# ಪರಿಪೂರ್ಣಚಂದ್ರಿಕಾ

## ಭಾಗ – 7

ಸೂತ್ರ-ಭಾಷ್ಯ-ಟೀಕಾ-ಟಿಪ್ಪಣಿ-ಮೊದಲಾದ 18 ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ





ಅಕ್ಷರಾಧಿಕರಣ, ಸದಧಿಕರಣ
ದಹರಾಧಿಕರಣ ಅನುಕೃತ್ಯಧಿಕರಣ
ವಾಮನಾಧಿಕರಣ



ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

ಭಾಗ - ೭

# ಪರಿಪೂರ್ಣಚಂದ್ರಿಕಾ

## ತೃತೀಯ ಪಾದ - ಅಕ್ಷರಾಧಿಕರಣ, ಸದಧಿಕರಣ, ದಹರಾಧಿಕರಣ, ಅನುಕೃತ್ಯಧಿಕರಣ, ವಾಮನಾಧಿಕರಣ

ಬ್ರಹ್ಮಸೂತ್ರ
ಸೂತ್ರದೀಪಿಕಾ
ತಂತ್ರದೀಪಿಕಾ
ನ್ಯಾಯಮುಕ್ತಾವಳಿ
ಬ್ರಹ್ಮಸೂತ್ರಭಾಷ್ಯ
ಭಾಷ್ಯದೀಪಿಕಾ
ಸತ್ತರ್ಕದೀಪಾವಳಿ
ತತ್ವಪ್ರಕಾಶಿಕಾ
ಭಾವದೀಪ
ವಾಕ್ಯಾರ್ಥಮಂಜರೀ
ತಾತ್ಪರ್ಯಚಂದ್ರಿಕಾ
ಪ್ರಕಾಶ
ಗುರುರಾಜೀಯ
ಭಾಟ್ಟಸಂಗ್ರಹ
ನ್ಯಾಯವಿವರಣ
ಭಾವಬೋಧ
ನ್ಯಾಯವಿವರಣಟೀಕಾ
ಅಣುಭಾಷ್ಯ
ತತ್ವಮಂಜರೀ

(ಶಂಕರಭಾಷ್ಯ, ಭಾಮತೀ, ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ)

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

- - - - - -

ಪ್ರಕಾಶಕರು
ಶ್ರೀಪಾದರಾಜಮಠ
ಮುಳಬಾಗಿಲು.

'ಪರಿಪೂರ್ಣಚಂದ್ರಿಕಾ' ಖರನಾಮಸಂವತ್ಸರ ಮಾಘ ಶುದ್ಧ ಮಧ್ವನವಮಿಯ (ದಿನಾಂಕ : 01-02-2012) ಶುಭಸಂದರ್ಭದಲ್ಲಿ ಮುಳಬಾಗಿಲು ಕ್ಷೇತ್ರದಲ್ಲಿ ಶ್ರೀಶ್ರೀಶ್ರೀ ಕೇಶವನಿಧಿಶ್ರೀಪಾದಂಗಳವರಿಂದ ಬಿಡುಗಡೆಯಾಯಿತು.

ಪ್ರಕಾಶನ : ಶ್ರೀಪಾದರಾಜಮಠ, ಮುಳುಬಾಗಿಲು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್ವೆನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2012

ಬೆಲೆ : 1000 ರೂ

ಪ್ರತಿಗಳು : 1000





ಅಕ್ಷರಜೋಡಣೆ :

ಸುಧೀಂದ್ರರಾವ್, ಗಿರಿನಗರ, ಬೆಂಗಳೂರು.
ನಾಗಲತಾ(ಸುಧಾ)ಗಿರಿ, ಬೆಂಗಳೂರು.

ಮುಖಪುಟ :
ಶ್ರೀಮತಿ ಕು|| ಸೌ|| ಬಿ. ಎನ್. ಪರಿಮಳ

ಮುದ್ರಣ
ದರ್ಶನ್ ಪ್ರಿಂಟರ್ಸ್, ರಾಘವೇಂದ್ರಕಾಲೋನಿ, ಬೆಂಗಳೂರು.

# ಸ್ಮರಿಸಿ ಬದುಕಿರೋ

ದುರ್ವಾದಿಗಳೆಂಬ ಸಿದ್ಧಾಂತ ಕತ್ತಲೆಗೆ ಸೂರ್ಯನಂತಿರುವ ಶ್ರೀಮದಾಚಾರ್ಯರಿಗೆ ಜಯವಾಗಲಿ.

ದುರ್ವಾದಿಗಳೆಂಬ ಮದಭರಿತ ಆನೆಗಳಿಗೆ ಸಿಂಹದಂತಿರುವ ಶ್ರೀಮದಾಚಾರ್ಯರಿಗೆ ಜಯವಾಗಲಿ.

ನಾಸ್ತಿಕರ ಗರ್ವ ಎಂಬ ಪರ್ವತಕ್ಕೆ ವಜ್ರಾಯುಧರಾಗಿರುವ ಶ್ರೀಮದಾಚಾರ್ಯರಿಗೆ ಜಯವಾಗಲಿ.

ಜಗದ್ಗುರುಗಳಾದ ಶ್ರೀಮದಾಚಾರ್ಯರೇ ! ನಿಮಗೆ ಜಯವಾಗಲಿ, ಜಯವಾಗಲಿ, ವಿಜಯವಾಗಲಿ.

ಹೀಗೆ ಶ್ರೀಮದಾಚಾರ್ಯರಿಗೆ ಜಯಕಾರ ಹಾಕಿದವರು ಶ್ರೀಶ್ರೀಪಾದರಾಜರು -

**ಜಯ ಜಯತು ದುರ್ವಾದಿಮತತಿಮಿರಮಾರ್ತಾಂಡ**
**ಜಯ ಜಯತು ವಾದಿಗಜಪಂಚಾನನ ।**
**ಜಯ ಜಯತು ಚಾರ್ವಕಗರ್ವಪರ್ವತಕುಲಿಶ**
**ಜಯ ಜಯ ಜಗನ್ನಾಥ ಮಧ್ವನಾಥ ॥**

ನಮ್ಮ ಮನಸ್ಸಿನಲ್ಲಿ 'ಶ್ರೀಮದಾಚಾರ್ಯರೇ ಜಯಶಾಲಿಗಳು' ಎಂಬ ಜ್ಞಾನವು ಯಾವ ದಿನ ಹೆಚ್ಚಾಗುತ್ತದೋ, ಅಂದಿನ ದಿನವೇ ಸುದಿನವು. ಶ್ರೀಮದಾಚಾರ್ಯರ ಸ್ಮರಣೆಯಿಂದ ಏನನ್ನೂ ಬೇಕಾದರೂ ಸಾಧಿಸಬಹುದು. ಎಲ್ಲರಿಗೂ ಅಪೇಕ್ಷಿತವಾದ ಮೋಕ್ಷವನ್ನೇ ಪಡೆಯಬಹುದೆಂದ ಮೇಲೆ ಲೌಕಿಕ ಫಲಗಳನ್ನೂ ಸಹ ಪಡೆಯಬಹುದೆಂಬುದರಲ್ಲಿ ಸಂದೇಹವಿಲ್ಲ.

ಸಾವಿರ ಹಸುಗಳನ್ನು ಯೋಗ್ಯಬ್ರಾಹ್ಮಣರಿಗೆ ಸೂರ್ಯ-ಚಂದ್ರಗ್ರಹಣ ಪರ್ವಕಾಲದಲ್ಲಿ ದಾನ ಮಾಡಿದ ಫಲವನ್ನು ಪಡೆಯಬೇಕೇ?

ಅಥವಾ ಪ್ರತಿನಿತ್ಯ ಗಂಗಾಪ್ರವಾಹವು ವಿಷ್ಣುವಿನ ಪಾದವನ್ನು ಸ್ಪರ್ಶಿಸುವಂತೆ ಗಂಗಾತೀರದಲ್ಲಿ ವಿಷ್ಣುದೇವಾಲಯವನ್ನು ಕಟ್ಟಿಸಿದರೆ ಎಷ್ಟು ಫಲವು ಬರುತ್ತದೋ, ಅಷ್ಟು ಫಲವನ್ನು ಪಡೆಯಬೇಕೆಂಬ ಹಂಬಲವೇ?

ಸಕಲವಿದ್ಯಾಭಿಮಾನಿಯಾದ ಮಹಾಲಕ್ಷ್ಮೀದೇವಿಯನ್ನು ಜಗದೊಡೆಯನಾದ ಮುಕುಂದನಿಗೆ ಸಮರ್ಪಿಸಿ, ಕಲ್ಯಾಣಮಹೋತ್ಸವವನ್ನು ಮಾಡಬೇಕೆಂಬ ಹಂಬಲವೇ?

ಪ್ರತಿಯೊಂದು ಉಸಿರು-ಪ್ರತಿಯೊಂದು ಕ್ಷಣಗಳ ಕಾರ್ಯಗಳು ಪರಮಾತ್ಮನ ಸೇವೆಯಾಗಬೇಕೆಂಬ ಹೆಬ್ಬಯಕೆಯೇ?

ಈ ಎಲ್ಲ ಅಪೇಕ್ಷೆಗಳು ಈಡೇರಬೇಕೆಂದರೆ ಶ್ರೀಮದಾಚಾರ್ಯರನ್ನು ಸ್ಮರಿಸಿದರೆ ಸಾಕು.

ಅಥವಾ ಅವರ ಗ್ರಂಥದಲ್ಲಿರುವ ನಾಲ್ಕಕ್ಷರಗಳನ್ನು ಓದಿದರೆ ಸಾಕು.

*ಪರಿಪೂರ್ಣಚಂದ್ರಿಕಾ*

ಹೀಗೆ ಶ್ರೀಮದಾಚಾರ್ಯರ ಮಹಿಮೆಯನ್ನು ಪಾಡಿಕೊಂಡಾಡಿದವರು ಶ್ರೀಶ್ರೀಪಾದರಾಜರು. ಶ್ರೀಮದಾಚಾರ್ಯರ ಸ್ಮರಣೆಯಿಂದ ಜೀವನದಲ್ಲಿ ಏನನ್ನು ಬೇಕಾದರೂ ಸಾಧಿಸಬಹುದೆನ್ನಲು ಜ್ವಲಂತ ದೃಷ್ಟಾಂತ - ಶ್ರೀಪಾದರಾಜರು.

ಶ್ರೀಮದಾಚಾರ್ಯರ ವಿಷಯದಲ್ಲಿ ಅಪ್ರತಿಮವಾದ ಅಪಾರ ಭಕ್ತಿಯನ್ನು ಮಾಡಿ ಎಲ್ಲರಿಂದಲೂ ಮಾಡಿಸುತ್ತಿರುವ ಶ್ರೀಪಾದರಾಜರಿಗೆ ಮಧ್ವನವಮಿಯ ಯಥಾರ್ಥ ಆಚರಣೆಯೂ ಅತ್ಯಂತ ಪ್ರೀತ್ಯಾಸ್ಪದವಾದದ್ದು.

ಪ್ರಕೃತ ಸ್ವತಃ ಶ್ರೀಪಾದರಾಜರೇ ನಿಂತು ನಡೆಸುತ್ತಿರುವ 'ಪರಿಪೂರ್ಣಚಂದ್ರಿಕಾ' ಗ್ರಂಥದ ೭ನೆಯ ಭಾಗವು ಖರನಾಮ ಸಂವತ್ಸರದ ಮಾಘ ಶುದ್ಧ ಮಧ್ವನವಮಿಯಂದು ಬಿಡುಗಡೆಯಾಗುತ್ತಿದೆ ಅಂದರೆ ಶ್ರೀಪಾದರಾಜರೇ ಸ್ವತಃ ಸಂತೋಷಮನಸ್ಸಿನಿಂದ ನಮ್ಮೆಲ್ಲರ ಮೇಲಿನ ವಾತ್ಸಲ್ಯದಿಂದ ಈ ಸಂಪುಟವನ್ನು ತಮ್ಮ ಗುರುಗಳಾದ ಶ್ರೀಮದಾಚಾರ್ಯರ ಅಂತರ್ಯಾಮಿಗಳಾದ ಶ್ರೀವೇದವ್ಯಾಸದೇವರಿಗೆ ಸಮರ್ಪಣೆ ಮಾಡುತ್ತಿದ್ದಾರೆ. ಜೀವನದಲ್ಲಿ ಇದಕ್ಕಿಂತ ಸೌಭಾಗ್ಯ ಮತ್ತೇನು..!!

ಶ್ರೀಪಾದರಾಜಮಠದ ಪ್ರಸ್ತುತ ಪೀಠಾಧಿಪತಿಗಳಾದ ಶ್ರೀಶ್ರೀಕೇಶವನಿಧಿತೀರ್ಥಶ್ರೀಪಾದಂಗಳವರು ಈ ಸಂಪುಟವನ್ನು ಮುಳುಬಾಗಿಲು ಕ್ಷೇತ್ರದಲ್ಲಿ ೦೧-೦೨-೨೦೧೨ ಖರನಾಮ ಸಂವತ್ಸರದ ಮಾಘ ಶುದ್ಧ ಮಧ್ವನವಮಿಯಂದು ಬಿಡುಗಡೆ ಮಾಡುತ್ತಿದ್ದಾರೆ. ಶ್ರೀಗಳವರಿಗೆ ಅನಂತ ನಮಸ್ಕಾರಗಳು ಮತ್ತು ಕೃತಜ್ಞತೆಗಳು.

ಶ್ರೀಪಾದರಾಜಮಠದ ಎಲ್ಲ ಕಾರ್ಯಗಳನ್ನು ಅದ್ವಿತೀಯರಾಗಿ ಸಾಧಿಸುವ ಶ್ರೀ ಹೆಚ್.ಬಿ. ಲಕ್ಷ್ಮೀನಾರಾಯಣಾಚಾರ್ಯರು ನಮ್ಮ ಯೋಜನೆಗೆ ಜೀವಾಳುವಾಗಿದ್ದಾರೆ. ಇವರಿಗೂ ಅನಂತ ಕೃತಜ್ಞತೆಗಳು.

ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ, ಡಾಯಲ್ಸ್ ಟೌನ್, ಪೆನ್ಸಿಲ್‌ವೇನಿಯಾ ಇವರು ಪ್ರತಿಸಂಪುಟದಂತೆ ಈ ಸಂಪುಟಕ್ಕೂ ಉದಾರವಾಗಿ ಧನಸಹಾಯ ಮಾಡಿದ್ದಾರೆ.

ದಿ. ಕೆ. ಎಸ್. ವೆಂಕಟರಾವ್ ಮತ್ತು ಸುಬ್ಬಮ್ಮ ಇವರೀರ್ವ ದಂಪತಿಗಳ ಸ್ಮರಣಾರ್ಥವಾಗಿ ಶ್ರೀ ಕೆ.ವಿ. ಜಯತೀರ್ಥ ಮತ್ತು ಶ್ರೀಮತಿ ಸಾವಿತ್ರಿ ದಂಪತಿಗಳು ಉದಾರ ಮನಸ್ಸಿನಿಂದ ಹನ್ನೆರಡು ಸಾವಿರ ರೂ.ಗಳನ್ನು ಈ ಕೃತಿಗಾಗಿ ಸಮರ್ಪಿಸಿದ್ದಾರೆ. ಇವರಿಗೆ ಶ್ರೀಹರಿಯವಾಯುಗುರುಗಳು ಸತ್ಕಲ್ಯಾಣಗಳನ್ನುಂಟು ಮಾಡಲಿ.

ಶ್ರೀ ಸುಧೀಂದ್ರರಾವ್ ಗಿರಿನಗರ, ಇವರು ಹರಿಭಕ್ತರ ವರ್ಗದಲ್ಲಿ ಅಪೂರ್ವ ವ್ಯಕ್ತಿಗಳು ನಮ್ಮ ಸಂಪೂರ್ಣ ಯೋಜನೆಗೆ ಬಹಳ ಉತ್ಸಾಹವನ್ನು ನೀಡುತ್ತಿದ್ದಾರೆ. ಈ ಪುಸ್ತಕದ ಅನೇಕ ಪುಟಗಳನ್ನು ಸೇವಾರೂಪದಲ್ಲಿ ಡಿ.ಟಿ.ಪಿ. ಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಶ್ರೀಹರಿವಾಯುಗುರುಗಳು ಮತ್ತು ಶ್ರೀ ವ್ಯಾಸತೀರ್ಥರು ಇವರಿಂದ ಇನ್ನೂ ಹೆಚ್ಚಿನ ಸೇವೆಯನ್ನು ಸ್ವೀಕರಿಸಿ, ಜೀವನ ಸಾರ್ಥಕವಾಗುವಂತೆ ಅನುಗ್ರಹಿಸಲಿ.

ಮುಂದಿನ ಸಂಪುಟ ಎಂಟನೆಯದ್ದು. ಅಲ್ಲಿಗೆ ನಮ್ಮ ಘೋಷಿತ ಯೋಜನೆಯು ಮುಕ್ತಾಯವಾಗುವುದು. ಆದರೆ ಶ್ರೀವ್ಯಾಸತೀರ್ಥರು ಬರೆದಿರುವ ತಾತ್ಪರ್ಯಚಂದ್ರಿಕಾ ಗ್ರಂಥದ ಮುಕ್ತಾಯವಲ್ಲ. ಶ್ರೀವ್ಯಾಸತೀರ್ಥರು ಬರೆದಿರುವ ಎಂಟು ಪಾದಗಳ ತಾತ್ಪರ್ಯಚಂದ್ರಿಕೆಯಲ್ಲಿ ಕೇವಲ ಮೂರು ಪಾದಗಳ ಅನುವಾದದ ಮುಕ್ತಾಯ. ಉಳಿದ ೫ ಪಾದಗಳ ಅನುವಾದದ ಕಾರ್ಯ ಪ್ರತ್ಯೇಕ ಯೋಜನೆ. ಒಂದು ನಿಟ್ಟಿನಲ್ಲಿ ೮ನೆಯ ಸಂಪುಟವು ಘೋಷಿತ ಯೋಜನೆಗೆ ಪರಿಪೂರ್ಣ. ೮ನೆಯ ಸಂಪುಟದ ಸಮರ್ಪಣೆಯನ್ನು ಇದೇ ಬರುವ ಖರ ನಾಮ ಸಂವತ್ಸರದ ಫಾಲ್ಗುಣ ಬಹುಳ ಚತುರ್ಥಿ ಶ್ರೀಮದ್‌ವ್ಯಾಸತೀರ್ಥರ ಆರಾಧನೆಯಂದು ಮಾಡಬೇಕೆಂದು ಉತ್ಕಟ ಅಪೇಕ್ಷೆಯಿದೆ. ಶ್ರೀಪಾದರಾಜರೇ ನಿಂತು ನಡೆಸುತ್ತಾರೆಂಬ ಸಂಪೂರ್ಣ ವಿಶ್ವಾಸವಿದೆ.

*ಪರಿಪೂರ್ಣಚಂದ್ರಿಕಾ*

ಹತ್ತಾರು, ನೂರಾರು ವಿಘ್ನಗಳ ಮತ್ತು ಸಮಸ್ಯೆಗಳ ಮಧ್ಯದಲ್ಲಿಯೂ ತಾತ್ಪರ್ಯಚಂದ್ರಿಕೆಯ ಕಾರ್ಯವು ನಿರಾತಂಕವಾಗಿ ನಡೆಯುತ್ತಿರುವುದು ಶ್ರೀಪಾದರಾಜರೇ ನಡೆಸುತ್ತಿರುವ ದೊಡ್ಡ ಪವಾಡ.

**ಕಾಲೇ ಫಲತಿ ಸುರದ್ರುಃ ಚಿಂತಾಮಣಿಸ್ತು ಯಾಚತೇ ದಾತಾ ।**

**ವರ್ಷತಿ ಸಕಲಮಭೀಷ್ಟಂ ದರ್ಶನಮಾತ್ರಾತ್ ಶ್ರೀಪಾದರಾಣ್ಮುನಿಃ**

ಕಲ್ಪವೃಕ್ಷ ಕಾಲ ಬಂದಾಗಷ್ಟೇ ಫಲ ನೀಡುತ್ತದೆ. ಯಾಚನೆ ಮಾಡಿದರಷ್ಟೇ ಚಿಂತಾಮಣಿಯು ಇಷ್ಟಾರ್ಥವನ್ನು ಪೂರೈಸುತ್ತದೆ. ಆದರೆ ಶ್ರೀಪಾದರಾಜರು ದರ್ಶನ ಮಾಡಿದರೆ ಸಾಕು; ಎಲ್ಲಾ ಇಷ್ಟಗಳನ್ನು ನೆರವೇರಿಸುತ್ತಾರೆ.

ಕಣ್ವಋಷಿಗಳ ತಪೋಭೂಮಿಯೆಂದು ಅಬ್ಬೂರು ಕ್ಷೇತ್ರಕ್ಕೆ ಇತಿಹಾಸವಿದೆ. ಅಲ್ಲಿ ಶ್ರೀ ಶೇಷಗಿರಿ ಆಚಾರ್ಯ, ಗಿರಿಯಮ್ಮ ಎಂಬ ದಂಪತಿಗಳು ದೇವರ ಆರಾಧನೆಯನ್ನು ಮಾಡಿಕೊಂಡು ಜೀವನ ಮಾಡುತ್ತಿದ್ದರು. ಅವರಿಬ್ಬರಿಗೆ ಭಗವಂತನು ಗಂಡು ಮಗುವನ್ನು ಅನುಗ್ರಹಿಸಿದನು. ಮಗುವಿಗೆ ಲಕ್ಷ್ಮೀನಾರಾಯಣ ಎಂದು ಹೆಸರಿಟ್ಟರು. ಹುಣ್ಣಿಮೆಯ ಚಂದ್ರನಂತೆ ಎಲ್ಲರ ಮನಸ್ಸನ್ನು ಸೂರೆಗೊಂಡು ಮಗು ಮುದ್ದಾಗಿ ಬೆಳೆಯಿತು.

ನಾಲ್ಕೈದು ವರ್ಷಗಳ ಮಗು ಒಮ್ಮೆ ಹಸುಗಳನ್ನು ಮೇಯಿಸಿ ಕರೆದುಕೊಂಡು ಬರುತ್ತಿದ್ದನು. ಅಲ್ಲಿಗೆ ಆಕಸ್ಮಿಕವಾಗಿ ಶ್ರೀ ಸ್ವರ್ಣವರ್ಣತೀರ್ಥರು ಸಂಚಾರ ಮಾಡುತ್ತಾ ಬಂದರು. ಇವರು ಶ್ರೀಮದಾಚಾರ್ಯರ ನಂತರ ಶ್ರೀ ಪದ್ಮನಾಭತೀರ್ಥರಿಂದ ಮುಂದುವರೆದ ಸಂಸ್ಥಾನದಲ್ಲಿ ಏಳನೆಯ ಪೀಠಾಧಿಪತಿಗಳು. ಮಹಾಜ್ಞಾನಿಗಳು, ತಪಸ್ವಿಗಳು, ಯತಿಪುಂಗವರೂ ಆಗಿದ್ದರು. ಅಬ್ಬೂರು ಕ್ಷೇತ್ರದಲ್ಲಿರುವ ಶ್ರೀ ಪುರುಷೋತ್ತಮ

ತೀರ್ಥರನ್ನು ಕಾಣಲು ಸಂಚಾರ ಮಾಡಿಕೊಂಡು ಬರುತ್ತಿದ್ದರು. ಅಬ್ಬೂರು ಕ್ಷೇತ್ರ ಎಷ್ಟು ದೂರವಿದೆಯೆಂದು ಇವರಿಗೆ ತಿಳಿಯಬೇಕಾಯಿತು. ಅದು ಸೂರ್ಯ ಮುಳುಗುವ ಸಮಯ. ಯಾರನ್ನಾದರೂ ಕೇಳಬೇಕೆಂದು ಇಚ್ಛಿಸಿದಾಗ ಲಕ್ಷ್ಮೀನಾರಾಯಣ ಎಂಬ ಮಗು ಹಸುಗಳ ಜೊತೆಗೆ ಬರುತ್ತಿದ್ದನು. ಆವಾಗ ಶ್ರೀಸ್ವರ್ಣವರ್ಣತೀರ್ಥರು-

'ಮಗು, ಅಬ್ಬೂರು ಇನ್ನು ಎಷ್ಟು ದೂರವಿದೆ?' ಎಂದು ಪ್ರಶ್ನಿಸಿದರು.

ಬಾಲಕನು ಥಟ್ಟನೆ ಉತ್ತರಿಸಿದನು -

'ಸ್ವಾಮಿ ! ಸೂರ್ಯಮುಳುಗುವ ಸಮಯ. ಹಸುಗಳನ್ನು ಕರೆದುಕೊಂಡು ಹೋಗುತ್ತಿದ್ದೇನೆ. ಇದರಿಂದಲೇ ಊರು ಎಷ್ಟು ದೂರವಿದೆಯೆಂಬುದನ್ನು ತಾವೇ ತಿಳಿಯಬಹುದಲ್ಲವೇ?' ಎಂದು.

ಶ್ರೀಗಳವರಿಗೆ ಊರು ಹತ್ತಿರದಲ್ಲಿದೆಯೆಂದು ತಿಳಿಯಿತು. ಬಾಲಕನ ಪ್ರತ್ಯುತ್ಪನ್ನಮತಿಗೆ ಮನಸೋತರು-

*ಸಾಯಂಕಾಲೇ ಕದಾಚಿತ್ ಗುಣಗಣಭರಿತೇ ಸ್ವರ್ಣವರ್ಣೇ ಯತೀಂದ್ರೇ ।*

*ದೂರೇ ಗ್ರಾಮಃ ಪುರಸ್ತಾತ್ ಕಿಯತಿ ಕಥಯ ಮೇ ಬಾಲಕೇತಿ ಬ್ರುವಾಣೇ ।*

*ಸೂರ್ಯಂ ಮಾಂ ಸೈರಿಭಾಂಸ್ತ್ವಂ ಸಕಲಬುಧಮಣೇ ಪಶ್ಯ ಕಿಂ ತ್ವಾಂ ಬ್ರುವೇಹಮ್ ॥*

ಅನಂತರ ಅಬ್ಬೂರಿನಲ್ಲಿ ಶ್ರೀಪುರುಷೋತ್ತಮತೀರ್ಥರನ್ನು ನೋಡಿ ಶ್ರೀಸ್ವರ್ಣವರ್ಣತೀರ್ಥರು ಲಕ್ಷ್ಮೀನಾರಾಯಣನನ್ನು ತಮ್ಮ ಉತ್ತರಾಧಿಕಾರಿಯಾಗಿ ನೇಮಿಸಿಕೊಳ್ಳಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದರು.

ಎಲ್ಲರ ಸಮ್ಮತಿಯನ್ನು ಪಡೆದು ಶ್ರೀಸ್ವರ್ಣವರ್ಣತೀರ್ಥರು ಲಕ್ಷ್ಮೀನಾರಾಯಣನನ್ನು ಮತ್ತು ಅವನ ತಂದೆ ತಾಯಿಗಳನ್ನು ಮಠದಲ್ಲೇ ಉಳಿಸಿಕೊಂಡರು. ಯೋಗ್ಯಸಮಯದಲ್ಲಿ ಉಪನಯನ ಮಾಡಿಸಿ ಬ್ರಹ್ಮೋಪದೇಶ ಮಾಡಿದರು. ಅನಂತರ ವಿದ್ಯಾಭ್ಯಾಸವನ್ನು ಮಾಡಿಸಿ, ತರ್ಕ, ವ್ಯಾಕರಣ, ಮೀಮಾಂಸಾ, ವೇದಾಂತ ಎಂಬ

ಚತುಃಶಾಸ್ತ್ರಗಳ ಪಾಠಗಳನ್ನು ಹೇಳಿ, ಅತ್ಯಂತ ಪ್ರತಿಭಾವಂತ ವಿದ್ವಾಂಸನನ್ನಾಗಿ ಮಾಡಿದರು. ವಿದ್ವತ್ ಪ್ರಪಂಚದಲ್ಲಿ ಉದ್ದಾಮ ಪಂಡಿತನೆಂಬ ಬಿರುದು ಬಂದಿತು. ಜ್ಞಾನ, ಭಕ್ತಿ, ವೈರಾಗ್ಯಗಳು ಲಕ್ಷ್ಮೀನಾರಾಣನನ್ನೇ ಮನೆಮಾಡಿಕೊಂಡಿದ್ದವು. ಇಂತಹ ಲಕ್ಷ್ಮೀನಾರಾಯಣನನ್ನು ಕಂಡು ಪರಮಸಂತುಷ್ಟರಾದ ಶ್ರೀಸ್ವರ್ಣವರ್ಣತೀರ್ಥರು ಒಂದು ದಿವಸ ಶುಭಮುಹೂರ್ತದಲ್ಲಿ ವಿಧಿಪೂರ್ವಕವಾಗಿ ಸನ್ಯಾಸಾಶ್ರಮವನ್ನು ನೀಡಿದರು. 'ಶ್ರೀಲಕ್ಷ್ಮೀನಾರಾಯಣತೀರ್ಥ' ಎಂದೇ ನಾಮಕರಣ ಮಾಡಿದರು.

ಶ್ರೀಪದ್ಮನಾಭತೀರ್ಥರ ಪರಂಪರೆಯಲ್ಲಿ ಎಂಟನೆಯ ಸ್ಥಾನವನ್ನು ಅಲಂಕರಿಸಿದ ಶ್ರೀ ಲಕ್ಷ್ಮೀನಾರಾಯಣ ತೀರ್ಥರು ಇನ್ನೂ ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡಲು ಬಯಸಿದರು. ಆವಾಗ ಗುರುಗಳಾದ ಶ್ರೀಸ್ವರ್ಣವರ್ಣತೀರ್ಥರು ಶ್ರೀವಿಭುದೇಂದ್ರತೀರ್ಥರ ಬಳಿ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದರು. ಆ ಕಾಲದಲ್ಲಿ ಶ್ರೀವಿಭುದೇಂದ್ರತೀರ್ಥಶ್ರೀಪಾದಂಗಳವರು ರಾಮೇಶ್ವರದಿಂದ ಹಿಮಾಲಯದ ತನಕ, ಎಲ್ಲಾ ಕುವಾದಿಗಳನ್ನು ಪರಾಜಯಗೊಳಿಸಿ, ಅಪ್ರತಿಮ ವಿದ್ವಾಂಸರಾಗಿದ್ದರು. ಅವರೊಬ್ಬರೇ ಶ್ರೀಲಕ್ಷ್ಮೀನಾರಾಯಣತೀರ್ಥರಿಗೆ ವಿದ್ಯಾಗುರುಗಳಾಗಲು ಸಮರ್ಥರೆಂಬುದು ಶ್ರೀಸ್ವರ್ಣವರ್ಣತೀರ್ಥರ ನಿರ್ಧಾರವಾಗಿತ್ತು.

ಶ್ರೀವಿಭುದೇಂದ್ರತೀರ್ಥಶ್ರೀಪಾದಂಗಳವರ ಅಂತೇವಾಸಿಗಳಾಗಿ ಶ್ರೀಲಕ್ಷ್ಮೀನಾರಾಯಣತೀರ್ಥರು ಉದ್ಗ್ರಂಥಗಳ ಅಧ್ಯಯನವನ್ನು ನಡೆಸಿದರು. ಗುರುಗಳಿಂದ ಉಪದಿಷ್ಟವಾದ ಸಮುದ್ರದಂತಹ ವಿದ್ಯೆಯನ್ನು ಪಾನ ಮಾಡಲು ಇವರೊಬ್ಬರೇ ಸಮರ್ಥರೆಂಬುದು ಎಲ್ಲರಿಗೂ ಮನವರಿಕೆಯಾಗಿತ್ತು.

ಶ್ರೀಲಕ್ಷ್ಮೀನಾರಾಯಣತೀರ್ಥರಿಗೆ ಮುಂದೆ 'ಶ್ರೀಶ್ರೀಪಾದರಾಜರು' ಎಂಬ ಬಿರುದು ಬಂದಿತು. ಶ್ರೀಮದಾಚಾರ್ಯರ ಗ್ರಂಥಗಳ ಪಾಠ-ಪ್ರವಚನ, ಸಚ್ಛಾಸ್ತ್ರಗಳ ನಿರ್ಮಾಣ, ದುರ್ಮತಗಳ ಖಂಡನೆ, ಮೊದಲಾದ ಕಾರ್ಯಗಳನ್ನು ಸಾಧಿಸುವುದಕ್ಕಾಗಿ ಮುಳುಬಾಗಿಲು ಕ್ಷೇತ್ರದಲ್ಲಿ ಶ್ರೀಪಾದರಾಜರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದರು. ಮುಳುಬಾಗಿಲು ಕ್ಷೇತ್ರಕ್ಕೆ ಅಂಜನಾದೇವಿ ತಪಸ್ಸು ಮಾಡಿದ ಸ್ಥಳವೆಂಬ ಬಿರುದಿದೆ. ಕೌಂಡಿನ್ಯಋಷಿಗಳ ತಪೋಭೂಮಿಯೆಂಬ ಇತಿಹಾಸವೂ ಇದೆ. ಕರ್ನಾಟಕ ವಿದ್ಯಾಸಿಂಹಾಸನಾಧೀಶರರಾದ ಶ್ರೀವ್ಯಾಸತೀರ್ಥರು ಈ ವಿಶ್ವವಿದ್ಯಾನಿಲಯದಲ್ಲೇ ಅಧ್ಯಯನ ಮಾಡಿ ಶ್ರೀಪಾದರಾಜರ ಅಂತೇವಾಸಿಗಳಾಗಿದ್ದರೆಂಬುದು ಗಮನಾರ್ಹ ವಿಷಯ. ಶ್ರೀಪಾದರಾಜರು ರಚನೆ ಮಾಡಿದ, 'ವಾಗ್ವಜ್ರ' ಎಂಬ ಗ್ರಂಥದ ಸ್ಫೂರ್ತಿಯಿಂದಲೇ ಶ್ರೀವ್ಯಾಸತೀರ್ಥರು ಮುಂದೆ ನ್ಯಾಯಾಮೃತಾದಿ ಗ್ರಂಥಗಳನ್ನು ರಚನೆ ಮಾಡಿದರು. ಶ್ರೀಪಾದರಾಜರು ವ್ಯಾಸಸಾಹಿತ್ಯದಲ್ಲಿ ಎಷ್ಟು ಕೃಷಿ ಮಾಡಿದ್ದರೋ, ದಾಸಸಾಹಿತ್ಯದಲ್ಲಿಯೂ ಅಷ್ಟೇ ಕೃಷಿ ಮಾಡಿ ಅದ್ಭುತವಾದ ಕೊಡುಗೆಗಳನ್ನು ನೀಡಿದ್ದಾರೆ. 'ದಾಸಸಾಹಿತ್ಯಪ್ರವರ್ತಕ'ರೆಂಬ ಬಿರುದೂ ಸಹ ಇವರಿಗೆ ಬಂದಿದೆ. ಶ್ರೀಪಾದರಾಜರು ತಮ್ಮ ಜೀವಿತಕಾಲದಲ್ಲಿ ಸಾಧಿಸಿದ ಮಹತ್ಕಾರ್ಯಗಳನ್ನು ಮತ್ತು ಅವರ ಸಾಧನೆಯನ್ನು ಶ್ರೀ ವ್ಯಾಸತೀರ್ಥರೇ ಹಾಡಿ ಕೊಂಡಾಡಿದ್ದಾರೆ -

*ವಾದಿಗಜಮಸ್ತಕಾಂಕುಶ ಸುಜನಬುಧಗೇಯ*
*ಮೇದಿನೀಸುರವಂದ್ಯ ಶ್ರೀಪಾದರಾಜ ॥ ಪ ॥*

*ಸಕಲ ಶಾಸ್ತ್ರಕಲಾಪ ಸನ್ಯಾಸಕುಲದೀಪ*
*ಸಕಲ ಸತ್ಯಸ್ಥಾಪಕ ಸುಜ್ಞಾನದೀಪ ॥*
*ಪ್ರಕಟಪಾವನರೂಪ ಅರಿಕುಜನಮತಲೋಪ*
*ನಿಕಟವರ್ಜಿತಪಾಪ ಕೀರ್ತಿಪ್ರತಾಪ ॥ ೧ ॥*

*ಪರಿಪೂರ್ಣಚಂದ್ರಿಕಾ*

*ಹರಿಪದಾಂಬುಜಭೃಂಗ ಪರಮತಾಹಿವಿಹಂಗ*
*ಪರಮಸುಗುಣಾಂತರಂಗ ಭವದುರಿತಭಂಗ ||*
*ಶರಣಕೀರ್ತಿತರಂಗ ಶತ್ರುತಿಮಿರಪತಂಗ*
*ಶರಣು ಶುಭಚರಿತಾಂಗ ಷಟ್‌ಶಾಸ್ತ್ರಸಂಗ ||೨||*

*ಸಿರಿಕೃಷ್ಣದಿವ್ಯಪಾದಾಬ್ಜಚಿಂತಾಲೋಲ*
*ವರಹೇಮವರ್ಣಮುನಿಪತಿಯ ಸುಕುಮಾರ ||*
*ಗುರುತಿಲಕ ಶ್ರೀಪಾದರಾಯ ಅಮಿತೋದ್ಧಾರ*
*ಶರಣಜನಸುರಧೇನು ಭಕ್ತಿಮಂದಾರ || ೩ ||*

ಶ್ರೀ ವ್ಯಾಸತೀರ್ಥರು ರಚನೆ ಮಾಡಿರುವ ಈ ಪದ್ಯದಲ್ಲಿರುವ ಶ್ರೀಪಾದರಾಜರ ಮಹಿಮೆಗಳನ್ನು ಸಾಧಕರು ಪ್ರತಿನಿತ್ಯ ಸ್ಮರಿಸಿಕೊಳ್ಳಬೇಕು.

ಮತ್ತು ದಾರಿದ್ರ್ಯನಾಶಕ್ಕಾಗಿ ಈ ಶ್ಲೋಕವನ್ನು ಪಠಿಸಬೇಕು -

*ಬಿಭ್ರಾಣಂ ಕ್ಷೌಮವಾಸಃ ಕರಧೃತವಲಯಂ ಹಾರಕೇಯೂರಕಾಂಚೀ*
*ಗ್ರೈವೇಯ ಸ್ವರ್ಣಮಾಲಾಮಣಿಗಣಖಚಿತಾನೇಕಭೂಷಾಪ್ರಕರ್ಷಂ*
*ಭುಂಜಾನಾಂ ಷಡ್ರಸೀಶಾಕಂ ಹಯಗಜಶಿಬಿಕಾನರ್ಘ್ಯ ಶ್ಯಯ್ಯಾರಥಾಢ್ಯಂ*
*ವಂದೇ ಶ್ರೀಪಾದರಾಜಂ ತ್ರಿಭುವನವಿದಿತಂ ಘೋರದಾರಿದ್ರ್ಯಶಾಂತ್ಯೈ*

ವಿದ್ಯೆಯ ಅಭಿವೃದ್ಧಿಗಾಗಿ ಮುಂದಿನ ಶ್ಲೋಕವನ್ನು ಹೇಳಿಕೊಳ್ಳಬೇಕು.

*ಜ್ಞಾನವೈರಾಗ್ಯ ಭಕ್ತ್ಯಾದಿ ಕಲ್ಯಾಣಗುಣಶಾಲಿನಃ*
*ಲಕ್ಷ್ಮೀನಾರಾಯಣಮುನೀನ್ ವಂದೇ ವಿದ್ಯಾಗುರೂನ್‌ಮಮ ||*

ಹೀಗೆ ಶ್ರೀಪಾದರಾಜರನ್ನು ಸ್ಮರಣೆ ಮಾಡಿಕೊಳ್ಳಬೇಕೆಂದು ಶ್ರೀವ್ಯಾಸತೀರ್ಥರು ನಮಗೆ ತಿಳಿಸಿದ್ದಾರೆ. ನಾವು ಶ್ರೀವ್ಯಾಸತೀರ್ಥರ ಅನುಗ್ರಹವನ್ನು ಪಡೆಯಬೇಕೆಂದರೆ ಶ್ರೀವ್ಯಾಸತೀರ್ಥರಿಗೆ ಅತ್ಯಂತ ಇಷ್ಟರಾದ ಶ್ರೀಪಾದರಾಜರನ್ನು ಹೀಗೆ ಸ್ಮರಣೆ ಮಾಡಿಕೊಳ್ಳಲೇಬೇಕು.

ನಮಗೆಲ್ಲರಿಗೂ ಶ್ರೀಪಾದರಾಜರು ಅನುಗ್ರಹ ಮಾಡಿ, ಜೀವನದಲ್ಲಿ ಅಲ್ಪ ಸಾಧನೆಗೆ ಅನುಕೂಲ ಮಾಡಿಕೊಡಲಿ. ಮತ್ತು ಶ್ರೀವ್ಯಾಸತೀರ್ಥರು ರಚನೆ ಮಾಡಿರುವ ಗ್ರಂಥಗಳಲ್ಲಿರುವ ತತ್ವವಿಚಾರವನ್ನೆಲ್ಲಾ ತಿಳಿದು ಮತ್ತೊಬ್ಬರಿಗೂ ತಿಳಿಸುವಂತಹ ಸೌಭಾಗ್ಯವನ್ನು ಕರುಣಿಸಲಿ.

ಅನುವಾದಕರು

ಬೆಮ್ಮತ್ತಿ ವೆಂಕಟೇಶಾಚಾರ್ಯ

# ಮುನ್ನುಡಿ

## ಅಕ್ಷರಾಧಿಕರಣ

*ಅಕ್ಷರಶಬ್ದಕ್ಕೆ ಉಭಯತ್ರಪ್ರಸಿದ್ಧತ್ವ ಸಮರ್ಥನೆ*

ಈ ಅಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. ಲಕ್ಷ್ಮೀದೇವಿಯಲ್ಲಿಯೂ ಅಕ್ಷರಶಬ್ದವನ್ನು ಪ್ರಯೋಗಿಸಬಹುದಲ್ಲವೇ? ಎಂಬ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ. ಆದ್ದರಿಂದ ಲಕ್ಷ್ಮೀದೇವಿ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ಉಭಯತ್ರಪ್ರಸಿದ್ಧವೆನಿಸುತ್ತದೆ.

ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ಹೇಳುವುದು ಎಷ್ಟು ಸ್ವರಸ? ಏಕೆಂದರೆ ಅಕಾರಾದಿ ವರ್ಣಗಳಲ್ಲಿಯೂ ಅಕ್ಷರಶಬ್ದದ ಪ್ರಯೋಗವು ಲೋಕದಲ್ಲಿ ಕಾಣಿಸುತ್ತಿದೆ. ಆದ್ದರಿಂದ ಲೋಕರೂಢಿಯನ್ನು ವಿವಕ್ಷಿಸಿದಾಗ ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವಾಗಬೇಕಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಆದರೆ ಸಮನ್ವಯ ಮಾಡಬೇಕಾಗಿರುವ ಶಬ್ದವು ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲಾದರೂ ಪ್ರಸಿದ್ಧವಾಗಿರಬೇಕೆಂಬ ಅಭಿಪ್ರಾಯವನ್ನು ಹೇಳಬಾರದು. ಆ ಸಮನ್ವಯ ಮಾಡಬೇಕಾದ ಶಬ್ದವನ್ನು ಪೂರ್ವಪಕ್ಷಿಯು ಯಾವ ಪದಾರ್ಥದಲ್ಲಿ ಸಮರ್ಥಿಸುತ್ತಾನೋ ಅಂತಹ ಪದಾರ್ಥದಲ್ಲಿ ಮತ್ತು ಸಿದ್ಧಾಂತಕ್ಕೆ ವಿಷಯವಾದ ವಸ್ತುವಿನಲ್ಲಿ ಸಾಧಾರಣವಾಗಿದ್ದರೆ ಸಾಕು. ಪೂರ್ವಪಕ್ಷಿಯು ಅಕಾರಾದಿ ವರ್ಣಗಳನ್ನಾಗಲೀ, ಜಡಪ್ರಕೃತಿಯನ್ನಾಗಲೀ ಅಕ್ಷರವೆಂದು ಆಕ್ಷೇಪಿಸುತ್ತಿಲ್ಲವಾದ್ದರಿಂದ ಅವುಗಳಲ್ಲಿರುವ ರೂಢಿಯನ್ನು ವಿವಕ್ಷಿಸಬೇಕಾಗಿಲ್ಲ. ಆದ್ದರಿಂದಲೇ ಈ ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವೂ ಸಹ ಆಗುವುದಿಲ್ಲವೆಂದು ತಿಳಿಯಬೇಕು. ಅವಿನಾಶಿತ್ವ ಎಂಬ ಪ್ರವೃತ್ತಿನಿಮಿತ್ತವನ್ನು ಅನುಸರಿಸಿದಾಗ ಕೇವಲ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆಂದು ನ್ಯಾಯವಿವರಣಕಾರರು ತಿಳಿಸಿರುತ್ತಾರೆ. ಆದ್ದರಿಂದ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ನಾವು ತಿಳಿಯಬಾರದು. ವಾಸ್ತವಿಕವಾಗಿ ಮಹಾಲಕ್ಷ್ಮೀ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದದ ಪ್ರಯೋಗಸಾಧಾರಣ್ಯವನ್ನು ಹೇಳಬಹುದು. ಆದರೆ ಯಾವ ಪೂರ್ವಪಕ್ಷಿಯು ಮಹಾಲಕ್ಷ್ಮಿಯೇ ಅಕ್ಷರಳಾಗಿದ್ದಾಳೆಂದು ಆಕ್ಷೇಪಿಸುತ್ತಿದ್ದಾನೋ, ಅವನು ವಿಷ್ಣುವಿನಲ್ಲೂ ಅಕ್ಷರಶಬ್ದದ ಪ್ರಯೋಗವನ್ನು ಒಪ್ಪಲಾರನು. ಆದ್ದರಿಂದ ಅವಿನಾಶಿತ್ವವೆಂಬ ಧರ್ಮದ ಮೂಲಕವಾಗಿಯೇ ಉಭಯಸಾಧಾರಣ್ಯವನ್ನು ಹೇಳಬೇಕು.

*ಪರಿಪೂರ್ಣಚಂದ್ರಿಕಾ*

ಅಕ್ಷರಶಬ್ದಕ್ಕೆ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವನ್ನಷ್ಟೇ ಆಶ್ರಯಿಸಿದರೆ ಅಕಾರಾದಿವರ್ಣಗಳಲ್ಲಿಯೂ ಇದು ಇರುವುದರಿಂದ ಅತಿಪ್ರಸಕ್ತಿ ಬರುತ್ತದೆ. ಆದ್ದರಿಂದ ರೂಢಿಯನ್ನೂ ಸಹ ಆಶ್ರಯಿಸಬೇಕು. ಇದರಿಂದ ಅಕ್ಷರಶಬ್ದವು ಪಂಕಜಾದಿಶಬ್ದಗಳಂತೆ ಯೋಗರೂಢವಾದ ಶಬ್ದವೆಂದು ಸ್ಪಷ್ಟವಾಗುತ್ತದೆ.

ಅಕ್ಷರಶಬ್ದವು ಸಂಶಯಕೋಟಿಗಳಲ್ಲಷ್ಟೇ ಸಾಧಾರಣವಾಗಬೇಕು. ಆದರೆ ಅಕಾರಾದಿವರ್ಣಗಳಲ್ಲಿಯೂ ಸಹ ಅಕ್ಷರಶಬ್ದದ ಪ್ರಯೋಗವಿರುವುದರಿಂದ ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ ? ಎಂಬುದು ಮುಂದಿನ ಪ್ರಶ್ನೆ. ಈ ಪ್ರಶ್ನೆಗೆ ಗ್ರಂಥಕಾರರು ಎರಡು ಬಗೆಯಲ್ಲಿ ಉತ್ತರಿಸಿದ್ದಾರೆ. ಉಭಯತ್ರಪ್ರಸಿದ್ಧವಾಗಬೇಕೆಂದರೆ ಸಂಶಯಕೋಟಿಗಳಲ್ಲಿ ಸಾಧಾರಣವಾಗಿದ್ದರೆ ಸಾಕು, ಬೇರೆಡೆ ಇರಬಾರದೆಂದೇನೂ ಇಲ್ಲ. ಸಂಶಯಕೋಟಿಗಳೆರಡರಲ್ಲಿ ಸಾಧಾರಣವಾಗಿರುವ ಪ್ರಯುಕ್ತವೇ ಉಭಯತ್ರ-ಪ್ರಸಿದ್ಧವೆನಿಸುತ್ತದೆಂಬುದು ಒಂದು ಬಗೆಯ ಪರಿಹಾರ.

### *ಮತ್ತೊಂದು ಬಗೆಯಲ್ಲಿ ಉಭಯತ್ರಪ್ರಸಿದ್ಧತ್ವ ಸಮರ್ಥನೆ*

ಶರೀರವಿಯೋಗ ಇಲ್ಲದಿರುವಿಕೆ ಎಂಬ ಯೋಗಾರ್ಥವನ್ನು ಆಶ್ರಯಿಸಿದಾಗ ಅಕ್ಷರಶಬ್ದವು ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆ. ಅಕಾರಾದಿ ವರ್ಣಗಳಲ್ಲಾಗಲೀ, ಜಡಪ್ರಕೃತಿಯಲ್ಲಾಗಲೀ ಈ ಪ್ರವೃತ್ತಿನಿಮಿತ್ತವು ಬರುವುದೇ ಇಲ್ಲ. ಹಿಂದೆ ಹೇಳಿದಂತೆ ಕೇವಲ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದರೆ ಅಕಾರಾದಿ ವರ್ಣಗಳಲ್ಲಿಯೂ ಸಹ ಅಕ್ಷರಶಬ್ದವು ಸಾಧಾರಣವಾಗುತ್ತಿತ್ತು. ಅದರ ಪರಿಹಾರಕ್ಕಾಗಿ ರೂಢ್ಯರ್ಥವನ್ನು ಸ್ವೀಕರಿಸುವ ಅವಶ್ಯಕತೆಯಿರುತ್ತಿತ್ತು. ಆದರೆ ಶರೀರವಿಯೋಗರಾಹಿತ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದಾಗ ಅಕಾರಾದಿ ವರ್ಣಗಳಲ್ಲಿ ಇದು ಬರುವುದೇ ಇಲ್ಲ.

ನಾಶ ಶಬ್ದಕ್ಕೆ ಸ್ವರೂಪನಾಶವೆಂಬರ್ಥ ಇರುವಂತೆ ಶರೀರವಿಯೋಗವೆಂಬರ್ಥವೂ ಸಹ ಇರುವುದರಿಂದ 'ದ್ವಾವಿಮೌ ಪುರುಷೌ ಲೋಕೇ' ಎಂಬ ಭಗವದ್ಗೀತೆಯ ಆಧಾರದಿಂದ ಶರೀರವಿಯೋಗ ಇಲ್ಲದಿರುವಿಕೆಯೂ ಸಹ ಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿ ಮಾತ್ರ ಬರುತ್ತದೆಂದು ಸ್ಪಷ್ಟವಾಗುತ್ತದೆ. ಹೀಗೆ ಅಕ್ಷರಶಬ್ದದ ಅರ್ಥವನ್ನು ಹೇಳಿದಾಗ ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗುತ್ತದೆ ಹೊರತು, ಅಕಾರಾದಿ ವರ್ಣಗಳಲ್ಲಿ ಸಾಧಾರಣವಾಗುವುದಿಲ್ಲ. ಆದ್ದರಿಂದ ಸಂಶಯಪೂರ್ವಪಕ್ಷಕೋಟಿ ಹಾಗೂ ಸಿದ್ಧಾಂತಕೋಟಿಗಳಲ್ಲಷ್ಟೇ ಸಾಧಾರಣವಾದದ್ದನ್ನು ಉಭಯತ್ರಪ್ರಸಿದ್ಧವೆಂದು ಹೇಳಬಹುದು.

ಹಾಗಾದರೆ ಪಂಕಜಾದಿಶಬ್ದಗಳಂತೆ ಇದನ್ನು ಯೋಗರೂಢವೆಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಹುದು. ಆದರೆ ಇಲ್ಲಿಗೂ ಅಲ್ಲಿಗೂ ವ್ಯತ್ಯಾಸವಿದೆ. ಹೇಗೆಂದರೆ ಪಂಕಜಶಬ್ದಕ್ಕೆ ಕೇವಲ ಯೌಗಿಕಾರ್ಥವನ್ನು ಸ್ವೀಕರಿಸಿದರೆ, ಕುಮುದಾದಿಗಳಲ್ಲಿ ಅತಿಪ್ರಸಕ್ತಿ ಬರುತ್ತದೆ. ಮತ್ತು ಪದ್ಮತ್ವಜಾತಿ ಉಪಸ್ಥಿತಿಯೂ ಸಹ ಬರುತ್ತಿದೆ. ಮತ್ತು ಕೇವಲ ಪಂಕಜನಿಕರ್ತೃತ್ವವೆಂಬ ಯೌಗಿಕಾರ್ಥವನ್ನು ವಿವಕ್ಷಿಸಲು ಪ್ರಮಾಣವೂ ಸಹ ಇರುವುದಿಲ್ಲ. ಆದರೆ ಅಕ್ಷರಶಬ್ದದಲ್ಲಿ ಕೇವಲ ಶರೀರವಿಯೋಗರಾಹಿತ್ಯವೆಂಬ ಯೌಗಿಕಾರ್ಥವನ್ನು ವಿವಕ್ಷಿಸಿದಾಗ ಯಾವುದೇ ಅತಿಪ್ರಸಂಗವು ಬರುತ್ತಿಲ್ಲ. ಅಕ್ಷರತ್ವವೆಂಬ ಜಾತಿಯ ಉಪಸ್ಥಿತಿಯೂ ಬರುತ್ತಿಲ್ಲ. ಕೇವಲ ಯೋಗಾರ್ಥವನ್ನು ಸ್ವೀಕರಿಸಲು ಪ್ರಮಾಣವೂ ಕೂಡ ಇರುತ್ತದೆ. ಆದ್ದರಿಂದ ಪಂಕಜಶಬ್ದದಂತೆ ಇದನ್ನು ಯೋಗರೂಢವೆಂದು ವಿವಕ್ಷಿಸಬಾರದು. ಇಲ್ಲಿ ಶರೀರವಿಯೋಗರಾಹಿತ್ಯವೆಂಬ ಅರ್ಥವನ್ನು ವಿವಕ್ಷಿಸಿದಾಗ ಮಹಾವಿಷ್ಣು ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿ ಯೌಗಿಕಾರ್ಥವಾಗಿದೆ. ಈ ಅರ್ಥವನ್ನು ವಿವಕ್ಷಿಸದೇ ಕೇವಲ ಅಕ್ಷರತ್ವ ಎಂಬ ಜಾತಿಯನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ ಅಕಾರಾದಿವರ್ಣಗಳಲ್ಲಿ ರೂಢವಾಗಿದೆ. ಆದ್ದರಿಂದ ಶಬ್ದವು ಒಂದೇ ಆಗಿದ್ದರೂ ಈ ಶಬ್ದದ ಧರ್ಮವು

ಬೇರೆ ಬೇರೆ ಆಗಿರುವುದರಿಂದ ಧರ್ಮಗಳ ಭೇದದಿಂದಷ್ಟೇ ಯೋಗ ಹಾಗೂ ರೂಢಿಯೆಂದು ಈ ಅಕ್ಷರಶಬ್ದವನ್ನು ಕರೆಯಲಾಗಿದೆ. ಹೊರತಾಗಿ ಒಂದೇ ಅರ್ಥದಲ್ಲಿ ಯೋಗರೂಢವೆಂದು ಹೇಳಬಾರದು. ಹೀಗೆ ವ್ಯತ್ಯಾಸವಿದೆ.

ಹಾಗಾದರೆ ಪ್ರಥಮಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಇಂದ್ರಾದಿ ಶಬ್ದಗಳೂ ಕೂಡ ಅನ್ಯತ್ರಪ್ರಸಿದ್ಧವೆಂದೆನಿಸಲಾರವು. ಏಕೆಂದರೆ ಅವುಗಳಲ್ಲಿಯೂ ಪರಮೈಶ್ವರ್ಯಾದಿ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ ಉಭಯಸಾಧಾರಣ್ಯವನ್ನು ಹೇಳಲು ಬರುವುದರಿಂದ ಉಭಯತ್ರಪ್ರಸಿದ್ಧತ್ವವನ್ನೇ ಅವುಗಳಿಗೂ ಹೇಳಬೇಕಲ್ಲವೇ? ಎಂಬುದು ಇಲ್ಲಿ ಬರುವ ಮತ್ತೊಂದು ಗೊಂದಲ. ಆದರೆ ನಮ್ಮ ಬುದ್ಧಿಯ ವಿವಕ್ಷೆಯಿಂದಷ್ಟೇ ಆಯಾಶಬ್ದಗಳನ್ನು ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧವೆಂದು ಪರಿಗಣಿಸಬೇಕು. ಕೇವಲ ರೂಢ್ಯರ್ಥವನ್ನಷ್ಟೇ ಸ್ವೀಕರಿಸಿ ಇಂದ್ರಾದಿ ಶಬ್ದಗಳನ್ನು ಅನ್ಯತ್ರಪ್ರಸಿದ್ಧವೆಂದು ಪ್ರಥಮಪಾದದಲ್ಲಿ ವಿವಕ್ಷಿಸಲಾಗಿದೆ. ಒಂದು ವೇಳೆ ಪರಮೈಶ್ವರ್ಯಾದಿ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿದರೆ ಅಂತಹ ಶಬ್ದಗಳೆಲ್ಲವೂ ಉಭಯತ್ರಪ್ರಸಿದ್ಧವೆನಿಸುವುದರಿಂದ ಈ ಪಾದದಲ್ಲಿಯೇ ಅವುಗಳ ಸಮನ್ವಯವು ಸಿದ್ಧವಾಗುತ್ತದೆಂಬ ಉತ್ತರವನ್ನು ತಿಳಿಯಬೇಕು.

### *ಮೂರನೆಯ ಬಗೆಯಲ್ಲಿ ಉಭಯತ್ರಪ್ರಸಿದ್ಧತ್ವದ ಲಕ್ಷಣ*

ಅಥವಾ ನಿತ್ಯದೇಹತ್ವವನ್ನು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆಂದು ಹೇಳಬಹುದು. ನಿತ್ಯದೇಹತ್ವವು ಸರ್ವಾಧಾರತ್ವದ ಅನ್ಯಥಾನುಪಪತ್ತಿಯಿಂದ ಪ್ರವೃತ್ತಿನಿಮಿತ್ತವೆಂದು ಸಿದ್ಧವಾಗುತ್ತದೆ. ಇಂತಹ ನಿತ್ಯದೇಹತ್ವವೆಂಬ ಪ್ರವೃತ್ತಿನಿಮಿತ್ತವು ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಸಾಧಾರಣವಾಗಿದೆಯೆಂದೂ ಸಹ ಹೇಳಬಹುದು.

ಟೀಕೆಯಲ್ಲಿ ಅಕ್ಷರಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರೆ. ಇದೇನೂ ತಪ್ಪಲ್ಲ. ಈಗಾಗಲೇ ಸಮರ್ಥಿಸಿದ ಮೂರು ವಿಧವಾದ ಪಕ್ಷಗಳಲ್ಲಿಯೂ ಅಕ್ಷರಶಬ್ದಕ್ಕೆ ನಾಮಾತ್ಮಕತ್ವವನ್ನು ಒಪ್ಪಲಾಗಿದೆ. ಕೇವಲ ಯೌಗಿಕಪಕ್ಷವನ್ನು ವಿವಕ್ಷಿಸಿದಾಗ ಅಕಾರಾದಿ ವರ್ಣಗಳಲ್ಲಿ ಅಕ್ಷರಶಬ್ದವು ರೂಢವಾಗಿರುವ ಪ್ರಯುಕ್ತ ನಾಮಾತ್ಮಕವಾಗಿದೆಯೆಂದು, ಯೋಗರೂಢಪಕ್ಷದಲ್ಲಿ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿಯೂ ನಾಮಾತ್ಮಕವಾಗಿದೆಯೆಂದು, ಕೇವಲ ನಾಮಾತ್ಮಕವೆಂಬ ಪಕ್ಷದಲ್ಲಂತೂ ನಾಮಾತ್ಮಕವೆಂದು ಹೇಳಿದ್ದು ಸಮಂಜಸವೇ ಆಗುತ್ತದೆ.

### *ನಾಲ್ಕು ಬಗೆಯಲ್ಲಿ ಅವಾಂತರ ಸಂಗತಿ*

ಸೂತ್ರಕಾರರ ಅಧಿಕರಣ ರಚನೆಯು ಬಹಳ ಸ್ವಾರಸ್ಯಮಯವಾಗಿದೆ. ಈ ಅಧಿಕರಣಗಳ ಈ ಕ್ರಮಕ್ಕೆ ನಾಲ್ಕು ರೀತಿ ಕಾರಣವನ್ನು ತಿಳಿಯಬಹುದು - ಏಕೆಂದರೆ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ದ್ಯುಭ್ವಾದ್ಯಾಯತನತ್ವವನ್ನು ಜಡವಾದ ಪ್ರಕೃತಿ ಹಾಗೂ ಸಕಲಜೀವರಲ್ಲಿ ನಿರಾಕರಿಸಿ ಅದನ್ನು ವಿಷ್ಣುವಿನಲ್ಲಿ ಸಮರ್ಥಿಸಿದರು. ಎರಡನೆಯ ಭೂಮಾಧಿಕರಣದಲ್ಲಿ ಸಕಲಜೀವರಿಗಿಂತ ಶ್ರೇಷ್ಠರಾದ ಮುಖ್ಯಪ್ರಾಣದೇವರಲ್ಲಿ ಭೂಮತ್ವವನ್ನು ನಿರಾಕರಿಸಿ ಅದನ್ನು ವಿಷ್ಣುವಿನಲ್ಲಿ ಸಮರ್ಥಿಸಿದರು. ಮೂರನೆಯ ಈ ಅಕ್ಷರಾಧಿಕರಣದಲ್ಲಿ ಲಕ್ಷ್ಮೀದೇವಿಯಲ್ಲಿರುವ ಅಕ್ಷರತ್ವವನ್ನು ನಿರಾಕರಿಸಿ ವಿಷ್ಣುವಿನಲ್ಲಿ ಅದನ್ನು ಸಮನ್ವಯ ಮಾಡುತ್ತಿರುವುದರಿಂದ ಅಧಿಕರಣಗಳ ತಾರತಮ್ಯವು ಅತ್ಯಂತ ಸಂಗತವಾಗಿದೆ.

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಕೇವಲ ಬಹಿರಂಗವಾದ ಎರಡು ಸಮಾಖ್ಯಾಪ್ರಮಾಣಗಳಿಂದಲೇ ಆಕ್ಷೇಪ ಮಾಡಿದರು, ಮತ್ತೆ ಎರಡನೆಯ ಭೂಮಾಧಿಕರಣದಲ್ಲಿ ಸಮಾಖ್ಯಾ-ಪ್ರಮಾಣಕ್ಕಿಂತಲೂ ಬಲಿಷ್ಠವಾದ ಉಪಕ್ರಮಪ್ರಮಾಣವನ್ನು ಆಶ್ರಯಿಸಿದರು. ಹಾಗೂ ಈ ಅಧಿಕರಣದಲ್ಲಿ ಆ ಎರಡು ಪ್ರಮಾಣಗಳಿಗಿಂತಲೂ ಬಲಿಷ್ಠವಾದ ಪ್ರವೃತ್ತಿನಿಮಿತ್ತದಿಂದ ಆಕ್ಷೇಪ ಮಾಡಿ ವಿಷ್ಣುವಿನಲ್ಲಿ ಅಕ್ಷರಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ.

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಬೇರೆ ಬೇರೆ ಪ್ರಕರಣಗಳಲ್ಲಿರುವ ಧರ್ಮಗಳಿಗೆ ವಿರೋಧಗಳನ್ನು ಪರಿಹರಿಸಿದರು. ಎರಡನೆಯ ಭೂಮಾಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ ಧರ್ಮಗಳಿಗೆ ವಿರೋಧವನ್ನು ಪರಿಹರಿಸಿದರು. ಈ ಅಧಿಕರಣದಲ್ಲಿ ಒಂದೇ ವಾಕ್ಯದಲ್ಲಿರುವ ಧರ್ಮಗಳಿಗೆ ವಿರೋಧವನ್ನು ಪರಿಹರಿಸುತ್ತಿದ್ದಾರೆ.

ಅಥವಾ ಹಿಂದಿನೆರಡು ಅಧಿಕರಣಗಳಲ್ಲಿ ಕೇವಲ ಒಂದೊಂದು ಧರ್ಮಗಳಿಗೆ ವಿರೋಧವನ್ನು ಪರಿಹರಿಸಿದರು, ಆದರೆ ಈ ಅಧಿಕರಣದಲ್ಲಿ ಅನೇಕ ಧರ್ಮಗಳಿಗಿರುವ ವಿರೋಧವನ್ನು ಪರಿಹರಿಸಿದ್ದಾರೆ.

*ಸಂಶಯ ಪರಂಪರೆ*

'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನು ಸ್ವೀಕರಿಸದೇ, ಉಳಿದ ಪದಾರ್ಥಗಳನ್ನಷ್ಟೇ ಅರ್ಥವನ್ನಾಗಿ ವ್ಯಾಖ್ಯಾನಿಸಬೇಕು. ಅಂತಹ ಆಕಾಶಾದಿ ಜಡಪದಾರ್ಥಗಳಿಗೆ ಆಶ್ರಯಳಾದವಳು ಲಕ್ಷ್ಮೀದೇವಿಯೆಂದು ಆವಾಗ ಹೇಳಬಹುದು. ಆದ್ದರಿಂದ ಲಕ್ಷ್ಮೀದೇವಿಯೇ ಅಕ್ಷರಶಬ್ದವಾಚ್ಯಳಾಗುತ್ತಾಳೆಂಬುದು ಪೂರ್ವಪಕ್ಷಕಾರರ ಉದ್ದೇಶ.

'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನವು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯ ತನಕ ಇರುವ ಸಕಲಪದಾರ್ಥಗಳನ್ನು ವಿವಕ್ಷಿಸಬೇಕು. ಅಂತಹ ಸಕಲಪದಾರ್ಥಗಳಿಗೆ ಆಶ್ರಯನಾದವನು ವಿಷ್ಣು ಒಬ್ಬನೇ ಆಗುತ್ತಾನೆ. ಆದ್ದರಿಂದ ವಿಷ್ಣುವೇ ಅಕ್ಷರಶಬ್ದವಾಚ್ಯನಾಗುತ್ತಾನೆಂಬುದು ಸಿದ್ಧಾಂತಿಗಳ ಉದ್ದೇಶ.

*ನಿರವಕಾಶವಾದ ಶ್ರುತಿಯ ಬಲದಿಂದ ಪೂರ್ವಪಕ್ಷ*

ಅಕ್ಷರಶಬ್ದದಿಂದ ಪ್ರತಿಪಾದ್ಯಳಾದವಳು ಲಕ್ಷ್ಮೀದೇವಿಯೆಂದು ಪೂರ್ವಪಕ್ಷ. ವಿಷ್ಣುವು ಕ್ಷರಾಕ್ಷರ ಪುರುಷಾತೀತನಾದ್ದರಿಂದ ಅಕ್ಷರನೆನಿಸುವುದಿಲ್ಲ. ಲಕ್ಷ್ಮೀದೇವಿ ಮಾತ್ರ ಅಕ್ಷರಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ. 'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿ ವಾಕ್ಯಗಳಲ್ಲಿರುವ ಅಕ್ಷರಶಬ್ದದಿಂದಲೂ ಸಹ ಲಕ್ಷ್ಮೀದೇವಿಯೇ ಪ್ರತಿಪಾದ್ಯಳು ಹೊರತು; ವಿಷ್ಣುವಲ್ಲ. ಆದ್ದರಿಂದ ಯಾವುದೇ ಶ್ರುತಿಗಳಲ್ಲಿರುವ ಅಕ್ಷರಶಬ್ದವು ಲಕ್ಷ್ಮೀದೇವಿಯನ್ನಷ್ಟೇ ಪ್ರತಿಪಾದಿಸುವ ಪ್ರಯುಕ್ತ ಅಕ್ಷರಶ್ರುತಿಯು ನಿರವಕಾಶವಾಗಿದೆ. ಇಂತಹ ನಿರವಕಾಶವಾದ ಶ್ರುತಿಯ ಬಲದಿಂದ ಲಕ್ಷ್ಮೀದೇವಿಯು ಅಕ್ಷರಳೆಂದು ನಿರ್ಣಯಿಸಬೇಕು.

ವೈದಿಕಪ್ರಯೋಗವನ್ನೆಲ್ಲಾ ಲಕ್ಷ್ಮೀದೇವಿಯಲ್ಲಿಯೇ ಪೂರ್ವಪಕ್ಷದಲ್ಲಿ ಹೇಳುವುದಾದರೆ, ಉಭಯತ್ರಪ್ರಸಿದ್ಧವೆಂದು ಹೇಗೆ ಪರಿಗಣಿಸುವುದು ಎಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಆದರೆ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತದಿಂದ ಸಾಧಾರಣ್ಯದಿಂದಷ್ಟೇ ಅಕ್ಷರಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೆ ಹೊರತು, ಅಕ್ಷರಶಬ್ದದ ಪ್ರಯೋಗವು ಎರಡೂ ಕಡೆ ಸಮಾನವಾದ್ದರಿಂದ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಬಾರದು.

*ಅನಶನತ್ವಲಿಂಗದಿಂದಲೇ ಪೂರ್ವಪಕ್ಷ*

ಅಥವಾ ಸೂರ್ಯಚಂದ್ರಾದ್ಯಾಧಾರತ್ವ, ಅದೃಶ್ಯತ್ವ ಮೊದಲಾದ ಲಿಂಗಗಳು ಲಕ್ಷ್ಮೀದೇವಿ ಯಲ್ಲಿರುವಂತೆ ವಿಷ್ಣುವಿನಲ್ಲೂ ಸಹ ಒಪ್ಪೋಣ. ಆದರೆ 'ನ ತದಶ್ನಾತಿ ಕಿಂಚನ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನತ್ವವನ್ನು

ವಿಷ್ಣುವಿನಲ್ಲಿ ಹೇಳಲು ಸಾಧ್ಯವಿಲ್ಲ. 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಂತೆ ಸಕಲ ಭಕ್ಷಕನಾದ ವಿಷ್ಣುವಿನಲ್ಲಿ ಏನನ್ನೂ ತಿನ್ನುವುದಿರುವಿಕೆಯು ಕೂಡುವುದಿಲ್ಲ. ಹಾಗಾಗಿ ಸ್ವತಂತ್ರವಾಗಿ ಏನನ್ನೂ ತಿನ್ನದ ಲಕ್ಷ್ಮೀದೇವಿಯಲ್ಲಿಯೇ ಈ ಅನತ್ತೃತ್ವವು ಉಪಪನ್ನವಾಗುತ್ತದೆ. ನಿರವಕಾಶವಾದ ಈ ಒಂದೇ ಒಂದು ಅನಶನತ್ವಲಿಂಗದ ಬಲದಿಂದ ಪೂರ್ವಪಕ್ಷವು ಬಲಿಷ್ಠವಾಗುತ್ತದೆ. ಈ ಲಿಂಗಕ್ಕೆ ಅನುಸಾರಿಯಾಗಿ 'ಅಂಬರಾಂತಧೃತಿ', 'ಪ್ರಶಾಸನ' ಮೊದಲಾದ ಲಿಂಗಗಳೆಲ್ಲವನ್ನೂ ಲಕ್ಷ್ಮೀದೇವಿಯಲ್ಲಿಯೇ ಕೂಡಿಸಬೇಕು. ಆದ್ದರಿಂದ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೇ ಅಕ್ಷರಶಬ್ದವಾಚ್ಯಳಾಗುತ್ತಾಳೆ ಹೊರತು, ಮಹಾವಿಷ್ಣು ಆ ಅಕ್ಷರಶಬ್ದವಾಚ್ಯನಾಗುವುದಿಲ್ಲವೆಂಬುದು ಎರಡನೆಯ ಪೂರ್ವಪಕ್ಷ.

*ಮಹಾವಿಷ್ಣುವೇ 'ಅಕ್ಷರ' ಎಂದು ಸಿದ್ಧಾಂತ*

ಸಿದ್ಧಾಂತ ಹೀಗಿದೆ - ಅಕ್ಷರಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಹೊರತು, ಲಕ್ಷ್ಮೀದೇವಿಯಲ್ಲ. ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವಿನಾಶಿತ್ವವು ಪುಷ್ಕಳವಾಗಿ ಮತ್ತು ಸ್ವತಂತ್ರವಾಗಿ ಮಹಾವಿಷ್ಣುವಿನಲ್ಲಿ ಮಾತ್ರ ಇರುವ ಪ್ರಯುಕ್ತ ಅವನೇ ಅಕ್ಷರನಾಗಬೇಕು. ಅನೇಕ ಶ್ರುತಿ, ಸ್ಮೃತಿಗಳಲ್ಲಿ ಬ್ರಹ್ಮನನ್ನು ಅಕ್ಷರನೆಂದು ಹೇಳಿದ್ದಷ್ಟೇ ಅಲ್ಲದೆ, ಉತ್ತಮಾಕ್ಷರನೆಂಬ ಪ್ರಸಿದ್ಧಿಯೂ ಸಹ ಇದೆ.

'ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬ ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಸರ್ವತ್ರಪ್ರಕಾಶಮಾನಳಾದ ಲಕ್ಷ್ಮೀದೇವಿಯೆಂದರ್ಥ. ಸಕಲಪದಾರ್ಥಗಳಿಗೆ ಲಕ್ಷ್ಮೀದೇವಿಯು ಆಶ್ರಯಳಾಗಿದ್ದಾಳೆ. ಇಂತಹ ಲಕ್ಷ್ಮೀದೇವಿಗೂ ಸಹ ಮಹಾವಿಷ್ಣು ಆಧಾರನಾಗಿದ್ದಾನೆ. ಇಂತಹ ಲಕ್ಷ್ಮೀದೇವಿಗೂ ಆಧಾರನಾದವನು ಮಹಾವಿಷ್ಣುವೆಂದು 'ಏತಸ್ಮಿನ್ ಖಲ್ವಕ್ಷರೇ' ಇತ್ಯಾದಿ ಶ್ರುತಿಯು ಪ್ರತಿಪಾದಿಸುತ್ತಿದೆ. ಒಂದು ವೇಳೆ ಅಕ್ಷರಶಬ್ದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನು ಹೇಳಿದರೆ ಆಕಾಶನಾಮಕಳಾದ ಲಕ್ಷ್ಮೀದೇವಿಗೆ ತಾನೇ ಆಶ್ರಯಳೆಂದು ಹೇಳಿದಂತಾಗುತ್ತದೆ. ಇದು ಅಯುಕ್ತವಾದ ಕಾರಣ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನು ಸ್ವೀಕರಿಸಿ ಅಕ್ಷರಶಬ್ದಕ್ಕೆ ಮಹಾವಿಷ್ಣು ಎಂಬರ್ಥವನ್ನು ಸ್ವೀಕರಿಸಬೇಕು. ಇದನ್ನೇ ಸೂತ್ರಕಾರರು 'ಅಂಬರಾಂತಧೃತೇಃ' ಎಂದು ಹೇಳಿರುತ್ತಾರೆ. ಲಕ್ಷ್ಮೀದೇವಿಯನ್ನು ಧರಿಸಿರುವಿಕೆ ಎಂಬ ಹೇತು, ವಿಷ್ಣುವಿನಲ್ಲಿ ಬಿಟ್ಟು ಬೇರೆ ಯಾರಲ್ಲೂ ಸಹ ಬಾರದ ಕಾರಣ ಅಕ್ಷರಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂಬುದು ಸೂತ್ರದ ಅಭಿಪ್ರಾಯ.

ಸಕಲ ಪದಾರ್ಥಗಳು ಆಕಾಶದಲ್ಲಿ ಓತಪ್ರೋತವಾಗಿವೆ ಎಂಬುದಕ್ಕೆ ಉಪಾದೇಯವಾಗಿವೆ ಅಥವಾ ಆಧೇಯವಾಗಿವೆಯೆಂಬುದಾಗಿ ಪೂರ್ವಪಕ್ಷಕಾರರು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಆದರೆ 'ಕಸ್ಮಿನ್ನು ಖಲ್ವಿಂದ್ರಲೋಕಾ ಓತಾಶ್ಚ ಪ್ರೋತಾಶ್ಚ' ಇತ್ಯಾದಿಯಾದ ಅದೇ ಪ್ರಕರಣದಲ್ಲಿರುವ 'ಓತ' 'ಪ್ರೋತ' ಶಬ್ದಗಳಿಗೆ ಆಧೇಯತ್ವವನ್ನಾಗಲೀ ಉಪಾದೇಯತ್ವವೆಂಬರ್ಥವನ್ನಾಗಲೀ ಹೇಳಲು ಸಾಧ್ಯವಿಲ್ಲ ಹೊರತು, ಪೋಷ್ಯತ್ವ ಎಂಬರ್ಥವನ್ನೇ ಹೇಳಬೇಕು. ಅದರಂತೆ ಇಲ್ಲಿಯೂ ಸಹ ಆಕಾಶದಿಂದ ಸಕಲ ಪದಾರ್ಥಗಳು ಪೋಷ್ಯವಾಗಿವೆ. ಅಂದರೆ ಲಕ್ಷ್ಮೀದೇವಿಯು ಸಕಲಪದಾರ್ಥಗಳನ್ನು ಪೋಷಣೆ ಮಾಡುತ್ತಾಳೆ. ಇಂತಹ ಲಕ್ಷ್ಮೀದೇವಿಯನ್ನು ಪರಮಾತ್ಮನು ಪೋಷಣೆ ಮಾಡುತ್ತಾನೆ ಎಂಬರ್ಥವನ್ನೇ ಹೇಳಬೇಕು. ಆದ್ದರಿಂದ ಯಾವುದೇ ಬಾಧಕಗಳಿಲ್ಲವೆಂದು ತಿಳಿಯಬೇಕು.

*ಪ್ರಶಾಸನ ಹಾಗೂ ಪ್ರಾಕೃತಸ್ಥೌಲ್ಯಾದಿರಾಹಿತ್ಯ ಎಂಬೆರಡು ಹೇತುಗಳೂ ನಿರವಕಾಶವಾಗಿವೆ*

ಯಾವರೀತಿಯಾಗಿ ಪ್ರಥಮ ಸೂತ್ರದಲ್ಲಿರುವ 'ಅಂಬರಾಂತಧೃತಿ' ಎಂಬ ಹೇತು ನಿರವಕಾಶವಾಗಿದೆಯೋ, ಅದರಂತೆ ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನ ಎಂಬ ಹೇತು, ಮತ್ತು ಮೂರನೆಯ ಸೂತ್ರದಲ್ಲಿ ಹೇಳಲ್ಪಟ್ಟ

ಪ್ರಾಕೃತ ಸ್ಥೌಲ್ಯಾದಿರಾಹಿತ್ಯವೆಂಬ ಹೇತುಗಳೂ ಸಹ ನಿರವಕಾಶವೇ ಆಗಿವೆ. ಪ್ರಶಾಸನ ಎಂಬ ಹೇತುವಿನಲ್ಲಿ 'ಪ್ರ' ಎಂಬ ಉಪಸರ್ಗವು ಅಸಂಕುಚಿತವಾಗಿರುವಿಕೆ ಮತ್ತು ಸ್ವತಂತ್ರವಾಗಿರುವಿಕೆ ಎಂಬ ಉತ್ಕರ್ಷವನ್ನು (ಶಾಸನ) ಆಜ್ಞೆಯಲ್ಲಿ ಹೇಳುತ್ತಿದೆ. ಸಾಮಾನ್ಯವಾದ ಆಜ್ಞೆಯು ಇತರ ದೇವತೆಗಳಲ್ಲಿರಬಹುದಾದರೂ ಅಸಂಕುಚಿತವಾದ ಸ್ವತಂತ್ರವಾದ ಆಜ್ಞೆ ವಿಷ್ಣುವಿನಲ್ಲಿ ಮಾತ್ರ ಇರುತ್ತದೆ. ಆದ್ದರಿಂದ ನಿರವಕಾಶವೆಂದು ತಿಳಿಯಬೇಕು.

ಮೂರನೆಯ ಸೂತ್ರದಲ್ಲಿ ಸ್ಥೌಲ್ಯಾದಿರಾಹಿತ್ಯವನ್ನು ಹೇಳಿರುತ್ತಾರೆ. ಇಲ್ಲಿ ಹೇಳಲ್ಪಟ್ಟ ಸ್ಥೌಲ್ಯಾದಿರಾಹಿತ್ಯಕ್ಕೆ ಪ್ರಾಕೃತಸ್ಥೌಲ್ಯಾದಿರಾಹಿತ್ಯವೆಂದೇ ವಿವಕ್ಷಿಸಬೇಕು. ಮತ್ತು ಸ್ವತಂತ್ರವಾಗಿದೆಯೆಂದು ವಿವಕ್ಷಿಸಬೇಕು. ಸ್ವತಂತ್ರವೂ ಪ್ರಾಕೃತವೂ ಅಲ್ಲದ ಸ್ಥೌಲ್ಯ, ಅಣುತ್ವ ಮೊದಲಾದ ಧರ್ಮಗಳು ಪರಮಾತ್ಮನನ್ನು ಬಿಟ್ಟು ಬೇರೆ ಯಾರಲ್ಲೂ ಸಹ ಬರಲು ಸಾಧ್ಯವಿಲ್ಲ.

## *ಬ್ರಹ್ಮನು ಸ್ಥೂಲನೂ ಅಲ್ಲ ಅಣುವೂ ಅಲ್ಲ*

ಬ್ರಹ್ಮನಲ್ಲಿ ಶ್ರುತಿಯು ಸ್ಥೌಲ್ಯ, ಅಣುತ್ವ ಮೊದಲಾದ ಧರ್ಮಗಳೆಲ್ಲವನ್ನೂ ಸಹ ನಿಷೇಧ ಮಾಡುತ್ತಿದೆ. ವಾಸ್ತವಿಕವಾಗಿ ಸ್ಥೂಲತ್ವವನ್ನು ನಿಷೇಧ ಮಾಡಿದ ಮೇಲೆ ಅಣುತ್ವವನ್ನು ವಿಧಾನ ಮಾಡಲೇ ಬೇಕು. ಅಣುತ್ವವೂ, ಸ್ಥೂಲತ್ವವೂ ಇಲ್ಲದ ವಸ್ತುವಿರಲು ಸಾಧ್ಯವಿಲ್ಲ. ಆದರೆ ಮಹಾವಿಷ್ಣುವು ಅಪ್ರಾಕೃತಸ್ವರೂಪನಾದ್ದರಿಂದ ಪ್ರಾಕೃತಸ್ಥೂಲತ್ವವಾಗಲೀ, ಪ್ರಾಕೃತವಾದ ಅಣುತ್ವವಾಗಲೀ ಅವನಲ್ಲಿ ಇರುವುದಿಲ್ಲವೆಂದು ಹೇಳಬಹುದು. ಅಪ್ರಾಕೃತಸ್ವರೂಪನಲ್ಲಿ ಪ್ರಾಕೃತವಾದ ಎರಡು ವಿರುದ್ಧಧರ್ಮಗಳ ಅಭಾವವನ್ನು ಹೇಳುವುದರಿಂದ ಯಾವುದೇ ಬಾಧಕಗಳಿರುವುದಿಲ್ಲ.

## *ಭಗವಂತನಲ್ಲಿರುವ ಧರ್ಮಗಳಿಗೆ ವಿರೋಧವಿಲ್ಲ*

'ಅಸ್ಥೂಲೋ ಅನಣುಃ' ಇತ್ಯಾದಿ ಶ್ರುತಿಯು ಅಣುತ್ವ ಮೊದಲಾದ ವಿರುದ್ಧ ಧರ್ಮಗಳನ್ನು ಭಗವಂತನಲ್ಲಿ ಹೇಳುತ್ತಿದೆಯೆಂದೇ ವ್ಯಾಖ್ಯಾನಿಸಬಹುದು. ಒಬ್ಬನೇ ಪರಮಾತ್ಮನಲ್ಲಿ ಅಣುತ್ವಮಹತ್ವಗಳೆರಡನ್ನೂ ಸಹ ಒಪ್ಪಲು ಹೇಗೆ ಸಾಧ್ಯ ? ಯಾವ ಪದಾರ್ಥವು ಅಣುವಾಗಿರುತ್ತದೋ, ಅದು ಮಹತ್ತಾಗಲು ಸಾಧ್ಯವಿಲ್ಲ. ಅಥವಾ ಮಹತ್ತಾಗಿರುವ ಪದಾರ್ಥವು ಅಣುವಾಗಲೂ ಸಹ ಸಾಧ್ಯವಿಲ್ಲವೆಂದು ಲೋಕದಲ್ಲಿ ಅನುಭವಸಿದ್ಧವಾಗಿದೆ. ಹೀಗಿರುವಾಗ ಪರಮಾತ್ಮನ ವಿಷಯದಲ್ಲಿ ಇಂತಹ ವಿರುದ್ಧ ಧರ್ಮವನ್ನು ಒಪ್ಪುವ ಮೂಲಕ ಶ್ರುತಿಯನ್ನು ವ್ಯಾಖ್ಯಾನಿಸುವುದು ತಪ್ಪಲ್ಲವೇ? ಎಂದು ಶಂಕೆಯು ಪ್ರಾಪ್ತವಾಗುತ್ತದೆ. ಆದರೆ ಬೇರೆ ಬೇರೆ ಕಡೆ ವಿರುದ್ಧವಾಗಿ ಕಂಡಿರುವ ಪದಾರ್ಥಗಳು ಕೆಲವೆಡೆ ಒಟ್ಟಿಗೆ ಇರುವುದು ಲೋಕದಲ್ಲಿಯೇ ಕಂಡಿದೆ. ಪೂರ್ವಮೀಮಾಂಸೆಯಲ್ಲಿಯೂ ಸಹ ಇಂತಹ ದೃಷ್ಟಾಂತಗಳು ಅನೇಕವಿರುತ್ತವೆ. ಅಥವಾ ಭಗವಂತನಲ್ಲಿ ಇಂತಹ ಧರ್ಮಗಳಿಗೆ ವಿರೋಧವಿಲ್ಲವೆನ್ನಲು ಪ್ರತ್ಯಕ್ಷ, ಅನುಮಾನ, ಆಗಮಗಳೆಂಬ ಪ್ರಮಾಣಗಳೇ ಆಧಾರವಾಗಿವೆ. ಶ್ರೀಕೃಷ್ಣನ ಪುಟ್ಟ ಮುಖಕಮಲದಲ್ಲಿ ಯಶೋದಾದೇವಿಯು ಸಮಗ್ರ ಬ್ರಹ್ಮಾಂಡವನ್ನೇ ಕಂಡಳು. ಶ್ರೀಕೃಷ್ಣನ ಬಾಯಿ ಅತ್ಯಂತ ಸಣ್ಣದಾಗಿದೆ. ಅಂತಹ ಸಣ್ಣ ಬಾಯಿಯಲ್ಲಿ ಇಷ್ಟು ದೊಡ್ಡ ಜಗತ್ತನ್ನು ಕಾಣಬೇಕೆಂದರೆ ಮಹತ್ತ್ವವು ಇರಲೇಬೇಕಲ್ಲವೇ? ಹೀಗೆ ಅಣುತ್ವ-ಮಹತ್ತ್ವಗಳೆರಡೂ ಒಟ್ಟಿಗೆ ಇರಲು ಯಶೋದೆಯ ಪ್ರತ್ಯಕ್ಷವೇ ಪ್ರಮಾಣ. ಅಥವಾ ಒಂದೇ ಹಗ್ಗದಿಂದ ಕೃಷ್ಣನನ್ನು ಒರಳುಕಲ್ಲಿಗೆ ಕಟ್ಟಿಹಾಕಿದ ಕಥೆಯನ್ನು ನಾವು ಕೇಳುತ್ತೇವೆ. ಅಷ್ಟೇ ಅಲ್ಲದೆ, ಅನೇಕ ಹಗ್ಗಗಳನ್ನು ಸೇರಿಸಿದಾಗಲೂ ಅವನನ್ನು ಕಟ್ಟಲು ಸಾಧ್ಯವಾಗದ ಕಥೆಯನ್ನೂ ಸಹ ಕೇಳಿದ್ದೇವೆ. ಇದರಿಂದ ಅವನಲ್ಲಿ ಅಣುತ್ವ-ಮಹತ್ತ್ವಗಳೆರಡೂ ಒಟ್ಟಿಗೆ ಇರುತ್ತವೆಂದು ಅನುಮಾನ ಮಾಡಬಹುದು. 'ಅಣೋರಣೀಯಾನ್ ಮಹತೋ ಮಹೀಯಾನ್' ಇತ್ಯಾದಿ ಆಗಮಗಳೂ ಸಹ ಈ ವಿಷಯದಲ್ಲಿ

ಪ್ರಮಾಣಗಳಾಗಿವೆ. ಆದ್ದರಿಂದ ಬೇರೆಡೆ ವಿರುದ್ಧವಾದ ಧರ್ಮಗಳನ್ನು ಪರಮಾತ್ಮನಲ್ಲಿ ಒಟ್ಟಿಗೆ ಒಪ್ಪಿದಾಗ ಯಾವುದೇ ವಿರೋಧಕ್ಕೂ ಸಹ ಆಸ್ಪದವಿಲ್ಲವೆಂಬ ಪ್ರಮೇಯವನ್ನು ಅವಶ್ಯವಾಗಿ ತಿಳಿಯಬೇಕು. ಪರಮಾತ್ಮನ ಅಚಿಂತ್ಯಾದ್ಭುತ - ಶಕ್ತಿಯಿಂದ ಭೇದಪ್ರತಿನಿಧಿಯಾದ ವಿಶೇಷದ ಬಲದಿಂದ ಇವುಗಳ ವಿರೋಧವು ಪರಿಹಾರವಾಗುತ್ತವೆ.

### *ಲೌಕಿಕದೃಷ್ಟಾಂತದಿಂದಲೂ ಅಣುತ್ವ-ಮಹತ್ತ್ವಗಳ ವಿರೋಧ ಪರಿಹಾರ*

ಪರಮಾತ್ಮನಲ್ಲಿರುವ ಅಣುತ್ವ-ಮಹತ್ತ್ವಗಳಿಗೆ ವಿರೋಧವಿರುವುದಿಲ್ಲವೆಂದು ಪ್ರಮಾಣಗಳ ಆಧಾರದಿಂದ ಸಮರ್ಥಿಸಿದ್ದಾಯಿತು. ಲೌಕಿಕದೃಷ್ಟಾಂತದ ಬಲದಿಂದಲೂ ವಿರೋಧವಿಲ್ಲವೆಂದು ತಿಳಿಯಬಹುದು. ಆಕಾಶ ಮೊದಲಾದ್ದರಲ್ಲಿ ಮಹತ್‌ಪರಿಣಾಮವಿರುವುದು ಸರ್ವಾನುಭವಸಿದ್ಧವಾಗಿದೆ. ಇಂತಹ ಆಕಾಶಾದಿಗಳಲ್ಲಿಯೇ ಅಣುಪರಿಮಾಣವೂ ಸಹ ಇರುತ್ತದೆಂಬುದನ್ನು ಗಮನಿಸಬೇಕು. ಏಕೆಂದರೆ ಪರಮಾಣುವಿನ ಸಂಯೋಗ ಆಕಾಶದಲ್ಲಿ ಉಂಟಾಗುತ್ತದೆ. ಯಾವ ಪದಾರ್ಥದಿಂದ ಯಾವ ಪದಾರ್ಥಕ್ಕೆ ಸಂಬಂಧವಾಗುತ್ತದೋ, ಅದರಲ್ಲಿ ಸಮಾನ ಪರಿಮಾಣವನ್ನು ಒಪ್ಪಲೇ ಬೇಕು. ಒಂದು ಸಣ್ಣ ಸೂಜಿಯ ತುದಿಯು ಪರ್ವತದ ಪ್ರದೇಶಕ್ಕೆ ಸಂಬದ್ಧವಾಯಿತೆಂದರೆ ಆ ಸೂಜಿಯ ಸಣ್ಣ ಭಾಗದಷ್ಟೇ ಪರಿಮಾಣವನ್ನು ಆ ಪರ್ವತದ ಸಂಬದ್ಧಭಾಗಕ್ಕೆ ಒಪ್ಪುವುದು ಅನುಭವಸಿದ್ಧವಾಗಿದೆ. ಅದರಂತೆ ಪರಮಾಣುವಿನ ಸಂಯೋಗವು ಆಕಾಶದಲ್ಲಿ ಉಂಟಾದರೆ ಪರಮಾಣುವಿನ ಪರಿಮಾಣವೇ ಆಕಾಶದಪ್ರದೇಶಲ್ಲಿದೆಯೆಂದು ಹೇಳಿದಂತಾಗುತ್ತದೆ. ಆಕಾಶಪ್ರದೇಶ ಹಾಗೂ ಆಕಾಶ ಎರಡಕ್ಕೂ ಅಭೇದವಿರುವುದರಿಂದ ಆಕಾಶವೂ ಸಹ ಅಣುಪರಿಮಾಣವುಳ್ಳದ್ದೆಂದು ಸಿದ್ಧವಾಗುತ್ತದೆ.

### *ಪುನರುಕ್ತಿ ಪರಿಹಾರ ಮತ್ತು ಸೂತ್ರಕ್ರಮ ಸ್ವಾರಸ್ಯ ವರ್ಣನೆ*

ಅಕ್ಷರನಾಮಕನಿಗೆ ಅನಶನವನ್ನು ಶ್ರುತಿಯು ಹೇಳುತ್ತಿದೆ. ಅಕ್ಷರನೇ ಪರಮಾತ್ಮನಾದಲ್ಲಿ ಪರಮಾತ್ಮನು ಏನನ್ನೂ ಸಹ ತಿನ್ನುವುದಿಲ್ಲವೆಂದು ಹೇಳಿದಂತಾಗುತ್ತದೆ. ಆವಾಗ ಅತ್ತೃತ್ವಾಧಿಕರಣದಿಂದ ವಿರೋಧ ಬರುತ್ತದೆಂದು ಪೂರ್ವಪಕ್ಷಿಯು ಹಿಂದೆ ಆಕ್ಷೇಪಿಸಿದ್ದನು. ಅದಕ್ಕೂ ಸಹ ಈಗ ಅವಕಾಶವಿಲ್ಲ. ನಾವು ಯಾವ ಆಹಾರವನ್ನು ತಿನ್ನುತ್ತೇವೋ, ಅದನ್ನು ಉಪಜೀವಿಸಿಕೊಂಡು ಬದುಕುತ್ತಿದ್ದೇವೆ. ಆದರೆ ಪರಮಾತ್ಮನಿಗೆ ಇಂತಹ ಸ್ಥಿತಿ ಇರುವುದಿಲ್ಲ. ಏನನ್ನೂ ತಿನ್ನದಿದ್ದರೂ ಸಹ ದಷ್ಟಪುಷ್ಟನಾಗಿ ಇರುತ್ತಾನೆ. ಉಳಿದ ಆಹಾರಪದಾರ್ಥಗಳನ್ನು ತಿಂದು ಅವನು ಬದುಕಬೇಕಾಗಿಲ್ಲ. ಈ ದೃಷ್ಟಿಯಿಂದಷ್ಟೇ 'ಏನನ್ನೂ ಅವನು ತಿನ್ನಲಾರ' ಇತ್ಯಾದಿಯಾಗಿ ಶ್ರುತಿಯು ಅವನನ್ನು ಪ್ರತಿಪಾದಿಸುತ್ತಿದೆ. ಸಕಲ ಜಗತ್ತನ್ನು ಸಂಹಾರ ಮಾಡುವ ಕಾರಣ 'ಸಕಲಜಗದ್ಭೋಕ್ತಾ' ಎಂಬುದಾಗಿ ಅತ್ತೃತ್ವಾಧಿಕರಣವು ಸಮರ್ಥಿಸುತ್ತಿದೆ. ಹೀಗಿರುವಾಗ ವಿರೋಧಕ್ಕೆ ಅವಕಾಶವೇ ಇಲ್ಲ.

ಇಲ್ಲಿಯ ತನಕ ಸಮರ್ಥನೆ ಮಾಡಿದಂತೆ ಮಹತ್ತ್ವವುಳ್ಳ ಪರಮಾತ್ಮನಲ್ಲಿ ಅಣುತ್ವವೂ ಸಹ ಇರುತ್ತದೆಂದು ತಿಳಿದಂತಾಯಿತು. ಇದೇ ವಿಚಾರವು ಬೇರೆ ಅಧಿಕರಣಗಳಲ್ಲಿಯೂ ಸಮರ್ಥಿಸಿದ್ದರಿಂದ ಪುನರುಕ್ತಿ ಬಂದಂತೆ ಕಾಣಿಸುತ್ತದೆ. ಸರ್ವಗತತ್ವಾಧಿಕರಣದ ಅರ್ಭಕೌಕಸ್ತ್ವಸೂತ್ರದಲ್ಲಿ ಸರ್ವತ್ರ ವ್ಯಾಪ್ತನಾದ ಪರಮಾತ್ಮನಿಗೆ ಹೃದಯವೆಂಬ ಅಲ್ಪದೇಶಸ್ಥಾನವನ್ನು ಪ್ರತಿಪಾದಿಸಲಾಗಿದೆ. ಇದರಿಂದ ಸರ್ವಗತತ್ವಾಧಿಕರಣದಲ್ಲಿಯೇ ಅಣುತ್ವವನ್ನು ಸಮರ್ಥಿಸಿದಂತಾಯಿತು. ಪುನಃ ಇಲ್ಲಿಯೂ ಅದನ್ನೇ ಹೇಳಿದರೆ, ಹೇಳಿದ ವಿಷಯವನ್ನೇ ಪುನಃ ಹೇಳಿದಂತಾಗುತ್ತದಲ್ಲವೇ? ಎಂಬ ಪ್ರಶ್ನೆಯು ಸಹಜವಾಗಿ ಮನಸ್ಸಿನಲ್ಲಿ ಹುಟ್ಟುತ್ತದೆ. ಆದರೆ ವ್ಯತ್ಯಾಸವಿದೆ. ನೂರುರೂಪಾಯಿ ಇರುವವನಲ್ಲಿ ಐವತ್ತು ರೂಪಾಯಿ ಹೇಗೆ ಇದ್ದೇ ಇರುತ್ತದೋ, ಅದರಂತೆ ಎಲ್ಲೆಡೆ ವ್ಯಾಪ್ತನಾದ ಪರಮಾತ್ಮನಲ್ಲಿ ಅಲ್ಪದೇಶಸ್ಥಿತಿಯೂ ಸಹ ಇರುತ್ತದೆಂಬ ಅಭಿಪ್ರಾಯವಷ್ಟೇ ಅರ್ಭಕೌಕಸ್ತ್ವ ಸೂತ್ರದ್ದಾಗಿದೆ.

ಭೂಮಾಧಿಕರಣದಲ್ಲಿಯೂ ಸಹ ಇಲ್ಲಿ ಸಮರ್ಥಿಸುವ ಅಣುತ್ವವನ್ನು ಮೊದಲೇ ವಿವಕ್ಷಿಸಿ ಉತ್ಕ್ರಮಣಲಿಂಗವನ್ನು ಸಮರ್ಥಿಸಿದ್ದಾರೆ. ಆದರೆ ಈ ಅಧಿಕರಣದಲ್ಲಿ ಮಹತ್ತ್ವವಿದ್ದರೂ ಸಹ ಪರಮಾತ್ಮನಲ್ಲಿ ಅಣುತ್ವವೂ ಇರುತ್ತದೆಂದು ಸಮರ್ಥಿಸುತ್ತಿದ್ದಾರೆ. ಈ ವಿಷಯವು ಸರ್ವಗತತ್ವಾಧಿಕರಣದಲ್ಲಾಗಲೀ, ಭೂಮಾಧಿ ಕರಣದಲ್ಲಾಗಲೀ ಸಮರ್ಥಿಸಲ್ಪಟ್ಟಿಲ್ಲ.

ದಹರಾಧಿಕರಣದ 'ಅಲ್ಪಶ್ರುತೇಃ' ಎಂಬ ಸೂತ್ರದಲ್ಲಿಯೂ ಸಹ ಗಗನಕ್ಕೆ ಕೇವಲ ಅವಯವಿ ರೂಪದಿಂದ ಮಹತ್ತ್ವವಿದ್ದಂತೆ, ಪರಮಾತ್ಮನಿಗಲ್ಲ. ಪರಮಾತ್ಮನು ತನ್ನ ಅವಯವರೂಪದಿಂದಲೂ ಸಹ ಮಹತ್ತ್ವವನ್ನು ಪಡೆದಿದ್ದಾನೆಂಬುದಾಗಿ ಸಮರ್ಥಿಸಲಾಗಿದೆ. ಹೀಗೆ ಬೇರೆ ಅಧಿಕರಣಗಳಿಂದ ಪುನರುಕ್ತಿ ಬರುವುದಿಲ್ಲವೆಂಬುದನ್ನು ಗಮನಿಸಬೇಕು.

ಈ ಅಧಿಕರಣದಲ್ಲಿ ಒಟ್ಟು ಮೂರುಸೂತ್ರಗಳಿವೆ. ಅಕ್ಷರಂಮಂಬರಾಂತಧೃತೇಃ' ಎಂಬ ಪ್ರಥಮಸೂತ್ರದಲ್ಲಿ ವಿಷಯವಾಕ್ಯದಲ್ಲಿರುವ ಅಂಬರಾಂತಧಾರಕತ್ವವೆಂಬ ಹೇತುವನ್ನು ಸಮರ್ಥಿಸಿದ್ದಾರೆ. ಆದ್ದರಿಂದ ಪ್ರಾಥಮ್ಯವು ಯುಕ್ತವಾಗಿದೆ. 'ಸಾ ಚ ಪ್ರಶಾಸಾನತ್' ಎಂಬ ಎರಡನೆಯ ಸೂತ್ರದಲ್ಲಿ, 'ಕೇವಲ ತನ್ನ ಆಜ್ಞೆಯಿಂದಲೇ ಸೂರ್ಯ, ಚಂದ್ರ ಮೊದಲಾದವರು ತಮ್ಮ ತಮ್ಮ ಸ್ಥಾನದಲ್ಲಿ ನಿಂತು ಲೋಕವನ್ನು ಬೆಳಗುತ್ತಾರೆ. ಪೂರ್ವಾದಿ ದಿಕ್ಕುಗಳಲ್ಲಿ ನದಿಗಳು ಹರಿಯುತ್ತವೆ' ಇತ್ಯಾದಿ ವಿಚಾರವನ್ನು ಹೇಳುತ್ತಾ ಪ್ರಶಾಸನವೆಂಬ ಲಿಂಗವನ್ನು ಹೇಳಿದ್ದಾರೆ. ಈ ಲಿಂಗವು ವಿಷಯವಾಕ್ಯದ ಮುಂದಿನ ವಾಕ್ಯದಲ್ಲಿರುವುದರಿಂದ ದ್ವಿತೀಯ ಸ್ಥಾನವು ಇದಕ್ಕೆ ಯುಕ್ತವಾಗಿದೆ.

ಮೂರನೆಯ 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಅಸ್ಥೂಲತ್ವಾದಿ ಸಾಧಕಪ್ರಮಾಣಗಳನ್ನು ಹೇಳುವುದರ ಜೊತೆಗೆಪೂರ್ವಪಕ್ಷಿಕಾರನುಹೇಳಿದಬಾಧಕಪ್ರಮಾಣಗಳೆಲ್ಲವನ್ನೂನಿರಾಕರಿಸಲಾಗಿದೆ.ಪರಮಾತ್ಮನುಅಸ್ಥೂಲತ್ವ,ಅನಣುತ್ವ ಮೊದಲಾದ ವಿರುದ್ಧಧರ್ಮಗಳಿಗೆ ಆಶ್ರಯನಾಗುವುದಾದರೆ ನಿಃಸ್ವಭಾವನಾಗಲಿ ಅಥವಾ ವಿರುದ್ಧವಾದ ಧರ್ಮಗಳನ್ನು ಒಬ್ಬನಲ್ಲೇಹೇಳಲುಸಾಧ್ಯವಿಲ್ಲ. ಇತ್ಯಾದಿಬಾಧಕಗಳನ್ನುಆಶಂಕಿಸಿದರೆಪರಮಾತ್ಮನುಅಪ್ರಾಕೃತನಾದ್ದರಿಂದಅಚಿಂತ್ಯವಾದ ಐಶ್ವರ್ಯಶಕ್ತಿಯನ್ನು ಹೊಂದಿರುವುದರಿಂದ ಇಂತಹ ಯಾವುದೇ ವಿರೋಧಕ್ಕೂ ಸಹ ಅವಕಾಶವಿಲ್ಲವೆಂಬುದಾಗಿ ಮೂರನೆಯ ಸೂತ್ರವು ಪ್ರತಿಪಾದಿಸುತ್ತಿದೆ. ಆದ್ದರಿಂದ ಮೂರನೆಯ ಸ್ಥಾನವನ್ನು ಇದು ಪಡೆದಿದೆ. ಹೀಗೆ ಅಕ್ಷರಾಧಿಕರಣದಲ್ಲಿರುವ ಮೂರು ಸೂತ್ರಗಳ ಜೋಡಣೆಯ ಶೈಲಿಯು ಅತ್ಯಂತ ಹೃದಯಂಗಮ- ವಾಗಿದೆಯೆಂದು ತಿಳಿದುಕೊಳ್ಳಬೇಕು.

*ಶಾಂಕರ ಭಾಷ್ಯ ವಿಮರ್ಶೆ*

ಶಾಂಕರಭಾಷ್ಯದ ವ್ಯಾಖ್ಯಾನ ಹೀಗಿದೆ - ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಅಕ್ಷರವು ಅಕಾರಾದಿ ವರ್ಣಗಳೇ ಆಗಿವೆ. ಅಥವಾ ಸಕಲ ವರ್ಣಾತ್ಮಕವಾದ ಓಂಕಾರವೇ ಅಕ್ಷರಶಬ್ದ ಪ್ರತಿಪಾದ್ಯವಾಗಿದೆ. ಉಪನಿಷತ್ತುಗಳಲ್ಲಿ ಕೇವಲ ಉಪಾಸನೆಗಾಗಿ ಹೀಗೆ ವರ್ಣಗಳನ್ನು ಅಕ್ಷರವೆಂದು ವರ್ಣಿಸಲಾಗಿದೆ. ಸಕಲ ಪದಾರ್ಥಗಳು ಶಬ್ದದ ಜೊತೆಗೇನೇ ತೋರುವುದರಿಂದ ಶಬ್ದ ಹಾಗೂ ಅರ್ಥಗಳಿಗೆ ಅಭೇದವನ್ನು ಹೇಳಬೇಕು. ಆದ್ದರಿಂದಲೇ ಉಪನಿಷತ್ತು ಸಕಲ ಪದಾರ್ಥಗಳಿಗೆ ಅಕ್ಷರಾತ್ಮಕತ್ವವನ್ನು ಹೇಳುತ್ತಿದೆಯೆಂದು ಪೂರ್ವಪಕ್ಷ.

ಸಿದ್ಧಾಂತ - ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಇರುವ ಸಕಲ ಪದಾರ್ಥಗಳು ಅಕಾರಾದಿ ಅಕ್ಷರಗಳಲ್ಲಿ ಆಶ್ರಿತವಾಗಲು ಸಾಧ್ಯವಿಲ್ಲ. ನಿರ್ವಿಶೇಷನಾದ ಬ್ರಹ್ಮನೇ ಅಕ್ಷರಶಬ್ದದಿಂದ ಪ್ರತಿಪಾದ್ಯನೆಂದು ಹೇಳಬೇಕು. ಆವಾಗ 'ನ ಕ್ಷರತಿ ಇತಿ ಅಕ್ಷರಮ್' ಎಂಬ ಅಕ್ಷರಶಬ್ದದ ನಿರ್ವಚನವೂ ಸಹ ಸಾಧುವಾಗುತ್ತದೆ.

ಇವರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಸಕಲ ಪದಾರ್ಥಗಳು ಶಬ್ದದ ಜೊತೆಗೆ ಸೇರಿಕೊಂಡೇ ತೋರುತ್ತದೆಂಬ ಪೂರ್ವಪಕ್ಷವು ಸಾಧುವಲ್ಲ. ಏಕೆಂದರೆ 'ಗೌರಯಂ ವೃಕ್ಷೋಽಯಂ' ಇತ್ಯಾದಿ ಪ್ರತೀತಿಗಳಿಂದ ಗೋ ಮೊದಲಾದ ಶಬ್ದ ಪ್ರತಿಪಾದ್ಯತ್ವವು ತಿಳಿಯುತ್ತದೆ ಹೊರತು, ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಸಕಲ ಪದಾರ್ಥಗಳು ಆಶ್ರಿತವಾಗಿವೆಯೆಂದು ಸರ್ವಥಾ ತಿಳಿಯುವುದಿಲ್ಲ. ಮತ್ತು ಅಕ್ಷರಗಳು ಜಡವಾಗಿರುವುದರಿಂದ ಅವುಗಳಲ್ಲಿ ಇಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿ ಚೇತನಧರ್ಮಗಳು ಇರಲು ಸಾಧ್ಯವಿಲ್ಲ. ಆದ್ದರಿಂದ ಅಕಾರಾದಿ ವರ್ಣಗಳೇ ಅಕ್ಷರವೆಂಬ ಪೂರ್ವಪಕ್ಷವು ಅತ್ಯಂತ ದುರ್ಬಲವಾಗಿದೆ.

### *ಅದ್ವೈತಿಗಳ ಉಳಿದ ಸೂತ್ರಾರ್ಥಗಳ ನಿರಾಕರಣೆ*

ಅದ್ವೈತಿಗಳು ಮಾಡಿದ ಸಿದ್ಧಾಂತವೂ ಸಹ ಸರಿಯಿಲ್ಲ. ನಿರ್ವಿಶೇಷ ಬ್ರಹ್ಮನಲ್ಲಿ ಅಕ್ಷರಶಬ್ದದ ವ್ಯುತ್ಪತ್ತಿಯನ್ನಾಗಲೀ, ವಾಚ್ಯತ್ವವನ್ನಾಗಲೀ ಅಥವಾ ದ್ರಷ್ಟೃತ್ವಗಳನ್ನಾಗಲೀ ಹೇಳಲು ಸಾಧ್ಯವಿಲ್ಲ. ಪ್ರಥಮ ಸೂತ್ರದಲ್ಲಿ ಪ್ರಯೋಗಿಸಲ್ಪಟ್ಟ ಧೃತಿ ಪದವೂ ಅಯುಕ್ತವಾಗಿದೆ. ಬ್ರಹ್ಮನು ಜಗತ್ತನ್ನು ಧಾರಣೆ ಮಾಡಿದ್ದಾನೆಂದರೆ ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆಂಬರ್ಥವನ್ನು ಬಿಟ್ಟು ಬೇರೆ ಅರ್ಥಗಳನ್ನು ಅದ್ವೈತಿಗಳಿಂದ ಹೇಳಲಾಗದು. ಆದರೆ ಉಪಕ್ರಮದಲ್ಲಿರುವ 'ಆಕಾಶ ಏವ ತದೋತಂ' ಇತ್ಯಾದಿ ವಾಕ್ಯದಿಂದ ಈ ಅರ್ಥವು ವಿರುದ್ಧವಾಗಿದೆ.

ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನವೆಂಬ ಹೇತುವೂ ಸಹ ಅಯುಕ್ತವಾಗಿದೆ. ಸಕಲ ಜಗತ್ತು ಬ್ರಹ್ಮನಲ್ಲಿ ಅಧ್ಯಸ್ತವಾಗಿದೆ. ಬ್ರಹ್ಮನು ಅಧಿಷ್ಠಾನನಾಗಿದ್ದಾನೆ. ಅಧಿಷ್ಠಾನವಾದ ವಸ್ತು ಅಧ್ಯಸ್ತವಾದ ವಸ್ತುವನ್ನು ಶಾಸನೆ ಮಾಡಲು ಎಂದಿಗೂ ಸಹ ಸಾಧ್ಯವಿಲ್ಲ. ಅಧಿಷ್ಠಾನಭೂತವಾದ ಶುಕ್ತಿಯು ಅಧ್ಯಸ್ತವಾದ ರಜತವನ್ನು ಶಾಸನೆ ಮಾಡುತ್ತದೆಂಬುದು ಎಷ್ಟು ಹಾಸ್ಯಾಸ್ಪದವೋ, ಅದರಂತೆ ಅಧ್ಯಸ್ತವಾದ ಜಗತ್ತನ್ನು ಅಧಿಷ್ಠಾನನಾದ ಬ್ರಹ್ಮನು ಶಾಸನೆ ಮಾಡಲು ಸಾಧ್ಯವೇ ಇಲ್ಲ.

ಮೂರನೆಯ ಸೂತ್ರವು ಪ್ರಕೃತಿ ಹಾಗೂ ಜೀವರನ್ನು ಅಕ್ಷರಶಬ್ದವಾಚ್ಯರಲ್ಲವೆಂದು ನಿಷೇಧಿಸುತ್ತಿದೆ ಎಂದು ವ್ಯಾಖ್ಯಾನಿಸುತ್ತಾರೆ. ದ್ರಷ್ಟೃತ್ವಾದಿ ಲಿಂಗಗಳು ಪ್ರಕೃತ್ಯಾದಿಗಳಲ್ಲಿ ಬರುವುದಿಲ್ಲವೆಂಬುದೇ ಇವರು ನೀಡುವ ಹೇತು. ಆದರೆ ಯಾವ ಶ್ರುತಿಯು ದ್ರಷ್ಟೃತ್ವಾದಿಗಳನ್ನು ಅಕ್ಷರನಲ್ಲಿ ಹೇಳುತ್ತಿದೆಯೋ, ಅದೇ ಶ್ರುತಿಯು ಅಂಬರಾಂತಧಾರಕತ್ವ ಮತ್ತು ಪ್ರಶಾಸನ ಎಂಬೆರಡು ಲಿಂಗಗಳನ್ನೂ ಸಹ ಹೇಳುತ್ತಿದೆ. ಆದ್ದರಿಂದ ಮೂರನೆಯ ಸೂತ್ರದಿಂದಲೇ ಅಂಬರಾಂತಧಾರಕತ್ವ ಮತ್ತು ಪ್ರಶಾಸನ ಎಂಬೆರಡು ಹೇತುಗಳನ್ನು ಹೇಳಲು ಬರುವಾಗ ಮೊದಲೆರಡು ಸೂತ್ರಗಳಿಗೆ ಅದ್ವೈತಸಿದ್ಧಾಂತದಲ್ಲಿ ಸಾರ್ಥಕ್ಯವೇ ಇರುವುದಿಲ್ಲ.

ಅದ್ವೈತಿಗಳು 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಜೀವನು ಬ್ರಹ್ಮನಿಗಿಂತ ಭಿನ್ನನಾಗಿದ್ದಾನೆಂದು ಹೇಳಿರುತ್ತಾರೆ. ಜೀವಬ್ರಹ್ಮರಿಗೆ ಅಭೇದವನ್ನು ಪ್ರತಿಪಾದಿಸಲು ಹೊರಟ, ಅದ್ವೈತಿಗಳು ಜೀವಬ್ರಹ್ಮರಿಗೆ ಭೇದವನ್ನೇ ಈ ಸೂತ್ರದಿಂದ ಸಮರ್ಥಿಸಿದಂತಾಗುತ್ತದೆ. ಆದ್ದರಿಂದ ಎಲ್ಲ ಅಧಿಕರಣಗಳಂತೆ ಇಲ್ಲಿಯೂ ಸಹ ಭೇದಸ್ಥಾಪನೆಯನ್ನೇ ಅದ್ವೈತಿಗಳು ಮಾಡಿದಂತಾಯಿತು.

### *ರಾಮಾನುಜರ ಅಧಿಕರಣ ವಿಮರ್ಶೆ*

ರಾಮಾನುಜರೂ ಸಹ ಛಾಂದೋಗ್ಯದ ಮಾತನ್ನೇ ವಿಚಾರಕ್ಕೆ ವಿಷಯವೆನ್ನುತ್ತಾರೆ. ಆದರೆ ಪ್ರಕೃತಿ ಅಥವಾ ಜೀವರೆಂದು ಸಮರ್ಥಿಸುತ್ತಾರೆ. ಸಕಲ ಕಾರ್ಯಗಳಿಗೆ ಪ್ರಕೃತಿಯು ಉಪಾದಾನ ಕಾರಣವಾದ್ದರಿಂದ ತ್ರೈಕಾಲಿಕ

ಪದಾರ್ಥಗಳಿಗೂ ಪ್ರಕೃತಿಯು ಆಧಾರವಾಗುತ್ತದೆಂದು ಇವರು ನೀಡುವ ಸಮರ್ಥನೆ. ಬ್ರಹ್ಮನೇ ಅಕ್ಷರನಾಗಿದ್ದಾನೆಂದು ಸಿದ್ಧಾಂತ. ಏಕೆಂದರೆ ಶ್ರುತಿಯಲ್ಲಿ ಹೇಳಲ್ಪಟ್ಟ ಶಾಸ್ತೃತ್ವಾದಿಗಳು ಪರಮಾತ್ಮನಲ್ಲಿ ಮಾತ್ರ ಸಿದ್ಧವಾಗುತ್ತದೆ. 'ಅಂಬರಾಂತಧೃತಿ' ಎಂಬುದೂ ಸಹ ಮತ್ತೊಂದು ಸಿದ್ಧಾಂತ ಹೇತು. ಭೂತಾಕಾಶವು ಪೃಥಿವ್ಯಾದಿಗಳಂತೆ ಜನ್ಯವಾದ್ದರಿಂದ ಪ್ರಪಂಚಕ್ಕೆ ಆಧಾರವಾಗುವುದಿಲ್ಲ. ಅಜನ್ಯವಾದ ಅವ್ಯಾಕೃತಾಕಾಶವೆನಿಸಿದ ಪ್ರಕೃತಿಯೇ ಈ ಪ್ರಪಂಚಕ್ಕೆ ಮೂಲವಾಗಿದೆ. ಅಂತಹ ಪ್ರಕೃತಿಗೆ ಆಧಾರನಾದವನು ಬ್ರಹ್ಮನೇ ಆಗಿದ್ದಾನೆಂದು ಇವರ ಅಭಿಪ್ರಾಯ. 'ಅನ್ಯಭಾವವ್ಯಾವೃತೇಶ್ಚ' ಎಂಬ ಸೂತ್ರದಲ್ಲಿ ಅನ್ಯಭಾವ ಎಂದರೆ ಪ್ರಧಾನಾದಿ ಭಾವ ಎಂದರ್ಥ. ಅಂದರೆ ಅಕ್ಷರವು ಬ್ರಹ್ಮನನ್ನು ಬಿಟ್ಟು ಬೇರೆಯದ್ದಾಗುವುದಿಲ್ಲ. ಏಕೆಂದರೆ 'ಅದೃಷ್ಟಂ ದ್ರಷ್ಟೃ' ಎಂಬ ಶ್ರುತಿಯು ಇತರ ನಿಷೇಧವನ್ನು ಮಾಡುತ್ತಿದೆ. ಆದ್ದರಿಂದಲೂ ಬ್ರಹ್ಮನೇ ಅಕ್ಷರಶಬ್ದವಾಚ್ಯನಾಗುತ್ತಾನೆಂದು ಇವರ ವಾದ.

ಇವರ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಶ್ರುತಿಯಲ್ಲಿ ಆಕಾಶಪದಕ್ಕೆ ಭೂತಾಕಾಶವೆಂದು ಅರ್ಥೈಸಿದಾಗ ಅದಕ್ಕನುಗುಣವಾಗಿ ಸೂತ್ರದಲ್ಲಿರುವ 'ಅಂಬರ' ಶಬ್ದಕ್ಕೂ ಸಹ ಭೂತಾಕಾಶವೆಂದೇ ಅರ್ಥೈಸಬೇಕು. ಒಂದು ವೇಳೆ ಶ್ರುತಿಯಲ್ಲಿ ಹೇಳಿದ ಪ್ರಕೃತಿಯೆಂಬರ್ಥವನ್ನು ಸೂತ್ರಕ್ಕೆ ಹೇಳಿದರೆ ಶ್ರುತಿಯಿಂದ ಅನಾನುಗುಣ್ಯದೋಷವನ್ನು ಸೂತ್ರಕ್ಕೆ ಹೇಳಿದಂತಾಗುತ್ತದೆ.

# ಸದಧಿಕರಣ

*'ಸತ್' ಶಬ್ದಕ್ಕೆ ಉಭಯತ್ರಪ್ರಸಿದ್ಧತ್ವ ಸಮರ್ಥನೆ*

ಸದಧಿಕರಣದಲ್ಲಿ 'ಸತ್' ಎಂಬ ನಾಮಾತ್ಮಕ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಈ ಶಬ್ದವು ವಿಷ್ಣು ಹಾಗೂ ಪ್ರಕೃತಿ ಇಬ್ಬರಲ್ಲಿಯೂ ಸಾಧಾರಣವಾಗಿದೆ. ಆದ್ದರಿಂದಲೇ ಉಭಯತ್ರಪ್ರಸಿದ್ಧವಾಗುವುದರಿಂದ ಮೂರನೆಯ ಪಾದದಲ್ಲಿ ಇದರ ಸಮನ್ವಯವು ಸಂಗತವಾಗುತ್ತದೆ.

ಜಗತ್ಕಾರಣತ್ವವನ್ನು ಪ್ರತಿಪಾದಿಸುವ 'ಸದೇವ ಸೌಮ್ಯ ಇದಮಗ್ರ ಆಸೀತ್' ಇತ್ಯಾದಿ ಅನೇಕ ವಾಕ್ಯಗಳು ವೇದದಲ್ಲಿರುತ್ತವೆ. ಸೃಷ್ಟಿಪ್ರತಿಪಾದಕವಾದ ವಾಕ್ಯಗಳನ್ನೆಲ್ಲ 'ಸೃಷ್ಟಿಸ್ಥಾನ' ಎಂದು ಕರೆಯುತ್ತಾರೆ. 'ಸತ್' ಎಂಬ ಪದಾರ್ಥಕ್ಕೆ ಜಗತ್ಕಾರಣತ್ವವು ಶ್ರುತವಾಗಿದೆ. ಈ 'ಸತ್' ಎಂಬ ಪದವು ಜಡಪ್ರಕೃತಿಯನ್ನು ಅಥವಾ ವಿಷ್ಣುವನ್ನು ಪ್ರತಿಪಾದಿಸಬೇಕು. ಏಕೆಂದರೆ ಇಬ್ಬರಲ್ಲಿಯೂ ಕಾರಣತ್ವವೆಂಬ ಧರ್ಮವು ಸಾಧಾರಣವಾಗಿದೆ.

ಕಾರಣತ್ವವನ್ನು ನಿರೂಪಿಸುವ ಪ್ರಕರಣದಲ್ಲಿ 'ಸದೇವ ಸೌಮ್ಯ' ಎಂಬ ವಾಕ್ಯವಷ್ಟೇ ಶ್ರುತವಾಗಿಲ್ಲ. 'ತದೈಕ್ಷತ' ಎಂಬ ವಾಕ್ಯವು 'ಬಹು ಸ್ಯಾಂ ಪ್ರಜಾಯೇಯ' ಎಂಬ ವಾಕ್ಯವೂ ಸಹ ಶ್ರುತವಾಗಿದೆ. 'ತದೈಕ್ಷತ' ಎಂಬ ವಾಕ್ಯದಲ್ಲಿ ಶ್ರುತವಾದ ಈಕ್ಷಿತೃತ್ವವು ಪ್ರಕೃತಿಯಲ್ಲಿ ಬರುತ್ತಿಲ್ಲ. 'ಬಹು ಸ್ಯಾಂ ಪ್ರಜಾಯೇಯ' ಎಂಬ ವಾಕ್ಯದಲ್ಲಿ ಶ್ರುತವಾದ ಬಹುಭವನವು ಬ್ರಹ್ಮನಲ್ಲಿ ಬರುತ್ತಿಲ್ಲ. ಹೀಗಿರುವಾಗ ಸೃಷ್ಟಿಪ್ರತಿಪಾದಕ ವಾಕ್ಯಗಳಲ್ಲಿ ಉಭಯಸಾಧಾರಣವಾದ ಧರ್ಮವೇ ಶ್ರುತವಾಗಿದೆಯೆಂದು ಹೇಗೆ ಹೇಳುತ್ತೀರಿ? ಎಂಬುದು ಇಲ್ಲಿ ಬರುವ ಪ್ರಶ್ನೆ. ಆದರೆ 'ಸದೇವ ಸೌಮ್ಯ' ಎಂಬ ವಾಕ್ಯದಲ್ಲಿರುವ ಕಾರಣತ್ವವನ್ನಷ್ಟೇ ಇಲ್ಲಿ ವಿವಕ್ಷಿಸಬೇಕು ಹೊರತು, ಮುಂದಿನ ವಾಕ್ಯಗಳನ್ನು ವಿವಕ್ಷಿಸಬಾರದು. ಈ ವಾಕ್ಯದಲ್ಲಿ ಶ್ರುತವಾದ ಕಾರಣತ್ವವು ಉಭಯಸಾಧಾರಣ- ವಾಗಿದೆ. ಆದ್ದರಿಂದಲೇ 'ಸತ್' ಎಂಬ ನಾಮಾತ್ಮಕ ಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆಂದು ನ್ಯಾಯವಿವರಣದಲ್ಲಿ ಹೇಳಿರುತ್ತಾರೆ.

## ಉಭಯತ್ರಪ್ರಸಿದ್ಧಿಗೆ ಪ್ರಯೋಜಕವಾದ ಕಾರಣತ್ವದ ಪರಿಷ್ಕಾರ

'ಸತ್' ಎಂಬ ನಾಮಾತ್ಮಕ ಶಬ್ದವು ಪ್ರಕೃತಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಪ್ರಸಿದ್ಧವಾಗಿದೆ. ಆದ್ದರಿಂದಲೇ ಉಭಯತ್ರಪ್ರಸಿದ್ಧವಾಗಿದೆಯೆಂದು ಕರೆಯಲಾಗಿದೆ. ನೇರವಾಗಿ 'ಸತ್' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಗಿಲ್ಲ. ಶ್ರುತಿಯಲ್ಲಿ ಹೇಳಲ್ಪಟ್ಟ ಕಾರಣತ್ವ ಧರ್ಮದ ಮೂಲಕವಾಗಿ ಇದು ಉಭಯತ್ರಪ್ರಸಿದ್ಧವೆನಿಸಿದೆ. ಕಾರಣತ್ವ ಸಾಮಾನ್ಯವು ಎರಡೂ ಕಡೆ ಸಮಾನವಾಗಿರುವುದರಿಂದಷ್ಟೇ ಇದೂ ಸಹ ಎರಡೂ ಕಡೆ ಸಮಾನವಾಗಿದೆಯೆಂದು ವಿವಕ್ಷಿಸಬೇಕು. ಹೀಗೆ ವಿವಕ್ಷಿಸದಿದ್ದರೆ, 'ಸತ್' ಎಂಬ ಶಬ್ದವು ಪ್ರಕೃತಿ ಹಾಗೂ ವಿಷ್ಣು ಇಬ್ಬರಲ್ಲಿ ಮಾತ್ರ ಸಾಧಾರಣವಾಗಿದೆಯೆಂದು ಹೇಳಲು ಹೇಗೆ ಸಾಧ್ಯ? ಘಟ, ಪಟಾದಿಗಳಲ್ಲಿಯೂ ಸಹ 'ಸತ್' ಎಂಬ ಶಬ್ದವು ಪ್ರಸಿದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಅವಕಾಶವಿರುತ್ತಿತ್ತು. ಅದಕ್ಕೋಸ್ಕರವೇ ಕಾರಣತ್ವಧರ್ಮದ ಮೂಲಕವಾಗಿ ಉಭಯತ್ರಪ್ರಸಿದ್ಧವೆಂದು ಹೇಳುತ್ತಿದ್ದಾರೆ.

ಹೀಗೆ ಹೇಳಿದಾಗಲೂ ಪ್ರಶ್ನೆಯು ತಪ್ಪಿದ್ದಲ್ಲ. ಏಕೆಂದರೆ ಕಾರಣತ್ವವು ಕೇವಲ ಬ್ರಹ್ಮ ಹಾಗೂ ಪ್ರಕೃತಿಗಳಲ್ಲಿ ಮಾತ್ರ ಇರುವುದಿಲ್ಲ. ಅದೃಷ್ಟಾದಿಗಳಲ್ಲಿಯೂ ಸಹ ಇರುತ್ತದೆ. ಆದ್ದರಿಂದ ಕಾರಣತ್ವಧರ್ಮವನ್ನು ಆಶ್ರಯಿಸಿದ ಮಾತ್ರದಿಂದ ಉಭಯತ್ರಪ್ರಸಿದ್ಧವಾಗುತ್ತದೆಂದು ಹೇಗೆ ಹೇಳುತ್ತೀರಿ? ಆದ್ದರಿಂದ ಯಾವರೀತಿಯಲ್ಲಿ ವಿವಕ್ಷಿಸಬೇಕೆಂಬುದನ್ನು ಸ್ಪಷ್ಟವಾಗಿ ತಿಳಿಯಬೇಕು. ಅದು ಹೀಗೆ - ಒಂದೇ ವ್ಯಕ್ತಿಯಲ್ಲಿರಬೇಕು. ಹಾಗೂ ಕಾರಣವಾಗಿರಬೇಕು. ಅಥವಾ ಉಪಾದಾನತ್ವ ಅಥವಾ ಕರ್ತೃತ್ವವಿರಬೇಕು. ಹಾಗೂ ಕಾರಣವಾಗಿರಬೇಕು. ಹೀಗೆ ಹೇಳಿದಾಗ ಅದೃಷ್ಟಾದಿಗಳಲ್ಲಿ ಕಾರಣತ್ವವನ್ನು ಹೇಳಲು ಸಾಧ್ಯವಿಲ್ಲ. ಅದೃಷ್ಟಗಳು ಅನೇಕವಾಗಿರುವುದರಿಂದ ಏಕವ್ಯಕ್ತಿಕವಾಗಿಲ್ಲ. ಆದ್ದರಿಂದ 'ಏಕ ವ್ಯಕ್ತಿತ್ವೇ ಸತಿ ಕಾರಣತ್ವಂ' ಅಥವಾ 'ಉಪಾದಾನತ್ವಕರ್ತೃತ್ವಾನ್ಯತರತ್ವೇ ಸತಿ ಕಾರಣತ್ವಂ' ಎಂದು ಕಾರಣತ್ವಲಕ್ಷಣವನ್ನು ಪರಿಷ್ಕರಿಸಿ ಹೇಳಿದಂತಾಯಿತು.

## 'ಸತ್'ಶಬ್ದಸಮನ್ವಯದ ಪ್ರಯೋಜನ

ಕಾರಣತ್ವಧರ್ಮದ ಮೂಲಕವಾಗಿ 'ಸತ್' ಶಬ್ದವನ್ನು ಸಮನ್ವಯ ಮಾಡುವುದಾದರೆ 'ಆಕಾಶ' ಶಬ್ದದ ಸಮನ್ವಯವನ್ನೂ ಸಹ ಮಾಡಬೇಕಾಗುತ್ತದೆ. ಏಕೆಂದರೆ 'ಸತ್' ಶಬ್ದಾರ್ಥದಿಂದ ಕಾರಣತ್ವವೂ ತಿಳಿಯುತ್ತಿರುವಂತೆ 'ಆಕಾಶ' ಶಬ್ದಾರ್ಥದಿಂದಲೂ ಸಹ ಕಾರಣತ್ವವು ತಿಳಿಯುತ್ತಿದೆ. ಹೀಗೆ ಶಂಕೆಯು ಮನಸ್ಸಿನಲ್ಲಿ ಹುಟ್ಟುತ್ತದೆ. ಆದರೆ 'ಆಕಾಶ' ಎಂಬ ಶಬ್ದವು ವ್ಯಕ್ತಿವಿಶೇಷಕ್ಕೆ ವಾಚಕವಾಗಿದೆ. ಆದರಂತೆ 'ಸತ್' ಎಂಬ ಶಬ್ದವು ವ್ಯಕ್ತಿವಿಶೇಷಕ್ಕೆ ವಾಚಕವಾಗಿಲ್ಲ. ಸಕಲ ಪದಾರ್ಥಗಳೂ ಸಹ ಸತ್ಯವಾಗಿರುವುದರಿಂದ ಎಲ್ಲವನ್ನೂ ನಾವು ಸತ್ಯವೆಂದು ಕರೆಯುತ್ತೇವೆ. ಆದ್ದರಿಂದ ಇಂತಹ 'ಸತ್' ಶಬ್ದವನ್ನು ವಿಷ್ಣು ಹಾಗೂ ಪ್ರಕೃತಿ ಇಬ್ಬರಲ್ಲಿ ಮಾತ್ರ ಸಾಧಾರಣವೆಂದು ಸಮರ್ಥಿಸಲು ಕಾರಣತ್ವಧರ್ಮದ ಆಕಾಂಕ್ಷೆಯಿರುತ್ತದೆ. ಆದರೆ 'ಆಕಾಶ' ಶಬ್ದದ ಸಮನ್ವಯಕ್ಕೆ ಇಂತಹ ಕಾರಣತ್ವದ ಆಕಾಂಕ್ಷೆ ಇರುವುದಿಲ್ಲ. ಹಾಗಾಗಿ ಈ ಅಧಿಕರಣದಲ್ಲಿ 'ಸತ್' ಎಂಬ ನಾಮಾತ್ಮಕ ಶಬ್ದವನ್ನೇ ಸಮನ್ವಯ ಮಾಡುತ್ತಿದ್ದಾರೆ.

ಕಾರಣತ್ವ ಧರ್ಮದ ಮೂಲಕವಾಗಿ 'ಸತ್' ಶಬ್ದವನ್ನು ಸಮನ್ವಯ ಮಾಡುವುದಾದರೆ ನೇರವಾಗಿ ಕಾರಣತ್ವಧರ್ಮವನ್ನೇ ಸಮನ್ವಯ ಮಾಡಿ ಅರ್ಥಾತ್ 'ಸತ್' ಶಬ್ದದ ಸಮನ್ವಯವೂ ಸಹ ಸಿದ್ಧವಾಯಿತೆಂದು ಸಮರ್ಥಿಸಬಹುದಲ್ಲವೇ? ಎಂಬುದು ಮುಂದಿನ ಪ್ರಶ್ನೆ. ಆದರೆ ಶ್ರುತಿಯಲ್ಲಿ ಕಾರಣತ್ವಧರ್ಮಕ್ಕಿಂತಲೂ ಮೊದಲು 'ಸತ್' ಶಬ್ದವೇ ಕೇಳಿಸುತ್ತಿದೆ. ಮತ್ತು ಹಿಂದಿನ ಅಧಿಕರಣದಲ್ಲಿ ಮಾಡಿದ ನಾಮಾತ್ಮಕ ಶಬ್ದದ ಸಮನ್ವಯವೇ ಬುದ್ಧಿಸ್ಥವಾಗಿದೆ. ಮತ್ತು ಲಿಂಗಕ್ಕಿಂತ ಶ್ರುತಿಯು ಪ್ರಬಲವಾಗಿರುವುದರಿಂದ ಶ್ರುತಿಸಮನ್ವಯವನ್ನು ನೇರವಾಗಿ ಮಾಡಿ ಅರ್ಥಾತ್ ಲಿಂಗಸಮನ್ವಯವನ್ನು ಸ್ಥಾಪಿಸುವುದು ನ್ಯಾಯಸಮ್ಮತವಾಗುತ್ತದೆ. ಮತ್ತು ಒಂದು 'ಸತ್' ಶಬ್ದವನ್ನು

ಸಮನ್ವಯ ಮಾಡುವುದರಿಂದ ಸರ್ವಾಧಾರತ್ವ, ಸುಷುಪ್ತಿಗಮ್ಯತ್ವ ಮೊದಲಾದ ಅನೇಕ ಗುಣಗಳು ಬ್ರಹ್ಮನಲ್ಲಿ ಸಮನ್ವಯವಾಗುತ್ತವೆ. ಅಂದರೆ ಕೇವಲ ಒಂದು 'ಸತ್' ಶಬ್ದದ ಸಮನ್ವಯವನ್ನಷ್ಟೇ ಇಲ್ಲಿ ವಿವಕ್ಷಿಸಿಲ್ಲ. ಸಂಪೂರ್ಣ ಸ್ಥಾನದ ಸಮನ್ವಯವೇ ವಿವಕ್ಷಿತವಾಗಿದೆ. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ ಸ್ಥಾನದ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಹೇಳಿರುತ್ತಾರೆ.

ಈ ಪಾದದಲ್ಲಿ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳ ಸಮನ್ವಯವಷ್ಟೇ ವಿವಕ್ಷಿತವೆಂಬ ಅಭಿಪ್ರಾಯದಿಂದ ಶ್ರೀಮದಾಚಾರ್ಯರು 'ಲಿಂಗನಾಮ್ನಾಮ್' ಎಂದು ಹೇಳಿರುವುದಲ್ಲ. ಸ್ಥಾನಸಮನ್ವಯದ ದೃಷ್ಟಿಯೂ ಸಹ ಶ್ರೀಮದಾಚಾರ್ಯರಿಗೆ ಇರುತ್ತದೆ. ಹಾಗಾದರೆ 'ಲಿಂಗನಾಮ್ನಾಮ್' ಎಂದೇಕೆ ಹೇಳಿದ್ದಾರೆಂದರೆ, ಹಿಂದಿನ ಎರಡು ಪಾದಗಳಲ್ಲಿ ಕೇವಲ ಲಿಂಗದ ಸಮನ್ವಯ ಅಥವಾ ನಾಮದ ಸಮನ್ವಯವಷ್ಟೇ ವಿವಕ್ಷಿತವಾಗಿದೆ. ಅದರಂತೆ ಇಲ್ಲಿ ಇರುವುದಿಲ್ಲವೆಂಬ ಉದ್ದೇಶದಿಂದ. ಆದ್ದರಿಂದ ಬೇರೆ ಅಧಿಕರಣಗಳಲ್ಲಿಯೂ ಆಯಾ ನಾಮಾತ್ಮಕ ಶಬ್ದಗಳ ಅಥವಾ ಲಿಂಗಾತ್ಮಕಶಬ್ದಗಳ ಸಮನ್ವಯದಿಂದ ಸಂಪೂರ್ಣ ಸ್ಥಾನದ ಸಮನ್ವಯವನ್ನೂ ಸಹ ನಾವು ವಿವಕ್ಷಿಸಬೇಕೆಂಬುದೇ ಇಲ್ಲಿರುವ ಪರಮ ಪ್ರಮೇಯ ವಿಚಾರ.

### *'ಸ್ಥಾನ' ಸಮನ್ವಯದ ಉದ್ದೇಶ*

ಈ ಸದಧಿಕರಣದಲ್ಲಿ 'ಸ್ಥಾನ' ಎಂಬುದರ ಸಮನ್ವಯವನ್ನು ಮಾಡುತ್ತಿದ್ದಾರೆ. ಬೇರೆ ಅಧಿಕರಣಗಳಲ್ಲಿಯೂ ಸಹ ಸ್ಥಾನದ ಸಮನ್ವಯವು ಇರುವಾಗ ಈ ಅಧಿಕರಣದಲ್ಲಿ ಮಾತ್ರ ಇದನ್ನು ಉಲ್ಲೇಖಿಸಲು ವಿಶೇಷ ಕಾರಣವಿದೆ. ಏನೆಂದರೆ ಸಮನ್ವಯ ಮಾಡುವಂತಹ 'ಸತ್' ಎಂಬ ಶಬ್ದದಿಂದಲೇ ಘಟಿತವಾದ ಅನೇಕ ಅವಾಂತರ ಪ್ರಕರಣಗಳಿವೆ. ಅವೆಲ್ಲವೂ ಭಗವಂತನ ಸೃಷ್ಟಿಕಾರಣತ್ವವನ್ನು ಪ್ರತಿಪಾದಿಸುತ್ತಿವೆ. ಅವುಗಳ ಸಮನ್ವಯದ ಸಿದ್ಧಿಗಾಗಿ ಇಲ್ಲಿ ಸ್ಥಾನದ ಸಮನ್ವಯವನ್ನು ಹೇಳಿದ್ದಾರೆ. ಆದರೆ ಬೇರೆ ಅಧಿಕರಣಗಳಲ್ಲಿ ಸಮನ್ವಯ ಮಾಡುವಂತಹ ಶಬ್ದದಿಂದಲೇ ಘಟಿತವಾದ ಅನೇಕ ಅವಾಂತರ ಪ್ರಕರಣಗಳಿರುವುದು ಕಾಣಿಸುವುದಿಲ್ಲ.

ಅಥವಾ ಸೃಷ್ಟಿಕಾರಣತ್ವವನ್ನು ಹೇಳುವ ಕೆಲವು ವಾಕ್ಯಗಳಲ್ಲಿ 'ಸತ್' ಎಂಬ ಶಬ್ದವಿರಬಹುದು. ಅದರಂತೆ ಇನ್ನೂ ಕೆಲವು ವಾಕ್ಯಗಳಲ್ಲಿ ಆತ್ಮಾ, ಬ್ರಹ್ಮ ಮೊದಲಾದ ಶಬ್ದಗಳಿರುತ್ತವೆ. ಅದೆಲ್ಲದರ ಸಮನ್ವಯದ ಸಿದ್ಧಿಗಾಗಿಯೂ ಸಹ ಸ್ಥಾನದ ಸಮನ್ವಯವನ್ನು ಇಲ್ಲಿ ಹೇಳಿರುತ್ತಾರೆ.

ಹೀಗೆ ಸ್ಥಾನದ ಸಮನ್ವಯವು ಸಿದ್ಧವಾದ ಮೇಲೆ ತದೇಕದೇಶವೇ ಆಗಿರುವಂತಹ ಪ್ರಕರಣ ಹಾಗೂ ವಾಕ್ಯಗಳ ಸಮನ್ವಯವು ಸಹಜವಾಗಿ ಕೈಮುತ್ಯನ್ಯಾಯದಿಂದಲೇ ಸಿದ್ಧವಾಗುತ್ತದೆಂದು ಅವುಗಳ ಸಮನ್ವಯವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಆದ್ದರಿಂದ ಈ ಅಧಿಕರಣದಲ್ಲಿ 'ಸತ್' ಎಂಬ ಶ್ರುತಿಯ ಸಮನ್ವಯ ಹಾಗೂ ಜಗತ್‌ಕಾರಣತ್ವವೆಂಬ ಲಿಂಗದ ಸಮನ್ವಯ, (ಸಮಾಖ್ಯಾಪ್ರಮಾಣದ ಸಮನ್ವಯವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.) 'ಸತ್' ಶಬ್ದ ಘಟಿತವಾದ ವಾಕ್ಯದ ಸಮನ್ವಯ ಮತ್ತು ಅದರ ಪ್ರಕರಣದ ಸಮನ್ವಯ ಮತ್ತು ಸ್ಥಾನದ ಸಮನ್ವಯ. ಹೀಗೆ ಆಗಮನಿರ್ಣಾಯಕವಾದ ಆರೂವಿಧವಾದ ಲಿಂಗಗಳ ಸಮನ್ವಯವನ್ನು ಮಾಡಿದಂತಾಗುತ್ತದೆ. ಇಂತಹ ವೈಶಿಷ್ಟ್ಯವು ಈ ಅಧಿಕರಣಕ್ಕೆ ಮಾತ್ರ ಇರುವುದು ಎಂಬುದನ್ನು ಗಮನಿಸಬೇಕು.

### *ಮೂರು ಬಗೆಯಲ್ಲಿ ಸಂಗತಿ ನಿರೂಪಣೆ*

ನ್ಯಾಯವಿವರಣ ಟೀಕೆಯಲ್ಲಿ 'ಸ್ಥಾನ' ಪದಕ್ಕೆ 'ಸೃಷ್ಟಿಗೋಸ್ಕರ ಪ್ರಳಯಕಾಲದಲ್ಲಿರುವಿಕೆ' ಎಂಬ ಲಿಂಗದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆಯೆಂದು ವ್ಯಾಖ್ಯಾನಿಸಿದ್ದಾರೆ. ಇಲ್ಲಿಯ ತನಕ 'ಸ್ಥಾನ' ಶಬ್ದಕ್ಕೆ ಶ್ರುತಿಯ ನಿರ್ಣಾಯಕವಾದ ಷಡ್ವಿಧ ತಾತ್ಪರ್ಯಲಿಂಗಗಳ ನಡುವೆ ಇರುವ ಸ್ಥಾನದ ಸಮನ್ವಯವೆಂದು ನಿರೂಪಣೆ ಮಾಡಲಾಯಿತು. ಆದರೆ ಈಗ 'ಸ್ಥಾನ' ಶಬ್ದಕ್ಕೆ ಇರುವಿಕೆ ಎಂಬ ಲಿಂಗದ ಸಮನ್ವಯವೆಂಬ ಅಭಿಪ್ರಾಯವನ್ನು ವಿವಕ್ಷಿಸಿದ್ದಾರೆ. ಸ್ಥಾನದ ಸಮನ್ವಯವಾಗಲೀ, ಅಥವಾ ಲಿಂಗದ ಸಮನ್ವಯವಾಗಲೀ ಈ ಅಧಿಕರಣದಲ್ಲಿ ಮಾಡಿದರೂ ಸಹ ಪಾದಸಂಗತಿಯಿರುತ್ತದೆಂಬುದನ್ನು ತಿಳಿಯಬೇಕು.

ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ವಿಭಿನ್ನವಾದ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಪ್ರತ್ಯುದಾಹರಣ ಸಂಗತಿಯನ್ನು, ಹಿಂದಿನ ಅಧಿಕರಣದ ಸಿದ್ಧಾಂತವನ್ನೇ ಅವಲಂಬಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಪವಾದಕೀ ಸಂಗತಿಯನ್ನು ಹಿಂದಿನ ಅಧಿಕರಣದ ಸಿದ್ಧಾಂತ ಹೇತುವನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಕ್ಷೇಪಿಕೀ ಸಂಗತಿಯನ್ನೂ ತಿಳಿಯಬೇಕು. ಮುಂದೆ ಮೂರು ಬಗೆಯ ಪೂರ್ವಪಕ್ಷಗಳನ್ನು ವಿವರಣೆ ಮಾಡಿದಾಗ ಸ್ಪಷ್ಟವಾಗುತ್ತವೆ.

### *ಸಂಶಯ ಪರಂಪರೆ*

ಈ ಅಧಿಕರಣಕ್ಕೆ ಛಾಂದೋಗ್ಯದ ಆರನೇ ಅಧ್ಯಾಯದಲ್ಲಿರುವ 'ಸದೇವ ಸೋಮ್ಯ ಇದಮಗ್ರ ಆಸೀತ್' ಇತ್ಯಾದಿ ಸಮಸ್ತ ಪ್ರಕರಣವೇ ವಿಷಯವಾಗಿದೆ. ಅಲ್ಲಿ ಮುಖ್ಯವಾಗಿರುವ 'ಸತ್' ಎಂಬ ಶಬ್ದವನ್ನು ವಿಶೇಷವಾಗಿ ಉಲ್ಲೇಖಿಸಿ ಸಮನ್ವಯ ಮಾಡಲು ಹೊರಟಿದ್ದಾರೆ.

'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿ 'ಸತ್' ಪದಾರ್ಥಕ್ಕೆ ಬಹುಭವನವು ಶ್ರುತವಾಗಿದೆ. ಬಹುಭವನವೆಂದರೆ 'ವಿಕಾರ' ಎಂದು ಒಪ್ಪಬೇಕಾದ್ದರಿಂದ 'ತದೈಕ್ಷತ' ಎಂಬ ಶ್ರುತಿಯಲ್ಲಿರುವ ಈಕ್ಷಿತೃತ್ವವನ್ನು ಗೌಣವನ್ನಾಗಿ ವಿವಕ್ಷಿಸಬೇಕು. ಆವಾಗ ಜಡಪ್ರಕೃತಿಯೇ 'ಸತ್' ಶಬ್ದದಿಂದ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷಕಾರರ ಧೋರಣೆ.

'ಸತ್' ಪದಾರ್ಥಕ್ಕೆ ಶ್ರುತವಾದ ಬಹುಭವನವು ಸ್ವರೂಪತಃ ಬಹುಭಾವವನ್ನೇ ಹೇಳುತ್ತಿದೆ. ಭಗವಂತನಿಗೆ ಸ್ವರೂಪತಃ ಅನೇಕ ರೂಪಗಳು ಇರುವುದರಿಂದ 'ತದೈಕ್ಷತ' ಎಂಬಲ್ಲಿರುವ ಈಕ್ಷಿತೃತ್ವವನ್ನು ಗೌಣವನ್ನಾಗಿ ವಿವಕ್ಷಿಸಬೇಕಾಗಿಲ್ಲ. ಆದ್ದರಿಂದ 'ಸತ್' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂಬುದು ಸಿದ್ಧಾಂತಿಗಳ ವಿಚಾರ ಧಾರೆ.

### *'ಸತ್' ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವೆಂದು ಪೂರ್ವಪಕ್ಷ*

ಪೂರ್ವಪಕ್ಷ ಹೀಗಿದೆ - ಶ್ರುತಿಯಲ್ಲಿರುವ 'ಸತ್' ಶಬ್ದವು ಪ್ರಕೃತಿಯನ್ನು ಪ್ರತಿಪಾದಿಸಬೇಕು ಹೊರತು, ಬ್ರಹ್ಮನನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಏಕೆಂದರೆ ಜಗತ್ತಿಗೆ ಕಾರಣವಾದ ಯಾವ ಸತ್‌ಪದಾರ್ಥವಿದೆಯೋ, ಅದು 'ಬಹು ಸ್ಯಾಂ ಪ್ರಜಾಯೇಯ' ಇತ್ಯಾದಿ ಶ್ರುತಿಯು ಹೇಳುವಂತೆ ಪೃಥಿವೀ, ತೇಜಸ್ಸು ಮೊದಲಾದವುಗಳ ಸ್ವರೂಪವನ್ನು ತಾಳುತ್ತದೆಂದು ತಿಳಿಯುತ್ತದೆ. ಪರಬ್ರಹ್ಮನನ್ನೇ 'ಸತ್' ಶಬ್ದದಿಂದ ಪ್ರತಿಪಾದ್ಯನೆಂದು ಹೇಳಿದರೆ ಇಂತಹ ವಿಕಾರಸ್ವರೂಪವನ್ನು ಹೇಳುವುದು ತಪ್ಪಾಗುತ್ತದೆ. ಅವನು ಯಾವುದೇ ವಿಕಾರಕ್ಕೆ ಒಳಗಾಗುವುದಿಲ್ಲವೆಂದು ಶ್ರುತಿಗಳು ಹೇಳುತ್ತಿರುವಾಗ ಪೃಥಿವೀ, ತೇಜಸ್ಸು ಮೊದಲಾದವುಗಳ ಸ್ವರೂಪದಲ್ಲಿ ವಿಕಾರವನ್ನು ತಾಳುತ್ತಾನೆಂದು ಹೇಳಿದರೆ ಅದು ಅತ್ಯಂತ ವಿರುದ್ಧವಾದ ಗುಣವಾದೀತು.

ಹಿಂದಿನ ಭೂಮಾಧಿಕರಣದಲ್ಲಿ ಉತ್ಕ್ರಮಣವೆಂಬ ಲಿಂಗಕ್ಕೂ ಸರ್ವಗತತ್ವಕ್ಕೂ ಪರಸ್ಪರ ವಿರೋಧವು ಪ್ರಾಪ್ತವಾದಾಗ ಸರ್ವಗತನಾದರೂ ಸಹ ಬ್ರಹ್ಮನಲ್ಲಿ ಉತ್ಕ್ರಮಣವು ಇರಬಹುದೆಂದು ವಿರೋಧವನ್ನು ಪರಿಹರಿಸಲಾಯಿತು. ಅದೇ ನ್ಯಾಯದಿಂದ ಇಲ್ಲಿಯೂ ಸಹ ವಿಕಾರ ಹಾಗೂ ತದಭಾವಗಳಿಗೆ ವಿರೋಧವನ್ನು ಪರಿಹರಿಸಬಹುದಲ್ಲವೇ? ಅಥವಾ ಅಕ್ಷರಾಧಿಕರಣದಲ್ಲಿ ಮಹತ್ತ್ವ ಹಾಗೂ ಅಣುತ್ವಗಳಿಗೆ ಪರಸ್ಪರ ವಿರೋಧವಿರುವುದರಿಂದ ಒಬ್ಬನೇ ಪರಮಾತ್ಮನಲ್ಲಿ ಈ ವಿರುದ್ಧ ಧರ್ಮಗಳನ್ನು ಹೇಳುವುದು ಹೇಗೆ ಸಾಧ್ಯ? ಇದರಂತೆ ಸ್ಥೌಲ್ಯಾಭಾವ ಹಾಗೂ ಅಣುತ್ವಾಭಾವಗಳಿಗೂ ಲೋಕದಲ್ಲಿ ವಿರೋಧ ಕಂಡಿರುವುದರಿಂದ ಒಬ್ಬನೇ ಪರಮಾತ್ಮನಲ್ಲಿ ಇವೆರಡನ್ನು ಹೇಳುವುದು ಹೇಗೆ ಸಾಧ್ಯ ? ಮತ್ತು ಅತ್ತೃತ್ವ ಅನಶನಗಳಿಗೂ ವಿರೋಧವು ಕಂಡಿದ್ದರಿಂದ, ಇವುಗಳ ವಿರೋಧವನ್ನಾದರೂ ಪರಮಾತ್ಮನಲ್ಲಿ ಪರಿಹರಿಸುವುದು ಹೇಗೆ ಸಾಧ್ಯ ? ಇತ್ಯಾದಿ ಪ್ರಶ್ನೆಗಳು ಪ್ರಸಕ್ತವಾಗಿದ್ದವು. ಅವುಗಳಿಗೆ ಉತ್ತರವನ್ನು ಈ ಹಿಂದೆ ನೀಡಲಾಗಿತ್ತು. ಅದೇನು ತಪ್ಪಲ್ಲ. ಏಕೆಂದರೆ ಮಹತ್ತ್ವ-ಅಣುತ್ವಗಳಿಗೆ ಪ್ರತಿಯೋಗಿ-ಅನುಯೋಗಿಭಾವವಿದ್ದರೂ ಎರಡೂ ಸಹ ಭಾವರೂಪವೇ ಆಗಿವೆ. ಭಾವರೂಪವಾದ ಎರಡು ಧರ್ಮಗಳಿಗೆ ವಿರೋಧವನ್ನು ಪರಿಹರಿಸುವುದು ಕಷ್ಟವಾಗುವುದಿಲ್ಲ. ಸ್ಥೌಲ್ಯಾಭಾವ-ಅಣುತ್ವಾಭಾವಗಳೆರಡೂ ಅಭಾವರೂಪಗಳೇ ಆಗಿರುವುದರಿಂದ ಇವೆರಡರ ವಿರೋಧ ಪರಿಹಾರವೂ ಸಹ ಕಷ್ಟವಲ್ಲ. ಇನ್ನೂ ಅತ್ತೃತ್ವ ಹಾಗೂ ಅನಶನ (ಅತ್ತೃತ್ವಾಭಾವ)ಗಳಿಗೆ ವಿರೋಧವನ್ನೂ ಸಹ ಪರಿಹರಿಸಬಹುದು. ಏಕೆಂದರೆ ಅನಶನವು (ಅತ್ತೃತ್ವಾಭಾವವು) ವಿಶೇಷಾಭಾವ ಸ್ವರೂಪವಾಗಿದೆ. ಅತ್ತೃತ್ವವು ಸಾಮಾನ್ಯರೂಪವಾಗಿದೆ. ವಿಶೇಷಾಭಾವ ಹಾಗೂ ಸಾಮಾನ್ಯಗಳಿಗೆ ವಿರೋಧವಿರುವುದಿಲ್ಲ. ಉದಾಹರಣೆ : ಹಲಸಿನ ಮರದಲ್ಲಿ ವೃಕ್ಷತ್ವ ಎಂಬ ಸಾಮಾನ್ಯ ಧರ್ಮವಿದ್ದರೂ 'ಚೂತತ್ವ' ಎಂಬ ವಿಶೇಷಧರ್ಮ ಇಲ್ಲ. ಅಂದರೆ ವೃಕ್ಷತ್ವ ಸಾಮಾನ್ಯಕ್ಕೂ ಚೂತತ್ವಾಭಾವರೂಪ ವಿಶೇಷಧರ್ಮಕ್ಕೂ ವಿರೋಧವಿರುವುದಿಲ್ಲ. ಆದರೆ ಪ್ರಕೃತ 'ಬಹು ಸ್ಯಾಮ್' ಎಂಬ ಶ್ರುತಿಯಿಂದ ತಿಳಿಯುತ್ತಿರುವ ವಿಕಾರಕ್ಕೂ 'ನಿರ್ವಿಕಾರಃ ಸದಾ ಶುದ್ಧಃ' ಎಂಬುದರಿಂದ ತಿಳಿಯುತ್ತಿರುವ ವಿಕಾರಾಭಾವಕ್ಕೂ ವಿರೋಧವನ್ನು ಪರಿಹರಿಸಲು ಸಾಧ್ಯವೇ ಇಲ್ಲ. ಏಕೆಂದರೆ ವಿಕಾರಾಭಾವವು ವಿಕಾರಸಾಮಾನ್ಯಾಭಾವರೂಪವಾಗಿದೆ. 'ಬಹು ಸ್ಯಾಮ್' ಎಂಬಲ್ಲಿ ಹೇಳಲ್ಪಟ್ಟ ವಿಕಾರವು ವಿಶೇಷರೂಪವಾಗಿದೆ. ವಿಶೇಷಾಭಾವಕ್ಕೂ ಸಾಮಾನ್ಯಕ್ಕೂ ವಿರೋಧವಿಲ್ಲದಿರಬಹುದು. ಆದರೆ ಸಾಮಾನ್ಯಾಭಾವಕ್ಕೂ ವಿಶೇಷಕ್ಕೂ ವಿರೋಧವಿದ್ದೇ ಇರುತ್ತದೆ. ಅಂದರೆ ಘಟದಲ್ಲಿ ವೃಕ್ಷತ್ವವಿಲ್ಲವೆಂದು ಹೇಳಿದ ಮೇಲೆ ಚೂತ ವೃಕ್ಷತ್ವವಿದೆ ಎಂದು ಹೇಳಲು ಸಾಧ್ಯವಿಲ್ಲ. ಹಾಗಾಗಿ ವಿಕಾರ ತದಭಾವವೆಂಬ ಪೂರ್ವಪಕ್ಷ ಯುಕ್ತಿಯು ನಿರವಕಾಶವಾಗಿದೆ.

ನಾನಾವಿಧವಾದ ಜಡವಾದ ಪದಾರ್ಥಗಳ ಸ್ವರೂಪವನ್ನು ತಾಳುವಿಕೆಯು ಪರಮಾತ್ಮನಿಗೆ ಗುಣವೂ ಆಗುವುದಿಲ್ಲ. ಒಂದು ವೇಳೆ ಗುಣವಾಗಿದ್ದಲ್ಲಿ 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತಿ' ಇತ್ಯಾದಿ ಶ್ರುತಿಯಿಂದ ವಿರುದ್ಧವಾಗಿದ್ದ ಗುಣಗಳನ್ನೂ ಒಪ್ಪಬಹುದಿತ್ತು. ಆದರೆ ಇಂತಹ ವಿಕಾರವು ಅನರ್ಥಸ್ವರೂಪ ವಾಗಿರುವುದರಿಂದ ವಿರುದ್ಧವಾದ ಇಂತಹ ಧರ್ಮವನ್ನು ಪರಮಾತ್ಮನಲ್ಲಿ ಒಪ್ಪುವುದು ಅನಾವಶ್ಯಕ.

### *ಶ್ರುತಿಯಲ್ಲಿರುವ ಈಕ್ಷಣವು ಗೌಣ*

'ವಿಕಾರ-ತದಭಾವ' ಎಂಬ ಹೇತುವಿನಿಂದ ಬ್ರಹ್ಮನು 'ಸತ್' ಶಬ್ದದಿಂದ ವಾಚ್ಯನಾಗುವುದಿಲ್ಲವೆಂದು ಸಮರ್ಥಿಸಲಾಯಿತು. ಹಾಗಾದರೆ 'ತದೈಕ್ಷತ' ಎಂಬ ಶ್ರುತಿಯು 'ಸತ್' ಪದಾರ್ಥದಲ್ಲಿ ಈಕ್ಷಣವನ್ನು ಹೇಳುತ್ತಿದೆ. ಇದು ಪ್ರಕೃತಿಯಲ್ಲಿ ಬಾರದ ಕಾರಣ ಬ್ರಹ್ಮನಂತೆ ಪ್ರಕೃತಿಯೂ ಕೂಡ 'ಸತ್' ಶಬ್ದದಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲವಲ್ಲವೇ?

ಹೀಗೆ ಪ್ರಶ್ನಿಸಬಾರದು. ಶ್ರುತಿಯಲ್ಲಿರುವ ಈಕ್ಷಣಕ್ಕೆ ಗೌಣಾರ್ಥವನ್ನು ಅನಿವಾರ್ಯವಾಗಿ ಆಶ್ರಯಿಸಬೇಕು. ಜ್ಞಾನವು ಹುಟ್ಟಬೇಕೆಂದರೆ ಸತ್ವಗುಣವಿರಬೇಕೆಂದು ಗೀತೆಯು ಹೇಳಿದೆ. ಇಂತಹ ಸತ್ವಗುಣಕ್ಕೆ ಪ್ರಕೃತಿಯು ಆಶ್ರಯವಾದ್ದರಿಂದ, ಪ್ರಕೃತಿಯನ್ನು ಶ್ರುತಿಯು ಜ್ಞಾನವುಳ್ಳದ್ದೆಂದು ಕರೆಯುತ್ತಿದೆ. ಅಥವಾ ಅಭಿಮಾನಿದೇವತೆಯಲ್ಲಿರುವ ಜ್ಞಾನವನ್ನು ಅಭಿಮನ್ಯವಾದ ಪ್ರಕೃತಿಯಲ್ಲಿ ಪ್ರಯೋಗಿಸಲಾಗಿದೆ. ಹೀಗೆ ಗೌಣಾರ್ಥವನ್ನು ಮಾಡುವುದೇ ಅನಿವಾರ್ಯ. ಇಲ್ಲದಿದ್ದರೆ, 'ತತ್ತೇಜ ಐಕ್ಷತ' 'ತಾ ಆಪ ಐಕ್ಷಂತ' ಇತ್ಯಾದಿ ಸ್ಥಳಗಳಲ್ಲಿ ತೇಜಸ್ಸು, ನೀರು ಮೊದಲಾದವುಗಳಲ್ಲಿಯೂ ಜ್ಞಾನದ ಅಸ್ತಿತ್ವವನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಶ್ರುತಿಯ ಹಿಂದಿನ-ಮುಂದಿನ ವಾಕ್ಯಗಳೆಲ್ಲಾ ಜಡಪದಾರ್ಥಗಳಲ್ಲಿ ಜ್ಞಾನದ ಇರುವಿಕೆಯನ್ನು ಹೇಳಿದ್ದು ಮೇಲ್ನೋಟಕ್ಕೆ ಕಂಡರೂ ಕೂಡ, ಗೌಣಾರ್ಥವನ್ನೇ ಮಾಡಬೇಕೆಂದು ಸ್ಪಷ್ಟವಾಗುತ್ತದೆ. ಪ್ರಾಯಪಾಠದ ಬಲದಿಂದ 'ಸತ್' ಪದಾರ್ಥದಲ್ಲಿ ಕೇಳಿಸುತ್ತಿರುವ ಜ್ಞಾನವೂ ಕೂಡ ಗೌಣವೆಂದೇ ತಿಳಿಯಬೇಕು.

ಈಕ್ಷಣವನ್ನು ಗೌಣವನ್ನಾಗಿ ಸ್ವೀಕರಿಸದೇ ಮುಖ್ಯವೆಂದೇ ಸ್ವೀಕರಿಸಿ, ವಿಕಾರವನ್ನು ಗೌಣವೆಂದು ಹೇಳಿದಾಗ ಬ್ರಹ್ಮನು 'ಸತ್' ಶಬ್ದದಿಂದ ವಾಚ್ಯನಾಗಬಹುದು. ಆದರೆ ಉಪಕ್ರಮಕ್ಕಿಂತ ಉಪಸಂಹಾರವೇ ಪ್ರಬಲವೆಂಬುದು ನಮ್ಮ ಸಿದ್ಧಾಂತ. ಆದ್ದರಿಂದ ಚರಮಶ್ರುತವಾದ ವಿಕಾರವನ್ನು ಮುಖ್ಯವೆಂದು ಸ್ವೀಕರಿಸಬೇಕೆಂದರೆ ಪ್ರಥಮ ಶ್ರುತವಾದ ಈಕ್ಷಣಕ್ಕೆ ಗೌಣಾರ್ಥವನ್ನು ಸ್ವೀಕರಿಸುವುದು ನ್ಯಾಯಸಮ್ಮತವಾಗಿದೆ. ಆದ್ದರಿಂದ ಪ್ರಕೃತಿಯು 'ಸತ್' ಶಬ್ದದಿಂದ ಪ್ರತಿಪಾದ್ಯವಾಗುತ್ತದೆ.

### *ಈಕ್ಷಣಾದಿಗಳನ್ನು ಗೌಣವೆಂದೊಪ್ಪಿ - ಪ್ರಥಮ ಪೂರ್ವಪಕ್ಷ*

ಪ್ರಧಾನವು ಉಪಾದಾನ ಕಾರಣವೇ ಆಗಲಿ, ಬ್ರಹ್ಮನು ನಿಮಿತ್ತಕಾರಣವಾಗಬಹುದಲ್ಲವೇ? ಎಂಬ ಪ್ರಶ್ನೆಯನ್ನು ಅತ್ಯಂತ ಮಹತ್ತ್ವಪೂರ್ಣವಾಗಿ ವಿಚಾರ ಮಾಡುತ್ತಿದ್ದಾರೆ. ಈ ಪ್ರಶ್ನೆಗೆ ಐದು ಬಗೆಯಲ್ಲಿ ಉತ್ತರಿಸುತ್ತಾ, ಮೊದಲನೆಯ ಉತ್ತರವನ್ನು ಹೀಗೆ ಸಮರ್ಥಿಸಿದ್ದಾರೆ -

ಶ್ರುತಿಯಲ್ಲಿ 'ಸದೇವ ಸೌಮ್ಯ' ಎಂಬ ಅವಧಾರಣವಿರುವ ಪ್ರಯುಕ್ತ ಪ್ರಕೃತಿಯು ಮಾತ್ರ ಜಗತ್ತಿಗೆ ಕಾರಣವೆಂದು ಹೇಳಿದಾಗ ಬ್ರಹ್ಮನು ಕಾರಣನಲ್ಲವೆಂದು ತಿಳಿಯುತ್ತದೆ. ಕ್ಷೀರವು ಸ್ವಾಭಾವಿಕವಾಗಿ ಮೊಸರಾಗುವಂತೆ, ಪ್ರಕೃತಿಯು ಸ್ವಾಭಾವಿಕವಾಗಿಯೇ ಜಗತ್ತಾಗುತ್ತದೆ. ಈಶ್ವರನ ಆಧೀನ್ಯವು ಬೇಕಾಗಿಲ್ಲ. ಅಥವಾ ಶ್ರುತಿಯು ಅಭಿಮಾನಿಚೇತನದಲ್ಲಿ ಇರುವಂತಹ ಕಾರಣತ್ವವನ್ನು ವಿವಕ್ಷಿಸಿ ಪ್ರಕೃತಿಗೆ ಶ್ರುತಿಯು ಕಾರಣತ್ವವನ್ನು ಹೇಳುತ್ತಿದೆ. ಈ ಪಕ್ಷದಲ್ಲಿ ಈಶ್ವರನಿಗೆ ಜಗತ್ಕಾರಣತ್ವವೇ ಬರುವುದಿಲ್ಲ. ಪ್ರಕೃತಿಗೆ ಮಾತ್ರ ಜಗತ್ಕಾರಣತ್ವ ಬರುತ್ತದೆಂದು ತಿಳಿಯಬೇಕು. ಹಾಗಾಗಿ ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವ ಲಕ್ಷಣಕ್ಕೆ ಅಸಂಭವ ದೋಷವನ್ನು ಹೇಳಿದಂತಾಯಿತು.

ಅಥವಾ ಈಶ್ವರನಿಗೆ ಅನನ್ಯಾಧೀನವಾದ ಸ್ರಷ್ಟೃತ್ವವು ಹೇಗೆ ಇದೆಯೋ ಅದರಂತೆ ಪ್ರಕೃತಿಯಲ್ಲಿಯೂ ಅನನ್ಯಾಧೀನವಾದ ಜಗತ್ಕಾರಣತ್ವವಿದೆಯೆಂದು ಹೇಳಬಹುದು. ಈಶ್ವರನಿಗೂ ಸ್ರಷ್ಟೃತ್ವವನ್ನು ಒಪ್ಪಿ, ಪ್ರಕೃತಿಯಲ್ಲಿಯೂ ಜಗತ್ಕಾರಣತ್ವವನ್ನು ಒಪ್ಪುತ್ತಿರುವುದರಿಂದ ಅತಿವ್ಯಾಪ್ತಿದೋಷವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವವಾಗಲೀ, ಜಗತ್ಸ್ರಷ್ಟೃತ್ವವಾಗಲೀ ಈಶ್ವರನಲ್ಲಿ ಯುಕ್ತವಾಗುವುದಿಲ್ಲ.

### ಎರಡು ಮತ್ತು ಮೂರನೆಯ ಪೂರ್ವಪಕ್ಷ

ಶ್ರುತಿಯಲ್ಲಿರುವ ಈಕ್ಷಣಾದಿಗಳಿಗೆ ಗೌಣಾರ್ಥವನ್ನು ಆಶ್ರಯಿಸಬೇಕಾಗಿಲ್ಲ. ವಿವರ್ತಮತದಲ್ಲಿ ನಿರ್ವಿಕಾರಬ್ರಹ್ಮನಿಗೆ ತಾತ್ವಿಕವಾದ ವಿಕಾರವನ್ನು ಒಪ್ಪದಿದ್ದರೂ ಅತಾತ್ವಿಕವಾದ ವಿಕಾರವನ್ನು ಹೇಗೆ ಒಪ್ಪಿದ್ದಾರೋ, ಅದರಂತೆ ಅಚೇತನವಾದ ಪ್ರಕೃತಿಗೆ ತಾತ್ವಿಕವಾದ ಈಕ್ಷಣವನ್ನು ಒಪ್ಪಲು ಸಾಧ್ಯವಾಗದಿದ್ದರೂ ಅತಾತ್ವಿಕವಾದ ಈಕ್ಷಣವನ್ನು ಒಪ್ಪಬಹುದು. ಇದು ಎರಡನೆಯ ಪೂರ್ವಪಕ್ಷ.

ಅಥವಾ ವಿಶಿಷ್ಟಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಒಪ್ಪುವ ಅದ್ವೈತ ಮತದಲ್ಲಿ ವಿಶೇಷ್ಯನಲ್ಲಿ ನಿರ್ವಿಕಾರತ್ವವಿದ್ದರೂ ವಿಶಿಷ್ಟನಲ್ಲಿ ತಾತ್ವಿಕವಾದ ವಿಕಾರವೇ ಇರುತ್ತದೆಂದು ಒಪ್ಪಿದ್ದಾರೆ. ಅದರಂತೆ ಪ್ರಧಾನವು ಅಚೇತನವಾಗಿದ್ದರೂ ಅಭಿಮಾನಿ ಚೇತನರಿಂದ ವಿಶಿಷ್ಟವಾದಾಗ ಅದಕ್ಕೆ ತಾತ್ವಿಕವಾದ ಈಕ್ಷಣವನ್ನೇ ಒಪ್ಪಬಹುದೆಂಬುದು ಮೂರನೆಯ ಪೂರ್ವಪಕ್ಷ.

### ನಾಲ್ಕನೆಯ ಹಾಗೂ ಐದನೆಯ ಪೂರ್ವಪಕ್ಷ

ಸಾಂಖ್ಯಮತವನ್ನೇ ಅವಲಂಬಿಸಿ ಈ ಅಧಿಕರಣದ ಪೂರ್ವಪಕ್ಷವು ಹೊರಟಿಲ್ಲ. ಆದ್ದರಿಂದ ಶ್ರುತಿಯಲ್ಲಿ ಹೇಳಿದ್ದನ್ನು ಅವಲಂಬಿಸಿ ಪೂರ್ವಪಕ್ಷವು ಹೇಗೆ ಸುದೃಢವಾಗುತ್ತದೆಂಬುದನ್ನು ಗಮನಹರಿಸಬೇಕು. ಶ್ರುತಿಯಲ್ಲಿ ಒಂದೆಡೆ ಜಗತ್ಕಾರಣವಾದದ್ದಕ್ಕೆ ಈಕ್ಷಣವನ್ನು ಹೇಳಲಾಗಿದೆ. ಮತ್ತೊಂದೆಡೆ ಜಡತ್ವವನ್ನು ಹೇಳಲಾಗಿದೆ. ಶ್ರುತಿಯಲ್ಲಿ ಹೇಳಿರುವ ಕಾರಣದಿಂದಲೇ ಜಡತ್ವ ಹಾಗೂ ಈಕ್ಷಣಗಳಿಗೆ ಲೋಕದಲ್ಲಿ ವಿರೋಧವಿದ್ದರೂ ಪ್ರಕೃತ ಪ್ರಧಾನದ ವಿಷಯದಲ್ಲಿ ವಿರೋಧವಿರುವುದಿಲ್ಲ. ಹಿಂದಿನ ಅಧಿಕರಣದಲ್ಲಿ 'ಶ್ರುತಿಯಲ್ಲಿ ಹೇಳಿದೆ' ಎಂಬ ಕಾರಣದಿಂದಲೇ ಒಬ್ಬನೇ ಬ್ರಹ್ಮನಲ್ಲಿ ಅಣುತ್ವ ಹಾಗೂ ಮಹತ್ತ್ವಗಳನ್ನು ಸಿದ್ಧಾಂತಿಗಳೇ ಒಪ್ಪಿದ್ದಾರೆ. ಆ ಅಧಿಕರಣದ ಸಿದ್ಧಾಂತನ್ಯಾಯವನ್ನೇ ಇಲ್ಲಿಯೂ ವಿವಕ್ಷಿಸಿ ಪೂರ್ವಪಕ್ಷವು ಉದಯವಾಗುತ್ತದೆ.

ಅಥವಾ ಪ್ರಕೃತಿಯು ಸಾಂಶವಾದ ಪದಾರ್ಥ. ಒಂದಂಶದಿಂದ ಚೇತನತ್ವ, ಸ್ರಷ್ಟೃತ್ವಗಳೂ ಇದರಲ್ಲಿ ಇರುತ್ತದೆ. ಮತ್ತೊಂದು ಅಂಶದಿಂದ ಅಚೇತನತ್ವ, ವಿಕಾರಿತ್ವಗಳೂ ಕೂಡ ಇರುತ್ತದೆ. ಹೀಗೆ ಹೇಳಿದಾಗ, ಪ್ರಧಾನದಲ್ಲಿ ಜಗತ್ ಸ್ರಷ್ಟೃತ್ವವನ್ನು ಸುಲಭವಾಗಿ ಸಮರ್ಥಿಸಿದಂತಾಗುತ್ತದೆ. ಹೀಗೆ ಪ್ರಧಾನವೇ ಜಗತ್ಕಾರಣವೆಂದು, ಜಗತ್‌ಸ್ರಷ್ಟೃವೆಂದು ಹೇಳಲು ಬರುವ ಕಾರಣ ಜನ್ಮಾದ್ಯಧಿಕರಣದಲ್ಲಿ ಜಗತ್ಕಾರಣತ್ವವು ಮಹಾವಿಷ್ಣುವಿನ ಲಕ್ಷಣವೆಂದು ಹೇಳಿದ್ದು ತಪ್ಪಾಗುತ್ತದೆ.

### ಜನ್ಮಾದ್ಯಧಿಕರಣದಿಂದ ತೋರಿಸಿದ ಆಕ್ಷೇಪದಲ್ಲಿ ಸ್ವಾರಸ್ಯ

ಈ ಅಧಿಕರಣದಲ್ಲಿ 'ಸದಾಯತನಾಃ' ಎಂಬ ವಿಷಯವಾಕ್ಯವನ್ನು ಗಮನಿಸಿದಾಗ ಸರ್ವಾಧಾರತ್ವವೇ ಮೊದಲಾದ ಧರ್ಮಗಳೂ ಕೂಡ ತೋರುತ್ತವೆ. ಇವುಗಳನ್ನು ಆಕ್ಷೇಪ ಮಾಡಿದಾಗ, ಹಿಂದಿನ ಅಧಿಕರಣದಿಂದ ಅಥವಾ ದ್ಯುಭ್ವಾದ್ಯಧಿಕರಣದಿಂದ ಸಂಗತಿಯನ್ನು ಸುಲಭವಾಗಿ ತೋರಿಸಿದಂತಾಗುತ್ತದೆ. ಇದನ್ನು ಬಿಟ್ಟು ಜನ್ಮಾದ್ಯಧಿಕರಣದಿಂದ ಆಕ್ಷೇಪ ತೋರಿಸುವುದು ಗೌರವವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರ ತಿಳಿಯಬೇಕು. ಸಮನ್ವಯಾಧ್ಯಾಯದಲ್ಲಿರುವ ಪ್ರತಿಯೊಂದು ಅಧಿಕರಣಗಳೂ ಕೂಡ ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವ ಲಕ್ಷಣವನ್ನು ಸಮರ್ಥಿಸುವುದಕ್ಕಾಗಿಯೇ ಹೊರಟಿವೆ. ಜನ್ಮಾದ್ಯಧಿಕರಣದಿಂದ ನೇರವಾಗಿ ಆಕ್ಷೇಪ ತೋರಿಸಿದ್ದರಿಂದ ಈ ಪ್ರಮೇಯವನ್ನು ತಿಳಿಸಿದಂತಾಗುತ್ತದೆ.

ಅಥವಾ ಜಿಜ್ಞಾಸಾಧಿಕರಣದಿಂದಲೂ ಕೂಡ ಆಕ್ಷೇಪಮಾಡಬಹುದು. ಏಕೆಂದರೆ 'ಸತ್'ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವಾಗದಿದ್ದರೆ, 'ಸೋSಕಾಮಯತ ಬಹುಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದ ಆನಂದಮಯನೂ ಕೂಡ ವಿಷ್ಣುವಾಗಲು ಸಾಧ್ಯವಿಲ್ಲ. ಆಗ ಆನಂದಮಯನ ಅವಯವವೆನಿಸಿದ ಬ್ರಹ್ಮನೂ ಕೂಡ ವಿಷ್ಣುವಾಗುವುದಿಲ್ಲವೆಂದು ಆಕ್ಷೇಪವನ್ನು ತೋರಿಸಬಹುದಿತ್ತು. ಅಂದರೆ ಜಿಜ್ಞಾಸಾಧಿಕರಣ-ದಿಂದ ನೇರವಾಗಿ ಆಕ್ಷೇಪವನ್ನು ತೋರಿಸಬೇಕೆಂದರೆ, ಆನಂದಮಯನನ್ನು ಆಕ್ಷೇಪ ಮಾಡುವ ಮೂಲಕ ತೋರಿಸಬೇಕಾಗುತ್ತದೆ. ಇದು ದೀರ್ಘವಾದ್ದರಿಂದ ಸುಲಭವಾಗಿ ಜನ್ಮಾಧಿಕರಣದಿಂದ ಆಕ್ಷೇಪವನ್ನು ತಿಳಿಯಬೇಕು.

ಅನುವ್ಯಾಖ್ಯಾನದಲ್ಲಿ ಸ್ಥಾನದ ಸಮನ್ವಯವನ್ನು ಈ ಅಧಿಕರಣದ ಪ್ರಮೇಯವನ್ನಾಗಿ ಹೇಳಿದ್ದಾರೆ. ಇದರಿಂದ ಸ್ರಷ್ಟೃತ್ವಧರ್ಮವನ್ನು ಆಕ್ಷೇಪ ಮಾಡುವುದಷ್ಟೇ ಅಲ್ಲದೇ ಸರ್ವೋತ್ತಮತ್ವವೇ ಮೊದಲಾದ ಉಳಿದ ಬ್ರಹ್ಮನ ಧರ್ಮಗಳನ್ನೂ ಕೂಡ ಆಕ್ಷೇಪ ಮಾಡಬೇಕೆಂದು ತಿಳಿಯಬೇಕು.

*ಪರಮಾತ್ಮನೇ 'ಸತ್' ಶಬ್ದವಾಚ್ಯನೆಂದು ಸಿದ್ಧಾಂತ*

ಸಿದ್ಧಾಂತ ಹೀಗಿದೆ - ಹಿಂದೆ ಮಾಡಿದ ಐದು ಬಗೆಯ ಪೂರ್ವಪಕ್ಷಗಳಲ್ಲಿ ಮೊದಲನೆಯ ಪೂರ್ವಪಕ್ಷದ ನಿರಾಕರಣೆ ಹೀಗಿದೆ - ಪ್ರಕೃತಿಯೇ 'ಸತ್' ಶಬ್ದ ವಾಚ್ಯವಾದರೆ ಈಕ್ಷಣವನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕಾದರೂ ಬಹುಭವನವನ್ನು ಗೌಣವನ್ನಾಗಿ ಸ್ವೀಕರಿಸಬೇಕಾಗಿಲ್ಲವೆಂದು ಪೂರ್ವಪಕ್ಷದಲ್ಲಿ ಹೇಳಿದ್ದರು. ಆದರೆ ಈಕ್ಷಣದ ಜೊತೆಗೆ ಬಹುಭವನವನ್ನೂ ಸಹ ಗೌಣವೆಂದೇ ಅವರು ಒಪ್ಪಬೇಕಾಗುತ್ತದೆ. ಏಕೆಂದರೆ 'ತತ್ತೇಜ ಐಕ್ಷತ ತದತಪೋ ಅಸ್ರಜತ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ 'ತೇಜಸ್' ಮೊದಲಾದ ಶಬ್ದಗಳು ಜಡಪದಾರ್ಥವನ್ನು ಪ್ರತಿಪಾದಿಸುತ್ತಿಲ್ಲ ಹೊರತಾಗಿ, ದೇವತೆಗಳನ್ನೇ ಪ್ರತಿಪಾದಿಸುತ್ತಿವೆ. ಪ್ರಕೃತಿಗೆ ದೇವತಾಸ್ವರೂಪವನ್ನು ತಾಳಲು ಸಾಧ್ಯವಿಲ್ಲ. ಹಾಗಾಗಿ 'ಸತ್' ಪದಾರ್ಥದಿಂದ 'ತೇಜಸ್' ಮೊದಲಾದವುಗಳು ಹುಟ್ಟಿದವು ಎಂಬ ಶ್ರುತಿಗೆ ಪ್ರಕೃತಿಪರತ್ವವನ್ನು ಸುಲಭವಾಗಿ ಹೇಳಲು ಅವರಿಂದಾಗದು.

ಆದರೆ ಬ್ರಹ್ಮನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾದಾಗ ಈ ಸಮಸ್ಯೆ ಬರುವುದಿಲ್ಲ. ಬ್ರಹ್ಮನು ಚೇತನನಾದ್ದರಿಂದ ಈಕ್ಷಣವನ್ನು ಮುಖ್ಯವಾಗಿ ಹೇಳಬಹುದು. ಬಹುಭವನವೂ ಸಹ ಪ್ರಾದುರ್ಭಾವರೂಪದಿಂದ ಮುಖ್ಯವಾಗಿಯೇ ಉಪಪನ್ನವಾಗುತ್ತದೆ. ಬ್ರಹ್ಮನು ಒಬ್ಬನೇ ಆಗಿದ್ದರೂ, ಅಜಾಯಮಾನನಾಗಿದ್ದರೂ ಕೂಡ ದ್ಯುಭ್ವಾದ್ಯಧಿಕರಣದಲ್ಲಿ ಹಾಗೂ ಗುಹಾಧಿಕರಣದಲ್ಲಿ ಹೇಳಿದಂತೆ ಅನೇಕ ರೂಪಗಳಿಂದ ಪ್ರಾದುರ್ಭಾವವಾಗುವಿಕೆ ಮತ್ತು ಪ್ರಾದುರ್ಭಾವವಿರುವುದರಿಂದ ಹುಟ್ಟುವಿಕೆ ಮೊದಲಾದವುಗಳೂ ಕೂಡ ಅವನಲ್ಲಿ ಯುಕ್ತವಾಗುತ್ತದೆಂದು ತಿಳಿಯಬೇಕು. ಆದ್ದರಿಂದ 'ಸತ್' ಶಬ್ದದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗುತ್ತಾನೆ.

*ಶ್ರೀಹರಿಯಲ್ಲಿ ಈಕ್ಷಣ, ಬಹುಭಾವಗಳೆರಡೂ ಮುಖ್ಯ*

ಪರಮಾತ್ಮನು ಅನೇಕ ರೂಪಗಳನ್ನು ತಾಳಲು ಸಂಕಲ್ಪ ಮಾಡಿದನು. ಅನಂತರ ಆ ರೂಪಗಳ ಅಧಿಷ್ಠಾನಕ್ಕಾಗಿ ಸಮಸ್ತ ಜಗತ್ತಿನಲ್ಲಿ ನಾನಾವಿಧವಾದ ಪದಾರ್ಥಗಳನ್ನು ಸೃಷ್ಟಿ ಮಾಡಿದನು. ಅನಂತರ ಆ ಪದಾರ್ಥಗಳ ಒಳಗಡೆ ನಿಯಾಮಕನಾಗಿ ಪ್ರವೇಶ ಮಾಡಿದನು. ಹೀಗೆ ಶ್ರುತಿಯು ಹೇಳುತ್ತಿದೆ. ನಿಯಾಮಕವಾದ ಅನೇಕ ರೂಪಗಳನ್ನು ತಾಳಬೇಕೆಂದು ಸಂಕಲ್ಪ ಮಾಡಿ, ನಿಯಮ್ಯ ಪದಾರ್ಥಗಳನ್ನು ಸೃಷ್ಟಿ ಮಾಡುವುದೇನೂ ತಪ್ಪಾಗುವುದಿಲ್ಲ. ನಾನು

ಗುರುವಾಗಬೇಕು ಎಂಬ ಸಂಕಲ್ಪವನ್ನು ಮಾಡಿರುವಂತಹ ವ್ಯಕ್ತಿಯು ಶಿಷ್ಯ ಸಂಪಾದನೆಯಲ್ಲಿ ತೊಡಗಿರುತ್ತಾನೆ. ನಾನು ರಾಜನಾಗಬೇಕೆಂದು ಸಂಕಲ್ಪಿಸಿದ ವ್ಯಕ್ತಿಯು ಭೃತ್ಯರ ಸಂಪಾದನೆಯಲ್ಲಿ ತೊಡಗುತ್ತಾನೆ. ಇವುಗಳು ಹೇಗೆ ತಪ್ಪಲ್ಲವೋ, ಅದರಂತೆ ಅನೇಕ ರೂಪಗಳನ್ನು ತಾಳಬೇಕೆಂದು ಸಂಕಲ್ಪಮಾಡಿದ ಪರಮಾತ್ಮನ ವಿಷಯದಲ್ಲೂ ಅನೇಕ ಪದಾರ್ಥಗಳ ಸೃಷ್ಟಿ ಮಾಡುವಿಕೆಯು ತಪ್ಪಾಗುವುದಿಲ್ಲ. ಈ ಅಭಿಪ್ರಾಯದಿಂದಲೇ 'ಸಚ್ಚ ತ್ಯಚ್ಚಾಭವತ್' ಎಂಬ ಶ್ರುತಿ ಮತ್ತು 'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯು ಹೊರಟಿದೆ. ಆದ್ದರಿಂದ ಪರಮಾತ್ಮನೇ 'ಸತ್' ಶಬ್ದದಿಂದ ವಾಚ್ಯನಾದಾಗ ಅವನಲ್ಲಿಯೇ ಈಕ್ಷಣ ಮತ್ತು ಬಹುಭವನಗಳೆರಡೂ ಮುಖ್ಯವಾಗಿಯೇ ಉಪಪನ್ನವಾಗುತ್ತದೆ.

*ಐದೂ ಬಗೆಯ ಪೂರ್ವಪಕ್ಷಗಳ ನಿರಾಕರಣೆ*

ಈ ಹಿಂದೆ ಮೊದಲನೆಯ ಪೂರ್ವಪಕ್ಷವನ್ನು ನಿರಾಕರಿಸಿದ್ದಾಯಿತು. ಈಗ ಉಳಿದ ನಾಲ್ಕು ಬಗೆಯ ಪೂರ್ವಪಕ್ಷಗಳೂ ಸಹ ಅಸಮಂಜಸವಾಗಿವೆಯೆಂದು ನಿರಾಕರಿಸಲಾಗಿದೆ. ಎರಡನೆಯ ಹಾಗೂ ಮೂರನೆಯ ಪೂರ್ವಪಕ್ಷಗಳು ವಿವರ್ತಮತ ಮತ್ತು ವಿಕಾರಮತಗಳಲ್ಲಿ ಸೇರ್ಪಡೆಯಾಗುವುದರಿಂದ ಪ್ರಕೃತ್ಯಧಿಕರಣದಲ್ಲಿ ಇವುಗಳನ್ನು ವಿವರವಾಗಿ ನಿರಾಕರಿಸಲಾಗಿದೆ. ನಾಲ್ಕನೆಯ ಪೂರ್ವಪಕ್ಷದಲ್ಲಿ ವಿಚಿತ್ರಶಕ್ತಿಯೋಗಿತ್ವ ಮತ್ತು ವಿರುದ್ಧಗುಣಭಾಗಿತ್ವ ಎಂಬೆರಡು ಧರ್ಮಗಳು ಬ್ರಹ್ಮನಲ್ಲಿ ಮಾತ್ರ ಇರುತ್ತವೆಂದು ಸಾಧಿಸಲಾಗದು. ಬ್ರಹ್ಮನಂತೆ ಪ್ರಕೃತಿಯಲ್ಲೂ ಕೂಡ ಈ ಧರ್ಮಗಳು ಇರುತ್ತವೆ. ಐದನೆಯ ಪೂರ್ವಪಕ್ಷದಲ್ಲಿ ಪ್ರಕೃತಿಯನ್ನು ಎರಡು ಭಾಗ ಮಾಡಿ ಚೇತನಾಚೇತನತ್ವವನ್ನು ಒಪ್ಪುವುದು ಅತ್ಯಂತ ಕಠಿಣ ಕಲ್ಪನೆಯಾಗಿದೆ. ಆದ್ದರಿಂದ ಬ್ರಹ್ಮನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳುವುದೇ ಅತ್ಯಂತ ಶ್ರೇಷ್ಠ.

*ಸೂತ್ರದಲ್ಲಿರುವ 'ಕರ್ಮ' 'ಸಃ' ಎಂಬೆರಡು ಪದಗಳ ಸಾರ್ಥಕ್ಯ ಚಿಂತನೆ*

ಸೂತ್ರದಲ್ಲಿ 'ಕರ್ಮ' ಎಂಬ ಪದವನ್ನೇಕೆ ಹೇಳಿದರು. ಶ್ರುತಿಯಲ್ಲಿ ಈಕ್ಷಣವು ಹೇಳಲ್ಪಟ್ಟದ್ದರಿಂದ ಭಗವಂತನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸಲು 'ಈಕ್ಷತಿ ವ್ಯಪದೇಶಾತ್ ಸಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. ಕರ್ಮಪದವನ್ನು ಹೇಳಿದ್ದರಿಂದ ಹೆಚ್ಚಿನ ವಿಷಯವನ್ನೇನೂ ತಿಳಿಸಿದಂತಾಗಲಿಲ್ಲವಲ್ಲ ಎಂಬ ಪ್ರಶ್ನೆಗೆ ಟೀಕೆಯ ಪ್ರಕಾರ ಹೀಗೆ ಸಮಾಧಾನ ತಿಳಿಯಬೇಕು. ಪರಮಾತ್ಮನು ಜ್ಞಾನಸ್ವರೂಪನಾದ್ದರಿಂದ 'ಐಕ್ಷತ' ಎಂಬಲ್ಲಿ ಹೇಳಲ್ಪಟ್ಟ ಜ್ಞಾನಕರ್ತೃತ್ವವನ್ನು ಅವನಲ್ಲಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಲೋಕದಲ್ಲಿ ಕ್ರಿಯೆ ಹಾಗೂ ಕರ್ತೃತ್ವಗಳಿಗೆ ಭೇದವೇ ಇರುತ್ತದೆ. ದೇವದತ್ತನು ಕೊಡಲಿಯಿಂದ ಮರವನ್ನು ಕಡಿಯುತ್ತಾನೆ ಎಂದು ಹೇಳಿದಾಗ 'ಕಡಿಯುವಿಕೆ' ಎಂಬ ಕ್ರಿಯೆಗೂ, ದೇವದತ್ತನಿಗೂ ಭೇದವೇ ಇರುತ್ತದೆ ಹೊರತು, ಕಡಿಯುವಿಕೆಯೇ ದೇವದತ್ತನಾಗಲು ಸಾಧ್ಯವಿಲ್ಲ. ಅದರಂತೆ ಜ್ಞಾನಸ್ವರೂಪನಾದ ಬ್ರಹ್ಮನು ಜ್ಞಾನಾಶ್ರಯನಾಗಲು ಸಾಧ್ಯವಿಲ್ಲ. ಹಾಗಾಗಿ 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬ ಶ್ರುತಿಯಿಂದ ಜ್ಞಾನರೂಪನೆಂದು ನಿರ್ಣೀತನಾದ ಬ್ರಹ್ಮನಿಗೆ 'ಐಕ್ಷತ' ಎಂಬುದಾಗಿ ಜ್ಞಾನಕರ್ತೃತ್ವವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಯು ಬರುತ್ತದೆ. ಇದರ ಪರಿಹಾರಕ್ಕೋಸ್ಕರ ಸೂತ್ರಕಾರರು 'ಈಕ್ಷತಿಕರ್ಮ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಅಂದರೆ 'ಜ್ಞಾನರೂಪವಾದ ಕ್ರಿಯೆ' ಎಂದು ಒತ್ತಿ ಹೇಳಿದ್ದರಿಂದ ಜ್ಞಾನಕರ್ತೃವಾಗಿದ್ದರೂ ಪರಮಾತ್ಮನು ಜ್ಞಾನಸ್ವರೂಪನು ಆಗುತ್ತಾನೆಂದು ಹೇಳಿದಂತಾಗುತ್ತದೆ. ಇಲ್ಲಿರುವ ಕರ್ಮಪದಕ್ಕೆ 'ಕ್ರಿಯೆ' ಎಂದರ್ಥ. ಭಗವಂತನ ವಿಷಯದಲ್ಲಿ ಕ್ರಿಯೆಗೂ ಕರ್ತೃತ್ವಕ್ಕೂ ಭೇದವಿರಬೇಕೆಂಬ ನಿಯಮವಿಲ್ಲ. ವಿಶೇಷದ ಬಲದಿಂದ ಈ ಕ್ರಿಯಾಕರ್ತೃಭಾವವು ಉಪಪನ್ನವಾಗುತ್ತದೆ. ಇದು ಟೀಕಾರಾಯರ ಅಭಿಪ್ರಾಯ.

ತತ್ತ್ವಪ್ರದೀಪಕಾರರ ಅಭಿಪ್ರಾಯ ಹೀಗಿದೆ - ಸೂತ್ರದಲ್ಲಿ ಇರುವ ಕರ್ಮಶಬ್ದಕ್ಕೆ 'ಸೃಷ್ಟ್ಯಾದಿ ಕ್ರಿಯೆ' ಎಂದರ್ಥ. ಗೀತಾತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು 'ನ ಕರ್ತೃತ್ವಂ ನ ಕರ್ಮಾಣಿ' ಎಂಬ ಶ್ಲೋಕಕ್ಕೆ ವ್ಯಾಖ್ಯಾನವನ್ನು

ಮಾಡುವಾಗ ಕರ್ಮಶಬ್ದಕ್ಕೆ ಅದೃಷ್ಟೋತ್ಪಾದನವೆಂಬ ಕ್ರಿಯಾವಿಶೇಷವೆಂಬರ್ಥವನ್ನು ಹೇಳುತ್ತಾರೆ. ಅದರಂತೆ ಇಲ್ಲಿಯೂ ಕೂಡ ಸೃಷ್ಟ್ಯಾದಿ ಕ್ರಿಯಾವಿಶೇಷವೆಂಬರ್ಥವನ್ನು ತಿಳಿಸುವುದಕ್ಕಾಗಿ ಕರ್ಮಪದವನ್ನು ತಿಳಿಸಿರುತ್ತಾರೆ. ಹೀಗೆ ಕ್ರಿಯಾವಿಶೇಷವನ್ನು ಹೇಳಿದ್ದರಿಂದ ಪ್ರಧಾನ ಪಕ್ಷದಲ್ಲಿ ಈಕ್ಷಿತೃತ್ವವು ಅಯುಕ್ತವಾಗುತ್ತದೆಂದಷ್ಟೇ ಅಲ್ಲ, ಸ್ರಷ್ಟೃತ್ವಾದಿಗಳೂ ಕೂಡ ಅಯುಕ್ತವಾಗುತ್ತದೆಂದು ತಿಳಿಯಬೇಕು.

ಸೂತ್ರದಲ್ಲಿರುವ ಕರ್ಮಪದವು ಹೇಗೆ ಸಾರ್ಥಕವೋ, ಅದರಂತೆ 'ಸಃ' ಎಂಬ ಪದವೂ ಕೂಡ ಸಾರ್ಥಕವಾಗಿದೆ. ವಾಸ್ತವಿಕವಾಗಿ 'ತತ್ತುಸಮನ್ವಯಾತ್' ಎಂಬ ಸೂತ್ರದಿಂದ 'ಸತ್' ಎಂಬ ಪದವೇ ಅನುವೃತ್ತವಾಗುತ್ತಿರುವಾಗ 'ಸಃ' ಎಂಬ ಪದವನ್ನೇಕೆ ಪ್ರತ್ಯೇಕವಾಗಿ ಹೇಳಿದರೆಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಆದರೆ 'ಏಕೋ ನಾರಾಯಣ ಆಸೀತ್' ಮೊದಲಾದ ಸಮಾಖ್ಯಾಪ್ರಮಾಣವನ್ನು ಉಲ್ಲೇಖಿಸುವುದಕ್ಕಾಗಿ 'ತತ್' ಎಂಬುದನ್ನು ಅನುಷಂಗ ಮಾಡಿಕೊಳ್ಳದೇ 'ಸಃ' ಎಂಬ ಪದವನ್ನು ಉಲ್ಲೇಖಿಸಿದ್ದಾರೆ. ಆದ್ದರಿಂದ ಸೂತ್ರದಲ್ಲಿರುವ ಎಲ್ಲ ಪದಗಳು ಅತ್ಯಂತ ಅರ್ಥಪೂರ್ಣವಾಗಿವೆಯೆಂದು ಭಾವಿಸಬೇಕು.

*ಸೂತ್ರದಲ್ಲಿ ಸಮನ್ವೇತವ್ಯ ಶಬ್ದವನ್ನೇಕೆ ಉಲ್ಲೇಖಿಸಿಲ್ಲ ?*

ಸಾಮಾನ್ಯವಾಗಿ ಪ್ರತಿಯೊಂದು ಅಧಿಕರಣಗಳ ಪ್ರಥಮಸೂತ್ರದಲ್ಲಿ ಸಮನ್ವಯ ಮಾಡಬೇಕಾದ ಶಬ್ದವನ್ನು ಉಲ್ಲೇಖ ಮಾಡುತ್ತಾರೆ. ಆದರೆ ಇದೇ ಮೊದಲ ಬಾರಿ ಈ ಅಧಿಕರಣದ ಸೂತ್ರದಲ್ಲಿ ಸಮನ್ವಯ ಮಾಡಬೇಕಾದ ಶಬ್ದವನ್ನೇ ಸೂತ್ರಕಾರರು ಉಲ್ಲೇಖ ಮಾಡಿಲ್ಲ. ಇದಕ್ಕೆ ಕಾರಣ ಏನು? ಎಂಬ ಪ್ರಶ್ನೆಗೆ ಹಲವು ಬಗೆಯಲ್ಲಿ ಇದರ ಉತ್ತರವನ್ನು ತಿಳಿಯಬಹುದು -

ಸೂತ್ರದಲ್ಲಿರುವ ಹೇತುವನ್ನು ಗಮನಿಸಿ, ಶಿಷ್ಯಂದಿರೇ ಸ್ವತಃ ಸಮನ್ವಯ ಮಾಡಬೇಕಾದ ಶಬ್ದವನ್ನು ಊಹಿಸಿಕೊಳ್ಳಲಿ ಎಂದು ಉಲ್ಲೇಖ ಮಾಡದಿರಬಹುದು. ಅಥವಾ ಸ್ಥಾನದ ಸಮನ್ವಯವು ಈ ಅಧಿಕರಣದ ಉದ್ದೇಶವಾದ್ದರಿಂದ ಶಬ್ದವಿಶೇಷವನ್ನು ಉಲ್ಲೇಖ ಮಾಡಲು ಸಾಧ್ಯವಿಲ್ಲವೆಂದಿರಬಹುದು. ಅಥವಾ ಸೂತ್ರವು ಅಲ್ಪಾಕ್ಷರವಾಗಿರಲಿ ಎಂಬ ಉದ್ದೇಶವಿರಬಹುದು. ಅಥವಾ ಯಾವ ಸೂತ್ರದಲ್ಲಿ ಹೇತುವಿನಿಂದಲೇ ಸ್ಪಷ್ಟವಾಗಿ 'ಸಮನ್ವೇತವ್ಯಶಬ್ದ'ವು ತಿಳಿಯುತ್ತದೋ, ಅಲ್ಲಿ ಪುನಃ ಸಾಧ್ಯನಿರ್ದೇಶವನ್ನು ಮಾಡಬೇಕಾಗಿಲ್ಲವೆಂದು ಸೂಚಿಸುವ ಉದ್ದೇಶವಿರಬಹುದು. ಹೀಗೆ ಅನೇಕ ಉದ್ದೇಶಗಳಿಂದ ಸೂತ್ರಕಾರರು 'ಸಮನ್ವೇತವ್ಯಶಬ್ದ'ವನ್ನು ಸೂತ್ರದಲ್ಲಿ ಉಲ್ಲೇಖಿಸಿಲ್ಲ.

ಅಥವಾ 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ 'ಸಃ' ಎಂಬ ಪದವು ಸಮನ್ವೇತವ್ಯಶಬ್ದವೇ ಆಗಿದೆ. 'ಸ ಈಕ್ಷಾಂಚಕ್ರೇ' ಎಂಬ ಶ್ರುತಿಯಲ್ಲಿರುವ 'ಸಃ' ಎಂಬ ಪದವನ್ನೇ ಇದು ಉಲ್ಲೇಖ ಮಾಡುತ್ತಿರುವುದರಿಂದ ಸೂತ್ರಕಾರರು ಸಮನ್ವೇತವ್ಯಶಬ್ದವನ್ನು ಉಲ್ಲೇಖಿಸಿಲ್ಲವೆಂದು ಹೇಳಬಾರದು.

*ಶಾಂಕರಭಾಷ್ಯ ವಿಮರ್ಶೆ*

ಶಾಂಕರಭಾಷ್ಯದ ಅಧಿಕರಣ ಶರೀರ ಹೀಗಿದೆ - 'ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ' ಎಂಬ ವಾಕ್ಯವನ್ನು ಇವರು ವಿಷಯವಾಕ್ಯವೆಂದು ಪರಿಗಣಿಸುತ್ತಾರೆ. ಈ ವಾಕ್ಯದಲ್ಲಿ 'ಅಭಿಧ್ಯಾಯೀತ' ಎಂಬ ಪದದಿಂದ ಧ್ಯಾನಕ್ಕೆ ವಿಷಯನನ್ನಾಗಿ ಹೇಳಲ್ಪಟ್ಟ ಪದಾರ್ಥ ಹಿರಣ್ಯಗರ್ಭನೆಂಬ ಅಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಇಂತಹ ಧ್ಯಾನದಿಂದ ದೊರೆಯುವಂತಹ ಫಲವು 'ಸ ಸಾಮಭಿರುನ್ನೀಯತೇ

ಬ್ರಹ್ಮಲೋಕಮ್' ಇತ್ಯಾದಿಯಾಗಿ ಪರಿಚ್ಛಿನ್ನವಾದ ಬ್ರಹ್ಮಲೋಕದ ಪ್ರಾಪ್ತಿ. ಅಪರಿಚ್ಛಿನ್ನನಾದ ಪರಬ್ರಹ್ಮನನ್ನು ತಿಳಿಯುವುದರಿಂದ ಪರಿಚ್ಛಿನ್ನವಾದ ಫಲವು ದೊರೆಯುವುದು ಸರಿಯಲ್ಲ. ಆದ್ದರಿಂದ ಧ್ಯಾನಕ್ಕೆ ವಿಷಯನಾದವನು ಚತುರ್ಮುಖಬ್ರಹ್ಮನೇ ಆಗಿದ್ದಾನೆಂದು ಪೂರ್ವಪಕ್ಷ.

ಧ್ಯಾನಕ್ಕೆ ವಿಷಯನಾದವನು ಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಎಂಬುದಾಗಿ ಮುಂದಿನ ವಾಕ್ಯದಲ್ಲಿ ಪುರುಷನದರ್ಶನವನ್ನು ಹೇಳಲಾಗಿದೆ. ದರ್ಶನಕ್ಕೆ ಸತ್ಯಭೂತವಾದದ್ದೇ ವಿಷಯವಾಗುತ್ತದೆ ಹೊರತು, ಕಲ್ಪಿತವಸ್ತು ವಿಷಯವಾಗುವುದಿಲ್ಲ. ಜ್ಞಾನಕ್ಕೆ ವಿಷಯನಾದವನೇ ಧ್ಯಾನಕ್ಕೂ ವಿಷಯನಾಗಬೇಕಾದ್ದರಿಂದ ಅಭಿಧ್ಯಾತವ್ಯನಾದವನು ಪರಬ್ರಹ್ಮನೇ ಆಗುತ್ತಾನೆ. 'ಯ ಪುನರೇತಮ್' ಎಂಬ ವಾಕ್ಯದಲ್ಲಿ ಉಲ್ಲೇಖಿಸಲ್ಪಟ್ಟವನು ಪರಬ್ರಹ್ಮನೇ ಆಗಿದ್ದಾನೆಂದು ಸಿದ್ಧಾಂತ.

ಇವರ ಈ ಅಧಿಕರಣ ಶರೀರ ಸರಿಯಲ್ಲ. ಏಕೆಂದರೆ ಧ್ಯಾನವು ಕಾರಣವಾಗಿದೆ. ಧ್ಯಾನವು ಕಾರ್ಯವಾಗಿದೆಯೆಂದು 'ಈಕ್ಷಣಧ್ಯಾನಯೋರೇಕಃ ಕಾರ್ಯಕಾರಣಭೂತಯೋಃ' ಎಂಬುದಾಗಿ ಭಾಮತಿಯಲ್ಲಿ ಹೇಳಿದೆ. ಇದು ಸರಿಯಲ್ಲ. ಏಕೆಂದರೆ ಪ್ರಣವ ಪ್ರತೀಕದಲ್ಲಿ ಬ್ರಹ್ಮನನ್ನು ಧ್ಯಾನ ಮಾಡುವುದರಿಂದ ಬ್ರಹ್ಮನ ಲೋಕವೇ ಪ್ರಾಪ್ತವಾಗುತ್ತದೆಂದು ಹೇಳಿ, ಪರಿಚ್ಛಿನ್ನಲೋಕದ ಪ್ರಾಪ್ತಿಯಾಗುವುದರಿಂದ ಧ್ಯಾನಕ್ಕೂ ಪರಿಚ್ಛಿನ್ನಬ್ರಹ್ಮನೇ ವಿಷಯನೆಂದು ಹೇಳಲಾಗಿದೆ. ಮೊದಲು ಹೇಳಿರುವ ಅಭಿಪ್ರಾಯಕ್ಕೆ ಇದು ವಿರುದ್ಧವಾಗಿದೆ. ಮತ್ತು ಸೂತ್ರದಲ್ಲಿ ನಿರವಕಾಶವೂ ಪ್ರಥಮಶ್ರುತವೂ ಆದ ಪರಾತ್ಪರತ್ವವೆಂಬ ಬ್ರಹ್ಮನ ಲಿಂಗವನ್ನು ಬಿಟ್ಟು, ಚರಮಶ್ರುತವಾದ ಸಾವಕಾಶವಾದ ಈಶಿತ್ವಕರ್ಮತ್ವವೆಂಬ ಹೇತುವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಮತ್ತು ಸೂತ್ರದಲ್ಲಿರುವ ಕರ್ಮಪದಕ್ಕೆ ಭಾವಪ್ರಧಾನ ನಿರ್ದೇಶ ಮಾಡುವುದೂ ಸಹ ತಪ್ಪು.

ಅಷ್ಟೇ ಅಲ್ಲದೆ, ಪ್ರತ್ಯಕ್ಷಕ್ಕೆ ಪಾರಮಾರ್ಥಿಕಸತ್ಯಭೂತವಾದ ವಸ್ತುವೇ ವಿಷಯವಾಗುತ್ತದೆಂದು ಹೇಳುವ ಅದ್ವೈತಿಗಳು 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' ಎಂಬ ಶ್ರುತಿಯನ್ನು ವ್ಯಾಖ್ಯಾನಿಸುವಾಗ ಕಲ್ಪಿತವಾದ ಸತ್ಯವೇ ಅಪರೋಕ್ಷಕ್ಕೆ ವಿಷಯವಾಗುತ್ತದೆಂದು ಹೇಳಿದ್ದಾರೆ. ಆದ್ದರಿಂದ ಸತ್ಯಭೂತವಾದ ಈಕ್ಷಣಕ್ಕೆ ಅನುಸಾರಿಯಾಗಿ ಜ್ಞಾನವನ್ನು ಸದ್ವಿಷಯಕವೆಂದು ಹೇಳುತ್ತಿರುವ ಅವರು ಕಲ್ಪಿತವಿಷಯಕವಾದ ಧ್ಯಾನಕ್ಕೆ ಅನುಸಾರಿಯಾಗಿ ಈಕ್ಷಣವೇ ಕಲ್ಪಿತವಿಷಯಕವೆಂದು ಹೇಳುವುದೇ ಅವರ ಸಿದ್ಧಾಂತಕ್ಕೆ ಸಮ್ಮತವಾದ ಮಾತಾಗುತ್ತದೆ. ಹಾಗಾಗಿ ಹಿರಣ್ಯಗರ್ಭನೆಂಬ ಅಪರಬ್ರಹ್ಮನೇ ಧ್ಯಾನಕ್ಕೆ ವಿಷಯ ಎಂಬುದು ಸಮಂಜಸ. ಆದ್ದರಿಂದ ಪರಬ್ರಹ್ಮನು ಧ್ಯಾನಕ್ಕೆ ವಿಷಯನಾದ್ದರಿಂದ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಅವರ ಸಿದ್ಧಾಂತವು ಅಯುಕ್ತವಾಗಿದೆ.

ಪ್ರತಿಯೊಂದು ಅಧಿಕರಣಗಳಂತೆ ಇಲ್ಲಿಯೂ ಕೂಡ ಅದ್ವೈತಿಗಳು ಜೀವಬ್ರಹ್ಮರಿಗೆ ಕರ್ತೃಕರ್ಮ- ಭಾವವನ್ನು ಒಪ್ಪಿದ್ದರಿಂದ ಭೇದವನ್ನೇ ಹೇಳಿದಂತಾಯಿತು. ಅವೇದ್ಯನಾದ ಬ್ರಹ್ಮನಿಗೆ ದೃಶ್ಯತ್ವವನ್ನು ಒಪ್ಪಿದಂತಾಯಿತು. ಹಾಗಾಗಿ ಅದ್ವೈತಿಗಳಿಗೆ ಈ ಅಧಿಕರಣವು ಅನುಕೂಲವಾಗುವುದಕ್ಕಿಂತ ಪ್ರತಿಕೂಲವೇ ಆಗಿದೆ.

*ರಾಮಾನುಜ ಭಾಷ್ಯ ವಿಮರ್ಶೆ*

ರಾಮಾನುಜ ಭಾಷ್ಯದಲ್ಲಿ 'ಪರಮಪುರುಷಮಭಿಧ್ಯಾಯೀತ' ಎಂಬುದನ್ನೇ ವಿಷಯವಾಕ್ಯವೆಂದು ಪರಿಗಣಿಸಿದ್ದಾರೆ. ಧ್ಯಾನಕ್ಕೆ ವಿಷಯನೆಂದು ಹೇಳಲ್ಪಟ್ಟ ಪುರುಷನು ಚತುರ್ಮುಖನೇ ಆಗಿದ್ದಾನೆ. ಏಕೆಂದರೆ ಪ್ರಣವವನ್ನು ಒಂದು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಮನುಷ್ಯಲೋಕವು, ಎರಡು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಸ್ವರ್ಗಲೋಕವು, ಮೂರು ಮಾತ್ರಾಕಾಲಗಳಲ್ಲಿ ಉಚ್ಚರಿಸಿದಾಗ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ. ಹೀಗೆ ಪ್ರಣವೋಪಾಸನದ ಫಲವನ್ನು ಹೇಳಲಾಗಿದೆ. ಮನುಷ್ಯ ಲೋಕ ಹಾಗೂ ಅಂತರಿಕ್ಷ

ಲೋಕದ ಸನ್ನಿಧಾನವಿರುವುದರಿಂದ ಬ್ರಹ್ಮಲೋಕ ಶಬ್ದಕ್ಕೆ ಮೋಕ್ಷವೆಂದು ಅರ್ಥೈಸಲಾಗದು ಹೊರತಾಗಿ, ಚತುರ್ಮುಖಲೋಕವೆಂದೇ ಅರ್ಥೈಸಬೇಕು. ಆದ್ದರಿಂಗ ಚತುರ್ಮುಖಬ್ರಹ್ಮನೇ ಧ್ಯಾನಕ್ಕೆ ವಿಷಯನಾಗುತ್ತಾನೆಂದು ಅವರ ಪೂರ್ವಪಕ್ಷ.

'ಪರಮ್', 'ಶಾಂತಮ್', 'ಅಭಯಮ್', 'ಅಮೃತಮ್' ಇತ್ಯಾದಿಯಾಗಿ ಬ್ರಹ್ಮನ ಲಿಂಗಗಳೇ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಅಪರೋಕ್ಷಜ್ಞಾನಕ್ಕೆ ವಿಷಯನಾಗಿರುವವನು ಪರಮಾತ್ಮನೇ ಆಗಿದ್ದಾನೆ. ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೇ ಧ್ಯಾನಕ್ಕೂ ವಿಷಯನಾಗಬೇಕಾದ್ದರಿಂದ 'ಪುರಿಶಯಂ ಪುರುಷಮೀಕ್ಷತೇ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಕೂಡ ಪರಬ್ರಹ್ಮನೇ ಆಗುತ್ತಾನೆಂದು ಸಿದ್ಧಾಂತ. ಮತ್ತು ಇವರು 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ ನಾವು ಹಾಗೂ ಅದ್ವೈತಿಗಳು ಹೇಳುವುದಕ್ಕಿಂತ ವಿಭಿನ್ನವಾಗಿ ಪದಚ್ಛೇದ ಮಾಡಿ ಅರ್ಥವನ್ನು ಹೇಳುತ್ತಾರೆ. 'ಈಕ್ಷತಿಕರ್ಮ' ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೂ ಸಹ ಪರಮಾತ್ಮನೇ ಆಗಿದ್ದಾನೆ. ಏಕೆಂದರೆ 'ವ್ಯಪದೇಶಾತ್' ಪರಮಾತ್ಮನೆಂದು ಹೇಳಿದ್ದರಿಂದ ಹೀಗೆ ಇವರ ವ್ಯಾಖ್ಯಾನ.

ರಾಮಾನುಜ ಭಾಷ್ಯದ ಈ ಅಭಿಪ್ರಾಯವು ಅಸಾಧುವಾಗಿದೆ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಸನ್ನಿಧಿ ಪ್ರಮಾಣಕ್ಕಿಂತ ಲಿಂಗವೇ ಹೆಚ್ಚು ಶ್ರೇಷ್ಠವೆಂದು ನಿರ್ಣಯಿಸಲಾಗಿದೆ. ಪೂರ್ವಮೀಮಾಂಸಾ ಗ್ರಂಥವನ್ನು ಪರಮ ಪ್ರಮಾಣವೆಂದು ಹೇಳುವ ರಾಮಾನುಜರು ಅದಕ್ಕೆ ವಿರುದ್ಧವಾಗಿ ಮಾತನಾಡುವುದು ತಪ್ಪಾಗುತ್ತದೆ. ಯಾವಾಗ ಲಿಂಗವೇ ಪ್ರಬಲ ಪ್ರಮಾಣವಾಯಿತೋ, ಆವಾಗ ಸನ್ನಿಧಿ ಪ್ರಮಾಣದಿಂದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ.

ಮತ್ತು 'ತದ್ಧರ್ಮೋಪದೇಶಾತ್' 'ಭೇದವ್ಯಪದೇಶಾಚ್ಚ' ಇತ್ಯಾದಿ ಸೂತ್ರಗಳಲ್ಲಿ 'ವ್ಯಪದೇಶಾತ್' ಎಂದಷ್ಟೇ ಹೇಳದೆ, ವ್ಯಪದೇಶದ ಸ್ವರೂಪವನ್ನೂ ಕೂಡ ತಿಳಿಸಿರುತ್ತಾರೆ. ಅದರಂತೆ ಈ ಸೂತ್ರದಲ್ಲಿಯೂ ವ್ಯಪದೇಶದ ಸ್ವರೂಪವನ್ನು ತಿಳಿಸುವುದಕ್ಕಾಗಿ 'ಈಕ್ಷತಿಕರ್ಮ' ಎಂಬ ಹಿಂದಿನ ವಿಶೇಷಣವು ಪ್ರಯುಕ್ತವಾಗಿದೆ. ಸುಲಭವಾಗಿ ಹೀಗೆಯೇ ವ್ಯಾಖ್ಯಾನಿಸಲು ಬರುವಾಗ 'ಈಕ್ಷತಿಕರ್ಮ' ಎಂಬುದನ್ನು ಬೇರೆ ಪದವೆಂದು 'ವ್ಯಪದೇಶಾತ್' ಎಂಬುದನ್ನು ಮತ್ತೊಂದು ಪದವೆಂದು ಪರಿಗಣಿಸುವುದು ತಪ್ಪಾಗುತ್ತದೆ. ಆದ್ದರಿಂದ ರಾಮಾನುಜರ ಅಧಿಕರಣ ಶರೀರವು ಅದ್ವೈತಮತದಂತೆ ಅಸಾಧುವಾಗಿದೆ.

# ದಹರಾಧಿಕರಣ

*ಪಾದಸಂಗತಿ-ಅಧಿಕರಣಸಂಗತಿ*

ದಹರಾಧಿಕರಣದಲ್ಲಿ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾರೆ. 'ಯೋ ವೇದ ನಿಹಿತಂ' ಎಂಬ ಶ್ರುತಿಯನ್ನು ನೋಡಿದಾಗ ಹೃತ್ಪದ್ಮಸ್ಥತ್ವಲಿಂಗವು ಪರಮಾತ್ಮನಲ್ಲಿ ಶ್ರುತವಾದರೂ ಕೂಡ 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್' ಎಂಬ ಶ್ರುತಿಯಿಂದ ಆಕಾಶದಲ್ಲಿ ಹಾಗೂ 'ಹೃದಿ ಹ್ಯೇಷ' ಎಂಬ ಶ್ರುತಿಯಿಂದ ಜೀವನಲ್ಲಿ ಪ್ರಸಿದ್ಧವಾಗಿದೆಯೆಂದು ತೋರುತ್ತದೆ. ಹೀಗೆ ಪರಮಾತ್ಮ, ಭೂತಾಕಾಶ ಮತ್ತು ಜೀವ ಈ ಮೂವರಲ್ಲಿ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವು ಸಾಧಾರಣವಾಗಿರುವುದರಿಂದ ಉಭಯತ್ರಪ್ರಸಿದ್ಧವೆಂದಂತಾಯಿತು. ಹೀಗೆ ಈ ಪಾದದಲ್ಲಿ ದಹರಾಧಿಕರಣವು ಸಂಗತವಾಗುತ್ತದೆಂದು ತಿಳಿಯಬೇಕು.

*ಪರಿಪೂರ್ಣಚಂದ್ರಿಕಾ*

ಹಿಂದಿನ ಅಧಿಕರಣದಲ್ಲಿ ಯಾವ ಪರಮಾತ್ಮನಿಗೆ ಅನ್ವೇಷ್ಟವ್ಯತ್ವವನ್ನು ಹೇಳಲಾಯಿತೋ, ಅದನ್ನೇ ಇಲ್ಲಿ ಹೃತ್ಪದ್ಮಸ್ಥನಲ್ಲಿ ಹೇಳಲಾಗಿದೆ. ಮತ್ತು ಸರ್ವಾಧಾರತ್ವ, ಸೃಷ್ಟಿ-ಹೇತುತ್ವಗಳನ್ನೂ ಕೂಡ ಹೃತ್ಪದ್ಮಸ್ಥನಲ್ಲಿ ಹೇಳಿದ ಕಾರಣ, ಹೃತ್ಪದ್ಮಸ್ಥನು ವಿಷ್ಣುವಿಗಿಂತ ಭಿನ್ನನಾದರೆ, ಹಿಂದಿನ ಅಧಿಕರಣದಲ್ಲಿ ಪ್ರತಿಪಾದ್ಯನಾದವನೂ ಕೂಡ ಅನ್ಯನೇ ಆಗುತ್ತಾನೆಂದು ಆನಂತರ್ಯಸಂಗತಿಯನ್ನು ತಿಳಿಯಬೇಕು. ಇಷ್ಟು ಸಂಗತಿ ವಿಚಾರ.

*ಅಧಿಕರಣದ ವಿಷಯವಾಕ್ಯ ಹಾಗೂ ಸಂಶಯ ಪರಂಪರೆ*

ಒಂದು ವೇಳೆ 'ಯಾವಾನ್ವಾ ಅಯಮಾಕಾಶಃ' ಎಂಬ ಪ್ರತಿವಚನವು ಬ್ರಹ್ಮಪರವಾದಲ್ಲಿ ಎಲ್ಲವೂ ಕೂಡ ಬ್ರಹ್ಮನಲ್ಲೇ ಇದೆ ಎಂದು ನಿರ್ಣಯವಾಗುತ್ತದೆ. ಆವಾಗ 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಎಂಬ ಸುಷಿರ ಶ್ರುತಿಯ ವಿರೋಧವು ಬರುತ್ತದೆ. ಏಕೆಂದರೆ ಸುಷಿರ ಶ್ರುತಿಯು ಎಲ್ಲಾ ಪದಾರ್ಥಗಳು ಭೂತಾಕಾಶದಲ್ಲಿದೆಯೆಂದೇ ಹೇಳುತ್ತಿದೆ. ಆದ್ದರಿಂದ 'ಯಾವಾನ್ವಾ' ಇತ್ಯಾದಿ ಪ್ರತಿವಚನವು ಭೂತಾಕಾಶವನ್ನು ಅನುವಾದ ಮಾಡಿ, ಅಂತಹ ಭೂತಾಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳೆಲ್ಲವೂ ಕೂಡ ಇರುತ್ತವೆಂದು ಅನ್ವೇಷಣೆ ಮಾಡಬೇಕೆಂದು ಪ್ರತಿಪಾದಿಸುತ್ತಿದೆಯೆಂದು ವ್ಯಾಖ್ಯಾನಿಸಬೇಕು. ಯಾವಾಗ ಪ್ರತಿವಚನವು ಭೂತಾಕಾಶಪರವೆಂದು ಸಿದ್ಧವಾಗುತ್ತದೋ, ಆವಾಗ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ, ಹೃತ್ಪದ್ಮಸ್ಥತ್ವವು ಕೂಡ ಭೂತಾಕಾಶದಲ್ಲಿಯೇ ಪ್ರಾಪ್ತವಾಗುತ್ತದೆ. ಈ ಪ್ರತಿವಚನಕ್ಕೆ ಅನುಸಾರಿಯಾಗಿ ಅಪಹತಪಾಪ್ಮತ್ವಾದಿಗಳನ್ನು ಗೌಣವಾಗಿ ವ್ಯಾಖ್ಯಾನಿಸಬೇಕು. ಹಿಂದೆ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವನ್ನೂ ಕೂಡ ಭೂತಾಕಾಶದಲ್ಲಿಯೇ ಹೇಳಬೇಕು. ಇದು ಪೂರ್ವಪಕ್ಷಕಾರರ ಉದ್ದೇಶ.

ಒಂದುವೇಳೆ 'ಯಾವಾನ್ವಾ' ಎಂಬ ಪ್ರತಿವಚನವು 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ, ಆಕಾಶಶಬ್ದ ಪ್ರತಿಪಾದ್ಯನಾದ ಬ್ರಹ್ಮನೇ ಇದ್ದಾನೆಂದು ಅವನನ್ನೇ ಅನ್ವೇಷಣೆ ಮಾಡಬೇಕೆಂದು ಬ್ರಹ್ಮಪರವಾಗಿ ಉತ್ತರ ನೀಡುವುದಾದರೆ, ವಿಷ್ಣುವೇ ಸಕಲ ಪದಾರ್ಥಗಳಿಗೂ ಆಧಾರನಾಗಿ ಹೃತ್ಪದ್ಮಸ್ಥಿತನೆಂದು ಸಿದ್ಧವಾಗುತ್ತದೆ. ಆವಾಗ ಪ್ರತಿವಚನದ ವಾಕ್ಯವಿರೋಧವು ಬರುವುದಿಲ್ಲ. ಹಿಂದೆ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವೆಂಬ ಲಿಂಗವೂ ಕೂಡ ವಿಷ್ಣುವಿನಲ್ಲೇ ಯುಕ್ತವಾಗುತ್ತದೆ.

ಆದ್ದರಿಂದ ಅಪಹತಪಾಪ್ಮತ್ವವೇ ಮೊದಲಾದ ಲಿಂಗಗಳೆಲ್ಲವೂ ಮುಖ್ಯವಾಗಿಯೇ ಉಪಪನ್ನವಾಗುತ್ತವೆ. ಮತ್ತು ಸುಷಿರಶ್ರುತಿಯ ವಿರೋಧವೂ ಕೂಡ ಬರುವುದಿಲ್ಲ. ಸುಷಿರಕ್ಕೆ ದ್ಯಾವಾಪೃಥಿವ್ಯಾದ್ಯಾಶ್ರಯತ್ವವು ಅತ್ಯಂತ ಅಯುಕ್ತವಾದ್ದರಿಂದ ಸುಷಿರದಲ್ಲಿರುವ ಪರಮಾತ್ಮನು ದ್ಯಾವಾಪೃಥಿವ್ಯಾದಿಗಳಿಗೆಲ್ಲಾ ಆಶ್ರಯ- ನಾಗಿದ್ದಾನೆಂಬ ಅಭಿಪ್ರಾಯದಿಂದ ಸುಷಿರಶ್ರುತಿಯು ಸುಷಿರಕ್ಕೆ ಸರ್ವಾಧಾರತ್ವವನ್ನು ಹೇಳುತ್ತಿದೆ. ಆದ್ದರಿಂದ ಸುಷಿರಶ್ರುತಿಯ ವಿರೋಧಕ್ಕೂ ಅವಕಾಶವಿಲ್ಲ. ಹೀಗೆ ಹೃತ್ಪದ್ಮಸ್ಥತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಮಾತ್ರ ಇರುತ್ತದೆಂದು ಸಿದ್ಧವಾಗುತ್ತದೆ. ಇದು ಸಿದ್ಧಾಂತಿಗಳ ಉದ್ದೇಶ.

*'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವಲಿಂಗದ ಸಮನ್ವಯ*

ಈ ಅಧಿಕರಣದಲ್ಲಿ 'ದಹರೋऽಸ್ಮಿನ್ ಅಂತರಾಕಾಶಃ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದ ಬಗ್ಗೆ ವಿಚಾರ ಮಾಡುತ್ತಿಲ್ಲ. ಏಕೆಂದರೆ ಇದು ಭೂತಾಕಾಶನಿಷ್ಠವೆಂದು ಸಿದ್ಧಾಂತದಲ್ಲಿಯೂ ಒಪ್ಪಲಾಗಿದೆ.

'ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದಹರಾಕಾಶಸ್ಥತ್ವವೆಂಬ ಲಿಂಗದ-ಸಮನ್ವಯವು ಈ ಅಧಿಕರಣದ ಉದ್ದೇಶವಲ್ಲ. ಏಕೆಂದರೆ ಈ ವಾಕ್ಯದಲ್ಲಿ ಆಕಾಶಶಬ್ದವೆಂಬ ಪೂರ್ವಪಕ್ಷ ಬೀಜವೇ ಇರುವುದಿಲ್ಲ.

'ಸರ್ವಾಧಾರತ್ವ' ಎಂಬ ಲಿಂಗದ ಸಮನ್ವಯವೂ ಕೂಡ ಈ ಅಧಿಕರಣದ ಉದ್ದೇಶವಲ್ಲ. 'ಚಂದ್ರಾದ್ಯಾಧಾರತ್ವಮ್' ಇತ್ಯಾದಿ ಭಾಷ್ಯದ ಮಾತನ್ನು ನೋಡಿದಾಗ ಸರ್ವಾಧಾರತ್ವದ ಸಮನ್ವಯವನ್ನು ಮಾಡುತ್ತಿರಬಹುದೆಂದು ತೋರುತ್ತದೆ. ಆದರೆ 'ಲಿಂಗಂ ಹೃತ್ಪದ್ಮಸ್ಥತ್ವಂ' ಎಂಬ ನ್ಯಾಯವಿವರಣದಲ್ಲಿ ಹಾಗೂ 'ಸೋಽಕ್ಷರಃ ಸನ್‌ಹೃದಬ್ಜಗಃ' ಎಂಬ ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರೇ ಸ್ಪಷ್ಟವಾಗಿ 'ಹೃತ್ಪದ್ಮಸ್ಥತ್ವ' ಎಂಬ ಲಿಂಗದ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಹೇಳಿರುತ್ತಾರೆ.

ಆದ್ದರಿಂದ 'ಯಾವಾನ್ವಾ ಅಯಮಾಕಾಶಃ ತಾವಾನೇಷೋಽಂತರ್ಹೃದಯೇ' ಎಂಬ ವಾಕ್ಯದಲ್ಲಿರುವ 'ಹೃತ್ಪದ್ಮಸ್ಥತ್ವ' ಎಂಬ ಲಿಂಗದ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಸ್ಪಷ್ಟವಾಗಿ ತಿಳಿಯಬೇಕು.

### *ಹಲವು ಬಗೆಯಲ್ಲಿ 'ಹೃತ್ಪದ್ಮಸ್ಥತ್ವ' ಲಿಂಗಸಮನ್ವಯದ ಸಮರ್ಥನೆ*

ಅಥವಾ 'ಅನ್ವೇಷ್ಟವ್ಯಃ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದ ಬಗ್ಗೆಯೇ ವಿಚಾರವನ್ನು ಮಾಡುತ್ತಿದ್ದೇವೆ. ಪೂರ್ವಪಕ್ಷದಲ್ಲಿ 'ತಸ್ಮಿನ್‌ಯದಂತಃ' ಎಂಬಲ್ಲಿರುವ 'ತತ್' ಶಬ್ದದಿಂದ ವ್ಯವಹಿತವಾದ ಪುಂಡರೀಕದ ಪರಾಮರ್ಶವನ್ನು ಮಾಡಲಾಗುತ್ತದೆ. ಸಿದ್ಧಾಂತದಲ್ಲಿ ಆಕಾಶದ ಪರಾಮರ್ಶವನ್ನು ಮಾಡಲಾಗುತ್ತದೆ. ಅಥವಾ ಈ ಪ್ರಕರಣದಲ್ಲಿರುವ ಹೃತ್ಪದ್ಮಸ್ಥತ್ವವೆಂಬ ಸಾಮಾನ್ಯಧರ್ಮದ ಬಗ್ಗೆ ವಿಚಾರ ಮಾಡಲಾಗಿದೆಯೆಂದು ಉತ್ತರಿಸಬಹುದು. ಅಂದರೆ ಶೃಂಗಗ್ರಾಹಿಕತಯಾ ಇದೇ ವಾಕ್ಯವು ವಿಚಾರಕ್ಕೆ ಯೋಗ್ಯವಾಗಿದೆಯೆಂದು ಉಲ್ಲೇಖ ಮಾಡದೇ ಸಾಮಾನ್ಯವಾಗಿ ಈ ಪ್ರಕರಣವನ್ನು ನೋಡಿದಾಗ, ಹೃತ್ಪದ್ಮಸ್ಥತ್ವವು ಶ್ರುತವಾಗಿದೆ. ಇದು ಭೂತಾಕಾಶದಲ್ಲಿ ಬರುತ್ತದೋ, ಅಥವಾ ವಿಷ್ಣುವಿನಲ್ಲೋ ಎಂಬ ಬಗೆಯಲ್ಲಿ ವಿಚಾರವನ್ನು ಮಾಡುತ್ತಿದ್ದೇವೆ. ಸಾಕ್ಷಾದ್ಧೃತ್ಪದ್ಮಸ್ಥತ್ವವು ಭೂತಾಕಾಶದಲ್ಲಿದೆಯೆಂದು ತೋರಿದರೂ ಸಹ ಪರಂಪರೆಯಿಂದ ಹೃತ್ಪದ್ಮಸ್ಥತ್ವವು ವಿಷ್ಣುವಿನಲ್ಲಿದೆಯೆಂದೇ ಕಾಣಿಸುತ್ತದೆ. ಆದ್ದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನಾಗಿ ಅನ್ವೇಷಣಕ್ಕೆ ವಿಷಯನಾದವನು ವಿಷ್ಣು ಆಗಿದ್ದಾನೋ, ಇಲ್ಲವೋ ಎಂಬ ವಿಚಾರವನ್ನು ಮಾಡುವುದು ಅತ್ಯಂತ ಸಂಗತವೆಂದು ತಿಳಿಯಬೇಕು.

### *ಪ್ರಥಮ ಪೂರ್ವಪಕ್ಷ ದಹರಾಕಾಶ ಬ್ರಹ್ಮನಲ್ಲ*

ಹೃತ್ಪದ್ಮಸ್ಥತ್ವವೆಂಬ ಲಿಂಗವು ಭೂತಾಕಾಶದಲ್ಲಿ ಬರುತ್ತದೆ ಹೊರತು, ಬ್ರಹ್ಮನಲ್ಲ. ಹೃತ್ಪದ್ಮಸ್ಥತ್ವ ಲಿಂಗವು ಬ್ರಹ್ಮನಲ್ಲಿ ಬರುತ್ತದೆಂದು ಹೇಳುವ ನಿಮ್ಮ ಅಭಿಪ್ರಾಯವೇನು? ಹೃತ್ಪದ್ಮದಲ್ಲಿರುವ ದಹರಾಕಾಶವನ್ನೇ ಬ್ರಹ್ಮನೆನ್ನುತ್ತೀರೋ, ಅಥವಾ ದಹರಾಕಾಶದಲ್ಲಿ ಜಿಜ್ಞಾಸ್ಯನಾದವನನ್ನು ಬ್ರಹ್ಮನೆನ್ನುತ್ತೀರೋ?

ಪ್ರಥಮ ಪಕ್ಷ ತಪ್ಪು. 'ದಹರೋಽಸ್ಮಿನ್ನಂತರಾಕಾಶಃ' ಎಂಬ ಹಿಂದಿನ ವಾಕ್ಯದಲ್ಲಿ ಮತ್ತು 'ತಾವಾನೇಷೋಽಂತರ್ಹೃದಯ' ಎಂಬ ಮುಂದಿನ ವಾಕ್ಯದಲ್ಲಿ ಭೂತಾಕಾಶದಲ್ಲಿ ಪ್ರಸಿದ್ಧವಾದ ಆಕಾಶ ಶಬ್ದವನ್ನು ಪ್ರಯೋಗಿಸಿ ದಹರಾಕಾಶವೆಂದು ಪ್ರಯೋಗಿಸಲಾಗಿದೆ. ಆದ್ದರಿಂದ ಆಕಾಶ ಶ್ರುತಿಯ ಬಲದಿಂದ ಭೂತಾಕಾಶವೇ ದಹರಾಕಾಶವಾಗುತ್ತದೆ. ಮತ್ತು 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್' ಎಂಬ ನಾರಾಯಣೋಪನಿಷತ್ತಿನ ಸಮಾಖ್ಯಾಪ್ರಮಾಣದ ಬೆಂಬಲವು ಈ ವಿಷಯದಲ್ಲಿದೆ. ಅಷ್ಟೇ ಅಲ್ಲದೇ ಭೂತಾಕಾಶದ ಬಗ್ಗೆ ವಿಚಾರವು ಪ್ರಸಕ್ತವಾಗುತ್ತಿರುವಾಗ ಮಧ್ಯದಲ್ಲಿರುವ ದಹರಾಕಾಶವನ್ನು ಬ್ರಹ್ಮವೆಂದು ಹೇಳಿದರೆ, 'ತಸ್ಮಿನ್ ಯದಂತಸ್ತದನ್ವೇಷ್ಟವ್ಯಮ್' ಎಂಬ ಶ್ರುತಿಯಲ್ಲಿ ದಹರಾಕಾಶದಲ್ಲಿರುವವನ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದ್ದು ತಪ್ಪಾಗುತ್ತದೆ. ಏಕೆಂದರೆ

ನಿಮ್ಮ ಪ್ರಕಾರ ಬ್ರಹ್ಮನೇ ದಹರಾಕಾಶನೆಂದಾದ ಮೇಲೆ, ದಹರಾಕಾಶದಲ್ಲಿರುವವನ ಬಗ್ಗೆ ಜಿಜ್ಞಾಸೆ ಮಾಡಬೇಕೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ. ತನ್ನಲ್ಲೇ ತಾನಿದ್ದಾನೆಂಬ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳುವುದು ತಪ್ಪಲ್ಲವೇ? ಆದ್ದರಿಂದ ದಹರಾಕಾಶವನ್ನು ಬ್ರಹ್ಮನೆಂದು ಹೇಳಲು ಸಾಧ್ಯವಿಲ್ಲ. ಭೂತಾಕಾಶವನ್ನೇ ದಹರಾಕಾಶವೆನ್ನಬೇಕು. ಈ ವಿಷಯದಲ್ಲಿ 'ಸಮಾಖ್ಯಾಶ್ರುತಿ' ಹಾಗೂ 'ಅನ್ಯಸ್ಯಅನ್ವೇಷ್ಟವ್ಯತ್ವೋಕ್ತಿ' ಎಂಬ ಲಿಂಗ ಇವೆರಡು ಆಕಾಶ ಶ್ರುತಿಯನ್ನು ಉಪೋದ್ಬಲಿಸುತ್ತಿವೆ. ಇಂತಹ ಆಕಾಶ ಶ್ರುತಿಯ ಆಧಾರದಿಂದ ಭೂತಾಕಾಶವೇ ದಹರಾಕಾಶವೆನಿಸುತ್ತದೆಂಬುದು ಪ್ರಥಮ ಪೂರ್ವಪಕ್ಷ.

### *ದ್ವಿತೀಯ ಪೂರ್ವಪಕ್ಷ ದಹರಾಕಾಶದಲ್ಲಿ ಜಿಜ್ಞಾಸ್ಯನಾದವನು ಬ್ರಹ್ಮನಲ್ಲ*

ದಹರಾಕಾಶದಲ್ಲಿ ದ್ಯಾವಾಪೃಥಿವೀಗಳು ಇರುತ್ತವೆಂದೇ ಶ್ರುತಿ ಹೇಳುತ್ತಿದೆ ಹೊರತು, ಬ್ರಹ್ಮನು ಇರುತ್ತಾನೆಂದು ಹೇಳುತ್ತಿಲ್ಲ. ಒಂದು ವೇಳೆ ಜಿಜ್ಞಾಸ್ಯನಾದವನು ಬ್ರಹ್ಮನೇ ಆಗಿದ್ದಾನೆಂದು ಹೇಳುವುದಾದಲ್ಲಿ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಬ್ರಹ್ಮ'ನೂ ಆಧೇಯವಾಗಿದೆಯೆಂದು ಹೇಳಿದಾಗ ಪೂರ್ವೋತ್ತರ ವಾಕ್ಯಗಳಿಗೆ ಸಾಂಗತ್ಯ ಬರುತ್ತದೆ. ಇಲ್ಲದಿದ್ದರೆ ಅಸಾಂಗತ್ಯ ದೋಷಬಂದು, ಅನನ್ವಯ ದೋಷಕ್ಕೆ ಅವಕಾಶವಿದೆ.

### *'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ ಶಬ್ದವು ಬ್ರಹ್ಮಪರವಲ್ಲ*

'ಯಾವಾನ್ವಾ ಅಯಮಾಕಾಶಃ' ಎಂಬ ಪ್ರತಿವಚನದಲ್ಲಿರುವ 'ಆಕಾಶ' ಶಬ್ದವು ಬ್ರಹ್ಮಪರವಾಗುತ್ತದೆಂದು ಹೇಳುವುದೇ ತಪ್ಪು. ಏಕೆಂದರೆ 'ಹೃದಯಾಕಾಶದಲ್ಲಿ ಏನಿದೆ ?' ಎಂದು ಪ್ರಶ್ನಿಸಿದಾಗ. 'ಹೃದಯಾಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳು ಇರುತ್ತವೆ' ಎಂದು ಉತ್ತರಿಸುವುದೇ ಅತ್ಯಂತ ಸಮಂಜಸವಾಗುತ್ತದೆ. ಅದನ್ನು ಬಿಟ್ಟು ಹೃದಯಾಕಾಶದಲ್ಲಿ ಬ್ರಹ್ಮನಿದ್ದಾನೆ. ಅವನಲ್ಲಿ ಎಲ್ಲವೂ ಇದೆ ಎಂಬ ಉತ್ತರವು ಅಸಂಗತವಾಗುತ್ತದೆ. ಮತ್ತು 'ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂದು ಸುಷಿರದಲ್ಲಿಯೇ ದ್ಯಾವಾಪೃಥಿವ್ಯಾದಿಗಳೆಲ್ಲವೂ ಇರುತ್ತವೆಂದು ಸಮಾಖ್ಯಾ-ರೂಪವಾದ ನಾರಾಯಣೋಪನಿಷತ್ತು ಹೇಳುತ್ತಿದೆ. ಅದರ ವಿರೋಧವೂ ಕೂಡ ಬರುತ್ತಿದೆ. ಹೀಗೆ ಅನನ್ವಯ ಮತ್ತು ಸಮಾಖ್ಯಾಶ್ರುತಿ ವಿರೋಧ ಈ ಎರಡೂ ದೋಷಗಳು ಬರುವ ಪ್ರಯುಕ್ತ, 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ 'ಆಕಾಶ' ಶಬ್ದವು ಬ್ರಹ್ಮಪರವಾಗುತ್ತದೆಂದು ಹೇಳಲು ಸಾಧ್ಯವಿಲ್ಲ.

ಆದ್ದರಿಂದ ಭೂತಾಕಾಶವೇ ಹೃತ್ಪದ್ಮಸ್ಥವಾಗಿದೆಯೆಂದು ಹೇಳಬೇಕು. ಶ್ರುತಿಯಲ್ಲಿರುವ ಅಪಹತಪಾಪ್ಮತ್ವ, ಸತ್ಯಕಾಮತ್ವ ಮೊದಲಾದ ಲಿಂಗಗಳ ವಿರೋಧವೂ ಕೂಡ ಬರುವುದಿಲ್ಲ. ಅಚೇತನವಾದ ಆಕಾಶದಲ್ಲಿ ಚೇತನನಿಷ್ಠವಾದ ಪಾಪಾದಿಗಳ ಅತ್ಯಂತಾಭಾವ ಇದೆ. ಆದ್ದರಿಂದ ಅಪಹತಪಾಪ್ಮತ್ವವನ್ನು ಶ್ರುತಿಯು ಹೇಳುತ್ತಿದೆ. ಇದರಂತೆ ಕಾಮ ಸಾಮಾನ್ಯವೇ ಜಡವಾದ ಪದಾರ್ಥದಲ್ಲಿ ಹುಟ್ಟಲು ಸಾಧ್ಯವಿಲ್ಲವಾದ್ದರಿಂದ ಪ್ರತಿಹತ ಕಾಮಾದಿಗಳನ್ನು ಹೇಳಲಾಗದು. ಈ ದೃಷ್ಟಿಯಿಂದ ಸತ್ಯಕಾಮತ್ವಾದಿಗಳನ್ನು ಉಪಪಾದಿಸಬೇಕು. ಆದ್ದರಿಂದ ಭೂತಾಕಾಶವು ಹೃತ್ಪದ್ಮಸ್ಥವಾಗಿದೆಯೆಂದು ಹೇಳಿದರೆ ಯಾವುದೇ ಬಾಧಕಗಳಿಲ್ಲ.

### *ಹೃತ್ಪದ್ಮಸ್ಥನಾದವನು ಜೀವನೆಂದು ಪೂರ್ವಪಕ್ಷ*

ಅಥವಾ ಜೀವನೇ ಹೃತ್ಪದ್ಮಸ್ಥನೆಂದು ಹೇಳಬಹುದು. 'ಏಷ ಸಂಪ್ರಸಾದಃ' ಇತ್ಯಾದಿ ಶ್ರುತಿಯು ಜೀವನ ಬಗ್ಗೆ ಹೇಳುತ್ತಿದೆ. ಪ್ರಸಕ್ತನಾದ ಇಂತಹ ಜೀವನಲ್ಲಿಯೇ ಹೃತ್ಪದ್ಮಸ್ಥತ್ವವನ್ನು ಹೇಳುವುದು ಸಂಗತವಾಗುತ್ತದೆ. ಅಪಹತಪಾಪ್ಮತ್ವಾದಿಗಳನ್ನು ಮೋಕ್ಷವನ್ನು ಹೊಂದಿದ ಮೇಲೆ ಪಡೆಯುತ್ತಾನಾದ್ದರಿಂದ ಈ ಅಭಿಪ್ರಾಯದಿಂದ

ಮೊದಲೇ ಜೀವನನ್ನು ಅಪಹತಪಾಪ್ಮನೆಂದು ಶ್ರುತಿಯು ಕರೆದಿದೆ. ಆದ್ದರಿಂದ ಜೀವನನ್ನು ಹೃತ್ಪದ್ಮಸ್ಥನೆಂದು ಹೇಳಿದರೆ ಯಾವ ತೊಂದರೆಯು ಬರುವುದಿಲ್ಲ.

### *ಹೃದಯಾಕಾಶದಲ್ಲಿರುವವನು ಮಹಾವಿಷ್ಣುವೇ*

ಹೃದಯಕಮಲದಲ್ಲಿ ಸಣ್ಣ ಆಕಾಶವಿದೆ. ಅದರಲ್ಲಿ ಕುಳಿತಿರುವವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತ. ಏಕೆಂದರೆ ಯಾವ ಪ್ರಕರಣದಲ್ಲಿ ಈ ವಿಚಾರವು ಪ್ರಸಕ್ತವಾಗುತ್ತದೋ, ಅದೇ ಪ್ರಕರಣದ ಮುಂದಿನ ಭಾಗದಲ್ಲಿ ಅಪಹತಪಾಪ್ಮತ್ವ, ಸತ್ಯಕಾಮತ್ವ ಮೊದಲಾದ ವಿಷ್ಣುವಿನ ಅಸಾಧಾರಣ ಲಿಂಗಗಳೇ ಶ್ರುತವಾಗಿವೆ.

ಅಪಹತಪಾಪ್ಮತ್ವಾದಿಗಳನ್ನು ಆಕಾಶದಲ್ಲಿ ಹೇಳಲೇ ಬಾರದು. ಒಂದು ವೇಳೆ ಪಾಪ ಮೊದಲಾದವುಗಳಿಗೆ ಪ್ರಸಕ್ತಿಯಿದ್ದಲ್ಲಿ ಅವುಗಳ ನಿಷೇಧಕ್ಕೆ ಅವಕಾಶವಿರುತ್ತಿತ್ತು. ಜೀವನಲ್ಲಿಯೂ ಕೂಡ ಅಪಹತಪಾಪ್ಮತ್ವಾದಿಗಳನ್ನು ಸಂಸಾರದೆಸೆಯಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿ-ಸ್ಮೃತಿಗಳ ಆಧಾರದಂತೆ ಅಪಹತಪಾಪ್ಮತ್ವಾದಿಗಳೆಲ್ಲವೂ ವಿಷ್ಣುವಿನಲ್ಲೇ ಸ್ವತಂತ್ರವಾಗಿರುತ್ತವೆ. ಜೀವಾದಿಗಳಲ್ಲಿದ್ದರೂ ಕೂಡ ಅಸ್ವತಂತ್ರವಾಗಿರುತ್ತದೆ. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷಿತವಾದ ಅರ್ಥವನ್ನು ಸ್ವೀಕರಿಸುವುದೇ ಶ್ರೇಷ್ಠವಾದ್ದರಿಂದ, ಸ್ವತಂತ್ರವಾದ ಸತ್ಯಕಾಮತ್ವಾದಿಗಳನ್ನೇ ಸ್ವೀಕರಿಸಬೇಕು. ಆದ್ದರಿಂದ ಪರಮಾತ್ಮನೇ ಹೃದಯಪದ್ಮದಲ್ಲಿದ್ದಾನೆ ಸ್ಪಷ್ಟವಾಗುತ್ತದೆ.

### *ಹೃದಯಕಮಲದಲ್ಲಿರುವ ಪರಮಾತ್ಮನ ವರ್ಣನೆಯು ಅಸಂಗತವಲ್ಲ*

ಹಿಂದೆ ಪೂರ್ವಪಕ್ಷ ಮಾಡುವಾಗ ಹೃದಯಕಮಲದಲ್ಲಿ ಬ್ರಹ್ಮನ ಮಹಿಮೆಯನ್ನು ಹೇಳಿದರೆ ಅಸಾಂಗತ್ಯ ದೋಷವನ್ನು ಹೇಳಲಾಗಿತ್ತು. 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದಾಗ ಹೃದಯದಲ್ಲಿ ಆಕಾಶವಿದೆ ಎಂಬ ಉತ್ತರವು ಅತ್ಯಂತ ಅಸಂಗತವಾಗುತ್ತದೆಂದು ಪೂರ್ವಪಕ್ಷಕಾರರ ಅಭಿಪ್ರಾಯ. ಆದರೆ ನಮ್ಮೆಲ್ಲರ ಶರೀರವು ಪರಮಾತ್ಮನ ಪಟ್ಟಣವಾಗಿದೆ. ಹೃದಯ ಕಮಲವು ಪರಮಾತ್ಮನ ಮನೆಯಾಗಿದೆ. ಹೀಗೆ ಉಪನಿಷತ್ತು ವರ್ಣಿಸುತ್ತಾ 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದೆ. ಅಂದರೆ ಶರೀರವೆಂಬ ಪಟ್ಟಣದಲ್ಲಿ ಹೃದಯಕಮಲವೆಂಬ ಮನೆಯಲ್ಲಿರುವ ಪರಮಾತ್ಮನ ಮಹಿಮೆಯೇನು? ಎಂದೇ ಪ್ರಶ್ನೆಯ ಅಭಿಪ್ರಾಯ ಹೊರತು ಹೃದಯದಲ್ಲಿ ಯಾವ ಪದಾರ್ಥವಿದೆಯೆಂಬ ಪ್ರಶ್ನೆ ಇಲ್ಲಿ ಹುಟ್ಟುವುದಿಲ್ಲ. ಹೀಗೆ ಪ್ರಶ್ನಿಸಿದಾಗ 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ಶ್ರುತಿಯು ಹೃದಯ ಕಮಲದಲ್ಲಿರುವ ಪರಮಾತ್ಮನ ಹೃದಯದಲ್ಲಿ ಎಷ್ಟು ಆಕಾಶವಿದೆಯೆಂದರೆ ಹೊರಗಡೆ ಎಷ್ಟು ವಿಶಾಲವಾದ ಆಕಾಶವಿದೆಯೋ ಅಷ್ಟು ಆಕಾಶ ಪರಮಾತ್ಮನ ಹೃದಯದಲ್ಲಿದೆಯೆಂದು ಅವನ ಮಹಿಮೆಯನ್ನು ಹೇಳುತ್ತಿದೆ. ಅಂದರೆ ಅಷ್ಟೊಂದು ವಿಶಾಲವಾದ ಆಕಾಶವೂ ಅಣುಸ್ವರೂಪನಾದ ಪರಮಾತ್ಮನಹೃದಯದಲ್ಲಿದೆ ಎಂದರೆ, ಪರಮಾತ್ಮನು ಎಲ್ಲೆಡೆ ವ್ಯಾಪ್ತನಾಗಿದ್ದಾನೆ ಎಂದೇ ಹೇಳಿದಂತಾಯಿತು. ಹೀಗೆ ಬ್ರಹ್ಮನ ಮಹಿಮೆಯ ಬಗ್ಗೆ ಪ್ರಶ್ನಿಸಿದಾಗ ಅವನ ಅದ್ಭುತವಾದ ಮಹಿಮೆಯನ್ನೇ ಉಪನಿಷತ್ತು ಹೇಳುತ್ತಿದೆ. ಆದ್ದರಿಂದ ಪ್ರಶ್ನೋತ್ತರಗಳಲ್ಲಿ ಅಸಾಂಗತ್ಯ ದೋಷವನ್ನು ಪೂರ್ವಪಕ್ಷಕಾರರಿಗೆ ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಅನನ್ವಯ' ಎಂಬ ಬಾಧಕವನ್ನು ಸಿದ್ಧಾಂತಿಗಳಿಗೆ ಹೇಳಲು ಸಾಧ್ಯವಿಲ್ಲ.

### *ಛಾಂದೋಗ್ಯ ಭಾಷ್ಯದ ಪ್ರಕಾರ ಶ್ರುತ್ಯರ್ಥ ವಿಚಾರ*

ಛಾಂದೋಗ್ಯ ಭಾಷ್ಯದ ಪ್ರಕಾರ ವಿಷಯವಾಕ್ಯದ ಅರ್ಥವನ್ನು ಹೀಗೆ ತಿಳಿಯಬೇಕು - ಶಿಷ್ಯರಿಗೆ ಗುರುಗಳು ಹೀಗೆ ಹೇಳುತ್ತಾರೆ. ಶರೀರದಲ್ಲಿ ವ್ಯಾಪ್ತನಾದ ಪೂರ್ಣಗುಣವುಳ್ಳವನು, ಪೂರ್ಣಕಾಮನೂ ಆದ ಪರಮಾತ್ಮನಲ್ಲಿ

ಹೃದಯಕಮಲವೆಂಬ ಸಣ್ಣಮನೆಯೂ ಆಶ್ರಿತವಾಗಿದೆ. ಈ ಮನೆಯಲ್ಲಿ ಸಣ್ಣ ಆಕಾಶವಿದೆ. ಅದರಲ್ಲಿರುವುದನ್ನು ಹುಡುಕಬೇಕು. ಮನನ ಮಾಡಬೇಕು.

ಶಿಷ್ಯರು ಗುರುಗಳನ್ನು ಹೀಗೆ ಪ್ರಶ್ನಿಸುತ್ತಾರೆ - ಸಣ್ಣದಾದ ಹೃದಯಕಮಲದಲ್ಲಿರುವ ಆಕಾಶದಲ್ಲಿ ಏನನ್ನು ಹುಡುಕಬೇಕು, ಏನನ್ನು ಮನನ ಮಾಡಬೇಕು ? ಎಂದು.

ಗುರುಗಳು ಉತ್ತರಿಸುತ್ತಾರೆ - ಶರೀರದಲ್ಲಿರುವ ಹೃದಯಕಮಲದಲ್ಲಿ ಸಣ್ಣ ಆಕಾಶವಿದೆ. ಅದರೊಳಗೆ ಆಕಾಶನಾಮಕನಾದ ಪರಬ್ರಹ್ಮನಿದ್ದಾನೆ. ಹೃದಯದ ಹೊರಗೆ ದೇಶ ಕಾಲಗುಣಗಳಿಂದ ಎಷ್ಟು ವ್ಯಾಪ್ತನಾಗಿದ್ದಾನೋ, ಅದರಂತೆ ಹೃತ್ಕಮಲದಲ್ಲಿರುವ ಆಕಾಶದಲ್ಲಿಯೂ ವ್ಯಾಪ್ತನಾಗಿದ್ದಾನೆ. ಒಬ್ಬನೇ ಪರಬ್ರಹ್ಮನು, ಅಣುವೂ-ಮಹತ್ತೂ ಆಗಿರುವುದರಿಂದ ಇದು ಅಸಂಭಾವಿತವಲ್ಲ. ಆದ್ದರಿಂದ ಅವನನ್ನೇ ಮನನ ಮಾಡಬೇಕು. ಮುಕ್ತಾಮುಕ್ತರು, ಸಕಲ ಲೋಕಗಳು, ಸಕಲ ದೇವತೆಗಳು ಇವನನ್ನೇ ಆಶ್ರಿಯಿಸಿದ್ದಾರೆ.

ಹೀಗೆ ಛಾಂದೋಗ್ಯಭಾಷ್ಯದ ಪ್ರಕಾರ, ಶ್ರುತ್ಯರ್ಥವನ್ನು ತಿಳಿಯಬೇಕು. ಬ್ರಹ್ಮನ ಪಟ್ಟಣವೆನಿಸಿದ ಈ ಶರೀರದಲ್ಲಿ ಯಾವ ಹೃತ್ಕಮಲವೆಂಬ ಮನೆಯಿದೆಯೋ, ಆ ಮನೆಯಲ್ಲಿರುವ ಭೂತಾಕಾಶದಲ್ಲಿ ಪರಮಾತ್ಮನೆಂಬ ವಸ್ತುವಿದೆಯೆಂದು ಹೇಳಿದಂತಾಯಿತು. ಆದ್ದರಿಂದ 'ಅಂತರ್ಹೃದಯೇ ಆಕಾಶಃ' ಎಂಬ ಮುಂದಿನ ವಾಕ್ಯದಲ್ಲಿರುವ ಹೃದಯಶಬ್ದದಿಂದ ಅಂತಃಕರಣದಲ್ಲಿರುವ ಭೂತಾಕಾಶವನ್ನು ಹೇಳಲಾಗಿದೆ ಹೊರತು, ಅಂತಃಕರಣವನ್ನಲ್ಲ. 'ಹೃದಿ ಅಯನಾತ್ ಹೃದಯಂ' ಅಂತಃಕರಣದಲ್ಲಿರುವುದರಿಂದ ಹೃದಯವೆನಿಸಿದೆ ಎಂಬ ವ್ಯುತ್ಪತ್ತಿಯನ್ನಿಟ್ಟುಕೊಂಡಾಗ ಹೃದಯ ಶಬ್ದವು ಅಂತಃಕರಣದಲ್ಲಿರುವ ಭೂತಾಕಾಶವನ್ನು ಪ್ರತಿಪಾದಿಸುತ್ತದೆ. ಹೀಗೆ 'ಅಂತರ್ಹೃದಯೇ ಆಕಾಶಃ' ಎಂಬ ಮುಂದಿನ ವಾಕ್ಯಕ್ಕೆ ಅಂತಃಕರಣದಲ್ಲಿರುವ ಭೂತಾಕಾಶದಲ್ಲಿ ಆಕಾಶನಾಮಕನಾದ ಪರಬ್ರಹ್ಮನಿದ್ದಾನೆಂದು ಅಭಿಪ್ರಾಯ ಹೊರತಾಗಿ, ಅಂತಃಕರಣದಲ್ಲಿ ಭೂತಾಕಾಶವಿದೆ ಎಂದಲ್ಲ. ಆದ್ದರಿಂದ 'ಅಂತರ್ಹೃದಯೇ ಆಕಾಶಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟಿರುವ ಆಕಾಶವು ಭೂತಾಕಾಶ ಪರವಾಗದೇ, ಬ್ರಹ್ಮಪರವೇ ಆಗುತ್ತದೆ.

'ದಹರೋऽಸ್ಮಿನ್ನಂತರಾಕಾಶಃ' ಎಂದು ಮೊದಲು ಹೇಳಿರುವ 'ಆಕಾಶ' ಶಬ್ದವು ಭೂತಾಕಾಶಪರವಾದರೆ, 'ಅಂತರ್ಹೃದಯ ಆಕಾಶಃ' ಎಂಬ ಮುಂದಿರುವ ಆಕಾಶವು ಭೂತಾಕಾಶವೇ ಆಗಲಿ, ಪರಬ್ರಹ್ಮನಲ್ಲವೆಂದು ಆಕ್ಷೇಪಮಾಡಬಾರದು. ಈ ಆಕಾಶವು ಭೂತಾಕಾಶ ಪರವಾದಲ್ಲಿ, 'ಉಭೇ ಅಸ್ಮಿನ್' ಇತ್ಯಾದಿಯಾಗಿ ಮುಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಸರ್ವಾಧಾರತ್ವ, ನಿತ್ಯತ್ವ, ಪೂರ್ಣಕಾಮತ್ವ ಮೊದಲಾದ ಧರ್ಮಗಳು ವಿರುದ್ಧವಾಗುತ್ತವೆ. ಆದ್ದರಿಂದ ಹಿಂದಿನ 'ಆಕಾಶ' ಶಬ್ದದಿಂದ ಭೂತಾಕಾಶವೇ ಪ್ರತಿಪಾದ್ಯವಾಗಿದೆ. ಮುಂದಿನ 'ಆಕಾಶ' ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ.

*ಹಲವು ಬಗೆಯಿಂದ ಪೂರ್ವಪಕ್ಷಕಾರರಿಗೆ ಅಸಾಂಗತ್ಯದೋಷ*

ಪೂರ್ವಪಕ್ಷಕಾರರು ಹಿಂದೆ ನಮ್ಮನ್ನು ಕುರಿತು ಅಸಾಂಗತ್ಯ ದೋಷವನ್ನು ಹೇಳುತ್ತಿದ್ದರು. ಇಲ್ಲಿಯ ತನಕ ವಿಚಾರ ಮಾಡಿದಂತೆ ಅಸಾಂಗತ್ಯ ದೋಷ ನಮಗೆ ತಟ್ಟುವುದೇ ಇಲ್ಲ. ಹೊರತಾಗಿ ಪೂರ್ವಪಕ್ಷಕಾರರಿಗೇನೇ ಹಲವು ಬಗೆಯಲ್ಲಿ ಹತ್ತಾರು ಕ್ರಮದಿಂದ ಅಸಾಂಗತ್ಯ ದೋಷವು ಬಾಧಿಸುತ್ತದೆ. ಅದು ಹೀಗೆ -

೧. ಹೃತ್ಪದ್ಮಸ್ಥವಾದ ಆಕಾಶದಲ್ಲಿ ಏನಿದೆ? ಎಂದು ಪ್ರಶ್ನಿಸಿದಾಗ, ಭೂತಾಕಾಶವಿದೆ ಎಂಬ ಉತ್ತರ ಅಸಂಗತ.

೨. 'ದಹರೋऽಸ್ಮಿನ್ನಂತರಾಕಾಶಃ' ಎಂಬ ಹಿಂದಿನ ವಾಕ್ಯದಲ್ಲಿಯೇ ಹೃತ್ಪದ್ಮಸ್ಥವಾದದ್ದು ಆಕಾಶವೆಂದು ಹೇಳಿದ ಮೇಲೆ ಪುನಃ ಮುಂದಿನ ವಾಕ್ಯದಲ್ಲಿ ಅದೇ ವಿಚಾರವನ್ನು ಹೇಳುವುದು ಅಸಂಗತ.

೩. ಪೂರ್ವಪಕ್ಷಕಾರರು 'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಆಕಾಶ ಪದವನ್ನು ಸಪ್ತಮ್ಯಂತವೆಂದು ಹೇಳುತ್ತಾರೆ. ಆವಾಗ ಹೃದಯದಲ್ಲಿರುವ ಸಣ್ಣ ಆಕಾಶದಲ್ಲಿ ಬಾಹ್ಯವಾದ ವ್ಯಾಪ್ತಾಕಾಶವಿದೆ ಎಂದು ಹೇಳಿದಂತಾಗುತ್ತದೆ. ಸಣ್ಣದಾದ ಆಕಾಶದಲ್ಲಿ ವ್ಯಾಪ್ತಾಕಾಶ ಇರಲು ಹೇಗೆ ಸಾಧ್ಯ ? ಪರಮಾತ್ಮನಲ್ಲಿ ಅಚಿಂತ್ಯಾದ್ಭುತ ಶಕ್ತಿಯಿರುವುದರಿಂದ ವಿರೋಧವಿಲ್ಲ. ಆದರೆ ಜಡಪದಾರ್ಥದಲ್ಲಿ ಇಂತಹ ಅಚಿಂತ್ಯ ಶಕ್ತಿಯಿಲ್ಲದ ಕಾರಣ. ಸಣ್ಣ ಆಕಾಶದಲ್ಲಿ ವ್ಯಾಪ್ತಾಕಾಶದ ಇರುವಿಕೆಯನ್ನು ಹೇಳುವುದು ಅಸಂಗತ.

೪. 'ತಮೇವೈಕಂ ಜಾನಥ' ಎಂಬ ಸೂತ್ರದಲ್ಲಿ ಬ್ರಹ್ಮನು ಮಾತ್ರ ಜಿಜ್ಞಾಸ್ಯನೆಂದು ಹೇಳಲಾಗಿದೆ. ಆದರೆ ನೀವು ಹೃದಯದಲ್ಲಿರುವ ಆಕಾಶದಲ್ಲಿ ಜಿಜ್ಞಾಸ್ಯತ್ವವನ್ನು, ಸರ್ವಾಧಾರತ್ವವನ್ನು ಹೇಳುತ್ತಿದ್ದೀರಿ. ಇವೆರಡೂ ಅಸಂಗತವಾಗಿದೆ.

೫. ಪರಿಚ್ಛಿನ್ನವಾದ ಹೃದಯಾಕಾಶದಲ್ಲಿ ಅಪರಿಚ್ಛಿನ್ನತ್ವವನ್ನು ವಿಧಾನ ಮಾಡಿ, ದ್ಯಾವಾಪೃಥಿವ್ಯಾದಿಗಳನ್ನು ಜಿಜ್ಞಾಸೆ ಮಾಡಬೇಕೆಂದು ಹೇಳಿದರೆ ಪರಿಚ್ಛಿನ್ನದಲ್ಲಿ ಅಪರಿಚ್ಛಿನ್ನತ್ವವನ್ನು ಹೇಳುವುದು ಅಯೋಗ್ಯವಾದ್ದರಿಂದ ಅಸಂಗತವಾಗಿದೆ.

೬. 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದಾಗ ಮುಂದಿರುವ 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯವನ್ನೇ ಉತ್ತರರೂಪವೆಂದು ಪರಿಗಣಿಸಲು ಬರುವಾಗ ದೂರದಲ್ಲಿರುವ 'ಉಭೇ ಅಸ್ಮಿನ್ ದ್ಯಾವ್ಯಾಪೃಥಿವೀ' ಎಂಬ ವಾಕ್ಯವನ್ನು ಉತ್ತರರೂಪವಾಗಿದೆಯೆಂದು ಹೇಳುವುದು ಅಸಂಗತ.

೭. 'ಕಿಂ ತದತ್ರ ವಿದ್ಯತೇ' ಎಂಬ ವಾಕ್ಯದಿಂದ ಯಾವುದನ್ನು ಜಿಜ್ಞಾಸೆ ಮಾಡಬೇಕೆಂದು ಚರ್ಚಿಸಿದಾಗ ಜಿಜ್ಞಾಸೆಗೆ ಅನರ್ಹವಾದ ದ್ಯಾವಾಪೃಥಿವ್ಯಾದಿಗಳ ಜಿಜ್ಞಾಸೆಯನ್ನು ಹೇಳುವುದು ಅಸಂಗತ.

೮. 'ತಮೇವೈಕಂ ಜಾನಥ' ಎಂಬ ಶ್ರುತಿಯಲ್ಲಿ ದ್ಯುಭ್ವಾದಿಗಳಿಗೆ ಯಾವುದು ಆಧಾರವಾಗಿದೆಯೋ, ಅದರ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಲಾಗಿದೆ. ನೀವು ಆಧೇಯವಾದ ದ್ಯುಭ್ವಾದಿಗಳ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳುತ್ತಿದ್ದೀರಿ. ಇದು ಅಸಂಗತ.

೯. 'ತದನ್ವೇಷ್ಟವ್ಯಮ್' ಎಂಬುದು ಉದ್ದೇಶವಾಗಿದೆ. ಉದ್ದೇಶದಲ್ಲಿ ವಿಶೇಷಣವಾದ ಏಕತ್ವವನ್ನು ತಿರಸ್ಕರಿಸಬಾರದು. ಆದ್ದರಿಂದ ಒಂದು ಪದಾರ್ಥದ ಜಿಜ್ಞಾಸೆಯನ್ನೇ ಶ್ರುತಿಯು ಹೇಳುತ್ತಿದೆ ಹೊರತು, ಸ್ವರ್ಗಲೋಕ, ಭೂಲೋಕ, ಸೂರ್ಯ-ಚಂದ್ರ ಮೊದಲಾದ ಅನೇಕ ಪದಾರ್ಥಗಳ ಜಿಜ್ಞಾಸೆಯನ್ನು ಶ್ರುತಿಯು ಹೇಳುತ್ತಿಲ್ಲ. ನೀವು ಹಾಗೇ ವ್ಯಾಖ್ಯಾನಿಸಿದರೆ ಅಸಂಗತವಾಗುತ್ತದೆ.

೧೦. 'ತದ್ವಾವ ವಿಜಿಜ್ಞಾಸಿತವ್ಯಮ್' ಎಂಬಲ್ಲಿ 'ವಾ' ಶಬ್ದದಿಂದ ಅವಧಾರಣೆಯನ್ನು ಮಾಡುತ್ತಾ ಬೇರೆ ಪದಾರ್ಥಗಳ ಜಿಜ್ಞಾಸೆಯನ್ನು ವ್ಯಾವರ್ತನೆ ಮಾಡಿ, ಒಂದೇ ಪದಾರ್ಥದ ಜಿಜ್ಞಾಸೆಯನ್ನು ವಿಧಿಸಲಾಗಿದೆ. ನೀವು ಅನೇಕ ಪದಾರ್ಥಗಳ ಜಿಜ್ಞಾಸೆಯನ್ನು ಹೇಳುವುದು ಅಸಂಗತ.

೧೧. ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ಜಡವಾದ ಆಕಾಶವೇ ಇದೆಯೆಂದು ಹೇಳುವುದಾದರೆ, ಶರೀರವನ್ನು ಪಟ್ಟಣವೆಂದು, ಪುಂಡರೀಕವನ್ನು ಮನೆಯೆಂದು ಹೇಳಿದ್ದು ಅಸಂಗತ. ಚೇತನರಿಗೆ ಮಾತ್ರ ಆಧಾರವಾಗಿ ಪಟ್ಟಣ-ಮನೆಯೆಂಬ ವ್ಯವಹಾರವಿದೆ. ಜಡಪದಾರ್ಥಗಳಿಗೆ ಆಧಾರವಾದದ್ದನ್ನು ಪಟ್ಟಣ ಅಥವಾ ಮನೆಯೆಂದು ಯಾರೂ ವ್ಯವಹರಿಸುವುದಿಲ್ಲ.

ಹೀಗೆ ಪೂರ್ವಪಕ್ಷಕಾರರಿಗೆ ಹತ್ತಾರು ಮುಖದಲ್ಲಿ ಅಸಾಂಗತ್ಯದೋಷವು ಬಾಧಿಸುತ್ತದೆ.

### *ಮಂದಿರೇ ಮಣಿಮಾಲಾ ನ್ಯಾಯದಿಂದ ಸಕಲ ವಿರೋಧ ಪರಿಹಾರ*

ಹಿಂದೆ ಜೀವನೇ ಹೃತ್ಪದ್ಮಸ್ಥನಾಗಿದ್ದಾನೆಂದು ಪೂರ್ವಪಕ್ಷ ಮಾಡುವಾಗ ಸಿದ್ಧಾಂತಿಗಳಿಗೆ ಬಾಧಕವೊಂದನ್ನು ಹೇಳಲಾಗಿತ್ತು. 'ಏತತ್' ಶಬ್ದದಿಂದ ಪರಮಾತ್ಮನನ್ನು ಪರಾಮರ್ಶಿಸಲು ಸಾಧ್ಯವಿಲ್ಲ. ಏಕೆಂದರೆ 'ಪರಂಜ್ಯೋತಿಃ' ಎಂಬ ಶಬ್ದವು ನಪುಂಸಕಲಿಂಗದಲ್ಲಿದೆ. ಈ ಶಬ್ದದಿಂದ ಪ್ರತಿಪಾದ್ಯನಾದ ಬ್ರಹ್ಮನನ್ನು ಪುಲ್ಲಿಂಗ ಶಬ್ದದಲ್ಲಿರುವ 'ಏಷಃ' ಎಂಬ ಶಬ್ದದಿಂದ ಪರಾಮರ್ಶಿಸಲು ಸಾಧ್ಯವಿಲ್ಲವೆಂದು.

ಇದೂ ಸಹ ತಪ್ಪು. ವಿಧೇಯವು ಯಾವ ಲಿಂಗದಲ್ಲಿರುತ್ತದೋ, ಆ ಲಿಂಗವನ್ನೇ ಅನುಸರಿಸಿ ಪರಾಮರ್ಶ ಮಾಡುವಂತಹ ಸರ್ವನಾಮ ಶಬ್ದವನ್ನು ಪ್ರಯೋಗಿಸುವುದು ಕಾಣಿಸುತ್ತದೆ. ''ಶೈತ್ಯಂ ಹಿ ಯತ್ಸಾ ಪ್ರಕೃತಿರ್ಜಲಸ್ಯ' ಎಂಬ ಪ್ರಯೋಗವು ಲೋಕದಲ್ಲಿ ಪ್ರಸಿದ್ಧವಾಗಿದೆ. 'ನೀರಿನ ಸ್ವಭಾವ ಶೈತ್ಯ' ಎಂಬುದು ಇದರ ಅರ್ಥ. 'ಸಾ' ಎಂಬ ಸ್ತ್ರೀಲಿಂಗವಾದ ಶಬ್ದದಿಂದ ಶೈತ್ಯವನ್ನು ಪರಾಮರ್ಶಿಸುತ್ತಾರೆ. ಆದರೆ ಶೈತ್ಯ ಶಬ್ದವು ನಪುಂಸಕಲಿಂಗದಲ್ಲೇ ಇದೆ. ಆದ್ದರಿಂದ ಪ್ರಕೃತಿ ಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ವಿಧೇಯಕವಾದ ಲಿಂಗವನ್ನೇ 'ತತ್' ಶಬ್ದವು ಅನುಸರಿಸಿದೆಯೆಂದು ಉತ್ತರಿಸಬೇಕು. ಅದರಂತೆ ಪ್ರಕೃತ 'ಆತ್ಮ' ಎಂಬ ವಿಧೇಯವಾಚಕ ಶಬ್ದವು ಪುಲ್ಲಿಂಗದಲ್ಲಿರುವ ಪ್ರಯುಕ್ತ 'ಏಷಃ' ಎಂಬುದಾಗಿ ಪುಲ್ಲಿಂಗ ಪ್ರಯೋಗವು ಯುಕ್ತವಾಗಿದೆಯೆಂದು ತಿಳಿಯಬೇಕು. ಮತ್ತು ಅಮೃತತ್ವ, ಅಭಯತ್ವ ಮೊದಲಾದ ನಿರವಕಾಶವಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರುವುದರಿಂದ ಪರಮಾತ್ಮನೇ ಪರಾಮರ್ಶಕ್ಕೆ ಯೋಗ್ಯನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. 'ಏತತ್' ಶಬ್ದದಿಂದ ಪರಾಮರ್ಶ ಮಾಡಬೇಕಾದರೆ ಸಮಾನವಿಭಕ್ತಿಯಾಗಲೀ, ಸಮಾನಲಿಂಗವಾಗಲೀ ಪ್ರಯೋಜಕವಲ್ಲ. ಹಿಂದೆ ಪ್ರಸ್ತುತನಾಗಿದ್ದರೆ ಸಾಕು. ಚೈತ್ರನು ಬಂದನು; ಅವನಿಗೆ ಊಟ ಮಾಡಿಸು. 'ಚೈತ್ರಃ ಆಗತಃ ತಂ ಭೋಜಯ' ಎಂಬ ಪ್ರಯೋಗವಿದೆ. ಚೈತ್ರ ಶಬ್ದವು ಪ್ರಥಮಾವಿಭಕ್ತಿಯಲ್ಲಿದ್ದರೂ ಕೂಡ ದ್ವಿತೀಯಾವಿಭಕ್ತ್ಯಂತದಲ್ಲಿರುವ 'ತಂ' ಎಂಬ 'ತತ್' ಶಬ್ದದಿಂದ ಚೈತ್ರನನ್ನು ಪರಾಮರ್ಶಿಸುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ಲಿಂಗವಾಗಲೀ, ವಿಭಕ್ತಿಯಾಗಲೀ ಪ್ರಯೋಜಕವಲ್ಲವೆಂದು ತಿಳಿಯಬೇಕು.

ಮತ್ತು ಪರಮಾತ್ಮನೇ ಎಲ್ಲಕ್ಕೂ ಆಧಾರನಾಗಿದ್ದಾನೆಂದು ಹೇಳುವುದಾದರೆ, ಸುಷಿರ ಶ್ರುತಿಯಲ್ಲಿ ಸುಷಿರಕ್ಕೆ ಹೇಳಲ್ಪಟ್ಟ ಸರ್ವಾಧಾರತ್ವವು ಎಂಬುದು ಪೂರ್ವಪಕ್ಷಕಾರರ ಮತ್ತೊಂದು ಪ್ರಶ್ನೆ. ಇದೂ ಕೂಡ ತಪ್ಪು. ಮನೆಯಲ್ಲಿ ಮಣಿಮಾಲೆಯಿದೆ ಎಂಬ ಪ್ರಯೋಗವಿದೆ. ಮಣಿಮಾಲೆಯನ್ನು ಮನೆಯಲ್ಲಿಟ್ಟಿರುವುದಿಲ್ಲ ಹೊರತಾಗಿ ಮನೆಯಲ್ಲಿರುವ ಪೆಟ್ಟಿಗೆಯಲ್ಲಿ ಭದ್ರವಾಗಿ ಇಟ್ಟಿರುತ್ತಾರೆ. ಆದರೂ ಕೂಡ 'ಮನೆಯಲ್ಲಿ ಮಣಿಮಾಲೆಯಿದೆ' ಎಂಬ ಪ್ರಯೋಗವನ್ನು ಹೇಗೆ ಮಾಡುತ್ತೇವೋ, ಅದರಂತೆ ಸುಷಿರದಲ್ಲಿ ಎಲ್ಲವೂ ಇದೆಯೆಂದರೆ ಸುಷಿರದಲ್ಲಿ ಬ್ರಹ್ಮನಿದ್ದಾನೆ. ಅವನಲ್ಲಿ ಎಲ್ಲ ಪದಾರ್ಥವೂ ಕೂಡ ಅಡಕವಾಗಿದೆಯೆಂದೇ ಅಭಿಪ್ರಾಯ. ಯಾವುದೇ ಬಾಧಕಗಳಿಲ್ಲದ ಕಾರಣ ಹೃದಯಪದ್ಮದಲ್ಲಿರುವ ಸುಷಿರದಲ್ಲಿ ನೆಲೆಸಿರುವವನು ಪರಮಾತ್ಮನೇ ಆಗಿದ್ದಾನೆಂದು ತೀರ್ಮಾನವಾಯಿತು.

### *ಪ್ರಥಮಸೂತ್ರ ಹಾಗೂ ದ್ವಿತೀಯಸೂತ್ರಗಳ ಸ್ವಾರಸ್ಯ ವರ್ಣನೆ*

'ದಹರ ಉತ್ತರೇಭ್ಯಃ' ಎಂಬ ಪ್ರಥಮ ಸೂತ್ರದಲ್ಲಿ ಸ್ವಪಕ್ಷಸಾಧಕಪ್ರಮಾಣವನ್ನು ಹೇಳುತ್ತಿದ್ದಾರೆ. ಮತ್ತು ವಿಷಯವಾಕ್ಯಕ್ಕೆ ಅತ್ಯಂತ ಹತ್ತಿರವಿರುವ ಆತ್ಮಶ್ರುತಿ ಮತ್ತು ಅಪಹತಪಾಪ್ಮತ್ವಾದಿ ಲಿಂಗಗಳನ್ನು ಸಾಧಿಸುತ್ತಿದ್ದಾರೆ. ಈ ಕಾರಣದಿಂದ ಸೂತ್ರಕ್ಕೆ ಪ್ರಾಥಮ್ಯವು ಸಮಂಜಸವಾಗಿದೆ.

'ಓಂ ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಚ ಓಂ' ಈ ಸೂತ್ರದಲ್ಲಿಯೂ ಕೂಡ ಬ್ರಹ್ಮಶ್ರುತಿ, ಮತ್ತು ಸುಪ್ತಗಮ್ಯತ್ವ ಎಂಬೆರಡು ಲಿಂಗಗಳನ್ನೇ ಹೃತ್ಪದ್ಮಸ್ಥನಾದವನು ಪರಮಾತ್ಮನೇ ಆಗಿದ್ದಾನೆನ್ನಲು ಪ್ರಮಾಣವನ್ನಾಗಿ ಹೇಳಿರುತ್ತಾರೆ. ಆದರೆ ವಿಷಯವಾಕ್ಯಕ್ಕಿಂತ ಸ್ವಲ್ಪದೂರದಲ್ಲಿರುವ ಶ್ರುತಿಯಲ್ಲಿ ಹೇಳಲ್ಪಟ್ಟ ಶ್ರುತಿಲಿಂಗಗಳನ್ನು ಈ ಸೂತ್ರವು ಉಲ್ಲೇಖ ಮಾಡುತ್ತಿರುವ ಕಾರಣ, ಎರಡನೆಯ ಸ್ಥಾನವನ್ನು ಪಡೆದಿರುತ್ತದೆ.

ಸೂತ್ರದಲ್ಲಿರುವ 'ಗತಿಶಬ್ದಾಭ್ಯಾಂ' ಎಂಬ ಪದವನ್ನು ಗಮನಿಸಿದಾಗ ಸುಪ್ತಗಮ್ಯತ್ವ ಹಾಗೂ ಬ್ರಹ್ಮಶಬ್ದ ಇವೆರಡೂ ವಿಷ್ಣುವಿನ ಹೃತ್ಪದ್ಮಸ್ಥತ್ವಕ್ಕೆ ಆಧಾರವಾದ ಪ್ರಮಾಣಗಳಾಗಿವೆ ಎಂದು ತಿಳಿಯುತ್ತದೆ. ಆದರೆ 'ತಥ್ಯಾ ಹಿ ದೃಷ್ಟಂ ಲಿಂಗಂ ಚ' ಎಂಬ ಮುಂದಿನ ಮಾತುಗಳು ಏಕೆ ಹೊರಟಿವೆ ? ಎಂದು ಸ್ಪಷ್ಟವಾಗಿ ನಮಗೆ ತಿಳಿಯುವುದಿಲ್ಲ. ಇಲ್ಲಿರುವ ಪ್ರತಿಯೊಂದು ಪದಗಳ ಸ್ವಾರಸ್ಯವನ್ನು ಚಂದ್ರಿಕಾಚಾರ್ಯರು ಹೃದಯಂಗಮವಾಗಿ ವರ್ಣಿಸಿದ್ದಾರೆ.

'ಅರ' ಮತ್ತು 'ಣ್ಯ' ಎಂಬೆರಡು ಅಮೃತಸಮುದ್ರಗಳು ವಿಷ್ಣುಲೋಕದಲ್ಲಿವೆ. ವಿಷ್ಣುಲೋಕದಲ್ಲಿ ಬಿಟ್ಟು ಬೇರೆ ಎಲ್ಲಿಯೂ ಸಹ ಈ ಲೋಕಗಳಿಲ್ಲ. ಹೀಗೆ ವಿಷ್ಣುವಿನ ಲೋಕದಲ್ಲಿ ಅಸಾಧಾರಣವಾದ ಲಿಂಗಗಳಿರುವುದನ್ನು ಶ್ರುತಿಯು ವರ್ಣನೆ ಮಾಡಿದೆ. ಹಾಗೆ ವಿಷ್ಣುಲೋಕವನ್ನು ವರ್ಣಿಸುವಾಗ ಅದೇ ಶ್ರುತಿಯು 'ಬ್ರಹ್ಮಲೋಕ' ಎಂಬ ಪದವನ್ನು ಪ್ರಯೋಗಿಸಿದೆ. ಆದ್ದರಿಂದ ವಿಷ್ಣುಲೋಕವನ್ನೇ ಬ್ರಹ್ಮಲೋಕವೆನ್ನಬೇಕೆಂದು ನಮಗೆ ಸ್ಪಷ್ಟವಾಗುತ್ತದೆ. ಅದೇ 'ಬ್ರಹ್ಮಲೋಕ' ಶಬ್ದವು ಹೃತ್ಪದ್ಮಸ್ಥ ಪ್ರಕರಣದಲ್ಲಿಯೂ ಇರುತ್ತದೆ. ಇದರಿಂದ ನಾವು ಏನನ್ನು ತಿಳಿಯಬೇಕೆಂದರೆ ಹೃತ್ಪದ್ಮವು ವಿಷ್ಣುವಿನ ಲೋಕವೇ ಆಗಿದೆ. ವಿಷ್ಣುವಿನ ಲೋಕವಾಗಬೇಕೆಂದರೆ ಹೃತ್ಪದ್ಮದಲ್ಲಿರುವವನು ವಿಷ್ಣುವೇ ಆಗಿದ್ದಾನೆಂದು ತಿಳಿಯಬೇಕು.

ಈ ಸ್ವಾರಸ್ಯವನ್ನು ತಿಳಿಸುವುದಕ್ಕಾಗಿ 'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಮುಂದಿನ ಸೂತ್ರದ ಭಾಗವು ಹೊರಟಿದೆ. ಹಾಗಾದರೆ ಗತಿ ಶಬ್ದಾಭ್ಯಾಂ' ಎಂಬ ದ್ವಂದ್ವಸಮಾಸದಲ್ಲಿಯೇ ಈ ಲಿಂಗವನ್ನೂ ಕೂಡ ಸೇರಿಸಬಹುದಿತ್ತಲ್ಲವೇ? ಪ್ರತ್ಯೇಕವಾಗಿ ಏಕೆ ಹೇಳಿದರು ಎಂಬುದು ಮುಂದಿನ ಪ್ರಶ್ನೆ. ಆದರೆ ಸ್ವಲ್ಪ ವ್ಯತ್ಯಾಸವಿದೆ. ಸುಪ್ತಗಮ್ಯತ್ವ ಹಾಗೂ ಬ್ರಹ್ಮಶಬ್ದಗಳು ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆನ್ನಲು ನೇರವಾದ ಹೇತುಗಳು.

'ಅರ' 'ಣ್ಯ' ಎಂಬ ಸುಧಾಸಮುದ್ರಾಶ್ರಯತ್ವವು ನೇರವಾದ ಹೇತುಗಳಾಗುವುದಿಲ್ಲ, ಹೊರತಾಗಿ ಹೇತುಸಾಧಕ ಹೇತುಗಳಾಗಿವೆ. ಆದ್ದರಿಂದ ಪ್ರತ್ಯೇಕವಾಗಿ ಸೂತ್ರಕಾರರು ಇದನ್ನು ಉಲ್ಲೇಖ ಮಾಡಿದ್ದಾರೆ. ಮತ್ತು 'ಅಹರಹರ್ಗಚ್ಛಂತ್ಯಃ' ಇತ್ಯಾದಿ ಶ್ರುತಿಯನ್ನು ಗಮನಿಸಿದಾಗ ಗತಿ ಮತ್ತು ಶಬ್ದಗಳು ಹೃತ್ಪದ್ಮಸ್ಥನಲ್ಲಿವೆ ಎಂದು ಸಿದ್ಧವಾಗಿವೆ. ಸುಧಾಸಮುದ್ರಾಶ್ರಯತ್ವವು ಹೃತ್ಪದ್ಮಸ್ಥನಲ್ಲಿದೆಯೆಂದು ಸಿದ್ಧವಾಗಿಲ್ಲ ಹೊರತು, ಸಾಧ್ಯವಾಗಿದೆ. ಸಿದ್ಧವಾದ ಹೇತುಗಳ ಜೊತೆಗೆ ಸಾಧ್ಯವಾದ್ದನ್ನು ಸೇರಿಸುವುದು ಸ್ವರಸವಲ್ಲ ಎಂಬ ದೃಷ್ಟಿಯಿಂದ ಪ್ರತ್ಯೇಕವಾಗಿ ಹೇಳಿದ್ದಾರೆ. ಸಾಧ್ಯವಾದದ್ದನ್ನು ಸುಪ್ತಗಮ್ಯತ್ವ ಲಿಂಗದ ಉದಾಹರಣೆಯಿಂದ ಹೃತ್ಪದ್ಮಸ್ಥನಲ್ಲಿ ಇದೆಯೆಂದು ಸಾಧಿಸಬೇಕು. ಅದಕ್ಕೋಸ್ಕರವೇ 'ತಥಾ ದೃಷ್ಟಮ್' ಎಂಬ ಪದಗಳನ್ನು ಪ್ರಯೋಗಿಸಿದ್ದಾರೆ.

ಸುಧಾಸಮುದ್ರಾಶ್ರಯತ್ವವೆಂಬ ಲಿಂಗವು ಹೃತ್ಪದ್ಮಸ್ಥವೆಂಬ ಪಕ್ಷದಲ್ಲಿ ಇದೆಯೋ? ಇಲ್ಲವೋ? ಎಂಬ ಸಂಶಯವು ಬಂದರೆ 'ಹಿ' ಶಬ್ದವನ್ನು ಸೂತ್ರಕಾರರು ಪ್ರಯೋಗಿಸುತ್ತಾರೆ. ಅನೇಕ ಸ್ಮೃತಿವಾಕ್ಯಗಳ ಆಧಾರದಿಂದ ಹೃತ್ಪದ್ಮಸ್ಥನಲ್ಲಿ ಇಂತಹ ಸುಧಾಸಮುದ್ರಾಶ್ರಯಲೋಕವತ್ತ್ವವು ಇರುತ್ತದೆಂಬುದು ಪ್ರಸಿದ್ಧವಾಗಿದೆ. ಹೀಗೆ ಸೂತ್ರದಲ್ಲಿರುವ ಪ್ರತಿಯೊಂದು ಪದಗಳು ಅತ್ಯಂತ ಸ್ವರಸವಾಗಿವೆ. ಮತ್ತು 'ಗತಿಶಬ್ದಾಭ್ಯಾಂ ಎಂಬ ಸೂತ್ರಕ್ಕೆ ಎರಡನೆಯ ಸ್ಥಾನವನ್ನು ನೀಡಿದ್ದೂ ಕೂಡ ಅತ್ಯಂತ ಪೂರ್ಣವಾಗಿದೆಯೆಂದು ತಿಳಿಯಬೇಕು.

*ಪರಿಪೂರ್ಣಚಂದ್ರಿಕಾ*

*ಎಂಟು ಸೂತ್ರಗಳಲ್ಲಿರುವ ಸ್ವಾರಸ್ಯ ವರ್ಣನೆ*

ಪ್ರಥಮಸೂತ್ರದಲ್ಲಿ ದಹರಸ್ಥನಾದವನು ಪರಮಾತ್ಮನೇ ಆಗಿದ್ದಾನೆನ್ನಲು ಪ್ರಬಲವಾದ ಶ್ರುತಿ ಹಾಗೂ ಲಿಂಗಪ್ರಮಾಣಗಳನ್ನು ಹೇಳಲಾಯಿತು. ವಿಷಯವಾಕ್ಯಕ್ಕಿಂತ ಸ್ವಲ್ಪದೂರದಲ್ಲಿರುವ ಶ್ರುತಿಲಿಂಗಗಳನ್ನು ಎರಡನೆಯ ಸೂತ್ರದಲ್ಲಿ ಹೇಳಿ ಹೇತುಸಾಧಕ ಹೇತುವನ್ನೂ ಕೂಡ ಸಮರ್ಥಿಸಲಾಯಿತು. ಹೀಗೆ ಶ್ರುತಿಲಿಂಗ ಪ್ರಮಾಣಗಳನ್ನು ಮೊದಲೆರಡು ಸೂತ್ರಗಳಲ್ಲಿ ಹೇಳಿದ ಮೇಲೆ ಸಮಾಖ್ಯಾಪ್ರಮಾಣವನ್ನು ಹೇಳುವುದಕ್ಕಾಗಿ ಮೂರನೆಯ ಸೂತ್ರವು ಹೊರಟಿದೆ. ಛಾಂದೋಗ್ಯದಲ್ಲಿ ಹೃತ್ಪದ್ಮದಲ್ಲಿರುವ ಆಕಾಶಸ್ಥನಾದವನನ್ನು ಪರಮಾತ್ಮನೆಂದು ಹೇಗೆ ವರ್ಣಿಸಲಾಗಿದೆಯೋ, ಅದರಂತೆ ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಕೂಡ ವರ್ಣನೆ ಇರುತ್ತದೆ. ಆದ್ದರಿಂದ ವಿಷ್ಣುವೇ ದಹರಾಕಾಶಸ್ಥನೆಂದು ಸ್ಪಷ್ಟವಾಗುತ್ತದೆ. ಮೂರನೆಯ ಈ ಸೂತ್ರದಲ್ಲಿ ಸಮಾಖ್ಯಾಪ್ರಮಾಣವನ್ನಷ್ಟೇ ಹೇಳುವುದಷ್ಟೇ ಅಲ್ಲದೇ ಭೂತಾಧಿಪತಿತ್ವ ಮೊದಲಾದ ವಿಷ್ಣುವಿನ ಮಹಿಮೆಯನ್ನೂ ಕೂಡ ಹೇಳಲಾಗಿದೆ.

'ಪ್ರಸಿದ್ಧೇಶ್ಚ' ಎಂಬ ನಾಲ್ಕನೆಯ ಸೂತ್ರಲ್ಲಿ ಕೇವಲ ಸಮಾಖ್ಯಾಪ್ರಮಾಣವನ್ನು ಹೇಳಿದ್ದಾರೆ. ಆದ್ದರಿಂದೆ. ಮೂರನೆಯ ಸೂತ್ರದ ಅನಂತರವೇ ಇದು ಪ್ರಸಕ್ತವಾಗುತ್ತದೆ. 'ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್' ಎಂಬ ಐದನೆಯ ಸೂತ್ರದಲ್ಲಿ ಸ್ವಪಕ್ಷ ಬಾಧಕ ಪ್ರಮಾಣವನ್ನು ಹೇಳಿ, ಪರಪಕ್ಷ ಸಾಧಕ ಪ್ರಮಾಣವನ್ನು ಆಶಂಕಿಸಿ; ಈ ಆಶಂಕೆಗಳನ್ನು ಪರಿಹರಿಸುವ ಮೂಲಕ ಪರಮಾತ್ಮನಲ್ಲಿಯೇ ಹೃತ್ಪದ್ಮಸ್ಥತ್ವವು ಬರುತ್ತದೆಂದು ಸಾಧಿಸಿರುವ ಕಾರಣ ಪರಪಕ್ಷ ನಿರಾಕರಣೆಗಾಗಿ ಹೊರಟಿರುವ ಈ ಸೂತ್ರಕ್ಕೆ ಐದನೆಯ ಸ್ಥಾನವು ಅತ್ಯಂತ ಸಮಂಜಸವಾಗಿದೆ. 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಆರನೆಯ ಸೂತ್ರದಲ್ಲಿ ಜೀವನಲ್ಲಿಯೂ ಕೂಡ ಬ್ರಹ್ಮನ ಧರ್ಮಗಳನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ ಮೋಕ್ಷಾವಸ್ಥೆಯಲ್ಲಿ ಅಪಹತಪಾಪ್ಮತ್ವಾದಿಗಳನ್ನು ಹೇಳಬಹುದಾದರೂ ಕೂಡ ಭಗವದಧೀನವೇ ಆಗಿರುವುದರಿಂದ ಸ್ವತಂತ್ರವಾದ, ಮುಖ್ಯವಾದ ಲಿಂಗವನ್ನು ಜೀವನಲ್ಲಿ ಉಪಪಾದಿಸಲು ಬರುವುದಿಲ್ಲವೆಂದು ಉತ್ತರಿಸಿದ್ದಾರೆ.

'ಅನ್ಯಾರ್ಥಶ್ಚ ಪರಾಮರ್ಶಃ' ಎಂಬ ಏಳನೆಯ ಸೂತ್ರದಲ್ಲಿ ಹಿಂದೆ ಪ್ರಸಕ್ತನಾದವನು ಪರಮಾತ್ಮನೇ ಆಗಿದ್ದಾನೆ. ಅವನನ್ನೇ 'ಏತತ್' ಶಬ್ದದಿಂದ ಪರಾಮರ್ಶಿಸಬೇಕೆಂದು ಸಮರ್ಥಿಸಲಾಗಿದೆ. 'ಅಲ್ಪಶ್ರುತೇರಿತಿ ಚೇತ್ ತದುಕ್ತಮ್' ಎಂಬ ಎಂಟನೆಯ ಸೂತ್ರದಲ್ಲಿ ಅಲ್ಪಸ್ಥಾನಸ್ಥಿತನಾದ ಪರಮಾತ್ಮನಿಗೆ ಸರ್ವಗತತ್ವವನ್ನು ಹೇಳುವುದು ಅನುಪಪನ್ನವಲ್ಲ. ಈ ವಿಷಯವನ್ನು 'ಅರ್ಭಕೌಕಸ್ತ್ವಾತ್' ಎಂಬ ಸರ್ವಗತಾಧಿಕರಣದಲ್ಲಿಯೇ ವಿವರಿಸಿದ್ದೇವೆಂದು ಸ್ಮರಿಸಿದ್ದಾರೆ. ಭಗವಂತನು ಹೇಗೆ ಪರಿಪೂರ್ಣನೋ, ಅದರಂತೆ ಅವನ ಅಂಶವೂ ಕೂಡ ಪರಿಪೂರ್ಣವಾದ್ದರಿಂದ ಎಲ್ಲೆಡೆ ವ್ಯಾಪ್ತನಾದ ಪರಮಾತ್ಮನು ಅಲ್ಪವಾದ ಹೃದಯಪ್ರದೇಶದಲ್ಲೂ ಇರುತ್ತಾನೆಂಬುದನ್ನು ತಿಳಿಯಬೇಕು. ಈ ವಿಷಯದಲ್ಲಿ ಶ್ರುತಿ-ಸ್ಮೃತಿಗಳೇ ಆಧಾರವಾಗಿವೆ.

*ಶಂಕರ-ರಾಮಾನುಜರ ಅಧಿಕರಣ ವಿಮರ್ಶೆ*

ಅದ್ವೈತಿಭಾಷ್ಯದ ಅಧಿಕರಣ ಶರೀರ - 'ಅಥ ಯದಿದಮಸ್ಮಿನ್ ಬ್ರಹ್ಮಪುರೇ' 'ದಹರಂ ಪುಂಡರೀಕಮ್' 'ದಹರೋಽಸ್ಮಿನ್ನಂತರಾಕಾಶಃ' ಎಂಬ ಛಾಂದೋಗ್ಯೋಪನಿಷತ್ತಿನ ಎಂಟನೆಯ ಅಧ್ಯಾಯದ ಪ್ರಥಮಖಂಡದ ಮಂತ್ರಗಳು ಇಲ್ಲಿನ ವಿಷಯವಾಕ್ಯ.

ಇಲ್ಲಿರುವ ದಹರಾಕಾಶಪದವು ಭೂತಾಕಾಶ ಪ್ರತಿಪಾದಕವೋ, ಜೀವಪ್ರತಿಪಾದಕವೋ, ಬ್ರಹ್ಮಪ್ರತಿಪಾದಕವೋ? ಎಂದು ಸಂಶಯ.

ಪೂರ್ವಪಕ್ಷ - ಹೃತ್ಪುಂಡರೀಕಾವಚ್ಛಿನ್ನವಾದ ಆಕಾಶಕ್ಕೆ ಬಾಹ್ಯಾಕಾಶದ ಉಪಮಾನವನ್ನು ನೀಡಿದ್ದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯತ್ವವನ್ನು ಹೇಳಿದ್ದರಿಂದ ಭೂತಾಕಾಶವೇ ದಹರಾಕಾಶವೆಂದು ಪ್ರಥಮ ಪೂರ್ವಪಕ್ಷ.

ಭಾಮತಿಯಲ್ಲಿ ಈ ಪೂರ್ವಪಕ್ಷವನ್ನು ನಿರಾಕರಿಸಿ, ಜೀವವೇ ದಹರಾಕಾಶವೆಂಬ ಎರಡನೆಯ ಪೂರ್ವಪಕ್ಷವನ್ನು ಸಮರ್ಥಿಸಲಾಗಿದೆ. ದೇಹದಿಂದ ಕೂಡಿರುವ ಕಾರಣ, ಜೀವನು ಬ್ರಹ್ಮನೆನಿಸುತ್ತಾನೆ. ಅವನ 'ಪುರ' ಎಂದರೆ, ದೇಹವೇ ಆಗುತ್ತದೆ. ಇಂತಹ ದೇಹದಲ್ಲಿ ಇರುವವನು ಜೀವನೆಂದು ಹೇಳಬೇಕು. ಆಕಾಶದಲ್ಲಿ ಹೇಗೆ ರೂಪಾದಿಗಳಿಲ್ಲವೋ, ಅದರಂತೆ ಜೀವನಲ್ಲಿಯೂ ಕೂಡ ರೂಪಾದಿಗಳಿಲ್ಲದ ಕಾರಣ 'ಆಕಾಶ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಜೀವನ ಕರ್ಮದಿಂದ ಶರೀರವು ನಿರ್ಮಿತವಾದ ಕಾರಣ, ದೇಹವು ಬ್ರಹ್ಮಪುರವೆನಿಸಿದೆ. ಶರೀರಕ್ಕೆ ಒಡೆಯನಾದ್ದರಿಂದ, ರಾಜನು ಪಟ್ಟಣದಲ್ಲಿದ್ದಂತೆ ಜೀವನು ಈ ಶರೀರದ ಹೃದಯಭಾಗದಲ್ಲಿರುತ್ತಾನೆ. ಆದ್ದರಿಂದ ಹೃತ್ಪದ್ಮಸ್ಥನಾದವನು ಜೀವನೇ ಆಗಿದ್ದಾನೆ.

ಸಿದ್ಧಾಂತ - ಬ್ರಹ್ಮ ಎಂಬ ಪ್ರಾತಿಪದಿಕಾರ್ಥವೇ ಮುಖ್ಯವಾದ್ದರಿಂದ ಅದಕ್ಕನುಸಾರಿಯಾಗಿ ಷಷ್ಠ್ಯರ್ಥವನ್ನು ಅರ್ಥೈಸಬೇಕು. 'ಬ್ರಹ್ಮಣಃ ಪುರಮ್' ಎಂದು ಹೇಳಿದಾಗ ನಮಗೆ 'ಬ್ರಹ್ಮನ ಪಟ್ಟಣ' ಎಂಬರ್ಥವೇ ಉಪಸ್ಥಿತವಾಗುತ್ತದೆ ಹೊರತು; ಜೀವನ ಉಪಸ್ಥಿತಿಯು ಬರುವುದಿಲ್ಲ. ಆದ್ದರಿಂದ ರಾಜನ ಪಟ್ಟಣದಲ್ಲಿ ಚೈತ್ರನು ವಾಸ ಮಾಡುವಂತೆ ಜೀವನ ದೇಹವೆಂಬ ಪಟ್ಟಣದಲ್ಲಿ ಬ್ರಹ್ಮನು ವಾಸಿಸುತ್ತಾನೆಂದು ಹೇಳಬೇಕು. ಮತ್ತು ಬಾಹ್ಯಾಕಾಶವು ಎಷ್ಟು ವಿಶಾಲವಾಗಿದೆಯೋ ಅಷ್ಟೇ ಬ್ರಹ್ಮನೂ ಕೂಡ ಅಪರಿಮಿತನಾಗಿದ್ದಾನೆ. ಪರಿಮಿತನಾದ ಜೀವನಲ್ಲಿ ಈ ದೃಷ್ಟಾಂತವು ಉಪಪನ್ನವಾಗುವುದಿಲ್ಲ. ಅಪಹತಪಾಪ್ಮತ್ವಾದಿ ಗುಣಗಳೂ ಕೂಡ ಬ್ರಹ್ಮನಲ್ಲಿಯೇ ಯುಕ್ತವಾಗುತ್ತದೆ. ಆದ್ದರಿಂದ ಬ್ರಹ್ಮನೇ ಹೃತ್ಪದ್ಮಸ್ಥಿತನಾಗಿದ್ದಾನೆ.

ಸೂತ್ರದಲ್ಲಿ 'ದಹರೇ' ಎಂದು ಪದವಿಭಾಗ ಮಾಡಬೇಕು. 'ದಹರಃ' ಎಂದು ಪದವಿಭಾಗ ಮಾಡಬಾರದು. ಆದ್ದರಿಂದ ದಹರಾಕಾಶನೇ ಬ್ರಹ್ಮನಾಗಿದ್ದಾನೆಂದು ಸೂತ್ರದ ಅರ್ಥ.

ರಾಮಾನುಜ ಭಾಷ್ಯದ ಅಧಿಕರಣ ಶರೀರ - 'ತಸ್ಮಿನ್ಯದಂತಃ ತದನ್ವೇಷ್ಟವ್ಯಮ್' ಎಂಬುದೇ ವಿಷಯವಾಕ್ಯ. ಭೂತಾಕಾಶವು ಹೃತ್ಪದ್ಮಸ್ಥಿತವಾಗಿದೆಯೆಂಬುದು ಮೊದಲನೆಯ ಪೂರ್ವಪಕ್ಷ. ದಹರಾಕಾಶಕ್ಕೆ ಬ್ರಹ್ಮತ್ವವನ್ನು ಹೇಳಲು ಸಾಧ್ಯವಿಲ್ಲವಾದ್ದರಿಂದ ಭೂತಾಕಾಶವನ್ನೇ ಹೃದಯಸ್ಥಿತವೆಂದು ಹೇಳಬೇಕು. ಅಥವಾ ಸಂಪ್ರಸಾದ ವಾಕ್ಯದಲ್ಲಿ ಜೀವನು ಪ್ರತಿಪಾದ್ಯನಾದ್ದರಿಂದ ಅಪಹತಪಾಪ್ಮತ್ವಾದಿ ಗುಣಗಳೂ ಕೂಡ ಶ್ರುತವಾದ್ದರಿಂದ ಜೀವನೇ ಹೃತ್ಪದ್ಮಸ್ಥಿತನೆಂಬುದು ಎರಡನೆಯ ಪೂರ್ವಪಕ್ಷ.

ಸಿದ್ಧಾಂತ - 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಯಾವಾನ್ವಾ' ಎಂಬ ವಾಕ್ಯದಿಂದ ಪ್ರಾರಂಭಮಾಡಿ 'ಏತತ್ ಸತ್ಯಂ ಬ್ರಹ್ಮಪುರಮ್' ಎಂಬಲ್ಲಿಯ ತನಕ ದಹರಾಕಾಶವನ್ನು ಅತಿಮಹತ್ತ್ವಪೂರ್ಣವಾಗಿ ಸರ್ವಕ್ಕೂ ಆಶ್ರಯವಾಗಿದೆ ಎಂದು ವಿವರಣೆ ಮಾಡಿದ್ದರಿಂದ ಪರಮಾತ್ಮನೇ ಹೃದಯಪದ್ಮಸ್ಥಿತನಾಗಿದ್ದಾನೆ. ಅಪಹತಪಾಪ್ಮತ್ವ, ಸತ್ಯಸಂಕಲ್ಪತ್ವಾದಿ ಗುಣಗಳೆಲ್ಲವೂ ಪರಮಾತ್ಮನ ಅಸಾಧಾರಣಧರ್ಮವಾಗಿರುವುದರಿಂದ ಅವನನ್ನೇ ದಹರಾಕಾಶನೆನ್ನಬೇಕು. ಹೀಗೆ ಇವರೂ ಕೂಡ ದಹರಾಕಾಶವನ್ನೇ ಬ್ರಹ್ಮನೆಂದು ಸಿದ್ಧಾಂತ ಮಾಡಿದ್ದಾರೆ.

*ಪರಿಪೂರ್ಣಚಂದ್ರಿಕಾ*

ಇವರಿಬ್ಬರ ಅಧಿಕರಣ ಶರೀರವೂ ಸರಿಯಲ್ಲ. ಏಕೆಂದರೆ ದಹರಾಕಾಶದಲ್ಲಿ ಬ್ರಹ್ಮನಿದ್ದಾನೆಂದು ಸೂತ್ರದ ಅಭಿಪ್ರಾಯ. ಆದ್ದರಿಂದ 'ದಹರೇ ಉತ್ತರೇಭ್ಯಃ' ಎಂದೇ ಸೂತ್ರವನ್ನು ಓದಬೇಕು. 'ದಹರಃ ಉತ್ತರೇಭ್ಯಃ' ಎಂದು ಓದಬಾರದು. ಆದರೆ ಇವರಿಬ್ಬರು ದಹರಾಕಾಶನನ್ನೇ ಬ್ರಹ್ಮನೆಂದು ಸಿದ್ಧಾಂತ ಮಾಡಿದ್ದಾರೆ. 'ದಹರಂ ಪುಂಡರೀಕಮ್' 'ದಹರೋಽಸ್ಮಿನ್ನಂತರಾಕಾಶಃ' 'ತಸ್ಮಿನ್ಯದಂತಃ ತದುಪಾಸಿತವ್ಯಮ್' ಎಂಬುದಾಗಿ ಸ್ಪಷ್ಟವಾಗಿ ಉಪನಿಷತ್ತು ಹೃದಯಕಮಲವನ್ನು ಉಲ್ಲೇಖ ಮಾಡಿ ಅದರಲ್ಲಿ ಆಕಾಶವಿದೆ. ಅದರಲ್ಲಿ ಬ್ರಹ್ಮನನ್ನು ಉಪಾನಸನೆ ಮಾಡಬೇಕೆಂದು ಹೇಳುತ್ತಿದೆ. ಹೀಗಿರುವಾಗ ಹೃದಯಪದ್ಮದಲ್ಲಿರುವ ದಹರಾಕಾಶವನ್ನೇ ಬ್ರಹ್ಮನೆಂದು ವ್ಯಾಖ್ಯಾನ ಮಾಡುವುದು ತಪ್ಪಾಗುತ್ತದೆ.

*ಅದ್ವೈತಿಗಳ ಶ್ರುತ್ಯರ್ಥ ವಿಮರ್ಶೆ*

ಅದ್ವೈತಿಗಳು ಶ್ರುತ್ಯರ್ಥವನ್ನು ಹೀಗೆ ಹೇಳಿರುತ್ತಾರೆ. 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ಹೃತ್ಪುಂಡರೀಕವನ್ನೇ ಪರಾಮರ್ಶಿಸಬೇಕು. ಹೃದಯಪುಂಡರೀಕದಲ್ಲಿರುವ ದಹರಾಕಾಶವನ್ನು ಅನ್ವೇಷಣ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ ಎಂದು.

ಇದು ತಪ್ಪು. 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ಹಿಂದೆ ಬುದ್ಧಿಯಲ್ಲಿ ಪ್ರಸಕ್ತವಾದ ದಹರಾಕಾಶವನ್ನೇ ಪರಾಮರ್ಶಿಸಲು ಬರುವಾಗ ಅದನ್ನು ಬಿಟ್ಟು ದೂರದಲ್ಲಿರುವ ಹೃದಯಪುಂಡರೀಕವನ್ನು ಪರಾಮರ್ಶ ಮಾಡುವುದು ಅಯುಕ್ತವಾಗಿದೆ.

ಸನ್ನಿಹಿತವಾದದ್ದನ್ನು ಪರಾಮರ್ಶಿಸಲು ಬರುವಾಗ ವ್ಯವಹಿತವಾದದ್ದನ್ನು ಪರಾಮರ್ಶ ಮಾಡಬಾರದೆನ್ನಲು ಪೂರ್ವಮೀಮಾಂಸೆಯ ದೃಷ್ಟಾಂತವು ಇರುತ್ತದೆ. ಏಳನೆಯ ಅಧ್ಯಾಯದಲ್ಲಿ ಒಂದು ಅಧಿಕರಣದಲ್ಲಿ ಹೀಗಿದೆ - ಚಾತುರ್ಮಾಸ್ಯದ ಮೂರನೆಯ ಪರ್ವದಲ್ಲಿ ಬರುವಂತಹ 'ಸಾಕಮೇಧೀಯ' ಎಂಬ ಯಾಗದಲ್ಲಿ 'ಏತದ್ಬ್ರಾಹ್ಮಣ ಏಕಕಪಾಲಃ' ಎಂಬ ವಾಕ್ಯವು ಶ್ರುತವಾಗಿದೆ. ಇಲ್ಲಿರುವ 'ಏತತ್' ಶಬ್ದದಿಂದ ದೂರದಲ್ಲಿರುವ ವೈಶ್ವದೇವಿಕವಾದ ಏಕಕಪಾಲವನ್ನು ಸ್ವೀಕರಿಸಬಾರದು. ಸನ್ನಿಹಿತವಾದ ವಾರುಣಪ್ರಘಾಸಿಕವಾದ ಏಕಕಪಾಲವನ್ನೇ ಪರಾಮರ್ಶಿಸಬೇಕು. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಸನ್ನಿಹಿತವಾದ ದಹರಾಕಾಶವನ್ನೇ ಪರಾಮರ್ಶ ಮಾಡಬೇಕು.

ಮತ್ತು ದಹರಾಕಾಶವು ಹೃದಯಪುಂಡರೀಕದಲ್ಲಿದೆಯೆಂದು 'ದಹರೋಽಸ್ಮಿನ್' ಎಂಬ ಹಿಂದಿನ ಶ್ರುತಿವಾಕ್ಯದಲ್ಲಿಯೇ ಹೇಳಿದ್ದಾಗಿದೆ. ಪುನಃ ಅದನ್ನೇ ಹೇಳುವುದು ವ್ಯರ್ಥವಾಗುತ್ತದೆ.

ಮತ್ತು 'ಯದಂತಃ' ಎಂಬಲ್ಲಿರುವ 'ಯತ್' ಶಬ್ದವು, 'ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್' ಎಂಬಲ್ಲಿರುವ 'ತತ್' ಶಬ್ದವು ದಹರಾಕಾಶಪರವಾದರೆ ಪುಲ್ಲಿಂಗದಲ್ಲಿಯೇ ಪ್ರಯೋಗಮಾಡಬೇಕಿತ್ತು. ಆದ್ದರಿಂದ ಅದ್ವೈತಿಗಳ ವ್ಯಾಖ್ಯಾನವು ಅಸಾಧುವಾಗಿದೆ.

*ರಾಮಾನುಜರ ಶ್ರುತ್ಯರ್ಥ ವಿಮರ್ಶೆ*

ರಾಮಾನುಜರ ಶ್ರುತಿ ವ್ಯಾಖ್ಯಾನ ಹೀಗಿದೆ - 'ತಸ್ಮಿನ್ಯಂದತಃ' ಎಂಬ ಶ್ರುತಿಯಲ್ಲಿ 'ಯತ್' ಎಂಬ ಪದದ ಜೊತೆಗೆ 'ಯಃ' ಎಂಬುದನ್ನೂ ಕೂಡ ಅನುವೃತ್ತಿ ಮಾಡಬೇಕು. ಆವಾಗ ಪುಲ್ಲಿಂಗದ 'ಯಃ' ಎಂಬ ಪದದಿಂದ ದಹರಾಕಾಶವನ್ನು, 'ಯತ್' ಎಂಬ ನಪುಂಸಕಲಿಂಗದ ಶಬ್ದದಿಂದ ದಹರಾಕಾಶದಲ್ಲಿರುವ ಗುಣಗಳ ಸಮೂಹವನ್ನು

ಪರಾಮರ್ಶಿಸಬೇಕು. ಅಥವಾ ಏಕಶೇಷವೃತ್ತಿಯನ್ನು ಅನುಸರಿಸಿದಾಗ, 'ಯಶ್ಚ' + 'ಯಚ್ಚ' = 'ಯತ್' ಎಂದೇ ರೂಪವಾಗುತ್ತದೆ. ಶ್ರುತಿಯಲ್ಲಿ ಒಮ್ಮೆ 'ಯತ್' ಎಂದು ಹೇಳಿದ್ದರೂ 'ಯಃ' ಎಂಬುದನ್ನೂ ಕೂಡ ವಿವಕ್ಷಿಸಲು ಬರುತ್ತದೆ. ಆದ್ದರಿಂದ 'ದಹರಾಕಾಶ ಮತ್ತು ಅದರಲ್ಲಿರುವ 'ಗುಣಸಮೂಹ' ಎರಡನ್ನೂ ಕೂಡ ಜಿಜ್ಞಾಸೆ ಮಾಡಬೇಕೆಂದು ಶ್ರುತಿಯಿಂದ ಸುಲಭವಾಗಿ ತಿಳಿಯುತ್ತದೆಂದು ವ್ಯಾಖ್ಯಾನಿಸುತ್ತಾರೆ.

ಇದು ತಪ್ಪು. ಹೃದಯಕಮಲದಲ್ಲಿ ದಹರಾಕಾಶವಿದೆ. ಅದರಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ಶ್ರುತಿಯಿಂದ ಸ್ಪಷ್ಟವಾಗಿ ತಿಳಿಯುತ್ತಿದೆ. ಇಲ್ಲಿರುವ 'ತಸ್ಮಿನ್ಯದಂತಃ' ಎಂಬುದಕ್ಕೆ ಹೃದಯಪದ್ಮದಲ್ಲಿ ಎಂಬರ್ಥವನ್ನು ಮಾಡಬಾರದು. ಏಕೆಂದರೆ ಪದ್ಮ, ಆಕಾಶಗಳನ್ನೂ ಹೇಳಿ, 'ತಸ್ಮಿನ್' ಎಂದು ಹೇಳಿರುವಾಗ 'ತತ್' ಪದಕ್ಕೆ ಹಿಂದೆ ಪ್ರಸಕ್ತವಾದ ಆಕಾಶವೆಂಬರ್ಥವೇ ಸ್ವರಸವಾಗುತ್ತದೆ.

*ಶಾಂಕರ-ರಾಮಾನುಜರ ಪ್ರಥಮ ಸೂತ್ರಾರ್ಥ ವಿಮರ್ಶೆ*

'ತಸ್ಮಿನ್ ಯದಂತಃ' ಎಂಬ ಶ್ರುತಿಯಲ್ಲಿ ಹೃದಯಪದ್ಮದಲ್ಲಿರುವ ಆಕಾಶವನ್ನೇ ಬ್ರಹ್ಮನೆಂದು ಹೇಳಿಲ್ಲ ಹೊರತಾಗಿ, ಹೃದಯಪದ್ಮದಲ್ಲಿ ಆಕಾಶವಿದೆ. ಅದರಲ್ಲಿ ಬ್ರಹ್ಮನಿದ್ದಾನೆಂದೇ ಹೇಳಲಾಗಿದೆ. ಒಂದು ವೇಳೆ ಹೃದಯಾಕಾಶವನ್ನೇ ಪರಮಾತ್ಮನೆಂದು ಹೇಳಿದರೆ, 'ಯ ಏಷೋ ಅಂತರ್ಹೃದಯ ಆಕಾಶಃ' ಇತ್ಯಾದಿ ಶ್ರುತಿಗಳೆಲ್ಲವೂ ಪರಮಾತ್ಮನು ಹೃದಯಾಕಾಶದಲ್ಲಿ ನೆಲೆಸಿದ್ದಾನೆಂದು ಸ್ಪಷ್ಟವಾಗಿ ಸಾರುತ್ತಿರುವುದರಿಂದ; ಇವುಗಳ ವಿರೋಧವೂ ಬರುತ್ತಿದೆ. ಆದ್ದರಿಂದ ಅದ್ವೈತಿಗಳು, ವಿಶಿಷ್ಟಾದ್ವೈತಿಗಳು ಪ್ರಥಮ ಸೂತ್ರದಲ್ಲಿ 'ದಹರಃ' ಎಂದು ಪ್ರಥಮಾ ವಿಭಕ್ತ್ಯಂತವಾಗಿ ಪದಚ್ಛೇದ ಮಾಡಿ ದಹರಾಕಾಶವನ್ನೇ ಬ್ರಹ್ಮನೆಂದು ವ್ಯಾಖ್ಯಾನ ಮಾಡಿದ್ದು ಅತ್ಯಂತ ಅಯುಕ್ತವಾಗಿದೆ.

*ಪರಕೀಯರ ದ್ವಿತೀಯ-ತೃತೀಯ ಸೂತ್ರವ್ಯಾಖ್ಯಾನ ವಿಮರ್ಶೆ*

ಅದ್ವೈತಿಗಳು ಎರಡನೆಯ ಸೂತ್ರದಲ್ಲಿರುವ 'ತಥಾಹಿ ದೃಷ್ಟಂ' ಎಂಬುದಕ್ಕೆ ಸುಪ್ತಜೀವರ ಗಮನವು ಬ್ರಹ್ಮವಿಷಯಕವಾಗಿದೆಯೆಂದು ಬೇರೆ ಶ್ರುತಿಯಲ್ಲಿಯೂ ಕಂಡಿದೆ ಎಂದು ವ್ಯಾಖ್ಯಾನಿಸುತ್ತಾರೆ. ರಾಮಾನುಜರು 'ಬ್ರಹ್ಮನ ಗತಿ' ಮತ್ತು 'ಬ್ರಹ್ಮಶಬ್ದ' ಎರಡೂ ಕೂಡ ಬೇರೆ ಶ್ರುತಿಯಲ್ಲಿ ಕಂಡಿದೆಯೆಂದು ವ್ಯಾಖ್ಯಾನಿಸುತ್ತಾರೆ. ಇವರಿಬ್ಬರ ವ್ಯಾಖ್ಯಾನವೂ ಕೂಡ ಸರಿಯಲ್ಲ. ಅದ್ವೈತಿಗಳ ಪ್ರಕಾರ ಸಮಾಸದಲ್ಲಿ ಅಂತರ್ಗತವಾದ ಗತಿಶಬ್ದಾರ್ಥಕ್ಕೆ 'ದೃಷ್ಟಮ್' ಎಂಬ ಪದಾರ್ಥದಲ್ಲಿ ಅನ್ವಯ ಮಾಡುವುದು ಅವ್ಯುತ್ಪನ್ನವಾಗಿದೆ. ಮತ್ತು ನಪುಂಸಕಲಿಂಗದಲ್ಲಿರುವ ದೃಷ್ಟಪದಕ್ಕೆ ಸ್ತ್ರೀಲಿಂಗದಲ್ಲಿರುವ 'ಗತಿ' ಶಬ್ದದಿಂದ ಅನ್ವಯಮಾಡುವುದಂತೂ ವ್ಯುತ್ಪತ್ತಿಯಿಲ್ಲದವರ ವ್ಯಾಖ್ಯಾನವಾಗಿದೆ. ರಾಮಾನುಜರು ಕೂಡ 'ಗತಿ ಶಬ್ದಾಭ್ಯಾಂ' ಎಂಬಲ್ಲಿ ವಿಶೇಷಣವೆಂದು ಹೇಳಬೇಕಾದರೆ, 'ದೃಷ್ಟಮ್' ಎಂಬುದನ್ನು ಪುಲ್ಲಿಂಗದಲ್ಲಿ ಮತ್ತು ದ್ವಿವಚನದಲ್ಲಿ ಪ್ರಯೋಗಿಸಬೇಕಾಗುತ್ತದೆ. ಆದ್ದರಿಂದ ಇವರಿಬ್ಬರ ವ್ಯಾಖ್ಯಾನವೂ ಕೂಡ ಅತ್ಯಂತ ಬಾಲಿಶವಾದದ್ದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮತ್ತು ಇಬ್ಬರು ವಾದಿಗಳೂ ಕೂಡ ಶ್ರುತಿಯಲ್ಲಿರುವ ಬ್ರಹ್ಮಲೋಕ ಶಬ್ದಕ್ಕೆ ಬ್ರಹ್ಮನೇ ಲೋಕಸ್ವರೂಪನಾಗಿದ್ದಾನೆಂಬ ಅರ್ಥವನ್ನು ಹೇಳುವವರಾಗಿ ಕರ್ಮಧಾರಯ ಸಮಾಸವನ್ನು ಆಶ್ರಯಿಸಿದ್ದಾರೆ. ಬ್ರಹ್ಮಲೋಕವನ್ನು ಕುರಿತು ಪ್ರತಿನಿತ್ಯ ಜೀವರು ತೆರಳಲು ಸಾಧ್ಯವಿಲ್ಲವೆಂದು ಇವರ ವಾದ. ಆದರೆ ಇದೇ ಶ್ರುತಿಯ ಮುಂದಿನ ವಾಕ್ಯದಲ್ಲಿ ಬ್ರಹ್ಮಲೋಕವು ಸುಧಾಸಮುದ್ರಗಳಿಂದ ಯುಕ್ತವಾಗಿದೆ. ಅಮೃತವನ್ನು ಸ್ರವಿಸುವ ಅಶ್ವತ್ಥಮರದಿಂದ ಕಂಗೊಳಿಸುತ್ತಿದೆ. ಜಯಶಾಲಿಯಾಗಿದೆ ಎಂದು 'ಬ್ರಹ್ಮಣಃ ಪೂಃ' ಎಂಬುದಾಗಿ ಷಷ್ಠೀ

ಸಮಾಸದಿಂದಲೇ ಬ್ರಹ್ಮನ ಲೋಕವನ್ನು ವರ್ಣಿಸಲಾಗಿದೆ. ಈ ವಾಕ್ಯಶೇಷದ ಬಲದಿಂದ, ಹಿಂದಿನ ಬ್ರಹ್ಮಲೋಕ ಶಬ್ದಕ್ಕೂ ಕೂಡ ಷಷ್ಠೀ ಸಮಾಸವನ್ನೇ ಆಶ್ರಯಿಸಬೇಕೆಂಬ ವಿಚಾರವು ಸ್ಪಷ್ಟವಾಗುತ್ತದೆ. 'ನಿಷಾದಸ್ಥಪತಿಮ್' ಎಂಬ ನ್ಯಾಯದಿಂದ ಕರ್ಮಧಾರಯ ಸಮಾಸವನ್ನು ಮಾಡಬೇಕೆಂಬುದು ಇವರ ಮತ್ತೊಂದು ವಾದ. ಆದರೆ ಪೂರ್ವಮೀಮಾಂಸಾದಲ್ಲಿ 'ನಿಷಾದಸ್ಥಪತಿಮ್' ಎಂಬುದಕ್ಕೆ ಕರ್ಮಧಾರಯ ಸಮಾಸವನ್ನು ಆಶ್ರಯಿಸಬೇಕೆನ್ನಲು ಕಾರಣವನ್ನು ನೀಡಿದ್ದಷ್ಟೇ ಅಲ್ಲದೆ, ಷಷ್ಠೀ ಸಮಾಸವನ್ನು ಆಶ್ರಯಿಸಬೇಕೆನ್ನಲು ವಾಕ್ಯಶೇಷದ ಬೆಂಬಲವಿರುವುದಿಲ್ಲ. ಆದ್ದರಿಂದ ಅಲ್ಲಿ ಕರ್ಮಧಾರಯ ಸಮಾಸವನ್ನು ಆಶ್ರಯಿಸಿದ ಮಾತ್ರಕ್ಕೆ ಪ್ರಕೃತ ಶ್ರುತಿಯಲ್ಲಿರುವ ಬ್ರಹ್ಮಲೋಕ ಶಬ್ದಕ್ಕೆ ಕರ್ಮಧಾರಯ ಸಮಾಸವನ್ನು ಆಶ್ರಯಿಸಬೇಕೆನ್ನಲು ಕಾರಣವಿಲ್ಲ. ಆದ್ದರಿಂದ 'ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಮ್' ಎಂಬಲ್ಲಿರುವ ಬ್ರಹ್ಮಲೋಕ ಶಬ್ದವು ಬ್ರಹ್ಮನಿಗೆ ಆವಾಸಸ್ಥಾನವೆನಿಸಿದ ದಹರಾಕಾಶವನ್ನೇ ಹೇಳುತ್ತಿದೆ.

'ಧೃತೇಶ್ಚ ಮಹಿಮ್ನೋಽಸ್ಮಿನ್ ಉಪಲಬ್ಧೇಃ' ಎಂಬ ಸೂತ್ರವ್ಯಾಖ್ಯಾನದಲ್ಲಿಯೂ ಕೂಡ ಶಂಕರ-ರಾಮಾನುಜರು ಇವರಿಬ್ಬರೂ ಕೂಡ ಎಡವಿದ್ದಾರೆ. 'ಧೃತೇಃ' ಮಹಿಮ್ನಃ' ಎಂಬೆರಡು ಪದಗಳಿಗೆ ಧಾರಕತ್ವವೆಂಬ ಮಹಿಮೆ ಇರುವುದರಿಂದ ಎಂದು ಒಂದೇ ಅರ್ಥವನ್ನು ಹೇಳಿರುತ್ತಾರೆ. 'ಧೃತೇಃ' ಎಂಬ ಪದದಿಂದಲೇ ಧಾರಕತ್ವದ ಮಹಿಮೆಯು ತಿಳಿಯುವಾಗ ಪುನಃ 'ಮಹಿಮ್ನಃ' ಎಂಬ ಪದವು ವ್ಯರ್ಥವಾಗುತ್ತದೆ. 'ಅಂಬರಾಂತಧೃತೇಃ' ಎಂದು ಹಿಂದೆ ಹೇಳಿದಂತೆ ಇಲ್ಲಿಯೂ ಕೂಡ 'ಧೃತೇಃ' ಎಂದಷ್ಟೇ ಹೇಳಿದರೆ ಸಾಕು. ಆದರೆ ನಮ್ಮ ಪ್ರಕಾರ ಧೃತಿ ಮತ್ತು ಬೇರೆ ಮಹಿಮೆಗಳು ಇರುವುದರಿಂದ ಎಂಬರ್ಥವಿರುವುದರಿಂದ ನಮ್ಮಲ್ಲಿ ಎರಡೂ ಪದಗಳು ಸಾರ್ಥಕವಾಗಿವೆ.

### *ನಾಲ್ಕನೆಯ ಮತ್ತು ಐದನೆಯ ಸೂತ್ರವ್ಯಾಖ್ಯಾನ ವಿಮರ್ಶೆ*

ಅದ್ವೈತಿಗಳು ಹಾಗೂ ರಾಮಾನುಜರಿಬ್ಬರೂ ನಾಲ್ಕನೆಯ ಸೂತ್ರಕ್ಕೆ ಒಂದೇ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. 'ಆಕಾಶ ಇತಿ ಹೋವಾಚ' ಎಂಬ ಶ್ರುತಿಯಲ್ಲಿರುವ 'ಆಕಾಶ' ಶಬ್ದವು ಬ್ರಹ್ಮನಲ್ಲಿ ಪ್ರಸಿದ್ಧವಾಗಿವೆ. ಈ ಕಾರಣದಿಂದ ದಹರಾಕಾಶನನ್ನು ಬ್ರಹ್ಮನೆನ್ನಬಹುದೆಂದು. ಇದು ತಪ್ಪು. ನಾವು ಹೇಳುವಂತೆ ಆಕಾಶದಲ್ಲಿರುವವನು ಬ್ರಹ್ಮನಾಗಿದ್ದಾನೆಂದು ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿದೆಯೆಂಬುದು ಸೂಕ್ತವಾದ ವಿಚಾರ. ಇದನ್ನು ಬಿಟ್ಟು ಈ ಅಧಿಕರಣದಲ್ಲಿ ಸಮನ್ವಯ ಮಾಡದ 'ಆಕಾಶ' ಶಬ್ದಕ್ಕೆ ಪ್ರಸಿದ್ಧಿಯನ್ನು ಹೇಳುವುದು ಅಯುಕ್ತವಾಗುತ್ತದೆ.

ಐದನೆಯ ಸೂತ್ರದಲ್ಲಿ 'ಅಸಂಭವಾತ್' ಎಂಬ ಪದಕ್ಕೆ ಅದ್ವೈತಿಗಳು ವಿಭಿನ್ನರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಜೀವನು ಬುದ್ಧ್ಯಾದಿ ಉಪಾಧಿಗಳಿಂದ ಪರಿಚ್ಛಿನ್ನನಾಗಿದ್ದಾನೆ. ಆದ್ದರಿಂದ 'ಯಾವಾನ್ವಾ ಅಯಮಾಕಾಶಃ' ಎಂಬ ಶ್ರುತಿಯು ಆಕಾಶವನ್ನು ಉಪಮಾನವನ್ನಾಗಿ ನೀಡಿದ್ದು ತಪ್ಪಾಗುತ್ತದೆ. ಆದ್ದರಿಂದ ಜೀವನನ್ನು ದಹರಾಕಾಶವೆಂದು ವಿವಕ್ಷಿಸಬಾರದೆಂದು ವ್ಯಾಖ್ಯಾನಿಸುತ್ತಾರೆ. ಇದು ತಪ್ಪು. 'ಜ್ಯಾಯಾನಾಕಾಶಃ' ಇತ್ಯಾದಿ ಶ್ರುತಿಯು ಆಕಾಶಕ್ಕಿಂತಲೂ ಬ್ರಹ್ಮನು ಹೆಚ್ಚು ಪರಿಮಾಣವನ್ನು ಹೊಂದಿದ್ದಾನೆಂದು ಹೇಳುತ್ತಿದೆ. ಇಂತಹ ಬ್ರಹ್ಮನಿಗೂ ಕೂಡ ಆಕಾಶವು ಉಪಮಾನವಾಗಲು ಸಾಧ್ಯವಿಲ್ಲ. ಆದ್ದರಿಂದ ಅದ್ವೈತಿಗಳ ವ್ಯಾಖ್ಯಾನವು ಅಸಾಧುವಾಗಿದೆ.

### *ಅದ್ವೈತಿಗಳ ಉಳಿದ ಸೂತ್ರಾರ್ಥ ವಿಮರ್ಶೆ*

'ಉತ್ತರಾಚ್ಚೇದ್ ಆವಿರ್ಭೂತಸ್ವರೂಪಸ್ತು' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾ, ಅದ್ವೈತಿಗಳು ಶುದ್ಧಬ್ರಹ್ಮನನ್ನು ಪ್ರತಿಪಾದ್ಯನೆಂದು ಸಮರ್ಥಿಸಿದ್ದಾರೆ. ಆವಿರ್ಭೂತನಾದ ಜೀವನನ್ನು 'ಪರಂಜ್ಯೋತಿಃ' ಇತ್ಯಾದಿ ಶ್ರುತಿಯು ಪ್ರತಿಪಾದಿಸುತ್ತಿದೆ. ಆವಿರ್ಭೂತಸ್ವರೂಪನಾದ ಜೀವನೆಂದರೆ ಶುದ್ಧಬ್ರಹ್ಮನೇ ಆಗಿದ್ದಾನೆ. ಅವನೇ ದಹರಾಕಾಶನೆಂದು ಇವರ ವಾದ. ಇದೂ ಸಹ ತಪ್ಪು. ಅದೇ ಪ್ರಕರಣದಲ್ಲಿ 'ಸ ತತ್ರ ಪರ್ಯೇತಿ ಜಕ್ಷನ್

ಕ್ರೀಡನ್ ರಮಮಾಣಃ' ಎಂಬುದಾಗಿ ಶುದ್ಧಬ್ರಹ್ಮನಲ್ಲಿ ಇಲ್ಲದ ಕ್ರೀಡಾದಿಗುಣಗಳು ಕೇಳಿಬರುತ್ತಿದೆ. ಇದರಿಂದಲೇ ಇದು ಶುದ್ಧಬ್ರಹ್ಮಪ್ರತಿಪಾದಕವಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೆ ಅದ್ವೈತಿಗಳು ಪ್ರತಿಯೊಂದು ಸೂತ್ರವ್ಯಾಖ್ಯಾನದಲ್ಲಿಯೂ ಕೂಡ ಎಡವಿದ್ದಾರೆ. ಏಳನೆಯ ಮತ್ತು ಎಂಟನೆಯ ಸೂತ್ರವ್ಯಾಖ್ಯಾನದಲ್ಲಿಯೂ ಸಹ ಅನೇಕ ದೋಷಗಳಿವೆ ಎಂಬುದನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು ಎಂದು ಚಂದ್ರಿಕಾಕಾರರು ಹೇಳಿದ್ದನ್ನು ರಾಯರು ಪ್ರಕಾಶದಲ್ಲಿ ಬಿಡಿಸಿ ತೋರಿಸಿದ್ದಾರೆ.

ಉಳಿದ ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಸಹ ಅದ್ವೈತಿಗಳು ಜೀವಬ್ರಹ್ಮಭೇದವನ್ನೇ ಒಪ್ಪಿಕೊಂಡಿದ್ದಾರೆ. ಏಕೆಂದರೆ ದಹರಾಕಾಶವನ್ನು ಜೀವನೆಂದು ಒಪ್ಪದೇ ಬ್ರಹ್ಮನೆಂದು ಸಮರ್ಥಿಸಿದ್ದಾರೆ. ಮತ್ತು 'ಗತಿಶಬ್ದಾಭ್ಯಾಮ್' ಎಂಬ ವಿಶೇಷಣದಿಂದ ಜೀವನು ಬ್ರಹ್ಮನನ್ನು ಹೊಂದುತ್ತಾನೆಂದು ಒಪ್ಪಿದ್ದಾರೆ. ಇದರಿಂದ ಜೀವನೇ ಬೇರೆ, ಬ್ರಹ್ಮನೇ ಎಂದು ಒಪ್ಪಿಕೊಂಡಂತಾಯಿತು. 'ಸತ್ಯಕಾಮಃ ಸತ್ಯಸಂಕಲ್ಪಃ' ಇತ್ಯಾದಿಯಾಗಿ ದಹರವಾಕ್ಯಶೇಷದಲ್ಲಿ ಸತ್ಯಕಾಮತ್ವಾದಿ ಗುಣಗಳು ಕೇಳಿಸುತ್ತಿರುವುದರಿಂದ ಬ್ರಹ್ಮನು ನಿರ್ಗುಣನಾಗಿದ್ದಾನೆನ್ನಲೂ ಕೂಡ ಪ್ರತಿಕೂಲವೇ ಆಗಿದೆ. ಇದರಂತೆ ಮುಂದೆಯೂ ಕೂಡ ತಿಳಿಯಬೇಕು.

# ಅನುಕೃತ್ಯಧಿಕರಣ

*'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗಸ್ವರೂಪದ ವಿಚಾರ*

ಈ ಅಧಿಕರಣದಲ್ಲಿ 'ಅನುಗ್ರಹ' ಎಂಬ ಲಿಂಗದ ಸಮನ್ವಯವನ್ನು ಮಾಡಲಾಗುತ್ತಿದೆ. 'ಅನುಗ್ರಹ' ಎಂದರೆ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂದರ್ಥ. 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂದರೆ 'ಜ್ಞಾನಾರ್ಥಂ ಜ್ಞೇಯಸ್ಯ ಪ್ರಾರ್ಥನಾ' ಎಂದರ್ಥ. ಅಂದರೆ ಜ್ಞಾನಕ್ಕಾಗಿ ಜ್ಞಾನಿಜನರು ಮಾಡುವಂತಹ ಪ್ರಾರ್ಥನೆಯೇ 'ಆನುಕೂಲ್ಯೇನ ಗೃಹ್ಯಮಾಣತ್ವ' ಎನಿಸುತ್ತದೆ.

ಇದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಮಗನನ್ನು ಹೇಗೆ ಕಾಣಲಿ? ಅವನು ಬರುತ್ತಾನೋ ? ಇಲ್ಲವೋ? ಎಂದು ಹೇಳಿದಾಗ ಮಗನ ಆಗಮನವೇ ತಂದೆಗೆ ಮುಖ್ಯಗುರಿಯಲ್ಲ. ಹೊರತು, ಅವನನ್ನು ನೋಡುವಿಕೆಯೇ ಮುಖ್ಯಗುರಿ. ಅದರಂತೆ ಪ್ರಕೃತದಲ್ಲಿ 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂಬುದಾಗಿ ಭಗವಂತನ ಆವಿರ್ಭಾವಕ್ಕೋಸ್ಕರ ಜ್ಞಾನಿಯಾದವನು ಭಗವಂತನ ಜ್ಞಾನವನ್ನು ಪ್ರಾರ್ಥಿಸುತ್ತಾನೆ. ಈ ಪ್ರಾರ್ಥನೆಗೆ ಮುಖ್ಯವಿಷಯನಾದವನು ಅವನ ಜ್ಞಾನವಲ್ಲ. ಹೊರತು ಪರಮಾತ್ಮನೇ. ಹೀಗೆ ಆನುಕೂಲ್ಯೇನ ಗೃಹ್ಯಮಾಣತ್ವವು ಪರಮಾತ್ಮನಲ್ಲಿ ಬರುತ್ತದೆಂದು ಈ ಅಧಿಕರಣದಲ್ಲಿ ಸಿದ್ಧಾಂತ ಮಾಡಲಾಗುತ್ತದೆ. ಆದರೆ ಯಾವ ರೀತಿಯಾಗಿ ಪರಮಾತ್ಮನು ಜ್ಞಾನಿಜನರಿಗೆ ಪ್ರಿಯನಾದ್ದರಿಂದ ಪ್ರಾರ್ಥನಾವಿಷಯನಾಗಿದ್ದಾನೋ ಅದರಂತೆ ತಮ್ಮ ಸುಖವೂ ಸಹ ಜ್ಞಾನಿಗಳಿಗೆ ಪ್ರಿಯವೇ ಆಗಿರುತ್ತದೆ. ಹಾಗಾಗಿ ಆನುಕೂಲ್ಯೇನ ಗೃಹ್ಯಮಾಣತ್ವವು ಜ್ಞಾನಿಜನರ ಸುಖದಲ್ಲಿಯೂ ಕೂಡ ಬರುತ್ತದೆ. ಹೀಗೆ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವು ಜ್ಞಾನಿಸುಖ ಮತ್ತು ಪರಮಾತ್ಮ ಇಬ್ಬರಲ್ಲಿಯೂ ಸಾಧಾರಣವಾದ್ದರಿಂದ ಉಭಯತ್ರಪ್ರಸಿದ್ಧವಾಯಿತು.

ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆನಂತರ್ಯ ಸಂಗತಿಯು ಇರುತ್ತದೆ. ಹಿಂದಿನ ಅಧಿಕರಣದಲ್ಲಿ 'ತಸ್ಮಿನ್ ಯದಂತಃ' ಇತ್ಯಾದಿ ವಾಕ್ಯದಲ್ಲಿರುವ 'ತತ್' ಶಬ್ದದಿಂದ ಸನ್ನಿಹಿತವಾದದ್ದನ್ನೇ ಪರಾಮರ್ಶ ಮಾಡಬೇಕೆಂದು ಸಾಧಿಸಲಾಯಿತು. ಇಲ್ಲಿಯೂ ಸಹ ಸನ್ನಿಹಿತವಾದ ಜ್ಞಾನಿಸುಖವನ್ನೇ 'ತದೇತದಿತಿ ಮನ್ಯಂತೇ' ಎಂಬಲ್ಲಿರುವ 'ತತ್ ಶಬ್ದದಿಂದ ಪರಾಮರ್ಶ ಮಾಡಬೇಕೆಂದು ಪೂರ್ವಪಕ್ಷ ಮಾಡಲಾಗುತ್ತಿದೆ. ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು ಅವಲಂಬಿಸಿ, ಪೂರ್ವಪಕ್ಷ ಮಾಡುತ್ತಿರುವುದರಿಂದ ಆಪವಾದಿಕೀ ಸಂಗತಿ ಇರುತ್ತದೆ. ಅಥವಾ ಹಿಂದಿನ ಅಧಿಕರಣದಲ್ಲಿ 'ಏಷ ಆತ್ಮಾ' ಎಂಬಲ್ಲಿರುವ 'ಏಷಃ' ಎಂಬ ಶಬ್ದವು ಪುಲ್ಲಿಂಗದಲ್ಲಿದ್ದರೂ ನಪುಂಸಕಲಿಂಗದಿಂದ ಪ್ರಸಕ್ತನಾದ ಪರಮಾತ್ಮನನ್ನು ಪರಾಮರ್ಶ ಮಾಡಬಹುದೆಂದು ಸಮರ್ಥಿಸಲಾಯಿತು. ಆದರೆ ಈ ಅಧಿಕರಣದಲ್ಲಿ 'ತದೇತತ್' ಎಂಬಲ್ಲಿರುವ ಎರಡು ನಪುಂಸಕಲಿಂಗದ ಶಬ್ದಗಳು ತಪ್ಪಾಗುತ್ತವೆ ಎಂದು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯಕ್ಕೆ ವಿಪರೀತವಾದ ಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಪ್ರತ್ಯುದಾಹರಣಸಂಗತಿಯನ್ನೂ ಕೂಡ ತಿಳಿಯಬಹುದು.

*ಸಂಶಯ ಪರಂಪರೆ*

ಪೂರ್ವಪಕ್ಷದ ಫಲ - ಈ ವಿಕಲ್ಪಗಳಲ್ಲಿ ಮೊದಲನೆಯ ಪಕ್ಷವನ್ನು ಅಂಗೀಕಾರ ಮಾಡಿದರೆ, ಅನುಕೃತಿಯು ಆನುಕೂಲ್ಯೇನ ಗೃಹ್ಯಮಾಣದಲ್ಲಿದೆಯೆಂದು ಹೇಳಿದಂತಾಗುವುದಿಲ್ಲ. ಆವಾಗ ಬ್ರಹ್ಮಪಕ್ಷದಲ್ಲಿ ಸಾಧಕಪ್ರಮಾಣವೂ ಕೂಡ ಬಾರದ ಕಾರಣ, 'ತದೇತತ್' ಎಂಬಲ್ಲಿರುವ 'ತತ್' ಶಬ್ದಾದಿಗಳಿಗೆ ಸನ್ನಿಹಿತವಾದ ಜ್ಞಾನಿಸುಖವನ್ನು ಪರಿತ್ಯಾಗ ಮಾಡಲು, ಕಾರಣವಿರುವುದಿಲ್ಲ. ಜ್ಞಾನಿಸುಖಪಕ್ಷದಲ್ಲಿ ಸಾಧಕಪ್ರಮಾಣವಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಗಳ ಸುಖವೆಂದೇ ಹೇಳಬೇಕು.

ಸಿದ್ಧಾಂತದ ಫಲ - ಒಂದು ವೇಳೆ ಎರಡನೆಯ ಪಕ್ಷವನ್ನು ಒಪ್ಪಿದರೆ, ಆವಾಗ ಅನುಕೃತಿಗೆ ಆನುಕೂಲ್ಯೇನ ಗೃಹ್ಯಮಾಣನಿಷ್ಠತ್ವವನ್ನು ಹೇಳಿದಂತಾಗುತ್ತದೆ. ಬ್ರಹ್ಮಪಕ್ಷದಲ್ಲಿ ಸಾಧಕಪ್ರಮಾಣವಿರುವುದರಿಂದ ಅದೇ ಕಾರಣದಿಂದಲೇ 'ತದೇತತ್' ಎಂಬಲ್ಲಿರುವ 'ತತ್' ಶಬ್ದಾದಿಗಳಿಗೆ ಸನ್ನಿಹಿತವಾದ ಜ್ಞಾನಿಸುಖಪರತ್ವವನ್ನು ಹೇಳಲಾಗದು. ಜ್ಞಾನಿಸುಖ ಪಕ್ಷದಲ್ಲಿ ಸಾಧಕಪ್ರಮಾಣಗಳೂ ಕೂಡ ಇಲ್ಲದ ಕಾರಣ ಆನುಕೂಲ್ಯೇನ ಗೃಹ್ಯಮಾಣನಾದವನು ಬ್ರಹ್ಮನೆಂದೇ ಸಿದ್ಧವಾಗುತ್ತದೆ.ಪೂರ್ವಪಕ್ಷ - ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೇ

ಕಾಠಕೋಪನಿಷತ್ತಿನಲ್ಲಿ ಹೇಳಲ್ಪಟ್ಟ ಆನುಕೂಲ್ಯೇನ ಗೃಹ್ಯಮಾಣವು ಜ್ಞಾನಿಸುಖವೇ ಆಗಿದೆ ಹೊರತು, ಬ್ರಹ್ಮನಲ್ಲ. ಏಕೆಂದರೆ 'ಕಥಂ ನು ತದ್ವಿಜಾನೀಯಾಮ್' ಎಂಬಲ್ಲಿರುವ 'ತತ್' ಶಬ್ದದಿಂದ ಹಿಂದೆ ಪ್ರಕೃತವಾದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕು.

ಇದು ಬ್ರಹ್ಮಪ್ರಕರಣವಾಗಿರುವುದರಿಂದ ಮತ್ತು ಬ್ರಹ್ಮನ ಲಿಂಗವು ಕೇಳಿಸುತ್ತಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣನಾದವನು ಬ್ರಹ್ಮನೇ ಏಕೆ ಆಗಬಾರದು ಎಂದು ಪ್ರಶ್ನಿಸಬಾರದು. ಏಕೆಂದರೆ ಪ್ರಕರಣ ಹಾಗೂ ಲಿಂಗಗಳಿಗಿಂತಲೂ 'ತತ್' 'ಏತತ್' ಎಂಬೆರಡು ಶ್ರುತಿಗಳು ಬಲಿಷ್ಠವಾಗಿವೆ. ಆದ್ದರಿಂದ 'ತಮಾತ್ಮಸ್ಥಂ ಯೇಽನುಪಶ್ಯಂತಿಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್' ಎಂಬಲ್ಲಿ ಪರಮಾತ್ಮನನ್ನು ಕಂಡ ಜ್ಞಾನಿಗಳಿಗೆ

ಪರಮಸುಖವಾಗುತ್ತದೆಂದು ಹೇಳಲಾಗಿದೆ. ಆ ಸುಖವನ್ನು 'ತದೇತದಿತಿ ಮನ್ಯಂತೇ' ಎಂಬ ಮುಂದಿನ ವಾಕ್ಯದಲ್ಲಿ 'ತದೇತತ್' ಎಂದು ಪರಾಮರ್ಶ ಮಾಡಿ, ಅನಿರ್ದೇಶ್ಯತ್ವವನ್ನು ಹೇಳಿದ್ದರಿಂದ ಜ್ಞಾನಿಸುಖವೇ ಆನುಕೂಲ್ಯೇನ ಗೃಹ್ಯಮಾಣವಾಗಿದೆಯೆಂದು ತಿಳಿಯುತ್ತದೆ.

*'ತದೇತತ್' ಶ್ರುತಿಯು ಹತ್ತಿರದ ಜ್ಞಾನಿಸುಖ ಪರ*

ಹಿಂದಿನ ದಹರಾಧಿಕರಣದಲ್ಲಿ ವಿಧೇಯವಾದ ಆತ್ಮಶಬ್ದದ ಬಲದಿಂದ 'ಏತತ್' ಶಬ್ದವು ಪುಲ್ಲಿಂಗದಲ್ಲಿ ಪ್ರಯುಕ್ತವಾಗಿರುವುದು ಸಾಧುವೇ ಆಗಿದೆಯೆಂದು ಸಮರ್ಥಿಸಲಾಯಿತು. ಅದರಂತೆ ಪ್ರಕೃತ 'ತದೇತತ್' ಎಂಬಲ್ಲಿರುವ ಎರಡು ನಪುಂಸಕಲಿಂಗದ ಶಬ್ದಗಳಲ್ಲಿ ಒಂದು ಮಾತ್ರ ಉದ್ದೇಶ್ಯವಾಚಕ ಪದಕ್ಕೆ ಸಮಾನಾಧಿಕರಣವಾಗಬಹುದು. ಹೊರತು, ಎರಡೂ ಅಲ್ಲ ಆದ್ದರಿಂದ ಎರಡಕ್ಕೂ ನಪುಂಸಕಲಿಂಗತ್ವವನ್ನು ಸಮರ್ಥಿಸಲು ಬರುವುದಿಲ್ಲ. ಆದ್ದರಿಂದ ಪುಲ್ಲಿಂಗದಿಂದ ಪ್ರಸಕ್ತನಾದ ಪರಮಾತ್ಮನನ್ನು ಪರಾಮರ್ಶ ಮಾಡದೇ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕು.

'ಅನಿರ್ದೇಶ್ಯಂ ಪರಮಂ ಸುಖಮ್' ಎಂಬ ವಾಕ್ಯದಲ್ಲಿ 'ರೂಪ' ಶಬ್ದವನ್ನು ಅಧ್ಯಾಹಾರ ಮಾಡಿ ಅಂತಹ ನಪುಂಸಕಲಿಂಗದ 'ರೂಪ' ಶಬ್ದದಿಂದ ಪರಮಾತ್ಮನು ಪ್ರಸಕ್ತನಾಗಿದ್ದಾನೆಂದು ಉತ್ತರಿಸಬೇಕು. ಆದರೆ ಯಾವುದೇ ಶಬ್ದಗಳನ್ನು ಅಧ್ಯಾಹಾರ ಮಾಡದೇ ನೇರವಾಗಿ ಜ್ಞಾನಿಸುಖಪರಾಮರ್ಶಕವೆಂದು ಸುಲಭವಾಗಿ ಹೇಳಲು ಬರುವಾಗ, ಕ್ಲಿಷ್ಟಕಲ್ಪನೆಯನ್ನು ಮಾಡಬಾರದು. ಮತ್ತು 'ತಮೇವ ಭಾಂತಮ್ ಅನುಭಾತಿ ಸರ್ವಮ್' ಎಂಬ ಶ್ರುತಿಯಲ್ಲಿರುವ 'ತಂ' ಎಂಬ ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯ- ನಾಗಿದ್ದಾನೆ. ಹಾಗೂ ಸೂರ್ಯಾದಿ ಪ್ರಕಾಶಕತ್ವ ಮೊದಲಾದ ಲಿಂಗಗಳು ಪರಮಾತ್ಮಪರವಾಗಿದ್ದರೂ 'ತದೇತತ್' ಎಂಬ ಶ್ರುತಿಯು ಜ್ಞಾನಿಸುಖವನ್ನೇ ಪರಾಮರ್ಶ ಮಾಡುತ್ತದೆ. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೇ ಆಗುತ್ತದೆಂದು ಪೂರ್ವಪಕ್ಷವು ದೃಢವಾಯಿತು.

*ಆನುಕೂಲ್ಯೇನ ಗೃಹ್ಯಮಾಣನಾದವನು ಪರಮಾತ್ಮನೇ ಆಗಿದ್ದಾನೆಂದು ಸಿದ್ಧಾಂತ*

ಕಠೋಪನಿಷತ್ತಿನ ಕೊನೆಯಲ್ಲಿ 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಮ್' ಇತ್ಯಾದಿ ವಾಕ್ಯಗಳಿಂದ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಹೇತುವು, ಹಾಗೂ 'ತಮೇವ ಭಾಂತಮ್ ಅನುಭಾತಿ ಸರ್ವಮ್' ಇತ್ಯಾದಿ ವಾಕ್ಯದಿಂದ 'ಸೂರ್ಯಾದಿಪ್ರಕಾಶಹೇತುತ್ವ' ಎಂಬ ಹೇತುವು, ಮತ್ತು 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಇತ್ಯಾದಿ ವಾಕ್ಯದಿಂದ 'ಸರ್ವಜಗತ್‌ಪ್ರಕಾಶಕತ್ವ' ಹೇತುವು ಹೇಳಲ್ಪಟ್ಟಿದೆ. ಈ ಎಲ್ಲಾ ಹೇತುಗಳು ಪರಮಾತ್ಮನ ಅಸಾಧಾರಣ ಧರ್ಮವಾಗಿವೆ ಎಂಬುದು ಶ್ರುತಿ-ಸ್ಮೃತಿಗಳಿಂದ ಸಿದ್ಧವಾದ ವಿಚಾರ. ಆದ್ದರಿಂದ 'ಕಥಂ ನು ತದ್ವಿಜಾನೀಯಾಮ್' ಇತ್ಯಾದಿ ಹತ್ತಿರದಲ್ಲಿರುವ ವಾಕ್ಯದಿಂದ ಪ್ರಕೃತವಾದ ಆನುಕೂಲ್ಯೇನ ಗೃಹ್ಯಮಾಣನಾದವನು ಪರಮಾತ್ಮನೇ ಆಗುತ್ತಾನೆ.

ವಾಸ್ತವಿಕವಾಗಿ ಈಶ್ವರ ಪ್ರತಿಪಾದಕವಾದ 'ನಿತ್ಯೋ ನಿತ್ಯಾನಾಮ್' ಇತ್ಯಾದಿ ವಾಕ್ಯವು 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯಕ್ಕಿಂತಲೂ ದೂರದಲ್ಲಿದೆ. 'ಕಥಂ ನು ತದ್ವಿಜಾನೀಯಾಮ್' ಇತ್ಯಾದಿ ವಾಕ್ಯವು ಹತ್ತಿರದಲ್ಲಿದೆ. ಆದರೂ 'ತಮೇವ ಭಾಂತಮ್' ಎಂಬ ಶ್ರುತಿಯಲ್ಲಿ 'ತಮ್' ಎಂಬ ಶಬ್ದವು ಪುಲ್ಲಿಂಗವಾದ್ದರಿಂದ ಈಶ್ವರ ಪರವೇ ಆಗಿದೆ. ಇದರ ಜೊತೆಗೆ ಸಮಾನಾರ್ಥವನ್ನು ಹೇಳಬೇಕಾದ್ದರಿಂದ, 'ನ ತತ್ರ ಸೂರ್ಯಃ' 'ತಸ್ಯ ಭಾಸಾ' ಇತ್ಯಾದಿ ವಾಕ್ಯಗಳೂ ಕೂಡ ಈಶ್ವರ ಪರವೇ ಆಗಿರುತ್ತವೆ. ಆದ್ದರಿಂದ ಸೂರ್ಯಾದಿ ಪ್ರಕಾಶ ಹೇತುತ್ವಾದಿಗಳನ್ನು ಆನುಕೂಲ್ಯೇನ ಗೃಹ್ಯಮಾಣನಲ್ಲಿ ಹೇಳಲು ಸಾಧ್ಯವಿಲ್ಲ. ಅಂದರೆ ಈಶ್ವರನನ್ನು ಸೂರ್ಯಾದಿ ಪ್ರಕಾಶಗಳಿಗೆ ಕಾರಣನಾಗಿದ್ದಾನೆಂದು ಒಪ್ಪೋಣ. ಹೊರತು, ಆನುಕೂಲ್ಯೇನ ಗೃಹ್ಯಮಾಣನಾಗಿದ್ದಾನೆಂದು ಒಪ್ಪಬೇಕಾಗಿಲ್ಲವಲ್ಲವೇ?

*ಪರಿಪೂರ್ಣಚಂದ್ರಿಕಾ*

ಹೀಗೆ ಪ್ರಶ್ನಿಸಬಾರದು. ಏಕೆಂದರೆ, 'ಕಿಮು ಭಾತಿ ನ ಭಾತಿ ವಾ' ಎಂಬ ವಾಕ್ಯದಲ್ಲಿ ಯಾರಿಂದಲೂ ತಿಳಿಯಲು ಸಾಧ್ಯವಿಲ್ಲದವನೆಂದು ಹೇಳಲಾಗಿದೆ. ಅಂತಹ ವ್ಯಕ್ತಿಯೇ, 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದಿಂದ ಪ್ರತ್ಯಭಿಜ್ಞಾಯಮಾನನಾಗಿದ್ದಾನೆ. ಆದ್ದರಿಂದ ಗೌಣವಾದ ಪುಲ್ಲಿಂಗವೆಂಬ ಪ್ರತ್ಯಯಾರ್ಥವನ್ನು ಅನುಸರಿಸುವುದಕ್ಕಾಗಿ ಪ್ರಧಾನವಾದ 'ತತ್ರ' 'ತಮ್', ತಸ್ಯ' ಇವೇ ಮೊದಲಾದ ಅನೇಕ ಪ್ರಾತಿಪದಿಕಗಳ ಅರ್ಥಕ್ಕೆ ಅಸ್ವಾರಸ್ಯವನ್ನು ಹೇಳುವುದು ಸರ್ವಥಾ ಅನ್ಯಾಯವಾಗುತ್ತದೆ.

ವಿಚಾರ ಮಾಡಿದರೆ 'ತತ್', 'ಏತತ್' ಎಂಬ ಶ್ರುತಿವಾಕ್ಯದಲ್ಲಿ ನಪುಂಸಕಲಿಂಗದ ಪ್ರಯೋಗ ಬಿಟ್ಟರೆ, ಹಿಂದಿನ-ಮುಂದಿನ ವಾಕ್ಯಗಳೆಲ್ಲೆಲ್ಲಾ ಇಂತಹ ಪುಲ್ಲಿಂಗ ಪ್ರಯೋಗವೇ ಕಾಣಿಸುತ್ತಿದೆ. ಇಂತಹ ಪುಲ್ಲಿಂಗ ಶಬ್ದಗಳಿಗಳಿಂದೆಲ್ಲಾ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ 'ತದೇತತ್' ಎಂಬಲ್ಲಿ ಮಾತ್ರ 'ರೂಪಮ್' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿ ಸಮಸ್ಯೆಯನ್ನು ಪರಿಹರಿಸಲು ಬರುವಾಗ, ಈಶ್ವರಪರತ್ವವನ್ನು ಬಿಡುವುದರಲ್ಲಿ ಅರ್ಥವಿಲ್ಲ. ಆದ್ದರಿಂದ ಕಠೋಪನಿಷತ್ತಿನಲ್ಲಿ ಆನುಕೂಲ್ಯೇನ ಗೃಹ್ಯಮಾಣನಾದವನೆಂದು ಪ್ರತಿಪಾದ್ಯನಾದವನು ಪರಮಾತ್ಮನೇ ಆಗಿದ್ದಾನೆಂದು ತಿಳಿಯಬೇಕು.

### *'ತದೇತತ್' ಶಬ್ದಗಳು ಈಶ್ವರ ಪರಾಮರ್ಶಕಗಳು*

'ಕಥಂ ನು ತದ್ವಿಜಾನೀಯಾತ್' ಎಂಬಲ್ಲಿರುವ 'ತತ್' ಶಬ್ದಕ್ಕೆ ಸನ್ನಿಹಿತ ಪರತ್ವವನ್ನು ಹೇಳುವುದಕ್ಕಾಗಿ ಜ್ಞಾನಿಸುಖವೇ ಆನುಕೂಲ್ಯೇನ ಗೃಹ್ಯಮಾಣವೆಂದು ಪೂರ್ವಪಕ್ಷಿಯು ಆಗ್ರಹಿಸುತ್ತಾನೆ. ಅದಕ್ಕಾಗಿ 'ತಮೇವ ಭಾಂತಮ್' ಎಂಬಲ್ಲಿರುವ 'ತಮ್' ಎಂಬ ಶಬ್ದವು ವ್ಯವಹಿತವಾದ ಈಶ್ವರಪರವಾಗಿದೆಯೆಂದೂ ಕೂಡ ಅವನು ಒಪ್ಪುತ್ತಾನೆ. ನಾವು 'ತಮೇವ ಭಾಂತಮ್' ಇತ್ಯಾದಿ ವಾಕ್ಯದಲ್ಲಿ ಸನ್ನಿಹಿತವಾದದ್ದು ಆನುಕೂಲ್ಯೇನ ಗೃಹ್ಯಮಾಣವಾಗಿರುವುದರಿಂದ 'ಕಥಂ ನು ತದ್ವಿಜಾನೀಯಾಂ' ಎಂಬಲ್ಲಿರುವ 'ತತ್' ಶಬ್ದಕ್ಕೆ ವ್ಯವಹಿತ ಈಶ್ವರಪರತ್ವವನ್ನು ಒಪ್ಪುತ್ತೇವೆ. ಈ ಎರಡು ಪಕ್ಷಗಳಲ್ಲಿ ಯಾವುದನ್ನು ಸ್ವೀಕರಿಸಬೇಕು ಎಂದರೆ, 'ತತ್ರ' 'ತಸ್ಯ' 'ತಮ್' ಎಂಬ ಮೂರು ಸ್ಥಳಗಳ ಮಧ್ಯದಲ್ಲಿ 'ತಮ್' ಎಂಬಲ್ಲಿ ಮಾತ್ರ ಪುಲ್ಲಿಂಗ ಇರುವುದನ್ನು ನೋಡಿ, ಅದು ಆನುಕೂಲ್ಯೇನ ಗೃಹ್ಯಮಾಣಪರವಲ್ಲವೆಂದು ಅದಕ್ಕೆ ವ್ಯವಹಿತವಾದ ಈಶ್ವರಪರತ್ವವನ್ನು ಪೂರ್ವಪಕ್ಷಿಯು ಒಪ್ಪುತ್ತಾನೆ. ಆದರೆ ನಾವು 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ಸ್ಥಳಗಳಲ್ಲಿರುವ 'ತತ್ರ' 'ತಸ್ಯ' 'ತಮ್' ಇತ್ಯಾದಿ ಪದಗಳಿಗೆ, ಸನ್ನಿಹಿತವಾದ ಆನುಕೂಲ್ಯೇನ ಗೃಹ್ಯಮಾಣಪರತ್ವವನ್ನೇ ಒಪ್ಪುತ್ತೇವೆ. ಆದರೆ 'ತದೇತದಿತಿ ಮನ್ಯಂತೇ' ಎಂಬಲ್ಲಿರುವ 'ತದೇತತ್' ಶಬ್ದಗಳಿಗೆ ವ್ಯವಹಿತವಾದ ಈಶ್ವರ ಪರತ್ವವನ್ನೇ ಸಾಧಿಸುತ್ತೇವೆ. ಈಶ್ವರ ಪರವಾದಾಗ ನಪುಂಸಕಪದ ಪ್ರಯೋಗವು ಹೇಗೆ ಉಪಪನ್ನವಾಗುತ್ತದೆ ? ಎಂಬುದು ಮುಂದಿನ ಪ್ರಶ್ನೆ. ಇದಕ್ಕೆ ಹೀಗೆ ಉತ್ತರಿಸಬೇಕು. 'ಯದ್ಬ್ರಹ್ಮ ಅನಿರ್ದೇಶ್ಯಮ್' 'ಯತ್ ಬ್ರಹ್ಮಣಃ ಅನಿರ್ದೇಶ್ಯಂ ಸುಖಂ ಸ್ವರೂಪಂ ತದ್ ಬ್ರಹ್ಮಣಃ ಸ್ವರೂಪಮ್' ಎಂದು ಯೋಜನೆಯನ್ನು ಮಾಡಬೇಕು. ಹೀಗೆ ಯೋಜನಾಭೇದದಿಂದ ನಪುಂಸಕಲಿಂಗದ ಪ್ರಯೋಗದ ವಿರೋಧವನ್ನು ಪರಿಹರಿಸಬಹುದು. ಆದ್ದರಿಂದ 'ತದೇತತ್' ಶಬ್ದಗಳು ಈಶ್ವರಪರವಾದರೆ ಏನೂ ಬಾಧಕವಿರುವುದಿಲ್ಲ.

### *ಈಶ್ವರನಲ್ಲಿ ವ್ಯವಹಿತತ್ವ ದೋಷ ಪರಿಹಾರ*

ಈಶ್ವರನು ವ್ಯವಹಿತನಾಗಿದ್ದಾನೆಂದು ಪೂರ್ವಪಕ್ಷಿಗಳು ಹೇಳಿದ್ದು ತಪ್ಪು. ಎರಡು ಬಗೆಯಲ್ಲಿ ಈಶ್ವರನ ಪರಾಮರ್ಶವೇ 'ತದೇತತ್' ಶಬ್ದಗಳಿಂದ ಮಾಡಬೇಕೆಂಬುದು ಸಿದ್ಧವಾಗುತ್ತದೆ. 'ತದೇತದಿತಿಮನ್ಯಂತೇ' ಎಂಬ ಶ್ರುತಿಯ ಹಿಂದಿನ ವಾಕ್ಯದಲ್ಲಿ ಜ್ಞಾನಿಸುಖವು ಪ್ರಕೃತವಾಗಿದೆಯೆಂದು ಪೂರ್ವಪಕ್ಷಿಗಳು ಹೇಗೆ ಹೇಳುತ್ತಾರೆ? ಏಕೆಂದರೆ

'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್' ಎಂಬಲ್ಲಿ ಶಾಂತಿಶಬ್ದದಿಂದ ಜ್ಞಾನಿಸುಖವು ಪ್ರಕೃತವಾಗಿದೆಯೆಂದು ಹೇಳುವುದಾದರೆ, 'ತದೇತತ್' ಶಬ್ದಗಳಿಂದ ಇಂತಹ ಸುಖವನ್ನು ಪರಾಮರ್ಶ ಮಾಡಲು ಸಾಧ್ಯವಿಲ್ಲ. ಏಕೆಂದರೆ ಶಾಂತಿಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ನಪುಂಸಕಲಿಂಗದ 'ತದೇತತ್' ಶಬ್ದಗಳಿಂದ ಪರಾಮರ್ಶ ಮಾಡಲು ಪೂರ್ವಪಕ್ಷಿಗಳಿಗೆ ಸಾಧ್ಯವಿಲ್ಲ. ಆದ್ದರಿಂದ ಅದಕ್ಕಿಂತಲೂ ಹಿಂದಿರುವ 'ತೇಷಾಂ ಸುಖಮ್' ಎಂಬ ವಾಕ್ಯದಲ್ಲಿ ಸುಖಶಬ್ದದಿಂದ ಪ್ರಕೃತವಾದದ್ದನ್ನು ಪರಾಮರ್ಶ ಮಾಡಬೇಕು. ಸುಖಶಬ್ದವು ನಪುಂಸಕಲಿಂಗದಲ್ಲಿರುವುದರಿಂದ 'ತದೇತತ್' ಶಬ್ದಗಳಿಂದ ಇದನ್ನು ಪರಾಮರ್ಶ ಮಾಡುವುದು ಸುಲಭವಾಗುತ್ತದೆ. ಆದರೆ 'ತೇಷಾಂ ಸುಖಮ್' ಎಂಬ ವಾಕ್ಯದ ಅನಂತರ 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾಮ್' ಎಂಬ ವಾಕ್ಯವು ಪ್ರಸಕ್ತವಾಗಿದೆ. ಈ ವಾಕ್ಯದಿಂದ ಈಶ್ವರನೇ ಪ್ರತಿಪಾದ್ಯನೆಂಬುದು ಪೂರ್ವಪಕ್ಷಿಗಳಿಗೂ ಸಮ್ಮತ. ಆದ್ದರಿಂದ 'ತದೇತತ್' ಶ್ರುತಿಗೆ ಅತ್ಯಂತ ಹತ್ತಿರದಲ್ಲೇ ಇರುವ ಈಶ್ವರನನ್ನು ಪರಾಮರ್ಶ ಮಾಡಲು ಸಾಧ್ಯವಿರುವಾಗ 'ತೇಷಾಂ ಸುಖಮ್' ಎಂಬ ದೂರದ ವಾಕ್ಯದಲ್ಲಿರುವ ಜ್ಞಾನಿಸುಖವನ್ನು ಪರಾಮರ್ಶ ಮಾಡುವುದು ತಪ್ಪಾಗುತ್ತದೆ.

ಈಶ್ವರನು 'ಏಕೋ ವಶೀ ಸರ್ವಭೂತಾಂತರಾತ್ಮಾ' ಎಂಬ ವಾಕ್ಯದಿಂದ ಪ್ರಕೃತನಾಗಿದ್ದಾನೆ. ಈ ವಾಕ್ಯವು 'ತೇಷಾಂ ಸುಖಮ್' ಎಂಬ ವಾಕ್ಯಕ್ಕಿಂತಲೂ ದೂರದಲ್ಲಿದೆ. ಆದ್ದರಿಂದ ಜ್ಞಾನಿಸುಖದ ಪರಾಮರ್ಶವೇ ಹತ್ತಿರವಾಗುತ್ತದೆಂದು ಪೂರ್ವಪಕ್ಷಿಗಳು ಇದರ ಮೇಲೆ ವಾದ ಮಾಡಬಹುದು. ಆದರೆ ಹಾಗೇ ಒಪ್ಪಿದರೂ ಕೂಡ ಈಶ್ವರನ ಪರಾಮರ್ಶವೇ ಯುಕ್ತವಾಗುತ್ತದೆ. ವ್ಯವಹಿತವಾಗಿದ್ದರೂ ಯೋಗ್ಯತಾವಿದ್ದಲ್ಲಿ ಅದರ ಪರಾಮರ್ಶವು ನ್ಯಾಯಸಮ್ಮತ. ಆದ್ದರಿಂದ ಸನ್ನಿಹಿತವಾಗಿದೆಯೆಂಬ ಕಾರಣದಿಂದ ಯೋಗ್ಯತಾವಿಲ್ಲದಿದ್ದರೂ ಜ್ಞಾನಿಸುಖವನ್ನು ಪರಾಮರ್ಶ ಮಾಡುವುದು ತಪ್ಪಾಗುತ್ತದೆ. ದೂರದಲ್ಲಿದ್ದರೂ ಯೋಗ್ಯತಾದಿಗಳಿರುವ ಕಾರಣ ಈಶ್ವರನನ್ನು ಪರಾಮರ್ಶ ಮಾಡುವುದು ಸಮಂಜಸವಾಗುತ್ತದೆ.

ಅಥವಾ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯಕ್ಕಿಂತಲೂ 'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್' ಎಂಬ ವಾಕ್ಯವು ಹತ್ತಿರದಲ್ಲಿದೆ. ಇದರಿಂದ ಜ್ಞಾನಿಸುಖವನ್ನು ನಾವು ಪರಾಮರ್ಶ ಮಾಡುತ್ತೇವೆ. ಶಾಂತಿಶಬ್ದವು ಸ್ತ್ರೀಲಿಂಗದಲ್ಲಿದ್ದರೂ ಕೂಡ ಶಾಂತಿಶಬ್ದದ ಅರ್ಥ ಸುಖವಾದ್ದರಿಂದ, ಅದನ್ನು ವಿವಕ್ಷಿಸಿ ನಪುಂಸಕಲಿಂಗದ ಪ್ರಯೋಗವು ತಪ್ಪಾಗುವುದಿಲ್ಲವೆಂದು ಪೂರ್ವಪಕ್ಷಿಗಳ ಈ ಆಕ್ಷೇಪವು ತಪ್ಪು. ಏಕೆಂದರೆ ಜ್ಞಾನಿಸುಖವು ಹೀಗೆ ಅತ್ಯಂತ ಸನ್ನಿಹಿತವಾಗಿರಬಹುದು. ಆದರೆ ಅನಿರ್ದೇಶ್ಯತ್ವ, ಸೂರ್ಯಪ್ರಕಾಶಹೇತುತ್ವ, ಮೊದಲಾದ ಧರ್ಮಗಳಿಲ್ಲದ ಕಾರಣ ಯೋಗ್ಯತೆಯೇ ಇರುವುದಿಲ್ಲ. ಇಂತಹ ಧರ್ಮಗಳನ್ನು ಹೊಂದಿರುವ ಕಾರಣ ಯೋಗ್ಯತೆಯಿರುವಂತಹ ಈಶ್ವರನನ್ನು ವ್ಯವಹಿತನಾಗಿದ್ದರೂ ಪರಾಮರ್ಶ ಮಾಡುವುದು ನ್ಯಾಯಸಮ್ಮತವಾಗುತ್ತದೆ. ಆದ್ದರಿಂದ 'ತದೇತತ್' ಶಬ್ದಗಳಿಂದ ಈಶ್ವರನ ಪರಾಮರ್ಶ ಮಾಡುವುದೇ ಯುಕ್ತಿಯುಕ್ತವೆಂದು ಸಿದ್ಧವಾಯಿತು.

*ಸೂತ್ರಾರ್ಥಸ್ವಾರಸ್ಯ ವರ್ಣನೆ*

ಈ ಅಧಿಕರಣದಲ್ಲಿ 'ಅನುಕೃತೇಸ್ತಸ್ಯ ಚ' ಎಂದು 'ಅಪಿ ಸ್ಮರ್ಯತೇ' ಎಂದು ಎರಡು ಸೂತ್ರಗಳಿವೆ. ಪ್ರಥಮಸೂತ್ರದಲ್ಲಿರುವ 'ತಸ್ಯ' ಎಂಬ ಪದದಿಂದ ಸಮನ್ವಯ ಮಾಡುವಂತಹ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವು ತಿಳಿಯುತ್ತಿದೆ. ಯಾವ 'ತಸ್ಯ' ಎಂಬ ಪದವು ಸಮನ್ವಯ ಮಾಡುವಂತಹ ಲಿಂಗವನ್ನು ತಿಳಿಸುತ್ತಿದೆಯೋ, ಅದೇ ಪದವು 'ತಸ್ಯಭಾಸಾ' ಎಂಬ ಶ್ರುತಿಯ ಪ್ರತೀಕಗ್ರಹಣವೂ ಆಗಿದೆಯೆಂಬುದೇ ಇಲ್ಲಿ ಗಮನಿಸಬೇಕಾದ ಸ್ವಾರಸ್ಯ. ಸೂತ್ರದಲ್ಲಿರುವ 'ಅನುಕೃತೇಃ' ಎಂಬ ಪದದಿಂದ ಸೂರ್ಯಾದಿಪ್ರಕಾಶ ಹೇತುತ್ವವೆಂಬ ಹೇತು ತಿಳಿಯುತ್ತದೆ. 'ತಸ್ಯ' ಎಂಬ ಪ್ರತೀಕ ಗ್ರಹಣದಿಂದ ಸಕಲಜಗತ್‌ಪ್ರಕಾಶಕತ್ವವೆಂಬ ಹೇತು, ಹಾಗೂ 'ಚ' ಶಬ್ದದಿಂದ ಸೂರ್ಯಾದ್ಯಪ್ರಕಾಶ್ಯತ್ವ

ಎಂಬ ಹೇತು ತಿಳಿಯುತ್ತದೆ. ಹೀಗೆ ಸೂತ್ರದಲ್ಲಿರುವ ಮೂರು ಪದಗಳಿಂದ ಮೂರು ಹೇತುಗಳನ್ನು ಸೂತ್ರಕಾರರು ಹೇಳಿರುತ್ತಾರೆ.

ಸೂತ್ರದಲ್ಲಿರುವ 'ಚ' ಶಬ್ದವೂ ಕೂಡ ಎರಡು ಪ್ರಕಾರಗಳಲ್ಲಿ ಸಮುಚ್ಚಯವನ್ನು ಹೇಳುತ್ತಿದೆ. 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ ಎರಡು ಅರ್ಥಗಳಿವೆ. ಮೊದಲನೆಯ ಅರ್ಥದಲ್ಲಿ ಸೂರ್ಯಾದ್ಯಪ್ರಕಾಶತ್ವ ಹೇತುವನ್ನು ಶ್ರುತಿ-ಸ್ಮೃತಿಸಿದ್ಧವಾಗಿದೆಯೆಂದು ಹೇಳುವುದಿಲ್ಲ. ಅದನ್ನು ಈ ಸೂತ್ರದಲ್ಲಿರುವ 'ಚ' ಶಬ್ದವು ಸಮುಚ್ಚಯ ಮಾಡುತ್ತಿದೆ. ಎರಡನೆಯ ವ್ಯಾಖ್ಯಾನದಲ್ಲಿ ಸರ್ವಜಗತ್ಪ್ರಕಾಶಕತ್ವವೆಂಬ ಹೇತುವನ್ನು ಸಮುಚ್ಚಯ ಮಾಡಲು 'ಚ' ಶಬ್ದವು ನಿವಿಷ್ಟವಾಗಿದೆಯೆಂದು ಹೇಳಿದಂತಾಗುತ್ತದೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು - 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ ಅನುಕೃತಿಯೆಂಬ ಶಬ್ದದಿಂದ ಒಂದು ಲಿಂಗವನ್ನು 'ತಸ್ಯ' ಎಂಬ ವಾಕ್ಯಪ್ರತೀಕದಿಂದ ಮತ್ತೊಂದು ಲಿಂಗವನ್ನು 'ಚ' ಶಬ್ದದಿಂದ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಮೂರನೆಯ ಲಿಂಗವನ್ನು ಹೇಳಿದಂತಾಯಿತು. ಅನಂತರ 'ಅಪಿ ಸ್ಮರ್ಯತೇ' ಎಂಬ ಎರಡನೆಯ ಸೂತ್ರದಲ್ಲಿ ಮೂರೂ ಲಿಂಗಗಳಿಗೂ ಶ್ರುತಿಸಮಾಖ್ಯಾವನ್ನು ಹೇಳುತ್ತಿಲ್ಲ. ಹೊರತಾಗಿ, 'ಸರ್ವಜಗತ್ಪ್ರಕಾಶಕತ್ವ' ಮತ್ತು 'ಸೂರ್ಯಾದಿಪ್ರಕಾಶಹೇತುತ್ವ' ಎಂಬೆರಡು ಹೇತುಗಳಿಗೆ ಮಾತ್ರ ಶ್ರುತಿಸಮಾಖ್ಯಾಪ್ರಮಾಣವನ್ನು ಹೇಳಲಾಗಿದೆ. 'ಚ'ಶಬ್ದದಿಂದ ಸೂಚಿತವಾದ ಸೂರ್ಯಾದ್ಯಪ್ರಕಾಶ್ಯತ್ವ ಎಂಬ ಹೇತುವಿಗೆ ಶ್ರುತಿಸಮಾಖ್ಯಾಪ್ರಮಾಣವನ್ನು ಹೇಳುತ್ತಿಲ್ಲ. ಇದು ಮೊದಲನೆಯ ವ್ಯಾಖ್ಯಾನ. 'ಅಪಿ ಸ್ಮರ್ಯತೇ' ಎಂಬ ಸೂತ್ರದ ಎರಡನೆಯ ವ್ಯಾಖ್ಯಾನದಲ್ಲಿ ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಮೂರೂ ಲಿಂಗಗಳಿಗೂ ಕೂಡ ಸ್ಮೃತಿಸಮಾಖ್ಯಾಪ್ರಮಾಣವನ್ನು ಹೇಳುತ್ತಿದ್ದಾರೆಂದು ಸಮರ್ಥಿಸಿದ್ದಾರೆ. 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ ಮೊದಲನೆಯ ವ್ಯಾಖ್ಯಾನವನ್ನು ವಿವಕ್ಷಿಸಿದಾಗ 'ಸೂರ್ಯಾದ್ಯಪ್ರಕಾಶಕತ್ವ' ಎಂಬ ಹೇತು ಅನುಕ್ತವಾಗುತ್ತದೆ. ಅದನ್ನು ಇಲ್ಲಿಯರುವ 'ಚ' ಶಬ್ದವು ಸಮುಚ್ಚಯ ಮಾಡುತ್ತಿದೆ ಎಂದು ಹೇಳಿದಂತಾಗುತ್ತದೆ. ಎರಡನೆಯ ವ್ಯಾಖ್ಯಾನದಲ್ಲಿ ಸೂರ್ಯಾದ್ಯಪ್ರಕಾಶ್ಯತ್ವವು ಎರಡನೆಯ ಸೂತ್ರದಿಂದ ಅನುಕ್ತವಾಗುವುದಿಲ್ಲ; ಉಕ್ತಪ್ರಾಯವೇ ಆಗುತ್ತದೆ. ಈ ಪಕ್ಷದಲ್ಲಿ 'ಸರ್ವಜಗತ್ಪ್ರಕಾಶಕತ್ವ' ಎಂಬ ಉಕ್ತವಾದ ಹೇತುವನ್ನೇ ಸಮುಚ್ಚಯ ಮಾಡುತ್ತಿದೆಯೆಂದು ಹೇಳಿದಂತಾಗುತ್ತದೆ. ಅಂದರೆ ಇಲ್ಲಿರುವ ಸಣ್ಣ ವ್ಯತ್ಯಾಸವನ್ನು ಗಮನಿಸಬೇಕು -

ರಾಮಾನುಜರು ಈ ಸೂತ್ರದಲ್ಲಿ 'ಚ' ಶಬ್ದವಿರುವುದರಿಂದ ಇದು ಬೇರೆ ಅಧಿಕರಣವೇ ಆಗುವುದಿಲ್ಲವೆಂದು ವಾದ ಮಾಡುತ್ತಾರೆ. ಅವರನ್ನು ಈಗ ನಿರಾಕರಿಸಿದಂತಾಯಿತು.

ಸೂರ್ಯನಲ್ಲಿ ಕೇವಲ ಪ್ರಕಾಶಶಕ್ತಿಯಷ್ಟೇ ಇರುವುದಲ್ಲ.

'ತಾಪಿನೀ ಪಾಚಿನೀ ಚೈವ ಶೋಷಿಣೀ ಚ ಪ್ರಕಾಶಿನೀ ।
ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥

ಎಲೈ! ರಾಜನೇ, ಸೂರ್ಯನು ಎಲ್ಲವನ್ನೂ ಸುಡುತ್ತಾನೆ, ಬೇಯಿಸುತ್ತಾನೆ, ಒಣಗಿಸುತ್ತಾನೆ. ಪ್ರಕಾಶಪಡಿಸುತ್ತಾನೆ. ಆದರೆ ಅವನಲ್ಲಿರುವ ಈ ಎಲ್ಲ ಶಕ್ತಿಗಳು ನಾರಾಯಣನದ್ದೇ ಹೊರತು, ಅವನದ್ದಲ್ಲ ಎಂದು. ಮಹಾಭಾರತದ ಈ ಮಾತಿನಂತೆ ಪಾಚನ ಮೊದಲಾದ ಕೃತಿಗಳು ಸೂರ್ಯನಲ್ಲಿ ಪ್ರಸಿದ್ಧವಾಗಿವೆ. ಇವುಗಳ ಸಮನ್ವಯ ಮಾಡುವ ಉದ್ದೇಶದಿಂದ ಸೂತ್ರದಲ್ಲಿ 'ಅನುಭಾನಮ್' ಎಂದು ಹೇಳದೇ 'ಅನುಕೃತೇಃ' ಎಂದು ಹೇಳಿದ್ದಾರೆ.

*ಪರಿಪೂರ್ಣಚಂದ್ರಿಕಾ*

ಎರಡನೆಯ ಸೂತ್ರದಲ್ಲಿ ಸ್ಮೃತಿಯನ್ನೇ ಕಂಠತಃ ಹೇಳಿ, ಶ್ರುತಿಯನ್ನು 'ಅಪಿ' ಶಬ್ದದಿಂದ ಸಮುಚ್ಚಯ ಮಾಡಿದ್ದಾರೆ. ಸ್ಮೃತಿಗಿಂತಲೂ ಶ್ರುತಿಯೇ ಪ್ರಬಲವೆಂದು ಅಭಿಪ್ರಾಯ.

*ಶಾಂಕರಭಾಷ್ಯ ವಿಮರ್ಶೆ*

ಕಾಠಕೋಪನಿಷತ್ತಿನಲ್ಲಿರುವ 'ತದೇತದಿತಿ ಮನ್ಯಂತೇ' ಇತ್ಯಾದಿ ವಾಕ್ಯವನ್ನು ವಿಷಯವೆಂದು ನಾವು ಹೇಳಿದರೆ, ಅದ್ವೈತಿಗಳು ಆಥರ್ವಣೋಪನಿಷತ್ತಿನಲ್ಲಿರುವ ಅದೇ ವಾಕ್ಯವನ್ನು ವಿಷಯವೆಂದು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಅಲ್ಲಿರುವ ಪ್ರಕರಣವು ಬ್ರಹ್ಮಪರವೆಂದು ಅದ್ವೈತಿಗಳೇ ನಿರ್ಣಯಿಸಿದ್ದಾರೆ. 'ಯತ್ತದದ್ರೇಶ್ಯಮ್' ಇತ್ಯಾದಿಯಾಗಿ ಪ್ರಾರಂಭವಾಗುವ ಪ್ರಕರಣವು ಅದೃಶ್ಯತ್ವಾಧಿಕರಣದ ನ್ಯಾಯದಿಂದ ಬ್ರಹ್ಮಪರವೆಂದು, 'ಯಸ್ಮಿನ್ ದ್ಯೌಃ' ಇತ್ಯಾದಿ ಹಿಂದಿನ ವಾಕ್ಯವು ಬ್ರಹ್ಮಪರವೆಂದು ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಸಿದ್ಧವಾಗಿದೆ. ಮತ್ತು ಮುಂದಿನ 'ಅನಶ್ನನ್ನನ್ಯಃ' ಎಂಬ ವಾಕ್ಯವು 'ಸ್ಥಿತ್ಯದನಾಭ್ಯಾಂಚ' ಎಂಬ ಸೂತ್ರದಿಂದ ಬ್ರಹ್ಮಪರವೆಂದು ಸಿದ್ಧವಾಗಿದೆ. ಹೀಗೆ ಬ್ರಹ್ಮಪರವೆಂದು ನಿರ್ಣೀತವಾದ ಮಂತ್ರಗಳ ಮಧ್ಯದಲ್ಲಿ ಈ ಮಂತ್ರವಿರುವುದರಿಂದ, ಇದೂ ಸಹ ಬ್ರಹ್ಮಪರವೆಂದೇ ಸಿದ್ಧವಾಗಿದೆ. ಮತ್ತು ಈ ವಾಕ್ಯದ ಪ್ರಾರಂಭದಲ್ಲಿ 'ವಿರಜಂ ಬ್ರಹ್ಮ ನಿಷ್ಕಲಮ್' ಎಂದು, ಅನಂತರ 'ಬ್ರಹ್ಮೈವೇದಮಮೃತಂ ಪುರಸ್ತಾತ್' ಎಂಬುದಾಗಿಯೂ ಬ್ರಹ್ಮಶಬ್ದದ ಉಲ್ಲೇಖವಿದೆ. ಹೀಗೆ ಅನೇಕ ಆಧಾರಗಳಿಂದ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯವು ಬ್ರಹ್ಮಪರವೆಂದು ಸಿದ್ಧವಾಗಿರುವಾಗ ಇದನ್ನೇ ಪುನಃ ಈ ಅಧಿಕರಣದಲ್ಲಿ ವಿಚಾರ ಮಾಡುವುದು ವ್ಯರ್ಥವಾಗಿದೆ. ಇದನ್ನು ಪರಿಹರಿಸಬೇಕೆಂದರೆ ಅದ್ವೈತಿಗಳು 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯವು ಬ್ರಹ್ಮಪ್ರಕರಣದಲ್ಲಿಲ್ಲವೆಂದು ಅನುಸಂಧಾನ ಮಾಡಿಕೊಂಡಾಗ ಮಾತ್ರ ಇದು ವಿಷಯವಾಗುತ್ತದೆಂದು ಉತ್ತರಿಸಬೇಕು. ಆದರೆ ಬೇರೆ ಗತಿಯಿಲ್ಲದಾಗ, ಹೀಗೆ ಕೃತ್ವಾಚಿಂತೆಯಿಂದ ಪೂರ್ವಪಕ್ಷ ಮಾಡಿಕೊಂಡು ಸಮಾಧಾನ ಮಾಡಬಹುದು. ಆದರೆ, ನಾವು ಹೇಳುವಂತೆ ಕಾಠಕಮಂತ್ರವನ್ನು ವಿಷಯವಾಕ್ಯವನ್ನಾಗಿ ಪರಿಗಣಿಸಲು ಬರುವಾಗ ಆಥರ್ವಣ ಮಾತನ್ನೇ ವಿಷಯವಾಕ್ಯವೆಂದು ಪರಿಗಣಿಸುವುದು ತಪ್ಪಾಗುತ್ತದೆ.

ವಿಚಾರ ಮಾಡಿದರೆ, ಕೃತ್ವಾಚಿಂತೆಯಿಂದಷ್ಟೇ ಅದ್ವೈತಿಗಳಿಗೆ ಈ ಅಧಿಕರಣಕ್ಕೆ ಸಾರ್ಥಕ್ಯವನ್ನು ಹೇಳಲು ಸಾಧ್ಯ. ಇತರ ಯಾವುದೇ ಬಲಿಷ್ಠವಾದ ಪೂರ್ವಪಕ್ಷ ಲಿಂಗಗಳನ್ನು ಅದ್ವೈತಿಗಳಿಗೆ ಹೇಳಲು ಸಾಧ್ಯವಿಲ್ಲ. ಮತ್ತು ಬ್ರಹ್ಮನನ್ನು ಜ್ಞಾನಸ್ವರೂಪವೆಂದು ಒಪ್ಪಿರುವುದರಿಂದ, 'ತಮೇವ ಭಾಂತಂ' ಎಂಬಲ್ಲಿ ಕರ್ತ್ರರ್ಥದಲ್ಲಿರುವ ಶತೃ ಪ್ರತ್ಯಯಾಂತ ಶಬ್ದಪ್ರತಿಪಾದ್ಯತ್ವವನ್ನು, 'ತಸ್ಯ ಭಾಸಾ' ಎಂಬಲ್ಲಿರುವ ಷಷ್ಠೀ ಪ್ರಯೋಗವನ್ನು ಅದ್ವೈತಿಗಳಿಂದ ಕೂಡಿಸಲಾಗದು.

ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ 'ನ ತದ್ಭಾಸಯತೇ ಸೂರ್ಯಃ' ಎಂದು, ಮತ್ತು 'ಯದಾದಿತ್ಯಗತಂ ತೇಜಃ' ಎಂಬ ಗೀತಾವಾಕ್ಯಗಳನ್ನು ವಿಷಯವೆಂದು ನೀವೂ ಕೂಡ ಹೇಳುತ್ತೀರಿ. 'ನ ತದ್ಭಾಸಯತೇ ಸೂರ್ಯಃ' ಎಂಬ ಗೀತಾವಾಕ್ಯದಲ್ಲಿ ಬ್ರಹ್ಮನಿಗೆ ಸೂರ್ಯಾದ್ಯಭಾಸ್ಯತ್ವವು ಹೇಳಲ್ಪಟ್ಟಿದೆ. 'ಯದಾದಿತ್ಯಗತಮ್ ತೇಜಃ' ಎಂಬ ವಾಕ್ಯದಲ್ಲಿ ಸೂರ್ಯಾದಿ ತೇಜಸ್ಸುಗಳಿಗೆ ಭಗವದಧೀನತ್ವವು ಹೇಳಲ್ಪಟ್ಟಿದೆ. ಆದರೆ ನೀನು ವ್ಯಾಖ್ಯಾನ ಮಾಡುವಂತೆ ಬ್ರಹ್ಮನು ಜ್ಞಾನಾಂತರದಿಂದ ವೇದ್ಯವಲ್ಲವೆಂದಾಗಲೀ, ಅಥವಾ ಅಸ್ಮದಾದಿ ಸಂಬಂಧಿಯಾದ ಘಟಾದಿ ಜ್ಞಾನವು ಬ್ರಹ್ಮರೂಪವಾಗಿದೆಯೆಂದಾಗಲೀ, ಈ ವಾಕ್ಯದಲ್ಲಿ ಹೇಳುತ್ತಿಲ್ಲ. ಆದ್ದರಿಂದ ಯಾವ ಉದ್ದೇಶಕ್ಕೋಸ್ಕರ ಗೀತಾವಾಕ್ಯಗಳನ್ನು ವಿಷಯವೆಂದು ಹೇಳುತ್ತಿದ್ದೀರೋ, ಅದು ವ್ಯಧಿಕರಣವಾಗಿದೆ.

## ರಾಮಾನುಜಮತ ವಿಮರ್ಶೆ

ರಾಮಾನುಜರ ಅಭಿಪ್ರಾಯ ಹೀಗಿದೆ - 'ಅನುಕೃತೇಸ್ತಸ್ಯ ಚ' ಮತ್ತು 'ಅಪಿ ಸ್ಮರ್ಯತೇ' ಎಂಬೆರಡು ಸೂತ್ರಗಳು ಸೇರಿ ಪ್ರತ್ಯೇಕವಾಗಿ 'ಅನುಕೃತ್ಯಧಿಕರಣ' ಎಂಬ ವಿಚಾರವೇ ತಪ್ಪು. ಹೊರತಾಗಿ, ಇವು ಹಿಂದಿನ ದಹರಾಧಿಕರಣದ ಗುಣಸೂತ್ರಗಳೇ ಆಗಿವೆ. ಛಾಂದೋಗ್ಯೋಪನಿಷತ್ತಿನ ಅಷ್ಟಮಾಧ್ಯಾಯದ ಪ್ರಥಮ ಖಂಡದಲ್ಲಿ ದಹರವಿದ್ಯೆಯನ್ನು ಉಪದೇಶಿಸಿ, ಎರಡನೆಯ ಖಂಡದಲ್ಲಿ ಪ್ರಜಾಪತಿ ವಿದ್ಯೆಯು ಇರುತ್ತದೆ. ಅಂದರೆ ಇಂದ್ರ ಮತ್ತು ಪುರೋಚನರು ಬ್ರಹ್ಮದೇವರ ಬಳಿ ವಿದ್ಯಾರ್ಜನೆಗಾಗಿ ಉಪಸತ್ತಿ ಮಾಡುತ್ತಾರೆ. ಆ ಸಂದರ್ಭದಲ್ಲಿ ಬ್ರಹ್ಮದೇವರು ಅವರಿಬ್ಬರನ್ನು ಕುರಿತು 'ಏಷ ಸಂಪ್ರಸಾದಃ' ಇತ್ಯಾದಿಯಾಗಿ ವಾಕ್ಯಗಳಿಂದ ಉಪದೇಶಗಳನ್ನು ಮಾಡಿರುತ್ತಾರೆ. ಬ್ರಹ್ಮದೇವರು ಉಪದೇಶಿಸಿದ ಮಾತುಗಳಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಹಿಂದೆ ಪ್ರಸಕ್ತನಾದ ದಹರಬ್ರಹ್ಮನಲ್ಲ.

ವಿಚಾರ ಮಾಡಿದಾಗ ಈ ಪ್ರಕರಣದಲ್ಲಿಯೂ ದಹರಬ್ರಹ್ಮನಲ್ಲಿ ಶ್ರುತವಾದ ಅಮೃತತ್ವಾದಿಗುಣಗಳ ಉಲ್ಲೇಖವಿದೆ. ಆದ್ದರಿಂದ ಪ್ರಜಾಪತಿ ಪ್ರಕರಣದಲ್ಲಿಯೂ ದಹರಬ್ರಹ್ಮನೇ ಪ್ರತಿಪಾದ್ಯನಾಗಿರಬಹುದಲ್ಲವೇ? ಎಂಬ ಆಶಂಕೆಗೆ 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಸೂತ್ರವು ಉತ್ತರಿಸಿದೆ. ಸ್ವರೂಪಾವಿರ್ಭಾವವನ್ನು ಹೊಂದಿರುವಂತಹ ಜೀವನೇ ಪ್ರಜಾಪತಿ ವಾಕ್ಯಗಳಿಂದ ಪ್ರತಿಪಾದ್ಯನು ದಹರಬ್ರಹ್ಮನಲ್ಲ. ಮೋಕ್ಷಾವಸ್ಥೆಯಲ್ಲಿ ಜೀವನಿಗಿರುವಂತಹ ಗುಣಗಳನ್ನು ವಿವಕ್ಷಿಸಿ ಅಂತಹ ಗುಣಗಳನ್ನು ಹೇಳಿರಬಹುದು.

ಈ ಸಂದರ್ಭದಲ್ಲಿ 'ಅನುಕೃತೇಸ್ತಸ್ಯ ಚ' ಎಂಬ ಸೂತ್ರವು ಜೀವನಿಗೆ ಮೋಕ್ಷಾವಸ್ಥೆಯಲ್ಲಿ ಬ್ರಹ್ಮಸಾದೃಶ್ಯವಿದೆಯೆಂದು ಹೇಳಿದೆ. 'ಅನುಕೃತಿ' ಎಂದರೆ 'ಸಾದೃಶ್ಯ' ಎಂದರ್ಥ. ಪ್ರಜಾಪತಿ ಪ್ರಕರಣದಲ್ಲಿ ಬ್ರಹ್ಮನ ಸಾದೃಶ್ಯವನ್ನು ಪಡೆದಿರುವ ಮುಕ್ತಜೀವನೇ ಪ್ರತಿಪಾದ್ಯನೆಂದು ಇದರಿಂದ ಸಾಧಿಸಿದಂತಾಗುತ್ತದೆ. ಆದ್ದರಿಂದ ಹಿಂದಿನ ದಹರಪ್ರಕರಣವು ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಈ ಪ್ರಜಾಪತಿ ಪ್ರಕರಣವು ಜೀವನನ್ನೇ ಪ್ರತಿಪಾದಿಸುತ್ತದೆ.

ಇದೇ ವಿಷಯದಲ್ಲಿ 'ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ' ಎಂಬ ಸ್ಮೃತಿವಾಕ್ಯವೂ ಕೂಡ ಪ್ರಮಾಣವಾಗಿವೆ ಎಂದು 'ಅಪಿ ಸ್ಮರ್ಯತೇ' ಎಂಬ ಸೂತ್ರದ ಅಭಿಪ್ರಾಯ. ಹೀಗೆ ದಹರಾಧಿಕರಣದ ಪ್ರಮೇಯವನ್ನು ಪ್ರತಿಪಾದಿಸುವುದಕ್ಕಾಗಿಯೇ ಈ ಎರಡು ಸೂತ್ರಗಳ ಪ್ರವೃತ್ತಿ.

ಇಷ್ಟು ರಾಮಾನುಜರ ಅಭಿಪ್ರಾಯ.

ಇದು ಸರಿಯಲ್ಲ. ಪ್ರಜಾಪತಿವಾಕ್ಯಕ್ಕೂ, ದಹರವಾಕ್ಯಕ್ಕೂ ಏನೂ ವ್ಯತ್ಯಾಸವಿಲ್ಲದಿದ್ದಾಗ, ದಹರ ವಾಕ್ಯವು ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಪ್ರಜಾಪತಿವಾಕ್ಯವು ಜೀವನನ್ನು ಪ್ರತಿಪಾದಿಸುತ್ತದೆ ಎಂಬ ವ್ಯತ್ಯಾಸವನ್ನು ಹೇಳುವುದು ಬಹಳ ತಪ್ಪು. ಮತ್ತು ದೇವೇಂದ್ರನು ದಹರಾತ್ಮನಲ್ಲಿ ಹೇಳಿರುವ ಗುಣಗಳನ್ನೇ ಅನುವಾದ ಮಾಡಿ ಆತ್ಮನ ಬಗ್ಗೆ ಪ್ರಶ್ನಿಸಿದಾಗ ಪ್ರಜಾಪತಿಯು ಹಿಂದೆ ಪ್ರಸಕ್ತನಾದ ದಹರಬ್ರಹ್ಮನ ಬಗ್ಗೆಯೇ ಉತ್ತರಿಸಬೇಕು ಹೊರತು, ಜೀವಾತ್ಮನ ಬಗ್ಗೆ ಉತ್ತರ ನೀಡುವುದು ಅಸಂಗತವಾಗುತ್ತದೆ. ಮತ್ತು ಈ ಪ್ರಜಾಪತಿ ಪ್ರಕರಣದಲ್ಲಿ 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂಬ ವಾಕ್ಯವಿದ್ದಂತೆ ಮೊದಲಿನ ದಹರಪ್ರಕರಣದಲ್ಲಿಯೂ ಇದೇ ವಾಕ್ಯವಿದೆ. ದಹರಪ್ರಕರಣದಲ್ಲಿ ಈ ವಾಕ್ಯವನ್ನು ಬ್ರಹ್ಮಪರವಾಗಿ ಅರ್ಥೈಸುವುದಾದರೆ, ಪ್ರಜಾಪತಿ ಪ್ರಕರಣದಲ್ಲಿಯೂ ಇದೇ ಅರ್ಥವನ್ನು ಏಕೆ ಹೇಳಬಾರದು?

ಅಪಹತಪಾಪ್ಮತ್ವಾದಿಗುಣಗಳುಳ್ಳ ಆತ್ಮನ ಬಗ್ಗೆ ಇಂದ್ರದೇವರು ಪುನಃ ಪುನಃ ಪ್ರಜಾಪತಿಯ ಬಳಿ ಪ್ರಶ್ನಿಸಿದಾಗ, ಅಕ್ಷಿಯಲ್ಲಿರುವವನು ಆತ್ಮನೆನಿಸಿದ್ದಾನೆಂದು ಸ್ವಪ್ನಕಾಲದಲ್ಲಿ ಮಹಿಮೋಪೇತನಾದವನು ಆತ್ಮನಾಗಿದ್ದಾನೆ. ಸುಪ್ತನಾದ ಜೀವನಿಗೆ ನಿಯಾಮಕನಾದವನು ಆತ್ಮನಾಗಿದ್ದಾನೆ. ಅಮೃತತ್ವ, ಅಶರೀರತ್ವ ಮೊದಲಾದ ಧರ್ಮಗಳಿಂದ ಕೂಡಿದವನೇ ಆತ್ಮನಾಗಿದ್ದಾನೆಂದು ಉಪದೇಶಿಸಿದ್ದಾರೆ. ಅಕ್ಷಿಷ್ಠನಾದವನು, ಸ್ವಪ್ನನಿಯಾಮಕನಾದವನು, ಸುಷುಪ್ತಿನಿಯಾಮಕನಾದವನು, ಅಮೃತತ್ವ, ಅಶರೀರತ್ವ ಮೊದಲಾದ ಧರ್ಮಗಳಿರುವವನು ಎಲ್ಲವೂ ಪರಮಾತ್ಮನೇ

ಆಗಿದ್ದಾನೆ ಹೊರತು, ಜೀವನಲ್ಲ. ಇವೆಲ್ಲವೂ ಪರಮಾತ್ಮನ ಅಸಾಧಾರಣಗುಣಗಳೇ ಆಗಿವೆ. ಈ ವಿಷಯದಲ್ಲಿ ಅನೇಕ ಶ್ರುತಿ-ಸ್ಮೃತಿಗಳೆಲ್ಲವೂ ಆಧಾರವಾಗಿವೆ.

ಮತ್ತು ದಹರಪ್ರಕರಣದಲ್ಲಿ ದಹರಬ್ರಹ್ಮನನ್ನು ತಿಳಿಯುವುದರಿಂದ ಯಾವ ಮೋಕ್ಷವೆಂಬ ಫಲವನ್ನು ಹೇಳಲಾಗಿದೆಯೋ, ಅದೇ ಫಲವನ್ನು ಪ್ರಜಾಪತಿ ವಾಕ್ಯದಲ್ಲಿಯೂ ಹೇಳಲಾಗಿದೆ. ದಹರಬ್ರಹ್ಮನಲ್ಲಿ ಯಾವ ಜಿಜ್ಞಾಸಾವಿಷಯತ್ವವನ್ನು ಹೇಳಲಾಗಿದೆಯೋ, ಅದನ್ನೇ ಪ್ರಜಾಪತಿ ವಾಕ್ಯದಲ್ಲಿಯೂ ಹೇಳಲಾಗಿದೆ. ಹೀಗೆ ಎರಡೂ ಪ್ರಕರಣಗಳು ಒಂದೇ ರೀತಿಯಲ್ಲಿರುವಾಗ ದಹರಪ್ರಕರಣವು ಮಾತ್ರ ಬ್ರಹ್ಮಪರ, ಪ್ರಜಾಪತಿ ಪ್ರಕರಣವು ಜೀವಪರವೆಂಬ ವ್ಯತ್ಯಾಸವು ಅಸಾಧುವಾಗುತ್ತದೆ. ಆದ್ದರಿಂದ ರಾಮಾನುಜರ ಧೋರಣೆಗಳು ಸರಿಯಾದದ್ದಲ್ಲ.

# ವಾಮನಾಧಿಕರಣ

*ಪೂರ್ವಾಧಿಕರಣ ಸಂಗತಿ ನಿರೂಪಣೆ 'ಈಶಾನ' ಶಬ್ದವು ಉಭಯತ್ರಪ್ರಸಿದ್ಧ*

ವಾಮನಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ 'ಈಶಾನ' ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಪ್ರೇರಕತ್ವ' ಎಂಬ ಧರ್ಮವು 'ಈಶಾನ' ಶಬ್ದದ ಪ್ರವೃತ್ತಿನಿಮಿತ್ತ. ಕಿಂಚಿತ್ ಸಂಕುಚಿತವಾದ ಪ್ರೇರಕತ್ವವನ್ನೇ ಪ್ರವೃತ್ತಿನಿಮಿತ್ತವೆನ್ನಬೇಕು. ಏಕೆಂದರೆ ಅಸಂಕುಚಿತವಾದ ಪ್ರವೃತ್ತಿನಿಮಿತ್ತ ವಾಯುದೇವರಲ್ಲಿಯೂ ಬರುವುದಿಲ್ಲ. ಅತ್ಯಂತ ಸಂಕುಚಿತವಾದ ಪ್ರವೃತ್ತಿನಿಮಿತ್ತ ರುದ್ರಾದಿಗಳಲ್ಲಿಯೂ ಬರುತ್ತದೆ. ಆದ್ದರಿಂದ ಕಿಂಚಿತ್ ಸಂಕುಚಿತವಾದ ಪ್ರವೃತ್ತಿನಿಮಿತ್ತ ವಾಯುದೇವರಲ್ಲಿ ಮಾತ್ರ ಬರುವುದರಿಂದ 'ಈಶಾನ' ಶಬ್ದವು ವಿಷ್ಣು ಹಾಗೂ ವಾಯು ಇಬ್ಬರಲ್ಲಿ ಪ್ರಸಿದ್ಧವಾಗಿದೆಯೆಂದು ಹೇಳಿದಂತಾಗುತ್ತದೆ.

ಹಿಂದಿನ ಅಧಿಕರಣದಲ್ಲಿ 'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಸುಖಂ ಶಾಶ್ವತಮ್' ಎಂಬ ಶ್ರುತಿಯಿಂದ ವಿಷ್ಣು ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳಿದರು. ಆದರೆ 'ವಿಶ್ವೇದೇವಾ ಉಪಾಸತೇ' ಎಂಬ ವಾಕ್ಯವನ್ನು ನೋಡಿದಾಗ, ವಾಯುದೇವರ ಜ್ಞಾನದಿಂದಲೂ ಮೋಕ್ಷವಾಗುತ್ತದೆಂದು ತಿಳಿಯುತ್ತಿದೆ. ಹೀಗಿರುವಾಗ ವಿಷ್ಣುಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದು ಹೇಗೆ ಸಮಂಜಸವಾಗುತ್ತದೆ ? ಎಂಬ ಆಕ್ಷೇಪಕ್ಕೆ ಈ ಅಧಿಕರಣದಲ್ಲಿ ಉತ್ತರಿಸುತ್ತಿರುವುದರಿಂದ ಅನುಕೃತ್ಯಧಿಕರಣದ ಅನಂತರವೇ ವಾಮನಾಧಿಕರಣವು ಹೊರಡುವುದು ಸಂಗತವಾಗಿದೆ. ಹೀಗೆ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು.

*ಸಂಶಯ ಪರಂಪರೆ*

ಈ ಅಧಿಕರಣದಲ್ಲಿ ಕಾಠಕೋಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿರುವ 'ಮಧ್ಯೇ ವಾಮನಮಾಸೀನಂ ವಿಶ್ವದೇವಾ ಉಪಾಸತೇ' ಎಂಬ ವಾಕ್ಯವು ವಿಷಯವಾಗಿದೆ. ಈ ವಾಕ್ಯದಲ್ಲಿರುವ 'ವಾಮನ' ಶಬ್ದವು ಮುಖ್ಯಪ್ರಾಣದೇವರನ್ನು ಪ್ರತಿಪಾದಿಸುತ್ತಿದೆಯೋ, ಅಥವಾ ವಿಷ್ಣುವನ್ನು ಪ್ರತಿಪಾದಿಸುತ್ತಿದೆಯೋ? ಎಂಬ ಗೊಂದಲವು ಪ್ರಾಪ್ತವಾದಾಗ ಅನೇಕ ಮುಖ್ಯಪ್ರಾಣಲಿಂಗಗಳಿರುವುದರಿಂದ ಲಿಂಗಗಳು ನಿರವಕಾಶವಾಗಿರುವುದರಿಂದ ವಿಷ್ಣುವಿಷಯಕವಾದ ವಾಮನಶ್ರುತಿಯು ಬಾಧಿತವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣದೇವರೇ 'ಈಶಾನ' ಶಬ್ದದಿಂದ ಪ್ರತಿಪಾದ್ಯರಾಗುತ್ತಾರೆಂಬುದು ಪೂರ್ವಪಕ್ಷಕಾರರು ಸಮರ್ಥಿಸುತ್ತಾರೆ.

ಲಿಂಗಗಳು ಮುಖ್ಯಪ್ರಾಣದೇವರಲ್ಲಿ ಅನೇಕವಾಗಿದ್ದರೂ ಅವೆಲ್ಲವೂ ಸಾವಕಾಶವಾಗಿರುವುದರಿಂದ, ಶ್ರುತಿಯು ಸ್ವಭಾವತಃ ಮತ್ತು ನಿರವಕಾಶತ್ವ ಪ್ರಯುಕ್ತವಾಗಿ ಬಲಿಷ್ಠವಾದ್ದರಿಂದ, ಅನೇಕ ಲಿಂಗಗಳನ್ನೆಲ್ಲಾ ಬಾಧಿಸುತ್ತದೆ. ಆದ್ದರಿಂದ ವಿಷ್ಣುವೇ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತಿಗಳು ಸ್ಥಾಪನೆ ಮಾಡುತ್ತಾರೆ.

## *'ಈಶಾನ' ಶಬ್ದವಾಚ್ಯರು ಮುಖ್ಯಪ್ರಾಣದೇವರೇ ಎಂದು ಪೂರ್ವಪಕ್ಷ*

ಕಾಠಕೋಪನಿಷತ್ತಿನಲ್ಲಿ 'ಊರ್ಧ್ವಂ ಪ್ರಾಣಮ್ ಉನ್ನಯತಿ ಅಪಾನಂ ಪ್ರತ್ಯಗಸ್ಯತಿ । ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ' ಎಂಬ ವಾಕ್ಯವಿದೆ. ತಾನು ಮಧ್ಯದಲ್ಲಿದ್ದು ಪ್ರಾಣನನ್ನು ಮೇಲ್ಮುಖವಾಗಿ, ಅಪಾನನನ್ನು ಕೆಳಮುಖವಾಗಿ ನಿಯಂತ್ರಿಸುವ ವಾಮನನನ್ನು ಎಲ್ಲ ದೇವತೆಗಳು ಉಪಾಸನೆ ಮಾಡುತ್ತಾರೆ ಎಂದು ಈ ಶ್ರುತಿಯ ಅರ್ಥ. ಇದರ ಹಿಂದಿನ ವಾಕ್ಯದಲ್ಲಿ 'ಈಶಾನೋ ಭೂತಭವ್ಯಸ್ಯ' ಹಿಂದಿನ-ಮುಂದಿನ ಪದಾರ್ಥಗಳಿಗೆಲ್ಲಾ ಅವನೇ ಒಡೆಯನು ಎಂಬುದಾಗಿ 'ಈಶಾನ' ಎಂಬ ಶಬ್ದದ ಉಲ್ಲೇಖವಿದೆ. ಇದರಿಂದ ಪ್ರಾಣಾದಿಗಳ ವ್ಯವಸ್ಥಾಪಕನು ಈಶಾನನೆಂದು ಹೇಳಿದಂತಾಗುತ್ತದೆ. ಪ್ರಾಣಾದಿ ವ್ಯವಸ್ಥಾಪಕತ್ವವು ಮುಖ್ಯಪ್ರಾಣದೇವರ ಲಿಂಗವಾದ್ದರಿಂದ ವಾಯುದೇವರೇ 'ಈಶಾನ' ಎನಿಸುತ್ತಾರೆ. ಏಕೆಂದರೆ ಈ ಮಂತ್ರದಲ್ಲಿ ಮೂರು ಲಿಂಗಗಳಿವೆ. ಒಂದು ಪ್ರಾಣಾದಿ ವ್ಯಾವಸ್ಥಾಪಕತ್ವ, ೨. ಮಧ್ಯಮತ್ವ, ೩. ಸರ್ವದೇವೋಪಾಸ್ಯತ್ವ. ಈ ಮೂರೂ ಲಿಂಗಗಳು ಮುಖ್ಯಪ್ರಾಣದೇವರ ಧರ್ಮಗಳೇ ಆಗಿವೆ. ಷಟ್‌ಪ್ರಶ್ನೋಪನಿಷತ್ತಿನಲ್ಲಿ 'ಏವಮೇವ ಏಷಃ ಪ್ರಾಣಃ' ಎಂಬ ವಾಕ್ಯದಿಂದ ಪ್ರಾಣಾದಿ ವ್ಯವಸ್ಥಾಪಕತ್ವವು ಮುಖ್ಯಪ್ರಾಣದೇವರಲಿಂಗವೆಂದು ನಿರ್ಣಯಿಸಲಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ವಾಕ್ಯದಿಂದ ಮಧ್ಯಮತ್ವವು ಮುಖ್ಯಪ್ರಾಣದೇವರ ಲಿಂಗವೆಂದು ಸಮರ್ಥಿಸಲಾಗಿದೆ. 'ಕುವಿದಂಗ' ಎಂಬ 'ಋಜ್' ಮಂತ್ರದಲ್ಲಿ ಸರ್ವದೇವೋಪಾಸ್ಯತ್ವವು ಮುಖ್ಯಪ್ರಾಣದೇವರ ಲಿಂಗವೆಂದು ನಿರ್ಣಯಿಸಲಾಗಿದೆ. ಇದೇ ಮೂರು ಲಿಂಗಗಳು ಈಶಾನನಲ್ಲಿ ಸ್ಥಿತವಾದ್ದರಿಂದ ಈಶಾನನು ಮುಖ್ಯಪ್ರಾಣದೇವರೇ ಆಗುತ್ತಾರೆ.

## *ಮುಖ್ಯಪ್ರಾಣ ಧರ್ಮಗಳಿಗೆ ನಿರವಕಾಶತ್ವ ಸಮರ್ಥನೆ*

'ಪ್ರಾಣಾದಿ ನಿಯಾಮಕತ್ವ', 'ಮಧ್ಯಮತ್ವ', 'ಸರ್ವದೇವೋಪಾಸ್ಯತ್ವ' ಈ ಮೂರು ಲಿಂಗಗಳು ಮುಖ್ಯಪ್ರಾಣದೇವರೇ ಈಶಾನರಾಗಿದ್ದಾರೆನ್ನಲು ಹೇತುಗಳಾಗಿವೆ. ಈ ಮೂರೂ ವಿಧವಾದ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆಯೆಂದು ಶಂಕಿಸಬಾರದು. ಏಕೆಂದರೆ 'ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಶ್ರುತಿಯು ಶಿಶುವೆನಿಸಿದ ಮುಖ್ಯಪ್ರಾಣದೇವರನ್ನೇ 'ಮಧ್ಯಮ' ಎಂದು ಕರೆಯುತ್ತಿದೆ. ಈ ಶ್ರುತಿಯ ಸಮಾಖ್ಯಾನದಿಂದ 'ಮಧ್ಯೇ ವಾಮನಮಾಸೀನಂ' ಎಂಬಲ್ಲಿಯೂ ಕೂಡ ಮುಖ್ಯಪ್ರಾಣದೇವರೇ ಪ್ರತಿಪಾದ್ಯರಾಗಿದ್ದಾರೆ. ಈ ಮಧ್ಯಮ ಶಬ್ದವು ತಾರತಮ್ಯ ಕಕ್ಷೆಯಲ್ಲಿ ಮುಖ್ಯಪ್ರಾಣದೇವರು ಅವಾಂತರನಿಯಾಮಕರಾಗಿದ್ದಾರೆಂದೇ ಹೇಳುತ್ತಿದೆ. ಹೊರತು, ಹೃದಯಮಧ್ಯದಲ್ಲಿರುತ್ತಾರೆ ಎಂಬರ್ಥವನ್ನು ಹೇಳುತ್ತಿಲ್ಲ. ಆದ್ದರಿಂದ ಈ ಮಧ್ಯಮತ್ವವು ಮುಖ್ಯಪ್ರಾಣದೇವರನ್ನು ಬಿಟ್ಟು ವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ.

ಇನ್ನು ಸರ್ವನಿಯಾಮಕತ್ವವಾಗಲೀ, 'ಊರ್ಧ್ವಂ ಪ್ರಾಣಮಮುನ್ನಯತಿ' ಎಂಬ ಶ್ರುತಿಯು ಪ್ರಾಣವ್ಯವಸ್ಥಾಪಕತ್ವ ಲಿಂಗವನ್ನು ಹೇಳುತ್ತಿದೆ. 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯು ದೇವೋಪಾಸ್ಯತ್ವವನ್ನು ಹೇಳುತ್ತಿದೆ. ಈ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಏಕೆಂದರೆ, ಸರ್ವನಿಯಾಮಕನಾದ್ದರಿಂದ ಸರ್ವದೇವೋಪಾಸ್ಯನಾದ್ದರಿಂದ, ಮಹಾವಿಷ್ಣುವು ಪ್ರಾಣಾದಿ ವ್ಯವಸ್ಥಾಪಕನು ಮತ್ತು ದೇವೋಪಾಸ್ಯನು ಆಗುತ್ತಾನಲ್ಲವೇ? ಎಂದು ಪ್ರಶ್ನಿಸಬಾರದು.

ಶ್ರುತಿಯಲ್ಲಿ ಸ್ಪಷ್ಟವಾಗಿ ಪ್ರಾಣನಿಯಾಮಕತ್ವ, ದೇವೋಪಾಸ್ಯತ್ವಗಳನ್ನು ಹೇಳಿರುವಾಗ, ಸಕಲ ನಿಯಾಮಕತ್ವವನ್ನಾಗಲೀ, ಸಕಲ ದೇವೋಪಾಸ್ಯತ್ವವನ್ನಾಗಲೀ ಇಟ್ಟುಕೊಳ್ಳುವುದು ತಪ್ಪಾಗುತ್ತದೆ. ಪೂರ್ವಮೀಮಾಂಸೆಯ 'ಶೇಷಸ್ತು ಗುಣಸಂಯುಕ್ತಃ' ಎಂಬ ಅಧಿಕರಣದಲ್ಲಿ ಆಗ್ನೇಯ ಶಬ್ದದಿಂದ ಆಗ್ನೇಯಪುರೋಡಾಶವನ್ನಷ್ಟೇ ವಿವಕ್ಷಿಸಬೇಕು ಹೊರತು, ಐಂದ್ರಾಗ್ನ್ಯಾದಿ ಪುರೋಡಾಶಗಳನ್ನು ವಿವಕ್ಷಿಸಬಾರದೆಂದು ನಿರ್ಣಯಿಸಿದ್ದಾರೆ. ಅದರಂತೆ ಇಲ್ಲಿಯೂ ಕೂಡ ಶ್ರುತ್ಯಂತರದಲ್ಲಿ ಕೇವಲ ಪ್ರಾಣನಿಯಾಮಕತ್ವ, ದೇವೋಪಾಸ್ಯತ್ವಗಳಷ್ಟೇ ಕೇಳಿಸುತ್ತಿರುವಾಗ ಇದರಿಂದ ವಿಷ್ಣುವಿನಲ್ಲಿರುವ ಸಕಲ ನಿಯಾಮಕತ್ವವನ್ನಾಗಲೀ, ಸಕಲ ದೇವೋಪಾಸ್ಯತ್ವವನ್ನಾಗಲೀ ವಿವಕ್ಷಿಸುವುದು ತಪ್ಪಾಗುತ್ತದೆ. ಆದ್ದರಿಂದ ಮೂರೂ ವಿಧವಾದ ಲಿಂಗಗಳು ನಿರವಕಾಶಗಳಾಗಿದೆ ಎಂದು ತಿಳಿಯಬೇಕು.

*ಸಿದ್ಧಾಂತ -'ಈಶಾನ' ಶಬ್ದವಾಚ್ಯನಾದವನು ಮಹಾವಿಷ್ಣುವೇ*

ವಿಷ್ಣುವೇ 'ಈಶಾನ' ಎಂಬ ಶಬ್ದದಿಂದ ಪ್ರತಿಪಾದ್ಯನು ಹೊರತು, ಮುಖ್ಯಪ್ರಾಣದೇವರಲ್ಲ. ಕಾರಣವೇನೆಂದರೆ 'ಮಧ್ಯೇ ವಾಮನಮಾಸೀನಂ' ಎಂಬ ವಾಮನ ಶ್ರುತಿಯು ವಿಷ್ಣುಪ್ರತಿಪಾದಕವಾಗಿದೆ. ಅದೇ ಶ್ರುತಿಯಲ್ಲಿ 'ಈಶಾನ' ಶಬ್ದವಿರುವುದರಿಂದ, ವಿಷ್ಣುವೇ ಈಶಾನನಾಗುತ್ತಾನೆಂದು ಸಿದ್ಧಾಂತ.

ವಾಮನ ಶ್ರುತಿಯು ವಿಷ್ಣುಪರವಾಗಿದೆಯೆಂದು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಶ್ರುತಿಯು ಸಹಜವಾಗಿ ಸಾವಿರಲಿಂಗಗಳಿಗಿಂತಲೂ ಬಲಿಷ್ಠವಾಗಿರುತ್ತದೆ. ಒಂದು ವೇಳೆ ನಿರವಕಾಶವಾಗಿದ್ದಲ್ಲಿ ಆದೇ ಶ್ರುತಿಯು ಸಾವಕಾಶವಾದ ಸಾವಿರಾರು ಶ್ರುತಿಗಳಿಗಿಂತ ಬಲಿಷ್ಠವಾಗಿದೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಪ್ರಕೃತ ಪೂರ್ವಪಕ್ಷಕಾರರು ಹೇಳಿದ ಸಕಲಲಿಂಗಗಳು ಸಾವಕಾಶವಾಗಿದೆ. ವಿಷ್ಣುವಿಷಯಕವಾದ ವಾಮನಶ್ರುತಿಯು ನಿರವಕಾಶವಾಗಿದೆ.

'ಏಷ ಉ ಏವ ವಾಮನಿಃ ಏಷ ಹಿ ಸರ್ವಾಣಿ ವಾಮಾನಿ ನಯತಿ' ಎಂಬ ಶ್ರುತಿಯಲ್ಲಿ ಅವಧಾರಣ-ಪುರಸ್ಸರವಾಗಿ ವಿಷ್ಣುವೇ ವಾಮನನೆಂದು ಸಮರ್ಥಿಸಲಾಗಿದೆ. 'ಉಪೇಂದ್ರೋ ವಾಮನಃ ಪ್ರಾಂಶುಃ' ಎಂಬ ವಿಷ್ಣುಸಹಸ್ರನಾಮವೂ ಸಹ ಈ ವಿಷಯದಲ್ಲಿ ಪರಮಪ್ರಮಾಣವಾಗಿದೆ. ಲೋಕದಲ್ಲಿಯೂ ಜ್ಞಾನಿ- ಜನರೆಲ್ಲರೂ ವಿಷ್ಣುವನ್ನೇ ವಾಮನನೆನ್ನುತ್ತಾರೆ. ಆದ್ದರಿಂದ 'ವಾಮನ' ಶಬ್ದವು ವಿಷ್ಣುಪರವಾಗಿದೆ- ಯೆಂಬುದರಲ್ಲಿ ಎರಡು ಮಾತಿಲ್ಲ. ಇನ್ನು ಇಲ್ಲಿರುವ 'ವಾಮನ' ಶಬ್ದಕ್ಕೆ ದೀರ್ಘಕ್ಕೆ ಪ್ರತಿಯೋಗಿಯಾದ ಹ್ರಸ್ವ ಎಂಬರ್ಥವನ್ನು ವಿವಕ್ಷಿಸಬಾರದು. ಅಂದರೆ ಗಿಡ್ಡದಾದ ಯಾವುದಾದರೊಂದು ವಸ್ತುವನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಹೇಳಬಾರದು. ಏಕೆಂದರೆ 'ವಾಮನ' ಶಬ್ದಕ್ಕೆ ನಿರಪೇಕ್ಷಿತವಾದ ರೂಢಿಯ ಬಲದಿಂದ ವಿಷ್ಣುವೆಂಬರ್ಥವನ್ನು ಸಹಜವಾಗಿ ಸ್ವೀಕರಿಸಲು ಬರುವಾಗ ಸಾಪೇಕ್ಷವಾದ ಹ್ರಸ್ವ ಎಂಬರ್ಥವನ್ನು ಯೋಗಬಲದಿಂದ ಸ್ವೀಕರಿಸುವುದು ಬಹಳ ತಪ್ಪಾಗುತ್ತದೆ. ಪೂರ್ವಮೀಮಾಂಸೆಯ 'ಯದೋಽನ್ಯಾಂ ತದುತ್ತರಯೋರ್ಗಾಯತಿ' ಎಂಬ ಅಧಿಕರಣವು ಸಾಪೇಕ್ಷವಾದ ಅರ್ಥಕ್ಕಿಂತಲೂ ನಿರಪೇಕ್ಷಿತವಾದ ಅರ್ಥವೇ ಪ್ರಬಲವೆಂದು ಸಮರ್ಥಿಸಿದೆ. ಆದ್ದರಿಂದ ವಾಮನಶ್ರುತಿಯು ವಿಷ್ಣುವಿನಲ್ಲಿ ನಿರವಕಾಶವಾಗಿದೆಯೆಂದು ತಿಳಿಯಬೇಕು.

*'ಪ್ರಾಣಾದಿ ನಿಯಾಮಕತ್ವ ' 'ದೇವೋಪಾಸ್ಯತ್ವ' ಈ ಎರಡೂ ಲಿಂಗಗಳು ಸಾವಕಾಶವಾಗಿವೆ*

ಪೂರ್ವಪಕ್ಷ ಮಾಡುವಾಗ ಪ್ರಾಣಾದಿನಿಯಾಮಕತ್ವ ಹಾಗೂ ಸರ್ವದೇವೋಪಾಸ್ಯತ್ವ ಎಂಬೆರಡು ಲಿಂಗಗಳು ಮುಖ್ಯಪ್ರಾಣದೇವರಲ್ಲಿ ಸಾವಕಾಶವಾಗಿವೆ. ವಿಷ್ಣುವಿನಲ್ಲಿ ಕಥಂಚಿದಪಿ ಬರಲು ಸಾಧ್ಯವಿಲ್ಲವೆಂದು ಸಮರ್ಥಿಸಿದ್ದರು. ಆದರೆ ಎಲ್ಲರನ್ನು ನಿಯಮನ ಮಾಡುವಂತಹ ಭಗವಂತನಿಗೆ ಪ್ರಾಣಾದಿನಿಯಾಮಕತ್ವವು ಬಂದೇ ಬರುತ್ತದೆ. ಆದರೆ

ಸಕಲ ದೇವತೆಗಳಿಂದ ಉಪಾಸ್ಯನಾದ ವಿಷ್ಣುವಿನಲ್ಲಿ ದೇವೋಪಾಸ್ಯತ್ವವೂ ಕೂಡ ಬಂದೇ ಬರುತ್ತದೆ. ಉದಾಹರಣೆ - ಮಹಡಿಯಲ್ಲಿ ಮನೆಯನ್ನು ಕಟ್ಟಿ ವಾಸಿಸುತ್ತಾರೆ. ಕೆಲವರು ಭೂಮಿಯಲ್ಲಿ ಮನೆಯನ್ನು ಕಟ್ಟಿ ವಾಸಿಸುತ್ತಾರೆ. ಕೆಲವರು ಎರಡೂ ಕಡೆಯೂ ವಾಸಮಾಡುತ್ತಿರುತ್ತಾರೆ. ಭೂಮಿಯಲ್ಲಿ ವಾಸಿಸುವವರು ಎಂದು ಹೇಳಿದಾಗ ಎರಡೂ ಕಡೆ ವಾಸಿಸುವವರನ್ನು ವಿವಕ್ಷಿಸಲು ಬರುತ್ತದೆ. ಮಹಡಿಯಲ್ಲಿ ವಾಸಿಸುವವರು ಎಂದು ಹೇಳಿದಾಗಲೂ, ಎರಡೂ ಕಡೆ ವಾಸಿಸುವವರನ್ನು ವಿವಕ್ಷಿಸಲು ಬರುತ್ತದೆ. ಇದು ಲೋಕಪ್ರಸಿದ್ಧವಾದ ಪ್ರಾಸಾದವಾಸಿನ್ಯಾಯ. ಈ ನ್ಯಾಯದಂತೆ ಪ್ರಕೃತ ಸರ್ವನಿಯಾಮಕನಾದ ವಿಷ್ಣು ಪ್ರಾಣಾಪಾನಾದಿಗಳಿಗೂ ಕೂಡ ನಿಯಾಮಕನಾಗಲೇ ಬೇಕು. ಅದರಂತೆ ಸಕಲ ದೇವತೆಗಳಿಂದ ಉಪಾಸ್ಯನಾದ ವಿಷ್ಣು ಕೆಲವು ದೇವತೆಗಳಿಂದಲೂ ಉಪಾಸ್ಯನಾಗಲೇಬೇಕು. ಆದ್ದರಿಂದ ವಿಷ್ಣುವಿನಲ್ಲಿ ಈ ಎರಡು ಮುಖ್ಯಪ್ರಾಣದೇವರ ಲಿಂಗಗಳು ಸಾವಕಾಶವಾಗಿವೆಯೆಂದು ತಿಳಿಯಬೇಕು.

### *ಮಧ್ಯಮತ್ವಲಿಂಗಕ್ಕೆ ಸಾವಕಾಶತ್ವ ಸಮರ್ಥನೆ*

ಪೂರ್ವಪಕ್ಷಕಾರರು ಮಧ್ಯಮತ್ವವೆಂಬ ಲಿಂಗವನ್ನು ನಿರವಕಾಶವೆಂದು ಸಮರ್ಥನೆ ಮಾಡಿದ್ದರು. ಅದು ಸರಿಯಲ್ಲ. ಏಕೆಂದರೆ 'ಮಧ್ಯೇ ವಾಮನಮಾಸೀನಂ' ಎಂಬ ಶ್ರುತಿವಾಕ್ಯವನ್ನು ವಿಚಾರ ಮಾಡಿದಾಗ ಮಧ್ಯಶಬ್ದವು ದೇಶವಿಶೇಷವನ್ನೇ ಹೇಳುತ್ತಿದೆ ಹೊರತು, ತಾರತಮ್ಯವಿಚಾರವನ್ನು ಹೇಳುತ್ತಿಲ್ಲ. 'ಊರ್ಧ್ವಂ ಪ್ರಾಣ'ಮ್ ಎಂಬ ಶ್ರುತಿಯಲ್ಲಿ ಪ್ರಾಣದೇವರು ಊರ್ಧ್ವದೇಶದಲ್ಲಿದ್ದಾರೆಂದು ಹೇಳಿ 'ಮಧ್ಯೇ ವಾಮನಮಾಸೀನಮ್' ಎಂದು ಹೇಳಿದಾಗ ಹೃದಯಮಧ್ಯಪ್ರದೇಶದಲ್ಲಿ ವಾಮನರೂಪಿಯಾದ ಪರಮಾತ್ಮನಿದ್ದಾನೆಂದೇ ಶ್ರುತಿಯ ಅಭಿಪ್ರಾಯ. ಊರ್ಧ್ವದೇಶದಲ್ಲಿ ಮುಖ್ಯಪ್ರಾಣದೇವರನ್ನು ಹೇಳಿದ ಮೇಲೆ, ಪುನಃ ಮಧ್ಯಪ್ರದೇಶದಲ್ಲಿ ಮುಖ್ಯಪ್ರಾಣದೇವರನ್ನು ಹೇಳಲು ಸಾಧ್ಯವಿಲ್ಲ. ಅಥವಾ ಅಪ್ರಸ್ತುತವಾಗಿ ತಾರತಮ್ಯವಿಚಾರವನ್ನೂ ಸಹ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಬೇರೆ ಶ್ರುತಿಯಲ್ಲಿರುವ ಮಧ್ಯಮ ಶಬ್ದದಿಂದ ಮುಖ್ಯಪ್ರಾಣದೇವರು ಪ್ರತಿಪಾದಿತರಾಗಿದ್ದಾರೆಂದ ಮಾತ್ರಕ್ಕೆ ಇಲ್ಲಿರುವ ಮಧ್ಯಶಬ್ದದಿಂದಲೂ ಅವರೇ ಪ್ರತಿಪಾದ್ಯರಾಗಬೇಕೆಂದೇನೂ ನಿಯಮವಿಲ್ಲ. ಹೀಗೆ ಮಧ್ಯಮತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಈ ಕಾರಣದಿಂದಲೂ ವಿಷ್ಣುವನ್ನೇ 'ಈಶಾನ' ಶಬ್ದ ಪ್ರತಿಪಾದ್ಯನೆಂದು ಹೇಳಬಹುದು.

### *ಎರಡನೆಯ ಸೂತ್ರವ್ಯಾಖ್ಯಾನ*

ಅಂಗುಷ್ಠಮಾತ್ರತ್ವವೂ ಸಹ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಪರಮಾತ್ಮನು ಎಲ್ಲೆಡೆ ವ್ಯಾಪ್ತನಾದ್ದರಿಂದ, ಅಂಗುಷ್ಠದಷ್ಟೇ ಪರಿಮಾಣವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಮುಖ್ಯಪ್ರಾಣದೇವರನ್ನೇ ವಿವಕ್ಷಿಸಬೇಕೆಂದು ಹಿಂದೆ ಪೂರ್ವಪಕ್ಷಿಯು ಹೇಳಿದ್ದನು. ಆದರೆ ಪರಮಾತ್ಮನು ಸರ್ವಗತನಾಗಿದ್ದರೂ ಹೃದಯದಲ್ಲಿರುವ ಪರಮಾತ್ಮನ ಮೂರ್ತಿವಿಶೇಷವು ವ್ಯಕ್ತಿರೂಪದಿಂದ ಅಂಗುಷ್ಠದಷ್ಟೇ ಪರಿಮಾಣವನ್ನು ಹೊಂದಿರುತ್ತದೆ. ಶಕ್ತಿರೂಪದಿಂದ ಅಣುತ್ವ-ಮಹತ್ವಗಳೆರಡೂ ಇದ್ದರೂ ಅದನ್ನು ಶ್ರುತಿಯು ವಿವಕ್ಷಿಸಿಲ್ಲ. ಅಥವಾ ಪರಮಾತ್ಮನು ವಾಸಮಾಡುವಂತಹ ಹೃದಯಪ್ರದೇಶವು ಅಂಗುಷ್ಠದಷ್ಟೇ ಪರಿಮಾಣವನ್ನು ಹೊಂದಿರುವುದರಿಂದಲೂ ಅಂಗುಷ್ಠಮಾತ್ರತ್ವವನ್ನು ಪರಮಾತ್ಮನಿಗೆ ಗೌಣವಾಗಿ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಅಂಗುಷ್ಠಮಾತ್ರ ಪರಿಮಾಣವನ್ನು ಪರಮಾತ್ಮನಿಗೆ ಹೇಳುವುದರಿಂದ ಯಾವುದೇ ಬಾಧಕಗಳಿಗೆ ಅವಕಾಶಗಳಿಲ್ಲ.

ಪ್ರಾಣಿಗಳಿಗೆ ಅಂಗುಷ್ಠಪರಿಮಾಣವೇ ಇಲ್ಲದ ಕಾರಣ, ಅವುಗಳ ಅಂತರ್ಯಾಮಿಯಾದ ಪರಮಾತ್ಮನಿಗೆ ಅಂಗುಷ್ಠಪರಿಮಾಣವನ್ನು ಹೇಳುವುದು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಈ ಶಾಸ್ತ್ರವು ಮನುಷ್ಯರನ್ನು ಕುರಿತು ಹೊರಟಿರುವುದರಿಂದ ಅವರ ಅಂತರ್ಯಾಮಿಯ ಬಗ್ಗೆ ಮಾತ್ರ ಇಲ್ಲಿ ವಿಚಾರ ಮಾಡಲಾಗಿದೆ.

ಮನುಷ್ಯರೆಲ್ಲರಿಗೂ ಅಂಗುಷ್ಠವಿರುವುದರಿಂದ ಅವರ ಹೃದಯವೂ ಸಹ ಅಂಗುಷ್ಠಪರಿಮಾಣವನ್ನು ಹೊಂದಿರುತ್ತದೆ. ಅಲ್ಲಿರುವಂತಹ ಭಗವಂತನ ಮೂರ್ತಿವಿಶೇಷದಲ್ಲಿಯೂ ಅಂಗುಷ್ಠಮಾತ್ರಪರಿಮಾಣವನ್ನು ಹೇಳಬಹುದು.

ಒಟ್ಟು ಅಭಿಪ್ರಾಯ -

ಪ್ರಮಿತಗ್ರಹಣೇನಾತ್ರ ಶ್ರುತೇರ್ನಿರವಕಾಶತಾಮ್ ।
ಏವಕಾರೇಣ ಲಿಂಗೇಭ್ಯಃ ಪ್ರಾಬಲ್ಯಂ ಸೂತ್ರಕೃಜ್ಜಗೌ ॥೧॥

'ಶಬ್ದಾದೇವ ಪ್ರಮಿತಃ' ಎಂಬಲ್ಲಿರುವ 'ಪ್ರಮಿತ' ಶಬ್ದದಿಂದ ವಾಮನಶ್ರುತಿಗೆ ಪರಮಾತ್ಮನಲ್ಲಿ ನಿರವಕಾಶತ್ವವನ್ನು ಹೇಳಿರುತ್ತಾರೆ. ಏವಕಾರದಿಂದ ಪೂರ್ವಪಕ್ಷಲಿಂಗಗಳಿಗಿಂತಲೂ ಶ್ರುತಿಯು ಬಲಿಷ್ಠವಾಗಿದೆಯೆಂದು ಸೂತ್ರಕಾರರು ಹೇಳಿರುತ್ತಾರೆ.

*ಶಾಂಕರಭಾಷ್ಯ ವಿಮರ್ಶೆ*

ಕಾಠಕೋಪನಿಷತ್ತಿನಲ್ಲಿರುವ 'ಅಂಗುಷ್ಠಮಾತ್ರಃ ಪುರುಷಃ' ಎಂಬ ವಾಕ್ಯವನ್ನು ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಅಂಗುಷ್ಠಪರಿಮಾಣವು ಪರಬ್ರಹ್ಮನಲ್ಲಿ ಬರುವುದಿಲ್ಲ. ಜೀವನಲ್ಲಿ ಭೂತಭವಿಷ್ಯತ್‌ವಸ್ತುವಿನ ಒಡೆತನವೂ ಬರುವುದಿಲ್ಲ. ಆದ್ದರಿಂದ ಈ ವಾಕ್ಯದಿಂದ ಪ್ರತಿಪಾದ್ಯನಾದವನು ಜೀವನೋ, ಅಥವಾ ಬ್ರಹ್ಮನೋ ಎಂದು ಸಂಶಯ.

ಅಣುವಾದ ಜೀವನು ಹೃತ್ಕಮಲದಲ್ಲಿರುವ ಅಂತಃಕರಣಾದ್ಯುಪಾಧಿಗಳಿಂದ ವಿಶಿಷ್ಟನಾದ ಕಾರಣ ಅಂಗುಷ್ಠಪರಿಮಾಣವನ್ನು ಹೊಂದಿರುತ್ತಾನೆ. ಪ್ರಥಮಶ್ರುತವಾದ ಅಂಗುಷ್ಠಪರಿಮಾಣಕ್ಕೆ ಅನುಸಾರಿಯಾಗಿ ಅನಂತರ ಶ್ರುತವಾದ ಭೂತಭವಿಷ್ಯತ್ ವಸ್ತುಗಳ ಒಡೆತನವನ್ನು ಸ್ವಲ್ಪ ಸಂಕೋಚ ಮಾಡಬೇಕು. ಆದ್ದರಿಂದ ಜೀವನೇ ಶ್ರುತಿಪ್ರತಿಪಾದ್ಯನೆಂದು ಪೂರ್ವಪಕ್ಷ.

ನಚಿಕೇತನು 'ಅನ್ಯತ್ರ ಧರ್ಮಾತ್' ಇತ್ಯಾದಿ ವಾಕ್ಯದಿಂದ ಬ್ರಹ್ಮನ ಬಗ್ಗೆ ಪ್ರಶ್ನೆಯನ್ನು ಮಾಡುತ್ತಿದ್ದಾನೆ. ಅದಕ್ಕೆ ಉತ್ತರ ನೀಡುವ ಸಂದರ್ಭದಲ್ಲಿ 'ಈಶಾನೋ ಭೂತಭವಸ್ಯ' ಎಂಬ ವಾಕ್ಯವಿರುತ್ತದೆ. ಆದ್ದರಿಂದ ಈ ವಾಕ್ಯವು ಬ್ರಹ್ಮಪರವೇ ಆಗಬೇಕು ಹೊರತು, ಜೀವನಲ್ಲಿ ಸಂಕೋಚ ಮಾಡಿ ಅರ್ಥೈಸಲು ಬರುವುದಿಲ್ಲ. ಆದ್ದರಿಂದ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ಪರಬ್ರಹ್ಮನೇ ಆಗುತ್ತಾನೆ. ಹಾಗಾದರೆ, ಇವನಲ್ಲಿ ಅಂಗುಷ್ಠಪರಿಮಾಣವನ್ನು ಹೇಗೆ ಕೂಡಿಸುವುದು? ಎಂದರೆ, ಜೀವನಿಂದ ಅಭಿನ್ನನಾದ ಕಾರಣ ಜೀವನಲ್ಲಿರುವ ಅಂಗುಷ್ಠಪರಿಮಾಣವನ್ನು ಬ್ರಹ್ಮನಲ್ಲಿ ಶ್ರುತಿಯು ಹೇಳುತ್ತಿದೆಯೆಂದು ಉತ್ತರಿಸಬೇಕು. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣ ಶರೀರ ಅಯುಕ್ತವಾಗಿದೆ. ಏಕೆಂದರೆ ಪೂರ್ವಪಕ್ಷದಲ್ಲಿ ಅನಂತರ ಶ್ರುತವಾದ ಭೂತಭವಿಷ್ಯತ್ ವಸ್ತುಗಳ ಒಡೆತನವನ್ನು ಸಂಕೋಚ ಮಾಡಬೇಕೆಂದು ಸಮರ್ಥಿಸಿದರು. ಸರಿಯಾಗಿ ಗಮನಿಸಿದರೆ 'ಅಂಗುಷ್ಠಮಾತ್ರಃ' ಎಂಬ ವಾಕ್ಯಕ್ಕಿಂತ ಮೊದಲೂ ಸಹ 'ಈಶಾನೋ ಭೂತಭವ್ಯಸ್ಯ' ಎಂಬ ವಾಕ್ಯವು ಇರುತ್ತದೆ. ಹೀಗೆ ಪೂರ್ವೋತ್ತರವಾಕ್ಯಗಳಲ್ಲಿ ಭೂತಭವಿಷ್ಯತ್ ವಸ್ತುಗಳ ಒಡೆತನವು ಉಕ್ತವಾಗಿರುವುದರಿಂದ ಸಂದಂಶ ನ್ಯಾಯದಿಂದ ಅಂಗುಷ್ಠಮಾತ್ರತ್ವವನ್ನು ಬ್ರಹ್ಮನಲ್ಲೇ ಹೇಳಬೇಕಾಗುತ್ತದೆ ಹೊರತು, ಜೀವನಲ್ಲಿ ಹೇಳಲಾಗದು. ಸಿದ್ಧಾಂತವೂ ಸಹ ಸರಿಯಲ್ಲ. ಏಕೆಂದರೆ ನಚಿಕೇತನು ಬ್ರಹ್ಮನ ಬಗ್ಗೆ ಪ್ರಶ್ನಿಸಿದಾಗ, ಯಮದೇವರು ಬ್ರಹ್ಮನ ಬಗ್ಗೆಯೇ ಉತ್ತರಿಸಬೇಕೆಂದು ಹೇಳಿದಿರಿ. ಆದರೆ ಕಾಠಕೋಪನಿಷತ್ತಿನ ಅದ್ವೈತಿಗಳ ವ್ಯಾಖ್ಯಾನದಲ್ಲಿ 'ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ'

ಎಂಬ ನಚಿಕೇತನ ಪ್ರಶ್ನೆ ಜೀವಾತ್ಮವಿಷಯಕವಾಗಿದೆಯೆಂದು ಹೇಳಲಾಗಿದೆ. ಅಂದಮೇಲೆ ಬ್ರಹ್ಮಪ್ರಕರಣವಾದಂತೆ ಇದು ಜೀವಪ್ರಕರಣವೂ ಸಹ ಏಕಾಗಬಾರದು?

ಮತ್ತು ಈ ಪಾದದಲ್ಲಿ ನಿರ್ವಿಶೇಷ ಬ್ರಹ್ಮನೇ ಪ್ರತಿಪಾದ್ಯನೆಂದು ಅದ್ವೈತಿಗಳು ಸಮರ್ಥಿಸುತ್ತಾರೆ. ಆದರೆ ಇಲ್ಲಿ ಈಶಿತೃತ್ವವನ್ನು ಬ್ರಹ್ಮನಧರ್ಮವೆಂದು ಪರಿಗಣಿಸುತ್ತಿದ್ದಾರೆ. ಜೀವನಲ್ಲಾದರೂ ತನ್ನ ದೇಹಾದಿಗಳನ್ನು ಕುರಿತು ಈಶಿತೃತ್ವವನ್ನು ಸ್ವಲ್ಪಮಟ್ಟಿಗಾದರೂ ಹೇಳಬಹುದು. ನಿರ್ವಿಶೇಷಬ್ರಹ್ಮನಲ್ಲಿ ಸ್ವಲ್ಪವೂ ಸಹ ಈಶಿತೃತ್ವವನ್ನು ಹೇಳಲು ಸಾಧ್ಯವಿಲ್ಲ.

ಈಶಾನೋ ಜೀವ ಏವ ಸ್ಯಾತ್ ಸ್ವದೇಹಾದೇರ್ನಿಯಾಮಕಃ ।
ನಿರ್ವಿಶೇಷಂ ತು ನೇಶಾನಮೇಕಸ್ಯಾಪ್ಯನಿಯಾಮಕಮ್ ॥

ಜೀವನಿಗೆ ತನ್ನ ದೇಹಾದಿಗಳನ್ನು ಕುರಿತು ಸ್ವಲ್ಪವಾದರೂ ಸ್ವಾಮಿತ್ವವು ಬರಬಹುದು. ನಿರ್ವಿಶೇಷಬ್ರಹ್ಮನಿಗೆ ಒಂದೇ ಒಂದು ಪದಾರ್ಥದ ಸ್ವಾಮಿತ್ವವೂ ಬರಲು ಸಾಧ್ಯವೇ ಇಲ್ಲ.

ಮತ್ತು ಕಾಠಕೋಪನಿಷತ್ತಿನ ಈ ಪ್ರಕರಣದ ಹಿಂದಿನ ಮುಂದಿನ ವಾಕ್ಯಗಳಲ್ಲೆಲ್ಲಾ ಜೀವಬ್ರಹ್ಮಭೇದವೇ ಪ್ರತಿಪಾದಿತವಾಗಿರುವಾಗ ಜೀವನಿಂದ ಐಕ್ಯವನ್ನು ವಿವಕ್ಷಿಸಿ, ಪರಬ್ರಹ್ಮನಲ್ಲಿ ಅಂಗುಷ್ಠಪರಿಮಾಣವನ್ನು ಸಮರ್ಥಿಸುವುದೂ ಸಹ ಬಹಳ ತಪ್ಪಾಗುತ್ತದೆ.

*ರಾಮಾನುಜಭಾಷ್ಯ ವಿಮರ್ಶೆ*

ರಾಮಾನುಜರು ಈ ಅಧಿಕರಣಕ್ಕೆ 'ಪ್ರಮಿತಾಧಿಕರಣ' ಎಂಬ ಹೆಸರನ್ನಿಟ್ಟು ದೇವತಾಧಿಕರಣವನ್ನು ಇದರಲ್ಲೇ ಸೇರಿಸಿದ್ದಾರೆ.

'ಪ್ರಾಣಾಧಿಪಃ ಸಂಚರತಿ ಸ್ವಕರ್ಮಭಿಃ' 'ಅಂಗುಷ್ಠಮಾತ್ರಃ' ಇತ್ಯಾದಿ ಬೇರೆ ಶ್ರುತಿಗಳಲ್ಲಿ ಜೀವನಿಗೆ ಅಂಗುಷ್ಠಪರಿಮಾಣವು ಉಕ್ತವಾಗಿರುವುದರಿಂದ, ಪ್ರಕೃತ ಕಾಠಕೋಪನಿಷತ್ತಿನ 'ಅಂಗುಷ್ಠಮಾತ್ರಃ ಪುರುಷಃ' ಇತ್ಯಾದಿ ವಾಕ್ಯವು ಜೀವನನ್ನೇ ಪ್ರತಿಪಾದಿಸಬೇಕೆಂದು ಪೂರ್ವಪಕ್ಷ. ಭೂತಭವಿಷ್ಯತ್ ಸಕಲಪದಾರ್ಥಗಳ ಒಡೆತನವನ್ನು 'ಈಶಾನ' ಶಬ್ದವು ಹೇಳುತ್ತಿರುವುದರಿಂದ ಈಶ್ವರನೇ ಪ್ರಕರಣ ಪ್ರತಿಪಾದ್ಯನೆಂದು ಸಿದ್ಧಾಂತ.

ಈ ಅಧಿಕರಣಶರೀರ ಸರಿಯಿಲ್ಲ. ಏಕೆಂದರೆ ವಿಷ್ಣುವಿನಲ್ಲಿಯೂ ಅಂಗುಷ್ಠಪರಿಮಾಣವನ್ನು ಹೇಳಿದ್ದು ಬೇರೆ ಶ್ರುತಿಗಳಲ್ಲಿ ಕಾಣಿಸುತ್ತಿದೆ. 'ಅಂಗುಷ್ಠಮಾತ್ರಃ ಪುರುಷಃ' ಇತ್ಯಾದಿಯಾಗಿ ಶ್ವೇತಾಶ್ವೇತರೋಪನಿಷತ್ತಿನಲ್ಲಿ, 'ಅಂಗುಷ್ಠಮಾತ್ರಃ ಪುರುಷಃ' ಇತ್ಯಾದಿಯಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಸ್ಪಷ್ಟವಾಗಿ ಈಶ್ವರನನ್ನೇ ಅಂಗುಷ್ಠಪರಿಮಾಣವುಳ್ಳವನೆಂದು ಹೇಳಿರುವಾಗ ಜೀವನನ್ನು ಅಂಗುಷ್ಠಪರಿಮಾಣವುಳ್ಳವನೆಂದು ಇಲ್ಲಿ ವಿವಕ್ಷಿಸುವುದು ತಪ್ಪಾಗುತ್ತದೆ. ಆದ್ದರಿಂದ ರಾಮಾನುಜರ ಪೂರ್ವಪಕ್ಷಸಿದ್ಧಾಂತಗಳು ಸರಿಯಲ್ಲವೆಂದು ತಿಳಿಯಬೇಕು.

*ಶ್ರುತಿ-ಲಿಂಗಾದಿಗಳು ವೇದದ ಅರ್ಥನಿಶ್ಚಾಯಕಗಳು*

ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಈ ಆರು ಬಗೆಯ ಲಿಂಗಗಳು ವೇದದ ಅರ್ಥವನ್ನು ನಿಶ್ಚಯಿಸುತ್ತವೆ. ಇವುಗಳ ಸ್ವರೂಪವನ್ನು ಹಿಂದೆ ಸಮನ್ವಯಾಧಿಕರಣದಲ್ಲಿಯೂ ತೋರಿಸಿದ್ದಾರೆ. ಪ್ರಕೃತ ಇವುಗಳಿಗೆ ಪರಸ್ಪರ ವಿರೋಧ ಬಂದಾಗ ಮುಂದಿನ ಪ್ರಮಾಣಗಳಿಗಿಂತ ಹಿಂದಿನ ಪ್ರಮಾಣಗಳೇ ಬಲಿಷ್ಠವಾಗುತ್ತವೆ

ಎಂದು ಸ್ಪಷ್ಟಪಡಿಸುತ್ತಿದ್ದಾರೆ. ಉದಾಹರಣೆ : ಶ್ರುತಿಗೂ ಲಿಂಗಕ್ಕೂ ಪರಸ್ಪರ ವಿರೋಧ ಬಂದರೆ ಶ್ರುತಿಯೇ ಪ್ರಬಲವಾಗುತ್ತದೆ. ಪ್ರಕೃತ ವಾಮನಾಧಿಕರಣದಲ್ಲಿ 'ಈಶಾನ' ಎಂಬ ಶಬ್ದವು ಶ್ರುತಿರೂಪವಾಗಿದೆ. ಪ್ರಾಣವ್ಯವಸ್ಥಾಪಕತ್ವವು ಲಿಂಗ-ರೂಪವಾಗಿದೆ. ಶ್ರುತಿಯಿಂದ ವಿಷ್ಣುವೇ ವಾಮನನೆಂದು ನಿರ್ಧಾರವಾದರೆ, ಲಿಂಗದಿಂದ ಮುಖ್ಯಪ್ರಾಣದೇವರು ವಾಮನಶಬ್ದಪ್ರತಿಪಾದ್ಯರೆಂದು ನಿರ್ಣಯವಾಗುತ್ತದೆ. ಹೀಗೆ ಶ್ರುತಿಯಿಂದ ಒಂದು ನಿರ್ಧಾರವಾದರೆ, ಲಿಂಗದಿಂದ ಮತ್ತೊಂದು ನಿರ್ಧಾರವಾಗುವ ಪರಿಸ್ಥಿತಿಯಿದೆ. ಈ ಸಂದರ್ಭದಲ್ಲಿ ಶ್ರುತಿಯನ್ನೇ ಬೆಂಬಲಿಸಿ, ಲಿಂಗವನ್ನು ಶ್ರುತಿಗನುಗುಣವಾಗಿ ಅರ್ಥೈಸಬೇಕಾಗುತ್ತದೆ. ಹೀಗೆ ಮುಂದಿನ ಪ್ರಮಾಣಗಳಲ್ಲಿಯೂ ಪರಸ್ಪರ ವಿರೋಧ ಬಂದಾಗ ಹಿಂದಿನ ಪ್ರಮಾಣವನ್ನೇ ಪ್ರಬಲವೆಂದು ಪರಿಗಣಿಸಬೇಕು.

ಒಂದು ವೇಳೆ ಲಿಂಗವು ನಿರವಕಾಶವಾಗಿದ್ದರೆ, ಶ್ರುತಿಯು ಲಿಂಗಕ್ಕಿಂತ ದುರ್ಬಲವಾಗುತ್ತ-ದೆಂಬುದನ್ನು ಮರೆಯಬಾರದು.

*'ಲಿಂಗ'ದ ಲಕ್ಷಣ ಶ್ರುತಿಲಿಂಗಗಳ ಪ್ರಾಬಲ್ಯ-ದೌರ್ಬಲ್ಯಗಳ ವಿಚಾರ*

ಅಸಾಧಾರಣಧರ್ಮಕ್ಕೆ ಅರ್ಪಕವಾದ ಶಬ್ದವೇ 'ಲಿಂಗ'. ಅಥವಾ ಶಬ್ದದಿಂದ ಅರ್ಪಿತವಾದ ಅಸಾಧಾರಣಲಿಂಗವೆನಿಸುತ್ತದೆ.

ಲಿಂಗವು ಎರಡು ವಿಧ - 'ಏಕ ಪದಾತ್ಮಕ', 'ಅನೇಕ ಪದಾತ್ಮಕ' ಎಂದು. 'ಅನಂತ' ಇತ್ಯಾದಿ ಶಬ್ದವು 'ಅನಂತತ್ವ' ಎಂಬ ಅಸಾಧಾರಣಧರ್ಮಕ್ಕೆ ಅರ್ಪಕವಾದ್ದರಿಂದ, ಏಕಪದಸ್ವರೂಪವಾದ ಲಿಂಗವೆನಿಸುತ್ತದೆ. 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬುದು ಅನೇಕ ಪದಗಳ ಸ್ವರೂಪವಾದ ಲಿಂಗ. ಈ ಎಲ್ಲ ಪದಗಳೂ ಸೇರಿ, 'ಶ್ರೀಲಕ್ಷ್ಮೀಪತಿತ್ವ' ಎಂಬ ಅಸಾಧಾರಣಧರ್ಮಕ್ಕೆ ಅರ್ಪಕಗಳಾಗಿವೆ.

ಇಂತಹ ಲಿಂಗವು ಶ್ರುತಿಗಿಂತಲೂ ದುರ್ಬಲವಾಗಿದೆ. ಏಕೆಂದರೆ ಶ್ರುತಿಯು ನೇರವಾಗಿ ಪ್ರತಿಪಾದ್ಯವಾದ ಅರ್ಥವನ್ನು ತಿಳಿಸುತ್ತದೆ. ಆದರೆ ಲಿಂಗವು ವ್ಯಾಪ್ಯಜ್ಞಾನವನ್ನು ಹುಟ್ಟಿಸುವ ಮೂಲಕ ವ್ಯಾಪಕಜ್ಞಾನವನ್ನು ಹುಟ್ಟಿಸಬೇಕಾದ್ದರಿಂದ ದುರ್ಬಲವಾಗಿದೆ. ಉದಾಹರಣೆ ವಾಮನಶ್ರುತಿಯು ನೇರವಾಗಿ ವಿಷ್ಣುವೆಂಬರ್ಥವನ್ನು ತಿಳಿಸುತ್ತದೆ. ಆದರೆ 'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಲಿಂಗಸ್ವರೂಪವಾದ ವಾಕ್ಯವು ಸ್ವಾರ್ಥವಾದ ವ್ಯಾಪ್ಯವನ್ನು ಮೊದಲು ತಿಳಿಸಿ, 'ಈಶಾನ' ಶಬ್ದ ಪ್ರತಿಪಾದ್ಯನು ವಾಯುದೇವನಾಗಿದ್ದಾನೆಂದು ತಿಳಿಸಿ, ವಾಕ್ಯಕ್ಕೆ ತತ್ಪರತ್ವವನ್ನು ಅನಂತರ ತಿಳಿಸುತ್ತದೆ. ಹೀಗೆ ವಿಳಂಬವಾಗಿ ಅರ್ಥಬೋಧಕವಾಗುವುದರಿಂದ ಶ್ರುತಿಗಿಂತಲೂ ದುರ್ಬಲವಾಗಿರುತ್ತದೆ.

*ವಾಕ್ಯದ ಲಕ್ಷಣ*

ವಾಕ್ಯದ ಲಕ್ಷಣ ಹೀಗಿದೆ. ತನ್ನಲ್ಲಿರುವ ಪದಗಳಿಂದಲೇ ಆಕಾಂಕ್ಷೆಯು ಪೂರ್ಣವಾಗಿರಬೇಕು. ಮತ್ತು ಬೇರೆ ಪದಗಳಿಂದ ಆಕಾಂಕ್ಷಾ ಇರಬಾರದು. ಇಂತಹ ವಾಕ್ಯವು ಸ್ವಾರ್ಥದಲ್ಲಿ ಶಬ್ದರೂಪವಾಗಿ ಪ್ರಮಾಣವಾಗುತ್ತದೆ. ಆದರೆ ಸ್ವಾಂತರ್ಗತವಾದ ಪದಾರ್ಥಗಳ ನಿರ್ಣಯದಲ್ಲಿ ಮತ್ತು ತನ್ನ ಜೊತೆಗೆ ಸಮಭಿವ್ಯಾಹೃತವಾದ ಬೇರೆ ವಾಕ್ಯಗಳ ಅರ್ಥನಿರ್ಣಯದಲ್ಲಿ ಅನುಮಾನರೂಪದಿಂದ ಪ್ರಮಾಣವಾಗಿರುತ್ತದೆ. ಉದಾಹರಣೆ 'ತತ್ತ್ವಮಸಿ' ಎಂಬ ವಾಕ್ಯದಲ್ಲಿ 'ತತ್' ಎಂಬ ಪದದ ಅರ್ಥವನ್ನು ನಿರ್ಣಯಿಸುವಾಗ 'ತ್ವಮಸಿ' ಎಂಬ ಪದಗಳು ಅನುಮಾನರೂಪದಿಂದ ಪ್ರಮಾಣವಾಗಿವೆ. ಅಂದರೆ 'ತತ್' ಎಂಬ ಪದಕ್ಕೆ 'ತತ್‌ಸದೃಶ' ಎಂಬರ್ಥವನ್ನು ಸ್ವೀಕರಿಸಬೇಕು. ಏಕೆಂದರೆ ವಿರುದ್ಧಧರ್ಮಾಧಿಕರಣ ಬೋಧಕವಾದ 'ತ್ವಮಸಿ' ಎಂಬ ಪದಗಳಿರುವುದರಿಂದ, ಹೀಗೆ ಸ್ವಾಂತರ್ಗತವಾದ ಪದಾರ್ಥನಿರ್ಣಯದಲ್ಲಿ 'ತ್ವಮಸಿ' ಎಂಬ ಪದಗಳು ಅನುಮಾನರೂಪದಿಂದ ಪ್ರಮಾಣವಾಗಿವೆ.

ಬೇರೆ ವಾಕ್ಯದ ಅರ್ಥವನ್ನು ನಿರ್ಣಯಿಸುವಾಗಲೂ ಶ್ರುತಿಲಿಂಗಾದಿಗಳಿಂದ ಉಪಪನ್ನವಾಗಿ ವಾಕ್ಯವು ನಿರ್ಣಾಯಕವಾಗಬಹುದು ಅಥವಾ ಅಂತಹ ಶ್ರುತಿಲಿಂಗಾದಿಗಳಿಲ್ಲದೇ ಕೇವಲ ಪ್ರಶ್ನೋತ್ತರಾದಿ ಭಾವದಿಂದಲೂ ವಾಕ್ಯಾರ್ಥಕ್ಕೆ ನಿರ್ಣಾಯಕವಾಗಬಹುದು. 'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ಬ್ರಹ್ಮನೇ ಆಕಾಶಶಬ್ದಪ್ರತಿಪಾದ್ಯನಾಗಿದ್ದಾನೆನ್ನಲು 'ಆಕಾಶಪರಾಯಣಂ' ಎಂಬ ವಾಕ್ಯವು 'ಪರಾಯಣತ್ವ' ಎಂಬ ಲಿಂಗದಿಂದ ಸಹಿತವಾಗಿ ಅರ್ಥನಿರ್ಣಾಯಕವಾಗಿದೆ. 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿ 'ಜ್ಯೋತಿಃ' ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆನ್ನಲು 'ಕತಮ ಆತ್ಮಾ' ಎಂಬ ಪ್ರಶ್ನೋತ್ತರ ಭಾವವು ನಿರ್ಣಾಯಕವಾಗಿದೆ. ಹೀಗೆ ವಾಕ್ಯವು ಮೂರುಬಗೆಯಲ್ಲಿ ಅರ್ಥನಿರ್ಣಾಯಕವಾಗುತ್ತದೆಂಬುದನ್ನು ತಿಳಿಯಬೇಕು.

ಲಿಂಗಕ್ಕಿಂತಲೂ ವಾಕ್ಯವು ದುರ್ಬಲ. ಏಕೆಂದರೆ ಲಿಂಗವು ನೇರವಾಗಿ ವ್ಯಾಪ್ತಜ್ಞಾನದ ಮೂಲಕ ವ್ಯಾಪಕಜ್ಞಾನವನ್ನು ತಂದುಕೊಡುತ್ತದೆ. ಆದರೆ ವಾಕ್ಯವು ಅನೇಕ ಪದಗಳ ಅರ್ಥವನ್ನು ತಿಳಿಸುತ್ತಾ, ಶ್ರುತಿ-ಲಿಂಗ ಇವುಗಳೆನ್ನೆಲ್ಲಾ ಅಪೇಕ್ಷಿಸಿ, ವಾಕ್ಯದ ಅರ್ಥದಲ್ಲಿ ಅನುಮಾಪಕವಾಗಿ ಅರ್ಥವನ್ನು ನಿರ್ಣಯಿಸುತ್ತದೆ. ಹೀಗೆ ಲಿಂಗಕ್ಕಿಂತಲೂ ವಿಳಂಬವಾಗಿ ಅರ್ಥನಿರ್ಣಾಯಕವಾಗುವುದರಿಂದ, ಲಿಂಗಕ್ಕಿಂತಲೂ ದುರ್ಬಲವೆಂದು ತಿಳಿಯಬೇಕು.

*ಲಿಂಗವಾಕ್ಯಗಳೆರಡೂ ಸಮಾನ ಪ್ರಮಾಣವಲ್ಲ*

ಲಿಂಗವು ಹೇಗೆ ಅರ್ಥವನ್ನು ನಿರ್ಣಯಿಸುತ್ತದೋ, ಅದರಂತೆ ವಾಕ್ಯಪ್ರಮಾಣವೂ ಸಹ, ಅರ್ಥವನ್ನು ನಿರ್ಣಯಿಸುತ್ತದೆ. ಇವೆರಡರಲ್ಲಿ ತಾರತಮ್ಯವನ್ನು ಕಲ್ಪಿಸುವುದೇ ತಪ್ಪಾಗುತ್ತದೆಂಬ ಆಶಂಕೆಗೆ ಅವಕಾಶವಿಲ್ಲ. ಏಕೆಂದರೆ ಲಿಂಗವು ನೇರವಾಗಿಯೇ ವ್ಯಾಪ್ಯಜ್ಞಾನವನ್ನು ಹುಟ್ಟಿಸಿ, ಅರ್ಥನಿರ್ಣಾಯಕವಾದರೆ, ವಾಕ್ಯವು ಪದಾರ್ಥಜ್ಞಾನವನ್ನು ಹುಟ್ಟಿಸಿ, ಅನಂತರ ವ್ಯಾಪ್ಯಜ್ಞಾನವನ್ನು ಹುಟ್ಟಿಸುವ ಮೂಲಕ ಅರ್ಥನಿರ್ಣಾಯಕವಾಗಬೇಕು. ಒಂದು ಹಂತದಲ್ಲಿ ಇದು ವಿಳಂಬಪ್ರವೃತ್ತಿ ಮಾಡುವುದರಿಂದ ವಾಕ್ಯವು ದುರ್ಬಲವಾಗಿದೆಯೆಂದು ಅಭಿಪ್ರಾಯ. ವಿಚಾರ ಮಾಡಿದರೆ, ಲಿಂಗದಲ್ಲಿಯೇ ಪರಸ್ಪರ ತಾರತಮ್ಯವಿದೆ. ಕೆಲವು ಲಿಂಗಗಳು ಒಂದೇ ಪದದಿಂದ ತಿಳಿಯುತ್ತವೆ. ಇನ್ನೂ ಕೆಲವು ಲಿಂಗಗಳು ಅನೇಕ ಪದಗಳಿಂದ ತಿಳಿಯುತ್ತವೆ. ಒಂದೇ ಪದದಿಂದ ತಿಳಿಯುವಂತಹ ಲಿಂಗದಲ್ಲಿ ಅನೇಕ ಪದಾರ್ಥಗಳ ಜ್ಞಾನದ ಅನಿವಾರ್ಯತೆ ಇಲ್ಲದ ಕಾರಣ ಕೂಡಲೇ ಅರ್ಥವು ನಿಶ್ಚಯವಾಗುತ್ತದೆ. ಅನೇಕ ಪದಗಳಿಂದ ಲಿಂಗಜ್ಞಾನ ಬರುವಾಗ ಆ ಎಲ್ಲಾ ಪದಾರ್ಥಗಳನ್ನು ತಿಳಿದು ಅನಂತರ ಅರ್ಥನಿಶ್ಚಯವಾಗಬೇಕಾದ ಕಾರಣ ವಿಳಂಬವಾಗಿ ಅರ್ಥನಿರ್ಣಯವಾಗುತ್ತದೆ. ಹೀಗೆ ಲಿಂಗದಲ್ಲೇ ಯಾವರೀತಿಯಾಗಿ ಅವಾಂತರ ತಾರತಮ್ಯವಿದೆಯೋ, ಅದರಂತೆ ಲಿಂಗ ಮತ್ತು ವಾಕ್ಯಗಳ ನಡುವೆಯೂ ತಾರತಮ್ಯವು ಇದ್ದೇ ಇರುತ್ತದೆ.

ಅನೇಕ ಪದಗಳಿಂದ ಅರ್ಪಿತವಾದ ಅಸಾಧಾರಣಧರ್ಮವು ಲಿಂಗವಾಗುವುದಿಲ್ಲವೆಂದು ಶಂಕಿಸಬಾರದು. 'ಅಂತಸ್ತದ್ಧರ್ಮೋಪದೇಶಾತ್' 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರಗಳೆಲ್ಲಾ ಸೂತ್ರಕಾರರು ಉಲ್ಲೇಖ ಮಾಡುವಂತಹ ಸಮುದ್ರಶಾಯಿತ್ವ, ಶ್ರೀಲಕ್ಷ್ಮೀಪತಿತ್ವ ಮೊದಲಾದ ಲಿಂಗಗಳು ಒಂದೊಂದು ಪದಗಳಿಂದ ತಿಳಿಯುವಂತಹದ್ದಲ್ಲ, ಅನೇಕ ಪದಗಳಿಂದಲೇ ತಿಳಿಯುತ್ತದೆ. ಆದ್ದರಿಂದ, ಸೂತ್ರಕಾರರಿಗೆ ಅಭಿಪ್ರೇತವಾದದ್ದನ್ನೇ ಗ್ರಂಥಕಾರರು ಇಲ್ಲಿ ಉಲ್ಲೇಖಿಸುತ್ತಿದ್ದಾರೆಂಬುದನ್ನು ಗಮನಿಸಬೇಕು.

*ನ್ಯಾಯಸುಧಾ ಅನುವ್ಯಾಖ್ಯಾನಗಳಲ್ಲಿ ವಾಕ್ಯಪ್ರಮಾಣ ಸ್ವರೂಪ ವಿಚಾರ*

ವಾಕ್ಯವು ನೇರವಾಗಿ ವ್ಯಾಪ್ಯಾರ್ಪಕವಾಗುವುದಿಲ್ಲವೆಂದು ಹೇಗೆ ಹೇಳಿದಿರಿ? ಏಕೆಂದರೆ ಸೂರ್ಯನು ಮುಳುಗಿದನು ಎಂದು ಹೇಳಿದಾಗ, ಒಬ್ಬೊಬ್ಬ ವ್ಯಕ್ತಿಗೆ ಒಂದೊಂದು ಬಗೆಯಲ್ಲಿ ಅರ್ಥವಾಗುತ್ತದೆ. ವಿಪ್ರನಿಗೆ

ಸಂಧ್ಯಾವಂದನೆ ಮಾಡು ಎಂದು, ಕಳ್ಳನಿಗೆ ಕಳ್ಳತನದಲ್ಲಿ ಉದ್ಯುಕ್ತನಾಗು ಎಂದು, ದಾರಿಹೋಕನಿಗೆ ಮುಂದೆ ಹೋಗಬೇಡ ಎಂದು, ಕಾಮಿನಿಸ್ತ್ರೀಗೆ ರತಿಕ್ರೀಡೆಗಾಗಿ ಕಾಂತಪುರುಷನನ್ನು ಪ್ರಲೋಭನೆ ಮಾಡು ಎಂದು ಅರ್ಥವಾಗುತ್ತದೆ. ಹೀಗೆ ಸೂರ್ಯನ ಅಸ್ತಂಗಮನದಿಂದ ವ್ಯಾಪ್ಯವಾದ ಅರ್ಥಗಳನ್ನು 'ಅಸ್ತಂಗತಃ ಸವಿತಾ' ಎಂಬ ವಾಕ್ಯವು ತಿಳಿಸುವುದರಿಂದ ವಾಕ್ಯವು ಲಿಂಗರೂಪವೇ ಆಗಿದೆ. ಹೀಗಿರುವಾಗ ಲಿಂಗಕ್ಕಿಂತಲೂ ದುರ್ಬಲವೆಂದು ಹೇಗೆ ಹೇಳುತ್ತೀರಿ?

ಈ ಆಕ್ಷೇಪವೂ ಸಹ ತಪ್ಪು. ಏಕೆಂದರೆ ಪ್ರಕೃತ ಉಲ್ಲೇಖಿಸುತ್ತಿರುವ ಶ್ರುತಿ, ಲಿಂಗ, ವಾಕ್ಯ ಇವೆಲ್ಲವೂ ವೇದದ ಅರ್ಥನಿರ್ಣಯದಲ್ಲಿ ಲಿಂಗರೂಪವಾಗಿರಬೇಕು ಹೊರತು, ವಕ್ತೃವಿನ ವಿವಕ್ಷೆಯನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಪ್ರಮಾಣವನ್ನಾಗಿ ಉಲ್ಲೇಖಿಸುತ್ತಿಲ್ಲ. 'ಅಸ್ತಂಗತಃ ಸವಿತಾ' ಇತ್ಯಾದಿ ವಾಕ್ಯವನ್ನು ನೀವು ಉದಾಹರಿಸಿದ್ದು, ವಕ್ತೃವಿನ ವಿವಕ್ಷೆಯನ್ನು ತಿಳಿಯಲಷ್ಟೇ ಅನುಮಾಪಕವಾಗಿದೆ, ಆದ್ದರಿಂದ ದೃಷ್ಟಾಂತವು ವಿಷಮವಾದ್ದರಿಂದ ಆಕ್ಷೇಪವೂ ತಪ್ಪು. ಆದ್ದರಿಂದ 'ಆಗಮಾರ್ಥಾವಸಿತ್ಯರ್ಥಾ ನಿಯತವ್ಯಾಪ್ತಯೋಽಖಿಲಾಃ । ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾಚ ತಥಾವಿಧಾಃ ॥' ಎಂದರೆ ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾಗಳೆಲ್ಲವೂ ವೇದಾರ್ಥದ ನಿರ್ಣಯದಲ್ಲಿ ನಿಯತವ್ಯಾಪ್ತವಾಗಿವೆ ಆದ್ದರಿಂದ ಅನುಮಾನರೂಪವಾಗಿವೆಯೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

*ಪ್ರಕರಣ ಲಕ್ಷಣ - ವಾಕ್ಯಕ್ಕಿಂತ ಪ್ರಕರಣ ದುರ್ಬಲ*

ಒಂದೇ ಅರ್ಥದಲ್ಲಿ ತಾತ್ಪರ್ಯವುಳ್ಳ ಅನೇಕ ವಾಕ್ಯಗಳ ಪುಂಜವೇ ಪ್ರಕರಣ ಎನಿಸುತ್ತದೆ. ಈ ಪ್ರಕರಣವು ಅನೇಕ ಅವಾಂತರ ವಾಕ್ಯಾರ್ಥಗಳನ್ನು ತಿಳಿಸುವ ಮೂಲಕ ವಿಪ್ರತಿಪನ್ನವಾದ ವಾಕ್ಯವನ್ನು ಪ್ರಕರಣಕ್ಕೆ ಅನುಗುಣವಾಗಿ ಅರ್ಥೈಸಬೇಕಾದ್ದರಿಂದಲೂ ವಾಕ್ಯಕ್ಕಿಂತಲೂ ವಿಳಂಬವಾಗಿ ಪ್ರವೃತ್ತಿ ಮಾಡುತ್ತದೆ. ಆದ್ದರಿಂದ ಪ್ರಕರಣಕ್ಕಿಂತ ವಾಕ್ಯವೇ ಪ್ರಬಲವಾಗುತ್ತದೆ -

ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯೋಽಯಂ ವಿಜ್ಞಾನಮಯಃ ಪ್ರಾಣೇಽಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಪ್ರಾರಂಭವಾಗುವ ವಾಕ್ಯವು ಜೀವನನ್ನು ಪ್ರತಿಪಾದನೆ ಮಾಡುತ್ತಿದೆ. 'ಕಿಂ ಜ್ಯೋತಿರಯ ಪುರುಷಃ' ಎಂದು ಜನಕರಾಜರು ಜೀವನು ಯಾವರೀತಿಯ ಜ್ಞಾನಸಾಧನವನ್ನು ಹೊಂದಿದ್ದಾನೆಂದು ಪ್ರಶ್ನಿಸಿದ್ದಾರೆ. ಅದಕ್ಕೆ ಯಾಜ್ಞವಲ್ಕ್ಯರು ಉತ್ತರಿಸುವ ಪ್ರಕರಣವೇ ಇದಾಗಿದೆ. ಇಲ್ಲಿ ಜೀವಾತ್ಮನ ಬಗ್ಗೆ ಪ್ರಶ್ನೆ ಹಾಗೂ ಉತ್ತರಗಳಿರುವುದರಿಂದ 'ಜ್ಯೋತಿಸ್' ಶಬ್ದದಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆಂದು ಈ ಪ್ರಕರಣ ಸಮರ್ಥಿಸುತ್ತದೆ. ಆದರೆ ಅದಕ್ಕಿಂತ ಮೊದಲೇ 'ಕತಮ ಆತ್ಮಾ' ಎಂಬ ವಾಕ್ಯವು ವಿಷ್ಣುವೇ 'ಜ್ಯೋತಿಸ್' ಶಬ್ದ ಪ್ರತಿಪಾದ್ಯನೆಂದು ಸಮರ್ಥಿಸಿಬಿಡುತ್ತದೆ. ಏಕೆಂದರೆ ಒಂದು 'ಜ್ಯೋತಿಸ್' ಶಬ್ದ ಪ್ರತಿಪಾದ್ಯನು ಜೀವಾತ್ಮನಾದಲ್ಲಿ 'ಕತಮ ಆತ್ಮಾ' ಆತ್ಮನೆಂದರೆ ಯಾರು ? ಎಂಬ ಪ್ರಶ್ನೆಯೇ ಕೂಡುವುದಿಲ್ಲ. ಹೀಗೆ ಪ್ರಶ್ನೆಯನ್ನು ಮಾಡಿದ್ದರಿಂದಲೇ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ಹೀಗೆ ಪ್ರಕರಣಕ್ಕಿಂತ ವಾಕ್ಯವೇ ಪ್ರಬಲ.

*ಪ್ರಕಾರಾಂತರದಿಂದ ಬಲಾಬಲ ವಿಚಾರ*

ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಮತ್ತೊಂದು ಬಗೆಯಲ್ಲಿ ತಿಳಿಯಬಹುದು. ವ್ಯಾಪ್ಯಾರ್ಪಕವಾದ ಪದವು ಲಿಂಗ. ವ್ಯಾಪ್ಯಾರ್ಪಕವಾದ ಅನೇಕ ಪದಗಳೇ ವಾಕ್ಯ ಎಂದು. ಹಿಂದೆ ಲಿಂಗವೇ ಏಕಪದಾತ್ಮಕವಾಗಿದೆ. ಮತ್ತು ಅನೇಕ ಪದಾತ್ಮಕವಾಗಿದೆಯೆಂದು ಎರಡು ಪ್ರಕಾರದಿಂದ ಲಿಂಗವನ್ನು ವಿಭಾಗಮಾಡಲಾಗಿತ್ತು. ಆದರೆ ಈಗ ವ್ಯಾಪ್ಯಧರ್ಮವನ್ನು ತಿಳಿಸುವ ಒಂದು ಪದವಿದ್ದರೆ ಲಿಂಗವೆಂದು, ಅನೇಕ ಪದಗಳಿದ್ದರೆ ವಾಕ್ಯವೆಂದು ವಿಭಿನ್ನವಾಗಿ

ಮತ್ತೊಂದು ಪ್ರಕಾರದಲ್ಲಿ ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಹೇಳಿದ್ದಾರೆ. ಹಾಗಾದರೆ ಲಿಂಗವು ವಾಕ್ಯಕ್ಕಿಂತಲೂ ಪ್ರಬಲವೆಂದು ಹೇಗೆ ಹೇಳುವುದು ಎಂದರೆ? 'ಒಬ್ಬ ಕರ್ತೃವು ವರ್ತಮಾನ ಕಾಲದಲ್ಲಿ ತನಗಾಗಿ ಪಾಕಕ್ರಿಯೆಯಲ್ಲಿ ತೊಡಗುತ್ತಾನೆ' ಎಂದು ಉದ್ದವಾದ ವಾಕ್ಯದಿಂದ ಯಾವ ಶಾಬ್ದಬೋಧವು ಬರುತ್ತದೋ ಅದನ್ನು 'ಪಚತೇ' ಎಂಬ ಒಂದೇ ಕ್ರಿಯಾಪದದಿಂದ ಅಷ್ಟೂ ಶಾಬ್ದಬೋಧವನ್ನು ಪಡೆಯಬಹುದು. ಇಲ್ಲಿರುವ 'ಪಚತೇ' ಎಂಬ ಒಂದೇ ಪದವು ವ್ಯಾಪ್ಯಾರ್ಥಕವಾದ ಲಿಂಗರೂಪವಾದ ಪದವಾಗಿದೆ. ಒಬ್ಬ ಕರ್ತೃ ವರ್ತಮಾನ ಕಾಲದಲ್ಲಿ ತನಗಾಗಿ ಪಾಕಕ್ರಿಯೆಯಲ್ಲಿ ತೊಡಗುತ್ತಾನೆ ಎಂಬುದು ಅನೇಕ ಪದಗಳುಳ್ಳ ವಾಕ್ಯರೂಪವಾಗಿದೆ. ಯಾವುದರಿಂದ ಶೀಘ್ರವಾಗಿ ಶಾಬ್ದಬೋಧವು ಬರುತ್ತದೋ ಅದೇ ಪ್ರಬಲವಾದ್ದರಿಂದ 'ಪಚತೇ' ಎಂಬ ಲಿಂಗರೂಪವಾದ ಪದವೇ ಪ್ರಬಲವೆಂದು ಸಿದ್ಧವಾಗುತ್ತದೆ. ಅದರಂತೆ 'ಸರ್ವಾಣಿ ಹವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' ಎಂಬ ದೀರ್ಘವಾದ ವಾಕ್ಯದಿಂದ ವಾಯ್ವಾದಿ ಭೂತಕಾರಣತ್ವವನ್ನು ತಿಳಿಯುವುದಕ್ಕಿಂತಲೂ 'ಅನಂತಃ' ಎಂಬ ಒಂದೇ ಪದದಿಂದ ಅನಂತತ್ವ ಲಿಂಗವನ್ನು ತಿಳಿಯುವುದೇ ಶ್ರೇಷ್ಠ. ಇದರಂತೆ ಅಗ್ನಿ ಪ್ರಕರಣದಿಂದ ಅಗ್ನಿಯೇ ಪ್ರತಿಪಾದ್ಯನೆಂದು ತಿಳಿಯುವುದಕ್ಕಿಂತಲೂ 'ವಿಮೇ ಕರ್ಣಾ ಪತಯತಃ' ಎಂಬ ಒಂದೇ ವಾಕ್ಯದಿಂದ ವಿಷ್ಣುವೇ 'ಜ್ಯೋತಿಸ್' ಶಬ್ದದಿಂದ ಪ್ರತಿಪಾದ್ಯನೆಂದು ತಿಳಿಯುವುದು ಶ್ರೇಷ್ಠವಾಗಿದೆ. ಆದ್ದರಿಂದ ಪ್ರಕರಣಕ್ಕಿಂತ ವಾಕ್ಯವು ಪ್ರಬಲವಾಗಿದೆಯೆಂದೂ ಸಹ ತಿಳಿಯಬೇಕು.

ಹಾಗಾದರೆ 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರಗಳಲ್ಲಿ ಶ್ರೀಲಕ್ಷ್ಮೀಪತಿತ್ವ ಮೊದಲಾದವುಗಳನ್ನು ಲಿಂಗವೆಂದೇಕೆ ಹೇಳಿದ್ದಾರೆ ಈಗ ಹೇಳಿದ ಲಕ್ಷಣದಂತೆ ಅವುಗಳು ವಾಕ್ಯವಾಗಬೇಕಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ವ್ಯಾಪ್ಯಾರ್ಥಕವಾದ ಅನೇಕ ಪದಗಳ ಸಮೂಹವು ವಾಕ್ಯವೆನಿಸಿದ್ದರಿಂದ 'ಶ್ರೀಶ್ಚ ತೇ ಲಕ್ಷ್ಮೀಶ್ಚ' ಇತ್ಯಾದಿ ಪದಸಮೂಹವು ವಾಕ್ಯರೂಪ ಪ್ರಮಾಣವೇ ಆಗಿದೆ. ಆದರೆ ಇದರಿಂದ ತಿಳಿಯುವಂತಹ 'ಶ್ರೀಲಕ್ಷ್ಮೀ ಪತಿತ್ವ' ಎಂಬ ಅಸಾಧಾರಣ ಧರ್ಮವು ಲಿಂಗರೂಪವಾಗಿರುವುದರಿಂದ ಅವಾಂತರ ಭೇದವನ್ನು ವಿವಕ್ಷಿಸದೇ ಇದನ್ನು ಮಾತ್ರ ವಿವಕ್ಷಿಸಿ, ಸೂತ್ರಕಾರರು ಲಿಂಗವೆಂದು ಪ್ರಯೋಗಿಸಿದ್ದಾರೆ.

*'ಸ್ಥಾನ' ಲಕ್ಷಣ- ಪ್ರಕರಣಕ್ಕಿಂತ ಸ್ಥಾನವು ದುರ್ಬಲ*

ಪ್ರಕರಣ ಪ್ರಮಾಣಕ್ಕಿಂತಲೂ ಸ್ಥಾನಪ್ರಮಾಣವು ದುರ್ಬಲವಾಗಿದೆ - ಸಮಗ್ರ ಷಟ್‌ಪ್ರಶ್ನೋಪನಿಷತ್ತು ಅನೇಕ ಪ್ರಕರಣದಿಂದ ಕೂಡಿರುವಂತಹ ಸ್ಥಾನರೂಪವಾದ ಪ್ರಮಾಣ. ಆದರೆ ಉಪನಿಷತ್ತಿನ ಮೂರನೆಯ ಪ್ರಶ್ನೆಯಲ್ಲಿ 'ಆತ್ಮತಃ ಏಷ ಪ್ರಾಣೋ ಜಾಯತೇ' ಎಂಬುದಾಗಿ ಪ್ರಾಣನ ಉಲ್ಲೇಖವಿದೆ. ಪ್ರಕರಣ ಪ್ರಮಾಣವು ಮುಖ್ಯಪ್ರಾಣನ ಅಸಾಧಾರಣ ಲಿಂಗಗಳಿಂದ 'ಭಗವನ್‌ಕುತ ಏಷ ಪ್ರಾಣೋಜಾಯತೇ' ಎಂಬ ವಾಕ್ಯವು ಮುಖ್ಯಪ್ರಾಣಪರವಾಗಿದೆಯೆಂದು ಸಮರ್ಥಿಸುತ್ತದೆ. ಸ್ಥಾನಪ್ರಮಾಣವು ಸ್ವಲ್ಪ ವಿಳಂಬವಾಗಿ 'ಏವಮೇವ ಏಷ ಪ್ರಾಣಃ ಎಂಬುದನ್ನು ವಿಷ್ಣುಪರವಾಗಿದೆಯೆಂದು ಸಮರ್ಥಿಸುತ್ತದೆ. ವಿಳಂಬವಾಗಿ ಸಮರ್ಥಿಸುವಂತಹ ಸ್ಥಾನ ಪ್ರಮಾಣಕ್ಕಿಂತಲೂ ಶೀಘ್ರವಾಗಿ ವಾಯುಪರತ್ವವನ್ನು ಸಮರ್ಥಿಸುವ ಪ್ರಕರಣ ಪ್ರಮಾಣವೇ ಪ್ರಬಲವಾಗಿದೆಯೆಂದು ಇದರಿಂದ ನಿಶ್ಚಯವಾಗುತ್ತದೆ.

*'ಸಮಾಖ್ಯಾ' ಲಕ್ಷಣ -ಸಮಾಖ್ಯೆಗಿಂತ ಸ್ಥಾನವು ದುರ್ಬಲ*

ಸಮಾಖ್ಯಾಪ್ರಮಾಣವು ಸ್ಥಾನಪ್ರಮಾಣಕ್ಕಿಂತಲೂ ದುರ್ಬಲವಾಗಿದೆ. 'ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಾ ಮೇ ಶುಧ್ಯಂತಾಮ್' ಎಂಬ ಮಹಾನಾರಾಯಣೋಪನಿಷತ್ತಿನಲ್ಲಿರುವ ಸಮಾಖ್ಯಾಪ್ರಮಾಣಕ್ಕಿಂತಲೂ ತೈತ್ತಿರೀಯೋಪನಿಷತ್ತಿನಲ್ಲಿರುವ ಪ್ರಾಣಮಯಾದಿ ಶಬ್ದಗಳು

ಕೋಶವಾಚಕವಾಗಿದೆಯೆಂದು ಹೇಳಬಹುದು. ಇದರಂತೆ ಬ್ರಹ್ಮಶಬ್ದದ ಉಲ್ಲೇಖವಿರುವಂತಹ ಪ್ರಕರಣದಲ್ಲಿ ಹೇಳಿರುವುದರಿಂದ, ಅನ್ನಮಯಾದಿ ಶಬ್ದಗಳು ಬ್ರಹ್ಮವಾಚಕಗಳೂ ಆಗಿವೆಯೆಂದು ಹೇಳಬಹುದು. ಆದರೆ ಸಮಾಖ್ಯಾಪ್ರಮಾಣಕ್ಕಿಂತಲೂ ಪ್ರಕರಣಪ್ರಮಾಣವು ಪ್ರಬಲವಾದ್ದರಿಂದ ಅನ್ನಮಯಾದಿಗಳೆಲ್ಲವೂ ಬ್ರಹ್ಮವಾಚಕಗಳಾಗುತ್ತವೆಂದೇ ಸಿದ್ಧಾಂತ.

ಆದ್ದರಿಂದ ಶ್ರುತಿಯು ಲಿಂಗಕ್ಕಿಂತಲೂ ಪ್ರಬಲವಾಗಿದೆ. ವಾಕ್ಯಕ್ಕಿಂತ ಲಿಂಗವು ಪ್ರಬಲವಾಗಿದೆ. ಪ್ರಕರಣ ಪ್ರಮಾಣಕ್ಕಿಂತ ವಾಕ್ಯವು ಪ್ರಬಲವಾಗಿದೆ. ಸ್ಥಾನಪ್ರಮಾಣಕ್ಕಿಂತ ಪ್ರಕರಣವು ಪ್ರಬಲವಾಗಿದೆ. ಸ್ಥಾನಪ್ರಮಾಣವು ಸಮಾಖ್ಯಾಪ್ರಮಾಣಕ್ಕಿಂತಲೂ ಪ್ರಬಲವಾಗಿದೆಯೆಂದು ನಿಶ್ಚಯವಾಯಿತು.

### *ಶ್ರುತ್ಯಾದಿಗಳು ಹೇಗೆ ತಾತ್ಪರ್ಯನಿಶ್ಚಾಯಕಗಳಾಗುತ್ತವೆ*

ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಎಂಬ ಆರು ಬಗೆಯ ಈ ತಾತ್ಪರ್ಯಲಿಂಗಗಳೆಲ್ಲವೂ ಅನುಮಾನರೂಪದ್ಧಲ್ಲಿಯೇ ಅರ್ಥನಿಶ್ಚಾಯಕವಾಗುತ್ತವೆ. ಆದರೆ ಶ್ರುತಿ ಮಾತ್ರ ಶ್ರುತಿತ್ವಪ್ರಯುಕ್ತವಾಗಿ ಅರ್ಥನಿರ್ಣಾಯಕವಾಗುತ್ತದೆ.

ವೇದದಲ್ಲಿರುವ ಯಾವ ವಾಕ್ಯದ ಅರ್ಥವನ್ನು ನಿಶ್ಚಯ ಮಾಡಲು ಶ್ರುತಿ-ಲಿಂಗಾದಿಗಳನ್ನು ಅವಲಂಬಿಸುತ್ತೇವೋ, ಅಂತಹ ಶ್ರುತಿ-ಲಿಂಗಾದಿಗಳು ಅದೇ ವಾಕ್ಯದಲ್ಲಿಯೇ ಇರಬೇಕಾಗುತ್ತವೆ. ಅಂದರೆ ವಿಪ್ರತಿಪನ್ನವಾದ ವಾಕ್ಯದಲ್ಲಿರುವ ಶ್ರುತಿ-ಲಿಂಗ ಮೊದಲಾದವುಗಳನ್ನು ಅವಲಂಬಿಸಿ, ಅದರ ಅರ್ಥವನ್ನು ನಾವು ನಿಶ್ಚಯಮಾಡಬೇಕು. ಒಂದು ವೇಳೆ ವಿಪ್ರತಿಪನ್ನವಾದ ವಾಕ್ಯದಲ್ಲಿ ಶ್ರುತಿ-ಲಿಂಗಾದಿಗಳಿಲ್ಲದೇ, ಅದರ ಹಿಂದಿನ ಅಥವಾ ಮುಂದಿನ ವಾಕ್ಯದಲ್ಲಿ ಶ್ರುತಿ-ಲಿಂಗಾದಿಗಳಿದ್ದರೆ ಹಿಂದಿನ-ಮುಂದಿನ ವಾಕ್ಯಗಳ ಅರ್ಥವನ್ನು ನಿರ್ಣಯಿಸಿ ಅನಂತರ ವಿಪ್ರತಿಪನ್ನವಾದ ವಾಕ್ಯದ ಅರ್ಥವನ್ನು ನಿಶ್ಚಯಿಸಬೇಕು.

ಒಂದು ವೇಳೆ ಹಿಂದಿನ-ಮುಂದಿನ ವಾಕ್ಯಗಳಲ್ಲಿಯೂ ಮತ್ತು ವಿಪ್ರತಿಪನ್ನವಾದ ವಾಕ್ಯದಲ್ಲಿಯೂ ಶ್ರುತಿ-ಲಿಂಗಾದಿಗಳಿಲ್ಲದೇ ಬೇರೆ ಕಡೆ ಇದ್ದರೆ, ಆವಾಗ ಪ್ರಕರಣಕ್ಕೆ ನಿಶ್ಚಾಯಕವಾಗುವ ಮೂಲಕ ಅವು ತಾತ್ಪರ್ಯಲಿಂಗಗಳೆನಿಸುತ್ತವೆ.

ಒಂದು ವೇಳೆ ಶ್ರುತ್ಯಾದಿಗಳಿಂದ ಅರ್ಥನಿಶ್ಚಯವಾಗಿ ಉಪಕ್ರಮ-ಉಪಸಂಹಾರಗಳು ಅನುಗುಣವಾಗಿದ್ದರೆ ಅಲ್ಲಿ ತಾತ್ಪರ್ಯಾತಿಶಯವು ಉಂಟಾಗುತ್ತದೆ. ಶ್ರುತ್ಯಾದಿಗಳಿಂದ ಅರ್ಥನಿಶ್ಚಯವಾಗದೇ ಉಪಕ್ರಮೋಪಸಂಹಾರಗಳು ಮಾತ್ರವಿದ್ದಲ್ಲಿ ಪ್ರಕರಣವು ನಿರ್ಣಯದ್ವಾರಾ ವಿಪ್ರತಿಪನ್ನವಾದ ಅರ್ಥನಿರ್ಣಾಯಕವಾಗುತ್ತದೆ. ಇನ್ನು ಶ್ರುತ್ಯಾದಿಗಳಿಂದ ಅರ್ಥನಿಶ್ಚಯವು ಉಂಟಾಗಿ, ಉಪಕ್ರಮೋಪಸಂಹಾರಗಳು ವಿಪರೀತವಾದ ಅರ್ಥದಲ್ಲಿದ್ದರೆ ಶ್ರುತಿ-ಲಿಂಗಾದಿಗಳಿಂದ ಈ ವಾಕ್ಯವು ಬೇರೆ ಅರ್ಥವನ್ನೇ ನಿರ್ಣಯಿಸುತ್ತದೆ. ಉಪಕ್ರಮಾದಿಗಳಿಂದ ಪ್ರಕರಣವು ಅನ್ಯಪರವೆಂದು ನಿರ್ಣಯವಾಗುತ್ತದೆ. ಹೀಗೆ ವ್ಯವಸ್ಥೆಯನ್ನು ತಿಳಿಯಬೇಕು.

ಅನುವಾದಕರು

ಬೆಮ್ಮತ್ತಿ ವೆಂಕಟೇಶಾಚಾರ್ಯ

॥ ಶ್ರೀಕೃಷ್ಣಾರ್ಪಣಮಸ್ತು ॥

# ವಿಷಯಾನುಕ್ರಮಣಿಕೆ

## ಅಕ್ಷರಾಧಿಕರಣ

### ಭಾಷ್ಯ ತತ್ವಪ್ರಕಾಶಿಕಾ



### ತಾತ್ಪರ್ಯಚಂದ್ರಿಕಾ

## ಸದಧಿಕರಣ -

## ಭಾಷ್ಯ ತತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

## ದಹರಾಧಿಕರಣ -

## ಭಾಷ್ಯ ತತ್ತ್ವಪ್ರಕಾಶಿಕಾ

# ತಾತ್ಪರ್ಯಚಂದ್ರಿಕಾ

# ಅನುಕೃತ್ಯಧಿಕರಣ -
# ಭಾಷ್ಯ ತತ್ವಪ್ರಕಾಶಿಕಾ



# ತಾತ್ಪರ್ಯಚಂದ್ರಿಕಾ

## ವಾಮನಾಧಿಕರಣ

## ಭಾಷ್ಯ ತತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

# ಪರಿಶಿಷ್ಟ



## ವಿಶೇಷ ಸೂಚನೆ

ಈ ಸಂಪುಟದಲ್ಲಿನ ನ್ಯಾಯವಿವರಣ ಮೂರನೆಯ ಪಾದವನ್ನು ಒಟ್ಟಿಗೆ ಪರಿಶಿಷ್ಟ ಎಂಬ ಭಾಗದಲ್ಲಿ ನೀಡಲಾಗಿದೆ. ಮೂರನೆಯ ಪಾದದಲ್ಲಿ ಎಲ್ಲಾ ಅಧಿಕರಣಗಳ ಪೂರ್ವಪಕ್ಷಗಳನ್ನು ಒಟ್ಟಿಗೆ ತೆಗೆದುಕೊಂಡು ಸಿದ್ಧಾಂತಗಳನ್ನೂ ಸಹ ನ್ಯಾಯವಿವರಣದಲ್ಲಿ ಒಟ್ಟಿಗೆ ಹೇಳಿರುತ್ತಾರೆ. ಆದ್ದರಿಂದ ಆಯಾ ಅಧಿಕರಣಗಳಲ್ಲಿ ನ್ಯಾಯವಿವರಣಗಳನ್ನು ಪ್ರತ್ಯೇಕವಾಗಿ (ಭಾಗ -೩ರಲ್ಲಿ) ಸೇರಿಸಿಲ್ಲ.

ಮೂರನೆಯ ಪಾದದಿಂದ ಶ್ರೀರಘೂತ್ತಮ ಶ್ರೀಪಾದಂಗಳವರು ನ್ಯಾಯವಿವರಣಕ್ಕೆ ಭಾವಬೋಧವನ್ನು ಬರೆಯಲು ಪ್ರಾರಂಭಿಸಿದ್ದಾರೆ.

# ಅಕ್ಷರಾಧಿಕರಣ

(೧-೩-೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಅಕ್ಷರಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## 'ಅಕ್ಷರ' ಎಂದರೆ ಮಹಾವಿಷ್ಣುವೇ

**।। अथ अक्षराधिकरणम् ।।**

**सू – ॐ ॥ अक्षरमम्बरान्तधृतेः ॥ ॐ ॥ १० ॥**

ಸೂತ್ರಾರ್ಥ - 'ಏತದ್ವಾ ಅಕ್ಷರಸ್ಯ' ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ ಕೇಳಿಸುತ್ತಿರುವ ಅಕ್ಷರನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಏತಸ್ಮಿನ್ ಖಲ್ವಕ್ಷರೇ' ಎಂಬ ಬೃಹದಾರಣ್ಯಕ ವಾಕ್ಯದಂತೆ ಪೃಥಿವಿಯಿಂದಾರಂಭಿಸಿ 'ಆಕಾಶ' ಪದವಾಚ್ಯಳಾದ ಲಕ್ಷ್ಮೀದೇವಿಯವರೆಗೆ ಸಕಲ ವಸ್ತುಗಳನ್ನು ಧಾರಣೆ ಮಾಡಿದ್ದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ॐ अक्षरमम्बरान्तधृतेः ॐ ।। अक्षरं ''तद्वा एतत्'' इत्यक्षर शब्दवाच्यं ब्रह्मैव न चित्प्रकृतिः । कुतः? अम्बरान्तधृतेः अस्मिन्नक्षरे ''एतस्मिन्खल्वक्षरे'' (बृ.५-८-११.) इत्याकाशान्तपदार्थधारकत्व-श्रवणादित्यर्थः ।।१।।

ಅರ್ಥ -- ಅಕ್ಷರಂ = 'ತದ್ವಾ ಏತತ್' ಎಂಬಲ್ಲಿ ಕೇಳಿಸುತ್ತಿರುವ 'ಅಕ್ಷರ' ಶಬ್ದವಾಚ್ಯನಾದವನು ಬ್ರಹ್ಮನೇ; ಹೊರತು ಚಿತ್‌ಪ್ರಕೃತಿಯಲ್ಲ. ಏಕೆಂದರೆ ಅಂಬರಾಂತಧೃತೇಃ = 'ಇಂತಹ ಅಕ್ಷರನಲ್ಲಿ 'ಏತಸ್ಮಿನ್ ಖಲ್ವಕ್ಷರೇ' ಎಂಬ ಬೃಹದಾರಣ್ಯಕದಲ್ಲಿ ಆಕಾಶದವರೆಗೆ (ಆಕಾಶಪದವಾಚ್ಯಳಾದ ಲಕ್ಷ್ಮೀದೇವಿಯವರೆಗೆ) ಸಕಲ ಪದಾರ್ಥಗಳನ್ನು ಧಾರಣೆ ಮಾಡಿದ್ದಾನೆಂದು ಹೇಳಿದ್ದರಿಂದ.

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – अदृश्यत्वादिगुणा विष्णोरुक्ताः । 'अदृष्टं द्रष्टृश्रुतं श्रोतृ' (बृ.५-८-११) इत्यादिना । 'अहं सोममाहनसं बिभर्मि' (ऋ.१०-१२५-२.) इत्यादेस्तस्यापि सम्भवान्मध्यमाक्षरस्योक्ता इति ।**

ಅನುವಾದ - ಹಿಂದೆ ಅದೃಶ್ಯತ್ವಾಧಿಕರಣದಲ್ಲಿ ಅದೃಶ್ಯತ್ವವೇ ಮೊದಲಾದ ಗುಣಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಅದೇ ಗುಣಗಳು ಅಕ್ಷರತತ್ವದಲ್ಲಿದೆ ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿರುವ 'ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯಗಳು ಹೇಳುತ್ತವೆ . 'ಅಹಂ ಸೋಮಮಾಹನಸಂ ಬಿಭರ್ಮಿ' ಇತ್ಯಾದಿಶ್ರುತಿಯಲ್ಲಿ ಲಕ್ಷ್ಮೀದೇವಿಗೂ ಸಹ ಅದೇ ಗುಣಗಳನ್ನು ಹೇಳಲಾಗಿದೆ. ಆದ್ದರಿಂದ ಅದೃಶ್ಯತ್ವಾದಿ ಗುಣಗಳುಳ್ಳವಳು ಅಕ್ಷರಳೆನಿಸಿರುವ ಲಕ್ಷ್ಮೀದೇವಿಯೇ ಆಗಿರಬಹುದಲ್ಲವೆ ?

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ಸಾಧಿಸುತ್ತಿದ್ದಾರೆ. ಶ್ರುತ್ಯಾದಿಸಂಗತಿಯನ್ನು ಹಾಗೂ ವಿಷಯವಾಕ್ಯವನ್ನೂ ಸಹ ಉದಾಹರಿಸುತ್ತಾ ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ಅದೃಶ್ಯತ್ವಾದಿ' ಇವೇ ಮೊದಲಾದ ಭಾಷ್ಯದ ವಾಕ್ಯಗಳಿಂದ ತೋರಿಸುತ್ತಿದ್ದಾರೆ

ಅದೃಶ್ಯತ್ವಾದಿಗುಣಾಃ - ಅದೃಶ್ಯತ್ವವೇ ಮೊದಲಾದ ಗುಣಗಳು ವಿಷ್ಣೋಃ ಉಕ್ತಾಃ = ಅದೃಶ್ಯತ್ವಾಧಿಕರಣದಲ್ಲಿ ವಿಷ್ಣುವಿನಲ್ಲಿ ಸಮರ್ಥಿಸಲಾಯಿತು. ಆದರೆ ಅದೇ ಅದೃಶ್ಯತ್ವಾದಿಗುಣಗಳು ಅಕ್ಷರನಲ್ಲಿ ಕೇಳಿಸುತ್ತಿವೆ. ಅಂತಹ ಅಕ್ಷರನು ಯಾರು ಎಂದರೆ ಅದೃಷ್ಟಂ = ಯಾರಿಂದಲೂ ನೋಡಲು ಸಾಧ್ಯವಾಗದ, ದ್ರಷ್ಟೃ = ಸ್ವಯಂ ಎಲ್ಲವನ್ನೂ ನೋಡುವ, ಅಶ್ರುತಂ = ಯಾರಿಂದಲೂ ಕೇಳಿ ತಿಳಿಯಲು ಸಾಧ್ಯವಾಗದ ಶ್ರೋತೃ = ಎಲ್ಲವನ್ನೂ ಕೇಳುವ ವಸ್ತು ಯಾವುದಿದೆಯೋ ಅದೇ ಅಕ್ಷರವು, ಇತ್ಯಾದಿನಾ = ಇವೇ ಮೊದಲಾದ ವಾಕ್ಯಗಳಿಂದ ಅಕ್ಷರತತ್ವವನ್ನು ವರ್ಣಿಸಲಾಗಿದೆ. ಋಗ್ವೇದದಲ್ಲಿ ಅಹಂ = ನಾನೇ, ಆಹನಸಂ = ಚಂದ್ರನೇ ಅಭಿಮಾನಿಯಾಗಿರುವ ಲತೆಯ ಮೂಲಕ ಚೆನ್ನಾಗಿ ಹಿಂಡಲ್ಪಟ್ಟ, ಸೋಮಂ = ಸೋಮಲತೆಯ ಅಭಿಮಾನಿಯಾದ ಚಂದ್ರನನ್ನು, ಬಿಭರ್ಮಿ= ಧರಿಸಿದವಳಾಗಿದ್ದೇನೆ, ಇತ್ಯಾದೇಃ = ಇದೇ ರೀತಿಯ ಪ್ರಮಾಣಗಳಿಂದ, ತಸ್ಯಾಪಿ =

ಸ್ವಪ್ನಾದಿಕ್ರಿಯಾಗಳುಳ್ಳ ಲಕ್ಷ್ಮೀದೇವಿಗೂ ಸಹ, ಸಂಭವಾತ್ = ಅಕ್ಷರಶಬ್ದವಾಚ್ಯತ್ವವು ಉಕ್ತವಾಗುತ್ತದೆ. ಆದ್ದರಿಂದ ಮಧ್ಯಮಾಕ್ಷರಸ್ಯ = ಮಧ್ಯಮಾಕ್ಷರಳೆಂದು ಕರೆಸಿಕೊಳ್ಳುವ ಲಕ್ಷ್ಮೀದೇವಿಗೆ, ಉಕ್ತಾಃ = ಈ ಗುಣಗಳು ಹೇಳಲ್ಪಡುತ್ತವೆ.(१)

---

(१)भाष्यदीपिका – अत्राधिकरणेऽक्षरनामसमन्वयः क्रियते । श्रुत्यादिसङ्गतिं विषयवाक्यमुदाहृत्य विषयादिकं च सूचयन् सयुक्तिकं पूर्वपक्षं च दर्शयति – अदृश्यत्वादीति ।। उक्ता इत्यस्याऽवृत्तिः । ते इति शेषः । आद्यादिशब्देनाग्राह्यत्वादि गृह्यते । गुणा इत्यनेन चन्द्राद्याधारत्वगुणोऽपि गृह्यते । द्वितीयादिशब्देन 'अश्रुतं श्रोत्रमतं मन्त्रविज्ञातं विज्ञातृ नान्यदतोऽस्ति द्रष्टृ नान्यदतोऽस्ति श्रोतृ नान्यदतोऽस्ति मन्तृ नान्यदतोऽस्तिविज्ञातृ एतस्मिन् खल्वक्षरे गार्ग्याकाश ओतश्च प्रोतश्च' (बृ.५–८–११.) इति शिष्टवाक्यम्, तथा – 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' (बृ. ५.८.९) इति वाक्यं च गृह्यते । तृतीयादिशब्देन 'अहं त्वष्टारमुत पूषणं भगम्' (ऋ.१०.१२५.२) इति वाक्यम्, तथा –

'ये त्वक्षरमनिर्देश्यमव्यक्तं पर्युपासते ।
सर्वत्रगमचिन्त्यं च कूटस्थमचलं ध्रुवम् ।।' (गी. १२–३.)

इति गीतावाक्यम् ।

'आसीदिदं तमोऽभूतमप्रज्ञातमलक्षणम् ।
अप्रतर्क्यमविज्ञेयं प्रसुप्तमिव सर्वतः ।।'

इति तद्भाष्योदाहृतवाक्यं च गृह्यते । चशब्देनाक्षरशब्दस्य श्रीतत्त्वे प्रसिद्धेश्चेति अक्षरपदसूचितो हेतुः समुच्चीयते । तस्येति पदमावर्तते, विपरिणम्यते च । न केवलं विष्णोरेव, किन्तु 'तस्य' अक्षरस्यापीत्यपेरर्थः । विष्णुजडव्यावृत्त्यर्थं – मध्यमेति ।। 'भूमत्वप्राप्तिः' इति पूर्ववाक्याद् बुद्ध्या विवेकेन प्राप्तिरिति पदमत्रानुवर्तते । तथा च – पूर्वमदृश्यत्वाधिकरणे येऽदृश्यत्वादिगुणा अक्षरस्य विष्णोरुक्ताः । ते वाजसनेयके 'तद्वा एतदक्षरं गार्गि अदृष्टं द्रष्टृ' इत्यादिना वाक्येन 'मध्यमाक्षरस्य' श्रीतत्त्वस्य 'उक्ताः' उच्यन्ते इत्येका योजना । अपरा तु – 'तस्य' तेषामदृश्यत्वादिगुणानां 'तस्य' तस्मिन् मध्यमाक्षरेऽपि सम्भवाद् युक्तत्वात् 'तस्य' चन्द्राद्याधारत्वलिङ्गस्यापि 'अहं सोममाहनसम्' इत्यादिवाक्यात् तस्मिन्नक्षरे उपपत्तेः 'तस्य' अक्षरशब्दस्य तस्मिन् मध्यमाक्षरे प्रसिद्धेश्च 'तस्य' मध्यमाक्षरस्यापि 'तस्य' अक्षरनामवाच्यत्वस्य प्राप्तिरिति ।

तत्राऽद्ययोजनायाम् अदृश्यत्वाधिकरणोक्तादृश्यत्वादिगुणकाक्षरस्य विष्ण्वन्यत्वाक्षेपात् तेनास्याऽक्षेपिकी सङ्गतिरुक्ता भवति । तथाऽक्षराख्यो विषयः, द्रष्टृत्वाभिधायकोत्तरवाक्य-

भाष्यम् – अतो ब्रूते

सू – ॐ ॥ अक्षरमम्बरान्तधृतेः ॥ ॐ ॥ १० ॥

'एतस्मिन्नु खल्वक्षरे गार्ग्याकाश ओतश्च प्रोतश्च'(बृ. ५-८-११)
इत्यम्बरान्तस्य सर्वस्य धृतेर्ब्रह्मैवाक्षरम् ।

---

पर्यालोचनया जडव्यावृत्तेः । किं चेतनप्रकृतिरुत विष्णुरिति संशयश्च सूचितः । द्वितीययोजनायां सयुक्तिकः पूर्वपक्षः प्रदर्शित इति ज्ञातव्यम् । 'तद्वा' इत्यादेः सिद्धान्तरीत्याऽयमर्थः – 'तत्' आकाशाश्रयत्वेन वक्ष्यमाणम् 'अक्षरं' न क्षरतीत्यक्षर-शब्दवाच्यं ब्रह्म 'एतत्' एतल्लक्षणकं च प्रसिद्धम् । तदेवाऽह – अदृष्टमित्यादिना ॥ अन्यैः साकल्येनादृष्टत्वात् स्वयं द्रष्टृत्वाददृष्टं द्रष्ट्रित्युच्यते । एवमुत्तरवाक्यमपि व्याख्येयम् । द्रष्टृत्वादौ विशेषमाह – नेति ॥ 'अतः' अक्षरादन्यत् स्वातन्त्र्येण द्रष्टृ श्रोतृ मन्तृ ज्ञातृ च नास्तीत्यर्थः । 'एतस्मिन्' एवम्भूतेऽक्षरशब्दिते ब्रह्मणि दीप्तिनिमित्ताकाशपदोक्तं श्रीतत्त्वम् 'ओतश्च प्रोतश्च' अत्रोतं च प्रोतं च । तथा च सर्वाकारेण तदाश्रितं खल्वित्यर्थः । गार्गीति याज्ञवल्क्यकर्तृकपत्नीसम्बोधनम् । 'एतस्य वा अक्षरस्य' विष्णोः 'प्रशासने' आज्ञायामिति निमित्तसप्तमी । तथा च आज्ञामात्रात् 'सूर्याचन्द्रमसौ' 'केशौ सूर्यविघ्नमतौ' इति बृहद्भाष्योक्तेर्ब्रह्मरुद्रौ भाष्यटीकारीत्या प्रसिद्धरविचन्द्रौ च 'विधृतौ' विशेषेण धृतौ भवत इति । पूर्वपक्षी त्वक्षरशब्दं श्रीतत्त्वपरं मन्यते । तत्पक्षे आकाशशब्दः प्रकृत्यन्यतत्पोष्यपरः ।

अहम् 'आहनसं' स्वाभिमन्यमानलताद्वारा यज्ञेष्वभिषूयमाणं 'सोमं' सोमलताभिमानिनं चन्द्रं त्वष्टारं च 'उत पूषणं' पूषणं च भगं च 'बिभर्मि' दधामीत्यम्भ्रणीवाक्यस्यार्थः । त्वष्ट्रादयस्तु सूर्यप्रभेदाः । तत्त्वप्रदीपसत्तर्कदीपावल्योस्तु बृहद्भाष्यानुसारेण 'सोमम्' उमया सहितम् 'आहनसम्' आसमन्ताद् हन्तारं संहर्तारं रुद्रं बिभर्मीति व्याख्यातम्। 'अक्षरं' देहतोऽप्यविनाशि, 'अनिर्देश्यं' शब्दागोचरं, 'सर्वत्रगं' देशतो व्याप्तम्, 'अचिन्त्यं' मनसाऽग्राह्यं, गुणबाहुल्यात्, कूटे आकाशेऽभिमानित्वेन तिष्ठतीति 'कूटस्थम्', 'अचलं' कदाऽपि स्वपदादभ्रष्टं 'ध्रुवम्' उत्पत्तिविनाशशून्यम्, 'अव्यक्तं' श्रीतत्त्वं ये पर्युपासत इति गीतार्थः ।

प्रलये 'अभूतम्' अजातम् 'अप्रज्ञातं' प्रत्यक्षावेद्यम् अवेद्यलक्षणत्वादलक्षणम् अत एव 'अतर्क्यम्' अनुमानावेद्यम् 'अविज्ञेयम्' आगमावेद्यम् अनाद्यविद्याभिमानित्वात्, तमःशब्दवाच्यमिदं लक्ष्म्याख्यं तत्त्वं 'प्रसुप्तमिव' निर्व्यापारं 'सर्वतः' सर्वत्राऽसीदिति स्मृत्यर्थः ।

ಅನುವಾದ - ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಸೂತ್ರಕಾರರು 'ಓಂ ಅಕ್ಷರಮಂಬರಾಂತಧೃತೇಃ ಓಂ' ಎಂದು ಹೇಳಿರುತ್ತಾರೆ ಮತ್ತು 'ಏತಸ್ಮಿನ್‌ನು ಖಲ್ವಕ್ಷರೇ' ಇತ್ಯಾದಿ ವಾಕ್ಯದಿಂದ ಸಕಲಪದಾರ್ಥಗಳನ್ನೂ ಧರಿಸಿರುವಿಕೆ ಎಂಬ ಸಾಮರ್ಥ್ಯವನ್ನು ಹೇಳಿರುವುದರಿಂದ ಭಗವಂತನೇ ಅಕ್ಷರನೆನಿಸುತ್ತಾನೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ಸ್ಥಾಪನೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸುತ್ತಿದ್ದಾರೆ.

ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇ ಗಾರ್ಗಿ! = ಎಲೈ ಗಾರ್ಗಿಯೇ! ಏತಸ್ಮಿನ್‌ನು ಖಲ್ವಕ್ಷರೇ = ಈ ಅಕ್ಷರನಲ್ಲಿಯೇ, ಆಕಾಶಃ = ಆಕಾಶಾಂತವಾದ ಸಕಲಪದಾರ್ಥವು, ಓತಶ್ಚ ಪ್ರೋತಶ್ಚ = ಒಳಗೂ ಹೊರಗೂ ಆಶ್ರಯಿಸಿಕೊಂಡಿದೆ, ಇತಿ = ಹೀಗೆ, ಅಂಬರಾಂತಸ್ಯ = ಆಕಾಶದ ತನಕ ಇರುವ, ಸರ್ವಸ್ಯ = ಸಕಲ ಪದಾರ್ಥಗಳ, ಧೃತೇಃ = ಧರಿಸಿರುವಿಕೆ ಎಂಬ ಗುಣವನ್ನು ಹೇಳಿರುವುದರಿಂದ, ಅಕ್ಷರಮ್ = ಅಕ್ಷರ ಶಬ್ದವಾಚ್ಯನಾದವನು, ಬ್ರಹ್ಮೈವ = ಪರಬ್ರಹ್ಮನಾದ ವಿಷ್ಣುವೇ ಆಗುತ್ತಾನೆ.(१)

**भाष्यम् – 'य उ त्रिधातु पृथिवीमुत द्यामेको दधार भुवनानि विश्वा ।'**

**(ऋ. १-१५४-५)**

ಅನುವಾದ - ಯಾವ ವ್ಯಕ್ತಿಯು ಪ್ರಕೃತಿ, ಪುರುಷ, ಕಾಲ ಇವುಗಳನ್ನು ಧರಿಸಿದ್ದಾನೋ, ಅವನೇ ಭೂಮಿಯನ್ನೂ, ಅಂತರಿಕ್ಷವನ್ನೂ, ಸಕಲಲೋಕಗಳನ್ನೂ ಸಹ ಧರಿಸಿದ್ದಾನೆ. ಅಂತಹವನು ವಿಷ್ಣುವೇ ಆಗಿದ್ದಾನೆ ಎಂದು ತಿಳಿಯಬೇಕು.

---

(१) भाष्यदीपिका – सिद्धान्तयत्सूत्रमवतारयति – अत इति ।। सूत्रे गहनार्थत्वात् प्रथमं हेतुभागं व्याकरिष्यमाणोऽसिद्धिपरिहाराय श्रुतिमुदाहरति – एतस्मिन्निति ।। इतीत्यनन्तरं 'वाक्ये' इति शेषः । अन्यपदार्थं दर्शयन् विग्रहं दर्शयति – अम्बरेति ।। अम्बरमाकाशः अन्तो यस्य सर्वस्य पृथिव्यादेर्धारकत्वोक्तेरित्यर्थः । यद्यपि 'एतस्मिन्' इति वाक्येऽम्बरधृतिरेवोच्यते । नतु तदन्तसर्वधृतिः । तथाऽपि 'यदूर्ध्वं गार्गि दिवो यदर्वाक् पृथिव्या यदन्तरा द्यावापृथिवी...आकाश एव तदोतं च प्रोतं च' (बृ.५–८–७.) इत्यनेनाऽकाशस्य चित्प्रकृतेः सर्वाधारत्वमुक्त्वाऽनन्तरम् 'एतस्मिन्' इति वाक्येऽक्षरस्य तादृशप्रकृत्याधारत्वोक्तेः प्रकृतिद्वाराऽक्षरस्याम्बरान्तसर्वाधारत्वमत्रोक्तमेवेति न दोषः। एतच्च सूत्रेऽम्बरान्तेत्यन्तपदप्रयोगात् सूचितम् । सूत्रे तत्त्वित्यनुवृत्त-पदद्वयोपेतप्रतिज्ञाभागं व्याख्याति – ब्रह्मैवेति ।। अक्षरं ब्रह्मैवेत्यन्वयः । अनेन अक्षरस्य 'एतस्मिन्' इति प्रकृतिद्वाराऽऽकाशान्त सर्वाधारत्वश्रुतेरक्षरं ब्रह्मैवेति सूत्रार्थ उक्तो भवति ।

ಪ್ರತಿಪದಾರ್ಥ -- ಸರ್ವಾಧಾರತ್ವವು ಹೇಗೆ ವಿಷ್ಣುವಿಗೆ ನಿರ್ಣಾಯಕವಾಗುತ್ತದೆ ? ಎಂಬ ಪ್ರಶ್ನೆಗೆ ಸರ್ವಾಧಾರತ್ವವು ವಿಷ್ಣುಲಿಂಗವೆಂದು ಶ್ರುತಿಸಿದ್ಧವಾಗಿದೆ ಎಂಬ ವಿಚಾರವನ್ನು ತೋರಿಸುತ್ತಿದ್ದಾರೆ.

ಯ ಉ = ಯಾವ ವ್ಯಕ್ತಿಯು, ತ್ರಿಧಾತು = ಪ್ರಕೃತಿ, ಪುರುಷ, ಕಾಲ ಎಂಬ ಮೂರು ಧಾತುಗಳಿಗೆ, ಆಧಾರನೋ, ಏಕಃ = ಅವನೊಬ್ಬನೇ, ಪೃಥಿವೀಮ್ = ಭೂಮಿಯನ್ನು, ಉತ = ಮತ್ತು, ದ್ಯಾಂ = ಅಂತರಿಕ್ಷವನ್ನು, ವಿಶ್ವಾ = ಎಲ್ಲ, ಭುವನಾನಿ = ಲೋಕಗಳನ್ನು ದಧಾರ = ಧರಿಸಿದ್ದಾನೋ ಅವನು ವಿಷ್ಣುವೇ ಆಗಿದ್ದಾನೆ.(१)

**भाष्यम् – 'भर्ता सन् भ्रियमाणो बिभर्ति । एको देवो बहुधा निविष्टः । यदा भारं तन्द्रयते स भर्तुम् । परास्य भारं पुनरस्तमेति ॥' (तै.आ. ३-१-४.)**

ಅನುವಾದ - ಒಬ್ಬನೇ ವಿಷ್ಣು ತನ್ನನ್ನು ಹೊತ್ತುಕೊಂಡು ಎಲ್ಲವನ್ನೂ ಹೊತ್ತುನಿಂತಿದ್ದಾನೆ. ಇದು ವಿರುದ್ಧವಲ್ಲ. ಅನೇಕ ರೂಪವಿರುವುದರಿಂದ ಒಬ್ಬನಲ್ಲಿಯೇ ಈ ಧರ್ಮಗಳು ಉಪಪನ್ನವಾಗಬಹುದು. ಯಾವಾಗ ಈ ಭಾರವನ್ನು ಕೆಳಗಡೆ ಇಟ್ಟು ಪುನಃ ಹೊತ್ತುಕೊಳ್ಳಲು ಬಯಸುವುದಿಲ್ಲವೋ ಆವಾಗ ಈ ಜಗತ್ತು ನಾಶವನ್ನು ಹೊಂದುತ್ತದೆ.

ಪ್ರತಿಪದಾರ್ಥ -- ಜಗತ್ತಿಗೂ ಈಶನಿಗೂ ಏನು ವ್ಯತ್ಯಾಸ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ದೇವಃ = ಕ್ರೀಡಾದಿಗುಣವಿಶಿಷ್ಟನಾದ ಭಗವಂತನು, ಏಕಃ = ಒಬ್ಬನೇ, ಭರ್ತಾ = ಸಕಲಜಗತ್ತನ್ನು ಧರಿಸಿದವನಾಗಿ, ಬಹುಧಾ = ಅನೇಕರೂಪಗಳಿಂದ, ನಿವಿಷ್ಟಃ = ವ್ಯಾಪ್ತನಾಗಿದ್ದಾನೆ, ಭ್ರಿಯಮಾಣಃ =ಸಕಲಜೀವರಿಗೆ ಧಾರಕನಾಗಿ, ಬಿಭರ್ತಿ = ಜಗತ್ತಿನ ಧಾರಣೆಯನ್ನು ಮಾಡಿರುತ್ತಾನೆ, ಸಃ = ಆ ಪರಮಾತ್ಮನು, ಯದಾ = ಯಾವಾಗ, ಭಾರಂ = ಅತ್ಯಂತ ಭಾರವಾದ ಪ್ರಪಂಚವನ್ನು, ಪರಾಸ್ಯ = ಕೆಳಗಿಟ್ಟು, ಪುನಃ = ಮತ್ತೆ, ತಂ ಭಾರಂ = ಆ ಪ್ರಪಂಚದ ಭಾರವನ್ನು, ಭರ್ತುಂ = ಧರಿಸಲು, ತಂದ್ರಯತೇ = ಇಚ್ಛಿಸುವುದಿಲ್ಲವೋ, ತದಾ = ಆವಾಗ, ಅಸೌ = ಈ ಪ್ರಪಂಚದ ಭಾರವು, ಅಸ್ತಮೇತಿ = ನಾಶವನ್ನು ಹೊಂದುತ್ತದೆ.(२)

---

(१)भाष्यदीपिका – सर्वाधारत्वं कुतो विष्णुत्वनिश्चायकमित्यतः तस्य विष्णुलिङ्गत्वेन श्रुतिसिद्धत्वादित्याह – य इति ॥ व्याख्यातेयं श्रुतिर्जन्मनये ।

(२) भाष्यदीपिका – 'भर्ता सन्' इति तैत्तिरीयाणां श्रुतिः । 'देवः' प्राणाख्यो भगवान् स्वयं जगता जीवेन वा हृदि भ्रियमाणः तत् 'बिभर्ति' धत्ते पुष्णाति च । तर्हि जगदीशयोः साम्यापत्तिरित्यत आह – भर्ता सन्निति ॥ जगतो मूलभर्ता सन्नेव भ्रियमाणः, न स्वकीयस्थित्येत्यर्थः । नन्वेकस्यैव भगवतः भर्ता भ्रियमाणो बिभर्तीत्यनेकविधव्यवहारविषयत्वं कथमित्यत आह – एको बहुधेति ॥ एकोऽपि भर्तृत्वादिना 'बहुधा' बहुरूपेण च

**भाष्यम् – 'यस्मिन्निदं सं च वि चैधि सर्वं यस्मिन् देवा अधि विश्वे निषेदुः ।' (महाना. १३.) इत्यादिश्रुतेः।**

ಅನುವಾದ - ಯಾವ ವಿಷ್ಣುವಿನಿಂದ ಈ ಜಗತ್ತು ಅನೇಕ ವಿಧದಲ್ಲಿ ಬೆಳೆಯುತ್ತದೋ, ಯಾವ ವಿಷ್ಣುವಿನಲ್ಲಿ ಸಕಲ ದೇವತೆಗಳು ಆಶ್ರಯವನ್ನು ಪಡೆದಿದ್ದಾರೋ ಅವನೇ ಈ ಜಗತ್ತಿಗೆ ಸಂಹಾರಕನು.

ಪ್ರತಿಪದಾರ್ಥ -- ಯಸ್ಮಿನ್ = ಯಾವ ಪರಮಾತ್ಮನಲ್ಲಿ, ಇದಂ ಸರ್ವಂ = ಈ ಸಮಸ್ತ ಪ್ರಪಂಚವು, ಸಂ = ಚನ್ನಾಗಿ, ಚ = ಮತ್ತು, ವಿ = ನಾನಾಪ್ರಕಾರಗಳಿಂದ, ಏಧಿ = ಬೆಳೆಯುತ್ತಲೇ ಇದೆಯೋ, ಯಸ್ಮಿಂಶ್ಚ = ಯಾವ ಪರಮಾತ್ಮನಲ್ಲಿಯಾದರೂ, ವಿಶ್ವೇ ದೇವಾಃ = ಬ್ರಹ್ಮಾದಿಸಕಲದೇವತೆಗಳು, ಅಧಿನಿಷೇದುಃ = ಆಶ್ರಯವನ್ನು ಪಡೆದಿದ್ದಾರೆಯೋ, ಇತ್ಯಾದಿ = ಇವೇ ಮೊದಲಾದ, ಶ್ರುತೇಃ = ವೇದಗಳಿರುವುದರಿಂದ ವಿಷ್ಣುವೇ ಅಕ್ಷರನು.(१)

**भाष्यम् – 'पृथिव्यादि प्रकृत्यन्तं भूतं भव्यं भवच्च यत् ।**

**विष्णुरेको बिभर्तीदं नान्यस्तस्मात् क्षमो धृतौ ॥' - इति च स्कान्दे ।**

ಅನುವಾದ - ವಿಷ್ಣುವಿನಲ್ಲಿ ಈ ಜಗತ್ತು ಆಶ್ರಯವನ್ನು ಪಡೆದಿದೆ ಎಂದು ಸ್ಕಾಂದಪುರಾಣದಲ್ಲಿಯೂ ಹೇಳಲಾಗಿದೆ. ಭೂಮಿಯಿಂದ ಪ್ರಕೃತಿಯವರೆಗೆ ಹಿಂದಿನ, ಈಗಿನ

---

'निविष्टो' व्याप्त इत्यर्थः । तत्र प्रविष्ट इति वा । 'यदा भारं तन्द्रयते स भर्तुं परास्य भारं पुनरस्तमेति' इति वाक्यशेषः । 'स' विष्णुर्यदा तं जगद्भारं 'परास्य' अधो निधाय पुनर्भर्तुं 'तन्द्रयते' नेच्छति तदा असौ भारः 'अस्तमेति' नश्यतीत्यर्थः ।

(१) भाष्यदीपिका – 'यस्मिन्' इत्यपि तैत्तिरीयेऽन्यद्वाक्यम् । अत्र यच्छब्दस्य 'तदेव ब्रह्म परमम्' (महाना.१-६.) इत्युत्तरवाक्यस्थतच्छब्देनान्वयः । चौ प्रकार-समुच्चये । तथा च – 'यस्मिन्निदं' सर्वं जगत् 'सं' सम्यक् 'वि' विविधं 'चैधि' अवर्धत । एधतेर्लिङि छान्दसं रूपमेतत् । यद्वा – एधि वर्धते । अस्तीति वाऽर्थः । अस्मिन् पक्षे अस्तेर्लटि मध्यमपुरुषैकवचने छान्दसं रूपम् । वस्तुतो लोटि मध्यमपुरुषैकवचने रूपमेतत् । यस्मिंश्च 'विश्वे' सर्वे देवाः 'अधिनिषेदुः' यमध्यगुस्तदेव ब्रह्मेत्यर्थः । इत्यादिश्रुतेरित्यस्य अम्बरान्तधृतेरित्यनेनान्वयः । ब्रह्मण्यवगताया इति शेषः । तृतीयार्थे पञ्चमी । आदिशब्देन 'येनाऽवृतं खं च दिवं मही च येनाऽदित्यस्तपति तेजसा भ्राजसा च' (महाना.१-३) इत्यादिकम्, 'तमेव मृत्युममृतं तमाहुस्तं भर्तारं तमु गोप्तारमाहुः' (तै.आ.३-१४) इत्यादि च गृह्यते । तथा च विष्णुलिङ्गत्वेन श्रुतिसिद्धात् सर्वाधारणाद् विष्णुत्वनिश्चयो भवत्येवेति भावः ।

ಮುಂದಿನ ಎಲ್ಲ ವಸ್ತುಗಳನ್ನು ವಿಷ್ಣುವೇ ಧಾರಣೆ ಮಾಡಿದ್ದಾನೆ. ಬೇರೆ ಯಾರೂ ಸಹ ಅದನ್ನು ಧಾರಣೆ ಮಾಡಲು ಸಮರ್ಥರಲ್ಲ.

ಪ್ರತಿಪದಾರ್ಥ -- ವಿಷ್ಣುವಿನಲ್ಲಿ ಸರ್ವಾಧಾರತ್ವವಿದ್ದಂತೆ ಬೇರೆಯವರಲ್ಲಿಯೂ ಸಹ ಸರ್ವಾಧಾರತ್ವ ಇರಬಹುದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯತ್ = ಯಾವ, ಭೂತಂ = ಹಿಂದಿನ, ಭವ್ಯಂ = ಮುಂದಿನ, ಭವಚ್ಚ = ಈಗಿನ, ಪೃಥಿವ್ಯಾದಿ = ಪೃಥಿವಿಯಿಂದ ಆರಂಭಿಸಿ, ಪ್ರಕೃತ್ಯಂತಂ = ಮೂಲಪ್ರಕೃತಿಯ ಪರ್ಯಂತ ಇರುವ, ಇದಂ = ಈ ಜಗತ್ತನ್ನು, ವಿಷ್ಣುರೇವ = ವಿಷ್ಣು ಒಬ್ಬನೇ, ಬಿಭರ್ತಿ = ಧಾರಣೆ ಮಾಡಿದ್ದಾನೆ, ತಸ್ಮಾತ್ = ಆ ವಿಷ್ಣುವಿನ ದೆಸೆಯಿಂದ, ಅನ್ಯಃ = ಬೇರೆಯವನು, ಧೃತೌ = ಧಾರಣೆಮಾಡಲು, ನ ಕ್ಷಮಃ = ಸಮರ್ಥನಲ್ಲ, ಇತಿ = ಹೀಗೆ, ಸ್ಕಾಂದೇ = ಸ್ಕಾಂದ ಪುರಾಣದಲ್ಲಿ ಹೇಳಿದೆ.[१]

## श्रीपद्मनाभतीर्थविरचितसत्तर्कदीपावलिः

### ॐ ॥ अक्षरमम्बरान्तधृतेः ॥ ॐ ॥ १-३-१० ॥

**तद्वा 'एतदक्षरं गार्गि अदृष्टं द्रष्ट्रश्रुतं श्रोत्रमतं मन्तृ' इत्यादि श्रूयते । अत्र परमेश्वरधर्मादृष्टत्वादिगुणत्वेनोच्यमानमक्षरं लक्ष्मीतत्वं भवेत् । 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' इत्यादिना चन्द्राद्याधारत्वेन विष्णोरुक्तत्वात् चन्द्राद्याधारत्वस्य गुणत्वेन लक्ष्म्या उक्तत्वात् 'अहं सोममाहनसं विभर्म्यहं त्वष्टारमुत पूषणं भगम्' इति ।**

ಪೂರ್ವಪಕ್ಷ - 'ತದ್ವಾ ಏತದ್ವೈತದಕ್ಷರಂ ಗಾರ್ಗಿ' ಅದೃಷ್ಟಂ ದ್ರಷ್ಟೃಶ್ರುತಂ ಶೋತ್ರಮತಂ ಮಂತೃ' ಇತ್ಯಾದಿಯಾಗಿ ಅಕ್ಷರನಲ್ಲಿ ಅನೇಕಗುಣಗಳು ಕೇಳಿಸುತ್ತಿವೆ, ಈ ಎಲ್ಲ ಗುಣಗಳು ಪರಮಾತ್ಮನಲ್ಲಿ

(१) भाष्यदीपिका – विष्णुवदन्यस्यापि सर्वाधारत्वं किं न स्यादित्यत आह – पृथिव्यादीति ॥ प्रकृत्यन्तपदेन सौत्रान्तपदं व्याख्यातम् । 'भूतम्' अतीतं 'भव्यं' भविष्यत् 'भवत्' वर्तमानं 'यत्' इदं विश्वं तद्विष्णुः 'एक एव' असहायो बिभर्ति । तस्य धृतौ तस्माद्विष्णोरन्यः 'क्षमः' समर्थो नेत्यर्थः । इति स्कान्द इत्यस्य 'उक्तत्वात्' इत्यध्याहारेण न सावकाशत्वं लिङ्गस्येति वाक्यशेषेणान्वयः ।

ಒಪ್ಪಲು ಸಾಧ್ಯವಾಗದ ಕಾರಣ ಲಕ್ಷ್ಮೀದೇವಿಯೇ ಅಕ್ಷರ ಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ. 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಚಂದ್ರಾದಿ ಆಧಾರತ್ವ ಎಂಬ ಗುಣವು ಲಕ್ಷ್ಮಿಯಲ್ಲಿಯೇ ಯುಕ್ತವಾಗುತ್ತದೆ. ಏಕೆಂದರೆ 'ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್' ಎಂಬುದಾಗಿ ಅಂಭೃಣೀ ಸೂಕ್ತದಲ್ಲಿ ಚಂದ್ರಾದ್ಯಾಧಾರತ್ವವು ಲಕ್ಷ್ಮಿಯ ಗುಣವೆಂದು ಹೇಳಲಾಗಿದೆ.

**अत्राहनसशब्देन आसमन्ताद् हन्तृत्वाद् रुद्र उच्यते । सोमशब्दस्तूमया सहितः सोम इति रुद्रविशेषणमपि भवति । 'अक्षरमदृष्टं द्रष्टृ' इत्यादिना यदक्षरं तदन्यैरदृष्टत्वादिकं चोच्यते तल्लक्ष्मीतत्वास्यपि सम्भवतीत्येवं पूर्वपक्षयति अदृश्यत्वेत्यादिना ।।**

ಇಲ್ಲಿರುವ 'ಆಹನಸಂ' ಎಂಬ ಶಬ್ದದಿಂದ 'ಆಸಮಂತಾತ್ ಹಂತೃತ್ವಾತ್' ಎಂಬ ವ್ಯುತ್ಪತ್ತಿಯನ್ನು ವಿವಕ್ಷಿಸಿದಾಗ ಸಂಹಾರಕಾರಕನಾದ ರುದ್ರ ಎಂಬ ಅರ್ಥ ಬರುತ್ತದೆ. 'ಸೋಮಂ' ಎಂದರೆ ಉಮಾದೇವಿಯಿಂದ ಸಹಿತನಾದ ರುದ್ರನನ್ನು ಎಂದರ್ಥ. ಇನ್ನು 'ಅಕ್ಷರಂ ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಅಕ್ಷರತತ್ತ್ವಕ್ಕೆ ಹೇಳಲ್ಪಟ್ಟ ಅದೃಶ್ಯತ್ವಾದಿ ಗುಣಗಳೂ ಸಹ ಲಕ್ಷ್ಮೀದೇವಿಯಲ್ಲಿಯೇ ಯುಕ್ತವಾಗುತ್ತದೆ. ಆದ್ದರಿಂದ ಅಕ್ಷರಶಬ್ದದಿಂದ ವಾಚ್ಯಳಾದವಳು ಲಕ್ಷ್ಮೀದೇವಿ ಎಂದು ಪೂರ್ವಪಕ್ಷ. ಇದನ್ನು 'ಅದೃಶ್ಯತ್ವಾದಿಗುಣಕಾಃ' ಇತ್ಯಾದಿ ವಾಕ್ಯಗಳಿಂದ ತೋರಿಸಿರುತ್ತಾರೆ.

**सिद्धान्तयति अक्षरमित्यादिना ।। अत्राक्षरशब्देन विष्णुरुच्यते न लक्ष्मीः । 'यद् भूतं च भवच्च भविष्यच्चेत्याचक्षते । आकाश एव तदोतं च प्रोतं च । एतस्मिन् खल्वक्षरे गार्ग्याकाश ओतश्च प्रोतश्च' इति सर्वाधारतयोक्ताकाशशब्दगृहीत-लक्ष्म्याधाराक्षराज्ञानिमित्तजगद्धारणनिमित्तश्रवणादप्यत्राक्षरशब्देन विष्णुरुच्यते । विष्ण्वाज्ञया जगद्धारणस्य सप्तेत्यादिवचनसिद्धत्वात् ।**

ಸಿದ್ಧಾಂತ - ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ಓಂ ಅಕ್ಷರಂ ಅಂಬರಾಂತಧೃತೇಃ ಓಂ' ಎಂಬ ಸೂತ್ರವನ್ನು ರಚಿಸುತ್ತಿದ್ದಾರೆ ಅಕ್ಷರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು, ಮಹಾಲಕ್ಷ್ಮಿಯಲ್ಲ. ಏಕೆಂದರೆ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎಂಬ ಶ್ರುತಿಯಲ್ಲಿ ಆಕಾಶಶಬ್ದದಿಂದ ಲಕ್ಷ್ಮೀದೇವಿಯನ್ನು ವಿವಕ್ಷಿಸಿ ಲಕ್ಷ್ಮೀದೇವಿಯ ತನಕ ಸಮಸ್ತ ಚರಾಚರಾತ್ಮಕ ಪ್ರಪಂಚವನ್ನು ಧಾರಣೆ ಮಾಡಿರುವಿಕೆ ಎಂಬ ಗುಣವನ್ನು ಹೇಳಲಾಗಿದೆ. ಇಂತಹ ಸಮಸ್ತ ಜಗತ್ತನ್ನು ಗ್ರಹಿಸಿರುವಿಕೆಯು ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುವುದರಿಂದ ವಿಷ್ಣುವೇ ಅಕ್ಷರ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಸಮಸ್ತ ಜಗತ್ತಿನಲ್ಲಿರುವ ಸಕಲಪದಾರ್ಥಗಳೂ ವಿಷ್ಣುವಿನ ಆಜ್ಞೆಯಿಂದಲೇ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿವೆ ಎಂಬುದಾಗಿ 'ಸಪ್ತಾರ್ಧಗರ್ಭಾ' ಇತ್ಯಾದಿ ಶ್ರುತಿಯು ಹೇಳುತ್ತಿದೆ.

सप्त महदहङ्कारपञ्चभूताख्याः पदार्थाः आ समन्ताद् ऋद्धो गर्भो ब्रह्माण्डाख्यो येषां ते ऋद्धगर्भाः । वननीयो भजनीयश्चेति भुवनस्य विष्णोः रेतःस्थानीयाः ते तस्य प्रदिशा आदेशेन आज्ञया विधर्मणि विधारणे तिष्ठन्ति आज्ञयैव धृता इत्यर्थः ॥

'ತತ್ವ' ಎಂಬ ಪದಕ್ಕೆ ಮಹತ್ತತ್ವ, ಅಹಂಕಾರತತ್ವ, ಪಂಚಭೂತಗಳೆಂಬ ಏಳು ಪದಾರ್ಥಗಳು ಎಂದರ್ಥ. ಇವುಗಳೇ ಆವರಣವಾಗಿವುಳ್ಳ ಬ್ರಹ್ಮಾಂಡವು ಮತ್ತು ಅವುಗಳ ಅಭಿಮಾನಿಗಳಾದ ಬ್ರಹ್ಮಾದಿದೇವತೆಗಳು ಎಂಬ ಅರ್ಥವನ್ನು 'ಸಪ್ತಾರ್ಧಗರ್ಭಾ' ಎಂಬ ಮಾತಿಗೆ ಅರ್ಥವನ್ನು ತಿಳಿಯಬೇಕು. 'ಭುವನಸ್ಯ' ಎಂಬ ಪದಕ್ಕೆ 'ವನನೀಯಃ ಭಜನೀಯಃ' ಎಂಬ ವ್ಯುತ್ಪತ್ತಿಯಿಂದ ವಿಷ್ಣು ಎಂದರ್ಥ. ಇಂತಹ ವಿಷ್ಣುವಿನ ರೇತಸ್ಸಿನ ಸ್ಥಾನದಲ್ಲಿರುವ ಬ್ರಹ್ಮಾದಿದೇವತೆಗಳು ಅವನ ಆಜ್ಞೆಯಿಂದಲೇ ತಮ್ಮ ವಿವಿಧವಾದ ಧಾರಣಾದಿ ಕಾರ್ಯಗಳಲ್ಲಿ ತೊಡಗಿದ್ದಾರೆ ಎಂದರ್ಥ.

श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः॥ॐ॥

तत्वप्रकाशिका –

ॐ ॥ अक्षरमम्बरान्तधृतेः ॥ ॐ ॥

अत्राविनाशित्वसाम्यात् चित्प्रकृतौ हरौ च साधारणस्याक्षरनाम्नो ब्रह्मणि समन्वयप्रतिपादनादस्ति शास्त्रादिसङ्गतिः ।

ಈ ಅಧಿಕರಣದಲ್ಲಿ ಲಕ್ಷ್ಮೀದೇವಿಯಲ್ಲಿ ಹಾಗೂ ಶ್ರೀಹರಿಯಲ್ಲಿ ಸಾಧಾರಣವಾದ 'ಅವಿನಾಶಿತ್ವ' ಎಂಬ ಧರ್ಮವಿರುವ ಪ್ರಯುಕ್ತ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುತ್ತದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇವೆ ಎಂದು ತಿಳಿಯಬೇಕು.

तत्वप्रकाशिका – श्रुत्यादिसङ्गतिं विषयवाक्यमुदाहृत्य विषयादिकं च सूचयन् सयुक्तिकं पूर्वपक्षं च दर्शयति – अदृश्यत्वादीति ॥

ಶ್ರುತಿಸಂಗತಿ ಹಾಗೂ ಅಧಿಕರಣ ಸಂಗತಿಗಳನ್ನು, ವಿಷಯವಾಕ್ಯವನ್ನು ಉದಾಹರಿಸುತ್ತಾ ವಿಷಯಾದಿಗಳನ್ನು ಸೂಚಿಸುವವರಾಗಿ ಯುಕ್ತಿಬದ್ಧವಾದ ಪೂರ್ವಪಕ್ಷವನ್ನೂ ಸಹ ತೋರಿಸುತ್ತಿದ್ದಾರೆ 'ಅದೃಶ್ಯತ್ವಾದಿ' ಇತ್ಯಾದಿ ಭಾಷ್ಯದಿಂದ.

ಒಪ್ಪಲು ಸಾಧ್ಯವಾಗದ ಕಾರಣ ಲಕ್ಷ್ಮೀದೇವಿಯೇ ಅಕ್ಷರ ಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ. 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಚಂದ್ರಾದಿ ಆಧಾರತ್ವ ಎಂಬ ಗುಣವು ಲಕ್ಷ್ಮಿಯಲ್ಲಿಯೇ ಯುಕ್ತವಾಗುತ್ತದೆ. ಏಕೆಂದರೆ 'ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್' ಎಂಬುದಾಗಿ ಅಂಭೃಣೀ ಸೂಕ್ತದಲ್ಲಿ ಚಂದ್ರಾದ್ಯಾಧಾರತ್ವವು ಲಕ್ಷ್ಮಿಯ ಗುಣವೆಂದು ಹೇಳಲಾಗಿದೆ.

**अत्राहनसशब्देन आसमन्ताद् हन्तृत्वाद् रुद्र उच्यते । सोमशब्दस्तूमया सहितः सोम इति रुद्रविशेषणमपि भवति । 'अक्षरमदृष्टं द्रष्टृ' इत्यादिना यदक्षरं तदन्यैरदृष्टत्वादिकं चोच्यते तल्लक्ष्मीतत्वास्यपि सम्भवतीत्येवं पूर्वपक्षयति अदृश्यत्वेत्यादिना ॥**

ಇಲ್ಲಿರುವ 'ಆಹನಸಂ' ಎಂಬ ಶಬ್ದದಿಂದ 'ಆಸಮಂತಾತ್ ಹಂತೃತ್ವಾತ್' ಎಂಬ ವ್ಯುತ್ಪತ್ತಿಯನ್ನು ವಿವಕ್ಷಿಸಿದಾಗ ಸಂಹಾರಕಾರಕನಾದ ರುದ್ರ ಎಂಬ ಅರ್ಥ ಬರುತ್ತದೆ. 'ಸೋಮಂ' ಎಂದರೆ ಉಮಾದೇವಿಯಿಂದ ಸಹಿತನಾದ ರುದ್ರನನ್ನು ಎಂದರ್ಥ. ಇನ್ನು 'ಅಕ್ಷರಂ ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಅಕ್ಷರತತ್ತ್ವಕ್ಕೆ ಹೇಳಲ್ಪಟ್ಟ ಅದೃಶ್ಯತ್ವಾದಿ ಗುಣಗಳೂ ಸಹ ಲಕ್ಷ್ಮೀದೇವಿಯಲ್ಲಿಯೇ ಯುಕ್ತವಾಗುತ್ತದೆ. ಆದ್ದರಿಂದ ಅಕ್ಷರಶಬ್ದದಿಂದ ವಾಚ್ಯಳಾದವಳು ಲಕ್ಷ್ಮೀದೇವಿ ಎಂದು ಪೂರ್ವಪಕ್ಷ. ಇದನ್ನು 'ಅದೃಶ್ಯತ್ವಾದಿಗುಣಕಃ' ಇತ್ಯಾದಿ ವಾಕ್ಯಗಳಿಂದ ತೋರಿಸಿರುತ್ತಾರೆ.

**सिद्धान्तयति अक्षरमित्यादिना ॥ अत्राक्षरशब्देन विष्णुरुच्यते न लक्ष्मीः । 'यद् भूतं च भवच्च भविष्यच्चेत्याचक्षते । आकाश एव तदोतं च प्रोतं च । एतस्मिन् खल्वक्षरे गार्ग्याकाश ओतश्च प्रोतश्च' इति सर्वाधारतयोक्ताकाशशब्दगृहीत-लक्ष्म्याधाराक्षराज्ञानिमित्तजगद्धारणनिमित्तश्रवणादप्यत्राक्षरशब्देन विष्णुरुच्यते । विष्ण्वाज्ञया जगद्धारणस्य सप्तेत्यादिवचनसिद्धत्वात् ।**

ಸಿದ್ಧಾಂತ - ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ಓಂ ಅಕ್ಷರಂ ಅಂಬರಾಂತಧೃತೇಃ ಓಂ' ಎಂಬ ಸೂತ್ರವನ್ನು ರಚಿಸುತ್ತಿದ್ದಾರೆ ಅಕ್ಷರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು, ಮಹಾಲಕ್ಷ್ಮಿಯಲ್ಲ. ಏಕೆಂದರೆ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎಂಬ ಶ್ರುತಿಯಲ್ಲಿ ಆಕಾಶಶಬ್ದದಿಂದ ಲಕ್ಷ್ಮೀದೇವಿಯನ್ನು ವಿವಕ್ಷಿಸಿ ಲಕ್ಷ್ಮೀದೇವಿಯ ತನಕ ಸಮಸ್ತ ಚರಾಚರಾತ್ಮಕ ಪ್ರಪಂಚವನ್ನು ಧಾರಣೆ ಮಾಡಿರುವಿಕೆ ಎಂಬ ಗುಣವನ್ನು ಹೇಳಲಾಗಿದೆ. ಇಂತಹ ಸಮಸ್ತ ಜಗತ್ತನ್ನು ಗ್ರಹಿಸಿರುವಿಕೆಯು ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುವುದರಿಂದ ವಿಷ್ಣುವೇ ಅಕ್ಷರ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಸಮಸ್ತ ಜಗತ್ತಿನಲ್ಲಿರುವ ಸಕಲಪದಾರ್ಥಗಳೂ ವಿಷ್ಣುವಿನ ಆಜ್ಞೆಯಿಂದಲೇ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿವೆ ಎಂಬುದಾಗಿ 'ಸಪ್ತಾರ್ಧಗರ್ಭಾ' ಇತ್ಯಾದಿ ಶ್ರುತಿಯು ಹೇಳುತ್ತಿದೆ.

सप्त महदहङ्कारपञ्चभूताख्याः पदार्थाः आ समन्ताद् ऋद्धो गर्भो ब्रह्माण्डाख्यो येषां ते ऋद्धगर्भाः । वननीयो भजनीयश्चेति भुवनस्य विष्णोः रेतःस्थानीयाः ते तस्य प्रदिशा आदेशेन आज्ञया विधर्मणि विधारणे तिष्ठन्ति आज्ञयैव धृता इत्यर्थः ।।

'ತತ್ತ್ವ' ಎಂಬ ಪದಕ್ಕೆ ಮಹತ್ತತ್ತ್ವ, ಅಂಹಕಾರತತ್ತ್ವ ಪಂಚಭೂತಗಳೆಂಬ ಏಳು ಪದಾರ್ಥಗಳು ಎಂದರ್ಥ. ಇವುಗಳೇ ಆವರಣವಾಗಿವುಳ್ಳ ಬ್ರಹ್ಮಾಂಡವು ಮತ್ತು ಅವುಗಳ ಅಭಿಮಾನಿಗಳಾದ ಬ್ರಹ್ಮಾದಿದೇವತೆಗಳು ಎಂಬ ಅರ್ಥವನ್ನು 'ಸಪ್ತಾರ್ಧಗರ್ಭಾ' ಎಂಬ ಮಾತಿಗೆ ಅರ್ಥವನ್ನು ತಿಳಿಯಬೇಕು. 'ಭುವನಸ್ಯ' ಎಂಬ ಪದಕ್ಕೆ 'ವನನೀಯಃ ಭಜನೀಯಃ' ಎಂಬ ವ್ಯುತ್ಪತ್ತಿಯಿಂದ ವಿಷ್ಣು ಎಂದರ್ಥ. ಇಂತಹ ವಿಷ್ಣುವಿನ ರೇತಸ್ಸಿನ ಸ್ಥಾನದಲ್ಲಿರುವ ಬ್ರಹ್ಮಾದಿದೇವತೆಗಳು ಅವನ ಆಜ್ಞೆಯಿಂದಲೇ ತಮ್ಮ ವಿವಿಧವಾದ ಧಾರಣಾದಿ ಕಾರ್ಯಗಳಲ್ಲಿ ತೊಡಗಿದ್ದಾರೆ ಎಂದರ್ಥ.

श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः।।ॐ।।

तत्वप्रकाशिका –

ॐ ।। अक्षरमम्बरान्तधृतेः ।। ॐ ।।

अत्राविनाशित्वसाम्यात् चित्प्रकृतौ हरौ च साधारणस्याक्षरनाम्नो ब्रह्मणि समन्वयप्रतिपादनादस्ति शास्त्रादिसङ्गतिः ।

ಈ ಅಧಿಕರಣದಲ್ಲಿ ಲಕ್ಷ್ಮೀದೇವಿಯಲ್ಲಿ ಹಾಗೂ ಶ್ರೀಹರಿಯಲ್ಲಿ ಸಾಧಾರಣವಾದ 'ಅವಿನಾಶಿತ್ವ' ಎಂಬ ಧರ್ಮವಿರುವ ಪ್ರಯುಕ್ತ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುತ್ತದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇವೆ ಎಂದು ತಿಳಿಯಬೇಕು.

तत्वप्रकाशिका – श्रुत्यादिसङ्गतिं विषयवाक्यमुदाहृत्य विषयादिकं च सूचयन् सयुक्तिकं पूर्वपक्षं च दर्शयति – अदृश्यत्वादीति ।।

ಶ್ರುತಿಸಂಗತಿ ಹಾಗೂ ಅಧಿಕರಣ ಸಂಗತಿಗಳನ್ನು, ವಿಷಯವಾಕ್ಯವನ್ನು ಉದಾಹರಿಸುತ್ತಾ ವಿಷಯಾದಿಗಳನ್ನು ಸೂಚಿಸುವವರಾಗಿ ಯುಕ್ತಿಬದ್ಧವಾದ ಪೂರ್ವಪಕ್ಷವನ್ನೂ ಸಹ ತೋರಿಸುತ್ತಿದ್ದಾರೆ 'ಅದೃಶ್ಯತ್ವಾದಿ' ಇತ್ಯಾದಿ ಭಾಷ್ಯದಿಂದ.

**तत्वप्रकाशिका – अदृश्यत्वादिगुणाः पूर्वं विष्णोरुक्तास्ते च वाचसनेयके अक्षरस्योक्ताः ।**

ಅದೃಶ್ಯತ್ವಾದಿಗುಣಗಳನ್ನು ಅದೃಶ್ಯತ್ವಾಧಿಕರಣದಲ್ಲಿ ವಿಷ್ಣುವಿನಲ್ಲಿ ಸಮರ್ಥಿಸಲಾಯಿತು. ಅದೇ ಅದೃಶ್ಯತ್ವಾದಿಗುಣಗಳನ್ನು ಬೃಹದಾರಣ್ಯಕೋಪನಿಷತ್ತು ಅಕ್ಷರನಿಗೆ ಹೇಳುತ್ತಿದೆ. ಅದು ಹೀಗೆ -

**तत्वप्रकाशिका – 'तद्वा एतदक्षरं गार्गि अदृष्टं द्रष्टृश्रुतं श्रोत्रमतं मन्त्रविज्ञातं विज्ञातृ नान्यदतोऽस्ति द्रष्टृ नान्यदतोऽस्ति श्रोतृ नान्यदतोऽस्ति मन्तृ नान्यदतोऽस्ति विज्ञात्रेतस्मिन्खल्वक्षरे गार्ग्याकाश ओतश्च प्रोतश्च' इति ।**

'ಎಲೈ ! ಗಾರ್ಗಿಯೇ, ಅಕ್ಷರತತ್ತ್ವವು ಬೇರೆಯವರಿಂದ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದ್ದು, ಕೇಳಲೂ ಸಹ ಸಾಧ್ಯವಿಲ್ಲ, ಮನನಕ್ಕೂ ಸಹ ವಿಷಯವಲ್ಲ, ಬೇರೆಯವರಿಂದ ನೋಡಲು ಸಾಧ್ಯವಿಲ್ಲದಿದ್ದರೂ, ಸ್ವತಃ ಎಲ್ಲವನ್ನೂ ಪೂರ್ಣವಾಗಿ ನೋಡುತ್ತದೆ, ಕೇಳುತ್ತದೆ, ಮನನ ಮಾಡುತ್ತದೆ, ತಿಳಿಯುತ್ತದೆ. ಅದನ್ನು ಬಿಟ್ಟು ಬೇರೆ ಯಾರೂ ಸಹ ನೋಡಿದವರೂ, ಕೇಳಿದವರೂ, ಮನನ ಮಾಡಿದವರೂ, ವಿಶೇಷವಾಗಿ ತಿಳಿದವರೂ ಇರುವುದಿಲ್ಲ. ಎಲೈ ! ಗಾರ್ಗಿಯೇ, ಇಂತಹ ಅಕ್ಷರತತ್ವದಲ್ಲಿ ಆಕಾಶವು ಸಂಪೂರ್ಣವಾಗಿ ಆಶ್ರಯ ಪಡೆದಿದೆ' ಎಂದು.

**तत्वप्रकाशिका – तस्याक्षरस्य विष्णोरन्यत्वेऽदृश्यत्वादिकं चान्यस्यैव प्रसजयेत इत्यवश्यं निर्णेयत्वम् ।**

ಈ ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದ್ಯವಾದ ಅಕ್ಷರವು ವಿಷ್ಣುವಿಗಿಂತ ಬೇರೆಯಾದರೆ ಅದೃಶ್ಯತ್ವಾದಿ ಗುಣಗಳೂ ಸಹ ಬೇರೆಯವರಲ್ಲಿಯೇ ಬರುತ್ತದೆ. ಆದ್ದರಿಂದ ಅಕ್ಷರಶಬ್ದದಿಂದ ಯಾರು ವಾಚ್ಯರಾಗಿದ್ದಾರೆಂಬುದನ್ನು ಅವಶ್ಯವಾಗಿ ನಿರ್ಣಯ ಮಾಡಬೇಕು.

**तत्वप्रकाशिका – तदक्षरं विषयः । किं विष्णुरुत चेतनप्रकृतिरिति सन्देहः । उक्तसाधारण्यं च सन्देहबीजम् ।**

ಈ ಅಧಿಕರಣದಲ್ಲಿ ಪೂರ್ವಪ್ರಕೃತವಾದ ಅಂತಹ ಅಕ್ಷರವೇ ವಿಷಯವಾಗಿದೆ. ಇಂತಹ ಅಕ್ಷರವು ವಿಷ್ಣುವೋ ಅಥವಾ ಲಕ್ಷ್ಮೀದೇವಿಯೋ ? ಎಂದು ಸಂದೇಹ. ಎರಡೂಕಡೆ ಸಮಾನವಾಗಿರುವ ಅವಿನಾಶಿತ್ವವು ಸಂದೇಹಕ್ಕೆ ಕಾರಣ.

**तत्वप्रकाशिका – द्रष्टृत्वादिश्रवणात् जडप्रकृतेरोङ्कारस्य च न सन्देहनिविष्टत्वम् । उत्तराधिकरणे त्वीक्षणस्य प्रथमप्रतीतेरस्त्यवकाशः । एतदक्षरं मध्यमं श्रीतत्त्वमेवेति पूर्वः पक्षः ।**

ಈ ಶ್ರುತಿಯಲ್ಲಿ ಅಕ್ಷರತತ್ವಕ್ಕೆ ದ್ರಷ್ಟೃತ್ವವೇ ಮೊದಲಾದ ಧರ್ಮಗಳು ಹೇಳಲ್ಪಟ್ಟಿವೆ. ಆದ್ದರಿಂದ ಜಡಪ್ರಕೃತಿಯನ್ನಾಗಲೀ, ಓಂಕಾರವನ್ನಾಗಲೀ, ಸಂಶಯ ಕೋಟಿಯಲ್ಲಿ ಸೇರಿಸಲು ಬರುವುದಿಲ್ಲ. ಮುಂದಿನ ಅಧಿಕರಣದ ವಿಷಯವಾಕ್ಯವೆನಿಸಿದ 'ಸದೇವ ಸೋಮ್ಯ ಇದಮಗ್ರ ಆಸೀತ್'ಎಂಬ ವಾಕ್ಯದಲ್ಲಿ ಈಕ್ಷಣೀಯತ್ವಧರ್ಮವು ಮೊದಲು ಪ್ರತೀತವಾಗದ ಕಾರಣ ಅಲ್ಲಿ ಅಕ್ಷರಶಬ್ದದಿಂದ ಜಡಪ್ರಕೃತಿಯನ್ನೂ ಸಹ ತೆಗೆದುಕೊಳ್ಳಲು ಬರುತ್ತದೆ. ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ ಮೊದಲೇ ಈಕ್ಷಣಧರ್ಮವು ಕೇಳಿಸುತ್ತಿರುವುದರಿಂದ ಲಕ್ಷ್ಮೀದೇವಿಯನ್ನೇ ಸ್ವೀಕರಿಸಬೇಕು. ಆದ್ದರಿಂದ ಶ್ರೀತತ್ತ್ವವೆನಿಸಿದ ಲಕ್ಷ್ಮೀದೇವಿಯೇ ಮಧ್ಯಮಾಕ್ಷರಳೆನಿಸಿದ್ದಾಳೆಂದು ಪೂರ್ವಪಕ್ಷ.

**तत्वप्रकाशिका – तत्राक्षरशब्दस्य प्रसिद्धेः । 'एतस्य वाऽक्षरस्य प्रशासने गार्गि सूर्याचन्द्रमसौ विधृतौ तिष्ठतः' इत्यादिनाऽक्षरस्य चन्द्रसूर्याद्याधारत्व प्रतीतेश्च । चन्द्राद्याधारत्वस्य च 'अहं सोमम्' इत्यादेस्तद्धर्मत्वात् ।**

ಶ್ರೀಲಕ್ಷ್ಮೀದೇವಿಯಲ್ಲಿ ಅಕ್ಷರಶಬ್ದವು ಪ್ರಸಿದ್ಧವೇ ಆಗಿದೆ. ಏಕೆಂದರೆ 'ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ', 'ಅಕ್ಷರತತ್ವದ ಆಜ್ಞೆಯಿಂದ ಸೂರ್ಯ, ಚಂದ್ರ ಎಲ್ಲರೂ ಸಹ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿದ್ದಾರೆ'. ಇತ್ಯಾದಿ ವಾಕ್ಯದಿಂದ ಅಕ್ಷರ ತತ್ತ್ವವು ಸೂರ್ಯ, ಚಂದ್ರ ಮೊದಲಾದವರಿಗೆ ಆಧಾರವಾಗಿದೆ ಎಂದು ಹೇಳಲಾಗಿದೆ. ಇಂತಹ ಸೂರ್ಯ ಚಂದ್ರ ಮೊದಲಾದವರಿಗೆ ಆಧಾರವಾಗಿರುವಿಕೆಯು ಲಕ್ಷ್ಮೀದೇವಿಯ ಗುಣವಾಗಿದೆ ಎಂದು 'ಅಹಂ ಸೋಮಮ್' ಇತ್ಯಾದಿ ಅಂಭೃಣೀ ಸೂಕ್ತದ ವಾಕ್ಯದಿಂದ ಸಿದ್ಧವಾಗಿದೆ.

**तत्वप्रकाशिका – नच वाच्यमदृश्यत्वादिविष्णुधर्मश्रवणात् तस्याक्षरत्वमिति। अदृश्यत्वादिगुणानां मध्यमाक्षरेऽपि सम्भवात् ।**

ಪ್ರಶ್ನೆ - ಅದೃಶ್ಯತ್ವಾದಿ ಧರ್ಮಗಳೂ ಸಹ ಅದೇ ವಾಕ್ಯದಲ್ಲಿ ಕೇಳಿಸುತ್ತಿರುವುದರಿಂದ ಅದೃಶ್ಯತ್ವಾಧಿಕರಣದ ನ್ಯಾಯದಂತೆ ವಿಷ್ಣುವಿನ ಅಸಾಧಾರಣ ಧರ್ಮವಾದ ಅದೃಶ್ಯತ್ವಗುಣದಿಂದ ವಿಷ್ಣುವೇ ಅಕ್ಷರಶಬ್ದ ವಾಚ್ಯನಾಗಬೇಕಲ್ಲವೆ?

ಉತ್ತರ - ಆಗಬೇಕಾಗಿಲ್ಲ. ಏಕೆಂದರೆ ಅದೃಶ್ಯತ್ವಾದಿ ಧರ್ಮವು ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀ ದೇವಿಯಲ್ಲೂ ಉಪಪನ್ನವಾಗುತ್ತದೆ.

**तत्वप्रकाशिका – तथा च स्मृतिः –**

**'ये त्वक्षरमनिर्देश्यमव्यक्तं पर्युपासते ।**
**सर्वत्रगमचिन्त्यं च कूटस्थमचलं ध्रुवम्' ।**

**'आसीदिदं तमोभूतमप्रज्ञातमलक्षणम् ।**
**अप्रतर्क्यमनिर्देश्यं प्रसुप्तमिव सर्वतः' इत्यादि ।**

ಈ ವಿಷಯದಲ್ಲಿ ಸ್ಮೃತಿ ಪ್ರಮಾಣವಿದೆ.

'ಯೇऽ ತ್ವಕ್ಷರಂ ಅನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥

ಅಕ್ಷರಳು ಅತ್ಯಂತ ಸೂಕ್ಷ್ಮಳಾದ್ದರಿಂದ ಅನಿರ್ದೇಶ್ಯಳೂ, ಅವ್ಯಕ್ತಳೂ, ಸರ್ವತ್ರವ್ಯಾಪ್ತಳೂ, ಅಚಿಂತ್ಯಳೂ, ಆಕಾಶದಂತೆ ಕೂಟಸ್ಥಳೂ, ಅಚಲಳೂ, ನಿರ್ವಿಕಾರಳೂ ಆಗಿದ್ದಾಳೆ. ಇಂತಹ ಅಕ್ಷರಳೆನಿಸಿದ ಲಕ್ಷ್ಮೀಯನ್ನು ಯಾರು ಉಪಾಸನೆ ಮಾಡುತ್ತಾರೋ, ಎಂಬುದಾಗಿ ಈ ಸ್ಮೃತಿಯು ಅದೃಶ್ಯತ್ವವನ್ನು ಲಕ್ಷ್ಮೀಯಲ್ಲಿ ಹೇಳುತ್ತಿದೆ ಮತ್ತು

ಆಸೀದಿದಂ ತಮೋಭೂತಂ ಅಪ್ರಜ್ಞಾತಮಲಕ್ಷಣಮ್ ॥
ಅಪ್ರತರ್ಕ್ಯಮನಿರ್ದೇಶ್ಯಂ ಪ್ರಸುಪ್ತಮಿವ ಸರ್ವತಃ ॥

'ಅಜ್ಞೇಯಸ್ವರೂಪಳೂ, ಶಬ್ದದಿಂದ ತಿಳಿಯಲು ಸಾಧ್ಯವಿಲ್ಲದವಳೂ, ಲೌಕಿಕ ಚಿಹ್ನೆ ಇಲ್ಲದವಳೂ, ಪ್ರತ್ಯಕ್ಷ ಹಾಗೂ ಅನುಮಾನಗಳಿಂದ ಅಗೋಚರಳೂ, ಪ್ರಳಯಕಾಲದಲ್ಲಿ ವ್ಯಾಪಾರವಿಲ್ಲದವಳೂ, ಜಡಪ್ರಕೃತಿಗೆ ಅಭಿಮಾನಿಯಾದವಳೂ ಸಹ, ಲಕ್ಷ್ಮೀದೇವಿಯೇ ಆಗಿದ್ದಾಳೆ'. ಈ ಸ್ಮೃತಿಯಲ್ಲೂ ಸಹ ಅದೃಶ್ಯತ್ವಾದಿಧರ್ಮವು ಲಕ್ಷ್ಮೀದೇವಿಯ ಲಕ್ಷಣವೆಂದು ವರ್ಣಿಸಲ್ಪಟ್ಟಿದೆ.

**तत्वप्रकाशिका – अथापि स्यात् । अक्षरश्रुतेरदृश्यत्वादिलिङ्गानां च मध्यमोत्तमाक्षरयोः साम्येऽत्र मध्यमैवोच्यत इति निर्बन्धे को हेतुरिति ॥**

ಪ್ರಶ್ನೆ - ಅಕ್ಷರಶ್ರುತಿ ಹಾಗೂ ಅದೃಶ್ಯತ್ವಾದಿಲಿಂಗಗಳೆಲ್ಲವೂ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲಿ ಹಾಗೂ ಉತ್ತಮಾಕ್ಷರನೆನಿಸಿದ ವಿಷ್ಣುವಿನಲ್ಲಿ ಸಮಾನವಾಗಿರುತ್ತವೆ. ಹೀಗಿರುವಾಗ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೇ ಅಕ್ಷರಳಾಗುತ್ತಾಳೆ ಎಂದು ಆಗ್ರಹಿಸಲು ಏನು ಕಾರಣ ?

**तत्वप्रकाशिका – मैवम् । 'न तदश्नाति किञ्चन' इत्यक्षरस्यानशनोक्तेः । तच्च विष्णोर्विरुद्धम् । 'अत्ता चराचरग्रहणात्' इत्युक्तत्वात् । नच मध्यमाक्षरस्यानशनाङ्गीकारे विरोधोऽस्ति । अतो मध्यमाक्षरमेवैतदक्षरमिति तस्यैवादृश्यत्वादिगुणकत्वमिति भावः ।**

ಇದು ತಪ್ಪು. 'ನ ತದಶ್ನಾತಿ ಕಿಂಚನ' ಎಂಬುದಾಗಿ ಯಾರು ಅಕ್ಷರನೆನಿಸಿದ್ದಾರೋ ಅವರು ಏನನ್ನೂ ತಿನ್ನುವುದಿಲ್ಲವೆಂದು ಶ್ರುತಿಯು ಹೇಳುತ್ತಿದೆ. ಇಂತಹ ಅನಶನತ್ವವನ್ನು ವಿಷ್ಣುವಿಗೆ ಹೇಳುವುದು ವಿರುದ್ಧವಾಗುತ್ತದೆ. ಏಕೆಂದರೆ 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ ಎಲ್ಲವನ್ನೂ

ಭಕ್ಷಿಸುತ್ತಾನೆಂದು ಈಗಾಗಲೇ ಸಾಧಿಸಿದ್ದಾಗಿದೆ. ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯು ಏನನ್ನೂ ಸಹ ತಿನ್ನುವುದಿಲ್ಲವೆಂದು ಅಂಗೀಕರಿಸಿದರೆ, ಇಂತಹ ವಿರೋಧಕ್ಕೆ ಅವಕಾಶವಿಲ್ಲ. ಆದ್ದರಿಂದ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೇ ಅಕ್ಷರಶಬ್ದವಾಚ್ಯಳಾಗುತ್ತಾಳೆ, ಅವಳೇ ಅದೃಶ್ಯತ್ವಾದಿ ಧರ್ಮವುಳ್ಳವಳೂ ಸಹ ಆಗುತ್ತಾಳೆಂದು ತಿಳಿಯಬೇಕು.

**तत्वप्रकाशिका – आहनसं यज्ञेष्वभिषूयमाणम् । लताभिमानित्वेनेयमुक्तिः। 'सोमं राजानं जुह्वति । तं देवा भक्षयन्ति' इत्यादिवत् ।**

ಆಹನಸಂ = ಯಜ್ಞದಲ್ಲಿ ಕುಟ್ಟಿಸಿಕೊಳ್ಳುವಂತಹ ಸೋಮಲತೆಯು ಹಾಗೂ ಅದಕ್ಕೆ ಅಭಿಮಾನಿಯಾದ ಚಂದ್ರನು, 'ಸೋಮಂ ರಾಜಾನಂ ಜುಹ್ವತಿ ತಂ ದೇವಾ ಭಕ್ಷಯಂತಿ' ಎಂಬಲ್ಲಿ ಹೇಗೆ ಚಂದ್ರನ ಹವನ, ಭಕ್ಷಣಗಳನ್ನು ಸೋಮಲತಾಭಿಮಾನಿಯಾದ್ದರಿಂದ ಔಪಚಾರಿಕವಾಗಿ ಹೇಳುತ್ತಾರೋ ಆದರಂತೆ ಇಲ್ಲಿ ಆಹನಸತ್ವವನ್ನು ಔಪಚಾರಿಕವಾಗಿ ಹೇಳಿದ್ದಾರೆಂದು ತಿಳಿಯಬೇಕು.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। 'यद्भूतं च भवच्च भविष्यच्चेत्याचक्षते । आकाश एव तदोतं च प्रोतं च' इत्याकाशाख्यप्रकृतेः सर्वाधारत्वमुक्त्वा 'एतस्मिन्खल्वक्षरे गार्ग्याकाश ओतश्च प्रोतश्च' इत्यक्षरस्य तदाधारत्वश्रवणादित्यर्थः ।**

ಸಿದ್ಧಾಂತವನ್ನು ಸ್ಥಾಪನೆ ಮಾಡುವ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನಿಸುತ್ತಿದ್ದಾರೆ 'ಅತಃ' ಇತ್ಯಾದಿ ಭಾಷ್ಯದಿಂದ.

ಶ್ರುತಿಯಲ್ಲಿ ಕೇಳಿಸಲ್ಪಟ್ಟ ಅಕ್ಷರವು ಬ್ರಹ್ಮನೇ ಆಗಿದ್ದಾನೆ ಏಕೆಂದರೆ. ಅಂತಹ ಯಾವಾತನು ಸ್ವರ್ಗಲೋಕದ ಮೇಲೆ ಭೂಲೋಕದ ಕೆಳಗೆ ಮತ್ತು ಇವೆರಡರ ಮಧ್ಯದಲ್ಲಿ ತುಂಬಿದ್ದಾನೋ ಅಂತಹ ಆಕಾಶದಲ್ಲಿ ಹಿಂದಿನ, ಮುಂದಿನ ಮತ್ತು ಈಗಿನ ಸಕಲಪದಾರ್ಥಗಳೆಲ್ಲವೂ ಸಂಪೂರ್ಣವಾಗಿ ಆಶ್ರಯವನ್ನು ಪಡೆದಿರುತ್ತವೆ. ಹೀಗೆ ಆಕಾಶ ಎಂಬ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ 'ಏತಸ್ಮಿನ್ ಖಲು ಅಕ್ಷರೇ ಗಾರ್ಗಿ, ಆಕಾಶಃ ಓತಶ್ಚ ಪ್ರೋತಶ್ಚ' ಎಂಬುದಾಗಿ ಅಂತಹ ಚಿತ್‌ಪ್ರಕೃತಿಗೂ ಅಂದರೆ ಲಕ್ಷ್ಮೀದೇವಿಗೂ ಸಹ ಪರಮಾತ್ಮನೇ ಆಧಾರನಾಗಿದ್ದಾನೆಂದು ಹೇಳಲಾಗಿದೆ. ಇಂತಹ ಸರ್ವಾಧಾರತ್ವವೆಂಬ ವಿಷ್ಣುವಿನ ಧರ್ಮವನ್ನು ಹೇಳಿರುವ ಕಾರಣ ಅವನೇ ಅಕ್ಷರ ಶಬ್ದವಾಚ್ಯನಾಗುತ್ತಾನೆ.

**तत्वप्रकाशिका – सर्वाधारत्वं कुतो विष्णुत्वनिश्चायकमित्यत आह – य इति ।। एको देवो भर्तृत्वेन बहुधा निविष्टो जगता भ्रियमाणस्तद्बिभर्ति । स च यदा तं भारं भर्तुं नेच्छति तदासौ नश्यतीत्यर्थः ।**

ಈ ಸರ್ವಾಧಾರತ್ವವು ವಿಷ್ಣುವಿನ ಅಸಾಧಾರಣಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ ? ಎಂಬ ಪ್ರಶ್ನೆಗೆ, 'ಯಥಾ' ಎಂಬುದಾಗಿ ಪ್ರಮಾಣ ನೀಡಿ ಉತ್ತರಿಸುತ್ತಿದ್ದಾರೆ. ಒಬ್ಬನೇ ಪರಮಾತ್ಮನು ಎಲ್ಲವನ್ನೂ ಧರಿಸಿದವನಾಗಿ ಅನೇಕರೂಪಗಳಿಂದ ಆಯಾ ಪದಾರ್ಥಗಳನ್ನು ಪ್ರವೇಶಿಸಿ ಸಮಸ್ತ ಜಗತ್ತನ್ನೂ ಧಾರಣೆ ಮಾಡಿದ್ದಾನೆ. ಅಂತಹ ಪರಮಾತ್ಮನು ಯಾವಾಗ ವಿಶ್ವವನ್ನು ಹೊರಲು ಇಚ್ಛಿಸುವುದಿಲ್ಲವೋ ಆವಾಗ ಸಮಗ್ರ ವಿಶ್ವವು ನಾಶವಾಗುತ್ತದೆಂದು ಶ್ರುತಿಗೆ ಅರ್ಥ.

**तत्वप्रकाशिका – एतच्च 'तद्वै त्वं प्राणः' इत्युक्तप्राणस्योच्यते । यस्मिन्निदं सम्यग्विविधं चैधि तदेव ब्रह्मेत्यर्थः । विष्णुवदन्यस्यापि सर्वाधारत्वं किं न स्यादित्यत आह – पृथिव्यादीति ।।**

'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯಿಂದ ಪ್ರಾಣಶಬ್ದವಾಚ್ಯನಾದ ವಿಷ್ಣುವಿನಲ್ಲೇ ಈ ಧರ್ಮವು ಯುಕ್ತವಾಗುತ್ತದೆ. ಯಾರಲ್ಲಿ ಈ ವಿಶ್ವವು ಸಂಪೂರ್ಣವಾಗಿ ಆಶ್ರಯವನ್ನು ಪಡೆದು ಪ್ರವರ್ತಮಾನವಾಗಿದೆಯೋ ಅಂತಹವನು ಬ್ರಹ್ಮನೇ ಆಗಿದ್ದಾನೆ. ವಿಷ್ಣುವಿನಂತೆ ಬೇರೆಯವರಿಗೂ ಸರ್ವಾಧಾರತ್ವವು ಏಕಿರಬಾರದು ? ಎಂದರೆ 'ಪೃಥಿವ್ಯಾದಿ' ಎಂಬ ಪ್ರಮಾಣದಿಂದ ಉತ್ತರಿಸಿದ್ದಾರೆ.

**भावदीपः –**

**ॐ अक्षरमम्बरान्तधृतेः ॐ ।।**

विष्णोश्चेतनप्रकृतेश्चाविनाशित्वसाम्यादक्षरशब्दः साधारण इति न्यायविवरणोक्तं साधारण्यमाह – **अविनाशित्वेति** ।। अक्षरशब्दप्रवृत्तिनिमित्तेति योज्यम्

'ಅವಿನಾಶಿತ್ವ' ಎಂಬುದು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ವಿಷ್ಣು ಹಾಗೂ ಮಹಾಲಕ್ಷ್ಮೀದೇವಿ ಇಬ್ಬರಲ್ಲಿಯೂ ಸಹ ಈ ಪ್ರವೃತ್ತಿ ನಿಮಿತ್ತವು ಸಾಧಾರಣವಾಗಿದೆ. ಈ ಬಗೆಯ ಸಾಧಾರಣ್ಯವನ್ನು ನ್ಯಾಯವಿವರಣದಲ್ಲಿ ಹೇಳಿರುತ್ತಾರೆ. ಅದನ್ನೇ ಪ್ರಕೃತ ಟೀಕೆಯಲ್ಲಿ 'ಅವಿನಾಶತ್ವ' ಇತ್ಯಾದಿಯಾಗಿ ಹೇಳಿರುತ್ತಾರೆ ಎಂದು ತಿಳಿಯಬೇಕು. ಇದು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವಾಗಿದೆ ಎಂದು ಟೀಕೆಯಲ್ಲಿ ಕಂಠತಃ ಹೇಳದಿದ್ದರೂ ಯೋಜನೆ ಮಾಡಿಕೊಳ್ಳಬೇಕು.

**भावदीपः** – उपलक्षणमेतत् । अक्षरशब्दस्य रूढ्या चेत्यपि ध्येयम् । अविनाशित्वयोगमात्रस्यातिप्रसङ्गात् । देहतोऽविनाशित्वसाम्यादिति वाऽर्थः । विशेषस्तु चन्द्रिकायाम् ।

ಪರಿಪೂರ್ಣಚಂದ್ರಿಕಾ

ಲಕ್ಷ್ಮೀದೇವಿಯಲ್ಲಿ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವಿದೆ ಎಂದಷ್ಟೇ ಅಲ್ಲ ರೂಢಿಯೂ ಸಹ ಇರುತ್ತದೆಂದು ತಿಳಿಯಬೇಕು. ಕೇವಲ ಪ್ರವೃತ್ತಿನಿಮಿತ್ತವನ್ನಷ್ಟೇ ವಿವಕ್ಷಿಸಿದರೆ ಅತಿಪ್ರಸಂಗ ಬರುತ್ತದೆ. ಅಥವಾ ಶರೀರದಿಂದ ವಿನಾಶವಿಲ್ಲದವರು ಮಹಾಲಕ್ಷ್ಮೀ ಹಾಗೂ ಮಹಾವಿಷ್ಣು ಮಾತ್ರವೆಂದು ತಿಳಿಯಬೇಕು. ಆದ್ದರಿಂದ 'ಅಕಾರಾದಿ ವರ್ಣಗಳೂ ಸಹ ಪೂರ್ವಪಕ್ಷಕ್ಕೆ ವಿಷಯವಾಗಲಿ' ಎಂದು ಆಶಂಕಿಸಬಾರದು ಹೆಚ್ಚಿನ ವಿಷಯವನ್ನು ತಾತ್ಪರ್ಯಚಂದ್ರಿಕೆಯನ್ನು ಓದಿ ತಿಳಿಯಬಹುದು.

**भावदीपः** – इत्यन्तभाष्यं सङ्गतिपरत्वेन तावद् व्याकुर्वन् अदृश्यत्वादिगुणा अक्षरस्योक्ता इत्येतावदंशं व्याचष्टे – **अदृश्यत्वादिगुणा इति** ।। अदृश्यत्वनये उक्ता इत्यर्थः । वाजसनेयके पञ्चमाध्याये 'अदृष्टं द्रष्टृश्रुतं श्रोतृ' इत्यादिनेत्यर्थः ।।

'ಇತಿ' ಎಂಬಲ್ಲಿಯ ತನಕದ ಭಾಷ್ಯವನ್ನು ಸಂಗತಿ ಪರವಾಗಿ ವ್ಯಾಖ್ಯಾನಿಸುತ್ತಾ 'ಅದೃಶ್ಯತ್ವಾದಿಗುಣಾಃ ಅಕ್ಷರಸ್ಯೋಕ್ತಾಃ' ಎಂಬ ಅಂಶವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಅದೃಶ್ಯತ್ವಾದಿಗುಣಾಃ' ಇತ್ಯಾದಿ ವಾಕ್ಯದಿಂದ. ಅದೃಶ್ಯಾತ್ವಾಧಿಕರಣವು ಅದೃಶ್ಯತ್ವಾದಿಗುಣಗಳನ್ನು ಮಹಾವಿಷ್ಣುವಿನಲ್ಲಿ ಸಮರ್ಥಿಸಿದೆ. ಬೃಹದಾರಣ್ಯಕದ ಐದನೆಯ ಅಧ್ಯಾಯದಲ್ಲಿ 'ಅದೃಷ್ಟಂ ದ್ರಷ್ಟೃಶ್ರುತಂ ಶ್ರೋತೃ' ಇತ್ಯಾದಿ ವಾಕ್ಯವಿರುತ್ತದೆ ಎಂದು ತಿಳಿಯಬೇಕು. ಈ ವಾಕ್ಯದಲ್ಲಿ ಕೇಳಿಸಲ್ಪಟ್ಟ ಅದೃಶ್ಯತ್ವಾದಿಗಳಿಂದ ಎಂದು ಟೀಕಾಮಾತಿನ ಅರ್ಥ.

**भावदीपः** – **तद्वा एतदिति** ।। अम्बराधारत्वद्योतनायादिपदोपात्तपरशेषोक्तिः । अदृश्यत्वादेरक्षरस्थताद्योतनाय पूर्वशेषोक्तिः ।। **इतीति** ।। इत्युक्ता इत्यन्वयः । 'अहं सोमम्' इत्यादेर्भावमाह – **तस्येति** ।।

ಆಕಾಶಕ್ಕೆ ಅಕ್ಷರವು ಧಾರಕವಾಗಿದೆ ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ಭಾಷ್ಯದಲ್ಲಿರುವ ಆದಿಪದದಿಂದ ಸೂಚಿತವಾದ ವಿಷಯವಾಚ್ಯವಾದ ಉಳಿದ ಶೇಷಭಾಗವನ್ನು ಟೀಕೆಯಲ್ಲಿ 'ತದ್ವಾ ಏತತ್' ಇತ್ಯಾದಿಯಾಗಿ ಉಲ್ಲೇಖಿಸಿದ್ದಾರೆ. ಅದೃಶ್ಯತ್ವಾದಿಗಳು ಅಕ್ಷರನಲ್ಲಿ ಕೇಳಿಸುತ್ತಿವೆ ಎಂದು ಸ್ಪಷ್ಟಪಡಿಸುವುದಕ್ಕಾಗಿ ವಿಷಯವಾಕ್ಯದ ಪೂರ್ವವಾಕ್ಯವನ್ನು ಉಲ್ಲೇಖಿಸಿದ್ದಾರೆ. 'ಇತಿ' ಎಂಬುದಕ್ಕೆ 'ಉಕ್ತಾಃ' ಎಂಬಲ್ಲಿ ಅನ್ವಯ. 'ಅಹಂ ಸೋಮಮ್' ಇತ್ಯಾದಿ ವಾಕ್ಯದ ಅಭಿಪ್ರಾಯವನ್ನು 'ತಸ್ಯ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**भावदीपः** – वक्ष्यमाणदिशा चन्द्राद्याधारत्वलिङ्गाच्चित्प्रकृतित्व इत्यर्थः । 'गुणाः' इत्येतस्य तात्पर्यम् – **अदृश्यत्वादिकं चेति** ।। **इतीति** ।। इति सङ्गतिसम्भवादवश्य-निर्णेयत्वमक्षरस्येत्यर्थः – **उक्तेति** ।। देहाक्षरणरूपाविनाशित्वाख्यप्रवृत्तिनिमित्त-साधारण्यमित्यर्थः ।

ಮುಂದೆ ಹೇಳುವ ಪ್ರಕಾರ ಸೂರ್ಯಚಂದ್ರಾದ್ಯಾಧಾರತ್ವವೆಂಬ ಲಿಂಗದಿಂದ ಲಕ್ಷ್ಮೀದೇವಿಯನ್ನೇ ಅಕ್ಷರಶಬ್ದವಾಚ್ಯಳೆಂದು ವಿವಕ್ಷಿಸುವುದಾದರೆ ಎಂದು 'ತಸ್ಯ' ಇತ್ಯಾದಿ ವಾಕ್ಯದಲ್ಲಿ ವಿವಕ್ಷಿಸಬೇಕು. 'ಗುಣಾಃ' ಎಂಬುದರ ತಾತ್ಪರ್ಯವನ್ನೇ 'ಅದೃಶ್ಯತ್ವಾದಿಕಂ ಚ' ಎಂಬುದರಿಂದ ಹೇಳಿದ್ದಾರೆ. 'ಇತಿ' ಎಂದರೆ ಹೀಗೆ

ಸಂಗತಿಯು ಕೂಡುವುದರಿಂದ ಅಕ್ಷರ ಶಬ್ದವಾಚ್ಯರು ಯಾರೆಂದು ಅವಶ್ಯವಾಗಿ ನಿರ್ಣಯಿಸಬೇಕೆಂದು ತಿಳಿಯಬೇಕು. 'ಉಕ್ತ' ಎಂದರೆ ದೇಹನಾಶವಿಲ್ಲದಿರುವಿಕೆ ಎಂಬ ಅವಿನಾಶತ್ವವೆಂಬ ಪ್ರವೃತ್ತಿನಿಮಿತ್ತ-ಸಾಧಾರಣ್ಯವನ್ನು ಇಬ್ಬರಲ್ಲೂ ಹೇಳಲಾಗಿದೆ ಎಂದು ಅರ್ಥ.

**भावदीपः** – ननु 'अक्षरत्रयमीरितम्' इत्यदृश्यत्वनयोक्तस्मृत्या जडप्रकृतौ तथा 'यः पुनरेतं त्रिमात्रेणोम्' इति 'अनेनैवाक्षरेण परं पुरुषममभिध्यायीत' इत्योङ्कारेऽप्यक्षरपदप्रयोगदर्शनात् प्रवृत्तिनिमित्तस्यापि तत्साम्येनैव वाच्यत्वात्तयोः कुतो न संशयकोटित्वमित्यत आह – **द्रष्टृत्वादिश्रवणाज्जडप्रकृतेरोङ्कारस्य चेति ॥**

ಪ್ರಶ್ನೆ - ಅದೃಶ್ಯತ್ವಾಧಿಕರಣದಲ್ಲಿ ಉದಾಹರಿಸಲ್ಪಟ್ಟ 'ಅಕ್ಷರತ್ರಯಮೀರಿತಮ್' ಎಂಬ ಶ್ರುತಿಯು ಜಡಪ್ರಕೃತಿಯಲ್ಲೂ ಸಹ ಅಕ್ಷರಶಬ್ದವನ್ನು ಪ್ರಯೋಗಿಸುತ್ತಿದೆ ಮತ್ತು 'ಯಃ ಪುನರೇತಂ ತ್ರಿಮಾತ್ರೇಣೋಮ್' 'ಓಂ ಇತಿ ಅನೇನೈವ ಅಕ್ಷರೇಣ ಪರಂ ಪುರುಷಮ್ ಅಭಿಧ್ಯಾಯೀತ' ಎಂಬಲ್ಲಿ ಓಂಕಾರದಲ್ಲಿಯೂ ಸಹ 'ಅಕ್ಷರ' ಪದದ ಪ್ರಯೋಗವಿದೆ. 'ಅಕ್ಷರ' ಪದಪ್ರಯೋಗದ ಸಾಮ್ಯವಿರುವುದರಿಂದ ಪ್ರವೃತ್ತಿನಿಮಿತ್ತವೂ ಸಹ ಅವೆರಡರಲ್ಲಿ ಇರುತ್ತವೆಂದು ತಿಳಿಯಬೇಕು. ಹೀಗಿರುವಾಗ ಜಡಪ್ರಕೃತಿಯನ್ನಾಗಲೀ, ಓಂಕಾರವನ್ನಾಗಲೀ ಏಕೆ ಪೂರ್ವಪಕ್ಷವಿಷಯವನ್ನಾಗಿ ಪರಿಗಣಿಸಿಲ್ಲ? ಎಂಬ ಪ್ರಶ್ನೆಗೆ 'ದ್ರಷ್ಟೃತ್ವಾದಿಶ್ರವಣಾತ್ ಜಡಪ್ರಕೃತೇರೋಂಕಾರಸ್ಯ ಚ' ಎಂಬುದರಿಂದ ಉತ್ತರಿಸಿದ್ದಾರೆ.

**भावदीपः**–एतेन 'ॐकारेण सर्वा वाक् सन्तृण्णा' इत्यादिश्रुत्या सर्ववर्णात्मकोङ्कारस्य सन्देहकोटित्वं वदन्तो निरस्ताः ।

ಹೀಗೆ ಹೇಳಿದ್ದರಿಂದ 'ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ' ಇತ್ಯಾದಿ ಶ್ರುತಿಯ ಬಲದಿಂದ ಸಕಲ ವರ್ಣಸ್ವರೂಪವಾದ ಓಂಕಾರವು ಸಂದೇಹಕೋಟಿನಿವಿಷ್ಟವಾಗಿದೆ ಎಂದು ಹೇಳುವ ಅದ್ವೈತಮತವನ್ನು ನಿರಾಕರಿಸಿದಂತಾಯಿತು.

**भावदीपः** – क्वचित्तु जडप्रकृतेराकाशस्य चेति पाठः । स च न साधुरेव । तत्राक्षरशब्दाप्रवृत्तेः । अविनाशित्वरूपप्रवृत्तिनिमित्तस्य भूताकाशेऽभावात् । अव्याकृते भावेऽपि कालात्मादावपि भावेनाऽकाशस्य चेति विशिष्योक्त्ययोगादित्याहुः ॥

ಕೆಲವೆಡೆ 'ಜಡಪ್ರಕೃತೇಃ ಆಕಾಶಸ್ಯ ಚೇತಿ' ಎಂಬ ಪಾಠವಿದೆ. ಈ ಪಾಠವು ಅತ್ಯಂತ ಅಸಾಧುವಾಗಿದೆ. ಏಕೆಂದರೆ ಇವೆರಡರಲ್ಲಿ ಅಕ್ಷರಶಬ್ದದ ಪ್ರವೃತ್ತಿಯೇ ಇರುವುದಿಲ್ಲ. 'ಅವಿನಾಶಿತ್ವ' ಎಂಬ ಪ್ರವೃತ್ತಿನಿಮಿತ್ತವು ಭೂತಾಕಾಶದಲ್ಲಿ ಇರುವುದಿಲ್ಲ. ಅವ್ಯಾಕೃತಾಕಾಶದಲ್ಲಿ ಪ್ರವೃತ್ತಿನಿಮಿತ್ತವಿದ್ದರೂ ಕಾಲ ಹಾಗೂ ಆತ್ಮಾ ಇವುಗಳಲ್ಲಿಯೂ ಸಹ ಅದೇ ಪ್ರವೃತ್ತಿನಿಮಿತ್ತ ಇರುವುದರಿಂದ 'ಆಕಾಶಸ್ಯ ಚ' ಎಂಬ ಉಲ್ಲೇಖವನ್ನು ವಿಶೇಷವಾಗಿ ಮಾಡಲು ಕಾರಣವಿಲ್ಲವೆಂದು ಕೆಲವರು ಹೇಳುತ್ತಾರೆ.

ಪರಿಪೂರ್ಣಚಂದ್ರಿಕಾ

**भावदीपः –** तर्हि उत्तरनयेऽपि 'तदैक्षत' इति श्रवणाज्जडप्रकृतिसंशयो न स्यादित्यत आह – उत्तरेति ।। सदेवेत्यत्राप्रतीतेरित्यर्थः ।

ದ್ರಷ್ಟೃತ್ವಾದಿಗಳು ಇಲ್ಲದ ಕಾರಣ ಜಡವಾದ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗುವುದಿಲ್ಲ-ವೆನ್ನುವುದಾದರೆ 'ತದೈಕ್ಷತ' ಎಂದು ಮುಂದಿನ ಅಧಿಕರಣದ ವಿಷಯವಾಕ್ಯದಲ್ಲೂ ಕೇಳಿಸುತ್ತಿರುವುದರಿಂದ ಅಲ್ಲಿಯೂ ಕೂಡ ಇಲ್ಲಿಯಂತೆ ಜಡಪ್ರಕೃತಿಯನ್ನು ಸಂಶಯಕೋಟಿಯಲ್ಲಿ ಸೇರಿಸಿದ್ದು ತಪ್ಪಾದೀತಲ್ಲವೆ? ಎಂಬ ಪ್ರಶ್ನೆಗೆ 'ಉತ್ತರಾಧಿಕರಣೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬಲ್ಲಿ ಅಪ್ರತೀತವಾಗಿದೆ ಎಂದರ್ಥ.

**भावदीपः –** एतेनान्तर्यामिनयेऽपि प्रकृतेः संशयकोटित्वं समाहितं ध्येयम् ।

ಹೀಗೆ ಹೇಳಿದ್ದರಿಂದ ಅಂತರ್ಯಾಮ್ಯಧಿಕರಣದಲ್ಲಿಯೂ ಕೂಡ ಪ್ರಕೃತಿಯು ಹೇಗೆ ಸಂಶಯ ಕೋಟಿಯಲ್ಲಿ ನಿವಿಷ್ಟವಾಗಿದೆ ? ಎಂಬ ಪ್ರಶ್ನೆಗೆ ಸಮಾಧಾನವನ್ನು ನೀಡಿದಂತಾಯಿತು.

**भावदीपः –** तदेव भाष्यं पूर्वपक्षादिपरत्वेनापि व्याकुर्वन् मध्यमाक्षरस्योक्ता इत्येतावदंशं प्रतिज्ञापरत्वेन व्याचष्टे – एतदिति ।। अदृश्यत्वादिगुणकमित्यर्थः ।

ಸಂಗತಿಪರವಾಗಿ ವ್ಯಾಖ್ಯಾನಿಸಿದ ಭಾಷ್ಯವನ್ನೇ ಪೂರ್ವಪಕ್ಷಪರವಾಗಿಯೂ ಕೂಡ ವ್ಯಾಖ್ಯಾನಿಸುತ್ತಿದ್ದಾರೆ. ಮೊದಲು 'ಮಧ್ಯಮಾಕ್ಷರಸ್ಯೋಕ್ತಾಃ' ಎಂಬ ಮಾತನ್ನು ಪ್ರತಿಜ್ಞಾಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ 'ಏತತ್' ಇತ್ಯಾದಿಯಾಗಿ. 'ಏತತ್' ಎಂದರೆ ಅದೃಶ್ಯತ್ವಾದಿಗುಣಗಳುಳ್ಳ ಎಂದರ್ಥ.

**भावदीपः –** श्रीतत्त्वस्येत्यनुक्त्वा मध्यमाक्षरस्येत्युक्तिलभ्यां युक्तिमाह – तत्रेति।। 'ये त्वक्षरमनिर्देश्यम्' इति गीतादौ श्रीतत्त्वे प्रसिद्धेरित्यर्थः । 'अक्षरत्रयमीरितम्' इति स्मृत्या विष्णावपि प्रसिद्धिरस्ति ।

'ಶ್ರೀತತ್ವಸ್ಯ' ಎಂದೇ ಹೇಳಬಹುದಿತ್ತು. ಆದರೂ 'ಮಧ್ಯಮಾಕ್ಷರಸ್ಯ' ಎಂದು ಹೇಳಿದ್ದಕ್ಕೆ ಏನು ಪ್ರಯೋಜನ ? ಎಂಬುದನ್ನು 'ತತ್ರ' ಇತ್ಯಾದಿ ವಾಕ್ಯದಿಂದ ಯುಕ್ತಿಯನ್ನು ಹೇಳುವ ಮೂಲಕ ಉತ್ತರಿಸುತ್ತಿದ್ದಾರೆ 'ಯೇ ತ್ವಕ್ಷರಮನಿರ್ದೇಶ್ಯಮ್' ಇತ್ಯಾದಿಯಾಗಿ. ಗೀತೆ ಮೊದಲಾದೆಡೆ ಅಕ್ಷರಶಬ್ದವು ಶ್ರೀತತ್ವದಲ್ಲಿಯೇ ಪ್ರಸಿದ್ಧವಾಗಿದೆ ಎಂದರ್ಥ. 'ಅಕ್ಷರತ್ರಯಮೀರಿತಮ್' ಎಂಬ ಸ್ಮೃತಿಯ ಆಧಾರದಿಂದ ವಿಷ್ಣುವಿನಲ್ಲಿಯೂ 'ಅಕ್ಷರ' ಶಬ್ದದ ಪ್ರಸಿದ್ಧಿ ಇದೆ.

**भावदीपः –** अत एव भाष्ये मध्यमपदम् । अन्यथाऽक्षरस्येत्येव ब्रूयादित्यतो भाष्ये इत्यादिनेत्यनेन न केवलं प्राक् टीकोक्तवाक्यशेषो ग्राह्यः । किन्तु 'एतस्य वा' इत्यादिलिङ्गोक्तिपरवाक्यं च ।

ಸಂಗತಿಯು ಕೂಡುವುದರಿಂದ ಅಕ್ಷರ ಶಬ್ದವಾಚ್ಯರು ಯಾರೆಂದು ಅವಶ್ಯವಾಗಿ ನಿರ್ಣಯಿಸಬೇಕೆಂದು ತಿಳಿಯಬೇಕು. 'ಉಕ್ತ' ಎಂದರೆ ದೇಹನಾಶವಿಲ್ಲದಿರುವಿಕೆ ಎಂಬ ಅವಿನಾಶತ್ವವೆಂಬ ಪ್ರವೃತ್ತಿನಿಮಿತ್ತ-ಸಾಧಾರಣ್ಯವನ್ನು ಇಬ್ಬರಲ್ಲೂ ಹೇಳಲಾಗಿದೆ ಎಂದು ಅರ್ಥ.

**भावदीपः** – ननु 'अक्षरत्रयमीरितम्' इत्यदृश्यत्वनयोक्तस्मृत्या जडप्रकृतौ तथा 'यः पुनरेतं त्रिमात्रेणोम्' इति 'अनेनैवाक्षरेण परं पुरुषममभिध्यायीत' इत्योङ्कारेऽप्यक्षरपदप्रयोगदर्शनात् प्रवृत्तिनिमित्तस्यापि तत्साम्येनैव वाच्यत्वात्तयोः कुतो न संशयकोटित्वमित्यत आह – **द्रष्टृत्वादिश्रवणाज्जडप्रकृतेरोङ्कारस्य चेति** ।।

ಪ್ರಶ್ನೆ - ಅದೃಶ್ಯತ್ವಾಧಿಕರಣದಲ್ಲಿ ಉದಾಹರಿಸಲ್ಪಟ್ಟ 'ಅಕ್ಷರತ್ರಯಮೀರಿತಮ್' ಎಂಬ ಶ್ರುತಿಯು ಜಡಪ್ರಕೃತಿಯಲ್ಲೂ ಸಹ ಅಕ್ಷರಶಬ್ದವನ್ನು ಪ್ರಯೋಗಿಸುತ್ತಿದೆ ಮತ್ತು 'ಯಃ ಪುನರೇತಂ ತ್ರಿಮಾತ್ರೇಣೋಮ್' 'ಓಂ ಇತಿ ಅನೇನೈವ ಅಕ್ಷರೇಣ ಪರಂ ಪುರುಷಮ್ ಅಭಿಧ್ಯಾಯೀತ' ಎಂಬಲ್ಲಿ ಓಂಕಾರದಲ್ಲಿಯೂ ಸಹ 'ಅಕ್ಷರ' ಪದದ ಪ್ರಯೋಗವಿದೆ. 'ಅಕ್ಷರ' ಪದಪ್ರಯೋಗದ ಸಾಮ್ಯವಿರುವುದರಿಂದ ಪ್ರವೃತ್ತಿನಿಮಿತ್ತವೂ ಸಹ ಅವೆರಡರಲ್ಲಿ ಇರುತ್ತವೆಂದು ತಿಳಿಯಬೇಕು. ಹೀಗಿರುವಾಗ ಜಡಪ್ರಕೃತಿಯನ್ನಾಗಲೀ, ಓಂಕಾರವನ್ನಾಗಲೀ ಏಕೆ ಪೂರ್ವಪಕ್ಷವಿಷಯವನ್ನಾಗಿ ಪರಿಗಣಿಸಿಲ್ಲ? ಎಂಬ ಪ್ರಶ್ನೆಗೆ 'ದ್ರಷ್ಟೃತ್ವಾದಿಶ್ರವಣಾತ್ ಜಡಪ್ರಕೃತೇರೋಂಕಾರಸ್ಯ ಚ' ಎಂಬುದರಿಂದ ಉತ್ತರಿಸಿದ್ದಾರೆ.

**भावदीपः** – एतेन 'ॐकारेण सर्वा वाक् सन्तृण्णा' इत्यादिश्रुत्या सर्ववर्णात्मकोङ्कारस्य सन्देहकोटित्वं वदन्तो निरस्ताः ।

ಹೀಗೆ ಹೇಳಿದ್ದರಿಂದ 'ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ' ಇತ್ಯಾದಿ ಶ್ರುತಿಯ ಬಲದಿಂದ ಸಕಲ ವರ್ಣಸ್ವರೂಪವಾದ ಓಂಕಾರವು ಸಂದೇಹಕೋಟಿನಿವಿಷ್ಟವಾಗಿದೆ ಎಂದು ಹೇಳುವ ಅದ್ವೈತಮತವನ್ನು ನಿರಾಕರಿಸಿದಂತಾಯಿತು.

**भावदीपः** – क्वचित्तु जडप्रकृतेराकाशस्य चेति पाठः । स च न साधुरेव । तत्राक्षरशब्दाप्रवृत्तेः । अविनाशित्वरूपप्रवृत्तिनिमित्तस्य भूताकाशेऽभावात् । अव्याकृते भावेऽपि कालात्मादावपि भावेनाऽऽकाशस्य चेति विशिष्योक्त्ययोगादित्याहुः ।।

ಕೆಲವೆಡೆ 'ಜಡಪ್ರಕೃತೇಃ ಆಕಾಶಸ್ಯ ಚೇತಿ' ಎಂಬ ಪಾಠವಿದೆ. ಈ ಪಾಠವು ಅತ್ಯಂತ ಅಸಾಧುವಾಗಿದೆ. ಏಕೆಂದರೆ ಇವೆರಡರಲ್ಲಿ ಅಕ್ಷರಶಬ್ದದ ಪ್ರವೃತ್ತಿಯೇ ಇರುವುದಿಲ್ಲ. 'ಅವಿನಾಶಿತ್ವ' ಎಂಬ ಪ್ರವೃತ್ತಿನಿಮಿತ್ತವು ಭೂತಾಕಾಶದಲ್ಲಿ ಇರುವುದಿಲ್ಲ. ಅವ್ಯಾಕೃತಾಕಾಶದಲ್ಲಿ ಪ್ರವೃತ್ತಿನಿಮಿತ್ತವಿದ್ದರೂ ಕಾಲ ಹಾಗೂ ಆತ್ಮಾ ಇವುಗಳಲ್ಲಿಯೂ ಸಹ ಅದೇ ಪ್ರವೃತ್ತಿನಿಮಿತ್ತ ಇರುವುದರಿಂದ 'ಆಕಾಶಸ್ಯ ಚ' ಎಂಬ ಉಲ್ಲೇಖವನ್ನು ವಿಶೇಷವಾಗಿ ಮಾಡಲು ಕಾರಣವಿಲ್ಲವೆಂದು ಕೆಲವರು ಹೇಳುತ್ತಾರೆ.

ಪರಿಪೂರ್ಣಚಂದ್ರಿಕಾ

भावदीपः – तर्हि उत्तरनयेऽपि 'तदैक्षत' इति श्रवणाज्जडप्रकृतिसंशयो न स्यादित्यत आह – उत्तरेति ।। सदेवेत्यत्राप्रतीतेरित्यर्थः ।

ದ್ರಷ್ಟೃತ್ವಾದಿಗಳು ಇಲ್ಲದ ಕಾರಣ ಜಡವಾದ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗುವುದಿಲ್ಲವೆನ್ನುವುದಾದರೆ 'ತದೈಕ್ಷತ' ಎಂದು ಮುಂದಿನ ಅಧಿಕರಣದ ವಿಷಯವಾಕ್ಯದಲ್ಲೂ ಕೇಳಿಸುತ್ತಿರುವುದರಿಂದ ಅಲ್ಲಿಯೂ ಕೂಡ ಇಲ್ಲಿಯಂತೆ ಜಡಪ್ರಕೃತಿಯನ್ನು ಸಂಶಯಕೋಟಿಯಲ್ಲಿ ಸೇರಿಸಿದ್ದು ತಪ್ಪಾದೀತಲ್ಲವೆ? ಎಂಬ ಪ್ರಶ್ನೆಗೆ 'ಉತ್ತರಾಧಿಕರಣೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬಲ್ಲಿ ಅಪ್ರತೀತವಾಗಿದೆ ಎಂದರ್ಥ.

भावदीपः – एतेनान्तर्यामिनयेऽपि प्रकृतेः संशयकोटित्वं समाहितं ध्येयम् ।

ಹೀಗೆ ಹೇಳಿದ್ದರಿಂದ ಅಂತರ್ಯಾಮ್ಯಧಿಕರಣದಲ್ಲಿಯೂ ಕೂಡ ಪ್ರಕೃತಿಯು ಹೇಗೆ ಸಂಶಯ ಕೋಟಿಯಲ್ಲಿ ನಿವಿಷ್ಟವಾಗಿದೆ ? ಎಂಬ ಪ್ರಶ್ನೆಗೆ ಸಮಾಧಾನವನ್ನು ನೀಡಿದಂತಾಯಿತು.

भावदीपः – तदेव भाष्यं पूर्वपक्षादिपरत्वेनापि व्याकुर्वन् मध्यमाक्षरस्योक्ता इत्येतावदंशं प्रतिज्ञापरत्वेन व्याचष्टे – एतदिति ।। अदृश्यत्वादिगुणकमित्यर्थः ।

ಸಂಗತಿಪರವಾಗಿ ವ್ಯಾಖ್ಯಾನಿಸಿದ ಭಾಷ್ಯವನ್ನೇ ಪೂರ್ವಪಕ್ಷಪರವಾಗಿಯೂ ಕೂಡ ವ್ಯಾಖ್ಯಾನಿಸುತ್ತಿದ್ದಾರೆ. ಮೊದಲು 'ಮಧ್ಯಮಾಕ್ಷರಸ್ಯೋಕ್ತಾಃ' ಎಂಬ ಮಾತನ್ನು ಪ್ರತಿಜ್ಞಾಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ 'ಏತತ್' ಇತ್ಯಾದಿಯಾಗಿ. 'ಏತತ್' ಎಂದರೆ ಅದೃಶ್ಯತ್ವಾದಿಗುಣಗಳುಳ್ಳ ಎಂದರ್ಥ.

भावदीपः – श्रीतत्त्वस्येत्यनुक्त्वा मध्यमाक्षरस्येत्युक्तिलभ्यां युक्तिमाह – तत्रेति।। 'ये त्वक्षरमनिर्देश्यम्' इति गीतादौ श्रीतत्त्वे प्रसिद्धेरित्यर्थः । 'अक्षरत्रयमीरितम्' इति स्मृत्या विष्णावपि प्रसिद्धिरस्ति ।

'ಶ್ರೀತತ್ತ್ವಸ್ಯ' ಎಂದೇ ಹೇಳಬಹುದಿತ್ತು. ಆದರೂ 'ಮಧ್ಯಮಾಕ್ಷರಸ್ಯ' ಎಂದು ಹೇಳಿದ್ದಕ್ಕೆ ಏನು ಪ್ರಯೋಜನ ? ಎಂಬುದನ್ನು 'ತತ್ರ' ಇತ್ಯಾದಿ ವಾಕ್ಯದಿಂದ ಯುಕ್ತಿಯನ್ನು ಹೇಳುವ ಮೂಲಕ ಉತ್ತರಿಸುತ್ತಿದ್ದಾರೆ 'ಯೇ ತ್ವಕ್ಷರಮನಿರ್ದೇಶ್ಯಮ್' ಇತ್ಯಾದಿಯಾಗಿ. ಗೀತೆ ಮೊದಲಾದೆಡೆ ಅಕ್ಷರಶಬ್ದವು ಶ್ರೀತತ್ತ್ವದಲ್ಲಿಯೇ ಪ್ರಸಿದ್ಧವಾಗಿದೆ ಎಂದರ್ಥ. 'ಅಕ್ಷರತ್ರಯಮೀರಿತಮ್' ಎಂಬ ಸ್ಮೃತಿಯ ಆಧಾರದಿಂದ ವಿಷ್ಣುವಿನಲ್ಲಿಯೂ 'ಅಕ್ಷರ' ಶಬ್ದದ ಪ್ರಸಿದ್ಧಿ ಇದೆ.

भावदीपः – अत एव भाष्ये मध्यमपदम् । अन्यथाऽक्षरस्येत्येव ब्रूयादित्यतो भाष्ये इत्यादिनेत्यनेन न केवलं प्राक् टीकोक्तवाक्यशेषो ग्राह्यः । किन्तु 'एतस्य वा' इत्यादिलिङ्गोक्तिपरवाक्यं च ।

ಆದ್ದರಿಂದಲೇ ಭಾಷ್ಯದಲ್ಲಿ 'ಮಧ್ಯಮಾ' ಎಂಬ ಪದವನ್ನೇ ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ 'ಅಕ್ಷರಸ್ಯ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತಲ್ಲವೇ ? ಎಂಬ ಪ್ರಶ್ನೆಗೆ ಭಾಷ್ಯದಲ್ಲಿ 'ಇತ್ಯಾದಿನಾ' ಎಂಬಲ್ಲಿ ಆದಿಪದದಿಂದ ಹಿಂದೆ ಹೇಳಿದಂತೆ ಕೇವಲ ಸಂಪೂರ್ಣ ವಿಷಯವಾಕ್ಯವನ್ನಷ್ಟೇ ವಿವಕ್ಷಿಸಬೇಕೆಂದಲ್ಲ. 'ಏತಸ್ಯ ವಾ' ಇತ್ಯಾದಿಯಾದ ಲಿಂಗವನ್ನು ಸಮರ್ಥಿಸುವ ಶ್ರುತಿವಾಕ್ಯವನ್ನೂ ಸಹ ಆದಿಪದದಿಂದಲೇ ವಿವಕ್ಷಿಸಬೇಕು.

**भावदीपः – गुणा इत्यनेन चन्द्राद्याधारत्वगुणोऽपि ग्राह्य इति भावेन तद्वाक्योक्तिपूर्वं लिङ्गमाह – एतस्येति ॥**

'ಗುಣಾಃ' ಎಂಬುದರಿಂದ ಚಂದ್ರಾದ್ಯಾಧಾರತ್ವವೆಂಬ ಗುಣವನ್ನೂ ಸಹ ಸ್ವೀಕರಿಸಬೇಕು. ಆ ವಾಕ್ಯವನ್ನು ಹೇಳುವ ಮೂಲಕ ಲಿಂಗವನ್ನೂ ಕೂಡ ತೋರಿಸುತ್ತಿದ್ದಾರೆ 'ಏತಸ್ಯ' ಎಂಬ ಟೀಕೆಯಿಂದ.

**भावदीपः – लिङ्गस्य श्रीतत्त्वधर्मतोक्तिपरत्वेनाहमित्यादिभाष्यं योजयति – चन्द्रेति ॥ अम्भ्रिणीपर्यायश्रीवाक्यत्वादहमित्यादेरिति भावः ।**

ಲಕ್ಷ್ಮೀದೇವಿಯ ಧರ್ಮವನ್ನು ಹೇಳುವ ಲಿಂಗವಿರುವ ಕಾರಣ 'ಅಹಂ' ಇತ್ಯಾದಿ ಭಾಷ್ಯವನ್ನು 'ಚಂದ್ರ' ಇತ್ಯಾದಿ ಟೀಕೆಯಿಂದ ಯೋಜನೆ ಮಾಡುತ್ತಿದ್ದಾರೆ. 'ಅಂಭ್ರಿಣೀ' ಶಬ್ದಕ್ಕೆ 'ಶ್ರೀ' ಎಂಬ ಶಬ್ದವು ಪರ್ಯಾಯ-ಪದವಾಗಿದೆ. ಆದ್ದರಿಂದ 'ಅಹಂ' ಎಂದರೆ 'ಲಕ್ಷ್ಮೀದೇವಿ' ಎಂದು ತಿಳಿಯಬೇಕು.

**भावदीपः – द्युभ्वादिनयन्यायेन विष्णावपि सम्भवाद् भाष्यस्थादिपदानुरोधेन तद्धर्मत्वादित्येवोक्तम् – नतु तस्यैव धर्मत्वादिति ॥ भाष्ये इत्यादेरित्यादिपदेन 'अहं त्वष्टारमुत पूषणं भगम्' इति वाक्यशेष इव 'ये त्वक्षरम्' इति गीतास्मृतिरपि गृह्यत इति भावेन तद्व्यावर्त्यशङ्कमाह – नच वाच्यमिति ॥**

ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಆಕಾಶಾಧಾರಕತ್ವವು ವಿಷ್ಣುವಿನಲ್ಲಿಯೂ ಸಹ ಉಪಪನ್ನವಾಗುತ್ತದೆ. ಆದ್ದರಿಂದ ಭಾಷ್ಯದಲ್ಲಿರುವ ಆದಿಪದಕ್ಕೆ ಅನುಸಾರಿಯಾಗಿ 'ತದ್ಧರ್ಮತ್ವಾತ್' ಎಂದೇ ಹೇಳಿದ್ದಾರೆ ಹೊರತು 'ತಸ್ಯೈವ ಧರ್ಮತ್ವಾತ್' ಎಂದು ಹೇಳಿಲ್ಲ. ಭಾಷ್ಯದಲ್ಲಿ 'ಇತ್ಯಾದೇಃ' ಎಂಬ ಆದಿ ಪದದಿಂದ 'ಅಹಂ ತ್ವಷ್ಟಾರಮುತ ಪೂಷಣಂ ಭಗಮ್' ಎಂಬ ವಾಕ್ಯಶೇಷವನ್ನು ಹೇಗೆ ಸ್ವೀಕರಿಸಬೇಕೋ, ಅದರಂತೆ 'ಯೇ ತ್ವಕ್ಷರಮ್' ಇತ್ಯಾದಿ ಗೀತಾಸ್ಮೃತಿಯನ್ನೂ ಸಹ ಸ್ವೀಕರಿಸಬೇಕು. ಈ ಅಭಿಪ್ರಾಯದಿಂದ ಇದರಿಂದ ಪರಿಹಾರವಾಗುವ ಶಂಕೆಯನ್ನು 'ನಚ ವಾಚ್ಯಮ್' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**भावदीपः – आकाङ्क्षितपूर्त्या तस्यापि सम्भवादिति वाक्यार्थमा – अदृश्यत्वादीति ॥** न केवलं अदृश्यत्वनयरीत्या विष्णावित्यपेरर्थः । इत्यादेरित्यादिपदोक्तां स्मृतिमाह – तथाचेति ॥

'ಲಕ್ಷ್ಮೀದೇವಿ' ಎಂಬ ಅರ್ಥವನ್ನು ಸ್ವೀಕರಿಸಿದಾಗಲೂ ಆಕಾಂಕ್ಷೆಯು ಪೂರ್ಣವಾಗುವ ಕಾರಣ ವಾಕ್ಯದ ಅರ್ಥವನ್ನು 'ಅದೃಶ್ಯತ್ವಾದಿ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಕೇವಲ ಅದೃಶ್ಯತ್ವಾಧಿಕರಣದ ನ್ಯಾಯದಿಂದಷ್ಟೇ ಅಲ್ಲ; ಆದಿಪದದಿಂದ ಸೂಚಿತವಾದ ಸ್ಮೃತಿಯನ್ನೂ ಸಹ ಉಲ್ಲೇಖಿಸುತ್ತಿದ್ದಾರೆ 'ತಥಾಚ' ಇತ್ಯಾದಿಯಾಗಿ.

**भावदीपः** – अक्षरमविनाशि सूक्ष्मत्वादनिर्देश्यम् । अप्रसिद्धत्वादव्यक्तम् । सर्वगं देशतो व्याप्तम् । गुणबाहुल्यादचिन्त्यम् । कूटे आकाशे अभिमानितया स्थितं कूटस्थम् । अचलं कदापि स्वपदादभ्रष्टम् । ध्रुवं निर्विकारमित्यर्थः ।

'ಯೇತ್ವಕ್ಷರಮನಿರ್ದೇಶ್ಯಮ್' ಇತ್ಯಾದಿ ವಾಕ್ಯಗಳಲ್ಲಿರುವ ಪದದ ಅರ್ಥ ಹೀಗಿದೆ. ಅಕ್ಷರಂ = ವಿನಾಶವಿಲ್ಲದ್ದು, ಅನಿರ್ದೇಶ್ಯಂ = ಸೂಕ್ಷ್ಮವಾದದ್ದು, ಅವ್ಯಕ್ತಂ = ಅಪ್ರಸಿದ್ಧವಾದದ್ದು, ಸರ್ವಗಂ = ದೇಶತಃ ವ್ಯಾಪ್ತವಾದದ್ದು, ಅಚಿಂತ್ಯಂ = ಅತ್ಯಂತ ಗುಣಭರಿತವಾದದ್ದು, ಕೂಟಸ್ಥಂ = ಆಕಾಶಕ್ಕೆ ಅಭಿಮಾನಿಯಾದದ್ದು, ಅಚಲಂ = ನಿರಂತರ ತನ್ನ ಸ್ಥಾನದಿಂದ ಭ್ರಷ್ಟವಾಗದ್ದು, ಧ್ರುವಂ = ವಿಕಾರವಿಲ್ಲದ್ದು, ಶ್ರೀತತ್ವವೇ ಆಗಿದೆ.

**भावदीपः** – इयं चित्प्रकृतिपरेति तात्पर्ये व्यक्तम् । आसीदिति द्वादशगीताभाष्योक्तस्मृतिः । इदं प्रसिद्धं तमः मायाख्यं प्रलये प्रसुप्तमिति निर्व्यापारमासीत् । अभूतमजातम् । अप्रज्ञातमित्यादिना प्रत्यक्षाद्यवेद्यत्वमुच्यते। अत्तेत्युक्त्वा 'न तदश्नाति किञ्चनेति विरुद्धता' इति न्यायविवरणमत्र योजयितुं तद्व्यावर्त्यशङ्कामाह – **अथापीति** ।।

ಈ ವಾಕ್ಯವು ಚಿತ್‌ಪ್ರಕೃತಿಯನ್ನೇ ಪ್ರತಿಪಾದಿಸುತ್ತಿದೆ ಎಂದು ಗೀತಾತಾತ್ಪರ್ಯದ ವಾಕ್ಯದಿಂದ ಸ್ಪಷ್ಟವಾಗುತ್ತದೆ. 'ಆಸೀತ್' ಎಂಬ ಶ್ರುತಿಯು ಗೀತಾಭಾಷ್ಯದಲ್ಲಿ ಉಕ್ತವಾಗಿದೆ. ಇದಂ = ಪ್ರಸಿದ್ಧವಾದ, ತಮಃ = ಮಾಯೆಯು, ಪ್ರಲಯೇ = ಪ್ರಳಯಕಾಲದಲ್ಲಿ, ಪ್ರಸುಪ್ತಂ = ನಿರ್ವ್ಯಾಪಾರವುಳ್ಳದ್ದು, ಆಸೀತ್ = ಆಗಿತ್ತು, ಅಭೂತಂ = ಹುಟ್ಟಿಲ್ಲದ್ದು, ಅಪ್ರಜ್ಞಾತಂ = ಪ್ರತ್ಯಕ್ಷಾದಿಗಳಿಂದ ಅವೇದ್ಯವಾದದ್ದು,

'ಅತ್ತಾಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ ಪರಮಾತ್ಮನಿಗೆ ಅತ್ತೃತ್ವವನ್ನು ಹೇಳಿ ಪ್ರಕೃತ 'ನ ತದಶ್ನಾತಿ ಕಿಂಚನ' ಎಂಬುದಾಗಿ ಅತ್ತೃತ್ವಾಭಾವವನ್ನು ಹೇಳಿದರೆ ಪರಸ್ಪರ ವಿರೋಧಬರುತ್ತದೆ. ಹೀಗೆ ನ್ಯಾಯವಿವರಣದಲ್ಲಿ ಹೇಳಿದ್ದನ್ನು ಯೋಜನೆ ಮಾಡುವುದಕ್ಕಾಗಿ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು 'ಅಥಾಪಿ' ಇತ್ಯಾದಿ ಗ್ರಂಥದಿಂದ ತೋರಿಸುತ್ತಾ ಇದ್ದಾರೆ.

**भावदीपः** – आदिपदेन सूर्याद्याधारत्वलिङ्गग्रहः । न्यायविवरणवाक्यस्य खण्डशोऽर्थमाह – **न तदिति** ।। अयमक्षरवाक्यशेष इत्यग्रे स्पष्टम् । अत्र 'न तदश्नाति' इत्येव पूर्वौ 'किञ्चन' इत्युक्तिः सामान्याभावसूचनाय । तेन गुहानयोक्तरीत्याऽशुभान शनपरं तदिति प्रत्युक्तं ध्येयम् ।।

ಆದಿಪದದಿಂದ ಸೂರ್ಯಾದ್ಯಾಧಾರತ್ವ ಲಿಂಗವನ್ನು ವಿವಕ್ಷಿಸಬೇಕು. ನ್ಯಾಯವಿವರಣ ವಾಕ್ಯಕ್ಕೆ 'ಖಂಡಶಃ' ಅರ್ಥವನ್ನು ಹೇಳುತ್ತಿದ್ದಾರೆ, 'ನ ತದಿತಿ' ಇತ್ಯಾದಿಯಾಗಿ. 'ನ ತದ್ಯಶ್ನಾತಿ ಕಿಂಚನ' ಎಂಬುದು ಅಕ್ಷರ ಪ್ರಕರಣದಲ್ಲಿಯೇ ಇರುತ್ತದೆ ಎಂದು ಮುಂದೆ ಸ್ಪಷ್ಟವಾಗುತ್ತದೆ. ವಸ್ತುತಃ 'ನ ತದಶ್ನಾತಿ' ಎಂದಷ್ಟೇ ಉಲ್ಲೇಖಿಸಿದ್ದರೆ ಸಾಕಾಗಿತ್ತು. 'ಕಿಂಚನ' ಎಂಬ ಪದವನ್ನು ಹೇಳಿದ್ದರಿಂದ ಯಾವುದನ್ನೂ ಸಹ ತಿನ್ನುವುದಿಲ್ಲ ಎಂದು ಸೂಚಿಸಿದಂತಾಯ್ತು. ಹೀಗೆ ಹೇಳಿದ್ದರಿಂದ ಗುಹಾಧಿಕರಣದ ನ್ಯಾಯದಂತೆ ಅಶುಭ ಫಲವನ್ನಷ್ಟೇ ತಿನ್ನುವುದಿಲ್ಲ ಎಂಬ ಅಭಿಪ್ರಾಯದಿಂದ ಶ್ರುತಿಯು 'ನ ತದಶ್ನಾತಿ' ಎಂದು ಅತ್ತೃತ್ವಾಭಾವವನ್ನು ಹೇಳುತ್ತಿದೆ ಎಂಬ ಪರಿಹಾರವನ್ನು ವಿವಕ್ಷಿಸಲಾಗದೆಂದು ಹೇಳಿದಂತಾಯಿತು.

**भावदीपः – नचेति ।। तस्य प्रागत्तृत्वस्य काप्यनुक्तेः अत्तृत्वेऽपि वा धर्मान्तरेण वाक्यशेषादिति न्यायेन 'नान्यत् किञ्चन मिषत्' इति श्रुताविव स्वतन्त्राशनाभाव-परतोपपत्तेरिति भावः ।।**

ಲಕ್ಷ್ಮೀದೇವಿಯಲ್ಲಿ 'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಿಂದ ವಾಚ್ಯತ್ವವನ್ನು ಒಪ್ಪಬಹುದು. ಏಕೆಂದರೆ ಲಕ್ಷ್ಮೀದೇವಿಯಲ್ಲಿ ಅತ್ತೃತ್ವವನ್ನು ಈ ಹಿಂದೆ ಯಾವ ಅಧಿಕರಣದಲ್ಲಿಯೂ ಸಮರ್ಥಿಸಿಲ್ಲ. ಅಥವಾ ಅತ್ತೃತ್ವವು ಅವಳಲ್ಲಿ ಇದ್ದರೂ 'ಧರ್ಮಾಂತರೇಣ ವಾಕ್ಯಶೇಷಾತ್' ಎಂಬ ನ್ಯಾಯದಂತೆ ಮತ್ತು 'ನಾನ್ಯತ್ ಕಿಂಚನ ಮಿಷತ್' ಎಂಬ ಶ್ರುತಿಯಂತೆ ಸ್ವತಂತ್ರವಾಗಿ ಏನನ್ನೂ ಸಹ ತಿನ್ನುವುದಿಲ್ಲವೆಂದು ವ್ಯಾಖ್ಯಾನಿಸಬಹುದು.

**भावदीपः – अत इति ।। श्रुतिलिङ्गरूपप्रापकभावाद् विष्णुत्वेऽनशनोक्तिविरोधा चेत्यर्थः ।**

'ಅತಃ' ಎಂದರೆ ಶ್ರುತಿ ಲಿಂಗಗಳೆಂಬ ಪ್ರಾಪಕಗಳಿರುವುದರಿಂದ ಅಕ್ಷರಶಬ್ದದಿಂದ ವಿಷ್ಣು ಪ್ರತಿಪಾದ್ಯನಾದರೆ ಅನಶನಶ್ರುತಿ ವಿರೋಧವಿರುವುದರಿಂದಲೂ ಎಂದರ್ಥ.

**भावदीपः – अक्षरमित्यनन्तरम् अत इत्यनुषङ्गः । इतीति पाठे तु नानुषङ्गः। अत्रोक्तं प्रागुक्तं चादृश्यत्वादिगुणकत्वमित्यर्थः । आङ्पूर्वस्य हन्तेः कर्मणि रूपं मत्वाऽऽह – अभिषूयमाणमिति ।। कथं चन्द्रस्याभिषूयमाणत्वमत आह – लतेति ।।**

'ಅಕ್ಷರಂ' ಎಂಬ ಪದದ ಅನಂತರ 'ಅತಃ' ಎಂಬುದನ್ನು ಅನುಷಂಗ ಮಾಡಬೇಕು. ಕೆಲವು ಪುಸ್ತಕಗಳಲ್ಲಿ 'ಅಕ್ಷರಂ ಇತಿ' ಎಂಬ ಪಾಠವಿದೆ. ಈ ಪಕ್ಷದಲ್ಲಿ ಅನುಷಂಗ ಮಾಡಬೇಕಾದ್ದಿಲ್ಲ. ಆದ್ದರಿಂದ ಇಲ್ಲಿ ಪ್ರತಿಪಾದ್ಯವಾದ ಅಕ್ಷರನು ಮತ್ತು ಹಿಂದೆ ಪ್ರತಿಪಾದಿಸಲ್ಪಟ್ಟ ಅದೃಶ್ಯತ್ವಾದಿಗುಣಗಳುಳ್ಳದ್ದು ಎಂದರ್ಥ. ಆಙ್ ಪೂರ್ವಕವಾದ 'ಹನ'ಧಾತುವಿಗೆ ಕರ್ಮಾರ್ಥದಲ್ಲಿಯೂ ಸಹ ಪ್ರಯೋಗವಿರುತ್ತದೆ ಎಂಬ ಅಭಿಪ್ರಾಯ ದಿಂದ 'ಅಭಿಷೂಯಮಾಣಮ್' ಎಂದು ಹೇಳಿದ್ದಾರೆ. ಚಂದ್ರನನ್ನು ಮರ್ದಿಸಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ 'ಲತಾ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**भावदीपः – सोममिति 'सोमं राजानम्' इत्यादौ हूयमानभक्ष्यमाणसोमलताभिमानत्वाच्चन्द्रेऽभिषूयमाणत्वोक्तिरित्यर्थः । यत्र क चाक्षरस्य ब्रह्मत्वमुच्यते इति भ्रमनिरासाय भाष्यस्थप्रतिज्ञार्थमाह – इदमिति ।।**

'ಸೋಮಂ ರಾಜಾನಮ್' ಇತ್ಯಾದಿ ಸ್ಥಳಗಳಲ್ಲಿ ಚಂದ್ರನಿಗೆ ಅಭಿಷವವನ್ನು ಹೇಳಿದಂತೆ ಕಾಣಿಸುತ್ತದೆ. ಆದರೆ ಹೋಮಿಸಲು ಯೋಗ್ಯವಾದ ಅಥವಾ ಭಕ್ಷಿಸಲು ಯೋಗ್ಯವಾದ ಯಾವ ಸೋಮಲತೆ ಇದೆಯೋ ಅದಕ್ಕೆ ಅಭಿಮಾನಿಯಾದ್ದರಿಂದಷ್ಟೇ ಚಂದ್ರನಲ್ಲಿ ಅಭಿಷವವನ್ನು ಹೇಳಲಾಗಿದೆ.

ಬೇರೆ ಎಲ್ಲಾದರೂ ಬ್ರಹ್ಮನಿಗೆ ಅಕ್ಷರತ್ವವನ್ನು ಹೇಳಿರಬಹುದಲ್ಲವೆ ? ಎಂಬ ಭ್ರಮೆಯನ್ನು ನಿರಾಸ ಮಾಡುವುದಕ್ಕಾಗಿ ಭಾಷ್ಯದಲ್ಲಿರುವ ಪ್ರತಿಜ್ಞಾಭಾವದ ಅರ್ಥವನ್ನು 'ಇದಂ' ಎಂಬ ವಾಕ್ಯದಿಂದ ಹೇಳಿದ್ದಾರೆ.

**भावदीपः – भाष्योक्तवाक्यादम्बरधृतेरेव प्रतीत्या तदन्तसर्वधृतेरप्रतीतेः सर्वाधारप्रकृत्याधारत्वं विष्णोरन्यस्य विरुद्धमिति न्यायविवरणोक्तिमनुरुद्ध्य वाक्यशेषं वदन् हेतूक्तिपरं भाष्यं व्यनक्ति – यदूर्ध्वमिति ।।**

ಭಾಷ್ಯದಲ್ಲಿ ಉದಾಹರಿಸಿದ ವಾಕ್ಯದಿಂದ ಆಕಾಶದ ಧಾರಕತ್ವವಷ್ಟೇ ಪ್ರತೀತವಾಗುತ್ತದೆ. ಆಕಾಶದ ತನಕ ಇರುವ ಸಕಲ ಪದಾರ್ಥಗಳ ಧಾರಕತ್ವವು ಪ್ರತೀತವಾಗುವುದಿಲ್ಲ. ಸಕಲಕ್ಕೂ ಆಧಾರವಾದ ಪ್ರಕೃತಿಗೆ ಆಧಾರವಾಗಿರುವಿಕೆಯು ವಿಷ್ಣುವನ್ನು ಬಿಟ್ಟು ಬೇರಯವರಲ್ಲಿ ವಿರುದ್ಧವಾಗುತ್ತದೆ ಎಂಬ ನ್ಯಾಯವಿವರಣದ ಮಾತನ್ನು ಅನುಸರಿಸಿ ವಾಕ್ಯಶೇಷವನ್ನು ಅನುಷಂಗ ಮಾಡಿಕೊಳ್ಳಬೇಕೆಂದು ಹೇಳುತ್ತಾ ಹೇತುಪರವಾದ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಯದೂರ್ಧ್ವಂ' ಇತ್ಯಾದಿಯಾಗಿ.

**भावदीपः – आकाशाख्यप्रकृतेरिति ।। चित्प्रकृतेरित्यर्थः । अत्र श्रुतावाकाशस्य सर्वाधारत्वमुक्त्वाऽस्यैकाक्षराश्रितत्वमुच्यते ।**

'ಆಕಾಶಾಖ್ಯಪ್ರಕೃತೇಃ' ಎಂಬ ಪದಕ್ಕೆ ಚಿತ್‌ಪ್ರಕೃತಿಗೆ ಎಂದರ್ಥ. ಈ ಶ್ರುತಿಯಲ್ಲಿ ಆಕಾಶಕ್ಕೆ ಸರ್ವಧಾರವನ್ನು ಹೇಳಿ, ಇಂತಹ ಆಕಾಶವು ಒಂದು ಅಕ್ಷರತತ್ವದಲ್ಲಿ ಆಶ್ರಿತವಾಗಿದೆ ಎಂದು ಹೇಳಲಾಗಿದೆ.

**भावदीपः – तच्च 'अव्यक्तात् पुरुषः परः' 'अक्षरात्परतः परः' 'मम योनिरप्स्वान्तः समुद्रे' इत्यादिना श्रीतत्त्वलिङ्गमिति आकाशस्तल्लिङ्गादिति न्यायसाम्येन दीप्तेराकाशशब्दोक्ता श्रीर्हि सर्वाश्रया मता । 'तदाश्रयः परो विष्णुः सोऽस्थूलादिगुणो मतः' इति बृहद्भाष्योक्तस्मृत्या चाकाशश्चित्प्रकृतिरिति भावः । अधिकं चन्द्रिकायाम् ।**

ಇಂತಹ ಅಕ್ಷರತತ್ವವು ಮಹಾವಿಷ್ಣುವೇ ಆಗಬೇಕು. ಏಕೆಂದರೆ 'ಅವ್ಯಕ್ತಾತ್ ಪುರುಷಃ ಪರಃ', 'ಅಕ್ಷರಾತ್ಪರತಃ ಪರಃ', 'ಮಮ ಯೋನಿರಪ್ಸ್ವ ಅಂತಃ ಸಮುದ್ರೇ' ಇತ್ಯಾದಿ ವಾಕ್ಯಗಳಿಂದ ಅಕ್ಷರದಲ್ಲಿ

ಲಕ್ಷ್ಮೀದೇವಿಯ ಲಿಂಗಗಳೇ ಕೇಳಿಸುತ್ತಿದೆ. ಮತ್ತು 'ಆಕಾಶಸ್ತಲ್ಲಿಂಗಾತ್' ಎಂಬ ನ್ಯಾಯವನ್ನು ವಿವಕ್ಷಿಸಿದಾಗ ಅತಿಶಯ ಪ್ರಕಾಶಮಾನಳಾದ ಲಕ್ಷ್ಮೀದೇವಿಯು ಆಕಾಶ ಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ. ಇಂತಹ ಲಕ್ಷ್ಮೀದೇವಿಯು ಸಕಲ ಪದಾರ್ಥಗಳಿಗೆ ಆಶ್ರಯಳಾಗಿದ್ದಾಳೆ. ಆದ್ದರಿಂದ ಶ್ರುತಿಯಲ್ಲಿರುವ ಆಕಾಶ ಶಬ್ದದಿಂದ ಲಕ್ಷ್ಮೀದೇವಿಯೇ ಪ್ರತಿಪಾದ್ಯಳಾಗುತ್ತಾಳೆ. ಇಂತಹ ಸಕಲಕ್ಕೂ ಆಶ್ರಯಳಾದ ಲಕ್ಷ್ಮೀದೇವಿಗೆ ಆಶ್ರಯನಾದವನು 'ತದಾಶ್ರಯಃ ಪರೋ ವಿಷ್ಣುಃ' ಎಂಬ ಬೃಹದಾರಣ್ಯಕಭಾಷ್ಯದಲ್ಲಿ ಹೇಳಿದ ಸ್ಮೃತಿಯ ಅನುಸಾರ ವಿಷ್ಣುವೇ ಆಗುತ್ತಾನೆ. ಹೆಚ್ಚಿನ ವಿಚಾರವನ್ನು ಚಂದ್ರಿಕೆಯನ್ನು ನೋಡಿ ತಿಳಿದುಕೊಳ್ಳಬೇಕು.

**भावदीपः – 'य एव एकप्रकृतिपुरुषकालाधारः पृथिवीं द्यां सर्वभुवनानि च दधार' इति जन्मादिनये 'य' इति श्रुतेर्व्याख्यानाद् भर्तेत्यादेरर्थमाह – एक इति ॥**

'ಯ ಏವ ಏಕಪ್ರಕೃತಿಪುರುಷಕಾಲಾಧಾರಃ ಪೃಥಿವೀಂ ದ್ಯಾಂ ಸರ್ವಭುವನಾನಿ ಚ ದಧಾರ' ಎಂಬುದಾಗಿ ಜನ್ಮಾಧಿಕರಣದಲ್ಲಿ 'ಯ ಏವ' ಎಂಬ ಶ್ರುತಿಯನ್ನು ವ್ಯಾಖ್ಯಾನ ಮಾಡಿದ್ದಾಗಿದೆ. ಆದ್ದರಿಂದ ಈಗ 'ಭರ್ತಾ' ಎಂಬ ಶ್ರುತಿಯ ಅರ್ಥವನ್ನು 'ಏಕಃ' ಇತ್ಯಾದಿಯಾಗಿ ಹೇಳುತ್ತಿದೆ.

**भावदीपः – 'भर्ता सन्' इत्यस्यार्थः – भर्तृत्वेनेति ॥ 'भ्रियमाणो बिभर्ति' इत्युक्त्या प्राप्तं जगदीश्वरयोराधाराधेयभावसाम्यं निरसितुं 'यदा भारं तन्द्रयते स भर्तुम् । परास्य भारं पुनरस्तमेति' इति शेषार्थमाह – स चेति ॥**

'ಭರ್ತಾ ಸನ್' ಎಂಬರ್ಥವನ್ನೇ 'ಭರ್ತೃತ್ವ' ಎಂಬುದರಿಂದ ಹೇಳಿದ್ದಾರೆ. 'ಭ್ರಿಯಮಾಣೋ ಬಿಭರ್ತಿ' ಎಂದು ಹೇಳಿದ್ದರಿಂದ ಜಗತ್ತು ಮತ್ತು ಈಶ್ವರರೆಂಬ ಆಧಾರಾಧೇಯಗಳಿಗೆ ಸಾಮ್ಯವು ಪ್ರಾಪ್ತವಾಗುತ್ತದೆ. ಅದರ ನಿರಾಸಕ್ಕಾಗಿ 'ಯದಾ ಭಾರಂ ತಂದ್ರಯತೇ ಸ ಭರ್ತುಮ್ । ಪರಾಸ್ಯ ಭಾರಂ ಪುನರಸ್ತಮೇತಿ' ಎಂದು ಉಳಿದ ಶ್ರುತಿಯ ಅರ್ಥವನ್ನು 'ಸ ಚ' ಇತ್ಯಾದಿ ಭಾಷ್ಯದಿಂದ ಹೇಳುತ್ತಿದ್ದಾರೆ.

**भावदीपः – अत्र विष्णुश्रुत्यादेरभावात्कथं विष्णौ समाख्येयं श्रुतिरित्यतस्तच्छब्द-परामृष्टमाह – एतच्चेति ॥**

ಈ ಶ್ರುತಿಯಲ್ಲಿ ವಿಷ್ಣುಶಬ್ದವೇ ಕೇಳಿಸದ ಕಾರಣ, ವಿಷ್ಣುವಿಷಯದಲ್ಲಿ ಸಮಾಖ್ಯಾಪ್ರಮಾಣ-ವಾಗುತ್ತದೆನ್ನಲು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ತತ್' ಶಬ್ದದಿಂದ ವಿಷ್ಣುವೇ ಪರಾಮೃಷ್ಟನಾಗಿದ್ದಾನೆಂದು 'ಏತಚ್ಚ' ಇತ್ಯಾದಿ ಟೀಕೆಯಿಂದ ಹೇಳಿದ್ದಾರೆ.

**भावदीपः – स च प्राणो 'अत एव प्राणः' इत्यत्र लक्ष्मीपतित्वादिलिङ्गेन विष्णुरिति निर्णीत इति भावः ।**

ಲಕ್ಷ್ಮೀಪತಿತ್ವವೇ ಮೊದಲಾದ ಲಿಂಗಗಳ ಬಲದಿಂದ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆಂದು 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಸಮರ್ಥಿಸಲಾಗಿದೆ.

भावदीपः – एधि अस्तीत्यर्थः । 'अवसोरेधावभ्यासलोपश्च' इति अस्तेर्मध्यमपुरुषप्रयोगः छान्दस इत्येके । एधीत्यस्यावर्धतेति चन्द्रिकोक्तिः ।

'ಏಧಿ' ಶಬ್ದಕ್ಕೆ 'ಅಸ್ತಿ' ಎಂದರ್ಥ. 'ಅವಸೋರೇಧಾವಭ್ಯಾಸಲೋಪಶ್ಚ' ಎಂಬುದಾಗಿ ಅಸು ಧಾತುವಿನ ಮಧ್ಯಮಪುರುಷ ಪದಪ್ರಯೋಗವೇ 'ಏಧಿ' ಎಂಬ ಛಾಂದಸಪ್ರಯೋಗವೆಂದು ಕೆಲವರು ಹೇಳುತ್ತಾರೆ. 'ಏಧಿ' ಎಂಬುದಕ್ಕೆ 'ಅವರ್ಧತ' ಎಂಬುದಾಗಿ ಚಂದ್ರಿಕೆಯಲ್ಲಿ ಹೇಳಿದ್ದಾರೆ.

भावदीपः – यस्मिन्निति श्रौतयच्छब्दस्य विष्ण्वर्थत्वद्योतनाय 'तदेव ब्रह्म परमं कवीनाम्' इत्युत्तरवाक्यस्थतत्पदेनान्वयमाह – तदेव ब्रह्मेत्यर्थ इति ।।

'ಯಸ್ಮಿನ್' ಎಂಬ ಶ್ರುತಿಯಲ್ಲಿರುವ 'ಯತ್' ಎಂಬ ಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತಿದೆ. ಇದನ್ನು ತಿಳಿಸಲು 'ತದೇವ ಬ್ರಹ್ಮ ಪರಮಂ ಕವೀನಾಮ್' ಎಂಬ ಮುಂದಿನ ವಾಕ್ಯದಲ್ಲಿರುವ 'ತತ್' ಪದದ ಜೊತೆಗೆ ಅನ್ವಯವನ್ನು 'ತದೇವ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

भावदीपः – विष्णुवदन्यस्यापीति ।। य उ त्रिविति ।। श्रुतेर्जन्मादिनयोक्तरीत्या भर्तेति श्रुतेश्च 'यदा भारम्' इति वाक्यशेषार्थोक्तरीत्याऽन्वयव्यतिरेकाभ्यां विष्ण्वेकपरत्वप्रतीतेस्तथैव श्रुतीनां व्याख्यातुं शक्यत्वेऽपि 'स्मृत्यवैयर्थ्याय श्रुतीः सर्वाधारप्रकृत्याधारत्वं विष्णोः' इति न्यायविवरणैकदेशविवरणपरतया व्याख्याय 'अन्यस्य विरुद्धम्' इत्येतदंशविवरणपरतया स्मृतिर्व्याख्यातेति ध्येयम् ।। १० ।।

'ಯ ಉ ತ್ರಿಧಾತು' ಎಂಬ ಶ್ರುತಿಯನ್ನು ಜನ್ಮಾಧಿಕರಣದಲ್ಲಿ ವ್ಯಾಖ್ಯಾನ ಮಾಡಿದಂತೆ 'ಭರ್ತಾ' ಎಂಬ ಶ್ರುತಿಯನ್ನೂ ಕೂಡ 'ಯದಾ ಭಾರಮ್' ಎಂಬ ವಾಕ್ಯಶೇಷದಂತೆ ಕೇವಲ ವಿಷ್ಣುಪರವೆಂದು ವ್ಯಾಖ್ಯಾನಿಸಬೇಕು. ಅನ್ವಯವ್ಯತಿರೇಕಗಳಿಂದ ಈ ಅರ್ಥವು ಸ್ಪಷ್ಟವಾಗುತ್ತದೆ. ಹೀಗೆ ಶ್ರುತಿಯನ್ನು ವ್ಯಾಖ್ಯಾನಿಸಲು ಸಾಧ್ಯವಿದ್ದರೂ ಕೂಡ 'ಸ್ಮೃತ್ಯವೈಯರ್ಥ್ಯಾಯ ಶ್ರುತೀಃ ಸರ್ವಾಧಾರಪ್ರಕೃತ್ಯಾಧಾರತ್ವಂ ವಿಷ್ಣೋಃ' ಎಂಬ ನ್ಯಾಯವಿವರಣದ ಏಕದೇಶವನ್ನು ವಿವರಣೆ ಮಾಡುವುದಕ್ಕಾಗಿ ವ್ಯಾಖ್ಯಾನ ಮಾಡಲಾಗಿದೆ. 'ಅನ್ಯಸ್ಯ ವಿರುದ್ಧಮ್' ಎಂಬಂಶವನ್ನು ವಿವರಣೆ ಮಾಡುವುದಕ್ಕಾಗಿ ಸ್ಮೃತಿಯನ್ನು ವ್ಯಾಖ್ಯಾನ ಮಾಡಿದ್ದಾರೆಂದು ತಿಳಿಯಬೇಕು.

वाक्यार्थमञ्जरी –

ॐ अक्षरमम्बरान्तधृतेः ॐ ।।

वाजसनेयके बृहदारण्यके ।। तद्वा एतदिति ।। 'हे गार्गि' इति याज्ञवल्क्यस्य स्वभार्यां प्रति सम्बोधनम् । तदेतदक्षरशब्दवाच्यं ब्रह्म अदृष्टमन्यैः साकल्येन दृष्टं न

भवति स्वयं तु द्रष्टृ एवमग्रेऽपि योज्यम् । अन्येषामपि द्रष्टृत्वादिसद्भावात् किमनेनेत्यत आह – **नान्यदिति** ।। अतोऽक्षरादन्यत् स्वातन्त्र्येण द्रष्टृ नास्ति । एवमग्रेऽपि आकाशः प्रकृतिः । नन्वक्षरशब्दस्य जडप्रकृतावपि सिद्धेः कुतो न तस्याः सन्देहविषयत्वमित्यत आह – **द्रष्टृत्वादीति** ।। **प्रथमाप्रतीतेरिति** ।। 'सदेव सौम्य' इति विषयवाक्ये 'तदैक्षत' इत्यश्रवणादिति भावः । मध्यममित्यक्षरत्रयापेक्षयोक्तिः । प्रशासने आज्ञायां विधृतौ विशेषेण धृतौ इत्यादेरित्यादिपदोक्तां स्मृतिमाह – **तथाचेति** ।। अक्षरम् अविनाशि । सूक्ष्मत्वादनिर्देश्यमदृश्यम् अप्रसिद्धत्वादव्यक्तं सर्वत्रगं देशतो व्याप्तं गुणबाहुल्यादचिन्त्यं कूटे अव्याकृताकाशे अभिमानित्वेन स्थितं कूटस्थम् अचलं कदापि स्वपदादभ्रष्टं ध्रुवं निर्विकारमित्यर्थः। इदञ्च चित्प्रकृतिपरमिति तात्पर्ये व्यक्तम् । आसीदिति गीताभाष्योक्तस्मृतिः तमोभूतं तमोरूपं 'तम आसीत् तमसा गूळ्हमग्रे' इति श्रुतेः अप्रज्ञातं शब्देन अलक्षणं लौकिकचिह्नरहितम् अतर्क्यम् अनुमानगम्यम् अनिर्देश्यं प्रत्यक्षेण प्रसुप्तमिव तदानीं जगद्व्यापाराभावात् । अभिषूयमाणम् अभिषवयुक्तम् । ननु सोमपदोक्तचन्द्रस्य कथं यज्ञेषु अभिषवणमित्यत आह – **लताभिमानित्वेनेति** ।। यथा 'सोमो वै राजा' इत्यादौ हूयमानभक्ष्यमाणसोमलताभिमानित्वेन चन्द्रमसि हूयमानत्वभक्ष्यमाणत्वव्यपदेशस्तथात्रापि 'सोममभिषुणोति' इति वाक्यविहिताभिषवणयुक्तसोमलताभिमानित्वेन चन्द्रेऽभिषूयमाणत्वव्यपदेश इत्यर्थः ।। **ॐ अक्षरमम्बरान्तधृतेः ॐ** ।। 'अक्षरं गार्गि' इत्युक्तमक्षरं ब्रह्मैव अम्बरान्तधृतेः अम्बरमाकाशशब्दितं श्रीतत्त्वम् अन्तं यस्य सर्वस्य जगतस्तदम्बरान्तं तस्य धृतेर्धारणादित्यर्थः । दिवः स्वर्गाद् वैकुण्ठाद्वा ऊर्ध्वम् उपरि यदस्ति महर्लोकादिकं ब्रह्माण्डखर्परबहिरावरणादिकं वा पृथिव्याः भूलोकात् पृथिवीसम्बन्धिसप्तलोकाद्वा अर्वाग् अधो यदस्ति तलादिकमण्डोदकादिकं वा 'अन्तरा ऊर्ध्वार्वाक्शब्दवाच्ययोः पूर्वो हृत्त्योर्मध्ये वर्तमानं यदि मे प्रसिद्धे द्यावापृथिवी स्वर्गादिभूरादिके 'भर्ता सन् भ्रियमाणो बिभर्ति' 'एको देवो बहुधा निविष्टः' 'यदा भारं तन्द्रयते स भर्तुम् । परास्य भारं पुनरस्तमेति ।।' इति श्रुतिं व्याचष्टे – **एको देव इति** ।। भर्तेत्यस्यार्थः – **भर्तृत्वेनेति** ।। श्रुतौ परास्य निरस्य ।। **प्राणस्येति** ।। तस्य च विष्णुत्वं प्रागेव समर्थितमिति भावः । अभि अवर्धत अधिनिषेदुः, अवस्थिता बभूवुः ।। १० ।।

## ಆಜ್ಞೆಯಿಂದಲೇ ಎಲ್ಲವನ್ನೂ ಧರಿಸಿದ್ದಾನೆ

### ।। अथ अक्षराधिकरणम् ।।

**सू – ॐ ॥ सा च प्रशासनात् ॥ ॐ ॥ ११ ॥**

**ಸೂತ್ರಾರ್ಥ - ಆಕಾಶದ ಪರ್ಯಂತ ಸಕಲ ಪದಾರ್ಥಗಳನ್ನು ವಿಷ್ಣು ಸ್ವತಃ ಧಾರಣೆ ಮಾಡಿದ್ದಾನೆ. ಅಂದರೆ. ಕೇವಲ ಆಜ್ಞಾಮೂಲಕವಾಗಿ ಸೂರ್ಯ, ಚಂದ್ರ ಮೊದಲಾದವರನ್ನೆಲ್ಲಾ ಆಯಾ ಸ್ಥಾನದಲ್ಲಿ ಇರುವಂತೆ ಮಾಡಿದ್ದಾನೆ, ಈ ಅದ್ಭುತ ಸಾಮರ್ಥ್ಯ ವಿಷ್ಣುವಿಗಲ್ಲದೇ ಬೇರೆಯವರಲ್ಲಿ ಕೂಡುವುದಿಲ್ಲ. ಆದ್ದರಿಂದ ವಿಷ್ಣುವೇ ಅಕ್ಷರಶಬ್ದವಾಚ್ಯನು.**

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ॐ सा च प्रशासनात् ॐ ।। चो यतः । सां अम्बरान्तधृतिः । प्रशासनात् विष्णोराज्ञामात्रादेव भवतीति ''एतस्य वा'' (बृ. ५-८-९.) इति श्रुतावुक्ता । अतोऽपि ब्रह्मैवाक्षरशब्दवाच्यम् । न चेतनप्रकृतिरित्यर्थः ।।२।।

**ಅರ್ಥ -- ಚ = ಯಾವ ಕಾರಣದಿಂದ, ಸಾ = ಆಕಾಶದ ಪರ್ಯಂತ, ಇರುವ ಸೂರ್ಯ, ಚಂದ್ರ ಮೊದಲಾದ ಸಕಲಪದಾರ್ಥಗಳು, ಪ್ರಶಾಸನಾತ್ = ಕೇವಲ ವಿಷ್ಣುವಿನ ಆಜ್ಞೆಯಿಂದಲೇ ಉಂಟಾಗಿದೆ ಎಂದು 'ಏತಸ್ಯ ವಾ' ಎಂದು ಬೃಹದಾರಣ್ಯಕಶ್ರುತಿಯಲ್ಲಿ ಹೇಳಲಾಗಿದೆ. ಈ ಕಾರಣದಿಂದಲೂ ಬ್ರಹ್ಮನೇ ಅಕ್ಷರಶಬ್ದವಾಚ್ಯನು ಹೊರತು ಚೇತನ ಪ್ರಕೃತಿಯಲ್ಲ.**

श्रीमदानन्दतीर्थभगवत्पादाचार्यविरचित-

## ब्रह्मसूत्रभाष्यम्

**भाष्यम् –** **ॐ ॥ सा च प्रशासनात् ॥ ॐ सा च धृतिः प्रशासनादुच्यते । 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' (बृ. ५-८-९) इत्यादिना । तच्च प्रशासनं विष्णोरेव ।**

ಅನುವಾದ - ಸೂರ್ಯ, ಚಂದ್ರ ಮೊದಲಾದ ಆಕಾಶದ ಪರ್ಯಂತ ಸಕಲ ಪದಾರ್ಥಗಳು ಭಗವಂತನ ಆಜ್ಞೆಯಿಂದಷ್ಟೇ ನಿಂತಿವೆ ಎಂದು ಶ್ರುತಿಯು ಹೇಳಿದೆ. 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಎಂಬ ಶ್ರುತಿಯು ಅಂತಹ ಆಜ್ಞೆ ನೀಡುವ ಸಾಮರ್ಥ್ಯ ವಿಷ್ಣುವಿನಲ್ಲಿ ಮಾತ್ರ ಇದೆ ಎಂದು ಹೇಳಿದೆ.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ಪ್ರತಿಪಾದಿಸುವ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ 'ಸಾ ಚ ಧೃತಿಃ' ಇತ್ಯಾದಿ ವಾಕ್ಯದಿಂದ.

ಸಾ ಚ ಧೃತಿಃ = ಅಂತಹ ಸಕಲ ಪದಾರ್ಥಗಳನ್ನು ಧಾರಣೆ ಮಾಡುವಂತಹ ಸಾಮರ್ಥ್ಯವು, ಪ್ರಶಾಸನಾತ್ = ಕೇವಲ ವಿಷ್ಣುವಿನ ಆಜ್ಞೆಯಿಂದಷ್ಟೇ, ಉಚ್ಯತೇ = ಶ್ರುತಿಯಲ್ಲಿ ಹೇಳಲಾಗಿದೆ - ಗಾರ್ಗಿ = ಎಲೈ, ಗಾರ್ಗಿಯೇ, ಸೂರ್ಯಾಚಂದ್ರಮಸೌ = ಸೂರ್ಯ, ಚಂದ್ರ ಮೊದಲಾದವರು, ಏತಸ್ಯ ಅಕ್ಷರಸ್ಯ = ಈ ಅಕ್ಷರನ, ಪ್ರಶಾಸನೇ = ಆಜ್ಞೆಯಲ್ಲಿ, ವಿಧೃತೌ = ನೆಲೆಸಿದವರಾಗಿ, ತಿಷ್ಠತಃ = ಇರುತ್ತಾರೆ, ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ ಹೀಗೆ ಹೇಳಿದ್ದರಿಂದ ಬ್ರಹ್ಮನೇ ಅಕ್ಷರನು.

ಸಕಲಪದಾರ್ಥಗಳನ್ನೂ ಆಜ್ಞೆ ಮಾಡುವ ಮೂಲಕ ನಿರ್ಮಿಸಿದ ಮಾತ್ರಕ್ಕೆ ಅಕ್ಷರನು ವಿಷ್ಣುವೇ ಆಗಿದ್ದಾನೆಂದು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ತಚ್ಚ = ಅಂತಹ, ಪ್ರಶಾಸನಂ = ಆಜ್ಞೆ ಮಾಡುವ ಸಾಮರ್ಥ್ಯವು, ವಿಷ್ಣೋರೇವ = ವಿಷ್ಣುವಿಗೆ ಮಾತ್ರ.(१)

**भाष्यम् – 'सप्तार्धगर्भा भुवनस्य रेतो विष्णोस्तिष्ठन्ति प्रदिशा विधर्मणि ।'**

**(ऋ. १-१६४-३६.)**

ಅನುವಾದ - ಮಹತ್ತತ್ವ, ಅಹಂಕಾರತತ್ವ ಮತ್ತು ಪಂಚಮಹಾಭೂತಗಳೆಂಬ ಏಳು ಆವರಣಗಳೂ ಹಾಗೂ ಅವುಗಳಿಗೆ ಅಭಿಮಾನಿಯಾದ ಬ್ರಹ್ಮ, ರುದ್ರಾದಿದೇವತೆಗಳೂ

(१) **भाष्यदीपिका** – युक्त्यन्तरेण विष्णोरेवाक्षरत्वं प्रतिपादयत्सूत्रमुपन्यस्य व्याचष्टे – सा चेति ।। 'सा च' सर्वधृतिरपि इत्यादिना प्रशासनादुच्यते यतोऽतोऽपि ब्रह्माक्षरमित्यन्वयः। आदिशब्देनैवंरूपाण्येकप्रकरणगतानेकवाक्यानि गृह्यन्ते । अनेन – यदा 'सा' पूर्वोक्ता सर्वधृतिरेव अक्षरस्य विष्णुत्वसाधिका, तदा सुतरां, या तु 'एतस्य' इति श्रुतिवाक्येऽक्षरस्य प्रशासनादेवासङ्कुचितविषयानन्यापत्तप्रकृष्टाज्ञामात्रादेव सर्वधृतिरुच्यते सेति सूत्रार्थ उक्तो भवति ।

ननु सर्वधृतिहेतुप्रशासनेन कुतोऽक्षरस्य विष्णुत्वनिश्चय इत्यतस्तस्य विष्णुकर्तृकत्वादित्याह – तच्चेति ।। सर्वधृतिकारणं प्रशासनं त्वित्यर्थः । न केवलं सर्वधृतिः, किन्तु तद्धेतुप्रशासनं चेति समुच्चये वा चशब्दः । 'विष्णोरेव' विष्णुकर्तृकमेव । न त्वन्यकर्तृकमिति एवार्थः । एवकारस्योत्तरत्रोपयोगः ।

ಸುಖಪ್ರದನಾದ ವಿಷ್ಣುವಿನ ಆಜ್ಞೆಯಿಂದ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿದ್ದಾರೆ. ಅಥವಾ ವಿಷ್ಣುವಿನ ರೇತಸ್ಸಿನ ಸ್ವರೂಪವಾಗಿರುವ ಮಹತ್ತತ್ತ್ವ, ಅಹಂಕಾರತತ್ತ್ವ ಮೊದಲಾದವುಗಳು ಮತ್ತು ಅವುಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿಗಳು ವಿಷ್ಣುವಿನ ಆಜ್ಞೆಯಿಂದ ವಿವಿಧವಾದ ಕರ್ತವ್ಯಗಳಲ್ಲಿ ತೊಡಗಿದ್ದಾರೆ.

ಪ್ರತಿಪದಾರ್ಥ -- ವಿಷ್ಣುವಿನ ಆಜ್ಞೆಯಿಂದಲೇ ಇವೆಲ್ಲವೂ ನಡೆಯುತ್ತವೆ ಎಂದು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅರ್ಧಗರ್ಭಾಃ = ಬ್ರಹ್ಮಾಂಡದ ಅತಿಸಮೃದ್ಧಿಪ್ರಸಿದ್ಧಿಗೆ ಕಾರಣೀಭೂತರೂ, ಆವರಣಭೂತರೂ ಆದ, ಭುವನಸ್ಯ = ಲೋಕಕ್ಕೆ, ರೇತಃ = ('ರೇತಸಃ' ಎಂದು ಬಹುವಚನಾರ್ಥದಲ್ಲಿ ಲಿಂಗವ್ಯತ್ಯಾಸ ಮಾಡಿಕೊಳ್ಳಬೇಕು.) ಸುಖಪ್ರದರೂ, ಸಾರಭೂತರೂ ಆದ, ಅಥವಾ ಭುವನಸ್ಯ = ಭೂಮನೂ, ಮನನೀಯನೂ ಆದ ವಿಷ್ಣುವಿನ, ರೇತಃ = ವೀರ್ಯವೆನಿಸಿದ, ಸಪ್ತ = ಮಹತ್ತತತ್ತ್ವ, ಅಹಂಕಾರತತ್ತ್ವ ಮತ್ತು ಪಂಚಮಹಾಭೂತಗಳೆಂಬ ಏಳು ಆವರಣಗಳು ಮತ್ತು ಅವುಗಳಿಗೆ ಅಭಿಮಾನಿಗಳಾಗಿ ತನ್ನಿಯಾಮಕರಾದ ಬ್ರಹ್ಮ, ರುದ್ರಾದಿದೇವತೆಗಳು, ವಿಷ್ಣೋಃ = ವಿಷ್ಣುವಿನ, ಪ್ರದಿಶಾ = ಆಜ್ಞೆಯಿಂದ, ವಿಧರ್ಮಣಿ = ತಮ್ಮ ತಮ್ಮ ಬಹುವಿಧವಾದ ವಿಶ್ವಧಾರಣಾದಿ ಕರ್ತವ್ಯಗಳಲ್ಲಿ, ತಿಷ್ಠಂತಿ = ತೊಡಗಿದ್ದಾರೆ.(१)

**भाष्यम् – 'चतुर्भिः साकं नवतिं च नामभिश्चक्रं न वृत्तं व्यतीरवीविपत् ।' (ऋ. १-१५५-६.) इत्यादिश्रुतेः**

ಅನುವಾದ - ವಿಷ್ಣು, ವಾಸುದೇವ ಮೊದಲಾದ ನಾಲ್ಕು ರೂಪಗಳಿಂದ, ಬ್ರಹ್ಮ, ವಾಯು, ರುದ್ರ ಮೊದಲಾದ ತೊಂಭತ್ತು ಮಂದಿ ದೇವತೆಗಳನ್ನು ಚಕ್ರದಂತೆ ಏಕಕಾಲದಲ್ಲಿ ತಿರುಗಿಸುತ್ತಾನೆ.

ಪ್ರತಿಪದಾರ್ಥ -- ಸಃ = ಬೃಹಚ್ಛರೀರವುಳ್ಳಂತಹ ವಿಷ್ಣುವು, ಚತುರ್ಭಿಃ = ವಾಸುದೇವ ಸಂಕರ್ಷಣ ಮೊದಲಾದ ನಾಲ್ಕು, ನಾಮಭಿಃ = ಕೀರ್ತಿಯುಳ್ಳಂತಹ ರೂಪಗಳಿಂದ, ವ್ಯತೀನ್ = ವಿಶೇಷವಾಗಿ ಅಧಿಕರಾದ, (२)ನವತಿಂ = ಪ್ರಧಾನವಾಯುವಿನೊಂದಿಗೆ

(१) भाष्यदीपिका – कुत एतज्ज्ञायत इत्यतस्तत्रेत्यनेन प्रतिज्ञातार्थे श्रुतिं प्रमाणयति – सप्तेति ।। आ ऋद्धगर्भाः आर्धगर्भाः । ब्रह्माण्डाख्यातिसमृद्धगर्भाः । निगरणेन भ्रियन्त इति गर्भास्तदावरणभूता इति यावत् । रेत इति लिङ्गव्यत्ययेनैकवचनं प्रथमाबहुवचनार्थे। तथा च – 'भुवनस्य' लोकस्य 'रेतसो' रतिप्रदाः सारभूता वा । यद्वा – भूमत्वात् पूर्णत्वाद् वननीयत्वाद् भजनीयत्वाद् भुवनस्य विष्णो रेतोरूपाः 'सप्त' महदहङ्कारपञ्चमहाभूताख्याः ब्रह्मादयो देवाः । भुवनस्य 'रेतो' रेतसो जगद्रतिप्रदस्य विष्णोः 'प्रदिशा' आदेशेनाऽऽज्ञया 'विधर्मणि' विविधविश्वधारणे तिष्ठन्तीति ऋङ्मन्त्रार्थः। विश्वेश्वरतीर्थीये तु 'अर्धस्य' विष्णोः 'गर्भाः' सप्त देवाः भुवनस्य 'रेतः' कारणम् । एते च विष्णोः प्रदिशा विधर्मणि तिष्ठन्तीत्यर्थ उक्तः ।

(२) "ಆದಿತ್ಯಾ ವಸವೋ ರುದ್ರಾ ಮರುತಶ್ಚಾಶ್ವಿನಾವಪಿ । ಬೃಹಸ್ಪತಿಶ್ಚ ಕಾಮಶ್ಚ ಮನುರ್ದಕ್ಷೋ ವಿನಾಯಕಃ ।
ಅಕ್ಷರಾಧಿಕರಣ (೧-೩-೩)

ಐವತ್ತು ಮರುತ್‌ಗಳು, ಅಷ್ಟವಸುಗಳು, ಏಕಾದಶರುದ್ರರು, ವಿಷ್ಣುವ್ಯತಿರಿಕ್ತ ಏಕಾದಶ ಆದಿತ್ಯರು, ಚತುರ್ಮುಖಬ್ರಹ್ಮನೊಂದಿಗೆ ಹತ್ತು ಪ್ರಜಾಪತಿಗಳು ಹೀಗೆ ತೊಂಭತ್ತು ಮಂದಿ ದೇವತೆಗಳನ್ನು, ವೃತ್ತಂ = ವರ್ತುಲಾಕಾರದ, ಚಕ್ರಂ ನ = ಚಕ್ರದಂತೆ, ಸಾಕಂ = ಒಟ್ಟಿಗೆ ಅವೀವಿಪತ್ = ತಿರುಗಿಸಿದನು, ಇತ್ಯಾದಿ = ಇವೇ ಮೊದಲಾದ, ಶ್ರುತೇಃ = ಆಗಮರೂಪ ಪ್ರಮಾಣದಿಂದ.(೧)

**भाष्यम् – 'एकः शास्ता न द्वितीयोऽस्ति शास्ता ।'**
**'यो हृच्छयस्तमहमिह ब्रवीमि ।' (भारते-सभा प.)**

ಅನುವಾದ - ವಿಷ್ಣು ಒಬ್ಬನೇ ಶಾಸಕನಾಗಿ ಆಜ್ಞೆಯನ್ನು ಮಾಡುತ್ತಾನೆ ಹೊರತು, ಅವನಂತೆ ಬೇರೊಬ್ಬನು ಶಾಸಕನಿಲ್ಲ. ಅಂದರೆ ಆಜ್ಞೆಯನ್ನು ಮಾಡಲಾರ. ಯಾವ ವಿಷ್ಣು ನಮ್ಮೆಲ್ಲರ ಹೃದಯದಲ್ಲಿ ನೆಲಸಿದ್ದಾನೆಯೋ ಅವನ ಬಗ್ಗೆ ಈಗ ನಿನಗೆ ಹೇಳುತ್ತೇನೆ. ಇದು ಸಭಾಪರ್ವದ ವಚನ. (ಈ ಶಬ್ದಕ್ಕೆ ಮುಂದಿನ ಮೂಲದಲ್ಲಿರುವ 'ಇತ್ಯಾದೇಃ' ಎಂಬಲ್ಲಿ ಅನ್ವಯ)

ಪ್ರತಿಪದಾರ್ಥ -- ಆಜ್ಞೆಯಿಂದ ಸಕಲವನ್ನು ಧರಿಸಿರುವಿಕೆಯು ಬೇರೆಯವರಲ್ಲೂ ಕೂಡಬಹುದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ, ಚ = ಮತ್ತು; ಏಕಃ = ಒಬ್ಬನೇ, ಶಾಸ್ತಾ = ಜಗತ್ತಿನ ಶಾಸಕನು, ದ್ವಿತೀಯಃ = ಇವನನ್ನು ಬಿಟ್ಟು ಬೇರೊಬ್ಬನು , ಶಾಸ್ತಾ = ಶಾಸಕನು, ನಾಸ್ತಿ = ಇರುವುದಿಲ್ಲ, ಯಃ = ಯಾವಾತನು, ಹೃಚ್ಛಯಃ = ಸರ್ವಜೀವರ ಹೃದಯದಲ್ಲಿ ನೆಲೆಸಿದ್ದಾನೋ, ತಮ್ = ಅವನನ್ನು, ಅಹಂ = ನಾನು, ಇಹ = ಇಲ್ಲಿ, ಬ್ರವೀಮಿ = ಹೇಳುತ್ತೇನೆ.(೨)

**भाष्यम् – 'न केवलं मे भवतश्च राजन् स वै बलं बलिनां चापरेषाम् ।'**
**(भाग-स्कं .७,अ.८,श्लो.८) इत्यादेश्च ॥ ११ ॥**

---

ಭೃಗುಶ್ಚೈವಾನಿರುದ್ಧಶ್ಚ ಧರ್ಮೋ ನಿರ್ಋತಿರೇವ ಚ । ಕುಬೇರಸಹಿತಾ ದೇವಾ ನವತಿಃ ಸಂಪ್ರಕೀರ್ತಿತಾಃ । ಅನಂತೋ ಗರುಡೋ ವಾಯುಶ್ಚಾಷ್ಟಾರೋ ಬ್ರಹ್ಮಣಾ ಸಹ '' - ತತ್ವಪ್ರದೀಪೇ.॥

(१) भाष्यदीपिका – 'चतुर्भिः' इति वाक्यं तु जन्मनये व्याख्यातम् । एवञ्जातीयकश्रुतिरादिशब्दार्थः । श्रुतेरित्यस्य ज्ञायत इत्यध्याहारेण तच्चेति पूर्ववाक्येनान्वयः।

(२) भाष्यदीपिका – सर्वधृतिहेतुप्रशासनं विष्णोरिवान्यस्यापि किं न स्यादित्यत आह – एक इति ॥ इदं च भारतवाक्यं सभापर्वगम् । 'शास्ता' सर्वधृतिहेत्वाज्ञाकर्ता । 'एकः' नतु द्वितीयोऽस्ति, स च विष्णुरेवेत्यर्थः । 'गर्भे शयानं पुरुषं कोऽस्ति शास्ता' इति शिष्टवाक्यम् । 'यो हृच्छयः' इत्यन्यद् वाक्यमुत्तरवाक्यपर्यालोचनया प्रकृतसङ्गतम्। 'यः' सर्वधृतिहेतुप्रशासनाय 'हृच्छयः' सर्वहृदयनिवासी तमहमिह स्थाने ब्रवीमीत्यर्थः।

ಅನುವಾದ - ಎಲೈ ! ಹಿರಣ್ಯಕನೇ, ನನಗೇ ಅಷ್ಟೇ ಅಲ್ಲದೇ, ನಿನಗೂ ಸಹ ಮತ್ತು ಬೇರೆ ಬಲಶಾಲಿಗಳಿಗೂ ಸಹ ಅವನೇ ಬಲಪ್ರದನು. ಇವೇ ಮೊದಲಾದ ಇತಿಹಾಸ ಪುರಾಣಗಳ ವಾಕ್ಯಗಳಿಂದ ವಿಷ್ಣುವೇ ಶಾಸಕನು ಎಂದು ತಿಳಿದುಬರುತ್ತದೆ.

ಪ್ರತಿಪದಾರ್ಥ -- ಹಿರಣ್ಯಕಶಿಪುವನ್ನು ಕುರಿತು ಪ್ರಹ್ಲಾದರು ಹೇಳುವ ಮಾತು. ಹೇ! ರಾಜನ್ = ಎಲೈ! ರಾಜನೇ, ಕೇವಲಂ ಮೇ ನ = ನನಗೆ ಮಾತ್ರವಲ್ಲದೇ, ಭವತಃ = ನಿನಗೂ ಸಹ, ಚ = ಮತ್ತು, ಅಪರೇಷಾಂ = ಬೇರೆ, ಬಲಿನಾಂ ಚ = ಬಲಿಷ್ಠರಿಗೂ ಸಹ, ಬಲಂ = ಬಲದಾಯಕನು, ಸ ವೈ = ಆ ಶ್ರೀಹರಿಯೇ ಆಗಿದ್ದಾನೆ. ಹೀಗೆ ಶ್ರುತಿಸ್ಮೃತಿಗಳ ಆಧಾರಗಳಿಂದ ಸರ್ವಾಧಾರಕನು, ಸರ್ವನಿಯಾಮಕನು ಮತ್ತು ಸರ್ವ ಬಲಪ್ರದನು ವಿಷ್ಣುವೇ ಆಗಿದ್ದಾನೆಂದು ತಿಳಿಯುತ್ತದೆ. ಅಂತಹ ವಿಷ್ಣುವೇ ಅಕ್ಷರನಾಗಿದ್ದಾನೆಂದು ತಿಳಿಯಬೇಕು.(१)

**तत्वप्रकाशिका –**

**ॐ सा च प्रशासनात् ॐ प्रयुक्त्यन्तरेण विष्णोरेवाक्षरत्वं प्रतिपादयत्सूत्रमुपन्यस्य व्याचष्टे – सा चेति ।।**

ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಅಕ್ಷರಶಬ್ದವಾಚ್ಯನೆಂದು ಪ್ರತಿಪಾದಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ 'ಸಾ ಚ' ಇತ್ಯಾದಿಯಾಗಿ.

**तत्वप्रकाशिका – यदा सर्वाधारत्वमेवाक्षरस्य विष्णुत्वं निश्चाययति तदा सुतरामाज्ञामात्रेण सर्वाधारत्वं विष्णुत्वनिश्चायकमित्याशयः । कुतोऽनेन विष्णुत्वनिश्चय इत्यत आह – तच्चेति ।।**

ಸರ್ವಾಧಾರತ್ವದಿಂದಲೇ ಅಕ್ಷರಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆಂದು ಸಾಧಿಸಲು ಬರುವಾಗ ಕೇವಲ ವಿಷ್ಣುವಿನ ಆಜ್ಞೆಯಿಂದಲೇ ಎಲ್ಲರಿಗೂ ಸರ್ವಾಧಾರತ್ವವು ಸಿದ್ಧವಾಗಿದೆ ಎಂಬ ಯುಕ್ತಿಯು ಅಕ್ಷರನು ವಿಷ್ಣುವೇ ಆಗಿದ್ದಾನೆಂದು ಹೇಳಲು ಕಾರಣವಾಗಿದೆ ಎಂದು ಪುನಃ ಹೇಳಬೇಕೇನು ? ಹೀಗೆ ಕೈಮುತ್ಯನ್ಯಾಯವು ಭಾಷ್ಯದ ಅಭಿಪ್ರಾಯವಾಗಿದೆ. ಸರ್ವಾಧಾರಕ್ಕೆ ಕಾರಣವಾದ ಪ್ರಶಾಸನವು ವಿಷ್ಣುವಿನ ಧರ್ಮವೇ ಆಗಿದೆ ಎಂದು ಹೇಗೆ ನಿಶ್ಚಯಿಸುತ್ತೀರಿ ? ಎಂಬ ಪ್ರಶ್ನೆಗೆ 'ತಚ್ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

(१) भाष्यदीपिका – 'न केवलम्' इत्यादि हिरण्यकशिपुं प्रति प्रह्लादवाक्यम् । हे राजन् । न केवलं मे भवतश्च 'सः' भगवान् 'बलं' बलप्रदो धृतिहेतुः, किन्त्वन्येषां बलिनां च बलमित्यर्थः । इत्यादेश्चेत्यस्य 'तच्च प्रशासनं विष्णोरेवेति ज्ञायते' इत्यनेनान्वयः। अनेन विष्णोरेवेत्येवकारस्य कृत्यं सूचितम् ।

**तत्वप्रकाशिका – सर्वधृतिकारणं प्रशासनं विष्णोरेव तत्कुत इति तत्राह – सप्तेति ।।**

ಸರ್ವಾಧಾರಕ್ಕೆ ಕಾರಣವಾದ ಆಜ್ಞೆಯು ವಿಷ್ಣುವಿನ ಧರ್ಮವೇ ಆಗಿದೆ ಎಂಬುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ 'ಸಪ್ತ' ಇತ್ಯಾದಿ ಪ್ರಮಾಣದಿಂದ ಎಂದು ಉತ್ತರಿಸುತ್ತಿದ್ದಾರೆ.

**तत्वप्रकाशिका – महदहङ्कारपञ्चमहाभूताख्यसप्तदेवता ब्रह्माण्डाख्यातिसमृद्धगर्भास्तदावरणभूता भुवनस्य रतिप्रदाः सारभूता वा भुवनरतिप्रदस्य विष्णोराज्ञया विविधविश्वधारणे तिष्ठन्तीत्यर्थः ।**

ಮಹತ್ತತ್ತ್ವ, ಅಹಂಕಾರತತ್ತ್ವ ಹಾಗೂ ಪಂಚಮಹಾಭೂತಗಳು ಸೇರಿ ಸಪ್ತಪದಾರ್ಥಗಳೆನಿಸುತ್ತವೆ. ಇಂತಹ ಸಪ್ತಪದಾರ್ಥಗಳ ನಿಯಾಮಕರಾದ ಬ್ರಹ್ಮಾದಿ ಸಪ್ತದೇವತೆಗಳು. ಇವರು ಅತ್ಯಂತ ಸಮೃದ್ಧವಾದ ಗರ್ಭದಿಂದ ಕೂಡಿರುವ ಬ್ರಹ್ಮಾಂಡಕ್ಕೆ ಆವರಣರಾಗಿದ್ದಾರೆ. ಇಂತಹ ಲೋಕಕ್ಕೆ ರತಿಪ್ರದರಾದ ಅಥವಾ ಸಾರಭೂತರಾದ ದೇವತೆಗಳು ಲೋಕಕ್ಕೆ ರತಿಪ್ರದನಾದ ಮತ್ತು ಸಾರಭೂತನಾದ ವಿಷ್ಣುವಿನ ಆಜ್ಞೆಯಿಂದ ವಿವಿಧವಾದ ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿದ್ದಾರೆ ಎಂದು ಶ್ರುತಿಗೆ ಅರ್ಥ.

**तत्वप्रकाशिका – सर्वधृतिहेतुप्रशासनं विष्णोरिवान्यस्यापि किं न स्यादित्यत आह – एक इति ।। बलं बलप्रदो धृतिहेतुः ।। ११ ।।**

ಈ ಸರ್ವಧಾರಣಕ್ಕೆ ಕಾರಣವಾದ ಪ್ರಶಾಸನವು ವಿಷ್ಣುವಿನಂತೆ ಬೇರೆಯವರಲ್ಲಿಯೂ ಸಹ ಬರಬಹುದಲ್ಲವೇ? ಎಂಬ ಪ್ರಶ್ನೆಗೆ 'ಏಕಃ ಶಾಸ್ತಾ' ಎಂಬ ಪ್ರಮಾಣದಿಂದ ಉತ್ತರಿಸಿದ್ದಾರೆ. ಬಲ ಶಬ್ದಕ್ಕೆ ಬಲಪ್ರದನೆಂದರ್ಥ. ಧಾರಣಕ್ಕೆ ಕಾರಣವಾದ ಸಾಮರ್ಥ್ಯವುಳ್ಳವನೆಂದು ಇದರರ್ಥ.

**भावदीपः –**

**ॐ सा च प्रशासनात् ॐ ।। सूत्रे चशब्दादाह – युक्त्यन्तरेणेत्यादि ।। धृतेरक्षराधीनत्वोक्तावप्यक्षरस्य कथं विष्णुत्वसिद्धिरित्यतोऽभिप्रायमाह – यदेति ।।**

ಸೂತ್ರದಲ್ಲಿ ಇರುವ 'ಚ' ಶಬ್ದವು ವಿಷ್ಣುವೇ ಅಕ್ಷರಶಬ್ದವಾಚ್ಯನೆನಿಸಲು ಯುಕ್ತ್ಯಂತರವನ್ನು ಹೇಳುತ್ತಿದೆ. ಆದ್ದರಿಂದ ಟೀಕೆಯಲ್ಲಿ 'ಯುಕ್ತ್ಯಂತರೇಣ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಧಾರಣೆಯು ಅಕ್ಷರತತ್ವದ ಆಜ್ಞೆಯಿಂದಷ್ಟೇ ನಡೆಯುತ್ತಿದೆ ಎಂಬುದಾಗಿ ಶ್ರುತಿಯಿಂದ ತಿಳಿಯಿತು. ಇಷ್ಟುಮಾತ್ರದಿಂದ ವಿಷ್ಣುವೇ ಅಂತಹ

ಅಕ್ಷರನಾಗಿದ್ದಾನೆಂದು ಹೇಗೆ ತಿಳಿಯುತ್ತದೆ ಎಂಬ ಪ್ರಶ್ನೆಗೆ 'ಯದಾ' ಎಂಬ ಇತ್ಯಾದಿ ವಾಕ್ಯದಿಂದ ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ.

**भावदीपः – आज्ञामात्रेण सर्वाधारत्वाश्चेत्यर्थ उक्तो भवति । तच्छब्दार्थं व्यनक्ति – सर्वधृतीति ।। अर्धपदार्थः – अतिसमृद्धेति ।। तदावरणेति फलितोक्तिः ।**

ಹೀಗೆ ಹೇಳಿದ್ದರಿಂದ ಕೇವಲ ಆಜ್ಞೆಯಿಂದಷ್ಟೇ ಸಕಲವನ್ನೂ ಧರಿಸಿರುವುದರಿಂದ ಎಂದು ಹೇಳಿದಂತಾಯಿತು. 'ತತ್' ಶಬ್ದದ ಅರ್ಥವನ್ನು 'ಸರ್ವಧೃತಿ ಕಾರಣಂ' ಎಂದು ಹೇಳಿದ್ದಾರೆ. ಅರ್ಧ ಪದದ ಅರ್ಥವನ್ನು 'ಅತಿಸಮೃದ್ಧ' ಎಂದು ಹೇಳಿದ್ದಾರೆ. 'ತದಾವರಣ' ಎನ್ನುವುದು ಫಲತಃ ಸಿದ್ಧವಾದ ಅರ್ಥ.

**भावदीपः – रेतो रेतस इति व्यत्ययेन बहुवचनस्यैकवचनं मत्वाऽर्थद्वयमाह – रतीति ।। षाष्ठ्यर्थं मत्वाऽर्थमाह – भुवनेति ।।**

ಶ್ರುತಿಯಲ್ಲಿರುವ 'ರೇತಃ' ಎಂಬುದನ್ನು ಬಹುವಚನಾಂತವಾಗಿ 'ರೇತಸಃ' ಎಂದು ವ್ಯತ್ಯಾಸ ಮಾಡಿಕೊಂಡು ಎರಡುಬಗೆಯ ಅರ್ಥವನ್ನು 'ರತಿ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಷಷ್ಠೀವಿಭಕ್ತಿ ಅರ್ಥವನ್ನು ವಿವಕ್ಷಿಸಿ 'ಭುವನ' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः – चतुर्भिरिति श्रुतिर्जन्मादिनय एव व्याख्याता । 'स वै बलम्' इत्यस्य प्रकृतोपयोगायाऽर्थमाह – बलमिति ।।**

'ಚತುರ್ಭಿಃ' ಎಂಬ ಶ್ರುತಿಯನ್ನು ಜನ್ಮಾಧಿಕರಣದಲ್ಲಿ ವ್ಯಾಖ್ಯಾನಿಸಿದ್ದಾಗಿದೆ. 'ಸ ವೈ ಬಲಮ್' ಎಂಬುದಕ್ಕೆ ಪ್ರಕೃತ ಉಪಯೋಗವನ್ನು ತಿಳಿಸುವುದಕ್ಕಾಗಿ ಅರ್ಥವನ್ನು ಹೇಳುತ್ತಿದ್ದಾರೆ 'ಬಲಮ್' ಇತ್ಯಾದಿಯಾಗಿ.

**वाक्यार्थमञ्जरी –**

**ॐ सा च प्रशासनात् ॐ ।।**

सा च धृतिः प्रशासनादक्षरस्याज्ञामात्रादुच्यते। अतश्चाक्षरं ब्रह्मैवेत्यर्थः । आशब्दार्थः – अतिसमृद्धेति ।। तदावरणेति फलितोक्तिः । 'भुवनस्य रेतः' इत्येतदावृत्त्याह – भुवनस्य रतिप्रदस्येति ।। चतुर्भिरिति श्रुतिर्जन्मनये व्याख्याता भाष्ये हृदयं श्रयत इति हृच्छ्रयः प्रकृतोपयोगायाह – धृतिहेतुरिति ।। ११ ।।

## ಬ್ರಹ್ಮಮೀಮಾಂಸಾಶಾಸ್ತ್ರ

## ಬೇರೆ ವಸ್ತುಗಳ ಸ್ವಭಾವ ಶ್ರೀಹರಿಗಿಲ್ಲ

**सू. ॐ || अन्यभावव्यावृत्तेश्च || ॐ || १२ ||**

**ಸೂತ್ರಾರ್ಥ - ಲೌಕಿಕವಾದ ವಸ್ತುಗಳಲ್ಲಿ ಪ್ರಾಕೃತವಾದ ಗಾತ್ರ, ಪರಿಮಾಣ ಮೊದಲಾದವುಗಳು ಇರುತ್ತವೆ. ಅಂತಹ ಪ್ರಾಕೃತವಾದ ಯಾವುದೇ ಗುಣಗಳು ವಿಷ್ಣುವಿನಲ್ಲಿ ಇಲ್ಲ. ಅವನ ಧರ್ಮಗಳೆಲ್ಲಾ ಅಲೌಕಿಕವಾಗಿವೆ. ಹೀಗೆ ಅಲೌಕಿಕಧರ್ಮವತ್ವವೆಂಬ ವಿಷ್ಣುವಿನ ಅಸಾಧಾರಣಗುಣವನ್ನು ಹೇಳಿರುವುದರಿಂದ ಅಕ್ಷರನು ವಿಷ್ಣುವೇ ಆಗುತ್ತಾನೆ.**

|| ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅಕ್ಷರಾಧಿಕರಣವು ಸಮಾಪ್ತವಾಯಿತು ||

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — ॐ अन्यभावव्यावृत्तेश्च ॐ || अन्यभावानां विष्ण्वन्यवस्तुस्वभावानां स्थूलत्वादीनां "अस्थूलमनणु" (बृ. ५-८-८.) इति श्रुतावक्षरे व्यावृत्तेरभावस्य कथनाच्च ब्रह्मैवाक्षरमित्यर्थः ||३||

ಅರ್ಥ -- ಅನ್ಯಭಾವವ್ಯಾವೃತ್ತೇಶ್ಚ = ವಿಷ್ಣುವಿಗಿಂತ ಅನ್ಯವಸ್ತುಗಳ ಸ್ವಭಾವವೆನಿಸಿದ ಸ್ಥೂಲತ್ವಾದಿಗಳು 'ಅಸ್ಥೂಲಮನಣು' ಇತ್ಯಾದಿ ಶ್ರುತಿಗಳಲ್ಲಿ ಅಕ್ಷರನಲ್ಲಿ ಇಲ್ಲವೆಂದು ಹೇಳಲಾಗಿದೆ. ಆದ್ದರಿಂದಲೂ ಬ್ರಹ್ಮನೇ ಅಕ್ಷರನು.

|| ಸೂತ್ರದೀಪಿಕೆಯಲ್ಲಿ ಅಕ್ಷರಾಧಿಕರಣವು ಸಮಾಪ್ತವಾಯಿತು ||

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् – ॐ ॥ अन्यभावव्यावृत्तेश्च ॥ ॐ अस्थूलमनणु' (बृ. ५-८-८.) इत्यादिना स्थूलाण्वादीनामन्यवस्तुस्वभावानां व्यावृत्तेश्च**

ಅನುವಾದ - 'ಅಸ್ಥೂಲಂ ಅನಣು' ಇತ್ಯಾದಿ ಶ್ರುತಿಗಳಲ್ಲಿ ಪ್ರಾಕೃತ ವಸ್ತುಗಳಲ್ಲಿರುವ ಸ್ಥೂಲತ್ವ, ಅಣುತ್ವ ಮೊದಲಾದ ಗುಣಗಳು ಅಕ್ಷರನಲ್ಲಿ ಇಲ್ಲವೆಂದು ಹೇಳಲಾಗಿದೆ. ಆದ್ದರಿಂದಲೂ ಅಕ್ಷರನು ವಿಷ್ಣುವೇ ಆಗಿದ್ದಾನೆ.

ಪ್ರತಿಪದಾರ್ಥ -- ಮತ್ತೊಂದು ಹೇತುವಿನಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ಪ್ರತಿಪಾದಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ -

ಅನ್ಯವಸ್ತುಸ್ವಭಾವಾನಾಂ = ಬೇರೆ ವಸ್ತುಗಳಲ್ಲಿರುವ ಸ್ಥೂಲತ್ವ, ಪರಿಮಾಣ ಮೊದಲಾದ ಧರ್ಮಗಳನ್ನು, ಅಸ್ಥೂಲಾಣ್ವಾದೀನಾಂ = 'ಅಸ್ಥೂಲಮನಣು' ಇತ್ಯಾದಿಯಾಗಿ ಪ್ರತಿಪಾದಿಸುವ ಶ್ರುತಿಗಳಿಂದ, 'ವ್ಯಾವೃತ್ತೇಶ್ಚ' = ವಿಷ್ಣುವಿನಲ್ಲಿ ನಿಷೇಧ ಮಾಡಿರುವುದರಿಂದಲೂ ವಿಷ್ಣುವೇ ಅಕ್ಷರನು. (१)

---

(१) **भाष्यदीपिका** - हेत्वन्तरेण विष्णोरेवाक्षरत्वं प्रतिपादयत्सूत्रं पठित्वा व्याचष्टे – **अन्येति** ।। आदिशब्देन **'एतद्वै तदक्षरं गार्गि ब्राह्मणा अभिवदन्ति अस्थूलमनण्वह्रस्वमदीर्घमलोहितमस्नेहमच्छायमतमोऽवाय्वनाकाशमसङ्गमरसमगन्धमचक्षुष्कमश्रोत्रमवागमनोऽतेजस्कमप्राणममुखममात्रमनन्तरमबाह्यं न तदश्नाति किञ्चन न तदश्नाति कश्चन'** (बृ.५–८–८) इति समग्रवाक्यं गृह्यते । **'स्थूलाण्वादीनाम्'** इति भावप्रधानो निर्देशः । व्यावृत्तेरित्यनन्तरं **'कथनात्'** इति शेषः । चो हेतुसमुच्चये । अस्यापि ब्रह्मैवाक्षरमिति पूर्वेणान्वयः । अनेन – न केवलं पूर्वोक्तहेतुभ्यां, किन्त्वन्येषां सकलवस्तूनां भावानां स्वरूपाणां स्थौल्यादिधर्माणां व्यावृत्तेः अनन्यापेक्षाराहित्यस्य **'अस्थूलम्'** इत्यादिनाऽक्षरे कथनादप्यक्षरं ब्रह्मैवेति सूत्रार्थ उक्तो भवति । श्रुत्यर्थस्तु – 'तत्' आकाशाश्रयत्वेन वक्ष्यमाणम् **'अक्षरं'** न क्षरतीत्यक्षरशब्दवाच्यं ब्रह्म एतल्लक्षणकं **'ब्राह्मणाः'** ज्ञानिनोऽभिवदन्ति वै प्रसिद्धम् । तत् किं लक्षणमित्यत आह – **अस्थूलमिति** ।। स्थूलं महत् । **स्वप्रबुद्धार्थान्तरं** तु – 'एतत्' अक्षरं ब्राह्मणाः 'तत्' चित्प्रकृत्याख्यमिति वदन्ति पूर्वपक्षयन्ति तद्

**भाष्यम् – 'अस्थूलोऽनणुरमध्यमो मध्यमोऽव्यापको व्यापको योऽसौ हरिरादिरनादिरविश्वो विश्वः सगुणो निर्गुणः' इत्यादेर्विष्णोरेव ते धर्माः ।**

ಅನುವಾದ - ಶ್ರೀಹರಿಯು ಸ್ಥೂಲನಲ್ಲ, ಅಣುವಲ್ಲ, ಮಧ್ಯಮಪರಿಮಾಣನಲ್ಲ, ಹೃದಯದ ಮಧ್ಯದಲ್ಲಿ ನೆಲಸಿರುವವನು, ಅವನಂತೆ ವ್ಯಾಪಿಸಿರುವ ಮತ್ತೊಬ್ಬರಿಲ್ಲ. ಆದ್ದರಿಂದ ಅವನೇ ಎಲ್ಲೆಡೆ ವ್ಯಾಪಿಸಿದವನು. ಸಕಲ ದೇಶಕಾಲಗಳಿಂದ ವ್ಯಾಪ್ತನು. ಅವನಿಗಿಂತ ಪೂರ್ಣರಾದವರು ಮತ್ತೊಬ್ಬರಿಲ್ಲ. ಆದರೆ ಜಗತ್ತಿನಲ್ಲಿ ಅವನೇ ಪ್ರವೇಶಿಸಿರುವವನು, ಅಪ್ರಾಕೃತವಾದ

---

ब्रह्मेत्यभिवदन्ति सिद्धान्तयन्ति । सिद्धान्तसाधकं हेतुमेवाऽह – **अस्थूलमित्यादिनेति** ।। अनेन **'प्रसिद्धस्थूलसूक्ष्मादिवैलक्षण्याज्जनार्दनः'** इति बृहद्भाष्योक्तरीत्या प्रसिद्धस्थूलादि-वैलक्षण्यमुच्यते । स्थूलाण्वादिपदस्य भावप्रधानत्वे तु लौकिकस्थौल्यादिराहित्यमनेनोक्तं भवति । **'अलोहितं'** लोहितशब्दितरक्ताद्युपलक्षितप्राकृतरूपसामान्यरहितम् । **'अस्नेहं'** प्राकृतस्नेहरहितम् । **'अच्छायं'** **'छाया त्वविद्या सम्प्रोक्ता'** इति वचनादज्ञानरहितम् । जीवदेहस्येव छायारहितं च । **'अतमः'** आवरणरहितम् । **'अवायु'** पीडारूपश्वासोच्छ्वास-रहितम् । यद्वा – व्यासतीर्थीयोक्तरीत्या अवाय्वनाकाशमतेजस्कमित्येतैस्तदारब्धशरीर-रहितमित्युच्यते । अत एव **'अच्छायमतमोऽवाय्वनाकाशम्'** इत्यत्र सर्वात्मना निषेध इत्युक्तं सुधाटीकयोः । 'असङ्गं' सर्वगतमपि तत्कृतलेपरहितम् । अरसमगन्धमित्याभ्यामुप-लक्षणया प्राकृतरसगन्धादिराहित्यमुच्यते । अचक्षुष्कमित्यादिना प्राकृतस्वभिन्नचक्षुरादि-राहित्यम् । **'अतेजस्कं'** प्राकृतवर्चोरहितम् । **'अप्राणम्'** उक्तचक्षुरादिव्यतिरिक्त प्राकृत-ज्ञानेन्द्रियकर्मेन्द्रियरहितम् । व्यासतीर्थीयोक्तरीत्या प्राणवायुरहितमिति वा । **'अमुखं'** प्राकृतविग्रहरहितं वा । **'अमात्रं'** परिमितिशून्यम् । **'मीयन्ते एभिः'** इति मात्रा इन्द्रियाणीति टीकोक्तेरमात्रं चक्षुरादीन्द्रियरहितमिति व्यासतीर्थीयोक्तिः । सर्वात्मना शरीरारम्भकपञ्चमात्रशून्यं वा । न विद्यतेऽन्तरं बाह्यं च यस्मात् तदनन्तरमबाह्यम्, इदमेव सर्वस्मादन्तरं बाह्यं चेत्यर्थः । 'तत्' ब्रह्म **'किञ्चन'** अन्नादिकं शुभमशुभं वा

**'साशनानशनत्वेन नरदेवौ यथोदितौ ।**
**अत्तिं विनाऽप्यदौर्बल्यात् तथाऽनत्तिर्हरेर्भुजिः ।।'**

इति स्मृतेरुपजीवनार्थं **'नाश्नाति'** नात्ति । **'कश्चन'** कोऽपि समर्थः **'तत्'** ब्रह्म **'नाश्नाति'** न संहरतीति ।

ಜ್ಞಾನಾನಂದಾದಿಗುಣಗಳಿರುವುದರಿಂದ ಸಗುಣನೆಂದೂ, ಪ್ರಾಕೃತಗುಣಗಳು ಇಲ್ಲದ ಕಾರಣ ನಿರ್ಗುಣನೆಂದೂ ಕರೆಸಿಕೊಂಡಿದ್ದಾನೆ. ಇವೇ ಮೊದಲಾದ ಪ್ರಮಾಣಗಳಲ್ಲಿ ಲೌಕಿಕ ಸ್ವಭಾವವಿಲ್ಲದಿರುವುದೆಂಬ ಧರ್ಮಗಳನ್ನು ಹೇಳಲಾಗಿವೆ. ಇವೆಲ್ಲವೂ ವಿಷ್ಣುವಿನ ಅಸಾಧಾರಣ ಧರ್ಮಗಳು.

ಪ್ರತಿಪದಾರ್ಥ -- ಲೌಕಿಕವಾದ ಸ್ಥೂಲತ್ವಾದಿಧರ್ಮಗಳು ಇಲ್ಲದ ಕಾರಣ ವಿಷ್ಣುವೇ ಪ್ರತಿಪಾದ್ಯನೆಂದು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಸ್ಥೂಲಃ = ಲೌಕಿಕಮಹತ್ವರಹಿತನು, ಅನಣುಃ = ಲೌಕಿಕಅಣುತ್ವರಹಿತನು, ಅಮಧ್ಯಮಃ = ಲೌಕಿಕ ಮಧ್ಯಮಪರಿಮಾಣವಿಲ್ಲದವನು, ಮಧ್ಯಮಃ = ಹೃದಯ ಮಧ್ಯದಲ್ಲಿದ್ದು ಉಪಾಸನೆಗೆ ವಿಷಯನಾದವನೂ, ಅವ್ಯಾಪಕಃ = ಇವನಂತೆ ವ್ಯಾಪ್ತನಾದ ಮತ್ತೊಬ್ಬನಿಲ್ಲದವನು, ವ್ಯಾಪಕಃ = ಆದ್ದರಿಂದ ಎಲ್ಲೆಡೆ ಯಾವಾಗಲೂ ವ್ಯಾಪಿಸಿರುವವನು, ಯೋಽಸೌ ಹರಿಃ = ಯಾರೋ ಅಂತಹ ಶ್ರೀಹರಿಯು, ಆದಿಃ = ಜಗತ್ತಿಗೆ ಕಾರಣನು, ಅನಾದಿಃ = ತನಗೆ ಕಾರಣನಿಲ್ಲದವನು, ಅಥವಾ ಉತ್ಪತ್ತಿರಹಿತನು, ಅವಿಶ್ವಃ =ವಿಶ್ವಕ್ಕಿಂತ ಭಿನ್ನನಾದವನು, ವಿಶ್ವಃ = ಎಲ್ಲೆಡೆ ವ್ಯಾಪಿಸಿದ ರೂಪವುಳ್ಳವನು, ಸಗುಣಃ = ಜ್ಞಾನಾನಂದಾದಿಗುಣಗಳಿರುವ ಪ್ರಯುಕ್ತ ಸಗುಣನು, ನಿರ್ಗುಣಃ = ಪ್ರಾಕೃತ ಸತ್ತ್ವಾದಿಗುಣವಿಲ್ಲದವನು , ಇತ್ಯಾದೇಃ = ಇವೇ ಮೊದಲಾದ ವಾಕ್ಯಗಳಿಂದ, ತೇ ಧರ್ಮಾಃ = ಆ ಎಲ್ಲಾ ಧರ್ಮಗಳು, ವಿಷ್ಣೋರೇವ = ವಿಷ್ಣುವಿನಲ್ಲಿ ಮಾತ್ರ ಯುಕ್ತವಾಗುತ್ತವೆ ಎಂದು ತಿಳಿಯುತ್ತದೆ.[१]

---

(१) भाष्यदीपिका - लौकिकस्थौल्यादिराहित्यं कथं विष्णुत्वनिश्चायकं, तद्धर्मत्वेनानिश्चितत्वादित्यत आह – अस्थूल इति ।। 'अस्थूलः' लौकिकमहत्त्वरहितः, 'अनणुः' लौकिकाणुत्वरहितः, 'अमध्यमः' लौकिकमध्यमपरिमाणरहितः । नच परिमाणादिराहित्ये विष्णोरस्वभावत्वापत्तिरिति वाच्यम् । लौकिकस्थौल्यादिराहित्येऽप्य लौकिकपरिमाणादिसद्भावादित्याह – मध्यम इत्यादिना ।। न चानेन स्थूलत्वादेरनुक्तेर्न चोक्तपरिहार इति वाच्यम् । 'मध्यमो व्यापकः' इत्याद्युक्तेः स्थूलोऽणुश्चेत्युपलक्षकत्वात् । नच मध्यमपरिमाणवत्त्वे विष्णोरनित्यत्वापत्तिरिति वाच्यम् । अनित्यत्वानापादकमध्यमपरिमाणाभ्युपगमात् । तत्त्वप्रदीपे तु 'अमध्यमः' मध्यमपरिमाणनियतिवर्जितः 'व्याप्तोऽणुर्मध्यमस्तथा' इत्युक्तेः मध्ये मीयमानत्वान्मध्यम इति व्याख्यातम् । अस्मिन् पक्षे नियतमध्यमपरिमाणशून्यत्वान्नानित्यत्वमिति परिहारोऽभिप्रेतः । न विद्यतेऽन्यो व्यापको यस्यासावव्यापकः । लोकविलक्षणव्यापक इति वा । 'व्यापकः' सर्वदेशकालव्यापी। आदिः कारणमनादिस्तच्छून्य उत्पत्तिशून्य इति वा । न विद्यते विश्वः पूर्णो यस्मादविश्वः ।

**भाष्यम् – 'अस्थूलोऽनणुरूपाऽसावविश्वोऽविश्व एव च ।**
**विरुद्धधर्मरूपोऽसावैश्वर्यात् पुरुषोत्तमः ॥' इति च ब्राह्मे ॥**

**॥ इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये अक्षराधिकरणम् ॥ ३ ॥**

ಅನುವಾದ - ಪರಮಾತ್ಮನು ಸ್ಥೂಲನೂ ಅಲ್ಲ ಅಣುವೂ ಅಲ್ಲ, ಲೋಕಬಹಿರ್ಭೂತನೂ ಆಗಿದ್ದಾನೆ, ಲೋಕಾಂತರ್ಗತನೂ ಆಗಿದ್ದಾನೆ, ಹೀಗೆ ಅದ್ಭುತವಾದ ಸಾಮರ್ಥ್ಯದಿಂದ ವಿರುದ್ಧವಾದ ಧರ್ಮಗಳುಳ್ಳವನಾಗಿದ್ದಾನೆಂದು ಬ್ರಾಹ್ಮಪುರಾಣದಲ್ಲಿ ಪ್ರತಿಪಾದಿತವಾಗಿದೆ.

ಪ್ರತಿಪದಾರ್ಥ -- ಲೌಕಿಕಪರಿಮಾಣಾದಿರಾಹಿತ್ಯವು ಹೇಗೆ ವಿಷ್ಣುತ್ವಸಾಧಕವಾಗುತ್ತದೆ ? ಲೋಕದಲ್ಲಿ ಸಕಲ ಪದಾರ್ಥಗಳೂ ಪ್ರಾಕೃತಪರಿಮಾಣಗಳಿಂದ ಯುಕ್ತವಾಗಿವೆಯಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ .

ಅಸೌ = ಈ ವಿಷ್ಣುವು, ಅಸ್ಥೂಲೋऽನಣುರೂಪಃ = ಸ್ಥೂಲನಾಗದಿರುವಿಕೆಯುಳ್ಳವನು, ಮತ್ತು ಅಣುಭಿನ್ನಸ್ವರೂಪನು, ಏವ = ಅವನೇ, ಅವಿಶ್ವಃ =ವಿಶ್ವಕ್ಕಿಂತ ಅತ್ಯಂತ ವಿಲಕ್ಷಣನೂ, ವಿಶ್ವಃ = ವಿಶ್ವದಲ್ಲಿ ಅಂತರ್ಯಾಮಿಸ್ವರೂಪನೂ ಆಗಿದ್ದಾನೆ, ಅಸೌ = ಇಂತಹ; (ವಿರುದ್ಧಧರ್ಮ ರೂಪ). ಪುರುಷೋತ್ತಮಃ = ಕ್ಷರಾಕ್ಷರಪುರುಷ ಶ್ರೇಷ್ಠನಾದ ವಿಷ್ಣು, ಐಶ್ವರ್ಯಾತ್ = ಅಚಿಂತ್ಯ ಐಶ್ವರ್ಯ ಸಾಮರ್ಥ್ಯವಿರುವ ಪ್ರಯುಕ್ತ ವಿಶ್ವವಿಲಕ್ಷಣನಾಗಿದ್ದಾನೆ. ಈ ಕಾರಣದಿಂದಲೂ ಅಕ್ಷರಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.(१)

---

पूर्णत्वाद् विश्वः । यद्वा – **'अविश्वः'** लौकिकेष्वप्रविष्टः । **'विश्वः'** जगद्धृदयं वा प्रविष्टः । **'सगुणः'** ज्ञानानन्दादिगुणवान् । **'निर्गुणः'** सत्त्वादिगुणहीन इत्यर्थः । **'इत्यादेः'** इति वाक्यात् । आदिशब्देन **'अणोरणीयान् महतो महीयान्'** (कठ.२-२०) इति कठश्रुतिर्गृह्यते। **'ते'** अस्थूलत्वादयः । यत इति निश्चिता इति शेषः । अस्य अतस्तेऽक्षरस्य विष्णुत्वनिश्चायका भवन्तीत्युपस्कृतवाक्येनान्वयः ।

ननु तथाऽपि ते विष्णोरेवेति कथं, यस्मात् तेऽप्राकृतविग्रहे मध्यमाक्षरेऽपि सन्ति । नैष दोषः – यतस्ते तत्र भगवदपेक्षयैव सन्ति । अन्यानपेक्षा एव धर्मा ह्यत्र हेतुत्वेन विवक्षिताः ।

(१) **भाष्यदीपिका** - ननु लौकिकपरिमाणादिराहित्यं कथं विष्णोर्युक्तं, लोके सर्वपदार्थानां प्राकृतपरिमाणस्यैव दर्शनादित्यत आह – अस्थूलेति ॥ 'असौ पुरुषोत्तमः'

## श्रीपद्मनाभतीर्थविरचितसत्तर्कदीपावलिः

## ॐ ॥ अन्यभावव्यावृत्तेश्च ॥ॐ ॥ १-३-१२ ॥

'अस्थूलमनण्वह्रस्वमदीर्घमलोहितमस्नेहमच्छायमतमोऽवाय्वनाकाशम्' इत्यादिना प्रकृतेर्विलक्षणत्वेनोच्यमानत्वात् अत्राक्षरं विष्णुर्न प्रकृतिः । 'अस्थूलोऽनणुरूपः' इत्यादिवचनान्तरेण विष्णोरेवास्थूलत्वादिलक्षणत्वेनोक्तत्वादित्याह । अन्यभावेत्यादिना । न विद्यते अन्यो व्यापको यस्यासावव्यापक इत्यर्थः ॥१२॥

॥ इति सत्तर्कदीपावल्याम् अक्षराधिकरणम् ॥

'ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯಮತಮೋಽವಾಯ್ವನಾಕಾಶಮ್' ಇತ್ಯಾದಿವಾಕ್ಯಗಳಿಂದ ಪ್ರಕೃತಿಗಿಂತ ವಿಲಕ್ಷಣವಾದ ಧರ್ಮಗಳು ಅಕ್ಷರತತ್ವದಲ್ಲಿ ಶ್ರುತವಾಗಿವೆ. ಈ ಕಾರಣದಿಂದಲೂ ಲಕ್ಷ್ಮೀದೇವಿಯು ಅಕ್ಷರಳೆನಿಸುವುದಿಲ್ಲ ಹೊರತು ವಿಷ್ಣುವೇ ಅಕ್ಷರನಾಗುತ್ತಾನೆ. 'ಅಸ್ಥೂಲೋ ಅನುಣುರೂಪಃ' ಇತ್ಯಾದಿ ಬೇರೆ ಶ್ರುತಿಗಳಿಂದಲೂ ವಿಷ್ಣುವೇ 'ಅಸ್ಥೂಲತ್ವ' ಮೊದಲಾದ ವಿರುದ್ಧಲಕ್ಷಣಗಳುಳ್ಳವನೆಂದು ಸಿದ್ಧನಾಗಿದ್ದಾನೆ. ಇದನ್ನು ಸಮರ್ಥಿಸುವುದಕ್ಕಾಗಿ 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರವು ಹೊರಟಿದೆ. 'ಅವ್ಯಾಪಕಃ' ಎಂಬ ಶಬ್ದಕ್ಕೆ 'ನವಿದ್ಯತೇ ಅನ್ಯಃ ವ್ಯಾಪಕಃ ಯಸ್ಮಾತ್ ಅವ್ಯಾಪಕಃ' ಎಂಬ ವಿಗ್ರಹವನ್ನು ಆಶ್ರಯಿಸಿದಾಗ ಇವನಿಗಿಂತ ವ್ಯಾಪಕವಾದ ಬೇರೊಂದು ಪದಾರ್ಥವು ಇರುವುದಿಲ್ಲವೆಂದು ತಿಳಿಯುತ್ತದೆ.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಮುಗಿಯಿತು ॥

---

भगवान् 'अस्थूलोऽनणुरूपो भवति' प्राकृतलौकिकस्थूलाणुत्वरूपधर्मरहितवपुर्भवति । एवं 'अविश्वो विश्वश्च' लोकबहिर्भूतो लोकान्तर्गतश्च भवति । तथा विरुद्धधर्मरूपश्च भवति । लोके परस्परं विरुद्धाः स्थूलत्वाणुत्वादयो धर्माः स्वरूपभूता यस्य सः तथोक्तः । कथमित्यतो घटकमाह – ऐश्वर्यादिति ॥ अचिन्त्यैश्वर्यसामर्थ्यादित्यर्थः । ऐश्वर्यादेवेत्यनेन नात्रोपपादकान्तरमन्वेषणीयमित्युक्तं भवति । इति ब्रह्माण्डे इत्यस्य उक्तत्वाद् युक्ता इत्यध्याहारेण ते धर्माः विष्णोर्युक्ता एवेति पूर्ववाक्येनान्वयः ।

॥ इत्यक्षराधिकरणम् ॥ ३ ॥

**तत्वप्रकाशिका –**

**ॐ ॥ अन्यभावव्यावृत्तेश्च ॥ॐ ॥ १-३-१२ ॥**

**युक्त्यन्तरेण विष्णोरेवाक्षरत्वं प्रतिपादयत् सूत्रं पठित्वा व्याचष्टे – अन्येति॥**

ಮತ್ತೊಂದು ಹೇತುವಿನಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. 'ಅನ್ಯಭಾವವ್ಯಾವೃತ್ತೇಶ್ಚ' ಎಂದು.

**तत्वप्रकाशिका – 'एतद्वै तदक्षरं गार्गि ब्राह्मणा अभिवदन्त्यस्थूलमनण्वह्रस्वमदीर्घमलोहितमस्नेहमच्छायमतमोऽवाय्वनाकाशमसङ्गमरसगन्धमचक्षुष्कमश्रोत्रमवागमनोऽतेजस्कमप्राणममुखममात्रमनन्तरबाह्यम्' । 'न तदश्नाति किञ्चन' इति सकलवस्तुस्वभावानां स्थूलत्वादीनामक्षरे व्यावृत्तिकथनाच्च ब्रह्मैवाक्षरमित्यर्थः ।**

'ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯಮತಮೋಽವಾಯ್ವನಾಕಾಶಮಸಂಗಮರಸಗಂಧಮಚಕ್ಷುಷ್ಕಮಶ್ರೋತ್ರಮವಾಗ-ಮನೋಽತೇಜಸ್ಕಮಪ್ರಾಣಮಮುಖಮಮಾತ್ರಮನಂತರಬಾಹ್ಯಂ' 'ನ ತದಶ್ನಾತಿ ಕಿಂಚನ'. ಎಲೈ ಗಾರ್ಗಿಯೇ! ಅಕ್ಷರತತ್ವದ ಲಕ್ಷಣವನ್ನು ಬ್ರಹ್ಮಜ್ಞಾನಿಗಳು ಹೀಗೆ ಹೇಳುತ್ತಾರೆ - 'ಪ್ರಾಕೃತವಾದ ಸ್ಥೂಲತ್ವ, ಅಣುತ್ವ, ಹ್ರಸ್ವತ್ವ, ದೀರ್ಘತ್ವ ಮೊದಲಾದ ಗುಣಗಳು ಇರುವುದಿಲ್ಲ. ಪ್ರಾಕೃತವರ್ಣವಾಗಲಿ, ಪ್ರಾಕೃತವಾದ ಸ್ನೇಹವಾಗಲಿ ಇರುವುದಿಲ್ಲ. ಅವಿದ್ಯೆ ಎಂಬ ಆವರಣದಿಂದ ರಹಿತವಾಗಿದೆ. ಪ್ರಾಕೃತವಾದ ವಾಯು, ಆಕಾಶ ಮೊದಲಾದವುಗಳಿಂದ ಸಹಿತವಾದ ಪ್ರಾಕೃತವಾದ ಶರೀರವಿಲ್ಲದ್ದು ಅಸಂಗವೂ, ಪ್ರಾಕೃತವಾದ ಗಂಧ, ರಸ ಮೊದಲಾದವೂ ಇಲ್ಲದ್ದು, ಪ್ರಾಕೃತವಾದ ಚಕ್ಷುಸ್ಸು, ಶ್ರೋತ್ರ, ವಾಣಿ, ಮನಸ್ಸು ಇವುಗಳಿಂದ ರಹಿತವಾದದ್ದು, ಪ್ರಾಕೃತವಾದ ತೇಜಸ್ಸು ಇಲ್ಲದ್ದು ಮತ್ತು ಪ್ರಾಕೃತವಾದ ಮುಖ, ದೇಹವಿಲ್ಲದ್ದು, ಪ್ರಾಕೃತವಾದ ಪರಿಮಾಣವಿಲ್ಲದ ಪದಾರ್ಥವೇ ಅಕ್ಷರತತ್ವವೆನಿಸಿದೆ' ಎಂದು ಹಾಗೂ 'ಇವನು ಅನ್ನ ಮೊದಲಾದ ಪ್ರಾಕೃತವಾದ ಪದಾರ್ಥಗಳನ್ನಾಗಲೀ, ಅಶುಭಕರ್ಮವನ್ನಾಗಲೀ, ಭೋಗ ಮಾಡುವುದಿಲ್ಲ'. ಹೀಗೆ ಸಕಲವಸ್ತುಗಳ ಸ್ವಭಾವವೆನಿಸಿದ ಸ್ಥೂಲತ್ವಾದಿಗಳನ್ನು ಅಕ್ಷರತತ್ವದಲ್ಲಿ ನಿಷೇಧ ಮಾಡಲಾಗಿದೆ. ಆದ್ದರಿಂದ ಬ್ರಹ್ಮನೇ ಅಕ್ಷರನಾಗಬೇಕೆಂದು ಅಭಿಪ್ರಾಯ.

**तत्वप्रकाशिका – लौकिकस्थौल्यादिराहित्यं कथं विष्णुत्वनिश्चायकमित्यत आह – अस्थूल इति ॥ लौकिकस्थौल्यादिराहित्येऽपि अलौकिकपरिमाणादिसद्भावात् न विष्णोरस्वभावत्वमिति भावेनोपलक्षणतया मध्यम इत्याद्युक्तम् ।**

ಪ್ರಾಕೃತವಾದ ಧರ್ಮಗಳಿಲ್ಲದ ಕಾರಣದಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಅಸ್ಥೂಲಃ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಪ್ರಾಕೃತವಾದ ಶೂನ್ಯತ್ವ ಮೊದಲಾದ ಧರ್ಮಗಳಿಲ್ಲದಿದ್ದರೂ ಅಪ್ರಾಕೃತವಾದ ಪರಿಮಾಣಾದಿಗಳು ಇರುವ ಕಾರಣ ವಿಷ್ಣು ಅಸ್ವರೂಪನಲ್ಲವೆಂದು ತಿಳಿಯುತ್ತದೆ. ಎಂದರೆ ನಿರಾಕಾರನಲ್ಲ; ಸಾಕಾರ ಎಂದರ್ಥ. ಈ ಅಭಿಪ್ರಾಯದಿಂದ ಉಪಲಕ್ಷಣವೆಂದು ಶ್ರುತಿಯಲ್ಲಿ ಮಧ್ಯಮ ಪರಿಮಾಣವನ್ನು ವಿಷ್ಣುವಿನ ಧರ್ಮವಾಗಿ ಹೇಳಲಾಗಿದೆ.

**तत्वप्रकाशिका – तमो वाय्वादीनां सर्वात्मना निवृत्तिः अदुःखम-सुखमित्यादिवत् ।**

ತಮಸ್ಸು, ವಾಯು ಮೊದಲಾದವುಗಳಿಗೆ ಅಕ್ಷರನಿಂದ ನಿವೃತ್ತಿಯನ್ನು ಹೇಳಿರುವಿಕೆಯನ್ನೇ 'ಸರ್ವಾತ್ಮನಾ ನಿವೃತ್ತಿ' ಎಂದು ತಿಳಿಯಬೇಕು. ಅಂದರೆ ಅಪ್ರಾಕೃತವಾದ ತಮೋ ವಾಯ್ವಾದಿಧರ್ಮಗಳು ಪರಮಾತ್ಮನಲ್ಲಿ ಇವೆ ಎಂದು ತಿಳಿಯಬಾರದು. ಹೇಗೆಂದರೆ 'ಅಸುಖಂ', 'ಅದುಃಖಂ' ಎಂಬಲ್ಲಿ 'ಅಸುಖಂ' ಎಂದರೆ ಪ್ರಾಕೃತವಾದ ಸುಖವಿಲ್ಲದವನು, ಅಪ್ರಾಕೃತವಾದ ಸುಖದಿಂದ ಪೂರ್ಣನಾದವನು ಎಂದರ್ಥ. ಆದರೆ 'ಅದುಃಖಂ' ಎಂಬಲ್ಲಿ ಪ್ರಾಕೃತವಾದ ದುಃಖವಿಲ್ಲದವನೂ, ಮತ್ತು ಅಪ್ರಾಕೃತವಾದ ದುಃಖವುಳ್ಳವನು ಎಂದರ್ಥವಲ್ಲ ಹೊರತು ಸರ್ವಾತ್ಮನಾ ದುಃಖಶೂನ್ಯನೆಂಬ ಅರ್ಥವನ್ನು ಹೇಗೆ ಮಾಡುತ್ತೇವೋ; ಅದರಂತೆ 'ಅತಮಃ' ಎಂದರೆ ಸರ್ವಾತ್ಮನಾ ತಮಸ್ಸು ಇವನಲ್ಲಿ ಇಲ್ಲವೆಂದೇ ತಿಳಿಯಬೇಕು.

**तत्वप्रकाशिका – लौकिकपरिमाणादिराहित्यं कथं विष्णोर्युक्तम् । सर्वपदार्थानां प्राकृतपरिमाणस्यैव दर्शनादित्यत आह – अस्थूलेति ।**

ಪ್ರಾಕೃತವಾದ ಪರಿಮಾಣಾದಿರಾಹಿತ್ಯವಿದ್ದಮಾತ್ರದಿಂದ ವಿಷ್ಣುವೇ ಅಕ್ಷರನೆಂದು ಹೇಗೆ ನಿಶ್ಚಯಿಸುತ್ತೀರಿ? ಸಕಲಪದಾರ್ಥಗಳೂ ಪ್ರಾಕೃತವಾದ ಧರ್ಮಗಳಿಂದ ಯುಕ್ತವಾಗಿರುವಾಗ ವಿಷ್ಣುವಿನ ಪರಿಮಾಣಕ್ಕೆ ಅಪ್ರಾಕೃತತ್ವವನ್ನು ಹೇಳಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ 'ಅಸ್ಥೂಲ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – मध्यमाक्षरस्याप्राकृतविग्रहत्वेऽपि भगवदपेक्षयैव । अनेनैव 'न तदश्नाति किञ्चन' इत्येतदपि जीवस्वभावभूतोपजीवनार्थाशनव्यावृत्त्यर्थमिति सूचितं भवति । अस्थूलत्वादिसमभिव्याहारात् ।**

ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೂ ಸಹ ಅಪ್ರಾಕೃತವಾದ ಶರೀರವನ್ನೇ ಧರಿಸಿದ್ದಾಳೆ. ಆದರೂ ಸಹ ಭಗವಂತನ ಅನುಗ್ರಹದಿಂದ ಅಪ್ರಾಕೃತಳಾಗಿದ್ದಾಳೆ ಹೊರತು ಸ್ವತಂತ್ರವಾಗಿ

ಅಪ್ರಾಕೃತಳಾಗಿಲ್ಲವೆಂದು ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ 'ನ ತದಶ್ನಾತಿ ಕಿಂಚನ' ಎಂಬ ವಾಕ್ಯವನ್ನೂ ಜೀವನ ಸ್ವಭಾವವೆನಿಸಿದ ಉಪಜೀವನಕ್ಕೋಸ್ಕರ ತಿನ್ನುವಿಕೆ ಎಂಬುದನ್ನು ವ್ಯಾವೃತ್ತಿ ಮಾಡಲಾಗಿದೆ ಎಂದು ಸೂಚಿಸಿದಂತಾಯಿತು. ಅಂದರೆ ಪ್ರಾಕೃತಸಂಪರ್ಕವಿಲ್ಲದ ವಿಷ್ಣು ಉಪಜೀವನಕ್ಕೋಸ್ಕರ ಏನನ್ನೂ ತಿನ್ನಲಾರನೆಂದು ಶ್ರುತಿಗೆ ವ್ಯಾಖ್ಯಾನಿಸಿದಂತಾಯಿತು. ಏಕೆಂದರೆ ಅಸ್ಥೂಲತ್ವಾದಿಗಳ ಜೊತೆಯಲ್ಲಿಯೇ ಈ ವಾಕ್ಯವು ಪಠಿತವಾಗಿರುವುದರಿಂದ.

**तत्वप्रकाशिका – अक्षरश्रुत्यादीनां तु विष्णावेव मुख्यता तस्मादक्षरं विष्णुरेवेति तस्यैवादृश्यत्वादि इति स्थितम् ।। १२ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् अक्षराधिकरणम् ।।**

ಆದ್ದರಿಂದ ಅಕ್ಷರಶ್ರುತಿಯು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ. ಆದ್ದರಿಂದ ವಿಷ್ಣುವೇ ಅಕ್ಷರನಾಗುತ್ತಾನೆ ಹಾಗೂ ಅದೃಶ್ಯತ್ವಾದಿ ಧರ್ಮಗಳು ಅವನಲ್ಲೇ ಇವೆ ಎಂದು ಸಿದ್ಧವಾಗುತ್ತವೆ.

ಇಲ್ಲಿಗೆ ತತ್ತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಮುಗಿಯಿತು

**भावदीपः –**

**ॐ अन्यभावव्यावृत्तेश्च ॐ ।।**

सौत्रचशब्दांशं प्रागुक्तहेतुसमुच्चायकं मत्वाऽऽह – **हेत्वन्तरेणेति** ।। सूत्रे 'अन्यभाव' इत्युक्तिलब्धोक्तिरन्यवस्तुस्वभावानामिति । तदर्थः – **सकलेति** ।। प्राकृतानामित्यर्थः ।

ಸೂತ್ರದಲ್ಲಿರುವ 'ಚ' ಶಬ್ದವು ಹಿಂದೆ ಹೇಳಿದ ಹೇತುವನ್ನು ಸಮುಚ್ಚಯಮಾಡುತ್ತಿದೆ ಎಂದು 'ಹೇತ್ವಂತರೇಣ' ಇತ್ಯಾದಿಯಾಗಿ ಹೇಳಿದ್ದಾರೆ. ಸೂತ್ರದಲ್ಲಿರುವ 'ಅನ್ಯಭಾವ' ಎಂಬ ಪದದಿಂದ 'ಅನ್ಯವಸ್ತುಸ್ವಭಾವಾನಾಂ' ಎಂಬ ಅರ್ಥವು ದೊರೆಯುತ್ತದೆ. ಅದರ ಅರ್ಥವನ್ನೇ ಟೀಕೆಯಲ್ಲಿ 'ಸಕಲವಸ್ತು ಸ್ವಭಾವನಾಂ' ಎಂದು ಹೇಳಿದ್ದಾರೆ. ಪ್ರಾಕೃತವಾದ ಸಕಲವಸ್ತುಗಳ ಸ್ವಭಾವ ಎಂದರ್ಥ

**भावदीपः –** भाष्ये भावप्रधानं मत्वोक्तम् – **स्थूलत्वेति** ।। भाष्योक्तश्रुतौ मध्यमव्यापकपदयोरुक्तेरुपयोगमाह – **अलौकिकेति** ।। उपलक्षणतया स्थौल्यादेरुपलक्षमतयेत्यर्थः ।

ಭಾಷ್ಯದಲ್ಲಿ ಹೇಳಲ್ಪಟ್ಟ 'ಅಣು' ಮೊದಲಾದ ಶಬ್ದಗಳು ಭಾವಪ್ರಧಾನದಿಂದ ನಿರ್ದಿಷ್ಟವಾಗಿವೆ ಎಂದು ತಿಳಿಸಲು 'ಸ್ಥೂಲತ್ವಾದೀನಮ್' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಯಲ್ಲಿ ಮಧ್ಯಮ ಹಾಗೂ ವ್ಯಾಪಕಪದಗಳ ತನಕ ಶ್ರುತಿಯಲ್ಲಿ ಏಕೆ ಉಲ್ಲೇಖಿಸಿದ್ದಾರೆ ಎಂಬುದಕ್ಕೆ 'ಅಲೌಕಿಕ' ಇತ್ಯಾದಿ ಪ್ರಯೋಜನವನ್ನು ಹೇಳುತ್ತಿದ್ದಾರೆ. 'ಉಪಲಕ್ಷಣತಯಾ' ಎಂದರೆ ಸ್ಥೂಲ್ಯಾದಿಗಳನ್ನು ಉಪಲಕ್ಷಣವಾಗಿ ಸ್ವೀಕರಿಸಬೇಕಾದ್ದರಿಂದ ಎಂದು ಅರ್ಥ .

**भावदीपः – विस्तृतमेतत् 'महतोऽल्पत्वमपि हि व्योमवत् प्राह वेदराट्' इत्यादिना वैशेषिकाधिकरणानुव्याख्याने भगवतोऽणुत्वमहत्त्वादिव्युत्पादनेन ।**

ಈ ವಿಚಾರವನ್ನೇ 'ಮಹತೋಽಲ್ಪತ್ವಮಪಿ ಹಿ ವ್ಯೋಮವತ್ ಪ್ರಾಹ ವೇದರಾಟ್' ಇತ್ಯಾದಿಯಾದ ವೈಶೇಷಿಕಾಧಿಕರಣದ ಅನುವ್ಯಾಖ್ಯಾನದಲ್ಲಿ ಭಗವಂತನಿಗೆ ಅಣುತ್ವ ಹಾಗೂ ಮಹತ್ವಗಳನ್ನು ಆಕಾಶದ ದೃಷ್ಟಾಂತದಿಂದ ಸ್ಪಷ್ಟವಾಗಿ ಪ್ರತಿಪಾದಿಸಿ ಮಾಡಿದ್ದಾರೆ.

**भावदीपः–ननु 'अस्थूलम्' इत्यादिना प्राकृतस्थौल्यादिनिरासे तत्प्रायपठितानामपि तथा स्यादित्यत आह – तम इति ॥**

'ಅಸ್ಥೂಲಮ್' ಇತ್ಯಾದಿ ಶ್ರುತಿಯಿಂದ ಪ್ರಾಕೃತಸ್ಥೌಲ್ಯಾದಿಗಳನ್ನು ನಿರಾಕರಿಸುವುದಾದರೆ ಅದರ ಜೊತೆಗೇ ಪಠಿತವಾದ ಸಕಲವನ್ನೂ ಸಹ ಹೀಗೆಯೇ ನಿರಾಕರಿಸಬೇಕಲ್ಲವೆ? ಎಂಬ ಪ್ರಶ್ನೆಗೆ 'ತಮಃ' ಎಂಬುದರಿಂದ ಉತ್ತರಿಸಿದ್ದಾರೆ.

**भावदीपः – 'अदुःखमसुखम्' इति श्रुतावसुखमित्यनेन बाह्यसुखनिषेधेऽपि 'अतमोऽवायु' इत्यादौ सर्वात्मना तमःप्रभृतेरेव निरासः । 'आदित्यवर्णं तमसः परस्ताद्' इत्यादिवाक्यबलादित्यर्थः ।**

'ಅದುಃಖಮಸುಖಮ್' ಎಂಬ ಶ್ರುತಿಯಲ್ಲಿ 'ಅಸುಖಮ್' ಎಂಬುದರಿಂದ ಬಾಹ್ಯಸುಖವನ್ನಷ್ಟೇ ನಿಷೇಧಮಾಡಲಾಗುತ್ತದೆ. ಆದರೆ 'ಅದುಃಖಮ್' ಎಂಬುದರಿಂದ ದುಃಖ ಸಾಮಾನ್ಯವನ್ನೇ ನಿಷೇಧ ಮಾಡಲಾಗುತ್ತದಯೇ ಹೊರತು ಪ್ರಕೃತವಾದ ದುಃಖವಿಲ್ಲವೆಂದು ನಿಷೇಧ ಮಾಡುವುದಿಲ್ಲ. ಅದರಂತೆ ಪ್ರಕೃತ 'ಅಸ್ಥೂಲಮ್' ಇತ್ಯಾದಿ ಶ್ರುತಿಯಲ್ಲಿಯೂ ಸಹ ಅಸ್ಥೂಲಾದಿ ಪದಗಳಿಂದ ಲೌಕಿಕವಾದ ಸ್ಥೌಲ್ಯಾದಿಗಳನ್ನು ನಿಷೇಧ ಮಾಡಿದರೂ 'ಅತಮೋಽವಾಯು' ಇತ್ಯಾದಿಪದಗಳಿಂದ ತಮಸ್ಸು ಮೊದಲಾದ್ದನ್ನು ಸರ್ವಾತ್ಮನಾ ನಿಷೇಧ ಮಾಡಲಾಗಿದೆ ಎಂದು ತಿಳಿಯಬೇಕು. 'ಆದಿತ್ಯವರ್ಣಂ ತಮಸಃಪರಸ್ತಾತ್' ಇತ್ಯಾದಿ ಪ್ರಮಾಣವೇ ಈ ವಿಷಯದಲ್ಲಿ ಆಧಾರವಾಗಿದೆ.

ಅಕ್ಷರಾಧಿಕರಣ (೧-೩-೩)

**भावदीपः – प्राकृतस्थौल्यादिराहित्यरूपहेतोर्व्यभिचारमाशङ्क्य दहरनयभाष्ये वक्ष्यमाणपरिहारं स्वयमाह – मध्यमेति ।।**

'ಪ್ರಾಕೃತಸ್ಥೌಲ್ಯಾದಿರಾಹಿತ್ಯ' ಎಂಬ ಹೇತುವಿಗೆ ವ್ಯಭಿಚಾರದೋಷವು ಬರುತ್ತದೆ ಎಂದು ಆಶಂಕಿಸಿ ದಹರಾಧಿಕರಣದ ಭಾಷ್ಯದಲ್ಲಿ ಮುಂದೆ ಹೇಳುವ ಪರಿಹಾರವನ್ನು ಪ್ರಕೃತ ಹೇಳುತ್ತಿದ್ದಾರೆ 'ಮಧ್ಯಮ' ಇತ್ಯಾದಿಯಾಗಿ.

**भावदीपः – तथाच 'सापेक्षनिरपेक्षयोर्निरपेक्षं स्वीकर्तव्यम्' इत्यग्रे भाष्योक्तेरस्थूलमित्यादिश्रुतौ निरपेक्षस्थौल्यादिराहित्यस्यैव ग्राह्यत्वात्तस्यैव च सूत्रकृता विवक्षितत्वान्न व्यभिचार इत्यर्थः ।**

ಆದ್ದರಿಂದ ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನು ಸ್ವೀಕರಿಸುವುದೇ ಶ್ರೇಷ್ಠವಾಗಿದೆ ಎಂದು ಮುಂದೆ ಭಾಷ್ಯದಲ್ಲಿ ಹೇಳುತ್ತಾರೆ. ಆದ್ದರಿಂದ 'ಅಸ್ಥೂಲಮ್' ಇತ್ಯಾದಿ ಶ್ರುತಿಯಲ್ಲಿ ನಿರಪೇಕ್ಷಿತವಾದ 'ಸ್ಥೌಲ್ಯಾದಿರಾಹಿತ್ಯ' ಎಂಬ ಅರ್ಥವನ್ನೇ ಸ್ವೀಕರಿಸಬೇಕು. ಇಂತಹ ಅರ್ಥವನ್ನೇ ಸೂತ್ರಕಾರರೂ ಸಹ ವಿವಕ್ಷಿಸಿರುತ್ತಾರೆ. ಬೇರೆಯವರಲ್ಲಿರುವ ಸ್ಥೌಲ್ಯಾದಿರಾಹಿತ್ಯವು ಸಾಪೇಕ್ಷಿತವಾದ್ದರಿಂದ ಆ ಅರ್ಥವು ಸೂತ್ರಕಾರರಿಗೆ ವಿವಕ್ಷಿತವಾಗಿಲ್ಲ. ಆದ್ದರಿಂದ ವ್ಯಭಿಚಾರದೋಷಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

**भावदीपः – प्रागुक्तानशनोक्तिविरोधं परिहर्तुम् अनशनोक्तिस्त्वनुपजीवनार्थत्वेनैव सावकाशेति न्यायविवरणं सूत्रारूढं दर्शयितुं सयुक्तिकं व्याख्याति – अनेनैवेति ।।**

ಹಿಂದೆ ಪೂರ್ವಪಕ್ಷ ಮಾಡುವಾಗ ಹೇಳಲ್ಪಟ್ಟ ಅನಶನಶ್ರುತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಪರಮಾತ್ಮನು ಮತ್ತೊಂದು ಪದಾರ್ಥವನ್ನು ಉಪಜೀವಿಸಿಕೊಂಡು ಜೀವಿಸಲಾರ; ಆದರೆ ಸಕಲಜೀವರು ಆಹಾರಪದಾರ್ಥವನ್ನು ಉಪಜೀವಿಸಿಕೊಂಡೇ ಜೀವನವನ್ನು ನಡೆಸುತ್ತಾರೆ. ಇಂತಹ ಸ್ಥಿತಿ ಪರಮಾತ್ಮನಿಗಿರುವುದಿಲ್ಲ. ಆದ್ದರಿಂದ ಅನಶನ ಶ್ರುತಿಯು ಸಾವಕಾಶವಾಗಿದೆ ಎಂದು ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಅದನ್ನು ಸೂತ್ರಾರೂಢ ಮಾಡಲು ಯುಕ್ತಿಬದ್ಧವಾಗಿ ವ್ಯಾಖ್ಯಾನಿಸುತ್ತಿದ್ದಾರೆ 'ಅನೇನೈವ' ಇತ್ಯಾದಿಯಾಗಿ.

**भावदीपः – सूत्रे लौकिकस्थौल्यादिराहित्यस्य श्रुत्यर्थतया कथनेनैवेत्यर्थः । 'साशनानशनत्वेन नरदेवौ यथोदितौ । अत्तिं विनाऽप्यदौर्बल्यात्तदनत्ति हरेर्भुजः' इत्येकादशस्कन्धतात्पर्योक्तेरिति भावः ।**

'ಅನೇನೈವ' ಎಂದರೆ ಸೂತ್ರದಲ್ಲಿ ಲೌಕಿಕವಾದ ಸ್ಥೌಲ್ಯಾದಿರಾಹಿತ್ಯವನ್ನೇ ಶ್ರುತಿಯ ಅರ್ಥವೆಂದು ಹೇಳಿದ್ದರಿಂದಲೇ ಎಂದರ್ಥ. 'ಸಾಶನಾನಶನತ್ವೇನ ನರದೇವೌ ಯಥೋದಿತೌ । ಅತ್ತಿಂ ವಿನಾಪ್ಯದೌರ್ಬಲ್ಯಾತ್ತದನತ್ತಿ ಹರೇರ್ಭುಜಃ', ಜೀವನು ಆಹಾರವನ್ನು ಭೋಗಿಸುತ್ತಾನೆ. ಪರಮಾತ್ಮನು ಯಾವುದೇ ಆಹಾರವನ್ನು ಭೋಗಿಸುವುದಿಲ್ಲ. ಆದ್ದರಿಂದಲೇ ಶ್ರುತಿಯು ಏನನ್ನೂ ತಿನ್ನುವುದಿಲ್ಲವೆಂದು ಪರಮಾತ್ಮನ ಬಗ್ಗೆ ಹೇಳುತ್ತದೆ. ಏಕೆಂದರೆ ಏನನ್ನೂ ತಿನ್ನದಿದ್ದರೂ ಸಹ ಅವನಿಗೆ ದೌರ್ಬಲ್ಯ ಬರುವುದಿಲ್ಲ. ಹೀಗೆ ಏಕಾದಶ ಸ್ಕಂಧದ ತಾತ್ಪರ್ಯದ ವಚನವನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

**भावदीपः** – कुत एवं सामान्योक्तेर्विशेषपरत्वम्? इत्यतो 'धर्मान्तरेण वाक्यशेषाद्' इति न्यायादिति भावेन न्यायविवरणोक्तसमाधौ युक्तिमाह – **अस्थूलत्वादीति** ।। लौकिकस्थौल्यादिराहित्यादिसमभिव्याहारादित्यर्थः ।।

'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ, ಅತ್ತೃತ್ವ ಸಾಮಾನ್ಯವನ್ನಷ್ಟೇ ನಿಷೇಧಿಸಲಾಗಿದೆ. ಹೀಗಿರುವಾಗ ನೀವು ಅತ್ತೃತ್ವದವಿಶೇಷವನ್ನೇಕೆ ನಿಷೇಧಮಾಡುತ್ತಿದ್ದೀರಿ ? ಎಂಬ ಪ್ರಶ್ನೆಗೆ 'ಧರ್ಮಾಂತರೇಣ ವಾಕ್ಯಶೇಷಾತ್' ಎಂಬ ನ್ಯಾಯದ ಆಧಾರದಿಂದ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಎರಡು ಸಮಾಧಾನಗಳನ್ನು ಯುಕ್ತಿಬದ್ಧವಾಗಿ ಸಮರ್ಥಿಸುತ್ತಿದ್ದಾರೆ. 'ಅಸ್ಥೂಲತ್ವಾದಿ' ಇತ್ಯಾದಿಯಾಗಿ ಲೌಕಿಕ ಸ್ಥೌಲ್ಯಾದಿರಾಹಿತ್ಯವೇ ಮೊದಲಾದವುಗಳ ಸಮಭಿವ್ಯಾಹಾರ ಇರುವುದರಿಂದ ಎಂದರ್ಥ.

**भावदीपः** – **अक्षरेति** ।। अक्षरश्रुतितत्प्रवृत्तिनिमित्तसूर्यचन्द्राद्याधारत्वलिङ्ग-रूपपूर्वपक्षप्रापकाणामित्यर्थः ।। **मुख्यतेति** ।। 'अनित्यत्वं देहहानिः दुःखप्राप्तिर-पूर्णता । नाशश्चतुर्विधः प्रोक्तस्तदभावो हरेः सदा ।।' इति स्मृतेः । 'तस्मादक्षरमित्याचक्षत एतमेव सन्तम्' इत्यादिश्रुतेः । 'अक्षरं ब्रह्म परमम्' इत्यादिस्मृतेः ।

'ಅಕ್ಷರಶ್ರುತ್ಯಾದೀನಾಮ್' ಎಂದರೆ ಅಕ್ಷರಶ್ರುತಿ ಹಾಗೂ ಅದರ ಪ್ರವೃತ್ತಿನಿಮಿತ್ತ ಮತ್ತು ಸೂರ್ಯಚಂದ್ರಾದ್ಯಾಧಾರಲಿಂಗಗಳೆಂಬ ಪೂರ್ವಪಕ್ಷ ಪ್ರಾಪಕಗಳಿಗೆ ಎಂದರ್ಥ. 'ಮುಖ್ಯತಯಾ' ಎಂದರೆ 'ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ । ನಾಶೋ ಚತುರ್ವಿಧಃ ಪ್ರೋಕ್ತಃ ತದಭಾವೋ ಹರೇಸ್ಸದಾ' 'ಅನಿತ್ಯವಾಗಿರುವಿಕೆ, ದೇಹಹಾನಿ, ದುಃಖಃ ಪ್ರಾಪ್ತಿ, ಅಪರಿಪೂರ್ಣತೇ' ಎಂಬುದಾಗಿ ನಾಶವು ನಾಲ್ಕುವಿಧವಾಗಿದೆ. ನಾಲ್ಕುಬಗೆಯ ನಾಶವೂ ಸಹ ಪರಮಾತ್ಮನಿಗೆ ಇಲ್ಲದ್ದರಿಂದ ಅವನು ಮುಖ್ಯವಾಗಿ ಅಕ್ಷರಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ ಎಂದು ತಿಳಿಯಬೇಕು. 'ತಸ್ಮಾದ್ಅಕ್ಷರಮಿತ್ಯಾಚಕ್ಷತೇ' ಎಂಬ ಶ್ರುತಿಯೂ ಸಹ, 'ಅಕ್ಷರಂ ಬ್ರಹ್ಮ ಪರಮ್' ಎಂಬ ಶ್ರುತಿಯೂ ಸಹ ಈ ವಿಷಯದಲ್ಲಿ ಆಧಾರವಾಗಿದೆ.

ಅಕ್ಷರಾಧಿಕರಣ (೧-೩-೩)

**भावदीपः** – द्युभ्वादिनयोक्तदिशा अत्र भाष्योक्तश्रुत्यादिना च सूर्याद्याधारत्वादेर्हरावेव युक्तत्वादिति भावः ।। तस्मादिति ।। तस्मात् प्रकृतिद्वारा सर्वाधारत्वाज्ञामात्रेण सर्वाधारत्वनिरपेक्षलौकिकस्थौल्यादिराहित्यरूपनिरवकाशप्रापकभावात् । अनशनोक्तिरूपबाधकाभावाच्चेति सर्वहेत्वंशार्थः ।

ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಪ್ರಕೃತಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತ್ಯಾದಿಗಳಿಂದಲೂ ಸೂರ್ಯಾಚಂದ್ರಾದಿ ಆಧಾರತ್ವವು ಪರಮಾತ್ಮನಲ್ಲಿ ಮಾತ್ರವೇ ಯುಕ್ತವಾಗುತ್ತದೆ ಎಂದು ತಿಳಿಯಬೇಕು. 'ತಸ್ಮಾತ್' ಎಂದರೆ ಲಕ್ಷ್ಮೀದೇವಿಯ ಮೂಲಕ ಸಕಲವನ್ನೂ ಕೇವಲ ಆಜ್ಞೆಯಿಂದಷ್ಟೇ ಧರಿಸಿದ್ದಾನೆ ಮತ್ತು ಇವನಲ್ಲಿರುವ ಸರ್ವಾಧಾರತ್ವವು ನಿರಪೇಕ್ಷಿತವಾಗಿದೆ. ಲೌಕಿಕವಾದ ಸ್ಥೌಲ್ಯಾದಿ ಧರ್ಮಗಳು ಇವನಲ್ಲಿ ಇರುವುದಿಲ್ಲ. ಹೀಗೆ ಅನೇಕ ನಿರವಕಾಶಗಳ ಬಲದಿಂದ ಅಕ್ಷರಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಬಹುದು. 'ಅನಶನೋಕ್ತಿರೂಪಬಾಧಕಾಭಾವ' ಎಂಬುದು ಸಕಲ ಹೇತ್ವಂಶದ ಅರ್ಥವಾಗಿದೆ.

**भावदीपः** – अक्षरं तत्त्विति प्रतिज्ञार्थः – अक्षरं विष्णुरेवेति ।। इतीति ।। हेतोरित्यर्थः । शेषेण फलोक्त्या भाष्योपसंहारः ।

'ಅಕ್ಷರಂ ತತ್ತು' ಎಂಬ ಪ್ರತಿಜ್ಞೆಯ ಅರ್ಥವನ್ನೇ 'ಅಕ್ಷರಂ ವಿಷ್ಣುರೇವ' ಎಂದು ಹೇಳಿದ್ದಾರೆ. 'ಇತಿ' ಎಂದರೆ ಈ ಹೇತುವಿನಿಂದ ಎಂದರ್ಥ. ಉಳಿದ ಭಾಗದಿಂದ ಈ ಅಧಿಕರಣದ ಫಲವನ್ನು ಹೇಳಿ ಭಾಷ್ಯವನ್ನು ಉಪಸಂಹಾರ ಮಾಡಿದ್ದಾರೆ.

**भावदीपः** – यत्तु कश्चिदाह – सूत्रे श्रुत्यनुसारायाकाशधृतेरित्येव वाच्यम् अन्तपदं व्यर्थमिति, तन्न । तवाप्यम्बरपदास्वारस्यात् । मम तु अं विष्णुं बिभर्तीत्यादिव्युत्पत्त्या श्रीतत्त्वमेव आकाशशब्दार्थ इति सूचनेन स्वारस्योपपत्तेश्च चन्द्रिकोक्तदिशा पृथिव्यादिप्रकृत्यन्तसर्वाधारत्वोक्त्यर्थतयान्तपदस्यापि सार्थक्यात् ।। १२ ।।

।। इति श्रीराघवेन्द्रयतिकृते भावदीपे अक्षराधिकरणम् ।।

ಕೆಲವರು ಹೀಗೆ ಹೇಳಿದ್ದಾರೆ. ಶ್ರುತಿಯ ಆನುಗುಣ್ಯಕ್ಕಾಗಿ ಸೂತ್ರದಲ್ಲಿ 'ಆಕಾಶ ಧೃತೇಃ' ಎಂದಷ್ಟೇ ಹೇಳಬೇಕಿತ್ತು. 'ಅಂತ' ಪದವನ್ನು ಹೇಳಿದ್ದು ವ್ಯರ್ಥವಾಗುತ್ತದೆ ಎಂದು, ಇವರವಾದ ತಪ್ಪು. ಏಕೆಂದರೆ ಇವರಿಗೂ ಸಹ 'ಅಂಬರ' ಪದದ ಸಾರ್ಥಕ್ಯವನ್ನು ಹೇಳಲು ಸಾಧ್ಯವಿಲ್ಲ. ಆದರೆ ನಮ್ಮ ಮತದಲ್ಲಿ 'ಅಂಬರ' ಶಬ್ದಕ್ಕೆ 'ಅಂ ವಿಷ್ಣುಂ ಬಿಭರ್ತಿ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ ಮತ್ತು ಶ್ರೀತತ್ತ್ವವೇ ಆಕಾಶ ಶಬ್ದದ

ಅರ್ಥವೆಂದು ಸೂಚಿಸಿದ್ದರಿಂದ 'ಅಂಬರ' ಪದವು ಸ್ವರಸವಾಗುತ್ತದೆ. ಮತ್ತು ಚಂದ್ರಿಕೆಯಲ್ಲಿ ಹೇಳಿದಂತೆ ಪೃಥಿವಿಯಿಂದ ಹಿಡಿದು ಪ್ರಕೃತಿಯತನಕ ಸರ್ವಾಧಾರತ್ವವೆಂಬ ಲಿಂಗವನ್ನು ಹೇಳುವುದಕ್ಕಾಗಿ ಸೂತ್ರಕಾರರು 'ಅಂತ' ಪದವನ್ನು ಪ್ರಯೋಗಿಸಿದ್ದಾರೆಂಬ ಸಾರ್ಥಕ್ಯವಿರುತ್ತದೆ ಎಂದು ತಿಳಿಯಬೇಕು.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಮುಗಿಯಿತು ॥

**वाक्यार्थमञ्जरी –**

**ॐ अन्यभावव्यावृत्तेश्च ॐ** अन्येषां वस्तूनां भावानां स्थौल्यादीनां व्यावृत्तेश्चाक्षरं ब्रह्मैवेत्यर्थः ।। **एतद्वै तदिति** ।। एतदाकाशाश्रयत्वेन वक्ष्यमाणमक्षरशब्दवाच्यं ब्रह्मेति तदेतल्लक्षणकं ब्राह्मणाः ब्रह्मज्ञानिनः अभिवदन्ति वै किं तल्लक्षणमित्यत आह – **अस्थूलमित्यादि** ।। प्राकृतस्थौल्यादिरहितमित्यर्थः । अलोहितं लोहितोपलक्षितरूपमात्रशून्यम् । अच्छायं तेजोरूपत्वाद् अज्ञानरहितम् । असङ्गं निर्लेपम् । अतेजस्कं वर्चोरहितम् । अप्राणं चक्षुःश्रोत्रवाङ्मनोतिरिक्त ज्ञानकर्मेन्द्रियशून्यम् । अमुखं तदुपलक्षितशरीररहितम् । अमात्रं परिमितिशून्यम् । न विद्यते अन्तरं यस्य तदनन्तरम् । न विद्यते बाह्यं यस्य तदबाह्यम् । इदमेव सर्वान्तरम्, बाह्यं चेति यावत् । तर्ह्यप्राकृततमो वाय्वादिरस्ति किम्? नेत्याह – **तमोवाय्वादीनामिति** ।। सङ्गतानामित्यर्थः । उपलक्षणमेतत्, सुधानुसारेण छायाया अपि सर्वात्मना निवृत्तिर्द्रष्टव्या । एकवाक्यपठितशब्देष्वित्थं वैषम्याश्रवणमदृष्टचर-मित्यतोऽत्र बृहद्भाष्योदाहृतस्मृतिमुदाहरति – **अदुःखमसुखमिति** ।। यथात्र 'असुखम्' इत्यनेन बाह्यसुखनिषेधेऽपि 'अदुःखम्' इत्यनेन दुःखमात्रनिषेधः, तथात्रापीत्यर्थः । ननु परमात्मनः सर्वथा वायुरहितत्वे 'प्राणाद् वायुरजायत' इति ऋचि 'प्राणः पृथग्वर्त्मा' इति छन्दोगे 'श्वसितं मातरिश्वा' इति भागवते च मुख्यप्राणस्य भगवच्छ्वासजन्यत्वाभिधानं 'श्वासैजदलकव्रातम्' इत्यादिभागवतद्वादश स्कन्धवाक्यं च कथं सङ्गच्छत इति चेदुच्यते । नात्र श्वासरूपवायुनिषेधः क्रियते, किन्तु देहारम्भकस्यैव, आकाशसहपाठात् । नह्याकाशस्य देहारम्भकत्वेन निषेद्धव्यत्वं विना प्रकारान्तरमस्ति श्वासश्च तत्स्वरूपभूतोऽस्त्येव । अत एव छान्दोग्यभाष्ये 'वाय्वादिप्राणशक्यं न यत्तत्कर्ता हरिर्यतः । प्राणस्तेन पृथग्वर्त्मा' इति

भगवत्प्राणस्य वाय्वादिप्राणाशक्यकार्यकर्तृत्वेन पृथग्वर्मत्वमुक्तम् । यद्वा त्यागनिरोधाभ्यां सुखदुःखापादकास्मदादिश्वासतुल्योभयविधश्वासनिरोधोऽत्र क्रियते । एतदभिप्रायेणैव बृहद्भाष्यभावबोधे प्राकृताप्रकृतोभयश्वासनिषेधेनैतत् श्रुतिव्याख्यानं कृतम् । ननु मध्यमाक्षरस्यापि अप्राकृतविग्रहत्त्वेन प्राकृतस्थौल्यादिराहित्यसम्भवात् कथमनेन विष्णुत्वनिश्चय इत्यत आह – **मध्यमाक्षरस्येति** ।। सापेक्षनिरपेक्षयोर्मध्ये निरपेक्षस्यैव ग्राह्यत्वादिति भावः । अनेन प्राकृतस्थौल्यादिनिषेधेन ।। **विष्णावेव मुख्यतेति** ।। चतुर्विधनाशशून्यत्वेनाक्षरस्य प्रवृत्तिनिमित्तस्य तत्रैव पौष्कल्यादिति भावः ।। १३ ।।

**।। इति श्रीशर्कराश्रीनिवासविरचितायां वाक्यार्थमञ्जर्याम्अक्षराधिकरणम् ।। ३।।**

ಅಕ್ಷರಾಧಿಕರಣ
(೧-೩-೩)

# ಭಾಗ - ೨

## ತಾತ್ಪರ್ಯಚಂದ್ರಿಕಾ,

## ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳವಾದ ಅನುವಾದ.

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,
ಶಾಂಕರಭಾಷ್ಯ, ಭಾಮತೀ,
ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अक्षराधिकरणम्

### ಅಕ್ಷರಶಬ್ದಕ್ಕೆ ಉಭಯತ್ರಪ್ರಸಿದ್ಧತ್ವಸಮರ್ಥನೆ

**।। ॐ अक्षरमम्बरान्तधृतेः ॐ ।। यद्यप्यक्षरशब्दो वर्णेषु लोकतः प्रसिद्धः । तथापि न तस्यान्यत्रप्रसिद्धता ।**

ಅನುವಾದ - ಪ್ರಶ್ನೆ - ಅಕ್ಷರ ಶಬ್ದವು ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಲಾಗಿದೆ. ಆದರೆ ಅಕ್ಷರಾದಿವರ್ಣಗಳಲ್ಲಿಯೂ ಅಕ್ಷರಶಬ್ದದ ಲೌಕಿಕಪ್ರಸಿದ್ಧಿಯು ಇರುತ್ತದೆ. ಹೀಗಿರುವಾಗ ಲೋಕಪ್ರಸಿದ್ಧಿಗನುಸಾರಿಯಾಗಿ ಅಕ್ಷರಶಬ್ದವನ್ನು ಅನ್ಯತ್ರಪ್ರಸಿದ್ಧವೆಂದೇ ವಿವಕ್ಷಿಸಬೇಕಲ್ಲವೇ?

ಉತ್ತರ - ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವಲ್ಲ. ಲೋಕಪ್ರಸಿದ್ಧಿಯನ್ನು ಇಲ್ಲಿ ವಿವಕ್ಷಿಸಿರುವುದಿಲ್ಲ. ಇದಕ್ಕೆ ಕಾರಣ ಹೀಗಿದೆ.

**नहि सा ब्रह्मणोऽन्यत्र यत्र क्वचन प्रसिद्धता । किन्तु पूर्वपक्ष्यभिप्रेतेऽन्यत्र ।**

'ಅನ್ಯತ್ರಪ್ರಸಿದ್ಧ' ಎಂಬ ಶಬ್ದಕ್ಕೆ ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲಿಯೋ ಒಂದೆಡೆ ಪ್ರಸಿದ್ಧವಾಗಿರಬೇಕೆಂಬ ಅರ್ಥವನ್ನು ವಿವಕ್ಷಿಸಬಾರದು. ಪೂರ್ವಪಕ್ಷಿಗೆ ಅಭಿಪ್ರೇತವಾದ ಬೇರೆ ವಿಷಯದಲ್ಲಷ್ಟೇ ಪ್ರಸಿದ್ಧಿಯನ್ನು ಅನ್ಯತ್ರಪ್ರಸಿದ್ಧಶಬ್ದದಿಂದ ಹೇಳಬೇಕು. ದ್ರಷ್ಟೃತ್ವಾದಿಗಳಿಲ್ಲದ ಕಾರಣ ಅಕಾರಾದಿ ಅಕ್ಷರಗಳಲ್ಲಿ ಅಕ್ಷರಶಬ್ದದ ಪ್ರಯೋಗವನ್ನು ಪೂರ್ವಪಕ್ಷಿಯು ಅಭಿಪ್ರಾಯಪಟ್ಟಿಲ್ಲ.

**उभयत्रप्रसिद्धत्वं तु ''विष्णोश्चेतनप्रकृतेश्चाविनाशित्वसाम्यादक्षरशब्दः साधारणः'' इति न्यायविवरण एवोक्तम् । प्रयोगसाधारण्येनोभयत्रप्रसिद्धता तु नोक्ता ।**

ಅಕ್ಷರಶಬ್ದವು ಹೇಗೆ ಉಭಯತ್ರಪ್ರಸಿದ್ಧವಾಗಿದೆಯೆಂಬುದನ್ನು "ವಿಷ್ಣೋಃಶ್ಚೇತನಪ್ರಕೃತೇಶ್ಚ ಅವಿನಾಶಿತ್ವಸಾಮ್ಯಾದ್ ಅಕ್ಷರಶಬ್ದಃ ಸಾಧಾರಣಃ" ಅವಿನಾಶಿತ್ವವು ಸಮಾನವಾಗಿರುವುದರಿಂದ ವಿಷ್ಣು ಹಾಗೂ ಲಕ್ಷ್ಮೀದೇವಿಯಲ್ಲಿ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ನ್ಯಾಯವಿವರಣದಲ್ಲಿಯೇ ತೋರಿಸಿರುತ್ತಾರೆ. ಹೀಗೆ ಅವಿನಾಶಿತ್ವದ ಕಾರಣದಿಂದ ಉಭಯಸಾಧಾರಣ್ಯವನ್ನು ತೋರಿಸಿದ್ದಾರೆ ಹೊರತು, ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ತೋರಿಸಿರುವುದಿಲ್ಲ.

**पूर्वपक्षिणं प्रति सम्प्रतिपन्नप्रयोगाभावात् ।**

'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿ ವಾಕ್ಯಗಳಿಂದ ಅಕ್ಷರಶಬ್ದದ ಪ್ರಯೋಗವನ್ನು ವಿಷ್ಣುವಿನಲ್ಲಿಯೂ ತೋರಿಸಬಹುದಲ್ಲವೇ? ಎಂದರೆ ಪೂರ್ವಪಕ್ಷಿಯು ಅಲ್ಲಿರುವ ಅಕ್ಷರಶಬ್ದಕ್ಕೂ ಸಹ ವಿಷ್ಣುಪರತ್ವವನ್ನು ಒಪ್ಪಲಾರನು. ಪೂರ್ವಪಕ್ಷಿಗೆ ಸಂಪ್ರತಿಪನ್ನವಾದ ಪ್ರಯೋಗವೇ ಇಲ್ಲದ ಕಾರಣ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ತೋರಿಸಲು ಬರುವುದಿಲ್ಲ.

**वर्णादिसाधारणेन तेन ब्रह्मचित्प्रकृतिरूपार्थद्वयमात्रासाधारण्यासिद्धेश्च ।**

ಮತ್ತು ಪ್ರಯೋಗವೆಂಬುದು ಕೇವಲ ಚಿತ್‌ಪ್ರಕೃತಿ ಹಾಗೂ ವಿಷ್ಣುವಿನಲ್ಲಿ ಮಾತ್ರ ಇರುವುದಿಲ್ಲ ಹೊರತಾಗಿ, ಲೋಕರೂಢಿಯಿಂದ ವರ್ಣಾದಿಗಳಲ್ಲಿಯೂ ಪ್ರಯೋಗವಿದೆ. ಸೃಷ್ಟಿಯಿಂದ ಜಡಪ್ರಕೃತಿಯಲ್ಲಿಯೂ ಪ್ರಯೋಗವಿದೆ. ಹೀಗೆ ವರ್ಣಾದಿಗಳಲ್ಲಿ ಸಾಧಾರಣವಾದ ಪ್ರಯೋಗದ ಬಲದಿಂದ ಅಕ್ಷರಶಬ್ದವು ಬ್ರಹ್ಮ ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿ ಮಾತ್ರ ಇರುವಂತಹ ಅಸಾಧಾರಣ ಧರ್ಮವಾಗುವುದಿಲ್ಲ. ಆದ್ದರಿಂದ ಪ್ರವೃತ್ತಿನಿಮಿತ್ತದ ಸಾಮ್ಯದಿಂದಲೇ ಉಭಯಸಾಧಾರಣ್ಯವನ್ನು ತೋರಿಸಬೇಕೇ ಹೊರತು, ಪ್ರಯೋಗಸಾಮ್ಯದಿಂದ ಉಭಯಸಾಧಾರಣ್ಯವನ್ನು ತೋರಿಸಬಾರದು.

**प्रवृत्तिनिमित्तोपजीविस्थलान्तरस्थप्रयोगानुसन्धाननिरपेक्षे समन्वेतव्यशब्द-प्रवृत्तिनिमित्तसाधारण्यप्रयुक्तउभयत्रप्रसिद्धत्वे सम्भवति तत्सापेक्षस्य तस्यानादरणीयत्वाच्च ।**

ಮತ್ತು ಸಾಧಾರಣ್ಯವನ್ನು ತೋರಿಸುವಾಗ ಬೇರೆ ಪ್ರಕರಣದಲ್ಲಿರುವ ಪ್ರಯೋಗವನ್ನು ಅನುಸರಿಸಿ ಸಾಧಾರಣ್ಯವನ್ನು ಹೇಳಬೇಕು. ಬೇರೆ ಸ್ಥಳದಲ್ಲಿರುವ ಪ್ರಯೋಗವಾದರೂ ಸಹ ರೂಢಿಯಿಂದಲೇ ಉಪಪನ್ನವಾಗಬೇಕಾಗಿಲ್ಲ. ಯೋಗವೃತ್ತಿಯಿಂದಲೂ ಸಹ ಉಪಪನ್ನವಾಗಬಹುದು. ಇದಕ್ಕಿಂತ ಸಮನ್ವಯ ಮಾಡಬೇಕಾದ ಶಬ್ದದ ಪ್ರವೃತ್ತಿನಿಮಿತ್ತದಿಂದಲೇ ಉಭಯಸಾಧಾರಣ್ಯವನ್ನು ಹೇಳಿ ಉಭಯತ್ರಪ್ರಸಿದ್ಧತ್ವವನ್ನು ತೋರಿಸುವುದು ಹೆಚ್ಚು ಸ್ವರಸ. ಅಂದರೆ ಬೇರೆ ಸ್ಥಳದಲ್ಲಿ ಪ್ರಯೋಗವನ್ನು ಕೂಡಿಸುವುದಕ್ಕಾಗಿ ಕೊನೆಗೆ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಲೇಬೇಕು. ಆದ್ದರಿಂದ ಅದು ಸಾಪೇಕ್ಷ.

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अक्षराधिकरणम्

### ಅಕ್ಷರಶಬ್ದಕ್ಕೆ ಉಭಯತ್ರಪ್ರಸಿದ್ಧತ್ವಸಮರ್ಥನೆ

**॥ ॐ अक्षरमम्बरान्तधृतेः ॐ ॥ यद्यप्यक्षरशब्दो वर्णेषु लोकतः प्रसिद्धः । तथापि न तस्यान्यत्रप्रसिद्धता ।**

ಅನುವಾದ - ಪ್ರಶ್ನೆ - ಅಕ್ಷರ ಶಬ್ದವು ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಲಾಗಿದೆ. ಆದರೆ ಅಕ್ಷರಾದಿವರ್ಣಗಳಲ್ಲಿಯೂ ಅಕ್ಷರಶಬ್ದದ ಲೌಕಿಕಪ್ರಸಿದ್ಧಿಯು ಇರುತ್ತದೆ. ಹೀಗಿರುವಾಗ ಲೋಕಪ್ರಸಿದ್ಧಿಗನುಸಾರಿಯಾಗಿ ಅಕ್ಷರಶಬ್ದವನ್ನು ಅನ್ಯತ್ರಪ್ರಸಿದ್ಧವೆಂದೇ ವಿವಕ್ಷಿಸಬೇಕಲ್ಲವೇ?

ಉತ್ತರ - ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವಲ್ಲ. ಲೋಕಪ್ರಸಿದ್ಧಿಯನ್ನು ಇಲ್ಲಿ ವಿವಕ್ಷಿಸಿರುವುದಿಲ್ಲ. ಇದಕ್ಕೆ ಕಾರಣ ಹೀಗಿದೆ.

**नहि सा ब्रह्मणोऽन्यत्र यत्र क्वचन प्रसिद्धता । किन्तु पूर्वपक्ष्यभिप्रेतेऽन्यत्र ।**

'ಅನ್ಯತ್ರಪ್ರಸಿದ್ಧ' ಎಂಬ ಶಬ್ದಕ್ಕೆ ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲಿಯೋ ಒಂದೆಡೆ ಪ್ರಸಿದ್ಧವಾಗಿರಬೇಕೆಂಬ ಅರ್ಥವನ್ನು ವಿವಕ್ಷಿಸಬಾರದು. ಪೂರ್ವಪಕ್ಷಿಗೆ ಅಭಿಪ್ರೇತವಾದ ಬೇರೆ ವಿಷಯದಲ್ಲಷ್ಟೇ ಪ್ರಸಿದ್ಧಿಯನ್ನು ಅನ್ಯತ್ರಪ್ರಸಿದ್ಧಶಬ್ದದಿಂದ ಹೇಳಬೇಕು. ದ್ರಷ್ಟೃತ್ವಾದಿಗಳಿಲ್ಲದ ಕಾರಣ ಅಕಾರಾದಿ ಅಕ್ಷರಗಳಲ್ಲಿ ಅಕ್ಷರಶಬ್ದದ ಪ್ರಯೋಗವನ್ನು ಪೂರ್ವಪಕ್ಷಿಯು ಅಭಿಪ್ರಾಯಪಟ್ಟಿಲ್ಲ.

**उभयत्रप्रसिद्धत्वं तु ''विष्णोश्चेतनप्रकृतेश्चाविनाशित्वसाम्यादक्षरशब्दः साधारणः'' इति न्यायविवरण एवोक्तम् । प्रयोगसाधारण्येनोभयत्रप्रसिद्धता तु नोक्ता ।**

ಅಕ್ಷರಶಬ್ದವು ಹೇಗೆ ಉಭಯತ್ರಪ್ರಸಿದ್ಧವಾಗಿದೆಯೆಂಬುದನ್ನು "ವಿಷ್ಣೋಶ್ಚೇತನಪ್ರಕೃತೇಶ್ಚ ಅವಿನಾಶಿತ್ವಸಾಮ್ಯಾದ್ ಅಕ್ಷರಶಬ್ದಃ ಸಾಧಾರಣಃ" ಅವಿನಾಶಿತ್ವವು ಸಮಾನವಾಗಿರುವುದರಿಂದ ವಿಷ್ಣು ಹಾಗೂ ಲಕ್ಷ್ಮೀದೇವಿಯಲ್ಲಿ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ನ್ಯಾಯವಿವರಣದಲ್ಲಿಯೇ ತೋರಿಸಿರುತ್ತಾರೆ. ಹೀಗೆ ಅವಿನಾಶಿತ್ವದ ಕಾರಣದಿಂದ ಉಭಯಸಾಧಾರಣ್ಯವನ್ನು ತೋರಿಸಿದ್ದಾರೆ ಹೊರತು, ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ತೋರಿಸಿರುವುದಿಲ್ಲ.

**पूर्वपक्षिणं प्रति सम्प्रतिपन्नप्रयोगाभावात् ।**

'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿ ವಾಕ್ಯಗಳಿಂದ ಅಕ್ಷರಶಬ್ದದ ಪ್ರಯೋಗವನ್ನು ವಿಷ್ಣುವಿನಲ್ಲಿಯೂ ತೋರಿಸಬಹುದಲ್ಲವೇ? ಎಂದರೆ ಪೂರ್ವಪಕ್ಷಿಯು ಅಲ್ಲಿರುವ ಅಕ್ಷರಶಬ್ದಕ್ಕೂ ಸಹ ವಿಷ್ಣುಪರತ್ವವನ್ನು ಒಪ್ಪಲಾರನು. ಪೂರ್ವಪಕ್ಷಿಗೆ ಸಂಪ್ರತಿಪನ್ನವಾದ ಪ್ರಯೋಗವೇ ಇಲ್ಲದ ಕಾರಣ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ತೋರಿಸಲು ಬರುವುದಿಲ್ಲ.

**वर्णादिसाधारणेन तेन ब्रह्मचित्प्रकृतिरूपार्थद्वयमात्रासाधारण्यासिद्धेश्च ।**

ಮತ್ತು ಪ್ರಯೋಗವೆಂಬುದು ಕೇವಲ ಚಿತ್‌ಪ್ರಕೃತಿ ಹಾಗೂ ವಿಷ್ಣುವಿನಲ್ಲಿ ಮಾತ್ರ ಇರುವುದಿಲ್ಲ ಹೊರತಾಗಿ, ಲೋಕರೂಢಿಯಿಂದ ವರ್ಣಾದಿಗಳಲ್ಲಿಯೂ ಪ್ರಯೋಗವಿದೆ. ಸೃಷ್ಟಿಯಿಂದ ಜಡಪ್ರಕೃತಿಯಲ್ಲಿಯೂ ಪ್ರಯೋಗವಿದೆ. ಹೀಗೆ ವರ್ಣಾದಿಗಳಲ್ಲಿ ಸಾಧಾರಣವಾದ ಪ್ರಯೋಗದ ಬಲದಿಂದ ಅಕ್ಷರಶಬ್ದವು ಬ್ರಹ್ಮ ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿ ಮಾತ್ರ ಇರುವಂತಹ ಅಸಾಧಾರಣ ಧರ್ಮವಾಗುವುದಿಲ್ಲ. ಆದ್ದರಿಂದ ಪ್ರವೃತ್ತಿನಿಮಿತ್ತದ ಸಾಮ್ಯದಿಂದಲೇ ಉಭಯಸಾಧಾರಣ್ಯವನ್ನು ತೋರಿಸಬೇಕೇ ಹೊರತು, ಪ್ರಯೋಗಸಾಮ್ಯದಿಂದ ಉಭಯಸಾಧಾರಣ್ಯವನ್ನು ತೋರಿಸಬಾರದು.

**प्रवृत्तिनिमित्तोपजीविस्थलान्तरस्थप्रयोगानुसन्धाननिरपेक्षे समन्वेतव्यशब्द-प्रवृत्तिनिमित्तसाधारण्यप्रयुक्तउभयत्रप्रसिद्धत्वे सम्भवति तत्सापेक्षस्य तस्यानादरणीयत्वाच्च ।**

ಮತ್ತು ಸಾಧಾರಣ್ಯವನ್ನು ತೋರಿಸುವಾಗ ಬೇರೆ ಪ್ರಕರಣದಲ್ಲಿರುವ ಪ್ರಯೋಗವನ್ನು ಅನುಸರಿಸಿ ಸಾಧಾರಣ್ಯವನ್ನು ಹೇಳಬೇಕು. ಬೇರೆ ಸ್ಥಳದಲ್ಲಿರುವ ಪ್ರಯೋಗವಾದರೂ ಸಹ ರೂಢಿಯಿಂದಲೇ ಉಪಪನ್ನವಾಗಬೇಕಾಗಿಲ್ಲ. ಯೋಗವೃತ್ತಿಯಿಂದಲೂ ಸಹ ಉಪಪನ್ನವಾಗಬಹುದು. ಇದಕ್ಕಿಂತ ಸಮನ್ವಯ ಮಾಡಬೇಕಾದ ಶಬ್ದದ ಪ್ರವೃತ್ತಿನಿಮಿತ್ತದಿಂದಲೇ ಉಭಯಸಾಧಾರಣ್ಯವನ್ನು ಹೇಳಿ ಉಭಯತ್ರಪ್ರಸಿದ್ಧತ್ವವನ್ನು ತೋರಿಸುವುದು ಹೆಚ್ಚು ಸ್ವರಸ. ಅಂದರೆ ಬೇರೆ ಸ್ಥಳದಲ್ಲಿ ಪ್ರಯೋಗವನ್ನು ಕೂಡಿಸುವುದಕ್ಕಾಗಿ ಕೊನೆಗೆ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಲೇಬೇಕು. ಆದ್ದರಿಂದ ಅದು ಸಾಪೇಕ್ಷ.

ಅದಕ್ಕಿಂತಲೂ ಸಮನ್ವಯಮಾಡಬೇಕಾದ ಶಬ್ದದಿಂದಲೇ ತಿಳಿಯುವಂತಹ ನಿರಪೇಕ್ಷವಾದ ಪ್ರವೃತ್ತಿನಿಮಿತ್ತದ ಸಾಮ್ಯದಿಂದ ಉಭಯಸಾಧಾರಣ್ಯವನ್ನು ಹೇಳುವುದು ಲಘುವಾಗಿದೆ ಎಂದು ಅಭಿಪ್ರಾಯ.

**अत्र चाक्षरशब्दो योगमात्रस्यातिप्रसक्तत्वात्पङ्कजादिवद्योगरूढः ।**

ವಿಷಯವಾಕ್ಯದಲ್ಲಿರುವ ಅಕ್ಷರಶಬ್ದಕ್ಕೆ ಕೇವಲ ಯೋಗಾರ್ಥವನ್ನು ಸ್ವೀಕರಿಸಿದರೆ ವರ್ಣ, ಜಡಪ್ರಕೃತ್ಯಾದಿಗಳಲ್ಲಿಯೂ ಅವಿನಾಶಿತ್ವವು ಇರುವುದರಿಂದ ಅತಿಪ್ರಸಕ್ತಿ ಬರುತ್ತದೆ. ಆದ್ದರಿಂದ ಪಂಕಜಾದಿ ಶಬ್ದಗಳಲ್ಲಿ ಕೇವಲ ಯೋಗಾರ್ಥವನ್ನು ಸ್ವೀಕರಿಸದೇ ರೂಢ್ಯರ್ಥವನ್ನೂ ಹೇಗೆ ಸ್ವೀಕರಿಸುತ್ತಾರೋ ಅದರಂತೆ ಇಲ್ಲಿಯೂ ಸಹ ಯೋಗಾರ್ಥದ ಜೊತೆಗೆ ವಿಷ್ಣು ಹಾಗೂ ಲಕ್ಷ್ಮೀದೇವಿಯಲ್ಲಿ ರೂಢ್ಯರ್ಥವನ್ನೂ ಸಹ ಸ್ವೀಕರಿಸಬೇಕು.

**तत्र रूढ्यंशसाधारण्यस्य "अक्षरत्रयमीरितम्" इत्यदृश्यत्वाधिकरण-भाष्योदाहृतस्मृत्यैव सिद्धेर्योगांशसाधारण्यमात्रम् "अविनाशित्वसाम्यात्" इति न्यायविवरण उक्तम् ।**

ಹೀಗೆ ಯೋಗ ಹಾಗೂ ರೂಢ್ಯರ್ಥವನ್ನು ಹೊಂದಿರುವ ಯೋಗರೂಢವಾದ ಅಕ್ಷರಶಬ್ದದ ವಿಷಯದಲ್ಲಿ ರೂಢ್ಯಂಶದಿಂದ ಉಭಯಸಾಧಾರಣ್ಯವು 'ಅಕ್ಷರತ್ರಯಮೀರಿತಮ್' ಎಂಬ ಅದೃಶ್ಯತ್ವಾಧಿಕರಣದ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಿಂದಲೇ ಸಿದ್ಧವಾಗಿದೆ. ಹೇಗೆ ಎಂಬುದನ್ನು ಆದ್ದರಿಂದ ಯೋಗಾಂಶದಿಂದ ಉಭಯಸಾಧಾರಣ್ಯವು ಹೇಗೆ ಎಂಬುದನ್ನು 'ಅವಿನಾಶಿತ್ವಸಾಮ್ಯಾತ್' ಎಂಬ ನ್ಯಾಯವಿವರಣದಲ್ಲಿ ಹೇಳಿದ್ದಾರೆ.

**अत एव टीकायां "द्रष्टृत्वादिश्रवणाज्जडप्रकृतेरोङ्कारस्य च न सन्देहनिविष्टत्वम्" इत्युक्तम् ।**

ಆದ್ದರಿಂದಲೇ ಟೀಕೆಯಲ್ಲಿ 'ದ್ರಷ್ಟೃತ್ವಾದಿಶ್ರವಣಾತ್ ಜಡಪ್ರಕೃತೇಃ ಓಂಕಾರಸ್ಯ ಚ ನ ಸಂದೇಹನಿವಿಷ್ಟತ್ವಮ್' ಎಂದರೆ 'ದ್ರಷ್ಟೃತ್ವಾದಿಗಳು ವಿಷಯವಾಕ್ಯದಲ್ಲಿ ಕೇಳಿಸುತ್ತಿರುವುದರಿಂದ ಜಡಪ್ರಕೃತಿಯಾಗಲೀ, ಓಂಕಾರವಾಗಲೀ ಸಂದೇಹ ಕೋಟಿಯಲ್ಲಿ ಸೇರಿರುವುದಿಲ್ಲ' ಎಂದು ಹೇಳಿರುತ್ತಾರೆ. ಅಂದರೆ ರೂಢಿವೃತ್ತಿಯನ್ನು ಸ್ವೀಕರಿಸಿದಾಗ ಓಂಕಾರ ಹಾಗೂ ಜಡಪ್ರಕೃತಿಯಲ್ಲಿ ರೂಢಿಯಿರುವುದರಿಂದ ಅವುಗಳನ್ನೂ ಸಹ ಸಂದೇಹ ಕೋಟಿಯಲ್ಲಿ ಸೇರಿಸಬೇಕಲ್ಲವೇ? ಎಂದು ಪ್ರಶ್ನಿಸಿ ದ್ರಷ್ಟೃತ್ವಾದಿಗಳಿಲ್ಲದ ಕಾರಣ ಅವೆರಡನ್ನು ಸಂದೇಹಕೋಟಿಯಲ್ಲಿ ಸೇರಿಸಬಾರದೆಂದು ಹೇಳಿರುತ್ತಾರೆ. ಇದರಿಂದ ಯೋಗ, ರೂಢಿಗಳೆರಡನ್ನೂ ವಿವಕ್ಷಿಸಬೇಕೆಂಬ ವಿಚಾರವು ಸ್ಪಷ್ಟವಾಗುತ್ತದೆ.

ಪರಿಪೂರ್ಣಚಂದ್ರಿಕಾ

**अन्यथा हि नित्यमात्रस्य न सन्देहनिविष्टत्वमित्यवक्ष्यत् ।**

ಹೀಗೆ ಅಭಿಪ್ರಾಯವಿಲ್ಲದಿದ್ದಲ್ಲಿ 'ನಿತ್ಯಮಾತ್ರಸ್ಯ ನ ಸಂದೇಹನಿವಿಷ್ಟತ್ವಮ್' ಸಕಲ ನಿತ್ಯಪದಾರ್ಥಗಳು ಸಂದೇಹಕೋಟಿಯಲ್ಲಿ ಸೇರುವುದಿಲ್ಲ ಎಂದೇ ಹೇಳುತ್ತಿದ್ದರು. ಆದರೆ ಓಂಕಾರ ಹಾಗೂ ಜಡಪ್ರಕೃತಿಗಳೆರಡನ್ನೇ ವಿವಕ್ಷಿಸಿದ್ದರಿಂದ ಯೋಗವನ್ನಷ್ಟೇ ಸ್ವೀಕರಿಸುವುದಲ್ಲದೇ ರೂಢಿಯನ್ನೂ ಸಹ ಸ್ವೀಕರಿಸಬೇಕೆಂದು ಸ್ಪಷ್ಟವಾಗುತ್ತದೆ.

**जडप्रकृत्यादिसाधारण्येनाक्षरशब्दस्योभयत्रप्रसिद्धत्वाभावस्तु टीकायां न शङ्कितः । अन्यसाधारण्येऽपि संशयकोटिसाधारण्यमात्रेण तत्सिद्धेः ।**

ಅಕ್ಷರಶಬ್ದವು ಉಭಯತ್ರಪ್ರಸಿದ್ಧವೆಂದೇಕೆ ಆಶಂಕಿಸಿಲ್ಲ ಎಂದರೆ, ಜಡಪ್ರಕೃತ್ಯಾದಿಗಳಲ್ಲಿಯೂ ಸಾಧಾರಣವಾಗಿರುವುದರಿಂದ ಅಕ್ಷರಶಬ್ದವು ಉಭಯತ್ರಪ್ರಸಿದ್ಧವಾಗುವುದಿಲ್ಲವೆಂದು ಟೀಕೆಯಲ್ಲಿ ಆಶಂಕಿಸಿಲ್ಲ. ಏಕೆಂದರೆ ಸಂಶಯಕೋಟಿಯನ್ನು ಬಿಟ್ಟು ಬೇರೆ ಪದಾರ್ಥಗಳಲ್ಲಿ ಯೋಗ ಹಾಗೂ ರೂಢಿಗಳು ಸಾಧಾರಣವಾಗಿದ್ದರೂ ಸಂಶಯಕೋಟಿ ಸಾಧಾರಣ್ಯದಿಂದಷ್ಟೇ ಉಭಯತ್ರಪ್ರಸಿದ್ಧತ್ವವು ಸಿದ್ಧವಾಗುತ್ತದೆ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – ।। ॐ अक्षरमम्बरान्तधृतेः ॐ ।।** ''अत्राविनाशित्वसाम्याच्चित्प्रकृतौ हरौ च साधारणस्याक्षरनाम्नः'' इत्यादि पादादिसङ्गत्युक्तिपरा टीका न युक्तेव । अविनाशित्वसाम्येऽक्षरनाम्नस्साधारण्ये बीजाभावात् ।

ವಿವರಣೆ - ಅಕ್ಷರಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣಕ್ಕೆ ಪಾದ ಮೊದಲಾದವುಗಳ ಸಂಗತಿಯನ್ನು ತೋರಿಸುವುದಕ್ಕಾಗಿ 'ಅತ್ರ ಅವಿನಾಶಿತ್ವಸಾಮ್ಯಾತ್ ಚಿತ್‌ಪ್ರಕೃತೌ ಹರೌ ಚ ಸಾಧಾರಣಸ್ಯ ಅಕ್ಷರನಾಮ್ನಃ' ಇತ್ಯಾದಿ ಟೀಕಾ ಮಾತುಗಳು ಹೊರಟಿವೆ. ಈ ವಾಕ್ಯದ ಮೇಲೆ ಹೀಗೆ ಸಂಶಯ ಬರುತ್ತದೆ. ಈ ಟೀಕಾವಾಕ್ಯವು ಯುಕ್ತವಾದಂತೆ ತೋರುವುದಿಲ್ಲ. ಏಕೆಂದರೆ - ಅವಿನಾಶಿತ್ವವು ಸಮಾನವಾಗಿರುವುದರಿಂದ ಚಿತ್‌ಪ್ರಕೃತಿಯಲ್ಲಿ ಹಾಗೂ ಶ್ರೀಹರಿಯಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದವು ಉಭಯಸಾಧಾರಣವಾಗಿದೆ

ಎಂದು ಇದರ ಅರ್ಥ. ಆದರೆ ಅವಿನಾಶಿತ್ವವು ಸಮಾನವಾದ ಮಾತ್ರಕ್ಕೆ 'ಅಕ್ಷರ' ಎಂಬ ನಾಮಾತ್ಮಕ ಶಬ್ದವು ಉಭಯಸಾಧಾರಣವಾಗಿದೆಯೆಂದು ಹೇಗೆ ಸಿದ್ಧವಾಗುತ್ತದೆ ? 'ಅಕ್ಷರ' ಶಬ್ದವು ಉಭಯಸಾಧಾರಣವಾಗಲು ಅವಿನಾಶಿತ್ವವೇನು ಕಾರಣವಾಗಿಲ್ಲವಲ್ಲ?

**प्रकाशः** – यद्यपि ''अविनाशित्वस्य अक्षरशब्दप्रवृत्तिनिमित्तत्वादित्यत्रोपस्कर्तव्यम्'' इति न्यायविवरणटीकात्त्या सबीजत्वम् । तथाप्यक्षरशब्दस्य विष्णुचित् प्रकृत्योर्यौगिकत्वेन लिङ्गतापत्त्या नाम्न इत्युक्त्ययुक्तेश्चेत्यतो मूलोक्तितद्व्याख्यानादिटीकां विवरिष्यन्नन्यत्रप्रसिद्धत्वं तावदाशङ्क्य निराह – **यद्यपीत्यादिना ।।**

ನ್ಯಾಯವಿವರಣ ಟೀಕೆಯಲ್ಲಿ 'ಅವಿನಾಶಿತ್ವಸ್ಯ ಅಕ್ಷರಶಬ್ದಪ್ರವೃತ್ತಿನಿಮಿತ್ತತ್ವಾದಿತ್ಯತ್ರೋಪಸ್ಕರ್ತವ್ಯಮ್' 'ಅವಿನಾಶಿತ್ವವು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವಾಗಿರುವುದರಿಂದ ಎಂಬುದನ್ನು ಶೇಷಪೂರ್ಣ ಮಾಡಿಕೊಳ್ಳಬೇಕೆಂದು ಹೇಳಿದ್ದಾರೆ. ಈ ಮಾತಿನಿಂದ ಅವಿನಾಶಿತ್ವವು ಅಕ್ಷರಶಬ್ದದ ಪ್ರವೃತ್ತಿಗೆ ನಿಮಿತ್ತವಾಗಿರುವುದರಿಂದ ಟೀಕೆಯಲ್ಲಿ ಅವಿನಾಶಿತ್ವದ ಸಾಮ್ಯದಿಂದ ಅಕ್ಷರಶಬ್ದವು ಉಭಯ-ಸಾಧಾರಣವಾಗುತ್ತದೆಂದು ಹೇಳಿದ್ದು ಸಮಂಜಸವೇ ಆಗಿದೆಯಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಇದು ಸರಿಯಲ್ಲ. ಅಕ್ಷರಶಬ್ದವು ವಿಷ್ಣುವಿನಲ್ಲಾಗಲೀ, ಚಿತ್‌ಪ್ರಕೃತಿಯಲ್ಲಾಗಲೀ, ಯೌಗಿಕವಾಗಿರುತ್ತದೆ ಹೊರತು, ರೂಢವಾಗಿರುವುದಿಲ್ಲ. ಯೌಗಿಕವಾದ್ದರಿಂದ ಇದು ಲಿಂಗಾತ್ಮಕ- ಶಬ್ದವೆನಿಸುತ್ತದೆ. ಆದ್ದರಿಂದ 'ಅಕ್ಷರನಾಮ್ನಃ' ಎಂಬುದಾಗಿ ನಾಮಾತ್ಮಕವೆಂದು ಹೇಳಿದ್ದು ತಪ್ಪಾಗುತ್ತದೆ. ಆದ್ದರಿಂದ ಟೀಕೆಯಲ್ಲಿ ಪಾದಸಂಗತಿಯನ್ನು ತೋರಿಸುವಾಗ ಅಕ್ಷರಶಬ್ದವನ್ನು ಉಭಯಸಾಧಾರಣವೆಂದು ಹೇಗೆ ಹೇಳಿದರು? ಮತ್ತು ನಾಮಾತ್ಮಕವೆಂದು ಹೇಗೆ ಹೇಳಿದರು? ಎಂಬ ಪ್ರಶ್ನೆ ಬಂದೇ ಬರುತ್ತದೆ.

ಇದಕ್ಕೆ ಉತ್ತರಿಸುವುದಕ್ಕಾಗಿ ಭಾಷ್ಯದಲ್ಲಿ ಹಾಗೂ ಅದರ ವ್ಯಾಖ್ಯಾನರೂಪವಾದ ಟೀಕೆಯಲ್ಲಿ 'ಅಕ್ಷರನಾಮ್ನಃ' ಎಂಬಲ್ಲಿ ಯಾವ ಅಭಿಪ್ರಾಯವನ್ನು ಹೊಂದಿರುತ್ತಾರೆಂದು ಗ್ರಂಥಕಾರರು ವಿವರಿಸುತ್ತಿದ್ದಾರೆ. ಮೊದಲು ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವಾಗುತ್ತದೆ ಹೊರತು, ಉಭಯತ್ರಪ್ರಸಿದ್ಧವಾಗುವುದಿಲ್ಲವಲ್ಲವೇ? ಎಂಬ ಆಶಂಕೆಯನ್ನು 'ಯದ್ಯಪಿ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – **क्वचनेति** निपातसमुदायः ।। **किं त्विति** ।। इह च वर्णे द्रष्टत्वादेरयोगान्न पूर्वपक्ष्यभिप्रेत इति भावः ।। का तर्हि पूर्वपक्षकोटिः । कथं चोभयसाधारण्यम् । वर्णव्यावृत्तस्य तद्बीजस्याभावादित्यत आह – **उभयत्रेति ।।**

'ಕ್ವಚನ' ಎಂಬುದು 'ಕ್ವ' ಮತ್ತು 'ಚನ' ಎಂಬೆರಡು ನಿಪಾತಗಳ ಸಮುದಾಯರೂಪವಾಗಿದೆ. 'ಕಿಂತು' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ವರ್ಣಗಳಲ್ಲಿ ದ್ರಷ್ಟೃತ್ವ ಮೊದಲಾದವುಗಳು ಅಯುಕ್ತವಾಗಿರುವುದರಿಂದ ಪೂರ್ವಪಕ್ಷಿಗೆ ಅದು (ಎಂದರೆ ವರ್ಣ) ಅಕ್ಷರವೆಂದು ಅಭಿಪ್ರೇತವೇ

ಆಗಿಲ್ಲವೆಂದು ತಿಳಿಯಬೇಕು. ಹಾಗಾದರೆ ಪೂರ್ವಪಕ್ಷಕೋಟಿ ಯಾವುದು ? ಅಕ್ಷರಶಬ್ದವು ಹೇಗೆ ಉಭಯಸಾಧಾರಣವಾಗುತ್ತದೆ? ಅಕ್ಷರಗಳಲ್ಲಿ ಇಲ್ಲದ ಚಿತ್‌ಪ್ರಕೃತಿ ಹಾಗೂ ವಿಷ್ಣುವಿನಲ್ಲಿ ಮಾತ್ರವಿರುವ ಅಂತಹ ಸಾಧಾರಣವಾದ ಧರ್ಮವಾದರೂ ಸಹ ಯಾವುದು ? ಇತ್ಯಾದಿ ಪ್ರಶ್ನೆಗಳಿಗೆ 'ಉಭಯತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – अविनाशित्वं तु वर्णादिव्यावृत्तकोटिद्वयमात्रसाधारणमित्यग्रे विवरिष्याम इति भावः । एतेन टीकैतन्मूलेति सूचितम् ।

ಅವಿನಾಶಿತ್ವವಾದರೂ ವರ್ಣರೂಪವಾದ ಅಕ್ಷರಗಳಲ್ಲಿ ಇರುವುದಿಲ್ಲ ಹೊರತಾಗಿ, ಚಿತ್‌ಪ್ರಕೃತಿ ಹಾಗೂ ವಿಷ್ಣು ಇಬ್ಬರಲ್ಲಿ ಮಾತ್ರ ಸಾಧಾರಣವಾಗಿದೆಯೆಂದು ಮುಂದೆ ನಾವೇ ವಿವರಿಸುತ್ತೇವೆ. ಇಷ್ಟು ಹೇಳಿದ್ದರಿಂದ ಟೀಕೆಗೆ ಇದೇ (ನ್ಯಾಯವಿವರಣವೇ) ಮೂಲವಾಗಿದೆಯೆಂದು ಸೂಚಿಸಿದಂತಾಯಿತು.

**प्रकाशः** – ननु वक्ष्यमाणदिशा रूढेरप्यावश्यकत्वात्तस्याश्च प्रयोगबाहुल्यादि-रूपत्वात्प्रयोगवशादेव साधारण्यं कुतो नोक्तम् । किं रूढितोऽप्यमुख्य-योगाश्रयणेनेत्यत आह – **प्रयोगेति** ।

ಪ್ರಶ್ನೆ - ಮುಂದೆ ಹೇಳುವ ಪ್ರಕಾರ ಅಕ್ಷರಶಬ್ದಕ್ಕೆ ರೂಢಿಯನ್ನಂತೂ ಅವಶ್ಯವಾಗಿ ಆಶ್ರಯಿಸಲೇ ಬೇಕು. ರೂಢಿಯಾದರೂ ಸಹ ಪ್ರಯೋಗಬಾಹುಲ್ಯರೂಪವಾಗಿರುತ್ತದೆ. ಆದ್ದರಿಂದ ಅಕ್ಷರಶಬ್ದವು ವಿಷ್ಣು ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿಯೂ ಪ್ರಯೋಗದಿಂದಲೇ ಸಾಧಾರಣವಾಗಿದೆಯೆಂದೇ ಏಕೆ ಹೇಳಲಿಲ್ಲ? ರೂಢಿಗಿಂತಲೂ ಅಮುಖ್ಯವಾದ ಯೋಗವನ್ನೇಕೆ ಆಶ್ರಯಿಸಿದ್ದಾರೆ?

ಉತ್ತರ - ಈ ಪ್ರಶ್ನೆಗೆ 'ಪ್ರಯೋಗಸಾಧಾರಣ್ಯೇನ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪ್ರಯೋಗಸಾಧಾರಣ್ಯಕ್ಕಿಂತ ಪ್ರವೃತ್ತಿನಿಮಿತ್ತದ ಸಾಧಾರಣ್ಯವನ್ನು ಹೇಳುವುದು ಲಘುವಾಗಿದೆ ಹಾಗೂ ಮುಖ್ಯವಾಗಿದೆ ಎಂದು ಅಭಿಪ್ರಾಯ.

**प्रकाशः** – ''यया तदक्षरमधिगम्यते'' इत्यादिप्रयोगात्कथमेतदित्यत उक्तम् सम्प्रतिपन्नेति ।। तत्रासम्मतेरिति भावः ।

'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿಯಾಗಿ ಅಕ್ಷರಶಬ್ದದ ಪ್ರಯೋಗವಿರುವುದರಿಂದ ವಿಷ್ಣುವಿನಲ್ಲಿ ಅಕ್ಷರಶಬ್ದದ ಪ್ರಯೋಗವಿಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಸಂಪ್ರತಿಪನ್ನ' ಎಂಬ ಪದದಿಂದ ಉತ್ತರಿಸಿದ್ದಾರೆ. ಅಂದರೆ ಇಲ್ಲಿರುವ ಅಕ್ಷರಶಬ್ದಕ್ಕೂ ಸಹ ಪೂರ್ವಪಕ್ಷಿಯು ವಿಷ್ಣುವೆಂಬರ್ಥವನ್ನು ಒಪ್ಪಲಾರನೆಂದು ಅಭಿಪ್ರಾಯ.

**प्रकाशः** – नन्वस्ति ''परतः परमक्षरम् । हरिमेव'' इति स्मार्तप्रयोग इत्यनुशयादाह – **वर्णाविति** ।।

ಪ್ರಶ್ನೆ - 'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿ ಸ್ಥಳಗಳಲ್ಲಿ ಅಕ್ಷರಶಬ್ದದ ಪ್ರಯೋಗವನ್ನು ವಿಷ್ಣುವಿನಲ್ಲಿ ಪೂರ್ವಪಕ್ಷಿಯು ಒಪ್ಪದಿರಬಹುದು. ಆದರೆ ಅದೇ ಪೂರ್ವಪಕ್ಷಿಯು 'ಪರತಃ ಪರಮಕ್ಷರಮ್ । ಹರಿಮೇವ' ಇತ್ಯಾದಿ ಸ್ಮೃತ್ಯುಕ್ತ ಸ್ಥಳಗಳಲ್ಲಿ ಅಕ್ಷರಶಬ್ದದ ಪ್ರಯೋಗವನ್ನು ಶ್ರೀಹರಿಯಲ್ಲಿ ಒಪ್ಪುತ್ತಾನೆ. ಇಲ್ಲಿರುವ 'ಹರಿ' ಶಬ್ದಕ್ಕೆ ಅನ್ಯಾರ್ಥವನ್ನು ಮಾಡಲಾಗದ ಕಾರಣ ಅಕ್ಷರಶಬ್ದವು ಹರಿಪರವಾಗಿದೆಯೆಂದು ಒಪ್ಪುವುದು ಪೂರ್ವಪಕ್ಷಿಗೆ ಅನಿವಾರ್ಯವಾಗಿದೆಯಲ್ಲವೇ?

ಹೀಗೆ ಪ್ರಶ್ನಿಸಬಹುದೆಂದು ಪಶ್ಚಾತ್ತಾಪದಿಂದ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. 'ವರ್ಣಾದಿ ಸಾಧಾರಣ್ಯೇನ' ಇತ್ಯಾದಿ ವಾಕ್ಯದಿಂದ. 'ವರ್ಣಾದಿ' ಎಂಬಲ್ಲಿ ಆದಿ ಶಬ್ದದಿಂದ ಜಡಪ್ರಕೃತಿಯನ್ನು ವಿವಕ್ಷಿಸಬೇಕು.

**ಪ್ರಕಾಶಃ – वर्णे लोकतः । जडप्रकृतौ च स्मार्तः । अर्थद्वयेति ॥ तन्मात्रसाधारण्यस्यैव वक्तव्यत्वेनाग्रे साधनादिति भावः ।**

ವರ್ಣದಲ್ಲಿ ಲೋಕತಃ ಪ್ರಸಿದ್ಧಿ. ಜಡಪ್ರಕೃತಿಯಲ್ಲಿ ಸ್ಮೃತಿಪ್ರಸಿದ್ಧಿ. ಇದರ ಅಭಿಪ್ರಾಯ ಹೀಗೆ -

ಚಿತ್‌ಪ್ರಕೃತಿ ಹಾಗೂ ವಿಷ್ಣು ಇಬ್ಬರಲ್ಲಿ ಸಾಧಾರಣವಾದುದನ್ನಷ್ಟೇ ನಾವು ವಿವಕ್ಷಿಸಬೇಕು. ಪ್ರಯೋಗಸಾಧಾರಣ್ಯವನ್ನು ವಿವಕ್ಷಿಸಿದರೆ ಅಕಾರಾದಿ ವರ್ಣಗಳಲ್ಲಿಯೂ ಅಕ್ಷರಶಬ್ದದ ಪ್ರಯೋಗವು ಲೋಕದಲ್ಲಿ ಪ್ರಸಿದ್ಧವಾಗಿದೆ. ಇನ್ನು 'ಅಪರಮ್ ತ್ವಕ್ಷರಮ್ ಯಾಸಾ ಪ್ರಕೃತಿರ್ಜಡರೂಪಿಕಾ' ಇತ್ಯಾದಿ ಸ್ಮೃತಿವಾಕ್ಯಗಳಲ್ಲಿ ಜಡಪ್ರಕೃತಿಯಲ್ಲಿಯೂ ಸಹ ಅಕ್ಷರಶಬ್ದದ ಪ್ರಯೋಗವಿದೆ. ಆದ್ದರಿಂದ ಪ್ರಯೋಗ ಸಾಧಾರಣ್ಯವು ಕೇವಲ ಅರ್ಥದ್ವಯಸಾಧಾರಣವಾಗುವುದಿಲ್ಲ. ಆದರೆ ಪ್ರಕೃತ ಅರ್ಥದ್ವಯ ಸಾಧಾರಣವಾದುದನ್ನಷ್ಟೇ ಹೇಳಬೇಕು. ಇದನ್ನು ಮುಂದೆ ಸಾಧಿಸುತ್ತೇವೆ. ಅಂದರೆ ಅರ್ಥದ್ವಯ ಸಾಧಾರಣವಾಗಿದ್ದರೆ ಮಾತ್ರ ಅದು ಉಭಯತ್ರಪ್ರಸಿದ್ಧವಾಗುತ್ತದೆ. ಬೇರೆ ಇನ್ನಾವುದೋ ನಿಮಿತ್ತದಿಂದ ಪ್ರಸಿದ್ಧವಾಗಿದ್ದರೆ ಅದು ಉಭಯತ್ರಪ್ರಸಿದ್ಧವಾಗುವುದಿಲ್ಲ ಎಂಬ ವಿಚಾರವನ್ನು ಮುಂದೆ ಸಾಧಿಸುತ್ತೇವೆಂದು ತಿಳಿಯಬೇಕು. ಇದು 'ಅರ್ಥದ್ವಯ' ಎಂಬ ಶಬ್ದದ ಅಭಿಪ್ರಾಯ.

**ಪ್ರಕಾಶಃ – ननु द्रष्टृत्वादिना वर्णजडप्रकृत्योर्निरासे द्वयमात्रवृत्तित्वं स्यादित्यतो हेत्वन्तरमाह – प्रवृत्तीति ॥**

'ಅದೃಷ್ಟಂ ದ್ರಷ್ಟೃ' ಇತ್ಯಾದಿ ಶ್ರುತಿಯಲ್ಲಿ ಅಕ್ಷರನಿಗೆ ದ್ರಷ್ಟೃತ್ವಾದಿಗಳು ಹೇಳಲ್ಪಟ್ಟಿವೆ. ಇಂತಹ ದ್ರಷ್ಟೃತ್ವಾದಿಗಳನ್ನು ಚೇತನರಲ್ಲಿ ಹೇಳಬಹುದೇ. ಹೊರತು, ಜಡವಾದ ವರ್ಣಗಳಲ್ಲಾಗಲೀ, ಪ್ರಕೃತಿಯಲ್ಲಾಗಲೀ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪ್ರಯೋಗದಿಂದಲೇ ಉಭಯಸಾಧಾರಣ್ಯವನ್ನು ಹೇಳಿ, ದ್ರಷ್ಟೃತ್ವಾದಿಗಳು ವರ್ಣಾದಿಗಳಲ್ಲಿಲ್ಲವೆಂದು ಹೇಳಲು ಬರುತ್ತದೆ. ಹೀಗೆ ಪ್ರಯೋಗಸಾಧಾರಣ್ಯವನ್ನು ವಿವಕ್ಷಿಸಿದಾಗಲೇ ವರ್ಣ, ಜಡಪ್ರಕೃತ್ಯಾದಿಗಳನ್ನು ತೆಗೆದುಕೊಳ್ಳಲು ಬಾರದ ಕಾರಣ ನೀವು ಪ್ರವೃತ್ತಿನಿಮಿತ್ತಸಾಧಾರಣ್ಯವನ್ನೇಕೆ ಅನುಸರಿಸಿದ್ದೀರಿ? ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಮತ್ತೊಂದು ಕಾರಣವನ್ನು ನೀಡುತ್ತಿದ್ದಾರೆ. 'ಪ್ರವೃತ್ತಿನಿಮಿತ್ತ' ಇತ್ಯಾದಿ ವಾಕ್ಯದಿಂದ.

ಪರಿಪೂರ್ಣಚಂದ್ರಿಕಾ

**प्रकाशः – श्रीतत्त्वादौ स्थलान्तरप्रयोगस्यावयववृत्त्यैवोपपत्तौ रूढेरकल्पनादिति भावः ।**

ವಿಷಯವಾಕ್ಯದಿಂದ ತಿಳಿಯುವ ಪ್ರವೃತ್ತಿನಿಮಿತ್ತದಿಂದಲೇ ಉಭಯಸಾಧಾರಣ್ಯವನ್ನು ವಿವಕ್ಷಿಸಲು ಬರುವಾಗ ಬೇರೆ ವಾಕ್ಯದಲ್ಲಿರುವ ಪ್ರಯೋಗಸಾಧಾರಣ್ಯವನ್ನು ವಿವಕ್ಷಿಸುವುದು ಗೌರವವಾಗಿದೆ. ಅಷ್ಟೇ ಅಲ್ಲದೆ, ಬೇರೆ ವಾಕ್ಯಗಳಲ್ಲಿರುವ ಪ್ರಯೋಗವು ಅವಯವವೃತ್ತಿಯಿಂದಲೇ ಲಕ್ಷ್ಮೀದೇವಿ ಮೊದಲಾದವರಲ್ಲಿ ಯುಕ್ತವಾಗುವುದರಿಂದ ಅಲ್ಲಿ ರೂಢಿಯನ್ನೇನೂ ಕಲ್ಪಿಸುವ ಅವಶ್ಯಕತೆಯಿರುವುದಿಲ್ಲ. ಅವಯವವೃತ್ತಿಯನ್ನು ಹೇಳಿದಾಗ ಪುನಃ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಲೇ ಬೇಕಾಗುತ್ತದೆ. ಹೀಗೆ ಕೊನೆಯಲ್ಲಿ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸುವುದಕ್ಕಿಂತ ಮೊದಲೇ ಪ್ರವೃತ್ತಿನಿಮಿತ್ತದ ಸಾಧಾರಣ್ಯವನ್ನು ಆಶ್ರಯಿಸುವುದು ಸೂಕ್ತವಾಗಿದೆ.

**प्रकाशः – नन्वेवं प्रवृत्तिनिमित्तस्याकाशादावपि सत्त्वेन कथं द्वयमात्रवृत्तित्वमक्षरशब्दस्येत्याशङ्कां हृदि कृत्वा "उपलक्षणं चैतत् । अक्षरशब्दस्य तत्र प्रसिद्धत्वादिति द्रष्टव्यम्" इति न्यायविवरणटीकायाम् "अविनाशित्वसाम्यात्" इत्यस्योपलक्षणत्वोक्तेर्बीजं वदंस्तदनुरोधेनात्रापि टीकायामविनाशित्व-साम्यादित्यनन्तरं तत्र प्रसिद्धत्वाच्चेत्यपि द्रष्टव्यमिति भावेन योगस्य साधारण्यमुपेत्य रूढिबलाच्चोभयमात्रवृत्तित्वं द्रष्टव्यमित्येकं पक्षं तावदाह – अत्र चेति ॥**

ಪ್ರವೃತ್ತಿನಿಮಿತ್ತದಿಂದ ಉಭಯಸಾಧಾರಣ್ಯವನ್ನು ವಿವಕ್ಷಿಸುವುದಾದರೆ ಆಕಾಶಾದಿಗಳಲ್ಲಿಯೂ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವಿರುತ್ತದೆ. ಹೀಗಿರುವಾಗ ಅಕ್ಷರಶಬ್ದಕ್ಕೆ ಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿ ಮಾತ್ರ ಪ್ರಯೋಗವೆಂದು ಹೇಗೆ ಹೇಳುತ್ತೀರಿ ?

ಈ ಆಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಉತ್ತರಿಸುತ್ತಿದ್ದಾರೆ. ಇಲ್ಲಿ 'ಉಪಲಕ್ಷಣಂ ಚೈತತ್ । ಅಕ್ಷರಶಬ್ದಸ್ಯ ತತ್ರ ಪ್ರಸಿದ್ಧತ್ವಾದಿತಿ ದ್ರಷ್ಟವ್ಯಮ್' 'ಉಪಲಕ್ಷಣಯಾ ಅಕ್ಷರಶಬ್ದದ ಪ್ರಸಿದ್ಧಿಯನ್ನೂ ಸಹ ವಿವಕ್ಷಿಸಬೇಕು' ಎಂಬ ನ್ಯಾಯವಿವರಣೆಯ ಟೀಕೆಯಲ್ಲಿ 'ಅವಿನಾಶಿತ್ವಸಾಮ್ಯಾತ್' ಎಂಬ ಆಚಾರ್ಯರ ಮಾತು ಉಪಲಕ್ಷಣವಾಗಿದೆಯೆಂದು ಹೇಳಿರುತ್ತಾರೆ. ಈ ನ್ಯಾಯವಿವರಣೆಯ ಟೀಕೆಯನುಸಾರಿಯಾಗಿ ಉಪಲಕ್ಷಣತ್ವ ವಚನಕ್ಕೆ ಕಾರಣವನ್ನು ಹೇಳುವುದಕ್ಕಾಗಿ - 'ಅತ್ರ ಚ' ಎಂಬ ಗ್ರಂಥ ಹೊರಟಿದೆ. ಹಾಗೂ ನ್ಯಾಯವಿವರಣ ಟೀಕಾನುಸಾರೇಣ ಪ್ರಕೃತ ತತ್ವಪ್ರಕಾಶಿಕೆಯಲ್ಲಿರುವ 'ಅವಿನಾಶಿತ್ವ ಸಾಮ್ಯಾತ್' ಎಂಬ ಪದದ ಅನಂತರ 'ತತ್ರ ಪ್ರಸಿದ್ಧತ್ವಾಚ್ಚ ಇತ್ಯಪಿ ದ್ರಷ್ಟವ್ಯಮ್' ಎಂದರೆ ಲಕ್ಷ್ಮೀದೇವಿ ಹಾಗೂ ವಿಷ್ಣುವಿನಲ್ಲಿ ಪ್ರಸಿದ್ಧವಾಗಿರುವಿಕೆಯನ್ನೂ ಸಹ ಉಪಲಕ್ಷಣಯಾ ವಿವಕ್ಷಿಸಬೇಕು ಎಂಬುದನ್ನು ಶೇಷಪೂರಣ ಮಾಡಿ ಇಟ್ಟುಕೊಳ್ಳಬೇಕು. ಆವಾಗ ಇಬ್ಬರಲ್ಲಿಯೂ ಪ್ರವೃತ್ತಿನಿಮಿತ್ತವಿದ್ದರೂ ಎಂದರೆ ಯೋಗವು ಸಾಧಾರಣವಾದರೂ ಲೋಕಪ್ರಯೋಗದಿಂದ ರೂಢಿಯೂ ಸಹ ಇರುತ್ತದೆ. ಆದ್ದರಿಂದ ರೂಢಿಬಲಾತ್ ಉಭಯಮಾತ್ರ-ವೃತ್ತಿಯಾಗಿದೆ ಎಂದು ತಿಳಿಯಬೇಕು. ಈ ಅಭಿಪ್ರಾಯದಿಂದ ಪ್ರಥಮಪಕ್ಷವನ್ನು 'ಅತ್ರ ಚ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः – अत एवेति ।।** योगरूढिभ्यां साधारण्यस्याभिमतत्वादेवेत्यर्थः । ''अक्षरत्रयमीरितम्'' इति जडप्रकृतौ, ''यस्त्वेतं त्रिमात्रेणोऽङ्काकारेणैवाक्षरेण परमपुरुषमभिध्यायीत'' इत्योङ्कारे च प्रयोगात्तयोरपि रूढेरविनाशित्वयोगस्य च सत्त्वाद्द्वयोरेव व्यवच्छेद्यतयोक्तिः । योगमात्रस्याभिमतत्वे तस्य नित्यमात्रेऽपि सत्त्वेन तन्मात्रमेव व्यवच्छेद्यतयोपादीयेतेत्यर्थः ।

'ಅತ ಏವ' ಎಂದರೆ 'ಯೋಗ ಹಾಗೂ ರೂಢಿ ಎರಡರಿಂದಲೂ ಉಭಯಸಾಧಾರಣ್ಯವು ಅಭಿಪ್ರೇತವಾಗಿರುವುದರಿಂದಲೇ' ಎಂದರ್ಥ. ಇದರ ಉಪಪಾದನೆ ಹೀಗಿದೆ - 'ಅಕ್ಷರತ್ರಯಮೀರಿತಮ್' ಎಂಬಲ್ಲಿ ಜಡಪ್ರಕೃತಿಯಲ್ಲಿಯೂ ಅಕ್ಷರಶಬ್ದದ ರೂಢಿಯಿರುತ್ತದೆ. 'ಯಸ್ತ್ವೇತಂ ತ್ರಿಮಾತ್ರೇಣ ಓಂಕಾರೇಣೈವಾಕ್ಷರೇಣ ಪರಮಪುರುಷಮಭಿಧ್ಯಾಯೀತ'' ಎಂಬಲ್ಲಿ ಓಂಕಾರದಲ್ಲಿಯೂ ಅಕ್ಷರಶಬ್ದದ ರೂಢಿಯಿರುತ್ತದೆ. ಅವಿನಾಶಿತ್ವವೆಂಬ ಯೋಗವೂ ಸಹ ಈ ಎರಡೂ ಸ್ಥಳಗಳಲ್ಲಿರುತ್ತದೆ. ಆದ್ದರಿಂದ ಜಡಪ್ರಕೃತಿ ಹಾಗೂ ಓಂಕಾರ ಇವೆರಡನ್ನೇ ಟೀಕೆಯಲ್ಲಿ ವ್ಯವಚ್ಛೇದ್ಯವನ್ನಾಗಿ ವಿವಕ್ಷಿಸಿದ್ದಾರೆ. ಇಲ್ಲದಿದ್ದರೆ ಸಕಲ ನಿತ್ಯಪದಾರ್ಥಗಳನ್ನು ವ್ಯವಚ್ಛೇದ್ಯವೆಂದು ಹೇಳುತ್ತಿದ್ದರು.

**प्रकाशः –** ननु वर्णमात्रेऽपि योगरूढिभावोऽस्तीति चेत्सत्यम् । वर्णमात्रोपलक्षणमेतट्टीकायाम् । अत एव न्यायविवरणटीकायां ''नन्वचेतनप्रकृतौ वर्णेषु च कुतो न शङ्का'' इत्युक्तमिति ध्येयम् ।

ಟೀಕೆಯಲ್ಲಿ ಓಂಕಾರವನ್ನಷ್ಟೇ ಏಕೆ ಸ್ವೀಕರಿಸಿದ್ದಾರೆ. ಸಕಲ ವರ್ಣಗಳಲ್ಲಿಯೂ ಯೋಗ ಹಾಗೂ ರೂಢಿಗಳಿರುವುದರಿಂದ ಒಂದನ್ನು ಮಾತ್ರ ಸ್ವೀಕರಿಸಲು ಕಾರಣವಿಲ್ಲವಲ್ಲ.

ಹೌದು. ಎಲ್ಲಾ ವರ್ಣಗಳನ್ನೂ ಸಹ ವಿವಕ್ಷಿಸಬೇಕೆಂಬುದೇ ಟೀಕೆಯ ಅಭಿಪ್ರಾಯ. ಓಂಕಾರವನ್ನು ಕೇವಲ ಉಪಲಕ್ಷಣವನ್ನಾಗಿ ಉಲ್ಲೇಖಿಸಿದ್ದಾರೆ. ಆದ್ದರಿಂದಲೇ ನ್ಯಾಯವಿವರಣಟೀಕೆಯಲ್ಲಿ 'ನನ್ವಚೇತನ-ಪ್ರಕೃತೌ ವರ್ಣೇಷು ಚ ಕುತೋ ನ ಶಂಕಾ' ಅಚೇತನ ಪ್ರಕೃತಿ ಹಾಗೂ ಸಕಲವರ್ಣಗಳನ್ನೇಕೆ ಆಕ್ಷೇಪಿಸಿಲ್ಲ? ಎಂದು 'ವರ್ಣ' ಎಂಬ ಶಬ್ದದಿಂದ ಸಕಲ ವರ್ಣಗಳನ್ನು ವಿವಕ್ಷಿಸಿರುತ್ತಾರೆ.

**प्रकाशः –** ननु योगरूढ्योर्जडप्रकृत्यादावपि भावे सति पूर्वोत्तरकोटिद्वयमात्र-साधारण्याभावाद्द्रष्टृत्वादिना संशयादिकोटित्वशङ्कानिरासवदुभयत्रप्रसिद्धत्वाभावमाशङ्क्य कुतो न तन्निरासः कृत इत्यत आह – जडेति ।।

ಗ್ರಂಥದಲ್ಲಿ ಪೂರ್ವಪಕ್ಷಕೋಟಿ ಹಾಗೂ ಸಿದ್ಧಾಂತ ಕೋಟಿಗಳು ಲಕ್ಷ್ಮೀ ದೇವಿ ಹಾಗೂ ವಿಷ್ಣುವಿನಲ್ಲಿ ಮಾತ್ರ ಸಾಧಾರಣವಾಗಿವೆ. ಜಡಪ್ರಕೃತ್ಯಾದಿಗಳಲ್ಲಿ ದ್ರಷ್ಟುತ್ವಾದಿಗಳು ಇರುವುದಿಲ್ಲ. ಆದ್ದರಿಂದ ಸಂಶಯ ಕೋಟಿಯಲ್ಲಿ ಜಡಪ್ರಕೃತ್ಯಾದಿಗಳನ್ನು ವಿವಕ್ಷಿಸಿರುವುದಿಲ್ಲವೆಂದು ಸಮರ್ಥಿಸಿದ್ದಾರೆ. ಇದರ ಜೊತೆಗೆ ಉಭಯತ್ರಪ್ರಸಿದ್ಧವಾಗುವುದಿಲ್ಲವೆಂಬ ಆಶಂಕೆಯನ್ನೂ ಸಹ ಮಾಡಿಕೊಳ್ಳಬೇಕಿತ್ತು. ಏಕೆಂದರೆ ಯೋಗ

ಮತ್ತು ರೂಢಿಗಳೆರಡೂ ಲಕ್ಷ್ಮೀದೇವಿ ಹಾಗೂ ವಿಷ್ಣುವಿನಲ್ಲಿರುವಂತೆ ಜಡಪ್ರಕೃತ್ಯಾದಿಗಳಲ್ಲಿಯೂ ಇರುತ್ತದೆ. ಹೀಗಿರುವಾಗ ಉಭಯತ್ರಪ್ರಸಿದ್ಧವಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಆಶಂಕೆಯನ್ನು ತೋರಿಸಬೇಕಿತ್ತಲ್ಲವೇ? ಏಕೆ ಈ ಶಂಕಾನಿರಾಕರಣೆಯನ್ನು ಮಾಡಿರುವುದಿಲ್ಲ ? ಎಂಬ ಪ್ರಶ್ನೆಗೆ 'ಜಡ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

# ಗುರುರಾಜೀಯಮ್ (ಭಾವದೀಪ)

**गुरुराजीयम् – ॐ अक्षरमम्बरान्तधृतेः ॐ** ।। नन्वक्षरशब्दस्योभयत्रप्रसिद्ध-शब्दसमन्वयप्रतिपादकपादे समन्वयप्रतिपादने पादासङ्गतिः । तस्य वर्णादौ रूढत्वेनान्यत्रप्रसिद्धत्वादित्यत आह – **यद्यपीत्यादिना** ।। सा अन्यत्रप्रसिद्धता । ननु चाविनाशित्वरूपप्रवृत्तिनिमित्तसाधारण्येनाक्षरशब्दस्योभयत्रप्रसिद्धत्वं किमर्थमुच्यते । प्रयोगसाधारण्येनाप्युभयत्रप्रसिद्धत्वोपपत्तेरित्यत आह – **प्रयोगेति** ।। **पूर्वपक्षिणं प्रतीति** ।। **ब्रह्मणि** चित्प्रकृतौ चेति शेषः । किञ्च प्रयोगसाधारण्येनाक्षरशब्दस्य चित्प्रकृतिब्रह्मरूपोभयप्रसिद्धता न सम्भवति । तस्य चित्प्रकृतिब्रह्मणोरिव वर्णादावपि सत्त्वादित्यत आह – **वर्णादीति** ।।

ननु च न प्रयोगमात्रमुभयत्रप्रसिद्धिसाधकत्वेनोच्यते । येनातिप्रसङ्गः स्यात् । किं नाम प्रवृत्तिनिमित्ताविनाशित्वोपजीविप्रयोगसाधारण्यमेव । नचैवं ब्रह्मणि प्रयोगो नास्तीति न तस्योभयत्रप्रसिद्धत्वमिति वाच्यम् । विषयवाक्ये प्रवृत्तिनिमित्तोपजीविप्रयोगाभावेऽपि स्थलान्तरे तत्सम्भवादित्यत आह – **प्रवृत्तिनिमित्तेति** ।। ननु यदि प्रयोगसाधारण्यस्य वर्णादिसाधारणत्वेन तेन ब्रह्म-चित्प्रकृतिरूपार्थद्वयमात्रसाधारण्यासिद्ध्या तस्योभयत्रप्रसिद्धिसाधकत्वं नाङ्गीक्रियते तर्हि अविनाशित्वरूपप्रवृत्तिनिमित्तसाधारण्येनाप्युभयत्रप्रसिद्धत्वं न स्यात्। प्रवृत्ति-निमित्तसाधारण्यस्यापि वर्णादिसाधारणत्वेन ब्रह्मचित्प्रकृतिरूपार्थद्वयमात्रसाधारण्या-सिद्ध्यापातादित्यतः स्यादेतदेवम् यदि प्रवृत्तिनिमित्तसाधारण्यमात्रेणैवोभयत्र-प्रसिद्धतोच्येत । किं नाम रूढिसहितयोगसाधारण्यमेव । अक्षरादिशब्दानां योगरूढत्वादिति भावेनाह – **अत्र चेति** ।। **अत एवेति** ।। रूढियोगसाधारण्यस्य उभयत्रप्रसिद्धिसाधकत्वेनाभिमतत्वादेवेत्यर्थः – **अन्यथेति** ।। अविनाशित्वरूप-प्रवृत्तिनिमित्तसाधारण्यमात्रस्यैवोभयत्रप्रसिद्धिसाधनत्वेऽभिमत इत्यर्थः । ननु

रूढियोगसाधारण्यस्यापि प्रकृतिवर्णसाधारणत्वेन तेनापि तत्र ब्रह्मचित्प्रकृतिरूपार्थद्वयमात्रसाधारण्यसिद्धिः कथं स्यादित्यत आह – **जडप्रकृत्यादीति** ।। आदिपदेन वर्णसङ्ग्रहः । विष्णुचित्प्रकृतिवर्णसाधारणत्वाद्द्वयमात्रसाधारण्याभावादुभयत्रप्रसिद्धत्वं कथमिति शङ्काभावो वक्ष्यमाणहेतोरिति भावः । सन्देहकोट्योरेव साधारण्यस्य विवक्षितत्वादिति भावः ।




ಈ ಅಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. ಲಕ್ಷ್ಮೀದೇವಿಯಲ್ಲಿಯೂ ಅಕ್ಷರಶಬ್ದವನ್ನು ಪ್ರಯೋಗಿಸಬಹುದಲ್ಲವೇ? ಎಂಬ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ. ಆದ್ದರಿಂದ ಲಕ್ಷ್ಮೀದೇವಿ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ಉಭಯತ್ರಪ್ರಸಿದ್ಧವೆನಿಸುತ್ತದೆ.

ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ಹೇಳುವುದು ಎಷ್ಟು ಸ್ವರಸ? ಏಕೆಂದರೆ ಅಕಾರಾದಿ ವರ್ಣಗಳಲ್ಲಿಯೂ ಅಕ್ಷರಶಬ್ದದ ಪ್ರಯೋಗವು ಲೋಕದಲ್ಲಿ ಕಾಣಸುತ್ತಿದೆ. ಆದ್ದರಿಂದ ಲೋಕರೂಢಿಯನ್ನು ವಿವಕ್ಷಿಸಿದಾಗ ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವಾಗಬೇಕಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಆದರೆ ಸಮನ್ವಯ ಮಾಡಬೇಕಾಗಿರುವ ಶಬ್ದವು ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲಾದರೂ ಪ್ರಸಿದ್ಧವಾಗಿರಬೇಕೆಂಬ ಅಭಿಪ್ರಾಯವನ್ನು ಹೇಳಬಾರದು. ಆ ಸಮನ್ವಯ ಮಾಡಬೇಕಾದ ಶಬ್ದವನ್ನು ಪೂರ್ವಪಕ್ಷಿಯು ಯಾವ ಪದಾರ್ಥದಲ್ಲಿ ಸಮರ್ಥಿಸುತ್ತಾನೋ ಅಂತಹ ಪದಾರ್ಥದಲ್ಲಿ ಮತ್ತು ಸಿದ್ಧಾಂತಕ್ಕೆ ವಿಷಯವಾದ ವಸ್ತುವಿನಲ್ಲಿ ಸಾಧಾರಣವಾಗಿದ್ದರೆ ಸಾಕು. ಪೂರ್ವಪಕ್ಷಿಯು ಅಕಾರಾದಿ ವರ್ಣಗಳನ್ನಾಗಲೀ, ಜಡಪ್ರಕೃತಿಯನ್ನಾಗಲೀ ಅಕ್ಷರವೆಂದು ಆಕ್ಷೇಪಿಸುತ್ತಿಲ್ಲವಾದ್ದರಿಂದ ಅವುಗಳಲ್ಲಿರುವ ರೂಢಿಯನ್ನು ವಿವಕ್ಷಿಸಬೇಕಾಗಿಲ್ಲ. ಆದ್ದರಿಂದಲೇ ಈ ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವೂ ಸಹ ಆಗುವುದಿಲ್ಲವೆಂದು ತಿಳಿಯಬೇಕು. ಅವಿನಾಶಿತ್ವ ಎಂಬ ಪ್ರವೃತ್ತಿನಿಮಿತ್ತವನ್ನು ಅನುಸರಿಸಿದಾಗ ಕೇವಲ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆಂದು ನ್ಯಾಯವಿವರಣಕಾರರು ತಿಳಿಸಿರುತ್ತಾರೆ. ಆದ್ದರಿಂದ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ನಾವು ತಿಳಿಯಬಾರದು. ವಾಸ್ತವಿಕವಾಗಿ ಮಹಾಲಕ್ಷ್ಮೀ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದದ ಪ್ರಯೋಗಸಾಧಾರಣ್ಯವನ್ನು ಹೇಳಬಹುದು. ಆದರೆ ಯಾವ ಪೂರ್ವಪಕ್ಷಿಯು ಮಹಾಲಕ್ಷ್ಮಿಯೇ ಅಕ್ಷರಳಾಗಿದ್ದಾಳೆಂದು ಆಕ್ಷೇಪಿಸುತ್ತಿದ್ದಾನೋ, ಅವನು ವಿಷ್ಣುವಿನಲ್ಲೂ ಅಕ್ಷರಶಬ್ದದ ಪ್ರಯೋಗವನ್ನು ಒಪ್ಪಲಾರನು. ಆದ್ದರಿಂದ ಅವಿನಾಶಿತ್ವವೆಂಬ ಧರ್ಮದ ಮೂಲಕವಾಗಿಯೇ ಉಭಯಸಾಧಾರಣ್ಯವನ್ನು ಹೇಳಬೇಕು.

ಅಕ್ಷರಶಬ್ದಕ್ಕೆ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವನ್ನಷ್ಟೇ ಆಶ್ರಯಿಸಿದರೆ ಅಕಾರಾದಿವರ್ಣಗಳಲ್ಲಿಯೂ ಇದು ಇರುವುದರಿಂದ ಅತಿಪ್ರಸಕ್ತಿ ಬರುತ್ತದೆ. ಆದ್ದರಿಂದ ರೂಢಿಯನ್ನೂ ಸಹ ಆಶ್ರಯಿಸಬೇಕು. ಇದರಿಂದ ಅಕ್ಷರಶಬ್ದವು ಪಂಕಜಾದಿಶಬ್ದಗಳಂತೆ ಯೋಗರೂಢವಾದ ಶಬ್ದವೆಂದು ಸ್ಪಷ್ಟವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಅಕ್ಷರಶಬ್ದವು ಸಂಶಯಕೋಟಿಗಳಲ್ಲಷ್ಟೇ ಸಾಧಾರಣವಾಗಬೇಕು. ಆದರೆ ಅಕಾರಾದಿವರ್ಣಗಳಲ್ಲಿಯೂ ಸಹ ಅಕ್ಷರಶಬ್ದದ ಪ್ರಯೋಗವಿರುವುದರಿಂದ ಉಭಯ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ ? ಎಂಬುದು ಮುಂದಿನ ಪ್ರಶ್ನೆ. ಈ ಪ್ರಶ್ನೆಗೆ ಗ್ರಂಥಕಾರರು ಎರಡು ಬಗೆಯಲ್ಲಿ ಉತ್ತರಿಸಿದ್ದಾರೆ. ಉಭಯತ್ರಪ್ರಸಿದ್ಧವಾಗಬೇಕೆಂದರೆ ಸಂಶಯಕೋಟಿಗಳಲ್ಲಿ ಸಾಧಾರಣವಾಗಿದ್ದರೆ ಸಾಕು, ಬೇರೆಡೆ ಇರಬಾರದೆಂದೇನೂ ಇಲ್ಲ. ಸಂಶಯಕೋಟಿಗಳೆರಡರಲ್ಲಿ ಸಾಧಾರಣವಾಗಿರುವ ಪ್ರಯುಕ್ತವೇ ಉಭಯತ್ರ-ಪ್ರಸಿದ್ಧವೆನಿಸುತ್ತದೆಂಬುದು ಒಂದು ಬಗೆಯ ಪರಿಹಾರ.

• • • • •

## ಮತ್ತೊಂದು ಬಗೆಯಲ್ಲಿ ಉಭಯತ್ರಪ್ರಸಿದ್ಧತ್ವ ಸಮರ್ಥನೆ

### तात्पर्यचन्द्रिका

**अथवा स्वरूपध्वंस इव शरीरवियोगेऽपि नाशशब्दप्रयोगात्**

ಅನುವಾದ - ಅಥವಾ ಅಕ್ಷರಶಬ್ದಕ್ಕೆ ಶರೀರವಿಯೋಗರಾಹಿತ್ಯ ಎಂಬರ್ಥವನ್ನು ವಿವಕ್ಷಿಸಿದಾಗ ಕೇವಲ ಮಹಾಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಸಾಧಾರಣವಾಗುತ್ತದೆಂದು ತಿಳಿಯಬೇಕು - ಏಕೆಂದರೆ ನಾಶ ಶಬ್ದವು ಸ್ವರೂಪಧ್ವಂಸ ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಂತೆ ಶರೀರವಿಯೋಗ ಎಂಬರ್ಥದಲ್ಲಿಯೂ ಸಹ ಪ್ರಯೋಗಿಸಲ್ಪಟ್ಟಿದೆ.

**'द्वाविमौ पुरुषौ लोके क्षरश्चाक्षर एव च ।**
**क्षरः सर्वाणि भूतानि कूटस्थोऽक्षर उच्यते ।।'**

**इति स्मृतौ च जीवस्य क्षरत्वमुक्त्वा चित्प्रकृतेरक्षरशब्दवाच्यत्वोक्तेः**

'ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋऽಕ್ಷರ ಉಚ್ಯತೇ ॥' 'ಚೇತನ ಪ್ರಪಂಚದಲ್ಲಿ 'ಕ್ಷರಪುರುಷ' 'ಅಕ್ಷರ ಪುರುಷ' ಎಂದು ದ್ವೈವಿಧ್ಯವಿದೆ. ಸಕಲಭೂತಗಳು ಕ್ಷರಪುರುಷರೆನಿಸಿದರೆ ಲಕ್ಷ್ಮೀದೇವಿಯು ಅಕ್ಷರಳೆನಿಸುತ್ತಾಳೆ'.

ಹೀಗೆ ಭಗವದ್ಗೀತೆಯಲ್ಲಿ ಸಕಲಜೀವರನ್ನು ಕ್ಷರಪುರುಷರೆಂದು ಹೇಳಿ, ಲಕ್ಷ್ಮೀದೇವಿಯನ್ನು ಅಕ್ಷರಪುರುಷಳೆಂದು ಹೇಳಿದ್ದರಿಂದ ಪ್ರಕೃತ ಅಕ್ಷರಶಬ್ದವನ್ನು ಕೇವಲ ಯೌಗಿಕವೆಂದು ಪರಿಗಣಿಸಬಹುದು.

**''लक्ष्मीरक्षरदेहत्वादक्षरा'' इत्यादिश्रुतौ शरीराक्षरणस्य निमित्त-त्वोक्तेश्चाव्यभिचरिते शरीरक्षरणाभावरूपाक्षरणविशेषे केवलयौगिकोऽक्षरशब्दः ।**

'ಲಕ್ಷ್ಮೀಃ ಅಕ್ಷರದೇಹತ್ವಾದಕ್ಷರಾ' ಇತ್ಯಾದಿ ಶ್ರುತಿಯಲ್ಲಿ ಶರೀರದ ನಾಶವಿಲ್ಲದಿರುವಿಕೆ ಎಂಬ ನಿಮಿತ್ತವನ್ನು ಅಕ್ಷರಶಬ್ದಕ್ಕೆ ಹೇಳಲಾಗಿದೆ. ಇಂತಹ ನಿಮಿತ್ತಕ್ಕೆ ಯಾವುದೇ ವ್ಯಭಿಚಾರಾದಿ ದೋಷಗಳು ಇಲ್ಲ - ಆದಕಾರಣ ಶರೀರಕ್ಷರಣಾಭಾವವೆಂಬ ಅ-ಕ್ಷರಣವಿಶೇಷದಲ್ಲಿ ಅಕ್ಷರಶಬ್ದವು ಕೇವಲ ಯೌಗಿಕವಾಗಿದೆಯೆಂದು ತಿಳಿಯಬೇಕು. ಅಂದರೆ ಪ್ರಕೃತ ವಿಷಯವಾಕ್ಯದಲ್ಲಿರುವ ಅಕ್ಷರಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಬೇಕಾಗಿಲ್ಲ.

**प्राभाकरमतेऽचिरनिर्मथनत्वरूपनिर्मथनविशेषे निर्मन्थ्यशब्द इव ।**

ಯಾವ ರೀತಿಯಾಗಿ ಪ್ರಾಭಾಕರಮತದಲ್ಲಿ 'ನಿರ್ಮಂಥ್ಯ' ಎಂಬ ಶಬ್ದವನ್ನು 'ಅಚಿರನಿರ್ಮಥನ' ಎಂಬ 'ನಿರ್ಮಥನ ವಿಶೇಷ'ದಲ್ಲಿ ಕೇವಲ ಯೌಗಿಕವೆಂದು ಅಂಗೀಕರಿಸಿದ್ದಾರೋ, ಅದರಂತೆ ಅಕ್ಷರಶಬ್ದಕ್ಕೂ ಸಹ ರೂಢ್ಯರ್ಥವನ್ನು ಬಿಟ್ಟು ಕೇವಲ ಯೋಗಾರ್ಥವನ್ನು ಅಂಗೀಕರಿಸಬೇಕು.

**नचैवं पङ्कजादेरपि केवलयौगिकत्वापातः ।**

ಅಕ್ಷರಶಬ್ದಕ್ಕೆ ಕೇವಲ ಯೋಗಾರ್ಥವನ್ನು ಅಂಗೀಕರಿಸುವುದಾದರೆ, ಪಂಕಜ ಮೊದಲಾದ ಯೋಗರೂಢವೆಂದು ಪ್ರಸಿದ್ಧವಾದ ಶಬ್ದಗಳಲ್ಲಿಯೂ ಕೇವಲ ಯೋಗಾರ್ಥವನ್ನೇ ಸ್ವೀಕರಿಸ-ಬೇಕಾದೀತು; ಹೊರತಾಗಿ ರೂಢ್ಯರ್ಥವನ್ನು ಒಪ್ಪುವುದು ತಪ್ಪಾಗಬೇಕಾದೀತು ಎಂದು ಆಕ್ಷೇಪಿಸಬಾರದು.

**तत्र पद्मत्वजातेरपि प्रतीतेः ।**

ಏಕೆಂದರೆ 'ಪಂಕಜ' ಪದವನ್ನು ಕೇಳಿದಾಗ 'ಪಂಕಜನಿಕರ್ತೃತ್ವ' ಎಂಬ ಯೋಗಾರ್ಥವಷ್ಟೇ ಉಪಸ್ಥಿತವಾಗುವುದಿಲ್ಲ. ಜೊತೆಗೆ 'ಪದ್ಮತ್ವ' ಎಂಬ ಜಾತಿಯೂ ಸಹ ಉಪಸ್ಥಿತವಾಗುತ್ತಿದೆ. 'ಪದ್ಮತ್ವ' ಎಂಬ ಜಾತಿಯ ಉಪಸ್ಥಿತಿ ಬರುತ್ತಿರುವುದರಿಂದ ರೂಢ್ಯರ್ಥವನ್ನು ಅವಶ್ಯ ಒಪ್ಪಬೇಕು.

**पङ्कजननविशेषस्य निमित्तत्वे मानाभावाच्च ।**

ಮತ್ತು ಅಕ್ಷರಶಬ್ದಕ್ಕೆ ಅಕ್ಷರನ ವಿಶೇಷವು ನಿಮಿತ್ತವಾಗಲು ಪ್ರಮಾಣವಿರುವಂತೆ ಪಂಕಜಶಬ್ದಕ್ಕೆ ಪಂಕಜನನವಿಶೇಷವು ನಿಮಿತ್ತವೆನಿಸಲು ಪ್ರಮಾಣವಿರುವುದಿಲ್ಲ. ಅಂದರೆ ಕೆಸರಿನಲ್ಲಿ ಹುಟ್ಟಿದ ವಸ್ತುವಿಶೇಷವೇ ಪಂಕಜಶಬ್ದದ ಪ್ರವೃತ್ತಿನಿಮಿತ್ತವೆನ್ನಲು ಕಾರಣವಿಲ್ಲವೆಂದರ್ಥ.

**कुमुदादिव्यावृत्तस्य पद्मे पङ्कजननविशेषस्याभावाच्च ।**

ಮತ್ತು ಅಕ್ಷರಶಬ್ದದಲ್ಲಿ 'ಶರೀರಕ್ಷರಣಾಭಾವ' ಎಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದಾಗ ಜಡಪ್ರಕೃತಿ, ಅಕಾರಾದಿ ಅಕ್ಷರಗಳು ವ್ಯಾವೃತ್ತವಾಗುವಂತೆ ಪ್ರಕೃತ ಪಂಕಜಶಬ್ದಕ್ಕೆ ಪಂಕಜನನ

ವಿಶೇಷವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದಾಗ ಪದ್ಮದಲ್ಲಿ ಮಾತ್ರವಿರುವ ಕುಮುದಾದಿಗಳಲ್ಲಿ ಇಲ್ಲದ ಧರ್ಮವನ್ನು ಹೇಳಿದಂತಾಗುವುದಿಲ್ಲ. ಅಂದರೆ ಇಂತಹ ಪ್ರವೃತ್ತಿನಿಮಿತ್ತದಿಂದ ಪದ್ಮವನ್ನೇ ವಿವಕ್ಷಿಸಬೇಕು. ಕುಮುದಾದಿಗಳನ್ನು ವಿವಕ್ಷಿಸಬಾರದೆಂದು ಸಮರ್ಥಿಸಲು ಸಾಧ್ಯವಿಲ್ಲ. ಏಕೆಂದರೆ ಕುಮುದಾದಿಗಳಲ್ಲಿಯೂ ಪಂಕಜನಿಕರ್ತೃತ್ವವು ಇದ್ದೇ ಇರುತ್ತದೆ.

**अत्र त्वनेकाक्षरानुगतजातिभेदस्याप्रतीतेः । अक्षरणविशेषस्य निमित्तत्वे स्मृतेरुक्तत्वाच्च । इतरव्यावृत्तस्य क्षरणरहितशरीरयोगरूपस्य विशेषस्य सत्त्वाच्च ।**

ಆದರೆ ಪ್ರಕೃತ ಅಕ್ಷರಶಬ್ದದಲ್ಲಿ ಅನೇಕ ಅಕ್ಷರಗಳಲ್ಲಿ ಅನುಗತವಾದ ಜಾತಿವಿಶೇಷವು ಪ್ರತೀತವಾಗುತ್ತಿಲ್ಲ. ಅಷ್ಟೇ ಅಲ್ಲದೆ ಅ-ಕ್ಷರಣವಿಶೇಷವೇ ಪ್ರವೃತ್ತಿನಿಮಿತ್ತವಾಗಿದೆಯೆನ್ನಲು ಭಗವದ್ಗೀತೆಯನ್ನು ಹೇಳಿದ್ದಾಗಿದೆ. ಮತ್ತು ಬೇರೆ ಎಲ್ಲೂ ಇಲ್ಲದ ನಾಶರಹಿತವಾದ ಶರೀರದ ಸಂಬಂಧವೆಂಬ ವಿಶೇಷವನ್ನು ಹೇಳಿರುವುದರಿಂದಲೂ ಅಕ್ಷರಶಬ್ದವು ಯೌಗಿಕವಾಗಿದೆ.

**वर्णादौ तु रूढः । वर्णत्वादिजातिभेदप्रतीतेः ।**

ಆದರೆ ಇದೇ ಅಕ್ಷರಶಬ್ದವು ಅಕಾರಾದಿ ವರ್ಣಗಳಲ್ಲಿ ರೂಢವಾಗಿದೆ ಹೊರತು, ಯೌಗಿಕವಲ್ಲ. ಏಕೆಂದರೆ ವರ್ಣತ್ವವೇ ಮೊದಲಾದ ಜಾತಿವಿಶೇಷವು ಪ್ರತೀತವಾಗುತ್ತಿರುವುದರಿಂದ. ಆದ್ದರಿಂದ ಒಂದೇ ಅಕ್ಷರಶಬ್ದವು ಲಕ್ಷ್ಮೀ ಹಾಗೂ ವಿಷ್ಣು ಇಬ್ಬರಲ್ಲಿ ಕೇವಲ ಯೌಗಿಕವಾಗಿದೆ. ಅಕಾರಾದಿ ವರ್ಣಗಳಲ್ಲಿ ಕೇವಲ ರೂಢವಾಗಿದೆ. ಈ ದೃಷ್ಟಿಯಿಂದಷ್ಟೇ ಅಕ್ಷರಶಬ್ದವನ್ನು ಯೋಗರೂಢ-ಶಬ್ದವೆನ್ನುತ್ತಾರೆ.

**इह च द्रष्टृत्वादिना रूढार्थबाधाद्यौगिकोऽक्षरशब्दो द्वयमात्रसाधारणः ।**

ಹೀಗೆ - ಅಕ್ಷರಶಬ್ದವು ರೂಢಿಯಿಂದ ವರ್ಣಾದಿಗಳನ್ನೂ ಸಹ ಪ್ರತಿಪಾದಿಸಬೇಕಲ್ಲವೇ? ಎಂಬ ಪ್ರಶ್ನೆ ಬಂದರೆ, ಭಾಷ್ಯದಲ್ಲಿ ದ್ರಷ್ಟೃತ್ವಾದಿಧರ್ಮಗಳನ್ನು ಉಲ್ಲೇಖಿಸುವ ಮೂಲಕ ರೂಢ್ಯರ್ಥವನ್ನು ಸ್ವೀಕರಿಸಬಾರದೆಂದು ಸೂಚಿಸಿದ್ದಾರೆ. ಆದ್ದರಿಂದ ಯೋಗಾರ್ಥವನ್ನಷ್ಟೇ ಸ್ವೀಕರಿಸಬೇಕು. ಯೋಗಾರ್ಥವನ್ನಷ್ಟೇ ಸ್ವೀಕರಿಸಿದಾಗ ಯೌಗಿಕವಾದ ಅಕ್ಷರಶಬ್ದವು ಮಹಾಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆ. ಹೀಗೆ ಸಂಶಯಕೋಟಿಯಲ್ಲಷ್ಟೇ ಸಾಧಾರಣವಾಗುವ ಪ್ರಯುಕ್ತ ಉಭಯತ್ರಪ್ರಸಿದ್ಧವೆನಿಸುತ್ತದೆ.

**इदमेव च ब्रह्मचित्प्रकृतिरूपार्थद्वयमात्रसाधारणशरीराक्षरणं न्यायविवरणेऽविनाशित्वपदेन विवक्षितम् ।**

ಮಹಾವಿಷ್ಣು ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿ ಮಾತ್ರ ಸಾಧಾರಣವಾದ 'ಶರೀರನಾಶರಾಹಿತ್ಯ' ಎಂಬ ಅರ್ಥವನ್ನು ವಿವಕ್ಷಿಸಿಯೇ ನ್ಯಾಯವಿವರಣದಲ್ಲಿ ಅವಿನಾಶಿತ್ವವೆಂಬ ಪದದಿಂದ ಶರೀರ ಅ-ಕ್ಷರಣ ರೂಪವಾದ ಪ್ರವೃತ್ತಿನಿಮಿತ್ತವನ್ನು ಹೇಳಿರುತ್ತಾರೆ.

**वक्तव्यं हि द्वयमात्रसाधारण्यम् । न्यायविवरणे पूर्वत्र द्युभ्वाद्यायतनत्वादौ संशयकोटिमात्रसाधारण्योक्तेः ।**

ಮತ್ತು ಸಂಶಯಕೋಟಿಯಲ್ಲಿ ಮಾತ್ರ ಸಾಧಾರಣವಾದ ಪ್ರವೃತ್ತಿನಿಮಿತ್ತವನ್ನೇ ಹೇಳಬೇಕು. ಏಕೆಂದರೆ ಹಿಂದೆ ದ್ಯುಭ್ವಾದ್ಯಧಿಕರಣದ ನ್ಯಾಯವಿವರಣದಲ್ಲಿ ಸಂಶಯಕೋಟಿಯಲ್ಲಷ್ಟೇ ಸಾಧಾರಣವಾಗುವಂತಹ ಜಾಯಮಾನತ್ವಲಿಂಗವನ್ನು ಹೇಳಿರುತ್ತಾರೆ.

**तथोत्तरत्र सच्छब्दस्य स्वतः सर्वसाधारणस्यापि कारणत्वमुखेन द्वयमात्रसाधारण्योक्तेः ।**

ಮತ್ತು ಮುಂದೆಯೂ ಸಹ 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬಲ್ಲಿರುವ 'ಸತ್' ಶಬ್ದವು ಸಕಲಪದಾರ್ಥಗಳಲ್ಲಿ ಸಾಧಾರಣವಾಗಿದ್ದರೂ 'ಜಗತ್ಕಾರಣತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಹೇಳುವ ಮೂಲಕ ಪ್ರಕೃತಿ ಹಾಗೂ ಪರಮಾತ್ಮ ಇಬ್ಬರಲ್ಲಿ ಮಾತ್ರ ಸಾಧಾರಣವಾಗುವಂತೆ ಸತ್‌ಶಬ್ದವನ್ನು ಪ್ರಯೋಗಿಸಿದ್ದಾರೆ.

**तथा "आहोभयगतत्वं च स्यादतो लिङ्गशब्दयोः" इत्यनुव्याख्याने सिद्धान्ते निरसनीयत्वेन यत्साधारण्यं प्रसक्तं तस्यैवोभयत्रप्रसिद्धित्वेनोक्तत्वाच्च ।**

ಮತ್ತು 'ಆಹೋಭಯಗತತ್ವಂ ಚ ಸ್ಯಾದತೋ ಲಿಂಗಶಬ್ದಯೋಃ' ಎಂಬ ಅನುವ್ಯಾಖ್ಯಾನದಲ್ಲಿ ಸಿದ್ಧಾಂತವನ್ನು ಮಾಡುವಾಗ ಯಾವ ಸಾಧಾರಣ್ಯವನ್ನು ನಿರಾಕರಿಸಿದ್ದಾರೋ, ಆ ನಿರಾಕರಣೆಗೆ ಪ್ರಸಕ್ತವಾದದ್ದೇ ಉಭಯತ್ರಪ್ರಸಿದ್ಧವೆಂದು ಸಮರ್ಥಿಸಿದ್ದಾರೆ. ಅಂದರೆ ಸಿದ್ಧಾಂತದಲ್ಲಿ ಸಕಲ ಸಾಧಾರಣವಾದದ್ದನ್ನು ನಿರಾಕರಿಸುವುದಿಲ್ಲ. ಹೊರತಾಗಿ ಪೂರ್ವಪಕ್ಷಕೋಟಿ ಹಾಗೂ ಸಿದ್ಧಾಂತ ಕೋಟಿಗಳಲ್ಲಿ ಈ ಧರ್ಮವು ಸಾಧಾರಣವಾಗಿಲ್ಲ ಎಂದಷ್ಟೇ ನಿರಾಕರಿಸಿ, ಕೇವಲ ವಿಷ್ಣುವಿನಲ್ಲಿ ಅಸಾಧಾರಣವಾಗಿದೆಯೆಂದು ಸಮರ್ಥಿಸಿರುತ್ತಾರೆ. ಇದರಿಂದ ಪೂರ್ವಪಕ್ಷಕೋಟಿ ಹಾಗೂ ಸಿದ್ಧಾಂತಕೋಟಿಗಳಲ್ಲಷ್ಟೇ ಸಾಧಾರಣವಾದ ಧರ್ಮಗಳನ್ನು ವಿವಕ್ಷಿಸಬೇಕು. ಅಂತಹ ಧರ್ಮವುಳ್ಳ ಶಬ್ದವೇ ಉಭಯತ್ರಪ್ರಸಿದ್ಧವಾಗುತ್ತದೆಂದು ತಿಳಿಯಬೇಕು.

**इन्द्रादिशब्देषु तु रूढ्यादिनैव पूर्वपक्षितत्वान्नैश्वर्यादिप्रवृत्तिनिमित्त-साधारण्यमिति नातिप्रसङ्गः ।**

ಪರಿಪೂರ್ಣಚಂದ್ರಿಕಾ

ಹಾಗಾದರೆ ಅನ್ಯತ್ರಪ್ರಸಿದ್ಧ ಶಬ್ದಗಳಲ್ಲಿ ಅತಿಪ್ರಸಂಗ ಬರುತ್ತದೆ. ಏಕೆಂದರೆ ಇಂದ್ರಾದಿಶಬ್ದಗಳಲ್ಲಿಯೂ ಸಹ 'ಪರಮೈಶ್ವರ್ಯ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದಾಗ ವಿಷ್ಣು ಹಾಗೂ ಇಂದ್ರ ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆ. ಹಾಗಾಗಿ ಇಂದ್ರಾದಿ ಶಬ್ದಗಳೂ ಸಹ ಉಭಯತ್ರಪ್ರಸಿದ್ಧವಾಗಬೇಕಲ್ಲವೇ? ಅನ್ಯತ್ರಪ್ರಸಿದ್ಧವೆಂದು ಹೇಗೆ ಹೇಳಿದಿರಿ? ಎಂದರೆ, ಇಂದ್ರಾದಿ ಶಬ್ದಗಳನ್ನು ಸಮನ್ವಯ ಮಾಡುವಾಗ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿಯೇ ಇಲ್ಲ. ಹೊರತಾಗಿ ಕೇವಲ ರೂಢಿಯ ಬಲದಿಂದ ಪೂರ್ವಪಕ್ಷವನ್ನು ಮಾಡಿ ನಿರಾಕರಿಸಿದ್ದಾರೆ. ಹಾಗಾಗಿ ಪರಮೈಶ್ವರ್ಯಾದಿ ಪ್ರವೃತ್ತಿನಿಮಿತ್ತದ ಸಾಧಾರಣ್ಯದಿಂದ ಅತಿಪ್ರಸಂಗವನ್ನು ಶಂಕಿಸಬಾರದು.

**प्रकाशः —**

**यद्येवं तर्हि न्यायविवरणोक्तस्योपलक्षणत्वमुपेत्य रूढिरपि नोपादेया । योगस्यान्यसाधारण्येऽपि संशयकोटिद्वयसाधारण्यमात्रेण तदुपपत्तेरित्यतो योगस्यानतिप्रसक्तत्वसम्भवात्कोटिद्वयमात्रवृत्तित्वमक्षरशब्दस्य ।**

ವಿವರಣೆ - ಉಭಯತ್ರಪ್ರಸಿದ್ಧವಾಗಬೇಕಾದರೆ ಸಂಶಯಕೋಟಿಯಲ್ಲಿ ಸಾಧಾರಣವಾದರೆ ಸಾಕು, ಅನ್ಯಕೋಟಿಗಳಲ್ಲಿ ಸಾಧಾರಣವಾಗಿರಬಾರದೆಂಬ ನಿಯಮವೇನಿರುವುದಿಲ್ಲ. ಅಂದರೆ ಪ್ರಕೃತ ಅಕ್ಷರಶಬ್ದವು ಸಂಶಯಕೋಟಿಯೆನಿಸಿದ ಲಕ್ಷ್ಮೀದೇವಿ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಸಾಧಾರಣವಾಗಿದ್ದರೆ ಸಾಕು, ಅನ್ಯಕೋಟಿಯೆನಿಸಿದ ಅಕಾರಾದಿ ವರ್ಣಗಳು, ಹಾಗೂ ಜಡಪ್ರಕೃತಿ ಇವುಗಳಲ್ಲಿ ಇರಬಾರದೆಂದೇನೂ ನಿಯಮವಿಲ್ಲ. ಆದ್ದರಿಂದ ಅಕಾರಾದಿ ವರ್ಣಗಳಲ್ಲಿ ಅಕ್ಷರಶಬ್ದವಿದ್ದರೂ ಸಹ ಉಭಯತ್ರಪ್ರಸಿದ್ಧವಾಗಲು ಏನೂ ಆತಂಕವಿಲ್ಲವೆಂದು ಇಲ್ಲಿಯ ತನಕ ಸಮರ್ಥಿಸಿದರು. ಹೀಗೆ ಹೇಳುವುದಾದರೆ ನ್ಯಾಯವಿವರಣದಲ್ಲಿ ಹೇಳಿದ್ದ ಉಪಲಕ್ಷಣವೆಂದು ಒಪ್ಪಿ ನ್ಯಾಯವಿವರಣ ಟೀಕೆಯಲ್ಲಿ ಹೇಳಿದ ರೂಢಿಯನ್ನೂ ಸಹ ವಿವಕ್ಷಿಸಬಾರದು. ಏಕೆಂದರೆ ನ್ಯಾಯವಿವರಣದಲ್ಲಿ ಹೇಳಿದ ಪ್ರಕಾರ ಯೋಗಾರ್ಥವನ್ನು ವಿವಕ್ಷಿಸಿದರೆ ಸಾಕು. ಹಾಗೇ ಅವಿನಾಶಿತ್ವವೆಂಬ ಯೋಗಾರ್ಥವನ್ನು ಸ್ವೀಕರಿಸಿದಾಗ ಅಕಾರಾದಿ ವರ್ಣಗಳಲ್ಲಿ ಅಂತಹ ಅವಿನಾಶಿತ್ವವು ಬಂದರೂ ಸಂಶಯಕೋಟಿಯೆನಿಸಿದ ಮಹಾಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಸಾಧಾರಣವಾಗುವ ಪ್ರಯುಕ್ತದಿಂದಲೇ ಉಭಯತ್ರಪ್ರಸಿದ್ಧವೆನಿಸುತ್ತದೆ. ಹೀಗಿರುವಾಗ ರೂಢಿಯನ್ನೇಕೆ ವಿವಕ್ಷಿಸಿದ್ದಾರೆ. ರೂಢಿಯನ್ನು ಉಪಲಕ್ಷಣೆಯ ಮೂಲಕ ಇಟ್ಟುಕೊಳ್ಳುವ ಮೂಲಕ ಅಕಾರಾದಿ ವರ್ಣಗಳಲ್ಲಿ ಯೋಗವು ಬಂದರೂ ಸಹ ರೂಢಿಯಿಲ್ಲದ ಕಾರಣ ಉಭಯತ್ರಪ್ರಸಿದ್ಧವಾಗುವುದಿಲ್ಲವೆಂದು ಹೇಳುವ ಅವಶ್ಯಕತೆಯಾದರೂ ಏನಿತ್ತು ?

ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಎಂತಹ ಯೋಗಾರ್ಥವನ್ನು ಅಕ್ಷರಶಬ್ದದಲ್ಲಿ ಒಪ್ಪುವುದರಿಂದ ಅತಿಪ್ರಸಕ್ತಿ ಬರುವುದಿಲ್ಲವೋ ಅಂತಹ ಅರ್ಥವನ್ನು ಉಪಪಾದಿಸುವ ಮೂಲಕ ಕೇವಲ ಸಂಶಯಕೋಟಿಗಳಲ್ಲಷ್ಟೇ ಬರುವಂತಹ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವನ್ನು ಗ್ರಂಥಕಾರರು ಪ್ರತಿಪಾದಿಸುತ್ತಿದ್ದಾರೆ.

**प्रकाशः** – अत एवात्र टीकायाम् ''अविनाशित्वसाम्यात्'' इत्येवोक्तिः । नतु रूढ्या चेति रूढ्यंशस्यापि । अत एव च योगस्य अन्यसाधारण्येन उभयत्र-प्रसिद्धत्वाभावशङ्काभावः ।

ಅತಿಪ್ರಸಕ್ತಿ ಇಲ್ಲದಂತಹ ಯೋಗಾರ್ಥವನ್ನು ವಿವಕ್ಷಿಸುವುದರಿಂದ ಕೇವಲ ಸಂಶಯಕೋಟಿಗಳಲ್ಲಷ್ಟೇ ಅಕ್ಷರಶಬ್ದವು ಸಾಧಾರಣವಾಗುತ್ತದೆಂದು ವಿವಕ್ಷಿಸಬೇಕಾದ್ದರಿಂದಲೇ ಟೀಕೆಯಲ್ಲಿ 'ಅವಿನಾಶಿತ್ವಸಾಮ್ಯಾತ್' ಎಂದಷ್ಟೇ ಹೇಳಿದ್ದಾರೆ ಹೊರತು, 'ರೂಢ್ಯಾ ಚ' ಎಂಬುದಾಗಿ ರೂಢಿಯ ಅಂಶವನ್ನು ಸ್ವೀಕರಿಸಿರುವುದಿಲ್ಲ. ಇಲ್ಲದಿದ್ದರೆ ಕೇವಲ ಯೋಗಾರ್ಥವನ್ನು ಸ್ವೀಕರಿಸಿ ಅತಿಪ್ರಸಕ್ತಿಗೆ ಅವಕಾಶವಿದ್ದಿದ್ದರೆ ಸಂಶಯಕೋಟಿಗಳಲ್ಲಷ್ಟೇ ಸಾಧಾರಣ್ಯವನ್ನು ತಿಳಿಸುವುದಕ್ಕಾಗಿ ರೂಢ್ಯರ್ಥವನ್ನೂ ಟೀಕೆಯಲ್ಲಿ ಸ್ವೀಕರಿಸುತ್ತಿದ್ದರು. ಹೀಗೆ ಹೇಳಿದ್ದರಿಂದ ಪ್ರಕೃತ ಯೋಗಾರ್ಥವು ಅನ್ಯಸಾಧಾರಣವೂ ಆಗುವುದರಿಂದ ಉಭಯತ್ರಪ್ರಸಿದ್ಧವಾಗುವುದಿಲ್ಲವೆಂಬ ಆಶಂಕೆಯನ್ನು ನಿರಾಕರಿಸಿದಂತಾಯಿತು. ಯಾವ ಕಾರಣದಿಂದ ಗ್ರಂಥಕಾರರು ಮುಂದೆ ವಿವಕ್ಷಿಸುವ ಸಾಧಾರಣ್ಯವು ಸಂಶಯಕೋಟಿಗಳನ್ನು ಬಿಟ್ಟು ಬೇರೆಡೆ ಬರುವುದೇ ಇಲ್ಲವೋ, ಆ ಕಾರಣದಿಂದ ಅಕಾರಾದಿ ವರ್ಣಗಳಲ್ಲಿ ಸಾಧಾರಣವಾಗಿದೆಯೆಂಬ ಶಂಕೆಯು ಹುಟ್ಟಲು ಸಾಧ್ಯವೇ ಇಲ್ಲ.

**प्रकाशः** – जडप्रकृतेरोङ्कारस्य चेति विशिष्य द्वयोरेव निषेधस्तु तत्र न योगसम्भवाभिप्रायः । अपि तु रूढ्याऽक्षरशब्दार्थत्वं तयोरप्यस्तीत्यभिप्राय इति भावेन योगस्यानतिप्रसक्तत्वं तावत्साधयति – **अथवेति** ।।

ಜಡಪ್ರಕೃತಿ ಹಾಗೂ ಓಂಕಾರದಲ್ಲಿ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವು ಬರುವುದಿಲ್ಲವೆಂದು ವಿಶೇಷವಾಗಿ ಏಕೆ ನಿಷೇಧ ಮಾಡಿದ್ದಾರೆಂದರೆ ಯೋಗಾರ್ಥವು ಬರುತ್ತದೆಂಬ ಅಭಿಪ್ರಾಯದಿಂದಲ್ಲ. ಹೊರತಾಗಿ; ಲೋಕರೂಢಿಯಿಂದ ಅಕ್ಷರಶಬ್ದದ ಪ್ರಯೋಗವನ್ನು ಅವುಗಳಲ್ಲಿಯೂ ಸಹ ಮಾಡಬಹುದೆಂಬ ಅಭಿಪ್ರಾಯದಿಂದ. ಹೀಗೆ ಭಾವಿಸಿ ತಾವು ಹೇಳುತ್ತಿರುವ ಅಕ್ಷರಶಬ್ದದ ಯೋಗಾರ್ಥವು ಅತಿಪ್ರಸಕ್ತವಾಗಿಲ್ಲ-ವೆಂಬುದನ್ನು 'ಅಥವಾ' ಇತ್ಯಾದಿ ಗ್ರಂಥದಿಂದ ಸಾಧಿಸುತ್ತಿದ್ದಾರೆ.

**प्रकाशः** – इह 'न क्षरतीत्यक्षरम्' इति शरीरवियोगराहित्यरूपम-विनाशित्वमभि मतम् । तच्च चित्प्रकृतीश्वरयोरेव । नान्यत्रेति वक्तुं देहवियोगस्य नाशशब्दार्थत्वं तावदाह – **स्वरूपेति** ।।

ಅಕ್ಷರಶಬ್ದಕ್ಕೆ 'ನ ಕ್ಷರತಿ ಇತಿ ಅಕ್ಷರಮ್' ಎಂಬ ವ್ಯುತ್ಪತ್ತಿಯನ್ನು ಅವಲಂಬಿಸಿ 'ಶರೀರವಿಯೋಗ-ವಿಲ್ಲದಿರುವಿಕೆ' ಎಂಬ ಅವಿನಾಶಿತ್ವವನ್ನು ಪ್ರವೃತ್ತಿನಿಮಿತ್ತವೆಂದು ಸಾಧಿಸುತ್ತಿದ್ದಾರೆ. ಅಕ್ಷರಶಬ್ದಕ್ಕೆ 'ಶರೀರದ ನಾಶ ಇಲ್ಲದಿರುವಿಕೆ' ಎಂಬರ್ಥವನ್ನು ವಿವಕ್ಷಿಸಿದ್ದರಿಂದ ಚಿತ್‌ಪ್ರಕೃತಿಯಲ್ಲಾಗಲೀ, ಮಹಾವಿಷ್ಣುವಿನಲ್ಲಾಗಲೀ ಅಕ್ಷರಶಬ್ದವನ್ನು ಪ್ರಯೋಗಿಸಬಹುದು. ಮಹಾಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಿಗೆ ಶರೀರದ

ನಾಶವಿಲ್ಲವೆಂದು ಹೇಳಬಹುದು. ಆದರೆ ಓಂಕಾರಾದಿ ಅಕ್ಷರಗಳಿಗಾಗಲೀ, ಜಡಪ್ರಕೃತಿಗಾಗಲೀ, ಶರೀರದ ನಾಶವಿಲ್ಲವೆಂದು ಹೇಳಲು ಪ್ರಸಕ್ತಿಯೇ ಇರುವುದಿಲ್ಲ. ಆದ್ದರಿಂದ ನಾಶಶಬ್ದಕ್ಕೆ ದೇಹವಿಯೋಗ ಎಂಬರ್ಥವನ್ನು ಸಾಧಿಸುತ್ತಿದ್ದಾರೆ. 'ಸ್ವರೂಪಧ್ವಂಸೇ' ಇತ್ಯಾದಿ ವಾಕ್ಯದಿಂದ

**प्रकाशः – प्रयोगादिति** ।। शरीरक्षरणाभावेत्यादिनान्वयः । ''तन्नोन्नशद्यः पितरं न वेद'' इत्यादिश्रुतौ ''नाशिता पृथिवी सर्वा धार्तराष्ट्रैस्तु दुर्नयैः'' इत्यादि स्मृत्यादौ च प्रयोगादित्यर्थः ।

'ಪ್ರಯೋಗಾತ್' ಎಂಬುದಕ್ಕೆ 'ಶರೀರಕ್ಷರಣಾಭಾವ' ಎಂಬಲ್ಲಿ ಅನ್ವಯವನ್ನು ಮಾಡಬೇಕು. 'ತನ್ನೋನ್ನಶದ್ ಯಃ ಪಿತರಂ ನ ವೇದ' 'ಯಾವಾತನು ತಂದೆಯಾದ ವಿಷ್ಣುವನ್ನು ತಿಳಿಯುವುದಿಲ್ಲವೋ, ಅವನು ನಾಶವನ್ನು ಹೊಂದುತ್ತಾನೆ' ಇತ್ಯಾದಿ ಶ್ರುತಿಯಲ್ಲಿ 'ನಾಶ' ಶಬ್ದಕ್ಕೆ ದೇಹವಿಯೋಗವೆಂದರ್ಥ ಮಾಡಲಾಗಿದೆ. ಅದರಂತೆ 'ನಾಶಿತಾ ಪೃಥಿವೀ ಸರ್ವಾ ಧಾರ್ತರಾಷ್ಟ್ರೈಸ್ತು ದುರ್ನಯೈಃ' ಇತ್ಯಾದಿ ಸ್ಮೃತಿಯಲ್ಲಿರುವ 'ಪೃಥಿವೀ' ಶಬ್ದಕ್ಕೆ 'ಪಾರ್ಥಿವ' (ರಾಜರು) ಎಂಬರ್ಥವನ್ನು ಹೇಳಿ 'ನಾಶಿತಾ' ಎಂಬ ಶಬ್ದಕ್ಕೆ ದೇಹವಿಯೋಗವೆಂದರ್ಥವನ್ನು ಹೇಳಲಾಗಿದೆ. ಅಂದರೆ ಈ ಸ್ಮೃತಿವಾಕ್ಯದಲ್ಲಿರುವ ನಾಶಶಬ್ದಕ್ಕೂ ಶರೀರವಿಯೋಗವೆಂದೇ ಅರ್ಥ. ಹೀಗೆ ಶರೀರವಿಯೋಗವೆಂಬರ್ಥದಲ್ಲಿ ನಾಶಶಬ್ದವನ್ನು ಅನೇಕ ಶ್ರುತಿ, ಸ್ಮೃತಿಗಳಲ್ಲಿ ಪ್ರಯೋಗಿಸಲಾಗಿರುವುದರಿಂದ ಎಂದು 'ಪ್ರಯೋಗಾತ್' ಶಬ್ದದ ಅರ್ಥ.

**प्रकाशः – अस्त्वेवम्** । तद्राहित्यं चित्प्रकृतौ हरौ च कुतः । येन तयोरक्षरशब्दो यौगिकः स्यादित्यत आह – **द्वाविति ।। स्मृतौ चेति** ।। गीतायाम् ।।

ನಾಶಶಬ್ದಕ್ಕೆ ಶರೀರವಿಯೋಗವೆಂಬರ್ಥವನ್ನು ಒಪ್ಪೋಣ. ಇಂತಹ ಶರೀರವಿಯೋಗವು ಮಹಾಲಕ್ಷ್ಮಿಗೆ ಹಾಗೂ ಶ್ರೀಹರಿಗೆ ಇಲ್ಲವೆಂದು ಹೇಗೆ ಹೇಳುತ್ತೀರಿ? ಹಾಗಾಗಿದ್ದಲ್ಲಿ ಅಕ್ಷರಶಬ್ದವು ಯೌಗಿಕವೆಂದು ಹೇಳಬಹುದಿತ್ತು ಎಂಬ ಪ್ರಶ್ನೆಗೆ 'ದ್ವಾವಿಮೌ ಪುರುಷೌ ಲೋಕೇ' ಎಂಬ ಪ್ರಮಾಣವಾಕ್ಯದಿಂದ ಉತ್ತರಿಸಿದ್ದಾರೆ. 'ಸ್ಮೃತೌ' ಎಂದರೆ ಭಗವದ್ಗೀತೆಯಲ್ಲಿ ಎಂದರ್ಥ.

**प्रकाशः – जीवस्य क्षरत्वमुक्त्वेत्यादि** ।। तथा च चित्प्रकृतौ देहवियोगराहित्यं ज्ञायत इति वाक्यशेषः । स्वरूपध्वंसाभावस्योभयत्राविशिष्टत्वाद्देहवियोगस्याप्यविशिष्टत्वे तद्योग्यजीवस्य क्षरत्वमुक्त्वा चित्प्रकृतेरक्षरत्वोक्तिर्न स्यादिति भावः ।

'ಜೀವಸ್ಯ ಕ್ಷರತ್ವಮುಕ್ತ್ವಾ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - 'ಚಿತ್‌ಪ್ರಕೃತಿಯಲ್ಲಿ ದೇಹವಿಯೋಗರಾಹಿತ್ಯವು ಇದರಿಂದ ಸ್ಪಷ್ಟವಾಗುತ್ತದೆ' ಎಂದು ವಾಕ್ಯವನ್ನು ಶೇಷಪೂರ್ಣ ಮಾಡಿಕೊಳ್ಳಬೇಕು. ಮಹಾಲಕ್ಷ್ಮೀ ಹಾಗೂ ಜೀವರುಗಳಿಗೆ ಸ್ವರೂಪತಃ ನಾಶವಿಲ್ಲವೆಂಬುದು ಸಮಾನವಾಗಿದೆ. ಮಹಾಲಕ್ಷ್ಮೀಯಂತೆ ಜೀವರಿಗೂ ಸಹ ದೇಹವಿಯೋಗವಿರುವುದಿಲ್ಲವೆಂದು ಹೇಳುವುದಾದರೆ ದೇಹವಿಯೋಗದ ಸಂಬಂಧವಿರುವ ಜೀವರು ಕ್ಷರಪುರುಷರೆಂದು, ಮಹಾಲಕ್ಷ್ಮಿಯು ಅಕ್ಷರಪುರುಷಳೆಂದು ಹೇಳಿದ್ದು ತಪ್ಪಾಗುತ್ತದೆಂದು ತಿಳಿಯಬೇಕು.

**प्रकाशः** – विष्णोर्देहवियोगराहित्यं तु ''नित्यो नित्यानाम्'' इत्यादिश्रुत्यादिना प्रमितमिति भावः । तावता तस्याक्षरपदप्रवृत्तिनिमित्तत्वं कुतः । येनाक्षरशब्दस्तयोरेव स्यादित्यत आह – **लक्ष्मीरिति** ।।

ವಿಷ್ಣುವಿಗೆ ದೇಹವಿಯೋಗವಿರುವುದಿಲ್ಲವೆಂಬ ಪ್ರಮೇಯವು 'ನಿತ್ಯೋ ನಿತ್ಯಾನಾಮ್' ಇತ್ಯಾದಿ ಶ್ರುತಿಯಿಂದ ಸಿದ್ಧವಾಗಿದೆಯೆಂದು ತಿಳಿಯಬೇಕು. ವಿಷ್ಣುವಿಗೆ ದೇಹವಿಯೋಗವಿಲ್ಲದ ಮಾತ್ರದಿಂದ ಅಕ್ಷರಪದ ಪ್ರವತ್ತಿನಿಮಿತ್ತವು ಅವನಲ್ಲಿ ಬರುತ್ತದೆಂದು ಹೇಗೆ ಹೇಳುತ್ತೀರಿ? ಹಾಗಾಗಿದ್ದಲ್ಲಿ, ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಅಕ್ಷರಪದವನ್ನು ಪ್ರಯೋಗಿಸಬಹುದಿತ್ತಲ್ಲವೇ ಎಂಬ ಪ್ರಶ್ನೆಗೆ 'ಲಕ್ಷ್ಮೀಃ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** –

'ब्रह्मा शिवस्सुरेशाद्याश्शरीरक्षरणात्क्षराः ।
लक्ष्मीरक्षरदेहत्वादक्षरा तत्परो हरिः ।।'

इति तत्वनिर्णयोक्तश्रुतावित्यर्थः ।।

'ಬ್ರಹ್ಮಾ ಶಿವಃ ಸುರೇಶಾದ್ಯಾಶರೀರಕ್ಷರಣಾತ್ಕ್ಷರಾಃ।
ಲಕ್ಷ್ಮೀರಕ್ಷರದೇಹತ್ವಾದಕ್ಷರಾ ತತ್ಪರೋ ಹರಿಃ।'

'ಚತುರ್ಮುಖಬ್ರಹ್ಮ, ರುದ್ರ, ಇಂದ್ರ ಮೊದಲಾದ ಸಕಲ ಚೇತನರ ಶರೀರವು ನಾಶವಾಗುತ್ತದೆ. ಆದ್ದರಿಂದಲೇ ಅವರು ಕ್ಷರಪುರುಷರೆನಿಸಿದ್ದಾರೆ. ಲಕ್ಷ್ಮೀದೇವಿಯ ಶರೀರವು ನಾಶವಾಗದ ಕಾರಣ ಅಕ್ಷರಳೆನಿಸಿದ್ದಾಳೆ. ಅವಳಿಗಿಂತಲೂ ಶ್ರೀಹರಿಯು ಸರ್ವೋತ್ತಮನಾಗಿದ್ದಾನೆ' ಎಂಬುದಾಗಿ ವಿಷ್ಣುತತ್ವ-ನಿರ್ಣಯದಲ್ಲಿ ಉಲ್ಲೇಖಿಸಿದ ಶ್ರುತಿಯು ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರನ್ನು ಅಕ್ಷರರೆಂದು ಪ್ರತಿಪಾದಿಸಿದೆ.

**प्रकाशः – प्राभाकरेति** ।। प्रथमस्य चतुर्थे नामधेयपादे ''तथा निर्मन्थ्ये'' इति दशमेऽधिकरणे ''निर्मन्थ्येनेष्टकाः पचन्ति'' इत्यत्र श्रुतोऽग्निवाचको निर्मन्थ्यशब्दोऽरणिमथनसंस्कारनिमित्तकोऽथाग्नित्वजातिनिमित्तक इति संशये

ಸಂಶಯ - ರೂಢ್ಯರ್ಥಕ್ಕೆ ಅವಕಾಶವಿದ್ದರೂ ಸಹ ಯೋಗಾರ್ಥವನ್ನೇ ಸ್ವೀಕರಿಸಿದ್ದು ಪೂರ್ವಮೀಮಾಂಸೆಯಲ್ಲಿ ಪ್ರಥಮಾಧ್ಯಾಯದ ನಾಲ್ಕನೇ ನಾಮಧೇಯ ಪಾದದ ಹತ್ತನೇ ಅಧಿಕರಣದಲ್ಲಿ ಕಂಡಿದೆ -

'ತಥಾ ನಿರ್ಮಂಥ್ಯೇ' (೧-೪-೧೦)[1]

'ನಿರ್ಮಂಥ್ಯೇನ ಇಷ್ಟಕಾಃ ಪಚಂತಿ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಅಗ್ನಿವಾಚಕವಾದ 'ನಿರ್ಮಂಥ್ಯ' ಎಂಬ ಶಬ್ದವು ಅರಣಿಮಥನ ರೂಪ ಸಂಸ್ಕಾರ ನಿಮಿತ್ತಕವಾದ ಅಗ್ನಿಯನ್ನು ಹೇಳುತ್ತದೋ? ಅಥವಾ ಅಗ್ನಿತ್ವಜಾತಿನಿಮಿತ್ತಕವಾದ ಅಗ್ನಿಯನ್ನು ಹೇಳುತ್ತದೋ ? ಎಂದು ಸಂಶಯ.

ಅಂದರೆ 'ನಿರ್ಮಂಥ್ಯ' ಶಬ್ದಕ್ಕೆ 'ಮಥನ ಪ್ರಯೋಜ್ಯವಾದ ಅಗ್ನಿ' ಎಂದರ್ಥ. ಅರಣಿ ಮಥನ ಸಂಸ್ಕಾರದಿಂದ ಹುಟ್ಟಿರುವಂತಹ ಅಗ್ನಿಯಿಂದಲೇ ಇಟ್ಟಿಗೆಗಳನ್ನು ಸುಡಬೇಕು ಎಂದರ್ಥವೋ? ಅಥವಾ ಅರಣಿಮಥನ ರೂಪ ಸಂಸ್ಕಾರವೇ ಇರಬೇಕೆಂದೇನಿಲ್ಲ, ಯಾವುದಾದರೂ ಅಗ್ನಿಯಾಗಿರಬಹುದು. ಅಂತಹ ಅಗ್ನಿಯಿಂದ ಇಟ್ಟಿಗೆಗಳನ್ನು ಸುಡಬೇಕೆಂದರ್ಥವೋ? ಎಂದು ಸಂಶಯ ಬರುತ್ತದೆ. 'ಪಚಂತಿ' ಎಂಬ ಧಾತು ಪಚನಕ್ರಿಯೆಯನ್ನು ಹೇಳುತ್ತಿದೆ. 'ಪಚನಕ್ರಿಯೆ' ಎಂದರೆ 'ರೂಪಪರಾವೃತ್ತಿ ಅನುಕೂಲ ವಿಜಾತೀಯ ತೇಜಃ ಸಂಯೋಗ' ಎಂದರ್ಥ.

---

(१) भाट्टसङ्ग्रहः —

**अथ दशमं निर्मन्थ्यशब्दस्य यौगिकताधिकरणम्**

**॥ तथा निर्मन्थ्ये ॥ १२ ॥**

अत्राधिकाशङ्कां कृत्वा पूर्वोक्तयौगिकत्वातिदेशादातिदेशिकी **सङ्गतिः** । अग्निचयनप्रकरणे श्रुते 'निर्मन्थ्येनेष्टकाः पचन्ति' इति वाक्ये निर्मन्थ्यशब्दो यौगिको न वेति **सन्देहः** । युक्तं प्रोक्षणीशब्दस्य यौगिकत्वम् । प्रकृष्टोक्षणसाधनत्वस्याप्सु सदा सत्त्वात् । निर्मन्थ्यशब्दस्य तु 'ऋहलोर्ण्यत्' इति कर्मणि विहितण्यत्प्रत्ययान्तत्वेन मथनकर्मत्वनिमित्तकत्वात् मथनकर्मत्वरूपनिमित्तस्य च निष्पन्नेऽग्नावभावेन 'निर्मन्थ्येन पक्ष्यामः' इत्यादौ मथनकर्मत्वरूपयोगस्य व्यभिचारान्न यौगिकत्वमस्य शब्दस्य । किन्तु वह्नित्वजाति-निमित्तकत्वमिति **प्राप्ते** भूतपूर्वमपि योगं निमित्तीकृत्य तत्सन्तानाभिप्रायेण 'निर्मन्थ्येन पक्ष्यामः' इत्यादिप्रयोगोपपत्तेर्यौगिकोऽयं शब्द इति **सिद्धान्तः** । तथा च **सूत्रम्** ॥ **तथेत्यादि** ॥ **तथा** प्रोक्षणीशब्द इव **निर्मन्थ्यशब्दे**ऽपि योग एवेति ॥१२॥ **फलन्तु, जात्यर्थकत्वे** येन केनचिद्वा वह्निजातीयेनेष्टकानां पाकः । **यौगिकत्वे** तु तद्देशे तत्काले तत्कर्त्रा लौकिकनिर्मथनेन जाताग्निना पाक इति । **अन्ये** तु 'आधानकाले निर्मथ्य गार्हपत्ये धृतोऽग्निश्चिरनिर्मथितः । तं वारयितुमचिरत्वाख्यगुणविधानेनाचिरनिर्मथिताग्निग्रहणायायं योगः । तस्य तदानीं नष्टत्वेऽपि तज्जातीयाभिप्रायेण भूतपूर्वयोगेन निर्मन्थ्यशब्दो यौगिकः' इत्याहुः ।

**इति दशमं निर्मन्थ्यशब्दस्य यौगिकताधिकरणम्**

ಅಕ್ಷರಾಧಿಕರಣ (೧-೩-೩)

**प्रकाशः – मथनकर्मत्वस्य निष्पन्नेऽग्नावभावात् "निर्मन्थ्येन पश्यामः" इति लौकिकेऽपि प्रयोगात्न संस्कारनिमित्तक इति प्राप्ते**

ಪೂರ್ವಪಕ್ಷ - 'ನಿರ್ಮಂಥ್ಯ' ಶಬ್ದವು ಅಗ್ನಿತ್ವಜಾತಿನಿಮಿತ್ತಕವಾದ ರೂಢ್ಯರ್ಥವನ್ನೇ ಹೇಳುತ್ತದೆ. ಏಕೆಂದರೆ ಯಾವ ಅಗ್ನಿಯು ಮೊದಲೇ ನಿಷ್ಪನ್ನವಾಗಿರುತ್ತದೋ, ಅಂತಹ ಅಗ್ನಿಯಲ್ಲಿಯೂ ಸಹ 'ನಿರ್ಮಂಥ್ಯೇನ ಪಶ್ಯಾಮಃ' 'ಅಗ್ನಿಯಿಂದ ನೋಡುತ್ತಿದ್ದೇವೆ' ಎಂಬುದಾಗಿ ಲೌಕಿಕಪ್ರಯೋಗವಿರುತ್ತದೆ. ಆದ್ದರಿಂದ ಅರಣಿಮಥನ ರೂಪ ಸಂಸ್ಕಾರದಿಂದಲೇ ಹುಟ್ಟಿರುವಂತಹ ಅಗ್ನಿಯನ್ನು ಸ್ವೀಕರಿಸಬೇಕಾಗಿಲ್ಲ. ಯಾವುದಾದರೂ ಅಗ್ನಿಯಿಂದ ಇಟ್ಟಿಗೆಗಳನ್ನು ಸುಡಬಹುದು.

**प्रकाशः – अचिरनिर्मथनविशिष्टेऽग्नौ निर्मथनविशेषस्य सत्त्वेन तत्र यौगिक इत्युक्तम् । आधानकाले निर्मथ्य गार्हपत्ये नित्यं धृतोऽग्निश्चिरनिर्मथितः । सद्य एव लौकिकमथनेन जातोऽग्निरचिरनिर्मथितः । तेनेष्टकाः पच्यन्ते ।**

ಸಿದ್ಧಾಂತ - ಅರಣಿಮಥನ ರೂಪ ಸಂಸ್ಕಾರನಿಮಿತ್ತಕವಾದ ಅಗ್ನಿಯಲ್ಲಿಯೇ ಇಟ್ಟಿಗೆಗಳನ್ನು ಸುಡಬೇಕೆಂದು ಸಿದ್ಧಾಂತ. ಏಕೆಂದರೆ ಅಗ್ನಿಯು ಎರಡು ವಿಧವಾಗಿದೆ. ೧) ಅಚಿರನಿರ್ಮಥಿತವಾದ ಅಗ್ನಿ, ೨) ಚಿರನಿರ್ಮಥಿತವಾದ ಅಗ್ನಿ ಎಂದು. ಅಗ್ನಿಯನ್ನು ಆಧಾನಮಾಡುವ ಕಾಲದಲ್ಲಿ ಅರಣಿಮಥನ ಮಾಡಿ ಹುಟ್ಟಿರುವಂತಹ ಅಗ್ನಿಯನ್ನು ಆಹವನೀಯದಲ್ಲಿ ಹಾಕಿ, ಅನಂತರ ಅದೇ ಅಗ್ನಿಯನ್ನು ಗಾರ್ಹಪತ್ಯದಲ್ಲಿ ಹಾಕಲಾಗುತ್ತದೆ. ಈ ಗಾರ್ಹಪತ್ಯಾಗ್ನಿಯು ಬಹಳ ದಿವಸಗಳಿಂದ ಇರುತ್ತಾದ್ದರಿಂದ ಇಲ್ಲಿರುವ ಅಗ್ನಿಯು ಬಹಳ ಹಿಂದೆ ಮಥಿತವಾದದ್ದು. ಆದ್ದರಿಂದ ಇದು ಚಿರಮರ್ಥಿತವಾದ ಅಗ್ನಿ ಎನಿಸುತ್ತದೆ. ಇನ್ನು ಯಾವ ಅಗ್ನಿಯು ಅರಣಿಮಥನರೂಪ ಸಂಸ್ಕಾರದಿಂದ ಆ ಕ್ಷಣದಲ್ಲಿಯೇ ಹುಟ್ಟಿರುತ್ತದೋ, ಅಂತಹ ಅಗ್ನಿಯಲ್ಲಿ ನಿರ್ಮಥನ ವಿಶೇಷವು ಇರುವುದರಿಂದ 'ನಿರ್ಮಂಥ್ಯ' ಶಬ್ದವು ಯೌಗಿಕಾರ್ಥವಾದ ಇಂತಹ ಅಗ್ನಿಯನ್ನೇ ಹೇಳುತ್ತದೆ. ಅಂದರೆ ಅರಣಿಮಥನ ಮಾಡಿ ಹುಟ್ಟಿದ ಅಂತಹ ಸಂಸ್ಕೃತವಾದ ಅಗ್ನಿಯಿಂದ ಇಟ್ಟಿಗೆಯನ್ನು ಸುಡಬೇಕೆಂದು ಅಭಿಪ್ರಾಯ. ಇಲ್ಲಿರುವ 'ನಿರ್ಮಂಥ್ಯ' ಶಬ್ದಕ್ಕೆ ಯಾವುದಾದರೂ ಅಗ್ನಿಯಾಗಬಹುದೆಂಬ ಅರ್ಥವನ್ನು ವಿವಕ್ಷಿಸಿಲ್ಲ. ಹೊರತಾಗಿ ಯೌಗಿಕವಾದ ಅಚಿರನಿರ್ಮಥಿತವಾದ ಅಗ್ನಿಯೆಂಬರ್ಥವನ್ನು ಸ್ವೀಕರಿಸುವ ಮೂಲಕ ಯೋಗಾರ್ಥವನ್ನೇ ಸ್ವೀಕರಿಸಿದ್ದಾರೆ. ಕೂಡಲೇ ಲೌಕಿಕ ಮಥನದಿಂದ ಹುಟ್ಟಿರುವಂತಹ ಅಗ್ನಿಯೇ ಅಚಿರನಿರ್ಮಥಿತವಾದ ಅಗ್ನಿಯೆನಿಸುತ್ತದೆ. ಇಂತಹ ಅಗ್ನಿಯಿಂದ ಇಟ್ಟಿಗೆಗಳನ್ನು ಪಾಕ ಮಾಡಬೇಕು.

**प्रकाशः – यथा पुरातननूतनयोर्घृतयोर्नवनीतजन्यत्वे समानेऽपि नूतनमेव नावनीतमिति व्यवह्रियते तद्वन्निर्मन्थ्यशब्दस्य मथनकर्ममात्रे पाणिनिस्मरणेऽप्यचिरनिर्मथिते चिरनिर्मथितव्यावृत्ताचिरनिर्मथनविशेषविशिष्टे यौगिक एव ।**

ಉದಾಹರಣೆ - ಅನೇಕ ದಿವಸಗಳ ಹಿಂದೆ ಬೆಣ್ಣೆಯಿಂದ ಕಾಯಿಸಲ್ಪಟ್ಟ ತುಪ್ಪವು ಇರುತ್ತದೆ. ಈ ಕ್ಷಣದಲ್ಲಿ ಬೆಣ್ಣೆಯಿಂದ ಕಾಯಿಸಲ್ಪಟ್ಟ ತುಪ್ಪವು ಇರುತ್ತದೆ. ಎರಡು ವಿಧವಾದ ತುಪ್ಪಗಳೂ ಸಹ 'ನವನೀತ ಜನ್ಯ'

ಅಂದರೆ 'ನಾವನೀತ' ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಹಳೆಯ ತುಪ್ಪವನ್ನು ಯಾರೂ ಸಹ 'ನಾವನೀತಂ' ಎಂದು ವ್ಯವಹರಿಸುವುದಿಲ್ಲ. ಈಗ ತಾನೇ ಬೆಣ್ಣೆಯಿಂದ ಕಾಯಿಸಲ್ಪಟ್ಟ ತುಪ್ಪವನ್ನೇ 'ನಾವನೀತಂ' ಎಂದು ವ್ಯವಹರಿಸುತ್ತಾರೆ. ಆದರಂತೆ 'ನಿರ್ಮಂಥ್ಯ' ಶಬ್ದದಲ್ಲಿರುವ ಪ್ರತ್ಯಯವು ಮಥನಕರ್ಮಾರ್ಥದಲ್ಲಷ್ಟೇ ಪಾಣಿನಿಯಿಂದ ಪ್ರಯುಕ್ತವಾಗಿದ್ದರೂ ಈಗತಾನೇ ಅರಣಿ ಮಥನದಿಂದ ಹುಟ್ಟಿದ ಅಗ್ನಿಯಲ್ಲಿ ಮಾತ್ರ 'ನಿರ್ಮಂಥ್ಯ' ಶಬ್ದವನ್ನು ಪ್ರಯೋಗಿಸಬೇಕೇ ಹೊರತು, ಹಿಂದೆ ಯಾವಾಗಲೋ, ಅರಣಿಮಥನದಿಂದ ಹುಟ್ಟಿದ ಅಗ್ನಿಯನ್ನು 'ನಿರ್ಮಂಥ್ಯ' ಎಂದು ವ್ಯವಹರಿಸಬಾರದು.

**प्रकाशः** – ननु तद्व्यावृत्त्यर्थं रूढिरप्याश्रयणीयेति यथोच्यते तथाऽत्राप्यन्यव्यावृत्ताविनाशविशेषनिमित्तयौगिक एव । न त्वन्यव्यावृत्त्यर्थं रूढिरप्याश्रयणीयेत्यर्थः ।

ಹೊರತಾಗಿ ಅಚಿರನಿರ್ಮಥಿತವಾದ ಅಗ್ನಿಯನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ಅಗ್ನಿತ್ವಜಾತಿನಿಮಿತ್ತಕವಾಗಿ ರೂಢ್ಯರ್ಥವನ್ನು ಆಶ್ರಯಿಸಬಾರದು. ಯೋಗಾರ್ಥವನ್ನೇ ಆಶ್ರಯಿಸಬೇಕೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿರುತ್ತಾರೆ.

ಆದರಂತೆ ಪ್ರಕೃತ ಅಕ್ಷರಶಬ್ದದಲ್ಲಿಯೂ ಸಹ ಅಕಾರಾದಿ ವರ್ಣಗಳಲ್ಲಿ ಇಲ್ಲದಂತಹ ಅವಿನಾಶವಿಶೇಷ ನಿಮಿತ್ತಕವಾದ ಅಂದರೆ ದೇಹವಿಯೋಗರಾಹಿತ್ಯವೆಂಬ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಇಂತಹ ಯೌಗಿಕಾರ್ಥವನ್ನು ಸ್ವೀಕರಿಸುವುದರಿಂದಲೇ ಅಕಾರಾದಿ ವರ್ಣಗಳು ವ್ಯಾವೃತ್ತವಾಗುವಾಗ ಇವುಗಳ ವ್ಯಾವೃತ್ತಿಗೋಸ್ಕರ ಯೋಗಾರ್ಥದ ಜೊತೆಗೆ ರೂಢ್ಯರ್ಥವನ್ನು ಸ್ವೀಕರಿಸುವುದು ತಪ್ಪಾಗುತ್ತದೆ. ನಿರ್ಮಂಥ್ಯ ಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನಷ್ಟೇ ಹೇಗೆ ಸ್ವೀಕರಿಸಿದ್ದಾರೋ, ಆದರಂತೆ ಇಲ್ಲಿಯೂ ಸಹ ಅಕ್ಷರಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಅವಿನಾಶಿತ್ವವಿಶೇಷವೆಂಬ ಯೋಗಾರ್ಥವನ್ನಷ್ಟೇ ಸ್ವೀಕರಿಸಬೇಕೆಂದು ತಿಳಿಯಬೇಕು.

**प्रकाशः** – नन्वेवं निबन्धनमते "क्लृप्तशक्तिकावयवयोगादेव पङ्कजादिशब्दः । अन्यथा समुदायशक्तिकल्पनागौरवापत्तेः" इति नयविवेकवरदराजीययोरुक्त्या तदप्यनुमतमिति भ्रमनिरासाय तदाशङ्क्य निराह – नचैवमिति ।।

ಆಕ್ಷೇಪ - ಯೋಗರೂಢವೆಂದು ಪ್ರಸಿದ್ಧವಾದ ಅಕ್ಷರಶಬ್ದದಲ್ಲಿ ಯೋಗಾರ್ಥವನ್ನಷ್ಟೇ ಸ್ವೀಕರಿಸಿ ಅತಿಪ್ರಸಕ್ತಿಯನ್ನು ನಿರಾಕರಿಸುವುದಾದರೆ ಯೋಗರೂಢವೆಂದೇ ಪ್ರಸಿದ್ಧವಾದ ಪಂಕಜಾದಿ ಶಬ್ದಗಳಲ್ಲಿಯೂ ಸಹ ಯೋಗಾರ್ಥವನ್ನಷ್ಟೇ ಸ್ವೀಕರಿಸಬೇಕಾದೀತು. ನಿಬಂಧನ ಮತದಲ್ಲಿ 'ಕ್ಲೃಪ್ತಶಕ್ತಿಕಾವಯವಯೋಗಾದೇವ ಪಂಕಜಾದಿಶಬ್ದಃ । ಅನ್ಯಥಾ ಸಮುದಾಯಶಕ್ತಿಕಲ್ಪನಾಗೌರವಾಪತ್ತೇಃ' ಕ್ಲೃಪ್ತವಾದ ಅವಯವಶಕ್ತಿಯನ್ನಷ್ಟೇ ಪಂಕಜಾದಿಶಬ್ದಗಳಲ್ಲಿ ಒಪ್ಪಿದರೆ ಸಾಕು. ಹಾಗಲ್ಲದೇ ಸಮುದಾಯ ಶಕ್ತಿಯನ್ನು ಒಪ್ಪಿದರೆ ಗೌರವವು ಬರುತ್ತದೆಂದು ಹೇಳಲಾಗಿದೆ. ಮತ್ತು ನಯವಿವೇಕ ಹಾಗೂ ವರದರಾಜೀಯದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿದೆ. ಆದ್ದರಿಂದ ಪಂಕಜಾದಿಶಬ್ದಗಳಲ್ಲಿಯೂ ಸಹ ಕೇವಲ ಯೋಗಾರ್ಥವನ್ನಷ್ಟೇ ಒಪ್ಪಬೇಕಾದೀತು.

**प्रकाशः** – मथनकर्मत्वस्य निष्पन्नेऽग्नावभावात् ''निर्मन्थ्येन पश्यामः'' इति लौकिकेऽपि प्रयोगान्न संस्कारनिमित्तक इति प्राप्ते

ಪೂರ್ವಪಕ್ಷ - 'ನಿರ್ಮಂಥ್ಯ' ಶಬ್ದವು ಅಗ್ನಿತ್ವಜಾತಿನಿಮಿತ್ತಕವಾದ ರೂಢ್ಯರ್ಥವನ್ನೇ ಹೇಳುತ್ತದೆ. ಏಕೆಂದರೆ ಯಾವ ಅಗ್ನಿಯು ಮೊದಲೇ ನಿಷ್ಪನ್ನವಾಗಿರುತ್ತದೋ, ಅಂತಹ ಅಗ್ನಿಯಲ್ಲಿಯೂ ಸಹ 'ನಿರ್ಮಂಥ್ಯೇನ ಪಶ್ಯಾಮಃ' 'ಅಗ್ನಿಯಿಂದ ನೋಡುತ್ತಿದ್ದೇವೆ' ಎಂಬುದಾಗಿ ಲೌಕಿಕಪ್ರಯೋಗವಿರುತ್ತದೆ. ಆದ್ದರಿಂದ ಅರಣಿಮಥನ ರೂಪ ಸಂಸ್ಕಾರದಿಂದಲೇ ಹುಟ್ಟಿರುವಂತಹ ಅಗ್ನಿಯನ್ನು ಸ್ವೀಕರಿಸಬೇಕಾಗಿಲ್ಲ. ಯಾವುದಾದರೂ ಅಗ್ನಿಯಿಂದ ಇಟ್ಟಿಗೆಗಳನ್ನು ಸುಡಬಹುದು.

**प्रकाशः** – अचिरनिर्मथनविशिष्टेऽग्नौ निर्मथनविशेषस्य सत्त्वेन तत्र यौगिक इत्युक्तम् । आधानकाले निर्मथ्य गार्हपत्ये नित्यं धृतोऽग्निश्चिरनिर्मथितः । सद्य एव लौकिकमथनेन जातोऽग्निरचिरनिर्मथितः । तेनेष्टकाः पच्यन्ते ।

ಸಿದ್ಧಾಂತ - ಅರಣಿಮಥನ ರೂಪ ಸಂಸ್ಕಾರನಿಮಿತ್ತಕವಾದ ಅಗ್ನಿಯಲ್ಲಿಯೇ ಇಟ್ಟಿಗೆಗಳನ್ನು ಸುಡಬೇಕೆಂದು ಸಿದ್ಧಾಂತ. ಏಕೆಂದರೆ ಅಗ್ನಿಯು ಎರಡು ವಿಧವಾಗಿದೆ. ೧) ಅಚಿರನಿರ್ಮಥಿತವಾದ ಅಗ್ನಿ, ೨) ಚಿರನಿರ್ಮಥಿತವಾದ ಅಗ್ನಿ ಎಂದು. ಅಗ್ನಿಯನ್ನು ಆಧಾನಮಾಡುವ ಕಾಲದಲ್ಲಿ ಅರಣಿಮಥನ ಮಾಡಿ ಹುಟ್ಟಿರುವಂತಹ ಅಗ್ನಿಯನ್ನು ಆಹವನೀಯದಲ್ಲಿ ಹಾಕಿ, ಅನಂತರ ಅದೇ ಅಗ್ನಿಯನ್ನು ಗಾರ್ಹಪತ್ಯದಲ್ಲಿ ಹಾಕಲಾಗುತ್ತದೆ. ಈ ಗಾರ್ಹಪತ್ಯಾಗ್ನಿಯು ಬಹಳ ದಿವಸಗಳಿಂದ ಇರುತ್ತಾದ್ದರಿಂದ ಇಲ್ಲಿರುವ ಅಗ್ನಿಯು ಬಹಳ ಹಿಂದೆ ಮಥಿತವಾದದ್ದು. ಆದ್ದರಿಂದ ಇದು ಚಿರಮಥಿತವಾದ ಅಗ್ನಿ ಎನಿಸುತ್ತದೆ. ಇನ್ನು ಯಾವ ಅಗ್ನಿಯು ಅರಣಿಮಥನರೂಪ ಸಂಸ್ಕಾರದಿಂದ ಆ ಕ್ಷಣದಲ್ಲಿಯೇ ಹುಟ್ಟಿರುತ್ತದೋ, ಅಂತಹ ಅಗ್ನಿಯಲ್ಲಿ ನಿರ್ಮಥನ ವಿಶೇಷವು ಇರುವುದರಿಂದ 'ನಿರ್ಮಂಥ್ಯ' ಶಬ್ದವು ಯೌಗಿಕಾರ್ಥವಾದ ಇಂತಹ ಅಗ್ನಿಯನ್ನೇ ಹೇಳುತ್ತದೆ. ಅಂದರೆ ಅರಣಿಮಥನ ಮಾಡಿ ಹುಟ್ಟಿದ ಅಂತಹ ಸಂಸ್ಕೃತವಾದ ಅಗ್ನಿಯಿಂದ ಇಟ್ಟಿಗೆಯನ್ನು ಸುಡಬೇಕೆಂದು ಅಭಿಪ್ರಾಯ. ಇಲ್ಲಿರುವ 'ನಿರ್ಮಂಥ್ಯ' ಶಬ್ದಕ್ಕೆ ಯಾವುದಾದರೂ ಅಗ್ನಿಯಾಗಬಹುದೆಂಬ ಅರ್ಥವನ್ನು ವಿವಕ್ಷಿಸಿಲ್ಲ. ಹೊರತಾಗಿ ಯೌಗಿಕವಾದ ಅಚಿರನಿರ್ಮಥಿತವಾದ ಅಗ್ನಿಯೆಂಬರ್ಥವನ್ನು ಸ್ವೀಕರಿಸುವ ಮೂಲಕ ಯೋಗಾರ್ಥವನ್ನೇ ಸ್ವೀಕರಿಸಿದ್ದಾರೆ. ಕೂಡಲೇ ಲೌಕಿಕ ಮಥನದಿಂದ ಹುಟ್ಟಿರುವಂತಹ ಅಗ್ನಿಯೇ ಅಚಿರನಿರ್ಮಥಿತವಾದ ಅಗ್ನಿಯೆನಿಸುತ್ತದೆ. ಇಂತಹ ಅಗ್ನಿಯಿಂದ ಇಟ್ಟಿಗೆಗಳನ್ನು ಪಾಕ ಮಾಡಬೇಕು.

**प्रकाशः** – यथा पुरातननूतनयोर्घृतयोर्नवनीतजन्यत्वे समानेऽपि नूतनमेव नावनीतमिति व्यवह्रियते तद्वन्निर्मन्थ्यशब्दस्य मथनकर्ममात्रे पाणिनिस्मरणेऽप्यचिरनिर्मथिते चिरनिर्मथितव्यावृत्ताचिरनिर्मथनविशेषविशिष्टे यौगिक एव ।

ಉದಾಹರಣೆ - ಅನೇಕ ದಿವಸಗಳ ಹಿಂದೆ ಬೆಣ್ಣೆಯಿಂದ ಕಾಯಿಸಲ್ಪಟ್ಟ ತುಪ್ಪವು ಇರುತ್ತದೆ. ಈ ಕ್ಷಣದಲ್ಲಿ ಬೆಣ್ಣೆಯಿಂದ ಕಾಯಿಸಲ್ಪಟ್ಟ ತುಪ್ಪವು ಇರುತ್ತದೆ. ಎರಡು ವಿಧವಾದ ತುಪ್ಪಗಳೂ ಸಹ 'ನವನೀತ ಜನ್ಯ'

ಅಂದರೆ 'ನಾವನೀತ' ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಹಳೆಯ ತುಪ್ಪವನ್ನು ಯಾರೂ ಸಹ 'ನಾವನೀತಂ' ಎಂದು ವ್ಯವಹರಿಸುವುದಿಲ್ಲ. ಈಗ ತಾನೇ ಬೆಣ್ಣೆಯಿಂದ ಕಾಯಿಸಲ್ಪಟ್ಟ ತುಪ್ಪವನ್ನೇ 'ನಾವನೀತಂ' ಎಂದು ವ್ಯವಹರಿಸುತ್ತಾರೆ. ಅದರಂತೆ 'ನಿರ್ಮಂಥ್ಯ' ಶಬ್ದದಲ್ಲಿರುವ ಪ್ರತ್ಯಯವು ಮಥನಕರ್ಮಾರ್ಥದಲ್ಲಷ್ಟೇ ಪಾಣಿನಿಯಿಂದ ಪ್ರಯುಕ್ತವಾಗಿದ್ದರೂ ಈಗತಾನೇ ಅರಣಿ ಮಥನದಿಂದ ಹುಟ್ಟಿದ ಅಗ್ನಿಯಲ್ಲಿ ಮಾತ್ರ 'ನಿರ್ಮಂಥ್ಯ' ಶಬ್ದವನ್ನು ಪ್ರಯೋಗಿಸಬೇಕೇ ಹೊರತು, ಹಿಂದೆ ಯಾವಾಗಲೋ, ಅರಣಿಮಥನದಿಂದ ಹುಟ್ಟಿದ ಅಗ್ನಿಯನ್ನು 'ನಿರ್ಮಂಥ್ಯ' ಎಂದು ವ್ಯವಹರಿಸಬಾರದು.

**प्रकाशः** – ननु तद्व्यावृत्त्यर्थं रूढिरप्याश्रयणीयेति यथोच्यते तथाऽत्राप्यन्यव्यावृत्ताविनाशविशेषनिमित्तयौगिक एव । न त्वन्यव्यावृत्त्यर्थं रूढिरप्याश्रयणीयेत्यर्थः ।

ಹೊರತಾಗಿ ಅಚಿರನಿರ್ಮಥಿತವಾದ ಅಗ್ನಿಯನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ಅಗ್ನಿತ್ವಜಾತಿನಿಮಿತ್ತಕವಾಗಿ ರೂಢ್ಯರ್ಥವನ್ನು ಆಶ್ರಯಿಸಬಾರದು. ಯೋಗಾರ್ಥವನ್ನೇ ಆಶ್ರಯಿಸಬೇಕೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿರುತ್ತಾರೆ.

ಅದರಂತೆ ಪ್ರಕೃತ ಅಕ್ಷರಶಬ್ದದಲ್ಲಿಯೂ ಸಹ ಅಕಾರಾದಿ ವರ್ಣಗಳಲ್ಲಿ ಇಲ್ಲದಂತಹ ಅವಿನಾಶವಿಶೇಷ ನಿಮಿತ್ತಕವಾದ ಅಂದರೆ ದೇಹವಿಯೋಗರಾಹಿತ್ಯವೆಂಬ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಇಂತಹ ಯೌಗಿಕಾರ್ಥವನ್ನು ಸ್ವೀಕರಿಸುವುದರಿಂದಲೇ ಅಕಾರಾದಿ ವರ್ಣಗಳು ವ್ಯಾವೃತ್ತವಾಗುವಾಗ ಇವುಗಳ ವ್ಯಾವೃತ್ತಿಗೋಸ್ಕರ ಯೋಗಾರ್ಥದ ಜೊತೆಗೆ ರೂಢ್ಯರ್ಥವನ್ನು ಸ್ವೀಕರಿಸುವುದು ತಪ್ಪಾಗುತ್ತದೆ. ನಿರ್ಮಂಥ್ಯ ಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನಷ್ಟೇ ಹೇಗೆ ಸ್ವೀಕರಿಸಿದ್ದಾರೋ, ಅದರಂತೆ ಇಲ್ಲಿಯೂ ಸಹ ಅಕ್ಷರಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಅವಿನಾಶಿತ್ವವಿಶೇಷವೆಂಬ ಯೋಗಾರ್ಥವನ್ನಷ್ಟೇ ಸ್ವೀಕರಿಸಬೇಕೆಂದು ತಿಳಿಯಬೇಕು.

**प्रकाशः** – नन्वेवं निबन्धनमते ''क्लृप्तशक्तिकावयवयोगादेव पङ्कजादिशब्दः । अन्यथा समुदायशक्तिकल्पनागौरवापत्तेः'' इति नयविवेकवरदराजीययोरुक्त्या तदप्यनुमतमिति भ्रमनिरासाय तदाशङ्क्य निराह – **नचैवमिति** ।।

ಆಕ್ಷೇಪ - ಯೋಗರೂಢವೆಂದು ಪ್ರಸಿದ್ಧವಾದ ಅಕ್ಷರಶಬ್ದದಲ್ಲಿ ಯೋಗಾರ್ಥವನ್ನಷ್ಟೇ ಸ್ವೀಕರಿಸಿ ಅತಿಪ್ರಸಕ್ತಿಯನ್ನು ನಿರಾಕರಿಸುವುದಾದರೆ ಯೋಗರೂಢವೆಂದೇ ಪ್ರಸಿದ್ಧವಾದ ಪಂಕಜಾದಿ ಶಬ್ದಗಳಲ್ಲಿಯೂ ಸಹ ಯೋಗಾರ್ಥವನ್ನಷ್ಟೇ ಸ್ವೀಕರಿಸಬೇಕಾದೀತು. ನಿಬಂಧನ ಮತದಲ್ಲಿ 'ಕ್ಲೃಪ್ತಶಕ್ತಿಕಾವಯವಯೋಗಾದೇವ ಪಂಕಜಾದಿಶಬ್ದಃ । ಅನ್ಯಥಾ ಸಮುದಾಯಶಕ್ತಿಕಲ್ಪನಾಗೌರವಾಪತ್ತೇಃ' ಕ್ಲೃಪ್ತವಾದ ಅವಯವಶಕ್ತಿಯನ್ನಷ್ಟೇ ಪಂಕಜಾದಿಶಬ್ದಗಳಲ್ಲಿ ಒಪ್ಪಿದರೆ ಸಾಕು. ಹಾಗಲ್ಲದೇ ಸಮುದಾಯ ಶಕ್ತಿಯನ್ನು ಒಪ್ಪಿದರೆ ಗೌರವವು ಬರುತ್ತದೆಂದು ಹೇಳಲಾಗಿದೆ. ಮತ್ತು ನಯವಿವೇಕ ಹಾಗೂ ವರದರಾಜೀಯದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿದೆ. ಆದ್ದರಿಂದ ಪಂಕಜಾದಿಶಬ್ದಗಳಲ್ಲಿಯೂ ಸಹ ಕೇವಲ ಯೋಗಾರ್ಥವನ್ನಷ್ಟೇ ಒಪ್ಪಬೇಕಾದೀತು.

ಈ ಭ್ರಮೆಯನ್ನು ನಿರಾಕರಿಸುವುದಕ್ಕಾಗಿಯೇ 'ನಚೈವಮ್' ಇತ್ಯಾದಿ ಗ್ರಂಥದಿಂದ ಆಕ್ಷೇಪವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ.

**प्रकाशः – जातिप्रतीतावपि क्लृप्तावयवशक्त्यैव प्रयोग इति निबन्धनमतं निराह – पङ्कजननेति ।। ननु नेदमक्षरपदप्रवृत्तिनिमित्तमव्याप्तेरित्यत आह – वर्णादौ त्विति ।। तत्र यौगिकत्वाभावान्नाव्याप्तिर्दोषायेति भावः ।**

ಪಂಕಜಾದಿ ಶಬ್ದಗಳಲ್ಲಿ ಪದತ್ವಜಾತಿಯ ಉಪಸ್ಥಿತಿಯಿದ್ದರೂ ಸಹ ಕ್ಲೃಪ್ತವಾದ ಅವಯವಶಕ್ತಿಯಿಂದಷ್ಟೇ ಹಾಗೇ ಪ್ರಯೋಗ ಮಾಡಲಾಗುತ್ತದೆ ಎಂಬ ನಿಬಂಧನಕಾರರ ಮತವನ್ನು 'ಪಂಕಜನನ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಅವಿನಾಶಿತ್ವವಿಶೇಷವೆಂಬ ಪ್ರವೃತ್ತಿನಿಮಿತ್ತವನ್ನು ಅಕ್ಷರಶಬ್ದಕ್ಕೆ ಹೇಳಿದರೆ ಅವ್ಯಾಪ್ತಿ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ವರ್ಣಾದೌ ತು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ವರ್ಣಾದಿಗಳಲ್ಲಿ ಯೌಗಿಕಾರ್ಥವನ್ನು ಒಪ್ಪದ ಕಾರಣ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲವೆಂದು ಅಭಿಪ್ರಾಯ. ಅಂದರೆ ಅಕ್ಷರಶಬ್ದಕ್ಕೆ ವಿಷ್ಣು ಹಾಗೂ ಮಹಾಲಕ್ಷ್ಮೀ ಇಬ್ಬರಲ್ಲಿ ಮಾತ್ರ ಯೋಗಾರ್ಥವನ್ನು ಒಪ್ಪಿ ಅಕಾರಾದಿ ವರ್ಣಗಳಲ್ಲಿ ರೂಢ್ಯರ್ಥವನ್ನು ಒಪ್ಪಲಾಗಿದೆ. ಅಕಾರಾದಿ ವರ್ಣಗಳಲ್ಲಿ ಯೋಗಾರ್ಥವನ್ನು ಒಪ್ಪದ ಕಾರಣ ಲಕ್ಷ್ಯಕೋಟಿಯಲ್ಲಿಯೇ ಅವುಗಳು ಸೇರುವುದಿಲ್ಲ. ಯೋಗಾರ್ಥವಾದ ದೇಹವಿಯೋಗರಾಹಿತ್ಯವೆಂಬ ಪ್ರವೃತ್ತಿನಿಮಿತ್ತವು ಅವುಗಳಲ್ಲಿ ಬಾರದಿದ್ದರೂ ಸಹ ಅವ್ಯಾಪ್ತಿದೋಷವು ಬರುವುದಿಲ್ಲವೆಂದು ಭಾವಿಸಬೇಕು.

**प्रकाशः – कथं तर्हि द्वयमात्रसाधारण्यमक्षरपदस्येत्यत आह – इह चेति ।। यथा हि परमते ''अजामेकाम्'' इति वाक्यस्थाजाशब्दश्छाग्यां रूढोऽपि न तत्पर इति वक्ष्यते चतुर्थपादे तथेति भावः ।। उत्तरत्रेति ।। ईक्षत्यधिकरणे ।।**

ಅಕಾರಾದಿ ವರ್ಣಗಳಲ್ಲಿ 'ಅಕ್ಷರ' ಶಬ್ದಕ್ಕೆ ಯೋಗಾರ್ಥವನ್ನು ಒಪ್ಪದಿದ್ದರೆ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಇದು ಹೇಗೆ ಸಾಧಾರಣವಾಗುತ್ತದೆ? ಎಂಬ ಪ್ರಶ್ನೆಗೆ 'ಇಹಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಯಾವರೀತಿಯಾಗಿ ಪರಮತದಲ್ಲಿ 'ಅಜಾಮೇಕಾಮ್' ಎಂಬ ವಾಕ್ಯದಲ್ಲಿರುವ 'ಅಜಾ' ಶಬ್ದವು ಛಾಗಪಶುವಿನಲ್ಲಿ ರೂಢವಾಗಿದ್ದರೂ ತತ್ಪರತ್ವವನ್ನು ಒಪ್ಪುವುದಿಲ್ಲವೆಂದು ನಾಲ್ಕನೇ ಪಾದದಲ್ಲಿ ಸಮರ್ಥಿಸುತ್ತಾರೋ, ಅದರಂತೆ ಅಕ್ಷರಶಬ್ದವು ಅಕಾರಾದಿ ವರ್ಣಗಳಲ್ಲಿ ರೂಢವಾಗಿದ್ದರೂ ತತ್ಪರತ್ವವನ್ನು ಒಪ್ಪುವುದಿಲ್ಲವೆಂದು ನಾವು ಉತ್ತರಿಸುತ್ತೇವೆ. ಆದ್ದರಿಂದ ಕೇವಲ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆಂದು ಭಾವಿಸಬೇಕು.

'ಉತ್ತರತ್ರ' ಎಂದರೆ ಮುಂದಿನ ಈಕ್ಷತ್ಯಧಿಕರಣದಲ್ಲಿ ಎಂದರ್ಥ. ಇಲ್ಲಿ ಸದಧಿಕರಣವನ್ನು ಈಕ್ಷತ್ಯಧಿಕರಣವೆಂದಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – इत्यनुव्याख्यान इति** ।। प्रागुदाहृतमेतत् । व्याख्यातं चास्माभिः ।

'ಇತ್ಯನುವ್ಯಾಖ್ಯಾನೇ' ಎಂದರೆ 'ಆಹೋಭಯಗತತ್ವಂ ಚ' ಎಂಬ ಅನುವ್ಯಾಖ್ಯಾನದ ಮಾತನ್ನು ಈ ಹಿಂದೆಯೇ ನಾವು ಉದಾಹರಿಸಿ ವ್ಯಾಖ್ಯಾನಿಸಿದ್ದೇವೆ. ಆದ್ದರಿಂದ ಪುನಃ ಇಲ್ಲಿ ಅದರ ವ್ಯಾಖ್ಯಾನವನ್ನು ಮಾಡಿರುವುದಿಲ್ಲ ಎಂದರ್ಥ.

**गुरुराजीयम्** – नन्वन्यसाधारण्ये संशयकोटिसाधारण्यमात्रेणोभयत्रप्रसिद्धतेत्ययुक्तम् । द्वयमात्रसाधारण्यस्यैवोभयत्रप्रसिद्धिसाधकत्वात् । न्यायविवरणे पूर्वाधिकरणे द्युभ्वाद्यायतनत्वादौ संशयकोटिमात्रसाधारण्योक्तेः । तथा चोत्तरत्र सच्छब्दस्य स्वतः सर्वसाधारणस्यापि कारणत्वमुखेन द्वयमात्रसाधारण्योक्तेः । तथा "आहोभयगतत्वं च" इत्यनुव्याख्याने सिद्धान्ते निरसनीयत्वेन यत्साधारण्यं प्रसक्तं तस्यैवोभयत्रप्रसिद्धत्वेनोक्तत्वाच्च । अन्यथा प्रवृत्तिनिमित्तमात्रसाधारण्यस्य वा प्रयोगसाधारण्यस्य वा वर्णादिसाधारण्यस्यापि संशयकोटिसाधारण्यमात्रेणैवोभयत्रप्रसिद्धत्वोपपत्तौ योगरूढ्यङ्गीकारवैयर्थ्यापत्तेरित्यस्वरसान्न्यायविवरणानुव्याख्यानस्वारस्यानुरोधात्पक्षान्तरमाह – **अथवेति** ।। तर्हि पङ्कजशब्दस्यापि पङ्कजननविशेषनिमित्तकेवलयौगिकत्वोपपत्तौ योगरूढत्वं न स्यादित्याशङ्कते – **नचेति** ।। केवलयौगिकत्वं स्यादित्यतस्तेषामसिद्धिमाह – **अत्र त्विति** ।। ननु योगस्य वर्णादिसाधारणत्वेन कथं तेनोभयत्रप्रसिद्धतेत्यत आह – **वर्णादाविति** ।। नन्वस्त्वक्षरशब्दस्य वर्णे रूढिः । तथापि प्रकृते रूढार्थो वर्णोऽप्यक्षरशब्दार्थ इति कथमक्षरशब्दस्य ब्रह्मप्रकृतिरूपार्थद्वयमात्रसाधारण्यमित्यत आह – **इह चेति** ।। **रूढार्थबाधादिति** ।। अनेनोदाहृतटीकावाक्यं योजितं भवति । ननु शरीराक्षरणरूपप्रवृत्तिनिमित्तस्योभयसाधारण्यप्रयोजकत्वे न्यायविवरणविरोधः । तत्राविनाशित्वस्यैव तत्प्रयोजकत्वेनोक्तत्वादित्यत आह – **इदमेव चेति** ।। नन्वक्षर शब्दप्रवृत्तिनिमित्तस्य शरीराक्षरणस्य ब्रह्मचित्प्रकृतिसाधारण्येनाक्षर शब्दस्योभयत्रप्रसिद्धत्वे इन्द्रादिशब्दप्रवृत्तिनिमित्तस्य परमैश्वर्यस्यापीन्द्रब्रह्मरूपार्थद्वयसाधारण्येन उभयत्रप्रसिद्धत्वापत्त्याऽन्यत्रप्रसिद्धसमन्वयप्रतिपादकपादासङ्गतिरित्यत आह – **इन्द्रादिशब्देष्विति** ।।




ಶರೀರವಿಯೋಗ ಇಲ್ಲದಿರುವಿಕೆ ಎಂಬ ಯೋಗಾರ್ಥವನ್ನು ಆಶ್ರಯಿಸಿದಾಗ ಅಕ್ಷರಶಬ್ದವು ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಸಾಧಾರಣವಾಗುತ್ತದೆ. ಅಕಾರಾದಿ ವರ್ಣಗಳಲ್ಲಾಗಲೀ, ಜಡಪ್ರಕೃತಿಯಲ್ಲಾಗಲೀ ಈ ಪ್ರವೃತ್ತಿನಿಮಿತ್ತವು ಬರುವುದೇ ಇಲ್ಲ. ಹಿಂದೆ ಹೇಳಿದಂತೆ ಕೇವಲ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದರೆ ಅಕಾರಾದಿ ವರ್ಣಗಳಲ್ಲಿಯೂ ಸಹ ಅಕ್ಷರಶಬ್ದವು ಸಾಧಾರಣವಾಗುತ್ತಿತ್ತು. ಅದರ ಪರಿಹಾರಕ್ಕಾಗಿ ರೂಢ್ಯರ್ಥವನ್ನು ಸ್ವೀಕರಿಸುವ ಅವಶ್ಯಕತೆಯಿರುತ್ತಿತ್ತು. ಆದರೆ ಶರೀರವಿಯೋಗರಾಹಿತ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದಾಗ ಅಕಾರಾದಿ ವರ್ಣಗಳಲ್ಲಿ ಇದು ಬರುವುದೇ ಇಲ್ಲ.

ನಾಶ ಶಬ್ದಕ್ಕೆ ಸ್ವರೂಪನಾಶವೆಂಬರ್ಥ ಇರುವಂತೆ ಶರೀರವಿಯೋಗವೆಂಬರ್ಥವೂ ಸಹ ಇರುವುದರಿಂದ 'ದ್ವಾವಿಮೌ ಪುರುಷೌ ಲೋಕೇ' ಎಂಬ ಭಗವದ್ಗೀತೆಯ ಆಧಾರದಿಂದ ಶರೀರವಿಯೋಗ ಇಲ್ಲದಿರುವಿಕೆಯೂ ಸಹ ಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿ ಮಾತ್ರ ಬರುತ್ತದೆಂದು ಸ್ಪಷ್ಟವಾಗುತ್ತದೆ. ಹೀಗೆ ಅಕ್ಷರಶಬ್ದದ ಅರ್ಥವನ್ನು ಹೇಳಿದಾಗ ಲಕ್ಷ್ಮೀ ಹಾಗೂ ಮಹಾವಿಷ್ಣು ಇಬ್ಬರಲ್ಲಿ ಮಾತ್ರ ಅಕ್ಷರಶಬ್ದವು ಸಾಧಾರಣವಾಗುತ್ತದೆ ಹೊರತು, ಅಕಾರಾದಿ ವರ್ಣಗಳಲ್ಲಿ ಸಾಧಾರಣವಾಗುವುದಿಲ್ಲ. ಆದ್ದರಿಂದ ಸಂಶಯಪೂರ್ವಪಕ್ಷಕೋಟಿ ಹಾಗೂ ಸಿದ್ಧಾಂತಕೋಟಿಗಳಲ್ಲಷ್ಟೇ ಸಾಧಾರಣವಾದದ್ದನ್ನು ಉಭಯತ್ರಪ್ರಸಿದ್ಧವೆಂದು ಹೇಳಬಹುದು.

ಹಾಗಾದರೆ ಪಂಕಜಾದಿಶಬ್ದಗಳಂತೆ ಇದನ್ನು ಯೋಗರೂಢವೆಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಹುದು. ಆದರೆ ಇಲ್ಲಿಗೂ ಅಲ್ಲಿಗೂ ವ್ಯತ್ಯಾಸವಿದೆ. ಹೇಗೆಂದರೆ ಪಂಕಜಶಬ್ದಕ್ಕೆ ಕೇವಲ ಯೌಗಿಕಾರ್ಥವನ್ನು ಸ್ವೀಕರಿಸಿದರೆ, ಕುಮುದಾದಿಗಳಲ್ಲಿ ಅತಿಪ್ರಸಕ್ತಿ ಬರುತ್ತದೆ. ಮತ್ತು ಪದ್ಮತ್ವಜಾತಿ ಉಪಸ್ಥಿತಿಯೂ ಸಹ ಬರುತ್ತಿದೆ. ಮತ್ತು ಕೇವಲ ಪಂಕಜನಿಕರ್ತೃತ್ವವೆಂಬ ಯೌಗಿಕಾರ್ಥವನ್ನು ವಿವಕ್ಷಿಸಲು ಪ್ರಮಾಣವೂ ಸಹ ಇರುವುದಿಲ್ಲ. ಆದರೆ ಅಕ್ಷರಶಬ್ದದಲ್ಲಿ ಕೇವಲ ಶರೀರವಿಯೋಗರಾಹಿತ್ಯವೆಂಬ ಯೌಗಿಕಾರ್ಥವನ್ನು ವಿವಕ್ಷಿಸಿದಾಗ ಯಾವುದೇ ಅತಿಪ್ರಸಂಗವು ಬರುತ್ತಿಲ್ಲ. ಅಕ್ಷರತ್ವವೆಂಬ ಜಾತಿಯ ಉಪಸ್ಥಿತಿಯೂ ಬರುತ್ತಿಲ್ಲ. ಕೇವಲ ಯೋಗಾರ್ಥವನ್ನು ಸ್ವೀಕರಿಸಲು ಪ್ರಮಾಣವೂ ಕೂಡ ಇರುತ್ತದೆ. ಆದ್ದರಿಂದ ಪಂಕಜಶಬ್ದದಂತೆ ಇದನ್ನು ಯೋಗರೂಢವೆಂದು ವಿವಕ್ಷಿಸಬಾರದು. ಇಲ್ಲಿ ಶರೀರವಿಯೋಗರಾಹಿತ್ಯವೆಂಬ ಅರ್ಥವನ್ನು ವಿವಕ್ಷಿಸಿದಾಗ ಮಹಾವಿಷ್ಣು ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿ ಯೌಗಿಕಾರ್ಥವಾಗಿದೆ. ಈ ಅರ್ಥವನ್ನು ವಿವಕ್ಷಿಸದೇ ಕೇವಲ ಅಕ್ಷರತ್ವ ಎಂಬ ಜಾತಿಯನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ ಅಕಾರಾದಿವರ್ಣಗಳಲ್ಲಿ ರೂಢವಾಗಿದೆ. ಆದ್ದರಿಂದ ಶಬ್ದವು ಒಂದೇ ಆಗಿದ್ದರೂ ಈ ಶಬ್ದದ ಧರ್ಮವು ಬೇರೆ ಬೇರೆ ಆಗಿರುವುದರಿಂದ ಧರ್ಮಗಳ ಭೇದದಿಂದಷ್ಟೇ ಯೋಗ ಹಾಗೂ ರೂಢಿಯೆಂದು ಈ ಅಕ್ಷರಶಬ್ದವನ್ನು ಕರೆಯಲಾಗಿದೆ. ಹೊರತಾಗಿ ಒಂದೇ ಅರ್ಥದಲ್ಲಿ ಯೋಗರೂಢವೆಂದು ಹೇಳಬಾರದು. ಹೀಗೆ ವ್ಯತ್ಯಾಸವಿದೆ.

ಹಾಗಾದರೆ ಪ್ರಥಮಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಇಂದ್ರಾದಿ ಶಬ್ದಗಳೂ ಕೂಡ ಅನ್ಯತ್ರಪ್ರಸಿದ್ಧವೆಂದೆನಿಸಲಾರವು. ಏಕೆಂದರೆ ಅವುಗಳಲ್ಲಿಯೂ ಪರಮೈಶ್ವರ್ಯಾದಿ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ ಉಭಯಸಾಧಾರಣ್ಯವನ್ನು ಹೇಳಲು ಬರುವುದರಿಂದ ಉಭಯತ್ರಪ್ರಸಿದ್ಧತ್ವವನ್ನೇ ಅವುಗಳಿಗೂ ಹೇಳಬೇಕಲ್ಲವೇ? ಎಂಬುದು ಇಲ್ಲಿ ಬರುವ ಮತ್ತೊಂದು ಗೊಂದಲ. ಆದರೆ ನಮ್ಮ ಬುದ್ಧಿಯ ವಿವಕ್ಷೆಯಿಂದಷ್ಟೇ ಆಯಾಶಬ್ದಗಳನ್ನು ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧವೆಂದು ಪರಿಗಣಿಸಬೇಕು. ಕೇವಲ

ರೂಢ್ಯರ್ಥವನ್ನಷ್ಟೇ ಸ್ವೀಕರಿಸಿ ಇಂದ್ರಾದಿ ಶಬ್ದಗಳನ್ನು ಅನ್ಯತ್ರಪ್ರಸಿದ್ಧವೆಂದು ಪ್ರಥಮಪಾದದಲ್ಲಿ ವಿವಕ್ಷಿಸಲಾಗಿದೆ. ಒಂದು ವೇಳೆ ಪರಮೈಶ್ವರ್ಯಾದಿ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿದರೆ ಅಂತಹ ಶಬ್ದಗಳೆಲ್ಲವೂ ಉಭಯತ್ರಪ್ರಸಿದ್ಧವೆನಿಸುವುದರಿಂದ ಈ ಪಾದದಲ್ಲಿಯೇ ಅವುಗಳ ಸಮನ್ವಯವು ಸಿದ್ಧವಾಗುತ್ತದೆಂಬ ಉತ್ತರವನ್ನು ತಿಳಿಯಬೇಕು.

• • • • •

## ಮೂರನೆಯ ಬಗೆಯಲ್ಲಿ ಉಭಯತ್ರಪ್ರಸಿದ್ಧತ್ವದ ಲಕ್ಷಣ

### तात्पर्यचन्द्रिका

**केचित्तु न्यायविवरणेऽविनाशित्वं प्रवृत्तिनिमित्तमिति नाभिप्रेतम् । किन्तु सर्वाधाराक्षरत्वमनित्यदेहस्य न युक्तमिति नित्यदेहस्यैव तद्वाच्यम् ।**

ಅನುವಾದ - ಕೆಲವರು ಹೀಗೆ ಹೇಳುತ್ತಾರೆ - ಅವಿನಾಶಿತ್ವವು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆಂದು ಹೇಳಬಾರದು. ಹೊರತಾಗಿ; ಸರ್ವಾಧಾರವಾದ ಅಕ್ಷರತ್ವವೇ ಪ್ರವೃತ್ತಿನಿಮಿತ್ತವೆಂದು ಹೇಳಬೇಕು. ಅನಿತ್ಯವಾದ ದೇಹವುಳ್ಳವರಲ್ಲಿ ಇಂತಹ ಸರ್ವಾಧಾರವಾದಂತಹ ಅಕ್ಷರತ್ವವು ಯುಕ್ತವಾಗುವುದಿಲ್ಲ-ವಾದ್ದರಿಂದ ನಿತ್ಯದೇಹವುಳ್ಳವರಲ್ಲಷ್ಟೇ ಇಂತಹ ಪ್ರವೃತ್ತಿನಿಮಿತ್ತವು ಬರುತ್ತದೆಂದು ಹೇಳಬೇಕು.

**तच्च ब्रह्मचित्प्रकृतिमात्रसाधारणम् । एवञ्च यथोत्तराधिकरणे स्वरूपेण सर्वसाधारणोऽपि सच्छब्दः कारणत्वमुखेन ब्रह्मजडप्रकृतिमात्रसाधारणः एवमक्षरशब्दः स्वरूपेण वर्णादिसाधारणोऽपि नित्यदेहत्वमुखेन ब्रह्मचित्प्रकृतिमात्र-साधारण इत्यभिप्रेतमित्याहुः ।**

ಇಂತಹ ಪ್ರವೃತ್ತಿನಿಮಿತ್ತವು ಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿ ಮಾತ್ರ ಸಾಧಾರಣವಾಗಿದೆ. ಆದ್ದರಿಂದ ಯಾವರೀತಿಯಾಗಿ ಮುಂದಿನ ಅಧಿಕರಣದಲ್ಲಿ 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿರುವ 'ಸತ್' ಎಂಬ ಶಬ್ದವು ಸ್ವರೂಪತಃ ಸಕಲಪದಾರ್ಥಗಳಲ್ಲಿ ಸಾಧಾರಣವಾಗಿದ್ದರೂ ಜಗತ್‌ಕಾರಣತ್ವವೆಂಬ ಅರ್ಥವನ್ನು ವಿವಕ್ಷಿಸಿದಾಗ ಅದೇ 'ಸತ್' ಎಂಬ ಶಬ್ದವು ವಿಷ್ಣು ಹಾಗೂ ಜಡಪ್ರಕೃತಿ ಇಬ್ಬರಲ್ಲಿ ಮಾತ್ರ ಸಾಧಾರಣವೆಂದು ಹೇಳುತ್ತಾರೋ, ಅದರಂತೆ ಅಕ್ಷರಶಬ್ದವೂ ಸಹ ಸ್ವರೂಪತಃ ಸಕಲವರ್ಣಗಳಲ್ಲಿ ಸಾಧಾರಣವಾಗಿದ್ದರೂ ನಿತ್ಯದೇಹತ್ವಧರ್ಮ ಮೂಲಕವಾಗಿ ವಿಷ್ಣು ಹಾಗೂ ಲಕ್ಷ್ಮೀದೇವಿ ಇಬ್ಬರಲ್ಲಿ ಮಾತ್ರ ಸಾಧಾರಣವಾಗಿದೆಯೆಂದು ವಿವಕ್ಷಿಸಬೇಕು. ಇಷ್ಟು ಕೆಲವರ ಅಭಿಪ್ರಾಯ.

**टीकायां नामत्वोक्तिस्तु मध्यमाक्षरादौ यौगिकत्वपक्षे वर्णेषु रूढत्वात् । योगरूढत्वपक्षे तु योगरूढानां नामलिङ्गात्मकत्वपक्षे मध्यमाक्षरादावपि नामत्वस्यापि सत्त्वात् । केवलनामत्वपक्षे तु नामत्वस्यैव सत्त्वात् ।**

ಟೀಕೆಯಲ್ಲಿ ಅಕ್ಷರಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರಲ್ಲವೇ ? ಎಂದರೆ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದವು ಯೌಗಿಕವಾಗಿದೆಯೆಂಬ ಪಕ್ಷವನ್ನು ಆಶ್ರಯಿಸಿದಾಗ ಅಕಾರಾದಿ ವರ್ಣಗಳಲ್ಲಿ ರೂಢವಾಗಿದೆಯೆಂಬ ಅರ್ಥ ಬರುವುದರಿಂದ ನಾಮಾತ್ಮಕವೆಂದು ಹೇಳಿದ್ದಾರೆ. ಇನ್ನು ಯೋಗರೂಢವೆಂಬ ಪಕ್ಷವನ್ನು ಆಶ್ರಯಿಸಿದಾಗ ಯೋಗರೂಢಪದಗಳು ನಾಮಾತ್ಮಕವೂ ಆಗಿರುತ್ತದೆ. ಲಿಂಗಾತ್ಮಕವೂ ಆಗಿರುತ್ತದೆಂದು ಆನಂದಮಯಾಧಿಕರಣದಲ್ಲಿ ಹೇಳಿದಂತೆ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಯೋಗರೂಢಿಯಿರುವುದರಿಂದ ರೂಢಿಯಿರುವ ಅಂಶದಿಂದ ನಾಮಾತ್ಮಕವೆಂದು ವಿವಕ್ಷಿಸಿ ಹಾಗೇ ಹೇಳಿದ್ದಾರೆ. ಇನ್ನು ಕೇವಲ ನಾಮಾತ್ಮಕವೆಂದು ವಿವಕ್ಷಿಸಿದರೆ ಅಕ್ಷರಶಬ್ದದಲ್ಲಿ ನಾಮಾತ್ಮಕತ್ವವು ಇದ್ದೇ ಇರುತ್ತದೆ. ಆದ್ದರಿಂದ ಟೀಕೆಯಲ್ಲಿನಾಮಾತ್ಮಕವೆಂದು ಹೇಳಿದ್ದು ಎಲ್ಲಾ ರೀತಿಯಿಂದಲೂ ಸಮಂಜಸವೆಂದು ತಿಳಿಯಬೇಕು.

**एवञ्च न्यायविवरणे "अविनाशित्वसाम्यात्" इति यौगिकत्वोक्त्या लिङ्गत्वस्याभिप्रेतत्वादनुव्याख्याने च "लिङ्गं साधारणं शब्दौ" इति शब्दपदेन नामत्वोक्तेस्तयोर्विरोध इति निरस्तम् ।**

ಹೀಗೆ ಹೇಳಿದ್ದರಿಂದ ನ್ಯಾಯವಿವರಣ ಹಾಗೂ ಅನುವ್ಯಾಖ್ಯಾನಗಳ ವಿರೋಧವನ್ನು ಪರಿಹರಿಸಿದಂತಾಯಿತು. ನ್ಯಾಯವಿವರಣದಲ್ಲಿ 'ಅವಿನಾಶಿತ್ವಸಾಮ್ಯಾತ್' ಎಂಬ ಮಾತಿನಿಂದ ಅವಿನಾಶಿತ್ವವೆಂಬ ಯೋಗಾರ್ಥವನ್ನು ಹೇಳಿದ ಕಾರಣ ಲಿಂಗಾತ್ಮಕವೆಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಅನುವ್ಯಾಖ್ಯಾನದಲ್ಲಿ 'ಲಿಂಗಂ ಸಾಧಾರಣಂ ಶಬ್ದೌ' ಎಂಬಲ್ಲಿ 'ಶಬ್ದೌ' ಎಂಬ ಪದದಿಂದ ನಾಮಾತ್ಮಕವೆಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಹಾಗಾಗಿ ನ್ಯಾಯವಿವರಣ ಹಾಗೂ ಅನುವ್ಯಾಖ್ಯಾನಗಳಿಗೆ ವಿರೋಧ ಬಂತಲ್ಲವೇ? ಎಂಬ ಆಶಂಕೆಗೆ ಈಗ ಅವಕಾಶವಿಲ್ಲ. ಏಕೆಂದರೆ ಯೋಗರೂಢಶಬ್ದವಾದ್ದರಿಂದ ನಾಮಾತ್ಮಕತ್ವವೂ, ಲಿಂಗಾತ್ಮಕತ್ವವೂ ಇರುತ್ತದೆಂದು ವಿರೋಧ ಪರಿಹರಿಸಬೇಕು.

**प्रकाशः –**

एवं न्यायविवरणटीकारीत्या योगरूढिभ्यां वा भाष्यटीकारीत्याऽनतिप्रसक्त-योगमात्रेण वा द्वयसाधारण्यं न्यायविवरणेऽभिप्रेतमित्युक्तम् । पक्षान्तरं चाह – केचित्त्विति ।।

ವಿವರಣೆ - ಇಲ್ಲಿಯತನಕ ನ್ಯಾಯವಿವರಣ ಟೀಕೆಯಂತೆ ಯೋಗ ಹಾಗೂ ರೂಢಿಗಳನ್ನು ಒಪ್ಪಿ, ಮಹಾವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿಯೂ ಸಹ ಅಕ್ಷರಶಬ್ದವು ಸಾಧಾರಣವಾಗಿದೆಯೆಂದು ಸಮರ್ಥಿಸಿದರು. ಮತ್ತು ಭಾಷ್ಯ ಹಾಗೂ ಟೀಕೆಗಳ ಪ್ರಕಾರ ಅತಿಪ್ರಸಂಗವಿಲ್ಲದ ಕೇವಲ ಯೋಗಾರ್ಥದಿಂದಲೇ ಅಕ್ಷರಶಬ್ದವು ಉಭಯಸಾಧಾರಣವಾಗುತ್ತದೆಂದೂ ಸಹ ಸಮರ್ಥನೆ ಮಾಡಿದರು. ಈ ಎರಡು ಬಗೆಯ ಸಮಾಧಾನವು ನ್ಯಾಯವಿವರಣಕ್ಕೂ ಸಹ ಸಮ್ಮತವಾಗಿದೆಯೆಂದೂ ಸಹ ತೋರಿಸಿದರು. ಆದರೂ ಸಹ ಪ್ರಕೃತ ಗ್ರಂಥಕಾರರೇ ಮತ್ತೊಂದು ಪಕ್ಷವನ್ನು ಹೇಳುತ್ತಿದ್ದಾರೆ 'ಕೇಚಿತ್ತು' ಇತ್ಯಾದಿ ಗ್ರಂಥದಿಂದ.

**प्रकाशः –** ''अविनाशित्वस्याक्षरशब्दप्रवृत्तिनिमित्तत्वात्'' इति न्यायविवरण-टीका विरोधाद्वा ''तत्तेजोऽसृजत'' इत्यत्र कारणत्वस्येवेह नित्यत्वस्य साक्षादश्रवणेन सर्वाधारत्वान्यथानुपपत्तिकल्प्यत्वाद्वा केचित्त्वित्युक्तिरित्याहुः ।

'ಕೇಚಿತ್ತು' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿರುವ ಪಕ್ಷವು ಸ್ವರಸವಲ್ಲವೆಂದು ತಿಳಿಸುವುದಕ್ಕಾಗಿಯೇ 'ಆಹುಃ' ಎಂಬ ಪದವನ್ನು ಗ್ರಂಥಕಾರರು ಪ್ರಯೋಗಿಸಿದ್ದಾರೆ. ಏಕೆಂದರೆ 'ಅವಿನಾಶಿತ್ವಸ್ಯ ಅಕ್ಷರಶಬ್ದಪ್ರವೃತ್ತಿನಿಮಿತ್ತತ್ವಾತ್' ಎಂಬ ನ್ಯಾಯವಿವರಣಟೀಕೆಯಲ್ಲಿ ಅವಿನಾಶಿತ್ವವನ್ನು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆಂದು ಹೇಳಿರುತ್ತಾರೆ. ಈಗ ನಿತ್ಯದೇಹತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದರೆ ಅದರ ವಿರೋಧ ಬರುತ್ತದೆ. ಅಥವಾ 'ತತ್ತೇಜೋಽಸೃಜತ' ಎಂಬ ಶ್ರುತಿಯಲ್ಲಿ ಜಗತ್ಕಾರಣತ್ವವು ನೇರವಾಗಿ ಕೇಳಿಸುತ್ತಿರುವುದರಿಂದ 'ಸತ್' ಎಂಬ ಶಬ್ದಕ್ಕೆ ಜಗತ್ಕಾರಣತ್ವವೆಂಬರ್ಥವನ್ನು ವಿವಕ್ಷಿಸುವುದು ತಪ್ಪಾಗುವುದಿಲ್ಲ. ಆದರೆ ಅಲ್ಲಿದ್ದಂತೆ ಅಕ್ಷರಶಬ್ದದಿಂದ ನಿತ್ಯದೇಹತ್ವ ಎಂಬರ್ಥವು ನೇರವಾಗಿ ಶ್ರುತವಾಗಿಲ್ಲ. ಸರ್ವಾಧಾರತ್ವದ ಅನ್ಯಥಾನುಪಪತ್ತಿಯಿಂದಷ್ಟೇ ನಿತ್ಯದೇಹತ್ವವನ್ನು ಸಮರ್ಥಿಸಬೇಕು. ಹೀಗೆ ಅಸ್ವಾರಸ್ಯವಿರುವ ಕಾರಣ 'ಕೇಚಿತ್‌ಆಹುಃ' ಎಂದು ಹೇಳಿರುತ್ತಾರೆ.

**प्रकाशः –** अस्मिन्पक्षे प्रवृत्तिनिमित्तं तु अश्नुते व्याप्नोतीत्यक्षरमित्यादिरूपेण बोध्यमिति भावः । अक्षरशब्दस्य केवलयौगिकत्वं योगरूढत्वं चेति स्वोक्तपक्षद्वयेऽपि नामत्वं व्यनक्ति ।। टीकायामिति ।।

ಈ ಪಕ್ಷದಲ್ಲಿ ಪ್ರವೃತ್ತಿನಿಮಿತ್ತವನ್ನು 'ಅಶ್ನುತೇ = ವ್ಯಾಪ್ನೋತಿ ಇತಿ ಅಕ್ಷರಮ್' ಎಂಬ ನಿಷ್ಪತ್ತಿಯಿಂದ ತಿಳಿಯಬೇಕು. ಅಕ್ಷರಶಬ್ದವು ಕೇವಲ ಯೌಗಿಕವಾಗಿದೆಯೆಂದಾಗಲೀ, ಯೋಗರೂಢವಾಗಿದೆಯೆಂದಾಗಲೀ, ತಾವು ಹೇಳಿದ ಎರಡು ಪಕ್ಷಗಳಲ್ಲಿಯೂ ನಾಮಾತ್ಮಕವಾಗುತ್ತದೆಂಬುದನ್ನು 'ಟೀಕಾಯಾಮ್' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः –** रूढत्वादिति ।। यान्यापाततो रूढान्येव तानि नामानि, तद्विपरीतानि लिङ्गानीत्युक्तत्वात्संशयकोट्योर्यौगिकत्वेऽप्यक्षरशब्दस्य वर्णेषु रूढत्वान्नामत्वं युक्तम् ।

ಯಾವ ಶಬ್ದಗಳೂ ಆಪಾತತಃ ರೂಢವೇ ಆಗಿರುತ್ತವೋ, ಅವುಗಳೇ ನಾಮಾತ್ಮಕಗಳೆಂದು, ಯಾವ ಶಬ್ದಗಳು ಆಪಾತತಃ ಯೌಗಿಕವೇ ಆಗಿರುತ್ತವೋ ಅವುಗಳು ಲಿಂಗಾತ್ಮಕಗಳೆಂದು ಹಿಂದೆ ಆನಂದಮಯಾಧಿಕರಣದಲ್ಲಿ ಹೇಳಿರುತ್ತಾರೆ. ಸಂಶಯಕೋಟಿಗಳಲ್ಲಿರುವ ಲಕ್ಷ್ಮೀ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದವು ಯೌಗಿಕವಾಗಿದ್ದರೂ ಸಂಶಯಕೋಟಿಯಲ್ಲಿ ಸೇರದ ಅಕಾರಾದಿ ವರ್ಣಗಳಲ್ಲಿ ರೂಢವಾಗಿರುವುದರಿಂದ ಅಕ್ಷರಶಬ್ದವನ್ನು ನಾಮಾತ್ಮಕವೆಂದು ತಿಳಿಯಬೇಕು.

**प्रकाशः – यथाऽऽनन्दमयादेः पूर्वोत्तरपक्षयोर्यौगिकत्वेऽपि कोशेषु रूढत्वान्नामत्वं तद्वदिति भावः । यान्यापाततो रूढानि तानि नामानि । यान्यापाततो यौगिकानि तानि लिङ्गानीति तैर्लक्षणान्तरस्याप्युक्तत्वादक्षरशब्दो योगरूढ इति पूर्वोक्ताद्यपक्षेऽपि नामत्वं युक्तमित्यर्थः ।।**

ಯಾವರೀತಿಯಾಗಿ ಆನಂದಮಯ ಮೊದಲಾದ ಶಬ್ದಗಳು ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳಲ್ಲಿ ಯೌಗಿಕವಾಗಿದ್ದರೂ ಕೋಶಗಳಲ್ಲಿ ರೂಢವಾಗಿರುವುದರಿಂದ ನಾಮಾತ್ಮಕವೆಂದು ಪರಿಗಣಿಸುತ್ತಾರೋ, ಅದರಂತೆ ಇಲ್ಲಿಯೂ ಸಹ ತಿಳಿಯಬೇಕು.

ಯಾವ ಶಬ್ದಗಳು ಆಪಾತತಃ ರೂಢವಾಗಿರುತ್ತದೋ, ಅವುಗಳು ನಾಮಾತ್ಮಕಗಳೆಂದೂ, ಯಾವ ಶಬ್ದಗಳು ಆಪಾತತಃ ಯೌಗಿಕವಾಗಿರುತ್ತವೋ, ಅಂತಹ ಶಬ್ದಗಳು ಲಿಂಗಾತ್ಮಕಗಳೆಂದು ಬೇರೆಯ ಲಕ್ಷಣವನ್ನೂ ಹೇಳಿರುವುದರಿಂದ ಅಕ್ಷರಶಬ್ದವು ಯೋಗರೂಢವಾಗುತ್ತದೆ. ಆದ್ದರಿಂದ ಹಿಂದೆ ಹೇಳಿದ ಮೊದಲ ಪಕ್ಷದಲ್ಲಿಯೂ ಸಹ ನಾಮಾತ್ಮಕತ್ವವು ಇದಕ್ಕೆ ಯುಕ್ತವಾಗುತ್ತದೆಂದು ಅಭಿಪ್ರಾಯ.

**प्रकाशः – केवलेति ।। यान्यापाततो रूढिरहितानि तानि लिङ्गानि । यानि तु तद्विपरीतान्यापाततो रूढानि योगरूढियुक्तानि वा तानि नामानीति लक्षणपक्ष इत्यर्थः ।।**

ಯಾವ ಶಬ್ದಗಳು ಆಪಾತತಃ ರೂಢವಾಗಿರುವುದಿಲ್ಲವೋ, ಅವುಗಳನ್ನೇ ಲಿಂಗಾತ್ಮಕಶಬ್ದಗಳೆಂದು ಭಾವಿಸಬೇಕು. ಯಾವ ಶಬ್ದಗಳು ಇದಕ್ಕೆ ವಿಪರೀತವಾಗಿ ಆಪಾತತಃ ರೂಢವಾಗಿರುತ್ತವೋ, ಅಥವಾ ಯೋಗರೂಢಿ ಯುಕ್ತವಾಗಿರುತ್ತವೋ, ಅಂತಹ ಶಬ್ದಗಳು ನಾಮಾತ್ಮಕವೆಂದು ಲಕ್ಷಣಾಪಕ್ಷದಲ್ಲಿ ತಿಳಿಯಬೇಕು. ಇಷ್ಟು 'ಕೇವಲ' ಇತ್ಯಾದಿ ಗ್ರಂಥದ ಅಭಿಪ್ರಾಯ.

**प्रकाशः – एवञ्चेति ।। प्रागुक्तलक्षणत्रयेऽप्यक्षरशब्दस्य नामत्वस्य लिङ्गत्वस्य च विवक्षाभेदेन सम्भवे सतीत्यर्थः ।**

'ಏವಂಚ' ಎಂಬ ಶಬ್ದದ ಅರ್ಥ ಹೀಗಿದೆ - ಹಿಂದೆ ಹೇಳಲ್ಪಟ್ಟ ಉಭಯತ್ರಪ್ರಸಿದ್ಧದ ಮೂರು ಬಗೆಯ ಲಕ್ಷಣಗಳಲ್ಲಿ ಅಕ್ಷರಶಬ್ದಕ್ಕೆ ನಾಮಾತ್ಮಕತ್ವ, ಲಿಂಗಾತ್ಮಕತ್ವಗಳು ವಿವಕ್ಷಾಭೇದದಿಂದ ಕೂಡುತ್ತಿರಲು ಎಂದು.

ಪರಿಪೂರ್ಣಚಂದ್ರಿಕಾ

**गुरुराजीयम्** – आहुरित्यस्वरसोद्भावनम् । तद्बीजं तु अस्मद्रीत्या साक्षात्प्रवृत्तिनिमित्ततयैवोभयसाधारण्यसम्भवे सर्वाधाराकाशाधारत्वलब्धनित्यदेहत्व-मुखेनोभयत्रप्रसिद्धत्वकल्पनस्य गौरवग्रस्तत्वादिति । ननु टीकायामक्षरनाम्न इत्यक्षरशब्दस्य नामात्मकत्वस्योक्तत्वाद्यौगिकत्वे तद्विरोध इत्यत आह – **टीकायामिति** ।। टीकोक्तनामतासमर्थनेनानुव्याख्यानन्यायविवरणयोर्विरोधोऽपि परिहृत इत्याह – **एवञ्चेति** ।।



ಅಥವಾ ನಿತ್ಯದೇಹತ್ವವನ್ನು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆಂದು ಹೇಳಬಹುದು. ನಿತ್ಯದೇಹತ್ವವು ಸರ್ವಾಧಾರತ್ವದ ಅನ್ಯಥಾನುಪಪತ್ತಿಯಿಂದ ಪ್ರವೃತ್ತಿನಿಮಿತ್ತವೆಂದು ಸಿದ್ಧವಾಗುತ್ತದೆ. ಇಂತಹ ನಿತ್ಯದೇಹತ್ವವೆಂಬ ಪ್ರವೃತ್ತಿನಿಮಿತ್ತವು ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿ ಮಾತ್ರ ಸಾಧಾರಣವಾಗಿದೆಯೆಂದೂ ಸಹ ಹೇಳಬಹುದು.

ಟೀಕೆಯಲ್ಲಿ ಅಕ್ಷರಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರೆ. ಇದೇನೂ ತಪ್ಪಲ್ಲ. ಈಗಾಗಲೇ ಸಮರ್ಥಿಸಿದ ಮೂರು ವಿಧವಾದ ಪಕ್ಷಗಳಲ್ಲಿಯೂ ಅಕ್ಷರಶಬ್ದಕ್ಕೆ ನಾಮಾತ್ಮಕತ್ವವನ್ನು ಒಪ್ಪಲಾಗಿದೆ. ಕೇವಲ ಯೌಗಿಕಪಕ್ಷವನ್ನು ವಿವಕ್ಷಿಸಿದಾಗ ಅಕಾರಾದಿ ವರ್ಣಗಳಲ್ಲಿ ಅಕ್ಷರಶಬ್ದವು ರೂಢವಾಗಿರುವ ಪ್ರಯುಕ್ತ ನಾಮಾತ್ಮಕವಾಗಿದೆಯೆಂದು, ಯೋಗರೂಢಪಕ್ಷದಲ್ಲಿ ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿಯೂ ನಾಮಾತ್ಮಕವಾಗಿದೆಯೆಂದು, ಕೇವಲ ನಾಮಾತ್ಮಕವೆಂಬ ಪಕ್ಷದಲ್ಲಂತೂ ನಾಮಾತ್ಮಕವೆಂದು ಹೇಳಿದ್ದು ಸಮಂಜಸವೇ ಆಗುತ್ತದೆ.





## ನಾಲ್ಕು ಬಗೆಯಲ್ಲಿ ಅವಾಂತರ ಸಂಗತಿ

### तात्पर्यचन्द्रिका

**अत्र चाद्येऽधिकरणे जडप्रकृतेर्जीवमात्रादेश्च द्युभ्वाद्यायतनत्वनिरासः, द्वितीये सर्वजीवश्रेष्ठस्य मुख्यप्राणस्य भूमत्वनिरासः, इह तु ततोऽपि श्रेष्ठस्य श्रीतत्त्वस्याक्षरत्वनिरास इति वा,**

ಅನುವಾದ - ಪಾದಸಂಗತಿಯನ್ನು ತಿಳಿದಿದ್ದಾಯಿತು. ಅಧಿಕರಣ ಸಂಗತಿಯನ್ನು ಹೀಗೆ ತಿಳಿಯಬೇಕು. ಈ ಪಾದದ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಜಡಪ್ರಕೃತಿ ಹಾಗೂ

ಸಕಲಜೀವರಲ್ಲಿ ದ್ಯುಭ್ವಾದ್ಯಾಯತನತ್ವವು ಬರಬಹುದಲ್ಲವೇ ಎಂಬ ಪೂರ್ವಪಕ್ಷವನ್ನು ನಿರಾಕರಿಸಿದ್ದಾಯಿತು. ಎರಡನೆಯ ಭೂಮಾಧಿಕರಣದಲ್ಲಿ ಜಡಪ್ರಕೃತಿ ಹಾಗೂ ಸಕಲಜೀವರಿಗಿಂತ ಶ್ರೇಷ್ಠರಾದ ಮುಖ್ಯಪ್ರಾಣದೇವರಲ್ಲಿ ಭೂಮತ್ವವು ಬರಬಹುದಲ್ಲವೇ ಎಂಬ ಪೂರ್ವಪಕ್ಷವನ್ನು ನಿರಾಕರಿಸಲಾಯಿತು. ಈ ಅಧಿಕರಣದಲ್ಲಿ ಮುಖ್ಯಪ್ರಾಣದೇವರಿಗಿಂತಲೂ ಶ್ರೇಷ್ಠಳಾಗಿರುವ ಮಹಾಲಕ್ಷ್ಮೀದೇವಿಯಲ್ಲಿ ಅಕ್ಷರಶಬ್ದವಾಚ್ಯತ್ವವು ಬರಬಹುದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸುತ್ತಿದ್ದಾರೆ. ಸಕಲಜೀವರಿಗೂ ಮುಖ್ಯಪ್ರಾಣದೇವರು ಶ್ರೇಷ್ಠರು, ಅವರಿಗಿಂತಲೂ ಲಕ್ಷ್ಮೀಯು ಶ್ರೇಷ್ಠಳಾದ್ದರಿಂದ ಅಧಿಕರಣಗಳ ಅನುಪೂರ್ವಿ ಸ್ವರಸವಾಗಿದೆಯೆಂದು ತಿಳಿಯಬೇಕು.

**आद्य उभयत्रप्रसिद्धिबहिरङ्गसमाख्याभ्याम् । द्वितीये बहिरङ्गसमाख्याविषयवाक्यस्थान्तरङ्गोपक्रमाभ्याम् । इह तु ततोऽप्यन्तरङ्गसमन्वेतव्यशब्दप्रवृत्तिनिमित्तसाधारण्यादिति वा ;**

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಉಭಯತ್ರಪ್ರಸಿದ್ಧಿ ಹಾಗೂ ಬಹಿರಂಗವಾದ ಸಮಾಖ್ಯಾಪ್ರಮಾಣಗಳಿಂದ ವಿಷ್ಣುವಿನಲ್ಲಿ ಹಾಗೂ ಜೀವಾದಿಗಳಲ್ಲಿ ದ್ಯುಭ್ವಾದ್ಯಾಯತನತ್ವವು ಸಾಧಾರಣವಾಗಿದೆಯೆಂದು ಉಭಯತ್ರಪ್ರಸಿದ್ಧತ್ವವನ್ನು ಹೇಳಲಾಗಿದೆ. ಎರಡನೆಯ ಭೂಮಾಧಿಕರಣದಲ್ಲಿ ಬಹಿರಂಗವಾದ ಸಮಾಖ್ಯಾಪ್ರಮಾಣವನ್ನು ಮತ್ತು ವಿಷಯವಾಕ್ಯದಲ್ಲೇ ಇರುವ ಅಂತರಂಗವಾದ ಉಪಕ್ರಮಪ್ರಮಾಣದಿಂದ ಈ ಎರಡರಿಂದ ಉಭಯತ್ರಪ್ರಸಿದ್ಧತ್ವವನ್ನು ಹೇಳಲಾಗಿದೆ. ಹೀಗೆ ಸಮಾಖ್ಯಾಪ್ರಮಾಣಕ್ಕಿಂತಲೂ ಉತ್ತಮವಾದ ಅಂತರಂಗಪ್ರಮಾಣವನ್ನು ಎರಡನೆಯ ಅಧಿಕರಣದಲ್ಲಿ ಹೇಳಿದ ಮೇಲೆ ಮೂರನೆಯ ಈ ಅಧಿಕರಣದಲ್ಲಿ ಉಪಕ್ರಮಪ್ರಮಾಣಕ್ಕಿಂತಲೂ ಇನ್ನೂ ಹೆಚ್ಚು ಬಲಿಷ್ಠವಾದ (ಅಂತರಂಗವಾದ) ಸಮನ್ವಯ ಮಾಡಬೇಕಾದ ಶಬ್ದದಲ್ಲೇ ಇರುವ ಪ್ರವೃತ್ತಿನಿಮಿತ್ತದ ಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ಹೇಳುತ್ತಿದ್ದಾರೆ. ಈ ಕ್ರಮದಲ್ಲಿಯೂ ಅಧಿಕರಣದ ಆನುಪೂರ್ವಿಯು ಅತ್ಯಂತ ಸಮಂಜಸವಾಗಿದೆ.

**आद्ये भिन्नप्रकरणस्य जायमानत्वाजननयोर्विरोधपरिहारः, द्वितीय एकप्रकरणस्योत्क्रमणसर्वगतत्वयोर्विरोधपरिहारः, इह त्वेकवाक्यस्यास्थूलानण्वादिशब्दार्थमहत्त्वाणुत्वयोर्विरोधपरिहार इति वा ;**

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಬೇರೆ ಬೇರೆ ಪ್ರಕರಣದಲ್ಲಿರುವ ಜಾಯಮಾನತ್ವ ಹಾಗೂ ಅಜಾಯಮಾನತ್ವವೆಂಬ ಲಿಂಗಗಳಿಗೆ ಪರಸ್ಪರ ವಿರೋಧವನ್ನು ಪರಿಹರಿಸಿದರು. ಎರಡನೆಯ ಭೂಮಾಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ ಉತ್ಕ್ರಮಣ ಹಾಗೂ ಸರ್ವಗತತ್ವವೆಂಬ ಲಿಂಗಗಳಿಗೆ ವಿರೋಧವನ್ನು ಪರಿಹರಿಸಿದರು. ಪ್ರಕೃತ ಈ ಅಧಿಕರಣದಲ್ಲಿ ಒಂದೇ ವಾಕ್ಯದಲ್ಲಿರುವ 'ಅಸ್ಥೂಲ',

'ಅನಣು' ಇತ್ಯಾದಿ ಶಬ್ದಗಳ ಅರ್ಥವೆನಿಸಿದ 'ಮಹತ್ತ್ವ', 'ಅಣುತ್ವ' ಗಳ ವಿರೋಧಗಳನ್ನು ಪರಿಹರಿಸಲಾಗಿದೆ. ಈ ದೃಷ್ಟಿಯಿಂದಲೂ ಅಧಿಕರಣಗಳ ಕ್ರಮ ಸಂಗತವಾಗಿದೆ.

**इहाणुत्वमहत्त्वयोर्भावयोरत्तृत्वानशनयोर्भावाभावयोः स्थौल्याद्यभावानामणुत्वाद्यभावानां चेत्यनेकविरोधपरिहारः, नतु पूर्वत्रेवैकैकविरोधपरिहार इति वा; अवान्तरसङ्गतिः,**

ಅಥವಾ ಈ ಅಧಿಕರಣದಲ್ಲಿ 'ಅಣುತ್ವ', 'ಮಹತ್ವ' ಎಂಬ ಪರಸ್ಪರ ಎರಡು ಭಾವರೂಪವಾದ ಧರ್ಮಗಳಿಗೆ ಮತ್ತು 'ಅತ್ತೃತ್ವ', 'ಅನಶನ' ಎಂಬ ಭಾವ ಹಾಗೂ ಅಭಾವ ರೂಪ ಧರ್ಮಗಳಿಗೆ ಮತ್ತು 'ಸ್ಥೌಲ್ಯಾದ್ಯಭಾವ', 'ಅಣುತ್ವಾದ್ಯಭಾವ' ಎಂಬ ಪರಸ್ಪರ ಎರಡು ಅಭಾವಧರ್ಮಗಳಿಗೆ ಬರುವಂತಹ ಅನೇಕ ವಿಧವಾದ ವಿರೋಧವನ್ನು ಪರಿಹರಿಸಲಾಗಿದೆ. ಆದರೆ ಹಿಂದಿನೆರಡು ಅಧಿಕರಣಗಳಲ್ಲಿ ಒಂದೊಂದು ಧರ್ಮಗಳಿಗೆ ಬರುವ ವಿರೋಧವನ್ನಷ್ಟೇ ಪರಿಹರಿಸಲಾಗಿತ್ತು. ಹೀಗೆ ಈ ಅಧಿಕರಣಕ್ಕೆ ನಾಲ್ಕು ಬಗೆಯ ಅವಾಂತರ ಸಂಗತಿಯನ್ನು ತಿಳಿಯಬೇಕು.

**प्रकाशः –**

एवं पादसङ्गतिमुक्त्वाऽनन्तरसङ्गतिं श्लिष्टतरत्वद्योतनायादितश्चतुर्धा दर्शयति – **अत्र चेति ।। भिन्नप्रकरणेति ।।** जायमानत्वं विषयवाक्यगतम् । अजायमानत्वं पुरुषसूक्तादिगतम् ।

ವಿವರಣೆ - ಇಲ್ಲಿಯ ತನಕ ಪಾದಸಂಗತಿಯನ್ನು ಹೇಳಿದ್ದಾಯಿತು. ಪ್ರಕೃತ ಅನಂತರಸಂಗತಿಯು ಅತ್ಯಂತ ಸ್ಪಷ್ಟವಾಗಿರುವುದರಿಂದ ನಾಲ್ಕು ಬಗೆಯಲ್ಲಿ ಸಂಗತಿಯನ್ನು ತೋರಿಸುತ್ತಿದ್ದಾರೆ. 'ಅತ್ರಚ' ಇತ್ಯಾದಿ ವಾಕ್ಯದಿಂದ. 'ಭಿನ್ನಪ್ರಕರಣ' ಎಂದರೆ ಜಾಯಮಾನತ್ವವೆಂಬ ಲಿಂಗವು ವಿಷಯವಾಕ್ಯದಲ್ಲೇ ಕೇಳಿಸುತ್ತಿದೆ. ಅಜಾಯಮಾನತ್ವವೆಂಬ ಲಿಂಗವು ಪುರುಷಸೂಕ್ತದಲ್ಲಿ ಕೇಳಿಸುತ್ತಿದೆ. ಆದ್ದರಿಂದ ಭಿನ್ನಪ್ರಕರಣವೆಂದು ಹೇಳಿರುತ್ತಾರೆ.

**प्रकाशः – एकप्रकरणेति ।।** ''उत्क्रान्तप्राणात्'' इति प्राणवाक्ये ''स एवाधस्तात्'' इति भूमवाक्ये श्रवणेऽपि प्राणस्य विष्णुत्वाङ्गीकारेण वा पूर्वपक्षरीत्या वा तयोरेकप्रकरणत्वमिति भावः ।।

'ಏಕಪ್ರಕರಣ' ಎಂಬ ಶಬ್ದದಿಂದ ಭೂಮಾಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ ಧರ್ಮಗಳಿಗೆ ವಿರೋಧವನ್ನು ಪರಿಹರಿಸಲಾಗಿದೆಯೆಂದು ಗ್ರಂಥಕಾರರು ಹೇಳಿದರು. ಆದರೆ 'ಉತ್ಕ್ರಾಂತ ಪ್ರಾಣಾತ್' ಎಂಬುದು ಪ್ರಾಣಪ್ರಕರಣದಲ್ಲಿದೆ. 'ಸ ಏವಾಧಸ್ತಾತ್' ಎಂಬುದು ಭೂಮಪ್ರಕರಣದಲ್ಲಿದೆ. ಆದ್ದರಿಂದ ಒಂದೇ ಪ್ರಕರಣವೆಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಾರದು. ಏಕೆಂದರೆ ಸಿದ್ಧಾಂತದಲ್ಲಿ ಪ್ರಾಣನನ್ನು

ವಿಷ್ಣುವೇನು ಅಂಗೀಕರಿಸಿದ್ದರಿಂದ ಸಂಪೂರ್ಣ ಪ್ರಾಣಪ್ರಕರಣವು ವಿಷ್ಣುಪ್ರಕರಣವೇ ಆಗುತ್ತದೆ. ಅಥವಾ ಪೂರ್ವಪಕ್ಷಕಾರರು ಸಂಪೂರ್ಣ ಪ್ರಕರಣವನ್ನು ಪ್ರಾಣಪರವೆಂದು ಹೇಳಿದ್ದರಿಂದ ಪ್ರಾಣಪ್ರಕರಣವೇ ಆಗುತ್ತದೆ. ಈ ದೃಷ್ಟಿಯಿಂದ ಏಕಪ್ರಕರಣವೆಂದು ಗ್ರಂಥಕಾರರು ಹೇಳಿದ್ದು ಸಮಂಜಸವಾಗಿದೆಯೆಂದು ತಿಳಿಯಬೇಕು.

**प्रकाशः – एकवाक्यस्थेति ।। अग्रे स्पष्टमेतत् । प्रागुक्तोत्क्रमणमयुक्तम् । तत्प्रयोजकस्याणुत्वस्य सर्वगते विरुद्धत्वादित्याशङ्कानिरासोऽत्र क्रियत इति सङ्गतिस्स्फुटत्वान्नोक्ता ।**

'ಏಕವಾಕ್ಯಸ್ಥ' ಎಂದರೆ ಒಂದೇ ವಾಕ್ಯದಲ್ಲಿರುವ ಧರ್ಮಗಳಿಗೆ ಬರುವಂತಹ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ ಎಂದರ್ಥ. ಅದು ಹೇಗೆಂಬುದು ಮುಂದೆ ಸ್ಪಷ್ಟವಾಗುತ್ತದೆ.

ಮತ್ತೊಂದು ಬಗೆಯಲ್ಲಿಯೂ ಸಂಗತಿಯನ್ನು ತಿಳಿಯಬಹುದು - ಹಿಂದಿನ ಅಧಿಕರಣದಲ್ಲಿ ಉತ್ಕ್ರಮಣವನ್ನು ವಿಷ್ಣುವಿಗೆ ಹೇಳಿದರು. ಇದು ತಪ್ಪು. ಸರ್ವಗತನಾದ ವಿಷ್ಣುವಿನಲ್ಲಿ ಉತ್ಕ್ರಮಣಕ್ಕೆ ಪ್ರಯೋಜಕವಾದ ಅಣುತ್ವ ಬರಲು ಸಾಧ್ಯವಿಲ್ಲವಲ್ಲವೇ ? ಎಂಬ ಆಶಂಕೆಯ ನಿರಾಕರಣೆಯನ್ನೂ ಸಹ ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಭೂಮಾಧಿಕರಣದಿಂದ ಈ ಅಕ್ಷರಾಧಿಕರಣಕ್ಕೆ ಸಂಗತಿಯು ಇರುತ್ತದೆ. ಇದು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಪ್ರತ್ಯೇಕವಾಗಿ ಹೇಳಿಲ್ಲ.

**प्रकाशः – "अदृश्यत्वादिगुणाः" इत्यादिभाष्यं तु फलपरं वक्ष्यमाणादिशा पूर्वपक्षेऽक्षरश्रुतेर्निरवकाशत्वोक्तिपरं वेति भावः ।**

ಹೀಗೆ ಗ್ರಂಥಕಾರರು ಸಂಗತಿಯನ್ನು ಹೇಳುತ್ತಿದ್ದಾರೆ. ಆದರೆ ಭಾಷ್ಯದಲ್ಲಿ 'ಅದೃಶ್ಯತ್ವಾದಿಗುಣಾಃ' ಇತ್ಯಾದಿಯಾಗಿ ಎರಡನೆಯ ಪಾದದಲ್ಲಿರುವ ಅದೃಶ್ಯತ್ವಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರಲ್ಲವೇ? ಎಂದು ಪ್ರಶ್ನೆ ಬರುತ್ತದೆ. ಅದನ್ನು ಫಲಪರವೆಂದು ಕೂಡಿಸಬೇಕು. ಅಥವಾ ಮುಂದೆ ಹೇಳುವಂತೆ ಪೂರ್ವಪಕ್ಷಕಾರನು ಅಕ್ಷರಶ್ರುತಿಯನ್ನೂ ಸಹ ಲಕ್ಷ್ಮೀದೇವಿಯಲ್ಲಿ ನಿರವಕಾಶವೆಂದು ಆಕ್ಷೇಪಿಸುತ್ತಾನೆ. ಆದ್ದರಿಂದ ಅದೃಶ್ಯತ್ವಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೆಂದು ತಿಳಿಯಬೇಕು.

**प्रकाशः – इति वाऽवान्तरेति ।। एतेन "प्राणसार्वात्म्यं न गौणम् । रूढ्या अक्षरशब्दितप्रणवसार्वात्म्यवदिति प्रत्यवस्थाननिरासात्सङ्गतिः" इति कल्पतरूक्तं निरस्तम् । तद्वृष्ट्त्वादिना प्रणवकोटेरेवात्रांनुत्थानादिति भावः ।**

'ಇತಿ ವಾ ಅವಾಂತರಸಂಗತಿಃ' ಎಂಬ ಗ್ರಂಥದಿಂದ ಕಲ್ಪತರುವನ್ನು ನಿರಾಕರಿಸಿದ್ದಾರೆ - 'ಪ್ರಾಣಸಾರ್ವಾತ್ಮ್ಯಂ ನ ಗೌಣಮ್ । ರೂಢ್ಯಾ ಅಕ್ಷರಶಬ್ದಿತ ಪ್ರಾಣಸರ್ವಾತ್ಮ್ಯವದಿತಿ ಪ್ರತ್ಯವಸ್ಥಾನನಿರಾಸಾತ್ ಸಂಗತಿಃ' ಕಲ್ಪತರುವಿನಲ್ಲಿ ಹಿಂದಿನ ಅಧಿಕರಣದಿಂದ ಹೀಗೆ ಸಂಗತಿಯನ್ನು ಹೇಳಿದ್ದಾರೆ - ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನಿಗೆ ಸಾರ್ವಾತ್ಮ್ಯವು ಗೌಣವೆಂದು, ವಿಷ್ಣುವಿನಲ್ಲಿ ಮುಖ್ಯವೆಂದು

ಸಮರ್ಥಿಸಲಾಯಿತು. ಆದರೆ ಮುಖ್ಯಪ್ರಾಣನ ಸಾರ್ವಾತ್ಮ್ಯವೇನೂ ಗೌಣವಲ್ಲ. ಯಾವರೀತಿಯಾಗಿ ಅಕ್ಷರಶಬ್ದದ ಅರ್ಥವೆನಿಸಿದ ಪ್ರಣವವು ಸರ್ವಾತ್ಮಕವಾಗಿದೆಯೋ, ಅದರಂತೆ ಮುಖ್ಯಪ್ರಾಣನೂ ಸಹ ಸರ್ವಾತ್ಮಕನಾಗುತ್ತಾನೆ ಎಂಬ ಅಧಿಕಾಶಂಕೆಯನ್ನು ನಿರಾಸಮಾಡುವುದಕ್ಕಾಗಿ ಈ ಅಧಿಕರಣವು ಹೊರಟಿರುತ್ತದೆ. ಹೀಗೆಂದು ಕಲ್ಪತರುವಿನಲ್ಲಿ ಸಮರ್ಥಿಸಿದ್ದಾರೆ. ಇದನ್ನು ಈಗ ನಿರಾಕರಿಸಿದಂತಾಯಿತು. ಏಕೆಂದರೆ ಈಗಾಗಲೇ ಹೇಳಿದಂತೆ ದ್ರಷ್ಟೃತ್ವಾದಿಗುಣಗಳು ಇಲ್ಲದ ಕಾರಣ ಓಂಕಾರವು ಪೂರ್ವಪಕ್ಷಕೋಟಿಯಲ್ಲಿಯೇ ಸೇರುವುದಿಲ್ಲ. ಹೀಗಿರುವಾಗ ಅದನ್ನೇ ಮೂಲವನ್ನಾಗಿಟ್ಟುಕೊಂಡು ಮುಖ್ಯಪ್ರಾಣನಿಗೆ ಸಾರ್ವಾತ್ಮ್ಯವನ್ನು ಆಕ್ಷೇಪಿಸುವುದು ತಪ್ಪಾಗುತ್ತದೆ. ಆದ್ದರಿಂದ ಗ್ರಂಥಕಾರರು ಹೇಳಿದ ಸಂಗತಿಯೇ ಸಮಂಜಸವಾಗಿದೆಯೆಂದು ತಿಳಿಯಬೇಕು.

**गुरुराजीयम्** – इदानीमस्याधिकरणस्य पूर्वाधिकरणेन सङ्गतिं विवक्षुः प्रसङ्गादधिकरणत्रयस्याप्यवान्तरसङ्गतिमाह – **अत्र चाद्य इति । महत्त्वाणुत्वयोर्विरोधपरिहार इति वेति ।।** उपलक्षणमेतत् । सर्वगतस्याणुभावात्तत्प्रयोज्योत्क्रान्तिः पूर्वोक्ता नेत्याक्षेपेण समाधानादाक्षेपिकी । प्रयोज्योत्क्रान्तिमुक्त्वा तत्प्रयोजकाणुत्वसाधनादुपजीव्योपजीवकभावो वा । उत्क्रान्त्या देहवियोगवतो देहावियोगरूपाक्षरत्वस्य द्युभ्वाद्यायतनत्वस्य वाऽऽक्षेपेण समाधानाद्वा यद्युत्क्रान्तिप्रयोजकमणुत्वमङ्गीक्रियते तर्हि तद्विरुद्धसर्वगतत्वेन श्रुतो भूमा विष्णुर्न स्यात् । यदि च भूमा विष्णुः स्यात्तर्हि सर्वगतत्वप्रयोजकाणुत्वाभावादुत्क्रान्तिर्न स्यादित्याक्षिप्य समाधानाद्वाऽऽक्षेपिकी सङ्गतिरित्याद्यूह्यम् । पूर्वत्र चात्र पाठक्रमेण टीकाव्याख्यानात्प्रथमतोऽनन्तरसङ्गत्यनुक्तिः । एवमन्यत्रापि द्रष्टव्यम् ।




ಸೂತ್ರಕಾರರ ಅಧಿಕರಣ ರಚನೆಯು ಬಹಳ ಸ್ವಾರಸ್ಯಮಯವಾಗಿದೆ. ಈ ಅಧಿಕರಣಗಳ ಈ ಕ್ರಮಕ್ಕೆ ನಾಲ್ಕು ರೀತಿ ಕಾರಣವನ್ನು ತಿಳಿಯಬಹುದು - ಏಕೆಂದರೆ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ದ್ಯುಭ್ವಾದ್ಯಾಯತನತ್ವವನ್ನು ಜಡವಾದ ಪ್ರಕೃತಿ ಹಾಗೂ ಸಕಲಜೀವರಲ್ಲಿ ನಿರಾಕರಿಸಿ ಅದನ್ನು ವಿಷ್ಣುವಿನಲ್ಲಿ ಸಮರ್ಥಿಸಿದರು. ಎರಡನೆಯ ಭೂಮಾಧಿಕರಣದಲ್ಲಿ ಸಕಲಜೀವರಿಗಿಂತ ಶ್ರೇಷ್ಠರಾದ ಮುಖ್ಯಪ್ರಾಣದೇವರಲ್ಲಿ ಭೂಮತ್ವವನ್ನು ನಿರಾಕರಿಸಿ ಅದನ್ನು ವಿಷ್ಣುವಿನಲ್ಲಿ ಸಮರ್ಥಿಸಿದರು. ಮೂರನೆಯ ಈ ಅಕ್ಷರಾಧಿಕರಣದಲ್ಲಿ ಲಕ್ಷ್ಮೀದೇವಿಯಲ್ಲಿರುವ ಅಕ್ಷರತ್ವವನ್ನು ನಿರಾಕರಿಸಿ ವಿಷ್ಣುವಿನಲ್ಲಿ ಅದನ್ನು ಸಮನ್ವಯ ಮಾಡುತ್ತಿರುವುದರಿಂದ ಅಧಿಕರಣಗಳ ತಾರತಮ್ಯವು ಅತ್ಯಂತ ಸಂಗತವಾಗಿದೆ.

ಅಕ್ಷರಾಧಿಕರಣ (೧-೩-೩)

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಕೇವಲ ಬಹಿರಂಗವಾದ ಎರಡು ಸಮಾಖ್ಯಾಪ್ರಮಾಣಗಳಿಂದಲೇ ಆಕ್ಷೇಪ ಮಾಡಿದರು, ಮತ್ತೆ ಎರಡನೆಯ ಭೂಮಾಧಿಕರಣದಲ್ಲಿ ಸಮಾಖ್ಯಾ-ಪ್ರಮಾಣಕ್ಕಿಂತಲೂ ಬಲಿಷ್ಠವಾದ ಉಪಕ್ರಮಪ್ರಮಾಣವನ್ನು ಆಶ್ರಯಿಸಿದರು. ಹಾಗೂ ಈ ಅಧಿಕರಣದಲ್ಲಿ ಆ ಎರಡು ಪ್ರಮಾಣಗಳಿಗಿಂತಲೂ ಬಲಿಷ್ಠವಾದ ಪ್ರವೃತ್ತಿನಿಮಿತ್ತದಿಂದ ಆಕ್ಷೇಪ ಮಾಡಿ ವಿಷ್ಣುವಿನಲ್ಲಿ ಅಕ್ಷರಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ.

ಅಥವಾ ಮೊದಲನೆಯ ದ್ಯುಭ್ವಾದ್ಯಧಿಕರಣದಲ್ಲಿ ಬೇರೆ ಬೇರೆ ಪ್ರಕರಣಗಳಲ್ಲಿರುವ ಧರ್ಮಗಳಿಗೆ ವಿರೋಧಗಳನ್ನು ಪರಿಹರಿಸಿದರು. ಎರಡನೆಯ ಭೂಮಾಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ ಧರ್ಮಗಳಿಗೆ ವಿರೋಧವನ್ನು ಪರಿಹರಿಸಿದರು. ಈ ಅಧಿಕರಣದಲ್ಲಿ ಒಂದೇ ವಾಕ್ಯದಲ್ಲಿರುವ ಧರ್ಮಗಳಿಗೆ ವಿರೋಧವನ್ನು ಪರಿಹರಿಸುತ್ತಿದ್ದಾರೆ.

ಅಥವಾ ಹಿಂದಿನೆರಡು ಅಧಿಕರಣಗಳಲ್ಲಿ ಕೇವಲ ಒಂದೊಂದು ಧರ್ಮಗಳಿಗೆ ವಿರೋಧವನ್ನು ಪರಿಹರಿಸಿದರು, ಆದರೆ ಈ ಅಧಿಕರಣದಲ್ಲಿ ಅನೇಕ ಧರ್ಮಗಳಿಗಿರುವ ವಿರೋಧವನ್ನು ಪರಿಹರಿಸಿದ್ದಾರೆ.

• • • • •

## ಸಂಶಯ ಪರಂಪರೆ

### तात्पर्यचन्द्रिका

**अत्र ''स होवाच एतद्वै तदक्षरं गार्गि ब्राह्मणा अभिवदन्त्यस्थूलम्'' इत्यादिनोक्तमक्षरं किं चित्प्रकृतिः किं वा ब्रह्मेति चिन्ता ।**

ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ - 'ಸ ಹೋವಾಚ ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮ್' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಅಕ್ಷರವು ಚಿತ್‌ಪ್ರಕೃತಿ ಎನಿಸಿದ ಲಕ್ಷ್ಮೀದೇವಿಯನ್ನು ಪ್ರತಿಪಾದಿಸುತ್ತದೋ, ಅಥವಾ ವಿಷ್ಣುವನ್ನೋ ? ಎಂದು ಸಂಶಯ.

**तदर्थम् ''एतस्मिन्खल्वक्षरे गार्ग्याकाश ओतश्च'' इति वाक्योक्ताम्बरान्तधृतिः किं चित्प्रकृतेर्युक्तोत न युक्तेति ।**

ಈ ಸಂಶಯವು ಪರಿಹಾರವಾಗಬೇಕೆಂದರೆ 'ಏತಸ್ಮಿನ್‌ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಆಕಾಶದತನಕದ ಧಾರಣವು ಲಕ್ಷ್ಮೀದೇವಿಯಲ್ಲಿ ಯುಕ್ತವಾಗುತ್ತದೋ, ಅಥವಾ ಯುಕ್ತವಾಗುವುದಿಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು.

ಪರಿಪೂರ್ಣಚಂದ್ರಿಕಾ

**तदर्थमत्राकाशशब्दः किं मध्यमाक्षरेतरपरः किं वा मध्यमाक्षरपर इति ।**

ಈ ಸಂಶಯವು ಪರಿಹಾರವಾಗಬೇಕೆಂದರೆ - ಶ್ರುತಿಯಲ್ಲಿರುವ ಆಕಾಶಶಬ್ದವು, ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯನ್ನು ಪ್ರತಿಪಾದಿಸದೇ ಬೇರೆಯವರನ್ನು ಪ್ರತಿಪಾದಿಸುತ್ತದೋ, ಅಥವಾ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯನ್ನಷ್ಟೇ ಪ್ರತಿಪಾದಿಸುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''न तदश्नाति किञ्चन'' इत्युक्तमनशनं किं ब्रह्मणो न युक्तमुत युक्तमिति ।**

ಈ ಸಂಶಯವು ಪರಿಹಾರವಾಗಬೇಕೆಂದರೆ 'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲವೋ, ಅಥವಾ ಯುಕ್ತವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**यद्याद्यः तदा ब्रह्मपक्षेऽनशनस्यैव बाधकत्वेनाकाशशब्दस्येतरपरत्वादितरधृतेश्च मध्यमाक्षरेऽपि सम्भवाद्ब्रह्मत्वसाधकाभावान्मध्यमाक्षरमेवेहाक्षरम् ।**

ಒಂದು ವೇಳೆ ಮೊದಲನೆಯ ಪಕ್ಷವನ್ನು ಸ್ವೀಕರಿಸಿದರೆ, ಆವಾಗ ಆಕಾಶಶಬ್ದವು ಮಧ್ಯಮಾಕ್ಷರಳಾದ ಲಕ್ಷ್ಮೀದೇವಿಯನ್ನು ಬಿಟ್ಟು ಇತರ ವಸ್ತುಗಳನ್ನಷ್ಟೇ ಪ್ರತಿಪಾದಿಸುವುದರಿಂದ ಅಂತಹ ಇತರ ವಸ್ತುಗಳನ್ನು ಧರಿಸಿರುವಿಕೆಯು ಲಕ್ಷ್ಮೀದೇವಿಯಲ್ಲಿಯೂ ಯುಕ್ತವಾಗುತ್ತದೆ. ಬ್ರಹ್ಮತ್ವಕ್ಕೆ ಸಾಧಕವಾದ ಪ್ರಮಾಣಗಳಿಲ್ಲದ ಕಾರಣ ಹಾಗೂ ಬ್ರಹ್ಮಪಕ್ಷದಲ್ಲಿ ಅನಶನತ್ವವೇ ಬಾಧಕವಾದ್ದರಿಂದ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೇ ಅಕ್ಷರಳೆನಿಸುತ್ತಾಳೆಂಬುದು ಪೂರ್ವಪಕ್ಷದ ಫಲ.

**यदि तु द्वितीयः तदा बाधकाभावेनाकाशो मध्यमाक्षरमेवेति तदाश्रयत्वस्यैव ब्रह्मत्वसाधकत्वादक्षरं ब्रह्मैव ।**

ಒಂದು ವೇಳೆ 'ಬ್ರಹ್ಮ' ಎಂಬ ಎರಡನೆಯ ಪಕ್ಷವನ್ನು ಸ್ವೀಕರಿಸಿದರೆ ಆವಾಗ ಯಾವುದೇ ಬಾಧಕವಿಲ್ಲದ ಕಾರಣ ಆಕಾಶಶಬ್ದವು ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯನ್ನೇ ಪ್ರತಿಪಾದಿಸುತ್ತದೆ. ಅಂತಹ ಲಕ್ಷ್ಮೀದೇವಿಗೆ ಆಶ್ರಯವಾಗಿರುವಿಕೆಯೇ ಬ್ರಹ್ಮತ್ವದ ಸಾಧಕವಾಗುವುದರಿಂದ ಬ್ರಹ್ಮನೇ ಅಕ್ಷರನಾಗುತ್ತಾನೆ ಎಂಬುದು ಸಿದ್ಧಾಂತದ ಫಲ.

**प्रकाशः –**

नन्वत्र भाष्ये टीकायां च "अदृष्टं द्रष्टृ" इत्याद्युपसंहारवाक्यमुदाहृत्य 'तदक्षरं विषयः' इत्युक्तम् । तदयुक्तमिव । तथात्वे तत्राम्बरान्तधृत्यादिरूपसूत्रोपात्तहेतूनां सर्वेषामभावादित्यतः

ವಿವರಣೆ - ಭಾಷ್ಯ ಹಾಗೂ ಟೀಕೆಯಲ್ಲಿ 'ಅದೃಷ್ಟಂ ದ್ರಷ್ಟೃ' ಇತ್ಯಾದಿಯಾಗಿ ಉಪಸಂಹಾರ ವಾಕ್ಯವನ್ನು ಉದಾಹರಿಸಿ 'ತದಕ್ಷರಂ ವಿಷಯಃ' ಅಂತಹ ಅಕ್ಷರನು ವಿಷಯ ಎಂದು ಹೇಳಿದ್ದಾರೆ. ಇದು ಅಯುಕ್ತವಾದಂತೆ ಕಾಣಿಸುತ್ತದೆ. ಕೊನೆಯ ವಾಕ್ಯವನ್ನು ಉದಾಹರಿಸುವುದರಿಂದ 'ಅಂಬರಾಂತಧೃತಿ' ಮುಂತಾದ ಸೂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಹೇತುಗಳೆಲ್ಲವನ್ನೂ ತೋರಿಸಿದಂತಾಗುವುದಿಲ್ಲವಲ್ಲ.

**प्रकाशः –** पूर्वसङ्गत्यर्थं द्रष्टृत्वादिना जडप्रकृत्यादिकं नात्र शङ्काहर्मिति सूचयितुम्, अम्बरे सर्वाधारत्वस्य तत्राप्रतीतावप्यम्बरधृतिरूपप्रधानहेतुरस्तीति दर्शयितुं च,

ಈ ಪ್ರಶ್ನೆಗೆ ಮೂರು ಬಗೆಯಲ್ಲಿ ಉತ್ತರಿಸಬಹುದು. ಹಿಂದಿನ ಅದೃಶ್ಯತ್ವಾಧಿಕರಣದಿಂದ ಸಂಗತಿಯನ್ನು ತೋರಿಸುವುದಕ್ಕಾಗಿ 'ಅದೃಷ್ಟಂ ದ್ರಷ್ಟೃ' ಎಂಬ ಕೊನೆಯವಾಕ್ಯವನ್ನೇ ಉಲ್ಲೇಖಿಸಿದ್ದಾರೆ. ಅಥವಾ ಜಡಪ್ರಕೃತಿಯಾಗಲೀ, ಅಕಾರಾದಿ ವರ್ಣಗಳಾಗಲೀ ದ್ರಷ್ಟೃತ್ವಾದಿ ಗುಣಗಳನ್ನು ಹೊಂದದ ಕಾರಣ ಶಂಕೆಗೆ ಅರ್ಹವೇ ಆಗಿರುವುದಿಲ್ಲವೆಂದು ಸೂಚಿಸುವುದಕ್ಕಾಗಿಯೂ 'ಅದೃಷ್ಟಂ ದ್ರಷ್ಟೃ' ಎಂಬ ವಾಕ್ಯವನ್ನೇ ಉಲ್ಲೇಖಿಸಿದ್ದಾರೆ. ಅಥವಾ ಆಕಾಶದಲ್ಲಿ ಸರ್ವಾಧಾರತ್ವವು ಈ ಕೊನೆಯ ವಾಕ್ಯದಿಂದ ಪ್ರತೀತವಾಗದಿದ್ದರೂ ಆಕಾಶಕ್ಕೆ ಅಕ್ಷರನು ಆಶ್ರಯನಾಗಿದ್ದಾನೆಂಬ ಪ್ರಧಾನಹೇತು ಪ್ರತೀತವಾಗುತ್ತಿದೆ. ಹೀಗೆ ಮೂರು ದೃಷ್ಟಿಯಿಂದ 'ಅದೃಷ್ಟಂ ದ್ರಷ್ಟೃ' ಎಂಬ ಕೊನೆಯವಾಕ್ಯವನ್ನೇ ಉಲ್ಲೇಖಿಸಿದ್ದಾರೆ.

**प्रकाशः –** अन्त्यवाक्योक्तावपि तदुपलक्षणमिति भावेन वा भाष्यटीकयोरुक्तं "तद्वा एतदक्षरं गार्ग्यदृष्टं द्रष्टृ" इत्यादिचरमवाक्यस्थतदेतच्छब्दपरामर्शविषयं दर्शयितुं वा पूर्ववाक्योक्त्या विषयसंशयटीकां व्यनक्ति – **अत्र स होवाचेत्यादिना ॥**

ಮೇಲಿನ ಮೂರು ಸಮಾಧಾನಗಳನ್ನು ತೋರಿಸುವುದಕ್ಕಾಗಿ ಭಾಷ್ಯದಲ್ಲಿ ಕೊನೆಯ ವಾಕ್ಯವನ್ನಷ್ಟೇ ಉಲ್ಲೇಖಿಸಿದ್ದರೂ ಸಹ ಅದು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ. ಅಥವಾ ಭಾಷ್ಯ ಹಾಗೂ ಟೀಕೆಗಳಲ್ಲಿ ಉಲ್ಲೇಖಿಸಲ್ಪಟ್ಟ 'ತದ್ವಾ ಏತದಕ್ಷರಂ ಗಾರ್ಗ್ಯದೃಷ್ಟಂ ದ್ರಷ್ಟೃ' ಎಂಬ ಕೊನೆಯ ವಾಕ್ಯದಲ್ಲಿರುವ 'ತತ್' ಮತ್ತು 'ಏತತ್' ಶಬ್ದಗಳಿಂದ ಪರಾಮರ್ಶಿಸಬೇಕಾದ್ದನ್ನು ತೋರಿಸುವುದಕ್ಕಾಗಿಯೂ ಪೂರ್ವವಾಕ್ಯವನ್ನು ಉಲ್ಲೇಖಿಸಬೇಕು. ಅಂತಹ ಪೂರ್ವವಾಕ್ಯವನ್ನು ಹೇಳುವ ಮೂಲಕ ವಿಷಯ ಹಾಗೂ

ಸಂಶಯಗಳನ್ನು ಪ್ರತಿಪಾದಿಸುವ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಅತ್ರ ಸ ಹೋವಾಚ' ಇತ್ಯಾದಿ ಗ್ರಂಥದಿಂದ.

**प्रकाशः** – बृहदारण्यके पञ्चमेऽध्यायेऽष्टमब्राह्मणे गार्गियाज्ञवल्क्यसंवादे श्रूयते "सा होवाच । यदूर्ध्वं याज्ञवल्क्य दिवो, यदर्वाक् पृथिव्या, यदन्तरा द्यावापृथिवी इमे यद्भूतं च भवच्च भविष्यच्चेत्याचक्षते कस्मिंस्तदोतं च प्रोतं चेति ।"

ಬೃಹದಾರಣ್ಯಕದ ಐದನೇ ಅಧ್ಯಾಯದ ಎಂಟನೇ ಬ್ರಾಹ್ಮಣದಲ್ಲಿ ಬರುವ ಗಾರ್ಗಿ-ಯಾಜ್ಞವಲ್ಕ್ಯರ ಸಂವಾದ ಹೀಗಿದೆ - 'ಸಾ ಹೋವಾಚ । ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಂಸ್ತದೋತಂ ಚ ಪ್ರೋತಂ ಚೇತಿ ।'

ಗಾರ್ಗಿ ಕೇಳಿದಳು. ಸ್ವರ್ಗದಿಂದ ಮೇಲಿನ ಮಹರಾದಿ ಲೋಕಗಳು, ವೈಕುಂಠದಿಂದ ಮೇಲಿನ ಬ್ರಹ್ಮಾಂಡ ನವಾವರಣಗಳೂ, ಪೃಥಿವಿಯ ಕೆಳಗಿನ ಪಾತಾಳಾದಿ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ, ವರ್ತಮಾನ, ಭವಿಷ್ಯತ್ತುಗಳೆಂದು ಬಲ್ಲವರು ಹೇಳುವವೆಲ್ಲವೂ ಯಾವುದರಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ?

**प्रकाशः** – 'स होवाच । यदूर्ध्वं गार्गि दिवो, यदर्वाक् पृथिव्या, यदन्तरा द्यावापृथिवी इमे यद्भूतं च भवच्च भविष्यच्च इत्याचक्षते आकाशे तदोतं च प्रोतं चेति ।'

'ಸ ಹೋವಾಚ । ಯದೂರ್ಧ್ವಂ ಗಾರ್ಗಿ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಚಕ್ಷತೇ ಆಕಾಶೇ ತದೋತಂ ಚ ಪ್ರೋತಂ ಚೇತಿ ।'

ಯಾಜ್ಞವಲ್ಕ್ಯರು ಹೇಳಿದರು. ಗಾರ್ಗಿ, ಸ್ವರ್ಗಕ್ಕಿಂತ ಮೇಲಿನ ಮಹರಾದಿ ಲೋಕಗಳೂ, ವೈಕುಂಠಕ್ಕಿಂತ ಮೇಲಿನ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳಾದಿಲೋಕಗಳೂ ಅವುಗಳಿಗಿಂತಲೂ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ, ವರ್ತಮಾನ, ಭವಿಷತ್ತುಗಳೆಂದು ಬಲ್ಲವರು ಯಾವುದನ್ನು ಹೇಳುವರೋ ಅವೆಲ್ಲವೂ ಆಕಾಶನಾಮಕಳಾದ ಲಕ್ಷ್ಮೀದೇವಿಯಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ.

**प्रकाशः** – 'सा होवाच । नमस्तेऽस्तु याज्ञवल्क्य यो म एतं व्यवोचः । अथापरस्मै धारयस्वेति । पृच्छ गार्गि इति ।'

ಸಾ ಹೋವಾಚ । ನಮಸ್ತೇऽಸ್ತು ಯಾಜ್ಞವಲ್ಕ್ಯ । ಯೋ ಮ ಏತಂ ವ್ಯವೋಚಃ । ಅಥಾಪರಸ್ಮೈ ಧಾರಯಸ್ವೇತಿ । ಪೃಚ್ಛ ಗಾರ್ಗೀತಿ ।

ಗಾರ್ಗಿ ಹೇಳಿದಳು. ಯಾಜ್ಞವಲ್ಕ್ಯರೇ, ನನ್ನ ಈ ಪ್ರಶ್ನೆಗೆ ಸರಿಯಾಗಿ ಉತ್ತರ ಹೇಳಿದಿರಿ, ನಿಮಗೆ ನಮಸ್ಕಾರ, ಇನ್ನೊಂದು ಪ್ರಶ್ನೆಗೆ ಸಿದ್ಧರಾಗಿರಿ. ಯಾಜ್ಞವಲ್ಕ್ಯರು ಹೇಳಿದರು. 'ಗಾರ್ಗಿ!' ಕೇಳು.

**प्रकाशः – सा होवाच । यदूर्ध्वं याज्ञवल्क्य दिवो, यदर्वाक् पृथिव्या, यदन्तरा द्यावापृथिवी इमे यद्भूतं च भवच्च भविष्यच्च इत्याचक्षते कस्मिंस्तदोतं च प्रोतं चेति ।**

ಸಾ ಹೋವಾಚ । ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಚಕ್ಷತೇ ಕಸ್ಮಿಂಸ್ತದೋತಂ ಚ ಪ್ರೋತಂ ಚೇತಿ ।

ಗಾರ್ಗಿ ಕೇಳಿದಳು, 'ಯಾಜ್ಞವಲ್ಕ್ಯರೇ, ಸ್ವರ್ಗಕ್ಕಿಂತ ಮೇಲಿರುವ ಮಹರಾದಿ ಲೋಕಗಳೂ, ವೈಕುಂಠಕ್ಕಿಂತ ಮೇಲಿನ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳಾದಿ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ, ವರ್ತಮಾನ, ಭವಿಷ್ಯತ್ತುಗಳೆಂದು ಬಲ್ಲವರು ಯಾವುದನ್ನು ಹೇಳುವರೋ ಅವೆಲ್ಲವೂ ಯಾವುದರಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ ?

**प्रकाशः – 'स होवाच । यदूर्ध्वं गार्गि दिवो, यदर्वाक् पृथिव्या, यदन्तरा द्यावापृथिवी इमे यद्भूतं च भवच्च भविष्यच्च इत्याचक्षते आकाश एव तदोतं च प्रोतं चेति । कस्मिन् खल्वाकाश ओतश्च प्रोतश्चेति ।'**

ಸ ಹೋವಾಚ । ಯದೂರ್ಧ್ವಂ ಗಾರ್ಗಿ, ದಿವೋ ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಚಕ್ಷತ ಆಕಾಶ ಏವ ತದೋತಂ ಚ ಪ್ರೋತಂ ಚೇತಿ । ಕಸ್ಮಿನ್ ಖಲ್ವಾಕಾಶ ಓತಪ್ರೋತಶ್ಚೇತಿ ।

ಯಾಜ್ಞವಲ್ಕ್ಯರು ಹೇಳಿದರು ಗಾರ್ಗಿ ! ಸ್ವರ್ಗಕ್ಕಿಂತ ಮೇಲಿರುವ ಮಹರಾದಿ ಲೋಕಗಳು, ವೈಕುಂಠಕ್ಕಿಂತ ಮೇಲಿರುವ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳಾದಿ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ, ವರ್ತಮಾನ, ಭವಿಷ್ಯತ್ತುಗಳೆಂದು ಯಾವುದನ್ನು ಬಲ್ಲವರು ಹೇಳುವರೋ ಅವೆಲ್ಲವೂ, ಆಕಾಶನಾಮಕಳಾದ ಲಕ್ಷ್ಮೀದೇವಿಯಲ್ಲಿಯೇ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ. ಗಾರ್ಗಿ ಕೇಳಿದಳು. ಲಕ್ಷ್ಮೀದೇವಿ ಯಾರನ್ನು ಓತಪ್ರೋತವಾಗಿ ಆಶ್ರಯಿಸಿಕೊಂಡಿರುವಳು ?

**प्रकाशः –** 'स होवाच । एतद्वै तदक्षरं गार्गि ब्राह्मणा अभिवदन्ति अस्थूलम् अनणु अह्रस्वम् अदीर्घम् अलोहितम्, अस्नेहम् अच्छायम् अतमः अवायु अनाकाशम् असङ्गम् अरसम् अगन्धम् अचक्षुष्कम् अश्रोत्रम् अवाक् अमनः अतेजस्कम् अप्राणम् अमुख्यम् अमात्रम् अनन्तरम् अबाह्यम् । न तदश्नाति किञ्चन न तदश्नाति कश्चन ।'

ಸ ಹೋವಾಚ । ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಮ್ ಅನಣು ಅಹ್ರಸ್ವಮ್ ಅದೀರ್ಘಮ್ ಅಲೋಹಿತಮ್, ಅಸ್ನೇಹಮ್ ಅಚ್ಛಾಯಮ್ ಅತಮಃ ಅವಾಯು ಅನಾಕಾಶಮ್ ಅಸಂಗಮ್ ಅರಸನ್ ಅಗಂಧಮ್ ಅಚಕ್ಷುಷ್ಕಮ್ ಅಶ್ರೋತ್ರಮ್ ಅವಾಕ್ ಅಮನಃ ಅತೇಜಸ್ಕಮ್ ಅಪ್ರಾಣಮ್ ಅಮುಖ್ಯಮ್ ಅಮಾತ್ರಮ್ ಅನಂತರಮ್ ಅಬಾಹ್ಯಮ್ । ನ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ ।

ಯಾಜ್ಞವಲ್ಕ್ಯರು ಹೇಳಿದರು ಗಾರ್ಗಿ ! ಲಕ್ಷ್ಮೀಗೆ ಅಕ್ಷರನಾಮಕ ನಾರಾಯಣನು ಆಧಾರ. ಆ ಅಕ್ಷರನ ಲಕ್ಷಣಗಳನ್ನು ಬ್ರಹ್ಮಜ್ಞಾನಿಗಳೂ ಹೀಗೆ ಹೇಳುತ್ತಾರೆ - ಅವನು ಸ್ಥೂಲ, ಸೂಕ್ಷ್ಮ, ಹ್ರಸ್ವ ಹಾಗೂ ದೀರ್ಘವಾದ ಎಲ್ಲ ಪ್ರಾಕೃತ ವಸ್ತುಗಳಿಂದ ಭಿನ್ನ, ಪ್ರಾಕೃತರಕ್ತಾದಿ ರೂಪವಿಲ್ಲದವನು. ಪ್ರಾಕೃತಜಿಗಟುತನವಿಲ್ಲದವನು. ಅಜ್ಞಾನ ರಹಿತ, ಆವರಣ ರಹಿತ, ಶ್ವಾಸೋಚ್ಛ್ವಾಸ ರಹಿತ. ಆಕಾಶ ಮೊದಲಾದ ಪಂಚಭೂತಮಯ ಶರೀರ ರಹಿತ. ಎಲ್ಲ ಕಡೆ ಇದ್ದರೂ ತತ್ಪ್ರಯುಕ್ತ ದೋಷಲೇಪವಿಲ್ಲದವನು. ಪ್ರಾಕೃತ ರಸರಹಿತ, ಪ್ರಾಕೃತಗಂಧರಹಿತ, ಪ್ರಾಕೃತನೇತ್ರರಹಿತ, ಪ್ರಾಕೃತಕಾಂತಿರಹಿತ, ಪ್ರಾಕೃತವಾದ ವಾಕ್, ಮನಸ್ಸುಗಳಿಂದ ರಹಿತ, ಪ್ರಾಕೃತ ಜ್ಞಾನೇಂದ್ರಿಯ, ಕರ್ಮೇಂದ್ರಿಯ ರಹಿತ, ಪ್ರಾಕೃತ ಶರೀರ ರಹಿತ, ಪರಿಮಿತಿ ರಹಿತ, ಎಲ್ಲಕ್ಕೂ ಒಳಗಿರುವವ, ಎಲ್ಲಕ್ಕೂ ಹೊರಗೂ ಇರುವವ. ಆ ಅಕ್ಷರನು ತನ್ನ ಉಳಿವಿಗಾಗಿ ಯಾರನ್ನೂ ಆಶ್ರಯಿಸಿಲ್ಲ. ಅವನನ್ನು ಯಾರೂ ಆಳಿಸಲೂ ಶಕ್ತರಲ್ಲ.

**प्रकाशः –** 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः । एतस्य वा अक्षरस्य प्रशासने गार्गि द्यावापृथिव्यौ विधृते तिष्ठतः । एतस्य वा अक्षरस्य प्रशासने गार्गि निमेषा मुहूर्ता अहोरात्राणि अर्धमासा मासा ऋतवः संवत्सरा इति विधृतास्तिष्ठन्ति । एतस्य वा अक्षरस्य प्रशासने गार्गि प्राच्योऽन्या नद्यः स्यन्दन्ते श्वेतेभ्यः पर्वतेभ्यः प्रतीच्योऽन्याः यां यां दिशमनु । एतस्य वा अक्षरस्य प्रशासने गार्गि ददतो मनुष्याः प्रशंसन्ति, यजमानं देवाः, दर्वीं पितरोऽन्वायत्ताः ।'

'ಏತಸ್ಯಾ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ

ನಿಮೇಷಾ ಮುಹೂರ್ತಾ ಅಹೋರಾತ್ರಾಣಿ ಅರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತಿ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾಃ ಯಾಂ ಯಾಂ ದಿಶಮನು । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಂಸಂತಿ, ಯಜಮಾನಂ ದೇವಾಃ, ದರ್ವೀಂ ಪಿತರೋಽನ್ವಾಯತ್ತಾಃ ।'

ಈ ಅಕ್ಷರನಾಮಕ ಹರಿಯ ಇಚ್ಛಾಮಾತ್ರದಿಂದಲೇ ಬ್ರಹ್ಮ-ರುದ್ರರು ಸುಸ್ಥಿತಿಯಲ್ಲಿದ್ದಾರೆ. ಈ ಅಕ್ಷರನ ಇಚ್ಛೆಯಿಂದಲೇ ಶ್ರೀ ಭೂ ದೇವಿಯರು ಸುಸ್ಥಿತಿಯಲ್ಲಿದ್ದಾರೆ. ಗಾರ್ಗಿ ! ಈ ಅಕ್ಷರದ ಇಚ್ಛೆಯಿಂದಲೇ ನಿಮಿಷಗಳು, ಮುಹೂರ್ತಗಳು, ಹಗಲು-ರಾತ್ರಿಗಳು, ಪಕ್ಷಗಳು, ತಿಂಗಳುಗಳು, ಋತುಗಳು, ವರ್ಷಗಳು ಇವುಗಳ ಅಭಿಮಾನಿದೇವತೆಗಳು ಸುಸ್ಥಿತಿಯಲ್ಲಿರುತ್ತಾರೆ. ಗಾರ್ಗಿ ! ಆ ಅಕ್ಷರನ ಇಚ್ಛೆಯಿಂದಲೇ ಪೂರ್ವದಿಕ್ಕಿನಲ್ಲಿ ಹರಿಯುವ ಬೇರೆ ಬೇರೆ ನದಿಗಳೂ, ಪಶ್ಚಿಮದಿಕ್ಕಿನಲ್ಲಿ ಹರಿಯುವ ಬೇರೆ ಬೇರೆ ನದಿಗಳೂ, ಶ್ವೇತಪರ್ವತಗಳಿಂದ ಯಾವ ಯಾವ ದಿಕ್ಕುಗಳಿಗೆ ಹರಿಯಬೇಕೋ ಆ ದಿಕ್ಕುಗಳಿಗೇ ಹರಿಯುತ್ತವೆ. ಗಾರ್ಗಿ ! ಈ ಅಕ್ಷರನ ಇಚ್ಛೆಯಿಂದಲೇ ದಾನ ಮಾಡುವವರನ್ನು ಮನುಷ್ಯರೂ, ಯಾಗ ಮಾಡುವವರನ್ನು ದೇವತೆಗಳೂ ಹೊಗಳುತ್ತಾರೆ. ಪಿತೃಗಳು ದರ್ವಿಯನ್ನು ಆಶ್ರಯಿಸುತ್ತಾರೆ.

**प्रकाशः** – 'यो वा एतदक्षरं गार्गि अविदित्वा अस्मिन् लोके जुहोति यजते तपस्तप्यते बहूनि वर्षसहस्राणि, अन्तवदेवास्य तद् भवति । यो वा एतदक्षरं गार्गि अविदित्वा अस्माल्लोकात् प्रैति, स कृपणः । अथ य एतदक्षरं गार्गि विदित्वा अस्माल्लोकात् प्रैति स ब्राह्मणः ।'

ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾ ಅಸ್ಮಿನ್ ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷಸಹಸ್ರಾಣಿ, ಅಂತವದೇವಾಸ್ಯ ತದ್ ಭವತಿ । ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾ ಅಸ್ಮಾಲ್ಲೋಕಾತ್ ಪ್ರೈತಿ, ಸ ಕೃಪಣಃ । ಅಥ ಯ ಏತದಕ್ಷರಂ ಗಾರ್ಗಿ ವಿದಿತ್ವಾ ಅಸ್ಮಾಲ್ಲೋಕಾತ್ ಪ್ರೈತಿ ಸ ಬ್ರಾಹ್ಮಣಃ । '

ಗಾರ್ಗಿ ! ಈ ಲೋಕದಲ್ಲಿ ಯಾರು ಈ ಅಕ್ಷರನನ್ನು ತಿಳಿಯದೇ ಹೋಮ ಮಾಡುತ್ತಾನೋ, ದಾನ ಮಾಡುತ್ತಾನೋ, ಬಹುಸಾವಿರ ವರ್ಷ ತಪಸ್ಸನ್ನು ಮಾಡುತ್ತಾನೋ ಅವನು ಸ್ವರ್ಗಾದಿ ಲೋಕಗಳಲ್ಲಿ ಬಹು ಸಾವಿರ ವರ್ಷ ವಾಸ ಮಾಡಬಹುದು. ಆದರೂ ಆ ಫಲವು ನಶ್ವರವೇ ಆಗಿರುತ್ತದೆ. ಗಾರ್ಗಿ, ಯಾರು ಈ ಅಕ್ಷರನನ್ನು ತಿಳಿಯದೇ ಮರಣ ಹೊಂದುತ್ತಾನೋ ಅವನು ಶೋಚನೀಯನಾಗಿರುತ್ತಾನೆ. ಸಂಸಾರ ಬಂಧನದಲ್ಲಿಯೇ ಇರುತ್ತಾನೆ. ಗಾರ್ಗಿ, ಯಾರು ಈ ಅಕ್ಷರನನ್ನು ತಿಳಿದು ಮರಣ ಹೊಂದುತ್ತಾನೋ ಅವನು ಮುಕ್ತನಾಗುತ್ತಾನೆ.

**प्रकाशः** – 'तद् वा एतदक्षरं गार्गि, अदृष्टं द्रष्टृ । अश्रुतं श्रोतृ । अमतं मन्तृ। अविज्ञातं विज्ञातृ । नान्यदतोऽस्ति द्रष्टृ । नान्यदतोऽस्ति श्रोतृ । नान्यदतोऽस्ति

मन्तृ । नान्यदतोऽस्ति विज्ञातृ । एतस्मिन् खलु अक्षरे गार्गि आकाश ओतश्च प्रोतश्च इति'

'ತದ್ ವಾ ಏತದಕ್ಷರಂ ಗಾರ್ಗಿ, ಅದೃಷ್ಟಂ ದ್ರಷ್ಟೃ। ಅಶ್ರುತಂ ಶ್ರೋತೃ। ಅಮತಂ ಮಂತೃ। ಅವಿಜ್ಞಾತಂ ವಿಜ್ಞಾತೃ । ನಾನ್ಯದತೋಽಸ್ತಿ ದ್ರಷ್ಟೃ । ನಾನ್ಯದತೋಽಸ್ತಿ ಶ್ರೋತೃ । ನಾನ್ಯದತೋಽಸ್ತಿ ಮಂತೃ । ನಾನ್ಯದತೋಽಸ್ತಿ ವಿಜ್ಞಾತೃ। ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ ಇತಿ'

ಗಾರ್ಗಿ ! ಈ ಅಕ್ಷರನು ಅನ್ಯರಿಗೆ ಸಂಪೂರ್ಣವಾಗಿ ನೋಡಲಾಗದವನು. ತಾನು ಎಲ್ಲವನ್ನೂ ನೋಡುವವನು. ಅನ್ಯರಿಗೆ ಸಂಪೂರ್ಣವಾಗಿ ಹೇಳಿ ತಿಳಿಯಲಾಗದವನು. ತಾನು ಎಲ್ಲವನ್ನೂ ಕೇಳುವವನು. ಅನ್ಯರಿಗೆ ಸಂಪೂರ್ಣವಾಗಿ ಮನಸ್ಸಿನಿಂದ ಗ್ರಹಿಸಲಾಗದವನು. ತಾನು ಎಲ್ಲವನ್ನೂ ಮನಸಾ ಗ್ರಹಿಸುವವನು. ಅನ್ಯರಿಗೆ ಸಂಪೂರ್ಣವಾಗಿ ತಿಳಿಯಲಾಗದವನು. ತಾನು ಎಲ್ಲವನ್ನೂ ತಿಳಿಯುವವನು. ಅಕ್ಷರನಿಂದ ಅನ್ಯರು ಯಾರೂ ಸ್ವತಂತ್ರವಾಗಿ ನೋಡುವವರಲ್ಲ. ಅವನಿಗಿಂತ ಅನ್ಯರು ಯಾರೂ ಸ್ವತಂತ್ರವಾಗಿ ಕೇಳುವವರಲ್ಲ. ಅವನಿಗಿಂತ ಅನ್ಯರು ಯಾರೂ ಸ್ವತಂತ್ರವಾಗಿ ಮನಸಾ ತಿಳಿಯುವವರಲ್ಲ. ಇವನಿಗಿಂತ ಬೇರೆ ಯಾರೂ ಸ್ವತಂತ್ರವಾಗಿ ತಿಳಿಯುವವನಿಲ್ಲ. ಗಾರ್ಗಿ ! ಇಂಥ ಅಕ್ಷರನಲ್ಲಿಯೇ ಲಕ್ಷ್ಮಿಯೂ ಓತಪ್ರೋತವಾಗಿ ಆಶ್ರಯ ಪಡೆದಿದ್ದಾಳೆ.

**प्रकाशः** – इत्यत्र सर्वाधारत्वेन श्रुतमक्षरं विषय इत्यर्थः । चित्प्रकृतिरिति ।। कोट्यन्तरस्याग्रे निरस्यत्वादिति भावः ।।

ಈ ವಿಷಯವಾಕ್ಯದಲ್ಲಿ ಸರ್ವಾಧಾರತ್ವೇನ ಶ್ರುತನಾದ ಅಕ್ಷರನೇ ವಿಷಯನೆಂದು ತಿಳಿಯಬೇಕು. 'ಚಿತ್ ಪ್ರಕೃತಿಃ' ಎಂದು ಸಂಶಯಕೋಟಿಯನ್ನು ಗ್ರಂಥದಲ್ಲಿ ತೋರಿಸಿದ್ದಾರೆ. ಉಳಿದ ಕೋಟಿಗಳನ್ನು ಮುಂದೆ ನಿರಾಕರಿಸುತ್ತಾರೆಂದು ತಿಳಿಯಬೇಕು.

**प्रकाशः** – इति वाक्योक्ताम्बरान्तधृतिरिति ।। यद्यपि तद्वाक्येऽम्बरधृतिरेवाक्षरे भाति । तथापि पूर्ववाक्येऽम्बरस्य भूतभवदादिसर्वाधारत्वमुक्त्वा तादृशस्याम्बरस्य ''कस्मिन्नु खल्वाकाश ओतश्च प्रोतश्च'' इत्याधारे पृष्टे ''स होवाच'' इत्यादिनाऽक्षरस्य महिमानमुक्त्वाऽनन्तरम् ''एतस्मिन्खल्वक्षरे गार्ग्याकाशः'' इत्युक्तत्वात्सर्वाधाराम्बराधारत्वरूपाम्बरान्तधृतिस्तत्र लब्धेति भावेनैवमुक्तिः ।।

ಗ್ರಂಥದಲ್ಲಿ 'ಇತಿ ವಾಕ್ಯೋಕ್ತಾಂಬರಾಂತಧೃತಿಃ' ಎಂದು ಹೇಳಿದ್ದಾರೆ. ವಸ್ತುತಃ ಆ ವಾಕ್ಯದಲ್ಲಿ ಆಕಾಶದ ಧಾರಣವನ್ನಷ್ಟೇ ಅಕ್ಷರನಲ್ಲಿ ಹೇಳಲಾಗಿದೆ. ಆದರೂ ಸಹ ಹಿಂದಿನ ವಾಕ್ಯದಲ್ಲಿ ಆಕಾಶವು ಹಿಂದಿನ, ಈಗಿನ, ಮುಂದಿನ ಸಕಲ ಪದಾರ್ಥಗಳಿಗೆ ಆಶ್ರಯವಾಗಿದೆಯೆಂದು ಹೇಳಿ ಅಂತಹ ಆಕಾಶಕ್ಕೆ 'ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚ' ಇತ್ಯಾದಿಯಾಗಿ ಯಾವುದು ಆಧಾರ ? ಎಂದು ಪ್ರಶ್ನಿಸಿದಾಗ 'ಸ ಹೋವಾಚ' ಇತ್ಯಾದಿ

ವಾಕ್ಯಗಳಿಂದ ಅಕ್ಷರನ ಮಹಿಮೆಯನ್ನು ಹೇಳಿ, ಮುಂದೆ 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶಃ' ಎಂದು ಹೇಳಿದ್ದರಿಂದ ಸಕಲಕ್ಕೂ ಆಧಾರವಾದ ಆಕಾಶಕ್ಕೆ ಆಶ್ರಯನಾದವನು ಅಕ್ಷರನೆಂದು ಅಂಬರಾಂತಧೃತಿಯನ್ನು ಸಮರ್ಥಿಸಲಾಗಿದೆಯೆಂದು ತಿಳಿಯಬೇಕು.

**प्रकाशः – मध्यमेति ।। चित्प्रकृतीतरपर इत्यर्थः । वक्ष्यमाणपूर्वपक्षरीत्या फलफलिभावस्यास्फुटत्वादाह – यदीति ।।**

'ಮಧ್ಯಮಾಕ್ಷರ' ಎಂದರೆ ಲಕ್ಷ್ಮೀದೇವಿಯೆಂದರ್ಥ. 'ಮಧ್ಯಮಾಕ್ಷರೇತರಪರ' ಎಂದರೆ ಲಕ್ಷ್ಮೀದೇವಿ ಎಂಬರ್ಥವನ್ನು ಬಿಟ್ಟು ಉಳಿದ ಪದಾರ್ಥಗಳೆಂಬರ್ಥವನ್ನು ವಿವಕ್ಷಿಸಿದರೆ ಎಂದರ್ಥ. ಮುಂದೆ ಸಾಧಿಸುವ ಪೂರ್ವಪಕ್ಷದ ಪ್ರಕಾರ ಫಲಫಲಿಭಾವವು ಅಸ್ಪಷ್ಟವಾಗಿರುವುದರಿಂದ ಸ್ವತಃ ಗ್ರಂಥಕಾರರೇ 'ಯದಿ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः – अत्र हि द्वेधा पूर्वपक्षः । एको भाष्ये ''मध्यमाक्षरस्योक्ता'' इति मध्यमाक्षरपदप्रयोगसूचिताक्षरश्रुतिनिरवकाशत्वमूलः । अन्यस्तु न्यायविवरणोक्तानशनविरोधमूलकः ।**

ಇಲ್ಲಿ ಒಟ್ಟು ಎರಡು ಬಗೆಯ ಪೂರ್ವಪಕ್ಷಗಳಿವೆ - ೧) ಭಾಷ್ಯದಲ್ಲಿ 'ಮಧ್ಯಮಾಕ್ಷರಸ್ಯ ಉಕ್ತಾ' ಎಂಬುದಾಗಿ ಮಧ್ಯಮಾಕ್ಷರವೆಂಬ ಪದವನ್ನು ಪ್ರಯೋಗ ಮಾಡಿದ್ದರಿಂದ ಅಕ್ಷರಶ್ರುತಿಯು ನಿರವಕಾಶವಾಗಿದೆಯೆಂದು ಸೂಚಿಸಿದ್ದಾರೆ. ಇಂತಹ ಅಕ್ಷರಶ್ರುತಿಯ ನಿರವಕಾಶತ್ವ ಮೂಲಕವಾದ ಪೂರ್ವಪಕ್ಷವು ಮೊದಲನೆಯದ್ದು.

೨) ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಅನಶನವಿರೋಧ ಮೂಲಕವಾದ ಪೂರ್ವಪಕ್ಷವು ಎರಡನೆಯದ್ದು.

**प्रकाशः – तत्र द्वितीयपूर्वपक्षानुगुणेयं चिन्तापरम्परा प्रधानत्वात्कण्ठोक्ता । आद्यपूर्वपक्षानुगुणा तु ब्रह्मेति चिन्तानन्तरं तदर्थमक्षरश्रुतिप्रसिद्ध्यनुसारेणाम्बरान्तधृत्यादिरूपलिङ्गं नेयमुत विपरीतमिति चिन्ता । तदर्थं श्रुतिर्निरवकाशा लिङ्गं तु सावकाशमुत विपरीतमिति चिन्ता स्फुटत्वाद्ब्रह्मेति नोक्ता ।**

ಈ ಎರಡೂ ಬಗೆಯ ಪೂರ್ವಪಕ್ಷಗಳಲ್ಲಿ ಎರಡನೆಯ ಪೂರ್ವಪಕ್ಷಕ್ಕೆ ಅನುಗುಣವಾದ ಸಂಶಯಪರಂಪರೆಯು ಪ್ರಧಾನವಾಗಿರುವುದರಿಂದ ಗ್ರಂಥಕಾರರು ಕಂಠತಃ ಹೇಳಿರುತ್ತಾರೆ. ಹಾಗೂ ಮೊದಲನೆಯ ಪೂರ್ವಪಕ್ಷಕ್ಕೆ ಅನುಗುಣವಾದ ಸಂಶಯಪರಂಪರೆಯನ್ನು ಕೇವಲ ಸೂಚನೆ ಮಾಡಿದ್ದಾರೆ. ಅದನ್ನು ಹೀಗೆ ತಿಳಿಯಬೇಕು - ಅಕ್ಷರಪದವು ಲಕ್ಷ್ಮೀಯನ್ನು ಪ್ರತಿಪಾದಿಸುತ್ತದೋ, ಅಥವಾ ವಿಷ್ಣುವನ್ನು ಪ್ರತಿಪಾದಿಸುತ್ತದೋ? ಎಂಬ ಸಂಶಯದ ಅನಂತರ; ಅದಕ್ಕೋಸ್ಕರ ಅಕ್ಷರ ಶ್ರುತಿಪ್ರಸಿದ್ಧಿಗೆ ಅನುಸಾರಿಯಾಗಿ 'ಅಂಬರಾಂತಧೃತಿ' ಮುಂತಾದ ಲಿಂಗವನ್ನು ನಯನ ಮಾಡಬೇಕೋ, ಅಥವಾ ಲಿಂಗಕ್ಕೆ ಅನುಸಾರಿಯಾಗಿಯೇ ಶ್ರುತಿಯನ್ನು ನಯನ ಮಾಡಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು. ಇದಕ್ಕಾಗಿ ಶ್ರುತಿಯು

ನಿರವಕಾಶ, ಹಾಗೂ ಲಿಂಗವು ಸಾವಕಾಶವೆಂದೋ, ಅಥವಾ ಶ್ರುತಿಯು ಸಾವಕಾಶ, ಲಿಂಗವು ನಿರವಕಾಶವೆಂದು ಹೇಳಬೇಕೋ ಎಂಬ ಸಂಶಯವು ಪರಿಹಾರವಾಗಬೇಕು. ಈ ತರಹದ ಸಂಶಯಪರಂಪರೆಯು ಸ್ಪಷ್ಟವಾಗಿರುವುದರಿಂದ ಸ್ವತಃ ಊಹಿಸಿಕೊಳ್ಳಬೇಕೆಂದು ಗ್ರಂಥಕಾರರು ಹೇಳಿರುವುದಿಲ್ಲ.

**गुरुराजीयम् – पूर्वपक्षसिद्धान्तयोः पलफलिभावमाह – यथाय इत्यादि ।**



'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನು ಸ್ವೀಕರಿಸದೇ, ಉಳಿದ ಪದಾರ್ಥಗಳನ್ನಷ್ಟೇ ಅರ್ಥವನ್ನಾಗಿ ವ್ಯಾಖ್ಯಾನಿಸಬೇಕು. ಅಂತಹ ಆಕಾಶಾದಿ ಜಡಪದಾರ್ಥಗಳಿಗೆ ಆಶ್ರಯಳಾದವಳು ಲಕ್ಷ್ಮೀದೇವಿಯೆಂದು ಆವಾಗ ಹೇಳಬಹುದು. ಆದ್ದರಿಂದ ಲಕ್ಷ್ಮೀದೇವಿಯೇ ಅಕ್ಷರಶಬ್ದವಾಚ್ಯಳಾಗುತ್ತಾಳೆಂಬುದು ಪೂರ್ವಪಕ್ಷಕಾರರ ಉದ್ದೇಶ.

'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನವು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯ ತನಕ ಇರುವ ಸಕಲಪದಾರ್ಥಗಳನ್ನು ವಿವಕ್ಷಿಸಬೇಕು. ಅಂತಹ ಸಕಲಪದಾರ್ಥಗಳಿಗೆ ಆಶ್ರಯನಾದವನು ವಿಷ್ಣು ಒಬ್ಬನೇ ಆಗುತ್ತಾನೆ. ಆದ್ದರಿಂದ ವಿಷ್ಣುವೇ ಅಕ್ಷರಶಬ್ದವಾಚ್ಯನಾಗುತ್ತಾನೆಂಬುದು ಸಿದ್ಧಾಂತಿಗಳ ಉದ್ದೇಶ.





## ನಿರವಕಾಶವಾದ ಶ್ರುತಿಯ ಬಲದಿಂದ ಪೂರ್ವಪಕ್ಷ

## तात्पर्यचन्द्रिका

**पूर्वपक्षस्तु । इदमक्षरं श्रीतत्त्वमेव । विष्णोरप्यविनाशित्वेनाक्षरत्वसम्भवेऽपि लोकप्रयोगस्य च श्रीतत्त्वेऽप्यभावेऽपि ''ये त्वक्षरमनिर्देश्यम्'' इत्यादौ श्रीतत्त्वेऽक्षरशब्दवत्क्षराक्षरातीतत्वेन प्रसिद्धे विष्णौ तदभावात् ।**

ಅನುವಾದ - ಪೂರ್ವಪಕ್ಷ ಹೀಗಿದೆ - ಶ್ರುತಿಯಲ್ಲಿರುವ ಕೇಳಿಸುತ್ತಿರುವ ಅಕ್ಷರವು ಲಕ್ಷ್ಮೀದೇವಿಯನ್ನೇ ಪ್ರತಿಪಾದಿಸುತ್ತದೆ ಹೊರತು, ವಿಷ್ಣುವನ್ನಲ್ಲ. ವಾಸ್ತವಿಕವಾಗಿ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವಿನಾಶಿತ್ವವು ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿಯೂ ಸಮಾನವಾಗಿರಬಹುದು. ಆದರೆ ವೈದಿಕಪ್ರಯೋಗವು ಲಕ್ಷ್ಮೀದೇವಿಯಲ್ಲಷ್ಟೇ ಇರುವುದರಿಂದ ಲಕ್ಷ್ಮೀದೇವಿಯ ವಿಷಯದಲ್ಲಿರುವ ಅಕ್ಷರಶ್ರುತಿಯು ನಿರವಕಾಶವಾಗಿದೆ. ಅದು ಹೀಗೆ -

ಲಕ್ಷ್ಮೀದೇವಿಯಲ್ಲಿ 'ಅಕ್ಷರ' ಎಂಬ ಶಬ್ದದ ಲೌಕಿಕಪ್ರಯೋಗವೇನೋ ಇರುವುದಿಲ್ಲ. ಆದರೆ 'ಯೇ ತ್ವಕ್ಷರಮನಿರ್ದೇಶ್ಯಮ್' ಇತ್ಯಾದಿಯಾಗಿ ಅಕ್ಷರಶಬ್ದದ ವೈದಿಕ ಪ್ರಯೋಗವಿರುತ್ತದೆ. ಇಂತಹ ಶ್ರೌತಪ್ರಯೋಗವು ಕ್ಷರಾಕ್ಷರಪದಾರ್ಥಗಳಿಗಿಂತ ಅತೀತನೆಂದು ಪ್ರಸಿದ್ಧನಾದ ಮಹಾವಿಷ್ಣುವಿನಲ್ಲಿ ಇರುವುದಿಲ್ಲ.

**"यया तदक्षरमधिगम्यते" इत्यादेरपि पूर्वपक्षे चित्प्रकृतिपरत्वात् ।**

'ಯಯಾ ತದಕ್ಷರಮಧಿಗಮ್ಯತೇ' ಮತ್ತು 'ಅಕ್ಷರಾತ್ ಸಂಭವತೀಹ ವಿಶ್ವಮ್' ಇತ್ಯಾದಿ ಶ್ರುತಿಗಳಲ್ಲಿರುವ ಅಕ್ಷರಶಬ್ದವು ವಿಷ್ಣುಪರವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿರುವ ಅಕ್ಷರಶಬ್ದವೂ ಸಹ ಲಕ್ಷ್ಮೀದೇವಿಯನ್ನೇ ಪ್ರತಿಪಾದಿಸುತ್ತದೆಂದು ಪೂರ್ವಪಕ್ಷಿಯ ಅಭಿಪ್ರಾಯ.

**अत एवैतस्यादृश्यत्वादिगुणकस्याक्षरस्यान्यत्वे पूर्वोक्तमप्यदृश्यत्वादिगुणकमक्षरमप्यन्यत्स्यादित्यदृश्यत्वाधिकरणमाक्षिप्तं भाष्यादौ ।**

ಆದ್ದರಿಂದಲೇ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರವು ವಿಷ್ಣುವಾಗದಿದ್ದರೆ, ಹಿಂದಿನ ಅದೃಶ್ಯತ್ವಾಧಿಕರಣದಲ್ಲಿ ಸಾಧಿಸಲ್ಪಟ್ಟ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರವೂ ಸಹ ವಿಷ್ಣುವನ್ನು ಬಿಟ್ಟು ಬೇರೆಯದೇ ಆಗುತ್ತದೆ. ಆದ್ದರಿಂದ ಈ ಅಧಿಕರಣಕ್ಕೆ ಅದೃಶ್ಯತ್ವಾಧಿಕರಣವನ್ನು ಆಕ್ಷೇಪಿಸಿಯೇ ಸಂಗತಿಗಳನ್ನು ಭಾಷ್ಯಾದಿಗಳಲ್ಲಿ ತೋರಿಸಿದ್ದಾರೆ.

**अन्यथा "एतस्य वा अक्षरस्य प्रशासने गार्गि द्यावापृथिव्यौ विधृते तिष्ठतः" इति द्यावापृथिव्याश्रयत्वेन श्रुतस्याक्षरस्यान्यत्वे द्युभ्वाद्यायतनमप्यन्यत्स्यादिति सन्निहितं द्युभ्वाद्यधिकरणमाक्षिप्येत ।**

ಇಲ್ಲದಿದ್ದರೆ 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ' ಇತ್ಯಾದಿಯಾಗಿ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನೆಂದು ಶ್ರುತನಾದ ಅಕ್ಷರನು ಬೇರೆಯವನಾದರೆ ದ್ಯುಭ್ವಾದ್ಯಾಯತನವೂ ಸಹ ಬೇರೆಯವನೇ ಆಗುತ್ತಾನೆ ಹೊರತು, ವಿಷ್ಣುವಾಗುವುದಿಲ್ಲವೆಂದು ಸನ್ನಿಹಿತವಾದ ದ್ಯುಭ್ವಾದ್ಯಧಿಕರಣವನ್ನು ಆಕ್ಷೇಪಿಸಬೇಕಿತ್ತು.

**प्रवृत्तिनिमित्तसाधारण्यप्रयुक्ता चोभयत्रप्रसिद्धिर्न पूर्वपक्षदशायां ब्रह्मणि प्रयोगमपेक्षते ।**

ಅಕ್ಷರ ಶಬ್ದವು ಉಭಯತ್ರಪ್ರಸಿದ್ಧವಾಗಬೇಕಾದರೆ ಬ್ರಹ್ಮನಲ್ಲಿಯೂ ಸಹ ಪ್ರಯೋಗವನ್ನು ತೋರಿಸಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವು ಉಭಯ-ಸಾಧಾರಣವಾಗಿದೆಯೆಂದು ತೋರಿಸುವುದರಿಂದಷ್ಟೇ ಅಕ್ಷರಶಬ್ದವನ್ನು ಉಭಯತ್ರಪ್ರಸಿದ್ಧವೆನ್ನಬೇಕು

ಎನ್ನುವ ಉಭಯತ್ರಪ್ರಸಿದ್ಧಿಗೆ ಪೂರ್ವಪಕ್ಷದೆಸೆಯಲ್ಲಿ ಬ್ರಹ್ಮನಲ್ಲಿ ಪ್ರಯೋಗವನ್ನು ತೋರಿಸುವ ಅವಶ್ಯಕತೆ ಇರುವುದಿಲ್ಲ.

**अत एव भाष्ये श्रीतत्त्वस्येति वक्तव्ये पूर्वपक्षे हेतुं दर्शयितुमक्षरस्येत्युक्तम् ।**

ಆದ್ದರಿಂದಲೇ ಭಾಷ್ಯದಲ್ಲಿ ಪೂರ್ವಪಕ್ಷವನ್ನು ತೋರಿಸುವಾಗ 'ಶ್ರೀತತ್ತ್ವಸ್ಯ' ಎಂದು ಹೇಳುವ ಬದಲು 'ಮಧ್ಯಮಾಕ್ಷರಸ್ಯ' ಎಂದು ಹೇಳಿದ್ದಾರೆ. ಅಂದರೆ ಲಕ್ಷ್ಮೀದೇವಿಯ ವಿಷಯದಲ್ಲಿರುವ ಅಕ್ಷರಶಬ್ದವು ನಿರವಕಾಶವಾಗಿದೆಯೆಂದು ಪೂರ್ವಪಕ್ಷದಲ್ಲಿ ಹೇತುವನ್ನು ಇದರಿಂದ ಸೂಚಿಸಿದ್ದಾರೆ.

**प्रकाशः –**

ननु नेह पूर्वपक्षोदयः । अक्षरश्रुतेर्योगेन ब्रह्मण्युपपत्तेः । लौकिकप्रयोगबाहुल्य-रूपरूढेरुभयत्राप्यभावात् । "अदृष्टं द्रष्टृ" इत्यादिना अदृश्यत्वश्रवणाच्च । तस्य चादृश्यत्वनये वैष्णवत्वस्य समर्थनात् । द्यावापृथिव्याद्याधारत्वश्रवणाच्च । तस्य च द्युभ्वादिनये विष्णुधर्मताया निर्णीतत्वादित्याशङ्क्य द्वेधा पूर्वपक्षटीकां विवृणोति – **पूर्वपक्षस्त्वित्यादिना ॥**

ವಿವರಣೆ - ಪ್ರಶ್ನೆ - ಈ ಅಧಿಕರಣದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ. ಏಕೆಂದರೆ ಅಕ್ಷರಶ್ರುತಿಯು ಯೋಗಾರ್ಥದಿಂದ ಬ್ರಹ್ಮನಲ್ಲಿಯೂ ಉಪಪನ್ನವಾಗುತ್ತದೆ. ಲೌಕಿಕಪ್ರಯೋಗ ಬಾಹುಲ್ಯವೆಂಬ ರೂಢಿಯು ವಿಷ್ಣು ಹಾಗೂ ಲಕ್ಷ್ಮೀ ಇಬ್ಬರಲ್ಲಿಯೂ ಸಹ ಬರುವುದಿಲ್ಲ. ಮತ್ತು 'ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಅದೃಶ್ಯತ್ವಾದಿ ಧರ್ಮಗಳೂ ಸಹ ಶ್ರುತವಾಗುತ್ತಿದೆ. ಈ ಎಲ್ಲಾ ಧರ್ಮಗಳು ಅದೃಶ್ಯತ್ವಾಧಿಕರಣದ ನ್ಯಾಯದಂತೆ ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ಸಿದ್ಧವಾಗಿವೆ. ಇದರಂತೆ ದ್ಯಾವಾಪೃಥಿವ್ಯಾದ್ಯಾಧಾರತ್ವವೂ ಸಹ ಶ್ರುತವಾಗಿವೆ. ಈ ಧರ್ಮಗಳೆಲ್ಲವೂ ದ್ಯುಭ್ವಾದ್ಯಧಿಕರಣದ ನ್ಯಾಯದಂತೆ ವಿಷ್ಣುವಿನ ಧರ್ಮವೆಂದು ನಿರ್ಣೀತವಾಗಿವೆ. ಹೀಗಿರುವಾಗ ಯಾವ ಆಧಾರದಿಂದ ಪೂರ್ವಪಕ್ಷವು ಹುಟ್ಟಲು ಸಾಧ್ಯ ?

ಉತ್ತರ - ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಪೂರ್ವಪಕ್ಷವನ್ನು ಸಮರ್ಥಿಸುವ ಟೀಕೆಯನ್ನು ಎರಡು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. ಅಂದರೆ ಎರಡು ಬಗೆಯ ಪೂರ್ವಪಕ್ಷಗಳನ್ನು 'ಪೂರ್ವಪಕ್ಷಸ್ತು' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – "तत्राक्षरशब्दस्य प्रसिद्धेः" इति टीकोक्तहेतु समर्थयते ॥ विष्णोरित्यादिनाऽक्षरस्येत्युक्तमित्यन्तेन ॥ इत्यादाविति ॥ टीकोदाहृतगीतारूप-स्मृतावित्यर्थः ।

'ತತ್ರ ಅಕ್ಷರಶಬ್ದಸ್ಯ ಪ್ರಸಿದ್ಧೇಃ' 'ಅಕ್ಷರಶಬ್ದವು ಲಕ್ಷ್ಮೀದೇವಿಯಲ್ಲಿ ಪ್ರಸಿದ್ಧವಾಗಿದೆ.' ಇತ್ಯಾದಿ ಟೀಕೆಯಲ್ಲಿ ಹೇಳಲ್ಪಟ್ಟ ಹೇತುವನ್ನು 'ವಿಷ್ಣೋಃ' ಇತ್ಯಾದಿ ವಾಕ್ಯದಿಂದ ಪ್ರಾರಂಭಿಸಿ 'ಅಕ್ಷರಸ್ಯ ಇತ್ಯುಕ್ತಮ್' ಎಂಬಲ್ಲಿಯ ತನಕದ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ಇತ್ಯಾದೌ' ಎಂದರೆ ಟೀಕೆಯಲ್ಲಿ ಉದಾಹರಿಸಲ್ಪಟ್ಟ, ಹದಿಮೂರನೆಯ ಅಧ್ಯಾಯದಲ್ಲಿರುವ ಭಗವದ್ಗೀತೆಯ ಶ್ಲೋಕದಲ್ಲಿ ಎಂದರ್ಥ.

**प्रकाशः – एतेन प्रसिद्धेरित्यस्य वैदिकप्रसिद्धेरित्यर्थ उक्तो भवति । प्रसिद्ध इति ।।**

"यस्मात्क्षरमतीतोऽहमक्षरादपि चोत्तमः ।
अतोऽस्मि लोके वेदे च प्रथितः पुरुषोत्तमः ।
क्षरस्सर्वाणि भूतानि कूटस्थोऽक्षर उच्यते । उत्तमः पुरुषस्त्वन्यः"

इति गीतायाम् "अक्षरात्परो हरिः" इति प्रागुदाहृतस्मृतौ च प्रसिद्ध इत्यर्थः ।

ಹೀಗೆ ಹೇಳಿದ್ದರಿಂದ 'ಪ್ರಸಿದ್ಧೇಃ' ಎಂಬ ಟೀಕೆಯಲ್ಲಿರುವ ಪದಕ್ಕೆ 'ವೈದಿಕಪ್ರಸಿದ್ಧಿ ಇರುವುದರಿಂದ' ಎಂಬರ್ಥವನ್ನು ಹೇಳಿದಂತಾಯಿತು. 'ಪ್ರಸಿದ್ಧಃ' ಎಂಬ ಗ್ರಂಥದ ಅಭಿಪ್ರಾಯ ಹೀಗೆ - ವಿಷ್ಣು ಕ್ಷರಾಕ್ಷರಪುರುಷರಿಗಿಂತ ಉತ್ತಮನೆಂದು ಪ್ರಸಿದ್ಧನಾಗಿದ್ದಾನೆಯೇ ಹೊರತು, ಅಕ್ಷರನೆಂದು ಪ್ರಸಿದ್ಧನಾಗಿಲ್ಲ. ಏಕೆಂದರೆ

"ಯಸ್ಮಾತ್ ಕ್ಷರಮತೀತೋಽಹಮ್ ಅಕ್ಷರಾದಪಿ ಚೋತ್ತಮಃ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ॥
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ। ಉತ್ತಮಃ ಪುರುಷಸ್ತ್ವನ್ಯಃ"

ಇತ್ಯಾದಿ ಗೀತೆಯಲ್ಲಿ ಕ್ಷರಾಕ್ಷರಪುರುಷರಿಗಿಂತಲೂ ವಿಷ್ಣು ಉತ್ತಮನೆಂದು ನಿರ್ದೇಶಿಸಲ್ಪಟ್ಟಿದ್ದಾನೆ. ಮತ್ತು 'ಅಕ್ಷರಾತ್‌ಪರೋ ಹರಿಃ' ಎಂಬ ಹಿಂದೆ ಉದಾಹರಿಸಲ್ಪಟ್ಟ ಸ್ಮೃತಿಯಲ್ಲಿಯೂ ಸಹ ಹಾಗೆಯೇ ಪ್ರತಿಪಾದಿಸಲಾಗಿದೆ.

**प्रकाशः – ब्रह्मण्यप्यस्त्यक्षरत्वप्रसिद्धिः इत्यतो नेत्याह – ययेति ।। अत एवेति ।। पूर्वपक्षे तत्र ब्रह्मपरत्वासम्मतेरेवेत्यर्थः । यद्वा अक्षरश्रुतेर्निरवकाशत्व-सम्पत्त्यर्थत्वादेवेत्यर्थः ।**

ಬ್ರಹ್ಮನಲ್ಲಿಯೂ ಸಹ ಅಕ್ಷರಶಬ್ದವು ಪ್ರಸಿದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಶ್ರೌತಪ್ರಸಿದ್ಧಿ ಇಲ್ಲ ಎಂದು 'ಯಯಾ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಅತ ಏವ' ಎಂದರೆ ಪೂರ್ವಪಕ್ಷಕಾರನು ಯಾವುದೇ ವಾಕ್ಯಗಳಲ್ಲಿರುವ ಅಕ್ಷರಶಬ್ದಕ್ಕೆ ಬ್ರಹ್ಮಪರತ್ವವನ್ನು ಒಪ್ಪದ ಕಾರಣದಿಂದಲೇ ಎಂದರ್ಥ.

ಪರಿಪೂರ್ಣಚಂದ್ರಿಕಾ

ಅಥವಾ "ಅತ ಏವ" ಎಂಬ ಶಬ್ದಕ್ಕೆ ಅಕ್ಷರಶ್ರುತಿಯು ನಿರವಕಾಶವಾಗಿದೆಯೆಂದು ಸಮರ್ಥಿಸು-ವುದಕ್ಕಾಗಿಯೇ ಎಂಬರ್ಥವನ್ನೂ ಸಹ ತಿಳಿಯಬಹುದು.

**प्रकाशः** – प्रयोजनार्थं तदाक्षेप उपपन्न इत्यत आह – **अन्यथेति** ।। फलमात्रार्थत्व इत्यर्थः ।

ಆಚಾರ್ಯರು ಭಾಷ್ಯದಲ್ಲಿ ಅದೃಶ್ಯತ್ವಾಧಿಕರಣದಿಂದ ಪ್ರಯೋಜನವನ್ನು ತೋರಿಸುವುದಕ್ಕಾಗಿ ಹಾಗೇ ಹೇಳಿರಬಹುದು. ಸಂಗತಿ ಪರವಾಗಿಯೇ ಏಕೆ ವ್ಯಾಖ್ಯಾನಿಸಬೇಕು? ಎಂಬ ಪ್ರಶ್ನೆಗೆ 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಅನ್ಯಥಾ' ಎಂದರೆ 'ಒಂದು ವೇಳೆ ಫಲವನ್ನಷ್ಟೇ ತೋರಿಸುವ ಉದ್ದೇಶವಿದ್ದಲ್ಲಿ' ಎಂದರ್ಥ.

**प्रकाशः** – ननु यथा पादान्त्यप्राणाधिकरणे पूर्वपक्षे "तद्वै त्वं प्राणो अभवः" इत्यत्र प्राणशब्दस्य विष्णुत्वाक्षेपादुभयत्रप्रसिद्ध्यभावस्तथाऽत्रापि स्यात् । ब्रह्मणि क्वाप्यक्षरपदप्रयोगासंमतेरित्यत आह – **प्रवृत्तीति** ।।

ಒಂದು ವೇಳೆ, ಅಕ್ಷರಶಬ್ದವು ವಿಷ್ಣುವಿನಲ್ಲಿ ಉಪಪನ್ನವೇ ಆಗುವುದಿಲ್ಲ. ಕೇವಲ ಲಕ್ಷ್ಮೀದೇವಿಯಲ್ಲಿ ಮಾತ್ರ ಬರುತ್ತದೆಂದು ಹೇಳುವುದಾದರೆ ಇದು ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ? ಯಾವ ರೀತಿಯಾಗಿ ಪಾದಾಂತ್ಯಪ್ರಾಣಾಧಿಕರಣದ ಪೂರ್ವಪಕ್ಷದಲ್ಲಿ 'ತದ್ವೈ ತ್ವಂ ಪ್ರಾಣೋ ಅಭವಃ' ಎಂಬಲ್ಲಿರುವ ಪ್ರಾಣಶಬ್ದಕ್ಕೆ ವಿಷ್ಣುತ್ವವನ್ನು ಆಕ್ಷೇಪಿಸಿದ್ದರಿಂದ ಅಂದರೆ ವಿಷ್ಣುಪರತ್ವವನ್ನು ಒಪ್ಪದ ಕಾರಣ ಉಭಯತ್ರಪ್ರಸಿದ್ಧವೆಂದು ಪರಿಗಣಿಸದೆ ಅನ್ಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೋ, ಅದರಂತೆ ಇಲ್ಲಿಯೂ ಸಹ ಅಕ್ಷರಶಬ್ದವು ಅನ್ಯತ್ರಪ್ರಸಿದ್ಧವೆಂದೇ ಆಗುತ್ತದೆ. ಏಕೆಂದರೆ ಯಾವುದೇ ವಾಕ್ಯದಲ್ಲಿರುವ ಅಕ್ಷರಶಬ್ದಕ್ಕೆ ವಿಷ್ಣುಪರತ್ವವನ್ನು ಪೂರ್ವಪಕ್ಷಿಯು ಒಪ್ಪಿಲ್ಲವಲ್ಲ? ಎಂಬ ಪ್ರಶ್ನೆಗೆ 'ಪ್ರವೃತ್ತಿನಿಮಿತ್ತ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – यथा ज्योतिर्दर्शनादित्यत्र ज्योतिश्शब्दस्य जीवेशरूपोभयत्र-प्रसिद्धिस्तथेति भावः । हेतूक्तिपरटीकाया उद्भाष्यत्वभ्रमं निराह – **अत एवेति** ।।

ಪ್ರವೃತ್ತಿನಿಮಿತ್ತಸಾಧಾರಣ್ಯದಿಂದಷ್ಟೇ ಅಕ್ಷರಶಬ್ದವನ್ನು ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಿದ್ದಾರೆ. ಯಾವರೀತಿಯಾಗಿ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಜ್ಞಾನರೂಪತ್ವವೆಂಬ ಪ್ರವೃತ್ತಿನಿಮಿತ್ತದ ಸಾಧಾರಣ್ಯದಿಂದ 'ಜ್ಯೋತಿ' ಎಂಬ ಶಬ್ದವು ಜೀವ ಹಾಗೂ ಪರಮಾತ್ಮ ಇಬ್ಬರಲ್ಲಿಯೂ ಸಾಧಾರಣ-ವಾಗಿದೆಯೆಂದು ಪರಿಗಣಿಸಿ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಿದ್ದಾರೋ, ಅದರಂತೆ ಇಲ್ಲಿಯೂ ಸಹ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತದ ಸಾಧಾರಣ್ಯದಿಂದಷ್ಟೇ ಉಭಯತ್ರಪ್ರಸಿದ್ಧವೆಂದು ತಿಳಿಯಬೇಕು.

ಹೇತುವನ್ನು ಹೇಳುವಂತಹ ಟೀಕೆಗೆ ಭಾಷ್ಯವೇ ಮೂಲವಾಗಿದೆಯೆಂದು ತಿಳಿಸುತ್ತಾ, ಉದ್ಭಾಷ್ಯತ್ವಭ್ರಮೆಯನ್ನು ನಿರಾಕರಿಸುತ್ತಿದ್ದಾರೆ 'ಅತ ಏವ' ಎಂಬ ವಾಕ್ಯದಿಂದ.

**गुरुराजीयम्** – आद्यं तावट्टीकोक्तहेतुमुपपादयति – **इदमक्षरमित्यादिना** ।। 'यया तदक्षरमधिगम्यते' इत्यादेः पूर्वपक्षे चित्प्रकृतिपरत्वे ज्ञापकमाह – **अत एवेति** ।। 'यया तदक्षरमधिगम्यते' इत्यादिवाक्योक्तपरविद्याविषयत्वादेः पूर्वपक्षे चित्प्रकृतिपरत्वस्याभिप्रेतत्वादेवेत्यर्थः ।। **अन्यथेति** ।। यया तदक्षरमित्यादेः प्रकृतिपरत्वस्यानभिप्रेतत्व इत्यर्थः । ननु ये त्वक्षरमनिर्देश्यमित्यादौ श्रीतत्वेऽक्षरशब्दवत् क्षराक्षरातीतत्वेन प्रसिद्धे विष्णावक्षरशब्दाभावाच्छ्रीतत्वस्यैवाक्षरत्वमिति पूर्वपक्षकरणेऽक्षरशब्दस्योभयत्रप्रसिद्धता न स्यादित्यत आह – **प्रवृत्तिनिमित्तेति** ।। **अत एवेति** ।। श्रीतत्ववद्विष्णावक्षरशब्दाप्रयोगादेवेत्यर्थः ।




ಅಕ್ಷರಶಬ್ದದಿಂದ ಪ್ರತಿಪಾದ್ಯಳಾದವಳು ಲಕ್ಷ್ಮೀದೇವಿಯೆಂದು ಪೂರ್ವಪಕ್ಷ. ವಿಷ್ಣುವು ಕ್ಷರಾಕ್ಷರ ಪುರುಷಾತೀತನಾದ್ದರಿಂದ ಅಕ್ಷರನೆನಿಸುವುದಿಲ್ಲ. ಲಕ್ಷ್ಮೀದೇವಿ ಮಾತ್ರ ಅಕ್ಷರಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ. 'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿ ವಾಕ್ಯಗಳಲ್ಲಿರುವ ಅಕ್ಷರಶಬ್ದದಿಂದಲೂ ಸಹ ಲಕ್ಷ್ಮೀದೇವಿಯೇ ಪ್ರತಿಪಾದ್ಯಳು ಹೊರತು; ವಿಷ್ಣುವಲ್ಲ. ಆದ್ದರಿಂದ ಯಾವುದೇ ಶ್ರುತಿಗಳಲ್ಲಿರುವ ಅಕ್ಷರಶಬ್ದವು ಲಕ್ಷ್ಮೀದೇವಿಯನ್ನಷ್ಟೇ ಪ್ರತಿಪಾದಿಸುವ ಪ್ರಯುಕ್ತ ಅಕ್ಷರಶ್ರುತಿಯು ನಿರವಕಾಶವಾಗಿದೆ. ಇಂತಹ ನಿರವಕಾಶವಾದ ಶ್ರುತಿಯ ಬಲದಿಂದ ಲಕ್ಷ್ಮೀದೇವಿಯು ಅಕ್ಷರಳೆಂದು ನಿರ್ಣಯಿಸಬೇಕು.

ವೈದಿಕಪ್ರಯೋಗವನ್ನೆಲ್ಲಾ ಲಕ್ಷ್ಮೀದೇವಿಯಲ್ಲಿಯೇ ಪೂರ್ವಪಕ್ಷದಲ್ಲಿ ಹೇಳುವುದಾದರೆ, ಉಭಯತ್ರಪ್ರಸಿದ್ಧವೆಂದು ಹೇಗೆ ಪರಿಗಣಿಸುವುದು ಎಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಆದರೆ ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತದಿಂದ ಸಾಧಾರಣ್ಯದಿಂದಷ್ಟೇ ಅಕ್ಷರಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೆ ಹೊರತು, ಅಕ್ಷರಶಬ್ದದ ಪ್ರಯೋಗವು ಎರಡೂ ಕಡೆ ಸಮಾನವಾದ್ದರಿಂದ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಬಾರದು.



**तात्पर्यचन्द्रिका**

**अस्तु वा ''अक्षरत्रयमीरितम्'' इति वचनादन्यत्राक्षरशब्दो ब्रह्मणि । अत एवोत्तमाक्षरेऽक्षरशब्दमङ्गीकृत्य तद्व्यावृत्त्यर्थं भाष्ये मध्यमशब्दः ।**

ಅನುವಾದ - ಅಥವಾ 'ಅಕ್ಷರತ್ರಯಮೀರಿತಮ್' ಇತ್ಯಾದಿ ವಾಕ್ಯಗಳಿರುವುದರಿಂದ ಇಲ್ಲಿರುವ ಅಕ್ಷರಶಬ್ದವು ಬ್ರಹ್ಮನನ್ನೂ ಸಹ ಪ್ರತಿಪಾದಿಸುತ್ತದೆಂಬುದನ್ನು ಒಪ್ಪೋಣ. ಆದ್ದರಿಂದಲೇ ಭಾಷ್ಯದಲ್ಲಿ ಕೇವಲ 'ಅಕ್ಷರಸ್ಯ' ಎಂಬ ಪದವನ್ನು ಪ್ರಯೋಗಿಸದೇ 'ಮಧ್ಯಮಾಕ್ಷರಸ್ಯ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಲಕ್ಷ್ಮೀದೇವಿಯು ಮಧ್ಯಮಾಕ್ಷರಳೆನಿಸಿದರೂ ವಿಷ್ಣು ಉತ್ತಮಾಕ್ಷರನಾಗಿದ್ದಾನೆಂದು ಒಪ್ಪಿದಂತಾಯಿತು. ಆದ್ದರಿಂದ ಅಕ್ಷರಶಬ್ದದ ಪ್ರಯೋಗವನ್ನು ಲಕ್ಷ್ಮೀದೇವಿಯಲ್ಲಿ ಒಪ್ಪುವಂತೆ ವಿಷ್ಣುವಿನಲ್ಲಿಯೂ ಸಹ ಒಪ್ಪೋಣ.

**तथापीहाक्षरं न ब्रह्म । ''सूर्याचन्द्रमसौ विधृतौ तिष्ठतः'' इति ''एतस्य वा अक्षरस्य प्रशासने गार्गि द्यावापृथिव्यौ विधृते तिष्ठतः'' इति चाक्षरे श्रुतस्य चन्द्रसूर्याद्याधारत्वस्य ''अहं सोममाहनसं बिभर्मि'' इत्यादिना श्रीतत्व इव द्युभ्वाद्यधिकरणन्यायेन ब्रह्मण्यपि सम्भवेऽपि**

ಆದರೆ ಪ್ರಕೃತ, ಬೃಹದಾರಣ್ಯಕಶ್ರುತಿಯಲ್ಲಿರುವ ಅಕ್ಷರಶಬ್ದವು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ. 'ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಎಂಬಲ್ಲಿ ಮತ್ತು 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ' ಎಂಬಲ್ಲಿ ಅಕ್ಷರನಿಗೆ ಶ್ರುತವಾದ ಚಂದ್ರ, ಸೂರ್ಯಾದ್ಯಾಧಾರತ್ವವು 'ಅಹಂ ಸೋಮಮಾಹನಸಂ ಬಿಭರ್ಮಿ' ಇತ್ಯಾದಿ ವಾಕ್ಯಗಳ ಆಧಾರದಿಂದ ಲಕ್ಷ್ಮೀದೇವಿಯಲ್ಲಿ ಉಪಪನ್ನವಾಗುವಂತೆ ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ವಿಷ್ಣುವಿನಲ್ಲಿಯೂ ಸಹ ಉಪಪನ್ನವಾಗುತ್ತದೆ. ಆದರೂ ಸಹ;

**''अदृष्टं द्रष्टृश्रुतं श्रोतृ'' इत्यक्षरे श्रुतस्यादृश्यत्वादेश्च ''ये त्वक्षरमनिर्देश्यम्'' इत्यादिना श्रीतत्व इवादृश्यत्वाद्यधिकरणन्यायेन ब्रह्मण्यपि सम्भवेऽपि ''न तदश्नाति किञ्चन'' इत्यक्षरे श्रुतस्यानत्तृत्वस्य ''अत्ता चराचर'' इत्यत्र सर्वात्तृत्वेनोक्ते ब्रह्मण्यसम्भवात् ।**

'ಅದೃಷ್ಟಂ ದ್ರಷ್ಟೃ ಶ್ರುತಂ ಶ್ರೋತೃ' ಇತ್ಯಾದಿಯಾಗಿ ಅಕ್ಷರನಲ್ಲಿ ಶ್ರುತವಾದ ಅದೃಶ್ಯತ್ವಾದಿಗಳೂ ಸಹ 'ಯೇ ತ್ವಕ್ಷರಮನಿರ್ದೇಶ್ಯಮ್' ಇತ್ಯಾದಿ ವಾಕ್ಯಗಳು ಹೇಳುವಂತೆ ಲಕ್ಷ್ಮೀದೇವಿಯಲ್ಲಿ ಹೇಗೆ

ಇರುತ್ತವೋ, ಅದರಂತೆ ಅದೃಶ್ಯತ್ವಾಧಿಕರಣದ ನ್ಯಾಯದಿಂದ ವಿಷ್ಣುವಿನಲ್ಲಿಯೂ ಸಹ ಯುಕ್ತವಾಗುತ್ತವೆಂದೂ ಸಹ ಒಪ್ಪೋಣ.

ಆದರೂ ಸಹ 'ನ ತದಶ್ನಾತಿ ಕಿಂಚನ' ಇತ್ಯಾದಿ ವಾಕ್ಯದಲ್ಲಿ ಅಕ್ಷರನಲ್ಲಿ ಶ್ರುತವಾದ ಅನತ್ತೃತ್ವವು (ತಿನ್ನದಿರುವಿಕೆಯು) 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ ಸಕಲವನ್ನು ಭಕ್ಷಿಸುವನೆಂದು ಹೇಳಿದಂತೆ ವಿಷ್ಣುವಿನಲ್ಲಿ ಉಪಪನ್ನವಾಗುವುದಿಲ್ಲ.

ಒಟ್ಟು ಅಭಿಪ್ರಾಯ - ಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಚಂದ್ರಸೂರ್ಯಾದ್ಯಾಧಾರತ್ವ-ವನ್ನಾಗಲೀ, ಅದೃಶ್ಯತ್ವಾದಿಗಳನ್ನಾಗಲೀ, ಸಮಾನವಾಗಿ ಹೇಳಲು ಬರಬಹುದು. ಆದರೆ ಅನತ್ತೃತ್ವವನ್ನು ಮಾತ್ರ ವಿಷ್ಣುವಿನಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷ್ಮೀದೇವಿಯೇ ಇಲ್ಲಿರುವ ಅಕ್ಷರಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆ.

**न चैतदशुभानशनपरम् । किञ्चनेत्युक्तम् ।**

ಶ್ರುತಿಯಲ್ಲಿರುವ ಹೇಳಲ್ಪಟ್ಟ ಅನತ್ತೃತ್ವವನ್ನು ವಿಷ್ಣುವಿನಲ್ಲಿಯೂ ಸಹ ಕೂಡಿಸಬಹುದು. ಶುಭಫಲವನ್ನಷ್ಟೇ ತಿನ್ನುವಂತಹ ವಿಷ್ಣುವಿನಲ್ಲಿ ಅಶುಭಫಲಭೋಕ್ತೃತ್ವ ಇರುವುದಿಲ್ಲ. ಅಶುಭಫಲಗಳನ್ನು ತಿನ್ನದ ಕಾರಣ ಅನತ್ತೃತ್ವವನ್ನು ವಿಷ್ಣುವಿನಲ್ಲಿ ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಕಿಂಚನ' ಎಂಬ ಶಬ್ದದಿಂದ ಯಾವುದನ್ನೂ ಸಹ ಅವನು ತಿನ್ನಲು ತಿನ್ನುವುದಿಲ್ಲವೆಂದು ಶ್ರುತಿ ಹೇಳುತ್ತಿದೆ. ಆದ್ದರಿಂದ ಅಶುಭಫಲವನ್ನು ತಿನ್ನುವುದಿಲ್ಲವೆಂದು ಸಂಕೋಚ ಮಾಡಿ ಅರ್ಥೈಸಲಾಗದು.

**मध्यमाक्षरस्य तु "आत्मा वा इदमेक एवाग्र आसीन्नान्यत्किञ्चन मिषत्" इति श्रुतौ स्वतन्त्रोन्मेषाभावेनानुन्मेषोक्तिवत्स्वतन्त्राशनाभावेन वा ब्रह्मवत्संहर्तृत्वाभावेन वा अत्तेत्यत्र संहाररूपतयोक्तस्याशनस्याभावो युक्तः ।**

ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲಿ ಇಂತಹ ಅನತ್ತೃತ್ವವನ್ನು ಅನೇಕ ಬಗೆಯಲ್ಲಿ ಉಪಪಾದಿಸಬಹುದು. ಉದಾಹರಣೆ - 'ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್' ಪ್ರಳಯಕಾಲದಲ್ಲಿ ಪರಮಾತ್ಮನೊಬ್ಬನೇ ಜಾಗರೂಕನಾಗಿದ್ದನು. ಬೇರೆ ಯಾರೂ ಸಹ ಜಾಗೃತರಾಗಿರಲಿಲ್ಲ ಎಂಬ ಶ್ರುತಿಯಲ್ಲಿ ಲಕ್ಷ್ಮೀದೇವಿಯೂ ಸಹ ಜಾಗೃತಳಾಗಿರಲಿಲ್ಲವೆಂದು ಹೇಳಿದಂತೆ ಕಾಣಿಸುತ್ತದೆ. ಆದರೆ ಪರಮಾತ್ಮನ ಜೊತೆಗೆ ಅವಳೂ ಸಹ ಜಾಗೃತಳಾಗಿರುವಾಗ 'ಕಿಂಚನ' ಎಂಬ ಪದವನ್ನು ಯಾವ ದೃಷ್ಟಿಯಿಂದ ಶ್ರುತಿಯು ಪ್ರಯೋಗಿಸುತ್ತಿದೆ ಎಂದರೆ. ಸ್ವತಂತ್ರವಾಗಿ ಲಕ್ಷ್ಮೀದೇವಿಯು ಜಾಗೃತಳಾಗಿರುವುದಿಲ್ಲ. ಪರಮಾತ್ಮನ ಅಧೀನವಾಗಷ್ಟೇ ಜಾಗೃತಳಾಗಿರುತ್ತಾಳೆ. ಅಂದರೆ ಪರಮಾತ್ಮನೊಬ್ಬನೇ ಸ್ವತಂತ್ರನಾಗಿ ಜಾಗರೂಕನಾಗಿರುತ್ತಾನೆಂಬ ವ್ಯಾಖ್ಯಾನವನ್ನು ಹೇಗೆ

ಮಾಡಬೇಕೋ, ಆದರಂತೆ ಪ್ರಕೃತದಲ್ಲಿಯೂ 'ನ ತದಶ್ನಾತಿ ಕಿಂಚನ' ಎಂದರೆ ಸ್ವತಂತ್ರವಾಗಿ ಸಕಲಭಕ್ಷಕನು ಪರಮಾತ್ಮನೊಬ್ಬನೇ, ಲಕ್ಷ್ಮೀದೇವಿಯು ಸ್ವತಂತ್ರವಾಗಿ ಏನನ್ನೂ ಸಹ ತಿನ್ನುವುದಿಲ್ಲ. ಆದ್ದರಿಂದ ಸ್ವತಂತ್ರವಾಗಿ ಏನೂ ಸಹ ತಿನ್ನುವುದಿಲ್ಲವೆಂಬ ದೃಷ್ಟಿಯಿಂದಲೇ ಶ್ರುತಿಯು ಅನತ್ತೃತ್ವವನ್ನು ಲಕ್ಷ್ಮೀದೇವಿಯಲ್ಲಿ ಹೇಳುತ್ತಿದೆ. ಅಥವಾ 'ಅಶನ' ಶಬ್ದಕ್ಕೆ ಸಂಹಾರವೆಂದರ್ಥ. ಸರ್ವಾತ್ತೃತ್ವರೂಪ ಸಂಹಾರಕತ್ವವು 'ಅತ್ತಾಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ ಹೇಳಿದಂತೆ ವಿಷ್ಣುವಿನಲ್ಲಿ ಮಾತ್ರವಿರುತ್ತದೆ. ವಿಷ್ಣುವಿನಲ್ಲಿರುವಂತೆ ಲಕ್ಷ್ಮೀದೇವಿಯಲ್ಲಿ ಅತ್ತೃತ್ವರೂಪವಾದ ಸಂಹಾರಕತ್ವವು ಇಲ್ಲದ ಕಾರಣ ಅನಶನತ್ವವನ್ನು ಶ್ರುತಿಯು ಹೇಳುತ್ತಿದೆಯೆಂದು ತಿಳಿಯಬೇಕು.

**तदुक्तं न्यायविवरणे ''अत्तेत्युक्त्वा न तदश्नाति किञ्चनेति विरुद्धता'' इति ।**

ಇದನ್ನೇ ನ್ಯಾಯವಿವರಣದಲ್ಲಿ 'ಅತ್ತೇತ್ಯುಕ್ತ್ವಾ ನ ತದಶ್ನಾತಿ ಕಿಂಚನೇತಿ ವಿರುದ್ಧತಾ' ಎಂದು ಹೇಳಿದ್ದಾರೆ. ಅಂದರೆ ಅತ್ತೃತ್ವಾಧಿಕರಣದಲ್ಲಿ ಅತ್ತೃತ್ವವನ್ನು ಹೇಳಿ, ಈಗ 'ನ ತದಶ್ನಾತಿ ಕಿಂಚನ' ಎಂಬುದಾಗಿ ಅನತ್ತೃತ್ವವನ್ನು ಅದೇ ವಿಷ್ಣುವಿನಲ್ಲಿ ಹೇಳಿದರೆ ವಿರುದ್ಧವಾಗುತ್ತದೆ. ಆದ್ದರಿಂದ 'ವಿರುದ್ಧತಾ' ಎಂಬುದೇ ಇಲ್ಲಿರುವ ಪೂರ್ವಪಕ್ಷ ಯುಕ್ತಿ.

**अत एवादृश्यत्वचन्द्राद्याधारत्वादिलिङ्गानां ब्रह्मणि सम्भवमुपेत्य पूर्वपक्षस्य प्रवृत्तत्वादेव भाष्ये ''तस्यापि सम्भवात्'' इत्यपिशब्दः । ''अदृश्यत्वादिलिङ्गानां मध्यमाक्षरेऽपि सम्भवात्'' इति टीका च ।**

ಪೂರ್ವಪಕ್ಷಕಾರರು ಅದೃಶ್ಯತ್ವ, ಚಂದ್ರಾದ್ಯಾಧಾರತ್ವ ಮೊದಲಾದ ಲಿಂಗಗಳು ಬ್ರಹ್ಮನಲ್ಲಿ ಸಾವಕಾಶವಾಗಿವೆಯೆಂಬುದನ್ನು ಒಪ್ಪಿಕೊಂಡಿರುವುದರಿಂದಲೇ ಭಾಷ್ಯದಲ್ಲಿ 'ತಸ್ಯಾಪಿ ಸಂಭವಾತ್' ಎಂಬುದಾಗಿ 'ಅಪಿ' ಶಬ್ದವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ 'ತಸ್ಯೈವ' ಎಂದು ಅವಧಾರಣ-ಪುರಸ್ಸರವಾಗಿ ಹೇಳಬೇಕಿತ್ತು. ಟೀಕೆಯಲ್ಲಿಯೂ ಸಹ 'ಅದೃಶ್ಯತ್ವಾದಿಲಿಂಗಾನಾಂ ಮಧ್ಯಮಾಕ್ಷರೇಽಪಿ ಸಂಭವಾತ್' ಅದೃಶ್ಯತ್ವಾದಿಲಿಂಗಗಳೆಲ್ಲವೂ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲಿಯೂ ಸಹ ಉಪಪನ್ನವಾಗುತ್ತವೆ ಎಂಬುದಾಗಿ 'ಅಪಿ' ಶಬ್ದವನ್ನು ಪ್ರಯೋಗಿಸಿದ್ದಾರೆ.

ಎರಡನೆಯ ಈ ಪೂರ್ವಪಕ್ಷದಲ್ಲಿ ಅಕ್ಷರಶ್ರುತಿ ಹಾಗೂ ಲಿಂಗಗಳೆಲ್ಲವೂ ಸಾವಕಾಶವೆಂದೇ ಒಪ್ಪಿ ಕೇವಲ ಅನಶನತ್ವವೆಂಬ ಲಿಂಗದಿಂದಷ್ಟೇ ಪೂರ್ವಪಕ್ಷವನ್ನು ದೃಢಗೊಳಿಸಿದ್ದಾರೆಂದು ತಿಳಿಯಬೇಕು.

**अस्मिन्पक्षेऽदृश्यत्वाद्यधिकरणाक्षेपस्तु विष्णोरेवादृश्यत्वादीत्यवधारणस्य आक्षेपादिति ज्ञेयम् ।**

ಎರಡನೆಯ ಈ ಪೂರ್ವಪಕ್ಷದಲ್ಲಿ ಅದೃಶ್ಯತ್ವಾಧಿಕರಣವನ್ನು ಭಾಷ್ಯದಲ್ಲಿ ಆಕ್ಷೇಪಿಸಿದ್ದು ಹೇಗೆ ಯುಕ್ತವಾಗುತ್ತದೆಂಬ ಪ್ರಶ್ನೆ ಬರುತ್ತದೆ. ಆದರೆ ವಿಷ್ಣುವೊಬ್ಬನೇ ಅದೃಶ್ಯತ್ವಾದಿಗುಣಗಳುಳ್ಳವನಲ್ಲ.

ಹೊರತು ಲಕ್ಷ್ಮೀದೇವಿಯೂ ಸಹ ಅಂತಹ ಗುಣಗಳನ್ನು ಹೊಂದಿದ್ದಾಳೆಂದು ಅವಧಾರಣವನ್ನಷ್ಟೇ ಆಕ್ಷೇಪ ಮಾಡಿದ್ದಾರೆಂದು ತಿಳಿಯಬೇಕು.

**अत एव चात्र टीकायाम् 'अदृश्यत्वादिकं च अन्यस्य प्रसज्यते' इत्युक्तम् । न त्वन्यस्यैवेति ।**

ಆದ್ದರಿಂದಲೇ ಪೂರ್ವಪಕ್ಷ ಮಾಡುವ ಟೀಕೆಯಲ್ಲಿಯೂ 'ಅದೃಶ್ಯತ್ವಾದಿಕಂ ಚ ಅನ್ಯಸ್ಯ ಪ್ರಸಜ್ಯತೇ' ಅದೃಶ್ಯತ್ವಾದಿಗಳು ಬೇರೆಯವರಲ್ಲಿ ಬರುತ್ತದೆ ಎಂದಷ್ಟೇ ಸಾಮಾನ್ಯವಾಗಿ ಹೇಳಿದ್ದಾರೆ; ಹೊರತು ಲಕ್ಷ್ಮೀದೇವಿಯಲ್ಲಿ ಮಾತ್ರವೇ ಬರುತ್ತದೆಂಬುದಾಗಿ ಅವಧಾರಣವನ್ನು ಹೇಳಿರುವುದಿಲ್ಲ.

**अत एवाम्बरान्तधृतिप्रशासनादिकमपि मध्यमाक्षरस्यैवेति ।**

ಇಲ್ಲಿಯ ತನಕ ಉಪಪಾದಿಸಿದಂತೆ ಅನಶನತ್ವಲಿಂಗವು ಅತ್ಯಂತ ಬಲಿಷ್ಠವಾಗಿರುತ್ತದೆ. ಅದಕ್ಕನುಸಾರಿಯಾಗಿ ಉಳಿದ ಅಂಬರಾಂತಧೃತಿ, ಪ್ರಶಾಸನ ಮೊದಲಾದ ಲಿಂಗಗಳೆಲ್ಲವೂ ಸಹ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲಿಯೇ ಬರುತ್ತವೆಂದು ಸಾಧಿಸಬೇಕು.

**प्रकाशः –**

एवं भाष्येऽनेकज्ञापकोपलम्भबलेन ''तत्राक्षरशब्दस्य प्रसिद्धेः'' इति टीकां श्रुतिनिरवकाशत्वाभिप्रायतया व्याख्याय

ವಿವರಣೆ - ಇಲ್ಲಿಯತನಕ ಭಾಷ್ಯದಲ್ಲಿ ಸೂಚಿಸಿದ ಅನೇಕ ಜ್ಞಾಪಕಗಳ ಬಲದಿಂದ 'ತತ್ರಾಕ್ಷರಶಬ್ದಸ್ಯ ಪ್ರಸಿದ್ಧೇಃ' ಎಂಬ ಟೀಕೆಯು ಅಕ್ಷರಶ್ರುತಿಯು ನಿರವಕಾಶವಾಗಿದೆಯೆಂಬ ಅಭಿಪ್ರಾಯವುಳ್ಳದ್ದಾಗಿದೆಯೆಂದು ವ್ಯಾಖ್ಯಾನಿಸಿದರು.

**प्रकाशः** – इदानीं टीकायां तत्रैवेत्यनुक्त्वा 'तत्राक्षरशब्दस्य प्रसिद्धेः' इत्येवोक्तत्वात् ।

ಪ್ರಕೃತ ಟೀಕೆಯಲ್ಲಿ 'ತತ್ರೈವ ಅಕ್ಷರಶಬ್ದಸ್ಯ ಪ್ರಸಿದ್ಧೇಃ' ಎಂದು ಹೇಳದೇ 'ತತ್ರ ಅಕ್ಷರಶಬ್ದಸ್ಯ ಪ್ರಸಿದ್ಧೇಃ' ಎಂದು ಏವಕಾರವಿಲ್ಲದೇ ಸಾಮಾನ್ಯವಾಗಿ ಹೇಳಿರುವುದರಿಂದ ಅಕ್ಷರಶ್ರುತಿಗೆ ನಿರವಕಾಶತ್ವವನ್ನು ವಿವಕ್ಷಿಸಬೇಕಾಗಿಲ್ಲವೆಂದು ಸಮರ್ಥಿಸುತ್ತಿದ್ದಾರೆ.

**प्रकाशः** – तथा ''एतस्य वा अक्षरस्य'' इत्यादिना चन्द्राद्याधारत्वस्य श्रीतत्वलिङ्गतयोपपाद्य

ಮತ್ತು 'ಏತಸ್ಯ ವಾ ಅಕ್ಷರಸ್ಯ' ಇತ್ಯಾದಿ ವಾಕ್ಯದಿಂದ ಚಂದ್ರಾದ್ಯಾಧಾರತ್ವವು ಲಕ್ಷ್ಮೀದೇವಿಯ ಲಿಂಗವೆಂದೇ ಸಮರ್ಥಿಸಿ,

**प्रकाशः – ''अदृष्टं द्रष्टृ'' इत्यादिनाऽत्र श्रुतादृश्यत्वादिकं च ''ये त्वक्षरमनिर्देश्यम्'' इत्यादिना श्रीतत्वे प्रतिपाद्य**

'ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಶ್ರುತವಾದ ಅದೃಶ್ಯತ್ವಾದಿಗಳು 'ಯೇ ತ್ವಕ್ಷರಮನಿರ್ದೇಶ್ಯಮ್' ಇತ್ಯಾದಿ ವಾಕ್ಯಗಳ ಬಲದಿಂದ ಲಕ್ಷ್ಮೀದೇವಿಯಲ್ಲಿಯೂ ಸಹ ಉಪಪನ್ನವಾಗುತ್ತವೆಂದು ಪ್ರತಿಪಾದಿಸಿ,

**प्रकाशः – अन्ते ''अक्षरश्रुतेरदृश्यत्वादिलिङ्गानां च मध्यमोत्तमयोस्साम्येऽत्र मध्यममेवोच्यत इति निर्बन्धे को हेतुः'' इत्यादिनाऽक्षरश्रुतिलिङ्गानां सावकाशत्वमुपेत्य**

ಕೊನೆಯಲ್ಲಿ 'ಅಕ್ಷರಶ್ರುತೇರದೃಶ್ಯತ್ವಾದಿಲಿಂಗಾನಾಂ ಚ ಮಧ್ಯಮೋತ್ತಮಯೋಃ ಸಾಮ್ಯೇऽತ್ರ ಮಧ್ಯಮಮೇವೋಚ್ಯತ ಇತಿ ನಿರ್ಬಂಧೇ ಕೋ ಹೇತುಃ' ಎಂದರೆ ಅಕ್ಷರಶ್ರುತಿಗೆ ಮತ್ತು ಅದೃಶ್ಯತ್ವಾದಿಲಿಂಗಗಳಿಗೆ ವಿಷ್ಣುವಿನಲ್ಲಿಯೂ ಸಹ ಅವಕಾಶವಿರುತ್ತದೆಂದು ಒಪ್ಪಿ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲಿ ಹಾಗೂ ಉತ್ತಮಾಕ್ಷರನೆನಿಸಿದ ವಿಷ್ಣುವಿನಲ್ಲಿ ಸಾಮ್ಯವನ್ನು ಹೇಳಿ, ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೇ 'ಅಕ್ಷರ' ಶ್ರುತಿಯಿಂದ ಪ್ರತಿಪಾದ್ಯಳಾಗಿದ್ದಾಳೆಂಬ ನಿರ್ಬಂಧನದಲ್ಲಿ ಏನು ಕಾರಣ? ಇತ್ಯಾದಿಯಾಗಿ ಅಕ್ಷರಶ್ರುತಿ ಹಾಗೂ ಅದೃಶ್ಯತ್ವಾದಿಲಿಂಗಗಳಿಗೆ ಸಾವಕಾಶತ್ವವನ್ನು ಒಪ್ಪಿ -

**प्रकाशः – ''न तदश्नाति'' इत्युक्तानशनलिङ्गेन पूर्वपक्षोज्जीवनस्य कृतत्वात्तत्र कथं श्रुतिलिङ्गानां विष्णावपि क्षराक्षरातीतत्वेनोक्ते वृत्तिः । कथं चानशनेनोज्जीवनमित्यतश्श्रुत्यादेस्सावकाशत्वमुपेत्याशेषटीकां व्यनक्ति – अस्तु वेति ।।**

'ನ ತದಶ್ನಾತಿ ಕಿಂಚನ' ಎಂಬಲ್ಲಿ ಶ್ರುತವಾದ ಅನಶನತ್ವಲಿಂಗದಿಂದ ಪೂರ್ವಪಕ್ಷವನ್ನು ಉಜ್ಜೀವನಗೊಳಿಸಿದ್ದಾರೆ. ಇಲ್ಲಿ ಶ್ರುತಿ ಹಾಗೂ ಲಿಂಗಗಳು ಕ್ಷರಾಕ್ಷರಪದಾರ್ಥಗಳಿಂದ ಅತೀತನೆಂದುಕ್ತನಾದ ವಿಷ್ಣುವಿನಲ್ಲಿ ಹೇಗೆ ಉಪಪನ್ನವಾಗುತ್ತವೆ? ಮತ್ತು ಅನಶನತ್ವ ಲಿಂಗದಿಂದ ಪೂರ್ವಪಕ್ಷವು ಹೇಗೆ ಉಜ್ಜೀವನವಾಗುತ್ತದೆ ? ಎಂಬೆರಡು ಪ್ರಶ್ನೆಗಳು ಪ್ರಾಪ್ತವಾದರೆ, ಶ್ರುತಿ, ಲಿಂಗ ಮೊದಲಾದವುಗಳಿಗೆ ಸಾವಕಾಶತ್ವವನ್ನು ಒಪ್ಪುವ ಮೂಲಕ ಸಮಸ್ತ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಅಸ್ತುವಾ' ಇತ್ಯಾದಿ ವಾಕ್ಯದಿಂದ.

**प्रकाशः – अन्यत्र वाक्यान्तरे । श्रुतेस्सावकाशत्वेन टीकाप्रवृत्तौ भाष्यज्ञापकमाह – अत एवेति ।। इहेति ।। विषयवाक्ये ।।**

'ಅನ್ಯತ್ರ' ಎಂಬ ಪದಕ್ಕೆ ಬೇರೆ ವಾಕ್ಯದಲ್ಲಿ ಎಂದರ್ಥ. ಶ್ರುತಿಯು ಸಾವಕಾಶವಾಗಿದೆಯೆಂಬ ಅಭಿಪ್ರಾಯದಿಂದ ಟೀಕೆಯು ಹೊರಡುತ್ತಿದೆ. ಇದಕ್ಕೆ ಭಾಷ್ಯವು ಜ್ಞಾಪಕವಾಗಿದೆಯೆಂಬ ವಿಚಾರವನ್ನು 'ಅತ ಏವ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ಇಹ' ಎಂಬ ಪದಕ್ಕೆ ವಿಷಯವಾಕ್ಯದಲ್ಲಿ ಎಂದರ್ಥ.

**प्रकाशः** – "**आहनसं यज्ञेष्वभिषूयमाणम् । लताभिमानित्वेनेयमुक्तिः**" इति टीका । तत्वप्रदीपे तु "आहनसम् आ समन्ताद्धन्तारं संहर्तारम्" इत्यर्थ उक्तः । एतच्चाम्भृणीशब्दितलक्ष्मीवाक्यम् ।

ಟೀಕೆಯಲ್ಲಿರುವ 'ಆಹನಸಂ' ಎಂಬ ಪದಕ್ಕೆ ಯಜ್ಞಗಳಲ್ಲಿ ಹಿಂಡಲ್ಪಟ್ಟ ಎಂದರ್ಥ. ಲಕ್ಷ್ಮೀದೇವಿಯೂ ಲತಾಭಿಮಾನಿಯಾದ್ದರಿಂದ ಹೀಗೆ ಹೇಳಲಾಗಿದೆ. ತತ್ವಪ್ರದೀಪದಲ್ಲಾದರೂ 'ಆಹನಸಮ್ ಆ ಸಮಂತಾದ್ಧಂತಾರಂ ಸಂಹರ್ತಾರಮ್' ಸಮಸ್ತವನ್ನೂ ಸಂಹಾರ ಮಾಡುವವಳಾದ್ದರಿಂದ 'ಆಹನಸಮ್' ಎಂಬ ಶಬ್ದದಿಂದ ಪ್ರತಿಪಾದ್ಯಳಾಗಿದ್ದಾಳೆಂಬರ್ಥವನ್ನು ಹೇಳಿದ್ದಾರೆ. ಈ ವಾಕ್ಯವು 'ಅಂಭೃಣೀ' ಎಂಬ ಶಬ್ದದಿಂದ ಪ್ರತಿಪಾದ್ಯಳಾದ ಲಕ್ಷ್ಮೀದೇವಿಯಿಂದಲೇ ಹೇಳಲ್ಪಟ್ಟಿದೆ.

**प्रकाशः** – ननु "गुहां प्रविष्टावात्मानौ" इत्यत्रानशनश्रुतेर्गतिरुक्तेत्यतो वैषम्यमाह – **नचेति** ।। तत्रानश्नन्नित्येव प्रतीत्या तथा गतिसम्भवेऽपीह किञ्चनेत्युक्त्या सामान्यनिषेधस्यैव प्रतीतेरित्यर्थः ।

'ಗುಹಾಂ ಪ್ರವಿಷ್ಟಾವಾತ್ಮಾನೌ' ಎಂಬಲ್ಲಿ ಅನಶನಶ್ರುತಿಗೆ ವಿಷ್ಣುವಿನಲ್ಲಿ ಹೇಗೆ ಅರ್ಥೈಸಬೇಕೆಂದು ವ್ಯಾಖ್ಯಾನಿಸಿದ್ದಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಗುಹಾಧಿಕರಣದಿಂದ ವೈಷಮ್ಯವನ್ನು ತೋರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ. ಗುಹಾಧಿಕರಣದ ವಿಷಯವಾಕ್ಯದಲ್ಲಿ 'ಅನಶ್ನನ್' ಎಂದಷ್ಟೇ ಶ್ರುತವಾದ್ದರಿಂದ ಪರಮಾತ್ಮನಲ್ಲಿ ಅದನ್ನು ಕೂಡಿಸಬಹುದಾದರೂ ಪ್ರಕೃತ ವಿಷಯವಾಕ್ಯದಲ್ಲಿ 'ಕಿಂಚನ' ಎಂಬ ಪದವಿರುವುದರಿಂದ ಅತ್ತೃತ್ವಸಾಮಾನ್ಯವನ್ನೇ ನಿಷೇಧ ಮಾಡಬೇಕು. ಹಾಗಾಗಿ ಸಂಕೋಚಮಾಡಿ ಅರ್ಥೈಸಲಾಗದು.

**प्रकाशः** – "नच मध्यमाक्षरस्यानशनाङ्गीकारे विरोधोऽस्ति" इति वाक्यं टीकायामयुक्तम् । श्रीतत्वस्यापि नित्यमुक्ततया सुखाशनस्येश्वररमणनिमित्तसुखभोगस्य भावाच्चेत्यतो व्यनक्ति – **मध्यमाक्षरस्य त्विति** ।।

ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯಲ್ಲಿಯೂ ಅಶನತ್ವವನ್ನು ಅಂಗೀಕರಿಸಿದರೆ ವಿರೋಧ-ವಿರುವುದಿಲ್ಲವೆಂದು 'ನಚ ಮಧ್ಯಮಾಕ್ಷರಸ್ಯಾನಶನಾಂಗಿಕಾರೇ ವಿರೋಧೋಽಸ್ತಿ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. ಆದರೆ ಇದು ಸರಿಯಲ್ಲ. ಏಕೆಂದರೆ ಲಕ್ಷ್ಮೀದೇವಿಯೂ ಸಹ ನಿತ್ಯಮುಕ್ತಳಾದ್ದರಿಂದ ಸುಖವನ್ನು ಅನುಭವಿಸುವಿಕೆಯು, ಅಂದರೆ ಈಶ್ವರನ ಜೊತೆಗೆ ರಮಿಸುವಿಕೆಯೆಂಬ ಸುಖಭೋಗವು ಲಕ್ಷ್ಮೀದೇವಿಗಿರು-ವುದರಿಂದ ಅನಶನತ್ವವನ್ನು ಹೇಳಲು ಹೇಗೆ ಸಾಧ್ಯ ?ಎಂಬ ಪ್ರಶ್ನೆಗೆ 'ಮಧ್ಯಮಾಕ್ಷರಸ್ಯ ತು' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – टीकायामनशनलिङ्गेन पूर्वपक्षोज्जीवनं मूलारूढं दर्शयति – **तदुक्तमिति** ।। एवं तर्हि कथं पूर्वाक्षेपः । प्रागुक्तस्य ब्रह्मण्यभ्युपेतत्वादित्यत आह – **अस्मिन्निति** ।।

ಟೀಕೆಯಲ್ಲಿ ಅನಶನತ್ವಲಿಂಗದಿಂದ ಪೂರ್ವಪಕ್ಷವನ್ನು ಉಜ್ಜೀವನ ಮಾಡಿದ್ದಾರೆ. ಅದನ್ನು ಮೂಲಾರೂಢವನ್ನಾಗಿ ಗ್ರಂಥಕಾರರು 'ತದುಕ್ತಮ್' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಹಾಗಾದರೆ ಶ್ರೀಮದಾಚಾರ್ಯರು ಭಾಷ್ಯದಲ್ಲಿ ಅದೃಶ್ಯತ್ವಾಧಿಕರಣವನ್ನು ಹೇಗೆ ಆಕ್ಷೇಪಿಸಿದರು? ಅಂತಹ ಅದೃಶ್ಯತ್ವಾದಿಗಳನ್ನು ಬ್ರಹ್ಮನಲ್ಲಿ ಇಲ್ಲಿನ ಪೂರ್ವಪಕ್ಷಕಾರನು ಒಪ್ಪಿದ್ದಾನಲ್ಲವೇ? ಎಂಬ ಪ್ರಶ್ನೆಗೆ 'ಅಸ್ಮಿನ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – ननु सर्वाधारत्वादिलिङ्गाद्विष्णुः किं न स्यादित्यत आह – **अत एवेति** ।।

ಸರ್ವಾಧಾರತ್ವವೇ ಮೊದಲಾದ ಲಿಂಗಗಳಿಂದ ವಿಷ್ಣುವೇ ಏಕೆ ಅಕ್ಷರನಾಗಬಾರದು ? ಎಂಬ ಪ್ರಶ್ನೆಗೆ 'ಅತ ಏವ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**गुरुराजीयम्** – नन्वेवमक्षरशब्दस्य सर्वथापि विष्णुपरत्वाभावे भाव्येऽक्षरस्येत्येव वक्तव्ये मध्यमाक्षरस्येति मध्यमशब्दो व्यर्थ इत्यरुच्या पक्षान्तरमाह – **अस्तु वेति** ।। अथवा टीकोक्तं द्वितीयहेतुमुपपादयति – **अस्तु वेति** ।। नन्वत्तृत्वेनोक्ते ब्रह्मण्यनत्तृत्वरूपानशनस्यायोगान्मध्यमाक्षरेऽपि तदसम्भवात्कथं तस्याक्षरत्वमित्याशङ्कापरिहारार्थं नच मध्यमाक्षरस्यानशनाङ्गीकारे विरोधोऽस्तीति टीका प्रवृत्ता । तत्र विरोधाभावो नोपपादितः । अतस्तमुपपादयितुमाह – **मध्यमाक्षरस्य त्विति** ।। अत एवेत्यस्य विवरणम् – **अदृश्यत्वस्येत्यादि** । नन्वदृश्यत्वादेर्ब्रह्मणि सम्भवमुपेत्य यदि पूर्वपक्षप्रवृत्तिस्तर्ह्यदृश्यत्वाक्षेपानुपपत्तिरित्यत आह – **अदृश्यत्वेति** ।।




ಅಥವಾ ಸೂರ್ಯಚಂದ್ರಾದ್ಯಾಧಾರತ್ವ, ಅದೃಶ್ಯತ್ವ ಮೊದಲಾದ ಲಿಂಗಗಳು ಲಕ್ಷ್ಮೀದೇವಿಯಲ್ಲಿರುವಂತೆ ವಿಷ್ಣುವಿನಲ್ಲೂ ಸಹ ಒಪ್ಪೋಣ. ಆದರೆ 'ನ ತದಶ್ನಾತಿ ಕಿಂಚನ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಅನಶನತ್ವವನ್ನು ವಿಷ್ಣುವಿನಲ್ಲಿ ಹೇಳಲು ಸಾಧ್ಯವಿಲ್ಲ. 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಂತೆ ಸಕಲ ಭಕ್ಷಕನಾದ ವಿಷ್ಣುವಿನಲ್ಲಿ ಏನನ್ನೂ ತಿನ್ನುವುದಿರುವಿಕೆಯು ಕೂಡುವುದಿಲ್ಲ. ಹಾಗಾಗಿ

ಸ್ವತಂತ್ರವಾಗಿ ಏನನ್ನೂ ತಿನ್ನದ ಲಕ್ಷ್ಮೀದೇವಿಯಲ್ಲಿಯೇ ಈ ಅನತ್ತೃತ್ವವು ಉಪಪನ್ನವಾಗುತ್ತದೆ. ನಿರವಕಾಶವಾದ ಈ ಒಂದೇ ಒಂದು ಅನಶನತ್ವಲಿಂಗದ ಬಲದಿಂದ ಪೂರ್ವಪಕ್ಷವು ಬಲಿಷ್ಠವಾಗುತ್ತದೆ. ಈ ಲಿಂಗಕ್ಕೆ ಅನುಸಾರಿಯಾಗಿ 'ಅಂಬರಾಂತಧೃತಿ', 'ಪ್ರಶಾಸನ' ಮೊದಲಾದ ಲಿಂಗಗಳೆಲ್ಲವನ್ನೂ ಲಕ್ಷ್ಮೀದೇವಿಯಲ್ಲಿಯೇ ಕೂಡಿಸಬೇಕು. ಆದ್ದರಿಂದ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯೇ ಅಕ್ಷರಶಬ್ದವಾಚ್ಯಳಾಗುತ್ತಾಳೆ ಹೊರತು, ಮಹಾವಿಷ್ಣು ಆ ಅಕ್ಷರಶಬ್ದವಾಚ್ಯನಾಗುವುದಿಲ್ಲವೆಂಬುದು ಎರಡನೆಯ ಪೂರ್ವಪಕ್ಷ.

• • • • •

## ಮಹಾವಿಷ್ಣುವೇ 'ಅಕ್ಷರ' ಎಂದು ಸಿದ್ಧಾಂತ

### तात्पर्यचन्द्रिका

**सिद्धान्तस्तु । अक्षरं ब्रह्मैव । चतुर्विधविनाशरहिते तत्रैवाक्षरशब्दप्रवृत्तिनिमित्तपौष्कल्यात् ।**

ಅನುವಾದ - ಸಿದ್ಧಾಂತ ಹೀಗಿದೆ - ಅಕ್ಷರಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. ನಾಲ್ಕು ಬಗೆಯ ನಾಶಕ್ಕೆ ಈಡಾಗದ ಮಹಾವಿಷ್ಣುವಿನಲ್ಲಿಯೇ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವು ಪುಷ್ಕಲವಾಗಿ ಬರುತ್ತದೆ.

**''तस्मादक्षरमित्याचक्षत एतमेव सन्तम्'' । ''अक्षरं ब्रह्म परम्'' इत्यादिश्रुतिस्मृतिषु तस्य तत्र प्रयोगाच्च । अत एव तत्रोत्तमाक्षरत्वप्रसिद्धिः ।**

'ತಸ್ಮಾದಕ್ಷರಮಿತ್ಯಾಚಕ್ಷತ ಏತಮೇವ ಸಂತಮ್' 'ಅಕ್ಷರಂ ಬ್ರಹ್ಮ ಪರಮ್' ಇವೇ ಮೊದಲಾದ ಶ್ರುತಿ, ಸ್ಮೃತಿಗಳೂ ಸಹ ಮಹಾವಿಷ್ಣುವಿನಲ್ಲಿಯೇ ಅಕ್ಷರಶಬ್ದವನ್ನು ವ್ಯವಹರಿಸುತ್ತಿವೆ. ಅಕ್ಷರಶಬ್ದದಿಂದ ಪ್ರಧಾನವಾಗಿ ವಿಷ್ಣುವೇ ಹೀಗೆ ಪ್ರತಿಪಾದ್ಯನಾದ್ದರಿಂದ ಅವನು ಉತ್ತಮಾಕ್ಷರನೆಂದು ಪ್ರಸಿದ್ಧಿ ಪಡೆದಿದ್ದಾನೆ.

**किं चेहाकाशं ''यद्भूतम्'' इत्यादिना ''आकाश एव तदोतं च प्रोतं च'' इत्यन्तेन सर्वचेतनपोषकतया ''एतस्मिन्खल्वक्षरे गार्ग्याकाश ओतश्च प्रोतश्च'' इत्यनेनान्याश्रितत्वेन चोच्यते । नच तच्चित्प्रकृतितोऽन्यत्र युक्तम् ।**

ಮತ್ತು ಆಕಾಶ ಶಬ್ದದಿಂದ ಲಕ್ಷ್ಮೀದೇವಿಯೇ ಪ್ರತಿಪಾದ್ಯಳಾಗಿದ್ದಾಳೆ. ಆದ್ದರಿಂದ ಆಕಾಶಾಂತಧಾರಕತ್ವವು ಮಹಾವಿಷ್ಣುವಿನಲ್ಲೇ ಯುಕ್ತವಾಗುತ್ತದೆ. 'ಯದ್ಭೂತಮ್' ಇತ್ಯಾದಿ ವಾಕ್ಯದಿಂದ ಪ್ರಾರಂಭಿಸಿ 'ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬಲ್ಲಿಯ ತನಕ ಆಕಾಶಕ್ಕೆ ಸರ್ವಚೇತನ-

ಪೋಷಕತ್ವವು ಹೇಳಲ್ಪಟ್ಟಿದೆ. ಮತ್ತು 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಎಂಬ ವಾಕ್ಯದಿಂದ ಇಂತಹ ಆಕಾಶವು ಅನ್ಯಾಶ್ರಿತವಾಗಿದೆಯೆಂದೂ ಸಹ ಹೇಳಲಾಗಿದೆ. ಸರ್ವಚೇತನ-ಪೋಷಕತ್ವ ಹಾಗೂ ಅನ್ಯಾಶ್ರಿತತ್ವಗಳೆರಡನ್ನೂ ಸಹ ಕೂಡಿಸಬೇಕೆಂದರೆ ಆಕಾಶಶಬ್ದದಿಂದ ಲಕ್ಷ್ಮೀದೇವಿಯೇ ಪ್ರತಿಪಾದ್ಯಳೆಂದು ಹೇಳಬೇಕು. ಬೇರೆ ಯಾರಲ್ಲಿಯೂ ಸಹ ಈ ಎರಡೂ ವಿಧವಾದ ಧರ್ಮಗಳು ಕೂಡಲು ಸಾಧ್ಯವಿಲ್ಲ.

**न चात्रोतत्वादिकमुपादेयत्वमाधेयत्वं वा नतु पोष्यत्वम् । तच्च सर्वस्य जडप्रकृतिं प्रति सम्भवतीति शङ्क्यम् ।**

ಪ್ರಶ್ನೆ - 'ತದೋತಂ ಚ ಪ್ರೋತಂ ಚ' ಇತ್ಯಾದಿ ಶ್ರುತಿಯಲ್ಲಿ ಶ್ರುತವಾದ ಓತತ್ವ, ಪ್ರೋತತ್ವವೆಂದರೆ ಉಪಾದೇಯತ್ವ ಮತ್ತು ಆಧೇಯತ್ವ ಎಂದರ್ಥ ಹೊರತು, ಪೋಷ್ಯತ್ವ ಎಂದರ್ಥವಲ್ಲ. ಸಕಲ ಪದಾರ್ಥಗಳು ಉಪಾದೇಯ ಮತ್ತು ಆಧೇಯವಾದರೆ ಆಕಾಶ ಎಂಬ ಪದಾರ್ಥವು ಉಳಿದೆಲ್ಲಾ ಪದಾರ್ಥಗಳಿಗೆ ಉಪಾದಾನವೆಂದೂ ಮತ್ತು ಆಧಾರವೆಂದೂ ಸಿದ್ಧವಾಗುತ್ತದೆ. ಇಂತಹ ಉಪಾದಾನತ್ವ ಮತ್ತು ಆಧಾರತ್ವಗಳನ್ನು ಜಡಪ್ರಕೃತಿಯಲ್ಲಿಯೂ ಸಹ ಹೇಳಬಹುದು. ಹೀಗಿರುವಾಗ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನೇ ಹೇಳಬೇಕೆಂದು ಹೇಗೆ ಸಾಧಿಸುತ್ತೀರಿ?

**''एतस्मिन्खल्वक्षरे गार्ग्याकाश ओतश्च'' इत्याकाशाश्रयत्वेनोच्यमानाक्षरस्य द्रष्टृत्वादिना चेतनत्वेनोपादानत्वायोगात् ।**

ಉತ್ತರ - 'ಓತ' ಎಂಬ ಶಬ್ದಕ್ಕೆ ಉಪಾದೇಯ ಎಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ' ಇತ್ಯಾದಿ ವಾಕ್ಯದಲ್ಲಿ ಅಕ್ಷರನು ಆಕಾಶಕ್ಕೆ ಆಶ್ರಯನಾಗಿದ್ದಾನೆಂದು ಹೇಳಲಾಗಿದೆ. ಇಲ್ಲಿರುವ 'ಓತ' ಎಂಬ ಶಬ್ದಕ್ಕೆ ಉಪಾದೇಯವೆಂಬರ್ಥವನ್ನು ಸ್ವೀಕರಿಸಿ, ಆಕಾಶಕ್ಕೆ ಅಕ್ಷರನು ಉಪಾದಾನನಾಗಿದ್ದಾನೆಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಈ ಅಕ್ಷರನು ದ್ರಷ್ಟೃತ್ವಾದಿಗುಣಗಳುಳ್ಳವನಾದ್ದರಿಂದ ಚೇತನನಾಗಿದ್ದಾನೆ. ಇಂತಹ ಚೇತನನ್ನು ಆಕಾಶಕ್ಕೆ ಉಪಾದಾನವೆಂದು ಹೇಳುವುದು ಅಯುಕ್ತವಾಗುತ್ತದೆ. ಆದ್ದರಿಂದ 'ಪೋಷ್ಯತ್ವ' ಎಂಬರ್ಥವನ್ನೇ ಹೇಳಬೇಕು.

**''कस्मिन्नु खल्विन्द्रलोका ओताश्च प्रोताश्चेति प्रजापतिलोकेषु गार्गि'' इत्यादावाधेयत्वस्याप्यभावाच्च । न ह्यधस्तनइन्द्रलोक उपरितने प्रजापतिलोक आहितः ।**

ಮತ್ತು 'ಕಸ್ಮಿನ್ನು ಖಲ್ವಿಂದ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ಪ್ರಜಾಪತಿಲೋಕೇಷು ಗಾರ್ಗಿ' ಇತ್ಯಾದಿ ವಾಕ್ಯದಲ್ಲಿ ಶ್ರುತವಾದ 'ಓತ' 'ಪ್ರೋತ' ಶಬ್ದಗಳಿಗೆ ಆಧೇಯತ್ವವೆಂಬರ್ಥವನ್ನೂ ಸಹ

ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಇಂದ್ರಲೋಕವು ಕೆಳಗಿರುತ್ತದೆ. ಪ್ರಜಾಪತಿಲೋಕವು ಮೇಲಿರುತ್ತದೆ. ಮೇಲಿರುವಂತಹ ಪ್ರಜಾಪತಿಲೋಕವು ಕೆಳಗಿರುವ ಇಂದ್ರನ ಲೋಕಕ್ಕೆ ಆಧಾರವಾಗಲು ಸಾಧ್ಯವಿಲ್ಲ. ಆದ್ದರಿಂದ ಇಂದ್ರಲೋಕಕ್ಕೆ ಆಧೇಯತ್ವವನ್ನೂ ಸಹ ಹೇಳಲು ಸಾಧ್ಯವಿಲ್ಲ. ಹಾಗಾಗಿ 'ಓತ' 'ಪ್ರೋತ' ಶಬ್ದಗಳಿಗೆ ಪೋಷ್ಯ ಎಂಬರ್ಥವನ್ನು ಸ್ವೀಕರಿಬೇಕು. ಆಗ ಪ್ರಜಾಪತಿಲೋಕದಿಂದ ಇಂದ್ರನ ಲೋಕವು ಪೋಷ್ಯವಾಗಿದೆಯೆಂದು ಹೇಳಬಹುದು.

**एकप्रकरणस्थस्योतादिशब्दस्य नानार्थत्वं चायुक्तम् ।**

ಹೀಗೆ 'ಏತಸ್ಮಿನ್‌ಖಲ್ವಕ್ಷರೇ' ಇತ್ಯಾದಿ ವಾಕ್ಯದಲ್ಲಾಗಲೀ, 'ಕಸ್ಮಿನ್ನು ಖಲು' ಇತ್ಯಾದಿ ವಾಕ್ಯದಲ್ಲಾಗಲೀ, ಶ್ರುತವಾದ 'ಓತ' 'ಪ್ರೋತ' ಶಬ್ದಗಳಿಗೆ ಪೋಷ್ಯವೆಂಬರ್ಥವನ್ನು ಒಪ್ಪುವುದು ಅನಿವಾರ್ಯವಾದ್ದರಿಂದ ಅದೇ ಪ್ರಕರಣದಲ್ಲಿರುವ 'ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬ ವಾಕ್ಯದಲ್ಲಿ ಶ್ರುತವಾದ 'ಓತ' 'ಪ್ರೋತ' ಶಬ್ದಗಳಿಗೂ ಸಹ ಪೋಷ್ಯವೆಂಬರ್ಥವನ್ನೇ ಒಪ್ಪಬೇಕು. ಒಂದೇ ಪ್ರಕರಣದಲ್ಲಿರುವ 'ಓತ' 'ಪ್ರೋತ' ಶಬ್ದಗಳಿಗೆ ಅನೇಕಾರ್ಥಗಳನ್ನು ಹೇಳುವುದು ತಪ್ಪಾಗುತ್ತದೆ.

**तस्मात् 'रुद्रं समाश्रिता देवाः', 'राज्ञि राज्यं समाहितम्' इत्यादाविव पोष्यत्वादिकमेवोतत्वम् ।**

ಆದ್ದರಿಂದ 'ರುದ್ರಂ ಸಮಾಶ್ರಿತಾ ದೇವಾಃ' ಇತ್ಯಾದಿ ವಾಕ್ಯದಲ್ಲಿ ರುದ್ರನನ್ನು ಸಕಲ ದೇವತೆಗಳು ಆಶ್ರಯಿಸಿದ್ದಾರೆಂಬುದಕ್ಕೆ ರುದ್ರದೇವರಿಂದ ಪೋಷ್ಯರಾದವರು. 'ಎಲ್ಲಾ ದೇವತೆಗಳನ್ನು ರುದ್ರದೇವರು ಪೋಷಣೆ ಮಾಡಿದರು' ಎಂಬರ್ಥವನ್ನೇ ಹೇಗೆ ಹೇಳುತ್ತೇವೋ, ಮತ್ತು 'ರಾಜ್ಞಿ ರಾಜ್ಯಂ ಸಮಾಹಿತಮ್' ಎಂಬಲ್ಲಿಯೂ ಸಹ 'ರಾಜನು ಸಕಲ ರಾಜ್ಯವನ್ನು ಪೋಷಣೆ ಮಾಡಿದನು' ಎಂಬರ್ಥವನ್ನು ಹೇಗೆ ಹೇಳುತ್ತೇವೋ, ಅದರಂತೆ ಇಲ್ಲಿಯೂ ಸಹ 'ಆಕಾಶದಲ್ಲಿ ಸಕಲ ಪದಾರ್ಥಗಳು ಆಶ್ರಿತವಾಗಿವೆ' ಎಂದರೆ 'ಆಕಾಶದಿಂದ ಪೋಷಿತವಾಗಿವೆ' ಎಂಬರ್ಥವನ್ನೇ ಹೇಳಬೇಕಾಗುತ್ತದೆ.

**न चाचेतनस्य पोष्यत्वं युक्तमिति भूतादिपदमपि देहद्वारा भूतत्वादियुक्त-चेतनपरमेवेत्याकाशं चित्प्रकृतिरेव ।**

ಅಚೇತನಕ್ಕೆ ಪೋಷ್ಯತ್ವವು ಯುಕ್ತವಾಗದ ಕಾರಣದಿಂದಲೇ ಶ್ರುತಿಯಲ್ಲಿರುವ 'ಭೂತ', 'ಭವತ್' ಇತ್ಯಾದಿ ಪದಗಳಿಗೂ ಸಹ ಚೇತನಪರತ್ವವನ್ನೇ ಹೇಳಬೇಕು. ನಿತ್ಯರಾದ ಚೇತನರಿಗೆ ಭೂತಾದಿ ಕಾಲಗಳನ್ನು ಹೇಗೆ ಪ್ರಯೋಗಿಸುವುದು ? ಎಂದರೆ ದೇಹದ್ವಾರಾ ಉತ್ಪತ್ತಿಯಿರುವುದರಿಂದ ಹಿಂದಿನ ಮುಂದಿನ ಚೇತನರನ್ನು ಪೋಷಿಸುತ್ತಾನೆಂಬ ಅರ್ಥವನ್ನು ಹೇಳಬಹುದು. ಆದ್ದರಿಂದ ಶ್ರುತಿಯಲ್ಲಿ ಕೇಳಿಸುತ್ತಿರುವ ಆಕಾಶಶಬ್ದವೂ ಸಹ ಮಹಾಲಕ್ಷ್ಮೀದೇವಿಯನ್ನೇ ಪ್ರತಿಪಾದಿಸುತ್ತದೆ.

ಪರಿಪೂರ್ಣಚಂದ್ರಿಕಾ

**ततश्च तदाश्रयोऽक्षरं ब्रह्मैव । न चित्प्रकृतिः । स्वाश्रयत्वस्य विरुद्धत्वात् ।**

ಅಂತಹ ಆಕಾಶನಾಮಕಳಾದ ಲಕ್ಷ್ಮೀದೇವಿಗೆ ಆಶ್ರಯನಾದವನು ಅಕ್ಷರಶಬ್ದವಾಚ್ಯನಾದ ಮಹಾವಿಷ್ಣುವೇ ಆಗಿದ್ದಾನೆ. ಒಂದು ವೇಳೆ ಅಕ್ಷರಶಬ್ದಕ್ಕೆ ಲಕ್ಮೀದೇವಿಯೆಂಬರ್ಥವನ್ನು ಒಪ್ಪಿದರೆ ತನಗೆ ತಾನೇ ಆಶ್ರಯಳಾಗಿದ್ದಾಳೆಂದು ಹೇಳಿದಂತಾಗುತ್ತದೆ. ಇದು ವಿರುದ್ಧವಾದ್ದರಿಂದ ಆಕಾಶಶಬ್ದದಿಂದ ಲಕ್ಷ್ಮೀದೇವಿಯು ಪ್ರತಿಪಾದ್ಯಳು. ಅಕ್ಷರಶಬ್ದದಿಂದ ಮಹಾವಿಷ್ಣು ಪ್ರತಿಪಾದ್ಯನೆಂದು ಹೇಳುವುದು ಅತ್ಯಂತ ಸ್ವರಸವಾಗಿದೆ.

**तदुक्तं न्यायविवरणे ''सर्वाधारप्रकृत्याधारत्वं विष्णोरन्यस्य विरुद्धम्'' इति ॥**

ಇದನ್ನೇ ನ್ಯಾಯವಿವರಣದಲ್ಲಿ - 'ಸರ್ವಾಧಾರಪ್ರಕೃತ್ಯಾಧಾರತ್ವಂ ವಿಷ್ಣೋರನ್ಯಸ್ಯ ವಿರುದ್ಧಮ್' 'ಸಕಲಕ್ಕೂ ಆಧಾರವಾದ ಪ್ರಕೃತಿಗೆ ಆಶ್ರಯನಾಗಿರುವಿಕೆಯು ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುತ್ತದೆ. ಬೇರೆಯವರಲ್ಲಿ ವಿರುದ್ಧವಾಗುತ್ತದೆ' ಎಂದು ಹೇಳಿರುತ್ತಾರೆ.

**उक्तं च बृहदारण्यकभाष्ये –**

**दीप्तेराकाशशब्दोक्ता श्रीर्हि सर्वाश्रया मता ।**
**तदाश्रयः परो विष्णुः सोऽस्थूलादिगुणो मतः ॥ इति ।**

ಬೃಹದಾರಣ್ಯಕಭಾಷ್ಯದಲ್ಲಿಯೂ ಸಹ ಇದನ್ನೇ ಹೇಳಿದ್ದಾರೆ -

ದೀಪ್ತೇರಾಕಾಶಶಬ್ದೋಕ್ತಾ ಶ್ರೀರ್ಹಿ ಸರ್ವಾಶ್ರಯಾ ಮತಾ ।
ತದಾಶ್ರಯಃ ಪರೋ ವಿಷ್ಣುಃ ಸೋಽಸ್ಥೂಲಾದಿಗುಣೋ ಮತಃ ॥

ಅತ್ಯಂತ ಪ್ರಕಾಶಮಾನಳಾದ್ದರಿಂದ ಲಕ್ಷ್ಮೀದೇವಿಯೇ ಆಕಾಶಶಬ್ದಪ್ರತಿಪಾದ್ಯಳು. ಸಕಲ ಪದಾರ್ಥಗಳಿಗೂ ಇವಳೇ ಆಧಾರಸ್ವರೂಪಳು. ಇಂತಹ ಲಕ್ಷ್ಮೀದೇವಿಗೆ ಆಶ್ರಯನಾದವನು ಸರ್ವೋತ್ತಮನಾದ ವಿಷ್ಣುವೇ ಆಗಿದ್ದಾನೆ. ಇಂತಹ ವಿಷ್ಣುವು ಅಸ್ಥೂಲತ್ವಾದಿ ಗುಣಗಳುಳ್ಳವನೆಂದು ಅಭಿಮತನಾಗಿದ್ದಾನೆಂದು.

**एवञ्च ''मयि सर्वमिदं प्रोतम्'' इत्यादिस्मृतिरप्यनुगृहीता भवति ।**

ಹೀಗೆ ಹೇಳಿದ್ದರಿಂದ ಎಂದರೆ - ಶ್ರುತಿಯನ್ನು ವ್ಯಾಖ್ಯಾನಿಸಿದ್ದರಿಂದ 'ಮಯಿ ಸರ್ವಮಿದಂ ಪ್ರೋತಮ್' ಇತ್ಯಾದಿ ಸ್ಮೃತಿಯಲ್ಲಿರುವ 'ಓತ' 'ಪ್ರೋತ' ಶಬ್ದಗಳಿಗೂ ಸಹ ವ್ಯಾಖ್ಯಾನ ಮಾಡಿದಂತಾಯಿತು. ಸಕಲ ಪದಾರ್ಥಗಳು ಲಕ್ಷ್ಮೀದೇವಿಯಿಂದ ಪೋಷಿತವಾಗಿವೆ. ಅಂತಹ ಲಕ್ಷ್ಮೀದೇವಿಯು ಪರಮಾತ್ಮನಿಂದ ಪೋಷಿತಳಾಗಿದ್ದಾಳೆಂಬರ್ಥವನ್ನು ಹೇಳಿದಂತಾಯಿತು.

**न चाकाशपदस्य प्रसिद्ध्यनुसरणे भूताकाशपरता । आकाशाधिकरणानुसरणे च ब्रह्मपरता । नतु जडाजडपरत्वमिति पूर्वपक्षः सिद्धान्तश्चायुक्त इति वाच्यम् ।**

ಪ್ರಶ್ನೆ - ಆಕಾಶಪದಕ್ಕೆ ಲೋಕಪ್ರಸಿದ್ಧಿಯನ್ನು ಅನುಸರಿಸಿದರೆ ಭೂತಾಕಾಶವೆಂದು ಅರ್ಥವಾಗುತ್ತದೆ. ಆಕಾಶಾಧಿಕರಣನ್ಯಾಯವನ್ನು ಅನುಸರಿಸಿದರೆ ವಿಷ್ಣುವೆಂದರ್ಥವಾಗುತ್ತದೆ. ಹೊರತು ಜಡಪ್ರಕೃತಿಯೆಂದಾಗಲೀ, ಚಿತ್‌ಪ್ರಕೃತಿಯೆಂದಾಗಲೀ ಅರ್ಥವನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಜಡಪ್ರಕೃತಿಯೆಂದು ಪೂರ್ವಪಕ್ಷವನ್ನು, ಹಾಗೂ ಚಿತ್‌ಪ್ರಕೃತಿಯೆಂದು ಸಿದ್ಧಾಂತವನ್ನು ಹೇಗೆ ಅನುಸರಿಸಿದಿರಿ?

**''आकाशस्तल्लिङ्गात्'' इत्यत्र प्रसिद्धित्यागेन लिङ्गानुसार्यर्थपरत्वस्योक्ततया लिङ्गानुसारिप्रकृतिपरताया अपि तन्न्यायसिद्धत्वात् ।**

ಉತ್ತರ - ಆಕಾಶಾಧಿಕರಣನ್ಯಾಯವನ್ನೇ ಅನುಸರಿಸಿ ಲೋಕಪ್ರಸಿದ್ಧಿಯನ್ನು ಬಿಟ್ಟು, ಚಿತ್ ಪ್ರಕೃತಿಯೆಂಬರ್ಥವನ್ನು ನಾವು ವಿವಕ್ಷಿಸಿದ್ದೇವೆ. ಏಕೆಂದರೆ ಆಕಾಶಾಧಿಕರಣದಲ್ಲಿ ಬಲಿಷ್ಠವಾದ ಲಿಂಗಗಳಿಗೆ ಅನುಸಾರಿಯಾಗಿ ಲೋಕಪ್ರಸಿದ್ಧಿಯನ್ನು ಬಿಟ್ಟು ಅನ್ಯಾರ್ಥವನ್ನು ಮಾಡಬೇಕೆಂದು ನಿರ್ಣಯಿಸಲಾಗಿದೆ. ಅದೇ ನ್ಯಾಯವನ್ನು ಇಲ್ಲಿಯೂ ವಿವಕ್ಷಿಸಿದಾಗ, ಲಕ್ಷ್ಮೀದೇವಿಯ ವಿಷಯದಲ್ಲಿರುವ ಲಿಂಗಗಳ ಬಲದಿಂದ ಲೋಕಪ್ರಸಿದ್ಧಿಯಿರುವ ಜಡಪ್ರಕೃತಿಯೆಂಬರ್ಥವನ್ನು ಬಿಟ್ಟು ಲಕ್ಷ್ಮೀದೇವಿಯೆಂಬರ್ಥವನ್ನೇ ಮಾಡಬೇಕು. ಆದ್ದರಿಂದ ಆಕಾಶಾಧಿಕರಣನ್ಯಾಯದಿಂದಲೇ ಈ ವಿಷಯವು ಸಿದ್ಧವಾಗಿದೆ.

**प्रकाशः –**

''इदमक्षरं ब्रह्मैव'' इति सूत्रभाष्याद्युक्तप्रतिज्ञांशेनैवाक्षरश्रुतेर्विष्णौ महायोगविद्वद्रूढिभ्यां मुख्यत्वस्य सूचनान्न तयाऽन्यप्राप्तिर्युक्तेति भावेनान्यत्रोक्तश्रुत्यादिना हरौ महायोगविद्वद्रूढी दर्शयन्नाद्यं श्रुत्यनवकाशत्वप्रयुक्तपूर्वपक्षं तावन्निराह – चतुर्विधेति ॥

ವಿವರಣೆ - ಸಿದ್ಧಾಂತವನ್ನು ಪ್ರಾರಂಭ ಮಾಡುತ್ತಿದ್ದಾರೆ. ಹಿಂದೆ ಅಕ್ಷರಶ್ರುತಿಯು ಮಹಾಲಕ್ಷ್ಮೀದೇವಿಯಲ್ಲಿ ನಿರವಕಾಶವಾಗಿದೆಯೆಂದು ಮೊದಲನೆಯ ಪೂರ್ವಪಕ್ಷವನ್ನು ತೋರಿಸಿ, ಅನಶನತ್ವಲಿಂಗವು ನಿರವಕಾಶವಾಗಿದೆಯೆಂದು ಎರಡನೆಯ ಪೂರ್ವಪಕ್ಷವನ್ನು ತೋರಿಸಿದರು. ಈ ಎರಡೂ ವಿಧ ಪೂರ್ವಪಕ್ಷಗಳಲ್ಲಿ ಶ್ರುತಿಗೆ ನಿರವಕಾಶತ್ವವೆಂಬ ಮೊದಲನೆಯ ಪೂರ್ವಪಕ್ಷವನ್ನು ಪ್ರಕೃತ ನಿರಾಕರಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಸೂತ್ರದಲ್ಲಿರುವ 'ತತ್ತು' ಎಂಬ ಪದವನ್ನು ವ್ಯಾಖ್ಯಾನಿಸುತ್ತಾ 'ಇದಮಕ್ಷರಂ ಬ್ರಹ್ಮೈವ' ಎಂಬುದಾಗಿ ಭಾಷ್ಯದಲ್ಲಿ ಹೇಳಿರುತ್ತಾರೆ. ಈ ಪ್ರತಿಜ್ಞೆಯಲ್ಲಿ ಅವಧಾರಣವನ್ನು ಹೇಳಿದ್ದರಿಂದ ಕೇವಲ ವಿಷ್ಣುವು ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಅಕ್ಷರಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂದು ಸೂಚನೆ ಮಾಡಿದ್ದಾರೆ. ವಿಷ್ಣುವೊಬ್ಬನೇ ಮುಖ್ಯವಾಗಿ ಪ್ರತಿಪಾದ್ಯನಾದ ಮೇಲೆ ಬೇರೆಯವರು ಮುಖ್ಯವಾಗಿ ಪ್ರತಿಪಾದ್ಯರಾಗಿರುವುದಿಲ್ಲ. ಈ ಅಭಿಪ್ರಾಯದಿಂದ ಬೇರೆ ಬೇರೆ ಕಡೆ ಹೇಳಲ್ಪಟ್ಟ ಶ್ರುತಿ ಮೊದಲಾದವುಗಳನ್ನು ಉಲ್ಲೇಖಿಸುತ್ತಾ ಮಹಾಯೋಗ ಹಾಗೂ ವಿದ್ವದ್ರೂಢಿಗಳು ಭಗವಂತನಲ್ಲಿಯೇ ಇರುತ್ತವೆಂದು ತೋರಿಸುವವರಾಗಿ ಶ್ರುತಿಗೆ ನಿರವಕಾಶತ್ವಪ್ರಯುಕ್ತವಾದ ಪೂರ್ವಪಕ್ಷವನ್ನು ನಿರಾಕರಿಸುತ್ತಿದ್ದಾರೆ 'ಚತುರ್ವಿಧ' ಇತ್ಯಾದಿ ವಾಕ್ಯದಿಂದ.

**प्रकाशः –**

अनित्यत्वं देहहानिर्दुःखप्राप्तिरपूर्णता ।
नाशश्चतुर्विधः प्रोक्तस्तदभावो हरेस्सदा ।।

इति स्मृतेरिति भावः ।

ಅನಿತ್ಯತ್ವಂ ದೇಹಹಾನಿ ರ್ದುಃಖಪ್ರಾಪ್ತಿರಪೂರ್ಣತಾ ।
ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಃ ಸದಾ ॥

ನಾಶವು ನಾಲ್ಕು ವಿಧವಾಗಿದೆ. ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತ್ವ ಎಂಬುದಾಗಿ. ಈ ನಾಲ್ಕು ವಿಧವಾದ ನಾಶಗಳೂ ಸಹ ಶ್ರೀಹರಿಗೆ ಇರುವುದಿಲ್ಲ.

ಈ ಸ್ಮೃತಿಯಿಂದ ಭಗವಂತನಲ್ಲಿರುವ ಅವಿನಾಶಿತ್ವವು ಪುಷ್ಕಲವಾಗಿದೆಯೆಂದು ತಿಳಿಯುತ್ತದೆ.

**प्रकाशः** – प्रयोगबाहुल्यरूपरूढावैतरेयश्रुतिमाह – तस्मादिति ।। प्रवृत्तिहेतु-पौष्कल्यादित्यर्थः । एतं सन्तं प्रवृत्तिनिमित्तवत्तया विद्यमानम् ।

ಪ್ರಯೋಗಬಾಹುಲ್ಯವೆಂಬ ರೂಢಿಯು ಪರಮಾತ್ಮನಲ್ಲಿದೆ ಎನ್ನಲು ಐತರೇಯಶ್ರುತಿಯನ್ನು ಪ್ರಮಾಣವನ್ನಾಗಿ ಹೇಳುತ್ತಿದ್ದಾರೆ 'ತಸ್ಮಾತ್' ಇತ್ಯಾದಿಯಾಗಿ. 'ತಸ್ಮಾತ್' ಎಂದರೆ ಪ್ರವೃತ್ತಿನಿಮಿತ್ತವು ಪುಷ್ಕಳವಾಗಿರುವುದರಿಂದ ಎಂದರ್ಥ. 'ಏತಂ ಸಂತಂ' ಎಂದರೆ ಪ್ರವೃತ್ತಿನಿಮಿತ್ತವುಳ್ಳದ್ದಾಗಿ ಇರುವ ಎಂದರ್ಥ.

**प्रकाशः –**

अक्षरं ब्रह्म परमं स्वभावोऽध्यात्ममुच्यते ।
भूतभावोद्भवकरो विसर्गः कर्मसंज्ञितः ।। इति गीता ।

**अत एव अक्षरशब्दमुख्यार्थत्वादेवेत्यर्थः । क्षराक्षरातीतत्वं च मुख्यवृत्त्याऽक्षर-शब्दार्थत्वेऽपि परतन्त्रचेतनवैलक्षण्यमात्रेणोपपन्नमिति भावः ।**

'ಅಕ್ಷರಂ ಬ್ರಹ್ಮ ಪರಮ್' ಎಂಬುದಾಗಿ ಗೀತೆಯಲ್ಲಿ ಅಕ್ಷರಶಬ್ದಾರ್ಥ ಮುಖ್ಯಾರ್ಥ ವಿಷ್ಣುವೇ ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ಹಾಗಾದರೆ ಕ್ಷರಾಕ್ಷರಪುರುಷರಿಗಿಂತಲೂ ಮಹಾವಿಷ್ಣು ವಿಲಕ್ಷಣನಾಗಿದ್ದಾನೆಂದು ಗೀತೆಯಲ್ಲಿ ಹೇಳಿದ್ದು ತಪ್ಪಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಅಕ್ಷರಶಬ್ದಕ್ಕೆ ಪರಮಾತ್ಮನೇ ಮುಖ್ಯಾರ್ಥನೆಂಬುವುದರಲ್ಲಿ ಸಂದೇಹವಿಲ್ಲ. ಅಸ್ವತಂತ್ರರಾದ ಸಕಲಚೇತನರಿಗಿಂತಲೂ ವಿಲಕ್ಷಣ-ನಾಗಿದ್ದಾನೆಂಬ ಅಭಿಪ್ರಾಯದಿಂದಷ್ಟೇ ಕ್ಷರಾಕ್ಷರಾತೀತ್ವವನ್ನು ಪರಮಾತ್ಮನಿಗೆ ಹೇಳಲಾಗಿದೆಯೆಂದು ತಿಳಿಯಬೇಕು.

**प्रकाशः – प्रसिद्धिः परतः परमक्षरमित्यादौ । एवं प्रतिज्ञांशसूचितन्यायं भाष्यादावस्फुटमपि –**

"शब्दप्रवृत्तिहेतूनां तस्मिन् मुख्यसमन्वयात् ।
अन्यार्थेष्वल्पता हेतोस्तन्निमित्तत्वतस्तथा ।।
तद्वाचकत्वं शब्दानां बहुलातिप्रयोगतः ।
रूढमित्येव साध्यं स्यात्"

इत्यानन्दमयनयानुव्याख्याने सामान्यत उक्तमन्यत्रोक्तश्रुत्यादिना स्फुटीकृत्य

'ಪ್ರಸಿದ್ಧಿಃ' ಎಂದರೆ 'ಪರತಃ ಪರಮಕ್ಷರಮ್' ಇತ್ಯಾದಿ ಸ್ಥಳಗಳಲ್ಲಿ ವಿಷ್ಣುವನ್ನು ಕೇವಲ ಅಕ್ಷರನೆಂದು ಹೇಳದೇ, ಸರ್ವೋತ್ತಮನಾದ ಅಕ್ಷರನೆಂದು ಹೇಳಲಾಗಿದೆ ಎಂದರ್ಥ. ಅಕ್ಷರ ಶಬ್ದದಿಂದ ಪರಮಾತ್ಮನೊಬ್ಬನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂಬ ಪ್ರತಿಜ್ಞಾಂಶದಿಂದ ಸೂಚಿತವಾದ ನ್ಯಾಯವು ಭಾಷ್ಯಾದಿಗಳಲ್ಲಿ ಸ್ಪಷ್ಟವಾಗಿರುವುದಿಲ್ಲ. ಆದರೂ ಸಹ

'ಶಬ್ದಪ್ರವೃತ್ತಿಹೇತೂನಾಂ ತಸ್ಮಿನ್ ಮುಖ್ಯಸಮನ್ವಯಾತ್ ।
ಅನ್ಯಾರ್ಥೇಷ್ವಲ್ಪತಾಹೇತೋಸ್ತನ್ನಿಮಿತ್ತತ್ವತಸ್ತಥಾ ॥
ತದ್ವಾಚಕತ್ವಂ ಶಬ್ದಾನಾಂ ಬಹುಲಾತಿಪ್ರಯೋಗತಃ ।
ರೂಢಮಿತ್ಯೇವ ಸಾಧ್ಯಂ ಸ್ಯಾತ್ ॥'

ಶಬ್ದಪ್ರವೃತ್ತಿನಿಮಿತ್ತಗಳು ವಿಷ್ಣುವಿನಲ್ಲಿ ಮುಖ್ಯವಾಗಿ ಇರುತ್ತವೆ. ಬೇರೆಯವರಲ್ಲಿ ಅಲ್ಪವಾಗಿರುವುದರಿಂದ ಅಮುಖ್ಯವಾಗಿಯೇ ಬೇರೆಯವರನ್ನು ಪ್ರತಿಪಾದಿಸುತ್ತವೆ. ಹೀಗೆ ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ ಸಕಲ ಶಬ್ದಗಳಿಗೂ ಸಹ ವಿಷ್ಣುವಿನಲ್ಲಿಯೇ ಮುಖ್ಯಪ್ರತಿಪಾದ್ಯತ್ವವನ್ನು ಹೇಳಿರುತ್ತಾರೆ. ಅದನ್ನು ಬೇರೆ ಬೇರೆ ಶ್ರುತಿಗಳಿಂದ ಪ್ರಕೃತ ಗ್ರಂಥಕಾರರು ಸ್ಪಷ್ಟಪಡಿಸಿದರು.

ಪರಿಪೂರ್ಣಚಂದ್ರಿಕಾ

**प्रकाशः** – इदानीम् 'अमम्बरान्तधृतेः' इति सौत्रलिङ्गोक्तिपरटीकां विवृण्वन्नस्य निरवकाशत्वं वक्तुमाकाशशब्दस्य ''आकाशाख्यप्रकृतेः'' इति टीकोक्तचित्प्रकृति-रूपमध्यमाक्षरार्थत्वमाह – **किञ्चेत्यादिना आकाशं चित्प्रकृतिरेवेत्यन्तेन** ।।

ಪ್ರಕೃತ 'ಅಂಬರಾಂತಧೃತೇಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಲಿಂಗವನ್ನೇ ಸಮರ್ಥಿಸುವಂತಹ ಟೀಕೆಯನ್ನು ವ್ಯಾಖ್ಯಾನಿಸುವವರಾಗಿ ಈ ಲಿಂಗವು ನಿರವಕಾಶವಾಗಿದೆಯೆಂಬ ಸಮರ್ಥನೆಗೆ ಪೂರಕವಾದ ಆಕಾಶಶಬ್ದಕ್ಕೆ 'ಆಕಾಶಾಖ್ಯಪ್ರಕೃತೇಃ' ಇತ್ಯಾದಿ ಟೀಕೆಯಲ್ಲಿ ಹೇಳಿದಂತೆ ಚಿತ್‌ಪ್ರಕೃತಿಯೆಂಬ ಮಧ್ಯಮಾಕ್ಷರ ಎಂಬರ್ಥವನ್ನು ಸಮರ್ಥಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ ಪ್ರಾರಂಭಿಸಿ, 'ಆಕಾಶಂ ಚಿತ್‌ಪ್ರಕೃತಿರೇವ' ಎಂಬಲ್ಲಿಯ ತನಕ.

**प्रकाशः** – इहाकाशमित्यस्योच्यत इत्यन्वयः । **यद्भूतमिति** ।। ''यद्भूतं च भवच्च भविष्यच्चेत्याचक्षत आकाश एव तदोतं च प्रोतं च'' इत्यन्तेनेत्यर्थः । ''कस्मिन्नु खल्वाकाश ओतश्च प्रोतश्च'' इति प्रश्ने ''एतस्मिन्'' इति परिहारः ।।

'ಇಹ ಆಕಾಶಮ್' ಎಂಬುದಕ್ಕೆ 'ಉಚ್ಯತೇ' ಎಂಬಲ್ಲಿ ಅನ್ವಯ ಮಾಡಬೇಕು. 'ಯದ್ಭೂತಮ್' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗೆ - 'ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬ ವಾಕ್ಯದ ತನಕ ಭೂತ, ವರ್ತಮಾನಾದಿಪದಗಳಿಗೆ ಅಕ್ಷರನೇ ಕಾರಣನಾಗಿದ್ದಾನೆಂದು ಹೇಳಲಾಗಿದೆ. 'ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚ' ಎಂದು ಪ್ರಶ್ನೆಯನ್ನು ಮಾಡಿದರೆ 'ಏತಸ್ಮಿನ್ ಖಲ್ವಕ್ಷರೇ' ಎಂಬುದಾಗಿ ಪರಿಹಾರವನ್ನು ನೀಡಲಾಗಿದೆ.

**प्रकाशः** – **नच तदिति** ।। सर्वोपजीव्यत्वे सत्यन्यैकाश्रितत्वस्य श्रीतत्वासाधारणलिङ्गत्वस्य ''अव्यक्तात्पुरुषः परः । मम योनिरप्स्वन्तः समुद्रः'' इत्यादिमानसिद्धत्वादिति भावः ।

'ನಚ ತತ್' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಸಕಲಪದಾರ್ಥಗಳಿಗೆ ಉಪಜೀವ್ಯಳಾಗಿದ್ದರೂ ಮತ್ತೊಬ್ಬನನ್ನು ಆಶ್ರಯಿಸಿದ್ದಾಳೆಂಬುದೇ ಲಕ್ಷ್ಮೀದೇವಿಯ ಅಸಾಧಾರಣ ಲಿಂಗವಾಗಿದೆ. 'ಅವ್ಯಕ್ತಾತ್‌ಪುರುಷಃ ಪರಃ। ಮಮ ಯೋನಿರಪ್ಸ್ವಂತಃ ಸಮುದ್ರೇ' ಇತ್ಯಾದಿ ಪ್ರಮಾಣಗಳಿಂದ ಈ ವಿಷಯವು ಸಿದ್ಧವಾಗಿದೆಯೆಂದು ತಿಳಿಯಬೇಕು.

**प्रकाशः** – ओतत्वं पोष्यत्वमित्येतत्साधयति – **न चेत्यादिना** ।। उपादेयत्वम् पादानपरिणामत्वमित्यर्थः । **आधेयत्वस्याप्यभावाच्चेति** ।। इन्द्रलोकस्य प्रजापति-लोकादधस्तनत्वादिति भावः ।

'ಓತತ್ವ' ಎಂಬ ಪದಕ್ಕೆ 'ಪ್ರೋಷ್ಯತ್ವ' ಎಂಬರ್ಥವನ್ನೇ ಹೇಳಬೇಕೆಂಬುದಾಗಿ 'ನಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ಉಪಾದೇಯತ್ವ' ಎಂದರೆ ಉಪಾದಾನಕಾರಣದ ಪರಿಣಾಮವಾಗಿದೆ ಎಂದರ್ಥ. 'ಆಧೇಯತ್ವಸ್ಯಾಪ್ಯಭಾವಾಚ್ಚ' ಎಂದರೆ ಇಂದ್ರಲೋಕವು ಸತ್ಯಲೋಕಕ್ಕಿಂತ ಕೆಳಗಿರುವುದರಿಂದ ಸತ್ಯಲೋಕವು ಇಂದ್ರಲೋಕಕ್ಕೆ ಆಧಾರವಾಗಲು ಸಾಧ್ಯವಿಲ್ಲವೆಂದು ತಿಳಿಯಬೇಕು.

**प्रकाशः – अस्य वाक्यस्य सिद्धान्तार्थस्तु –**

'शिवो हीश्वरनामा स्यात्तत्पारम्यात्सरस्वती ।
इन्द्रेत्युक्ता तत्सुखानां ब्रह्माधिर्मुक्तिगामिनाम् ।
तत्सुखानां परं ब्रह्म मुक्तिगानां परायणम् ।।'

इत्यादिब्रह्माण्डस्मृत्या ध्येयः । संसाराल्लुप्तानां मुक्तानां कानि सुखानि लोका इत्यर्थः ।

'ಕಸ್ಮಿನ್ ಖಲು' ಇತ್ಯಾದಿ ವಾಕ್ಯಕ್ಕೆ ಸಿದ್ಧಾಂತದ ಪ್ರಕಾರ ಹೀಗೆ ಅರ್ಥ -

ಶಿವೋ ಹೀಶ್ವರನಾಮಾ ಸ್ಯಾತ್ತತ್ಪಾರಮ್ಯಾತ್ ಸರಸ್ವತೀ ।
ಇಂದ್ರೇತ್ಯುಕ್ತಾ ತತ್ಸುಖಾನಾಂ ಬ್ರಹ್ಮಾಧಿರ್ಮುಕ್ತಿಗಾಮಿನಾಮ್ ।
ತತ್ಸುಖಾನಾಂ ಪರಂ ಬ್ರಹ್ಮ ಮುಕ್ತಿಗಾನಾಂ ಪರಾಯಣಮ್ ॥

ಶಿವನು ಈಶ್ವರನೆನಿಸಿದ್ದಾನೆ. ಇಂತಹ ಶಿವನಿಗಿಂತಲೂ ಅಧಿಕವಾದ ಸುಖವನ್ನು ಹೊಂದಿರುವ ಕಾರಣ ಸರಸ್ವತಿಯೂ ಇಂದ್ರಳೆನಿಸಿದ್ದಾಳೆ. ಇಂತಹ ಇಂದ್ರಳೆನಿಸಿದ ಮೋಕ್ಷಗಾಮಿನಿಯಾದ ಸರಸ್ವತೀದೇವಿಯ ಸುಖಕ್ಕೆ ಚತುರ್ಮುಖಬ್ರಹ್ಮದೇವರು ಆಶ್ರಯರಾಗಿದ್ದಾರೆ. ಚತುರ್ಮುಖಬ್ರಹ್ಮದೇವರ ಸುಖಕ್ಕೆ ಮಹಾವಿಷ್ಣುವೇ ಆಶ್ರಯನಾಗಿದ್ದಾನೆ. ಸಕಲ ಮುಕ್ತರಿಗೂ ಸಹ ಆಶ್ರಯನಾಗಿದ್ದಾನೆ.

ಹೀಗೆ ಬ್ರಹ್ಮಾಂಡಸ್ಮೃತಿಯ ಆಧಾರದಿಂದ ಶ್ರುತಿಯ ಅರ್ಥವನ್ನು ತಿಳಿಯಬೇಕು. ಸಂಸಾರದಿಂದ ಮುಕ್ತರಾದ ಜೀವರುಗಳ ಸುಖವನ್ನೇ ಲೋಕವೆಂದು ಶ್ರುತಿಯು ಹೇಳಿದೆ.

**प्रकाशः – ननु तत्र बाधकादर्थान्तरमस्त्वित्यत आह – एकेति ।।** अदृश्यत्वनयेऽक्षरशब्दस्य नानार्थत्वं परावधित्वादिबाधकात् । ''अक्षरत्रयमीरितम्'' इत्यादिस्मृतिबलाच्चोपेतमपि नेहैकार्थत्वे बाधकमस्तीति भावः ।

'ಕಸ್ಮಿನ್ನು ಖಲು' ಇತ್ಯಾದಿ ವಾಕ್ಯಗಳೆಲ್ಲಾ ಬಾಧಕವಿರುವ ಪ್ರಯುಕ್ತ ಅರ್ಥಾಂತರಗಳನ್ನು ಆಶ್ರಯಿಸುವುದು ಅನಿವಾರ್ಯ. ಆದರೆ 'ಯದ್ಭೂತಮ್' ಇತ್ಯಾದಿ ಸ್ಥಳಗಳಲ್ಲಿ ಉಪಾದೇಯವೆಂಬರ್ಥವನ್ನು ಆಶ್ರಯಿಸಿದರೆ ಏನೂ ಬಾಧಕವಿಲ್ಲವಲ್ಲ ಎಂಬ ಪ್ರಶ್ನೆಗೆ 'ಏಕಪ್ರಕರಣ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಒಂದೇ

ಪ್ರಕರಣದಲ್ಲಿ ಶ್ರುತವಾದ 'ಓತ' 'ಪ್ರೋತ' ಶಬ್ದಗಳಿಗೆ ನಾನಾರ್ಥವನ್ನು ಆಶ್ರಯಿಸುವುದು ಅಯುಕ್ತವಾಗುತ್ತದೆಂದು ಅಭಿಪ್ರಾಯ.

ವಾಸ್ತವಿಕವಾಗಿ ಅದೃಶ್ಯತ್ವಾಧಿಕರಣದಲ್ಲಿ ಪರಾವಧಿತ್ವಾದಿ ಬಾಧಕಗಳಿರುವುದರಿಂದ ಅಕ್ಷರಶಬ್ದಕ್ಕೆ ಅನೇಕಾರ್ಥವನ್ನು ಸ್ವೀಕರಿಸಲಾಗಿದೆ. ಮತ್ತು 'ಅಕ್ಷರತ್ರಯಮೀರಿತಮ್' ಇತ್ಯಾದಿ ಸ್ಮೃತಿಯ ಆಧಾರವೂ ಸಹ ಅನೇಕಾರ್ಥಸ್ವೀಕಾರಕ್ಕೆ ಆಧಾರವಾಗಿದೆ. ಆದ್ದರಿಂದ ಬಾಧಕವಿರುವ ಕಾರಣ ಅನೇಕಾರ್ಥವನ್ನು ನಾವೂ ಸಹ ಅಲ್ಲಿ ಹೇಳಿರುತ್ತೇವೆ. ಆದರೆ ಪ್ರಕೃತ ಅಂತಹ ಬಾಧಕಗಳೇನೂ ಕಾಣಿಸದ ಕಾರಣ ಅನೇಕಾರ್ಥವನ್ನು ಸ್ವೀಕರಿಸುವುದು ತಪ್ಪಾಗುತ್ತದೆಂದು ಅಭಿಪ್ರಾಯ.

**प्रकाशः** – तावतोतत्वं पोष्यत्वरूपमिति कुत इत्यत आह – **तस्मादिति** ।। परिशेषादित्यर्थः ।

'रुद्रं समाश्रिता देवा रुद्रो ब्रह्माणमाश्रितः ।
ब्रह्मा मामाश्रितो नित्यं नाहं कश्चिदुपाश्रितः ।।'

इत्यादिभारतवाक्यादाविवेत्यर्थः ।

ಬಾಧಕವಿರುವ ಮಾತ್ರದಿಂದ 'ಓತತ್ವ' ಎಂದರೆ 'ಪೋಷ್ಯತ್ವ' ಎಂಬರ್ಥವನ್ನೇ ಏಕೆ ಹೇಳಬೇಕು ? ಎಂಬ ಪ್ರಶ್ನೆಗೆ 'ತಸ್ಮಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಪರಿಶೇಷಾನುಮಾನದಿಂದ 'ಓತತ್ವ' ಎಂಬುದಕ್ಕೆ ಪೋಷ್ಯತ್ವವೆಂಬರ್ಥವನ್ನೇ ಆಶ್ರಯಿಸುವುದು ಅನಿವಾರ್ಯ.

ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ।
ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ॥

ಇತ್ಯಾದಿ ಮಹಾಭಾರತದ ವಾಕ್ಯದಲ್ಲಿ ಸಕಲದೇವತೆಗಳು ರುದ್ರದೇವರಿಂದ ಪೋಷಿತರಾಗಿದ್ದಾರೆ, ರುದ್ರದೇವರು ಬ್ರಹ್ಮದೇವರಿಂದ ಪೋಷಿತರಾಗಿದ್ದಾರೆ, ಬ್ರಹ್ಮದೇವರು ನನ್ನಿಂದ ಪೋಷಿತರಾಗಿದ್ದಾರೆ. ನಾನು ಯಾರಿಂದಲೂ ಪೋಷಿತನಾಗಿಲ್ಲವೆಂದು ಪರಮಾತ್ಮನೇ ಹೇಳಿಕೊಂಡಿದ್ದಾನೆ. ಇಲ್ಲಿರುವ ಆಶ್ರಿತಶಬ್ದಕ್ಕೆ 'ಪೋಷ್ಯತ್ವ' ಎಂಬರ್ಥವನ್ನು ಹೇಗೆ ಹೇಳಲಾಗುತ್ತದೋ, ಅದರಂತೆ ಪ್ರಕೃತದಲ್ಲಿಯೂ 'ಓತತ್ವ' ಎಂದರೆ 'ಪೋಷ್ಯತ್ವ' ಎಂಬರ್ಥವನ್ನೇ ಹೇಳಬೇಕು.

**प्रकाशः** – ननु ''भूतञ्च भवच्च'' इत्युक्तजडस्य कथं पोष्यत्वम् । अत एतस्मादेव बाधकान्नानार्थत्वं युक्तमित्यत आह – **नचेति** ।।

'ಭೂತಂ ಚ ಭವಚ್ಚ' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯವಾದ ಜಡಪದಾರ್ಥಕ್ಕೆ ಪೋಷ್ಯತ್ವವನ್ನು ಹೇಳಲು ಹೇಗೆ ಸಾಧ್ಯ ? ಜಡಪದಾರ್ಥಗಳಿಗೆ ಪೋಷ್ಯತ್ವವು ಬರುವುದಿಲ್ಲವೆಂಬ ಬಾಧಕವಿರುವುದರಿಂದಲೇ

ಅಕ್ಷರಶಬ್ದಕ್ಕೆ ಅನೇಕಾರ್ಥವನ್ನು ಒಪ್ಪಬೇಕಾಗುತ್ತದಲ್ಲವೇ ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः –** टीकायां भाष्येऽनुक्तस्यापि ''आकाशाख्यप्रकृतेः'' इत्युक्तिर्निर्मूला । किञ्चेदं लिङ्गमन्यस्य नेत्येतदपि टीकायां न प्रतीयते । यस्यात्र विवरणं क्रियत इत्यत आह – **तदुक्तमिति** ।।

ಟೀಕೆಯಲ್ಲಿ 'ಆಕಾಶಾಖ್ಯಪ್ರಕೃತೇಃ' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ ಹೇಳದ ವಿಚಾರವನ್ನು ಟೀಕೆಯಲ್ಲಿ ಹೇಳಿದ್ದರಿಂದ ಟೀಕೆಯು ನಿರ್ಮೂಲವಾಗಿದೆಯಲ್ಲವೇ ? ಮತ್ತು 'ಸರ್ವಾಧಾರಪ್ರಕೃತ್ಯಾಧಾರತ್ವ' ಎಂಬ ಲಿಂಗವು ಬೇರೆ ಯಾರಲ್ಲಿಯೂ ಸಹ ಬರುವುದಿಲ್ಲವೆಂದು ಹೇಳಿದಂತೆ ಟೀಕೆಯಲ್ಲಿ ಕಾಣಿಸುತ್ತಿಲ್ಲ. ಹೀಗಿರುವಾಗ ಗ್ರಂಥಕಾರರು ಈ ವಿಚಾರವನ್ನು ಹೇಗೆ ವಿವರಿಸುತ್ತಿದ್ದಾರೆ ? ಎಂಬ ಪ್ರಶ್ನೆಗೆ 'ತದುಕ್ತಮ್' ಇತ್ಯಾದಿ ವಾಕ್ಯದಿಂದಲೇ ಉತ್ತರಿಸಿದ್ದಾರೆ. ನ್ಯಾಯವಿವರಣದಲ್ಲಿ ಈ ಎರಡೂ ವಿಚಾರಗಳು ಸ್ಪಷ್ಟವಾಗಿ ಹೇಳಿರುವುದರಿಂದ ಗ್ರಂಥಕಾರರ ವಿವರಣೆಯು ಸಮಂಜಸವಾಗಿದೆಯೆಂದು ತಿಳಿಯಬೇಕು.

**प्रकाशः – विष्णोरन्यस्य** श्रीतत्वस्येत्यर्थः । टीकायां न्यायविवरणे च प्रकृतिपदस्यैव प्रयोगाच्चित्प्रकृतिपरत्वे स्पष्टं ज्ञापकमाह – **उक्तश्चेति** ।।

'ವಿಷ್ಣೋರನ್ಯಸ್ಯ' ಎಂದರೆ 'ಲಕ್ಷ್ಮೀದೇವಿಗೆ' ಎಂದರ್ಥ. ಟೀಕೆಯಲ್ಲಿ ಮತ್ತು ನ್ಯಾಯವಿವರಣದಲ್ಲಿ 'ಪ್ರಕೃತಿ' ಎಂಬ ಪದವನ್ನಷ್ಟೇ ಪ್ರಯೋಗಿಸಿದ್ದಾರೆ. 'ಚಿತ್‌ಪ್ರಕೃತಿ' ಎಂಬ ಪದವನ್ನು ಪ್ರಯೋಗಿಸಿಲ್ಲವಲ್ಲ ಎಂದರೆ, ಪ್ರಕೃತಿ ಪದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನೇ ಸ್ವೀಕರಿಸಬೇಕೆನ್ನಲು ಸ್ಪಷ್ಟವಾದ ಪ್ರಮಾಣವನ್ನು ಹೇಳುತ್ತಿದ್ದಾರೆ 'ಉಕ್ತಂ ಚ' ಇತ್ಯಾದಿ ವಾಕ್ಯದಿಂದ.

**प्रकाशः –** समाख्याबलाच्चैवमिति भावेनाह – **एवञ्चेति** ।। विष्णोरेव सर्वाधारत्वे –

मयि सर्वमिदं प्रोतं सूत्रे मणिगणा इव ।
रसोऽहमप्सु कौन्तेय प्रभाऽस्मि शशिसूर्ययोः ।।

इत्यादिगीताऽप्यनुकूलिता भवतीत्यर्थः ।

ಪರಮಾತ್ಮನೇ ಸಕಲಕ್ಕೂ ಆಧಾರನಾಗಿದ್ದಾನೆಂಬ ವಿಷಯದಲ್ಲಿ ಸಮಾಖ್ಯಾಪ್ರಮಾಣವೂ ಸಹ ಇರುತ್ತದೆಂದು 'ಏವಂಚ' ಎಂಬ ವ್ಯಾಕದಿಂದ ಸಮರ್ಥಿಸುತ್ತಿದ್ದಾರೆ.

ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ।
ರಸೋಽಹಮಪ್ಸು ಕೌಂತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ ।।

ದಾರದಲ್ಲಿ ಮಣಿಗಳ ಗುಂಪು ಆಶ್ರಿತವಾಗಿರುವಂತೆ ನನ್ನಲ್ಲಿ ಸಮಸ್ತ ಜಗತ್ತು ಆಶ್ರಿತವಾಗಿವೆ. ನೀರಿಗೂ ರಸಸ್ವರೂಪನು, ಚಂದ್ರಸೂರ್ಯರಿಗೂ ಕಾಂತಿಯನ್ನು ನೀಡುವವನು ನಾನೇ ಆಗಿದ್ದೇನೆಂದು ಶ್ರೀಕೃಷ್ಣನು

ಹೇಳಿರುತ್ತಾನೆ. ಗೀತೆಯ ಈ ಮಾತನ್ನೂ ಸಹ ವಿಷ್ಣುವೇ ಸಕಲಕ್ಕೂ ಆಧಾರನಾಗಿದ್ದಾನೆನ್ನಲು ಪ್ರಮಾಣವನ್ನಾಗಿ ಇಟ್ಟುಕೊಳ್ಳಬೇಕು.

**प्रकाशः** – अत्राकाशशब्दस्य चित्प्रकृतिपरत्वमाकाशनयन्यायसिद्धं चेत् एतच्छङ्कापूर्वमाह – **न चाकाशेति** ।।

ಶ್ರುತಿಯಲ್ಲಿರುವ ಆಕಾಶಪದಕ್ಕೆ ಚಿತ್‌ಪ್ರಕೃತಿಪರತ್ವವು ಆಕಾಶಾಧಿಕರಣನ್ಯಾಯದಿಂದ ಸಿದ್ಧವಾಗಿದೆ ಎಂಬ ಪ್ರಮೇಯವನ್ನು ಶಂಕಾಪೂರ್ವಕವಾಗಿ ತೋರಿಸುತ್ತಿದ್ದಾರೆ 'ನಚ ಆಕಾಶ' ಇತ್ಯಾದಿ ವಾಕ್ಯದಿಂದ.

**प्रकाशः** – **लिङ्गानुसारीति** ।। तथा च पूर्वपक्षे सर्वाधारत्वे सत्यक्षरशब्दित-श्रीतत्वाधीनत्वस्य जडप्रकृतिलिङ्गत्वात्सर्वाधारत्वे सति ब्रह्मैकाश्रितत्वस्य चित्प्रकृतिलिङ्गत्वात्सिद्धान्ते चित्प्रकृतिपरत्वं युक्तमिति भावः ।

'ಲಿಂಗಾನುಸಾರ್ಯರ್ಥಪರತ್ವಸ್ಯ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದ ಪೂರ್ವಪಕ್ಷದಲ್ಲಿ ಜಡಪ್ರಕೃತಿಯು ಆಕಾಶಶಬ್ದದ ಅರ್ಥವಾಗುತ್ತದೆ. ಏಕೆಂದರೆ 'ಸರ್ವಾಧಾರತ್ವೇ ಸತಿ ಅಕ್ಷರಶಬ್ದಿತ ಶ್ರೀತತ್ವಾಧೀನತ್ವಮ್' 'ಸಕಲ ಪದಾರ್ಥಗಳಿಗೂ ಆಶ್ರಯವಾಗಿದ್ದು ಅಕ್ಷರಳೆನಿಸಿದ ಲಕ್ಷ್ಮೀದೇವಿಯ ಅಧೀನವಾಗಿರುವಿಕೆ' ಎಂಬುದು ಜಡಪ್ರಕೃತಿಯ ಲಿಂಗವಾಗಿದೆ. ಈ ಲಿಂಗಕ್ಕೆ ಅನುಸಾರಿಯಾಗಿ ಜಡಪ್ರಕೃತಿಯೆಂಬರ್ಥವನ್ನು ಆಕಾಶಪದಕ್ಕೆ ಸಿದ್ಧಾಂತದಲ್ಲಿ ಹೇಳಿದ್ದಾರೆ. ಸಿದ್ಧಾಂತದಲ್ಲಿ 'ಸರ್ವಾಧಾರತ್ವೇ ಸತಿ ಬ್ರಹ್ಮೈಕಾಶ್ರಿತ್ವಮ್' 'ಸಕಲ ಪದಾರ್ಥಗಳಿಗೂ ಆಶ್ರಯವಾಗಿದ್ದು ಬ್ರಹ್ಮನಲ್ಲಿ ಆಶ್ರಿತವಾಗಿರುವಿಕೆಯೆಂಬ ಲಕ್ಷ್ಮೀದೇವಿಯ ಲಿಂಗದ ಬಲದಿಂದ ಆಕಾಶಪದಕ್ಕೆ ಚಿತ್‌ಪ್ರಕೃತಿಯೆಂಬರ್ಥವನ್ನು ಆಶ್ರಯಿಸಲಾಗಿದೆಯೆಂದು ತಿಳಿಯಬೇಕು.

**गुरुराजीयम्** – **अत एवेति** ।। प्रवृत्तिनिमित्तपौष्कल्यादेवेत्यर्थः । अनेन महायोगविद्वद्रूढिभ्यामक्षरशब्दस्य ब्रह्मपरत्वमित्युक्तं भवति । अम्बरान्तधृतेरिति स्थितिहेतुभागसूचितां युक्तिमाह – **किञ्चेति** ।। ननु आकाश एव तदोतम् इत्यत्रोत-शब्दस्याधेयपरत्वादिन्द्रलोका ओता इत्यत्र तु पोष्यत्वार्थकत्वान्न विरोध इत्यत आह – **एकप्रकरणेति** ।। ननु नात्रोतत्वं पोष्यत्वम् । ओतत्वेनोक्तानां भूतानामचेतनत्वेन पोष्यत्वानुपपत्तेरित्यत आह – **भूतादिपदमिति** ।।



## ಸಾರ

ಸಿದ್ಧಾಂತ ಹೀಗಿದೆ - ಅಕ್ಷರಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಹೊರತು, ಲಕ್ಷ್ಮೀದೇವಿಯಲ್ಲ. ಅಕ್ಷರಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವಿನಾಶಿತ್ವವು ಪುಷ್ಕಳವಾಗಿ ಮತ್ತು ಸ್ವತಂತ್ರವಾಗಿ ಮಹಾವಿಷ್ಣುವಿನಲ್ಲಿ ಮಾತ್ರ ಇರುವ ಪ್ರಯುಕ್ತ ಅವನೇ ಅಕ್ಷರನಾಗಬೇಕು. ಅನೇಕ ಶ್ರುತಿ, ಸ್ಮೃತಿಗಳಲ್ಲಿ ಬ್ರಹ್ಮನನ್ನು ಅಕ್ಷರನೆಂದು ಹೇಳಿದ್ದಷ್ಟೇ ಅಲ್ಲದೆ, ಉತ್ತಮಾಕ್ಷರನೆಂಬ ಪ್ರಸಿದ್ಧಿಯೂ ಸಹ ಇದೆ.

'ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬ ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಸರ್ವತ್ರಪ್ರಕಾಶಮಾನಳಾದ ಲಕ್ಷ್ಮೀದೇವಿಯೆಂದರ್ಥ. ಸಕಲಪದಾರ್ಥಗಳಿಗೆ ಲಕ್ಷ್ಮೀದೇವಿಯು ಆಶ್ರಯಳಾಗಿದ್ದಾಳೆ. ಇಂತಹ ಲಕ್ಷ್ಮೀದೇವಿಗೂ ಸಹ ಮಹಾವಿಷ್ಣು ಆಧಾರನಾಗಿದ್ದಾನೆ. ಇಂತಹ ಲಕ್ಷ್ಮೀದೇವಿಗೂ ಆಧಾರನಾದವನು ಮಹಾವಿಷ್ಣುವೆಂದು 'ಏತಸ್ಮಿನ್ ಖಲ್ವಕ್ಷರೇ' ಇತ್ಯಾದಿ ಶ್ರುತಿಯು ಪ್ರತಿಪಾದಿಸುತ್ತಿದೆ. ಒಂದು ವೇಳೆ ಅಕ್ಷರಶಬ್ದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನು ಹೇಳಿದರೆ ಆಕಾಶನಾಮಕಳಾದ ಲಕ್ಷ್ಮೀದೇವಿಗೆ ತಾನೇ ಆಶ್ರಯಳೆಂದು ಹೇಳಿದಂತಾಗುತ್ತದೆ. ಇದು ಅಯುಕ್ತವಾದ ಕಾರಣ ಆಕಾಶಶಬ್ದಕ್ಕೆ ಲಕ್ಷ್ಮೀದೇವಿಯೆಂಬರ್ಥವನ್ನು ಸ್ವೀಕರಿಸಿ ಅಕ್ಷರಶಬ್ದಕ್ಕೆ ಮಹಾವಿಷ್ಣು ಎಂಬರ್ಥವನ್ನು ಸ್ವೀಕರಿಸಬೇಕು. ಇದನ್ನೇ ಸೂತ್ರಕಾರರು 'ಅಂಬರಾಂತಧೃತೇಃ' ಎಂದು ಹೇಳಿರುತ್ತಾರೆ. ಲಕ್ಷ್ಮೀದೇವಿಯನ್ನು ಧರಿಸಿರುವಿಕೆ ಎಂಬ ಹೇತು, ವಿಷ್ಣುವಿನಲ್ಲಿ ಬಿಟ್ಟು ಬೇರೆ ಯಾರಲ್ಲೂ ಸಹ ಬಾರದ ಕಾರಣ ಅಕ್ಷರಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂಬುದು ಸೂತ್ರದ ಅಭಿಪ್ರಾಯ.

ಸಕಲ ಪದಾರ್ಥಗಳು ಆಕಾಶದಲ್ಲಿ ಓತಪ್ರೋತವಾಗಿವೆ ಎಂಬುದಕ್ಕೆ ಉಪಾದೇಯವಾಗಿವೆ ಅಥವಾ ಆಧೇಯವಾಗಿವೆಯೆಂಬುದಾಗಿ ಪೂರ್ವಪಕ್ಷಕಾರರು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಆದರೆ 'ಕಸ್ಮಿನ್ನು ಖಲ್ವಿಂದ್ರಲೋಕಾ ಓತಾಶ್ಚ ಪ್ರೋತಾಶ್ಚ' ಇತ್ಯಾದಿಯಾದ ಅದೇ ಪ್ರಕರಣದಲ್ಲಿರುವ 'ಓತ' 'ಪ್ರೋತ' ಶಬ್ದಗಳಿಗೆ ಆಧೇಯತ್ವವನ್ನಾಗಲೀ ಉಪಾದೇಯತ್ವವೆಂಬರ್ಥವನ್ನಾಗಲೀ ಹೇಳಲು ಸಾಧ್ಯವಿಲ್ಲ ಹೊರತು, ಪೋಷ್ಯತ್ವ ಎಂಬರ್ಥವನ್ನೇ ಹೇಳಬೇಕು. ಅದರಂತೆ ಇಲ್ಲಿಯೂ ಸಹ ಆಕಾಶದಿಂದ ಸಕಲ ಪದಾರ್ಥಗಳು ಪೋಷ್ಯವಾಗಿವೆ. ಅಂದರೆ ಲಕ್ಷ್ಮೀದೇವಿಯು ಸಕಲಪದಾರ್ಥಗಳನ್ನು ಪೋಷಣೆ ಮಾಡುತ್ತಾಳೆ. ಇಂತಹ ಲಕ್ಷ್ಮೀದೇವಿಯನ್ನು ಪರಮಾತ್ಮನು ಪೋಷಣೆ ಮಾಡುತ್ತಾನೆ ಎಂಬರ್ಥವನ್ನೇ ಹೇಳಬೇಕು. ಆದ್ದರಿಂದ ಯಾವುದೇ ಬಾಧಕಗಳಿಲ್ಲವೆಂದು ತಿಳಿಯಬೇಕು.



## ಪ್ರಶಾಸನ ಹಾಗೂ ಪ್ರಾಕೃತಸ್ಥೌಲ್ಯಾದಿರಾಹಿತ್ಯ ಎಂಬೆರಡು ಹೇತುಗಳೂ ನಿರವಕಾಶವಾಗಿವೆ

### तात्पर्यचन्द्रिका

**किञ्च "अक्षरस्य प्रशासने" इत्यत्र प्रशब्दार्थोऽसङ्कुचितविषयत्वानन्याय-त्तत्वादिरूपप्रकर्षो भाष्योक्तश्रुत्यादिभिर्न ब्रह्मणोऽन्यत्र युक्तः ।**

ಪರಿಪೂರ್ಣಚಂದ್ರಿಕಾ

ಅನುವಾದ - ಎರಡನೆಯ ಸೂತ್ರದಲ್ಲಿರುವ ಪ್ರಶಾಸನವೆಂಬ ಹೇತುವು ಕೂಡ ನಿರವಕಾಶವಾಗಿದೆ. 'ಪ್ರಶಾಸನೇ' ಎಂಬಲ್ಲಿರುವ 'ಪ್ರ' ಎಂಬ ಉಪಸರ್ಗವು ಅಸಂಕುಚಿತವಿಷಯತ್ವ ಮತ್ತು ಸ್ವಾತಂತ್ರ್ಯ ಎಂಬ ಪ್ರಕರ್ಷವನ್ನು ಹೇಳುತ್ತಿದೆ. ಅಸಂಕುಚಿತವಾದ ಆಜ್ಞೆಯಾಗಲೀ ಅಥವಾ ಸ್ವತಂತ್ರವಾದ ಆಜ್ಞೆಯಾಗಲೀ ವಿಷ್ಣುವಿನಲ್ಲಷ್ಟೇ ಯುಕ್ತವಾಗುತ್ತದೆಂಬ ವಿಚಾರವು ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿಗಳಿಂದ ಸಿದ್ಧವಾಗಿದೆ. ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಇಂತಹ ಪ್ರಶಾಸನವು ಯುಕ್ತವಾಗುವುದಿಲ್ಲ.

**किञ्च ''अस्थूलमनणु'' इत्यादिना न स्थौल्यादिमात्रस्य निषेधः । निःस्वभावत्वापातात् ।**

ಮೂರನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಾಕೃತಸ್ಥೌಲ್ಯಾದಿರಾಹಿತ್ಯವೂ ಕೂಡ ನಿರವಕಾಶವಾಗಿದೆ. 'ಅಸ್ಥೂಲಮನಣು' ಇತ್ಯಾದಿ ವಾಕ್ಯದಿಂದ ಕೇವಲ ಸ್ಥೌಲ್ಯಾದಿ ಧರ್ಮಗಳಿರುವುದಿಲ್ಲ ಎಂದಷ್ಟೇ ನಿಷೇಧ ಮಾಡಿಲ್ಲ. ಹಾಗೇನಾದರೂ ನಿಷೇಧ ಮಾಡಿದ್ದಲ್ಲಿ ಸ್ಥೌಲ್ಯ, ಅಣುತ್ವ ಎಂಬೆರಡೂ ಧರ್ಮಗಳಿಲ್ಲದ ಪರಮಾತ್ಮನು ಶೂನ್ಯದಂತೆ ನಿಃಸ್ವಭಾವನಾಗುತ್ತಿದ್ದ.

**श्रुत्यन्तरविरोधाच्च । प्राकृतस्य स्थौल्यादेर्निषेधोऽपि चित्प्रकृतावीश्वर इव न निरपेक्षः ।**

ಮತ್ತು ಸ್ಥೌಲ್ಯಾದಿ ಧರ್ಮಗಳನ್ನೇ ನಿಷೇಧ ಮಾಡಿದರೆ 'ಅಸ್ಥೌಲಮನಣು' ಇತ್ಯಾದಿ ಅನೇಕ ಶ್ರುತಿಗಳ ವಿರೋಧವೂ ಸಹ ಬರುತ್ತದೆ. ಮತ್ತು ವಿಷ್ಣುವಿನಲ್ಲಿರುವ ಪ್ರಾಕೃತಸ್ಥೌಲ್ಯಾದಿ ನಿಷೇಧವೂ ಸಹ ನಿರಪೇಕ್ಷಿತವಾಗಿದೆ ಹೊರತು, ಲಕ್ಷ್ಮೀದೇವಿಯಲ್ಲಿರುವ ಪ್ರಾಕೃತಸ್ಥೌಲ್ಯಾದಿರಾಹಿತ್ಯದಂತೆ ಸಾಪೇಕ್ಷಿತವಾಗಿಲ್ಲ.

**नच ''यस्य पर्णमयी जुहूर्भवति'' इत्यादौ प्रकृतिगतनिरपेक्षजुह्वा इवात्रापि निरपेक्षास्थूलत्वादेर्ग्रहणसम्भवे सापेक्षं ग्राह्यम् ।**

ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಸ್ವೀಕರಿಸಬೇಕು. 'ಯಸ್ಯ ಪರ್ಣಮಯೀ ಜುಹೂರ್ಭವತಿ' ಇತ್ಯಾದಿ ಸ್ಥಳಗಳಲ್ಲಿ ಪ್ರಕೃತಿಯಾಗಕ್ಕೋಸ್ಕರ ಇರುವಂತಹ ಫಲನಿರಪೇಕ್ಷವಾದ ಜುಹೂವಿಗೆ ಪರ್ಣಮಯತ್ವವನ್ನು ಹೇಗೆ ವಿಧಾನ ಮಾಡಿದ್ದಾರೋ, ಆದರಂತೆ ಇಲ್ಲಿಯೂ ತಿಳಿಯಬೇಕು. ಅಂದರೆ ಕೇವಲ ಪ್ರಕೃತಿಯಾಗವೇ ಫಲವಾಗಿವುಳ್ಳ ಜುಹೂವಿನ ನಿರ್ಮಾಣಕ್ಕೆ ಪ್ರತ್ಯೇಕವಾಗಿ ಫಲವನ್ನು ಹೇಳಬೇಕಾಗಿಲ್ಲ. ಆದ್ದರಿಂದಲೇ ಜುಹೂವಿಗೆ ವಿಧಾನ ಮಾಡುವಂತಹ ಪರ್ಣಮಯತ್ವವು ನಿರಪೇಕ್ಷಿತವಾಗಿದೆ. ಆದರಂತೆ ಪ್ರಕೃತದಲ್ಲಿಯೂ ಅಸ್ಥೂಲತ್ವಾದಿಗಳನ್ನು ವಿಷ್ಣುವಿನಲ್ಲಿ ಹೇಳುವಾಗ ನಿರಪೇಕ್ಷವಾದದ್ದನ್ನೇ ಸ್ವೀಕರಿಸಬೇಕು. ಸಾಪೇಕ್ಷವಾದ ಅಸ್ಥೂಲತ್ವಾದಿಗಳನ್ನು ಸ್ವೀಕರಿಸಬಾರದು.

**किञ्च भाष्योक्तश्रुत्यादिभिरस्थूलत्वादि विष्णावेव प्रसिद्धम् । नच प्रसिद्धसम्भवेऽप्यप्रसिद्धं ग्राह्यम् ।**

ಮತ್ತು ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಅನೇಕ ಶ್ರುತಿಗಳ ಆಧಾರದಿಂದ ಪ್ರಾಕೃತಸೌಠ್ಲ್ಯಾದಿರಾಹಿತ್ಯ-ಧರ್ಮಗಳು ವಿಷ್ಣುವಿನಲ್ಲೇ ಪ್ರಸಿದ್ಧವಾಗಿವೆ. ಪ್ರಸಿದ್ಧವಾದ ಅರ್ಥವನ್ನೇ ಕೂಡಿಸಲು ಬರುತ್ತಿರುವಾಗ ಈ ಅರ್ಥವನ್ನು ಬಿಟ್ಟು ಅಪ್ರಸಿದ್ಧವಾದ ಬೇರೆ ಅರ್ಥವನ್ನು ಸ್ವೀಕರಿಸುವುದು ಯುಕ್ತವಲ್ಲ.

**प्रकाशः –**

''सा च प्रशासनात्'' इति सूत्रोक्तहेतोरपि निरवकाशत्वमाह – **किञ्चेति** ।।

ವಿವರಣೆ – ಇಲ್ಲಿಯತನಕ 'ಅಕ್ಷರಮ್ ಅಂಬರಾಂತಧೃತೇಃ' ಎಂಬ ಸೂತ್ರದಲ್ಲಿರುವ 'ಅಂಬರಾಂತಧೃತಿ' ಎಂಬ ಹೇತುವಿಗೆ ನಿರವಕಾಶತ್ವವನ್ನು ಸಮರ್ಥಿಸಿದರು. ಪ್ರಕೃತ 'ಸಾ ಚ ಪ್ರಶಾಸನಾತ್' ಎಂಬ ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನ ಎಂಬ ಹೇತುವಿಗೆ ನಿರವಕಾಶತ್ವವನ್ನು ಸಮರ್ಥಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ.

**प्रकाशः – भाष्योक्तेति** ।। ''सप्तार्धगर्भा भुवनस्य'' इत्यादिभिरित्यर्थः । एतेन ''युक्त्यन्तरेण विष्णोरेवाक्षरत्वम्'' इत्यादिटीकातात्पर्यार्थ उक्तो भवति ।

'ಸಪ್ತಾರ್ಧಗರ್ಭಾ ಭುವನಸ್ಯ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಪ್ರಮಾಣದಿಂದ ಪ್ರಶಾಸನವೆಂಬ ಹೇತು ನಿರವಕಾಶವಾಗಿದೆಯೆಂದು ಸಿದ್ಧವಾಗುತ್ತದೆ ಎಂದರ್ಥ. ಇದರಿಂದ 'ಯುಕ್ತ್ಯಂತರೇಣ ವಿಷ್ಣೋರೇವಾಕ್ಷರತ್ವಮ್' 'ಮತ್ತೊಂದು ಯುಕ್ತಿಯಿಂದ ವಿಷ್ಣುವೊಬ್ಬನೇ ಅಕ್ಷರನಾಗಿದ್ದಾನೆ' ಇತ್ಯಾದಿ ಟೀಕೆಯ ತಾತ್ಪರ್ಯಾರ್ಥವನ್ನೂ ಸಹ ಹೇಳಿದಂತಾಯಿತು.

**प्रकाशः** – ''अन्यभावव्यावृत्तेश्च'' इति सूत्रोक्तहेतुर्भाष्यादावन्यवस्तुस्वभावानां लौकिकस्थौल्यादीनां राहित्यकथनादिति व्याख्यातः । स न युक्तः । श्रुतौ तथा प्रतीत्यभावेनासिद्ध्यापत्तेः ।

ಎರಡನೆಯ ಸೂತ್ರದ ಹೇತುವಿಗೆ ನಿರವಕಾಶತ್ವವನ್ನು ಸಮರ್ಥಿಸಿ 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಮೂರನೆಯ ಸೂತ್ರದಲ್ಲಿ ಹೇಳಲ್ಪಟ್ಟ ಹೇತುವಿಗೆ ಶ್ರುತಿಸಂವಾದವನ್ನು ತೋರಿಸುತ್ತಿದ್ದಾರೆ.

'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿನ ಹೇತುವಿಗೆ ಭಾಷ್ಯ ಹಾಗೂ ಟೀಕೆಗಳಲ್ಲಿ 'ಬೇರೆ ವಸ್ತುಗಳ ಸ್ವಭಾವವೆನಿಸಿದ ಲೌಕಿಕಸೌಠ್ಲ್ಯಾದಿಗಳು ಅಕ್ಷರನಲ್ಲಿ ಇಲ್ಲದಿರುವುದರಿಂದ' ಎಂಬರ್ಥವನ್ನು ಹೇಳಿ

ವ್ಯಾಖ್ಯಾನಿಸಿದ್ದಾರೆ. ಇದು ತಪ್ಪು. ಶ್ರುತಿಯಲ್ಲಿ ಎಲ್ಲಿಯೂ ಸಹ ಲೌಕಿಕಸ್ಥೌಲ್ಯಾದಿರಾಹಿತ್ಯವನ್ನು ಪರಮಾತ್ಮನಲ್ಲಿ ಹೇಳಿದ್ದೇ ಕಾಣಿಸುತ್ತಿಲ್ಲ. ಆದ್ದರಿಂದ ಸೂತ್ರೋಕ್ತ ಹೇತುವಿಗೆ ಅಸಿದ್ಧಿದೋಷವು ಬರಬೇಕಾಗುತ್ತದೆ.

**प्रकाशः** – टीकायां लौकिकस्थौल्यादिराहित्यस्य ''मध्यमाक्षरस्याप्राकृत-विग्रहवत्त्वेऽपि'' इत्यादिना व्यभिचारमाशङ्क्य ''भगवदपेक्षयैव'' इति समाधानमुक्तम् । तदपि न युक्तम् ।

ಟೀಕೆಯಲ್ಲಿಯೂ ಸಹ ಲೌಕಿಕಸ್ಥೌಲ್ಯಾದಿರಾಹಿತ್ಯವೆಂಬ ಹೇತುವಿಗೆ 'ಮಧ್ಯಮಾಕ್ಷರಸ್ಯ ಅಪ್ರಾಕೃತ-ವಿಗ್ರಹವತ್ತ್ವೇಽಪಿ' 'ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಯು ಅಪ್ರಾಕೃತವಾದ ಶರೀರವುಳ್ಳವಳಾಗಿದ್ದರೂ ಸಹ' ಇತ್ಯಾದಿ ವಾಕ್ಯದಿಂದ ವ್ಯಭಿಚಾರದೋಷವನ್ನು ಆಶಂಕಿಸಿದ್ದಾರೆ. ಅನಂತರ ಲಕ್ಷ್ಮೀದೇವಿಯಲ್ಲಿರುವ ಅಪ್ರಾಕೃತ ಶರೀರವು ಭಗವದಧೀನವಾದ್ದರಿಂದ ಮುಖ್ಯವಾದ ಅಪ್ರಾಕೃತತ್ವ ಬರಲಿಲ್ಲವೆಂಬ ಸಮಾಧಾನವನ್ನೂ ಕೂಡ ಹೇಳಿದ್ದಾರೆ. ಇದೂ ಸಹ ಸರಿಯಲ್ಲ.

**प्रकाशः** – निरपेक्षस्थौल्यादिराहित्यस्य श्रुतावप्रतीतेरित्यतो भाष्याद्याशयं व्यञ्जयन् 'अन्यभाव' इति सूत्रोक्तनिरपेक्षप्राकृतस्थौल्यादिराहित्यस्य श्रुत्यभिप्रेतत्वं साधयति – **किञ्चेत्यादिना** ।।

ಏಕೆಂದರೆ ಭಗವಂತನಲ್ಲಿರುವ ಸ್ಥೌಲ್ಯಾದಿರಾಹಿತ್ಯವು ಮಾತ್ರ ನಿರಪೇಕ್ಷಿತವಾಗಿದೆಯೆಂದು ನೀವು ಹೇಳುತ್ತಿದ್ದೀರಿ. ಆದರೆ ಯಾವುದೇ ಶ್ರುತಿಯಲ್ಲಿ ಈ ವಿಚಾರವು ಕಾಣಿಸುತ್ತಿಲ್ಲವಲ್ಲ ಎಂಬೆರಡು ಪ್ರಶ್ನೆಗಳಿಗೆ ಉತ್ತರಿಸುತ್ತಾ ಭಾಷ್ಯದ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ. ಮತ್ತು 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನಿರಪೇಕ್ಷಿತವಾದ ಪ್ರಾಕೃತಸ್ಥೌಲ್ಯಾದಿರಾಹಿತ್ಯವೂ ಸಹ ಶ್ರುತಿಗೆ ಅಭಿಪ್ರೇತವಾಗಿದೆಯೆಂದು ಸಾಧನೆ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ.

**प्रकाशः** – अस्तु को दोष इत्यत आह – **श्रुत्यन्तरेति** ।। 'अस्थूलोऽनणुरमध्यमो मध्यमो व्यापकोऽव्यापको यो हरिः' । 'अणोरणीयान्महतो महीयान्' 'ज्यायान् पृथिव्या दिवो ज्यायान्' इत्यादिश्रुत्यन्तरविरोधाच्चेत्यर्थः ।

ವಿಷ್ಣುವಿಗೆ ನಿಃಸ್ವಭಾವತ್ವವನ್ನು ಒಪ್ಪೋಣ ಏನು ದೋಷ? ಎಂಬ ಪ್ರಶ್ನೆಗೆ 'ಶ್ರುತ್ಯಂತರೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

'ಅಸ್ಥೂಲೋಽನಣುರಮಧ್ಯಮೋ ಮಧ್ಯಮೋ ವ್ಯಾಪಕೋಽವ್ಯಾಪಕೋ ಯೋ ಹರಿಃ'।

'ಅಣೋರಣೀಯಾನ್ ಮಹತೋ ಮಹೀಯಾನ್'

'ಜ್ಯಾಯಾನ್ ಪೃಥಿವ್ಯಾ ದಿವೋ ಜ್ಯಾಯಾನ್'

ಇವೇ ಮೊದಲಾದ ಬೇರೆ ಬೇರೆ ಶ್ರುತಿಗಳ ವಿರೋಧ ಬರುತ್ತದೆಂದು ಅಭಿಪ್ರಾಯ.

**प्रकाशः** – यद्वा ''सर्वधर्मा सर्वनामा सर्वकर्मा'

'गुणाः श्रुताश्च न' इत्याद्या प्रमाणं श्रुतिरत्र च'

इत्यनुभाष्योक्तश्रुत्यन्तरेत्यर्थः ।

ಅಥವಾ 'ಸರ್ವಧರ್ಮಾ ಸರ್ವನಾಮಾ ಸರ್ವಕರ್ಮಾ'

'ಗುಣಾಃಶ್ರುತಾಶ್ಚ ನೇತ್ಯಾದ್ಯಾ ಪ್ರಮಾಣಂ ಶ್ರುತಿರತ್ರ ಚ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಶ್ರುತ್ಯಂತರದ ವಿರೋಧ ಬರುತ್ತದೆಂದರ್ಥ.

**प्रकाशः** – सुधायां तु ''सर्वत्र प्रसिद्धोपदेशात्'' । ''अत्ता चराचरग्रहणात्''। ''रूपोपन्यासाच्च'' इत्युक्तविरोधस्स्यादित्यप्ययुक्तम् ।

ನ್ಯಾಯಸುಧೆಯಲ್ಲಾದರೂ 'ಸರ್ವತ್ರ ಪ್ರಸಿದ್ಧೋಪದೇಶಾತ್' 'ಅತ್ತಾ ಚರಾಚರಗ್ರಹಣಾತ್' 'ರೂಪೋಪನ್ಯಾಸಾಚ್ಚ' ಇವೇ ಮೊದಲಾದ ಸೂತ್ರಗಳಿಂದ ವಿರೋಧ ಬರುತ್ತದೆಂದು ಹೇಳಿದ್ದಾರೆ. ಅಂದರೆ ವಿಷ್ಣುವಿಗೆ ನಿಃಸ್ವಭಾವತ್ವವನ್ನು ಒಪ್ಪಿದರೆ ಶ್ರುತ್ಯಂತರವಿರೋಧವನ್ನು ಪ್ರಕೃತ ಗ್ರಂಥಕಾರರು ಅನುವ್ಯಾಖ್ಯಾನಕ್ಕೆ ಅನುಗುಣವಾಗಿ ಹೇಳಿದ್ದಾರೆ. ನ್ಯಾಯಸುಧೆಯಲ್ಲಾದರೂ ಸೂತ್ರಗಳ ವಿರೋಧವನ್ನೂ ಸಹ ಹೇಳಿದ್ದಾರೆಂದು ತಿಳಿಯಬೇಕು.

**प्रकाशः** – निस्स्वभावस्य सर्वत्र स्थित्यदनादेरयोगादिति तदुपलक्षणमिति भावः ।।

ಪರಮಾತ್ಮನಿಗೆ ಶೂನ್ಯಸ್ವರೂಪವನ್ನು ಒಪ್ಪಿದರೆ ಎಲ್ಲೆಡೆ ಇರುವಿಕೆ, ತಿನ್ನುವಿಕೆ, ರೂಪವಿರುವಿಕೆ ಮೊದಲಾದವೆಲ್ಲವೂ ಅಯುಕ್ತವಾಗುತ್ತದೆಂದು ನ್ಯಾಯಸುಧೆಯ ಅಭಿಪ್ರಾಯ. ನ್ಯಾಯಸುಧೆಯಲ್ಲಿ ಹೇಳಲ್ಪಟ್ಟ ಸೂತ್ರಗಳ ವಿರೋಧವನ್ನು ಕೇವಲ ಉಪಲಕ್ಷಣವೆಂದು ತಿಳಿದು ಶ್ರುತ್ಯಂತರವಿರೋಧಗಳನ್ನೂ ಸಹ ಜೊತೆಗೆ ಇಟ್ಟುಕೊಳ್ಳಬೇಕು.

**प्रकाशः** – न निरपेक्ष इति ।। तथैव दहरनये भाष्यादौ सत्यकामत्वादिषु प्रतिपादनादिति भावः ।

ಈಶ್ವರನಲ್ಲಿರುವ ಸೌಥಿಲ್ಯಾದಿರಾಹಿತ್ಯವು ನಿರಪೇಕ್ಷಿತವಾಗಿದೆ. ಲಕ್ಷ್ಮೀದೇವಿಯಲ್ಲಿರುವ ಸೌಥಿಲ್ಯಾದಿರಾಹಿತ್ಯವು ಸಾಪೇಕ್ಷಿತವಾಗಿದೆಯೆಂದು ದಹರಾಧಿಕರಣದ ಭಾಷ್ಯಾದಿಗಳಲ್ಲಿ ಸತ್ಯಕಾಮತ್ವಾದಿಗುಣಗಳನ್ನು ಹೇಳುವಾಗ ಪ್ರತಿಪಾದನೆ ಮಾಡಿದ್ದಾರೆ ಎಂದು 'ನ ನಿರಪೇಕ್ಷ' ಎಂಬುದರ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः** – अस्तु तर्हि श्रुतौ प्रकृतस्य स्थौल्यादेर्निषेधः । तावता निरपेक्षमेवास्थूलत्वादिकं श्रुतावुच्यत इति कुतः । येन चित्प्रकृतौ व्यभिचारो न स्यादित्यत आह – **नच यस्येति** ।।

ಶ್ರುತಿಯಲ್ಲಿ ಪ್ರಕೃತವಾದ ಸ್ಥೌಲ್ಯಾದಿ ರಾಹಿತ್ಯವನ್ನು ನಿಷೇಧ ಮಾಡಲಾಗಿದೆಯೆಂಬುದನ್ನು ಒಪ್ಪೋಣ. ಇದರಿಂದ ನಿರಪೇಕ್ಷಿತವಾದ ಅಸ್ಥೂಲತ್ವಾದಿಗಳನ್ನೇ ಪರಮಾತ್ಮನಲ್ಲಿ ಶ್ರುತಿಯು ಹೇಳುತ್ತಿದೆಯೆಂಬುದು ಹೇಗೆ ಸಿದ್ಧವಾಗುತ್ತದೆ ? ಹಾಗೇನಾದರೂ ಸಿದ್ಧವಾಗಿದ್ದಲ್ಲಿ ಲಕ್ಷ್ಮೀದೇವಿಯಲ್ಲಿ ಇಂತಹ ಅಸ್ಥೂಲತ್ವಾದಿಗಳಿಗೆ ವ್ಯಭಿಚಾರದೋಷವನ್ನು ಹೇಳಲು ಬರುವುದಿಲ್ಲವೆಂದು ಸಾಧಿಸಬಹುದಿತ್ತು. ಈ ಪ್ರಶ್ನೆಗೆ 'ನಚ ಯಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – पर्णमय्यधिकरणशरीरं 'प्राणस्तथाऽनुगमात्' इत्यत्र विवृतम् ।

ಪೂರ್ವಮೀಮಾಂಸೆಯಲ್ಲಿ ಬರುವ ಪರ್ಣಪಯೀ ಅಧಿಕರಣದ ಶರೀರವನ್ನು 'ಪ್ರಾಣಸ್ತಥಾऽನುಗಮಾತ್' ಎಂಬ ಸೂತ್ರದ ವ್ಯಾಖ್ಯಾನದಲ್ಲಿ ವಿವರಿಸಿದ್ದೇವೆ.

**प्रकाशः** – "यस्य पर्णमयी जुहूर्भवति न स पापं श्लोकं शृणोति । यस्य खादिरस्स्रुवो भवति छन्दसामेव रसेनावद्यति सरसा अस्याहुतयो भवन्ति" इत्यादौ प्रकृतिरूपक्रत्वर्थतया फलनिरपेक्षजुह्वनुवादेन पर्णमयीत्वविधिः । नतु पुरुषार्थतया। क्रत्वङ्गजुह्वाः क्रतुफलेनैव फलवत्त्वेन पृथक्फलानपेक्षत्वात्फलश्रुतिरर्थवाद इत्युच्यते । तद्वन्निरपेक्षस्य ग्रहणमित्यर्थः ।

'ಯಸ್ಯ ಪರ್ಣಮಯೀ ಜುಹೂರ್ಭವತಿ ನ ಸ ಪಾಪಂ ಶ್ಲೋಕಂ ಶೃಣೋತಿ । ಯಸ್ಯ ಖಾದಿರಸ್ರುವೋ ಭವತಿ ಛಂದಸಾಮೇವ ರಸೇನಾವದ್ಯತಿ ಸರಸಾ ಅಸ್ಯಾಹುತಯೋ ಭವಂತಿ' ಇತ್ಯಾದಿ ವಾಕ್ಯದಲ್ಲಿ ಪ್ರಕೃತಿರೂಪವಾದ ಕ್ರತುವಿಗೆ ಸಾಧನವಾದ್ದರಿಂದ ಫಲನಿರಪೇಕ್ಷಿತವಾದ ಜುಹೂವನ್ನು ಅನುವಾದ ಮಾಡಿ ಅಲ್ಲಿ ಪರ್ಣಮಯೀತ್ವವನ್ನು ವಿಧಾನ ಮಾಡಲಾಗಿದೆ ಹೊರತು, ಪುರುಷಾರ್ಥದ ಅಪೇಕ್ಷೆಯಿರುವ ಜುಹೂವಿನಲ್ಲಿ ಪರ್ಣಮಯತ್ವವನ್ನು ವಿಧಾನ ಮಾಡಿಲ್ಲ. ಏಕೆಂದರೆ ಕ್ರತುವಿಗೆ ಅಂಗವಾದ ಜುಹೂವಿಗೆ ಕ್ರತುವೇ ಫಲ ಹೊರತು, ಪ್ರತ್ಯೇಕ ಫಲದ ಅಪೇಕ್ಷೆ ಇರುವುದಿಲ್ಲ. 'ನ ಸ ಪಾಪಂ ಶ್ಲೋಕಂ ಶೃಣೋತಿ' ಎಂಬ ಪಾಪರಾಹಿತ್ಯರೂಪಫಲವನ್ನು ಹೇಳುವ ಶ್ರುತಿಯು ಕೇವಲ ಅರ್ಥವಾದವೆಂದು ಸಾಧಿಸಿದ್ದಾರೆ. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಸ್ವೀಕರಿಸಬೇಕೆಂದು ಪೂರ್ವಮೀಮಾಂಸೆಯ ಈ ಅಧಿಕರಣದಿಂದ ತಿಳಿಯುತ್ತದೆ. ಅದರಂತೆ ಪ್ರಕೃತದಲ್ಲಿಯೂ ಪರಮಾತ್ಮನಲ್ಲಿರುವ ಸ್ಥೌಲ್ಯಾದಿರಾಹಿತ್ಯವು ನಿರಪೇಕ್ಷಿತವಾದ್ದರಿಂದ ಅದನ್ನೇ ಸ್ವೀಕರಿಸಬೇಕು, ಲಕ್ಷ್ಮೀದೇವಿಯಲ್ಲಿರುವ ಸಾಪೇಕ್ಷಿತವಾದ ಸ್ಥೌಲ್ಯಾದಿ-ರಾಹಿತ್ಯವನ್ನು ವಿವಕ್ಷಿಸಬಾರದೆಂದು ತಿಳಿಯುತ್ತದೆ.

**प्रकाशः – यद्वा ''सर्वधर्मा सर्वनामा सर्वकर्मा'**

**'गुणाः श्रुताश्च न' इत्याद्या प्रमाणं श्रुतिरत्र च'**

**इत्यनुभाष्योक्तश्रुत्यन्तरेत्यर्थः ।**

ಅಥವಾ 'ಸರ್ವಧರ್ಮಾ ಸರ್ವನಾಮಾ ಸರ್ವಕರ್ಮಾ'

'ಗುಣಾಃಶ್ರುತಾಶ್ಚ ನೇತ್ಯಾದ್ಯಾ ಪ್ರಮಾಣಂ ಶ್ರುತಿರತ್ರ ಚ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಶ್ರುತ್ಯಂತರದ ವಿರೋಧ ಬರುತ್ತದೆಂದರ್ಥ.

**प्रकाशः – सुधायां तु ''सर्वत्र प्रसिद्धोपदेशात्'' । ''अत्ता चराचरग्रहणात्''। ''रूपोपन्यासाच्च'' इत्युक्तविरोधस्स्यादित्यप्ययुक्तम् ।**

ನ್ಯಾಯಸುಧೆಯಲ್ಲಾದರೂ 'ಸರ್ವತ್ರ ಪ್ರಸಿದ್ಧೋಪದೇಶಾತ್' 'ಅತ್ತಾ ಚರಾಚರಗ್ರಹಣಾತ್' 'ರೂಪೋಪನ್ಯಾಸಾಚ್ಚ' ಇವೇ ಮೊದಲಾದ ಸೂತ್ರಗಳಿಂದ ವಿರೋಧ ಬರುತ್ತದೆಂದು ಹೇಳಿದ್ದಾರೆ. ಅಂದರೆ ವಿಷ್ಣುವಿಗೆ ನಿಃಸ್ವಭಾವತ್ವವನ್ನು ಒಪ್ಪಿದರೆ ಶ್ರುತ್ಯಂತರವಿರೋಧವನ್ನು ಪ್ರಕೃತ ಗ್ರಂಥಕಾರರು ಅನುವ್ಯಾಖ್ಯಾನಕ್ಕೆ ಅನುಗುಣವಾಗಿ ಹೇಳಿದ್ದಾರೆ. ನ್ಯಾಯಸುಧೆಯಲ್ಲಾದರೂ ಸೂತ್ರಗಳ ವಿರೋಧವನ್ನೂ ಸಹ ಹೇಳಿದ್ದಾರೆಂದು ತಿಳಿಯಬೇಕು.

**प्रकाशः – निस्स्वभावस्य सर्वत्र स्थित्यदनादेरयोगादिति तदुपलक्षणमिति भावः ।।**

ಪರಮಾತ್ಮನಿಗೆ ಶೂನ್ಯಸ್ವರೂಪವನ್ನು ಒಪ್ಪಿದರೆ ಎಲ್ಲೆಡೆ ಇರುವಿಕೆ, ತಿನ್ನುವಿಕೆ, ರೂಪವಿರುವಿಕೆ ಮೊದಲಾದವೆಲ್ಲವೂ ಅಯುಕ್ತವಾಗುತ್ತದೆಂದು ನ್ಯಾಯಸುಧೆಯ ಅಭಿಪ್ರಾಯ. ನ್ಯಾಯಸುಧೆಯಲ್ಲಿ ಹೇಳಲ್ಪಟ್ಟ ಸೂತ್ರಗಳ ವಿರೋಧವನ್ನು ಕೇವಲ ಉಪಲಕ್ಷಣವೆಂದು ತಿಳಿದು ಶ್ರುತ್ಯಂತರವಿರೋಧಗಳನ್ನೂ ಸಹ ಜೊತೆಗೆ ಇಟ್ಟುಕೊಳ್ಳಬೇಕು.

**प्रकाशः – न निरपेक्ष इति ।।** तथैव दहरनये भाष्यादौ सत्यकामत्वादिषु प्रतिपादनादिति भावः ।

ಈಶ್ವರನಲ್ಲಿರುವ ಸ್ಥೌಲ್ಯಾದಿರಾಹಿತ್ಯವು ನಿರಪೇಕ್ಷಿತವಾಗಿದೆ. ಲಕ್ಷ್ಮೀದೇವಿಯಲ್ಲಿರುವ ಸ್ಥೌಲ್ಯಾದಿರಾಹಿತ್ಯವು ಸಾಪೇಕ್ಷಿತವಾಗಿದೆಯೆಂದು ದಹರಾಧಿಕರಣದ ಭಾಷ್ಯಾದಿಗಳಲ್ಲಿ ಸತ್ಯಕಾಮತ್ವಾದಿಗುಣಗಳನ್ನು ಹೇಳುವಾಗ ಪ್ರತಿಪಾದನೆ ಮಾಡಿದ್ದಾರೆ ಎಂದು 'ನ ನಿರಪೇಕ್ಷ' ಎಂಬುದರ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः** – अस्तु तर्हि श्रुतौ प्रकृतस्य स्थौल्यादेर्निषेधः । तावता निरपेक्षमेवास्थूलत्वादिकं श्रुतावुच्यत इति कुतः । येन चित्प्रकृतौ व्यभिचारो न स्यादित्यत आह – **नच यस्येति** ॥

ಶ್ರುತಿಯಲ್ಲಿ ಪ್ರಕೃತವಾದ ಸ್ಥೌಲ್ಯಾದಿ ರಾಹಿತ್ಯವನ್ನು ನಿಷೇಧ ಮಾಡಲಾಗಿದೆಯೆಂಬುದನ್ನು ಒಪ್ಪೋಣ. ಇದರಿಂದ ನಿರಪೇಕ್ಷಿತವಾದ ಅಸ್ಥೂಲತ್ವಾದಿಗಳನ್ನೇ ಪರಮಾತ್ಮನಲ್ಲಿ ಶ್ರುತಿಯು ಹೇಳುತ್ತಿದೆಯೆಂಬುದು ಹೇಗೆ ಸಿದ್ಧವಾಗುತ್ತದೆ ? ಹಾಗೇನಾದರೂ ಸಿದ್ಧವಾಗಿದ್ದಲ್ಲಿ ಲಕ್ಷ್ಮೀದೇವಿಯಲ್ಲಿ ಇಂತಹ ಅಸ್ಥೂಲತ್ವಾದಿಗಳಿಗೆ ವ್ಯಭಿಚಾರದೋಷವನ್ನು ಹೇಳಲು ಬರುವುದಿಲ್ಲವೆಂದು ಸಾಧಿಸಬಹುದಿತ್ತು. ಈ ಪ್ರಶ್ನೆಗೆ 'ನಚ ಯಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – पर्णमय्यधिकरणशरीरं 'प्राणस्तथाऽनुगमात्' इत्यत्र विवृतम् ।

ಪೂರ್ವಮೀಮಾಂಸೆಯಲ್ಲಿ ಬರುವ ಪರ್ಣಮಯೀ ಅಧಿಕರಣದ ಶರೀರವನ್ನು 'ಪ್ರಾಣಸ್ತಥಾऽನುಗಮಾತ್' ಎಂಬ ಸೂತ್ರದ ವ್ಯಾಖ್ಯಾನದಲ್ಲಿ ವಿವರಿಸಿದ್ದೇವೆ.

**प्रकाशः** – "यस्य पर्णमयी जुहूर्भवति न स पापं श्लोकं श्रुणोति । यस्य खादिरस्स्रुवो भवति छन्दसामेव रसेनावद्यति सरसा अस्याहुतयो भवन्ति" इत्यादौ प्रकृतिरूपक्रत्वर्थतया फलनिरपेक्षजुह्वनुवादेन पर्णमयीत्वविधिः । नतु पुरुषार्थतया। क्रत्वङ्गजुह्वाः क्रतुफलेनैव फलवत्त्वेन पृथक्फलानपेक्षत्वात्फलश्रुतिरर्थवाद इत्युच्यते । तद्वन्निरपेक्षस्य ग्रहणमित्यर्थः ।

'ಯಸ್ಯ ಪರ್ಣಮಯೀ ಜುಹೂರ್ಭವತಿ ನ ಸ ಪಾಪಂ ಶ್ಲೋಕಂ ಶ್ರುಣೋತಿ । ಯಸ್ಯ ಖಾದಿರಸ್ರುವೋ ಭವತಿ ಛಂದಸಾಮೇವ ರಸೇನಾವದ್ಯತಿ ಸರಸಾ ಅಸ್ಯಾಹುತಯೋ ಭವಂತಿ' ಇತ್ಯಾದಿ ವಾಕ್ಯದಲ್ಲಿ ಪ್ರಕೃತಿರೂಪವಾದ ಕ್ರತುವಿಗೆ ಸಾಧನವಾದ್ದರಿಂದ ಫಲನಿರಪೇಕ್ಷಿತವಾದ ಜುಹೂವನ್ನು ಅನುವಾದ ಮಾಡಿ ಅಲ್ಲಿ ಪರ್ಣಮಯೀತ್ವವನ್ನು ವಿಧಾನ ಮಾಡಲಾಗಿದೆ ಹೊರತು, ಪುರುಷಾರ್ಥದ ಅಪೇಕ್ಷೆಯಿರುವ ಜುಹೂವಿನಲ್ಲಿ ಪರ್ಣಮಯತ್ವವನ್ನು ವಿಧಾನ ಮಾಡಿಲ್ಲ. ಏಕೆಂದರೆ ಕ್ರತುವಿಗೆ ಅಂಗವಾದ ಜುಹೂವಿಗೆ ಕ್ರತುವೇ ಫಲ ಹೊರತು, ಪ್ರತ್ಯೇಕ ಫಲದ ಅಪೇಕ್ಷೆ ಇರುವುದಿಲ್ಲ. 'ನ ಸ ಪಾಪಂ ಶ್ಲೋಕಂ ಶ್ರುಣೋತಿ' ಎಂಬ ಪಾಪರಾಹಿತ್ಯರೂಪಫಲವನ್ನು ಹೇಳುವ ಶ್ರುತಿಯು ಕೇವಲ ಅರ್ಥವಾದವೆಂದು ಸಾಧಿಸಿದ್ದಾರೆ. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಸ್ವೀಕರಿಸಬೇಕೆಂದು ಪೂರ್ವಮೀಮಾಂಸೆಯ ಈ ಅಧಿಕರಣದಿಂದ ತಿಳಿಯುತ್ತದೆ. ಅದರಂತೆ ಪ್ರಕೃತದಲ್ಲಿಯೂ ಪರಮಾತ್ಮನಲ್ಲಿರುವ ಸ್ಥೌಲ್ಯಾದಿರಾಹಿತ್ಯವು ನಿರಪೇಕ್ಷಿತವಾದ್ದರಿಂದ ಅದನ್ನೇ ಸ್ವೀಕರಿಸಬೇಕು, ಲಕ್ಷ್ಮೀದೇವಿಯಲ್ಲಿರುವ ಸಾಪೇಕ್ಷಿತವಾದ ಸ್ಥೌಲ್ಯಾದಿ-ರಾಹಿತ್ಯವನ್ನು ವಿವಕ್ಷಿಸಬಾರದೆಂದು ತಿಳಿಯುತ್ತದೆ.

ಅಕ್ಷರಾಧಿಕರಣ (೧-೩-೩)

**प्रकाशः – प्राकृतस्थौल्यादिराहित्यं न चित्प्रकृतौ व्यभिचारीत्यत्र युक्त्यन्तरमाह – किञ्चेति ।।** श्रुत्यादिप्रसिद्धं विष्ण्वसाधारणमेवास्थूलत्वादिकं श्रुतौ ग्राह्यमिति कुत इत्यत आह – **नच प्रसिद्धेति ।।**

ಪ್ರಾಕೃತವಾದ ಸ್ಥೌಲ್ಯಾದಿರಾಹಿತ್ಯಕ್ಕೆ ಲಕ್ಷ್ಮೀದೇವಿಯಲ್ಲಿ ವ್ಯಭಿಚಾರ ಬರುವುದಿಲ್ಲವೆನ್ನಲು ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ. ಶ್ರುತ್ಯಾದಿಪ್ರಸಿದ್ಧವಾದ ವಿಷ್ಣುವಿನಲ್ಲಿ ಅಸಾಧಾರಣವೇ ಆಗಿರುವಂತಹ ಅಸ್ಥೂಲತ್ವಾದಿಗಳನ್ನೇ ಶ್ರುತ್ಯರ್ಥವೆಂದು ಏಕೆ ಪರಿಗಣಿಸಬೇಕು ? ಎಂಬ ಪ್ರಶ್ನೆಗೆ 'ನಚ ಪ್ರಸಿದ್ಧ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**गुरुराजीयम् – द्वितीयसूत्रोक्तहेतुमाह – किञ्चेति ।। श्रुत्यन्तरेति ।।** अणोरणीयानित्यादिश्रुत्यन्तरविरोधादित्यर्थः । अस्तु प्रकृतौ प्राकृतस्थौल्यादेर्निषेधः सापेक्षः । तथापि स एव किं न गृह्यत इत्यत आह – **नचेति ।।** अन्यथा यस्य पर्णमयी जुहूर्भवतीत्यत्रापि विकृतिगतसापेक्षजुह्वाया एव ग्रहणं स्यादिति भावः । तृतीयसूत्रोक्तहेतुमाह – **किञ्चेति ।।** ननु प्रसिद्धसम्भवे ह्यप्रसिद्धं न ग्राह्यम् । प्रकृते तु स्थौल्याणुत्वयोर्विरोधेनासम्भवादप्रसिद्धग्रहणं युक्तमेवेत्यत आह – **नचेति ।।** विरोधो दृष्टबाधनमित्युक्तत्वादिति भावः ।।




ಯಾವರೀತಿಯಾಗಿ ಪ್ರಥಮ ಸೂತ್ರದಲ್ಲಿರುವ 'ಅಂಬರಾಂತಧೃತಿ' ಎಂಬ ಹೇತು ನಿರವಕಾಶವಾಗಿದೆಯೋ, ಅದರಂತೆ ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನ ಎಂಬ ಹೇತು, ಮತ್ತು ಮೂರನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಾಕೃತ ಸ್ಥೌಲ್ಯಾದಿರಾಹಿತ್ಯವೆಂಬ ಹೇತುಗಳೂ ಸಹ ನಿರವಕಾಶವೇ ಆಗಿವೆ. ಪ್ರಶಾಸನ ಎಂಬ ಹೇತುವಿನಲ್ಲಿ 'ಪ್ರ' ಎಂಬ ಉಪಸರ್ಗವು ಅಸಂಕುಚಿತವಾಗಿರುವಿಕೆ ಮತ್ತು ಸ್ವತಂತ್ರವಾಗಿರುವಿಕೆ ಎಂಬ ಉತ್ಕರ್ಷವನ್ನು (ಶಾಸನ) ಆಜ್ಞೆಯಲ್ಲಿ ಹೇಳುತ್ತಿದೆ. ಸಾಮಾನ್ಯವಾದ ಆಜ್ಞೆಯು ಇತರ ದೇವತೆಗಳಲ್ಲಿರಬಹುದಾದರೂ ಅಸಂಕುಚಿತವಾದ ಸ್ವತಂತ್ರವಾದ ಆಜ್ಞೆ ವಿಷ್ಣುವಿನಲ್ಲಿ ಮಾತ್ರ ಇರುತ್ತದೆ. ಆದ್ದರಿಂದ ನಿರವಕಾಶವೆಂದು ತಿಳಿಯಬೇಕು.

ಮೂರನೆಯ ಸೂತ್ರದಲ್ಲಿ ಸ್ಥೌಲ್ಯಾದಿರಾಹಿತ್ಯವನ್ನು ಹೇಳಿರುತ್ತಾರೆ. ಇಲ್ಲಿ ಹೇಳಲ್ಪಟ್ಟ ಸ್ಥೌಲ್ಯಾದಿರಾಹಿತ್ಯಕ್ಕೆ ಪ್ರಾಕೃತಸ್ಥೌಲ್ಯಾದಿರಾಹಿತ್ಯವೆಂದೇ ವಿವಕ್ಷಿಸಬೇಕು. ಮತ್ತು ಸ್ವತಂತ್ರವಾಗಿದೆಯೆಂದು ವಿವಕ್ಷಿಸಬೇಕು. ಸ್ವತಂತ್ರವೂ ಪ್ರಾಕೃತವೂ ಅಲ್ಲದ ಸ್ಥೌಲ್ಯ, ಅಣುತ್ವ ಮೊದಲಾದ ಧರ್ಮಗಳು ಪರಮಾತ್ಮನನ್ನು ಬಿಟ್ಟು ಬೇರೆ ಯಾರಲ್ಲೂ ಸಹ ಬರಲು ಸಾಧ್ಯವಿಲ್ಲ.





### ಬ್ರಹ್ಮನು ಸ್ಥೂಲನೂ ಅಲ್ಲ ಅಣುವೂ ಅಲ್ಲ

## तात्पर्यचन्द्रिका

**ब्रह्मणः परस्परविरुद्धस्थौल्याणुत्वोभयराहित्यं च श्रुतत्वान्न विरुद्धम् ।**

ಅನುವಾದ - ಲೋಕದಲ್ಲಿ ಸ್ಥೂಲತ್ವಾಭಾವ-ಅಣುತ್ವಾಭಾವಗಳಿಗೆ ಪರಸ್ಪರ ವಿರೋಧವಿದೆ. ಸ್ಥೂಲತ್ವವಿಲ್ಲವೆಂದರೆ ಅಣುತ್ವವಿರುತ್ತದೆ. ಅಣುತ್ವವಿಲ್ಲವೆಂದರೆ ಸ್ಥೂಲತ್ವವಿರುತ್ತದೆ. ಸ್ಥೂಲತ್ವವಿಲ್ಲದಿದ್ದಲ್ಲಿ ಅಣುತ್ವವು ಇಲ್ಲದಿರಲು ಸಾಧ್ಯವಿಲ್ಲ. ಆದರೆ ಬ್ರಹ್ಮನಲ್ಲಿ ಸ್ಥೂಲತ್ವವೂ ಇಲ್ಲ. ಅಣುತ್ವವೂ ಸಹ ಇರುವುದಿಲ್ಲ. ಲೋಕದಲ್ಲಿ ಸ್ಥೂಲತ್ವಾಭಾವ ಅಣುತ್ವಾಭಾವಗಳಿಗೆ ಪರಸ್ಪರ ವಿರೋಧವಿರಬಹುದು. ಆದರೆ ಬ್ರಹ್ಮನಲ್ಲಿ ಮಾತ್ರ ಇವುಗಳಿಗೆ ವಿರೋಧವಿರುವುದಿಲ್ಲ. ಈ ವಿಷಯದಲ್ಲಿ ಅನೇಕ ಶ್ರುತಿಗಳು ಪ್ರಮಾಣವಾಗಿವೆ.

**दर्वीहोमा यथैवान्ये प्रकृतेर्विकृतेरपि ।**
**ईश्वरोऽपि तथैवान्यो महतोऽप्यणुतोऽपि हि ।। १ ।।**

ದರ್ವೀಹೋಮಾ ಯಥೈವಾನ್ಯೇ ಪ್ರಕೃತೇರ್ವಿಕೃತೇರಪಿ ।
ಈಶ್ವರೋऽಪಿ ತಥೈವಾನ್ಯೋ ಮಹತೋऽಪ್ಯಣುತೋऽಪಿ ಹಿ ॥೧॥

ದರ್ವೀಹೋಮದಲ್ಲಿ ಪ್ರಕೃತಿತ್ವ ವಿಕೃತಿತ್ವಗಳೆರಡೂ ಹೇಗೆ ಇಲ್ಲವೋ, ಅದರಂತೆ ಈಶ್ವರನಲ್ಲಿಯೂ ಮಹತ್ತ್ವ ಹಾಗೂ ಅಣುತ್ವಗಳೆರಡೂ ಸಹ ಇರುವುದಿಲ್ಲ.

**युक्तं हि दर्वीहोमानां परस्परविरुद्धप्रकृतिविकृतित्वोभयराहित्यवत्**

ಪೂರ್ವಮೀಮಾಂಸೆಯಲ್ಲಿ ದರ್ವೀಹೋಮವನ್ನು ಪ್ರಕೃತಿಯಾಗವೆಂದಾಗಲೀ ಅಥವಾ ವಿಕೃತಿಯಾಗವೆಂದಾಗಲೀ ಪರಿಗಣಿಸಿಲ್ಲ. ವಾಸ್ತವಿಕವಾಗಿ ಪ್ರಕೃತಿತ್ವವಿಲ್ಲದಿದ್ದರೆ ವಿಕೃತಿತ್ವವಾದರೂ ಇರಬೇಕು, ವಿಕೃತಿತ್ವವಿಲ್ಲವೆಂದರೆ ಪ್ರಕೃತಿತ್ವವಾದರೂ ಇರಬೇಕು. ಆದರೆ ದರ್ವೀಹೋಮದಲ್ಲಿ ಪ್ರಕೃತಿತ್ವ ವಿಕೃತಿತ್ವಗಳೆರಡೂ ಸಹ ಇರುವುದಿಲ್ಲವೆಂದು ನಿರ್ಣಯಿಸಿದ್ದಾರೆ.

**वाय्वादिस्पर्शस्योष्णाशीतबहिर्भाववत्**

ಅಥವಾ ತೇಜಸ್ಸಿನಲ್ಲಿರುವ ಸ್ಪರ್ಶದಲ್ಲಿ ಉಷ್ಣತ್ವವಿದೆ. ಜಲದಲ್ಲಿರುವ ಸ್ಪರ್ಶದಲ್ಲಿ ಶೀತಸ್ಪರ್ಶವಿದೆ. ಆದರೆ ವಾಯು ಹಾಗೂ ಪೃಥ್ವಿಗಳಲ್ಲಿರುವ ಸ್ಪರ್ಶಗುಣದಲ್ಲಿ ಶೀತತ್ವವೂ ಇಲ್ಲ. ಉಷ್ಣತ್ವವೂ ಸಹ ಇರುವುದಿಲ್ಲ. ಹೀಗೆ ತಾರ್ಕಿಕರು ಒಪ್ಪಿರುತ್ತಾರೆ.

**अपाकजरूपस्याबादेः पाकजनीलानीलरूपराहित्यवत्**

ಅಪಾಚಕ ನೀಲರೂಪವುಳ್ಳ ಜಲಾದಿಗಳಲ್ಲಿ ಪಾಚಕನೀಲರೂಪ - ಪಾಚಕಅನೀಲರೂಪ ಎರಡೂ ಧರ್ಮಗಳು ಇಲ್ಲವೆಂದು ತಾರ್ಕಿಕರು ಒಪ್ಪಿರುತ್ತಾರೆ.

**अप्राकृतस्य ब्रह्मणः प्राकृतपरिमाणद्वयराहित्यम् ।**

ಮೇಲಿನ ಮೂರು ದೃಷ್ಟಾಂತಗಳಂತೆ ಪ್ರಕೃತ ಬ್ರಹ್ಮನಲ್ಲಿಯೂ ಸಹ ಅಪ್ರಾಕೃತತ್ವವೇ ಇರುವುದರಿಂದ ಪ್ರಾಕೃತವಾದ ಸ್ಥೌಲ್ಯ-ಅಣುತ್ವ ಮೊದಲಾದ ಪರಿಮಾಣಗಳೆರಡೂ ಸಹ ಇರಲು ಸಾಧ್ಯವಿಲ್ಲ.

**प्रकाशः –**

अत्र भाष्ये -

अस्थूलोऽनणुरूपोऽसावविश्वो विश्व एव च ।
विरुद्धधर्मरूपोऽसावैश्वर्यात्पुरुषोत्तमः ॥

इत्यैश्वर्येणेश्वरे विरोधसमाधानमयुक्तम् ।

ವಿವರಣೆ - ಪರಮಾತ್ಮನಲ್ಲಿ ಪ್ರಾಕೃತವಾದ ಸ್ಥೌಲ್ಯರಾಹಿತ್ಯ-ಅಣುತ್ವರಾಹಿತ್ಯ ಮೊದಲಾದ ಧರ್ಮಗಳನ್ನು ಒಪ್ಪಿದರೆ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಿದ್ದಾರೆ -

ಅಸ್ಥೂಲೋಽನಣುರೂಪೋಽಸಾವವಿಶ್ವೋ ವಿಶ್ವ ಏವ ಚ ।
ವಿರುದ್ಧಧರ್ಮರೂಪೋಽಸಾವೈಶ್ವರ್ಯಾತ್ ಪುರುಷೋತ್ತಮಃ ॥

ಪರಮಾತ್ಮನು ಅಸ್ಥೂಲನು, ಅನಣುಸ್ವರೂಪನು, ಅವಿಶ್ವನು, ವಿಶ್ವನೂ ಆಗಿದ್ದಾನೆ. ಅಂದರೆ ವಿರುದ್ಧಧರ್ಮಸ್ವರೂಪನೇ ಆಗಿದ್ದಾನೆ. ಅವನಲ್ಲಿರುವ ಐಶ್ವರ್ಯದಿಂದ ಇವೆಲ್ಲವೂ ಯುಕ್ತವಾಗುತ್ತದೆ.

ಹೀಗೆ ಈಶ್ವರನಲ್ಲಿರುವ ಐಶ್ವರ್ಯದಿಂದ ವಿರೋಧಗಳನ್ನು ಪರಿಹರಿಸಿದ್ದಾರೆ. ಇದು ತಪ್ಪಲ್ಲವೇ? ಏಕೆಂದರೆ -

**प्रकाशः** – तथात्वे जीवेशाभेदोपगमेनाल्पज्ञत्वसर्वज्ञत्वादिकमपि समाधेयं स्यादित्यतः प्रमाणभावाभावाभ्यां व्यवस्थेति भावेनाह – **ब्रह्मण इति** ॥

ಐಶ್ವರ್ಯಶಕ್ತಿಯಿಂದ ವಿರೋಧವನ್ನು ಪರಿಹರಿಸುವುದಾದರೆ, ಜೀವ ಹಾಗೂ ಬ್ರಹ್ಮರಿಬ್ಬರಿಗೂ ಅಭೇದವನ್ನೇ ಒಪ್ಪೋಣ. ಹಾಗೇ ಅಭೇದವನ್ನು ಒಪ್ಪಿದಾಗ ಅಲ್ಪಜ್ಞತ್ವ, ಸರ್ವಜ್ಞತ್ವಾದಿಧರ್ಮಗಳಿಗೆ ವಿರೋಧ ಬರುತ್ತದಲ್ಲವೇ? ಎಂದು ದ್ವೈತಿಗಳು ಆಕ್ಷೇಪಿಸಿದರೆ ಪರಮಾತ್ಮನಲ್ಲಿರುವಂತಹ ಐಶ್ವರ್ಯಶಕ್ತಿಯಿಂದ ವಿರೋಧವನ್ನು ಪರಿಹರಿಸಬಹುದೆಂದು ಉತ್ತರಿಸುತ್ತೇವೆ. ಆದ್ದರಿಂದ ಪರಮಾತ್ಮನಲ್ಲಿ ಬರುವಂತಹ ಸ್ಥೌಲ್ಯಾದಿರಾಹಿತ್ಯಧರ್ಮಗಳ ವಿರೋಧವನ್ನು ಹೇಗೆ ಪರಿಹರಿಸುತ್ತೀರಿ?

ಈ ಆಕ್ಷೇಪಕ್ಕೆ ಗ್ರಂಥಕಾರರಲು 'ಬ್ರಹ್ಮಣಃ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಯಾವ ವಿಷಯದಲ್ಲಿ ಪ್ರಮಾಣವಿದ್ದು ಪರಸ್ಪರ ವಿರೋಧ ಬಂದಂತೆ ಕಾಣಿಸುತ್ತದೋ, ಅಲ್ಲಿ ಐಶ್ವರ್ಯ ಮೊದಲಾದ ಶಕ್ತಿಗಳನ್ನು ಒಪ್ಪಿ ಆ ವಿರೋಧವನ್ನು ಪರಿಹರಿಸಬೇಕು. ಯಾವ ವಿಷಯದಲ್ಲಿ ಪ್ರಮಾಣವೇ ಇರುವುದಿಲ್ಲವೋ, ಆ ಧರ್ಮಗಳಿಗೆ ಬರುವಂತಹ ಪರಸ್ಪರ ವಿರೋಧವನ್ನು ಪರಿಹರಿಸಲು ಐಶ್ವರ್ಯ ಮೊದಲಾದ ಶಕ್ತಿಗಳನ್ನು ಒಪ್ಪಬಾರದು. ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ.

**प्रकाशः** – यद्वा लोके भिन्नाधिकरणतयोपलब्धानामस्थूलत्वानणुत्वादीनां कथं विष्णौ समावेश इत्यत आह – **ब्रह्मण इति** ।।

ಅಥವಾ ಲೋಕದಲ್ಲಿ ಬೇರೆ ಬೇರೆ ಅಧಿಕರಣಗಳಲ್ಲಿ ಉಪಲಬ್ಧವಾಗಿರುವ ಅಸ್ಥೂಲತ್ವ-ಅನಣುತ್ವ ಮೊದಲಾದ ಧರ್ಮಗಳಿಗೆ ವಿಷ್ಣುವಿನಲ್ಲಿ ಹೇಗೆ ಸಮಾವೇಶವನ್ನು ಹೇಳುತ್ತೀರಿ? ಎಂಬ ಪ್ರಶ್ನೆಗೂ ಸಹ 'ಬ್ರಹ್ಮಣಃ' ಇತ್ಯಾದಿ ವಾಕ್ಯದಿಂದಲೇ ಉತ್ತರಿಸುತ್ತಿದ್ದಾರೆ.

**प्रकाशः** – **श्रुतत्वादिति** ।। यत्र हि धर्माणां भिन्नाधिकरणत्वं प्रमितं तत्रैव तेषां समावेशाभ्युपगमे हि विरोधः । यत्र प्रमाणेनैव सहोपलम्भोऽवगतस्तत्र तथैवाभ्युपगमो न विरुद्ध इति भावः ।

'ಶ್ರುತತ್ವಾತ್' ಎಂಬ ಗ್ರಂಥಕಾರರು ಬಳಸಿದ ಪದದ ಆಂತರ್ಯ ಹೀಗಿದೆ - ಎಲ್ಲಿ ಧರ್ಮಗಳು ಬೇರೆ ಬೇರೆ ಅಧಿಕರಣಗಳಲ್ಲಿ ಪ್ರಮಿತವಾಗಿರುತ್ತವೋ, ಅಂತಹ ಸಂದರ್ಭದಲ್ಲಿ ಒಂದೇ ಕಡೆ ಆ ಎರಡು ವಿರುದ್ಧ ಧರ್ಮಗಳಿಗೆ ಸಮಾವೇಶವನ್ನು ಅಂಗೀಕರಿಸಿದರೆ, ವಿರೋಧ ಬರುತ್ತದೆ. ಆದರೆ ಎಲ್ಲಿ ಪ್ರಮಾಣದ ಬಲದಿಂದಲೇ ಅಂತಹ ವಿರುದ್ಧಧರ್ಮಗಳು ಒಟ್ಟಿಗೆ ಉಪಲಬ್ಧವಾಗಿ ಗೋಚರಿಸುತ್ತವೋ, ಅಲ್ಲಿ ಹಾಗೇ ಸಮಾವೇಶವನ್ನು ಅಂಗೀಕರಿಸಿದರೆ ಖಂಡಿತವಾಗಿಯೂ ವಿರೋಧಬರುವುದಿಲ್ಲವೆಂದು ಅಭಿಪ್ರಾಯ.

**प्रकाशः** – सदृष्टान्तं युक्त्या चोपपादयति – **दर्वीति** ।। श्लोकोक्तमुपलक्षणमिति भावेन श्लोकोक्तं व्यनक्ति – **युक्तमिति** ।।

ಉದಾಹರಣೆಯನ್ನು ಹೇಳುತ್ತಾ ಸಯುಕ್ತಿಕವಾಗಿ ಪ್ರಮಾಣಸಿದ್ಧವಾದ ಧರ್ಮಗಳಿಗೆ ಏಕತ್ರಸಮಾವೇಶವನ್ನು ಒಪ್ಪಿದರೆ ವಿರೋಧ ಬರುವುದಿಲ್ಲವೆಂಬುದನ್ನು ಸಮರ್ಥಿಸುತ್ತಿದ್ದಾರೆ. 'ದರ್ವೀ' ಇತ್ಯಾದಿ ಶ್ಲೋಕದಿಂದ. ಶ್ಲೋಕದಲ್ಲಿ ನೀಡಿದ ದೃಷ್ಟಾಂತವು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ ಸ್ವತಃ ತಾವೇ ಅದನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಯುಕ್ತಮ್' ಇತ್ಯಾದಿ ವಾಕ್ಯದಿಂದ.

**प्रकाशः** – प्राकृतपरिमाणद्वयराहित्यमित्यन्वयः । तत्र हेतुगर्भमप्राकृतस्येति । असम्भावनानिरासाय दृष्टान्ताः दर्वीत्यादि ।

ಎರಡು ಬಗೆಯ ಪ್ರಾಕೃತ ಪರಿಮಾಣಗಳಿಂದ ರಹಿತವಾದದ್ದು ಯುಕ್ತವಾಗಿದೆ ಎಂದು ಅನ್ವಯ ಈ ವಿಷಯದಲ್ಲಿ 'ಅಪ್ರಾಕೃತಸ್ಯ' ಎಂಬುದು ಹೇತುಗರ್ಭವಿಶೇಷಣವಾಗಿದೆ. ಅಸಂಭಾವನೆಯನ್ನು ನಿರಾಕರಿಸುವುದಕ್ಕಾಗಿ 'ದರ್ವಿ' ಇತ್ಯಾದಿಯಾಗಿ ಉದಾಹರಣೆಯನ್ನು ನೀಡಿದ್ದಾರೆ.

**प्रकाशः** – ''तस्मिन्सोमः प्रवर्तेताव्यक्तत्वात्'' इत्यष्टमाध्यायान्तिमाधिकरणे ''यदेकया जुहुयाद्दर्वीहोमं कुर्यात्'' इत्यर्थवादगतदर्वीहोमशब्दितान् वास्तुहोमादीनुदाहृत्य किमेते सोमयागादिप्रकृतिका उतापूर्वा एवेति संशये

'ತಸ್ಮಿನ್ ಸೋಮಃ ಪ್ರವರ್ತೇತಾವ್ಯಕ್ತತ್ವಾತ್'

(೮ನೇ ಅಧ್ಯಾಯದ ಕೊನೆಯ ಅಧಿಕರಣ)[1]

---

(१) **भाट्टसङ्ग्रहः** –

**अथ द्वितीयं दर्वीहोमशब्दस्यापूर्वताधिकरणम् (सूत्राणि १०-२८)**

**तस्मिन् सोमः प्रवर्तेताव्यक्तत्वात् ॥ १० ॥**

**(न वा स्वाहाकारेण संयोगाद्वषट्कारस्य च निर्देशात्तन्त्रे तेन विप्रतिषेधात् ॥११॥ शब्दान्तरत्वाच्च ॥१२॥ लिङ्गदर्शनाच्च ॥१३॥ उत्तरार्थस्तु स्वाहाकारो यथा साप्तदश्यं तत्राविप्रतिषिद्धा पुनः प्रवृत्तिर्लिङ्गदर्शनात्पशुवत् ॥१४॥ अनुत्तरार्थो वाऽर्थवत्त्वादानर्थक्याद्धि प्राकृतस्योपरोधः स्यात् ॥१५॥ न प्रकृतावपीति चेत् ॥१६॥ उक्तं समवाये पारदौर्बल्यम् ॥१७॥ तच्चोदना वेष्टेः प्रवृत्तित्वाद्विधिः स्यात् ॥१८॥ शब्दसामर्थ्याच्च ॥१९॥ लिङ्गदर्शनाच्च ॥२०॥ तत्राभावस्य हेतुत्वाद् गुणार्थे स्याददर्शनम् ॥२१॥ विधिरिति चेत् ॥२२॥ न वाक्यशेषत्वाद् गुणार्थे च समाधानं नानात्वेनोपपद्यते ॥२३॥ येषां वाऽपरयोर्होमस्तेषां स्यादविरोधात् ॥२४॥ तत्रौषधानि चोद्यन्ते तानि स्थानेन गम्येरन् ॥२५॥ लिङ्गाद्वा शेषहोमयोः ॥२६॥ प्रतिपत्ती तु ते भवतस्तस्मादतद्विकारत्वम् ॥२७॥ सन्निपाते विरोधिनामप्रवृत्तिः प्रतीयेत विध्युत्पत्तिव्यवस्थानाद् अर्थस्यापरिणेयत्वाद् वचनादतिदेशः स्यात् ॥२८॥)**

यदर्थं पूर्वत्र दर्वीहोमपदे गुणविधिनामधेयचिन्ता कृता सोऽयमतिदेशापवादोऽधुनाऽऽरभ्यत इति **सङ्गतिः** । ''भिन्ने जुहोति'' ''स्कन्ने जुहोति'' इत्यादिवाक्यविहितदर्वीहोमशब्दिता होमाः किं पूर्ववन्तः, किं वा अपूर्ववन्त इति **सन्देहे**, अश्रुतेतिकर्तव्यताकत्वाद्यस्य कस्यचिद्विध्यन्तेऽवश्यापेक्षिते सत्युत्पत्तावश्रुतदेवताकत्वेनाव्यक्तचोदनाकतया **अव्यक्तासु तु सोमस्येत्युक्तदिशा सौमिकविध्यन्त इत्येकः पूर्वपक्षः** । तदाह सूत्रे, **तस्मिन् सोमः प्रवर्तेताव्यक्तत्वादिति** । **व्यक्तोऽर्थः** सोमस्य यागत्वेन दर्वीहोमानांच होमत्वेन विसदृशत्वान्न तयोः प्रकृतिविकृतिभावः सम्भवति । किन्त्वग्निहोत्रनारिष्टादीनां धर्मवतां विध्यन्तस्य

'ಯದೇಕಯಾ ಜುಹುಯಾದ್ದರ್ವೀಹೋಮಂ ಕುರ್ಯಾತ್' ಎಂಬುದು ಅರ್ಥವಾದ ವಾಕ್ಯವೆನಿಸಿದೆ. ಇದರಲ್ಲಿ 'ದರ್ವೀಹೋಮ' ಎಂಬ ಶಬ್ದದಿಂದ ಅನೇಕ ವಾಸ್ತು ಹೋಮಗಳನ್ನು ವಿಧಿಸಲಾಗಿದೆ. ಈ ವಾಸ್ತುಹೋಮಾದಿಗಳು ಸೋಮಯಾಗವೇ ಮೊದಲಾದ ಯಾಗಗಳಿಗೆ ಪ್ರಕೃತಿಯಾಗವೆನಿಸಿವೆಯೋ, ಅಥವಾ ಪ್ರಕೃತಿಯಾಗವೆನಿಸದೇ ಅಪೂರ್ವವಾದ ಯಾಗಗಳೆನಿಸಿವೆಯೋ? ಎಂದು ಸಂಶಯ.

**प्रकाशः – अश्रुतेतिकर्तव्यताकत्वात् देवतासम्बन्धस्य अस्पष्टत्वेन अव्यक्तचोदनाकत्वाच्च 'अव्यक्तासु तु सोमस्य' इति न्यायेन सोमयागप्रकृतिका इति प्राप्ते**

**ಪೂರ್ವಪಕ್ಷ** - ಸೋಮಯಾಗಕ್ಕೆ ವಾಸ್ತುಹೋಮಾದಿಗಳು ವಿಕೃತಿಯಾಗಗಳಾಗಿವೆ. ಏಕೆಂದರೆ ವಾಸ್ತುಹೋಮಾದಿಗಳನ್ನು ವಿಧಿಸುವಾಗ ಇತಿಕರ್ತವ್ಯತಾಕತ್ವವು ಶ್ರುತವಾಗಿಲ್ಲ. ಅಂದರೆ ಯಾವುದೇ ಒಂದು ಯಾಗಕ್ಕೆ ಇದು ಅಂಗಭೂತವಾಗಿದೆಯೆಂದು ಸ್ಪಷ್ಟವಾಗಿ ಹೇಳಿರುವುದಿಲ್ಲ. ದ್ರವ್ಯ ಹಾಗೂ ದೇವತೆಗಳ ಸಂಬಂಧವೂ ಸಹ ಈ ವಾಸ್ತುಹೋಮಾದಿಗಳಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿಲ್ಲ. ಪ್ರಕರಣದ ಪ್ರಾರಂಭದಲ್ಲಿ ಹಾಗೇನಾದರೂ ಶ್ರುತವಾಗಿದ್ದರೂ ಸಹ ಮುಂದೆ ವಿಷಯನಿರೂಪಣೆಯ ಸಂದರ್ಭದಲ್ಲಿ ಪುನಃ ಅದರ ವಿವರಣೆ ಇಲ್ಲದ ಕಾರಣ ಅಸ್ಪಷ್ಟವಾಗಿದೆಯೆಂದು ಭಾವಿಸಬೇಕು. ಆದ್ದರಿಂದ 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ಚೋದನಾಪ್ರಮಾಣಕ್ಕೆ ಇಲ್ಲಿ ಅವಕಾಶವಿರುವುದಿಲ್ಲ. ಹೀಗಿರುವಾಗ 'ಅವ್ಯಕ್ತಾಸು ತು ಸೋಮಸ್ಯ' ಎಂಬ ನ್ಯಾಯವನ್ನೇ ಅನುಸರಿಸಬೇಕಾಗುತ್ತದೆ. ಯಾವರೀತಿಯಾಗಿ ಯಾವುದಾದರೂ ಯಾಗಕ್ಕೆ ಯಾವುದೇ ಫಲವನ್ನು ಹೇಳದಿದ್ದಾಗ ಅಂತಹದ್ದಕ್ಕೆ ಸ್ವರ್ಗವನ್ನೇ ಫಲವೆಂದು ತಿಳಿಯಬೇಕೋ. ಅದರಂತೆ ಇಲ್ಲಿಯೂ ಸಹ ದ್ರವ್ಯದೇವತಾಗಳ ಸಂಬಂಧವು ಅಸ್ಪಷ್ಟವಾಗಿರುವುದರಿಂದ ಇತಿಕರ್ತವ್ಯತಾಕತ್ವವೂ ಅಸ್ಪಷ್ಟವಾಗಿರುವುದರಿಂದ ಸೋಮಯಾಗವನ್ನು ಕುರಿತು ಪ್ರಕೃತಿಹೋಮವಾಗುತ್ತದೆ ಎಂದೇ ಪರಿಗಣಿಸಬೇಕು. ಏಕೆಂದರೆ 'ಅವ್ಯಕ್ತಾಸು ತು ಸೋಮಸ್ಯ' ಎಂಬ ನ್ಯಾಯವು ಯಾವುದೇ ಒಂದು ಯಾಗಕ್ಕೆ ಅಂಗವೆಂದು ಹೇಳದಿದ್ದಾಗ ಸೋಮಯಾಗವನ್ನೇ ಕುರಿತು ಅದು ಅಂಗವಾಗುತ್ತದೆಂದು ಹೇಳಿದ್ದರಿಂದ ಇದೂ ಸಹ ಸೋಮಯಾಗಕ್ಕೇನೇ ಅಂಗವಾಗುತ್ತದೆ.

**प्रकाशः – सोमस्य यागत्वादेतेषां होमत्वात्सादृश्याभावान्न तत्प्रकृतिकाः । किन्तु नारिष्टाग्निहोत्रादिहोमप्रकृतिका इति पक्षान्तरमुक्त्वा नारिष्टाङ्गभूतानां**

प्रवृत्तिरिति **द्वितीयः** । तदाह **सूत्रे, शब्दान्तरत्वाच्चेति** । यजतिशब्दाज्जुहोतीतिहोमवाचिशब्दस्य भेदवत्त्वादित्यर्थः । **सिद्धान्तस्तु,** नारिष्टहोमादिप्रकृतिकत्वे तदङ्गभूतानामिध्माबर्हिरादीनां दर्वीहोमशब्दितत्र्यम्बकहोमेषु प्राप्तिः स्यात् । नच साऽस्ति । ''नेध्माबर्हिः सन्नह्यते'' इति तदभावदर्शनात् । तस्मादपूर्वत्वमेवैतेषामिति न कस्यापि विध्यन्तस्यातिदेश इति यावच्छ्रुतद्रव्यदेवताभ्यामेव तेषां होमनामनुष्ठानमिति ।

**इति द्वितीयं दर्विहोमशब्दस्यापूर्वताधिकरणम् (सूत्राणि १०-२८)**

ಅಕ್ಷರಾಧಿಕರಣ (೧-೩-೩)

इध्मादीनां त्र्यम्बकहोमकेषु दर्वीहोमनामकेष्वभावदर्शनादपूर्वा एव दर्वीहोमा इति सिद्धान्तितम् ।

ಪೂರ್ವಪಕ್ಷ - ಸೋಮಯಾಗಕ್ಕೆ ವಾಸ್ತುಹೋಮಾದಿಗಳನ್ನು ಅಂಗವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸೋಮವು ಯಾಗವೆನಿಸಿದೆ. ವಾಸ್ತು ಮೊದಲಾದವು ಹೋಮವಾಗಿವೆ. ಹೋಮ ಹಾಗೂ ಯಾಗಗಳಿಗೆ ಸಾದೃಶ್ಯವೇ ಇಲ್ಲದ ಕಾರಣ ಸೋಮ ಯಾಗವು ಪ್ರಕೃತಿಯಾಗವೆನಿಸಲು ಸಾಧ್ಯವಿಲ್ಲ. ಮತ್ತೇನೆಂದರೆ 'ನಾರಿಷ್ಟಾಗ್ನಿಹೋತ್ರ' ಎಂಬ ಹೋಮವು ಈ ವಾಸ್ತುಹೋಮಾದಿಗಳಿಗೆ ಪ್ರಕೃತಿಯಾಗವಾಗಿದೆ. 'ನಾರಿಷ್ಟಾಗ್ನಿಹೋತ್ರ' ಎಂಬ ಪ್ರಕೃತಿಯಾಗಕ್ಕೆ ಅಂಗಭೂತವಾಗಿ ವಾಸ್ತುಹೋಮಾದಿಗಳು ವಿಹಿತವಾಗಿದೆಯೆಂಬ ಮತ್ತೊಂದು ಪೂರ್ವಪಕ್ಷವನ್ನು ಮಾಡಿದ್ದಾರೆ.

ಸಿದ್ಧಾಂತ - ಅನಂತರ ಹೀಗೆ ಉತ್ತರಿಸಿದ್ದಾರೆ. ವಾಸ್ತುಹೋಮಾದಿಗಳು ಕೇವಲ ಸೋಮಯಾಗಕ್ಕಷ್ಟೇ ಅಲ್ಲ; 'ನಾರಿಷ್ಟಾಗ್ನಿಹೋತ್ರ' ಎಂಬ ಹೋಮಕ್ಕೂ ವಿಕೃತಿಯಾಗವಲ್ಲ. ಏಕೆಂದರೆ 'ನಾರಿಷ್ಟಾಗ್ನಿಹೋತ್ರ' ಎಂಬ ಹೋಮದಲ್ಲಿ ಇಧ್ಮ (೧೫ ಸಮಿತ್ತಿನ ಕಟ್ಟು) ಮೊದಲಾದವುಗಳನ್ನು ಅಂಗವೆಂದು ಹೇಳಲಾಗಿದೆ. ಅಂತಹ ಇಧ್ಮ (೧೫ ಸಮಿತ್ತಿನ ಕಟ್ಟು) ಮೊದಲಾದವುಗಳು ವಾಸ್ತುಹೋಮದ ಪ್ರಭೇದವಾದ ತ್ರ್ಯಂಬಕ ಮೊದಲಾದ ಹೋಮಾದಿಗಳಲ್ಲಿ ಶ್ರುತವಾಗಿಲ್ಲ. ತ್ರ್ಯಂಬಕ ಮೊದಲಾದ ಹೋಮಗಳೂ ಸಹ ದರ್ವೀ ಹೋಮಗಳೇ ಆಗಿವೆ. ಆದರೆ ನಾರಿಷ್ಟಾಗ್ನಿಹೋತ್ರದಲ್ಲಿ ಪ್ರಯೋಗಿಸುವ ಅಂಗಗಳು ಇವುಗಳಿಗಿರುವುದಿಲ್ಲವಾದ್ದರಿಂದ ಸ್ವತಂತ್ರವಾದ ಅಪೂರ್ವಯಾಗವೆಂದೇ ಪರಿಗಣಿಸಬೇಕು. ಹೀಗೆ ದರ್ವೀ ಹೋಮವು ಯಾವುದೇ ಯಾಗಕ್ಕೂ ಸಹ ಅಂಗವಾಗಿಲ್ಲವೆಂದು ಸಿದ್ಧಾಂತ.

**प्रकाशः –** तथा चैवमुक्तन्यायेन विकृतित्वराहित्यं तन्मुखनिरीक्षकस्यान्यस्य कर्मणोऽभावात्प्रकृतित्वराहित्यं च यथा दर्वीहोमनामकानां होमानां तथा प्रकृतेऽपीत्यर्थः ।

ಮೇಲಿನ ಪೂರ್ವಮೀಮಾಂಸಾಧಿಕರಣದಲ್ಲಿ ಹೇಳಿದಂತೆ ದರ್ವೀಹೋಮಕ್ಕೆ ವಿಕೃತಿತ್ವವೂ ಇರುವುದಿಲ್ಲ. ಮತ್ತು ಇದನ್ನು ಅಪೇಕ್ಷಿಸಿ ಮತ್ತೊಂದು ಯಾಗವು ಹೊರಟಿರುವುದಿಲ್ಲವಾದ್ದರಿಂದ ಪ್ರಕೃತಿತ್ವವೂ ಸಹ ಇರುವುದಿಲ್ಲ. ಪ್ರಕೃತಿತ್ವ ಹಾಗೂ ವಿಕೃತಿತ್ವ ಎರಡೂ ಧರ್ಮಗಳಿಂದ ಈ ದರ್ವೀ ಹೋಮವು ಯುಕ್ತವಾಗಿದೆ. ಅದರಂತೆ ಪ್ರಕೃತ ಪರಮಾತ್ಮನೂ ಸಹ ವಿರುದ್ಧಧರ್ಮವೆನಿಸಿದ ಸ್ಥೂಲತ್ವ ಹಾಗೂ ಅಣುತ್ವ ಎರಡರಿಂದಲೂ ರಹಿತನಾಗಿದ್ದಾನೆಂದು ಹೇಳಬಹುದು.

**प्रकाशः –** यद्यपि प्रकृतित्वविकृतित्वयोर्न परस्परं विरोधः । अग्नीषोमीयपशोः पश्वन्तरापेक्षया प्रकृतित्वेऽपि दर्शपूर्णमासापेक्षया विकृतित्वात् । द्वादशाहस्याहर्गणापेक्षया प्रकृतित्वेऽपि ज्योतिष्टोमापेक्षया विकृतित्वाच्च ।

ಪ್ರಶ್ನೆ - ಪೂರ್ವಮೀಮಾಂಸಾದೃಷ್ಟಾಂತದಿಂದ ಪ್ರಕೃತಿತ್ವ ಹಾಗೂ ವಿಕೃತಿತ್ವ ಧರ್ಮಗಳಿಗೆ ಪರಸ್ಪರ ವಿರೋಧವನ್ನು ನೀವು ಹೇಳಿದಂತಾಯಿತು. ಆದರೆ ಅವುಗಳಿಗೆ ವಿರೋಧವೇ ಇರುವುದಿಲ್ಲ. ಏಕೆಂದರೆ ಅನೇಕ ದೃಷ್ಟಾಂತಗಳಲ್ಲಿ ಪ್ರಕೃತಿತ್ವ ಹಾಗೂ ವಿಕೃತಿತ್ವ ಎರಡೂ ಸಹ ಒಂದೇ ಕಡೆ ಬಂದಿರುವುದು ಕಂಡಿರುತ್ತದೆ - ಅಗ್ನಿಷೋಮಿಯ ಪಶು ಎಂಬುದು ಬೇರೆ ಯಾಗದ ಪಶುಗಳನ್ನು ವಿವಕ್ಷಿಸಿದಾಗ ಪ್ರಕೃತಿಯಾಗಿರುತ್ತದೆ. ದರ್ಶಪೂರ್ಣಮಾಸಯಾಗವನ್ನು ಅಪೇಕ್ಷಿಸಿದಾಗ ವಿಕೃತಿಯೆನಿಸಿಕೊಳ್ಳುತ್ತದೆ. ಹೀಗೆ ಒಂದೇ ಅಗ್ನೀಷೋಮಿಯಪಶುವಿನಲ್ಲಿ ಪ್ರಕೃತಿತ್ವ ಹಾಗೂ ವಿಕೃತಿತ್ವ ಎರಡೂ ಸಹ ಒಟ್ಟಿಗೆ ಇರುವುದು ಕಂಡಿದೆ.

'ದ್ವಾದಶಾಹ' ಎಂಬ ಇಷ್ಟಿವಿಶೇಷವೂ ಸಹ 'ಅಹರ್ಗಣ' ಎಂಬ ಇಷ್ಟಿವಿಶೇಯದ ಅಪೇಕ್ಷೆಯಿಂದ ಪ್ರಕೃತಿಯೆನಿಸಿದೆ. ಆದರೆ ಜ್ಯೋತಿಷ್ಟೋಮಕ್ಕೆ ಅಂಗವಾದ್ದರಿಂದ ಜ್ಯೋತಿಷ್ಟೋಮವನ್ನು ಅಪೇಕ್ಷಿಸಿದಾಗ ವಿಕೃತಿಯೆನಿಸುತ್ತದೆ. ಹೀಗೆ ಒಂದೇ ದ್ವಾದಶಾಹ ಎಂಬ ಇಷ್ಟಿವಿಶೇಷದಲ್ಲಿ ಪ್ರಕೃತಿತ್ವ ವಿಕೃತಿತ್ವಗಳೆರಡೂ ಇರುವುದು ಕಂಡಿದೆ. ಹೀಗೆ ವಿರೋಧವೇ ಇಲ್ಲದಿರುವಾಗ ಪ್ರಕೃತಿತ್ವ ವಿಕೃತಿತ್ವಗಳಿಗೆ 'ಸಹಾನವಸ್ಥಾನ' ಎಂಬ ವಿರೋಧವನ್ನು ಹೇಗೆ ಹೇಳುತ್ತೀರಿ ?

**प्रकाशः** – तथापि प्रतियोगिभेदाभावे तयोर्विरुद्धत्वमस्तीति वा स्वापेक्षया स्वस्य द्वयं विरुद्धमिति वा परस्परपरिहारेण क्वचिद्दर्शपूर्णमासादौ दृष्टत्वाभिप्रायेण वा परस्परविरुद्धेति प्रकृतिविकृत्योर्विशेषणमुपात्तम् ।

ಉತ್ತರ - ಅನೇಕ ದೃಷ್ಟಿಯಿಂದ ಪ್ರಕೃತಿತ್ವ, ವಿಕೃತಿತ್ವಗಳಿಗೆ ಹೇಳಲ್ಪಟ್ಟ ವಿರೋಧವನ್ನು ಕೂಡಿಸಬಹುದು. ಪ್ರತಿಯೋಗಿ ಭೇದವು ಇಲ್ಲದಿದ್ದರೆ ಮಾತ್ರ ಪ್ರಕೃತಿತ್ವ ಹಾಗೂ ವಿಕೃತಿತ್ವಗಳಿಗೆ ವಿರೋಧವಿರುತ್ತದೆಂದು ತಿಳಿಯಬೇಕು. ಅಥವಾ ತನಗೆ ತಾನೇ ಪ್ರಕೃತಿ ಹಾಗೂ ವಿಕೃತಿಯಾಗಲು ಸಾಧ್ಯವಿಲ್ಲವೆಂಬುದಾಗಿ ಸ್ವಾಪೇಕ್ಷೆಯಾ ಪ್ರಕೃತಿತ್ವ ವಿಕೃತಿತ್ವಗಳಿಗೆ ವಿರೋಧವಿರುತ್ತದೆಂದು ತಿಳಿಯಬೇಕು. ಅಥವಾ ಪಾಚಕತ್ವ ಪುರುಷತ್ವಗಳು ಬೇರೆ ಬೇರೆ ಕಡೆ ಕಂಡರೂ ವ್ಯಕ್ತಿವಿಶೇಷದಲ್ಲಿ ಒಂದೇ ಕಡೆ ಇರುವುದು ಕಂಡಿರುತ್ತದೆ. ಅದರಂತೆ ಪ್ರಕೃತಿತ್ವ, ವಿಕೃತಿತ್ವಗಳು ಪರಸ್ಪರ ವಿರುದ್ಧವೇ ಆಗಿವೆ. ಆದರೆ ಅಗ್ನಿಷೋಮಿಯ ಪಶು ಮೊದಲಾದವೆಡೆ ಮಾತ್ರ ಒಂದೇ ಕಡೆ ಸೇರಿರುತ್ತವೆಂದು ತಿಳಿಯಬೇಕು. ಆದ್ದರಿಂದ ಕೆಲವು ದರ್ಶಪೂರ್ಣಮಾಸಾದಿ ಸ್ಥಳದಲ್ಲಿ ಪರಸ್ಪರ ವಿರುದ್ಧವಾಗಿ ಕಂಡಿರುವುದರಿಂದ, ಅಂತಹ ಸ್ಥಳವನ್ನೇ ಗ್ರಂಥಕಾರರು ದೃಷ್ಟಾಂತವನ್ನಾಗಿ ಪರಿಗಣಿಸಿದ್ದಾರೆಂದು ತಿಳಿಯಬೇಕು. ಆದ್ದರಿಂದಲೇ ಪರಸ್ಪರ ವಿರುದ್ಧ ಎಂಬುದನ್ನು ಪ್ರಕೃತಿ-ವಿಕೃತಿಗಳಲ್ಲಿ ವಿಶೇಷಣವನ್ನಾಗಿ ಹೇಳಿರುತ್ತಾರೆ.

**प्रकाशः** – यद्वा विरुद्धेति राहित्ययोर्विशेषणम्

ಪರಸ್ಪರ ವಿರುದ್ಧತ್ವವು ಪ್ರಕೃತಿತ್ವ-ವಿಕೃತಿತ್ವಗಳಲ್ಲಿ ವಿಶೇಷಣವೇ ಆಗಿಲ್ಲ ಹೊರತಾಗಿ ಪ್ರಕೃತಿತ್ವರಾಹಿತ್ಯ ವಿಕೃತಿತ್ವರಾಹಿತ್ಯವೆಂಬಲ್ಲಿ ವಿಶೇಷಣವಾಗಿವೆ. ಅಂದರೆ ಪ್ರಕೃತಿತ್ವರಾಹಿತ್ಯವಿದ್ದಲ್ಲಿ, ವಿಕೃತಿತ್ವವೇ ಇರುತ್ತದೆ ಹೊರತು, ವಿಕೃತಿತ್ವರಾಹಿತ್ಯವಿರುವುದಿಲ್ಲ. ವಿಕೃತಿತ್ವರಾಹಿತ್ಯವಿದ್ದಲ್ಲಿ ಪ್ರಕೃತಿತ್ವವೇ ಇರುತ್ತದೆ ಹೊರತು,

ಪ್ರಕೃತಿತ್ವರಾಹಿತ್ಯವು ಇರುವುದಿಲ್ಲ. ಆದ್ದರಿಂದ ಪ್ರಕೃತಿತ್ವರಾಹಿತ್ಯ ಹಾಗೂ ವಿಕೃತಿತ್ವರಾಹಿತ್ಯಗಳು ಪರಸ್ಪರವಿರುದ್ಧವಾದ ಧರ್ಮಗಳೆಂದು ದೃಷ್ಟಾಂತವನ್ನು ತಿಳಿಯಬೇಕು.

**प्रकाशः – वाय्विति ।।** यथा तार्किकमते तेजोगतस्य स्पर्शस्योष्णत्वं जलगतस्य शीतत्वं वायुगतस्योभयबहिर्भावः, पृथिवीवाय्वोरनुष्णाशीतस्पर्शोररीकरणात् । तद्वदित्यर्थः ।।

ಪರಮಾತ್ಮನಲ್ಲಿ ಪರಸ್ಪರ ವಿರುದ್ಧವಾದ ಧರ್ಮಗಳಿರಬಹುದೆನ್ನಲು ಮತ್ತೊಂದು ದೃಷ್ಟಾಂತವನ್ನು 'ವಾಯು' ಇತ್ಯಾದಿಯಾದ ಮಾತಿನಿಂದ ಗ್ರಂಥಕಾರರು ಹೇಳುತ್ತಿದ್ದಾರೆ. ತಾರ್ಕಿಕರು ತೇಜಸ್ಸಿನಲ್ಲಿರುವ ಸ್ಪರ್ಶಕ್ಕೆ ಉಷ್ಣತ್ವವನ್ನು ಮಾತ್ರ ಒಪ್ಪುತ್ತಾರೆ. ಜಲದಲ್ಲಿರುವ ಸ್ಪರ್ಶಕ್ಕೆ ಶೀತತ್ವವನ್ನು ಮಾತ್ರ ಒಪ್ಪುತ್ತಾರೆ. ಆದರೆ ವಾಯುವಿನಲ್ಲಿರುವ ಸ್ಪರ್ಶದಲ್ಲಿ ಶೀತತ್ವವನ್ನು ಒಪ್ಪುವುದಿಲ್ಲ. ಉಷ್ಣತ್ವವನ್ನೂ ಸಹ ಒಪ್ಪುವುದಿಲ್ಲ. ಏಕೆಂದರೆ ಪೃಥಿವೀ ಹಾಗೂ ವಾಯು ಎರಡು ದ್ರವ್ಯಗಳು ಅನುಷ್ಣಾಶೀತಸ್ಪರ್ಶವುಳ್ಳವುಗಳು ಎಂದು ಒಪ್ಪಿರುವುದರಿಂದ. ಹೀಗೆ ಯಾವರೀತಿಯಾಗಿ ವಾಯುವಿನಲ್ಲಿ ಶೀತಸ್ಪರ್ಶ ಹಾಗೂ ಉಷ್ಣಸ್ಪರ್ಶಗಳೆರಡೂ ಇರುವುದಿಲ್ಲವೋ, ಅದರಂತೆ ಪರಮಾತ್ಮನಲ್ಲಿ ಸ್ಥೂಲತ್ವ, ಅಣುತ್ವ ಎರಡೂ ಸಹ ಇಲ್ಲದಿರಬಹುದು ಎಂದಭಿಪ್ರಾಯ.

**प्रकाशः – पाकजेति ।।** पृथिवीगतस्य रूपस्य तपनादितेजस्सम्बन्धेन पाकजत्वमङ्गीकृतमिति पाकजेत्युक्तम् ।

ಪೃಥಿವೀಯಲ್ಲಿರುವ ರೂಪಕ್ಕೆ ಅಗ್ನಿಸಂಬಂಧವನ್ನು ಒಪ್ಪಿ ಪಾಕಜತ್ವವನ್ನು ತಾರ್ಕಿಕರು ಅಂಗೀಕರಿಸಿದ್ದಾರೆ. ಆದ್ದರಿಂದ ಗ್ರಂಥಕಾರರು 'ಪಾಕಜ' ಎಂದು ಹೇಳಿದ್ದಾರೆ.




ಬ್ರಹ್ಮನಲ್ಲಿ ಶ್ರುತಿಯು ಸ್ಥೌಲ್ಯ, ಅಣುತ್ವ ಮೊದಲಾದ ಧರ್ಮಗಳೆಲ್ಲವನ್ನೂ ಸಹ ನಿಷೇಧ ಮಾಡುತ್ತಿದೆ. ವಾಸ್ತವಿಕವಾಗಿ ಸ್ಥೂಲತ್ವವನ್ನು ನಿಷೇಧ ಮಾಡಿದ ಮೇಲೆ ಅಣುತ್ವವನ್ನು ವಿಧಾನ ಮಾಡಲೇ ಬೇಕು. ಅಣುತ್ವವೂ, ಸ್ಥೂಲತ್ವವೂ ಇಲ್ಲದ ವಸ್ತುವಿರಲು ಸಾಧ್ಯವಿಲ್ಲ. ಆದರೆ ಮಹಾವಿಷ್ಣುವು ಅಪ್ರಾಕೃತಸ್ವರೂಪನಾದ್ದರಿಂದ ಪ್ರಾಕೃತಸ್ಥೂಲತ್ವವಾಗಲೀ, ಪ್ರಾಕೃತವಾದ ಅಣುತ್ವವಾಗಲೀ ಅವನಲ್ಲಿ ಇರುವುದಿಲ್ಲವೆಂದು ಹೇಳಬಹುದು. ಅಪ್ರಾಕೃತಸ್ವರೂಪನಲ್ಲಿ ಪ್ರಾಕೃತವಾದ ಎರಡು ವಿರುದ್ಧಧರ್ಮಗಳ ಅಭಾವವನ್ನು ಹೇಳುವುದರಿಂದ ಯಾವುದೇ ಬಾಧಕಗಳಿರುವುದಿಲ್ಲ.



## तात्पर्यचन्द्रिका

**अथवा अनुव्याख्यानसुधोक्तरीत्याऽस्थूलादिपदैस्तद्विरुद्धाणुत्वादिविधिरस्तु । नचैवं विरोधः ।**

ಅನುವಾದ - ಅಥವಾ ಅನುವ್ಯಾಖ್ಯಾನ ಹಾಗೂ ನ್ಯಾಯಸುಧೆಯ ಪ್ರಕಾರ 'ಅಸ್ಥೂಲೋ ಅನಣುಃ' ಇತ್ಯಾದಿ ಶ್ರುತಿಗೆ ಮತ್ತೊಂದು ಬಗೆಯಲ್ಲಿಯೇ ವ್ಯಾಖ್ಯಾನಿಸಬಹುದು. ಶ್ರುತಿಯಲ್ಲಿರುವ 'ಅಸ್ಥೂಲಃ' ಎಂಬ ಪದವು ಸ್ಥೂಲತ್ವಕ್ಕೆ ವಿರುದ್ಧವಾದ ಅಣುತ್ವವನ್ನು ವಿಧಿಸುತ್ತಿದೆ. 'ಅನಣುಃ' ಎಂಬ ಪದವು ಅಣುತ್ವಕ್ಕೆ ವಿರುದ್ಧವಾದ ಸ್ಥೂಲತ್ವ ಧರ್ಮವನ್ನು ವಿಧಿಸುತ್ತಿದೆ. ಹೀಗೆ ಆಯಾ ಪದಗಳು ತದ್ವಿರುದ್ಧವಾದ ಧರ್ಮಗಳನ್ನು ವಿಧಿಸುತ್ತಿವೆ ಎಂದು ಹೇಳಬಹುದು. ಒಬ್ಬನೇ ಭಗವಂತನಲ್ಲಿ ವಿರುದ್ಧವಾದ ಸ್ಥೂಲತ್ವ-ಅಣುತ್ವ ಮೊದಲಾದ ಧರ್ಮಗಳಿಗೆ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ -

**यथैकस्यैव दध्यादेः क्रत्वर्थपुरुषार्थते ।**
**अणीयस्त्वमहीयस्त्वे तथैकस्यैव हीशितुः ॥**

ಯಥೈಕಸ್ಯೈವ ದಧ್ಯಾದೇಃ ಕ್ರತ್ವರ್ಥಪುರುಷಾರ್ಥತೇ ।
ಅಣೀಯಸ್ತ್ವಮಹೀಯಸ್ತ್ವೇ ತಥೈಕಸ್ಯೈವ ಹೀಶಿತುಃ ॥

ಒಂದೇ ದಧಿಯಲ್ಲಿ ಕ್ರತ್ವರ್ಥತ್ವ ಹಾಗೂ ಪುರುಷಾರ್ಥತ್ವಗಳೆರಡು ಇರುವುದು ಕಂಡಿದೆ. ಅದರಂತೆ ಐಶ್ವರ್ಯಾದಿ ಗುಣಶಾಲಿಯಾದ ಭಗವಂತನಲ್ಲಿ ಅಣುತ್ವ-ಮಹತ್ವಗಳು ಇರಬಹುದು.

**दर्शपूर्णमासादीनां केवलप्रकृतित्वेऽपि पशुगणादीनां केवलविकृतित्वेऽपि अग्नीषोमीयपश्वादीनां प्रकृतित्वे सति विकृतित्ववत्,**

ಶ್ಲೋಕದ ವಿವರಣೆ ಹೀಗಿದೆ - ದರ್ಶಪೂರ್ಣಮಾಸ ಯಾಗವು ಉಳಿದ ಯಾಗಗಳಿಗೆಲ್ಲಾ ಪ್ರಕೃತಿಯಾಗವಾಗಿದೆ ಹೊರತು, ಬೇರೆ ಮತ್ತೊಂದು ಯಾಗಕ್ಕೆ ಈ ದರ್ಶಪೂರ್ಣಮಾಸ ಯಾಗವು ವಿಕೃತಿಯಾಗಿರುವುದಿಲ್ಲ. ಇನ್ನು ಪಶುಗಣ ಮೊದಲಾದ ಯಾಗಗಳು ದರ್ಶಪೂರ್ಣಮಾಸಾದಿ ಯಾಗಗಳಿಗೆ ಕೇವಲ ವಿಕೃತಿಯಾಗಿದೆ ಹೊರತು, ಮತ್ತೊಂದು ಯಾಗಕ್ಕೆ ಪ್ರಕೃತಿಯಾಗಿರುವುದಿಲ್ಲ. ಆದರೆ ಅಗ್ನಿಷೋಮಿಯಪಶು ಮೊದಲಾದವುಗಳು ದರ್ಶಪೂರ್ಣಮಾಸ ಯಾಗದ ವಿಕೃತಿಯೂ ಆಗಿದೆ, ಸವನೀಯ ಪಶುಬಂಧಕ್ಕೆ ಪ್ರಕೃತಿಯೂ ಆಗಿದೆ. ಆದ್ದರಿಂದ ಪ್ರಕೃತಿತ್ವ ಹಾಗೂ ವಿಕೃತಿತ್ವಗಳು ಬೇರೆ ಬೇರೆ ಸ್ಥಳಗಳಲ್ಲಿ ಭಿನ್ನವಾಗಿ ಕಂಡಿದ್ದರೂ ಅಗ್ನಿಷೋಮಿಯಪಶುವಿನ ವಿಷಯದಲ್ಲಿ ಮಾತ್ರ ಪ್ರಕೃತಿತ್ವ, ವಿಕೃತಿತ್ವಗಳೆರಡೂ ಒಟ್ಟಿಗೆ ಇರುವುದು ಕಂಡಿರುತ್ತದೆ.

**अवघातादीनां दृष्टमात्रार्थत्वेऽपि प्रोक्षणादीनामदृष्टमात्रार्थत्वेऽपि स्विष्टकृदादीनामुभयार्थत्ववत्,**

ಮತ್ತು ಅವಘಾತಕ್ಕೆ ಕೇವಲ ದೃಷ್ಟಪ್ರಯೋಜನವಿರುವುದು ಕಂಡಿದೆ. ಪ್ರೋಕ್ಷಣ್ಯಾದಿಗಳಿಗೆ ಕೇವಲ ಅದೃಷ್ಟಪ್ರಯೋಜನವಿರುವುದು ಕಂಡಿದೆ. ಆದರೆ 'ಸ್ವಿಷ್ಟಕೃತ್' ಮೊದಲಾದವುಗಳಲ್ಲಿ ದೃಷ್ಟಪ್ರಯೋಜನ ಹಾಗೂ ಅದೃಷ್ಟಪ್ರಯೋಜನಗಳೆರಡೂ ಸಹ ಒಟ್ಟಿಗೆ ಇರುವುದು ಕಂಡಿರುತ್ತದೆ.'

**अन्यत्र कामाधिकारनित्याधिकारयोरन्यतरमात्रस्य सत्त्वेऽपि जातेष्टौ द्वयोः संवलनवत्,**

ಇದರಂತೆ ಕಾಮಾಧಿಕಾರತ್ವ ಹಾಗೂ ನಿತ್ಯಾಧಿಕಾರತ್ವಗಳು ಬೇರೆಡೆ ಭಿನ್ನ-ಭಿನ್ನವಾಗಿ ಕಂಡಿದ್ದರೂ, ಜಾತೇಷ್ಟಿಯಲ್ಲಿ ಮಾತ್ರ ಒಟ್ಟಿಗೆ ಇರುವುದು ಕಂಡಿರುತ್ತದೆ. ಅಥವಾ ನಿತ್ಯಕರ್ಮ ಹಾಗೂ ನೈಮಿತ್ತಿಕಕರ್ಮಗಳು ಭಿನ್ನ-ಭಿನ್ನವಾಗಿದ್ದರೂ ಕೆಲವೆಡೆ ಒಟ್ಟಿಗೆ ಇರುವುದು ಕಂಡಿರುತ್ತದೆಂದು ತಿಳಿಯಬೇಕು.

**व्रीह्यादीनां क्रत्वर्थमात्रत्वेऽपि गोदोहनादीनां पुरुषार्थत्वमात्रत्वेऽपि दध्यादीनामुभयार्थत्ववच्च**

ಇದರಂತೆ ವ್ರೀಹಿ ಮೊದಲಾದವುಗಳಲ್ಲಿ ಕೇವಲ ಕ್ರತುಪ್ರಯೋಜನತ್ವವಿರುತ್ತದೆ. ಗೋದೋಹನಾದಿಗಳಲ್ಲಿ ಕೇವಲ ಪುರುಷಾರ್ಥತ್ವವು ಇರುತ್ತದೆ. ಆದರೆ ದಧಿ ಮೊದಲಾದವುಗಳಲ್ಲಿ ಕ್ರತ್ವರ್ಥತ್ವ ಹಾಗೂ ಪುರುಷಾರ್ಥತ್ವಗಳೆರಡೂ ಒಟ್ಟಿಗೆ ಇರುವುದು ಪೂರ್ವಮೀಮಾಂಸೆಯಲ್ಲಿ ಸಿದ್ಧವಾಗಿದೆ. ಹೀಗೆ ಈ ನಾಲ್ಕು ದೃಷ್ಟಾಂತಗಳಿಂದ ಬೇರೆ ಬೇರೆ ಸ್ಥಳಗಳಲ್ಲಿ ಭಿನ್ನ-ಭಿನ್ನವಾಗಿರುವ ಧರ್ಮಗಳು ಕೆಲವೆಡೆ ಒಟ್ಟಿಗೆ ಇರಬಹುದೆಂಬ ನಿಯಮವು ಸಿದ್ಧವಾಗುತ್ತವೆ.

**अन्यत्राणुत्वमहत्त्वयोरेकैकमात्रस्य सत्त्वेऽपि अणुन्येव कृष्णस्य मुखे गर्भीकृतब्रह्माण्डे महत्त्वग्राहकस्य यशोदाप्रत्यक्षस्य अणुत्वलिङ्गस्यैकेनापि दाम्ना बन्धनस्य महत्त्वलिङ्गस्यानेकैरप्यबन्धनस्य "अणोरणीयान्महतो महीयान्" इत्यागमस्य च सत्त्वात् ।**

ಮೇಲೆ ಹೇಳಿದ ದೃಷ್ಟಾಂತಗಳಂತೆ ಅಣುತ್ವ ಹಾಗೂ ಮಹತ್ತ್ವಗಳೆರಡೂ ಪ್ರತ್ಯೇಕವಾಗಿ ಲೋಕದಲ್ಲೆಲ್ಲೆಡೆ ಇರುವುದು ಕಂಡಿದ್ದರೂ ಸಹ ಪರಮಾತ್ಮನಲ್ಲಿ ಒಟ್ಟಿಗೆ ಇರಬಹುದು. ಏಕೆಂದರೆ ಸಣ್ಣದಾದ ಶ್ರೀಕೃಷ್ಣನ ಬಾಯಿಯಲ್ಲಿ ಸಮಗ್ರ ಬ್ರಹ್ಮಾಂಡವನ್ನೇ ಯಶೋದಾದೇವಿಯು ನೋಡಿದ್ದಾಳೆ. ಯಶೋದೆಯ ಪ್ರತ್ಯಕ್ಷ ಪ್ರಮಾಣದಿಂದ ಕೃಷ್ಣನ ಮುಖದಲ್ಲಿ ಅಣುತ್ವ-ಮಹತ್ತ್ವಗಳೆರಡೂ ಒಟ್ಟಿಗೆ ಇರುವುದು ಸಿದ್ಧವಾಗಿದೆ.

ಪರಿಪೂರ್ಣಚಂದ್ರಿಕಾ

ಅಷ್ಟೇ ಅಲ್ಲದೆ, ಅಣುತ್ವಲಿಂಗಕ್ಕೆ ಅನುಮಾಪಕವಾದ ಒಂದೇ ಹಗ್ಗದಿಂದ ಕೃಷ್ಣನನ್ನು ಕಟ್ಟುವಿಕೆ ಹಾಗೂ ಮಹತ್ತ್ವಕ್ಕೆ ಅನುಮಾಪಕವಾದ ಅನೇಕ ಹಗ್ಗಗಳಿಂದ ಶ್ರೀಕೃಷ್ಣನನ್ನು ಕಟ್ಟಲಾಗದಿರುವಿಕೆ ಎಂಬ ಲಿಂಗವೂ ಸಹ ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ. ಒಂದೇ ಹಗ್ಗದಿಂದ ಕೃಷ್ಣನನ್ನು ಕಟ್ಟಿರುವ ಕಾರಣ ಅಣುತ್ವವಿದೆಯೆಂದು ಊಹಿಸಬಹುದು. ಅನೇಕ ಹಗ್ಗಗಳಿಂದ ಕೃಷ್ಣನನ್ನು ಕಟ್ಟಲಾಗಲು ಸಾಧ್ಯವಾಗದ ಕಾರಣ ಮಹತ್ತ್ವವಿದೆಯೆಂದು ಊಹಿಸಬಹುದು.

'ಅಣೋರಣೀಯಾನ್ ಮಹತೋ ಮಹೀಯಾನ್' 'ಅಣುವಿಗಿಂತಲೂ ಅಣುವಾಗಿದ್ದಾನೆ. ಮಹತ್‌ಪದಾರ್ಥಕ್ಕಿಂತಲೂ ಮಹೀಯಾನ್' ಆಗಿದ್ದಾನೆ ಎಂಬ ಮಹಾನಾರಾಯಣ ಶ್ರುತಿಯೂ ಸಹ ಈ ವಿಷಯದಲ್ಲಿ ಪ್ರಮಾಣವಾಗಿದೆ.

**अणुत्वादेर्महत्त्वाद्यसामानाधिकरण्ये च प्राकृतत्वस्योपाधित्वात् ।**

ಹಾಗಾದರೆ ಅಣುತ್ವ-ಮಹತ್ತ್ವಧರ್ಮಗಳಿಗೆ ಎಲ್ಲಿಯೂ ಸಹ ವಿರೋಧವನ್ನೇ ಒಪ್ಪಬೇಕಾಗಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಪ್ರಾಕೃತತ್ವವು ಅಣುತ್ವ ಮಹತ್ತ್ವಗಳಿಗಿರುವ ವಿರೋಧಕ್ಕೆ ಉಪಾಧಿಯಾಗಿದೆ. ಅಂದರೆ ಎಲ್ಲಿ ಮಹತ್ತ್ವವಿರುವುದಿಲ್ಲವೋ, ಅಲ್ಲಿ ಪ್ರಾಕೃತತ್ವವಿದ್ದರೆ ಅಣುತ್ವ ಇದ್ದೇ ಇರುತ್ತದೆ. ಇದರಂತೆ ಎಲ್ಲಿ ಅಣುತ್ವವಿರುವುದಿಲ್ಲವೋ, ಅಲ್ಲಿ ಪ್ರಾಕೃತತ್ವವಿದ್ದರೆ ಮಹತ್ತ್ವವು ಇದ್ದೇ ಇರುತ್ತದೆ ಎಂಬುದಾಗಿ ತಿಳಿಯಬೇಕು. ಆದ್ದರಿಂದ ಘಟಪಟಾದಿಗಳಲ್ಲಿಯೂ ಸಹ ಅಣುತ್ವ-ಮಹತ್ತ್ವಗಳನ್ನು ಒಟ್ಟಿಗೆ ಒಪ್ಪೋಣ ಎಂಬ ಶಂಕೆಗೆ ಅವಕಾಶವಿಲ್ಲ. ಪರಮಾತ್ಮನಲ್ಲಿ ಪ್ರಾಕೃತತ್ವವು ಇಲ್ಲದ ಕಾರಣ ಅಣುತ್ವ-ಮಹತ್ತ್ವಗಳಿಗೆ ವಿರೋಧವಿಲ್ಲವೆಂದು ತಿಳಿಯಬೇಕು.

**भेदप्रतिनिधेर्विशेषस्य सत्त्वाच्च ॥**

ಅಥವಾ ಅಣುತ್ವ-ಮಹತ್ತ್ವಗಳಿದ್ದಲ್ಲಿ ಭೇದವಿದ್ದರೆ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ ಪರಮಾತ್ಮನಲ್ಲಿ ಭೇದಪ್ರತಿನಿಧಿಯಾದ ವಿಶೇಷವಿರುವ ಕಾರಣ ವಿರೋಧಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

**''त्वयीश्वरे ब्रह्मणि नो विरुध्यते'' इत्यादावैश्वर्यादेवाविरोधोक्तेश्च ब्रह्मण्युभयमुपपन्नम् ।**

ಅಥವಾ 'ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ' ಇತ್ಯಾದಿ ವಾಕ್ಯಗಳಲ್ಲಿ ಪರಮಾತ್ಮನಲ್ಲಿರುವ ಐಶ್ವರ್ಯಶಕ್ತಿಯಿಂದ ಯಾವುದೇ ಧರ್ಮಗಳ ವಿರೋಧಕ್ಕೂ ಅವಕಾಶವಿಲ್ಲವೆಂದು ಅಂಗೀಕರಿಸಲಾಗಿದೆ. ಅಚಿಂತ್ಯಾದ್ಭುತಶಕ್ತಿಯಿಂದ ಪರಮಾತ್ಮನಲ್ಲಿ ಒಟ್ಟಿಗೆ ಇರುವ ಅಣುತ್ವ-ಮಹತ್ತ್ವಗಳ ವಿರೋಧವನ್ನು ಪರಿಹರಿಸಬೇಕು.

ಅಕ್ಷರಾಧಿಕರಣ (೧-೩-೩)

**अवघातादीनां दृष्टमात्रार्थत्वेऽपि प्रोक्षणादीनामदृष्टमात्रार्थत्वेऽपि स्विष्टकृदादीनामुभयार्थत्ववत्,**

ಮತ್ತು ಅವಘಾತಕ್ಕೆ ಕೇವಲ ದೃಷ್ಟಪ್ರಯೋಜನವಿರುವುದು ಕಂಡಿದೆ. ಪ್ರೋಕ್ಷಣ್ಯಾದಿಗಳಿಗೆ ಕೇವಲ ಅದೃಷ್ಟಪ್ರಯೋಜನವಿರುವುದು ಕಂಡಿದೆ. ಆದರೆ 'ಸ್ವಿಷ್ಟಕೃತ್' ಮೊದಲಾದವುಗಳಲ್ಲಿ ದೃಷ್ಟಪ್ರಯೋಜನ ಹಾಗೂ ಅದೃಷ್ಟಪ್ರಯೋಜನಗಳೆರಡೂ ಸಹ ಒಟ್ಟಿಗೆ ಇರುವುದು ಕಂಡಿರುತ್ತದೆ.

**अन्यत्र कामाधिकारनित्याधिकारयोरन्यतरमात्रस्य सत्त्वेऽपि जातेष्टौ द्वयोः संवलनवत्,**

ಇದರಂತೆ ಕಾಮಾಧಿಕಾರತ್ವ ಹಾಗೂ ನಿತ್ಯಾಧಿಕಾರತ್ವಗಳು ಬೇರೆಡೆ ಭಿನ್ನ-ಭಿನ್ನವಾಗಿ ಕಂಡಿದ್ದರೂ, ಜಾತೇಷ್ಟಿಯಲ್ಲಿ ಮಾತ್ರ ಒಟ್ಟಿಗೆ ಇರುವುದು ಕಂಡಿರುತ್ತದೆ. ಅಥವಾ ನಿತ್ಯಕರ್ಮ ಹಾಗೂ ನೈಮಿತ್ತಿಕಕರ್ಮಗಳು ಭಿನ್ನ-ಭಿನ್ನವಾಗಿದ್ದರೂ ಕೆಲವೆಡೆ ಒಟ್ಟಿಗೆ ಇರುವುದು ಕಂಡಿರುತ್ತದೆಂದು ತಿಳಿಯಬೇಕು.

**व्रीह्यादीनां क्रत्वर्थमात्रत्वेऽपि गोदोहनादीनां पुरुषार्थत्वमात्रत्वेऽपि दध्यादीनामुभयार्थत्ववच्च**

ಇದರಂತೆ ವ್ರೀಹಿ ಮೊದಲಾದವುಗಳಲ್ಲಿ ಕೇವಲ ಕ್ರತುಪ್ರಯೋಜನತ್ವವಿರುತ್ತದೆ. ಗೋದೋಹನಾದಿಗಳಲ್ಲಿ ಕೇವಲ ಪುರುಷಾರ್ಥತ್ವವು ಇರುತ್ತದೆ. ಆದರೆ ದಧಿ ಮೊದಲಾದವುಗಳಲ್ಲಿ ಕ್ರತ್ವರ್ಥತ್ವ ಹಾಗೂ ಪುರುಷಾರ್ಥತ್ವಗಳೆರಡೂ ಒಟ್ಟಿಗೆ ಇರುವುದು ಪೂರ್ವಮೀಮಾಂಸೆಯಲ್ಲಿ ಸಿದ್ಧವಾಗಿದೆ. ಹೀಗೆ ಈ ನಾಲ್ಕು ದೃಷ್ಟಾಂತಗಳಿಂದ ಬೇರೆ ಬೇರೆ ಸ್ಥಳಗಳಲ್ಲಿ ಭಿನ್ನ-ಭಿನ್ನವಾಗಿರುವ ಧರ್ಮಗಳು ಕೆಲವೆಡೆ ಒಟ್ಟಿಗೆ ಇರಬಹುದೆಂಬ ನಿಯಮವು ಸಿದ್ಧವಾಗುತ್ತವೆ.

**अन्यत्राणुत्वमहत्त्वयोरेकैकमात्रस्य सत्त्वेऽपि अणुन्येव कृष्णस्य मुखे गर्भीकृतब्रह्माण्डे महत्त्वग्राहकस्य यशोदाप्रत्यक्षस्य अणुत्वलिङ्गस्यैकेनापि दाम्ना बन्धनस्य महत्त्वलिङ्गस्यानेकैरप्यबन्धनस्य "अणोरणीयान्महतो महीयान्" इत्यागमस्य च सत्त्वात् ।**

ಮೇಲೆ ಹೇಳಿದ ದೃಷ್ಟಾಂತಗಳಂತೆ ಅಣುತ್ವ ಹಾಗೂ ಮಹತ್ತ್ವಗಳೆರಡೂ ಪ್ರತ್ಯೇಕವಾಗಿ ಲೋಕದಲ್ಲೆಲ್ಲೆಡೆ ಇರುವುದು ಕಂಡಿದ್ದರೂ ಸಹ ಪರಮಾತ್ಮನಲ್ಲಿ ಒಟ್ಟಿಗೆ ಇರಬಹುದು. ಏಕೆಂದರೆ ಸಣ್ಣದಾದ ಶ್ರೀಕೃಷ್ಣನ ಬಾಯಿಯಲ್ಲಿ ಸಮಗ್ರ ಬ್ರಹ್ಮಾಂಡವನ್ನೇ ಯಶೋದಾದೇವಿಯು ನೋಡಿದ್ದಾಳೆ. ಯಶೋದೆಯ ಪ್ರತ್ಯಕ್ಷ ಪ್ರಮಾಣದಿಂದ ಕೃಷ್ಣನ ಮುಖದಲ್ಲಿ ಅಣುತ್ವ-ಮಹತ್ತ್ವಗಳೆರಡೂ ಒಟ್ಟಿಗೆ ಇರುವುದು ಸಿದ್ಧವಾಗಿದೆ.

ಅಷ್ಟೇ ಅಲ್ಲದೆ, ಅಣುತ್ವಲಿಂಗಕ್ಕೆ ಅನುಮಾಪಕವಾದ ಒಂದೇ ಹಗ್ಗದಿಂದ ಕೃಷ್ಣನನ್ನು ಕಟ್ಟುವಿಕೆ ಹಾಗೂ ಮಹತ್ತ್ವಕ್ಕೆ ಅನುಮಾಪಕವಾದ ಅನೇಕ ಹಗ್ಗಗಳಿಂದ ಶ್ರೀಕೃಷ್ಣನನ್ನು ಕಟ್ಟಲಾಗದಿರುವಿಕೆ ಎಂಬ ಲಿಂಗವೂ ಸಹ ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ. ಒಂದೇ ಹಗ್ಗದಿಂದ ಕೃಷ್ಣನನ್ನು ಕಟ್ಟಿರುವ ಕಾರಣ ಅಣುತ್ವವಿದೆಯೆಂದು ಊಹಿಸಬಹುದು. ಅನೇಕ ಹಗ್ಗಗಳಿಂದ ಕೃಷ್ಣನನ್ನು ಕಟ್ಟಲಾಗಲು ಸಾಧ್ಯವಾಗದ ಕಾರಣ ಮಹತ್ತ್ವವಿದೆಯೆಂದು ಊಹಿಸಬಹುದು.

'ಅಣೋರಣೀಯಾನ್ ಮಹತೋ ಮಹೀಯಾನ್' 'ಅಣುವಿಗಿಂತಲೂ ಅಣುವಾಗಿದ್ದಾನೆ. ಮಹತ್‌ಪದಾರ್ಥಕ್ಕಿಂತಲೂ ಮಹೀಯಾನ್' ಆಗಿದ್ದಾನೆ ಎಂಬ ಮಹಾನಾರಾಯಣ ಶ್ರುತಿಯೂ ಸಹ ಈ ವಿಷಯದಲ್ಲಿ ಪ್ರಮಾಣವಾಗಿದೆ.

**अणुत्वादेर्महत्त्वाद्यसामानाधिकरण्ये च प्राकृतत्वस्योपाधित्वात् ।**

ಹಾಗಾದರೆ ಅಣುತ್ವ-ಮಹತ್ತ್ವಧರ್ಮಗಳಿಗೆ ಎಲ್ಲಿಯೂ ಸಹ ವಿರೋಧವನ್ನೇ ಒಪ್ಪಬೇಕಾಗಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಪ್ರಾಕೃತತ್ವವು ಅಣುತ್ವ ಮಹತ್ತ್ವಗಳಿಗಿರುವ ವಿರೋಧಕ್ಕೆ ಉಪಾಧಿಯಾಗಿದೆ. ಅಂದರೆ ಎಲ್ಲಿ ಮಹತ್ತ್ವವಿರುವುದಿಲ್ಲವೋ, ಅಲ್ಲಿ ಪ್ರಾಕೃತತ್ವವಿದ್ದರೆ ಅಣುತ್ವ ಇದ್ದೇ ಇರುತ್ತದೆ. ಇದರಂತೆ ಎಲ್ಲಿ ಅಣುತ್ವವಿರುವುದಿಲ್ಲವೋ, ಅಲ್ಲಿ ಪ್ರಾಕೃತತ್ವವಿದ್ದರೆ ಮಹತ್ತ್ವವು ಇದ್ದೇ ಇರುತ್ತದೆ ಎಂಬುದಾಗಿ ತಿಳಿಯಬೇಕು. ಆದ್ದರಿಂದ ಘಟಪಟಾದಿಗಳಲ್ಲಿಯೂ ಸಹ ಅಣುತ್ವ-ಮಹತ್ತ್ವಗಳನ್ನು ಒಟ್ಟಿಗೆ ಒಪ್ಪೋಣ ಎಂಬ ಶಂಕೆಗೆ ಅವಕಾಶವಿಲ್ಲ. ಪರಮಾತ್ಮನಲ್ಲಿ ಪ್ರಾಕೃತತ್ವವು ಇಲ್ಲದ ಕಾರಣ ಅಣುತ್ವ-ಮಹತ್ತ್ವಗಳಿಗೆ ವಿರೋಧವಿಲ್ಲವೆಂದು ತಿಳಿಯಬೇಕು.

**भेदप्रतिनिधेर्विशेषस्य सत्त्वाच्च ॥**

ಅಥವಾ ಅಣುತ್ವ-ಮಹತ್ತ್ವಗಳಿದ್ದಲ್ಲಿ ಭೇದವಿದ್ದರೆ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ ಪರಮಾತ್ಮನಲ್ಲಿ ಭೇದಪ್ರತಿನಿಧಿಯಾದ ವಿಶೇಷವಿರುವ ಕಾರಣ ವಿರೋಧಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

**''त्वयीश्वरे ब्रह्मणि नो विरुध्यते'' इत्यादावैश्वर्यादेवाविरोधोक्तेश्च ब्रह्मण्युभयमुपपन्नम् ।**

ಅಥವಾ 'ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ' ಇತ್ಯಾದಿ ವಾಕ್ಯಗಳಲ್ಲಿ ಪರಮಾತ್ಮನಲ್ಲಿರುವ ಐಶ್ವರ್ಯಶಕ್ತಿಯಿಂದ ಯಾವುದೇ ಧರ್ಮಗಳ ವಿರೋಧಕ್ಕೂ ಅವಕಾಶವಿಲ್ಲವೆಂದು ಅಂಗೀಕರಿಸಲಾಗಿದೆ. ಅಚಿಂತ್ಯಾದ್ಭುತಶಕ್ತಿಯಿಂದ ಪರಮಾತ್ಮನಲ್ಲಿ ಒಟ್ಟಿಗೆ ಇರುವ ಅಣುತ್ವ-ಮಹತ್ತ್ವಗಳ ವಿರೋಧವನ್ನು ಪರಿಹರಿಸಬೇಕು.

ಅಕ್ಷರಾಧಿಕರಣ (೧-೩-೩)

**तदुक्तमनुव्याख्याने –**

**अतो विरुद्धवद्भातमपि व्याख्याय तत्वतः ।**
**योजनीयं हरौ वाक्यं विरुद्धैर्लक्षणैर्युतम् ।। इति ।**

ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ಅತೋ ವಿರುದ್ಧವದ್ಭಾತಮಪಿ ವ್ಯಾಖ್ಯಾಯ ತತ್ವತಃ ।
ಯೋಜನೀಯಂ ಹರೌ ವಾಕ್ಯಂ ವಿರುದ್ಧೈರ್ಲಕ್ಷಣೈರ್ಯುತಮ್ ॥

ಪರಮಾತ್ಮನಲ್ಲಿರುವ ಧರ್ಮಗಳಿಗೆ ವಿರೋಧವಿರುವಂತೆ ಕಂಡರೂ ಸಹ ತಾತ್ವಿಕವಾಗಿ ಅದನ್ನು ವ್ಯಾಖ್ಯಾನ ಮಾಡಿ ಪರಮಾತ್ಮನಲ್ಲಿ ಯೋಜನೆ ಮಾಡಬೇಕು. ಏಕೆಂದರೆ ವಿರುದ್ಧಧರ್ಮವಿರುವಿಕೆಯೇ ಅವನ ಸ್ವಭಾವವಾಗಿದೆ ಎಂದು.

**प्रकाशः –**

एवं भाष्याद्युक्तं सूत्रे साक्षादुपात्तं प्राकृतस्थौल्यादिराहित्यरूपहेतुं समर्थ्य सौत्रचशब्दसूचितमनुव्याख्यानादौ विवृतं हेत्वन्तरं समर्थयमानः पक्षान्तरमाह – **अथवेति ।।**

ವಿವರಣೆ - ಇಲ್ಲಿಯ ತನಕ ಭಾಷ್ಯ, ಟೀಕಾದಿಗಳಲ್ಲಿ ಹೇಳಲ್ಪಟ್ಟ ಮತ್ತು ಸೂತ್ರದಲ್ಲಿ ನೇರವಾಗಿಯೇ ಹೇಳಲ್ಪಟ್ಟ ಪ್ರಾಕೃತವಾದ ಸ್ಥೌಲ್ಯ, ಅಣುತ್ವಾದಿಗಳು ಪರಮಾತ್ಮನಲ್ಲಿ ಇರುವುದಿಲ್ಲವೆಂಬ ಹೇತುವನ್ನು ಸಮರ್ಥಿಸಿದರು. ಈಗ ಸೂತ್ರದಲ್ಲಿರುವ 'ಚ' ಶಬ್ದದಿಂದ ಸೂಚಿತವಾದ ಮತ್ತು ಅನುವ್ಯಾಖ್ಯಾನದಲ್ಲಿ ವಿವರಿಸಲ್ಪಟ್ಟ ಮತ್ತೊಂದು ಹೇತುವನ್ನು ಸಮರ್ಥಿಸುವವರಾಗಿ ಪಕ್ಷಾಂತರವನ್ನು ನಿರೂಪಣೆ ಮಾಡುತ್ತಿದ್ದಾರೆ 'ಅಥವಾ' ಇತ್ಯಾದಿ ವಾಕ್ಯದಿಂದ.

**प्रकाशः – नचैवमिति ।।** अस्थूलानण्वादिशब्दैस्तद्विरुद्धाणुत्वमहत्त्वादिप्रापणे सतीत्यर्थः । श्लोकगतहिशब्दोक्तहेतुना नच विरोध इति साध्यस्यान्वयः । यस्मादीशितुस्ते युक्ते तस्मान्न विरोध इति ।

ಅಸ್ಥೂಲ-ಅನಣು ಮೊದಲಾದ ಶಬ್ದಗಳಿಂದ ತದ್ವಿರುದ್ಧವಾದ ಅಣುತ್ವ ಮಹತ್ವಾದಿಗಳನ್ನು ಪ್ರತಿಪಾದ್ಯವೆಂದು ಹೇಳಿದರೆ ವಿರೋಧ ಬರುತ್ತದೆಂದು ಅಭಿಪ್ರಾಯ. ಶ್ಲೋಕದಲ್ಲಿರುವ 'ಹಿ' ಶಬ್ದದಿಂದ ಹೇಳಲ್ಪಟ್ಟ ಹೇತುವಿಗೆ 'ನ ವಿರೋಧಃ' ಎಂಬ ಸಾಧ್ಯದ ಜೊತೆಗೆ ಸ್ವತಂತ್ರವಾಗಿ ಅನ್ವಯ ಮಾಡಬೇಕು ಎಂದರೆ ಯಾವ ಕಾರಣದಿಂದ ಅಣುತ್ವ-ಮಹತ್ವಾದಿಗಳು ಪರಮಾತ್ಮನಲ್ಲಿ ಯುಕ್ತವಾಗುತ್ತವೋ, ಆ ಕಾರಣದಿಂದಲೇ ವಿರೋಧವಿರುವುದಿಲ್ಲ ಎಂದು.

**प्रकाशः** – श्लोकोक्तमुपलक्षणमित्यभिप्रेत्य पूर्वार्धं तावद्व्याचष्टे – **दर्शेति** ।।

'ಯಥೈಕಸ್ಯೈವ' ಇತ್ಯಾದಿ ಶ್ಲೋಕದಲ್ಲಿ ನೀಡಿದ ದೃಷ್ಟಾಂತವು ಕೇವಲ ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ ಶ್ಲೋಕದ ಪೂರ್ವಾರ್ಧವನ್ನು ಸ್ವತಃ ತಾವೇ ವ್ಯಾಖ್ಯಾನಿಸುತ್ತಿದ್ದಾರೆ 'ದರ್ಶಪೂರ್ಣಮಾಸಾದೀನಾಮ್' ಇತ್ಯಾದಿ ಗ್ರಂಥದಿಂದ.

**प्रकाशः** – अष्टमे प्रथमपादे ''इष्टिषु दर्शपूर्णमासयोः प्रवृत्तिस्स्यात्'' इति चतुर्थेऽधिकरणे ''सौर्यं चरुं निर्वपेत् । ऐन्द्राग्नमेकादशकपालं निर्वपेत्'' इत्यादि-वाक्योक्तसौर्यैन्द्राग्नादिषु दार्शपौर्णमासिको विध्यन्त उत सामिक इति संशये

'ಇಷ್ಟಿಷು ದರ್ಶಪೂರ್ಣಮಾಸಯೋಃ ಪ್ರವೃತ್ತಿಃ ಸ್ಯಾತ್' (೮-೧-೪)[1]

'ಸೌರ್ಯಂ ಚರುಂ ನಿರ್ವಪೇತ್ । ಏಂದ್ರಾಗ್ನಮೇಕಾದಶಕಪಾಲಂ ನಿರ್ವಪೇತ್' ಇತ್ಯಾದಿ ವಾಕ್ಯಗಳೇ ಈ ಅಧಿಕರಣದ ವಿಷಯವಾಗಿವೆ. 'ಸೌರ್ಯಂ ಚರುಂ ನಿರ್ವಪೇತ್' ಎಂಬುದು ಸೌರ್ಯಯಾಗವನ್ನು 'ಐಂದ್ರಾಗ್ನಮೇಕಾದಶಕಪಾಲಂ ನಿರ್ವಪೇತ್' ಎಂಬುದು ಐಂದ್ರಾಗ್ನಿಕಯಾಗವನ್ನು ವಿಧಿಸುತ್ತಿದೆ. ಈ ಎರಡುವಿಧ ವಾಕ್ಯದಲ್ಲಿ ದ್ರವ್ಯ ಹಾಗೂ ದೇವತೆಗಳನ್ನಷ್ಟೇ ಹೇಳಿದ್ದಾರೆ ಹೊರತು, ಯಾಗವನ್ನು ಹೇಗೆ ಮಾಡಬೇಕೆಂದು ಹೇಳಿರುವುದಿಲ್ಲ. ಆದರೆ ಯಾವುದೇ ಕರ್ಮವನ್ನು ಆಚರಣೆ ಮಾಡುವಾಗಲೂ ಇತಿಕರ್ತವ್ಯತಾ ಆಕಾಂಕ್ಷೆಯು ಬಂದೇ ಬರುತ್ತದೆ. ಆ ಸಂದರ್ಭದಲ್ಲಿ ಕರ್ಮವಿಧಾಯಕ ವಾಕ್ಯಸ್ಥಳದಲ್ಲಿ ಹೇಗೆ ಮಾಡಬೇಕೆಂಬುದನ್ನು ಹೇಳದಿದ್ದರೆ ಹತ್ತಿರವಿರುವ ಪ್ರಕೃತಿಯಾಗದಲ್ಲಿ ಹೇಳಿದ್ದನ್ನೇ ತೆಗೆದುಕೊಳ್ಳಬೇಕೆಂದು 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ಚೋದಕವು ವಿಧಿಸುತ್ತದೆ. ಹೀಗಿರುವಾಗ ಪ್ರಕೃತ ಸೌರ್ಯ ಹಾಗೂ ಐಂದ್ರಾಗ್ನಿಕ ಯಾಗಗಳಲ್ಲಿ ಯಾವ ಯಾಗವನ್ನು ಪ್ರಕೃತಿಯಾಗವೆಂದು ಪರಿಗಣಿಸಬೇಕೆಂದೇ ತಿಳಿಯುವುದಿಲ್ಲ. ದರ್ಶಪೂರ್ಣಮಾಸಯಾಗವೂ ಸಹ ಸಮೀಪದಲ್ಲೇ ಹೇಳಲ್ಪಟ್ಟಿದೆ. ಸೋಮಿಕಯಾಗವೂ ಸಹ ಸಮೀಪದಲ್ಲೇ

(१) **भाट्टसङ्ग्रहः** –

**अथ तुरीयमैन्द्राग्नादावैष्टिकधर्मातिदेशाधिकरणम्**

**इष्टिषु दर्शपूर्णमासयोः प्रवृत्तिः स्यात् ॥ ११ ॥**

विकृतिषु सदृशादेव कर्मणो धर्मप्राप्तिरिति स्थिते, तमेवार्थं प्रपञ्चयति **सूत्रकारः**, सौर्यादीष्टिषु **दर्शपूर्णमासयो**र्विध्यन्तस्य निर्वपत्यादिचोदनालिङ्गसाम्यात्**प्रवृत्तिः स्या**दिति । सौर्यादिचोदनाया व्यक्तदेवतादित्वेन **'अव्यक्तासु तु सोमस्य'** इति वक्ष्यमाणसौमिक-विध्यन्तप्राप्तिशङ्कानुदयेनैष्टिकस्यैव प्राप्त्या पूर्वपक्षप्रापकस्याभावान्नातीवात्र पूर्वपक्षादि । किन्तु स्पष्टकथनमात्रम् । एवमग्रेऽपीत्याहुः ।

**इति तुरीयमैन्द्राग्नादावैष्टिकधर्मातिदेशाधिकरणम्**

ಅಕ್ಷರಾಧಿಕರಣ (೧-೩-೩)

ಹೇಳಲ್ಪಟ್ಟಿವೆ. ಆದ್ದರಿಂದ ಸೌರ್ಯ, ಇಂದ್ರಾಗ್ನಿ ಯಾಗಗಳಲ್ಲಿ ದರ್ಶಪೂರ್ಣಮಾಸಯಾಗಗಳಲ್ಲಿ ಹೇಳಲ್ಪಟ್ಟ ಅಂಗಕಲಾಪಗಳನ್ನೇ ವಿವಕ್ಷಿಸಬೇಕೋ. (ವಿಧ್ಯಂತಃ = ವಿಧಿ ಸಮೀಪದಲ್ಲಿ ಕೇಳಿಸಲ್ಪಟ್ಟ ಇತಿ ಕರ್ತವ್ಯತಾ ಸಮೂಹ) ಅಥವಾ ಸೌಮಿಕ ಯಾಗದಲ್ಲಿ ಹೇಳಲ್ಪಟ್ಟ ಅಂಗಕಲಾಪಗಳನ್ನು ಇಟ್ಟುಕೊಳ್ಳಬೇಕೋ ? ಎಂಬ ಸಂಶಯವು ಬರುತ್ತದೆ.

**प्रकाशः – नियामकाभावादनियम इति प्राप्ते**

ಪೂರ್ವಪಕ್ಷ - ಇಂತಹ ಯಾಗವನ್ನೇ ಪ್ರಕೃತಿಯಾಗವೆಂದು ಪರಿಗಣಿಸಬೇಕೆನ್ನಲು ಯಾವುದೇ ನಿಯಾಮಕ ಪ್ರಮಾಣವಿರುವುದಿಲ್ಲ. ಆದ್ದರಿಂದ ಸೌರ್ಯಾದಿ ಯಾಗಗಳಿಗೆ ದರ್ಶಪೂರ್ಣಮಾಸವೂ ಪ್ರಕೃತಿಯಾಗಬಹುದು, ಸೌಮಿಕ ಯಾಗವೂ ಸಹ ಪ್ರಕೃತಿಯಾಗಬಹುದು.

**प्रकाशः – तद्धितेन देवतानिर्देशो निर्वपतिशब्दश्चेत्यादिलिङ्गविशेषाद्दार्शपौर्णमासिक इति सिद्धान्तितम् । तेन तत्र दर्शपूर्णमासयोः सर्वाङ्गोपदेशेन केवलप्रकृतित्वं सिद्धम् ।**

ಸಿದ್ಧಾಂತ – 'ಸೌರ್ಯಂ ಚರುಂ ನಿರ್ವಪೇತ್' ಎಂಬ ವಾಕ್ಯದಲ್ಲಾಗಲೀ, 'ಐಂದ್ರಾಗ್ನಮೇಕಾದಶಕಪಾಲಮ್' ಎಂಬ ವಾಕ್ಯದಲ್ಲಾಗಲೀ, ತದ್ಧಿತ ಪ್ರತ್ಯಯಾಂತವಾದ ಶಬ್ದಗಳಿವೆ. 'ಸೌರ್ಯಮ್' ಎಂಬುದು ತದ್ಧಿತಪ್ರತ್ಯಯಂತವಾದ ಅಣ್ ಪ್ರತ್ಯಯದಿಂದ ಕೂಡಿದೆ. 'ಐಂದ್ರ್ಯಾಗ್ನಮ್' ಎಂಬ ಶಬ್ದವೂ ಸಹ ತದ್ಧಿತಪ್ರತ್ಯಯವೆನಿಸಿದ ಅಣ್ ಪ್ರತ್ಯಯದಿಂದ ಕೂಡಿದೆ. ಮತ್ತು ಎರಡು ಕಡೆಯೂ ನಿರ್ವಪತಿಶಬ್ದವೂ ಸಹ ಕೇಳಿಸುತ್ತಿದೆ. ಇದೇ ತದ್ಧಿತಾಂತವಾದ ಹಾಗೂ ನಿರ್ವಪತಿ ಶಬ್ದದಿಂದ ದರ್ಶಪೂರ್ಣಮಾಸ ಯಾಗವು ಕೂಡಿರುವುದರಿಂದ ಎರಡಕ್ಕೂ ಸಾಮ್ಯವಿದೆ. ಅನೇಕ ಕಡೆ ದರ್ಶಪೂರ್ಣಯಾಗ ವಿಧಾಯಕ ವಾಕ್ಯಗಳಲ್ಲಿ ತದ್ಧಿತಾಂತ ಪ್ರತ್ಯಯವೇ ಕೇಳಿಸುತ್ತಿದೆ. ಮತ್ತು ನಿರ್ವಪತಿ ಶಬ್ದವೂ ಸಹ ಕೇಳಿಸುತ್ತಿದೆ. ಹೀಗೆ ಸಾಮ್ಯವಿರುವ ಪ್ರಯುಕ್ತ ದರ್ಶಪೂರ್ಣಮಾಸಯಾಗವನ್ನೇ ಸೌರ್ಯಾದಿ ಯಾಗಗಳಿಗೆ ಪ್ರಕೃತಿಯಾಗವೆಂದು ಹೇಳಬೇಕು.

ಇದರಿಂದ ದರ್ಶಪೂರ್ಣಯಾಗದಲ್ಲಿ ಸಕಲವಿಧವಾದ ಅಂಗಗಳು ಶ್ರುತವಾಗುತ್ತಿರುವುದರಿಂದ ಕೇವಲ ಪ್ರಕೃತಿಯಾಗವಾಗುತ್ತದೆಂದು ಸಿದ್ಧವಾಯಿತು.

**प्रकाशः – आदिपदेनाग्निहोत्रादिग्रहणम् यथा तत्रैव ''तत्प्रवृत्तिर्गणेषु स्यात्प्रतिपशुयूपदर्शनात्'' इत्यष्टमेऽधिकरणे ''मैत्रं श्वेतमालभेत वारुणं कृष्णम्'' इत्यादिषु किमग्नीषोमीयस्य पशोर्विध्यन्त उतैकादशिनानां पशूनां विध्यन्त इति संशये**

'ದರ್ಶಪೂರ್ಣಮಾಸಾದೀನಾಮ್' ಎಂಬಲ್ಲಿರುವ ಆದಿಪದದಿಂದ ಅಗ್ನಿಹೋತ್ರಾದಿಗಳನ್ನೂ ಸಹ ದೃಷ್ಟಾಂತವನ್ನಾಗಿ ಸ್ವೀಕರಿಸಬೇಕು.

ಪರಿಪೂರ್ಣಚಂದ್ರಿಕಾ

ತತ್‌ಪ್ರವೃತ್ತಿರ್ಗಣೇಷು ಸ್ಯಾತ್ ಪ್ರತಿಪಶು ಯೂಪದರ್ಶನಾತ್' (೮-೧-೮)[1]

'ಮೈತ್ರಂ ಶ್ವೇತಮಾಲಭೇತ' ಎಂಬಲ್ಲಿ 'ಮಿತ್ರ' ಎಂಬ ದೇವತೆಯನ್ನು ಶ್ವೇತಪಶುವೆಂಬ ದ್ರವ್ಯವನ್ನು ಹೇಳಿರುವುದರಿಂದ ಇದು ಯಾಗವಿಧಾಯಕವೆಂದು ತಿಳಿಯುತ್ತದೆ. ಅದರಂತೆ 'ವಾರುಣಂ ಕೃಷ್ಣಮ್' ಎಂಬಲ್ಲಿಯೂ 'ವರುಣ' ಎಂಬ ದೇವತೆಯನ್ನು 'ಕೃಷ್ಣಪಶು' ಎಂಬ ದ್ರವ್ಯವನ್ನು ಹೇಳಿದ್ದರಿಂದ ಈ ವಾಕ್ಯವೂ ಸಹ ಯಾಗವಿಧಾಯಕವೆಂದು ಸ್ಪಷ್ಟವಾಗುತ್ತದೆ. ಆದರೆ ಯಾವುದೇ ಇತಿಕರ್ತವ್ಯತಾಗಳನ್ನು ಹೇಳದ ಕಾರಣ ಸಂಶಯ ಹೀಗೆ ಬರುತ್ತದೆ. ಅಗ್ನಿಷೋಮಿಯ ಪಶುವಿನ ಇತಿಕರ್ತವ್ಯತಾಗಳನ್ನು ಇಲ್ಲಿ ಇಟ್ಟುಕೊಳ್ಳಬೇಕೋ ? ಅಥವಾ 'ಏಕಾದಶಿನಾ' ಎಂಬ ಇಷ್ಟಿವಿಷಯವಾದ ಪಶುವಿನ ಇತಿಕರ್ತವ್ಯತಾಗಳನ್ನು ಇಲ್ಲಿ ಇಟ್ಟುಕೊಳ್ಳಬೇಕೋ ಎಂದು ?

**प्रकाशः** – आलभत्यादिसामान्यादग्नीषोमीयस्येति प्राप्ते

ಪೂರ್ವಪಕ್ಷ - ಅಗ್ನಿಷೋಮೀಯ ಪಶುವಿನ ಇತಿಕರ್ತವ್ಯತಾಗಳನ್ನೇ ಇಲ್ಲಿ ವಿವಕ್ಷಿಸಬೇಕು. ಏಕೆಂದರೆ 'ಅಗ್ನಿಷೋಮೀಯಂ ಪಶುಮಾಲಭೇತ' ಎಂಬುದಾಗಿ 'ಆಲಭತಿ' ಶಬ್ದವಿದೆ. ಆದೇ ಶಬ್ದವು 'ಮೈತ್ರಂ ಶ್ವೇತಮಾಲಭೇತ' ಎಂಬಲ್ಲಿಯೂ ಕೇಳಿಸುತ್ತಿದೆ. ಹೀಗೆ 'ಆಲಭತಿ' ಶಬ್ದವು ಎರಡೂ ಕಡೆ

(१) **भाट्टसङ्ग्रहः** –

**अथाष्टमं पशुगणेष्वैकादशिनधर्मातिदेशाधिकरणम्**

**तत् प्रवृत्तिर्गणेषु स्यात् प्रतिपशु यूपदर्शनात् ॥ १५ ॥**

पूर्ववैषम्येण शङ्कनात्सङ्गतिः । सौत्रामण्यां पशुगणः श्रूयते । तथा काम्यपशुकाण्डे पशुगणः श्रूयते । 'वसन्ते ललामांस्त्रीन् वृषभानालभेत' 'मैत्रं श्वेतं कृष्णम्' इत्यादिना । तत्र किं दैक्षपशोर्विध्यन्तः, उतैकादशिनानामिति **सन्देहे**, ऐकादशिनेषु सुत्याकालत्वसाम्यात्सवनीय-विध्यन्तप्राप्तावपि सौत्रामण्यादिपशुगणेषु रशनाद्वयादिविशेषलिङ्गाभावात्सर्वप्रकृतिभूतस्य दैक्षपशोर्विध्यन्त इति **प्राप्ते**, पशुगणान्तःपातित्वरूपधर्मसामान्यादैकादशिनपशुगणान्तः-पातिपशुविध्यन्त एव । न दैक्षस्येति **सिद्धान्तः** । तदाह **सूत्रे**, **पशुगणेषु तत्प्रवृत्तिः** ऐकादशिनपशुविध्यन्तप्रवृत्तिः स्यात् । **प्रतिपशु यूपदर्शनात्** सौत्रामण्यां प्रतिपशु यूपप्रसक्तिदर्शना-ल्लिङ्गादित्यर्थः । सौत्रामण्यां हि पशुत्रयम् । तत्रेदमाम्नायते, "यत् त्रिषु यूपेष्वालभेत, बहिर्धाऽस्मा इन्द्रियं वीर्यं दध्यात् । भ्रातृव्यमस्मै जनयेत् । यद्येकस्मिन् यूप आलभेत, एक एवास्मिन्निन्द्रियं वीर्यं दधाति । नास्मै भ्रातृव्यं जनयति । एक यूप आलभते" इति । तत्र यूपत्रयप्रतिषेधबलात्प्रतिपशु यूपप्रसक्तिर्दृश्यते । तच्च प्रतिपशु यूपप्रसक्तिदर्शनमैकादशिनविध्यन्तग्राहित्व एव युज्यते । तत्र प्रतिपशु यूपभेदात् । नाग्नीषोमीयपशुविध्यन्तग्रह इति ।

**इत्यष्टमं पशुगणेष्वैकादशिनधर्मातिदेशाधिकरणम्**

ಅಕ್ಷರಾಧಿಕರಣ (೧-೩-೩)

ಸಾಧಾರಣವಾಗಿರುವುದರಿಂದ ಅಗ್ನಿಷೋಮೀಯ ಪಶುವಿನ ಇತಿಕರ್ತವ್ಯತಾಗಳನ್ನೇ ಇಟ್ಟುಕೊಳ್ಳಬೇಕೆಂದು ತಿಳಿಯುತ್ತದೆ.

**प्रकाशः** – प्रतिपशु यूपदर्शनादविशेषलिङ्गादग्नीषोमीयप्रकृतित्वे चोदकेनैकस्यैव यूपस्य प्राप्तत्वेन प्रतिपशु यूपदर्शनं विरुध्येतेति पशुगणेष्वेकादशिनानां पशूनां विध्यन्त इति सिद्धान्तितम् ।

ಸಿದ್ಧಾಂತ - ಅಗ್ನಿಷೋಮೀಯ ಪಶುವಿನ ಇತಿಕರ್ತವ್ಯತಾರೂಪವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಮೈತ್ರಂ ಶ್ವೇತಮಾಲಭೇತ' ಎಂಬಲ್ಲಿ ಅನೇಕ ಪಶುಗಳು ದ್ರವ್ಯವಾಗಿವೆ. ಆ ಪ್ರತಿಯೊಂದು ಪಶುಗಳಿಗೂ ಬೇರೆ ಬೇರೆ ಯೂಪಸ್ತಂಭಗಳನ್ನು ವಿಧಿಸಲಾಗಿದೆ. ಆದರೆ ಅಗ್ನಿಷೋಮಿಯ ಯಾಗವು ಪ್ರಕೃತಿಯಾಗುವುದಾದರೆ ಅದರಲ್ಲಿ ಒಂದೇ ಪಶುವಿದೆ. ಅದಕ್ಕೆ ಸಂಬಂಧಪಟ್ಟಂತೆ ಯೂಪಸ್ತಂಭವೂ ಸಹ ಒಂದೇ ಆಗಿದೆ. 'ಪ್ರಕೃತಿವತ್ ವಿಕೃತಿಃಕರ್ತವ್ಯಾ' ಎಂಬ ಚೋದಕಪ್ರಮಾಣವನ್ನು ಅನುಸರಿಸಿದಾಗ ಅಗ್ನಿಷೋಮೀಯ ಪಶುವಿಗೆ ಒಂದೇ ಯೂಪಸ್ತಂಭವಿರುವುದರಿಂದ ಇಲ್ಲಿಯೂ ಸಹ ಒಂದೇ ಯೂಪಸ್ತಂಭವೂ ಪ್ರಾಪ್ತವಾಗಬೇಕಾಗದೀತು. ಆದರೆ ಪ್ರತಿಯೊಂದು ಪಶುವಿಗೆ ವಿಧಿಸಲ್ಪಟ್ಟ ಯೂಪವು ವಿರುದ್ಧವಾಗಬೇಕಾದೀತು. ಆದ್ದರಿಂದ ಕೇವಲ 'ಆಲಭತಿ' ಶಬ್ದದ ಸಾಧಾರಣ್ಯದಿಂದ ಅಗ್ನಿಷೋಮೀಯ ಪಶುವನ್ನು ಪ್ರಕೃತಿ ಎಂದು ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ 'ಏಕಾದಶೀ' ಎಂಬ ಇಷ್ಟಿವಿಶೇಷವನ್ನೇ ಇದಕ್ಕೆ ಪ್ರಕೃತಿಯೆಂದು ಪರಿಗಣಿಸಬೇಕು. ಏಕಾದಶೀ ನಾಮಕವಾದ ಇಷ್ಟೀವಿಶೇಷದಲ್ಲಿ ಅನೇಕ ಪಶುಗಳು ವಿಹಿತವಾಗಿವೆ. ಯೂಪಸ್ತಂಭಗಳೂ ಸಹ ಅನೇಕವಿರುತ್ತವೆ. 'ಪ್ರಕೃತಿವತ್ ವಿಕೃತಿಃ' ಎಂಬ ಚೋದಕದಂತೆ ಇಲ್ಲಿಯೂ ಸಹ ಅನೇಕ ಯೂಪಸ್ತಂಭಗಳೇ ಸಿದ್ಧವಾಗುವುದರಿಂದ ಪ್ರತಿಯೊಂದು ಪಶುಗಳಿಗೂ ವಿಧಿಸಲ್ಪಟ್ಟ ಯೂಪಸ್ತಂಭದ ವಿರೋಧವೂ ಬರುವುದಿಲ್ಲ. ಆದ್ದರಿಂದ 'ಏಕಾದಶಿನಾ' ಎಂಬ ಇಷ್ಟಿ ಪಶುಗಳ ಇತಿಕರ್ತವ್ಯತಾವನ್ನೇ ಇಟ್ಟುಕೊಳ್ಳಬೇಕೆಂದು ಸಿದ್ಧಾಂತ.

**प्रकाशः** – तेन तत्र पशुगणानां केवलविकृतित्वं सिद्धम् । आदिपदेन शाक्यानामयनादिसंवत्सरसत्राणां ग्रहणम् ।

ಆದ್ದರಿಂದ 'ಮೈತ್ರಂ ಶ್ವೇತಮಾಲಭೇತ' ಮೊದಲಾದ ವಾಕ್ಯಗಳಿಂದ ಹೇಳಲ್ಪಟ್ಟ ಪಶುಗಣಗಳಿಗೆ ಕೇವಲ ವಿಕೃತಿತ್ವ ಮಾತ್ರ ಇರುತ್ತದೆ ಹೊರತು, ಪ್ರಕೃತಿತ್ವ ಇರುವುದಿಲ್ಲ. ಆದಿಪದದಿಂದ 'ಶಾಕ್ಯಾನಾಮಯನಾ' ಮೊದಲಾದ ಸಂವತ್ಸರಸತ್ರಗಳನ್ನು ದೃಷ್ಟಾಂತವನ್ನಾಗಿ ಸ್ವೀಕರಿಸಬೇಕು.

**प्रकाशः** – तथा तत्रैव ''पशौ च लिङ्गदर्शनात्'' इति पञ्चमेऽधिकरणे ''अग्नीषोमीयं पशुमालभेत'' इत्युक्ताग्नीषोमीयपशौ किं दार्शपौर्णमासिको विध्यन्त उत सौमिक इति सन्देहे

'ಪಶೌ ಚ ಲಿಂಗದರ್ಶನಾತ್' (೮-೧-೫)[1]

'ಅಗ್ನಿಷೋಮೀಯಂ ಪಶುಮಾಲಭೇತ' ಇತ್ಯಾದಿ ವಾಕ್ಯಗಳಲ್ಲಿ 'ಅಗ್ನಿ' 'ಸೋಮ' ಎಂಬ ದೇವತೆಗಳನ್ನು ಹಾಗೂ ಪಶು ಎಂಬ ದ್ರವ್ಯವನ್ನು ವಿಧಾನ ಮಾಡಿದ್ದರಿಂದ ಇದು ಯಾಗವಿಧಾಯಕವೆಂದು ನಿರ್ಣಯವಾಗುತ್ತದೆ. ಆದರೆ ಇದಕ್ಕೆ ದರ್ಶಪೂರ್ಣಮಾಸ ಎಂಬುದು ಪ್ರಕೃತಿಯೋ? ಸೌಮಿಕ ಯಾಗವು ಪ್ರಕೃತಿಯೋ ? ಅಂದರೆ ದರ್ಶಪೂರ್ಣಮಾಸಯಾಗದ ಇತಿಕರ್ತವ್ಯತಾಗಳನ್ನೇ ಇಲ್ಲಿ ಇಟ್ಟುಕೊಳ್ಳಬೇಕೋ? ಅಥವಾ ಸೌಮಿಕ ಯಾಗದ ಇತಿಕರ್ತವ್ಯತಾಗಳನ್ನು ಇಟ್ಟುಕೊಳ್ಳಬೇಕೋ ? ಎಂಬ ಸಂಶಯವು ಪ್ರಾಪ್ತವಾಗುತ್ತದೆ.

**प्रकाशः – अनियम इति प्राप्ते**

ಪೂರ್ವಪಕ್ಷ - ಯಾವುದೇ ನಿಯಾಮಕ ಪ್ರಮಾಣವಿಲ್ಲವಾದ್ದರಿಂದ ದರ್ಶಪೂರ್ಣಮಾಸಿಕ ಇತಿಕರ್ತವ್ಯತಾಗಳನ್ನು ವಿವಕ್ಷಿಸಬೇಕು. ಅಥವಾ ಸೌಮಿಕ ಯಾಗದ ಇತಿಕರ್ತವ್ಯತಾಗಳನ್ನೂ ಸಹ ವಿವಕ್ಷಿಸಬಹುದು.

**प्रकाशः** – तद्धितेन देवतानिर्देशादिलिङ्गदर्शनाद्दार्शपौर्णमासिको विध्यन्त इत्युक्तत्वादग्नीषोमीयपशोर्विकृतित्वं सिद्धम् ।

ಸಿದ್ಧಾಂತ - ದರ್ಶಪೂರ್ಣಮಾಸಯಾಗದಲ್ಲಿ 'ಆಗ್ನೇಯಃ ಅಷ್ಟಾಕಪಾಲಃ' ಎಂಬಲ್ಲಿ ಆಗ್ನೇಯ ಎಂಬ ತದ್ಧಿತಪ್ರತ್ಯಯಾಂತವಾದ ಶಬ್ದವನ್ನು ಪ್ರಯೋಗಿಸಿದ್ದಾರೆ. 'ಅಗ್ನಿಷೋಮೀಯೌ ಏಕಾದಶಪಾಲಂ' ಎಂಬುದಾಗಿ 'ಅಗ್ನಿಷೋಮೀಯೌ' ಎಂಬುದಾಗಿ ತದ್ಧಿತಪ್ರತ್ಯಯಾಂತ ಶಬ್ದದ ಪ್ರಯೋಗವಿದೆ. ಆದರಂತೆ ಇಲ್ಲಿಯೂ ಸಹ 'ಅಗ್ನಿಷೋಮೀಯಮ್' ಎಂಬುದಾಗಿ ತದ್ಧಿತಪ್ರತ್ಯಯವೆನಿಸಿದ 'ಷಣ್' ಪ್ರತ್ಯಯಾಂತವಾದ ಶಬ್ದವಿದೆ. ಎರಡೂ ಕಡೆ ತದ್ಧಿತಪ್ರತ್ಯಯಾಂತವಾದ ಶಬ್ದದಿಂದಲೇ ದೇವತೆಯನ್ನು ನಿರ್ದೇಶ ಮಾಡಿರುವುದು

(१) **भाट्टसङ्ग्रहः –**

**अथ पञ्चममग्नीषोमीयपशौ दार्शपौर्णमासिकधर्मातिदेशाधिकरणम्**

**पशौ च लिङ्गदर्शनात् ॥ १२ ॥**

सौर्यादिषु दार्शिकविध्यन्तातिदेशोऽपि न पशौ । सादृश्याभावादिति पूर्ववैषम्येण **शङ्कायाम्,** अग्नीषोमीयपशौ तद्धितेन देवतानिर्देशरूपं, तथा 'ईषामालभेत' इति 'शकटद्वयस्यूतदण्डमालभेत' इति दर्शपूर्णमासयोः श्रवणेनालभतिरूपश्च सादृश्यं विद्यत इत्यस्ति पशावप्यैष्टिकधर्मातिदेशः । तदाह, **पशौ च** दार्शिको विध्यन्तोऽतिदिश्यते । **लिङ्गदर्शनात्** 'एकादश प्रयाजान्यजति' इति प्रयाजरूपलिङ्गदर्शनोपोद्बलिताच्चोदनासाम्य-रूपलिङ्गदर्शनादिति ।

**इति पञ्चममग्नीषोमीयपशौ दार्शपौर्णमासिकधर्मातिदेशाधिकरणम्**

ಅಕ್ಷರಾಧಿಕರಣ (೧-೩-೩)

ಏಕೆಂದರೆ ಸೂಜಿಯ ಮೊನೆಯಿಂದ ಪರ್ವತಕ್ಕೆ ಸಂಯೋಗವಾಯಿತೆಂದರೆ ಸೂಜಿ ಮೊನೆಯ ಸಮಾನವಾದ ಪರಿಮಾಣವನ್ನು ಪರ್ವತಾದಿ ಪ್ರದೇಶಗಳಲ್ಲಿರುವುದು ಕಂಡಿರುತ್ತದೆ.

**यदि चान्यत्रादृष्टाऽप्याकाशसंयोगस्य प्रतिसम्बन्धिपरिमाणादधिकपरिमाणदेशवृत्तिता तर्ह्यन्यत्रादृष्टमीश्वरस्य महतोऽप्यणीयस्त्वं स्यात् ।**

ಒಂದು ವೇಳೆ ಬೇರೆಲ್ಲಿಯೂ ಕಾಣದ ಪರಿಮಾಣುವಿಗೆ ಆಗುವ ಆಕಾಶಸಂಯೋಗಕ್ಕೆ ಪ್ರತಿಸಂಬಂಧಿಯಾದ ಪರಿಮಾಣುವಿನ ಪರಿಮಾಣಕ್ಕಿಂತ ಅಧಿಕಪರಿಮಾಣವುಳ್ಳ ಪ್ರದೇಶವೃತ್ತಿತ್ವವನ್ನು ಒಪ್ಪುವುದಾದರೆ ನಾವೂ ಸಹ ಬೇರೆಲ್ಲಿಯೂ ಕಾಣಿಸದ ಮಹತೋಽಪ್ಯಣೀಯಸ್ತ್ವವನ್ನು ಈಶ್ವರನಿಗೆ ಒಪ್ಪುತ್ತೇವೆ.

**भेरीशब्दासमवायिकारणस्य हन्यमानभेर्याकाशसंयोगस्य कृत्स्नाकाशवृत्तित्वं च स्यात् ।**

ಪ್ರತಿಸಂಬಂಧಿಯಿಂದ ಸಮಾನವಾದ ಪರಿಮಾಣವನ್ನು ಪ್ರದೇಶದಲ್ಲಿ ಒಪ್ಪದಿದ್ದರೆ ಮತ್ತೊಂದು ಬಾಧಕ ಬರುತ್ತದೆ. ಭೇರೀಶಬ್ದಕ್ಕೆ ಹನ್ಯಮಾನವಾದ ಭೇರ್ಯಾಕಾಶ ಸಂಯೋಗವು ಅಸಮವಾಯಿಕಾರಣವೆಂಬುದು ತಾರ್ಕಿಕರ ಸಿದ್ಧಾಂತ. ಹನ್ಯಮಾನವಾದ ಭೇರ್ಯಾಕಾಶ ಸಂಯೋಗವು ಆಕಾಶದ ಪ್ರದೇಶವಿಶೇಷದಲ್ಲಷ್ಟೇ ಇರುತ್ತದೆಂದು ಒಪ್ಪದೇ ಸಮಸ್ತ ಆಕಾಶದಲ್ಲಿರುತ್ತದೆಂದೂ ಒಪ್ಪಬೇಕಾಗುತ್ತದೆ.

**तथाच त्वन्मते जन्यविभुविशेषगुणानां देशनियमस्यासमवायिकारणकृतत्वादाद्य एव भेरीशब्दः कृत्स्नव्यापीति तस्य सर्वत्रोपलब्धिः स्यात् ।**

ಆವಾಗ ನಿಮ್ಮ ಮತದಲ್ಲಿ ಜನ್ಯವಾದ ವಿಭುವಾದ ವಿಶೇಷ ಗುಣಗಳಿಗೆ ಪ್ರದೇಶವಿಶೇಷನಿಯಮವು ಅಸಮವಾಯಿಕಾರಣದಿಂದಾಗುತ್ತದೆಂಬ ನಿಯಮವಿರುವುದರಿಂದ ಮೊದಲು ಹುಟ್ಟಿದ ಭೇರೀ ಶಬ್ದವೇ ಸಕಲ ಆಕಾಶದಲ್ಲಿ ಸಂಯೋಗವನ್ನು ಹೊಂದಿದಂತಾಯಿತು. ಆವಾಗ ಎಲ್ಲೆಡೆಯೂ ಭೇರೀ ಶಬ್ದವೇ ಕೇಳಿಸುವ ಪರಿಸ್ಥಿತಿ ಬರುತ್ತದೆ.

**वीचीतरङ्गन्यायेन शब्दपरम्परोत्पत्तिप्रक्रियाभङ्गश्च स्यात् ।**

ಮತ್ತು ವೀಚೀತರಂಗನ್ಯಾಯದಿಂದ ಶಬ್ದದ ಪರಂಪರೆಯು ಉತ್ಪನ್ನವಾಗುತ್ತದೆಂಬ ನಿಮ್ಮ ಪ್ರಕ್ರಿಯೆಗೂ ಸಹ ಭಂಗಬರುತ್ತದೆ.

**संयोगस्य स्वात्यन्ताभावसामानाधिकरण्याददोष इति चेन्न ।**

ಪ್ರಶ್ನೆ - ಸಂಯೋಗವು ಸ್ವಾತ್ಯಂತಾಭಾವಸಾಮಾನಾಧಿಕರಣ್ಯರೂಪವಾಗಿದೆ. ಅಂದರೆ ಸಂಯೋಗವಿರದ ದೇಶದಲ್ಲಿಯೇ ಸಂಯೋಗವನ್ನು ಒಪ್ಪಿದ್ದೇವೆ. ಹೀಗೆ ಹೇಳುವುದರಿಂದಲೇ ದೋಷವನ್ನು ಪರಿಹರಿಸಲು ಬರುವಾಗ ಪ್ರದೇಶವೃತ್ತಿತ್ವವನ್ನು ಏಕೆ ಒಪ್ಪಬೇಕು ?

**अणुत्वमहत्त्वयोरसामानाधिकरण्यनियमे भावाभावयोः सुतरां सामानाधिकरण्यायोगात् ।**

ಉತ್ತರ - ಇದು ತಪ್ಪು. ಅಣುತ್ವ ಹಾಗೂ ಮಹತ್ತ್ವಗಳಿಗೆ ಸಾಮಾನಾಧಿಕರಣ್ಯ-ನಿಯಮವಿರುವುದಿಲ್ಲವೆಂದು ಹೇಳಿದರೆ ಭಾವ ಮತ್ತು ಅಭಾವ ಪದಾರ್ಥಗಳಿಗೆ ಸುತರಾಂ ಸಾಮಾನಾಧಿಕರಣ್ಯವನ್ನು ಹೇಳಲು ಸಾಧ್ಯವಿಲ್ಲ.

**किञ्च भेर्यवष्टब्धप्रदेशे संयोगवत्तदत्यन्ताभावस्य अन्यत्र च तदत्यन्ताभाववत्संयोगस्य धीः स्यात् ।**

ಮತ್ತು ಯಾವ ಪ್ರದೇಶದಲ್ಲಿ ಭೇರಿಯು ಇರುತ್ತದೋ ಆ ಪ್ರದೇಶದಲ್ಲಿ ಭೇರೀಸಂಯೋಗವಿರುವಂತೆ ಅದರ ಅತ್ಯಂತ ಅಭಾವವೂ ಇರುತ್ತದೆ. ಯಾವ ಪ್ರದೇಶದಲ್ಲಿ ಭೇರೀ ಇರುವುದಿಲ್ಲವೋ, ಅಲ್ಲಿ ಅದರ ಸಂಯೋಗವೂ ಸಹ ಇರುತ್ತದೆಂಬ ಬುದ್ಧಿಯು ಬರಬೇಕಾಗುತ್ತದೆ. ಆದ್ದರಿಂದ ಸಂಯೋಗ ಹಾಗೂ ತದಭಾವಗಳಿಗೆ ಸ್ವಾತ್ಯಂತಾಭಾವ ಸಾಮಾನಾಧಿಕರಣ್ಯವನ್ನು ಒಪ್ಪಲು ಬರುವುದಿಲ್ಲ.

**प्रदेशस्यौपाधिकत्वे तूपाधिसंयोगोऽप्युक्तरीत्याऽणुप्रदेशवृत्तिः स्यात् ।**

ಪ್ರದೇಶವು ಔಪಾಧಿಕವಾದ್ದರಿಂದ ದೋಷವಿಲ್ಲವೆಂದು ಉತ್ತರಿಸಬಾರದು. ಉಪಾಧಿ ಸಂಯೋಗವನ್ನು ಒಪ್ಪುವುದಾದರೂ ಸಹ ಸಮಾನವಾದ ಪರಿಮಾಣವನ್ನು ಒಪ್ಪಲೇ ಬೇಕು. ಆದ್ದರಿಂದ ಗಗನಾದಿಗಳಲ್ಲಿ ಅಣುಪ್ರದೇಶವನ್ನು ಒಪ್ಪಲೇ ಬೇಕಾಗುತ್ತದೆ.

**नच निरवयवे गगनेऽणुपरिमाणः प्रदेशोऽन्योऽस्तीति महतो गगनस्यैवाणुत्वं सिद्धमिति नाणुत्वमहत्त्वयोर्विरोधः ।**

ಗಗನಕ್ಕೆ ಅವಯವವಿಲ್ಲವೆಂದು ತಾರ್ಕಿಕರಿಗೂ ಸಮ್ಮತವಾಗಿದೆ. ಆದ್ದರಿಂದ ಅಣುಪರಿಮಾಣ ಪ್ರದೇಶವು ಗಗನಕ್ಕಿಂತ ಭಿನ್ನವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಮಹತ್‌ಪರಿಮಾಣವುಳ್ಳ

ಏಕೆಂದರೆ ಸೂಜಿಯ ಮೊನೆಯಿಂದ ಪರ್ವತಕ್ಕೆ ಸಂಯೋಗವಾಯಿತೆಂದರೆ ಸೂಜಿ ಮೊನೆಯ ಸಮಾನವಾದ ಪರಿಮಾಣವನ್ನು ಪರ್ವತಾದಿ ಪ್ರದೇಶಗಳಲ್ಲಿರುವುದು ಕಂಡಿರುತ್ತದೆ.

**यदि चान्यत्रादृष्टाऽप्याकाशसंयोगस्य प्रतिसम्बन्धिपरिमाणादधिकपरिमाणदेश-वृत्तिता तर्ह्यन्यत्रादृष्टमीश्वरस्य महतोऽप्यणीयस्त्वं स्यात् ।**

ಒಂದು ವೇಳೆ ಬೇರೆಲ್ಲಿಯೂ ಕಾಣದ ಪರಿಮಾಣುವಿಗೆ ಆಗುವ ಆಕಾಶಸಂಯೋಗಕ್ಕೆ ಪ್ರತಿಸಂಬಂಧಿಯಾದ ಪರಿಮಾಣುವಿನ ಪರಿಮಾಣಕ್ಕಿಂತ ಅಧಿಕಪರಿಮಾಣವುಳ್ಳ ಪ್ರದೇಶವೃತ್ತಿತ್ವವನ್ನು ಒಪ್ಪುವುದಾದರೆ ನಾವೂ ಸಹ ಬೇರೆಲ್ಲಿಯೂ ಕಾಣಿಸದ ಮಹತೋऽಪ್ಯಣೀಯಸ್ತ್ವವನ್ನು ಈಶ್ವರನಿಗೆ ಒಪ್ಪುತ್ತೇವೆ.

**भेरीशब्दासमवायिकारणस्य हन्यमानभेर्याकाशसंयोगस्य कृत्स्नाकाशवृत्तित्वं च स्यात् ।**

ಪ್ರತಿಸಂಬಂಧಿಯಿಂದ ಸಮಾನವಾದ ಪರಿಮಾಣವನ್ನು ಪ್ರದೇಶದಲ್ಲಿ ಒಪ್ಪದಿದ್ದರೆ ಮತ್ತೊಂದು ಬಾಧಕ ಬರುತ್ತದೆ. ಭೇರೀಶಬ್ದಕ್ಕೆ ಹನ್ಯಮಾನವಾದ ಭೇರ್ಯಾಕಾಶ ಸಂಯೋಗವು ಅಸಮವಾಯಿಕಾರಣವೆಂಬುದು ತಾರ್ಕಿಕರ ಸಿದ್ಧಾಂತ. ಹನ್ಯಮಾನವಾದ ಭೇರ್ಯಾಕಾಶ ಸಂಯೋಗವು ಆಕಾಶದ ಪ್ರದೇಶವಿಶೇಷದಲ್ಲಷ್ಟೇ ಇರುತ್ತದೆಂದು ಒಪ್ಪದೇ ಸಮಸ್ತ ಆಕಾಶದಲ್ಲಿರುತ್ತದೆಂದೂ ಒಪ್ಪಬೇಕಾಗುತ್ತದೆ.

**तथाच त्वन्मते जन्यविभुविशेषगुणानां देशनियमस्यासमवायिकारणकृतत्वादाद्य एव भेरीशब्दः कृत्स्नव्यापीति तस्य सर्वत्रोपलब्धिः स्यात् ।**

ಆವಾಗ ನಿಮ್ಮ ಮತದಲ್ಲಿ ಜನ್ಯವಾದ ವಿಭುವಾದ ವಿಶೇಷ ಗುಣಗಳಿಗೆ ಪ್ರದೇಶವಿಶೇಷನಿಯಮವು ಅಸಮವಾಯಿಕಾರಣದಿಂದಾಗುತ್ತದೆಂಬ ನಿಯಮವಿರುವುದರಿಂದ ಮೊದಲು ಹುಟ್ಟಿದ ಭೇರೀ ಶಬ್ದವೇ ಸಕಲ ಆಕಾಶದಲ್ಲಿ ಸಂಯೋಗವನ್ನು ಹೊಂದಿದಂತಾಯಿತು. ಆವಾಗ ಎಲ್ಲೆಡೆಯೂ ಭೇರೀ ಶಬ್ದವೇ ಕೇಳಿಸುವ ಪರಿಸ್ಥಿತಿ ಬರುತ್ತದೆ.

**वीचीतरङ्गन्यायेन शब्दपरम्परोत्पत्तिप्रक्रियाभङ्गश्च स्यात् ।**

ಮತ್ತು ವೀಚೀತರಂಗನ್ಯಾಯದಿಂದ ಶಬ್ದದ ಪರಂಪರೆಯು ಉತ್ಪನ್ನವಾಗುತ್ತದೆಂಬ ನಿಮ್ಮ ಪ್ರಕ್ರಿಯೆಗೂ ಸಹ ಭಂಗಬರುತ್ತದೆ.

**संयोगस्य स्वात्यन्ताभावसामानाधिकरण्याददोष इति चेन्न ।**

ಪ್ರಶ್ನೆ - ಸಂಯೋಗವು ಸ್ವಾತ್ಯಂತಾಭಾವಸಾಮಾನಾಧಿಕರಣ್ಯರೂಪವಾಗಿದೆ. ಅಂದರೆ ಸಂಯೋಗವಿರದ ದೇಶದಲ್ಲಿಯೇ ಸಂಯೋಗವನ್ನು ಒಪ್ಪಿದ್ದೇವೆ. ಹೀಗೆ ಹೇಳುವುದರಿಂದಲೇ ದೋಷವನ್ನು ಪರಿಹರಿಸಲು ಬರುವಾಗ ಪ್ರದೇಶವೃತ್ತಿತ್ವವನ್ನು ಏಕೆ ಒಪ್ಪಬೇಕು ?

**अणुत्वमहत्त्वयोरसामानाधिकरण्यनियमे भावाभावयोः सुतरां सामानाधिकरण्यायोगात् ।**

ಉತ್ತರ - ಇದು ತಪ್ಪು. ಅಣುತ್ವ ಹಾಗೂ ಮಹತ್ತ್ವಗಳಿಗೆ ಸಾಮಾನಾಧಿಕರಣ್ಯ-ನಿಯಮವಿರುವುದಿಲ್ಲವೆಂದು ಹೇಳಿದರೆ ಭಾವ ಮತ್ತು ಅಭಾವ ಪದಾರ್ಥಗಳಿಗೆ ಸುತರಾಂ ಸಾಮಾನಾಧಿಕರಣ್ಯವನ್ನು ಹೇಳಲು ಸಾಧ್ಯವಿಲ್ಲ.

**किञ्च भेर्यवष्टब्धप्रदेशे संयोगवत्तदत्यन्ताभावस्य अन्यत्र च तदत्यन्ताभाववत्संयोगस्य धीः स्यात् ।**

ಮತ್ತು ಯಾವ ಪ್ರದೇಶದಲ್ಲಿ ಭೇರಿಯು ಇರುತ್ತದೋ ಆ ಪ್ರದೇಶದಲ್ಲಿ ಭೇರೀಸಂಯೋಗವಿರುವಂತೆ ಅದರ ಅತ್ಯಂತ ಅಭಾವವೂ ಇರುತ್ತದೆ. ಯಾವ ಪ್ರದೇಶದಲ್ಲಿ ಭೇರೀ ಇರುವುದಿಲ್ಲವೋ, ಅಲ್ಲಿ ಅದರ ಸಂಯೋಗವೂ ಸಹ ಇರುತ್ತದೆಂಬ ಬುದ್ಧಿಯು ಬರಬೇಕಾಗುತ್ತದೆ. ಆದ್ದರಿಂದ ಸಂಯೋಗ ಹಾಗೂ ತದಭಾವಗಳಿಗೆ ಸ್ವಾತ್ಯಂತಾಭಾವ ಸಾಮಾನಾಧಿಕರಣ್ಯವನ್ನು ಒಪ್ಪಲು ಬರುವುದಿಲ್ಲ.

**प्रदेशस्यौपाधिकत्वे तूपाधिसंयोगोऽप्युक्तरीत्याऽणुप्रदेशवृत्तिः स्यात् ।**

ಪ್ರದೇಶವು ಔಪಾಧಿಕವಾದ್ದರಿಂದ ದೋಷವಿಲ್ಲವೆಂದು ಉತ್ತರಿಸಬಾರದು. ಉಪಾಧಿ ಸಂಯೋಗವನ್ನು ಒಪ್ಪುವುದಾದರೂ ಸಹ ಸಮಾನವಾದ ಪರಿಮಾಣವನ್ನು ಒಪ್ಪಲೇ ಬೇಕು. ಆದ್ದರಿಂದ ಗಗನಾದಿಗಳಲ್ಲಿ ಅಣುಪ್ರದೇಶವನ್ನು ಒಪ್ಪಲೇ ಬೇಕಾಗುತ್ತದೆ.

**नच निरवयवे गगनेऽणुपरिमाणः प्रदेशोऽन्योऽस्तीति महतो गगनस्यैवाणुत्वं सिद्धमिति नाणुत्वमहत्त्वयोर्विरोधः ।**

ಗಗನಕ್ಕೆ ಅವಯವವಿಲ್ಲವೆಂದು ತಾರ್ಕಿಕರಿಗೂ ಸಮ್ಮತವಾಗಿದೆ. ಆದ್ದರಿಂದ ಅಣುಪರಿಮಾಣ ಪ್ರದೇಶವು ಗಗನಕ್ಕಿಂತ ಭಿನ್ನವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಮಹತ್‌ಪರಿಮಾಣವುಳ್ಳ

ಗಗನದಲ್ಲಿಯೇ ಅಣುತ್ವವನ್ನು ಒಪ್ಪಬೇಕಾಗುತ್ತದೆ. ಹೀಗೆ ಅಣುತ್ವ ಹಾಗೂ ಮಹತ್ತ್ವಗಳಿಗೆ ವಿರೋಧವಿರುವುದಿಲ್ಲವೆಂದು ಗಗನಾದಿಗಳಲ್ಲಿ ಕಂಡಿದೆ. ಇದರಂತೆ ಪರಮಾತ್ಮನಲ್ಲಿರುವ ಅಣುತ್ವ-ಮಹತ್ತ್ವಗಳಿಗೂ ಸಹ ವಿರೋಧ ಬರುವುದಿಲ್ಲ.

**प्रकाशः –**

एवं लोके विरोधमुपेत्य द्वयोर्ब्रह्मणि समावेशस्समर्थितः । इदानीं घटादावन्यापेक्षयाऽणुत्वमहत्त्वयोरविरोध इव स्वापेक्षयाऽपि स्वस्य तथाभावो युक्तः ।

ವಿವರಣೆ - ಇಲ್ಲಿಯ ತನಕ ಅಣುತ್ವ ಹಾಗೂ ಮಹತ್ತ್ವಗಳಿಗೆ ಲೋಕದಲ್ಲಿ ವಿರೋಧ ಕಂಡಿದೆಯೆಂದು ಅಂಗೀಕರಿಸಿ ಬ್ರಹ್ಮನಲ್ಲಿ ಮಾತ್ರ ವಿರೋಧವಿಲ್ಲವೆಂಬುದನ್ನು ಸಮರ್ಥಿಸಿದರು. ಈಗ ಘಟಪಟಾದಿಗಳಲ್ಲಿ ಅಣುತ್ವ ಹಾಗೂ ಮಹತ್ತ್ವಗಳಿಗೆ ಬೇರೆ ವಸ್ತುಗಳ ಅಪೇಕ್ಷೆಯಿಂದ ವಿರೋಧವು ಹೇಗೆ ಇರುವುದಿಲ್ಲವೋ, ಅದರಂತೆ ತನ್ನ ಅಪೇಕ್ಷೆಯಿಂದಲೇ ತನಗೆ ವಿರೋಧವಿಲ್ಲದಿರುವುದೂ ಸಹ ಗಗನಾದಿಗಳಲ್ಲಿಯೂ ಕಂಡಿರುತ್ತದೆ ಎಂದು ಸಮರ್ಥಿಸುತ್ತಿದ್ದಾರೆ. ಅಂದರೆ ಲೋಕದಲ್ಲಿಯೂ ಸಹ ಒಂದೇ ವಸ್ತುವಿನಲ್ಲಿ ಅಣುತ್ವ ಹಾಗೂ ಮಹತ್ತ್ವಗಳು ಇರುವುದು ಕಂಡಿದೆ.

**प्रकाशः** – ''महतोऽल्पत्वमपि हि व्योमवत्प्राह वेदवित्'' इति ''अतस्सर्वपदार्थानां भागास्सन्त्येव सर्वदा । सर्वदिक्ष्वपि सम्बन्धात्'' इत्यादि वैशेषिकनयानुभाष्योक्तयनुरोधेन

'ಮಹತೋಽಲ್ಪತ್ವಮಪಿ ಹಿ ವ್ಯೋಮವತ್ ಪ್ರಾಹ ವೇದವಿತ್' ಮಹತ್ವದಂತೆ ಅಣುತ್ವವೂ ಸಹ ಆಕಾಶದಲ್ಲಿರುವುದು ಕಂಡಿರುತ್ತದೆ. ಆ ದೃಷ್ಟಾಂತದಿಂದ ಸರ್ವಜ್ಞರು ಸಮರ್ಥಿಸುತ್ತಿದ್ದಾರೆ ಎಂಬುದಾಗಿ ಮತ್ತು 'ಅತಃ ಸರ್ವಪದಾರ್ಥಾನಾಂ ಭಾಗಾಃ ಸಂತ್ಯೇವ ಸರ್ವದಾ । ಸರ್ವದಿಕ್ಷ್ವಪಿ ಸಂಬಂಧಾತ್' ಸಕಲ ಪದಾರ್ಥಗಳಿಗೂ ಸಹ ದಶದಿಕ್ಕುಗಳ ಸಂಯೋಗ ಇದ್ದೇ ಇರುತ್ತದೆ. ಇದರಿಂದ ಅಣು ಮೊದಲಾದ ನಿತ್ಯ ಪದಾರ್ಥಗಳಿಗೂ ಭಾಗಗಳಿರುತ್ತವೆಂದು ಸ್ಪಷ್ಟವಾಗುತ್ತದೆಂದು ವೈಶೇಷಿಕಾಧಿಕರಣದ ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಹೇಳಿರುತ್ತಾರೆ. ಇದರಿಂದ ಮಹತ್ತ್ವವುಳ್ಳ ಆಕಾಶದಲ್ಲಿ ಅಣುತ್ವವೂ ಸಹ ಇರುತ್ತದೆಂದು ತಿಳಿಯುತ್ತದೆ.

**प्रकाशः** – अत्र सुधायां ''किं चाकाशस्य परमाणुसंयोगः किमाकाशैकदेशे वर्तत उताकाश एव'' इत्यादिना प्रपञ्चितरीत्या

ಮತ್ತು ಈ ಅನುವ್ಯಾಖ್ಯಾನಕ್ಕೆ ಸಂಬಂಧಪಟ್ಟ ನ್ಯಾಯಸುಧೆಯಲ್ಲಿ 'ಕಿಂಚ ಆಕಾಶಸ್ಯ ಪರಮಾಣುಸಂಯೋಗಃ ಕಿಮಾಕಾಶೈಕದೇಶೇ ವರ್ತತ ಉತಾಕಾಶ ಏವ' ಆಕಾಶಕ್ಕೆ ಪರಮಾಣು ಸಂಯೋಗವಾಗುತ್ತದೆ ಎಂದರೆ ಆಕಾಶದ ಏಕದೇಶದಲ್ಲಿ ವಿಯೋಗವನ್ನು ಹೊಂದುತ್ತದೆಂದೋ, ಅಥವಾ

ಸಂಪೂರ್ಣ ಆಕಾಶದಲ್ಲಿ ಸಂಯೋಗವನ್ನು ಹೊಂದುತ್ತದೆಂದೋ? ಇತ್ಯಾದಿಯಾಗಿ ಆಕಾಶದಲ್ಲಿ ಅಣುತ್ವ-ಮಹತ್ತ್ವಗಳನ್ನು ವಿವರವಾಗಿ ಸಮರ್ಥಿಸಿದ್ದಾರೆ.

**प्रकाशः** – अपरिच्छिन्ने गगनादौ परिमाणापकर्षलक्षणाणुत्वस्यापि दर्शनेन विरोधस्यैवाभावाद्ब्रह्मणि तत्समावेशो युक्त इत्यभिप्रेत्याकाशेऽणुत्वमपि साधयति – **किञ्चेत्यादिना नाणुत्वमहत्त्वयोर्विरोध इत्यन्तेन ।।**

ಹೀಗೆ ನ್ಯಾಯಸುಧಾ ಹಾಗೂ ಅನುವ್ಯಾಖ್ಯಾನಗಳಂತೆ ಅಪರಿಚ್ಛಿನ್ನವಾದ ಆಕಾಶಾದಿಗಳಲ್ಲಿ ಪರಿಮಾಣ ಅಪಕರ್ಷವೆಂಬ ಅಣುತ್ವವಿರುವುದೂ ಸಹ ಕಂಡಿದೆ. ಆದ್ದರಿಂದ ಒಂದೇ ಪದಾರ್ಥದಲ್ಲಿ ಅಣುತ್ವ-ಮಹತ್ತ್ವಗಳೆರಡಿದ್ದರೂ ವಿರೋಧವಿಲ್ಲವೆಂದು ಹೇಗೆ ಒಪ್ಪಲಾಗಿದೆಯೋ, ಅದರಂತೆ ಬ್ರಹ್ಮನಲ್ಲಿಯೂ ಸಹ ಅಣುತ್ವ-ಮಹತ್ತ್ವಗಳೆರಡನ್ನೂ ಒಪ್ಪಬಹುದು. ಈ ಅಭಿಪ್ರಾಯದಿಂದ ಆಕಾಶದಲ್ಲಿ ಅಣುತ್ವವನ್ನು ಸಹ ಸಾಧನ ಮಾಡುತ್ತಿದ್ದಾರೆ 'ಕಿಂಚ' ಎಂಬಲ್ಲಿಂದ ಪ್ರಾರಂಭಿಸಿ 'ನ ಅಣುತ್ವಮಹತ್ವಯೋಃ ವಿರೋಧಃ' ಎಂಬಲ್ಲಿಯ ತನಕ.

**प्रकाशः** – यद्वा ''परमाणुसम्बद्ध ईश्वरप्रदेशः परमाणुपरिमाणतामणति । मेरुमन्दरादिगतस्तत्परिमाणतामुपैति । स एव गगनसम्बन्धी तादृशो भवति । नहि तेषां प्रदेशानामीश्वरान्मिथो वा भेदं वादिनो वदन्ति'' इत्यादिना तत्वप्रदीपोक्तदिशा ईश्वरोऽणुपरिमाणाश्रयः । अणुपरिमाणपरमाणुसंयोगाश्रयत्वादित्यनुमानमभिप्रेत्य हेतोर्व्याप्तिसिद्ध्यर्थं गगनादौ दृष्टान्ते दार्ष्टान्तिके ईश्वरे च तत्साधयति – **किञ्चेत्यादिना ।।**

ಅಥವಾ 'ಕಿಂಚ' ಇತ್ಯಾದಿ ಗ್ರಂಥಕ್ಕೆ ಮತ್ತೊಂದು ಬಗೆಯಲ್ಲಿಯೂ ಅವತಾರಿಕೆಯನ್ನು ನೀಡಬಹುದು. 'ಪರಮಾಣುಸಂಬದ್ಧ ಈಶ್ವರಪ್ರದೇಶಃ ಪರಮಾಣುಪರಿಮಾಣತಾಮಣತಿ । ಮೇರುಮಂದರಾದಿಗತಸ್ತತ್-ಪರಿಮಾಣತಾಮುಪೈತಿ । ಸ ಏವ ಗಗನಸಂಬಂಧೀ ತಾದೃಶೋ ಭವತಿ । ನಹಿ ತೇಷಾಂ ಪ್ರದೇಶಾನಾಮೀಶ್ವರಾತ್ ಮಿಥೋ ವಾ ಭೇದಂ ವಾದಿನೋ ವದಂತಿ' 'ಪರಮಾಣು ಸಂಬಂಧವನ್ನು ಹೊಂದಿರುವ ಈಶ್ವರನ ಪ್ರದೇಶವು ಪರಮಾಣು ಪರಿಮಾಣವನ್ನೇ ಹೊಂದುತ್ತದೆ. ಮೇರು, ಮಂದರಾದಿಗಳ ಜೊತೆಗೆ ಸಂಬಂಧವನ್ನು ಹೊಂದಿರುವ ಈಶ್ವರನ ಪ್ರದೇಶವು ಮೇರು, ಮಂದರಾದಿಗಳ ಪರಿಮಾಣವನ್ನೇ ಹೊಂದುತ್ತದೆ. ಮತ್ತೆ ಅದೇ ಗಗನದ ಜೊತೆಗೆ ಸಂಬಂಧವನ್ನು ಪಡೆದಾಗ ಆ ಪರಿಮಾಣವನ್ನೇ ಹೊಂದುತ್ತದೆ. ಹೀಗೆ ಈಶ್ವರ ಪ್ರದೇಶಕ್ಕೆ ಅನೇಕ ಪರಿಮಾಣಗಳನ್ನು ಹೇಳಿದಂತಾಯಿತು. ಈಶ್ವರನಿಗೂ ಈಶ್ವರನ ಪ್ರದೇಶಕ್ಕೂ ಭೇದವನ್ನು ಹೇಳಲು ಸಾಧ್ಯವಿಲ್ಲ. ಒಂದು ಪ್ರದೇಶಕ್ಕೂ ಮತ್ತೊಂದು ಪ್ರದೇಶಕ್ಕೂ ಪರಸ್ಪರವಾದ ಭೇದವನ್ನೂ ಸಿದ್ಧಾಂತಿಗಳು ಒಪ್ಪಿರುವುದಿಲ್ಲ. ಆದ್ದರಿಂದ ಆಕಾಶದಂತೆ ಅಣುತ್ವ-ಮಹತ್ತ್ವಗಳೆರಡೂ ಇವೆ ಎಂದು ಪರಮಾತ್ಮನಲ್ಲಿ ಒಪ್ಪಿದಂತಾಯಿತು. ಹೀಗೆ ತತ್ತ್ವಪ್ರದೀಪದಲ್ಲಿ ಹೇಳಿರುತ್ತಾರೆ. ಇದರಿಂದ ಅನುಮಾನವನ್ನು

ಪ್ರಯೋಗಿಸಿದಂತಾಗುತ್ತದೆ - 'ಈಶ್ವರಃ, ಅಣುಪರಿಮಾಣಾಶ್ರಯಃ, ಅಣುಪರಿಮಾಣ ಪರಮಾಣು ಸಂಯೋಗಾಶ್ರಯತ್ವಾತ್ ಗಗನವತ್' ಯಾವ ಪದಾರ್ಥವು, ಯಾವ ಪರಿಮಾಣವುಳ್ಳ ವಸ್ತುವಿನ ಸಂಯೋಗಕ್ಕೆ ಆಶ್ರಯವಾಗಿದೆಯೋ, ಅದು ಆ ಪರಿಮಾಣವುಳ್ಳದ್ದೂ ಆಗಿರುತ್ತದೆ. ಅಣುಪರಿಮಾಣವುಳ್ಳ ಸಂಯೋಗಕ್ಕೆ ಈಶ್ವರನು ಆಶ್ರಯನಾದ್ದರಿಂದ ಅಣುಪರಿಮಾಣವುಳ್ಳವನಾಗಬೇಕೆಂದು ಅನುಮಾನದಿಂದ ಸಾಧಿಸಬಹುದು. ಈ ಅನುಮಾನದಲ್ಲಿರುವ ಹೇತುವಿಗೆ ವ್ಯಾಪ್ತಿಯಿರುತ್ತದೆಂದು ತೋರಿಸಲು ಗಗನಾದಿ ದೃಷ್ಟಾಂತದಲ್ಲಿ ಹಾಗೂ ದಾರ್ಷ್ಟಾಂತಿಕನಾದ ಈಶ್ವರನಲ್ಲಿ ಹೇತುವನ್ನು ಸಾಧನೆ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः – श्लोकं व्याख्याति – आकाशस्येति ।।** अप्रयोजकत्वमाशङ्क्य विपक्षे बाधकद्वयमाह **– यदि चेति ।।**

'ಪ್ರತಿಸಂಬಂಧಿನಾ' ಇತ್ಯಾದಿ ಶ್ಲೋಕವನ್ನು ಸ್ವತಃ ತಾವೇ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಆಕಾಶಸ್ಯ' ಇತ್ಯಾದಿ ವಾಕ್ಯದಿಂದ. ಅಣುಪರಿಮಾಣಸಂಯೋಗಾಶ್ರಯತ್ವವೆಂಬ ಹೇತು ಅಪ್ರಯೋಜಕವಾಗಿದೆಯೆಂದು ಆಶಂಕಿಸಿ ವಿಪಕ್ಷದಲ್ಲಿ ಎರಡು ಬಾಧಕಗಳನ್ನು ಹೇಳುತ್ತಿದ್ದಾರೆ 'ಯದಿಚ' ಇತ್ಯಾದಿ ವಾಕ್ಯದಿಂದ.

**प्रकाशः – अस्तु कृत्स्नवृत्तित्वं को दोष इत्यत आह – तथाचेति ।।** एतेन ''भेरीसंयोगस्यापि तथात्वोपपत्तेः । तथाच सर्वत्र शब्दोपलब्धिप्रसङ्गात्'' इति सुधावाक्यं विवृतं भवति ।

ಹನ್ಯಮಾನವಾದ ಭೇರ್ಯಾಕಾಶ ಸಂಯೋಗವು ಆಕಾಶದಲ್ಲೆಲ್ಲೆಡೆ ಇರಲಿ ಏನು ದೋಷ ? ಎಂಬ ಪ್ರಶ್ನೆಗೆ 'ತಥಾಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ 'ಭೇರೀಸಂಯೋಗಸ್ಯಾಪಿ ತಥಾತ್ವೋಪಪತ್ತೇಃ । ತಥಾಚ ಸರ್ವತ್ರ ಶಬ್ದೋಪಲಬ್ಧಿಪ್ರಸಂಗಾತ್' ಭೇರೀಸಂಯೋಗವೂ ಸಹ ಸಕಲ ಆಕಾಶದಲ್ಲಿ ಇರುವುದಾದರೆ ಎಲ್ಲೆಡೆ ಶಬ್ದವು ಉಪಲಬ್ಧವಾಗಬೇಕಾದೀತು. ಇತ್ಯಾದಿ ಸುಧಾವಾಕ್ಯವನ್ನು ವಿವರಿಸಿದಂತಾಗುತ್ತದೆ.

**प्रकाशः –** संयोगस्याव्याप्यवृत्तित्वं नाम स्वात्यन्ताभावसामानाधिकरण्यमेवेति मत्वोक्तबाधकपरिहारमाशङ्कते **– संयोगस्येति ।।**

ಸಂಯೋಗವು ಅವ್ಯಾಪ್ಯವೃತ್ತಿಯೆಂದರೆ ಪ್ರದೇಶವೃತ್ತಿಯೆಂದರ್ಥವಲ್ಲ ಹೊರತಾಗಿ, ತಾನು ಇಲ್ಲದ ಸ್ಥಳದಲ್ಲಿ ಇರುತ್ತದೆಂದು ಸ್ವಾತ್ಯಂತಾಭಾವಸಾಮಾನಾಧಿಕರಣ್ಯರೂಪದಿಂದ ಇರುತ್ತದೆ. ಹೀಗೆ ಹೇಳಿದಾಗ ಹಿಂದಿನ ಬಾಧಕವು ಪರಿಹಾರವಾಗುತ್ತದೆಂದು 'ಸಂಯೋಗಸ್ಯ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

**प्रकाशः – अदोष इति ।।** संयोगस्य प्रदेशवृत्तित्वदर्शनादीश्वरे गगनादौ च परमाणुतुल्यपरिमाणप्रदेशोऽपि परमाणुसंयोगाश्रयतयाऽभ्युपगन्तव्य इति दोषो

नास्तीत्यर्थः । अन्यथा प्रदेशस्य प्रदेशिनो भिन्नत्वेनान्यवृत्तिधर्मस्यान्यवृत्तित्वाभ्युपगमेऽतिप्रसङ्गादिति भावः ।

'ಅದೋಷಃ' ಎಂಬುದರ ಅಭಿಪ್ರಾಯ ಹೀಗಿದೆ - ಸಂಯೋಗಕ್ಕೆ ಪ್ರದೇಶವೃತ್ತಿತ್ವವಿರುವುದರಿಂದ ಈಶ್ವರನಲ್ಲಿ ಮತ್ತು ಗಗನಾದಿಗಳಲ್ಲಿ ಪರಮಾಣು ತುಲ್ಯ ಪರಿಮಾಣ ಪ್ರದೇಶವನ್ನು ಪರಮಾಣು ಸಂಯೋಗಕ್ಕೆ ಆಶ್ರಯವಾಗಿ ಒಪ್ಪಬೇಕೆಂದು ಯಾವ ದೋಷವನ್ನು ಸಿದ್ಧಾಂತಿಗಳು ಹೇಳಿದ್ದರೋ, ಆ ದೋಷವು ಈಗ ತಾರ್ಕಿಕರಿಗೆ ಬರುವುದಿಲ್ಲವೆಂದು ಅಭಿಪ್ರಾಯ. ಹೀಗೊಪ್ಪದಿದ್ದರೆ ಪ್ರದೇಶ ಮತ್ತು ಪ್ರದೇಶಿಗಳಿಗೆ ಭೇದವಿರುವುದರಿಂದ ಪ್ರದೇಶದಲ್ಲಿರುವ ಧರ್ಮವು ಪ್ರದೇಶಿಯಾದ ಆಕಾಶಾದಿಗಳಲ್ಲಿ ಒಪ್ಪಿದರೆ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಸ್ವಾತ್ಯಂತಾಭಾವಸಾಮಾನಾಧಿಕರಣ್ಯರೂಪವೆಂದೇ ಹೇಳಬೇಕು. ಹೀಗೆ ಹೇಳಿದಾಗ ಪರಮಾಣು ಮೊದಲಾದವುಗಳ ಸಮಾನಪರಿಮಾಣವನ್ನು ಆಕಾಶಾದಿಗಳಿಗೆ ಒಪ್ಪಬೇಕಾಗಿಲ್ಲವೆಂದು ತಾರ್ಕಿಕರ ಅಭಿಪ್ರಾಯ.

**प्रकाशः –** ''भावाभावयोरन्यत्र सर्वत्र सहानवस्थितयोः कथं विरोधो न भवेत्'' इति सुधोक्तं दोषं व्यक्तमाह – **अणुत्वेति** ।।

ಭಾವ ಮತ್ತು ಅಭಾವ ಪದಾರ್ಥಗಳಿಗೆ ಬೇರೆ ಎಲ್ಲಾ ಕಡೆಯೂ ಸಹ ಅವಸ್ಥಾನರೂಪವಾದ ವಿರೋಧವಿರುತ್ತದೆ. ಇಂತಹ ವಿರೋಧವು ಸಂಯೋಗ ಹಾಗೂ ತದಭಾವಗಳ ವಿಷಯದಲ್ಲಿ ಏಕೆ ಇರುವುದಿಲ್ಲ? ಇತ್ಯಾದಿ ಸುಧೆಯಲ್ಲಿ ಹೇಳಲ್ಪಟ್ಟ ದೋಷವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಅಣುತ್ವ' ಇತ್ಯಾದಿ ವಾಕ್ಯದಿಂದ

**प्रकाशः – सुतरामिति** ।। अणुत्वमहत्त्वयोरेकत्र वृत्तौ हि तत्परिमाणप्रदेशादिनिष्ठतया संयोगतदभावयोरविरोधो नान्यथेति भावः ।

ಗ್ರಂಥದಲ್ಲಿ ಅಣುತ್ವ-ಮಹತ್ತ್ವಗಳಿಗೆ ಸಾಮಾನಾಧಿಕರಣ್ಯವನ್ನು ಒಪ್ಪದಿದ್ದರೆ ಭಾವಾಭಾವಗಳಿಗೂ ಸಾಮಾನಾಧಿಕರಣ್ಯವು ಸುತರಾಂ ಕೂಡುವುದಿಲ್ಲವೆಂದಿದ್ದಾರೆ. ಅಂದರೆ ಅಣುತ್ವ ಹಾಗೂ ಮಹತ್ತ್ವಗಳಿಗೆ ಏಕಪ್ರದೇಶಸ್ಥಿತತ್ವವನ್ನು ಒಪ್ಪಿದರೆ ಅಣುಪರಿಮಾಣ ಪ್ರದೇಶಾದಿನಿಷ್ಠವಾಗಿ ಸಂಯೋಗತದಭಾವಗಳಿಗೆ ವಿರೋಧವಿಲ್ಲವೆಂಬುದನ್ನು ಸಾಧಿಸಬಹುದು. ಇಲ್ಲದಿದ್ದರೆ ಸಂಯೋಗತದಭಾವಗಳಿಗೆ ಬರುವಂತಹ ವಿರೋಧವನ್ನು ಪರಿಹರಿಸಲು ಸಾಧ್ಯವೇ ಇಲ್ಲ.

**प्रकाशः –** अल्पपरिमाणप्रदेशवृत्तित्वमनङ्गीकृत्य स्वात्यन्ताभावसामानाधिकरण्यनियमे दोषान्तरं चाह – **किञ्चेति** ।। यद्वा एकत्र संयोगतदभावौ प्रतीतिविरोधान्न स्त इत्याह – **किञ्चेति** ।।

ಅಲ್ಪಪರಿಮಾಣಪ್ರದೇಶವೃತ್ತಿತ್ವವನ್ನು ಅಂಗೀಕಾರ ಮಾಡದೇ ಸ್ವಾತ್ಯಂತಾಭಾವಸಾಮಾನಾಧಿಕರಣ್ಯವನ್ನೇ ಪ್ರತಿಪಾದನೆ ಮಾಡುವುದಾದರೆ ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಅಥವಾ 'ಕಿಂಚ' ಇತ್ಯಾದಿ ವಾಕ್ಯಕ್ಕೆ ಮತ್ತೊಂದು ರೀತಿಯಲ್ಲಿಯೂ ಅವತಾರಿಕೆಯನ್ನು ಹೇಳಬಹುದು - ಒಂದೇ ಸ್ಥಳದಲ್ಲಿ ಸಂಯೋಗ ಹಾಗೂ ತದಭಾವಗಳನ್ನು ಒಪ್ಪಿದರೆ ಪ್ರತೀತಿ ವಿರೋಧ ಬರುತ್ತದೆ. ಆದ್ದರಿಂದ ಸಂಯೋಗ ತದಭಾವಗಳು ಒಂದೇ ಕಡೆ ಇರುವುದಿಲ್ಲವೆಂದು 'ಕಿಂಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – नन्वस्तूक्तदिशा परमाणुसंयोगो गगनादौ परमाणुतुल्यपरिमाण-प्रदेशवृत्तिर्न तावता गगनादेरणुत्वमहत्त्वसिद्धिः । प्रदेशस्यौपाधिकत्वात् । स्वाभाविकत्वे वा पटादाविव भिन्नत्वेनाणुत्वस्य तन्मात्रनिष्ठत्वेन गगनादावभावादित्यतो द्वयमपि क्रमेण निराह – **प्रदेशस्येति ।। उक्तरीत्येति ।।** सूच्यग्रेत्यादिनोक्तरीत्येत्यर्थः ।

ಹಿಂದೆ ಹೇಳಿದಂತೆ ಪರಮಾಣುಸಂಯೋಗವು ಗಗನಾದಿಗಳಲ್ಲಿ ಪರಮಾಣುತುಲ್ಯವಾದ ಪರಿಮಾಣಪ್ರದೇಶದಲ್ಲಿ ಇರುತ್ತದೆಂದು ಒಪ್ಪೋಣ. ಅಷ್ಟರಿಂದ ಗಗನಾದಿಗಳಲ್ಲಿ ಅಣುತ್ವ-ಮಹತ್ತ್ವಗಳೇನೂ ಸಿದ್ಧವಾಗುವುದಿಲ್ಲ. ಏಕೆಂದರೆ ಪ್ರದೇಶವು ಔಪಾಧಿಕವಾಗಿದೆ. ಒಂದು ವೇಳೆ ಪ್ರದೇಶವನ್ನು ಸ್ವಾಭಾವಿಕವೆಂದು ಒಪ್ಪುವುದಾದರೂ ಪಟಾದಿಗಳಂತೆ ಪ್ರದೇಶವೂ ಸಹ ಭಿನ್ನವೆಂದಂತಾಯಿತು. ಭಿನ್ನವಾದ ಪ್ರದೇಶದಲ್ಲಿ ಮಾತ್ರ ಅಣುತ್ವವು ಇರುವುದರಿಂದ ಗಗನಾದಿಗಳಲ್ಲಿ ಅಣುತ್ವವನ್ನು ಸಾಧನೆ ಮಾಡಿದಂತಾಗುವುದಿಲ್ಲವಲ್ಲ? ಎಂಬೆರಡು ಪ್ರಶ್ನೆಗಳನ್ನು ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ಪ್ರದೇಶಸ್ಯ' ಇತ್ಯಾದಿ ವಾಕ್ಯದಿಂದ. 'ಉಕ್ತರೀತ್ಯಾ' ಎಂದರೆ 'ಸೂಚ್ಯಗ್ರ' ಇತ್ಯಾದಿ ವಾಕ್ಯದಿಂದ ಹೇಳಿದ ಪ್ರಕಾರವೆಂದರ್ಥ.

**प्रकाशः** – नन्वस्तूपाधिसंयोगोऽप्यणुपरिमाणकप्रदेशवृत्तिः । को दोष इति चेत् सोऽपि किमौपाधिक उत स्वाभाविकः । नाद्यः । आत्माश्रयाद्यापत्तेः । द्वितीये तु स्वाभाविकाणुपरिमाणकप्रदेशो गगनादावङ्गीकृतस्स्यादिति भावः ।

ಉಪಾಧಿಸಂಯೋಗವು ಅಣುಪರಿಮಾಣವುಳ್ಳ ಪ್ರದೇಶದಲ್ಲಿರುತ್ತದೆಂದು ಒಪ್ಪೋಣ. ಏನು ದೋಷ ? ಎಂದರೆ ಆ ಪ್ರದೇಶವು, ಅಥವಾ ಸ್ವಾಭಾವಿಕವೋ, ಔಪಾಧಿಕವೆಂದರೆ ಆತ್ಮಾಶ್ರಯಾದಿದೋಷಗಳು ಬರುತ್ತವೆ. ಸ್ವಾಭಾವಿಕವೆಂದರೆ ಸ್ವಾಭಾವಿಕವಾದ ಅಣುಪರಿಮಾಣವುಳ್ಳ ಪ್ರದೇಶವನ್ನು ಗಗನಾದಿಗಳಲ್ಲಿ ಒಪ್ಪಿದಂತಾಗುತ್ತದೆಂದು ತಿಳಿಯಬೇಕು.

**प्रकाशः** – उक्तञ्च तत्वविवेकटीकायां ''तथैवांशांशिनोरपि'' इत्येतद्व्याख्यावसरे किञ्चाकाशस्य तावदंशास्सन्तीत्यङ्गीकरणीयम् । अन्यथाऽऽकाशे विहगशरीरभावाभावौ न स्याताम् । संयोगस्त्वात्यन्ताभावसमानाश्रय इति चेन्न । विरोधात् । अन्यथा सर्वत्र भावाभावविरोधाभावप्रसङ्गात् । न चोपाधिकृतांशसद्भावादविरोधः । उपाधेरपि विहगशरीरसमानयोगक्षेमत्वात्'' इति

ಇದನ್ನೇ ತತ್ತ್ವವಿವೇಕದ ಟೀಕೆಯಲ್ಲಿ 'ತಥೈವಾಂಶಾಂಶಿನೋರಪಿ' ಎಂಬ ಶ್ರೀಮದಾಚಾರ್ಯರ ಮಾತನ್ನು ವ್ಯಾಖ್ಯಾನಿಸುವಾಗ ಹೀಗೆ ಹೇಳಿದ್ದಾರೆ - ಆಕಾಶಕ್ಕೂ ಸಹ ಅಂಶಗಳಿರುತ್ತದೆಂದೂ ಸಹ ಅಂಗೀಕರಿಸಬೇಕು. ಇಲ್ಲದಿದ್ದರೆ ಪಕ್ಷಿಯ ಶರೀರದ ಸಂಯೋಗ ಹಾಗೂ ತದಭಾವಗಳನ್ನು ಆಕಾಶದಲ್ಲಿ ಒಪ್ಪದೇ ಇರುವ ಪ್ರಸಂಗ ಬರುತ್ತದೆ. ಸಂಯೋಗವು ಸ್ವಾತ್ಯಂತಾಭಾವಸಮಾನಾಶ್ರಯವಾದ್ದರಿಂದ ಪಕ್ಷಿಯ ಶರೀರ ಹಾಗೂ ತದಭಾವಗಳನ್ನು ಕೂಡಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಸಂಯೋಗಕ್ಕೆ ಸ್ವಾತ್ಯಂತಾಭಾವಸಮಾನಾ ಶ್ರಯತ್ವವನ್ನು ಒಪ್ಪಿದರೆ ವಿರೋಧವು ಬರುತ್ತದೆ. ಇಲ್ಲದಿದ್ದರೆ ಭಾವ ಹಾಗೂ ಅಭಾವಗಳಿಗೆ ಪ್ರಸಿದ್ಧವಾದ ವಿರೋಧವೇ ಇಲ್ಲದಂತಾಗುವ ಪ್ರಸಂಗ ಬರುತ್ತದೆ. ಔಪಾಧಿಕವಾದ ಅಂಶಗಳಿರುವುದರಿಂದ ವಿರೋಧವು ಬರುವುದಿಲ್ಲವೇ? ಎಂದು ಪ್ರಶ್ನಿಸಬಾರದು. ಪಕ್ಷಿಯ ಶರೀರದಂತೆ ಉಪಾಧಿಯೂ ಸಹ ಸಮಾನಯೋಗಕ್ಷೇಮವನ್ನು ಹೊಂದಿದೆ. ಆದ್ದರಿಂದ ಔಪಾಧಿಕವಾದ ಉಪಾಧಿಪ್ರಯುಕ್ತವಾದ ಅಂಶಗಳನ್ನು ಆಕಾಶದಲ್ಲಿ ಒಪ್ಪಲಾಗದು.

**प्रकाशः** – निरवयव इति ।। ''कूटं खं विदलं व्योम'' इत्यादौ विदलत्व-प्रसिद्धेः । परैरपि तथाऽङ्गीकाराच्चेति भावः ।

'ಕೂಟಂ ಖಂ ವಿದಲಂ ವ್ಯೋಮ' ಎಂಬುದಾಗಿ ಆಕಾಶಶಬ್ದದ ಪರ್ಯಾಯ ಪದಗಳನ್ನು ಹೇಳುವಾಗ, ಯಾವುದೇ ಭಾಗಗಳಿರುವುದಿಲ್ಲವೆಂದು 'ವಿದಲ' ಶಬ್ದದಿಂದ ಹೇಳಲಾಗಿದೆ. ಇದನ್ನು ಪರರೂ ಸಹ ಅಂಗೀಕರಿಸಿದ್ದಾರೆ. ಆದ್ದರಿಂದ ಭಿನ್ನವಾದ ಪ್ರದೇಶವನ್ನು ಆಕಾಶದಲ್ಲಿ ಒಪ್ಪುವುದು ತಪ್ಪಾಗುತ್ತದೆ.

**प्रकाशः** – गगने प्रदेशोऽन्यो नह्यस्तीत्यनेनैतदपि निरस्तम् । संयोगः प्रदेशवृत्तिरित्ययुक्तम् । तथात्वे घटादिसंयोगोऽपि घटाद्यंशसंयोगपूर्वकः सोऽपि तदंशसंयोगपूर्वक इत्यनवस्थापत्तेः ।

ಗಗನದಲ್ಲಿ ಭಿನ್ನವಾದ ಪ್ರದೇಶವೇ ಇರುವುದಿಲ್ಲವೆಂಬುದರಿಂದ ಮತ್ತೊಂದು ಶಂಕೆಯನ್ನು ನಿರಾಕರಿಸಿದಂತಾಯಿತು. ಶಂಕೆ ಹೀಗಿದೆ - ಸಂಯೋಗವು ಪ್ರದೇಶವೃತ್ತಿಯೆಂದು ಹೇಳಿದ್ದು ಅಯುಕ್ತವಾಗಿದೆ. ಹಾಗಾದಲ್ಲಿ ಘಟಾದಿಸಂಯೋಗವೂ ಸಹ ಘಟಾದ್ಯಂಶಗಳ ಸಂಯೋಗ ಪೂರ್ವಕವಾದ್ದರಿಂದ ಅದೂ ಸಹ ತದಂಶಸಂಯೋಗಪೂರ್ವಕವಾಗಿದೆ ಅಂದರೆ ಘಟಾದಿಗಳ ಸಂಯೋಗವಾಯಿತು ಎಂದರೆ ಘಟಾದಿಗಳ ಅಂಶದಲ್ಲಿ ಸಂಯೋಗವು ಉಂಟಾಯಿತು ಎಂದರ್ಥ. ಆ ಅಂಶವೂ ಸಹ ಮತ್ತೊಂದೆಡೆ ಸಂಯೋಗವಾದಾಗ ಅದರ ಅಂಶದ ಜೊತೆಗೆ ಸಂಯೋಗವನ್ನು ಹೊಂದುತ್ತದೆ. ಹೀಗೆ ಸಂಪೂರ್ಣವಾಗಿ ಎಲ್ಲಿಯೂ ಸಂಯೋಗವಾಗದ ಕಾರಣ ಅನವಸ್ಥಾದೋಷ ಬರುತ್ತದೆ. .

**प्रकाशः** – न चेयं निरंशे परम्परा विश्राम्यतीति वाच्यम् । उक्तरीत्या कस्याप्यनंशत्वाभावादिति प्रदेशप्रदेशिनोरभेदेन प्रदेशसंयोगस्यैव प्रदेशि-संयोगत्वेनानवस्थाभावादिति ।

ಯಾವ ಅಂಶವು ನಿರಂಶವಾಗಿದೆಯೋ, ಅಲ್ಲಿ ಸಂಯೋಗವನ್ನು ಹೊಂದಿದಾಗ ಅನವಸ್ಥಾದೋಷವು ಬರುವುದಿಲ್ಲವೆಂದು ಹೇಳಬಾರದು. ಹಿಂದ ಹೇಳಿದ ಸಿದ್ಧಾಂತದ ಪ್ರಕಾರ ಅಂಶವಿಲ್ಲದ ವಸ್ತುವೇ ಇರುವುದಿಲ್ಲ. ಪ್ರದೇಶ ಹಾಗೂ ಪ್ರದೇಶಿಗಳಿಗೆ ಅಭೇದವಿರುವುದರಿಂದ ಪ್ರದೇಶಸಂಯೋಗವೇ ಪ್ರದೇಶಿ ಸಂಯೋಗವೆನಿಸುತ್ತದೆ. ಆದ್ದರಿಂದ ಅನವಸ್ಥಾದೋಷಕ್ಕೆ ಅವಕಾಶವಿರುವುದಿಲ್ಲ

**प्रकाशः** – एतेनैवान्यसंयोगस्य कथमन्यसंयोगत्वम् । अतिप्रसङ्गादित्यपि प्रत्युक्तम् । तयोरभेदादिति ।

ಹೀಗೆ ಹೇಳಿದ್ದರಿಂದಲೇ ಪ್ರದೇಶದಲ್ಲಿ ಆಗುವ ಸಂಯೋಗವನ್ನು ಪ್ರದೇಶಿಯಲ್ಲಿ ಹೇಗೆ ಹೇಳುತ್ತೀರಿ? ಹೀಗೆ ಒಪ್ಪಿದಲ್ಲಿ ಘಟದಲ್ಲಿ ಆಗುವಂತಹ ಸಂಯೋಗವನ್ನು ಪಟದಲ್ಲಿಯೂ ಸಹ ಒಪ್ಪಬೇಕಾದೀತೆಂಬ ಅತಿಪ್ರಸಂಗಬರುತ್ತದಲ್ಲವೇ ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಪ್ರದೇಶ ಹಾಗೂ ಪ್ರದೇಶಿಗಳಿಗೆ ಅಭೇದವನ್ನು ಒಪ್ಪಿರುವುದರಿಂದ ದೋಷಕ್ಕೆ ಅವಕಾಶವಿಲ್ಲ.

**प्रकाशः** – प्रपञ्चितं चैतद्वैशेषिकानुव्याख्यानसुधयोः ।

अंशांशिनोरभेदेन त्वंशं संयोग एव हि ।
अंशिनो नानवस्थातो यद्यप्यंशेष्वविश्रमः ।।

एकस्मिन् जात एवान्यः संयोगो जायते यदि ।
अनवस्था तदैव स्यात् संयोगैक्ये भवेत् क्व सा ।। इत्यादिनेति भावः ।

ಈ ಎಲ್ಲ ವಿಷಯವನ್ನು ವೈಶೇಷಿಕಾಧಿಕರಣದ ಅನುವ್ಯಾಖ್ಯಾನ ಹಾಗೂ ನ್ಯಾಯಸುಧೆಗಳಲ್ಲಿ ವಿವರಿಸಿದ್ದಾರೆ -

ಅಂಶಾಂಶಿನೋರಭೇದೇನ ಅಂಶಸಂಯೋಗ ಏವ ಹಿ ।
ಅಂಶಿನೋ ನಾನವಸ್ಥಾತೋ ಯದ್ಯಪ್ಯಂಶೇಷ್ವವಿಶ್ರಮಃ ॥

ಅಂಶ ಹಾಗೂ ಅಂಶಿಗಳಿಗೆ ಅಭೇದವನ್ನು ಒಪ್ಪಿರುವುದರಿಂದ ಅಂಶಸಂಯೋಗವೇ ಅಂಶಿಯ ಸಂಯೋಗವೆನಿಸುತ್ತದೆ. ಆದ್ದರಿಂದ ಅಂಶದಲ್ಲಿ ವಿಶ್ರಾಂತಿಯಿಲ್ಲವೆಂಬ ಅನವಸ್ಥಾದೋಷಕ್ಕೆ ಅವಕಾಶವಿಲ್ಲ.

ಏಕಸ್ಮಿನ್ ಜಾತ ಏವಾನ್ಯಃ ಸಂಯೋಗೋ ಜಾಯತೇ ಯದಿ ।
ಅನವಸ್ಥಾ ತದೈವ ಸ್ಯಾತ್ ಸಂಯೋಗೈಕ್ಯೇ ಭವೇತ್ ಕ್ವಸಾ ॥

ಒಂದರಲ್ಲಿ ಸಂಯೋಗವನ್ನು ಒಪ್ಪಿ ಮತ್ತೊಂದರಲ್ಲಿ ಸಂಯೋಗವು ಹುಟ್ಟುವುದಾದರೆ ಅನವಸ್ಥಾದೋಷವು ಬರುತ್ತದೆ. ಆದರೆ ಸಂಯೋಗಗಳಿಗೆ ಐಕ್ಯವನ್ನು ಒಪ್ಪಿದಾಗ ಅನವಸ್ಥಾದೋಷಕ್ಕೆ ಅವಕಾಶವೆಲ್ಲಿ.

गुरुराजीयम् – वीचीतरङ्गन्यायेनेति ।। प्रथमोत्पन्ना वीची वीच्यन्तरमारभते। तच्च तरङ्गान्तरम् तथा शब्दोऽपि सर्वतो दिक्षु सजातीयशब्दान्तरं तदपि शब्दान्तरमिति वीचीतरङ्गन्यायेनेत्यर्थः । उक्तरीत्येति ।। आकाशस्योपाधिसंयोगः प्रतिबन्धभूतोपाधितुल्यपरिमाणाकाशादिप्रदेशवृत्तिर्वाच्य इत्युक्तरीत्येत्यर्थः ।।




ಪರಮಾತ್ಮನಲ್ಲಿರುವ ಅಣುತ್ವ-ಮಹತ್ತ್ವಗಳಿಗೆ ವಿರೋಧವಿರುವುದಿಲ್ಲವೆಂದು ಪ್ರಮಾಣಗಳ ಆಧಾರದಿಂದ ಸಮರ್ಥಿಸಿದ್ದಾಯಿತು. ಲೌಕಿಕದೃಷ್ಟಾಂತದ ಬಲದಿಂದಲೂ ವಿರೋಧವಿಲ್ಲವೆಂದು ತಿಳಿಯಬಹುದು. ಆಕಾಶ ಮೊದಲಾದ್ದರಲ್ಲಿ ಮಹತ್‌ಪರಿಣಾಮವಿರುವುದು ಸರ್ವಾನುಭವಸಿದ್ಧವಾಗಿದೆ. ಇಂತಹ ಆಕಾಶಾದಿಗಳಲ್ಲಿಯೇ ಅಣುಪರಿಮಾಣವೂ ಸಹ ಇರುತ್ತದೆಂಬುದನ್ನು ಗಮನಿಸಬೇಕು. ಏಕೆಂದರೆ ಪರಮಾಣುವಿನ ಸಂಯೋಗ ಆಕಾಶದಲ್ಲಿ ಉಂಟಾಗುತ್ತದೆ. ಯಾವ ಪದಾರ್ಥದಿಂದ ಯಾವ ಪದಾರ್ಥಕ್ಕೆ ಸಂಬಂಧವಾಗುತ್ತದೋ, ಅದರಲ್ಲಿ ಸಮಾನ ಪರಿಮಾಣವನ್ನು ಒಪ್ಪಲೇ ಬೇಕು. ಒಂದು ಸಣ್ಣ ಸೂಜಿಯ ತುದಿಯು ಪರ್ವತದ ಪ್ರದೇಶಕ್ಕೆ ಸಂಬದ್ಧವಾಯಿತೆಂದರೆ ಆ ಸೂಜಿಯ ಸಣ್ಣ ಭಾಗದಷ್ಟೇ ಪರಿಮಾಣವನ್ನು ಆ ಪರ್ವತದ ಸಂಬದ್ಧಭಾಗಕ್ಕೆ ಒಪ್ಪುವುದು ಅನುಭವಸಿದ್ಧವಾಗಿದೆ. ಅದರಂತೆ ಪರಮಾಣುವಿನ ಸಂಯೋಗವು ಆಕಾಶದಲ್ಲಿ ಉಂಟಾದರೆ ಪರಮಾಣುವಿನ ಪರಿಮಾಣವೇ ಆಕಾಶದಪ್ರದೇಶಲ್ಲಿದೆಯೆಂದು ಹೇಳಿದಂತಾಗುತ್ತದೆ. ಆಕಾಶಪ್ರದೇಶ ಹಾಗೂ ಆಕಾಶ ಎರಡಕ್ಕೂ ಅಭೇದವಿರುವುದರಿಂದ ಆಕಾಶವೂ ಸಹ ಅಣುಪರಿಮಾಣವುಳ್ಳದ್ದೆಂದು ಸಿದ್ಧವಾಗುತ್ತದೆ.



## ಪುನರುಕ್ತಿ ಪರಿಹಾರ ಮತ್ತು ಸೂತ್ರಕ್ರಮ ಸ್ವಾರಸ್ಯ ವರ್ಣನೆ

### तात्पर्यचन्द्रिका

**अत्तृत्वानशनयोरविरोधस्तु ''अनशनोक्तिस्त्वनुपजीवनार्थत्वेन'' इति न्यायविवरण एवोक्तः ।**

ಅಕ್ಷರನನ್ನು ಪರಮಾತ್ಮನೆನ್ನುವುದಾದರೆ ಅನಶನವನ್ನು ಹೇಳಿದಂತಾಗುತ್ತದೆ. ಹಾಗಾದಲ್ಲಿ ಅತ್ತೃತ್ವಾಧಿಕರಣದಲ್ಲಿ ಹೇಳಲ್ಪಟ್ಟ ಅತ್ತೃತ್ವಕ್ಕೆ ವಿರೋಧ ಬರುತ್ತದಲ್ಲವೇ? ಎಂಬುದಾಗಿ ಹಿಂದೆ ಪೂರ್ವಪಕ್ಷಿಯು ಆಕ್ಷೇಪಿಸಿದ್ದನು. ಆದರೆ, 'ಅನಶನೋಕ್ತಿಸ್ತ್ವನುಪಜೀವನಾರ್ಥತ್ವೇನ' ಮತ್ತೊಂದನ್ನು ಉಪಜೀವಿಸುವುದೇ ಇರುವ ಕಾರಣದಿಂದ ಶ್ರುತಿಯು ಅನಶನತ್ವವನ್ನು ಹೇಳುತ್ತಿದೆ ಎಂಬುದಾಗಿ

ನ್ಯಾಯವಿವರಣದಲ್ಲಿ ಈ ವಿರೋಧವನ್ನು ಪರಿಹರಿಸಿದ್ದಾರೆ. ಆದ್ದರಿಂದ ಅತ್ತೃತ್ವಾಧಿಕರಣದಿಂದ ವಿರೋಧವು ಬರುವುದಿಲ್ಲ.

**साशनानशनत्वेन नरदेवौ यथोदितौ ।**
**अत्तिं विनाऽप्यदौर्बल्यात्तथाऽनत्तिर्हरेर्भुजिः ।।**

**इति च स्मृतिः ।**

ಸಾಶನಾನಶನತ್ವೇನ ನರದೇವೌ ಯಥೋದಿತೌ ।
ಅತ್ತಿಂ ವಿನಾಪ್ಯದೌರ್ಬಲ್ಯಾತ್ತಥಾಽನತ್ತಿರ್ಹರೇರ್ಭುಜಿಃ ॥

'ಸಾಶನಾನಶನೇ ಅಭಿ' ಇತ್ಯಾದಿಯಾದ ಶ್ರುತಿಯು ಜೀವನಲ್ಲಿ ತಿನ್ನುವಿಕೆಯನ್ನು ಪರಮಾತ್ಮನಲ್ಲಿ ತಿನ್ನದಿರುವಿಕೆಯನ್ನು ಹೇಳುತ್ತಿದೆ. ಪರಮಾತ್ಮನು ತಿನ್ನದಿದ್ದರೂ ಸಹ ದುರ್ಬಲನಾಗುವುದಿಲ್ಲ. ಆ ಕಾರಣದಿಂದಲೇ ಏನನ್ನೂ ತಿನ್ನುವುದಿಲ್ಲವೆಂದು ಶ್ರುತಿಯು ಹೇಳುತ್ತಿದೆ ಎಂಬ ಸ್ಮೃತಿಯೂ ಸಹ ಅತ್ತೃತ್ವಾಧಿಕರಣದಿಂದ ವಿರೋಧ ಬರುವುದಿಲ್ಲವೆಂಬ ವಿಷಯದಲ್ಲಿ ಆಧಾರವಾಗಿದೆ.

**''सर्वत्र प्रसिद्ध'' इत्यत्र सर्वगतस्याप्येकदेशवृत्तिः शते पञ्चाशन्न्यायेनाविरुद्धा । एकदेशमात्रगतत्वं त्वसिद्धमित्युक्तम् । भूमाधिकरणे तु सर्वगतेऽप्यणुत्वमत्र वक्ष्यमाणं सिद्धं कृत्वा तद्बलादुत्क्रान्तिरुक्ता । इह तु पुनर्महतोऽप्यणुत्वमुच्यते ।**

ಈ ಅಧಿಕರಣದಲ್ಲಿ ಮಹತ್ತ್ವವುಳ್ಳ ಪರಮಾತ್ಮನಲ್ಲಿ ಅಣುತ್ವವೂ ಸಹ ಇರುತ್ತದೆಂದು ಹೇಳಿದ್ದಾರೆ. ಸರ್ವಗತತ್ವಾಧಿಕರಣದಿಂದ ಪುನರುಕ್ತವಾಗುತ್ತದಲ್ಲವೇ? ಅಲ್ಲಿಯೂ ಸಹ 'ಅರ್ಭಕೌಕಸ್ತ್ವಾತ್' ಇತ್ಯಾದಿ ಸೂತ್ರದಿಂದ ಪರಮಾತ್ಮನಲ್ಲಿ ಅಲ್ಪಸ್ಥಾನಸ್ಥಿತತ್ವವನ್ನು ಹೇಳುವ ಮೂಲಕ ಅಣುತ್ವವನ್ನು ಸಮರ್ಥಿಸಿದ್ದಾರಲ್ಲವೇ? ಎಂದು ಪ್ರಶ್ನಿಸಬಾರದು. 'ಸರ್ವತ್ರಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಸರ್ವಗತನಾದ ಪರಮಾತ್ಮನು ಏಕದೇಶದಲ್ಲಿಯೂ ಸಹ ಇರುತ್ತಾನೆಂದು ಶತೇ ಪಂಚಾಶನ್ನ್ಯಾಯದಿಂದ ಸಮರ್ಥಿಸಿದ್ದಾರೆ. ಎಲ್ಲೆಡೆ ಇರುವ ಪರಮಾತ್ಮನು ಏಕದೇಶದಲ್ಲಿಯೂ ಇರುತ್ತಾನೆ, ಏಕದೇಶದಲ್ಲಷ್ಟೇ ಇರುತ್ತಾನೆಂದು ಹೇಳುವುದು ತಪ್ಪಾಗುತ್ತದೆ ಎಂಬುದಾಗಿ ಅಲ್ಲಿ ಸಮರ್ಥಿಸಿದ್ದಾರೆ. ಹೀಗೆ ಪ್ರಮೇಯ ಭೇದದಲ್ಲಿ ವ್ಯತ್ಯಾಸವಿದೆ. ಭೂಮಾಧಿಕರಣದಿಂದಲೂ ಸಹ ಪುನರುಕ್ತಿ ಬರುವುದಿಲ್ಲ. ಏಕೆಂದರೆ ಭೂಮಾಧಿಕರಣದಲ್ಲಿ; ಈ ಅಧಿಕರಣದಲ್ಲಿ ಸಮರ್ಥಿಸುವ ಅಣುತ್ವವನ್ನು ಸಿದ್ಧವತ್ ಕೃತ್ವಾ, ಈ ಅಣುತ್ವದ ಬಲದಿಂದ ಸರ್ವಗತನಾದ ಪರಮಾತ್ಮನಲ್ಲಿಯೂ ಉತ್ಕ್ರಮಣವು ಯುಕ್ತವಾಗುತ್ತದೆಂದು ಸಮರ್ಥಿಸಿದ್ದಾರೆ. ಇದರ ಜೊತೆಗೆ ಈ ಅಧಿಕರಣದಲ್ಲಿ ಮಹತ್ತ್ವಧರ್ಮವಿದ್ದಂತೆ ಅಣುತ್ವವೂ ಪರಮಾತ್ಮನಲ್ಲಿರುತ್ತದೆಂದು ಸಮರ್ಥಿಸಿದ್ದಾರೆ. ಹೀಗೆ ಭೂಮಾಧಿಕರಣದಲ್ಲಿ ಸ್ವತಂತ್ರವಾಗಿ ಅಣುತ್ವವನ್ನು ಸಮರ್ಥಿಸದ ಕಾರಣ ಪುನರುಕ್ತಿ ಬರುವುದಿಲ್ಲ.

ಪರಿಪೂರ್ಣಚಂದ್ರಿಕಾ

**''अल्पश्रुतेः'' इत्यत्र तु गगनवन्नावयविरूपेणैव महत्त्वम् । किन्त्ववयवरूपेणापीति वक्ष्यत इति भेदः ।**

ದಹರಾಧಿಕರಣದಿಂದಲೂ ಸಹ ಪುನರುಕ್ತಿ ಬರುವುದಿಲ್ಲ. ದಹರಾಧಿಕರಣದಲ್ಲಿರುವ 'ಅಲ್ಪಶ್ರುತೇಃ' ಎಂಬ ಸೂತ್ರದಲ್ಲಿ ಗಗನಾದಿಗಳಂತೆ ಅವಯವಿರೂಪದಿಂದಷ್ಟೇ ಪರಮಾತ್ಮನಲ್ಲಿ ಮಹತ್ತ್ವಬರುವುದಲ್ಲ. ಅವಯವರೂಪದಿಂದಲೂ ಸಹ ಮಹತ್ತ್ವ ಬರುತ್ತದೆಂದೂ ಸಹ ಸಮರ್ಥಿಸುತ್ತಾರೆ; ಹೊರತು ಹಿಂದಿನ ಅಧಿಕರಣದಂತೆ ಮಹತ್ತ್ವವುಳ್ಳವನಲ್ಲಿ ಅಣುತ್ವವನ್ನು ಸಮರ್ಥಿಸದ ಕಾರಣ ಪ್ರಮೇಯ ಭೇದವಿರುಪ ಪ್ರಯುಕ್ತ ಪುನರುಕ್ತಿ ಇಲ್ಲ.

**अत्र चाद्ये सूत्रे विषयवाक्यस्थसाधकोक्तिः । द्वितीये तदुत्तरवाक्यस्थस्य ।**

ಈ ಅಧಿಕರಣದ ಮೂರು ಸೂತ್ರಗಳ ಆನುಪೂರ್ವಿಯು ಅತ್ಯಂತ ಅರ್ಥಪೂರ್ಣವಾಗಿದೆ. ಪ್ರಥಮಸೂತ್ರದಲ್ಲಿ ವಿಷಯವಾಕ್ಯದಲ್ಲೇ ಇರುವ 'ಅಂಬರಾಂತಧೃತಿ' ಎಂಬ ಸಾಧಕಪ್ರಮಾಣವನ್ನು ನಿರೂಪಿಸಿದ್ದಾರೆ. ಎರಡನೆಯ ಸೂತ್ರದಲ್ಲಿ ಮುಂದಿನ ವಾಕ್ಯದಲ್ಲಿ ಪ್ರಶಾಸನವೆಂಬ ಲಿಂಗವಾಕ್ಯವನ್ನು ಹೇಳಿರುತ್ತಾರೆ.

**तृतीये यद्यपि विषयवाक्यस्थास्थूलत्वादिरूपसाधकोक्तिः । तथापि तेनैव ब्रह्माक्षरं चेत्स्थौल्यादिरहितत्वान्निःस्वभावं स्यादिति शङ्कितस्य बाधकस्य पदार्थान्तरस्वभावरूपप्राकृतस्थौल्यादिरहितम् । नतु सर्वथेत्येवमुद्धारात्**

ಮೂರನೆಯ ಸೂತ್ರದಲ್ಲಿ ವಿಷಯವಾಕ್ಯದಲ್ಲೇ ಇರುವ ಅಸ್ಥೂಲತ್ವಾದಿ ಸಾಧಕಪ್ರಮಾಣವನ್ನೇ ಹೇಳಿದ್ದಾರೆ. ಹಾಗಾದರೆ ಮೊದಲೇ ಇದನ್ನು ಹೇಳಬೇಕಿತ್ತು. ಅಥವಾ ಎರಡನೆಯ ಸೂತ್ರಕ್ಕಿಂತ ಮೊದಲು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಯು ಹುಟ್ಟುತ್ತದೆ. ಆದರೆ ಕೇವಲ ಅಸ್ಥೂಲತ್ವಾದಿ ಸಾಧಕಗಳನ್ನಷ್ಟೇ ಹೇಳುವುದಲ್ಲದೇ ಸ್ಥೌಲ್ಯ-ಅಣುತ್ವ ಮೊದಲಾದ ಎರಡೂ ವಿರುದ್ಧಧರ್ಮಗಳಿಲ್ಲದ ಕಾರಣ ನಿಃಸ್ವಭಾವನಾಗಬೇಕಾದೀತು ಎಂಬ ಪೂರ್ವಪಕ್ಷಿಯು ಹೇಳುವ ಬಾಧಕವನ್ನೂ ಸಹ ಇದೇ ಸೂತ್ರವು ಪರಿಹರಿಸುತ್ತಿದೆ. ಬೇರೆ ಪದಾರ್ಥಗಳ ಸ್ವಭಾವವೆನಿಸಿದ ಪ್ರಾಕೃತಸ್ಥೌಲ್ಯಾದಿಗಳು ಪರಮಾತ್ಮನಲ್ಲಿರುವುದಿಲ್ಲವೆಂದಷ್ಟೇ ಅಸ್ಥೂಲಾದಿ ಪದಗಳ ಅಭಿಪ್ರಾಯ. ಹೊರತು, ಸರ್ವಥಾ ಸ್ಥೌಲ್ಯಾದಿಗಳಿರುವುದಿಲ್ಲವೆಂದಲ್ಲ. ಎಂಬುದಾಗಿ ಪೂರ್ವಪಕ್ಷಿಯು ಹೇಳಲ್ಪಟ್ಟ ಬಾಧಕವನ್ನು ಪರಿಹರಿಸಲಾಗಿದೆ.

**तथाऽणुत्वमहत्त्वादिकं विरुद्धमिति शङ्कितस्य बाधक-स्याणुत्वमहत्त्वयोर्विरोधे प्राकृतत्वं तन्त्रम् । ब्रह्म तु प्राकृतपदार्थव्यावृत्तमित्येवमुद्धारात्तस्यान्त्यता ।**

ಅಕ್ಷರಾಧಿಕರಣ (೧-೩-೩)

ಅಷ್ಟೇ ಅಲ್ಲದೆ ಅಣುತ್ವ ಹಾಗೂ ಮಹತ್ತ್ವಗಳಿಗೆ ಪರಸ್ಪರ ವಿರೋಧಬರುತ್ತದಲ್ಲವೇ? ಎಂಬ ಪೂರ್ವಪಕ್ಷಿಯ ಬಾಧಕಕ್ಕೆ ಪ್ರಾಕೃತತ್ವವನ್ನು ಉಪಾಧಿಯೆಂದು ಹೇಳಿ ಉತ್ತರವನ್ನು ಸಮರ್ಥಿಸಲಾಗಿದೆ. ಎಂದರೆ ಎಲ್ಲಿ ಪ್ರಾಕೃತತ್ವವಿದ್ದು ಅಣುತ್ವವಿರುತ್ತದೋ, ಅಲ್ಲಿ ಮಹತ್ತ್ವವು ಇರುವುದಿಲ್ಲವೆಂದು ವಿರೋಧವನ್ನು ಪರಿಹರಿಸಬೇಕು. ಹೀಗೆ ಬ್ರಹ್ಮನಲ್ಲಿ ಪ್ರಾಕೃತತ್ವವೇ ಇಲ್ಲದ ಕಾರಣ ಅಣುತ್ವ-ಮಹತ್ತ್ವಗಳಿಗೆ ವಿರೋಧವು ಬರುವುದಿಲ್ಲವೆಂದು ಮೂರನೆಯ ಸೂತ್ರವು ಸಮರ್ಥಿಸುತ್ತಿದೆ. ಆದ್ದರಿಂದ ಸ್ವಪಕ್ಷ ಸಾಧಕಪ್ರಮಾಣವನ್ನು ಹೇಳುವುದರ ಜೊತೆಗೆ ಪೂರ್ವಪಕ್ಷಕಾರನಿಂದ ಹೇಳಲ್ಪಟ್ಟ ಬಾಧಕಪ್ರಮಾಣಗಳನ್ನೂ ಸಹ ಪರಿಹರಿಸುತ್ತಿರುವುದರಿಂದ ಈ ಸೂತ್ರವು ಮೂರನೆಯ ಸ್ಥಾನವನ್ನು ಪಡೆದಿರುತ್ತದೆ.

**प्रकाशः –**

एवं सूत्रोपात्तसाधकान्युपपाद्य यत्पूर्वपक्षिणाऽनशनं बाधकमिति शङ्कितं तत् ''अनेनैव न तदश्नाति किञ्चनेत्येतदपि जीवस्वभावभूतोपजीवनार्थाशनव्यावृत्त्यर्थम्'' इति टीकोक्तेर्मूलं वदन्निराह – **अत्तृत्वेति** ।।

ವಿವರಣೆ - ಇಲ್ಲಿಯ ತನಕ ಸೂತ್ರದಲ್ಲಿ ಹೇಳಲ್ಪಟ್ಟ ಸಾಧಕಗಳನ್ನು ಉಪಪಾದಿಸಿದ್ದಾಯಿತು. ಈಗ ಹಿಂದೆ ಪೂರ್ವಪಕ್ಷಿಯು 'ಅನಶನ' ಎಂಬ ಬಾಧಕವನ್ನು ಆಶಂಕಿಸಿದ್ದನು. ಅದನ್ನು ನಿರಾಕರಿಸಲು ಹೊರಟಿದ್ದಾರೆ. ಟೀಕೆಯಲ್ಲಿ 'ಅನೇನೈವ ನ ತದಶ್ನಾತಿ ಕಿಂಚನೇತ್ಯೇತದಪಿ ಜೀವಸ್ವಭಾವಭೂತೋಪಜೀವನಾರ್ಥಾಶನ-ವ್ಯಾವೃತ್ತ್ಯರ್ಥಮ್' ಎಂಬ ಮಾತಿನಿಂದ ಈ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ. ಟೀಕೆಯ ಈ ಮಾತನ್ನು ವಿವರಿಸುತ್ತಾ ಇದಕ್ಕೆ ನ್ಯಾಯವಿವರಣವೇ ಮೂಲವಾಗಿದೆಯೆಂಬುದನ್ನು ತೋರಿಸುತ್ತಿದ್ದಾರೆ 'ಅತ್ತೃತ್ವ' ಇತ್ಯಾದಿ ವಾಕ್ಯದಿಂದ.

**प्रकाशः** – नन्वर्भकौकस्त्वादिनाऽणुत्वमुक्तम् । ''महतोऽल्पत्वमपि हि व्योमवत् प्राह वेदवित्'' इत्यनुव्याख्यानोक्तेः । अतः पौनरुक्त्यमित्यत आह – **सर्वत्रेति** ।। विवृतं चैतत्तत्रैवाऽस्माभिः । **अल्पश्रुतेरिति** ।। दहराधिकरणे ।

ಸರ್ವಗತತ್ವಾಧಿಕರಣದಲ್ಲಿರುವ ಅರ್ಭಕೌಕಸ್ತ್ವಾದಿ ಸೂತ್ರದಲ್ಲಿ ಪರಮಾತ್ಮನಿಗೆ ಅಣುತ್ವವನ್ನು ಸಮರ್ಥಿಸಿದ್ದಾಗಿದೆ. 'ಮಹತೋಽಲ್ಪತ್ವಮಪಿ ಹಿ ವ್ಯೋಮವತ್ ಪ್ರಾಹ ವೇದವಿತ್' ಎಂಬ ಅನುವ್ಯಾಖ್ಯಾನದಲ್ಲಿ ಈ ವಿಷಯವನ್ನು ಪ್ರತಿಪಾದನೆ ಮಾಡಿರುತ್ತಾರೆ. ಪುನಃ ಅದನ್ನೇ ಈ ಅಧಿಕರಣದಲ್ಲಿಯೂ ಸಮರ್ಥಿಸುವುದಾದರೆ ಸರ್ವಗತತ್ವಾಧಿಕರಣದಿಂದ ಪುನರುಕ್ತಿ ದೋಷ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಸರ್ವತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ನೂರುರೂಪಾಯಿ ಇದ್ದವನ ಬಳಿ ಐವತ್ತು ರೂಪಾಯಿ ಇದ್ದೇಇರುತ್ತದೆಂಬ ನ್ಯಾಯದಿಂದ ಸರ್ವಗತನಾದ ಭಗವಂತನು ಏಕದೇಶದಲ್ಲಿಯೂ ಇರುತ್ತಾನೆಂದು ಅಲ್ಲಿ ಸಮರ್ಥಿಸಲಾಗಿದೆ. ಇದರ ಬಗ್ಗೆ ಹೆಚ್ಚಿನ ವಿವರಣೆಯನ್ನು ಅಲ್ಲಿಯೇ ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

'ಅಲಷ್ಟ್ರುತೇಃ' ಎಂಬ ಸೂತ್ರವು ದಹರಾಧಿಕರಣದಲ್ಲಿರುತ್ತದೆಂದು ತಿಳಿಯಬೇಕು.

**प्रकाशः** – **विषयवाक्यस्थेति** ।। ननु भाष्यटीकारीत्या ''अदृष्टं द्रष्टृ'' इत्यादिचरमवाक्यस्य विषयत्वे तत्र ''एतस्मिन्खल्वक्षरे गार्ग्याकाश ओतश्च'' इति श्रवणेऽप्यम्बरधृतेरेव श्रवणेनाम्बरान्तसर्वधृतिर्न श्रुता । चन्द्रिकोक्तरीत्या ''तद्वा एतदक्षरं गार्गि ब्राह्मणा अभिवदन्त्यस्थूलम्'' इत्यादेर्विषयत्वे तत्राम्बरस्यैव सर्वाधारत्वश्रवणेन सर्वाधाराम्बराधारत्वस्य तत्राश्रवणात्कथं विषयवाक्यस्थ-साधकोक्तिरिति । मिलित्वा सर्वस्य विषयत्वाद्विषयवाक्यस्थेत्युक्तिरित्युक्तावपि द्वितीये तदुत्तरवाक्यस्थेत्युत्तरग्रन्थासङ्गतिः । तस्य मध्यवाक्यस्थसाधकत्वात् ।

ಆಕ್ಷೇಪ - ಗ್ರಂಥಕಾರರು ಅಸ್ಥೂಲತ್ವಾದಿಗಳು ವಿಷಯವಾಕ್ಯದಲ್ಲಿ ಹೇಳಲ್ಪಟ್ಟ ಸಾಧಕಗಳೆಂದು ತಿಳಿಸಿರುತ್ತಾರೆ. ಇದು ಹೇಗೆ ಸರಿ ? ಏಕೆಂದರೆ ಭಾಷ್ಯ ಹಾಗೂ ಟೀಕೆಯ ಪ್ರಕಾರ 'ಅದೃಷ್ಟಂ ದ್ರಷ್ಟೃ' ಎಂಬ ಕೊನೆಯ ವಾಕ್ಯವಷ್ಟೇ ವಿಷಯವಾಗಿದೆ. 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ' ಎಂದು ಶ್ರುತವಾದ್ದರಿಂದ ಆಕಾಶಧಾರಕತ್ವವಷ್ಟೇ ಸಿದ್ಧವಾಗುತ್ತದೆ. ಆಕಾಶದತನಕ ಇರುವ ಸಕಲ ಪದಾರ್ಥಗಳ ಧಾರಕತ್ವವು ಇದರಿಂದ ಸಿದ್ಧವಾಗುವುದಿಲ್ಲ. ಇನ್ನು ಚಂದ್ರಿಕೆಯ ಪ್ರಕಾರ 'ತದ್ವಾ ಏತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮ್' ಎಂಬುದನ್ನು ವಿಷಯವಾಕ್ಯವೆಂದು ಪರಿಗಣಿಸಿದರೆ ಆಕಾಶವೇ ಸರ್ವಾಧಾರಕವೆಂದು ಹೇಳಿದಂತಾಗುತ್ತದೆ. ಸಕಲಕ್ಕೂ ಆಧಾರವಾದ ಆಕಾಶದ ಧಾರಕತ್ವವು ಈ ವಾಕ್ಯದಿಂದ ತಿಳಿಯುವುದಿಲ್ಲ. ಹೀಗಿರುವಾಗ ವಿಷಯವಾಕ್ಯದಲ್ಲಿ ಹೇಳಲ್ಪಟ್ಟ ಸಾಧಕಗಳೆಂದು ಹೇಗೆ ಹೇಳಿದರು?

ಭಾಷ್ಯ ಹಾಗೂ ಟೀಕೆ ಮತ್ತು ತಾತ್ಪರ್ಯಚಂದ್ರಿಕಾ ಇವುಗಳಲ್ಲಿ ಹೇಳಿದ ಸಮಸ್ತ ವಾಕ್ಯವನ್ನು ಒಟ್ಟಿಗೆ ಸೇರಿಸಿ ವಿಷಯವಾಕ್ಯವೆಂದು ಪರಿಗಣಿಸಿದರೆ 'ಎರಡನೆಯ 'ಸಾ ಚ ಪ್ರಶಾಸನಾತ್' ಎಂಬ ಸೂತ್ರದಲ್ಲಿ ವಿಷಯವಾಕ್ಯದ ಮುಂದಿನ ವಾಕ್ಯದಲ್ಲಿ ಹೇಳಲ್ಪಟ್ಟ' ಎಂಬ ಮಾತು ಅಯುಕ್ತವಾಗುತ್ತದೆ. ಏಕೆಂದರೆ ಎಲ್ಲವನ್ನೂ ಒಟ್ಟಿಗೆ ವಿಷಯವಾಕ್ಯವೆಂದು ಪರಿಗಣಿಸಿದಾಗ 'ಸಾ ಚ ಪ್ರಶಾಸನಾತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನವು ವಿಷಯವಾಕ್ಯದ ಮಧ್ಯದಲ್ಲಿಯೇ ಇರುತ್ತದೆ.

**प्रकाशः** – मैवम् । भाष्याद्युक्तेस्सङ्गत्याद्यर्थतयोपपत्त्या चन्द्रिकोक्तस्यैव विषयत्वात् । तत्राम्बरे सर्वाधारत्वमात्रश्रवणेऽपि सर्वाधाराम्बरस्याक्षराधारकत्व-विवक्षयाऽक्षरस्यास्थूलमित्यादिना महिमोक्तेरम्बरान्ताधारत्वं तत्राभिमतमिति विषयवाक्यस्थेत्युक्तम् ।

ಸಮಾಧಾನ - ಭಾಷ್ಯ ಹಾಗೂ ಟೀಕೆಗಳಲ್ಲಿ ಉಲ್ಲೇಖಿಸಲ್ಪಟ್ಟ ವಾಕ್ಯವು ಕೇವಲ ಸಂಗತಿಯನ್ನು ತೋರಿಸುವುದಕ್ಕಾಗಿ ಹೊರತು, ವಿಷಯವಾಕ್ಯವೆಂಬ ಉದ್ದೇಶದಿಂದಲ್ಲ. ಆದ್ದರಿಂದ ಚಂದ್ರಿಕೆಯಲ್ಲಿ ಉಲ್ಲೇಖಿಸಲ್ಪಟ್ಟ ವಾಕ್ಯವೇ ಈ ಅಧಿಕರಣದ ವಿಷಯವಾಗಿದೆ. ಹಾಗಾದರೆ ಚಂದ್ರಿಕೆಯಲ್ಲಿ ಉದಾಹರಿಸಿದ

ವಾಕ್ಯವು ಕೇವಲ ಆಕಾಶಕ್ಕೆ ಸರ್ವಾಧಾರತ್ವವನ್ನು ಹೇಳಿದೆ. ಪರಮಾತ್ಮನಿಗೆ ಅಂತಹ ಆಕಾಶಧಾರಕತ್ವವನ್ನು ಹೇಳಿಲ್ಲವಲ್ಲ ಎಂದು ಪ್ರಶ್ನಿಸಬಾರದು. ಏಕೆಂದರೆ ಇದು ಪರಮಾತ್ಮನ ಪ್ರಕರಣವೇ ಆಗಿರುವುದರಿಂದ ಆಕಾಶಕ್ಕೆ ಸಕಲ ಧಾರಕತ್ವವನ್ನು ಏಕೆ ಹೇಳುತ್ತಿದ್ದಾರೆ ಎಂದರೆ ಇಂತಹ ಆಕಾಶಕ್ಕೂ ಸಹ ಧಾರಕನಾದವನು ಪರಮಾತ್ಮನೇ ಆಗಿದ್ದಾನೆಂದು ತಿಳಿಸುವುದಕ್ಕಾಗಿ. ಅಕ್ಷರಶಬ್ದವಾಚ್ಯನಾದ ಪರಮಾತ್ಮನು 'ಅಸ್ಥೂಲಮ್' ಇತ್ಯಾದಿ ವಾಕ್ಯಗಳಿಂದ ಅನೇಕ ಮಹಿಮೆಯುಳ್ಳವನೆಂದು ತಿಳಿಯುತ್ತಿದೆ. ಆದ್ದರಿಂದಲೇ ಅಸ್ಥೂಲತ್ವಾದಿ ಪರಮಾತ್ಮನ ಅಸಾಧಾರಣಗುಣಗಳಿಂದ ಅಂಬರಾಂತಧಾರಕತ್ವವು ಪರಮಾತ್ಮನಲ್ಲಿ ಇದೆ ಎಂಬುದು ಅಭಿಮತವೇ ಆಗಿದೆ. ಈ ದೃಷ್ಟಿಯಿಂದ ಗ್ರಂಥಕಾರರು ವಿಷಯವಾಕ್ಯದಲ್ಲಿರುವ ಸಾಧಕಪ್ರಮಾಣವೆಂದರೆ ಅಸ್ಥೂಲತ್ವಾದಿಗಳಾಗಿವೆ ಎಂದು ಹೇಳಿದ್ದು ಅತ್ಯಂತ ಸಮಂಜಸವಾಗಿದೆ.

**प्रकाशः** – यद्वा विषयवाक्यस्थेत्यस्याद्यन्तविषयवाक्यस्थेत्यर्थः । आदावम्बरे सर्वाधारत्वस्यान्तेऽक्षरेऽम्बराधारत्वस्य श्रवणात् ।

ಅಥವಾ 'ವಿಷಯವಾಕ್ಯಸ್ಥ' ಎಂದರೆ ಮೊದಲನೆಯ ಹಾಗೂ ಕೊನೆಯ ವಿಷಯವಾಕ್ಯದಲ್ಲಿ ಎಂದರ್ಥ. ಪ್ರಾರಂಭದ ವಾಕ್ಯದಲ್ಲಿ ಸರ್ವಾಧಾರತ್ವವು, ಕೊನೆಯ ವಾಕ್ಯದಲ್ಲಿ ಅಂಬರಾಂತ ಧಾರಕತ್ವವು ಶ್ರುತವಾಗಿದೆ.

**प्रकाशः** – अत्रान्तपदं प्रकृतिद्वाराऽक्षरस्य सर्वाधारतात्त्पर्यर्थमम्बरस्य चित्प्रकृतित्वोक्त्यर्थं च । तेनान्तपदं व्यर्थमिति कस्यचिद्दूषणमलग्नकं ध्येयम् ।

ಸೂತ್ರದಲ್ಲಿ 'ಅಂಬರಾಂತಧೃತೇಃ' ಎಂದು ಹೇಳುವ ಬದಲು 'ಅಂಬರಧೃತೇಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. 'ಅಂತ' ಪದವು ಬೇಕಾಗಿರಲಿಲ್ಲ ? ಎಂದು ಪ್ರಶ್ನಿಸಬಾರದು. ಪ್ರಕೃತಿ ಅಥವಾ ಆಕಾಶಪದದಿಂದ ಲಕ್ಷ್ಮೀದೇವಿಯನ್ನೇ ಸ್ವೀಕರಿಸಬೇಕು. ಲಕ್ಷ್ಮೀದೇವಿಯು ಸಕಲ ಪದಾರ್ಥಗಳಿಗೆ ಆಧಾರಳಾಗಿದ್ದಾಳೆ. ಇಂತಹ ಲಕ್ಷ್ಮೀದೇವಿಗೂ ಸಹ ಭಗವಂತನು ಆಧಾರನಾಗಿದ್ದಾನೆಂದು ಲಕ್ಷ್ಮೀದೇವಿಯ ಮೂಲಕ ಅಕ್ಷರನಿಗೆ ಸರ್ವಾಧಾರತ್ವವನ್ನು ಸಮರ್ಥಿಸಬೇಕಾಗಿದೆ. ಈ ಎರಡು ದೃಷ್ಟಿಯಿಂದ 'ಅಂತ' ಪದವನ್ನು ಸೂತ್ರದಲ್ಲಿ ಉಲ್ಲೇಖಿಸಿರುತ್ತಾರೆ.

**प्रकाशः** – द्वितीये ''तदुत्तरवाक्यस्थे'' इत्यस्य त्वादिवाक्यापेक्षयोत्तर-वाक्यस्थेत्यर्थः ।

ಹಾಗಾದರೆ ಎರಡನೆಯ ಸೂತ್ರದಲ್ಲಿ 'ತದುತ್ತರವಾಕ್ಯಸ್ಥ' ಇತ್ಯಾದಿಯಾಗಿ ಹೇಳಿದ್ದು ಹೇಗೆ ಕೂಡುತ್ತದೆ. ಏಕೆಂದರೆ ವಿಷಯವಾಕ್ಯದ ಮಧ್ಯದಲ್ಲಿಯೇ ಪ್ರಶಾಸನವನ್ನು ಹೇಳಿದಂತಾಯಿತಲ್ಲವೇ? ಎಂಬ ಪ್ರಶ್ನೆಗೆ ಸುಲಭವಾಗಿ ಉತ್ತರಿಸಬಹುದು. ಪ್ರಾರಂಭದ ವಾಕ್ಯದ ಅಪೇಕ್ಷೆಯಿಂದ ಪ್ರಶಾಸನಾವಿಧಾಯಕವಾದ ವಾಕ್ಯವು ಅನಂತರವಿರುತ್ತದೆ. ಅನಂತರವಿರುವ ವಿವಕ್ಷೆಯಿಂದಷ್ಟೇ ಉತ್ತರವಾಕ್ಯವೆಂದು ಎರಡನೆಯ ಸೂತ್ರದಲ್ಲಿ ಪರಿಗಣಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – ''एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः'' इत्युत्तरवाक्ये सा च धृतिराज्ञामात्रेणोच्यत इत्यर्थः । ''अन्यभावव्यावृत्तेः'' इत्यस्याद्यत्वमाशङ्क्यान्त्यत्वमुपपादयति – **तृतीय इति** ।।

'ಸಾಚ ಪ್ರಶಾಸಾತ್' ಎಂಬ ಸೂತ್ರಾರ್ಥ ಹೀಗಿದೆ - 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಎಂಬ ಮುಂದಿನ ವಾಕ್ಯದಲ್ಲಿ ಸೂರ್ಯಚಂದ್ರಾದಿ ಧಾರಣೆಯು ಕೇವಲ ಆಜ್ಞೆಯಿಂದಷ್ಟೇ ಯುಕ್ತವಾಗಿದೆ ಎಂದು.

'ಅನ್ಯಭಾವವ್ಯಾವೃತ್ತೇಃ' ಎಂಬ ಮೂರನೆಯ ಸೂತ್ರದಲ್ಲಿ ಅಸ್ಥೂಲತ್ವಾದಿಲಿಂಗಗಳನ್ನೇ ಹೇಳಿದ್ದರಿಂದ ಮೊದಲೇ ಹೇಳಬೇಕಿತ್ತು ಎಂಬ ಆಶಂಕೆಗೆ ಉತ್ತರಿಸಿ ಕೊನೆಯದ್ದನ್ನಾಗಿ ಪರಿಗಣಿಸಲು ಕಾರಣವನ್ನು ನಿರೂಪಣೆ ಮಾಡುತ್ತಿದ್ದಾರೆ 'ತೃತೀಯ' ಇತ್ಯಾದಿ ವಾಕ್ಯದಿಂದ.

**गुरुराजीयम्** – **तेनैवेति** ।। तृतीयसूत्रेणैवेत्यर्थः । अत्र तेनेत्यस्योद्धारादित्यनेनान्वयः ।।




ಅಕ್ಷರನಾಮಕನಿಗೆ ಅನಶನವನ್ನು ಶ್ರುತಿಯು ಹೇಳುತ್ತಿದೆ. ಅಕ್ಷರನೇ ಪರಮಾತ್ಮನಾದಲ್ಲಿ ಪರಮಾತ್ಮನು ಏನನ್ನೂ ಸಹ ತಿನ್ನುವುದಿಲ್ಲವೆಂದು ಹೇಳಿದಂತಾಗುತ್ತದೆ. ಆವಾಗ ಅತ್ತೃತ್ವಾಧಿಕರಣದಿಂದ ವಿರೋಧ ಬರುತ್ತದೆಂದು ಪೂರ್ವಪಕ್ಷಿಯು ಹಿಂದೆ ಆಕ್ಷೇಪಿಸಿದ್ದನು. ಅದಕ್ಕೂ ಸಹ ಈಗ ಅವಕಾಶವಿಲ್ಲ. ನಾವು ಯಾವ ಆಹಾರವನ್ನು ತಿನ್ನುತ್ತೇವೋ, ಅದನ್ನು ಉಪಜೀವಿಸಿಕೊಂಡು ಬದುಕುತ್ತಿದ್ದೇವೆ. ಆದರೆ ಪರಮಾತ್ಮನಿಗೆ ಇಂತಹ ಸ್ಥಿತಿ ಇರುವುದಿಲ್ಲ. ಏನನ್ನೂ ತಿನ್ನದಿದ್ದರೂ ಸಹ ದಷ್ಟಪುಷ್ಟನಾಗಿ ಇರುತ್ತಾನೆ. ಉಳಿದ ಆಹಾರಪದಾರ್ಥಗಳನ್ನು ತಿಂದು ಅವನು ಬದುಕಬೇಕಾಗಿಲ್ಲ. ಈ ದೃಷ್ಟಿಯಿಂದಷ್ಟೇ 'ಏನನ್ನೂ ಅವನು ತಿನ್ನಲಾರ' ಇತ್ಯಾದಿಯಾಗಿ ಶ್ರುತಿಯು ಅವನನ್ನು ಪ್ರತಿಪಾದಿಸುತ್ತಿದೆ. ಸಕಲ ಜಗತ್ತನ್ನು ಸಂಹಾರ ಮಾಡುವ ಕಾರಣ 'ಸಕಲಜಗದ್ಭೋಕ್ತಾ' ಎಂಬುದಾಗಿ ಅತ್ತೃತ್ವಾಧಿಕರಣವು ಸಮರ್ಥಿಸುತ್ತಿದೆ. ಹೀಗಿರುವಾಗ ವಿರೋಧಕ್ಕೆ ಅವಕಾಶವೇ ಇಲ್ಲ.

ಇಲ್ಲಿಯ ತನಕ ಸಮರ್ಥನೆ ಮಾಡಿದಂತೆ ಮಹತ್ತ್ವವುಳ್ಳ ಪರಮಾತ್ಮನಲ್ಲಿ ಅಣುತ್ವವೂ ಸಹ ಇರುತ್ತದೆಂದು ತಿಳಿದಂತಾಯಿತು. ಇದೇ ವಿಚಾರವು ಬೇರೆ ಅಧಿಕರಣಗಳಲ್ಲಿಯೂ ಸಮರ್ಥಿಸಿದ್ದರಿಂದ ಪುನರುಕ್ತಿ ಬಂದಂತೆ ಕಾಣಿಸುತ್ತದೆ. ಸರ್ವಗತತ್ವಾಧಿಕರಣದ ಅರ್ಭಕೌಕಸ್ತ್ವಸೂತ್ರದಲ್ಲಿ ಸರ್ವತ್ರ ವ್ಯಾಪ್ತನಾದ ಪರಮಾತ್ಮನಿಗೆ ಹೃದಯವೆಂಬ ಅಲ್ಪದೇಶಸ್ಥಾನವನ್ನು ಪ್ರತಿಪಾದಿಸಲಾಗಿದೆ. ಇದರಿಂದ ಸರ್ವಗತತ್ವಾಧಿಕರಣದಲ್ಲಿಯೇ ಅಣುತ್ವವನ್ನು ಸಮರ್ಥಿಸಿದಂತಾಯಿತು. ಪುನಃ ಇಲ್ಲಿಯೂ ಅದನ್ನೇ ಹೇಳಿದರೆ, ಹೇಳಿದ ವಿಷಯವನ್ನೇ ಪುನಃ

ಹೇಳಿದಂತಾಗುತ್ತದಲ್ಲವೇ? ಎಂಬ ಪ್ರಶ್ನೆಯು ಸಹಜವಾಗಿ ಮನಸ್ಸಿನಲ್ಲಿ ಹುಟ್ಟುತ್ತದೆ. ಆದರೆ ವ್ಯತ್ಯಾಸವಿದೆ. ನೂರುರೂಪಾಯಿ ಇರುವವನಲ್ಲಿ ಐವತ್ತು ರೂಪಾಯಿ ಹೇಗೆ ಇದ್ದೇ ಇರುತ್ತದೋ, ಅದರಂತೆ ಎಲ್ಲೆಡೆ ವ್ಯಾಪ್ತನಾದ ಪರಮಾತ್ಮನಲ್ಲಿ ಅಲ್ಪದೇಶಸ್ಥಿತಿಯೂ ಸಹ ಇರುತ್ತದೆಂಬ ಅಭಿಪ್ರಾಯವಷ್ಟೇ ಅರ್ಭಕೌಕಸ್ತ್ವ ಸೂತ್ರದ್ದಾಗಿದೆ.

ಭೂಮಾಧಿಕರಣದಲ್ಲಿಯೂ ಸಹ ಇಲ್ಲಿ ಸಮರ್ಥಿಸುವ ಅಣುತ್ವವನ್ನು ಮೊದಲೇ ವಿವಕ್ಷಿಸಿ ಉತ್ತಮಣಲಿಂಗವನ್ನು ಸಮರ್ಥಿಸಿದ್ದಾರೆ. ಆದರೆ ಈ ಅಧಿಕರಣದಲ್ಲಿ ಮಹತ್ತ್ವವಿದ್ದರೂ ಸಹ ಪರಮಾತ್ಮನಲ್ಲಿ ಅಣುತ್ವವೂ ಇರುತ್ತದೆಂದು ಸಮರ್ಥಿಸುತ್ತಿದ್ದಾರೆ. ಈ ವಿಷಯವು ಸರ್ವಗತತ್ವಾಧಿಕರಣದಲ್ಲಾಗಲೀ, ಭೂಮಾಧಿ ಕರಣದಲ್ಲಾಗಲೀ ಸಮರ್ಥಿಸಲ್ಪಟ್ಟಿಲ್ಲ.

ದಹರಾಧಿಕರಣದ 'ಅಲ್ಪಶ್ರುತೇಃ' ಎಂಬ ಸೂತ್ರದಲ್ಲಿಯೂ ಸಹ ಗಗನಕ್ಕೆ ಕೇವಲ ಅವಯವಿ ರೂಪದಿಂದ ಮಹತ್ತ್ವವಿದ್ದಂತೆ, ಪರಮಾತ್ಮನಿಗಲ್ಲ. ಪರಮಾತ್ಮನು ತನ್ನ ಅವಯವರೂಪದಿಂದಲೂ ಸಹ ಮಹತ್ತ್ವವನ್ನು ಪಡೆದಿದ್ದಾನೆಂಬುದಾಗಿ ಸಮರ್ಥಿಸಲಾಗಿದೆ. ಹೀಗೆ ಬೇರೆ ಅಧಿಕರಣಗಳಿಂದ ಪುನರುಕ್ತಿ ಬರುವುದಿಲ್ಲವೆಂಬುದನ್ನು ಗಮನಿಸಬೇಕು.

ಈ ಅಧಿಕರಣದಲ್ಲಿ ಒಟ್ಟು ಮೂರುಸೂತ್ರಗಳಿವೆ. 'ಅಕ್ಷರಂಮಂಬರಾಂತಧೃತೇಃ' ಎಂಬ ಪ್ರಥಮಸೂತ್ರದಲ್ಲಿ ವಿಷಯವಾಕ್ಯದಲ್ಲಿರುವ ಅಂಬರಾಂತಧಾರಕತ್ವವೆಂಬ ಹೇತುವನ್ನು ಸಮರ್ಥಿಸಿದ್ದಾರೆ. ಆದ್ದರಿಂದ ಪ್ರಾಥಮ್ಯವು ಯುಕ್ತವಾಗಿದೆ. 'ಸಾ ಚ ಪ್ರಶಾಸಾನತ್' ಎಂಬ ಎರಡನೆಯ ಸೂತ್ರದಲ್ಲಿ, 'ಕೇವಲ ತನ್ನ ಆಜ್ಞೆಯಿಂದಲೇ ಸೂರ್ಯ, ಚಂದ್ರ ಮೊದಲಾದವರು ತಮ್ಮ ತಮ್ಮ ಸ್ಥಾನದಲ್ಲಿ ನಿಂತು ಲೋಕವನ್ನು ಬೆಳಗುತ್ತಾರೆ. ಪೂರ್ವಾದಿ ದಿಕ್ಕುಗಳಲ್ಲಿ ನದಿಗಳು ಹರಿಯುತ್ತವೆ' ಇತ್ಯಾದಿ ವಿಚಾರವನ್ನು ಹೇಳುತ್ತಾ ಪ್ರಶಾಸನವೆಂಬ ಲಿಂಗವನ್ನು ಹೇಳಿದ್ದಾರೆ. ಈ ಲಿಂಗವು ವಿಷಯವಾಕ್ಯದ ಮುಂದಿನ ವಾಕ್ಯದಲ್ಲಿರುವುದರಿಂದ ದ್ವಿತೀಯ ಸ್ಥಾನವು ಇದಕ್ಕೆ ಯುಕ್ತವಾಗಿದೆ.

ಮೂರನೆಯ 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಅಸ್ಥೂಲತ್ವಾದಿ ಸಾಧಕಪ್ರಮಾಣಗಳನ್ನು ಹೇಳುವುದರ ಜೊತೆಗೆ ಪೂರ್ವಪಕ್ಷಕಾರನು ಹೇಳಿದ ಬಾಧಕಪ್ರಮಾಣಗಳೆಲ್ಲವನ್ನೂ ನಿರಾಕರಿಸಲಾಗಿದೆ. ಪರಮಾತ್ಮನು ಅಸ್ಥೂಲತ್ವ, ಅನಣುತ್ವ ಮೊದಲಾದ ವಿರುದ್ಧಧರ್ಮಗಳಿಗೆ ಆಶ್ರಯನಾಗುವುದಾದರೆ ನಿಃಸ್ವಭಾವನಾಗಲಿ ಅಥವಾ ವಿರುದ್ಧವಾದ ಧರ್ಮಗಳನ್ನು ಒಬ್ಬನಲ್ಲೇ ಹೇಳಲು ಸಾಧ್ಯವಿಲ್ಲ. ಇತ್ಯಾದಿ ಬಾಧಕಗಳನ್ನು ಆಶಂಕಿಸಿದರೆ ಪರಮಾತ್ಮನು ಅಪ್ರಾಕೃತನಾದ್ದರಿಂದ ಅಚಿಂತ್ಯವಾದ ಐಶ್ವರ್ಯಶಕ್ತಿಯನ್ನು ಹೊಂದಿರುವುದರಿಂದ ಇಂತಹ ಯಾವುದೇ ವಿರೋಧಕ್ಕೂ ಸಹ ಅವಕಾಶವಿಲ್ಲವೆಂಬುದಾಗಿ ಮೂರನೆಯ ಸೂತ್ರವು ಪ್ರತಿಪಾದಿಸುತ್ತಿದೆ. ಆದ್ದರಿಂದ ಮೂರನೆಯ ಸ್ಥಾನವನ್ನು ಇದು ಪಡೆದಿದೆ. ಹೀಗೆ ಅಕ್ಷರಾಧಿಕರಣದಲ್ಲಿರುವ ಮೂರು ಸೂತ್ರಗಳ ಜೋಡಣೆಯ ಶೈಲಿಯು ಅತ್ಯಂತ ಹೃದಯಂಗಮವಾಗಿದೆಯೆಂದು ತಿಳಿದುಕೊಳ್ಳಬೇಕು.

///////////////////////////////////////////

● ● ● ● ●

## तात्पर्यचन्द्रिका

**अन्ये तु । वर्णा एवाक्षरम् । अक्षरशब्दस्य तत्र रूढेः ।**

ಅನುವಾದ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಶ್ರುತಿಯಲ್ಲಿರುವ ಅಕ್ಷರಶಬ್ದವು ವರ್ಣಗಳನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ ಲೋಕದಲ್ಲಿ ಅಕಾರಾದಿ ವರ್ಣಗಳಲ್ಲಿಯೇ ಅಕ್ಷರಶಬ್ದದ ಪ್ರಯೋಗವಿದೆ.

**नच वर्णेष्वाकाशस्योतत्वाद्ययोगः । सर्वस्यापि रूपधेयस्य गौरयं वृक्षोऽयमिति नामधेयानुविद्धतया भानात् ।**

ಶ್ರುತಿಯು ಅಕ್ಷರದಲ್ಲಿ ಆಕಾಶವೇ ಮೊದಲಾದ ಸಕಲ ಪದಾರ್ಥಗಳು ಆಶ್ರಿತವಾಗಿವೆಯೆಂದು ಹೇಳುತ್ತಿದೆ. ಅಕಾರಾದಿ ವರ್ಣಗಳಲ್ಲಿ ಆಕಾಶಾದಿಗಳು ಆಶ್ರಿತವಾಗಲು ಹೇಗೆ ಸಾಧ್ಯ ? ಎಂದರೆ ಸಕಲ ರೂಪಧೇಯಗಳು 'ಗೌರಯಂ ವೃಕ್ಷೋಽಯಂ' ಇತ್ಯಾದಿಯಾಗಿ ನಾಮಧೇಯದಿಂದ ಅಭಿನ್ನವಾಗಿಯೇ ತೋರುತ್ತದೆ. ಆದ್ದರಿಂದ ಆಕಾಶಾದಿ ಪದಾರ್ಥಗಳು ಅಕಾರಾದಿ ವರ್ಣಗಳಲ್ಲಿ ಓತಪ್ರೋತವಾಗಿವೆ-ಯೆಂದರೆ ಅಭಿನ್ನವಾಗಿವೆಯೆಂದರ್ಥ. ಹೀಗೆ ಸಕಲ ಪದಾರ್ಥಗಳಿಂದ ಅಕಾರಾದಿ ವರ್ಣಗಳು ಅಭಿನ್ನವಾಗಿವೆಯೆಂದು ಹೇಳುವುದೇ ಶ್ರುತಿಯ ಅಭಿಪ್ರಾಯ.

**तथा च वर्णमात्रमेवाक्षरमिति पूर्वः पक्षः ।**

ಆದ್ದರಿಂದ ಅಕಾರಾದಿ ವರ್ಣಗಳೇ ಅಕ್ಷರಶಬ್ದ ಪ್ರತಿಪಾದ್ಯವೆಂದು ಪೂರ್ವಪಕ್ಷ.

**भाष्ये ''ॐकारोऽक्षरम्'' इत्युक्तिस्त्वोङ्कारस्य सर्ववर्णात्मकत्वश्रुतेः ।**

ಶಾಂಕರ ಭಾಷ್ಯದಲ್ಲಿ ಅಕಾರಾದಿ ವರ್ಣಗಳನ್ನು ಅಕ್ಷರವೆಂದು ಪೂರ್ವಪಕ್ಷ ಮಾಡದೇ ಓಂಕಾರವೆಂಬುದನ್ನು ಅಕ್ಷರವೆಂದು ಪೂರ್ವಪಕ್ಷ ಮಾಡಲಾಗಿದೆ. ಕಾರಣವೇನೆಂದರೆ ಓಂಕಾರಕ್ಕೆ ಅಕಾರಾದಿ ಸರ್ವವರ್ಣಾತ್ಮಕತ್ವವು ಶ್ರುತಿಯಿಂದ ಸಿದ್ಧವಾಗಿದೆ.

**सिद्धान्तस्तु पृथिव्यादेर्भूताकाशान्तस्य विकारजातस्य धारणात् न क्षरतीत्यादि-व्युत्पत्तिसम्भवाच्च निर्विशेषं ब्रह्मैवाक्षरमित्याहुः ।**

ಸಿದ್ಧಾಂತ ಹೀಗಿದೆ - ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಸಕಲ ಪದಾರ್ಥಗಳು ಬ್ರಹ್ಮನ ವಿಕಾರವಾಗಿವೆ. ಆದ್ದರಿಂದ ಬ್ರಹ್ಮನಲ್ಲಿಯೇ ಓತಪ್ರೋತವಾಗಿವೆಯೆಂದು ಹೇಳಬೇಕು ಹೊರತು,

ಅಕಾರಾದಿ ವರ್ಣಗಳಲ್ಲಿ ಓತಪ್ರೋತವಾಗಿದೆಯೆಂದು ಹೇಳುವುದು ತಪ್ಪಾಗುತ್ತದೆ. ಮತ್ತು 'ನಕ್ಷರತಿ ಇತಿ ಅಕ್ಷರಮ್' ಎಂಬ ವ್ಯುತ್ಪತ್ತಿಯೂ ಸಹ ಬ್ರಹ್ಮನಲ್ಲೇ ಉಪಪನ್ನವಾಗುತ್ತದೆ. ಆದ್ದರಿಂದ ನಿರ್ವಿಶೇಷ ಬ್ರಹ್ಮನೇ ಅಕ್ಷರಶಬ್ದ ಪ್ರತಿಪಾದ್ಯನಾಗಿದ್ದಾನೆ.

**तन्न । गौरित्यादौ गोत्वादिजातिसम्भेदस्य गोशब्दादिवाच्यत्वस्य वा भानेऽपि "कस्मिन्नु खल्वाकाश ओतश्च प्रोतश्च" इत्यादिश्रुत्युक्तस्याकाशाश्रयत्वस्याभानेन वर्णेषु द्रष्टृत्वादेरसम्भवेन च पूर्वपक्षानुदयात् ।**[१]

(१) **शाङ्करभाष्यम् –**

**अक्षरमम्बरान्तधृतेः ॥ १० ॥**

**अक्षरं प्रणवः किं वा ब्रह्म लोकेऽक्षराभिधा ।**
**वर्णे प्रसिद्धा तेनात्र प्रणवः स्यादुपास्तये ॥**
**अव्याकृताधारतोक्तेः सर्वधर्मनिषेधतः ।**
**शासनाद्द्रष्टृतादेश्च ब्रह्मैवाक्षरमुच्यते ॥**

'कस्मिन्नु खल्वाकाश ओतश्च प्रोतश्चेति । स होवाचैतद् वै तदक्षरं गार्गि ब्राह्मणा अभिवदन्त्यस्थूलमनणु' (बृ. ३-८-७,८) इत्यादि श्रूयते । तत्र संशयः – किमक्षरशब्देन वर्ण उच्यते? किंवा परमेश्वरः? इति । तत्राक्षरसमाम्नाय इत्यादावक्षरशब्दस्य वर्णे प्रसिद्धत्वात्, प्रसिद्ध्यतिक्रमस्य चायुक्तत्वात्, 'ॐकार एवेदं सर्वम्' (छा. २-२३-३) इत्यादौ च श्रुत्यन्तरे वर्णस्याप्युपास्यत्वेन सर्वात्मकत्वावधारणात्, वर्ण एवाक्षरशब्द इति, एवं प्राप्त उच्यते – पर एवात्माक्षरशब्दवाच्यः । कस्मात्? **अम्बरान्तधृतेः** – पृथिव्यादेराकाशान्तस्य विकारजातस्य धारणात् । तत्र हि पृथिव्यादेः समस्तविकारजातस्य कालत्रयविभक्तस्य 'आकाश एव तदोतं च प्रोतं च' इत्याकाशे प्रतिष्ठितत्वमुक्त्वा 'कस्मिन्नु खल्वाकाश ओतश्च प्रोतश्च' इत्यनेन प्रश्नेनेदमक्षरमवतारितम् । तथाचोपसंहृतम् – 'एतस्मिन्नु खल्वक्षरे गार्ग्याकाश ओतश्च प्रोतश्च' इति । नचेयमम्बरान्तधृति-र्ब्रह्मणोऽन्यत्र सम्भवति । यदपि 'ॐकार एवेदं सर्वम्' इति तदपि ब्रह्मप्रतिपत्तिसाधनत्वात् स्तुत्यर्थं द्रष्टव्यम् । तस्मान्न क्षरत्यश्नुते चेति नित्यत्वव्यापित्वाभ्यामक्षरं परमेव ब्रह्म ॥ १० ॥

स्यादेतत् । कार्यस्य चेत्कारणाधीनत्वमम्बरान्तधृतिरभ्युपगम्यते, प्रधानकारणवादिनोऽपीयमुपपद्यते । कथमम्बरान्तधृतेर्ब्रह्मत्वप्रतिपत्तिः । अत उत्तरं पठति –

**सा च प्रशासनात् ॥ ११ ॥**

**सा** चाम्बरान्तधृतिः परमेश्वरस्यैव कर्म । कस्मात्? **प्रशासनात्** प्रशासनं हीह श्रूयते – 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' (बृ. ३-८-९)

ಇವರ ಅಧಿಕರಣ ಶರೀರವು ಅಸಾಧುವಾಗಿದೆ. 'ಗೌರಯಂ ವೃಕ್ಷೋಽಯಂ' ಇತ್ಯಾದಿ ಪ್ರತೀತಿಗಳಿಂದ ಗೋತ್ವಾದಿ ಜಾತಿ ವೈಶಿಷ್ಟ್ಯವು ತಿಳಿಯಬಹುದು. ಗೋಶಬ್ದವಾಚ್ಯತ್ವವೂ ಸಹ ತಿಳಿಯಬಹುದು. ಆದರೆ 'ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶಾಶ್ರಯತ್ವವೂ ಮಾತ್ರ ಅಕಾರಾದಿ ವರ್ಣಗಳಲ್ಲಿ ತಿಳಿಯಲು ಸಾಧ್ಯವೇಇಲ್ಲ. ಮತ್ತು ಅಕ್ಷರನಲ್ಲಿ ಹೇಳಲ್ಪಟ್ಟ, ದ್ರಷ್ಟೃತ್ವ, ಶ್ರೋತೃತ್ವ ಮೊದಲಾದವುಗಳನ್ನಂತೂ ಅಕಾರಾದಿ ಅಕ್ಷರಗಳಲ್ಲಿ ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಅಕಾರಾದಿ ವರ್ಣಗಳೇ ಅಕ್ಷರಶಬ್ದವಾಚ್ಯವಾಗುತ್ತವೆಂಬ ಪೂರ್ವಪಕ್ಷವೇ ಹುಟ್ಟುವುದಿಲ್ಲ.

**उत्तराधिकरणे तु यथेक्षितृत्वश्रवणेऽपि जडप्रकृतेः प्राप्तिस्तथा तत्रैव वक्ष्यते ।**

ದ್ರಷ್ಟೃತ್ವಾದಿಗಳು ಶ್ರುತಿಯಲ್ಲಿ ಕೇಳಿಸುತ್ತಿರುವುದರಿಂದ ಅಕಾರಾದಿ ವರ್ಣಗಳನ್ನು ಅಕ್ಷರವೆಂದು ಪೂರ್ವಪಕ್ಷ ಮಾಡಬಾರದೆಂದು ಅದ್ವೈತಿಗಳಿಗೆ ಹೇಳುತ್ತಿದ್ದೀರಿ. ಹಾಗಾದರೆ ಸಿದ್ಧಾಂತಿಗಳೇ ಮುಂದಿನ ಅಧಿಕರಣದಲ್ಲಿ ಶ್ರುತಿಯಲ್ಲಿ ಈಕ್ಷಿತೃತ್ವವು ಶ್ರುತವಾಗಿದ್ದರೂ ಸಹ ಜಡಪ್ರಕೃತಿಯನ್ನು ಪೂರ್ವಪಕ್ಷ ವಿಷಯವನ್ನಾಗಿ ಸ್ವೀಕರಿಸಿದ್ದೀರಲ್ಲವೇ? ಎಂಬ ಪ್ರಶ್ನೆಗೆ ಮುಂದಿನ ಅಧಿಕರಣದಲ್ಲಿಯೇ ಉತ್ತರವನ್ನು ನೀಡುತ್ತೇವೆ.

**किञ्चैवं पूर्वपक्षे पृथिव्यादेर्नामानुविद्धताया आकाशव्यवहितत्वाभावेन श्रुतौ मध्य आकाशोक्तिर्व्यर्था स्यात् ।**

---

इत्यादि । प्रशासनं च पारमेश्वरं कर्म । नाचेतनस्य प्रधानस्य प्रशासनं भवति । नह्यचेतनानां घटादिकारणानां मृदादीनां घटादिविषयं प्रशासनमस्ति ।। ११ ।।

**अन्यभावव्यावृत्तेश्च ।। १२ ।।**

**अन्यभावव्यावृत्तेश्च** कारणाद् ब्रह्मैवाक्षरशब्दवाच्यम् । तस्यैवाम्बरान्तधृतिः कर्म नान्यस्य कस्यचित् । किमिदमन्यभावव्यावृत्तेरिति । अन्यस्य भावोऽन्यभावस्तस्माद् व्यावृत्तिरन्यभावव्यावृत्तिरिति । एतदुक्तं भवति – यदन्यद् ब्रह्मणोऽक्षरशब्दवाच्यमिहाशङ्क्यते तद्भावादिदमम्बरान्तविधारणमक्षरं व्यावर्तयति श्रुतिः । 'तद्वा एतदक्षरं गार्ग्यदृष्टं द्रष्टृश्रुतं श्रोत्रममतं मन्त्रविज्ञातं विज्ञातृ' (बृ. ३-८-११) इति । तत्रादृष्टत्वादिव्यपदेशः प्रधानस्यापि सम्भवति । द्रष्टृत्वादिव्यपदेशस्तु न सम्भवत्यचेतनत्वात् । तथा 'नान्यदतोऽस्ति द्रष्टृ नान्यदतोऽस्ति श्रोतृ नान्यदतोऽस्ति मन्तृ नान्यदतोऽस्ति विज्ञातृ' इत्यात्मभेदप्रतिषेधात्, न शारीरस्याप्युपाधिमतोऽक्षरशब्दवाच्यत्वम् । 'अचक्षुष्कमश्रोत्रवागमनः' (बृ. ३-८-८) इति चोपाधिमत्ताप्रतिषेधात् । नहि निरुपाधिकः शारीरो नाम भवति । तस्मात्परमेव ब्रह्माक्षरमिति निश्चयः ।। १२ ।।

ಮತ್ತು ಹೀಗೆ ರೂಪಧೇಯವೆಲ್ಲವೂ ನಾಮಧೇಯದಿಂದ ಅನುವಿದ್ಧವಾಗಿ ತೋರುತ್ತವೆಂದು ಪೂರ್ವಪಕ್ಷ ಮಾಡುತ್ತಿದ್ದೀರಿ. ಹಾಗಾದರೆ ಪೃಥಿವ್ಯಾದಿಗಳೆಲ್ಲವೂ ನಾಮಾನುವಿದ್ಧವಾಗಿ ತೋರುತ್ತವೆಂದು ತಿಳಿಸಲು ಮಧ್ಯದಲ್ಲಿ ಆಕಾಶವನ್ನೇಕೆ ಹೇಳಬೇಕು. ನೇರವಾಗಿ ಪೃಥಿವ್ಯಾದಿಗಳೆಲ್ಲವೂ ನಾಮಾನುವಿದ್ಧವಾಗಿ ತೋರುತ್ತವೆಂದು ಹೇಳಿದ್ದರೆ ಸಾಕಾಗಿತ್ತಲ್ಲವೇ? ಈ ಪ್ರಶ್ನೆಗೆ ಅದ್ವೈತಿಗಳಿಂದ ಉತ್ತರಿಸಲಾಗದು.

**प्रकाशः –**

**अन्य त्विति** ।। भामत्युक्तमनुवदति – **वर्णाएवाक्षरमिति** ।। **रूढेरिति** ।। ''अक्षरसमाम्नायः'' इत्यादौ प्रसिद्धत्वात् । ब्रह्मणि त्ववयवप्रसिद्ध्या यौगिकः । अवयवप्रसिद्धेश्च समुदायप्रसिद्धिरूपरूढिर्बलीयसीति भावः ।।

ವಿವರಣೆ - ಅದ್ವೈತಿಗಳ ಅಧಿಕರಣ ಶರೀರವನ್ನು ನಿರಾಕರಿಸುವುದಕ್ಕಾಗಿ ಮೊದಲು 'ಅನ್ಯೇ ತು' ಇತ್ಯಾದಿ ಗ್ರಂಥದಿಂದ ಅವರ ಅಧಿಕರಣವನ್ನು ಅನುವಾದ ಮಾಡುತ್ತಿದ್ದಾರೆ. ಭಾಮತಿಯಲ್ಲಿ ಹೇಳಿದ ವಿಷಯವನ್ನೇ 'ವರ್ಣಾ ಏವಾಕ್ಷರಮ್' ಇತ್ಯಾದಿಯಾಗಿ ಅನುವಾದ ಮಾಡಿದ್ದಾರೆ. ಅಕ್ಷರಶಬ್ದವು 'ಅಕ್ಷರಸಮಾಮ್ನಾಯಃ' ಇತ್ಯಾದಿಯಾಗಿ ವರ್ಣಗಳಲ್ಲಿಯೇ ಪ್ರಸಿದ್ಧವಾಗಿದೆ. ಬ್ರಹ್ಮನಲ್ಲಿ ಅವಯವಪ್ರಸಿದ್ಧಿಯಿಂದ ಅಕ್ಷರಶಬ್ದವು ಯೌಗಿಕವಾಗಿದೆ. ಆದರೆ ವರ್ಣಗಳಲ್ಲಿ ಸಮುದಾಯಶಕ್ತಿಯಿಂದ ರೂಢವಾಗಿದೆ. ಅವಯವಪ್ರಸಿದ್ಧಿಗಿಂತಲೂ ಸಮುದಾಯ ಪ್ರಸಿದ್ಧಿಯೆಂಬ ರೂಢಿಯೇ ಶ್ರೇಷ್ಠವಾದ್ದರಿಂದ ಅಕ್ಷರಶಬ್ದದಿಂದ ವರ್ಣಗಳೇ ಪ್ರತಿಪಾದ್ಯವೆಂದು ತಿಳಿಯಬೇಕು.

**प्रकाशः – रूपधेयस्येति** ।। रूप्यते निरूप्यते इत्यभिधेयमिति कल्पतरूक्त्याऽ-भिधेयवाचिरूपशब्दात् ''भागरूपनामभ्यो धेयः'' इति स्वार्थे धेयप्रत्ययः । वाच्यार्थस्येत्यर्थः ।। **अनुविद्धतयेति** ।। तादात्म्येनेत्यर्थः ।

'ನಾಮಧೇಯ' ಎಂಬ ಪದವು ಲೋಕಪ್ರಸಿದ್ಧವಾಗಿದೆ. ಆದರೆ ಪ್ರಕೃತ ಗ್ರಂಥಕಾರರು 'ರೂಪಧೇಯಸ್ಯ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ರೂಪ್ಯತೇ = ನಿರೂಪ್ಯತೇ = ಪ್ರತಿಪಾದ್ಯವಾದದ್ದು ಎಂದು ಕಲ್ಪತರುವಿನಲ್ಲಿ ಹೇಳಿದಂತೆ ರೂಪಶಬ್ದವು ಅಭಿಧೇಯವಾಚಿಯಾಗಿದೆ. ಇದರ ಮುಂದೆ 'ಭಾಗರೂಪನಾಮಭ್ಯೋ ಧೇಯಃ' ಎಂಬ ಸೂತ್ರದಿಂದ ಸ್ವಾರ್ಥದಲ್ಲಿ ಧೇಯಪ್ರತ್ಯಯವು ಬಂದಿರುತ್ತದೆ. ನಾಮವನ್ನೇ ನಾಮಧೇಯವೆನ್ನುತ್ತಾರೆ. ಅದರಂತೆ ರೂಪವನ್ನೇ ರೂಪಧೇಯವೆಂದು ಹೇಳಿದ್ದಾರೆಂದು ತಿಳಿಯಬೇಕು. ಭಾಗ, ರೂಪ, ನಾಮ ಈ ಮೂರು ಶಬ್ದಗಳ ಮೇಲೆ ಮಾತ್ರ ಸ್ವಾರ್ಥದಲ್ಲಿ ಧೇಯಪ್ರತ್ಯಯವನ್ನು ಪಾಣಿನಿಯ ಸೂತ್ರವು ವಿಧಿಸಿದೆ. ಆದ್ದರಿಂದ ಭಾಗಧೇಯ, ರೂಪಧೇಯ, ನಾಮಧೇಯ ಎಂಬ ಶಬ್ದಗಳನ್ನು ಸ್ವಾರ್ಥದಲ್ಲಿ ಪ್ರಯೋಗಿಸಬಹುದು. ತಾದಾತ್ಮ್ಯದಿಂದ ರೂಪಧೇಯವು, ನಾಮಧೇಯದಿಂದ ಸೇರಿಕೊಂಡಿದೆಯೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ननु परभाष्ये ''ॐकार एवेदं सर्वमित्यादौ च श्रुत्यन्तरे वर्णस्याप्युपास्यत्वसर्वात्मत्वावधारणात्'' इत्युक्त्योङ्काररूपवर्ण एवाक्षरमिति प्रतीतेर्वर्णमात्रमेवेति कथमुच्यत इत्यतो ''नामानि चोङ्कारात्मकानि । तद्व्याप्तत्वात्'' इत्यादिना भामत्युक्तमेवाशयमाह – भाष्य इति ॥

ಶಾಂಕರ ಭಾಷ್ಯದಲ್ಲಿ ಹೀಗೆ ಹೇಳಲಾಗಿದೆ - 'ಓಂಕಾರ ಏವೇದಂ ಸರ್ವಮ್' 'ಓಂಕಾರವೇ ಸರ್ವಾತ್ಮಕವಾಗಿದೆ' ಇತ್ಯಾದಿಯಾಗಿ ಮತ್ತೊಂದು ಶ್ರುತಿಯಲ್ಲಿ ವರ್ಣವನ್ನೂ ಸಹ ಉಪಾಸ್ಯವೆಂದು, ಸರ್ವಾತ್ಮಕವೆಂದು ಅವಧಾರಣ ಮಾಡಲಾಗಿದೆ'. ಹೀಗೆ ಹೇಳಿದ್ದರಿಂದ ಓಂಕಾರವನ್ನೇ ಅಕ್ಷರಶಬ್ದ ಪ್ರತಿಪಾದ್ಯವೆಂದು ಹೇಳಿದಂತೆ ಕಾಣಿಸುತ್ತಿದೆ. ಪ್ರಕೃತ ಗ್ರಂಥಕಾರರು ಸಕಲ ವರ್ಣಗಳನ್ನೇ ಅಕ್ಷರಸ್ವರೂಪವೆಂದು ಹೇಳುತ್ತಿದ್ದಾರೆ. ಇದು ಶಾಂಕರಭಾಷ್ಯಕ್ಕೆ ವಿರುದ್ಧವಾಯಿತಲ್ಲವೇ?

ಹೀಗೆ ಪ್ರಶ್ನಿಸಬಾರದು. 'ನಾಮಾನಿ ಚೋಂಕಾರಾತ್ಮಕಾನಿ । ತದ್‌ವ್ಯಾಪ್ತತ್ವಾತ್' ಸಕಲ ನಾಮಗಳು ಓಂಕಾರಾತ್ಮಕವಾಗಿವೆ. ಏಕೆಂದರೆ ಓಂಕಾರದಿಂದ ವ್ಯಾಪ್ತವಾದ್ದರಿಂದ ಇತ್ಯಾದಿಯಾಗಿ ಭಾಮತಿಯಲ್ಲಿ ಹೇಳಿದ ವಿಷಯವನ್ನೇ ಅನುಸರಿಸಿ ಪ್ರಕೃತ ಗ್ರಂಥಕಾರರು ಸಕಲ ವರ್ಣಗಳನ್ನೇ ಅಕ್ಷರವೆಂದು ಭಾಷ್ಯ ಇತ್ಯಾದಿಯಾಗಿ ನಿರೂಪಿಸುತ್ತಿದ್ದಾರೆ.

**प्रकाशः** – ''तद्यथा शङ्कुना सर्वाणि पर्णानि सन्तृण्णानि । एवमोङ्कारेण सर्वा वाक्'' इति श्रुतेरित्यर्थः । तथाच ''ॐकार एवेदं सर्वम्'' इति श्रुत्यन्तर ॐकारस्य सर्वात्मकत्वश्रवणात् ''ॐकारेणैव'' इति श्रुत्या सर्ववर्णात्मकत्वात् इह च श्रुतौ पृथिव्याद्यम्बरान्तसर्वतादात्म्येनोतप्रोतपदाभ्यां श्रुतमक्षरं वर्णा एवेति अक्षरे विषयवाक्यश्रुतसर्वात्मकत्वं वर्णेषूपपादयितुं वर्णानां सर्वात्मकत्वे स्पष्टश्रुतेरभावादोङ्कारस्य सर्ववर्णात्मकत्वं श्रुत्यन्तरसिद्धं हृदि सिद्धवत्कृत्योङ्कारस्य सर्वात्मकत्वे ''ॐकार एवेदं सर्वम्'' इति भाष्ये श्रुतिरुक्ता । नत्वत्रोङ्कार एवाक्षरमित्युपेत्येति भावः ॥

'ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನಿ । ಏವಮೋಂಕಾರೇಣ ಸರ್ವಾ ವಾಕ್' ಎಂಬ ಶ್ರುತಿಯಿಂದ ಓಂಕಾರಕ್ಕೆ ಸರ್ವಾತ್ಮಕತ್ವವು ಕೇಳಿಸುತ್ತಿದೆ ಎಂದರ್ಥ. ಪ್ರಕೃತದಲ್ಲಿ 'ಓಂಕಾರ ಏವೇದಂ ಸರ್ವಮ್' ಎಂಬ ಶ್ರುತ್ಯಂತರದಲ್ಲಿ ಓಂಕಾರಕ್ಕೆ ಸರ್ವಾತ್ಮಕತ್ವವು ಕೇಳಿಸುತ್ತಿದೆ. ಹಾಗೂ 'ಓಂಕಾರೇಣೈವ ಸರ್ವಾ ವಾಕ್ ಸಂತೃಣ್ಣಾ' ಎಂಬ ಶ್ರುತಿಯಲ್ಲಿ ಸರ್ವವರ್ಣಾತ್ಮಕತ್ವವು ಕೇಳಿಸುತ್ತಿದೆ. ಅಂದರೆ ಓಂಕಾರಕ್ಕೆ ಸರ್ವಾತ್ಮಕತ್ವವು ಶ್ರುತವಾಗಿದೆ. ಹಾಗೂ ಸಕಲ ವರ್ಣಗಳಿಗೆ ಓಂಕಾರಾತ್ಮಕತ್ವವು ಶ್ರುತವಾಗಿದೆ. ಇದರಿಂದ ಪ್ರಕೃತ ಶ್ರುತಿಯಲ್ಲಿ ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಸಕಲ ಪದಾರ್ಥಗಳಿಗೆ ತಾದಾತ್ಮ್ಯವನ್ನು ಹೇಳಿದ್ದರಿಂದ ಓತಪ್ರೋತ ಪದಗಳಿಂದ ಶ್ರುತವಾದ ಅಕ್ಷರವು ವರ್ಣಗಳನ್ನೇ ಪ್ರತಿಪಾದಿಸುತ್ತಿದೆಂದು

ಹೇಳಿದಂತಾಗುತ್ತದೆ. ವಿಷಯವಾಕ್ಯದಲ್ಲಿ ಶ್ರುತವಾದ ಸರ್ವಾತ್ಮಕತ್ವವನ್ನು ಸಕಲವರ್ಣಗಳಲ್ಲಿ ಹೇಳಿದಂತಾಗುತ್ತದೆ. 'ವರ್ಣಗಳು ಸರ್ವಾತ್ಮಕವಾಗಿವೆ' ಎಂಬ ವಿಷಯದಲ್ಲಿ ಸ್ಪಷ್ಟ ಶ್ರುತಿಯು ಇಲ್ಲದ ಕಾರಣ ಓಂಕಾರಕ್ಕೆ ಸಕಲ ವರ್ಣಾತ್ಮಕತ್ವವು ಬೇರೆ ಶ್ರುತಿಯಿಂದ ಸಿದ್ಧವಾಗಿದೆಯೆಂದು ಹೇಳಿದ್ದಾರೆ. ಓಂಕಾರವು ಸರ್ವಾತ್ಮಕವಾದ ಮೇಲೆ ಅದರಿಂದ ಅಭಿನ್ನವಾದ ಸಕಲ ವರ್ಣಗಳೂ ಸಹ ಸರ್ವಾತ್ಮಕವೆಂದೇ ಹೇಳಿದಂತಾಗುತ್ತದೆ. ಓಂಕಾರವು ಸರ್ವಾತ್ಮಕವಾಗಿದೆಯೆಂಬ ವಿಷಯದಲ್ಲಿ 'ಓಂಕಾರ ಏವೇದಂ ಸರ್ವಮ್' ಎಂಬ ಭಾಷ್ಯದಲ್ಲಿ ಹೇಳಿದ ಶ್ರುತಿಯೇ ಪ್ರಮಾಣವಾಗಿದೆ. ಆದ್ದರಿಂದ ಸಕಲ ವರ್ಣಗಳಿಗೆ ಅಕ್ಷರಶಬ್ದ ಪ್ರತಿಪಾದ್ಯತ್ವವನ್ನು ಸಮರ್ಥಿಸುವುದೇ ಮುಖ್ಯ ಉದ್ದೇಶವಾಗಿದೆ. ಹೊರತು ಓಂಕಾರಕ್ಕೆ ಅಕ್ಷರಶಬ್ದ ಪ್ರತಿಪಾದ್ಯತ್ವವನ್ನು ಮಾಡುವಂತಹ ಉದ್ದೇಶವಿರುವುದಿಲ್ಲವೆಂದು ತಿಳಿಯಬೇಕು.

**प्रकाशः – विकारजातस्येति ।। सर्वस्य ब्रह्मविकारत्वाद्ब्रह्मण्येवाकाशादेरोतत्वं युक्तम् । नतु वर्णेषु ।**

ಸಕಲವೂ ಸಹ ಬ್ರಹ್ಮನ ವಿಕಾರವಾದ್ದರಿಂದ ಆಕಾಶಾದಿಗಳೆಲ್ಲವೂ ಬ್ರಹ್ಮನಲ್ಲಿ ಅಧ್ಯಸ್ಥವಾಗಿದೆಯೆಂದು ಹೇಳಬಹುದು. ಅಂದರೆ ಓತಪ್ರೋತವಾಗಿದೆಯೆಂದು ಹೇಳಬಹುದು ಹೊರತು, ವರ್ಣಗಳಲ್ಲಿ ಆಕಾಶವು ಓತಪ್ರೋತವಾಗಿದೆಯೆಂದು ಹೇಳಲು ಸಾಧ್ಯವಿಲ್ಲ.

**प्रकाशः – नच नामधेयात्मकं रूपधेयमित्युक्तत्वाद्वर्णेष्वपि तद्युक्तमिति वाच्यम् ।**

ರೂಪಧೇಯವೆಲ್ಲವೂ ನಾಮಧೇಯಾತ್ಮಕವೆಂದು ಹೇಳಿದ್ದರಿಂದ ರೂಪಧೇಯವೆನಿಸಿದ ಆಕಾಶಾದಿಗಳು ವರ್ಣಸ್ವರೂಪವೆಂದು ಹೇಳಬಹುದಲ್ಲವೇ?

**प्रकाशः – स्वरूपभेदादुपायभेदादर्थक्रियाभेदाच्च तयोर्भेदात् ।**

ಇದೂ ಸಹ ತಪ್ಪು. ಶಬ್ದ ಹಾಗೂ ಅರ್ಥಗಳಿಗೆ ಅಭೇದವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಸ್ವರೂಪಭೇದ, ಉಪಾಧಿಭೇದ ಹಾಗೂ ಅರ್ಥಕ್ರಿಯಾ ಭೇದಗಳಿಂದ ಶಬ್ದ ಮತ್ತು ಅರ್ಥಗಳಿಗೆ ಭೇದವನ್ನೇ ಹೇಳಬೇಕು.

**प्रकाशः – तथाहि । शब्दत्वसामान्यात्मकानि श्रोत्रग्राह्याण्यर्थप्रत्ययार्थक्रियाणि नामधेयानि । रूपधेयानि तु घटादीनि घटत्वसामान्यात्मकानि चक्षुरादीन्द्रियग्राह्याणि जलाधारप्रावरणाद्यर्थक्रियाणीति तयोर्भेदाद्वर्णेष्वाकाशादेरोतत्वाद्ययोगाद् ब्रह्मैवाक्षरमित्याहुरित्यर्थः ।**

ಅದು ಹೀಗೆ - ಶಬ್ದದಲ್ಲಿ ಶಬ್ದತ್ವವೆಂಬ ಜಾತಿಯಿದೆ, ಶ್ರೋತ್ರಗ್ರಾಹಕತ್ವವೆಂಬ ಉಪಾಧಿಯಿದೆ. ಅರ್ಥಪ್ರತ್ಯಾಯಕತ್ವವೆಂಬ ಅರ್ಥಕ್ರಿಯಾಕಾರಿತ್ವವು ಇರುತ್ತದೆ. ಆದ್ದರಿಂದ ನಾಮಧೇಯವೆನಿಸುತ್ತದೆ.

ರೂಪಧೇಯವೆನಿಸಿದ ಘಟಪಟಾದಿಗಳು ಘಟತ್ವವೆಂಬ ಜಾತಿವುಳ್ಳವುಗಳಾಗಿವೆ. ಚಕ್ಷುರ್ ಇಂದ್ರಿಯದಿಂದ ಗ್ರಾಹ್ಯವಾಗಿದೆ. ಜಲಾಹರಣ ಮೊದಲಾದ ಅರ್ಥಕ್ರಿಯಾಕಾರಿಯಾಗಿವೆ. ಹೀಗೆ ನಾಮಧೇಯ ಹಾಗೂ ರೂಪಧೇಯಗಳಲ್ಲಿ ಸ್ವರೂಪ, ಉಪಾಯ ಹಾಗೂ ಅರ್ಥಕ್ರಿಯಾಗಳಿಗೆ ಪರಸ್ಪರ ಭೇದವಿರುವುದರಿಂದ ಎರಡಕ್ಕೂ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ವರ್ಣಗಳಲ್ಲಿ ಆಕಾಶಾದಿಗಳಿಗೆ ಓತತ್ವವನ್ನೂ ಸಹ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನೇ ಅಕ್ಷರನೆಂದು ನಿರ್ಣಯವಾಗುತ್ತದೆ. ಇಷ್ಟು ಅದ್ವೈತಿಗಳು ಹೇಳುವ ಸಿದ್ಧಾಂತ.

**प्रकाशः** – जातिसम्भेदस्य जातितादात्म्यस्येत्यर्थः । नन्वत्राप्योतप्रोतपदाभ्यां पृथिव्याद्यम्बरान्तसर्वात्मकत्वमेवोच्यते । नतु तदाश्रयत्वमिति चेन्न ।

ಅದ್ವೈತಿಗಳ ಸಿದ್ಧಾಂತವು ಅಸಾಧುವಾಗಿದೆ. ಏಕೆಂದರೆ ಗೋತ್ವಾದಿ ಜಾತಿಗಳಿಗೂ ಗೋವಿಗೂ ತಾದಾತ್ಮ್ಯವೇ ಇರುತ್ತದೆ.

ಶಂಕೆ - ನಾವೂ ಸಹ ಓತಪ್ರೋತ ಪದಗಳಿಂದ ಪೃಥಿವಿಯಿಂದ ಆಕಾಶದ ತನಕ ಇರುವ ಸಕಲ ಪದಾರ್ಥಗಳಿಗೆ ಸರ್ವಾತ್ಮಕತ್ವವನ್ನೇ ಹೇಳಿದ್ದೇವೆ ಹೊರತು, ತದಾಶ್ರಯತ್ವವನ್ನು ಹೇಳಿಲ್ಲ. ಆದ್ದರಿಂದ ನೀವು ಹೇಳುವ ಜಾತಿ, ತಾದಾತ್ಮ್ಯವು ನಮಗೂ ಸಹ ಸಮ್ಮತವೇ ಆಗಿದೆಯಲ್ಲವೇ?

**प्रकाशः** – सूत्रे धृतेरिति धृतिपदायोगात् । ''पृथिव्यादेराकाशान्तस्य धारणात्'' इति त्वदीयभाष्याद्युक्त्योगाच्च ।

ಸಮಾಧಾನ - ತಾದಾತ್ಮ್ಯವನ್ನು ನಿಮಗೆ ಹೇಳಲಾಗದು. ಏಕೆಂದರೆ ಸೂತ್ರದಲ್ಲಿ 'ಧೃತೇಃ' ಎಂಬುದಾಗಿ 'ಧೃತಿ' ಪದವನ್ನು ಪ್ರಯೋಗಿಸಿದ್ದರಿಂದ ಭೇದವೇ ತಿಳಿಯುತ್ತದೆ. ಮತ್ತು ನಿಮ್ಮ ಭಾಷ್ಯದಲ್ಲಿಯೂ ಸಹ 'ಪೃಥಿವ್ಯಾದೇಃ ಆಕಾಶಾಂತಸ್ಯ ಧಾರಣಾತ್' ಎಂಬುದಾಗಿ ಧಾರಣ ಎಂಬ ಶಬ್ದವನ್ನು ಪ್ರಯೋಗಿಸಿದ್ದರಿಂದ ಆಕಾಶಾದಿಗಳಿಗೆ ಸರ್ವಾತ್ಮಕತ್ವವನ್ನು ಹೇಳಲು ಸಾಧ್ಯವಿಲ್ಲ.

**प्रकाशः** – न चात्राक्षरस्य सर्वात्मकत्वं भ्रान्त्वाऽक्षरस्य वर्णत्वं शङ्क्यत इति युक्तम् । तथात्वे गौरयं वृक्षोऽयमित्यादौ रूपधेयस्य नामधेयसम्भेदेन भानेऽपीह सर्वाधारत्वमेवोच्यते । नत्वम्बरान्तसम्भेदोऽक्षरस्योच्यते । येन नामरूपसम्भेदोपपादनं सङ्गच्छेतेत्येव समाधिर्वाच्यः । नतु नामरूपभेदसमर्थनेन समाधिर्वाच्यः ।

ಶಂಕೆ - ಅಕ್ಷರವು ಸರ್ವಾತ್ಮಕವೆಂದು ಭ್ರಾಂತಿಯಿಂದ ತಿಳಿದು, ಅಕ್ಷರಕ್ಕೆ ವರ್ಣಾತ್ಮಕತ್ವವನ್ನು ಪೂರ್ವಪಕ್ಷ ಮಾಡಲಾಗಿದೆ. ವಾಸ್ತವಿಕವಾಗಿ ಸಿದ್ಧಾಂತದಲ್ಲಿ ಓತಪ್ರೋತ ಶಬ್ದಗಳಿಗೆ ಧಾರಣೆ ಎಂಬರ್ಥವನ್ನು ಮಾಡುವುದರಿಂದ ಧೃತಿ, ಧಾರಣ ಮೊದಲಾದ ಶಬ್ದ ಪ್ರಯೋಗವು ಯುಕ್ತವಾಗುತ್ತದಲ್ಲವೇ?

ಹೇಳಿದಂತಾಗುತ್ತದೆ. ವಿಷಯವಾಕ್ಯದಲ್ಲಿ ಶ್ರುತವಾದ ಸರ್ವಾತ್ಮಕತ್ವವನ್ನು ಸಕಲವರ್ಣಗಳಲ್ಲಿ ಹೇಳಿದಂತಾಗುತ್ತದೆ. 'ವರ್ಣಗಳು ಸರ್ವಾತ್ಮಕವಾಗಿವೆ' ಎಂಬ ವಿಷಯದಲ್ಲಿ ಸ್ಪಷ್ಟ ಶ್ರುತಿಯು ಇಲ್ಲದ ಕಾರಣ ಓಂಕಾರಕ್ಕೆ ಸಕಲ ವರ್ಣಾತ್ಮಕತ್ವವು ಬೇರೆ ಶ್ರುತಿಯಿಂದ ಸಿದ್ಧವಾಗಿದೆಯೆಂದು ಹೇಳಿದ್ದಾರೆ. ಓಂಕಾರವು ಸರ್ವಾತ್ಮಕವಾದ ಮೇಲೆ ಅದರಿಂದ ಅಭಿನ್ನವಾದ ಸಕಲ ವರ್ಣಗಳೂ ಸಹ ಸರ್ವಾತ್ಮಕವೆಂದೇ ಹೇಳಿದಂತಾಗುತ್ತದೆ. ಓಂಕಾರವು ಸರ್ವಾತ್ಮಕವಾಗಿದೆಯೆಂಬ ವಿಷಯದಲ್ಲಿ 'ಓಂಕಾರ ಏವೇದಂ ಸರ್ವಮ್' ಎಂಬ ಭಾಷ್ಯದಲ್ಲಿ ಹೇಳಿದ ಶ್ರುತಿಯೇ ಪ್ರಮಾಣವಾಗಿದೆ. ಆದ್ದರಿಂದ ಸಕಲ ವರ್ಣಗಳಿಗೆ ಅಕ್ಷರಶಬ್ದ ಪ್ರತಿಪಾದ್ಯತ್ವವನ್ನು ಸಮರ್ಥಿಸುವುದೇ ಮುಖ್ಯ ಉದ್ದೇಶವಾಗಿದೆ. ಹೊರತು ಓಂಕಾರಕ್ಕೆ ಅಕ್ಷರಶಬ್ದ ಪ್ರತಿಪಾದ್ಯತ್ವವನ್ನು ಮಾಡುವಂತಹ ಉದ್ದೇಶವಿರುವುದಿಲ್ಲವೆಂದು ತಿಳಿಯಬೇಕು.

**प्रकाशः** – विकारजातस्येति ।। सर्वस्य ब्रह्मविकारत्वाद्ब्रह्मण्येवाकाशादेरोतत्वं युक्तम् । नतु वर्णेषु ।

ಸಕಲವೂ ಸಹ ಬ್ರಹ್ಮನ ವಿಕಾರವಾದ್ದರಿಂದ ಆಕಾಶಾದಿಗಳೆಲ್ಲವೂ ಬ್ರಹ್ಮನಲ್ಲಿ ಅಧ್ಯಸ್ಥವಾಗಿದೆಯೆಂದು ಹೇಳಬಹುದು. ಅಂದರೆ ಓತಪ್ರೋತವಾಗಿದೆಯೆಂದು ಹೇಳಬಹುದು ಹೊರತು, ವರ್ಣಗಳಲ್ಲಿ ಆಕಾಶವು ಓತಪ್ರೋತವಾಗಿದೆಯೆಂದು ಹೇಳಲು ಸಾಧ್ಯವಿಲ್ಲ.

**प्रकाशः** – नच नामधेयात्मकं रूपधेयमित्युक्तत्वाद्वर्णेष्वपि तद्युक्तमिति वाच्यम् ।

ರೂಪಧೇಯವೆಲ್ಲವೂ ನಾಮಧೇಯಾತ್ಮಕವೆಂದು ಹೇಳಿದ್ದರಿಂದ ರೂಪಧೇಯವೆನಿಸಿದ ಆಕಾಶಾದಿಗಳು ವರ್ಣಸ್ವರೂಪವೆಂದು ಹೇಳಬಹುದಲ್ಲವೇ?

**प्रकाशः** – स्वरूपभेदादुपायभेदादर्थक्रियाभेदाच्च तयोर्भेदात् ।

ಇದೂ ಸಹ ತಪ್ಪು. ಶಬ್ದ ಹಾಗೂ ಅರ್ಥಗಳಿಗೆ ಅಭೇದವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಸ್ವರೂಪಭೇದ, ಉಪಾಧಿಭೇದ ಹಾಗೂ ಅರ್ಥಕ್ರಿಯಾ ಭೇದಗಳಿಂದ ಶಬ್ದ ಮತ್ತು ಅರ್ಥಗಳಿಗೆ ಭೇದವನ್ನೇ ಹೇಳಬೇಕು.

**प्रकाशः** – तथाहि । शब्दत्वसामान्यात्मकानि श्रोत्रग्राह्याण्यर्थप्रत्ययार्थक्रियाणि नामधेयानि । रूपधेयानि तु घटादीनि घटत्वसामान्यात्मकानि चक्षुरादीन्द्रियग्राह्याणि जलाधारप्रावरणाद्यर्थक्रियाणीति तयोर्भेदाद्वर्णेष्वाकाशादेरोतत्वाद्ययोगाद् ब्रह्मैवाक्षर-मित्याहुरित्यर्थः ।

ಅದು ಹೀಗೆ - ಶಬ್ದದಲ್ಲಿ ಶಬ್ದತ್ವವೆಂಬ ಜಾತಿಯಿದೆ, ಶ್ರೋತ್ರಗ್ರಾಹಕತ್ವವೆಂಬ ಉಪಾಧಿಯಿದೆ. ಅರ್ಥಪ್ರತ್ಯಾಯಕತ್ವವೆಂಬ ಅರ್ಥಕ್ರಿಯಾಕಾರಿತ್ವವು ಇರುತ್ತದೆ. ಆದ್ದರಿಂದ ನಾಮಧೇಯವೆನಿಸುತ್ತದೆ.

ರೂಪಧೇಯವೆನಿಸಿದ ಘಟಪಟಾದಿಗಳು ಘಟತ್ವವೆಂಬ ಜಾತಿವುಳ್ಳವುಗಳಾಗಿವೆ. ಚಕ್ಷುರ್ ಇಂದ್ರಿಯದಿಂದ ಗ್ರಾಹ್ಯವಾಗಿದೆ. ಜಲಾಹರಣ ಮೊದಲಾದ ಅರ್ಥಕ್ರಿಯಾಕಾರಿಯಾಗಿವೆ. ಹೀಗೆ ನಾಮಧೇಯ ಹಾಗೂ ರೂಪಧೇಯಗಳಲ್ಲಿ ಸ್ವರೂಪ, ಉಪಾಯ ಹಾಗೂ ಅರ್ಥಕ್ರಿಯಾಗಳಿಗೆ ಪರಸ್ಪರ ಭೇದವಿರುವುದರಿಂದ ಎರಡಕ್ಕೂ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ವರ್ಣಗಳಲ್ಲಿ ಆಕಾಶಾದಿಗಳಿಗೆ ಓತತ್ವವನ್ನೂ ಸಹ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನೇ ಅಕ್ಷರನೆಂದು ನಿರ್ಣಯವಾಗುತ್ತದೆ. ಇಷ್ಟು ಅದ್ವೈತಿಗಳು ಹೇಳುವ ಸಿದ್ಧಾಂತ.

**प्रकाशः** – जातिसम्भेदस्य जातितादात्म्यस्येत्यर्थः । नन्वत्राप्योतप्रोतपदाभ्यां पृथिव्याद्यम्बरान्तसर्वात्मकत्वमेवोच्यते । नतु तदाश्रयत्वमिति चेन्न ।

ಅದ್ವೈತಿಗಳ ಸಿದ್ಧಾಂತವು ಅಸಾಧುವಾಗಿದೆ. ಏಕೆಂದರೆ ಗೋತ್ವಾದಿ ಜಾತಿಗಳಿಗೂ ಗೋವಿಗೂ ತಾದಾತ್ಮ್ಯವೇ ಇರುತ್ತದೆ.

ಶಂಕೆ - ನಾವೂ ಸಹ ಓತಪ್ರೋತ ಪದಗಳಿಂದ ಪೃಥಿವಿಯಿಂದ ಆಕಾಶದ ತನಕ ಇರುವ ಸಕಲ ಪದಾರ್ಥಗಳಿಗೆ ಸರ್ವಾತ್ಮಕತ್ವವನ್ನೇ ಹೇಳಿದ್ದೇವೆ ಹೊರತು, ತದಾಶ್ರಯತ್ವವನ್ನು ಹೇಳಿಲ್ಲ. ಆದ್ದರಿಂದ ನೀವು ಹೇಳುವ ಜಾತಿ, ತಾದಾತ್ಮ್ಯವು ನಮಗೂ ಸಹ ಸಮ್ಮತವೇ ಆಗಿದೆಯಲ್ಲವೇ?

**प्रकाशः** – सूत्रे धृतेरिति धृतिपदायोगात् । "पृथिव्यादेराकाशान्तस्य धारणात्" इति त्वदीयभाष्याद्युक्तयोगाच्च ।

ಸಮಾಧಾನ - ತಾದಾತ್ಮ್ಯವನ್ನು ನಿಮಗೆ ಹೇಳಲಾಗದು. ಏಕೆಂದರೆ ಸೂತ್ರದಲ್ಲಿ 'ಧೃತೇಃ' ಎಂಬುದಾಗಿ 'ಧೃತಿ' ಪದವನ್ನು ಪ್ರಯೋಗಿಸಿದ್ದರಿಂದ ಭೇದವೇ ತಿಳಿಯುತ್ತದೆ. ಮತ್ತು ನಿಮ್ಮ ಭಾಷ್ಯದಲ್ಲಿಯೂ ಸಹ 'ಪೃಥಿವ್ಯಾದೇಃ ಆಕಾಶಾಂತಸ್ಯ ಧಾರಣಾತ್' ಎಂಬುದಾಗಿ ಧಾರಣ ಎಂಬ ಶಬ್ದವನ್ನು ಪ್ರಯೋಗಿಸಿದ್ದರಿಂದ ಆಕಾಶಾದಿಗಳಿಗೆ ಸರ್ವಾತ್ಮಕತ್ವವನ್ನು ಹೇಳಲು ಸಾಧ್ಯವಿಲ್ಲ.

**प्रकाशः** – न चात्राक्षरस्य सर्वात्मकत्वं भ्रान्त्वाऽक्षरस्य वर्णत्वं शङ्क्यत इति युक्तम् । तथात्वे गौरयं वृक्षोऽयमित्यादौ रूपधेयस्य नामधेयसम्भेदेन भानेऽपीह सर्वाधारत्वमेवोच्यते । नत्वम्बरान्तसम्भेदोऽक्षरस्योच्यते । येन नामरूपसम्भेदोपपादनं सङ्गच्छेतेत्येव समाधिर्वाच्यः । नतु नामरूपभेदसमर्थनेन समाधिर्वाच्यः ।

ಶಂಕೆ - ಅಕ್ಷರವು ಸರ್ವಾತ್ಮಕವೆಂದು ಭ್ರಾಂತಿಯಿಂದ ತಿಳಿದು, ಅಕ್ಷರಕ್ಕೆ ವರ್ಣಾತ್ಮಕತ್ವವನ್ನು ಪೂರ್ವಪಕ್ಷ ಮಾಡಲಾಗಿದೆ. ವಾಸ್ತವಿಕವಾಗಿ ಸಿದ್ಧಾಂತದಲ್ಲಿ ಓತಪ್ರೋತ ಶಬ್ದಗಳಿಗೆ ಧಾರಣೆ ಎಂಬರ್ಥವನ್ನು ಮಾಡುವುದರಿಂದ ಧೃತಿ, ಧಾರಣ ಮೊದಲಾದ ಶಬ್ದ ಪ್ರಯೋಗವು ಯುಕ್ತವಾಗುತ್ತದಲ್ಲವೇ?

ಸಮಾಧಾನ - ಭ್ರಾಂತಿಯಿಂದ ಪೂರ್ವಪಕ್ಷ ಮಾಡುವುದಾದರೆ ಸಿದ್ಧಾಂತದಲ್ಲಿ ಈ ಭ್ರಾಂತಿಯನ್ನೇ ಪರಿಹರಿಸಬೇಕು. ಓತಪ್ರೋತ ಶಬ್ದಗಳಿಗೆ ತಾದಾತ್ಮ್ಯ ಎಂಬರ್ಥವನ್ನು ಹೇಳುತ್ತಿಲ್ಲ. ಆಶ್ರಯತ್ವವೆಂಬರ್ಥವನ್ನೇ ಹೇಳಲಾಗಿದೆ. ಗೌರಯಂ, ವೃಕ್ಷೋಽಯಂ ಇತ್ಯಾದಿ ಪ್ರತೀತಿಗಳಲ್ಲಿ ರೂಪಧೇಯಗಳಿಗೆ, ನಾಮಧೇಯಗಳಿಂದ ಭೇದವೇ ತೋರಿದರೂ ಸಹ ಪ್ರಕೃತ ಆಕಾಶಾದಿಗಳಿಗೆ ಸರ್ವಾತ್ಮಕತ್ವವು ತೋರುತ್ತಿಲ್ಲ ಹೊರತು, ಸರ್ವಾಧಾರತ್ವವೇ ತೋರುತ್ತಿದೆ. ಏಕೆಂದರೆ ಓತಪ್ರೋತ ಶಬ್ದಗಳಿಗೆ ಆಶ್ರಯತ್ವ ಎಂಬರ್ಥವನ್ನು ವಿವಕ್ಷಿಸಿದ್ದರಿಂದ ಅಕ್ಷರ ಹಾಗೂ ಆಕಾಶಾದಿಗಳಿಗೆ ಅಭೇದವನ್ನು ಹೇಳಬಾರದು. ಹೀಗೆ ಋಜುವಾಗಿ ಪೂರ್ವಪಕ್ಷದ ಖಂಡನೆಯನ್ನು ಮಾಡಬೇಕಿತ್ತು. ಇದನ್ನು ಬಿಟ್ಟು ವರ್ಣಗಳಿಗೂ, ಅರ್ಥಗಳಿಗೂ ತಾದಾತ್ಮ್ಯವಿಲ್ಲ ಇತ್ಯಾದಿಯಾಗಿ ಪ್ರಯಾಸಪಟ್ಟು ಸಿದ್ಧಾಂತ ಮಾಡುವುದರಲ್ಲಿ ಅರ್ಥವಿಲ್ಲ.

**प्रकाशः** – एतेन भाष्ये ॐकार एवेदं सर्वमिति सर्ववर्णात्मकतया श्रुत्यन्तरसिद्धोङ्कारस्य सर्वात्मकत्वोक्तिरपि व्यधिकरणा । विषयवाक्येऽक्षरस्य सर्वाभेदाश्रवणादित्युक्तं भवति ।

ಹೀಗೆ ಹೇಳಿದ್ದರಿಂದ ಶಾಂಕರಭಾಷ್ಯದಲ್ಲಿ 'ಓಂಕಾರ ಏವೇದಂ ಸರ್ವಮ್' ಎಂಬುದಾಗಿ ಸರ್ವವರ್ಣಾತ್ಮಕವಾಗಿ ಶ್ರುತ್ಯಂತರಸಿದ್ಧವಾದ ಓಂಕಾರಕ್ಕೆ ಸರ್ವಾತ್ಮಕತ್ವವನ್ನು ಹೇಳಿದ್ದೂ ಸಹ ವ್ಯಧಿಕರಣವಾಗುತ್ತದೆ. ಏಕೆಂದರೆ ವಿಷಯವಾಕ್ಯದಲ್ಲಿ ಓತಪ್ರೋತ ಶಬ್ದದಿಂದ ಭೇದವೇ ತಿಳಿಯುತ್ತಿರುವುದರಿಂದ ಸರ್ವಾಭೇದವು ಶ್ರುತವಾಗಿಲ್ಲ ಎಂದು ಹೇಳಿದಂತಾಯಿತು.

**प्रकाशः** – नन्वत्र द्रष्टृत्वादिना वर्णानामक्षरत्वशङ्कानुपपत्तावुत्तराधिकरणे 'तदैक्षत' इतीक्षणश्रवणेऽपि कथं प्रधानमिति पूर्वपक्ष इत्यत आह – **उत्तरेति** ।।

ಶಂಕೆ - ದ್ರಷ್ಟೃತ್ವಾದಿಗಳ ಬಲದಿಂದ ವರ್ಣಗಳಲ್ಲಿ ಅಕ್ಷರತ್ವಶಂಕೆಯು ಅನುಪಪನ್ನವಾಗುವುದಾದರೆ ಮುಂದಿನ ಅಧಿಕರಣದಲ್ಲಿ 'ತದೈಕ್ಷತ' ಎಂಬುದಾಗಿ ಈಕ್ಷಣವು ಕೇಳಿಸುತ್ತಿದ್ದರೂ ಸಹ ಪ್ರಕೃತಿ(ಪ್ರಧಾನ) ಪರವಾಗಿ ಹೇಗೆ ಪೂರ್ವಪಕ್ಷ ಮಾಡುತ್ತೀರಿ?

ಸಮಾಧಾನ - ಈ ಶಂಕೆಗೆ ಉತ್ತರಾಧಿಕರಣ ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – अन्तर्याम्यधिकरणे द्रष्टृत्वादिश्रवणेऽपि प्रधानमिति पूर्वपक्षकरणमनेन न विरुध्यत इत्येतत्तत्रैवोक्तमस्माभिः ।

ಅಂತರ್ಯಾಮ್ಯಧಿಕರಣದಲ್ಲಿ ದ್ರಷ್ಟೃತ್ವಾದಿಗಳು ಶ್ರುತವಾಗಿದ್ದರೂ ಸಹ ಪ್ರಕೃತಿ ಪರವಾಗಿ ಪೂರ್ವಪಕ್ಷ ಮಾಡುವುದು ವಿರುದ್ಧವಲ್ಲವೆಂಬುದನ್ನು ಅಲ್ಲಿಯೇ ಸಮರ್ಥಿಸಿದ್ದೇವೆ.

**प्रकाशः** – अक्षरस्य वर्णत्वेन पूर्वपक्षे दोषान्तरमाह – **किञ्चैवमिति** ।। गौरयं वृक्षोऽयमित्यादौ नाम्नो रूपात्मना भानेनात्राक्षरशब्दितेषु 'यद्भूतम्' इत्यादिना सर्वात्मकत्वकथनं यद्यभिमतं तदा ''ॐकार एवेदं सर्वम्'' इति श्रुताविव ''यद्भूतं

च भवच्च भविष्यच्चेत्याचक्षते तदक्षर ओतं च प्रोतं च'' इत्येव साक्षात्सर्वसम्भेदोऽक्षरेऽभिधीयेत । मध्ये आकाशप्रणाड्या तदभिधानं व्यर्थमिति श्रुतहानिस्स्यादित्यर्थः ।

ಅಕ್ಷರವನ್ನು ವರ್ಣಸ್ವರೂಪವೆಂದು ಪೂರ್ವಪಕ್ಷವನ್ನ ಮಾಡಿದರೆ ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. 'ಗೌರಯಂ' 'ವೃಕ್ಷೋಽಯಮ್' ಇತ್ಯಾದಿ ಸ್ಥಳಗಳಲ್ಲಿ ನಾಮಧೇಯಕ್ಕೆ ರೂಪಧೇಯದಿಂದ ಅಭೇದವು ಕಾಣಿಸುತ್ತಿರುವುದರಿಂದ ಪ್ರಕೃತ ಅಕ್ಷರಶಬ್ದವಾಚ್ಯವಾದ ವರ್ಣಗಳಲ್ಲಿ 'ಯದ್ಭೂತಂ' ಇತ್ಯಾದಿಯಾಗಿ ಸರ್ವಾತ್ಮಕತ್ವವು ಶ್ರುತವಾಗಿದೆಯೆಂದು ಅಭಿಪ್ರಾಯ ಪಡುವುದಾದರೆ 'ಓಂಕಾರ ಏವೇದಂ ಸರ್ವಮ್' 'ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಕ್ಷತೇ ತದಕ್ಷರ ಓತಂ ಚ ಪ್ರೋತಂಚ' ಎಂಬುದಾಗಿ ನೇರವಾಗಿಯೇ ಸಕಲ ಪದಾರ್ಥಗಳಿಂದ ಭೇದವನ್ನು ಅಕ್ಷರದಲ್ಲಿ ಹೇಳಬೇಕಿತ್ತು. ಅದನ್ನು ಬಿಟ್ಟು ಮಧ್ಯದಲ್ಲಿ ಆಕಾಶವನ್ನು ಹೇಳುವ ಮೂಲಕ ಉತ್ತರ ನೀಡುವಿಕೆಯು ವ್ಯರ್ಥವಾಗುತ್ತದೆ. ಆದ್ದರಿಂದ ಶ್ರುತಹಾನಿ ಎಂಬ ದೋಷವು ಪ್ರಾಪ್ತವಾಗುತ್ತದೆಂದು ತಿಳಿಯಬೇಕು.

**प्रकाशः** – व्यर्थेत्युपलक्षणम् । वक्ष्यमाणदिशा भूतभवद्भविष्यदाद्योतत्वस्यानित्याकाशेऽनुपपत्त्या विरुद्धार्था च स्यादित्यपि ध्येयम् ॥

ಅಥವಾ ಗ್ರಂಥದಲ್ಲಿ ಹೇಳಲ್ಪಟ್ಟ ವ್ಯರ್ಥ ಎಂಬುದು ಉಪಲಕ್ಷಣವಾಗಿದೆ. ಮುಂದೆ ಹೇಳುವ ಪ್ರಕಾರ ಹಿಂದಿನ, ಈಗಿನ ಮತ್ತು ಮುಂದಿನ ಪದಾರ್ಥಗಳೆಲ್ಲವೂ ಅನಿತ್ಯವಾದ ಆಕಾಶದಲ್ಲಿ ಆಶ್ರಿತವಾಗಲು ಸಾಧ್ಯವಿಲ್ಲ. ಆದ್ದರಿಂದ ಅವರ ಪೂರ್ವಪಕ್ಷ ನಿರೂಪಣೆಯು ವ್ಯರ್ಥವಷ್ಟೇ ಅಲ್ಲ, ವಿರುದ್ಧಾರ್ಥವೂ ಆಗಿದೆಯೆಂದು ತಿಳಿಯಬೇಕು.

**गुरुराजीयम्** – **अन्येत्विति** ॥ **अत्र रूप्यते इति** । रूप्यत इति रूपमभिधेयम् । **स्वार्थे** धेयप्रत्यय इति बोध्यम् । अत्र वर्णा एवेत्यनेन न प्रधानजीवयोर्व्यावृत्तिः । किन्तु भाष्य ॐकारमात्रोक्तेस्तस्यैव व्यवच्छेद इति ध्येयम् । **रूपधेयस्य** रूपात्मकप्रपञ्चस्येत्यर्थः । तर्हि भाष्य ॐकारमात्रस्य पूर्वपक्षनिविष्टत्वोक्तिः कथमित्यत आह – **भाष्य इति** ॥ **तन्नेति** ॥ अक्षरत्रयमीरितमित्यादौ यथाऽक्षरशब्दवाच्यत्वं वाऽक्षरत्वजात्याधारत्वं प्रतीयते तथा गौरित्यत्रापीत्यर्थः । **जातिसम्भेदः** जातिसम्बन्धः ।



ಶಾಂಕರಭಾಷ್ಯದ ವ್ಯಾಖ್ಯಾನ ಹೀಗಿದೆ - ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಅಕ್ಷರವು ಅಕಾರಾದಿ ವರ್ಣಗಳೇ ಆಗಿವೆ. ಅಥವಾ ಸಕಲ ವರ್ಣಾತ್ಮಕವಾದ ಓಂಕಾರವೇ ಅಕ್ಷರಶಬ್ದ ಪ್ರತಿಪಾದ್ಯವಾಗಿದೆ. ಉಪನಿಷತ್ತುಗಳಲ್ಲಿ ಕೇವಲ ಉಪಾಸನೆಗಾಗಿ ಹೀಗೆ ವರ್ಣಗಳನ್ನು ಅಕ್ಷರವೆಂದು ವರ್ಣಿಸಲಾಗಿದೆ. ಸಕಲ ಪದಾರ್ಥಗಳು ಶಬ್ದದ ಜೊತೆಗೇನೇ ತೋರುವುದರಿಂದ ಶಬ್ದ ಹಾಗೂ ಅರ್ಥಗಳಿಗೆ ಅಭೇದವನ್ನು ಹೇಳಬೇಕು. ಆದ್ದರಿಂದಲೇ ಉಪನಿಷತ್ತು ಸಕಲ ಪದಾರ್ಥಗಳಿಗೆ ಅಕ್ಷರಾತ್ಮಕತ್ವವನ್ನು ಹೇಳುತ್ತಿದೆಯೆಂದು ಪೂರ್ವಪಕ್ಷ.

ಸಿದ್ಧಾಂತ - ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಇರುವ ಸಕಲ ಪದಾರ್ಥಗಳು ಅಕಾರಾದಿ ಅಕ್ಷರಗಳಲ್ಲಿ ಆಶ್ರಿತವಾಗಲು ಸಾಧ್ಯವಿಲ್ಲ. ನಿರ್ವಿಶೇಷನಾದ ಬ್ರಹ್ಮನೇ ಅಕ್ಷರಶಬ್ದದಿಂದ ಪ್ರತಿಪಾದ್ಯನೆಂದು ಹೇಳಬೇಕು. ಆವಾಗ 'ನ ಕ್ಷರತಿ ಇತಿ ಅಕ್ಷರಮ್' ಎಂಬ ಅಕ್ಷರಶಬ್ದದ ನಿರ್ವಚನವೂ ಸಹ ಸಾಧುವಾಗುತ್ತದೆ.

ಇವರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಸಕಲ ಪದಾರ್ಥಗಳು ಶಬ್ದದ ಜೊತೆಗೆ ಸೇರಿಕೊಂಡೇ ತೋರುತ್ತದೆಂಬ ಪೂರ್ವಪಕ್ಷವು ಸಾಧುವಲ್ಲ. ಏಕೆಂದರೆ 'ಗೌರಯಂ ವೃಕ್ಷೋಽಯಂ' ಇತ್ಯಾದಿ ಪ್ರತೀತಿಗಳಿಂದ ಗೋ ಮೊದಲಾದ ಶಬ್ದ ಪ್ರತಿಪಾದ್ಯತ್ವವು ತಿಳಿಯುತ್ತದೆ ಹೊರತು, ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಸಕಲ ಪದಾರ್ಥಗಳು ಆಶ್ರಿತವಾಗಿವೆಯೆಂದು ಸರ್ವಥಾ ತಿಳಿಯುವುದಿಲ್ಲ. ಮತ್ತು ಅಕ್ಷರಗಳು ಜಡವಾಗಿರುವುದರಿಂದ ಅವುಗಳಲ್ಲಿ ಇಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿ ಚೇತನಧರ್ಮಗಳು ಇರಲು ಸಾಧ್ಯವಿಲ್ಲ. ಆದ್ದರಿಂದ ಅಕಾರಾದಿ ವರ್ಣಗಳೇ ಅಕ್ಷರವೆಂಬ ಪೂರ್ವಪಕ್ಷವು ಅತ್ಯಂತ ದುರ್ಬಲವಾಗಿದೆ.

• • • • •

## ಅದ್ವೈತಿಗಳ ಉಳಿದ ಸೂತ್ರಾರ್ಥಗಳ ನಿರಾಕರಣೆ

### तात्पर्यचन्द्रिका

**सिद्धान्तोऽप्ययुक्तः । "आकाश एव तदोतश्च" इति पूर्ववाक्ये त्रिकालवर्तिवस्त्वाश्रयत्वेनोक्तस्याकाशस्यानित्यभूताकाशतायाः, तथा अवाच्ये निर्विशेषे ब्रह्मणि न क्षरतीति त्वदुक्तस्य योगस्य, तथा "एतद्वै तदक्षरं गार्गि ब्राह्मणा अभिवदन्ति" इति श्रुत्युक्तस्य वाच्यत्वस्य द्रष्टृत्वादेश्चायोगात् ।**

ಅನುವಾದ - ಅದ್ವೈತಿಗಳ ಸಿದ್ಧಾಂತವೂ ಸಹ ಅಯುಕ್ತವಾಗಿದೆ. ಏಕೆಂದರೆ 'ಆಕಾಶ ಏವ ತದೋತಂ ಚ' ಎಂಬ ಪೂರ್ವವಾಕ್ಯದಲ್ಲಿ ಮೂರು ಕಾಲದಲ್ಲಿರುವ ಸಕಲ ವಸ್ತುಗಳಿಗೆ ಆಶ್ರಯವನ್ನಾಗಿ ಹೇಳಲ್ಪಟ್ಟ ಆಕಾಶವನ್ನು ಅನಿತ್ಯವಾದ ಭೂತಾಕಾಶವೆಂದು ಹೇಳುವುದು ತಪ್ಪಾಗುತ್ತದೆ.

ಪರಿಪೂರ್ಣಚಂದ್ರಿಕಾ

ಮತ್ತು ಅವಾಚ್ಯನಾದ ನಿರ್ವಿಶೇಷ ಬ್ರಹ್ಮನಲ್ಲಿ 'ನ ಕ್ಷರತಿ ಇತಿ ಅಕ್ಷರಮ್' ಎಂಬ ಅವಯವಶಕ್ತಿರೂಪವಾದ ಯೋಗಾರ್ಥವೂ ಸಹ ಅಯುಕ್ತವಾಗುತ್ತದೆ.

ಮತ್ತು 'ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಾಚ್ಯತ್ವ ಹಾಗೂ ದ್ರಷ್ಟೃತ್ವಾದಿಗಳೆಲ್ಲವೂ ಅಯುಕ್ತವಾಗುತ್ತವೆ.

**आद्यसूत्रे धृतिपदं चायुक्तम् । त्वन्मते भ्रमाधिष्ठानत्वादन्यस्य धारणस्याभावात् ।**

ಪ್ರಥಮ ಸೂತ್ರದಲ್ಲಿರುವ ಧೃತಿಪದವೂ ಸಹ ಅಯುಕ್ತವಾಗುತ್ತದೆ. ಏಕೆಂದರೆ ಅದ್ವೈತಿಗಳ ಮತದಲ್ಲಿ ಭ್ರಮಾಧಿಷ್ಠಾನತ್ವವನ್ನು ಬಿಟ್ಟು ಮತ್ತೊಂದು ಬಗೆಯ ಧಾರಣವನ್ನು ಬ್ರಹ್ಮನಲ್ಲಿ ಹೇಳಲು ಸಾಧ್ಯವಾಗುವುದಿಲ್ಲ.

**तस्य च "आकाश एव तदोतम्" इत्यादिप्रक्रमानानुगुण्यात् । नह्याकाशे त्रैकालिकं वस्त्वध्यस्तम् ।**

ಭ್ರಮಾಧಿಷ್ಠಾನರೂಪವಾದ ಆಶ್ರಯವನ್ನೇ ಹೇಳುತ್ತೇವೆಂದು ಉತ್ತರಿಸಲಾಗದು. ಏಕೆಂದರೆ ಉಪಕ್ರಮದಲ್ಲಿ 'ಆಕಾಶ ಏವ ತದೋತಂ ಚ' ಇತ್ಯಾದಿಯಾಗಿ ಆಕಾಶದಲ್ಲಿ ಸಕಲ ವಸ್ತುಗಳು ಆಶ್ರಿತವಾಗಿವೆಯೆಂದು ಹೇಳಲಾಗಿದೆ. ಮೂರು ಕಾಲಗಳಲ್ಲಿರುವ ಸಕಲ ವಸ್ತುಗಳು ಆಕಾಶದಲ್ಲಿ ಅಧ್ಯಸ್ತವಾಗಲು ಸಾಧ್ಯವಿಲ್ಲ. ಆದ್ದರಿಂದ ಭ್ರಮಾಧಿಷ್ಠಾನವೆಂಬ ಅರ್ಥವನ್ನು ಉಪಕ್ರಮ ವಾಕ್ಯದಲ್ಲಿ ಹೇಳಲು ಸಾಧ್ಯವಿಲ್ಲದ ಕಾರಣ ಮುಂದಿನ ವಾಕ್ಯದಲ್ಲಿಯೂ ಸಹ ಅದನ್ನು ಹೇಳಬಾರದು.

**द्वितीयोक्तं प्रशासनं चायुक्तम् । यतः –**

**अध्यस्तस्याम्बरान्तस्य ह्यधिष्ठानात्मिका चितिः ।**
**न शास्त्री नहि शुक्त्यादि शास्ति रूप्यादिकं क्वचित् ॥ १ ॥**

ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನವೂ ಸಹ ಅದ್ವೈತಿಗಳ ಸಿದ್ಧಾಂತದಲ್ಲಿ ಅಯುಕ್ತವಾಗುತ್ತದೆ. ಏಕೆಂದರೆ

ಅಧ್ಯಸ್ತಸ್ಯಾಂಬರಾಂತಸ್ಯ ಹ್ಯಧಿಷ್ಠಾನಾತ್ಮಿಕಾ ಚಿತಿಃ ।
ನ ಶಾಸ್ತ್ರೀ ನಹಿ ಶುಕ್ತ್ಯಾದಿ ಶಾಸ್ತಿ ರೂಪ್ಯಾದಿಕಂ ಕ್ವಚಿತ್ ॥೧॥

ಆಕಾಶದ ತನಕ ಸಕಲ ಪದಾರ್ಥಗಳು ಅಧ್ಯಸ್ಥವಾಗಿವೆ. ಚಿತ್‌ಸ್ವರೂಪವು ಅಧಿಷ್ಠಾನರೂಪವಾಗಿದೆ. ಇಂತಹ ಅಧಿಷ್ಠಾನರೂಪವಾದ ಚಿತ್‌ಸ್ವರೂಪವು ಅಧ್ಯಸ್ತಪದಾರ್ಥಗಳನ್ನು ಶಾಸನ ಮಾಡಲು ಸಾಧ್ಯವಿಲ್ಲ. ಅಧಿಷ್ಠಾನವಾದ ಶುಕ್ತಿಯು ಅಧ್ಯಸ್ತವಾದ ರಜತಾದಿಗಳನ್ನು ಶಾಸನ ಮಾಡಲು ಎಂದೂ ಸಹ ಹೇಗೆ ಸಾಧ್ಯವಿಲ್ಲವೋ ಅದರಂತೆ.




ಶಾಂಕರಭಾಷ್ಯದ ವ್ಯಾಖ್ಯಾನ ಹೀಗಿದೆ - ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಅಕ್ಷರವು ಅಕಾರಾದಿ ವರ್ಣಗಳೇ ಆಗಿವೆ. ಅಥವಾ ಸಕಲ ವರ್ಣಾತ್ಮಕವಾದ ಓಂಕಾರವೇ ಅಕ್ಷರಶಬ್ದ ಪ್ರತಿಪಾದ್ಯವಾಗಿದೆ. ಉಪನಿಷತ್ತುಗಳಲ್ಲಿ ಕೇವಲ ಉಪಾಸನೆಗಾಗಿ ಹೀಗೆ ವರ್ಣಗಳನ್ನು ಅಕ್ಷರವೆಂದು ವರ್ಣಿಸಲಾಗಿದೆ. ಸಕಲ ಪದಾರ್ಥಗಳು ಶಬ್ದದ ಜೊತೆಗೇನೇ ತೋರುವುದರಿಂದ ಶಬ್ದ ಹಾಗೂ ಅರ್ಥಗಳಿಗೆ ಅಭೇದವನ್ನು ಹೇಳಬೇಕು. ಆದ್ದರಿಂದಲೇ ಉಪನಿಷತ್ತು ಸಕಲ ಪದಾರ್ಥಗಳಿಗೆ ಅಕ್ಷರಾತ್ಮಕತ್ವವನ್ನು ಹೇಳುತ್ತಿದೆಯೆಂದು ಪೂರ್ವಪಕ್ಷ.

ಸಿದ್ಧಾಂತ - ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಇರುವ ಸಕಲ ಪದಾರ್ಥಗಳು ಅಕಾರಾದಿ ಅಕ್ಷರಗಳಲ್ಲಿ ಆಶ್ರಿತವಾಗಲು ಸಾಧ್ಯವಿಲ್ಲ. ನಿರ್ವಿಶೇಷನಾದ ಬ್ರಹ್ಮನೇ ಅಕ್ಷರಶಬ್ದದಿಂದ ಪ್ರತಿಪಾದ್ಯನೆಂದು ಹೇಳಬೇಕು. ಆವಾಗ 'ನ ಕ್ಷರತಿ ಇತಿ ಅಕ್ಷರಮ್' ಎಂಬ ಅಕ್ಷರಶಬ್ದದ ನಿರ್ವಚನವೂ ಸಹ ಸಾಧುವಾಗುತ್ತದೆ.

ಇವರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಸಕಲ ಪದಾರ್ಥಗಳು ಶಬ್ದದ ಜೊತೆಗೆ ಸೇರಿಕೊಂಡೇ ತೋರುತ್ತದೆಂಬ ಪೂರ್ವಪಕ್ಷವು ಸಾಧುವಲ್ಲ. ಏಕೆಂದರೆ 'ಗೌರಯಂ ವೃಕ್ಷೋಽಯಂ' ಇತ್ಯಾದಿ ಪ್ರತೀತಿಗಳಿಂದ ಗೋ ಮೊದಲಾದ ಶಬ್ದ ಪ್ರತಿಪಾದ್ಯತ್ವವು ತಿಳಿಯುತ್ತದೆ ಹೊರತು, ಪೃಥಿವಿಯಿಂದ ಪ್ರಾರಂಭಿಸಿ ಆಕಾಶದ ತನಕ ಸಕಲ ಪದಾರ್ಥಗಳು ಆಶ್ರಿತವಾಗಿವೆಯೆಂದು ಸರ್ವಥಾ ತಿಳಿಯುವುದಿಲ್ಲ. ಮತ್ತು ಅಕ್ಷರಗಳು ಜಡವಾಗಿರುವುದರಿಂದ ಅವುಗಳಲ್ಲಿ ಇಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿ ಚೇತನಧರ್ಮಗಳು ಇರಲು ಸಾಧ್ಯವಿಲ್ಲ. ಆದ್ದರಿಂದ ಅಕಾರಾದಿ ವರ್ಣಗಳೇ ಅಕ್ಷರವೆಂಬ ಪೂರ್ವಪಕ್ಷವು ಅತ್ಯಂತ ದುರ್ಬಲವಾಗಿದೆ.

• • • • •

## ಅದ್ವೈತಿಗಳ ಉಳಿದ ಸೂತ್ರಾರ್ಥಗಳ ನಿರಾಕರಣೆ

## तात्पर्यचन्द्रिका

**सिद्धान्तोऽप्ययुक्तः । "आकाश एव तदोतश्च" इति पूर्ववाक्ये त्रिकालवर्तिवस्त्वाश्रयत्वेनोक्तस्याकाशस्यानित्यभूताकाशतायाः, तथा अवाच्ये निर्विशेषे ब्रह्मणि न क्षरतीति त्वदुक्तस्य योगस्य, तथा "एतद्वै तदक्षरं गार्गि ब्राह्मणा अभिवदन्ति" इति श्रुत्युक्तस्य वाच्यत्वस्य द्रष्टृत्वादेश्चायोगात् ।**

ಅನುವಾದ - ಅದ್ವೈತಿಗಳ ಸಿದ್ಧಾಂತವೂ ಸಹ ಅಯುಕ್ತವಾಗಿದೆ. ಏಕೆಂದರೆ 'ಆಕಾಶ ಏವ ತದೋತಂ ಚ' ಎಂಬ ಪೂರ್ವವಾಕ್ಯದಲ್ಲಿ ಮೂರು ಕಾಲದಲ್ಲಿರುವ ಸಕಲ ವಸ್ತುಗಳಿಗೆ ಆಶ್ರಯವನ್ನಾಗಿ ಹೇಳಲ್ಪಟ್ಟ ಆಕಾಶವನ್ನು ಅನಿತ್ಯವಾದ ಭೂತಾಕಾಶವೆಂದು ಹೇಳುವುದು ತಪ್ಪಾಗುತ್ತದೆ.

ಮತ್ತು ಅವಾಚ್ಯನಾದ ನಿರ್ವಿಶೇಷ ಬ್ರಹ್ಮನಲ್ಲಿ 'ನ ಕ್ಷರತಿ ಇತಿ ಅಕ್ಷರಮ್' ಎಂಬ ಅವಯವಶಕ್ತಿರೂಪವಾದ ಯೋಗಾರ್ಥವೂ ಸಹ ಅಯುಕ್ತವಾಗುತ್ತದೆ.

ಮತ್ತು 'ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಾಚ್ಯತ್ವ ಹಾಗೂ ದ್ರಷ್ಟೃತ್ವಾದಿಗಳೆಲ್ಲವೂ ಅಯುಕ್ತವಾಗುತ್ತವೆ.

**आद्यसूत्रे धृतिपदं चायुक्तम् । त्वन्मते भ्रमाधिष्ठानत्वादन्यस्य धारणस्याभावात् ।**

ಪ್ರಥಮ ಸೂತ್ರದಲ್ಲಿರುವ ಧೃತಿಪದವೂ ಸಹ ಅಯುಕ್ತವಾಗುತ್ತದೆ. ಏಕೆಂದರೆ ಅದ್ವೈತಿಗಳ ಮತದಲ್ಲಿ ಭ್ರಮಾಧಿಷ್ಠಾನತ್ವವನ್ನು ಬಿಟ್ಟು ಮತ್ತೊಂದು ಬಗೆಯ ಧಾರಣವನ್ನು ಬ್ರಹ್ಮನಲ್ಲಿ ಹೇಳಲು ಸಾಧ್ಯವಾಗುವುದಿಲ್ಲ.

**तस्य च ''आकाश एव तदोतम्'' इत्यादिप्रक्रमानानुगुण्यात् । नह्याकाशे त्रैकालिकं वस्त्वध्यस्तम् ।**

ಭ್ರಮಾಧಿಷ್ಠಾನರೂಪವಾದ ಆಶ್ರಯವನ್ನೇ ಹೇಳುತ್ತೇವೆಂದು ಉತ್ತರಿಸಲಾಗದು. ಏಕೆಂದರೆ ಉಪಕ್ರಮದಲ್ಲಿ 'ಆಕಾಶ ಏವ ತದೋತಂ ಚ' ಇತ್ಯಾದಿಯಾಗಿ ಆಕಾಶದಲ್ಲಿ ಸಕಲ ವಸ್ತುಗಳು ಆಶ್ರಿತವಾಗಿವೆಯೆಂದು ಹೇಳಲಾಗಿದೆ. ಮೂರು ಕಾಲಗಳಲ್ಲಿರುವ ಸಕಲ ವಸ್ತುಗಳು ಆಕಾಶದಲ್ಲಿ ಅಧ್ಯಸ್ತವಾಗಲು ಸಾಧ್ಯವಿಲ್ಲ. ಆದ್ದರಿಂದ ಭ್ರಮಾಧಿಷ್ಠಾನವೆಂಬ ಅರ್ಥವನ್ನು ಉಪಕ್ರಮ ವಾಕ್ಯದಲ್ಲಿ ಹೇಳಲು ಸಾಧ್ಯವಿಲ್ಲದ ಕಾರಣ ಮುಂದಿನ ವಾಕ್ಯದಲ್ಲಿಯೂ ಸಹ ಅದನ್ನು ಹೇಳಬಾರದು.

**द्वितीयोक्तं प्रशासनं चायुक्तम् । यतः –**

**अध्यस्तस्याम्बरान्तस्य ह्यधिष्ठानात्मिका चितिः ।**
**न शास्त्री नहि शुक्त्यादि शास्ति रूप्यादिकं क्वचित् ।। १ ।।**

ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನವೂ ಸಹ ಅದ್ವೈತಿಗಳ ಸಿದ್ಧಾಂತದಲ್ಲಿ ಅಯುಕ್ತವಾಗುತ್ತದೆ. ಏಕೆಂದರೆ

ಅಧ್ಯಸ್ತಸ್ಯಾಂಬರಾಂತಸ್ಯ ಹ್ಯಧಿಷ್ಠಾನಾತ್ಮಿಕಾ ಚಿತಿಃ ।
ನ ಶಾಸ್ತ್ರೀ ನಹಿ ಶುಕ್ತ್ಯಾದಿ ಶಾಸ್ತಿ ರೂಪ್ಯಾದಿಕಂ ಕ್ವಚಿತ್ ।।೧।।

ಆಕಾಶದ ತನಕ ಸಕಲ ಪದಾರ್ಥಗಳು ಅಧ್ಯಸ್ಥವಾಗಿವೆ. ಚಿತ್‌ಸ್ವರೂಪವು ಅಧಿಷ್ಠಾನರೂಪವಾಗಿದೆ. ಇಂತಹ ಅಧಿಷ್ಠಾನರೂಪವಾದ ಚಿತ್‌ಸ್ವರೂಪವು ಅಧ್ಯಸ್ತಪದಾರ್ಥಗಳನ್ನು ಶಾಸನ ಮಾಡಲು ಸಾಧ್ಯವಿಲ್ಲ. ಅಧಿಷ್ಠಾನವಾದ ಶುಕ್ತಿಯು ಅಧ್ಯಸ್ತವಾದ ರಜತಾದಿಗಳನ್ನು ಶಾಸನ ಮಾಡಲು ಎಂದೂ ಸಹ ಹೇಗೆ ಸಾಧ್ಯವಿಲ್ಲವೋ ಅದರಂತೆ.

**न हीह सविशेषं ब्रह्म प्रतिपाद्यम् । नच निर्विशेषे व्यावहारिकमपि शास्तृत्वमस्ति । प्रातिभासिकं तु प्रधानेऽपि ।**

ಸವಿಶೇಷ ಬ್ರಹ್ಮನು ಪ್ರತಿಪಾದ್ಯನೆಂದು ನೀವೇ ಒಪ್ಪಿಲ್ಲ ನಿರ್ವಿಶೇಷ ಬ್ರಹ್ಮನಲ್ಲಿ ವ್ಯಾವಹಾರಿಕವಾದ ಶಾಸ್ತೃತ್ವವೂ ಸಹ ಇರಲು ಸಾಧ್ಯವಿಲ್ಲ. ಪ್ರಾತಿಭಾಸಿಕವಾದ ಶಾಸ್ತೃತ್ವವನ್ನು ಹೇಳುವುದಾದರೆ ಪ್ರಧಾನದಲ್ಲಿಯೇ ಹೇಳಬಹುದು.

**यच्चोक्तं चेतनधर्मः शास्तृत्वं चेतने ब्रह्मण्येवारोप्यते । नत्वचेतने प्रधाने । नहि राजत्वं राजपरिवारोपेतेऽमात्य इव कुड्येऽप्यारोप्यत इति ।**

ಈ ವಿಷಯದಲ್ಲಿ ಕಲ್ಪತರುವಿನಲ್ಲಿ ಹೀಗೆ ಉತ್ತರಿಸಲು ಪ್ರಯತ್ನಿಸಲಾಗಿ. ಶಾಸ್ತೃತ್ವವು ಚೇತನನ ಧರ್ಮವಾಗಿದೆ. ಇಂತಹ ಶಾಸ್ತೃತ್ವವನ್ನು ಚೇತನನೇ ಆಗಿರುವ ಬ್ರಹ್ಮನಲ್ಲಿ ಆರೋಪ ಮಾಡಬಹುದೇ ಹೊರತು, ಅಚೇತನವಾದ ಪ್ರಕೃತಿಯಲ್ಲಿ ಆರೋಪ ಮಾಡಲು ಬರುವುದಿಲ್ಲ. ಯಾವರೀತಿಯಾಗಿ ರಾಜನ ಪರಿವಾರದಿಂದ ಕೂಡಿರುವಂತಹ ಮಂತ್ರಿಯಲ್ಲಷ್ಟೇ ರಾಜತ್ವವನ್ನು ಆರೋಪ ಮಾಡಬಹುದೇ ಹೊರತು, ಯಾವುದೇ ರೀತಿಯಲ್ಲಿ ಸಾದೃಶ್ಯವಿಲ್ಲದ ಗೋಡೆ ಮೊದಲಾದವುಗಳಲ್ಲಿ ರಾಜತ್ವವನ್ನು ಆರೋಪ ಮಾಡಲು ಬರುವುದಿಲ್ಲವೋ ಅದರಂತೆ.

**तन्न । परमतेऽधिष्ठानाध्यस्तयोः सादृश्यनियमाभावात् । अमात्ये राजसादृश्यवन्निर्विशेषे ज्ञातृरूपचेतनसादृश्याभावाच्च ।**

ಈ ಉತ್ತರವೂ ಸಹ ಸರಿಯಲ್ಲ. ಅದ್ವೈತಿಗಳ ಮತದಲ್ಲಿ ಅಧಿಷ್ಠಾನ ಹಾಗೂ ಅಧ್ಯಸ್ತಗಳಿಗೆ ಸಾದೃಶ್ಯವಿರಬೇಕೆಂಬ ನಿಯಮವೇ ಇರುವುದಿಲ್ಲ. ಮತ್ತು ಮಂತ್ರಿಯಲ್ಲಿ ರಾಜನ ಸಾದೃಶ್ಯವಿರುವಂತೆ ನಿರ್ವಿಶೇಷ ಬ್ರಹ್ಮನಲ್ಲಿ ಜ್ಞಾತೃರೂಪನಾದ ಚೇತನನ ಸಾದೃಶ್ಯವೇ ಇರುವುದಿಲ್ಲ.

**शासनकर्तृत्वरूपशास्तृत्वादेर्जडान्तःकरणधर्मत्वेन जडस्य प्रधानस्यैव तत्सदृशत्वाच्च ।**

ವಿಚಾರ ಮಾಡಿದರೆ ಶಾಸ್ತೃತ್ವವನ್ನು ಪ್ರಧಾನದಲ್ಲಿ ಆರೋಪ ಮಾಡುವುದೇ ಅದ್ವೈತಿಗಳಿಗೆ ಸುಲಭ. ಏಕೆಂದರೆ ಶಾಸನಕರ್ತೃತ್ವವೆಂಬ ಶಾಸ್ತೃತ್ವವು ಜಡವಾದ ಅಂತಃಕರಣದ ಧರ್ಮವಾಗಿದೆ. ಜಡವೇ ಆಗಿರುವಂತಹ ಪ್ರಧಾನದಲ್ಲಿ ಇಂತಹ ಶಾಸ್ತೃತ್ವವನ್ನು ಆರೋಪ ಮಾಡುವುದು ಸುಲಭ. ಏಕೆಂದರೆ ಜಡತ್ವ ಧರ್ಮದಿಂದ ಎರಡಕ್ಕೂ ಸಾದೃಶ್ಯವಿದೆ.

**यच्चोक्तं यदन्यद्ब्रह्मणोऽक्षरशब्दवाच्यमिहाशङ्क्यते प्रधानजीवादितद्भावादिदमक्षरं व्यावर्तयति श्रुतिः । द्रष्टृत्वादेः प्रधानादावसम्भवादिति तृतीयसूत्रार्थ इति ।**

ಅದ್ವೈತಿಗಳ ಮೂರನೆಯ ಸೂತ್ರವ್ಯಾಖ್ಯಾನ ಹೀಗಿದೆ - 'ಅನ್ಯಭಾವವ್ಯಾವೃತ್ತೇಶ್ಚ' ಎಂದರೆ 'ಬ್ರಹ್ಮನಿಗಿಂತ ಅನ್ಯವಾದ ಪ್ರಧಾನ, ಜೀವ ಮೊದಲಾದ ಯಾವುದೇ ಪದಾರ್ಥಗಳೂ ಸಹ ಅಕ್ಷರಶಬ್ದ ವಾಚ್ಯವಾಗುವುದಿಲ್ಲ' ಎಂಬುದಾಗಿ ಶ್ರುತಿಯು ಬ್ರಹ್ಮನಿಗಿಂತ ಭಿನ್ನವಾದದ್ದು ಅಕ್ಷರವಾಗಬಹುದಲ್ಲವೇ ಎಂಬ ಆಶಂಕೆಯನ್ನು ವ್ಯಾವೃತ್ತಿ ಮಾಡುತ್ತಿದೆ. ಏಕೆಂದರೆ ದ್ರಷ್ಟೃತ್ವಾದಿಗುಣಗಳು ಪ್ರಧಾನಾದಿಗಳಲ್ಲಿ ಅಸಂಭಾವಿತವಾದ್ದರಿಂದ ಎಂದು.

**तन्न । द्रष्टृत्वादेरिवाम्बरान्तधृतिप्रशासनयोरपि वर्णादावसम्भवतोरनेनैव सूत्रेण विवक्षासम्भवेन पूर्वसूत्रयोर्वैयर्थ्यात् ।**

ಇದೂ ಸಹ ತಪ್ಪು. ಹೀಗೆ ಮೂರನೆಯ ಸೂತ್ರವನ್ನು ವ್ಯಾಖ್ಯಾನಿಸುವುದಾದರೆ ಹಿಂದಿನೆರಡು ಸೂತ್ರಗಳೇ, ಅನಾವಶ್ಯಕ. ಈ ಸೂತ್ರವು ದ್ರಷ್ಟೃತ್ವಾದಿ ಧರ್ಮಗಳಿಂದ ಪ್ರಧಾನಾದಿಗಳನ್ನು ವ್ಯಾವೃತ್ತಿ ಮಾಡುವಂತೆ 'ಅಂಬರಾಂತಧೃತಿ' 'ಪ್ರಶಾಸನ'ಗಳೆಂಬ ಧರ್ಮಗಳಿಂದಲೂ ಸಹ ವರ್ಣಾದಿಗಳನ್ನು ವ್ಯಾವೃತ್ತಿ ಮಾಡುತ್ತದೆಂದು ಹೇಳಬಹುದು. ಸುಲಭವಾಗಿ ಹೀಗೆಯೇ ಹೇಳಲು ಬರುವಾಗ ಹಿಂದಿನೆರಡು ಸೂತ್ರಗಳು ವ್ಯರ್ಥವೇ ಆಗುತ್ತವೆ. ಆದ್ದರಿಂದ ಅದ್ವೈತಿಗಳ ಅಧಿಕರಣ ಶರೀರವಾಗಲೀ ಸೂತ್ರವ್ಯಾಖ್ಯಾನಗಳಾಗಲೀ ಅತ್ಯಂತ ಅಯುಕ್ತವಾಗಿವೆಯೆಂದು ಸಿದ್ಧವಾಯಿತು.

**अक्षरप्रकरणस्थं ''नान्यदतोऽस्मि द्रष्टृ'' इत्यादि वाक्यं त्वन्यत्र व्याख्यातम् ।**

ಅಕ್ಷರ ಪ್ರಕರಣದಲ್ಲಿರುವ 'ನಾನ್ಯದತೋಽಸ್ತಿ ದ್ರಷ್ಟೃ' ಎಂಬ ವಾಕ್ಯವನ್ನು ನೋಡಿದಾಗ ಬ್ರಹ್ಮನನ್ನು ಬಿಟ್ಟು ಮತ್ತೊಬ್ಬ ದ್ರಷ್ಟೃಪುರುಷನಿಲ್ಲವೆಂದು ಹೇಳಿದರೆ, ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಿದಂತೆ ತೋರುತ್ತದೆ. ಆದರೆ ಇದನ್ನು ನಿರಾಕರಿಸಿ ನ್ಯಾಯಮೃತಾದಿ ಗ್ರಂಥಗಳಲ್ಲಿ ಸ್ವತಂತ್ರವಾದ ದ್ರಷ್ಟೃತ್ವವಿಲ್ಲವೆಂಬ ಅಭಿಪ್ರಾಯದಿಂದಷ್ಟೇ ಶ್ರುತಿಯು ಹೀಗೆ ಹೇಳುತ್ತಿದೆಯೆಂದು ವ್ಯಾಖ್ಯಾನಿಸಿದ್ದೇವೆ.

**अत्रापि परमतेऽन्यभावव्यावृत्तेरित्यनेन जीवाद्भेदोक्तेरभेदनिषेधः स्पष्ट एव ।**

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಸಹ ಅದ್ವೈತಿಗಳಿಗೆ 'ಅನ್ಯಭಾವವ್ಯಾವೃತ್ತೇಃ' ಎಂಬ ಸೂತ್ರದಿಂದ ಬ್ರಹ್ಮನಲ್ಲಿ ಜೀವನ ದೆಸೆಯಿಂದ ಭೇದವನ್ನೇ ಒಪ್ಪಿದ್ದಾರೆ. ಆದ್ದರಿಂದ ಅವರಿಗೆ ಇಷ್ಟವಾದ ಅಭೇದವು ಈ ಅಧಿಕರಣದಿಂದಲೂ ಸಿದ್ಧವಾಗಲಿಲ್ಲ.

**प्रकाशः —**

**अनित्येति** ।। 'आत्मन आकाशस्सम्भूतः' इत्यादिश्रुत्या 'न वियदश्रुतेः' इति वक्ष्यमाणदिशा च भूताकाशस्यानित्यत्वादिति भावः

ವಿವರಣೆ - 'ಆತ್ಮನ ಆಕಾಶಃಸಂಭೂತಃ' ಇತ್ಯಾದಿ ಶ್ರುತಿಯಿಂದ ಮತ್ತು 'ನ ವಿಯದಶ್ರುತೇಃ' ಇತ್ಯಾದಿ ಸೂತ್ರದ ಬಲದಿಂದ ಭೂತಾಕಾಶವು ಅನಿತ್ಯವಾಗಿದೆಯೆಂದು ಸಿದ್ಧವಾಗಿದೆ. ಇಂತಹ ಭೂತಾಕಾಶವು ತ್ರೈಕಾಲಿಕ ವಸ್ತುಗಳಿಗೆ ಆಶ್ರಯವಾಗಲು ಸಾಧ್ಯವಾಗುವುದಿಲ್ಲವೆಂದು ಅಭಿಪ್ರಾಯ.

**प्रकाशः – त्वदुक्तस्ययोगस्येति ।।** ''न क्षरत्यश्नुते चेति नित्यत्वव्यापित्वाभ्यां परमेव ब्रह्म'' इति परभाष्येऽभिधानादिति भावः ।

'ನ ಕ್ಷರತಿ ಇತಿ ಅಕ್ಷರಮ್' ಹಾಗೂ 'ಅಶ್ನುತೇ ಚ ಇತಿ ಅಕ್ಷರಮ್' ಎಂಬ ವ್ಯುತ್ಪತ್ತಿಯಿಂದ ನಿತ್ಯತ್ವ ಹಾಗೂ ವ್ಯಾಪಿತ್ವವನ್ನು ಅಕ್ಷರಶಬ್ದವು ಹೇಳುತ್ತಿದೆಯೆಂಬುದಾಗಿ 'ನ ಕ್ಷರತ್ಯಶ್ನುತೇ ಚೇತಿ ನಿತ್ಯತ್ವವ್ಯಾಪಿತ್ವಾಭ್ಯಾಂ ಪರಮೇವ ಬ್ರಹ್ಮ' ಎಂಬ ಶಾಂಕರ ಭಾಷ್ಯದಲ್ಲಿ ಹೇಳಲಾಗಿದೆಯೆಂದು ತಿಳಿಯಬೇಕು. ಇಂತಹ ಯೋಗಾರ್ಥವು ನಿರ್ವಿಶೇಷ ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲ ಎಂದು 'ತ್ವದುಕ್ತಸ್ಯ ಯೋಗಸ್ಯ' ಎಂಬುದರ ಅರ್ಥ.

**प्रकाशः – सूत्रार्थानपि प्रत्याह – आद्येति ।।** श्रुतावोतपदास्वारस्यं चाह – **तस्य चेति ।।** भ्रमाधिष्ठानत्वस्येत्यर्थः ।

ಅದ್ವೈತಿಗಳ ಅಧಿಕರಣ ಶರೀರವನ್ನು ನಿರಾಕರಣೆ ಮಾಡಿ ಸೂತ್ರಾರ್ಥಗಳನ್ನೂ ಸಹ ನಿರಾಕರಿಸುತ್ತಿದ್ದಾರೆ. 'ಆದ್ಯಸೂತ್ರೇ' ಇತ್ಯಾದಿ ವಾಕ್ಯದಿಂದ. ಶ್ರುತಿಯಲ್ಲಿರುವ ಓತ ಎಂಬ ಪದಕ್ಕೆ ಅಸ್ವಾರಸ್ಯ ಬರುತ್ತದೆಂದು 'ತಸ್ಯ ಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ತಸ್ಯ ಚ' ಎಂಬ ಪದಕ್ಕೆ ಭ್ರಮಾಧಿಷ್ಠಾನತ್ವವೆಂಬರ್ಥವು ಎಂದರ್ಥ.

**प्रकाशः – वस्त्वध्यस्तमिति ।।** येनाक्षरे ओतमित्यत्राप्योतशब्दस्याध्यस्तत्वमर्थस्स्यादिति भावः

ತ್ರೈಕಾಲಿಕ ವಸ್ತುಗಳು ಆಕಾಶದಲ್ಲಿ ಅಧ್ಯಸ್ತವಾಗಲು ಸಾಧ್ಯವಿಲ್ಲ. ಹಾಗಾಗಿದ್ದಲ್ಲಿ ಅಕ್ಷರನಲ್ಲಿ ಪ್ರಯೋಗಿಸಲ್ಪಟ್ಟ 'ಓತಂ' ಎಂಬ 'ಓತ' ಶಬ್ದಕ್ಕೂ ಸಹ ಅಧ್ಯಸ್ತವನ್ನೇ ಅರ್ಥವನ್ನಾಗಿ ಹೇಳಬಹುದಿತ್ತೆಂದು ಅಭಿಪ್ರಾಯ.

**प्रकाशः – द्वितीयेति ।।** ''आद्यसूत्रेऽम्बरान्तधृत्या वर्णानामक्षरत्वं निरस्तम् । 'सा च प्रशासनात्' इति सूत्रे जडप्रकृतेरक्षरत्वं निरस्यते । तथाहि । अम्बरान्तधृतेर्विश्वोपादाने प्रधानेऽपि सम्भवात्प्रधानमेवाक्षरमिति शङ्कायां सा च धृतिः परमात्मन एव कर्म । 'एतस्य वा अक्षरस्य प्रशासने गार्गि' इत्यादिनाऽऽज्ञापरपर्यायस्य प्रशासनस्य श्रवणात् । नह्यचेतनस्य प्रशास्तृत्वं युक्तमित्यर्थ उक्तः ।

ಅದ್ವೈತಿಗಳ ಸೂತ್ರಾರ್ಥ ಹೀಗಿದೆ - ''ಆದ್ಯಸೂತ್ರೇಽಂಬರಾಂತಧೃತ್ಯಾ ವರ್ಣಾನಾಮಕ್ಷರತ್ವಂ ನಿರಸ್ತಮ್। ಸಾ ಚ ಪ್ರಶಾಸನಾದಿತಿ ಸೂತ್ರೇ ಜಡಪ್ರಕೃತೇರಕ್ಷರತ್ವಂ ನಿರಸ್ಯತೇ। ತಥಾಹಿ। ಅಂಬರಾಂಧೃತೇರ್ವಿಶ್ವೋಪಾದಾನೇ

ಪ್ರಧಾನೇಽಪಿ ಸಂಭವಾತ್ಪ್ರಧಾನಮೇವಾಕ್ಷರಮಿತಿ ಶಂಕಾಯಾಂ ಸಾ ಚ ಧೃತಿಃ ಪರಮಾತ್ಮನ ಏವ ಕರ್ಮ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಇತ್ಯಾದಿನಾಽಽಜ್ಞಾಪರಪರ್ಯಾಯಸ್ಯ ಪ್ರಶಾಸನಸ್ಯ ಶ್ರವಣಾತ್ । ನಹ್ಯಚೇತನಸ್ಯ ಪ್ರಶಾಸ್ತೃತ್ವಂ ಯುಕ್ತಮ್' ಎಂಬುದಾಗಿ ಪ್ರಥಮ ಸೂತ್ರದಲ್ಲಿ 'ಅಂಬರಾಂತಧೃತಿ' ಎಂಬ ಲಿಂಗದಿಂದ ಅಕಾರಾದಿ ವರ್ಣಗಳಿಗೆ ಅಕ್ಷರತ್ವವನ್ನು ನಿರಾಕರಿಸಿದ್ದಾಯಿತು. 'ಸಾ ಚ ಪ್ರಶಾಸಾನಾತ್' ಎಂಬ ಎರಡನೆಯ ಸೂತ್ರದಲ್ಲಿ ಜಡಪ್ರಕೃತಿಗೆ ಅಕ್ಷರತ್ವವನ್ನು ನಿರಾಕರಿಸುತ್ತಿದ್ದಾರೆ. ಅದು ಹೀಗೆ - ವಿಶ್ವಕ್ಕೆ ಉಪಾದಾನ ಕಾರಣವಾದ ಪ್ರಕೃತಿಯಲ್ಲಿಯೂ ಸಹ ಅಂಬರಾಂತಧಾರಕತ್ವವು ಸಂಭಾವಿತವಾಗುತ್ತದೆ. ಆದ್ದರಿಂದ ಪ್ರಧಾನವೇ ಅಕ್ಷರಶಬ್ದವಾಚ್ಯವಾಗಬಹುದಲ್ಲವೇ? ಎಂಬ ಆಶಂಕೆಗೆ ಎರಡನೆಯ ಸೂತ್ರವು ಉತ್ತರಿಸುತ್ತಿದೆ. ಅಂತಹ ಧಾರಕತ್ವವು ಪರಮಾತ್ಮನ ಕ್ರಿಯೆಯೇ ಆಗಿದೆ. ಏಕೆಂದರೆ 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಇತ್ಯಾದಿ ವಾಕ್ಯದಿಂದ ಆಜ್ಞೆ ಎಂದೆನಿಸಿದ ಪ್ರಶಾಸನವು ಶ್ರುತವಾಗಿದೆ. ಅಚೇತನ ಪದಾರ್ಥಕ್ಕೆ ಪ್ರಶಾಸ್ತೃತ್ವವು ಯುಕ್ತವೇ ಆಗುವುದಿಲ್ಲ. ಹೀಗೆ ಎರಡನೆಯ ಸೂತ್ರವನ್ನು ವ್ಯಾಖ್ಯಾನಿಸಿದ್ದಾರೆ.

**ಪ್ರಕಾಶಃ** – तत्र प्रधान इव निर्विशेषब्रह्मण्यपि प्रशासनं न युक्तम् । सविशेषं तु नात्र प्रतिपाद्यम् । पादासङ्गतेः । स्थौल्यादिनिषेधानुपपत्तेश्चेति भावः ।

ಅದ್ವೈತಿಗಳ ಎರಡನೆಯ ಸೂತ್ರ ವ್ಯಾಖ್ಯಾನವೂ ಸಹ ಅಯುಕ್ತವಾಗಿದೆ. ಯಾವರೀತಿಯಾಗಿ ಪ್ರಧಾನದಲ್ಲಿ ಪ್ರಶಾಸನವು ಯುಕ್ತವಾಗುವುದಿಲ್ಲವೆನ್ನುತ್ತಾರೋ, ಅದರಂತೆ ನಿರ್ವಿಶೇಷ ಬ್ರಹ್ಮನಲ್ಲಿಯೂ ಸಹ ಯಾವುದೇ ಧರ್ಮಗಳಾಗಲೀ, ಕ್ರಿಯೆಗಳಾಗಲೀ, ಇಲ್ಲದ ಕಾರಣ ಅವನಲ್ಲಿಯೂ ಯುಕ್ತವಾಗುವುದಿಲ್ಲ. ಇನ್ನು ಸವಿಶೇಷ ಬ್ರಹ್ಮನನ್ನೇ ಪ್ರತಿಪಾದ್ಯನೆನ್ನಬೇಕು. ಹೀಗೆ ಹೇಳಿದರೆ ನಿರ್ವಿಶೇಷಬ್ರಹ್ಮಪ್ರತಿಪಾದಕವಾದ ಈ ಪಾದದಲ್ಲಿ ಸವಿಶೇಷ ಬ್ರಹ್ಮನ ನಿರೂಪಣೆಯು ಅಸಂಗತವಾಗುತ್ತದೆ. ಅಷ್ಟೇ ಅಲ್ಲದೆ, ಸ್ಥೌಲ್ಯಾದಿ ಧರ್ಮಗಳ ನಿಷೇಧವನ್ನು ಶ್ರುತಿಯು ಅಕ್ಷರನಲ್ಲಿ ಮಾಡುತ್ತಿದೆ. ಸವಿಶೇಷ ಬ್ರಹ್ಮನೇ ಅಕ್ಷರನಾದಲ್ಲಿ ಸ್ಥೌಲ್ಯಾದಿ ಧರ್ಮಗಳಿಗೆ ಆಶ್ರಯನಾದ್ದರಿಂದ ಅವುಗಳ ನಿಷೇಧವೂ ಸಹ ಅನುಪಪನ್ನವಾಗುತ್ತದೆ.

**ಪ್ರಕಾಶಃ** – शास्तृत्वं किं तात्त्विकमुत व्यावहारिकमथ प्रातिभासिकम् । आद्यद्वयं निराह – **नचेति** ।।

ಇಲ್ಲಿ ಹೇಳಲ್ಪಟ್ಟ ಶಾಸ್ತೃತ್ವವು ತಾತ್ವಿಕವೋ, ವ್ಯಾವಹಾರಿಕವೋ, ಅಥವಾ ಪ್ರಾತಿಭಾಸಿಕವೋ, ಮೊದಲೆರಡು ಪಕ್ಷಗಳನ್ನು 'ನಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**ಪ್ರಕಾಶಃ** – अपिपदेन तात्त्विकं तु शङ्कानर्हमिति समुच्चीयते । निर्विशेषत्वादित्यर्थः । तृतीये तु न प्रधाननिरास इत्याह – **प्रातिभासिकं त्विति** ।।

'ವ್ಯವಹಾರಿಕಮಪಿ' ಎಂಬಲ್ಲಿರುವ 'ಅಪಿ' ಪದವು ತಾತ್ವಿಕವಾದ ಶಾಸ್ತೃತ್ವವು ಶಂಕೆಗೆ ಅನರ್ಹವಾಗಿದೆಯೆಂಬುದನ್ನು ಸಮುಚ್ಚಯ ಮಾಡುತ್ತಿದೆ. ಏಕೆಂದರೆ ಬ್ರಹ್ಮನು ನಿರ್ವಿಶೇಷನಾದ್ದರಿಂದ.

ಪ್ರಾತಿಭಾಸಿಕವಾದ ಶಾಸ್ತೃತ್ವವನ್ನು ಬ್ರಹ್ಮನಲ್ಲಿ ಒಪ್ಪಿದರೆ ಪ್ರಧಾನವನ್ನು ನಿರಾಕರಿಸಲು ಸಾಧ್ಯವಿಲ್ಲವೆಂದು 'ಪ್ರಾತಿಭಾಸಿಕಂ ತು' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – प्रातिभासिकप्रशासनपक्षे कल्पतरूक्तं समाधिमनूद्य निराह – **यच्चेति** ।। एतच्चोपलक्षणम् । यद्यत्र वर्णप्रधानयोः क्रमेण निरासस्तर्ह्यक्षरं प्रशासनादित्येतावन्मात्रोक्तावपि चेतनधर्मेण प्रशासनेन वर्णप्रधानयोर्द्वयोरपि-जडयो र्निरासिसिद्ध्याऽम्बरान्तधृत्युक्तिर्योगद्वयोक्तिश्च व्यर्था ।

ಪ್ರಾತಿಭಾಸಿಕವಾದ ಶಾಸ್ತೃತ್ವವನ್ನು ಒಪ್ಪುವ ಪಕ್ಷದಲ್ಲಿ ಕಲ್ಪತರುವಿನಲ್ಲಿ ಹೇಳಲ್ಪಟ್ಟ ಸಮಾಧಾನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಮ್' ಇತ್ಯಾದಿ ವಾಕ್ಯದಿಂದ. ಗ್ರಂಥದಲ್ಲಿ ಹೇಳಲ್ಪಟ್ಟ ಈ ದೋಷವು ಉಪಲಕ್ಷಣವಾಗಿದೆ. ಒಂದು ವೇಳೆ ವರ್ಣ ಹಾಗೂ ಪ್ರಧಾನಗಳೆರಡನ್ನು ಜಡ ಎನ್ನುವ ಕಾರಣದಿಂದ ನಿರಾಸ ಮಾಡುವುದಾದರೆ 'ಅಕ್ಷರಂ ಪ್ರಶಾಸನಾತ್' ಎಂದಷ್ಟೇ ಹೇಳಿದರೆ ಸಾಕು. ಚೇತನನ ಧರ್ಮವೆನಿಸಿದ ಪ್ರಶಾಸನ ಹೇತುವಿನಿಂದಲೇ ವರ್ಣ ಹಾಗೂ ಪ್ರಧಾನಗಳೆರಡನ್ನು ನಿರಾಕರಿಸಿದಂತಾಗುತ್ತದೆ. 'ಅಂಬರಾಂತ ಧೃತಿ' ಹಾಗೂ ಅಕ್ಷರ ಶಬ್ದದ ಅವಯವಶಕ್ತಿ ಇವೆರಡನ್ನೂ ಹೇಳುವ ಅವಶ್ಯಕತೆಯಿರುವುದಿಲ್ಲ.

**प्रकाशः** – किञ्च प्रागुक्तरीत्या प्रकृष्टशासनस्य जीवेऽप्ययोगेनाक्षरं प्रशासनादित्येतावतैव जीवस्यापि निरासादुत्तरसूत्रवैयर्थ्यं चेत्यपि ध्येयम् ।

ಮತ್ತು ಹಿಂದೆ ಹೇಳಿದ ಪ್ರಕಾರ ಪ್ರಕೃಷ್ಟವಾದ ಶಾಸನವು ಜೀವನಲ್ಲಿಯೂ ಸಹ ಅಯುಕ್ತವಾಗುತ್ತದೆ. ಆದ್ದರಿಂದ 'ಅಕ್ಷರಂ ಪ್ರಶಾಸನಾತ್' ಎಂದಷ್ಟೇ ಸೂತ್ರವನ್ನು ಹೇಳುವುದರಿಂದ ಜೀವನನ್ನೂ ಸಹ ನಿರಾಕರಿಸಿದಂತಾಗುತ್ತದೆ. ಜೀವ ನಿರಾಕರಣೆಗೋಸ್ಕರ ಮೂರನೆಯ ಸೂತ್ರವನ್ನು ಹೇಳುವ ಅವಶ್ಯಕತೆಯೂ ಇರುವುದಿಲ್ಲವೆಂದು ತಿಳಿಯಬೇಕು.

**प्रकाशः** – एवं वर्णप्रधानयोरक्षरशब्दार्थत्वं व्युदस्य जीवस्याक्षरशब्दार्थत्वं व्युदसितुं प्रधानादिसर्वनिरासासाधारणम् ''अन्यभावव्यावृत्तेः'' इति सूत्रम् । तदर्थमनूद्य निराह – **यच्चेति** ।।

ಹೀಗೆ ಅಕಾರಾದಿ ವರ್ಣಗಳು ಹಾಗೂ ಪ್ರಕೃತಿ ಇವುಗಳಿಗೆ ಅಕ್ಷರಶಬ್ದ ಪ್ರತಿಪಾದ್ಯತ್ವವನ್ನು ನಿರಾಕರಿಸಿ ಜೀವನಿಗೂ ಸಹ ಅಕ್ಷರಶಬ್ದ ಪ್ರತಿಪಾದ್ಯತ್ವವನ್ನು ನಿರಾಕರಿಸುವುದಕ್ಕಾಗಿ ನಿರಸನೀಯವಾದ ಸಕಲ ಪದಾರ್ಥಗಳಲ್ಲಿ ಸಾಧಾರಣವಾದ ಹೇತುವನ್ನು 'ಅನ್ಯಭಾವವ್ಯಾವೃತ್ತೇಃ' ಎಂಬ ಸೂತ್ರದಿಂದ ಹೇಳುತ್ತಿದ್ದಾರೆ. ಅವರ ವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಿಸಲು 'ಯಚ್ಚೋಕ್ತಮ್' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – च अदृष्टं द्रष्ट्रित्यादिश्रुतिः अचक्षुष्कमश्रोत्रमिति च श्रुतिरित्यर्थः । आदिपदेनाचक्षुष्कत्वादेर्जीवेऽसम्भवादिति गृह्यते ।

'ಅದೃಷ್ಟಂ ದ್ರಷ್ಟೃ' ಇತ್ಯಾದಿ ಶ್ರುತಿಯು 'ಅಚಕ್ಷುಷ್ಕಮಶ್ರೋತ್ರಮ್' ಇತ್ಯಾದಿ ಶ್ರುತಿಯು ಎಂದರ್ಥ. ಆದಿಪದದಿಂದ ಚಕ್ಷುರಾದಿ ಇಂದ್ರಿಯಗಳಿಲ್ಲದಿರುವಿಕೆಯು ಜೀವನಲ್ಲಿ ಅಸಂಭಾವಿತವಾಗಿವೆಯೆಂದು ವಿವಕ್ಷಿಸಬೇಕು.

**प्रकाशः** – यत्त्वत्र ''नान्यदतोऽस्ति द्रष्टृ नान्यदतोऽस्ति श्रोत्र'' इत्यादिनाऽऽत्म-भेदप्रतिषेधान्न शारीरस्याक्षरशब्दवाच्यत्वमित्युक्तं भाष्ये तदप्ययुक्तमित्याह – **अक्षरेति** ।।

ಅಕ್ಷರ ಪ್ರಕರಣದಲ್ಲಿ 'ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃ' ಇತ್ಯಾದಿ ವಾಕ್ಯವಿರುತ್ತದೆ. ಇದನ್ನು ನೋಡಿದಾಗ ಪರಮಾತ್ಮನಿಂದ ಜೀವನಿಗೆ ಭೇದವಿರುವುದಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಶಾರೀರನಾದ ಜೀವನಿಗೆ ಅಕ್ಷರಶಬ್ದವಾಚ್ಯತ್ವವಿರುವುದಿಲ್ಲವೆಂದು ಶಾಂಕರಭಾಷ್ಯವು ಸಮರ್ಥನೆ ಮಾಡಿದೆ. ಇದೂ ಸಹ ಅಯುಕ್ತವಾಗಿದೆಯೆಂದು 'ಅಕ್ಷರಪ್ರಕರಣಸ್ಥಂ' ಎಂಬ ಗ್ರಂಥವು ಪ್ರತಿಪಾದನೆ ಮಾಡುತ್ತಿದೆ.

**प्रकाशः** – **अन्यत्र न्यायामृते द्वितीयपरिच्छेदे । अतो नेदं वाक्यं निर्विशेषबोधकमित्यर्थः ।**

'ಅನ್ಯತ್ರ' ಎಂದರೆ ನ್ಯಾಯಾಮೃತದ ಎರಡನೆಯ ಪರಿಚ್ಛೇದದಲ್ಲಿ ಎಂದರ್ಥ. ನ್ಯಾಯಾಮೃತದಲ್ಲಿ ಇದಕ್ಕೆ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸುವುದರಿಂದ ನಿರ್ವಿಶೇಷಬ್ರಹ್ಮನನ್ನು ಇದು ಪ್ರತಿಪಾದಿಸುವುದಿಲ್ಲವೆಂದು ತಿಳಿಯುತ್ತದೆ.

**गुरुराजीयम्** – भूतं भवद्भविष्यच्चेत्यनेन लब्धमर्थमाह – **त्रिकालेति** ।। ननु शास्तृत्वादिकं निर्विशेषस्य यद्यपि न सम्भवति । तथापि सविशेषे तूपपद्यत एव । तदेवात्र प्रतिपाद्यमित्यत आह – **नहीति** ।। तथात्वे पादसङ्गतिर्न स्यादिति भावः । ननु च न पादासङ्गतिः । निर्विशेषस्यैव शास्तृत्वादिना प्रतिपाद्यत्वाङ्गीकारात् । नच तस्य शास्तृत्वानुपपत्तिः । पारमार्थिकशास्तृत्वस्य निर्विशेषेऽभावेऽपि व्यावहारिकशास्तृत्वस्य तत्र सत्त्वादित्यत आह – **नच निर्विशेष इति** ।। ननु व्यावहारिकशास्तृत्वस्य निर्विशेषेऽसम्भवेऽपि प्रातिभासिकं शास्तृत्वं निर्विशेषस्य सम्भवतीत्यत आह – **प्रातिभासिकमिति** ।। तथाच न प्रधानपक्ष-प्रतिक्षेपकतेत्यर्थः । ननु प्रातिभासिकमपि शास्तृत्वं ब्रह्मण्येव । न प्रधाने । तथाच युक्तस्तेन प्रधानपक्षनिरास इत्याशङ्क्ते – **यच्चेति** ।। ननु तथापि 'नान्यदतोऽस्ति द्रष्टृ नान्यदतोऽस्ति श्रोतृ नान्यदताऽस्ति मन्तृ नान्यदतोऽस्ति विज्ञातृ' इत्यादिनाऽत्मभेदनिषेधान्न शारीरस्याप्युपाधिमतोऽक्षरशब्दवाच्यत्वम् । 'अचक्षुष्कमश्रोत्रमवागमनः' इति चोपाधिमत्ताप्रतिषेधात् । नहि निरुपाधिकः

शारीरो भवतीति परकीयभाष्ये । तथा भामत्यां तृतीयसूत्रेण जीवस्याक्षरता निषिध्यते । नान्यदित्यादिकया श्रुत्या आत्मभेदः प्रतिषिध्यते । तथाचोपाधिभेदभिन्ना जीवा निषिद्धा भवन्ति । अभेदाभिधानात् । किञ्च न शारीरस्याक्षरशब्दवाच्यता । अक्षरस्य चक्षुराद्युपाधिं वारयन्त्यचक्षुष्कमित्यादिश्रुतिरौपाधिकस्य जीवस्याक्षरतां निषेधतीत्युक्तत्वान्नास्याः श्रुतेर्द्रष्टृत्वादिमात्रे तात्पर्यम् किन्तु शारीरस्यात्माभेदनिरासे तात्पर्यमित्यत आह – **अक्षरप्रकरणस्थमिति** । **अन्यत्रेति** ।। न्यायामृते इत्यर्थः ।




ಅದ್ವೈತಿಗಳು ಮಾಡಿದ ಸಿದ್ಧಾಂತವೂ ಸಹ ಸರಿಯಿಲ್ಲ. ನಿರ್ವಿಶೇಷ ಬ್ರಹ್ಮನಲ್ಲಿ ಅಕ್ಷರಶಬ್ದದ ವ್ಯುತ್ಪತ್ತಿಯನ್ನಾಗಲೀ, ವಾಚ್ಯತ್ವವನ್ನಾಗಲೀ ಅಥವಾ ದ್ರಷ್ಟೃತ್ವಗಳನ್ನಾಗಲೀ ಹೇಳಲು ಸಾಧ್ಯವಿಲ್ಲ. ಪ್ರಥಮ ಸೂತ್ರದಲ್ಲಿ ಪ್ರಯೋಗಿಸಲ್ಪಟ್ಟ ಧೃತಿ ಪದವೂ ಅಯುಕ್ತವಾಗಿದೆ. ಬ್ರಹ್ಮನು ಜಗತ್ತನ್ನು ಧಾರಣೆ ಮಾಡಿದ್ದಾನೆಂದರೆ ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆಂಬರ್ಥವನ್ನು ಬಿಟ್ಟು ಬೇರೆ ಅರ್ಥಗಳನ್ನು ಅದ್ವೈತಿಗಳಿಂದ ಹೇಳಲಾಗದು. ಆದರೆ ಉಪಕ್ರಮದಲ್ಲಿರುವ 'ಆಕಾಶ ಏವ ತದೋತಂ' ಇತ್ಯಾದಿ ವಾಕ್ಯದಿಂದ ಈ ಅರ್ಥವು ವಿರುದ್ಧವಾಗಿದೆ.

ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಶಾಸನವೆಂಬ ಹೇತುವೂ ಸಹ ಅಯುಕ್ತವಾಗಿದೆ. ಸಕಲ ಜಗತ್ತು ಬ್ರಹ್ಮನಲ್ಲಿ ಅಧ್ಯಸ್ತವಾಗಿದೆ. ಬ್ರಹ್ಮನು ಅಧಿಷ್ಠಾನನಾಗಿದ್ದಾನೆ. ಅಧಿಷ್ಠಾನವಾದ ವಸ್ತು ಅಧ್ಯಸ್ತವಾದ ವಸ್ತುವನ್ನು ಶಾಸನೆ ಮಾಡಲು ಎಂದಿಗೂ ಸಹ ಸಾಧ್ಯವಿಲ್ಲ. ಅಧಿಷ್ಠಾನಭೂತವಾದ ಶುಕ್ತಿಯು ಅಧ್ಯಸ್ತವಾದ ರಜತವನ್ನು ಶಾಸನೆ ಮಾಡುತ್ತದೆಂಬುದು ಎಷ್ಟು ಹಾಸ್ಯಾಸ್ಪದವೋ, ಅದರಂತೆ ಅಧ್ಯಸ್ತವಾದ ಜಗತ್ತನ್ನು ಅಧಿಷ್ಠಾನನಾದ ಬ್ರಹ್ಮನು ಶಾಸನೆ ಮಾಡಲು ಸಾಧ್ಯವೇ ಇಲ್ಲ.

ಮೂರನೆಯ ಸೂತ್ರವು ಪ್ರಕೃತಿ ಹಾಗೂ ಜೀವರನ್ನು ಅಕ್ಷರಶಬ್ದವಾಚ್ಯರಲ್ಲವೆಂದು ನಿಷೇಧಿಸುತ್ತಿದೆ ಎಂದು ವ್ಯಾಖ್ಯಾನಿಸುತ್ತಾರೆ. ದ್ರಷ್ಟೃತ್ವಾದಿ ಲಿಂಗಗಳು ಪ್ರಕೃತ್ಯಾದಿಗಳಲ್ಲಿ ಬರುವುದಿಲ್ಲವೆಂಬುದೇ ಇವರು ನೀಡುವ ಹೇತು. ಆದರೆ ಯಾವ ಶ್ರುತಿಯು ದ್ರಷ್ಟೃತ್ವಾದಿಗಳನ್ನು ಅಕ್ಷರನಲ್ಲಿ ಹೇಳುತ್ತಿದೆಯೋ, ಅದೇ ಶ್ರುತಿಯು ಅಂಬರಾಂತಧಾರಕತ್ವ ಮತ್ತು ಪ್ರಶಾಸನ ಎಂಬೆರಡು ಲಿಂಗಗಳನ್ನೂ ಸಹ ಹೇಳುತ್ತಿದೆ. ಆದ್ದರಿಂದ ಮೂರನೆಯ ಸೂತ್ರದಿಂದಲೇ ಅಂಬರಾಂತಧಾರಕತ್ವ ಮತ್ತು ಪ್ರಶಾಸನ ಎಂಬೆರಡು ಹೇತುಗಳನ್ನು ಹೇಳಲು ಬರುವಾಗ ಮೊದಲೆರಡು ಸೂತ್ರಗಳಿಗೆ ಅದ್ವೈತಸಿದ್ಧಾಂತದಲ್ಲಿ ಸಾರ್ಥಕ್ಯವೇ ಇರುವುದಿಲ್ಲ.

ಅದ್ವೈತಿಗಳು 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಜೀವನು ಬ್ರಹ್ಮನಿಗಿಂತ ಬಿನ್ನನಾಗಿದ್ದಾನೆಂದು ಹೇಳಿರುತ್ತಾರೆ. ಜೀವಬ್ರಹ್ಮರಿಗೆ ಅಭೇದವನ್ನು ಪ್ರತಿಪಾದಿಸಲು ಹೊರಟ, ಅದ್ವೈತಿಗಳು ಜೀವಬ್ರಹ್ಮರಿಗೆ ಭೇದವನ್ನೇ ಈ ಸೂತ್ರದಿಂದ ಸಮರ್ಥಿಸಿದಂತಾಗುತ್ತದೆ. ಆದ್ದರಿಂದ ಎಲ್ಲ ಅಧಿಕರಣಗಳಂತೆ ಇಲ್ಲಿಯೂ ಸಹ ಭೇದಸ್ಥಾಪನೆಯನ್ನೇ ಅದ್ವೈತಿಗಳು ಮಾಡಿದಂತಾಯಿತು.

ಪರಿಪೂರ್ಣಚಂದ್ರಿಕಾ

## तात्पर्यचन्द्रिका

**एतेन यत्केचिज्जडं प्रधानमेवाक्षरमिति पूर्वपक्षयन्ति तदपि निरस्तम् । जडस्य शास्तृत्वद्रष्टृत्वादेरयोगेन पूर्वपक्षानुदयात् ।**

ಅನುವಾದ - ಅದ್ವೈತಮತ ನಿರಾಕರಣೆಯಿಂದಲೇ ರಾಮಾನುಜಮತವನ್ನೂ ಸಹ ನಿರಾಕರಿಸಿದಂತಾಯಿತು. ಜಡವಾದ ಪ್ರಧಾನವೇ ಅಕ್ಷರಶಬ್ದವಾಚ್ಯವಾಗಿದೆಯೆಂದು ಇವರ ಪೂರ್ವಪಕ್ಷ. ಆದರೆ ಜಡವಾದ ಪ್ರಧಾನಕ್ಕೆ ಶಾಸ್ತೃತ್ವವಾಗಲೀ, ದ್ರಷ್ಟೃತ್ವಾದಿಗಳಾಗಲೀ ಅಯುಕ್ತವಾಗುವ ಕಾರಣ ಅದ್ವೈತಿಗಳಂತೆ ಇವರ ಪೂರ್ವಪಕ್ಷವೂ ಸಹ ಉದಯವಾಗಲು ಸಾಧ್ಯವಿಲ್ಲ.

**यच्च श्रुतावाकाशशब्दः प्रधानपर इत्युपेत्य सूत्रेऽम्बरशब्दो भूताकाशपरः । तथाचाम्बरस्य अन्तः अवधिः कारणमिति अम्बरान्तपदं प्रधानपरमित्युक्तम् ।**

ಮತ್ತು ಶ್ರುತಿಯಲ್ಲಿರುವ ಆಕಾಶಶಬ್ದಕ್ಕೆ ಪ್ರಧಾನ ಪರತ್ವವನ್ನು ಅಂಗೀಕರಿಸಿ ಸೂತ್ರದಲ್ಲಿರುವ ಅಂಬರಶಬ್ದಕ್ಕೆ ಭೂತಾಕಾಶಪರತ್ವವನ್ನು ಸಮರ್ಥಿಸುತ್ತಾರೆ. ಆದ್ದರಿಂದ 'ಅಂಬರಾಂತಧೃತೇಃ' ಎಂದರೆ ಅಂಬರ = ಭೂತಾಕಾಶಕ್ಕೆ, ಅಂತಃ = ಕಾರಣವಾದ ಪ್ರಕೃತಿಯೆಂಬರ್ಥವನ್ನು ಒಪ್ಪಿ, ಅಂತಹ ಪ್ರಕೃತಿಗೂ ಸಹ ಧಾರಕನಾಗಿರುವುದರಿಂದ ಎಂಬರ್ಥವನ್ನು ಹೇಳುತ್ತಾರೆ.

**तन्न । सूत्रे श्रुत्यनुसारित्वस्यैव न्याय्यत्वात् । अन्तपदन्तु अम्बरम् अन्तो यस्येति व्युत्पत्त्या पृथिव्यादिपरं सत् तस्यापि प्रकृतिद्वारा ब्रह्मैवाश्रय इति सूचयितुम् । तथाच ''पृथिव्यादिप्रकृत्यन्तम्'' इति स्मृतिरपि सूत्रेणानुसृता भवति ।** [१]

---

(१) **रामानुजभाष्यम् –**

**अक्षरमम्बरान्तधृतेः ॥**

वाजसनेयिनो गार्गिप्रश्ने समामनन्ति, 'स होवाचैतद्वैतदक्षरं गार्गि ब्राह्मणा अभिवदन्ति अस्थूलमनण्वह्रस्वमदीर्घमलोहितमस्नेहमच्छायम्' इत्यादि । तत्र संशयः किमेतदक्षरं प्रधानम्, जीवो वा, उत परमात्मा? किं युक्तम्? प्रधानमिति । कुतः? 'अक्षरात्परतः परः' इत्यादिष्वक्षरशब्दस्य प्रधाने प्रयोगदर्शनादस्थूलत्वादीनां च तत्र समन्वयात् । 'यया

तदक्षरमधिगम्यते' इत्यादिषु परस्मिन्नप्यक्षरशब्दो दृश्यत इति चेन्न । प्रमाणान्तरप्रसिद्ध-श्रुतिप्रसिद्धयोः प्रमाणान्तरप्रसिद्धस्य प्रथमप्रतीतेः । प्रतीतपरिग्रहे विरोधाभावात् । किञ्च 'यदूर्ध्वं गार्गि दिवो यदर्वाक् पृथिव्याः' इत्यारभ्य सर्वस्य कालत्रितयवर्तिनः कारणभूताकाशाधारत्वे प्रतिपादिते 'कस्मिन्नु खल्वाकाश ओतश्च प्रोतश्च' इत्याकाशस्यापि कारणं तदाधारभूतं किमिति पृष्टे प्रत्युच्यमानमक्षरं सर्वविकारकारणतया तदाधारभूतं प्रमाणान्तरप्रसिद्धं प्रधानमिति प्रतीयते । अतोऽक्षरं प्रधानम्, इति प्राप्ते उच्यते – **अक्षरमम्बरान्तधृतेः ॥** अक्षरं परं ब्रह्म, कुतः? अम्बरान्तधृतेः अम्बरस्य आकाशस्य अन्तः पारभूतम् अव्याकृतमम्बरान्तः । तस्य धृतेः तदाधारतयाऽस्याक्षरस्योपदेशादिति यावत् । अयमर्थः 'कस्मिन्नु खल्वाकाश ओतश्च प्रोतश्च' इत्यत्राकाशशब्दनिर्दिष्टं न वायुमदम्बरम्, अपितु तत्पारभूतमव्याकृतम्, अतस्तस्याव्याकृतस्याप्याधारत्वेनोच्यमानमक्षरं नाव्याकृतं भवितुमर्हति इति । नन्वाकाशशब्दनिर्दिष्टो न वायुमानिति कथमवगम्यते? उच्यते । 'यदूर्ध्वं गार्गि दिवो यदर्वाक् पृथिव्या यदन्तरा द्यावापृथिवी इमे यद्भूतं च भवच्च भविष्यच्चेत्याचक्षते आकाश एव तदोतं च प्रोतं च' इत्युक्ते त्रैकाल्यवर्तिनो विकारजातस्याधारतया निर्दिष्ट आकाशो न वायुमदाकाशो भवितुमर्हति । तस्यापि विकारान्तर्गतत्वात् । अतोऽत्राकाशशब्दनिर्दिष्टं भूतसूक्ष्ममिति प्रतीयते । ततस्तस्यापि भूतसूक्ष्मस्याधारभूतं किमिति पृच्छ्यते? 'कस्मिन्नु खल्वाकाश ओतश्च प्रोतश्च' इति । अतस्तदाधारतया निर्दिश्यमानमक्षरं न प्रधानं भवितुमर्हति ।

यत्तु श्रुतिप्रसिद्धात् प्रमाणान्तरप्रसिद्धं प्रथमं प्रतीयत इति, तन्न । अक्षरशब्दस्यावयवशक्त्या स्वार्थप्रतिपादने प्रमाणान्तरानपेक्षणात् । सम्बन्धग्रहणदशायामर्थस्वरूपं येन प्रमाणेनावगम्यते, न तत्प्रतिपादनदशायामपेक्षणीयम् ॥ ९ ॥

एवं तर्ह्यक्षरशब्दनिर्दिष्टो जीवोऽस्तु, तस्य भूतसूक्ष्मपर्यन्तस्य कृत्स्नस्याचिद्वस्तुन आधारत्वोपपत्तेः । अस्थूलत्वाद्युच्यमानविशेषणोपपत्तेश्च । 'अव्यक्तमक्षरे लीयते' 'यस्याव्यक्तं शरीरम्' 'यस्याक्षरं शरीरम्' 'क्षरस्सर्वाणि भूतानि कूटस्थोऽक्षर उच्यते' इत्यादिषु प्रत्यगात्मन्यप्यक्षरशब्दप्रयोगदर्शनादित्यत्रोत्तरम् –

**सा च प्रशासनात् ॥ १० ॥**

सा चाम्बरान्तधृतिरस्याक्षरस्य प्रशासनादेव भवतीत्युपदिश्यते । 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः', 'एतस्य वा अक्षरस्य प्रशासने गार्गि द्यावापृथिव्यौ विधृते तिष्ठतः', 'एतस्य वा अक्षरस्य प्रशासने गार्गि निमेषा मुहूर्ता अहोरात्राण्यर्धमासा मासा ऋतवस्संवत्सरा इति विधृतास्तिष्ठन्ति' इत्यादिना । प्रशासनम् – प्रकृष्टं शासनम् । नचेदृशं स्वशासनाधीनसर्ववस्तुविधरणं बद्धमुक्तोभयावस्थस्यापि

ಇದೂ ಸಹ ತಪ್ಪು. ಶ್ರುತಿಗೆ ಅನುಸಾರಿಯಾದ ಅರ್ಥವನ್ನೇ ಸೂತ್ರಕ್ಕೆ ಹೇಳುವುದು ನ್ಯಾಯಸಮ್ಮತವಾಗಿದೆ. ಶ್ರುತಿಯಲ್ಲಿ ಪ್ರಧಾನಪರತ್ವವನ್ನು ಒಪ್ಪಿ, ಸೂತ್ರದಲ್ಲಿ ಭೂತಾಕಾಶಪರತ್ವವನ್ನು ಒಪ್ಪುವುದು ಸರಿಯಾಗುವುದಿಲ್ಲ.

'ಆಕಾಶ' ಪದಕ್ಕೆ ಚಿತ್‌ಪ್ರಕೃತಿಯೆಂಬರ್ಥವನ್ನು ಒಪ್ಪಿದಾಗಲೂ ಈ ದೋಷವು ಸಮಾನವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಅಂಬರಮ್ ಅಂತಃ ಯಸ್ಯ' ಎಂಬ ವ್ಯುತ್ಪತ್ತಿಯಿಂದ ಪೃಥಿವ್ಯಾದಿ ಸಕಲ ಪದಾರ್ಥಗಳಿಗೆ ಅಂಬರಾಂತ ಪದವು ವಾಚಕವಾಗಿದೆ. ಅಂದರೆ ಪೃಥಿವ್ಯಾದಿಗಳೆಲ್ಲವೂ ಪ್ರಕೃತಿಯು ಆಶ್ರಯವಾಗಿದೆ. ಅಂತಹ ಪ್ರಕೃತಿಗೆ ಬ್ರಹ್ಮನು ಆಶ್ರಯನಾಗಿದ್ದಾನೆಂದು ತಿಳಿಸುವುದಕ್ಕಾಗಿ 'ಅಂತ' ಎಂಬ ಪದವು ಸಾರ್ಥಕವಾಗಿದೆ. ರಾಮಾನುಜರಿಗೆ ಈ ಬಗೆಯಲ್ಲಿ ವ್ಯಾಖ್ಯಾನಿಸಲು ಸಾಧ್ಯವಿಲ್ಲದ ಕಾರಣ, ಅವರ ಪ್ರಕಾರ 'ಅಂತ' ಪದವು ವ್ಯರ್ಥವಾಗುತ್ತದೆ. ನಮ್ಮಂತೆ ವ್ಯಾಖ್ಯಾನಿಸಿದಾಗ 'ಪೃಥಿವ್ಯಾದಿ ಪ್ರಕೃತ್ಯಂತಂ' ಎಂಬ ಸ್ಮೃತಿಯೂ ಸಹ ಸೂತ್ರಕ್ಕೆ ಅನುಸಾರಿಯಾಗಿದೆಯೆಂದು ತಿಳಿಸಿದಂತಾಗುತ್ತದೆ.

---

प्रत्यगात्मनस्सम्भवति । अतः पुरुषोत्तम एव प्रशासित्रक्षरम् ।। १० ।।

**अन्यभावव्यावृत्तेश्च ॥ ११ ॥**

अन्यभावः अन्यत्वम्, प्रधानादिभावः । अस्याक्षरस्य परमपुरुषादन्यत्वं वाक्यशेषे व्यावर्त्यते । 'तद्वा एतदक्षरं गार्ग्यदृष्टं द्रष्टृ अश्रुतं श्रोतृ अमतं मन्तृ अविज्ञातं विज्ञातृ नान्यदतोऽस्ति द्रष्टृ, नान्यदतोऽस्ति श्रोतृ, नान्यदतोऽस्ति मन्तृ, नान्यदतोऽस्ति विज्ञातृ, एतस्मिन्नु खल्वक्षरे गार्ग्याकाश ओतश्च प्रोतश्च' इति । अत्र द्रष्टृत्वश्रोतृत्वाद्युपदेशादस्याक्षरस्या चेतनभूतप्रधानभावो व्यावर्त्यते । सर्वैरदृष्टस्यैव सतस्सर्वस्य द्रष्टृत्वाद्युपदेशाच्च प्रत्यगात्मभावो व्यावर्त्यते । अत इयमन्यभावव्यावृत्तिरस्याक्षरस्य परमपुरुषतां द्रढयति । एवं वाऽन्यभावव्यावृत्तिः अन्यस्य सद्भाव्यन्व्यावृत्तिरन्यभावव्यावृत्तिः । यथैतदक्षरमन्यैरदृष्टं सदन्येषां द्रष्टृ च सत्स्वव्यतिरिक्तस्य समस्तस्याधारभूतम्, एवमनेनादृष्टमेतस्य द्रष्टृ च सदेत ास्याधारभूतमन्यन्नास्तीति वदन् 'नान्यदतोऽस्ति द्रष्टृ' इत्यादिवाक्यशेषोऽन्यस्य सद्भावं व्यावर्तयन्नस्याक्षरस्य प्रधानभावं प्रत्यगात्मभावं च प्रतिषेधति । किञ्च 'एतस्य वा अक्षरस्य प्रशासने गार्गि ददतो मनुष्याः प्रशंसन्ति यजमानं देवा दर्वी पितरोऽन्वायत्ताः' इति श्रौतं स्मार्तं च यागदानहोमादिकं सर्वं कर्म यस्याज्ञया प्रवर्तते । तदक्षरं परब्रह्मभूतः पुरुषोत्तम एवेति विज्ञायते । अपिच 'यो वा एतदक्षरं गार्ग्यविदित्वाऽस्मिंल्लोके जुहोति यजते तपस्तप्यते बहूनि वर्षसहस्राण्यन्तवदेवास्य तद् भवति । यो वा एतदक्षरं गार्ग्यविदित्वाऽस्माल्लोकात् प्रैति स कृपणः, अथ य एतदक्षरं गार्गि विदित्वाऽस्माल्लोकात् प्रैति स ब्राह्मणः' इति यदज्ञानात् संसारप्राप्तिर्यज्ज्ञानाच्चामृतत्वप्राप्तिस्तदक्षरं परं ब्रह्मैवेति सिद्धम् ।। ११ ।।

**प्रकाशः –**

एतेनेति ।। अस्थूलमनण्वित्यादिनोक्तमक्षरं प्रधानजीवान्यतरदुत ब्रह्मेति संशये

ವಿವರಣೆ - ರಾಮಾನುಜರ ಅಧಿಕರಣ ಶರೀರ ಹೀಗಿದೆ - 'ಅಸ್ಥೂಲಮನಣು' ಇತ್ಯಾದಿ ಶ್ರುತಿಯಲ್ಲಿ ಉಕ್ತವಾದ ಅಕ್ಷರವು ಪ್ರಧಾನ ಅಥವಾ ಜೀವರೋ, ಅಥವಾ ಬ್ರಹ್ಮನೋ? ಎಂದು ಸಂಶಯ.

**प्रकाशः –** अक्षरशब्दस्य वर्णेषु रूढिसम्भवेऽपि ''अह्रस्वमदीर्घम्'' इत्यादिनिषेधायोगेन वर्णानां शङ्कानर्हत्वात् । प्रधानस्य च सर्वविकारास्पदत्वेनाकाशपृथिव्यादिधारणसम्भवात्प्रधानं वा चित एवाचिद्वस्त्वाधारत्वसम्भवाज्जीवो वेति प्राप्ते

ಅಕ್ಷರಶಬ್ದಕ್ಕೆ ಅಕಾರಾದಿ ವರ್ಣಗಳಲ್ಲಿ ರೂಢಿಯಿರಬಹುದು. 'ಅಹ್ರಸ್ವಮದೀರ್ಘಮ್' ಇತ್ಯಾದಿ ನಿಷೇಧವೂ ತಪ್ಪಾಗುತ್ತದೆ. ಆದ್ದರಿಂದ ಹ್ರಸ್ವ, ದೀರ್ಘಾದಿಗಳಿರುವ ಅಕ್ಷರವು ಶಂಕೆಗೆ ಅರ್ಹವೇ ಆಗುವುದಿಲ್ಲ. ಪ್ರಕೃತಿಯಾದರೂ ಸಹ ಸಕಲ ವಿಕಾರಕ್ಕೆ ಆಶ್ರಯವಾಗಿರುವುದರಿಂದ ಆಕಾಶ, ಪೃಥಿವೀ ಮೊದಲಾದವುಗಳಿಗೆ ಆಶ್ರಯವಾಗುತ್ತದೆಂದು ಹೇಳಬಹುದು. ಅಥವಾ ಸಕಲ ಅಚಿತ್‌ಪದಾರ್ಥಗಳಿಗೆ ಚಿತ್‌ಪದಾರ್ಥವೇ ಧಾರಕವಾಗಬೇಕಾದ್ದರಿಂದ ಜೀವನೂ ಸಹ ಅಕ್ಷರಶಬ್ದ ವಾಚ್ಯನಾಗಬಹುದೆಂದು ಪೂರ್ವಪಕ್ಷ.

**प्रकाशः –** न तावत्प्रधानम् । त्रिकालवर्तिसकलवस्त्वाधारतयोच्यमानस्य भूताकाशत्वायोगेनाव्याकृतापरनामकप्रधानपरत्वात् ''अक्षरे गार्ग्याकाश ओतः'' इत्युक्तप्रधानाधारत्वस्य प्रधानेऽनुपपत्तेः ।

ಸಿದ್ಧಾಂತ - ಪ್ರಧಾನವನ್ನು ಅಕ್ಷರವೆನ್ನಲು ಸಾಧ್ಯವಿಲ್ಲ. ಏಕೆಂದರೆ ಮೂರು ಕಾಲಗಳಲ್ಲಿರುವ ಸಕಲ ವಸ್ತುಗಳಿಗೆ ಆಧಾರವಾಗಿರುವಿಕೆಯು ಭೂತಾಕಾಶದಲ್ಲಿ ಕೂಡುವುದಿಲ್ಲ. ಆದ್ದರಿಂದ ಅವ್ಯಾಕೃತಾಕಾಶ ಎಂಬ ಹೆಸರನ್ನು ಪಡೆದ ಪ್ರಕೃತಿಯೇ ಆಕಾಶಶಬ್ದದಿಂದ ವಾಚ್ಯವಾಗಬೇಕು. ಹಾಗಾದಲ್ಲಿ 'ಅಕ್ಷರೇ ಗಾರ್ಗ್ಯಕಾಶ ಓತಶ್ಚ' ಇತ್ಯಾದಿ ಶ್ರುತಿಯಲ್ಲಿ ಆಕಾಶಕ್ಕೂ ಸಹ ಆಶ್ರಯವಾದದ್ದು ಮತ್ತೊಂದು ಪದಾರ್ಥವೆಂದು ಶ್ರುತಿಯು ಹೇಳುತ್ತಿದೆ. ತನಗೆ ತಾನೇ ಆಶ್ರಯವಾಗಲು ಸಾಧ್ಯವಿಲ್ಲದ್ದರಿಂದ ಪ್ರಕೃತಿಯು ಅಕ್ಷರಶಬ್ದದಿಂದ ವಾಚ್ಯವಾಗುವುದಿಲ್ಲ.

**प्रकाशः –** नापि जीवः । द्वितीयसूत्रोक्तस्याप्रतिहताज्ञापरनामकस्य प्रशासनस्य जीवेऽनुपपत्तेः । अन्यभावस्य परमात्मनोऽन्यत्वस्यादृष्टं द्रष्ट्रित्यादिनाऽक्षरस्य व्यावृत्तेश्च परमात्मैवाक्षरमिति सिद्धान्तः ।

ಪರಿಪೂರ್ಣಚಂದ್ರಿಕಾ

ಜೀವನೂ ಸಹ ಅಕ್ಷರನೆನಿಸುವುದಿಲ್ಲ. ಏಕೆಂದರೆ ಎರಡನೇ ಸೂತ್ರದಲ್ಲಿ ಹೇಳಲ್ಪಟ್ಟ ಅಪ್ರತಿಹತವಾದ ಆಜ್ಞಾ ಎಂಬ ಹೆಸರನ್ನು ಪಡೆದ ಪ್ರಶಾಸನವು ಜೀವನಲ್ಲಿ ಅನುಪಪನ್ನವಾಗುತ್ತದೆ. ಮತ್ತು 'ಅನ್ಯಭಾವ ವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಶ್ರುತಿಯು 'ಅನ್ಯಭಾವಸ್ಯ' ಪರಮಾತ್ಮನಿಗಿಂತ ಭಿನ್ನವಾದದ್ದನ್ನು ದ್ರಷ್ಟೃತ್ವಾದಿಗಳಿಂದ ನಿಷೇಧ ಮಾಡುತ್ತಿದೆ. ಆದ್ದರಿಂದ ಪರಮಾತ್ಮನೇ ಅಕ್ಷರಶಬ್ದದಿಂದ ವಾಚ್ಯನಾಗುತ್ತಾನೆಂದು ಸಿದ್ಧಾಂತ.

**प्रकाशः** – तत्र दूष्यांशमनुवदति – **जडमिति** ।। एवकारः परोक्तवर्णमात्रव्यावर्तकः। एतेनेत्युक्तमेवाह – **जडस्येति** ।। सूत्रार्थं च प्रत्याह – **यच्चेति** ।।

ಈ ಅಧಿಕರಣ ಶರೀರದಲ್ಲಿ ದೂಷ್ಯವಾದ ಅಂಶವನ್ನಷ್ಟೇ ಗ್ರಂಥಕಾರರು 'ಜಡಮ್' ಇತ್ಯಾದಿಯಾಗಿ ಅನುವಾದ ಮಾಡಿದ್ದಾರೆ. 'ಪ್ರಧಾನಮೇವ' ಎಂಬಲ್ಲಿರುವ ಏವಕಾರವು ಜೀವನನ್ನು ವ್ಯಾವೃತ್ತಿ ಮಾಡುತ್ತಿಲ್ಲ; ಹೊರತಾಗಿ ಅವರು ಹೇಳುವ ಅಕಾರಾದಿ ವರ್ಣಗಳನ್ನು ಮಾತ್ರ ವ್ಯಾವೃತ್ತಿ ಮಾಡುತ್ತಿದೆ ಎಂದು ತಿಳಿಯಬೇಕು. 'ಏತೇನ' ಎಂಬ ಪದದಿಂದ ಹೇಳಿದ್ದನ್ನೇ 'ಜಡಸ್ಯ' ಎಂಬುದರಿಂದ ಹೇಳುತ್ತಿದ್ದಾರೆ. ಸೂತ್ರಾರ್ಥವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ.

**प्रकाशः – श्रुत्यनुसारित्वस्येति** ।। श्रुताविव सूत्रेऽप्यम्बरशब्दस्यैव प्रधानपरत्वं वाच्यमित्यन्तपदं व्यर्थमित्यर्थः ।

'ಶ್ರುತ್ಯನುಸಾರಿತ್ವಸ್ಯ' ಎಂಬುದಕ್ಕೆ ಶ್ರುತಿಯಲ್ಲಿರುವ ಆಕಾಶಶಬ್ದವು ಪ್ರಧಾನಪರವಾದ ಮೇಲೆ ಸೂತ್ರದಲ್ಲಿರುವ 'ಅಂಬರ' ಶಬ್ದವೂ ಸಹ ಪ್ರಧಾನ ಪರವೇ ಆಗಬೇಕು. ಇಲ್ಲದಿದ್ದರೆ 'ಅಂತ' ಎಂಬ ಪದವು ವ್ಯರ್ಥವಾಗುತ್ತದೆಂದು ಅಭಿಪ್ರಾಯ.

**प्रकाशः** – आकाशस्य चित्प्रकृतित्वपक्षेऽप्येष दोषस्तुल्य इत्यत आह – **अन्तपदं तु इति** ।। **तस्यापि** पृथिव्यादेरपि ।

ಆಕಾಶಶಬ್ದದಿಂದ ಚಿತ್‌ಪ್ರಕೃತಿಯೇ ಪ್ರತಿಪಾದ್ಯವೆಂದು ಹೇಳಿದರೂ ಸಹ 'ಅಂತ' ಪದಕ್ಕೆ ವೈಯರ್ಥ್ಯ ಬಂದೇ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅಂತಪದಂ ತು' ಇತ್ಯಾದಿ ವಾಕ್ಯದಿಂದ ಅದಕ್ಕೆ ಉತ್ತರಿಸಿದ್ದಾರೆ. 'ತಸ್ಯಾಪಿ' ಎಂಬ ಪದಕ್ಕೆ ಪೃಥಿವ್ಯಾದಿಗಳಿಗೂ ಸಹ ಎಂದರ್ಥ.

**प्रकाशः – स्मृतिरिति** ।।

पृथिव्यादिप्रकृत्यन्तं भूतं भव्यं भवच्च यत् ।
विष्णुरेको बिभर्तीदं नान्यस्तस्मात् क्षमो धृतौ ।।

इति स्कान्दस्मृतिरित्यर्थः ।

ಅಕ್ಷರಾಧಿಕರಣ (೧-೩-೩)

'ಸ್ಮೃತಿಃ' ಎಂದರೆ -

ಪೃಥಿವ್ಯಾದಿಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚ ಯತ್ ।
ವಿಷ್ಣುರೇಕೋ ಬಿಭರ್ತೀದಂ ನಾನ್ಯಸ್ತಸ್ಮಾತ್ ಕ್ಷಮೋ ಧೃತೌ ॥

ಪೃಥಿವಿಯಿಂದ ಪ್ರಾರಂಭಿಸಿ ಪ್ರಕೃತಿಯ ತನಕ ಹಿಂದಿನ, ಈಗಿನ, ಮುಂದಿನ ಸಕಲ ಪದಾರ್ಥಗಳೆಲ್ಲವನ್ನು ವಿಷ್ಣುವೊಬ್ಬನೇ ಧಾರಣೆ ಮಾಡಿದ್ದಾನೆ. ಇವನನ್ನು ಬಿಟ್ಟು ಬೇರೆ ಯಾರೂ ಸಹ ಅವುಗಳನ್ನು ಧರಿಸಲು ಸಾಧ್ಯವಿಲ್ಲ ಎಂಬ ಸ್ಕಾಂದಸ್ಮೃತಿಯೆಂದು ತಿಳಿಯಬೇಕು.

**प्रकाशः** – एतेनाक्षरं प्रणवजीवान्यतरदिति प्राप्तेऽम्बरान्तधृत्यादेश्शिवधर्मत्वाच्छिव एवेति कस्यचित्प्रलपनं प्रत्युक्तम् । द्रष्टृत्वादेरयोगेन पूर्वपक्षानुदयात् । भाष्योक्तश्रुत्यादिनाऽम्बरान्तधृत्यादेर्विष्ण्वेकनिष्ठत्वेन शिव इति सिद्धान्तानुदयाच्चेति।

ಅದ್ವೈತಿಗಳನ್ನು ಹಾಗೂ ರಾಮಾನುಜರನ್ನು ನಿರಾಕರಣೆ ಮಾಡಿದ್ದರಿಂದಲೇ ಶೈವರನ್ನೂ ಸಹ ನಿರಾಕರಿಸಿದಂತಾಯಿತು.

ಶೈವರ ಅಧಿಕರಣ ಶರೀರ ಹೀಗಿದೆ - ಅಕ್ಷರಶಬ್ದದಿಂದ ಪ್ರತಿಪಾದ್ಯವಾದದ್ದು ಓಂಕಾರ ಅಥವಾ ಜೀವನೆಂದು ಪೂರ್ವಪಕ್ಷ. ಅಂಬರಾಂತಧಾರಕತ್ವವು ಶಿವನ ಧರ್ಮವಾಗಿರುವುದರಿಂದ ಶಿವನೇ ಅಕ್ಷರಶಬ್ದ ಪ್ರತಿಪಾದ್ಯನೆಂದು ಸಿದ್ಧಾಂತ.

ಇದೂ ಸಹ ತಪ್ಪು. ಓಂಕಾರಾದಿಗಳಲ್ಲಿ ದ್ರಷ್ಟೃತ್ವಾದಿಗಳು ಅಯುಕ್ತವಾಗುವುದರಿಂದ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂಬ ದೋಷ ಇವರಿಗೂ ಸಮಾನವಾಗಿದೆ. ಮತ್ತು 'ಪೃಥಿವ್ಯಾದಿಪ್ರಕೃತ್ಯಂತಮ್' ಎಂಬ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತ್ಯಾದಿಗಳಿಂದ ಅಂಬರಾಂತಧಾರಕತ್ವವು ಕೇವಲ ವಿಷ್ಣುವಿನಲ್ಲಿ ಮಾತ್ರವಿರುತ್ತದೆಂದು ಸಿದ್ಧವಾಗಿದೆ. ಆದ್ದರಿಂದ ಶಿವನು ಅಕ್ಷರಶಬ್ದ ಪ್ರತಿಪಾದ್ಯನಾಗುತ್ತಾನೆಂಬ ಸಿದ್ಧಾಂತವೂ ಸಹ ಇವರ ಮತದಲ್ಲಿ ಉದಯವಾಗುವುದಿಲ್ಲ.




ರಾಮಾನುಜರೂ ಸಹ ಛಾಂದೋಗ್ಯದ ಮಾತನ್ನೇ ವಿಚಾರಕ್ಕೆ ವಿಷಯವೆನ್ನುತ್ತಾರೆ. ಆದರೆ ಪ್ರಕೃತಿ ಅಥವಾ ಜೀವರೆಂದು ಸಮರ್ಥಿಸುತ್ತಾರೆ. ಸಕಲ ಕಾರ್ಯಗಳಿಗೆ ಪ್ರಕೃತಿಯು ಉಪಾದಾನ ಕಾರಣವಾದ್ದರಿಂದ ತ್ರೈಕಾಲಿಕ ಪದಾರ್ಥಗಳಿಗೂ ಪ್ರಕೃತಿಯು ಆಧಾರವಾಗುತ್ತದೆಂದು ಇವರು ನೀಡುವ ಸಮರ್ಥನೆ. ಬ್ರಹ್ಮನೇ ಅಕ್ಷರನಾಗಿದ್ದಾನೆಂದು ಸಿದ್ಧಾಂತ. ಏಕೆಂದರೆ ಶ್ರುತಿಯಲ್ಲಿ ಹೇಳಲ್ಪಟ್ಟ ಶಾಸ್ತೃತ್ವಾದಿಗಳು ಪರಮಾತ್ಮನಲ್ಲಿ ಮಾತ್ರ ಸಿದ್ಧವಾಗುತ್ತದೆ. 'ಅಂಬರಾಂತಧೃತಿ' ಎಂಬುದೂ ಸಹ ಮತ್ತೊಂದು ಸಿದ್ಧಾಂತ ಹೇತು. ಭೂತಾಕಾಶವು ಪೃಥಿವ್ಯಾದಿಗಳಂತೆ ಜನ್ಯವಾದ್ದರಿಂದ ಪ್ರಪಂಚಕ್ಕೆ

ಆಧಾರವಾಗುವುದಿಲ್ಲ. ಅಜನ್ಯವಾದ ಅವ್ಯಾಕೃತಾಕಾಶವೆನಿಸಿದ ಪ್ರಕೃತಿಯೇ ಈ ಪ್ರಪಂಚಕ್ಕೆ ಮೂಲವಾಗಿದೆ. ಅಂತಹ ಪ್ರಕೃತಿಗೆ ಆಧಾರನಾದವನು ಬ್ರಹ್ಮನೇ ಆಗಿದ್ದಾನೆಂದು ಇವರ ಅಭಿಪ್ರಾಯ. 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಅನ್ಯಭಾವ ಎಂದರೆ ಪ್ರಧಾನಾದಿ ಭಾವ ಎಂದರ್ಥ. ಅಂದರೆ ಅಕ್ಷರವು ಬ್ರಹ್ಮನನ್ನು ಬಿಟ್ಟು ಬೇರೆಯದ್ದಾಗುವುದಿಲ್ಲ. ಏಕೆಂದರೆ 'ಅದೃಷ್ಟಂ ದ್ರಷ್ಟೃ' ಎಂಬ ಶ್ರುತಿಯು ಇತರ ನಿಷೇಧವನ್ನು ಮಾಡುತ್ತಿದೆ. ಆದ್ದರಿಂದಲೂ ಬ್ರಹ್ಮನೇ ಅಕ್ಷರಶಬ್ದವಾಚ್ಯನಾಗುತ್ತಾನೆಂದು ಇವರ ವಾದ.

ಇವರ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಶ್ರುತಿಯಲ್ಲಿ ಆಕಾಶಪದಕ್ಕೆ ಭೂತಾಕಾಶವೆಂದು ಅರ್ಥೈಸಿದಾಗ ಅದಕ್ಕನುಗುಣವಾಗಿ ಸೂತ್ರದಲ್ಲಿರುವ 'ಅಂಬರ' ಶಬ್ದಕ್ಕೂ ಸಹ ಭೂತಾಕಾಶವೆಂದೇ ಅರ್ಥೈಸಬೇಕು. ಒಂದು ವೇಳೆ ಶ್ರುತಿಯಲ್ಲಿ ಹೇಳಿದ ಪ್ರಕೃತಿಯೆಂಬರ್ಥವನ್ನು ಸೂತ್ರಕ್ಕೆ ಹೇಳಿದರೆ ಶ್ರುತಿಯಿಂದ ಅನಾನುಗುಣ್ಯದೋಷವನ್ನು ಸೂತ್ರಕ್ಕೆ ಹೇಳಿದಂತಾಗುತ್ತದೆ.



● ● ● ● ●

## ಟೀಕೆಯ ಕೆಲವು ಕಠಿಣಪದಗಳ ಅರ್ಥ

## तात्पर्यचन्द्रिका

**टीकाक्षरार्थस्तु ।। सोमं राजानं जुह्वति । तं देवा भक्षयन्तीत्यादिवदिति।। यथा "सोमं राजानम्" इत्यादौ हूयमानभक्ष्यमाणसोमलताभिमानित्वाच्चन्द्रे हूयमानत्वादिव्यपदेशः तथाऽत्रापि 'सोममभिषुणोति' इति वाक्यविहिताभिषवयुक्त-सोमलताभिमानित्वाच्चन्द्रेऽभिषूयमाणत्वव्यपदेश इत्यर्थः ।**

ಅನುವಾದ - ಟೀಕೆಯಲ್ಲಿ ಕೆಲವು ಕಠಿಣಪದಗಳ ಅರ್ಥ ಹೀಗಿದೆ - 'ಸೋಮಂ ರಾಜಾನಂ ಜುಹ್ವತಿ । ತಂ ದೇವಾ ಭಕ್ಷಯಂತಿ ಇತ್ಯಾದಿವತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ಅಹಂ ಸೋಮಮ್' ಎಂಬ ಅಂಭ್ರಣೀ ಸೂಕ್ತವನ್ನು ವ್ಯಾಖ್ಯಾನಿಸುವ ಸಂದರ್ಭದಲ್ಲಿ ಈ ಮಾತು ಟೀಕೆಯಲ್ಲಿ ಪ್ರಸಕ್ತವಾಗಿದೆ. ಯಾವರೀತಿಯಾಗಿ 'ಸೋಮಂ ರಾಜಾನಮ್' ಇತ್ಯಾದಿ ಸ್ಥಳಗಳಲ್ಲಿ ಹೋಮಿಸಲು ಯೋಗ್ಯವಾದ ಅಥವಾ ಭಕ್ಷಿಸಲು ಯೋಗ್ಯವಾದ ಯಾವ ಸೋಮಲತೆಯಿದೆಯೋ, ಅದಕ್ಕೆ ಅಭಿಮಾನಿಯಾಗಿರುವ ಕಾರಣದಿಂದ ಚಂದ್ರನಲ್ಲಿಯೂ ಸಹ ಹೂಯಮಾನ ಅಥವಾ ಭಕ್ಷ್ಯಮಾಣವೆಂಬ ಪ್ರಯೋಗವಿರುತ್ತದೆ. ಅದರಂತೆ ಪ್ರಕೃತದಲ್ಲಿಯೂ 'ಸೋಮಮ್ ಅಭಿಷುಣೋತಿ' ಎಂಬ ವಾಕ್ಯದಲ್ಲಿ ವಿಹಿತವಾದ ಅಭಿಷವವು ಸೋಮಲತೆಯಲ್ಲಷ್ಟೇ ಹೇಳಲು ಸಾಧ್ಯ. ಅದಕ್ಕೆ ಅಭಿಮಾನಿಯಾದ್ದರಿಂದ ಚಂದ್ರನಲ್ಲಿಯೂ ಸಹ ಅಭಿಷೂಯಮಾಣತ್ವದ ಪ್ರಯೋಗವಿರುತ್ತದೆಂದು ಇದರ ಅರ್ಥ.

"एको देवो बहुधा निविष्टः" इत्यस्य शेषभूतं वाक्यं "यदा भारं तन्द्रयते स भर्तुम् । निधाय भारं पुनरस्तमेति" इति । तस्यार्थमाह – स च यदा तं भारं भर्तुं नेच्छतीति ।।

ಭಾಷ್ಯದಲ್ಲಿ 'ಏಕೋ ದೇವೋ ಬಹುಧಾ ನಿವಿಷ್ಟಃ' ಎಂಬುದನ್ನು ಹೇಳಿದ್ದಾರೆ. 'ಯದಾ ಭಾರಂ ತಂದ್ರಯತೇ ಸ ಭರ್ತುಮ್ । ನಿಧಾಯ ಭಾರಂ ಪುನರಸ್ತಮೇತಿ' ಎಂಬ ಶೇಷಭೂತವಾದ ವಾಕ್ಯವನ್ನೂ ಸಹ ಭಾಷ್ಯದಲ್ಲಿ ವಿವಕ್ಷಿಸಬೇಕು. ಅದರರ್ಥ ಹೀಗಿದೆ - ಪರಮಾತ್ಮನು ಯಾವಾಗ ಜಗತ್ತಿನ ಭಾರವನ್ನು ಹೊರಲು ಇಚ್ಛಿಸುವುದಿಲ್ಲವೋ, ಆವಾಗ ಜಗತ್ತು ಪ್ರಳಯವಾಗುತ್ತದೆಂದು ಅಭಿಪ್ರಾಯ,

"यस्मिन्निदं सञ्च विचैति सर्वम्" इति श्रुतौ यच्छब्दस्य "यतः प्रसूता" इत्यादि यच्छब्दवत् "तदेव ब्रह्म परमं कवीनाम्" इत्युत्तरवाक्यस्थेन तच्छब्देनान्वय इत्याह – तदेव ब्रह्मेत्यर्थ इति ।। श्रुतावेधीत्यस्यावर्धतेत्यर्थः ।

'ಯಸ್ಮಿನ್ನಿದಂ ಸಂಚ ವಿಚೈತಿ ಸರ್ವಮ್' ಎಂಬ ಶ್ರುತಿಯಲ್ಲಿರುವ 'ಯತ್' ಶಬ್ದಕ್ಕೆ 'ಯತಃ ಪ್ರಸೂತಾ' ಎಂಬ ಶ್ರುತಿಯಲ್ಲಿರುವ ಯಚ್ಛಬ್ದದಂತೆ 'ತದೇವ ಬ್ರಹ್ಮ ಪರಮಂ ಕವೀನಾಮ್' ಎಂಬ ಮುಂದಿನ ವಾಕ್ಯದಲ್ಲಿರುವ ತಚ್ಛಬ್ದದ ಜೊತೆಗೆ ಅನ್ವಯವನ್ನು ಮಾಡಬೇಕೆಂದು 'ತದೇವ ಬ್ರಹ್ಮ ಇತ್ಯರ್ಥಃ' ಎಂಬುದರಿಂದ ಹೇಳಿದ್ದಾರೆ. ಶ್ರುತಿಯಲ್ಲಿರುವ 'ಏಧಿ' ಎಂಬುದಕ್ಕೆ 'ಬೆಳೆದನು' ಎಂದರ್ಥ.

मध्यम इत्याद्युक्तमिति ।। श्रुतौ मध्यमादिशब्दः स्थौल्यादेरप्युपलक्षक इत्यर्थः ।।

'ಮಧ್ಯಮ ಇತ್ಯಾದ್ಯುಕ್ತಮ್' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ ಹೇಳಲ್ಪಟ್ಟ 'ಮಧ್ಯಮಃ' ಎಂಬುದು ಸ್ಥೌಲ್ಯಾದಿಗಳಿಗೂ ಸಹ ಉಪಲಕ್ಷಕವಾಗಿದೆ. ಆದ್ದರಿಂದ ಪರಮಾತ್ಮನು ನಿಃಸ್ವಭಾವನಲ್ಲ, ಅವನಲ್ಲಿ ಮಧ್ಯಮ, ಸ್ಥೌಲ್ಯ ಮೊದಲಾದ ಸ್ವಭಾವಗಳಿದೆಯೆಂದು ತಿಳಿಯಬೇಕು.

तमोवाय्वादीनां सर्वात्मनेति ।। "अदुःखमसुखम्" इत्यादौ यथाऽसुखमित्यनेन बाह्यसुखनिषेधेऽप्यदुःखमित्यनेन दुःखमात्रनिषेधः तथाऽत्राप्यस्थूलमित्यादौ प्राकृतस्थौल्यादिनिषेधेऽप्यतमोऽवाय्वित्यादौ सर्वात्मना तमआदेर्निषेध इत्यर्थः ।। छ ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां
तात्पर्यचन्द्रिकायाम् अक्षराधिकरणं सम्पूर्णम् ।।

ಪರಿಪೂರ್ಣಚಂದ್ರಿಕಾ

'ತಮೋವಾಯ್ವಾದೀನಾಂ ಸರ್ವಾತ್ಮನಾಃ' ಎಂದರೆ ತಮಸ್ಸು ವಾಯು ಮೊದಲಾದವುಗಳನ್ನು ಪರಮಾತ್ಮನಲ್ಲಿ ಸರ್ವಾತ್ಮನಾ ನಿಷೇಧಿಸಬೇಕೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು. 'ಅದುಃಖಮಸುಖಮ್' ಇತ್ಯಾದಿ ಸ್ಥಳದಲ್ಲಿ 'ಅಸುಖಮ್' ಎಂಬ ಪದದಿಂದ ಬಾಹ್ಯಸುಖವನ್ನಷ್ಟೇ ಪರಮಾತ್ಮನಲ್ಲಿ ನಿಷೇಧ ಮಾಡಿದರೂ ಸಹ 'ಅದುಃಖಮ್' ಎಂಬುದರಿಂದ ಸಕಲವಿಧವಾದ ದುಃಖವನ್ನೇ ನಿಷೇಧ ಮಾಡಲಾಗುತ್ತದೆ. ಅದರಂತೆ ಇಲ್ಲಿಯೂ ಸಹ 'ಅಸ್ಥೂಲಮ್' ಇತ್ಯಾದಿ ಶ್ರುತಿಯಲ್ಲಿ ಅಸ್ಥೂಲಾದಿ ಪದಗಳಿಂದ ಪ್ರಾಕೃತವಾದ ಸ್ಥೌಲ್ಯಾದಿಗಳನ್ನು ನಿಷೇಧ ಮಾಡಿದರೂ ಸಹ 'ಅತಮೋ ಅವಾಯು' ಇತ್ಯಾದಿ ಪದಗಳಿಂದ 'ಸರ್ವಾತ್ಮನಾ ತಮಸ್ಸು' ಮೊದಲಾದವುಗಳನ್ನು ನಿಷೇಧ ಮಾಡಲಾಗುತ್ತಿದೆಂದು ದೃಷ್ಟಾಂತ ದಾರ್ಷ್ಟಾಂತಿಕ ಭಾವವನ್ನು ತಿಳಿಯಬೇಕು.

ಇಲ್ಲಿಗೆ ಶ್ರೀಮದ್‌ವ್ಯಾಸತೀರ್ಥರು ರಚಿಸಿದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಸಂಪೂರ್ಣವಾಯಿತು.

**प्रकाशः –**

टीकायां दुर्गमानि कानिचिद्वाक्यानि व्यनक्ति – **टीकेति** ।। भाष्ये शेषस्यानुदाहृतत्वात् सच यदेत्यादिकस्यार्थ इत्यज्ञानादाह – **एको देव इति** ।।

ವಿವರಣೆ - ಟೀಕೆಯಲ್ಲಿರುವ ಕೆಲವು ದುರ್ಗಮವಾದ ವಾಕ್ಯಗಳನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಟೀಕಾಕ್ಷರಾರ್ಥಸ್ತು' ಇತ್ಯಾದಿಯಾಗಿ. ಭಾಷ್ಯದಲ್ಲಿ ಶೇಷಭೂತವಾದ ವಾಕ್ಯವನ್ನು ಉದಾಹರಿಸಿರುವುದಿಲ್ಲ. ಆಗ ಆ ವಾಕ್ಯದ ಅರ್ಥಜ್ಞಾನವು ಸ್ಪಷ್ಟವಾಗುವುದಿಲ್ಲ ಎಂಬ ಕಾರಣದಿಂದ. 'ಏಕೋ ದೇವಃ' ಇತ್ಯಾದಿ ಗ್ರಂಥದಿಂದ ಶೇಷಭೂತವಾದ ವಾಕ್ಯವನ್ನು ಉಲ್ಲೇಖಿಸಿ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – भाष्येऽनुक्तमपि तदेव ब्रह्मेति कस्मादुच्यत इत्यत आह – **यस्मिन्निति** ।। टीकायामनुक्तेरेधीत्यस्यासभुवीत्यस्य रूपत्वाद्भवेत्यर्थत्वेऽन्वयायोगादाह – **श्रुताविति** ।।

ಭಾಷ್ಯದಲ್ಲಿ ಹೇಳದಿದ್ದರೂ 'ತದೇವ ಬ್ರಹ್ಮ' ಎಂಬುದನ್ನು ಹೇಗೆ ವಿವಕ್ಷಿಸುತ್ತೀರಿ? ಎಂಬ ಪ್ರಶ್ನೆಗೆ 'ಯಸ್ಮಿನ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಶ್ರುತಿಯಲ್ಲಿರುವ 'ಏಧಿ' ಎಂಬ ಧಾತುವು 'ಅಸಭುವಿ' ಎಂಬುದರಿಂದ ನಿಷ್ಪನ್ನವಾದ್ದರಿಂದ 'ಭವೇತ್' ಎಂಬರ್ಥವನ್ನು ನೀಡುತ್ತದೆ. ಆವಾಗ ಹಿಂದಿನ ಮುಂದಿನ ಪದಗಳಿಂದ ಅನ್ವಯವೇ ಯುಕ್ತವಾಗುವುದಿಲ್ಲವಲ್ಲ ಎಂಬ ಪ್ರಶ್ನೆಗೆ 'ಶ್ರುತೌ' ಎಂಬುದರಿಂದ ಉತ್ತರಿಸುತ್ತಾರೆ.

**प्रकाशः** – एध वृद्धावित्यस्य रूपमिति भावः ।। श्रुतौ मध्यमादिशब्द इति ।। ''अस्थूलोऽनणुरमध्यमो मध्यमः'' इति श्रुतावित्यर्थः ।। छ ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे अक्षराधिकरणं सम्पूर्णम् ॥**

'ಏಧವೃದ್ಧೌ ' ಎಂಬ ಧಾತುವಿನಿಂದ 'ಏಧಿ' ಎಂಬುದು ನಿಷ್ಪನ್ನವಾಗಿದೆಯೆಂದು ತಿಳಿಯಬೇಕು. 'ಶ್ರುತೌ ಮಧ್ಯಮಾದಿಶಬ್ದಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಅಸ್ಥೂಲೋऽನಣುರಮಧ್ಯಮೋ ಮಧ್ಯಮಃ' ಎಂಬ ಶ್ರುತಿಯಲ್ಲಿರುವ ಮಧ್ಯಮ ಮೊದಲಾದ ಶಬ್ದಗಳೆಂದು ಇದರ ಅರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಅಕ್ಷರಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – 'सोमं राजानं जुह्वति' इत्यादेः प्रातीतिकार्थमभ्युपेत्य व्याचष्टे – यथेति ।। यद्यपीदं वाक्यं चन्द्रलोकगतकर्मजीवपरम् । तथापि कर्मजीवस्य सोमे प्रवेशानङ्गीकारादधिष्ठानत्वेन चन्द्रस्यापि विवक्षितत्वादियमुक्तिरिति ध्येयम् । टीकायामेधीत्यस्याव्याख्याततत्वात्स्वयं व्याख्याति – श्रुताविति ।।

।। इति श्रीकेशवभट्टारकेण विरचितायां भावदीपिकायाम्
अक्षराधिकरणं सम्पूर्णम् ।। ३ ।।

# ಅಕ್ಷರಾಧಿಕರಣ

(೧-೩-೩)

## ಭಾಗ -೩

### ಅಣುಭಾಷ್ಯ, ತತ್ವಮಂಜರೀ,
### ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
### ಸರಳ ಕನ್ನಡ ಅನುವಾದ

* * *

### ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री मदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## अक्षराधिकरणम् (१।३।३)

**'सोऽक्षरः'**

ಚತುರ್ವಿಧ ನಾಶರಹಿತನಾದ ಮಹಾವಿಷ್ಣುವೇ ಅಕ್ಷರ ಶಬ್ದವಾಚ್ಯನು, ಶ್ರೀತತ್ತ್ವವಲ್ಲ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## अक्षराधिकरणम् (१।३।३)

नन्वथापि दृश्यत्वाद्युज्झितो विष्णुरित्ययुक्तम् । वाजसनेये पञ्चमे 'अदृष्टं द्रष्टृश्रुतं श्रोतृ' इत्यादिनाऽक्षरब्राह्मणोक्तस्याक्षरस्य अदृश्यत्वादिश्रवणात् । तस्य च 'कूटस्थोऽक्षरः' इत्यादौ श्रीतत्त्वे प्रसिद्धाक्षरश्रुत्या 'अहं सोममाहनसं बिभर्मि' इति लक्ष्मीसूक्ते श्रीतत्त्वे प्रसिद्धचन्द्राधारत्वस्य 'एतस्य वाऽक्षरस्य प्रशासने गार्गि सूर्याचन्द्रमसौ विधृतौ तिष्ठतः' इति श्रवणेन सूर्याधारत्वलिङ्गेन च श्रीतत्त्वरूपत्वेन

अविष्णुत्वात् प्राचीनोऽपि श्रीतत्त्वमेव । द्वयोरपरिच्छेद्यवैभवायोगादित्यतः प्राप्तम् – अक्षरमम्बरान्तेत्यादि सूत्रत्रयम् ।

ಆಕ್ಷೇಪ - ಹಿಂದೆ ಅದೃಶ್ಯತ್ವಾಧಿಕರಣದಲ್ಲಿ ಅದೃಶ್ಯತ್ವಾದಿ ಗುಣಗಳುಳ್ಳವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತವನ್ನು ಮಾಡಿದ್ದಾಯಿತು. ಆದರೆ ಇದು ಸರಿಯಲ್ಲ, ಏಕೆಂದರೆ ಬೃಹದಾರಣ್ಯೋಕಪನಿಷತ್ತಿನ ಪಂಚಮಾಧ್ಯಾಯದಲ್ಲಿ, 'ಅದೃಷ್ಟಂ ದ್ರಷ್ಟೃಶ್ರುತಂ ಶ್ರೋತೃ' ಇತ್ಯಾದಿಯಾಗಿ ಅದೃಶ್ಯತ್ವಾದಿ ಗುಣಗಳುಳ್ಳದ್ದು ಅಕ್ಷರತತ್ತ್ವವಾಗಿದೆಯೆಂದು ಹೇಳಲ್ಪಟ್ಟಿದೆ. ಇಂತಹ ಅಕ್ಷರತತ್ತ್ವವು, 'ಕೂಟಸ್ಥೋಽಕ್ಷರ ಉಚ್ಯತೇ' ಎಂಬ ಸ್ಮೃತಿ ಪ್ರಮಾಣದಂತೆ ಲಕ್ಷ್ಮೀದೇವಿಯೇ ಆಗಿದ್ದಾಳೆ. ಅಷ್ಟೇ ಅಲ್ಲದೆ 'ಏತಸ್ಯ ವಾಽಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಎಂಬಲ್ಲಿ, ಸೂರ್ಯ, ಚಂದ್ರಾದಿಗಳಿಗೆ ಆಧಾರವಾದದ್ದೇ ಅಕ್ಷರವೆಂದು ಉಪನಿಷತ್ತು ವರ್ಣಿಸುತ್ತಿದೆ. ಸೂರ್ಯ, ಚಂದ್ರಾದಿಗಳಿಗೆಲ್ಲಾ ಆಧಾರಳಾದವಳು ತಾನೆಂದು ಲಕ್ಷ್ಮೀದೇವಿಯೇ ಹೇಳಿಕೊಂಡಿದ್ದಾಳೆ. 'ಅಹಂ ಸೋಮಮಾಹನಸಂ ಬಿಭರ್ಮಿ' ಇತ್ಯಾದಿಯಾಗಿ, ಹೀಗೆ ಅಕ್ಷರ ಶ್ರುತಿ ಹಾಗೂ ಸೂರ್ಯ, ಚಂದ್ರ ಆಧಾರತ್ವವೆಂಬಲಿಂಗಗಳು ಲಕ್ಷ್ಮೀದೇವಿಯಲ್ಲಿ ಇರುವುದರಿಂದ ಲಕ್ಷ್ಮೀದೇವಿಯೇ ಅಕ್ಷರಳಾಗಬೇಕು. ಅಕ್ಷರ ಬ್ರಾಹ್ಮಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವಾದಿ ಗುಣಗಳೂ ಸಹ ಲಕ್ಷ್ಮೀದೇವಿಯಲ್ಲಿಯೇ ಬರುತ್ತವೆ ಹೊರತು, ವಿಷ್ಣುವಿನಲ್ಲಿ ಬರುವುದಿಲ್ಲ. ಲಕ್ಷ್ಮೀದೇವಿ ಹಾಗೂ ಮಹಾವಿಷ್ಣು ಇಬ್ಬರಿಗೂ ಸಹ ಅದೃಶ್ಯತ್ವಾದಿಗುಣಗಳನ್ನು ಹೇಳೋಣವೆಂದು, ಹೇಳಬಾರದು. ಇಬ್ಬರಿಗೆ ಅಪರಿಚ್ಛೇದ್ಯ ವೈಭವವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಲಕ್ಷ್ಮೀದೇವಿ ಒಬ್ಬಳೇ ಅಕ್ಷರಳೆನಿಸಿದ್ದಾಳೆ.

ಸಮಾಧಾನ - ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ 'ಅಕ್ಷರಮಂಬರಾಂತಧೃತೇಃ' ಇತ್ಯಾದಿಯಾಗಿ ಮೂರು ಸೂತ್ರಗಳು ಹೊರಟಿವೆ.

तदर्थः – सोऽक्षर इति । अत्राक्षरशब्देन यौगिकः तदर्थोऽविनाशी ग्राह्यः । तथा प्रस्तावात् । पूर्ववदनुषङ्गः । स इति सर्वश्रयपरामर्शः ।

ಆ ಮೂರುಸೂತ್ರಗಳ ಅಭಿಪ್ರಾಯವನ್ನೇ 'ಸೋಽಕ್ಷರಃ' ಎಂದು ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ. ಇಲ್ಲಿರುವ ಅಕ್ಷರ ಶಬ್ದವು ಯೌಗಿಕವಾದ್ದರಿಂದ ನಾಶವಿಲ್ಲದ್ದು ಎಂಬರ್ಥವನ್ನು ತಿಳಿಸುತ್ತಿದೆ. ಏಕೆಂದರೆ ಇಲ್ಲಿ ಯೋಗಿಕವಾದ ಅರ್ಥವೇ ಪ್ರಸ್ತುತವಾಗಿದೆ. ಹಿಂದಿನ ಅಧಿಕರಣಗಳಂತೆ ಇಲ್ಲಿಯೂ ಸಹ 'ತದನ್ಯತ್ರಚ' ಎಂಬುದನ್ನು 'ಲಿಂಗೈಸ್ಸರ್ವೈರ್ಯುತಃ ಸಹಿ' ಎಂಬುದನ್ನೂ ಸಹ ಅನುಷಂಗ ಮಾಡಬೇಕು. 'ಸೋಽಕ್ಷರಃ' ಎಂಬಲ್ಲಿರುವ 'ಸಃ' ಎಂಬ ಪದದಿಂದ ಸರ್ವಾಶ್ರಯನಾದವನೆಂಬುದನ್ನು ಪರಾಮರ್ಶಿಸಲಾಗಿದೆ.

'एतस्मिन् खल्वक्षरे गार्ग्याकाश ओतश्च' इतीह श्रुतौ आकाशब्दितप्रकृतिद्वारा श्रुतः सः पृथिव्यादिप्रकृत्यन्तसर्वाश्रयः अक्षरः अक्षरशब्दोऽविनाशी स प्राक् दृश्यत्वाद्युज्झितत्वेनोक्तः स एको जनार्दनः ।

'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಇತ್ಯಾದಿ ಶ್ರುತಿಯಲ್ಲಿ 'ಆಕಾಶ' ಶಬ್ದದಿಂದ ಪ್ರಕೃತಿಯು

ಪ್ರತಿಪಾದ್ಯವಾಗಿದೆ. ಇಂತಹ ಪ್ರಕೃತಿಯ ಮೂಲಕ ಪೃಥಿವೀಯಿಂದ ಪ್ರಾರಂಭಿಸಿ ಪ್ರಕೃತಿಯತನಕ ಸಕಲಕ್ಕೂ ಆಶ್ರಯನಾದವನು ಅಕ್ಷರನಾಗಿದ್ದಾನೆಂದು ಹೇಳಲ್ಪಟ್ಟಿದೆ. ಇದು ಮಹಾವಿಷ್ಣುವಿನ ಅಸಾಧಾರಣ ಗುಣವಾದ್ದರಿಂದ ವಿಷ್ಣುವೇ ಅಕ್ಷರನಾಗುತ್ತಾನೆ. ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಅದೃಶ್ಯತ್ವಾದಿ ಗುಣಗಳುಳ್ಳವನೂ ಸಹ ಜನಾರ್ದನನೊಬ್ಬನೇ ಆಗುತ್ತಾನೆಂದು ತಿಳಿಯಬೇಕು.

**तथा च अविनाशित्वरूपप्रवृत्तिनिमित्तसाम्येन तद्वदन्यत्र च वाचकैः 'एतस्मिन्नक्षरे' इत्यक्षरतद्विशेषणसर्वशब्दैः मुख्यतः चतुर्विधनाशराहित्यरूप-योगरूढिभ्याम् एको जनार्दन एव वाच्यो न श्रीतत्वम् ।**

ಆದ್ದರಿಂದ ಅವಿನಾಶಿತ್ವವೆಂಬ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವು ಶ್ರೀತತ್ತ್ವ ಹಾಗೂ ಪರಮಾತ್ಮ ಇಬ್ಬರಲ್ಲೂ ಸಮಾನವೇ ಆಗಿದೆ. ಆದರೆ ಮುಖ್ಯವಾಗಿ ಪರಮಾತ್ಮನಲ್ಲಿಯೇ ಇಂತಹ ಅವಿನಾಶಿತ್ವವು ಯುಕ್ತವಾಗುತ್ತದೆ. ಮತ್ತು ಅಕ್ಷರನಲ್ಲಿ ವಿಶೇಷಣನಾಗಿರುವ ಸಕಲ ಶಬ್ದಗಳೂ ಸಹ ಮುಖ್ಯವಾಗಿ ಮಹಾವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಹೀಗೆ ಚತುರ್ವಿಧ ನಾಶರಾಹಿತ್ಯವೆಂಬ ಯೋಗಾರ್ಥ ಹಾಗೂ ರೂಢಿ ಎರಡೂ ಸಹ ವಿಷ್ಣುವಿನಲ್ಲಿ ಮುಖ್ಯವಾಗಿರುವುದರಿಂದ ಅವನೇ ಅಕ್ಷರಶಬ್ದವಾಚ್ಯನೆಂದು ತಿಳಿಯಬೇಕು.

**कुतः । अक्षरो विष्णुः – सर्वैर्लिङ्गैर्युतो हि । 'भूतं भवच्च भविष्यच्चेत्याचक्षते । आकाश एव तदोतं च प्रोतं च' इति 'अक्षरे आकाश ओतश्च' इत्यादिनोक्ताम्बरान्त-शाब्दितप्रकृत्यन्तसर्वाधारत्वप्रशासनशब्दितासङ्कुचितानन्यायत्ताऽज्ञामात्राधीनसर्वधारकत्व 'अस्थूलमनाणु' इत्यादिवाक्योक्तप्राकृतस्थौल्यादिराहित्य अप्राकृताणुत्वमहत्त्वादि-रूपैतत्प्रकरण श्रुतसर्वलिङ्गैर्युतत्वात् । तेषां भाष्योक्तवाक्यैः वैष्णवत्वस्य प्रसिद्धत्वादित्यर्थः ।**

ವಿಷ್ಣುವೇ ಏಕೆ ಅಕ್ಷರನೆನಿಸಿದ್ದಾನೆ? ಎಂಬ ಪ್ರಶ್ನೆಗೆ 'ಸರ್ವೈರ್ಲಿಂಗೈರ್ಯುತೋ ಹಿ' ಎಂದು ಉತ್ತರ. ಈ ಪ್ರಕರಣದಲ್ಲಿ ಶ್ರುತವಾದ ಸಕಲ ಲಿಂಗಗಳೂ ವಿಷ್ಣುವಿನ ಲಿಂಗಗಳೇ ಆಗಿವೆ. ಅದು ಹೀಗೆ 'ಭೂತಂ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ। ಆಕಾಶ ಏವ ತದೋತಂ ಚ ಪ್ರೋತಂ ಚ' ಇತ್ಯಾದಿಯಾಗಿ ಪೃಥಿವಿಯಿಂದ ಪ್ರಾರಂಭಿಸಿ ಪ್ರಕೃತಿಯ ತನಕ ಭೂತ, ಭವಿಷ್ಯತ್, ವರ್ತಮಾನ ಸಕಲ ಪದಾರ್ಥಗಳಿಗೂ ಆಕಾಶವೇ ಆಧಾರವಾಗಿದೆ ಎಂದು ಹೇಳಿ ಮುಂದೆ 'ಅಕ್ಷರೇ ಆಕಾಶ ಓತಶ್ಚ ಪ್ರೋತಶ್ಚ' ಇತ್ಯಾದಿಯಾಗಿ ಅಂತಹ ಆಕಾಶ ಶಬ್ದ ಪ್ರತಿಪಾದ್ಯವಾದ ಪ್ರಕೃತಿಗೂ ಸಹ ಅಕ್ಷರವು ಆಧಾರವಾಗಿದೆ ಎಂದು ಹೇಳಲಾಗಿದೆ. ಅಂದರೆ ಪೃಥಿವಿಯಿಂದ ಪ್ರಾರಂಭಿಸಿ ಪ್ರಕೃತಿಯ ತನಕ ಸಕಲ ಪದಾರ್ಥಗಳೂ ಅಕ್ಷರನ ಆಜ್ಞೆಯಿಂದಲೇ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿ ತಮ್ಮ ವ್ಯಾಪಾರಗಳಲ್ಲಿ ತೊಡಗಿವೆ ಎಂದು ಶ್ರುತಿಯು ವರ್ಣಿಸುತ್ತಿದೆ. ಕೇವಲ ಆಜ್ಞೆಯಿಂದ ತಮ್ಮಸ್ಥಾನದಲ್ಲಿ ನೆಲಸಿರುವಿಕೆಯು ಮಹಾವಿಷ್ಣುವಿನಿಂದಷ್ಟೇ ಸಾಧ್ಯವೆಂದು ಅನೇಕ ಶ್ರುತಿ, ಸ್ಮೃತಿಗಳಿಂದ ಸಿದ್ಧವಾಗಿದೆ. ಮತ್ತು ಅಕ್ಷರ ಪ್ರಕರಣದಲ್ಲಿ ಕೇಳಿಸುತ್ತಿರುವ 'ಅಸ್ಥೂಲಮನಣು' ಇತ್ಯಾದಿ ವಾಕ್ಯಗಳಲ್ಲಿ 'ಅಸ್ಥೂಲ' ಎಂದು ಸ್ಥೂಲಾದಿರಾಹಿತ್ಯವು ಉಕ್ತವಾಗಿದೆ. ಇಂತಹ ಅಪ್ರಾಕೃತವಾದ ಅಣುತ್ವ, ಮಹತ್ವಾದಿ ಧರ್ಮಗಳು ಮಹಾವಿಷ್ಣುವಿನಲ್ಲಿ ಮಾತ್ರ ಯುಕ್ತವಾಗಿವೆ. ಇವೇ ಮೊದಲಾದ ಅನೇಕ ವಿಷ್ಣುಲಿಂಗಗಳಿರುವುದರಿಂದ

ಮಹಾವಿಷ್ಣುವೇ ಅಕ್ಷರನೆನಿಸುತ್ತಾನೆ. ಇವುಗಳು ವಿಷ್ಣುವಿನ ಅಸಾಧಾರಣ ಧರ್ಮಗಳಾಗಿವೆ ಎಂಬ ವಿಚಾರವು ಭಾಷ್ಯದಲ್ಲಿ ಉದಾಹರಿಸಿದ ಅನೇಕ ವಾಕ್ಯಗಳಿಂದ ಸಿದ್ಧವಾಗಿದೆ.

**अत्रैक इति 'एकः शास्ता' इति वाक्यसूचनाय । जनार्दन इत्यक्षरत्वरूपाविनाशित्वसूचनाय । प्रागुक्त्यैव निरुक्तिः । स इति अम्बरान्तधृतिरूपहेतुसूचनाय चन्द्राधारत्वस्य सावकाशत्व सूचनाय च ।**

ಇಲ್ಲಿ 'ಏಕಃ' ಎಂಬ ಪದದಿಂದ 'ಏಕಃ ಶಾಸ್ತಾ' ಎಂಬ ಪ್ರಮಾಣವನ್ನು ಸೂಚಿಸಿದ್ದಾರೆ. 'ಜನಾರ್ದನಃ' ಎಂಬ ಪದದಿಂದ ಅಕ್ಷರಶಬ್ದದ ಪ್ರವೃತ್ತಿ ನಿಮಿತ್ತವೆನಿಸಿದ ಅವಿನಾಶಿತ್ವವೆನಿಸಿದ ಧರ್ಮವು ಸೂಚಿತವಾಗಿದೆ. 'ಜನಾರ್ದನ' ಶಬ್ದದ ನಿಷ್ಪತ್ತಿಯನ್ನು ಈ ಹಿಂದೆ ತೋರಿಸಿದ್ದಾಗಿದೆ. 'ಸಃ' ಎಂದರೆ ಪೃಥಿವಿಯಿಂದ ಪ್ರಾರಂಭಿಸಿ ಪ್ರಕೃತಿಯ ತನಕ ಸಕಲ ವಸ್ತುಗಳಿಗೆ ಆಶ್ರಯವಾಗಿರುವಿಕೆ ಎಂಬ ಹೇತುವನ್ನು ಸೂಚಿಸಿದ್ದಾರೆ. ಇದರಿಂದ ಚಂದ್ರಾದ್ಯಾಧಾರತ್ವವು ಪ್ರಕೃತಿಯಲ್ಲಿದ್ದರೂ ಸಹ ಅದು ಕೇವಲ ವಿಷ್ಣುವಿನ ಅಧೀನವಾಗಿದೆ ಎಂದು ತಿಳಿಯಬೇಕು. ಆದ್ದರಿಂದ ಪ್ರಕೃತಿಯಲ್ಲಿ ಸ್ಥಿತವಾದ ಚಂದ್ರಾಧಾರತ್ವಲಿಂಗವು ಸಾವಕಾಶವಾಗಿದೆ ಎಂದು ಸೂಚಿಸಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## अक्षराधिकरणम् (१।३।३)

**।। ॐ अक्षरमम्बरान्तधृतेः ॐ ।। १-३-१० ।।**

अत्राक्षरनाम समन्वीयते । ''एतद्वै तदक्षरं गार्गि'' इत्युक्तमक्षरं तत्तु ब्रह्मैव न श्रीतत्त्वम् । अम्बरान्तधृतेः । अम्बरमाकाशशब्दितं श्रीतत्त्वमन्ते यस्य सर्वस्य तदम्बरान्तं तस्य धृतेर्धारणात् । श्रुतावाकाशाख्यचित्प्रकृतेः सर्वाधारत्वमुक्तवा ''एतस्मिन् खल्वक्षरे गार्ग्याकाश ओतश्च प्रोतश्च'' इत्यक्षरस्य तदाधारत्वश्रवणादित्यर्थः ।

ಈ ಅಧಿಕರಣದಲ್ಲಿ 'ಏತದ್ವೈ ತದಕ್ಷರಂ ಗಾರ್ಗಿ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಕೇಳಿಸುತ್ತಿರುವ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ.

ಸೂತ್ರಾರ್ಥ ಹೀಗಿದೆ - ಅಕ್ಷರಂ = 'ಏತದ್ವೈ ತದಕ್ಷರಂ ಗಾರ್ಗಿ' ಎಂಬಲ್ಲಿ ಶ್ರುತನಾದ ಅಕ್ಷರನು ಬ್ರಹ್ಮನೇ ಆಗಿದ್ದಾನೆ ಹೊರತು ಶ್ರೀತತ್ತ್ವವಲ್ಲ. ಏಕೆಂದರೆ 'ಅಂಬರಾಂತ ಧೃತೇಃ' = 'ಅಂಬರ' ಎಂದರೆ 'ಆಕಾಶ' ಶಬ್ದದಿಂದ ಪ್ರತಿಪಾದ್ಯಳಾದ 'ಲಕ್ಷ್ಮೀದೇವಿ' ಎಂದರ್ಥ. ಲಕ್ಷ್ಮೀದೇವಿಯೇ ಕೊನೆಯಾಗಿವುಳ್ಳ ಸಕಲ ಪದಾರ್ಥವೂ, 'ಅಂಬರಾಂತ' ಎನಿಸುತ್ತದೆ. ಆ ಎಲ್ಲಾ ಸಕಲ ಪದಾರ್ಥಗಳನ್ನೂ ಧರಿಸಿರುವುದರಿಂದ, ಎಂದು 'ಅಂಬರಾಂತ ಧೃತೇಃ' ಶಬ್ದಕ್ಕೆ ಅರ್ಥ. ಶ್ರುತಿಯಲ್ಲಿ 'ಆಕಾಶ' ಎಂಬ ಚಿತ್‌ಪ್ರಕೃತಿಗೆ , ಅಂದರೆ ಲಕ್ಷ್ಮೀದೇವಿಗೆ ಸರ್ವಾಧಾರತ್ವವನ್ನು ಹೇಳಲಾಗಿದೆ. ಹಾಗೇ ಹೇಳಿ ಮುಂದೆ 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಎಂಬುದಾಗಿ ಮುಂದಿನ ಮಂತ್ರದಲ್ಲಿ ಚಿತ್ ಪ್ರಕೃತಿಗೂ ಸಹ ಆಧಾರನಾದವನು ಅಕ್ಷರನೆಂದು ಹೇಳಲಾಗಿದೆ.

अम्बरधृतेरित्येव पूर्तावन्तेत्युक्तिः पृथिव्यादिसर्वस्यापि प्रकृतिद्वारा ब्रह्मैवाश्रय इति सूचयितुम् । ''पृथिव्यादिप्रकृत्यन्तम्'' इति स्मृतेः । अम्बरस्य श्रीतत्त्वज्ञापनाय

चेत्यप्याहुः । सर्वाश्रयत्वे सत्येकाश्रयत्वस्य तल्लिङ्गत्वादिति ।।

ಸೂತ್ರದಲ್ಲಿ 'ಅಂಬರಾಂತ ಧೃತೇಃ' ಎಂದು ಹೇಳುವ ಬದಲು 'ಅಂಬರ ಧೃತೇಃ' ಎಂದಷ್ಟೇ ಹೇಳಿದ್ದರೂ ಸಾಕಾಗುತ್ತಿತ್ತು, ಆದರೆ 'ಅಂತ' ಎಂದು ಹೇಳಿ, ಆದರಿಂದ 'ಪೃಥಿವಿಯಿಂದ ಪ್ರಾರಂಭಿಸಿ ಪ್ರಕೃತಿತನಕ ಸಕಲ ಪದಾರ್ಥಗಳಿಗೂ ಪ್ರಕೃತಿಯ ಮೂಲಕ ಮಹಾವಿಷ್ಣುವೇ ಆಶ್ರಯನಾಗಿದ್ದಾನೆಂದು ತಿಳಿಸಿದ್ದಾರೆ.

'ಪೃಥಿವ್ಯಾದಿಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚ ಯತ್ ।
ವಿಷ್ಣುರೇಕೋ ಭಿಭರ್ತೀದವ್ ನಾನ್ಯತ್ ತಸ್ಮಾತ್ ಸವೋಧೃತಾ'

ಎಂಬ ಸ್ಮೃತಿಯೇ ಈ ವಿಷಯದಲ್ಲಿ ಆಧಾರವಾಗಿದೆ. ಲಕ್ಷ್ಮೀದೇವಿಯು ಎಲ್ಲಾ ಪದಾರ್ಥಗಳನ್ನೂ ಧರಿಸಿದ್ದಾಳೆ. ಆದರೂ ಸಹ ಭಗವಂತನನ್ನು ಇವಳು ಆಶ್ರಯಿಸಿದ್ದಾಳೆ. ಅಂಬರವು ಶ್ರೀತತ್ತ್ವವೆಂದು ತಿಳಿಸುವುದಕ್ಕಾಗಿಯೂ 'ಅಂತ' ಪದವನ್ನು ಹೇಳಿದ್ದಾರೆಂದು ಕೆಲವರು ಹೇಳುತ್ತಾರೆ. ಏಕೆಂದರೆ ಸಕಲ ಪದಾರ್ಥಗಳನ್ನು ಆಶ್ರಯಿಸಿದ್ದರೂ ಮಹಾವಿಷ್ಣುವಿನ್ನೊಬ್ಬನನ್ನು ಆಶ್ರಯಿಸಿರುವುದು ಲಕ್ಷ್ಮೀದೇವಿಯ ಲಕ್ಷಣವಾಗಿರುವುದರಿಂದ.

इतश्चैवमित्याह -

**।। ॐ सा च प्रशासनात् ॐ ।। १-३-११ ।।**

उच्यत इति शेषः । सा धृतिश्च प्रशासनादक्षरस्याज्ञामात्रादुच्यते ''एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः'' इत्यादौ । अतश्चाक्षरं ब्रह्मैवेत्यर्थः ।

ಮತ್ತೊಂದು ಕಾರಣದಿಂದಲೂ ಅಕ್ಷರನು ಬ್ರಹ್ಮನೇ ಆಗಿದ್ದಾನೆಂದು ಸಮರ್ಥಿಸುವುದಕ್ಕಾಗಿ ಮುಂದಿನ ಸೂತ್ರ ಹೊರಡುತ್ತಿದೆ. 'ಉಚ್ಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಸಾಚ = ಅಂತಹ ಧಾರಣವು 'ಪ್ರಶಾಸನಾತ್' = ಅಕ್ಷರನ ಆಜ್ಞೆಯಿಂದಷ್ಟೇ, ಉಚ್ಯತೇ = 'ಏತಸ್ಯ ಅಕ್ಷರಸ್ಯ ಪ್ರಸಾಶನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌತಿಷ್ಠತಃ' ಇತ್ಯಾದಿಯಾಗಿ ಹೇಳಲ್ಪಟ್ಟಿದೆ. ಈ ಕಾರಣದಿಂದಲೂ ಬ್ರಹ್ಮನೇ ಅಕ್ಷರನಾಗುತ್ತಾನೆಂದು.

नहि प्रेत्युक्तासङ्कुचितविषयत्वानन्यायत्तत्वरूपप्रकृष्टशासनमात्रेण सर्वधृतिरन्यस्य युज्यत इति भावः ।।

'ಪ್ರಶಾಸನಾತ್' ಎಂಬಲ್ಲಿ 'ಪ್ರ' ಎಂಬ ಉಪಸರ್ಗವು ಅಸಂಕುಚಿತವಾದ ವಿಷಯತ್ವವನ್ನು ಹಾಗೂ ಮತ್ತೊಬ್ಬರ ಅಧೀನವಲ್ಲವೆಂಬ ಮೊದಲಾದ ಪ್ರಕೃಷ್ಟತ್ವವನ್ನು ಸೂಚಿಸುತ್ತಿದೆ. ಅಂದರೆ ಸಂಪೂರ್ಣವಾದ

ಸ್ವಾತಂತ್ರ್ಯದಿಂದ ಮಹಾವಿಷ್ಣು ಎಲ್ಲವನ್ನೂ ಆಜ್ಞೆ ಮಾಡುತ್ತಾನೆ. ಇಂತಹ ಸ್ವಾತಂತ್ರ್ಯದಿಂದ ಆಜ್ಞೆ ಮಾಡುವ ಮಾತ್ರದಿಂದ ಸಕಲವನ್ನೂ ಧರಿಸುವಿಕೆಯು ಮಹಾವಿಷ್ಣುವನ್ನು ಬಿಟ್ಟು ಇತರರಲ್ಲಿ ಯುಕ್ತವಾಗುವುದಿಲ್ಲವೆಂದು ತಿಳಿಯಬೇಕು.

इतश्चैवमित्याह -

**।। ॐ अन्यभावव्यावृत्तेश्च ॐ ।। १-३-१२ ।।**

अन्येषां वस्तूनां भावानां स्थौल्यादिधर्माणां व्यावृत्तेः ''अस्थूलमनणु'' इत्यादिनाऽक्षरे व्यावृत्त्युक्तेश्चाक्षरं ब्रह्मैवेत्यर्थः ।

ಮತ್ತೊಂದು ಕಾರಣದಿಂದಲೂ ಮಹಾವಿಷ್ಣುವೇ ಅಕ್ಷರನಾಗಿದ್ದಾನೆಂದು ಮುಂದಿನ ಸೂತ್ರದಿಂದ ಸಮರ್ಥಿಸುತ್ತಿದ್ದಾರೆ.

ಸೂತ್ರಾರ್ಥ ಹೀಗಿದೆ - ಅನ್ಯೇಷಾಂ = ಬೇರೆ ವಸ್ತುಗಳ, ಭಾವಾನಾಂ = ಸೂರ್ಯ ಮೊದಲಾದ ಧರ್ಮಗಳಿಗೆ, ವ್ಯಾವೃತ್ತೇಃ = 'ಅಸ್ಥೂಲಮನಣು' ಇತ್ಯಾದಿ ಶ್ರುತಿಯಿಂದ ಅಕ್ಷರನಲ್ಲಿ ಇಲ್ಲದಿರುವಿಕೆಯನ್ನು ಹೇಳಿರುವುದರಿಂದಲೂ ಮಹಾವಿಷ್ಣುವೇ ಅಕ್ಷರನಾಗಿದ್ದಾನೆಂದು ಸೂತ್ರಾರ್ಥ.

स्थौल्यादीति वाच्येऽन्यभावेत्युक्तिः स्थौल्यादिहीनमक्षरं ब्रह्म चेन्निःस्वभावं स्यादिति न शङ्क्यम्, अन्यवस्तुस्वाभावस्य प्राकृतस्यैव स्थौल्यादेर्व्यावृत्त्युक्तेरिति सूचयितुम् । नहि तादृशं निरपेक्षं स्थौल्यादिराहित्यमन्यस्य युज्यत इति भावः ।

ಸೂತ್ರದಲ್ಲಿ 'ಸ್ಥೌಲ್ಯಾದೇರ್ವ್ಯಾವೃತ್ತೇಃ' ಎಂದೇ ಹೇಳಬಹುದಿತ್ತು ಆದರೂ 'ಅನ್ಯಭಾವವ್ಯಾವೃತ್ತೇಃ' ಎಂದು ಹೇಳಿದ್ದರಿಂದ; ಬೇರೆ ವಸ್ತುಗಳ ಸ್ವಭಾವವಾದ ಪ್ರಾಕೃತವಾದ ಸ್ಥೌಲ್ಯಾದಿಗಳು ಬ್ರಹ್ಮನಲ್ಲಿ ಇಲ್ಲವೆಂದು ಹೇಳಿದರೆ ಬ್ರಹ್ಮನು ಸ್ಥೌಲ್ಯಾದಿರಹಿತನಾದ್ದರಿಂದ ಶೂನ್ಯಸ್ವಭಾವನಾಗಬೇಕಾದೀತು ಎಂಬ ಆಶಂಕೆಯನ್ನು ನಿರಾಕರಿಸಿದ್ದಾರೆ. ಇಂತಹ ನಿರಪೇಕ್ಷವಾದ ಪ್ರಾಕೃತಸ್ಥೌಲ್ಯಾದಿರಾಹಿತ್ಯವು ಬ್ರಹ್ಮನನ್ನು ಬಿಟ್ಟು ಇತರರಲ್ಲಿ ಯುಕ್ತವಾಗುವುದಿಲ್ಲವೆಂದು ಅಭಿಪ್ರಾಯ.

यद्वा सुधारीत्या ''अस्थूलमनणु'' इत्यादिना स्थौल्यादिविरुद्धाणुत्व-महत्त्वादिमत्त्वाच्चेति चशब्देन समुच्चीयते । बहुपदविषयं व्याख्यानं स्वशब्देन कृत्वा कतिपयपदविषयत्वादिदं व्याख्यानं चशब्देन समुच्चितम् । नच विरोधः । अन्यभावा-व्यावृत्तेरन्यवस्तु वैलक्षण्याद् वस्तुस्वभावस्यैव तादृशत्वादिति यावदिति वृत्त्यन्तरं बोध्यम् ।।३।।

ಅಥವಾ ನ್ಯಾಯಸುಧೆಯ ಪ್ರಕಾರ ಮತ್ತೊಂದು ರೀತಿಯಲ್ಲಿಯೂ ಇದರ ಪ್ರಯೋಜನವನ್ನು

ತಿಳಿಯಬಹುದು. 'ಅಸ್ಥೂಲಮನಣು' ಇತ್ಯಾದಿ ವಾಕ್ಯಗಳಿಂದ ಸ್ಥೌಲ್ಯಾದಿ ಧರ್ಮಗಳಿಗೆ ವಿರುದ್ಧವಾದ ಅಣುತ್ವ-ಮಹತ್ವಾದಿ ಧರ್ಮಗಳಿರುವುದರಿಂದಲೂ ಎಂಬುದನ್ನು ಸಮುಚ್ಚಯ ಮಾಡುವುದಕ್ಕಾಗಿ, 'ಅನ್ಯಭಾವ' ಎಂಬ ಶಬ್ದವನ್ನು ಹೇಳಿರುತ್ತಾರೆ. 'ಅಸ್ಥೂಲಮನಣು' ಎಂಬ ಶ್ರುತಿಯ ಅನೇಕ ಪದಗಳಿಗೆ ಸಂಬಂಧಿಸಿದ ವ್ಯಾಖ್ಯಾನವನ್ನು ಸೂತ್ರದಿಂದ ಮಾಡಿ ಕೆಲವು ವಿಷಯಗಳಿಗೆ ಸಂಬಂಧಿಸಿದ ವ್ಯಾಖ್ಯಾನವನ್ನು 'ಚ' ಶಬ್ದದಿಂದ ಸಂಗ್ರಹಿಸಿದ್ದಾರೆ. ಅಣುತ್ವ, ಮಹತ್ವ ಮೊದಲಾದ ಧರ್ಮಗಳು ವಿರುದ್ಧವಾದ್ದರಿಂದ ಒಬ್ಬನಲ್ಲೇ ಒಪ್ಪಲು ಸಾಧ್ಯವಿಲ್ಲವೆಂದು ಶಂಕಿಸಬಾರದು. ಏಕೆಂದರೆ 'ಅನ್ಯಭಾವವ್ಯಾವೃತ್ತೇಃ' = ಇತರ ಸಕಲ ಪದಾರ್ಥಗಳಿಂದಲೂ ಬ್ರಹ್ಮನು ವಿಲಕ್ಷಣ ಸ್ವಭಾವವುಳ್ಳವನಾಗಿದ್ದಾನೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲವೆಂದು ಮತ್ತೊಂದು ಅರ್ಥವನ್ನೂ ಸೂತ್ರದಲ್ಲಿ ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಸಮಾಪ್ತವಾಯಿತು.

### श्री राघवेन्द्रतीर्थविरचिता

# श्रीन्यायमुक्तावळिः

## अक्षराधिकरणम् (१।३।३)

**।। ॐ अक्षरमम्बरान्तधृतेः ॐ ।।**

**।। ॐ सा च प्रशासनात् ॐ ।।**

**।। ॐ अन्यभावव्यावृत्तेश्च ॐ ।।**

पूर्वत्रैकप्रकरणस्थयोः सर्वगतत्वोत्क्रमणयोः विरोधनिरासोऽत्र त्वेकवाक्यस्थयोः अणुत्वमहत्वयोर्विरोधो निरस्यत इति सङ्गतिः ।

ಹಿಂದಿನ ಅಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ 'ಸರ್ವಗತತ್ವ' ಹಾಗೂ 'ಉತ್ಕ್ರಮಣ' ಎಂಬ ಎರಡು ಧರ್ಮಗಳಿಗೆ ವಿರೋಧವನ್ನು ಪರಿಹರಿಸಿದ್ದಾಯಿತು. ಪ್ರಕೃತ ಈ ಅಧಿಕರಣದಲ್ಲಿ ಒಂದೇ ವಾಕ್ಯದಲ್ಲಿರುವ ಅಣುತ್ವ ಹಾಗೂ ಮಹತ್ವಗಳಿಗೆ ಇರುವಂತಹ ವಿರೋಧವನ್ನು ಪರಿಹರಿಸುತ್ತಿದ್ದಾರೆ.

ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯಿದೆ ಎಂದು ತಿಳಿಯಬೇಕು.

काण्वशाखायां पञ्चमेऽध्यायेऽष्टमब्राह्मणे "एतद्वै तदक्षरं गार्गि ब्राह्मणा अभिवदन्त्यस्थूलमनण्वह्रस्वम्' इत्यादिना (बृ. ५-८-८) श्रुतमक्षरं किं चित्प्रकृतिरुत विष्णुरिति सन्देहः ।

ಕಾಣ್ವಶಾಖೆಯ ಐದನೆಯ ಅಧ್ಯಾಯದ ಎಂಟನೆಯ ಬ್ರಾಹ್ಮಣದಲ್ಲಿ 'ಏತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣು' ಇತ್ಯಾದಿ ವಾಕ್ಯದಲ್ಲಿ ಶೃತವಾದ ಅಕ್ಷರವು ಲಕ್ಷ್ಮೀದೇವಿಯೋ ಅಥವಾ ವಿಷ್ಣುವೋ ಎಂದು ಸಂದೇಹ .

अक्षरशब्दस्य 'ये त्वक्षरमनिर्देश्यम्' इत्यादौ (भ.गी.१२-३) श्रीतत्त्वे प्रयोगाद-विनाशित्वरूपनिमित्तसत्त्वाद् 'अहं सोममाहनसं बिभर्मि' इति श्रुत्यन्तरे श्रीतत्त्वधर्मतया श्रुतस्य चन्द्राद्याधारत्वस्येह 'सूर्याचन्द्रमसौ विधृतौ तिष्ठतः'' इति 'श्रवणाददृष्टं द्रष्टृश्रुतं श्रोतृ' इत्यादिनोक्तादृश्यत्वादेश्च 'ये त्वक्षरम्' इत्यादिस्मृत्या श्रीतत्त्वेऽपि सम्भवात् 'न तदश्नाति किञ्चन' इत्युक्तानशनस्य "अत्ता" (ब्र.सू.१-२-९) इत्यत्रात्तृत्वेनोक्तविष्णावयोगात् । 'किञ्चन' इत्युक्त्या गुहानयोक्तन्यायेन (ब्र.सू. १-२-११) अशुभानशनपरत्वस्याप्ययोगात् । श्रीतत्त्वे च स्वतन्त्राशनाभावादिनोपपत्तेः चित्प्रकृतिरेवेदम् अक्षरमिति पूर्वः पक्षः ।।

'ಅಕ್ಷರ' ಶಬ್ದವು 'ಯೇ ತ್ವಕ್ಷರಮನಿರ್ದೇಶ್ಯಮ್' ಇತ್ಯಾದಿಯಾಗಿ ಭಗವದ್ಗೀತೆಯಲ್ಲಿ ಲಕ್ಷ್ಮೀದೇವಿಯಲ್ಲಿಯೂ ರೂಢವಾಗಿದೆ. ಮತ್ತು ಅವಿನಾಶತ್ವವೆಂಬ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿರುವಂತೆ ಲಕ್ಷ್ಮೀದೇವಿಯಲ್ಲಿಯೂ ಇರುತ್ತದೆ. 'ಅಹಂ ಸೋಮಮಾಹನಸಂ ಬಿಭರ್ಮಿ' ಎಂಬ ಅಂಭೃಣೀ ಸೂಕ್ತದಲ್ಲಿ ಚಂದ್ರಾದ್ಯಾಧಾರತ್ವವೆಂಬ ಧರ್ಮವು ಲಕ್ಷ್ಮೀದೇವಿಯ ಗುಣವೆಂದು ಹೇಳಲಾಗಿದೆ. ಅದೇ ಗುಣವು 'ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಎಂಬುದಾಗಿ ಅಕ್ಷರನಲ್ಲಿಯೂ ಕೇಳಿಸುತ್ತಿದೆ. ಅಕ್ಷರನಲ್ಲಿ ಕೇಳಿಸಲ್ಪಟ್ಟ ಅದೃಶ್ಯತ್ವಾದಿ ಧರ್ಮಗಳು ಲಕ್ಷ್ಮೀದೇವಿಯಲಿಯೂ ಉಪಪನ್ನವಾಗುತ್ತವೆ. ಏಕೆಂದರೆ 'ಅದೃಷ್ಟಂ ದ್ರಷ್ಟೃಶ್ರುತಂ ಶೋತೃ' ಇತ್ಯಾದಿ ವಾಕ್ಯದಿಂದ ಉಕ್ತವಾದ ಅದೃಶ್ಯತ್ವವು 'ಏತ್ವಕ್ಷರಮನಿರ್ದೇಶ್ಯಂ' ಇತ್ಯಾದಿ ಸ್ಮೃತಿಯಿಂದ ಲಕ್ಷ್ಮೀದೇವಿಯಲ್ಲಿ ಸಿದ್ಧವಾಗಿದೆ. ಅಷ್ಟೇ ಅಲ್ಲದೇ ಅಕ್ಷರನಲ್ಲಿ ಶ್ರುತವಾದ 'ನ ತದಶ್ನಾತಿ ಕಿಂಚನ' ಎಂಬ ಅನಶನತ್ವವು, ವಿಷ್ಣುವಿನಲ್ಲಿ ಉಪಪನ್ನವಾಗುವುದಿಲ್ಲ. ಏಕೆಂದರೆ 'ಅತ್ತಾಚರಾಚರಾತ್' ಎಂಬ ಸೂತ್ರದಲ್ಲಿ ಸಕಲವನ್ನೂ ಮಹಾವಿಷ್ಣು ಭಕ್ಷಿಸುತ್ತಾನೆಂದು ಹೇಳಿದ್ದಕ್ಕೆ ವಿರೋಧ ಬರುತ್ತದೆ. 'ಕಿಂಚನ'

ಎಂದು ಶ್ರುತಿಯು ಹೇಳಿರುವುದರಿಂದ ಗುಹಾಧಿಕರಣದ ನ್ಯಾಯವನ್ನು ವಿವಕ್ಷಿಸಿ ಅಶುಭವಾದ ಫಲವನ್ನಷ್ಟೇ ತಿನ್ನುವುದಿಲ್ಲವೆಂದು ವ್ಯಾಖ್ಯಾನಿಸಲು ಸಾಧ್ಯವಿಲ್ಲ. ಆದರೆ ಲಕ್ಷ್ಮೀದೇವಿಯು ಸ್ವತಂತ್ರವಾಗಿ ಏನನ್ನೂ ತಿನ್ನದ ಕಾರಣ 'ನ ತದಶ್ನಾತಿ ಕಿಂಚನ' ಎಂಬ ಶ್ರುತಿಯನ್ನು ಉಪಪಾದಿಸಬಹುದು. ಆದ್ದರಿಂದ ಚಿತ್‌ಪ್ರಕೃತಿಯೇ ಅಕ್ಷರಳೆನಿಸುತ್ತಾಳೆಂದು ಪೂರ್ವಪಕ್ಷ.

सिद्धान्तस्तु ।। 'यद्भूतं च भवच्च भविष्यच्चेत्याचक्षते आकाश एव तदोतम्' इति सर्वाधारत्वमाकाशशब्दितश्रीतत्त्वेऽभिधाय 'अक्षरे गार्ग्याकाश ओतश्च प्रोतश्च' इत्युक्त-सर्वाधाराकाशशब्दितचित्प्रकृत्याः आकाशाख्यप्रकृतेः सर्वाधारत्वमुक्त्वा 'एतस्मिन् खल्वक्षरे गार्गि आकाश ओतश्च प्रोतश्च' इति तदाधारत्वस्य' एतस्य वा अक्षरस्य प्रशासने गार्गि' इत्यादिनोक्तस्यासङ्कुचितविषयत्वानन्यायत्तत्वरूपप्रकर्षयुक्तसर्वशासन-लिङ्गस्यास्थूलमनण्वित्यादिनोक्तस्यान्यानपेक्षप्राकृतस्थौल्याद्यभावस्य स्थौल्यादि-विरुद्धाणुत्वमहत्वादेर्वा लिङ्गस्य 'एको दाधार भुवनानि', 'सप्तार्धगर्भा भुवनस्य रेतो विष्णोस्तिष्ठन्ति प्रदिशा' इति 'अस्थूलोऽनणुरमध्यमो मध्यमो व्यापकोऽव्यापकः' इत्यादिश्रुत्या विष्ण्वेकनिष्ठत्वात् ''अनित्यत्वं देहहानिः'' इत्यादिश्रुत्या चतुर्विधनाशहीने विष्णावेवाक्षरपदप्रवृत्तिनिमित्तपौष्कल्यात् 'तस्मादक्षरं तस्मादक्षरम्' इति प्रयोगाच्चाक्षरं विष्णुरेव ।

ಸಿದ್ಧಾಂತ ಹೀಗಿದೆ - 'ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತ ಆಕಾಶ ಏವ ಓತಂಚ ಪ್ರೋತಂಚ' ಇತ್ಯಾದಿ ಶ್ರುತಿಯಲ್ಲಿ 'ಆಕಾಶ' ಶಬ್ದವಾಚ್ಯವಾದ ಪ್ರಕೃತಿಯಲ್ಲಿ ಸರ್ವಾಧಾರತ್ವವನ್ನು ಹೇಳಲಾಗಿದೆ. ಮುಂದೆ ಅಕ್ಷರನಲ್ಲಿ 'ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಎಂಬಲ್ಲಿ ಹೇಳಲ್ಪಟ್ಟ ಆಕಾಶ ಶಬ್ದಪ್ರತಿಪಾದ್ಯವಾದ ಸಕಲಕ್ಕೂ ಆಶ್ರಯವಾದ 'ಚಿತ್' ಪ್ರಕೃತಿಗೆ ಮತ್ತು ಆಕಾಶವೆಂಬ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎಂಬುದಾಗಿ ಅಂತಹ ಲಕ್ಷ್ಮೀದೇವಿಗೂ ಅಂದರೆ ಚಿತ್‌ಪ್ರಕೃತಿಗೂ ಅಕ್ಷರನೇ ಆಧಾರನಾಗಿದ್ದಾನೆಂದು ಹೇಳಲಾಗಿದೆ. 'ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಇತ್ಯಾದಿ ವಾಕ್ಯದಿಂದ ಅಸಂಕುಚಿತವಾದ ಆಜ್ಞೆಯನ್ನು ಮತ್ತು ಸ್ವತಂತ್ರವಾದ ಆಜ್ಞೆಯನ್ನು ಅಕ್ಷರನಲ್ಲಿ ಹೇಳಲಾಗಿದೆ. 'ಪ್ರಶಾಸನೇ' ಎಂಬಲ್ಲಿರುವ 'ಪ್ರ' ಎಂಬ ಉಪಸರ್ಗದಿಂದ ಅಸಂಕುಚಿತತ್ವ ಮತ್ತು ಸ್ವಾತಂತ್ರವೆಂಬ ಪ್ರಕೃಷ್ಟತ್ವವು ತಿಳಿಯುತ್ತದೆ. ಅಂದರೆ ಅಕ್ಷರನ ಆಜ್ಞೆಮಾತ್ರದಿಂದಲೇ ಪೃಥಿವಿಯಿಂದ ಪ್ರಾರಂಭಿಸಿ ಪ್ರಕೃತಿಯತನಕ ಸಕಲ ಪದಾರ್ಥಗಳೂ ತಮ್ಮ ತಮ್ಮ ಸ್ಥಾನದಲ್ಲಿ ನೆಲೆಸಿವೆ ಮತ್ತು ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿವೆ ಎಂದು ಹೇಳಲಾಗಿದೆ. ಕೇವಲ ಆಜ್ಞೆಯಿಂದಲೇ ಹೀಗೆ ಧಾರಣೆ ಮಾಡಿರುವಿಕೆಯು ಮಹಾವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ

ಸಹ ಉಪಪನ್ನವಾಗುವುದಿಲ್ಲ. ಮತ್ತು ಸೌಕ್ಷ್ಮ್ಯಾದಿ ವಿರುದ್ಧವಾದ ಅಣುತ, ಮಹತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುತ್ತವೆ. 'ಏಕೋ ದಾಧಾರ ಭುವನಾನಿ', 'ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ' 'ಅಸ್ಥೂಲೋಽನಣುರಮಧ್ಯಮೋ ಮಧ್ಯಮೋ ವ್ಯಾಪಕೋಽವ್ಯಾಪಕಃ' ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಈ ಎಲ್ಲ ಲಿಂಗಗಳೂ ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುತ್ತವೆ. 'ಅನಿತ್ಯತ್ವಂ ದೇಹಹಾನಿಃ' ಇತ್ಯಾದಿ ಶ್ರುತಿಯಿಂದ ಚತುರ್ವಿಧ ನಾಶರಹಿತನಾದ ವಿಷ್ಣುವಿನಲ್ಲಿ ಮಾತ್ರ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವು ಪುಷ್ಕಳವಾಗಿ ಯುಕ್ತವಾಗುತ್ತದೆ. 'ತಸ್ಮಾದ್ ಅಕ್ಷರಂ, ತಸ್ಮಾದ್ ಅಕ್ಷರಂ' ಎಂಬ ಪ್ರಯೋಗವೂ ವಿಷ್ಣುವಿನಲ್ಲಿ ಇರುವುದರಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ತಿಳಿಯಬೇಕು.

**अनशनश्रुतिस्तु जीवस्वभावभूतोपजीवनार्थाशननिषेधपरा, अणुत्वमहत्वादिकं चाचिन्त्यशक्तियुक्तत्वाद् युक्तमिति सर्वाधारत्वे सत्यन्यैकाश्रितत्वलिङ्गेनाकाशोऽत्र श्रीतत्त्वमिति ध्येयम् ।।**

ಪೂರ್ವಪಕ್ಷ ಯುಕ್ತಿಯನ್ನಾಗಿ ಬಳಸಲ್ಪಟ್ಟ ಅನಶನ ಶ್ರುತಿಯಾದರೂ ಜೀವನ ಸ್ವಭಾವವೆನಿಸಿದ ಉಪಜೀವನಕ್ಕೋಸ್ಕರ ತಿನ್ನುವಿಕೆಯು ಪರಮಾತ್ಮನಲ್ಲಿ ಇರುವುದಿಲ್ಲವೆಂಬ ಅಭಿಪ್ರಾಯದಿಂದಷ್ಟೇ ಹೊರಟಿರುತ್ತದೆ ಎಂದು ವಿವಕ್ಷಿಸಬೇಕು. ಅಣುತ್ವ, ಮಹತ್ವಗಳ ವಿರೋಧವನ್ನು ಅಚಿಂತಾದ್ಭುತ ಶಕ್ತಿಗಳಿಂದ ಪರಿಹರಿಸಬೇಕು. ಶ್ರುತಿಯಲ್ಲಿರುವ 'ಆಕಾಶ' ಶಬ್ದಕ್ಕೆ ಶ್ರೀತತ್ತ್ವವೆಂದರ್ಥ. ಶ್ರೀತತ್ತ್ವವು ಸಕಲ ಪ್ರಪಂಚಕ್ಕೆ ಆಶ್ರಯವಾಗಿ ಒಬ್ಬ ಪರಮಾತ್ಮನನ್ನು ಮಾತ್ರ ಆಶ್ರಯಿಸಿದೆ. ಇದೇ ಶ್ರೀತತ್ತ್ವದ ಲಿಂಗವಾಗಿದೆ ಎಂದೂ ಸಹ ತಿಳಿಯಬೇಕು. ಆದ್ದರಿಂದ ಆಕಾಶಶಬ್ದ ವಾಚ್ಯಳು ಲಕ್ಷ್ಮೀದೇವಿ. ಇಂತಹ ಲಕ್ಷ್ಮಿಯು ಪರಮಾತ್ಮನ್ನು ಆಶ್ರಯಿಸಿರುವ ಕಾರಣ ಅಕ್ಷರಳೆನೆನಿಸಲು ಸಾಧ್ಯವಿಲ್ಲ.

**फले त्वदृश्यत्वादियुतस्याक्षरस्य विष्णवन्यत्वे प्राचीनं तादृशाक्षरमपि तथेत्य-दृश्यत्वनयाक्षेपसमाधी ।।३।।**

ಪೂರ್ವಪಕ್ಷಗಳ ಹಾಗೂ ಸಿದ್ಧಾಂತಗಳ ಫಲಫಲಿಭಾವ ಹೀಗಿದೆ - ಅದೃಶ್ಯತ್ವಾದಿ ಧರ್ಮಗಳುಳ್ಳ ಅಕ್ಷರನು ವಿಷ್ಣುವಿಗಿಂತ ಭಿನ್ನನಾದರೆ ಅದಶ್ಯತ್ವಾಧಿಕರಣದಲ್ಲಿ ಪ್ರತಿಪಾದಿಸಲ್ಪಟ್ಟ ಅದೃಶ್ಯತ್ವಾದಿ-ಗುಣವುಳ್ಳದ್ದು ವಿಷ್ಣುವಾಗಲು ಸಾಧ್ಯವಿಲ್ಲವೆಂಬುದು ಪೂರ್ವಪಕ್ಷದ ಫಲ. ಅದರ ನಿರಾಕರಣೆಯೇ ಸಿದ್ಧಾಂತದ ಫಲವೆಂದು ಅದೃಶ್ಯತ್ವಾಧಿಕರಣದ ನ್ಯಾಯದ ಆಕ್ಷೇಪ - ಸಮಾಧಾನಗಳನ್ನು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಸಮಾಪ್ತವಾಯಿತು.

ಪರಿಪೂರ್ಣಚಂದ್ರಿಕಾ

# सूत्रार्थरत्नावलिः

## अक्षराधिकरणम् (१।३।३)

**।। ॐ अक्षरमम्बरान्तधृतेः ॐ ।।**

(अत्र 'अक्षरनामसमन्वयः' क्रियते)

ननु एतदक्षरं मध्यमं श्रीतत्वमेव । 'अदृष्टम्'(बृ. ५।८।११) इति श्रुतेः । 'अहं सोमम्' (ऋ १०।१२५।२) इत्यादिना तद्धर्मत्वेनावगतचन्द्रसूर्याद्याधारत्वस्य 'सूर्याचन्द्रमसौ' (बृ. ५।८।९) इत्यादिना अक्षरप्रतीतेश्च । नच श्रीतत्वलिङ्गतया प्रसिद्धचन्द्रसूर्याद्याधारत्वबलाद् यद्यक्षरं श्रीतत्वमुच्यते । तर्हि विष्णुलिङ्गतया प्रसिद्धाददृश्यत्वादिबलाद् विष्णुरेव किं न स्यादिति वाच्यम् । अदृश्यत्वादीनां 'येत्वक्षरमनिर्देश्यम्' (भ.गी.१२।३) इत्यादिना सावकाशत्वात् । न चाक्षरश्रुतेरदृश्यत्वादिलिङ्गानां च मध्यमोत्तमाक्षरयोः साम्येऽत्र मध्यममेवोच्यत इति निर्बन्धे को हेतुरिति वाच्यम् । 'न तदश्नादि किञ्चन' इत्यक्षरस्यानशनोक्तेः । तच्च विष्णोर्विरुद्धम् । 'अत्ता चराचरग्रहणात्' इत्युक्तत्वात् । नच मध्यमाक्षरस्यानशनाङ्गीकारे विरोधोऽस्ति । अत एतदक्षरं मध्यमं श्रीतत्वमेवेति प्राप्ते, सूत्रितम् –

> ।। ॐ अक्षरमम्बरान्तधृतेरिति । अस्यार्थः – अक्षरं तद्वा एतदित्यक्षरशब्दवाच्यं ब्रह्मैव । न चित्प्रकृतिः । कुतः? अम्बरान्तधृतेः । अस्मिन् अक्षरे 'एतस्मिन् खल्वक्षरे' (बृ. ५।८।११) इति आकाशान्तपदार्थधारकत्वश्रवणादित्यर्थः ।

एवञ्च आकाश एव 'तदोतं च प्रोतं च' (बृ.५।८।७) इत्याकाशाख्यप्रकृतेः सर्वाधारत्वोक्त्या, 'एतस्मिन् खल्वक्षरे' इत्यादिनाऽक्षरस्य तदाधारत्वश्रवणादक्षरशब्दवाच्यो विष्णुरेवेति सिद्धम् ।।

**।। ॐ सा च प्रशासनात् ॐ ।। १।।**

युक्त्यन्तरेण विष्णोरेवाक्षरत्वं प्रतिपादयत्सूत्रं व्याचष्टे –

।। ॐ सा च प्रशासनादिति ।। अस्यार्थः – चो यतः । सा अम्बरान्तधृतिः। प्रशासनात् विष्णोराज्ञामात्रादेव भवतीति 'एतस्य वा' इति श्रुतौ उक्ता । अतोऽपि ब्रह्मैवाक्षरशब्दवाच्यम् । न चेतनप्रकृतिरित्यर्थः ।

एवञ्च अक्षरस्याज्ञामात्रेण सर्वाधारत्वश्रवणात् । 'सप्तार्धगर्भा' इति (ऋ. १।१६४।३६) श्रुतेः । अतः 'अक्षरशब्दवाच्यो विष्णुरेव' इति सिद्धम् ।

।। ॐ अन्यभावव्यावृत्तेश्च ॐ ।। १२ ।।

युक्त्यन्तरेण विष्णोरक्षरत्वं प्रतिपादयत्सूत्रमाह –

।। ॐ अन्यभावव्यावृत्तेश्चेति ।। अस्यार्थः – अन्यभावानां = विष्णवन्यवस्तुस्वभावानां स्थूलत्वादीनाम् । 'अस्थूलमनणु' (बृ.५।८।८) इति श्रुतावक्षरे व्यावृत्तेरभावस्य कथनाच्च ब्रह्मैवाक्षरम् इत्यर्थः ।

एवञ्च 'अस्थूलम्' इत्यादिना अन्यवस्तुस्वभावानां स्थौल्यादीनां व्यावृत्त्यभिधानात् 'अक्षरशब्दवाच्यो विष्णुरेव' इति सिद्धम् ।।

।। ಪರಿಪೂರ್ಣಚಂದ್ರಿಕೆಯಲ್ಲಿ ಅಕ್ಷರಾಧಿಕರಣವು ಮುಗಿಯಿತು ।।

।। ಶ್ರೀಮಧ್ವೇಶಾರ್ಪಣಮಸ್ತು ।।

# ಸದಧಿಕರಣ

(೧-೩-೪)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

|| ಶ್ರೀಗುರುಭ್ಯೋ ನಮಃ ||

# ಸದಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಜ್ಞಾನಪೂರ್ವಕ ಸೃಷ್ಟಿಕ್ರಿಯೆಯುಳ್ಳ ಶ್ರೀಹರಿಯಲ್ಲಿ ಸ್ಥಾನ ಸಮನ್ವಯ

**।। अथ सदधिकरणम् ।।**

**स – ॐ ।। ईक्षतिकर्मव्यपदेशात्सः ॐ ।। १३ ।।**

ಸೂತ್ರಾರ್ಥ – 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಶ್ರುತಿಯಲ್ಲಿರುವ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಭಗವಂತನೇ ಆಗಿದ್ದಾನೆ ಹೊರತು ಪ್ರಧಾನವಲ್ಲ. ಏಕೆಂದರೆ 'ತದೈಕ್ಷತ' ಎಂಬುದಾಗಿ ಜ್ಞಾನಸಹಿತವಾದ ಸೃಷ್ಟಿಯನ್ನುಂಟುಮಾಡುವಿಕೆಯನ್ನು ಶ್ರುತಿಯು ಹೇಳುತ್ತಿರುವುದರಿಂದ.

|| ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಸದಧಿಕರಣವು ಸಮಾಪ್ತವಾಯಿತು ||

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ॐ ईक्षतिकर्मव्यपदेशात्सः ॐ ।। ''सदेव'' इत्यादि (छा. ६-२-१.) प्रकरणस्थितसदादिशब्दवाच्यः विष्णुरेव न प्रधानम् । कुतः? ईक्षतिकर्मव्यपदेशात् ''तदैक्षत'' (छां. ६-२-३.) इति चेतननिष्ठेक्षतेति-शब्दोपलक्षितदर्शनाख्यक्रियाभिधानादित्यर्थः ।।१।।

ಪರಿಪೂರ್ಣಚಂದ್ರಿಕಾ

ಅರ್ಥ - ಸದೇವ' ಇತ್ಯಾದಿಯಾದ ಛಾಂದೋಗ್ಯದ ಪ್ರಕರಣದಲ್ಲಿರುವ 'ಸತ್' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಹೊರತು ಪ್ರಧಾನವಲ್ಲ. ಏಕೆಂದರೆ ಈಕ್ಷತಿಕರ್ಮವ್ಯಪದೇಶಾತ್ = 'ತದೈಕ್ಷತ' ಎಂಬುದಾಗಿ ಅದೇ ಛಾಂದೋಗ್ಯವು ಚೇತನನಲ್ಲಿ ಮಾತ್ರ ಇರುವ 'ಐಕ್ಷತ' ಶಬ್ದದಿಂದ ಉಪಲಕ್ಷಿತವಾದ ದರ್ಶನಕ್ರಿಯೆಯನ್ನು ಹೇಳುತ್ತಿರುವುದರಿಂದ.

॥ ಸೂತ್ರದೀಪಿಕೆಯಲ್ಲಿ ಸದಧಿಕರಣವು ಸಮಾಪ್ತವಾಯಿತು ॥

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – 'सदेव सोम्येदमग्र आसीत्' (छा. ६-२-१.) इत्यादिना सतः स्रष्टृत्वमुच्यते ॥**

ಅನುವಾದ -'ಸದೇವ ಸೋಮ್ಯ. ಇದಮಗ್ರ ಆಸೀತ್' ಇತ್ಯಾದಿಯಾದ ಛಾಂದೋಗ್ಯ ಉಪನಿಷತ್ತಿನಲ್ಲಿ 'ಸತ್' ಎಂಬ ತತ್ವವು ಜಗತ್ತನ್ನು ಸೃಷ್ಟಿ ಮಾಡುತ್ತದೆ ಎಂದು ಹೇಳಲಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಅನೇಕ ಪ್ರಕರಣ ಸ್ವರೂಪವಾದ 'ಸದೇವ' ಇವೇ ಮೊದಲಾದ ಸ್ಥಾನದ ಸಮನ್ವಯವನ್ನು ಮಾಡಲಾಗಿದೆ. ಪ್ರಕೃತ ಶ್ರುತ್ಯಾದಿಸಂಗತಿ ಹಾಗೂ ವಿಷಯವಾಕ್ಯಗಳನ್ನು ತೋರಿಸುತ್ತಾ ವಿಷಯಾದಿಗಳನ್ನೂ ಸೂಚಿಸುತ್ತಿದ್ದಾರೆ -

ಹೇ ಸೋಮ್ಯ = ಎಲೈ ಸೋಮಪಾನಕ್ಕೆ ಅರ್ಹನಾದವನೇ, ಇದಂ = ಪ್ರಸಿದ್ಧವಾದ, ಸದೇವ = 'ಸತ್' ಎಂಬ ತತ್ವವೇ, ಅಗ್ರೇ = ಸೃಷ್ಟಿಯ ಮೊದಲು, ಆಸೀತ್ = ಇದ್ದಿತು, ಇತ್ಯಾದಿನಾ = ಇವೇ ಮೊದಲಾದ ಛಾಂದೋಗ್ಯದ ವಾಕ್ಯಗಳಿಂದ, ಸತ: = 'ಸತ್' ಎಂಬ ತತ್ವಕ್ಕೆ, ಸ್ರಷ್ಟೃತ್ವಂ = ಮತ್ತೊಬ್ಬರ ಅಧೀನವಾಗದೇ ಸೃಷ್ಟಿ ಮಾಡುವಿಕೆಯು, ಉಚ್ಯತೇ = ಹೇಳಲ್ಪಟ್ಟಿದೆ.[१]

---

(१) **भाष्यदीपिका** – अत्राधिकरणेऽनेकप्रकरणात्मकं 'सदेव' इत्यादिस्थानं समन्वीयते। श्रुत्यादिसङ्गतिं विषयवाक्यमुदाहृत्य विषयादिकं च सूचयति – सदिति 'इत्यादिना' छान्दोग्यवाक्येन । आदिशब्देन 'एकमेवाद्वितीयं, (छां.६.२.१) 'तत् तेजोऽसृजत' (छां.६-२) 'सन्मूलाः सोम्येमाः' (छां.६.८.६) 'सता सोम्य तदा सम्पन्नो भवति' (छां.६-८-१) इत्यादिकं गृह्यते । तच्चेत्यतस्तदित्याकृष्यते । तथा च इत्यादिना सतः 'तत्' जन्मनयोक्तं 'स्रष्टृत्वम्' अनन्याधीनकारणत्वम् । उपलक्षणमेतत् । सर्वोत्तमत्व-सर्वाधारत्वसुप्तिगम्यत्वादिकं च 'उच्यते' प्रतिपाद्यते इति योजना ।

अनेन जन्माधिकरणोक्तकारणत्वस्य विष्णवन्यस्मिन् प्रधाने आक्षेपात् तेनास्य आक्षेपिकी

॥ ಶ್ರೀಗುರುಭ್ಯೋ ನಮಃ ॥

# ಸದಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಜ್ಞಾನಪೂರ್ವಕ ಸೃಷ್ಟಿಕ್ರಿಯೆಯುಳ್ಳ ಶ್ರೀಹರಿಯಲ್ಲಿ ಸ್ಥಾನ ಸಮನ್ವಯ

**।। अथ सदधिकरणम् ।।**

**स — ॐ ॥ ईक्षतिकर्मव्यपदेशात्सः ॐ ॥ १३ ॥**

ಸೂತ್ರಾರ್ಥ - 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಶ್ರುತಿಯಲ್ಲಿರುವ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಭಗವಂತನೇ ಆಗಿದ್ದಾನೆ ಹೊರತು ಪ್ರಧಾನವಲ್ಲ. ಏಕೆಂದರೆ 'ತದೈಕ್ಷತ' ಎಂಬುದಾಗಿ ಜ್ಞಾನಸಹಿತವಾದ ಸೃಷ್ಟಿಯನ್ನುಂಟುಮಾಡುವಿಕೆಯನ್ನು ಶ್ರುತಿಯು ಹೇಳುತ್ತಿರುವುದರಿಂದ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಸದಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** ॐ ईक्षतिकर्मव्यपदेशात्सः ॐ ।। ''सदेव'' इत्यादि (छा. ६-२-१.) प्रकरणस्थितसदादिशब्दवाच्यः विष्णुरेव न प्रधानम् । कुतः? ईक्षतिकर्मव्यपदेशात् ''तदैक्षत'' (छां. ६-२-३.) इति चेतननिष्ठेक्षतेति-शब्दोपलक्षितदर्शनाख्यक्रियाभिधानादित्यर्थः ।।१।।

ಪರಿಪೂರ್ಣಚಂದ್ರಿಕಾ

ಅರ್ಥ - ಸದೇವ' ಇತ್ಯಾದಿಯಾದ ಛಾಂದೋಗ್ಯದ ಪ್ರಕರಣದಲ್ಲಿರುವ 'ಸತ್' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಹೊರತು ಪ್ರಧಾನವಲ್ಲ. ಏಕೆಂದರೆ ಈಕ್ಷತಿಕರ್ಮವ್ಯಪದೇಶಾತ್ = 'ತದೈಕ್ಷತ' ಎಂಬುದಾಗಿ ಅದೇ ಛಾಂದೋಗ್ಯವು ಚೇತನನಲ್ಲಿ ಮಾತ್ರ ಇರುವ 'ಐಕ್ಷತ' ಶಬ್ದದಿಂದ ಉಪಲಕ್ಷಿತವಾದ ದರ್ಶನಕ್ರಿಯೆಯನ್ನು ಹೇಳುತ್ತಿರುವುದರಿಂದ.

॥ ಸೂತ್ರದೀಪಿಕೆಯಲ್ಲಿ ಸದಧಿಕರಣವು ಸಮಾಪ್ತವಾಯಿತು ॥

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् – 'सदेव सोम्येदमग्र आसीत्' (छा. ६-२-१.) इत्यादिना सतः स्रष्टृत्वमुच्यते ॥**

ಅನುವಾದ -'ಸದೇವ ಸೋಮ್ಯ ಇದಮಗ್ರ ಆಸೀತ್' ಇತ್ಯಾದಿಯಾದ ಛಾಂದೋಗ್ಯ ಉಪನಿಷತ್ತಿನಲ್ಲಿ 'ಸತ್' ಎಂಬ ತತ್ವವು ಜಗತ್ತನ್ನು ಸೃಷ್ಟಿ ಮಾಡುತ್ತದೆ ಎಂದು ಹೇಳಲಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಅನೇಕ ಪ್ರಕರಣ ಸ್ವರೂಪವಾದ 'ಸದೇವ' ಇವೇ ಮೊದಲಾದ ಸ್ಥಾನದ ಸಮನ್ವಯವನ್ನು ಮಾಡಲಾಗಿದೆ. ಪ್ರಕೃತ ಶ್ರುತ್ಯಾದಿಸಂಗತಿ ಹಾಗೂ ವಿಷಯವಾಕ್ಯಗಳನ್ನು ತೋರಿಸುತ್ತಾ ವಿಷಯಾದಿಗಳನ್ನೂ ಸೂಚಿಸುತ್ತಿದ್ದಾರೆ -

ಹೇ ಸೋಮ್ಯ = ಎಲೈ ಸೋಮಪಾನಕ್ಕೆ ಅರ್ಹನಾದವನೇ, ಇದಂ = ಪ್ರಸಿದ್ಧವಾದ, ಸದೇವ = 'ಸತ್' ಎಂಬ ತತ್ವವೇ, ಅಗ್ರೇ = ಸೃಷ್ಟಿಯ ಮೊದಲು, ಆಸೀತ್ = ಇದ್ದಿತು, ಇತ್ಯಾದಿನಾ = ಇವೇ ಮೊದಲಾದ ಛಾಂದೋಗ್ಯದ ವಾಕ್ಯಗಳಿಂದ, ಸತಃ = 'ಸತ್' ಎಂಬ ತತ್ವಕ್ಕೆ, ಸ್ರಷ್ಟೃತ್ವಂ = ಮತ್ತೊಬ್ಬರ ಅಧೀನವಾಗದೇ ಸೃಷ್ಟಿ ಮಾಡುವಿಕೆಯು, ಉಚ್ಯತೇ = ಹೇಳಲ್ಪಟ್ಟದೆ.[१]

(१) **भाष्यदीपिका** – अत्राधिकरणेऽनेकप्रकरणात्मकं 'सदेव' इत्यादिस्थानं समन्वीयते। श्रुत्यादिसङ्गतिं विषयवाक्यमुदाहृत्य विषयादिकं च सूचयति – सदिति 'इत्यादिना' छान्दोग्यवाक्येन । आदिशब्देन 'एकमेवाद्वितीयं, (छां.६.२.१) 'तत् तेजोऽसृजत' (छां.६-२) 'सन्मूलाः सोम्येमाः' (छां.६.८.६) 'सता सोम्य तदा सम्पन्नो भवति' (छां.६-८-१) इत्यादिकं गृह्यते । तच्चेत्यतस्तदित्याकृष्यते । तथा च इत्यादिना सतः 'तत्' जन्मनयोक्तं 'स्रष्टृत्वम्' अनन्याधीनकारणत्वम् । उपलक्षणमेतत् । सर्वोत्तमत्व-सर्वाधारत्वसुप्तिगम्यत्वादिकं च 'उच्यते' प्रतिपाद्यते इति योजना ।
अनेन जन्माधिकरणोक्तकारणत्वस्य विष्णवन्यस्मिन् प्रधाने आक्षेपात् तेनास्य आक्षेपिकी

**भाष्यम् – तच्च सत् 'बहु स्यां प्रजायेय' (छा. ६-२-३) इति परिणाम प्रतीतेर्न विष्णुः ।**

ಅನುವಾದ - ಅಂತಹ 'ಸತ್' ಪದಾರ್ಥವು ವಿಷ್ಣುವಾಗಲು ಸಾಧ್ಯವಿಲ್ಲ. ಏಕೆಂದರೆ ಇಲ್ಲಿ 'ಬಹು ಸ್ಯಾಂ ಪ್ರಜಾಯೇಯ' ಎಂಬುದಾಗಿ 'ನಾನೇ ಬಹುರೂಪವಾಗಿ ಹುಟ್ಟುತ್ತೇನೆ' ಎಂದು ವಿಕಾರವನ್ನು ಹೊಂದುವಿಕೆಯು ಶ್ರುತವಾಗುತ್ತಿದೆ. ವಿಷ್ಣುವು ವಿಕಾರವನ್ನು ಹೊಂದದ ಕಾರಣ ಅವನನ್ನು 'ಸತ್' ಎಂದು ಹೇಳಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಯುಕ್ತಿಬದ್ಧವಾಗಿ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ -

ತಚ್ಚ ಸತ್ = ಅಂತಹ ಸತ್‌ಪದಾರ್ಥವು, ನ ವಿಷ್ಣುಃ = ವಿಷ್ಣುವಾಗಲು ಸಾಧ್ಯವಿಲ್ಲ, ಬಹು ಸ್ಯಾಂ ಪ್ರಜಾಯೇಯ = ಬಹುರೂಪವನ್ನು ತಾಳುತ್ತೇನೆ ಎಂದು, ಪರಿಣಾಮಪ್ರತೀತೇಃ = ವಿಕಾರವೆಂಬ ಅರ್ಥವು ತೋರುತ್ತಿರುವುದರಿಂದ,[१]

**भाष्यम् – स हि 'अविकारः सदा शुद्धो नित्य आत्मा सदा हरिः' इत्यादिनाऽविकारः प्रसिद्ध इति ।**

ಅನುವಾದ - ವಿಷ್ಣುವಿಗೆ ವಿಕಾರವಿಲ್ಲ ಏಕೆಂದರೆ, ವಿಷ್ಣುವು 'ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ' ಎಂಬ ಪ್ರಮಾಣದಂತೆ ಯಾವುದೇ ವಿಕಾರವಿಲ್ಲದವನೆಂದು ಪ್ರಸಿದ್ಧನಾಗಿದ್ದಾನೆ.

---

सङ्गतिरुक्ता भवति । तथा विषयवाक्यम्, सदाख्यो विषयश्चोक्तः । 'सदेव' इत्युद्दालकवाक्यम्। हे 'सोम्य' भक्तिज्ञानलक्षणसोमार्ह श्वेतकेतो 'इदम्' अस्य जगतः 'अग्रे' तत्सृष्टेः पूर्वं प्रलये सच्छब्दोक्तं ब्रह्मैवाऽसीत् स्वातन्त्र्येणेति शेषः । तत्सत् 'एकमेवाद्वितीयं' स्वगतस्वावयवभेदाभेदशून्यं सर्वोत्तमम् । प्रजाः 'सन्मूलाः' सद् ब्रह्मैव मूलं यासां तास्तथोक्ताः । 'तदा' सुप्तौ सता सम्पन्नो भवति सुप्त इति सिद्धान्ते श्रुत्यर्थः । ब्रह्मलक्षणाभिधायकानेकवाक्यसङ्ग्राहकादिशब्दप्रयोगेनसिद्धान्तेऽप्यत्र प्रधानस्य प्रतिपाद्यत्वाभ्युपगमेनानिष्टाभावादधिकरणवैयर्थ्यमिति शङ्का निरस्ता भवति । अत्र प्रकरणे श्रुतानां ब्रह्मलक्षणानां प्रधानेऽसम्भवेन ब्रह्मणोऽपि प्रतिपाद्यत्वेन प्रधानमात्रस्य प्रतिपाद्यत्वानभ्युपगमात् ।

(१) भाष्यदीपिका – सयुक्तिकं पूर्वपक्षयति – तच्चेति ।। चशब्दः प्रधानमिति पदाकर्षकोऽवधारणे च । तदित्यावृत्तं विपरिणम्यते । तथा च 'तत्' छान्दोग्ये श्रुतं सत् प्रधानमेव भवेत्, नतु विष्णुः । कुतः ? 'तस्य' सतो 'बहु स्याम्' इत्युत्तरवाक्येन बहुभावाख्यपरिणामस्य विकारस्य प्रतीतेरिति योजना । 'प्रजायेय' प्रजनयेयं जगत्सृजानि । तदर्थं 'बहु स्याम्' नियामकबहुरूपी भवेयमिति । 'बहु स्याम्' तदर्थं प्रजायेयेति वा श्रुत्यर्थः ।

ಪ್ರತಿಪದಾರ್ಥ -- ಶ್ರುತಿಯಲ್ಲಿ ವಿಕಾರಿತ್ವವು ಶ್ರುತವಾಗಿದ್ದರೂ ವಿಷ್ಣುವೇ 'ಸತ್' ಪದಾರ್ಥನೆಂದು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಹಿ = ಯಾವ ಕಾರಣದಿಂದ, ಸಃ = ಆ ವಿಷ್ಣುವು, ಅವಿಕಾರಃ = ವಿಕಾರರಹಿತನು, ಸದಾ = ಯಾವಾಗಲೂ, ಶುದ್ಧಃ = ಪ್ರಕೃತಿ ಸಂಬಂಧವಿಲ್ಲದವನು, ನಿತ್ಯಃ = ನಾಶರಹಿತನು, ಸದಾ = ಯಾವಾಗಲೂ, ಆತ್ಮಾ = ಸರ್ವಾಂತರ್ಯಾಮಿಯು, ಹರಿಃ = ಪಾಪಪರಿಹಾರಕನು, ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಅವಿಕಾರಃ = ವಿಕಾರವಿಲ್ಲದವನೆಂದು, ಪ್ರಸಿದ್ಧಃ = ಪ್ರಸಿದ್ಧನಾಗಿದ್ದಾನೆ, ಆದ್ದರಿಂದಲೇ ವಿಷ್ಣು ಸತ್‌ಶಬ್ದದಿಂದ ವಾಚ್ಯನಾಗುವುದಿಲ್ಲ. ಇತಿ = ಇಷ್ಟು ಪೂರ್ವಪಕ್ಷ.(೧)

**भाष्यम् – अतो ब्रवीति -**

**ॐ ॥ ईक्षतिकर्मव्यपदेशात् सः ॐ ॥ १३॥**

**'तदैक्षत' इतीक्षतिकर्मव्यपदेशात् स एव विष्णुरत्रोच्यते ।**

ಅನುವಾದ - ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ, ಸೂತ್ರಕಾರರು 'ಓಂ ॥ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ ॥' ಎಂಬ ಸೂತ್ರವನ್ನು ರಚನೆ ಮಾಡಿದ್ದಾರೆ.

'ತದೈಕ್ಷತ' ಎಂಬುದಾಗಿ ಶ್ರುತಿಯಲ್ಲಿ ನೋಡುವಿಕೆ ಎಂಬ ಕ್ರಿಯೆಯನ್ನು ಹೇಳಿರುವುದರಿಂದ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಎಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ಸ್ಥಾಪನೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ. ಅತಃ = ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ, ಬ್ರವೀತಿ = ಸೂತ್ರಕಾರರು ಹೇಳುತ್ತಿದ್ದಾರೆ. ಸಃ = 'ಸತ್' ಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಈಕ್ಷತಿಕರ್ಮವ್ಯಪದೇಶಾತ್ = ಚೇತನನಲ್ಲಿರುವ ದರ್ಶನ ಎಂಬ ಕ್ರಿಯೆಯನ್ನು ಹೇಳುತ್ತಿರುವುದರಿಂದ.

ತತ್ = 'ತತ್' ಶಬ್ದದಿಂದ ಪ್ರತಿಪಾದ್ಯವಾದ ಪದಾರ್ಥವು, ಐಕ್ಷತ = ನೋಡಿತು, ಇತಿ = ಹೀಗೆ, ಈಕ್ಷತಿಕರ್ಮವ್ಯಪದೇಶಾತ್ = ನೋಡುವಿಕೆ ಎಂಬ ಕ್ರಿಯೆಯನ್ನು ಹೇಳಿದ್ದರಿಂದ, ಸಃ = 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು, ವಿಷ್ಣುರೇವ = ವಿಷ್ಣುವೇ ಎಂದು, ಅತ್ರ = ಛಾಂದೋಗ್ಯ ಉಪನಿಷತ್ತಿನಲ್ಲಿ, ಉಚ್ಯತೇ = ಹೇಳಲಾಗಿದೆ.(೨)

---

(१) **भाष्यदीपिका** – विकारित्वप्रतीतावपि कुतोऽयं न विष्णुरित्यत आह – स हीति ॥ 'हि' यस्मात् 'सः' विष्णुः 'अविकारः सदा' इत्यादिप्रमाणैरविकारः 'प्रसिद्धः' तत्त्वेन निश्चितस्तस्मात् तदसम्भवात् प्रधाने च तत्सम्भवाद् अत्र च विकारप्रतीतेः तत् सत् न विष्णुः, किन्तु प्रधानमेवेति योजना । श्रुतौ द्वितीयस्य सदाशब्दस्य सदाऽविकार इत्यन्वयः । आद्यस्य तु सदा 'शुद्धः' निर्मल इति ।

(२) **भाष्यदीपिका** – सिद्धान्तयत्सूत्रमवतार्य व्याचष्टे – अत इति ॥ सूत्रोक्तं व्यपदेशं दर्शयति – तदिति ॥ ईक्षतीति धातुनिर्देशेन तदर्थेक्षणक्रिया लक्ष्यते । ईक्षतिकर्मेति

**भाष्यम् – 'नान्योऽतोऽस्ति द्रष्टा' (बृ. ५-७-२३) 'नान्यदतोऽस्ति द्रष्टृ' (बृ. ५-८-११) इत्यादिना तस्यैव हि तल्लक्षणम् ।**

ಅನುವಾದ - ವಿಷ್ಣುವನ್ನು ಬಿಟ್ಟು ಮತ್ತೊಂದು ಪದಾರ್ಥವು ಸ್ವತಂತ್ರವಾಗಿ ಏನನ್ನೂ ಸಹ ಸೃಷ್ಟಿ ಮಾಡುವುದಕ್ಕಾಗಿ ನೋಡಲು ಸಾಧ್ಯವಿಲ್ಲ. ಇವನಿಗಿಂತ ಭಿನ್ನವಾದ ಮತ್ತೊಂದು ವಸ್ತುವು, ಸ್ವತಂತ್ರವಾದ ದ್ರಷ್ಟೃವಾಗಿ ಇರುವುದಿಲ್ಲ ಎಂಬುದಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಅನೇಕಬಾರಿ ಹೇಳಿದ್ದರಿಂದ ಸ್ವತಂತ್ರದ್ರಷ್ಟೃತ್ವವು ವಿಷ್ಣುವಿನ ಅಸಾಧಾರಣಲಕ್ಷಣವೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- ನಿಯಮನ (ಈಶನ) ಕರ್ತೃತ್ವವು ವಿಷ್ಣುವಿನಲ್ಲಿ ಹೇಗೆ ಇದೆಯೋ ಅದರಂತೆ ಪ್ರಧಾನಾದಿಗಳಲ್ಲಿಯೂ ಸಹ ಏಕಿರಬಾರದು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅತಃ = ವಿಷ್ಣುವಿನ ದೆಸೆಯಿಂದ, ಅನ್ಯಃ = ಭಿನ್ನವಾದ ಮತ್ತೊಂದು ಪದಾರ್ಥವು, ದ್ರಷ್ಟಾ = ಸೃಷ್ಟಿಗೋಸ್ಕರ ಸ್ವತಂತ್ರವಾಗಿ ನೋಡುವಂತಹುದು, ನ = ಇರುವುದಿಲ್ಲ, ಮತ್ತು ನಾನ್ಯದತಃ ಅಸ್ತಿ ದ್ರಷ್ಟೃ = ಇವನಿಗಿಂತ ನೋಡಲು ಅರ್ಹವಾದ ವಸ್ತುವು ಮತ್ತೊಂದು ಇರುವುದಿಲ್ಲ, ಇತ್ಯಾದಿನಾ = ಇವೇ ಮೊದಲಾದ ವಾಕ್ಯಗಳಿಂದ, ತಸ್ಯೈವ = ಆ ವಿಷ್ಣುವಿಗೇ, ತತ್ = ಆ ಸ್ವತಂತ್ರದ್ರಷ್ಟೃತ್ವವು, ಲಕ್ಷಣಂ = ಲಿಂಗವೆಂದು, ಹಿ = ಪ್ರಸಿದ್ಧವಾಗಿದೆ, (१)

---

सामानाधिकरण्यं तत्कर्तृत्वपरम् । तथा च 'तदैक्षत' इति श्रुतावीक्षणाख्यव्यापारे कर्तृत्वोक्तेरित्यर्थः । यद्वा, कर्मशब्देन सृष्ट्यादिक्रियोच्यते । तथात्वे वैयधिकरण्यम् । ईक्षतिपूर्वकसृष्ट्यादिव्यपदेशादित्यर्थः । समन्वयसूत्रात् तदित्यस्य अनुषङ्गसम्भवेऽपि 'एको नारायण आसीत् स मुनिर्भूत्वा' इत्यादिसमाख्यामपि प्रमाणीकर्तुं स इत्युक्तम् । तदनूद्य विष्णुरिति व्याख्यातम् । विष्णुरेवेत्यन्वयः । एवेति तुशब्दार्थः । अनेन समन्वयसूत्रात् तु शब्दमात्रमनुवर्तनीयमिति सूचितम् । सूत्रे समन्वेतव्यानुक्तेराह – अत्रेति ।। 'सदेव' इत्यादिस्थान इत्यर्थः । सच्छब्देनेति शेषः । तथा चात्र प्रकरणजाते सच्छब्देन य उच्यते स विष्णुरेव नतु प्रधानमिति साध्यवाक्यार्थः । अनेन अत्र सदेवेत्यादिस्थाने सच्छब्देनोच्यमानः स विष्णुरेव, न प्रधानम् । कुतः ? 'ईक्षतिकर्मव्यपदेशात् सः' ततः 'तदैक्षत' इतीक्षणाख्यक्रियाकर्तृत्वश्रवणादीक्षितृत्वसृष्ट्यादिक्रिययोर्वा श्रवणाज्जडप्रकृतौ च तदसम्भवादिति सूत्रार्थ उक्तो भवति । सूत्रे सच्छब्देनेति शेषं विना स इत्यस्याऽवृत्तिः, तत्रैकस्य प्रतीकग्रहणार्थत्वमिति पक्षे ईक्षतिकर्मव्यपदेशात् 'सः' 'सोऽकामयत'(तै. २–६.) इत्यादिप्रकरणप्रतिपाद्यः स विष्णुरेव भवेत्, न प्रधानमित्यर्थोऽवसेयः ।

(१) **भाष्यदीपिका** – नन्वीक्षणकर्तृत्वं विष्णुवत् प्रधानस्य किं न स्यादित्यतश्चेतनस्यापीह हेतुत्वेनाभिमतं मुख्येक्षणं न सम्भवति, किमु जडस्येत्याशयेन तत्र प्रमाणमाह – नेति ।। 'अतो' ब्रह्मणः सकाशात् 'अन्यः' स्वातन्त्र्येण द्रष्टा द्रष्टृ च नास्तीति वाजसनेयप्रकरणद्वय

**भाष्यम् – बहुत्वं चाविकारेणैवोक्तम् 'अजायमानो बहुधा विजायते' (तै. आ. ३-१३-१) इति ॥**

ಅನುವಾದ - ಬಹುತ್ವವಾದರೂ ಸಹ ವಿಕಾರವಿಲ್ಲದೇ ವಿಷ್ಣುವಿನಲ್ಲೂ ಉಪಪನ್ನವಾಗುತ್ತದೆ. 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ತೈತ್ತಿರೀಯವು ವಿಕಾರವಿಲ್ಲದೇ ಭಗವಂತನು ಅನೇಕರೂಪಗಳನ್ನು ತಾಳುತ್ತಾನೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ವಿಷ್ಣುವಿಗೆ ವಿಕಾರವಿಲ್ಲದ ಕಾರಣ ಬಹುಭವನವೆಂಬ ವಿಕಾರವನ್ನು ಹೇಳಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಬಹುತ್ವಂ ಚ = ಬಹುರೂಪತ್ವವಾದರೂ ಸಹ, ಅವಿಕಾರೇಣೈವ = ಭಗವಂತನಲ್ಲಿ ವಿಕಾರವಿಲ್ಲದೆಯೇ, ಉಕ್ತಮ್ = ಹೇಳಲ್ಪಟ್ಟಿದೆ, ಅಜಾಯಮಾನಃ = ಯಾವುದೇ ಬಗೆಯ ಹುಟ್ಟಿಲ್ಲದವನಾದರೂ, ಬಹುಧಾ = ಅನೇಕ ರೂಪಗಳಿಂದ, ವಿಜಾಯತೇ = ಅಭಿವ್ಯಕ್ತನಾಗುತ್ತಾನೆ, ಇತಿ = ಹೀಗೆ ಹೇಳಿರುವುದರಿಂದ, 'ಸತ್' ಎಂಬ ಪದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಎಂದು ನಿರ್ಣಯವಾಗುತ್ತದೆ.(१)

**।। इति सदधिकरणम् ।। ४ ।।**

---

गतवाक्यद्वयस्यार्थः । आदिशब्देनैवञ्जातीयकं वाक्यं गृह्यते । 'तस्य' विष्णोरेव । हिशब्दः प्रसिद्धौ । स्वातन्त्र्येणेक्षणकर्तृत्वलक्षणं लिङ्गं उक्तमिति शेषः । अस्य तस्मान्न लिङ्गस्यान्यगामित्वं मन्तव्यमित्युपस्कृतवाक्येनान्वयः ।

(१) **भाष्यदीपिका** – ननु विष्णोरविकारितया सिद्धत्वेन तत्र बहुभावाख्यविकारान्वया-योगान्निरवकाशविकारित्वलिङ्गेनात्रेक्षतिर्गौणो व्याख्येयः । **'सत्त्वात् सञ्जायते ज्ञानम्'** इति स्मरणाद् ज्ञानोपादानतया सिद्धे प्रधाने तत्कर्तृत्वासम्भवेन तत्र तस्यामुख्यत्वादित्यत आह – **बहुत्वं चेति** ।। चस्त्वर्थः । **'अविकारेण'** विकारित्वं विनैव स्वरूपबहुत्वेनैवेत्यर्थः । इत्यादिनोक्तमित्यन्वयः । तथा च बहुत्वस्य सावकाशत्वान्न तद्बलेन ईक्षतेर्गौणत्वं कल्पनीयमिति भावः ।

यद्वा – **'बहुत्वं' 'बहु स्याम्'** इति बहुभाववचनं **'उक्तं'** व्याख्यातम् । तथा च इत्येवमादिप्रमाणवाक्येन **'बहु स्याम्'** इति बहुभाववचनम् **'अविकारेण'** विकारं विनैव नियामकस्वरूपबहुत्वेनैव मुख्यप्रतिपाद्येनैव युक्तमित्युक्तम् इति योजना । तथा च – सिद्धान्ते **'बहु स्याम्'** इत्यस्य तत्तन्नियामकस्वरूपबहुभावसङ्कल्पोऽर्थ इत्युक्तं भवति । न चैवं नियामकस्वरूपबहुभावसङ्कल्पानन्तरं नियम्यसृष्टिरयुक्तेति वाच्यम् । गुरुत्वराजत्वादेः शिष्यभृत्यसापेक्षत्वेन तत्सङ्कल्पानन्तरं शिष्यादिसम्पादनवन्नियामकताया नियम्यसापेक्षत्वेन नियामकबहुभावसङ्कल्पानन्तरं तत्सापेक्षनियम्यसृष्टेर्युक्तत्वात् । **'अजायमानः'** अविकुर्वाण इति श्रुत्यर्थस्तु द्युभ्वादिनयेऽभिहितः ।। ४ ।।

**।। इति सदधिकरणम् ।। ४ ।।**

## श्रीपद्मनाभतीर्थविरचितसत्तर्कदीपावळिः

### ॥ ॐ ईक्षतिकर्मव्यपदेशात्सः ॐ ॥ १-२-१३ ॥

**सदेवसोम्येत्यादेरयमर्थः । 'सदेवसोम्येदमग्र आसीत्' 'एकमेवाद्वितीयं' 'तदैक्षत बहुस्यां प्रजायेयेति' 'तत्तेजोऽसृजत' इत्यादिश्रुत्या यत् जगत्स्रष्टृ श्रूयते तत्प्रधानं भवेत् । बहुधा जायमानत्वेनोच्यमानत्वात् । बहुधा परिणामस्तु जडरूपप्रधानधर्मो न विष्णुधर्मः । 'अविकारः शुद्धः' इत्यादिवचनैः विष्णोरविकारत्वेनोक्तत्वादिति चेन्नैवम्। विष्णुरेवात्र सच्छब्देनोच्यते न प्रधानम् ईक्षितृत्वेनोच्यमानत्वात् । ईक्षितृत्वं मुख्यं न विष्ण्वन्यस्य सम्भवति 'नान्योऽतोऽस्ति द्रष्टा' इत्यादि श्रुतिविरोधात् । 'अजायमानो बहुधा विजायते' इति अपरिणामस्यैव बह्ववतारश्रवणात् विष्णोर्न बहुभवनश्रुतिर्विरुध्यते ॥१३॥**

**॥ इति सत्तर्कदीपावळ्याम् सदधिकरणम् ॥**

'ಸದೇವ ಸೋಮ್ಯ' ಇತ್ಯಾದಿ ಶ್ರುತಿಯ ಅರ್ಥ ಹೀಗಿದೆ -

'ಸದೇವ ಸೋಮ್ಯೇದಮಗ್ರ ಆಸೀತ್' 'ಏಕಮೇವಾದ್ವಿತೀಯಂ'
'ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ' 'ತತ್ತೇಜೋಽಸೃಜತ ।'

ಇತ್ಯಾದಿ ಶ್ರುತಿಯಿಂದ ಯಾವ ಜಗತ್ಸ್ರಷ್ಟೃತ್ವವು ಶ್ರುತವಾಗಿದೆಯೋ ಅಂತಹ ಜಗತ್ಸ್ರಷ್ಟೃವಾದದ್ದು ಪ್ರಧಾನವೇ ಆಗಬೇಕು. ಏಕೆಂದರೆ ಅನೇಕ ರೂಪಗಳಿಂದ ಹುಟ್ಟುವಿಕೆಯು ಶ್ರುತವಾದ್ದರಿಂದ. ಅನೇಕ ಬಗೆಯಲ್ಲಿ ಪರಿಣಾಮವಾಗುವಿಕೆಯು ಜಡರೂಪವಾದ ಪ್ರಧಾನದ ಧರ್ಮವಾಗುತ್ತದೆಯೇ ಹೊರತು, ವಿಷ್ಣುವಿನ ಧರ್ಮವಾಗಲು ಸಾಧ್ಯವಿಲ್ಲ. ಏಕೆಂದರೆ 'ಅವಿಕಾರಃ ಸದಾ ಶುದ್ಧಃ' ಇವೇ ಮೊದಲಾದ ಪ್ರಮಾಣಗಳಿಂದ, ವಿಷ್ಣು ನಿರ್ವಿಕಾರನೆಂದು ಪ್ರತೀತನಾಗಿದ್ದಾನೆ. ಇಷ್ಟು ಪೂರ್ವಪಕ್ಷ.

ವಿಷ್ಣುವೇ ಈ ಸ್ಥಿತಿಯಲ್ಲಿರುವ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ ಹೊರತು ಪ್ರಧಾನವಲ್ಲ. ಏಕೆಂದರೆ ಯಾರು ಜಗತ್ಸ್ರಷ್ಟೃವಾಗಿದ್ದಾನೋ ಅವನಲ್ಲಿ 'ಈಕ್ಷಿತೃತ್ವ' ಎಂಬ ಧರ್ಮವು ಕೇಳಿಸುತ್ತಿದೆ. ಈಕ್ಷಿತೃತ್ವವು ವಿಷ್ಣುವನ್ನು ಬಿಟ್ಟು ಬೇರೆಲ್ಲಿಯೂ ಕೂಡ ಮುಖ್ಯವಾಗಿ ಕೂಡುವುದಿಲ್ಲ. ಈ ವಿಷಯದಲ್ಲಿ 'ನಾನ್ಯೋಽತೋಽಸ್ತಿ ದ್ರಷ್ಟಾ' ವಿಷ್ಣುವನ್ನು ಬಿಟ್ಟು ಮತ್ತೊಂದು ದ್ರಷ್ಟೃಪದಾರ್ಥವಿಲ್ಲ ಎಂಬ ಶ್ರುತಿಯೇ ಆಧಾರವಾಗಿದೆ. 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಶ್ರುತಿಯ

ಆಧಾರದಿಂದ ಭಗವಂತನಿಗೆ ಪರಿಣಾಮವಿಲ್ಲದಿದ್ದರೂ ಅನೇಕ ರೂಪಗಳಿಂದ ಅವತಾರವು ಶ್ರುತವಾಗಿದೆ. ಆದ್ದರಿಂದ ಬಹುಭವನಶ್ರುತಿಯ ವಿರೋಧಕ್ಕೂ ಆಸ್ಪದವಿಲ್ಲ.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ಸದಧಿಕರಣವು ಮುಗಿಯಿತು ॥

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः।।ॐ।।**

**तत्वप्रकाशिका –**

**।। ॐ ईक्षतिकर्मव्यपदेशात्सः ॐ ।।**

**अत्र 'सदेव सोम्य' इत्यादिसृष्टिप्रतिपादकस्थानगतसन्नाम्नो ब्रह्मप्रधानयोः कारणत्वसाम्येन साधारणस्य भगवति समन्वयप्रतिपादनादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ 'ಸದೇವ ಸೋಮ್ಯ' ಮೊದಲಾದ ಸೃಷ್ಟಿಪ್ರತಿಪಾದಕವಾದ ಸ್ಥಾನದಲ್ಲಿರುವ 'ಸತ್' ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಈ 'ಸತ್' ಎಂಬ ನಾಮಾತ್ಮಕಶಬ್ದವು ವಿಷ್ಣು ಹಾಗೂ ಪ್ರಕೃತಿ ಇಬ್ಬರಲ್ಲಿಯೂ ಕಾರಣತ್ವಧರ್ಮವು ಸಮಾನವಾಗಿರುವುದರಿಂದ ಉಭಯಸಾಧಾರಣವಾಗಿದೆ. ಹೀಗೆ ಉಭಯತ್ರಪ್ರಸಿದ್ಧವಾದ 'ಸತ್' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳಿರುತ್ತವೆಂದು ತಿಳಿಯಬೇಕು.

**तत्वप्रकाशिका – श्रुत्यादिसङ्गतिं विषयवाक्यमुदाहृत्य विषयादिकं च सूचयति – सदिति ।।**

ಶ್ರುತಿಸಂಗತಿ, ಅಧಿಕರಣಸಂಗತಿ ಮೊದಲಾದುವುಗಳನ್ನು ತೋರಿಸುವವರಾಗಿ ವಿಷಯವಾಕ್ಯವನ್ನು ಉದಾಹರಿಸುತ್ತಾ ವಿಷಯಾದಿಗಳನ್ನೂ ಕೂಡ ಸೂಚನೆ ಮಾಡುತ್ತಿದ್ದಾರೆ. 'ಸದೇವ ಸೋಮ್ಯ' ಇತ್ಯಾದಿ ಭಾಷ್ಯದಿಂದ.

**तत्वप्रकाशिका – 'जन्माद्यस्य यतः' इति जगत्स्रष्टृत्वं विष्णोरुक्तम् तच्छन्दोगश्रुतौ सतः प्रतीयते 'तत्तेजो असृजत' इत्यादिना ।**

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಜಗತ್ಸ್ರಷ್ಟೃತ್ವವು ವಿಷ್ಣುವಿನ ಧರ್ಮವೆಂದು ಸಮರ್ಥಿಸಲಾಯಿತು. ಇದೇ ಜಗತ್ಸ್ರಷ್ಟೃತ್ವಧರ್ಮವು ಛಾಂದೋಗ್ಯೋಪನಿಷತ್ತಿನಲ್ಲಿ 'ಸತ್' ಎಂಬ ತತ್ವದಲ್ಲಿ ಪ್ರತೀತವಾಗುತ್ತಿದೆ 'ತತ್ತೇಜೋ ಅಸೃಜತ' ಇತ್ಯಾದಿ ವಾಕ್ಯಗಳಿಂದ

**तत्वप्रकाशिका – तस्य च विष्णोरन्यत्वे अन्यस्यैव स्रष्टृत्वप्रसङ्गादवश्यं निर्णेयत्वम् ।**

ಅಂತಹ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯವಾದದ್ದು ವಿಷ್ಣುವಿಗಿಂತ ಭಿನ್ನವಾದಲ್ಲಿ, ಆ ಪದಾರ್ಥವೇ ಜಗತ್ಸ್ರಷ್ಟೃವಾಗುವ ಪ್ರಸಂಗ ಬರುತ್ತದೆ. ಹಾಗಾಗಿ 'ಸತ್' ಎಂಬ ಶಬ್ದವು ಯಾರನ್ನು ಪ್ರತಿಪಾದಿಸುತ್ತಿದೆ ಎಂಬುದನ್ನು ಅವಶ್ಯವಾಗಿ ನಿರ್ಣಯಮಾಡಬೇಕು.

**तत्वप्रकाशिका – त सदत्र विषयः । किं ब्रह्म उत प्रधानमिति सन्देहः । कारणत्वसाम्यं सन्देहबीजमिति भावः ।**

'ಸತ್' ಶಬ್ದವು ಈ ಅಧಿಕರಣದ ವಿಷಯ. 'ಸತ್' ಶಬ್ದದಿಂದ ಪ್ರತಿಪಾದ್ಯವಾದದ್ದು ಬ್ರಹ್ಮನೋ ಅಥವಾ ಪ್ರಕೃತಿಯೋ ಎಂದು ಸಂದೇಹ. ಇಬ್ಬರಲ್ಲಿಯೂ ಕಾರಣತ್ವಧರ್ಮವು ಸಮಾನವಾಗಿರುವುದೇ ಸಂದೇಹಬೀಜ.

**तत्वप्रकाशिका – सयुक्तिकं पूर्वपक्षयति – तच्चेति ।। एतत्सत् प्रधानमेव भवेन्नतु विष्णुः ।**

ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ತಚ್ಚ ಸತ್' ಇತ್ಯಾದಿಭಾಷ್ಯದಿಂದ ತೋರಿಸುತ್ತಿದ್ದಾರೆ. ಇಂತಹ 'ಸತ್' ಪದಾರ್ಥವು ಪ್ರಕೃತಿಯೇ ಆಗಬೇಕು ಹೊರತು ವಿಷ್ಣುವಲ್ಲ.

**तत्वप्रकाशिका –'बहु स्यां प्रजायेय' इति सतो बहुभावाख्यविकारित्वश्रवणा दित्यर्थः । विकारित्वप्रतीतावपि कुतोऽयं न विष्णुरित्यत आह – स हीति ।।**

ಏಕೆಂದರೆ 'ಬಹು ಸ್ಯಾಂ ಪ್ರಜಾಯೇಯ' ಎಂಬುದಾಗಿ 'ಸತ್' ಪದಾರ್ಥಕ್ಕೆ ಅನೇಕ ಪದಾರ್ಥಗಳ ಸ್ವರೂಪದಿಂದ ಪರಿಣಾಮವಾಗುವಿಕೆಯನ್ನು ಶ್ರುತಿಯು ಹೇಳುತ್ತದೆ. ಪರಿಣಾಮವನ್ನು ಹೊಂದಿದ ಮಾತ್ರಕ್ಕೆ ವಿಷ್ಣುವೇಕೆ 'ಸತ್' ಎನಿಸಬಾರದು? ಎಂಬ ಪ್ರಶ್ನೆಗೆ 'ಸ ಹಿ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – विष्णोः प्रमाणैरविकारित्वप्रसिद्धेस्तस्मिन् स्तदसम्भवात् प्रधाने च तत्सम्भवात् तदेव सदिति तस्यैव जगत्कारणत्वमिति भावः ।**

ಅನೇಕ ಪ್ರಮಾಣಗಳಿಂದ ವಿಷ್ಣುವಿಗೆ ಯಾವುದೇ ವಿಕಾರಗಳಿಲ್ಲವೆಂದು ಪ್ರಸಿದ್ಧವಾಗಿದೆ. ಅಂತಹ ನಿರ್ವಿಕಾರನಾದ ವಿಷ್ಣುವಿನಲ್ಲಿ ಪರಿಣಾಮವು ಕೂಡುವುದಿಲ್ಲ. ಆದರೆ ಪ್ರಧಾನದಲ್ಲಿ ಇಂತಹ ವಿಕಾರವನ್ನು ಹೇಳಲು ಬರುತ್ತದೆ. ಆದ್ದರಿಂದ ಪ್ರಧಾನವೇ 'ಸತ್' ಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಆದ್ದರಿಂದಲೇ ಜಗತ್ಕಾರಣವೂ ಕೂಡ ಪ್ರಧಾನವೇ ಆಗುತ್ತದೆ ಎಂದು ತಿಳಿಯಬೇಕು.

**तत्वप्रकाशिका – नन्वेतत्स्थाने प्रधानस्य प्रतिपाद्यत्वेऽपि तस्योपादन-कारणताभ्युपगमेनानिष्टाभावाद्व्यर्थमेवेदमधिकरणं प्रतीयत इति ।**

ಪ್ರಶ್ನೆ - ಪ್ರಕೃತ ಜಗತ್ಕಾರಣತ್ವವನ್ನು ಹೇಳುವ ಸ್ಥಾನದಲ್ಲಿ ಪ್ರಧಾನವು ಪ್ರತಿಪಾದ್ಯವಾದರೆ ಸಿದ್ಧಾಂತಿಗಳಿಗೇನೂ ತೊಂದರೆ ಇಲ್ಲ. ಏಕೆಂದರೆ ಜಗತ್ತಿಗೆ ಪ್ರಕೃತಿ ಉಪಾದಾನಕಾರಣವಾಗಿದೆ ಎಂದು ಸಿದ್ಧಾಂತಿಗಳೂ ಒಪ್ಪುತ್ತಾರೆ. ಯಾವ ಅನಿಷ್ಟವೂ ಅವರಿಗೆ ಇಲ್ಲವಾದ್ದರಿಂದ ಈ ಅಧಿಕರಣ ಹೊರಟಿದ್ದು ವ್ಯರ್ಥವಲ್ಲವೆ?

**तत्वप्रकाशिका – मैवम् । भवेदेतद्यद्येतत्प्रकरणे विकारिकारणमेवोच्येत । नैतदस्ति ।**

ಉತ್ತರ - ಈ ಪ್ರಕರಣದಲ್ಲಿ ಪ್ರಧಾನಕ್ಕೆ ವಿಕಾರಿಕಾರಣತ್ವವನ್ನು ಹೇಳುತ್ತಿರುವುದಾಗಿ ನಿಶ್ಚಿತವಾದಲ್ಲಿ ನೀವು ಮಾಡಿದ ಆಕ್ಷೇಪ ಸಾಧುವಾಗುತ್ತಿತ್ತು, ಆದರೆ ಹಾಗಿಲ್ಲ.

**तत्वप्रकाशिका – 'एकमेवाद्वितीयम्', 'तत्तेजोऽसृजत', 'सन्मूलाः सोम्येमाः सर्वाः प्रजाः सदायतनाः सत्प्रतिष्ठाः', 'सता सोम्य तदा सम्पन्नो भवति' इत्यादिब्रह्मलक्षणानां श्रवणात् ।**

ಏಕೆಂದರೆ 'ಏಕಮೇವಾದ್ವಿತೀಯಮ್', 'ತತ್ತೇಜೋಽಸೃಜತ', 'ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ', 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಇತ್ಯಾದಿ ಶ್ರುತಿಗಳಲ್ಲಿ ಅದ್ವಿತೀಯತ್ವವೇ ಮೊದಲಾದ ಅನೇಕ ಬ್ರಹ್ಮನ ಲಕ್ಷಣಗಳು ಶ್ರುತವಾಗಿವೆ. ಆದ್ದರಿಂದ 'ಸತ್' ಶಬ್ದದಿಂದ ಪ್ರಧಾನವನ್ನು ವಿವಕ್ಷಿಸಲು ಬರುವುದಿಲ್ಲ.

**तत्वप्रकाशिका – सिद्धान्तयत् सूत्रमवतार्य व्याचष्टे – अत इति ।। सदेवेत्यादिस्थाने सच्छब्देन विष्णुरेवोच्यते ।**

ಈ ಪೂರ್ವಪಕ್ಷವನ್ನು ನಿರಾಕರಿಸುತ್ತಾ ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ಸೂತ್ರವನ್ನು ವ್ಯಾಖ್ಯಾನಿಸುತ್ತಿದ್ದಾರೆ - 'ಅತಃ' ಇತ್ಯಾದಿ ಗ್ರಂಥದಿಂದ. 'ಸದೇವ' ಇವೇ ಮೊದಲಾದ ಸ್ಥಾನದಲ್ಲಿ ಶ್ರುತವಾದ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ.

ಸದಧಿಕರಣ (೧-೩-೪)

**तत्वप्रकाशिका – सतस्तदैक्षतेतीक्षत्याख्यव्यापारश्रवणात् । जडप्रधानस्येक्षणासम्भवादित्यर्थः ।**

ಏಕೆಂದರೆ 'ಸತ್' ಪದಾರ್ಥಕ್ಕೆ 'ತದೈಕ್ಷತ' ಎಂಬುದಾಗಿ ಈಕ್ಷಣವೆಂಬ ವ್ಯಾಪಾರವು ಶ್ರುತವಾಗಿದೆ. ಜಡಭೂತವಾದ ಪ್ರಕೃತಿಗೆ ಈಕ್ಷಣವೆಂಬ ವ್ಯಾಪಾರವು ಉಪಪನ್ನವಾಗುವುದಿಲ್ಲ.

**तत्वप्रकाशिका – अपिच विष्णवन्यस्य कस्यापीक्षतिर्मुख्यतो न विद्यते किमु जडस्येत्याशयेनाऽऽह – नेति ।।**

ಮತ್ತು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಕೂಡ ಈಕ್ಷಣವನ್ನು ಮುಖ್ಯವಾಗಿ ಹೇಳಲಾಗದು. ಬೇರೆ ಚೇತನಪದಾರ್ಥಗಳಲ್ಲಿಯೇ ಈಕ್ಷಣವು ಮುಖ್ಯವಾಗಿ ಉಪಪನ್ನವಾಗುವುದಿಲ್ಲ ಎಂದಮೇಲೆ ಜಡಭೂತವಾದ ಪ್ರಕೃತಿಯಲ್ಲಿ ಈಕ್ಷಣವು ಉಪಪನ್ನವಾಗುವುದಿಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕೇನು? ಎಂಬ ಅಭಿಪ್ರಾಯದಿಂದ 'ನ' ಇತ್ಯಾದಿ ಭಾಷ್ಯವು ಹೊರಟಿದೆ.

**तत्वप्रकाशिका – एतेन 'सोमो वै राजा गन्धर्वेष्वासीत्' इत्यादिवत् अभिमानिविवक्षयेक्षत्युक्तिरिति परास्तम् ।**

ಹೀಗೆ ಹೇಳಿದ್ದರಿಂದ 'ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್' ಎಂಬ ವಾಕ್ಯದಲ್ಲಿ 'ಗಂಧರ್ವೇಷು' ಎಂಬ ಶಬ್ದದಿಂದ ಸೋಮಲತಾಭಿಮಾನಿಯಾದ ಚಂದ್ರನನ್ನು ಹೇಗೆ ವಿವಕ್ಷಿಸಲಾಗುತ್ತದೋ ಅದರಂತೆ ಇಲ್ಲಿಯೂ ಸಹ ಪ್ರಧಾನಶಬ್ದದಿಂದ ಪ್ರಧಾನಕ್ಕೆ ಅಭಿಮಾನಿದೇವತೆಯಾದ ಲಕ್ಷ್ಮೀದೇವಿಯನ್ನು ವಿವಕ್ಷಿಸಬೇಕು. ಈ ದೃಷ್ಟಿಯಿಂದ ಶ್ರುತಿಯು ಈಕ್ಷಣವೆಂಬ ವ್ಯಾಪಾರವನ್ನು ಹೇಳಿದೆ. ಈ ಆಶಂಕೆಯನ್ನು ಈಗ ನಿರಾಕರಿಸಿದಂತಾಯಿತು.

**तत्वप्रकाशिका – ननु निरवकाशविकारित्वलिङ्गेनेक्षतिव्यपदेशो गौणः किं न स्यात् । 'सत्वात् सञ्जायते ज्ञानम्' इत्यादेः प्रधानस्य ज्ञानोपादानत्वादित्यत आह – बहुत्वं चेति ।।**

ನಿರವಕಾಶವಾದ ಲಿಂಗದ ಬಲದಿಂದ ಈಕ್ಷಿತೃತ್ವದ ವ್ಯಪದೇಶವನ್ನು ಏಕೆ ಗೌಣವಾಗಿ ವ್ಯಾಖ್ಯಾನಿಸಬಾರದು? ಏಕೆಂದರೆ 'ಸತ್ವಾತ್ ಸಂಜಾಯತೇ ಜ್ಞಾನಮ್' ಎಂಬ ವಾಕ್ಯದಿಂದ ಜ್ಞಾನವು ಸತ್ವಗುಣದಿಂದ ಹುಟ್ಟುತ್ತದೆಂದು ಶ್ರೀಕೃಷ್ಣನು ಹೇಳಿದ್ದಾನೆ. ಅಂತಹ ಸತ್ವಗುಣವು ಪ್ರಧಾನದಲ್ಲಿರುವುದರಿಂದ ಪ್ರಧಾನವು ಜ್ಞಾನಕ್ಕೆ ಉಪಾದಾನಕಾರಣವಾಯಿತೆಂದಾಗುತ್ತದಲ್ಲವೇ? ಈ ಪ್ರಶ್ನೆಗೆ 'ಬಹುತ್ವಂ ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – बहुभावस्य विकारित्वं विनैव स्वरूपबहुत्वेन सावकाशत्वान्न तद्बलेनेक्षतेर्गौणत्वं कल्प्यमिति भावः ।।**

'ಸತ್' ಪದಾರ್ಥಕ್ಕೆ ಹೇಳಲ್ಪಟ್ಟ ಬಹುಭವನವೆಂಬ ವಿಕಾರಿತ್ವದ ವಿರೋಧವು ಬರುವುದಿಲ್ಲ. ಏಕೆಂದರೆ ಪರಮಾತ್ಮನು ತನ್ನ ಸ್ವರೂಪದಿಂದ ಅನೇಕ ಅವತಾರಗಳನ್ನು ಸ್ವೀಕರಿಸುತ್ತಾನೆ. ಈ ದೃಷ್ಟಿಯಿಂದ ಶ್ರುತಿಯು ಬಹುಭವನವನ್ನು ಹೇಳಿದೆ ಎಂದು ಸಾವಕಾಶ ಮಾಡಬಹುದು. ಆದ್ದರಿಂದ ಬಹುಭವನವೆಂಬ ಲಿಂಗದ ಬಲದಿಂದ ಈ ಈಕ್ಷತಿಶ್ರುತಿಗೆ ಗೌಣತ್ವವನ್ನು ಕಲ್ಪಿಸಲು ಸಾಧ್ಯವಿಲ್ಲ.

**तत्वप्रकाशिका – अजायमानोऽविकुर्वाणः । अतः परं ब्रह्मैवैतत्स्थानप्रतिपाद्यं सदिति तस्यैवैतत्स्रष्टृत्वमि इति सिद्धम् ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् सदधिकरणम् ।।**

'ಅಜಾಯಮಾನಃ' ಎಂದರೆ ವಿಕಾರವನ್ನು ಹೊಂದದೇ ಇರುವ ಎಂದರ್ಥ. ಆದ್ದರಿಂದ ಮಹಾವಿಷ್ಣುವೇ ಈ ಸೃಷ್ಟಿಸ್ಥಾನದಿಂದ ಪ್ರತಿಪಾದ್ಯನಾಗಿದ್ದಾನೆ, ಅವನೇ 'ಸತ್' ಶಬ್ದದಿಂದ ವಾಚ್ಯನಾದ್ದರಿಂದ ಜನ್ಮಾಧಿಕರಣದಲ್ಲಿ ಪ್ರತಿಪಾದಿಸಲ್ಪಟ್ಟ ಜಗತ್‌ಸೃಷ್ಟಿಕರ್ತೃತ್ವವು ಮಹಾವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುತ್ತದೆ ಎಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಸದಧಿಕರಣವು ಮುಗಿಯಿತು

**भावदीपः –**

**ॐ ईक्षतिकर्मव्यपदेशात् सः ॐ ।। अत्र न्यायविवरणे कारणत्वसाम्याद् विष्णोरचेतनप्रकृतेश्च 'सदेव सोम्य' इत्यादिसृष्टिस्थानं साधारणमिति अनेकप्रकरणजातरूपस्थानं समन्वेतव्यमुक्तम् ।**

ಈ ಅಧಿಕರಣದ ನ್ಯಾಯವಿವರಣದಲ್ಲಿ ಸ್ಥಾನದ ಸಮನ್ವಯವನ್ನು ಮಾಡಲಾಗಿದೆಯೆಂದು ಸಮರ್ಥಿಸಿದ್ದಾರೆ. ಶ್ರುತಿಯಲ್ಲಿ ಹೇಳಲ್ಪಟ್ಟ ಕಾರಣತ್ವಧರ್ಮವು ಮಹಾವಿಷ್ಣು ಹಾಗೂ ಜಡಪ್ರಕೃತಿ ಎರಡರಲ್ಲಿಯೂ ಸಾಧಾರಣವಾಗಿದೆ. ಆದ್ದರಿಂದ 'ಸದೇವ ಸೌಮ್ಯ' ಇತ್ಯಾದಿಯಾದ ಸೃಷ್ಟಿಯನ್ನು ಹೇಳುವ ಸ್ಥಾನವು ಉಭಯಸಾಧಾರಣವಾಯಿತು. ಅನೇಕ ಪ್ರಕರಣಗಳ ಸಮೂಹವೇ 'ಸ್ಥಾನ' ಎನಿಸುತ್ತದೆ. ಜಗತ್‌ಕಾರಣತ್ವವನ್ನು ಹೇಳುವ ಶ್ರುತಿಗಳು ಅನೇಕವಿರುವುದರಿಂದ ಆ ಎಲ್ಲಾ ಶ್ರುತಿಗಳ ಸಮನ್ವಯವು ಈ ಅಧಿಕರಣದಲ್ಲಿ ವಿವಕ್ಷಿತವಾದ್ದರಿಂದ ಸ್ಥಾನದ ಸಮನ್ವಯವನ್ನೇ ಈ ಅಧಿಕರಣದ ಉದ್ದೇಶವನ್ನೇ ನ್ಯಾಯವಿವರಣದಲ್ಲಿ ಹೇಳಿರುತ್ತಾರೆ.

**भावदीपः** – तच्च न साक्षात् । किन्तु तत्स्थसन्नामसमन्वये तद्युक्तानेकप्रकरणसमन्वयो भवतीति सच्छब्दसमन्वद्वारेत्यभिप्रेत्य भाष्ये तच्च सदिति सन्नाम समन्वेतव्यं प्रदर्शितमिति भावेनान्यत्रोक्तमेव साधारण्यं व्यनक्ति – अत्र सदेवेति ॥

ನ್ಯಾಯವಿವರಣದಲ್ಲಿ ಹೇಳಲ್ಪಟ್ಟ 'ಸ್ಥಾನ' ಸಮನ್ವಯವು ಸಾಕ್ಷಾತ್ತಾಗಿ ಎಂದು ತಿಳಿಯಬಾರದು. ಹೊರತಾಗಿ, ಸೃಷ್ಟಿಕಾರಣತ್ವವನ್ನು ಹೇಳುವಂತಹ ಶ್ರುತಿಯಲ್ಲಿರುವ 'ಸತ್' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಾರೆ. ಅಂತಹ 'ಸತ್' ಎಂಬ ಶಬ್ದದಿಂದ ಕೂಡಿರುವಂತಹ ಅನೇಕ ಪ್ರಕರಣಗಳ ಸಮನ್ವಯವೂ ಸಹ ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ 'ಸತ್' ಎಂಬ ನಾಮಾತ್ಮಕ ಶಬ್ದದ ಸಮನ್ವಯ ಮೂಲಕವಾಗಿ ಸ್ಥಾನಸಮನ್ವಯವು ವಿವಕ್ಷಿತವಾಗಿದೆಯೆಂದು ನ್ಯಾಯವಿವರಣದ ಅಭಿಪ್ರಾಯ. ಆದ್ದರಿಂದಲೇ ಭಾಷ್ಯದಲ್ಲಿ 'ತಚ್ಚ ಸತ್' ಎಂಬುದಾಗಿ 'ಸತ್' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನೇ ಹೇಳಿರುತ್ತಾರೆ. ಹೀಗೆ ಬೇರೆಡೆ ಹೇಳಲ್ಪಟ್ಟ ಸಾಧಾರಣ್ಯವನ್ನೇ ಟೀಕೆಯಲ್ಲಿ 'ಅತ್ರ ಸದೇವ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – सृष्टीत्युपलक्षणम् । 'सदेव सोम्य । सन्मूलाः सोम्येमाः सर्वाः प्रजाः सदायतनाः सत्प्रतिष्ठाः । सता सोम्य तदा सम्पन्नो भवति सति सम्पद्य न विदुः । सत आगत्य न विदुः' इत्यादिसृष्टिसुप्तिसर्वाश्रयत्वादिप्रतिपादकानेकप्रकरणजातरूप-स्थानगतस्येत्यर्थः ॥

ಸೃಷ್ಟಿಪ್ರತಿಪಾದಕವಾದ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದು ಕೇವಲ ಉಪಲಕ್ಷಣ. ಇದರ ಜೊತೆಗೆ ಸ್ಥಿತಿಪ್ರತಿಪಾದಕ, ಸಂಹಾರಪ್ರತಿಪಾದಕ ಮೊದಲಾದವುಗಳನ್ನೂ ಸಹ ವಿವಕ್ಷಿಸಬೇಕು. ಆದ್ದರಿಂದ 'ಸದೇವ ಸೌಮ್ಯ । ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್‌ಪ್ರತಿಷ್ಠಾ । ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸತಿ ಸಂಪದ್ಯ ನ ವಿದುಃ । ಸತ ಆಗತ್ಯ ನ ವಿದುಃ' ಇವೇ ಮೊದಲಾದ ಸೃಷ್ಟಿ-ಪ್ರತಿಪಾದಕವಾದ ಸುಪ್ತಿಪ್ರತಿಪಾದಕವಾದ, ಸರ್ವಾಶ್ರಯಪ್ರತಿಪಾದಕವಾದ ಅನೇಕ ಪ್ರಕರಣಗಳ ಸಮೂಹ ರೂಪವಾದ ಸ್ಥಾನದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆಂದು ಹೇಳಿದಂತಾಗುತ್ತದೆ.

**भावदीपः** – कारणत्वेति ॥ 'सदेव' इति वाक्ये विश्वस्मात् पूर्वं सत्वोक्त्या प्रतीतकारणत्वसाम्येनेति वा 'तत्तेजोऽसृजत' इति वाक्यप्रतीतकारणत्वसाम्येनेति वाऽर्थः । अधिकं चन्द्रिकायाम् ।

ವಿಷ್ಣು ಹಾಗೂ ಪ್ರಕೃತಿ ಕಾರಣತ್ವವು ಇಬ್ಬರಲ್ಲಿಯೂ ಸಮಾನವಾಗಿದೆಯೆಂದು ಟೀಕೆಯಲ್ಲಿ ಹೇಳಿದ್ದಾರೆ-ಇದರ ಅಭಿಪ್ರಾಯ ಹೀಗಿದೆ - 'ಸದೇವ ಸೌಮ್ಯ' ಎಂಬ ವಾಕ್ಯದಲ್ಲಿ ಜಗತ್ತಿಗಿಂತ ಮೊದಲು ವಿಷ್ಣುವಿನ ಅಸ್ತಿತ್ವವನ್ನು ಹೇಳಿದ್ದರಿಂದ ಜಗತ್‌ಕಾರಣತ್ವವವನ್ನು ಹೇಳಿದಂತಾಗುತ್ತದೆ. 'ತತ್ತೇಜೋಽಸೃಜತ' ಎಂಬ ಶ್ರುತಿಯಲ್ಲಿ ಪ್ರಕೃತಿಗೆ ಜಗತ್‌ಕಾರಣತ್ವವನ್ನು ಹೇಳಲಾಗಿದೆ. ಹೀಗೆ ವಿಷ್ಣು ಹಾಗೂ ಪ್ರಕೃತಿ ಎರಡರಲ್ಲಿಯೂ ಕಾರಣತ್ವಧರ್ಮವು ಸಮಾನವಾಗಿದೆಯೆಂದು. ಹೆಚ್ಚಿನ ವಿಚಾರವನ್ನು ಚಂದ್ರಿಕೆಯಲ್ಲಿ ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**भावदीपः** – सङ्गतिपरत्वेन तावद् भाष्यं व्याकुर्वन् सतः स्रष्टृत्वमुच्यत इति स्रष्टृपदसूचितमाक्षेप्यं दर्शयति – **जन्मादीति** ।।

ಶ್ರೀಮದಾಚಾರ್ಯರ ಭಾಷ್ಯವನ್ನು ಸಂಗತಿಪ್ರದರ್ಶನ ಮೂಲಕವಾಗಿ ವ್ಯಾಖ್ಯಾನ ಮಾಡುತ್ತಾ, 'ಸತ್' ಪದಾರ್ಥಕ್ಕೆ ಸ್ರಷ್ಟೃತ್ವವನ್ನು ಹೇಳುವ ಮೂಲಕ ಸ್ರಷ್ಟೃಪದದಿಂದ ಸೂಚಿತವಾದ ಆಕ್ಷೇಪವನ್ನು ತೋರಿಸುತ್ತಿದ್ದಾರೆ 'ಜನ್ಮಾದಿ' ಇತ್ಯಾದಿ ವಾಕ್ಯದಿಂದ.

**भावदीपः** – अत्र भाष्यटीकयोः स्रष्टृत्वशब्दः कारणत्वमात्रपरः, स च गुणान्तरोपलक्षक इत्यग्रे व्यक्तीभविष्यति । उच्यत इत्यस्यार्थः – **प्रतीयत इति** ।।

ಈ ಅಧಿಕರಣದ ಭಾಷ್ಯ ಹಾಗೂ ಟೀಕೆಯಲ್ಲಿರುವ ಸ್ರಷ್ಟೃತ್ವ ಪದವು ಕಾರಣತ್ವವನ್ನಷ್ಟೇ ಹೇಳುತ್ತದೆ. ಆದ್ದರಿಂದ ಬೇರೆ ಗುಣಗಳಿಗೂ ಸಹ ಉಪಲಕ್ಷಕವಾಗಿದೆಯೆಂಬ ವಿಚಾರವು ಮುಂದೆ ಸ್ಪಷ್ಟವಾಗುತ್ತದೆ. 'ಉಚ್ಯತೇ' ಎಂಬರ್ಥವನ್ನೇ 'ಪ್ರತೀಯತೇ' ಎಂಬುದರಿಂದ ಹೇಳಿರುತ್ತಾರೆ.

**भावदीपः** – 'सदेव' इत्यादि तु वाक्यप्रतीकं सन्नामप्रदर्शनार्थमिति दर्शयन् व्याचष्टे – **छान्दोगश्रुतौ सत इति** ।। षष्ठेऽध्याय इत्यर्थः ।

ಭಾಷ್ಯದಲ್ಲಿ ಹೇಳಲ್ಪಟ್ಟ 'ಸದೇವ' ಎಂಬುದು ಪ್ರತೀಕಗ್ರಹಣವಾಗಿದೆಯೆಂಬ ಅಭಿಪ್ರಾಯದಿಂದ 'ಸತ್' ಎಂಬ ನಾಮಾತ್ಮಕ ಶಬ್ದದ ಸಮನ್ವಯವು ವಿವಕ್ಷಿತವಾಗಿದೆ ಎಂದು ತೋರಿಸುತ್ತಿದ್ದಾರೆ. 'ಛಾಂದೋಗಶ್ರುತೌ ಸತಃ' ಎಂಬುದಾಗಿ. ಆರನೆಯ ಅಧ್ಯಾಯದ ಛಾಂದೋಗ್ಯದಲ್ಲಿ ಈ ವಾಕ್ಯವು ಇರುತ್ತದೆಂದು ತಿಳಿಯಬೇಕು.

**भावदीपः** – 'इत्यादिना' इत्यनेनोपात्तं वाक्यमाह – **तत्तेज इति** ।। एतेन जन्मादिनयोक्तं स्रष्टृत्वमित्यादिना सत उच्यत इति भाष्ययोजना दर्शिता ।

'ಇತ್ಯಾದಿನಾ' ಎಂಬಲ್ಲಿರುವ ಆದಿಪದದಿಂದ ವಿವಕ್ಷಿತವಾದ ಶ್ರುತಿಯನ್ನು 'ತತ್ತೇಜಃ' ಎಂಬುದರಿಂದ ತೋರಿಸಿದ್ದಾರೆ. ಹೀಗೆ ಹೇಳಿದ್ದರಿಂದ 'ಜನ್ಮಾದಿನಯೋಕ್ತಂ ಸ್ರಷ್ಟೃತ್ವಮಿತ್ಯಾದಿನಾ ಸತ ಉಚ್ಯತೇ' ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಸ್ರಷ್ಟೃತ್ವವನ್ನು 'ಸತ್'ಪದಾರ್ಥಕ್ಕೆ ಹೇಳಲಾಗಿದೆಯೆಂದು ಭಾಷ್ಯದ ಮಾತುಗಳ ಯೋಜನೆಯನ್ನು ತೋರಿಸಿದಂತಾಯಿತು.

**भावदीपः** – तच्च सदित्यादिभाष्यतात्पर्यमाह – **तस्य चेति** ।। विष्णावयुक्तविकाररूपपरिणामोक्तेर्विष्णोरन्यत्व इत्यर्थः । स्रष्टृत्वमित्युक्ततात्पर्यमाह – **अन्यस्यैवेति** ।।

'ತಚ್ಚ ಸತ್' ಎಂಬ ಭಾಷ್ಯದ ಅಭಿಪ್ರಾಯವನ್ನು 'ತಸ್ಯ ಚ' ಎಂಬ ಟೀಕೆಯಿಂದ ತೋರಿಸುತ್ತಿದ್ದಾರೆ. ವಿಷ್ಣುವಿನಲ್ಲಿ ಅಯುಕ್ತವಾದ ವಿಕಾರರೂಪವಾದ ಪರಿಣಾಮವನ್ನು 'ತತ್ತೇಜಃ' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ, ವಿಷ್ಣುವಿಗಿಂತ ಬೇರೆ ಪದಾರ್ಥವೇ ಜಗತ್ಕಾರಣವಾಗಬೇಕೆಂದು ಪೂರ್ವಪಕ್ಷದ ಅಭಿಪ್ರಾಯ. 'ಸ್ರಷ್ಟೃತ್ವಮ್' ಎಂಬ ಪದದ ತಾತ್ಪರ್ಯವನ್ನು 'ಅನ್ಯಸ್ಯೈವ' ಎಂಬುದರಿಂದ ಹೇಳಿದ್ದಾರೆ.

**भावदीपः – इति सङ्गतिसम्भवान्निर्णेयत्वम्** । सत इत्यनुषङ्गः । भाष्ये न विष्णुरित्युक्तावपि न्यायविवरणोक्तिमनुरुद्ध्य उत प्रधानमित्युक्तम् । 'तदैक्षत' इतीक्षणश्रवणेऽप्यदृष्टं द्रष्ट्रित्यक्षरवाक्य इव प्रथमत एवाप्रतीतेरस्ति सन्देहनिविष्टत्वं प्रधानस्येति पूर्वमेवोक्तमिति भावः ।

ಹೀಗೆ ಸಂಗತಿಯನ್ನು ಹೇಳಬಹುದಾದ್ದರಿಂದ 'ಸತ್' ಶಬ್ದ ಪ್ರತಿಪಾದ್ಯವಾದದ್ದನ್ನು ಅವಶ್ಯವಾಗಿ ನಿರ್ಣಯಿಸಬೇಕು. ಸತಃ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು.

ಭಾಷ್ಯದಲ್ಲಿ 'ನ ವಿಷ್ಣುಃ' ವಿಷ್ಣುವು ಸತ್‌ಶಬ್ದದಿಂದ ಪ್ರತಿಪಾದ್ಯನಲ್ಲ ಎಂದಷ್ಟೇ ಹೇಳಿದ್ದರೂ ನ್ಯಾಯವಿವರಣದ ಮಾತನ್ನು ಅನುಸರಿಸಿ 'ಉತ ಪ್ರಧಾನಮ್' ಎಂಬುದಾಗಿ ಪ್ರಧಾನ ಪಕ್ಷವನ್ನು ಸ್ವೀಕರಿಸಿದ್ದಾರೆ. ವಾಸ್ತವಿಕವಾಗಿ ಪ್ರಧಾನಕ್ಕೆ ಜಗತ್‌ಕಾರಣತ್ವವನ್ನು ಹೇಳುವ ಶ್ರುತಿಯಲ್ಲಿ 'ತದೈಕ್ಷತ' ಎಂಬುದಾಗಿ ಈಕ್ಷಣವನ್ನು ಹೇಳಿದ್ದರೂ 'ಅದೃಷ್ಟಂ ದ್ರಷ್ಟೃ' ಎಂಬ ಅಕ್ಷರವಾಕ್ಯದಂತೆ ಇಲ್ಲಿಯೂ ಸಹ ಈಕ್ಷಣವು ಪ್ರಥಮ ಪ್ರತೀತವಾಗುವುದಿಲ್ಲ. ಆದ್ದರಿಂದ ಸಂದೇಹಕೋಟಿಯಲ್ಲಿ ಪ್ರಧಾನವನ್ನು ನಿವೇಶಿಸಬಹುದು ಈ ಉತ್ತರವನ್ನು ಹಿಂದೆಯೇ ಹೇಳಿದ್ದಾಗಿದೆ.

**भावदीपः – पूर्वपक्षादिपरत्वेनापि व्याख्यातुमवतारयति – सयुक्तिकमिति** ।। तच्च सन्न विष्णुरिति प्रतिज्ञाबाष्यं फलितार्थपरं मत्वा व्याख्याति – **प्रधानमेवेति** ।।

ಸಂಗತಿಪರವಾದ ಭಾಷ್ಯವನ್ನು ಪೂರ್ವಪಕ್ಷಪರವಾಗಿಯೂ ಸಹ ವ್ಯಾಖ್ಯಾನ ಮಾಡುವುದಕ್ಕಾಗಿ ಅವತಾರಿಕೆ ನೀಡುತ್ತಿದ್ದಾರೆ 'ಸಯುಕ್ತಿಕಮ್' ಎಂಬ ಟೀಕೆಯಿಂದ 'ತಚ್ಚ ಸತ್ ನ ವಿಷ್ಣುಃ' ಅಂತಹ ಸತ್‌ಪದಾರ್ಥವು ವಿಷ್ಣುವಾಗಲು ಸಾಧ್ಯವಿಲ್ಲ ಎಂಬ ಪ್ರತಿಜ್ಞಾಪರವಾದ ಭಾಷ್ಯವನ್ನು ಫಲಿತಾರ್ಥಪರವಾಗಿ ವ್ಯಾಖ್ಯಾನ ಮಾಡಿದ್ದಾರೆ 'ಪ್ರಧಾನಮೇವ' ಎಂಬುದಾಗಿ.

**भावदीपः – हेत्वंशार्थमाह – बहु स्यामिति** ।। **बहुभावेति** ।। तेजःप्रभृत्यात्मना । नतु स्वरूपबहुभावेनेत्यर्थः । इत्यादिनेत्यस्यार्थः – **प्रमाणैरिति** ।। भाष्ये हिर्हेताविति भावः ।

ಹೇತ್ವಂಶದ ಅರ್ಥವನ್ನು 'ಬಹು ಸ್ಯಾಮ್' ಎಂಬುದರಿಂದ ಹೇಳಿದ್ದಾರೆ 'ಬಹುಭಾವ' ಎಂದರೆ ತೇಜಸ್ಸು ಮೊದಲಾದವುಗಳ ಸ್ವರೂಪವನ್ನು ತಾಳುವಿಕೆ ಎಂದಷ್ಟೇ ಅರ್ಥ ಹೊರತು, ಸ್ವರೂಪತಃ ಬಹುಭಾವವನ್ನು ಹೊಂದಿದೆ ಎಂದರ್ಥವಲ್ಲ. 'ಇತ್ಯಾದಿನಾ' ಎಂಬಲ್ಲಿರುವ ಆದಿಪದದ ಅರ್ಥವನ್ನು 'ಪ್ರಮಾಣೈಃ' ಎಂಬುದರಿಂದ ಹೇಳಿದ್ದಾರೆ. ಭಾಷ್ಯದಲ್ಲಿರುವ 'ಹಿ' ಪದವು ಹೇತ್ವರ್ಥದಲ್ಲಿದೆ.

**भावदीपः** – अस्त्वविकारित्वं विष्णोः परिणामोऽप्यस्त्वित्यतः 'बहु स्यां प्रजायेय' इत्यन्यस्यान्यभावादृष्टिरिति न्यायविवरणोक्तं हृदि कृत्वाऽह – **तस्मिन्निति** ।।

ವಿಷ್ಣುವಿಗೆ ವಿಕಾರವಿಲ್ಲದಿರಬಹುದು. ಆದರೂ ಸಹ ಪರಿಣಾಮವನ್ನು ಒಪ್ಪಿದರೆ ಏನು ತೊಂದರೆ? ಎಂಬ ಪ್ರಶ್ನೆಗೆ 'ಬಹು ಸ್ಯಾಮ್ ಪ್ರಜಾಯೇಯ' ಎಂಬುದಾಗಿ ಒಂದು ಪದಾರ್ಥಕ್ಕೆ ಮತ್ತೊಂದು ಪದಾರ್ಥದ ಸ್ವರೂಪವು ಬರುವುದು ಎಲ್ಲಿಯೂ ಕಂಡಿಲ್ಲ ಎಂಬುದಾಗಿ 'ಬಹುಸ್ಯಾಂ ಪ್ರಜಾಯೇಯ ಇತಿ ಅನ್ಯಸ್ಯ ಅನ್ಯಭಾವಾದೃಷ್ಟೇಃ' ಎಂಬುದಾಗಿ ನ್ಯಾಯವಿವರಣದಲ್ಲಿ ಹೇಳಿದ್ದನ್ನೇ ಮನಸ್ಸಿನಲ್ಲಿಟ್ಟುಕೊಂಡು 'ತಸ್ಮಿನ್' ಇತ್ಯಾದಿ ಟೀಕೆಯು ಹೊರಟಿದೆ.

**भावदीपः** – निर्विकारे हरौ । तस्य तेजःप्रभृत्यात्मना बहुभवनरूपविकारस्य काप्येवमदृष्टाऽसम्भवादित्यर्थः ।। **प्रधाने चेति** ।। तस्य विकारित्वादिति भावः ।।

ನಿರ್ವಿಕಾರೇ = ವಿಕಾರವಿಲ್ಲದ ಶ್ರೀಹರಿಯಲ್ಲಿ, ಅಂತಹ ಶ್ರೀಹರಿಗೆ ತೇಜಸ್ಸು ಮೊದಲಾದವುಗಳ ರೂಪದಿಂದ ಬಹುಭವನರೂಪವಾದ ವಿಕಾರವು ಎಲ್ಲಿಯೂ ಕಂಡಿರುವುದಿಲ್ಲ ಎಂದರ್ಥ. 'ಪ್ರಧಾನೇಚ' ಎಂದರೆ ಪ್ರಕೃತಿಯಲ್ಲಿ ಅಂತಹ ವಿಕಾರವಿರುವುದು ಕಂಡಿದೆ ಎಂದರ್ಥ.

**भावदीपः**– **जगत्कारणत्वमिति**।।एतेनभाष्येस्रष्टृत्वपदम् अनन्याधीनकारणत्वमात्र परमिति दर्शितम् । ईक्षणं त्वभिमानिद्वारा वा ज्ञानहेतुत्वाद्वा युक्तमिति भावः ।।

'ಜಗತ್‌ಕಾರಣತ್ವಮ್' ಎಂದು ಹೇಳಿದ್ದರಿಂದ ಭಾಷ್ಯದಲ್ಲಿ ಸ್ರಷ್ಟೃತ್ವಪದವು ಅನನ್ಯಾಧೀನವಾದ ಕಾರಣತ್ವವನ್ನಷ್ಟೇ ಹೇಳುತ್ತಿದೆಯೆಂದು ವ್ಯಾಖ್ಯಾನಿಸಿದಂತಾಯಿತು. ಜಡಪ್ರಕೃತಿಯಲ್ಲಿ ಹೇಳಲ್ಪಟ್ಟ ಈಕ್ಷಣವನ್ನು ಅಭಿಮಾನಿದೇವತೆಯ ಮೂಲಕವಾಗಿ ಜ್ಞಾನಕ್ಕೆ ಕಾರಣವಾಗಿದೆಯೆಂಬ ದೃಷ್ಟಿಯಿಂದ ಕೂಡಿಸಬೇಕು.

**भावदीपः** – **नन्विति** ।। उक्तदिशाऽनन्याधीनकारणत्वरूपब्रह्मलक्षणाक्षेपासम्भवेऽपि गुणान्तराक्षेपप्रदर्शनायेयमाशङ्केति ज्ञेयम् । प्रधानस्य सत्पदवाच्यत्वेऽपीत्येतावति वाच्ये स्थान इत्युक्तिर्वक्ष्यमाणानेकप्रकरणगतबहुगुणाक्षेपोक्तिसौकर्याय उच्येत प्रतीयेत ।

'ನನು' ಎಂಬ ಆಕ್ಷೇಪಪರವಾದ ಟೀಕೆಯ ಅಭಿಪ್ರಾಯ ಹೀಗಿದೆ - ಹಿಂದೆ ಹೇಳಿದಂತೆ ಅನನ್ಯಾಧೀನಕಾರಣತ್ವರೂಪವಾದ ಬ್ರಹ್ಮನ ಲಕ್ಷಣವನ್ನು ಪ್ರಕೃತಿಯಲ್ಲಿ ಆಕ್ಷೇಪ ಮಾಡಲು ಬಾರದಿದ್ದರೂ ಉಳಿದ ಗುಣಗಳನ್ನು ಆಕ್ಷೇಪ ಮಾಡಬಹುದೆಂದು ಹೇಳಲು ಹೀಗೆ ಆಶಂಕಿಸಿದ್ದಾರೆಂದು ತಿಳಿಯಬೇಕು. ಪ್ರಕೃತಿಯು 'ಸತ್' ಎಂಬ ನಾಮಾತ್ಮಕಪದದಿಂದ ಪ್ರತಿಪಾದ್ಯವಾಗಿದ್ದರೂ 'ಸ್ಥಾನೇ' ಎಂದು ಹೇಳಿದ್ದು ಮುಂದೆ ಹೇಳುವಂತೆ ಅನೇಕ ಪ್ರಕರಣಗಳಲ್ಲಿರುವ ಅನೇಕ ಗುಣಗಳ ಆಕ್ಷೇಪವನ್ನು ಮಾಡುವುದರ ಸೌಕರ್ಯಕ್ಕಾಗಿ ಎಂದು ತಿಳಿಯಬೇಕು. 'ಉಚ್ಯೇತ' ಎಂದರೆ 'ತೋರಬೇಕಾದೀತು' ಎಂದರ್ಥ.

**भावदीपः** – यद्वा तेजःप्रभृतेरग्रे त्रिवृत्करणोक्त्योपादानभूतत्वमप्यस्तीत्येवमुक्तिः ।।

ಅಥವಾ ತೇಜಸ್ಸು ಮೊದಲಾದವುಗಳಿಗೆ ಮೂರಾದೆ ತ್ರಿವೃತ್ಕರಣವನ್ನು ಹೇಳಿದ್ದರಿಂದ ಉಪಾದಾನ ಕಾರಣತ್ವವೂ ಕೂಡ ಇರುತ್ತದೆಂದು ಹೀಗೆ ಹೇಳಿರುತ್ತಾರೆ.

**भावदीपः—एकमेवेति ।।** तेन समाभ्यधिकराहित्योक्त्या 'सदेव' इत्युक्तकारणत्वस्यानन्याधीनतोक्तेः कारणत्वं ब्रह्मलक्षणमिति वा समाभ्यधिकराहित्यादिकं पृथगेकं लक्षणमिति वा एतदुक्तिः ।

'ಏಕಮೇವಾದ್ವಿತೀಯಂ' ಎಂಬ ಶ್ರುತಿಯಿಂದ ವಿಷ್ಣುವಿಗೆ ಸಮಾನವಾದ ಮತ್ತು ಅಧಿಕವಾದ ಮತ್ತೊಂದು ಪದಾರ್ಥವಿಲ್ಲವೆಂದು ಹೇಳಿದಂತಾಯಿತು. ಇದರಿಂದ 'ಸದೇವ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಕಾರಣತ್ವವು ಅನನ್ಯಾಧೀನವಾಗಿದೆಯೆಂದು ಹೇಳಿದಂತಾಗುತ್ತದೆ. ಇಂತಹ ಕಾರಣತ್ವವು ವಿಷ್ಣುವಿನ ಲಕ್ಷಣವೇ ಆಗಿದೆ. ಅಥವಾ ಸಮಾಭ್ಯಧಿಕರಾಹಿತ್ಯವು ವಿಷ್ಣುವಿನ ಪ್ರತ್ಯೇಕಲಕ್ಷಣವೆಂದೂ ಸಹ ವಿವಕ್ಷಿಸಬಹುದೆಂದು ತಿಳಿಸಲು 'ಏಕಮೇವಾದ್ವಿತೀಯಂ' ಎಂಬ ಶ್ರುತಿಯನ್ನು ಉಲ್ಲೇಖ ಮಾಡಿದ್ದಾರೆ.

**भावदीपः –** एतच्च जन्मादिसूत्रेऽर्थात् सिद्धम् । 'सृष्टिः स्थितिश्च संहारो नियतिर्ज्ञानमावृतिः । बन्धमोक्षौ च कथ्यन्ते तस्योत्कर्षप्रसिद्धये ।।' इत्युक्तेः ।।

ಇಂತಹ ಜಗತ್ಕಾರಣತ್ವವು ಜನ್ಮಾದಿಸೂತ್ರದಲ್ಲಿ ಅರ್ಥಾತ್ ಸಿದ್ಧವಾಗಿದೆ. ಏಕೆಂದರೆ 'ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ । ಬಂಧಮೋಕ್ಷೌ ಚ ಕಥ್ಯಂತೇ ತಸ್ಯೋತ್ಕರ್ಷಪ್ರಸಿದ್ಧಯೇ' ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳನ್ನು ವಿಷ್ಣುವಿನ ಸರ್ವೋತ್ತಮತ್ವಕ್ಕಾಗಿ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆಯೆಂದು ಹೇಳಲಾಗಿದೆ.

**भावदीपः – सन्मूला इति ।।** प्रजाः प्रतिनिमित्तत्वस्थितिहेतुत्वसुप्तगम्यत्वादीनां श्रवणात्तेषामतिव्याप्तिः स्यादिति भावः ।

'ಸನ್ಮೂಲಾ ಸೋಮ್ಯೇಮಾ ಪ್ರಜಾಃ' ಎಂಬ ಶ್ರುತಿಯಲ್ಲಿ' ಪ್ರಜೆಗಳಿಗೆಲ್ಲಾ ವಿಷ್ಣು ನಿಮಿತ್ತಕಾರಣನಾಗಿದ್ದಾನೆಂದು ಮತ್ತು ಸ್ಥಿತಿಹೇತುತ್ವ, ಸುಪ್ತಗಮ್ಯತ್ವ ಮೊದಲಾದ ಧರ್ಮಗಳುಳ್ಳವನೆಂದು ಶ್ರುತವಾಗಿದೆ. ಇವುಗಳಿಗೆಲ್ಲಾ ಅತಿವ್ಯಾಪ್ತಿದೋಷವನ್ನು ಹೇಳಬೇಕಾದೀತು ಎಂದಭಿಪ್ರಾಯ.

**भावदीपः –** प्रतिष्ठापकत्वं च मुक्तिदत्वम् । 'तत्प्रतिष्ठाश्च मोक्षगाः' इति तद्भाष्योक्तेः ।। **सता सोम्येति ।।** लयकर्तृत्वं च लब्धम् । 'प्रजास्तद्वत् प्रजालयः' इति तद्भाष्योक्तेरेवेति ध्येयम् ।

'ಪ್ರತಿಷ್ಠಾಪಕತ್ವ' ಎಂದರೆ ಮೋಕ್ಷವನ್ನು ನೀಡುತ್ತಾನೆಂದರ್ಥ. ಏಕೆಂದರೆ 'ತತ್ಪ್ರತಿಷ್ಠಾಶ್ಚ ಮೋಕ್ಷಗಾಃ' ಎಂಬ ಭಾಷ್ಯವು ಆಧಾರವಾಗಿರುವುದರಿಂದ. 'ಸತಾ ಸೋಮ್ಯ' ಎಂಬುದರಿಂದ ಲಯಕರ್ತೃತ್ವವು ಸಿದ್ಧವಾಯಿತು. ಏಕೆಂದರೆ 'ಪ್ರಜಾಸ್ತದ್ವತ್ ಪ್ರಜಾಲಯೇ' ಎಂಬುದಾಗಿ ಉಪನಿಷದ್ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – किञ्चित् शेषोक्त्या प्रतिज्ञाहेतूक्तिपरं भाष्यं व्याचष्टे – **सदेवेति** ।। अत्रेत्यस्यार्थः – **स्थान इति** ।।

ಕೆಲವು ಪದಗಳನ್ನು ಶೇಷಪೂರಣ ಮಾಡಿಕೊಳ್ಳುವ ಮೂಲಕ ಪ್ರತಿಜ್ಞೆ ಹಾಗೂ ಹೇತುಗಳನ್ನು ಹೇಳುವಂತಹ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಸದೇವ' ಇತ್ಯಾದಿ ಟೀಕೆಯಿಂದ. 'ಅತ್ರ' ಎಂಬುದರ ಅರ್ಥವನ್ನೇ 'ಸ್ಥಾನೇ' ಎಂದು ಹೇಳಿದ್ದಾರೆ.

**भावदीपः** – कर्मशब्दार्थः – **व्यापारेति** ।। तत्कृत्यं चन्द्रिकायां व्यक्तम् । तत्त्वप्रदीपे तु 'न कर्तृत्वं न कर्माणि' इति गीतावाक्य इव कर्मेति सृष्टिरुच्यते । ईक्षतिसृष्ट्योरुपदेशादित्यर्थ इत्युक्तम् ।

ಸೂತ್ರದಲ್ಲಿರುವ ಕರ್ಮಶಬ್ದದ ಅರ್ಥವನ್ನು 'ವ್ಯಾಪಾರ' ಎಂದು ಹೇಳಿದ್ದಾರೆ. ಇದರ ಸಾರ್ಥಕ್ಯವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಸ್ಪಷ್ಟಪಡಿಸಲಾಗಿದೆ. ತತ್ತ್ವಪ್ರದೀಪದಲ್ಲಾದರೂ 'ನ ಕರ್ತೃತ್ವಂ ನ ಕರ್ಮಾಣಿ' ಎಂಬ ಗೀತಾವಾಕ್ಯದಲ್ಲಿ ಕರ್ಮಶಬ್ದವನ್ನು 'ಸೃಷ್ಟಿ' ಎಂಬರ್ಥದಲ್ಲಿ ಪ್ರಯೋಗಿಸಿದಂತೆ ಇಲ್ಲಿಯೂ ಕೂಡ 'ಸೃಷ್ಟಿ' ಎಂಬರ್ಥವನ್ನೇ ಹೇಳಬೇಕು. 'ಈಕ್ಷತಿಕರ್ಮವ್ಯಪದೇಶಾತ್' ಎಂಬ ಸೂತ್ರಕ್ಕೆ ಈಕ್ಷಣ ಮತ್ತು ಸೃಷ್ಟಿಗಳನ್ನು ಉಪದೇಶಿಸಿದ್ದರಿಂದ ಎಂಬರ್ಥದಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – विष्णुरेवेत्युक्त्या न प्रधानमिति दर्शितम् । तत्र हेत्वाकाङ्क्षायामचेतनस्येक्षणादृष्टिरित्यन्यत्रोक्तमीक्षणस्य निरवकाशत्वमाह – **जडेति** ।।

'ವಿಷ್ಣುರೇವ ಉಚ್ಯತೇ' ವಿಷ್ಣುವೊಬ್ಬನೇ ಪ್ರತಿಪಾದ್ಯನಾಗುತ್ತಾನೆಂದು ಅವಧಾರಣಪುರಸ್ಸರವಾಗಿ ಹೇಳಿದ್ದರಿಂದ ಪ್ರಧಾನವು ಪ್ರತಿಪಾದ್ಯವಾಗುವುದಿಲ್ಲವೆಂದು ಪ್ರತ್ಯೇಕವಾಗಿ ಹೇಳಿಲ್ಲ. ಈ ವಿಷಯದಲ್ಲಿ ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ, ಅಚೇತನಕ್ಕೆ ಜ್ಞಾನವಿರುವಿಕೆಯು ಬೇರೆ ಎಲ್ಲಿಯೂ ಕಂಡಿಲ್ಲ ಎಂಬುದಾಗಿ ಸೂತ್ರದಲ್ಲಿ ಹೇಳಲ್ಪಟ್ಟ 'ಈಕ್ಷಣ' ಎಂಬ ಲಿಂಗಕ್ಕೆ ನಿರವಕಾಶತ್ವವನ್ನು ಸಮರ್ಥಿಸುತ್ತಿದ್ದಾರೆ 'ಜಡ' ಎಂಬ ಪದದಿಂದ.

**भावदीपः** – 'तत्तेज ऐक्षत' इत्युक्तं तेजःप्रभृत्यपि चेतनमेवेत्यभिमानिनये वक्ष्यत इति भावः । श्रुत्यर्थं वदन्नेवावतारयति – **अपिच विष्ण्विति** ।।

'ತತ್ತೇಜ ಐಕ್ಷತ' ಎಂಬಲ್ಲಿ ಜಡವಾದ ತೇಜಸ್ಸಿಗೆ ಈಕ್ಷಣವನ್ನು ಹೇಳಿಯೇ ಇಲ್ಲ. ಹೊರತಾಗಿ, 'ತೇಜಃ' ಮೊದಲಾದ ಶಬ್ದಗಳು ಚೇತನರನ್ನೇ ಪ್ರತಿಪಾದಿಸುತ್ತಿವೆ ಎಂಬುದಾಗಿ ಅಭಿಮಾನ್ಯಧಿಕರಣದಲ್ಲಿ ಮುಂದೆ ಸಮರ್ಥಿಸುತ್ತೇವೆ. ಶ್ರುತಿಯ ಅರ್ಥವನ್ನು ಹೇಳುವವರಾಗಿ ಅವತಾರಿಕೆ ನೀಡುತ್ತಿದ್ದಾರೆ 'ಅಪಿಚ' ಇತ್ಯಾದಿ ವಾಕ್ಯದಿಂದ.

**भावदीपः – एतेनेति ।।** श्रुतौ विष्ण्वन्यस्य मुख्येक्षणनिषेधेनेत्यर्थः । यथा 'सोमो वै राजा गन्धर्वेष्वासीत्तं देवा ऋषयश्चाभिध्यायन्' इत्यादौ सोमलताभिमानिचेतन-विवक्षया गन्धर्वेष्वासीदित्युक्तिस्तथेत्यर्थः ।

'ಏತೇನ' ಎಂದರೆ ಶ್ರುತಿಯಲ್ಲಿ ಮುಖ್ಯವಾದ ಈಕ್ಷಣವು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಬರುವುದಿಲ್ಲವೆಂದು ನಿಷೇಧ ಮಾಡಿದ್ದರಿಂದ ಎಂದರ್ಥ. 'ಯಥಾ ಸೋಮೋ ವೈ ರಾಜಾ ಗಂಧರ್ವೇಷು ಆಸೀತ್ತಂ ದೇವಾ ಋಷಯಶ್ಚಾಭ್ಯಾಯನ್' ಎಂಬ ವಾಕ್ಯದಲ್ಲಿ 'ಸೋಮ' ಶಬ್ದಕ್ಕೆ ಸೋಮಲತೆಗೆ ಅಭಿಮಾನಿಯಾದ ಚೇತನನನ್ನೇ ವಿವಕ್ಷಿಸಿ, ಅಂತಹ ಚಂದ್ರನು ರಾಜನಂತೆ ಗಂಧರ್ವರ ಮಧ್ಯದಲ್ಲಿದ್ದನು ಎಂದು ಹೇಗೆ ವ್ಯಾಖ್ಯಾನ ಮಾಡಲಾಗುತ್ತದೋ, ಅದರಂತೆ ಇಲ್ಲಿಯೂ ಅಭಿಮಾನಿಚೇತನರೇ ಪ್ರತಿಪಾದ್ಯ-ರಾಗುತ್ತಾರೆ.

**भावदीपः –** भाष्ये बहुत्वं चाविकारेणोक्तं श्रुतावित्युक्तम् । तावता कथमुक्तशङ्काव्युदास इत्यतो बहुभावश्रुतिस्त्वन्यभावं विना तत्तन्नियामकतया स्वरूप-बहुत्वार्थतयैव युज्यत इत्यन्यत्रोक्तमत्र संयोज्य भाष्यभावमाह – **बहुभावस्येति ।।**

ಭಾಷ್ಯದಲ್ಲಿ 'ಬಹುತ್ವಂ ಚಾವಿಕಾರೇಣ ಉಕ್ತಂ ಶ್ರುತೌ' ಎಂದು ಹೇಳಿದ್ದಾರೆ. ಇಷ್ಟು ಹೇಳುವುದರಿಂದ ಬಹುಭವನವೆಂಬ ಪೂರ್ವಪಕ್ಷದಲ್ಲಿ ಹೇಳಿದ ಶಂಕೆಯ ಪರಿಹಾರವನ್ನು ಹೇಗೆ ಮಾಡಿದಂತಾಗುತ್ತದೆ? ಎಂಬ ಪ್ರಶ್ನೆಗೆ ಬಹುಭಾವಶ್ರುತಿಯು ಬಹುಭವನವನ್ನು ಹೇಳುತ್ತಲೇ ಇಲ್ಲ. ಹೊರತಾಗಿ ಬೇರೆ ಸ್ವರೂಪವನ್ನು ಹೊಂದದೇ, ಆಯಾ ಪದಾರ್ಥಗಳ ನಿಯಾಮಕನಾಗಿ ತನ್ನ ಸ್ವರೂಪದಿಂದ ಅನೇಕ ರೂಪಗಳನ್ನು ತಾಳುತ್ತಾನೆಂಬ ಅರ್ಥವನ್ನೂ ಕೂಡ ಶ್ರುತಿಗೆ ಹೇಳಬಹುದೆಂದು ಬೇರೆಡೆ ಸಮರ್ಥಿಸಲಾಗಿದೆ. ಅದನ್ನು ಇಲ್ಲಿ ಸಂಯೋಜನೆ ಮಾಡಿ ಭಾಷ್ಯದ ಸಂಪೂರ್ಣ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಬಹುಭಾವಸ್ಯ' ಇತ್ಯಾದಿ ಟೀಕೆಯಿಂದ

**भावदीपः – स्वरूपेति ।।** अत्र श्रुतौ स्वरूपबहुभवनमेवोच्यते नतु तेजःप्रभृत्यात्मना बहुभवनम् । 'बहु स्याम्' इत्युक्त्वा 'तत्तेजोऽसृजत' इत्युक्तिस्तु

**'सृष्ट्वा जगदिदं सर्वं नियामकतयाऽस्य तु ।**
**बहुरूपो भवानीति स्याज्जगच्चेत्यचिन्तयद् ।।'**

इति तैत्तिरीयभाष्योक्तदिशा तत्तन्नियामकतया स्वरूपबहुभावसङ्कल्पानन्तरं नियम्यं तेजःप्रभृतिस्पष्टवानित्युपपन्नेति ।

ಟೀಕೆಯಲ್ಲಿ 'ಸ್ವರೂಪಬಹುತ್ವೇನ' ಎಂದಿದೆ. ಪ್ರಕೃತ ಶ್ರುತಿಯಲ್ಲಿ ಸ್ವರೂಪತಃ ಅನೇಕ ರೂಪಗಳನ್ನು ತಾಳುತ್ತಾನೆಂದೇ ಹೇಳಲಾಗಿದೆ ಹೊರತು, ತೇಜಸ್ಸು, ಪೃಥಿವೀ ಮೊದಲಾದ ಪದಾರ್ಥಗಳ ಸ್ವರೂಪದಿಂದ,

ವಿಕಾರವನ್ನು ಹೊಂದುತ್ತಾನೆಂದು ಹೇಳಿಲ್ಲ. ಏಕೆಂದರೆ 'ಬಹು ಸ್ಯಾಮ್' ಅನೇಕ ರೂಪಗಳನ್ನು ತಾಳುತ್ತೇನೆಂದು ಇಚ್ಛಿಸಿ, ಅನಂತರ 'ತತ್ತೇಜೋಽಸೃಜತ' ಎಂಬ ಮಾತು ಶ್ರುತವಾಗಿದೆ. ಈ ಮಾತಿಗೆ ತೈತ್ತಿರೀಯಭಾಷ್ಯದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನ ಮಾಡಿದ್ದಾರೆ -

ಸೃಷ್ಟ್ವಾ ಜಗದಿದಂ ಸರ್ವಂ ನಿಯಾಮಕತಯಾಽಸ್ಯ ತು ।
ಬಹುರೂಪೋ ಭವಾನೀತಿ ಸ್ಯಾಜ್ಜಗಚ್ಚೇತ್ಯಚಿಂತಯುತ್ ॥

ಸಕಲ ಜಗತ್ತನ್ನು ಸೃಷ್ಟಿಮಾಡಿ, ನಿಯಾಮಕನಾಗಿ ಅನೇಕ ರೂಪಗಳನ್ನು ತಾಳುತ್ತೇನೆಂದು ಆಲೋಚಿಸಿದನು.

ಹೀಗೆ ತೈತ್ತಿರೀಯ ಭಾಷ್ಯದಲ್ಲಿ ಹೇಳಿದಂತೆ ಭಗವಂತನು ಆಯಾಪದಾರ್ಥಗಳ ನಿಯಾಮಕರೂಪದಿಂದ ಸ್ವರೂಪತಃ ಬಹುಭವನದ ಸಂಕಲ್ಪವನ್ನು ಮಾಡಿ, ಅದಕ್ಕೋಸ್ಕರ ನಿಯಮ್ಯವಾದ ತೇಜಸ್ಸು ಪೃಥಿವೀ ಮೊದಲಾದ ಜಗತ್ತನ್ನು ಸೃಷ್ಟಿ ಮಾಡಿದನೆಂದು ಪ್ರಕೃತ ಶ್ರುತ್ಯರ್ಥವನ್ನು ತಿಳಿಯಬೇಕು.

**भावदीपः – तदुक्तं चतुर्थपादीयानुव्याख्याने**

**'बहु स्यामिति तस्यैव ह्युक्तमार्गेण युज्यते ।**
**तत्तद्गतेन रूपेण तदर्थं ह्यसृजज्जगद् ।।**

**इति । न्यायविवरणे चोक्तं बहुभावश्रुतिस्त्वित्यादि ।**

ಈ ವಿಷಯವನ್ನೇ ನಾಲ್ಕನೆಯ ಪಾದದ ಅನುವ್ಯಾಖ್ಯಾನದಲ್ಲಿಯೂ ಸ್ಪಷ್ಟವಾಗಿ ಹೇಳಿದ್ದಾರೆ

'ಬಹು ಸ್ಯಾಮಿತಿ ತಸ್ಯೈವ ಹ್ಯುಕ್ತಮಾರ್ಗೇಣ ಯುಜ್ಯತೇ ।
ತತ್ತದ್ಗತೇನ ರೂಪೇಣ ತದರ್ಥಂ ಹ್ಯಸೃಜಜ್ಜಗದ್ ॥

ಹಿಂದೆ ಹೇಳಿದಂತೆ ಅನೇಕರೂಪಗಳನ್ನು ತಾಳುತ್ತೇನೆಂದು ಇಚ್ಛೆ ಮಾಡಿ, ಆ ರೂಪಗಳನ್ನು ತಾಳುವುದಕ್ಕಾಗಿ ನಿಯಮ್ಯವಾದ ಜಗತ್ತನ್ನು ಸೃಷ್ಟಿ ಮಾಡಿದನು ಎಂದು.

ನ್ಯಾಯವಿವರಣದಲ್ಲೂ ಕೂಡ 'ಬಹುಭಾವಶ್ರುತಿಸ್ತು' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः – विवृतमेतच्चन्द्रिकायाम् ।**

**'बहु स्यामिति सङ्कल्प्य तेजःप्रभृतिसर्जनम् ।**
**गुरुः स्यामिति सङ्कल्प्य शिष्यसम्पादनादिवद् ।। इति ।**

ತಾತ್ಪರ್ಯಚಂದ್ರಿಕೆಯಲ್ಲಿ ಈ ವಿಷಯವನ್ನು ಹೀಗೆ ವಿವರಿಸಿದ್ದಾರೆ -

'ಬಹು ಸ್ಯಾಮಿತಿ ಸಂಕಲ್ಪ್ಯ ತೇಜಃ ಪ್ರಭೃತಿಸರ್ಜನಮ್ ।
ಗುರುಃ ಸ್ಯಾಮಿತಿ ಸಂಕಲ್ಪ್ಯ ಶಿಷ್ಯಸಂಪದನಾದಿವತ್ ।
ಸದಧಿಕರಣ (೧-೩-೪)

**सिद्धे च स्थानसमन्वये तदेकदेशयोः प्रकरणवाक्ययोरपि स कैमुत्यन्यायसिद्ध इति न ते पृथगुक्ते ।**

ಮೊದಲು ಶ್ರುತಿ ಹಾಗೂ ಲಿಂಗಗಳ ಸಮನ್ವಯವನ್ನು ಹೇಳಿದ ಮೇಲೆ ಸ್ಥಾನದ ಸಮನ್ವಯವನ್ನು ಅನಂತರ ಹೇಳುತ್ತಿದ್ದಾರೆ. ಮಧ್ಯದಲ್ಲಿರುವ ಪ್ರಕರಣ ಹಾಗೂ ವಾಕ್ಯಗಳ ಸಮನ್ವಯವನ್ನು ಏಕೆ ಬಿಟ್ಟಿದ್ದಾರೆ? ಎಂದರೆ ಸ್ಥಾನದ ಸಮನ್ವಯದಿಂದಲೇ ತದೇಕದೇಶಭೂತವಾದ ಪ್ರಕರಣ ಹಾಗೂ ವಾಕ್ಯಗಳ ಸಮನ್ವಯವೂ ಸಹ ಕೈಮುತ್ಯನ್ಯಾಯದಿಂದಲೇ ಸಿದ್ಧವಾಗುತ್ತದೆಂಬ ವಿವಕ್ಷೆಯಿಂದ. ಆದ್ದರಿಂದ ಪ್ರತ್ಯೇಕವಾಗಿ ಪ್ರಕರಣ ಮತ್ತು ವಾಕ್ಯಗಳ ಸಮನ್ವಯವನ್ನು ಹೇಳಿರುವುದಿಲ್ಲ.

ಹೀಗೆ 'ಸ್ಥಾನಸಮನ್ವಯ'ವನ್ನು ಮಾಡಿದ್ದರಿಂದ ಪ್ರಕರಣದ ಸಮನ್ವಯ, 'ಕಾರಣತ್ವ' ಎಂಬ ಲಿಂಗದ ಸಮನ್ವಯ, ಹಾಗೂ 'ಸತ್' ಎಂಬ ಶ್ರುತಿಯ ಸಮನ್ವಯ. ಹೀಗೆ ಎಲ್ಲದರ ಸಮನ್ವಯವೂ ಸಹ ಕೈಮುತ್ಯನ್ಯಾಯದಿಂದಲೇ ಸಿದ್ಧವಾಗುತ್ತದೆ ಎಂದಭಿಪ್ರಾಯ.

**समाख्यायास्तु ब्रह्मपरत्वस्यानिर्णये समाख्यात्वस्यैवायोगात् निर्णये च निर्णीतसमन्वयस्य निर्णेतव्यनामादिसमन्वयाधीनत्वायोगान्न सा पृथगुक्ता ।**

ಹಾಗಾದರೆ ಸಮಾಖ್ಯಾಪ್ರಮಾಣವನ್ನೇಕೆ ಸಮನ್ವಯ ಮಾಡಿಲ್ಲ? ಎಂದರೆ ಸಮಾಖ್ಯಾಪ್ರಮಾಣವನ್ನು ಸ್ಥಾನಸಮನ್ವಯದಿಂದ ಸಿದ್ಧವಾಯಿತೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಮಾಖ್ಯಾಪ್ರಮಾಣಕ್ಕೆ ಬ್ರಹ್ಮಪರತ್ವವು ನಿರ್ಣಯವಾಗದಿದ್ದರೆ ಸಮಾಖ್ಯಾವೆಂದೇ ಕರೆಸಿಕೊಳ್ಳುವುದಿಲ್ಲ. ಯಾವಾಗ ಅದು ಬ್ರಹ್ಮಪರವೆಂದು ನಿರ್ಣಯವಾಗುತ್ತದೋ, ಆವಾಗ ಅದು ನಿರ್ಣೀತ ಸಮನ್ವಯವೆನಿಸಿಕೊಳ್ಳುತ್ತದೆ. ಅಂತಹ ನಿರ್ಣೀತ ಸಮನ್ವಯಕ್ಕೆ ನಿರ್ಣೇತವ್ಯವಾದ ನಾಮಾದಿಸಮನ್ವಯದ ಆಧೀನ್ಯವನ್ನು ಹೇಳುವುದು ಅಯುಕ್ತವಾಗುತ್ತದೆ. ಈ ದೃಷ್ಟಿಯಿಂದ ಸಮಾಖ್ಯಾಪ್ರಮಾಣದ ಸಮನ್ವಯವನ್ನು ಪ್ರತ್ಯೇಕವಾಗಿ ಹೇಳಿರುವುದಿಲ್ಲ.

**प्रकाशः –**

अत्रैवैतस्य वचने को हेतुरित्यतः पक्षान्तरमाह – **यद्वेति** ।।

ವಿವರಣೆ - ಸ್ಥಾನದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆಂದು ಸಮರ್ಥಿಸಿದರು. ಬೇರೆ ಅಧಿಕರಣಗಳಲ್ಲಿಯೂ ಸಹ ಇದರಂತೆ ಸ್ಥಾನದ ಸಮನ್ವಯವನ್ನು ತಿಳಿದುಕೊಳ್ಳುವುದಾದರೆ ಈ ಅಧಿಕರಣದಲ್ಲಿ ಮಾತ್ರ ಸ್ಥಾನದ ಸಮನ್ವಯವನ್ನು ಶ್ರೀಮದಾಚಾರ್ಯರು ಪ್ರತಿಪಾದಿಸಲು ಏನು ಕಾರಣ? ಎಂಬ ಪ್ರಶ್ನೆಗೆ ಮತ್ತೊಂದು ಪಕ್ಷವನ್ನು ಹೇಳುತ್ತಿದ್ದಾರೆ 'ಯದ್ವಾ' ಇತ್ಯಾದಿ ವಾಕ್ಯದಿಂದ.

**प्रकाशः – पादान्त्यप्राणनयविषयवाक्ये प्राणशब्दयुक्तानेकावान्तर-प्रकरणमस्तीत्यतः पक्षान्तरमाह – अथवेति ।।**

ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಸತ್' ಎಂಬ ಶಬ್ದದಿಂದ ಘಟಿತವಾದ ಪ್ರಕರಣಗಳು ಅನೇಕವಿರುತ್ತವೆಂದು ಹೇಳಿದಿರಿ. ಮತ್ತು ಬೇರೆ ಅಧಿಕರಣಗಳಲ್ಲಿ ಸಮನ್ವಯ ಮಾಡುತ್ತಿರುವ ಶಬ್ದದಿಂದ ಘಟಿತವಾದ ಅನೇಕ ಪ್ರಕರಣಗಳಿರುವುದಿಲ್ಲವೆಂದು ಹೇಳಿದಿರಿ. ಆದರೆ ಪಾದಾಂತ್ಯಪ್ರಾಣಾಧಿಕರಣದ ವಿಷಯವಾಕ್ಯದಲ್ಲಿ ಯಾವ ಪ್ರಾಣಶಬ್ದವಿದೆಯೋ, ಅದರಿಂದ ಘಟಿತವಾದ ಅನೇಕ ಅವಾಂತರ ಪ್ರಕರಣಗಳು ಶ್ರುತಿಯಲ್ಲಿ ಕಾಣಸುತ್ತಿವೆ. ಆದ್ದರಿಂದ ಅಲ್ಲಿಯೂ ಸಹ ಸ್ಥಾನದ ಸಮನ್ವಯವನ್ನು ಶ್ರೀಮದಾಚಾರ್ಯರು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ ಮತ್ತೊಂದು ಪಕ್ಷವನ್ನು 'ಅಥವಾ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः – नन्वर्थात्समन्वीयमानस्याप्युक्तौ वाक्यप्रकरणसमाख्यानामप्युपादान-प्रसङ्ग इत्यत आह – सिद्धे चेति ।। स इति ।। समन्वय इत्यर्थः ।**

'ಸತ್' ಎಂಬ ನಾಮಾತ್ಮಕಶಬ್ದದ ಸಮನ್ವಯದಿಂದ ಸ್ಥಾನದ ಸಮನ್ವಯವು ಅರ್ಥಾತ್ ಸಿದ್ಧವಾಗುತ್ತದೆಂದು ಹೇಳಿದಿರಿ, ಹಾಗಾದರೆ ವಾಕ್ಯ, ಪ್ರಕರಣ, ಸಮಾಖ್ಯಾ ಇವುಗಳ ಸಮನ್ವಯವೂ ಸಹ ಅರ್ಥಾತ್ ಸಿದ್ಧವಾಗುವುದರಿಂದ ಅವುಗಳ ಸಮನ್ವಯವನ್ನೇಕೆ ಶ್ರೀಮದಾಚಾರ್ಯರು ಹೇಳಿರುವುದಿಲ್ಲ? ಈ ಪ್ರಶ್ನೆಗೆ 'ಸಿದ್ಧೇ ಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಸಃ' ಎಂಬ ಶಬ್ದಕ್ಕೆ ಸಮನ್ವಯವು ಎಂದರ್ಥ.



## ಸಾರ

ಈ ಸದಧಿಕರಣದಲ್ಲಿ 'ಸ್ಥಾನ' ಎಂಬುದರ ಸಮನ್ವಯವನ್ನು ಮಾಡುತ್ತಿದ್ದಾರೆ. ಬೇರೆ ಅಧಿಕರಣಗಳಲ್ಲಿಯೂ ಸಹ ಸ್ಥಾನದ ಸಮನ್ವಯವು ಇರುವಾಗ ಈ ಅಧಿಕರಣದಲ್ಲಿ ಮಾತ್ರ ಇದನ್ನು ಉಲ್ಲೇಖಿಸಲು ವಿಶೇಷ ಕಾರಣವಿದೆ. ಏನೆಂದರೆ ಸಮನ್ವಯ ಮಾಡುವಂತಹ 'ಸತ್' ಎಂಬ ಶಬ್ದದಿಂದಲೇ ಘಟಿತವಾದ ಅನೇಕ ಅವಾಂತರ ಪ್ರಕರಣಗಳಿವೆ. ಅವೆಲ್ಲವೂ ಭಗವಂತನ ಸೃಷ್ಟಿಕಾರಣತ್ವವನ್ನು ಪ್ರತಿಪಾದಿಸುತ್ತಿವೆ. ಅವುಗಳ ಸಮನ್ವಯದ ಸಿದ್ಧಿಗಾಗಿ ಇಲ್ಲಿ ಸ್ಥಾನದ ಸಮನ್ವಯವನ್ನು ಹೇಳಿದ್ದಾರೆ. ಆದರೆ ಬೇರೆ ಅಧಿಕರಣಗಳಲ್ಲಿ ಸಮನ್ವಯ ಮಾಡುವಂತಹ ಶಬ್ದದಿಂದಲೇ ಘಟಿತವಾದ ಅನೇಕ ಅವಾಂತರ ಪ್ರಕರಣಗಳಿರುವುದು ಕಾಣಸುವುದಿಲ್ಲ.

ಅಥವಾ ಸೃಷ್ಟಿಕಾರಣತ್ವವನ್ನು ಹೇಳುವ ಕೆಲವು ವಾಕ್ಯಗಳಲ್ಲಿ 'ಸತ್' ಎಂಬ ಶಬ್ದವಿರಬಹುದು. ಅದರಂತೆ ಇನ್ನೂ ಕೆಲವು ವಾಕ್ಯಗಳಲ್ಲಿ ಆತ್ಮಾ, ಬ್ರಹ್ಮ ಮೊದಲಾದ ಶಬ್ದಗಳಿರುತ್ತವೆ. ಅದೆಲ್ಲದರ ಸಮನ್ವಯದ ಸಿದ್ಧಿಗಾಗಿಯೂ ಸಹ ಸ್ಥಾನದ ಸಮನ್ವಯವನ್ನು ಇಲ್ಲಿ ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

ಹೀಗೆ ಸ್ಥಾನದ ಸಮನ್ವಯವು ಸಿದ್ಧವಾದ ಮೇಲೆ ತದೇಕದೇಶವೇ ಆಗಿರುವಂತಹ ಪ್ರಕರಣ ಹಾಗೂ ವಾಕ್ಯಗಳ ಸಮನ್ವಯವು ಸಹಜವಾಗಿ ಕೈಮುತ್ಯನ್ಯಾಯದಿಂದಲೇ ಸಿದ್ಧವಾಗುತ್ತದೆಂದು ಅವುಗಳ ಸಮನ್ವಯವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಆದ್ದರಿಂದ ಈ ಅಧಿಕರಣದಲ್ಲಿ 'ಸತ್' ಎಂಬ ಶ್ರುತಿಯ ಸಮನ್ವಯ ಹಾಗೂ ಜಗತ್ಕಾರಣತ್ವವೆಂಬ ಲಿಂಗದ ಸಮನ್ವಯ, (ಸಮಾಖ್ಯಾಪ್ರಮಾಣದ ಸಮನ್ವಯವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.) 'ಸತ್' ಶಬ್ದ ಘಟಿತವಾದ ವಾಕ್ಯದ ಸಮನ್ವಯ ಮತ್ತು ಅದರ ಪ್ರಕರಣದ ಸಮನ್ವಯ ಮತ್ತು ಸ್ಥಾನದ ಸಮನ್ವಯ. ಹೀಗೆ ಆಗಮನಿರ್ಣಾಯಕವಾದ ಆರೂವಿಧವಾದ ಲಿಂಗಗಳ ಸಮನ್ವಯವನ್ನು ಮಾಡಿದಂತಾಗುತ್ತದೆ. ಇಂತಹ ವೈಶಿಷ್ಟ್ಯವು ಈ ಅಧಿಕರಣಕ್ಕೆ ಮಾತ್ರ ಇರುವುದು ಎಂಬುದನ್ನು ಗಮನಿಸಬೇಕು.



## ಮೂರು ಬಗೆಯಲ್ಲಿ ಸಂಗತಿ ನಿರೂಪಣೆ

### तात्पर्यचन्द्रिका

**केचित्तु अनुव्याख्यानादौ स्थानपदं सृष्टिकालेऽवस्थानवाचीत्याहुः ।**

ಅನುವಾದ - ಕೆಲವರು (ನ್ಯಾಯವಿವರಣ ಟೀಕಾಕಾರರು) ಅನುವ್ಯಾಖ್ಯಾನದಲ್ಲಿರುವ 'ಸ್ಥಾನ' ಪದವು ಸೃಷ್ಟಿಕಾಲದಲ್ಲಿರುವ ಅವಸ್ಥಾನವನ್ನು ಹೇಳುತ್ತದೆಂದು ವ್ಯಾಖ್ಯಾನಿಸುತ್ತಾರೆ. ಸೃಷ್ಟಿಗೋಸ್ಕರ ಪರಮಾತ್ಮನು ಮೊದಲು ಇರುತ್ತಾನೆ. ಅಂತಹ ಪರಮಾತ್ಮನ ಇರುವಿಕೆಯನ್ನು 'ಸ್ಥಾನ' ಪದದಿಂದ ವಿವಕ್ಷಿಸಿದ್ದಾರೆಂಬುದು ಇವರ ಅಭಿಪ್ರಾಯ.

**तस्माद्युक्ता पादसङ्गतिः ।**

ಹೀಗೆ 'ಸತ್' ಎಂಬ ನಾಮಾತ್ಮಕ ಶಬ್ದದ ಸಮನ್ವಯವು ಈ ಅಧಿಕರಣದ ಉದ್ದೇಶವೆಂದು ಒಂದು ಬಗೆಯಲ್ಲಿ ವ್ಯಾಖ್ಯಾನಿಸಬಹುದು. ಅಥವಾ 'ಸ್ಥಾನ' ಎಂಬುದರ ಸಮನ್ವಯವೂ ಸಹ ಈ ಅಧಿಕರಣದ ಉದ್ದೇಶವಾಗಿದೆಯೆಂದು ವಿವಕ್ಷಿಸಬಹುದು. ಎರಡು ರೀತಿಯನ್ನು ಅನುಸರಿಸಿದಾಗಲೂ ಸದಧಿಕರಣಕ್ಕೆ ಉಭಯತ್ರಪ್ರಸಿದ್ಧ ಶಬ್ದಗಳ ಸಮನ್ವಯ ಪಾದದಲ್ಲಿ ಸಂಗತಿಯು ಯುಕ್ತವಾಗುತ್ತದೆ.

**पूर्वाधिकरणवैषम्यप्रदर्शनेन वा पूर्वाधिकरणसिद्धान्तन्यायेन वाऽम्बरान्तधृति-रूपपूर्वहेत्वाक्षेपेण वा पूर्वपक्षोत्थानादवान्तरसङ्गतिः ।**

ಅಥವಾ ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ವಿಭಿನ್ನವಾದ ಪೂರ್ವಪಕ್ಷವನ್ನು ತೋರಿಸುತ್ತಿರುವುದರಿಂದ.

ಅಥವಾ ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದಿಂದಲೇ ಈ ಅಧಿಕರಣದ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ

ಅಥವಾ ಅಂಬರಾಂತಧಾರಕತ್ವವೆಂಬ ಹಿಂದಿನ ಅಧಿಕರಣದ ಸಿದ್ಧಾಂತ ಹೇತುವನ್ನು ಆಕ್ಷೇಪ ಮಾಡುವ ಮೂಲಕ ಈ ಅಧಿಕರಣದ ಪೂರ್ವಪಕ್ಷವು ಹುಟ್ಟುತ್ತಿದೆ. ಆದ್ದರಿಂದ ಅವ್ಯವಹಿತವಾದ ಹಿಂದಿನ ಅಕ್ಷರಾಧಿಕರಣದಿಂದ ಈ ಅಧಿಕರಣಕ್ಕೆ ಅವಾಂತರ ಸಂಗತಿಯು ಇರುತ್ತದೆಂದು ತಿಳಿಯಬೇಕು.

**त्रेधा पूर्वपक्षोत्थानं चानन्तरमेव दर्शयिष्यते ।**

ಮೂರು ಬಗೆಯ ಸಂಗತಿಯನ್ನು ತಿಳಿಯಬೇಕೆಂದರೆ, ಮೂರು ಬಗೆಯಲ್ಲಿ ಪೂರ್ವಪಕ್ಷವು ಹೇಗೆ ಹುಟ್ಟುತ್ತದೆಂಬುದನ್ನು ಸ್ಪಷ್ಟವಾಗಿ ತಿಳಿಯಬೇಕಾಗುತ್ತದೆ. ಅದನ್ನು ಈ ಮುಂದೆ ನಿರೂಪಣೆ ಮಾಡಲಾಗುತ್ತದೆ.

**प्रकाशः –**

''सदेव सोम्येत्यादिना प्रतिपादितं सृष्ट्यर्थं प्रलये प्रथममवस्थानमित्येके वर्णयन्ति । एवं तर्हि विषयमालायां लिङ्गमित्येव वक्तव्यम् । सत्यम् । विशेषतस्तदेव प्रदर्शितमित्यदोषः'' इति न्यायविवरणटीकोक्तं पक्षान्तरमाह – **केचित्त्विति ।।**

ವಿವರಣೆ - ನ್ಯಾಯವಿವರಣ ಟೀಕೆಯಲ್ಲಿ 'ಸ್ಥಾನ' ಶಬ್ದಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ - 'ಸದೇವ ಸೋಮ್ಯ ಇತ್ಯಾದಿನಾ ಪ್ರತಿಪಾದಿತಂ ಸೃಷ್ಟ್ಯರ್ಥಂ ಪ್ರಲಯೇ ಪ್ರಥಮಮವಸ್ಥಾನಮಿತ್ಯೇಕೇ ವರ್ಣಯಂತಿ । ಏವಂ ತರ್ಹಿ ವಿಷಯಮಾಲಾಯಾಂ ಲಿಂಗಮಿತ್ಯೇವ ವಕ್ತವ್ಯಮ್ । ಸತ್ಯಮ್ । ವಿಶೇಷತಸ್ತದೇವ ಪ್ರದರ್ಶಿತಮಿತ್ಯದೋಷಃ' '''ಸದೇವ ಸೌಮ್ಯ' ಇತ್ಯಾದಿ ವಾಕ್ಯದಿಂದ ಭಗವಂತನು ಸೃಷ್ಟಿಗೋಸ್ಕರ ಪ್ರಳಯ ಕಾಲದಲ್ಲಿ ಇರುತ್ತಾನೆಂದು ತಿಳಿಯುತ್ತದೆ. ಇಂತಹ ಭಗವಂತನ ಇರುವಿಕೆಯನ್ನೇ 'ಸ್ಥಾನ' ಶಬ್ದವು ಹೇಳುತ್ತಿದೆಯೆಂದು ಕೆಲವರು ವರ್ಣಿಸುತ್ತಾರೆ. ಹಾಗಾದರೆ ಅನುವ್ಯಾಖ್ಯಾನದ ವಿಷಯಮಾಲೆಯಲ್ಲಿ 'ಪ್ರಥಮಮವಸ್ಥಾನ' ಎಂಬ ಲಿಂಗದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆಯೆಂದು ಹೇಳಬಹುದಿತ್ತಲ್ಲವೇ? ಹೌದು, ಆದರೆ ಯಾವ ಲಿಂಗವೆಂದು ಶೃಂಗಗ್ರಾಹಿಕತಯಾ ಲಿಂಗವನ್ನು ತೋರಿಸುವುದಕ್ಕಾಗಿ 'ಸ್ಥಾನಮ್' ಎಂಬ ಪದವನ್ನು ಬಳಸಿದ್ದಾರೆ''. ಹೀಗೆ ನ್ಯಾಯವಿವರಣ ಟೀಕೆಯಲ್ಲಿ ಹೇಳಿರುತ್ತಾರೆ. ಇದನ್ನೇ ಗ್ರಂಥಕಾರರು 'ಕೇಚಿತ್ತು' ಎಂಬುದಾಗಿ ಉಲ್ಲೇಖಿಸುತ್ತಿದ್ದಾರೆ.

**प्रकाशः –** अत एव ''तत्रान्यत्रप्रसिद्धानां लिङ्गनाम्नां पुनर्हरिः'' इत्यनुव्याख्याने लिङ्गेत्येवोक्तिरिति भावः ।

ನ್ಯಾಯವಿವರಣ ಟೀಕೆಯ ಈ ಅಭಿಪ್ರಾಯವು ಸಾಧುವಾಗಿರುವುದರಿಂದಲೇ 'ತತ್ರಾನ್ಯತ್ರಪ್ರಸಿದ್ಧಾನಾಂ ಲಿಂಗನಾಮ್ನಾಂ ಪುನರ್ಹರಿಃ' ಎಂಬ ಅನುವ್ಯಾಖ್ಯಾನದಲ್ಲಿ 'ಲಿಂಗ' ಎಂದಷ್ಟೇ ಹೇಳಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿ ಪ್ರಳಯಕಾಲದಲ್ಲಿ ಭಗವಂತನ ಅವಸ್ಥಾನ ಎಂಬ ಲಿಂಗದ ಸಮನ್ವಯವನ್ನು ಮಾಡುತ್ತಿದ್ದಾರೆಂದು ತಿಳಿಯಬೇಕು.

**प्रकाशः** – एवमन्तर्भावसङ्गतिपरटीकायामुपपादनसापेक्षपादान्तर्भावांशं समर्थ्येदानीं ''जन्माद्यस्य यतः'' इत्यादिटीका फलपरेति भावेन पूर्वानन्तर्ये सङ्गतित्रयमाह – **पूर्वेति** ।। प्रत्युदाहरणरूपा वाऽपवादरूपा वाऽऽक्षेपिकी वेत्यर्थः ।

ಇಲ್ಲಿಯ ತನಕ ಅಂತರ್ಭಾವಸಂಗತಿಯನ್ನು ಹೇಳುವ ಟೀಕೆಯಲ್ಲಿ ಯಾವ ಭಾಗವನ್ನು ಉಪಪಾದಿಸಬೇಕೋ, ಅಂತಹ ಪಾದಾಂತರ್ಭಾವಸಂಗತಿಯ ಅಂಶವನ್ನು ಸಮರ್ಥಿಸಿದರು. ಈಗ 'ಜನ್ಮಾದ್ಯಸ್ಯ ಯತಃ' ಇತ್ಯಾದಿ ಟೀಕೆಯಲ್ಲಿ ಈ ಸದಧಿಕರಣಕ್ಕೆ ಜನ್ಮಾಧಿಕರಣದಿಂದ ಸಂಗತಿಯನ್ನು ಹೇಳಿದಂತೆ ಕಾಣಿಸುತ್ತದೆ. ಆದರೆ, ಅದು ಕೇವಲ ಜನ್ಮಾಧಿಕರಣದ ಫಲವನ್ನಷ್ಟೇ ತೋರಿಸಲು ಹೊರಟಿದೆ ಎಂಬ ಅಭಿಪ್ರಾಯದಿಂದ ಹಿಂದಿನ ಅಕ್ಷರಾಧಿಕರಣದಿಂದ ಈ ಅಧಿಕರಣಕ್ಕಿರುವ ಆನಂತರ್ಯಸಂಗತಿಯನ್ನು ಮೂರು ಬಗೆಯಲ್ಲಿ ತೋರಿಸುತ್ತಿದ್ದಾರೆ 'ಪೂರ್ವ' ಇತ್ಯಾದಿ ವಾಕ್ಯದಿಂದ. ಪ್ರತ್ಯುದಾಹರಣ, ಅಪವಾದ ಮತ್ತು ಆಕ್ಷೇಪಿಕೀ ಎಂಬುದಾಗಿ ಮೂರು ಬಗೆಯಲ್ಲಿ ಸಂಗತಿಗಳನ್ನು ನಿರೂಪಿಸಿದ್ದಾರೆಂದು ತಿಳಿಯಬೇಕು.

**प्रकाशः** – एतेन –

''अम्बरावधिकाधारात् प्रणवः पर्युदासितः ।
तद्ध्येयमपरं किं वा परमित्यत्र चिन्त्यते ।।
इति बुद्धिसङ्गतिः''

इति कल्पतरूक्तं निरस्तम् ।

ಹೀಗೆ ಸಂಗತಿಯನ್ನು ತೋರಿಸಿದ್ದರಿಂದ ಕಲ್ಪತರುಕಾರನಿಂದ ಹೇಳಲ್ಪಟ್ಟ ಸಂಗತಿಯನ್ನು ನಿರಾಕರಿಸಿದಂತಾಯಿತು.

ಕಲ್ಪತರು ಗ್ರಂಥದಲ್ಲಿ ಸಂಗತಿಯನ್ನು ಹೀಗೆ ನಿರೂಪಿಸಲಾಗಿದೆ.

'ಅಂಬರಾವಧಿಕಾಧಾರಾತ್ ಪ್ರಣವಃ ಪರ್ಯುದಾಸಿತಃ।
ತದ್ಧ್ಯೇಯಮಪರಂ ಕಿಂ ವಾ ಪರಮಿತ್ಯತ್ರ ಚಿಂತ್ಯತೇ ॥
ಇತಿ ಬುದ್ಧಿಸಂಗತಿಃ'

'ಹಿಂದಿನ ಅಧಿಕರಣದಲ್ಲಿ ಅಂಬರಾಂತ ಧಾರಕತ್ವವು ಪ್ರಣವದಲ್ಲಿ ಇರುವುದಿಲ್ಲವೆಂದು ನಿರಾಕರಿಸಲಾಯಿತು. ಅಂತಹ ಅಂಬರಾಂತಧಾರಕತ್ವವು ಧ್ಯೇಯನಾದ ಅಪರಬ್ರಹ್ಮನಲ್ಲಿ ಇದೆಯೋ, ಅಥವಾ

ಪರಬ್ರಹ್ಮನಲ್ಲಿ ಇದೆಯೋ ಎಂದು ವಿಚಾರ ಮಾಡಲಾಗಿದೆ. ಆದ್ದರಿಂದ ಬುದ್ಧಿಸಂಗತಿಯನ್ನು ಹಿಗೆ ತಿಳಿಯಬೇಕು'.

**प्रकाशः** – पूर्वत्र द्रष्टृत्वाद्ययोगेन वर्णपक्षस्य प्रत्याख्याततया बुद्धिसन्निध्यभावाद् भामत्यादौ वर्णमात्रस्यैव पर्युदस्तत्वेन विशिष्य प्रणवपर्युदासाभावाच्च ।

ಈ ಸಂಗತಿಯು ಸರಿಯಲ್ಲ. ಏಕೆಂದರೆ ನಾವು ಹಿಂದಿನ ಅಧಿಕರಣದಲ್ಲಿಯೇ ಜಡಭೂತವಾದ ಪ್ರಣವದಲ್ಲಿ ದ್ರಷ್ಟುತ್ವಾದಿಗಳು ಅಯುಕ್ತವಾಗುತ್ತವೆಂದು ನಿರಾಕರಿಸಿದ್ದೇವೆ. ಮತ್ತು ಭಾಮತಿಯಲ್ಲಿ ಪ್ರಣವವು ಬುದ್ಧಿಯಲ್ಲಿ ಸನ್ನಿಹಿತವಾಗದ ಕಾರಣ ಕೇವಲವರ್ಣಗಳನ್ನೇ ಪೂರ್ವಪಕ್ಷಕ್ಕೆ ವಿಷಯವನ್ನಾಗಿ ಸ್ವೀಕರಿಸಿ ನಿರಾಕರಿಸಲಾಗಿದೆ. ಹೀಗಿರುವಾಗ ಕಲ್ಪತರುವಿನಲ್ಲಿ ಹೇಳಲ್ಪಟ್ಟ ಪ್ರಣವಕ್ಕೆ ಅಂಬರಾಂತಧಾರಕತ್ವವಿಲ್ಲವೆಂಬ ನಿರಾಕರಣೆಯೇ ತಪ್ಪಾಗುತ್ತದೆ. ಅಂದರೆ ಓಂಕಾರವು ಅಂಬರಾಂತಧಾರಕವಾಗಿದೆಯೆಂಬ ಪೂರ್ವಪಕ್ಷವು ಹುಟ್ಟಲು ಸಾಧ್ಯವೇ ಇಲ್ಲವೆಂದು ಅಭಿಪ್ರಾಯ.

**प्रकाशः** – परात्परत्वरूपलिङ्गत्यागेन सूत्र ईक्षतिकर्मत्वोक्त्या ''त्रिमात्रेण ओमित्यनेन'' इत्युदाहरणस्य सूत्राननुगुणतयाऽन्यस्यैवात्र विषयत्वाच्चेति ।

ಮತ್ತು ಪರಾತ್ಪರತ್ವವೆಂಬ ಲಿಂಗವು ಮೊದಲೇ ಕೇಳಿಸುತ್ತಿರುವಾಗ ಅದನ್ನು ಬಿಟ್ಟು ಸೂತ್ರದಲ್ಲಿ ಈಕ್ಷತಿಕರ್ಮತ್ವವನ್ನು ಹೇಳಿದ ಕಾರಣ 'ತ್ರಿಮಾತ್ರೇಣ ಓಮಿತ್ಯನೇನ' ಎಂಬ ವಾಕ್ಯವನ್ನು ಉದಾಹರಿಸಿದರೆ, ಇದು ಸೂತ್ರಕ್ಕೆ ಅನನುಗುಣವಾಗಿ ಇರುವುದರಿಂದ ಈ ವಿಷಯವಾಕ್ಯವನ್ನು ವ್ಯಾಖ್ಯಾನಿಸುವುದು ತಪ್ಪಾಗುತ್ತದೆ. ಆದ್ದರಿಂದ ಬೇರೆ ವಿಷಯವಾಕ್ಯವನ್ನೇ ಕಲ್ಪತರುಕಾರರು ಹೇಳಬೇಕಾಗುತ್ತದೆ.




ನ್ಯಾಯವಿವರಣ ಟೀಕೆಯಲ್ಲಿ 'ಸ್ಥಾನ' ಪದಕ್ಕೆ 'ಸೃಷ್ಟಿಗೋಸ್ಕರ ಪ್ರಳಯಕಾಲದಲ್ಲಿರುವಿಕೆ' ಎಂಬ ಲಿಂಗದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆಯೆಂದು ವ್ಯಾಖ್ಯಾನಿಸಿದ್ದಾರೆ. ಇಲ್ಲಿಯ ತನಕ 'ಸ್ಥಾನ' ಶಬ್ದಕ್ಕೆ ಶ್ರುತಿಯ ನಿರ್ಣಾಯಕವಾದ ಷಡ್ವಿಧ ತಾತ್ಪರ್ಯಲಿಂಗಗಳ ನಡುವೆ ಇರುವ ಸ್ಥಾನದ ಸಮನ್ವಯವೆಂದು ನಿರೂಪಣೆ ಮಾಡಲಾಯಿತು. ಆದರೆ ಈಗ 'ಸ್ಥಾನ' ಶಬ್ದಕ್ಕೆ ಇರುವಿಕೆ ಎಂಬ ಲಿಂಗದ ಸಮನ್ವಯವೆಂಬ ಅಭಿಪ್ರಾಯವನ್ನು ವಿವಕ್ಷಿಸಿದ್ದಾರೆ. ಸ್ಥಾನದ ಸಮನ್ವಯವಾಗಲೀ, ಅಥವಾ ಲಿಂಗದ ಸಮನ್ವಯವಾಗಲೀ ಈ ಅಧಿಕರಣದಲ್ಲಿ ಮಾಡಿದರೂ ಸಹ ಪಾದಸಂಗತಿಯಿರುತ್ತದೆಂಬುದನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ವಿಭಿನ್ನವಾದ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಪ್ರತ್ಯುದಾಹರಣ ಸಂಗತಿಯನ್ನು, ಹಿಂದಿನ ಅಧಿಕರಣದ ಸಿದ್ಧಾಂತವನ್ನೇ ಅವಲಂಬಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಪವಾದಕೀ ಸಂಗತಿಯನ್ನು ಹಿಂದಿನ ಅಧಿಕರಣದ ಸಿದ್ಧಾಂತ ಹೇತುವನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಕ್ಷೇಪಿಕೀ ಸಂಗತಿಯನ್ನೂ ತಿಳಿಯಬೇಕು. ಮುಂದೆ ಮೂರು ಬಗೆಯ ಪೂರ್ವಪಕ್ಷಗಳನ್ನು ವಿವರಣೆ ಮಾಡಿದಾಗ ಸ್ಪಷ್ಟವಾಗುತ್ತವೆ.



## ಸಂಶಯ ಪರಂಪರೆ

### तात्पर्यचन्द्रिका

**अत्र ''सदेव सोम्येदमग्र आसीत्'' इति श्रुतं सत् किं जडप्रकृतिः किं वा ब्रह्मेति चिन्ता ।**

ಅನುವಾದ - ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ - 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ 'ಸತ್' ಶಬ್ದವು ಜಡಪ್ರಕೃತಿಯನ್ನು ಹೇಳುತ್ತದೋ? ಅಥವಾ ಬ್ರಹ್ಮನನ್ನೋ ? ಎಂದು ಸಂಶಯ.

**तदर्थं ''तदैक्षत'' इति श्रुतं सत ईक्षणं किं गौणं किं वा मुख्यमिति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ 'ತದೈಕ್ಷತ' ಎಂಬಲ್ಲಿ ಶ್ರುತವಾದ 'ಸತ್' ಪದಾರ್ಥದಲ್ಲಿರುವ ಈಕ್ಷಣವು ಗೌಣವೋ, ಅಥವಾ ಮುಖ್ಯವೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''बहु स्याम्'' इत्युक्तो बहुभावः किं विकारः किं वा स्वरूपबहुत्वमिति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ 'ಬಹು ಸ್ಯಾಮ್' ಎಂಬಲ್ಲಿ ಶ್ರುತವಾದ 'ಬಹುಭವನವು' ವಿಕಾರಸ್ವರೂಪವೋ, ಅಥವಾ 'ಸ್ವರೂಪವೇ ಬಹುವಾಗಿದೆ' ಎಂದೋ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

''तत्सदत्र विषयः'' इत्यादिविषयसंशयटीकां व्यनक्ति – **अत्रेति** ।।

**ವಿವರಣೆ** - 'ತತ್‌ಸದತ್ರ ವಿಷಯಃ' ಇತ್ಯಾದಿ ಟೀಕೆಯು ವಿಷಯ ಹಾಗೂ ಸಂಶಯವನ್ನು ನಿರೂಪಣೆ ಮಾಡುತ್ತಿದೆ. ಅದನ್ನೇ ಗ್ರಂಥಕಾರರು 'ಅತ್ರ' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – **छान्दोग्ये षष्ठेऽध्याये ''सदेव सोम्येदमग्र आसीदेकमेवाद्वितीयम्'' इत्युपक्रम्य ''तदैक्षत बहुस्यां प्रजायेयेति । तत्तेजोऽसृजत'' इत्यादि श्रूयते । तत्रत्यसच्छब्दो विषय इत्यर्थः ।**

ಛಾಂದೋಗ್ಯದ ಆರನೇ ಅಧ್ಯಾಯದಲ್ಲಿ 'ಸದೇವ ಸೋಮ್ಯ ಇದಮಗ್ರ ಆಸೀತ್ ಏಕಮೇವಾ-ದ್ವಿತೀಯಮ್' ಎಂದು ಪ್ರಾರಂಭವಾಗುವ ಪ್ರಕರಣವು, 'ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ । ತತ್ತೇಜೋಽಸೃಜತ' ಇತ್ಯಾದಿಯಾಗಿ ಮುಂದುವರೆಯುತ್ತದೆ. ಇಲ್ಲಿರುವ 'ಸತ್' ಎಂಬ ಶಬ್ದವೇ ಈ ಅಧಿಕರಣಕ್ಕೆ ವಿಷಯವಾಗಿದೆಯೆಂದು ತಿಳಿಯಬೇಕು.

**प्रकाशः** – **यदि विकारस्तदा बहुभावाद्बाधकादीक्षणं गौणमिति जडप्रकृतिरिति सिध्यति । अन्यथा तु विष्णुरिति स्पष्टमिति भावः ।**

ಸಂಶಯವನ್ನು ಸ್ಪಷ್ಟವಾಗಿ ಗ್ರಂಥಕಾರರೇ ತೋರಿಸಿದ್ದಾರೆ. ಒಂದು ವೇಳೆ ಬಹುಭಾವವು ವಿಕಾರಸ್ವರೂಪವಾದರೆ, ಈಕ್ಷಣವನ್ನು ಗೌಣಮಾಡಬಹುದು. ಆವಾಗ ಜಡಪ್ರಕೃತಿಯೇ 'ಸತ್' ಶಬ್ದದಿಂದ ವಾಚ್ಯವಾಗುತ್ತದೆಂಬುದು ಪೂರ್ವಪಕ್ಷಕಾರರ ಗುರಿ. ಒಂದು ವೇಳೆ ಬಹುಭವನವು ಸ್ವರೂಪತಃ ಬಹುಭಾವರೂಪವಾದದ್ದೆಂದು ಹೇಳಿದರೆ ಈಕ್ಷಣವನ್ನು ಮುಖ್ಯವಾಗಿ ವಿವಕ್ಷಿಸಬಹುದು. ಆವಾಗ ಮಹಾವಿಷ್ಣುವೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತಿಗಳ ಗುರಿ.

ಪಾಂಡುರಂಗಿಕೇಶವಾಚಾರ್ಯವಿರಚಿತ

# ಗುರುರಾಜೀಯಮ್ (ಭಾವದೀಪ)

**गुरुराजीयम्** – **ॐ ईक्षतिकर्मव्यपदेशात्सः ॐ** ।। ननु न्यायविवरणादौ सच्छब्दस्य कारणत्वमुखेनोभयत्रप्रसिद्धिव्युत्पादनं व्यर्थम् । अबाध्यत्ववाचिसच्छब्दस्य कारणत्वमुखनिरपेक्षस्यैवोभयत्र प्रसिद्धत्वादित्याशङ्क्ते – **यद्यपीति** ।। ननु नात्राबाध्यत्वं सच्छब्दप्रवृत्तिनिमित्तम् । किन्तु निर्दोषत्वमेव । तस्य स्वत एवोभयत्र प्रसिद्ध्यभावात् कारणत्वमुखेनोभयत्रप्रसिद्धिव्युत्पादनं सार्थकमित्यत आह – **निर्दोषत्ववाचीति** ।। **अन्यत्राप्यस्तीति** ।। तथाच संशयकोटिद्वयमात्रसाधारण्या-भावान्न तेन रूपेणोभयत्रप्रसिद्धतेति भावः । ननु कारणत्वमुखेन सच्छब्दस्योभयत्र-प्रसिद्धत्वे ''इति होवाच'' इति वाक्योक्तकारणत्वस्यापि प्रसिद्धाकाशब्रह्म-

साधारण्यादाकाशशब्दस्योभयत्रप्रसिद्धत्वापत्त्याऽन्यत्रप्रसिद्धसमन्वयप्रतिपादकपादे निवेशो न स्यादित्यत आह – **यद्यपीति** ।। नन्वेवम् 'इक्षतिकर्म' इत्यत्र स्थानसमन्वयप्रतिपादकत्वे भाष्ये सच्छब्दोक्तिरयुक्तेत्यत आह – **भाष्य इति** ।। ननु तथाप्यत्र स्थानसमन्वयो वक्तुं न शक्यते । अनुव्याख्यान एतत्पादार्थोक्तिदशायां लिङ्गनाम्नां समन्वयस्य प्रतिज्ञातत्वेनावस्थानसमयस्य व्यवच्छेदितत्वादित्यत आह – **अनुव्याख्यान इति** ।। ननु 'लिङ्गनाम्नाम्' इत्यनेन केवलनाम्नः केवललिङ्गस्य च समन्वयव्यवच्छेदवत् स्थानसमन्वयव्यवच्छेदोऽपि विवक्षितुं शक्य एव । अन्यथा नामलिङ्गादावपि सङ्कोचः स्यादित्यरुचेराह – **स्थानसमन्वयस्येति** ।। ननु ज्योतिरादौ ज्योतिरादिशब्देन तत्सूक्तानां तत्प्रकरणानां च ब्रह्मपरत्वस्य साधितत्वात्कथमन्यलिङ्गनाम्नोरेकैकस्यैव समन्वय इत्युच्यत इत्यत आह – **एवञ्चेति** ।। ननु प्रधानातिक्रमे कारणाभावात् ज्योतिरधिकरण एव वक्तव्यमेतदित्यरुच्याऽऽह – **यद्वेति** ।। आहुरित्यस्वरसोद्भावनम् । तद्बीजं तु सृष्टिकालेऽवस्थानमदृष्ट-प्रकृत्यादिसाधारणम् ।।




ಈ ಅಧಿಕರಣಕ್ಕೆ ಛಾಂದೋಗ್ಯದ ಆರನೇ ಅಧ್ಯಾಯದಲ್ಲಿರುವ 'ಸದೇವ ಸೋಮ್ಯ ಇದಮಗ್ರ ಆಸೀತ್' ಇತ್ಯಾದಿ ಸಮಸ್ತ ಪ್ರಕರಣವೇ ವಿಷಯವಾಗಿದೆ. ಅಲ್ಲಿ ಮುಖ್ಯವಾಗಿರುವ 'ಸತ್' ಎಂಬ ಶಬ್ದವನ್ನು ವಿಶೇಷವಾಗಿ ಉಲ್ಲೇಖಿಸಿ ಸಮನ್ವಯ ಮಾಡಲು ಹೊರಟಿದ್ದಾರೆ.

'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿ 'ಸತ್' ಪದಾರ್ಥಕ್ಕೆ ಬಹುಭವನವು ಶ್ರುತವಾಗಿದೆ. ಬಹುಭವನವೆಂದರೆ 'ವಿಕಾರ' ಎಂದು ಒಪ್ಪಬೇಕಾದ್ದರಿಂದ 'ತದೈಕ್ಷತ' ಎಂಬ ಶ್ರುತಿಯಲ್ಲಿರುವ ಈಕ್ಷಿತೃತ್ವವನ್ನು ಗೌಣವನ್ನಾಗಿ ವಿವಕ್ಷಿಸಬೇಕು. ಆವಾಗ ಜಡಪ್ರಕೃತಿಯೇ 'ಸತ್' ಶಬ್ದದಿಂದ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷಕಾರರ ಧೋರಣೆ.

'ಸತ್' ಪದಾರ್ಥಕ್ಕೆ ಶ್ರುತವಾದ ಬಹುಭವನವು ಸ್ವರೂಪತಃ ಬಹುಭಾವವನ್ನೇ ಹೇಳುತ್ತಿದೆ. ಭಗವಂತನಿಗೆ ಸ್ವರೂಪತಃ ಅನೇಕ ರೂಪಗಳು ಇರುವುದರಿಂದ 'ತದೈಕ್ಷತ' ಎಂಬಲ್ಲಿರುವ ಈಕ್ಷಿತೃತ್ವವನ್ನು ಗೌಣವನ್ನಾಗಿ ವಿವಕ್ಷಿಸಬೇಕಾಗಿಲ್ಲ. ಆದ್ದರಿಂದ 'ಸತ್' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂಬುದು ಸಿದ್ಧಾಂತಿಗಳ ವಿಚಾರ ಧಾರೆ.



● ● ● ● ●

## 'ಸತ್' ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु । इदं सत्प्रधानमेव । नतु ब्रह्म । ''बहु स्यां प्रजायेय'' इति सति श्रुतस्य विकारस्य निर्विकारे ब्रह्मणि विरोधात् ।**

ಅನುವಾದ - ಅಧಿಕರಣದ ಪೂರ್ವಪಕ್ಷ ಹೀಗಿದೆ - ಶ್ರುತಿಯಲ್ಲಿರುವ 'ಸತ್' ಎಂಬ ಪದವು ಪ್ರಧಾನವನ್ನೇ ಪ್ರತಿಪಾದಿಸುತ್ತಿದೆ ಹೊರತು, ಬ್ರಹ್ಮನನ್ನಲ್ಲ. ಏಕೆಂದರೆ 'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯು ಯಾವುದು 'ಸತ್' ಪದ ಪ್ರತಿಪಾದ್ಯವೋ, ಅದು ವಿಕಾರವುಳ್ಳದ್ದೆಂದು ಹೇಳುತ್ತಿದೆ. ಬ್ರಹ್ಮನಿಗೆ ಯಾವುದೇ ವಿಕಾರವಿಲ್ಲದ ಕಾರಣ 'ಸತ್' ಪದದಿಂದ ಬ್ರಹ್ಮನು ಪ್ರತಿಪಾದ್ಯನಾಗಲಾರನು.

**युक्तो हि भूमगतयोरुत्क्रमणसर्वगतत्वयोरविरोधः । तयोः प्रतियोग्यनुयोगिभावाभावात् ।**

ವಿಕಾರ ಹಾಗೂ ವಿಕಾರಾಭಾವಗಳಿಗೆ ಬರುತ್ತಿರುವ ವಿರೋಧವನ್ನು ಪರಿಹರಿಸಲು ನಿಮ್ಮಿಂದ ಸಾಧ್ಯವೇ ಇಲ್ಲ. ಹಿಂದಿನ ಅಧಿಕರಣಗಳಲ್ಲಿ ಪ್ರಾಪ್ತವಾದಂತಹ ವಿರೋಧವನ್ನು ಕಥಂಚಿತ್ ಪರಿಹರಿಸಿದಿರಿ. ಉದಾ: - ಒಬ್ಬನೇ ಭೂಮನಲ್ಲಿ ಉತ್ಕ್ರಮಣ ಹಾಗೂ ಸರ್ವಗತತ್ವಗಳು ಶ್ರುತವಾಗಿವೆ. ಆದರೆ ಇವೆರಡಕ್ಕೆ ಪ್ರತಿಯೋಗಿಭಾವ-ಅನುಯೋಗಿಭಾವ ಇರುವುದಿಲ್ಲ. ಅಂದರೆ ಉತ್ಕ್ರಮಣಾಭಾವವನ್ನೇ ಸರ್ವಗತತ್ವವೆಂದಾಗಲೀ, ಸರ್ವಗತತ್ವದ ಅಭಾವವನ್ನೇ ಉತ್ಕ್ರಮಣವೆಂದಾಗಲೀ ಹೇಳಲು ಸಾಧ್ಯವಿಲ್ಲ. ಹೀಗೆ ಪ್ರತಿಯೋಗಿ-ಅನುಯೋಗಿಭಾವವಿಲ್ಲದ ಕಾರಣ ವಿರೋಧವನ್ನು ನೀವು ಪರಿಹರಿಸಿದ್ದು ಯುಕ್ತವಾಗುತ್ತದೆ.

**युक्तश्चाक्षरधर्मयोर्महत्त्वाणुत्वयोरप्यविरोधः । तयोः प्रतियोग्यनुयोगिभावेऽपि भावरूपत्वेन भावाभावरूपत्वाभावात् ।**

ಅಕ್ಷರಾಧಿಕರಣದಲ್ಲಿ ಮಹತ್ತ್ವ ಹಾಗೂ ಅಣುತ್ವಗಳಿಗೆ ವಿರೋಧವನ್ನು ಪರಿಹರಿಸಿದ್ದೂ ಸಹ ತಪ್ಪಲ್ಲ. ಏಕೆಂದರೆ ಅಣುತ್ವ ಹಾಗೂ ಮಹತ್ತ್ವಗಳಿಗೆ ಪ್ರತಿಯೋಗಿ-ಅನುಯೋಗಿ ಭಾವಗಳಿದ್ದರೂ ಎರಡೂ ಭಾವರೂಪವೇ ಆಗಿರುವುದರಿಂದ ಭಾವಾಭಾವರೂಪತ್ವವು ಇರುವುದಿಲ್ಲ. ಒಂದು ವೇಳೆ ಭಾವಾಭಾವರೂಪಗಳಾಗಿದ್ದು ಪ್ರತಿಯೋಗಿ-ಅನುಯೋಗಿ ಭಾವವೂ ಸಹ ಇದ್ದಲ್ಲಿ ವಿರೋಧವನ್ನು ಹೇಳಬಹುದಿತ್ತು.

**युक्तश्च तद्धर्मयोरेव स्थौल्याभावाणुत्वाभावयोरविरोधः । तयोरप्यभावरूपत्वेन भावाभावरूपत्वाभावात् ।**

ಮತ್ತು ಪರಮಾತ್ಮನ ಧರ್ಮವೇ ಆಗಿರುವ ಸ್ಥೂಲತ್ವಾಭಾವ-ಅಣುತ್ವಾಭಾವಗಳ ಅವಿರೋಧವೂ ಸಹ ತಪ್ಪಲ್ಲ. ಏಕೆಂದರೆ ಎರಡೂ ಸಹ ಅಭಾವರೂಪಧರ್ಮಗಳೇ ಆಗಿರುವುದರಿಂದ ಭಾವಾಭಾವರೂಪತ್ವವು ಇರುವುದಿಲ್ಲ. ಇವುಗಳಿಗೂ ಸಹ ವಿರೋಧವು ಬರುವುದಿಲ್ಲ.

**युक्तश्च तद्धर्मयोरेवात्तृत्वानशनयोरप्यविरोधः । तयोर्भावाभावरूपत्वेऽप्यनशनस्यात्तृत्वविशेषाभावरूपत्वेनात्तृत्वसामान्याभावरूपत्वाभावात् । विशेषाभावसामान्ययोश्चाविरोधात् ।**

ಮತ್ತು ಅತ್ತೃತ್ವಾಧಿಕರಣದಲ್ಲಿ ಪರಮಾತ್ಮನ ಧರ್ಮವೇ ಆಗಿರುವ ಅತ್ತೃತ್ವ ಹಾಗೂ ಅನಶನಗಳ ವಿರೋಧಕ್ಕೂ ಅವಕಾಶವಿಲ್ಲವೆನ್ನಬಹುದು. ಏಕೆಂದರೆ ಅತ್ತೃತ್ವ ಹಾಗೂ ಅನಶನಗಳಿಗೆ ಭಾವಾಭಾವರೂಪತ್ವವಿದ್ದರೂ ಸಹ ಅನಶನವು ಅತ್ತೃತ್ವವಿಶೇಷಾಭಾವರೂಪವೇ ಆಗಿದೆ ಹೊರತು, ಅತ್ತೃತ್ವಸಾಮಾನ್ಯಾಭಾವರೂಪವಾಗಿಲ್ಲ. ಅತ್ತೃತ್ವಸಾಮಾನ್ಯಾಭಾವರೂಪವೇ ಅನಶನವಾಗಿದ್ದಲ್ಲಿ, ಅತ್ತೃತ್ವಸಾಮಾನ್ಯದಿಂದ ವಿರೋಧವು ಬರುತ್ತಿತ್ತು. ಏಕೆಂದರೆ ವಿಶೇಷಾಭಾವಕ್ಕೂ ಸಾಮಾನ್ಯಕ್ಕೂ ವಿರೋಧವಿರುವುದಿಲ್ಲ. (ಭೂತಲದಲ್ಲಿ ಪೀತಘಟವು ಇದ್ದಾಗ, ನೀಲಘಟಾಭಾವವನ್ನು ಹೇಳಬಹುದು.)

**इह तु ''बहु स्याम्'' इति श्रुतेन विकारेण ''निर्विकारः सदा शुद्धः'' इत्यादौ श्रुतस्य विकाराभावस्याविरोधो न युक्तः । तस्य विकारसामान्याभावरूपत्वात् । सामान्याभावविशेषयोश्च विरोधात् ।**

ಪ್ರಕೃತ 'ಬಹು ಸ್ಯಾಮ್' ಇತ್ಯಾದಿ ಶ್ರುತಿಯಿಂದ ವಿಕಾರವು ಕೇಳಿಸುತ್ತಿದೆ. 'ನಿರ್ವಿಕಾರಃ ಸದಾ ಶುದ್ಧಃ' ಇತ್ಯಾದಿ ವಾಕ್ಯದಿಂದ ವಿಕಾರಾಭಾವವೂ ಸಹ ಕೇಳಿಸುತ್ತಿದೆ. ಈ ವಿಕಾರ ಹಾಗೂ ವಿಕಾರಾಭಾವಗಳಿಗೆ ಬರುವಂತಹ ವಿರೋಧವನ್ನು ಪರಿಹರಿಸಲು ಸಾಧ್ಯವೇ ಇಲ್ಲ. ಏಕೆಂದರೆ 'ನಿರ್ವಿಕಾರಃ' ಎಂಬ ಶ್ರುತಿಯಲ್ಲಿ ಹೇಳುತ್ತಿರುವ ವಿಕಾರಾಭಾವವು ವಿಕಾರಸಾಮಾನ್ಯದ ಅಭಾವರೂಪವೇ ಆಗಿದೆ. ವಿಕಾರಸಾಮಾನ್ಯಕ್ಕೂ, ವಿಕಾರಸಾಮಾನ್ಯಾಭಾವಕ್ಕೂ ವಿರೋಧವನ್ನು ಒಪ್ಪಲೇಬೇಕು. ಏಕೆಂದರೆ ಸಾಮಾನ್ಯಾಭಾವಕ್ಕೂ, ವಿಶೇಷಕ್ಕೂ ಪರಸ್ಪರ ವಿರೋಧವಿರುತ್ತದೆ.

**नचानशनश्रुतेरिव निर्विकारश्रुतेरपि विशेषनिषेधपरता सिद्धान्तिन इष्टा युक्ता वा । चेतने विकारसामान्यस्य क्वाप्यदर्शनात् ।**

ಅನಶನಶ್ರುತಿಯಲ್ಲಿ ಹೇಳಿದಂತೆ ನಿರ್ವಿಕಾರಶ್ರುತಿಗೂ ಸಹ ವಿಶೇಷನಿಷೇಧಪರತ್ವವನ್ನು ಒಪ್ಪುವುದು ಸಿದ್ಧಾಂತಿಗೆ ಇಷ್ಟವಿಲ್ಲ. ಮತ್ತು ಅದು ಯುಕ್ತವೂ ಸಹ ಆಗಿರುವುದಿಲ್ಲ. ಏಕೆಂದರೆ ಚೇತನನಲ್ಲಿ ವಿಕಾರವಾಗುವಿಕೆಯು (ವಿಕಾರಸಾಮಾನ್ಯವು) ಎಲ್ಲಿಯೂ ಕಂಡಿರುವುದಿಲ್ಲ.

**तदुक्तं न्यायविवरणे ''अन्यस्यान्यभावादृष्टिः'' इति ।। नच नानाविधहेयात्मनाविकारो गुणः ।**

ಆದ್ದರಿಂದಲೇ ನ್ಯಾಯವಿವರಣದಲ್ಲಿ 'ಅನ್ಯಸ್ಯ ಅನ್ಯಭಾವಾದೃಷ್ಟಿಃ' ಒಬ್ಬನಿಗೆ ಮತ್ತೊಬ್ಬನಾಗಿರುವಿಕೆಯು ಕಂಡಿಲ್ಲ (ಒಬ್ಬನು ಮತ್ತೊಬ್ಬನಾಗಲಾರ) ಎಂಬುದಾಗಿ ಹೇಳಿರುತ್ತಾರೆ. ಇನ್ನು ನಾನಾವಿಧವಾದ ಹೇಯವಾದ ಆತ್ಮನ ವಿಕಾರವನ್ನು ಗುಣವೆಂದೂ ಸಹ ಹೇಳಲಾಗದು.

**येन ''गुणाः श्रुताः सुविरुद्धाश्च देवे सन्ति'' इत्यादिश्रुत्या विरुद्धोऽप्यङ्गीक्रियते। प्रत्युतानर्थत्वाद्दोष एव ।**

ಒಂದು ವೇಳೆ ಅಂತಹ ವಿಕಾರವಾಗುವಿಕೆಯು ಗುಣವಾಗಿದ್ದಲ್ಲಿ 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತಿ' ಇತ್ಯಾದಿ ಶ್ರುತಿಯಿಂದ ವಿರುದ್ಧವಾದ ಗುಣವೂ ಸಹ ಇದೆ ಎಂದು ಒಪ್ಪಬಹುದಿತ್ತು. ಪ್ರತ್ಯುತ ಅನರ್ಥರೂಪವೇ ಆಗಿರುವುದರಿಂದ ದೋಷವೇ ಆಗಿದೆ. ಹಾಗಾಗಿ 'ಸತ್' ಪದದಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಹೇಳಲು ಸಾಧ್ಯವಿಲ್ಲ.

**प्रकाशः –**

''सत्प्रधानमेव भवेत्'' इत्यादि ''इति भावः'' इत्यन्तटीकां विवृण्वन् पूर्वपक्षयति – **पूर्वपक्षस्त्विति** ।।

ವಿವರಣೆ - 'ಸತ್‌ಪ್ರಧಾನಮೇವ ಭವೇತ್' ಎಂಬಲ್ಲಿಂದ ಪ್ರಾರಂಭಿಸಿ 'ಇತಿ ಭಾವಃ' ಎಂಬುದರ ತನಕ ಇರುವ ಟೀಕೆಯನ್ನು ವ್ಯಾಖ್ಯಾನಿಸುವವರಾಗಿ ಪೂರ್ವಪಕ್ಷ ಮಾಡುತ್ತಿದ್ದಾರೆ 'ಪೂರ್ವಪಕ್ಷಸ್ತು' ಇತ್ಯಾದಿ ಗ್ರಂಥದಿಂದ.

**प्रकाशः** – ननु पूर्वत्रेवात्रापि विकारतदभावयोरीश्वरे विरोधसमाधानसम्भवात् नायं हेतुः पूर्वपक्षप्रापक इत्यतः पूर्ववैषम्येणास्य निरवकाशत्वमाह – **युक्तो हीति** ।।

ವಿಕಾರ ಹಾಗೂ ತದಭಾವಗಳನ್ನು ಪೂರ್ವಪಕ್ಷ ಹೇತುವನ್ನಾಗಿ ಹೇಳುತ್ತಿದ್ದಾರೆ. ಈ ಹೇತು ಹಿಂದಿನ ಅಧಿಕರಣಗಳಲ್ಲಿ ಹೇಳಿದಂತೆ ಈಶ್ವರನಲ್ಲಿ ವಿರುದ್ಧವಾಗುವುದಿಲ್ಲವೆಂದು ಸಮಾಧಾನ ಮಾಡಬಹುದು. ಆದ್ದರಿಂದ ವಿಕಾರ ಹಾಗೂ ತದಭಾವವೆಂಬ ಹೇತು ಪೂರ್ವಪಕ್ಷ ಪ್ರಾಪಕವಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಹಿಂದಿನ ಅಧಿಕರಣಗಳಿಗೂ ಇಲ್ಲಿಗೂ ವ್ಯತ್ಯಾಸವಿದೆ ಎಂಬುದನ್ನು ತೋರಿಸುವುದಕ್ಕಾಗಿ ಈ ಹೇತುವಿಗೆ ನಿರವಕಾಶತ್ವವನ್ನು ಸಮರ್ಥಿಸುತ್ತಿದ್ದಾರೆ 'ಯುಕ್ತೋ ಹಿ' ಇತ್ಯಾದಿ ಗ್ರಂಥದಿಂದ.

**प्रकाशः – प्रतियोग्यनुयोगिभावेऽपीति ।। निरूप्यनिरूपकभावेऽपीत्यर्थः । अत्तृत्वविशेषेति ।। उपजीवनार्थादनरूपविशेषेत्यर्थः । पनसे चूतत्वाभाव वृक्षत्वयोरिवेति भावः ।**

'ಪ್ರತಿಯೋಗಿ-ಅನುಯೋಗಿಭಾವೇऽಪಿ' ಎಂದರೆ 'ನಿರೂಪ್ಯನಿರೂಪಕ ಭಾವವಿದ್ದರೂ ಸಹ' ಎಂದರ್ಥ. 'ಅತ್ತೃತ್ವವಿಶೇಷ' ಎಂದರೆ ಉಪಜೀವನಕ್ಕೋಸ್ಕರ ಇರುವಂತಹ 'ತಿನ್ನುವಿಕೆಯೆಂಬ ವಿಶೇಷ' ಎಂದರ್ಥ. ಪನಸವೃಕ್ಷದಲ್ಲಿ ಚೂತತ್ವ ಎಂಬ ವಿಶೇಷವಿಲ್ಲದಿದ್ದರೂ, ವೃಕ್ಷತ್ವಸಾಮಾನ್ಯವು ಹೇಗೆ ಇದೆಯೋ, ಅದರಂತೆ ಇಲ್ಲಿಯೂ ಸಹ ಸಾಮಾನ್ಯವಿಶೇಷಭಾವವನ್ನು ತಿಳಿಯಬೇಕೆಂದು ಅಭಿಪ್ರಾಯ.

**प्रकाशः – विकारसामान्याभावरूपत्वादिति ।। एतेन विकाराविकारयोः प्रतियोग्यनुयोगिरूपत्वादित्यपि सिद्धं बोध्यम् ।। भाष्यादावविकारे विकारासम्भव इत्येवोक्त्या तदुपपादनस्यास्पष्टत्वादाह – तदुक्तमिति ।।**

'ವಿಕಾರ ಸಾಮಾನ್ಯಾಭಾವರೂಪತ್ವಾತ್' ಎಂದರೆ - ವಿಕಾರಸಾಮಾನ್ಯಾಭಾವರೂಪವೆಂದು ಹೇಳಿದ್ದರಿಂದ ವಿಕಾರ ಹಾಗೂ ವಿಕಾರಾಭಾವಗಳು ಪ್ರತಿಯೋಗಿ-ಅನುಯೋಗಿಸ್ವರೂಪವಾಗಿವೆ ಎಂದೂ ಹೇಳಿದಂತಾಯಿತು ಎಂದರ್ಥ. ಭಾಷ್ಯ-ಟೀಕೆಗಳಲ್ಲಿ ನಿರ್ವಿಕಾರನಾದ ಪರಮಾತ್ಮನಲ್ಲಿ ವಿಕಾರವು ಉಪಪನ್ನವಾಗುವುದಿಲ್ಲವೆಂದಷ್ಟೇ ಹೇಳಿದ್ದಾರೆ. ಅದನ್ನು ಸ್ಪಷ್ಟವಾಗಿ ಉಪಪಾದಿಸಿಲ್ಲ. ಅದಕ್ಕೋಸ್ಕರ ನ್ಯಾಯವಿವರಣವನ್ನು ಉಲ್ಲೇಖಿಸುತ್ತಿದ್ದಾರೆ 'ತದುಕ್ತಮ್' ಇತ್ಯಾದಿಯಾಗಿ'

**प्रकाशः** – लोके क्वचिद्विशेषसामान्याभावयोरविरोधादृष्ट्या विरुद्धत्वमित्येतदित्यर्थः । विस्तृतं चैतत् -

न चेतनविकारस्स्याद्यत्र क्वापि ह्यचेतनम् ।
नाचेतनविकारोऽपि चेतनः स्यात् कदाचन ।।
न चान्यस्यान्यरूपत्वं विकृतत्वेऽपि दृश्यते ।

इत्यादिचतुर्थपादीयानुव्याख्यानसुधयोः ।

ಲೋಕದಲ್ಲಿ ಕೆಲವೆಡೆ ವಿಶೇಷಕ್ಕೂ ಹಾಗೂ ಸಾಮಾನ್ಯಾಭಾವಕ್ಕೂ ವಿರೋಧವು ಕಂಡಿದ್ದರಿಂದ ಇಲ್ಲಿಯೂ ಸಹ ವಿರೋಧ ಬಂದೇ ಬರುತ್ತದೆಂದು ಅಭಿಪ್ರಾಯ. ಇದನ್ನೇ ನಾಲ್ಕನೇ ಪಾದದ ಅನುವ್ಯಾಖ್ಯಾನ ಮತ್ತು ನ್ಯಾಯಸುಧೆಗಳಲ್ಲಿ ವಿವರಿಸಿರುತ್ತಾರೆ. ಅನುವ್ಯಾಖ್ಯಾನದ ಶ್ಲೋಕ ಹೀಗಿದೆ -

ನ ಚೇತನವಿಕಾರಃ ಸ್ಯಾದ್ಯತ್ರ ಕ್ವಾಪಿ ಹ್ಯಚೇತನಮ್ ।
ನಾಚೇನತವಿಕಾರೋऽಪಿ ಚೇತನಃ ಸ್ಯಾತ್ ಕದಾಚನ ॥
ನ ಚಾನ್ಯಸ್ಯಾನ್ಯರೂಪತ್ವಂ ವಿಕೃತತ್ವೇऽಪಿ ದೃಶ್ಯತೇ ।
ಸದಧಿಕರಣ (೧-೩-೪)

ಎಲ್ಲಿಯೂ ಸಹ ಚೇತನ ವಿಕಾರವು ಅಚೇತನವಾಗಿದ್ದು ಕಂಡಿಲ್ಲ. ಅಚೇತನವೂ ಸಹ ಚೇತನ ವಿಕಾರವಾಗಿರುವುದು ಕಂಡಿಲ್ಲ. ಹಾಗೂ ಒಂದಕ್ಕೆ ಇನ್ನೊಂದರ ರೂಪವೂ ಸಹ ಬರುವುದಿಲ್ಲ ಎಂದು.

**प्रकाशः** – एतेन ''युक्तो हि'' इत्यादिना ''पूर्वाधिकरणवैषम्यप्रदर्शनेन'' इत्युक्तमुपपादितं ध्येयम् । अन्यत्रादृष्टमपि श्रुतत्वादस्त्वित्यत आह – **नचेति** ।।

ಹೀಗೆ ಹೇಳಿದ್ದರಿಂದ 'ಯುಕ್ತೋ ಹಿ'' ಎಂಬಲ್ಲಿಂದ ಪ್ರಾರಂಭಿಸಿ 'ಪೂರ್ವಾಧಿಕರಣವೈಷಮ್ಯಪ್ರದರ್ಶನೇನ' ಎಂಬಲ್ಲಿಯ ತನಕ ಹೇಳಿದ್ದನ್ನು ಉಪಪಾದಿಸಿದಂತಾಯಿತು. ಬೇರೆ ಕಡೆ ಕಾಣಿಸದಿದ್ದರೂ ಶ್ರುತಿಯಲ್ಲಿ ಸಿದ್ಧವಾದ್ದರಿಂದ ವಿರೋಧವಿಲ್ಲವೆಂದು ಒಪ್ಪಬಹುದಲ್ಲವೇ? ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – श्रुतौ हि 'बहु स्याम्' इति तेजःप्रभृत्यात्मना नानाविधमहं स्यां भवेयमिति तेजःप्रभृत्यात्मना बहुभवनं सङ्कल्प्य तत्तेजोऽसृजतेति तेजोऽभवदिति तेजःप्रभृत्यात्मना भवनश्रवणात्तस्य च गुणत्वाभावादित्यर्थः ।

ಶ್ರುತಿಯಲ್ಲಿ 'ಬಹು ಸ್ಯಾಮ್' ಇತ್ಯಾದಿ ವಾಕ್ಯದಿಂದ, 'ನಾನು ತೇಜಸ್ಸು ಮೊದಲಾದವುಗಳ ಸ್ವರೂಪದಿಂದ ನಾನಾರೂಪವನ್ನು ತಾಳುತ್ತೇನೆ' ಎಂದು ಹೇಳಲಾಗಿದೆ. ತೇಜಸ್ಸು ಮೊದಲಾದವುಗಳ ಅನೇಕ ರೂಪವನ್ನು ತಾಳುತ್ತೇನೆಂದು ಸಂಕಲ್ಪಿಸಿ 'ತತ್ತೇಜೋऽಸೃಜತ' 'ತೇಜೋऽಭವತ್' ಇತ್ಯಾದಿಯಾಗಿ ತೇಜಸ್ಸು ಮೊದಲಾದವುಗಳ ಸೃಷ್ಟಿಯನ್ನು ಹೇಳಿ ತೇಜಸ್ ಮೊದಲಾದವುಗಳಿಗೆ ರೂಪವನ್ನು ಹೇಳಲಾಗಿದೆ. ಪರಮಾತ್ಮನಿಗೆ ಇಂತಹ ರೂಪಗಳನ್ನು ಹೇಳುವುದು ಗುಣವೆನಿಸುವುದಿಲ್ಲ. ತೇಜಸ್ಸು ಮೊದಲಾದವೆಲ್ಲವೂ ಹೇಯ ಪದಾರ್ಥಗಳಾದ್ದರಿಂದ ಅವುಗಳ ಸ್ವರೂಪವನ್ನು ತಾಳುವಿಕೆಯು ಹೇಗೆ ಗುಣವಾಗುತ್ತದೆ. ಆದ್ದರಿಂದ ಪರಮಾತ್ಮನಲ್ಲಿರುವ ವಿಕಾರ ಹಾಗೂ ತದಭಾವಗಳಿಗೆ ವಿರೋಧವನ್ನು ಪರಿಹರಿಸಲು ಸಾಧ್ಯವಿಲ್ಲ.

**गुरुराजीयम्** – अस्मदुक्तरीत्या साक्षात् स्थानसमन्वयस्यैव सम्भवेन स्थान-पदस्यार्थान्तरपरिकल्पनस्यायुक्तत्वाच्चेति पूर्वाधिकरणवैषम्येण पूर्वपक्षमाह – **युक्तो हीति** ।। अयुक्तत्वमुपपादयति – **चेतन इति** ।। ननु 'गुणाः श्रुताः' इति श्रुतेर्विकारस्य च गुणरूपत्वान्निर्विकारेऽपि ब्रह्मणि विकारः सम्भवतीत्यत आह – **नचेति** ।। नानाविधहेयात्मनेति गुणत्वाभावे हेतुः ।




ಪೂರ್ವಪಕ್ಷ ಹೀಗಿದೆ - ಶ್ರುತಿಯಲ್ಲಿರುವ 'ಸತ್' ಶಬ್ದವು ಪ್ರಕೃತಿಯನ್ನು ಪ್ರತಿಪಾದಿಸಬೇಕು ಹೊರತು, ಬ್ರಹ್ಮನನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಏಕೆಂದರೆ ಜಗತ್ತಿಗೆ ಕಾರಣವಾದ ಯಾವ ಸತ್‌ಪದಾರ್ಥವಿದೆಯೋ, ಅದು 'ಬಹು ಸ್ಯಾಂ ಪ್ರಜಾಯೇಯ' ಇತ್ಯಾದಿ ಶ್ರುತಿಯು ಹೇಳುವಂತೆ ಪೃಥಿವೀ, ತೇಜಸ್ಸು ಮೊದಲಾದವುಗಳ ಸ್ವರೂಪವನ್ನು ತಾಳುತ್ತದೆಂದು ತಿಳಿಯುತ್ತದೆ. ಪರಬ್ರಹ್ಮನನ್ನೇ 'ಸತ್' ಶಬ್ದದಿಂದ ಪ್ರತಿಪಾದ್ಯನೆಂದು ಹೇಳಿದರೆ ಇಂತಹ ವಿಕಾರಸ್ವರೂಪವನ್ನು ಹೇಳುವುದು ತಪ್ಪಾಗುತ್ತದೆ. ಅವನು ಯಾವುದೇ ವಿಕಾರಕ್ಕೆ ಒಳಗಾಗುವುದಿಲ್ಲವೆಂದು ಶ್ರುತಿಗಳು ಹೇಳುತ್ತಿರುವಾಗ ಪೃಥಿವೀ, ತೇಜಸ್ಸು ಮೊದಲಾದವುಗಳ ಸ್ವರೂಪದಲ್ಲಿ ವಿಕಾರವನ್ನು ತಾಳುತ್ತಾನೆಂದು ಹೇಳಿದರೆ ಅದು ಅತ್ಯಂತ ವಿರುದ್ಧವಾದ ಗುಣವಾದೀತು.

ಹಿಂದಿನ ಭೂಮಾಧಿಕರಣದಲ್ಲಿ ಉತ್ಕ್ರಮಣವೆಂಬ ಲಿಂಗಕ್ಕೂ ಸರ್ವಗತತ್ವಕ್ಕೂ ಪರಸ್ಪರ ವಿರೋಧವು ಪ್ರಾಪ್ತವಾದಾಗ ಸರ್ವಗತನಾದರೂ ಸಹ ಬ್ರಹ್ಮನಲ್ಲಿ ಉತ್ಕ್ರಮಣವು ಇರಬಹುದೆಂದು ವಿರೋಧವನ್ನು ಪರಿಹರಿಸಲಾಯಿತು. ಅದೇ ನ್ಯಾಯದಿಂದ ಇಲ್ಲಿಯೂ ಸಹ ವಿಕಾರ ಹಾಗೂ ತದಭಾವಗಳಿಗೆ ವಿರೋಧವನ್ನು ಪರಿಹರಿಸಬಹುದಲ್ಲವೇ? ಅಥವಾ ಅಕ್ಷರಾಧಿಕರಣದಲ್ಲಿ ಮಹತ್ತ್ವ ಹಾಗೂ ಅಣುತ್ವಗಳಿಗೆ ಪರಸ್ಪರ ವಿರೋಧವಿರುವುದರಿಂದ ಒಬ್ಬನೇ ಪರಮಾತ್ಮನಲ್ಲಿ ಈ ವಿರುದ್ಧಧರ್ಮಗಳನ್ನು ಹೇಳುವುದು ಹೇಗೆ ಸಾಧ್ಯ? ಇದರಂತೆ ಸ್ಥೌಲ್ಯಾಭಾವ ಹಾಗೂ ಅಣುತ್ವಾಭಾವಗಳಿಗೂ ಲೋಕದಲ್ಲಿ ವಿರೋಧ ಕಂಡಿರುವುದರಿಂದ ಒಬ್ಬನೇ ಪರಮಾತ್ಮನಲ್ಲಿ ಇವೆರಡನ್ನು ಹೇಳುವುದು ಹೇಗೆ ಸಾಧ್ಯ ? ಮತ್ತು ಅತ್ತೃತ್ವ ಅನಶನಗಳಿಗೂ ವಿರೋಧವು ಕಂಡಿದ್ದರಿಂದ, ಇವುಗಳ ವಿರೋಧವನ್ನಾದರೂ ಪರಮಾತ್ಮನಲ್ಲಿ ಪರಿಹರಿಸುವುದು ಹೇಗೆ ಸಾಧ್ಯ ? ಇತ್ಯಾದಿ ಪ್ರಶ್ನೆಗಳು ಪ್ರಸಕ್ತವಾಗಿದ್ದವು. ಅವುಗಳಿಗೆ ಉತ್ತರವನ್ನು ಈ ಹಿಂದೆ ನೀಡಲಾಗಿತ್ತು. ಅದೇನು ತಪ್ಪಲ್ಲ. ಏಕೆಂದರೆ ಮಹತ್ತ್ವ-ಅಣುತ್ವಗಳಿಗೆ ಪ್ರತಿಯೋಗಿ-ಅನುಯೋಗಿಭಾವವಿದ್ದರೂ ಎರಡೂ ಸಹ ಭಾವರೂಪವೇ ಆಗಿವೆ. ಭಾವರೂಪವಾದ ಎರಡು ಧರ್ಮಗಳಿಗೆ ವಿರೋಧವನ್ನು ಪರಿಹರಿಸುವುದು ಕಷ್ಟವಾಗುವುದಿಲ್ಲ. ಸ್ಥೌಲ್ಯಾಭಾವ-ಅಣುತ್ವಾಭಾವಗಳೆರಡೂ ಅಭಾವರೂಪಗಳೇ ಆಗಿರುವುದರಿಂದ ಇವೆರಡರ ವಿರೋಧ ಪರಿಹಾರವೂ ಸಹ ಕಷ್ಟವಲ್ಲ. ಇನ್ನೂ ಅತ್ತೃತ್ವ ಹಾಗೂ ಅನಶನ (ಅತ್ತೃತ್ವಾಭಾವ)ಗಳಿಗೆ ವಿರೋಧವನ್ನೂ ಸಹ ಪರಿಹರಿಸಬಹುದು. ಏಕೆಂದರೆ ಅನಶನವು (ಅತ್ತೃತ್ವಾಭಾವವು) ವಿಶೇಷಾಭಾವ ಸ್ವರೂಪವಾಗಿದೆ. ಅತ್ತೃತ್ವವು ಸಾಮಾನ್ಯರೂಪವಾಗಿದೆ. ವಿಶೇಷಾಭಾವ ಹಾಗೂ ಸಾಮಾನ್ಯಗಳಿಗೆ ವಿರೋಧವಿರುವುದಿಲ್ಲ. ಉದಾಹರಣೆ : ಹಲಸಿನ ಮರದಲ್ಲಿ ವೃಕ್ಷತ್ವ ಎಂಬ ಸಾಮಾನ್ಯ ಧರ್ಮವಿದ್ದರೂ 'ಚೂತತ್ವ' ಎಂಬ ವಿಶೇಷಧರ್ಮ ಇಲ್ಲ. ಅಂದರೆ ವೃಕ್ಷತ್ವ ಸಾಮಾನ್ಯಕ್ಕೂ ಚೂತತ್ವಾಭಾವರೂಪ ವಿಶೇಷಧರ್ಮಕ್ಕೂ ವಿರೋಧವಿರುವುದಿಲ್ಲ. ಆದರೆ ಪ್ರಕೃತ 'ಬಹು ಸ್ಯಾಮ್' ಎಂಬ ಶ್ರುತಿಯಿಂದ ತಿಳಿಯುತ್ತಿರುವ ವಿಕಾರಕ್ಕೂ 'ನಿರ್ವಿಕಾರಃ ಸದಾ ಶುದ್ಧಃ' ಎಂಬುದರಿಂದ ತಿಳಿಯುತ್ತಿರುವ ವಿಕಾರಾಭಾವಕ್ಕೂ ವಿರೋಧವನ್ನು ಪರಿಹರಿಸಲು ಸಾಧ್ಯವೇ ಇಲ್ಲ. ಏಕೆಂದರೆ ವಿಕಾರಾಭಾವವು ವಿಕಾರಸಾಮಾನ್ಯಾಭಾವರೂಪವಾಗಿದೆ. 'ಬಹು ಸ್ಯಾಮ್' ಎಂಬಲ್ಲಿ ಹೇಳಲ್ಪಟ್ಟ ವಿಕಾರವು ವಿಶೇಷರೂಪವಾಗಿದೆ. ವಿಶೇಷಾಭಾವಕ್ಕೂ ಸಾಮಾನ್ಯಕ್ಕೂ ವಿರೋಧವಿಲ್ಲದಿರಬಹುದು. ಆದರೆ ಸಾಮಾನ್ಯಾಭಾವಕ್ಕೂ ವಿಶೇಷಕ್ಕೂ ವಿರೋಧವಿದ್ದೇ ಇರುತ್ತದೆ. ಅಂದರೆ ಘಟದಲ್ಲಿ ವೃಕ್ಷತ್ವವಿಲ್ಲವೆಂದು ಹೇಳಿದ ಮೇಲೆ ಚೂತ ವೃಕ್ಷತ್ವವಿದೆ ಎಂದು ಹೇಳಲು ಸಾಧ್ಯವಿಲ್ಲ. ಹಾಗಾಗಿ ವಿಕಾರ ತದಭಾವವೆಂಬ ಪೂರ್ವಪಕ್ಷ ಯುಕ್ತಿಯು ನಿರವಕಾಶವಾಗಿದೆ.

ಸದಧಿಕರಣ (೧-೩-೪)

ನಾನಾವಿಧವಾದ ಜಡವಾದ ಪದಾರ್ಥಗಳ ಸ್ವರೂಪವನ್ನು ತಾಳುವಿಕೆಯು ಪರಮಾತ್ಮನಿಗೆ ಗುಣವೂ ಆಗುವುದಿಲ್ಲ. ಒಂದು ವೇಳೆ ಗುಣವಾಗಿದ್ದಲ್ಲಿ 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತಿ' ಇತ್ಯಾದಿ ಶ್ರುತಿಯಿಂದ ವಿರುದ್ಧವಾಗಿದ್ದ ಗುಣಗಳನ್ನೂ ಒಪ್ಪಬಹುದಿತ್ತು. ಆದರೆ ಇಂತಹ ವಿಕಾರವು ಅನರ್ಥಸ್ವರೂಪ ವಾಗಿರುವುದರಿಂದ ವಿರುದ್ಧವಾದ ಇಂತಹ ಧರ್ಮವನ್ನು ಪರಮಾತ್ಮನಲ್ಲಿ ಒಪ್ಪುವುದು ಅನಾವಶ್ಯಕ.





## ಶ್ರುತಿಯಲ್ಲಿರುವ ಈಕ್ಷಣವು ಗೌಣ

## ತಾत्पर्यचन्द्रिका

**नच प्रधानेऽपि ''तदैक्षत'' इत्युक्तमीक्षणं विरुद्धमिति शङ्क्यम् ।**

ಅನುವಾದ - ಬ್ರಹ್ಮನಲ್ಲಿ ವಿಕಾರ-ವಿಕಾರಾಭಾವ ಇವೆರಡಕ್ಕೆ ವಿರೋಧವನ್ನು ಹೇಳಿದಂತೆ ಪ್ರಧಾನದಲ್ಲಿಯೂ ಸಹ 'ತದೈಕ್ಷತ' ಎಂಬಲ್ಲಿ ಹೇಳಲ್ಪಟ್ಟ ಈಕ್ಷಣವು ವಿರುದ್ಧವಾಗುತ್ತದೆ. ನೋಡುವಿಕೆ ಅಥವಾ ತಿಳಿಯುವಿಕೆ ಎಂಬುದು ಚೇತನನಲ್ಲಿ ಬರುತ್ತದೆ ಹೊರತು, ಜಡವಾದ ಪ್ರಕೃತಿಯಲ್ಲಿ ಬರುವುದಿಲ್ಲ. ಆದ್ದರಿಂದ ವಿಕಾರತದಭಾವಗಳ ವಿರೋಧ ಬರುತ್ತದೆಂಬ ಕಾರಣಕ್ಕಾಗಿ ಬ್ರಹ್ಮನನ್ನು 'ಸತ್' ಶಬ್ದದಿಂದ ಪ್ರತಿಪಾದ್ಯನಲ್ಲವೆಂದು ಹೇಳಿದರೆ ಪ್ರಧಾನದಲ್ಲಿಯೂ ಈಕ್ಷಿತೃತ್ವವು ಬರುತ್ತಿಲ್ಲವಾದ್ದರಿಂದ ಬ್ರಹ್ಮನಂತೆ ಇದೂ ಸಹ 'ಸತ್' ಶಬ್ದದಿಂದ ಪ್ರತಿಪಾದ್ಯವಾಗುವುದು ಬೇಡ. ಹೀಗೆ ಪ್ರಶ್ನಿಸಬಾರದು.

**प्रधानस्य ज्ञानहेतुसत्त्वगुणयोगेन वा कार्योन्मुखत्वेन वाऽभिमानिन ईक्षितृत्वेन वा तस्य गौणत्वात् ।**

'ತದೈಕ್ಷತ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಈಕ್ಷಣವು ಗೌಣವಾಗಿದೆ. ಜ್ಞಾನವು ಹುಟ್ಟಬೇಕೆಂದರೆ ಸತ್ತ್ವಗುಣವಿರಬೇಕು. ಆದ್ದರಿಂದ ಜ್ಞಾನಕ್ಕೆ ಸತ್ವಗುಣವು ಕಾರಣವೆಂದು ಸಿದ್ಧವಾಗಿದೆ. ಇಂತಹ ಸತ್ತ್ವಗುಣದಿಂದ ಕೂಡಿರುವ ಕಾರಣ ಪ್ರಕೃತಿಯು ಜ್ಞಾನವುಳ್ಳದ್ದೆಂದು ಶ್ರುತಿಯು ಹೇಳುತ್ತಿದೆ.

ಅಥವಾ ಪ್ರಕೃತಿಯು ಪದಾರ್ಥಗಳನ್ನು ಹುಟ್ಟಿಸಲು ಕಾರ್ಯೋನ್ಮುಖವಾಗಿದೆ ಎಂಬ ವಿವಕ್ಷೆಯಿಂದಲೂ 'ಐಕ್ಷತ' ಎಂದು ಶ್ರುತಿಯು ಹೇಳಿರಬಹುದು.

ಅಥವಾ ತಿಳಿಯುವಿಕೆ ಎಂಬ ಧರ್ಮವು ಪ್ರಕೃತಿಯ ಅಭಿಮಾನಿದೇವತೆಯಲ್ಲಿರುತ್ತದೆ. ಅಭಿಮಾನಿಯಲ್ಲಿರುವ ಧರ್ಮವನ್ನು ಅಭಿಮನ್ಯವಾದ ಪದಾರ್ಥದಲ್ಲಿ ಗೌಣವಾಗಿ ಹೇಳುವುದುಂಟು. ಈ ಮೂರು ಕಾರಣಗಳಿಂದ 'ತದೈಕ್ಷತ' ಎಂಬಲ್ಲಿರುವ ಈಕ್ಷಿತೃತ್ವವನ್ನು ಗೌಣವಾಗಿ ಉಪಪಾದಿಸಲು ಬರುತ್ತದೆ.

**युक्तं चेक्षणस्य गौणत्वम् । "तत्तेज ऐक्षत ता आप ऐक्षन्त" इति गौणेक्षणप्रायपाठात् ।**

ಮತ್ತು 'ತದೈಕ್ಷತ' ಎಂಬಲ್ಲಿ ಹೇಳಲ್ಪಟ್ಟ ಈಕ್ಷಣವು ಗೌಣವಾಗಿದೆಯೆಂದು ವ್ಯಾಖ್ಯಾನಿಸುವುದೇ ಯುಕ್ತವಾಗಿದೆ. ಏಕೆಂದರೆ 'ತತ್ತೇಜ ಐಕ್ಷತ ತಾ ಆಪ ಐಕ್ಷಂತ' ಇತ್ಯಾದಿ ವಾಕ್ಯಗಳೂ ಸಹ ಅದೇ ಪ್ರಕರಣದಲ್ಲಿವೆ. ಈ ವಾಕ್ಯಗಳನ್ನು ಗಮನಿಸಿದಾಗ ತೇಜಸ್ಸು, ನೀರು ಮೊದಲಾದವುಗಳಲ್ಲಿಯೂ ಈಕ್ಷಣವನ್ನು ಹೇಳಿದಂತೆ ಕಾಣಿಸುತ್ತದೆ. ಆದರೆ ತೇಜಸ್ಸು ಮೊದಲಾದವುಗಳಿಗೆ ಈಕ್ಷಣವನ್ನು ಒಪ್ಪಲು ಸಾಧ್ಯವಿಲ್ಲ. ಇವುಗಳ ಪ್ರಾಯಪಾಠದ ಬಲದಿಂದ 'ತದೈಕ್ಷತ' ಎಂಬಲ್ಲಿರುವ ಈಕ್ಷಣವೂ ಸಹ ಗೌಣವೆಂದೇ ವ್ಯಾಖ್ಯಾನಿಸಬೇಕು.

**एतेनेक्षणं मुख्यं विकारस्तु गौण इति ब्रह्मैव सदस्त्विति निरस्तम् ।**

ಹೀಗೆ ಹೇಳಿದ್ದರಿಂದ ಈಕ್ಷಣವನ್ನು ಮುಖ್ಯವೆಂದು ಸ್ವೀಕರಿಸಿ, ವಿಕಾರವನ್ನು ಗೌಣವೆಂದು ವಿವಕ್ಷಿಸಿದಾಗ ಬ್ರಹ್ಮನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ -

**पूर्वाधिकरणे चरमस्य द्रष्टृत्वादेर्मुख्यत्वाय प्रथमस्य भूतभवत्त्वादेर्गौणत्ववदत्रापि चरमस्य विकारस्य मुख्यत्वाय प्रथमस्येक्षणस्यैव गौणताया न्याय्यत्वाच्च ।**

ಹಿಂದಿನ ಅಧಿಕರಣದಲ್ಲಿ ಚರಮಶ್ರುತವಾದ ದ್ರಷ್ಟೃತ್ವಾದಿಗಳಿಗೆ ಮುಖ್ಯಾರ್ಥವನ್ನು ಕೂಡಿಸುವುದಕ್ಕಾಗಿ ಪ್ರಥಮಶ್ರುತವಾದ ಭೂತ, ಭವಿಷ್ಯತ್, ವರ್ತಮಾನ ಮೊದಲಾದವುಗಳಿಗೆ ಶರೀರದ್ವಾರಾ ಗೌಣಾರ್ಥವನ್ನು ಸ್ವೀಕರಿಸಲಾಯಿತು. ಅದರಂತೆ ಇಲ್ಲಿಯೂ ಸಹ ಚರಮಶ್ರುತವಾದ 'ವಿಕಾರ' ಎಂಬರ್ಥಕ್ಕೆ ಮುಖ್ಯಾರ್ಥವನ್ನು ಕೂಡಿಸುವುದಕ್ಕಾಗಿ ಪ್ರಥಮಶ್ರುತವಾದ ಈಕ್ಷಣಕ್ಕೆ ಗೌಣಾರ್ಥವನ್ನು ಹೇಳುವುದೇ ನ್ಯಾಯಪ್ರಾಪ್ತವಾಗುತ್ತದೆ. ಆದ್ದರಿಂದ ಈಕ್ಷಣವನ್ನು ಮುಖ್ಯವನ್ನಾಗಿ ಸ್ವೀಕರಿಸಲು ಸಾಧ್ಯವಿಲ್ಲ. ಬ್ರಹ್ಮನು 'ಸತ್' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂಬುದನ್ನು ಸಮರ್ಥಿಸಲೂ ಸಹ ಸಾಧ್ಯವಿಲ್ಲ.

**प्रकाशः –**

भाष्याद्युक्तो विकारासम्भवो हरावुपलक्षणम् । 'तदैक्षत' इतीक्षणोपपत्तिश्च प्रधाने ध्येयेति भावेन शङ्कासमाधी आह – **नच प्रधानेऽपीति ।।**

ವಿವರಣೆ - ಭಾಷ್ಯ, ಟೀಕೆಗಳಲ್ಲಿ ವಿಕಾರವು ಶ್ರೀಹರಿಯಲ್ಲಿ ಉಪಪನ್ನವಾಗುವುದಿಲ್ಲವೆಂದು ಹೇಳಿದ್ದು ಕೇವಲ ಉಪಲಕ್ಷಣವಾಗಿದೆ. ಇದರಿಂದ 'ತದೈಕ್ಷತ' ಎಂಬಲ್ಲಿರುವ ಈಕ್ಷಣವು ಪ್ರಕೃತಿಯಲ್ಲಿ ಅನುಪಪನ್ನವಾಗು-ವುದಿಲ್ಲವೆಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಈ ಅಭಿಪ್ರಾಯದಿಂದ ಶಂಕೆ ಹಾಗೂ ಸಮಾಧಾನಗಳನ್ನು ನಿರೂಪಣೆ ಮಾಡುತ್ತಿದ್ದಾರೆ 'ನಚ ಪ್ರಧಾನೇಽಪಿ' ಇತ್ಯಾದಿ ವಾಕ್ಯದಿಂದ.

**प्रकाशः** – टीकोक्तमाह – **ज्ञानेति** ।। ''सत्त्वात्सञ्जायते ज्ञानं रजसो लोभ एव च'' इति गीतोक्तदिशा ज्ञानहेतुसत्त्वगुणयोगेन ''चक्षुः पश्यति'' इतिवत्तदैक्षतेति निर्देश इत्यर्थः ।

ಟೀಕೆಯಲ್ಲಿ ಹೇಳಿದ್ದನ್ನೇ ಗ್ರಂಥಕಾರರು 'ಜ್ಞಾನ' ಇತ್ಯಾದಿ ವಾಕ್ಯಗಳಿಂದ ಉಪಪಾದಿಸುತ್ತಿದ್ದಾರೆ. 'ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದಂತೆ ಸತ್ತ್ವಗುಣದಿಂದ ಜ್ಞಾನವು ಹುಟ್ಟುತ್ತದೆ. ಆದ್ದರಿಂದ ಜ್ಞಾನಕ್ಕೆ ಕಾರಣವಾಗಿರುವಂತಹ ಸತ್ತ್ವಗುಣವು ಪ್ರಕೃತಿಯಲ್ಲಿರುವುದರಿಂದ ಪ್ರಕೃತಿಯು ಜ್ಞಾನವುಳ್ಳದ್ದೆಂದು ವ್ಯವಹಾರಕ್ಕೆ ವಿಷಯವಾಗಿದೆ. ಮತ್ತು 'ಚಕ್ಷುಃ ಪಶ್ಯತಿ' ಎಂದು ಲೋಕದಲ್ಲಿ ವ್ಯವಹಾರವಿದೆ. ವಾಸ್ತವಿಕವಾಗಿ ಚಕ್ಷುರಿಂದ್ರಿಯದಿಂದ ನೋಡುತ್ತಾನೆಂದು ಹೇಳಬೇಕು ಹೊರತು, ಚಕ್ಷುರಿಂದ್ರಿಯವು ನೋಡುತ್ತದೆಂಬ ವ್ಯವಹಾರವು ತಪ್ಪು. ಆದರೂ ಕರಣದಲ್ಲಿ ಕರ್ತೃತ್ವವ್ಯವಹಾರವನ್ನು ಔಪಚಾರಿಕವಾಗಿ ಲೋಕದಲ್ಲಿ ಹೇಗೆ ಮಾಡಲಾಗುತ್ತದೋ, ಅದರಂತೆ ಜ್ಞಾನಕ್ಕೆ ಕರಣವಾದ ಪ್ರಕೃತಿಯಲ್ಲಿ ಜ್ಞಾನದ ವ್ಯವಹಾರವನ್ನು ಶ್ರುತಿಯು ಮಾಡುತ್ತಿದೆ.

**प्रकाशः** – ननु प्राथमिकेक्षणानुरोधेन चरमबहुभाव एव गौणो नीयतामित्यत आह – **युक्तमिति** ।। तेजःप्रभृतेः पूर्वपक्षे जडत्वादिति भावः ।

ಮೊದಲಿರುವಂತಹ ಈಕ್ಷಣಕ್ಕೆ ಅನುಸಾರಿಯಾಗಿ ಅನಂತರವಿರುವ ಬಹುಭಾವವನ್ನೇ ಗೌಣವನ್ನಾಗಿ ವ್ಯಾಖ್ಯಾನಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಯುಕ್ತಮ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ತೇಜಸ್ಸು' ಮೊದಲಾದವುಗಳು ಪೂರ್ವಪಕ್ಷದ ಸಂದರ್ಭದಲ್ಲಿ ಜಡಭೂತವಾಗಿದೆಯೆಂದು ಅಂಗೀಕರಿಸಿದ್ದರಿಂದ, ಈಕ್ಷಣವನ್ನು ಅವುಗಳಲ್ಲಿ ಹೇಳಲಾಗದೆಂದು ತಿಳಿಯಬೇಕು.

**प्रकाशः** – ननु प्रधानेऽभिमानिनमङ्गीकृत्येक्षणमुपपादयंस्तेजःप्रभृतेः कथमभिमानिचेतनत्वं नोपैतीति चेत् सत्यम् । एवमप्यभिमानिद्वारा गौणताया अवश्यं वाच्यत्वादिति भावः । 'अत एव' गौणेक्षणप्रायपाठेत्येवोक्तम् ।

ಪ್ರಧಾನದ ವಿಷಯದಲ್ಲಿ ಈಕ್ಷಣವನ್ನು ಅಭಿಮಾನಿಚೇತನಪರವೆಂದು ಅಂಗೀಕರಿಸಿ, ಉಪಪಾದಿಸಲಾಗುತ್ತದೆ. ಅದರಂತೆ ತೇಜಸ್ಸು ಮೊದಲಾದವುಗಳ ವಿಷಯದಲ್ಲಿ ಶ್ರುತವಾದ ಈಕ್ಷಣವನ್ನೂ ಕೂಡ ಅಭಿಮಾನಿಚೇತನಪರವಾಗಿ ಏಕೆ ವ್ಯಾಖ್ಯಾನಿಸುವುದಿಲ್ಲ? ಎಂದರೆ, ಹೌದು, 'ತತ್ತೇಜ ಈಕ್ಷತ' ಇತ್ಯಾದಿ ಸ್ಥಳಗಳಲ್ಲಿಯೂ ಅಭಿಮಾನಿಚೇತನಪರವಾಗಿ ಈಕ್ಷಣವನ್ನು ಒಪ್ಪಿಯೇ ಗೌಣಾರ್ಥವನ್ನು ಅವಶ್ಯವಾಗಿ

ಹೇಳಬೇಕು, ಅದರಂತೆ ಪ್ರಧಾನದ ವಿಷಯದಲ್ಲಿಯೂ ಗೌಣವಾದ ಈಕ್ಷಣವನ್ನೇ ವಿವಕ್ಷಿಸಬೇಕೆಂದು ತಿಳಿಸಿದ್ದಾರೆ. ಆದ್ದರಿಂದಲೇ ಗೌಣವಾದ ಈಕ್ಷಣದ ಪ್ರಾಯಪಾಠದ ಬಲದಿಂದ ಎಂದಷ್ಟೇ ಹೇಳಿದ್ದು.

**प्रकाशः –** एतेनेति ।। प्रायपाठेनेत्यर्थः । न केवलं प्रायपाठेन । अपि तु पूर्वसिद्धान्तन्यायेनापीत्याह – **पूर्वेति** ।।

'ಏತೇನ' ಎಂದರೆ ಪ್ರಾಯಪಾಠದ ಬಲದಿಂದ ಎಂದರ್ಥ. ಕೇವಲ ಪ್ರಾಯಪಾಠದಿಂದಷ್ಟೇ ಅಲ್ಲ, ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದಲೂ ಕೂಡ ಗೌಣವಾದ ಈಕ್ಷಣವನ್ನು ಅಂಗೀಕರಿಸಬೇಕೆಂದು 'ಪೂರ್ವ' ಇತ್ಯಾದಿ ವಾಕ್ಯದಿಂದ ಸಮರ್ಥಿಸಿದ್ದಾರೆ.

**प्रकाशः –** 'नान्यदतोऽस्ति द्रष्टृ' इत्यादिवाक्यशेषबलात् 'अदृष्टं द्रष्टृ' इत्यादिना प्रतीता- नन्याधीनासङ्कुचितसर्वद्रष्टृत्वादेः प्रशास्तृत्वास्थूलत्वानणुत्वादेश्च ब्रह्मण्येव मुख्यतया तदनुरोधेन ततः प्राक् श्रुतस्याक्षरस्य ब्रह्मत्वे तदेकाश्रितत्वलिङ्गेनाकाशस्य चित्प्रकृतित्वात्तदोतत्वादिनोक्तभूतभवदादेर्जडत्वे पोष्यत्वादिरूपोतत्वस्यायोगेन देहद्वारा भूतत्वभवत्त्वादियुक्तचेतनपरतया भूतत्वं भवत्त्वं भविष्यत्त्वमित्येतद्गौणं तथेहापीत्यर्थः ।

ಹಿಂದಿನ ಅಧಿಕರಣದಲ್ಲಿ ಚರಮಶ್ರುತವಾದ ದ್ರಷ್ಟೃತ್ವಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸುವುದಕ್ಕಾಗಿ ಪ್ರಥಮಸೂತ್ರದಲ್ಲಿರುವ 'ಭೂತ' 'ಭವತ್' ಮೊದಲಾದವುಗಳಿಗೆ ಗೌಣಾರ್ಥವನ್ನು ಒಪ್ಪಿದ್ದಾರೆಂದು ಗ್ರಂಥದಲ್ಲಿ ಹೇಳಲಾಯಿತು. ಅದರ ವಿವರ ಹೀಗಿದೆ -

'ನಾನ್ಯದತೋಽಸ್ತಿ ದ್ರಷ್ಟೃ' ಎಂಬುದು ವಾಕ್ಯಶೇಷ. ಇದರ ಬಲದಿಂದ 'ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಪರಮಾತ್ಮನಲ್ಲಿರುವ ಸರ್ವದ್ರಷ್ಟೃತ್ವ, ಪ್ರಶಾಸ್ತೃತ್ವ, ಅಸ್ಥೂಲತ್ವ, ಅನಣುತ್ವ ಮೊದಲಾದ ಧರ್ಮಗಳೆಲ್ಲವೂ ಅನನ್ಯಾಧೀನವಾಗಿವೆ ಮತ್ತು ಅಸಂಕುಚಿತವಾಗಿವೆಯೆಂದು ತಿಳಿಯುತ್ತದೆ. ಅನನ್ಯಾಧೀನವು ಅಸಂಕುಚಿತವು ಆಗಿರುವ ಕಾರಣದಿಂದಲೇ ದ್ರಷ್ಟೃತ್ವಾದಿಗಳೆಲ್ಲವೂ ವಿಷ್ಣುವಿನಲ್ಲಿ ಮುಖ್ಯವಾಗಿ ಇರುತ್ತವೆಂದು ಸ್ಪಷ್ಟವಾಗುತ್ತದೆ. ಇದಕ್ಕನುಸಾರಿಯಾಗಿ ಈ ವಾಕ್ಯಕ್ಕಿಂತ ಮೊದಲು ಶ್ರುತವಾದ ಅಕ್ಷರಕ್ಕೆ 'ಪರಮಾತ್ಮ' ಎಂಬರ್ಥವನ್ನೇ ಒಪ್ಪಬೇಕು. ಪರಮಾತ್ಮನೊಬ್ಬನೇ ಆಶ್ರಿತನಾಗಿರುವಿಕೆಯು ಲಕ್ಷ್ಮೀದೇವಿಯಲ್ಲಿ ಮಾತ್ರ ಉಪಪನ್ನವಾಗುತ್ತದೆ. ಇದಕ್ಕನುಸಾರವಾಗಿ ಆಕಾಶಶಬ್ದವು ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯನ್ನೇ ಪ್ರತಿಪಾದಿಸುತ್ತದೆಂದೂ ಸಹ ನಿರ್ಣಯವಾಗುತ್ತದೆ. ಯಾವಾಗ ಆಕಾಶಶಬ್ದದಿಂದ ಚಿತ್‌ಪ್ರಕೃತಿಯೇ ಪ್ರತಿಪಾದ್ಯಳೆಂದು ನಿರ್ಣಯವಾಗುತ್ತದೋ, ಆವಾಗ ಪ್ರಥಮ ಶ್ರುತವಾದ ಭೂತ, ಭವದಾದಿಗಳಿಗೆ ಜಡವಾದ ದೇಹವೆಂಬರ್ಥವನ್ನು ಒಪ್ಪಲು ಸಾಧ್ಯವಿಲ್ಲ. ಜಡಾರ್ಥತ್ವವನ್ನು ಒಪ್ಪಿದರೆ ಪೋಷ್ಯತ್ವಾದಿ ಅರ್ಥವನ್ನು ಹೇಳುವ ಓತತ್ವವು ಅಯುಕ್ತವಾಗುತ್ತವೆ. ಆದ್ದರಿಂದ 'ಭೂತ', 'ಭವತ್' ಮೊದಲಾದವುಗಳಿಗೆ ಶರೀರದ್ವಾರಾ ಚೇತನ ಎಂಬರ್ಥವನ್ನೇ ಒಪ್ಪಬೇಕು. ಚೇತನನು ನಿತ್ಯನಾಗಿದ್ದರೂ ಜಡವಾದ ಶರೀರವು

ವಿವರಣೆ - ಭಾಷ್ಯ, ಟೀಕೆಗಳಲ್ಲಿ ವಿಕಾರವು ಶ್ರೀಹರಿಯಲ್ಲಿ ಉಪಪನ್ನವಾಗುವುದಿಲ್ಲವೆಂದು ಹೇಳಿದ್ದು ಕೇವಲ ಉಪಲಕ್ಷಣವಾಗಿದೆ. ಇದರಿಂದ 'ತದೈಕ್ಷತ' ಎಂಬಲ್ಲಿರುವ ಈಕ್ಷಣವು ಪ್ರಕೃತಿಯಲ್ಲಿ ಅನುಪಪನ್ನವಾಗುವುದಿಲ್ಲವೆಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಈ ಅಭಿಪ್ರಾಯದಿಂದ ಶಂಕೆ ಹಾಗೂ ಸಮಾಧಾನಗಳನ್ನು ನಿರೂಪಣೆ ಮಾಡುತ್ತಿದ್ದಾರೆ 'ನಚ ಪ್ರಧಾನೇಽಪಿ' ಇತ್ಯಾದಿ ವಾಕ್ಯದಿಂದ.

**प्रकाशः – टीकोक्तमाह – ज्ञानेति ।।** ''सत्त्वात्सञ्जायते ज्ञानं रजसो लोभ एव च'' इति गीतोक्तदिशा ज्ञानहेतुसत्त्वगुणयोगेन ''चक्षुः पश्यति'' इतिवत्तदैक्षतेति निर्देश इत्यर्थः ।

ಟೀಕೆಯಲ್ಲಿ ಹೇಳಿದ್ದನ್ನೇ ಗ್ರಂಥಕಾರರು 'ಜ್ಞಾನ' ಇತ್ಯಾದಿ ವಾಕ್ಯಗಳಿಂದ ಉಪಪಾದಿಸುತ್ತಿದ್ದಾರೆ. 'ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದಂತೆ ಸತ್ತ್ವಗುಣದಿಂದ ಜ್ಞಾನವು ಹುಟ್ಟುತ್ತದೆ. ಆದ್ದರಿಂದ ಜ್ಞಾನಕ್ಕೆ ಕಾರಣವಾಗಿರುವಂತಹ ಸತ್ತ್ವಗುಣವು ಪ್ರಕೃತಿಯಲ್ಲಿರುವುದರಿಂದ ಪ್ರಕೃತಿಯು ಜ್ಞಾನವುಳ್ಳದ್ದೆಂದು ವ್ಯವಹಾರಕ್ಕೆ ವಿಷಯವಾಗಿದೆ. ಮತ್ತು 'ಚಕ್ಷುಃ ಪಶ್ಯತಿ' ಎಂದು ಲೋಕದಲ್ಲಿ ವ್ಯವಹಾರವಿದೆ. ವಾಸ್ತವಿಕವಾಗಿ ಚಕ್ಷುರಿಂದ್ರಿಯದಿಂದ ನೋಡುತ್ತಾನೆಂದು ಹೇಳಬೇಕು ಹೊರತು, ಚಕ್ಷುರಿಂದ್ರಿಯವು ನೋಡುತ್ತದೆಂಬ ವ್ಯವಹಾರವು ತಪ್ಪು. ಆದರೂ ಕರಣದಲ್ಲಿ ಕರ್ತೃತ್ವವ್ಯವಹಾರವನ್ನು ಔಪಚಾರಿಕವಾಗಿ ಲೋಕದಲ್ಲಿ ಹೇಗೆ ಮಾಡಲಾಗುತ್ತದೋ, ಅದರಂತೆ ಜ್ಞಾನಕ್ಕೆ ಕರಣವಾದ ಪ್ರಕೃತಿಯಲ್ಲಿ ಜ್ಞಾನದ ವ್ಯವಹಾರವನ್ನು ಶ್ರುತಿಯು ಮಾಡುತ್ತಿದೆ.

**प्रकाशः** – ननु प्राथमिकेक्षणानुरोधेन चरमबहुभाव एव गौणो नीयतामित्यत आह – **युक्तमिति** ।। तेजःप्रभृतेः पूर्वपक्षे जडत्वादिति भावः ।

ಮೊದಲಿರುವಂತಹ ಈಕ್ಷಣಕ್ಕೆ ಅನುಸಾರಿಯಾಗಿ ಅನಂತರವಿರುವ ಬಹುಭಾವವನ್ನೇ ಗೌಣವನ್ನಾಗಿ ವ್ಯಾಖ್ಯಾನಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಯುಕ್ತಮ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ತೇಜಸ್ಸು' ಮೊದಲಾದವುಗಳು ಪೂರ್ವಪಕ್ಷದ ಸಂದರ್ಭದಲ್ಲಿ ಜಡಭೂತವಾಗಿದೆಯೆಂದು ಅಂಗೀಕರಿಸಿದ್ದರಿಂದ, ಈಕ್ಷಣವನ್ನು ಅವುಗಳಲ್ಲಿ ಹೇಳಲಾಗದೆಂದು ತಿಳಿಯಬೇಕು.

**प्रकाशः** – ननु प्रधानेऽभिमानिनमङ्गीकृत्येक्षणमुपपादयंस्तेजःप्रभृतेः कथमभिमानिचेतनत्वं नोपैतीति चेत् सत्यम् । एवमप्यभिमानिद्वारा गौणताया अवश्यं वाच्यत्वादिति भावः । 'अत एव' गौणेक्षणप्रायपाठेत्येवोक्तम् ।

ಪ್ರಧಾನದ ವಿಷಯದಲ್ಲಿ ಈಕ್ಷಣವನ್ನು ಅಭಿಮಾನಿಚೇತನಪರವೆಂದು ಅಂಗೀಕರಿಸಿ, ಉಪಪಾದಿಸಲಾಗುತ್ತದೆ. ಅದರಂತೆ ತೇಜಸ್ಸು ಮೊದಲಾದವುಗಳ ವಿಷಯದಲ್ಲಿ ಶ್ರುತವಾದ ಈಕ್ಷಣವನ್ನೂ ಕೂಡ ಅಭಿಮಾನಿಚೇತನಪರವಾಗಿ ಏಕೆ ವ್ಯಾಖ್ಯಾನಿಸುವುದಿಲ್ಲ? ಎಂದರೆ, ಹೌದು, 'ತತ್ತೇಜ ಈಕ್ಷತ' ಇತ್ಯಾದಿ ಸ್ಥಳಗಳಲ್ಲಿಯೂ ಅಭಿಮಾನಿಚೇತನಪರವಾಗಿ ಈಕ್ಷಣವನ್ನು ಒಪ್ಪಿಯೇ ಗೌಣಾರ್ಥವನ್ನು ಅವಶ್ಯವಾಗಿ

ಹೇಳಬೇಕು, ಅದರಂತೆ ಪ್ರಧಾನದ ವಿಷಯದಲ್ಲಿಯೂ ಗೌಣವಾದ ಈಕ್ಷಣವನ್ನೇ ವಿವಕ್ಷಿಸಬೇಕೆಂದು ತಿಳಿಸಿದ್ದಾರೆ. ಆದ್ದರಿಂದಲೇ ಗೌಣವಾದ ಈಕ್ಷಣದ ಪ್ರಾಯಪಾಠದ ಬಲದಿಂದ ಎಂದಷ್ಟೇ ಹೇಳಿದ್ದು.

**प्रकाशः –** एतेनेति ।। प्रायपाठेनेत्यर्थः । न केवलं प्रायपाठेन । अपि तु पूर्वसिद्धान्तन्यायेनापीत्याह – **पूर्वेति** ।।

'ಏತೇನ' ಎಂದರೆ ಪ್ರಾಯಪಾಠದ ಬಲದಿಂದ ಎಂದರ್ಥ. ಕೇವಲ ಪ್ರಾಯಪಾಠದಿಂದಷ್ಟೇ ಅಲ್ಲ, ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದಲೂ ಕೂಡ ಗೌಣವಾದ ಈಕ್ಷಣವನ್ನು ಅಂಗೀಕರಿಸಬೇಕೆಂದು 'ಪೂರ್ವ' ಇತ್ಯಾದಿ ವಾಕ್ಯದಿಂದ ಸಮರ್ಥಿಸಿದ್ದಾರೆ.

**प्रकाशः –** 'नान्यदतोऽस्ति द्रष्टृ' इत्यादिवाक्यशेषबलात् 'अदृष्टं द्रष्टृ' इत्यादिना प्रतीता- नन्याधीनासङ्कुचितसर्वद्रष्टृत्वादेः प्रशास्तृत्वास्थूलत्वानणुत्वादेश्च ब्रह्मण्येव मुख्यतया तदनुरोधेन ततः प्राक् श्रुतस्याक्षरस्य ब्रह्मत्वे तदेकाश्रितत्वलिङ्गेनाकाशस्य चित्प्रकृतित्वात्तदोतत्वादिनोक्तभूतभवदादेर्जडत्वे पोष्यत्वादिरूपोतत्वस्यायोगेन देहद्वारा भूतत्वभवत्त्वादियुक्तचेतनपरतया भूतत्वं भवत्त्वं भविष्यत्त्वमित्येतद्गौणं तथेहापीत्यर्थः ।

ಹಿಂದಿನ ಅಧಿಕರಣದಲ್ಲಿ ಚರಮಶ್ರುತವಾದ ದ್ರಷ್ಟೃತ್ವಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸುವುದಕ್ಕಾಗಿ ಪ್ರಥಮಸೂತ್ರದಲ್ಲಿರುವ 'ಭೂತ' 'ಭವತ್' ಮೊದಲಾದವುಗಳಿಗೆ ಗೌಣಾರ್ಥವನ್ನು ಒಪ್ಪಿದ್ದಾರೆಂದು ಗ್ರಂಥದಲ್ಲಿ ಹೇಳಲಾಯಿತು. ಅದರ ವಿವರ ಹೀಗಿದೆ -

'ನಾನ್ಯದತೋऽಸ್ತಿ ದ್ರಷ್ಟಾ' ಎಂಬುದು ವಾಕ್ಯಶೇಷ. ಇದರ ಬಲದಿಂದ 'ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯದಿಂದ ಪರಮಾತ್ಮನಲ್ಲಿರುವ ಸರ್ವದ್ರಷ್ಟೃತ್ವ, ಪ್ರಶಾಸ್ತೃತ್ವ, ಅಸ್ಥೂಲತ್ವ, ಅನಣುತ್ವ ಮೊದಲಾದ ಧರ್ಮಗಳೆಲ್ಲವೂ ಅನನ್ಯಾಧೀನವಾಗಿವೆ ಮತ್ತು ಅಸಂಕುಚಿತವಾಗಿವೆಯೆಂದು ತಿಳಿಯುತ್ತದೆ. ಅನನ್ಯಾಧೀನವು ಅಸಂಕುಚಿತವು ಆಗಿರುವ ಕಾರಣದಿಂದಲೇ ದ್ರಷ್ಟೃತ್ವಾದಿಗಳೆಲ್ಲವೂ ವಿಷ್ಣುವಿನಲ್ಲಿ ಮುಖ್ಯವಾಗಿ ಇರುತ್ತವೆಂದು ಸ್ಪಷ್ಟವಾಗುತ್ತದೆ. ಇದಕ್ಕನುಸಾರಿಯಾಗಿ ಈ ವಾಕ್ಯಕ್ಕಿಂತ ಮೊದಲು ಶ್ರುತವಾದ ಅಕ್ಷರಕ್ಕೆ 'ಪರಮಾತ್ಮ' ಎಂಬರ್ಥವನ್ನೇ ಒಪ್ಪಬೇಕು. ಪರಮಾತ್ಮನೊಬ್ಬನೇ ಆಶ್ರಿತನಾಗಿರುವಿಕೆಯು ಲಕ್ಷ್ಮೀದೇವಿಯಲ್ಲಿ ಮಾತ್ರ ಉಪಪನ್ನವಾಗುತ್ತದೆ. ಇದಕ್ಕನುಸಾರವಾಗಿ ಆಕಾಶಶಬ್ದವು ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯನ್ನೇ ಪ್ರತಿಪಾದಿಸುತ್ತದೆಂದೂ ಸಹ ನಿರ್ಣಯವಾಗುತ್ತದೆ. ಯಾವಾಗ ಆಕಾಶಶಬ್ದದಿಂದ ಚಿತ್‌ಪ್ರಕೃತಿಯೇ ಪ್ರತಿಪಾದ್ಯಳೆಂದು ನಿರ್ಣಯವಾಗುತ್ತದೋ, ಆವಾಗ ಪ್ರಥಮ ಶ್ರುತವಾದ ಭೂತ, ಭವದಾದಿಗಳಿಗೆ ಜಡವಾದ ದೇಹವೆಂಬರ್ಥವನ್ನು ಒಪ್ಪಲು ಸಾಧ್ಯವಿಲ್ಲ. ಜಡಾರ್ಥತ್ವವನ್ನು ಒಪ್ಪಿದರೆ ಪೋಷ್ಯತ್ವಾದಿ ಅರ್ಥವನ್ನು ಹೇಳುವ ಓತತ್ವವು ಅಯುಕ್ತವಾಗುತ್ತವೆ. ಆದ್ದರಿಂದ 'ಭೂತ', 'ಭವತ್' ಮೊದಲಾದವುಗಳಿಗೆ ಶರೀರದ್ವಾರಾ ಚೇತನ ಎಂಬರ್ಥವನ್ನೇ ಒಪ್ಪಬೇಕು. ಚೇತನನು ನಿತ್ಯನಾಗಿದ್ದರೂ ಜಡವಾದ ಶರೀರವು

ಹುಟ್ಟು-ಸಾವುಗಳನ್ನು ಹೊಂದಿರುವ ಕಾರಣ ಭೂತ, ಭವಿಷ್ಯತ್, ವರ್ತಮಾನ ಇತ್ಯಾದಿ ಪ್ರಯೋಗಕ್ಕೆ ವಿಷಯವಾಗುತ್ತದೆ. ಶರೀರದಲ್ಲಿ ಭೂತ, ಭವಿಷ್ಯತ್ ಪ್ರಯೋಗಗಳಿರುವುದರಿಂದ ಗೌಣವಾಗಿ ಜೀವನಲ್ಲಿ ಅದನ್ನು ವ್ಯವಹರಿಸುತ್ತಾರೆ. ಹೀಗೆ ಚರಮಶ್ರುತವಾದ ದ್ರಷ್ಟೃತ್ವಾದಿಗಳಿಗೆ ಮುಖ್ಯಾರ್ಥಗಳನ್ನು ಕೂಡಿಸುವುದಕ್ಕಾಗಿ ಪ್ರಥಮ ಶ್ರುತವಾದ ಭೂತ-ಭವದಾದಿಗಳಿಗೆ ಗೌಣಾರ್ಥವನ್ನು ಹಿಂದಿನ ಅಧಿಕರಣದಲ್ಲಿ ಒಪ್ಪಲಾಗಿದೆ. ಅದರಂತೆ ಈ ಅಧಿಕರಣದಲ್ಲಿಯೂ ಹೇಳಬೇಕು ಎಂದರ್ಥ.

**प्रकाशः** – अन्यथा तत्र भूतभवत्त्वादेर्मुख्यत्वाय भूतं च भवच्चेत्युक्तस्य जडत्वे तदाधारत्वस्य प्रधानेऽपि सम्भवात्सर्वाधारप्रधानाधारस्याक्षरस्य चित्प्रकृतितापत्त्या द्रष्टृत्वादिकमन्याधीनममुख्यं प्राप्नोतीति भावः ।

ಒಂದು ವೇಳೆ ಮೊದಲು ಶ್ರುತವಾದ ಭೂತ-ಭವತ್ತ್ವಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಲು ಹೊರಟರೆ 'ಭೂತಂಚ ಭವಚ್ಚ' ಎಂಬಲ್ಲಿ ಹೇಳಿದ್ದು ಜಡವೆಂದಾಗುತ್ತದೆ. ಅಂತಹ ಜಡಕ್ಕೆ ಆಧಾರವಾದದ್ದು ಪ್ರಕೃತಿಯೆಂದೇ ಹೇಳಬಹುದು. ಹೀಗೆ ಸರ್ವಕ್ಕೂ ಆಧಾರವಾದ ಶ್ರುತಿಯಲ್ಲಿರುವ ಜಡಪ್ರಕೃತಿಗೆ ಆಧಾರವಾದ ಅಕ್ಷರ ಎಂದರೆ ಚಿತ್‌ಪ್ರಕೃತಿಯೆಂದೇ ಹೇಳಲು ಬರುತ್ತದೆ. ಅಂತಹ ಚಿತ್‌ಪ್ರಕೃತಿಯಲ್ಲಿ ದ್ರಷ್ಟೃತ್ವಾದಿಗಳನ್ನು ಮುಖ್ಯವಾಗಿ ಹೇಳಲು ಸಾಧ್ಯವಿಲ್ಲ. ಹೊರತು, ಅನ್ಯಾಧೀನವಾಗಿ ಮತ್ತು ಅಮುಖ್ಯವಾಗಿ ಹೇಳಬೇಕಾಗುತ್ತದೆ. ಆದ್ದರಿಂದ ಚರಮಶ್ರುತವಾದ ದ್ರಷ್ಟೃತ್ವಾದಿಗಳನ್ನೇ ಮುಖ್ಯಾರ್ಥವೆಂದು ಸ್ವೀಕರಿಸುವುದು ಅನಿವಾರ್ಯ.

**प्रकाशः** – एतेन ''पूर्वाधिकरणसिद्धान्तन्यायेन वा पूर्वपक्षोत्थानात्'' इत्येतदुपपादितं बोध्यम् ।

ಹೀಗೆ ಹೇಳಿದ್ದರಿಂದ 'ಪೂರ್ವಾಧಿಕರಣಸಿದ್ಧಾಂತನ್ಯಾಯೇನ ವಾ ಪೂರ್ವಪಕ್ಷೋತ್ಥಾನಾತ್' 'ಹಿಂದಿನ ಅಧಿಕರಣದ ಸಿದ್ಧಾಂತದ ನ್ಯಾಯದಿಂದಲೇ ಪೂರ್ವಪಕ್ಷವು ಹುಟ್ಟುತ್ತದೆ' ಎಂಬ ಗ್ರಂಥದ ಮಾತನ್ನು ಸಮರ್ಥಿಸಿದಂತಾಯಿತು.

**प्रकाशः** – अत्रास्थूलत्वादेरिति वक्तव्ये द्रष्टृत्वादेरिति वचनं तस्य साक्षात् सूत्रोपात्तास्थूलत्वादेरिवास्यापि सिद्धान्तसाधकतासूचनाय । उक्तञ्च बृहदारण्यकभाष्ये ''नान्योऽतोऽस्ति द्रष्टेत्यादियुक्तिभिश्च'' इति ।

ವಾಸ್ತವಿಕವಾಗಿ 'ಅಸ್ಥೂಲತ್ವಾದೇಃ' ಎಂದೇ ಶ್ರುತಿ ಮತ್ತು ಸೂತ್ರ ಇವುಗಳಿಗೆ ಅನುಸಾರಿಯಾಗಿ ಗ್ರಂಥದಲ್ಲಿ ಹೇಳಬೇಕಿತ್ತು. ಆದರೆ 'ದ್ರಷ್ಟೃತ್ವಾದೇಃ' ಎಂದು ಹೇಳಲು ಕಾರಣವಿದೆ. ಏಕೆಂದರೆ ಸೂತ್ರದಲ್ಲಿ ಅಸ್ಥೂಲತ್ವಾದಿಗಳನ್ನು ಸಾಕ್ಷಾತ್ತಾಗಿ ಉಲ್ಲೇಖಿಸುವ ಮೂಲಕ ಸಿದ್ಧಾಂತಸ್ಥಾಪಕಲಿಂಗಗಳೆಂದು ಹೇಗೆ ಹೇಳಿದ್ದಾರೋ, ಅದರಂತೆ ದ್ರಷ್ಟೃತ್ವಾದಿಗಳೂ ಸಹ ಸಿದ್ಧಾಂತಸ್ಥಾಪಕವಾದ ಲಿಂಗಗಳೇ ಆಗಿರುತ್ತದೆಂದು ತಿಳಿಸುವುದಕ್ಕಾಗಿ ಗ್ರಂಥದಲ್ಲಿ 'ದ್ರಷ್ಟೃತ್ವಾದೇಃ' ಎಂದು ಹೇಳಿದ್ದಾರೆ. ಇದನ್ನೇ ಬೃಹದಾರಣ್ಯಕ ಭಾಷ್ಯದಲ್ಲಿ

'ನಾನ್ಯೋಽತೋಽಸ್ತಿ ದ್ರಷ್ಟಾ ಇತ್ಯಾದಿಯುಕ್ತಿಭಿಶ್ಚ' 'ಪರಮಾತ್ಮನನ್ನು ಹೊರತಾಗಿ ಮತ್ತೊಬ್ಬರು ಸ್ವತಂತ್ರವಾದ ದ್ರಷ್ಟುತ್ವಾದಿ ಧರ್ಮಗಳುಳ್ಳವರಲ್ಲ ಇತ್ಯಾದಿ ಯುಕ್ತಿಗಳಿಂದಲೂ ಕೂಡ' ಎಂದು ಹೇಳಲಾಗಿದೆ.

**प्रकाशः – यद्यपि पूर्वं पोष्यत्वाद्यर्थकोतत्वान्यथानुपपत्त्यैव भूतभवत्त्वादेर्गौणत्वं युक्तमिति चरमोतत्वमुख्यत्वाय प्रथमभूतभवत्त्वादेर्गौणत्ववदित्यपि वक्तुं शक्यम् । भाष्यादावनुक्तत्वं चोभयत्र समम् ।**

ಆಕ್ಷೇಪ - ಚರಮಶ್ರುತವಾದದ್ದಕ್ಕೆ ಅನುಸಾರಿಯಾಗಿ ಪ್ರಥಮಶ್ರುತವಾದದ್ದನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕೆಂದು ನೀವು ಸಮರ್ಥಿಸುತ್ತಿದ್ದೀರಿ. ಅದಕ್ಕೋಸ್ಕರ ಅತ್ಯಂತ ಕೊನೆಯಲ್ಲಿ ಕೇಳಿಸುತ್ತಿರುವ ದ್ರಷ್ಟುತ್ವಾದಿಗಳನ್ನು ವಿವಕ್ಷಿಸುವುದಕ್ಕಿಂತ ಭೂತ-ಭವತ್ತ್ವಾದಿಗಳಿಗೆ ಸಮೀಪದಲ್ಲೇ ಇರುವ ಪೋಷ್ಯತ್ವಾದಿ-ಗಳಿಂದಲೇ ಗೌಣಾರ್ಥವನ್ನು ಸ್ವೀಕರಿಸಲು ಬರುತ್ತದೆ. ಹೀಗೆ ಪೋಷ್ಯತ್ವಾದ್ಯರ್ಥವುಳ್ಳ ಓತತ್ವಾದಿಗಳ ಅನ್ಯಥಾನುಪಪತ್ತಿಯಿಂದಲೇ ಭೂತ-ಭವತ್ತ್ವಾದಿಗಳಿಗೆ ಗೌಣಾರ್ಥವನ್ನು ಸ್ವೀಕರಿಸಲು ಬರುವಾಗ ಕೊನೆಯಲ್ಲಿ ಶ್ರುತವಾದ ಓತತ್ವಾದಿಗಳ ಮುಖ್ಯತ್ವಕ್ಕೋಸ್ಕರ ಪ್ರಥಮ ಸೂತ್ರದ ಭೂತಭವತ್ತ್ವಾದಿಗಳಿಗೆ ಗೌಣಾರ್ಥವನ್ನು ಸ್ವೀಕರಿಸಬೇಕೆಂದು ಹೇಳುವುದು ಗುರುಭೂತವಾಗಿದೆ. ಭಾಷ್ಯ-ಟೀಕಾದಿಗಳಲ್ಲಿ ಪೋಷ್ಯತ್ವಾದ್ಯರ್ಥದ ಅನ್ಯಥಾನುಪಪತ್ತಿಯಿಂದ ಗೌಣಾರ್ಥವನ್ನು ಮಾಡಬೇಕೆಂದು ಹೇಳಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಭಾಷ್ಯಾದಿಗಳಲ್ಲಿ ಹೇಳದಿರುವಿಕೆಯು ಎರಡೂ ಪಕ್ಷಗಳಲ್ಲಿಯೂ ಸಮಾನವಾಗಿದೆ. ಚರಮಶ್ರುತವಾದ ದ್ರಷ್ಟುತ್ವಾದಿಗಳ ಅನ್ಯಥಾನುಪಪತ್ತಿಗಳಿಂದಲೂ ಕೂಡ ಪ್ರಥಮ ಶ್ರುತವಾದ ಭೂತಭವತ್ತ್ವಾದಿಗಳಿಗೆ ಗೌಣಾರ್ಥವನ್ನು ಸ್ವೀಕರಿಸಬೇಕೆಂಬುದನ್ನೂ ಸಹ ಭಾಷ್ಯಾದಿಗಳಲ್ಲಿ ಹೇಳಿರುವುದಿಲ್ಲ.

**प्रकाशः – तथापि द्रष्टृत्वादेर्मुख्यत्वमपि तद्गौणतायां बीजमिति दर्शयितुमेवमुक्तम् ।**

ಪರಿಹಾರ - ಹೌದು, ಅತ್ಯಂತ ಸಮೀಪದಲ್ಲೇ ಇರುವ ಪೋಷ್ಯತ್ವಾದ್ಯರ್ಥವುಳ್ಳ ಓತತ್ವಾದಿಗಳ ಅನ್ಯಥಾನುಪಪತ್ತಿಯಿಂದಲೇ ಭೂತ-ಭವತ್ತ್ವಾದಿಗಳಿಗೆ ಗೌಣಾರ್ಥವನ್ನು ಸ್ವೀಕರಿಸಲು ಬರುತ್ತದೆ. ಆದರೆ ದ್ರಷ್ಟುತ್ವಾದಿಗಳ ಮುಖ್ಯತ್ವಕ್ಕೋಸ್ಕರವೂ ಕೂಡ ಭೂತ-ಭವತ್ತ್ವಾದಿಗಳಿಗೆ ಗೌಣಾರ್ಥವನ್ನು ಸ್ವೀಕರಿಸಬಹುದು ಎಂಬ ವಿಷಯವನ್ನು ತಿಳಿಸುವುದಕ್ಕಾಗಿ ಗ್ರಂಥಕಾರರು ಹೀಗೆ ಹೇಳಿದ್ದಾರೆ.

**प्रकाशः – न चास्मिन्पक्षेऽम्बरशब्दितश्रीतत्वाधारतयाऽक्षरस्य ब्रह्मत्वोक्ति-विरोधः ।**

ಪ್ರಶ್ನೆ - ಹಿಂದಿನ ಅಧಿಕರಣದಲ್ಲಿ ಹೇಳಿದ್ದಕ್ಕೆ ಇದು ವಿರುದ್ಧವಾಗಿದೆ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಆಕಾಶಶಬ್ದದಿಂದ ಲಕ್ಷ್ಮೀದೇವಿಯು ಪ್ರತಿಪಾದ್ಯಳಾಗುತ್ತಾಳೆಂದು ಮೊದಲು ಸಮರ್ಥಿಸಿ, ಅನಂತರ 'ಅಂಬರಾಂತಧಾರಕತ್ವ' ಎಂಬ ಲಿಂಗದಿಂದ ಅಕ್ಷರಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು ಸಮರ್ಥಿಸಲಾಯಿತು. ಆದರೆ ಅದಕ್ಕೆ ವಿರುದ್ಧವಾಗಿ ಈಗ ಅಕ್ಷರನು ಬ್ರಹ್ಮನಾಗಿರುವುದರಿಂದ

ತದೇಕಾಶ್ರಿತತ್ವವೆಂಬ ಲಿಂಗದ ಬಲದಿಂದ ಆಕಾಶಶಬ್ದವು ಲಕ್ಷ್ಮೀದೇವಿಯನ್ನು ಪ್ರತಿಪಾದಿಸಬೇಕೆಂದು ಸಮರ್ಥಿಸುತ್ತಿದ್ದೀರಿ. ಇದು ತಪ್ಪಲ್ಲವೇ?

**प्रकाशः** – अक्षरस्य ब्रह्मत्वनिर्णयेनाकाशस्य चित्प्रकृतिपरत्वनिर्णयेऽन्योन्याश्रयश्च स्यादिति वाच्यम् ।

ಮತ್ತೊಂದು ಪ್ರಶ್ನೆ - ಅಕ್ಷರವು ಬ್ರಹ್ಮನೆಂದು ನಿರ್ಣಯವಾದರೆ ಆಕಾಶವು ಚಿತ್‌ಪ್ರಕೃತಿ ಪರವೆಂದು ನಿರ್ಣಯವಾಗುತ್ತದೆ. ಚಿತ್‌ಪ್ರಕೃತಿಯು ಆಕಾಶಶಬ್ದವಾಚ್ಯವಾದರೆ ಅಕ್ಷರಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವೂ ಸಹ ಬರುತ್ತದೆ.

**प्रकाशः** – अस्मिन्पक्षेऽम्बरान्तधृतिहेतोरविवक्षितत्वात् । द्रष्टृत्वादिनैवाक्षरस्य ब्रह्मत्वनिर्णयेऽन्योन्याश्रयाभावाच्च ।

ಪರಿಹಾರ - ಈ ಎರಡೂ ಪ್ರಶ್ನೆಗಳಿಗೆ ಹೀಗೆ ಉತ್ತರಿಸಬಹುದು. ದ್ರಷ್ಟೃತ್ವಾದಿಗಳ ಬಲದಿಂದ ಬ್ರಹ್ಮನೇ ಅಕ್ಷರಶಬ್ದದಿಂದ ವಾಚ್ಯನಾಗುತ್ತಾನೆಂದು ಈಗ ಪ್ರತಿಪಾದಿಸುತ್ತಿದ್ದೇವೆ. ಈ ಸಂದರ್ಭದಲ್ಲಿ ಅಂಬರಾಂತಧಾರಕತ್ವವೆಂಬ ಹೇತುವನ್ನು ವಿವಕ್ಷಿಸುವುದಿಲ್ಲ. ಆದ್ದರಿಂದ ಅಂಬರಾಂತಧಾರಕತ್ವದ ಬಲದಿಂದ ಏನನ್ನೂ ಸಹ ನಿರ್ಣಯಿಸದ ಕಾರಣ ಹಿಂದಿನ ಅಧಿಕರಣದಿಂದ ವಿರೋಧವು ಬರುವುದಿಲ್ಲ. ಮತ್ತು ದ್ರಷ್ಟೃತ್ವಾದಿಗಳ ಬಲದಿಂದಲೇ ಬ್ರಹ್ಮನು ಅಕ್ಷರನೆಂದು ನಿರ್ಣಯವಾಗುತ್ತಿರುವ ಕಾರಣ, ಅನ್ಯೋನ್ಯಾಶ್ರಯಕ್ಕೂ ಕೂಡ ಅವಕಾಶವಿಲ್ಲ. ಒಂದು ವೇಳೆ ಆಕಾಶವು ಚಿತ್‌ಪ್ರಕೃತಿಪರವಾಗುತ್ತದೆಂದು ನಿರ್ಣಯ ಮಾಡುವ ಮೂಲಕ ಅಕ್ಷರಕ್ಕೆ ಬ್ರಹ್ಮತ್ವವನ್ನು ನಿರ್ಣಯ ಮಾಡಿದ್ದಲ್ಲಿ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿರುತ್ತಿತ್ತು.

**प्रकाशः** – अत एव पूर्वत्राद्यहेतुसमर्थनायोतत्वमुखेनैवाकाशस्य चित्प्रकृतिपरत्वमुक्तम् ।

ಆದ್ದರಿಂದಲೇ ಇನ್ನೊಂದು ಪ್ರಮೇಯವನ್ನು ತಿಳಿಸಿದಂತಾಯಿತು. ಗ್ರಂಥಕಾರರು ಹಿಂದೆ ದ್ರಷ್ಟೃತ್ವಾದಿ ಯುಕ್ತಿಗಳನ್ನು ಉಪಯೋಗಿಸದೆ ಓತತ್ವಾದಿ ಧರ್ಮಗಳ ಮುಖಾಂತರವೇ ಭೂತ-ಭವತು ಮೊದಲಾದ ಪದಗಳಿಗೆ ಚೇತನಪರತ್ವವನ್ನು ಸಮರ್ಥಿಸಿದ್ದಾರೆ. ಏಕೆಂದರೆ ಅಂಬರಾಂತಧಾರಕತ್ವವೆಂಬ ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಹೇತುವನ್ನು ಸಮರ್ಥಿಸುವುದಕ್ಕಾಗಿ ದ್ರಷ್ಟೃತ್ವಾದಿಗಳನ್ನು ಹೇಳಬಾರದು. ಓತತ್ವಾದಿ ಹೇತುಗಳನ್ನೇ ಹೇಳಬೇಕು. ಆದರೆ ಪ್ರಕೃತ ಪ್ರಥಮಹೇತು ಸಮರ್ಥನದ ಪ್ರಸಂಗವಿಲ್ಲ. ಪ್ರಥಮಶ್ರುತವಾದದ್ದಕ್ಕೆ ಗೌಣಾರ್ಥವನ್ನು ವಿವಕ್ಷಿಸಬಹುದೆಂದು ತಿಳಿಸಲು ದೂರದಲ್ಲಿರುವ ದ್ರಷ್ಟೃತ್ವಾದಿಗಳನ್ನು ಹೇತುವನ್ನಾಗಿ ಸ್ವೀಕರಿಸಿದ್ದಾರೆ.

**प्रकाशः** – केचित्तु आकाशः किं प्रधानं चित्प्रकृतिर्वेति विशये भूतभवत्त्वादेर्मुख्यत्वाय प्रधानमिति प्राप्ते स्वतन्त्रद्रष्टृत्वादेर्मुख्यत्वायाक्षरस्य ब्रह्मतया

तदेकाश्रितत्वलिङ्गेनाकाशस्य श्रीतत्वपरतया तत्पोष्यत्वनिर्वाहाय भूतत्वादिकं गौणं यथेति विचारान्तराभिप्रायेणैतदित्याहुः ।

ಕೆಲವರ ವಿಚಾರವು ಹೀಗಿದೆ-ಆಕಾಶವು ಪ್ರಧಾನವೋ? ಅಥವಾ ಚಿತ್‌ಪ್ರಕೃತಿಯೋ? ಎಂಬ ಸಂಶಯವು ಬಂದರೆ ಭೂತ-ಭವತ್ತ್ವಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಬೇಕಾದ್ದರಿಂದ ಪ್ರಧಾನವೇ ಆಕಾಶವೆಂದು ಪೂರ್ವಪಕ್ಷ. ಸ್ವತಂತ್ರವಾದ ದ್ರಷ್ಟೃತ್ವಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಬೇಕಾದ್ದರಿಂದ ಅಕ್ಷರಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆ. 'ತದೇಕಾಶ್ರಿತತ್ವ' ಎಂಬ ಲಿಂಗದಿಂದ ಆಕಾಶವು ಶ್ರೀತತ್ವಪರವಾಗುತ್ತದೆ. ಇಂತಹ ಶ್ರೀತತ್ವದಿಂದ ಪೋಷ್ಯವಾಗಿರುವಿಕೆಯನ್ನು ಕೂಡಿಸುವುದಕ್ಕಾಗಿ ಭೂತತ್ತ್ವಾದಿಗಳಿಗೆ ಗೌಣಾರ್ಥವನ್ನು ಸ್ವೀಕರಿಸಬೇಕು. ಹೀಗೆ ಹಿಂದಿನ ಅಧಿಕರಣದಿಂದ ಏನೂ ಸಂಬಂಧವಿಲ್ಲದೇ ಬೇರೆ ವಿಚಾರವೇ ಹೊರಟಿರುವುದರಿಂದ ಯಾವುದೇ ಬಾಧಕಗಳಿಲ್ಲವೆಂದು ಹೇಳುತ್ತಾರೆ.

**प्रकाशः** – पूर्वतन्त्रादौ प्रथमेन चरमस्य बाधोक्तावपीह पूर्वसिद्धान्तन्यायेनात्र चरमेण पूर्वस्य बाधशङ्कनादत्र शास्त्रे चरमस्यैव प्राबल्याश्रयणाच्चरमेण पूर्वस्य बाधोक्तिरदोषायेति भावः ।

ಪ್ರಶ್ನೆ - ಪೂರ್ವಮೀಮಾಂಸೆಯಲ್ಲಿ ಪ್ರಥಮ ಶ್ರುತವಾದ ಲಿಂಗವನ್ನು ಅನುಸರಿಸಿ, ಚರಮಶ್ರುತವಾದದ್ದಕ್ಕೆ ಗೌಣಾರ್ಥವನ್ನು ಸ್ವೀಕರಿಸಬೇಕೆಂದು ಸಿದ್ಧಾಂತ ಮಾಡುತ್ತಾರೆ. ಆದರೆ ಅದಕ್ಕೆ ವಿರುದ್ಧವಾಗಿ ನೀವು ಹೇಳುವುದು ತಪ್ಪಲ್ಲವೇ?

ಉತ್ತರ - ಪೂರ್ವಮೀಮಾಂಸಾಕಾರರ ಪ್ರಕಾರ ಉಪಕ್ರಮವು ಪ್ರಬಲವಾಗಿರುತ್ತದೆ. ನಮ್ಮ ಸಿದ್ಧಾಂತದಲ್ಲಿ ಉಪಸಂಹಾರವೇ ಪ್ರಬಲವಾದ್ದರಿಂದ ಉಪಸಂಹಾರಕ್ಕೆ ಅನುಸಾರಿಯಾಗಿ ಉಪಕ್ರಮಕ್ಕೆ ಗೌಣಾರ್ಥವನ್ನು ಮಾಡುವುದು ತಪ್ಪಲ್ಲವೆಂದು ತಿಳಿಯಬೇಕು.

**गुरुराजीयम्** – ननु ब्रह्मपक्षे विकारस्येव प्रधानपक्ष ईक्षणस्य गौणत्वादीक्षणस्य गौणत्वमङ्गीकृत्य प्रधानस्य सच्छब्दार्थत्ववद्विकारस्य गौणत्वमभ्युपेत्य ब्रह्मण एव सच्छब्दार्थत्वमिति किं न स्यात् । विशेषनियामकाभावादित्यत आह – **युक्तश्चेति** ।।




'ವಿಕಾರ-ತದಭಾವ' ಎಂಬ ಹೇತುವಿನಿಂದ ಬ್ರಹ್ಮನು 'ಸತ್' ಶಬ್ದದಿಂದ ವಾಚ್ಯನಾಗುವುದಿಲ್ಲವೆಂದು ಸಮರ್ಥಿಸಲಾಯಿತು. ಹಾಗಾದರೆ 'ತದೈಕ್ಷತ' ಎಂಬ ಶ್ರುತಿಯು 'ಸತ್' ಪದಾರ್ಥದಲ್ಲಿ ಈಕ್ಷಣವನ್ನು ಹೇಳುತ್ತಿದೆ. ಇದು ಪ್ರಕೃತಿಯಲ್ಲಿ ಬಾರದ ಕಾರಣ ಬ್ರಹ್ಮನಂತೆ ಪ್ರಕೃತಿಯೂ ಕೂಡ 'ಸತ್' ಶಬ್ದದಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲವಲ್ಲವೇ?

ತದೇಕಾಶ್ರಿತತ್ವವೆಂಬ ಲಿಂಗದ ಬಲದಿಂದ ಆಕಾಶಶಬ್ದವು ಲಕ್ಷ್ಮೀದೇವಿಯನ್ನು ಪ್ರತಿಪಾದಿಸಬೇಕೆಂದು ಸಮರ್ಥಿಸುತ್ತಿದ್ದೀರಿ. ಇದು ತಪ್ಪಲ್ಲವೇ?

**प्रकाशः –** अक्षरस्य ब्रह्मत्वनिर्णयेनाकाशस्य चित्प्रकृतिपरत्वनिर्णयेऽन्योन्याश्रयश्च स्यादिति वाच्यम् ।

ಮತ್ತೊಂದು ಪ್ರಶ್ನೆ - ಅಕ್ಷರವು ಬ್ರಹ್ಮನೆಂದು ನಿರ್ಣಯವಾದರೆ ಆಕಾಶವು ಚಿತ್‌ಪ್ರಕೃತಿ ಪರವೆಂದು ನಿರ್ಣಯವಾಗುತ್ತದೆ. ಚಿತ್‌ಪ್ರಕೃತಿಯು ಆಕಾಶಶಬ್ದವಾಚ್ಯವಾದರೆ ಅಕ್ಷರಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವೂ ಸಹ ಬರುತ್ತದೆ.

**प्रकाशः –** अस्मिन्पक्षेऽम्बरान्तधृतिहेतोरविवक्षितत्वात् । द्रष्टृत्वादिनैवाक्षरस्य ब्रह्मत्वनिर्णयेऽन्योन्याश्रयाभावाच्च ।

ಪರಿಹಾರ - ಈ ಎರಡೂ ಪ್ರಶ್ನೆಗಳಿಗೆ ಹೀಗೆ ಉತ್ತರಿಸಬಹುದು. ದ್ರಷ್ಟೃತ್ವಾದಿಗಳ ಬಲದಿಂದ ಬ್ರಹ್ಮನೇ ಅಕ್ಷರಶಬ್ದದಿಂದ ವಾಚ್ಯನಾಗುತ್ತಾನೆಂದು ಈಗ ಪ್ರತಿಪಾದಿಸುತ್ತಿದ್ದೇವೆ. ಈ ಸಂದರ್ಭದಲ್ಲಿ ಅಂಬರಾಂತಧಾರಕತ್ವವೆಂಬ ಹೇತುವನ್ನು ವಿವಕ್ಷಿಸುವುದಿಲ್ಲ. ಆದ್ದರಿಂದ ಅಂಬರಾಂತಧಾರಕತ್ವದ ಬಲದಿಂದ ಏನನ್ನೂ ಸಹ ನಿರ್ಣಯಿಸದ ಕಾರಣ ಹಿಂದಿನ ಅಧಿಕರಣದಿಂದ ವಿರೋಧವು ಬರುವುದಿಲ್ಲ. ಮತ್ತು ದ್ರಷ್ಟೃತ್ವಾದಿಗಳ ಬಲದಿಂದಲೇ ಬ್ರಹ್ಮನು ಅಕ್ಷರನೆಂದು ನಿರ್ಣಯವಾಗುತ್ತಿರುವ ಕಾರಣ, ಅನ್ಯೋನ್ಯಾಶ್ರಯಕ್ಕೂ ಕೂಡ ಅವಕಾಶವಿಲ್ಲ. ಒಂದು ವೇಳೆ ಆಕಾಶವು ಚಿತ್‌ಪ್ರಕೃತಿಪರವಾಗುತ್ತದೆಂದು ನಿರ್ಣಯ ಮಾಡುವ ಮೂಲಕ ಅಕ್ಷರಕ್ಕೆ ಬ್ರಹ್ಮತ್ವವನ್ನು ನಿರ್ಣಯ ಮಾಡಿದ್ದಲ್ಲಿ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿರುತ್ತಿತ್ತು.

**प्रकाशः –** अत एव पूर्वत्राद्यहेतुसमर्थनायोतत्वमुखेनैवाकाशस्य चित्प्रकृति-परत्वमुक्तम् ।

ಆದ್ದರಿಂದಲೇ ಇನ್ನೊಂದು ಪ್ರಮೇಯವನ್ನು ತಿಳಿಸಿದಂತಾಯಿತು. ಗ್ರಂಥಕಾರರು ಹಿಂದೆ ದ್ರಷ್ಟೃತ್ವಾದಿ ಯುಕ್ತಿಗಳನ್ನು ಉಪಯೋಗಿಸದೆ ಓತತ್ವಾದಿ ಧರ್ಮಗಳ ಮುಖಾಂತರವೇ ಭೂತ-ಭವತು ಮೊದಲಾದ ಪದಗಳಿಗೆ ಚೇತನಪರತ್ವವನ್ನು ಸಮರ್ಥಿಸಿದ್ದಾರೆ. ಏಕೆಂದರೆ ಅಂಬರಾಂತಧಾರಕತ್ವವೆಂಬ ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಹೇತುವನ್ನು ಸಮರ್ಥಿಸುವುದಕ್ಕಾಗಿ ದ್ರಷ್ಟೃತ್ವಾದಿಗಳನ್ನು ಹೇಳಬಾರದು. ಓತತ್ವಾದಿ ಹೇತುಗಳನ್ನೇ ಹೇಳಬೇಕು. ಆದರೆ ಪ್ರಕೃತ ಪ್ರಥಮಹೇತು ಸಮರ್ಥನದ ಪ್ರಸಂಗವಿಲ್ಲ. ಪ್ರಥಮಶ್ರುತವಾದದ್ದಕ್ಕೆ ಗೌಣಾರ್ಥವನ್ನು ವಿವಕ್ಷಿಸಬಹುದೆಂದು ತಿಳಿಸಲು ದೂರದಲ್ಲಿರುವ ದ್ರಷ್ಟೃತ್ವಾದಿಗಳನ್ನು ಹೇತುವನ್ನಾಗಿ ಸ್ವೀಕರಿಸಿದ್ದಾರೆ.

**प्रकाशः –** केचित्तु आकाशः किं प्रधानं चित्प्रकृतिर्वेति विशये भूतभवत्त्वादेर्मुख्यत्वाय प्रधानमिति प्राप्ते स्वतन्त्रद्रष्टृत्वादेर्मुख्यत्वायाक्षरस्य ब्रह्मतया

तदेकाश्रितत्वलिङ्गेनाकाशस्य श्रीतत्वपरतया तत्पोष्यत्वनिर्वाहाय भूतत्वादिकं गौणं यथेति विचारान्तराभिप्रायेणैतदित्याहुः ।

ಕೆಲವರ ವಿಚಾರವು ಹೀಗಿದೆ-ಆಕಾಶವು ಪ್ರಧಾನವೋ? ಅಥವಾ ಚಿತ್‌ಪ್ರಕೃತಿಯೋ? ಎಂಬ ಸಂಶಯವು ಬಂದರೆ ಭೂತ-ಭವತ್ವಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಬೇಕಾದ್ದರಿಂದ ಪ್ರಧಾನವೇ ಆಕಾಶವೆಂದು ಪೂರ್ವಪಕ್ಷ. ಸ್ವತಂತ್ರವಾದ ದ್ರಷ್ಟೃತ್ವಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಬೇಕಾದ್ದರಿಂದ ಅಕ್ಷರಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆ. 'ತದೇಕಾಶ್ರಿತತ್ವ' ಎಂಬ ಲಿಂಗದಿಂದ ಆಕಾಶವು ಶ್ರೀತತ್ವಪರವಾಗುತ್ತದೆ. ಇಂತಹ ಶ್ರೀತತ್ವದಿಂದ ಪೋಷ್ಯವಾಗಿರುವಿಕೆಯನ್ನು ಕೂಡಿಸುವುದಕ್ಕಾಗಿ ಭೂತತ್ವಾದಿಗಳಿಗೆ ಗೌಣಾರ್ಥವನ್ನು ಸ್ವೀಕರಿಸಬೇಕು. ಹೀಗೆ ಹಿಂದಿನ ಅಧಿಕರಣದಿಂದ ಏನೂ ಸಂಬಂಧವಿಲ್ಲದೇ ಬೇರೆ ವಿಚಾರವೇ ಹೊರಟಿರುವುದರಿಂದ ಯಾವುದೇ ಬಾಧಕಗಳಿಲ್ಲವೆಂದು ಹೇಳುತ್ತಾರೆ.

**प्रकाशः** – पूर्वतन्त्रादौ प्रथमेन चरमस्य बाधोक्तावपीह पूर्वसिद्धान्तन्यायेनात्र चरमेण पूर्वस्य बाधशङ्कनादत्र शास्त्रे चरमस्यैव प्राबल्याश्रयणाच्चरमेण पूर्वस्य बाधोक्तिरदोषायेति भावः ।

ಪ್ರಶ್ನೆ - ಪೂರ್ವಮೀಮಾಂಸೆಯಲ್ಲಿ ಪ್ರಥಮ ಶ್ರುತವಾದ ಲಿಂಗವನ್ನು ಅನುಸರಿಸಿ, ಚರಮಶ್ರುತವಾದದ್ದಕ್ಕೆ ಗೌಣಾರ್ಥವನ್ನು ಸ್ವೀಕರಿಸಬೇಕೆಂದು ಸಿದ್ಧಾಂತ ಮಾಡುತ್ತಾರೆ. ಆದರೆ ಅದಕ್ಕೆ ವಿರುದ್ಧವಾಗಿ ನೀವು ಹೇಳುವುದು ತಪ್ಪಲ್ಲವೇ?

ಉತ್ತರ - ಪೂರ್ವಮೀಮಾಂಸಾಕಾರರ ಪ್ರಕಾರ ಉಪಕ್ರಮವು ಪ್ರಬಲವಾಗಿರುತ್ತದೆ. ನಮ್ಮ ಸಿದ್ಧಾಂತದಲ್ಲಿ ಉಪಸಂಹಾರವೇ ಪ್ರಬಲವಾದ್ದರಿಂದ ಉಪಸಂಹಾರಕ್ಕೆ ಅನುಸಾರಿಯಾಗಿ ಉಪಕ್ರಮಕ್ಕೆ ಗೌಣಾರ್ಥವನ್ನು ಮಾಡುವುದು ತಪ್ಪಲ್ಲವೆಂದು ತಿಳಿಯಬೇಕು.

**गुरुराजीयम्** – ननु ब्रह्मपक्षे विकारस्येव प्रधानपक्ष ईक्षणस्य गौणत्वादीक्षणस्य गौणत्वमङ्गीकृत्य प्रधानस्य सच्छब्दार्थत्ववद्विकारस्य गौणत्वमभ्युपेत्य ब्रह्मण एव सच्छब्दार्थत्वमिति किं न स्यात् । विशेषनियामकाभावादित्यत आह – **युक्तश्चेति** ।।




'ವಿಕಾರ-ತದಭಾವ' ಎಂಬ ಹೇತುವಿನಿಂದ ಬ್ರಹ್ಮನು 'ಸತ್' ಶಬ್ದದಿಂದ ವಾಚ್ಯನಾಗುವುದಿಲ್ಲವೆಂದು ಸಮರ್ಥಿಸಲಾಯಿತು. ಹಾಗಾದರೆ 'ತದೈಕ್ಷತ' ಎಂಬ ಶ್ರುತಿಯು 'ಸತ್' ಪದಾರ್ಥದಲ್ಲಿ ಈಕ್ಷಣವನ್ನು ಹೇಳುತ್ತಿದೆ. ಇದು ಪ್ರಕೃತಿಯಲ್ಲಿ ಬಾರದ ಕಾರಣ ಬ್ರಹ್ಮನಂತೆ ಪ್ರಕೃತಿಯೂ ಕೂಡ 'ಸತ್' ಶಬ್ದದಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲವಲ್ಲವೇ?

ಹೀಗೆ ಪ್ರಶ್ನಿಸಬಾರದು. ಶ್ರುತಿಯಲ್ಲಿರುವ ಈಕ್ಷಣಕ್ಕೆ ಗೌಣಾರ್ಥವನ್ನು ಅನಿವಾರ್ಯವಾಗಿ ಆಶ್ರಯಿಸಬೇಕು. ಜ್ಞಾನವು ಹುಟ್ಟಬೇಕೆಂದರೆ ಸತ್ವಗುಣವಿರಬೇಕೆಂದು ಗೀತೆಯು ಹೇಳಿದೆ. ಇಂತಹ ಸತ್ವಗುಣಕ್ಕೆ ಪ್ರಕೃತಿಯು ಆಶ್ರಯವಾದ್ದರಿಂದ, ಪ್ರಕೃತಿಯನ್ನು ಶ್ರುತಿಯು ಜ್ಞಾನವುಳ್ಳದ್ದೆಂದು ಕರೆಯುತ್ತಿದೆ. ಅಥವಾ ಅಭಿಮಾನಿದೇವತೆಯಲ್ಲಿರುವ ಜ್ಞಾನವನ್ನು ಅಭಿಮನ್ಯವಾದ ಪ್ರಕೃತಿಯಲ್ಲಿ ಪ್ರಯೋಗಿಸಲಾಗಿದೆ. ಹೀಗೆ ಗೌಣಾರ್ಥವನ್ನು ಮಾಡುವುದೇ ಅನಿವಾರ್ಯ. ಇಲ್ಲದಿದ್ದರೆ, 'ತತ್ತೇಜ ಐಕ್ಷತ' 'ತಾ ಆಪ ಐಕ್ಷಂತ' ಇತ್ಯಾದಿ ಸ್ಥಳಗಳಲ್ಲಿ ತೇಜಸ್ಸು, ನೀರು ಮೊದಲಾದವುಗಳಲ್ಲಿಯೂ ಜ್ಞಾನದ ಅಸ್ತಿತ್ವವನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಶ್ರುತಿಯ ಹಿಂದಿನ-ಮುಂದಿನ ವಾಕ್ಯಗಳೆಲ್ಲಾ ಜಡಪದಾರ್ಥಗಳಲ್ಲಿ ಜ್ಞಾನದ ಇರುವಿಕೆಯನ್ನು ಹೇಳಿದ್ದು ಮೇಲ್ನೋಟಕ್ಕೆ ಕಂಡರೂ ಕೂಡ, ಗೌಣಾರ್ಥವನ್ನೇ ಮಾಡಬೇಕೆಂದು ಸ್ಪಷ್ಟವಾಗುತ್ತದೆ. ಪ್ರಾಯಪಾಠದ ಬಲದಿಂದ 'ಸತ್' ಪದಾರ್ಥದಲ್ಲಿ ಕೇಳಿಸುತ್ತಿರುವ ಜ್ಞಾನವೂ ಕೂಡ ಗೌಣವೆಂದೇ ತಿಳಿಯಬೇಕು.

ಈಕ್ಷಣವನ್ನು ಗೌಣವನ್ನಾಗಿ ಸ್ವೀಕರಿಸದೇ ಮುಖ್ಯವೆಂದೇ ಸ್ವೀಕರಿಸಿ, ವಿಕಾರವನ್ನು ಗೌಣವೆಂದು ಹೇಳಿದಾಗ ಬ್ರಹ್ಮನು 'ಸತ್' ಶಬ್ದದಿಂದ ವಾಚ್ಯನಾಗಬಹುದು. ಆದರೆ ಉಪಕ್ರಮಕ್ಕಿಂತ ಉಪಸಂಹಾರವೇ ಪ್ರಬಲವೆಂಬುದು ನಮ್ಮ ಸಿದ್ಧಾಂತ. ಆದ್ದರಿಂದ ಚರಮಶ್ರುತವಾದ ವಿಕಾರವನ್ನು ಮುಖ್ಯವೆಂದು ಸ್ವೀಕರಿಸಬೇಕೆಂದರೆ ಪ್ರಥಮ ಶ್ರುತವಾದ ಈಕ್ಷಣಕ್ಕೆ ಗೌಣಾರ್ಥವನ್ನು ಸ್ವೀಕರಿಸುವುದು ನ್ಯಾಯಸಮ್ಮತವಾಗಿದೆ. ಆದ್ದರಿಂದ ಪ್ರಕೃತಿಯು 'ಸತ್' ಶಬ್ದದಿಂದ ಪ್ರತಿಪಾದ್ಯವಾಗುತ್ತದೆ.

////////////////////////////////////////

● ● ● ● ●

## ಈಕ್ಷಣಾದಿಗಳನ್ನು ಗೌಣವೆಂದೊಪ್ಪಿ - ಪ್ರಥಮ ಪೂರ್ವಪಕ್ಷ

## तात्पर्यचन्द्रिका

**नन्वेवं प्रधानस्योपादानत्वेऽपि निमित्तत्वं ब्रह्मण एवेति ''सतः स्रष्टृत्वमुच्यते'' इति भाष्योक्तजन्मादिसूत्राक्षेपो न युक्त इति चेदुच्यते ।**

ಅನುವಾದ - ಆಕ್ಷೇಪ - ಪ್ರಧಾನವು ಜಗತ್ತಿಗೆ ಉಪಾದಾನಕಾರಣವಾಗಿರುತ್ತದೆ. ಬ್ರಹ್ಮನು ನಿಮಿತ್ತಕಾರಣನಾಗಿರುತ್ತಾನೆ. ಹೀಗೆ ಹೇಳುವುದರಿಂದಲೂ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳಲು ಬರುವುದರಿಂದ 'ಸತಃ ಸ್ರಷ್ಟೃತ್ವಮುಚ್ಯತೇ' ಎಂಬ ಭಾಷ್ಯದಲ್ಲಿ ಜನ್ಮಾದಿಸೂತ್ರವನ್ನು ಆಕ್ಷೇಪ ಮಾಡಿದ್ದು ಯುಕ್ತವಾಗುವುದಿಲ್ಲ. ಆದ್ದರಿಂದ ಬ್ರಹ್ಮನೂ 'ಸತ್' ಶಬ್ದದಿಂದ ವಾಚ್ಯನಾಗಬಹುದಲ್ಲವೇ?

ಸಮಾಧಾನ - ಇದು ತಪ್ಪು. ಈ ಪ್ರಶ್ನೆಗೆ ಒಟ್ಟು ಐದು ಬಗೆಯಲ್ಲಿ ಉತ್ತರಿಸಬಹುದು. ಮೊದಲಿನ ಉತ್ತರ ಹೀಗಿದೆ -

**'सदेव' इत्यवधारणेन प्रधानातिरिक्तकारणव्यवच्छेदात् सर्वाणि कारणवाक्यानि प्रधानपराणि ।**

ಪರಿಪೂರ್ಣಚಂದ್ರಿಕಾ

'ಸದೇವ ಸೋಮ್ಯ' ಇತ್ಯಾದಿಯಾಗಿ ಶ್ರುತಿಯಲ್ಲಿ ಏವಕಾರದಿಂದ ಅನ್ಯಯೋಗವ್ಯವಚ್ಛೇದ ಮಾಡಲಾಗಿದೆ. ಅಂದರೆ ಪ್ರಧಾನವನ್ನು ಬಿಟ್ಟು ಬೇರೆ ಯಾವುದೇ ಪದಾರ್ಥವೂ ಸಹ ಜಗತ್ಕಾರಣವಾಗುವುದಿಲ್ಲವೆಂದು ನಿರಾಕರಿಸುತ್ತಿದೆ. ಇದರಿಂದ ಶ್ರುತಿಯಲ್ಲಿರುವ ಜಗತ್ಕಾರಣತ್ವವನ್ನು ಪ್ರತಿಪಾದಿಸುವ ಸಕಲ ವಾಕ್ಯಗಳೂ ಕೂಡ ಪ್ರಧಾನಪರವೇ ಆಗಿವೆಯೆಂದು ನಿಶ್ಚಯಿಸಬಹುದು.

**प्रधानस्य परिणामश्च क्षीरस्य दधिभाववच्चेतननिरपेक्षोऽभिमानिचेतनमात्र-सापेक्षो वा ।**

ಜಡವಾದ ಪ್ರಧಾನಕ್ಕೆ ಪರಿಣಾಮವಾದರೂ ಸ್ವತಂತ್ರವಾಗಿ ಉಂಟಾಗಲು ಹೇಗೆ ಸಾಧ್ಯ ? ಎಂದರೆ ಜಡಭೂತವಾದ ಕ್ಷೀರವು ಸ್ವತಂತ್ರವಾಗಿ ದಧಿಭಾವವನ್ನು ಹೊಂದುವಂತೆ ಚೇತನನಿರಪೇಕ್ಷವಾಗಿಯೇ ಪ್ರಧಾನವು ಜಗತ್ತಿಗೆ ಕಾರಣವಾಗುತ್ತದೆ. ಅಥವಾ ಅಭಿಮಾನಿಯಾದ ಕೇವಲ ಚೇತನದ ಅಪೇಕ್ಷೆಯಿಂದಷ್ಟೇ ಜಗತ್ಕಾರಣವಾಗುತ್ತದೆಂದೂ ಕೂಡ ಹೇಳಬಹುದು.

**तथाचेश्वरस्य कारणतैव नेति वा श्रुत्यन्तरेणेश्वरस्य कारणत्वेऽपीहाद्वितीयपद-सन्निधानात्प्रतीतानन्याधीनकारणता प्रधानस्यापीति वा पूर्वः पक्षः ।**

ಆದ್ದರಿಂದ ಈಶ್ವರನಿಗೆ ಜಗತ್ಕಾರಣತ್ವವೇ ಇಲ್ಲವೆಂದು ಪೂರ್ವಪಕ್ಷವನ್ನು ಹೇಳಿದಂತಾಯಿತು. ಅಥವಾ 'ಯತೋ ವಾ ಇಮಾನಿ ಭೂತಾನಿ' ಇತ್ಯಾದಿ ಶ್ರುತ್ಯಂತರದಿಂದ ಈಶ್ವರನಿಗೆ ಜಗತ್ಕಾರಣತ್ವವಿದ್ದರೂ ಸಹ ಪ್ರಕೃತ 'ಅದ್ವಿತೀಯ' ಪದದ ಸನ್ನಿಧಾನವಿರುವ ಕಾರಣ ಸ್ವತಂತ್ರವಾದ ಕಾರಣತ್ವವು ಪ್ರಧಾನಕ್ಕೂ ಸಹ ಇರುತ್ತದೆಂದು ಹೇಳಬಹುದು. ಈಶ್ವರನಿಗೆ ಕಾರಣತ್ವವೇ ಇಲ್ಲವೆಂದು ಹೇಳಿದಾಗ, ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವ ಲಕ್ಷಣಕ್ಕೆ ಅಸಂಭವದೋಷವನ್ನು ಹೇಳಿದಂತಾಗುತ್ತದೆ. ಈಶ್ವರನು ಜಗತ್ಕಾರಣನಾದರೂ ಕೂಡ ಸ್ವತಂತ್ರವಾದ ಕಾರಣ ಪ್ರಕೃತಿಯೇ ಆಗುತ್ತದೆಂದು ಹೇಳಿದಾಗ ಅತಿವ್ಯಾಪ್ತಿದೋಷವನ್ನು ಹೇಳಿದಂತಾಗುತ್ತದೆ.

**एवञ्च श्रुतौ भाष्ये च स्रष्टृत्वव्यपदेशो लक्षणया कारणत्वमात्रपरः ।**

ಹೀಗೆ ಹೇಳಿದ್ದರಿಂದ ಶ್ರುತಿಯಲ್ಲಿ ಮತ್ತು ಭಾಷ್ಯದಲ್ಲಿ 'ಅಸೃಜತಃ' ಇತ್ಯಾದಿಯಾಗಿ ಸ್ರಷ್ಟೃತ್ವವನ್ನು ಹೇಳಿದ್ದು ಲಕ್ಷಣಯಾ ಕಾರಣತ್ವ ಸಾಮಾನ್ಯವಾಚಕವೆಂದು ತಿಳಿಯಬೇಕು. ಅಂದರೆ ಕಾರಣತ್ವ ಸಾಮಾನ್ಯವನ್ನು ಹೇಳಿದಾಗ ಪ್ರಕೃತಿಯಲ್ಲಿ ಉಪಾದಾನಕಾರಣತ್ವವನ್ನು ವಿವಕ್ಷಿಸಲು ಬರುತ್ತದೆ.

**गौण्याऽनन्याधीनकारणत्वपरो वा । प्रधानाभिमानिचेतनस्य स्रष्टृत्वपरो वा ।**

ಅಥವಾ ಗೌಣೀವೃತ್ತಿಯಿಂದ ಅನನ್ಯಾಧೀನವಾದ ಕಾರಣತ್ವವನ್ನು ವಿವಕ್ಷಿಸಬಹುದು. ಅಥವಾ ಪ್ರಧಾನಾಭಿಮಾನಿಯಾದ ಚೇತನನಲ್ಲಿರುವ ಸ್ರಷ್ಟೃತ್ವವನ್ನೂ ಸಹ ಶ್ರುತಿ ಹಾಗೂ ಭಾಷ್ಯಗಳಲ್ಲಿ ಹೇಳಲಾಗಿದೆಯೆಂದು ವಿವಕ್ಷಿಸಬಹುದು.

**तथाचेक्षणादेर्गौणत्वेन प्रधानस्यास्रष्टृत्वेऽपि जन्मादिसूत्रोक्तकारणत्व-सामान्यस्य वाऽनन्याधीनकारणत्वस्य वा स्रष्टृत्वस्य वाऽऽक्षेपो युक्तः ।**

ಇಲ್ಲಿಯ ತನಕ ಇಷ್ಟು ಆಕ್ಷೇಪ ಮಾಡಿದಂತಾಯಿತು - ಶ್ರುತಿಯಲ್ಲಿರುವ ಈಕ್ಷಣಾದಿಗಳು ಗೌಣವಾದ್ದರಿಂದ ಪ್ರಧಾನಕ್ಕೆ ಸ್ರಷ್ಟೃತ್ವವು ಇಲ್ಲದಿದ್ದರೂ ಕಾರಣತ್ವವು ಉಪಪನ್ನವಾಗುತ್ತದೆ. ಪ್ರಧಾನವು ಜಗತ್ತಿಗೆ ಕಾರಣವಾಗಿದೆಯೆಂದು ಹೇಳಿದರೆ ಸಾಕು, ಪುನಃ ಬ್ರಹ್ಮನಿಗೆ ಸ್ರಷ್ಟೃತ್ವವನ್ನು ಒಪ್ಪುವ ಅವಶ್ಯಕತೆಯಿರುವುದಿಲ್ಲ. ಆದ್ದರಿಂದ ಜನ್ಮಾದಿಸೂತ್ರದಲ್ಲಿ ಹೇಳಲ್ಪಟ್ಟ ಕಾರಣತ್ವಸಾಮಾನ್ಯವನ್ನು ಆಕ್ಷೇಪ ಮಾಡಬಹುದು. ಅಥವಾ ಅದ್ವಿತೀಯಪದವು ಶ್ರುತಿಯಲ್ಲಿ ಕೇಳಿಸುತ್ತಿರುವುದರಿಂದ ಅನನ್ಯಾಧೀನವಾದ ಕಾರಣತ್ವವನ್ನು ಬ್ರಹ್ಮನಲ್ಲಿ ಹೇಳುವಂತೆ ಪ್ರಕೃತಿಯಲ್ಲಿಯೂ ಸಹ ಹೇಳಬಹುದು. ಆದ್ದರಿಂದ ಜನ್ಮಾದಿ ಸೂತ್ರದಲ್ಲಿ ಹೇಳಲ್ಪಟ್ಟ ಅನನ್ಯಾಧೀನ ಕಾರಣತ್ವದ ಆಕ್ಷೇಪವನ್ನು ಇಲ್ಲಿ ಮಾಡುತ್ತಿದ್ದಾರೆಂದು ತಿಳಿಯಬೇಕು. ಅಥವಾ ಪ್ರಧಾನದಲ್ಲಿ ಪರಿಣಾಮ ಕಾರಣತ್ವವು ಪ್ರಾಪ್ತವಾದ ಮೇಲೆ ಸ್ರಷ್ಟೃತ್ವವೂ ಕೂಡ ಗೌಣವಾಗಿ ಬರುತ್ತದೆಂದು ಹೇಳಬಹುದು. ಆದ್ದರಿಂದ ನೇರವಾಗಿ ಸ್ರಷ್ಟೃತ್ವವನ್ನೂ ಕೂಡ ಆಕ್ಷೇಪಿಸಬಹುದೆಂದು ಅಭಿಪ್ರಾಯ. ಹೀಗೆ ಮೂರು ರೀತಿಯ ಆಕ್ಷೇಪಗಳನ್ನು ಇಲ್ಲಿ ಮಾಡಿದ್ದಾರೆ.

**प्रकाशः –**

एवं प्रधानपक्षे ''तदैक्षत'' इत्यस्य गतिमुक्त्वा ''तत्तेजोऽसृजत'' इत्याद्युक्तेर्गतिं विवक्षुः ''नन्वेतत्स्थाने प्रधानस्य प्रतिपाद्यत्वेऽपि'' इत्यादि टीकायां सृष्ट्युक्तिगत्युक्तिद्वारा जन्मादिसूत्राक्षेपप्रकारस्यास्फुटत्वात्तां तात्पर्यतो विवृण्वन् टीकोक्ताक्षेपमनूद्य पञ्चधा समाधिमाह – **नन्वेवमित्यादिना ॥**

ವಿವರಣೆ - ಇಲ್ಲಿಯ ತನಕ ಪ್ರಕೃತಿಯು ಜಗತ್ಕಾರಣವಾಗುತ್ತದೆಂಬ ಪಕ್ಷದಲ್ಲಿ 'ತದೈಕ್ಷತ' ಎಂಬಲ್ಲಿ ಶ್ರುತವಾದ ಈಕ್ಷಣವು ವಿರುದ್ಧವಾಗುವುದಿಲ್ಲವೆಂದು ಸಮಾಧಾನವನ್ನು ಹೇಳಿ, ಈಗ 'ತತ್ತೇಜೋಽಸೃಜತಃ' ಇತ್ಯಾದಿ ಶ್ರುತಿಗೂ ಸಹ ವ್ಯಾಖ್ಯಾನಿಸುವವರಾಗಿ; 'ನನ್ವೇತತ್ಸ್ಥಾನೇ ಪ್ರಧಾನಸ್ಯ ಪ್ರತಿಪಾದ್ಯತ್ವೇಽಪಿ' ಇತ್ಯಾದಿ ಟೀಕೆಯಲ್ಲಿ ಸೃಷ್ಟಿಯ ವಚನಕ್ಕೆ ಜನ್ಮಾದಿಸೂತ್ರದ ಆಕ್ಷೇಪವೇ ಈ ಅಧಿಕರಣದ ಉದ್ದೇಶವೆಂದು ಹೇಳುವ ಮೂಲಕ; ಈ ವಿಷಯವು ಸ್ಪಷ್ಟವಾಗಿ ತಿಳಿಯದ ಕಾರಣ, ಟೀಕಾಪಂಕ್ತಿಯ ತಾತ್ಪರ್ಯವನ್ನು ವ್ಯಾಖ್ಯಾನಿಸುತ್ತಾ; ಟೀಕೆಯಲ್ಲಿ ಹೇಳಲ್ಪಟ್ಟ ಆಕ್ಷೇಪವನ್ನು ಅನುವಾದ ಮಾಡಿ ಐದು ಬಗೆಯಲ್ಲಿ ಸಮಾಧಾನವನ್ನು ಹೇಳಲು ಪ್ರಾರಂಭಿಸುತ್ತಿದ್ದಾರೆ 'ನನ್ವೇವಮ್' ಇತ್ಯಾದಿ ಗ್ರಂಥದಿಂದ.

ಪರಿಪೂರ್ಣಚಂದ್ರಿಕಾ

**प्रकाशः** – केवलजडस्य कथं परिणाम इत्यत आह – **प्रधानस्येति** ।। तत्रापि आसिञ्चनकर्तुः सत्वेन विवादादाह – **अभिमानीति** ।।

ಕೇವಲ ಜಡಭೂತವಾದ ಪ್ರಧಾನಕ್ಕೆ ಪರಿಣಾಮವಾದರೂ ಕೂಡ ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೆ 'ಪ್ರಧಾನಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಜಡವು ಸ್ವತಃ ಪರಿಣಾಮವಾಗುತ್ತದೆಂಬುದಕ್ಕೆ ಕ್ಷೀರದೃಷ್ಟಾಂತವನ್ನು ಗ್ರಂಥದಲ್ಲಿ ಹೇಳಿದ್ದಾರೆ. ಆದರೆ ಕ್ಷೀರವು ಮೊಸರಾಗಬೇಕೆಂದರೆ ಹೆಪ್ಪು ಹಾಕುವನೊಬ್ಬ ಇರಲೇಬೇಕು. ಸ್ವತಂತ್ರವಾಗಿ ಜಡಕ್ಕೆ ಪರಿಣಾಮವು ಬರುವುದಿಲ್ಲವಲ್ಲ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ 'ಅಭಿಮಾನಿ ಚೇತನಮಾತ್ರಸಾಪೇಕ್ಷಃ' ಎಂದು ಹೇಳಿರುತ್ತಾರೆ.

**प्रकाशः** – **तथाचेति** ।। सकलकारणवाक्यानां प्रधानपरत्वे सतीत्यर्थः । **प्रधानस्यापीति** ।। तथाच प्राचीनपक्षे ब्रह्मणि कारणत्वरूपलक्षणस्यासम्भवः । द्वितीयपक्षेऽतिव्याप्तिरिति भावः ।

'ತಥಾಚ' ಎಂದರೆ ಕಾರಣತ್ವ ಪ್ರತಿಪಾದಕವಾದ ಸಕಲವಾಕ್ಯಗಳೂ ಪ್ರಧಾನಪರವಾದಲ್ಲಿ ಎಂದರ್ಥ. 'ಪ್ರಧಾನಸ್ಯಾಪಿ' ಎಂದು ಹೇಳಿದ್ದರಿಂದ ಹಿಂದಿನ ಪಕ್ಷದಲ್ಲಿ ಜಗತ್ಕಾರಣತ್ವ ಲಕ್ಷಣಕ್ಕೆ ಅಸಂಭವದೋಷವನ್ನು; ಈ ಪಕ್ಷದಲ್ಲಿ ಅತಿವ್ಯಾಪ್ತಿದೋಷವನ್ನೂ ಹೇಳಿದಂತಾಯಿತು.

**प्रकाशः** – एवं तर्हि श्रुतौ ''असृजत'' इति भाष्ये ''सतस्स्रष्टृत्वमुच्यते'' इति स्रष्टृपदं च विरुध्यत इत्यत आह – **एवञ्चेति** ।।

ಹಾಗಾದರೆ ಶ್ರುತಿಯಲ್ಲಿ 'ಅಸೃಜತ' ಎಂಬುದಾಗಿ ಭಾಷ್ಯದಲ್ಲಿ 'ಸತಃ ಸ್ರಷ್ಟೃತ್ವಮುಚ್ಯತೇ' ಎಂಬುದಾಗಿ ಸ್ರಷ್ಟೃಪದವನ್ನು ಹೇಳಿದ್ದು ವಿರುದ್ಧವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ, 'ಏವಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – स्रष्टृत्वं नाम कृतिमत्कारणत्वम् । तत्र तदेकदेशः कारणत्वमात्रं लक्ष्यत इत्यर्थः। **गौण्येति** ।। यथा स्रष्टाऽनन्याधीनस्तथाऽनन्याधीनकारणमपीत्यर्थः।

'ಸ್ರಷ್ಟೃತ್ವ' ಎಂದರೆ 'ಕೃತಿಮತ್ಕಾರಣತ್ವ' ಎಂದರ್ಥ. ಇಲ್ಲಿ ಅದರ ಏಕದೇಶವಾದ ಕಾರಣತ್ವದಲ್ಲಿ ಮಾತ್ರ ಲಕ್ಷಣಾ ಮಾಡಲಾಗಿದೆಯೆಂದು ತಿಳಿಯಬೇಕು. 'ಗೌಣ್ಯಾ' ಎಂದರೆ ಯಾವ ರೀತಿಯಾಗಿ ಸ್ರಷ್ಟೃತ್ವವು ಅನನ್ಯಾಧೀನವಾಗಿದೆಯೋ, ಅದರಂತೆ ಕಾರಣತ್ವವೂ ಕೂಡ ಅನನ್ಯಾಧೀನವಾಗಿದೆಯೆಂದರ್ಥ.

**गुरुराजीयम्** – ननु 'तत्तेज ऐक्षत' इत्यादिनेक्षणस्रष्टृत्वदेवतात्वानां श्रवणात्तेजः प्रभृति चेतनमेव । तत्र चेक्षणं मुख्यमेवेति प्रायपाठो ब्रह्मपक्ष एव गुण इति कथम् । तद्दृष्टान्त एव विप्रतिपन्न इत्यत आह – **अभिमानीति** ।।




ಪ್ರಧಾನವು ಉಪಾದಾನ ಕಾರಣವೇ ಆಗಲಿ, ಬ್ರಹ್ಮನು ನಿಮಿತ್ತಕಾರಣವಾಗಬಹುದಲ್ಲವೇ? ಎಂಬ ಪ್ರಶ್ನೆಯನ್ನು ಅತ್ಯಂತ ಮಹತ್ತ್ವಪೂರ್ಣವಾಗಿ ವಿಚಾರ ಮಾಡುತ್ತಿದ್ದಾರೆ. ಈ ಪ್ರಶ್ನೆಗೆ ಐದು ಬಗೆಯಲ್ಲಿ ಉತ್ತರಿಸುತ್ತಾ, ಮೊದಲನೆಯ ಉತ್ತರವನ್ನು ಹೀಗೆ ಸಮರ್ಥಿಸಿದ್ದಾರೆ -

ಶ್ರುತಿಯಲ್ಲಿ 'ಸದೇವ ಸೌಮ್ಯ' ಎಂಬ ಅವಧಾರಣವಿರುವ ಪ್ರಯುಕ್ತ ಪ್ರಕೃತಿಯು ಮಾತ್ರ ಜಗತ್ತಿಗೆ ಕಾರಣವೆಂದು ಹೇಳಿದಾಗ ಬ್ರಹ್ಮನು ಕಾರಣನಲ್ಲವೆಂದು ತಿಳಿಯುತ್ತದೆ. ಕ್ಷೀರವು ಸ್ವಾಭಾವಿಕವಾಗಿ ಮೊಸರಾಗುವಂತೆ, ಪ್ರಕೃತಿಯು ಸ್ವಾಭಾವಿಕವಾಗಿಯೇ ಜಗತ್ತಾಗುತ್ತದೆ. ಈಶ್ವರನ ಆಧೀನ್ಯವು ಬೇಕಾಗಿಲ್ಲ. ಅಥವಾ ಶ್ರುತಿಯು ಅಭಿಮಾನಿಚೇತನದಲ್ಲಿ ಇರುವಂತಹ ಕಾರಣತ್ವವನ್ನು ವಿವಕ್ಷಿಸಿ ಪ್ರಕೃತಿಗೆ ಶ್ರುತಿಯು ಕಾರಣತ್ವವನ್ನು ಹೇಳುತ್ತಿದೆ. ಈ ಪಕ್ಷದಲ್ಲಿ ಈಶ್ವರನಿಗೆ ಜಗತ್ಕಾರಣತ್ವವೇ ಬರುವುದಿಲ್ಲ. ಪ್ರಕೃತಿಗೆ ಮಾತ್ರ ಜಗತ್ಕಾರಣತ್ವ ಬರುತ್ತದೆಂದು ತಿಳಿಯಬೇಕು. ಹಾಗಾಗಿ ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವ ಲಕ್ಷಣಕ್ಕೆ ಅಸಂಭವ ದೋಷವನ್ನು ಹೇಳಿದಂತಾಯಿತು.

ಅಥವಾ ಈಶ್ವರನಿಗೆ ಅನನ್ಯಾಧೀನವಾದ ಸ್ರಷ್ಟೃತ್ವವು ಹೇಗೆ ಇದೆಯೋ ಅದರಂತೆ ಪ್ರಕೃತಿಯಲ್ಲಿಯೂ ಅನನ್ಯಾಧೀನವಾದ ಜಗತ್ಕಾರಣತ್ವವಿದೆಯೆಂದು ಹೇಳಬಹುದು. ಈಶ್ವರನಿಗೂ ಸ್ರಷ್ಟೃತ್ವವನ್ನು ಒಪ್ಪಿ, ಪ್ರಕೃತಿಯಲ್ಲಿಯೂ ಜಗತ್ಕಾರಣತ್ವವನ್ನು ಒಪ್ಪುತ್ತಿರುವುದರಿಂದ ಅತಿವ್ಯಾಪ್ತಿದೋಷವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವವಾಗಲೀ, ಜಗತ್‌ಸ್ರಷ್ಟೃತ್ವವಾಗಲೀ ಈಶ್ವರನಲ್ಲಿ ಯುಕ್ತವಾಗುವುದಿಲ್ಲ.





## ಎರಡು ಮತ್ತು ಮೂರನೆಯ ಪೂರ್ವಪಕ್ಷ

### तात्पर्यचन्द्रिका

**अथवा यथा विवर्तमते तत्वतो निर्विकारस्यैव ब्रह्मणोऽतात्विकविकारः तथा तत्वतोऽचेतनस्य विकारिणश्च प्रधानस्यातात्विकमीक्षणं स्रष्टृत्वं चास्तु । एवं चेक्षणादिकमपि मुख्यमेव । नतु गौणमिति पूर्वः पक्षः ।**

ಅನುವಾದ - ಅಥವಾ ಜನ್ಮಾದ್ಯಧಿಕರಣದ ಆಕ್ಷೇಪವನ್ನು ಹೀಗೆ ಸಮರ್ಥಿಸಬಹುದು. ಯಾವರೀತಿಯಾಗಿ ನಿರ್ವಿಕಾರನಾದ ಬ್ರಹ್ಮನಲ್ಲಿ ತಾತ್ವಿಕವಾದ ವಿಕಾರವಿಲ್ಲದಿದ್ದರೂ ಅತಾತ್ವಿಕವಾದ ವಿಕಾರವಿರುತ್ತದೆಂದು ವಿವರ್ತಮತದಲ್ಲಿ ಒಪ್ಪುತ್ತಾರೋ, ಅದರಂತೆ ತಾತ್ವಿಕವಾಗಿ ಅಚೇತನವೂ ವಿಕಾರಿಯೂ ಆದ ಪ್ರಧಾನಕ್ಕೆ ಅತಾತ್ವಿಕವಾದ ಈಕ್ಷಣವನ್ನೂ ಸ್ರಷ್ಟೃತ್ವವನ್ನೂ ಒಪ್ಪಬಹುದು. ಈ ಪಕ್ಷದಲ್ಲಿ ಈಕ್ಷಣದಲ್ಲಿ ಮುಖ್ಯಾರ್ಥವನ್ನೇ ಸ್ವೀಕರಿಸಬಹುದು. ಪ್ರಥಮ ಪಕ್ಷದಂತೆ ಗೌಣಾರ್ಥವನ್ನೇ ಮಾಡಬೇಕಾಗಿಲ್ಲ. ಇದು ಎರಡನೆಯ ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

**यद्वा यथा विशिष्टोपादानमते विशेष्यस्य निर्विकारत्वेऽपि विशिष्टस्य तात्त्विक एव विकारः तथा प्रधानस्याचेतनत्वेऽपि स्वाभिमानिचेतनविशिष्टस्य तात्त्विकमेवेक्षणादीति पूर्वःपक्षः ।**

ಅಥವಾ ಮೂರನೆಯ ಸಮಾಧಾನ ಹೀಗಿದೆ - ಯಾವರೀತಿಯಾಗಿ ವಿಶಿಷ್ಟವೂ ಉಪಾದಾನವೆಂದು ಹೇಳುವ ಅದ್ವೈತಮತದಲ್ಲಿ ವಿಶೇಷ್ಯವು ನಿರ್ವಿಕಾರನಾದ ಶುದ್ಧಬ್ರಹ್ಮನಾಗಿದ್ದರೂ ವಿಶಿಷ್ಟಕ್ಕೆ ಅಂದರೆ ಶಬಲಬ್ರಹ್ಮನಿಗೆ ತಾತ್ವಿಕವಾದ (ಧರ್ಮಿಸತ್ತಾ ಸಮಾನಸತ್ತಾಕವಾದ) ವಿಕಾರವನ್ನು ಒಪ್ಪಲಾಗುತ್ತದೆ. ಅದರಂತೆ ಪ್ರಧಾನವು ಅಚೇತನವಾಗಿದ್ದರೂ (ತನಗೆ) ಪ್ರಧಾನಕ್ಕೆ ಅಭಿಮಾನಿಯಾದ ಚೇತನವಿಶಿಷ್ಟಕ್ಕೆ ತಾತ್ವಿಕವಾದ ಈಕ್ಷಣವನ್ನೇ ಒಪ್ಪಬಹುದೆಂಬುದು ಮೂರನೆಯ ಪೂರ್ವಪಕ್ಷ.

**प्रकाशः –**

पूर्वं श्रुत्यादिगतेक्षणादेरमुख्यत्वमुपेत्याक्षेपप्रकार उक्तः । इदानीं मुख्यत्वमुपेत्याह – **अथवा यथा विवर्तमत इति ।।**

ವಿವರಣೆ - ಪ್ರಥಮ ಪಕ್ಷದಲ್ಲಿ ಶ್ರುತ್ಯಾದಿಗಳಲ್ಲಿರುವ ಈಕ್ಷಣಾದಿಗಳಿಗೆ ಅಮುಖ್ಯಾರ್ಥವನ್ನು ಸ್ವೀಕರಿಸಿ ಆಕ್ಷೇಪ ಪ್ರಕಾರವನ್ನು ಹೇಳಲಾಯಿತು. ಆದರೆ ಈಗ ಆ ಈಕ್ಷಣಾದಿಗಳಿಗೆ ಮುಖ್ಯಾರ್ಥವನ್ನೇ ಸ್ವೀಕರಿಸಿ, ಎರಡನೆಯ ಪೂರ್ವಪಕ್ಷವು ಹೊರಡುತ್ತಿದೆ 'ಅಥವಾ ಯಥಾ ವಿವರ್ತಮತ ಇತಿ' ಇತ್ಯಾದಿ ವಾಕ್ಯಗಳಿಂದ.

**प्रकाशः –** तात्त्विकमेवेक्षणादिकमुपेत्याह – **यद्वा यथाविशिष्टेति ।।** प्राक्पक्षेऽतात्त्विकत्वमेवास्वारस्यबीजम् । अस्मिन्पक्षे च प्रागुक्तस्रष्टृत्वाक्षेपस्सुकर इति भावः।

ತಾತ್ವಿಕವಾದ ಈಕ್ಷಣಾದಿಗಳನ್ನೇ ಒಪ್ಪಿ ಮೂರನೆಯ ಪೂರ್ವಪಕ್ಷವು ಹೊರಡುತ್ತಿದೆ 'ಯದ್ವಾ' ಇತ್ಯಾದಿ ವಾಕ್ಯದಿಂದ. ಎರಡನೆಯ ಪೂರ್ವಪಕ್ಷದಲ್ಲಿಯೂ ಅತಾತ್ವಿಕವಾದ ಈಕ್ಷಣಾದಿಗಳನ್ನು ಒಪ್ಪಿದ್ದರಿಂದ ಅಸ್ವಾರಸ್ಯವಿದೆ. ಈ ಪಕ್ಷದಲ್ಲಿ ತಾತ್ವಿಕವಾದ ಈಕ್ಷಣವನ್ನೇ ಒಪ್ಪಿದ್ದರಿಂದ ಜನ್ಮಾಧಿಕರಣದ ಮೇಲೆ ಸ್ರಷ್ಟೃತ್ವಾಕ್ಷೇಪವು ಅತ್ಯಂತ ಸಮಂಜಸವಾಗುತ್ತದೆ.

**गुरुराजीयम् –** अस्मिन्पक्षे प्रधानस्येक्षणं भवतीतीदमेवास्वारस्यं मनसि निधाय पक्षान्तरमाह – **अथवेति ।।** नन्वेवमीक्षणस्य तात्त्विकत्वेऽतात्त्विकेक्षणप्रतिपादकस्य 'तदैक्षत' इतीक्षणवाक्यस्याप्रामाण्यं स्यादित्यरुच्याह – **यद्वेति ।।**



ಶ್ರುತಿಯಲ್ಲಿರುವ ಈಕ್ಷಣಾದಿಗಳಿಗೆ ಗೌಣಾರ್ಥವನ್ನು ಆಶ್ರಯಿಸಬೇಕಾಗಿಲ್ಲ. ವಿವರ್ತಮತದಲ್ಲಿ ನಿರ್ವಿಕಾರಬ್ರಹ್ಮನಿಗೆ ತಾತ್ವಿಕವಾದ ವಿಕಾರವನ್ನು ಒಪ್ಪದಿದ್ದರೂ ಅತಾತ್ವಿಕವಾದ ವಿಕಾರವನ್ನು ಹೇಗೆ ಒಪ್ಪಿದ್ದಾರೋ, ಅದರಂತೆ ಅಚೇತನವಾದ ಪ್ರಕೃತಿಗೆ ತಾತ್ವಿಕವಾದ ಈಕ್ಷಣವನ್ನು ಒಪ್ಪಲು ಸಾಧ್ಯವಾಗದಿದ್ದರೂ ಅತಾತ್ವಿಕವಾದ ಈಕ್ಷಣವನ್ನು ಒಪ್ಪಬಹುದು. ಇದು ಎರಡನೆಯ ಪೂರ್ವಪಕ್ಷ.

ಅಥವಾ ವಿಶಿಷ್ಟಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಒಪ್ಪುವ ಅದ್ವೈತ ಮತದಲ್ಲಿ ವಿಶೇಷ್ಯನಲ್ಲಿ ನಿರ್ವಿಕಾರತ್ವವಿದ್ದರೂ ವಿಶಿಷ್ಟನಲ್ಲಿ ತಾತ್ವಿಕವಾದ ವಿಕಾರವೇ ಇರುತ್ತದೆಂದು ಒಪ್ಪಿದ್ದಾರೆ. ಅದರಂತೆ ಪ್ರಧಾನವು ಅಚೇತನವಾಗಿದ್ದರೂ ಅಭಿಮಾನಿ ಚೇತನರಿಂದ ವಿಶಿಷ್ಟವಾದಾಗ ಅದಕ್ಕೆ ತಾತ್ವಿಕವಾದ ಈಕ್ಷಣವನ್ನೇ ಒಪ್ಪಬಹುದೆಂಬುದು ಮೂರನೆಯ ಪೂರ್ವಪಕ್ಷ.

• • • • •

## ನಾಲ್ಕನೆಯ ಹಾಗೂ ಐದನೆಯ ಪೂರ್ವಪಕ್ಷ

### तात्पर्यचन्द्रिका

**यद्वा यथा पूर्वाधिकरणसिद्धान्ते विशेष्यभूतब्रह्मनिष्ठयोस्तात्विकयोरेवाणुत्व-महत्त्वयोरविरोधः तथा प्रधानेऽपि श्रौतत्वाज्जाड्येक्षणयोर्विकारस्रष्टृत्वयोश्चाविरोध इति पूर्वः पक्षः ।**

ಅನುವಾದ - ಅಥವಾ ನಾಲ್ಕನೆಯ ಪೂರ್ವಪಕ್ಷ ಹೀಗಿದೆ - ಯಾವ ರೀತಿಯಾಗಿ ಹಿಂದಿನ ಅಕ್ಷರಾಧಿಕರಣದ ಸಿದ್ಧಾಂತದಲ್ಲಿ ವಿಶೇಷ್ಯನಾದ ಬ್ರಹ್ಮನಲ್ಲಿ ಇರುವಂತಹ ಅಣುತ್ವ-ಮಹತ್ತ್ವಗಳೆರಡೂ ತಾತ್ವಿಕವೇ ಆಗಿದ್ದರೂ ವಿರೋಧವಿಲ್ಲವೆಂದು ಸಮರ್ಥಿಸಲಾಯಿತು. ಕಾರಣವೇನೆಂದರೆ ಶ್ರುತಿಸಿದ್ಧವಾದದ್ದರಲ್ಲಿ ವಿರೋಧವನ್ನು ಶಂಕಿಸಬಾರದೆಂದು. ಅದರಂತೆ ಪ್ರಧಾನದಲ್ಲಿಯೂ ಸಹ ಅದು ಜಡವಾದ್ದರಿಂದ ಈಕ್ಷಣವನ್ನು ಹೇಳುವುದು ವಿರುದ್ಧವಾಗುತ್ತದೆ. ಆದರೂ ಶ್ರುತಿಸಿದ್ಧವಾದದ್ದರಲ್ಲಿ ವಿರೋಧಕ್ಕೆ ಅವಕಾಶವಿಲ್ಲವೆಂದು ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಶ್ರಯಿಸಿದಾಗ ಪ್ರಧಾನದಲ್ಲಿ ಜಡತ್ವವಿದ್ದರೂ ಈಕ್ಷಣವೂ ಕೂಡ ಇರಬಹುದು, ಹಾಗೂ ವಿಕಾರ ಮತ್ತು ಸ್ರಷ್ಟೃತ್ವಗಳೂ ಇರಬಹುದು. ವಿರೋಧಕ್ಕೆ ಅವಕಾಶವಿಲ್ಲ. ಹೀಗೆ ಪೂರ್ವಪಕ್ಷವು ಉದಯವಾಗುತ್ತದೆ.

**नात्र साङ्ख्यमतं पूर्वः पक्षः । किन्तु श्रुत्यवष्टम्भेन सम्भावितं मतम् । एवञ्च पूर्वपक्ष उपादानस्य प्रधानस्यैव स्रष्टृत्वमपीति जन्मादिसूत्राक्षेपो युक्तः ।**

ಪರಿಪೂರ್ಣಚಂದ್ರಿಕಾ

ಈ ಅಧಿಕರಣದಲ್ಲಿ ಸಾಂಖ್ಯಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡುತ್ತಿಲ್ಲ. ಹಾಗಾಗಿದ್ದಲ್ಲಿ, ಶ್ರುತಿಯನ್ನು ಆಶ್ರಯಿಸಿ ಮಾಡುವಂತಹ ಪೂರ್ವಪಕ್ಷವು ತಪ್ಪಾಗುತ್ತಿತ್ತು. ಹೊರತಾಗಿ, ಶ್ರುತಿಯನ್ನು ಅವಲಂಬಿಸಿ ಸಂಭಾವಿತವಾದ ಪಕ್ಷವನ್ನು ಆಶ್ರಯಿಸಿ ಪೂರ್ವಪಕ್ಷವನ್ನು ಮಾಡಲಾಗಿದೆ. ಹೀಗೆ ಹೇಳಿದ್ದರಿಂದ ಉಪಾದಾನಕಾರಣವೇ ಆಗಿರುವಂತಹ ಪ್ರಧಾನದಲ್ಲಿಯೇ ಸ್ರಷ್ಟೃತ್ವವನ್ನೂ ಕೂಡ ಹೇಳಬಹುದೆಂದು ಪೂರ್ವಪಕ್ಷ ಮಾಡಬಹುದು. ಆದ್ದರಿಂದ ಜನ್ಮಾದಿಸೂತ್ರದ ಆಕ್ಷೇಪವು ಯುಕ್ತವಾಗುತ್ತದೆ.

**अथवा प्रधानस्य सांशत्वादेकेनांशेन चेतनत्वस्रष्टृत्वे । अंशान्तरेणत्वचेतनत्व-विकारित्वे ।**

ಅಥವಾ ಐದನೆಯ ಪೂರ್ವಪಕ್ಷ ಹೀಗಿದೆ - ಪ್ರಧಾನವು ಸಾಂಶವಾಗಿದೆ. ಒಂದು ಅಂಶದಿಂದ ಚೇತನತ್ವ ಹಾಗೂ ಸ್ರಷ್ಟೃತ್ವಗಳು ಬಂದರೆ ಮತ್ತೊಂದಂಶದಿಂದ ಅಚೇತನತ್ವ ಹಾಗೂ ವಿಕಾರಿತ್ವಗಳು ಪ್ರಧಾನದಲ್ಲಿ ಉಪಪನ್ನವಾಗುತ್ತದೆ.

**ब्रह्मतु निरंशम् । तथाच प्रधानस्यैव स्रष्टृत्वमिति पूर्वपक्षप्रवृत्तेस्तदाक्षेपः ।**

ಆದರೆ ಬ್ರಹ್ಮನು ನಿರಂಶನಾಗಿದ್ದಾನೆ. ಆದ್ದರಿಂದ ನಿರಂಶನಾದ ಕಾರಣ ಸ್ರಷ್ಟೃತ್ವಾದಿಗಳನ್ನು ಉಪಪಾದಿಸಲು ಬರುವುದಿಲ್ಲ. ಆದ್ದರಿಂದ ಪ್ರಧಾನದಲ್ಲಿಯೇ ಸ್ರಷ್ಟೃತ್ವವು ಬರುತ್ತದೆಂದು ಪೂರ್ವಪಕ್ಷವು ಉದಯವಾಗುತ್ತದೆ. ಆದ್ದರಿಂದ ಜನ್ಮಾಧಿಕರಣದ ಆಕ್ಷೇಪವು ಸಮಂಜಸವಾಗಿದೆ.

**प्रकाशः –**

**अस्मिन्पक्षे विशिष्टस्येक्षितृत्वस्य स्रष्टृत्वलाभेऽपि बहुभवनरूपविकारस्य केवल-प्रधाननिष्ठतयेक्षणस्रष्टृत्वविकाराणामेकनिष्ठत्वाय पक्षान्तरमाह – यद्वा यथा पूर्वाधिकरणेति ।।**

ವಿವರಣೆ - ಮೂರನೆಯ ಪಕ್ಷದಲ್ಲಿ ಅಭಿಮಾನಿಚೇತನ ವಿಶಿಷ್ಟವಾದ ಪ್ರಧಾನಕ್ಕೆ ಈಕ್ಷಿತೃತ್ವ ಹಾಗೂ ಸ್ರಷ್ಟೃತ್ವಗಳನ್ನು ಸಮರ್ಥಿಸಲಾಯಿತು. ಶುದ್ಧವಾದ ಪ್ರಧಾನಕ್ಕೆ ಸಮರ್ಥಿಸಿದಂತಾಗಲಿಲ್ಲ. ಪ್ರಕೃತ ನಾಲ್ಕನೆಯ ಈ ಪಕ್ಷದಲ್ಲಿ ಬಹುಭವನರೂಪವಾದ ವಿಕಾರವು ಪ್ರಧಾನದಲ್ಲಷ್ಟೇ ಇರುವುದರಿಂದ ಈಕ್ಷಣ, ಸ್ರಷ್ಟೃತ್ವ, ವಿಕಾರ ಮೊದಲಾದವುಗಳೆಲ್ಲಾ ಪ್ರಧಾನದಲ್ಲಿ ಮಾತ್ರ ಇರುತ್ತವೆಂದು ಸಮರ್ಥಿಸುತ್ತಿದ್ದಾರೆ. ಇದನ್ನು 'ಯದ್ವಾ ಯಥಾ ಪೂರ್ವಾಧಿಕರಣ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – एतेन ''पूर्वाधिकरणसिद्धान्तन्यायेन वा पूर्वपक्षोत्थानात्'' इत्येतत्प्रकारान्तरेणापि दर्शितं भवति ।

ಹೀಗೆ ಹೇಳಿದ್ದರಿಂದ - 'ಪೂರ್ವಾಧಿಕರಣಸಿದ್ಧಾಂತನ್ಯಾಯೇನ ವಾ ಪೂರ್ವಪಕ್ಷೋತ್ಥಾನಾತ್' ಪೂರ್ವಾಧಿಕರಣಸಿದ್ಧಾಂತನ್ಯಾಯದಿಂದ ಈ ಅಧಿಕರಣದ ಪೂರ್ವಪಕ್ಷವು ಹುಟ್ಟುತ್ತಿದೆಯೆಂಬ ಟೀಕೆಯನ್ನು ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸಿದಂತಾಯಿತು.

**प्रकाशः** – ननु साङ्ख्यमते प्रधानस्यैवंविधत्वानङ्गीकारादपसिद्धान्त इत्यत आह – **न हीति** ।। अत एव टीकादौ मायावादादिमत इव उक्तदिशा निर्वाहस्सुकर इति विशिष्य प्रपञ्चनाभाव इति भावः ।

ಸಾಂಖ್ಯಮತದ ಪ್ರಕಾರ ಪೂರ್ವಪಕ್ಷವನ್ನು ಮಾಡುತ್ತಿದ್ದೀರಿ. ಆದರೆ ಸಾಂಖ್ಯರು ಶ್ರುತಿಯಲ್ಲಿ ಹೇಳುವುದನ್ನು ಅಂಗೀಕರಿಸುವುದಿಲ್ಲ. ಪ್ರಧಾನವನ್ನು ಹಿಂದೆ ಹೇಳಿದಂತೆಯೂ ಒಪ್ಪಿಲ್ಲ. ಆದ್ದರಿಂದ ಅಪಸಿದ್ಧಾಂತವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಕೇವಲ ಸಾಂಖ್ಯಮತವನ್ನು ಅವಲಂಬಿಸಿ ಈ ಅಧಿಕರಣದ ಪೂರ್ವಪಕ್ಷವು ಹೊರಟಿರುವುದಲ್ಲ. ಆದ್ದರಿಂದ ಭಾಸ್ಕರ, ಮಾಯಾವಾದ ಮೊದಲಾದ ಮತಗಳ ಅಭಿಪ್ರಾಯವನ್ನು ವಿವಕ್ಷಿಸಿಯೂ ಕೂಡ ಪೂರ್ವಪಕ್ಷವನ್ನು ಸುಲಭವಾಗಿ ಮಾಡಬಹುದು. ಆದ್ದರಿಂದಲೇ ಟೀಕಾದಿಗಳಲ್ಲಿ ಮತಗಳನ್ನು ಹೆಸರಿಸಿ ಪೂರ್ವಪಕ್ಷವನ್ನು ವಿವರಿಸಿರುವುದಿಲ್ಲ.

**प्रकाशः** – उपादानस्यैव स्रष्टृत्वे कार्यानुस्यूत्यननुस्यूत्योरयोगात्तदनुगुणं पक्षान्तरमाह –**अथवेति** ।।

ಉಪಾದಾನಕಾರಣವಾದದ್ದು ಜಗತ್ಕಾರಣವಾದಲ್ಲಿ ಕಾರ್ಯದಲ್ಲಿ ಅನುಸ್ಯೂತವೂ ಆಗಬೇಕು. ಅನನುಸ್ಯೂತವೂ ಆಗಬೇಕು. ಒಂದೇ ಪದಾರ್ಥದಲ್ಲಿ ಕಾರ್ಯಾನುಸ್ಯೂತತ್ವ, ಅನನುಸ್ಯೂತತ್ವಗಳೆಂಬ ವಿರುದ್ಧ ಧರ್ಮಗಳನ್ನು ಒಪ್ಪುವುದು ತಪ್ಪಾಗುತ್ತದೆಂಬ ವಿವಕ್ಷೆಯಿಂದ ಐದನೆಯ ಪೂರ್ವಪಕ್ಷವನ್ನು 'ಅಥವಾ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ಹೀಗೆ ಐದು ಪಕ್ಷಗಳನ್ನು ಆಶ್ರಯಿಸಲು ಹಿಂದಿನ-ಹಿಂದಿನ ಪಕ್ಷಗಳಲ್ಲಿರುವ ಅಸ್ವಾರಸ್ಯವೇ ಕಾರಣ ಎಂಬುದನ್ನು ಪ್ರಧಾನವಾಗಿ ಗಮನಿಸಬೇಕು.




ಸಾಂಖ್ಯಮತವನ್ನೇ ಅವಲಂಬಿಸಿ ಈ ಅಧಿಕರಣದ ಪೂರ್ವಪಕ್ಷವು ಹೊರಟಿಲ್ಲ. ಆದ್ದರಿಂದ ಶ್ರುತಿಯಲ್ಲಿ ಹೇಳಿದ್ದನ್ನು ಅವಲಂಬಿಸಿ ಪೂರ್ವಪಕ್ಷವು ಹೇಗೆ ಸುದೃಢವಾಗುತ್ತದೆಂಬುದನ್ನು ಗಮನಹರಿಸಬೇಕು. ಶ್ರುತಿಯಲ್ಲಿ ಒಂದೆಡೆ ಜಗತ್ಕಾರಣವಾದದ್ದಕ್ಕೆ ಈಕ್ಷಣವನ್ನು ಹೇಳಲಾಗಿದೆ. ಮತ್ತೊಂದೆಡೆ ಜಡತ್ವವನ್ನು ಹೇಳಲಾಗಿದೆ. ಶ್ರುತಿಯಲ್ಲಿ ಹೇಳಿರುವ ಕಾರಣದಿಂದಲೇ ಜಡತ್ವ ಹಾಗೂ ಈಕ್ಷಣಗಳಿಗೆ ಲೋಕದಲ್ಲಿ ವಿರೋಧವಿದ್ದರೂ ಪ್ರಕೃತ ಪ್ರಧಾನದ ವಿಷಯದಲ್ಲಿ ವಿರೋಧವಿರುವುದಿಲ್ಲ. ಹಿಂದಿನ ಅಧಿಕರಣದಲ್ಲಿ 'ಶ್ರುತಿಯಲ್ಲಿ ಹೇಳಿದೆ' ಎಂಬ ಕಾರಣದಿಂದಲೇ ಒಬ್ಬನೇ ಬ್ರಹ್ಮನಲ್ಲಿ

ಅಣುತ್ವ ಹಾಗೂ ಮಹತ್ತ್ವಗಳನ್ನು ಸಿದ್ಧಾಂತಿಗಳೇ ಒಪ್ಪಿದ್ದಾರೆ. ಆ ಅಧಿಕರಣದ ಸಿದ್ಧಾಂತನ್ಯಾಯವನ್ನೇ ಇಲ್ಲಿಯೂ ವಿವಕ್ಷಿಸಿ ಪೂರ್ವಪಕ್ಷವು ಉದಯವಾಗುತ್ತದೆ.

ಅಥವಾ ಪ್ರಕೃತಿಯು ಸಾಂಶವಾದ ಪದಾರ್ಥ. ಒಂದಂಶದಿಂದ ಚೇತನತ್ವ, ಸ್ರಷ್ಟೃತ್ವಗಳೂ ಇದರಲ್ಲಿ ಇರುತ್ತದೆ. ಮತ್ತೊಂದು ಅಂಶದಿಂದ ಅಚೇತನತ್ವ, ವಿಕಾರಿತ್ವಗಳೂ ಕೂಡ ಇರುತ್ತದೆ. ಹೀಗೆ ಹೇಳಿದಾಗ, ಪ್ರಧಾನದಲ್ಲಿ ಜಗತ್ಸ್ರಷ್ಟೃತ್ವವನ್ನು ಸುಲಭವಾಗಿ ಸಮರ್ಥಿಸಿದಂತಾಗುತ್ತದೆ. ಹೀಗೆ ಪ್ರಧಾನವೇ ಜಗತ್ಕಾರಣವೆಂದು, ಜಗತ್ಸ್ರಷ್ಟೃವೆಂದು ಹೇಳಲು ಬರುವ ಕಾರಣ ಜನ್ಮಾಧಿಕರಣದಲ್ಲಿ ಜಗತ್ಕಾರಣತ್ವವು ಮಹಾವಿಷ್ಣುವಿನ ಲಕ್ಷಣವೆಂದು ಹೇಳಿದ್ದು ತಪ್ಪಾಗುತ್ತದೆ.

• • • • •

## ಜನ್ಮಾಧಿಕರಣದಿಂದ ತೋರಿಸಿದ ಆಕ್ಷೇಪದಲ್ಲಿ ಸ್ವಾರಸ್ಯ

## तात्पर्यचन्द्रिका

**अत्र यद्यपि पूर्वपक्षे "सदायतनाः" इत्युक्तं सर्वाधारत्वमपि प्रधानस्य स्यादित्यम्बरान्तधृतिरूपपूर्वाधिकरणहेतुर्वा द्युभ्वाद्यधिकरणं वाऽऽक्षेप्तुं शक्यम् ।**

ಅನುವಾದ - ಪ್ರಶ್ನೆ - ಸ್ರಷ್ಟೃತ್ವವನ್ನೇ ಆಕ್ಷೇಪಿಸಬೇಕಾಗಿಲ್ಲ. 'ಸದಾಯತನಾಃ' ಎಂಬಲ್ಲಿ ಹೇಳಲ್ಪಟ್ಟ ಸರ್ವಾಧಾರತ್ವ ಧರ್ಮವನ್ನೂ ಕೂಡ ಪ್ರಧಾನದಲ್ಲಿ ಆಕ್ಷೇಪಿಸಬಹುದು. ಅಥವಾ 'ಅಂಬರಾಂತಧೃತಿ' ಎಂಬ ಹಿಂದಿನ ಅಧಿಕರಣದ ಸಿದ್ಧಾಂತ ಹೇತುವನ್ನೂ ಸಹ ಪ್ರಧಾನದಲ್ಲಿ ಆಕ್ಷೇಪಿಸಬಹುದು. ಸರ್ವಾಧಾರತ್ವವನ್ನು ಆಕ್ಷೇಪಿಸಿದಾಗ ದ್ಯುಭ್ವಾದ್ಯಧಿಕರಣದಿಂದ ಸಂಗತಿಯನ್ನು ತೋರಿಸಿದಂತಾಗುತ್ತದೆ. 'ಅಂಬರಾಂತಧೃತಿ' ಎಂಬ ಹೇತುವನ್ನು ಆಕ್ಷೇಪಿಸಿದಾಗ ಹಿಂದಿನ ಅಕ್ಷರಾಧಿಕರಣದಿಂದ ಸಂಗತಿಯನ್ನು ತೋರಿಸಿದಂತಾಗುತ್ತದೆ. ಈ ಹೇಳದೇ ಜನ್ಮಾಧಿಕರಣದಿಂದ ಹೇಳಲ್ಪಟ್ಟ ಸ್ರಷ್ಟೃತ್ವವನ್ನು ಪ್ರಧಾನದಲ್ಲಿ ಆಕ್ಷೇಪಿಸುವುದು ಪ್ರತಿಪತ್ತಿಗೌರವ ಮತ್ತು ದೂರದಿಂದ ಸಂಗತಿಯನ್ನು ಹೇಳಿದಂತಾಗುತ್ತದಲ್ಲವೇ?

**तथाप्यस्य सर्वस्य जन्मादिसूत्रनिर्वाहार्थत्वेन तच्छेषत्वात् 'सदेव' इत्यादिवाक्ये कारणत्वस्य प्रथमप्रतीतत्वाच्च तदेवाक्षिप्तम् ।**

ಉತ್ತರ - ಸಮನ್ವಯಾಧ್ಯಾಯದಲ್ಲಿ ಎಲ್ಲ ಅಧಿಕರಣದ ಪ್ರಮೇಯವೂ ಕೂಡ ಜನ್ಮಾದಿಸೂತ್ರದ ಪ್ರಮೇಯಕ್ಕೆ ಪೂರಕಗಳೇ ಆಗಿವೆ. ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವವನ್ನು ಸಮರ್ಥಿಸುವುದಕ್ಕಾಗಿ ಮತ್ತು ಬ್ರಹ್ಮಶಬ್ದದಿಂದ ಪ್ರಥಮಸೂತ್ರದಲ್ಲಿ ತಿಳಿಸಲ್ಪಟ್ಟ ಗುಣಪೂರ್ಣತ್ವದ ಸಾಧನೆಗಾಗಿಯೇ ಎಲ್ಲ ಅಧಿಕರಣಗಳು ಹೊರಟಿವೆ. ಆದ್ದರಿಂದ ಇವೆಲ್ಲವೂ ಜನ್ಮಾದಿಸೂತ್ರ ಶೇಷರೂಪವಾಗಿವೆ. ಆದಕಾರಣ ಜನ್ಮಾದಿಸೂತ್ರದಲ್ಲಿ ಹೇಳಲ್ಪಟ್ಟ ಸ್ರಷ್ಟೃತ್ವವನ್ನು ಆಕ್ಷೇಪಿಸಿದ್ದು

ತಪ್ಪಾಗುವುದಿಲ್ಲ. ಮತ್ತು ಪ್ರಕೃತ ವಿಷಯವಾಕ್ಯವೆನಿಸಿದ 'ಸದೇವ ಸೋಮ್ಯ' ಎಂಬ ವಾಕ್ಯವನ್ನು ಗಮನಿಸಿದಾಗ ಜಗತ್ಕಾರಣತ್ವವೇ ಪ್ರಥಮ ಪ್ರತೀತವಾಗುತ್ತಿದೆ. ಆದ್ದರಿಂದ ಆ ಜಗತ್ಕಾರಣತ್ವವನ್ನೇ ಆಕ್ಷೇಪಿಸಿದ್ದು ತಪ್ಪಾಗುವುದಿಲ್ಲ.

**यद्यपि चात्रत्यस्य स्रष्टुरन्यत्वे ''सोऽकामयत बहु स्यां प्रजायेय'' इति ''स इदं सर्वमसृजत'' इत्युक्त आनन्दमयरूपोऽपि स्रष्टाऽन्यः स्यात् । ब्रह्म तु तदवयव इत्यजिज्ञास्यं स्यादिति जिज्ञासासूत्रमेवाक्षेप्तुं शक्यम् ।**

ಪ್ರಶ್ನೆ - 'ಸದೇವ ಸೋಮ್ಯ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದ ಜಗತ್ಕಾರಣತ್ವವು ಬೇರೆ ಪದಾರ್ಥದಲ್ಲಿ ಬರುವುದಾದರೆ 'ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ' ಎಂಬಲ್ಲಿ ಹೇಳಲ್ಪಟ್ಟ 'ಸ ಇದಂ ಸರ್ವಮಸೃಜತ' ಎಂಬಲ್ಲಿ ಹೇಳಲ್ಪಟ್ಟ ಆನಂದಮಯನೆಂಬ ಜಗತ್ಕಾರಣನೂ ಕೂಡ ಬೇರೆ ಪದಾರ್ಥವೇ ಆಗಬೇಕು. ಆವಾಗ ಆನಂದಮಯ ಪುಚ್ಛನೆನಿಸಿದ ಬ್ರಹ್ಮನು ಜಿಜ್ಞಾಸ್ಯನಾಗಲಾರ. ಹೀಗೆ ಜಿಜ್ಞಾಸಾಸೂತ್ರವನ್ನೇ ಆಕ್ಷೇಪ ಮಾಡಲು ಬರುತ್ತದಲ್ಲವೇ?

**तथापि तदाक्षेपस्यानन्दमयाक्षेपसापेक्षत्वान्निरपेक्षो जन्मादिसूत्राक्षेप एवात्र कृतः ।**

ಉತ್ತರ - ಜನ್ಮಾದಿಸೂತ್ರಕ್ಕಿಂತಲೂ ಪ್ರಧಾನವಾದ ಜಿಜ್ಞಾಸಾಸೂತ್ರವನ್ನೇ ಆಕ್ಷೇಪ ಮಾಡಬಹುದು. ಆದರೆ ಹೀಗೆ ಮಾಡಬೇಕಾದರೆ ಮೊದಲು ಆನಂದಮಯತ್ವವನ್ನು ಆಕ್ಷೇಪ ಮಾಡಿ ತನ್ಮೂಲಕವಾಗಿ ಜಿಜ್ಞಾಸಾಸೂತ್ರವನ್ನು ಆಕ್ಷೇಪ ಮಾಡಬೇಕಾಗುತ್ತದೆ. ಆದ್ದರಿಂದ ಜಿಜ್ಞಾಸಾಸೂತ್ರದ ಆಕ್ಷೇಪವು ಆನಂದಮಯಾಧಿಕರಣಾಕ್ಷೇಪ ಸಾಪೇಕ್ಷವಾಯಿತು. ಆದರೆ ಜನ್ಮಾದಿಸೂತ್ರದಿಂದ ಮಾಡಲ್ಪಟ್ಟ ಆಕ್ಷೇಪವು ನಿರಪೇಕ್ಷವಾದ್ದರಿಂದ ಸುಲಭವಾಗಿದೆ. ಈ ದೃಷ್ಟಿಯಿಂದಲೇ ಜನ್ಮಾದಿಸೂತ್ರದಿಂದಲೇ ಆಕ್ಷೇಪವನ್ನು ತೋರಿಸಿದ್ದಾರೆ.

**यत्तु ''ब्रह्मलक्षणानां श्रवणात्'' इति टीकायाम् ''एकमेवाद्वितीयम्'' इत्यद्वितीयादिपदोक्तानां सर्वोत्तमत्वादीनां ब्रह्मधर्मत्वमाक्षिप्तं तदनुव्याख्यानादिस्थ-स्थानपदानुसारेण भाष्यस्थस्रष्टृपदं गुणान्तरस्याप्युपलक्षकम् ।**

ಟೀಕೆಯಲ್ಲಿ 'ಬ್ರಹ್ಮಲಕ್ಷಣಾನಾಂ ಶ್ರವಣಾತ್' ಎಂಬುದಾಗಿ 'ಏಕಮೇವಾದ್ವಿತೀಯಮ್' ಎಂಬಲ್ಲಿರುವ 'ಅದ್ವಿತೀಯ' ಮುಂತಾದ ಪದದಿಂದ ಸರ್ವೋತ್ತಮತ್ವಾದಿ ಬ್ರಹ್ಮನ ಧರ್ಮಗಳನ್ನು ಆಕ್ಷೇಪ ಮಾಡಲಾಗಿದೆ. ಹೊರತು, ಇಲ್ಲಿ ಸಮರ್ಥಿಸುತ್ತಿರುವಂತೆ ಸ್ರಷ್ಟೃತ್ವಧರ್ಮವನ್ನು ಆಕ್ಷೇಪ ಮಾಡುತ್ತಿಲ್ಲ. ಕಾರಣವೇನೆಂದರೆ. ಅನುವ್ಯಾಖ್ಯಾನದಲ್ಲಿರುವ 'ಸ್ಥಾನ' ಪದಕ್ಕೆ ಅನುಸಾರಿಯಾಗಿ

ಭಾಷ್ಯದಲ್ಲಿರುವ ಸ್ರಷ್ಟೃಪದವು ಸರ್ವೋತ್ತಮತ್ವವೇ ಮೊದಲಾದ ಗುಣಾಂತರಗಳಿಗೂ ಕೂಡ ಉಪಲಕ್ಷಕವಾಗಿದೆಯೆಂದು ತಿಳಿಸುವುದಕ್ಕೋಸ್ಕರ.

**ततश्च सर्वोत्तमत्वादिगुणान्तराक्षेपोऽपि सम्भवतीत्यभिप्रायेण । नतु स्रष्टृत्वाक्षेपो न सम्भवतीत्यभिप्रायेण ।**

ಈ ಉದ್ದೇಶಕ್ಕಾಗಿ ಸರ್ವೋತ್ತಮತ್ವಾದಿ ಧರ್ಮಗಳನ್ನು ಟೀಕೆಯಲ್ಲಿ ಆಕ್ಷೇಪ ಮಾಡಿದ್ದಾರೆ ಹೊರತು, ಸ್ರಷ್ಟೃತ್ವಧರ್ಮದಿಂದ ಆಕ್ಷೇಪ ಮಾಡಬಾರದೆಂದಲ್ಲ. ಆದ್ದರಿಂದ ಭಾಷ್ಯದಲ್ಲಿರುವ ಸ್ರಷ್ಟೃಪದವು ಕೇವಲ ಸ್ರಷ್ಟೃತ್ವವನ್ನಷ್ಟೇ ಅಲ್ಲದೇ, ಸರ್ವೋತ್ತಮತ್ವಾದಿ ಗುಣಾಂತರಗಳಿಗೂ ಕೂಡ ಉಪಲಕ್ಷಕವಾಗಿ ಇರುತ್ತದೆ ಎಂದು ತಿಳಿಯಬೇಕು.

**अत एव टीकायां ''यद्यत्र विकारिकारणत्वमेवोच्येत'' इत्यवधारणप्रयोगः । 'तत्तेजोऽसृजत' इति स्रष्टृत्ववाचिवाक्योदाहरणं च ।**

ಆದ್ದರಿಂದ ಟೀಕೆಯಲ್ಲಿ 'ಯದ್ಯತ್ರ ವಿಕಾರಿಕಾರಣತ್ವಮೇವೋಚ್ಯೇತ' ಎಂಬುದಾಗಿ ಅವಧಾರಣವನ್ನು ಪ್ರಯೋಗಿಸಿದ್ದಾರೆ. ಇದರಿಂದ ಮೂಡಿಬಂದ ಸ್ರಷ್ಟೃತ್ವಧರ್ಮವೂ ಸಹ ಆಕ್ಷಿಪ್ತವಾಗಿದೆಯೆಂದು ತಿಳಿಯುತ್ತದೆ. ಅಷ್ಟೇ ಅಲ್ಲದೇ, 'ತತ್ತೇಜೋಽಸೃಜತ' ಎಂಬುದಾಗಿ ಸ್ರಷ್ಟೃತ್ವವನ್ನು ಪ್ರತಿಪಾದಿಸುವ ವಾಕ್ಯವನ್ನೂ ಕೂಡ ಉದಾಹರಿಸಿರುತ್ತಾರೆ.

**प्रकाशः –**

एवं भाष्यकारीयं जन्मादिसूत्राक्षेपप्रकारमुपपाद्य तदाक्षेपोक्तौ भाष्यकृतोऽ-चातुर्यमाशङ्क्याह – **अत्र यद्यपीति ।।**

ವಿವರಣೆ - ಇಲ್ಲಿಯ ತನಕ ಭಾಷ್ಯಕಾರರು ಮಾಡಿದ ಜನ್ಮಾದಿಸೂತ್ರದ ಆಕ್ಷೇಪ ಪ್ರಕಾರವನ್ನು ತೋರಿಸಿದಂತಾಯಿತು. ಆದರೆ ಜನ್ಮಾಧಿಕರಣದಿಂದ ಮಾಡಲ್ಪಟ್ಟ ಈ ಆಕ್ಷೇಪವು ಎಷ್ಟು ಸ್ವರಸ? ಎಂದು ಶಂಕಾ ಮಾಡಿ ಉತ್ತರಿಸುತ್ತಿದ್ದಾರೆ 'ಯದ್ಯಪಿ' ಎಂಬ ಗ್ರಂಥದಿಂದ.

**प्रकाशः – आक्षेप्तुं शक्यमिति ।।** एतेन ''अम्बरान्तधृतिरूपपूर्वहेत्वाक्षेपेण वा पूर्वपक्षोत्थानात्'' इत्येतद्विवृतं भवति ।

'ಆಕ್ಷೇಪ್ತುಂ ಶಕ್ಯಮ್' ಎಂದು ಹೇಳಿದ್ದರಿಂದ 'ಅಂಬರಾಂತಧೃತಿರೂಪಪೂರ್ವಹೇತ್ವಾಕ್ಷೇಪೇಣ ವಾ ಪೂರ್ವಪಕ್ಷೋತ್ಥಾನಾತ್' ಎಂಬ ಟೀಕೆಯನ್ನು ವಿವರಿಸಿದಂತಾಗುತ್ತದೆ.

**प्रकाशः** – अत्र यद्यपि 'सन्मूलाः सोम्येमाः सर्वाः प्रजाः सदायतनास्सत्प्रतिष्ठाः'' इति प्रजानामेव सदाधारकत्वमुच्यते । नतु पृथिव्यादिप्रकृत्यन्तरूपाम्बरान्तस्य सदाधारकत्वम् । येन सच्छब्दार्थस्य प्रधानत्वे तत्र श्रुताम्बरान्तधारकत्वमप्यस्यैवेति प्रागुक्ताम्बरान्तधृतिरूपहेतुर्न विष्णुत्वसाधक इत्याक्षेपेण पूर्वपक्षस्स्यात् ।

ಪ್ರಶ್ನೆ - 'ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾ ಸತ್‌ಪ್ರತಿಷ್ಠಾಃ' ಎಂಬ ಶ್ರುತಿಯಲ್ಲಿ ಎಲ್ಲಾ ಪ್ರಜೆಗಳಿಗಷ್ಟೇ 'ಸತ್' ಎಂಬ ಪದಾರ್ಥವು ಆಧಾರವಾಗಿದೆಯೆಂದು ಹೇಳಿದಂತಾಯಿತು ಹೊರತು, ಪೃಥಿವಿಯಿಂದ ಪ್ರಾರಂಭಿಸಿ, ಆಕಾಶದ ತನಕ ಇರುವ ಸಕಲಪದಾರ್ಥಗಳಿಗೆ 'ಸತ್' ಎಂಬ ಪದಾರ್ಥವು ಆಧಾರವಾಗಿದೆಯೆಂದು ಹೇಳಿದಂತಾಗಲಿಲ್ಲ. ಒಂದು ವೇಳೆ ಹಾಗೇ ಹೇಳಿದ್ದಲ್ಲಿ, 'ಸತ್' ಶಬ್ದದಿಂದ ಪ್ರಧಾನವು ಪ್ರತಿಪಾದ್ಯವಾದಾಗ ಅಂಬರಾಂತಧಾರಕತ್ವವೂ ಕೂಡ ಪ್ರಧಾನದಲ್ಲೇ ಹೇಳಿದಂತಾಗುತ್ತಿತ್ತು. ಆವಾಗ ವಿಷ್ಣುತ್ವಸಾಧಕಲಿಂಗವಾಗುತ್ತಿರಲಿಲ್ಲ. ಆದ್ದರಿಂದಲೇ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಆಕ್ಷೇಪ ಮಾಡುವ ಮೂಲಕ ಈ ಅಧಿಕರಣದ ಪೂರ್ವಪಕ್ಷವು ಉದಯವಾಗುತ್ತಿತ್ತು. ಆದರೆ ಹಾಗಿಲ್ಲವಲ್ಲ?

**प्रकाशः** – तथापि पूर्वत्राम्बरान्तपदेन पृथिव्यादिप्रकृत्यन्तस्य चेतनराशेरेवाभिमन्यमानसहितस्य विवक्षितत्वेनेहापि प्रजापदेन तथैव विपक्षोपपत्तेः सङ्कोचकाभावादिति भावः ।

ಉತ್ತರ - ಆದರೂ ಕೂಡ ಹಿಂದಿನ ಅಧಿಕರಣದಲ್ಲಿ 'ಅಂಬರಾಂತ' ಎಂಬ ಪದದಿಂದ ಪೃಥಿವಿಯಿಂದ ಆರಂಭಿಸಿ ಪ್ರಕೃತಿಯ ತನಕ ಸಕಲ ಜಡಪದಾರ್ಥಗಳನ್ನು ವಿವಕ್ಷಿಸುವುದರ ಜೊತೆಗೆ ಅಭಿಮಾನಿಚೇತನ ರಾಶಿಗಳನ್ನೂ ವಿವಕ್ಷಿಸಲಾಗಿದೆ. ಅದರಂತೆ ಇಲ್ಲಿಯೂ ಕೂಡ ಪ್ರಜಾಪದದಿಂದ ಅಭಿಮಾನಿಚೇತರನ್ನು ವಿವಕ್ಷಿಸುವುದರ ಜೊತೆಗೆ ಅಭಿಮನ್ಯಮಾನವಾದ ಜಡಪದಾರ್ಥಗಳನ್ನೂ ವಿವಕ್ಷಿಸಬೇಕು. ಇಲ್ಲದಿದ್ದರೆ ಸಂಕೋಚ ಮಾಡಿದಂತಾಗುತ್ತದೆ. ಇದಕ್ಕೆ ಕಾರಣವಿಲ್ಲ. ಆದ್ದರಿಂದ 'ಸನ್ಮೂಲಾಃ ಸೋಮ್ಯೇಮಾಃ' ಎಂಬ ಶ್ರುತಿಯಿಂದಲೇ ಅಂಬರಾಂತಧಾರಕತ್ವವನ್ನೂ ಸಹ ಹೇಳಿದಂತಾಗುತ್ತದೆ. ಹಾಗೂ ಪೂರ್ವಾಧಿಕರಣದಿಂದ ಆಕ್ಷೇಪವನ್ನೂ ಕೂಡ ಮಾಡಬಹುದು.

**प्रकाशः** – टीकाविरोधमाशङ्क्य तत्तात्पर्यमाह – यत्त्विति ।। अवधारणेति ।। तेन स्रष्टृत्वरूपकारणत्वस्याप्यनुमतत्वप्रतीतेरिति भावः ।

ಟೀಕೆಯಿಂದ ಬರುವಂತಹ ವಿರೋಧವನ್ನು ಆಶಂಕಿಸಿ ಟೀಕಾವಾಕ್ಯದ ತಾತ್ಪರ್ಯವನ್ನು ಸ್ಪಷ್ಟಪಡಿಸುತ್ತಾ ಇದ್ದಾರೆ. 'ಯತ್ತು' ಇತ್ಯಾದಿ ಗ್ರಂಥದಿಂದ, 'ಅವಧಾರಣ' ಎಂದು ಹೇಳಿದ್ದರಿಂದ ಸ್ರಷ್ಟೃತ್ವರೂಪ ಕಾರಣತ್ವವೂ ಕೂಡ ಟೀಕಾಕಾರರಿಗೆ ಅನುಮತವಾಗಿದೆಯೆಂದು ಹೇಳಿದಂತಾಗುತ್ತದೆ.

**गुरुराजीयम्** – पूर्वाधिकरणवैषम्येण पूर्वपक्षं प्रदर्श्य पूर्वाधिकरणसिद्धान्तन्यायेन पूर्वपक्षमाह – **यद्वेति** ।। पूर्वाधिकरणसिद्धांतहेत्वाक्षेपेण पूर्वपक्षमाह – **अथवेति** ।। नन्वेवमधिकरणान्तरे जन्मादिसूत्राक्षेप एव स्यान्नत्वधिकरणान्तरस्येत्यतो नियामकान्तरमाह – **सदेवेत्यादि वाक्य इति** ।। नन्वेवं यदि जन्मादिसूत्राक्षेपस्तर्हि टीकाविरोधः स्यात् । टीकायामद्वितीयत्वादिपदोक्तसर्वोत्तमत्वादेरेवाक्षेपादित्यत आह – **यत्त्विति** ।। **अत एवेति** ।। स्रष्टृत्वाक्षेपस्याभिप्रेतत्वादेवेत्यर्थः ।।



ಈ ಅಧಿಕರಣದಲ್ಲಿ 'ಸದಾಯತನಾಃ' ಎಂಬ ವಿಷಯವಾಕ್ಯವನ್ನು ಗಮನಿಸಿದಾಗ ಸರ್ವಾಧಾರತ್ವವೇ ಮೊದಲಾದ ಧರ್ಮಗಳೂ ಕೂಡ ತೋರುತ್ತವೆ. ಇವುಗಳನ್ನು ಆಕ್ಷೇಪ ಮಾಡಿದಾಗ, ಹಿಂದಿನ ಅಧಿಕರಣದಿಂದ ಅಥವಾ ದ್ಯುಭ್ವಾದ್ಯಧಿಕರಣದಿಂದ ಸಂಗತಿಯನ್ನು ಸುಲಭವಾಗಿ ತೋರಿಸಿದಂತಾಗುತ್ತದೆ. ಇದನ್ನು ಬಿಟ್ಟು ಜನ್ಮಾದ್ಯಧಿಕರಣದಿಂದ ಆಕ್ಷೇಪ ತೋರಿಸುವುದು ಗೌರವವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರ ತಿಳಿಯಬೇಕು. ಸಮನ್ವಯಾಧ್ಯಾಯದಲ್ಲಿರುವ ಪ್ರತಿಯೊಂದು ಅಧಿಕರಣಗಳೂ ಕೂಡ ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವ ಲಕ್ಷಣವನ್ನು ಸಮರ್ಥಿಸುವುದಕ್ಕಾಗಿಯೇ ಹೊರಟಿವೆ. ಜನ್ಮಾದ್ಯಧಿಕರಣದಿಂದ ನೇರವಾಗಿ ಆಕ್ಷೇಪ ತೋರಿಸಿದ್ದರಿಂದ ಈ ಪ್ರಮೇಯವನ್ನು ತಿಳಿಸಿದಂತಾಗುತ್ತದೆ.

ಅಥವಾ ಜಿಜ್ಞಾಸಾಧಿಕರಣದಿಂದಲೂ ಕೂಡ ಆಕ್ಷೇಪಮಾಡಬಹುದು. ಏಕೆಂದರೆ 'ಸತ್'ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವಾಗದಿದ್ದರೆ, 'ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದ ಆನಂದಮಯನೂ ಕೂಡ ವಿಷ್ಣುವಾಗಲು ಸಾಧ್ಯವಿಲ್ಲ. ಆಗ ಆನಂದಮಯನ ಅವಯವವೆನಿಸಿದ ಬ್ರಹ್ಮನೂ ಕೂಡ ವಿಷ್ಣುವಾಗುವುದಿಲ್ಲವೆಂದು ಆಕ್ಷೇಪವನ್ನು ತೋರಿಸಬಹುದಿತ್ತು. ಅಂದರೆ ಜಿಜ್ಞಾಸಾಧಿಕರಣದಿಂದ ನೇರವಾಗಿ ಆಕ್ಷೇಪವನ್ನು ತೋರಿಸಬೇಕೆಂದರೆ, ಆನಂದಮಯನನ್ನು ಆಕ್ಷೇಪ ಮಾಡುವ ಮೂಲಕ ತೋರಿಸಬೇಕಾಗುತ್ತದೆ. ಇದು ದೀರ್ಘವಾದ್ದರಿಂದ ಸುಲಭವಾಗಿ ಜನ್ಮಾದ್ಯಧಿಕರಣದಿಂದ ಆಕ್ಷೇಪವನ್ನು ತಿಳಿಯಬೇಕು.

ಅನುವ್ಯಾಖ್ಯಾನದಲ್ಲಿ ಸ್ಥಾನದ ಸಮನ್ವಯವನ್ನು ಈ ಅಧಿಕರಣದ ಪ್ರಮೇಯವನ್ನಾಗಿ ಹೇಳಿದ್ದಾರೆ. ಇದರಿಂದ ಸ್ರಷ್ಟೃತ್ವಧರ್ಮವನ್ನು ಆಕ್ಷೇಪ ಮಾಡುವುದಷ್ಟೇ ಅಲ್ಲದೇ ಸರ್ವೋತ್ತಮತ್ವವೇ ಮೊದಲಾದ ಉಳಿದ ಬ್ರಹ್ಮನ ಧರ್ಮಗಳನ್ನೂ ಕೂಡ ಆಕ್ಷೇಪ ಮಾಡಬೇಕೆಂದು ತಿಳಿಯಬೇಕು.





## ಪರಮಾತ್ಮನೇ 'ಸತ್' ಶಬ್ದವಾಚ್ಯನೆಂದು ಸಿದ್ಧಾಂತ

**तात्पर्यचन्द्रिका**

**सिद्धान्तस्तु । न तावदाद्यः पूर्वःपक्षो युक्तः । यतः –**

**ईक्षतिर्बहुभावश्च मुख्यौ ब्रह्मपरिग्रहे ।**
**प्रधानपक्षे तु तयोरमुख्यत्वं प्रसज्यते ।। १ ।।**

ಅನುವಾದ - ಸಿದ್ಧಾಂತವು ಹೀಗಿದೆ - ಮೊದಲನೆಯ ಪೂರ್ವಪಕ್ಷವು ಅಯುಕ್ತ - ಏಕೆಂದರೆ

ಈಕ್ಷತಿರ್ಬಹುಭಾವಶ್ಚ ಮುಖ್ಯೌ ಬ್ರಹ್ಮಪರಿಗ್ರಹೇ ।
ಪ್ರಧಾನಪಕ್ಷೇ ತು ತಯೋರಮುಖ್ಯತ್ವಂ ಪ್ರಸಜ್ಯತೇ ॥೧॥

ಈಕ್ಷಣ ಹಾಗೂ ಬಹುಭವನಗಳು ಬ್ರಹ್ಮಪಕ್ಷದಲ್ಲಿ ಮುಖ್ಯವಾಗಿಯೇ ಉಪಪನ್ನವಾಗುತ್ತದೆ. ಆದರೆ ಪ್ರಧಾನ ಪಕ್ಷದಲ್ಲಿ ಎರಡಕ್ಕೂ ಅಮುಖ್ಯಾರ್ಥವನ್ನು ಸ್ವೀಕರಿಸಬೇಕಾಗುತ್ತದೆ.

**आद्यपूर्वपक्ष ईक्षणं तावद्गौणमिति परेणैवोक्तम् । बहुभावोऽपि गौण एव । 'तत्तेजोऽसृजत' इति यत्तेजःप्रभृति सृज्यमुक्तं तदात्मना हि त्वया बहुभावो वाच्यः ।**

ಮೊದಲನೆಯ ಪೂರ್ವಪಕ್ಷದಲ್ಲಿ ಈಕ್ಷಣವನ್ನು ಪ್ರಧಾನದಲ್ಲಿ ಗೌಣವಾಗಿಯೇ ಪೂರ್ವಪಕ್ಷಕಾರರು ಉಪಪಾದಿಸಿದರು. ಈಕ್ಷಣವಷ್ಟೇ ಗೌಣವಲ್ಲ. ಬಹುಭಾವವೂ ಕೂಡ ಗೌಣವೆಂದೇ ಅವರು ಹೇಳಬೇಕು. ಏಕೆಂದರೆ 'ತತ್ತೇಜೋಽಸೃಜತ' ಇತ್ಯಾದಿಯಾಗಿ ತೇಜಸ್ಸು ಮೊದಲಾದವುಗಳು ಹುಟ್ಟುತ್ತವೆಂದು ಹೇಳಿದರೆ, ತೇಜಸ್ಸು ಮೊದಲಾದವುಗಳ ಸ್ವರೂಪದಿಂದ ಬಹುಭವನವನ್ನು ಪ್ರಕೃತಿಗೆ ಹೇಳಬೇಕು ಎಂದಂತಾಯಿತು.

**तेजःप्रभृति च चेतनम् । ''तत्तेज ऐक्षत तदपोऽसृजत ता आप ऐक्षन्त ता अन्नमसृजन्त तिस्रो देवताः'' इतीक्षितृत्वस्रष्टृत्वदेवतात्वानां श्रवणात् ।**

ಆದರೆ 'ತೇಜಸ್ಸು' ಮತ್ತು 'ಅಪ್' ಮೊದಲಾದವುಗಳು ಜಡಪದಾರ್ಥವಲ್ಲ ಹೊರತು, ಚೇತನಪದಾರ್ಥಗಳು 'ತತ್ತೇಜ ಐಕ್ಷತ ತದಪೋಽಸೃಜತ, ತಾ ಆಪ ಐಕ್ಷಂತ, ತಾ ಅನ್ನಮಸೃಜಂತ, ತಿಸ್ರೋ ದೇವತಾಃ' ಎಂಬುದಾಗಿ 'ಐಕ್ಷತ' ಎಂಬ ಪದದಿಂದ ತೇಜಸ್ಸು ಮೊದಲಾದವುಗಳಲ್ಲಿ ಈಕ್ಷಿತೃತ್ವವನ್ನು, 'ಅಸೃಜತ' ಎಂಬುದರಿಂದ ಸ್ರಷ್ಟೃತ್ವವನ್ನು ಮತ್ತು 'ದೇವತಾಃ' ಎಂಬ ಪದದಿಂದ ದೇವತಾತ್ವವನ್ನು ಶ್ರುತಿಯು ಹೇಳುತ್ತಿದೆ. ಈ ಮೂರು ಕಾರಣಗಳಿಂದ 'ತೇಜಸ್' ಮೊದಲಾದ ಶಬ್ದಗಳಿಂದ ಚೇತನರೇ ಪ್ರತಿಪಾದ್ಯರೆಂದು ತಿಳಿಯುತ್ತದೆ.

**तेजोबन्नानां देवतात्वेऽपि त्रिवृत्करणविरोधपरिहारश्छान्दोग्यभाष्यादवगन्तव्यः।**

'ತೇಜಸ್' 'ಅಪ್' ಮೊದಲಾದ ಶಬ್ದಗಳಿಂದ ದೇವತೆಗಳೇ ಪ್ರತಿಪಾದ್ಯರಾದಲ್ಲಿ ಶ್ರುತಿಯಲ್ಲಿ ಹೇಳಲ್ಪಟ್ಟ ತ್ರಿವೃತ್ಕರಣದ ವಿರೋಧವು ಬರುತ್ತದಲ್ಲವೇ? ಏಕೆಂದರೆ ಮೂರು ಪದಾರ್ಥಗಳ ಸಮ್ಮಿಲನವನ್ನು ಶ್ರುತಿಯು ಹೇಳುತ್ತಿದೆ. ಇಂತಹ ಸಮ್ಮಿಲನವನ್ನು ದೇವತೆಗಳಲ್ಲಿ ಹೇಳುವುದು ಹೇಗೆ? ಎಂಬ ಪ್ರಶ್ನೆಗೆ ಛಾಂದೋಗ್ಯ ಭಾಷ್ಯದಲ್ಲಿಯೇ ಪರಿಹಾರವನ್ನು ಹೇಳಲಾಗಿದೆ.

**नच जडस्य प्रधानस्य चेतनात्मना बहुभावो मुख्यः । एतेन प्रायपाठो निरस्तः ।**

ಆದ್ದರಿಂದ ಜಡವಾದ ಪ್ರಕೃತಿಗೆ ಚೇತನಸ್ವರೂಪದಿಂದ ಬಹುಭವನವನ್ನು ಮುಖ್ಯವಾಗಿ ಹೇಳಲು ಸಾಧ್ಯವಿಲ್ಲವೆಂದು ತಿಳಿಯುತ್ತದೆ. ಹೀಗೆ ಈಕ್ಷಣವನ್ನು ಗೌಣವನ್ನಾಗಿ ಹೇಳುವುದರ ಜೊತೆಗೆ ಬಹುಭವನವನ್ನೂ ಕೂಡ ಗೌಣವಾಗಿಯೇ ಹೇಳಬೇಕು. ಆದ್ದರಿಂದಲೇ ಹಿಂದೆ ಪೂರ್ವಪಕ್ಷ ಮಾಡುವಾಗ ಪ್ರಾಯಪಾಠದ ಬಲದಿಂದ ಈಕ್ಷಣವು ಗೌಣವೆಂದು ತಿಳಿಯುತ್ತದೆಂಬ ಪೂರ್ವಪಕ್ಷವನ್ನು ನಿರಾಕರಿಸಿದಂತಾಯಿತು.

**ब्रह्मपक्षे तु न केवलमीक्षणं मुख्यम् । किन्तु बहुभावोऽपि ।**

ಆದರೆ ಬ್ರಹ್ಮನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಪಕ್ಷದಲ್ಲಿ ಈಕ್ಷಣವಷ್ಟೇ ಮುಖ್ಯವಲ್ಲ. ಬಹುಭವನವೂ ಕೂಡ ಮುಖ್ಯವಾಗುತ್ತದೆ.

**''गुहांप्रविष्टौ'' इत्यत्रैकस्मिन्नपि बहुत्वस्य ''द्युभ्वादि'' इत्यत्र चाजेऽपि जनेरुक्तत्वात् ।**

ಒಬ್ಬನೇ ಬ್ರಹ್ಮನಲ್ಲಿ ಬಹುಭವನವು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರದಲ್ಲಿ ಉತ್ತರಿಸಲಾಗಿದೆ ಎಂದರೆ ಒಬ್ಬನೇ ಬ್ರಹ್ಮನಲ್ಲಿ ಅನೇಕ ರೂಪಗಳ ಪ್ರಾದುರ್ಭಾವವಿರುವ ಪ್ರಯುಕ್ತ ಬಹುಭವನವು ಉಪಪನ್ನವಾಗುತ್ತದೆಂದು ಸಮರ್ಥಿಸಲಾಗಿದೆ. ದ್ಯುಭ್ವಾದ್ಯಧಿಕರಣದಲ್ಲಿ ಬ್ರಹ್ಮನಿಗೆ ಹುಟ್ಟಿಲ್ಲದಿದ್ದರೂ ಪ್ರಾದುರ್ಭಾವ ಪ್ರಯುಕ್ತವಾಗಿ ಹುಟ್ಟನ್ನು ಕೂಡಿಸಬೇಕೆಂದು ಸಮರ್ಥಿಸಲಾಗಿದೆ.

**नचैवमिदमधिकरणं व्यर्थमिति शङ्क्यम् ।**

ಹಾಗಾದರೆ ಗುಹಾಧಿಕರಣ ಹಾಗೂ ದ್ಯುಭ್ವಾದ್ಯಧಿಕರಣದಿಂದಲೇ ಈ ಅಧಿಕರಣದ ಪ್ರಮೇಯವು ಗತಾರ್ಥವಾದ್ದರಿಂದ, ವೈಯ್ಯರ್ಥದೋಷ ಇದಕ್ಕೆ ಬರುತ್ತದಲ್ಲವೇ? ಎಂದು ಶಂಕಿಸಬಾರದು.

**''बहु स्याम्'' इति तेजआद्यात्मना बहुभाव एव सङ्कल्पितो न स्वरूपबहुभावः । ''तत्तेजोऽसृजत'' इति वाक्यशेषात् । नहि स्वरूपबहुभावं सङ्कल्प्य तेजःप्रभृतिसर्जनं युक्तम् । तेजआदिभावश्च न ब्रह्मणि युक्त इति शङ्कायां तत्समाधानार्थत्वादस्य ।**

ವೈಯ್ಯರ್ಥದೋಷವು ಬರುವುದಿಲ್ಲ. ಏಕೆಂದರೆ 'ಬಹು ಸ್ಯಾಮ್' ಎಂಬ ಶ್ರುತಿಯಲ್ಲಿ 'ತೇಜಸ್' ಮೊದಲಾದವುಗಳ ಸ್ವರೂಪದಿಂದ ಬಹುಭವನವನ್ನು ಪಡೆಯುತ್ತೇನೆಂದು ಬ್ರಹ್ಮನು ಸಂಕಲ್ಪ ಮಾಡಿ, ತನ್ನ ಸ್ವರೂಪದಿಂದ ಬಹುಭವನವನ್ನು ಪಡೆದಿಲ್ಲ. ಏಕೆಂದರೆ ಮುಂದೆ 'ತತ್ತೇಜೋಽಸೃಜತ' ಇತ್ಯಾದಿ ಶ್ರುತಿಗಳಿರುವುದರಿಂದ 'ತೇಜಸ್' ಮೊದಲಾದವುಗಳನ್ನು ಸೃಷ್ಟಿ ಮಾಡಿದನೆಂದು ವಾಕ್ಯಶೇಷದ ಬಲದಿಂದ ತಿಳಿಯುತ್ತಿದೆ. ಸ್ವರೂಪತಃ ಅನೇಕ ಪದಾರ್ಥಗಳ ಭಾವ(ರೂಪ)ವನ್ನು ಹೊಂದುತ್ತೇನೆಂದು ಸಂಕಲ್ಪ ಮಾಡಿ, 'ತೇಜಸ್' ಮೊದಲಾದವುಗಳನ್ನು ಸೃಷ್ಟಿ ಮಾಡುವುದು ಯುಕ್ತವಾಗುವುದಿಲ್ಲ. ಮತ್ತು 'ತೇಜಸ್' ಮೊದಲಾದವುಗಳ ಸ್ವರೂಪವನ್ನು ಪಡೆಯುವಿಕೆಯು ಬ್ರಹ್ಮನಿಗೆ ಯುಕ್ತವೂ ಆಗುವುದಿಲ್ಲ. ಈ ಹೊಸದಾದ ಆಶಂಕೆಯನ್ನು ತೋರಿಸಿ, ಇದರ ಸಮಾಧಾನಕ್ಕೋಸ್ಕರ ಈ ಅಧಿಕರಣ ಹೊರಡುವುದು ಅನಿವಾರ್ಯವಾಗಿದೆ.

**प्रकाशः –**

क्रमेणोक्तान् पञ्चपक्षान्निराकरिष्यन्सिद्धान्तयति – सिद्धान्तस्त्विति ।।

ವಿವರಣೆ - ಇಲ್ಲಿಯ ತನಕ ಐದು ಬಗೆಯಲ್ಲಿ ಪೂರ್ವಪಕ್ಷವನ್ನು ಸಮರ್ಥಿಸಿದರು. ಈಗ ಅವೆಲ್ಲವನ್ನು ನಿರಾಕರಿಸುವುದಕ್ಕಾಗಿ ಸಿದ್ಧಾಂತವನ್ನು ಸ್ಥಾಪಿಸುತ್ತಿದ್ದಾರೆ 'ಸಿದ್ಧಾಂತಸ್ತು' ಇತ್ಯಾದಿ ಗ್ರಂಥದಿಂದ.

**प्रकाशः –** ''सदेव' इत्यादिस्थाने सच्छब्देन विष्णुरेवोच्यते । सतः 'तदैक्षत' इतीक्षत्याख्यव्यापारश्रवणात् । जडप्रधानस्येक्षणासम्भवात्' इत्यादिना कृत्स्नसिद्धान्तटीकायामीक्षणबहुभावौ विष्णावुपपाद्य प्रधाने सूत्रोपात्तेक्षणासम्भव एवोक्तो नतु बहुभावासम्भवोऽपि । अतष्टीकोक्तमुपलक्षणं मत्वा सर्वं तावत्सङ्गृह्याऽह – यतः । ईक्षतिरिति ।।

'ಸದೇವ' ಇತ್ಯಾದಿ ಸ್ಥಾನೇ ಸಚ್ಛಬ್ದೇನ ವಿಷ್ಣುರೇವೋಚ್ಯತೇ । ಸತಃ 'ತದೈಕ್ಷತ' ಇತಿ ಈಕ್ಷತ್ಯಾಖ್ಯವ್ಯಾಪಾರಶ್ರವಣಾತ್ । ಜಡಪ್ರಧಾನಸ್ಯ ಈಕ್ಷಣಾಸಂಭವಾತ್' ಇವೇ ಮೊದಲಾದ ಸಮಸ್ತ ಸಿದ್ಧಾಂತ ಟೀಕೆಯಲ್ಲಿ ಈಕ್ಷಣ ಹಾಗೂ ಬಹುಭಾವಗಳೆರಡೂ ವಿಷ್ಣುವಿನಲ್ಲಿ ಉಪಪನ್ನವಾಗುತ್ತದೆಂದು ಸಮರ್ಥಿಸಿ, ಸೂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಈಕ್ಷಣವು, ಪ್ರಧಾನದಲ್ಲಿ ಸುತರಾಂ ಕೂಡುವುದಿಲ್ಲವೆಂದೂ ಕೂಡ

ಸಮರ್ಥಿಸಿದರು. ಆದರೆ ಪ್ರಧಾನದಲ್ಲಿ ಬಹುಭಾವವು ಕೂಡುವುದಿಲ್ಲವೆಂದು ಹೇಳಿಲ್ಲವಲ್ಲ ಎಂದರೆ ಟೀಕೆಯಲ್ಲಿ ಹೇಳಲ್ಪಟ್ಟದ್ದು ಕೇವಲ ಉಪಲಕ್ಷಣವೆಂದು ತಿಳಿದು, ಮೊದಲ ಪೂರ್ವಪಕ್ಷದ ನಿರಾಕರಣೆಯ ಸಂಗ್ರಹವನ್ನು ಶ್ಲೋಕದ ಮೂಲಕ ಮಾಡುತ್ತಿದ್ದಾರೆ 'ಯತಃ ಇಕ್ಷತಿರಿತಿ' ಇತ್ಯಾದಿಯಾಗಿ.

**प्रकाशः** – 'यतः' इत्यस्य श्लोकेनान्वयः । ततो न युक्त इत्यर्थः । उत्तरार्धं विवृणोति – **आद्यपूर्वपक्ष इत्यादिना** ।। **त्रिवृत्करणेति** ।। ''या इमातस्तिस्रो देवतास्तासां त्रिवृतं त्रिवृतमेकैकामकरोत्'' इत्युक्ततेजोबन्नानां त्रयाणां मेलनेनैकैकद्रव्यान्तरकरणरूपं यत्त्रिवृत्करणं तद्विरोधः ।

'ಯತಃ' ಎಂಬ ಪದಕ್ಕೆ ಶ್ಲೋಕದ ಜೊತೆಗೆ ಅನ್ವಯವನ್ನು ತಿಳಿಯಬೇಕು. ಯಾವ ಕಾರಣದಿಂದ ಈಕ್ಷಣ ಹಾಗೂ ಬಹುಭಾವವು ಕೂಡುವುದಿಲ್ಲವೋ, ಆ ಕಾರಣದಿಂದ ಅಯುಕ್ತವಾಗುತ್ತದೆಂದು ಅನ್ವಯ. ಶ್ಲೋಕದ ಉತ್ತರಾರ್ಧವನ್ನು ಸ್ವತಃ ಗ್ರಂಥಕಾರರೇ ವಿವರಿಸುತ್ತಿದ್ದಾರೆ 'ಆದ್ಯಪೂರ್ವಪಕ್ಷೇ' ಇತ್ಯಾದಿ ವಾಕ್ಯದಿಂದ. 'ತ್ರಿವೃತ್ಕರಣ' ಇತ್ಯಾದಿ ವಾಕ್ಯದ ವಿವರ ಹೀಗಿದೆ - 'ಯಾ ಇಮಾಸ್ತಿಸ್ರೋ ದೇವತಾಸ್ತಾಸಾಂ ತ್ರಿವೃತಂ ತ್ರಿವೃಮೇಕೈಕಾಮಕರೋತ್' ಎಂಬ ಶ್ರುತಿಯಲ್ಲಿ 'ತೇಜಸ್', 'ನೀರು' ಮತ್ತು 'ಅನ್ನ' ಈ ಮೂರನ್ನು ಮೇಲಣ ಮಾಡಿದಾಗ ಒಂದು ದ್ರವ್ಯಾಂತರವು ಉತ್ಪನ್ನವಾಯಿತೆಂದು ಶ್ರುತಿಯು ಹೇಳಿದೆ. 'ತೇಜಸ್' ಮೊದಲಾದ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾದರೆ ಅದರ ವಿರೋಧವು ಬರುತ್ತದೆಂದು ಶಂಕಿಸಬಾರದು. ಏಕೆಂದರೆ ತ್ರಿವೃತ್ಕರಣದಿಂದ ಬರುವಂತಹ ವಿರೋಧಪರಿಹಾರವನ್ನು ಛಾಂದೋಗ್ಯಭಾಷ್ಯದಲ್ಲಿಯೇ ಪರಿಹರಿಸಿದ್ದಾಗಿದೆ.

**प्रकाशः** – देवतानां तदयोगात् ।

सृष्टेष्वेतेषु भगवानीक्षाश्चक्रे स केशवः ।
जीवाख्येनैव रूपेण योऽनिरुद्ध इति स्मृतः ।।

तेन रूपेण लक्ष्म्यादीन्प्रविष्टो रूपनामनी ।
करिष्ये त्रिवृतश्चैतानेकैकं करवाणि च ।।

इति मत्वा प्रविश्याथ तेभ्य इन्द्रादिनामपि ।
नामरूपाणि कृतवांस्तांश्चान्योन्यप्रवेशिनः ।।

कृत्वाऽग्निसोमसूर्यादिष्वेतांस्त्रीन्विदधे पुनः ।

इत्यादिनाऽभिमन्यमानतेजोऽबन्नांशैर्द्रव्यान्तरं कृत्वा तत्राभिमानिदेवतांशानामपि प्रवेशाकरणेन त्रिवृत्करणोक्तेरविरोधो बोध्य इत्यर्थः ।

ಛಾಂದೋಗ್ಯ ಭಾಷ್ಯದಲ್ಲಿ ಮಾಡಿದ ವಿರೋಧ ಪರಿಹಾರ ಹೀಗಿದೆ -

ಲಕ್ಷ್ಮೀದೇವಿ, ಮುಖ್ಯಪ್ರಾಣ ಹಾಗೂ ರುದ್ರ ಇವರಿಂದ ಅಭಿಮನ್ಯಮಾನವಾದ ಮೂರು ಭೂತದ್ರವ್ಯಗಳು ಅಬಾದಿಗಳು. ಇವುಗಳ ಸೃಷ್ಟಿಯ ಅನಂತರ 'ಜೀವ' ಎಂಬ ರೂಪದಿಂದ ಅನಿರುದ್ಧ ನಾಮಕನಾದ ಕೇಶವನು ಹೀಗೆ ಚಿಂತಿಸಿದನು. ಆ ಜೀವ ಎಂಬ ರೂಪದಿಂದ ಶ್ರೀದೇವಿ, ಪ್ರಾಣದೇವರು ಹಾಗೂ ರುದ್ರದೇವರನ್ನು ಪ್ರವೇಶ ಮಾಡಿ, ಎಲ್ಲ ಪದಾರ್ಥಗಳನ್ನು, ಅವುಗಳ ಹೆಸರುಗಳನ್ನು ಸೃಷ್ಟಿ ಮಾಡುತ್ತೇನೆ. ಮತ್ತು ಈ ಮೂರು ದೇವತೆಗಳನ್ನು ಪರಸ್ಪರ ಅಂಶಯುಕ್ತರನ್ನಾಗಿ ಮಾಡುತ್ತೇನೆ ಎಂದು ಆಲೋಚಿಸಿದನು. ಹಾಗೆ ಆಲೋಚಿಸಿ ಆ ದೇವತೆಗಳನ್ನು ಪ್ರವೇಶ ಮಾಡಿದ ಅನಂತರ, ಅವರಿಂದ ಇಂದ್ರಾದಿ ದೇವತೆಗಳ ಹೆಸರು, ಹಾಗೂ ರೂಪಗಳನ್ನು ಸೃಷ್ಟಿ ಮಾಡಿದನು. ಆ ಮೂರುದೇವತೆಗಳನ್ನು ಪುನಃ ಅಗ್ನಿ, ಸೋಮ, ಸೂರ್ಯ ಮೊದಲಾದ ದೇವತೆಗಳಲ್ಲಿ ಪ್ರವೇಶ ಮಾಡಿಸಿದನು.

ಇವೇ ಮೊದಲಾದ ವಾಕ್ಯಗಳಿಂದ ಆ ದೇವತೆಗಳಿಂದ ಅಭಿಮನ್ಯಮಾನವಾದ ತೇಜಸ್, ನೀರು, ಅನ್ನ ಇವುಗಳಿಂದ ಮತ್ತೊಂದು ದ್ರವ್ಯವನ್ನು ತಯಾರಿಸಿ, ಅಂತಹ ದ್ರವ್ಯದಲ್ಲಿಯೂ ಎಲ್ಲ ಅಭಿಮಾನಿದೇವತೆಗಳ ಅಂಶವು ಪ್ರವೇಶಮಾಡಿಸಿದನು ಎಂದು ಉಪನಿಷತ್ತಿನಲ್ಲಿ ತ್ರಿವೃತ್ಕರಣವನ್ನು ಹೇಳಲಾಗಿದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

**प्रकाशः** – तथा ''अन्नमशितं त्रेधा विधीयते । यः स्थविष्ठो भागस्तत्पुरीषं यो मध्यमस्तन्मांसम्'' इत्यादिनोक्ताध्यात्मत्रिवृत्करणाविरोधोऽपि ''देवता एव मांसादिशब्दवाच्याः । तत्र प्रवेशात् । अश्यमानाच्च । उपजीव्यत्वात् । नच दुःखं तासाम् । ऐश्वर्यात्'' इति भाष्यवाक्यादवगन्तव्य इत्यर्थः ।

ಮತ್ತು ಉಪನಿಷತ್ತಿನಲ್ಲಿ ಹೇಳಲ್ಪಟ್ಟ ತ್ರಿವೃತ್ಕರಣ ವಿರೋಧವನ್ನು ಅದೇ ಉಪನಿಷದ್ಭಾಷ್ಯದ ಅನುಸಾರಿಯಾಗಿ ಪರಿಹರಿಸಿಕೊಳ್ಳಬೇಕು. ಉಪನಿಷತ್ತು ಹೀಗಿದೆ - 'ಅನ್ನಮಶಿತಂ ತ್ರೇಧಾ ವಿಧೀಯತೇ । ತಸ್ಯ ಯಃ ಸ್ಥವಿಷ್ಠಃ ಧಾತುಃ ತತ್ ಪುರೀಷಂ ಭವತೀ ಯೋ ಮಧ್ಯಮಃ ತನ್ಮಾಂಸಮ್ ।'

ಪ್ರಾಣಿಗಳಿಂದ ಯಾವ ಅನ್ನವು ತಿನ್ನಲ್ಪಡುತ್ತದೋ, ಅದರಲ್ಲಿ ರುದ್ರದೇವರು ಸ್ಥೂಲ, ಮಧ್ಯಮ ಹಾಗೂ ಸೂಕ್ಷ್ಮ ಎಂದು ಮೂರು ಬಗೆಯಲ್ಲಿ ವಿಭಾಗವನ್ನು ಹೊಂದುತ್ತಾರೆ. ಸ್ಥೂಲ ಭಾಗದಲ್ಲಿರುವ ರುದ್ರ ರೂಪವು ಮಲದಲ್ಲಿ ಪ್ರವೇಶಿಸಿ 'ಪುರೀಷ' ಎನಿಸಿದೆ. ಮಧ್ಯಮಭಾಗದಲ್ಲಿರುವ ರುದ್ರರೂಪವು ಮಾಂಸವನ್ನು ಪ್ರವೇಶಿಸಿ 'ಮಾಂಸ' ಎನಿಸುತ್ತದೆ. ಸೂಕ್ಷ್ಮವಾದ ಸಾರಭಾಗದಲ್ಲಿರುವ ರುದ್ರರೂಪವು ಮನಸ್ಸಿನಲ್ಲಿ ಪ್ರವೇಶಿಸಿ 'ಮನಸ್' ಎನಿಸುತ್ತದೆ. ಈ ಉಪನಿಷತ್ತಿನ ಭಾಷ್ಯ ಹೀಗಿದೆ -

'ದೇವತಾಃ ಏವ ಮಾಂಸಾದಿಶಬ್ದವಾಚ್ಯಾಃ । ತತ್ರ ಪ್ರವೇಶಾತ್ । ಅಶ್ಯಮಾನಾಚ್ಚ । ಉಪಜೀವ್ಯತ್ವಾತ್ । ನಚ ದುಃಖಂ ತಾಸಾಮ್ । ಐಶ್ವರ್ಯಾತ್'

'ಅನ್ನಮಶಿತಂ ತ್ರೇಧಾ ವಿಧೀಯತೇ' ಎಂಬ ಮಂತ್ರಗಳಲ್ಲಿ ಇರುವಂತಹ ಮಾಂಸ, ಮನಸ್ಸು, ಪುರೀಷ ಮೊದಲಾದ ಶಬ್ದಗಳು ಅಭಿಮಾನಿಗಳಾದ ರುದ್ರಾದಿ ದೇವತೆಗಳನ್ನೇ ಹೇಳುತ್ತಿದೆ. ಏಕೆಂದರೆ ಆ ದೇವತೆಗಳು

ನಿಯಾಮಕರಾಗಿ ನಿಯಮ್ಯವಾದ ಮಾಂಸಾದಿಗಳಲ್ಲಿ ಪ್ರವೇಶ ಮಾಡಿರುವರು. ನಿಯಮ್ಯವಾಚಕಗಳಾದ ಶಬ್ದಗಳೆಲ್ಲವೂ ಮುಖ್ಯವಾಗಿ ನಿಯಾಮಕವಾಚಕಗಳಾಗಿರುತ್ತವೆ. ಹಾಗಾಗಿ ಮಾಂಸ ಮೊದಲಾದ ಶಬ್ದಗಳು ರುದ್ರಾದಿ ದೇವತೆಗಳಲ್ಲಿ ಮುಖ್ಯವಾಗಿ ಪ್ರವೃತ್ತವಾಗುತ್ತವೆ. ಮಾಂಸಾದಿ ನಿಯಾಮಕರಾಗಿರುವ ಈ ದೇವತೆಗಳು ಪ್ರಾಣಿಗಳಿಂದ ಉಪಜೀವ್ಯರು ಎಂದರೆ ಆಶ್ರಯಿಸಲ್ಪಡಬೇಕಾದವರು. ಈ ಅಭಿಪ್ರಾಯದಿಂದ ಉಪನಿಷತ್ತಿನಲ್ಲಿ ಅಶ್ಯಮಾನರು ಪೀಯಮಾನರೆಂದು ಕರೆಸಿಕೊಳ್ಳುತ್ತಾರೆ ಹೊರತು, ಜಡವಾದ ಅನ್ನ ಹಾಗೂ ನೀರಿನಂತೆ ತಿನ್ನಲ್ಪಡುವ ಅಥವಾ ಕುಡಿಯಲ್ಪಡುವ ಕಾರಣದಿಂದಲ್ಲ. ಅನ್ನ ಮೊದಲಾದವುಗಳನ್ನು ತಿನ್ನುವಾಗ, ಅನ್ನದಲ್ಲಿರುವ ದೇವತೆಗಳಿಗೆ ದುಃಖವಾಗುವುದಿಲ್ಲವೇ? ಎಂಬ ಪ್ರಶ್ನೆಯೂ ತಪ್ಪು. ತನ್ನಲ್ಲಿರುವ ಐಶ್ವರ್ಯ ಶಕ್ತಿಯಿಂದ ದೇವತೆಗಳಿಗೆ ದುಃಖವು ಉಂಟಾಗುವುದಿಲ್ಲ.

**प्रकाशः – एतेनेति ।।** तेजः प्रभृतेश्चेतनत्वेन तत्र श्रुतेक्षणस्य गौणत्वाभावेन गौणेक्षणप्रायपाठात् ''तदैक्षत'' इति श्रुतमीक्षणं गौणमित्येतन्निरस्तमित्यर्थः ।

'ಏತೇನ' ಎಂಬ ಗ್ರಂಥದ ಅಭಿಪ್ರಾಯ ಹೀಗಿದೆ - ಹಿಂದೆ ಹೇಳಿದಂತೆ 'ತೇಜಸ್' ಮೊದಲಾದವುಗಳೆಲ್ಲವೂ ಚೇತನವೆಂದಾದವು. ಅಲ್ಲಿ ಶ್ರುತವಾದ ಈಕ್ಷಣಕ್ಕೆ ಗೌಣತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಗೌಣವಾದ ಈಕ್ಷಣದ ಪ್ರಾಯಪಾಠದ ಬಲದಿಂದ 'ತದೈಕ್ಷತ' ಎಂಬಲ್ಲಿ ಶ್ರುತವಾದ ಈಕ್ಷಣಕ್ಕೆ ಗೌಣಾರ್ಥವನ್ನು ಒಪ್ಪಬಹುದಲ್ಲವೇ ಎಂಬ ಪಕ್ಷವೂ ಸಹ ಇದರಿಂದಲೇ ನಿರಾಕೃತವಾಯಿತು.

**प्रकाशः –** नन्वस्त्वीक्षणबहुभावयोर्मुख्ययोः प्रधानेऽसम्भवः । हरौ तु कथमीक्षणस्य चेतनत्वेन ''नान्योऽतोऽस्ति द्रष्टा' इत्यादिभाष्योक्तश्रुत्या च मुख्यस्य सम्भवेऽप्येकस्मिन्नजे ''अजायमानो बहुधा विजायते'' इति श्रुत्युक्तत्वेऽपि बहुत्वजननयोरुपपत्तिः ।

ಆಕ್ಷೇಪ - ಈಕ್ಷಣ ಹಾಗೂ ಬಹುಭವನಗಳು ಪ್ರಧಾನಪಕ್ಷದಲ್ಲಿ ಮುಖ್ಯವಾಗಿ ಬರುವುದಿಲ್ಲವೆಂದು ಸಮರ್ಥಿಸಿದಿರಿ. ಆದರೆ ಶ್ರೀಹರಿಯೇ 'ಸತ್' ಶಬ್ದದಿಂದ ಪ್ರತಿಪಾದ್ಯನಾದಾಗ ಬಹುಭವನವನ್ನು ಮುಖ್ಯವಾಗಿ ಕೂಡಿಸಲು ನಿಮ್ಮಿಂದಲೂ ಸಾಧ್ಯವಿಲ್ಲ. ಏಕೆಂದರೆ ಶ್ರೀಹರಿಯು ಚೇತನನಾದ್ದರಿಂದ ಈಕ್ಷಣವನ್ನು ಮುಖ್ಯವಾಗಿ ಕೂಡಿಸಬಹುದು. ಮತ್ತು 'ನಾನ್ಯೋऽತೋऽಸ್ತಿ ದ್ರಷ್ಟಾ' ಎಂಬ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಯ ಆಧಾರದಿಂದಲೂ ಈಕ್ಷಣವನ್ನು ಮುಖ್ಯವಾಗಿ ಕೂಡಿಸಬಹುದು. ಆದರೆ ಒಬ್ಬನೇ ಆಗಿರುವಂತಹ ಅವನಲ್ಲಿ ಬಹುತ್ವವನ್ನು ಕೂಡಿಸುವುದು ಅಸಂಭಾವಿತ. ಮತ್ತು ಜನ್ಮವಿಲ್ಲದ ಪರಮಾತ್ಮನಲ್ಲಿ ಹುಟ್ಟುವಿಕೆಯನ್ನೂ ಸಹ ಕೂಡಿಸಲಾಗದು. ವಸ್ತುತಃ 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಶ್ರುತಿಯ ಬಲದಿಂದ ಹುಟ್ಟಿಲ್ಲದ್ದಿದರೂ ಅನೇಕ ರೂಪವನ್ನು ತಾಳುತ್ತಾನೆಂದು ತಿಳಿಯಬಹುದು. ಆದರೆ ಬಹುತ್ವ-ಜನನಗಳೆರಡೂ ಒಬ್ಬನೇ ಆಗಿರುವ ಮತ್ತು ಜನ್ಮವಿಲ್ಲದ ಪರಮಾತ್ಮನಲ್ಲಿ ಉಪಪಾದಿಸುವುದು ಸುಲಭಸಾಧ್ಯವಲ್ಲ.

**प्रकाशः –** तथाच ''बहुभावस्य विकारित्वं विनैव स्वरूपबहुत्वेन सावकाशत्वात्'' इति टीका न युक्ता ।

ಆದ್ದರಿಂದ 'ಬಹುಭಾವಸ್ಯ ವಿಕಾರಿತ್ವಂ ವಿನೈವ ಸ್ವರೂಪಬಹುತ್ವೇನ ಸಾವಕಾಶತ್ವಾತ್' ಬಹುಭವನವನ್ನು ಪ್ರಾದುರ್ಭಾವರೂಪದಿಂದ ಕೂಡಿಸುವ ಮೂಲಕ ಸಾವಕಾಶ ಮಾಡಬೇಕೆಂಬ ಟೀಕೆಯೂ ಕೂಡ ಅಯುಕ್ತವಾಗುತ್ತದೆ.

**प्रकाशः** – तत्सङ्ग्रहश्चात्र श्लोके न युक्त इत्यतः पूर्वार्धं विवृणोति – **ब्रह्मपक्षे त्विति** ।।

ಮತ್ತು ಆ ಪ್ರಮೇಯವನ್ನೆಲ್ಲಾ ಸಂಗ್ರಹಿಸುವ ಶ್ಲೋಕವೂ ಸಹ ಅಯುಕ್ತವಾಗಿದೆ. ಇಷ್ಟು ಆಕ್ಷೇಪಾಂಶ.

ಸಮಾಧಾನ - ಈ ಆಕ್ಷೇಪಗಳಿಗೆ ಉತ್ತರಿಸುತ್ತಾ, ಶ್ಲೋಕದ ಪೂರ್ವಾರ್ಧವನ್ನು ವಿವರಿಸುತ್ತಿದ್ದಾರೆ 'ಬ್ರಹ್ಮಪಕ್ಷೇ ತು' ಇತ್ಯಾದಿಯಾಗಿ.

**प्रकाशः** – नहि अन्यार्थं सङ्कल्पमभिधायान्यक्रियाभिधानं सङ्गच्छते । न हीश्वरोऽस्वतन्त्रोऽसत्यकामो वेति चतुर्थपादीयं सुधोक्तदिशा वाक्यशेषस्योक्तार्थ-ज्ञापकत्वं व्यनक्ति – **नहीति** ।।

ಒಂದು ಪದಾರ್ಥವನ್ನು ಸೃಷ್ಟಿ ಮಾಡುತ್ತೇನೆಂದು ಸಂಕಲ್ಪ ಮಾಡಿ, ಮತ್ತೊಂದು ಪದಾರ್ಥದ ಕ್ರಿಯೆಯನ್ನು ಹೇಳುವುದು ತಪ್ಪಾಗುತ್ತದೆ. ಏಕೆಂದರೆ ಈಶ್ವರನು ಅಸ್ವತಂತ್ರನೂ ಅಲ್ಲ, ಅಸತ್ಯಕಾಮನೂ ಅಲ್ಲ. ಹೀಗೆ ಚತುರ್ಥಪಾದದ ಸುಧೆಯಲ್ಲಿ ಹೇಳಿದಂತೆ ವಾಕ್ಯಶೇಷವು ಹಿಂದೆ ಹೇಳಿದ ಅರ್ಥಕ್ಕೆ ಜ್ಞಾಪಕವಾಗಿದೆಯೆಂದು 'ನಹಿ' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – अतस्तेजःप्रभृत्यात्मनैव बहुभावस्सङ्कल्पित इति वक्तव्यमिति भावः। **न ब्रह्मणि युक्त इति** ।। "न चेतनविकारस्स्याद्यत्र क्वापि ह्यचेतन" इति चतुर्थ-पादीयानुभाष्योक्तदिशेति भावः । यद्वा प्रागुक्तदिशा निर्विकारत्वादिति भावः ।।

ಆದ್ದರಿಂದ 'ತೇಜಸ್' ಮೊದಲಾದವುಗಳ ಸ್ವರೂಪದಿಂದಲೇ ಬಹುಭವನವನ್ನು ಹೊಂದುತ್ತೇನೆಂದು ಸಂಕಲ್ಪ ಮಾಡಿದ್ದಾನೆಂದು ಹೇಳಬೇಕು. 'ನ ಬ್ರಹ್ಮಣಿ ಯುಕ್ತಃ' ಎಂಬುದು 'ನ ಚೇತನವಿಕಾರಸ್ಸ್ಯಾದ್ಯತ್ರ ಕ್ವಾಪಿ ಹ್ಯಚೇತನ' ಎಂಬ ನಾಲ್ಕನೇ ಪಾದದ ಅನುವ್ಯಾಖ್ಯಾನದ ಪ್ರಕಾರ ಹೇಳಿದ್ದಾರೆಂದು ತಿಳಿಯಬೇಕು. ಅಥವಾ ಹಿಂದೆ ಹೇಳಿದಂತೆ ಬ್ರಹ್ಮನು ನಿರ್ವಿಕಾರನಾದ್ದರಿಂದಲೂ ಉಪಪನ್ನವಾಗುತ್ತದೆಂದು ತಿಳಿಯಬೇಕು.

**गुरुराजीयम्** – **एतेनेति** ।। तेज आदेर्देवतात्वेन तत्रेक्षणस्य मुख्यत्वोपपादनेनेत्यर्थः ।।

ಪರಿಪೂರ್ಣಚಂದ್ರಿಕಾ



ಸಿದ್ಧಾಂತ ಹೀಗಿದೆ - ಹಿಂದೆ ಮಾಡಿದ ಐದು ಬಗೆಯ ಪೂರ್ವಪಕ್ಷಗಳಲ್ಲಿ ಮೊದಲನೆಯ ಪೂರ್ವಪಕ್ಷದ ನಿರಾಕರಣೆ ಹೀಗಿದೆ - ಪ್ರಕೃತಿಯೇ 'ಸತ್' ಶಬ್ದ ವಾಚ್ಯವಾದರೆ ಈಕ್ಷಣವನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕಾದರೂ ಬಹುಭವನವನ್ನು ಗೌಣವನ್ನಾಗಿ ಸ್ವೀಕರಿಸಬೇಕಾಗಿಲ್ಲವೆಂದು ಪೂರ್ವಪಕ್ಷದಲ್ಲಿ ಹೇಳಿದ್ದರು. ಆದರೆ ಈಕ್ಷಣದ ಜೊತೆಗೆ ಬಹುಭವನವನ್ನೂ ಸಹ ಗೌಣವೆಂದೇ ಅವರು ಒಪ್ಪಬೇಕಾಗುತ್ತದೆ. ಏಕೆಂದರೆ 'ತತ್ತೇಜ ಐಕ್ಷತ ತದತಪೋ ಅಸೃಜತ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ 'ತೇಜಸ್' ಮೊದಲಾದ ಶಬ್ದಗಳು ಜಡಪದಾರ್ಥವನ್ನು ಪ್ರತಿಪಾದಿಸುತ್ತಿಲ್ಲ ಹೊರತಾಗಿ, ದೇವತೆಗಳನ್ನೇ ಪ್ರತಿಪಾದಿಸುತ್ತಿವೆ. ಪ್ರಕೃತಿಗೆ ದೇವತಾಸ್ವರೂಪವನ್ನು ತಾಳಲು ಸಾಧ್ಯವಿಲ್ಲ. ಹಾಗಾಗಿ 'ಸತ್' ಪದಾರ್ಥದಿಂದ 'ತೇಜಸ್' ಮೊದಲಾದವುಗಳು ಹುಟ್ಟಿದವು ಎಂಬ ಶ್ರುತಿಗೆ ಪ್ರಕೃತಿಪರತ್ವವನ್ನು ಸುಲಭವಾಗಿ ಹೇಳಲು ಅವರಿಂದಾಗದು.

ಆದರೆ ಬ್ರಹ್ಮನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾದಾಗ ಈ ಸಮಸ್ಯೆ ಬರುವುದಿಲ್ಲ. ಬ್ರಹ್ಮನು ಚೇತನನಾದ್ದರಿಂದ ಈಕ್ಷಣವನ್ನು ಮುಖ್ಯವಾಗಿ ಹೇಳಬಹುದು. ಬಹುಭವನವೂ ಸಹ ಪ್ರಾದುರ್ಭಾವರೂಪದಿಂದ ಮುಖ್ಯವಾಗಿಯೇ ಉಪಪನ್ನವಾಗುತ್ತದೆ. ಬ್ರಹ್ಮನು ಒಬ್ಬನೇ ಆಗಿದ್ದರೂ, ಅಜಾಯಮಾನನಾಗಿದ್ದರೂ ಕೂಡ ದ್ಯುಭ್ವಾದ್ಯಧಿಕರಣದಲ್ಲಿ ಹಾಗೂ ಗುಹಾಧಿಕರಣದಲ್ಲಿ ಹೇಳಿದಂತೆ ಅನೇಕ ರೂಪಗಳಿಂದ ಪ್ರಾದುರ್ಭಾವವಾಗುವಿಕೆ ಮತ್ತು ಪ್ರಾದುರ್ಭಾವವಿರುವುದರಿಂದ ಹುಟ್ಟುವಿಕೆ ಮೊದಲಾದವುಗಳೂ ಕೂಡ ಅವನಲ್ಲಿ ಯುಕ್ತವಾಗುತ್ತದೆಂದು ತಿಳಿಯಬೇಕು. ಆದ್ದರಿಂದ 'ಸತ್' ಶಬ್ದದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗುತ್ತಾನೆ.





## ಶ್ರೀಹರಿಯಲ್ಲಿ ಈಕ್ಷಣ, ಬಹುಭಾವಗಳೆರಡೂ ಮುಖ್ಯ

**तात्पर्यचन्द्रिका**

**समाधानं तु-**

**बहु स्यामिति सङ्कल्प्य तेजःप्रभृतिसर्जनम् ।**
**गुरुः स्यामिति सङ्कल्प्य शिष्यसम्पादनादिवत् ।। १ ।।**

ಅನುವಾದ - ಈ ಅಧಿಕರಣವು ವ್ಯರ್ಥವಲ್ಲವೆನ್ನಲು ಅಧಿಕಾಶಂಕೆಯನ್ನು ಈ ಹಿಂದೆ ತೋರಿಸಲಾಯಿತು. ಅದಕ್ಕೆ ಏನು ಸಮಾಧಾನ ? ಎಂದರೆ. ಈಗ ಉತ್ತರಿಸುತ್ತಿದ್ದಾರೆ.

ಬಹು ಸ್ಯಾಮಿತಿ ಸಂಕಲ್ಪ್ಯ ತೇಜಃಪ್ರಭೃತಿಸರ್ಜನಮ್ ।
ಗುರುಃ ಸ್ಯಾಮಿತಿ ಸಂಕಲ್ಪ್ಯ ಶಿಷ್ಯಸಂಪಾದನಾದಿವತ್ ॥೧॥
ಸದಧಿಕರಣ (೧-೩-೪)

ಶ್ರೀಹರಿಯು ಬಹುಭವನವನ್ನು ತಾಳುತ್ತೇನೆಂದು ಸಂಕಲ್ಪ ಮಾಡಿ, 'ತೇಜಸ್' ಮೊದಲಾದ ಪದಾರ್ಥಗಳಿಂದ ಸೃಷ್ಟಿ ಮಾಡಿದ್ದು ತಪ್ಪಲ್ಲ. ಏಕೆಂದರೆ 'ನಾನು ಗುರುವಾಗಬೇಕು' ಎಂದು ಸಂಕಲ್ಪ ಮಾಡಿ ಶಿಷ್ಯರನ್ನು ಸಂಪಾದನೆ ಮಾಡಲು ಪ್ರವೃತ್ತಿ ಮಾಡಿದರೆ ಹೇಗೆ ತಪ್ಪಾಗುವುದಿಲ್ಲವೋ, ಅದರಂತೆ.

**तत्तन्नियामकस्वरूपबहुभावं सङ्कल्प्यानन्तरं नियम्य सृष्टिर्युक्तैव । गुरुत्व-राजत्वादेः शिष्यभृत्यादिसापेक्षत्ववन्नियामकताया नियम्यसापेक्षत्वात् ।**

ಆಯಾ ಪದಾರ್ಥಗಳ ನಿಯಾಮಕರೂಪದಿಂದ ಬಹುರೂಪಗಳನ್ನು ತಾಳಬೇಕೆಂದು ಸಂಕಲ್ಪ ಮಾಡಿ, ಅನಂತರ ನಿಯಮ್ಯಪದಾರ್ಥಗಳ ಸೃಷ್ಟಿಯನ್ನು ಹೇಳಿದರೆ ತಪ್ಪಾಗುವುದಿಲ್ಲ. ಯಾವರೀತಿಯಾಗಿ ಗುರುತ್ವವು ಶಿಷ್ಯಸಾಪೇಕ್ಷವೋ, ರಾಜತ್ವವು ಭೃತ್ಯಸಾಪೇಕ್ಷಿತವೋ, ಅದರಂತೆ ನಿಯಾಮಕತ್ವವು ನಿಯಮ್ಯಸಾಪೇಕ್ಷವಾಗಿದೆ.

**अत एव श्रुत्यन्तरे "सोऽकामयत बहु स्यां प्रजायेय" इति प्रक्रम्य "स इदं सर्वमसृजत । यदिदं किञ्च । तत्सृष्ट्वा । तदेवानुप्राविशत्" इति । अत्रापि श्रुतौ "अनेन जीवेनात्मनाऽनुप्रविश्य" इति भगवतः स्वसृष्टवस्तुनियमनाय तदनुप्रवेश उक्तः ।**

ಆದ್ದರಿಂದಲೇ ತೈತ್ತಿರೀಯದ ಬ್ರಹ್ಮವಲ್ಲಿಯಲ್ಲಿ 'ಸೋऽಕಾಮಯತ ಬಹು ಸ್ಯಾಂ ಪ್ರಜಾಯೇಯ' ಪರಮಾತ್ಮನು ಅನೇಕ ಪದಾರ್ಥಗಳನ್ನು ಸೃಷ್ಟಿ ಮಾಡಬೇಕೆಂದು ಸಂಕಲ್ಪ ಮಾಡಿದನು ಎಂದು ಪ್ರಾರಂಭವಾಗಿ, 'ಸ ಇದಂ ಸರ್ವಮಸೃಜತ । ಯದಿದಂ ಕಿಂಚ । ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಆ ಪದಾರ್ಥಗಳನ್ನೆಲ್ಲಾ ಸೃಷ್ಟಿ ಮಾಡಿದನು. ಅನಂತರ ಅವುಗಳಲ್ಲಿ ಪ್ರವೇಶ ಮಾಡಿದನೆಂದು ಹೇಳಲಾಗಿದೆ. ಅಂದರೆ ಸಂಕಲ್ಪ ಮಾಡಿ, ತನ್ನಿಂದ ನಿಯಮ್ಯವಾದ ಪದಾರ್ಥಗಳನ್ನು ಸೃಷ್ಟಿಸಿ ಅವುಗಳಲ್ಲಿ ಪ್ರವೇಶ ಮಾಡಿದನೆಂದು ಹೇಳಿದ್ದರಿಂದ ಅವನ ಸಂಕಲ್ಪವು ಸತ್ಯವಾಗಿದೆಯೆಂದು ತಿಳಿಯುತ್ತದೆ. ಅಷ್ಟೇ ಅಲ್ಲದೇ ಪ್ರಕೃತ ಛಾಂದೋಗ್ಯಶ್ರುತಿಯಲ್ಲಿಯೂ ಸಹ 'ಅನೇನ ಜೀವೇನಾತ್ಮನಾऽನುಪ್ರವಿಶ್ಯ' ಎಂಬುದಾಗಿ ತಾನು ಸೃಷ್ಟಿ ಮಾಡಿದ ವಸ್ತುಗಳಲ್ಲಿ ಪ್ರವೇಶ ಮಾಡಿದನೆಂದು ಹೇಳಲಾಗಿದೆ. ತನ್ನಿಂದ ಸೃಷ್ಟವಾದ ಪದಾರ್ಥಗಳನ್ನು ನಿಯಂತ್ರಣ ಮಾಡುವುದಕ್ಕಾಗಿ ಅವುಗಳ ಒಳಗಡೆ ಪ್ರವಿಷ್ಟನಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಅವುಗಳಲ್ಲಿ ಪ್ರವೇಶ ಮಾಡಬೇಕೆಂದರೆ ಮೊದಲು ಅವುಗಳ ಸೃಷ್ಟಿಯನ್ನು ಮಾಡಲೇ ಬೇಕು.

**तदेतदभिप्रेत्योक्तं न्यायविवरणे "अचेतनस्येक्षणादृष्टिः । बहुभाव-श्रुतिस्त्वन्यभावं विना तत्तन्नियामकतया स्वरूपबहुत्वार्थत्वेनैव युज्यते" इति ।**

ಪರಿಪೂರ್ಣಚಂದ್ರಿಕಾ

ಈ ಎಲ್ಲಾ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ ಶ್ರೀಮದಾಚಾರ್ಯರು 'ಅಚೇತನಸ್ಯೇಕ್ಷಣಾದೃಷ್ಟಿಃ । ಬಹುಭಾವಶ್ರುತಿಸ್ತ್ವನ್ಯಭಾವಂ ವಿನಾ ತತ್ತನ್ನಿಯಾಮಕತಯಾ ಸ್ವರೂಪಬಹುತ್ವಾರ್ಥತ್ವೇನ್ನೈವ ಯುಜ್ಯತೇ' 'ಅಚೇತನವಾದ ಪ್ರಧಾನಕ್ಕೆ ಈಕ್ಷಣವು ಉಪಪನ್ನವಾಗುವುದಿಲ್ಲ. ಪರಮಾತ್ಮನಲ್ಲಿ ಇದು ಯುಕ್ತವಾಗುತ್ತದೆ. ಮತ್ತು ಬಹುಭಾವ ಶ್ರುತಿಯೂ ಕೂಡ ಅನ್ಯಪದಾರ್ಥಗಳ ಸೃಷ್ಟಿಯನ್ನು ಮಾಡದಿದ್ದರೆ, ಅವುಗಳ ಒಳಗಡೆ ನಿಯಾಮಕರೂಪದಿಂದ ಪ್ರವೇಶ ಮಾಡುವುದು ಕೂಡುವುದಿಲ್ಲ' ಎಂದು ಹೇಳಿರುತ್ತಾರೆ.

**तस्मादीक्षणबहुभावौ द्वावपि मुख्यौ ।**

ಆದ್ದರಿಂದ ಶ್ರೀಹರಿಯೇ 'ಸತ್' ಶಬ್ದವಾಚ್ಯನೆಂದು ಹೇಳಿದಾಗ ಅವನಲ್ಲಿ 'ಈಕ್ಷಣ' ಮತ್ತು 'ಬಹುಭಾವ' ಎರಡೂ ಕೂಡ ಮುಖ್ಯವಾಗಿಯೇ ಉಪಪನ್ನವಾಗುತ್ತವೆ.

**एकस्य गौणत्वेऽपीक्षितृत्वस्रष्टृत्वमध्यगतत्वेन ताभ्यां सन्दष्टो बहुभाव एव गौणः ।**

ಈಕ್ಷಣವು ಚೇತನರಲ್ಲಿ ಮಾತ್ರ ಬರಲು ಸಾಧ್ಯ. ಬಹುಭವನವು ಅಚೇತನ ಪದಾರ್ಥದಲ್ಲಿ ಮಾತ್ರ ಬರಲು ಸಾಧ್ಯ. ಈ ಎರಡು ವಿರುದ್ಧಧರ್ಮಗಳಿಗೆ ಒಂದೇ ಪದಾರ್ಥದಲ್ಲಿ ಸಾಮಾನಾಧಿಕರಣ್ಯವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಎರಡರಲ್ಲಿ ಒಂದಕ್ಕೆ ಗೌಣಾರ್ಥವನ್ನು ಮಾಡಲೇಬೇಕೆಂದು ಹೇಳಿದರೆ, ಬಹುಭವನವನ್ನೇ ಗೌಣವನ್ನಾಗಿ ಮಾಡಬೇಕು ಹೊರತು, ಈಕ್ಷಣವನ್ನು ಗೌಣವನ್ನಾಗಿ ಮಾಡಬಾರದು. ಏಕೆಂದರೆ ಎಲ್ಲಿ ಬಹುಭವನವು ಶ್ರುತವಾಗಿದೆಯೋ, ಅದರ ಹಿಂದೆ ಈಕ್ಷಿತೃತ್ವವು ಮುಂದೆ ಸ್ರಷ್ಟೃತ್ವವು ಶ್ರುತವಾಗಿದೆ. ಈಕ್ಷಿತೃತ್ವ-ಸ್ರಷ್ಟೃತ್ವಗಳೆರಡನ್ನು ಮುಖ್ಯವಾಗಿ ಸ್ವೀಕರಿಸಿದಾಗ ಇವೆರಡರ ಮಧ್ಯದಲ್ಲಿರುವುದರಿಂದ ಇವೆರಡರಿಂದ ಸಂದಷ್ಟವಾದ ಬಹುಭವನವನ್ನೇ ಗೌಣವನ್ನಾಗಿ ಒಪ್ಪಬೇಕಾಗುತ್ತದೆ.

**नच सङ्कल्पस्य सृष्ट्यर्थत्वात् ''गुणे त्वन्याय्यकल्पना'' इति न्यायेनेक्षणं गौणमिति वाच्यम् ।**

ಪ್ರಶ್ನೆ - ಬಹುಭವನವನ್ನು ಮುಖ್ಯವನ್ನಾಗಿಟ್ಟುಕೊಂಡು ಈಕ್ಷಣವನ್ನೇ ಗೌಣವಾಗಿ ಹೇಳಬೇಕು. ಏಕೆಂದರೆ, ಸಂಕಲ್ಪವು ಸೃಷ್ಟಿಗೋಸ್ಕರವಿರುವ ಕಾರಣ, 'ಗುಣೇ ತ್ವನ್ಯಾಯಕಲ್ಪನಾ' ಎಂಬ ನ್ಯಾಯದಂತೆ ಸಂಕಲ್ಪರೂಪವಾದ ಈಕ್ಷಣವನ್ನೇ ಗೌಣವನ್ನಾಗಿ ಮಾಡಬೇಕು. ಸೃಷ್ಟಿಗೋಸ್ಕರ ಸಂಕಲ್ಪವಿರುವುದರಿಂದ ಸೃಷ್ಟಿಯು ಮುಖ್ಯವಾಗುತ್ತದೆ. ಸಂಕಲ್ಪವು ಗೌಣವಾಗುತ್ತದೆ. 'ಸೃಷ್ಟಿ' ಶಬ್ದಕ್ಕೆ ಬಹುಭವನವೆಂಬರ್ಥವನ್ನು ವಿವಕ್ಷಿಸಬೇಕು.

**'बहु स्यां प्रजायेय' इत्यस्यापि सङ्कल्पान्तर्भूतत्वात् ''असृजत'' इति प्रधानभूतस्रष्टृत्वानुरोधेन बहुभावादेरेव गौणत्वापत्तेः ।**

ಉತ್ತರ - ಸಂಕಲ್ಪದಲ್ಲಿ ಅಂತರ್ಗತವಾದದ್ದು ಬಹುಭವನವೇ ಹೊರತು, ಈಕ್ಷಣವಲ್ಲ. ಏಕೆಂದರೆ 'ಬಹು ಸ್ಯಾಮ್ ಪ್ರಜಾಯೇಯ' ಎಂಬುದಾಗಿ ಶ್ರುತಿಯು ಸಂಕಲ್ಪದ ಸ್ವರೂಪವನ್ನು ತೋರಿಸುತ್ತಿದೆ. ಆದ್ದರಿಂದ ನೀನೇ ಹೇಳಿದ ನ್ಯಾಯದಂತೆ ಬಹುಭವನವನ್ನೇ ಗೌಣವನ್ನಾಗಿ ಸ್ವೀಕರಿಸಬೇಕು ಎಂದಂತಾಗುತ್ತದೆ. 'ಅಸೃಜತ' ಎಂಬಲ್ಲಿ ಹೇಳಲ್ಪಟ್ಟ ಸೃಷ್ಟಿಯು ಬಹುಭವನರೂಪವಲ್ಲ. ಪ್ರಧಾನವೇ ಆಗಿದೆ. ಇಂತಹ ಪ್ರಧಾನವಾದ ಸ್ರಷ್ಟೃತ್ವಕ್ಕೆ ಅನುಸಾರಿಯಾಗಿ ಬಹುಭವನವನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕು.

**गौणसङ्कल्पेन सृष्टेः क्वाप्यदर्शनेन सङ्कल्पस्य गौणत्वे सृष्ट्यर्थत्वस्यैवायोगाच्च ।**

ಮತ್ತು ಗೌಣವಾದ ಸಂಕಲ್ಪದಿಂದ ಸೃಷ್ಟಿ ಮಾಡುವುದು ಜಗತ್ತಿನಲ್ಲಿ ಎಲ್ಲೂ ಕೂಡ ಕಂಡಿಲ್ಲ. ಆದ್ದರಿಂದ ಸಂಕಲ್ಪವನ್ನು ಗೌಣ ಮಾಡಿದರೆ ಸೃಷ್ಟಿರೂಪ ಪ್ರಯೋಜನವೇ ಸಂಕಲ್ಪಕ್ಕೆ ಸಿದ್ಧವಾಗುವುದಿಲ್ಲ.

**प्रकाशः –**

''बहु स्यामिति तस्यैव ह्युक्तमार्गेण युज्यते । तत्तद्गतेन रूपेण तदर्थं ह्यसृजज्जगत्'' इति चतुर्थपादीयानुव्याख्यानोक्तं दृष्टान्तपूर्वं सङ्गृह्योपपादयति – **समाधानं त्वित्यादिना ।।**

ವಿವರಣೆ - 'ಬಹು ಸ್ಯಾಮಿತಿ ತಸ್ಯೈವ ಹ್ಯುಕ್ತಮಾರ್ಗೇಣ ಯುಜ್ಯತೇ । ತತ್ತದ್ಗತೇನ ರೂಪೇಣ ತದರ್ಥಂ ಹ್ಯಸೃಜಜ್ಜಗತ್' 'ಸಚ್ಚತ್ಯಚ್ಚಾಭವತ್' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡಿದ ಪ್ರಕಾರದಲ್ಲಿಯೇ 'ಬಹು ಸ್ಯಾಮ್' ಎಂಬ ಶ್ರುತಿಗೂ ಕೂಡ ಆಯಾ ರೂಪದಿಂದ ಪ್ರವೇಶ ಮಾಡುವುದಕ್ಕಾಗಿ ಜಗತ್ತನ್ನು ಸೃಷ್ಟಿ ಮಾಡಿದನು ಎಂದು ವ್ಯಾಖ್ಯಾನಿಸಬೇಕು. ಹೀಗೆ ನಾಲ್ಕನೇ ಪಾದದ ಅನುವ್ಯಾಖ್ಯಾನದಲ್ಲಿ ಹೇಳಿದ ಮಾತನ್ನು ದೃಷ್ಟಾಂತ ಪೂರ್ವಕವಾಗಿ ಸಂಗ್ರಹಿಸಿ, ಉಪಪಾದನೆ ಮಾಡುತ್ತಿದ್ದಾರೆ 'ಸಮಾಧಾನಂ ತು' ಇತ್ಯಾದಿ ವಾಕ್ಯದಿಂದ.

**प्रकाशः –**

सच्च त्यच्चाभवदिति नास्य विश्वत्वमुच्यते ।
तत्सृष्ट्वेति गिरैवास्य पूर्वं विश्वस्य सिद्धितः ।।

इत्युत्तरपादीयानुव्याख्यानोक्तमाह – **अत एवेति ।।**

ಮೊದಲು ಜಗತ್ತನ್ನು ಸೃಷ್ಟಿ ಮಾಡಬೇಕೆಂದು ಬಯಸಿ, ಅನಂತರ ಜಗತ್ತನ್ನು ಸೃಷ್ಟಿ ಮಾಡಿ, ಜಗತ್ತಿನೊಳಗಡೆ ಪ್ರವೇಶ ಮಾಡಿ, ಅನಂತರ ಆಯಾ ಪದಾರ್ಥಗಳ ಸ್ವರೂಪವನ್ನು ತಾಳುತ್ತಾನೆಂದು ಪೂರ್ವಪಕ್ಷಕಾರರು ಹೇಳಿದಂತಾಯಿತು. ಇದು ಬಹಳ ತಪ್ಪಾಗುತ್ತದೆ. ಸೃಷ್ಟಿ ಮಾಡಿ ಆಯಾ ಪದಾರ್ಥಗಳಲ್ಲಿ ಪ್ರವೇಶಿಸಿದ ಅನಂತರ ಆಯಾಪದಾರ್ಥಗಳ ತಾದಾತ್ಮ್ಯವನ್ನು ಹೊಂದಲು ಸಾಧ್ಯವೇ ಇಲ್ಲ. ಏಕೆಂದರೆ

'ಸಚ್ಚ ತ್ಯಚ್ಚಾಭವದಿತಿ ನಾಸ್ಯ ವಿಶ್ವತ್ವಮುಚ್ಯತೇ।
ತತ್ಸೃಷ್ಟ್ವೇತಿ ಗಿರೈವಾಸ್ಯ ಪೂರ್ವಂ ವಿಶ್ವಸ್ಯ ಸಿದ್ಧಿತಃ॥

'ಸಚ್ಚತ್ಯಚ್ಚಾಭವತ್' ಎಂಬುದಾಗಿ ಹೇಳಿ, ಅನಂತರ ಆಯಾ ಪದಾರ್ಥಗಳ ಸ್ವರೂಪವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ತತ್ಸೃಷ್ಟ್ವಾ' ಎಂಬ ಮಾತು ಮೊದಲೇ ಹೇಳಲ್ಪಟ್ಟಿದೆ ಎಂಬ ಅನುವ್ಯಾಖ್ಯಾನದ ಅಭಿಪ್ರಾಯವನ್ನೇ 'ಅತ ಏವ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – स्वरूपबहुत्वसङ्कल्पानन्तरं नियम्यसर्जनस्योक्तदिशाऽभिमतत्वादित्यर्थः ।

ಸ್ವರೂಪತಃ ಬಹುಭವನವನ್ನು ತಾಳುತ್ತೇನೆಂದು ಸಂಕಲ್ಪ ಮಾಡಿ, ಅನಂತರ ನಿಯಮ್ಯವಾದ ಪದಾರ್ಥವನ್ನು ಸೃಷ್ಟಿ ಮಾಡುವುದು ತಪ್ಪಲ್ಲವೆಂದು ಈಗ ಸಮರ್ಥಿಸಿದಂತೆ ಅಭಿಪ್ರೇತವಾದ್ದರಿಂದ ಎಂಬುದಾಗಿ 'ಅತಃ' ಎಂಬ ಪದದ ಅರ್ಥವನ್ನು ತಿಳಿಯಬೇಕು.

**प्रकाशः** – नन्वस्तु तैत्तिरीयश्रुतौ 'तत्सृष्ट्वा' इति वाक्यशेषबलात्तथोपपत्तिः । नैवं छन्दोगश्रुतौ । तथोपपत्तिकल्पकवाक्यशेषाभावात् । तथाच "बहु स्यामिति तस्यैव ह्युक्तमार्गेण" इत्यनुव्याख्याने "सच्चत्यच्चेति वाक्यव्याख्यानन्यायेन" इत्युक्तिरयुक्तेत्यत आह – **अत्रापि श्रुताविति** ॥

ತೈತ್ತಿರೀಯಶ್ರುತಿಯಲ್ಲಿ 'ತತ್ಸೃಷ್ಟ್ವಾ 'ಎಂಬ ವಾಕ್ಯಶೇಷದ ಬಲದಿಂದ ಪರಮಾತ್ಮನ ಅನುಪ್ರವೇಶವನ್ನು ಒಪ್ಪಬಹುದು. ಆದರೆ ಛಾಂದೋಗ್ಯಶ್ರುತಿಯಲ್ಲಿ ಹಾಗೆ ಹೇಳಿಲ್ಲ. ಹಾಗೇ ಕಲ್ಪಿಸಲು ಆವಶ್ಯಕವಾದ ವಾಕ್ಯಶೇಷವೂ ಕೂಡ ಇರುವುದಿಲ್ಲ. ಆದ್ದರಿಂದ 'ಬಹು ಸ್ಯಾಮಿತಿ ತಸ್ಯೈವ ಹ್ಯುಕ್ತಮಾರ್ಗೇಣ' ಎಂದು ಅನುವ್ಯಾಖ್ಯಾನದಲ್ಲಿ ಮತ್ತು 'ಸಚ್ಚತ್ಯಚ್ಚೇತಿ ವಾಕ್ಯವ್ಯಾಖ್ಯಾನನ್ಯಾಯೇನ' ಎಂಬುದಾಗಿ ಹೇಳಿದ್ದೂ ಕೂಡ ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅತ್ರಾಪಿ ಶ್ರುತೌ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – अनेन जीवनामकेनानिरुद्धेन स्वात्मना तेजोऽबन्नशब्दितान् श्रीब्रह्मरुद्रान् प्रविश्येत्यर्थः ।

ಹೀಗೆ ಹೇಳಿದ್ದರಿಂದ ಜೀವನಿಯಾಮಕವಾದ ಅನಿರುದ್ಧವೆಂಬ ತನ್ನದೇ ಆದ ರೂಪದಿಂದ ತೇಜಸ್, ಅಪ್, ಅನ್ನ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾದ ಲಕ್ಷ್ಮೀ, ಬ್ರಹ್ಮ, ರುದ್ರ ಮೊದಲಾದವರನ್ನು ಪ್ರವೇಶ ಮಾಡಿ ಎಂಬರ್ಥವನ್ನು ಹೇಳಿದಂತಾಯಿತು.

**प्रकाशः – तैत्तिरीयभाष्ये तु –**

सृष्ट्वा जगदिदं सर्वं नियामकतयाऽस्य तु ।
बहुरूपो भवानीति स्याज्जगच्चेत्यचिन्तयत् ।।

इति 'बहु स्याम्' इति सङ्कल्प एव नियम्यानेकसर्जनपूर्वकस्वरूपबहुभावसर्जन विषयक इत्यर्थान्तरमुक्तम् । तस्मिन्पक्षे नियम्यसर्जनस्य प्रथमसङ्कल्पितत्वान्नियम्य-सर्जनं नासङ्गतमिति भावः ।

ತೈತ್ತಿರೀಯಭಾಷ್ಯದಲ್ಲಿ ಹೀಗೆ ಹೇಳಿದೆ -

ಸೃಷ್ಟ್ವಾ ಜಗದಿದಂ ಸರ್ವಂ ನಿಯಾಮಕತಯಾಽಸ್ಯ ತು ।
ಬಹುರೂಪೋ ಭವಾನೀತಿ ಸ್ಯಾಜ್ಜಗಚ್ಚೇತ್ಯಚಿಂತಯತ್ ॥

ಈ ಎಲ್ಲ ಜಗತ್ತನ್ನು ಸೃಷ್ಟಿಮಾಡಿ ನಿಯಾಮಕರೂಪದಿಂದ ಬಹುರೂಪವನ್ನು ತಾಳಬೇಕು ಎಂದು ಸಂಕಲ್ಪ ಮಾಡಿದನು ಎಂಬುದಾಗಿ,

'ಬಹು ಸ್ಯಾಮ್' ಎಂಬ ಸಂಕಲ್ಪವೇ ಕೇವಲ ತನ್ನ ಬಹುರೂಪದ ತಾಳುವಿಕೆಯ ಸ್ವರೂಪವಾಗಿಲ್ಲ. ಹೊರತಾಗಿ, ನಿಯಮ್ಯವಾದ ಅನೇಕ ಪದಾರ್ಥಗಳ ಸೃಷ್ಟಿ ಮಾಡುವ ಮೂಲಕ ತಾನೂ ಕೂಡ ಅನೇಕ ಸ್ವರೂಪವನ್ನು ತಾಳಬೇಕು ಎಂಬ ಸ್ವರೂಪದಲ್ಲಿ ಸಂಕಲ್ಪವಿದೆ. ಹೀಗೂ ಸಹ ವ್ಯಾಖ್ಯಾನಿಸಲಾಗಿದೆ. ಈ ಪಕ್ಷದಲ್ಲಿ ನಿಯಮ್ಯಸರ್ಜನವೇ ಮೊದಲು ಸಂಕಲ್ಪಿತವಾದ್ದರಿಂದ, ಸಂಕಲ್ಪಕ್ಕೆ ಅನುಸಾರಿಯಾಗಿ ನಿಯಮ್ಯದ ಸೃಷ್ಟಿಯನ್ನು ಮೊದಲು ಮಾಡಿ ಅನಂತರ ಬಹುಭಾವವನ್ನು ಹೊಂದಿದ್ದು ಅಸಂಗತವಾಗುವುದಿಲ್ಲ.

**प्रकाशः** – भाष्यटीकयोरस्फुटत्वादाह – **तदिति** ।। तत्वप्रदीपे सौत्रकर्मशब्दस्य सृष्ट्यर्थत्वमुपेत्येक्षणस्रष्टृत्वयोर्द्वयोर्हरौ मुख्यत्वोक्त्या सूचितं पक्षान्तरमाह – **एकस्य गौणत्वेऽपीति** ।।

ಗ್ರಂಥದಲ್ಲಿ ಹೇಳಲ್ಪಟ್ಟ ವಿಷಯವು ಭಾಷ್ಯ ಹಾಗೂ ಟೀಕೆಗಳಲ್ಲಿ ಸ್ಪಷ್ಟವಾಗಿ ತೋರುವುದಿಲ್ಲ. ಅದಕ್ಕೋಸ್ಕರ ನ್ಯಾಯವಿವರಣದಲ್ಲಿ ಹೇಳಲ್ಪಟ್ಟಿದೆಯೆಂದು 'ತತ್ತು' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ. ತತ್ವಪ್ರದೀಪದಲ್ಲಿ ಸೂತ್ರದಲ್ಲಿರುವ ಕರ್ಮಶಬ್ದಕ್ಕೆ ಸೃಷ್ಟಿಯೆಂಬರ್ಥವನ್ನು ಅಂಗೀಕರಿಸಿ ಈಕ್ಷಣ ಹಾಗೂ ಸೃಷ್ಟಿಗಳೆರಡೂ ಶ್ರೀಹರಿಯಲ್ಲಿ ಮುಖ್ಯವಾಗಿಯೇ ಉಪಪನ್ನವಾಗುತ್ತವೆಂದು ಸೂಚಿಸಿದ್ದಾರೆ. ತತ್ವಪ್ರದೀಪದ ಈ ಪಕ್ಷವನ್ನು 'ಏಕಸ್ಯ ಗೌಣತ್ವೇಽಪಿ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः – सन्दष्ट इति** ।। ''तदैक्षत बहु स्यां प्रजायेय' इति । तत्तेजोऽसृजत'' इति श्रवणादिति भावः ।

'ಸಂದಷ್ಟ' ಎಂದರೆ - ಈಕ್ಷಿತೃತ್ವ ಹಾಗೂ ಸ್ರಷ್ಟೃತ್ವಗಳಿಂದ ಬಹುಭವನವು ಸಂದಷ್ಟವಾಗಿದೆಯೆಂದು ತಿಳಿಯಬೇಕು. ಏಕೆಂದರೆ 'ತದೈಕ್ಷತ ಬಹು ಸ್ಯಾಂ ಪ್ರಜಾಯೇಯ' ಎಂದು ಮತ್ತು 'ತತ್ತೇಜೋಽಸೃಜತ' ಎಂದು ಶ್ರುತವಾದ್ದರಿಂದ ಇವುಗಳ ಮಧ್ಯೆ ಬಹುಭವನವು ಸಂದಷ್ಟವಾಗಿದೆ.

**प्रकाशः** – एतेन ''पूर्वाधिकरणे चरमस्य द्रष्टृत्वादेर्मुख्यत्वाय'' इत्यादिनोक्त-पूर्वसिद्धान्तन्यायेन पूर्वपक्षोक्तिरपि प्रत्युक्ता । अत्रेव पूर्वत्र सन्दंशाभावेन द्रष्टृत्वादे-र्मुख्यत्वसम्भवेनास्य पूर्ववैषम्यात् ।

ಹೀಗೆ ಹೇಳಿದ್ದರಿಂದ 'ಪೂರ್ವಾಧಿಕರಣೇ ಚರಮಸ್ಯ ದ್ರಷ್ಟೃತ್ವಾದೇರ್ಮುಖ್ಯತ್ವಾಯ' 'ಹಿಂದಿನ ಅಧಿಕರಣದಲ್ಲಿ ಚರಮಶ್ರುತವಾದ ದ್ರಷ್ಟೃತ್ವಾದಿಗಳಿಗೆ ಮುಖ್ಯಾರ್ಥತ್ವವನ್ನು ಕೂಡಿಸುವುದಕ್ಕಾಗಿ' ಇತ್ಯಾದಿಯಾದ ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದಿಂದ ಮಾಡಲ್ಪಟ್ಟ ಪೂರ್ವಪಕ್ಷವನ್ನೂ ಕೂಡ ನಿರಾಕರಿಸಿದಂತಾಯಿತು. ಏಕೆಂದರೆ ಇಲ್ಲಿ ಯಾವರೀತಿಯಾಗಿ ಬಹುಭವನವು ಸಂದಷ್ಟವಾಗಿದೆಯೋ, ಅದರಂತೆ ಹಿಂದಿನ ಅಧಿಕರಣದಲ್ಲಿ ಸಂದಂಶವನ್ನು ತೋರಿಸಲು ಸಾಧ್ಯವಿಲ್ಲ. ಆದ್ದರಿಂದ ದ್ರಷ್ಟೃತ್ವಾದಿಗಳೆಲ್ಲವೂ ಮುಖ್ಯವೆಂದು ಹೇಳಬೇಕಾಗುತ್ತದೆ. ಹೀಗೆ ಹಿಂದಿನ ಅಧಿಕರಣದಿಂದ ವೈಷಮ್ಯವಿರುವ ಪ್ರಯುಕ್ತ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನೇ ಅವಲಂಬಿಸಿ ಪೂರ್ವಪಕ್ಷ ಮಾಡಲು ಬರುವುದಿಲ್ಲ.

**प्रकाशः**–ननु बहुभावस्य सन्दष्टत्वेऽपि न्यायान्तरेणेक्षणं गौणं स्यादित्याशङ्क्याह – **नचेति** ।। 'तदैक्षत' इत्यस्य सङ्कल्परूपत्वात्सङ्कल्पस्येत्युक्तम् ।

ಬಹುಭವನವು ಸಂದಷ್ಟವಾಗಿದ್ದರೂ ಅಪ್ರಧಾನವಾದದ್ದನ್ನು ಗೌಣವನ್ನಾಗಿ ಸ್ವೀಕರಿಸಬೇಕೆಂಬ ಮತ್ತೊಂದು ನ್ಯಾಯವನ್ನು ಅವಲಂಬಿಸಿ ಈಕ್ಷಣವನ್ನು ಗೌಣವನ್ನಾಗಿ ಅರ್ಥೈಸುತ್ತೇವೆಂದು ಶಂಕಿಸಿದರೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ತದೈಕ್ಷತ' ಎಂಬುದು ಸಂಕಲ್ಪರೂಪವಾದ್ದರಿಂದ 'ಸಂಕಲ್ಪಸ್ಯ' ಎಂದು ಹೇಳಿದ್ದಾರೆ.

**प्रकाशः** – **गुणे त्विति** ।। नवमे तृतीयपादे ''विप्रतिपत्तौ विकल्पस्स्यात् समत्वाद्गुणे त्वन्याय्यकल्पनैकदेशत्वात्'' इति जैमिनीयसूत्रोक्तन्यायेनेत्यर्थः । विवृतश्चायं न्यायो गुहाधिकरणे ।

'ಗುಣೇ ತ್ವನ್ಯಾಯ್ಯಕಲ್ಪನಾ' ಎಂಬ ನ್ಯಾಯವು 'ವಿಪ್ರತಿಪತ್ತೌ ವಿಕಲ್ಪಸ್ಸ್ಯಾತ್ ಸಮತ್ವಾದ್ ಗುಣೇ ತ್ವನ್ಯಾಯ ಕಲ್ಪನೈಕದೇಶತ್ವಾತ್' ಎಂಬ ಜೈಮಿನೀಸೂತ್ರದ ಒಂಭತ್ತನೇ ಅಧ್ಯಾಯದ ಮೂರನೇ ಪಾದದಲ್ಲಿ ಬಂದಿರುತ್ತದೆ. ಈ ನ್ಯಾಯವನ್ನು ಹಿಂದೆ ಗುಹಾಧಿಕರಣದಲ್ಲಿ ವಿವರಿಸಿದ್ದಾಗಿದೆ.

**प्रकाशः** – बहुभावादेरित्यादिपदेन प्रजननं गृह्यते । कथमेतावतेक्षणस्या-गौणत्वमित्यत आह – **गौणेति** ।।

'ಬಹುಭಾವಾದೇಃ' ಎಂಬಲ್ಲಿರುವ ಆದಿಪದದಿಂದ ಹುಟ್ಟುವಿಕೆಯನ್ನು ಸ್ವೀಕರಿಸಬೇಕು. ಇಷ್ಟು ಮಾತ್ರದಿಂದ ಈಕ್ಷಣಕ್ಕೆ ಗೌಣತ್ವವಿಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ, 'ಗೌಣಸಂಕಲ್ಪೇನ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**गुरुराजीयम् – अत एवेति । नियामकताया नियम्यसापेक्षत्वादेवेत्यर्थः ।**



ಪರಮಾತ್ಮನು ಅನೇಕ ರೂಪಗಳನ್ನು ತಾಳಲು ಸಂಕಲ್ಪ ಮಾಡಿದನು. ಅನಂತರ ಆ ರೂಪಗಳ ಅಧಿಷ್ಠಾನಕ್ಕಾಗಿ ಸಮಸ್ತ ಜಗತ್ತಿನಲ್ಲಿ ನಾನಾವಿಧವಾದ ಪದಾರ್ಥಗಳನ್ನು ಸೃಷ್ಟಿ ಮಾಡಿದನು. ಅನಂತರ ಆ ಪದಾರ್ಥಗಳ ಒಳಗಡೆ ನಿಯಾಮಕನಾಗಿ ಪ್ರವೇಶ ಮಾಡಿದನು. ಹೀಗೆ ಶ್ರುತಿಯು ಹೇಳುತ್ತಿದೆ. ನಿಯಾಮಕವಾದ ಅನೇಕ ರೂಪಗಳನ್ನು ತಾಳಬೇಕೆಂದು ಸಂಕಲ್ಪ ಮಾಡಿ, ನಿಯಮ್ಯ ಪದಾರ್ಥಗಳನ್ನು ಸೃಷ್ಟಿ ಮಾಡುವುದೇನೂ ತಪ್ಪಾಗುವುದಿಲ್ಲ. ನಾನು ಗುರುವಾಗಬೇಕು ಎಂಬ ಸಂಕಲ್ಪವನ್ನು ಮಾಡಿರುವಂತಹ ವ್ಯಕ್ತಿಯು ಶಿಷ್ಯ ಸಂಪಾದನೆಯಲ್ಲಿ ತೊಡಗಿರುತ್ತಾನೆ. ನಾನು ರಾಜನಾಗಬೇಕೆಂದು ಸಂಕಲ್ಪಿಸಿದ ವ್ಯಕ್ತಿಯು ಭೃತ್ಯರ ಸಂಪಾದನೆಯಲ್ಲಿ ತೊಡಗುತ್ತಾನೆ. ಇವುಗಳು ಹೇಗೆ ತಪ್ಪಲ್ಲವೋ, ಅದರಂತೆ ಅನೇಕ ರೂಪಗಳನ್ನು ತಾಳಬೇಕೆಂದು ಸಂಕಲ್ಪಮಾಡಿದ ಪರಮಾತ್ಮನ ವಿಷಯದಲ್ಲೂ ಅನೇಕ ಪದಾರ್ಥಗಳ ಸೃಷ್ಟಿ ಮಾಡುವಿಕೆಯು ತಪ್ಪಾಗುವುದಿಲ್ಲ. ಈ ಅಭಿಪ್ರಾಯದಿಂದಲೇ 'ಸಚ್ಚ ತ್ಯಚ್ಚಾಭವತ್' ಎಂಬ ಶ್ರುತಿ ಮತ್ತು 'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯು ಹೊರಟಿದೆ. ಆದ್ದರಿಂದ ಪರಮಾತ್ಮನೇ 'ಸತ್' ಶಬ್ದದಿಂದ ವಾಚ್ಯನಾದಾಗ ಅವನಲ್ಲಿಯೇ ಈಕ್ಷಣ ಮತ್ತು ಬಹುಭವನಗಳೆರಡೂ ಮುಖ್ಯವಾಗಿಯೇ ಉಪಪನ್ನವಾಗುತ್ತದೆ.

• • • • •

## ಐದೂ ಬಗೆಯ ಪೂರ್ವಪಕ್ಷಗಳ ನಿರಾಕರಣೆ

### तात्पर्यचन्द्रिका

**द्वितीयतृतीयौ तु पूर्वपक्षौ प्रकृत्यधिकरणेऽनुव्याख्यानाद्युक्तेन विवर्तविकारमत-निरासकन्यायेन निरस्तौ ।**

ಅನುವಾದ - ಎರಡು ಹಾಗೂ ಮೂರನೆಯ ಪೂರ್ವಪಕ್ಷಗಳೂ ಸಹ ಸರಿಯಲ್ಲ. ಏಕೆಂದರೆ ಪ್ರಕೃತ್ಯಧಿಕರಣದ ಅನುವ್ಯಾಖ್ಯಾನಾದಿಗಳಲ್ಲಿ ಹೇಳಲ್ಪಟ್ಟ ವಿವರ್ತಮತವನ್ನು ನಿರಾಸ ಮಾಡುವ ನ್ಯಾಯದಿಂದ ಮತ್ತು ವಿಕಾರಮತವನ್ನೂ ನಿರಾಸ ಮಾಡುವ ನ್ಯಾಯದಿಂದಲೇ ನಿರಾಕೃತವಾಗಿವೆ.

### ಪರಿಪೂರ್ಣಚಂದ್ರಿಕಾ

**चतुर्थोऽप्ययुक्तः । यतः –**

**विचित्रशक्तियोगित्वविरुद्धगुणभागिते ।**
**श्रूयेते ब्रह्मणो यद्वन्न तथा प्रकृतेः क्वचित् ॥ १ ॥**

**नहि मानं विना दृष्टान्तमात्रेण मेयसिद्धिः ।**

ನಾಲ್ಕನೆಯ ಪೂರ್ವಪಕ್ಷವೂ ಸಹ ಅಯುಕ್ತವಾಗಿದೆ. ಏಕೆಂದರೆ

ವಿಚಿತ್ರಶಕ್ತಿಯೋಗಿತ್ವವಿರುದ್ಧಗುಣಭಾಗಿತೇ ।
ಶ್ರೂಯೇತೇ ಬ್ರಹ್ಮಣೋ ಯದ್ವತ್ ನ ತಥಾ ಪ್ರಕೃತೇಃ ಕ್ವಚಿತ್ ॥೧॥

ವಿಚಿತ್ರಶಕ್ತಿಯೋಗಿತ್ವ ಹಾಗೂ ವಿರುದ್ಧಗುಣಭಾಗಿತ್ವ ಎಂಬೆರಡು ಧರ್ಮಗಳು ಬ್ರಹ್ಮನಲ್ಲಿ ಯಾವರೀತಿಯಾಗಿ ಶ್ರುತವಾಗಿವೆಯೋ, ಅದರಂತೆ ಪ್ರಕೃತಿಯಲ್ಲಿ ಇಂತಹ ಗುಣಗಳು ಶ್ರುತವಾಗಿಲ್ಲ.

ಪ್ರಮಾಣವಿಲ್ಲದೇ ಕೇವಲ ದೃಷ್ಟಾಂತದ ಬಲದಿಂದ ಪ್ರಮೇಯವು ಸಿದ್ಧವಾಗುವುದಿಲ್ಲ.

**पञ्चमोऽप्ययुक्तः । उक्तप्रकारेणाक्लिष्टे ब्रह्मपक्षे सम्भवत्येकस्य चेतनरूपांशस्येक्षितृत्वादि, अन्यस्य त्वचेतनरूपांशस्योपादानत्वादि अंशिनस्तु सतो न किमपीत्यस्यातिक्लिष्टस्य कल्पनस्यायोगात् ।**

ಐದನೆಯ ಪೂರ್ವಪಕ್ಷವೂ ಸಹ ಅಯುಕ್ತವಾಗಿದೆ. ಏಕೆಂದರೆ ಹಿಂದೆ ನಾವು ಸಮರ್ಥಿಸಿದಂತೆ ಏನೂ ಕ್ಲೇಶವಿಲ್ಲದೇ, ಬ್ರಹ್ಮನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಪಕ್ಷವನ್ನು ಅಂಗೀಕರಿಸಲು ಬರುತ್ತಿರುವಾಗ, ಒಂದೇ ಪ್ರಕೃತಿಯಲ್ಲಿ ಎರಡು ಭಾಗವನ್ನು ಒಪ್ಪಿ ಚೇತನರೂಪವಾದ ಅಂಶದಿಂದ ಈಕ್ಷಿತೃತ್ವಾದಿಗಳನ್ನು ಒಪ್ಪಿ; ಮತ್ತೊಂದು ಭಾಗದಿಂದ ಅಚೇತನತ್ವವನ್ನು ಒಪ್ಪುವ ಮೂಲಕ ಉಪಾದಾನತ್ವಾದಿಗಳನ್ನು ಹೇಳುವುದಲ್ಲದೇ, ಅಂಶಿಯಾದ ಸತ್ತಾದ ಪ್ರಕೃತಿಗೆ ಏನನ್ನೂ ಒಪ್ಪದಿರುವುದು ಅತ್ಯಂತ ಕಠಿಣವಾದ ಕಲ್ಪನೆಯಾಗುತ್ತದೆ. ಸುಲಭವಾಗಿಯೇ ಬರುವಾಗ ಕ್ಲಿಷ್ಟಕಲ್ಪನವು ಅನ್ಯಾಯ.

**प्रकाशः –**

एवं टीकोक्तविवरणेनाद्यपक्षं निरस्येक्षणादिकमतात्त्विकमिति पक्षं तात्त्विकमेवेति पक्षं चान्यत्रोक्तदोषेण निराह – **द्वितीयेति** ॥

**ವಿವರಣೆ** - ಇಲ್ಲಿಯತನಕ ಟೀಕೆಯಲ್ಲಿ ಹೇಳಿದ್ದನ್ನೇ ವಿವರಣೆ ಮಾಡುವ ಮೂಲಕ ಮೊದಲನೆಯ ಪಕ್ಷವನ್ನು ನಿರಾಕರಿಸಿದ್ದಾಯಿತು. ಈಗ ಪ್ರಕೃತಿಯಲ್ಲಿರುವ ಈಕ್ಷಣಾದಿಗಳು ಅತಾತ್ವಿಕವಾಗಿದೆಯೆಂಬ

ಎರಡನೆಯ ಪಕ್ಷವನ್ನು, ಹಾಗೂ ತಾತ್ವಿಕವೇ ಆಗಿದೆಯೆಂಬ ಮೂರನೆಯ ಪಕ್ಷವನ್ನೂ ಸಹ ಅನುವ್ಯಾಖ್ಯಾನ ಹಾಗೂ ನ್ಯಾಯಸುಧೆಯ ಆಧಾರದಿಂದ ನಿರಾಕರಿಸುತ್ತಿದ್ದಾರೆ 'ದ್ವಿತೀಯ' ಇತ್ಯಾದಿ ಗ್ರಂಥದಿಂದ.

**प्रकाशः –**

यच्चाविकृतमेवैकं ब्रह्म विश्वात्मना मृषा ।
दृश्यते मन्ददृष्ट्यैव स सर्ग इति कथ्यते ।।

सा मन्ददृष्टिस्तस्यैव ब्रह्मणः किं ततोऽन्यगा ।
ब्रह्मणश्चेत्क सार्वज्ञमन्यगा चेत्स्वतोऽन्यता ।।

इत्यादिना ब्रह्मविवर्तमतस्य

नच प्रकृतिशब्देन ब्रह्मोपादानमुच्यते ।
अविकारस्सदा शुद्धो नित्य आत्मा सदा हरिः ।।

इत्यादिना विकारमतस्यानुव्याख्यानसुधयोर्निरासाद् दृष्टान्तस्यैवासंमत्या निरस्तावित्यर्थः ।

ಯಚ್ಚಾವಿಕೃತಮೇವೈಕಂ ಬ್ರಹ್ಮ ವಿಶ್ವಾತ್ಮನಾ ಮೃಷಾ ।
ದೃಶ್ಯತೇ ಮಂದದೃಷ್ಟ್ಯೈವ ಸ ಸರ್ಗ ಇತಿ ಕಥ್ಯತೇ ॥

ಸಾ ಮಂದದೃಷ್ಟಿಸ್ತಸ್ಯೈವ ಬ್ರಹ್ಮಣಃ ಕಿಂ ತತೋಽನ್ಯಗಾ ।
ಬ್ರಹ್ಮಣಶ್ಚೇತ್ಕ್ವ ಸಾರ್ವಜ್ಞಮನ್ಯಗಾ ಚೇತ್ ಸ್ವತೋಽನ್ಯತಾ ॥

ಇತ್ಯಾದಿ ಅನುವ್ಯಾಖ್ಯಾನ ಶ್ಲೋಕದಿಂದ ವಿವರ್ತಮತವನ್ನು ನಿರಾಕರಿಸಿದ್ದಾರೆ.

ನಚ ಪ್ರಕೃತಿಶಬ್ದೇನ ಬ್ರಹ್ಮೋಪಾದಾನಮುಚ್ಯತೇ ।
ಅವಿಕಾರಸ್ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ ॥

ಇತ್ಯಾದಿ ಶ್ಲೋಕದಿಂದ ವಿಕಾರಮತವನ್ನು ನಿರಾಕರಿಸಿದ್ದಾರೆ. ಈ ಅನುವ್ಯಾಖ್ಯಾನದ ನ್ಯಾಯಸುಧೆಯಲ್ಲಿಯೂ ಕೂಡ ಇದರ ವಿವರಣೆಯನ್ನು ಗಮನಿಸಬಹುದು. ವಿವರ್ತಮತ ಹಾಗೂ ವಿಕಾರಮತಗಳನ್ನು ದೃಷ್ಟಾಂತವನ್ನಾಗಿ ಪರಿಗಣಿಸಿ ಮೂರನೆಯ ಮತ್ತು ನಾಲ್ಕನೆಯ ಪೂರ್ವಪಕ್ಷಗಳು ಹೊರಟಿವೆ. ದೃಷ್ಟಾಂತವೇ ನಮಗೆ ಸಮ್ಮತವಲ್ಲದ ಕಾರಣ, ಮೂರು ಮತ್ತು ನಾಲ್ಕನೆಯ ಪೂರ್ವಪಕ್ಷಗಳೂ ಕೂಡ ನಿರಾಕೃತವಾದವೆಂದು ತಿಳಿಯಬೇಕು.

**प्रकाशः –** यद्वा तत्र हि ब्रह्मणो विवर्तत्वं प्रपञ्चस्य तद्घटकाज्ञानस्य ब्रह्माश्रितत्वादिविकल्पानुपपत्तेः सत्यत्वग्राहिप्रत्यक्षादिविरोधाच्च निराक्रियते ।

ಅಥವಾ ಅನುವ್ಯಾಖ್ಯಾನ ಹಾಗೂ ನ್ಯಾಯಸುಧೆಗಳಲ್ಲಿ ಬ್ರಹ್ಮನಿಗೆ ವಿವರ್ತತ್ವವನ್ನು ನಿರಾಕರಿಸಿದ್ದಾರೆ. ಮತ್ತು ಪ್ರಪಂಚಕ್ಕೆ ಅಜ್ಞಾನವೇ ಕೂಡದ ಕಾರಣ ಬ್ರಹ್ಮಾಶ್ರಿತತ್ವವು ಯುಕ್ತವಾಗುವುದಿಲ್ಲವೆಂದು ವಿಕಲ್ಪದ ಮೂಲಕ ನಿರಾಕರಣೆ ಮಾಡಿದ್ದಾರೆ. ಅಂದರೆ ಅಜ್ಞಾನವು ಯಾವುದನ್ನು ಆಶ್ರಯಿಸಿದೆ. ಪ್ರಪಂಚವನ್ನೋ ಅಥವಾ ಬ್ರಹ್ಮನನ್ನೋ ಇತ್ಯಾದಿಯಾಗಿ ವಿಕಲ್ಪಿಸಿ ಎಂದರ್ಥ. ಮತ್ತು ಎಲ್ಲವೂ ಪ್ರಪಂಚದಲ್ಲಿ ಆರೋಪಿತವಾಗುವುದಾದರೆ ಸತ್ಯತ್ವಗ್ರಾಹಿಯಾದ ಪ್ರತ್ಯಕ್ಷಾದಿಗಳಿಂದ ವಿರೋಧ ಬರುತ್ತದೆ ಎಂದೂ ಬ್ರಹ್ಮನಿಗೆ ವಿವರ್ತತ್ವವನ್ನು ನಿರಾಕರಿಸಲಾಗಿದೆ.

**प्रकाशः** – ब्रह्मविकारत्वं च निर्विकारश्रुत्यादिनाऽपाक्रियते ।

ಬ್ರಹ್ಮನಿಗೆ ವಿಕಾರವನ್ನು ಒಪ್ಪಿದರೆ ಬ್ರಹ್ಮನಲ್ಲಿ ನಿರ್ವಿಕಾರತ್ವವನ್ನು ಪ್ರತಿಪಾದನೆ ಮಾಡುವ ಶ್ರುತ್ಯಾದಿಗಳಿಂದ ವಿರೋಧವು ಬರುತ್ತದೆ. ಹೀಗೆ ಬ್ರಹ್ಮವಿಕಾರತ್ವ ಪಕ್ಷವನ್ನೂ ಕೂಡ ನಿರಾಕರಿಸಲಾಗುತ್ತದೆ.

**प्रकाशः** – प्रधानस्यैवंविधत्वं वदता पूर्वपक्षिणा तु ब्रह्मस्थाने प्रधानमेवाभिषिक्तमिति तत्रोक्तदोषास्सर्वे प्रधानेऽपि तुल्या इति तन्न्यायेन निरस्तावित्युक्तम् ।

ಪ್ರಧಾನಕ್ಕೆ ಈ ರೀತಿಯ ಜಗತ್ಕಾರಣತ್ವವನ್ನು ಹೇಳುವ ಮೂಲಕ 'ಸತ್' ಶಬ್ದದಿಂದ ಪ್ರತಿಪಾದ್ಯತ್ವವನ್ನು ಒಪ್ಪುವ ಪೂರ್ವಪಕ್ಷಿಯು ಬ್ರಹ್ಮನ ಸ್ಥಾನದಲ್ಲಿ ಪ್ರಧಾನವನ್ನಿಟ್ಟು ಅಭಿಷೇಕ ಮಾಡಿದಂತಾಯಿತು. ಆದ್ದರಿಂದ ಬ್ರಹ್ಮನ ವಿಷಯದಲ್ಲಿ ಏನೇನು ದೋಷಗಳನ್ನು ಹೇಳಿದ್ದಾರೋ, ಅವೆಲ್ಲಾ ದೋಷಗಳು ಪ್ರಧಾನ ಪಕ್ಷದಲ್ಲೂ ಕೂಡ ಸಮಾನವಾಗುತ್ತದೆ. ಹೀಗೆ ಸಮಾನ ನ್ಯಾಯದಿಂದಲೇ ಪ್ರಧಾನವು 'ಸತ್' ಶಬ್ದವಾಚ್ಯ-ವಾಗುವುದಿಲ್ಲವೆಂದು ನಿರಾಕರಿಸಿದಂತಾಗುತ್ತದೆ.

**प्रकाशः** – तथाहि । ब्रह्मणस्सर्वज्ञत्वेन तदाश्रितस्य वा जीवस्याज्ञानकल्पित-त्वेनान्योन्याश्रयापत्त्या जीवाश्रितस्य वाऽज्ञानस्यासम्भवेन ब्रह्मण्यज्ञानाधीनातात्विक जगद्रूपतावभासस्य विशिष्टोपादानमते विशेष्यस्य ब्रह्मत्वेऽप्यविकारित्वेन विशेषणस्य विकारित्वेऽप्यब्रह्मत्वेन ब्रह्मणस्तात्विकजगदाकार- परिणामलक्षणविकार स्यानुपपत्तेः'' इत्यादिना तन्मतद्वयं निरस्यते ।

ವಿಕಾರಮತದ ಅನುಪಪತ್ತಿಯನ್ನು ಹೀಗೆ ತಿಳಿಯಬೇಕು - ಬ್ರಹ್ಮನು ಸರ್ವಜ್ಞನಾದ್ದರಿಂದ ಅಜ್ಞಾನವು ಬ್ರಹ್ಮನಲ್ಲಿರಲು ಸಾಧ್ಯವಿಲ್ಲ. ಇನ್ನು ಜೀವನಲ್ಲಿ ಅಜ್ಞಾನವನ್ನು ಹೇಳಿದರೆ ಜೀವನೇ ಅಜ್ಞಾನಕಲ್ಪಿತನಾದ್ದರಿಂದ ಅಜ್ಞಾನಸಿದ್ಧವಾದರೆ ತತ್‌ಕಲ್ಪಿತನಾದ ಜೀವನು ಸಿದ್ಧನಾಗುತ್ತಾನೆ. ತದಾಶ್ರಿತತ್ವೇನ ಅಜ್ಞಾನವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವೂ ಬರುವುದರಿಂದ ಅಜ್ಞಾನವು ಜೀವನಲ್ಲಿಯೂ ಸಹ ಬರಲು ಸಾಧ್ಯವಿಲ್ಲ. ಯಾವಾಗ ಅಜ್ಞಾನವೇ ಕೂಡುವುದಿಲ್ಲವೋ, ಅವಾಗ ಬ್ರಹ್ಮನಲ್ಲಿ ಅಜ್ಞಾನಾಧೀನವಾದ ಅತಾತ್ವಿಕ ಜಗದ್ರೂಪತಾವಭಾಸವೂ ಸಹ ಕೂಡುವುದಿಲ್ಲ. ಅಂದರೆ ವಿವರ್ತವನ್ನೇ ಹೇಳಲು ಸಾಧ್ಯವಿಲ್ಲ ಎಂದರ್ಥ.

ಇನ್ನು ವಿಶಿಷ್ಟಬ್ರಹ್ಮನು ಉಪಾದಾನಕಾರಣವೆಂಬ ಮತದಲ್ಲಿ ವಿಶೇಷ್ಯವು ಬ್ರಹ್ಮವಾದರೂ ಸಹ ಆ ವಿಶೇಷ್ಯನಾದ ಬ್ರಹ್ಮನು ಅವಿಕಾರನಾದ್ದರಿಂದ ಜಗತ್ತಿಗೆ ಉಪಾದಾನನಾಗುವುದಿಲ್ಲ. ವಿಶೇಷಣವಾದ ಪ್ರಧಾನವು ವಿಕಾರವುಳ್ಳದ್ದಾಗಿದ್ದರೂ ಬ್ರಹ್ಮವಲ್ಲದ ಕಾರಣ, ಬ್ರಹ್ಮನಿಗೆ ಜಗದುಪಾದಾನತ್ವವನ್ನು ಹೇಳಿದಂತಾಗುವುದಿಲ್ಲ. ಆದ್ದರಿಂದ ಬ್ರಹ್ಮನಿಗೆ ತಾತ್ವಿಕವಾದ ಜಗದಾಕಾರಪರಿಣಾಮವೆಂಬ ವಿಕಾರವೇ ಅನುಪಪನ್ನವಾಗುತ್ತದೆ. ಹೀಗೆ ವಿವರ್ತೋಪಾದಾನ, ವಿಶಿಷ್ಟೋಪಾದಾನ ರೂಪ ಎರಡೂ ಮತಗಳನ್ನು ನಿರಾಕರಿಸಲಾಗಿದೆ.

**प्रकाशः –** तथाच प्रधानस्यैव ब्रह्मसार्वज्ञादिश्रुतिविषयत्वस्य वक्तव्यत्वात्तत्राप्यज्ञाननिबन्धनस्यैवारोपस्य वाच्यत्वादुक्तदोषा योज्या इति ।

ಆದ್ದರಿಂದ ಬ್ರಹ್ಮನ ಸ್ಥಾನದಲ್ಲಿ ಪ್ರಧಾನವನ್ನೇ ಹೇಳಬೇಕು. ಬ್ರಹ್ಮವಿಷಯಕವಾದ ಸರ್ವಜ್ಞತ್ವ ಪ್ರತಿಪಾದಕವಾದ ಸಕಲ ಶ್ರುತಿಗಳೆಲ್ಲವೂ ಇಂತಹ ಪ್ರಧಾನವನ್ನೇ ಪ್ರತಿಪಾದಿಸುತ್ತದೆಂದು ಹೇಳಬೇಕು. ಆವಾಗ ಅಜ್ಞಾನನಿಮಿತ್ತಿಕವಾದ ಆರೋಪವನ್ನೂ ಕೂಡ ಪ್ರಧಾನದಲ್ಲೇ ಹೇಳಬೇಕಾದ್ದರಿಂದ ಹಿಂದಿನ ದೋಷಗಳೆಲ್ಲವೂ ಇಲ್ಲಿಯೂ ಬರುತ್ತವೆ.

**प्रकाशः –** जाड्येक्षणादेः प्रधानेऽप्यविरोधोऽस्त्विति पक्षं दृष्टान्तवैषम्योक्त्या निराह – **चतुर्थोऽपीति** ।।

ಪ್ರಧಾನಕ್ಕೆ ಜಾಡ್ಯವೂ (ಜಡತ್ವ) ಇರಲಿ, ಈಕ್ಷಣವೂ ಇರಲಿ. ವಿಕಾರವೂ ಇರಲಿ, ಸ್ರಷ್ಟೃತ್ವವೂ ಇರಲಿ. ಬ್ರಹ್ಮನಲ್ಲಿ ಅಣುತ್ವ-ಮಹತ್ತ್ವಗಳಿಗೆ ಹೇಗೆ ವಿರೋಧವಿಲ್ಲವೋ, ಅದರಂತೆ ಇಲ್ಲಿಯೂ ಕೂಡ ವಿರೋಧ ಬರುವುದಿಲ್ಲ ಎಂಬ ನಾಲ್ಕನೆಯ ಪಕ್ಷವನ್ನು ವಿಷಮ ದೃಷ್ಟಾಂತವನ್ನು ಹೇಳುವವರಾಗಿ ನಿರಾಕರಿಸುತ್ತಿದ್ದಾರೆ 'ಚತುರ್ಥೋಽಪಿ' ಇತ್ಯಾದಿ ವಾಕ್ಯದಿಂದ.

**प्रकाशः –** 'यतः' इत्यस्य श्लोकेनान्वयः । ''विचित्रशक्तिः पुरुषः पुराणो न चान्येषां शक्तयस्तादृशास्स्युः । अणोरणीयान्महतो महीयान्'' इत्यादिना श्रूयते ।

'ಯತಃ' ಎಂಬ ಪದಕ್ಕೆ ಶ್ಲೋಕದ ಜೊತೆಗೆ ಅನ್ವಯವನ್ನು ತಿಳಿಯಬೇಕು. 'ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಸ್ಸ್ಯುಃ । ಅಣೋರಣೀಯಾನ್ಮಹತೋ ಮಹೀಯಾನ್' ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ವಿರುದ್ಧವಾದ ಗುಣಗಳೂ ಇವೆ ಎಂದು ಕೇಳಿಸುತ್ತಿವೆ.

**प्रकाशः –** नचैवं प्रकृते । 'तदैक्षत' इत्यादिश्रुतिस्तूक्तदिशा ब्रह्मपरेति श्रौतत्वादिति प्रागुक्तो हेतुरसिद्ध इति भावः ।

ಆದರೆ ಪ್ರಧಾನದ ವಿಷಯದಲ್ಲಿ ಹೀಗೆ ವಿರುದ್ಧವಾದ ಗುಣಗಳು ಕೇಳಿಸುತ್ತಿಲ್ಲ. 'ತದೈಕ್ಷತ' ಎಂಬ ಶ್ರುತಿಯೂ ಕೂಡ ಹಿಂದೆ ಹೇಳಿದ ಪ್ರಕಾರ ಬ್ರಹ್ಮಪರವಾಗಿದೆಯೆಂದು ತಿಳಿಯಬೇಕು. ಆದ್ದರಿಂದ ಪೂರ್ವಪಕ್ಷಕಾರರು ಹೇಳಲ್ಪಟ್ಟ 'ಶ್ರೌತತ್ವಾತ್' ಎಂಬ ಹೇತುವಿಗೆ ಅಸಿದ್ಧಿದೋಷವನ್ನು ಹೇಳಿದಂತಾಯಿತು.

ಪರಿಪೂರ್ಣಚಂದ್ರಿಕಾ

**प्रकाशः** – अयं च समाधिः -

सर्वधर्मा सर्वनामा सर्वकर्मा गुणाश्श्रुताः ।
दोषाश्श्रुताश्च नेत्याद्या प्रमाणं श्रुतिरत्र च ॥

इत्यक्षरनयानुभाष्येऽस्थूलत्वादिविरुद्धधर्मवत्त्वे प्रमाणोक्त्या सूचितः ।

ಈ ಸಮಾಧಾನವನ್ನು 'ಸರ್ವಧರ್ಮಾ ಸರ್ವನಾಮಾ ಸರ್ವಕರ್ಮಾ ಗುಣಾಃಶ್ರುತಾಃ । ದೋಷಾಃಶ್ರುತಾಶ್ಚ ನೇತ್ಯಾದ್ಯಾ ಪ್ರಮಾಣಂ ಶ್ರುತಿರತ್ರ ಚ ॥' 'ಲೌಕಿಕ ಹಾಗೂ ಅಲೌಕಿಕವಾಗಿ ಶ್ರುತವಾದ ಸರ್ವಧರ್ಮಗಳೂ, ಸರ್ವನಾಮಗಳು, ಸರ್ವಕರ್ಮಗಳು, ಸಕಲಗುಣಗಳು ಇವೆಲ್ಲವೂ ಪರಮಾತ್ಮನಲ್ಲಿವೆ' ಎಂಬ ವಿಷಯದಲ್ಲಿ ಪ್ರಮಾಣವಿದೆ. ಇದರಂತೆ ಶ್ರುತವಾದ ಯಾವ ದೋಷಗಳಿಲ್ಲ ಎಂಬ ವಿಷಯದಲ್ಲಿಯೂ ಪ್ರಮಾಣವಿದೆ. ಹೀಗೆ ಅಕ್ಷರಾಧಿಕರಣದ ಅನುವ್ಯಾಖ್ಯಾನದಲ್ಲಿ ಅಸ್ಥೂಲತ್ವಾದಿವಿರುದ್ಧಧರ್ಮಗಳು ಪರಮಾತ್ಮನಲ್ಲಿವೆ ಎಂದೆನ್ನಲು ಪ್ರಮಾಣವನ್ನು ಹೇಳಿರುತ್ತಾರೆ.

**प्रकाशः** – विपक्षे व्याघातसूचनाय मानं विना मेयसिद्धिरिति मानमेय-पदोक्तिः । अंशविभागेनोभयोपादानमयुक्तमित्याह – **पञ्चमोऽपीति** ॥

ಪ್ರಮಾಣವಿಲ್ಲದೇ ಪ್ರಮೇಯವು ಸಿದ್ಧವಾಗುತ್ತದೆಂದು ಹೇಳಿದರೆ ವ್ಯಾಘಾತದೋಷವು ಬರುತ್ತದೆ. ಹೀಗೆ ವಿಪಕ್ಷದಲ್ಲಿ ವ್ಯಾಘಾತದೋಷವಿದೆ ಎಂದು ತಿಳಿಸಲು 'ಮಾನಮೇಯ' ಪದಗಳನ್ನು ಗ್ರಂಥಗಳಲ್ಲಿ ಹೇಳಿದ್ದಾರೆ. ಒಂದು ಭಾಗಕ್ಕೆ ಚೇತನತ್ವವು, ಮತ್ತೊಂದು ಭಾಗಕ್ಕೆ ಅಚೇತನತ್ವವು ಎಂಬ ಅಂಶವಿಭಾಗದಿಂದ ಸಮಾಧಾನವನ್ನು ತಿಳಿಸುತ್ತೇವೆಂಬ ಪೂರ್ವಪಕ್ಷವನ್ನು 'ಪಂಚಮೋಽಪಿ' ಎಂಬ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ.

**प्रकाशः** – अत्र यद्यपि

भागेन परिणामश्चेद्भागयोर्भेद एव हि ।
यो भागो न विकारी स्यात्स एवास्माकमीश्वरः ॥

इत्याद्युत्तरपादीयानुव्याख्यानोक्तन्यायेन तन्निरासोऽपि प्रतीयते । तथापि दोषान्तरोक्तिरियमिति । एतेन भाष्यकारीयफलाक्षेपोऽपि समाहितो ध्येयः ।

ವಸ್ತುತಃ ನಾಲ್ಕನೆಯ ಪಾದದ ಅನುವ್ಯಾಖ್ಯಾನದಲ್ಲಿ 'ಭಾಗೇನ ಪರಿಣಾಮಶ್ಚೇತ್ ಭಾಗಯೋರ್ಭೇದ ಏವ ಹಿ । ಯೋ ಭಾಗೋ ನ ವಿಕಾರೀ ಸ್ಯಾತ್ಸ ಏವಾಸ್ಮಾಕಮೀಶ್ವರಃ' ಅಂಶದಿಂದ ಪರಿಣಾಮವನ್ನು ಹೇಳುವುದಾದರೆ, ಆ ಎರಡು ಭಾಗಗಳಿಗೆ ಭೇದವನ್ನೇ ಹೇಳಬೇಕು. ಯಾವ ಭಾಗಕ್ಕೆ ವಿಕಾರವಿಲ್ಲವೋ, ಅದೇ ನಮ್ಮ ಸಿದ್ಧಾಂತದ ಈಶ್ವರ ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ ನ್ಯಾಯದಂತೆ ಇವರ ಈ ಪ್ರಧಾನಪಕ್ಷವನ್ನೂ ಕೂಡ ನಿರಾಕರಿಸಲು ಬರುತ್ತದೆ. ಅನುವ್ಯಾಖ್ಯಾನದ ಈ ಮಾತಿನಿಂದಲೇ ದೋಷವು

ತಿಳಿಯುತ್ತದೆ. ಈ ದೋಷವನ್ನು ವಿವಕ್ಷಿಸಿಯೇ ಗ್ರಂಥಕಾರರು ಮತ್ತೊಂದು ದೋಷವನ್ನು ಇಲ್ಲಿ ಹೇಳಿದ್ದಾರೆಂದು ತಿಳಿಯಬೇಕು. ಇದರಿಂದ ಭಾಷ್ಯಕಾರರು ಮಾಡಿದ ಫಲಾಕ್ಷೇಪಕ್ಕೂ ಕೂಡ ಸಮಾಧಾನವನ್ನು ನೀಡಿದಂತಾಯಿತು. ಅಂದರೆ ಐದು ಬಗೆಯಲ್ಲಿ ಮಾಡಲ್ಪಟ್ಟ ಜನ್ಮಾಧಿಕರಣದ ಆಕ್ಷೇಪವನ್ನು ತಪ್ಪೆಂದು ನಿರ್ಣಯಿಸಿದಂತಾಯಿತು.




ಈ ಹಿಂದೆ ಮೊದಲನೆಯ ಪೂರ್ವಪಕ್ಷವನ್ನು ನಿರಾಕರಿಸಿದ್ದಾಯಿತು. ಈಗ ಉಳಿದ ನಾಲ್ಕು ಬಗೆಯ ಪೂರ್ವಪಕ್ಷಗಳೂ ಸಹ ಅಸಮಂಜಸವಾಗಿವೆಯೆಂದು ನಿರಾಕರಿಸಲಾಗಿದೆ. ಎರಡನೆಯ ಹಾಗೂ ಮೂರನೆಯ ಪೂರ್ವಪಕ್ಷಗಳು ವಿವರ್ತಮತ ಮತ್ತು ವಿಕಾರಮತಗಳಲ್ಲಿ ಸೇರ್ಪಡೆಯಾಗುವುದರಿಂದ ಪ್ರಕೃತ್ಯಧಿಕರಣದಲ್ಲಿ ಇವುಗಳನ್ನು ವಿವರವಾಗಿ ನಿರಾಕರಿಸಲಾಗಿದೆ. ನಾಲ್ಕನೆಯ ಪೂರ್ವಪಕ್ಷದಲ್ಲಿ ವಿಚಿತ್ರಶಕ್ತಿಯೋಗಿತ್ವ ಮತ್ತು ವಿರುದ್ಧಗುಣಭಾಗಿತ್ವ ಎಂಬೆರಡು ಧರ್ಮಗಳು ಬ್ರಹ್ಮನಲ್ಲಿ ಮಾತ್ರ ಇರುತ್ತವೆಂದು ಸಾಧಿಸಲಾಗದು. ಬ್ರಹ್ಮನಂತೆ ಪ್ರಕೃತಿಯಲ್ಲೂ ಕೂಡ ಈ ಧರ್ಮಗಳು ಇರುತ್ತವೆ. ಐದನೆಯ ಪೂರ್ವಪಕ್ಷದಲ್ಲಿ ಪ್ರಕೃತಿಯನ್ನು ಎರಡು ಭಾಗ ಮಾಡಿ ಚೇತನಾಚೇತನತ್ವವನ್ನು ಒಪ್ಪುವುದು ಅತ್ಯಂತ ಕಠಿಣ ಕಲ್ಪನೆಯಾಗಿದೆ. ಆದ್ದರಿಂದ ಬ್ರಹ್ಮನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳುವುದೇ ಅತ್ಯಂತ ಶ್ರೇಷ್ಠ.

• • • • •

### ಸೂತ್ರದಲ್ಲಿರುವ 'ಕರ್ಮ' 'ಸಃ' ಎಂಬೆರಡು ಪದಗಳ ಸಾರ್ಥಕ್ಯ ಚಿಂತನೆ

## तात्पर्यचन्द्रिका

**सूत्रे कर्मपदं तु सिद्धान्तेऽपि ''ऐक्षत'' इतीक्षणकर्तृत्वव्यपदेशो न युक्तः । स्वरूपातिरिक्तेक्षणक्रियाभावादिति शङ्कायां विशेषबलात्क्रियाकर्तृभाव इति दर्शयितुम् । एतदेवाभिप्रेत्य टीकायाम् ''ईक्षत्याख्यव्यापारः'' इत्युक्तम् ।**

ಅನುವಾದ - 'ಈಕ್ಷತಿಕರ್ಮವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿರುವ ಕರ್ಮಪದ ಸಾರ್ಥಕ್ಯವನ್ನು ಟೀಕೆಯಲ್ಲಿ ಒಂದು ಬಗೆಯಲ್ಲಿ ಸಮರ್ಥಿಸಿದ್ದಾರೆ. ತತ್ವಪ್ರದೀಪದಲ್ಲಿ ಮತ್ತೊಂದು ಬಗೆಯಲ್ಲಿ ಸಮರ್ಥಿಸಿದ್ದಾರೆ. ಟೀಕೆಯ ಪ್ರಕಾರ ಕರ್ಮಶಬ್ದಕ್ಕೆ ವ್ಯಾಪಾರ ಎಂದರ್ಥ. 'ಈಕ್ಷತಿ' ಎಂಬ ಕ್ರಿಯೆಯು ಕೇಳಿಸುತ್ತಿದೆ ಎಂದರ್ಥವನ್ನು ಹೇಳಿದಂತಾಗುತ್ತದೆ. ಆವಾಗ 'ಈಕ್ಷತಿವ್ಯಪದೇಶಾತ್' ಎಂದಷ್ಟೇ ಹೇಳಿದರೆ ಸಾಕು. 'ಈಕ್ಷತಿ' ಎಂಬ ವ್ಯಾಪಾರವನ್ನು ಹೇಳಿದ್ದರಿಂದ ಎಂದೇಕೆ ಹೇಳಬೇಕು? ಎಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಆದರೆ ಇಲ್ಲಿ ಬರುವ ಶಂಕೆಯೊಂದನ್ನು ಪರಿಹರಿಸುವುದಕ್ಕಾಗಿ ಕರ್ಮಶಬ್ದವನ್ನು ಸೂತ್ರಕಾರರು ಹೇಳಿರುತ್ತಾರೆ.

ಶಂಕೆ ಹೀಗಿದೆ - ಪ್ರಧಾನದಲ್ಲಿ ಈಕ್ಷಣವು ಕೂಡುವುದಿಲ್ಲವೆಂದು ಹೇಳುತ್ತಿದ್ದೀರಿ. ಆದರೆ ಬ್ರಹ್ಮನಲ್ಲಿಯೂ ಕೂಡ ಈಕ್ಷಣವು ಕೂಡುವುದಿಲ್ಲ. ಏಕೆಂದರೆ 'ಐಕ್ಷತ' ಎಂಬಲ್ಲಿರುವ ಆಖ್ಯಾತ ಪ್ರತ್ಯಯವು ಕರ್ತೃತ್ವವನ್ನು ಹೇಳುತ್ತಿದೆ. ಈ ಈಕ್ಷಣಕರ್ತೃತ್ವವು ಬ್ರಹ್ಮನಲ್ಲಿ ಹೇಗೆ ಕೂಡುತ್ತದೆ? ಏಕೆಂದರೆ 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬಲ್ಲಿ ಹೇಳಿದಂತೆ ಈಶ್ವರನು ಜ್ಞಾನರೂಪನಾಗಿದ್ದಾನೆ. ಇಂತಹ ಜ್ಞಾನರೂಪನಾದ ಬ್ರಹ್ಮನಲ್ಲಿ ಜ್ಞಾನಕರ್ತೃತ್ವವು ಕೂಡುವುದಿಲ್ಲ. ಕ್ರಿಯಾಕರ್ತೃಭಾವವು ಭೇದಸಾಪೇಕ್ಷಿತವಾಗಿದೆ. 'ದೇವದತ್ತಃ ದಾರು ಛಿನತ್ತಿ' ಎಂದು ಹೇಳಿದಾಗ ಛೇದನ ಎಂಬ ಕ್ರಿಯೆಗೂ ಛೇದನಕರ್ತೃವಾದ ದೇವದತ್ತನಿಗೂ ಹೇಗೆ ಭೇದವಿದೆಯೋ, ಅದರಂತೆ ಇಲ್ಲಿಯೂ ಸಹ 'ಜ್ಞಾನ' ಎಂಬ ಕ್ರಿಯೆಗೂ ಜ್ಞಾನಕರ್ತೃವಾದ ಬ್ರಹ್ಮನಿಗೂ ಭೇದವೇ ಇರಬೇಕು. ಆದ್ದರಿಂದ ಜ್ಞಾನಕರ್ತೃತ್ವವೇ ಬ್ರಹ್ಮನಿಗೆ ಕೂಡುವುದಿಲ್ಲ.

ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ಕರ್ಮಪದವನ್ನು ಸೂತ್ರಕಾರರು ಹೇಳಿದ್ದಾರೆ. ಕ್ರಿಯೆಯನ್ನು ಹೇಳುವ ಕರ್ಮಪದವನ್ನು ಪ್ರಯೋಗಿಸಿದ್ದರಿಂದ, ಲೋಕದಲ್ಲಿ ಕ್ರಿಯಾ ಮತ್ತು ಕರ್ತೃಗಳಿಗೆ ಭೇದವಿದ್ದರೂ, ಪರಮಾತ್ಮನ ವಿಷಯದಲ್ಲಿ ಭೇದವಿರುವುದಿಲ್ಲವೆಂದು ತಿಳಿಸಿದ್ದಾರೆ. ವಿಶೇಷದ ಬಲದಿಂದ ಜ್ಞಾನರೂಪನೇ ಆಗಿರುವಂತಹ ಪರಮಾತ್ಮನಲ್ಲಿ ಜ್ಞಾನಕರ್ತೃತ್ವವೂ ಕೂಡ ಉಪಪನ್ನವಾಗುತ್ತದೆಂದು ತಿಳಿಸಿದ್ದಾರೆ. ಈ ಅಭಿಪ್ರಾಯದಿಂದಲೇ ಟೀಕೆಯಲ್ಲಿ 'ಈಕ್ಷತ್ಯಾಖ್ಯವ್ಯಾಪಾರಃ' ಈಕ್ಷಣವೆಂಬ ವ್ಯಾಪಾರವೂ ಎಂದು ಪ್ರಯೋಗಿಸಿದ್ದಾರೆ.

**यद्वा सौत्रः कर्मशब्दः ''न कर्तृत्वं न कर्माणि'' इत्यादाविव सृष्ट्यादिक्रियापरः। तथा च प्रधानपक्षे न केवलमीक्षितृत्वस्यायोगः किन्तु स्रष्टृत्वादेरपीति दर्शयितुम्।**

ತತ್ವಪ್ರದೀಪದ ಪ್ರಕಾರ ಹೀಗೆ ಸಮಾಧಾನವನ್ನು ತಿಳಿಯಬೇಕು. ಸೂತ್ರದಲ್ಲಿರುವ ಕರ್ಮಶಬ್ದವು ಸೃಷ್ಟ್ಯಾದಿಕ್ರಿಯೆಯನ್ನು ಹೇಳುತ್ತಿದೆ. ಯಾವರೀತಿಯಾಗಿ 'ನ ಕರ್ತೃತ್ವಂ ನ ಕರ್ಮಾಣಿ' ಎಂಬ ಗೀತೆಯ ಶ್ಲೋಕಕ್ಕೆ ಶ್ರೀಮದಾಚಾರ್ಯರು ವ್ಯಾಖ್ಯಾನ ಮಾಡುತ್ತಾ ಕರ್ಮಶಬ್ದಕ್ಕೆ ಅದೃಷ್ಟೋತ್ಪಾದನವೆಂಬ ಕ್ರಿಯಾವಿಶೇಷಾರ್ಥದಲ್ಲಿ ವ್ಯಾಖ್ಯಾನ ಮಾಡಿದ್ದಾರೋ, ಅದರಂತೆ ಇಲ್ಲಿಯೂ ಸಹ ಕರ್ಮಶಬ್ದಕ್ಕೆ 'ಸೃಷ್ಟ್ಯಾದಿಕ್ರಿಯಾವಿಶೇಷ' ಎಂಬರ್ಥವನ್ನು ವಿವಕ್ಷಿಸಬೇಕು. ಹೀಗೆ ಹೇಳಿದಾಗ ಪ್ರಧಾನ ಪಕ್ಷದಲ್ಲಿ ಕೇವಲ ಈಕ್ಷಿತೃತ್ವವು ಅಯುಕ್ತವಾಗುತ್ತದೆಂದಷ್ಟೇ ಅಲ್ಲ, ಸ್ರಷ್ಟೃತ್ವಾದಿಗಳೂ ಕೂಡ ಅಯುಕ್ತ-ವಾಗುತ್ತದೆಂದು ತಿಳಿಸಿದಂತಾಗುತ್ತದೆ. ಅದಕ್ಕೋಸ್ಕರ ಸೂತ್ರದಲ್ಲಿರುವ ಕರ್ಮಪದವು ಸಾರ್ಥಕವೆಂದು ತಿಳಿಯಬೇಕು.

**यद्यप्यत्र सूत्रान्तर इव समन्वयसूत्रस्थो ब्रह्मपरस्तच्छब्दोऽनुषङ्गार्हः ।**

ವಸ್ತುತಃ ಬೇರೆ ಸೂತ್ರಗಳಲ್ಲಿ ಸಮನ್ವಯ ಸೂತ್ರದಿಂದ 'ತತ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳುವಂತೆ, ಈ ಸೂತ್ರದಲ್ಲಿಯೂ ಬ್ರಹ್ಮಪರವಾದ 'ತತ್' ಎಂಬುದನ್ನು ಅನುವೃತ್ತಿಮಾಡಿಕೊಳ್ಳಬಹುದು.

ಸದಧಿಕರಣ (೧-೩-೪)

**तथापि ''एको नारायण आसीत् । स मुनिर्भूत्वा समचिन्तयत्'' इत्यादिश्रुतिषु यः कारणत्वेन निर्णीतः स एवात्राप्युच्यत इति समाख्यानमपि प्रमाणीकर्तुं स इत्युक्तम् ।**

ಆದರೂ ಸಹ 'ತತ್' ಎಂಬುದನ್ನು ಅನುವೃತ್ತಿಮಾಡಿಕೊಳ್ಳದೇ 'ಸಃ' ಎಂದೇಕೆ ನಿರ್ದೇಶ ಮಾಡಿದ್ದಾರೆಂದರೆ, ಸಮಾಖ್ಯಾಪ್ರಮಾಣವನ್ನು ಸೂಚನೆ ಮಾಡುವುದಕ್ಕಾಗಿ. 'ಏಕೋ ನಾರಾಯಣ ಆಸೀತ್ । ಸ ಮುನಿರ್ಭೂತ್ವಾ ಸಮಚಿಂತಯತ್' ಇತ್ಯಾದಿ ಶ್ರುತಿಗಳಲ್ಲಿ ಕಾರಣತ್ವೇನ ನಿರ್ಣೀತನಾದ ಯಾವ ವ್ಯಕ್ತಿಯು ಇದ್ದಾನೋ, ಅವನು ಇಲ್ಲಿಯೂ ಕೂಡ ಪ್ರತಿಪಾದ್ಯನಾಗಿದ್ದಾನೆ ಎಂಬ ಸಮಾಖ್ಯಾನವನ್ನು ಪ್ರಮಾಣವನ್ನಾಗಿ ತೋರಿಸಲು ಸೂತ್ರದಲ್ಲಿ 'ಸಃ' ಎಂದು ಹೇಳಿದ್ದಾರೆ.

ಆದ್ದರಿಂದ ಸೂತ್ರದಲ್ಲಿರುವ 'ಕರ್ಮ' ಎಂಬ ಪದ, 'ಸಃ' ಎಂಬ ಪದ ಎರಡೂ ಕೂಡ ಅತ್ಯಂತ ಸಾರ್ಥಕವೆಂದು ತಿಳಿಯಬೇಕು.

**प्रकाशः –**

नन्वत्र सूत्रे ''ईक्षतेर्नाशब्दम्''- इत्यत्रेवेक्षतेस्स इति वा ईक्षतिव्यपदेशात्स इति वा वक्तव्यम् । लाघवात् । नतु कर्मेति । व्यर्थत्वात् ।

ವಿವರಣೆ - ಪ್ರಶ್ನೆ - 'ಈಕ್ಷತಿಕರ್ಮವ್ಯಪದೇಶಾಚ್ಚ' ಎಂಬ ಶ್ರುತಿಯಲ್ಲಿ ಕರ್ಮಪದವು ವ್ಯರ್ಥ. ಯಾವರೀತಿಯಾಗಿ 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲಿ ಕರ್ಮಪದವನ್ನು ಹೇಳಿಲ್ಲವೋ, ಅದರಂತೆ ಈ ಸೂತ್ರದಲ್ಲಿಯೂ 'ಈಕ್ಷತೇಃ ಸಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. ಅಥವಾ 'ಈಕ್ಷತಿವ್ಯಪದೇಶಾತ್ಸಃ' ಎಂದು ಹೇಳಬಹುದಿತ್ತು. ಹೀಗೆ ಹೇಳುವುದರಿಂದ ಸೂತ್ರವು ಲಘುವಾಗುತ್ತದೆ. ಕರ್ಮಪದವನ್ನು ಹೇಳುವುದರಲ್ಲಿ ಅರ್ಥವಿಲ್ಲ.

**प्रकाशः –** नच परमत इवेक्षतिं प्रति कर्मत्वरूपोऽर्थोऽभ्युपेयते ।

ಮತ್ತು ಪರಮತದಂತೆ ಈಕ್ಷಣಕ್ಕೆ ಕರ್ಮತ್ವರೂಪ ಅರ್ಥವನ್ನು ನಾವು ಒಪ್ಪುವುದಿಲ್ಲ ಎಂದರೆ ಅದ್ವೈತಿಗಳ ಪ್ರಕಾರ ಕರ್ಮಶಬ್ದವು ಸಾರ್ಥಕವಾಗಬಹುದು. ಏಕೆಂದರೆ ಈ ಅಧಿಕರಣದಲ್ಲಿ 'ಸದೇವ ಸೋಮ್ಯ' ಎಂಬ ವಾಕ್ಯವನ್ನು ವಿಷಯವೆಂದು ನಾವು ಹೇಳಿದರೆ, ಅದ್ವೈತಿಗಳು 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲಿ ಇದನ್ನು ವಿಷಯವೆನ್ನುತ್ತಾರೆ. ಆ ವಿಷಯದಲ್ಲಿ ನಾವು ಹೇಳಲ್ಪಟ್ಟ 'ಪರಾತ್ಪರಮ್ ಪುರುಷಂ' ಎಂಬ ವಿಷಯವಾಕ್ಯವನ್ನು ಅದ್ವೈತಿಗಳು ಈ ಸೂತ್ರದ ವಿಷಯವೆಂದು ಹೇಳುತ್ತಾರೆ. ಹೀಗೆ ನಮಗೆ ವಿಪರೀತವಾಗಿ ವಿಷಯವಾಕ್ಯವನ್ನು ನಿರ್ದೇಶಿಸುವ ಅದ್ವೈತಿಗಳ ಪ್ರಕಾರ ಈಕ್ಷತಿಯನ್ನು ಕುರಿತು ಕರ್ಮತ್ವವೆಂಬ ಅರ್ಥವನ್ನು ತಿಳಿಸುವುದಕ್ಕಾಗಿ ಸೂತ್ರದಲ್ಲಿ ಕರ್ಮಪದವು ಸಾರ್ಥಕವಾಗುತ್ತದೆ. ಆದರೆ 'ಸದೇವ ಸೋಮ್ಯ' ಎಂಬುದನ್ನು ವಿಷಯವಾಕ್ಯವೆಂದಾಗ ಕರ್ಮಪದವು ವ್ಯರ್ಥವೇ ಆಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – किञ्चाध्यायपरिसमाप्तिसमन्वयसूत्रात् तत्त्वित्यस्य साध्यनिर्देशकस्यानुवर्तमानत्वात्स इत्यपि व्यर्थम् ।

ಸೂತ್ರದಲ್ಲಿರುವ ಕರ್ಮಪದವು ವ್ಯರ್ಥವೆಂದಷ್ಟೇ ಅಲ್ಲ 'ಸಃ' ಎಂಬ ಪದವೂ ಕೂಡ ವ್ಯರ್ಥವೇ ಆಗಿದೆ. ಏಕೆಂದರೆ ಅಧ್ಯಾಯ ಮುಗಿಯುವ ತನಕ 'ತತ್ತುಸಮನ್ವಯಾತ್' ಎಂಬ ಸೂತ್ರದಲ್ಲಿರುವ 'ತತ್' ಎಂಬ ಸಾಧ್ಯನಿರ್ದೇಶಕ ಶಬ್ದವು ಪ್ರತಿಯೊಂದು ಸೂತ್ರಗಳಲ್ಲಿಯೂ ಅನುವೃತ್ತವಾಗುತ್ತದೆ. ಈ ಸೂತ್ರದಲ್ಲಿಯೂ 'ತತ್' ಎಂಬ ಪದದ ಅಧ್ಯಾಹಾರದಿಂದಲೇ ಸಾಧ್ಯನಿರ್ದೇಶವು ತಿಳಿಯುತ್ತಿರುವಾಗ ಪುನಃ 'ಸಃ' ಎಂಬ ಪದವು ಹೇಳಿದ್ದು ವ್ಯರ್ಥವಾಗುತ್ತದೆ.

**प्रकाशः** – नच स इत्येतद्धर्मिनिर्देशपरमेव । न साध्यनिर्देशपरमिति वाच्यम् ।

'ಸತ್' ಎಂಬ ಪದದಿಂದ ಸಾಧ್ಯನಿರ್ದೇಶ ಮಾಡಬಹುದು. ಆದರೆ ವಿಷಯವಾಕ್ಯದಲ್ಲಿರುವ ಧರ್ಮಿಯನ್ನು ನಿರ್ದೇಶಿಸುವುದಕ್ಕಾಗಿ 'ಸಃ' ಎಂಬ ಪದವು ಸಾರ್ಥಕವಾಗಿದೆ. ಸಾಧ್ಯನಿರ್ದೇಶಕ್ಕೋಸ್ಕರ 'ಸಃ' ಎಂಬ ಪದವನ್ನು ಸೂತ್ರದಲ್ಲಿ ಹೇಳಿದ್ದಲ್ಲವೆಂದು ಉತ್ತರಿಸಲೂ ಸಹ ಬರುವುದಿಲ್ಲ. ಏಕೆಂದರೆ

**प्रकाशः** – सदित्यस्यैव धर्मिपरत्वेनेक्षतिकर्मव्यपदेशात्सदिति निर्देशापातात् ।

ವಿಷಯವಾಕ್ಯದಲ್ಲಿರುವ ಧರ್ಮಿಯನ್ನು ನಿರ್ದೇಶಿಸುವುದಕ್ಕಾಗಿ 'ಸಃ' ಎಂದು ಹೇಳಬಾರದು ಹೊರತು, 'ಸತ್' ಎಂದೇ ಹೇಳಬೇಕು. ಆದ್ದರಿಂದ 'ಈಕ್ಷತಿಕರ್ಮವ್ಯಪದೇಶಾತ್ಸತ್' ಎಂದು ಸೂತ್ರವನ್ನು ಉಲ್ಲೇಖಿಸಬೇಕಾಗುತ್ತದೆ.

**प्रकाशः** – ''स एवेश्वरस्सच्छब्दोक्तो न प्रधानम्'' इति तत्वप्रदीपविरोधाच्चेत्यतः

ಅಷ್ಟೇ ಅಲ್ಲದೇ ತತ್ವಪ್ರದೀಪದಲ್ಲಿ 'ಸ ಏವೇಶ್ವರಸ್ಸಚ್ಛಬ್ದೋಕ್ತೋ ನ ಪ್ರಧಾನಮ್' 'ಈಶ್ವರನೇ 'ಸತ್' ಶಬ್ದದಿಂದ ಪ್ರತಿಪಾದ್ಯನು, ಪ್ರಧಾನವಲ್ಲ' ಎಂಬುದಾಗಿ ತತ್ವಪ್ರದೀಪದಲ್ಲಿ 'ಸಃ' ಎಂಬುದನ್ನು ಧರ್ಮಿನಿರ್ದೇಶಪರವಾಗಿಯೇ ಪರಿಗಣಿಸಿದ್ದಾರೆ. ನೀವು ಸಾಧ್ಯನಿರ್ದೇಶಪರವೆಂದು ಹೇಳುವುದಾದರೆ ತತ್ವಪ್ರದೀಪದ ವಿರೋಧವೂ ಕೂಡ ಬರುತ್ತದೆ.

ಆದ್ದರಿಂದ 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ 'ಕರ್ಮ' ಪದ ಹಾಗೂ 'ಸಃ' ಎಂಬ ಪದವು ವ್ಯರ್ಥವಲ್ಲವೇ?

**प्रकाशः** – कर्मपदसार्थक्यं तावदाह – **कर्मपदं त्विति** ।। ''तत्तेजोऽसृजत'' इति तत्पूर्वककर्मव्यपदेशात् 'नामरूपे व्याकरवाणि'' इत्यादिना चेक्षतिपूर्वव्याकरणादिकर्मव्यपदेशात्स एवेश्वरस्सच्छब्दोक्तः'' इत्यादि तत्वप्रदीपानुरोधात् पक्षान्तरमाह – **यद्वेति** ।।

ಉತ್ತರ - ಈ ಪ್ರಶ್ನೆಗೆ ಉತ್ತರಿಸುತ್ತಾ ಮೊದಲು 'ಕರ್ಮ' ಪದದ ಸಾರ್ಥಕ್ಯವನ್ನು ಟೀಕೆಯ ಪ್ರಕಾರ ಹೇಳುತ್ತಿದ್ದಾರೆ 'ಕರ್ಮಪದಂ ತು' ಇತ್ಯಾದಿ ವಾಕ್ಯದಿಂದ. ಒಬ್ಬನೇ ಬ್ರಹ್ಮನಲ್ಲಿ ಕ್ರಿಯಾಕರ್ತೃಭಾವವು ಉಪಪನ್ನವಾಗುತ್ತದೆಂದು ತಿಳಿಸುವುದಕ್ಕಾಗಿ ಕರ್ಮಪದವು ಸಾರ್ಥಕವಾಗಿದೆಯೆಂದು ಟೀಕೆಯ ಪ್ರಕಾರ ತಿಳಿಯಬೇಕು.

'ತತ್ತೇಜೋಽಸೃಜತ' ಎಂಬುದಾಗಿ ಈಕ್ಷಣಪೂರ್ವಕವಾದ ಕರ್ಮತ್ವದ ವ್ಯಪದೇಶವಿರುವುದರಿಂದ; ಮತ್ತು 'ನಾಮರೂಪೇ ವ್ಯಾಕರವಾಣಿ' ಇತ್ಯಾದಿ ವಾಕ್ಯದಿಂದ ಈಕ್ಷಣಪೂರ್ವಕವಾದ ನಾಮ ಹಾಗೂ ರೂಪಗಳ ಸೃಷ್ಟಿಯ ಕರ್ಮವನ್ನು ಹೇಳಿದ್ದರಿಂದ, ಅಂತಹ ಈಶ್ವರನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ ಎಂಬುದಾಗಿ ತತ್ವಪ್ರದೀಪಕ್ಕೆ ಅನುಸಾರಿಯಾದ ಮತ್ತೊಂದು ಪಕ್ಷವನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – ''न कर्तृत्वं न कर्माणि लोकस्य सृजति प्रभुः'' इति गीतायां कर्मपदस्य ''क्रियायामदृष्टोत्पादने फले च स्वातन्त्र्यं लोकस्य न सृजतीश्वरः'' इत्यदृष्टोत्पादनादिपरत्वेन गीतातात्पर्ये भगवत्पादैर्व्याख्यानादिति भावः ।

'ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ' ಎಂಬ ಗೀತಾಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ ಗೀತಾತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ - 'ಕ್ರಿಯಾಯಾಮದೃಷ್ಟೋತ್ಪಾದನೇ ಫಲೇ ಚ ಸ್ವಾತಂತ್ರ್ಯಂ ಲೋಕಸ್ಯ ನ ಸೃಜತೀಶ್ವರಃ' ಕ್ರಿಯೆಯಲ್ಲಾಗಲೀ, ಕ್ರಿಯೆಯಿಂದ ಹುಟ್ಟುವ ಅದೃಷ್ಟದಲ್ಲಾಗಲೀ, ಫಲದಲ್ಲಾಗಲೀ ಸ್ವಾತಂತ್ರ್ಯವನ್ನು ಪರಮಾತ್ಮನು ಕೊಡುವುದಿಲ್ಲವೆಂದು ಶ್ರೀಮದಾಚಾರ್ಯರು ವ್ಯಾಖ್ಯಾನಿಸಿದ್ದಾರೆ. ಇಲ್ಲಿ 'ಕರ್ಮ' ಪದಕ್ಕೆ 'ಅದೃಷ್ಟೋತ್ಪಾದನ' ಎಂಬ ಕ್ರಿಯಾವಿಶೇಷವನ್ನು ಹೇಳಿದ್ದಾರೆ. ಗೀತಾತಾತ್ಪರ್ಯದಲ್ಲಿ ಯಾವರೀತಿಯಾಗಿ ಕರ್ಮಪದಕ್ಕೆ ಕ್ರಿಯಾವಿಶೇಷವೆಂಬರ್ಥದಲ್ಲಿ ವ್ಯಾಖ್ಯಾನ ಮಾಡಿದ್ದಾರೋ, ಅದರಂತೆ ಇಲ್ಲಿಯೂ ಕೂಡ 'ಸರ್ಜನ' ಎಂಬ ಕ್ರಿಯಾವಿಶೇಷದಲ್ಲಿ 'ಕರ್ಮ' ಪದವು ಸಾರ್ಥಕವಾಗುತ್ತದೆಂದು ತಿಳಿಯಬೇಕು.

**प्रकाशः** – एतेन ब्रह्मधर्मेक्षणकर्मसन्दष्टो बहुभावोऽपि ब्रह्मण्येव कथञ्चिन्नेय इति सूचितमिति ततोऽपि कर्मपदसार्थक्यं ध्येयम् ।

ಹೀಗೆ ಹೇಳಿದ್ದರಿಂದ ಮತ್ತೊಂದು ಬಗೆಯಲ್ಲಿಯೂ 'ಕರ್ಮ' ಪದಕ್ಕೆ ಸಾರ್ಥಕ್ಯವನ್ನು ತಿಳಿಸಿದಂತಾಯಿತು. ಬ್ರಹ್ಮನ ಧರ್ಮವೇ ಆಗಿರುವ ಈಕ್ಷತಿ ಹಾಗೂ ಕರ್ಮಗಳನ್ನು ಶ್ರುತಿಯಲ್ಲಿ ಹೇಳಲಾಗಿದೆ. ಈ ಎರಡೂ ಬ್ರಹ್ಮನ ಧರ್ಮಗಳ ಮಧ್ಯದಲ್ಲಿ ಹೇಳಲ್ಪಟ್ಟ ಬಹುಭಾವವೂ ಕೂಡ ಬ್ರಹ್ಮನಲ್ಲಿಯೇ ಕಥಂಚಿತ್ ಉಪಪಾದಿಸಬೇಕೆಂದು ತಿಳಿಯಬೇಕು. ಹೀಗೆ ಸಂದಂಶನ್ಯಾಯದಿಂದ ಬಹುಭಾವದ ವಿರೋಧವನ್ನು ಪರಿಹರಿಸಬೇಕೆಂಬ ಉದ್ದೇಶದಿಂದ ಸೂತ್ರಕಾರರು 'ಕರ್ಮ' ಪದವನ್ನು ಹೇಳಿರುತ್ತಾರೆ.

**प्रकाशः** – 'सः' इत्येतदाक्षिप्य समाधत्ते – यद्यपीति ॥

ಪರಿಪೂರ್ಣಚಂದ್ರಿಕಾ

ಇಲ್ಲಿಯ 'ಕರ್ಮ' ಪದದ ಸಾರ್ಥಕ್ಯವನ್ನು ಸಮರ್ಥಿಸಿದ್ದಾಯಿತು. ಈಗ ಸೂತ್ರದಲ್ಲಿರುವ 'ಸಃ' ಎಂಬ ಪದದ ಸಾರ್ಥಕ್ಯವನ್ನು ತೋರಿಸುವುದಕ್ಕಾಗಿ ಆಕ್ಷೇಪ ಹಾಗೂ ಸಮಾಧಾನಗಳನ್ನು 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – एतेन यदुक्तं श्रुतप्रकाशे ''अत्र स इत्युक्तिरस्मिन्पादे सर्वाधिकरणे साध्यप्रतिज्ञानुवृत्त्यर्था । यथा आद्यपादे 'भेदव्यपदेशाच्चान्यः' इत्यन्यशब्दोक्तिः द्वितीये 'अत एव च स ब्रह्म' इति ब्रह्मशब्दोक्तिः चतुर्थपादे च 'वदतीति चेन्न प्राज्ञो हि' इति प्राज्ञशब्दोक्तिः'' इति तन्निरस्तम् ।

'ಸಃ' ಎಂಬ ಪದದ ಸಾರ್ಥಕ್ಯವನ್ನು ಗ್ರಂಥಕಾರರು ಹೇಳಿದ್ದರಿಂದ ಶ್ರುತಪ್ರಕಾಶದಲ್ಲಿ ಹೇಳಿದ್ದನ್ನು ನಿರಾಕರಿಸಿದಂತಾಯಿತು. ಶ್ರುತಪ್ರಕಾಶದಲ್ಲಿ 'ಸಃ' ಎಂಬ ಪದದ ಸಾರ್ಥಕ್ಯವನ್ನು ಹೀಗೆ ಹೇಳಲಾಗಿದೆ -

'ಅತ್ರ ಸ ಇತ್ಯುಕ್ತಿರಸ್ಮಿನ್‌ಪಾದೇ ಸರ್ವಾಧಿಕರಣೇ ಸಾಧ್ಯಪ್ರತಿಜ್ಞಾನುವೃತ್ತ್ಯರ್ಥಾ । ಯಥಾ ಆದ್ಯಪಾದೇ 'ಭೇದವ್ಯಪದೇಶಾಚ್ಚಾನ್ಯಃ' ಇತ್ಯನ್ಯಶಬ್ದೋಕ್ತಿಃ, ದ್ವಿತಿಯೇ 'ಅತ ಏವ ಚ ಸಬ್ರಹ್ಮ' ಇತಿ ಬ್ರಹ್ಮಶಬ್ದೋಕ್ತಿಃ, ಚತುರ್ಥಪಾದೇ ಚ 'ವದತೀತಿ ಚೇನ್ನ ಪ್ರಾಜ್ಞೋ ಹಿ' ಇತಿ ಪ್ರಾಜ್ಞಶಬ್ದೋಕ್ತಿಃ'

'ಈ ಸೂತ್ರದಲ್ಲಿ 'ಸಃ' ಎಂದೇಕೆ ಹೇಳಿದ್ದಾರೆಂದರೆ ಪ್ರತಿಯೊಂದು ಅಧಿಕರಣಗಳಲ್ಲಿಯೂ ಸಾಧ್ಯಪ್ರತಿಜ್ಞೆಯನ್ನು ಅನುವೃತ್ತಿ ಮಾಡಿಕೊಳ್ಳುವುದಕ್ಕಾಗಿ. ಮೊದಲನೆಯ ಪಾದದಲ್ಲಿ 'ಭೇದವ್ಯಪದೇಶಾಚ್ಚಾನ್ಯಃ' ಎಂಬಲ್ಲಿ ಅನ್ಯಶಬ್ದದಿಂದ ಪ್ರತಿಜ್ಞೆಯನ್ನು ಎಲ್ಲೆಡೆ ಅನುವಾದ ಮಾಡಿಕೊಳ್ಳಬೇಕೆಂದು ಹೇಳಿದ್ದಾರೆ. ಎರಡನೆಯ ಪಾದದಲ್ಲಿ 'ಅತ ಏವ ಚ ಸ ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದದಿಂದ ಹಾಗೂ ನಾಲ್ಕನೆಯ ಪಾದದಲ್ಲಿ 'ವದತೀತಿ ಚೇನ್ನ ಪ್ರಾಜ್ಞೋ ಹಿ' ಎಂಬಲ್ಲಿರುವ ಪ್ರಾಜ್ಞಶಬ್ದದಿಂದ ಪ್ರತಿಜ್ಞೆಯನ್ನು ಎಲ್ಲೆಡೆ ಅನುವೃತ್ತಿ ಮಾಡಿಕೊಳ್ಳಬೇಕೆಂದು ತಿಳಿಸಿರುತ್ತಾರೆ. ಅದರಂತೆ ಈ ಮೂರನೇ ಪಾದದಲ್ಲಿಯೂ 'ಸಃ' ಎಂಬ ಪದದಿಂದ ಸಾಧ್ಯಪ್ರತಿಜ್ಞೆಯು ಎಲ್ಲೆಡೆ ಅನುವೃತ್ತವಾಗಬೇಕೆಂದು ತಿಳಿಸಿದ್ದಾರೆ'. ಶ್ರುತಪ್ರಕಾಶದ ಈ ಅಭಿಪ್ರಾಯವನ್ನು ಈಗ ನಿರಾಕರಿಸಿದಂತಾಯಿತು.

**प्रकाशः** – समन्वयसूत्रस्थतत्पदस्यैव समन्वयपराधिकरणेष्वादितः सर्वत्रानुवृत्तिसम्भवे प्रतिपादं तदुक्तिवैयर्थ्यात् ।

ಸಮನ್ವಯಸೂತ್ರದಲ್ಲಿರುವ 'ತತ್' ಪದದಿಂದಲೇ ಸಮನ್ವಯಕ್ಕಾಗಿ ಹೊರಟಿರುವ ಸಕಲ ಅಧಿಕರಣಗಳಲ್ಲಿಯೂ ಅನುವೃತ್ತಿಯು ಉಪಪನ್ನವಾಗುತ್ತಿರುವಾಗ ಪ್ರತಿಯೊಂದು ಪಾದಗಳಲ್ಲಿಯೂ ಅದನ್ನು ಉಲ್ಲೇಖಿಸುವುದು ವ್ಯರ್ಥ.

**प्रकाशः** – पादेष्वादावेव साध्यनिर्देशकस्य वक्तव्यत्वेन मध्ये निर्देशायोगात् । ब्रह्मादिपदेनैव साध्यनिर्देशौचित्येनान्यशब्देन तन्निर्देशायोगाच्च ।

ಮತ್ತು ನಿಮ್ಮ ಪ್ರಕಾರ ಹೇಳುವುದಾದರೂ, ಆಯಾ ಪಾದಗಳ ಪ್ರಾರಂಭದಲ್ಲಿಯೇ ಸಾಧ್ಯವನ್ನು ನಿರ್ದೇಶ ಮಾಡಬೇಕಿತ್ತು. ಪಾದದ ಮಧ್ಯದ ಯಾವುದೋ ಅಧಿಕರಣದಲ್ಲಿ ಸಾಧ್ಯವನ್ನು ನಿರ್ದೇಶ ಮಾಡುವುದರಲ್ಲಿ ಅರ್ಥವಿಲ್ಲ. ಮತ್ತು ಬ್ರಹ್ಮ ಮೊದಲಾದ ಪದಗಳಿಂದಲೇ ಸಾಧ್ಯವನ್ನು ನಿರ್ದೇಶ ಮಾಡಲು ಬರುವಾಗ 'ಅನ್ನ' ಎಂಬ ಶಬ್ದದಿಂದ ಅದನ್ನು ನಿರ್ದೇಶಿಸುವುದೂ ಅಯುಕ್ತವಾಗುತ್ತದೆ.

**प्रकाशः – प्रथमपादेऽन्यशब्दस्यात्र स इति तच्छब्दस्य च कृत्यान्तर-सम्भवाच्च । 'अत एव च स ब्रह्म' इति सूत्रस्यासाम्प्रदायिकत्वेन प्रक्षिप्तत्वाच्चेति ।।**

ಪ್ರಥಮಪಾದದಲ್ಲಿ ಅನ್ನಶಬ್ದಕ್ಕೆ ಮತ್ತು ಈ ಸೂತ್ರದಲ್ಲಿ 'ಸಃ' ಎಂಬ 'ತದ್' ಶಬ್ದಕ್ಕೆ ಬೇರೆ ಪ್ರಯೋಜನವನ್ನೂ ಕೂಡ ಅವರಿಗೆ ಹೇಳಲಾಗದು. ಇನ್ನು ಎರಡನೆಯ ಪಾದದಲ್ಲಿ 'ಅತ ಏವ ಚ ಸಬ್ರಹ್ಮ' ಎಂಬ ಸೂತ್ರವೇ ಇಲ್ಲ. ಅಸಂಪ್ರಾದಾಯಿಕವಾದ್ದರಿಂದ ಈ ಸೂತ್ರವೇ ಪ್ರಕ್ಷಿಪ್ತವಾಗಿದೆ.

**गुरुराजीयम् – द्वितीयतृतीयौ त्विति ।। ईक्षणमतात्विकं स्वाभिमानिचेतनविशिष्टस्य तात्विकमिति द्वितीयतृतीयावित्यर्थः ।। चतुर्थ इति ।। अणुत्वमहत्त्ववदीक्षणविकारावपि श्रौतत्वात्प्रधाने न विरुद्धाविति चतुर्थ इत्यर्थः । पञ्चमः अंशभेदेनेक्षणविकाराववरुद्धाविति पञ्चम इत्यर्थः । एकस्य चेतनरूपांशस्येक्षितृत्वादीत्यादिपदेन स्रष्टृत्वसङ्ग्रहः । उपादानत्वादीत्यत्रत्येना-चेतनत्वपरिग्रहः ।**



ಸೂತ್ರದಲ್ಲಿ 'ಕರ್ಮ' ಎಂಬ ಪದವನ್ನೇಕೆ ಹೇಳಿದರು. ಶ್ರುತಿಯಲ್ಲಿ ಈಕ್ಷಣವು ಹೇಳಲ್ಪಟ್ಟದ್ದರಿಂದ ಭಗವಂತನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸಲು 'ಈಕ್ಷತಿ ವ್ಯಪದೇಶಾತ್ ಸಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. ಕರ್ಮಪದವನ್ನು ಹೇಳಿದ್ದರಿಂದ ಹೆಚ್ಚಿನ ವಿಷಯವನ್ನೇನೂ ತಿಳಿಸಿದಂತಾಗಲಿಲ್ಲವಲ್ಲ ಎಂಬ ಪ್ರಶ್ನೆಗೆ ಟೀಕೆಯ ಪ್ರಕಾರ ಹೀಗೆ ಸಮಾಧಾನ ತಿಳಿಯಬೇಕು. ಪರಮಾತ್ಮನು ಜ್ಞಾನಸ್ವರೂಪನಾದ್ದರಿಂದ 'ಐಕ್ಷತ' ಎಂಬಲ್ಲಿ ಹೇಳಲ್ಪಟ್ಟ ಜ್ಞಾನಕರ್ತೃತ್ವವನ್ನು ಅವನಲ್ಲಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಲೋಕದಲ್ಲಿ ಕ್ರಿಯೆ ಹಾಗೂ ಕರ್ತೃತ್ವಗಳಿಗೆ ಭೇದವೇ ಇರುತ್ತದೆ. ದೇವದತ್ತನು ಕೊಡಲಿಯಿಂದ ಮರವನ್ನು ಕಡಿಯುತ್ತಾನೆ ಎಂದು ಹೇಳಿದಾಗ 'ಕಡಿಯುವಿಕೆ' ಎಂಬ ಕ್ರಿಯೆಗೂ, ದೇವದತ್ತನಿಗೂ ಭೇದವೇ ಇರುತ್ತದೆ ಹೊರತು, ಕಡಿಯುವಿಕೆಯೇ ದೇವದತ್ತನಾಗಲು ಸಾಧ್ಯವಿಲ್ಲ. ಅದರಂತೆ ಜ್ಞಾನಸ್ವರೂಪನಾದ ಬ್ರಹ್ಮನು ಜ್ಞಾನಾಶ್ರಯನಾಗಲು ಸಾಧ್ಯವಿಲ್ಲ. ಹಾಗಾಗಿ 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬ ಶ್ರುತಿಯಿಂದ ಜ್ಞಾನರೂಪನೆಂದು ನಿರ್ಣೀತನಾದ ಬ್ರಹ್ಮನಿಗೆ 'ಐಕ್ಷತ' ಎಂಬುದಾಗಿ ಜ್ಞಾನಕರ್ತೃತ್ವವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಯು ಬರುತ್ತದೆ. ಇದರ ಪರಿಹಾರಕ್ಕೋಸ್ಕರ ಸೂತ್ರಕಾರರು 'ಈಕ್ಷತಿಕರ್ಮ' ಎಂಬ

ಪದವನ್ನು ಪ್ರಯೋಗಿಸಿದ್ದಾರೆ. ಅಂದರೆ 'ಜ್ಞಾನರೂಪವಾದ ಕ್ರಿಯೆ' ಎಂದು ಒತ್ತಿ ಹೇಳಿದ್ದರಿಂದ ಜ್ಞಾನಕರ್ತೃವಾಗಿದ್ದರೂ ಪರಮಾತ್ಮನು ಜ್ಞಾನಸ್ವರೂಪನು ಆಗುತ್ತಾನೆಂದು ಹೇಳಿದಂತಾಗುತ್ತದೆ. ಇಲ್ಲಿರುವ ಕರ್ಮಪದಕ್ಕೆ 'ಕ್ರಿಯೆ' ಎಂದರ್ಥ. ಭಗವಂತನ ವಿಷಯದಲ್ಲಿ ಕ್ರಿಯೆಗೂ ಕರ್ತೃತ್ವಕ್ಕೂ ಭೇದವಿರಬೇಕೆಂಬ ನಿಯಮವಿಲ್ಲ. ವಿಶೇಷದ ಬಲದಿಂದ ಈ ಕ್ರಿಯಾಕರ್ತೃಭಾವವು ಉಪಪನ್ನವಾಗುತ್ತದೆ. ಇದು ಟೀಕಾರಾಯರ ಅಭಿಪ್ರಾಯ.

ತತ್ವಪ್ರದೀಪಕಾರರ ಅಭಿಪ್ರಾಯ ಹೀಗಿದೆ - ಸೂತ್ರದಲ್ಲಿ ಇರುವ ಕರ್ಮಶಬ್ದಕ್ಕೆ 'ಸೃಷ್ಟ್ಯಾದಿ ಕ್ರಿಯೆ' ಎಂದರ್ಥ. ಗೀತಾತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು 'ನ ಕರ್ತೃತ್ವಂ ನ ಕರ್ಮಾಣಿ' ಎಂಬ ಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡುವಾಗ ಕರ್ಮಶಬ್ದಕ್ಕೆ ಅದೃಷ್ಟೋತ್ಪಾದನವೆಂಬ ಕ್ರಿಯಾವಿಶೇಷವೆಂಬರ್ಥವನ್ನು ಹೇಳುತ್ತಾರೆ. ಅದರಂತೆ ಇಲ್ಲಿಯೂ ಕೂಡ ಸೃಷ್ಟ್ಯಾದಿ ಕ್ರಿಯಾವಿಶೇಷವೆಂಬರ್ಥವನ್ನು ತಿಳಿಸುವುದಕ್ಕಾಗಿ ಕರ್ಮಪದವನ್ನು ತಿಳಿಸಿರುತ್ತಾರೆ. ಹೀಗೆ ಕ್ರಿಯಾವಿಶೇಷವನ್ನು ಹೇಳಿದ್ದರಿಂದ ಪ್ರಧಾನ ಪಕ್ಷದಲ್ಲಿ ಈಕ್ಷಿತೃತ್ವವು ಅಯುಕ್ತವಾಗುತ್ತದೆಂದಷ್ಟೇ ಅಲ್ಲ, ಸ್ರಷ್ಟೃತ್ವಾದಿಗಳೂ ಕೂಡ ಅಯುಕ್ತವಾಗುತ್ತದೆಂದು ತಿಳಿಯಬೇಕು.

ಸೂತ್ರದಲ್ಲಿರುವ ಕರ್ಮಪದವು ಹೇಗೆ ಸಾರ್ಥಕವೋ, ಅದರಂತೆ 'ಸಃ' ಎಂಬ ಪದವೂ ಕೂಡ ಸಾರ್ಥಕವಾಗಿದೆ. ವಾಸ್ತವಿಕವಾಗಿ 'ತತ್ತುಸಮನ್ವಯಾತ್' ಎಂಬ ಸೂತ್ರದಿಂದ 'ಸತ್' ಎಂಬ ಪದವೇ ಅನುವೃತ್ತವಾಗುತ್ತಿರುವಾಗ 'ಸಃ' ಎಂಬ ಪದವನ್ನೇಕೆ ಪ್ರತ್ಯೇಕವಾಗಿ ಹೇಳಿದರೆಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಆದರೆ 'ಏಕೋ ನಾರಾಯಣ ಆಸೀತ್' ಮೊದಲಾದ ಸಮಾಖ್ಯಾಪ್ರಮಾಣವನ್ನು ಉಲ್ಲೇಖಿಸುವುದಕ್ಕಾಗಿ 'ತತ್' ಎಂಬುದನ್ನು ಅನುಷಂಗ ಮಾಡಿಕೊಳ್ಳದೇ 'ಸಃ' ಎಂಬ ಪದವನ್ನು ಉಲ್ಲೇಖಿಸಿದ್ದಾರೆ. ಆದ್ದರಿಂದ ಸೂತ್ರದಲ್ಲಿರುವ ಎಲ್ಲ ಪದಗಳು ಅತ್ಯಂತ ಅರ್ಥಪೂರ್ಣವಾಗಿವೆಯೆಂದು ಭಾವಿಸಬೇಕು.

## ಸೂತ್ರದಲ್ಲಿ ಸಮನ್ವೇತವ್ಯ ಶಬ್ದವನ್ನೇಕೆ ಉಲ್ಲೇಖಿಸಿಲ್ಲ ?

## तात्पर्यचन्द्रिका

**अत्र सूत्रे समन्वेतव्यविशेषानुक्तिस्तु हेत्वनुसारेण समन्वेतव्यविशेष ऊह्य इति शिष्यशिक्षार्थं वा**

ಅನುವಾದ - ಈ ಅಧಿಕರಣದ ಸೂತ್ರದಲ್ಲಿ ಸಮನ್ವಯ ಮಾಡಬೇಕಾದ ಶಬ್ದವಿಶೇಷವನ್ನೇ ಹೇಳಿಲ್ಲ. ಸಾಮಾನ್ಯವಾಗಿ ಪ್ರತಿಯೊಂದು ಅಧಿಕರಣಗಳ ಪ್ರಾರಂಭ ಸೂತ್ರದಲ್ಲಿ ಯಾವ ಶಬ್ದದ ಸಮನ್ವಯವೆಂದು ಉಲ್ಲೇಖಿಸುತ್ತಾರೆ. ಆದರೆ ಇಲ್ಲಿ ಅದನ್ನು ಉಲ್ಲೇಖ ಮಾಡದಿರಲು ಅನೇಕ ಕಾರಣಗಳಿವೆ -

೧. ಸೂತ್ರದಲ್ಲಿರುವ ಹೇತುವನ್ನು ಗಮನಿಸಿ ಶಿಷ್ಯಂದಿರೇ ಸಮನ್ವಯ ಮಾಡಬೇಕಾದ ಶಬ್ದವನ್ನು ಸ್ವತಃ ಊಹಿಸಿಕೊಳ್ಳಬೇಕೆಂಬ ಶಿಷ್ಯಶಿಕ್ಷಣೆಗೋಸ್ಕರ ಸೂತ್ರಕಾರರು ಇಲ್ಲಿ ಸಮನ್ವಯ ಮಾಡಬೇಕಾದ ಶಬ್ದವನ್ನು ಉಲ್ಲೇಖಿಸಿಲ್ಲ.

**''सदेव सोम्येदमग्रे' 'सोऽकामयत बहु स्याम्'' इत्यादिभिन्नसृष्टि-प्रकरणस्थनानाशब्दा इह तुल्यवत्समन्वेतव्याः नतु शब्दविशेष इति प्रदर्शनार्थं वा**

೨. 'ಸದೇವ ಸೋಮ್ಯ ಇದಮಗ್ರ ಆಸೀತ್' 'ಸೋऽಕಾಮಯತ ಬಹು ಸ್ಯಾಮ್' ಇವೇ ಮೊದಲಾದ ಅನೇಕ ಸೃಷ್ಟಿಪ್ರಕರಣಗಳಲ್ಲಿರುವ ನಾನಾವಿಧವಾದ ಶಬ್ದಗಳ ಸಮನ್ವಯವನ್ನು ಈ ಅಧಿಕರಣದ ಸಮಾನನ್ಯಾಯದಿಂದ ತಿಳಿದುಕೊಳ್ಳಬೇಕು ಹೊರತು, 'ಸತ್' ಎಂಬ ಒಂದೇ ಶಬ್ದದ ಸಮನ್ವಯವನ್ನು ತಿಳಿಯಬಾರದು. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿಯೂ ಸೂತ್ರಕಾರರು ಶಬ್ದವಿಶೇಷವನ್ನು ಉಲ್ಲೇಖಿಸಿಲ್ಲ.

**अल्पाक्षरे सूत्रे निर्देशानर्हानेकप्रकरणात्मक 'सदेव' इत्यादिस्थानस्य समन्वे-तव्यत्वप्रदर्शनार्थं वेति द्रष्टव्यम् ।**

೩. ಅಥವಾ ಸೂತ್ರವು ಅಲ್ಪಾಕ್ಷರವಾಗಿರಬೇಕು. ಅನೇಕ ಪ್ರಕರಣಸ್ವರೂಪವಾದ 'ಸದೇವ ಸೋಮ್ಯ' ಮೊದಲಾದ ಸ್ಥಾನದ ಸಮನ್ವಯವು ಈ ಅಧಿಕರಣದ ಉದ್ದೇಶವಾಗಿದೆ. ಆ ಸ್ಥಾನದ ಸಮನ್ವಯವನ್ನೆಲ್ಲಾ ನಿರ್ದೇಶ ಮಾಡುತ್ತಾ ಹೋದರೆ ಸೂತ್ರವು ದೀರ್ಘವಾಗುತ್ತದೆ. ಅಲ್ಪಾಕ್ಷರತ್ವಕ್ಕೋಸ್ಕರ ಸೂತ್ರಕಾರರು 'ಸಮನ್ವೇತವ್ಯ' ಶಬ್ದವನ್ನು ಉಲ್ಲೇಖ ಮಾಡಿಲ್ಲ.

**अथवा ''आनन्दमयोऽभ्यासात्'' इत्यादौ हेतुविशेषानुक्तेः समन्वेतव्य-विशेषोक्तिः, अत्र त्वीक्षणरूपहेतुविशेषोक्त्या तद्युक्तशब्दस्य समन्वेतव्यत्व-सिद्धेस्तदनुक्तिः ।**

೪. 'ಆನಂದಮಯೋऽಭ್ಯಾಸಾತ್' ಇತ್ಯಾದಿ ಸೂತ್ರಗಳಲ್ಲಿ ಹೇತುವಿಶೇಷವನ್ನು ಹೇಳದ ಕಾರಣ ಸಮನ್ವೇತವ್ಯಶಬ್ದವನ್ನು ಉಲ್ಲೇಖ ಮಾಡಿದ್ದಾರೆ. ಆದರೆ ಈ ಅಧಿಕರಣದ ಸೂತ್ರದಲ್ಲಿ ಈಕ್ಷಣವೆಂಬ ಹೇತುವಿಶೇಷವನ್ನು ಹೇಳಿದ್ದರಿಂದ, ಅಂತಹ ಹೇತುವಿಶೇಷದಿಂದ ಕೂಡಿರುವ 'ಸಮನ್ವೇತವ್ಯಶಬ್ದ'ವು ಯಾವುದೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಆದಕ್ಕೋಸ್ಕರ ಪ್ರತ್ಯೇಕವಾಗಿ 'ಸಮನ್ವೇತವ್ಯಶಬ್ದ'ವನ್ನು ಹೇಳಿಲ್ಲ. ಅಂದರೆ ಎಲ್ಲಿ ಹೇತುವಿನಿಂದಲೇ 'ಸಮನ್ವೇತವ್ಯಶಬ್ದ'ವು ಸ್ಪಷ್ಟವಾಗಿ ತಿಳಿಯುತ್ತದೋ, ಅಂತಹ ಸಂದರ್ಭದಲ್ಲಿ ಪ್ರತ್ಯೇಕವಾಗಿ ಸಾಧ್ಯನಿರ್ದೇಶವನ್ನು ಮಾಡಬೇಕಾಗಿಲ್ಲ ಎಂದು ಅಭಿಪ್ರಾಯ.

**यद्वा ''स ईक्षाञ्चक्रे' 'सोऽकामयत'' इत्यादौ 'सः' इत्यस्य समन्वेतव्यत्वात्स इत्यनेन ब्रह्मपरेणापि तन्त्रेणावृत्त्या वा एकदेशकीर्तनमुखेन समन्वेतव्य-स्याप्युक्तिरिति ।**

೫. ಅಥವಾ 'ಸ ಈಕ್ಷಾಂಚಕ್ರೇ' 'ಸೋಽಕಾಮಯತ' ಇತ್ಯಾದಿ ಶ್ರುತಿಯಲ್ಲಿರುವ 'ಸಃ' ಎಂಬ ಪ್ರಾತಿಪದಿಕ ಶಬ್ದದ ಸಮನ್ವಯವು ಈ ಅಧಿಕರಣದಲ್ಲಿ ವಿವಕ್ಷಿತವಾಗಿದೆ. ಅದನ್ನೇ ಸೂತ್ರದಲ್ಲಿ 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬಲ್ಲಿ 'ಸಃ' ಎಂಬುದಾಗಿ ನಿರ್ದೇಶ ಮಾಡಿದ್ದಾರೆ. 'ಸಃ' ಎಂಬ ಪದವು ಬ್ರಹ್ಮಪರವಾಗಿದೆ. ತಂತ್ರದಿಂದ ಅಥವಾ ಆವೃತ್ತಿಯಿಂದ ಅದನ್ನು ಎರಡು ಬಾರಿ ಇಟ್ಟುಕೊಳ್ಳಬೇಕು. ಆವಾಗ ಸೂತ್ರದಲ್ಲಿ 'ಈಕ್ಷತಿಕರ್ಮವ್ಯಪದೇಶಾತ್ಸಃ ಸಃ' ಎಂದು ಹೇಳಿದಂತಾಗುತ್ತದೆ. ಅಂದರೆ 'ಸಃ' ಎಂಬ ಶಬ್ದದಿಂದ ಪರಾಮರ್ಶಿಸಲ್ಪಟ್ಟ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದಂತಾಗುತ್ತದೆ. ಹೀಗೆ ಸಮನ್ವಯ ಮಾಡಬೇಕಾದ ಅನೇಕ ಶಬ್ದಗಳ ಮಧ್ಯದಲ್ಲಿ ಒಂದನ್ನು ಉಲ್ಲೇಖ ಮಾಡಿದ್ದರಿಂದ ಏಕದೇಶದ ಉಲ್ಲೇಖದ ಮೂಲಕ ಉಳಿದ ಶಬ್ದಗಳ ಸಮನ್ವಯವನ್ನು ಸಂಗ್ರಹಿಸಿದ್ದಾರೆಂದು ತಿಳಿಯುತ್ತದೆ.

**प्रकाशः –**

**एकदेशेति ।। समन्वेतव्यसदादिनानाशब्देष्वेकदेशभूततच्छब्दकीर्तनमुखेनेत्यर्थः । यद्वा समन्वेतव्यसृष्टिस्थानैकदेशभूततच्छब्दकीर्तनमुखेन स्थानरूपसमन्वयस्याप्युक्तिरित्यर्थः ।।**

ವಿವರಣೆ - 'ಏಕದೇಶಕೀರ್ತನ ಮುಖೇನ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ ಈ ಅಧಿಕರಣದಲ್ಲಿ 'ಸತ್' ಮೊದಲಾದ ಅನೇಕ ಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ. ಅವುಗಳ ಮಧ್ಯದಲ್ಲಿ 'ಸಃ' ಎಂಬುದು ಏಕದೇಶವಾಗಿದೆ. ಅದನ್ನು ಹೇಳುವ ಮೂಲಕ ಸಕಲ ಶಬ್ದಗಳ ಸಮನ್ವಯವನ್ನು ಸಂಗ್ರಹಿಸಿದ್ದಾರೆಂದರ್ಥ. ಅಥವಾ ಸಮನ್ವಯ ಮಾಡುವಂತಹ ನಾನಾ ವಿಧವಾದ ಸೃಷ್ಟಿಸ್ಥಾನಗಳನ್ನು ಸಂಗ್ರಹಿಸುವುದಕ್ಕಾಗಿ ಸೃಷ್ಟಿಸ್ಥಾನದ ಏಕದೇಶಭೂತವಾದ 'ಸತ್' ಶಬ್ದವನ್ನು ಉಲ್ಲೇಖಿಸಿದ್ದಾರೆ. ಇದರಿಂದ ಸ್ಥಾನಸಮನ್ವಯವನ್ನೂ ಉಲ್ಲೇಖಿಸಿದಂತಾಗುತ್ತದೆ.

## ಸಾರ

ಸಾಮಾನ್ಯವಾಗಿ ಪ್ರತಿಯೊಂದು ಅಧಿಕರಣಗಳ ಪ್ರಥಮಸೂತ್ರದಲ್ಲಿ ಸಮನ್ವಯ ಮಾಡಬೇಕಾದ ಶಬ್ದವನ್ನು ಉಲ್ಲೇಖ ಮಾಡುತ್ತಾರೆ. ಆದರೆ ಇದೇ ಮೊದಲ ಬಾರಿ ಈ ಅಧಿಕರಣದ ಸೂತ್ರದಲ್ಲಿ ಸಮನ್ವಯ ಮಾಡಬೇಕಾದ ಶಬ್ದವನ್ನೇ ಸೂತ್ರಕಾರರು ಉಲ್ಲೇಖ ಮಾಡಿಲ್ಲ. ಇದಕ್ಕೆ ಕಾರಣ ಏನು? ಎಂಬ ಪ್ರಶ್ನೆಗೆ ಹಲವು ಬಗೆಯಲ್ಲಿ ಇದರ ಉತ್ತರವನ್ನು ತಿಳಿಯಬಹುದು -

ಸೂತ್ರದಲ್ಲಿರುವ ಹೇತುವನ್ನು ಗಮನಿಸಿ, ಶಿಷ್ಯಂದಿರೇ ಸ್ವತಃ ಸಮನ್ವಯ ಮಾಡಬೇಕಾದ ಶಬ್ದವನ್ನು ಊಹಿಸಿಕೊಳ್ಳಲಿ ಎಂದು ಉಲ್ಲೇಖ ಮಾಡದಿರಬಹುದು. ಅಥವಾ ಸ್ಥಾನದ ಸಮನ್ವಯವು ಈ ಅಧಿಕರಣದ ಉದ್ದೇಶವಾದ್ದರಿಂದ ಶಬ್ದವಿಶೇಷವನ್ನು ಉಲ್ಲೇಖ ಮಾಡಲು ಸಾಧ್ಯವಿಲ್ಲವೆಂದಿರಬಹುದು. ಅಥವಾ ಸೂತ್ರವು ಅಲ್ಪಾಕ್ಷರವಾಗಿರಲಿ ಎಂಬ ಉದ್ದೇಶವಿರಬಹುದು. ಅಥವಾ ಯಾವ ಸೂತ್ರದಲ್ಲಿ ಹೇತುವಿನಿಂದಲೇ ಸ್ಪಷ್ಟವಾಗಿ 'ಸಮನ್ವೇತವ್ಯಶಬ್ದ'ವು ತಿಳಿಯುತ್ತದೋ, ಅಲ್ಲಿ ಪುನಃ ಸಾಧ್ಯನಿರ್ದೇಶವನ್ನು ಮಾಡಬೇಕಾಗಿಲ್ಲವೆಂದು ಸೂಚಿಸುವ ಉದ್ದೇಶವಿರಬಹುದು. ಹೀಗೆ ಅನೇಕ ಉದ್ದೇಶಗಳಿಂದ ಸೂತ್ರಕಾರರು 'ಸಮನ್ವೇತವ್ಯಶಬ್ದ'ವನ್ನು ಸೂತ್ರದಲ್ಲಿ ಉಲ್ಲೇಖಿಸಿಲ್ಲ.

ಅಥವಾ 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ 'ಸಃ' ಎಂಬ ಪದವು ಸಮನ್ವೇತವ್ಯಶಬ್ದವೇ ಆಗಿದೆ. 'ಸ ಈಕ್ಷಾಂಚಕ್ರೇ' ಎಂಬ ಶ್ರುತಿಯಲ್ಲಿರುವ 'ಸಃ' ಎಂಬ ಪದವನ್ನೇ ಇದು ಉಲ್ಲೇಖ ಮಾಡುತ್ತಿರುವುದರಿಂದ ಸೂತ್ರಕಾರರು ಸಮನ್ವೇತವ್ಯಶಬ್ದವನ್ನು ಉಲ್ಲೇಖಿಸಿಲ್ಲವೆಂದು ಹೇಳಬಾರದು.

● ● ● ● ●

## ಶಾಂಕರಭಾಷ್ಯ ವಿಮರ್ಶೆ

### तात्पर्यचन्द्रिका

अन्येतु । ''यः पुनरेतं त्रिमात्रेणोमित्यनेनैवाक्षरेण परं पुरुषमभिध्यायीत''[1]

(१) **शाङ्करभाष्यम् –**

**ईक्षतिकर्मव्यपदेशात्सः ॥ १३ ॥**

**त्रिमात्रप्रणवे ध्येयमपरं ब्रह्म वा परम् ।**
**ब्रह्मलोकफलोक्त्यादेरपरं ब्रह्म गम्यते ॥**
**ईक्षितव्यो जीवघनात् परस्तात्प्रत्यभिज्ञया ।**
**भवेद्ध्येयं परं ब्रह्म क्रममुक्तिः फलिष्यति ॥**

'एतद्वै सत्यकाम परं चापरं च ब्रह्म यदोङ्कारस्तस्माद् विद्वानेतेनैवायतनेनैकतरमन्वेति' इति प्रकृत्य श्रूयते । 'यः पुनरेतं त्रिमात्रेणोमित्येतेनैवाक्षरेण परं पुरुषमभिध्यायीत' इति । किमस्मिन् वाक्ये परं ब्रह्माभिध्यातव्यमुपदिश्यते? आहोस्विदपरम्? इति । एतेनैवायतनेन परमपरं चैकतरमन्वेतीति प्रकृतत्वात् संशयः । तत्रापरमिदं ब्रह्मेति प्राप्तम्। कस्मात्? 'स तेजसि सूर्ये सम्पन्नः' 'स सामभिरुन्नीयते ब्रह्मलोकम्' इतिच तद्विदो देशपरिच्छिन्नस्य फलस्योच्यमानत्वात् । नहि परब्रह्मविद् देशपरिच्छिन्नं फलमश्नुवीतेति युक्तम्, सर्वगतत्वात् परस्य ब्रह्मणः । नन्वपरब्रह्मपरिग्रहे परं पुरुषमिति विशेषणं नोपपद्यते । नैष दोषः । पिण्डापेक्षया प्राणस्य परत्वोपपत्तेः । इत्येवं प्राप्तेऽभिधीयते – परमेव ब्रह्मेहाभिध्यातव्यमुपदिश्यते । कस्मात्? **ईक्षतिकमव्यपदेशात्** । ईक्षतिर्दर्शनम् ।

**इत्यस्मिन्वाक्येऽभिध्यातव्यत्वेनोक्तं वस्तु हिरण्यगर्भाख्यमपरं ब्रह्मैव । "स सामभिरुन्नीयते ब्रह्मलोकम्" इति तद्विदो देशपरिच्छिंन्नफलोक्तेः, नहि परब्रह्मविदः फलं देशपरिच्छिन्नमिति प्राप्ते**

ಅನುವಾದ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ -

ಪೂರ್ವಪಕ್ಷ - 'ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ' ಎಂಬ ವಾಕ್ಯದಲ್ಲಿ ಧ್ಯಾನಕ್ಕೆ ವಿಷಯವಾದ ವಸ್ತು, ಹಿರಣ್ಯಗರ್ಭನೆಂಬ

दर्शनव्याप्यमीक्षितिकर्म । ईक्षतिकर्मत्वेनास्याभिध्यातव्यस्य पुरुषस्य वाक्यशेषे व्यपदेशोभवति 'स एतस्माज्जीवघनात् परात्परं पुरिशयं पुरुषमीक्षते' इति । तत्राभिध्यायतेरतथाभूतमपि वस्तु कर्म भवति । मनोरथकल्पितस्याप्यभिध्यायतिकर्मत्वात् । ईक्षतेस्तु तथाभूतमेव वस्तु लोके कर्म दृष्टमित्यतः परमात्मैवायं सम्यग् दर्शनविषयभूत ईक्षतिकर्मत्वेन व्यपदिष्ट इति गम्यते । स एव चेह परपुरुषशब्दाभ्यामभिध्यातव्यः प्रत्यभिज्ञायते । नन्वभिध्याने परः पुरुष उक्तः, ईक्षणे तु परात्परः, कथमितर इतरत्र प्रत्यभिज्ञायते? इति । अत्रोच्यते – परपुरुषशब्दौ तावदुभयत्र साधारणौ । नचात्र जीवघनशब्देन प्रकृतोऽभिध्यातव्यः परः पुरुषः परामृश्यते, येन तस्मात्परात् परोऽयमीक्षितव्यः पुरुषोऽन्यः स्यात् । कस्तर्हि जीवघन इति । उच्यते – घनो मूर्तिः । जीवलक्षणो घनो जीवघनः । सैन्धवखिल्यवद् यः परमात्मनो जीवरूपः खिल्यभाव उपाधिकृतः, परश्च विषयेन्द्रियेभ्यः सोऽत्र जीवघन इति । अपर आह 'स सामभिरुन्नीयते ब्रह्मलोकम्' इत्यतीतानन्तरवाक्य-निर्दिष्टो यो ब्रह्मलोकः परश्च लोकान्तरेभ्यः सोऽत्र जीवघन इत्युच्यते । जीवानां हि सर्वेषां करणपरिवृतानां सर्वकरणात्मनि हिरण्यगर्भे ब्रह्मलोकनिवासिनि सङ्घातोपपत्तेर्भवति ब्रह्मलोको जीवघनः । तस्मात् परो यः परमात्मेक्षणकर्मभूतः स एवाभिध्यानेऽपि कर्मभूत इति गम्यते । परं पुरुषमिति च विशेषणं परमात्मपरिग्रह एवावकल्पते । परो हि पुरुषः परमात्मैव भवति यस्मात्परं किञ्चिदन्यन्नास्ति, 'पुरुषान्न परं किञ्चित् सा काष्ठा सा परा गतिः ।' इति च श्रुत्यन्तरात् । 'परं चापरं च ब्रह्म यदोङ्कारः' इतिच विभज्यानन्तरमोङ्कारेण परं पुरुषमभिध्यातव्यं ब्रुवन् परमेव ब्रह्म परं पुरुषं गमयति । 'यथा पादोदरस्त्वचा विनिर्मुच्यते, एवं ह वै स पाप्मना विनिर्मुच्यते' इति पाप्मविनिर्मोकफलवचनं परमात्मानमिहाभिध्यातव्यं सूचयति । अथ यदुक्तं परमात्माभिध्यायिनो न देशपरिच्छिन्नफलं युज्यत इति । अत्रोच्यते – त्रिमात्रेणोङ्कारेणालम्बनेन परमात्मानमभिध्यायतः फलं ब्रह्मलोकप्राप्तिः क्रमेण च सम्यग् दर्शनोत्पत्तिरिति क्रममुक्त्यभिप्रायमेतद् भविष्यतीत्यदोषः ।। १३ ।।

ಅಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್' ಎಂಬುದಾಗಿ ಯಾರು ಅಂತಹ ವ್ಯಕ್ತಿಯನ್ನು ತಿಳಿಯುತ್ತಾನೋ, ಅವನಿಗೆ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಪರಿಚ್ಛಿನ್ನವಾದ ದೇಶಪ್ರಾಪ್ತಿಯೆಂಬ ಫಲವನ್ನು ಹೇಳಲಾಗಿದೆ. ಪರಬ್ರಹ್ಮನನ್ನು ತಿಳಿಯುವಂತಹ ವ್ಯಕ್ತಿಗೆ ದೊರೆಯುವ ಫಲವು ದೇಶಪರಿಚ್ಛಿನ್ನವಾಗಲು ಸಾಧ್ಯವಿಲ್ಲ. ಆದ್ದರಿಂದ ಅಪರಬ್ರಹ್ಮನೇ ಪ್ರತಿಪಾದ್ಯನೆಂದು ಪೂರ್ವಪಕ್ಷ.

**इदं वस्तु परंब्रह्मैव । "परात्परं पुरिशयं पुरुषमीक्षते" इत्युत्तरवाक्येऽस्यैवेक्षणकर्मत्वोक्तेः । ईक्षणं हि परमार्थसत्कर्मकम् ।**

ಸಿದ್ಧಾಂತ - ಧ್ಯಾನಕ್ಕೆ ವಿಷಯವಾದ ಈ ವಸ್ತು ಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಎಂಬುದಾಗಿ ಮುಂದಿನ ವಾಕ್ಯದಲ್ಲಿ ಇಂತಹ ಧ್ಯಾತನಾದ ವ್ಯಕ್ತಿಯೇ ಈಕ್ಷಣಕ್ಕೆ ಕರ್ಮನಾಗಿದ್ದಾನೆಂದು ಹೇಳಲಾಗಿದೆ. ಈಕ್ಷಣವಾದರೂ ಸಹ ಪಾರಮಾರ್ಥಿಕವಾದ ಸದ್ವಿಷಯಕವೇ ಆಗಿರುತ್ತದೆ.

**नच ब्रह्मणोऽन्यत्परमार्थसदस्ति । न चेक्षणीयस्य परब्रह्मत्वेऽभिध्यातव्यमपरब्रह्मेति युक्तम् । ईक्षणध्यानयोरेकविषयत्वात् ।**

ಬ್ರಹ್ಮನನ್ನು ಬಿಟ್ಟು ಇತರ ಯಾವುದೇ ಪದಾರ್ಥವೂ ಸಹ ಪಾರಮಾರ್ಥಿಕವಲ್ಲ. ಮತ್ತೆ, ಈಕ್ಷಣೀಯನಾದವನು ಪರಬ್ರಹ್ಮನೇ ಆಗಲಿ, ಆದರೆ ಅಭಿಧ್ಯಾನಕ್ಕೆ ವಿಷಯನಾದವನು ಮಾತ್ರ ಅಪರಬ್ರಹ್ಮನಾಗಲಿ ಎಂದೂ ಕೂಡ ಹೇಳಬಾರದು. ಏಕೆಂದರೆ ಜ್ಞಾನಕ್ಕೆ ವಿಷಯನಾದವನೇ ಧ್ಯಾನಕ್ಕೂ ಕೂಡ ವಿಷಯನಾಗುತ್ತಾನೆ.

**तदुक्तं भामत्यां -**

**ईक्षणध्यानयोरेकः कार्यकारणभूतयोः ।**
**अर्थ औत्सर्गिकं तत्वविषयत्वं तथेक्षतेः ।। इति ।**

ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಿದೆ -

ಈಕ್ಷಣಧ್ಯಾನಯೋರೇಕಃ ಕಾರ್ಯಕಾರಣಭೂತಯೋಃ ।
ಅರ್ಥ ಔತ್ಸರ್ಗಿಕಂ ತತ್ವವಿಷಯತ್ವಂ ತಥೇಕ್ಷತೇಃ ॥

ಧ್ಯಾನವು ಜ್ಞಾನಕ್ಕೆ ಕಾರಣವಾದ್ದರಿಂದ ಧ್ಯಾನವು ಕಾರಣವಾದರೆ, ಈಕ್ಷಣವು ಕಾರ್ಯವಾಗಿದೆ. ಹೀಗೆ ಕಾರ್ಯಕಾರಣಗಳಾದ ಈಕ್ಷಣ ಹಾಗೂ ಧ್ಯಾನಗಳಿಗೆ ಒಂದೇ ವಿಷಯವಿರಬೇಕು. ಸಾಮಾನ್ಯವಾಗಿ ಈಕ್ಷಣಕ್ಕೆ ವಿಷಯವಾದದ್ದು ತಾತ್ವಿಕವೇ ಆಗಿರುತ್ತದೆಂಬುದು ಔತ್ಸರ್ಗಿಕನಿಯಮ.

ಪರಿಪೂರ್ಣಚಂದ್ರಿಕಾ

**निरुपाधिकब्रह्मज्ञानस्यैव चापरिच्छिन्नफलकत्वादिह च त्रिमात्रोङ्काररूपोपाधिमत्त्वात्फलस्य परिच्छिन्नता युक्तेति सिद्धान्त इत्याहुः ।**

ನಿರುಪಾಧಿಕವಾದ ಬ್ರಹ್ಮಜ್ಞಾನವೇ ಅಪರಿಚ್ಛಿನ್ನಫಲವುಳ್ಳದ್ದಾಗಿರುತ್ತದೆ. ಆದರೆ ಪ್ರಕೃತ ಮೂರು ಮಾತ್ರಾಕಾಲಗಳಲ್ಲಿ ಉಚ್ಚರಿಸುವಂತಹ ಓಂಕಾರವೆಂಬ ಉಪಾಧಿಯು ಇರುವುದರಿಂದ. ಇದರ ಫಲವು ಪರಿಚ್ಛಿನ್ನವಾಗಿದೆಯೆಂಬುದು ಯುಕ್ತವಾಗುತ್ತದೆಂಬುದು ಸಿದ್ಧಾಂತ. ಹೀಗೆ ಅದ್ವೈತಿಗಳು ಈ ಅಧಿಕರಣವನ್ನು ರಚಿಸಿದ್ದಾರೆ.

**तन्न । सूत्रे कर्मशब्दस्य भावप्रधानताया आश्रयणीयत्वात् ।**

ಅದ್ವೈತಿಗಳ ಈ ಅಧಿಕರಣ ಶರೀರ ಅಸಾಧುವಾಗಿದೆ. ಏಕೆಂದರೆ ಅದ್ವೈತಿಗಳ ಪ್ರಕಾರ ಕರ್ಮಶಬ್ದಕ್ಕೆ ಭಾವಪ್ರಧಾನ ನಿರ್ದೇಶ ಮಾಡಬೇಕು. ಹೀಗೆ ಮಾಡಿದರೆ ಕಲ್ಪನಾಗೌರವರೂಪದೋಷವು ಬರುತ್ತದೆ.

**निरवकाशे प्रथमे च परात्परत्वे ब्रह्मलिङ्गे सति तत्त्यागेन सूत्रे चरमसावकाशेक्षतिकर्मत्वात्त्ययोगाच्च ।**

ಮತ್ತು ನಿರವಕಾಶವಾದ ಪ್ರಥಮಶ್ರುತವಾದ ಪರಾತ್ಪರತ್ವವೆಂಬ ಬ್ರಹ್ಮನ ಲಿಂಗವು ಇರುವಾಗ ಇದನ್ನು ಬಿಟ್ಟು ಚರಮಶ್ರುತವಾದ ಸಾವಕಾಶವಾದ ಈಕ್ಷತಿಕರ್ಮತ್ವವೆಂಬ ಲಿಂಗವನ್ನು ಸೂತ್ರದಲ್ಲಿ ಹೇಳುವುದು ಅಯುಕ್ತವಾಗುತ್ತದೆ.

**त्वन्मत ईक्षणकर्मणो मिथ्यात्वनियमेनेक्षणकर्मत्वस्य परमार्थसद्ब्रह्मत्वे हेतुत्वायोगाच्च ।**

ಮತ್ತು ಅದ್ವೈತಮತದಲ್ಲಿ ಜ್ಞಾನಕ್ಕೆ ವಿಷಯವಾದದ್ದು ಮಿಥ್ಯಾಭೂತವೇ ಆಗಿರುತ್ತದೆಂಬ ನಿಯಮವಿರುವುದರಿಂದ ಈಕ್ಷಣಕರ್ಮತ್ವವು ಪಾರಮಾರ್ಥಿಕಸತ್ತಾದ ಬ್ರಹ್ಮನೇ ಆಗಿದ್ದಾನೆನ್ನಲು ಹೇತುವಾಗುವುದಿಲ್ಲ.

**किञ्च ध्यानस्य परमार्थसद्विषयकेक्षणैकविषयत्वाय निरुपाधिकब्रह्मविषयतायाः परिच्छिन्नफलत्वाय चोङ्कारोपाधिकविषयतायाश्च त्वयैवोक्तत्वाद्व्याघातः ।**

ಮತ್ತು ಧ್ಯಾನವು ಪರಮಾರ್ಥಸದ್ವಿಷಯಕವಾದ ಈಕ್ಷಣದ ಜೊತೆಗೆ ಏಕವಿಷಯತ್ವವನ್ನು ಹೊಂದಿದೆಯೆಂದು ಹೇಳುವುದಕ್ಕೋಸ್ಕರ ಅದು ನಿರುಪಾಧಿಕಬ್ರಹ್ಮವಿಷಯಕವಾಗಿದೆಯೆಂದು ಹೇಳಿದಿರಿ. ಇದು ವ್ಯಾಹತವಾಗಿದೆ. ಮತ್ತು ಪರಿಚ್ಛಿನ್ನಫಲಕ್ಕೋಸ್ಕರ ಧ್ಯಾನಕ್ಕೆ ಓಂಕಾರೌಪಾಧಿಕ-

ವಿಷಯತ್ವವನ್ನು ಹೇಳಿದಿರಿ. ಇದೂ ಕೂಡ ವ್ಯಾಹತವಾಗಿದೆ. ಅಂದರೆ ಮೊದಲು ನಿರುಪಾಧಿಕ-ಬ್ರಹ್ಮವಿಷಯವೆಂದು ಒಪ್ಪಿ, ಅನಂತರ ಪರಿಚ್ಛಿನ್ನಫಲಕ್ಕೋಸ್ಕರ ಸೋಪಾಧಿಕಬ್ರಹ್ಮವಿಷಯತ್ವವನ್ನು ಒಪ್ಪುವುದು ವಿರುದ್ಧವಾಗಿದೆಯೆಂದು ಅಭಿಪ್ರಾಯ.

**अपि च ओङ्कारोपाधिकध्यानफलस्य परिच्छिन्नत्वोक्तिरयुक्ता । ''ॐकारेणैवायनेनान्वेति विद्वान् यत्तच्छान्तमजरममृतमभयं परं च'' इति वाक्यशेषे तस्यापरिच्छिन्नत्वोक्तेः ।**

ಮತ್ತು ಓಂಕಾರೋಪಾಧಿಕವಾದ ಧ್ಯಾನಕ್ಕೆ ಪರಿಚ್ಛಿನ್ನಫಲವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಏಕೆಂದರೆ 'ಓಂಕಾರೇಣೈವಾಯನೇನಾನ್ವೇತಿ ವಿದ್ವಾನ್ ಯತ್ತಚ್ಛಾಂತಮಜರಮಮೃತಮಭಯಂ ಪರಂ ಚ' ಎಂಬ ವಾಕ್ಯಶೇಷದಲ್ಲಿ ಓಂಕಾರಧ್ಯಾನಕ್ಕೆ ಅಪರಿಚ್ಛಿನ್ನಫಲವನ್ನು ಹೇಳಲಾಗಿದೆ.

**किञ्च –**

**ईक्षणस्यानुसारेण ध्यानं सद्विषयं यदि ।**
**तर्हि ध्यानानुसारेणास्त्वीक्षणं कल्पितार्थकम् ।। १ ।।**

ಮತ್ತು

'ಈಕ್ಷಣಸ್ಯಾನುಸಾರೇಣ ಧ್ಯಾನಂ ಸದ್ವಿಷಯಂ ಯದಿ ।
ತರ್ಹಿ ಧ್ಯಾನಾನುಸಾರೇಣಾಸ್ತ್ವೀಕ್ಷಣಂ ಕಲ್ಪಿತಾರ್ಥಕಮ್ ॥೧॥'

ಈಕ್ಷಣಕ್ಕೆ ಅನುಸಾರಿಯಾಗಿ ಧ್ಯಾನವು ಸತ್ಪದಾರ್ಥವಿಷಯಕವೆಂದು ಹೇಳುತ್ತಿದ್ದೀರಿ. ಹಾಗಾದರೆ ಧ್ಯಾನಕ್ಕೆ ಅನುಸಾರಿಯಾಗಿ ಈಕ್ಷಣವೇ ಕಲ್ಪಿತಾರ್ಥವಿಷಯಕವೆಂದು ಏಕೆ ಹೇಳಬಾರದು?

**त्वन्मते ''योषितमग्निं ध्यायीत'' इत्यादौ ध्यानस्यारोपितविषयतायाः क्लृप्तत्वात् । 'य एषोऽन्तरादित्ये हिरण्मयः पुरुषो दृश्यते' 'यदा पश्यः पश्यते रुग्मवर्णम्' इत्यादावीक्षणस्याप्यतत्त्वविषयत्वाच्च ।**

ನಿಮ್ಮ ಮತದಲ್ಲಿ 'ಯೋಷಿತಮಗ್ನಿಂ ಧ್ಯಾಯೀತ' ಇತ್ಯಾದಿ ಸ್ಥಳದಲ್ಲಿ ಧ್ಯಾನಕ್ಕೆ ಆರೋಪಿತ ವಿಷಯತ್ವವನ್ನೇ ಸ್ಪಷ್ಟವಾಗಿ ಸಮರ್ಥಿಸಲಾಗಿದೆ. ಹೀಗಿರುವಾಗ ಪ್ರಕೃತ ಸದ್ವಿಷಯಕತ್ವವನ್ನು ಒಪ್ಪುವುದು ತಪ್ಪಾಗುತ್ತದೆ. ಮತ್ತು 'ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ' 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' ಇತ್ಯಾದಿ ಸ್ಥಳಗಳಲ್ಲಿ ಈಕ್ಷಣವೂ ಕೂಡ ಮಿಥ್ಯಾವಿಷಯಕವೇ ಆಗಿದೆಯೆಂದು ನೀವು ಒಪ್ಪಲೇ ಬೇಕು. ಆದ್ದರಿಂದ ಆರೋಪಿತವಿಷಯಕವಾದ ಧ್ಯಾನಕ್ಕೆ ಅನುಸಾರಿಯಾಗಿ ಈಕ್ಷಣವನ್ನು ಕಲ್ಪಿತಾರ್ಥವಿಷಯಕವೆಂದು ಹೇಳುವುದೇ ಸಮಂಜಸ.

ಪರಿಪೂರ್ಣಚಂದ್ರಿಕಾ

**व्यावहारिकविषयता तु हिरण्यगर्भविषयत्वेऽपि युक्ता ।**

'ಯ ಏಷೋಽಂತರಾದಿತ್ಯೇ' ಇತ್ಯಾದಿ ಸ್ಥಳಗಳಲ್ಲಿ ವ್ಯಾವಹಾರಿಕ ವಿಷಯತ್ವವನ್ನು ಒಪ್ಪುತ್ತೇವೆಂದು ಹೇಳಿದರೆ, ಹಿರಣ್ಯಗರ್ಭವಿಷಯಕವೆಂದೂ ಸಹ ಹೇಳಬಹುದು. ಆದ್ದರಿಂದ ಹಿರಣ್ಯಗರ್ಭನು 'ಪರಾತ್ಪರಮ್' ಎಂಬ ವಾಕ್ಯದಿಂದ ಪ್ರತಿಪಾದ್ಯನಲ್ಲ. ಪರಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನಿಮ್ಮಿಂದ ಸಮರ್ಥಿಸಲು ಸಾಧ್ಯವಿಲ್ಲ.

**अत्रापि परमते ईक्षतिकर्मेतिसूत्रेण जीवेशयोः कर्तृकर्मभावेन भेदोक्तेर्ब्रह्मणो दृश्यत्वोक्तेश्च परमतप्रतिकूलता व्यक्तैव ।**

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಅದ್ವೈತಿಗಳು 'ಈಕ್ಷತಿಕರ್ಮ' ಎಂಬ ಸೂತ್ರದಿಂದ ಜೀವ ಹಾಗೂ ಬ್ರಹ್ಮರಿಗೆ ಕರ್ತೃ-ಕರ್ಮಭಾವವನ್ನು ಒಪ್ಪಿರುತ್ತಾರೆ. ಇದರಿಂದ ಜೀವಬ್ರಹ್ಮರಿಗೆ ಭೇದವನ್ನೇ ಒಪ್ಪಿದಂತಾಯಿತು. ಮತ್ತು ಬ್ರಹ್ಮನಿಗೆ ದೃಶ್ಯತ್ವವನ್ನು ಹೇಳಿದ್ದರಿಂದ ಅದ್ವೈತಿಗಳಿಗೆ ಈ ಅಧಿಕರಣವೂ ಕೂಡ ಮುಳ್ಳಾಗಿದೆ.

**प्रकाशः –**

**अन्ये त्विति ।।** ''एतद्वै सत्यकाम परं चापरं च ब्रह्म यदोङ्कारस्तस्माद्विद्वानैतेनैवायनेनैकतरमन्वेति'' इति प्रक्रम्य श्रूयते । ''यः पुनरेतं त्रिमात्रेणोमित्यनेनैवाक्षरेण परं पुरुषमभिध्यायीत'' इत्यादि यथाश्रुतपरभाष्योक्तविषय-वाक्यम् ।

ವಿವರಣೆ - ಅದ್ವೈತಿಗಳ ಅಧಿಕರಣಶರೀರವನ್ನು 'ಅನ್ಯೇ ತು' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. 'ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಸ್ತಸ್ಮಾದ್ವಿದ್ವಾನೈತೇನೈವಾಯನೇನೈಕತರ-ಮನ್ವೇತಿ' ಎಂದು ಪ್ರಾರಂಭವಾಗಿ ಹೀಗೆ ಶ್ರುತವಾಗಿದೆ 'ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈ-ವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ'' ಇತ್ಯಾದಿಯಾಗಿ. ಇದು ಶಾಂಕರ ಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟ ಯಥಾಶ್ರುತವಾದ ವಿಷಯವಾಕ್ಯ.

**प्रकाशः – पूर्वपक्षमनुवदति – अभिध्यातव्यत्वेनेति ।।** ''कार्यब्रह्महिरण्यगर्भ एव'' इति कल्पतरूक्तेर्हिरण्यगर्भाख्येत्यनुवादः । **तद्विद इति ।।** ''तस्माद्विद्वान्'' इत्युक्ताभिध्यातव्यवस्तुज्ञानिन इत्यर्थः । ईक्षणध्यानयोरेकविषयत्वादिति भावः ।

ಅದ್ವೈತಿಗಳ ಪೂರ್ವಪಕ್ಷವನ್ನು ಅನುವಾದ ಮಾಡುತ್ತಿದ್ದಾರೆ 'ಅಭಿಧ್ಯಾತವ್ಯತ್ವೇನ' ಇತ್ಯಾದಿಯಾಗಿ. 'ಕಾರ್ಯಬ್ರಹ್ಮಹಿರಣ್ಯಗರ್ಭ ಏವ' ಎಂಬುದಾಗಿ ಕಲ್ಪತರುವಿನಲ್ಲಿ ಹೇಳಿದ್ದರಿಂದ ಗ್ರಂಥಕಾರರು 'ಹಿರಣ್ಯಗರ್ಭಾಖ್ಯಃ' ಎಂದು ಅನುವಾದ ಮಾಡಿದ್ದಾರೆ. 'ತದ್ವಿದಃ' ಎಂದರೆ 'ತಸ್ಮಾತ್ ವಿದ್ವಾನ್' ಎಂಬಲ್ಲಿ ಹೇಳಲ್ಪಟ್ಟ ಧ್ಯಾನಕ್ಕೆ ವಿಷಯವಾದ ವಸ್ತುವನ್ನು ತಿಳಿದ ಜ್ಞಾನಿಗಳಿಗೆ ಎಂದರ್ಥ. ಏಕೆಂದರೆ ಈಕ್ಷಣಕ್ಕೆ ವಿಷಯವಾದ ವಸ್ತುವೇ ಧ್ಯಾನಕ್ಕೆ ವಿಷಯವಾಗಿರುತ್ತದೆಂದು ಅಭಿಪ್ರಾಯ.

**प्रकाशः – नहीति ।।** ''ब्रह्मविद् ब्रह्मैव भवतीति श्रुतेः सर्वगतपरब्रह्मवेदने तद्भावापत्तौ 'सामभिरुन्नीयते ब्रह्मलोकम्' इति न देशविशेषप्राप्तिरुपपद्यते'' इति भामत्युक्तेरिति भावः ।

'ಬ್ರಹ್ಮವಿದ್ ಬ್ರಹ್ಮೈವ ಭವತೀತಿ ಶ್ರುತೇಃ ಸರ್ವಗತಪರಬ್ರಹ್ಮವೇದನೇ ತದ್ಭಾವಾಪತ್ತೌ ಸಾಮಭಿರುನ್ನೀಯತೇ ಬ್ರಹ್ಮಲೋಕಮಿತಿ ನ ದೇಶವಿಶೇಷಪ್ರಾಪ್ತಿರುಪಪದ್ಯತೇ' 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂಬ ಶ್ರುತಿಯು ಇರುವುದರಿಂದ ಸರ್ವಗತನಾದ ಬ್ರಹ್ಮನನ್ನು ತಿಳಿದ ಜ್ಞಾನಿಯು ಸರ್ವಗತ ಪರಬ್ರಹ್ಮಸ್ವರೂಪವನ್ನೇ ಹೊಂದುತ್ತಾನೆ. ಹೀಗಿರುವಾಗ 'ಸಾಮಾಭಿರುನ್ನೀಯತೇ ಬ್ರಹ್ಮಲೋಕಮ್' ಎಂಬುದಾಗಿ ದೇಶವಿಶೇಷಪ್ರಾಪ್ತಿಯು ಫಲವಾಗಿ ದೊರಕಲು ಸಾಧ್ಯವಿಲ್ಲ ಎಂದು ಭಾಮತಿಯಲ್ಲಿ ಹೇಳಿದ್ದರಿಂದ ಎಂದು ತಿಳಿಯಬೇಕು.

**प्रकाशः – ईक्षणं हीति ।।** नच स्वप्नादौ व्यभिचारेणेक्षणस्य तत्वविषयत्वनियमाभाव इति वाच्यम् । उत्सर्गतस्तत्वविषयकत्वादिह चापवादकाभावात् सत्कर्मकमेवेत्यर्थः ।

'ಈಕ್ಷಣಮ್ ಹಿ' ಎಂದು ಗ್ರಂಥದಲ್ಲಿದೆ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು. ಈಕ್ಷಣವು ಎಲ್ಲೆಡೆ ಸದ್ವಿಷಯಕವೆಂದು ಹೇಳಿದರೆ, ಸ್ವಪ್ನಾದಿಗಳಲ್ಲಿ ವ್ಯಭಿಚಾರ ದೋಷ ಬರುತ್ತದೆ. ಏಕೆಂದರೆ ಕರಿತುರಗಾದಿಗಳನ್ನು ಸ್ವಪ್ನದಲ್ಲಿ ಕಾಣುತ್ತೇವೆ. ಅಲ್ಲಿರುವ ಈಕ್ಷಣವು ಯಥಾರ್ಥವಿಷಯಕವಲ್ಲ. ಆದ್ದರಿಂದ ಎಲ್ಲ ವಿಧವಾದ ಈಕ್ಷಣವನ್ನು ಸದ್ವಿಷಯಕವೆಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಾರದು. ಈಕ್ಷಣವು ಯಥಾರ್ಥವಿಷಯಕವೆಂಬುದು ಸಾಪವಾದನಿಯಮ. ಅಪವಾದವಿದ್ದರೆ ಸದ್ವಿಷಯಕವಾಗುವುದಿಲ್ಲವೆಂದು ತಿಳಿಯಬೇಕು. ಪ್ರಕೃತ ಸ್ವಪ್ನವೆಂಬ ಅಪವಾದವಿರುವ ಕಾರಣ ಸದ್ವಿಷಯಕವಾಗಬೇಕಾಗಿಲ್ಲ. ಆದ್ದರಿಂದ ಮುಂದೆ 'ಔತ್ಸರ್ಗಿಕಮ್' ಎಂದು ಹೇಳಿರುತ್ತಾರೆ.

**प्रकाशः – तदुक्तमिति ।।** यद्यप्ययमर्थो भाष्येऽपि व्यक्तः । तथापि तदर्थसङ्ग्राहकत्वात्सङ्ग्रहेण तद्दर्शयितुं भामत्यामित्युक्तम् ।

'ತದುಕ್ತಂ ಭಾಮತ್ಯಾಮ್' ಎಂದರೆ - ವಸ್ತುತಃ ಈ ವಿಷಯವು ಶಾಂಕರಭಾಷ್ಯದಲ್ಲಿಯೇ ವ್ಯಕ್ತವಾಗಿದೆ. ಆದರೂ ಸಹ ಗ್ರಂಥಕಾರರು ಭಾಮತಿಯ ಮಾತನ್ನೇಕೆ ಉಲ್ಲೇಖಿಸಿದ್ದಾರೆಂದರೆ, ಶಾಂಕರಭಾಷ್ಯದ ಅರ್ಥವನ್ನೇ

ಸಂಗ್ರಹಿಸಿ ಭಾಮತಿಯಲ್ಲಿ ಶ್ಲೋಕ ರೂಪದಲ್ಲಿ ಹೇಳಿದ್ದರಿಂದ ಅನುಕೂಲಕ್ಕಾಗಿ ಗ್ರಂಥಕಾರರು ಭಾಮತಿಯ ಮಾತನ್ನು ಉಲ್ಲೇಖ ಮಾಡಿದ್ದಾರೆ.

**प्रकाशः – यद्वा –**

कार्यब्रह्मजनप्राप्तिफलत्वादर्थभेदतः ।
दर्शनध्यानयोर्ध्येयमपरं ब्रह्म गम्यते ।।

इति पूर्वपक्षकारिकायामर्थभेदत इत्यनेन ईक्षणध्यानयोर्भिन्नविषयत्वमुपेत्यापि भामत्यां पूर्वपक्षितत्वात्सिद्धान्ते तेनैव भामतीकृता तयोरेकविषयत्वमुक्तं प्रदर्शयितुं भामत्यामित्युक्तम् ।।

ಅಥವಾ

'ಕಾರ್ಯಬ್ರಹ್ಮಜನಪ್ರಾಪ್ತಿಫಲತ್ವಾದರ್ಥಭೇದತಃ।
ದರ್ಶನಧ್ಯಾನಯೋರ್ಧ್ಯೇಯಮಪರಂ ಬ್ರಹ್ಮ ಗಮ್ಯತೇ ॥'

ಕಾರ್ಯಬ್ರಹ್ಮನ ಲೋಕಪ್ರಾಪ್ತಿಯನ್ನು ಫಲವೆಂದು ಹೇಳಿದ್ದರಿಂದ ದರ್ಶನ ಹಾಗೂ ಧ್ಯಾನಗಳಿಗೆ ಬೇರೆ ಬೇರೆ ಪದಾರ್ಥಗಳೇ ವಿಷಯವಾಗಿದೆ. ಆದ್ದರಿಂದ ಧ್ಯೇಯನಾದವನು ಅಪರಬ್ರಹ್ಮನಾಗಿದ್ದಾನೆ. ಹೀಗೆ ಪೂರ್ವಪಕ್ಷಕಾರಿಕೆಯಲ್ಲಿ 'ಅರ್ಥಭೇದತಃ' ಎಂಬುದರಿಂದ 'ಈಕ್ಷಣ ಹಾಗೂ ಧ್ಯಾನಗಳಿಗೆ ಭಿನ್ನವಿಷಯಕತ್ವವನ್ನು ಒಪ್ಪಲಾಗಿದೆ. ಹಾಗೆ ಭಿನ್ನವಿಷಯಕತ್ವವನ್ನು ಒಪ್ಪಿಯೂ ಕೂಡ ಪೂರ್ವಪಕ್ಷ ಮಾಡಿ ಸಿದ್ಧಾಂತದಲ್ಲಿ ಅದೇ ಭಾಮತಿಕಾರನು ಏಕವಿಷಯಕತ್ವವನ್ನು ಒಪ್ಪಿದ್ದಾನೆ. ಈ ವ್ಯತ್ಯಾಸವನ್ನು ತೋರಿಸುವುದಕ್ಕಾಗಿ ಗ್ರಂಥಕಾರರು ಭಾಮತಿಯ ಶ್ಲೋಕವನ್ನೇ ಉಲ್ಲೇಖ ಮಾಡಿದ್ದಾರೆ.

**प्रकाशः – एक इति ।।** एकोऽर्थ इत्यन्वयः । स्वप्रादौ व्यभिचारादाह – **औत्सर्गिकमिति ।।** ईक्षतेरीक्षणस्य तत्वविषयत्वमौत्सर्गिकम् । न चेहापवादः कश्चिदिति भावः ।

'ಏಕಃ' ಎಂಬುದಕ್ಕೆ 'ಅರ್ಥಃ' ಎಂಬಲ್ಲಿ ಅನ್ವಯ. ಸ್ವಪ್ನಾದಿಗಳಲ್ಲಿ ವ್ಯಭಿಚಾರ ಬರುವುದರಿಂದ 'ಔತ್ಸರ್ಗಿಕಮ್' ಎಂದಿದ್ದಾರೆ. ಅಂದರೆ ಈಕ್ಷಣವು ತತ್ವವಿಷಯಕವಾಗಿದೆಯೆಂಬುದು ಔತ್ಸರ್ಗಿಕ ನಿಯಮವೆಂದರ್ಥ. ಆದರೆ ಪ್ರಕೃತ ಅಂತಹ ಅಪವಾದವಿರುವುದಿಲ್ಲವೆಂದು ತಿಳಿಯಬೇಕು.

**प्रकाशः –** ननु कथमत्रेक्षणध्यानयोरेकविषयत्वम् । येनेक्षणवद्ध्यानस्यापि परमार्थभूतं ब्रह्मैव विषयस्स्यात् । ध्यानस्य परमपुरुषविषयत्वात् । ईक्षणस्य परात्परपुरुषविषयत्वादिति चेन्न ।

ಶಂಕೆ - ಈಕ್ಷಣ ಹಾಗೂ ಧ್ಯಾನಗಳೆರಡೂ ಏಕವಿಷಯಕವೆಂದು ಹೇಗೆ ಹೇಳುತ್ತೀರಿ? ಏಕವಿಷಯಕವಾಗಿದ್ದಲ್ಲಿ, ಧ್ಯಾನವೂ ಕೂಡ ಪಾರಮಾರ್ಥಿಕವಾದ ಬ್ರಹ್ಮವಿಷಯಕವೇ ಆಗುತ್ತಿತ್ತು. ಆದರೆ ಧ್ಯಾನವು ಪರಮಪುರುಷವಿಷಯಕವಾಗಿದೆ. ಈಕ್ಷಣವು ಪರಾತ್ಪರಪುರುಷವಿಷಯಕವಾಗಿದೆ. ಪರಪುರುಷನೇ ಬೇರೆ, ಪರಾತ್‌ಪುರುಷನೇ ಬೇರೆ. ಹೀಗೆ ಭಿನ್ನವಿಷಯಕವಾದ್ದರಿಂದ ಏಕವಿಷಯಕವನ್ನು ಹೇಳಿದ್ದು ತಪ್ಪಲ್ಲವೇ?

**प्रकाशः** – ''एतस्माज्जीवघनात्परात्परम्'' इति प्रकृतापेक्षैतच्छब्दसमभिव्याहारावगतैकवाक्यतानुगृहीतेन ''पुरुषमभिध्यायीत पुरुषमीक्षते'' इति पुरुषप्रत्यभिज्ञानेन तयोरेकविषयत्वावगमात् ।

ಸಮಾಧಾನ - 'ಏತಸ್ಮಾಜ್ಜೀವಘನಾತ್ ಪರಾತ್ಪರಮ್' ಎಂಬಲ್ಲಿ ಪ್ರಕೃತವನ್ನು ಅಪೇಕ್ಷಿಸುವ 'ಏತತ್' ಶಬ್ದದ ಸಮಭಿವ್ಯವಹಾರದಿಂದ ಏಕವಾಕ್ಯತ್ವವು ತಿಳಿಯುತ್ತದೆ. ಇಂತಹ ಏಕವಾಕ್ಯತ್ವದಿಂದ ಅನುಗೃಹಿತವಾದ 'ಪುರುಷಮಭಿಧ್ಯಾಯೀತ ಪುರುಷಮೀಕ್ಷತೇ' ಎಂಬ ವಾಕ್ಯದಿಂದ ಪುರುಷನ ಪ್ರತ್ಯಭಿಜ್ಞಾನವು ಬರುತ್ತದೆ. ಆದ್ದರಿಂದ ಧ್ಯಾನ ಹಾಗೂ ಈಕ್ಷಣಗಳೆರಡೂ ಏಕವಿಷಯಕವಾಗಿದೆಯೆಂದು ಪ್ರತ್ಯಭಿಜ್ಞಾನದಿಂದ ತಿಳಿಯುತ್ತದೆಂದು ನಮ್ಮ ಅಭಿಪ್ರಾಯ.

**प्रकाशः** – नच परं परात्परमिति च रूपभेदानुपपत्तिः । प्रतीतैकवाक्यतानुसारेण जीवघनात्परादिति जीवघनशब्दस्य हिरण्यगर्भब्रह्मलोकान्यतरविषयत्वेन ध्यातव्यपुरुषविषयत्वाभावात् ।

ಪರಪುರುಷನೇ ಬೇರೆ, ಪರಮಪುರುಷನೇ ಬೇರೆ ಎಂದು ತಿಳಿಯುತ್ತಿದೆಯಲ್ಲಾ? ಎಂದು ಪ್ರಶ್ನಿಸಬಾರದು. ಪ್ರತೀತವಾದ ಏಕವಾಕ್ಯತ್ವಕ್ಕೆ ಅನುಸಾರಿಯಾಗಿ 'ಜೀವಘನಾತ್ಪರಾತ್' ಎಂಬಲ್ಲಿರುವ ಜೀವಘನಶಬ್ದವು ಹಿರಣ್ಯಗರ್ಭ ಅಥವಾ ಬ್ರಹ್ಮಲೋಕ ಇವೆರಡರಲ್ಲಿ ಒಂದನ್ನು ವಿಷಯೀಕರಿಸುತ್ತದೆ ಹೊರತು, ಧ್ಯಾನಕ್ಕೆ ವಿಷಯನಾದ ಪುರುಷನನ್ನು ವಿಷಯೀಕರಿಸುತ್ತಿಲ್ಲ.

**प्रकाशः** – नन्वथापि ध्यानस्योपाधिविशिष्टविषयत्वात्कथं शुद्धविषयेक्षणैकार्थत्वमिति चेन्न ।

ಶಂಕೆ - ಆದರೂ ಸಹ ಧ್ಯಾನವು ಉಪಾಧಿವಿಶಿಷ್ಟಬ್ರಹ್ಮನನ್ನು ವಿಷಯೀಕರಿಸುತ್ತದೆ. ಹೀಗಿರುವಾಗ ಶುದ್ಧವಿಷಯಕವಾದ ಈಕ್ಷಣದ ಜೊತೆಗೆ ಸಮಾನವಿಷಯಕತ್ವವನ್ನು ಹೇಳಲು ಹೇಗೆ ಸಾಧ್ಯ ?

**प्रकाशः** – ''उपाधेः कल्पितत्वेन विशेष्यस्य शुद्धत्वात्'' इति तद्भाष्याद्युक्तमनुसन्धेयमिति भावः ।

ಪರಿಪೂರ್ಣಚಂದ್ರಿಕಾ

ಸಮಾಧಾನ - 'ಉಪಾಧೇಃ ಕಲ್ಪಿತತ್ವೇನ ವಿಶೇಷ್ಯಸ್ಯ ಶುದ್ಧತ್ವಾತ್' ಎಂಬುದಾಗಿ ಶಾಂಕರಭಾಷ್ಯದಲ್ಲಿ ಹೇಳಿದಂತೆ ಉಪಾಧಿಯು ಕಲ್ಪಿತವಾಗಿದೆ. ವಿಶೇಷ್ಯಭಾಗವು ಶುದ್ಧವಾಗಿದೆ. ಕಲ್ಪಿತವಾದ ಉಪಾಧ್ಯಂಶವನ್ನು ಬಿಟ್ಟರೆ ಧ್ಯಾನವೂ ಕೂಡ ವಿಶೇಷ್ಯಭೂತವಾದ ಶುದ್ಧಬ್ರಹ್ಮವಿಷಯಕವೇ ಆಯಿತು. ಆದ್ದರಿಂದ ಧ್ಯಾನ ಹಾಗೂ ಈಕ್ಷಣಗಳೆರಡೂ ಸಮಾನವಿಷಯಕವೆಂದು ತಿಳಿಯಬೇಕು.

**प्रकाशः** – नन्विह दर्शनस्य तत्वविषयत्वत्यागे परिच्छिन्नफलश्रवणमेव बाधकमित्यत आह – **निरुपाधिकेति** ।।

ದರ್ಶನವು ತತ್ವವಿಷಯಕವೇ ಆಗಿರಬಹುದು. ಆದರೆ ಪರಿಚ್ಛಿನ್ನಫಲಶ್ರವಣವೆಂಬ ಬಾಧಕವಿರುವುದರಿಂದ ತತ್ವವಿಷಯಕತ್ವವನ್ನು ಬಿಟ್ಟು ಮಿಥ್ಯಾಭೂತವಿಷಯಕವೆಂದು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ನಿರುಪಾಧಿಕ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – नेदमुदाहरणं युक्तम् । सूत्राक्षरासामञ्जस्यादिदोषप्राप्तेरिति दूषयति – **तन्नेति** ।। विरुद्धोऽयं हेतुरित्याह – **त्वन्मत इति** ।।

ಅದ್ವೈತಿಗಳ ಈ ಅಧಿಕರಣಶರೀರವು ಅಸಾಧುವಾಗಿದೆ. ಮೊದಲು ಅವರು ಉಲ್ಲೇಖಿಸಿದ ವಿಷಯವಾಕ್ಯವೇ ಸರಿಯಲ್ಲ. ಏಕೆಂದರೆ ಸೂತ್ರಾಕ್ಷರಗಳಿಂದ ಅಸಾಮಾಂಜಸ್ಯಾದಿದೋಷಗಳು ಪ್ರಾಪ್ತವಾಗುತ್ತದೆಂದು ದೂಷಿಸುತ್ತಿದ್ದಾರೆ 'ತನ್ನ' ಇತ್ಯಾದಿ ಗ್ರಂಥದಿಂದ. ಅವರು ನಿರ್ದೇಶಿಸಿದ ಹೇತುವೂ ಕೂಡ ವಿರುದ್ಧವಾಗಿದೆಯೆಂದು 'ತ್ವನ್ಮತೇ' ಇತ್ಯಾದಿ ವಾಕ್ಯದಿಂದ ಸಮರ್ಥಿಸಿದ್ದಾರೆ.

**प्रकाशः** – **निरुपाधिकेति** ।। अन्यथापरमार्थसद्विषयेक्षणैकार्थत्वं न स्यादिति भावः । **अयनेन** अयनसाधनेन । अयनसाधनमोङ्कारं मात्रात्रयात्मकं सम्यग्ज्ञात्वेति यावत् ।

'ನಿರುಪಾಧಿಕ' ಧ್ಯಾನಕ್ಕೆ ನಿರುಪಾಧಿಕಬ್ರಹ್ಮವಿಷಯತ್ವವನ್ನು ಒಪ್ಪದಿದ್ದರೆ ಪರಮಾರ್ಥಸದ್ವಿಷಯಕವಾದ ಈಕ್ಷಣದ ಜೊತೆಗೆ ಏಕಾರ್ಥತ್ವವನ್ನು ಹೇಳಲು ಸಾಧ್ಯವಿಲ್ಲವೆಂದು ಅಭಿಪ್ರಾಯ. 'ಓಂಕಾರೇಣೈವಾಯನೇನ' ಎಂಬ ಶ್ರುತಿಯಲ್ಲಿರುವ 'ಅಯನೇನ' ಎಂಬ ಪದಕ್ಕೆ 'ಅಯನಸಾಧನೇನ' ಎಂದರ್ಥ. ಅಂದರೆ 'ಜ್ಞಾನಸಾಧನವಾದ ಓಂಕಾರವನ್ನು ಮೂರು ಮಾತ್ರಾಕಾಲಗಳಿಂದ ಕೂಡಿರುವುದನ್ನಾಗಿ ಚೆನ್ನಾಗಿ ತಿಳಿದು' ಎಂದರ್ಥ.

**प्रकाशः** – ''पूर्वान्तवत्स्वरस्सन्धौ' इत्यादेः ''ध्यानानुसारेणास्त्वीक्षणम्'' इत्यत्र न यतिभङ्गश्शङ्कनीयः ।

ಗ್ರಂಥಕಾರರು ರಚಿಸಲ್ಪಟ್ಟ 'ಈಕ್ಷಣಸ್ಯನುಸಾರೇಣ' ಎಂಬ ಶ್ಲೋಕವು 'ಪಥ್ಯಾವಕ್ತ್ರಾ' ಎಂಬ ವೃತ್ತದಲ್ಲಿದೆ. ಮೂರನೆಯ ಪಾದ 'ತರ್ಹಿ ಧ್ಯಾನೇನುಸಾರೇಣ', ನಾಲ್ಕನೆಯ ಪಾದ 'ಅಸ್ತ್ವೀಕ್ಷಣಂ ಕಲ್ಪಿತಾರ್ಥಕಮ್'

ಎಂಬುದು. ನಾಲ್ಕನೆಯ ಪಾದದಲ್ಲಿನ ಮೊದಲನೆಯ ಪದ 'ಅಸ್ತು' ಎಂಬುದು. ಈ 'ಅಸ್ತು' ಎಂಬ ಪದದಲ್ಲಿ ಅಕಾರವು ಹಿಂದಿನ ಪಾದದ ಜೊತೆಗೆ ಹೋಗಿದೆ. 'ಸ್ತು' ಎಂಬ ಅಕ್ಷರವು ಮುಂದಿನ ಪಾದದಲ್ಲಿ ಸೇರಿದೆ. ಆದ್ದರಿಂದ ಯತಿಭಂಗ ದೋಷವು ಬರುತ್ತದೆ. ಎಂಟು ಅಕ್ಷರಗಳಿಗೆ ಸರಿಯಾಗಿ ಯತಿಯು ಮುಗಿಯಬೇಕು. ಪಥ್ಯಾವಕ್ತ್ರ ವೃತ್ತದ ಲಕ್ಷಣ. ಆದರೆ ಪ್ರಕೃತ ಎಂಟು ಅಕ್ಷರಗಳಲ್ಲಿ ಮೂರನೆಯ ಪಾದವು ಮುಗಿಯುತ್ತಿಲ್ಲವಾದ್ದರಿಂದ ಯತಿಭಂಗದೋಷವು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಪೂರ್ವಾಂತವತ್ ಸ್ವರಃ ಸಂಧೌಃ' ಎಂಬ ನಿಯಮದಂತೆ ಎಲ್ಲಿ ಸಂಧಿಯಾಗುತ್ತದೋ ಅಲ್ಲಿ ಪೂರ್ವದ ಅಂತವದ್ಭಾವವನ್ನು, ಪರದ ಆದಿವದ್ಭಾವವನ್ನು ವಿವಕ್ಷಿಸಬೇಕು. 'ಅನುಸಾರೇಣ' ಎಂಬ ಪದಕ್ಕೂ 'ಅಸ್ತು' ಎಂಬ ಪದಕ್ಕೂ ಸವರ್ಣದೀರ್ಘಸಂಧಿಯಾಗಿ 'ಅನುಸಾರೇಣಾಸ್ತು' ಎಂದಾಗಿದೆ. ಸವರ್ಣದೀರ್ಘಸಂಧಿಯಾದ ಕಾರಣ ಅಕಾರವು ಪೂರ್ವಪದದ ಅಂತವದ್ಭಾವವನ್ನು ಹೊಂದುತ್ತದೆ. ಮುಂದಿನ ಪದದ ಆದಿವದ್ಭಾವವನ್ನು ಹೊಂದಿದೆ. ಆದ್ದರಿಂದ ಯತಿಭಂಗದೋಷಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

**प्रकाशः** – वैपरीत्ये को हेतुरित्यत आह – **त्वन्मत इति** ।। ननु तत्रापि न प्रातिभासिकविषयत्वम् । किन्तु व्यावहारिकविषयत्वमेवेत्यतस्तर्हीहापि तथात्वापत्त्या न सिद्धान्तोत्थितिरित्याह – **व्यावहारिकेति** ।। **दृश्यत्वेति** ।। तेन चावेद्यत्वाङ्गीकारादिति भावः ।

ಧ್ಯಾನಕ್ಕೆ ಅನುಸಾರಿಯಾಗಿ ಈಕ್ಷಣವನ್ನೇ ಕಲ್ಪಿತಾರ್ಥವಿಷಯಕವೆಂದು ವಿಪರೀತವಾಗಿಯೇ ಹೇಳಿರಿ ಎಂದು ಆಕ್ಷೇಪಿಸಲಾಯಿತು. ಏಕೆ ? ಎಂಬುದಕ್ಕೆ 'ತ್ವನ್ಮತೇ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಯ ಏಷೋಽಂತರಾದಿತ್ಯೇ' ಎಂಬ ಶ್ರುತಿಯಲ್ಲಿಯೂ ಸಹ ನಾವು ಪ್ರಾತಿಭಾಸಿಕವಿಷಯತ್ವವನ್ನು ಒಪ್ಪುವುದಿಲ್ಲ ಹೊರತು, ವ್ಯಾವಹಾರಿಕವಿಷಯತ್ವವನ್ನೇ ಒಪ್ಪುತ್ತೇವೆ ಎಂದು ಅದ್ವೈತಿಗಳು ಹೇಳಿದರೆ ಪ್ರಕೃತ ವಿಷಯವಾಕ್ಯದಲ್ಲಿಯೂ ವ್ಯಾವಹಾರಿಕವಿಷಯತ್ವವನ್ನೇ ಒಪ್ಪಬಹುದು. ಆವಾಗ ಹಿರಣ್ಯಗರ್ಭನೇ 'ಸತ್' ಶಬ್ದದಿಂದ ವಾಚ್ಯನೆಂದಾಗುತ್ತಾನೆ ಹೊರತು, ಪರಬ್ರಹ್ಮನು 'ಸತ್' ಶಬ್ದದಿಂದ ವಾಚ್ಯನಾಗುತ್ತಾನೆಂಬ ಸಿದ್ಧಾಂತವೇ ಉದಯವಾಗುವುದಿಲ್ಲ ಎಂದು 'ವ್ಯಾವಹಾರಿಕವಿಷಯಾತ್' ಎಂಬ ವಿಷಯವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ದೃಶ್ಯತ್ವೋಕ್ತೇಶ್ಚ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಹೀಗೆ ಹೇಳಿದ್ದು ಅದ್ವೈತಿಗಳಿಗೆ ಪ್ರತಿಕೂಲವಾಗಿದೆ. ಏಕೆಂದರೆ ಅದ್ವೈತಿಗಳು ಬ್ರಹ್ಮನನ್ನು ಅವೇದ್ಯನೆಂದು ಒಪ್ಪುತ್ತಾರೆ. ಆದರೆ ಈ ಅಧಿಕರಣದಲ್ಲಿ ದೃಶ್ಯತ್ವವನ್ನು ಒಪ್ಪಿದ್ದರಿಂದ ಇದು ಅವರಿಗೆ ವಿರುದ್ಧವಾದ ಪ್ರಮೇಯವಾಗಿದೆಯೆಂದು ತಿಳಿಯಬೇಕು.

**गुरुराजीयम्** – नन्वेवं सति 'ज्योतिश्चरणाभिधानात्' इत्यत्रापि कर्णादिविदूरत्वरूपविशेषहेत्वनुसारेणैव समन्वेतव्यज्योतिश्शब्दलाभसम्भवेन तत्र समन्वेतव्यज्योतिश्शब्दोक्तिरयुक्तेत्यरुचेराह – **सदेवेत्यादि** ।। नन्वेवमानन्दमयाधिकरणेऽपि समन्वेतव्यशब्दोक्तिर्न

स्यात् । तत्रापि भिन्नप्रकरणस्थानां तुल्यवत्समन्वेतव्यत्वेन शब्दविशेषस्यैवा-समन्वेतव्यत्वात् । अल्पाक्षरे सूत्रे सर्वशब्दानां ग्रहणेऽल्पाक्षरत्वाभावापत्त्योपलक्षणतया शब्दविशेषोपादानासम्भवादित्यरुचेराह – **अथवेति** ।। नन्वेवं ज्योतिस्सूत्रे समन्वेतव्यशब्दोक्तिर्न स्यात् । विशरणरूपहेतुविशेषोक्त्या तदुक्तशब्दस्य समन्वेतव्यत्व-सिद्धेरित्यस्वरसादाह – **यद्वेति** ।। नन्वेवं स इति तच्छब्दस्य समन्वेतव्यत्वे भाष्यटीका-विरोधः । तत्र तच्छब्दस्य समन्वेतव्यत्वेनानभिधानादित्यतः सच्छब्दस्यैव समन्वयाभिधानान्न विरोध इति भावेन तर्हीक्षतिकर्मव्यपदेशात्सदिति वक्तव्यम् । स इति तु कथमित्याशङ्कां परिहरति – **एकदेशकीर्तनेति** ।। ईक्षणध्यानयोरिति संमतिश्लोकस्यायमर्थः । एकोऽर्थ इत्यन्वयः । ध्यानस्य हि साक्षात्कारः फलम् । साक्षात्कारश्चोत्सर्गतस्तत्वविषयः । क्वचिद्बाधकोपनिपाते समारोपितगोचरो भवेत् । न चासत्यपवादे शक्य उत्सर्गस्त्यक्तुम् । तथाचेक्षणस्य तत्वविषयत्वात्कारणस्य ध्यानस्यापि तत्वविषयत्वमिति ।।

।। इति श्रीकेशवभट्टारकेण विरचितायां भावदीपिकायां
सदधिकरणं सम्पूर्णम् ।। ४ ।।




ಶಾಂಕರಭಾಷ್ಯದ ಅಧಿಕರಣ ಶರೀರ ಹೀಗಿದೆ - 'ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇ-ನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ' ಎಂಬ ವಾಕ್ಯವನ್ನು ಇವರು ವಿಷಯವಾಕ್ಯವೆಂದು ಪರಿಗಣಿಸುತ್ತಾರೆ. ಈ ವಾಕ್ಯದಲ್ಲಿ 'ಅಭಿಧ್ಯಾಯೀತ' ಎಂಬ ಪದದಿಂದ ಧ್ಯಾನಕ್ಕೆ ವಿಷಯನನ್ನಾಗಿ ಹೇಳಲ್ಪಟ್ಟ ಪದಾರ್ಥ ಹಿರಣ್ಯಗರ್ಭನೆಂಬ ಅಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಇಂತಹ ಧ್ಯಾನದಿಂದ ದೊರೆಯುವಂತಹ ಫಲವು 'ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್' ಇತ್ಯಾದಿಯಾಗಿ ಪರಿಚ್ಛಿನ್ನವಾದ ಬ್ರಹ್ಮಲೋಕದ ಪ್ರಾಪ್ತಿ. ಅಪರಿಚ್ಛಿನ್ನನಾದ ಪರಬ್ರಹ್ಮನನ್ನು ತಿಳಿಯುವುದರಿಂದ ಪರಿಚ್ಛಿನ್ನವಾದ ಫಲವು ದೊರೆಯುವುದು ಸರಿಯಲ್ಲ. ಆದ್ದರಿಂದ ಧ್ಯಾನಕ್ಕೆ ವಿಷಯನಾದವನು ಚತುರ್ಮುಖಬ್ರಹ್ಮನೇ ಆಗಿದ್ದಾನೆಂದು ಪೂರ್ವಪಕ್ಷ.

ಸದಧಿಕರಣ (೧-೩-೪)

ಧ್ಯಾನಕ್ಕೆ ವಿಷಯನಾದವನು ಪರಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಎಂಬುದಾಗಿ ಮುಂದಿನ ವಾಕ್ಯದಲ್ಲಿ ಪುರುಷನದರ್ಶನವನ್ನು ಹೇಳಲಾಗಿದೆ. ದರ್ಶನಕ್ಕೆ ಸತ್ಯಭೂತವಾದದ್ದೇ ವಿಷಯವಾಗುತ್ತದೆ ಹೊರತು, ಕಲ್ಪಿತವಸ್ತು ವಿಷಯವಾಗುವುದಿಲ್ಲ. ಜ್ಞಾನಕ್ಕೆ ವಿಷಯನಾದವನೇ ಧ್ಯಾನಕ್ಕೂ ವಿಷಯನಾಗಬೇಕಾದ್ದರಿಂದ ಅಭಿಧ್ಯಾತವ್ಯನಾದವನು ಪರಬ್ರಹ್ಮನೇ ಆಗುತ್ತಾನೆ. 'ಯ ಪುನರೇತಮ್' ಎಂಬ ವಾಕ್ಯದಲ್ಲಿ ಉಲ್ಲೇಖಿಸಲ್ಪಟ್ಟವನು ಪರಬ್ರಹ್ಮನೇ ಆಗಿದ್ದಾನೆಂದು ಸಿದ್ಧಾಂತ.

ಇವರ ಈ ಅಧಿಕರಣ ಶರೀರ ಸರಿಯಲ್ಲ. ಏಕೆಂದರೆ ಧ್ಯಾನವು ಕಾರಣವಾಗಿದೆ. ಧ್ಯಾನವು ಕಾರ್ಯವಾಗಿದೆಯೆಂದು 'ಈಕ್ಷಣಧ್ಯಾನಯೋರೇಕಃ ಕಾರ್ಯಕಾರಣಭೂತಯೋಃ' ಎಂಬುದಾಗಿ ಭಾಮತಿಯಲ್ಲಿ ಹೇಳಿದೆ. ಇದು ಸರಿಯಲ್ಲ. ಏಕೆಂದರೆ ಪ್ರಣವ ಪ್ರತೀಕದಲ್ಲಿ ಬ್ರಹ್ಮನನ್ನು ಧ್ಯಾನ ಮಾಡುವುದರಿಂದ ಬ್ರಹ್ಮನ ಲೋಕವೇ ಪ್ರಾಪ್ತವಾಗುತ್ತದೆಂದು ಹೇಳಿ, ಪರಿಚ್ಛಿನ್ನಲೋಕದ ಪ್ರಾಪ್ತಿಯಾಗುವುದರಿಂದ ಧ್ಯಾನಕ್ಕೂ ಪರಿಚ್ಛಿನ್ನಬ್ರಹ್ಮನೇ ವಿಷಯನೆಂದು ಹೇಳಲಾಗಿದೆ. ಮೊದಲು ಹೇಳಿರುವ ಅಭಿಪ್ರಾಯಕ್ಕೆ ಇದು ವಿರುದ್ಧವಾಗಿದೆ. ಮತ್ತು ಸೂತ್ರದಲ್ಲಿ ನಿರವಕಾಶವೂ ಪ್ರಥಮಶ್ರುತವೂ ಆದ ಪರಾತ್ಪರತ್ವವೆಂಬ ಬ್ರಹ್ಮನ ಲಿಂಗವನ್ನು ಬಿಟ್ಟು, ಚರಮಶ್ರುತವಾದ ಸಾವಕಾಶವಾದ ಈಕ್ಷಿತ್ವಕರ್ಮತ್ವವೆಂಬ ಹೇತುವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಮತ್ತು ಸೂತ್ರದಲ್ಲಿರುವ ಕರ್ಮಪದಕ್ಕೆ ಭಾವಪ್ರಧಾನ ನಿರ್ದೇಶ ಮಾಡುವುದೂ ಸಹ ತಪ್ಪು.

ಅಷ್ಟೇ ಅಲ್ಲದೆ, ಪ್ರತ್ಯಕ್ಷಕ್ಕೆ ಪಾರಮಾರ್ಥಿಕಸತ್ಯಭೂತವಾದ ವಸ್ತುವೇ ವಿಷಯವಾಗುತ್ತದೆಂದು ಹೇಳುವ ಅದ್ವೈತಿಗಳು 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' ಎಂಬ ಶ್ರುತಿಯನ್ನು ವ್ಯಾಖ್ಯಾನಿಸುವಾಗ ಕಲ್ಪಿತವಾದ ಸತ್ಯವೇ ಅಪರೋಕ್ಷಕ್ಕೆ ವಿಷಯವಾಗುತ್ತದೆಂದು ಹೇಳಿದ್ದಾರೆ. ಆದ್ದರಿಂದ ಸತ್ಯಭೂತವಾದ ಈಕ್ಷಣಕ್ಕೆ ಅನುಸಾರಿಯಾಗಿ ಜ್ಞಾನವನ್ನು ಸದ್ವಿಷಯಕವೆಂದು ಹೇಳುತ್ತಿರುವ ಅವರು ಕಲ್ಪಿತವಿಷಯಕವಾದ ಧ್ಯಾನಕ್ಕೆ ಅನುಸಾರಿಯಾಗಿ ಈಕ್ಷಣವೇ ಕಲ್ಪಿತವಿಷಯಕವೆಂದು ಹೇಳುವುದೇ ಅವರ ಸಿದ್ಧಾಂತಕ್ಕೆ ಸಮ್ಮತವಾದ ಮಾತಾಗುತ್ತದೆ. ಹಾಗಾಗಿ ಹಿರಣ್ಯಗರ್ಭನೆಂಬ ಅಪರಬ್ರಹ್ಮನೇ ಧ್ಯಾನಕ್ಕೆ ವಿಷಯ ಎಂಬುದು ಸಮಂಜಸ. ಆದ್ದರಿಂದ ಪರಬ್ರಹ್ಮನು ಧ್ಯಾನಕ್ಕೆ ವಿಷಯನಾದ್ದರಿಂದ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಅವರ ಸಿದ್ಧಾಂತವು ಅಯುಕ್ತವಾಗಿದೆ.

ಪ್ರತಿಯೊಂದು ಅಧಿಕರಣಗಳಂತೆ ಇಲ್ಲಿಯೂ ಕೂಡ ಅದ್ವೈತಿಗಳು ಜೀವಬ್ರಹ್ಮರಿಗೆ ಕರ್ತೃಕರ್ಮ-ಭಾವವನ್ನು ಒಪ್ಪಿದ್ದರಿಂದ ಭೇದವನ್ನೇ ಹೇಳಿದಂತಾಯಿತು. ಅವೇದ್ಯನಾದ ಬ್ರಹ್ಮನಿಗೆ ದೃಶ್ಯತ್ವವನ್ನು ಒಪ್ಪಿದಂತಾಯಿತು. ಹಾಗಾಗಿ ಅದ್ವೈತಿಗಳಿಗೆ ಈ ಅಧಿಕರಣವು ಅನುಕೂಲವಾಗುವುದಕ್ಕಿಂತ ಪ್ರತಿಕೂಲವೇ ಆಗಿದೆ.

//////////////////////////////////////////////////

## तात्पर्यचन्द्रिका

**केचित्तु । 'पुरुषमीक्षते' इत्युक्तमीक्षतिकर्म सः परमात्मैव । व्यपदेशादिति सूत्रार्थः ।**

ಅನುವಾದ - ರಾಮಾನುಜರ ಅಧಿಕರಣಶರೀರ ಹೀಗಿದೆ - 'ಈಕ್ಷತಿಕರ್ಮ' 'ಪರಾತ್ಪರಂ' 'ಪುರಿಶಯಂ ಪುರುಷಮೀಕ್ಷತೇ' ಎಂಬ ಶ್ರುತಿಯಲ್ಲಿ ಜ್ಞಾನಕ್ಕೆ ವಿಷಯನಾದವನೂ ಸಹ ಪರಮಾತ್ಮನೇ ಆಗಿದ್ದಾನೆ. ಏಕೆಂದರೆ 'ವ್ಯಪದೇಶಾತ್' ಪರಮಾತ್ಮತ್ವೇನ ವ್ಯಪದೇಶ ಮಾಡಿದ್ದರಿಂದ ಎಂದು ಸೂತ್ರಾರ್ಥ.

**यद्यपीक्षतिवाक्ये परात्परत्वादीनां "यथा पादोदरस्त्वचा विनिर्मुच्यत एवं हैव स पाप्मना विनिर्मुक्तः" इति पूर्ववाक्ये तद्विदः पापालेपादीनामुत्तरवाक्ये चामृतत्वाभयत्वादीनां ब्रह्मधर्माणां स्फुटत्वेन पूर्वपक्षानुदयः ।[1]**

(१) **रामानुजभाष्यम् –**

**ईक्षतिकर्मव्यपदेशात्सः ॥ १२ ॥**

आथर्वणिकास्सत्यकामप्रश्नेऽधीयते 'यः पुनरेतं त्रिमात्रेणोमित्यनेनैवाक्षरेण परं पुरुषमभिध्यायीत, स तेजसि सूर्ये सम्पन्नः । यथा पादोदरस्त्वचा विनिर्मुच्यते, एवं ह वै स पाप्मना विनिर्मुक्तास्सामभिरुन्नीयते ब्रह्मलोकं स एतस्माज्जीवघनात्परात्परं पुरिशयं पुरुषमीक्षते' इति । अत्र ध्यायतीक्षतिशब्दावेकविषयौ, ध्यानफलत्वादीक्षणस्य । 'यथा क्रतुरस्मिंल्लोके पुरुषः' इति न्यायेन ध्यानविषयस्यैव प्राप्यत्वात् । 'परं पुरुषम्' इत्युभयत्र कर्मभूतस्यार्थस्य प्रत्यभिज्ञानाच्च ॥

तत्र संशय्यते, किमिह 'परं पुरुषम्' इति निर्दिष्टो जीवसमष्टिरूपोऽण्डाधिपतिश्चतुर्मुखः, उत सर्वेश्वरः पुरुषोत्तमः? इति । किं युक्तम्? समष्टिक्षेत्रज्ञ इति । कुतः? 'स यो ह वै तद्भगवन्मनुष्येषु प्रायणान्तमोङ्कारमभिध्यायीत, कतमं वाव स तेन लोकं जयति ।' इति प्रक्रम्यैकमात्रं प्रणवमुपासनीस्य मनुष्यलोकप्राप्तिमभिधाय, द्विमात्रमुपासनीस्य अन्तरिक्ष-लोकप्राप्तिमभिधाय, त्रिमात्रमुपासीनस्य प्राप्यतयाऽभिधीयमानो ब्रह्मलोकोऽन्तरिक्षात्परो जीवसमष्टिरूपस्य चतुर्मुखस्य लोक इति विज्ञायते । तद्गतेन चेक्ष्यमाणस्तल्लोकाधिपतिश्चतुर्मुख एव । 'एतस्माज्जीवघनात्परात्परम्' इति च देहेन्द्रियादिभ्यः परादेहेन्द्रियादिभिस्सह घनीभूताज्जीवव्यष्टिपुरुषाद् ब्रह्मलोकवासिनस्समष्टिपुरुषस्य चतुर्मुखस्य परत्वेनोपपद्यते । अतोऽत्र निर्दिश्यमानः परः पुरुषस्समष्टिपुरुषश्चतुर्मुख एव । एवं चतुर्मुखत्वे निश्चिते

ಪ್ರಶ್ನೆ - ಈ ಅಧಿಕರಣದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಏಕೆಂದರೆ 'ಪುರುಷಮೀಕ್ಷತೇ' ಎಂಬ ವಾಕ್ಯದಲ್ಲಿ ಪರಾತ್ಪರತ್ವಾದಿಲಿಂಗಗಳು ಕೇಳಿಸುತ್ತಿವೆ. 'ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ' 'ಯಾವರೀತಿಯಾಗಿ ಸರ್ಪವು ತನ್ನ ಚರ್ಮವನ್ನು ಕಳಚಿಕೊಳ್ಳುತ್ತದೋ, ಅದರಂತೆ ಪರಾತ್ಪರನಾದವನನ್ನು ತಿಳಿದಂತಹ ಪುರುಷನು ಪಾಪಗಳನ್ನು ಕಳಚಿಕೊಳ್ಳುತ್ತಾನೆ' ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಪರಾತ್ಪರನನ್ನು ತಿಳಿದವನು ಪಾಪಲೇಪವಿಲ್ಲದವನಾಗುತ್ತಾನೆಂದು ಹೇಳಲಾಗಿದೆ. ಮುಂದಿನ ವಾಕ್ಯದಲ್ಲಿಯೂ ಸಹ ಅಮೃತತ್ವ-ಅಭಯತ್ವ ಮೊದಲಾದ ಬ್ರಹ್ಮನ ಧರ್ಮಗಳೇ ಸ್ಪಷ್ಟವಾಗಿ ಗೋಚರವಾಗುತ್ತಿವೆ. ಹೀಗೆ ಎಲ್ಲವೂ ಪರಬ್ರಹ್ಮವಿಷಯಕವೇ ಆಗಿರುವುದರಿಂದ ಪೂರ್ವಪಕ್ಷವು ಹುಟ್ಟಲು ಹೇಗೆ ಸಾಧ್ಯ ?

अजरत्वादयो यथाकथञ्चिन्नेतव्याः, इति प्राप्ते प्रचक्ष्महे — **ईक्षतिकर्मव्यपदेशात्सः** ॥ ईक्षति कर्म सः परमात्मा । कुतः? व्यपदेशात्, व्यपदिश्यते हीक्षतिकर्म परमात्मत्वेन । तथाहि ईक्षतिकर्मविषयतयोदाहृते श्लोके 'तमोङ्कारेणैवायनेनान्वेति विद्वान् यत्तच्छान्तमजरम-मृतमभयं परं च' इति परं शान्तमजरमभयममृतमिति हि परमात्मन एवैतद् रूपम्, 'एतदमृतमेतदभयमेतद् ब्रह्म' इत्येवमादिश्रुतिभ्यः । 'एतस्माज्जीवघनात्परात्परम्' इति च परमात्मन एव व्यपदेशः । न चतुर्मुखस्य, तस्यापि जीवघनशब्दगृहीतत्वात् । यस्य हि कर्मनिमित्तं देहित्वं स जीवघन इत्युच्यते, चतुर्मुखस्यापि तत् श्रूयते । 'यो ब्रह्माणं विदधाति पूर्वम्' इत्यादौ । यत्पुनरुक्तमन्तरिक्षलोकस्योपरि निर्दिश्यमानो ब्रह्मलोकश्चतुर्मुख-लोक इति प्रतीयते, अतस्तत्रस्थश्चतुर्मुख इति, तदयुक्तम् । 'यत्तच्छान्तमजरममृतमभयम्' इत्यादिनेक्षतिकर्मणः परमात्मत्वे निश्चिते सति इक्षितुः स्थानतया निर्दिष्टो ब्रह्मलोको न क्षयिष्णुश्चतुर्मुखलोको भवितुमर्हति । किञ्च 'यथा पादोदरस्त्वचा विनिर्मुच्यते, एवं ह वै स पाप्मना विनिर्मुक्तस्सामभिरुन्नीयते ब्रह्मलोकम्' इति सर्वपापविनिर्मुक्तस्य प्राप्यतयोच्यमानं न चतुर्मुखस्थानम् । अत एव चोदाहरणश्लोके इममेव ब्रह्मलोकमधिकृत्य श्रूयते 'यत्तत् कवयो वेदयन्ते' इति । कवयः सूरयः । सूरिभिर्दृश्यं च वैष्णवं पदमेव, 'तद्विष्णोः परमं पदं सदा पश्यन्ति सूरयः' इत्येवमादिभ्यः । नचान्तरिक्षात् परश्चतुर्मुखलोकः, मध्ये स्वर्गलोकादीनां बहूनां सद्भावात् । अतः 'एतद्वै सत्यकाम परं चापरं च ब्रह्म यदोङ्कारस्तस्माद् विद्वानेतेनैवायनेनैकतरमन्वेति' इति प्रतिवचने यदपरं कार्यं ब्रह्म निर्दिष्टं तदैहिकामुष्मिकत्वेन द्विधा विभज्यैकमात्रं प्रणवमुपासीनानामैहिकं मनुष्यलोकावाप्तिरूपं फलमभिधाय, द्विमात्रमुपासीनानामामुष्मिकमन्तरिक्षशब्दोपलक्षितं फलं चाभिधाय, त्रिमात्रेण परब्रह्मवाचिना प्रणवेन परं पुरुषं ध्यायतां परमेव ब्रह्म प्राप्यतयोपदिशतीति सर्वं समञ्जसम् । अत ईक्षतिकर्म परमात्मा ॥ १२ ॥

**तथापि "सोऽन्तरिक्षं यजुर्भिः" इति प्राकृतान्तरिक्षलोकसन्निधानात् "स सामभिरुन्नीयते ब्रह्मलोकम्" इत्युक्तस्य ब्रह्मलोकस्य चतुर्मुखलोकत्वशङ्क्या तदुदय इत्याहुः ।**

ಉತ್ತರ - ಚತುರ್ಮುಖನೇ ಈ ವಾಕ್ಯಕ್ಕೆ ವಿಷಯನಾಗಿದ್ದಾನೆಂದು ಪೂರ್ವಪಕ್ಷವು ಹುಟ್ಟುತ್ತದೆ. ಏಕೆಂದರೆ ಹಿಂದಿನ ವಾಕ್ಯದಲ್ಲಿ 'ಸೋಽಂತರಿಕ್ಷಂ ಯಜುರ್ಭಿಃ' ಇತ್ಯಾದಿಯಾಗಿ ಪ್ರಣವದ ಒಂದು ಅಕ್ಷರದ ಧ್ಯಾನದಿಂದ ಮನುಷ್ಯಲೋಕವು ಪ್ರಾಪ್ತವಾಗುತ್ತದೆ. ಎರಡು ಅಕ್ಷರಗಳ ಧ್ಯಾನದಿಂದ ಅಂತರಿಕ್ಷಲೋಕದ ಪ್ರಾಪ್ತಿಯಾಗುತ್ತದೆಂದು ಹೇಳಲಾಗಿದೆ. ಪ್ರಾಕೃತವಾದ ಅಂತರಿಕ್ಷಲೋಕದ ಸನ್ನಿಧಾನದಿಂದ ಮುಂದಿರುವ 'ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್' ಮೂರು ಅಕ್ಷರಗಳ ಧ್ಯಾನದಿಂದ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಹೇಳಿದ್ದರಿಂದ ಬ್ರಹ್ಮಲೋಕವು ಪ್ರಾಕೃತವಾದ ಚತುರ್ಮುಖಬ್ರಹ್ಮಲೋಕವೇ ಆಗಬೇಕು. ಆದ್ದರಿಂದ ಚತುರ್ಮುಖಬ್ರಹ್ಮನೇ ಧ್ಯಾನಕ್ಕೆ ವಿಷಯನಾಗಿ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷವು ಉದಯವಾಗುತ್ತದೆ. ಹೀಗೆ ರಾಮಾನುಜರು ಪೂರ್ವಪಕ್ಷದ ಉದಯವನ್ನು ಸಮರ್ಥಿಸುತ್ತಾರೆ.

**तन्न । "तद्धर्मोपदेशात्" "भेदव्यपदेशात्" इत्यादाविव सिद्धान्तसाधकार्थविशेषघटितस्यैव व्यपदेशस्य हेतूकर्तव्यत्वात् ।**

ಈ ವ್ಯಾಖ್ಯಾನವು ಸರಿಯಲ್ಲ. ಏಕೆಂದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ, 'ಭೇದವ್ಯಪದೇಶಾಚ್ಚಾನ್ಯಃ' ಎಂಬ ಸೂತ್ರದಲ್ಲಿ ಕೇವಲ 'ವ್ಯಪದೇಶಾತ್' ಎಂದಷ್ಟೇ ಹೇಳದೇ, ಆ ವ್ಯಪದೇಶಕ್ಕೆ ವಿಷಯವಾದದ್ದು ಯಾವುದು ಎಂದು ಹೇಳಿದ್ದಾರೆ. ಅದರಂತೆ ಪ್ರಕೃತ ಈ ಸೂತ್ರದಲ್ಲಿಯೂ 'ಈಕ್ಷತಿಕರ್ಮವ್ಯಪದೇಶಾತ್' ಎಂಬುದಾಗಿ ವ್ಯಪದೇಶಕ್ಕೆ ವಿಷಯವಾದದ್ದನ್ನೇ 'ಈಕ್ಷತಿಕರ್ಮ' ಎಂದು ಸ್ಪಷ್ಟಪಡಿಸಿದ್ದಾರೆ. ಹೀಗೆ ಸೂತ್ರವನ್ನು ವ್ಯಾಖ್ಯಾನಿಸಲು ಬರುವಾಗ 'ವ್ಯಪದೇಶಾತ್' ಎಂಬುದನ್ನು ಮಾತ್ರ ಹೇತುವೆಂದು ಪರಿಗಣಿಸುವುದು ಸರಿಯಲ್ಲ. ಅಂದರೆ ಅರ್ಥವಿಶೇಷಘಟಿತವಾದ ಹೇತುವೇ ಸಿದ್ಧಾಂತಸಾಧಕವಾಗುತ್ತದೆ. ಆದ್ದರಿಂದ ಅಂತಹ ಅರ್ಥವಿಶೇಷಘಟಿತವಾದ ವ್ಯಪದೇಶವನ್ನೇ ಹೇತುವನ್ನಾಗಿ ಹೇಳಬೇಕು. 'ತದ್ಧರ್ಮ' 'ಭೇದ' ಇತ್ಯಾದಿಯಾಗಿ ವ್ಯಪದೇಶದ ಜೊತೆಗೆ ಸಿದ್ಧಾಂತಸಾಧಕವಾದ ಅಥವಾ ವಿಶೇಷವಾಚಕ ಶಬ್ದಗಳು ಸೇರಿರುವಂತೆ ಇಲ್ಲಿಯೂ ಸಹ ಎಂದರ್ಥ.

**त्वद्रीत्यैतच्छास्त्रस्य पूर्वभागे पूर्वतन्त्र एव "आनन्तर्यमचोदना" इत्यत्र लिङ्गादिभ्यः सन्निधानदौर्बल्यस्योक्ततया पुनरिह तत्प्राबल्यशङ्कानुदयाच्च ।**

ಮತ್ತು ಸನ್ನಿಧಾನದ ಬಲದಿಂದ ಲಿಂಗಾದಿಗಳಿಗೆ ಅರ್ಥಾಂತರವನ್ನು ಮಾಡುವ ಮೂಲಕ ಪೂರ್ವಪಕ್ಷವು ಹುಟ್ಟುತ್ತದೆಂದು ನೀವು ಸಮರ್ಥಿಸಿದ್ದೂ ಕೂಡ ಸರಿಯಲ್ಲ. ಏಕೆಂದರೆ ನಿಮ್ಮ ಪ್ರಕಾರ ಬ್ರಹ್ಮಮೀಮಾಂಸಶಾಸ್ತ್ರದ ಪೂರ್ವಭಾಗವೆಂದೇ ಪರಿಗಣಿತವಾದ ಪೂರ್ವಮೀಮಾಂಸಾಗ್ರಂಥದಲ್ಲಿ 'ಆನಂತರ್ಯಮಚೋದನಾ' ಎಂಬ ಸೂತ್ರವಿದೆ. ಇದರಲ್ಲಿ ಲಿಂಗಾದಿಗಳಿಗಿಂತಲೂ ಕೂಡ ಸನ್ನಿಧಾನವೇ ದುರ್ಬಲವಾಗಿದೆಯೆಂದು ಸಮರ್ಥಿಸಿದ್ದಾರೆ. ಹೀಗಿರುವಾಗ ಅದಕ್ಕೆ ವಿಪರೀತವಾಗಿ ಸನ್ನಿಧಾನದಿಂದ ಲಿಂಗಾದಿಗಳಿಗೆ ನೀವು ಹೇಳುತ್ತಿರುವ ದೌರ್ಬಲ್ಯವು ತಪ್ಪಾಗುತ್ತದೆ. ಆದ್ದರಿಂದ ಸನ್ನಿಧಾನಕ್ಕೆ ಪ್ರಾಬಲ್ಯವನ್ನು ಒಪ್ಪಿ ಪೂರ್ವಪಕ್ಷವನ್ನು ಸಮರ್ಥಿಸಲು ನಿಮ್ಮಿಂದ ಸಾಧ್ಯವಾಗುವುದಿಲ್ಲ.

**प्रकाशः –**

**केचित्त्विति** ।। स इत्यनूद्य परमात्मेति व्याख्यातम् । **व्यपदेशादिति** ।। ईक्षतिकर्मविषयतयोदाहृतश्लोके "एतदमृतमभयमेतद्ब्रह्म" इत्यादिभ्यः परमात्मन एव व्यपदेशादित्यर्थः ।

ವಿವರಣೆ - ರಾಮಾನುಜರ ಅಧಿಕರಣ ಶರೀರವನ್ನು 'ಕೇಚಿತ್ತು' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ. 'ಸಃ' ಎಂದು ಸೂತ್ರದಲ್ಲಿರುವ ಪದವನ್ನು ಅನುವಾದ ಮಾಡಿ 'ಪರಮಾತ್ಮಾ' ಎಂದು ವ್ಯಾಖ್ಯಾನಿಸಿದ್ದಾರೆ. 'ವ್ಯಪದೇಶಾತ್' ಎಂದರೆ ಈಕ್ಷತಿಕರ್ಮವಿಷಯವಾಗಿ ಉದಾಹರಿಸಲ್ಪಟ್ಟ ಶ್ಲೋಕದಲ್ಲಿ 'ಏತದಮೃತಮ್ ಅಭಯಮ್ ಏತದ್ ಬ್ರಹ್ಮ' ಇತ್ಯಾದಿ ವಾಕ್ಯದಿಂದ ಪರಮಾತ್ಮನನ್ನೇ ಹೇಳಲಾಗಿರುವುದರಿಂದ ಎಂದರ್ಥ.

**प्रकाशः** – पूर्वपक्षेऽपि दूष्यांशमात्रमनुवदति – **यद्यपीत्यादिना** ।। **सन्निधानादिति** ।। सन्निधानेन लिङ्गानामन्यथा नयनमिति भावः ।

ರಾಮಾನುಜರ ಸಂಪೂರ್ಣ ಪೂರ್ವಪಕ್ಷವನ್ನು ಅನುವಾದ ಮಾಡದೇ ದೂಷಿಸಬೇಕಾದ ಅಂಶವನ್ನಷ್ಟೇ 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ. 'ಸನ್ನಿಧಾನಾತ್' ಎಂದರೆ ಸನ್ನಿಧಿ ಪ್ರಮಾಣದಿಂದ ಲಿಂಗಗಳಿಗೆ ಅನ್ಯಾರ್ಥವನ್ನು ಮಾಡಬೇಕೆಂದು ಅಭಿಪ್ರಾಯ.

**प्रकाशः** – एवं हि तेषामधिकरणम् । प्रागुदाहृते वाक्य ईक्षतिकर्मणः परमात्मत्वं स्थाप्य ध्यायतेस्ततो भिन्नविषयतया पूर्वपक्षं कृत्वा एकविषयत्वेनाद्वैतिभिः द्धान्तः कृतः ।

ರಾಮಾನುಜರ ಅಧಿಕರಣ ಶರೀರ ಹೀಗಿದೆ - ಹಿಂದೆ ಉದಾಹರಿಸಲ್ಪಟ್ಟ 'ಪರಾತ್ಪರಮ್ ಪುರಿಶಯಂ' ಎಂಬ ವಾಕ್ಯದಲ್ಲಿ ಈಕ್ಷತಿಕರ್ಮನಾಗಿ ಪರಮಾತ್ಮನನ್ನು ವ್ಯವಸ್ಥೆ ಮಾಡಿ ಧ್ಯಾನ ಹಾಗೂ ಈಕ್ಷಣಗಳಿಗೆ ಭಿನ್ನವಿಷಯತ್ವವನ್ನು ಹೇಳುವ ಮೂಲಕ ಪೂರ್ವಪಕ್ಷ ಮಾಡಿ ಏಕವಿಷಯತ್ವವನ್ನು ಒಪ್ಪುವ ಮೂಲಕ ಸಿದ್ಧಾಂತವನ್ನು ಅದ್ವೈತಿಗಳು ಮಾಡಿದರು.

**प्रकाशः** – स न युक्तः । ध्यानेक्षणयोर्हेतुहेतुमद्भावापन्नयोरेकविषयत्वावश्यम्भावादिति परमतं निरस्य,

ಆದರೆ ಅದ್ವೈತಿಗಳ ಈ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ಧ್ಯಾನ ಮತ್ತು ಈಕ್ಷಣಗಳಿಗೆ ಹೇತು-ಹೇತುಮದ್ಭಾವವನ್ನು ಒಪ್ಪಬೇಕಾದರೆ ಏಕವಿಷಯತ್ವವು ಅವಶ್ಯವಾಗಿ ಇರಬೇಕು. ಆದರೆ ಭಿನ್ನವಿಷಯಕವಾದ ಧ್ಯಾನ ಮತ್ತು ಈಕ್ಷಣಗಳಿಗೆ ಹೇತು-ಹೇತುಮದ್ಭಾವವನ್ನೇ ಹೇಳುವುದು ತಪ್ಪಾಗುತ್ತದೆ. ಹೀಗೆ ಅದ್ವೈತಮತವನ್ನು ರಾಮಾನುಜರು ನಿರಾಕರಿಸುತ್ತಾರೆ.

**प्रकाशः** – एकविषयतामुपेत्य ध्यानेक्षणविषयः किं चतुर्मुखः परमात्मावेति सन्दिह्य,

ಮತ್ತು ; ಹೀಗೆ ರಾಮಾನುಜರು ಈಕ್ಷಣ ಮತ್ತು ಧ್ಯಾನಗಳಿಗೆ ಏಕವಿಷಯತ್ವವನ್ನು ಒಪ್ಪಿ ಆ ಧ್ಯಾನ ಮತ್ತು ಈಕ್ಷಣಗಳಿಗೆ ವಿಷಯನಾದವನು ಚತುರ್ಮುಖಬ್ರಹ್ಮನೋ ಅಥವಾ ಪರಮಾತ್ಮನೋ ಎಂಬ ಸಂಶಯವನ್ನು ತೋರಿಸುತ್ತಾರೆ.

**प्रकाशः** – पूर्वत्र मनुष्यलोकान्तरिक्षलोकौ क्रमेणैकमात्रद्विमात्रप्रणवोपासनाफलत्वेनोक्त्वा अनन्तरं त्रिमात्रप्रणवोपासनाफलत्वेनोच्यमानब्रह्मलोकस्थपुरुषेक्षणकर्मभूतः पुरुषो हिरण्यगर्भ एव ।

ಈ ವಿಷಯವಾಕ್ಯದ ಹಿಂದೆ; ಒಂದು ಮಾತ್ರಾಕಾಲವುಳ್ಳ ಪ್ರಣವೋಪಾಸನೆಯಿಂದ ಮನುಷ್ಯಲೋಕವು ಪ್ರಾಪ್ತವಾಗುತ್ತದೆ. ಎರಡು ಮಾತ್ರಾಕಾಲವುಳ್ಳ ಪ್ರಣವೋಪಾಸನೆಯಿಂದ ಸ್ವರ್ಗಲೋಕವು ಪ್ರಾಪ್ತವಾಗುತ್ತದೆಂದು ಉಪಾಸನಾಫಲವನ್ನು ಹೇಳಲಾಗಿದೆ. ಮುಂದೆ ಮೂರು ಮಾತ್ರಾಕಾಲವುಳ್ಳ ಪ್ರಣವೋಪಾಸನೆಯಿಂದ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ. ಬ್ರಹ್ಮಲೋಕಪ್ರಾಪ್ತಿ ಎಂಬ ಫಲವನ್ನು ಹೇಳಿದ್ದರಿಂದ ಈಕ್ಷಣಕರ್ಮಕ್ಕೆ ವಿಷಯನಾದವನು ಹಿರಣ್ಯಗರ್ಭನೇ ಆಗುತ್ತಾನೆಂದು ತಿಳಿಯಬೇಕು.

**प्रकाशः** – मनुष्यलोकादिसान्निध्येन ब्रह्मलोकस्य हिरण्यगर्भलोकत्वमिति निश्चयात् । सन्निधानेन ब्रह्मलिङ्गानां बाधादिति प्राप्ते,

ಮನುಷ್ಯಲೋಕಾದಿ ಸಾನ್ನಿಧ್ಯವಿರುವ ಪ್ರಯುಕ್ತ ಬ್ರಹ್ಮಲೋಕವೆಂದರೆ ಚತುರ್ಮುಖಬ್ರಹ್ಮನ ಲೋಕವೇ ಹೊರತು, ಪರಬ್ರಹ್ಮನ ಲೋಕವಲ್ಲ. ಹೀಗೆ ಸನ್ನಿಧಾನ ಪ್ರಮಾಣದಿಂದ ಬ್ರಹ್ಮಲಿಂಗಗಳೆಲ್ಲವೂ ಬಾಧಿತ-ವಾಗುತ್ತವೆಂದು ಪೂರ್ವಪಕ್ಷ.

**प्रकाशः** – ईक्षतिकर्मतया निर्दिष्टपुरुषविषये ''तमोङ्कारेणायनेनान्वेति विद्वान्'' इति श्लोके निरुपाधिकशान्तत्वामृतत्वादिव्यपदेशात् परमात्मैवायं परमपुरुषः ।

ಪರಮಾತ್ಮನೇ ಈಕ್ಷತಿಕರ್ಮನೆಂದು ಸಿದ್ಧಾಂತ. ಏಕೆಂದರೆ ಯಾವ ವ್ಯಕ್ತಿಯು ಈಕ್ಷಿತಿಕರ್ಮನಾಗಿದ್ದಾನೋ, ಅವನನ್ನು 'ತಮೋಂಕಾರೇಣಾಯನೇನಾನ್ವೇತಿ ವಿದ್ವಾನ್' ಎಂಬ ಶ್ಲೋಕದಲ್ಲಿ ನಿರುಪಾಧಿಕ, ಶಾಂತತ್ವ, ಅಮೃತತ್ವ ಮೊದಲಾದ ಧರ್ಮಗಳುಳ್ಳವನೆಂದು ಹೇಳಲಾಗಿದೆ. ಆದ್ದರಿಂದ ಪರಮಾತ್ಮನೇ ಈ ಪರಮಪುರುಷನು.

**प्रकाशः** – एवं परमात्मत्वेऽवगते ब्रह्मलोकशब्दोऽपि तत्स्थानस्यैव वाचको भवति ।

ಹೀಗೆ ಪರಮಾತ್ಮನು ತಿಳಿದ ಮೇಲೆ ಪ್ರಕರಣದಲ್ಲಿರುವ ಬ್ರಹ್ಮಲೋಕ ಶಬ್ದವೂ ಕೂಡ ಪರಮಾತ್ಮನ ಸ್ಥಾನವನ್ನೇ ಪ್ರತಿಪಾದಿಸುತ್ತದೆ ಹೊರತು, ಚತುರ್ಮುಖಬ್ರಹ್ಮನ ಸ್ಥಾನವನ್ನು ಪ್ರತಿಪಾದಿಸುವುದಿಲ್ಲ.

**प्रकाशः** – तद्विषये ''यत्कवयो वेदयन्ते'' इति श्लोके सूरिभिर्दृश्यत्ववचनं च तदेव द्रढयतीति सिद्धान्त इति ॥

ಈ ವಿಷಯದಲ್ಲಿ 'ಯತ್ ಕವಯೋ ವೇದಯಂತೇ' ಎಂಬ ಶ್ಲೋಕವು ಜ್ಞಾನಿಗಳಿಂದ ದೃಶ್ಯನಾಗಿದ್ದಾನೆಂದು ಹೇಳುತ್ತಿದೆ. ಆದ್ದರಿಂದ ಈಕ್ಷಣ ಮತ್ತು ಧ್ಯಾನಕ್ಕೆ ವಿಷಯನಾಗಿದ್ದಾನೆಂದು ದೃಢವಾಗುತ್ತದೆ. ಇಷ್ಟು ಸಿದ್ಧಾಂತ.

**प्रकाशः** – उक्तञ्च –

नन्वत्रोङ्कारमात्रात्रयफलगणनारूढभूम्यन्तरिक्ष –

प्रत्यासत्त्या निवासस्सरसिजवसतेर्ब्रह्मलोकोऽस्तु मैवम् ।
पापोन्मुक्तेन लभ्यो ह्ययमिह कथितस्सूर्यसम्पत्तिपूर्वः
सोढव्यो मर्त्यलोके व्यवधिरिति समस्तत्समाधानमार्गः ॥ इति ।

ಇದನ್ನೇ ಶ್ರುತಪ್ರಕಾಶದಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

ನನ್ವತ್ರೋಂಕಾರಮಾತ್ರತ್ರಯಫಲಗಣನಾರೂಢಭೂಮ್ಯಂತರಿಕ್ಷ-
ಪ್ರತ್ಯಾಸತ್ತ್ಯಾ ನಿವಾಸಸ್ಸರಸಿಜವಸತೇ ಬ್ರಹ್ಮಲೋಕೋಽಸ್ತು ಮೈವಮ್ ।
ಪಾಪೋನ್ಮುಕ್ತೇನ ಲಭ್ಯೋ ಹ್ಯಯಮಿಹ ಕಥಿತಃ ಸೂರ್ಯಸಂಪತ್ತಿಪೂರ್ವಃ
ಸೋಢವ್ಯೋ ಮರ್ತ್ಯಲೋಕೇ ವ್ಯವಧಿರಿತಿ ಸಮಸ್ತಃ ತತ್ಸಮಾಧಾನಮಾರ್ಗಃ ॥

'ಸ ಸಾಮಭಿಃ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯವಾದ ಬ್ರಹ್ಮಲೋಕವೆಂದರೆ ಚತುರ್ಮುಖನ ಮನೆಯೇ ಆಗುತ್ತದೆ. ಏಕೆಂದರೆ ಭೂಮಿ ಹಾಗೂ ಅಂತರಿಕ್ಷ ಲೋಕಗಳ ಸನ್ನಿಧಾನವಿರುವುದರಿಂದ. ಈ ಲೋಕಗಳ ಪ್ರಾಪ್ತಿಯನ್ನು ಮೂರು ಬಗೆಯ ಮಾತ್ರಾಕಾಲವುಳ್ಳ ಓಂಕಾರದ ಫಲವನ್ನಾಗಿ ಶ್ರುತಿಯು ಹೇಳಿದೆ. ಇಷ್ಟು ಪೂರ್ವಪಕ್ಷ.

ಆದರೆ ಪಾಪರಹಿತನಾದವನಿಂದ ಪ್ರಾಪ್ಯನಾಗುತ್ತಾನೆಂದು ಹೇಳಿದ್ದರಿಂದ ಮತ್ತು ಸೂರ್ಯಮಾರ್ಗದ ಮೂಲಕ ಬ್ರಹ್ಮಲೋಕವನ್ನು ಹೊಂದುತ್ತಾನೆಂದು ಹೇಳಿದ್ದರಿಂದ ಬ್ರಹ್ಮಲೋಕವೆಂದರೆ ಚತುರ್ಮುಖನ ಮನೆಯಲ್ಲ, ಪರಮಾತ್ಮನ ಮನೆಯೇ ಆಗಿದೆಯೆಂದು ತಿಳಿಯಬೇಕು. ಆದ್ದರಿಂದ ಮರ್ತ್ಯಲೋಕದ ವ್ಯವಧಾನವನ್ನು ಸಹನೆ ಮಾಡಬೇಕು. ಇಷ್ಟು ಸಿದ್ಧಾಂತ.

**प्रकाशः** – सूत्रार्थं तावन्निराह – **तद्धर्मेति** ।। ईक्षतिरूपकर्मणो व्यपदेशादित्यस्मत्सिद्धान्त इव समस्तमेवेक्षतिकर्मपदं व्याख्येयम् । नतु विभज्येति भावः ।

ರಾಮಾನುಜರ ಸೂತ್ರಾರ್ಥವನ್ನು ನಿರಾಕರಿಸುತ್ತಿದ್ದಾರೆ 'ತದ್ಧರ್ಮ' ಇತ್ಯಾದಿ ವಾಕ್ಯದಿಂದ. 'ಈಕ್ಷತಿಕರ್ಮ' ಎಂಬುದಕ್ಕೆ ನಾವು ಹೇಳುವಂತೆ "ಈಕ್ಷತಿ' ಎಂಬ ವಿಷಯದ ನಿರೂಪಣೆಯಿರುವುದರಿಂದ' ಎಂಬುದಾಗಿ ಒಟ್ಟಿಗೆ ವ್ಯಾಖ್ಯಾನಿಸಲು ಬರುವಾಗ 'ಈಕ್ಷತಿ' ಪದವನ್ನು ಹಾಗೂ 'ಕರ್ಮ' ಪದವನ್ನು ವಿಭಾಗಮಾಡಿ ವ್ಯಾಖ್ಯಾನ ಮಾಡುವುದು ಸರಿಯಲ್ಲ.

**प्रकाशः** – नचैवं सूत्रे धर्मिनिर्देशाभावान्न्यूनतादोषः । "अत्र सूत्रेसमन्वेतव्यविशेषानुक्तिस्तु" इत्यादिना चन्द्रिकायामेव प्रागस्य दोषस्य समाधानादिति भावः ।

ನಿಮ್ಮಲ್ಲಿಯೂ ಸಹ ಸೂತ್ರದಲ್ಲಿ ಧರ್ಮಿನಿರ್ದೇಶ ಮಾಡಿಲ್ಲವೆಂಬ ದೋಷವು ಪ್ರಾಪ್ತವಾಗುತ್ತದಲ್ಲವೇ? ಎಂದರೆ 'ಅತ್ರ ಸೂತ್ರೇ ಸಮನ್ವೇತವ್ಯವಿಶೇಷಾನುಕ್ತಿಸ್ತು' ಎಂಬುದಾಗಿ ಈ ಹಿಂದೆಯೇ ಚಂದ್ರಿಕಾಗ್ರಂಥದಲ್ಲಿಯೇ ಈ ಪ್ರಶ್ನೆಗೆ ಸಮಾಧಾನವನ್ನು ನೀಡಿದ್ದಾಗಿದೆ.

**प्रकाशः** – पूर्वपक्षानुदयेनाधिकरणशरीरं च निरस्यति – **त्वद्रीत्येति** ।। विंशतिलक्षणमेकं शास्त्रमिति त्वद्रीत्येत्यर्थः ।

ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂದು ಅಧಿಕರಣ ಶರೀರವನ್ನು ನಿರಾಕರಿಸುತ್ತಿದ್ದಾರೆ 'ತ್ವದ್ರೀತ್ಯಾ' ಇತ್ಯಾದಿ ವಾಕ್ಯದಿಂದ. 'ತ್ವದ್ರೀತ್ಯಾ' ಎಂದರೆ ಇಪ್ಪತ್ತು ಅಧ್ಯಾಯಗಳಿಂದ ಕೂಡಿರುವ ಶಾಸ್ತ್ರವನ್ನು ಬ್ರಹ್ಮಮೀಮಾಂಸಾ-ಶಾಸ್ತ್ರವೆಂದು ಹೇಳುತ್ತೀರಿ. ಆದ್ದರಿಂದ ಪೂರ್ವಮೀಮಾಂಸಾಶಾಸ್ತ್ರವೂ ಕೂಡ ಇದರಲ್ಲೇ ಸೇರಿದೆ ಎಂದು ಹೇಳುವ ನಿಮ್ಮ ಪ್ರಕಾರ ಎಂದರ್ಥ.

**प्रकाशः** – तृतीयेऽध्याये ''आनन्तर्यमचोदना'' इत्याद्यपादीयचतुर्दशेऽधिकरणे ज्योतिष्टोमगतं ''मुष्टीकरोति वाचं यच्छति दीक्षितमावेदयति'' इति वाक्यमुदाहृत्य मुष्टीकरणवाग्यमने मनःप्रणिधानद्वारा करिष्यमाणसर्वकर्माङ्गमुतानन्तरस्यादीक्षिता-वेदनस्येति संशये आनन्तर्यादेकवाक्यत्वादवान्तरप्रकरणाद्वादीक्षिता वेदनमात्राङ्गमिति प्राप्ते लिङ्गप्रकरणाभ्यां सर्वार्थत्वावगमात्सन्निधानात्प्रबलेन सामर्थ्यरूपलिङ्गे करिष्यमाणसर्वकर्माङ्गमिति सिद्धान्तितमिति सन्निधेर्दौर्बल्यं सिद्धमित्यर्थः ।

'ಆನಂತರ್ಯಮಚೋದನಾ' (೩-೧-೧೪)[1]

---

(१) भाट्टसङ्ग्रहः –

**अथ चतुर्दशं हस्तावनेजनादीनां कृत्स्नप्राकरणिकाङ्गताधिकरणम् (२४-२५ सूत्रे)**

**आनन्तर्यमचोदना ॥ २४ ॥**

**(वाक्यानाञ्च समाप्तत्वात् ॥२५॥)**

अत्रापि पूर्वन्यायेन शङ्कनात् **सङ्गतिः** । दर्शपूर्णमासयोः प्रकरणे श्रूयते 'हस्ताववनेनिक्ते' 'उलपराजिँ स्तृणाति' इति । उलपानां तृणविशेषाणां राजिं पङ्क्तिं वेद्यामास्तृणातीत्यर्थः। तद्धस्तावनेजनमास्तरणमात्राङ्गमुत करिष्यमाणसर्वकर्माङ्गमिति **सन्देहः** । यथा हि पूर्वत्रानुवाक्यानां यथासङ्ख्याम्नानरूपक्रमेणाऽज्यभागान्वयस्तथा अत्राप्यानन्तर्यलक्षणक्रम-प्रमाणेन हस्तावनेजनरूपहस्तसंस्कारस्याऽनन्तरश्रुतोलपराज्यास्तरणमात्राङ्गत्वमिति **प्राप्ते** अभिधीयते । अवनेजनं हि हस्तसंस्कारः । संस्कृतौ च हस्तौ सर्वकर्मानुष्ठानयोग्यावित्ये-तादृशसामर्थ्यरूपलिङ्गेन दर्शपूर्णमासप्रकरणेन च आनन्तर्यरूपक्रमस्य बाधेन करिष्यमाणसर्वकर्माङ्गं हस्तावनेजनम्, नास्तरणमात्राङ्गम् । एवं ज्योतिष्टोमे 'मुष्टीकरोति' 'वाचं यच्छति' 'दीक्षितमावेदयति' इति श्रुतमुष्टीकरणवाग्यमनयोः मनःप्रणिधानार्थयोः 'अदीक्षिष्टायं ब्राह्मणः' इति देवेभ्यो मनुष्येभ्यश्चाऽवेदनरूपदीक्षितावेदनस्याङ्गत्वमानन्तर्यादिति **प्राप्ते** लिङ्गप्रकरणाभ्यां सर्वकर्माङ्गता ज्ञेया । तथा च सूत्रम्, **आनन्तर्यं** सन्निध्याम्नानं **अचोदना** अङ्गत्वे प्रमाणं न भवतीति । **फलन्तु** यदा प्रमादादिना हस्तावनेजनादिकमकृत्वा

ಜ್ಯೋತಿಷ್ಟೋಮ ಪ್ರಕರಣದಲ್ಲಿ 'ಮುಷ್ಟೀಕರೋತಿ ವಾಚಂ ಯಚ್ಛತಿ ದೀಕ್ಷಿತಮಾವೇದಯತಿ' ಎಂಬ ವಾಕ್ಯವು ಶ್ರುತವಾಗಿದೆ. ಈ ವಾಕ್ಯದಲ್ಲಿ 'ಮುಷ್ಟೀಕರಣ' ಮತ್ತು 'ವಾಗ್ಯಮನ' ಎರಡು ವಿಧಿಗಳನ್ನು ಹೇಳಲಾಗಿದೆ. (ಮುಷ್ಟಿಹಿಡಿಯುವಿಕೆ ಮತ್ತು ಮೌನವಾಗಿರುವಿಕೆ ಎಂಬೆರಡು ನಿಯಮಗಳನ್ನು ಹೇಳಲಾಗಿದೆ) ಈ ಎರಡು ಮುಷ್ಟೀಕರಣ ಹಾಗೂ ವಾಗ್ಯಮನಗಳು ಮನಸ್ಸಿನ ಏಕಾಗ್ರತೆಗೆ ಕಾರಣಗಳಾಗಿವೆ. ಮನಸ್ಸಿನ ಏಕಾಗ್ರತೆಯನ್ನು ತಂದುಕೊಡುವ ಮೂಲಕ ಮುಂದೆ ಮಾಡುವಂತಹ ಸಕಲ ಕರ್ಮಗಳಿಗೆ ಇವು ಅಂಗವಾಗಿವೆಯೋ ಅಥವಾ ಅವ್ಯವಹಿತ ಉತ್ತರಕಾಲದಲ್ಲಿ ಮಾಡಲ್ಪಡುವ ದೀಕ್ಷಿತಾವೇದನಕ್ಕೆ ಅಂಗಗಳಾಗಿವೆಯೋ? ಎಂದು ಸಂಶಯ.

ಪೂರ್ವಪಕ್ಷ - ಮುಷ್ಟೀಕರಣ ಮತ್ತು ವಾಗ್ಯಮನಗಳೆರಡೂ ದೀಕ್ಷೀತಾವೇದನಕ್ಕೆ ಮಾತ್ರ ಅಂಗಗಳಾಗಿವೆ. 'ದೀಕ್ಷಿತಾವೇದನ' ಎಂದರೆ ಹೀಗರ್ಥ - ಯಜಮಾನನು ದೀಕ್ಷಾಬದ್ಧನಾಗಿದ್ದಾನೆಂದು ಋತ್ವಿಜರು ಮನುಷ್ಯರನ್ನು ಕುರಿತು ಗಟ್ಟಿಯಾಗಿ ಹೇಳಬೇಕು. ದೇವತೆಗಳು ಹಾಗೂ ಮನುಷ್ಯರು ಇಬ್ಬರನ್ನೂ ಕುರಿತು ಹೇಳುವಾಗ ಮೆಲ್ಲನೆ ಹೇಳಬೇಕು. ಇದನ್ನೇ ದೀಕ್ಷಿತಾವೇದನವೆನ್ನುತ್ತಾರೆ. ಮೊದಲು ಮುಷ್ಟೀಕರಣ ಹಾಗೂ ವಾಗ್ಯಮನಗಳನ್ನು ಹೇಳಿ ಅನಂತರ ಮುಂದಿನ ವಾಕ್ಯದಲ್ಲಿ ದೀಕ್ಷಿತಾವೇದನದ ಬಗ್ಗೆ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಮುಷ್ಟೀಕರಣ ಹಾಗೂ ವಾಗ್ಯಮನಗಳು ದೀಕ್ಷಿತಾವೇದನಕ್ಕೆ ಮಾತ್ರ ಅಂಗಗಳಾಗಿವೆ ಎಂದು ಸ್ಪಷ್ಟವಾಗುತ್ತದೆ. ಮತ್ತು ಅವಾಂತರ ಪ್ರಕರಣವಾಗಿರುವುದರಿಂದಲೂ ಏಕವಾಕ್ಯತ್ವವಿರುವುದರಿಂದಲೂ ದೀಕ್ಷಿತಾವೇದನಕ್ಕೆ ಅಂಗಗಳಾಗಿವೆ ಎಂದು ಪೂರ್ವಪಕ್ಷ.

ಸಿದ್ಧಾಂತ - ಲಿಂಗ ಹಾಗೂ ಪ್ರಕರಣಗಳ ಬಲದಿಂದ ಮುಷ್ಟೀಕರಣ ಹಾಗೂ ವಾಗ್ಯಮನಗಳೆರಡೂ ಸರ್ವಕರ್ಮಕ್ಕೂ ಅಂಗಗಳಾಗಿವೆಯೆಂದು ತಿಳಿಯುತ್ತದೆ. ಸಾನ್ನಿಧ್ಯಪ್ರಮಾಣದಿಂದ ದೀಕ್ಷಿತಾವೇದನಕ್ಕೆ ಅಂಗವೆಂದು ಆಪಾತತಃ ತಿಳಿಯುವುದಾದರೂ ಸನ್ನಿಧಾನ ಪ್ರಮಾಣಕ್ಕಿಂತ ಸಾಮರ್ಥ್ಯರೂಪವಾದ ಲಿಂಗವು ಹೆಚ್ಚು ಪ್ರಬಲವಾಗಿದೆ. ಅಂದರೆ ಕಾರ್ಯಕಾರಣ ಭಾವರೂಪವಾದ ಈ ಲಿಂಗದಿಂದ ಮುಂದೆ ಮಾಡುವಂತಹ ಸಕಲ ಕರ್ಮಗಳಿಗೂ ಇದು ಅಂಗವೆಂದೇ ತಿಳಿಯಬೇಕು. ಇಷ್ಟು ಸಿದ್ಧಾಂತ. ಈ ಅಧಿಕರಣದಲ್ಲಿ ಲಿಂಗಕ್ಕಿಂತ ಸನ್ನಿಧಿಗೆ ದೌರ್ಬಲ್ಯವನ್ನು ಅಂಗೀಕರಿಸಲಾಗಿದೆ.

**प्रकाशः** – एतेनेदं वाक्यं ब्रह्मपरतया यत्र क्वच निर्णेयत्वादधिकरणान्तरस्य चैतन्निर्णायकस्यादर्शनादत्रैव निर्णेयमिति निरस्तम् । ब्रह्मलिङ्गादिबाहुल्येन सन्निधिबाधसम्भवेन संशयस्यैवानुदयादिति ।

---

आस्तरणादिकमनुष्ठाय पश्चात्तदकरणं स्मर्यते तदा तदकरणप्रायश्चित्तमेव कार्यं **पूर्वपक्षे** । **सिद्धान्ते** तु विपर्यासप्रायश्चित्तमपि कृत्वा पुनरुत्तरकर्मावैगुण्याय हस्तावनेजनादिकं कार्यमिति ।

**इति चतुर्दशं हस्तावनेजनादीनां कृत्स्नप्राकरणिकाङ्गताधिकरणम्**

ಸದಧಿಕರಣ (೧-೩-೪)

ಹೀಗೆ ಹೇಳಿದ್ದರಿಂದ ರಾಮಾನುಜರ ಮತ್ತೊಂದು ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು - 'ಪರಾತ್ಪರಂ ಪುರಿಶಯಮ್' ಎಂಬ ವಾಕ್ಯವು ಬ್ರಹ್ಮಪರವಾಗಿದೆಯೆಂದು ಯಾವುದಾದರೂ ಒಂದು ಅಧಿಕರಣದಲ್ಲಿ ನಿರ್ಣಯ ಮಾಡಬೇಕು. ಬೇರೆ ಅಧಿಕರಣಗಳಲ್ಲಿ ಇದನ್ನು ಪ್ರತಿಪಾದಿಸುವ ಲಿಂಗಗಳಾವುದೂ ಕಾಣಸುತ್ತಿಲ್ಲ. ಅನಿವಾರ್ಯವಾಗಿ ಈ ಅಧಿಕರಣದಲ್ಲೇ ಸಮನ್ವಯ ಮಾಡಬೇಕೆಂದು ರಾಮಾನುಜರ ಅಭಿಪ್ರಾಯ. ಇದನ್ನು ಈಗ ನಿರಾಕರಿಸಿದಂತಾಯಿತು. ಏಕೆಂದರೆ ಈ ಪ್ರಕರಣದಲ್ಲಿ ಬ್ರಹ್ಮಲಿಂಗಗಳೇ ಬಹುಲವಾಗಿ ಕೇಳಿಸುತ್ತಿರುವುದರಿಂದ ಸನ್ನಿಧಿಪ್ರಮಾಣವು ಬಾಧಿತವಾಗುತ್ತದೆ. ಆದ್ದರಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತದೋ, ಇಲ್ಲವೋ ಎಂಬ ಸಂಶಯವೇ ಹುಟ್ಟುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣ ಶರೀರವು ಅತ್ಯಂತ ಅಯುಕ್ತವಾಗಿದೆಯೆಂದು ನಿರ್ಣಯವಾಯಿತು.

**प्रकाशः** – एतेन रामानुजीयरीतिमनुसृत्य पूर्वोत्तरपक्षौ सूत्रार्थं च वर्णयतः कस्यचिच्छैवस्य मतमपि प्रत्युक्तं बोध्यम् ।

ಹೀಗೆ ರಾಮಾನುಜಮತವನ್ನು ನಿರಾಕರಣೆ ಮಾಡಿದ್ದರಿಂದ, ರಾಮಾನುಜರ ಅಭಿಪ್ರಾಯವನ್ನೇ ಅನುಸರಿಸಿ ಪೂರ್ವಪಕ್ಷ-ಸಿದ್ಧಾಂತ ಹಾಗೂ ಸೂತ್ರಾರ್ಥಗಳನ್ನು ವರ್ಣಿಸುವ ಕೆಲವು ಶೈವರ ಮತವನ್ನೂ ಸಹ ನಿರಾಕರಿಸಿದಂತಾಯಿತು.

**प्रकाशः** – विषयवाक्यस्थब्रह्मात्मपुरुषादिशब्दानां तत्र तत्र भाष्यादौ पूर्वत्रास्माभिश्च विष्ण्वेकनिष्ठताया दर्शितत्वेन शिव इति सिद्धान्तस्यातितुच्छत्वादिति ।।छ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे सदधिकरणं सम्पूर्णम् ।।**

ಹೇಗೆಂದರೆ ವಿಷಯವಾಕ್ಯದಲ್ಲಿರುವ ಬ್ರಹ್ಮ, ಆತ್ಮಾ, ಪುರುಷ ಮೊದಲಾದ ಶಬ್ದಗಳೆಲ್ಲವೂ ಕೇವಲ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ಭಾಷ್ಯಾದಿಗಳಲ್ಲಿ ಉಲ್ಲೇಖಿಸಿದ ಪ್ರಮಾಣಗಳಿಂದ ನಾವು ತೋರಿಸಿದ್ದೇವೆ. ಆದ್ದರಿಂದ ಶಿವನೇ ಈ ಅಧಿಕರಣ ಪ್ರತಿಪಾದ್ಯನೆಂಬ ಸಿದ್ಧಾಂತವು ಅತ್ಯಂತ ಹೇಯವಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಸದಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ



ರಾಮಾನುಜ ಭಾಷ್ಯದಲ್ಲಿ 'ಪರಮಪುರುಷಮಭಿಧ್ಯಾಯೀತ' ಎಂಬುದನ್ನೇ ವಿಷಯವಾಕ್ಯವೆಂದು ಪರಿಗಣಿಸಿದ್ದಾರೆ. ಧ್ಯಾನಕ್ಕೆ ವಿಷಯನೆಂದು ಹೇಳಲ್ಪಟ್ಟ ಪುರುಷನು ಚತುರ್ಮುಖನೇ ಆಗಿದ್ದಾನೆ. ಏಕೆಂದರೆ ಪ್ರಣವವನ್ನು ಒಂದು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಮನುಷ್ಯಲೋಕವು, ಎರಡು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಸ್ವರ್ಗಲೋಕವು, ಮೂರು ಮಾತ್ರಾಕಾಲಗಳಲ್ಲಿ ಉಚ್ಚರಿಸಿದಾಗ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ. ಹೀಗೆ ಪ್ರಣವೋಪಾಸನದ ಫಲವನ್ನು ಹೇಳಲಾಗಿದೆ. ಮನುಷ್ಯ ಲೋಕ ಹಾಗೂ ಅಂತರಿಕ್ಷ ಲೋಕದ ಸನ್ನಿಧಾನವಿರುವುದರಿಂದ ಬ್ರಹ್ಮಲೋಕ ಶಬ್ದಕ್ಕೆ ಮೋಕ್ಷವೆಂದು ಅರ್ಥೈಸಲಾಗದು ಹೊರತಾಗಿ, ಚತುರ್ಮುಖಲೋಕವೆಂದೇ ಅರ್ಥೈಸಬೇಕು. ಆದ್ದರಿಂದ ಚತುರ್ಮುಖಬ್ರಹ್ಮನೇ ಧ್ಯಾನಕ್ಕೆ ವಿಷಯನಾಗುತ್ತಾನೆಂದು ಅವರ ಪೂರ್ವಪಕ್ಷ.

'ಪರಮ್', 'ಶಾಂತಮ್', 'ಅಭಯಮ್', 'ಅಮೃತಮ್' ಇತ್ಯಾದಿಯಾಗಿ ಬ್ರಹ್ಮನ ಲಿಂಗಗಳೇ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಅಪರೋಕ್ಷಜ್ಞಾನಕ್ಕೆ ವಿಷಯನಾಗಿರುವವನು ಪರಮಾತ್ಮನೇ ಆಗಿದ್ದಾನೆ. ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೇ ಧ್ಯಾನಕ್ಕೂ ವಿಷಯನಾಗಬೇಕಾದ್ದರಿಂದ 'ಪುರಿಶಯಂ ಪುರುಷಮೀಕ್ಷತೇ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಕೂಡ ಪರಬ್ರಹ್ಮನೇ ಆಗುತ್ತಾನೆಂದು ಸಿದ್ಧಾಂತ. ಮತ್ತು ಇವರು 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ ನಾವು ಹಾಗೂ ಅದ್ವೈತಿಗಳು ಹೇಳುವುದಕ್ಕಿಂತ ವಿಭಿನ್ನವಾಗಿ ಪದಚ್ಛೇದ ಮಾಡಿ ಅರ್ಥವನ್ನು ಹೇಳುತ್ತಾರೆ. 'ಈಕ್ಷತಿಕರ್ಮ' ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೂ ಸಹ ಪರಮಾತ್ಮನೇ ಆಗಿದ್ದಾನೆ. ಏಕೆಂದರೆ 'ವ್ಯಪದೇಶಾತ್' ಪರಮಾತ್ಮನೆಂದು ಹೇಳಿದ್ದರಿಂದ ಹೀಗೆ ಇವರ ವ್ಯಾಖ್ಯಾನ.

ರಾಮಾನುಜ ಭಾಷ್ಯದ ಈ ಅಭಿಪ್ರಾಯವು ಅಸಾಧುವಾಗಿದೆ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಸನ್ನಿಧಿ ಪ್ರಮಾಣಕ್ಕಿಂತ ಲಿಂಗವೇ ಹೆಚ್ಚು ಶ್ರೇಷ್ಠವೆಂದು ನಿರ್ಣಯಿಸಲಾಗಿದೆ. ಪೂರ್ವಮೀಮಾಂಸಾ ಗ್ರಂಥವನ್ನು ಪರಮ ಪ್ರಮಾಣವೆಂದು ಹೇಳುವ ರಾಮಾನುಜರು ಅದಕ್ಕೆ ವಿರುದ್ಧವಾಗಿ ಮಾತನಾಡುವುದು ತಪ್ಪಾಗುತ್ತದೆ. ಯಾವಾಗ ಲಿಂಗವೇ ಪ್ರಬಲ ಪ್ರಮಾಣವಾಯಿತೋ, ಆವಾಗ ಸನ್ನಿಧಿ ಪ್ರಮಾಣದಿಂದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ.

ಮತ್ತು 'ತದ್ಧರ್ಮೋಪದೇಶಾತ್' 'ಭೇದವ್ಯಪದೇಶಾಚ್ಚ' ಇತ್ಯಾದಿ ಸೂತ್ರಗಳಲ್ಲಿ 'ವ್ಯಪದೇಶಾತ್' ಎಂದಷ್ಟೇ ಹೇಳದೆ, ವ್ಯಪದೇಶದ ಸ್ವರೂಪವನ್ನೂ ಕೂಡ ತಿಳಿಸಿರುತ್ತಾರೆ. ಅದರಂತೆ ಈ ಸೂತ್ರದಲ್ಲಿಯೂ ವ್ಯಪದೇಶದ ಸ್ವರೂಪವನ್ನು ತಿಳಿಸುವುದಕ್ಕಾಗಿ 'ಈಕ್ಷತಿಕರ್ಮ' ಎಂಬ ಹಿಂದಿನ ವಿಶೇಷಣವು ಪ್ರಯುಕ್ತವಾಗಿದೆ. ಸುಲಭವಾಗಿ ಹೀಗೆಯೇ ವ್ಯಾಖ್ಯಾನಿಸಲು ಬರುವಾಗ 'ಈಕ್ಷತಿಕರ್ಮ' ಎಂಬುದನ್ನು ಬೇರೆ ಪದವೆಂದು 'ವ್ಯಪದೇಶಾತ್' ಎಂಬುದನ್ನು ಮತ್ತೊಂದು ಪದವೆಂದು ಪರಿಗಣಿಸುವುದು ತಪ್ಪಾಗುತ್ತದೆ. ಆದ್ದರಿಂದ ರಾಮಾನುಜರ ಅಧಿಕರಣ ಶರೀರವು ಅದ್ವೈತಮತದಂತೆ ಅಸಾಧುವಾಗಿದೆ.

---

ಹೀಗೆ ಹೇಳಿದ್ದರಿಂದ ರಾಮಾನುಜರ ಮತ್ತೊಂದು ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು - 'ಪರಾತ್ಪರಂ ಪುರಿಶಯಮ್' ಎಂಬ ವಾಕ್ಯವು ಬ್ರಹ್ಮಪರವಾಗಿದೆಯೆಂದು ಯಾವುದಾದರೂ ಒಂದು ಅಧಿಕರಣದಲ್ಲಿ ನಿರ್ಣಯ ಮಾಡಬೇಕು. ಬೇರೆ ಅಧಿಕರಣಗಳಲ್ಲಿ ಇದನ್ನು ಪ್ರತಿಪಾದಿಸುವ ಲಿಂಗಗಳಾವುದೂ ಕಾಣಿಸುತ್ತಿಲ್ಲ. ಅನಿವಾರ್ಯವಾಗಿ ಈ ಅಧಿಕರಣದಲ್ಲೇ ಸಮನ್ವಯ ಮಾಡಬೇಕೆಂದು ರಾಮಾನುಜರ ಅಭಿಪ್ರಾಯ. ಇದನ್ನು ಈಗ ನಿರಾಕರಿಸಿದಂತಾಯಿತು. ಏಕೆಂದರೆ ಈ ಪ್ರಕರಣದಲ್ಲಿ ಬ್ರಹ್ಮಲಿಂಗಗಳೇ ಬಹುಲವಾಗಿ ಕೇಳಿಸುತ್ತಿರುವುದರಿಂದ ಸನ್ನಿಧಿಪ್ರಮಾಣವು ಬಾಧಿತವಾಗುತ್ತದೆ. ಆದ್ದರಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತದೋ, ಇಲ್ಲವೋ ಎಂಬ ಸಂಶಯವೇ ಹುಟ್ಟುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣ ಶರೀರವು ಅತ್ಯಂತ ಅಯುಕ್ತವಾಗಿದೆಯೆಂದು ನಿರ್ಣಯವಾಯಿತು.

**प्रकाशः** – एतेन रामानुजीयरीतिमनुसृत्य पूर्वोत्तरपक्षौ सूत्रार्थं च वर्णयतः कस्यचिच्छैवस्य मतमपि प्रत्युक्तं बोध्यम् ।

ಹೀಗೆ ರಾಮಾನುಜಮತವನ್ನು ನಿರಾಕರಣೆ ಮಾಡಿದ್ದರಿಂದ, ರಾಮಾನುಜರ ಅಭಿಪ್ರಾಯವನ್ನೇ ಅನುಸರಿಸಿ ಪೂರ್ವಪಕ್ಷ-ಸಿದ್ಧಾಂತ ಹಾಗೂ ಸೂತ್ರಾರ್ಥಗಳನ್ನು ವರ್ಣಿಸುವ ಕೆಲವು ಶೈವರ ಮತವನ್ನೂ ಸಹ ನಿರಾಕರಿಸಿದಂತಾಯಿತು.

**प्रकाशः** – विषयवाक्यस्थब्रह्मात्मपुरुषादिशब्दानां तत्र तत्र भाष्यादौ पूर्वत्रास्माभिश्च विष्ण्वेकनिष्ठताया दर्शितत्वेन शिव इति सिद्धान्तस्यातितुच्छत्वादिति ।।छ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे सदधिकरणं सम्पूर्णम् ॥**

ಹೇಗೆಂದರೆ ವಿಷಯವಾಕ್ಯದಲ್ಲಿರುವ ಬ್ರಹ್ಮ, ಆತ್ಮಾ, ಪುರುಷ ಮೊದಲಾದ ಶಬ್ದಗಳೆಲ್ಲವೂ ಕೇವಲ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ಭಾಷ್ಯಾದಿಗಳಲ್ಲಿ ಉಲ್ಲೇಖಿಸಿದ ಪ್ರಮಾಣಗಳಿಂದ ನಾವು ತೋರಿಸಿದ್ದೇವೆ. ಆದ್ದರಿಂದ ಶಿವನೇ ಈ ಅಧಿಕರಣ ಪ್ರತಿಪಾದ್ಯನೆಂಬ ಸಿದ್ಧಾಂತವು ಅತ್ಯಂತ ಹೇಯವಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಸದಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ



ರಾಮಾನುಜ ಭಾಷ್ಯದಲ್ಲಿ 'ಪರಮಪುರುಷಮಭಿಧ್ಯಾಯೀತ' ಎಂಬುದನ್ನೇ ವಿಷಯವಾಕ್ಯವೆಂದು ಪರಿಗಣಿಸಿದ್ದಾರೆ. ಧ್ಯಾನಕ್ಕೆ ವಿಷಯನೆಂದು ಹೇಳಲ್ಪಟ್ಟ ಪುರುಷನು ಚತುರ್ಮುಖನೇ ಆಗಿದ್ದಾನೆ. ಏಕೆಂದರೆ ಪ್ರಣವವನ್ನು ಒಂದು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಮನುಷ್ಯಲೋಕವು, ಎರಡು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಸ್ವರ್ಗಲೋಕವು, ಮೂರು ಮಾತ್ರಾಕಾಲಗಳಲ್ಲಿ ಉಚ್ಚರಿಸಿದಾಗ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ. ಹೀಗೆ ಪ್ರಣವೋಪಾಸನದ ಫಲವನ್ನು ಹೇಳಲಾಗಿದೆ. ಮನುಷ್ಯ ಲೋಕ ಹಾಗೂ ಅಂತರಿಕ್ಷ ಲೋಕದ ಸನ್ನಿಧಾನವಿರುವುದರಿಂದ ಬ್ರಹ್ಮಲೋಕ ಶಬ್ದಕ್ಕೆ ಮೋಕ್ಷವೆಂದು ಅರ್ಥೈಸಲಾಗದು ಹೊರತಾಗಿ, ಚತುರ್ಮುಖಲೋಕವೆಂದೇ ಅರ್ಥೈಸಬೇಕು. ಆದ್ದರಿಂದ ಚತುರ್ಮುಖಬ್ರಹ್ಮನೇ ಧ್ಯಾನಕ್ಕೆ ವಿಷಯನಾಗುತ್ತಾನೆಂದು ಅವರ ಪೂರ್ವಪಕ್ಷ.

'ಪರಮ್', 'ಶಾಂತಮ್', 'ಅಭಯಮ್', 'ಅಮೃತಮ್' ಇತ್ಯಾದಿಯಾಗಿ ಬ್ರಹ್ಮನ ಲಿಂಗಗಳೇ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಅಪರೋಕ್ಷಜ್ಞಾನಕ್ಕೆ ವಿಷಯನಾಗಿರುವವನು ಪರಮಾತ್ಮನೇ ಆಗಿದ್ದಾನೆ. ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೇ ಧ್ಯಾನಕ್ಕೂ ವಿಷಯನಾಗಬೇಕಾದ್ದರಿಂದ 'ಪುರಿಶಯಂ ಪುರುಷಮೀಕ್ಷತೇ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಕೂಡ ಪರಬ್ರಹ್ಮನೇ ಆಗುತ್ತಾನೆಂದು ಸಿದ್ಧಾಂತ. ಮತ್ತು ಇವರು 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ ನಾವು ಹಾಗೂ ಅದ್ವೈತಿಗಳು ಹೇಳುವುದಕ್ಕಿಂತ ವಿಭಿನ್ನವಾಗಿ ಪದಚ್ಛೇದ ಮಾಡಿ ಅರ್ಥವನ್ನು ಹೇಳುತ್ತಾರೆ. 'ಈಕ್ಷತಿಕರ್ಮ' ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೂ ಸಹ ಪರಮಾತ್ಮನೇ ಆಗಿದ್ದಾನೆ. ಏಕೆಂದರೆ 'ವ್ಯಪದೇಶಾತ್' ಪರಮಾತ್ಮನೆಂದು ಹೇಳಿದ್ದರಿಂದ ಹೀಗೆ ಇವರ ವ್ಯಾಖ್ಯಾನ.

ರಾಮಾನುಜ ಭಾಷ್ಯದ ಈ ಅಭಿಪ್ರಾಯವು ಅಸಾಧುವಾಗಿದೆ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಸನ್ನಿಧಿ ಪ್ರಮಾಣಕ್ಕಿಂತ ಲಿಂಗವೇ ಹೆಚ್ಚು ಶ್ರೇಷ್ಠವೆಂದು ನಿರ್ಣಯಿಸಲಾಗಿದೆ. ಪೂರ್ವಮೀಮಾಂಸಾ ಗ್ರಂಥವನ್ನು ಪರಮ ಪ್ರಮಾಣವೆಂದು ಹೇಳುವ ರಾಮಾನುಜರು ಅದಕ್ಕೆ ವಿರುದ್ಧವಾಗಿ ಮಾತನಾಡುವುದು ತಪ್ಪಾಗುತ್ತದೆ. ಯಾವಾಗ ಲಿಂಗವೇ ಪ್ರಬಲ ಪ್ರಮಾಣವಾಯಿತೋ, ಆವಾಗ ಸನ್ನಿಧಿ ಪ್ರಮಾಣದಿಂದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ.

ಮತ್ತು 'ತದ್ಧರ್ಮೋಪದೇಶಾತ್' 'ಭೇದವ್ಯಪದೇಶಾಚ್ಚ' ಇತ್ಯಾದಿ ಸೂತ್ರಗಳಲ್ಲಿ 'ವ್ಯಪದೇಶಾತ್' ಎಂದಷ್ಟೇ ಹೇಳದೆ, ವ್ಯಪದೇಶದ ಸ್ವರೂಪವನ್ನೂ ಕೂಡ ತಿಳಿಸಿರುತ್ತಾರೆ. ಅದರಂತೆ ಈ ಸೂತ್ರದಲ್ಲಿಯೂ ವ್ಯಪದೇಶದ ಸ್ವರೂಪವನ್ನು ತಿಳಿಸುವುದಕ್ಕಾಗಿ 'ಈಕ್ಷತಿಕರ್ಮ' ಎಂಬ ಹಿಂದಿನ ವಿಶೇಷಣವು ಪ್ರಯುಕ್ತವಾಗಿದೆ. ಸುಲಭವಾಗಿ ಹೀಗೆಯೇ ವ್ಯಾಖ್ಯಾನಿಸಲು ಬರುವಾಗ 'ಈಕ್ಷತಿಕರ್ಮ' ಎಂಬುದನ್ನು ಬೇರೆ ಪದವೆಂದು 'ವ್ಯಪದೇಶಾತ್' ಎಂಬುದನ್ನು ಮತ್ತೊಂದು ಪದವೆಂದು ಪರಿಗಣಿಸುವುದು ತಪ್ಪಾಗುತ್ತದೆ. ಆದ್ದರಿಂದ ರಾಮಾನುಜರ ಅಧಿಕರಣ ಶರೀರವು ಅದ್ವೈತಮತದಂತೆ ಅಸಾಧುವಾಗಿದೆ.

//////////////////////////////////////////

ಹೀಗೆ ಹೇಳಿದ್ದರಿಂದ ರಾಮಾನುಜರ ಮತ್ತೊಂದು ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು - 'ಪರಾತ್ಪರಂ ಪುರಿಶಯಮ್' ಎಂಬ ವಾಕ್ಯವು ಬ್ರಹ್ಮಪರವಾಗಿದೆಯೆಂದು ಯಾವುದಾದರೂ ಒಂದು ಅಧಿಕರಣದಲ್ಲಿ ನಿರ್ಣಯ ಮಾಡಬೇಕು. ಬೇರೆ ಅಧಿಕರಣಗಳಲ್ಲಿ ಇದನ್ನು ಪ್ರತಿಪಾದಿಸುವ ಲಿಂಗಗಳಾವುದೂ ಕಾಣಿಸುತ್ತಿಲ್ಲ. ಅನಿವಾರ್ಯವಾಗಿ ಈ ಅಧಿಕರಣದಲ್ಲೇ ಸಮನ್ವಯ ಮಾಡಬೇಕೆಂದು ರಾಮಾನುಜರ ಅಭಿಪ್ರಾಯ. ಇದನ್ನು ಈಗ ನಿರಾಕರಿಸಿದಂತಾಯಿತು. ಏಕೆಂದರೆ ಈ ಪ್ರಕರಣದಲ್ಲಿ ಬ್ರಹ್ಮಲಿಂಗಗಳೇ ಬಹುಲವಾಗಿ ಕೇಳಿಸುತ್ತಿರುವುದರಿಂದ ಸನ್ನಿಧಿಪ್ರಮಾಣವು ಬಾಧಿತವಾಗುತ್ತದೆ. ಆದ್ದರಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತದೋ, ಇಲ್ಲವೋ ಎಂಬ ಸಂಶಯವೇ ಹುಟ್ಟುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣ ಶರೀರವು ಅತ್ಯಂತ ಅಯುಕ್ತವಾಗಿದೆಯೆಂದು ನಿರ್ಣಯವಾಯಿತು.

**प्रकाशः** – एतेन रामानुजीयरीतिमनुसृत्य पूर्वोत्तरपक्षौ सूत्रार्थं च वर्णयतः कस्यचिच्छैवस्य मतमपि प्रत्युक्तं बोध्यम् ।

ಹೀಗೆ ರಾಮಾನುಜಮತವನ್ನು ನಿರಾಕರಣೆ ಮಾಡಿದ್ದರಿಂದ, ರಾಮಾನುಜರ ಅಭಿಪ್ರಾಯವನ್ನೇ ಅನುಸರಿಸಿ ಪೂರ್ವಪಕ್ಷ-ಸಿದ್ಧಾಂತ ಹಾಗೂ ಸೂತ್ರಾರ್ಥಗಳನ್ನು ವರ್ಣಿಸುವ ಕೆಲವು ಶೈವರ ಮತವನ್ನೂ ಸಹ ನಿರಾಕರಿಸಿದಂತಾಯಿತು.

**प्रकाशः** – विषयवाक्यस्थब्रह्मात्मपुरुषादिशब्दानां तत्र तत्र भाष्यादौ पूर्वत्रास्माभिश्च विष्ण्वेकनिष्ठताया दर्शितत्वेन शिव इति सिद्धान्तस्यातितुच्छत्वादिति ।।छ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे सदधिकरणं सम्पूर्णम् ।।**

ಹೇಗೆಂದರೆ ವಿಷಯವಾಕ್ಯದಲ್ಲಿರುವ ಬ್ರಹ್ಮ, ಆತ್ಮಾ, ಪುರುಷ ಮೊದಲಾದ ಶಬ್ದಗಳೆಲ್ಲವೂ ಕೇವಲ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ಭಾಷ್ಯಾದಿಗಳಲ್ಲಿ ಉಲ್ಲೇಖಿಸಿದ ಪ್ರಮಾಣಗಳಿಂದ ನಾವು ತೋರಿಸಿದ್ದೇವೆ. ಆದ್ದರಿಂದ ಶಿವನೇ ಈ ಅಧಿಕರಣ ಪ್ರತಿಪಾದ್ಯನೆಂಬ ಸಿದ್ಧಾಂತವು ಅತ್ಯಂತ ಹೇಯವಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಸದಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ



ರಾಮಾನುಜ ಭಾಷ್ಯದಲ್ಲಿ 'ಪರಮಪುರುಷಮಭಿಧ್ಯಾಯೀತ' ಎಂಬುದನ್ನೇ ವಿಷಯವಾಕ್ಯವೆಂದು ಪರಿಗಣಿಸಿದ್ದಾರೆ. ಧ್ಯಾನಕ್ಕೆ ವಿಷಯನೆಂದು ಹೇಳಲ್ಪಟ್ಟ ಪುರುಷನು ಚತುರ್ಮುಖನೇ ಆಗಿದ್ದಾನೆ. ಏಕೆಂದರೆ ಪ್ರಣವವನ್ನು ಒಂದು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಮನುಷ್ಯಲೋಕವು, ಎರಡು ಮಾತ್ರಾಕಾಲದಲ್ಲಿ ಉಚ್ಚರಿಸಿದಾಗ ಸ್ವರ್ಗಲೋಕವು, ಮೂರು ಮಾತ್ರಾಕಾಲಗಳಲ್ಲಿ ಉಚ್ಚರಿಸಿದಾಗ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ. ಹೀಗೆ ಪ್ರಣವೋಪಾಸನದ ಫಲವನ್ನು ಹೇಳಲಾಗಿದೆ. ಮನುಷ್ಯ ಲೋಕ ಹಾಗೂ ಅಂತರಿಕ್ಷ ಲೋಕದ ಸನ್ನಿಧಾನವಿರುವುದರಿಂದ ಬ್ರಹ್ಮಲೋಕ ಶಬ್ದಕ್ಕೆ ಮೋಕ್ಷವೆಂದು ಅರ್ಥೈಸಲಾಗದು ಹೊರತಾಗಿ, ಚತುರ್ಮುಖಲೋಕವೆಂದೇ ಅರ್ಥೈಸಬೇಕು. ಆದ್ದರಿಂದ ಚತುರ್ಮುಖಬ್ರಹ್ಮನೇ ಧ್ಯಾನಕ್ಕೆ ವಿಷಯನಾಗುತ್ತಾನೆಂದು ಅವರ ಪೂರ್ವಪಕ್ಷ.

'ಪರಮ್', 'ಶಾಂತಮ್', 'ಅಭಯಮ್', 'ಅಮೃತಮ್' ಇತ್ಯಾದಿಯಾಗಿ ಬ್ರಹ್ಮನ ಲಿಂಗಗಳೇ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಅಪರೋಕ್ಷಜ್ಞಾನಕ್ಕೆ ವಿಷಯನಾಗಿರುವವನು ಪರಮಾತ್ಮನೇ ಆಗಿದ್ದಾನೆ. ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೇ ಧ್ಯಾನಕ್ಕೂ ವಿಷಯನಾಗಬೇಕಾದ್ದರಿಂದ 'ಪುರಿಶಯಂ ಪುರುಷಮೀಕ್ಷತೇ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಕೂಡ ಪರಬ್ರಹ್ಮನೇ ಆಗುತ್ತಾನೆಂದು ಸಿದ್ಧಾಂತ. ಮತ್ತು ಇವರು 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ ನಾವು ಹಾಗೂ ಅದ್ವೈತಿಗಳು ಹೇಳುವುದಕ್ಕಿಂತ ವಿಭಿನ್ನವಾಗಿ ಪದಚ್ಛೇದ ಮಾಡಿ ಅರ್ಥವನ್ನು ಹೇಳುತ್ತಾರೆ. 'ಈಕ್ಷತಿಕರ್ಮ' ಜ್ಞಾನಕ್ಕೆ ವಿಷಯನಾದ ವ್ಯಕ್ತಿಯೂ ಸಹ ಪರಮಾತ್ಮನೇ ಆಗಿದ್ದಾನೆ. ಏಕೆಂದರೆ 'ವ್ಯಪದೇಶಾತ್' ಪರಮಾತ್ಮನೆಂದು ಹೇಳಿದ್ದರಿಂದ ಹೀಗೆ ಇವರ ವ್ಯಾಖ್ಯಾನ.

ರಾಮಾನುಜ ಭಾಷ್ಯದ ಈ ಅಭಿಪ್ರಾಯವು ಅಸಾಧುವಾಗಿದೆ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಸನ್ನಿಧಿ ಪ್ರಮಾಣಕ್ಕಿಂತ ಲಿಂಗವೇ ಹೆಚ್ಚು ಶ್ರೇಷ್ಠವೆಂದು ನಿರ್ಣಯಿಸಲಾಗಿದೆ. ಪೂರ್ವಮೀಮಾಂಸಾ ಗ್ರಂಥವನ್ನು ಪರಮ ಪ್ರಮಾಣವೆಂದು ಹೇಳುವ ರಾಮಾನುಜರು ಅದಕ್ಕೆ ವಿರುದ್ಧವಾಗಿ ಮಾತನಾಡುವುದು ತಪ್ಪಾಗುತ್ತದೆ. ಯಾವಾಗ ಲಿಂಗವೇ ಪ್ರಬಲ ಪ್ರಮಾಣವಾಯಿತೋ, ಆವಾಗ ಸನ್ನಿಧಿ ಪ್ರಮಾಣದಿಂದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ.

ಮತ್ತು 'ತದ್ಧರ್ಮೋಪದೇಶಾತ್' 'ಭೇದವ್ಯಪದೇಶಾಚ್ಚ' ಇತ್ಯಾದಿ ಸೂತ್ರಗಳಲ್ಲಿ 'ವ್ಯಪದೇಶಾತ್' ಎಂದಷ್ಟೇ ಹೇಳದೆ, ವ್ಯಪದೇಶದ ಸ್ವರೂಪವನ್ನೂ ಕೂಡ ತಿಳಿಸಿರುತ್ತಾರೆ. ಅದರಂತೆ ಈ ಸೂತ್ರದಲ್ಲಿಯೂ ವ್ಯಪದೇಶದ ಸ್ವರೂಪವನ್ನು ತಿಳಿಸುವುದಕ್ಕಾಗಿ 'ಈಕ್ಷತಿಕರ್ಮ' ಎಂಬ ಹಿಂದಿನ ವಿಶೇಷಣವು ಪ್ರಯುಕ್ತವಾಗಿದೆ. ಸುಲಭವಾಗಿ ಹೀಗೆಯೇ ವ್ಯಾಖ್ಯಾನಿಸಲು ಬರುವಾಗ 'ಈಕ್ಷತಿಕರ್ಮ' ಎಂಬುದನ್ನು ಬೇರೆ ಪದವೆಂದು 'ವ್ಯಪದೇಶಾತ್' ಎಂಬುದನ್ನು ಮತ್ತೊಂದು ಪದವೆಂದು ಪರಿಗಣಿಸುವುದು ತಪ್ಪಾಗುತ್ತದೆ. ಆದ್ದರಿಂದ ರಾಮಾನುಜರ ಅಧಿಕರಣ ಶರೀರವು ಅದ್ವೈತಮತದಂತೆ ಅಸಾಧುವಾಗಿದೆ.

---

## ಟೀಕೆಯ ಕ೦ಣಪದಾರ್ಥ

### तात्पर्यचन्द्रिका

टीकाक्षरार्थस्तु । 'सोमो वै राजा गन्धर्वेष्वासीत् इत्यादिवत्' इति टीकाया अयमर्थः । यथा ''सोमो वै राजा गन्धर्वेष्वासीत् । तं देवाश्च ऋषयश्चाभ्यध्यायन्'' इत्यादौ सोमलताभिमानिचेतनविवक्षया गन्धर्वेष्वासीदिति व्यपदेशस्तथाऽत्रापि प्रधानाभिमानिचेतनविवक्षयेक्षितृत्वव्यपदेश इति ।। छ ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायां सदधिकरणं सम्पूर्णम् ।।४।।

ಅನುವಾದ - ಟೀಕಾಕ್ಷರಾರ್ಥ - 'ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್ ಇತ್ಯಾದಿವತ್' ಎಂಬ ಟೀಕೆಗೆ ಹೀಗರ್ಥ - ಯಾವರೀತಿಯಾಗಿ 'ಸೋಮೋ ವೈ ರಾಜಾ ಗಂಧರ್ವೇಷು ಆಸೀತ್ । ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್' ಗಂಧರ್ವರಲ್ಲಿ ಸೋಮವು ಇತ್ತು ಎಂದರೆ, 'ಸೋಮಲತೆಗೆ ಅಭಿಮಾನಿಯಾದ ಪುರುಷನು ಇದ್ದನು' ಎಂದರ್ಥ. ಈ ದೃಷ್ಟಿಯಿಂದಲೇ 'ಗಂಧರ್ವೇಷು ಆಸೀತ್' ಎಂಬ 'ವ್ಯಪದೇಶವು' ಇರುತ್ತದೆ. ಅದರಂತೆ ಪ್ರಕೃತದಲ್ಲಿಯೂ ಪ್ರಧಾನಕ್ಕೆ ಅಭಿಮಾನಿಯಾದ ಚೇತನನನ್ನು ವಿವಕ್ಷಿಸಿ, ಈಕ್ಷಣವನ್ನು ಶ್ರುತಿಯು ಹೇಳುತ್ತಿದೆ.

ಇಲ್ಲಿಗೆ ಶ್ರೀಮದ್ವ್ಯಾಸತೀರ್ಥರು ರಚಿಸಿದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಸದಧಿಕರಣವು ಸಂಪೂರ್ಣವಾಯಿತು.

# ಸದಧಿಕರಣ

(೧-೩-೪)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री मदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## सदधिकरणम् (१।३।४)

सून्

'ಸತ್' ಶಬ್ದದ ಮುಖ್ಯಾರ್ಥ ವಿಷ್ಣು ಹೊರತು, ಜಡಪ್ರಕೃತಿಯಲ್ಲ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## सदधिकरणम् (१।३।४)

नन्वथापि सर्वकर्ता विष्णुरित्ययुक्तम् । छान्दोग्ये षष्ठे 'सदेव सोम्येदमग्र आसीदेकमेवाद्वितीयम्' इत्यादिंना बहुप्रकरणेषु श्रुतसच्छब्दोक्तस्यावधारणेन एकपदादिना चानन्याधीनकारणत्वस्य 'तत्तेजोसृजत' इति, 'सन्मूलाः सोम्येमाः प्रजाः सदायतनाः सत्प्रतिष्ठाः' इति, 'सता सोम्य तदा सम्पन्नो भवति' इत्यादिना अत्र सृष्टिस्थितिमुक्तिसुप्तिप्रलयहेतुत्वादेश्चोक्तेः । सच्छब्दितस्य च 'तदैक्षत बहुस्यां प्रजायेय' इति बहुभवनरूपविकारश्रवणेन प्रधानत्वादीक्षणस्य च जडे अभिमानिद्वारा

वा 'सत्वात्संज्ञायते ज्ञानम्' इति ज्ञानोपादानत्वाद्वा युक्तत्वान्निर्विकारे हरौ च विकारस्य सर्वथाऽप्ययोगादित्यतः प्राप्तम् - **ईक्षतिकर्मव्यपदेशात् स इति ।**

ಶಂಕೆ - ಜನ್ಮಾದ್ಯಧಿಕರಣದಲ್ಲಿ ವಿಷ್ಣುವೇ 'ಸರ್ವಕರ್ತಾ' ಎಂದು ಸಮರ್ಥಿಸಲಾಯಿತು. ಇದು ಸರಿಯಲ್ಲ ಏಕೆಂದರೆ ಛಾಂದೋಗ್ಯೋಪನಿಷತ್ತಿನ ಆರನೇ ಅಧ್ಯಾಯದಲ್ಲಿ 'ಸದೇವ ಸೋಮ್ಯ ಇದಮಗ್ರ ಆಸೀತ್' 'ಏಕಮೇವಾದ್ವಿತೀಯಮ್' ಇತ್ಯಾದಿ ಅನೇಕ ಪ್ರಕರಣಗಳಲ್ಲಿ 'ಸತ್' ಎಂಬ ಶಬ್ದವು ಶ್ರುತವಾಗಿದೆ. ಇಂತಹ 'ಸತ್' ಪದಾರ್ಥವೇ ಸೃಷ್ಟಿ-ಸ್ಥಿತಿ-ಮುಕ್ತಿ-ಸುಪ್ತಿ, ಪ್ರಳಯಗಳಿಗೆ ಕಾರಣವೆಂದು ಉಪನಿಷತ್ತು ಹೇಳುತ್ತಿದೆ. 'ಏವ' ಎಂಬ ಅವಧಾರಣದಿಂದ ಮತ್ತು 'ಏಕಪದ' ಮೊದಲಾದವುಗಳಿಂದ ಈ ಸತ್‌ಪದಾರ್ಥವು ಅನನ್ಯಾಧೀನ ಕಾರಣವಾಗಿದೆಯೆಂದು ತಿಳಿಯುತ್ತದೆ.

'ತತ್ತೇಜೋಽಸೃಜತ' 'ಸನ್ಮೂಲಾಃ ಸೋಮ್ಯೇಮಾಃ ಪ್ರಜಾಃ ಸದಾಯತನಾಃ ಸತ್‌ಪ್ರತಿಷ್ಠಾಃ', 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಇವೇ ಮೊದಲಾದ ವಾಕ್ಯಗಳಿಂದ ಸೃಷ್ಟಿ, ಸ್ಥಿತಿ, ಮುಕ್ತಿ, ಸುಪ್ತಿ, ಪ್ರಳಯ ಇವುಗಳಿಗೆಲ್ಲಾ 'ಸತ್' ಪದಾರ್ಥವು ಕಾರಣವಾಗಿದೆಯೆಂದು ಉಪನಿಷತ್ತು ಹೇಳುತ್ತಿದೆ.

ಸತ್‌ಪದಾರ್ಥಕ್ಕೆ 'ತದೈಕ್ಷತ ಬಹುಸ್ಯಾಂ ಪ್ರಜಾಯೇಯ' ಎಂಬ ವಾಕ್ಯದಿಂದ, ಬಹುಭವನವೆಂಬ ವಿಕಾರವು ಶ್ರುತವಾಗಿದೆ. ಆದ್ದರಿಂದ ಬಹುಭವನವು ಜಡವಾದ ಪದಾರ್ಥದಲ್ಲೇ ಹೇಳಲು ಸಾಧ್ಯವಾದ್ದರಿಂದ ಪ್ರಕೃತಿಯೇ 'ಸತ್' ಶಬ್ದದಿಂದ ಪ್ರತಿಪಾದ್ಯವಾಗಿದೆಯೆಂದು ಹೇಳಬೇಕು. ಆಲೋಚನಾರೂಪವಾದ ಈಕ್ಷಣವನ್ನಾದರೂ ಜಡಪ್ರಕೃತಿಗೆ ಹೇಗೆ ಹೇಳುವುದೆಂದರೆ ಅಭಿಮಾನಿದೇವತೆಯ ಮೂಲಕ ಜಡಪ್ರಕೃತಿಯಲ್ಲಿ ಇದನ್ನು ಕೂಡಿಸಬಹುದು. ಅಂದರೆ ಅಭಿಮಾನಿಯಲ್ಲಿರುವ ನೋಡುವಿಕೆಯನ್ನು ಜಡದಲ್ಲಿ ಔಪಚಾರಿಕವಾಗಿ ಶ್ರುತಿಹೇಳುತ್ತಿದೆ ಎಂದು ಅಭಿಪ್ರಾಯ. ಅಥವಾ 'ಸತ್ವಾತ್ ಸಂಜ್ಞಾಯತೇ ಜ್ಞಾನಮ್' ಎಂಬುದಾಗಿ ಸತ್ವಗುಣವು ಜ್ಞಾನಕ್ಕೆ ಉಪಾದಾನ ಕಾರಣ ಎಂಬುದರಿಂದ ಅದಕ್ಕೂ ಕೂಡ ಜ್ಞಾನವಿದೆಯೆಂದು ಔಪಚಾರಿಕವಾಗಿ ಹೇಳಬಹುದು. ಹೀಗೆ ಈಕ್ಷಣವನ್ನು ಔಪಚಾರಿಕವಾಗಿ ಕೂಡಿಸಲು ಬರುವುದರಿಂದ ಜಡಪ್ರಕೃತಿಯೇ 'ಸತ್' ಎನಿಸುತ್ತದೆ. ಆದ್ದರಿಂದ ಸೃಷ್ಟಿ-ಸ್ಥಿತಿ ಇವುಗಳಿಗೆಲ್ಲಾ ಜಡಪ್ರಕೃತಿಯೇ ಕಾರಣವಾಗಿದೆಯೆಂದು ಉಪನಿಷತ್ತಿನ ಅಭಿಪ್ರಾಯ. ಹೀಗಿರುವಾಗ ವಿಷ್ಣುವನ್ನು ಸಕಲ ಜಗತ್ಕಾರಣನೆಂದು ಹೇಳಿದ್ದು ಹೇಗೆ ಸರಿಯಾಗುತ್ತದೆ?

ಸಮಾಧಾನ - ಈ ಶಂಕೆಗೆ ಸಮಾಧಾನವನ್ನು ನೀಡುವುದಕ್ಕಾಗಿ 'ಈಕ್ಷತಿಕರ್ಮವ್ಯಪದೇಶಾತ್ ಸ' ಎಂಬ ಸೂತ್ರವು ಹೊರಟಿದೆ.

तदर्थः - **सन्निति ।** अत्रापि पूर्ववद्यौगिकः सच्छब्दार्थो निर्दोषत्वादिविशिष्टो वा स्वातन्त्र्यादिविशिष्टो वा सन्निति निर्दिश्यते प्रकरणवशात् । 'यच्छब्दा योगवृत्तयः' इति वक्ष्यमाणानुरोधाच्च । पूर्ववदनुषङ्गः । सदेव सोम्य' इत्यादौ सृष्टिस्थाने सच्छब्दोक्तः सन्निर्दोषादिर्वा स्वतन्त्रो वा । सः प्राक् सर्वकर्तृत्वेनोक्तः एको जनार्दनः । तथा च कारणत्वमुखेन तदन्यत्र वाचकत्वेन प्रतीतैः 'सदेव सोम्य'

'सन्मूलाः सोम्य' इत्यादिना अनेकप्रकरणेषु श्रुतैः सर्वैः सच्छब्दैः तद्विशेषणैरेक एवेत्यादिशब्दैः मुख्यतो जनार्दन एव वाच्यो न प्रकृतिः ।

ಈ ಅಧಿಕರಣದ ಅರ್ಥವನ್ನು ಅಣುಭಾಷ್ಯದಲ್ಲಿ 'ಸನ್' ಎಂಬ ಪದದಿಂದ ಸಂಗ್ರಹಿಸಿದ್ದಾರೆ. 'ಸತ್' ಎಂಬ ಶಬ್ದಕ್ಕೆ ಹಿಂದೆ ಹೇಳಿದಂತೆ ಯೋಗಿಕಾರ್ಥವನ್ನು ಸ್ವೀಕರಿಸಿದಾಗ 'ನಿರ್ದೋಷತ್ವ ವಿಶಿಷ್ಟ' ಎಂದು ಅಥವಾ 'ಸ್ವತಂತ್ರ್ಯಾದಿವಿಶಿಷ್ಟ' ಎಂಬರ್ಥವನ್ನು ತಿಳಿಯಬೇಕು. ಹೀಗೆ ವ್ಯುತ್ಪತ್ತಿಬಲದಿಂದ 'ಸತ್' ಶಬ್ದದ ಅರ್ಥವನ್ನು ತಿಳಿಯಬೇಕು. ಈ ಪ್ರಕರಣದಲ್ಲಿ ಯೌಗಿಕಾರ್ಥವೇ ಪ್ರಕೃತವಾಗಿದೆ. ಮತ್ತು 'ಯಚ್ಛಬ್ದಾ ಯೋಗವೃತ್ತಯ' ಎಂಬುದಾಗಿ ಈ ಅಧ್ಯಾಯದ ಕೊನೆಯಲ್ಲಿ ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರು ಎಲ್ಲ ಶಬ್ದಗಳು ಯೋಗಿಕಾರ್ಥದಲ್ಲಿಯೇ ಪ್ರಯುಕ್ತವಾಗಿವೆ ಎಂದು ಹೇಳುತ್ತಾರೆ. 'ತದನ್ಯತ್ರ ತ್ಯಜವಾಚಕೈಃ ಲಿಂಗೈಃ ಸರ್ವೈಃ' ಇತ್ಯಾದಿ ಪದಗಳನ್ನು ಹಿಂದಿನ ಅಧಿಕರಣಗಳಂತೆ ಇಲ್ಲಿಯೂ ಸಹ ಅನ್ವಯ ಮಾಡಿಕೊಳ್ಳಬೇಕು. ಆದ್ದರಿಂದ ವಿಷ್ಣು ಮತ್ತು ಪ್ರಧಾನ ಇಬ್ಬರಲ್ಲಿಯೂ ಸಾಧಾರಣವಾದ 'ಸತ್' ಎಂಬ ಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. 'ಸದೇವ ಸೌಮ್ಯ' ಇತ್ಯಾದಿ ಪ್ರಕರಣದಲ್ಲಿ ಇರುವಂತಹ ಸಕಲಧರ್ಮಗಳೆಲ್ಲವೂ ವಿಷ್ಣುವೇ ಧರ್ಮವೇ ಆಗಿದೆಯೆಂದು ಅಣುಭಾಷ್ಯದ ಮಾತಿನಿಂದ ತಿಳಿದುಕೊಳ್ಳಬೇಕು.

'ಸದೇವ ಸೌಮ್ಯ' ಇತ್ಯಾದಿ ಸೃಷ್ಟಿಸ್ಥಾನದಲ್ಲಿ ಇರುವಂತಹ 'ಸತ್' ಎಂಬ ಶಬ್ದಕ್ಕೆ ನಿರ್ದುಷ್ಟ ಮತ್ತು ಸ್ವತಂತ್ರ ಎಂದರ್ಥ. ಇಂತಹ ಧರ್ಮಗಳಿಂದ ಯುಕ್ತನಾದವನು ಜನ್ಮಾಧಿಕರಣದಲ್ಲಿ 'ಸರ್ವಕರ್ತ' ಎಂದು ಹೇಳಲ್ಪಟ್ಟ ಒಬ್ಬನೇ ಜನಾರ್ದನನಾಗಿದ್ದಾನೆ. ಆದ್ದರಿಂದ ಕಾರಣತ್ವ ಮುಖದಿಂದ ಉಭಯತ್ರಪ್ರಸಿದ್ಧವಾದ 'ಸತ್' ಎಂಬ ಶಬ್ದವು ಜನಾರ್ದನನನ್ನೇ ಪ್ರತಿಪಾದನೆ ಮಾಡುತ್ತದೆ. 'ಸದೇವ ಸೌಮ್ಯ' ಸನ್ಮೂಲಾಃ ಸೌಮ್ಯ' ಇತ್ಯಾದಿ ಅನೇಕ ಪ್ರಕರಣಗಳಲ್ಲಿ ಶ್ರುತವಾದ 'ಸತ್' ಶಬ್ದಗಳೆಲ್ಲವೂ ಜನಾರ್ದನನನ್ನೇ ಪ್ರತಿಪಾದನೆ ಮಾಡುತ್ತದೆ. ವಿಶೇಷಣಗಳೆಲ್ಲವೂ 'ಏಕಃ' ಮತ್ತು 'ಏವ' ಇತ್ಯಾದಿ ಶಬ್ದಗಳ ಬಲಗಳಿಂದ ಮುಖ್ಯ-ಪ್ರತಿಪಾದ್ಯತ್ವವನ್ನು ಜನಾರ್ದನನಲ್ಲೇ ಸಮರ್ಥಿಸುತ್ತವೆ ಹೊರತು, ಪ್ರಕೃತಿಯು 'ಸತ್' ಶಬ್ದದಿಂದ ಪ್ರತಿಪಾದ್ಯವಾಗುವುದಿಲ್ಲ.

कुतः । **सन्विष्णुः लिङ्गैः सर्वैर्युतो हि** । ईक्षितृत्वस्रष्टृत्वाद्वितीयत्वाद्यैः लिङ्गैर्युतत्वादिति वा, तैर्युतः सन् जनार्दनः । तेषां भाष्योक्तवाक्यैः विष्णावेव मुख्यत्वप्रतीतेरिति वाऽर्थः ।

'ಸತ್' ಶಬ್ದದಿಂದ ಜನಾರ್ದನನೇ ಏಕೆ ಪ್ರತಿಪಾದ್ಯನಾಗುತ್ತಾನೆ ? ಎಂದರೆ 'ಸನ್ ವಿಷ್ಣುಃ ಲಿಂಗೈಃ ಸರ್ವೈರ್ಯುತೋ ಹಿ' ಎಂಬ ಮೂಲದಿಂದ ಉತ್ತರಿಸಲಾಗಿದೆ. ಅಂದರೆ ಸೃಷ್ಟಿ ಸ್ಥಾನದಲ್ಲಿ ಕೇಳಲ್ಪಟ್ಟ ಈಕ್ಷಿತೃತ್ವ ಸ್ರಷ್ಟೃತ್ವ, ಅದ್ವಿತೀಯತ್ವ ಮೊದಲಾದ ಲಿಂಗಗಳೆಲ್ಲವೂ ವಿಷ್ಣುವಿನ ಅಸಾಧಾರಣ ಧರ್ಮಗಳಾದ್ದರಿಂದ, ಜನಾರ್ದನನೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಭಾಷ್ಯದಲ್ಲಿ ಉದಾಹರಿಸಿದ ವಾಕ್ಯಗಳ ಬಲದಿಂದ, ಅವೆಲ್ಲವೂ ವಿಷ್ಣುವಿನಲ್ಲಿ ಮುಖ್ಯವಾಗಿ ಪ್ರತೀತವಾಗುತ್ತಿವೆ.

ಪರಿಪೂರ್ಣಚಂದ್ರಿಕಾ

नच बहुभवनविरोधः । सन्निति सच्छब्दार्थोक्त्या तेजःप्रभृत्यात्मना विकाररूपदोषाभावस्य जनार्दन इत्यत्राजत्ववाचिजनपदेन, 'अजायमानो बहुधा विजायते' इति श्रुतिसिद्धस्वरूपबहुभावस्य च दर्शितत्वात् । अर्दन इत्यंशेन चात्र 'सत्प्रतिष्ठाः' इत्यादिना श्रुतमुक्तिहेतुत्वं च तस्यैवेति सूचितम् । एक इत्युक्तिर्न भिन्नजडरूपेण बहुभवनं किन्तु स्वाभिन्ननानानियामकरूपेणेति सूचयितुम् ।।४।।

ವಿಷ್ಣುವೇ 'ಸತ್' ಶಬ್ದದಿಂದ ಪ್ರತಿಪಾದ್ಯನಾದರೆ ಬಹುಭವನಶ್ರುತಿಯ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು? ಏಕೆಂದರೆ ವಿಷ್ಣುವಿಗೆ ಸ್ವರೂಪತಃ ವಿಕಾರವಿಲ್ಲದಿದ್ದರೂ, ಅನೇಕ ರೂಪಗಳನ್ನು ತಾಳುವುದರಿಂದ ಕೂಡಿಸಬಹುದು. ಅಂದರೆ ತೇಜಸ್ಸು, ಅಪ್ ಮೊದಲಾದ ಪದಾರ್ಥಗಳ ವಿಕಾರ ರೂಪವನ್ನು ವಿಷ್ಣು ಹೊಂದುವುದಿಲ್ಲ. ಇಂತಹ ವಿಕಾರ ರೂಪವಾದ ಬಹುಭವನವಿಲ್ಲವೆಂದು ಜನಾರ್ದನ ಎಂಬಲ್ಲಿರುವ ಜನಶಬ್ದವು ಅಜತ್ವ ಎಂಬ ಧರ್ಮವನ್ನು ಹೇಳುವ ಮೂಲಕ ಸೂಚನೆ ಮಾಡುತ್ತಿದೆ. 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಶ್ರುತಿಸಿದ್ಧವಾದ ಸ್ವರೂಪಬಹುಭಾವವನ್ನು ವಿಷ್ಣುವಿಗೆ ಹೇಳಬಹುದು. ಅಂದರೆ ತನಗಿಂತ ಅಭಿನ್ನವಾದ ಅನೇಕ ರೂಪಗಳನ್ನು ಪರಮಾತ್ಮನು ಹೊಂದಿ ಸೃಷ್ಟಿಕಾರ್ಯವನ್ನು ನೆರವೇರಿಸುತ್ತಾನೆಂಬುದು ಶ್ರುತಿಸಿದ್ಧವೇ ಆಗಿದೆ.

'ಜನಾರ್ದನ' ಎಂಬಲ್ಲಿರುವ 'ಅರ್ದನ' ಎಂಬ ಅಂಶವು 'ಸತ್‌ಪ್ರತಿಷ್ಠಾಃ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಮುಕ್ತಿಹೇತುತ್ವ ಮೊದಲಾದ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ಸೂಚನೆ ಮಾಡುತ್ತಿವೆ. 'ಏಕಃ' ಎಂಬುದರಿಂದ ತನಗಿಂತ ಭಿನ್ನವಾದ ಜಡರೂಪಗಳಿಂದ ವಿಷ್ಣು ಬಹುಭವನವನ್ನು ತಾಳುವುದಿಲ್ಲ. ಹೊರತಾಗಿ ತನಗಿಂತ ಅಭಿನ್ನವಾದ ಅನೇಕ ನಿಯಾಮಕರೂಪಗಳಿಂದ ಬಹುಭಾವವನ್ನು ತಾಳುತ್ತಾನೆಂದು ಸೂಚನೆ ಮಾಡಲಾಗಿದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಸದಧಿಕರಣವು ಮುಗಿಯಿತು.

* * *

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## सदधिकरणम् (१।३।४)

।। ॐ ईक्षतिकर्मव्यपदेशात्सः ॐ ।। १-३-१३ ।।

अत्र ''सदेव सोम्य'' इत्यादिसृष्टिस्थानस्थसन्नाम समन्वीयते । योग्यतया सदित्यन्वेति । स इत्यनेन तत्त्विति तुरन्वेति ।

ಈ ಅಧಿಕರಣದಲ್ಲಿ ''ಸದೇವ ಸೋಮ್ಯ'' ಮೊದಲಾದ ಅನೇಕ ಪ್ರಕರಣರೂಪವಾದ ಸ್ಥಾನದಲ್ಲಿರುವ 'ಸತ್' ಎಂಬ ಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. 'ಸತ್' ಎಂಬ ಪದವು ಯೋಗ್ಯತಾದಿಗಳಿರುವುದರಿಂದ ಅನ್ವಯವನ್ನು ಹೊಂದುತ್ತದೆ. ಸೂತ್ರದಲ್ಲಿರುವ 'ಸಃ' ಎಂಬುದರ ಜೊತೆಗೆ 'ತು' ಶಬ್ದಕ್ಕೆ ಅನ್ವಯ ಮಾಡಬೇಕು.

''सदेव'' इत्यादौ श्रुतं सत् स एव विष्णुरेव । न प्रधानम् । ईक्षतिरूपं च तत्कर्म च तस्य व्यपदेशात् ''तदैक्षत'' इतीक्षणाख्यव्यापारोक्तेर्जडे तदयोगादित्यर्थः।

ಸೂತ್ರಾರ್ಥ - 'ಸದೇವ' ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ ಸತ್ = 'ಸತ್' ಶಬ್ದದಿಂದ ಪ್ರತಿಪಾದ್ಯನಾದವನು 'ಸಃ ತು' = ವಿಷ್ಣುವೇ ಆಗಿದ್ದಾನೆ ಹೊರತು, ಪ್ರಕೃತಿಯಲ್ಲ. ಏಕೆಂದರೆ ಈಕ್ಷತೀಕರ್ಮವ್ಯಪದೇಶಾತ್ = ಈಕ್ಷತಿರೂಪವಾದ ಕರ್ಮವನ್ನು ಹೇಳಿರುವುದರಿಂದ. 'ತದೈಕ್ಷತ' ಎಂಬ ಶ್ರುತಿಯಲ್ಲಿ 'ಈಕ್ಷಣ' ಎಂಬ ವ್ಯಾಪಾರವನ್ನು ಹೇಳಿದ್ದರಿಂದ ಜಡವಾದ ಪ್ರಕೃತಿಯಲ್ಲಿ ವ್ಯಾಪಾರವು ಕೂಡುವುದಿಲ್ಲವೆಂದು ಅರ್ಥ.

ईक्षतीत्येव वाच्ये कर्मेत्युक्तिः स्वरूपान्येक्षणाभावात् कथं तदैक्षतेति कर्तृत्वश्रुतिरिति न शङ्क्यम् । विशेषात् क्रियाकर्तृभाव इति सूचयितुम् ।

ಪರಿಪೂರ್ಣಚಂದ್ರಿಕಾ

ಸೂತ್ರದಲ್ಲಿ 'ಈಕ್ಷತಿ' ಎಂದಷ್ಟೇ ಹೇಳಿದ್ದರೆ ಸಾಕಾಗಿತ್ತು. ಆದರೂ ಸಹ 'ಕರ್ಮ' ಎಂದು ಹೇಳಿದ್ದರಿಂದ ಈಕ್ಷಣವು ಬ್ರಹ್ಮನ ಸ್ವರೂಪವೇ ಆಗಿರುವಾಗ, ಈಕ್ಷಣಕ್ಕೆ ಬ್ರಹ್ಮನು ಆಶ್ರಯನೆಂದು ಹೇಳುವುದು ಕೂಡುವುದಿಲ್ಲ. ಆದರೆ ವಿಶೇಷದ ಬಲದಿಂದ ಅಭೇದವಿದ್ದರೂ ಈಕ್ಷಣಕ್ರಿಯೆಗೆ ಬ್ರಹ್ಮನು ಆಶ್ರಯನಾಗಿದ್ದಾನೆಂಬ ವ್ಯವಹಾರವನ್ನು ಮಾಡಿ ಕ್ರಿಯಾಕರ್ತೃಭಾವಸಂಬಂಧವನ್ನು ಹೇಳಬಹುದೆಂದು ಸೂಚನೆ ಮಾಡಿದ್ದಾರೆ.

तत्त्वप्रदीपचन्द्रिकयोस्तु कर्मेति ''न कर्तृत्वं न कर्माणि'' इत्यत्रेव सृष्टिरुच्यते । ईक्षतिश्च कर्म च तयोरीक्षणसृष्टिक्रिययोरुक्तेरित्यर्थः । तत्त्वित्यनुवृत्तावपि स इत्युक्तिः ''एको नारायण आसीत्'', ''स मुनिर्भूत्वा समचिन्तयत्'' इत्यादिसमाख्यां सूचयितुमित्युक्तम् ।।४।।

ತತ್ತ್ವಪ್ರದೀಪ ಹಾಗೂ ಚಂದ್ರಿಕಾಗ್ರಂಥಗಳಲ್ಲಿ ಕರ್ಮಪದದ ಸಾರ್ಥಕ್ಯವನ್ನು ಹೀಗೆ ಹೇಳಲಾಗಿದೆ. 'ನ ಕರ್ತೃತ್ವಂ ನ ಕರ್ಮಾಣಿ' ಎಂಬಲ್ಲಿ ಸೃಷ್ಟಿಯನ್ನು ಹೇಳಲಾಗಿದೆ. 'ಈಕ್ಷತಿಶ್ಚ ಕರ್ಮ ಚ ತಯೋಃ' ಎಂಬುದಾಗಿ ಈಕ್ಷಣ ಕ್ರಿಯೆ ಹಾಗೂ ಸೃಷ್ಟಿಕ್ರಿಯೆಗಳ ವಚನವು ಇರುವುದರಿಂದ ಎಂದರ್ಥ. 'ತತ್' 'ತು' ಎಂಬ ಪದಗಳು ಅನುವೃತ್ತವಾಗುತ್ತವೆ. ಆದರೂ ಸಹ 'ಸಃ' ಎಂದು ಏಕೆ ಹೇಳಿದ್ದಾರೆ ಎಂದರೆ 'ಏಕೋ ನಾರಾಯಣ ಆಸೀತ್' 'ಸ ಮುನಿರ್ಭೂತ್ವಾ ಸಮಚಿಂತಯತ್' ಇತ್ಯಾದಿ ಶ್ರುತಿಗಳ ಸಮಾಖ್ಯಾನವನ್ನು ಸೂಚನೆ ಮಾಡುವುದಕ್ಕಾಗಿ ಎಂದು ವ್ಯಾಖ್ಯಾನ ಮಾಡಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಸದಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावलिः

## सदधिकरणम् (१।३।४)

।। ॐ ईक्षतिकर्मव्यपदेशात्सः ॐ ।।४।।

अत्र सदेवेति सच्छब्दार्थस्यान्यत्वे सदायतना इत्युक्तसर्वाधारत्वस्याप्यन्यनिष्ठत्वात् प्रागुक्ताम्बरान्तधृतिरपि तस्यैवेत्याक्षेपात्सङ्गतिः ।

ಈ ಅಧಿಕರಣದಲ್ಲಿ 'ಸತ್' ಎಂಬ ನಾಮಾತ್ಮಕಶಬ್ದವನ್ನು ಸಮನ್ವಯ ಮಾಡಲಾಗಿದೆ. 'ಸದೇವ' ಇತ್ಯಾದಿ ಸೃಷ್ಟಿಸ್ಥಾನದಲ್ಲಿರುವ 'ಸತ್' ಶಬ್ದವು ಬೇರೆ ವಸ್ತುವನ್ನು ಪ್ರತಿಪಾದನೆ ಮಾಡುವುದಾದರೆ 'ಸದಾಯತನಾಃ ಸತ್‌ಪ್ರತಿಷ್ಠಾಃ' ಎಂಬಲ್ಲಿರುವ ಸರ್ವಾಧಾರವಾದ ಪದಾರ್ಥವು ಬೇರೆ ವಸ್ತುವೇ ಆಗುತ್ತದೆ. ಆದ್ದರಿಂದ ಹಿಂದೆ ಹೇಳಲ್ಪಟ್ಟ ಆಕಾಶದ ತನಕ ಸಕಲ ಪದಾರ್ಥಗಳ ಧಾರಣೆಯು ಬೇರೆ ಪದಾರ್ಥದಲ್ಲೇ ಬರುತ್ತದೆಂದು ಆಕ್ಷೇಪಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಸಂಗತಿಯನ್ನು ತಿಳಿಯಬೇಕು.

छान्दोग्ये षष्ठेऽध्याये ''सदेव सोम्येदमग्र'' इत्युपक्रम्य (छां. ६-२-१) ''तदैक्षत बहुस्यां प्रजायेय'' इत्यादिना कारणत्वादिनोक्तं सत्पदवाच्यं किं ब्रह्म उतप्रधानं इति सन्देहः ।

ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ 'ಸದೇವ ಸೋಮ್ಯೇದಮಗ್ರೇ' ಎಂದು ಪ್ರಾರಂಭ ಮಾಡಿ, 'ತದೈಕ್ಷತ ಬಹುಸ್ಯಾಂ ಪ್ರಜಾಯೇಯ' ಇತ್ಯಾದಿಯಾಗಿ ಜಗತ್ಕಾರಣತ್ವೇನ ಹೇಳಲ್ಪಟ್ಟ 'ಸತ್' ಶಬ್ದದಿಂದ ಪ್ರತಿಪಾದ್ಯವಾದದ್ದು ಬ್ರಹ್ಮನೋ? ಅಥವಾ ಪ್ರಕೃತಿಯೋ? ಎಂದು ಸಂದೇಹ.

प्रधानमिति पूर्वः पक्षः । बहु स्यामिति तेजःप्रभृतिबहुभावश्रवणात् तस्य परिणममाने प्रधान एव योगात्, ''निर्विकारोऽक्षरःशुद्धः'' इत्यादिश्रुतेः ईशे निर्विकारे तदयोगात् ।

ಪ್ರಕೃತಿಯೆಂದೇ ಪೂರ್ವಪಕ್ಷ. 'ಬಹುಸ್ಯಾಂ ಪ್ರಜಾಯೇಯ' ಎಂಬುದಾಗಿ ತೇಜಸ್ಸು, ಪೃಥಿವೀ ಮೊದಲಾದ ಸ್ವರೂಪವನ್ನು ತಾಳುವಿಕೆಯ ಮೂಲಕ ಬಹುಭವನವನ್ನು ಶ್ರುತಿಯು ಹೇಳುತ್ತಿದೆ. ವಿಕಾರವನ್ನು ಹೊಂದುವ ಪ್ರಕೃತಿಯಲ್ಲಷ್ಟೇ ಇಂತಹ ಬಹುಭವನವನ್ನು ಹೇಳಲು ಸಾಧ್ಯ. 'ನಿರ್ವಿಕಾರೋಽಕ್ಷರಃಶುದ್ಧ' ಇತ್ಯಾದಿ ಶ್ರುತಿಯು ಪರಮಾತ್ಮನಿಗೆ ನಿರ್ವಿಕಾರತ್ವವನ್ನು ಹೇಳುತ್ತಿರುವುದರಿಂದ ಅವನಲ್ಲಿ ಬಹುಭವನವನ್ನು ಹೇಳಲು ಸಾಧ್ಯವಿಲ್ಲ.

न चात्र स्वरूपबहुभाव एवोक्तः न तेज आद्यात्मना बहुभाव इति वाच्यम् । तत्तेजोऽसृजतेति वाक्यशेषविरोधात् । नहि स्वरूपबहुभावं सङ्कल्प्य तेजःप्रभृतिसर्जनं युक्तम् ।

ಸ್ವರೂಪತಃ ಬಹುಭವನವನ್ನು ಶ್ರುತಿಯು ಹೇಳುತ್ತಿದೆ. ಹೊರತು, ತೇಜಸ್ಸು, ಪೃಥಿವೀ ಮೊದಲಾದವುಗಳ ರೂಪದಿಂದ ಬಹುಭವನವನ್ನು ಹೇಳುತ್ತಿಲ್ಲ. ಪರಮಾತ್ಮನಿಗೆ ಅನೇಕ ರೂಪಗಳಿರುವುದರಿಂದ ಬಹುಭವನವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಮುಂದಿನ ವಾಕ್ಯದಲ್ಲಿ 'ತತ್ತೇಜೋಽಸೃಜತ' ಇತ್ಯಾದಿಯಾಗಿ ತೇಜಸ್ಸು, ಪೃಥಿವೀ ಮೊದಲಾದವುಗಳ ಸೃಷ್ಟಿಯನ್ನು ಹೇಳಲಾಗಿದೆ. ಸ್ವರೂಪತಃ ಬಹುಭವನವನ್ನು ಹೇಳಿದರೆ ಆ ವಾಕ್ಯಶೇಷದ ವಿರೋಧವು ಬರುತ್ತದೆ. ಏಕೆಂದರೆ ತನ್ನ ಸ್ವರೂಪದಿಂದ ಅನೇಕ ರೂಪಗಳನ್ನು ತಾಳುತ್ತೇನೆಂದು ಸಂಕಲ್ಪ ಮಾಡಿ, ತೇಜಸ್ಸು, ಅಪ್ ಮೊದಲಾದವುಗಳನ್ನು ಸೃಷ್ಟಿ ಮಾಡುವುದು ಯುಕ್ತವಾಗುವುದಿಲ್ಲವಷ್ಟೇ ?

ईक्षणं तु प्रधानस्य ज्ञानहेतुसत्त्वगुणयोगेन वा कार्योन्मुखत्वेन वा अभिमानिन ईक्षितृत्वेन वा गौणमिति ॥

ಪ್ರಕೃತಿಯು 'ಸತ್' ಶಬ್ದದಿಂದ ಪ್ರತಿಪಾದ್ಯವಾದರೆ, ಶ್ರುತಿಯಲ್ಲಿ ಹೇಳಲ್ಪಟ್ಟ ಈಕ್ಷಣವನ್ನು ಹೇಗೆ ಹೇಳುವುದು? ಈಕ್ಷಣವು ಕೇವಲ ಚೇತನಧರ್ಮವಷ್ಟೇ? ಎಂದು ಪ್ರಶ್ನಿಸಬಾರದು. ಜ್ಞಾನಕ್ಕೆ ಹೇತುವಾದ 'ಸತ್ವ' ಎಂಬ ಗುಣದಿಂದ ಪ್ರಕೃತಿಯು ಕೂಡಿದೆ. ಈ ದೃಷ್ಟಿಯಿಂದ ಈಕ್ಷಣವನ್ನು ಪ್ರಕೃತಿಯಲ್ಲಿ ಶ್ರುತಿ ಹೇಳುತ್ತಿದೆ. ಅಥವಾ ಕಾರ್ಯೋನ್ಮುಖವಾಗಿದೆಯೆಂಬ ದೃಷ್ಟಿಯಿಂದಲೂ ಶ್ರುತಿ ಹಾಗೆ ಹೇಳಿರಬಹುದು. ಅಥವಾ ಅಭಿಮಾನಿ ದೇವತೆಯಲ್ಲಿ ಜ್ಞಾನವಿರುವುದರಿಂದ, ಅಭಿಮಾನಿಯಲ್ಲಿರುವ ಈಕ್ಷಣವನ್ನು ವಿವಕ್ಷಿಸಿ, ಅಭಿಮನ್ಯಮಾನವಾದ್ದರಲ್ಲಿ ಈಕ್ಷಿತೃತ್ವವನ್ನು ಗೌಣವಾಗಿ ಶ್ರುತಿ ಹೇಳುತ್ತಿದೆ. ಆದ್ದರಿಂದ ಪ್ರಕೃತಿಯೇ ಸೃಷ್ಟಿಸ್ಥಾನದಲ್ಲಿ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ.

ಸದಧಿಕರಣ (೧-೩-೪)

सिद्धान्तस्तु ।। तदैक्षतेत्युक्तेक्षितृत्वस्य मुख्यसम्भवे अमुख्यस्य ग्रहणायोगात् ।

ಸಿದ್ಧಾಂತ ಹೀಗಿದೆ - 'ತದೈಕ್ಷತ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಈಕ್ಷಿತೃತ್ವವನ್ನು ಮುಖ್ಯವಾಗಿಯೇ ವಿವಕ್ಷಿಸಲು ಬರುವಾಗ, ಅಮುಖ್ಯವಾಗಿ ವ್ಯಾಖ್ಯಾನ ಮಾಡುವುದು ತಪ್ಪಾಗುತ್ತದೆ.

अभिमानिनयन्यायेन तेजःप्रभृतीनां देवतात्वेन तदात्मना बहुभावस्य प्रधानेऽप्ययोगात्

ಅಭಿಮಾನ್ಯಧಿಕರಣದ ನ್ಯಾಯದಿಂದ, 'ತತ್ತೇಜೋಽಸೃಜತಃ' ಇತ್ಯಾದಿ ಶ್ರುತಿಯಲ್ಲಿರುವ 'ತೇಜಸ್' ಮೊದಲಾದ ಶಬ್ದಗಳು ದೇವತೆಯನ್ನೇ ಪ್ರತಿಪಾದನೆ ಮಾಡುತ್ತಿವೆ. ಹೀಗಿರುವಾಗ, ಅಂತಹ ದೇವತಾರೂಪದಿಂದ ಪ್ರಕೃತಿಯು ಪರಿಣಾಮವಾಗಲು ಸಾಧ್ಯವೇ ಇಲ್ಲ.

नियामकस्वरूपबहुभावस्य नियम्यसृष्टिसापेक्षत्वेन स्वरूपबहुभावसङ्कल्पेऽपि नियम्यतेजःप्रभृतिसर्जनस्य सङ्गतत्वात्

ಮತ್ತು ನಿಯಮ್ಯವಾದ ಪದಾರ್ಥಗಳನ್ನು ಭಗವಂತನು ಸೃಷ್ಟಿಮಾಡಬೇಕೆಂದರೆ ನಿಯಾಮಕವಾದ ಅನೇಕ ರೂಪಗಳನ್ನು ತಾಳಲೇಬೇಕು. ಆದ್ದರಿಂದ ಸ್ವರೂಪತಃ ಅನೇಕ ರೂಪಗಳನ್ನು ತಾಳುತ್ತೇನೆಂದು ಸಂಕಲ್ಪ ಮಾಡಿ, ನಿಯಮ್ಯವಾದ ಪದಾರ್ಥಗಳನ್ನು ಸೃಷ್ಟಿ ಮಾಡಿದರೆ, ಅಸಂಗತವಾಗುವುದಿಲ್ಲ.

एकस्यापीश्वरस्य गुहानयन्यायेन बहुत्वस्य द्युभ्वादिनयोक्तन्यायेन जननस्य च सम्भवात्,

ಒಬ್ಬನೇ ಈಶ್ವರನಿಗೆ ಗುಹಾಧಿಕರಣದ ನ್ಯಾಯದಿಂದ ಬಹುತ್ವವನ್ನು ಹೇಳುವುದು ತಪ್ಪಾಗುವುದಿಲ್ಲ. ಮತ್ತು ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಜನನವನ್ನು ಹೇಳುವುದೂ ಸಹ ತಪ್ಪಾಗುವುದಿಲ್ಲ.

मुख्येक्षितृत्वेन लिङ्गेन कारणत्वादिना सत्पदवाच्यं ब्रह्मैवेति ।।

ಹೀಗೆ ಶ್ರುತಿಯಲ್ಲಿ ಹೇಳಲ್ಪಟ್ಟ ಈಕ್ಷಿತೃತ್ವಲಿಂಗವು ಮುಖ್ಯವಾಗಿರುವುದರಿಂದ, ಇಂತಹ ಈಕ್ಷಿತೃತ್ವವೆಂಬ ಲಿಂಗದ ಬಲದಿಂದ, ಕಾರಣತ್ವಾದಿಗಳ ಲಿಂಗದಿಂದ ಸೃಷ್ಟಿಸ್ಥಾನದಲ್ಲಿರುವ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗುತ್ತಾನೆಂದು ಸಿದ್ಧಾಂತ.

ಪರಿಪೂರ್ಣಚಂದ್ರಿಕಾ

फले तु सदेवेत्यवधारणेन प्रधानस्यैव कारणत्वप्रतीत्या ईशे तदभावादित्यादिना चन्द्रिकोक्तदिशा जन्मादिसूत्राक्षेपसमाधी ।।४।।

ಫಲಫಲಿಭಾವ ಹೀಗಿದೆ - 'ಸದೇವ' ಎಂಬುದಾಗಿ ಶ್ರುತಿಯಲ್ಲಿ ಅವಧಾರಣಪುರಸ್ಸರವಾಗಿ ಪ್ರಕೃತಿಗೆ ಕಾರಣತ್ವವು ಪ್ರತೀತವಾಗುತ್ತಿರುವುದರಿಂದ ಪರಮಾತ್ಮನಲ್ಲಿ ಅಂತಹ ಕಾರಣತ್ವವು ಇಲ್ಲವೆಂದು ಹೇಳಿದ್ದರಿಂದ ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿದಂತೆ ಜನ್ಮಾದಿಸೂತ್ರದ ಆಕ್ಷೇಪವೇ ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಸದಧಿಕರಣವು ಸಮಾಪ್ತವಾಯಿತು.

# सूत्रार्थरत्नावलिः

## सदधिकरणम् (१।३।४)

ॐ।। ईक्षतिकर्मव्यपदेशात् सः ।।ॐ ।।१३

(अत्र अनेकप्रकरणात्मकं 'सदेव' इत्यादिस्थानं समन्वीयते)

ननु सत् प्रधानमेव भवेत् । न विष्णुः । सतः 'बहुस्याम्' (छां.६।२) इति बहुभावाख्यविकारित्वश्रवणात् । नच विकारित्वं परमात्मनि सम्भवति । 'अविकारः सदा शुद्धः' इत्यादिना तस्याविकारित्वात् । ततश्च 'प्रधानमेव सत्' इति, 'तस्यैव जगत्कर्तृत्वम्' इति प्राप्ते, सूत्रमाह –

ॐ।। ईक्षतिकर्मव्यपदेशात् सः - इति । अस्यार्थः – 'सदेव' (६।२) इत्यादि प्रकरणस्थितसदादिशब्दवाच्यः विष्णुरेव, न प्रधानम् । कुतः? ईक्षतिकर्मव्यपदेशात्, 'तदैक्षत' (छां.६।२।३) इति चेतननिष्ठैक्षता इति शब्दोपलक्षितदर्शनाख्यक्रियाभिधानादित्यर्थः ।

एवञ्च 'तदैक्षत' इति ईक्षत्याख्यव्यापारश्रवणात् तेन प्रेक्षापूर्वकारित्वलाभात् । ईक्षणस्याचेतने प्रधाने कथमप्ययोगात् । मा भूत् तर्ह्यचेतना प्रकृतिः । चेतना प्रकृतिः किं न स्यात्? इति चेत् । चेतनप्रकृतेः स्त्रीत्वेन स्वातन्त्र्येण सर्जकत्वायोगात् । नच बहुभावाख्यप्रधानलिङ्गश्रवणेन स न विष्णुरिति वाच्यम् । 'अजायमानो बहुधा विजायत' (तै.आ.३।१३।१) इत्यविकारस्यापि बहुभावश्रवणेन तस्य सावकाशत्वात् । 'सदिति विष्णुरेवोक्तः, तस्यैव स्रष्टृत्वम्' इति सिद्धम् ।। इति सदधिकरणम् ।।

।। इति सूत्रार्थरत्नावळ्यां सदधिकरणम् ।।

॥ ಪರಿಪೂರ್ಣಚಂದ್ರಿಕೆಯಲ್ಲಿ ಸದಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ದಹರಾಧಿಕರಣ

(೧-೩-೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ದಹರಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಹೃತ್ಪದ್ಮದಲ್ಲಿರುವ ಸಣ್ಣ ಆಕಾಶದಲ್ಲಿರುವವನು ನಾರಾಯಣನೇ

**।। अथ दहराधिकरणम् ।।**

**स – ॐ ।। दहर उत्तरेभ्यः ।। ॐ ।। २४ ।।**

ಸೂತ್ರಾರ್ಥ - ಸಣ್ಣದಾದ ಹೃದಯ ಪದ್ಮದಲ್ಲಿರುವ ಆಕಾಶದಲ್ಲಿ ನೆಲೆಸಿರುವವನು ವಿಷ್ಣುವೇ ಹೊರತು ಜೀವಾದಿಗಳಲ್ಲ. ಏಕೆಂದರೆ ಮುಂದಿನ ವಾಕ್ಯಗಳಲ್ಲಿ ಅಪಹತಪಾಪ್ಮತ್ವಾದಿ ಧರ್ಮಗಳನ್ನು ಹೇಳಿರುವುದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ॐ दहर उत्तरेभ्यः ।। दहरे ''दहरं पुण्डरीकं वेश्म'' इति वाक्योक्तहृत्पद्मस्थाल्पाकाशे स्थितो विष्णुरेव नतु जीवादिः । कुतः? उत्तरेभ्यः ''य आत्माऽपहतपाप्मा'' (छां. ८-७) इत्याद्युत्तरवाक्योक्तनिर्गतपाप्मत्वादि-धर्मेभ्य इत्यर्थः ।।१।।

ಅರ್ಥ -- ದಹರೇ = 'ದಹರಂ ಪುಂಡರೀಕಂ ವೇಶ್ಮ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ಸಣ್ಣದಾದ ಆಕಾಶದಲ್ಲಿ ನೆಲೆಸಿರುವವನು ವಿಷ್ಣುವೇ ಆಗಿದ್ದಾನೆ ಹೊರತು ಜೀವಾದಿಗಳಲ್ಲ. ಏಕೆಂದರೆ ಉತ್ತರೇಭ್ಯಃ = 'ಯ ಆತ್ಮಾ ಅಪಹತಪಾಪ್ಮಾ' ಮುಂತಾದ ಮುಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಕೂಡುವುದರಿಂದ.

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् —चन्द्रादित्याद्याधारत्वं विष्णोरुक्तम् । तच्च 'अथ यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तर आकाशः ..... किं तदत्र विद्यते .....' (छां. ८-१-२.) 'उभे अस्मिन् द्यावापृथिवी अन्तरेव समाहिते उभावग्निश्च वायुश्च सूर्याचन्द्रमसावुभौ विद्युन्नक्षत्राणि' (छां ८-१-३) इत्यादिनाऽऽकाशस्य प्रतीयते ।**

ಅನುವಾದ - ಚಂದ್ರ, ಸೂರ್ಯ, ಸ್ವರ್ಗ, ಭೂಮಿ ಇವುಗಳಿಗೆ ಆಧಾರನಾದವನು ವಿಷ್ಣುವೆಂದು ಹಿಂದಿನ ಅಕ್ಷರಾಧಿಕರಣದಲ್ಲಿ ನಿರ್ಣಯಿಸಲಾಯಿತು. ಆದರೆ ಛಾಂದೋಗ್ಯ ಶ್ರುತಿಯಲ್ಲಿ ಆಕಾಶವೇ ಸೂರ್ಯ, ಚಂದ್ರಾದಿಗಳಿಗೆ ಆಧಾರವೆಂದು ಹೇಳಲಾಗಿದೆ -

'ಅಥ ಯದಿದಮಸ್ಮಿನ್' ಇತ್ಯಾದಿ ವಾಕ್ಯದಿಂದ 'ಹೃದಯ ಗುಹೆಯಲ್ಲಿ ಸಣ್ಣದಾದ ಕಮಲದಲ್ಲಿ ಸೂಕ್ಷ್ಮಾಕಾಶವಿದೆ' ಎಂದು ಗುರುಗಳು ಉಪದೇಶಿಸಿದಾಗ ಶಿಷ್ಯನು ಪ್ರಶ್ನಿಸುತ್ತಾನೆ. 'ಆ ಸೂಕ್ಷ್ಮಾಕಾಶದಲ್ಲಿ ಏನಿದೆ?' ಗುರುಗಳು ಹೀಗೆ ಉತ್ತರಿಸುತ್ತಾರೆ - 'ಸೂಕ್ಷ್ಮಾಕಾಶದಲ್ಲಿ ಸ್ವರ್ಗ, ಭೂಮಿ ಎಲ್ಲವೂ ಸಹ ಒಳಗೆ ಆಶ್ರಿತವಾಗಿವೆ ಮತ್ತು ಮಿಂಚು ನಕ್ಷತ್ರ ಇವುಗಳೆಲ್ಲವೂ ಅಂತಹ ಹೃದಯಾಕಾಶದಲ್ಲೇ ಆಶ್ರಿತವಾಗಿವೆ' ಎಂದು.

ಈ ಛಾಂದೋಗ್ಯದ ಪ್ರಕರಣವನ್ನು ನೋಡಿದಾಗ ಸೂರ್ಯ, ಚಂದ್ರಾದಿಗಳಿಗೆಲ್ಲಾ ಆಧಾರವಾದದ್ದು ಆಕಾಶವೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಜೀವ, ಆಕಾಶ ಇವುಗಳಲ್ಲಿ ಆಪಾತತಃ ತೋರುವ ಹೃದಯಾಕಾಶದಲ್ಲಿರುವಿಕೆ ಎಂಬ ಅರ್ಥದ 'ದಹರ' ಎಂಬ ಧರ್ಮದ ಸಮನ್ವಯವನ್ನು ಮಾಡುತ್ತಿದ್ದಾರೆ. ಇದರಿಂದ 'ಹೃತ್ಪದ್ಮಸ್ಥತ್ವ'ವೆಂಬ ಲಿಂಗದ ಸಮನ್ವಯವನ್ನು ನೇರವಾಗಿ ಅಥವಾ ಪರಂಪರೆಯಿಂದ ಸಾಧಿಸಿದಂತಾಗುತ್ತದೆ. ಈ ಲಿಂಗದ ಸಮನ್ವಯದಿಂದ ವಿಷ್ಣುವಿನಲ್ಲಿ

ದಹರಾಧಿಕರಣ (೧-೩-೫)

ಅಸಾಧಾರಣವಾದ ಅನೇಕ ಧರ್ಮಗಳ ಸಮನ್ವಯವನ್ನು ಮಾಡಿದಂತಾಗುತ್ತದೆ. ಮೊದಲು ವಿಷಯ ಮತ್ತು ಪೂರ್ವಪಕ್ಷಗಳನ್ನು ತೋರಿಸುತ್ತಿದ್ದಾರೆ -

ಚಂದ್ರಾದಿತ್ಯಾದ್ಯಾಧಾರತ್ವಂ = ಚಂದ್ರ, ಸೂರ್ಯ, ಸ್ವರ್ಗ ಮೊದಲಾದವುಗಳಿಗೆ ಆಧಾರವಾಗಿರುವಿಕೆಯು, ವಿಷ್ಣೋಃ = ವಿಷ್ಣುವಿನ, ಉಕ್ತಮ್ = ಧರ್ಮವೆಂದು ಹಿಂದಿನ ಅಕ್ಷರಾಧಿಕರಣದಲ್ಲಿ ಹೇಳಲಾಯಿತು, ತಚ್ಚ = ಅಂತಹ, ಸೂರ್ಯಚಂದ್ರಾದಿ ಆಧಾರತ್ವವು ಮತ್ತು ಹೃತ್ಪದ್ಮಸ್ಥತ್ವವು ಭೂತಾಕಾಶದಲ್ಲಿ ತೋರುತ್ತಿದೆ. ಈ ಶ್ರುತಿವಾಕ್ಯವು ಹೀಗಿದೆ -

ಅಥ = ಅನಂತರ, ಅಸ್ಮಿನ್ ಬ್ರಹ್ಮಪುರೇ = ಇಂತಹ ಹೃದಯವೆಂಬ ಗುಹೆಯಲ್ಲಿ, ಯದಿದಂ = ಯಾವ, ದಹರಂ = ಸಣ್ಣದಾದ, ಪುಂಡರೀಕಂ ವೇಶ್ಮ = ಕಮಲವೆಂಬ ಮನೆಯು ಇದೆಯೋ, ತಸ್ಮಿನ್ = ಅದರಲ್ಲಿ, ದಹರಃ ಆಕಾಶಃ = ಅತ್ಯಂತ ಸೂಕ್ಷ್ಮವಾದ ಆಕಾಶವು ಇರುತ್ತದೆ, ಹೀಗೆ ಗುರುಗಳು ಶಿಷ್ಯನಿಗೆ ಉಪದೇಶಿಸಿದರು.

ಶಿಷ್ಯನು ಪ್ರಶ್ನಿಸುತ್ತಾನೆ. ತದತ್ರ = ಆ ಸೂಕ್ಷ್ಮಾಕಾಶದಲ್ಲಿ, ಕಿಂ ವಿದ್ಯತೇ = ಏನಿದೆ?

ಗುರುಗಳು ಉತ್ತರಿಸುತ್ತಾರೆ, ಅಸ್ಮಿನ್ = ಈ ಸೂಕ್ಷ್ಮಾಕಾಶದಲ್ಲಿ, ದ್ಯಾವಾಪೃಥಿವೀ = ಸ್ವರ್ಗ, ಭೂಮಿ ಮೊದಲಾದವು, ಅಂತರೇವ = ಒಳಗೇ, ಸಮಾಹಿತೇ = ಆಶ್ರಿತವಾಗಿವೆ, ಮತ್ತು ಉಭೇ =ಮುಕ್ತ ಮತ್ತು ಅಮುಕ್ತರಿಬ್ಬರೂ, ಅಗ್ನಿಶ್ಚ ವಾಯುಶ್ಚ ಉಭೌ = ಅಗ್ನಿ, ವಾಯುಗಳಿಬ್ಬರೂ, ಸೂರ್ಯಾಚಂದ್ರಮಸೌ ಉಭೌ = ಸೂರ್ಯ ಚಂದ್ರರಿಬ್ಬರೂ, ವಿದ್ಯುನ್ನಕ್ಷತ್ರಾಣಿ = ವಿದ್ಯುತ್ ಎಂದರೆ ಮಿಂಚು, ನಕ್ಷತ್ರಾಣಿ = ನಕ್ಷತ್ರಗಳು, (ನೆಲೆಸಿವೆ), ಇತ್ಯಾದಿನಾ = ಇವೇ ಮೊದಲಾದ, ಶ್ರುತಿ ವಾಕ್ಯದಿಂದ, ಆಕಾಶಸ್ಯ = ಆಕಾಶಕ್ಕೆ, ಪ್ರತೀಯತೇ = ಸೂರ್ಯಚಂದ್ರಾದಿ ಆಧಾರತ್ವವು ಮತ್ತು ಹೃತ್ಪದ್ಮಸ್ಥತ್ವವು ತೋರುತ್ತದೆ.(१)

---

(१) **भाष्यदीपिका** – अत्राधिकरणे सर्वाधारतयाऽन्वेष्टव्यतया च साक्षाद्वा व्यवधानेन वा सामान्यतो हृत्पद्मस्थत्वलिङ्गस्य ब्रह्मणि समन्वयः क्रियते । श्रुत्यादिसङ्गतिं विषयवाक्यमुदाहृत्य विषयादिकं च सूचयन् सयुक्तिकं पूर्वपक्षयति – चन्द्रेति ।। **'एतस्य वा अक्षरस्य'** (बृ. ५–८–९) इत्यादिनेति वर्तते । आदिपदेन द्यावापृथिव्यादिकं गृह्यते । ततः किमित्यत आह – **तच्चेति** ।। तदित्यावर्तते । चः समुच्चयेऽवधारणे च। तथा च **'तत्र'** छन्दोगश्रुतौ यदक्षरनयोदाहृतवाक्योक्तं चन्द्रादित्याधारत्वं तदेव तथा तत्समानाधिकरणं हृत्पद्मस्थत्वं चाऽकाशस्य **'अथ'** इत्यादिना वाक्येन प्रतीयत इति योजना । यद्यपि बृहद्भाष्येऽक्षरनयोदाहृतबृहदारण्यकश्रुतिगतसूर्यचन्द्रपदयोर्ब्रह्मरुद्रपरतया व्याकृतत्वादेवमनुवादोऽनुपपन्नः । तथाऽपि तयोः प्रसिद्धचन्द्रसूर्यपरत्वस्याप्यनुमतत्वादेवमुक्तिः ।

यद्वा – अत्र भाष्येऽपि चन्द्रादित्यपदे रुद्रब्रह्मपरे । अत एव तत्त्वप्रदीपेऽक्षरनये **'अहं सोमम्'** (ऋ.१०-१२५-२) इति वचने सोमशब्दो रुद्रपरतया व्याकृतः । तथा च न कोऽपि विरोधः। अनेनाक्षरनयोक्तचन्द्रादित्याद्याधारत्वस्य साक्षाद् हृत्पद्मस्थाकाशनिष्ठताक्षेपात् तेन अस्याऽक्षेपिकी सङ्गतिरुक्ता भवति । एवं सर्वाधारत्वान्वेष्टव्यत्वसमानाधिकरणः साक्षाद्

व्यवधानेन वा सामान्यतो हृत्पद्मस्थत्वरूपो विषयश्च दर्शितः । न चैवं **'चन्द्रादित्य'** इति भाष्येण स चन्द्रादित्याद्याधारः किं दहराकाशः स्यात् ? आहोस्वित् तत्स्थः कश्चित् ? इति तत्त्वप्रदीपेन च विरोध इति वाच्यम् । तयोरक्षराधिकरणाक्षेपेणात्र पूर्वपक्ष इति दर्शयितुं प्रवृत्तत्वेन विषयप्रदर्शनायाप्रवृत्तत्वात् । **'आकाशस्य'** इत्यनेन प्रसिद्धभूताकाशस्यैव सर्वाधारतया साक्षाद् हृत्पद्मस्थत्वमिति पूर्वः पक्षः प्रदर्शितः । तथा प्रश्नप्रतिवचनपूर्वकं साक्षादाकाशस्यैवात्र सर्वाधारतया हृत्पद्मस्थत्वकथनादिति पूर्वपक्षयुक्तिश्च प्रदर्शिता भवति । अत्र यद्यपि **'अथ यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तराकाशः तस्मिन् यदन्तस्तदन्वेष्टव्यं तद्वाव विजिज्ञासितव्यमिति । तं चेद् ब्रूयुः ... किं तदत्र विद्यते यदन्वेष्टव्यं यद्वाव विजिज्ञासितव्यमिति । स ब्रूयाद् यावान् वाऽयमाकाशस्तावानेषोऽन्तर्हृदय आकाशः । उभे अस्मिन् द्यावापृथिवी अन्तरेव समाहिते । उभावग्निश्च वायुश्च सूर्याचन्द्रमसावुभौ । विद्युन्नक्षत्राणि'** (छा.८-१-२) इत्यादिसमग्रवाक्यमुदाहर्तव्यम्, नतु विच्छिद्य । तथाऽप्य-पेक्षितांशोदाहरणेनैव पूर्तेः विषयपूर्वपक्षयुक्त्यादेरेतावतैव ज्ञातुं शक्यत्वादुपयुक्तमात्र-मुदाहृतम् । यद्यपि **'यदिदमस्मिन्'** इति श्रुतिपाठः । तथाऽपि समानजातीयश्रुत्यन्तरोप-सङ्ग्रहायैवमुदाहृतमिति ध्येयम् । श्रुतावथशब्दः प्रमेयान्तरारम्भार्थः । **'ब्रह्मपुरम्'** इत्येतद् ब्रह्मणः पुरं निवासस्थानमिति ब्रह्मैव पूर्णत्वात् पुरमिति च द्वेधा व्याख्येयम् । **'अन्तर्हृदये'** इति सप्तम्यन्तम् । **'आकाशः'** इति प्रथमान्तम् । तथा च एतस्मिन् ब्रह्मपुरे शरीरे यत् पुरं ब्रह्मास्ति **'अस्मिन्'** तस्मिन् ब्रह्मणि **'दहरं'** दभ्रमल्पं **'पुण्डरीकम्'** अब्जं **'वेश्म'** तस्य सद्मरूपमस्ति अस्मिन् **'अन्तर्दहरः'** अल्पो भूताकाशोऽस्ति । किं चातः **'तस्मिन्'** आकाशेऽन्तर्यद् वर्तते **'तदन्वेष्टव्यं'** ज्ञातव्यं मार्गितव्यं वा । ननु न घटादिवदन्वेषणं युक्तम्, अप्रत्यक्षत्वादित्यतस्तदेव विवृणोति – **तद्वावेति** ।। वावेत्यवधारणे । तथा च तदेव **'विजिज्ञासितव्यं'** विचारितव्यम् । इति गुरुणोक्ते **'तं'** गुरुं प्रति **'चेत्'** यदि शिष्याः **'ब्रूयुः'** पृच्छेयुः । किमिति ? **'अत्र'** भूताकाशे यदन्वेष्टव्यं यद्वाव विजिज्ञासितव्यमित्युक्तं **'तत्'** आधेयस्वरूपं **'किं'** किंमहिमं चेति । नच ब्रह्मपुरे ब्रह्मणो वेश्मेत्युक्त्यैवाऽकाशस्य ब्रह्मत्वनिश्चयात् प्रश्नायोग इति वाच्यम् । अन्यपुरेऽप्यन्यस्य वेश्मसम्भवादन्य-वेश्मन्यप्यन्यस्यावस्थानसम्भवात् तदुक्तेरनिश्चायकत्वात् । एवं शिष्यैः पृष्टे **'सः'** गुरुर्ब्रूयात् । किमिति ? हृदोऽन्तः अन्तर्हृत् तस्मिन्नयतेऽस्तीति व्युत्पत्त्या **'अन्तर्हृदये'** तच्छब्दबोध्ये हृत्पद्मगतभूताकाशे द्यावापृथिव्याद्याश्रयः **'आकाशः'** तदाख्यः परमात्माऽस्तीति । नन्वणौ तस्मिन् कथं द्यावापृथिव्याद्यवस्थितिरित्यतस्तस्य व्याप्तत्वमाह – **यावानिति**।। **'अयं'** बहिःस्थितः **'आकाशः'** तदाख्यो भगवान् गुणतः परिमाणतश्च यावान्, एष आन्तरोऽपि तावानेव । तथा चाणावपि रूपे ईशशक्त्या महत्त्वस्यापि सत्त्वाद्

**भाष्यम् –स चाऽकाशो न विष्णुः । 'तस्यान्ते सुषिरं सूक्ष्मं तस्मिन् सर्वं प्रतिष्ठितम्' (महाना.१-१.) इति श्रुतेरिति । अत आह –**

ಅನುವಾದ - ಈ ಆಕಾಶವಾದರೂ, ವಿಷ್ಣುವಾಗಲು ಸಾಧ್ಯವಿಲ್ಲ, ಏಕೆಂದರೆ ಮಹಾನಾರಾಯಣೋಪನಿಷತ್ತಿನಲ್ಲಿ, 'ತಸ್ಯಾಂತೇ ಸುಷಿರಂ' ಇತ್ಯಾದಿಯಾಗಿ, ಹೃದಯದಲ್ಲಿರುವ ಪ್ರಸಿದ್ಧವಾದ ಜಡಾಕಾಶವನ್ನೇ ಸರ್ವಾಧಾರವೆಂದು ಹೇಳಲಾಗಿದೆ.

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು, ಸೂತ್ರವನ್ನು ರಚಿಸುತ್ತಿದ್ದಾರೆ. 'ಓಂ ದಹರ ಉತ್ತರೇಭ್ಯಃ ಓಂ॥'

ಪ್ರತಿಪದಾರ್ಥ -- ಆಕಾಶವು ಸಕಲಕ್ಕೂ ಆಧಾರವಾಗಿದೆ. ಮತ್ತು ಹೃದಯಪದ್ಮದಲ್ಲಿದೆ ಎಂದು ಹೇಳೋಣ. 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಂತೆ, ಆಕಾಶಶಬ್ದವು ವಿಷ್ಣು ಪರವಾಗಿರುವುದರಿಂದ, ವಿಷ್ಣುವಿನಲ್ಲಿಯೇ ಹೃತ್‌ಪದ್ಮಸ್ಥತ್ವವು ಸಿದ್ಧವಾಗುತ್ತದೆ ಅಲ್ಲವೇ? ಎಂಬ ಪ್ರಶ್ನೆಗೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಸ ಚ = ಅಂತಹ, ಆಕಾಶಃ = ಆಕಾಶವು, ವಿಷ್ಣುಃ = ವಿಷ್ಣುವೆಂದು, ನ = ಹೇಳಲಾಗದು, ಏಕೆಂದರೆ ನಾರಾಯಣೋಪನಿಷತ್ತಿನಲ್ಲಿ, ತಸ್ಯಾಂತೇ = ಹೃದಯದ ಅಂತ್ಯದಲ್ಲಿ, ಸುಷಿರಂ = ಛಿದ್ರ ಸ್ವರೂಪವಾದ, ಸೂಕ್ಷ್ಮಂ = ಸೂಕ್ಷ್ಮವಾದ ತತ್ವವಿದೆ, ತಸ್ಮಿನ್ = ಭೂತಾಕಾಶದಲ್ಲಿ, ಸರ್ವಂ = ಸಕಲ ಪದಾರ್ಥವೂ, ಪ್ರತಿಷ್ಠಿತಂ = ಆಶ್ರಿತವಾಗಿದೆ, ಇತಿ ಶ್ರುತೇಃ = ಹೀಗೆ

---

व्याप्तस्य तस्यानेकाधारत्वं युज्यत एवेति भावः । अन्यपरित्यागेनास्यैव जिज्ञास्यत्वे को हेतुरित्यतोऽस्य सर्वाधारत्वाख्यं महिमानमाह – उभ इत्यादिना ।। अस्मिन्नन्तरे ये उभे मुक्तामुक्ते द्यावापृथिव्यौ देव्यौ 'समाहिते' समवस्थिते । एवमुभयविधौ अग्निश्च वायुश्चेत्येतौ देवौ समाश्रितौ । तथा उभौ मुक्तामुक्तौ सूर्याचन्द्रमसौ विद्युत् नक्षत्राणि च समाश्रितानीति छान्दोग्यभाष्यरीत्या श्रुत्यर्थः । न्यायविवरणे तद्विवरणरूपटीकायां – 'तस्मिन् यदन्तः' इत्यत्र हृत्पद्मस्थाकाशगतं ब्रह्मान्वेष्टव्यमित्युक्तम् । नच पद्मस्थस्य ब्रह्मत्वासिद्धिः । शरीरपुण्डरीकयोर्ब्रह्म प्रति पुरत्ववेश्मत्वोक्त्यैवा अन्वेष्टव्यस्य ब्रह्मत्वसिद्धेः। तथा च पद्मे ब्रह्मास्तीत्युक्तेऽपि तद् ब्रह्म किम्प्रकारमिति भावेन पुनः 'किं तदत्र विद्यते' इति पृष्टे तत्प्रकारज्ञापनाय 'यावान्' इत्याद्याह गुरुः । अनेन च यद् ब्रह्मान्वेष्टव्यतयोक्तं तद्ब्रह्मान्तर्हृदये यावानेष प्रसिद्धाकाशस्तावान् सर्वोऽप्याकाशो वर्तते । तस्मिंश्चाऽकाशे पृथिव्यादिकं सर्वं समाश्रितम् । अपहतपाप्मत्वादिगुणकं च तदित्येवमाकाशादि-सर्वाश्रयत्वादपहतपाप्मत्वादिप्रकार उक्तो भवतीति प्रकारान्तरेण व्याख्यातम् । पूर्वपक्षी तु – 'हृदय आकाशे' इति पदं सप्तम्यन्तं कृत्वा दहराकाशस्थो व्याप्ताकाशोऽन्वेष्टव्य इति वा आकाश इति प्रथमान्तं कृत्वा प्रागुक्तदहरभूताकाशमनूद्य यावानित्यनेन बाह्याकाशतुल्यतया तं विशिष्य जिज्ञास्यत्वेन तत्र द्यावापृथिव्यादिकमुच्यत इत्याह ।

ಶ್ರುತಿಗಳಿರುವುದರಿಂದ, ಭೂತಾಕಾಶವೇ ಸೂರ್ಯಚಂದ್ರಾದಿಗಳಿಗೆ ಆಧಾರವಾಗಿದೆ ಎಂದು ಪೂರ್ವಪಕ್ಷ.(१)

**भाष्यम् – ॐ ।। दहर उत्तरेभ्यः ।। ॐ**

**'य आत्माऽपहतपाप्मा विजरो विमृत्युर्विशोकोऽविजिघत्सोऽपिपासः सत्यकामः सत्यसङ्कल्पः सोऽन्वेष्टव्यः स विजिज्ञासितव्यः' (छां.८-७-३) इत्यादिभ्य उत्तरेभ्यो गुणेभ्यो दहरे विष्णुरेव ।**

ಅನುವಾದ - ಯಾವಾತನು ಸರ್ವನಿಯಾಮಕನೂ, ಪಾಪಲೇಪರಹಿತನೂ, ವೃದ್ಧಾಪ್ಯ ಮೊದಲಾದ ದೋಷಗಳಿಲ್ಲದವನೂ, ಮೃತ್ಯುವನ್ನು ಗೆದ್ದವನೂ, ದುಃಖರಹಿತನೂ, ನ್ಯೂನತೆ ಇಲ್ಲದವನೂ, ಹಸಿವು, ನೀರಡಿಕೆ ಮೊದಲಾದ ದೋಷಗಳಿಲ್ಲದವನೂ, ಸತ್ಯವಾದ ಕಾಮನೆ ಉಳ್ಳವನೂ, ಸತ್ಯಸಂಕಲ್ಪನೂ ಆಗಿದ್ದಾನೋ ಅಂತಹವನೇ ಹುಡುಕಲು (ಅನ್ವೇಷಣೆಗೆ) ಯೋಗ್ಯನಾಗಿದ್ದಾನೆ. ಅವನನ್ನೇ ವಿಚಾರ ಮಾಡಬೇಕು. ಇತ್ಯಾದಿಯಾಗಿ ಛಾಂದೋಗ್ಯವು ಹೃತ್ಪದ್ಮದಲ್ಲಿರುವ ವ್ಯಕ್ತಿಯನ್ನು ಹೊಗಳುತ್ತಿದೆ. ಈ ಎಲ್ಲ ಗುಣಗಳು ವಿಷ್ಣುವಿನಲ್ಲಿ ಅಸಾಧಾರಣವಾಗಿರುವುದರಿಂದ ವಿಷ್ಣುವೇ ಹೃತ್ಪದ್ಮದಲ್ಲಿದ್ದಾನೆಂದು, ಹಾಗೂ ಸರ್ವಾಧಾರನೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ಮಾಡುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆ ನೀಡುತ್ತಾ ವ್ಯಾಖ್ಯಾನಿಸುತ್ತಿದ್ದಾರೆ -

ದಹರಃ = ಹೃತ್ತದಲ್ಲಿರುವ ಆಕಾಶವೆಂದರೆ ವಿಷ್ಣುವೇ ಆಗಿದ್ದಾನೆ, ಏಕೆಂದರೆ , ಉತ್ತರೇಭ್ಯಃ = ಮುಂದಿನ ವಾಕ್ಯದಲ್ಲಿ ಹೇಳಿರುವ ಗುಣಗಳು ವಿಷ್ಣುವಿನಲ್ಲೇ ಯುಕ್ತವಾಗುವುದರಿಂದ.

---

(१) **भाष्यदीपिका** – नन्वस्त्वाकाशस्य सर्वाधारतया हृत्पद्मस्थत्वं तस्य चाऽकाशस्य **'आकाशस्तल्लिङ्गात्'** (ब्र.सू.१.१.२२) इति न्यायेन विष्णुत्वेन विष्णोरेव हृत्पद्मस्थत्वं सिद्ध्यतीत्यत आह – **स चेति** ।। चस्त्वर्थः, प्रतिज्ञासमुच्चये वा । तथा च यः सर्वाधारतया हृत्पद्मस्थत्वेन च श्रुत्युक्तः **'स चाऽकाशो न विष्णुः'** भूतमेव नतु विष्णुरित्यर्थः । कुतो वा न विष्णुरित्यत आह – **तस्यान्त इति** ।। स चेत्यनुषक्तश्चशब्दोऽत्र बुद्ध्या विविक्तसुषिरपदेनान्वीयतेऽवधारणे चायम् । श्रुतिसमानोक्त्युपलक्षकं चैतत् । तथा च **'तस्यान्ते'** इति वाक्ये **'सुषिरपदश्रुतेः'** सुषिरशब्दश्रवणात् सुषिरस्य छिद्रात्मकप्रसिद्धाकाशस्यैव श्रुतेः सर्वाधारतया हृत्पद्मस्थत्वोक्तेः तत्समाख्यानादित्यर्थः । **'तस्य' 'पद्मकोशप्रतीकाशं हृदयं चाप्यधोमुखम्'** इति पूर्ववाक्ये प्रकृतस्य हृत्पद्मकोशस्य **'अन्ते'** अन्तरे तन्मध्ये सूक्ष्मं **'सुषिरं'** छिद्रमस्ति, तस्मिन् **'सर्वं'** जगत् प्रतिष्ठितमिति तैत्तिरीयश्रुत्यर्थः ।

**भाष्यम् –स चाऽकाशो न विष्णुः । 'तस्यान्ते सुषिरं सूक्ष्मं तस्मिन् सर्वं प्रतिष्ठितम्' (महाना.१-१.) इति श्रुतेरिति । अत आह –**

ಅನುವಾದ - ಈ ಆಕಾಶವಾದರೂ, ವಿಷ್ಣುವಾಗಲು ಸಾಧ್ಯವಿಲ್ಲ, ಏಕೆಂದರೆ ಮಹಾನಾರಾಯಣೋಪನಿಷತ್ತಿನಲ್ಲಿ, 'ತಸ್ಯಾಂತೇ ಸುಷಿರಂ' ಇತ್ಯಾದಿಯಾಗಿ, ಹೃದಯದಲ್ಲಿರುವ ಪ್ರಸಿದ್ಧವಾದ ಜಡಾಕಾಶವನ್ನೇ ಸರ್ವಾಧಾರವೆಂದು ಹೇಳಲಾಗಿದೆ.

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು, ಸೂತ್ರವನ್ನು ರಚಿಸುತ್ತಿದ್ದಾರೆ. 'ಓಂ ದಹರ ಉತ್ತರೇಭ್ಯಃ ಓಂ॥'

ಪ್ರತಿಪದಾರ್ಥ -- ಆಕಾಶವು ಸಕಲಕ್ಕೂ ಆಧಾರವಾಗಿದೆ. ಮತ್ತು ಹೃದಯಪದ್ಮದಲ್ಲಿದೆ ಎಂದು ಹೇಳೋಣ. 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಂತೆ, ಆಕಾಶಶಬ್ದವು ವಿಷ್ಣು ಪರವಾಗಿರುವುದರಿಂದ, ವಿಷ್ಣುವಿನಲ್ಲಿಯೇ ಹೃತ್‌ಪದ್ಮಸ್ಥತ್ವವು ಸಿದ್ಧವಾಗುತ್ತದೆ ಅಲ್ಲವೇ? ಎಂಬ ಪ್ರಶ್ನೆಗೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಸ ಚ = ಅಂತಹ, ಆಕಾಶಃ = ಆಕಾಶವು, ವಿಷ್ಣುಃ = ವಿಷ್ಣುವೆಂದು, ನ = ಹೇಳಲಾಗದು, ಏಕೆಂದರೆ ನಾರಾಯಣೋಪನಿಷತ್ತಿನಲ್ಲಿ, ತಸ್ಯಾಂತೇ = ಹೃದಯದ ಅಂತ್ಯದಲ್ಲಿ, ಸುಷಿರಂ = ಛಿದ್ರ ಸ್ವರೂಪವಾದ, ಸೂಕ್ಷ್ಮಂ = ಸೂಕ್ಷ್ಮವಾದ ತತ್ವವಿದೆ, ತಸ್ಮಿನ್ = ಭೂತಾಕಾಶದಲ್ಲಿ, ಸರ್ವಂ = ಸಕಲ ಪದಾರ್ಥವೂ, ಪ್ರತಿಷ್ಠಿತಂ = ಆಶ್ರಿತವಾಗಿದೆ, ಇತಿ ಶ್ರುತೇಃ = ಹೀಗೆ

---

व्याप्तस्य तस्यानेकाधारत्वं युज्यत एवेति भावः । अन्यपरित्यागेनास्यैव जिज्ञास्यत्वे को हेतुरित्यतोऽस्य सर्वाधारत्वाख्यं महिमानमाह – उभ इत्यादिना ।। अस्मिन्नन्तरे ये उभे मुक्तामुक्ते द्यावापृथिव्यौ देव्यौ 'समाहिते' समवस्थिते । एवमुभयविधौ अग्निश्च वायुश्चेत्येतौ देवौ समाश्रितौ । तथा उभौ मुक्तामुक्तौ सूर्याचन्द्रमसौ विद्युत् नक्षत्राणि च समाश्रितानीति छान्दोग्यभाष्यरीत्या श्रुत्यर्थः । न्यायविवरणे तद्विवरणरूपटीकायां – 'तस्मिन् यदन्तः' इत्यत्र हृत्पद्मस्थाकाशगतं ब्रह्मान्वेष्टव्यमित्युक्तम् । नच पद्मस्थस्य ब्रह्मत्वासिद्धिः । शरीरपुण्डरीकयोर्ब्रह्म प्रति पुरत्ववेश्मत्वोक्त्यैवा अन्वेष्टव्यस्य ब्रह्मत्वसिद्धेः। तथा च पद्मे ब्रह्मास्तीत्युक्तेऽपि तद् ब्रह्म किम्प्रकारमिति भावेन पुनः 'किं तदत्र विद्यते' इति पृष्टे तत्प्रकारज्ञापनाय 'यावान्' इत्याद्याह गुरुः । अनेन च यद् ब्रह्मान्वेष्टव्यतयोक्तं तद्ब्रह्मान्तर्हृदये यावानेष प्रसिद्धाकाशस्तावान् सर्वोऽप्याकाशो वर्तते । तस्मिंश्चाऽकाशे पृथिव्यादिकं सर्वं समाश्रितम् । अपहतपाप्मत्वादिगुणकं च तदित्येवमाकाशादि-सर्वाश्रयत्वादपहतपाप्मत्वादिप्रकार उक्तो भवतीति प्रकारान्तरेण व्याख्यातम् । पूर्वपक्षी तु – 'हृदय आकाशे' इति पदं सप्तम्यन्तं कृत्वा दहराकाशस्थो व्याप्ताकाशोऽन्वेष्टव्य इति वा आकाश इति प्रथमान्तं कृत्वा प्रागुक्तदहरभूताकाशमनूद्य यावानित्यनेन बाह्याकाशतुल्यतया तं विशिष्य जिज्ञास्यत्वेन तत्र द्यावापृथिव्यादिकमुच्यत इत्याह ।

ಶ್ರುತಿಗಳಿರುವುದರಿಂದ, ಭೂತಾಕಾಶವೇ ಸೂರ್ಯಚಂದ್ರಾದಿಗಳಿಗೆ ಆಧಾರವಾಗಿದೆ ಎಂದು ಪೂರ್ವಪಕ್ಷ.[(१)]

भाष्यम् – ॐ ॥ दहर उत्तरेभ्यः ॥ ॐ

**'य आत्माऽपहतपाप्मा विजरो विमृत्युर्विशोकोऽविजिघत्सोऽपिपासः सत्यकामः सत्यसङ्कल्पः सोऽन्वेष्टव्यः स विजिज्ञासितव्यः' (छां.८-७-३) इत्यादिभ्य उत्तरेभ्यो गुणेभ्यो दहरे विष्णुरेव ।**

ಅನುವಾದ - ಯಾವಾತನು ಸರ್ವನಿಯಾಮಕನೂ, ಪಾಪಲೇಪರಹಿತನೂ, ವೃದ್ಧಾಪ್ಯ ಮೊದಲಾದ ದೋಷಗಳಿಲ್ಲದವನೂ, ಮೃತ್ಯುವನ್ನು ಗೆದ್ದವನೂ, ದುಃಖರಹಿತನೂ, ನ್ಯೂನತೆ ಇಲ್ಲದವನೂ, ಹಸಿವು, ನೀರಡಿಕೆ ಮೊದಲಾದ ದೋಷಗಳಿಲ್ಲದವನೂ, ಸತ್ಯವಾದ ಕಾಮನೆ ಉಳ್ಳವನೂ, ಸತ್ಯಸಂಕಲ್ಪನೂ ಆಗಿದ್ದಾನೋ ಅಂತಹವನೇ ಹುಡುಕಲು (ಅನ್ವೇಷಣೆಗೆ) ಯೋಗ್ಯನಾಗಿದ್ದಾನೆ. ಅವನನ್ನೇ ವಿಚಾರ ಮಾಡಬೇಕು. ಇತ್ಯಾದಿಯಾಗಿ ಛಾಂದೋಗ್ಯವು ಹೃತ್ಪದ್ಮದಲ್ಲಿರುವ ವ್ಯಕ್ತಿಯನ್ನು ಹೊಗಳುತ್ತಿದೆ. ಈ ಎಲ್ಲ ಗುಣಗಳು ವಿಷ್ಣುವಿನಲ್ಲಿ ಅಸಾಧಾರಣವಾಗಿರುವುದರಿಂದ ವಿಷ್ಣುವೇ ಹೃತ್ಪದ್ಮದಲ್ಲಿದ್ದಾನೆಂದು, ಹಾಗೂ ಸರ್ವಾಧಾರನೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ಮಾಡುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆ ನೀಡುತ್ತಾ ವ್ಯಾಖ್ಯಾನಿಸುತ್ತಿದ್ದಾರೆ -

ದಹರಃ = ಹೃತ್ತದಲ್ಲಿರುವ ಆಕಾಶವೆಂದರೆ ವಿಷ್ಣುವೇ ಆಗಿದ್ದಾನೆ, ಏಕೆಂದರೆ , ಉತ್ತರೇಭ್ಯಃ = ಮುಂದಿನ ವಾಕ್ಯದಲ್ಲಿ ಹೇಳಿರುವ ಗುಣಗಳು ವಿಷ್ಣುವಿನಲ್ಲೇ ಯುಕ್ತವಾಗುವುದರಿಂದ.

---

(१) भाष्यदीपिका – नन्वस्त्वाकाशस्य सर्वाधारतया हृत्पद्मस्थत्वं तस्य चाऽकाशस्य **'आकाशस्तल्लिङ्गात्'** (ब्र.सू.१.१.२२) इति न्यायेन विष्णुत्वेन विष्णोरेव हृत्पद्मस्थत्वं सिद्ध्यतीत्यत आह – स चेति ॥ चस्त्वर्थः, प्रतिज्ञासमुच्चये वा । तथा च यः सर्वाधारतया हृत्पद्मस्थत्वेन च श्रुत्युक्तः 'स चाऽकाशो न विष्णुः' भूतमेव नतु विष्णुरित्यर्थः । कुतो वा न विष्णुरित्यत आह – तस्यान्त इति ॥ स चेत्यनुषक्तश्चशब्दोऽत्र बुद्ध्या विविक्तसुषिरपदेनान्वीयतेऽवधारणे चायम् । श्रुतिसमानोक्त्युपलक्षकं चैतत् । तथा च 'तस्यान्ते' इति वाक्ये 'सुषिरपदश्रुतेः' सुषिरशब्दश्रवणात् सुषिरस्य छिद्रात्मकप्रसिद्धाकाशस्यैव श्रुतेः सर्वाधारतया हृत्पद्मस्थत्वोक्तेः तत्समाख्यानादित्यर्थः । **'तस्य' 'पद्मकोशप्रतीकाशं हृदयं चाप्यधोमुखम्'** इति पूर्ववाक्ये प्रकृतस्य हृत्पद्मकोशस्य 'अन्ते' अन्तरे तन्मध्ये सूक्ष्मं 'सुषिरं' छिद्रमस्ति, तस्मिन् 'सर्वं' जगत् प्रतिष्ठितमिति तैत्तिरीयश्रुत्यर्थः ।

ಛಾಂದೋಗ್ಯದ ಮುಂದಿನ ವಾಕ್ಯಗಳು ಹೀಗಿವೆ - ಯಃ = ಯಾವಾತನು, ಆತ್ಮಾ = ಸಕಲನಿಯಾಮಕನೋ, ಅಪಹತಪಾಪ್ಮಾ = ಪಾಪಲೇಪಗಳಿಂದ ರಹಿತನೋ, ವಿಜರಃ = ವೃದ್ಧಾಪ್ಯವೇ ಮೊದಲಾದ ದೋಷಗಳಿಲ್ಲದವನೋ, ವಿಮೃತ್ಯುಃ = ಮೃತ್ಯುವನ್ನು ಗೆದ್ದವನೋ, ವಿಶೋಕಃ = ದುಃಖರಹಿತನೋ, ಅವಿಜಿಘತ್ಸಃ = ಹಸಿವು ಇಲ್ಲದವನೋ, ಅಪಿಪಾಸಃ = ಬಾಯಾರಿಕೆ ಇಲ್ಲದವನೋ, ಸತ್ಯಕಾಮಃ = ಸತ್ಯವಾದ ಕಾಮನೆಯುಳ್ಳವನೋ, ಸತ್ಯಸಂಕಲ್ಪಃ = ಯಾವುದೇ ಕಾರಣದಿಂದಲೂ ವ್ಯರ್ಥವಾಗದಂತಹ ಸಂಕಲ್ಪ ಉಳ್ಳವನೋ, ಸಃ = ಅಂತಹ ವ್ಯಕ್ತಿಯೇ, ಅನ್ವೇಷ್ಟವ್ಯಃ = ಹುಡುಕಲು ಯೋಗ್ಯನಾಗಿದ್ದಾನೆ, ಸಃ = ಅವನೇ, ವಿಜಿಜ್ಞಾಸಿತವ್ಯಃ = ವಿಚಾರ ಮಾಡಲು ಯೋಗ್ಯನು, ಇತ್ಯಾದಿಭ್ಯಃ = ಇವೇ ಮೊದಲಾದ, ಉತ್ತರೇಭ್ಯಃ = ಮುಂದಿನ ವಾಕ್ಯಗಳಲ್ಲಿರುವ, ಗುಣೇಭ್ಯಃ = ಗುಣಗಳಿಂದ, ದಹರೇ = ಹೃದಯಾಕಾಶದಲ್ಲಿ ಇರುವವನು, ವಿಷ್ಣುರೇವ = ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.[१]

**भाष्यम् –'योऽशनायापिपासे शोकं मोहं जरां मृत्युमत्येति' (बृ.५-५)**

(१) **भाष्यदीपिका** – सिद्धान्तयत्सूत्रमवतार्य व्याचष्टे – **अत इति** ।। **'इत्यादिभ्यः'** इत्यादिरूपेभ्यः **'उत्तरेभ्यः'** विषयवाक्यानन्तरभाविभ्यः **'शब्देभ्यः उक्तेभ्यः'** इति शेषः । इत्याद्युत्तरवाक्येभ्य इति [illegible]वसितार्थः । यद्वा **'गुणेभ्यः'** गणवचनेभ्य इत्यर्थः । हेत्वसिद्धिपरिहाराय श्रुत्युदाहरणम् । आदिपदेन **'विशोकोऽविजिघत्सोऽपिपासः सत्यकामः सत्यसङ्कल्पः सोऽन्वेष्टव्यः स विजिज्ञासितव्यः'** इत्यादिकं गृह्यते । गुणेभ्य इत्यनेनोत्तरपदमुत्तरत्र श्रुतानेकशब्दवाच्यगुणोपलक्षकमित्युक्तं भवति । **'दहरे'** हृत्पद्मगताल्पाकाशे इत्यनेन सूत्रे **'दहरे'** इति सप्तम्यन्तं पदं, न परमत इव प्रथमान्तमित्युक्तं भवति । स्थितोऽन्वेष्टव्यतयोक्त इति शेषः । समन्वयसूत्रादनुवृत्तस्य विधेयपरस्य तत्त्वित्यस्यार्थो विष्णोरेवेति । अनेन – **'यः'** इति दहरवाक्यादुत्तरवाक्ये श्रुतेभ्यो गुणेभ्यो **'दहरे'** विजिज्ञास्यतयोक्तः **'तत्तु'** विष्णुरेव न भूताकाशादिरिति सूत्रार्थ उक्तो भवति । यो हृत्पद्माकाशगतः परमात्मा **'न वधेनास्य हन्यते'** (छां.८.१.५) इति प्राक् शरीरस्य नाशेनावध्यत्वेनोक्तः सः **'अपहतपाप्मा'** नित्यमेव स्वतोऽपहतपाप्मा पापात्यन्ताभाववानिति यावत् । अत एव न तत्कार्यं जरादिकमस्येत्युच्यते – **विजर इत्यादिना** ।। **'अविजिघत्सः'** बुभुक्षारहितः । **'अपिपासः'** पानेच्छारहित इति । **'बुभुक्षादिना पीडाभाव उच्यते'** इति ज्ञानपादीयटीकोक्तेर्नादन-पानेच्छाभावोऽभिधीयते, प्रमाणबाधितत्वात् । किन्तु तत्पीडाभावः । अत्र हेतुः – **सत्यकाम इति** ।। तस्य यदिष्टं तत् स्वत एव भवेदिति सत्यकामः । तत्रापि हेतुः – **'सत्यसङ्कल्पः'** अप्रतिहतसङ्कल्प इति । य एवम्भूतः सोऽन्वेष्टव्य इति श्रुत्यर्थः ।

**'स एष सर्वेभ्यः पाप्मभ्य उदितः' (छां.१-६-७) इत्यादिना विष्णोरेव हि ते गुणाः ।**

ಅನುವಾದ - 'ಯಾವಾತನು ಹಸಿವು, ನೀರಡಿಕೆ, ದುಃಖ, ಭ್ರಾಂತಿ, ಮುಪ್ಪು, ಮರಣ ಇವುಗಳೆಲ್ಲವನ್ನೂ ದಾಟಿದ್ದಾನೋ, ಅಂಥಹ ವ್ಯಕ್ತಿಯೇ, ಸಕಲ ಪಾಪಗಳಿಂದ ರಹಿತನಾಗಿರುತ್ತಾನೆ'. ಇವೇ ಮೊದಲಾದ ಪ್ರಮಾಣಗಳಿಂದ ಪಾಪರಾಹಿತ್ಯಾದಿ ಗುಣಗಳು, ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- 'ಯಃ = ಯಾವಾತನು, ಅಶನಾಯಾ = ಹಸಿವು, ಪಿಪಾಸೇ = ನೀರಡಿಕೆಗಳನ್ನು, ಶೋಕಂ = ದುಃಖವನ್ನು, ಮೋಹಂ = ಮೂರ್ಛೆಯನ್ನು, ಜರಾಂ = ಮುಪ್ಪನ್ನು, ಮೃತ್ಯುಂ = ಮರಣವನ್ನು, ಅತ್ಯೇತಿ = ದಾಟಿದ್ದಾನೋ, ಸ ಏಷಃ = ಅಂತಹ ಇವನೇ, ಸರ್ವೇಭ್ಯಃ ಪಾಪ್ಮಭ್ಯಃ = ಸಕಲ ಪಾಪಗಳಿಂದ, ಉದಿತಃ = ರಹಿತನಾಗಿ ಪ್ರಕಾಶಿಸುತ್ತಾನೆ', ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ತೇ ಗುಣಾಃ = ಹಿಂದಿನ ಅಪಹತಪಾಪ್ಮತ್ವಾದಿ ಸಮಸ್ತ ಗುಣಗಳು, ವಿಷ್ಣೋರೇವ ಹಿ = ಭಗವಂತನದ್ದೇ ಆಗಿವೆ.[१]

**भाष्यम् – 'नित्यतीर्णाशनायादिरेक एव हरिः स्वतः ।**
**अशनायादिकानन्ये तत्प्रसादात् तरन्ति हि ॥'**
**इति पाद्मे ॥**

ಅನುವಾದ - ನಿರಂತರವಾಗಿ ಹಸಿವು ನೀರಡಿಕೆಗಳನ್ನು ಗೆದ್ದವನು ಶ್ರೀಹರಿ ಮಾತ್ರ. ಅವನ ಅನುಗ್ರಹದಿಂದ ಬೇರೆಯವರೂ ಸಹ ಹಸಿವು, ನೀರಡಿಕೆಗಳನ್ನು ಗೆಲ್ಲಬಹುದು ಎಂದು ಪದ್ಮಪುರಾಣವು ಹೇಳಿದೆ.

---

(१) भाष्यदीपिका – अपहतपाप्मत्वादिकं कथं विष्णुत्वनिश्चायकं, तद्गतत्वेनासिद्धत्वादित्यत आह – य इति ॥ बृहदारण्यकश्रुतिरियम् । यः 'अशनाया' अशनेच्छा। 'पिपासा' पानेच्छा । ते 'अत्येति' अतिक्रम्य वर्तते । यश्च 'शोकं' दुःखं 'मोहं' मूर्छां 'जरां' मरणं चाप्येतीत्यर्थः । अत्रत्यस्य यच्छब्दस्य 'तमात्मानं विदित्वा' इति तच्छ्रुतिस्थतच्छब्देनान्वयः । 'स एषः' इति छन्दोगश्रुतिः । 'स एषः' परमात्मा 'पाप्मभ्यः' पापेभ्यः 'उदितः' नित्यं स्वत एवोद्गतः पापरहित इत्यर्थः । 'इत्यादिना' वाक्येन आदिशब्देन सत्यकामत्वादिगुणान्तरबोधकवाक्यानि गृह्यन्ते । हिशब्दो यत इत्यर्थे । ते अपहतपाप्मत्वादिरूपोत्तरवाक्योक्ताः सिद्धा इति शेषः । तस्मान्न तेषां विष्णुलिङ्गत्वनिश्चय इति वाक्यशेषेणास्यान्वयः । अन्यत्र पापाद्यभावस्य कथञ्चिद्योगेऽपि सर्वथा सत्यकामत्वादिकं न युज्यत इति ज्ञापनायाऽऽदिशब्दबहुवचनयोः प्रयोगः ।

ಪ್ರತಿಪದಾರ್ಥ -- ಆದರೂ ಸಹ ಇವುಗಳು ವಿಷ್ಣುವಿನ ಗುಣಗಳಲ್ಲ. ಲಕ್ಷ್ಮೀದೇವಿ ಮೊದಲಾದವರಲ್ಲಿಯೂ ಸಹ ಇಂತಹ ಗುಣಗಳು ಇರಬಹುದಲ್ಲವೆ? ಈ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಸ್ವತಃ = ಮತ್ತೊಬ್ಬರ ಅಪೇಕ್ಷೆ ಇಲ್ಲದೇ, ನಿತ್ಯತೀರ್ಣಾಶನಾಯಾದಿಃ = ಅನಾದ್ಯನಂತಕಾಲದಲ್ಲಿಯೂ, ಹಸಿವು ನೀರಡಿಕೆಗಳನ್ನು ದಾಟದವನು, ಏಕ ಏವ = ಒಬ್ಬನೇ ಆದ, ಹರಿಃ = ಶ್ರೀಹರಿಯು, ತತ್‌ಪ್ರಸಾದಾತ್ = ಇಂತಹ ಶ್ರೀಹರಿಯ ಅನುಗ್ರಹದಿಂದಲೇ, ಅನ್ಯೇ = ರಮಾಬ್ರಹ್ಮಾದಿಗಳೂ ಸಹ, ಅಶನಾಯಾದಿಕಾನ್ = ಹಸಿವು, ನೀರಡಿಕೆ ಮೊದಲಾದವುಗಳನ್ನು, ತರಂತಿ = ದಾಟುತ್ತಾರೆ, ಇತಿ = ಹೀಗೆ, ಪಾದ್ಮೇ = ಪದ್ಮ ಪುರಾಣದಲ್ಲಿ ಹೇಳಲಾಗಿದೆ.(१)

**भाष्यम् – सापेक्षनिरपेक्षयोश्च निरपेक्षं स्वीकर्तव्यम् ।**

ಅನುವಾದ - ಶ್ರೀಹರಿಯಲ್ಲಿ ಮಾತ್ರ ಅಪಹತಪಾಪ್ಮತ್ವಾದಿಗುಣಗಳು ಸಹಜವಾಗಿ ಇವೆ. ಬೇರೆಯವರಲ್ಲಿ ಈ ಗುಣಗಳು ಶ್ರೀಹರಿಯ ಅಧೀನವಾಗಿವೆ. ಸಾಪೇಕ್ಷನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಸ್ವೀಕರಿಸಬೇಕು. ಆದ್ದರಿಂದ ಹಸಿವು ನೀರಡಿಕೆ ಮೊದಲಾದವುಗಳನ್ನು ಮೀರಿರುವಿಕೆ ಎಂಬಲ್ಲಿ ಗುಣವೆಂದರೆ, ನಿರಪೇಕ್ಷವಾದ ಗುಣಗಳನ್ನೇ ಸ್ವೀಕರಿಸಬೇಕು. ಆದ್ದರಿಂದ ದಹರಾಕಾಶದಲ್ಲಿರುವವನು ವಿಷ್ಣುವೇ ಆಗಿದ್ದಾನೆ.

ಪ್ರತಿಪದಾರ್ಥ -- ಲಕ್ಷ್ಮೀ ಮೊದಲಾದವರಲ್ಲಿ ಅಪಹತಪಾಪ್ಮತ್ವಾದಿಗಳು ಸ್ವತಂತ್ರವಾಗಿರದಿದ್ದರೂ, ಅಸ್ವತಂತ್ರವಾಗಿ ಇರುತ್ತವೆಂದು ಹೇಳಬಹುದಲ್ಲವೆ ? ಆದ್ದರಿಂದ 'ಅಪಹತಪಾಪ್ಮತ್ವ' ಎಂಬ ಗುಣದಿಂದ ವಿಷ್ಣುವೇ ದಹರಸ್ಥನೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಸಾಪೇಕ್ಷ-ನಿರಪೇಕ್ಷಯೋಶ್ಚ = ಪಾರತಂತ್ರ್ಯ ಸ್ವಾತಂತ್ರ್ಯಗಳಲ್ಲಿ, ನಿರಪೇಕ್ಷಂ = ಸ್ವತಂತ್ರವಾದದ್ದೇ, ಸ್ವೀಕರ್ತವ್ಯಂ = ಸ್ವೀಕರಿಸಲ್ಪಡಬೇಕು. (२)

---

(१) **भाष्यदीपिका** – तथाऽपि नैते गुणा विष्णोरेव, रमादिष्वपि सम्भवादित्यत आह – **नित्येति** ।। **'स्वतः'** अन्यानपेक्षया नित्यं तीर्णा अशनायादयो येन स हरिरेक एव, नान्योऽस्ति । हरेरन्ये रमाब्रह्मादयस्तु **'अशनायादिकान्'** अशनपानेच्छाशोकादिदोषान् **'तत्प्रसादात्'** तस्य हरेरनुग्रहादेव **'तरन्ति'** अतियन्ति, न स्वत इत्यर्थः । हिशब्दः प्रसिद्धौ । **'पाद्मे'** उक्तमिति शेषः । अतो निरपेक्षगुणानामन्यत्राभावाद् विष्णोरेवेत्युक्तमिति भावः ।

(२) **भाष्यदीपिका** – ननु रमादिष्वपहतपाप्मत्वादीनामन्यानधीनानाम भावेऽपि यथाकथञ्चित् सत्त्वादन्यगतैस्तैः कथं विष्णुत्वनिश्चय इत्यत आह – **सापेक्षेति** ।। **'सापेक्षम्'** अन्याधीनं **'निरपेक्षम्'** अन्यानधीनं तयोर्मध्ये इत्यर्थः । चोऽवधारणे,

**भाष्यम् – 'सत्यकामोऽपरो नास्ति तमृते विष्णुमव्ययम् ।**
**सत्यकामत्वमन्येषां भवेत् तत्काम्यकामिता ॥'**
**इति स्कान्दे ॥**

ಅನುವಾದ - ನಾಶರಹಿತನಾದ ವಿಷ್ಣುವನ್ನು ಬಿಟ್ಟು, ಲಕ್ಷ್ಮೀ ಮೊದಲಾದವರೂ ಸಹ ಸತ್ಯ ಸಂಕಲ್ಪರಲ್ಲ. ಲಕ್ಷ್ಮೀದೇವಿ ಮೊದಲಾದವರಲ್ಲಿರುವ ಸತ್ಯಸಂಕಲ್ಪಗಳು ವಿಷ್ಣುವಿನ ಅಧೀನವೇ ಆಗಿವೆ. ಆದ್ದರಿಂದ ದಹರಸ್ಥನಲ್ಲಿ ಹೇಳಲ್ಪಟ್ಟ ಸತ್ಯಸಂಕಲ್ಪತ್ವವು ವಿಷ್ಣುವಿನ ಅಸಾಧಾರಣಧರ್ಮವೆಂದು ನಿರ್ಣಯವಾಗುತ್ತದೆ. ಈ ಕಾರಣದಿಂದಲೂ ವಿಷ್ಣುವೇ ಹೃತ್ಪದ್ಮಸ್ಥನೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸಾಪೇಕ್ಷತ್ವ, ನಿರಪೇಕ್ಷತ್ವಗಳಿಂದ ವಿಶಿಷ್ಟವಾದ ಅಪಹತಪಾಪ್ಮತ್ವಾದಿಗಳು ಅಭಾವರೂಪವಾದ ಕಾರಣ ಆಕಾಶಾದಿಗಳಲ್ಲಿ ನೇರವಾಗಿ ಅಥವಾ ಅಭಿಮಾನಿದೇವತೆಯ ಮೂಲಕವಾಗಿ ಕೂಡಬಹುದು. ಆದರೆ ಸತ್ಯಕಾಮತ್ವಾದಿಭಾವರೂಪವಾದ ಗುಣಗಳು ಬೇರೆಯವರಲ್ಲಿ ಯಾವುದೇ ಕಾರಣದಿಂದಲೂ ಸಹ ಯುಕ್ತವಾಗುವುದಿಲ್ಲ. ಇಂತಹ ಸತ್ಯಕಾಮತ್ವಾದಿಗುಣಗಳ ಆಧಾರದಿಂದ ವಿಷ್ಣುವೇ ಹೃತ್ಪದ್ಮಸ್ಥನೆಂದು ನಿರ್ಣಯಿಸಬಹುದು.

ಸತ್ಯಕಾಮಃ = ಅಪ್ರತಿಹತವಾದ ಸಂಕಲ್ಪವುಳ್ಳವನು, ತಂ ವಿಷ್ಣುಂ ಋತೇ = ಆ ವಿಷ್ಣುವನ್ನು ಬಿಟ್ಟು, ಅಪರಃ = ಮತ್ತೊಬ್ಬ ದೇವತೆಯು, ನಾಸ್ತಿ = ಇರುವುದಿಲ್ಲ, ಅನ್ಯೇಷಾಂ = ಲಕ್ಷ್ಮೀ ಬ್ರಹ್ಮಾದಿಗಳಲ್ಲಿರುವ, ಸತ್ಯಕಾಮತ್ವಂ = ಸತ್ಯಸಂಕಲ್ಪಗುಣವು, ತತ್ ಕಾಮ್ಯಕಾಮಿತಾ = ಪರಮಾತ್ಮನ ಇಚ್ಛೆಗೆ ಅನುಗುಣವಾಗಿಯೇ ಕಾಮನಾ ಮಾಡತಕ್ಕದ್ದು, ಭವೇತ್ = ಆಗಿರುತ್ತದೆ, ಇತಿ ಚ = ಎಂಬುದಾಗಿಯೂ ಸ್ಕಾಂದಪುರಾಣದಲ್ಲಿ ಹೇಳಲಾಗಿದೆ. ಆದ್ದರಿಂದ ವಿಷ್ಣುವೇ ದಹರನೆಂದು, ಹೃತ್ಪದ್ಮಸ್ಥನೆಂದು ನಿರ್ಣಯವಾಯಿತು.(१)

---

निरपेक्षमेवेति सम्बध्यते । अपहतपाप्मत्वादिकमिति विशेष्यं प्रकृतत्वाल्लभ्यते । **'स्वीकर्तव्यं'** लिङ्गत्वेनेति शेषः । तथा च विवक्षितलिङ्गस्यान्यत्राभावात्तेन विष्णुत्वनिश्चयो भवत्येवेति भावः ।

(१) **भाष्यदीपिका** – किञ्च सापेक्षत्वनिरपेक्षत्वादिविशेषितानामपहतपाप्मत्वादीनाम-भावरूपाणामन्यत्राऽकाशादौ साक्षाद्वाऽभिमानिद्वारा वा यथाकथञ्चिद् वृत्तावपि न कथञ्चिदन्यत्र सत्यकामत्वाद्यस्तीति युक्तस्तेन विष्णुत्वनिश्चय इत्याह – **सत्यकाम इति** ॥ 'अव्ययम्' अक्षीणकाममोघकामं सत्यकामं विष्णुम् 'ऋते' विना 'परोऽन्यः' विष्णोरन्यः सत्यकामः सत्यसङ्कल्पश्च नास्ति । विष्णौ तद्भावस्य तदन्यस्मिन् तदभावस्य च प्रतिपादनाय वक्रोक्तिः । विष्णोरन्येषां रमादीनां क्वचिदागमे प्रतीयमानमपि सत्यकामत्वं 'तत्काम्यकामिता' विष्णुकामनाविषयविषयककामनावत्त्व रूपमेव भवेन्न मुख्यमित्यर्थः । तथा चापहतपाप्मत्वं स्वतः पराधीनं चेति यथा

## श्रीपद्मनाभतीर्थविरचितसत्तर्कदीपावळिः

### ॥ ॐ दहर उत्तरेभ्यः ॥ ॐ ॥ १४ ॥

**चन्द्रेत्यादेरयमर्थः । अथ 'यदिदमस्मिन् ब्रह्मपुरे' इत्याम्नायते । तत्राकाशस्य चन्द्राद्याधारत्वमुच्यते । स चाकाशशब्दाभिधेयो भूताकाशो न विष्णुः ।**

ಭಾಷ್ಯದಲ್ಲಿ 'ಚಂದ್ರಾದಿತ್ಯದ್ಯಾಧಾರತ್ವಂ' ಎಂದು ಹೇಳಿದ್ದಾರೆ. ಇಲ್ಲಿರುವ 'ಆದಿ' ಪದಕ್ಕೆ ಹೀಗೆ ಅರ್ಥ - 'ಅಥ ಯದಿದಮಸ್ಮಿನ್ ಬ್ರಹ್ಮಪುರೇ' ಎಂದು ಶ್ರುತವಾಗಿದೆ. ಇಲ್ಲಿ ಆಕಾಶಕ್ಕೆ ಚಂದ್ರಾದಿತ್ಯಾದ್ಯಾಧಾರತ್ವವನ್ನು ಹೇಳಲಾಗಿದೆ. 'ಆಕಾಶ' ಶಬ್ದಕ್ಕೆ ಭೂತಾಕಾಶವೆಂದೇ ಅರ್ಥ ಹೊರತು ವಿಷ್ಣುವೆಂದಲ್ಲ.

**'हृदयं तद्विजानीयात्' 'तस्यान्ते सुषिरं सूक्ष्मं तस्मिन् सर्वं प्रतिष्ठितम्' इति श्रुत्यन्तरसंवादात्**

'ಹೃದಯಂ ತದ್ವಿಜಾನೀಯಾತ್' 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬ ಸಮಾಖ್ಯಾಶ್ರುತ್ಯಂತರದ ಸಂವಾದ ಇರುವುದರಿಂದ,

**'एतस्य वा अक्षरस्य' इत्यादिना विष्णोरेवेति, तन्न । सिद्ध्यतीत्येवं प्राप्तेऽभिधीयते ।**

ಆದ್ದರಿಂದ ಚಂದ್ರಾದಿತ್ಯಾದ್ಯಾಧಾರತ್ವವನ್ನು, 'ಏತಸ್ಯ ವಾ ಅಕ್ಷರಸ್ಯ' ಇತ್ಯಾದಿ ವಾಕ್ಯಗಳಿಂದ ವಿಷ್ಣುವಿನಲ್ಲಿ ಮಾತ್ರ ಏನು ಸಮರ್ಥಿಸಲಾಯಿತೋ ಅದು ಸಿದ್ಧವಾಗುವುದಿಲ್ಲವೆಂದು ಪೂರ್ವಪಕ್ಷ.

**चन्द्राद्याधारो विष्णुरेवात्र निर्दिश्यते, नाकाशम् ।**

ಸಿದ್ಧಾಂತ - ಚಂದ್ರಾದಿತ್ಯಾದ್ಯಾಧಾರನಾದವನು ವಿಷ್ಣುವೇ ಆಗಿದ್ದಾನೆಂದು ಶ್ರುತಿಯು ಹೇಳುತ್ತದೆ ಹೊರತು ಆಕಾಶವಲ್ಲ.

---

द्विविधं, न तथा सत्यकामत्वं किं त्वेकविधं, तच्च मुख्यं विष्णावेव, अन्यत्र तु पारिभाषिकमिति भावः । 'स्कान्दे' उक्तमिति शेषः । अतः सत्यकामत्वादिविवक्षया विष्णोरेव हि ते गुणा इत्युक्तं युक्तमिति भावः ।

**'य आत्माऽपहतपाप्मा विजरो विमृत्युर्विशोकोऽ विजिघित्सोऽपिपासः सत्यकामः सत्यसङ्कल्पः' इत्युत्तरवाक्यविरोधात् ।**

'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘಿತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ' ಎಂಬ ಮುಂದಿನ ವಾಕ್ಯದಲ್ಲಿ ವಿಷ್ಣುವಿನ ಸತ್ಯಸಂಕಲ್ಪತ್ವಾದಿ ಅಸಾಧಾರಣ-ಗುಣಗಳೇ ಶ್ರುತವಾಗಿವೆ. ವಿಷ್ಣುವು ಆಕಾಶಶಬ್ದಪ್ರತಿಪಾದ್ಯನಲ್ಲವೆಂದರೆ, ಈ ಮುಂದಿನ ವಾಕ್ಯದ ವಿರೋಧ ಬರುತ್ತದೆ.

**'अथ यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तराऽकाशस्तस्मिन् यदन्तस्तदन्वेष्टव्यम्, तद्वाव विजिज्ञासितव्यम्' इत्यन्वेष्टव्यतया यो निर्दिष्टो विष्णुः दहराकाशस्थः तद्धृदयाकाशसन्निहितं सर्वमुच्यते ।**

'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಽಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಮ್, ತದ್ವಾವ ವಿಜಿಜ್ಞಾಸಿತವ್ಯಮ್' ಎಂಬುದಾಗಿ ಜಿಜ್ಞಾಸೆಗೆ ವಿಷಯನಾದ ಯಾವ ವಿಷ್ಣುವಿದ್ದಾನೋ ಇವನು ದಹರಾಕಾಶದಲ್ಲಿರುತ್ತಾನೆ. ಅಂತಹ ವಿಷ್ಣುವಿನ ಹೃದಯಾಕಾಶದಲ್ಲಿ ಎಲ್ಲವೂ ಸನ್ನಿಹಿತವಾಗಿದೆಯೆಂದು ಹೇಳಲಾಗಿದೆ. ಇವನಲ್ಲಿ ಎಲ್ಲವೂ ಆಶ್ರಿತವಾಗಿದೆ.

**'यावान् वाऽयमाकाशस्तावानषोऽन्तर्हृदय आकाश उभे अस्मिन् द्यावापृथिवी' इत्यादिना ।**

'ಯಾವಾನ್ ವಾಽಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ' ಎಂಬ ಶ್ರುತಿಯು ವಿಷ್ಣುವಿನ ಹೃದಯದಲ್ಲಿರುವ ಆಕಾಶಕ್ಕೆ ವ್ಯಾಪ್ತತ್ವವನ್ನು ಹೇಳುತ್ತಿದೆ. ಇದರಿಂದ ಸಕಲಕ್ಕೂ ಆಧಾರನಾದವನು ವಿಷ್ಣುವೇ ಆಗಿದ್ದಾನೆ ಮತ್ತು ಸರ್ವಗತನಾಗಿದ್ದಾನೆಂದು ಹೇಳಿದಂತಾಯಿತು.

**अथवा विष्णुमेव न बाह्याकाशं व्यापकं हृत्कुहरस्थाकाशशब्देन निर्दिश्य तत्स्थं सर्वमुच्यते ।**

ಅಥವಾ ವಿಷ್ಣುವೇ ವ್ಯಾಪ್ತನಾಗಿದ್ದಾನೆ ಹೊರತು ಬಾಹ್ಯಾಕಾಶವಲ್ಲ; ಹೃದಯಗುಹೆಯಲ್ಲಿರುವ ಆಕಾಶದಲ್ಲಿ ವಿಷ್ಣುವಿದ್ದಾನೆಂದು ನಿರ್ದೇಶ ಮಾಡಿ ಅವನಲ್ಲಿ ಎಲ್ಲವೂ ಇದೆ ಎಂದು 'ಆಕಾಶ' ಶಬ್ದದಿಂದ ಶ್ರುತಿ ಹೇಳುತ್ತಿದೆ.

**उभे इत्यादिना अपहतपाप्मत्वादिगुणकश्च विष्णुरेवैतच्छ्रुत्यन्तरसंवादेन दृढीकरोति – योऽशनायेत्यादिना ।। अशनाया विजिघित्सा क्षुदित्यर्थः ।**

'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಿಂದ ಅಪಹತಪಾಪ್ಮತ್ವಾದಿಗುಣಗಳು ವಿಷ್ಣುವಿನಲ್ಲೇ ಬರುತ್ತದೆ ಎಂದು ಶ್ರುತ್ಯಂತರಸಂವಾದದಿಂದ ದೃಢಪಡಿಸುತ್ತಿದ್ದಾರೆ. 'ಯೋऽಶನಾಯಾ' ಇತ್ಯಾದಿಯಾಗಿ. ಹಸಿವೆ ನೀರಡಿಕೆಗಳನ್ನು ದಾಟಿದ್ದಾನೆಂದರ್ಥ.

**नन्वशनायादिपिपासाद्यतिक्रमणं न विष्णोरेव, मुक्तानामपि सम्भवादित्याशङ्कित आह – नित्येति ।।**

ಹಸಿವೆ, ನೀರಡಿಕೆಗಳನ್ನು ದಾಟಿರುವುದು ವಿಷ್ಣುವಿನದ್ದೇ ಲಕ್ಷಣವಾಗುವುದಿಲ್ಲ. ಏಕೆಂದರೆ ಮುಕ್ತರಲ್ಲಿಯೂ ಕೂಡ ಈ ಗುಣಗಳಿರುತ್ತವಲ್ಲವೆ ? ಎಂಬ ಪ್ರಶ್ನೆಗೆ 'ನಿತ್ಯತೀರ್ಣಾ' ಇತ್ಯಾದಿ ಪ್ರಮಾಣದ ಬಲದಿಂದ ವಿಷ್ಣುವಿನ ಅಸಾಧಾರಣ ಧರ್ಮವೆಂದು ನಿಶ್ಚಯ ಮಾಡುತ್ತಿದ್ದಾರೆ.

**नच दहराकाशस्याप्यपहतपाप्मत्वादिकं किञ्चिदाशङ्कनीयम्, अप्रसक्तप्रतिषेधप्रसङ्गात् । भगवदनुकूलेच्छावत्त्वमेव मुक्तानां सत्यकामत्वमित्यर्थः ।।**

ದಹರಾಕಾಶಕ್ಕೂ ಕೂಡ ಅಪಹತಪಾಪ್ಮತ್ವಾದಿಗುಣಗಳನ್ನು ಹೇಳಬಹುದಲ್ಲವೆ ? ಎಂದು ಶಂಕಿಸಬಾರದು. ಜಡವಾದ ಆಕಾಶದಲ್ಲಿ ಪಾಪಕ್ಕೆ ಪ್ರಸಕ್ತಿಯೇ ಇಲ್ಲ. ಹೀಗಿರುವಾಗ ಅದನ್ನು ನಿಷೇಧ ಮಾಡುವುದು ತಪ್ಪಾಗುತ್ತದೆ. ಮುಕ್ತರಲ್ಲಿ ಸತ್ಯಕಾಮತ್ವಾದಿಗಳು ಇದ್ದರೂ ಅವು ಭಗವಂತನ ಮನಸ್ಸಿಗೆ ಅನುಕೂಲವಾದ ಇಚ್ಛೆಯೇ ಆಗಿರುತ್ತವೆಂದು ತಿಳಿಯಬೇಕು.

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः।।ॐ।।**

**तत्वप्रकाशिका –**

**।। ॐ दहर उत्तरेभ्यः ।। ॐ ।। १४ ।।**

**अत्र 'यो वेद निहितं गुहायाम्' । 'तस्यान्ते सुषिरं सूक्ष्मम्' । 'हृदि ह्येष आत्मा' इत्यादिश्रुतिभिः ब्रह्माकाशजीवेषु साधारणस्य हृत्पद्मस्थत्वलिङ्गस्य भगवति समन्वयप्रतिपादनादस्ति शास्त्रादिसङ्गतिः ।**

ಸಂಗತಿ ವಿಚಾರ - 'ಯೋ ವೇದ ನಿಹಿತಂ ಗುಹಾಯಾಮ್', 'ಯಾರು ಹೃದಯದಲ್ಲಿರುವವನನ್ನು ತಿಳಿದಿದ್ದಾನೋ', 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್', 'ಹೃತ್ಪದ್ಮದಲ್ಲಿ ಅತಿಸೂಕ್ಷ್ಮವಾದ ಆಕಾಶ ಇದೆ', 'ಹೃದಿ ಹ್ಯೇಷ' 'ಹೃದಯದಲ್ಲಿ ಆತ್ಮ ಇದ್ದಾನೆ'.

ಇವೇ ಮೊದಲಾದ ಶ್ರುತಿಗಳ ಬಲದಿಂದ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವು, ವಿಷ್ಣು, ಆಕಾಶ, ಜೀವ ಮೂವರಲ್ಲೂ ಸಾಧಾರಣವಾಗಿದೆ. ಹೀಗೆ ಉಭಯತ್ರ ಸಾಧಾರಣವಾದ ಹೃತ್ಪದ್ಮಸ್ಥತ್ವ ಲಿಂಗದ ಸಮನ್ವಯವನ್ನು ಭಗವಂತನಲ್ಲಿ ಪ್ರತಿಪಾದನೆ ಮಾಡುತ್ತಿರುವುದರಿಂದ, ಶಾಸ್ತ್ರಸಂಗತಿ, ಅಧ್ಯಾಯ-ಸಂಗತಿ, ಹಾಗೂ ಪಾದಸಂಗತಿಗಳು ಇರುತ್ತವೆಂದು ತಿಳಿಯಬೇಕು.

**तत्वप्रकाशिका – श्रुत्यादिसङ्गतिं विषयवाक्यमुदाहृत्य विषयादिकं च सूचयन् सयुक्तिकं पूर्वपक्षं सूचयति – चन्द्रेति ।।**

ಶ್ರುತಿಸಂಗತಿ, ಅಧಿಕರಣಸಂಗತಿ ಹಾಗೂ ವಿಷಯವಾಕ್ಯವನ್ನು ಉದಾಹರಿಸುತ್ತಾ ವಿಷಯಾದಿಗಳನ್ನು ಸೂಚಿಸುತ್ತಾ ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಸೂಚನೆ ಮಾಡುತ್ತಿದ್ದಾರೆ 'ಚಂದ್ರ' ಇತ್ಯಾದಿ ವಾಕ್ಯದಿಂದ.

**तत्वप्रकाशिका – 'एतस्य वाऽक्षरस्य' इत्यादिना विष्णोश्चन्द्रादित्याधारत्व-मुक्तं तच्छन्दोगश्रुतौ हृत्पद्मस्थस्योच्यते ।**

'ಏತಸ್ಯ ವಾ ಅಕ್ಷರಸ್ಯ' ಇತ್ಯಾದಿ ಶ್ರುತಿಯಿಂದ ವಿಷ್ಣುವೇ ಚಂದ್ರ, ಆದಿತ್ಯ ಮೊದಲಾದವರಿಗೆ ಆಧಾರನಾಗಿದ್ದಾನೆಂದು ಅಕ್ಷರಾಧಿಕರಣದಲ್ಲಿ ಸಮರ್ಥಿಸಲಾಯಿತು, ಆದರೆ ಅದೇ ಚಂದಾದ್ಯಾ-ಧಾರತ್ವವು ಛಾಂದೋಗ್ಯಶ್ರುತಿಯಲ್ಲಿ ಹೃತ್ಪದ್ಮಸ್ಥನಿಗೆ ಶ್ರುತವಾಗಿದೆ.

**तत्वप्रकाशिका –'एतस्मिन्ब्रह्मपुरे दहरं पुण्डरीकं वेश्म दहरोऽस्मिन्नन्तर आकाशस्तस्मिन् यदन्तस्तदन्वेष्टव्यं तद्वाव विजिज्ञासितव्यमिति । तं चेद् ब्रूयुः किं तदत्र विद्यते यदन्वेष्टव्यं यद्वाव विजिज्ञासितव्यमिति । स ब्रूयाद्यावान् वा अयमाकाशस्तावानेषोऽन्तर्हृदय आकाश उभे अस्मिन् द्यावापृथिवी' इत्यादिना ।**

ಅದು ಹೀಗೆ - 'ಏತಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋऽಸ್ಮಿನ್ನಂತರಃ ಆಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ । ತಂ ಚೇದ್ ಬ್ರೂಯುಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ । ಸ ಬ್ರೂಯಾದ್ಯಾವಾನ್ ವಾ ಅಯಮಾಕಾಶಸ್ತಾವಾನೇಷೋऽಂತರ್‌ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ',

'ಬ್ರಹ್ಮನ ಆವಾಸಸ್ಥಾನವಾದ ಈ ಶರೀರದಲ್ಲಿ ಚಿಕ್ಕ ಹೃದಯಕಮಲವಿದೆ. ಅದರಲ್ಲಿ ಅತ್ಯಂತ ಅಲ್ಪವಾದ ಆಕಾಶವಿದೆ, ಅದರಲ್ಲಿ ಏನು ಇದೆಯೋ ಅದನ್ನು ಹುಡುಕಬೇಕು, ಅಂದರೆ ಜಿಜ್ಞಾಸೆ ಮಾಡಬೇಕು. ಅದರಲ್ಲಿ ಏನನ್ನು ಹುಡುಕಬೇಕು ? ಏನನ್ನು ಜಿಜ್ಞಾಸೆ ಮಾಡಬೇಕು? ಈ ಪ್ರಶ್ನೆಗಳಿಗೆ ಗುರುಗಳು ಉತ್ತರಿಸುತ್ತಾರೆ. ಶರೀರದಲ್ಲಿ ಹೃತ್‌ಕಮಲವಿದೆ, ಅದರಲ್ಲಿ ಆಕಾಶವಿದೆ, ಆಕಾಶದಲ್ಲಿ ಬ್ರಹ್ಮನಿದ್ದಾನೆ, ಅವನ ಹೃದಯದಲ್ಲಿ ಹೊರಗೆ ಎಷ್ಟು ವಿಶಾಲವಾದ ಆಕಾಶವಿದೆಯೋ, ಅಷ್ಟುವಿಶಾಲವಾದ ಆಕಾಶವಿದೆ. ಇವನು ಸಮಗ್ರ ದ್ಯುಲೋಕ, ಭೂಲೋಕಗಳಿಗೆಲ್ಲಾ ಆಧಾರನಾಗಿದ್ದಾನೆ' ಇತ್ಯಾದಿಯಾಗಿ ಛಾಂದೋಗ್ಯದ ಎಂಟನೇ ಅಧ್ಯಾಯವು ಪ್ರಾರಂಭವಾಗುತ್ತದೆ.

**तत्वप्रकाशिका – तस्य च विष्णोरन्यत्वेऽक्षरस्य विष्णुत्वसाधकसर्वाधारत्वं चान्यस्य प्रसज्येतेत्यवश्यं निर्णेयता ।**

ಇಲ್ಲಿರುವ ಹೃತ್ಪದ್ಮಸ್ಥನಾದವನು ವಿಷ್ಣುವಿಗಿಂತ ಭಿನ್ನನಾದರೆ ಅಕ್ಷರನಿಗೆ ವಿಷ್ಣುತ್ವಸಾಧಕವಾದ ಸರ್ವಾಧಾರತ್ವವು ಬೇರೆಯವರಲ್ಲಿ ಬರುತ್ತದೆಂದು ಹೇಳಿದಂತಾಯಿತು. ಆದ್ದರಿಂದ ಹೃತ್ಪದ್ಮಸ್ಥನಾದವನನ್ನು ಯಾರೆಂದು ಅವಶ್ಯವಾಗಿ ನಿರ್ಣಯ ಮಾಡಬೇಕು.

**तत्वप्रकाशिका – तद्धृदयपद्मस्थत्वं विषयः । किं विष्णोरथाकाशस्योत जीवस्येति संशयः । उक्तसाधारण्यं सन्देहबीजम् ।**

ಅಂತಹ ಹೃದಯಪದ್ಮಸ್ಥತ್ವವೇ ವಿಷಯ. ಹೃತ್ಪದ್ಮಸ್ಥನಾದವನು, ವಿಷ್ಣುವೋ, ಆಕಾಶವೋ, ಅಥವಾ ಜೀವನೋ? ಎಂದು ಸಂಶಯ. ಶ್ರುತಿಗಳು ಮೂವರಲ್ಲೂ ಸಾಧಾರಣವಾಗಿರುವುದೇ ಸಂದೇಹಬೀಜ.

**तत्वप्रकाशिका – सर्वाधारतया हृत्पद्मस्थत्वमाकाशस्येति तावत्पूर्वःपक्षः। 'दहरेऽस्मिन्नन्तर आकाशः' इति हृत्पद्मे दहराकाशस्थितिश्रवणात् तस्यैव 'उभे अस्मिन्' इति सर्वाधारत्वोक्तेरित्यर्थः ।**

ಹೃತ್ಪದ್ಮಸ್ಥವಾದದ್ದು ಭೂತಾಕಾಶವೇ ಆಗಿದೆ. ಸಕಲಕ್ಕೂ ಆಧಾರವಾಗಿದೆ ಎಂದು ಪೂರ್ವಪಕ್ಷ. 'ದಹರೋಽಸ್ಮಿನ್ನಂತರ ಆಕಾಶಃ' ಎಂಬುದಾಗಿ ಹೃತ್ಪದ್ಮದಲ್ಲಿ ಸಣ್ಣದಾದ ಆಕಾಶದ ಸ್ಥಿತಿಯೂ ಶ್ರುತವಾಗಿದೆ. ಅಂತಹ ಆಕಾಶವೇ 'ಉಭೇ ಅಸ್ಮಿನ್' ಇತ್ಯಾದಿ ಶ್ರುತಿಬಲದಿಂದ ಸಕಲಕ್ಕೂ ಆಧಾರವಾಗಿದೆ ಎಂದೂ ಕೂಡ ತಿಳಿಯುತ್ತಿದೆ.

**तत्वप्रकाशिका – नन्वस्त्वाकाशस्य सर्वाधारतया हृदयपद्मस्थत्वम् । तस्य चाऽऽकाशस्तल्लिङ्गादिति न्यायेन विष्णुत्वे तस्यैव हृत्पद्मस्थत्वसिद्धिरित्यत आह – स चेति ।।**

ಪರಿಪೂರ್ಣಚಂದ್ರಿಕಾ

ಆಕಾಶವು ಸಕಲಕ್ಕೂ ಆಧಾರವಾದ್ದರಿಂದ ಹೃತ್ಪದ್ಮಸ್ಥವಾಗಿದೆ ಎಂದು ಒಪ್ಪೋಣ, ಆದರೆ 'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮಪಾದದ ಸೂತ್ರದಂತೆ ವಿಷ್ಣುವೇ ಆಕಾಶ ಶಬ್ದಪ್ರತಿಪಾದ್ಯನಾಗಿದ್ದಾನೆ, ಅಂತಹ ವಿಷ್ಣುವಿಗೇ ಹೃತ್ಪದ್ಮಸ್ಥತ್ವವೂ ಕೂಡ ಸಿದ್ಧವಾಗುತ್ತದಲ್ಲವೆ? ಈ ಪ್ರಶ್ನೆಗೆ 'ಸಚ ಆಕಾಶಃ ನ ವಿಷ್ಣುಃ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – नात्रोक्ताऽऽकाशो विष्णुः । 'तस्यान्ते सुषिरम्' इति प्रसिद्धाकाशस्यैव सर्वाधारतया हृत्पद्मस्थत्वोक्तेः तत्समाख्यानादित्यर्थः ।**

ಛಾಂದೋಗ್ಯದ ಈ ಪ್ರಕರಣದಲ್ಲಿ ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲ. 'ತಸ್ಯಾಂತೇ ಸುಷಿರಮ್' ಎಂಬ ಶ್ರುತಿಯಿಂದ ಪ್ರಸಿದ್ಧವಾದ ಭೂತಾಕಾಶವೇ ಸಕಲಕ್ಕೂ ಆಧಾರವಾಗಿದೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಇಂತಹ ಆಕಾಶವೇ ಹೃತ್ಪದ್ಮಸ್ಥವಾಗಿದೆ ಎಂದು ತಿಳಿಯುತ್ತದೆ. ಹೀಗೆ ನಾರಾಯಣೋಪನಿಷತ್ತಿನ ಸಮಾಖ್ಯಾನವಿರುವುದರಿಂದಲೂ, ಭೂತಾಕಾಶವೇ ಹೃತ್ಪದ್ಮಸ್ಥವಾಗುತ್ತದೆ.

**तत्वप्रकाशिका – नच वाच्यम् अस्तु आकाशशब्देन सुषिरमेव । 'तस्मिन् यदन्तः' इति हृत्पद्मस्थाकाशगतो विष्णुः सर्वाधारतयोच्यते इति । तथा सति वाक्यान्वयानुपपत्तेः ।**

'ಆಕಾಶ' ಶಬ್ದದಿಂದ 'ಸುಷಿರವೇ' ಪ್ರತಿಪಾದ್ಯವಾಗಲಿ. ಆದರೆ 'ತಸ್ಮಿನ್' ಎಂಬ ವಾಕ್ಯದಿಂದ ಹೃತ್ಪದ್ಮಸ್ಥವಾದ ಆಕಾಶದಲ್ಲಿರುವ ವಿಷ್ಣು ಸಕಲಕ್ಕೂ ಆಧಾರನೆಂದು ಹೇಳಲಾಗಿದೆ. ಹೀಗೇಕೆ ವ್ಯಾಖ್ಯಾನಿಸಬಾರದು? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಹಿಂದಿನ ಮುಂದಿನ ವಾಕ್ಯಗಳಿಗೆ ಅನ್ವಯವೇ ಕೂಡುವುದಿಲ್ಲ.

**तत्वप्रकाशिका – तथा हि । तस्मिन्नित्यत्र विष्णुत्वाभिप्राये किं तदत्र विद्यते इति प्रश्नस्य ब्रह्म विद्यत इति परिहारं विना 'यावान्वा' इत्यादेरभिप्रायासङ्गतिः ।**

ಹೇಗೆಂದರೆ 'ತಸ್ಮಿನ್' ಎಂಬಲ್ಲಿ ಹೃತ್ಪದ್ಮಸ್ಥಿತವಾದ ಆಕಾಶದಲ್ಲಿ ವಿಷ್ಣುವಿದ್ದಾನೆಂದು ಅರ್ಥೈಸಿದರೆ ಮುಂದೆ 'ಕಿಂ ತದತ್ರ ವಿದ್ಯತೇ' ಹೃದಯಾಕಾಶದಲ್ಲಿ ಏನಿದೆ ಎಂದು ಪ್ರಶ್ನಿಸಲಾಗಿದೆ. ಅದಕ್ಕೆ ನಿಮ್ಮ ಪ್ರಕಾರ ಬ್ರಹ್ಮನಿದ್ದಾನೆಂದು ಉತ್ತರಿಸಬೇಕು. ಅದನ್ನು ಬಿಟ್ಟು ಹೊರಗಡೆ ಎಷ್ಟು ವಿಶಾಲವಾದ ಆಕಾಶವಿದೆಯೋ ಅಷ್ಟು ಆಕಾಶವಿದೆ ಎಂಬ 'ಯಾವಾನ್ವಾಽಯಮಾಕಾಶಃ' ಇತ್ಯಾದಿ ಉತ್ತರವು ಅಸಂಗತವಾಗುತ್ತದೆ.

**तत्वप्रकाशिका – आकाशपक्षे त्वस्त्यन्वयः । हृदयाकाशस्थमुपास्यमित्युक्ते किं तत्र स्थितमिति प्रश्ने यावान्वा अयमाकाश इति प्रागुक्ताकाशमेव विशिष्योभे अस्मिन्नित्यादिपरिहारसंश्लेषात् ।**

ಆದರೆ ಭೂತಾಕಾಶವೇ ಹೃತ್ಪದ್ಮಸ್ಥಿತವೆಂದು ಒಪ್ಪಿದಾಗ, ಹಿಂದಿನ ಮುಂದಿನ ವಾಕ್ಯಗಳಿಗೆ ಅನ್ವಯವು ಸ್ಪಷ್ಟವಾಗಿ ತಿಳಿಯುತ್ತದೆ -

ಹೇಗೆಂದರೆ ಹೃದಯಾಕಾಶದಲ್ಲಿರುವುದನ್ನು ಉಪಾಸನೆ ಮಾಡಬೇಕು ಎಂದು ಹೇಳಿದಾಗ ಅಲ್ಲಿ ಏನಿದೆ ? ಎಂಬ ಪ್ರಶ್ನೆ ಹುಟ್ಟುತ್ತದೆ. ಆವಾಗ 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ವಾಕ್ಯಗಳಿಂದ ಹಿಂದೆ ಹೇಳಲ್ಪಟ್ಟ ಆಕಾಶವನ್ನೇ ಉಲ್ಲೇಖ ಮಾಡಿ 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಿಂದ, ಆ ಆಕಾಶವು ಸಕಲಕ್ಕೂ ಆಧಾರವಾಗಿದೆ ಎಂದು ಉತ್ತರಿಸಲಾಗಿದೆ. ಈ ಪ್ರಶ್ನೋತ್ತರಗಳು ಅತ್ಯಂತ ಸಂಗತವಾಗಿವೆ.

**तत्वप्रकाशिका – नच यावानित्यादिनाऽऽकाशाख्यो विष्णुः सर्वाधारतया परिहारे कथ्यत इत्यन्वयोपपत्तिः ।**

'ಯಾವಾನ್' ಇತ್ಯಾದಿ ಶ್ರುತಿಯು ವಿಷ್ಣುವೇ ಸರ್ವಾಧಾರನಾಗಿದ್ದಾನೆಂಬ ಪರಿಹಾರವನ್ನು ಹೇಳುತ್ತಿಲ್ಲವೆಂದು ಅನ್ವಯ.

**तत्वप्रकाशिका – तस्मिन् सर्वं प्रतिष्ठितमिति साक्षात्सुषिरस्यैव सर्वाधारत्वोक्तिविरोधात् । तस्मादाकाशस्यैव सर्वाधारतया हृत्पद्मस्थत्वम् ।**

'ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬುದಾಗಿ ಹೃದಯದಲ್ಲಿರುವ ಸುಷಿರವೇ ಸಕಲಕ್ಕೂ ಆಧಾರವಾಗಿದೆ ಎಂದು ಕೇಳಿಬರುತ್ತಿದೆ. ಬ್ರಹ್ಮನನ್ನು ಸಕಲಾಧಾರನೆಂದು ಹೇಳಿದರೆ, ಈ ಶ್ರುತಿಯ ವಿರೋಧವೂ ಕೂಡ ಬರುತ್ತದೆ. ಆದ್ದರಿಂದ ಆಕಾಶವೇ ಸಕಲಕ್ಕೂ ಆಧಾರವಾಗಿದೆ. ಹಾಗೂ ಅದೇ ಹೃತ್ಪದ್ಮಸ್ಥವಾಗಿದೆ ಎಂದು ಹೇಳಿದಂತಾಯಿತು.

**तत्वप्रकाशिका – जीवस्य वैतद्भवेत् । उत्तरत्र 'परंज्योतिरुपसम्पद्य स्वेन रूपेणाभिनिष्पद्यत एष आत्मेति होवाच' इति जीवस्य 'य आत्माऽपहतपाप्मा' इत्युक्तहृत्पद्मस्थात्मतया परामर्शात् दहरस्थत्वलिङ्गाच ।**

ಅಥವಾ ಜೀವನೇ ಹೃತ್ಪದ್ಮಸ್ಥನಾಗುತ್ತಾನೆ, ಏಕೆಂದರೆ ಇದೇ ಛಾಂದೋಗ್ಯ ಉಪನಿಷತ್ತಿನ ಮುಂದಿನ ಖಂಡದಲ್ಲಿ 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚ', 'ಯೋಗ್ಯನಾದ ಜೀವನು ಪ್ರಕಾಶ ಸ್ವರೂಪನಾಗಿ ಪರಮಾತ್ಮನ ಸಾನ್ನಿಧ್ಯವನ್ನು ಹೊಂದಿ ಸ್ವರೂಪಾವಿರ್ಭಾವವನ್ನು ಹೊಂದುತ್ತಾನೆ ಇವನೇ ಆತ್ಮನು'. ಈ ವಾಕ್ಯದಲ್ಲಿ 'ಯ ಆತ್ಮಾ ಅಪಹತಪಾಪ್ಮಾ', ಎಂದು ಯಾವ ಹೃತ್ಪದ್ಮಸ್ಥನಾದ ಆತ್ಮನನ್ನು ಪರಾಮರ್ಶೆ ಮಾಡಲಾಗಿದೆಯೋ ಅವನೇ ಜೀವನು. ಹಾಗೂ 'ಅಲ್ಪಸ್ಥಾನಸ್ಥಿತತ್ವ' ಎಂಬ ಲಿಂಗವೂ ಕೂಡ ಜೀವನಲ್ಲೇ ಯುಕ್ತವಾಗುತ್ತದೆ.

**तत्वप्रकाशिका – तद्धि अणोर्जीवस्यैव युक्तं न सर्वगतस्य हरेः ।**

ಹೃದಯಪುಂಡರೀಕದಲ್ಲಿರುವ ಆಕಾಶವು ಅತ್ಯಂತ ಅಣುರೂಪವಾಗಿದೆ. ಇಂತಹ ಅಣುಪ್ರದೇಶದಲ್ಲಿ, ಅಣುಸ್ವರೂಪನಾದ ಜೀವನೇ ಇರಲು ಅರ್ಹ; ಹೊರತು ವ್ಯಾಪ್ತನಾದ ಪರಮಾತ್ಮನಲ್ಲ.

**तत्वप्रकाशिका – न चान्वयाभावदोषः । विष्णुपक्षेऽपि साम्यात् । अतो भगवदितरदेव चन्द्रादित्याद्याधाराक्षरमिति ।**

ಹಿಂದೆ ಹೇಳಿದ ಅನ್ವಯಾಭಾವದೋಷವು ಜೀವಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ ಹೃತ್ಪದ್ಮಸ್ಥನಾಗಿದ್ದವನು ವಿಷ್ಣುವೆಂದು ಹೇಳಿದರೂ ಈ ದೋಷವು ಸಮಾನವಾಗಿದೆ. ಯಾವ ದೋಷವು ಇಬ್ಬರಿಗೂ ಸಮಾನವಾಗಿರುತ್ತದೋ ಅದು ದೋಷವೇ ಅಲ್ಲ. ಆದ್ದರಿಂದ ಭೂತಾಕಾಶ ಅಥವಾ ಜೀವರುಗಳೇ, ಹೃತ್ಪದ್ಮಸ್ಥರಾಗುತ್ತಾರೆ, ಚಂದ್ರಾದಿತ್ಯ ಮೊದಲಾದವರಿಗೂ ಆಶ್ರಯರಾಗುತ್ತಾರೆ. ಅಕ್ಷರಶಬ್ದದಿಂದ ಪ್ರತಿಪಾದ್ಯರೂ ಆಗುತ್ತಾರೆ ಹೊರತು, ಅಕ್ಷರನೂ, ಹೃತ್ಪದ್ಮಸ್ಥನೂ ವಿಷ್ಣುವಲ್ಲ ಎಂದು ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। दहरपद्मस्थो विष्णुरेव भवेत् । य आत्माऽपहतपाप्मेत्यादिनोत्तरवाक्ये हृत्पद्मस्थस्यापहत-पाप्मत्वादिगुणश्रवणादिति भावः ।**

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಾ ಸಿದ್ಧಾಂತಸ್ಥಾಪನೆಗಾಗಿ ಸೂತ್ರವನ್ನು ಉಲ್ಲೇಖಿಸುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ. ಸೂಕ್ಷ್ಮವಾದ ಹೃದಯಪದ್ಮದಲ್ಲಿರುವವನು ವಿಷ್ಣುವೇ ಆಗಿದ್ದಾನೆ. 'ಯ ಆತ್ಮಾ ಅಪಹತಪಾಪ್ಮಾ' ಮೊದಲಾದ ಮುಂದಿನ ವಾಕ್ಯದಿಂದ ಹೃತ್ಪದ್ಮಸ್ಥನಲ್ಲಿ ಅಪಹತಪಾಪ್ಮತ್ವ ಮೊದಲಾದ ಗುಣಗಳು ಶ್ರುತವಾಗಿರುವುದರಿಂದ.

**तत्वप्रकाशिका – अपहतपाप्मत्वादिकं कथं विष्णुत्वनिश्चायकमित्यत आह – य इति ।।**

'ಅಪಹತಪಾಪ್ಮತ್ವ' ಮುಂತಾದವು ವಿಷ್ಣುತ್ವಕ್ಕೆ ನಿಶ್ಚಾಯಕವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಯಃ' ಇತ್ಯಾದಿ ಶ್ರುತಿಯಿಂದ ಉತ್ತರಿಸಿದ್ದಾರೆ.

**तत्वप्रकाशिका – अत्येति अतिक्रम्य वर्तते । न चाकाशस्यापि पापाद्यभावेनैते गुणा युक्ता इति वाच्यम् । तस्याचेतनस्य तत्प्राप्त्यभावेन निषेधायोगात् ।**

ಶ್ರುತಿಯಲ್ಲಿರುವ 'ಅತ್ಯೇತಿ' ಎಂಬ ಶಬ್ದಕ್ಕೆ ಅತಿಕ್ರಮಣ ಮಾಡಿ ಇರುತ್ತಾನೆಂದರ್ಥ. ಭೂತಾಕಾಶವು ಜಡವಾದ್ದರಿಂದ ಪಾಪಗಳು ಅದರಲ್ಲಿಯೂ ಇಲ್ಲವಲ್ಲವೇ? ಆದ್ದರಿಂದ ಭೂತಾಕಾಶದ ಗುಣವನ್ನೇ

ಶ್ರುತಿಯು ವರ್ಣಿಸುತ್ತದೆ ಎಂದು ಏಕೆ ಹೇಳಬಾರದು? ಎಂದು ಪ್ರಶ್ನಿಸಬಾರದು. ಅಚೇತನವಾದ ಆಕಾಶದಲ್ಲಿ ಪಾಪವಿರಲು ಪ್ರಸಕ್ತಿಯೇ ಇಲ್ಲ. ಹೀಗಿರುವಾಗ ಅದನ್ನು ನಿಷೇಧ ಮಾಡುವುದು, ಅಪ್ರಸ್ತುತವೆನಿಸುತ್ತದೆ.

**तत्वप्रकाशिका – विष्णोश्चेतनत्वादस्ति प्राप्तिः । सत्यकामत्वाद्ययोगाच्च ।**

ವಿಷ್ಣುವಾದರೂ ಸಹ ಚೇತನನಾದುದರಿಂದ ಪಾಪ ಇರಲು ಪ್ರಸಕ್ತಿ ಇದೆ. ಅದರ ನಿಷೇಧವು ಯುಕ್ತವಾಗುತ್ತದೆ. ಮತ್ತು ಭೂತಾಕಾಶದಲ್ಲಿ ಸತ್ಯಕಾಮತ್ವಾದಿ ಗುಣಗಳು ಅತ್ಯಂತ ಅಸಂಭಾವಿತವಾಗಿದೆ.

**तत्वप्रकाशिका – तथापि नैते गुणा विष्णोरेव रमादिष्वपि सम्भवादित्यत आह – नित्येति ।। ननु यथाकथञ्चिदपि तेऽन्यत्र गुणाः सन्त्येव अतः कथं तैर्विष्णुत्वनिश्चय इत्यत आह – सापेक्षेति ।। अपहतपाप्मत्वादीनां कथञ्चिदन्यत्र वृत्तावपि न कथञ्चिदन्यत्र सत्यकामत्वादि इत्याशयेनाऽऽह – सत्यकाम इति ।।**

ಆದರೂ ಸಹ ಸತ್ಯಕಾಮತ್ವಾದಿ ಗುಣಗಳು, ವಿಷ್ಣುವಿನಲ್ಲಿರುವಂತೆ, ಲಕ್ಷ್ಮೀ ಮೊದಲಾದವರಲ್ಲಿಯೂ ಇರುತ್ತವೆ. ಹೀಗಿರುವಾಗ ವಿಷ್ಣುವಿನ ಅಸಾಧಾರಣಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ನಿತ್ಯ' ಇತ್ಯಾದಿ ಪ್ರಮಾಣದಿಂದ ಉತ್ತರಿಸಿದ್ದಾರೆ. ವಿಷ್ಣುವಿನ ಅನುಗ್ರಹದಿಂದ ಅಸ್ವತಂತ್ರವಾಗಿ ರಮಾದಿಗಳಲ್ಲಿ, ಸತ್ಯಕಾಮತ್ವಾದಿ ಗುಣಗಳು ಇದ್ದೇ ಇರುತ್ತವೆ. ಹೇಗಾದರೂ ಇರಲಿ ವಿಷ್ಣುವಿನಂತೆ ಬೇರೆಯವರಲ್ಲೂ ಇರುವಾಗ ಅಸಾಧಾರಣಧರ್ಮವೆಂದು ಹೇಗೆ ಪರಿಗಣಿಸುತ್ತೀರಿ? ಇವುಗಳು ಹೇಗೆ ವಿಷ್ಣುತ್ವನಿಶ್ಚಾಯಕವಾಗುತ್ತವೆ? ಎಂಬ ಪ್ರಶ್ನೆಗೆ 'ಸಾಪೇಕ್ಷ' ಎಂಬುದರಿಂದ ಉತ್ತರಿಸಿದ್ದಾರೆ. ಅತಹತಪಾಪ್ಮತ್ವಾದಿಗುಣಗಳು ಲಕ್ಷ್ಮೀದೇವಿ ಮೊದಲಾದವರಲ್ಲಿ, ಹೇಗಾದರೂ ಬರಬಹುದು. ಆದರೆ ಸತ್ಯಕಾಮತ್ವಾದಿಗುಣಗಳಂತೂ ಕಥಚಿದಪಿ ಬರುವುದಿಲ್ಲವೆಂದು ತಿಳಿಸುವುದಕ್ಕಾಗಿ 'ಸತ್ಯಕಾಮಃ' ಇತ್ಯಾದಿ ಭಾಷ್ಯವು ಹೊರಟಿದೆ.

**तत्वप्रकाशिका – अनेनाऽऽकाशाभिमानिविषयतयाऽपहतपाप्मत्वाद्युपपत्तिरिति परास्तम् ।। १४ ।।**

ಹೀಗೆ ಹೇಳಿದ್ದರಿಂದ ಭೂತಾಕಾಶಕ್ಕೆ ಅಭಿಮಾನಿದೇವತೆಯಾದ್ದರಿಂದ ಲಕ್ಷ್ಮೀದೇವಿಯಲ್ಲಿ ಅಪಹತಪಾಪ್ಮತ್ವಾದಿಗುಣಗಳು ಬರುವಂತೆ ಭೂತಾಕಾಶದಲ್ಲಿಯೂ ಬರುತ್ತದೆಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಹೇಗೆಂದರೆ ಲಕ್ಷ್ಮೀದೇವಿಯಲ್ಲಿರುವಂತಹ ಅಪಹತಪಾಪ್ಮತ್ವಾದಿಗುಣಗಳು ಅಸ್ವತಂತ್ರವಾಗಿವೆ, ಸತ್ಯಕಾಮತ್ವಾದಿಗುಣಗಳಂತೂ ಕಥಂಚಿದಪಿ ಬರುವುದಿಲ್ಲವೆಂದು.

**भावदीपः –**

**ॐ दहर उत्तरेभ्यः ॐ ॥**

अत्र न्यायविवरणे स्पष्टत्वात् श्रुतीरनुदाहृत्य हृत्पद्मस्थितत्वं साधारणमित्युक्तम्। तदुदाहरणपूर्वकं साधारण्यं व्यञ्जयन्नस्य पादान्तर्भावमाह – **अत्र यो वेदेति** ॥

ಈ ಅಧಿಕರಣದ ನ್ಯಾಯವಿವರಣದಲ್ಲಿ ಸ್ಪಷ್ಟವಾದ್ದರಿಂದ ಶ್ರುತಿಗಳನ್ನು ಉದಾಹರಿಸದೆ ಹೃತ್ಪದ್ಮಸ್ಥಿತತ್ವವು ಉಭಯಸಾಧಾರಣವೆಂದು ಹೇಳಿದ್ದಾರೆ. ಪ್ರಕೃತ ಟೀಕೆಯಲ್ಲಿ ಆ ಶ್ರುತಿಗಳನ್ನು ಉದಾಹರಿಸುತ್ತಾ ಉಭಯ-ಸಾಧಾರಣ್ಯವನ್ನು ಸ್ಪಷ್ಟವಾಗಿ ತೋರಿಸುತ್ತಾ ಪಾದಾಂತರ್ಭಾವಸಂಗತಿಯನ್ನು ಸಮರ್ಥಿಸುತ್ತಿದ್ದಾರೆ "ಅತ್ರ ಯೋ ವೇದ" ಇತ್ಯಾದಿ ವಾಕ್ಯದಿಂದ.

**भावदीपः –** एतच्चानन्दमयनये ब्रह्मपरत्वेन निर्णीतम् ।

"ಯೋ ವೇದ ನಿಹಿತಾಂ ಗುಹಾಯಾಂ" ಎಂಬ ಶ್ರುತಿಯು ಬ್ರಹ್ಮಪರವಾಗಿದೆ ಎಂಬ ವಿಚಾರವನ್ನು ಆನಂದಮಯಾಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ.

**भावदीपः –** यद्यपि 'परमे व्योमन्' इति हृदयगुहास्थाकाशस्थत्वमेव तत्रोक्तम्, मन्दिरे मणिमालेतिवत् सामान्येन गुहास्थत्वमविरुद्धम् । अत एव गुहायामित्याधारसप्तमीति भावः ॥ **तस्येति** ॥

ವಸ್ತುತಃ "ಪರಮೇ ವ್ಯೋಮನ್" ಎಂಬುದಾಗಿ ಹೃದಯಗುಹೆಯಲ್ಲಿರುವ ಆಕಾಶದಲ್ಲಿರುವಿಕೆಯನ್ನು ಶ್ರುತಿಯು ಹೇಳಿದೆ. ಆದರೆ ಟೀಕೆಯಲ್ಲಿ "ಮಂದಿರೇ ಮಣಿಮಾಲಾ" ನ್ಯಾಯದಿಂದ ಸಾಮಾನ್ಯವಾಗಿ ಹೃದಯಗುಹಾಸ್ಥವನ್ನು ಹೇಳಿದ್ದಾರೆ; ಇದು ವಿರುದ್ಧವಲ್ಲ. ಮನೆಯಲ್ಲಿ 'ಮಣಿಮಾಲೆ ಇದೆ' ಎಂದರೆ 'ಮನೆಯಲ್ಲಿರುವ ಆಭರಣದ ಪೆಟ್ಟಿಗೆಯಲ್ಲಿ ಮಣಿಮಾಲೆ ಇದೆ' ಎಂದರ್ಥ. ಅದರಂತೆ ಹೃದಯಗುಹೆಯಲ್ಲಿ ಪರಮಾತ್ಮನು ಇದ್ದಾನೆಂದರೆ ಹೃದಯಗುಹೆಯಲ್ಲಿರುವ ಆಕಾಶದಲ್ಲಿ ಪರಮಾತ್ಮನು ಇದ್ದಾನೆಂದರ್ಥ. ಆದ್ದರಿಂದ ವಿರೋಧವಿಲ್ಲ. ಆದ್ದರಿಂದಲೇ ಶ್ರುತಿಯಲ್ಲಿ "ಗುಹಾಯಾಂ" ಎಂಬುದಾಗಿ ಆಧಾರಾರ್ಥಕವಾದ ಸಪ್ತಮೀವಿಭಕ್ತಿಯ ಪ್ರಯೋಗವಿರುತ್ತದೆ.

**भावदीपः –** 'तैत्तिरीये पद्मकोशप्रतीकाशं हृदयं चाप्यधोमुखम् । अधोनिष्ठ्या वितस्त्यान्ते नाभ्यामुपरि तिष्ठति । ज्वालमालाकुलं भाति विश्वस्यायतनं महत् । सन्ततꣳशिलाभिस्तुलम्बत्याकोशसन्निभम् । तस्यान्ते' इति प्रकृतहृत्पद्मं तस्येति परामृश्य तदन्तस्थत्वमाकाशस्योच्यते – **हृदीति** ॥

ತೈತ್ತಿರೀಯೋಪನಿಷತ್ತಿನಲ್ಲಿ ಆಕಾಶವೇ ಹೃದಯಗುಹೆಯಲ್ಲಿದೆ ಎಂದು ಹೇಳಿದಂತೆ ಇದೆ. ತೈತ್ತಿರೀಯಪ್ರಕರಣ ಹೀಗಿದೆ - 'ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಮ್ । ಅಧೋನಿಷ್ಟ್ಯಾ ವಿತಸ್ತ್ಯಾಂತೇ ನಾಭ್ಯಾಮುಪರಿ ತಿಷ್ಠತಿ । ಜ್ವಾಲಮಾಲಾಕುಲಂ ಭಾತಿ ವಿಶ್ವಸ್ಯಾಯತನಂ ಮಹತ್ । ಸಂತತಂಶಿಲಾಭಿಸ್ತು ಲಂಬತ್ಯಾಕೋಶಸನ್ನಿಭಮ್ । ತಸ್ಯಾಂತೇ' ಎಂದು. ಹಿಂದೆ ಪ್ರಕೃತವಾದ ಹೃತ್ಪದ್ಮವನ್ನೇ 'ತಸ್ಯ' ಎಂಬ 'ತತ್' ಪದದಿಂದ ಪರಾಮರ್ಶ ಮಾಡಿ ಹೃದಯಪದ್ಮದಲ್ಲಿ ಆಕಾಶವಿದೆಯೆಂದು ಈ ಶ್ರುತಿಯು ಹೇಳಿದೆ.

**भावदीपः** – षट्प्रश्ने 'मध्ये तु समानः एष ह्येतद्धुतमन्नं समं नयति । तस्मादेताः सप्तार्चिषो भवन्ति' इति पूर्वत्र तस्मात्समानेनान्नस्य समीकरणात् 'एताः सप्तार्चिषो भवन्ति' इत्युक्तौ आत्मैव विषयसंसर्गेणताननुभविष्यति किमिन्द्रियवृत्तिभिरिति शङ्कायाम् अणुत्वात्तस्य नैवं युक्तमिति भावेन हृदि ह्येष आत्मा जीवः स्वरूपेण वर्तत इत्युक्तेः ।

ಷಟ್‌ಪ್ರಶ್ನೋಪನಿಷತ್ತಿನಲ್ಲಿರುವ ವಾಕ್ಯವನ್ನು ನೋಡಿದಾಗ ಜೀವನು ಹೃದಯದಲ್ಲಿ ಇದ್ದಾನೆಂದು ಕಾಣಿಸುತ್ತಿದೆ. ಷಟ್‌ಪ್ರಶ್ನೋಪತ್ತಿನ ಪ್ರಕರಣ ಹೀಗಿದೆ - 'ಮಧ್ಯೇ ತು ಸಮಾನಃ ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ'' ಎಂದು. ಅಂದರೆ ಸಮಾನ ನಾಮಕನಾದ ವಾಯು ಅನ್ನವನ್ನು ಎಲ್ಲಾ ಇಂದ್ರಿಯಗಳಿಗೆ ಸಮಾನವಾಗಿ ಕೊಂಡೊಯ್ಯುವುದರಿಂದ ಕಣ್ಣು, ಕಿವಿ ಮೊದಲಾದ ಇಂದ್ರಿಯಗಳು ತಮ್ಮ ಕಾರ್ಯಗಳನ್ನು ನಿರ್ವಹಿಸಲು ಸಮರ್ಥಗಳಾಗಿವೆ. ಹೀಗೆ ಹೇಳಿದಾಗ ಆತ್ಮನೇ ನೇರವಾಗಿ ವಿಷಯ ಸಂಪರ್ಕಗಳನ್ನು ಪಡೆಲು ಸಮರ್ಥನಾಗಿದ್ದಾನೆ, ಇಂದ್ರಿಯಗಳ ಸಹಕಾರಗಳೇಕೆ ? ಎಂಬ ಆಶಂಕೆಯು ಪ್ರಾಪ್ತವಾದರೆ ಆತ್ಮನು ಅಣುರೂಪನಾಗಿ ಹೃದಯ ಪ್ರದೇಶದಲ್ಲಿರುತ್ತಾನೆ. ಆದ್ದರಿಂದ ಅವನಿಗೆ ನೇರವಾಗಿ ವಿಷಯಗಳನ್ನು ಅನುಭವಿಸಲು ಸಾಧ್ಯವಿಲ್ಲ ಎಂಬ ಅಭಿಪ್ರಾಯದಿಂದ 'ಹೃದಿ ಹ್ಯೇಷ ಆತ್ಮಾ' ಎಂಬ ಮಾತು ಹೊರಟಿದೆ. ಇದರಿಂದ ಜೀವನೇ ಹೃದಯದಲ್ಲಿದ್ದಾನೆಂದು ಸ್ಪಷ್ಟವಾಗುತ್ತದೆ.

**भावदीपः** – 'अवस्थितिवैशेष्यादिति चेन्नाभ्युपगमाद्धृदि हि' इति सूत्रकृता जीवपरत्वेन वक्ष्यमाणत्वाच्चेति भावः ।।

'ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ' ಎಂಬ ಸೂತ್ರದಲ್ಲಿ ಜೀವನು ಹೃದಯದಲ್ಲಿದ್ದಾನೆ ಎಂದು ಸಮರ್ಥಿಸುವವರಿದ್ದಾರೆ.

**भावदीपः** – **हृत्पद्मस्थत्वेति** ।। साक्षात्परम्परासाधारणहृत्पद्मगतत्वलिङ्गस्येत्यर्थः। आकाशस्येति भाष्यं तु पूर्वपक्षहेत्वभिप्रायम्, नतु समन्वेतव्यनामाशयमिति भावः ।

ಟೀಕೆಯಲ್ಲಿ 'ಹೃತ್ಪದ್ಮಸ್ಥತ್ವ' ಎಂದು ಇದೆ. ಅಂದರೆ ಹೃದಯಪದ್ಮದಲ್ಲಿ ಸಾಕ್ಷಾತ್ತಾಗಿ ಇರುತ್ತಾನೆಂದು ಅಥವಾ ಹೃತ್ಪದ್ಮದಲ್ಲಿರುವ ಆಕಾಶದಲ್ಲಿರುತ್ತಾನೆಂದು ತಿಳಿಯಬಹುದು. ಹೀಗೆ ಸಾಕ್ಷಾತ್ಪರಂಪರಾ-ಸಾಧಾರಣವಾದ 'ಹೃತ್ಪದ್ಮಗತತ್ವ' ಎಂಬ ಲಿಂಗವನ್ನು ಎಂದು ಇದರ ಅರ್ಥ. 'ಆಕಾಶಸ್ಯ' ಎಂಬ ಭಾಷ್ಯವಾಕ್ಯವು ಪೂರ್ವಪಕ್ಷದ ಹೇತುಪರವಾಗಿದೆ; ಹೊರತು ಆಕಾಶವೆಂಬ ನಾಮಾತ್ಮಕಶಬ್ದದ ಸಮನ್ವಯಗೋಸ್ಕರ ಹೇಳಿದ್ದಲ್ಲವೆಂದು ತಿಳಿಯಬೇಕು. ಏಕೆಂದರೆ ಈ ಅಧಿಕರಣದಲ್ಲಿ ಹೃತ್ಪದ್ಮಸ್ಥಿತತ್ವವೆಂಬ ಲಿಂಗದ ಸಮನ್ವಯವೇ ವಿವಕ್ಷಿತ ಹೊರತು, ಅದ್ವೈತಿಗಳು ಹೇಳುವಂತೆ ಆಕಾಶಶಬ್ದದ ಸಮನ್ವಯವು ವಿವಕ್ಷಿತವಲ್ಲ.

**भावदीपः** – इत्यन्तभाष्यं सङ्गतिसूचकत्वेन व्याकुर्वन्नुक्तमित्यन्तं व्याचष्टे – **एतस्य वा इति** ।। उक्तमक्षरनय इत्यर्थः ।

'ಇತಿ' ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಸಂಗತಿಪರವಾಗಿ ವ್ಯಾಖ್ಯಾನ ಮಾಡುತ್ತಾ, 'ಉಕ್ತಂ' ಎಂಬಲ್ಲಿಯ ತನಕದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಏತಸ್ಯ ವಾ' ಇತ್ಯಾದಿ ಟೀಕೆಯಿಂದ. ಅಕ್ಷರಾಧಿಕರಣದಲ್ಲಿ ಅಕ್ಷರನಿಗೆ ಸೂರ್ಯಚಂದ್ರಾದ್ಯಾಧಾರತ್ವವನ್ನು ಹೇಳಲಾಗಿದೆಯೆಂದರ್ಥ.

**भावदीपः** – आकाशस्य प्रतीयत इत्यत्र हृत्पद्मस्थस्येत्याकाशविशेषणमुपेत्य तात्पर्यमाह – **तच्छन्दोगश्रुताविति** ।। उच्यते अष्टम इत्यर्थः ।

'ಆಕಾಶಸ್ಯ ಪ್ರತೀಯತೇ' ಎಂಬಲ್ಲಿ ಹೃತ್ಪದ್ಮದಲ್ಲಿರುವ ಆಕಾಶದಲ್ಲಿರುವಿಕೆಯು ಕಾಣಿಸುತ್ತಿದೆ ಎಂಬರ್ಥವನ್ನು ಒಪ್ಪಿ ತಾತ್ಪರ್ಯವನ್ನು ಹೇಳುತ್ತಿದ್ದಾರೆ 'ತಚ್ಛಂದೋಗಶ್ರುತೌ' ಇತ್ಯಾದಿಯಾಗಿ. 'ಉಚ್ಯತೇ' ಎಂದರೆ ಛಾಂದೋಗ್ಯಶ್ರುತಿಯ ಎಂಟನೇ ಅಧ್ಯಾಯದಲ್ಲಿ ಹೇಳಲಾಗಿದೆ ಎಂದರ್ಥ.

**भावदीपः** – केनेत्यत एतस्मिन्नित्यादिभाष्यमिति भावेन भाष्ये पूर्वपक्षयुक्तिद्योतनाय समग्रानुक्तावपि वक्ष्यमाणानन्वययुक्तिसौकर्याय तद्वाक्यं समग्रं पठति – **एतस्मिन्निति** ।।

ಯಾರಿಂದ ಹೇಳಲ್ಪಟ್ಟಿದೆ ? ಎಂಬ ಪ್ರಶ್ನೆಗೆ 'ಏತಸ್ಮಿನ್' ಇತ್ಯಾದಿ ಭಾಷ್ಯವು ಹೊರಟಿದೆ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ ಪೂರ್ವಪಕ್ಷದ ಯುಕ್ತಿಯನ್ನು ತಿಳಿಸಲು ಸಮಗ್ರವಾಕ್ಯವನ್ನು ಪಠಿಸದಿದ್ದರೂ ಟೀಕಾರಾಯರು ಆಕಾಶಪಕ್ಷದಲ್ಲಿ ಹಿಂದಿನ ಮುಂದಿನ ವಾಕ್ಯಗಳಿಗೆ ಅನ್ವಯವು ಕೂಡುವುದಿಲ್ಲ ಎಂಬುದನ್ನು ಮುಂದೆ ತೋರಿಸುವುದಕ್ಕಾಗಿ ಪ್ರಕರಣದ ಸಂಪೂರ್ಣ ವಾಕ್ಯವನ್ನು ಪಠಿಸುತ್ತಿದ್ದಾರೆ 'ಏತಸ್ಮಿನ್' ಇತ್ಯಾದಿಯಾಗಿ.

**भावदीपः** – ब्रह्मपुरे देहे । दहरं दभ्रमल्पमित्यर्थः । अस्मिन् पुण्डरीके । तस्मिन्नाकाशे । कथं तस्यान्वेषणमित्यत उक्तम् – **विजिज्ञासितव्यमिति** ।। तमेवमुक्तवन्तं गुरुं शिष्याश्चेद् ब्रूयुः । किं तदाह – **किं तदत्रेति** ।।

'ಬ್ರಹ್ಮಪುರೇ' ಎಂದರೆ ದೇಹದಲ್ಲಿ ಎಂದರ್ಥ. 'ದಹರಂ' ಎಂಬ ಪದಕ್ಕೆ ಅಣುರೂಪವಾದದ್ದು ಎಂದರ್ಥ. 'ಅಸ್ಮಿನ್' ಹೃದಯಕಮಲದಲ್ಲಿ, 'ತಸ್ಮಿನ್' ಆಕಾಶದಲ್ಲಿ, ಹುಡುಕುವುದು ಹೇಗೆ ? ಎಂಬ ಪ್ರಶ್ನೆಗೆ 'ವಿಜಿಜ್ಞಾಸಿತವ್ಯಂ' ಜಿಜ್ಞಾಸೆ ಮಾಡಬೇಕೆಂದು ಹೇಳಲಾಗಿದೆ. ಹೀಗೆ ಹೇಳಲ್ಪಟ್ಟ ಗುರುವನ್ನು ಶಿಷ್ಯರು ಪುನಃ ಪ್ರಶ್ನಿಸುತ್ತಾರೆ - 'ಹೃದಯಕಮಲದ ಆಕಾಶದಲ್ಲಿ ಏನಿದೆ?' ಎಂದು. ಇದನ್ನೇ 'ಕಿಂ ತದತ್ರ' ಇತ್ಯಾದಿ ವಾಕ್ಯಗಳಿಂದ ಹೇಳಿರುತ್ತಾರೆ.

**भावदीपः** – यदन्वेष्टव्यादिनोक्तं तदत्र किं विद्यते? कुतश्च तदन्वेष्टव्यम्? कीदृशं च तद् विद्यते? इति प्रश्नार्थः । स गुरुः शिष्यान् प्रति ब्रूयात् । किं तदाह – यावानिति ॥

ಜಿಜ್ಞಾಸೆ ಮಾಡಬೇಕೆಂದು ಹೇಳಲಾಯಿತು. ಆದರೆ ಹೃದಯಾಕಾಶದಲ್ಲಿ ಏನಿದೆ? ಯಾವ ಕಾರಣಕ್ಕಾಗಿ ಅದನ್ನು ಜಿಜ್ಞಾಸೆ ಮಾಡಬೇಕು? ಇರುವ ವಸ್ತುವು ಎಂತಹ ಧರ್ಮಗಳಿಂದ ಉಪಪನ್ನವಾಗಿದೆ ? ಎಂಬುದು ಪ್ರಶ್ನೆಯ ಅಭಿಪ್ರಾಯ. ಆವಾಗ ಗುರುಗಳು ಶಿಷ್ಯರನ್ನು ಕುರಿತು ಉತ್ತರಿಸುತ್ತಾರೆ. ಅದೇನೆಂಬುದನ್ನು 'ಯಾವಾನ್' ಎಂಬ ಶ್ರುತಿಯು ಹೇಳುತ್ತಿದೆ.

**भावदीपः** – हृद्ययत इति हृदये हृत्स्थदहराकाशे । आकाशः आकाशनाम ब्रह्म विद्यते । अयं बाह्याकाशः आकाशनामा विष्णुर्यावान् व्याप्त्या, तावानिति किमत्यस्य । अस्मिन् द्यावाभूम्यादि सर्वं समाहितं यतोऽतो द्यावापृथिव्याद्याधारत्वाज्जिज्ञास्यमिति कुतश्चेति प्रश्नस्योत्तरम् ।

'ಹೃದಯೇ' ಎಂದರೆ 'ಹೃದಿ ಅಯತೇ ಇತಿ ಹೃದಯೇ' ಎಂಬ ನಿಷ್ಪತ್ತಿಯನ್ನು ವಿವಕ್ಷಿಸಿದಾಗ ಹೃದಯದಲ್ಲಿರುವ ದಹರಾಕಾಶದಲ್ಲಿ ಎಂಬ ಅರ್ಥವು ಪ್ರಾಪ್ತವಾಗುತ್ತದೆ. ಅದರಲ್ಲಿ ಆಕಾಶನಾಮಕಬ್ರಹ್ಮನು ಇರುತ್ತಾನೆ. 'ಅಯಂ' ಎಂದರೆ ಬಾಹ್ಯಾಕಾಶ ಎಂದರ್ಥ. ಆಕಾಶನಾಮಕನಾದ ವಿಷ್ಣು ಎಷ್ಟು ವ್ಯಾಪ್ತನಾಗಿದ್ದಾನೆಯೋ ಅಷ್ಟೇ ವ್ಯಾಪ್ತಿಯು ಹೃದಯಾಕಾಶದಲ್ಲಿರುವ ವಿಷ್ಣುವಿನಲ್ಲಿಯೂ ಇರುತ್ತದೆ. ಇದು 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ ಉತ್ತರವೆಂದು ತಿಳಿಯಬೇಕು.

ಈ ದ್ಯಾವಾಪೃಥಿವ್ಯಾದಿಗಳೆಲ್ಲವೂ ಹೃದಯಾಕಾಶದಲ್ಲಿರುವ ಪರಮಾತ್ಮನಲ್ಲಿಯೇ ಆಶ್ರಿತವಾಗಿವೆ. ಆದ್ದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಿತನಾಗಿರುವುದರಿಂದ ಜಿಜ್ಞಾಸೆ ಮಾಡಬೇಕೆಂದು ಉತ್ತರಿಸಲಾಗಿದೆ. ಇದು 'ಕುತಶ್ಚ' ಎಂಬ ಪ್ರಶ್ನೆಗೆ ಉತ್ತರವಾಗಿದೆ.

**भावदीपः** – कीदृशमित्यस्यापि तद् ब्रह्म कीदृशमस्तीति पृष्टम् । तस्य हृदये यावान् बाह्याकाशः तावान् द्यावाभूम्यादिकं च सर्वं विद्यते सर्वाधारभूतं तदिति इदमेवोत्तरमिति सिद्धान्तीयोऽर्थः ।

'ಕೀದೃಶಂ' ಯಾವ ಧರ್ಮಗಳಿಂದ ಉಪಪನ್ನನಾಗಿದ್ದಾನೆ? ಎಂಬ ಪ್ರಶ್ನೆಗೂ ಕೂಡ 'ಯಾವಾನ್ವಾ ವಾ' ಎಂಬುದೇ ಉತ್ತರವಾಗಿದೆ. ಅಂದರೆ ಹೃದಯದಲ್ಲಿ ಎಷ್ಟು ಬಾಹ್ಯಾಕಾಶವಿದೆಯೋ ಅಷ್ಟು ವ್ಯಾಪ್ತಿಯು ವಿಷ್ಣುವಿನಲ್ಲಿ ಇರುತ್ತದೆ. ಮತ್ತು ದ್ಯಾವಾಪೃಥಿವ್ಯಾದಿಗಳೆಲ್ಲವೂ ಇರುತ್ತವೆ. ಹೀಗೆ ಹೃದಯಾಕಾಶದಲ್ಲಿರುವ ವಿಷ್ಣುವಿನಲ್ಲಿ ದ್ಯಾವಾಪೃಥಿವ್ಯಾದ್ಯಾಶ್ರಯತ್ವಧರ್ಮವು ಇರುತ್ತದೆ ಎಂದು ತಿಳಿಯಬೇಕು. ಉಪನಿಷತ್ತಿಗೆ ಇಲ್ಲಿಯತನಕ ವ್ಯಾಖ್ಯಾನ ಮಾಡಿದ್ದು ಸಿದ್ಧಾಂತಿಗಳ ಪ್ರಕಾರ.

**भावदीपः** – पूर्वपक्षीयस्तु हृदये आकाश इति प्रागुक्तदहराकाशमनूद्य यावानिति बाह्याकाशतुल्यतया तं विशेष्यान्वेष्टव्यतया तत्र द्यावाभूम्यादिकमुच्यत इत्यर्थः ।

ಆದರೆ ಪೂರ್ವಪಕ್ಷಿಗಳು 'ಹೃದಯೇ' ಎಂಬುದಕ್ಕೆ ಹಿಂದೆ ಹೇಳಲ್ಪಟ್ಟ ಹೃದಯಾಕಾಶವನ್ನು ಅನುವಾದ ಮಾಡಿ 'ಯಾವಾನ್' ಇತ್ಯಾದಿ ವಾಕ್ಯದಿಂದ ಬಾಹ್ಯಾಕಾಶದ ಸಾಮ್ಯವನ್ನು ಹೇಳುವ ಮೂಲಕ ಅದರಲ್ಲಿ ದ್ಯಾವಾಪೃಥಿವ್ಯಾದಿಗಳನ್ನು ಹೇಳುತ್ತಾರೆ.

**भावदीपः** – आकाशस्येत्यादेर्भावः – **तस्य चेति** ।। चन्द्राद्याधारहृत्पद्मस्थस्येत्यर्थः।। **अन्यत्व इति** ।। सुषिरश्रुतिसमाख्यासहिताकाशश्रुत्या आकाशत्वे वक्ष्यमाणदिशा जीवत्वे वेत्यर्थः ।

'ಆಕಾಶಸ್ಯ' ಇತ್ಯಾದಿ ವಾಕ್ಯದ ಅಭಿಪ್ರಾಯವನ್ನು 'ತಸ್ಯಚ' ಎಂಬುದರಿಂದ ಹೇಳಿದ್ದಾರೆ. ಅಂದರೆ ಚಂದ್ರಾದಿಗಳಿಗೆ ಆಧಾರವಾದ ಹೃತ್ಪದ್ಮದಲ್ಲಿರುವ ಎಂದರ್ಥ. 'ಅನ್ಯತ್ವ' ಎಂದರೆ ಸುಷಿರಶ್ರುತಿಸಮಾಖ್ಯಾ- ಪ್ರಮಾಣದಿಂದ ಕೂಡಿರುವ ಆಕಾಶಶ್ರುತಿಯು ಭೂತಾಕಾಶಪರವಾದರೆ ಅಥವಾ ಮುಂದೆ ಹೇಳುವ ಜೀವಪರವಾದರೆ ಎಂದರ್ಥ.

**भावदीपः** – उक्तमित्यन्तस्य तात्पर्यम् – **अक्षरस्येति** ।। **इतीति** ।। इति सङ्गतिसम्भवादित्यर्थः ।। **तदिति** ।। यस्मिन् हृत्पद्मस्थे सर्वाधारत्वं श्रुतम्, तद्गतः साक्षात् परम्परासाधारण्येन पूर्वोत्तरवाक्यस्थहृत्पद्मस्थत्वसामान्यरूपो धर्म इत्यर्थः ।

ಭಾಷ್ಯದಲ್ಲಿರುವ 'ಉಕ್ತಂ' ಎಂಬಲ್ಲಿಯ ತನಕದ ತಾತ್ಪರ್ಯವನ್ನು 'ಅಕ್ಷರಸ್ಯ' ಎಂಬುದರಿಂದ ಹೇಳಿದ್ದಾರೆ. 'ಇತಿ' ಎಂದರೆ ಹೀಗೆ ಸಂಗತಿಯು ಉಪಪನ್ನವಾಗುವುದರಿಂದ ಎಂದರ್ಥ. 'ತತ್' ಇತ್ಯಾದಿ ಟೀಕಾವಾಕ್ಯಗಳಿಗೆ ಹೀಗರ್ಥ - ಯಾವ ಹೃದಯಪದ್ಮದಲ್ಲಿರುವ ವಸ್ತುವಿನಲ್ಲಿ ಸರ್ವಾಧಾರತ್ವವು ಶ್ರುತವಾಗಿದೆಯೋ ಅಂತಹ ವಸ್ತುವಿನಲ್ಲಿರುವ ಸಾಕ್ಷಾತ್ ಪರಂಪರಾಸಾಧಾರಣವಾದ ಹಿಂದಿನ ಮುಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟ 'ಹೃತ್ಪದ್ಮಸ್ಥತ್ವ' ಎಂಬ ಸಾಮಾನ್ಯಧರ್ಮವು ಈ ಅಧಿಕರಣದ ವಿಷಯವಾಗಿದೆ ಎಂದರ್ಥ. ಅಂದರೆ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವನ್ನು ಇಲ್ಲಿ ಸಮನ್ವಯ ಮಾಡುತ್ತಿದ್ದಾರೆಂದು ಅರ್ಥ.

**भावदीपः** – तेन साक्षाच्चेद्दहरे विष्णुरेवेति विष्णोर्दहराकाशस्थत्वोक्तिः सिद्धान्ते न युक्ता । परम्परा चेदाकाशस्थेति पूर्वपक्षायोग इति शङ्कानवकाशः । अस्मिन् पक्षे पूर्वोत्तरपक्षसामञ्जस्यमग्रे विवरिष्यते ।

ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವನ್ನು ನಿರಾಕರಿಸಿದಂತಾಯಿತು. ಸಾಕ್ಷಾತ್ ಹೃತ್ಪದ್ಮಸ್ಥತ್ವ-ಲಿಂಗವನ್ನು ಸಮನ್ವಯ ಮಾಡುವುದಾದರೆ ವಿಷ್ಣುವಿನಲ್ಲಿಯೇ ಬರುವುದಿಲ್ಲ. ಏಕೆಂದರೆ ವಿಷ್ಣು ಹೃದಯ-ಪದ್ಮದಲ್ಲಿರುವ ದಹರಾಕಾಶದಲ್ಲಿ ಇರುತ್ತಾನೆಂದು ಸಿದ್ಧಾಂತ ಮಾಡುತ್ತೀರಿ. ಇನ್ನು ಪರಂಪರಯಾ ಹೃತ್ಪದ್ಮಸ್ಥತ್ವಲಿಂಗವನ್ನು ಸಮನ್ವಯ ಮಾಡುತ್ತೇವೆಂದು ಹೇಳಿದರೆ ಭೂತಾಕಾಶದಲ್ಲಿ ಹೃತ್ಪದ್ಮಸ್ಥತ್ವವನ್ನು ಹೇಳಬಹುದೇ ಹೊರತು ಹೃದಯಪದ್ಮದಲ್ಲಿರುವ ದಹರಾಕಾಶಸ್ಥಿತತ್ವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಪೂರ್ವಪಕ್ಷವೇ ಕೂಡುವುದಿಲ್ಲ. ಈ ಆಶಂಕೆಯನ್ನು ಈಗ ಪರಿಹರಿಸಿದಂತಾಯಿತು. ಏಕೆಂದರೆ ಸಾಕ್ಷಾತ್, ಪರಂಪರಾಸಾಧಾರಣವಾದ ಹಿಂದಿನ ಮುಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟ ಹೃತ್ಪದ್ಮಸ್ಥಿತತ್ವವನ್ನು ಇಲ್ಲಿ ಸಮನ್ವಯ ಮಾಡಲಾಗಿದೆ. ಇದು ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳಲ್ಲಿ ಯುಕ್ತವಾಗುತ್ತವೆಂಬುದನ್ನು ಮುಂದೆ ವಿವರಿಸುತ್ತೇವೆ.

**भावदीपः** – जीवपरामर्शादित्युत्तरभाष्यानुरोधादाह – **उत जीवस्येति** ।। पूर्वपक्षादिपरत्वेनापि व्याकुर्वन् हृत्पद्मस्थत्वं साक्षाद् व्यवधानेन वा द्वेधा सम्भवति ।

'ಜೀವಪರಾಮರ್ಶಾತ್' ಎಂಬ ಮುಂದಿನ ಭಾಷ್ಯಕ್ಕೆ ಅನುಸಾರಿಯಾಗಿ 'ಉತ ಜೀವಸ್ಯ' ಎಂಬ ಟೀಕೆಯು ಹೊರಟಿದೆ. ಹೃತ್ಪದ್ಮಸ್ಥಿತತ್ವವನ್ನು ಪೂರ್ವಪಕ್ಷಪರವಾಗಿಯೂ ವ್ಯಾಖ್ಯಾನ ಮಾಡುತ್ತಾ ಸಾಕ್ಷಾತ್ತಾಗಿ ಮತ್ತು ವ್ಯವಹಿತವಾಗಿಯೂ ಹೃತ್ಪದ್ಮಸ್ಥತ್ವವನ್ನು ಹೇಳಬಹುದು.

**भावदीपः** – तत्राद्ये तच्चाकाशस्य प्रतीयत इति प्रतिज्ञाभाष्यं विवृणोति – **सर्वेति** ।। दहरोऽस्मिन्नन्तरिति पूर्ववाक्ये 'य एषोऽन्तर्हृदय' इत्युत्तरस्मिन् सर्वाधारवाक्ये च श्रुतहृत्पद्मस्थत्वमित्यर्थः ।।

ಸಾಕ್ಷಾತ್ತಾಗಿ ಹೃತ್ಪದ್ಮಸ್ಥತ್ವವನ್ನು ವಿವಕ್ಷಿಸಿದಾಗ ಆಕಾಶದಲ್ಲಿಯೇ ಈ ಧರ್ಮವು ಪ್ರಾಪ್ತವಾಗುತ್ತದೆಂಬ ಪ್ರತಿಜ್ಞಾಭಾಷ್ಯವನ್ನು ವಿವರಿಸುತ್ತಿದ್ದಾರೆ 'ಸರ್ವ' ಇತ್ಯಾದಿ ಟೀಕೆಯಿಂದ. 'ದಹರೋಽಸ್ಮಿನ್ನಂತಃ' ಎಂಬ ಹಿಂದಿನ ವಾಕ್ಯದಲ್ಲಿ ಮತ್ತು 'ಯ ಏಷೋಽಂತರ್ಹೃದಯೇ' ಎಂಬ ಮುಂದಿನ ವಾಕ್ಯದಲ್ಲಿ ಮತ್ತು ಸರ್ವಾಧಾರವನ್ನು ಹೇಳುವ ವಾಕ್ಯದಲ್ಲಿ ಶ್ರುತವಾದ ಹೃತ್ಪದ್ಮಸ್ಥತ್ವಲಿಂಗವು ಎಂದರ್ಥ.

**भावदीपः – तावदिति ।।** जीवस्येति पश्चाद्वक्ष्याम इत्यर्थः । पूर्वाक्षेपरूप-फलोक्तिसौकर्याय वा सुषिरश्रुत्यैकार्थ्याय वा तदुक्त्यै शङ्कोत्थानाय वा सिद्धान्तिन इष्टापत्तिनिरासाय वा सर्वाधारतयेति विशेषणम् ।

'ತಾವತ್' ಎಂಬ ಪದದಿಂದ ಜೀವಪರವಾದ ಪೂರ್ವಪಕ್ಷವನ್ನು ಮುಂದೆ ಹೇಳುತ್ತೇವೆ ಎಂದು ತಿಳಿಸಿದ್ದಾರೆ. ಟೀಕೆಯಲ್ಲಿ ಆಕಾಶವೇ ಹೃತ್ಪದ್ಮಸ್ಥಿತವೆಂದು ಪೂರ್ವಪಕ್ಷ ಮಾಡಬೇಕಾದಾಗ 'ಸರ್ವಾಧಾರತಯಾ' ಎಂಬ ವಿಶೇಷಣವನ್ನು ನೀಡಿದ್ದಾರೆ. ಈ ವಿಶೇಷಣವನ್ನು ನೀಡಲು ಹಲವು ಕಾರಣಗಳಿವೆ. ಹಿಂದಿನ ಅಕ್ಷರಾಧಿಕರಣದಲ್ಲಿ ಅಕ್ಷರನಿಗೆ ಸರ್ವಾಧಾರತ್ವವನ್ನು ಹೇಳಲಾಗಿತ್ತು. ಅದನ್ನು ಆಕ್ಷೇಪ ಮಾಡುವ ಪ್ರಯೋಜನವನ್ನು ತಿಳಿಸುವುದಕ್ಕಾಗಿ ಅಥವಾ ಸುಷಿರಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಾಧಾರತ್ವಕ್ಕೆ ಸಮಾನಾರ್ಥಕತ್ವವನ್ನು ತಿಳಿಸುವುದಕ್ಕಾಗಿ, ಅಥವಾ ಸರ್ವಾಧಾರತ್ವವನ್ನು ಹೇಳಿದಾಗ ಶಂಕೆಯು ಪ್ರಾಪ್ತವಾಗುತ್ತದೆಂದು ತಿಳಿಸುವುದಕ್ಕಾಗಿ, ಅಥವಾ ಆಕಾಶವು ಹೃದಯಪದ್ಮದಲ್ಲಿದೆ ಎಂಬುದು ನಮಗೆ ಇಷ್ಟವೇ ಆಗಿದೆ ಎಂದು ಸಿದ್ಧಾಂತಿಯು ಇಷ್ಟಾಪತ್ತಿಯನ್ನು ಹೇಳಿದರೆ ಅದನ್ನು ನಿರಾಕರಿಸಲು 'ಸರ್ವಾಧಾರತಯಾ' ಎಂದು ಹೇಳಿದ್ದಾರೆ.

**भावदीपः –** तेन तच्चेत्येतर्थो विवृतः । कुतः? इत्यतो दहरोऽस्मिन्नन्तर आकाश इत्यन्तवाक्योक्तेर्भावमाह – **दहर इति ।।**

ಇದರಿಂದ ಭಾಷ್ಯದಲ್ಲಿರುವ 'ತಚ್ಚ' ಎಂಬ ಪದವನ್ನು ವಿವರಿಸಿದಂತಾಯಿತು. ಭೂತಾಕಾಶವು ಹೃದಯ ಪದ್ಮದಲ್ಲಿದೆ ಎಂದು ಏಕೆ ಒಪ್ಪಬೇಕು? ಎಂದರೆ 'ದಹರೋಽಸ್ಮಿನ್ನಂತರ ಆಕಾಶಃ' ಇತ್ಯಾದಿ ಶ್ರು`ಗಳ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ದಹರೇ' ಇತ್ಯಾದಿಯಾಗಿ

**भावदीपः –** इदमुपलक्षणम् । 'य एषोऽन्तर्हृदय आकाश' इति चेत्यपि बोध्यम् ।। **स्थितीति ।।** हृत्पद्मस्थे आकाशशब्दश्रवणादित्यर्थः । किं तदत्रेत्याद्युक्तेर्भावमाह – **तस्यैवेति ।।**

ಉಪಲಕ್ಷಣಯಾ 'ಯ ಏಷೋಽಂತರ್ಹೃದಯ ಆಕಾಶೇ' ಎಂಬ ವಾಕ್ಯವನ್ನೂ ಕೂಡ ವಿವಕ್ಷಿಸಬೇಕು. ಟೀಕೆಯಲ್ಲಿ 'ಹೃತ್ಪದ್ಮೇ ದಹರಾಕಾಶಸ್ಥಿತಿಶ್ರವಣಾತ್' 'ಹೃದಯಪದ್ಮದಲ್ಲಿ ದಹರಾಕಾಶದ ಇರುವಿಕೆಯು ಶ್ರುತವಾದ್ದರಿಂದ' ಎಂದು ಹೇಳಲಾಗಿದೆ. ಏಕೆಂದರೆ ಹೃತ್ಪದ್ಮದಲ್ಲಿರುವ ವಸ್ತುವಿನಲ್ಲಿ ಆಕಾಶಶಬ್ದವು ಶ್ರುತವಾದ್ದರಿಂದ ಎಂದು ತಿಳಿಯಬೇಕು.

**भावदीपः –** अन्यथा किं तदत्रेति प्रश्नानानुगुण्यमिति भावः ।। **तस्यान्त इति ।।** विवृतमेतत्पूर्वम् ।

ಇಲ್ಲದಿದ್ದರೆ 'ಕಿಂ ತದತ್ರ' ಎಂಬ ಪ್ರಶ್ನೆಯೇ ಅನನುಗುಣವಾಗುತ್ತದೆಂಬುದು ಇದರ ಅಭಿಪ್ರಾಯ. 'ತಸ್ಮಿಂಶ್ಚೇ' ಇದರ ಅಭಿಪ್ರಾಯವನ್ನು ಹಿಂದೆ ವಿವರಿಸಿದ್ದಾಗಿದೆ.

**भावदीपः – 'तस्मिन् सर्वं प्रतिष्ठितम्' इति वाक्यशेषार्थमाह – सर्वेति ।। तत्रापि सुषिरस्य विष्णुत्वं तु न युक्तम् ।**

'ತಸ್ಮಿನ್ ಸರ್ವಂ ಪ್ರತಿಷ್ಠಿತಂ' ಇತ್ಯಾದಿ ಉಳಿದ ವಾಕ್ಯಗಳ ಅಭಿಪ್ರಾಯವನ್ನು 'ಸರ್ವ' ಇತ್ಯಾದಿ ಟೀಕೆಯಿಂದ ಹೇಳಿರುತ್ತಾರೆ. ಇಲ್ಲಿಯೂ ಸಹ ಸುಷಿರಕ್ಕೆ ವಿಷ್ಣುತ್ವವನ್ನು ಹೇಳಲು ಸಾಧ್ಯವಿಲ್ಲ.

**भावदीपः – 'तस्य मध्ये वह्निशिखा अणीयोर्ध्वा व्यवस्थितः ।' इति विष्णोः शिखामध्यस्थत्वोक्तेरिति भावेनोक्तम् – आकाशस्यैवेति ।।**

'ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಃ' ಎಂಬ ಶ್ರುತಿಯಲ್ಲಿ ಹೃದಯಸುಷಿರದ ಮಧ್ಯದಲ್ಲಿ ಅಗ್ನಿಶಿಖೆಯು ಇರುತ್ತದೆ ಎಂದು ಹೇಳಿ 'ತಸ್ಯಾಃ ಶಿಖಾಯಾಃ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ' ಎಂದು ಆ ಅಗ್ನಿಶಿಖೆಯ ಮಧ್ಯದಲ್ಲಿ ವಿಷ್ಣು ಇದ್ದಾನೆಂದು ಹೇಳಲಾಗಿದೆ. ಈ ಅಭಿಪ್ರಾಯದಿಂದ 'ಆಕಾಶಸ್ಯೈವ' ಎಂದು ಹೇಳಿದ್ದಾರೆ. ಅಂದರೆ ವಿಷ್ಣುವಿಗೆ ಹೃತ್ಪದ್ಮಸ್ಥತ್ವವನ್ನು ಹೇಳಬಾರದು. ಆಕಾಶಕ್ಕೆ ಮಾತ್ರ ಹೇಳಬೇಕೆಂದು 'ಏವ' ಕಾರದ ಅಭಿಪ್ರಾಯ.

**भावदीपः – एवं साक्षाद् हृत्पद्मस्थत्वपक्षे भाष्यं योजयित्वा व्यवधानेन हृत्पद्मस्थत्वपक्षं शङ्कते – नच वाच्यमिति ।।**

ಹೀಗೆ ಸಾಕ್ಷಾತ್ ಮತ್ತು ಪರಂಪರೆಯಿಂದ ಹೃತ್ಪದ್ಮಸ್ಥತ್ವಧರ್ಮವನ್ನು ಆಕಾಶದಲ್ಲಿ ಹೇಳುತ್ತಾ ಭಾಷ್ಯವನ್ನು ಯೋಜನೆ ಮಾಡಿದ್ದಾಯಿತು. ಈಗ ಪರಂಪರೆಯಿಂದ ಹೃತ್ಪದ್ಮಸ್ಥತ್ವವನ್ನು ಲಿಂಗವೆಂದು ವಿವಕ್ಷಿಸಿದಾಗ ಭಾಷ್ಯದ ಮಾತುಗಳನ್ನು ಯೋಜನೆ ಮಾಡಲು ಶಂಕಿಸುತ್ತಿದ್ದಾರೆ 'ನಚ ವಾಚ್ಯಮ್' ಇತ್ಯಾದಿಯಾಗಿ.

**भावदीपः – अस्मिन् पक्षे न्यायविवरणोक्तं दहरोऽस्मिन्नन्तर आकाशस्तस्मिन् यदन्तस्तदन्वेष्टव्यमित्यनेन यावान् वा अयमाकाशस्तावानेषोऽन्तर्हृदय इत्यस्यान्वयाभाव इति दोषं व्यञ्जयन् द्यावाभूम्यादेरेवान्वेष्टव्यत्वं न विष्णोरित्याह – तथा सतीति ।।**

ಈ ಪಕ್ಷದಲ್ಲಿ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ 'ದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ' ಎಂಬುದರಿಂದ 'ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯೇ' ಎಂಬ ವಾಕ್ಯಕ್ಕೆ ಅನ್ವಯವೇ ಬರುವುದಿಲ್ಲ ಎಂಬ ದೋಷವನ್ನು ತಿಳಿಯಬೇಕು. ಅದನ್ನೇ ಟೀಕೆಯಲ್ಲಿ ಸ್ಪಷ್ಟಪಡಿಸುತ್ತಾ ದ್ಯಾವಾಪೃಥಿವ್ಯಾದಿಗಳ ಜಿಜ್ಞಾಸೆಯಷ್ಟೇ ಉಪಪನ್ನವಾಗುತ್ತದೆ ಹೊರತು ವಿಷ್ಣುವಿನ ಜಿಜ್ಞಾಸೆ ಅಲ್ಲವೆಂದು 'ತಥಾ ಸತಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

[illegible]

**भावदीपः** – किं तदत्रेत्यादि प्रतीयत इत्यन्तभाष्यभावमाह – **किमिति** ।। आधेयप्रश्न इत्यर्थः । विशिष्य द्यावाभूम्याद्याधारत्वयोग्यत्वाय बाह्याकाशतुल्यतया विशिष्येत्यर्थः ।

'ಕಿಂ ತದತ್ರ' ಎಂಬಲ್ಲಿಂದ ಪ್ರಾರಂಭಿಸಿ 'ಪ್ರತೀಯತೇ' ಎಂಬಲ್ಲಿಯ ತನಕ ಇರುವ ಭಾಷ್ಯದ ಅಭಿಪ್ರಾಯವನ್ನು ಟೀಕೆಯಲ್ಲಿ 'ಕಿಂ ಅತ್ರ' ಇತ್ಯಾದಿ ವಾಕ್ಯಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಕಿಂ' ಎಂಬುದು ಆಧೇಯದ ಬಗ್ಗೆ ಪ್ರಶ್ನಿಸುವ ಪದವಾಗಿದೆ. ದ್ಯಾವಾಭೂಮಿಗಳ ಆಧಾರಕ್ಕೆ ಯೋಗ್ಯವಾದ ಬಾಹ್ಯಾಕಾಶಕ್ಕೆ ಸಮಾನವಾದ ಧರ್ಮವಿರುವುದರಿಂದ 'ವಿಶಿಷ್ಯ' ಎಂದು ಹೇಳಿದ್ದಾರೆ.

**भावदीपः** – यावान् वा इति वाक्यस्थाकाशो ब्रह्मेति द्वितीयपक्षशङ्कोत्तरत्वेन स चाकाश इत्यादिभाष्यं व्याचष्टे – **नचेति** ।।

'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಆಕಾಶಶಬ್ದವು ಬ್ರಹ್ಮಪರವಾಗಿದೆ ಎಂಬ ಎರಡನೇ ಪಕ್ಷದ ಶಂಕೆಗೆ ಉತ್ತರ ನೀಡುವುದಕ್ಕಾಗಿ 'ಸ ಚಾಕಾಶಃ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಅದನ್ನು 'ನಚ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – परिहारे परिहारवाक्ये । एतेन 'स यावान्' इति वाक्योक्ताकाशो विष्णुरिति नच वाच्यमिति भाष्यार्थो दर्शितः । वाक्यशेषोक्तिपूर्वं तस्यान्त इत्युक्तसमाख्याविरोधं व्यनक्ति – **तस्मिन्निति** ।।

'ಪರಿಹಾರೇ' ಎಂದರೆ 'ಪರಿಹಾರನೀಡುವ ವಾಕ್ಯದಲ್ಲಿ' ಎಂದು ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ 'ಯಾವಾನ್ವಾ' ವಾಕ್ಯದಲ್ಲಿ ಹೇಳಲ್ಪಟ್ಟ ಆಕಾಶಶಬ್ದವಾಚ್ಯನು ವಿಷ್ಣುವೆಂದು ಹೇಳಬಾರದು. ಹೀಗೆ ಭಾಷ್ಯದ ಅರ್ಥವನ್ನು ತಿಳಿಯಬೇಕು. ಉಳಿದ ವಾಕ್ಯಶೇಷವನ್ನು ಹೇಳುವ ಮುಖಾಂತರ 'ತಸ್ಯಾಂತೇ' ಎಂಬ ಸಮಾಖ್ಯಾವಿರೋಧವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ತಸ್ಮಿನ್' ಇತ್ಯಾದಿ ಟೀಕೆಯಿಂದ

**भावदीपः** – **तस्मादिति** ।। सुषिरश्रुतिसमाख्यावाक्यान्वयसामञ्जस्याभ्यां सहितस्याकाशशब्दस्य साधकस्य भावात् ।

'ತಸ್ಮಾತ್' ಎಂದರೆ ಸುಷಿರಶ್ರುತಿ ಮತ್ತು ಸಮಾಖ್ಯಾವಾಕ್ಯದ ಅನ್ವಯಸಾಮಂಜಸ್ಯದ ಜೊತೆಗೆ ಆಕಾಶ ಶ್ರುತಿಯೆಂಬ ಸಾಧಕಪ್ರಮಾಣವಿರುವುದರಿಂದ ಎಂದರ್ಥ.

**भावदीपः** – विष्णुत्वपक्षे वाक्यान्वयाभावसुषिरश्रुतिविरोधरूपबाधकभावाच्चेत्यर्थः । अपहतपाप्मत्वादिकं तु जडे आकाशे पापास्पृष्ट्या वा अभिमानिद्वारा वा युक्तमिति भावः । बाधवारणाय सर्वाधारतयेत्युक्तम् ।

ವಿಷ್ಣುವೇ ಆಕಾಶಶಬ್ದಪ್ರತಿಪಾದ್ಯನಾದಲ್ಲಿ ವಾಕ್ಯಗಳಿಗೆ ಅನ್ವಯ ಕೂಡುವುದಿಲ್ಲ, ಸುಷಿರಶ್ರುತಿಯ ವಿರೋಧವೆಂಬ ಬಾಧಕವೂ ಇರುತ್ತದೆ ಎಂದು ತಿಳಿಯಬೇಕು. ಅಪಹತಪಾಪ್ಮತ್ವಾದಿಗಳು ಜಡವಾದ ಆಕಾಶದಲ್ಲಿ ಬರುವುದಿಲ್ಲವೆಂದು ಶಂಕಿಸಬಾರದು. ಪಾಪದ ಸಂಪರ್ಕವೇ ಜಡಗಳಿಗೆ ಇಲ್ಲದ ಕಾರಣ ಅಥವಾ ಅಭಿಮಾನಿಚೇತನರಲ್ಲಿ ಅಪಹತಪಾಪ್ಮತ್ವಾದಿಗಳು ಇರುವುದರಿಂದ ಯುಕ್ತವಾಗುತ್ತದೆ. ಬಾಧದೋಷವನ್ನು ಪರಿಹರಿಸುವುದಕ್ಕಾಗಿ 'ಸರ್ವಾಧಾರತಯಾ' ಎಂದು ಹೇಳಿದ್ದಾರೆ.

**भावदीपः –'इतरपरामर्शात् स इति चेद्' इति सूत्रतद्भाष्याभ्यामुक्तं व्यनक्ति – जीवस्य चेति ।। परामर्शादिति ।।**

ಜಡವಾದ ಆಕಾಶವೇ ಹೃತ್ಪದ್ಮಸ್ಥವೆಂಬ ಪೂರ್ವಪಕ್ಷವನ್ನು ತೋರಿಸಿದ್ದಾಯಿತು. ಈಗ ಜೀವನೇ ಹೃತ್ಪದ್ಮಸ್ಥನಾಗಿದ್ದಾನೆ ಎಂಬುದನ್ನು ತೋರಿಸಲು ಹೊರಟಿದ್ದಾರೆ. 'ಇತರಪರಾಮರ್ಶಾತ್ ಸ ಇತಿ ಚೇತ್' ಎಂಬ ಸೂತ್ರ ಹಾಗೂ ಭಾಷ್ಯದಲ್ಲಿ ಹೇಳಿದ್ದನ್ನೇ ವ್ಯಾಖ್ಯಾನಿಸುತ್ತಿದ್ದಾರೆ 'ಜೀವಸ್ಯ ವಾ' ಇತ್ಯಾದಿ ಟೀಕೆಯಿಂದ

**भावदीपः – प्रकृतं जीवं एष इति परामृश्य आत्मेत्यात्मपदेन 'य आत्मा अपहतपाप्मा' इत्यादिवाक्येऽपहतपाप्मत्वादिनोक्तहृत्पद्मस्थात्मत्वस्य विधानादित्यर्थः ।**

ಪ್ರಕೃತನಾದ ಜೀವನನ್ನು 'ಏಷಃ' ಎಂದು ಪರಾಮರ್ಶ ಮಾಡಿ ಆತ್ಮಪದದಿಂದ 'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿ ವಾಕ್ಯದಲ್ಲಿ ಅಪಹತಪಾಪ್ಮತ್ವಾದಿಗುಣಗಳನ್ನು ಹೇಳುವ ಮುಖಾಂತರ ಹೃತ್ಪದ್ಮಸ್ಥನಲ್ಲಿ ಆತ್ಮತ್ವವನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ಜೀವನು ಹೃತ್ಪದ್ಮಸ್ಥನಾಗುತ್ತಾನೆಂದು ತಿಳಿಯಬೇಕು.

**भावदीपः – 'अल्पश्रुतेरिति चेद्' इति सूत्रतद्भाष्याभ्यामुक्तमाह – दहरस्थत्वेति ।। 'अर्भकौकस्त्वाद्' इति सूत्रे व्योमवद् विष्णावपि युक्तमित्यतोऽस्य निरवकाशत्वमाह – तद्धयणोरिति ।। 'उत्क्रान्तिगत्यागतीनाम्' इति वक्ष्यमाणन्यायेनाणोरित्यर्थः ।।**

'ಅಲ್ಪಶ್ರುತೇರಿತಿ ಚೇತ್' ಎಂಬ ಸೂತ್ರ ಹಾಗೂ ಭಾಷ್ಯಗಳ ಅಭಿಪ್ರಾಯವನ್ನು 'ದಹರಸ್ಥತ್ವ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಅರ್ಭಕೌಕಸ್ತ್ವಾತ್' ಎಂಬ ಸೂತ್ರದಲ್ಲಿ ಆಕಾಶದಂತೆ ವಿಷ್ಣುವೂ ಕೂಡ ವ್ಯಾಪ್ತನಾಗಿದ್ದರೂ ಅಲ್ಪಸ್ಥಾನದಲ್ಲಿಯೂ ಇರುತ್ತಾನಲ್ಲವೇ? ಎಂಬ ಪ್ರಶ್ನೆಗೆ ಜೀವನಲ್ಲಿರುವ ಅಲ್ಪಸ್ಥಾನಸ್ಥಿತತ್ವವು ನಿರವಕಾಶವಾಗಿದೆಯೆಂದು 'ತದ್ಧ್ಯಣೋಃ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ಉತ್ಕ್ರಾಂತಿಗತ್ಯಾಗತೀನಾಂ' ಎಂಬ ಮುಂದೆ ಬರುವ ಸೂತ್ರದ ನ್ಯಾಯದಿಂದ ಅಣುವಾದ ಜೀವನಿಗೆ ಅಲ್ಪಸ್ಥಾನಸ್ಥಿತತ್ವವು ಯುಕ್ತವಾಗುತ್ತದೆಂದು ತಿಳಿಯಬೇಕು.

**भावदीपः – सर्वगतस्येति ।।** अंशतोऽपीति योज्यम् । व्योम्नोंऽशेनैकत्राल्पदेशेऽवस्थितिसम्भवेऽपि हरेरंशस्याप्यपरिच्छिन्नत्वेनाल्पौकस्त्वस्य निरवकाशत्वादिति भावः ।

**भावदीपः** – किं तदत्रेत्यादि प्रतीयत इत्यन्तभाष्यभावमाह – **किमिति** ।। आधेयप्रश्न इत्यर्थः । विशिष्य द्यावाभूम्याद्याधारत्वयोग्यत्वाय बाह्याकाशतुल्यतया विशिष्येत्यर्थः ।

'ಕಿಂ ತದತ್ರ' ಎಂಬಲ್ಲಿಂದ ಪ್ರಾರಂಭಿಸಿ 'ಪ್ರತೀಯತೇ' ಎಂಬಲ್ಲಿಯ ತನಕ ಇರುವ ಭಾಷ್ಯದ ಅಭಿಪ್ರಾಯವನ್ನು ಟೀಕೆಯಲ್ಲಿ 'ಕಿಂ ಅತ್ರ' ಇತ್ಯಾದಿ ವಾಕ್ಯಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಕಿಂ' ಎಂಬುದು ಆಧೇಯದ ಬಗ್ಗೆ ಪ್ರಶ್ನಿಸುವ ಪದವಾಗಿದೆ. ದ್ಯಾವಾಭೂಮಿಗಳ ಆಧಾರಕ್ಕೆ ಯೋಗ್ಯವಾದ ಬಾಹ್ಯಾಕಾಶಕ್ಕೆ ಸಮಾನವಾದ ಧರ್ಮವಿರುವುದರಿಂದ 'ವಿಶಿಷ್ಯ' ಎಂದು ಹೇಳಿದ್ದಾರೆ.

**भावदीपः** – यावान् वा इति वाक्यस्थाकाशो ब्रह्मेति द्वितीयपक्षशङ्कोत्तरत्वेन स चाकाश इत्यादिभाष्यं व्याचष्टे – **नचेति** ।।

'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಆಕಾಶಶಬ್ದವು ಬ್ರಹ್ಮಪರವಾಗಿದೆ ಎಂಬ ಎರಡನೇ ಪಕ್ಷದ ಶಂಕೆಗೆ ಉತ್ತರ ನೀಡುವುದಕ್ಕಾಗಿ 'ಸ ಚಾಕಾಶಃ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಅದನ್ನು 'ನಚ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – परिहारे परिहारवाक्ये । एतेन 'स यावान्' इति वाक्योक्ताकाशो विष्णुरिति नच वाच्यमिति भाष्यार्थो दर्शितः । वाक्यशेषोक्तिपूर्वं तस्यान्त इत्युक्तसमाख्याविरोधं व्यनक्ति – **तस्मिन्निति** ।।

'ಪರಿಹಾರೇ' ಎಂದರೆ 'ಪರಿಹಾರನೀಡುವ ವಾಕ್ಯದಲ್ಲಿ' ಎಂದು ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ 'ಯಾವಾನ್ವಾ' ವಾಕ್ಯದಲ್ಲಿ ಹೇಳಲ್ಪಟ್ಟ ಆಕಾಶಶಬ್ದವಾಚ್ಯನು ವಿಷ್ಣುವೆಂದು ಹೇಳಬಾರದು. ಹೀಗೆ ಭಾಷ್ಯದ ಅರ್ಥವನ್ನು ತಿಳಿಯಬೇಕು. ಉಳಿದ ವಾಕ್ಯಶೇಷವನ್ನು ಹೇಳುವ ಮುಖಾಂತರ 'ತಸ್ಯಾಂತೇ' ಎಂಬ ಸಮಾಖ್ಯಾವಿರೋಧವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ತಸ್ಮಿನ್' ಇತ್ಯಾದಿ ಟೀಕೆಯಿಂದ

**भावदीपः** – **तस्मादिति** ।। सुषिरश्रुतिसमाख्यावाक्यान्वयसामञ्जस्याभ्यां सहितस्याकाशशब्दस्य साधकस्य भावात् ।

'ತಸ್ಮಾತ್' ಎಂದರೆ ಸುಷಿರಶ್ರುತಿ ಮತ್ತು ಸಮಾಖ್ಯಾವಾಕ್ಯದ ಅನ್ವಯಸಾಮಂಜಸ್ಯದ ಜೊತೆಗೆ ಆಕಾಶ ಶ್ರುತಿಯೆಂಬ ಸಾಧಕಪ್ರಮಾಣವಿರುವುದರಿಂದ ಎಂದರ್ಥ.

**भावदीपः** – विष्णुत्वपक्षे वाक्यान्वयाभावसुषिरश्रुतिविरोधरूपबाधक-भावाच्चेत्यर्थः । अपहतपाप्मत्वादिकं तु जडे आकाशे पापास्पृष्ट्या वा अभिमानिद्वारा वा युक्तमिति भावः । बाधवारणाय सर्वाधारतयेत्युक्तम् ।

ವಿಷ್ಣುವೇ ಆಕಾಶಶಬ್ದಪ್ರತಿಪಾದ್ಯನಾದಲ್ಲಿ ವಾಕ್ಯಗಳಿಗೆ ಅನ್ವಯ ಕೂಡುವುದಿಲ್ಲ, ಸುಷಿರಶ್ರುತಿಯ ವಿರೋಧವೆಂಬ ಬಾಧಕವೂ ಇರುತ್ತದೆ ಎಂದು ತಿಳಿಯಬೇಕು. ಅಪಹತಪಾಪ್ಮತ್ವಾದಿಗಳು ಜಡವಾದ ಆಕಾಶದಲ್ಲಿ ಬರುವುದಿಲ್ಲವೆಂದು ಶಂಕಿಸಬಾರದು. ಪಾಪದ ಸಂಪರ್ಕವೇ ಜಡಗಳಿಗೆ ಇಲ್ಲದ ಕಾರಣ ಅಥವಾ ಅಭಿಮಾನಿಚೇತನರಲ್ಲಿ ಅಪಹತಪಾಪ್ಮತ್ವಾದಿಗಳು ಇರುವುದರಿಂದ ಯುಕ್ತವಾಗುತ್ತದೆ. ಬಾಧದೋಷವನ್ನು ಪರಿಹರಿಸುವುದಕ್ಕಾಗಿ 'ಸರ್ವಾಧಾರತಯಾ' ಎಂದು ಹೇಳಿದ್ದಾರೆ.

**भावदीपः –'इतरपरामर्शात् स इति चेद्' इति सूत्रतद्भाष्याभ्यामुक्तं व्यनक्ति – जीवस्य चेति ।। परामर्शादिति ।।**

ಜಡವಾದ ಆಕಾಶವೇ ಹೃತ್ಪದ್ಮಸ್ಥವೆಂಬ ಪೂರ್ವಪಕ್ಷವನ್ನು ತೋರಿಸಿದ್ದಾಯಿತು. ಈಗ ಜೀವನೇ ಹೃತ್ಪದ್ಮಸ್ಥನಾಗಿದ್ದಾನೆ ಎಂಬುದನ್ನು ತೋರಿಸಲು ಹೊರಟಿದ್ದಾರೆ. 'ಇತರಪರಾಮರ್ಶಾತ್ ಸ ಇತಿ ಚೇತ್' ಎಂಬ ಸೂತ್ರ ಹಾಗೂ ಭಾಷ್ಯದಲ್ಲಿ ಹೇಳಿದ್ದನ್ನೇ ವ್ಯಾಖ್ಯಾನಿಸುತ್ತಿದ್ದಾರೆ 'ಜೀವಸ್ಯ ವಾ' ಇತ್ಯಾದಿ ಟೀಕೆಯಿಂದ

**भावदीपः – प्रकृतं जीवं एष इति परामृश्य आत्मेत्यात्मपदेन 'य आत्मा अपहतपाप्मा' इत्यादिवाक्येऽपहतपाप्मत्वादिनोक्तहृत्पद्मस्थात्मत्वस्य विधानादित्यर्थः ।**

ಪ್ರಕೃತನಾದ ಜೀವನನ್ನು 'ಏಷಃ' ಎಂದು ಪರಾಮರ್ಶ ಮಾಡಿ ಆತ್ಮಪದದಿಂದ 'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿ ವಾಕ್ಯದಲ್ಲಿ ಅಪಹತಪಾಪ್ಮತ್ವಾದಿಗುಣಗಳನ್ನು ಹೇಳುವ ಮುಖಾಂತರ ಹೃತ್ಪದ್ಮಸ್ಥನಲ್ಲಿ ಆತ್ಮತ್ವವನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ಜೀವನು ಹೃತ್ಪದ್ಮಸ್ಥನಾಗುತ್ತಾನೆಂದು ತಿಳಿಯ ಬೇಕು.

**भावदीपः – 'अल्पश्रुतेरिति चेद्' इति सूत्रतद्भाष्याभ्यामुक्तमाह – दहरस्थत्वेति ।। 'अर्भकौकस्त्वाद्' इति सूत्रे व्योमवद् विष्णावपि युक्तमित्यतोऽस्य निरवकाशत्वमाह – तद्ध्यणोरिति ।। 'उत्क्रान्तिगत्यागतीनाम्' इति वक्ष्यमाणन्यायेनाणोरित्यर्थः ।।**

'ಅಲ್ಪಶ್ರುತೇರಿತಿ ಚೇತ್' ಎಂಬ ಸೂತ್ರ ಹಾಗೂ ಭಾಷ್ಯಗಳ ಅಭಿಪ್ರಾಯವನ್ನು 'ದಹರಸ್ಥತ್ವ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಅರ್ಭಕೌಕಸ್ತ್ವಾತ್' ಎಂಬ ಸೂತ್ರದಲ್ಲಿ ಆಕಾಶದಂತೆ ವಿಷ್ಣುವೂ ಕೂಡ ವ್ಯಾಪ್ತನಾಗಿದ್ದರೂ ಅಲ್ಪಸ್ಥಾನದಲ್ಲಿಯೂ ಇರುತ್ತಾನಲ್ಲವೇ? ಎಂಬ ಪ್ರಶ್ನೆಗೆ ಜೀವನಲ್ಲಿರುವ ಅಲ್ಪಸ್ಥಾನಸ್ಥಿತತ್ವವು ನಿರವಕಾಶವಾಗಿದೆಯೆಂದು 'ತದ್ಧ್ಯಣೋಃ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ಉತ್ಕ್ರಾಂತಿಗತ್ಯಾಗತೀನಾಂ' ಎಂಬ ಮುಂದೆ ಬರುವ ಸೂತ್ರದ ನ್ಯಾಯದಿಂದ ಅಣುವಾದ ಜೀವನಿಗೆ ಅಲ್ಪಸ್ಥಾನಸ್ಥಿತತ್ವವು ಯುಕ್ತವಾಗುತ್ತದೆಂದು ತಿಳಿಯಬೇಕು.

**भावदीपः – सर्वगतस्येति ।।** अंशतोऽपीति योज्यम् । व्योम्नोंऽशेनैकत्राल्पदेशेऽवस्थितिसम्भवेऽपि हरेरंशस्याप्यपरिच्छिन्नत्वेनाल्पौकस्त्वस्य निरवकाशत्वादिति भावः ।

'ಸರ್ವಗತಸ್ಯ' ಎಂಬಲ್ಲಿ 'ಅಂಶತೋಽಪಿ' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. ಅಂದರೆ ಆಕಾಶಕ್ಕೆ ಅಂಶದಿಂದ ಅಲ್ಪದೇಶಸ್ಥಿತತ್ವವು ಉಪಪನ್ನವಾದರೂ ಕೂಡ ಭಗವಂತನ ಅಂಶವೂ ಸಹ ಅಪರಿಚ್ಛಿನ್ನವಾದ್ದರಿಂದ ಅಲ್ಪಸ್ಥಾನಸ್ಥಿತತ್ವವನ್ನು ಹೇಳಲಾಗದು. ಆದ್ದರಿಂದ ಈ ಧರ್ಮವು ಜೀವನಲ್ಲಿ ಮಾತ್ರ ನಿರವಕಾಶವಾಗಿದೆಯೆಂದು ತಿಳಿಯಬೇಕು.

**भावदीपः** – विवरिष्यते चैतदग्रे । अपहतपाप्मत्वादिकं तु जीवे मुक्तौ भावाद् भाव्यपेक्षया युक्तमिति भावः ।

ಇದೇ ವಿಷಯವನ್ನು ಮುಂದೆ ವಿವರಿಸಲಾಗುತ್ತದೆ. ಅಪಹತಪಾಪ್ಮತ್ವಾದಿಗುಣಗಳು ಜೀವನಲ್ಲಿ ಇಲ್ಲದ ಕಾರಣ ಜೀವನನ್ನು ಹೃತ್ಪದ್ಮಸ್ಥಿತನೆಂದು ಹೇಗೆ ಹೇಳುವುದು? ಎಂದು ಪ್ರಶ್ನಿಸಬಾರದು. ಸಂಸಾರ ದಶೆಯಲ್ಲಿರುವ ಜೀವನಲ್ಲಿ ಅಪಹತಪಾಪ್ಮತ್ವಾದಿಗುಣಗಳು ಇಲ್ಲದಿದ್ದರೂ ಮುಕ್ತನಾದ ಮೇಲೆ ಅದೇ ಧರ್ಮಗಳು ಇರುವುದರಿಂದ ಭಾವಿಧರ್ಮದ ವಿವಕ್ಷೆಯಿಂದ ಮೊದಲೇ ಆ ಧರ್ಮಗಳನ್ನು ಶ್ರುತಿಯು ಹೇಳಿದೆ.

**भावदीपः** – ननु हृत्पद्मस्थाकाशस्थो जीवश्चेद् यावान्वा इति वाक्यानन्वय इत्यत आह – **नचेति** ।।

ಹೃತ್ಪದ್ಮದ ಆಕಾಶದಲ್ಲಿರುವವನು ಜೀವನೆಂದು ಹೇಳಿದರೆ 'ಯಾವಾನ್ವಾ' ಎಂಬ ಶ್ರುತಿಗೆ ಅನ್ವಯವೇ ಕೂಡುವುದಿಲ್ಲವಲ್ಲ? ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ಟೀಕೆಯಿಂದ ಉತ್ತರಿಸಿದ್ದಾರೆ.

**भावदीपः** – हृत्पद्मस्थ आकाश एवेति वा जीव एवेति वा निर्णयाभावात् पूर्वपक्षस्य सन्देहादविशेषः स्यादित्यतो विष्णिवतरत्वेन निश्चयः स्यादिति भावेन द्विविधपूर्वपक्षफलत्वेनोक्तमित्यन्तभाष्यतात्पर्यमाह – **अत इति** ।।

ಹೃತ್ಪದ್ಮಸ್ಥವಾದ ವಸ್ತುವು ಜಡಾಕಾಶವೆಂದೋ, ಜೀವನೆಂದೋ ನಿರ್ಣಯಿಸಲು ಬಾರದಿದ್ದಾಗ ಪೂರ್ವಪಕ್ಷವು ಸಂದೇಹಸ್ವರೂಪವನ್ನೇ ಹೊಂದಿತಲ್ಲವೇ? ಎಂಬ ಪ್ರಶ್ನೆಗೆ ವಿಷ್ಣು ಇತರತ್ವೇನ ನಿಶ್ಚಯ ಮಾಡಬೇಕೆಂದು ತಿಳಿಯಬೇಕು. ಎರಡೂ ಬಗೆಯ ಪೂರ್ವಪಕ್ಷಗಳಲ್ಲಿ ವಿಷ್ಣು ಹೃತ್ಪದ್ಮಸ್ಥನಾಗುವುದಿಲ್ಲವೆಂದು ನಿಶ್ಚಯವಿರುವುದರಿಂದ ಎರಡು ಬಗೆಯ ಪೂರ್ವಪಕ್ಷವನ್ನು ಹೇಳಿದ್ದಾರೆ. 'ಉಕ್ತಂ' ಎಂಬಲ್ಲಿಯತನಕದ ಭಾಷ್ಯದ ತಾತ್ಪರ್ಯವನ್ನು 'ಅತ' ಎಂಬ ಟೀಕಾವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**भावदीपः** – साक्षाद् व्यवधानाभ्यां क्रमादाकाशजीवयोरेव सर्वाधारतया हृत्पद्मस्थत्वाद् विष्णोश्चैकेनापि रूपेण सर्वाधारतया हृत्पद्मस्थत्वाभावाच्चेत्यर्थः ।

ಸಾಕ್ಷಾತ್‌ಹೃತ್ಪದ್ಮಸ್ಥಿತತ್ವವು ಅಥವಾ ಪರಂಪರಯಾ ಸರ್ವಾಧಾರತಯಾ ಹೃತ್ಪದ್ಮಸ್ಥಿತತ್ವವು ಆಕಾಶ ಮತ್ತು ಜೀವರುಗಳಿಗೆ ಹೇಳಿದಂತಾಯಿತು. ಆದರೆ ವಿಷ್ಣುವಿಗೆ ಸಾಕ್ಷಾತ್ತಾಗಿ ಅಥವಾ ಪರಂಪರಯಾ ಹೃತ್ಪದ್ಮಸ್ಥಿತತ್ವವನ್ನು ಹೇಳಲು ಸಾಧ್ಯವಿಲ್ಲವೆಂದು ತಿಳಿಯಬೇಕು.

**भावदीपः** – विष्णोः साक्षाद् हृत्पद्मस्थत्वाभावेऽपि हृत्पद्मस्थदहराकाशस्थतया व्यवधानेन हृत्पद्मस्थत्वं स्यादेवेति भावेनाऽकाङ्क्षाक्रमेण भाष्यं व्याचष्टे – **दहरेति** ॥

ವಿಷ್ಣುವಿಗೆ ಸಾಕ್ಷಾತ್ತಾಗಿ ಹೃತ್ಪದ್ಮಸ್ಥಿತತ್ವವನ್ನು ಹೇಳಲು ಸಾಧ್ಯವಿಲ್ಲದಿದ್ದರೂ ಹೃತ್ಪದ್ಮದಲ್ಲಿರುವ ದಹರಾಕಾಶಸ್ಥಿತತ್ವವನ್ನು ಹೇಳಬಹುದು. ಹೀಗೆ ಪರಂಪರಯಾ ಹೃತ್ಪದ್ಮಸ್ಥಿತತ್ವವು ವಿಷ್ಣುವಿನಲ್ಲಿ ಬಂದೇ ಬರುತ್ತದಲ್ಲವೇ? ಈ ಅಭಿಪ್ರಾಯದಿಂದ ಆಕಾಂಕ್ಷೆಗೆ ಅನುಸಾರಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ದಹರ' ಇತ್ಯಾದಿಯಾಗಿ.

**भावदीपः** – परम्परया दहरहृत्पद्मस्थ इत्यर्थः । अत्येति अतिशयेन प्राप्नोतीति भ्रान्तिं निराह – **अतिक्रम्येति** ॥ सर्वदा शोकादिहीन एवास्त इत्यर्थः ॥ **विष्णोरिति** ॥ सजातीये जीवे दर्शनेनात्रापि तत्प्राप्तिभ्रान्तौ निषेधसम्भवादित्यर्थः ।

ಪರಂಪರೆಯಿಂದ ದಹರವಾದ ಹೃತ್ಪದ್ಮಸ್ಥಿತನೆಂದು ತಿಳಿಯಬೇಕು. ಶ್ರುತಿಯಲ್ಲಿರುವ 'ಅತ್ಯೇತಿ' ಎಂಬ ಪದಕ್ಕೆ ಅತಿಶಯವಾಗಿ ಹೊಂದುತ್ತಾನೆ ಎಂಬ ಭ್ರಾಂತಿಯನ್ನು ನಿರಾಕರಿಸಲು 'ಅತಿಕ್ರಮ್ಯ' ಎಂದು ಹೇಳಿದ್ದಾರೆ. ಅಂದರೆ 'ನಿರಂತರವಾಗಿ ದುಃಖಾದಿಗಳಿಂದ ರಹಿತನಾಗಿದ್ದಾನೆ' ಎಂದರ್ಥ.

**भावदीपः** – अभिमानिद्वाराऽकाशेऽप्यस्त्वपहतपाप्मत्वमित्यत आह – **सत्यकामत्वेति** ॥ तत्तु निरवकाशमित्यग्रे व्यक्तमिति भावः । कथञ्चिद् अभिमान्यादिद्वारेत्यर्थः ॥ **अनेनेति** ॥ क्वापि निरपेक्षधर्माभावकथनेनेत्यर्थः ।

ಚೇತನತ್ವೇನ ಸಜಾತಿಯನಾದ ಜೀವನಲ್ಲಿ ದುಃಖಾದಿಗಳು ಇರುವುದರಿಂದ ವಿಷ್ಣುವಿನಲ್ಲಿಯೂ ದುಃಖಾದಿಗಳು ಬರಬಹುದಲ್ಲವೇ? ಎಂಬ ಭ್ರಾಂತಿ ಬಂದರೆ ಅದನ್ನು ನಿಷೇಧ ಮಾಡುವುದಕ್ಕಾಗಿ ಎಂದರ್ಥ. ಅಭಿಮಾನಿಜೀವನ ಮುಖಾಂತರ ಆಕಾಶಾದಿಗಳಲ್ಲಿ ಅಪಹತಪಾಪ್ಮತ್ವಾದಿ ಗುಣಗಳನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ಸತ್ಯಕಾಮತ್ವ' ಇತ್ಯಾದಿ ಟೀಕೆಯಿಂದ ಉತ್ತರಿಸಿದ್ದಾರೆ. ಈ ಸತ್ಯಕಾಮತ್ವಾದಿ ಗುಣಗಳು ವಿಷ್ಣುವಿನಲ್ಲಿ ಮಾತ್ರ ನಿರವಕಾಶವಾಗಿದೆಯೆಂದು ಮುಂದೆ ಸಮರ್ಥಿಸುತ್ತಾರೆ. "ಕಥಂಚಿತ್' ಎಂದರೆ ಅಭಿಮಾನಿ ದೇವತೆಗಳ ಮುಖಾಂತರ ಎಂದರ್ಥ. 'ಅನೇನ' ಎಂದರೆ 'ನಿರಪೇಕ್ಷವಾದ ಧರ್ಮಗಳು ಇರುವುದಿಲ್ಲವೆಂದು ಹೇಳಿದ್ದರಿಂದ' ಎಂದರ್ಥ.

**भावदीपः** – ननु तर्कताण्डवे पाकसापेक्षस्यापि पृथिवीशौक्ल्यस्य तन्निरपेक्षाबादिशौक्ल्यस्येव शुक्लशब्दमुख्यार्थत्वेन तुल्यतया प्रतीतेः व्याप्तिसङ्गति-

ज्ञानादिसापेक्षयोरप्यनुमानशब्दयोस्तन्निरपेक्षप्रत्यक्षवत् प्रमाणशब्दमुख्यार्थत्वेन तुल्यतया प्रतीतेश्चेत्यादिनोपक्रमप्राबल्यभङ्गे सापेक्षस्यापि शब्दमुख्यार्थत्वोक्तेः 'सत्यकामः सत्यसङ्कल्पः' इति श्रुतौ सापेक्षधर्मस्यापि धीरस्तीति चेन्न । प्रतीतस्यापि तस्य त्यागोपपत्तेरिति भावः ।। १४ ।।

ಶಂಕೆ - ತರ್ಕತಾಂಡವದಲ್ಲಿ ಸಾಪೇಕ್ಷವಾದ ಧರ್ಮವನ್ನೂ ಸಹ ಶಬ್ದದ ಮುಖ್ಯಾರ್ಥವೆಂದೇ ಸ್ವೀಕರಿಸಿದ್ದಾರೆ. ಪೃಥಿವಿಯಲ್ಲಿರುವ ಶೌಕ್ಲ್ಯವು ಸಾಪೇಕ್ಷಿತವಾಗಿದೆ. ನೀರಿನಲ್ಲಿರುವ ಶೌಕ್ಲ್ಯವು ನಿರಪೇಕ್ಷಿತ-ವಾಗಿದೆ. 'ಶುಕ್ಲ' ಶಬ್ದಕ್ಕೆ ನೀರಿನ ಶೌಕ್ಲ್ಯವು ಹೇಗೆ ಮುಖ್ಯಾರ್ಥವೋ ಅದರಂತೆ ಪೃಥಿವಿಯಲ್ಲಿರುವ ಶೌಕ್ಲ್ಯವೂ ಸಹ ಮುಖ್ಯಾರ್ಥವೇ ಆಗಿದೆ. ಅದರಂತೆ ವ್ಯಾಪ್ತಿಜ್ಞಾನ ಸಂಬಂಧಜ್ಞಾನಗಳನ್ನು ಅಪೇಕ್ಷೆ ಪಡದ ಪ್ರತ್ಯಕ್ಷದಲ್ಲಿ ಪ್ರಮಾಣಶಬ್ದದ ಮುಖ್ಯವಾದ ವ್ಯವಹಾರ ಹೇಗೆ ಇದೆಯೋ ಅದರಂತೆ ವ್ಯಾಪ್ತಿಜ್ಞಾನ ಸಂಬಂಧ ಜ್ಞಾನಗಳನ್ನು ಅಪೇಕ್ಷಿಸುವ ಅನುಮಾನ ಶಬ್ದಗಳಲ್ಲಿಯೂ ಪ್ರಮಾಣ ಶಬ್ದದ ವ್ಯವಹಾರವಿದೆ. ಹೀಗೆ ಸಾಪೇಕ್ಷಿತವಾದದ್ದೂ ಸಹ ಶಬ್ದದ ಮುಖ್ಯಾರ್ಥವೇ ಆಗುತ್ತದೆಂದು ತರ್ಕತಾಂಡವದ ಉಪಕ್ರಮ-ಪ್ರಾಬಲ್ಯಭಂಗ ಪ್ರಕರಣದಲ್ಲಿ ಸಮರ್ಥಿಸಿದ್ದಾರೆ. ಹಾಗಾಗಿ ಪ್ರಕೃತ 'ಸತ್ಯಕಾಮಃ ಸತ್ಯಸಂಕಲ್ಪಃ' ಎಂಬ ಶ್ರುತಿಯಿಂದ ಸಾಪೇಕ್ಷವಾದ ಧರ್ಮವನ್ನೂ ಸಹ ಮುಖ್ಯವಾಗಿ ವಿವಕ್ಷಿಸಬಹುದಲ್ಲವೇ ?

ಸಮಾಧಾನ - ಹೌದು. ಸಾಪೇಕ್ಷಧರ್ಮದ ಪ್ರತೀತಿ ಬಂದೇ ಬರುತ್ತದೆ. ಆದರೂ ಸಹ ಸಾಪೇಕ್ಷ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದು ಪ್ರಬಲವಾದ್ದರಿಂದ ಅದನ್ನೇ ಇಟ್ಟುಕೊಳ್ಳಬೇಕೆಂದು ಭಾಷ್ಯದ ಅಭಿಪ್ರಾಯ.

**वाक्यार्थमञ्जरी –**

**ॐ दहर उत्तरेभ्यः ॐ ।।**

**तस्यान्त इति** ।। तत्र तच्छब्देन 'पद्मकोशप्रतीकाशं हृदयम्' इति प्रकृतं हृत्पद्मं परामृश्यते । तथाच तस्य हृत्पद्मस्यान्ते अन्तः सूक्ष्मम् अल्पं सुषिरम् आकाशं वर्तते, तस्मिंश्चाकाशे भगवान्, तत्र च सर्वं जगत् प्रकर्षेण वर्तत इत्यर्थः ।। **अथ यदिदमिति** ।। अथेत्यारम्भे अस्मिन् ब्रह्मपुरे पुरुषदेहव्यापिपरब्रह्मशरीरे इदं बुद्धिसन्निहितं दहरम् अल्पं पुण्डरीकं पद्मरूपं वेश्म गृहं यदस्ति, अस्मिन्नन्तः पद्ममध्ये दहराकाशः भूताकाशोऽस्ति, ततः किम्? इत्यत आह – **तस्मिन्निति** ।। तस्मिन्नाकाशे यदन्तर्वर्तते, तदन्वेष्टव्यम् मार्गणीयम् । न घटादिवदस्यान्वेषणम्, अप्रत्यक्षत्वाद् । इत्यतस्तदेव विवृणोति – **तद्वावेति** ।। वावेत्यवधारणे । तदेवाव जिज्ञासितव्यमिति गुरुणोक्ते सतीति शेषः । तं गुरुं प्रति शिष्याः पृच्छेयुः,

यदिदमित्याद्यनुवादः यद् विजिज्ञासितव्यम्, तदत्र हृत्पद्मगताकाशे किं विद्यते, ब्रह्म च न सम्भवति, तस्य व्याप्तत्वेन दहराकाशगतत्वायोगादिति भावः । इति ब्रूयुरिति सम्बन्धः । तदा स गुरुः ब्रूयात्, किमिति? अन्तः शरीरान्तर्हृदये हृद्यत इति हृदयशब्दवाच्ये हृत्पद्मगते भूताकाशे आकाशः आकाशाख्यपरमात्मा वर्तते । एषोऽन्तस्थः यावानयं बहिर्विद्यमानः आकाशाख्यपरमात्मा तावान्वै गुणतः परिमाणतश्च तावानेव अनेन हृत्पद्मगतं ब्रह्माण्वपि व्याप्तं लोकदृष्ट्या विरुद्धयुगपद णुत्वमहत्त्वादीनां तस्मिन् समावेशस्य प्रमितत्वादित्युक्तं भवति । अन्यपरित्यागेन तस्यैव जिज्ञास्यत्वप्रयोजकं तत्सामर्थ्यमाह – **उभेत्यादिना** ।। अस्मिन्नन्तरेवोभे मुक्ते द्यावापृथिव्यौ समाहिते समाश्रिते उभयविधाग्निवायुसूर्यचन्द्रविद्युन्नक्षत्राणि च समाहितानीत्यर्थः । किमाकाशे विद्यते? इति प्रश्ने आकाशगतस्यैव वक्तव्यत्वेन य ावानित्यादेरसङ्गताकाशपक्षेऽप्य-न्वयानुपपत्तिरित्यत आह – **आकाशपक्षे त्विति** ।। हृत्पद्माकाशस्य द्यावापृथिव्याद्याश्रितत्वयोग्यत्वद्योतनाय दहरोऽस्मिन्नन्तर आकाश इति प्रागुक्ताकाशमेव यावान् वेत्यादिना बाह्याकाशतुल्यतया विशिष्येत्यर्थः । परिहारः कथ्यत इति एतच्च तद्वाक्यव्याख्यावसरे एव व्यक्तम् । उत्तरत्र उत्तरखण्डे 'परं ज्योतिः' इति योऽधिकारी सम्प्रसादः सम्यग् विष्णुप्रसादवान् एषः अस्माच्चरमशरीरात् समुत्थाय निर्गतः परं ज्योतिः अतिप्रकाशवान् परमात्मानम् उपसम्पद्य स्वेन रूपेणाभिनिष्पद्यते स्वस्वरूपाविर्भावं प्राप्नोति । हृत्पद्मस्थात्मनिरूपणावसरे किं ज्योतिःप्रसङ्गेन? इत्यत उक्तम् – **एष इति** ।। यं प्राप्य स्वस्वरूपमाप्नोति स एष प्रागुक्तपरमात्मेति होवाचेत्यर्थः । अत्र यः निष्पद्यते, एष आत्मेत्यन्वयः पूर्वपक्षिणोऽभिमतः ।। **नचेति** ।। किं तदत्र विद्यते? इति प्रश्नस्य जीवे विद्यत इति परिहारं विना यावान् वाऽयमाकाश इत्यादेरसङ्गतत्वादिति भावः ।। **ॐ दहर उत्तरेभ्यः ॐ** ।। दहरे दहरं पुण्डरीकमित्याद्युक्तदहरपद्मे स्थितं ब्रह्मैव उत्तरेभ्यः 'य आत्माऽपहतपाप्मा' इत्याद्युत्त रवाक्योक्तापहतपाप्मत्वादितद्धर्मेभ्य इत्यर्थः । अपहतपाप्मा दूरनिरस्तपापः, अविजिघत्सः बुभुक्षापीडारहितः, अतिशयेन प्राप्नोतीति भ्रान्तिं वारयति – **अतिक्रम्येति** ।। कथञ्चिद् अभिमानिद्वारा । अनेन नित्यतीर्णेत्यादिना ।। १४ ।।

## ಬ್ರಹ್ಮಮೀಮಾಂಸಾಶಾಸ್ತ್ರ

## ಸುಪ್ತಪ್ರಾಪ್ಯತ್ವ, ಬ್ರಹ್ಮಲೋಕಶಬ್ದ, ಅರಣ್ಯಾಶ್ರಯತ್ವ ಎಂಬ ಮೂರು ಕಾರಣಗಳಿವೆ

### सू – ॐ गतिशब्दाभ्यां तथाहि दृष्टं लिङ्गञ्च ॐ ॥ १५ ॥

ಸೂತ್ರಾರ್ಥ - ಸುಷುಪ್ತಿ ಅವಸ್ಥೆಯನ್ನು ಹೊಂದಿದ ಜೀವನಿಂದ ಪರಮಾತ್ಮನು ಪ್ರಾಪ್ತನಾಗಿದ್ದಾನೆ. ಮತ್ತು 'ಬ್ರಹ್ಮಲೋಕಮ್' ಎಂಬಲ್ಲಿ ಬ್ರಹ್ಮ ಶಬ್ದವೂ ಸಹ ಶ್ರುತವಾಗಿದೆ. ಯಾವ ರೀತಿಯಾಗಿ ಹೀಗೆ ಗತಿ ಹಾಗೂ ಶಬ್ದಗಳು ಹೃತ್ಪದ್ಮಸ್ಥಿತನಲ್ಲಿ ಮಾತ್ರ ಬರುತ್ತವೋ ಅದರಂತರ 'ಅರ' ಮತ್ತು 'ಣ್ಯ' ಎಂಬ ಸುಧಾಸಮುದ್ರಕ್ಕೆ ಆಶ್ರಯವಾದ ಲಿಂಗವೂ ಸಹ ಬ್ರಹ್ಮನಲ್ಲಿಯೇ ಬರುತ್ತದೆ. ಆದ್ದರಿಂದಲೂ ಹೃದಯ ಪದ್ಮದಲ್ಲಿರುವವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಬಹುದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – ॐ गतिशब्दाभ्यां तथाहि दृष्टं लिङ्गञ्च ॐ ।। गतिशब्दाभ्यां ''अहरहर्गच्छन्त्य एतं ब्रह्मलोकम्'' (छां. ८-३-२.) इति वाक्ये श्रुताभ्यां सुप्तप्राप्यत्वब्रह्मशब्दाभ्यां हेतुभ्यां दहरपद्मस्थं ब्रह्मैव । किञ्च यतः ''अरश्च'' (छां. ८-५-३.) इति श्रुतौ तथा सुप्तप्राप्यत्ववत् । हि विष्णुनिष्ठत्वेन प्रसिद्धं लिङ्गं अरण्याख्यसुधासमुद्राश्रयलोकवत्वरूपज्ञापकम् । हृत्पद्मस्थे दृष्टं उक्तम् । अतोऽपि दहरपद्मस्थो विष्णुरेवेत्यर्थः ।।२।।

ಅರ್ಥ -- ಓಂ॥ ಗತಿ ಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ॥ ಓಂ, = 'ಅಹರಹಃ ಗಚ್ಛಂತ್ಯ ಏತಂ ಬ್ರಹ್ಮಲೋಕಂ' ಎಂಬ ಛಾಂದೋಗ್ಯದ ವಾಕ್ಯದಲ್ಲಿ ಶ್ರುತವಾದ ಸುಪ್ತರಿಂದ ಪ್ರಾಪ್ತವಾದ 'ಬ್ರಹ್ಮಲೋಕಂ' ಎಂದು ಬ್ರಹ್ಮಶಬ್ದ . ಈ ಎರಡುಕಾರಣಗಳಿಂದ ಹೃದಯಾಕಾಶದ ಪದ್ಮದಲ್ಲಿರುವವನು ಬ್ರಹ್ಮನೇ ಆಗಿದ್ದಾನೆ. ಮತ್ತು ಯತಃ = ಯಾವಕಾರಣದಿಂದ, ಗತಿ ಹಾಗೂ ಶಬ್ದಗಳು ಹೃತ್‌ಪದ್ಮಸ್ಥಿತನಲ್ಲಿವೆಯೋ, ತಥಾ = ಅದರಂತೆ, ಲಿಂಗಂಚ = ಅರಶ್ಚ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ 'ಅರ'

ಮತ್ತು 'ಣ್ಯ' ಎಂಬ ಸುಧಾಸಮುದ್ರ ಲೋಕವತ್ವವೆಂಬ ಲಿಂಗವೂಸಹ ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ. ಆ ಕಾರಣದಿಂದಲೂ ಹೃದಯಾಕಾಶದ ಪದ್ಮದಲ್ಲಿರುವ ವ್ಯಕ್ತಿಯು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् – ॐ ॥ गतिशब्दाभ्यां तथाहि दृष्टं लिङ्गं च ॥ ॐ**

**'अहरहर्गच्छन्त्य एतं ब्रह्मलोकं न विन्दन्ति' (छां. ८-३-२.)**

**इति सुप्तस्य तद्गतिर्ब्रह्मशब्दश्चोच्यते ।**

ಅನುವಾದ - 'ಪ್ರತಿನಿತ್ಯ ಹಗಲು ರಾತ್ರಿ ಜೀವರುಗಳು ಬ್ರಹ್ಮಲೋಕಕ್ಕೆ ಹೋಗುತ್ತಲೇ ಇದ್ದಾರೆ. ಆದರೂ ಸಹ ಅವನನ್ನು ತಿಳಿಯಲು ಸಾಧ್ಯವಾಗಿಲ್ಲ' ಎಂಬುದಾಗಿ ಛಾಂದೋಗ್ಯದಲ್ಲಿಯೇ ಮುಂದೆ ಸುಷುಪ್ತಿ ಅವಸ್ಥೆಯನ್ನು ಹೊಂದಿದವರಿಗೆ ಪ್ರಾಪ್ತಿಯು ಮತ್ತು ಬ್ರಹ್ಮ ಶಬ್ದವೂ ಹೇಳಲಾಗಿದೆ.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಹೃತ್ಪದ್ಮಸ್ಥನಾದವನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸುವುದಕ್ಕಾಗಿ, ಸೂತ್ರವನ್ನು ಪಠಿಸುತ್ತಾ, ಶಂಕಾಪರಿಹಾರಕ್ಕಾಗಿ ಶ್ರುತಿಯನ್ನು ಉದಾಹರಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ -

ಅಹರಹಃ = ಹಗಲೂ ರಾತ್ರಿ, ಜೀವರುಗಳು, ಬ್ರಹ್ಮಲೋಕವನ್ನು ಕುರಿತು, ಗಚ್ಛಂತಿ = ಹೋಗುತ್ತಾರೆ, ಆದರೂ ಸಹ ಈ ಬ್ರಹ್ಮನನ್ನು, ನ ವಿಂದಂತಿ = ತಿಳಿಯಲಾರರು, ಸುಪ್ತಸ್ಯ = ಸುಪ್ತನಾದ ಜೀವನಿಗೆ, ತದ್ಗತಿಃ = ಪರಮಾತ್ಮನ ಪ್ರಾಪ್ತಿಯು ಹೇಳಲ್ಪಟ್ಟಿದೆ, ಬ್ರಹ್ಮಶಬ್ದಶ್ಚ = ಬ್ರಹ್ಮಪದದ ಪ್ರಯೋಗವೂ ಸಹ, ಉಚ್ಯತೇ = ಹೇಳಲ್ಪಟ್ಟಿದೆ, (१)

---

(१) भाष्यदीपिका – युक्त्यन्तरेण विष्णोर्हृत्पद्मस्थत्वं प्रतिपादयत्सूत्रमुपन्यस्यासिद्धिपरिहाराय श्रुत्युदाहरणपूर्वकं व्याचष्टे – गतीति ॥ 'इमाः' सुप्ताः प्रजाः 'अहरहः' प्रतिदिनमेतं 'गच्छन्त्यः' प्राप्यमाणाः 'एतं' ब्रह्मलोकं ब्रह्मणो विष्णोरावासस्थानभूतं हृत्पद्मं तद्द्वारा तत्रत्यं ब्रह्म साक्षाल्लोकपदोक्तं ब्रह्माख्यमाश्रयं वा 'न विन्दन्ति' न विजानन्ति, स एष आत्मा हृदीति श्रुत्यर्थः । इतीति ॥ इति छन्दोगवाक्ये 'सुप्तस्य' चेतनस्य 'तद्गतिः' अहरहो हृद्गतं ब्रह्मलोकं प्रति गतिः प्राप्तिः 'उच्यते' व्यपदिश्यत इत्यर्थः । 'ब्रह्मशब्दः' इत्यत्रापि तदिति पदं बुद्ध्या विविच्य विपरिणामेन सम्बध्यते। तथा च तस्मिन् प्राप्यमाणे हृद्गते ब्रह्मलोके 'ब्रह्मशब्दः' 'उच्यते' श्रूयत इत्यर्थः ।

**भाष्यम् – 'सता सोम्य तदा सम्पन्नो भवति' (छां. ६-७-१.) इति श्रुतेस्तं हि सुप्तो गच्छति ।**

ಅನುವಾದ - "ಸತ್' ಎಂಬ ಶಬ್ದದಿಂದ ವಾಚ್ಯನಾದ ಪರಮಾತ್ಮನನ್ನು ಕುರಿತು, ಜೀವನು ಹೋಗುತ್ತಾನೆ' ಎಂಬ ಶ್ರುತಿ ಇರುವುದರಿಂದ ಸುಪ್ತನಾದ ಜೀವನು, ತಾನೇ ಅವನೆಡೆಗೆ ತೆರಳುತ್ತಾನೆ.

ಪ್ರತಿಪದಾರ್ಥ -- ಸುಪ್ತಪ್ರಾಪ್ಯತ್ವವು ವಿಷ್ಣುತ್ವನಿಶ್ಚಾಯಕ ಲಿಂಗವೆಂದು ಹೇಗೆ ಹೇಳುತ್ತೀರಿ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಹೇ ಸೋಮ್ಯ ! = ಭಕ್ತಿ, ಜ್ಞಾನಗಳಿಗೆ ಅರ್ಹನಾದ ಹೇ ಶ್ವೇತಕೇತುವೇ ! ತದಾ = ಸುಷುಪ್ತಿ ಕಾಲದಲ್ಲಿ ಜೀವನು, ಸತಾ = 'ಸತ್' ಎಂಬ ಶಬ್ದದಿಂದ ವಾಚ್ಯನಾದ, ಬ್ರಹ್ಮನ ಜೊತೆಗೆ, ಸಂಪನ್ನಃ = ಹೊಂದಿದವನು, ಭವತಿ = ಆಗುತ್ತಾನೆ, ಇತಿ = ಹೀಗೆ, ಶ್ರುತೇಃ = ಶ್ರುತಿ ಇರುವ ಕಾರಣ, ತಂ = ವಿಷ್ಣುವನ್ನು ಕುರಿತು, ಸುಪ್ತಃ = ಸುಷುಪ್ತಿಯನ್ನು ಹೊಂದಿದ ಜೀವನು, ಗಚ್ಛತಿ = ಸ್ವತಃ ತಾನೇ ತೆರಳುತ್ತಾನೆ, ಹಿ = ಇದು ಪ್ರಸಿದ್ಧವಷ್ಟೆ.(१)

**भाष्यम् – 'अरश्च हवै ण्यश्चार्णवौ ब्रह्मलोके' (छां ८-५-३.) इति लिङ्गं च तथा दृष्टम् ।**

ಅನುವಾದ - ಬ್ರಹ್ಮಲೋಕದಲ್ಲಿ 'ಅರ' ಮತ್ತು 'ಣ್ಯ' ಎಂಬ ಎರಡು ಸಮುದ್ರಗಳಿವೆ, ಹೀಗೆ ಹೇಳಿದ್ದರಿಂದ ಬ್ರಹ್ಮಲೋಕವೆಂಬ ಅಸಾಧಾರಣಧರ್ಮವೂ ಸಹ ಸುಪ್ತ ಪ್ರಾಪ್ಯತ್ವದಂತೆ ವಿಷ್ಣುತ್ವ ನಿಶ್ಚಾಯಕವಾಗಿದೆ.

ಪ್ರತಿಪದಾರ್ಥ -- 'ಲಿಂಗಂ ಚ ತಥಾಹಿ ದೃಷ್ಟಮ್' ಎಂಬ ಸೂತ್ರ ಶೇಷವನ್ನು ಮತ್ತೊಂದು ಹೇತುವಿನಿಂದ ವ್ಯಾಖ್ಯಾನಿಸುತ್ತಿದ್ದಾರೆ -

ಅರಃ =ಅರವೆಂದು, ಚ ವೈ = ಮತ್ತೊಂದು ಪ್ರಸಿದ್ಧವಾದ, ಣ್ಯಃ = ಣ್ಯ ಎಂದು, ಅರ್ಣವೌ= ಎರಡು ಅಮೃತಸಮುದ್ರಗಳು, ಬ್ರಹ್ಮಲೋಕೇ = ಬ್ರಹ್ಮಲೋಕದಲ್ಲಿ, ಹ =

---

उच्यते च इत्यपि सम्बन्धः । चः समुच्चये । यत इति शेषः । अस्यातोऽपि दहरे विष्णुरेवेति प्रधानसाध्येनान्वयः ।

(१) भाष्यदीपिका – सुप्तप्राप्यत्वं कुतो विष्णुत्वनिश्चायकमित्यत आह – सतेति ।। हे 'सोम्य' भक्तिज्ञानार्ह श्वेतकेतो 'तदा' सुप्तिकाले 'सता' ब्रह्मणा 'सम्पन्नः' सङ्गतो भवतीत्यर्थः । उद्दालकवाक्यमेतत् । श्रुतेरिति पञ्चमी । 'तं' विष्णुम् । हिशब्दः प्रसिद्धौ । 'गच्छति' प्राप्नोति । इति ज्ञायत इति शेषः । तथा च सुप्तप्राप्यत्वस्य विष्णुलिङ्गत्वेन श्रुतिप्रसिद्धत्वात् तेन विष्णुत्वनिश्चयो भवतीति भावः ।

ಇರುವುದು ಪ್ರಸಿದ್ಧವಾಗಿದೆಯಷ್ಟೇ, ಇತಿ = ಹೀಗೆ, ಲಿಂಗಂ = ವಿಷ್ಣುವಿನ ವಿಷಯದಲ್ಲಿ, 'ಅರ' 'ಣ್ಯ' ವೆಂಬ ಸಮುದ್ರಾಶ್ರಯಲೋಕವತ್ವವೆಂಬ ಲಿಂಗವೂ ಸಹ, ದೃಷ್ಟಮ್ = ಶ್ರುತವಾಗಿದೆ.(೧)

**भाष्यम् – 'अरश्च वै ण्यश्च सुधासमुद्रौ तत्रैव सर्वाभिमतप्रदौ द्वौ ।' इत्यादिना तस्यैव तल्लक्षणत्वेनोच्यते ॥ १५ ॥**

ಅನುವಾದ - 'ಅರ' ಮತ್ತು 'ಣ್ಯ' ಎಂಬ ಎರಡು ಅಮೃತಸಮುದ್ರಗಳು ವಿಷ್ಣುಲೋಕದಲ್ಲೇ ಇರುತ್ತವೆ. ಇವೆರಡೂ ಸಕಲ ಅಭೀಷ್ಟಪ್ರದಗಳಾಗಿವೆ. ಇವೇ ಮೊದಲಾದ ಪ್ರಮಾಣಗಳಿಂದ, ಸುಧಾಸಮುದ್ರವುಳ್ಳ ಲೋಕವು ವಿಷ್ಣುವಿನ ಲಕ್ಷಣವೇ ಆಗಿದೆ ಎಂದು ಸ್ಪಷ್ಟವಾಗುತ್ತದೆ.

ಪ್ರತಿಪದಾರ್ಥ -- ಹೃತ್ಪದ್ಮಸ್ಥನಲ್ಲಿ 'ಅರ' 'ಣ್ಯ' ಎಂಬ ಸಮುದ್ರಕ್ಕೆ ಆಶ್ರಯವಾಗಿರುವ ಲೋಕವತ್ವ ಎಂಬುದು ಲಿಂಗವಾಗಿರಬಹುದು. ಇದರಿಂದ ವಿಷ್ಣುವೇ ಹೃತ್ಪದ್ಮಸ್ಥನೆಂದು ನಿರ್ಣಯಿಸಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಅರಃ = ಅರವೆಂದು, ಚ ವೈ = ಮತ್ತೊಂದು ಪ್ರಸಿದ್ಧವಾದ, ಣ್ಯಶ್ಚ =ಣ್ಯ ಎಂದೂ, ಸುಧಾಸಮುದ್ರೌ = ಎರಡು ಸುಧಾಸಮುದ್ರಗಳೂ, ತತ್ರೈವ = ಆ ವಿಷ್ಣುವಿನ ಲೋಕದಲ್ಲೇ ಇವೆ, ದ್ವೌ = ಆ ಎರಡು ಸಮುದ್ರಗಳೂ ಸಹ, ಸರ್ವಾಭಿಮತಪ್ರದೌ = ಸಕಲ ಅಭೀಷ್ಟಗಳನ್ನು ನೀಡುವವುಗಳಾಗಿ ಇರುತ್ತವೆ, ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ತಸ್ಯೈವ = ಆ ವಿಷ್ಣುವಿಗೇ, ತತ್ = ಆ ಅರಣ್ಯಾಶ್ರಯಲೋಕವತ್ವವು, ಲಕ್ಷಣತ್ವೇನ = ಲಿಂಗವೆಂಬುದಾಗಿ, ಉಚ್ಯತೇ = ಹೇಳಲ್ಪಡುತ್ತದೆ.(೨)

(१) **भाष्यदीपिका** – **'लिङ्गं च तथा हि दृष्टम्'** इति सूत्रशेषं हेत्वन्तरपरतया व्याचष्टे – **अरश्चेति** ॥ चशब्दो हेतुसमुच्चये । यथा सुप्तगम्यत्वम् **'अहरहः'** इति श्रुतौ हृत्पद्मस्थे दृष्टम्, तथा अरण्यनामामृतसमुद्रद्वयाश्रयलोकवत्त्वरूपं लिङ्गमपि **'अरश्च'** इति श्रुतौ हृत्पद्मस्थे दृष्टं श्रुतमिति । उपमायां तथाशब्दः । अनेनासिद्धिः परिहृता । नच गतिशब्दयोरिवास्य सन्निधौ हृत्पद्मस्थस्यानुक्तेरसिद्ध्यनिवृत्तिरिति वाच्यम् । हृत्पद्मस्थस्य ब्रह्मण आवासत्वेन निमित्तेन तल्लोकभूते हृत्पद्मे **'एतं ब्रह्मलोकम्'** इति प्रयुक्तस्य ब्रह्मलोकशब्दस्यारण्याश्रयलोकेऽपि प्रयोगात् तन्मुखेन तादृशलोकवत्त्वरूपलिङ्गस्य हृत्पद्मस्थब्रह्मनिष्ठतायाः प्राप्तत्वात् । दृष्टमित्यनन्तरं यत इति शेषः । अस्यातोऽपि दहरे विष्णुरेवेति प्रतिज्ञावाक्येनान्वयः । श्रुतौ हवा इति निपातौ प्रसिद्धिद्योतकौ । समुद्रयोरन्योन्यसमुच्चये चशब्दौ । तथा च ब्रह्मणो विष्णोर्लोके श्वेतद्वीपे अरण्याख्यार्णवौ सुधासमुद्रौ अर्णवोपमे सुधासरसी वा स्त इति श्रुत्यर्थः ।

(२) **भाष्यदीपिका** – ननु हृत्पद्मस्थस्यारण्याश्रयलोकवत्त्वलिङ्गश्रवणेऽपि कुतोऽयं

विष्णुरित्यतोऽरण्याश्रयत्वस्य विष्णुलोकैकलिङ्गत्वेन स्मृतिसिद्धत्वादित्याशयेन सौत्रहिशब्दाभिप्रेतां स्मृतिं दर्शयति – **अरश्चेति** ।। वैशब्दः प्रसिद्धौ । चशब्दौ परस्परसमुच्चये । 'तत्रैव' क्षीराब्धिमध्यस्थितविष्णुलोक एव 'सर्वाभिमतप्रदौ' सर्वेष्टकरौ स्त इत्यर्थः । एवकारोऽन्यत्र सत्त्वव्यावर्तकः । तेनारण्याश्रयलोकवत्त्वलिङ्गस्य विष्णुत्वेनाव्यभिचारः सिद्ध्यति । अत एव भाष्ये तस्यैवेत्येवकारः । 'इत्यादिना' पुरुषोत्तमध्यानचक्रवाक्येन 'तस्यैव' विष्णोरेव 'तत्' सुधार्णवद्वयाश्रयलोकवत्त्वं 'लक्षणत्वेन' लिङ्गत्वेन 'उच्यते' प्रतिपाद्यत इत्यर्थः । 'हि' यस्मादित्यर्थे । तस्मादेतल्लिङ्गबलाद् विष्णुत्वनिश्चयो युक्त इति वाक्यशेषः । यद्वा – ब्रह्मलोकमिति हृत्पद्मस्य विष्णुलोकत्वोक्तेः तदन्तर्गतो विष्णुरित्युक्तं, ब्रह्मलोकपदं कुतो विष्णुलोकवाचीत्यत आह – **अरश्चेति** ।। ब्रह्मलोकपदस्य विष्णुलोके 'अरश्च' इति वाक्ये प्रयोगादत्र हृत्पद्मे प्रयुक्तम् 'एतं ब्रह्मलोकम्' इति पदमपि विष्णुलोकपरमेव । नच 'अरश्च' इति श्रुतावपि ब्रह्मलोकपदं कुतो विष्णुलोकपरमिति वाच्यम् । यतस्तत्रारण्याश्रयत्वलिङ्गं श्रुतमित्यर्थः । अथाप्यरण्याश्रयत्वस्य भगवल्लोकलिङ्गत्वं कुत इत्यत आह – **अरश्चेति** ।। अस्मिन् पक्षे सौत्रं लिङ्गपदं हृत्पद्मस्थस्य ब्रह्मत्वसाधक-ब्रह्मलोकपदाख्यहेतोर्विष्णुलोकपरत्वसाधकारण्याश्रयत्वाख्यहेतुपरम् । अत एवास्य लिङ्गस्य हेतुगतविशेषसाधकत्वेन हृत्पद्मस्थस्य ब्रह्मत्वरूपप्रधानसाध्ये हेतुत्वाभावात् सूत्रे लिङ्गशब्देन पृथगुक्तिः । पूर्वव्याख्यानेऽपि गतिशब्दयोरिवास्य लिङ्गस्य विष्णुनिष्ठताया उपपादनसापेक्षत्वेन स्पष्टत्वाभावाद् गतिशब्दलिङ्गैरित्यनुक्त्वा लिङ्गं चेति पृथगुक्तिर्युक्ता । अनेन – न केवलमुत्तरेभ्यो गुणेभ्यः, किन्तु गतिशब्दाभ्यां च 'अहरहः' इति वाक्ये हृत्पद्मस्थनिष्ठतया श्रुताभ्यां सुप्तप्राप्यत्वब्रह्मशब्दाभ्यां च दहरे विष्णुरेवेति ज्ञायते । न केवलमेताभ्यामेव, किन्तु यतः 'अरश्च' इति श्रुतौ 'तथा' गतिशब्दयोरिव 'हि' विष्णुलिङ्गत्वेन स्मृतिसिद्धमरण्याश्रयलोकवत्त्वरूपं लिङ्गं हृत्पद्मस्थे विष्णुलोके प्रयुक्तब्रह्मलोकपदस्य हृत्पद्मे प्रयोगात् 'दृष्टं' श्रुतमतोऽपि दहरे विष्णुरेव । यद्वा – कुतोऽत्र प्रयुक्तस्य ब्रह्मलोकपदस्य विष्णुलोकपरत्वम् ? 'अरश्च' इति वाक्ये विष्णुलोके ब्रह्मलोकपदप्रयोगात् । अत्रापि 'एतं ब्रह्मलोकम्' इति तस्यैव प्रयोगात् । नच तत्रापि विष्णुलोकपरत्वं कुतः ? यतोऽरण्याश्रयत्वं लिङ्गं 'दृष्टं' श्रुतमत इति सूत्रार्थ उक्तो भवति ।

## श्रीपद्मनाभतीर्थविरचितसत्तर्कदीपावळिः

## ॥ ॐ गतिशब्दाभ्यां तथाहि दृष्टं लिङ्गञ्च ॐ ॥

**गतीत्यादेरयमर्थः । द्यावापृथिव्याधारं प्रकृत्य 'इमाः सर्वाः प्रजाः अहरहर्गच्छन्त्य एतं ब्रह्मलोकं न विन्दन्ति' इति श्रूयमाणत्वादप्यसौ विष्णुरेव, नहि दहर आकाशः ।**

ಗತಿಸೂತ್ರದ ಅರ್ಥ ಹೀಗಿದೆ -

ದ್ಯಾವಾಪೃಥಿವಿಗಳಿಗೆ ಆಧಾರವಾದದ್ದರ ಬಗ್ಗೆ ಪ್ರಕೃತವಾದಾಗ 'ಇಮಾಃ ಸರ್ವಾಃ ಪ್ರಜಾಃ ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಂ ನ ವಿಂದಂತಿ' ಎಂದು ಶ್ರುತವಾಗಿದೆ. ಪ್ರತಿನಿತ್ಯ ಸುಪ್ತರಾದ ಪ್ರಜೆಗಳು ಯಾವ ಬ್ರಹ್ಮಲೋಕವನ್ನು ಕುರಿತು ತೆರಳುತ್ತಾರೋ ಅದನ್ನು ತಿಳಿಯಲು ಸಾಧ್ಯವಿಲ್ಲ ಎಂದು ಹೇಳಿರುವ ಈ ಶ್ರುತಿಯಲ್ಲಿ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಹೊರತು ದಹರಾಕಾಶವಲ್ಲ.

**विष्णुरेव हि सुप्तगम्यः प्रसिद्धो 'यत्र तत्पुरुषः स्वपिति नाम सता सोम्य तदा सम्पन्नो भवति' इत्यादिश्रुतौ ब्रह्मलोकशब्दोऽत्र दहराकाशविषयत्वे 'अरश्च ह वै ण्यश्चार्णवौ ब्रह्मलोके' इति लिङ्गदर्शनं विरुद्ध्यते ।**

ಏಕೆಂದರೆ ಸುಪ್ತರಾದ ಪ್ರಜೆಗಳಿಂದ ಗಮ್ಯನಾದವನು ವಿಷ್ಣುವೇ ಆಗಿದ್ದಾನೆ ಎಂಬುದು ಪ್ರಸಿದ್ಧವಾಗಿದೆ - 'ಯತ್ರ ತತ್ಪುರುಷಃ ಸ್ವಪಿತಿ ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಇತ್ಯಾದಿಯಾಗಿ ಸುಪ್ತನಾದ ಪ್ರಜೆಯು ಬ್ರಹ್ಮನನ್ನು ಕುರಿತು ತೆರಳುತ್ತಾನೆಂದು ಶ್ರುತವಾಗಿದೆ. 'ಬ್ರಹ್ಮಲೋಕಂ ನ ವಿಂದಂತಿ' ಎಂಬಲ್ಲಿರುವ ಬ್ರಹ್ಮಲೋಕಶಬ್ದವು ದಹರಾಕಾಶವನ್ನು ಪ್ರತಿಪಾದನೆ ಮಾಡುವುದಾದರೆ, 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂಬ 'ಅರ' ಮತ್ತು 'ಣ್ಯ' ಎಂಬ ಸುಧಾ ಸಮುದ್ರಾಶ್ರಯತ್ವವು ವಿರುದ್ಧವಾಗುತ್ತದೆ.

**अरण्यशब्दाभिधेयसुधासमुद्रयोर्विष्णुलोकस्थत्वेन प्रसिद्धत्वादागमेषु । तथाहि उक्तं पुरुषोत्तमतन्त्रे – 'अरश्च वै ण्यश्च सुधासमुद्रौ तत्रैव सर्वाभिमतप्रदौ द्वौ' इति ॥**

ಏಕೆಂದರೆ 'ಅರ' ಮತ್ತು 'ಣ್ಯ' ಶಬ್ದಗಳಿಂದ ಪ್ರತಿಪಾದ್ಯವಾದ ಸುಧಾಸಮುದ್ರಗಳು ವಿಷ್ಣುಲೋಕದಲ್ಲಿ ಇವೆ ಎಂದು ಆಗಮಗಳಲ್ಲಿ ಪ್ರಸಿದ್ಧವಾಗಿವೆ. ಇದನ್ನೇ ಪುರುಷೋತ್ತಮತಂತ್ರದಲ್ಲಿ ಹೀಗೆ ಹೇಳಲಾಗಿದೆ. 'ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ' ಎಂದು.

**तत्वप्रकाशिका –**

**।। ॐ गतिशब्दाभ्यां तथाहि दृष्टं लिङ्गञ्च ॐ ।।**

**युक्त्यन्तरेण हृत्पद्मस्थत्वं विष्णोः प्रतिपादयत्सूत्रमुपन्यस्य व्याचष्टे – गतीति ।।**

ಮತ್ತೊಂದು ಯುಕ್ತಿಯಿಂದ ಹೃತ್ಪದ್ಮಸ್ಥನಾದವನು ವಿಷ್ಣುವೇ ಆಗಿದ್ದಾನೆ ಎಂಬುದನ್ನು ಸಮರ್ಥಿಸುವ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಗತಿ' ಇತ್ಯಾದಿಯಾಗಿ.

**तत्वप्रकाशिका – अत्र हृत्पद्मस्थस्याहरहर्गच्छन्त्य एतमिति सुप्तप्रजाप्राप्यव्यपदेशात् हृत्पद्मस्य ब्रह्मलोकत्वात्तया तदन्तर्गते ब्रह्मशब्दश्रवणाच्च विष्णुरेवायमित्यर्थः ।**

ಈ ಶ್ರುತಿಯಲ್ಲಿ ಹೃತ್ಪದ್ಮದಲ್ಲಿ ಇರುವವನಿಗೆ, ಪ್ರತಿನಿತ್ಯವೂ ಸುಪ್ತರಾದ ಪ್ರಜೆಗಳಿಂದ ಪ್ರಾಪ್ಯತ್ವವನ್ನು ಹೇಳಲಾಗಿದೆ. ಹೀಗೆ 'ಸುಪ್ತಪ್ರಜಾಪ್ರಾಪ್ಯತ್ವ' ಎಂಬ ಲಿಂಗದ ಬಲದಿಂದ ಮತ್ತು ಹೃತ್ಪದ್ಮವನ್ನು ಬ್ರಹ್ಮಲೋಕವೆಂದು ಕರೆದದ್ದರಿಂದ ಬ್ರಹ್ಮಲೋಕದಲ್ಲಿರುವವನು, ವಿಷ್ಣುವಾದ್ದರಿಂದ ಹೃತ್ಪದ್ಮದಲ್ಲಿರುವವನೂ ಕೂಡ ವಿಷ್ಣುವೇ ಆಗುತ್ತಾನೆ. ಇಲ್ಲಿ ಬ್ರಹ್ಮಶಬ್ದವೂ ಸಹ ಶ್ರುತವಾಗಿದೆ.

**तत्वप्रकाशिका – ब्रह्मैव सर्वाश्रयत्वादिना लोकपदोक्तं वा ।**

ಅಥವಾ 'ಲೋಕ' ಶಬ್ದಕ್ಕೆ ಆಶ್ರಯ ಎಂದರ್ಥ, ಬ್ರಹ್ಮನು ಸರ್ವಕ್ಕೂ ಆಶ್ರಯನಾದ್ದರಿಂದ, ಲೋಕಪದದಿಂದ ಅವನೇ ಪ್ರತಿಪಾದ್ಯನಾಗುತ್ತಾನೆ.

**तत्वप्रकाशिका – सुप्तप्राप्यत्वं कुतो विष्णुत्वनिश्चायकमित्यत आह – सतेति ।।**

ಸುಪ್ತಪ್ರಜಾಪ್ರಾಪ್ಯತ್ವವು ಇದ್ದ ಮಾತ್ರದಿಂದ ವಿಷ್ಣುವೇ ಹೃತ್‌ಪದ್ಮಸ್ಥನಾಗಿದ್ದಾನೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಸತಾ' ಎಂಬುದರಿಂದ ಉತ್ತರಿಸಿದ್ದಾರೆ.

**तत्वप्रकाशिका – सम्पन्नः सङ्गतः । ब्रह्मशब्दस्तु विष्ण्वेकपर इति प्रागेवोक्तम् ।**

'ಸಂಪನ್ನಃ' ಎಂದರೆ ಸಂಗತನೆಂದರ್ಥ, ಬ್ರಹ್ಮಶಬ್ದವು ಕೇವಲ ವಿಷ್ಣುವನ್ನೇ ಪ್ರತಿಪಾದಿಸುತ್ತದೆ ಎಂದು ಹಿಂದೆಯೇ ಸಮರ್ಥಿಸಿದ್ದಾಗಿದೆ.

**तत्वप्रकाशिका – किञ्च हृत्पद्मस्थस्यारण्याख्यसुधासमुद्राश्रयलोकवत्त्वलिङ्ग-श्रवणाच्च तदन्तर्गतो विष्णुरिति सूत्रशेषं व्याचष्टे – अरश्चेति ॥**

ಮತ್ತು ಹೃತ್ಪದ್ಮಸ್ಥನಿಗೆ 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳಿಗೆ ಆಶ್ರಯವಾದ ಲೋಕವತ್ವವೆಂಬ ಲಿಂಗವನ್ನು ಹೇಳಿದ್ದರಿಂದ ಹೃತ್ಪದ್ಮಾಂತರ್ಗತನಾದವನು ವಿಷ್ಣುವೇ ಆಗುತ್ತಾನೆ. ಎಂದರೆ 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳು ವಿಷ್ಣು ಲೋಕದಲ್ಲಿ ಮಾತ್ರವಿರುವುದರಿಂದ ಅಂತಹ ಲಿಂಗವನ್ನು ಹೃತ್ಪದ್ಮದಲ್ಲಿ ಹೇಳಿರುವುದರಿಂದ ವಿಷ್ಣುವೇ ಹೃತ್ಪದ್ಮದಲ್ಲಿರಬೇಕೆಂದು ನಿಶ್ಚಯವಾಗುತ್ತದೆ. ಈ ಅರ್ಥವನ್ನು ಪ್ರತಿಪಾದನೆ ಮಾಡುವಂತಹ ಸೂತ್ರಶೇಷವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅರಶ್ಚ' ಇತ್ಯಾದಿಯಾಗಿ.

**तत्वप्रकाशिका – हृत्पद्मस्थस्यारण्याश्रयलोकवत्वलिङ्गश्रवणेऽपि कुतोऽयं विष्णुरिति चेत् ।**

ಶ್ರುತಿಯಲ್ಲಿ ಹೃತ್ಪದ್ಮಸ್ಥನಿಗೆ 'ಅರಣ್ಯಾಶ್ರಯಲೋಕವತ್ವ' ಎಂಬ ಲಿಂಗವು ಶ್ರುತವಾಗಿದ್ದರೂ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂದು ನಿಶ್ಚಯಿಸಲು ಹೇಗೆ ಸಾಧ್ಯ? ಎಂದರೆ,

**तत्वप्रकाशिका – तस्य च विष्णुलोकैकलङ्गत्वादिति हिशब्दाभिप्रायमाह – अरश्चेति ॥**

ಈ ಅರಣ್ಯಾಶ್ರಯಲೋಕವತ್ವವು ಕೇವಲ ವಿಷ್ಣುಲೋಕದ ಲಿಂಗವೇ ಆಗಿದೆ ಎಂಬುದು 'ಹಿ' ಶಬ್ದದ ಅಭಿಪ್ರಾಯವೆಂದು ತೋರಿಸುತ್ತಿದ್ದಾರೆ 'ಅರಶ್ಚ' ಎಂಬುದರಿಂದ.

**तत्वप्रकाशिका – अनेनारण्याश्रयत्वं सत्यलोकलिङ्गमित्यप्यपास्तम् । क्षीराब्धिमध्ये इति तत्प्रसङ्गात् ।**

ಹೀಗೆ ಹೇಳಿದ್ದರಿಂದ; ಕೆಲವರು ಅರಣ್ಯಾಶ್ರಯತ್ವವು ಸತ್ಯಲೋಕದ ಲಿಂಗವೆಂದು ಏನು ವಾದಿಸುತ್ತಾರೋ, ಅದನ್ನು ನಿರಾಕರಿಸಿದಂತಾಯಿತು. ಏಕೆಂದರೆ 'ಕ್ಷೀರಾಬ್ಧಿಮಧ್ಯೇ' 'ಕ್ಷೀರಸಮುದ್ರ ಮಧ್ಯದಲ್ಲಿ' ಎಂದು ವಿಷ್ಣುಲೋಕದ ಲಿಂಗದಿಂದಲೇ ಇದು ಪ್ರಸಕ್ತವಾಗಿದೆ.

ಏಕೆಂದರೆ 'ಅರ' ಮತ್ತು 'ಣ್ಯ' ಶಬ್ದಗಳಿಂದ ಪ್ರತಿಪಾದ್ಯವಾದ ಸುಧಾಸಮುದ್ರಗಳು ವಿಷ್ಣುಲೋಕದಲ್ಲಿ ಇವೆ ಎಂದು ಆಗಮುಗಳಲ್ಲಿ ಪ್ರಸಿದ್ಧವಾಗಿವೆ. ಇದನ್ನೇ ಪುರುಷೋತ್ತಮತಂತ್ರದಲ್ಲಿ ಹೀಗೆ ಹೇಳಲಾಗಿದೆ. 'ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ' ಎಂದು.

**तत्वप्रकाशिका –**

**।। ॐ गतिशब्दाभ्यां तथाहि दृष्टं लिङ्गञ्च ॐ ।।**

**युक्त्यन्तरेण हृत्पद्मस्थत्वं विष्णोः प्रतिपादयत्सूत्रमुपन्यस्य व्याचष्टे – गतीति ।।**

ಮತ್ತೊಂದು ಯುಕ್ತಿಯಿಂದ ಹೃತ್ಪದ್ಮಸ್ಥನಾದವನು ವಿಷ್ಣುವೇ ಆಗಿದ್ದಾನೆ ಎಂಬುದನ್ನು ಸಮರ್ಥಿಸುವ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಗತಿ' ಇತ್ಯಾದಿಯಾಗಿ.

**तत्वप्रकाशिका – अत्र हृत्पद्मस्थस्याहरहर्गच्छन्त्य एतमिति सुप्तप्रजाप्राप्यव्यपदेशात् हृत्पद्मस्य ब्रह्मलोकत्वात्तया तदन्तर्गते ब्रह्मशब्दश्रवणाच्च विष्णुरेवायमित्यर्थः ।**

ಈ ಶ್ರುತಿಯಲ್ಲಿ ಹೃತ್ಪದ್ಮದಲ್ಲಿ ಇರುವವನಿಗೆ, ಪ್ರತಿನಿತ್ಯವೂ ಸುಪ್ತರಾದ ಪ್ರಜೆಗಳಿಂದ ಪ್ರಾಪ್ಯತ್ವವನ್ನು ಹೇಳಲಾಗಿದೆ. ಹೀಗೆ 'ಸುಪ್ತಪ್ರಜಾಪ್ರಾಪ್ಯತ್ವ' ಎಂಬ ಲಿಂಗದ ಬಲದಿಂದ ಮತ್ತು ಹೃತ್ಪದ್ಮವನ್ನು ಬ್ರಹ್ಮಲೋಕವೆಂದು ಕರೆದದ್ದರಿಂದ ಬ್ರಹ್ಮಲೋಕದಲ್ಲಿರುವವನು, ವಿಷ್ಣುವಾದ್ದರಿಂದ ಹೃತ್ಪದ್ಮದಲ್ಲಿರುವವನೂ ಕೂಡ ವಿಷ್ಣುವೇ ಆಗುತ್ತಾನೆ. ಇಲ್ಲಿ ಬ್ರಹ್ಮಶಬ್ದವೂ ಸಹ ಶ್ರುತವಾಗಿದೆ.

**तत्वप्रकाशिका – ब्रह्मैव सर्वाश्रयत्वादिना लोकपदोक्तं वा ।**

ಅಥವಾ 'ಲೋಕ' ಶಬ್ದಕ್ಕೆ ಆಶ್ರಯ ಎಂದರ್ಥ, ಬ್ರಹ್ಮನು ಸರ್ವಕ್ಕೂ ಆಶ್ರಯನಾದ್ದರಿಂದ, ಲೋಕಪದದಿಂದ ಅವನೇ ಪ್ರತಿಪಾದ್ಯನಾಗುತ್ತಾನೆ.

**तत्वप्रकाशिका – सुप्तप्राप्यत्वं कुतो विष्णुत्वनिश्चायकमित्यत आह – सतेति ।।**

ಸುಪ್ತಪ್ರಜಾಪ್ರಾಪ್ಯತ್ವವು ಇದ್ದ ಮಾತ್ರದಿಂದ ವಿಷ್ಣುವೇ ಹೃತ್‌ಪದ್ಮಸ್ಥನಾಗಿದ್ದಾನೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಸತಾ' ಎಂಬುದರಿಂದ ಉತ್ತರಿಸಿದ್ದಾರೆ.

**तत्वप्रकाशिका – सम्पन्नः सङ्गतः । ब्रह्मशब्दस्तु विष्ण्वेकपर इति प्रागेवोक्तम् ।**

'ಸಂಪನ್ನಃ' ಎಂದರೆ ಸಂಗತನೆಂದರ್ಥ, ಬ್ರಹ್ಮಶಬ್ದವು ಕೇವಲ ವಿಷ್ಣುವನ್ನೇ ಪ್ರತಿಪಾದಿಸುತ್ತದೆ ಎಂದು ಹಿಂದೆಯೇ ಸಮರ್ಥಿಸಿದ್ದಾಗಿದೆ.

**तत्वप्रकाशिका – किञ्च हृत्पद्मस्थस्यारण्याख्यसुधासमुद्राश्रयलोकवत्त्वलिङ्ग-श्रवणाच्च तदन्तर्गतो विष्णुरिति सूत्रशेषं व्याचष्टे – अरश्चेति ।।**

ಮತ್ತು ಹೃತ್ಪದ್ಮಸ್ಥನಿಗೆ 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳಿಗೆ ಆಶ್ರಯವಾದ ಲೋಕವತ್ವವೆಂಬ ಲಿಂಗವನ್ನು ಹೇಳಿದ್ದರಿಂದ ಹೃತ್ಪದ್ಮಾಂತರ್ಗತನಾದವನು ವಿಷ್ಣುವೇ ಆಗುತ್ತಾನೆ. ಎಂದರೆ 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳು ವಿಷ್ಣು ಲೋಕದಲ್ಲಿ ಮಾತ್ರವಿರುವುದರಿಂದ ಅಂತಹ ಲಿಂಗವನ್ನು ಹೃತ್ಪದ್ಮದಲ್ಲಿ ಹೇಳಿರುವುದರಿಂದ ವಿಷ್ಣುವೇ ಹೃತ್ಪದ್ಮದಲ್ಲಿರಬೇಕೆಂದು ನಿಶ್ಚಯವಾಗುತ್ತದೆ. ಈ ಅರ್ಥವನ್ನು ಪ್ರತಿಪಾದನೆ ಮಾಡುವಂತಹ ಸೂತ್ರಶೇಷವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅರಶ್ಚ' ಇತ್ಯಾದಿಯಾಗಿ.

**तत्वप्रकाशिका – हृत्पद्मस्थस्यारण्याश्रयलोकवत्वलिङ्गश्रवणेऽपि कुतोऽयं विष्णुरिति चेत् ।**

ಶ್ರುತಿಯಲ್ಲಿ ಹೃತ್ಪದ್ಮಸ್ಥನಿಗೆ 'ಅರಣ್ಯಾಶ್ರಯಲೋಕವತ್ವ' ಎಂಬ ಲಿಂಗವು ಶ್ರುತವಾಗಿದ್ದರೂ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂದು ನಿಶ್ಚಯಿಸಲು ಹೇಗೆ ಸಾಧ್ಯ? ಎಂದರೆ,

**तत्वप्रकाशिका – तस्य च विष्णुलोकैकलङ्गत्वादिति हिशब्दाभिप्रायमाह – अरश्चेति ।।**

ಈ ಅರಣ್ಯಾಶ್ರಯಲೋಕವತ್ವವು ಕೇವಲ ವಿಷ್ಣುಲೋಕದ ಲಿಂಗವೇ ಆಗಿದೆ ಎಂಬುದು 'ಹಿ' ಶಬ್ದದ ಅಭಿಪ್ರಾಯವೆಂದು ತೋರಿಸುತ್ತಿದ್ದಾರೆ 'ಅರಶ್ಚ' ಎಂಬುದರಿಂದ.

**तत्वप्रकाशिका – अनेनारण्याश्रयत्वं सत्यलोकलिङ्गमित्यप्यपास्तम् । क्षीराब्धिमध्ये इति तत्प्रसङ्गात् ।**

ಹೀಗೆ ಹೇಳಿದ್ದರಿಂದ; ಕೆಲವರು ಅರಣ್ಯಾಶ್ರಯತ್ವವು ಸತ್ಯಲೋಕದ ಲಿಂಗವೆಂದು ಏನು ವಾದಿಸುತ್ತಾರೋ, ಅದನ್ನು ನಿರಾಕರಿಸಿದಂತಾಯಿತು. ಏಕೆಂದರೆ 'ಕ್ಷೀರಾಬ್ಧಿಮಧ್ಯೇ' 'ಕ್ಷೀರಸಮುದ್ರ ಮಧ್ಯದಲ್ಲಿ' ಎಂದು ವಿಷ್ಣುಲೋಕದ ಲಿಂಗದಿಂದಲೇ ಇದು ಪ್ರಸಕ್ತವಾಗಿದೆ.

**तत्वप्रकाशिका – अरण्याश्रयलोकवत्त्वं हृत्पद्मस्थस्य नोच्यत इति शङ्कापनोदाय तथेत्युक्तम् । यथाऽहरहर्गच्छन्त्य एतं ब्रह्मलोकं न विन्दन्तीत्येतत् हृत्पद्मस्थविषयं तथैदपि लिङ्गं तन्निष्ठम् । ब्रह्मलोकशब्दश्रवणादेवेति भावः ।**

ಅರಣ್ಯಾಶ್ರಯಲೋಕವತ್ತ್ವವು ಹೃತ್ಪದ್ಮಸ್ಥನಲ್ಲಿ ಹೇಳಲ್ಪಟ್ಟಿಲ್ಲವೆಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ತಥಾ' ಎಂದು ಹೇಳಿದ್ದಾರೆ. ಯಾವ ರೀತಿಯಾಗಿ 'ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಂ ನ ವಿಂದಂತಿ' ಎಂಬ ವಾಕ್ಯವು ಹೃತ್ಪದ್ಮಸ್ಥವಿಷಯಕವಾಗಿದೆಯೋ ಅದರಂತೆ ಅರಣ್ಯಾಶ್ರಯತ್ವವೆಂಬ ಲಿಂಗವೂ ಕೂಡ ಹೃತ್ಪದ್ಮಸ್ಥವಿಷಯಕವೇ ಆಗಿದೆ. ಎರಡೂ ಶ್ರುತಿಗಳಲ್ಲಿ ಬ್ರಹ್ಮಲೋಕಶಬ್ದವು ಶ್ರುತವಾಗಿರುವುದೇ ಇದಕ್ಕೆ ಕಾರಣವೆಂದು ತಿಳಿಯಬೇಕು.

**तत्वप्रकाशिका – अथवा ब्रह्मलोकमिति हृत्पद्मस्थ विष्णुलोकत्वोक्तेस्तदन्तर्गतो विष्णुरित्युक्तम् । ब्रह्मलोकपदं कुतो विष्णुलोकवाचीत्यत आह – अरश्चेति ।। ब्रह्मलोकपदस्य विष्णुलोके अरश्चेति प्रयोगादत्रापि तत्परत्वमेव ।**

ಅಥವಾ 'ಬ್ರಹ್ಮಲೋಕಮ್' ಎಂಬುದಾಗಿ ಹೃತ್ಪದ್ಮವನ್ನು ವಿಷ್ಣುಲೋಕವೆಂದು ಹೇಳಿದ್ದರಿಂದ ಬ್ರಹ್ಮಲೋಕದಲ್ಲಿರುವವನು ವಿಷ್ಣುವಾದ್ದರಿಂದ ಹೃತ್ಪದ್ಮದಲ್ಲಿರುವವನೂ ವಿಷ್ಣುವೇ ಆಗುತ್ತಾನೆಂದು ಹೇಳಿದಂತಾಯಿತು. ಬ್ರಹ್ಮಲೋಕಪದವು ವಿಷ್ಣುಲೋಕಕ್ಕೆ ವಾಚಕವಾಗುತ್ತದೆ ಎಂದು ಹೇಗೆ ನಿಶ್ಚಯಿಸುವುದು? ಎಂಬ ಪ್ರಶ್ನೆಗೆ 'ಅರಶ್ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಬ್ರಹ್ಮಲೋಕಪದವನ್ನು ವಿಷ್ಣುಲೋಕ ಎಂಬ ಅರ್ಥದಲ್ಲಿ ಪ್ರಯೋಗ ಮಾಡಿರುವುದರಿಂದ ಪ್ರಕೃತ 'ಅಹರಹಃ' ಎಂಬ ಶ್ರುತಿಯಲ್ಲಿಯೂ ಬ್ರಹ್ಮಲೋಕಶಬ್ದಕ್ಕೆ 'ವಿಷ್ಣುಲೋಕ' ಎಂಬ ಅರ್ಥದಲ್ಲಿಯೇ ಪ್ರಯೋಗ ಮಾಡಲ್ಪಟ್ಟಿದೆ ಎಂದು ತಿಳಿಯಬೇಕು.

**तत्वप्रकाशिका – तत्रापि तत्कुतः । अरण्याश्रयत्वलिङ्गादित्यर्थः । तस्य भगवल्लोकलिङ्गत्वं कुत इत्यत आह – अरश्चेति ।।**

'ಅರಶ್ಚ' ಎಂಬ ವಾಕ್ಯದಲ್ಲಿ ಬ್ರಹ್ಮಲೋಕಪದವನ್ನು 'ವಿಷ್ಣುಲೋಕ' ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾರೆ ಎಂಬುದನ್ನಾದರೂ ಹೇಗೆ ನಿಶ್ಚಯಿಸುವುದು? ಎಂದರೆ ಬ್ರಹ್ಮಲೋಕಕ್ಕೆ ಅರಣ್ಯಾಶ್ರಯಹೇತುಲಿಂಗವನ್ನು ಹೇಳಿದ್ದರಿಂದ ಎಂದರ್ಥ. ಅರಣ್ಯ ಹೇತುಲಿಂಗವಾದರೂ ವಿಷ್ಣುಲೋಕಕ್ಕೆ ಲಿಂಗವೆಂದು ಹೇಗೆ ನಿಶ್ಚಯಿಸುವುದು? ಎಂಬ ಪ್ರಶ್ನೆಗೆ 'ಅರಶ್ಚ ವೈ' ಎಂಬುದರಿಂದ ಉತ್ತರಿಸಿದ್ದಾರೆ.

**भावदीपः –**

**ॐ गतिशब्दाभ्यां तथा हि दृष्टं लिङ्गं च ॐ ॥**

**युक्त्यन्तरेणेति** ॥ जातावेकवचनम् । भाष्यं व्याकुर्वन् सूत्रार्थमाह – **अत्रेति** ॥

ಮತ್ತೊಂದು ಯುಕ್ತಿಯಿಂದ ಹೃತ್ಪದ್ಮಸ್ಥನು ಭಗವಂತನೇ ಆಗಿದ್ದಾನೆ ಎಂಬುದನ್ನು ಸಮರ್ಥಿಸುವುದಕ್ಕಾಗಿ ಈ ಸೂತ್ರವು ಹೊರಟಿದೆ. "ಯುಕ್ತ್ಯಂತರೇಣ" ಎಂಬಲ್ಲಿರುವ ಏಕವಚನವು ಸಮುದಾಯ ಏಕವಚನದಲ್ಲಿದೆ. ಅಂದರೆ ಅನೇಕಯುಕ್ತಿಗಳಿಂದ ಸಾಧಿಸಲಾಗಿದೆ ಎಂದು ತಿಳಿಯಬೇಕು. ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಾ ಸೂತ್ರಾರ್ಥವನ್ನು ಹೇಳುತ್ತಿದ್ದಾರೆ 'ಅತ್ರ' ಇತ್ಯಾದಿ ಟೀಕೆಯಿಂದ.

**भावदीपः** – "इमाः प्रजा अहरहर्गच्छन्त्य" इति पूर्वोक्तप्रजापेक्षया "गच्छन्त्यः" इति स्त्रीलिङ्गमित्युपेत्योक्तम् ॥ **सुप्तप्रजेति** ॥

'ಇಮಾಃ ಪ್ರಜಾ ಅಹರಹರ್ಗಚ್ಛಂತ್ಯಃ' ಎಂದು 'ಇಮಾಃ ಪ್ರಜಾಃ' ಎಂಬಲ್ಲಿ ಸ್ತ್ರೀಲಿಂಗಪ್ರಯೋಗವಿದೆ. ಇದಕ್ಕೆ ಅನುಸಾರಿಯಾಗಿ 'ಗಚ್ಛಂತ್ಯಃ' ಎಂಬುದಾಗಿ ಸ್ತ್ರೀಲಿಂಗವನ್ನೇ ಪ್ರಯೋಗಿಸಲಾಗಿದೆ.

**भावदीपः** – परं ब्रह्मैव लोकनात् । ब्रह्मलोक इति प्रोक्तस्तस्य लोकोऽपि कथ्यत इति तद्भाष्योक्तेः षष्ठ्यर्थत्वमुपेत्यार्थमाह – **हृत्पद्मस्येति** ॥ अयं सर्वाधारतया हृत्पद्मस्थ इत्यर्थः ।

ಪರಬ್ರಹ್ಮನೇ 'ಬ್ರಹ್ಮಲೋಕ' ಎನಿಸುತ್ತಾನೆ. ಏಕೆಂದರೆ 'ಬ್ರಹ್ಮಲೋಕ ಇತಿ ಪ್ರೋಕ್ತಸ್ತಸ್ಯ ಲೋಕೋಽಪಿ ಕಥ್ಯತೇ' 'ಬ್ರಹ್ಮಲೋಕ ಶಬ್ದದಿಂದ ಬ್ರಹ್ಮ ಹಾಗೂ ಬ್ರಹ್ಮಲೋಕ ಇಬ್ಬರೂ ಕೂಡ ಪ್ರತಿಪಾದ್ಯರಾಗುತ್ತಾರೆಂದು ಛಾಂದೋಗ್ಯೋಪನಿಷತ್ತಿನ ಭಾಷ್ಯದಲ್ಲಿ ಹೇಳಲಾಗಿದೆ. 'ಬ್ರಹ್ಮಣಃ ಲೋಕಃ' ಎಂಬ ಷಷ್ಠ್ಯರ್ಥವನ್ನು ಅಂಗೀಕರಿಸಿ ಅರ್ಥವನ್ನು ಹೇಳುತ್ತಿದ್ದಾರೆ 'ಹೃತ್ಪದ್ಮಸ್ಯ' ಎಂಬುದಾಗಿ. ಹೃತ್ಪದ್ಮದಲ್ಲಿರುವವನು ಸಕಲಕ್ಕೂ ಆಧಾರನಾಗಿದ್ದಾನೆ ಎಂದರ್ಥ.

**भावदीपः** – अर्थान्तरं चाऽह – **ब्रह्म चासौ लोकश्चेति** ॥ व्युत्पत्त्येति भावः । अस्मिन् पक्षे साक्षादेव हृत्पद्मस्थस्य गतिशब्दौ । पूर्वव्याख्याने त्वार्थिकौ । तद्व्याख्यानं तूत्तरलिङ्गोक्तिसौकर्यायेति भावः ।

ಮತ್ತೊಂದು ಅರ್ಥವನ್ನು ಹೇಳುತ್ತಿದ್ದಾರೆ 'ಬ್ರಹ್ಮ ಚಾಸೌ ಲೋಕಶ್ಚ' ಎಂಬ ವ್ಯುತ್ಪತ್ತಿಯಿಂದ ಎಂದು ತಿಳಿಯಬೇಕು. ಮೊದಲನೆಯ ವ್ಯುತ್ಪತ್ತಿಯಂತೆ ಹೃತ್ಪದ್ಮವು ಬ್ರಹ್ಮನ ಲೋಕವೆನಿಸುತ್ತದೆ ಎಂದು ತಿಳಿಯಬೇಕು. ಎರಡನೆಯ ವ್ಯುತ್ಪತ್ತಿಯಲ್ಲಿ ಬ್ರಹ್ಮನೇ ಲೋಕಸ್ವರೂಪನಾಗಿದ್ದಾನೆಂದು ತಿಳಿಯಬೇಕು.

'ಬ್ರಹ್ಮ ಚಾಸೌ ಲೋಕಶ್ಚ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ ನೇರವಾಗಿಯೇ ಹೃತ್ಪದ್ಮಸ್ಥನಲ್ಲಿ ಗತಿ ಮತ್ತು ಶಬ್ದಗಳನ್ನು ಲಿಂಗವನ್ನಾಗಿ ಹೇಳಿದಂತಾಗುತ್ತದೆ. 'ಬ್ರಹ್ಮಣಃ ಲೋಕಃ' ಎಂದು ವ್ಯುತ್ಪತ್ತಿಯನ್ನು ಅನುಸರಿಸಿದಾಗ ಆರ್ಥಿಕವಾದ ಲಿಂಗವನ್ನು ಹೇಳಿದಂತಾಗುತ್ತದೆ. ಇದರ ವ್ಯಾಖ್ಯಾನವು ಮುಂದೆ ಹೇಳುವ ಲಿಂಗಕ್ಕೆ ಸೌಕರ್ಯವಾಗುವುದಕ್ಕಾಗಿ ತಿಳಿಯಬೇಕು.

**भावदीपः – तादात्म्यं प्राप्त इति भ्रान्तिं निराह – सङ्गत इति ।। ''लिङ्गं च'' इति ''च'' अर्थं वदन् भाष्यं भावार्थोक्तिपूर्वं अवतारयति – किञ्चेति ।।**

ಮುಕ್ತನಾದ ಜೀವನು ಬ್ರಹ್ಮನೊಂದಿಗೆ ತಾದಾತ್ಮ್ಯವನ್ನು ಹೊಂದುತ್ತಾನೆ ಎಂಬ ಭ್ರಾಂತಿಯನ್ನು ನಿರಾಕರಣೆ ಮಾಡುವುದಕ್ಕಾಗಿ 'ಸಂಗತಃ' ಎಂದು ಹೇಳಿದ್ದಾರೆ. 'ಲಿಂಗಂಚ' ಎಂಬುದರ ಅರ್ಥವನ್ನು ಹೇಳುತ್ತಾ ಭಾಷ್ಯದ ಅಭಿಪ್ರಾಯವನ್ನು ಹೇಳುವ ಮೂಲಕ ಅವತಾರಿಕೆಯನ್ನು ನೀಡುತ್ತಿದ್ದಾರೆ 'ಕಿಂಚ' ಇತ್ಯಾದಿಯಾಗಿ.

**भावदीपः – लोकवत्त्वलिङ्गेति ।। 'अरश्च ह वै ण्यश्चार्णवौ ब्रह्मलोके तृतीयस्यामितो दिवि' इत्युत्तरवाक्ये अरण्याख्यसुधासमुद्राश्रयलोके प्रयुक्त-ब्रह्मलोकपदस्य हृत्पद्मे प्रयोगाद् हृत्पद्मस्स्य तादृशलोकवत्वं लभ्यत इति भावः ।।**

'ಅರಶ್ಚ ಹ ವೈ ಣ್ಯಶ್ಚಾರ್ಣವೋ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ' ಎಂಬ ಮುಂದಿನ ವಾಕ್ಯದಲ್ಲಿ 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳಿಗೆ ಆಶ್ರಯವಾದ ಲೋಕದಲ್ಲಿ ಯಾವ ಬ್ರಹ್ಮಲೋಕಪದವನ್ನು ಪ್ರಯೋಗಿಸಲಾಗಿದೆಯೋ ಅದೇ ಪದವನ್ನು ಹೃತ್ಪದ್ಮದಲ್ಲಿಯೂ ಪ್ರಯೋಗ ಮಾಡಲಾಗಿದೆ. ಆದ್ದರಿಂದ ಹೃತ್ಪದ್ಮಸ್ಥನಿಗೆ ಅಂತಹ ಲೋಕವತ್ವವನ್ನು ಹೇಳಿದಂತಾಗುತ್ತದೆ.

**भावदीपः – हिशब्देति ।। पूर्वं भाष्ये 'लिङ्गं च तथाहि दृष्टम्' इति 'हि' शब्दः केवलमनूदित एवेति भावः ।। अनेनेति ।। 'हि' शब्दसूचित स्मृतिकथनेनेत्यर्थः ।। तत्प्रसङ्गादिति ।। विष्णुलोकप्रसङ्गादित्यर्थः ।**

ಹಿಂದೆ ಭಾಷ್ಯದಲ್ಲಿ 'ಲಿಂಗಂ ಚ ತಥಾಹಿ ದೃಷ್ಟಂ' ಎಂಬಲ್ಲಿರುವ 'ಹಿ' ಶಬ್ದವನ್ನು ಅನುವಾದ ಮಾಡಲಾಗಿತ್ತು ಎಂದು ತಿಳಿಯಬೇಕು. 'ಅನೇನ' ಎಂದರೆ 'ಹಿ' ಶಬ್ದದಿಂದ ಸೂಚಿತವಾದ ಸ್ಮೃತಿಯನ್ನು ಹೇಳಿದ್ದರಿಂದ ಎಂದರ್ಥ. 'ತತ್ಪ್ರಸಂಗಾತ್' ಎಂದರೆ ವಿಷ್ಣುಲೋಕವನ್ನು ಹೊಂದಬೇಕಾದ ಪ್ರಸಂಗ ಬರುವುದರಿಂದ ಎಂದರ್ಥ.

**भावदीपः – 'अरश्च वै ण्यश्च' इति भाष्योक्तवाक्ये पूर्वत्र 'क्षीराब्धिमध्ये' इति उपक्रम्य उक्तविष्णुलोकप्रस्तावे 'अरश्च' इति पाठादित्यर्थः ।**

'ಅರಶ್ಚ ವೈ ಣ್ಯಶ್ಚ' ಎಂಬ ಭಾಷ್ಯದ ವಾಕ್ಯದಲ್ಲಿ ಹಿಂದೆ 'ಕ್ಷೀರಾಬ್ಧಿಮಧ್ಯೇ' ಎಂದು ಪ್ರಾರಂಭವಾಗಿ ವಿಷ್ಣುಲೋಕದ ಪ್ರಸ್ತಾಪವಿರುವಾಗ 'ಅರಶ್ಚ' ಎಂಬ ವಾಕ್ಯವು ಹೊರಟಿದೆ ಎಂದು ತಿಳಿಯಬೇಕು.

**भावदीपः** – यद्वा वराहादिपुराणान्तरे चतुर्दशाध्यायादौ पूर्वत्र क्षीराब्धिं उक्त्वा ''तन्मध्ये मम लोकस्तु परितो वलयाकृतिः'' इत्युक्त्वा ''अरण्याख्यसुधाम्भोधिः'' इत्याद्युक्तेरिति भावः ।

ಅಥವಾ ವರಾಹ ಮೊದಲಾದ ಬೇರೆ ಪುರಾಣಗಳಲ್ಲಿ ಹದಿನಾಲ್ಕನೇ ಅಧ್ಯಾಯದಲ್ಲಿ ಕ್ಷೀರಸಮುದ್ರವನ್ನು ಹೇಳಿ ಅದರ ಮಧ್ಯದಲ್ಲಿ ದುಂಡಾದ ನನ್ನ ಲೋಕವಿದೆ ಎಂದು ಹೇಳಿ 'ಅರ' ಮತ್ತು 'ಣ್ಯ' ಎಂಬ ಸುಧಾ ಸಮುದ್ರಗಳು ಅಲ್ಲಿವೆ ಎಂದು ಹೇಳಿರುವುದರಿಂದ ಎಂದು ಅಭಿಪ್ರಾಯ.

**भावदीपः** – भाष्ये हि शब्दार्थमात्रविवरणात् सौत्रतथाशब्दकृत्यं स्वयमाह – **अरण्येति** ।। **ब्रह्मलोकेति** ।। सुधासमुद्राश्रयलोके प्रयुक्तब्रह्मलोकपदस्य हृत्पद्मे श्रवणादित्यर्थः ।

ಭಾಷ್ಯದಲ್ಲಿ 'ಹಿ' ಶಬ್ದದ ಅರ್ಥವನ್ನಷ್ಟೇ ವಿವರಿಸಿದ್ದರಿಂದ ಸೂತ್ರದಲ್ಲಿರುವ 'ತಥಾ' ಶಬ್ದಕ್ಕೆ ಸಾರ್ಥಕ್ಯವನ್ನು ಸ್ವತಃ ತಾವೇ ಹೇಳುತ್ತಿದ್ದಾರೆ 'ಅರಣ್ಯೇ' ಇತ್ಯಾದಿಯಾಗಿ. 'ಬ್ರಹ್ಮಲೋಕ' ಎಂದರೆ ಸುಧಾಸಮುದ್ರದಲ್ಲಿ ಪ್ರಯೋಗಿಸಲ್ಪಟ್ಟ ಬ್ರಹ್ಮಲೋಕ ಪದವು ಹೃತ್ಪದ್ಮದಲ್ಲಿ ಶ್ರುತವಾದ್ದರಿಂದ ಎಂದರ್ಥ.

**भावदीपः** – एतेनास्य लिङ्गस्य विष्णुनिष्ठताया अस्पष्टत्वेनोपपादनसापेक्षत्वात् गतिशब्दलिङ्गेभ्य इत्यनुक्त्वा पृथगुक्तिरिति दर्शितम् ।

ಹೀಗೆ ಹೇಳಿದ್ದರಿಂದ ಲಿಂಗಕ್ಕೆ ವಿಷ್ಣುನಿಷ್ಠತ್ವವು ಸ್ಪಷ್ಟವಾಗಿ ತಿಳಿಯದ ಕಾರಣ ಅದರ ವಿವರಣೆಯು ಆವಶ್ಯಕವಾಗಿದೆ. ಆದ್ದರಿಂದ 'ಗತಿಶಬ್ದಲಿಂಗೇಭ್ಯಃ' ಎಂದು ಒಟ್ಟಿಗೆ ಹೇಳದೆ 'ತಥಾಹಿ ದೃಷ್ಟಂ ಚ' ಎಂದು ಪ್ರತ್ಯೇಕವಾಗಿ ಸೂತ್ರಕಾರರು ಹೇಳಿರುತ್ತಾರೆ.

**भावदीपः** – पूर्वं हृत्पद्मस्थस्य ब्रह्मत्वे हेत्वन्तरोक्त्यर्थं सौत्रं लिङ्गपदमित्येवं परतया अरश्चेत्यादि भाष्यं व्याख्यातम् । अधुना ब्रह्मलोकशब्दस्य प्रसिद्धसत्यलोक परत्वशङ्कानिरासार्थं तदित्येवंपरतया अरश्चेत्यादिभाष्यांशं व्याचष्टे – **अथवेति** ।।

ಹೃತ್ಪದ್ಮಸ್ಥನು ಬ್ರಹ್ಮನಾಗಿದ್ದಾನೆನ್ನಲು ಮತ್ತೊಂದು ಹೇತುವನ್ನು ಹೇಳುವುದಕ್ಕಾಗಿ ಸೂತ್ರದಲ್ಲಿರುವ ಲಿಂಗಪದವು ಪ್ರಯುಕ್ತವಾಗಿದೆ ಎಂದು ಹೇಳಿ 'ಅರಶ್ಚ' ಮುಂತಾದ ಭಾಷ್ಯವನ್ನು ಹಿಂದೆ ವ್ಯಾಖ್ಯಾನ ಮಾಡಿದ್ದಾಯಿತು. ಈಗ ಬ್ರಹ್ಮಲೋಕಶಬ್ದಕ್ಕೆ ಪ್ರಸಿದ್ಧವಾದ ಸತ್ಯಲೋಕ ಎಂಬ ಅರ್ಥವು ಇರು

ವಾಗ ವಿಷ್ಣುವೇ ಬ್ರಹ್ಮಲೋಕವೆಂದು ಹೇಗೆ ಹೇಳುತ್ತೀರಿ? ಎಂಬ ಆಶಂಕೆಯನ್ನು ನಿರಾಸ ಮಾಡುವುದಕ್ಕಾಗಿ 'ಅರಶ್ಚ' ಇತ್ಯಾದಿ ವಾಕ್ಯಗಳು ಹೊರಟಿವೆ ಎಂದು ಭಾಷ್ಯದ ಅಭಿಪ್ರಾಯವನ್ನು 'ಅಥವಾ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – भाष्ये ''इति'' शब्दानन्तरं हेतुसाध्ये अध्याहृत्य वा (यथा) विष्णुलोके ब्रह्मलोकपदप्रयोगः तथा 'ब्रह्मलोकं' इत्यत्रापि विष्णुलोकत्वे लिङ्गमनुमापकं दृष्टमित्यर्थमुपेत्य वा ''अरश्च'' इत्यादिवाक्यं व्याचष्टे – **ब्रह्मलोकेति** ।।

ಭಾಷ್ಯದಲ್ಲಿ 'ಇತಿ' ಶಬ್ದದ ಅನಂತರ ಹೇತು ಮತ್ತು ಸಾಧ್ಯಗಳನ್ನು ಅಧ್ಯಾಹಾರ ಮಾಡಿಕೊಂಡು ವಿಷ್ಣುಲೋಕದಲ್ಲಿ ಬ್ರಹ್ಮಲೋಕಪದಪ್ರಯೋಗವು, ಅದೇ ರೀತಿಯಾಗಿ 'ಬ್ರಹ್ಮಲೋಕಂ' ಎಂಬಲ್ಲಿಯೂ ವಿಷ್ಣುಲೋಕವಾಗಿದೆ ಎಂಬ ವಿಷಯದಲ್ಲಿ ಅನುಮಾಪಕವಾದ ಲಿಂಗವು ಕಂಡಿದೆ ಎಂದು ಒಪ್ಪಿ 'ಅರಶ್ಚ' ಇತ್ಯಾದಿ ಶ್ರುತಿಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಬ್ರಹ್ಮಲೋಕ' ಇತ್ಯಾದಿಯಾಗಿ.

**भावदीपः** – **अरश्चेति** ।। वाक्ये इत्यर्थः । अत्रापि 'ब्रह्मलोकं न विन्दन्ति' इत्यत्रापि विष्णुलोकपरत्वमेवेत्यर्थः ।

'ಅರಶ್ಚ' ಎಂಬ ವಾಕ್ಯದಲ್ಲಿ ಎಂದು ತಿಳಿಯಬೇಕು. 'ಅತ್ರಾಪಿ' ಎಂದರೆ ಬ್ರಹ್ಮಲೋಕಂ ನ ವಿಂದಂತಿ' ಎಂಬಲ್ಲಿಯೂ ಕೂಡ ವಿಷ್ಣುಪರತ್ವವನ್ನೇ ಒಪ್ಪಬೇಕೆಂದರ್ಥ.

**भावदीपः** – तथा अरश्चेत्यादिवाक्येऽपि ब्रह्मलोकशब्दस्य विष्णुलोकवाचित्वेऽपि लिङ्गं सुधासमुद्राश्रयत्वादिरूपविष्णुलोकलिङ्गं दृष्टमित्यर्थमुपेत्य लिङ्गं चेत्यादि-भाष्यमवतार्य व्याचष्टे – **तत्रापीति** ।।

ಅದರಂತೆ 'ಅರಶ್ಚ' ಇತ್ಯಾದಿ ವಾಕ್ಯದಲ್ಲಿಯೂ ಬ್ರಹ್ಮಲೋಕಶಬ್ದಕ್ಕೆ ವಿಷ್ಣುಲೋಕವೆಂಬ ಅರ್ಥವನ್ನು ಒಪ್ಪಿದರೂ 'ಲಿಂಗಂ' ಎಂದರೆ ಸುಧಾಸಮುದ್ರಾಶ್ರಯತ್ವಾದಿರೂಪವಾದ ವಿಷ್ಣುಲೋಕಲಿಂಗವು ಕಂಡಿರುತ್ತದೆ. ಹೀಗೆ ಅರ್ಥವನ್ನು ಒಪ್ಪಿ 'ಲಿಂಗಂ ಚ' ಇತ್ಯಾದಿ ಭಾಷ್ಯಕ್ಕೆ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ತತ್ರಾಪಿ' ಇತ್ಯಾದಿ ಟೀಕೆಯಿಂದ.

**भावदीपः** – अरश्चेत्यादिवाक्येऽपीत्यर्थः ।। **तस्येति** ।। समुद्राश्रयत्वस्येत्यर्थः । भाष्ये तस्यैव विष्णुलोकस्यैव तत् समुद्राश्रयत्वमित्यर्थः ।। १५ ।।

'ತತ್ರಾಪಿ' ಎಂದರೆ 'ಅರಶ್ಚ' ಇತ್ಯಾದಿ ವಾಕ್ಯಗಳಲ್ಲಿಯೂ ಎಂದರ್ಥ. 'ತಸ್ಯ' ಎಂದರೆ 'ಸಮುದ್ರಾಶ್ರಯಕ್ಕೆ' ಎಂದರ್ಥ. ಭಾಷ್ಯದಲ್ಲಿ 'ತಸ್ಯೈವ' ಎಂದರೆ 'ವಿಷ್ಣುಲೋಕಕ್ಕೆ ಮಾತ್ರ' 'ತತ್' ಎಂದರೆ ಸುಧಾಸಮುದ್ರಾಶ್ರಯತ್ವವನ್ನು ಹೇಳಲಾಗಿದೆ ಎಂದು ತಿಳಿಯಬೇಕು.

**वाक्यार्थमञ्जरी –**

**ॐ गतिशब्दाभ्यां तथाहि दृष्टं लिङ्गं च ॐ ।।**

गतिः सुप्तप्राप्तिः अहरहर्गच्छन्त्य एतं ब्रह्मलोकमिति सुप्तगम्यत्वलिङ्ग-ब्रह्मशब्दाभ्यां च हृत्पद्मस्थं ब्रह्मैव । किञ्च यथा गतिशब्दौ हृत्पद्मस्थगौ, तथा लिङ्गं अरण्याख्यसुधासमुद्राश्रयलोकवत्त्वरूपलिङ्गं च 'अरश्च वै ण्यश्च अर्णवौ ब्रह्मलोके' इति तन्निष्ठतया दृष्टं यतोऽतोऽपि हृत्पद्मस्थं ब्रह्मैवेत्यर्थः ।। **अहरह इति** ।। इमाः सर्वाः प्रजाः एतं ब्रह्मलोकं विष्णुलोकं हृत्पद्मं तत्रत्यं ब्रह्मैवेति यावद्, अथवा लोकं सर्वाधारत्वेन प्रकाशवत्त्वेन लोकशब्दाभिधेयं ब्रह्मविष्णुम् अहरहः प्रतिदिनं प्राप्नुवन्त्यः सत्यः एतं जानन्तीत्यर्थः । हृत्पद्मस्थे ब्रह्मशब्दं प्रकारद्वयेन घटयति – **हृत्पद्मस्थेत्यादिना** ।। अरश्च वै ण्यश्च अर्णवौ ब्रह्मलोके तृतीयस्यामितो दिवीत्यस्यायमर्थः । इतो मेर्वपेक्षया तृतीयायां दिवि विद्यमाने ब्रह्मलोके श्वेतद्वीपे अरश्च वै ण्यश्चेत्येतन्नामानौ लक्ष्म्यात्मकौ ह वै प्रसिद्धार्णवौ समुद्रौ समुद्रोपमे च सरसी तिष्ठत इति । प्रसङ्गात् प्रकरणाद् इदं भाष्योदाहृतात् पूर्ववाक्ये द्रष्टव्यम् । यद्वा वराहादिपुराणान्तरे चतुर्दशाध्यायादौ पूर्वत्र क्षीराब्धिमुक्त्वा 'तन्मध्ये मम लोकस्तु परितो वलयाकृतिः।' इत्युक्त्वा अरण्याख्यसुधाम्भोधि-रित्याद्युक्तेरिति भावः ।। **नोच्यत इति** ।। हृत्पद्मस्थस्याद्यखण्डे तादृशलोकवत्त्वस्य पञ्चमखण्डेऽभिहितत्वेन व्यवधानादिति भावः । एवं हृत्पद्मस्थस्य ब्रह्मत्वे हेत्वन्तरोक्त्यर्थं सौत्रं लिङ्गपदमित्येवम्परतया अरश्चेति भाष्यं व्याख्यायाधुना ब्रह्मलोकशब्दस्य प्रसिद्ध्यनुसारेण सत्यलोकपरत्व-शङ्कानिरासार्थं तदित्येवंपरतया व्याचष्टे – **अथवेति** ।। **अरश्चेतीति** ।। अरश्चेत्यादिना । अत्र एतं ब्रह्मलोकमित्यत्र

।। १५ ।।

## ಬ್ರಹ್ಮಮೀಮಾಂಸಾಶಾಸ್ತ್ರ

### ಶ್ರೀಹರಿಯ ಮಹಿಮೆ ಛಾಂದೋಗ್ಯದಂತೆ ಬೃಹದಾರಣ್ಯಕದಲ್ಲೂ ಇದೆ

**सू – ॐ धृतेश्च महिम्नोऽस्यास्मिन्नुपलब्धेः ॐ ॥ १५ ॥**

ಸೂತ್ರಾರ್ಥ - ಹೃತ್‌ಪದ್ಮಸ್ಥಿತನಲ್ಲಿ ಸರ್ವಾಧಾರತ್ವವು ಕೇಳಿಸುತ್ತಿರುವುದರಿಂದ ವಿಷ್ಣುವೇ ಹೃತ್‌ಪದ್ಮಸ್ಥನಾಗಿದ್ದಾನೆ; ಮತ್ತು ಸರ್ವೇಶ್ವರತ್ವ ಮೊದಲಾದ ಧರ್ಮಗಳು ವಿಷ್ಣುವಿನಲ್ಲಿ ಕೇಳಿಸುತ್ತಿರುವುದರಿಂದ ಸಮಾಖ್ಯಾಪ್ರಮಾಣದಿಂದಲೂ ವಿಷ್ಣುವೇ ಹೃತ್‌ಪದ್ಮಸ್ಥನೆಂದು ನಿರ್ಣಯವಾಗುತ್ತದೆ.

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ॐ धृतेश्च महिम्नोऽस्यास्मिन्नुपलब्धेः ॐ।। धृतेः ''स एष सेतुर्विधृतिः'' (छां. ८-४.) इति हृत्पद्मस्थस्य सर्वाधारत्वश्रवणाच्च विष्णुरेव हृत्पद्मस्थः । किञ्च छान्दोग्ये हृत्पद्मस्थनिष्ठतयोक्तस्य महिम्नः सर्वेश्वरत्वादेः अस्मिन् ''एषसर्वेश्वरः'' इति वाजसनेयकवाक्ये । उपलब्धेः । श्रवणात् । तत्समाख्यानादपि विष्णुरेव हृत्पद्मस्थः । ननु समाख्यानादपि कुतो विष्णुरेवेत्यत उक्तम् । अस्येत्यादि । अस्य विष्णुमहिम्नः। अस्मिन् वाजसनेयकवाक्ये श्रवणादेत्वेत्यर्थः ।।३।।

ಅರ್ಥ -- ಧೃತೇಶ್ಚ = 'ಸ ಏಷಃ ಸೇತುರ್ವಿಧೃತಿಃ' ಎಂಬ ವಾಕ್ಯದಲ್ಲಿ, ಸರ್ವಾಧಾರಕತ್ವ ಧರ್ಮವು ಹೇಳಲ್ಪಟ್ಟಿರುವುದರಿಂದಲೂ ಹೃದಯ ಪದ್ಮದಲ್ಲಿ ಇರುವವನು ವಿಷ್ಣುವೇ ಆಗಿದ್ದಾನೆ. ಮತ್ತು ಛಾಂದೋಗ್ಯದಲ್ಲಿ ಹೃದಯಪದ್ಮದಲ್ಲಿ ಶ್ರುತವಾದ ಸರ್ವೇಶ್ವರತ್ವವೇ ಮೊದಲಾದ ಮಹಿಮೆಗಳು, ಅಸ್ಮಿನ್ = 'ಏಷಃ ಸರ್ವೇಶ್ವರಃ' ಎಂಬ ಬೃಹದಾರಣ್ಯಕವಾಕ್ಯದಲ್ಲಿ ಶ್ರುತವಾಗಿದೆ. ಬೃಹದಾರಣ್ಯಕವಾಕ್ಯದ ಸಮಾಖ್ಯಾನವಿರುವುದರಿಂದಲೂ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಹೃದಯಪದ್ಮಸ್ಥನು ವಿಷ್ಣುವೇ ಆಗುತ್ತಾನೆ. ಬೃಹದಾರಣ್ಯಕವಾಕ್ಯದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆನ್ನಲು ಏನು ಆಧಾರ ? ಎಂದರೆ, ಅಸ್ಮಿನ್ = ಬೃಹದಾರಣ್ಯಕ ವಾಕ್ಯದಲ್ಲಿ, ಅಸ್ಯ ಮಹಿಮ್ನಃ = ಸಕಲವನ್ನೂ ನಿಯಂತ್ರಿಸುತ್ತಾನೆ ಎಂಬ ಮಹಿಮೆಯ, ಉಪಲಬ್ಧೇಃ = ಉಪಲಬ್ಧಿ ಇರುವುದರಿಂದ, 'ಏಷ ಸೇತುರ್ವಿಧಾರಣೇ' ಎಂಬಲ್ಲಿ ಸರ್ವೇಶ್ವರತ್ವಧರ್ಮವು ಉಲ್ಲೇಖಿತವಾಗಿರುವುದರಿಂದ ಈ ವಾಕ್ಯವು ಹೇಗೆ ಬ್ರಹ್ಮಪರವಾಗುತ್ತದೋ ಆದರಂತೆ, ಇಲ್ಲಿರುವ ವಾಕ್ಯವೂ ಬ್ರಹ್ಮಪರವೇ ಆಗುತ್ತದೆ.

ಪರಿಪೂರ್ಣಚಂದ್ರಿಕಾ

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – ॐ ॥ धृतेश्च महिम्नोऽस्यास्मिन्नुपलब्धेः ॥ ॐ**

**'एष सेतुर्विधृतिः' (छां. ८-४-१.) इति धृतेः,**

ಅನುವಾದ - ಹೃತ್ಪದ್ಮದಲ್ಲಿರುವ ವ್ಯಕ್ತಿಯು ಸಕಲವನ್ನೂ ಧರಿಸುವ ಸಾಮರ್ಥ್ಯವನ್ನು ಹೊಂದಿರುವ ಕಾರಣ, 'ಸೇತು' ಎನಿಸಿದ್ದಾನೆ ಎಂದು ಧಾರಕತ್ವಗುಣವನ್ನು ಹೇಳಲಾಗಿದೆ.

ಪ್ರತಿಪದಾರ್ಥ -- ಮತ್ತೊಂದು ಹೇತುವಿನಿಂದ ವಿಷ್ಣುವಿನಲ್ಲಿ ಹೃತ್‌ಪದ್ಮಸ್ಥತ್ವವನ್ನು ಪ್ರತಿಪಾದಿಸುವುದಕ್ಕಾಗಿ, ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ -

ಪ್ರತಿಪದಾರ್ಥ -- ಏಷ ಸೇತುಃ = ಇವನೇ ಸಕಲಕ್ಕೂ ಆಶ್ರಯನು, ವಿಧೃತಿಃ = ಎಲ್ಲವನ್ನೂ ಧರಿಸಿದವನು, ಇತಿ = ಹೀಗೆ, ಧೃತೇಃ = ವಿಷ್ಣುವಿನ ಧಾರಕತ್ವಗುಣವನ್ನು ಹೇಳಿರುವುದರಿಂದ.(१)

**भाष्यम् –'एष भूताधिपतिरेष भूतपालः' (बृ. ६-४-२१.) इत्याद्यस्य महिम्नोऽस्मिन्नुपलब्धेः ।**

ಅನುವಾದ - 'ಏಷ ಭೂತಾಧಿಪತಿರೇಷ ಭೂತಪಾಲಃ' ಇತ್ಯಾದಿಯಾಗಿ 'ಹೃತ್'

(१) भाष्यदीपिका – हेत्वन्तरेण विष्णोर्हृत्पद्मस्थत्वं प्रतिपादयत्सूत्रमुपन्यस्य व्याचष्टे – धृतेरिति ।। 'इति धृतेः' इत्यस्य 'अस्मिन्नस्य' इति पदानुवर्तनेनेत्यस्मिन् वाक्येऽस्य हृत्पद्मस्थस्य धृतिपदोक्तसर्वाधारत्वश्रुतेरित्यर्थः । अस्य दहरे विष्णुरेवेति प्रतिज्ञावाक्येनान्वयः । श्रुतौ विधृतिः सेतुरित्यन्वयः । तत्र विधृतिरित्येतत् सेतुत्वे हेतुः । तथा च य आत्मा हृत्पद्मस्थत्वेनोक्तः स एष 'एषां' भूरादिलोकानाम् 'असम्भेदाय' असाङ्कर्यायाविदारणायेति, व्यासतीर्थीयोक्तरीत्या वर्णाश्रमसाङ्कर्याभावायेति वा 'विधृतिः' धारणपोषणसमर्थोऽत एव सेतुरिव 'सेतुः' आश्रय इत्यर्थः । धारकत्वं च न धार्याद् बहिष्ठतया, किन्त्वन्तःकृतजगत्त्वेन, 'श्रितमस्मिन् जगत् सर्वमिति सेतुरितीरितः' इत्युक्तेः मुख्यार्थ एव वा सेतुशब्दः । यद्यपि 'स सेतुर्विधृतिः' इति छन्दोगश्रुतिपाठः । तथाऽपि शाखान्तराणामप्यत्रोपसङ्ग्रहायैवमुक्तिः । एवमन्यत्रापीति सम्प्रदायविदः ।

ಪದ್ಮಸ್ಥನಲ್ಲಿರುವವನಿಗೆ, ಸಕಲ ಚೇತನರನ್ನು ನಿಯಮನ ಮಾಡುವಿಕೆ ಎಂಬ ಗುಣಗಳನ್ನು ಹೇಳಲಾಗಿದೆ. ಇವೆಲ್ಲವೂ ವಿಷ್ಣುವಿನ ಮಹಿಮೆಯೇ ಆಗಿವೆ. ಆದ್ದರಿಂದ ಸಮಾಖ್ಯಾಪ್ರಮಾಣದಿಂದಲೂ, ಛಾಂದೋಗ್ಯದಲ್ಲಿ ಪ್ರತಿಪಾದ್ಯನಾದ ಹೃತ್‌ಪದ್ಮಸ್ಥನು ವಿಷ್ಣುವೇ ಆಗಿದ್ದಾನೆಂದು ಸ್ಪಷ್ಟವಾಗುತ್ತದೆ.

ಪ್ರತಿಪದಾರ್ಥ -- ಏಷಃ =ಇವನೇ, ಭೂತಾಧಿಪತಿಃ = ಸಕಲ ಜೀವರಿಗೆ ನಿಯಾಮಕನು, ಏಷಃ = ಇವನೇ, ಭೂತಪಾಲಃ = ಸಕಲ ಜೀವರುಗಳಿಗೆ ರಕ್ಷಕನು, ಇತ್ಯಾದ್ಯಸ್ಯ = ಇವೇ ಮೊದಲಾದ, ಮಹಿಮ್ನಃ = ಮಹಿಮೆಯು, ಅಸ್ಮಿನ್ = ಹೃತ್ಪದ್ಮದಲ್ಲಿರುವನಲ್ಲಿ, ಉಪಲಬ್ಧೇಃ = ಶ್ರುತವಾಗಿವೆ.[१]

---

(१) **भाष्यदीपिका** – एवं सेतुसमुच्चायकसौत्रचशब्दस्य यथाश्रुतान्वयेन लिङ्गोक्तिपरतया धृतेश्चेत्यंशं व्याख्यायेदानीं समग्रं सूत्रं समानोक्तिरूपसमाख्यापरतया व्याचष्टे – एष इति ।। धृतेरिति पदमत्रानुषज्यते । अस्मिन् पक्षे सौत्रचशब्द उपलब्धेश्चेत्यन्वेति । तथा च न केवलं धृतेर्लिङ्गात्, किन्तु 'धृतेः' धृतियुक्तायास्तद्बोधिकाया उपलब्धेः वासनेयके **'य एषोऽन्तर्हृदय आकाशस्तस्मिन् शेते सर्वस्य वशी'** (बृ.६.४.२१) इत्याद्युक्त्वा आम्नातायाः **'एष सर्वेश्वर एष भूताधिपतिरेष भूतपाल एष सेतुर्विधरण एषां लोकानामसम्भेदाय'** इत्युक्तेः समानोक्तेश्च दहरे विष्णुरेवेति योजना । समाख्यायाः कुतो विष्णुपरत्वमित्यत आह – एष इति ।। इत्यादीति लुप्ततृतीयाविभक्तिको निर्देशः । आदिशब्देन **'एष सर्वस्य वशी एष सर्वस्याधिपतिरेष सर्वेश्वरः'** (बृ.६.४.२१) इति पूर्ववाक्यम् **'एष सेतुर्विधरण एषां लोकानामसम्भेदाय'** इत्युत्तरवाक्यं च गृह्यते । अत एव मध्यस्थवाक्यग्रहणं कृतम् । अस्य महिम्न इति व्यधिकरणषष्ठ्यौ । उपलब्धेरित्यावृत्तमत्रान्वेति । तथा च **'अस्मिन्'** वाजसनेयके **'एष भूताधिपतिः'** इत्यादिना वाक्येन **'अस्य'** विष्णोर्भूताधिपतित्वादिमहिम्नः **'अस्मिन्'** दहराकाशगते वस्तुनि **'उपलब्धेः'** उक्तत्वादिति योजना । य एष सर्वस्याधिपतिः, यश्चैष सर्वेश्वरो, यश्चैष प्रसिद्धो **'भूताधिपतिः'** भूत एवाधिपतिर्नास्याधिपत्यमादिमत्, यश्चैष भूत एव पालको, यश्च **'एषां'** भूरादिलोकानाम् **'असम्भेदाय'** अमेलनाय एषां **'विधरणः'** विधारणसमर्थः, न केवलं सामर्थ्यमात्रं, किन्तु य एषां लोकानां **'सेतुः'** आश्रयश्च, तमेतं भगवन्तं ब्राह्मणा विविदिषन्तीति श्रुत्यर्थः ।

अनेन – न केवलं पूर्वोक्तहेतुभ्यः, किन्तु विधृतेश्चास्मिन् प्रकरणे **'स सेतुर्विधृतिः'** इति सर्वाधारत्वलिङ्गश्रवणादपि दहरपद्मस्थो विष्णुरेव । न चास्य हृत्पद्मस्थत्वं कुत इति वाच्यम् । **'अस्य'** हृत्पद्मस्थस्य **'महिम्नः'** अपहतपाप्मत्वादेर्लक्षणस्य **'अस्मिन्'** सर्वाधारे **'सर्वे पाप्मानोऽतो निवर्तन्ते'** (छां.८.४.१) इत्यनेन **'उपलब्धेः'** उक्तत्वात् ।

**भाष्यम् –'एतस्मिन् खल्वक्षरे गार्ग्याकाश ओतश्च प्रोतश्च'(बृ.५-८-११), 'एतस्य वा अक्षरस्य प्रशासने गार्गि'(बृ.५-८-९)**

ಅನುವಾದ - 'ಎಲೈ ! ಗಾರ್ಗಿಯೇ, ಅಕ್ಷರಶಬ್ದವಾಚ್ಯನಾದ ಪರಮಾತ್ಮನ ಅನುಜ್ಞೆಯಿಂದಲೇ ಆಕಾಶವು ಅಕ್ಷರನಲ್ಲಿಯೇ ಆಶ್ರಯವನ್ನು ಪಡೆದಿದೆ'. 'ಎಲೈ ! ಗಾರ್ಗಿಯೇ, ಅಕ್ಷರತತ್ವದ ಆಜ್ಞೆಯಿಂದಲೇ ಸೂರ್ಯ, ಚಂದ್ರಾದಿಗಳು ತಮ್ಮ ತಮ್ಮ ಸ್ಥಾನದಲ್ಲಿ ನಿಂತಿದ್ದಾರೆ'.

ಪ್ರತಿಪದಾರ್ಥ -- ಸರ್ವಾಧಾರತ್ವ ಲಿಂಗವು ಕೇಳಿಸುತ್ತಿರುವುದರಿಂದ ಹೃತ್ಪದ್ಮಸ್ಥನಾದವನು ವಿಷ್ಣುವೇ ಆಗಿದ್ದಾನೆ ಎಂದು ನಿಶ್ಚಯಿಸಿದಿರಿ. ಆದರೆ ಸರ್ವಾಧಾರತ್ವವು ವಿಷ್ಣುತ್ವ ನಿಶ್ಚಾಯಕವೆಂದು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಹೇ ! ಗಾರ್ಗಿ = ಎಲೈ ಗಾರ್ಗಿಯೇ !, ಏತಸ್ಯ ವಾ ಅಕ್ಷರಸ್ಯ = ಈ ಪ್ರಸಿದ್ಧವಾದ ಅಕ್ಷರನೆನಿಸಿದ ಪರಮಾತ್ಮನ, ಪ್ರಶಾಸನೇ = ಆಜ್ಞೆಯಿಂದಲೇ, ಆಕಾಶಃ = ಆಕಾಶವು, ಏತಸ್ಮಿನ್ ಅಕ್ಷರೇ = ಈ ಅಕ್ಷರತತ್ವದಲಿ, ಓತಶ್ಚ ಪ್ರೋತಶ್ಚ = ಹಾಸುಹೊಕ್ಕಾಗಿ ಸರ್ವತ್ರ ವ್ಯಾಪಿಸಿಕೊಂಡಿದೆ.(१)

**भाष्यम् –'स हि सर्वाधिपतिः स हि सर्वपालः स ईशः स विष्णुः', 'पतिं विश्वस्याऽत्मेश्वरम्' (महाना.११) इत्यादिश्रुतिभ्यस्तस्य ह्येष महिमा।**

ಅನುವಾದ - ಅಂತಹ ವಿಷ್ಣುವೇ ಸಕಲ ಸಲ್ಲೋಕ ಪಾಲಕನು, ಎಲ್ಲರಿಗೂ ಒಡೆಯನು, ಅವನೇ ಸ್ವಾಮಿಯು, ಅವನೇ ವ್ಯಾಪ್ತನು ಅಚೇತನವರ್ಗಕ್ಕೆ ಒಡೆಯನಾದ, ಚೇತನರಿಗೂ ಒಡೆಯನಾದ

---

न केवलं धृतेर्लिङ्गात्, किन्तु धृतेर्धृतियुक्ताया उपलब्धेरुक्तेः । **'य एषोऽन्तर्हृदय आकाशस्तस्मिन् शेते .. एष सेतुर्विधरणः'** इति वाजसनेयसमाख्यायाश्च दहरे विष्णुरेव। समाख्याया अपि कुतो विष्णुविषयत्वम् **'अस्मिन्'** वाजसनेयके **'अस्य'** विष्णोः **'महिम्नो'** भूताधिपतित्वादेरुक्तत्वादिति सूत्रार्थ उक्तो भवति । यद्यपि **'अस्य महिम्नः'** इत्याद्यंशो भाष्ये धृतेश्चेत्यस्य लिङ्गपरतया योजनायां नान्वितः । तथाऽपि टीकायां **'सर्वे पाप्मानोऽतः'** इति तल्लक्षणोक्तेश्चेत्युक्तत्वाल्लिङ्गस्य हृत्पद्मस्थत्वरूप-पक्षधर्मोपपादकतयाऽपि योजनीयः ।

(१) भाष्यदीपिका – यदुक्तं सर्वाधारत्वलिङ्गश्रवणाद् हृत्पद्मस्थो विष्णुरिति, तत्र सर्वाधारत्वं कुतो विष्णुत्वनिश्चायकं, तत्समानाधिकरणत्वेनासिद्धत्वादित्यत आह - एतस्मिन्निति ।। **'एतस्य वा अक्षरस्य प्रशासने'** इति प्रतीकग्रहणेन **'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः, एतस्य वा अक्षरस्य प्रशासने गार्गि द्यावापृथिव्यौ'** इत्यादिबहुवाक्यानि सूचयति । इमान्यक्षरनये व्याकृतानि ।

ಇಂತಹ ನಾರಾಯಣನನ್ನು, ಜಗತ್ತು ಆಶ್ರಯಿಸಿದೆ. ಇವೇ ಮೊದಲಾದ ಸ್ಥಿತಿಗಳಿಂದ ಲೋಕಾಧಾರತ್ವಾದಿಗುಣಗಳು, ವಿಷ್ಣುವಿನದ್ದೇ ಆಗಿವೆಯೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಸಮಾಖ್ಯಾಶ್ರುತಿಯಿಂದ ತಿಳಿಯಲ್ಪಟ್ಟ ಸರ್ವೇಶ್ವರತ್ವಾದಿ ಮಹಿಮೆಗಳು, ವಿಷ್ಣುತ್ವನಿಶ್ಚಾಯಕವೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ,

ಸ ಹಿ = ಅಂತಹ ಅಕ್ಷರನೇ, ಸರ್ವಾಧಿಪತಿಃ = ಎಲ್ಲರಿಗೂ ಒಡೆಯನು, ಸ ಹಿ ಸರ್ವಪಾಲಃ = ಅವನೇ ಸಕಲರಿಗೂ ರಕ್ಷಕನು, ಸ ಈಶಃ = ಅವನೇ ಸಕಲ ನಿಯಾಮಕನು, ಸಃ = ಅಂತಹವನು, ವಿಷ್ಣುಃ = ವ್ಯಾಪ್ತನು, ವಿಶ್ವಸ್ಯ = ಜಗತ್ತಿಗೆ, ಪತಿಂ = ಒಡೆಯನನ್ನಾಗಿ, ಆತ್ಮೇಶ್ವರಂ = ಸ್ವಾಮಿಯನ್ನಾಗಿ ಹಾಗೂ ಮಂಗಳಕರನನ್ನಾಗಿ, ಇತ್ಯಾದಿ = ಇವೇ ಮೊದಲಾದ, ಶ್ರುತಿಭ್ಯಃ = ವೇದಗಳ ದೆಸೆಯಿಂದ, ಏಷ ಮಹಿಮಾ = ಈ ಸರ್ವೇಶ್ವರತ್ವ ಮಹಿಮೆಯು, ತಸ್ಯ ಹಿ = ಆ ವಿಷ್ಣುವಿನದ್ದೇ ಎಂದು ಸುಪ್ರಸಿದ್ಧ.[१]

**भाष्यम् – 'सर्वेशो विष्णुरेवैको नान्योऽस्ति जगतः पतिः ।' इति च स्कान्दे ॥**

ಅನುವಾದ - ಸರ್ವೇಶ್ವರನಾದವನು ವಿಷ್ಣು ಒಬ್ಬನೇ ಆಗಿದ್ದಾನೆ. ಅವನನ್ನು ಬಿಟ್ಟು ಇನ್ಯಾರೂ ಸಹ ಈ ಜಗತ್ತಿಗೆ ಒಡೆಯರಾಗಲು ಸಾಧ್ಯವಿಲ್ಲ ಎಂದು ಸ್ಕಾಂದಪುರಾಣವು ಹೇಳುತ್ತಿದೆ.

ಪ್ರತಿಪದಾರ್ಥ -- ಸರ್ವೇಶ್ವರತ್ವಾದಿಗಳು ವಿಷ್ಣುವಿನಂತೆ ಬೇರೆಯವರಲ್ಲೂ ಇರಬಹುದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಸರ್ವೇಶೋ = ಎಲ್ಲರಿಗೂ ಒಡೆಯನಾದವನು, ವಿಷ್ಣುರೇವೈಕಃ = ವಿಷ್ಣು ಒಬ್ಬನೇ ಆಗಿದ್ದಾನೆ, ಅನ್ಯಃ = ಮತ್ತೊಬ್ಬನು, ಜಗತಃ = ಜಗತ್ತಿಗೆ, ಪತಿಃ = ಒಡೆಯನು, ನಾಸ್ತಿ = ಇರುವುದಿಲ್ಲ, ಇತಿ ಚ = ಹೀಗೂ ಸಹ, ಸ್ಕಾಂದೇ = ಸ್ಕಾಂದ ಪುರಾಣದಲ್ಲಿ ಹೇಳಲ್ಪಟ್ಟಿದೆ.[२]

---

(१) **भाष्यदीपिका** – ननु समाख्याश्रुत्युक्तः सर्वेश्वरत्वादिमहिमा कुतो विष्णोरवगत इत्यत आह – स हीति ॥ 'स हि' इत्यारभ्य 'स विष्णुः' इत्यन्तमेकं वाक्यं श्रुत्यन्तरगतम् । 'सः' प्रकृतः । 'हिः' प्रसिद्धौ । 'पतिं विश्वस्य' इति नारायणानुवाकस्थं वाक्यम् । 'विश्वस्य' अचेतनप्रपञ्चस्य पतिं 'आत्मेश्वरं' चेतनेश्वरं नारायणं तद्विश्वमुपजीवतीत्यर्थः । इत्यादीति । एवमादिश्रुतिवाक्येभ्य इत्यर्थः । आदिशब्देनैतज्जातीयं गृह्यते । तृतीयार्थे पञ्चमी । 'तस्य' विष्णोः 'हिः' प्रसिद्धौ हेतौ वा । 'एष सर्वेश्वरः' (बृ.६.४.२२) इत्यादिमहिमा । अवगत इति शेषः । तस्मान्नैतेषां विष्णुत्वरूपसाध्यसामानाधिकरण्यासिद्धिरिति वाक्यशेषः ।

(२) **भाष्यदीपिका** – ननु सर्वेश्वरत्वादिकं विष्णुवदन्यस्यापि किं न स्यादित्यत आह – **सर्वेश इति** ॥ अत्र सर्वजगच्छब्दौ चेतनाचेतनप्रपञ्चपरौ । यद्वा – जगतः पतिरिति प्रतियोगित्वेनैवोक्तस्यानुवादः । अथवा – 'पतिः' पालकः । तथा च सर्वेश्वरः सर्वपालकश्च विष्णुरेक एव नान्योऽस्तीत्यर्थः । इति स्कान्द इत्यस्य एवकारोक्तपदाध्याहारेण तस्य ह्येष

**श्रीपद्मनाभतीर्थविरचितसत्तर्कदीपावळिः**

**ॐ धृतेश्च महिम्नोऽस्यास्मिन्नुपलब्धेः ॐ ॥ १-२-२४ ॥**

**धृतेरित्यादेरयमर्थः । द्यावापृथिव्याधारं प्रकृत्य 'स सेतुर्विधृतिरेषां लोकानाम्' इति श्रूयमाणत्वादप्यसौ विष्णुरेव न दहर आकाशः ।**

'ಧೃತೇಶ್ಚ' ಇತ್ಯಾದಿ ಸೂತ್ರದ ಅರ್ಥ ಹೀಗಿದೆ - ದ್ಯಾವಾಪೃಥಿವ್ಯಾದಿಗಳಿಗೆ ಆಧಾರನಾದವನ ಬಗ್ಗೆ ಪ್ರಸ್ತುತವಾದಾಗ, 'ಸ ಸೇತುರ್ವಿಧೃತಿರೇಷಾಂ ಲೋಕಾನಾಮ್' ಎಂಬ ವಾಕ್ಯವು ಶ್ರುತವಾಗಿದೆ. ಆದ್ದರಿಂದ ವಿಷ್ಣುವೇ ಹೃತ್ಪದ್ಮಸ್ಥನು ಹೊರತು ದಹಾರಾಕಾಶವಲ್ಲ.

**तत् स्थितपुरुष एव हि जगद्धारणादिमहिमा श्रुत्यन्तरोपलब्धः ।**

ದಹಾರಾಕಾಶದಲ್ಲಿರುವ ಪುರುಷನೇ ಸಮಸ್ತ ಜಗತ್ತನ್ನು ಧಾರಣೆ ಮಾಡಿದ್ದಾನೆಂಬ ಮಹಿಮೆಯು ಬೇರೆ ಶ್ರುತಿಯಲ್ಲಿಯೂ ಹೇಳಲ್ಪಟ್ಟಿದೆ.

**'स एषोऽन्तर्हृदय आकाशस्तस्मिंश्छेते । एष भूताधिपतिरेष भूतपालः एष सेतुर्विधारण एष लोकानामसम्भेदाय' इति विष्णोरेवायं महिमेत्येतच्छ्रुत्यन्तरैः साधयति – एतस्मिन्नित्यादिना ॥**

'ಸ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್‌ಶೇತೇ । ಏಷ ಭೂತಾಧಿಪತಿರೇಷ ಭೂತಪಾಲಃ ಏಷ ಸೇತುರ್ವಿಧಾರಣ ಏಷ ಲೋಕಾನಾಮಸಂಭೇದಾಯ' ಇತ್ಯಾದಿಯಾಗಿ ವಿಷ್ಣುವೇ ಸಕಲ ಧಾರಕನಾಗಿದ್ದಾನೆಂದು ವಿಷ್ಣುವಿನ ಮಹಿಮೆಯನ್ನು ಬೇರೆ ಶ್ರುತಿಗಳಿಂದ ಸಾಧನೆ ಮಾಡುತ್ತಿದ್ದಾರೆ, 'ಏತಸ್ಮಿನ್' ಇತ್ಯಾದಿ ವಾಕ್ಯಗಳಿಂದ.

**तत्वप्रकाशिका –**

**ॐ धृतेश्च महिम्नोऽस्यास्मिन्नुपलब्धेः ॐ ॥ १-२-२४ ॥**

**हेत्वन्तरेण विष्णोः हृत्पद्मस्थत्वं प्रतिपादयत् सूत्रमुपन्यस्य व्याचष्टे – धृतेश्चेति ॥**

महिमेति पूर्वेणान्वयः । तस्मान्नैतल्लिङ्गानामन्यत्र सावकाशत्वं शङ्क्यमिति वाक्यशेषः ।

ಮತ್ತೊಂದು ಹೇತುವಿನಿಂದ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂಬುದನ್ನು ಪ್ರತಿಪಾದನೆ ಮಾಡುವಂತಹ ಸೂತ್ರವನ್ನು ಪಠಿಸಿ, ವ್ಯಾಖ್ಯಾನ ಮಾಡುತ್ತಿದ್ದಾರೆ 'ಧೃತೇಶ್ಚ' ಇತ್ಯಾದಿಯಾಗಿ.

**तत्वप्रकाशिका – 'अथ य आत्मा स सेतुर्विधृतिरेषां लोकानामसम्भेदाय' इति हृत्पद्मस्थस्य सर्वाधारत्वश्रवणाच्च विष्णुरेवासावित्यर्थः ।**

'ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ' 'ಹೃತ್ಪದ್ಮಸ್ಥನಾದ ಪರಮಾತ್ಮನೇ ನಾಶವಾಗಬಾರದೆಂಬ ಕಾರಣದಿಂದ, ಭೂಲೋಕಾದಿಗಳನ್ನು ಧಾರಣೆ ಮಾಡಿ, ಪೋಷಣೆ ಮಾಡುತ್ತಿದ್ದಾನೆ. ಆದ್ದರಿಂದಲೇ ಸರ್ವಾಶ್ರಯನಾಗಿದ್ದಾನೆ'. ಹೀಗೆ ಹೃತ್ಪದ್ಮಸ್ಥನಲ್ಲಿ ಸರ್ವಾಧಾರತ್ವಧರ್ಮವು ಹೇಳಲ್ಪಟ್ಟಿದ್ದರಿಂದ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂದು ತಿಳಿಯುತ್ತದೆ.

**तत्वप्रकाशिका – अत्र स सेतुरिति वक्तव्ये एष सेतुरित्युक्तिः शाखान्तराणामप्यत्रोपसङ्ग्रहार्थम् । एवमन्यत्रापीति सम्प्रदायविदः ।।**

ಇಲ್ಲಿ 'ಸೇತುಃ' ಎಂಬ ಶ್ರುತಿಯನ್ನು ಹೇಳುವ ಬದಲು, 'ಏಷ ಸೇತುಃ' ಎಂದು ಏಕೆ ಹೇಳಿದ್ದಾರೆಂದರೆ? ಬೇರೆ ಶಾಖಾದಲ್ಲಿ ಇದಕ್ಕೆ ಸಮಾಖ್ಯಾಪ್ರಮಾಣವಿದೆ, ಅವುಗಳನ್ನೂ ಸಂಗ್ರಹಿಸಬೇಕೆಂಬ ಉದ್ದೇಶದಿಂದ. ಹೀಗೆ ಬೇರೆಕಡೆಯೂ ತಿಳಿಯಬೇಕೆಂದು ಸಂಪ್ರದಾಯಜ್ಞಾನಿಗಳು ಹೇಳಿದ್ದಾರೆ.

**तत्वप्रकाशिका – विधृतिः सेतुरिति धारणसमर्थ आश्रयः । नच वाच्यमयं न हृत्पद्मस्थ इति । 'य आत्मा' इति प्रागुक्तात्मपरामर्शात् 'सर्वे पाप्मानोऽतो निवर्तन्ते' इति तल्लक्षणत्वोक्तेश्च ।**

ಪ್ರತಿಪದಾರ್ಥ -- ವಿಧೃತಿಃ = ಸಕಲವನ್ನು ಧರಿಸಲು ಸಮರ್ಥನು, ಸೇತುಃ = ಆಶ್ರಯನು, 'ಏಷ ಸೇತುಃ' ಎಂಬಲ್ಲಿ ಪ್ರತಿಪಾದ್ಯನಾದವನು, ಹೃತ್ಪದ್ಮಸ್ಥನು ಅಲ್ಲವೆಂದು ಶಂಕಿಸಬಾರದು ಏಕೆಂದರೆ, 'ಯ ಆತ್ಮಾ' ಎಂದು ಹಿಂದೆ ಹೇಳಲ್ಪಟ್ಟ ಆತ್ಮನ ಪರಾಮರ್ಶವನ್ನು ಮಾಡಿ 'ಸರ್ವೇ ಪಾಪ್ಮಾನೋಽತೋ ನಿವರ್ತಂತೇ', 'ಇವನಿಂದ ಸಕಲ ಪಾಪಗಳು ಹಿಂತಿರುಗುತ್ತವೆ' ಎಂಬುದಾಗಿ ವಿಷ್ಣುವಿನ ಲಕ್ಷಣವನ್ನು ಹೇಳಲಾಗಿದೆ.

**तत्वप्रकाशिका – समाख्ययाऽप्येतमर्थं साधयति – एष इति ।।**

'ಸಮಾಖ್ಯಾ' ರೂಪವಾದ ಶ್ರುತಿಪ್ರಮಾಣದಿಂದಲೂ ಹೃತ್ಪದ್ಮಸ್ಥನಾದವನು ವಿಷ್ಣುವೇ ಆಗಿದ್ದಾನೆಂದು ಸಮರ್ಥನೆ ಮಾಡುತ್ತಿದ್ದಾರೆ 'ಏಷಃ' ಇತ್ಯಾದಿಯಾಗಿ.

**तत्वप्रकाशिका – वाजसनेयके 'य एषोऽन्तर्हृदय आकाशस्तस्मिन् शेते सर्वस्य वशी' इत्याद्युक्त्वा 'एष सर्वेश्वर एष भूताधिपतिरेष भूतपाल एष सेतुर्विधारणः' 'एषां लोकानामसम्भेदाय' इत्यादिना हृदये विष्णोरुक्तत्वेन तत्समाख्यानादत्राप्युक्तो विष्णुरेव ।**

ಬೃಹದಾರಣ್ಯಕೋಪನಿಷತ್ತಿನಲ್ಲಿ, 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿಂನ್ ಶೇತೇ ಸರ್ವಸ್ಯ ವಶೀ' - 'ಪರಮಾತ್ಮನು ಬೇರೆ ಆಕಾಶದಲ್ಲಿರುತ್ತಾನೆ, ಎಲ್ಲವೂ ಅವನ ವಶವಾಗಿದೆ' ಎಂದು ಹೇಳಿ ಮುಂದೆ 'ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧಾರಣಃ', 'ಏಷಾಂ ಲೋಕಾನಾಮಸಂಭೇದಾಯ', 'ಇವನೇ ಭೂತಾಧಿಪತಿಯು ಭೂತಪಾಲನು, ಭೂಲೋಕಾದಿಗಳ ರಕ್ಷಣೆಗಾಗಿ, ಅವುಗಳನ್ನು ಧಾರಣೆ ಮಾಡಿದವನು' ಇತ್ಯಾದಿಯಾಗಿ ಹೃದಯದಲ್ಲಿ ವಿಷ್ಣುವೇ ಇದ್ದಾನೆಂದು ಹೇಳಲಾಗಿದೆ. ಈ ಸಮಾಖ್ಯಾಪ್ರಮಾಣದ ಬಲದಿಂದ ಛಾಂದೋಗ್ಯದಲ್ಲಿ 'ಅಥ ಯ ಆತ್ಮಾ ಸ ಸೇತುರ್ವಿಧೃತಿಃ' ಎಂಬಲ್ಲಿಯೂ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ನಿಶ್ಚಯವಾಗುತ್ತದೆ.

**तत्वप्रकाशिका – नच वाच्यं समाख्याश्रुत्युक्तोऽपि कुतो विष्णुरिति । अस्मिन् सर्वेश्वरत्वादिविष्णुमहिम्नः श्रवणादेवेति भावः ।**

ಸಮಾಖ್ಯಾಶ್ರುತಿ ಪ್ರತಿಪಾದ್ಯನಾದರೂ ವಿಷ್ಣುವೇ ಆಗಿದ್ದಾನೆಂದು ನಿಶ್ಚಯಿಸಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. ಏಕೆಂದರೆ ವಿಷ್ಣುವಿನ ಅಸಾಧಾರಣಧರ್ಮವೆನಿಸಿದ ಸರ್ವೇಶ್ವರತ್ವವೇ ಮೊದಲಾದ ಮಹಿಮೆಗಳು ಶ್ರುತವಾದ್ದರಿಂದ ಎಂದು ತಿಳಿಯಬೇಕು.

**तत्वप्रकाशिका – यदुक्तं हृत्पद्मस्थस्य सर्वाधारत्वश्रवणात् विष्णुरसाविति । तत्र सर्वाधारत्वं कुतो विष्णुत्वनिश्चायकमित्यत आह – एतस्मिन्निति ।।**

ಹೃತ್ಪದ್ಮಸ್ಥನಲ್ಲಿ ಸರ್ವಾಧಾರತ್ವ ಧರ್ಮವು ಶ್ರುತವಾದ್ದರಿಂದ ವಿಷ್ಣುವೇ ಹೃತ್ಪದ್ಮಸ್ಥನೆಂದು ಹೇಳಿದಿರಿ, ಆದರೆ ಸರ್ವಾಧಾರತ್ವವು ವಿಷ್ಣುವಿನ ಅಸಾಧಾರಣಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಏತಸ್ಮಿನ್' ಎಂಬ ಶ್ರುತಿವಾಕ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – एतस्येति प्रतीकग्रहणेन बहुवाक्यानि सूचयति ।**

ಭಾಷ್ಯಕಾರರು 'ಏತಸ್ಯ ಅಕ್ಷರಸ್ಯ' ಎಂಬ ಶ್ರುತಿಯಲ್ಲಿರುವ 'ಏತಸ್ಯ' ಎಂಬ ಪದದ ಪ್ರತೀಕವನ್ನು ಸ್ವೀಕರಿಸಿದ್ದರಿಂದ ಅನೇಕ ಶ್ರುತಿವಾಕ್ಯಗಳನ್ನು ಸಂಗ್ರಹಿಸಿದ್ದಾರೆ.

**तत्वप्रकाशिका – ननु समाख्याश्रुत्युक्तः सर्वेश्वरत्वादिमहिमा कुतो विष्णुरित्यत आह – स हीति ।।**

ಸಮಾಖ್ಯಾಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವೇಶ್ವರತ್ವಾದಿ ಧರ್ಮಗಳೆಲ್ಲವೂ ವಿಷ್ಣುವಿನ ಮಹಿಮೆಯಾಗಿದೆ ಎಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಸಹಿ' ಇತ್ಯಾದಿ ಭಾಷ್ಯದ ಮಾತಿನಿಂದ ಉತ್ತರಿಸಿದ್ದಾರೆ.

**तत्वप्रकाशिका – विश्वमचेतनम् । विष्णोरिव अन्यस्यापि महिमा किं न स्यादित्यत आह – सर्वेश इति ।।**

ವಿಶ್ವಂ = ಅಚೇತನಪದಾರ್ಥ, ಸರ್ವೇಶ್ವರತ್ವವೇ ಮೊದಲಾದ ಧರ್ಮಗಳು ವಿಷ್ಣುವಿನಲ್ಲಿರುವಂತೆ ಬೇರೆಯವರಲ್ಲಿ ಏಕಿರಬಾರದು? ಎಂಬ ಪ್ರಶ್ನೆಗೆ 'ಸರ್ವೇಶ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**भावदीपः –**

**ॐ धृतेश्च महिम्नोऽस्यास्मिन्नुपलब्धेः ॐ ।।**

**हेत्वन्तरेणेति ।।** सूत्रे ''च'' शब्दादिति भावः । भाष्ये वाजसनेयवाक्यप्रतीकपूर्वम् अत्रत्यवाक्यस्योक्तेर्भावमग्रे विवृण्वानः स्वयमेतत्प्रकरणस्थछान्दोग्यवाक्यमुदाहृत्य ''धृतेः'' इत्यन्तभाष्यं व्याकुर्वन् 'धृतेश्च' इति सूत्रांशार्थमाह – **अथ य इति ।।**

ಟೀಕೆಯಲ್ಲಿ ಮತ್ತೊಂದು ಹೇತುವಿನಿಂದ ಹೃತ್ಪದ್ಮಸ್ಥಿತತ್ವ ಲಿಂಗವನ್ನು ವಿಷ್ಣುವಿನಲ್ಲಿ ಸಮರ್ಥಿಸಲಾಗಿದೆ ಎಂದು ಹೇಳಿದ್ದಾರೆ. ಸೂತ್ರದಲ್ಲಿರುವ ''ಚ'' ಶಬ್ದದ ಅರ್ಥವನ್ನೇ ಟೀಕೆಯಲ್ಲಿ ''ಹೇತ್ವಂತರೇಣ'' ಎಂಬ ಪದದಿಂದ ವ್ಯಾಖ್ಯಾನ ಮಾಡಿದ್ದಾರೆ.

ಭಾಷ್ಯದಲ್ಲಿ ಬೃಹದಾರಣ್ಯಕೋಪನಿಷತ್ತಿನ ವಾಕ್ಯದ ಪ್ರತೀಕಗ್ರಹಣ ಮಾಡುವ ಮೂಲಕ ಪ್ರಕೃತ ಛಾಂದೋಗ್ಯದ ವಾಕ್ಯವನ್ನು ಹೇಳಿದ್ದಾರೆ. ಇದಕ್ಕೆ ಕಾರಣವನ್ನು ಟೀಕಾಕಾರರು ಮುಂದೆ ವಿವರಿಸುತ್ತಾರೆ. ಈಗ ಛಾಂದೋಗ್ಯಪ್ರಕರಣದಲ್ಲಿರುವ ವಾಕ್ಯವನ್ನು ಸ್ವತಃ ತಾವೇ ಉದಾಹರಿಸಿ ''ಧೃತೇಃ'' ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಾ, 'ಧೃತೇಶ್ಚ' ಎಂಬ ಸೂತ್ರದ ಭಾಗವನ್ನೂ ಕೂಡ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅಥ ಯಃ' ಇತ್ಯಾದಿ ಮಾತುಗಳಿಂದ.

**भावदीपः – भाष्यभावमाह – अत्रेति ।। उपसङ्ग्रहार्थमिति ।।** विवरिष्यते चैतदग्रे ।। **एवमन्यत्रापीति ।।** 'अत एव प्राणः' इत्यत्र 'ह्रीश्च ते' इति वक्तव्ये 'श्रीश्च ते' इत्युक्तिः । तथा 'पत्यादिशब्देभ्यः' इत्यत्र 'सर्वस्य वशी सर्वस्येशानः' इत्येव वक्तव्ये ''सर्वस्याधिपतिः'' इत्युक्तिः । अत्रैव ''अस्मिन् ब्रह्मपुरे'' इति वाच्येऽप्येतस्मिन्निति वाक्योक्तिः ।

ಭಾಷ್ಯದ ಅಭಿಪ್ರಾಯವನ್ನು 'ಅತ್ರ' ಇತ್ಯಾದಿ ಮಾತುಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ. ''ಉಪಸಂಗ್ರಹಾರ್ಥಂ'' ಎಂಬ ವಾಕ್ಯದ ಅರ್ಥವನ್ನು ಮುಂದೆ ಸ್ಪಷ್ಟಪಡಿಸಲಾಗುತ್ತದೆ. ''ಏವಮನ್ಯತ್ರಾಪಿ'' ಎಂದರೆ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ 'ಹ್ರೀಶ್ಚ ತೇ'' ಎಂದು ಹೇಳುವ ಬದಲು 'ಶ್ರೀಶ್ಚ ತೇ' ಎಂದು ಹೇಳಿದ್ದಾರೋ ಅದರಂತೆ 'ಪತ್ಯಾದಿಶಬ್ದೇಭ್ಯಃ' ಎಂಬಲ್ಲಿ 'ಸರ್ವಸ್ಯ ವಶೀ ಸರ್ವಸ್ಯೇಶಾನಃ' ಎಂದು ಹೇಳುವ ಬದಲು 'ಸರ್ವಸ್ಯಾಧಿಪತಿಃ' ಎಂದು ಹೇಗೆ ಹೇಳಿದ್ದಾರೋ ಅದರಂತೆ ಇಲ್ಲಿ 'ಅಸ್ಮಿನ್ ಬ್ರಹ್ಮಪುರೇ' ಎಂದು ಹೇಳುವ ಬದಲು 'ಏತಸ್ಮಿನ್' ಎಂಬ ವಾಕ್ಯವನ್ನು ಹೇಳಿದ್ದಾರೆ.

**भावदीपः** – समानजातीयानां श्रुत्यन्तराणां सङ्ग्रहोपलक्षणार्थमेतदित्यादि तत्त्वप्रदीपोक्तेः ''सम्प्रदायविदः'' इत्युक्तम् । अपौनरुक्त्यायाऽह – **धारणसमर्थ इति ।।**

ಒಂದೇ ತರಹ ಇರುವ ಬೇರೆ ಶ್ರುತಿಗಳನ್ನು ಉಪಲಕ್ಷಣಯಾ ಸಂಗ್ರಹ ಮಾಡಬೇಕೆಂದು ಹೀಗೆ ಹೇಳಿದ್ದಾರೆಂದು ತತ್ವಪ್ರದೀಪದಲ್ಲಿ ಸಮರ್ಥಿಸಿದ್ದಾರೆ. ತತ್ವಪ್ರದೀಪಕಾರರ ಈ ವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು ಟೀಕೆಯಲ್ಲಿ 'ಸಂಪ್ರದಾಯವಿದಃ' ಎಂದು ಹೇಳಿದ್ದಾರೆ. ಪುನರುಕ್ತಿದೋಷವನ್ನು ಪರಿಹರಿಸಲು ''ಧಾರಣಸಮರ್ಥ'' ಎಂಬ ಪದವು ಪ್ರಯುಕ್ತವಾಗಿದೆ.

**भावदीपः – सूत्रखण्डमवतार्य व्याचष्टे – नचेति ।।** अस्य हृत्पद्मस्थस्य अस्मिन् ''स सेतुः'' इति वाक्ये अपहतपाप्मत्वरूपमहिम्न उपलब्धेः इत्यर्थम् उपेत्य आऽह – **य आत्मेति ।।** भाष्ये ''एष भूत'' इत्यादि वाजसनेयवाक्यशेषोक्तिः ''सर्वे पाप्मानः'' इति छान्दोग्यवाक्यशेषस्याप्युपलक्षणमिति भावः ।

ಸೂತ್ರಖಂಡವನ್ನು ಅನುವಾದ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ನಚ' ಇತ್ಯಾದಿ ವಾಕ್ಯದಿಂದ. 'ಅಸ್ಯ' ಎಂಬ ಪದಕ್ಕೆ ಹೃತ್ಪದ್ಮನಿಗೆ ಎಂದರ್ಥ. ಇವನಲ್ಲಿ 'ಸ ಸೇತುಃ' ಎಂಬ ವಾಕ್ಯದಲ್ಲಿ ಅಪಹತಪಾಪ್ಮತ್ವಾದಿ ಮಹಿಮೆಗಳನ್ನು ಹೇಳಿರುವುದರಿಂದ ಎಂಬುದನ್ನು ಅಂಗೀಕರಿಸಿ 'ಯ ಆತ್ಮಾ' ಇತ್ಯಾದಿ ವಾಕ್ಯಗಳು ಹೊರಟವೆ. ಭಾಷ್ಯದಲ್ಲಿ 'ಏಷ ಭೂತ' ಇತ್ಯಾದಿ ಬೃಹದಾರಣ್ಯಕದ ವಾಕ್ಯಶೇಷವನ್ನು ಹೇಳಿದ್ದರಿಂದ 'ಸರ್ವೇ ಪಾಪ್ಮಾನಃ' ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯಶೇಷವನ್ನೂ ಕೂಡ ಉಪಲಕ್ಷಣಯಾ ಸ್ವೀಕರಿಸಬೇಕು.

**भावदीपः** – इदानीं सूत्रस्यार्थान्तरोक्तिपरतया भाष्यमवतार्य धृतेरित्यन्तं तात्पर्यतो व्याचष्टे – **समाख्ययेति** ।। **वाजसनेयक इति** ।। षष्ठेऽध्याये । भाष्ये 'एष सेतुः' इति प्रतीकमात्रोक्तेः स्वयं समग्रं पठति – **य एष इति** ।।

ಈಗ ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಹೇಳುವ ಮೂಲಕ ಭಾಷ್ಯಕ್ಕೆ ಅವತಾರಿಕೆ ನೀಡಿ 'ಧೃತೇಃ' ಎಂಬಲ್ಲಿಯ ತನಕ ಇರುವ ತಾತ್ಪರ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಸಮಾಖ್ಯಯಾ' ಇತ್ಯಾದಿ ವಾಕ್ಯಗಳಿಂದ. 'ವಾಜಸನೇಯಕೇ' ಎಂದು ಬೃಹದಾರಣ್ಯಕದ ಆರನೆಯ ಅಧ್ಯಾಯದಲ್ಲಿ ಎಂದರ್ಥ. ಭಾಷ್ಯದಲ್ಲಿ 'ಏಷ ಸೇತುಃ' ಎಂದಷ್ಟೇ ಪ್ರತೀಕಗ್ರಹಣ ಮಾಡಿದ್ದರಿಂದ ಟೀಕಾಕಾರರು ಸಮಗ್ರವಾಕ್ಯವನ್ನು ಪಠಿಸುತ್ತಿದ್ದಾರೆ 'ಯ ಏಷಃ' ಇತ್ಯಾದಿಯಾಗಿ.

**भावदीपः** – हृत्पद्मस्थत्वस्य तत्स्थाकाशस्थत्वेनैव इह अभिमतत्वाद् हृदये विष्णोरुक्तत्वेनेत्युक्तम् । ''एष भूत'' इत्यादि भाष्यशेषमवतार्य व्याचष्टे – **नच वाच्यमिति** ।। भाष्ये ''इत्यादि'' इति क्रियाविशेषणम् । सान्तमहत इत्यादाविवाविभक्तिकनिर्देशो वेति भावः ।।

'ಹೃತ್ಪದ್ಮಸ್ಥತ್ವ' ಎಂದರೆ ಹೃದಯಪದ್ಮದಲ್ಲಿರುವ ಆಕಾಶದಲ್ಲಿರುವಿಕೆ ಎಂಬ ಅರ್ಥವು ಇಲ್ಲಿ ವಿವಕ್ಷಿತವಾಗಿರುವುದರಿಂದ 'ಹೃದಯೇ ವಿಷ್ಣೋರುಕ್ತತ್ವೇನ' ಎಂದು ಹೇಳಿದ್ದಾರೆ. 'ಏಷ ಭೂತಃ' ಇತ್ಯಾದಿ ಭಾಷ್ಯದ ಶೇಷವನ್ನು ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ನಚ ವಾಚ್ಯಂ' ಇತ್ಯಾದಿ ವಾಕ್ಯಗಳಿಂದ. ಭಾಷ್ಯದಲ್ಲಿ 'ಇತ್ಯಾದಿ' ಎಂಬುದು ಕ್ರಿಯಾವಿಶೇಷಣವಾಗಿದೆ. ಅಥವಾ 'ಸಾಂತಮಹತಃ' ಇತ್ಯಾದಿ ಸ್ಥಳಗಳಲ್ಲಿ ಹೇಗೋ ಹಾಗೆ ವಿಭಕ್ತಿ ಇಲ್ಲದ ಪದವಾಗಿದೆ ಎಂದು ತಿಳಿಯಬೇಕು.

**भावदीपः** – **यदुक्तमिति** ।। 'स सेतुर्विधृतिः' इति वाक्यग्राहिणा धृतेश्चेति सूत्रखण्डेनेत्यर्थः ।। **एतस्मिन्नितीति** ।।

भाष्ये आकाश इति सर्वाधारतयोक्तचित्प्रकृतिरित्यर्थः ।। **प्रतीकेति** ।। 'एतस्य वा अक्षरस्य प्रशासने गार्गि सूर्याचन्द्रमसौ' 'एतस्य वा अक्षरस्य प्रशासने गार्गि द्यावापृथिव्यौ' इत्यादीनि बहुवाक्यानि सूचयतीत्यर्थः ।

'ಯದುಕ್ತಂ' ಎಂದರೆ 'ಸ ಸೇತುರ್ವಿಧೃತಿಃ' ಎಂಬ ವಾಕ್ಯವನ್ನು ವಿವಕ್ಷಿಸುವ 'ಧೃತೇಶ್ಚ' ಎಂಬ ಸೂತ್ರದ ಭಾಗದಿಂದ ಎಂದರ್ಥ. 'ಏತಸ್ಮಿನ್' ಎಂದರೆ ಭಾಷ್ಯದಲ್ಲಿ ಆಕಾಶ ಪದದಿಂದ ಸರ್ವಾಧಾರವಾದ ಚಿತ್‌ಪ್ರಕೃತಿ ಎಂದರ್ಥ.

ಭಾಷ್ಯದಲ್ಲಿ 'ಏತಸ್ಯ' ಎಂಬ ಪ್ರತೀಕದಿಂದ 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯ-ಚಂದ್ರಮಸೌ' ಎಂಬ ವಾಕ್ಯವನ್ನು ಮತ್ತು 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ' ಇವೇ ಮೊದಲಾದ ಅನೇಕ ವಾಕ್ಯಗಳು ವಿವಕ್ಷಿತವಾಗಿದೆ ಎಂದು ಸೂಚನೆ ಮಾಡಿದ್ದಾರೆ.

**भावदीपः** – 'आत्मेश्वरम्' इत्यस्यावैय्यर्थ्यायाऽह – **विश्वमचेतनमिति** ।। 'आत्मा चेतन' इति भावः । 'नारायणं महाज्ञेयम्' इत्यग्रे नारायणपद सामानाधिकरण्याद् वैष्णवत्वमस्य सिद्धमिति भावः ।। १६ ।।

'ಆತ್ಮ' 'ಈಶ್ವರಂ' ಎಂಬೆರಡು ಪದಗಳಿಗೆ ವೈಯ್ಯರ್ಥ್ಯ ಬರಬಾರದೆಂದು 'ವಿಶ್ವಮಚೇತನಂ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಆತ್ಮಶಬ್ದದಿಂದ ಚೇತನರನ್ನು ವಿವಕ್ಷಿಸಬೇಕು. 'ನಾರಾಯಣಂ ಮಹಾಜ್ಞೇಯಂ ಎಂದು ಮುಂದೆ ನಾರಾಯಣಪದದಿಂದ ಸಾಮಾನಾಧಿಕರಣ್ಯವಿರುವುದರಿಂದ ವಿಷ್ಣುಪರವಾಗಿದೆಯೆಂದು ಪ್ರಸಿದ್ಧವಾಗಿದೆ ಎಂದು ತಿಳಿಯಬೇಕು.

**वाक्यार्थमञ्जरी –**

**ॐ धृतेश्च महिम्नोऽस्यास्मिन्नुपलब्धेः ॐ** ।।

धृतेर्धारणाद्ध्यात्मा 'स सेतुर्विधृतिः' इति सर्वाधारत्वलिङ्गश्रवणाच्च हृत्पद्मस्थं ब्रह्मैव । एतल्लिङ्गस्य हृत्पद्मस्थत्वं कुतः? इति चेन्न । अस्य हृत्पद्मस्थस्य महिम्नो अपहतपाप्मत्वादेः सर्वे पाप्मानोऽतिवर्तन्त इत्यस्मिन् वाक्ये उपलब्धेरित्यर्थः – **अथेति** ।। य आत्मा हृत्पद्मस्थत्वेनोक्तः स एषां लोकानामसम्भेदायासम्मेलनायाविदारणाय वा धारणसमर्थाश्रय इत्यर्थः – **इति वक्तव्य इति** ।। तथैव छन्दोगपाठादिति भावः । शाखान्तराणां बृहदारण्यकादीनां समानजातीयानां श्रुत्यन्तराणां सङ्ग्रहोपलक्षणार्थमेतदिति तत्त्वप्रदीपोक्तेः सम्प्रदायविद इत्युक्तम् ।। **धारणसमर्थाश्रय इति** ।। तेन न पुनरुक्तिरिति भावः । अयं सर्वाधारतयोक्तः । यश्चैषः प्रसिद्धः सर्वेश्वरः । सर्वेश्वरत्वं नामादि किन्तु यश्चैष भूत एवाधिपतिर्नास्याधिपत्यमादिमदिति भूताधिपतिः यश्चैष भूत एव पालः पालकः ।। **बहुवाक्यानीति** ।। 'एतस्य वा अक्षरस्य प्रशासने गार्गि सूर्याचन्द्रमसौ' 'एतस्य वाक्षरस्य प्रशासने गार्गि द्यावापृथिव्यौ' इत्यादिबहुवाक्यानीत्यर्थः । आत्मेश्वरमिति चेतनस्य पृथगभिधानादाह – **विश्वमचेतनमिति** ।। १६ ।।

## ಬ್ರಹ್ಮಮೀಮಾಂಸಾಶಾಸ್ತ್ರ

## 'ದಹರಾಕಾಶಸ್ಥ' ವಿಷ್ಣುವೆಂಬುದು ಸುಪ್ರಸಿದ್ಧ

**सू – ॐ प्रसिद्धेश्च ॐ ॥ १७ ॥**

ಸೂತ್ರಾರ್ಥ - ಮಹಾನಾರಾಯಣೋಪನಿಷತ್ತಿನಲ್ಲಿ 'ದಹ್ರಂ ವಿಪಾಪಂ' ಎಂಬುದಾಗಿ ವಿಷ್ಣುವೇ ಹೃದಯಪದ್ಮದಲ್ಲಿದ್ದಾನೆಂದು ಪ್ರಸಿದ್ಧವಾಗಿದೆ, ಆದ್ದರಿಂದಲೂ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಹೃದಯಪದ್ಮಸ್ಥನೂ ಸಹ ಮಹಾವಿಷ್ಣುವೇ ಆಗುತ್ತಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ॐ प्रसिद्धेश्च ॐ ।। ''दहरं विपाप्मम्'' (महाना. १०-७.) इति श्रुतौ विष्णोः हृत्पद्मस्थत्वप्रसिद्धेश्च स एव हृत्पद्मस्थ इत्यर्थः ।।४।।

ಅರ್ಥ -- ಓಂ ॥ ಪ್ರಸಿದ್ಧೇಶ್ಚ ॥ ಓಂ , ಪ್ರಸಿದ್ಧೇಶ್ಚ = 'ದಹ್ರಂ ವಿಪಾಪ್ಮಂ' ಎಂಬ ಮಹಾನಾರಾಯಣೋಪನಿಷತ್ತಿನಲ್ಲಿ , ವಿಷ್ಣುವಿಗೆ ಹೃತ್ಪದ್ಮಸ್ಥಿತತ್ವವು ಪ್ರಸಿದ್ಧವಾಗಿರುವುದರಿಂದಲೂ ಸಹ ವಿಷ್ಣುವೇ ಹೃತ್ಪದ್ಮಸ್ಥನೆಂದು ನಿರ್ಣಯವಾಗುತ್ತದೆ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् – ॐ ॥ प्रसिद्धेश्च ॥ ॐ ॥**

**'तत्रापि दहं गगनं विशोकस्तस्मिन् यदन्तस्तदुपासितव्यम्' (महाना. १०-७.) इति प्रसिद्धेश्च ॥**

ಪರಿಪೂರ್ಣಚಂದ್ರಿಕಾ

ಅನುವಾದ - ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆನ್ನಲು, ಇನ್ನೂ ಅನೇಕ ಶ್ರುತಿಗಳು ಪ್ರಸಿದ್ಧವಾಗಿವೆ - 'ತತ್ರಾಪಿ ದಹ್ರಂ' ಇತ್ಯಾದಿ ಶ್ರುತಿಯಲ್ಲಿ ವಿಷ್ಣುವೇ ಹೃದಯಾಕಾಶದಲ್ಲಿದ್ದಾನೆಂದು ಪ್ರಸಿದ್ಧವಾಗಿದೆ.

ಪ್ರತಿಪದಾರ್ಥ -- ಸಮಾಖ್ಯಾರೂಪವಾದ ಮತ್ತೊಂದು ಶ್ರುತಿಯಿಂದ, ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂದು ಸಮರ್ಥಿಸಲು ಸೂತ್ರವನ್ನು ಪಠಿಸಿ, ವ್ಯಾಖ್ಯಾನಿಸುತ್ತಿದ್ದಾರೆ.

ತತ್ರಾಪಿ = ಹೃದಯ ಕಮಲದಲ್ಲಿ, ದಹ್ರಂಗಗನಂ = ಸೂಕ್ಷ್ಮವಾದ ಆಕಾಶವು, ತಸ್ಮಿನ್ = ಆ ಸೂಕ್ಷ್ಮಾಕಾಶದ ಒಳಗಡೆ, ವಿಶೋಕಃ = ಶೋಕವಿಲ್ಲದ ವಸ್ತು, ಯತ್ = ಯಾವುದಿದೆಯೋ, ತತ್ = ಆ ವಸ್ತುವು, ಉಪಾಸಿತವ್ಯಮ್ = ಬ್ರಹ್ಮನೆಂದು ಉಪಾಸಿಸಲ್ಪಡಬೇಕು, ಇತಿ = ಹೀಗೆ, ಪ್ರಸಿದ್ಧೇಶ್ಚ = ಪ್ರಸಿದ್ಧಿ ಇರುವುದರಿಂದಲೂ ಸಹ.(१)

**भाष्यम् — तदन्तस्स्थत्वापेक्षत्वान्न सुषिरश्रुतिविरोधः ॥**

ಅನುವಾದ - ಸುಷಿರಾಂತರ್ಗತ ವಿಷ್ಣುವನ್ನು ವಿವಕ್ಷಿಸಿದ್ದರಿಂದ ಸುಷಿರಶ್ರುತಿವಿರೋಧವೂ ಸಹ ಬರುವುದಿಲ್ಲ.

ಪ್ರತಿಪದಾರ್ಥ -- ಹೃತ್ಪದ್ಮದಲ್ಲಿರುವವನು ವಿಷ್ಣುವೆಂದು ಅಂಗೀಕರಿಸಿದರೆ, ಸುಷಿರಶ್ರುತಿಯ ವಿರೋಧ ಬರುತ್ತದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ತದಂತಃಸ್ಥತ್ವಾಪೇಕ್ಷತ್ವಾತ್

---

(१)**भाष्यदीपिका** – समाख्यान्तररूपयुक्त्यन्तरेण विष्णोर्हृत्पद्मगताकाशस्थत्वं साधयत्सूत्रं पठित्वा व्याचष्टे – **प्रसिद्धेश्चेति** ॥ इतीत्यनन्तरं श्रुताविति शेषः । तस्येत्यनुवर्तते । **'तस्य'** विष्णोः **'तस्य'** हृत्पद्मस्थस्येति तदर्थः । अनेन – सूत्रेऽस्यास्मिन्निति पदद्वयं पूर्वसूत्रादनुवर्तनीयम् । तथा च न केवलं वाजसनेयसमाख्यानात्, किन्तु **'अस्मिन्'** तत्रापीति तैत्तिरीयश्रुतिवाक्ये **'अस्य'** हृत्पद्मस्थस्य विष्णुत्वप्रसिद्धेश्च तत्समाख्यानादपि दहरपद्मस्थो विष्णुरेवेति सूत्रार्थ उक्तो भवति । **'दिव्ये ब्रह्मपुरे ह्येष व्योम्न्यात्मा सम्प्रतिष्ठितः'** (मुं.२.२.७) इत्याथर्वणे प्रसिद्धेश्च । **'य एषोऽन्तर्हृदय आकाशस्तस्मिन्नयं पुरुषः'** (तै.१.२.१) इति तैत्तिरीयवाक्यान्तरे प्रसिद्धेश्चेति सूत्रस्य यद् वृत्त्यन्तरं टीकायां सूचितं, तद्भाष्यस्थेतिशब्दस्याऽद्यर्थत्वमाश्रित्येति द्रष्टव्यम् । श्रुतौ **'दहरं विपाप्मं परवेश्मभूतं यत्पुण्डरीकं पुरमध्यसंस्थम्'** (महाना.१०.७) इति वाक्ये यत् **'दहरम्'** अल्पं परस्य ब्रह्मणः सद्मभूतम्, अत एव विगतपापं देहाख्यब्रह्मपुरमध्ये संस्थं हृदयकमलं प्रकृतं तत् तत्रेति परामृश्यते । तथा च **'तत्रापि'** पुण्डरीकेऽपि यत् **'दहरम्'** अल्पं गगनमस्ति तस्मिन् **'अन्तः'** अन्तरे **'विशोकः'** विशोकं विशोकपदोपलक्षितं जरादिशून्यं यद् ब्रह्म तदुपासितव्यमित्यर्थः । विशोक इति लिङ्गव्यत्ययः छान्दसः । तत्त्वप्रदीपे तु – लिङ्गव्यत्यासस्तस्य पुरुषत्वज्ञापनार्थः । **'य आत्माऽपहतपाप्मा विजरो विमृत्युर्विशोकः'** इत्यादावुदितगुणानामधिकरणैक्यबलेन सन्निधीयमानानामनुकर्षणार्थश्चेति प्रयोजनमुक्तम् ।

= ಒಳಗಿನ ಭಗವದ್‌ರೂಪದ ಉದ್ದೇಶವಿರುವುದರಿಂದ, ನ ಸುಷಿರಶ್ರುತಿವಿರೋಧಃ = ಛಿದ್ರಬೋಧಕವಾದ ಸುಷಿರಶ್ರುತಿಯ ವಿರೋಧವೂ ಸಹ ಬರುವುದಿಲ್ಲ.(१)

## श्रीपद्मनाभतीर्थविरचितसत्तर्कदीपावळिः

### ॐ प्रसिद्धेश्च ॐ ॥ १-२-१७ ॥

**'तस्मिन्यदन्तस्तदन्वेष्टव्यं तद्वाव विजिज्ञासितव्यम्' इति दहराकाशस्थितस्योपास्यत्वेन श्रवणादत्र विष्णुरेव प्रतिपाद्यते ।**

'ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್' ಎಂಬ ಶ್ರುತಿಯಲ್ಲಿ ದಹರಾಕಾಶದಲ್ಲಿರುವವನನ್ನು ಉಪಾಸನೆ ಮಾಡಬೇಕೆಂದು ಶ್ರುತವಾಗಿದೆ. ಆದ್ದರಿಂದಲೂ ಇಲ್ಲಿ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ.

**तथाहि श्रुत्यन्तरम् ।**

**'दहरं विपाप्मं परवेश्मभूतं, यत्पुण्डरीकं पुरमध्यसंस्थम् ।**
**तत्रापि दहं गगनं विशोकः तस्मिन्यदन्तस्तदुपासितव्यम् ।**
**सहस्रशीर्षं देवम् इति ।**

**तदाह प्रसिद्धेरित्यादिना ।**

ಇದೇ ವಿಷಯದಲ್ಲಿ ಶ್ರುತ್ಯಂತರವೂ ಪ್ರಮಾಣವಾಗಿದೆ -

---

(१) **भाष्यदीपिका** – ननु साक्षात् पद्मगतस्य विष्णुत्वाभ्युपगमे सुषिरश्रुतिविरोधः । एवं पद्मगताकाशस्यैव विष्णुत्वाभ्युपगमेऽपि सुषिरश्रुतिविरोधः, सुषिरशब्दस्याऽकाशवाचित्वात् । एतद् विहाय दहरपद्मस्याऽकाशत्वं, विष्णोस्त्वाकाशगतत्वं, तस्यैव सर्वाधारत्वमित्युपगमेऽपि सुषिरश्रुतिविरोधः । तत्र साक्षात् सुषिरस्य सर्वाधारत्वोक्तेरित्यत आह – **तदन्तस्स्थेति** ॥ बुद्ध्या विविक्तसुषिरश्रुतिपदं षष्ठ्यन्तमत्रान्वीयते । तथा च **'सुषिरश्रुतेः'** इति सुषिरपदघटितश्रुतेः **'तदन्तस्स्थापेक्षत्वात्'** पद्मगतसुषिरान्तस्स्थपरमात्मानमपेक्ष्य प्रवृत्तत्वात् तस्य च सर्वाधारत्वान्न सुषिरश्रुतिविरोधोऽस्मदभ्युपगमस्येत्यर्थः । यथा मन्दिरस्थमञ्जूषान्तर्गतमपि वस्तु मन्दिरस्थमिति सञ्ज्ञीयते, एवमिहापीति भावः । तदन्तस्स्थत्वेति पाठे परमात्मनः सुषिरान्तस्स्थत्वमपेक्ष्य श्रुतेः प्रवृत्तत्वादित्यर्थः ।

'ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಮ್ ।
ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಸ್ತದುಪಾಸಿತವ್ಯಮ್ ।
ಸಹಸ್ರಶೀರ್ಷಂ ದೇವಮ್'

ಇತ್ಯಾದಿ ಶ್ರುತಿಯಲ್ಲಿ ಹೃದಯಪುಂಡರೀಕದಲ್ಲಿರುವವನು ವಿಷ್ಣುವೇ ಆಗಿದ್ದಾನೆಂದು ಪ್ರಸಿದ್ಧವಾಗಿದೆ. ಇದನ್ನು 'ಪ್ರಸಿದ್ಧೇಃ' ಎಂದು ಹೇಳಿದ್ದಾರೆ.

**यदुक्तं तस्यान्ते सुषिरमिति तत्राह तदन्तरिति । यथा भाण्डान्तःस्थमपि गृहस्थमित्युच्यते एवं सुषिरस्थितविष्णावेव सर्वं प्रतिष्ठितमिति ज्ञातव्यम् । सुषिरस्य सर्वाधारत्वविरोधादित्यर्थः ।**

'ತಸ್ಯಾಂತೇ ಸುಷಿರಂ' ಎಂಬ ಶ್ರುತಿಯಲ್ಲಿಯೂ ವಿಷ್ಣುವೇ ಪ್ರತಿಪಾದ್ಯನೆಂದು 'ತದಂತಃ' ಎಂಬುದರಿಂದ ಹೇಳಿದ್ದಾರೆ. ಯಾವರೀತಿಯಾಗಿ ಪಾತ್ರೆಯ ಒಳಗೆ ಇರುವ ವಸ್ತುವನ್ನು ಮನೆಯಲ್ಲಿದೆ ಎಂದೂ ಹೇಳುತ್ತಾರೋ ಆದರಂತೆ ಸುಷಿರದಲ್ಲಿರುವ ವಿಷ್ಣುವಿನಲ್ಲೇ ಎಲ್ಲವೂ ಇರುತ್ತದೆ ಎಂದು ತಿಳಿಯಬೇಕು. ಆದ್ದರಿಂದ ಸುಷಿರಕ್ಕೆ ಸರ್ವಾಧಾರತ್ವವನ್ನು ಹೇಳುವ ಶ್ರುತಿಯ ವಿರೋಧವೂ ಕೂಡ ಬರುವುದಿಲ್ಲ.

**तत्वप्रकाशिका –**

**ॐ प्रसिद्धेश्च ॐ ॥ १-२-१७ ॥**

**युक्त्यन्तरेण विष्णोः हृत्पद्मस्थत्वसाधकं सूत्रं पठित्वा व्याचष्टे – प्रसिद्धेश्चेति ॥**

ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂಬುದನ್ನು ಸಾಧಿಸುವ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪ್ರಸಿದ್ಧೇಶ್ಚ' ಇತ್ಯಾದಿಯಾಗಿ.

**तत्वप्रकाशिका – 'दहरं विपापं परवेश्मभूतं यत्पुण्डरीकं पुरमध्यसंस्थम् । तत्रापि दहमिति विष्णोः हृत्पद्मस्थत्वप्रसिद्धेश्च स एव हृत्पद्मस्थ इत्यर्थः ।**

'ದಹರಂ ವಿಪಾಪಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಮ್ । ತತ್ರಾಪಿ ದಹ್ರಮ್' ಎಂಬುದಾಗಿ ವಿಷ್ಣುವಿನಲ್ಲಿ ಹೃತ್ಪದ್ಮಸ್ಥವು ಪ್ರಸಿದ್ಧವಾಗಿರುವುದರಿಂದಲೂ ಸಹ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆ ಎಂದು ಸೂತ್ರದ ಅರ್ಥ.

**तत्वप्रकाशिका – 'दहरोऽस्मिन्नन्तर आकाशः' इति हृत्पद्मस्थाकाशो विष्णुरित्यभ्युपगमे सुषिरश्रुतिविरोध इत्येतदनेनैव निरस्तं भवति ।**

'ದಹರೋಽಸ್ಮಿನ್ನಂತರ ಆಕಾಶಃ' ಎಂಬ ಹೃತ್ಪದ್ಮದಲ್ಲಿರುವ ಆಕಾಶವನ್ನು ವಿಷ್ಣುವೆಂದು ಅಂಗೀಕಾರ ಮಾಡಿದರೆ, ಸುಷಿರಶ್ರುತಿಯ ವಿರೋಧ ಬರುತ್ತದೆ ಅಲ್ಲವೆ? ಎಂಬ ಶಂಕೆಯನ್ನು ಇದರಿಂದಲೇ ನಿರಾಸ ಮಾಡಿದಂತಾಯಿತು.

**तत्वप्रकाशिका – पुण्डरीके दहरं गगनं तस्मिन् विशोकं ब्रह्मेत्यभ्युपगमात् ।**

ಹೃದಯಪುಂಡರೀಕದಲ್ಲಿ ಸಣ್ಣದಾದ ಆಕಾಶ = ಪ್ರದೇಶವಿದೆ. ಅದರಲ್ಲಿ ಶೋಕರಹಿತನಾದ ಬ್ರಹ್ಮನಿದ್ದಾನೆಂದು ಅಂಗೀಕರಿಸಿರುವುದರಿಂದ.

**तत्वप्रकाशिका – 'दिव्ये ब्रह्मपुरे ह्येष व्योम्न्यात्मा सम्प्रतिष्ठितः' ।'य एषोऽन्तर्हृदय आकाशस्तस्मिन्नयं पुरुषः' इत्यादेश्च ।**

'ದಿವ್ಯವಾದ ಪರಮಾತ್ಮನ ಸ್ಥಾನವೆನಿಸಿದ, ಬ್ರಹ್ಮಪುರವೆನಿಸಿದ ಹೃತ್ಕಮಲದಲ್ಲಿರುವ ಆಕಾಶದಲ್ಲಿ ಪರಮಾತ್ಮನು ಉತ್ತಮರೀತಿಯಲ್ಲಿ ಪ್ರತಿಷ್ಠಿತನಾಗಿದ್ದಾನೆ' ಎಂದು; ಮತ್ತು 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ನಯಂ ಪುರುಷಃ', 'ಹೃದಯದಲ್ಲಿರುವ ಆಕಾಶದಲ್ಲಿ ಗುಣಪೂರ್ಣನಾದ ಪರಮಾತ್ಮನು ವಾಸಮಾಡಿದ್ದಾನೆ'. ಇತ್ಯಾದಿ ವಾಕ್ಯದಲ್ಲಿಯೂ ಹೃತ್ಪದ್ಮಸ್ಥತ್ವಧರ್ಮವನ್ನು ಪರಮಾತ್ಮನಲ್ಲಿಯೇ ಹೇಳಲಾಗಿದೆ.

**तत्वप्रकाशिका – अन्वयाभावस्तर्हि भवेदिति च न वाच्यम् ।**

'ದಹರೋಽಸ್ಮಿನ್ ಅಂತರಾಕಾಶಃ' ಎಂಬಲ್ಲಿರುವ ಆಕಾಶದಲ್ಲಿ ಪರಮಾತ್ಮನು ಇದ್ದಾನೆಂದು ಒಪ್ಪಿದರೆ 'ಯಾವಾನ್ ವಾ ಅಯಮ್ ಆಕಾಶಃ' ಎಂಬ ಮುಂದಿನ ಶ್ರುತಿಗೆ ಅನ್ವಯವೇ ಕೂಡುವುದಿಲ್ಲವಲ್ಲ? ಎಂದು ಪ್ರಶ್ನಿಸಬಾರದು.

**तत्वप्रकाशिका – तथा हि । तस्मिन्यदन्तारित्यत्र हृत्पद्मस्थाकाशगतं ब्रह्मान्वेष्टव्यमित्युच्यते । ब्रह्मपुरपदेनैव ब्रह्मस्थितिसिद्धेः ।**

ಏಕೆಂದರೆ 'ತಸ್ಮಿನ್ ಯದಂತಃ ತದನ್ವೇಷ್ಟವ್ಯಂ' ಎಂಬ ಛಾಂದೋಗ್ಯಪನಿಷತ್ತಿನಲ್ಲಿ ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ಬ್ರಹ್ಮನನ್ನು ಅನ್ವೇಷಣೆ ಮಾಡಬೇಕೆಂದು ಹೇಳಲಾಗಿದೆ. ಆ ಸ್ಥಿತಿಯಲ್ಲಿ 'ಅಂತಃ' ಎಂಬ ಪದವಿದ್ದರೂ ಕೂಡ ಹಿಂದಿನ ವಾಕ್ಯದಲ್ಲಿ 'ಬ್ರಹ್ಮಪುರಮ್' ಎಂಬ ವಾಕ್ಯವಿರುವುದರಿಂದ ಆ ಪದದಿಂದಲೇ ಬ್ರಹ್ಮನನ್ನು ಹುಡುಕಬೇಕೆಂದು ಸಿದ್ಧವಾಗುತ್ತದೆ.

**तत्वप्रकाशिका – तथा च कीदृशं तदिति भावेन 'किं तदत्र विद्यते' इति प्रश्ने तत्स्वरूपनिरूपणपरतया 'यावान्वाऽयमाकाशः' इत्यादिवाक्यान्वयः ।**

ಆದ್ದರಿಂದ ಬ್ರಹ್ಮನನ್ನು ಹುಡುಕಬೇಕೆಂದು ಹೇಳಿದಂತಾಯಿತು. ಆ ಬ್ರಹ್ಮನು ಹೇಗಿದ್ದಾನೆ? ಎಂಬ ಅಭಿಪ್ರಾಯದಿಂದ 'ಕಿಂ ತದತ್ರ ವಿದ್ಯತೇ' ಎಂದು ಶಿಷ್ಯರು ಪ್ರಶ್ನಿಸಿದ್ದಾರೆ. ಬ್ರಹ್ಮನ ಸ್ವರೂಪವನ್ನು ನಿರ್ಣಯಿಸುವುದಕ್ಕಾಗಿ ಗುರುಗಳು 'ಯಾವಾನ್ವಾऽಯಮಾಕಾಶಃ' ಎಂಬ ವಾಕ್ಯದಿಂದ ಉತ್ತರ ನೀಡಿದ್ದಾರೆ. ಹೀಗೆ 'ಯಾವಾನ್ವಾऽಯಮ್' ಎಂಬ ಶ್ರುತಿಯಿಂದ ಅನ್ವಯವನ್ನು ಹೇಳಿದಂತಾಗುತ್ತದೆ.

**तत्वप्रकाशिका – यद् ब्रह्मान्वेष्टव्यतयोक्तं तस्यान्तर्हृदये यावानेष आकाशस्तावान् सर्वोऽपि विद्यते । तदाधारतया पृथिव्यादिकं च समाहितम् ।**

ಯಾವ ಬ್ರಹ್ಮನನ್ನು ಹುಡುಕಬೇಕೆಂದು ಶ್ರುತಿಯು ಹೇಳಿದೆಯೋ ಅಂತಹ ಬ್ರಹ್ಮನ ಹೃದಯ ಪ್ರದೇಶದಲ್ಲಿ ಬಾಹ್ಯಾಕಾಶವು ವ್ಯಾಪ್ತವಾಗಿದೆ. ಭೂಲೋಕವೇ ಮೊದಲಾದವುಗಳೂ ಕೂಡ ಅದರಲ್ಲಿ ಆಶ್ರಿತವಾಗಿವೆ.

**तत्वप्रकाशिका – नष्टेऽपि देहे न नश्यति । अपहतपाप्मत्वादिगुणं चेति ।**

ದೇಹವು ನಾಶವಾದರೂ ಕೂಡ ಹೃದಯದಲ್ಲಿರುವ ಪರಮಾತ್ಮನು ನಾಶವಾಗುವುದಿಲ್ಲ ಮತ್ತು ಅಂತಹ ಪರಮಾತ್ಮನು ಅಪಹತಪಾಪ್ಮತ್ವ ಮೊದಲಾದ ಗುಣಗಳಿಂದ ಯುಕ್ತನಾಗಿದ್ದಾನೆ.

**तत्वप्रकाशिका – अथवा हृत्पद्मगताकाशस्थमन्वेष्टव्यमिति सामान्येनोक्ते 'किं तदत्र विद्यते' इति प्रश्ने यावान् बहिः परमात्माऽऽकाशाख्यस्तिष्ठति तावान् हृदयपद्माकाशे विद्यते ।**

ಅಥವಾ ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ನೆಲಿಸಿರುವಂತಹ ವಸ್ತುವನ್ನು ಅನ್ವೇಷಣೆ ಮಾಡಬೇಕೆಂದು, ಸಾಮಾನ್ಯವಾಗಿ ಗುರುಗಳು ಹೇಳಿದ ಮೇಲೆ ಶಿಷ್ಯರು 'ಕಿಂ ತದತ್ರ ವಿದ್ಯತೇ' ಅದರಲ್ಲಿರುವ ಪದಾರ್ಥ ಯಾವುದು? ಎಂದು ಪ್ರಶ್ನಿಸುತ್ತಾರೆ. ಆವಾಗ 'ಯಾವಾನ್ವಾऽಯಮಾಕಾಶಃ' ಎಂಬುದರಿಂದ ಪರಮಾತ್ಮನು ಬಾಹ್ಯದಲ್ಲಿ ಆಕಾಶನಾಮಕನಾಗಿ ಎಷ್ಟು ವ್ಯಾಪ್ತನಾಗಿದ್ದಾನೋ ಅದೇರೀತಿ ಹೃದಯಪದ್ಮದ ಆಕಾಶದಲ್ಲಿಯೂ ವ್ಯಾಪ್ತನಾಗಿ ಇರುತ್ತಾನೆ.

**तत्वप्रकाशिका – स च पृथिव्याद्याश्रयत्वात् शरीरनाशेनाप्यनाश्यत्वाद् अपहतपाप्मत्वादेश्च अन्वेष्टव्य इत्यन्वयोपपत्तेः ।**

ಅಂತಹ ಪರಮಾತ್ಮನು ಪೃಥಿವ್ಯಾದಿಪದಾರ್ಥಗಳಿಗೆ ಆಶ್ರಯನಾಗಿದ್ದಾನೆ. ಶರೀರನಾಶವಾದರೂ ಕೂಡ ತಾನು ನಷ್ಟನಾಗುವುದಿಲ್ಲ. ಅಪಹತಪಾಪ್ಮಾದಿಗುಣಗಳಿಂದಲೂ ಯುಕ್ತನಾಗಿದ್ದಾನೆ.

ದಹರಾಧಿಕರಣ (೧-೩-೫)

ಆದ್ದರಿಂದಲೇ ಅನ್ವೇಷಣೆ ಮಾಡಲು ಯೋಗ್ಯನಾಗಿರುತ್ತಾನೆ. ಈ ರೀತಿಯಾಗಿ ಹಿಂದಿನ ಮುಂದಿನ ವಾಕ್ಯಗಳಿಗೆ ಅನ್ವಯವನ್ನು ತೋರಿಸಲು ಬರುತ್ತದೆ.

**तत्वप्रकाशिका – नच ब्रह्मपुरपदप्रयोगादात्मा न विष्णुः । ब्रह्मैव पूर्णत्वात् पुरमित्युपपत्तेः ।**

ಶ್ರುತಿಯಲ್ಲಿರುವ 'ಬ್ರಹ್ಮಪುರ' ಎಂಬ ಪ್ರಯೋಗದಿಂದ ಆತ್ಮನು ವಿಷ್ಣುವಾಗುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಬ್ರಹ್ಮನೇ ಪೂರ್ಣನಾದ್ದರಿಂದ 'ಪುರ' ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಬ್ರಹ್ಮಪುರಶಬ್ದಕ್ಕೆ ವಿಷ್ಣುವೆಂದೇ ಅರ್ಥ.

**तत्वप्रकाशिका – एतच्छब्देन शरीरस्य प्रकृतत्वान्नेति चेन्न । शरीरनाशेनास्याविनाशोक्तेः ।**

ಶ್ರುತಿಯಲ್ಲಿರುವ 'ಏತತ್' ಶಬ್ದದಿಂದ ಶರೀರವೇ ಪ್ರಕೃತವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಶರೀರನಾಶವಾದರೂ ಕೂಡ ಬ್ರಹ್ಮಪುರಕ್ಕೆ ನಾಶವಾಗುವುದಿಲ್ಲವೆಂದು ಹೇಳಿದ್ದರಿಂದ 'ಬ್ರಹ್ಮಪುರ' ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

**तत्वप्रकाशिका – न चाऽऽकाशपक्षेऽन्वयोऽस्ति । दहराकशस्थमुपास्यमित्युक्ते किं तदत्र विद्यते इति प्रश्ने यावान्वेत्यस्यान्वयादर्शनात् । नहि दहराकाशस्थो व्याप्काशोऽन्वेष्टव्य इत्युपपद्यते । तदभावादयोगाच्च ।**

'ದಹರೋಽಸ್ಮಿನ್ ಅಂತರಾಕಾಶೇ' ಎಂಬ ವಾಕ್ಯದಿಂದ ಭೂತಾಕಾಶವೇ ಪ್ರತಿಪಾದ್ಯವಾಗಿದೆಯಲ್ಲವೆ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಮುಂದಿನ ವಾಕ್ಯದಿಂದ ಅನ್ವಯವು ಕೂಡುವುದಿಲ್ಲ. ಏಕೆಂದರೆ ಸೂಕ್ಷ್ಮಾಕಾಶದ ಉಪಾಸನೆಯನ್ನು ಮಾಡಬೇಕೆಂದು ಹೇಳಿದ್ದರಿಂದ, ಸೂಕ್ಷ್ಮಾಕಾಶದಲ್ಲಿ ಏನಿದೆ ಎಂದು ಪ್ರಶ್ನೆಯು ಪ್ರಾಪ್ತವಾದರೆ, ಅದಕ್ಕೆ ಉತ್ತರವನ್ನು ನೀಡಲು 'ಯಾವಾನ್ವಾ' ಎಂಬ ಮುಂದಿನ ವಾಕ್ಯವು ಹೊರಟಿದೆ, ಎಂದು ಉತ್ತರಿಸಲಾಗದು. ಏಕೆಂದರೆ ಸೂಕ್ಷ್ಮಾಕಾಶದಲ್ಲಿ ವ್ಯಾಪ್ತವಾದ ಭೂತಾಕಾಶವನ್ನು ಅನ್ವೇಷಣ ಮಾಡಬೇಕೆಂದು ಉಪಪನ್ನವಾಗುವುದಿಲ್ಲ. ಏಕೆಂದರೆ ವ್ಯಾಪ್ತವಾದ ಆಕಾಶವು ಭೂತಾಕಾಶದಲ್ಲಿ ಇರಲು ಸಾಧ್ಯವೇ ಇಲ್ಲ.

**तत्वप्रकाशिका – नापि दहराकाशमेव विशिष्योभे अस्मिन्नित्यादिपरिहार इति युक्तम् । दहरस्य व्याप्तत्वायोगान्मुख्यतः पृथिव्यादीनामनुपास्यत्वाच्च ।**

ದಹರಾಕಾಶವೇ ಸ್ಥೂಲಾಕಾಶದಂತೆ ವ್ಯಾಪ್ತವಾಗಿದೆ ಎಂಬ ಪರಿಹಾರವನ್ನೂ ಕೂಡ ಹೇಳಲಾಗದು. ಸೂಕ್ಷ್ಮಾಕಾಶದಲ್ಲಿ ಏನು ವಿಶೇಷವಿದೆ? ಎಂಬ ಪ್ರಶ್ನೆಗೆ ಬಾಹ್ಯಾಕಾಶವು ಹೇಗೆ ವ್ಯಾಪ್ತವಾಗಿದೆಯೋ ಅದರಂತೆ ದಹರಾಕಾಶವೂ ಕೂಡ ವ್ಯಾಪ್ತವಾಗಿದೆ ಎಂಬ ಉತ್ತರವನ್ನು ನೀಡಲಾಗದು. ಏಕೆಂದರೆ

ದಹರಾಕಾಶವು ಸ್ಥೂಲಾಕಾಶದಂತೆ ವ್ಯಾಪ್ತವಾಗಿರಲು ಸಾಧ್ಯವಿಲ್ಲ. ಮತ್ತು ಪೃಥಿವ್ಯಾದಿಗಳಿಗೆ ಉಪಾಸ್ಯತ್ವವೂ ಕೂಡ ಸರ್ವಥಾ ಸಾಧ್ಯವಿಲ್ಲ. ಆದ್ದರಿಂದ ಪೃಥಿವ್ಯಾದಿ ಆಧಾರತ್ವವನ್ನು ದಹರಾಕಾಶಕ್ಕೆ ಹೇಳಲು ಬರುವುದಿಲ್ಲ.

**तत्वप्रकाशिका – नन्वेवं हृत्पद्मगताकाशस्थो विष्णुरित्यभ्युपेत्य तस्य सर्वाधारत्वाङ्गीकारोऽपि सुषिरश्रुतिविरोधः स्यात् । तत्र साक्षात्सुषिरस्य सर्वाधारत्वोक्तेरित्यत आह – तदिति ।।**

ಹಾಗಾದರೆ ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ವಿಷ್ಣುವಿದ್ದಾನೆಂದು ಅಂಗೀಕರಿಸಿ ಅಂತಹ ವಿಷ್ಣು ಸಕಲಕ್ಕೂ ಆಧಾರನಾಗಿದ್ದಾನೆಂದು ಅಂಗೀಕರಿಸಿದಂತಾಯಿತು. ಹೀಗೆ ಅಂಗೀಕಾರ ಮಾಡಿದರೂ ಸಹ ಸುಷಿರಶ್ರುತಿಯ ವಿರೋಧವು ಬರುತ್ತದೆ. ಏಕೆಂದರೆ ನೇರವಾಗಿ ಶ್ರುತಿಯಲ್ಲಿ ಸುಷಿರಕ್ಕೇ ಸರ್ವಾಧಾರತ್ವವನ್ನು ಹೇಳಲಾಗಿದೆ. ಹೀಗಿರುವಾಗ ವಿಷ್ಣುವಿನಲ್ಲಿ ಸರ್ವಾಧಾರತ್ವವನ್ನು ಹೇಳಿದರೆ ಈ ಶ್ರುತಿಯ ವಿರೋಧವು ಬರುತ್ತದೆ ಅಲ್ಲವೇ? ಎಂಬ ಪ್ರಶ್ನೆಗೆ 'ತತ್' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – न चैवमङ्गीकारेऽपि सुषिरश्रुतिविरोधः । मन्दिरे मणिमालेत्यत्र मन्दिरपदेन तदन्तःस्थमञ्जूषाविवक्षावत् सुषिरश्रुतेरपि तदन्तःस्थ-भगवदपेक्षया प्रवृत्तत्वादित्यर्थः ।। १७ ।।**

ವಿಷ್ಣುವೇ ಸಕಲಕ್ಕೆ ಆಧಾರನಾಗಿದ್ದಾನೆಂದು ಅಂಗೀಕಾರ ಮಾಡಿದರೂ ಕೂಡ ಸುಷಿರಶ್ರುತಿಯ ವಿರೋಧವು ಬರುವುದಿಲ್ಲ. 'ಮಂದಿರೇ ಮಣಿಮಾಲಾ' ಎಂಬ ನ್ಯಾಯದಿಂದ ತಿಳಿಯಬೇಕು. ಅಂದರೆ 'ಮಂದಿರೇ ಮಣಿಮಾಲಾ' ಎಂಬಲ್ಲಿರುವ ಮಂದಿರ ಪದಕ್ಕೆ ಮಂದಿರದಲ್ಲಿರುವ ಆಭರಣದ ಪೆಟ್ಟಿಗೆಯಲ್ಲಿ ಎಂದೇ ಅರ್ಥ. ಅದರಂತೆ ಇಲ್ಲಿಯೂ ಸುಷಿರಪದಕ್ಕೆ ಸುಷಿರದಲ್ಲಿರುವ ಭಗವಂತನೆಂದೇ ಅರ್ಥ. ಈ ಅಭಿಪ್ರಾಯದಲ್ಲಿ ಭಾಷ್ಯದ ಮಾತುಗಳು ಹೊರಟಿವೆ.

**भावदीपः –**

**ॐ प्रसिद्धेश्च ॐ ।।**

भाष्योक्तश्रुतौ तत्रापीति तच्छब्दपरामर्श्यं दर्शयन् भाष्यं व्याचष्टे – दहरमिति।।

ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತಿಯಲ್ಲಿರುವ 'ತತ್ರಾಪಿ' ಎಂಬ ಪದದ 'ತತ್' ಶಬ್ದದಿಂದ ಯಾವುದನ್ನು ಪರಾಮರ್ಶಿಸಬೇಕೆಂಬುದನ್ನು ತೋರಿಸುವವರಾಗಿ, ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ದಹರಮ್' ಇತ್ಯಾದಿ ಟೀಕೆಯಿಂದ.

**भावदीपः – विष्णोरिति** ।। 'सहस्रशीर्षं देवम्' इति तस्यैव प्रकृतत्वादिति भावः । न सुषिरश्रुतिविरोध इति भाष्यं व्याचष्टे – **दहर इति** ।।

'ವಿಷ್ಣೋಃ' ಎಂಬುದರಿಂದ 'ಸಹಸ್ರಶೀರ್ಷಂ ದೇವಮ್' ಎಂಬುದಾಗಿ ವಿಷ್ಣುವೇ ಪ್ರಕೃತನಾಗಿದ್ದಾನೆಂದು ತಿಳಿಸಿದ್ದಾರೆ. 'ನ ಸುಷಿರಶ್ರುತಿವಿರೋಧಃ' ಸುಷಿರಶ್ರುತಿವಿರೋಧಕ್ಕೆ ಅವಕಾಶವಿಲ್ಲ' ಎಂಬ ಭಾಷ್ಯವನ್ನು 'ದ ಹರೇ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः – इत्यभ्युपगम इति** ।। आकाशपदेन तल्लिङ्गादिति न्यायेन विष्णुमुपादाय तस्य हृत्पद्मस्थत्वाभ्युपगमे पूर्वोक्तदिशा सुषिरस्य सर्वाधारतया हृत्पद्मस्थत्वश्रुतिविरोध इत्यर्थः ।।

'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಆಕಾಶಪದದಿಂದ ಪ್ರತಿಪಾದ್ಯ-ನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಅಂಗೀಕರಿಸಿ, ಅವನೇ ಹೃದಯಕಮಲದಲ್ಲಿದ್ದಾನೆಂದು ಒಪ್ಪಿದರೆ, ಹಿಂದೆ ಹೇಳಿದಂತೆ ಸುಷಿರವೇ ಸಕಲಕ್ಕೂ ಆಧಾರವಾದ ಹೃದ್ಯಸ್ಥವಾಗಿದೆಯೆಂಬ ಶ್ರುತಿವಿರೋಧ ಬರುತ್ತದೆಂಬುದನ್ನು 'ಇತ್ಯಭ್ಯುಪಗಮೇ' ಎಂಬ ಟೀಕೆಯಿಂದ ಹೇಳಿದ್ದಾರೆ.

**भावदीपः – अनेनैवेति** ।। 'तत्रापि दहरम्' इति श्रुतिग्राहिणा 'प्रसिद्धेश्च' इति सूत्रेणैवेत्यर्थः ।

**न केवलं तस्य हृत्पद्मस्थत्वसामान्यस्य प्रसिद्धेश्चेति सूत्रार्थः । किन्तु हृत्पद्मस्थाकाशस्थत्वप्रसिद्धेश्चेत्यप्यर्थ इति भावेन इति प्रसिद्धेश्चेत्यस्य श्रुतिषु दहराकाशस्थत्वप्रसिद्धेश्चेत्यर्थकतया उत्तरभाष्येणान्वयमुपेत्य तदन्तःस्थेति तच्छब्दार्थ-माह – तस्मिन्निति ।।**

'ಅನೇನೈವ' ಎಂದರೆ 'ತತ್ರಾಪಿ ದಹರಮ್' ಎಂಬ ಶ್ರುತಿಯನ್ನು ಉಲ್ಲೇಖಿಸುವ 'ಪ್ರಸಿದ್ಧೇಶ್ಚ' ಎಂಬ ಸೂತ್ರದಿಂದ ಎಂದರ್ಥ.

ಹೃತ್ಕಮಲದಲ್ಲಿರುವವನು ಪರಮಾತ್ಮನೇ ಆಗಿದ್ದಾನೆಂಬುದು ಅತ್ಯಂತ ಪ್ರಸಿದ್ಧವಾದ ವಿಚಾರ. ಇಷ್ಟೇ ಸೂತ್ರಾರ್ಥವಲ್ಲ. ಹೊರತಾಗಿ, ಹೃತ್ಕಮಲದಲ್ಲಿರುವ ಆಕಾಶದಲ್ಲಿಯೂ ಸಹ ಪರಮಾತ್ಮನೇ ಇರುತ್ತಾನೆಂಬುದೂ ಕೂಡ ಸೂತ್ರದ ಅಭಿಪ್ರಾಯವೇ ಆಗಿದೆ. ಹಾಗಾಗಿ 'ಪ್ರಸಿದ್ಧೇಶ್ಚ' ಎಂಬ ಸೂತ್ರಕ್ಕೆ ಪರ ಮಾತ್ಮನೇ ದಹರಾಕಾಶದಲ್ಲಿರುತ್ತಾನೆಂಬುದು ಶ್ರುತಿಗಳಿಂದ ಪ್ರಸಿದ್ಧವಾಗಿದೆ ಎಂದರ್ಥ. ಈ ಅಭಿಪ್ರಾಯ ದಿಂದ ಉತ್ತರಭಾಷ್ಯದ ಜೊತೆಗೆ ಅನ್ವಯವನ್ನು ಒಪ್ಪಿ, 'ತದಂಸ್ಥ' ಎಂಬಲ್ಲಿರುವ 'ತತ್' ಶಬ್ದದ ಅರ್ಥವನ್ನು 'ತಸ್ಮಿನ್' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**भावदीपः** – श्रुतौ लिङ्गव्यत्ययं मत्वोक्तम् – **विशोकमिति** ।। भाष्ये हृत्पद्मस्थत्वोक्तेरिति शेषः । दहराकाशस्थत्वावेदकश्रुत्यन्तराणि भाष्योपलक्षितान्याह – **दिव्य इति** ।।

ಶ್ರುತಿಯಲ್ಲಿರುವ ಲಿಂಗವ್ಯತ್ಯಾಸವನ್ನು ಗಮನಿಸಿ 'ವಿಶೋಕಮ್' ಎಂದಿದ್ದಾರೆ. 'ಭಾಷ್ಯೇ ಹೃತ್ಪದ್ಮಸ್ಥತ್ವೋಕ್ತೇಃ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ದಹರಾಕಾಶಸ್ಥತ್ವವನ್ನು ಪ್ರತಿಪಾದನೆ ಮಾಡುವ ಬೇರೆ ಶ್ರುತಿಗಳನ್ನೂ ಭಾಷ್ಯದಲ್ಲಿ ಉಪಲಕ್ಷಣಯಾ ತಿಳಿಸಿದ್ದಾರೆ. ಅದನ್ನೇ 'ದಿವ್ಯೇ' ಇತ್ಯಾದಿ ಟೀಕೆಯಿಂದ ಹೇಳಿದ್ದಾರೆ.

**भावदीपः** – आथर्वणे । य एष इति तैत्तिरीये । आदिपदेन 'य एषोऽन्तर्हृदय आकाशस्तस्मिन् शेते' 'यो वेद निहितं गुहायां परमे व्योमन्' इति पूर्वोक्तश्रुत्यादिग्रहः।

'ದಿವ್ಯೇ' ಎಂಬ ಶ್ರುತಿಯು ಆಥರ್ವಣದಲ್ಲಿದೆ. 'ಯ ಏಷ' ಎಂಬ ಶ್ರುತಿಯು ತೈತ್ತಿರೀಯಾದಲ್ಲಿದೆ. 'ಆದಿ' ಪದವು ಹಿಂದೆ ಹೇಳಲ್ಪಟ್ಟ 'ಯ ಏಷೋಽಂತರ್ಹೃದಯೇ ಆಕಾಶಸ್ತಸ್ಮಿನ್ ಶೇತೇ' ಎಂಬುದನ್ನು ಮತ್ತು 'ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್' ಎಂಬ ಶ್ರುತಿಯನ್ನು ಇಟ್ಟುಕೊಳ್ಳಬೇಕು.

**भावदीपः** – भाष्ये श्रुतिविरोध इत्युपलक्षणं मत्वा प्रागुक्तानन्वयदोषं निराह – **अन्वयाभाव इति** ।। ''योऽन्वेष्टव्यो भगवांस्तस्यान्तर्हृदये यावान् वा अयमाकाशस्तावानेषोऽन्तर्हृदय आकाशस्तस्मिन् द्यावापृथिवी अन्तरेव समाहिते । स भगवानपहतपाप्मा'' इत्यन्वय इत्यन्यत्रोक्तं समाधिं व्यनक्ति – **तस्मिन्नित्यादिना**।।

ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತಿವಿರೋಧವು ಉಪಲಕ್ಷಣವಾಗಿದೆಯೆಂದು ತಿಳಿದು, ಹಿಂದೆ ಹೇಳಲ್ಪಟ್ಟ ಅನನ್ವಯದೋಷವನ್ನು ನಿರಾಕರಿಸುತ್ತಿದ್ದಾರೆ 'ಅನ್ವಯಾಭಾವ' ಇತ್ಯಾದಿ ವಾಕ್ಯದಿಂದ. 'ಯೋಽನ್ವೇಷ್ಟವ್ಯೋ ಭಗವಾಂಸ್ತಸ್ಯಾಂತರ್ಹೃದಯೇ ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಸ್ತಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ । ಸ ಭಗವನಾಪಹತಪಾಪ್ಮ' ಎಂಬುದಾಗಿ ಅನ್ವಯವನ್ನು ತಿಳಿಯಬೇಕೆಂದು ಬೇರೆಡೆ ಹೇಳಲ್ಪಟ್ಟ ಸಮಾಧಾನವನ್ನೇ 'ತಸ್ಮಿನ್' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – अप्रकृतब्रह्मणः कथमुक्तिरित्यत आह – **ब्रह्मपुरेति** ।। देहस्य ब्रह्म प्रति पुरत्वोक्त्या तथा 'पुण्डरीकं वेश्म' इत्यत्रापि ब्रह्मपदान्वयावश्यम्भावे ब्रह्म

**प्रति पुण्डरीकस्य वेश्मत्वोक्त्या ब्रह्म वेश्मपदेन चेत्युपलक्षणम् । तथाच यद् ब्रह्मान्तस्तदन्वेष्टव्यमिति सिद्धेरित्यर्थः ।**

ಅಪ್ರಕೃತನಾದ ಬ್ರಹ್ಮನನ್ನು ಸ್ವೀಕರಿಸಬೇಕೆಂದು ಹೇಳಿದ್ದು ಹೇಗೆ ಸಮಂಜಸವಾಗುತ್ತದೆ? ಎಂಬ ಪ್ರಶ್ನೆಗೆ 'ಬ್ರಹ್ಮಪುರ' ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ. ಬ್ರಹ್ಮನಿಗೆ ದೇಹವು ಪಟ್ಟಣವಾಗಿದೆ. ಮತ್ತು 'ಪುಂಡರೀಕಂ ವೇಶ್ಮ' ಎಂಬಲ್ಲಿಯೂ ಪುಂಡರೀಕವೇ ಬ್ರಹ್ಮನ ಮನೆಯೆಂದು ಹೇಳಲಾಗಿದೆ. ಏಕೆಂದರೆ, ಶ್ರುತಿಯಲ್ಲಿ ಬ್ರಹ್ಮಪದವನ್ನು ಅವಶ್ಯವಾಗಿ, ಅನ್ವಯ ಮಾಡಿಕೊಳ್ಳಬೇಕು. ಆದ್ದರಿಂದ 'ವೇಶ್ಮ' ಪದದಿಂದ ಬ್ರಹ್ಮಪದವನ್ನು ಉಪಲಕ್ಷಣಯಾ ತೆಗೆದುಕೊಂಡಂತಾಯಿತು. ಆದ್ದರಿಂದ ಒಳಗೆ ಯಾವ ಬ್ರಹ್ಮನಿದ್ದಾನೋ, ಅವನನ್ನು ಅನ್ವೇಷಣೆ ಮಾಡಬೇಕೆಂದು ಸಿದ್ಧವಾಯಿತು.

**भावदीपः – तस्यान्तर्हृदय इति समानविभक्तिकत्वाभावेऽपि समानविषयत्व-मात्रेणापि प्रश्नोत्तरभावो युक्त इति भावः ।**

"ತಸ್ಯಾಂತರ್ಹೃದಯೇ" ಎಂಬಲ್ಲಿ ಸಮಾನವಿಭಕ್ತಿಯಿಲ್ಲದಿದ್ದರೂ ಸಮಾನವಿಷಯತ್ವವಿರುವ ಪ್ರಯುಕ್ತ ಪ್ರಶ್ನೋತ್ತರಗಳು ಉಪಪನ್ನವಾಗುತ್ತವೆಂದು ತಿಳಿಯಬೇಕು.

**भावदीपः – उभे अस्मिन् द्यावापृथिवी इत्यादेरित्यर्थः – तदाधारतयेति ।। ब्रह्महृदयस्थाकाशाभिमान्याधारतया पृथिव्याद्यभिमान्यादिकमित्यर्थः । 'नास्य जरयैतज्जीर्यते । न वधेनास्य हन्यते । तदेतत् सत्यम् ब्रह्मपुरमस्मिन् कामाः समाहिताः । एष आत्माऽपहतपाप्मा' इत्यादेरर्थमाह – नष्टेऽपीति ।।**

"ಉಭೇ ಅಸ್ಮಿನ್ ದ್ಯಾವಾಪೃಥಿವೀ" ಎಂಬ ಶ್ರುತಿಯ ಅರ್ಥವನ್ನು "ತದಾಧಾರತಯಾ" ಇತ್ಯಾದಿ ಮಾತುಗಳಿಂದ ವಿವರಿಸುತ್ತಿದ್ದಾರೆ. ಬ್ರಹ್ಮನು ಹೃದಯಲ್ಲಿರುವ ಆಕಾಶಕ್ಕೆ ಪೃಥಿವ್ಯಾದಿಗಳಿಗೂ ಅಭಿಮಾನಿ-ಯಾಗಿದ್ದಾನೆಂದು ತಿಳಿಯಬೇಕು. "ನಾಸ್ಯ ಜರಯೈತಜ್ಜೀರ್ಯತೇ । ನ ವಧೇನಾಸ್ಯ ಹನ್ಯತೇ । ತದೇತತ್ಸತ್ಯಂ ಬ್ರಹ್ಮಪುರಮಸ್ಮಿನ್ಕಾಮಾಃ ಸಮಾಹಿತಾಃ । ಏಷ ಆತ್ಮಾऽಪಹತಪಾಪ್ಮಾ" ಇತ್ಯಾದಿ ಶ್ರುತಿಯ ಅರ್ಥವನ್ನು "ನಷ್ಟೇऽಪಿ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**भावदीपः – अस्मिन् भूताकाशे ब्रह्माख्याकाशो वर्तते । स च यावान् बहिः परमात्मा व्याप्तोऽस्ति तावानेव विद्यत इति छान्दोग्यभाष्योक्तं पक्षान्तरं व्यनक्ति – अथवेति ।।**

"ಅಸ್ಮಿನ್" = ಭೂತಾಕಾಶದಲ್ಲಿ, ಆಕಾಶಸ್ವರೂಪಿಯಾದ ಬ್ರಹ್ಮನು ಇದ್ದಾನೆ. ಇವನು ಬಾಹ್ಯಾಕಾಶದಲ್ಲಿ ಎಷ್ಟು ವಿಶಾಲನಾಗಿದ್ದಾನೋ, ಅಷ್ಟೇ ವ್ಯಾಪ್ತಿಯನ್ನು ಹೊಂದಿರುತ್ತಾನೆ ಎಂಬ ಛಾಂದೋಗ್ಯೋಪನಿಷತ್ತಿನ ಭಾಷ್ಯದಲ್ಲಿ ಹೇಳಿದ ಪಕ್ಷಾಂತರವನ್ನು "ಅಥವಾ" ಇತ್ಯಾದಿ ಮಾತುಗಳಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – अस्मिन् पक्षे प्रश्नोत्तरयोस्तुल्यविभक्तिकत्वं चास्तीति भावः । एतद्व्याख्यानोक्तिश्चाल्पश्रुतेरित्यधिकाशङ्कोत्थानाय । 'सङ्गम्यन्ते गुरोर्गिरः' इति स्वप्रतिज्ञानुरोधाय चेति ज्ञेयम् ।

ಈ ಪಕ್ಷದಲ್ಲಿ ಪ್ರಶ್ನೋತ್ತರಗಳಿಗೆ ತುಲ್ಯವಿಭಕ್ತಿಗಳೂ ಸಹ ಕೂಡುತ್ತವೆಂದು ತಿಳಿಯಬೇಕು. ಈ ವ್ಯಾಖ್ಯಾನವನ್ನು ಆಶ್ರಯಿಸಿದ್ದರಿಂದ "ಅಲ್ಪಶ್ರುತೇಃ" ಎಂಬ ಸೂತ್ರದ ಭಾಗದಿಂದ ಹೆಚ್ಚಿನ ಆಶಂಕೆಯನ್ನು ತೋರಿಸಲು ಆಗುತ್ತದೆ. ಅಥವಾ "ಸಂಗಮ್ಯಂತೇ ಗುರೋರ್ಗಿರಃ" ಎಂಬ ತಮ್ಮ ಪ್ರತಿಜ್ಞೆಯನ್ನು ಅನುಸರಿಸಿದಂತಾಗುತ್ತದೆ.

**भावदीपः** – देहादेर्ब्रह्म प्रति पुरत्वाद्युक्तावपि स्पष्टं तत्र ब्रह्मस्थितेरप्राप्तेरन्यपुरादावन्यस्यापि स्थितिसम्भवादित्यभिप्रेत्य सामान्येनोक्त इत्युक्तम् ।

ದೇಹವು ಬ್ರಹ್ಮನಿಗೆ "ಪುರ" ಎನಿಸಿದೆ ಎಂದು ಹೇಳಿದರೂ ದೇಹದಲ್ಲಿ ಬ್ರಹ್ಮನಿದ್ದಾನೆ ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಏಕೆಂದರೆ ಬ್ರಹ್ಮನ ಪಟ್ಟಣವಾದ ಮಾತ್ರದಿಂದ ಬ್ರಹ್ಮನೇ ಇರಬೇಕೆಂದು ಏನಿಲ್ಲ. ಜೀವನೂ ಸಹ ಇರಬಹುದು. ಏಕೆಂದರೆ ಮತ್ತೊಬ್ಬರ ಪಟ್ಟಣದಲ್ಲಿ ಬೇರೊಬ್ಬರು ಇರಬಾರದೆಂದೇನಿಲ್ಲ. ಈ ಅಭಿಪ್ರಾಯದಿಂದ ಸಾಮಾನ್ಯವಾಗಿ "ಉಕ್ತಃ" ಎಂದು ಹೇಳಿದ್ದಾರೆ.

**भावदीपः** – तस्यैतदेव निरुक्तं हृदयमित्युत्तरवाक्योक्तरीत्या हृद्ययत इति व्युत्पत्त्या हृदयपदेन हृत्पुण्डरीकस्थदहरभूताकाशं गृह्यत इति भावेनाह – **हृदयपद्माकाश इति ।।**

"ತಸ್ಯೈತದೇವ ನಿರುಕ್ತಃ" ಎಂದು ಉತ್ತರವಾಕ್ಯದಲ್ಲಿ ಹೇಳಿದಂತೆ "ಹೃದಿ ಅಯತೇ" ಎಂಬ ವ್ಯುತ್ಪತ್ತಿಯಿಂದ ಹೃದಯಪದಕ್ಕೆ ಹೃದಯಪುಂಡರೀಕದಲ್ಲಿರುವ ಅಲ್ಪವಾದ ಭೂತಾಕಾಶವನ್ನು ಸ್ವೀಕರಿಸಬೇಕೆಂಬ ಅಭಿಪ್ರಾಯದಿಂದ "ಹೃದಯಪದ್ಮಾಕಾಶ" ಎಂದು ಹೇಳಿದ್ದಾರೆ.

**भावदीपः** – तर्हि किं तदत्रेति प्रश्नस्य यावानित्यनेनोत्तरितत्वात् । 'उभे अस्मिन् द्यावापृथिवी' इत्यादि व्यर्थमित्यतः तत्तु विजिज्ञासितव्यत्वे हेतुत्वेन सामर्थ्यकथनमेवेति छान्दोग्यभाष्यानुरोधेन वाक्यशेषस्यान्वयमाह – **स चेति ।।**

ಹಾಗಾದರೆ "ಕಿಂ ತದತ್ರ" ಎಂಬ ಪ್ರಶ್ನೆಗೆ "ಯಾವಾನ್ವಾ" ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾಯಿತು. ಆದ್ದರಿಂದ "ಉಭೇ ಅಸ್ಮಿನ್ ದ್ಯಾವಾಪೃಥಿವೀ" ಇತ್ಯಾದಿ ವಾಕ್ಯಗಳು ವ್ಯರ್ಥವಲ್ಲವೇ? ಎಂಬ ಪ್ರಶೆಗೆ "ತತ್ತು ವಿಜಿಜ್ಞಾಸಿತವ್ಯತ್ವೇ ಹೇತುತ್ವೇನ ಸಾಮರ್ಥ್ಯಕಥನಮೇವ" ಎಂಬ ಛಾಂದೋಗ್ಯಭಾಷ್ಯಕ್ಕೆ ಅನುಸಾರವಾಗಿ ವಾಕ್ಯಶೇಷಕ್ಕೆ ಅನ್ವಯವನ್ನು ತೋರಿಸುತ್ತಿದ್ದಾರೆ "ಸ ಚ" ಇತ್ಯಾದಿ ವಾಕ್ಯದಿಂದ.

**भावदीपः – नचेति ।।** 'तदेतत् सत्यं ब्रह्मपुरम्' इति हृत्पद्मस्थाकाशस्थे ब्रह्मपुरपदप्रयोगादित्यर्थः । ब्रह्माख्यं पुरं पूर्णत्वात् पुरमिति तद्भाष्योक्तमेवाह – **ब्रह्मैवेति ।।**

"ತದೇತತ್ ಸತ್ಯಂ ಬ್ರಹ್ಮಪುರಂ" ಎಂದು ಹೃತ್ಪದ್ಮದಲ್ಲಿರುವ ಆಕಾಶದಲ್ಲಿರುವವನಿಗೆ ಬ್ರಹ್ಮಪುರ ಪದವನ್ನು ಪ್ರಯೋಗ ಮಾಡಿದ್ದರಿಂದ ಎಂದು "ನಚ" ಇತ್ಯಾದಿ ವಾಕ್ಯದ ಅರ್ಥ. ಇಲ್ಲಿರುವ 'ಬ್ರಹ್ಮಪುರ' ಶಬ್ದಕ್ಕೆ ಪೂರ್ಣನಾದ್ದರಿಂದ ಬ್ರಹ್ಮನೆಂಬ ಅರ್ಥವನ್ನೇ ವಿವಕ್ಷಿಸಬೇಕು ಎಂದು ಛಾಂದೋಗ್ಯಭಾಷ್ಯದ ಅಭಿಪ್ರಾಯವನ್ನೇ "ಬ್ರಹ್ಮೈವ" ಎಂಬುದರಿಂದ ಹೇಳಿದ್ದಾರೆ.

**भावदीपः –** एतच्छब्देन, 'यदिदमस्मिन् ब्रह्मपुरे' इति ब्रह्मपुरशब्देनेत्यर्थः ।। **अस्याविनाशेति ।।** तथाच नाशाभावरूपलिङ्गेन शरीरेऽनुपपन्नेन बाधकेन प्रकृतशरीरत्यागेन विष्णुग्रहणं युक्तम् ।

"ಏತಚ್ಛಬ್ದೇನ" ಎಂದರೆ "ಯದಿದಮಸ್ಮಿನ್ ಬ್ರಹ್ಮಪುರೇ" ಎಂಬಲ್ಲಿರುವ 'ಬ್ರಹ್ಮಪುರ' ಶಬ್ದದಿಂದ ಎಂದರ್ಥ. "ಅಸ್ಯಾವಿನಾಶಿ" ಇತ್ಯಾದಿ ಮಾತಿನ ಅಭಿಪ್ರಾಯ ಹೀಗಿದೆ - 'ನಾಶಾಭಾವ' ಎಂಬ ಲಿಂಗವು ಶರೀರದಲ್ಲಿ ಅನುಪಪನ್ನವಾಗಿದೆ. ಆದ್ದರಿಂದ ಪ್ರಕೃತವಾದ ಶರೀರವನ್ನು ಬಿಟ್ಟು ವಿಷ್ಣು ಎಂಬ ಅರ್ಥವನ್ನೇ ವಿವಕ್ಷಿಸಬೇಕು.

**भावदीपः –** यथा अदृश्यत्वनये 'अक्षरात् सम्भवतीह विश्वम्' इत्यत्राक्षरशब्देन ब्रह्मणः प्रकृतत्वेऽपि 'अक्षरात्परतः परः' इत्यत्र परत्वावधित्वबाधकेन तत्राक्षरपदेन प्रकृतिग्रहणं तद्वदिति भावः ।

ಯಾವರೀತಿಯಾಗಿ ಅದೃಶ್ಯತ್ವಾಧಿಕರಣದಲ್ಲಿ "ಅಕ್ಷರಾತ್ಸಂಭವತೀಹ ವಿಶ್ವಂ" ಎಂಬ ವಾಕ್ಯದಲ್ಲಿ ಅಕ್ಷರಶಬ್ದದಿಂದ ಬ್ರಹ್ಮನು ಪ್ರಕೃತನಾಗಿದ್ದರೂ "ಅಕ್ಷರಾತ್ಪರತಃ ಪರಃ" ಎಂಬಲ್ಲಿ ಪರತ್ವಾವಧಿತ್ವವೆಂಬ ಬಾಧಕವಿರುವ ಕಾರಣ ಅಕ್ಷರಶಬ್ದದಿಂದ ಪ್ರಕೃತಿಯನ್ನೇ ಸ್ವೀಕರಿಸಲಾಗುತ್ತದೆಯೋ ಅದರಂತೆ ಇಲ್ಲಿಯೂ ಸಹ 'ನಾಶಾಭಾವ' ಎಂಬ ಬಾಧಕವಿರುವುದರಿಂದ 'ವಿಷ್ಣು' ಎಂಬ ಅರ್ಥವನ್ನು ಸ್ವೀಕರಿಸಬೇಕು.

**भावदीपः –** एतच्चोपलक्षणम् । बृहत्वात् पूर्णकामत्वाद् विष्णुः ब्रह्मपुराभिधः । तस्मिंस्तस्य पुरं देहः तस्मिन् हृदयमास्थितमित्युक्तदिशा पूर्वमपि ब्रह्मपुरपदेन विष्णोरपि प्रकृतत्वाद् द्वयोः प्रकृतत्वेऽपि बहूनां सह निर्देश इत्यानन्दमयनय-टीकोक्तरीत्या सत्यं ब्रह्मपुरमित्यत्र विष्णुमात्रग्रहणं युक्तमित्यपि ज्ञेयम् ।

ಇದು ಉಪಲಕ್ಷಣ - "ಬೃಹತ್ವಾತ್ ಪೂರ್ಣಕಾಮತ್ವಾತ್ ವಿಷ್ಣುಃ ಬ್ರಹ್ಮಪುರಾಭಿಧಃ । ತಸ್ಮಿನ್‌ಸ್ತಸ್ಯ ಪುರಂ ದೇಹಸ್ತಸ್ಮಿನ್ ಹೃದಯಮಾಸ್ಥಿತಂ" ಎಂಬ ಉಕ್ತಿಯ ಪ್ರಕಾರ ಹಿಂದೆಯೂ ಬ್ರಹ್ಮಪುರಪದದಿಂದ ವಿಷ್ಣುವೇ ಪ್ರಕೃತನಾಗಿದ್ದಾನೆ. ಇಬ್ಬರು ಪ್ರಕೃತರಾದಾಗ "ಬಹೂನಾಂ ಸಹ ನಿರ್ದೇಶಃ" ಎಂದು ಆನಂದಮಯಾಧಿ- ಕರಣದ ಟೀಕೆಯಲ್ಲಿ ಹೇಳಿದ ಪ್ರಕಾರ "ಸತ್ಯಂ ಬ್ರಹ್ಮಪುರಂ" ಎಂಬಲ್ಲಿ ಕೇವಲ ವಿಷ್ಣುವೆಂಬ ಅರ್ಥವನ್ನು ಸ್ವೀಕರಿಸುವುದು ತಪ್ಪಾಗುವುದಿಲ್ಲ.

**भावदीपः** – तर्हि उभयत्र वाक्यान्वयसामञ्जस्ये विष्णुरेवेति निर्बन्धे को हेतुरित्यत आकाशपक्ष एवान्वयाभाव इति न्यायविवरणोक्तमन्वयाभावं व्यनक्ति – **नचेत्यादिना ।।**

ಹಾಗಾದರೆ ಆಕಾಶ ಹಾಗೂ ಬ್ರಹ್ಮ ಎರಡರ್ಥದಲ್ಲಿಯೂ ವಾಕ್ಯದ ಅನ್ವಯ ಸಮಂಜಸವಾಗುತ್ತಿರಲು ವಿಷ್ಣುವೇ ಬ್ರಹ್ಮಪುರ ಎನಿಸಿದ್ದಾನೆಂದು ನಿರ್ಬಂಧ ಮಾಡಲು ಏನು ಕಾರಣ? ಎಂಬ ಪ್ರಶ್ನೆಗೆ ಆಕಾಶ ಪಕ್ಷದಲ್ಲಿಯೇ ಅನ್ವಯವು ಕೂಡುವುದಿಲ್ಲ ಎಂಬುದನ್ನು "ಆಕಾಶಪಕ್ಷೇ ಏವ ಅನ್ವಯಾಭಾವಃ" ಎಂಬ ನ್ಯಾಯವಿವರಣದಲ್ಲಿ ಹೇಳಿದ್ದನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ "ನಚ" ಇತ್ಯಾದಿ ಟೀಕೆಯಿಂದ.

**भावदीपः** – तत्र किं यावानिति वाक्ये पूर्वोक्तहृत्पुण्डरीकस्थदहराकाशस्यैव हृदयेऽवस्थानमुच्यते । अथ आकाशपदं सप्तम्यन्तमुपेत्य हृदये हृत्स्थे आकाशे व्याप्ताकाशोऽस्तीत्युच्यते । किं वा हृदये आकाश इति दहरमनूद्य यावानिति बाह्याकाश तुल्यतया तदेव विशिष्यत इति विकल्पान् हृदि कृत्वा आद्यं निराह – **यावान् वा इत्यस्येति ।।**

"ಯಾವಾನ್ವಾ" ಎಂಬ ವಾಕ್ಯದಲ್ಲಿ ಹಿಂದೆ ಹೇಳಲ್ಪಟ್ಟ ಹೃತ್ಪುಂಡರೀಕದಲ್ಲಿ ದಹರಾಕಾಶವನ್ನೇ ಹೃದಯದಲ್ಲಿದೆ ಎಂದು ಹೇಳಲಾಗಿದೆಯೋ? ಅಥವಾ ಆಕಾಶಪದವನ್ನು ಸಪ್ತಮ್ಯಂತವಾಗಿ ವಿವಕ್ಷಿಸಿ ಹೃದಯದಲ್ಲಿರುವ ಆಕಾಶದಲ್ಲಿ ವ್ಯಾಪ್ತಾಕಾಶವಿದೆ ಎಂದು ಹೇಳಲಾಗಿದೆಯೋ? ಅಥವಾ 'ಆಕಾಶ' ಎಂದು ದಹರಾಕಾಶವನ್ನು ಅನುವಾದ ಮಾಡಿ "ಯಾವಾನ್ವಾ" ಎಂಬ ವಾಕ್ಯದಿಂದ ಬಾಹ್ಯಾಕಾಶದ ಸಮಾನತೆಯನ್ನು ಹೇಳಲಾಗಿದೆಯೋ? ಇದೇ ಮೊದಲಾದ ವಿಕಲ್ಪಗಳನ್ನು ಹೃಯದಲ್ಲಿಟ್ಟುಕೊಂಡು ಮೊದಲನೆಯ ವಿಕಲ್ಪವನ್ನು "ಯಾವಾನ್ವಾ ಇತ್ಯಸ್ಯ" ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**भावदीपः** – हृदये आकाश इत्येतावता पूर्तेरिति भावः । द्वितीयं निराह – **नहीति ।। तदभावादिति ।।** ईश्वरवदचिन्त्यशक्त्यभावेन व्याप्ताकाशस्य दहराकाशस्थत्वाभावात् । छान्दोग्यभाष्योक्तदिशा 'तमेवैकं जानथ' इति ब्रह्मण एवान्वेष्टव्यत्वोक्त्या आकाशे अन्वेष्टव्यत्वायोगाच्चेत्यर्थः ।

ಮೊದಲನೆಯ ಪಕ್ಷದಲ್ಲಿ "ಹೃದಯೇ ಆಕಾಶಃ" ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು ಎಂದು ಅಭಿಪ್ರಾಯ. ಎರಡನೆಯ ಪಕ್ಷವನ್ನು 'ನಹಿ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. 'ತದಭಾವಾತ್' ಎಂದರೆ ಈಶ್ವರನಂತೆ ಅಚಿಂತ್ಯಶಕ್ತಿ ಇಲ್ಲದ ಕಾರಣ ವ್ಯಾಪ್ತಾಕಾಶವು ದಹರಾಕಾಶದಲ್ಲಿರಲು ಸಾಧ್ಯವಿಲ್ಲ. ಛಾಂದೋಗ್ಯಭಾಷ್ಯದ ಪ್ರಕಾರ "ತಮೇವೈಕಂ ಜಾನಥ" ಎಂದು ಬ್ರಹ್ಮನಲ್ಲಿ ಮಾತ್ರ ಅನ್ವೇಷಣವನ್ನು ಹೇಳಿದ್ದರಿಂದ ಭೂತಾಕಾಶದಲ್ಲಿ ಅನ್ವೇಷಣವು ಅಯುಕ್ತವಾಗುತ್ತದೆಂದು ಅಭಿಪ್ರಾಯ.

**भावदीपः** – तृतीयं निराह – **नापीति** ।। **व्याप्तत्वेति** ।। ईश्वरवदचिन्त्यशक्त्य भावादिति भावः ।

ಮೂರನೆಯ ಪಕ್ಷವನ್ನು "ನಾಪಿ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ವ್ಯಾಪ್ತತ್ವವೆಂದರೆ ಈಶ್ವರನಂತೆ ಅಚಿಂತ್ಯಶಕ್ತಿ ಇಲ್ಲದ ಕಾರಣ ಹೃದಯಾಕಾಶವು ವ್ಯಾಪ್ತವಾಗಲು ಸಾಧ್ಯವಿಲ್ಲವೆಂದು ತಿಳಿಯಬೇಕು.

**भावदीपः** – नहि 'द्यावापृथिव्यादेर्जिज्ञास्यत्वं' 'तमेवैकं जानथ आत्मानम् अन्या वाचो विमुञ्चथ' इति हि श्रुतिरिति छान्दोग्यभाष्योक्तं दोषमाह – **मुख्यत इति** ।।

ದ್ಯಾವಾಪೃಥಿವ್ಯಾದಿಗಳಿಗೆ ಜಿಜ್ಞಾಸ್ಯತ್ವವೇ ಕೂಡುವುದಿಲ್ಲ. ಏಕೆಂದರೆ "ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥ" ಎಂದಷ್ಟೇ ಶ್ರುತಿ ಇರುತ್ತದೆ. ಆದ್ದರಿಂದ ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಲ್ಪಟ್ಟ ದೋಷವನ್ನು "ಮುಖ್ಯತಃ" ಇತ್ಯಾದಿ ವಾಕ್ಯಗಳಿಂದ ಹೇಳಿರುತ್ತಾರೆ.

**भावदीपः** – **तदाधारतयेति** प्रागुक्तदिशा ब्रह्मणि प्रकारतया जिज्ञास्यत्वमस्तीत्यतो **मुख्यत** इत्युक्तम् । वक्ष्यति च 'अवस्थितेरिति काशकृत्स्नः' इति सूत्रेऽमुख्यतो जिज्ञास्यत्वमिति भावः ।

ದ್ಯಾವಾಪೃಥಿವ್ಯಾದಿಗಳಲ್ಲಿಯೂ ಅಮುಖ್ಯವಾದ ಜಿಜ್ಞಾಸ್ಯತ್ವವನ್ನು ಹೇಳಬಹುದಲ್ಲವೇ? "ತದಾಧಾರತಯಾ" ಎಂದು ಹಿಂದೆ ಹೇಳಿದ ಪ್ರಕಾರ ಬ್ರಹ್ಮನಲ್ಲಿ ಪ್ರಕಾರವಾಗಿರುವುದರಿಂದ ಇವುಗಳ ಜಿಜ್ಞಾಸೆಯನ್ನು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ "ಮುಖ್ಯತಃ" ಎಂದು ಉತ್ತರಿಸಿದ್ದಾರೆ. "ಅವಸ್ಥಿತೇರಿತಿ ಕಾಶಕೃತ್ಸ್ನಃ" ಎಂಬ ಸೂತ್ರದಲ್ಲಿ ಅಮುಖ್ಯವಾದ ಜಿಜ್ಞಾಸ್ಯತ್ವವನ್ನೇ ಇವುಗಳಿಗೆ ಹೇಳಿದಂತಾಗುತ್ತದೆ. ಮುಖ್ಯವಾದ ಜಿಜ್ಞಾಸ್ಯತ್ವವು ಬ್ರಹ್ಮನಲ್ಲಿ ಮಾತ್ರ ಬರುತ್ತದೆ ಎಂದು ಅಭಿಪ್ರಾಯ.

**भावदीपः** – पूर्वोक्तशङ्कापरिहारकत्वेनापि तदित्यादिभाष्यमवतार्य व्याचष्टे – **नन्वेवमिति** ।। **अङ्गीकारेऽपीति** ।। यथा साक्षाद् हृत्पद्मस्थत्वे विरोधस्तथैवमङ्गीकारेऽपीत्यपेरर्थः । भाष्येऽपेक्षितं पूरयति – **नचैवमङ्गीकारेऽपीति** ।। १७ ।।

ಹಿಂದಿನ ಶಂಕೆಯ ಪರಿಹಾರಕ್ಕಾಗಿ "ತತ್" ಇತ್ಯಾದಿ ಭಾಷ್ಯವು ಹೊರಟಿದೆ ಎಂದು ಅವತಾರಿಕೆಯನ್ನು ಹೇಳಿ ವ್ಯಾಖ್ಯಾನ ಮಾಡುತ್ತಿದ್ದಾರೆ "ನನ್ವೇವಮ್" ಇತ್ಯಾದಿ ಟೀಕೆಯಿಂದ. "ಅಂಗೀಕಾರೇಽಪಿ" ಎಂದರೆ ಯಾವರೀತಿಯಾಗಿ ಹೃತ್ಪದ್ಮಸ್ಥತ್ವವನ್ನು ನೇರ ಹೇಳಿದರೆ ವಿರೋಧ ಬರುತ್ತದೆಯೋ ಅದರಂತೆ ಪರಂಪರೆಯಿಂದ ಹೃತ್ಪದ್ಮಸ್ಥಿತತ್ವವನ್ನು ಹೇಳಿದರೂ ಕೂಡ ವಿರೋಧ ಬರುತ್ತದೆಂದರ್ಥ. ಭಾಷ್ಯದಲ್ಲಿ ಅಪೇಕ್ಷಿತವಾದ ಪದಗಳನ್ನು ಪೂರ್ತಿಮಾಡಿಕೊಳ್ಳಬೇಕೆಂಬುದನ್ನು "ನಚೈವಮಂಗೀಕಾರೇಽಪಿ" ಎಂಬುದರಿಂದ ಹೇಳಿದ್ದಾರೆ.

**वाक्यार्थमञ्जरी –**

**ॐ प्रसिद्धेश्च ॐ ।।**

'दहरं विपापम्' इत्यादि तैत्तिरीये विष्णोर्हृत्पद्मस्थत्वप्रसिद्धेश्च तत्समाख्यानाद् दहरे ब्रह्मैवेत्यर्थः – **दहरमिति** ।। यत् पुण्डरीकम् अष्टदलकमलमस्ति, कीदृशं दहरम्? अल्पं विपापं शुद्धम् शरीरदोषैरपरामृष्टत्वात् परमात्मनो वेश्मभूते गृहभूतं सर्वदा तत्रोपलभ्यमानत्वात् । पुरमध्ये शरीरमध्ये संस्थितम् । राज्ञः पुरमध्ये प्रासाद इव तत्रापि हृत्पुण्डरीके दहरं गगनमस्ति । तस्मिन् गगने यदन्तर्विशोकः शोकरहितं ब्रह्मास्ति, तदुपासितव्यमित्यर्थः । अनेन तैतिरीयवाक्योदाहरणेन दिव्ये द्योतमाने व्योम्नि हृदयाकाशे सम्प्रतिष्ठितः सम्यग् व्यवस्थितः अन्तर्देहस्य अनयोरात्मपुरुषपदोपेतत्वेन स्पष्टत्वात् स्वयमुदाहृतवान् । सामान्येनोक्तत्वात् कथं ब्रह्मेति निर्धारणमित्यत आह – **ब्रह्मपुरपदेनेति** ।। 'न वधेनास्य हन्यते' इत्यस्यार्थः – **नष्टेऽपि देहेन नश्यतीति** ।। एवं न्यायविवरणोक्तयोजनां प्रदर्श्य छान्दोग्यभाष्योक्तयोजनां दर्शयति – **अथवेति** ।। प्रयोगाद् 'एतत् सत्यं ब्रह्मपुरम्' इत्यत्र ।। **तच्छब्देनेति** ।। स चासौ शब्दश्च तच्छब्दः । ब्रह्मपुरशब्देनेत्यर्थः । प्रकृतत्वाद् ब्रह्मपुरे दहरं पुण्डरीकमित्यत्र । अस्य एतत्सत्यमित्युक्तस्य । तत्र शरीरग्रहणेऽप्यत्र बाधकवशात् तत्परित्याग इति भावः । तदभावाद् व्याप्ताकाशस्य दहरस्थत्वाभावात् ।। **अयोगाच्चेति** ।। ईश्वरवदचिन्त्यशक्त्यभावेन व्याप्ताकाशस्य दहराकाशे अवस्थाना- योगाच्चेत्यर्थः । पृथिव्यभिमानिदेवानां विष्णुशेषत्वेनोपास्यत्वान्मुख्यत इत्युक्तम् ।।१७।।

ದಹರಾಧಿಕರಣ (೧-೩-೫)

## ಬ್ರಹ್ಮಮೀಮಾಂಸಾಶಾಸ್ತ್ರ

## ಹೃದಯಕಮಲದಲ್ಲಿರುವ ಆತ್ಮನು ಜೀವನಲ್ಲ

**सू – ॐ इतरपरामर्शात्स इति चेन्नासम्भवात् ॐ ॥ १८ ॥**

ಅನುವಾದ - 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬುದಾಗಿ ಪ್ರಕೃತನಾದ ಜೀವನನ್ನೇ 'ಏಷ ಆತ್ಮಾ' ಎಂಬಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶಿಸಲಾಗಿದೆ. ಆದ್ದರಿಂದ ಜೀವನೇ ಹೃದಯಪದ್ಮಸ್ಥನಾಗಬೇಕಲ್ಲವೆ ? ಎಂದು ಪ್ರಶ್ನಿಸಬಾರದು. ಹೃದಯಪದ್ಮಸ್ಥನಲ್ಲಿ ಸ್ಥಿತವಾದ ಪಾಪಲೇಪರಾಹಿತ್ಯ ಮೊದಲಾದ ಧರ್ಮಗಳು ಜೀವನಲ್ಲಿ ಸ್ವತಂತ್ರವಾಗಿ ಬರಲು ಸಾಧ್ಯವೇ ಇಲ್ಲ.

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ॐ इतरपरामर्शात्स इति चेन्नासम्भवात् ॐ ।। इतरपरामर्शात् ''स्वेन रूपेणाभिनिष्पद्यते'' (छां. ८-१२-३.) इत्युक्तस्य जीवस्य हृत्पद्मस्थात्मतया 'एष आत्मा'' (छा. ४-१४-१.) इत्येतच्छब्देन परामर्शात् ग्रहणात् । जीव एव हृत्पद्मस्थ इति चेन्न । कुतः? असम्भवात् हृत्पद्मस्थनिष्ठतया श्रुतानामपहतापाप्मत्वादिगुणानां जीवे स्वातन्त्र्येणासम्भवादित्यर्थः ।।५।।

ಅರ್ಥ -- ಇತರಪರಾಮರ್ಶಾತ್ = 'ಪರಂಜ್ಯೋತಿರುಪಸಂಪದ್ಯ' ಎಂಬುದಾಗಿ ಪ್ರಸಕ್ತನಾದ ಬ್ರಹ್ಮನಿಗಿಂತ ಭಿನ್ನನಾದ ಜೀವನು 'ಏಷ ಆತ್ಮಾ' ಎಂಬ ಪ್ರಕರಣದಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶಿಸಲ್ಪಟ್ಟಿದ್ದಾನೆ. ಆದ್ದರಿಂದ ಸಃ - ಇತಿ = ಚೇತ್, ಜೀವನೇ ಹೃದಯಪದ್ಮಸ್ಥನಾಗಿದ್ದಾನೆಂದು ಆಕ್ಷೇಪ.

ನ = ಇದು ತಪ್ಪು. ಅಸಂಭವಾತ್ = ಜೀವನಿಗೆ ಇಲ್ಲಿ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಗುಣಗಳು ಸ್ವತಂತ್ರವಾಗಿ ಬರಲು ಸಾಧ್ಯವಿಲ್ಲ.

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् – ॐ ॥ इतरपरामर्शात् स इति चेन्नासम्भवात् ॥ ॐ ॥**

**'परंज्योतिरुपसम्पद्य स्वेन रूपेणाभिनिष्पद्यते,' (छां.८-१२-३) 'एष आत्मेति होवाच' (छां.४-१५-१) इति जीवपरामर्शात् स इति चेत्,**

ಅನುವಾದ - 'ಪರಂಜ್ಯೋತಿಸ್ವರೂಪನಾದ ಪರಮಾತ್ಮನನ್ನು ಹೊಂದಿ ತನ್ನ ಸ್ವಾಭಾವಿಕವಾದ ರೂಪದಿಂದ ಪ್ರಕಟನಾಗುತ್ತಾನೆ ಇವನೇ ಜೀವಾತ್ಮನು', ಹೀಗೆ 'ಯ ಆತ್ಮಾ ಅಪಹತಪಾಪ್ಮಾ' ಎಂಬುದಾಗಿ, ಪ್ರಕೃತನಾದ ಹೃದಯಸ್ಥನಾದ ಆತ್ಮನನ್ನು 'ಏಷ ಆತ್ಮಾ' ಎಂಬ ಶ್ರುತಿಯಲ್ಲಿ ಪರಾಮರ್ಶ ಮಾಡಲಾಗಿದೆ. ಆದ್ದರಿಂದ ಜೀವಾತ್ಮನೇ ಹೃತ್ಪದ್ಮಸ್ಥನಾಗುತ್ತಾನಲ್ಲವೇ ?

ಪ್ರತಿಪದಾರ್ಥ -- ಭಗವಂತನಲ್ಲಿರುವ ಹೃತ್‌ಪದ್ಮಸ್ಥತ್ವಲಿಂಗವನ್ನು ಆಕ್ಷೇಪಮಾಡಿ ಸಮಾಧಾನವನ್ನು ತೋರಿಸುತ್ತಾ ಸೂತ್ರದಲ್ಲಿರುವ ಆಕ್ಷೇಪ ಭಾಗವನ್ನಷ್ಟೇ ವ್ಯಾಖ್ಯಾನಿಸುತ್ತಿದ್ದಾರೆ -

ಪರಂಜ್ಯೋತಿಃ = ಪರಂಜ್ಯೋತಿಸ್ವರೂಪನಾದ ಪರಮಾತ್ಮನನ್ನು, ಉಪಸಂಪದ್ಯ = ಹೊಂದಿ, ಸ್ವೇನ ರೂಪೇಣ = ಸ್ವಾಭಾವಿಕವಾದ ತನ್ನ ರೂಪದಿಂದ, ಅಭಿನಿಷ್ಪದ್ಯತೇ = ಪ್ರಕಟಗೊಳ್ಳುತ್ತಾನೆ. ಏಷ ಆತ್ಮಾ = ಇವನೇ ಜೀವಾತ್ಮನು, ಇತಿ = ಹೀಗೆ, ಹೋವಾಚ = ಹೇಳಿದರು ಎಂದು ಪ್ರಸಿದ್ಧಿ, ಇತಿ = ಎಂದು, ಜೀವಪರಾಮರ್ಶಾತ್ = 'ಯ ಆತ್ಮಾ ಅಪಹತಪಾಪ್ಮಾ' ಎಂಬಲ್ಲಿ ಜೀವನನ್ನು ಪರಾಮರ್ಶ ಮಾಡಿರುವುದರಿಂದ, ಸಃ = ಜೀವನು, ಹೃತ್‌ಪದ್ಮಸ್ಥನು, ಇತಿ ಚೇತ್ = ಹೀಗೆ ಆಕ್ಷೇಪವುಂಟಾದರೆ -(१)

**भाष्यम् – न । तस्य स्वतोऽपहतपाप्मत्वाद्यसम्भवात् ॥**

(१) भाष्यदीपिका – भगवतो हृत्पद्मस्थत्वमाक्षिप्य समादधत्सूत्रमुपन्यस्याऽक्षेपांशं तावद् व्याचष्टे – इतरेति ॥ 'निष्पद्यते' इत्यनन्तरमित्युक्तस्येति शेषः । अस्य च समासप्रविष्टजीवपदेनान्वयः । अनेन सूत्रे अस्मिन्नस्येत्यस्यानुवृत्तिः । इतरपदं च सिद्धान्त्यभिमतब्रह्मप्रतियोगिजीवपरम् । अत एव श्रुतावेष इति जीवपरामर्शः । सिद्धान्ते श्रुत्यर्थस्तु वक्ष्यते ।

ಅನುವಾದ - ಇದು ತಪ್ಪು. ಏಕೆಂದರೆ ಜೀವನು ಈಶ್ವರನನ್ನು ಅಪೇಕ್ಷಿಸದೇ ಸ್ವತಂತ್ರವಾಗಿ ಅಪಹತಪಾಪ್ಮನಾಗಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- 'ಧೃತೇಶ್ಚ' ಸೂತ್ರದಿಂದ 'ಅಸ್ಯ ಅಸ್ಮಿನ್ನುಪಲಬ್ಧೇಃ' ಎಂಬುದನ್ನು ಅನುವೃತ್ತಿ ಮಾಡಿಕೊಂಡು, ಪರಿಹಾರ ಅಂಶವನ್ನಷ್ಟೇ ವ್ಯಾಖ್ಯಾನಿಸುತ್ತಿದ್ದಾರೆ.

ನ = ಇದು ತಪ್ಪು, ತಸ್ಯ = ಆ ಜೀವನಿಗೆ, ಸ್ವತಃ = ಸ್ವಾಭಾವಿಕವಾಗಿ, ಅಪಹತಪಾಪ್ಮತ್ವಾದಿ = ಅಪಹತಪಾಪತ್ವ ಮೊದಲಾದ ಧರ್ಮಗಳು, ಅಸಂಭವಾತ್ = ಇರುವುದಿಲ್ಲ.(१)

## श्रीपद्मनाभतीर्थविरचितसत्तर्कदीपावळिः

### ॐ इतरपरामर्शात् स इति चेन्नासम्भवात् ॐ ।। १८ ।।

**'एष आत्माऽपहतपाप्मा' इत्यादिवाक्यवशाद् दहराकाशस्थितो विष्णुरेव द्यावापृथिव्याधार इत्युक्तम्, तन्न ।**

'ಇತರ' ಇತ್ಯಾದಿ ಸೂತ್ರದ ಅರ್ಥ ಹೀಗಿದೆ - 'ಏಷ ಆತ್ಮಾ ಅಪಹತಪಾ... ' ಇತ್ಯಾದಿ ವಾಕ್ಯದ ಬಲದಿಂದ ಹೃದಯದ ದಹರಾಕಾಶದಲ್ಲಿರುವವನು, ವಿಷ್ಣುವೇ ಆಗಿದ್ದಾನೆ. ಇವನು ದ್ಯಾವಾಪೃಥಿವ್ಯಾದಿಗಳಿಗೆ ಆಧಾರನಾಗಿದ್ದಾನೆಂದು ಹೇಳಲಾಯಿತು. ಇದು ತಪ್ಪು.

(१) भाष्यदीपिका – धृतिसूत्रात् 'अस्यास्मिन् उपलब्धेः' इत्यस्यानुवृत्तिमभिप्रेत्य परिहारांशं व्याचष्टे – नेति ।। हृत्पद्मस्थो न जीव इत्यर्थः । कुतो नेत्यतस्तत्रानुवृत्तवाक्येन 'अस्मिन्' प्रकरणे 'अस्य' अपहतपाप्मत्वादेरुपलब्धेरित्यस्य हेतोर्लाभात् तमनुपन्यस्योक्तहेतोर्जीवे निरवकाशत्वोक्तिपरतयाऽसम्भवादित्यंशं व्याचष्टे – तस्येति ।। जीवस्येत्यर्थः । मुक्तभावमादाय जीवे सम्भवाद् असिद्धिवाराणाय – स्वत इति ।। स्वातन्त्र्येणेत्यर्थः । सत्यकामत्वादिकमादिशब्दार्थः । अनेन – 'अस्मिन्' 'परं ज्योतिः' इति वाक्येऽभिव्यक्तिकर्तृत्वेनोक्तस्य प्रकृतस्योपसम्पत्तिकर्मीभूताद् ब्रह्मण इतरस्यास्य जीवस्याऽत्मेति 'य आत्मा' इत्युक्तहृत्पद्मस्थात्मत्वविधानाय 'एषः' इत्येतच्छब्देन 'परामर्शात्' उपस्थापनात् । जीवपरामर्शकैतच्छब्दश्रवणादिति यावत् । दहरे स जीव एव, न विष्णुरिति चेत् – न हृत्पद्मस्थो जीवः । कुतः ? अस्मिन् प्रकरणेऽस्यापहतपाप्मत्वादेरुपलब्धेः श्रवणात् । अस्य चास्मिन् जीवे स्वतोऽसम्भवादिति सूत्रार्थ उक्तो भवति ।

**दहराकाशस्थितस्य जीवस्यैव 'परं ज्योतिरुपसम्पद्य स्वेन रूपेणाभिनिष्पद्यते, एष आत्मेति होवाच' इति परामर्शादिति चेत्,**

ದಹರಾಕಾಶದಲ್ಲಿರುವ ಜೀವನೇ 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮೇತಿ ಹೋವಾಚ' ಎಂಬುದಾಗಿ ಪರಾಮರ್ಶಿಸಲ್ಪಟ್ಟಿದ್ದಾನೆ. ಹೀಗಿರುವಾಗ ಇಂತಹ ಜೀವನನ್ನೇ ದಹರಾಕಾಶಸ್ಥಿತನೆಂದು ಹೇಳಬೇಕಲ್ಲವೆ?

**मैवम् । जीवस्यापहतपाप्मत्वादिधर्मासम्भवेनात्रात्मशब्देन निर्देशासम्भवात्।**

ಈ ಆಕ್ಷೇಪವು ತಪ್ಪು, ಜೀವನಲ್ಲಿ ಅಪಹತಪಾಪ್ಮತ್ವ ಮೊದಲಾದ ಧರ್ಮಗಳು ಅಸಂಭಾವಿತಗಳಾಗಿವೆ. ಆದ್ದರಿಂದ ಶ್ರುತಿಯಲ್ಲಿರುವ ಆತ್ಮಶಬ್ದದಿಂದ ಜೀವನನ್ನು ನಿರ್ದೇಶ ಮಾಡಲು ಸಾಧ್ಯವಿಲ್ಲ.

**'परं ज्योतिरुपसम्पद्य स्वेन रूपेणाभिनिष्पद्यते, स तत्र पर्येति जक्षन् क्रीडन् रममाणः' इत्युपरितनवाक्येन मुक्तजीवप्रतीतेः । मुक्तस्यापहतपाप्मत्वादिगुणकात्मत्व-सम्भव इति चेत्,**

'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ, ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂಬ ಮುಂದಿನ ವಾಕ್ಯದ ಬಲದಿಂದ ಮುಕ್ತನಾದ ಜೀವನು ಪ್ರಸಕ್ತನಾಗಿದ್ದಾನೆಂದು ತಿಳಿಯುತ್ತದೆ. ಮುಕ್ತನಾದ ಜೀವನಲ್ಲಾದರೂ ಅಪಹತಪಾಪ್ಮತ್ವ ಮೊದಲಾದ ಗುಣಗಳಿರುವುದರಿಂದ ಆತ್ಮಶಬ್ದದಿಂದ ಅವನನ್ನು ನಿರ್ದೇಶ ಮಾಡಬಹುದಲ್ಲವೆ?

**मैवम् । अमुख्यार्थत्वात् । नहि मुख्ये सत्यमुख्यं युज्यते ।**

ಈ ಶಂಕೆಯು ಸರಿಯಲ್ಲ, ಹಾಗೇನಾದರೂ ಮುಕ್ತ ಜೀವನನ್ನು ನಿರ್ದೇಶ ಮಾಡಿದರೆ, ಅಮುಖ್ಯಾರ್ಥವನ್ನು ಶ್ರುತಿಗೆ ಹೇಳಿದಂತಾಯಿತು. ಮುಖ್ಯಾರ್ಥವನ್ನೇ ಸುಲಭವಾಗಿ ಹೇಳಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ನ್ಯಾಯವಲ್ಲ. ಆದ್ದರಿಂದ ಪರಮಾತ್ಮನ ಪ್ರಸಾದದಿಂದ ಪಡೆಯಲ್ಪಟ್ಟ ಅಪಹತಪಾಪ್ಮತ್ವವೇ ಮೊದಲಾದ ಗುಣಗಳುಳ್ಳ, ಅಮುಖ್ಯವಾದ ಆತ್ಮಶಬ್ದ ಪ್ರತಿಪಾದ್ಯನಾದ ಮುಖ್ಯಜೀವನನ್ನು ಪರಿತ್ಯಾಗ ಮಾಡಿ ಮುಖ್ಯನಾದ ಪರಮಾತ್ಮನೇ ಅಪಹತಪಾಪ್ಮತ್ವಾದಿಗುಣಗಳಿಂದ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ.

**नचैष य आत्मेति जीवपरामर्शविरोधः, यं परं ज्योतिश्शब्दाभिधेयमुपसम्पद्य स्वेन रूपेणाभिनिष्पद्यते । एष आत्मेति परमात्मन एव परामर्शोपपत्तेः ।**

**।। इति सत्तर्कदीपावळ्याम् दहराधिकरणम् ।।**

ದಹರಾಧಿಕರಣ (೧-೩-೫)

ಹಾಗಾದರೆ 'ಏಷಃ ಯ ಆತ್ಮಾ' ಎಂಬ ವಾಕ್ಯದಿಂದ ಜೀವನನ್ನು ಪರಾಮರ್ಶ ಮಾಡಿದ್ದಕ್ಕೆ ವಿರೋಧ ಬರುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ಯಾವ ಶ್ರೇಷ್ಠನಾದ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನಾದ ಪರಮಾತ್ಮನನ್ನು ಹೊಂದಿ ತನ್ನ ನೈಜಸ್ವರೂಪವನ್ನು ಪಡೆಯತ್ತಾನೋ ಅಂತಹ ವಿಷ್ಣುವೇ 'ಆತ್ಮಾ' ಎಂಬ ಶಬ್ದದಿಂದ ನಿರ್ದೇಶಿಸಲ್ಪಟ್ಟಿದ್ದಾನೆ. ಹೀಗೆ 'ಏಷ ಆತ್ಮಾ' ಎಂಬ ಶ್ರುತಿಯಲ್ಲಿರುವ 'ಏತತ್' ಪದದಿಂದ ಪರಮಾತ್ಮನನ್ನೇ ಪರಾಮರ್ಶೆ ಮಾಡಬೇಕು.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ದಹರಾಧಿಕರಣವು ಮುಗಿಯಿತು ॥

**तत्वप्रकाशिका –**

**ॐ इतरपरामर्शात् स इति चेन्नासम्भवात् ॐ ।। १८ ।।**

**भगवतो हृत्पद्मस्थत्वमाक्षिप्य समादधत्सूत्रमुपन्यस्याऽऽक्षेपांशं तावद्व्याचष्टे – इतरेति ।।**

ಭಗವಂತನಲ್ಲಿ ಸಾಧಿಸಲ್ಪಟ್ಟ ಹೃತ್ಪದ್ಮಸ್ಥತ್ವವೆಂಬ ಲಿಂಗವನ್ನು ಆಕ್ಷೇಪ ಮಾಡಿ ಅದರ ಸಮಾಧಾನಕ್ಕಾಗಿ ಸೂತ್ರವನ್ನು ರಚಿಸಿ, ಆಕ್ಷೇಪಾಂಶವನ್ನು ಮೊದಲು ವ್ಯಾಖ್ಯಾನ ಮಾಡುತ್ತಿದ್ದಾರೆ 'ಇತರ' ಇತ್ಯಾದಿಯಾಗಿ.

**तत्वप्रकाशिका – 'परं ज्योतिरुपसम्पद्य स्वेन रूपेण अभिनिष्पद्यते' इत्युक्तस्य जीवस्य 'एष आत्मेति होवाच' इति हृत्यपद्मस्थात्मतया परामर्शाज्जीव एव हृत्पद्मस्थ इत्यर्थः ।**

'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂಬ ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟ ಜೀವನನ್ನು 'ಏಷ ಆತ್ಮೇತಿ ಹೋವಾಚ' ಎಂಬುದಾಗಿ ಹೃದಯಪದ್ಮಸ್ಥನೆಂದು ಪರಾಮರ್ಶ ಮಾಡಲಾಗಿದೆ. ಹಾಗಾಗಿ ಹೃದಯಪದ್ಮಸ್ಥನಾದವನು ಜೀವನೇ ಆಗಿದ್ದಾನೆಂದು ಆಕ್ಷೇಪ.

**तत्वप्रकाशिका – परिहारांशं व्याचष्टे – नेति ।। न जीवो हृत्पद्मस्थः । हृत्पद्मस्थेऽपहतपाप्मत्वादिगुणश्रवणात्तेषां जीवेऽसम्भवात् ।**

ಈ ಆಕ್ಷೇಪಕ್ಕೆ ಪರಿಹಾರ ನೀಡುವ ಸೂತ್ರದ ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ನ' ಇತ್ಯಾದಿ ಮಾತುಗಳಿಂದ. ಜೀವನು ಹೃತ್ಪದ್ಮಸ್ಥನಲ್ಲವೆಂದು ಅರ್ಥ. ಏಕೆಂದರೆ ಹೃತ್ಪದ್ಮಸ್ಥನಲ್ಲಿ ಅಪಹತಪಾಪ್ಮತ್ವವೇ ಮೊದಲಾದ ಗುಣಗಳು ಶ್ರುತವಾಗಿವೆ. ಇಂತಹ ಗುಣಗಳು ಜೀವನಲ್ಲಿ ಅತ್ಯಂತ ಅಸಂಭಾವಿತ.

**तत्वप्रकाशिका – नच वाच्यं मुक्तजीवे तत्सम्भवात् जीव एव भाविभावेनोच्यत इति ।**

ಮುಕ್ತಜೀವನಲ್ಲಿ ಅಪಹತಪಾಪ್ಮತ್ವಾದಿಗುಣಗಳು ಇರುವುದರಿಂದ, ಮುಂದೆ ಬರುವ ಗುಣಗಳನ್ನು ವಿವಕ್ಷಿಸಿ ಸಂಸಾರಾವಸ್ಥೆಯಲ್ಲಿಯೇ ಅಂತಹ ಗುಣಗಳುಳ್ಳವನೆಂದು ಹೇಳಿರಬಹುದಲ್ಲವೆ? ಎಂದು ಪ್ರಶ್ನಿಸಬಾರದು.

**तत्वप्रकाशिका – मुक्तस्याप्यस्वातन्त्र्येण तदसम्भवात् । अतः स्वातन्त्र्येणापहतपाप्मत्वादिगुणो हरिरेव हृत्पद्मगत इति भावः ।।**

ಮುಕ್ತನಲ್ಲಿ ಅಪಹತಪಾಪ್ಮತ್ವ ಮೊದಲಾದ ಗುಣಗಳು ಇರಬಹುದು, ಆದರೆ ಅಸ್ವಾತಂತ್ರ್ಯದಿಂದಷ್ಟೇ ಆ ಗುಣಗಳು ಬಂದಿರುತ್ತವೆ. ಸ್ವತಂತ್ರವಾಗಿ ಅಪಹತಪಾಪ್ಮತ್ವಾದಿಗುಣಗಳುಳ್ಳ ಶ್ರೀಹರಿಯನ್ನು ವಿವಕ್ಷಿಸುವುದೇ ನ್ಯಾಯಸಮ್ಮತವಾದುದು. ಮುಖ್ಯವಾದ ಅರ್ಥವನ್ನು ಹೇಳಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ತಪ್ಪು. ಆದ್ದರಿಂದ ಶ್ರೀಹರಿಯೇ ಹೃತ್ಪದ್ಮದಲ್ಲಿದ್ದಾನೆಂದು ಸಿದ್ಧವಾಯಿತು.

**भावदीपः –**

**ॐ इतरपरामर्शात् स इति चेन्नासम्भवात् ॐ ।। १८ ।।**

**परामर्शादिति ।।** ''एष सम्प्रसादोऽस्माच्छरीरात् समुत्थाय परं ज्योतिः'' इति पूर्ववाक्ये ''सम्प्रसाद'' पदेन प्रकृतस्य ''अभिनिष्पद्यते'' इति कर्तृत्वेनोक्तस्य जीवस्य ''एषः'' इति परामृश्य आत्मपदेन 'य आत्माऽपहतपाप्मा विजरो विमृत्युः' इत्युक्त हृत्पद्मस्थात्मत्वविधानादित्यर्थः ।

ಟೀಕೆಯಲ್ಲಿ ''ಪರಾಮರ್ಶಾತ್'' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ''ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿಃ'' ಎಂಬ ಹಿಂದಿನ ವಾಕ್ಯದಲ್ಲಿ ''ಸಂಪ್ರಸಾದ'' ಪದದಿಂದ ಪ್ರಕೃತನಾದವನಿಗೆ ''ಅಭಿನಿಷ್ಪದ್ಯತೇ'' ಎಂದು ಕರ್ತೃತ್ವೇನ ಹೇಳಲಾದ ಜೀವನನ್ನೇ ''ಏಷಃ'' ಎಂದು ಪರಾಮರ್ಶ ಮಾಡಿ ಆತ್ಮಪದದಿಂದ ''ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುಃ'' ಎಂಬಲ್ಲಿ ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ಆತ್ಮನೆಂದು ಹೇಳಲಾಗಿದೆ ಎಂದು ಅಭಿಪ್ರಾಯ.

ದಹರಾಧಿಕರಣ (೧-೩-೫)

**भावदीपः** – शेषपूर्त्या स इति प्रतिज्ञार्थमाह – **जीव एवेति** ।। नेत्यस्य पूर्वतनप्रतिज्ञयाऽन्वयं दर्शयन् हेतुसाध्ययोरवैय्यधिकरण्याय भाष्यं व्याचष्टे – **न जीव इति** ।।

ವಾಕ್ಯದ ಉಳಿದ ಪದಗಳನ್ನು ಪೂರ್ತಿ ಮಾಡುವ ಮೂಲಕ "ಸಃ" ಎಂಬ ಪ್ರತಿಜ್ಞಾರ್ಥವನ್ನು ಹೇಳುತ್ತಿದ್ದಾರೆ "ಜೀವ ಏವ" ಎಂಬುದಾಗಿ. "ನ" ಎಂಬುದಕ್ಕೆ ಹಿಂದಿನ ಪ್ರತಿಜ್ಞೆಯೊಂದಿಗೆ ಅನ್ವಯವನ್ನು ತೋರಿಸುತ್ತಾ ಹೇತು ಮತ್ತು ಸಾಧ್ಯಗಳಿಗೆ ವೈಯ್ಯಧಿಕರಣವನ್ನು ಪರಿಹರಿಸುತ್ತಾ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ನ ಜೀವ" ಇತ್ಯಾದಿಯಾಗಿ.

**भावदीपः** – स्वत इति पदं शङ्कापूर्वं व्यनक्ति – **नचेति** ।। **स्वातन्त्र्येणेति** ।। सापेक्षनिरपेक्षयोर्निरपेक्षमेव श्रुतौ स्वीकर्तव्यमिति भावः ।। १८ ।।

"ಸ್ವತಃ" ಎಂಬ ಪದವನ್ನು ಶಂಕೆ ಮಾಡುವ ಮೂಲಕ ವ್ಯಾಖ್ಯಾನಿಸುತ್ತಿದ್ದಾರೆ "ನಚ" ಇತ್ಯಾದಿ ಟೀಕೆಯಿಂದ. "ಸ್ವಾತಂತ್ರ್ಯೇಣ" ಎಂದರೆ ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಶ್ರುತ್ಯರ್ಥವೆಂದು ಪರಿಗಣಿಸಬೇಕೆಂದು ಅಭಿಪ್ರಾಯ.

**वाक्यार्थमञ्जरी** – ॐ **इतरपरामर्शात्स इति चेन्नासम्भवात्** ॐ ।। 'परं ज्योतिरुपसम्पद्य' इति प्रकृतस्येतरस्य जीवस्यैष आत्मेति परामर्शात् स जीव एव दहरस्थ इति चेन्न । तस्य स्वतोऽपहतपाप्मत्वासम्भवादित्यर्थः ।। **भाविभावेनेति**।। यूपं तक्षतीत्यादिवद् भविष्यदभिप्रायेणेत्यर्थः ।। १८ ।।

## ಸತ್ಯಕಾಮತ್ವ, ಪಾಪಾದ್ಯಲೇಪ ಧರ್ಮಗಳು ಜೀವನಲ್ಲಿಲ್ಲ

**सू – ॐ उत्तराच्चेदाविर्भूतस्वरूपस्तु ॐ ॥ ९ ॥**

ಅನುವಾದ - 'ಸ ತತ್ರ ಪರ್ಯೇತಿ' ಎಂಬ ಮುಂದಿನ ವಾಕ್ಯದಲ್ಲಿ ಸತ್ಯಕಾಮತ್ವವೇ ಮೊದಲಾದ ಧರ್ಮಗಳನ್ನು ಜೀವನಲ್ಲಿ ಹೇಳಲಾಗಿದೆ. ಈ ಹೇತುವಿನಿಂದ ಅಪಹತಪಾಪ್ಮತ್ವ ಮೊದಲಾದವೂ ಸಹ ಜೀವನಲ್ಲಿ ಬರುತ್ತವಲ್ಲವೆ ? ಎಂದು ಪ್ರಶ್ನಿಸಬಾರದು. ಏಕೆಂದರೆ ಅದೇ ವಾಕ್ಯದಲ್ಲಿ ಮುಕ್ತನಾದ ಜೀವನ ಉಲ್ಲೇಖವಿದೆ ಹೊರತು ಸಂಸಾರಾವಸ್ಥೆಯಲ್ಲಿರುವ ಹೃದಯದಲ್ಲಿ ನೆಲೆಸಿರುವ ಜೀವನ ಉಲ್ಲೇಖವಿಲ್ಲ. ಮೋಕ್ಷವನ್ನು ಪಡೆದಾಗ ಪಾಪರಹಿತನಾಗಿದ್ದರೂ ಸಂಸಾರಕಾಲದಲ್ಲಿ ಪಾಪಗಳಿಂದ ಯುಕ್ತನೇ ಆಗಿರುತ್ತಾನೆ.

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — ॐ उत्तराच्चेदाविर्भूतस्वरूपस्तु ॐ ॥ तुशब्द एवार्थे । नेतिशेषः । तथाच उत्तरात् "स तत्र पर्येति" (छा. ८-१२-३.) इत्युत्तरवाक्यात् । जीवस्य सत्यकामत्वादिप्रतीतेः । तत एव विशोकत्वादेः सम्भवात् । स एव हृत्पद्मस्थ इति चेन्न । कुतः? यतस्तद्वाक्यो "स्वेन" इत्युत्तरवाक्यबलात् आविर्भूतस्वरूपो मुक्त एव प्रतिपाद्यः । न जीवमात्रम् । मुक्तश्च न स्वतोऽपहतपाप्मत्वादिगुणकः । अतो न तस्यापि हृत्पद्मस्थत्वमित्यर्थः ॥६॥

ಅರ್ಥ -- 'ತು' ಎಂಬ ಶಬ್ದವು 'ಏವ' ಎಂಬ ಅರ್ಥದಲ್ಲಿದೆ. 'ನ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಆದ್ದರಿಂದ ಉತ್ತರಾತ್= 'ಸ ತತ್ರ ಪರ್ಯೇತಿ' ಎಂಬ ಮುಂದಿನ ವಾಕ್ಯದಲ್ಲಿ ಜೀವನಿಗೆ ಸತ್ಯಕಾಮತ್ವಗಳು ಪ್ರತೀತವಾಗುತ್ತಿವೆ ಆದ್ದರಿಂದಲೇ ವಿಶ್ವಲೋಕತ್ವಾದಿಗಳನ್ನೂ ಕೂಡಿಸಬಹುದು. ಈ ಕಾರಣದಿಂದ ಜೀವನು ಹೃದಯಪದ್ಮಸ್ಥನಾಗುತ್ತಾನಲ್ಲವೆ? ಎಂದರೆ ಇದು ತಪ್ಪು. ಏಕೆಂದರೆ ಯಾವ ವಾಕ್ಯದಲ್ಲಿ ಸತ್ಯಕಾಮತ್ವಾದಿಗಳು ಶ್ರುತವಾಗಿವೆಯೋ ಅದೇ ವಾಕ್ಯದಲ್ಲಿ 'ಸ್ವೇನ ರೂಪೇಣ ಜೀವೋ ಅಭಿನಿಷ್ಪದ್ಯತೇ' ಎಂಬುದಾಗಿ ಆವಿರ್ಭೂತ ಸ್ವರೂಪನಾದ ಮುಕ್ತಜೀವನ ಉಲ್ಲೇಖವಿದೆ, ಹೊರತಾಗಿ ಜೀವಸಾಮಾನ್ಯನ ಉಲ್ಲೇಖವಿಲ್ಲ. ಮುಕ್ತನಾದರೂ ಸ್ವಾಭಾವಿಕವಾಗಿ ಅಪಹತಪಾಪ್ಮತ್ವ ಮುಂತಾದ ಗುಣಗಳಿಂದ ಕೂಡಿರುವವನು ಅಲ್ಲ. ಆದ್ದರಿಂದ ಮುಕ್ತನಿಗೂ ಕೂಡ ಹೃದಯಪದ್ಮಸ್ಥತ್ವವು ಬರುವುದಿಲ್ಲ.

**श्रीमदानन्दतीर्थभगवत्पादाचार्यविरचित-**

# ब्रह्मसूत्रभाष्यम्

**भाष्यम् — ॐ ॥ उत्तराच्चेदाविर्भूतस्वरूपस्तु ॥ ॐ**

**'स तत्र पर्येति जक्षन् क्रीडन् रममाणः' (छां.८-१२-३) इत्याद्युत्तरवचनाज्जीव एवेति चेत्,**

ಅನುವಾದ - ಛಾಂದೋಗ್ಯದ ಮುಂದಿನ ನಾಲ್ಕನೆಯ ಖಂಡದಲ್ಲಿ, 'ಮುಕ್ತ ಜೀವನು ಭಗವಂತನ ಲೋಕದಲ್ಲಿ ಸ್ವೇಚ್ಛೆಯಿಂದ ತಿನ್ನುತ್ತಾ ಆಟವಾಡುತ್ತಾ ಸಂಚರಿಸುತ್ತಾನೆ' ಎಂದು ಹೇಳಲಾಗಿದೆ. ಆದ್ದರಿಂದಲೂ ಜೀವನೇ ಹೃತ್ಪದ್ಮಸ್ಥನಾಗಬೇಕಲ್ಲವೇ ?

ಪ್ರತಿಪದಾರ್ಥ -- ಜೀವನಲ್ಲಿ ಅಪಹತಪಾಪ್ಮತ್ವವನ್ನು ಏಕೆ ಹೇಳಬಾರದು? ಎಂದು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರವನ್ನು ಉಪನ್ಯಾಸ ಮಾಡುತ್ತಾ ಆಕ್ಷೇಪಾಂಶವನ್ನಷ್ಟೇ ವ್ಯಾಖ್ಯಾನಿಸುತ್ತಿದ್ದಾರೆ.

'ಸಃ = ಜೀವನು, ತತ್ರ = ಮೋಕ್ಷದಲ್ಲಿ, ಜಕ್ಷನ್ = ಸ್ವೇಚ್ಛೆಯಿಂದ ತಿನ್ನುತ್ತಾ, ಕ್ರೀಡನ್ = ಆಟವಾಡುತ್ತಾ, ರಮಮಾಣಃ = ವಿಹಾರ ಮಾಡುತ್ತಾ, ಪರ್ಯೇತಿ = ಸಂಚರಿಸುತ್ತಾನೆ', ಇತ್ಯಾದಿ ವಚನಾತ್ = ಇವೇ ಮೊದಲಾದ ಛಾಂದೋಗ್ಯದ ಮುಂದಿನ ವಾಕ್ಯಗಳಿಂದ, ಜೀವ ಏವ = ಜೀವನೇ ಹೃತ್ಪದ್ಮಸ್ಥನು, ಇತಿ ಚೇತ್ = ಇಷ್ಟು ಆಕ್ಷೇಪವುಂಟಾದರೆ -(१)

**भाष्यम् — न । तत्र हि परमेश्वरप्रसादादाविर्भूतस्वरूपो मुक्त उच्यते ।**

ಅನುವಾದ - ಇದು ತಪ್ಪು. ಏಕೆಂದರೆ, ಪರಮಾತ್ಮನ ಅನುಗ್ರಹದಿಂದಷ್ಟೇ, ಜೀವನು ತನ್ನ ಸ್ವರೂಪದಲ್ಲಿರುವ ಸುಖವನ್ನು ಹೇಗೆ ಅನುಭವಿಸುತ್ತಾನೆಂಬುದನ್ನು ಈ ಶ್ರುತಿಯು ವರ್ಣಿಸುತ್ತಿದೆ.

ಪ್ರತಿಪದಾರ್ಥ -- 'ಪರಂಜ್ಯೋತಿರುಪಸಂಪದ್ಯ' ಎಂಬ ಶ್ರುತಿಯಲ್ಲಿ, ಜೀವನಿಗೆ

(१) भाष्यदीपिका – जीवस्यापहतपाप्मत्वाद्यसम्भवमाक्षिप्य समादधत्सूत्रमुपन्यस्याऽक्षेपांशं तावद् व्याचष्टे – उत्तरादिति ।। 'इत्याद्युत्तरवचनात्' एवंरूपाद् दहरवाक्यापेक्षया परामर्शवाक्यापेक्षया वाऽनन्तराद् वचनादित्यर्थः । वचनादित्यनन्तरम् अस्यास्मिन्नुपलब्धेरित्यनुषज्यते । सम्भवादिति शेषः । 'अस्य' सत्यकामत्वस्य 'अस्मिन्' जीवे प्रतीतेस्तत एव विशोकत्वादेः 'उपलब्धेः' सिद्धेरुक्तगुणानां सम्भवादिति तदर्थः । जीव इत्यनेन पूर्वसूत्रात् स इत्यस्यानुवृत्तिः सूचिता । नेश्वर इति एवशब्दार्थः । हृत्पद्मस्थ इति वर्तते ।

ಅಪಹತಪಾಪ್ಮತ್ವಾದಿಗುಣಗಳು ಇವೆ ಎಂದಷ್ಟೇ ಹೇಳಲಾಗಿದೆ. ಪರಮಾತ್ಮನ ಆಧೀನನೆಂದು ಹೇಳಿಲ್ಲವಲ್ಲ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಪ್ರತಿಪದಾರ್ಥ -- ನ = ಇದು ತಪ್ಪು, ತತ್ರಹಿ = ಆ ಶ್ರುತಿಯಲ್ಲಿ, ಪರಮೇಶ್ವರಪ್ರಸಾದಾತ್ = ಭಗವಂತನ ಅನುಗ್ರಹದಿಂದಲೇ, ಆವಿರ್ಭೂತಸ್ವರೂಪಃ = ತನ್ನ ಸ್ವರೂಪಸುಖದ ಅಭಿವ್ಯಕ್ತಿಯುಳ್ಳವನು, ಮುಕ್ತಃ = ಮುಕ್ತನೆಂದು, ಉಚ್ಯತೇ = ಹೇಳಲ್ಪಟ್ಟಿದ್ದಾನೆ.(೧)

**भाष्यम् – यत्प्रसादात् स मुक्तो भवति स भगवान् पूर्वोक्तः ॥**

ಅನುವಾದ - ಯಾರ ಅನುಗ್ರಹದಿಂದ ಜೀವನು ಮೋಕ್ಷವನ್ನು ಪಡೆಯುತ್ತಾನೋ ಅಂತಹವನೇ ಪರಮಾತ್ಮನು. ಅವನೇ ಪರಂಜ್ಯೋತಿಯು ಎಂದು ಹಿಂದಿನ ವಾಕ್ಯದ ಅಭಿಪ್ರಾಯ.

ಪ್ರತಿಪದಾರ್ಥ -- ಯತ್ ಪ್ರಸಾದಾತ್ = ಯಾರ ಪ್ರಸಾದದಿಂದ, ಸಃ = ಜೀವನು, ಮುಕ್ತೋ ಭವತಿ = ಮೋಕ್ಷವನ್ನು ಪಡೆಯುತ್ತಾನೋ, ಸಃ = ಅಂತಹ, ಭಗವಾನ್ = ಭಗವಂತನು, ಪೂರ್ವೋಕ್ತಃ = ಹಿಂದೆ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಗುಣಗಳುಳ್ಳವನೆಂದು

---

(१) **भाष्यदीपिका** – नञनुवृत्त्या परिहारांशं व्याचष्टे – **नेति** ॥ नैतद्वाक्यबलेन जीवस्य सत्यकामत्वादिगुणान् सम्भाव्यहृत्पद्मस्थत्वं वाच्यमित्यर्थः । कुतो नेत्यतोऽभिहितम् **'आविर्भूतस्वरूपस्तु'** इत्यंशं तत्रेति पदाध्याहारेण व्याचष्टे – **तत्रेति** ॥ **'स तत्र'** इत्युत्तरवाक्य इत्यर्थः । तत्र आविर्भूतस्वरूप उच्यत इति सम्बन्धः । **'आविर्भूतस्वरूपः'** इत्यस्य व्याख्यानं मुक्त इति । हिशब्दो यत इत्यर्थे । उत्तरवचनादित्यत्रापि सम्बध्यते । तथा च **'उत्तरवचनात्' 'स्वेन रूपेण'** इति जडदेहत्यागोत्तरकालीन-स्वरूपाभिव्यक्तिश्रुतेः । अत्र मुक्तस्योक्तेः हृत्पद्मस्य च देहान्तरवृत्तितया मुक्तत्वायोगान्नायं जीव इति भावः । नन्वस्य मुक्तविषयत्वेऽपि मुक्तस्यापि जीवत्वे नास्त्येव जीवेऽपहतपाप्मत्वादिसम्भवः । नच तस्य हृत्पद्मस्थत्वायोगः, यतो जीवो भाविभावेनापहतपाप्मत्वादिगुणः इदानीं हृत्पद्मगततयोच्यत इत्यत आह – **परमेश्वरप्रसादादिति** ॥ एवेत्यनुवर्तते । अनेन तुशब्दो व्याख्यातः । परमेश्वरप्रसादादित्यनेन उत्तरादित्येतदुत्तमादित्यपि व्याख्यातम् । अत्र मुक्त इति न सौत्रपदव्याख्यानमात्रम् । किन्तूद्देश्यसमर्पकं च । अनेनाऽवृत्तिस्तुशब्दस्य यथाश्रुतान्वयश्च सूचितः । तथा च योऽत्र मुक्त उच्यते स तु परमेश्वरप्रसादादेव **'आविर्भूतस्वरूपः'** उच्यते । आविर्भूतो व्यक्तः स्वरूपः अपहतपाप्मत्वादिः स्वधर्मो यस्य स तथोक्तः । अतो न स्वतोऽपहतपाप्मत्वादिगुणकः, अतो न दहरस्थो जीव इति योजना ।

**तदर्थं प्रतिवचनं किं "दहरोऽस्मिन्नन्तराकाशः" इति पूर्वं हृत्पद्मस्थतयोक्त-भूताकाशमनूद्य तत्स्थस्य द्यावापृथिव्यादेरन्वेष्टव्यत्वप्रतिपादकं किं वा "तस्मिन्यदन्तस्तदन्वेष्टव्यम्" इति पूर्वोक्तान्वेष्टव्यस्य ब्रह्मत्वं विधाय तस्यान्वेष्टव्यत्वाय द्यावापृथिव्याद्याश्रयत्वप्रतिपादकमिति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಪ್ರತಿವಚನದ ವಾಕ್ಯವು 'ದಹರೋಽಸ್ಮಿನ್ನಂತರಾಕಾಶಃ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಆಕಾಶವನ್ನು ಅನುವಾದ ಮಾಡಿ ಅಂತಹ ಆಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳನ್ನು ಅನ್ವೇಷಣ ಮಾಡಬೇಕೆಂದು ಪ್ರತಿಪಾದಿಸುತ್ತಿದೆಯೋ, ಅಥವಾ 'ತಸ್ಮಿನ್‌ಯದಂತಸ್ತದನ್ವೇಷ್ಟವ್ಯಮ್' ಎಂದು ಹಿಂದೆ ಹೇಳಲ್ಪಟ್ಟ ಅನ್ವೇಷ್ಟವ್ಯಪದಾರ್ಥದಲ್ಲಿ ಬ್ರಹ್ಮತ್ವವನ್ನು ವಿಧಾನ ಮಾಡಿ ಅನ್ವೇಷಣೆಗೋಸ್ಕರ ದ್ಯಾವಾಪೃಥಿವ್ಯಾದ್ಯಾಶ್ರಯತ್ವವನ್ನು ಪ್ರತಿಪಾದಿಸುತ್ತಿದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**तथा ब्रह्मणो द्यावापृथिव्याश्रयत्वे सुषिरश्रुतिर्विरुध्यते न वेति ।**

ಅದರಂತೆ ಬ್ರಹ್ಮನು ದ್ಯಾವಾಪೃಥಿವ್ಯಾದಿಗಳಿಗೆಲ್ಲಾ ಆಶ್ರಯನಾದರೆ, ಸುಷಿರಶ್ರುತಿಯ ವಿರೋಧವು ಬರುತ್ತದೋ, ಇಲ್ಲವೋ? ಎಂಬ ಸಂಶಯವೂ ಕೂಡ ಪರಿಹಾರವಾಗಬೇಕು.

**यद्याद्यस्तदा प्रतिवचनविरोधेन सुषिरश्रुतिविरोधेन चापहतपाप्मत्वादे-र्भूताकाश एवामुख्यस्य सम्भवात्तस्यैवान्वेष्टव्यद्यावापृथिव्याद्याश्रयत्वविशिष्टं हृत्पद्मस्थत्वम् ।**

ಒಂದು ವೇಳೆ 'ಯಾವಾನ್' ಇತ್ಯಾದಿ ಪ್ರತಿವಚನವು ಬ್ರಹ್ಮಪರವಾಗದೇ ಆಕಾಶಪರವಾದರೆ, ಸುಷಿರ ಶ್ರುತಿ ವಿರೋಧವು ಬರುವುದರಿಂದ, ಭೂತಾಕಾಶವನ್ನು ಅನುವಾದ ಮಾಡಿ; ಅದರಲ್ಲಿ ದ್ಯಾವಾಪೃಥಿವ್ಯಾದಿಗಳನ್ನು ಅನ್ವೇಷಣೆ ಮಾಡಬೇಕೆಂದೇ ಪ್ರತಿವಚನವು ಹೇಳುತ್ತಿದೆಯೆಂದು ಒಪ್ಪಬೇಕು. ಆವಾಗ ಭೂತಾಕಾಶವೇ ಹೃತ್ಪದ್ಮಸ್ಥವಾಗುವ ಕಾರಣ ಅದಕ್ಕೆ ಅನುಸಾರಿಯಾಗಿ ಅಪಹತಪಾಪ್ಮತ್ವಾದಿ ಲಿಂಗಗಳನ್ನು ಗೌಣವಾಗಿ ಅರ್ಥೈಸಬೇಕು. ಅಂತಹ ಭೂತಾಕಾಶವನ್ನು ದ್ಯಾವಾಪೃಥಿವ್ಯಾದ್ಯಾಶ್ರಯತ್ವ ವಿಶಿಷ್ಟವಾಗಿ ತಿಳಿಯಬೇಕು. ಆಗ ಹೃತ್ಪದ್ಮಸ್ಥತ್ವ ಲಿಂಗವು ಭೂತಾಕಾಶದಲ್ಲಿಯೇ ಸಿದ್ಧವಾಗುತ್ತದೆ. ಇದು ಪೂರ್ವಪಕ್ಷ ಫಲಫಲಿಭಾವ.

**यदि तु द्वितीयस्तदा विरोधद्वयाभावान्मुख्येनापहतपाप्मत्वादिनाऽन्वेष्टव्यत्वद्या-वापृथिव्याद्याश्रयत्वविशिष्टं हृत्पद्मस्थत्वं ब्रह्मण एव ।**

ಪರಿಪೂರ್ಣಚಂದ್ರಿಕಾ

ಒಂದು ವೇಳೆ 'ಯಾವಾನ್' ಇತ್ಯಾದಿ ಪ್ರತಿವಚನವು ಬ್ರಹ್ಮಪರವಾದರೆ ವಿಷ್ಣುವೇ ಸರ್ವಾಧಾರನಾಗುತ್ತಾನೆ. ಆವಾಗ ಪ್ರತಿವಚನದ ಹಾಗೂ ಸುಷಿರ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲದ ಕಾರಣ ಅಪಹತಪಾಪ್ಮತ್ವದಲಿಂಗಗಳೆಲ್ಲವನ್ನು ಮುಖ್ಯವಾಗಿ ಕೂಡಿಸಬಹುದು. ಆಗ ಅನ್ವೇಷ್ಟವ್ಯತ್ವ, ದ್ಯಾವಾಪೃಥಿವ್ಯಾದ್ಯಾಶ್ರಯತ್ವ ಮೊದಲಾದ ಧರ್ಮಗಳಿಂದ ವಿಶಿಷ್ಟನಾದವನು ಬ್ರಹ್ಮನೇ ಆಗುತ್ತಾನೆ. ಅವನಲ್ಲಿಯೇ ಹೃತ್ಪದ್ಮಸ್ಥತ್ವ ಲಿಂಗವು ಸಿದ್ಧವಾಗುತ್ತದೆ. ಇದು ಸಿದ್ಧಾಂತದ ಫಲಫಲಿಭಾವ.

**प्रकाशः –**

विषयसंशयटीकां व्यनक्ति – **अत्रेति** ।। ''तद्धृदयपद्मस्थत्वं विषयः'' इत्यत्र तच्छब्दपरामर्शमाह – **अथ यदिदमित्यादिना** ।। **छान्दोग्येति** ।। छान्दोग्येऽष्टमाध्याय-गतवाक्यस्थमित्यर्थः । वाक्यस्यार्थोऽग्रे व्यक्तः ।

ವಿವರಣೆ - ಈ ಅಧಿಕರಣದ ವಿಷಯವಾಕ್ಯವನ್ನು ಮತ್ತು ಸಂಶಯವನ್ನು ಉಲ್ಲೇಖ ಮಾಡುವ ಟೀಕೆಯನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ತದ್ಧೃದಯಪದ್ಮಸ್ಥತ್ವಂ ವಿಷಯಃ' ಎಂಬ ಟೀಕಾವಾಕ್ಯದಲ್ಲಿರುವ 'ತತ್' ಶಬ್ದದಿಂದ ಯಾವುದನ್ನು ಪರಾಮರ್ಶಮಾಡಿಕೊಳ್ಳಬೇಕೆಂಬುದನ್ನು 'ಅಥ ಯದಿದಂ' ಇತ್ಯಾದಿ ವಾಕ್ಯದಿಂದ ಶ್ರುತಿಯನ್ನು ಉಲ್ಲೇಖಿಸುವವರಾಗಿ ಹೇಳುತ್ತಿದ್ದಾರೆ. 'ಛಾಂದೋಗ್ಯೇ' ಎಂದರೆ ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದ ವಾಕ್ಯದಲ್ಲಿರುವ ಎಂದರ್ಥ. ಈ ವಾಕ್ಯದ ಅರ್ಥವು ಮುಂದೆ ಸ್ಪಷ್ಟವಾಗುತ್ತದೆ.

**प्रकाशः – आकाशादेः** आकाशजीवयोरित्यर्थः । 'दहरे ब्रह्मैव' इति प्रतिज्ञांश-व्यावर्त्यपूर्वपक्षोपयुक्तचिन्तामुक्त्वा ''उत्तरेभ्यः गतिशब्दाभ्याम्'' इत्यादि हेत्वंश-व्यावर्त्यपूर्वपक्षोपयुक्तचिन्तामाह – **अपहतेति** ।।

'ಆಕಾಶಾದೇಃ' ಎಂಬಲ್ಲಿರುವ ಆದಿಪದದಿಂದ ಜೀವನನ್ನು ವಿವಕ್ಷಿಸಬೇಕು. ಆದ್ದರಿಂದ 'ಆಕಾಶ ಮತ್ತು ಜೀವ ಇವರಿಬ್ಬರಿಗೆ' ಎಂದರ್ಥ. 'ದಹರೇ ಬ್ರಹ್ಮೈವ' 'ಹೃದಯಾಕಾಶದಲ್ಲಿ ಬ್ರಹ್ಮನೇ ಇದ್ದಾನೆ' ಎಂಬ ಪ್ರತಿಜ್ಞಾಂಶದಿಂದ ವ್ಯಾವರ್ತ್ಯವಾದ ಪೂರ್ವಪಕ್ಷಕ್ಕೆ ಉಪಯೋಗಿಯಾದ ಸಂಶಯವನ್ನು ತೋರಿಸಿದ್ದಾಯಿತು. ಈಗ 'ಉತ್ತರೇಭ್ಯಃ ಗತಿಶಬ್ದಾಭ್ಯಾಮ್' ಇತ್ಯಾದಿಯಾದ ಹೇತ್ವಂಶದಿಂದ ವ್ಯಾವರ್ತ್ಯವಾದ ಪೂರ್ವಪಕ್ಷಕ್ಕೆ ಉಪಯೋಗಿಯಾದ ಸಂಶಯವನ್ನು ತೋರಿಸುತ್ತಿದ್ದಾರೆ 'ಅಪಹತ' ಇತ್ಯಾದಿ ವಾಕ್ಯದಿಂದ.

**प्रकाशः –** ''एष आत्माऽपहतपाप्मा विजरो विमृत्युर्विशोकोऽविजिघत्सोऽपिपास-स्सत्यकामस्सत्यसङ्कल्पः'' इत्यादिना श्रुतमित्यर्थः । **ब्रह्मत्वमिति** ।। आकाशपदेनेत्यर्थः।

'ಅಪಹತ ಪಾಪ್ಮತ್ವಾದಿಕಂ' ಎಂದು ಗ್ರಂಥದಲ್ಲಿದೆ. 'ಏಷ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋऽವಿಜಿಘತ್ಸೋऽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪಃ' ಇತ್ಯಾದಿ ವಾಕ್ಯದಿಂದ ಅಪಹತ-

ಪಾಪತ್ವವೇ ಮೊದಲಾದ ಧರ್ಮಗಳು ಶ್ರುತವಾಗಿವೆ ಎಂದರ್ಥ. 'ಬ್ರಹ್ಮತ್ವಮ್' ಎಂದು ಗ್ರಂಥದಲ್ಲಿದೆ. ಆಕಾಶಪದದಿಂದ ಬ್ರಹ್ಮನೆಂಬರ್ಥವನ್ನು ತಿಳಿದು ಇದರ ಅರ್ಥ.

**प्रकाशः –** यद्यप्येवं न भाष्ये प्रतीयते । न्यायविवरणे च ''योऽन्वेष्टव्यो भगवांस्तस्यान्तर्हृदये'' इत्यादिनान्वेष्टव्यतयोक्तस्य ब्रह्मत्वं सिद्धं कृत्वा प्रकारप्रश्ने तत्कथनपरतया यावानित्यादि वाक्यं योजितम् । विवृतं चैवमेव टीकायाम् । अतः ''तस्मिन्यदन्तस्तदन्वेष्टव्यम्'' इति पूर्वोक्तान्वेष्टव्यस्य ब्रह्मणोऽन्वेष्टव्यत्वायाकाशादिसर्वाश्रयत्वादिप्रकारप्रतिपादकम्' इति चिन्ता प्रदर्शनीया ।

ಪ್ರಶ್ನೆ - 'ಯಾವಾನ್ವಾ ಅಯಮಕಾಶಃ' ಇತ್ಯಾದಿಯಾದ ಪ್ರತಿವಚನದ ವಾಕ್ಯದ ಬಗ್ಗೆ, ಭಾಷ್ಯದಲ್ಲಿ ಸ್ಪಷ್ಟವಾದ ವ್ಯಾಖ್ಯಾನವು ತೋರುವುದಿಲ್ಲ. ಆದರೆ ನ್ಯಾಯವಿವರಣದಲ್ಲಿ ಇದನ್ನು ವ್ಯಾಖ್ಯಾನಿಸಿದ್ದಾರೆ. ಪ್ರಕೃತ ಗ್ರಂಥಕಾರರು ನ್ಯಾಯವಿವರಣಕ್ಕನುಸಾರಿಯಾಗಿ ಸಂಶಯವನ್ನು ಪ್ರದರ್ಶನ ಮಾಡದೇ ಛಾಂದೋಗ್ಯೋಪನಿಷತ್ತಿನ ಭಾಷ್ಯಕ್ಕನುಸಾರಿಯಾಗಿ ಸಂಶಯವನ್ನು ಪ್ರದರ್ಶಿಸಿದ್ದಾರೆ. ಗ್ರಂಥಕಾರರು ತೋರಿಸಿದ ಸಂಶಯ ಹೀಗಿದೆ - ಹಿಂದೆ 'ತದ್ವಾವ ವಿಜಿಜ್ಞಾಸಿತವ್ಯಂ' ಎಂದು ಹೇಳಿದ ಮೇಲೆ ಹೃದಯಾಕಾಶದಲ್ಲಿ ಯಾರಿದ್ದಾರೆ? ಎಂದು ಶಿಷ್ಯಂದಿರು ಪ್ರಶ್ನಿಸುತ್ತಾರೆ. ಆವಾಗ ಆಕಾಶಪದದಿಂದ ಹೃದಯದಲ್ಲಿರುವವನು ಬ್ರಹ್ಮನೇ ಆಗಿದ್ದಾನೆಂದು 'ತಸ್ಮಿನ್ಯದಂತಃ ತದನ್ವೇಷ್ಟವ್ಯಮ್' ಎಂಬ ವಾಕ್ಯದಲ್ಲಿ ಉತ್ತರಿಸಿದ್ದಾರೆ. ಹೊರಗಡೆ ಇರುವ ಆಕಾಶನಾಮಕನಾದ ಪರಮಾತ್ಮನು ಎಷ್ಟು ಇದ್ದಾನೋ, ಅಷ್ಟೇ ಹೃದಯದ ಒಳಗಿರುವ ಪರಮಾತ್ಮನೂ ಕೂಡ ಇದ್ದಾನೆಂದು ಉತ್ತರಿಸಿದಂತಾಯಿತು. ಹೀಗೆ ಅನ್ವೇಷ್ಟವ್ಯನಾದ ಪರಮಾತ್ಮನನ್ನು ಉಪಪಾದನೆ ಮಾಡಿ ಅನ್ವೇಷ್ಟವ್ಯತ್ವಕ್ಕೆ ಉಪಪಾದಕವಾಗಿ ದ್ಯಾವಾಪೃಥಿವ್ಯಾದ್ಯಾಶ್ರಯತ್ವವನ್ನು ಹೇಳಿರುತ್ತಾರೆ. ಹೀಗೆ ಗ್ರಂಥಕಾರರು 'ಯೋऽನ್ವೇಷ್ಟವ್ಯೋ ಭಗವಾಂಸ್ತಸ್ಯಾಂತರ್ಹೃದಯೇ'' ಎಂದು ಸಂಶಯವನ್ನು ತೋರಿಸಿದ್ದಾರೆ.

ಆದರೆ ಭಾಷ್ಯದಲ್ಲಿ ಆಕಾಶಪದಕ್ಕೆ ಬ್ರಹ್ಮಪರತ್ವವನ್ನು ಒಪ್ಪಿ ಅನ್ವೇಷ್ಟವ್ಯತ್ವಕ್ಕೆ ಉಪಪಾದಕವಾಗಿ ದ್ಯಾವಾಪೃಥಿವ್ಯಾದ್ಯಾಶ್ರಯತ್ವವನ್ನು ಹೇಳಿದ್ದು ಸ್ಪಷ್ಟವಾಗಿ ಕಾಣಸುತ್ತಿಲ್ಲ. ನ್ಯಾಯವಿವರಣದಲ್ಲಂತೂ ಗ್ರಂಥಕಾರರು ಹೇಳಿದ್ದಕ್ಕೆ ವಿಭಿನ್ನವಾದ ವ್ಯಾಖ್ಯಾನವೇ ಕಾಣಸುತ್ತಿದೆ ಎಂದರೆ 'ಆಕಾಶ' ಪದಕ್ಕೆ ಬ್ರಹ್ಮನೆಂಬ ಅರ್ಥವನ್ನು ಒಪ್ಪದೇ ಪ್ರಸಿದ್ಧವಾದ ಆಕಾಶವೆಂಬರ್ಥವನ್ನೇ ಒಪ್ಪಿ ವ್ಯಾಖ್ಯಾನಿಸಿದ್ದಾರೆ. 'ಯೋऽನ್ವೇಷ್ಟವ್ಯಃ ಭಗವಾಂಸ್ತಸ್ಯಾಂತರ್ಹೃದಯೇ' ಇತ್ಯಾದಿಯಾಗಿ ಅನ್ವೇಷ್ಟವ್ಯತಯಾ ಸಿದ್ಧನಾದ ವ್ಯಕ್ತಿಗೆ ಬ್ರಹ್ಮತ್ವವು ಸಿದ್ಧವಾಗಿದೆಯೆಂದು ವಿವಕ್ಷಿಸಿ, ಅಂತಹ ಬ್ರಹ್ಮನು ಹೇಗಿರುತ್ತಾನೆ ಎಂತಹ ಗುಣಗಳಿಂದ ವಿಶಿಷ್ಟನಾಗಿದ್ದಾನೆ ಎಂಬುದಾಗಿ ಪ್ರಕಾರದ ವಿಷಯದಲ್ಲಷ್ಟೇ ಶಿಷ್ಯನು ಪ್ರಶ್ನಿಸುತ್ತಿದ್ದಾನೆ. ಆವಾಗ ಪ್ರಶ್ನೆಗೆ ಉತ್ತರಿಸಲು 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯವು ಹೊರಟಿದೆ. ಟೀಕೆಯಲ್ಲಿಯೂ ಕೂಡ ಹೀಗೆ ವ್ಯಾಖ್ಯಾನಿಸಿ ಇದನ್ನು ವಿವರಣೆ ಮಾಡಿದ್ದಾರೆ. ಇದಕ್ಕನುಸಾರಿಯಾಗಿ ಗ್ರಂಥಕಾರರು ಕೂಡ 'ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್ ಇತಿ ಪೂರ್ವೋಕ್ತಾನ್ವೇಷ್ಟವ್ಯಸ್ಯ ಬ್ರಹ್ಮಣೋऽನ್ವೇಷ್ಟವ್ಯತ್ವಾಯ ಆಕಾಶಾದಿಸರ್ವಾಶ್ರಯತ್ವಾದಿ ಪ್ರಕಾರ ಪ್ರತಿಪಾದಕಮ್' ಎಂಬುದಾಗಿಯೇ ಸಂಶಯವನ್ನು ತೋರಿಸಬೇಕಿತ್ತಲ್ಲವೇ? 'ಅನ್ವೇಷ್ಟತವ್ಯತಯಾ' ಹಿಂದಿನ

ವಾಕ್ಯದಲ್ಲಿ ಪ್ರತಿಪಾದ್ಯನಾದವನು ಬ್ರಹ್ಮನೇ ಎಂದು ಶಿಷ್ಯರಿಗೆ ತಿಳಿದಿದೆ. ಆದರೆ ಎಂತಹ ಧರ್ಮಗಳಿಂದ ಬ್ರಹ್ಮನು ಕೂಡಿದ್ದಾನೆಂದು ಶಿಷ್ಯರಿಗೆ ಗೊತ್ತಿಲ್ಲ. ಈ ವಿಷಯದಲ್ಲಷ್ಟೇ ಪ್ರಶ್ನೆಯನ್ನು ಮಾಡುತ್ತಿದ್ದಾರೆ. ಶಿಷ್ಯಂದಿರಿಗೆ ಸರ್ವಾಶ್ರಯತ್ವ ಪ್ರಕಾರವನ್ನು ತಿಳಿಸುವುದಕ್ಕಾಗಿ ಬ್ರಹ್ಮನು ದ್ಯಾವಾಪೃಥಿವ್ಯಾದಿಗಳಿಗೆಲ್ಲಾ ಆಶ್ರಯನಾಗಿದ್ದಾನೆಂದು ಸ್ಪಷ್ಟಪಡಿಸುವುದಕ್ಕಾಗಿ ಈ ವಾಕ್ಯವು ಹೊರಟಿದೆ ಎಂದು ಹೇಳಬೇಕಿತ್ತಲ್ಲವೇ?

**प्रकाशः – तथाऽप्यस्मिन्पक्षे वक्ष्यमाणदिशा प्रश्नप्रतिवचनयोस्तुल्यविभक्तिकत्वाभावाद्, ब्रह्मत्वविधानपक्षे तत्सत्त्वस्य वक्ष्यमाणत्वाच्छान्दोग्यभाष्योक्तब्रह्मत्वविधानकोटिकचिन्ता प्रदर्शितेति ज्ञेयम् ।**

ಉತ್ತರ - ನ್ಯಾಯವಿವರಣದ ಪ್ರಕಾರ ವ್ಯಾಖ್ಯಾನವನ್ನು ಅವಲಂಬಿಸಿದರೆ ಸ್ವಲ್ಪ ಹೆಚ್ಚಿನ ವಿವರಣೆಯನ್ನು ನೀಡಬೇಕಾಗುತ್ತದೆ. ಛಾಂದೋಗ್ಯೋಪನಿಷದ್ಭಾಷ್ಯದ ಪ್ರಕಾರ ವ್ಯಾಖ್ಯಾನ ಮಾಡಿದರೆ ಸುಲಭವಾಗಿ ಅರ್ಥವಾಗುತ್ತದೆ. ಸಾಮಾನ್ಯವಾಗಿ ಪ್ರಶ್ನೋತ್ತರಗಳಿಗೆ ಸಮಾನ ವಿಭಕ್ತಿಯೆಂಬುದು ಇರಬೇಕು. ಉದಾಹರಣೆ: 'ದಶರಥಸ್ಯ ಪುತ್ರಃ ಕಃ' ಎಂದು ಪ್ರಶ್ನಿಸಿದಾಗ 'ದಶರಥಸ್ಯ ಪುತ್ರಃ ಶ್ರೀರಾಮಃ' ಎಂಬ ಉತ್ತರವೇ ಸಮಂಜಸವಾದದ್ದು. ಆದರೆ 'ರಾಮಸ್ಯ ಪಿತಾ ದಶರಥಃ' ಎಂದು ಉತ್ತರಿಸಿದರೆ ಸಮಂಜಸವಾದ ಉತ್ತರವೇ ಆಗಿರಬಹುದು. ಆದರೆ ಭಿನ್ನವಿಭಕ್ತಿಯಿಂದ ಉತ್ತರ ನೀಡಿದಾಗ ತಿಳಿಯುವುದು ಸ್ವಲ್ಪ ಕ್ಲೇಶಕರವಾಗುತ್ತದೆ. ಅದರಂತೆ ಪ್ರಕೃತದಲ್ಲಿಯೂ 'ಕಿಂ ತದತ್ರ ವಿದ್ಯತೇ' ಎಂಬುದಾಗಿ ಪ್ರಥಮಾ ವಿಭಕ್ತಿಯಲ್ಲಿ ಪ್ರಶ್ನೆಯು ಶ್ರುತವಾಗಿದೆ. ಈ ಪ್ರಶ್ನೆಗೆ 'ಇದಂ ಬ್ರಹ್ಮ ದ್ಯಾವಾಪೃಥಿವ್ಯಾದ್ಯಾಶ್ರಯಂ' ಎಂಬ ಉತ್ತರವನ್ನು ನೀಡಿದ್ದರೆ, ಸಮಾನವಿಭಕ್ತಿಕವಾದ್ದರಿಂದ, ಸುಲಭವಾಗಿ ತಿಳಿಯಬಹುದಿತ್ತು. ಆದರೆ 'ಅಸ್ಯ ಅಂತರ್ಹೃದಯೇ' ಇತ್ಯಾದಿಯಾಗಿ 'ಇವನ ಒಳಗಡೆ ಎಲ್ಲವೂ ಇದೆ' ಎಂಬ ವಾಕ್ಯವಿದೆ. ಪ್ರಥಮಾವಿಭಕ್ತ್ಯಂತವಾದ ಪ್ರಶ್ನೆಗೆ, ಷಷ್ಠ್ಯಂತವಾಗಿ ಅಥವಾ ಸಪ್ತಮ್ಯಂತವಾಗಿ ಉತ್ತರಿಸುವುದು ಸುಲಭವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. ಆದರೆ ಛಾಂದೋಗ್ಯ ಭಾಷ್ಯದ ಪ್ರಕಾರ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಯಾವಾನ್ವಾ ಅಯಮಾಕಾಶಃ' ಎಂಬುದಾಗಿ ಪ್ರಥಮಾವಿಭಕ್ತ್ಯಂತವಾದ ಉತ್ತರವೇ ಇರುತ್ತದೆ.

ನ್ಯಾಯವಿವರಣದ ಪ್ರಕಾರ ಪ್ರಶ್ನೋತ್ತರಗಳನ್ನು ತಿಳಿಯುವುದು ತಪ್ಪಲ್ಲ. ಆದರೆ ಛಾಂದೋಗ್ಯ ಭಾಷ್ಯದ ಪ್ರಕಾರ ತಿಳಿದಾಗ ಹೆಚ್ಚು ಸ್ವಾರಸ್ಯವಿರುತ್ತದೆ. ಈ ದೃಷ್ಟಿಯಿಂದ ಗ್ರಂಥಕಾರರು ಸೂತ್ರಪ್ರಸ್ಥಾನದ ವ್ಯಾಖ್ಯಾನವನ್ನು ಅನುಸರಿಸದೇ ಉಪನಿಷತ್ಪ್ರಸ್ಥಾನದ ವ್ಯಾಖ್ಯಾನವನ್ನು ಅನುಸರಿಸಿ, 'ಆಕಾಶ' ಶಬ್ದಕ್ಕೆ ಬ್ರಹ್ಮಪರತ್ವವನ್ನು ಒಪ್ಪಿ ಸಂಶಯಕೋಟಿಯನ್ನು ತೋರಿಸಿರುತ್ತಾರೆ.

**प्रकाशः – अत्र द्वौ पूर्ववादिसाधकावुत्तरवादिबाधकौ वाक्यानन्वयसमाख्याविरोधरूपौ न्यायविवरणभाष्याभ्यामुक्तौ । तत्राद्यघटितां चिन्तामुक्त्वा द्वितीयघटितामाह – तथेति ।।**

ನ್ಯಾಯವಿವರಣದಲ್ಲಿ 'ಅನ್ವಯಾಭಾವ' ಅಥವಾ 'ಅನನ್ವಯ' ಎಂಬ ಲಿಂಗವನ್ನು ಪೂರ್ವಪಕ್ಷಿಯು ತನಗೆ ಸಾಧಕವನ್ನಾಗಿ ಸಿದ್ಧಾಂತಿಗಳಿಗೆ ಬಾಧಕವನ್ನಾಗಿ ಹೇಳುತ್ತಾನೆಂದು ಪೂರ್ವಪಕ್ಷ ಲಿಂಗವನ್ನು

ಸಂಗ್ರಹಿಸಿದ್ದಾರೆ. ಭಾಷ್ಯದಲ್ಲಿ ಸಮಾಖ್ಯಾಪ್ರಮಾಣದ ವಿರೋಧವನ್ನು ಪೂರ್ವಪಕ್ಷಲಿಂಗವನ್ನಾಗಿ ಹೇಳಿರುತ್ತಾರೆ. ಇವೆರಡರಲ್ಲಿ ವಾಕ್ಯಾನನ್ವಯವೆಂಬ ಪೂರ್ವಪಕ್ಷಲಿಂಗದಿಂದ ಕೂಡಿರುವಂತಹ ಸಂಶಯವನ್ನು ತೋರಿಸಿ ಸಮಾಖ್ಯಾವಿರೋಧವೆಂಬ ಪೂರ್ವಪಕ್ಷಲಿಂಗದಿಂದ ಕೂಡಿರುವಂತಹ ಸಂಶಯವನ್ನು 'ತಥಾ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

**प्रकाशः – अस्पष्टत्वात् फलफलिभावं व्यनक्ति – यद्याद्य इति ।।**

ಗ್ರಂಥದಲ್ಲಿ ಪೂರ್ವಪಕ್ಷ ಹಾಗೂ ಸಿದ್ಧಾಂತಗಳ ಫಲಫಲಿಭಾವವನ್ನು ತೋರಿಸಿದ್ದಾರೆ. ಕೇವಲ ಈ ಸಂಶಯಗಳನ್ನು ನೋಡಿದಾಗ ಪೂರ್ವಪಕ್ಷಕಾರರ ಉದ್ದೇಶವೇನು, ಸಿದ್ಧಾಂತಕಾರರ ಉದ್ದೇಶವೇನೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕಾಗಿ ಸ್ವತಃ ತಾವೇ ಫಲಫಲಿಭಾವವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಯದ್ಯಾದ್ಯಃ' ಇತ್ಯಾದಿ ವಾಕ್ಯದಿಂದ.

**प्रकाशः** – यदि 'यावान्' इत्यादिप्रतिवचनं ब्रह्मपरत्वे सुषिरश्रुतिविरोधेन भूताकाशानुवादेन तत्स्थस्य द्यावाभूम्यादेरन्वेष्टव्यत्वप्रतिपादकं तर्हि भूतस्यैव हृत्पद्मस्थत्वप्राप्तेः प्रतिवचनविरोधेनापहतपाप्मत्वादेर्गौणतया प्राक्तनमपि हृत्पद्मस्थत्वं भूतस्यैव सिध्यतीत्यर्थः ।

ಒಂದು ವೇಳೆ 'ಯಾವಾನ್ವಾ ಅಯಮಾಕಾಶಃ' ಎಂಬ ಪ್ರತಿವಚನವು ಬ್ರಹ್ಮಪರವಾದಲ್ಲಿ ಎಲ್ಲವೂ ಕೂಡ ಬ್ರಹ್ಮನಲ್ಲೇ ಇದೆ ಎಂದು ನಿರ್ಣಯವಾಗುತ್ತದೆ. ಆವಾಗ 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಎಂಬ ಸುಷಿರ ಶ್ರುತಿಯ ವಿರೋಧವು ಬರುತ್ತದೆ. ಏಕೆಂದರೆ ಸುಷಿರ ಶ್ರುತಿಯು ಎಲ್ಲಾ ಪದಾರ್ಥಗಳು ಭೂತಾಕಾಶದಲ್ಲಿದೆಯೆಂದೇ ಹೇಳುತ್ತಿದೆ. ಆದ್ದರಿಂದ 'ಯಾವಾನ್ವಾ' ಇತ್ಯಾದಿ ಪ್ರತಿವಚನವು ಭೂತಾಕಾಶವನ್ನು ಅನುವಾದ ಮಾಡಿ, ಅಂತಹ ಭೂತಾಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳೆಲ್ಲವೂ ಕೂಡ ಇರುತ್ತವೆಂದು ಅನ್ವೇಷಣೆ ಮಾಡಬೇಕೆಂದು ಪ್ರತಿಪಾದಿಸುತ್ತಿದೆಯೆಂದು ವ್ಯಾಖ್ಯಾನಿಸಬೇಕು. ಯಾವಾಗ ಪ್ರತಿವಚನವು ಭೂತಾಕಾಶಪರವೆಂದು ಸಿದ್ಧವಾಗುತ್ತದೋ, ಆವಾಗ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ, ಹೃತ್ಪದ್ಮಸ್ಥತ್ವವು ಕೂಡ ಭೂತಾಕಾಶದಲ್ಲಿಯೇ ಪ್ರಾಪ್ತವಾಗುತ್ತದೆ. ಈ ಪ್ರತಿವಚನಕ್ಕೆ ಅನುಸಾರಿಯಾಗಿ ಅಪಹತಪಾಪ್ಮತ್ವಾದಿಗಳನ್ನು ಗೌಣವಾಗಿ ವ್ಯಾಖ್ಯಾನಿಸಬೇಕು. ಹೀಗೆ ಹೇಳಿದಾಗ ಹಿಂದೆ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವನ್ನೂ ಕೂಡ ಭೂತಾಕಾಶದಲ್ಲಿಯೇ ಹೇಳಬೇಕು. ಇದು ಪೂರ್ವಪಕ್ಷಕಾರರ ಉದ್ದೇಶ.

**प्रकाशः** – ननु यावानिति प्रतिवचनस्य वाक्यतया कथं तद्विरोधेनापहतपाप्मत्वादे-लिङ्गस्य बाधेन गौणत्वोक्तिः । वैपरीत्यस्यैवौचित्यात् ।

ಆಕ್ಷೇಪ - ಪೂರ್ವಪಕ್ಷಿಯು 'ಯಾವಾನ್ವಾ' ಎಂಬ ಪ್ರತಿವಚನ ವಾಕ್ಯದ ಆಧಾರದಿಂದ ಅಪಹತಪಾಪ್ಮತ್ವವೇ ಮೊದಲಾದ ಲಿಂಗಗಳಿಗೆ ಗೌಣಾರ್ಥವನ್ನು ಮಾಡಬೇಕೆಂದು ಸಾಧಿಸುತ್ತಿದ್ದಾನೆ. ಆದರೆ

'ಪ್ರತಿವಚನ' ಎಂಬುದು ವಾಕ್ಯರೂಪವಾಗಿದೆ. ಲಿಂಗಕ್ಕಿಂತಲೂ ವಾಕ್ಯವು ದುರ್ಬಲ. ದುರ್ಬಲವಾದ ವಾಕ್ಯಕ್ಕೆ ಅನುಸಾರಿಯಾಗಿ ಲಿಂಗಕ್ಕೆ ದೌರ್ಬಲ್ಯವನ್ನು ಹೇಳುವುದು ಎಷ್ಟು ಸರಿ? ಆದ್ದರಿಂದ ವಿಪರೀತವಾಗಿ ಅಪಹತಪಾಪ್ಮತ್ವವೇ ಮೊದಲಾದ ಲಿಂಗಗಳಿಗೆ ಅನುಸಾರಿಯಾಗಿ ಪ್ರತಿವಚನವೆಂಬ ವಾಕ್ಯವನ್ನು ಗೌಣಾರ್ಥ ಮಾಡುವುದೇ ಲೇಸು.

**प्रकाशः** – वक्ष्यति च ''शब्दादेव'' इत्यत्र ''किं तदत्र विद्यते'' इत्यादिवाक्यस्यापहतपाप्मत्वादिलिङ्गाद्दुर्बलत्वमिति ।

ಮುಂದೆಯೂ ಕೂಡ 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಕಿಂ ತದತ್ರ ವಿದ್ಯತೇ' ಇತ್ಯಾದಿ ಅಪಹತಪಾಪ್ಮತ್ವಾದಿಲಿಂಗಗಳಿಗಿಂತ ದೌರ್ಬಲ್ಯವನ್ನು ಹೇಳಲಾಗಿದೆ. ಆದ್ದರಿಂದ ಅದರ ವಿರೋಧವೂ ಕೂಡ ಪೂರ್ವಪಕ್ಷಕಾರರಿಗೆ ಬರುತ್ತದೆ.

**प्रकाशः** – नच प्रतिवचनरूपवाक्यस्य प्रथमस्थत्वेनासञ्जातविरोधित्वेन प्राबल्यं मन्यते पूर्वपक्षी । अग्रेतनं लिङ्गवाक्ययोः प्राबल्यदौर्बल्यकथनं तु लिङ्गत्ववाक्यत्वप्रयुक्तमेवेति न विरुध्यत इति वाच्यम् ।

ವಾಕ್ಯಕ್ಕಿಂತ ಲಿಂಗವು ಪ್ರಬಲವಾಗಿದೆ. ಆದರೂ ಸಹ ಮೊದಲು ಶ್ರುತವಾದ ಪ್ರತಿವಚನವೆಂಬ ವಾಕ್ಯವು ಅಸಂಜಾತವಿರೋಧಿಯಾದ ಪ್ರಯುಕ್ತ ಪ್ರಬಲವಾಗಿದೆ. ಈ ದೃಷ್ಟಿಯಿಂದ ಪ್ರಬಲವಾದ ಪ್ರತಿವಚನಕ್ಕೆ ಅನುಸಾರಿಯಾಗಿ ಲಿಂಗವನ್ನು ಅರ್ಥೈಸಬೇಕೆಂದು ಪೂರ್ವಪಕ್ಷಿಯು ಅಭಿಪ್ರಾಯ ಪಡುತ್ತಿದ್ದಾನೆ. ಮುಂದಿರುವ ಲಿಂಗ ಹಾಗೂ ವಾಕ್ಯಗಳಲ್ಲಿ ಲಿಂಗಕ್ಕೆ ಪ್ರಾಬಲ್ಯವನ್ನು, ವಾಕ್ಯಕ್ಕೆ ದೌರ್ಬಲ್ಯವನ್ನೂ ಕೂಡ ಪೂರ್ವಪಕ್ಷಿಯು ಹೇಳುತ್ತಾನೆ. ಆದರೆ ಅದು ಲಿಂಗತ್ವ ಮತ್ತು ವಾಕ್ಯತ್ವ ಪ್ರಯುಕ್ತವಾಗಿ ತಿಳಿಯಬೇಕು. ಪ್ರಕೃತದಲ್ಲಿ ಪ್ರಥಮಶ್ರುತತ್ವೇನ ವಾಕ್ಯಕ್ಕೆ ಪ್ರಾಬಲ್ಯವನ್ನು, ಅನಂತರ ಶ್ರುತವಾದ್ದರಿಂದ ಲಿಂಗಕ್ಕೆ ದೌರ್ಬಲ್ಯವನ್ನು ಪೂರ್ವಪಕ್ಷಿಯು ಅಭಿಪ್ರಾಯ ಪಟ್ಟಿರುತ್ತಾನೆ. ಹೀಗೆ ಹೇಳಿದಾಗ ಪ್ರತಿವಚನಕ್ಕೆ ಅನುಸಾರಿಯಾಗಿ ಅಪಹತಪಾಪ್ಮತ್ವಾದಿಲಿಂಗಗಳಿಗೆ ಗೌಣಾರ್ಥ ಮಾಡುವುದು ತಪ್ಪಾಗುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು.

**प्रकाशः** – चरमस्य बहुभावस्य मुख्यत्वाय प्रथमस्येक्षणस्यैव गौणताया न्याय्यत्वादिति पूर्वाधिकरणोक्तदिशा पूर्वबाधस्यैव युक्तत्वात् ।

ಏಕೆಂದರೆ ಈ ಪ್ರಶ್ನೆಗೆ ಹಿಂದಿನ ಅಧಿಕರಣದಲ್ಲಿಯೇ ಉತ್ತರಿಸಿದ್ದಾಗಿದೆ. ಚರಮಶ್ರುತವಾದ ಬಹುಭಾವಕ್ಕೆ ಮುಖ್ಯತ್ವವನ್ನು ಉಪಪಾದಿಸುವುದಕ್ಕಾಗಿ ಪ್ರಥಮಶ್ರುತವಾದ ಈಕ್ಷಣವನ್ನೇ ಗೌಣವನ್ನಾಗಿ ವ್ಯಾಖ್ಯಾನಿಸುವುದು ನ್ಯಾಯಪ್ರಾಪ್ತವಾಗಿದೆ. ಉಪಕ್ರಮೋಪಸಂಹಾರಗಳ ನಡುವೆ ಉಪಕ್ರಮಕ್ಕಿಂತ, ಉಪಸಂಹಾರವೇ ಪ್ರಬಲವೆಂಬುದು ನ್ಯಾಯಸಿದ್ಧವಾಗಿದೆ. ಹೀಗೆ ಹಿಂದಿನ ಅಧಿಕರಣದ ತೀರ್ಮಾನದಂತೆ ಪ್ರಕೃತ

ಚರಮಶ್ರುತವಾದ ಅಪಹತಪಾಪ್ಮತ್ವಾದಿಲಿಂಗಗಳಿಗೆ ಅನುಸಾರಿಯಾಗಿ ಪ್ರಥಮಶ್ರುತವಾದ ಪ್ರತಿವಚನವೆಂಬ ವಾಕ್ಯಕ್ಕೆ ಗೌಣಾರ್ಥಮಾಡುವುದೇ ಸೂಕ್ತವಾಗುತ್ತದೆ.

**प्रकाशः** – न चाकाशश्रुतियुक्तत्वेन वाक्यस्य लिङ्गाद्बलवत्त्वम् । एष आत्माऽपहतपाप्मेति श्रवणेन लिङ्गस्यापि ''स्वशब्दात्'' इत्युक्तन्यायेन ब्रह्मवाचकात्म-श्रुतियुक्तत्वात् ।

ವಾಕ್ಯವು ಆಕಾಶಶ್ರುತಿಯಿಂದ ಯುಕ್ತವಾಗಿದೆ. ಆದ್ದರಿಂದ ಲಿಂಗಕ್ಕಿಂತ ಬಲಿಷ್ಠವೆಂದು ಹೇಳುತ್ತೇವೆ? ಏನು ತಪ್ಪು? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಅಪಹತಪಾಪ್ಮತ್ವಾದಿಲಿಂಗಗಳೂ ಕೂಡ 'ಏಷ ಆತ್ಮಾऽಪಹತಪಾಪ್ಮಾ' ಇತ್ಯಾದಿಯಾಗಿ ಆತ್ಮಶ್ರುತಿಯಿಂದ ಯುಕ್ತವಾಗಿವೆ. 'ಸ್ವಶಬ್ದಾತ್' ಎಂಬ ಸೂತ್ರದಲ್ಲಿ ನ್ಯಾಯದಂತೆ ಬ್ರಹ್ಮವಾಚಕವಾದ ಆತ್ಮಶ್ರುತಿಯಿಂದ ಯುಕ್ತವಾದ ಕಾರಣ, ಅಪಹತಪಾಪ್ಮತ್ವಾದಿಲಿಂಗಗಳು ವಾಕ್ಯಕ್ಕಿಂತ ಬಲಿಷ್ಠವಾಗಿದೆಯೆಂದು ಹೇಳಬಹುದು.

**प्रकाशः** – नच वाक्ये श्रुतेरभ्यासोऽस्तीति तस्य बलवत्त्वम् । ''तद्य इहात्मानमननुविद्य व्रजन्ति । अथ य आत्मानमनुविद्य व्रजन्ति'' इति चात्मश्रुतेरभ्यासाल्लिङ्गानां बहुत्वाच्चेति चेत् –

ಆಕಾಶ ಶಬ್ದವು ಎರಡು ಬಾರಿ ಶ್ರುತವಾಗಿದೆ. ಶ್ರುತಿಯು ಅಭ್ಯಾಸಪ್ರಮಾಣದಿಂದ ಯುಕ್ತವಾಗಿದೆ. ಆದ್ದರಿಂದ ವಾಕ್ಯವು ಶ್ರುತಿಯುಕ್ತವಾಯಿತು. ಶ್ರುತಿಯು ಅಭ್ಯಾಸದಿಂದ ಉಪೋದ್ಬಲಿತವಾಯಿತು. ಹೀಗೆ ವಾಕ್ಯಪ್ರಮಾಣವು ಲಿಂಗಕ್ಕಿಂತ ಬಲಿಷ್ಠವಾಗಿದೆಯೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಇಲ್ಲಿಯೂ ಕೂಡ 'ತದ್ಯ ಇಹ ಆತ್ಮಾನಮನನುವಿದ್ಯ ವ್ರಜಂತಿ । ಅಥ ಯ ಆತ್ಮಾನಮನುವಿದ್ಯ ವ್ರಜಂತಿ' ಎಂಬುದಾಗಿ ಆತ್ಮಶ್ರುತಿಯೂ ಅನೇಕ ಬಾರಿ ಇರುತ್ತದೆ. ಹೀಗೆ ಆತ್ಮಶ್ರುತಿಯ ಅಭ್ಯಾಸದಿಂದ ಮತ್ತು ಅನೇಕ ಲಿಂಗಗಳಿಂದ ಶ್ರುತಿವಾಕ್ಯಕ್ಕಿಂತ ಲಿಂಗವೇ ಬಲಿಷ್ಠವಾಗಿದೆಯೆಂದು ಸಿದ್ಧವಾಗುತ್ತದೆ. ಹೀಗಿರುವಾಗ ವಾಕ್ಯಕ್ಕೆ ಅನುಸಾರಿಯಾಗಿ ಲಿಂಗವನ್ನು ಗೌಣಮಾಡಬೇಕೆಂದು ಪೂರ್ವಪಕ್ಷಕಾರರ ಆಕ್ಷೇಪ.

**प्रकाशः** – मैवम् । वक्ष्माणादिशा वाक्यस्य निरवकाशत्वं लिङ्गानां सावकाशत्वमिति पूर्वपक्षिणोऽभिमानात् । एकेनापि जात्या दुर्बलेन निरवकाशेन बहूनां सावकाशानां बाधात् । ''आनर्थक्यप्रतिहतानां विपरीतं बलाबलम्'' इति न्यायादिति भावः ।

ಸಮಾಧಾನ - ಈ ಆಕ್ಷೇಪ ಸರಿಯಲ್ಲ. ಏಕೆಂದರೆ ಮುಂದೆ ಹೇಳುವ ಪ್ರಕಾರ ವಾಕ್ಯವು ನಿರವಕಾಶವಾಗಿದೆ. ಲಿಂಗಗಳೆಲ್ಲವೂ ಸಾವಕಾಶವಾಗಿವೆಯೆಂದೇ ಪೂರ್ವಪಕ್ಷಿಯ ಅಭಿಪ್ರಾಯ. ಅಂದರೆ ಈಗಾಗಲೇ ಹೇಳಿದಂತೆ ಲಿಂಗಕ್ಕಿಂತಲೂ ವಾಕ್ಯವು ದುರ್ಬಲವಾಗಿರಬಹುದು. ಆದರೆ ನಿರವಕಾಶವಾದ

ಪ್ರಯುಕ್ತ ಸಾವಕಾಶವಾದ ಅನೇಕ ಲಿಂಗಗಳನ್ನು ಒಂದೇ ವಾಕ್ಯವು ಬಾಧಿಸುತ್ತದೆ. 'ಆನರ್ಥಕ್ಯಪ್ರತಿಹತಾನಾಂ ವಿಪರೀತಂ ಬಲಾಬಲಮ್' ಎಂಬ ನ್ಯಾಯವೇ ಈ ವಿಷಯದಲ್ಲಿ ಆಧಾರ.

**प्रकाशः – यदि त्विति ।। यदि ''यावान्'' इति प्रतिवचनं ''किं तदत्र विद्यते'' इति प्रश्ने आकाशशब्दितं ब्रह्म विद्यत इत्यन्वेष्टव्यं ब्रह्मेत्युक्तिपरं तदा विष्णोरेव सर्वाधारतया हृत्पद्मस्थत्वप्राप्तेः प्रतिवचनविरोधाभावात् प्राक्तनमपि हृत्पद्मस्थत्वं तस्यैव ।**

ಸಿದ್ಧಾಂತದ ಫಲಫಲಿಭಾವವನ್ನು 'ಯದಿ ತು' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಒಂದುವೇಳೆ 'ಯಾವಾನ್ವಾ' ಎಂಬ ಪ್ರತಿವಚನವು 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ, ಆಕಾಶಶಬ್ದ ಪ್ರತಿಪಾದ್ಯನಾದ ಬ್ರಹ್ಮನೇ ಇದ್ದಾನೆಂದು ಅವನನ್ನೇ ಅನ್ವೇಷಣೆ ಮಾಡಬೇಕೆಂದು ಬ್ರಹ್ಮಪರವಾಗಿ ಉತ್ತರ ನೀಡುವುದಾದರೆ, ವಿಷ್ಣುವೇ ಸಕಲ ಪದಾರ್ಥಗಳಿಗೂ ಆಧಾರನಾಗಿ ಹೃತ್ಪದ್ಮಸ್ಥಿತನೆಂದು ಸಿದ್ಧವಾಗುತ್ತದೆ. ಆವಾಗ ಪ್ರತಿವಚನದ ವಾಕ್ಯವಿರೋಧವು ಬರುವುದಿಲ್ಲ. ಹಿಂದೆ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವೆಂಬ ಲಿಂಗವೂ ಕೂಡ ವಿಷ್ಣುವಿನಲ್ಲೇ ಯುಕ್ತವಾಗುತ್ತದೆ.

**प्रकाशः – एवं चापहतपाप्मत्वादिकं मुख्यमेव । तथा सुषिरश्रुतेरपि सर्वाधारत्वाभिप्रायेण परम्परया सुषिरस्य सर्वाधारत्वबोधनपरतयोपपत्तेस्तद्विरोधाभावाद्धृत्पद्मस्थत्वं विष्णोरेव सिध्यतीत्यर्थः ।**

ಆದ್ದರಿಂದ ಅಪಹತಪಾಪ್ಮತ್ವವೇ ಮೊದಲಾದ ಲಿಂಗಗಳೆಲ್ಲವೂ ಮುಖ್ಯವಾಗಿಯೇ ಉಪಪನ್ನವಾಗುತ್ತವೆ. ಮತ್ತು ಸುಷಿರಶ್ರುತಿಯ ವಿರೋಧವೂ ಕೂಡ ಬರುವುದಿಲ್ಲ. ಸುಷಿರಕ್ಕೆ ದ್ಯಾವಾಪೃಥಿವ್ಯಾದ್ಯಾಶ್ರಯತ್ವವು ಅತ್ಯಂತ ಅಯುಕ್ತವಾದ್ದರಿಂದ ಸುಷಿರದಲ್ಲಿರುವ ಪರಮಾತ್ಮನು ದ್ಯಾವಾಪೃಥಿವ್ಯಾದಿಗಳಿಗೆಲ್ಲಾ ಆಶ್ರಯನಾಗಿದ್ದಾನೆಂಬ ಅಭಿಪ್ರಾಯದಿಂದ ಸುಷಿರಶ್ರುತಿಯು ಸುಷಿರಕ್ಕೆ ಸರ್ವಾಧಾರತ್ವವನ್ನು ಹೇಳುತ್ತಿದೆ. ಆದ್ದರಿಂದ ಸುಷಿರಶ್ರುತಿಯ ವಿರೋಧಕ್ಕೂ ಅವಕಾಶವಿಲ್ಲ. ಹೀಗೆ ಹೃತ್ಪದ್ಮಸ್ಥತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಮಾತ್ರ ಇರುತ್ತದೆಂದು ಸಿದ್ಧವಾಗುತ್ತದೆ. ಇದು ಸಿದ್ಧಾಂತಿಗಳ ಉದ್ದೇಶ.

**गुरुराजीयम् – विरोधद्वयाभावादिति ।।** प्रतिवचनविरोधसुषिरश्रुतिविरोधरूपविरोधद्वयाभावादित्यर्थः ।



ಒಂದು ವೇಳೆ 'ಯಾವಾನ್ವಾ ಅಯಮಾಕಾಶಃ' ಎಂಬ ಪ್ರತಿವಚನವು ಬ್ರಹ್ಮಪರವಾದಲ್ಲಿ ಎಲ್ಲವೂ ಕೂಡ ಬ್ರಹ್ಮನಲ್ಲೇ ಇದೆ ಎಂದು ನಿರ್ಣಯವಾಗುತ್ತದೆ. ಆವಾಗ 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಎಂಬ ಸುಷಿರ ಶ್ರುತಿಯ ವಿರೋಧವು ಬರುತ್ತದೆ. ಏಕೆಂದರೆ ಸುಷಿರ ಶ್ರುತಿಯು ಎಲ್ಲಾ ಪದಾರ್ಥಗಳು ಭೂತಾಕಾಶದಲ್ಲಿದೆಯೆಂದೇ ಹೇಳುತ್ತಿದೆ. ಆದ್ದರಿಂದ 'ಯಾವಾನ್ವಾ' ಇತ್ಯಾದಿ ಪ್ರತಿವಚನವು ಭೂತಾಕಾಶವನ್ನು ಅನುವಾದ ಮಾಡಿ, ಅಂತಹ ಭೂತಾಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳೆಲ್ಲವೂ ಕೂಡ ಇರುತ್ತವೆಂದು ಅನ್ವೇಷಣೆ ಮಾಡಬೇಕೆಂದು ಪ್ರತಿಪಾದಿಸುತ್ತಿದೆಯೆಂದು ವ್ಯಾಖ್ಯಾನಿಸಬೇಕು. ಯಾವಾಗ ಪ್ರತಿವಚನವು ಭೂತಾಕಾಶಪರವೆಂದು ಸಿದ್ಧವಾಗುತ್ತದೋ, ಆವಾಗ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ, ಹೃತ್ಪದ್ಮಸ್ಥತ್ವವು ಕೂಡ ಭೂತಾಕಾಶದಲ್ಲಿಯೇ ಪ್ರಾಪ್ತವಾಗುತ್ತದೆ. ಈ ಪ್ರತಿವಚನಕ್ಕೆ ಅನುಸಾರಿಯಾಗಿ ಅಪಹತಪಾಪ್ಮತ್ವಾದಿಗಳನ್ನು ಗೌಣವಾಗಿ ವ್ಯಾಖ್ಯಾನಿಸಬೇಕು. ಹಿಂದೆ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವನ್ನೂ ಕೂಡ ಭೂತಾಕಾಶದಲ್ಲಿಯೇ ಹೇಳಬೇಕು. ಇದು ಪೂರ್ವಪಕ್ಷಕಾರರ ಉದ್ದೇಶ.

ಒಂದುವೇಳೆ 'ಯಾವಾನ್ವಾ' ಎಂಬ ಪ್ರತಿವಚನವು 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ, ಆಕಾಶಶಬ್ದ ಪ್ರತಿಪಾದ್ಯನಾದ ಬ್ರಹ್ಮನೇ ಇದ್ದಾನೆಂದು ಅವನನ್ನೇ ಅನ್ವೇಷಣೆ ಮಾಡಬೇಕೆಂದು ಬ್ರಹ್ಮಪರವಾಗಿ ಉತ್ತರ ನೀಡುವುದಾದರೆ, ವಿಷ್ಣುವೇ ಸಕಲ ಪದಾರ್ಥಗಳಿಗೂ ಆಧಾರನಾಗಿ ಹೃತ್ಪದ್ಮಸ್ಥಿತನೆಂದು ಸಿದ್ಧವಾಗುತ್ತದೆ. ಆವಾಗ ಪ್ರತಿವಚನದ ವಾಕ್ಯವಿರೋಧವು ಬರುವುದಿಲ್ಲ.ಹಿಂದೆ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವೆಂಬ ಲಿಂಗವೂ ಕೂಡ ವಿಷ್ಣುವಿನಲ್ಲೇ ಯುಕ್ತವಾಗುತ್ತದೆ.

ಆದ್ದರಿಂದ ಅಪಹತಪಾಪ್ಮತ್ವವೇ ಮೊದಲಾದ ಲಿಂಗಗಳೆಲ್ಲವೂ ಮುಖ್ಯವಾಗಿಯೇ ಉಪಪನ್ನವಾಗುತ್ತವೆ. ಮತ್ತು ಸುಷಿರಶ್ರುತಿಯ ವಿರೋಧವೂ ಕೂಡ ಬರುವುದಿಲ್ಲ. ಸುಷಿರಕ್ಕೆ ದ್ಯಾವಾಪೃಥಿವ್ಯಾದ್ಯಾಶ್ರಯತ್ವವು ಅತ್ಯಂತ ಅಯುಕ್ತವಾದ್ದರಿಂದ ಸುಷಿರದಲ್ಲಿರುವ ಪರಮಾತ್ಮನು ದ್ಯಾವಾಪೃಥಿವ್ಯಾದಿಗಳಿಗೆಲ್ಲಾ ಆಶ್ರಯನಾಗಿದ್ದಾನೆಂಬ ಅಭಿಪ್ರಾಯದಿಂದ ಸುಷಿರಶ್ರುತಿಯು ಸುಷಿರಕ್ಕೆ ಸರ್ವಾಧಾರತ್ವವನ್ನು ಹೇಳುತ್ತಿದೆ. ಆದ್ದರಿಂದ ಸುಷಿರಶ್ರುತಿಯ ವಿರೋಧಕ್ಕೂ ಅವಕಾಶವಿಲ್ಲ. ಹೀಗೆ ಹೃತ್ಪದ್ಮಸ್ಥತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಮಾತ್ರ ಇರುತ್ತದೆಂದು ಸಿದ್ಧವಾಗುತ್ತದೆ. ಇದು ಸಿದ್ಧಾಂತಿಗಳ ಉದ್ದೇಶ.





## 'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವಲಿಂಗದ ಸಮನ್ವಯ

### तात्पर्यचन्द्रिका

**अत्र यद्यपि "दहरोऽस्मिन्नन्तराकाशः" इति वाक्योक्ते हृत्पद्मस्थदहराकाशत्वे न चिन्ता । तस्य सिद्धान्तेऽप्यब्रह्मनिष्ठत्वात् ।**

ಅನುವಾದ - ಪ್ರಶ್ನೆ - 'ದಹರೋಽಸ್ಮಿನ್ನಂತರಾಕಾಶಃ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ದಹರಾಕಾಶದ ಬಗ್ಗೆ ಸಂಶಯವಿಲ್ಲ. ಏಕೆಂದರೆ ಇಲ್ಲಿರುವ ಆಕಾಶಶಬ್ದವು ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ಭೂತಾಕಾಶವನ್ನೇ ಪ್ರತಿಪಾದಿಸುತ್ತದೆಂದು ಸಿದ್ಧಾಂತಕಾರರೂ ಕೂಡ ಒಪ್ಪಿರುತ್ತಾರೆ.

**नापि "तस्मिन्यदन्तस्तदन्वेष्टव्यम्" इति वाक्योक्ते हृत्पद्मस्थ-दहराकाशस्थत्वे । तत्र भाष्योक्ताकाशशब्दाख्यपूर्वपक्षबीजाभावात् ।**

ಇನ್ನು 'ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಮುಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ದಹರಾಕಾಶದಲ್ಲಿರುವವನು ಯಾರು ಎಂಬುದರ ಬಗ್ಗೆಯೂ ಕೂಡ ಸಂಶಯವು ಕೂಡುವುದಿಲ್ಲ. ಏಕೆಂದರೆ ಹೃತ್ಪದ್ಮದಲ್ಲಿರುವ ದಹರಾಕಾಶದಲ್ಲಿರುವವನಲ್ಲಿ ಆಕಾಶಶಬ್ದವಿಲ್ಲವೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಆದ್ದರಿಂದ ಪೂರ್ವಪಕ್ಷಬೀಜವನ್ನೇ ಹೃತ್ಪದ್ಮಸ್ಥ ದಹರಾಕಾಶದಲ್ಲಿ ತೋರಿಸಲಾಗದು.

**पूर्वपक्षे दहराकाशस्थस्य सर्वाधारत्वाभावेन भाष्यटीकोक्ताम्बरान्तधृत्याक्षेपा-योगाच्च ।**

ಮತ್ತು ಪೂರ್ವಪಕ್ಷದಲ್ಲಿ ದಹರಾಕಾಶಕ್ಕೆ ಸರ್ವಾಧಾರತ್ವವನ್ನು ಹೇಳುತ್ತಾನೆ ಹೊರತು, ಹೃತ್ಪದ್ಮಸ್ಥವಾದ ದಹರಾಕಾಶಕ್ಕೆ ಸರ್ವಾಧಾರತ್ವವನ್ನು ಹೇಳುವುದಿಲ್ಲ. ಆದ್ದರಿಂದ ಭಾಷ್ಯ ಹಾಗೂ ಟೀಕೆಗಳಲ್ಲಿ ಪೂರ್ವೋಕ್ತವಾದ ಅಂಬರಾಂತಧಾರಕತ್ವವಾದ ಆಕಾಶವೂ ಕೂಡ ಈ ಪಕ್ಷದಲ್ಲಿ ಅಯುಕ್ತವಾಗುತ್ತದೆ. ಆದ್ದರಿಂದ 'ಹೃತ್ಪದ್ಮಸ್ಥ ದಹರಾಕಾಶಸ್ಥತ್ವ' ಎಂಬ ಲಿಂಗದ ಸಮನ್ವಯವು ಈ ಅಧಿಕರಣದ ಉದ್ದೇಶವೆಂದು ಹೇಳಲು ಸಾಧ್ಯವಿಲ್ಲ.

**नापि हृत्पद्मस्थो दहर आकाश इति पूर्वपक्षे हृत्पद्मस्थदहरस्थं ब्रह्मेति सिद्धान्तो युक्तः ।**

ಇನ್ನು ಹೃತ್ಪದ್ಮಸ್ಥವಾದ ದಹರವೆಂದರೆ ಭೂತಾಕಾಶವಾಗಿದೆಯೆಂದು ಪೂರ್ವಪಕ್ಷ. ಹೃತ್ಪದ್ಮಸ್ಥ ದಹರದಲ್ಲಿರುವವನು ಬ್ರಹ್ಮನಾಗಿದ್ದಾನೆಂದು ಸಿದ್ಧಾಂತ. ಹೀಗೆ ಹೇಳುವುದೂ ಯುಕ್ತವಲ್ಲ. ಏಕೆಂದರೆ ಹೃತ್ಪದ್ಮಸ್ಥವಾದದ್ದೇ ಬೇರೆ, ಹೃತ್ಪದ್ಮಸ್ಥ ದಹರಸ್ಥವಾದದ್ದೇ ಬೇರೆ. ಹೀಗೆ ವ್ಯಧಿಕರಣವಾದ್ದರಿಂದ, ಈ ಪಕ್ಷವು ಸರಿಯಲ್ಲ.

**नापि सर्वाधारत्वे चिन्ता । ''चन्द्राद्याधारत्वं विष्णोरुक्तम् । तच्चाकाशस्य प्रतीयते'' इति भाष्यानुसारात् । ''स चन्द्रादित्याद्याधारः किं दहराकाश आहोस्वित्तत्स्थः कश्चित्'' इत्यादि तत्वप्रदीपानुसाराच्चेति वाच्यम् ।**

ಇನ್ನು ಸರ್ವಾಧಾರತ್ವ ವಿಷಯದಲ್ಲಿ ಸಂಶಯ ಬರುತ್ತಿದೆಯೆಂದೂ ಕೂಡ ಹೇಳಲಾಗದು. ವಸ್ತುತಃ ಸರ್ವಾಧಾರತ್ವ ವಿಷಯದಲ್ಲಿ ಸಂಶಯವನ್ನು ತೋರಿಸಬಹುದೆಂದು ಮೇಲ್ನೋಟಕ್ಕೆ ಕಾಣಿಸುತ್ತಿದೆ. ಏಕೆಂದರೆ 'ಚಂದ್ರಾದ್ಯಾಧಾರತ್ವಂ ವಿಷ್ಣೋರುಕ್ತಮ್ । ತಚ್ಚಾಕಾಶಸ್ಯ ಪ್ರತಿಯತೇ' ಎಂಬ ಭಾಷ್ಯದ ಮಾತನ್ನು ನೋಡಿದಾಗ, ಸರ್ವಾಧಾರತ್ವದ ಸಮನ್ವಯವೆಂದು ತಿಳಿಯುತ್ತದೆ. ಮತ್ತು 'ಸ ಚಂದ್ರಾದಿತ್ಯಾದ್ಯಾರಧಾರಃ ಕಿಂ ದಹರಾಕಾಶ ಆಹೋಸ್ವಿತ್ತತ್ಸ್ಥಃ ಕಶ್ಚಿತ್' ಎಂಬುದಾಗಿ ತತ್ವಪ್ರದೀಪದ ಮಾತನ್ನೂ ಕೂಡ ಅನುಸರಿಸಿದಂತಾಗುತ್ತದೆ. ಆದ್ದರಿಂದ ಸರ್ವಾಧಾರತ್ವದ ಸಮನ್ವಯವನ್ನೇ ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**''लिङ्गं हृत्पद्मस्थत्वम्'' इति न्यायविवरणे ''सोऽक्षरः सन्हृदब्जगः'' इति सङ्क्षेपे च हृत्पद्मस्थत्वस्यैव विषयत्वोक्तेः ।**

ಏಕೆಂದರೆ ನ್ಯಾಯವಿವರಣದಲ್ಲಿ 'ಲಿಂಗಂ ಹೃತ್ಪದ್ಮಸ್ಥತ್ವಮ್' ಎಂಬ ಲಿಂಗದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆಂದು ಸ್ಪಷ್ಟವಾಗಿ ಶ್ರೀಮದಾಚಾರ್ಯರೇ ಹೇಳಿರುತ್ತಾರೆ. ಮತ್ತು 'ಸೋಽಕ್ಷರಃ ಸನ್‌ಹೃದಬ್ಜಗಃ' ಎಂಬುದಾಗಿ ಅಣುಭಾಷ್ಯದಲ್ಲಿಯೂ ಕೂಡ 'ಹೃದಬ್ಜಗಃ' ಎಂಬ ಪದದಿಂದ ಹೃತ್ಪದ್ಮಸ್ಥತ್ವವೆಂಬ ಲಿಂಗದ ಸಮನ್ವಯವೇ ಈ ಅಧಿಕರಣದ ಸಾರವೆಂದು ಹೇಳಿರುತ್ತಾರೆ. ಆದಕ್ಕೆ ವಿರುದ್ಧವಾಗಿ ಸರ್ವಾಧಾರತ್ವದ ಸಮನ್ವಯವು ಈ ಅಧಿಕರಣದ ಉದ್ದೇಶವೆಂದು ಹೇಳಬಾರದು.

**अत्रापि ''दहरे विष्णुरेव'' इति सिद्धान्तभाष्ये सूत्रेऽपि सप्तम्यन्तेन दहरपदेन दहराकाशस्थत्वस्यैव समन्वेतव्यत्वप्रतीतेश्च ।**

ಪರಿಪೂರ್ಣಚಂದ್ರಿಕಾ

ಮತ್ತು ಈ ಅಧಿಕರಣದ ಸಿದ್ಧಾಂತ ಭಾಷ್ಯದಲ್ಲಿಯೂ 'ದಹರೇ ವಿಷ್ಣುರೇವ' ಎಂಬುದಾಗಿ ಸೂತ್ರದಲ್ಲಿರುವ 'ದಹರ' ಎಂಬ ಪದವನ್ನು ಸಪ್ತಮ್ಯಂತವಾಗಿಯೇ ವಿವಕ್ಷಿಸಲಾಗಿದೆ. ಈ ಸಪ್ತಮ್ಯಂತವಾದ 'ದಹರ' ಪದದಿಂದ ದಹರಾಕಾಶಸ್ಥತ್ವವೇ ಸಮನ್ವೇತವ್ಯವೆಂದು ತಿಳಿಯುತ್ತದೆ.

**''प्रसिद्धेश्च'' इत्यादिसूत्रे विष्णोर्दहराकाशस्थत्वस्यैवोपपादनाच्च ।**

ಅಷ್ಟೇ ಅಲ್ಲದೇ ಇದೇ ಅಧಿಕರಣದ 'ಪ್ರಸಿದ್ಧೇಶ್ಚ' ಇತ್ಯಾದಿ ಸೂತ್ರಗಳಲ್ಲಿ ದಹರಾಕಾಶಸ್ಥನಾದವನು ವಿಷ್ಣುವೇ ಆಗಿದ್ದಾನೆಂದು ಉಪಪಾದಿಸಲಾಗಿದೆ. ಅದಕ್ಕೆ ವಿರುದ್ಧವಾಗಿ ಸರ್ವಾಧಾರತ್ವದ ಸಮನ್ವಯವೆಂದು ಹೇಳುವುದು ಸರಿಯಾಗುವುದಿಲ್ಲ.

**''चन्द्राद्याधारत्वम्'' इति भाष्यं त्वक्षराधिकरणाक्षेपेणात्र पूर्वपक्ष इति दर्शयितुमिति टीकायामेव व्याख्यातम् । तत्वप्रदीपोऽपि तथैव व्याख्येयः ।**

ಹಾಗಾದರೆ 'ಚಂದ್ರಾದ್ಯಾಧಾರತ್ವಮ್' ಎಂಬ ಭಾಷ್ಯದಲ್ಲಿ ಸರ್ವಾಧಾರತ್ವಲಿಂಗದ ಸಮನ್ವಯವೆಂದೇ ಹೇಳಿದ್ದಾರಲ್ಲವೇ? ಎಂದು ಪ್ರಶ್ನಿಸಬಾರದು. ಅದು ಕೇವಲ ಅಕ್ಷರಾಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡಿ ಪೂರ್ವಪಕ್ಷವು ಹೊರಡುತ್ತಿದೆಯೆಂದು ತಿಳಿಸುವುದಕ್ಕಾಗಿ ಮಾತ್ರ. ಹೀಗೆ ಟೀಕೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ತತ್ವಪ್ರದೀಪದಲ್ಲಿಯೂ ಕೂಡ 'ಚಂದ್ರಾದ್ಯಾಧ್ಯಾರತ್ವಮ್' ಇತ್ಯಾದಿ ಭಾಷ್ಯಕ್ಕೆ ಇದೇ ಪ್ರಕಾರದಲ್ಲಿ ವ್ಯಾಖ್ಯಾನಿಸಬೇಕು. ಇದರಿಂದ ಸರ್ವಾಧಾರತ್ವದ ಲಿಂಗದ ಸಮನ್ವಯವು ಈ ಅಧಿಕರಣದ ಉದ್ದೇಶವೆಂದೇನೂ ಸಿದ್ಧವಾಗುವುದಿಲ್ಲ.

**तथापि ''यावान्वा अयमाकाशस्तावानेषोऽन्तर्हृदय'' इति वाक्योक्ते हृत्पद्मस्थत्वे चिन्ता । एवञ्च न कोऽपि दोषः । तस्य सिद्धान्ते ब्रह्ममात्र-निष्ठत्वात् । तत्र पूर्वपक्षबीजादेः सत्वाच्च ॥**

ಉತ್ತರ - ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ನಾವು 'ದಹರೋಽಸ್ಮಿನ್‌ಅಂತರಾಕಾಶಃ' ಇತ್ಯಾದಿ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದ ಬಗ್ಗೆ ಸಂಶಯವನ್ನು ತೋರಿಸುತ್ತಿಲ್ಲ ಹೊರತಾಗಿ, 'ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯೇ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದ ಬಗ್ಗೆ ಸಂಶಯವನ್ನು ತೋರಿಸುತ್ತಿದ್ದೇವೆ. ಆದ್ದರಿಂದ ಹಿಂದಿನ ಯಾವುದೇ ದೋಷಕ್ಕೂ ಅವಕಾಶವಿಲ್ಲ. ಈ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವಲಿಂಗವು ಕೇವಲ ವಿಷ್ಣುವಿನಲ್ಲಿರುತ್ತದೆಂಬುದೇ ಸಿದ್ಧಾಂತ. ಹಾಗೂ ಪೂರ್ವಪಕ್ಷಬೀಜಾದಿಗಳೆಲ್ಲವೂ ಈ ವಾಕ್ಯದಲ್ಲಿ ಸ್ಪಷ್ಟವಾಗಿ ಇರುತ್ತದೆ.

**प्रकाशः –**

पूर्वपक्षटीकां विवरीतुकामो भाष्याद्युक्तपूर्वपक्षहेतूनामसिद्धिपरिहाराय समन्वीयमानलिङ्गस्वरूपं निर्णेतुमाक्षिपति – **अत्र यद्यपीति** ।।

ವಿವರಣೆ - ಪೂರ್ವಪಕ್ಷ ಟೀಕೆಯನ್ನು ಮುಂದೆ ವಿವರಿಸುವ ಉದ್ದೇಶದಿಂದ ಅದಕ್ಕೆ ಪೂರಕವಾಗಿ ಭಾಷ್ಯದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ಹೇತುಗಳಿಗೆ ಅಸಿದ್ಧಿಯನ್ನು ಪರಿಹರಿಸುವ ಮೂಲಕ ಸಮನ್ವಯ ಮಾಡಬೇಕಾದ ಲಿಂಗಸ್ವರೂಪದ ನಿರ್ಧಾರಕ್ಕಾಗಿ ಆಕ್ಷೇಪ ಮಾಡುತ್ತಿದ್ದಾರೆ. 'ಅತ್ರ ಯದ್ಯಪಿ' ಇತ್ಯಾದಿ ಗ್ರಂಥದಿಂದ.

**प्रकाशः** – न चिन्तेति विच्छेदः । **पूर्वपक्ष इति** ।। भूतस्यैव सर्वाधारत्वेन पूर्वपक्षकरणादिति भावः ।

ಗ್ರಂಥದ ಪ್ರಾರಂಭದ ವಾಕ್ಯದಲ್ಲಿ 'ಹೃತ್ಪದ್ಮಸ್ಥತ್ವದಹರಾಕಾಶತ್ವೇ ನ ಚಿಂತಾ' ಎಂದು ಪದಚ್ಛೇದ ಮಾಡಬೇಕು. ಇಲ್ಲದಿದ್ದರೆ, 'ಆಕಾಶತ್ವೇನ' ಎಂಬುದಾಗಿ ತೃತೀಯಾಂತವಾಗಿ ಓದುವ ಸಂಭವವಿದೆ. 'ಪೂರ್ವಪಕ್ಷೇ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಭೂತಾಕಾಶವನ್ನೇ ಸರ್ವಾಧಾರವೆಂದು ಪೂರ್ವಪಕ್ಷಕಾರನು ಆಕ್ಷೇಪಿಸುತ್ತಿದ್ದಾನೆ ಹೊರತು, ಭೂತಾಕಾಶದಲ್ಲಿರುವವನಲ್ಲಿ ಸರ್ವಾಧಾರತ್ವವನ್ನು ಆಕ್ಷೇಪಿಸುತ್ತಿಲ್ಲವೆಂದು ತಿಳಿಯಬೇಕು.

**प्रकाशः – नापि हृत्पद्मस्थ इति** ।। व्यधिकरणत्वादिति भावः । उक्तदोषपरिजिहीर्षया पक्षान्तरं सोपष्टम्भमाशङ्कते – **नापीति** ।।

'ನಾಪಿ ಹೃತ್ಪದ್ಮಸ್ಥಃ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಹೃತ್ಪದ್ಮದಲ್ಲಿರುವ ದಹರವು ಆಕಾಶವಾಗಿದೆಯೆಂದು ಪೂರ್ವಪಕ್ಷಕಾರನು ಹೇಳಿದಾಗ ದಹರದಲ್ಲಿರುವವನು ಬ್ರಹ್ಮನಾಗಿದ್ದಾನೆಂದು ಸಿದ್ಧಾಂತ ಮಾಡಿದರೆ ವ್ಯಧಿಕರಣವಾಗುತ್ತದೆ ಎಂದು. ಹಿಂದಿನ ಪಕ್ಷದಲ್ಲಿರುವ ದೋಷಗಳನ್ನೆಲ್ಲಾ ಪರಿಹಾರ ಮಾಡಿಕೊಳ್ಳುವ ಅಭಿಪ್ರಾಯದಿಂದ ಮತ್ತೊಂದು ಪಕ್ಷಕ್ಕೆ ಸೋಪಷ್ಟಂಭವಾಗಿ ಜ್ಞಾಪಕವನ್ನು ಆಶಂಕಿಸುತ್ತಿದ್ದಾರೆ 'ನಾಪಿ' ಇತ್ಯಾದಿ ವಾಕ್ಯದಿಂದ.

**प्रकाशः** – बह्वनुरोधेनैकं भाष्यवाक्यं टीकोक्तरीत्याऽन्यथा व्याख्येयमित्याह – **लिङ्गमिति** ।। **तथैवेति** ।। पूर्वाधिकरणाक्षेपेणात्र पूर्वपक्ष इति दर्शयितुमित्येवं-रूपेणेत्यर्थः ।

ನ್ಯಾಯವಿವರಣ, ಅನುವ್ಯಾಖ್ಯಾನ ಮೊದಲಾದವುಗಳನ್ನೆಲ್ಲಾ ಉಪಪಾದಿಸುವುದಕ್ಕಾಗಿ ಭಾಷ್ಯದ ಒಂದು ಮಾತನ್ನು ಟೀಕೆಯಲ್ಲಿ ಹೇಳಿದಂತೆ ಅನ್ಯಥಾ ವ್ಯಾಖ್ಯಾನ ಮಾಡಬೇಕು ಅಂದರೆ ಸರ್ವಾಧಾರತ್ವದ

ಸಮನ್ವಯವನ್ನು ಮಾಡುತ್ತಿದ್ದಾರೆಂಬ ಭಾಷ್ಯದ ಮಾತನ್ನು ನ್ಯಾಯವಿವರಣಾದಿಗಳಿಗೆ ಅನುಸಾರಿಯಾಗಿ ವ್ಯಾಖ್ಯಾನಿಸಬೇಕು ಎಂಬುದಾಗಿ 'ಲಿಂಗಮ್' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ತಥೈವ' ಎಂದರೆ ಹಿಂದಿನ ಅಧಿಕರಣದ ಆಕ್ಷೇಪದಿಂದ ಈ ಅಧಿಕರಣದ ಪೂರ್ವಪಕ್ಷವು ಹೊರಟಿದೆಯೆಂದು ತೋರಿಸುವುದಕ್ಕಾಗಿಯೇ ಎಂದರ್ಥ.

**प्रकाशः – अत एवोत्तरत्र तत्वप्रदीपे ''तत्स्थः कश्चिदित्यपरः पक्षः । सोऽपि जीव इति प्राप्तम्'' इति हृत्पद्मगतसुषिरस्थ एव विषयो दर्शित इति भावः ।**

ಆದ್ದರಿಂದಲೇ ಮುಂದೆ ತತ್ವಪ್ರದೀಪದಲ್ಲಿ 'ತಸ್ಥಃ ಕಶ್ಚಿದಿತ್ಯಪರಃ ಪಕ್ಷಃ। ಸೋಽಪಿ ಜೀವ ಇತಿ ಪ್ರಾಪ್ತಮ್' ಎಂಬುದಾಗಿ ಹೃತ್ಪದ್ಮದಲ್ಲಿರುವ ಸುಷಿರಸ್ಥನಾದ ವ್ಯಕ್ತಿಯನ್ನೇ ವಿಷಯನೆಂದು ಹೇಳಿರುತ್ತಾರೆ.

**प्रकाशः – त्रेधा समाधित्सुःछान्दोग्यभाष्यरीत्या तावत्समाधिमाह – तथाऽपि यावानिति ।।**

ಇಲ್ಲಿಯ ತನಕ ಮಾಡಿದ ಪ್ರಶ್ನೆಗೆ ಮೂರು ಬಗೆಯಲ್ಲಿ ಸಮಾಧಾನ ನೀಡುವುದಕ್ಕಾಗಿ ಮೊದಲು ಛಾಂದೋಗ್ಯಭಾಷ್ಯದ ಪ್ರಕಾರ ಸಮಾಧಾನವನ್ನು ಹೇಳುತ್ತಿದ್ದಾರೆ. 'ತಥಾಽಪಿ ಯಾವಾನ್ವಾ' ಇತ್ಯಾದಿ ವಾಕ್ಯದಿಂದ.

**प्रकाशः – तत्रेति ।। यावानयं बाह्याकाशस्तावान् हृदये विद्यत इत्याकाशस्य हृदयस्थताश्रवणेनाकाशश्रुतिरूपपूर्वपक्षबीजस्य सिद्धान्ते तदाकाशत्वस्य ब्रह्मनिष्ठतायाश्च सत्वादित्यर्थः ।**

'ತತ್ರ' ಎಂಬ ಗ್ರಂಥದ ಅಭಿಪ್ರಾಯ ಹೀಗಿದೆ. ಎಷ್ಟು ಬಾಹ್ಯಾಕಾಶವಿದೆಯೋ, ಅಷ್ಟೂ ಕೂಡ ಹೃದಯದಲ್ಲಿದೆ ಎಂಬುದಾಗಿ ಹೃದಯಸ್ಥತ್ವವು ಆಕಾಶದಲ್ಲಿ ಶ್ರುತವಾಗಿದೆ. ಆದ್ದರಿಂದ ಆಕಾಶಶ್ರುತಿಯೆಂಬ ಪೂರ್ವಪಕ್ಷಬೀಜವನ್ನು ಇದರಿಂದ ಹೇಳಿದಂತಾಗುತ್ತದೆ. ಸಿದ್ಧಾಂತದಲ್ಲಿಯೂ ಕೂಡ ಆಕಾಶಶಬ್ದ ಪ್ರತಿಪಾದ್ಯತ್ವವನ್ನು ಬ್ರಹ್ಮನಲ್ಲಿ ಹೇಳುತ್ತಾರೆ. ಅದನ್ನೂ ಸಹ ಈ ವಾಕ್ಯದಿಂದಲೇ ತೋರಿಸಿದಂತಾಗುತ್ತದೆಂದು ತಿಳಿಯಬೇಕು.

**गुरुराजीयम् – तस्येति ।।** हृत्पद्मस्थदहराकाशत्वस्येत्यर्थः । **नापीति ।।** पूर्वपक्षस्य हृत्पद्मस्थदहराकाशत्वविषयकत्वात् सिद्धान्तस्य हृत्पद्मस्थदहराकाशस्थस्य ब्रह्मविषयकत्वेन समानविषयत्वाभावेन पूर्वपक्षसिद्धान्तभावानुपपत्तेरित्यर्थः । **तत्वप्रदीपोऽपि तथैवेति ।** अक्षराधिकरणाक्षेपार्थत्वेनैवेत्यर्थः ।



ಈ ಅಧಿಕರಣದಲ್ಲಿ 'ದಹರೋಽಸ್ಮಿನ್ ಅಂತರಾಕಾಶಃ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದ ಬಗ್ಗೆ ವಿಚಾರ ಮಾಡುತ್ತಿಲ್ಲ. ಏಕೆಂದರೆ ಇದು ಭೂತಾಕಾಶನಿಷ್ಠವೆಂದು ಸಿದ್ಧಾಂತದಲ್ಲಿಯೂ ಒಪ್ಪಲಾಗಿದೆ.

'ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದಹರಾಕಾಶಸ್ಥತ್ವವೆಂಬ ಲಿಂಗದ-ಸಮನ್ವಯವು ಈ ಅಧಿಕರಣದ ಉದ್ದೇಶವಲ್ಲ. ಏಕೆಂದರೆ ಈ ವಾಕ್ಯದಲ್ಲಿ ಆಕಾಶಶಬ್ದವೆಂಬ ಪೂರ್ವಪಕ್ಷ ಬೀಜವೇ ಇರುವುದಿಲ್ಲ.

'ಸರ್ವಾಧಾರತ್ವ' ಎಂಬ ಲಿಂಗದ ಸಮನ್ವಯವೂ ಕೂಡ ಈ ಅಧಿಕರಣದ ಉದ್ದೇಶವಲ್ಲ. 'ಚಂದ್ರಾದ್ಯಾಧಾರತ್ವಮ್' ಇತ್ಯಾದಿ ಭಾಷ್ಯದ ಮಾತನ್ನು ನೋಡಿದಾಗ ಸರ್ವಾಧಾರತ್ವದ ಸಮನ್ವಯವನ್ನು ಮಾಡುತ್ತಿರಬಹುದೆಂದು ತೋರುತ್ತದೆ. ಆದರೆ 'ಲಿಂಗಂ ಹೃತ್ಪದ್ಮಸ್ಥತ್ವಂ' ಎಂಬ ನ್ಯಾಯವಿವರಣದಲ್ಲಿ ಹಾಗೂ 'ಸೋಽಕ್ಷರಃ ಸನ್ಹೃದಬ್ಜಗಃ' ಎಂಬ ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರೇ ಸ್ಪಷ್ಟವಾಗಿ 'ಹೃತ್ಪದ್ಮಸ್ಥತ್ವ' ಎಂಬ ಲಿಂಗದ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಹೇಳಿರುತ್ತಾರೆ.

ಆದ್ದರಿಂದ 'ಯಾವಾನ್ವಾ ಅಯಮಾಕಾಶಃ ತಾವಾನೇಷೋಽಂತರ್ಹೃದಯೇ' ಎಂಬ ವಾಕ್ಯದಲ್ಲಿರುವ 'ಹೃತ್ಪದ್ಮಸ್ಥತ್ವ' ಎಂಬ ಲಿಂಗದ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಸ್ಪಷ್ಟವಾಗಿ ತಿಳಿಯಬೇಕು.





## ಹಲವು ಬಗೆಯಲ್ಲಿ 'ಹೃತ್ಪದ್ಮಸ್ಥತ್ವ' ಲಿಂಗಸಮನ್ವಯದ ಸಮರ್ಥನೆ

## तात्पर्यचन्द्रिका

**यद्वा अन्वेष्टव्य इति वाक्योक्ते हृत्पद्मस्थत्वे चिन्ता । पूर्वपक्षे तच्छब्दस्य व्यवहितपुण्डरीकपरत्वेन पुण्डरीकस्थाकाशस्यैवान्वेष्टव्यत्वेन पूर्वपक्षबीजसम्भवात् । तस्यैव सर्वाधारत्वेनाम्बरान्तधृत्याक्षेपसम्भवाच ।**

ಅನುವಾದ - ಅಥವಾ 'ತಸ್ಮಿನ್ ಯದಂತಸ್ತದನ್ವೇಷ್ಟವ್ಯಃ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದ ಬಗ್ಗೆಯೇ ವಿಚಾರವನ್ನು ಮಾಡಲಾಗಿದೆ. ಪೂರ್ವಪಕ್ಷದ ಸಂದರ್ಭದಲ್ಲಿ 'ತತ್' ಶಬ್ದದಿಂದ ವ್ಯವಹಿತವಾದ ಪುಂಡರೀಕವನ್ನು ಪರಾಮರ್ಶಿಸಲಾಗುತ್ತದೆ. ಆವಾಗ ಪುಂಡರೀಕದಲ್ಲಿರುವ ಆಕಾಶದ ಬಗ್ಗೆ ಅನ್ವೇಷಣವನ್ನು ಮಾಡುವಿಕೆಯು ಪೂರ್ವಪಕ್ಷಬೀಜವೆಂದು ಹೇಳುವುದು ಸಮಂಜಸವಾಗುತ್ತದೆ. ಏಕೆಂದರೆ ಅಂತಹ ಆಕಾಶವೇ ಸರ್ವಾಧಾರವಾಗಿದೆಯೆಂದು ಹೇಳಬಹುದಾದ್ದರಿಂದ ಅಂಬರಾಂತ-ಧಾರಕತ್ವವನ್ನು ಆಕ್ಷೇಪ ಮಾಡಬಹುದು.

### ಪರಿಪೂರ್ಣಚಂದ್ರಿಕಾ

**यद्वा एतत्प्रकरणस्थे हृत्पद्मस्थत्वसामान्ये चिन्ता । तच्चाकाशस्येति न पूर्वः पक्षः ।**

ಅಥವಾ ಇದೇ ಪ್ರಕರಣದಲ್ಲಿ ಹೃತ್ಪದ್ಮಸ್ಥತ್ವವೆಂಬ ಸಾಮಾನ್ಯಧರ್ಮದ ಬಗ್ಗೆ ವಿಚಾರವನ್ನು ಮಾಡಲಾಗಿದೆ. ಈ ಪಕ್ಷದಲ್ಲಿ ಹೃತ್ಪದ್ಮಸ್ಥತ್ವವು ಆಕಾಶದಲ್ಲಿ ಬರುತ್ತದೆಂದು ಪೂರ್ವಪಕ್ಷವಲ್ಲ.

**नापि तदाकाशस्य नेति सिद्धान्तः । येन बाधः । किन्तु द्यावापृथिव्याद्याश्रयतया यत्साक्षाद्धृत्पद्मस्थत्वं तदाकाशस्यैव । भाष्योक्तसुषिरश्रुतेः ।**

ಮತ್ತು ಆಕಾಶದಲ್ಲಿ ಹೃತ್ಪದ್ಮಸ್ಥತ್ವವು ಬರುವುದಿಲ್ಲವೆಂದು ಸಿದ್ಧಾಂತವನ್ನು ಕೂಡ ಮಾಡುತ್ತಿಲ್ಲ. ಹಾಗೇ ಮಾಡಿದಲ್ಲಿ ಬಾಧದೋಷವು ಬರುತ್ತಿತ್ತು ಹೊರತಾಗಿ, ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯವಾಗಿ ಯಾವ ಹೃತ್ಪದ್ಮಸ್ಥತ್ವವು ಸಾಕ್ಷಾತ್ತಾಗಿ ಶ್ರುತವಾಗಿದೆಯೋ, ಇದು ಆಕಾಶದಲ್ಲೇ ಬರುತ್ತದೆ. ಏಕೆಂದರೆ 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಪ್ರಮಾಣವಿರುವುದರಿಂದ.

**यत्तु व्यवहितमन्वेष्टव्यतया हृत्पद्मस्थत्वं तत् द्यावापृथिव्यादेरेव । न्यायविवरणोक्तानन्वयात् । तथाच ब्रह्मणि विशेषाभावात्सामान्यमपि नेति प्राप्ते**

ವಿಶೇಷವಿದ್ದಲ್ಲಿ ಸಾಮಾನ್ಯವಿದ್ದೇ ಇರುತ್ತದೆ. ಸಾಮಾನ್ಯವಿದ್ದಲ್ಲಿ ವಿಶೇಷವಿರಬೇಕೆಂಬ ನಿಯಮವಿಲ್ಲ. ಆದರೆ ಯಾವದ್ವಿಶೇಷ್ಯವಿಲ್ಲದಿದ್ದರೆ ಸಾಮಾನ್ಯವೂ ಕೂಡ ಇರುವುದಿಲ್ಲವೆಂದು ನಿಯಮವು ಲೋಕಸಿದ್ಧವಾಗಿದೆ.

ಪ್ರಕೃತ ಹೃದಯಪದ್ಮಸ್ಥತ್ವವು ಈ ಪ್ರಕರಣದಲ್ಲಿ ಕೇಳಿಬರುತ್ತಿರುವ ಸಾಮಾನ್ಯಧರ್ಮ. ಸಾಕ್ಷಾತ್ ಹೃದಯಪದ್ಮಸ್ಥತ್ವ ಮತ್ತು ಪರಂಪರಯಾ ಹೃದಯಪದ್ಮಸ್ಥತ್ವ ಎಂಬೆರಡು ಧರ್ಮಗಳು ಇಲ್ಲಿವೆ. ಬ್ರಹ್ಮನ ವಿಷಯದಲ್ಲಿ ಸಾಕ್ಷಾತ್ ಹೃದಯಪದ್ಮಸ್ಥತ್ವವು ಬರುವುದಿಲ್ಲ. ಪರಂಪರಯಾ ಹೃದಯ-ಪದ್ಮಸ್ಥತ್ವವೂ ಕೂಪ ಬರುವುದಿಲ್ಲ. ಹೀಗೆ ಎರಡೂ ವಿಧವಾದ ವಿಶೇಷಧರ್ಮಗಳಿಲ್ಲದ ಪ್ರಯುಕ್ತ ಹೃದಯಪದ್ಮಸ್ಥತ್ವವೆಂಬ ಸಾಮಾನ್ಯಧರ್ಮವೂ ಕೂಡ ಬರುವುದಿಲ್ಲವೆಂದು ತಿಳಿಯಬೇಕು. ಸಾಕ್ಷಾತ್ ಹೃದಯಪದ್ಮಸ್ಥತ್ವವು ಏಕೆ ಬರುವುದಿಲ್ಲವೆಂದರೆ ಸ್ವತಃ ನೀವೇ ಸಾಕ್ಷಾದ್ಧೃತ್ಪದ್ಮಸ್ಥತ್ವವಿಲ್ಲವೆಂದು ಸಿದ್ಧಾಂತದಲ್ಲಿ ಹೇಳಿರುತ್ತೀರಿ.

ಇನ್ನು ಪರಂಪರಯಾ ಹೃದಯಪದ್ಮಸ್ಥತ್ವವು ಏಕಿಲ್ಲ? ಎಂದರೆ ಹೃದಯಪದ್ಮಸ್ಥತ್ವವು ಆಕಾಶ. ಅದರಲ್ಲಿ ಇರುವಂತಹದ್ದು ದ್ಯಾವಾಪೃಥಿವೀಗಳು. ಇವುಗಳನ್ನು ಅನ್ವೇಷಣೆ ಮಾಡಬೇಕೆಂದು ಶ್ರುತಿ ಹೇಳುತ್ತಿದೆ ಹೊರತು, ಪರಮಾತ್ಮನ ಅನ್ವೇಷಣವನ್ನು ಹೇಳಿಲ್ಲ. ಒಂದು ವೇಳೆ ಪರಮಾತ್ಮನನ್ನು

ವಿವಕ್ಷಿಸಿದರೆ ಅನ್ವಯವೇ ಬರುವುದಿಲ್ಲ. ಹೀಗೆ ಅಸಂಗತವಾಗುವ ಕಾರಣ ಪರಂಪರಯಾ ಹೃದಯಪದಸ್ಥತ್ವವೂ ಕೂಡ ವಿಷ್ಣುವಿನಲ್ಲಿ ಬರುವುದಿಲ್ಲ.

ಈ ರೀತಿ ಮಾಡುವ ಪೂರ್ವಪಕ್ಷವು ಸಿದ್ಧಾಂತಕ್ಕೆ ಬಾಧಕವಾಗುತ್ತದೆ. ಆದ್ದರಿಂದ ದ್ಯಾವಾಪೃಥಿವ್ಯಾದ್ಯಾಶ್ರಯತಯಾ ಸಾಕ್ಷಾದ್ಧೃತ್ಪದಸ್ಥತ್ವವು ಆಕಾಶಕ್ಕೆ ಮಾತ್ರ ಬಂದಿತು. ವ್ಯವಹಿತವಾದ ಅನ್ವೇಷ್ಟವ್ಯತಯಾ ಪರಂಪರಯಾ ಹೃತ್ಪದಸ್ಥತ್ವವು ದ್ಯಾವಾಪೃಥಿವ್ಯಾದಿಗಳಿಗಷ್ಟೇ ಬಂದಿತು. ಹೊರತು ಪರಮಾತ್ಮನಲ್ಲಿ ಬರುವುದಿಲ್ಲ. ಏಕೆಂದರೆ ನ್ಯಾಯವಿವರಣದಲ್ಲಿ ಅಧಿಕರಣಶರೀರವನ್ನು ಸಂಗ್ರಹಿಸುವಾಗ 'ಅನನ್ವಯ' ಎಂಬುದನ್ನು ಈ ಅಧಿಕರಣದ ಸಂಗ್ರಾಹಕ ಧರ್ಮವನ್ನಾಗಿ ಹೇಳಲಾಗಿದೆ. ಅದು ಪರಮಾತ್ಮನಲ್ಲಿ ಕೂಡಿಸಲು ಸಾಧ್ಯವಿಲ್ಲ. ಹೀಗೆ ಬ್ರಹ್ಮನಲ್ಲಿ ವಿಶೇಷಧರ್ಮಗಳಿಲ್ಲದ ಕಾರಣ ಸಾಮಾನ್ಯಧರ್ಮಕ್ಕೂ ಕೂಡ ಅವಕಾಶವಿಲ್ಲವೆಂದು ಪೂರ್ವಪಕ್ಷವು ಬರುತ್ತದೆ.

**सत्यं साक्षाद्धृत्पद्मस्थत्वमाकाशस्यैव । व्यवहितं तु ब्रह्मणः । तस्यैव द्यावापृथिव्याद्याश्रयत्वमन्वेष्टव्यत्वं च । तथाच विशेषसद्भावात्सामान्यमप्यस्तीति सिद्धान्तयिष्यमाणत्वान्न कोऽपि दोषः ।**

ಸಿದ್ಧಾಂತವನ್ನು ಹೀಗೆ ಮಾಡಬೇಕು - ಸಾಕ್ಷಾತ್ ಹೃತ್ಪದಸ್ಥತ್ವವು ಆಕಾಶಕ್ಕೆ ಮಾತ್ರ ಬರುತ್ತದೆ. ವ್ಯವಹಿತವಾದ ಹೃತ್ಪದಸ್ಥತ್ವವು ಬ್ರಹ್ಮನಲ್ಲಿ ಬರುತ್ತದೆನ್ನಲು ಏನೂ ಬಾಧಕವಿಲ್ಲ. ನಾವು ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯವಾದದ್ದೇ ಬೇರೆ, ಅನ್ವೇಷ್ಟವ್ಯವಾದದ್ದೇ ಬೇರೆ ಎಂದು ವ್ಯಧಿಕರಣವಾಗಿ ಉತ್ತರಿಸುವುದಿಲ್ಲ. ಹೊರತಾಗಿ ಅಂತಹ ವಿಷ್ಣುವೇ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನಾಗಿದ್ದಾನೆ. ಹಾಗೂ ಅವನೇ ಅನ್ವೇಷ್ಟವ್ಯನಾಗಿದ್ದಾನೆ. ಹೀಗೆ ಉತ್ತರಿಸುತ್ತೇವೆ. ಆದ್ದರಿಂದ ಪರಂಪರಯಾ ಹೃತ್ಪದಸ್ಥತ್ವವು ವಿಷ್ಣುವಿನಲ್ಲಿರುವುದರಿಂದ ವಿಶೇಷ ಧರ್ಮವು ಇದೆ ಎಂದು ಹೇಳಿದಂತಾಯಿತು. ಹಾಗೂ ಹೃತ್ಪದಸ್ಥತ್ವವೆಂಬ ಸಾಮಾನ್ಯಧರ್ಮವೂ ಕೂಡ ವಿಷ್ಣುವಿನಲ್ಲಿ ಬರುತ್ತದೆಂದು ಸಿದ್ಧಾಂತವನ್ನು ಮುಂದೆ ಮಾಡುತ್ತೇವೆ. ಆದ್ದರಿಂದ ಯಾವ ದೋಷಕ್ಕೂ ಕೂಡ ಆಸ್ಪದವಿಲ್ಲ.

**प्रकाशः —**

नन्वस्य छान्दोग्यभाष्यरीत्या सम्भवेऽपि न्यायविवरणरीत्या हृदयशब्दस्य विष्णुहृदयपरत्वात्तत्स्थत्वं सिद्धान्तेऽपि प्रसिद्धाकाशस्यैव । नतु विष्णोरित्यत उभयानुगुणं पक्षान्तरमाह – यद्वेति ।।

ವಿವರಣೆ - ಹಿಂದೆ ಹೇಳಿದ ಸಮಾಧಾನವು ಛಾಂದೋಗ್ಯಭಾಷ್ಯದ ಪ್ರಕಾರ ಸಮಂಜಸವಾಗುತ್ತದೆ. ಆದರೆ ನ್ಯಾಯವಿವರಣದಲ್ಲಿ 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ ಶಬ್ದಕ್ಕೆ ಭೂತಾಕಾಶವೆಂದು ಅರ್ಥೈಸಿ, 'ಅಂತರ್ಹೃದಯೇ' ಎಂಬಲ್ಲಿರುವ ಹೃದಯ ಶಬ್ದಕ್ಕೆ ವಿಷ್ಣುವಿನ ಹೃದಯವೆಂಬರ್ಥವನ್ನು ಮಾಡಿರುತ್ತಾರೆ. ಅಂತಹ ವಿಷ್ಣುವಿನ ಹೃದಯದಲ್ಲಿ ಬಹಿಷ್ಠವಾದ ಆಕಾಶವು ಇರುತ್ತದೆಂದು ಹೇಳಿದ್ದರಿಂದ ವಿಷ್ಣು ವ್ಯಾಪ್ತನೆಂದು ತಿಳಿಯುತ್ತದೆ. ಆದ್ದರಿಂದ ಸಿದ್ಧಾಂತದಲ್ಲಿಯೂ ಕೂಡ ಹೃತ್ಪದ್ಮಸ್ಥತ್ವವು ಪ್ರಸಿದ್ಧಾಕಾಶದಲ್ಲಿ ಬರುತ್ತದೆ ಹೊರತು, ವಿಷ್ಣುವಿನಲ್ಲಿ ಬರುವುದಿಲ್ಲ ? ಎಂಬ ಪ್ರಶ್ನೆಗೆ ಉಭಯಾನುಗುಣವಾದ ಪಕ್ಷಾಂತರವನ್ನು ಹೇಳುತ್ತಾ ಉತ್ತರಿಸುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥದಿಂದ.

**प्रकाशः** – ''यदिदमस्मिन्ब्रह्मपुरे दहरं पुण्डरीकं वेश्म दहरोऽस्मिन्नन्तराकाशः'' इत्युक्त्वा ''तस्मिन्यदन्तस्तदन्वेष्टव्यम्'' इति वाक्योक्त इत्यर्थः । **तच्छब्दस्य** तस्मिन्नित्यस्य ।

'ಯದಿದಮಸ್ಮಿನ್‌ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ' ಎಂದು ಹೇಳಿ ಮುಂದೆ 'ತಸ್ಮಿನ್ ಯದಂತಸ್ತದನ್ವೇಷ್ಟವ್ಯಮ್' ಎಂದು ಹೇಳಲಾಗಿದೆ. ಇಲ್ಲಿ 'ಯದಿದಮಸ್ಮಿನ್' ಎಂಬ ವಾಕ್ಯವು ವಿಷಯವಲ್ಲ. 'ತಸ್ಮಿನ್ ಯದಂತಃ' ಎಂಬುದೇ ಈ ಅಧಿಕರಣದ ವಿಷಯವಾಗಿದೆ. 'ಯದಿದಮಸ್ಮಿನ್' ಎಂಬ ವಾಕ್ಯದಲ್ಲಿ ಶರೀರದ ಹೃದಯದಲ್ಲಿ ಪುಂಡರೀಕವಿದೆಯೆಂದು ಹೇಳಲಾಗಿದೆ. ಇದನ್ನೇ ಮುಂದೆ 'ತಸ್ಮಿನ್ ಯದಂತಃ' ಎಂಬಲ್ಲಿರುವ 'ತತ್' ಶಬ್ದದಿಂದ ಪರಾಮರ್ಶ ಮಾಡಲಾಗಿದೆ. ಇಂತಹ ಪುಂಡರೀಕದಲ್ಲಿ ಯಾವುದು ಇದೆಯೋ, ಅದನ್ನು ಅನ್ವೇಷಣೆ ಮಾಡಬೇಕೆಂದು ವಿಷಯವಾಕ್ಯವು ಹೇಳುತ್ತಿದೆ. 'ತಚ್ಛಬ್ದಸ್ಯ' ಎಂದು ಗ್ರಂಥದಲ್ಲಿದೆ. ಪೂರ್ವಪಕ್ಷದಲ್ಲಿ 'ತಸ್ಮಿನ್' ಎಂಬ ಪದವು ಹೀಗೆ ಪುಂಡರೀಕವನ್ನು ಪರಾಮರ್ಶ ಮಾಡುತ್ತದೆ. ಸಿದ್ಧಾಂತದಲ್ಲಿ ಇದೇ 'ತಸ್ಮಿನ್' ಎಂಬ ಶಬ್ದವು ಆಕಾಶವನ್ನು ಪರಾಮರ್ಶ ಮಾಡುತ್ತದೆ ಎಂದರ್ಥ.

**प्रकाशः** – नन्वेवमाकाशस्यैवान्वेष्टव्यत्वप्राप्त्या पूर्वपक्षे द्यावाभूम्यादेरन्वेष्टव्यत्वोक्तिर्न युज्यत इत्यतस्साक्षात्परम्परासाधारण्येन वाक्यविशेषस्थत्वं विनैतत्प्रकरणगतं हृत्पद्मस्थत्वसामान्यमेव लिङ्गमित्याह – **यद्वेति** ।।

ಹೀಗೆ ಹೇಳಿದರೆ ಆಕಾಶವನ್ನೇ ಅನ್ವೇಷ್ಟವ್ಯವೆಂದು ಹೇಳಿದಂತಾಗುತ್ತದೆ. ಆವಾಗ ಪೂರ್ವಪಕ್ಷದಶಾದಲ್ಲಿ ದ್ಯಾವಾಪೃಥಿವ್ಯಾದಿಗಳಿಗೆ ಅನ್ವೇಷ್ಟವ್ಯತ್ವವನ್ನು ಹೇಳಿದ್ದು ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರವಾಗಿ ಹೃದಯಪದ್ಮಸ್ಥವಾದದ್ದು ಆಕಾಶವೆಂದು ಪೂರ್ವಪಕ್ಷಿಯು ಹೇಳುತ್ತಿದ್ದಾನೆ. ಹೃದಯಪದ್ಮಸ್ಥವಾದ ಆಕಾಶದಲ್ಲಿ ವಿಷ್ಣುವಿದ್ದಾನೆಂದು (ಸಿದ್ಧಾಂತಿಗಳು) ನಾವು ಹೇಳುತ್ತಿದ್ದೇವೆ. ಹೀಗೆ ಸಾಕ್ಷಾತ್ ಅಥವಾ ಪರಂಪರಾ ಸಾಧಾರಣವಾದ ವಾಕ್ಯವಿಶೇಷಸ್ಥತ್ವವನ್ನು ಬಿಟ್ಟು ಈ ಪ್ರಕರಣದಲ್ಲಿರುವ ಹೃತ್ಪದ್ಮಸ್ಥತ್ವವೆಂಬ ಸಾಮಾನ್ಯಧರ್ಮವೇ ಲಿಂಗವೆಂದು ಹೇಳುತ್ತಿದ್ದಾರೆ. 'ಯದ್ವಾ' ಇತ್ಯಾದಿ ವಾಕ್ಯದಿಂದ.

**प्रकाशः – बाध इति ।।** सिद्धत्वमित्यपि योज्यम् । आकाशे हृत्पद्मस्थत्वस्य सिद्धान्तेप्यनुमतत्वात् । **किन्तु द्यावापृथिव्यादीति ।।** अत एव टीकायां ''सर्वाधारतया हृत्पद्मस्थत्वमाकाशस्य'' इत्युक्तमिति भावः ।।

'ಬಾಧಃ' ಎಂಬುದರ ಅನಂತರ 'ಸಿದ್ಧತ್ವಮ್' ಎಂಬುದನ್ನೂ ಕೂಡ ಯೋಜನೆ ಮಾಡಿಕೊಳ್ಳಬೇಕು. ಏಕೆಂದರೆ ಆಕಾಶದಲ್ಲಿ ಹೃತ್ಪದ್ಮಸ್ಥತ್ವವಿದೆಯೆಂದು ಸಿದ್ಧಾಂತದಲ್ಲಿಯೂ ಕೂಡ ಒಪ್ಪಲಾಗಿದೆ. 'ಕಿಂತು ದ್ಯಾವಾಪೃಥಿವ್ಯಾದಿ' ಎಂದು ಹೇಳಿದ್ದರಿಂದಲೇ ಟೀಕೆಯಲ್ಲಿ 'ಸರ್ವಾಧಾರತಯಾ ಹೃತ್ಪದ್ಮಸ್ಥತ್ವಮಾಕಾಶಸ್ಯ' ಎಂದು ಹೇಳಿದ್ದು ಎಂದರ್ಥ.

**प्रकाशः – तस्यैवेति ।।** यावान्वेति वाक्ये प्रागुक्ताकाशानुवादेन सर्वाधारत्वोक्तेरिति भावः । **विशेषेति ।।** साक्षात्परम्परालक्षणविशेषभावादिति भावः।

'ತಸ್ಯೈವ' ಎಂದರೆ 'ಯಾವಾನ್ ವಾ' ಎಂಬ ವಾಕ್ಯದಲ್ಲಿ ಹಿಂದೆ ಹೇಳಲ್ಪಟ್ಟ ಆಕಾಶವನ್ನು ಅನುವಾದ ಮಾಡಿ ಸರ್ವಾಧಾರತ್ವವನ್ನು ಹೇಳಿದ್ದರಿಂದ ಎಂದು ಅಭಿಪ್ರಾಯ. 'ವಿಶೇಷ' ಎಂದರೆ ಸಾಕ್ಷಾತ್ ಹಾಗೂ ಪರಂಪರಾ ರೂಪವಾದ ವಿಶೇಷವಿರುವುದರಿಂದ ಎಂದಭಿಪ್ರಾಯ.

**गुरुराजीयम् –** यावान्वायमाकाश इति टीकोक्तव्याख्यानानुसारेण चिन्तामुपपाद्य भगवतस्सर्वाधारत्वे तस्मिन्सर्वं प्रतिष्ठितमिति सुषिरस्य सर्वाधारत्वश्रुतिविरोध इति व्याख्यानानुसारेणापि चिन्ताप्रकारमाह – **यद्वेति ।। येन बाध इति ।।** दहरोऽस्मिन्नन्तराकाश इत्यत्र हृत्पद्मस्थत्वस्याकाशमात्रनिष्ठत्वस्य सिद्धान्तेऽप्यभ्युपगतत्वेनाकाशस्य नेत्युच्यमाने बाधः स्यादित्यर्थः । **तथाचेति ।।** यावद्विशेषाभावे सामान्यस्य बाधितत्वादित्यर्थः । वाक्यान्वयानुपपत्तेरित्यादि टीकाऽनुपपन्ना । आकाशशब्दस्य ब्रह्मपरत्वेन किं तदत्र विद्यत इति प्रश्ने आकाशशब्दोक्तं ब्रह्मास्तीति परिहारस्य श्लिष्टत्वात् । न चाकाशस्य प्रसिद्धाकाशपरत्वाभिप्रायेण यावान्वा इत्यादेरन्वयाभावापादनमिति शङ्क्यम् । तथापि नानन्वयः ।




ಅಥವಾ 'ಅನ್ವೇಷ್ಟವ್ಯಃ' ಎಂಬ ವಾಕ್ಯದಲ್ಲಿರುವ ಹೃತ್ಪದ್ಮಸ್ಥತ್ವದ ಬಗ್ಗೆಯೇ ವಿಚಾರವನ್ನು ಮಾಡುತ್ತಿದ್ದೇವೆ. ಪೂರ್ವಪಕ್ಷದಲ್ಲಿ 'ತಸ್ಮಿನ್‌ಯದಂತಃ' ಎಂಬಲ್ಲಿರುವ 'ತತ್' ಶಬ್ದದಿಂದ ವ್ಯವಹಿತವಾದ ಪುಂಡರೀಕದ ಪರಾಮರ್ಶವನ್ನು ಮಾಡಲಾಗುತ್ತದೆ. ಸಿದ್ಧಾಂತದಲ್ಲಿ ಆಕಾಶದ ಪರಾಮರ್ಶವನ್ನು ಮಾಡಲಾಗುತ್ತದೆ. ಅಥವಾ ಈ ಪ್ರಕರಣದಲ್ಲಿರುವ ಹೃತ್ಪದ್ಮಸ್ಥತ್ವವೆಂಬ ಸಾಮಾನ್ಯಧರ್ಮದ ಬಗ್ಗೆ ವಿಚಾರ

ಮಾಡಲಾಗಿದೆಯೆಂದು ಉತ್ತರಿಸಬಹುದು. ಅಂದರೆ ಶೃಂಗಗ್ರಾಹಿಕತಯಾ ಇದೇ ವಾಕ್ಯವು ವಿಚಾರಕ್ಕೆ ಯೋಗ್ಯವಾಗಿದೆಯೆಂದು ಉಲ್ಲೇಖ ಮಾಡದೇ ಸಾಮಾನ್ಯವಾಗಿ ಈ ಪ್ರಕರಣವನ್ನು ನೋಡಿದಾಗ, ಹೃತ್ಪದ್ಮಸ್ಥತ್ವವು ಶ್ರುತವಾಗಿದೆ. ಇದು ಭೂತಾಕಾಶದಲ್ಲಿ ಬರುತ್ತದೋ, ಅಥವಾ ವಿಷ್ಣುವಿನಲ್ಲೋ ಎಂಬ ಬಗೆಯಲ್ಲಿ ವಿಚಾರವನ್ನು ಮಾಡುತ್ತಿದ್ದೇವೆ. ಸಾಕ್ಷಾದ್ಧೃತ್ಪದ್ಮಸ್ಥತ್ವವು ಭೂತಾಕಾಶದಲ್ಲಿದೆಯೆಂದು ತೋರಿದರೂ ಸಹ ಪರಂಪರೆಯಿಂದ ಹೃತ್ಪದ್ಮಸ್ಥತ್ವವು ವಿಷ್ಣುವಿನಲ್ಲಿದೆಯೆಂದೇ ಕಾಣಿಸುತ್ತದೆ. ಆದ್ದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನಾಗಿ ಅನ್ವೇಷಣಕ್ಕೆ ವಿಷಯನಾದವನು ವಿಷ್ಣು ಆಗಿದ್ದಾನೋ, ಇಲ್ಲವೋ ಎಂಬ ವಿಚಾರವನ್ನು ಮಾಡುವುದು ಅತ್ಯಂತ ಸಂಗತವೆಂದು ತಿಳಿಯಬೇಕು.

• • • • •

## ಪ್ರಥಮ ಪೂರ್ವಪಕ್ಷ
## ದಹರಾಕಾಶ ಬ್ರಹ್ಮನಲ್ಲ

### तात्पर्यचन्द्रिका

**पूर्वपक्षस्तु । हृत्पद्मस्थत्वमाकाशस्यैव । नतु ब्रह्मणः । तद्धि ब्रह्मणो हृत्पद्मस्थदहराकाशतया वा दहराकाशाश्रितान्वेष्टव्यतया वा ।**

ಅನುವಾದ - ಪೂರ್ವಪಕ್ಷ ಹೀಗಿದೆ - ಹೃತ್ಪದ್ಮಸ್ಥತ್ವವನ್ನು ಭೂತಾಕಾಶದಲ್ಲೇ ಹೇಳಬೇಕು ಹೊರತು, ಬ್ರಹ್ಮನಲ್ಲಲ್ಲ. ಬ್ರಹ್ಮನಲ್ಲಿ ಹೇಳುವುದಾದರೆ ಹೃತ್ಪದ್ಮಸ್ಥವಾದ ದಹರಾಕಾಶವನ್ನೇ ಬ್ರಹ್ಮನೆಂದು ಹೇಳುತ್ತಿರೋ, ಅಥವಾ ದಹರಾಕಾಶಾದಲ್ಲಿ ಅನ್ವೇಷಣೀಯನಾದವನು ಬ್ರಹ್ಮನೆಂದು ಹೇಳುತ್ತಿರೋ? ಈ ಪ್ರಶ್ನೆಗೆ ಉತ್ತರಿಸಬೇಕು.

**तत्राद्यः ''आकाशस्य प्रतीयते'' इत्यादिभाष्येण तद्विवरणरूपया ''दहरोऽस्मिन्नन्तराकाशः'' इत्यादिटीकया च दूषितः ।**

ಪ್ರಥಮಪಕ್ಷವನ್ನು 'ಆಕಾಶಸ್ಯ ಪ್ರತೀಯತೇ' ಇತ್ಯಾದಿ ಭಾಷ್ಯದ ಮಾತಿನಿಂದ ಮತ್ತು ಭಾಷ್ಯದ ಈ ಮಾತನ್ನು ವ್ಯಾಖ್ಯಾನ ಮಾಡುವ 'ದಹರೋಽಸ್ಮಿನ್ನಂತರಾಕಾಶಃ' ಇತ್ಯಾದಿ ಟೀಕಾವಾಕ್ಯಗಳಿಂದಲೂ ದೂಷಣೆ ಮಾಡಿದ್ದಾಗಿದೆ.

**तत्रायं भावः । पूर्वस्मिन् ''दहरोऽस्मिन्नन्तराकाशः'' इति हृत्पद्मस्थवाक्ये परस्मिंश्च ''तावानेषोऽन्तर्हृदय आकाश उभे अस्मिन्द्यावापृथिवी'' इत्यादौ सर्वाधारवाक्ये च गगने प्रसिद्धाकाशशब्दश्रवणान्न ब्रह्म दहराकाशः ।**

ಇಷ್ಟು ಅಭಿಪ್ರಾಯ. 'ದಹರೋಽಸ್ಮಿನ್ನಂತರಾಕಾಶಃ' ಇತ್ಯಾದಿ ಹೃತ್ಪದ್ಮಸ್ಥವಾಕ್ಯದಲ್ಲಿ ಮತ್ತು ಮುಂದಿರುವ 'ತಾವಾನೇಷೋಽಂತರ್ಹೃದಯ ಆಕಾಶ ಉಭೇ ಅಸ್ಮಿನ್‌ದ್ಯಾವಾಪೃಥಿವೀ' ಇತ್ಯಾದಿಯಾದ ಸರ್ವಾಧಾರವಾಕ್ಯದಲ್ಲಿಯೂ ಕೂಡ ಗಗನದಲ್ಲಿ ಪ್ರಸಿದ್ಧವಾದ ಆಕಾಶಶಬ್ದವೇ ಶ್ರುತವಾಗುತ್ತಿದೆ. ಆದ್ದರಿಂದ ಬ್ರಹ್ಮನನ್ನು ದಹರಾಕಾಶನೆಂದು ಹೇಳಲು ಸಾಧ್ಯವಿಲ್ಲ.

**नच तल्लिङ्गादित्युक्तन्यायेन स ब्रह्मपरः ।**

'ಆಕಾಶಾಸ್ತಲ್ಲಿಂಗಾತ್' ಎಂಬ ಪ್ರಥಮ ಪಾದದ ಸೂತ್ರದಂತೆ ಅಪಹತಪಾಪ್ಮತ್ವವೇ ಮೊದಲಾದ ಬ್ರಹ್ಮನ ಲಿಂಗಗಳು ಇಲ್ಲಿ ಶ್ರುತವಾದ್ದರಿಂದ ಬ್ರಹ್ಮನನ್ನು ಆಕಾಶಶಬ್ದ ಪ್ರತಿಪಾದ್ಯನೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**''पद्मकोशप्रतीकाशं हृदयम्'' इति प्रकृतहृत्पद्मपरामर्शेन ''तस्यान्ते सुषिरं सूक्ष्मं तस्मिन् सर्वं प्रतिष्ठितम्'' इति श्रुत्यन्तरे सुषिरस्य हृत्पद्मस्थत्व-सर्वाधारत्वयोरुक्तेः।**

'ಪದ್ಮಕೋಶಪ್ರತೀಕಾಶಂ ಹೃದಯಮ್' ಇತ್ಯಾದಿ ವಾಕ್ಯದಿಂದ ಪ್ರಕೃತವಾದ ಹೃತ್ಪದ್ಮವನ್ನು ಪರಾಮರ್ಶ ಮಾಡಿ, 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್‌ಸರ್ವಂ ಪ್ರತಿಷ್ಠಿತಮ್' ಎಂಬುದಾಗಿ ನಾರಾಯಣ ಶ್ರುತಿಯಲ್ಲಿ ಸುಷಿರಕ್ಕೆ ಹೃತ್ಪದ್ಮಸ್ಥತ್ವವನ್ನು ಮತ್ತು ಸಕಲ ಪದಾರ್ಥಗಳಿಗೆ ಆಶ್ರಯವಾಗಿರುವಿಕೆಯನ್ನು ಹೇಳಲಾಗಿದೆ.

**नच तत्र सुषिरशब्दो ब्रह्मपरः ।**

ನಾರಾಯಣೋಪನಿಷತ್ತಿನಲ್ಲಿರುವ ಸುಷಿರ ಶಬ್ದವು ಬ್ರಹ್ಮಪರವೆಂದು ಹೇಳುತ್ತೇವೆ. ಆವಾಗ ಹೃತ್ಪದ್ಮಸ್ಥತ್ವ ಮತ್ತು ಸರ್ವಾಧಾರತ್ವ ಎರಡನ್ನೂ ಕೂಡ ಬ್ರಹ್ಮನಲ್ಲೇ ಹೇಳಿದಂತಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

**''तस्य मध्ये वह्निशिखा अणीयोर्ध्वा व्यवस्थिता ।**
**तस्याः शिखाया मध्ये परमात्मा व्यवस्थितः''**

**इति परमात्मनः सुषिरस्थशिखामध्यस्थत्वोक्तेः ।**

'ತಸ್ಯ ಮಧ್ಯೇ ವಹ್ನಿಶಿಖಾ ಅಣೆಯೋರ್ಧ್ವಾ ವ್ಯವಸ್ಥಿತಾ ।
ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ'

ಪರಿಪೂರ್ಣಚಂದ್ರಿಕಾ

ಎಂಬುದಾಗಿ ಹೃದಯಪದ್ಮದಲ್ಲಿ ಸುಷಿರವಿದೆ. ಆ ಸುಷಿರದಲ್ಲಿ ಸಣ್ಣದಾದ ತೇಜಸ್ಸಿದೆ, ಅದರ ಮಧ್ಯದಲ್ಲಿ ಪರಮಾತ್ಮನಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಸುಷಿರದಲ್ಲಿರುವ ತೇಜಸ್ಸಿನ ಮಧ್ಯದಲ್ಲಿ ಪರಮಾತ್ಮನಿದ್ದಾನೆಂದು ಶ್ರುತಿಯು ಹೇಳುತ್ತಿರುವಾಗ ಸುಷಿರವನ್ನೇ ಪರಮಾತ್ಮನೆಂದು ಹೇಳುವುದು ತಪ್ಪಾಗುತ್ತದೆ.

**किञ्च दहराकाशस्य ब्रह्मत्वे ''तस्मिन्यदन्तस्तदन्वेष्टव्यम्'' इति दहरस्थस्यान्वेष्टव्यत्वोक्तिरयुक्ता स्यात् ।**

ಮತ್ತು ದಹರಾಕಾಶವನ್ನೇ ಬ್ರಹ್ಮನೆಂದು ಹೇಳಿದರೆ, 'ತಸ್ಮಿನ್‌ಯದಂತಸ್ತದನ್ವೇಷ್ಟವ್ಯಮ್' ಎಂಬುದಾಗಿ ದಹರಾಕಾಶದ ಒಳಗೆ ಇರುವವನನ್ನು ಅನ್ವೇಷಣೆ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ. ಈ ಅನ್ವೇಷಣೆಗೆ ವಿಷಯನಾದವನು ಬ್ರಹ್ಮನಾಗದೇ ಇರಬೇಕಾದೀತು. ಆದ್ದರಿಂದ ಜಿಜ್ಞಾಸೆಗೆ ವಿಷಯನಾದವನೇ ಬೇರೆ ಎಂದಾಗಿ ದಹರಾಕಾಶನು ಮಾತ್ರ ಪರಮಾತ್ಮನೆಂದಾಗಬೇಕಾದೀತು. ಆವಾಗ ಬ್ರಹ್ಮಜಿಜ್ಞಾಸೆ ಮಾಡಬೇಕೆಂದು ಹೇಳಿದ್ದೇ ತಪ್ಪಾಗುತ್ತದೆ.

**प्रकाशः –**

आकाशप्रापकपूर्वपक्षटीकां ''सर्वाधारतया हृत्पद्मस्थत्वमाकाशस्य'' इत्यादि रूपां तावत्प्रपञ्चयति – **हृत्पद्मस्थत्वमिति** ।।

ವಿವರಣೆ - ಭೂತಾಕಾಶವು ಹೃತ್ಪದ್ಮಸ್ಥವಾಗಿದೆ ಎಂದು ಸಮರ್ಥಿಸುವ 'ಸರ್ವಾಧಾರತಯಾ ಹೃತ್ಪದ್ಮಸ್ಥತ್ವಮಾಕಾಶಸ್ಯ' ಇತ್ಯಾದಿಯಾದ ಪೂರ್ವಪಕ್ಷ ಟೀಕೆಯನ್ನು ವಿವರಿಸುತ್ತಿದ್ದಾರೆ 'ಹೃತ್ಪದ್ಮಸ್ಥತ್ವಮ್' ಇತ್ಯಾದಿ ಗ್ರಂಥದಿಂದ.

**प्रकाशः** – न्यायविवरणे वाक्यानन्वयोऽत्र पूर्वपक्षे हेतुरुक्तः । भाष्ये समाख्याविरोधो हेतुरुक्तः । तद्धेतुद्वयं पक्षभेदेन योज्यम् । अन्यथानुपपत्तेरिति भावेन विकल्पपूर्वमाद्यपक्षे भाष्योक्तं हेतुं योजयति – **तद्धीत्यादिना** ।।

ನ್ಯಾಯವಿವರಣದಲ್ಲಿ ವಾಕ್ಯಾನನ್ವಯವನ್ನು ಪೂರ್ವಪಕ್ಷ ಹೇತುವನ್ನಾಗಿ ಪ್ರಯೋಗಿಸಿದ್ದಾರೆ. ಭಾಷ್ಯದಲ್ಲಿ ಸಮಾಖ್ಯಾವಿರೋಧವನ್ನು ಪೂರ್ವಪಕ್ಷಹೇತುವನ್ನಾಗಿ ಹೇಳಿದ್ದಾರೆ. ಈ ಎರಡು ಹೇತುಗಳನ್ನು ಬೇರೆ ಬೇರೆ ಪಕ್ಷಗಳಲ್ಲಿ ಯೋಜನೆ ಮಾಡಿಕೊಳ್ಳಬೇಕು. ಅನ್ಯಥಾನುಪಪತ್ತಿಯಿಂದ ಈ ಎರಡು ಹೇತುಗಳು ಪ್ರತ್ಯೇಕವಾಗಿ ಬೇರೆ ಬೇರೆ ಪಕ್ಷಗಳಿಗೆ ಸಂಬಂಧಪಟ್ಟಿವೆಯೆಂದು ತಿಳಿಯುತ್ತದೆ. ಈ ಅಭಿಪ್ರಾಯದಿಂದ ವಿಕಲ್ಪವನ್ನು

ಮಾಡುತ್ತಾ ಪ್ರಥಮ ಪಕ್ಷದಲ್ಲಿ ಭಾಷ್ಯದಲ್ಲಿ ಹೇಳಲ್ಪಟ್ಟ ಸಮಾಖ್ಯಾವಿರೋಧವೆಂಬ ಪೂರ್ವಪಕ್ಷ ಹೇತುವನ್ನು ಯೋಜನೆ ಮಾಡಲು ಹೊರಟಿದ್ದಾರೆ 'ತದ್ಧಿ' ಇತ್ಯಾದಿ ಗ್ರಂಥದಿಂದ.

**प्रकाशः** – टीकायां प्रतिज्ञाविशेषादेरस्पष्टत्वात् समाख्याया निरवकाशत्वानुक्त्या समाख्यया लिङ्गबाधायोगाच्च निष्कृष्य तदभिप्रायमाह – **तत्रायं भाव इति** ।।

ಟೀಕೆಯಲ್ಲಿ ಪ್ರತಿಜ್ಞೆಯ ವಿಶೇಷವು ಸ್ಪಷ್ಟವಾಗಿ ತಿಳಿಯುವುದಿಲ್ಲ. ಮತ್ತು ಸಮಾಖ್ಯಾಪ್ರಮಾಣಕ್ಕೆ ನಿರವಕಾಶತ್ವವನ್ನೂ ಕೂಡ ಸ್ಪಷ್ಟವಾಗಿ ಹೇಳಿಲ್ಲ. ಸಮಾಖ್ಯಾಪ್ರಮಾಣಕ್ಕೆ ನಿರವಕಾಶತ್ವವು ಸಿದ್ಧವಾಗದಿದ್ದರೆ, ಅದರಿಂದ ಬಲಿಷ್ಠವಾದ ಲಿಂಗವನ್ನು ಬಾಧಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ಪಷ್ಟವಾಗಿ ವಿಶೇಷವಾದ ಪ್ರತಿಜ್ಞೆಯನ್ನು ಮತ್ತು ಸಮಾಖ್ಯಾಪ್ರಮಾಣಕ್ಕೆ ನಿರವಕಾಶತ್ವವನ್ನು ಸಮರ್ಥಿಸುವುದಕ್ಕಾಗಿ ಟೀಕೆಯ ಅಭಿಪ್ರಾಯವನ್ನು ತಿಳಿಸಲು 'ತತ್ರಾಯಂ ಭಾವಃ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – टीकोक्तमुपलक्षणं मत्वाऽऽह – **परस्मिंश्चेति** ।। ''नन्वस्तु'' इत्यादि टीकां व्यनक्ति – **नच तल्लिङ्गादिति** ।।

ಟೀಕೆಯಲ್ಲಿ ಮೊದಲಿರುವ 'ದಹರೋಽಸ್ಮಿನ್ನಂತರಾಕಾಶಃ' ಎಂಬ ವಾಕ್ಯವನ್ನೇ ಉಲ್ಲೇಖಿಸಿದ್ದಾರೆ. ಇದು ಕೇವಲ ಉಪಲಕ್ಷಣ. ಪರಿಹಾರವಾಕ್ಯದಲ್ಲಿರುವ 'ಯಾವಾನ್ವಾಯಮಾಕಾಶಃ' ಎಂಬಲ್ಲಿರುವ ಆಕಾಶಶ್ರುತಿಯನ್ನು ಕೂಡ ವಿವಕ್ಷಿಸಬೇಕು. ಈ ಅಭಿಪ್ರಾಯದಿಂದ 'ಪರಸ್ಮಿಂಶ್ಚ' ಎಂಬ ವಾಕ್ಯ ಹೊರಟಿದೆ. 'ನನ್ವಸ್ತು' ಇತ್ಯಾದಿ ಟೀಕೆಯನ್ನು 'ನಚ ತಲ್ಲಿಂಗಾತ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – 'आकाश इति होवाच' इति वाक्ये परोवरीयस्त्वादिलिङ्गश्रवणादाकाशो ब्रह्मेत्युक्तम् ''आकाशस्तल्लिङ्गात्'' इत्यत्र । तथेहापि सर्वाधारत्वरूप-ब्रह्मलिङ्गादाकाशो ब्रह्म स्यादित्यर्थः ।

'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ಪರೋವರೀಯಸ್ತ್ವಾದಿಲಿಂಗಗಳು ಶ್ರುತವಾದ್ದರಿಂದ ಆಕಾಶನು ಬ್ರಹ್ಮನೇ ಆಗಿದ್ದಾನೆಂದು 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಸಮರ್ಥಿಸಲಾಯಿತು. ಅದರಂತೆ ಇಲ್ಲಿಯೂ ಕೂಡ ಸರ್ವಾಧಾರತ್ವ ಎಂಬ ಬ್ರಹ್ಮಲಿಂಗವು ಶ್ರುತವಾದ್ದರಿಂದ, ಆಕಾಶ ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಬೇಕಲ್ಲವೇ? ಎಂದು ಆಕ್ಷೇಪದ ಅಭಿಪ್ರಾಯ.

**प्रकाशः** – ''तस्यान्ते'' इति तच्छब्दार्थविवरणायोक्तं – **पद्मकोशेति** ।।

''पद्मकोशप्रतीकाशं हृदयं चाप्यधोमुखम् ।
अधोनिष्ठ्यावितस्त्यांतु नाभ्यामुपरि तिष्ठति ।
ज्वालमालाकुलं भाति विश्वस्यायतनं महत् ।
सन्ततँशिराभिस्तु लम्बत्या कोशसन्निभम् । तस्यान्ते सुषिरम्''

इति नारायणोपनिषदि समाम्नानादिति भावः ।।

'ತಸ್ಯಾಂತೇ' ಎಂಬಲ್ಲಿರುವ 'ತತ್' ಶಬ್ದದ ಅರ್ಥವನ್ನು ವಿವರಣೆ ಮಾಡುವುದಕ್ಕಾಗಿ 'ಪದ್ಮಕೋಶ' ಇತ್ಯಾದಿ ವಾಕ್ಯವನ್ನು ಹೇಳಿರುತ್ತಾರೆ. ನಾರಾಯಣೋಪನಿಷತ್ತಿನಲ್ಲಿ ಬರುವ ವಾಕ್ಯಸಂದರ್ಭ ಹೀಗಿದೆ -

'ಪದ್ಮಕೋಶಪ್ರತಿಕಾಶಂ ಹೃದಯಂ ಚಾಪ್ಯಧೋಮುಖಮ್ ।
ಅಧೋನಿಷ್ಟ್ಯಾವಿತಸ್ತ್ಯಾಂ ತು ನಾಭ್ಯಾಮುಪರಿ ತಿಷ್ಠತಿ ।
ಜ್ವಾಲಮಾಲಾಕುಲಂ ಭಾತಿ ವಿಶ್ವಸ್ಯಾಯತನಂ ಮಹತ್ ।
ಸಂತತಮ್‌ಶಿರಾಭಿಸ್ತು ಲಂಬತ್ಯಾ ಕೋಶಸನ್ನಿಭಮ್ । ತಸ್ಯಾಂತೇ ಸುಷಿರಮ್''

ಎಂದು ಉಪನಿಷತ್ತಿನಲ್ಲಿರುವ ಕ್ರಮ. ಇಲ್ಲಿ ಮೂರು ವಾಕ್ಯಗಳ ವ್ಯವಧಾನವಿದ್ದರೂ ಕೂಡ 'ತತ್' ಶಬ್ದದಿಂದ ಹೃತ್ಪದ್ಮವನ್ನೇ ಪರಾಮರ್ಶ ಮಾಡಬೇಕೆಂದು ತಿಳಿಯುತ್ತದೆ.

**प्रकाशः** – उक्तेरिति ।। ननु तावता कथं लिङ्गस्य समाख्यामात्रेण बाधः । नचाकाशश्रुतिसमाख्याभ्यां लिङ्गस्य बाध इति युक्तम् । एकेनापि निरवकाशेनानेक-बाधदर्शनादित्यतस्समाख्याया निरवकाशत्वं शङ्कापूर्वमाह – नच तत्रेति ।। उक्तन्यायेनैवेत्यर्थः ।

ಸಮಾಖ್ಯಾಶ್ರುತಿಯಲ್ಲಿ ಹೃತ್ಪದ್ಮಸ್ಥತ್ವ ಮತ್ತು ಸರ್ವಾಧಾರತ್ವಗಳನ್ನು ಹೇಳಿದ ಮಾತ್ರದಿಂದ ಲಿಂಗಕ್ಕೆ ಬಾಧವನ್ನು ಹೇಳಲು ಹೇಗೆ ಸಾಧ್ಯ? ಮತ್ತೆ ಇದಕ್ಕೆ ವಿಪರೀತವಾಗಿ ಆಕಾಶಶ್ರುತಿ ಹಾಗೂ ಸಮಾಖ್ಯಾ ಎರಡರಿಂದಲೂ ಲಿಂಗಕ್ಕೇ ಬಾಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ನಿರವಕಾಶವಾದ ಒಂದರಿಂದಲೇ ಅನೇಕ ಪ್ರಮಾಣಗಳು ಬಾಧಿತವಾಗುತ್ತವೆಂದು ಕಂಡಿದ್ದರಿಂದ, ಸಮಾಖ್ಯಾಪ್ರಮಾಣಕ್ಕೆ ನಿರವಕಾಶತ್ವವನ್ನು ಶಂಕಾಪೂರ್ವಕವಾಗಿ ಸಮರ್ಥಿಸುತ್ತಿದ್ದಾರೆ 'ನಚ' ಇತ್ಯಾದಿ ವಾಕ್ಯದಿಂದ. 'ತತ್ರ' ಎಂದರೆ ಉಕ್ತನ್ಯಾಯದಿಂದಲೇ ಎಂದರ್ಥ.

**प्रकाशः** – व्यवस्थितेत्यनन्तरं

''नीलतोयदमध्यस्था विद्युल्लेखेव भास्वरा ।
नीवारशूकवत्तन्वी पीता भास्वत्यनूपमा''

इति मन्त्रोऽनुपयोगादत्र नोदाहृतः । युक्त्यन्तरं च स्वयमाह – किञ्चेति ।।

'ವ್ಯವಸ್ಥಿತ' ಎಂಬುದರ ಅನಂತರ

'ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ ।
ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯನೂಪಮಾ'

ಎಂಬ ಮಂತ್ರವನ್ನೂ ಉದಾಹರಿಸಬೇಕಿತ್ತು. ಆದರೆ ಅನುಪಯುಕ್ತವಾದ್ದರಿಂದ ಇಲ್ಲಿ ಉದಾಹರಿಸಿಲ್ಲ. ಮತ್ತೊಂದು ಯುಕ್ತಿಯನ್ನು ಸ್ವತಃ ಗ್ರಂಥಕಾರರೇ ಹೇಳುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ.

**प्रकाशः** – नच तच्छब्दस्य पुण्डरीकपरत्वाद्ब्रह्मण एवान्वेष्टव्यत्वमिति वाच्यम् । अव्यवहिताकाशपरत्वसम्भवे व्यवहितपुण्डरीकपरत्वायोगात् । दहरस्य हृत्पुण्डरीकस्थताया 'दहरोऽस्मिन्' इत्यत्रैवोक्तत्वेन पुनस्तदुक्तिवैयर्थ्याच्चेति भावः ।

ಶ್ರುತಿಯಲ್ಲಿರುವ 'ತತ್' ಶಬ್ದವು ಪುಂಡರೀಕವನ್ನು ಹೇಳುತ್ತಿದೆ. ಆದ್ದರಿಂದ ಬ್ರಹ್ಮನನ್ನೇ ಅನ್ವೇಷಣೆ ಮಾಡಬೇಕೆಂದು ಹೇಳಿದಂತಾಯಿತಲ್ಲವೇ? ಎಂದು ಪ್ರಶ್ನಿಸಬಾರದು. ಅವ್ಯವಹಿತವಾದ ಆಕಾಶವನ್ನು ಪರಾಮರ್ಶ ಮಾಡುತ್ತಿದೆಯೆಂದೇ ಹೇಳಲು ಬರುವಾಗ ವ್ಯವಹಿತವಾದ ಪುಂಡರೀಕಪರತ್ವವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ದಹರಕ್ಕೆ ಹೃತ್ಕಮಲಸ್ಥಿತತ್ವವನ್ನು 'ದಹರೋಽಸ್ಮಿನ್' ಎಂಬ ವಾಕ್ಯದಲ್ಲಿಯೇ ಹೇಳಿದ್ದರಿಂದ, ಪುನಃ ಇಲ್ಲಿ ಅದನ್ನೇ ಹೇಳಿದರೆ ಪುನರುಕ್ತಿದೋಷವೂ ಬರುತ್ತದೆ.

**प्रकाशः** – एतेनोत्तरवाक्यगतबहुतरहेतुविरोधाद्भूते प्रसिद्धाकाशश्रुत्या पूर्वपक्षस्तुच्छ इति भामत्युक्तं निरस्तम् ।

निरवकाशसमाख्यया अन्यस्यान्वेष्टव्यत्वोक्त्ययोगरूपयुक्त्या च सहिताकाश-श्रुत्याऽऽकाशपूर्वपक्षस्य युक्तत्वादिति ॥

ಹೀಗೆ ಹೇಳಿದ್ದರಿಂದ ಭಾಮತಿ ಮತವನ್ನು ನಿರಾಕರಿಸಿದಂತಾಯಿತು. ಭಾಮತಿಯಲ್ಲಿ ಹೀಗೆ ಹೇಳಲಾಗಿದೆ- ಮುಂದಿನ ವಾಕ್ಯದಲ್ಲಿರುವ ಅನೇಕ ಹೇತುಗಳ ವಿರೋಧ ಬರುವ ಕಾರಣ, ಆಕಾಶಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾಗುವುದಿಲ್ಲವೆಂದೇ ಪೂರ್ವಪಕ್ಷ ಮಾಡಲು ಬರುವಾಗ ಕೇವಲ ಭೂತಾಕಾಶದಲ್ಲಿ ಪ್ರಸಿದ್ಧವಾಗಿದೆಯೆಂಬ ಕಾರಣದಿಂದ ಆಕಾಶಶ್ರುತಿಯಿಂದ ಮಾತ್ರ ಪೂರ್ವಪಕ್ಷ ಮಾಡುವುದು ಅತ್ಯಂತ ತುಚ್ಛವಾಗಿದೆಯೆಂದು ಅಲ್ಲಿನ ವಿಚಾರ ಸರಣಿ. ಇದನ್ನು ಈಗ ನಿರಾಕರಿಸಿದಂತಾಯಿತು.

ಏಕೆಂದರೆ ನಾವು ಪೂರ್ವಪಕ್ಷಯುಕ್ತಿಯನ್ನಾಗಿ ಹೇಳುತ್ತಿರುವ ಆಕಾಶ ಶ್ರುತಿಯು ನಿರವಕಾಶವಾದ ಸಮಾಖ್ಯಾಪ್ರಮಾಣದಿಂದ ಯುಕ್ತವಾಗಿದೆ. ಮತ್ತು 'ಅನ್ಯಸ್ಯ ಅನ್ವೇಷ್ಟವ್ಯವೋಕ್ತಿ' ಎಂಬ ಲಿಂಗದಿಂದ ಸಹಿತವಾಗಿದೆ. ಹೀಗೆ ಸಮಾಖ್ಯಾಶ್ರುತಿ ಹಾಗೂ ಲಿಂಗ ಇವೆರಡರಿಂದ ಉಪೋದ್ಬಲಿತವಾದ ಕಾರಣ,

ಆಕಾಶಶ್ರುತಿಯಿಂದ ಪೂರ್ವಪಕ್ಷ ಮಾಡುವುದು ಅತ್ಯಂತ ಸಮಂಜಸವಾಗುತ್ತದೆಂದು ತಿಳಿಯಬೇಕು. ಹೀಗೆ ಹೇಳುವುದರಿಂದ ಭಾಮತಿಯ ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು ಎಂದರ್ಥ.

**गुरुराजीयम् –** अन्वेष्टव्यद्युपृथिव्याद्याधारतयाऽऽकाशोक्तेः सम्भवादित्यतो व्याख्याति – **तत्रायं भाव इति ॥**



ಹೃತ್ಪದ್ಮಸ್ಥತ್ವವೆಂಬ ಲಿಂಗವು ಭೂತಾಕಾಶದಲ್ಲಿ ಬರುತ್ತದೆ ಹೊರತು, ಬ್ರಹ್ಮನಲ್ಲ. ಹೃತ್ಪದ್ಮಸ್ಥತ್ವ ಲಿಂಗವು ಬ್ರಹ್ಮನಲ್ಲಿ ಬರುತ್ತದೆಂದು ಹೇಳುವ ನಿಮ್ಮ ಅಭಿಪ್ರಾಯವೇನು? ಹೃತ್ಪದ್ಮದಲ್ಲಿರುವ ದಹರಾಕಾಶವನ್ನೇ ಬ್ರಹ್ಮನೆನ್ನುತ್ತೀರೋ, ಅಥವಾ ದಹರಾಕಾಶದಲ್ಲಿ ಜಿಜ್ಞಾಸ್ಯನಾದವನನ್ನು ಬ್ರಹ್ಮನೆನ್ನುತ್ತೀರೋ?

ಪ್ರಥಮ ಪಕ್ಷ ತಪ್ಪು. 'ದಹರೋಽಸ್ಮಿನ್ನಂತರಾಕಾಶಃ' ಎಂಬ ಹಿಂದಿನ ವಾಕ್ಯದಲ್ಲಿ ಮತ್ತು 'ತಾವಾನೇಷೋಽಂತರ್ಹೃದಯ' ಎಂಬ ಮುಂದಿನ ವಾಕ್ಯದಲ್ಲಿ ಭೂತಾಕಾಶದಲ್ಲಿ ಪ್ರಸಿದ್ಧವಾದ ಆಕಾಶ ಶಬ್ದವನ್ನು ಪ್ರಯೋಗಿಸಿ ದಹರಾಕಾಶವೆಂದು ಪ್ರಯೋಗಿಸಲಾಗಿದೆ. ಆದ್ದರಿಂದ ಆಕಾಶ ಶ್ರುತಿಯ ಬಲದಿಂದ ಭೂತಾಕಾಶವೇ ದಹರಾಕಾಶವಾಗುತ್ತದೆ. ಮತ್ತು 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್' ಎಂಬ ನಾರಾಯಣೋಪನಿಷತ್ತಿನ ಸಮಾಖ್ಯಾಪ್ರಮಾಣದ ಬೆಂಬಲವು ಈ ವಿಷಯದಲ್ಲಿದೆ. ಅಷ್ಟೇ ಅಲ್ಲದೇ ಭೂತಾಕಾಶದ ಬಗ್ಗೆ ವಿಚಾರವು ಪ್ರಸಕ್ತವಾಗುತ್ತಿರುವಾಗ ಮಧ್ಯದಲ್ಲಿರುವ ದಹರಾಕಾಶವನ್ನು ಬ್ರಹ್ಮವೆಂದು ಹೇಳಿದರೆ, 'ತಸ್ಮಿನ್ ಯದಂತಸ್ತದನ್ವೇಷ್ಟವ್ಯಮ್' ಎಂಬ ಶ್ರುತಿಯಲ್ಲಿ ದಹರಾಕಾಶದಲ್ಲಿರುವವನ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದ್ದು ತಪ್ಪಾಗುತ್ತದೆ. ಏಕೆಂದರೆ ನಿಮ್ಮ ಪ್ರಕಾರ ಬ್ರಹ್ಮನೇ ದಹರಾಕಾಶನೆಂದಾದ ಮೇಲೆ, ದಹರಾಕಾಶದಲ್ಲಿರುವವನ ಬಗ್ಗೆ ಜಿಜ್ಞಾಸೆ ಮಾಡಬೇಕೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ. ತನ್ನಲ್ಲೇ ತಾನಿದ್ದಾನೆಂಬ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳುವುದು ತಪ್ಪಲ್ಲವೇ? ಆದ್ದರಿಂದ ದಹರಾಕಾಶವನ್ನು ಬ್ರಹ್ಮನೆಂದು ಹೇಳಲು ಸಾಧ್ಯವಿಲ್ಲ. ಭೂತಾಕಾಶವನ್ನೇ ದಹರಾಕಾಶವೆನ್ನಬೇಕು. ಈ ವಿಷಯದಲ್ಲಿ 'ಸಮಾಖ್ಯಾಶ್ರುತಿ' ಹಾಗೂ 'ಅನ್ಯಸ್ಯಅನ್ವೇಷ್ಟವ್ಯತ್ವೋಕ್ತಿ' ಎಂಬ ಲಿಂಗ ಇವೆರಡು ಆಕಾಶ ಶ್ರುತಿಯನ್ನು ಉಪೋದ್ಬಲಿಸುತ್ತಿವೆ. ಇಂತಹ ಆಕಾಶ ಶ್ರುತಿಯ ಆಧಾರದಿಂದ ಭೂತಾಕಾಶವೇ ದಹರಾಕಾಶವೆನಿಸುತ್ತದೆಂಬುದು ಪ್ರಥಮ ಪೂರ್ವಪಕ್ಷ.



## ದ್ವಿತೀಯ ಪೂರ್ವಪಕ್ಷ
## ದಹರಾಕಾಶದಲ್ಲಿ ಜಿಜ್ಞಾಸ್ಯನಾದವನು ಬ್ರಹ್ಮನಲ್ಲ

### तात्पर्यचन्द्रिका

**द्वितीयस्तु ''दहरोऽस्मिन्नन्तराकाशस्तस्मिन्यदन्तस्तदन्वेष्टव्यम्' इत्यनेन 'यावान्वा अयमाकाशस्तावानेषोऽन्तर्हृदय आकाशः' इत्यस्यान्वयाभावात्'' इति न्यायविवरणे तद्विवरणरूपायां ''वाक्यान्वयानुपपत्तेः'' इत्यादि टीकायां च परिहृतः ।**

ದಹರಾಕಾಶನು ಬ್ರಹ್ಮನಲ್ಲ. ದಹರಾಕಾಶದಲ್ಲಿ ಅನ್ವೇಷಣೆಗೆ ವಿಷಯನಾದವನನ್ನು ಬ್ರಹ್ಮನೆಂದು ಎರಡನೆಯ ಪಕ್ಷವನ್ನೂ ಕೂಡ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ 'ದಹರೋऽಸ್ಮಿನ್ನಂತರಾಕಾಶಸ್ತಸ್ಮಿನ್ಯ-ದಂತಸ್ತದನ್ವೇಷ್ಟವ್ಯಮ್' ಇತ್ಯನೇನ 'ಯಾವಾನ್ವಾ ಅಯಮಾಕಾಶಸ್ತಾವಾನೇಷೋऽಂತರ್ಹೃದಯ ಆಕಾಶಃ' ಇತ್ಯಸ್ಯಾನ್ವಯಾಭಾವಾತ್' ಎಂಬ ನ್ಯಾಯವಿವರಣ ವಾಕ್ಯದಲ್ಲಿ ಮತ್ತು ಈ ವಾಕ್ಯವನ್ನು ವ್ಯಾಖ್ಯಾನ ಮಾಡುವ 'ವಾಕ್ಯಾನ್ವಯಾನುಪಪತ್ತೇಃ' ಇತ್ಯಾದಿಯಾದ ನ್ಯಾಯವಿವರಣದ ಟೀಕಾವಾಕ್ಯದಲ್ಲಿ ಈ ಪಕ್ಷವನ್ನು ನಿರಾಕರಣೆ ಮಾಡಿದ್ದಾರೆ.

**तत्रायं भावः । 'यावान्वा अयमाकाशः' इति वाक्यस्थ आकाशः किं प्रसिद्धाकाशः किं वा ब्रह्म ।**

ಈ ಟೀಕಾಭಿಪ್ರಾಯವನ್ನು ಹೀಗೆ ತಿಳಿಯಬೇಕು - 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯದಲ್ಲಿರುವ ಆಕಾಶಶಬ್ದವು ಪ್ರಸಿದ್ಧವಾದ ಭೂತಾಕಾಶವನ್ನು ಹೇಳುತ್ತಿದೆಯೋ? ಅಥವಾ ಬ್ರಹ್ಮನನ್ನು ಹೇಳುತ್ತಿದೆಯೋ? ಎಂಬ ಪ್ರಶ್ನೆಗೆ ನೀವು ಉತ್ತರಿಸಬೇಕು.

**नाद्यः । 'तस्मिन्यदन्तः' इत्यत्रान्वेष्टव्यतयोक्तस्य हृत्पद्मस्थदहराकाशस्थस्य ब्रह्मत्वे ''किं तदत्र विद्यते'' इति प्रश्नस्य ब्रह्म विद्यत इति परिहारं विना ''यावान्वा'' इत्यादिना प्रसिद्धाकाशस्यान्वेष्टव्यत्वोक्तेरनन्वयात् ।**

ಮೊದಲನೆಯ ಪಕ್ಷ ತಪ್ಪು. ಏಕೆಂದರೆ 'ತಸ್ಮಿನ್ ಯದಂತಃ' ಎಂಬಲ್ಲಿ ಅನ್ವೇಷಣೆಗೆ ವಿಷಯನಾದವನೆಂದು ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ದಹರಾಕಾಶಸ್ಥನಾದವನನ್ನು ಬ್ರಹ್ಮನೆಂದು ಹೇಳಿದರೆ 'ಕಿಂ ತದತ್ರ ವಿದ್ಯತೇ' 'ಅಲ್ಲಿ ಏನಿದೆ?' ಎಂಬ ಪ್ರಶ್ನೆಗೆ ಬ್ರಹ್ಮನಿದ್ದಾನೆಂದು ಉತ್ತರಿಸಬೇಕು.

ಅದನ್ನು ಬಿಟ್ಟು 'ಯಾವಾನ್ವಾ ಅಯಮಾಕಾಶಃ' ಇತ್ಯಾದಿಯಾಗಿ ಪ್ರಸಿದ್ಧವಾದ ಆಕಾಶಕ್ಕೆ ಅನ್ವೇಷಣಾವಿಷಯತ್ವವನ್ನು ಹೇಳಿದರೆ ಅಸಂಗತವಾಗುತ್ತದೆ. ಹೀಗೆ ಅನನ್ವಯವೆಂಬ ಬಾಧಕವಿರುವ ಪ್ರಯುಕ್ತ 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶಶಬ್ದವು ಪ್ರಸಿದ್ಧಾಕಾಶಪರವೆಂಬುದು ತಪ್ಪಾಗುತ್ತದೆ.

**न चान्वेष्टव्यं प्रत्याधारतया तदुक्तिः ।**

ಆಕಾಶದ ಬಗ್ಗೆ ಉತ್ತರಿಸುವುದು ಅಸಂಗತವಾಗುವುದಿಲ್ಲ. ಏಕೆಂದರೆ ಅನ್ವೇಷಣಕ್ಕೆ ವಿಷಯನಾದವನು ಬ್ರಹ್ಮನೇ ಆಗಿದ್ದಾನೆ. ಅಂತಹ ಬ್ರಹ್ಮನಿಗೆ ಆಕಾಶವು ಆಧಾರವಾಗಿದೆಯೆಂಬ ದೃಷ್ಟಿಯಿಂದ 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ವಾಕ್ಯವು ಹೊರಟಿರುತ್ತದೆ. ಹೀಗೆ ಹೇಳಿದಾಗ ಅಸಂಗತವಾಗಲು ಹೇಗೆ ಸಾಧ್ಯ ?

**आधारतायाः "तस्मिन्यदन्तः" इति प्रागेवोक्तत्वेन "किं तदत्र विद्यते" इत्याधेयस्यैव पृष्टत्वेन चाकाङ्क्षाभावेन द्यावापृथिव्यादेरन्वेष्टव्यत्वप्रसङ्गेन चाधारत्वोक्तेरनन्वयात् ।**

ಏಕೆಂದರೆ 'ತಸ್ಮಿನ್ ಯದಂತಃ' ಇತ್ಯಾದಿಯಾಗಿ ಈ ಹಿಂದೆಯೇ ಆಧಾರದ ಬಗ್ಗೆ ಹೇಳಿದ್ದಾಗಿದೆ. ಈಗ 'ಕಿಂ ತದತ್ರ ವಿದ್ಯತೇ' ಎಂಬುದಾಗಿ ಆಧೇಯದ ಬಗ್ಗೆ ಪ್ರಶ್ನೆಯನ್ನು ಮಾಡಿದ್ದರಿಂದ, ಅದಕ್ಕನುಸಾರಿಯಾಗಿ ಆಧೇಯದ ವಿವರಣೆಯನ್ನು ಮಾಡಬೇಕು ಹೊರತು, ಪುನಃ ಆಧಾರದ ಬಗ್ಗೆ ಉತ್ತರಿಸಿದರೆ ಆಕಾಂಕ್ಷಾವಿಲ್ಲದ ಪ್ರಯುಕ್ತ ಅನನ್ವಯ ದೋಷವು ಬಂದೇ ಬರುತ್ತದೆ. ಮತ್ತು ಆಧೇಯವಾದದ್ದು ದ್ಯಾವ್ಯಾಪೃಥಿವೀಗಳೆಂದು ಹೇಳಿದ್ದರಿಂದ, ದ್ಯಾವ್ಯಾಪೃಥಿವ್ಯಾದಿಗಳೇ ಅನ್ವೇಷಣಕ್ಕೆ ವಿಷಯವಾಗಬೇಕಾದ ಪ್ರಸಂಗವೂ ಬರುತ್ತದೆ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಆಧಾರತ್ವ ವಚನವು ಅನನ್ವಿತವಾಗಿದೆ ಎಂಬುದನ್ನು ನಿಮಗೆ ಪರಿಹರಿಸಲಾಗದು.

**आकाशपक्षे त्वस्त्यन्वयः । आकाशस्य दहरवाक्ये हृत्पद्मस्थतामुक्त्वाऽन्वेष्टव्य वाक्ये दहराकाशान्तःस्थस्यान्वेष्टव्यत्व उक्ते "किं तदत्र विद्यते" इत्यत्रान्वेष्टव्य आधेये पृष्टे "यावान्वा" इत्यादिना पूर्वोक्तमाधारमाकाशमनूद्य तच्च द्यावापृथिव्याद्याश्रयत्वयोग्यत्वाय बाह्याकाशतुल्यतया विशेष्य "उभे अस्मिन्" इत्यादिना द्यावापृथिव्यादेरन्वेष्टव्यत्वोक्तेः श्लिष्टत्वात् ।**

ಹೃತ್ಪದ್ಮಸ್ಥವಾದದ್ದು ಭೂತಾಕಾಶವೆಂದು ಹೇಳಿದಾಗ ಈ ಯಾವ ಅನನ್ವಯ ದೋಷಕ್ಕೂ ಅವಕಾಶವಿಲ್ಲ. ಹಾಗೂ ಅನ್ವಯವೇ ಇರುತ್ತದೆ. ಏಕೆಂದರೆ ದಹರ ವಾಕ್ಯದಲ್ಲಿ ಆಕಾಶಕ್ಕೆ

ಹೃತ್ಪದಸ್ಥತ್ವವನ್ನು ಹೇಳಿದ ಮೇಲೆ ಅನ್ವೇಷ್ಟವ್ಯ ವಾಕ್ಯದಲ್ಲಿ ದಹರಾಕಾಶದಲ್ಲಿರುವ ವಸ್ತುವನ್ನು ಅನ್ವೇಷಣ ಮಾಡಬೇಕೆಂದು ಹೇಳಲಾಗಿದೆ. ಆವಾಗ 'ಕಿಂ ತದತ್ರ ವಿದ್ಯತೇ' ಎಂದು ಅನ್ವೇಷ್ಟವ್ಯವಾದ ಆಧೇಯದ ಬಗ್ಗೆ ಪ್ರಶ್ನೆಯು ಸಂಗತವಾಗುತ್ತದೆ. ಅದಕ್ಕೆ 'ಯಾವಾನ್ವಾ' ಇತ್ಯಾದಿ ವಾಕ್ಯದಿಂದ ಹಿಂದೆ ಆಧಾರವಾಗಿ ಹೇಳಲ್ಪಟ್ಟ ಆಕಾಶವನ್ನು ಅನುವಾದ ಮಾಡಿ, ಅದರಲ್ಲಿ ದ್ಯಾವಾಪೃಥಿವ್ಯಾದಿಗಳೆಲ್ಲವೂ ಇರುತ್ತವೆಂದು ಉತ್ತರಿಸಲಾಗಿದೆ. ಸಣ್ಣದಾದ ಹೃದಯಾಕಾಶದಲ್ಲಿ ಬೃಹತ್ತಾದ ದ್ಯಾವಾಪೃಥಿವ್ಯಾದಿಗಳು ಇರಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಬಾಹ್ಯಾಕಾಶವು ಹೇಗೆ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯವಾಗಿದೆಯೋ, ಅದರಂತೆ ದಹರಾಕಾಶವೂ ಕೂಡ ಸಮಾನಯೋಗಕ್ಷೇಮದಿಂದ ಸಕಲಕ್ಕೂ ಆಧಾರವಾಗಿದೆ ಎಂಬುದಾಗಿ 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಿಂದ ಉತ್ತರಿಸಲಾಗಿದೆ. ಹೀಗೆ ದ್ಯಾವಾಪೃಥಿವ್ಯಾದಿಗಳನ್ನು ಅನ್ವೇಷಣೆ ಮಾಡಬೇಕೆಂದು ಹೇಳಿರುವುದು ಅತ್ಯಂತ ಸಂಗತವಾಗುತ್ತದೆ.

**एवञ्च पूर्वपक्षे जिज्ञासासूत्रस्याप्याक्षेपः । अत एव ''मुख्यतः पृथिव्यादीनामनुपास्यत्वात्'' इति सिद्धान्तटीकायां पृथिव्यादेर्जिज्ञास्यत्वप्रतिषेधः।**

ಆದ್ದರಿಂದ ದ್ಯಾವಾಪೃಥಿವಿಗಳ ಬಗ್ಗೆ ಜಿಜ್ಞಾಸ್ಯತ್ವವನ್ನು ಹೇಳಿದಂತಾಯಿತು. ಹೀಗಿರುವಾಗ ಪ್ರಥಮಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆ ಮಾಡಬೇಕೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ. ಹೀಗೆ ಜಿಜ್ಞಾಸಾಸೂತ್ರವನ್ನೂ ಆಕ್ಷೇಪ ಮಾಡಿದಂತಾಗುತ್ತದೆ. ಆದ್ದರಿಂದಲೇ 'ಮುಖ್ಯತಃ ಪೃಥಿವ್ಯಾದೀನಾಮನುಪಾಸ್ಯತ್ವಾತ್' ಎಂಬ ಸಿದ್ಧಾಂತದ ಟೀಕೆಯಲ್ಲಿ ಪೃಥಿವ್ಯಾದಿಗಳ ಜಿಜ್ಞಾಸ್ಯತ್ವವನ್ನು ಪ್ರತಿಷೇಧ ಮಾಡಿದ್ದಾರೆ. ಇದರಿಂದ ಪೂರ್ವಪಕ್ಷ ಸಂದರ್ಭದಲ್ಲಿ ಪೃಥಿವ್ಯಾದಿಗಳ ಜಿಜ್ಞಾಸೆಯೇ ಪೂರ್ವಪಕ್ಷಿಗೆ ಅಭಿಮತವಾಗಿದೆಯೆಂದು ತಿಳಿಯುತ್ತದೆ.

**प्रकाशः –**

**द्वितीयस्त्विति ।।** दहराश्रितान्वेष्टव्यतया वेति पक्ष इत्यर्थः ।

ವಿವರಣೆ - ಈ ಹಿಂದೆ ದಹರಾಕಾಶವನ್ನೇ ಬ್ರಹ್ಮನೆನ್ನುತ್ತಿರೋ, ಅಥವಾ ದಹರಾಕಾಶದಲ್ಲಿ ಜಿಜ್ಞಾಸ್ಯನಾದವನನ್ನು ಬ್ರಹ್ಮನೆನ್ನುತ್ತಿರೋ, ಎಂದು ಎರಡು ಬಗೆಯಲ್ಲಿ ವಿಕಲ್ಪಮಾಡಿ, ಮೊದಲನೆಯ ವಿಕಲ್ಪವನ್ನು ನಿರಾಕರಣೆ ಮಾಡಿದರು. ಪ್ರಕೃತ ದಹರಾಕಾಶದಲ್ಲಿರುವವನ ಜಿಜ್ಞಾಸೆ ಮಾಡಬೇಕೆಂಬ ಎರಡನೆಯ ಪಕ್ಷವನ್ನು ನಿರಾಕರಿಸಿ ಭೂತಾಕಾಶವನ್ನೇ ಹೃತ್ಪದ್ಮಸ್ಥವೆಂದು ಪೂರ್ವಪಕ್ಷದ ಸ್ಥಾಪನೆಯನ್ನು ಮಾಡುತ್ತಿದ್ದಾರೆ. ದ್ವಿತೀಯಸ್ತು' ಇತ್ಯಾದಿ ಗ್ರಂಥದಿಂದ. ದ್ವಿತೀಯ ಪಕ್ಷವೆಂದರೆ ದಹರಾಕಾಶದಲ್ಲಿ ಜಿಜ್ಞಾಸ್ಯನಾದವನು ಬ್ರಹ್ಮನಾಗಿದ್ದಾನೆ ಎಂಬ ಪಕ್ಷವೆಂದರ್ಥ.

ಪರಿಪೂರ್ಣಚಂದ್ರಿಕಾ

**प्रकाशः** – टीकोक्तं प्रतीतचोद्यनिरासेन विकल्पमुखेन विशदयन्नाद्यपक्ष इव द्वितीयपक्षेऽप्युत्तरवाक्यस्य ब्रह्मपरत्वे टीकोक्तसुषिरश्रुतिविरोधवदनन्वयोऽपि योज्य इति भावेन टीकाभिप्रायमाह – **तत्रेति** ।।

ಟೀಕೆಯಲ್ಲಿ ಪ್ರತೀತವಾದ ಶಂಕೆಯನ್ನು ನಿರಾಕರಿಸುತ್ತಾ ವಿಕಲ್ಪ ಮಾಡುವ ಮೂಲಕ ಎರಡನೆಯ ಪಕ್ಷವನ್ನು ನಿರಾಕರಿಸುತ್ತಿದ್ದಾರೆ. ಈ ಹಿಂದೆ ಹೇಳಿದಂತೆ ನ್ಯಾಯವಿವರಣದಲ್ಲಿ ಅನನ್ವಯವೆಂಬ ಪೂರ್ವಪಕ್ಷ ಹೇತುವನ್ನು ಹೇಳಿದ್ದಾರೆ. ಭಾಷ್ಯದಲ್ಲಿ ಸಮಾಖ್ಯಾವಿರೋಧವನ್ನು ಹೇಳಿದ್ದಾರೆ. ಸಮಾಖ್ಯಾವಿರೋಧವನ್ನು ಪ್ರಥಮ ಪೂರ್ವಪಕ್ಷದ ಹೇತುವನ್ನಾಗಿ ತಿಳಿಯಬೇಕು. ಅನನ್ವಯವನ್ನು ಎರಡನೆಯ ಪೂರ್ವಪಕ್ಷ ಹೇತುವನ್ನಾಗಿ ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ ಹೇಳಿದಂತೆ ಎರಡನೆಯ ಪಕ್ಷದಲ್ಲಿಯೂ ಕೂಡ ಉತ್ತರವಾಕ್ಯವು ಬ್ರಹ್ಮಪರವಾದರೆ, ಟೀಕೆಯಲ್ಲಿ ಹೇಳಲ್ಪಟ್ಟ ಸುಷಿರಶ್ರುತಿ ವಿರೋಧದಂತೆ ಅನನ್ವಯವೆಂಬ ದೋಷವೂ ಇರುತ್ತದೆಂದು ಯೋಜನೆ ಮಾಡಕೊಳ್ಳಬೇಕು. ಈ ಉದ್ದೇಶದಿಂದ ಟೀಕೆಯ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ತತ್ರ' ಇತ್ಯಾದಿ ಗ್ರಂಥದಿಂದ.

ಅಭಿಪ್ರಾಯ ಹೀಗಿದೆ - 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ ಶಬ್ದವು ಬ್ರಹ್ಮಪರವೆಂದು ಹೇಳಿದಾಗ ಟೀಕೆಯಲ್ಲಿ ಸುಷಿರಶ್ರುತಿ ವಿರೋಧವನ್ನು ಹೇಳಿದ್ದಾರೆ. ಅನನ್ವಯ ದೋಷವನ್ನು ಹೇಳಿಲ್ಲ. ಕಾರಣವೇನೆಂದರೆ ಅನನ್ವಯ ದೋಷ ಬರುವುದಿಲ್ಲವೆಂದಭಿಪ್ರಾಯವಲ್ಲ. ಸುಷಿರ ಶ್ರುತಿ ವಿರೋಧವೂ ಕೂಡ ಬರುತ್ತದೆಂದು ಅಭಿಪ್ರಾಯ.

**प्रकाशः** – अन्वेष्टव्यम् ''उभे अस्मिन्'' इत्यादिना वक्तुं तदुपयुक्तत्वेन-तदुक्त्यन्वयोऽस्त्वित्याशङ्क्य टीकोक्तमनन्वयं साधयति – **नचेति** ।।

ವಸ್ತುತಃ ಅನ್ವೇಷ್ಟವ್ಯನಾದವನು ಬ್ರಹ್ಮನೇ ಆಗಿದ್ದಾನೆಂದು 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಲ್ಲಿ ಮುಂದೆ ಹೇಳುತ್ತಾರೆ. ಅದಕ್ಕೆ ಉಪಯುಕ್ತವಾಗಿ ಮೊದಲು ಅನ್ವೇಷ್ಟವ್ಯನಾದವನಿಗೆ ಆಧಾರವನ್ನು ಪ್ರಕೃತ ಆಕಾಶಶ್ರುತಿ ಹೇಳುತ್ತಿದೆ. ಹೀಗೆ ಹೇಳಿದರೆ ಏನು ತಪ್ಪು? ಎಂದು ಆಶಂಕಿಸಿ, ಟೀಕೆಯಲ್ಲಿ ಹೇಳಲ್ಪಟ್ಟ ಅನನ್ವಯ ದೋಷವನ್ನು ಪೂರ್ವಪಕ್ಷಕಾರರು ಸಾಧಿಸುತ್ತಿದ್ದಾರೆ 'ನಚ' ಇತ್ಯಾದಿ ವಾಕ್ಯದಿಂದ.

**प्रकाशः** – **द्यावापृथिव्यादेरिति** ।। यद्यप्येतत्पूर्वपक्षिणस्समीहितमेव । तथापि ''तमेवैकं जानथ आत्मानमन्या वाचो विमुञ्चथ'' इत्यादिना सिद्धान्तिभिरन्वेष्टव्यत्वस्य त्याजितत्वादेतदनिष्टमिति भावः ।

ದ್ಯಾವ್ಯಾಪೃಥಿವ್ಯಾದಿಗಳೇ ಜಿಜ್ಞಾಸ್ಯವಾಗಬೇಕಾದೀತೆಂದು ಪೂರ್ವಪಕ್ಷಿಯು ಆಪಾದಿಸುತ್ತಿದ್ದಾನೆ. ವಸ್ತುತಃ ಪೂರ್ವಪಕ್ಷಿಗೆ ದ್ಯಾವ್ಯಾಪೃಥಿವ್ಯಾದಿಗಳೇ ಜಿಜ್ಞಾಸ್ಯಗಳೆಂದು ವಿವಕ್ಷಿತವಾಗಿದೆ. ಆದರೆ ಸಿದ್ಧಾಂತಿಗಳಿಗೆ ಇದು ಸಮ್ಮತವಲ್ಲ. ಪೂರ್ವಪಕ್ಷಕಾರರಿಗೆ ಸಮ್ಮತವಾಗಿದ್ದರೂ ಸಿದ್ಧಾಂತಿಗಳಿಗೆ ಅನಿಷ್ಟವಾದ ಕಾರಣ ಹೀಗೆ

ಆಪಾದಿಸಲಾಗಿದೆಯೆಂದು ತಿಳಿಯಬೇಕು. ಏಕೆಂದರೆ 'ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ' ಇತ್ಯಾದಿ ವಾಕ್ಯದಿಂದ ಸಿದ್ಧಾಂತಿಗಳು ಬ್ರಹ್ಮನನ್ನು ಮಾತ್ರ ಜಿಜ್ಞಾಸೆ ಮಾಡಬೇಕು. ಬೇರೆ ವಸ್ತುವನ್ನು ಜಿಜ್ಞಾಸೆ ಮಾಡಬಾರದೆಂದು ಸಮರ್ಥಿಸುತ್ತಾರೆ. ಈಗ ದ್ಯಾವ್ಯಾಪೃಥಿವ್ಯಾದಿಗಳಿಗೆ ಜಿಜ್ಞಾಸ್ಯತ್ವವು ಪ್ರಾಪ್ತವಾದರೆ, 'ತಮೇವೈಕಂ ಜಾನಥ' ಎಂಬ ಶ್ರುತಿಯ ವಿರೋಧವೂ ಬಂದಂತಾಗುತ್ತದೆ. ಈ ದೃಷ್ಟಿಯಿಂದ ಇದನ್ನು ಅನಿಷ್ಟಾಪಾದನೆಯೆಂದು ಪರಿಗಣಿಸಬೇಕು.

**प्रकाशः** – तेन नोत्तरग्रन्थविरोध इति ध्येयम् । अस्मिन्पक्षे भाष्यमुपलक्षणमन्यदप्याक्षेप्यमित्याह – **एवञ्चेति** ।।

ಹೀಗೆ ಪೂರ್ವಪಕ್ಷಿಗೆ ದ್ಯಾವಾಪೃಥಿವ್ಯಾದಿಗಳ ಜಿಜ್ಞಾಸೆಯು ಅನಿಷ್ಟವಲ್ಲವೆಂದು ಹೇಳಿದ್ದರಿಂದಲೇ ಉತ್ತರಗ್ರಂಥದ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ ಮುಂದೆ ಪೂರ್ವಪಕ್ಷಿಯು ದ್ಯಾವಾಪೃಥಿವ್ಯಾದಿಗಳೇ ಜಿಜ್ಞಾಸ್ಯವೆಂದು ಸಮರ್ಥಿಸುತ್ತಾನೆ.

ಭಾಷ್ಯದಲ್ಲಿ ಅಕ್ಷರಾಧಿಕರಣದ ಸಿದ್ಧಾಂತವನ್ನಷ್ಟೇ ಆಕ್ಷೇಪಿಸಿದ್ದಾರೆ. ಇದು ಕೇವಲ ಉಪಲಕ್ಷಣ. ದ್ಯಾವ್ಯಾಪೃಥಿವ್ಯಾದಿಗಳೇ ಜಿಜ್ಞಾಸ್ಯಗಳೆಂದು ಹೇಳುತ್ತಿರುವುದರಿಂದ, ಜಿಜ್ಞಾಸಾಧಿಕರಣದ ಸಿದ್ಧಾಂತವನ್ನೂ ಕೂಡ ಆಕ್ಷೇಪ ಮಾಡಿದಂತಾಯಿತು. ಈ ಅಭಿಪ್ರಾಯದಿಂದ 'ಏವಂಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – तेन जिज्ञास्यत्वरूपब्रह्मधर्मादाकाशो ब्रह्मेति निरस्तम् ।

ಹೀಗೆ ಜಿಜ್ಞಾಸಾಧಿಕರಣವನ್ನು ಆಕ್ಷೇಪ ಮಾಡಬೇಕೆಂದು ಹೇಳಿದ್ದರಿಂದ, ಮತ್ತೊಂದು ಶಂಕೆಯನ್ನು ನಿರಾಕರಿಸಿದಂತಾಯಿತು. ಅಂದರೆ ಜಿಜ್ಞಾಸ್ಯತ್ವವೆಂಬುದು ಬ್ರಹ್ಮನ ಧರ್ಮವಾಗಿದೆ. ಆದ್ದರಿಂದ ಆಕಾಶಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಬೇಕಲ್ಲವೇ? ಎಂಬ ಆಶಂಕೆಯನ್ನು ನಿರಾಕರಿಸಿದಂತಾಯಿತು. ಹೇಗೆಂದರೆ ಜಿಜ್ಞಾಸ್ಯತ್ವವನ್ನು ದ್ಯಾವ್ಯಾಪೃಥಿವ್ಯಾದಿಗಳಲ್ಲಿ ಆಕ್ಷೇಪಿಸುತ್ತಿರುವುದರಿಂದ, ಬ್ರಹ್ಮನ ಧರ್ಮವೆಂದು ವಿವಕ್ಷಿಸಲು ಸಾಧ್ಯವಿಲ್ಲ.

**गुरुराजीयम्** – 'आकाशपक्षे तु अस्त्यन्वयः' इत्यादिटीका । तत्र 'यावान्वा' इत्यादिना प्रसिद्धाकाशस्यैव विशेषमभिधायेत्युक्तम् । नतु तत्प्रयोजनमुक्तमित्य-तस्तत्प्रयोजनं वदन्नेवार्थतष्टीकामनुवदति – **आकाशपक्ष इति** ।। **अत एवेति** ।। पूर्वपक्षे जिज्ञासासूत्रस्याप्याक्षेपस्याभिमतत्वादेवेत्यर्थः ।




ದಹರಾಕಾಶದಲ್ಲಿ ದ್ಯಾವಾಪೃಥಿವೀಗಳು ಇರುತ್ತವೆಂದೇ ಶ್ರುತಿ ಹೇಳುತ್ತಿದೆ ಹೊರತು, ಬ್ರಹ್ಮನು ಇರುತ್ತಾನೆಂದು ಹೇಳುತ್ತಿಲ್ಲ. ಒಂದು ವೇಳೆ ಜಿಜ್ಞಾಸ್ಯನಾದವನು ಬ್ರಹ್ಮನೇ ಆಗಿದ್ದಾನೆಂದು ಹೇಳುವುದಾದಲ್ಲಿ 'ಕಿಂ ತದತ್ರ ವಿದ್ಯತೇ'

ಎಂಬ ಪ್ರಶ್ನೆಗೆ 'ಬ್ರಹ್ಮ ವಿದ್ಯತೇ' ಎಂದೇ ಉತ್ತರಿಸಬೇಕಿತ್ತು. ಅದನ್ನು ಬಿಟ್ಟು 'ಯಾವಾನ್ವಾ ಅಯಮಾಕಾಶಃ' ಇತ್ಯಾದಿಯಾಗಿ ದ್ಯಾವಾಪೃಥಿವೀಗಳಿಗೆ ಆಶ್ರಯವಾದ ಆಕಾಶವಿದೆಯೆಂದು ಹೇಳಿರುವುದು ತಪ್ಪಾಗುತ್ತದೆ.

ಮುಂದೆ ಬ್ರಹ್ಮನೇ ದಹರಾಕಾಶದಲ್ಲಿದ್ದಾನೆಂದು ಜಿಜ್ಞಾಸೆ ಮಾಡಬೇಕೆಂದು ಹೇಳಲಾಗುತ್ತದೆ. ಅದಕ್ಕೆ ಪೂರಕವಾಗಿ ಬ್ರಹ್ಮನಿಗೆ ಆಧಾರವಾದದ್ದು, ಆಕಾಶವೆಂದು ಈ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಬ್ರಹ್ಮನು ಜಿಜ್ಞಾಸ್ಯನಲ್ಲವೆಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಾರದು. ಏಕೆಂದರೆ ಆಧೇಯದ ಬಗ್ಗೆ ಪ್ರಶ್ನೆಯನ್ನು ಮಾಡಿದಾಗ, ಆಧಾರದ ಬಗ್ಗೆ ವಿವರಣೆಯು ತಪ್ಪಾಗುತ್ತದೆ. ನಿಮ್ಮ ಮನೆಯಲ್ಲಿ ಏನಿದೆ? ಎಂದು ಪ್ರಶ್ನಿಸಿದಾಗ. ಮನೆಯ ಆಕಾರವನ್ನು ವರ್ಣಿಸುವುದು, ಅಥವಾ ಮನೆಯ ಬಗ್ಗೆ ವಿಶ್ಲೇಷಣೆ ಮಾಡುವುದು ಹೇಗೆ ತಪ್ಪಾಗುತ್ತದೋ, ಅದರಂತೆ ಹೃದಯಾಕಾಶದಲ್ಲಿ ಯಾರಿದ್ದಾರೆ? ಎಂದು ಪ್ರಶ್ನಿಸಿದಾಗ ಬ್ರಹ್ಮನಿದ್ದಾನೆಂದು ಉತ್ತರಿಸದೇ, ಪುನಃ ಹೃದಯಾಕಾಶವನ್ನೇ ವರ್ಣಿಸುವುದು ತಪ್ಪಾಗುತ್ತದೆ. ಆದ್ದರಿಂದ ಭೂತಾಕಾಶವೇ ಹೃತ್ಪದ್ಮಸ್ಥವಾಗಿದೆಯೆಂದು ಹೇಳಬೇಕು. ಇಂತಹ ಹೃತ್ಪದ್ಮಸ್ಥವಾದ ಭೂತಾಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳೆಲ್ಲವೂ ಆಧೇಯವಾಗಿದೆಯೆಂದು ಹೇಳಿದಾಗ ಪೂರ್ವೋತ್ತರ ವಾಕ್ಯಗಳಿಗೆ ಸಾಂಗತ್ಯ ಬರುತ್ತದೆ. ಇಲ್ಲದಿದ್ದರೆ ಅಸಾಂಗತ್ಯ ದೋಷಬಂದು, ಅನನ್ವಯ ದೋಷಕ್ಕೆ ಅವಕಾಶವಿದೆ.

## 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ ಶಬ್ದವು ಬ್ರಹ್ಮಪರವಲ್ಲ

### तात्पर्यचन्द्रिका

**ननु तर्हि ब्रह्मेति द्वितीयोऽस्तु ।**

ಅನುವಾದ - ಆಕ್ಷೇಪ - 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ ಶಬ್ದವು ಭೂತಾಕಾಶ ಪರವೆಂದು ನಾವು ಹೇಳಿದರೆ ನೀವು ಹೇಳಿದ ದೋಷಗಳಿಗೆಲ್ಲಾ ಅವಕಾಶವಿರುತ್ತಿತ್ತು. ಆದರೆ ನಾವು ಇದೂ ಕೂಡ ಬ್ರಹ್ಮಪರವೆಂದೇ ಹೇಳುತ್ತೇವೆ. 'ದಹರೋಽಸ್ಮಿನ್ನಂತರಾಕಾಶಃ' ಎಂಬ ಮೊದಲಿರುವ ಆಕಾಶ ಶಬ್ದವು ಭೂತಾಕಾಶಪರವಾಗಲೀ, ಆದರೆ 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿ ಆಕಾಶ ಶಬ್ದವು ಪರಮಾತ್ಮನನ್ನೇ ಹೇಳುತ್ತಿದೆ. ಈ ಪಕ್ಷದಲ್ಲಿ ಅನ್ವೇಷ್ಟವ್ಯನಾದವನು ಮತ್ತು ಆಧೇಯನಾದವನು ಪರಮಾತ್ಮನೇ ಆಗಿದ್ದಾನೆಂದು ಹೇಳಿದಂತಾಯಿತು. ಹೀಗೆ ಎರಡನೆಯ ಪಕ್ಷವನ್ನೇ ಒಪ್ಪುತ್ತೇವೆ.

**न चैवमाधेयप्रश्नस्य ''यावान्'' इत्यनेनैवोत्तरितत्वेन ''उभे अस्मिन्'' इत्यादिकं व्यर्थमिति वाच्यम् ।**

ಹಾಗಾದರೆ ಆಧೇಯದ ಬಗ್ಗೆ ಪ್ರಶ್ನೆ ಮಾಡಿದಾಗ 'ಯಾವಾನ್ವಾ ಅಯಮಾಕಾಶಃ' ಎಂಬುದರಿಂದ ಉತ್ತರವನ್ನು ನೀಡಿದ್ದಾಗಿದೆ. ಪುನಃ 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯವು ಹೊರಟಿದ್ದು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು.

**ब्रह्मणो जिज्ञास्यत्वाय सर्वाधारत्वोक्तेरिति चेत् ।**

ಬ್ರಹ್ಮನು ಜಿಜ್ಞಾಸ್ಯನಾಗಿದ್ದಾನೆ. ಈ ಜಿಜ್ಞಾಸ್ಯತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ದ್ಯಾವಾಪೃಥಿವ್ಯಾದ್ಯಾಶ್ರಯತ್ವವನ್ನು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಎರಡನೆಯ ಪಕ್ಷವನ್ನು ಒಪ್ಪಬಹುದಲ್ಲವೇ?

**न 'तस्मिन्सर्वं प्रतिष्ठितम्' इति समाख्याश्रुतौ साक्षात्सुषिरस्यैव सर्वाधारत्वोक्तेः ।**

ಸಮಾಧಾನ - ಹೀಗೆ ಹೇಳಿದರೆ, ಸುಷಿರ ಶ್ರುತಿಯ ವಿರೋಧ ಬರುತ್ತದೆ. ದಹರಪದ್ಮದಲ್ಲಿ ಭೂತಾಕಾಶವಿದೆ. ಈ ಭೂತಾಕಾಶದಲ್ಲಿ ಬ್ರಹ್ಮನಿದ್ದಾನೆ. ಅವನಲ್ಲಿ ದ್ಯಾವಾಪೃಥಿವ್ಯಾದಿಗಳೆಲ್ಲವೂ ಇರುತ್ತವೆಂದು ಹೇಳುತ್ತಿದ್ದೀರಿ. ಆದರೆ 'ತಸ್ಮಿನ್‌ಸರ್ವಂ ಪ್ರತಿಷ್ಠಿತಮ್' ಎಂಬ ಸಮಾಖ್ಯಾಶ್ರುತಿಯಲ್ಲಿ ನೇರವಾಗಿ ಸುಷಿರಕ್ಕೆ ಸರ್ವಾಧಾರತ್ವವನ್ನು ಹೇಳಲಾಗಿದೆ. ಬ್ರಹ್ಮನಿಗೆ ನೀವು ಸರ್ವಾಧಾರತ್ವವನ್ನು ಹೇಳಿದರೆ ಈ ಸಮಾಖ್ಯಾಪ್ರಮಾಣದ ವಿರೋಧ ಬರುತ್ತದೆ.

**'दहरोऽस्मिन्नन्तराकाशस्तस्मिन्' इति पूर्वोक्तप्रसिद्धाकाशस्यैवेहापि ''यावान्वा अयमाकाश'' इत्याकाशश्रुत्या ''उभे अस्मिन्'' इति सप्तम्या च प्रत्यभिज्ञानाच्च ।**

ಒಂದೇ ಶಬ್ದವು ಒಂದೇ ಪ್ರಕರಣದಲ್ಲಿ ಪ್ರಸಕ್ತವಾದಾಗ ಭಿನ್ನ-ಭಿನ್ನವಾದ ಅರ್ಥವನ್ನು ಆ ಶಬ್ದಕ್ಕೆ ಹೇಳಬಾರದೆಂದು ನಿಯಮವಿದೆ. ಪ್ರಕೃತ 'ದಹರೋಽಸ್ಮಿನ್ನಂತರಾಕಾಶಃ' ಎಂಬಲ್ಲಿರುವ ಆಕಾಶಶಬ್ದವು ಭೂತಾಕಾಶಪರವೆಂದು ನೀವೂ ಕೂಡ ಒಪ್ಪಿರುತ್ತೀರಿ. ಎರಡು ವಾಕ್ಯದ ಅನಂತರ 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿ ಅದೇ ಆಕಾಶ ಶಬ್ದವು ಪ್ರಸಕ್ತವಾಗಿದೆ. 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶಶ್ರುತಿಯಲ್ಲಿಯೂ ಸಹ ಭೂತಾಕಾಶವನ್ನೇ ವಿವಕ್ಷಿಸಬೇಕು. ಮತ್ತು ಹಿಂದಿನ ವಾಕ್ಯದಲ್ಲಿ 'ತಸ್ಮಿನ್' ಎಂಬ ಸಪ್ತಮೀ ವಿಭಕ್ತಿಯಿದೆ. ಇಲ್ಲಿ 'ಉಭೇ ಅಸ್ಮಿನ್' ಎಂಬುದಾಗಿ ಅದೇ ಸಪ್ತಮೀ ವಿಭಕ್ತಿಯೂ ಇರುತ್ತದೆ. ಒಂದೇ ರೀತಿಯಾದ ಆಕಾಶಶ್ರುತಿಯಿಂದ ಮತ್ತು ಒಂದೇ ಸಪ್ತಮೀ ವಿಭಕ್ತಿಯಿಂದ, ಹಿಂದೆ ಹೇಳಿದ ಭೂತಾಕಾಶವನ್ನೇ ಪರಾಮರ್ಶಿಸಬೇಕೆಂದು ಪ್ರತ್ಯಭಿಜ್ಞಾನವು ಬರುತ್ತದೆ. ಹೀಗಿರುವಾಗ ಒಂದು ಆಕಾಶ ಶಬ್ದಕ್ಕೆ ಭೂತಾಕಾಶಪರತ್ವವನ್ನು ಒಪ್ಪಿ, ಮತ್ತೊಂದು ಆಕಾಶ ಶಬ್ದಕ್ಕೆ ಬ್ರಹ್ಮಪರತ್ವವನ್ನು ಒಪ್ಪುವುದು ಸಮಂಜಸವಾಗುವುದಿಲ್ಲ.

ಪರಿಪೂರ್ಣಚಂದ್ರಿಕಾ

**नह्यस्मिन्निति सप्तमीनिर्दिष्ट आकाशः पृष्टमाधेयं प्रत्याधारो न । प्रथमानिर्दिष्टं च द्यावापृथिव्यादिकं पृष्टमाधेयं न । किं त्वन्यदेवेत्यन्वितं भवतीति ।**

('ನಹಿ' ಎಂಬುದಕ್ಕೆ 'ಭವತಿ' ಎಂಬಲ್ಲಿ ಅನ್ವಯ) ಸಾಮಾನ್ಯವಾಗಿ ಆಧಾರವಾದದ್ದನ್ನು ಸಪ್ತಮೀವಿಭಕ್ತ್ಯಂತವಾದ ಪದದಿಂದ ಆಧೇಯುವನ್ನು ಪ್ರಥಮಾವಿಭಕ್ತ್ಯಂತ ಪದದಿಂದ ಪ್ರಯೋಗ ಮಾಡುವುದು ಕಂಡಿದೆ. ಉದಾಹರಣೆ 'ಭೂತಲೇ ಘಟಃ' ಎಂದು ಹೇಳಿದಾಗ ಆಧಾರವಾದ ಭೂತಲವನ್ನು ಸಪ್ತಮೀ ವಿಭಕ್ತ್ಯಂತ ಪದದಿಂದ ಹಾಗೂ ಆಧೇಯವಾದ ಘಟವನ್ನು ಪ್ರಥಮಾವಿಭಕ್ತ್ಯಂತ ಪದದಿಂದ ಪ್ರಯೋಗಿಸುತ್ತಾರೆ. ಆದರೆ ನೀವು ಇಲ್ಲಿ ವಿರುದ್ಧವಾಗಿ ಹೇಳುತ್ತಿದ್ದೀರಿ. 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶಶಬ್ದವು ಪರಮಾತ್ಮನ ಪರವಾದರೆ, 'ಉಭೇ ಅಸ್ಮಿನ್' ಎಂಬಲ್ಲಿರುವ ಸಪ್ತಮ್ಯಂತವಾದ 'ಅಸ್ಮಿನ್' ಎಂಬ ಪದವೂ ಕೂಡ ಪರಮಾತ್ಮ ಪರವೇ ಆಗಬೇಕು. ಪರಮಾತ್ಮನಲ್ಲಿ ದ್ಯಾವಾಪೃಥಿವ್ಯಾದಿಗಳು ಇರುತ್ತವೆಂದು ಹೇಳಬೇಕು. ಆದರೆ ನಿಮ್ಮ ಪ್ರಕಾರ ಬ್ರಹ್ಮನು ಆಧೇಯನಾದ್ದರಿಂದ ಆಧೇಯನಾದ ಬ್ರಹ್ಮನನ್ನು ಸಪ್ತಮ್ಯಂತ ಪದದಿಂದ ಕರೆಯುವುದು ಹೇಗೆ ? ಆದ್ದರಿಂದ 'ಅಸ್ಮಿನ್' ಎಂಬುದಾಗಿ ಸಪ್ತಮೀ ವಿಭಕ್ತಿಯಿಂದ ನಿರ್ದೇಶಿಸಲ್ಪಟ್ಟ ಆಕಾಶವು ಪ್ರಶ್ನಿಸಲ್ಪಟ್ಟ ಆಧೇಯಕ್ಕೆ ಆಧಾರವಾಗುವುದಿಲ್ಲ. ಪ್ರಥಮಾನಿರ್ದಿಷ್ಟವಾದ ದ್ಯಾವಾಪೃಥಿವ್ಯಾದಿಗಳು ಪ್ರಶ್ನಿಸಲ್ಪಟ್ಟ ಆಧೇಯವೂ ಆಗುವುದಿಲ್ಲ. ಹೊರತು, ಬೇರೆ ಪದಾರ್ಥವೇ ಆಧಾರವಾಗುತ್ತದೆ. ಮತ್ತೊಂದು ಪದಾರ್ಥವೇ ಆಧೇಯವಾಗುತ್ತದೆಂದು ಹೇಳುವುದು ಅತ್ಯಂತ ಅನುಚಿತ. 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದಾಗ ನೇರವಾಗಿ ಆಧೇಯವನ್ನು ಮಾತ್ರ ಹೇಳಿದ್ದಲ್ಲಿ, ಈ ಯಾವ ಅನನ್ವಯ ರೂಪ ದೋಷವು ಬರುತ್ತಿರಲಿಲ್ಲ.

**टीकायामस्मिन्पक्षे न्यायविवरणोक्तानन्वयमनुक्त्वा भाष्योक्तसुषिरश्रुति-विरोधोक्तिस्त्वनन्वयो न लगतीति नाभिप्रेत्य । किन्तु सुषिरश्रुतिविरोधोऽपि लगतीत्यभिप्रेत्य ।**

'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ ಶಬ್ದವು ಬ್ರಹ್ಮಪರವಾಗುತ್ತದೆಂಬ ಈ ಪಕ್ಷದಲ್ಲಿ ಸುಷಿರ ಶ್ರುತಿಯ ವಿರೋಧ ಬರುತ್ತದೆ ಎಂಬಷ್ಟೇ ಅಲ್ಲ. ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಅನನ್ವಯವೆಂಬ ದೋಷವೂ ಕೂಡ ಬರುತ್ತದೆ. ಹಾಗಾದರೆ ಟೀಕೆಯಲ್ಲಿ ಕೇವಲ ಸುಷಿರ ಶ್ರುತಿ ವಿರೋಧವನ್ನಷ್ಟೇ ಏಕೆ ಹೇಳಿದ್ದಾರೆ ಎಂದರೆ? ಟೀಕೆಯಲ್ಲಿ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಅನನ್ವಯವನ್ನು ಹೇಳದೇ ಭಾಷ್ಯದಲ್ಲಿ ಹೇಳಲ್ಪಟ್ಟ ಸುಷಿರ ಶ್ರುತಿವಿರೋಧವನ್ನಷ್ಟೇ ಹೇಳಲು ಕಾರಣವಿದೆ. ಅನನ್ವಯ ದೋಷವು ಇಲ್ಲವೆಂಬ ಅಭಿಪ್ರಾಯದಿಂದಲ್ಲ ಹೊರತು, ಅಧಿಕವಾಗಿ ಸುಷಿರ ಶ್ರುತಿ ವಿರೋಧವೂ ಕೂಡ ಇರುತ್ತದೆಂಬ ಅಭಿಪ್ರಾಯದಿಂದ ಟೀಕೆಯಲ್ಲಿ ಸುಷಿರ ಶ್ರುತಿವಿರೋಧವನ್ನು ಹೇಳಿರುತ್ತಾರೆ.

**तस्मादाकाशमेव हृत्पद्मस्थम् । अपहतपाप्मत्वादिकं त्वाकाशेऽपि युक्तम् ।**

ಆದ್ದರಿಂದ ಹೃತ್ಪದ್ಮಸ್ಥವಾದದ್ದು ಆಕಾಶವೇ ಆಗುತ್ತದೆ. ಅಪಹತಪಾಪ್ಮತ್ವಾದಿಗಳೂ ಕೂಡ ಆಕಾಶದಲ್ಲೇ ಬರುತ್ತವೆಂದು ಹೇಳಬೇಕು.

**तस्याचेतनत्वेन पाप्माद्यत्यन्ताभावस्य सत्त्वात् । तत्प्रध्वंसस्य च ब्रह्मण्यप्यसत्त्वात् । सत्यकामत्वादिकं तु प्रतिहतकामादिराहित्यात् ।**

'ಅಪಹತಪಾಪ್ಮತ್ವ' ಎಂಬ ಶಬ್ದಕ್ಕೆ 'ಪಾಪಾದಿಗಳ ಅತ್ಯಂತಾಭಾವ' ಎಂದರ್ಥ. ಆಕಾಶವು ಅಚೇತನವಾದ್ದರಿಂದ ಪಾಪಾದಿಗಳ ಅತ್ಯಂತಾಭಾವವನ್ನು ಹೇಳಬಹುದು. ಹೀಗೆ ಅತ್ಯಂತಾ-ಭಾವವೆಂಬರ್ಥವನ್ನು ಒಪ್ಪುವುದು ತಪ್ಪಲ್ಲ. ಒಂದು ವೇಳೆ ಪ್ರಧ್ವಂಸಾಭಾವವನ್ನು ವಿವಕ್ಷಿಸುವುದಾದರೆ ಬ್ರಹ್ಮನಲ್ಲಿಯೂ ಕೂಡ ಪಾಪಾದಿಗಳ ಧ್ವಂಸವು ಇಲ್ಲದ ಕಾರಣ ಅಪಹತಪಾಪ್ಮತ್ವಾದಿಗಳನ್ನು ಅವನಲ್ಲಿಯೂ ಹೇಳಲು ಸಾಧ್ಯವಿಲ್ಲ. ಸತ್ಯಕಾಮತ್ವಾದಿಗಳನ್ನೂ ಕೂಡ ಪ್ರತಿಹತವಾದ ಕಾಮಾದಿರಾಹಿತ್ಯದಿಂದ ಕೂಡಿಸಬೇಕು. ಅಂದರೆ ಜಡವಾದ್ದರಿಂದ ಕಾಮಾದಿಗಳೇ ಹುಟ್ಟುವುದಿಲ್ಲ. ಆದ್ದರಿಂದಲೇ ಪ್ರತಿಹತವಾದ ಕಾಮಾದಿಗಳನ್ನು ಹೇಳಲು ಸಾಧ್ಯವಿಲ್ಲವೆಂಬ ದೃಷ್ಟಿಯಿಂದ ಶ್ರುತಿಯು ಸತ್ಯಕಾಮತ್ವಾದಿ ಗುಣಗಳನ್ನು ಹೇಳಿರುತ್ತದೆ.

**यद्वा अभिमान्यभिप्रायेणाकाशे अपहतपाप्मत्वादिकं सत्यकामत्वादिकं चास्तु । तस्माद्धृत्पद्मस्थमाकाशमेव ।**

ಅಥವಾ ಭೂತಾಕಾಶದಲ್ಲಿರುವ ಅಭಿಮಾನಿದೇವತೆಯನ್ನು ವಿವಕ್ಷಿಸಿ, ಅಪಹತಪಾಪ್ಮತ್ವ ಮತ್ತು ಸತ್ಯಕಾಮತ್ವಾದಿಗಳನ್ನು ಶ್ರುತಿಯು ಹೇಳುತ್ತಿದೆಯೆಂದು ವ್ಯಾಖ್ಯಾನಿಸಬಹುದು. ಆದ್ದರಿಂದ ಹೃತ್ಪದ್ಮಸ್ಥವಾದದ್ದು ಭೂತಾಕಾಶವೇ ಆಗುತ್ತದೆ.

**प्रकाशः –**

''यावान्वा'' इति वाक्यगताकाशो ब्रह्मेति द्वितीयपक्षटीकायां ''नच यावानित्यादिनाऽऽकाशाख्यो विष्णुः'' इत्यादिग्रन्थेन शङ्कापूर्वं निरस्तः । तं विशदयति – नन्विति ।।

**ವಿವರಣೆ** - 'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಆಕಾಶ ಶಬ್ದವು ಬ್ರಹ್ಮಪರವಾಗುತ್ತದೆಂಬ ಎರಡನೆಯ ಪೂರ್ವಪಕ್ಷವನ್ನು ಒಪ್ಪಿ, ಇದನ್ನು ಟೀಕೆಯಲ್ಲಿರುವ 'ನಚ ಯಾವಾನಿತ್ಯಾದಿನಾऽऽಕಾಶಾಖ್ಯೋ ವಿಷ್ಣುಃ'

ಇತ್ಯಾದಿ ಗ್ರಂಥದಿಂದ ಶಂಕೆಯನ್ನು ಮಾಡಿ ಉತ್ತರಿಸಿದ್ದಾರೆ. ಅದನ್ನೇ 'ನನು' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

**प्रकाशः** – टीकोक्तं सुषिरश्रुतिविरोधमुक्त्वाऽनन्वयमपि योजयति – **नहीति** ।। हृत्पद्मस्थाकाशस्थं किमिति पृष्टे हृदये ब्रह्म तत्र च सर्वमस्तीत्यस्यानन्वयादिति भावः ।।

ಟೀಕೆಯಲ್ಲಿ ಹೇಳಲ್ಪಟ್ಟ ಸುಷಿರಶ್ರುತಿ ವಿರೋಧವನ್ನು ಹೇಳಿ, ನ್ಯಾಯವಿವರಣದಲ್ಲಿ ಹೇಳಲ್ಪಟ್ಟ 'ಅನನ್ವಯ' ದೋಷವನ್ನೂ ಕೂಡ ಯೋಜನೆ ಮಾಡುತ್ತಿದ್ದಾರೆ 'ನಹಿ' ಇತ್ಯಾದಿ ಗ್ರಂಥದಿಂದ. ಹೃದಯಪದ್ಮದ ಆಕಾಶದಲ್ಲಿ ಏನಿದೆ ? ಎಂದು ಪ್ರಶ್ನಿಸಿದಾಗ, ಹೃದಯದಲ್ಲಿ ಬ್ರಹ್ಮನಿದ್ದಾನೆ. ಅಂತಹ ಬ್ರಹ್ಮನಲ್ಲಿ ಎಲ್ಲವೂ ಇದೆ. ಎಂಬ ಉತ್ತರ ನೀಡುವ ವಾಕ್ಯಕ್ಕೆ ಸಾಂಗತ್ಯವಿರುವುದಿಲ್ಲವೆಂದು ಅಭಿಪ್ರಾಯ.

**प्रकाशः** – **अस्मिन्पक्ष इति** ।। प्रतिवचनगताकाशो ब्रह्मेति पक्ष इत्यर्थः । ननु विष्णुलिङ्गविरोध इत्यत आह – **अपहतेति** ।। तस्मात् लिङ्गविरोधाभावादित्यर्थः ।

'ಅಸ್ಮಿನ್‌ಪಕ್ಷೇ' ಎಂದರೆ ಉತ್ತರ ನೀಡುವ 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯದಲ್ಲಿರುವ ಆಕಾಶಶಬ್ದವು ಬ್ರಹ್ಮಪರವಾಗುತ್ತದೆಂಬ ಎರಡನೆಯ ಪಕ್ಷದಲ್ಲಿ ಎಂದರ್ಥ. ಇಲ್ಲಿರುವ ಆಕಾಶ ಶಬ್ದಕ್ಕೆ ಭೂತಾಕಾಶಪರತ್ವವನ್ನು ಒಪ್ಪಿದರೆ, ವಿಷ್ಣುಲಿಂಗದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅಪಹತ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ತಸ್ಮಾತ್' ಎಂದರೆ ಲಿಂಗಗಳವಿರೋಧವಿಲ್ಲದ ಕಾರಣ ಎಂದರ್ಥ.

**गुरुराजीयम्** – 'यावान्वा अयमाकाशः' इति वाक्यस्थाकाशो न प्रसिद्धाकाशः । किन्तु ब्रह्मेति द्वितीयोऽस्त्विति शङ्कते – **नन्विति** ।। टीकायां नच यावानित्यादिनाऽऽकाशाख्यो विष्णुः सर्वाधारतया परिहारे कथ्यत इति शङ्काग्रन्थे सर्वाधारतयेत्युक्तम् । तस्य प्रयोजनमाह – **न चैवमाधेयप्रश्नस्येत्यादिना** ।। तस्मिन्सर्वं प्रतिष्ठितमिति साक्षात्सुषिरस्यैव सर्वाधारत्वोक्तिविरोधादिति परिहारटीकायां यावानिति वाक्योक्ताकाशस्य विष्णुत्वे न्यायविवरणोक्तानन्वया-सम्भवेन सुषिरश्रुतिविरोधोऽभिहित इति प्रतीतिनिरासायाह – **तस्मिन्सर्वमिति** ।। यावानिति वाक्योक्ताकाशस्य ब्रह्मत्वेऽप्युक्तरीत्याऽनन्वयश्चेत्तर्ह्यस्मिन्पक्षेऽनन्वयमनुक्त्वा सुषिरश्रुतिविरोधोक्तिरयुक्तेत्यत आह – **टीकायामिति** ।। ननु प्रसिद्धाकाशपक्षेऽपहत-पाप्मत्वाद्ययोग इत्यतोऽपहतपाप्मत्वं किं पापात्यन्ताभावो वा पाप्मध्वंसो वा । आद्यस्तु प्रसिद्धाकाशेऽप्यनुपपन्न इत्याह – **तस्येति** ।। द्वितीय आह – **तत्प्रध्वंसस्य चेति** ।। ननु च पाप्मात्यन्ताभाव एव विवक्षितः । नच चेतनत्वेनाकाशस्यापि

पाप्मात्यन्ताभावोक्तिरिति वाच्यम् । तस्याचेतनत्वेन पापप्रसक्तेरेवाभावेन तन्निषेधायोगात् । च नान्तरिक्षेऽग्निश्चेतव्य इत्यादाविवाप्रसक्तनिषेधः किं न स्यादिति वाच्यम् । तस्य हिरण्यं निधायाग्निचयनं कर्तव्यमिति विधिस्तावकत्वेन स्वार्थे तात्पर्याभावादित्यस्वरसादाह – यद्वेति ॥




'ಯಾವಾನ್ವಾ ಅಯಮಾಕಾಶಃ' ಎಂಬ ಪ್ರತಿವಚನದಲ್ಲಿರುವ 'ಆಕಾಶ' ಶಬ್ದವು ಬ್ರಹ್ಮಪರವಾಗುತ್ತದೆಂದು ಹೇಳುವುದೇ ತಪ್ಪು. ಏಕೆಂದರೆ 'ಹೃದಯಾಕಾಶದಲ್ಲಿ ಏನಿದೆ ?' ಎಂದು ಪ್ರಶ್ನಿಸಿದಾಗ. 'ಹೃದಯಾಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳು ಇರುತ್ತವೆ' ಎಂದು ಉತ್ತರಿಸುವುದೇ ಅತ್ಯಂತ ಸಮಂಜಸವಾಗುತ್ತದೆ. ಅದನ್ನು ಬಿಟ್ಟು ಹೃದಯಾಕಾಶದಲ್ಲಿ ಬ್ರಹ್ಮನಿದ್ದಾನೆ. ಅವನಲ್ಲಿ ಎಲ್ಲವೂ ಇದೆ ಎಂಬ ಉತ್ತರವು ಅಸಂಗತವಾಗುತ್ತದೆ. ಮತ್ತು 'ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂದು ಸುಷಿರದಲ್ಲಿಯೇ ದ್ಯಾವಾಪೃಥಿವ್ಯಾದಿಗಳೆಲ್ಲವೂ ಇರುತ್ತವೆಂದು ಸಮಾಖ್ಯಾ-ರೂಪವಾದ ನಾರಾಯಣೋಪನಿಷತ್ತು ಹೇಳುತ್ತಿದೆ. ಅದರ ವಿರೋಧವೂ ಕೂಡ ಬರುತ್ತಿದೆ. ಹೀಗೆ ಅನನ್ವಯ ಮತ್ತು ಸಮಾಖ್ಯಾಶ್ರುತಿ ವಿರೋಧ ಈ ಎರಡೂ ದೋಷಗಳು ಬರುವ ಪ್ರಯುಕ್ತ, 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ' ಶಬ್ದವು ಬ್ರಹ್ಮಪರವಾಗುತ್ತದೆಂದು ಹೇಳಲು ಸಾಧ್ಯವಿಲ್ಲ.

ಆದ್ದರಿಂದ ಭೂತಾಕಾಶವೇ ಹೃತ್ಪದ್ಮಸ್ಥವಾಗಿದೆಯೆಂದು ಹೇಳಬೇಕು. ಶ್ರುತಿಯಲ್ಲಿರುವ ಅಪಹತಪಾಪ್ಮತ್ವ ಸತ್ಯಕಾಮತ್ವ ಮೊದಲಾದ ಲಿಂಗಗಳ ವಿರೋಧವೂ ಕೂಡ ಬರುವುದಿಲ್ಲ. ಅಚೇತನವಾದ ಆಕಾಶದಲ್ಲಿ ಚೇತನನಿಷ್ಠವಾದ ಪಾಪಾದಿಗಳ ಅತ್ಯಂತಾಭಾವ ಇದೆ. ಆದ್ದರಿಂದ ಅಪಹತಪಾಪ್ಮತ್ವವನ್ನು ಶ್ರುತಿಯು ಹೇಳುತ್ತಿದೆ. ಇದರಂತೆ ಕಾಮ ಸಾಮಾನ್ಯವೇ ಜಡವಾದ ಪದಾರ್ಥದಲ್ಲಿ ಹುಟ್ಟಲು ಸಾಧ್ಯವಿಲ್ಲವಾದ್ದರಿಂದ ಪ್ರತಿಹತ ಕಾಮಾದಿಗಳನ್ನು ಹೇಳಲಾಗದು. ಈ ದೃಷ್ಟಿಯಿಂದ ಸತ್ಯಕಾಮತ್ವಾದಿಗಳನ್ನು ಉಪಪಾದಿಸಬೇಕು. ಆದ್ದರಿಂದ ಭೂತಾಕಾಶವು ಹೃತ್ಪದ್ಮಸ್ಥವಾಗಿದೆಯೆಂದು ಹೇಳಿದರೆ ಯಾವುದೇ ಬಾಧಕಗಳಿಲ್ಲ.

• • • • •

## ಹೃತ್ಪದ್ಮಸ್ಥನಾದವನು ಜೀವನೆಂದು ಪೂರ್ವಪಕ್ಷ

## तात्पर्यचन्द्रिका

जीवो वाऽस्तु । ''एष सम्प्रसादोऽस्माच्छरीरात्समुत्थाय परं ज्योतिरुपसम्पद्य स्वेन रूपेणाभिनिष्पद्यत एष आत्मा'' इत्युत्तरत्रैतच्छब्देन प्रकृतं जीवमनूद्य तस्यात्मशब्देन ''य आत्माऽपहतपाप्मा विजरो विमृत्युः'' इत्यादिनोक्त-हृत्पद्मस्थात्मत्वविधानात् ।

ಪರಿಪೂರ್ಣಚಂದ್ರಿಕಾ

ಅನುವಾದ - ಅಥವಾ ಹೃತ್ಪದ್ಮಸ್ಥನಾದವನು ಜೀವನೇ ಆಗಿದ್ದಾನೆಂದು ಹೇಳಬಹುದು. ಏಕೆಂದರೆ 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮಾ' ಎಂಬುದಾಗಿ ಮುಂದಿನ ಶ್ರುತಿವಾಕ್ಯದಲ್ಲಿರುವ 'ಏತತ್' ಶಬ್ದದಿಂದ ಪ್ರಕೃತನಾದ ಜೀವನನ್ನೇ ಅನುವಾದ ಮಾಡಲಾಗಿದೆ. ಅಂತಹ ಜೀವನಿಗೆ ಆತ್ಮಶಬ್ದದಿಂದ 'ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುಃ' ಇತ್ಯಾದಿಯಾಗಿ ಹೃತ್ಪದ್ಮಸ್ಥವಾದ ಆತ್ಮತ್ವವನ್ನು ವಿಧಾನ ಮಾಡಲಾಗಿದೆ.

**तत्र चैतच्छब्दस्य परज्योतिःपरत्वे नपुंसकलिङ्गता स्यात् ।**

ಜೀವನನ್ನು ಪರಾಮರ್ಶ ಮಾಡುವುದಾದರೆ, 'ಏಷಃ' ಎಂಬುದಾಗಿ ಪುಲ್ಲಿಂಗ ಪ್ರಯೋಗವೇ ಇರಬೇಕಿತ್ತಲ್ಲವೇ? 'ಏತತ್' ಎಂಬುದಾಗಿ ನಪುಂಸಕಲಿಂಗ ಪ್ರಯೋಗವು ಹೇಗೆ ಯುಕ್ತವಾಗುತ್ತದೆ ಎಂದು ಪ್ರಶ್ನಿಸಬಾರದು. ಇಲ್ಲಿರುವ 'ಏತತ್' ಶಬ್ದವು ಪರಜ್ಯೋತಿಯನ್ನು ಹೇಳುವುದರಿಂದ ನಪುಂಸಕಲಿಂಗವು ಯುಕ್ತವಾಗುತ್ತದೆಂದು ತಿಳಿಯಬೇಕು.

**अपहतपाप्मत्वादिकं तु मुक्तौ जीवेऽपि सम्भवात् 'अस्य सूत्रस्य शाटकं वय' 'यूपं तक्षति' इत्यादिवद्भाविभावाभिप्रायम् ।**

ಜೀವನನ್ನೇ ಹೃತ್ಪದ್ಮಸ್ಥನೆನ್ನುವುದಾದರೆ ಅಪಹತಪಾಪ್ಮತ್ವಾದಿಗಳನ್ನು ಹೇಗೆ ಕೂಡಿಸಬೇಕು ? ಎಂದರೆ, ಇದೇ ಜೀವನು ಮೋಕ್ಷವನ್ನು ಹೊಂದಿದ ಮೇಲೆ ಪಾಪವಿದೂರನಾಗುತ್ತಾನೆ. ಮುಂದೆ ಹೊಂದುವಂತಹ ಅಪಹತಪಾಪ್ಮತ್ವಾದಿಗಳನ್ನು ಸಂಸಾರದೆಶೆಯಲ್ಲಿ ಪ್ರಯೋಗಿಸುವುದು ತಪ್ಪಾಗುವುದಿಲ್ಲ. ಏಕೆಂದರೆ 'ಅಸ್ಯ ಸೂತ್ರಸ್ಯ ಶಾಟಕಂ ವಯ' ಎಂಬ ಪ್ರಯೋಗವಿದೆ. ಅಂದರೆ 'ನೂಲುಗಳಿಂದ ಬಟ್ಟೆಯನ್ನು ಹೆಣೆಯಬೇಕು' ಎಂಬ ಪ್ರಯೋಗದಲ್ಲಿ ಶಾಟಕಶಬ್ದವಿದೆ. ಬಟ್ಟೆಯನ್ನು ಇನ್ನೂ ಹೆಣೆಯದೇ ಇರುವಾಗಲೂ ಕೂಡ ಮುಂದೆ ಹುಟ್ಟುವಂತಹ ಬಟ್ಟೆಯನ್ನು ವಿವಕ್ಷಿಸಿ ಮೊದಲೇ ಶಾಟಕಶಬ್ದವನ್ನು ಪ್ರಯೋಗಿಸುವುದು ಕಂಡಿದೆ. ಇದರಂತೆ 'ಯೂಪಂ ತಕ್ಷತಿ' ಎಂಬ ಪ್ರಯೋಗವು ಪೂರ್ವಮೀಮಾಂಸೆಯಲ್ಲಿ ಕಂಡಿದೆ. ತಕ್ಷಣವೆಲ್ಲಾ ಆದಮೇಲೆ ಯೂಪವು ಹುಟ್ಟುತ್ತದೆ. ಆದರೆ ಮೊದಲೇ ಯೂಪಶಬ್ದದ ಪ್ರಯೋಗವನ್ನು ನಾವು ಕಾಣುತ್ತೇವೆ. ಅದರಂತೆ ಮುಂದೆ ಮೋಕ್ಷಾವಸ್ಥೆಯಲ್ಲಿ ಹೊಂದುವಂತಹ ಅಪಹತಪಾಪ್ಮತ್ವಾದಿಗಳನ್ನು ವಿವಕ್ಷಿಸಿ, ಮೊದಲೇ ಆ ಧರ್ಮಗಳನ್ನು ಜೀವನಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

**अत एवास्मिन्नेव प्रकरण उत्तरत्र ''स यदि पितृलोककामो भवति सङ्कल्पादेवास्य पितरः समुत्तिष्ठन्ते । अत्र ह्येते सत्याः कामाः'' इत्यादिना मुक्तानां सत्यकामत्वाद्युक्तिः ।**

ಆದ್ದರಿಂದಲೇ ಇದೇ ಪ್ರಕರಣದಲ್ಲಿ ಮುಂದೆ 'ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವ ಅಸ್ಯ ಪಿತರಃ ಸಮುತ್ತಿಷ್ಠಂತೇ । ಅತ್ರ ಹ್ಯೇತೇ ಸತ್ಯಾಃ ಕಾಮಾಃ' ಇತ್ಯಾದಿ ವಾಕ್ಯದಿಂದ ಮುಕ್ತರಲ್ಲಿರುವ ಸತ್ಯಕಾಮತ್ವಾದಿಗಳನ್ನು ವರ್ಣಿಸಲಾಗಿದೆ.

**यावान्वा इत्यादिवाक्यानन्वयस्तु ब्रह्मपक्षेऽपि सम इति ।**

ಜೀವಪಕ್ಷದಲ್ಲಿ 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿರುವ ಆಕಾಶ ಶಬ್ದದಿಂದ ಅನನ್ವಯ ದೋಷ ಬರುತ್ತದಲ್ಲವೇ? ಎಂದರೆ ಈ ದೋಷ ಬ್ರಹ್ಮಪಕ್ಷದಲ್ಲೂ ಕೂಡ ಸಮಾನವಾದ್ದರಿಂದ ದೋಷವೆನಿಸುವುದಿಲ್ಲ. ಯಾವ ದೋಷವು ಎರಡು ಪಕ್ಷದಲ್ಲಿಯೂ ಸಮಾನವಾಗಿರುತ್ತದೋ, ಅದನ್ನು ದೋಷವೆಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ.

**प्रकाशः –**

**एवमाकाशपूर्वपक्षटीकां प्रपञ्च्य ''इतरपरामर्शात्स इति चेत्'' इति सूत्रपूर्वपक्षोक्तिपरां ''जीवस्य वैतद्भवेत्'' इत्यादिटीकां व्यनक्ति – जीवो वास्त्विति ॥**

ವಿವರಣೆ - ಇಲ್ಲಿಯ ತನಕ ಭೂತಾಕಾಶವೇ ಹೃತ್ಪದ್ಮಸ್ಥವಾಗಿದೆಯೆಂಬ ಪೂರ್ವಪಕ್ಷವನ್ನು ಸಮರ್ಥಿಸಿದರು, ಈಗ ಜೀವನೇ ಹೃತ್ಪದ್ಮಸ್ಥನಾಗಿದ್ದಾನೆಂಬ ಎರಡನೇ ಪೂರ್ವಪಕ್ಷವನ್ನು ಸಮರ್ಥಿಸಲು ಹೊರಟಿದ್ದಾರೆ. ಪೂರ್ವಪಕ್ಷ ಟೀಕೆಯಲ್ಲಿರುವುದನ್ನೇ ವಿವರಿಸುತ್ತಾ 'ಇತರಪರಾಮರ್ಶಾತ್ಸ ಇತಿ ಚೇತ್' ಎಂಬ ಸೂತ್ರದ ಪೂರ್ವಪಕ್ಷಕ್ಕೆ ವಿವರಣೆಯನ್ನು ಮಾಡುತ್ತಾ 'ಜೀವಸ್ಯ ವೈತದ್ಭವೇತ್' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸುವವರಾಗಿ 'ಜೀವೋವಾ ಅಸ್ತು' ಇತ್ಯಾದಿ ಗ್ರಂಥವು ಹೊರಟಿರುತ್ತದೆ.[1]

**प्रकाशः – हृत्पद्मस्थ इत्यनुषङ्गः । तस्यात्मत्वविधानेऽपि हृत्पद्मस्थत्वं कुत इत्यत आह – य आत्मेति ॥ तस्य प्रकृतहृत्पद्मस्थविषयत्वादिति भावः ॥**

'ಜೀವೋವಾ ಅಸ್ತು' ಎಂಬುದರ ಅನಂತರ 'ಹೃತ್ಪದ್ಮಸ್ಥಃ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. ಜೀವನಲ್ಲಿ ಆತ್ಮತ್ವವನ್ನು ವಿಧಾನ ಮಾಡಿದ ಮಾತ್ರದಿಂದ ಹೃತ್ಪದ್ಮಸ್ಥತ್ವವನ್ನು ಹೇಗೆ ಹೇಳಲು ಸಾಧ್ಯ ? ಎಂಬ ಪ್ರಶ್ನೆಗೆ 'ಯ ಆತ್ಮಾ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ 'ಯ ಆತ್ಮಾ' ಇತ್ಯಾದಿ ವಾಕ್ಯದಿಂದ ಹೃತ್ಪದ್ಮಸ್ಥನಿಗೆ ಆತ್ಮತ್ವವನ್ನು ಹಿಂದೆ ಹೇಳಲಾಗಿತ್ತು ಎಂದರ್ಥ. 'ಯ ಆತ್ಮಾ' ಎಂಬ ವಾಕ್ಯವು ಪ್ರಕೃತವಾದ ಹೃತ್ಪದ್ಮಸ್ಥನ ಬಗ್ಗೆ ಹೇಳಲು ಹೊರಟಿದೆ ಎಂದಭಿಪ್ರಾಯ.

(೧) ಇಲ್ಲಿಯ ತನಕ ಭೂತಾಕಾಶವೇ ಹೃತ್ಪದ್ಮಸ್ಥವಾಗಿದೆಯೆಂಬ ಪೂರ್ವಪಕ್ಷ ಟೀಕೆಯನ್ನು ವಿವರಿಸಿದ್ದಾಯಿತು. ಈಗ 'ಇತರಪರಾಮರ್ಶಾತ್ಸ ಇತಿ ಚೇತ್' ಎಂಬ ಸೂತ್ರದಲ್ಲಿರುವ ಪೂರ್ವಪಕ್ಷವನ್ನು ಸಮರ್ಥಿಸುವ 'ಜೀವಸ್ಯ ವೈತದ್ಭವೇತ್' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ. 'ಜೀವೋವಾ ಅಸ್ತು' ಇತ್ಯಾದಿ ಗ್ರಂಥದಿಂದ

ಪರಿಪೂರ್ಣಚಂದ್ರಿಕಾ

**प्रकाशः – विधानादिति ।।** एतेन टीकादौ ''परामर्शात्'' इत्यस्य परामृश्यात्मत्वविधानादित्यर्थ उक्तो भवति ।

ಹೀಗೆ ಆತ್ಮತ್ವವನ್ನು ವಿಧಾನ ಮಾಡಿದ್ದಾರೆಂದು ಹೇಳಿದ್ದರಿಂದ ಟೀಕೆಯಲ್ಲಿರುವ 'ಪರಾಮರ್ಶಾತ್' ಎಂಬ ಶಬ್ದಕ್ಕೆ 'ಪರಾಮೃಶ್ಯಾತ್ಮತ್ವವಿಧಾನಾತ್' ಎಂಬ ಅರ್ಥವನ್ನು ಹೇಳಿದಂತಾಗುತ್ತದೆ. ಅಂದರೆ ಕೇವಲ ಜೀವನನ್ನು ಪರಾಮರ್ಶ ಮಾಡುವುದಷ್ಟೇ ಅಲ್ಲ. ಪರಾಮರ್ಶ ಮಾಡಿ ಅವನಲ್ಲಿ ಆತ್ಮತ್ವವನ್ನು ವಿಧಾನ ಮಾಡಿದ್ದರಿಂದ ಹೃತ್ಪದ್ಮಸ್ಥತ್ವವನ್ನು ಜೀವನಿಗೆ ಹೇಳಿದಂತಾಗುತ್ತದೆ.

**प्रकाशः –** ननु 'तत्रैषः' इत्यस्य ज्योतिश्शब्दनिर्दिष्टविष्णुपरत्वमस्त्वित्यत आह – **तत्र चेति ।। नपुंसकेति ।।** उपलक्षणमेतत् । 'सम्पद्यते' इत्यत्र कर्तृत्वेन सन्निहितजीवपरित्यागायोगादित्यपि ध्येयम् ।

'ತತ್ರೈಷಃ' ಎಂಬ ಶ್ರುತಿಯಲ್ಲಿರುವ 'ಏತತ್' ಶಬ್ದದಿಂದ 'ಜ್ಯೋತಿ' ಎಂಬ ಶಬ್ದದಿಂದ ನಿರ್ದಿಷ್ಟನಾದ ವಿಷ್ಣುವನ್ನೇ ಪರಾಮರ್ಶಿಸಬಹುದಲ್ಲವೇ ? ಎಂಬ ಪ್ರಶ್ನೆಗೆ 'ತತ್ರ ಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ನಪುಂಸಕಲಿಂಗವಾಗಬೇಕಾದೀತು ಎಂದು ಗ್ರಂಥದಲ್ಲಿ ಹೇಳಿದ್ದು ಕೇವಲ ಉಪಲಕ್ಷಣವಾಗಿದೆ. 'ಸಂಪದ್ಯತೇ' ಎಂಬಲ್ಲಿ ಕರ್ತೃತ್ವೇನ ಸನ್ನಿಹಿತನಾದ ಜೀವನ ಪರಿತ್ಯಾಗವೂ ಕೂಡ ಕೂಡುವುದಿಲ್ಲವೆಂದು ವಿವಕ್ಷಿಸಬೇಕು.

**प्रकाशः –** लिङ्गविरोधमाशङ्क्य ''उत्तराचेत्'' इति सौत्राक्षेपाभिप्रायमाह – **अपहतेति ।। अस्य सूत्रस्येति ।।** सूत्रतादशायां शाटकभावाभावादिति भावः ।

ಲಿಂಗವಿರೋಧವನ್ನು ಆಂಶಕಿಸಿ 'ಉತ್ತಾರಾಚ್ಚೇತ್' ಎಂಬ ಸೂತ್ರದ ಆಕ್ಷೇಪಾಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ - 'ಅಪಹತ' ಇತ್ಯಾದಿ ವಾಕ್ಯದಿಂದ. 'ಅಸ್ಯಸೂತ್ರಸ್ಯ' ಎಂದರೆ 'ತಂತು ಇರುವ ಕಾಲದಲ್ಲಿ ಬಟ್ಟೆಯು ಇನ್ನೂ ಹುಟ್ಟಿರುವುದಿಲ್ಲ' ಎಂದಭಿಪ್ರಾಯ.

**प्रकाशः –** सूत्रस्य शाटकं वयेत्येतद्यथोभे सूत्रे शाटकं भवति तथा कुर्विति भावेन प्रयुज्यते । यथाच तक्षणे कृते यूपो भवति तथा कुर्विति भावेन प्रयुज्यते तद्वदिति भावः ।

'ಸೂತ್ರಸ್ಯ ಶಾಟಕಂ ವಯ' ಎಂದರೆ ಯಾವರೀತಿಯಾಗಿ ಎರಡು ತಂತುವಿನಿಂದ ಬಟ್ಟೆಯು ಹುಟ್ಟುತ್ತದೋ ಆ ರೀತಿಯಾಗಿ ತಂತುಗಳನ್ನು ಹೆಣೆಯಬೇಕು ಎಂಬ ಅಭಿಪ್ರಾಯದಿಂದ ಸೂತ್ರಸ್ಯ ಶಾಟಕಂ ವಯ' ಎಂದು ಪ್ರಯೋಗಿಸಲಾಗುತ್ತದೆ. ಅದೇ ರೀತಿಯಾಗಿ 'ಯಾವ ಪ್ರಕಾರದಲ್ಲಿ ಚೆನ್ನಾಗಿ ಕೆತ್ತನೆ ಮಾಡಿದರೆ ಯೂಪದ ನಿರ್ಮಾಣವಾಗುತ್ತದೋ, ಆ ರೀತಿಯಲ್ಲಿ ಕೆತ್ತನೆಯನ್ನು ಮಾಡು' ಎಂಬ ಅಭಿಪ್ರಾಯದಿಂದ 'ಯೂಪಂ ತಕ್ಷತಿ' ಎಂಬ ಪ್ರಯೋಗವಿರುತ್ತದೆಂದು ತಿಳಿಯಬೇಕು.

**प्रकाशः** – विवृतश्चायं दृष्टान्तो महाभाष्ये ''इग्यणस्सम्प्रसारणम्'' इत्यत्र । यदि शाटको न वातव्यः अथ वातव्यो न शाटकः शाटको वातव्यश्चेति विप्रतिषिद्धम् । भाविनी खल्वस्य सञ्ज्ञाऽभिप्रेता । सः मन्ये वातव्यो यस्मिन्नुते शाटक इत्येतद् भवतीति । एवमिहापि स यणः स्थाने भवति । यस्याभिनिर्वृत्तस्य सम्प्रसारणमित्येषा सञ्ज्ञा भविष्यति'' इति ।

ಈ ದೃಷ್ಟಾಂತವನ್ನು ಮಹಾಭಾಷ್ಯದಲ್ಲಿ 'ಇಗ್ಯಣಃಸಂಪ್ರಸಾರಣಮ್ ಇತ್ಯತ್ರ । ಯದಿ ಶಾಟಕೋ ನ ವಾತವ್ಯಃ ಅಥ ವಾತವ್ಯೋ ನ ಶಾಟಕಃ ಶಾಟಕೋ ವಾತವ್ಯಶ್ಚೇತಿ ವಿಪ್ರತಿಷಿದ್ಧಮ್ । ಭಾವಿನೀ ಖಲ್ವಸ್ಯ ಸಂಜ್ಞಾಽಭಿಪ್ರೇತಾ । ಸ ಮನ್ಯೇ ವಾತವ್ಯೋ ಯಸ್ಮಿನ್ನುತೇ ಶಾಟಕ ಇತ್ಯೇತದ್ ಭವತೀತಿ । ಏವಮಿಹಾಪಿ ಸ ಯಣಃ ಸ್ಥಾನೇ ಭವತಿ । ಯಸ್ಯಾಭಿನಿರ್ವೃತ್ತಸ್ಯ ಸಂಪ್ರಸಾರಣಮಿತ್ಯೇಷಾ ಸಂಜ್ಞಾ ಭವಿಷ್ಯತಿ' ಎಂದು ವಿವರಿಸಿರುತ್ತಾರೆ. ಒಂದು ವೇಳೆ ಬಟ್ಟೆಯು ಸಿದ್ಧವಾಗಿದ್ದಲ್ಲಿ, ಅದನ್ನು ಹೆಣೆಯುವ ಅವಶ್ಯಕತೆ ಇಲ್ಲ. ಒಂದು ವೇಳೆ ಹೆಣೆಯ ಬೇಕಾಗಿದ್ದಲ್ಲಿ, ಬಟ್ಟೆಯು ಸಿದ್ಧವಾಗಿರುವುದಿಲ್ಲ. ಹೀಗೆ ಬಟ್ಟೆಗೂ ಹೆಣೆಯುವುದಕ್ಕೂ ಪರಸ್ಪರ ವಿರೋಧವಿದೆ. ಆದ್ದರಿಂದ ಮುಂದೆ ಬರುವಂತಹ ಹೆಸರನ್ನು ಮೊದಲೇ ವಿವಕ್ಷಿಸಿ ಬಟ್ಟೆ (ಶಾಟಕ) ಎಂಬ ಪ್ರಯೋಗವನ್ನು ಮಾಡಲಾಗುತ್ತದೆಂದು ಹೇಳಬೇಕು. ಸಂಪೂರ್ಣವಾಗಿ ನೂಲುಗಳಿಂದ ಬಟ್ಟೆಯನ್ನು ಹೆಣೆದ ಮೇಲೆ 'ಶಾಟಕಃ' ಎಂಬ ಪ್ರಯೋಗವು ಸಾಧುವಾಗುತ್ತದೆ. (ಯಸ್ಮಿನ್ನುತೇ ಶಾಟಕಃ ಇತ್ಯೇತದ್ ಭವತಿ ಸಃ ವಾತವ್ಯಃ ಇತಿ ಮನ್ಯೇ' ಎಂದು ಅನ್ವಯ.)

ಇದರಂತೆ ಪ್ರಕೃತದಲ್ಲಿಯೂ ಕೂಡ 'ಇಕ್' ಅಕ್ಷರಗಳು 'ಯಣ್' ಅಕ್ಷರಗಳ ಸ್ಥಾನದಲ್ಲಿ ಬರುತ್ತದೆ. 'ಯಣ್' ಅಕ್ಷರಗಳಿಗೆ 'ಇಕ್' ಅಕ್ಷರಗಳು ಬಂದ ಮೇಲೆ ಸಂಪ್ರಸಾರಣ ಸಂಜ್ಞೆಯು ಪ್ರಾಪ್ತವಾಗುತ್ತದೆ. ಆದರೆ 'ಯಣ್' ಅಕ್ಷರಗಳಿಗೆ ಸಂಪ್ರಸಾರಣವಾದ 'ಇಕ್' ಅಕ್ಷರ ಬರುತ್ತದೆಂಬ ಪ್ರಯೋಗವು ಮುಂದೆ ಬರುವ ಸಂಜ್ಞೆಯನ್ನು ವಿವಕ್ಷಿಸಿ ಹೊರಟಿದೆ. ಅಂದರೆ 'ಯಣ್' ಅಕ್ಷರಗಳು ಹೋದ ಅನಂತರ ಈ 'ಇಕ್' ಅಕ್ಷರಗಳು ಬಂದು ಅದರ ಅನಂತರ ಸಂಪ್ರಸಾರಣ ಸಂಜ್ಞೆ ಬರಬೇಕು. ಆದರೆ ಮೊದಲೇ ಸಂಪ್ರಸಾರಣ ಬರುತ್ತದೆಂದು ಹೇಳುವಿಕೆಯು ಕೇವಲ ಮುಂದೆ ಬರುವ ಸಂಜ್ಞೆಯನ್ನು ವಿವಕ್ಷಿಸಿ ಎಂದು ತಿಳಿಯಬೇಕು.

**प्रकाशः** – तथा पूर्वतन्त्रे नवमाद्यपादे ''अग्नये जुष्टं निर्वपामि'' इत्यत्र जुष्टमित्येतद्भाविभावाभिप्रायेणेत्युक्तं 'गुणशब्दस्तथेति चेत्' इत्यत्र द्वादशेऽधिकरणे ।

ಇದರಂತೆ ಪೂರ್ವಮೀಮಾಂಸೆಯ ಒಂಭತ್ತನೇ ಅಧ್ಯಾಯದ ಪ್ರಥಮ ಪಾದದಲ್ಲಿ 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬಲ್ಲಿ 'ಜುಷ್ಟಂ' ಎಂಬುದನ್ನು ಭಾವಿಭಾವಾಭಿಪ್ರಾಯದಿಂದ ಪ್ರಯೋಗಿಸಲಾಗಿದೆ. 'ಜುಷಿ ಪ್ರೀತಿ ಸೇವನಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾದ ಕಾರಣ 'ಜುಷ್ಟ' ಶಬ್ದಕ್ಕೆ 'ಪ್ರೀತಿಸಾಧನ' ಎಂದರ್ಥ. ಪುರೋಡಾಶವನ್ನು ನಿರ್ವಾಪ ಮಾಡಿದ ಅನಂತರ ಅದು ಪ್ರೀತಿಸಾಧನವಾಗುತ್ತದೆ. ಅಗ್ನಿಗೆ ಆಹುತಿ ಕೊಟ್ಟ ಮೇಲೆ ಪ್ರೀತಿಸಾಧನವಾಗುವುದನ್ನು ಆಹುತಿ ಕೊಡುವುದಕ್ಕಿಂತ ಮೊದಲೇ ಪ್ರೀತಿಸಾಧನವಾದ ಪುರೋಡಾಶ ಎಂದು ಪ್ರಯೋಗಿಸಲಾಗಿದೆ. ಅಂದರೆ ಇಲ್ಲಿಯೂ ಮುಂದೆ ಬರುವ ಸಂಜ್ಞೆಯನ್ನು ಮೊದಲೇ ವಿವಕ್ಷಿಸಿ

ಪ್ರಯೋಗಿಸಲಾಗಿದೆಯೆಂದು ತಿಳಿಯಬೇಕು. ಈ ವಿಚಾರವು 'ಗುಣಶಬ್ದಸ್ತಥೇತಿ ಚೇತ್' ಎಂಬ ಹನ್ನೆರಡನೆಯ ಅಧಿಕರಣದಲ್ಲಿ ಪ್ರಸಕ್ತವಾಗಿದೆ.

**प्रकाशः** – तदेतदाह – इत्यादिवदिति ॥ मुक्तावपि सत्यकामत्वादिकम् अप्रसिद्धम् । तदा निश्शेषकामनिवृत्तेरित्यत आह – **अत एवेति** ॥ अपहतपाप्मत्वादेर्मुक्तविषयत्वादेवेत्यर्थः ।

'ಇತ್ಯಾದಿ ವತ್' ಎಂಬಲ್ಲಿರುವ ಆದಿಪದದಿಂದ ಈ ದೃಷ್ಟಾಂತವನ್ನು ತಿಳಿಸಿದ್ದಾರೆಂದು ಭಾವಿಸಬೇಕು. ಮುಕ್ತಿಯಲ್ಲೂ ಕೂಡ ಸತ್ಯಕಾಮತ್ವಾದಿಗಳು ಅಪ್ರಸಿದ್ಧವಾಗಿವೆ. ಏಕೆಂದರೆ ಸಕಲ ವಿಧವಾದ ಕಾಮನೆಗಳು ಮೋಕ್ಷಾವಸ್ಥೆಯಲ್ಲಿ ಇರುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಅತ ಏವ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಮುಂದಿನ ವಾಕ್ಯದಲ್ಲಿ ಪಿತೃಲೋಕಕಾಮನೆ ಮೊದಲಾದವುಗಳು ಮುಕ್ತನಿಗೆ ಹುಟ್ಟುತ್ತವೆಂದು ತಿಳಿಸಿದ್ದರಿಂದ ಸಕಲ ವಿಧವಾದ ಕಾಮನೆಗಳ ನಿವೃತ್ತಿಯನ್ನು ಒಪ್ಪಲು ಸಾಧ್ಯವಿಲ್ಲ. 'ಅತ ಏವ' ಎಂದರೆ ಅಪಹತಪಾಪ್ಮತ್ವ ಮುಂತಾದ್ದೆಲ್ಲವೂ ಮುಕ್ತವಿಷಯಕವಾದ್ದರಿಂದ ಎಂದರ್ಥ.

**प्रकाशः** – "स यदि पितृलोककामः" इत्यादेर्मुक्तविषयत्वं च "सङ्कल्पादेव च तच्छ्रुतेः" इत्यधिकरणसिद्धमिति तत्प्रकरणादस्यापहतपाप्मेत्यादेर्मुक्तविषयत्वमवश्यं वाच्यम् । अन्यथा "स यदि" इत्यादेरप्रकृतविषयत्वं स्यादिति भावः ।

'ಸ ಯದಿ ಪಿತೃಲೋಕಕಾಮಃ' ಇತ್ಯಾದಿ ವಾಕ್ಯವು ಮುಕ್ತವಿಷಯಕವಾಗಿದೆಯೆಂದು 'ಸಂಕಲ್ಪಾದೇವ ಚ ತಚ್ಛ್ರುತೇಃ' ಎಂಬ ಸೂತ್ರದಿಂದ ಸಿದ್ಧವಾಗಿದೆ. 'ಸ ಯದಿ' ಎಂಬ ವಾಕ್ಯವು ಪ್ರಸಕ್ತವಾಗುವ ಪ್ರಕರಣದಲ್ಲಿಯೇ 'ಅಪಹತಪಾಪ್ಮಾ' ಇತ್ಯಾದಿ ವಾಕ್ಯವೂ ಕೂಡ ಪ್ರಸಕ್ತವಾಗಿದೆ. ಆದ್ದರಿಂದ ಮುಕ್ತವಿಷಯಕವೆಂದು ಅವಶ್ಯವಾಗಿ ಒಪ್ಪಬೇಕು. ಇಲ್ಲದಿದ್ದರೆ 'ಸ ಯದಿ' ಇತ್ಯಾದಿ ವಾಕ್ಯಕ್ಕೆ ಅಪ್ರಕೃತವಾದ ವಿಷಯತ್ವವನ್ನು ಒಪ್ಪಿದಂತಾಗುತ್ತದೆ.

**प्रकाशः** – नन्वेवमप्यनन्वयदोषस्तदवस्थ इत्यतो "यश्चोभयोस्समो दोषः" इति न्यायेन नाहं पर्यनुयोज्य इति भावेनाह – **यावान्वा इति** ॥

ಜೀವಪಕ್ಷದಲ್ಲಿ ಅನನ್ವಯದೋಷವು ಬರುತ್ತದಲ್ಲವೇ ಎಂದರೆ 'ಯಶ್ಚೋಭಯೋಃ ಸಮೋ ದೋಷಃ' ಎಂಬ ನ್ಯಾಯದಂತೆ ಯಾವ ದೋಷವು ಇಬ್ಬರಿಗೂ ಸಮಾನವಾಗಿದೆಯೋ, ಅದು ದೋಷವೇ ಅಲ್ಲ ಎಂದು ತಿಳಿಯುವುದರಿಂದ ಕೇವಲ ಪೂರ್ವಪಕ್ಷಕಾರರಿಗಷ್ಟೇ ದೋಷವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಯಾವಾನ್ವಾ' ಇತ್ಯಾದಿ ವಾಕ್ಯದಿಂದ ಅಸಾಂಗತ್ಯದೋಷವನ್ನು ಪರಿಗಣಿಸಬಾರದೆಂದು 'ಯಾವಾನ್ವಾ' ಇತ್ಯಾದಿ ಗ್ರಂಥದಿಂದ ತಿಳಿಸಿದ್ದಾರೆ.

**गुरुराजीयम्** – जीवस्य वै तद्वेदिति टीका । तत्र जीवस्य पूर्वमप्रकृतत्वेनैतच्छब्देन तत्परामर्शानुपपत्तिः । अस्तु वा प्रकृतत्वम् । तथापि

**परंज्योतिश्शब्देन ब्रह्मणोऽपि प्रकृतत्वादेतच्छब्देन तत्परामर्शः किं न स्यादित्यतो व्याख्याति – अत एवेति ।। भाविभावाभिप्रायेण जीवेऽप्यपहतपाप्मत्वादेः सम्भवादेवेत्यर्थः ।**



ಅಥವಾ ಜೀವನೇ ಹೃತ್ಪದ್ಮಸ್ಥನೆಂದು ಹೇಳಬಹುದು. 'ಏಷ ಸಂಪ್ರಸಾದಃ' ಇತ್ಯಾದಿ ಶ್ರುತಿಯು ಜೀವನ ಬಗ್ಗೆ ಹೇಳುತ್ತಿದೆ. ಪ್ರಸಕ್ತನಾದ ಇಂತಹ ಜೀವನಲ್ಲಿಯೇ ಹೃತ್ಪದ್ಮಸ್ಥತ್ವವನ್ನು ಹೇಳುವುದು ಸಂಗತವಾಗುತ್ತದೆ. ಅಪಹತಪಾಪ್ಮತ್ವಾದಿಗಳನ್ನು ಮೋಕ್ಷವನ್ನು ಹೊಂದಿದ ಮೇಲೆ ಪಡೆಯುತ್ತಾನಾದ್ದರಿಂದ ಈ ಅಭಿಪ್ರಾಯದಿಂದ ಮೊದಲೇ ಜೀವನನ್ನು ಅಪಹತಪಾಪ್ಮನೆಂದು ಶ್ರುತಿಯು ಕರೆದಿದೆ. ಆದ್ದರಿಂದ ಜೀವನನ್ನು ಹೃತ್ಪದ್ಮಸ್ಥನೆಂದು ಹೇಳಿದರೆ ಯಾವ ತೊಂದರೆಯು ಬರುವುದಿಲ್ಲ.





## ಹೃದಯಾಕಾಶದಲ್ಲಿರುವವನು ಮಹಾವಿಷ್ಣುವೇ

## तात्पर्यचन्द्रिका

**सिद्धान्तस्तु ।। हृत्पद्मस्थत्वं विष्णोरेव । अपहतपाप्मत्वादिलिङ्गात् ।**

ಅನುವಾದ - ಸಿದ್ಧಾಂತ ಹೀಗಿದೆ - ಹೃತ್ಪದ್ಮಸ್ಥನಾದವನು ಮಹಾವಿಷ್ಣುವೇ ಆಗಿದ್ದಾನೆ. ಮುಂದಿನ ಶ್ರುತಿವಾಕ್ಯದಲ್ಲಿ ಅಪಹತಪಾಪ್ಮತ್ವ ಮೊದಲಾದ ಲಿಂಗಗಳು ಶ್ರುತವಾದ್ದರಿಂದ. (ದಹರೇ = ಹೃದಯಪದ್ಮದಲ್ಲಿರುವ ದಹರಾಕಾಶದಲ್ಲಿ ಇರುವವನು ಮಹಾವಿಷ್ಣುವೇ ಆಗಿದ್ದಾನೆ. ಉತ್ತರೇಭ್ಯಃ = ಮುಂದಿನ ಶ್ರುತಿವಾಕ್ಯದಲ್ಲಿರುವ ಅಪಹತಪಾಪ್ಮತ್ವಾದಿ ಲಿಂಗಗಳಿರುವುದರಿಂದ.)

**तच्च न हृत्पद्मस्थदहराकाशतया । येनोक्तदोषाः (षः) । किन्तु हृत्पद्मस्थ-दहराकाशगततया ।**

ಹಿಂದೆ ಎರಡು ಬಗೆಯಲ್ಲಿ ವಿಕಲ್ಪ ಮಾಡಿದ್ದರೂ, ಅವುಗಳಲ್ಲಿ ಹೃದಯಪದ್ಮದಲ್ಲಿರುವ ದಹರಾಕಾಶವನ್ನೇ ವಿಷ್ಣುವೆಂಬ ಮೊದಲನೆಯ ಪಕ್ಷವನ್ನು ಒಪ್ಪುವುದಿಲ್ಲ. ಹಾಗೇ ಒಪ್ಪಿದಲ್ಲಿ ಪ್ರಥಮ ಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳಿಗೆ ಅವಕಾಶವಿರುತ್ತಿತ್ತು; ಹೊರತಾಗಿ ಹೃದಯಪದ್ಮದಲ್ಲಿರುವ ದಹರಾಕಾಶದಲ್ಲಿರುವವನು ಮಹಾವಿಷ್ಣುವೆಂದು ಹೇಳುತ್ತೇವೆ. ಆದ್ದರಿಂದ ಎರಡನೆಯ ವಿಕಲ್ಪವನ್ನು ಸ್ವೀಕರಿಸಿದಂತಾಯಿತು.

**नच गगनेऽपहतपाप्मत्वाद्युक्तिर्युक्ता । तत्र पाप्माद्यप्रसक्तेः । न चेश्वरेऽपि तदप्रसक्तिः ।**

ಜಡವಾದ ಆಕಾಶದಲ್ಲಿಯೂ ಅಪಹತಪಾಪ್ಮತ್ವಾದಿಗಳನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪಾಪ ಮೊದಲಾದವುಗಳಿಗೆ ಜಡವಾದ ಆಕಾಶದಲ್ಲಿ ಪ್ರಸಕ್ತಿಯೇ ಇರುವುದಿಲ್ಲ. ಹಾಗಾದರೆ ಈಶ್ವರನಲ್ಲಿಯೂ ಕೂಡ ಪಾಪಗಳಿಗೆ ಪ್ರಸಕ್ತಿಯನ್ನು ಹೇಳಲು ಹೇಗೆ ಸಾಧ್ಯ ? ಎಂದರೆ ಪ್ರಸಕ್ತಿಯೆಂದರೇನು? ಎಂಬುದನ್ನು ಮೊದಲು ತಿಳಿಯಬೇಕು.

**सजातीये दर्शनं हि प्रतिषेधे प्रयोजकम् ।**
**चेतने चैव पाप्मादिमत्ता दृष्टा जडे तु न ।। १ ।।**

ಸಜಾತೀಯೇ ದರ್ಶನಂ ಹಿ ಪ್ರತಿಷೇಧೇ ಪ್ರಯೋಜಕಮ್ ।
ಚೇತನೇ ಚೈವ ಪಾಪ್ಮಾದಿಮತ್ತಾ ದೃಷ್ಟಾ ಜಡೇ ತು ನ ॥ ೧ ॥

ಪ್ರತಿಷೇಧ ಮಾಡುವುದಕ್ಕೆ ಯಾವುದು ಪ್ರಯೋಜಕವಾಗಿದೆಯೋ, ಅದು ಪ್ರಸಕ್ತಿ ಎನಿಸುತ್ತಿದೆ. ಇಂತಹ ಪ್ರಸಕ್ತಿಯು ಸಜಾತಿಯವಾದ ಪದಾರ್ಥಗಳಲ್ಲಿ ಕಂಡಿದೆ. ವಿಜಾತೀಯವಾದದ್ದರಲ್ಲಿ ಕಂಡಿಲ್ಲ. ಅಂದರೆ ಚೇತನತ್ವೇನ ಸಜಾತೀಯರಾದ ಜೀವಾದಿಗಳಲ್ಲಿ ಪಾಪಾದಿಗಳಿರುವುದು ಕಂಡಿದೆ. ಅಂತಹ ಪಾಪಾದಿಗಳಿಗೆ ಚೇತನನೇ ಆದ ಈಶ್ವರನಲ್ಲಿ ಪ್ರಸಕ್ತಿಯಿದ್ದಾಗ, ಅದನ್ನು ನಿಷೇಧ ಮಾಡಲಾಗುತ್ತದೆ. ಆದರೆ ಜಡವಾದ ಭೂತಾಕಾಶದಲ್ಲಿ ಸಾಂಗತ್ಯವಿಲ್ಲದ ಕಾರಣ ಪಾಪಾದಿಗಳಿಗೆ ಪ್ರಸಕ್ತಿಯಿರಲು ಸಾಧ್ಯವಿಲ್ಲ.

**जीवस्य तु न संसारदशायामपहतपाप्मत्वादिकम् । मुक्तिदशायां तु देहाभावान्न हृत्पद्मस्थत्वम् ।**

ಜೀವನನ್ನು ಹೃತ್ಪದ್ಮಸ್ಥನೆಂದು ವಿವಕ್ಷಿಸಿದರೆ ಸಂಸಾರದಶೆಯಲ್ಲಿ ಅಪಹತಪಾಪ್ಮತ್ವಾದಿಗಳನ್ನು ಕೂಡಿಸಲು ಬರುವುದಿಲ್ಲ. ಮುಕ್ತನಾದ ಜೀವನನ್ನು ವಿವಕ್ಷಿಸಿದರೆ ಮೋಕ್ಷದಶೆಯಲ್ಲಿ ದೇಹವೇ ಇಲ್ಲದ ಕಾರಣ ಹೃತ್ಪದ್ಮಸ್ಥತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಏಕಂ ಸಂದಿಹಾನಃ ಅಪರಮ್ ಪ್ರಚ್ಯವತೇ' ಎಂಬ ನ್ಯಾಯದಂತೆ ಅಪಹತಪಾಪ್ಮತ್ವ ಮತ್ತು ಹೃತ್ಪದ್ಮಸ್ಥತ್ವ ಎರಡನ್ನೂ ಒಟ್ಟಿಗೆ ಕೂಡಿಸಲು ಜೀವಪಕ್ಷದಲ್ಲಿ ಸಾಧ್ಯವಿಲ್ಲ.

**किञ्च अपहतपाप्मत्वादिकं भाष्योक्तश्रुत्यादिभिरीशस्य निरपेक्षम् । जीवस्य तु ईशदत्तत्वात्सापेक्षम् ।**

ಮತ್ತು ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಅನೇಕ ಶ್ರುತಿಗಳ ಆಧಾರದಿಂದ ಅಪಹತಪಾಪ್ಮತ್ವಾದಿಗಳು ಈಶ್ವರನಲ್ಲಿ ನಿರಪೇಕ್ಷವಾದ್ದರಿಂದ ಸ್ವತಂತ್ರವಾಗಿವೆ. ಜೀವನಲ್ಲಿ ಈಶನ ಅಧೀನವಾದ್ದರಿಂದ ಅಸ್ವತಂತ್ರವಾಗಿವೆಯೆಂದು ತಿಳಿಯುತ್ತದೆ. ಸಾಪೇಕ್ಷ ಹಾಗೂ ನಿರಪೇಕ್ಷಗಳ ನಡುವೆ ನಿರಪೇಕ್ಷವಾದದ್ದನ್ನೇ ಸ್ವೀಕರಿಸಬೇಕು.

**नच निरपेक्षसम्भवे सापेक्षं ग्राह्यम् । एतेन सत्यकामत्वादेरपि ब्रह्मलिङ्गता सिद्धा ।**

ನಿರಪೇಕ್ಷವಾದದ್ದನ್ನೇ ಸ್ವೀಕರಿಸಲು ಬರುವಾಗ ಸಾಪೇಕ್ಷವಾದದ್ದನ್ನು ಸ್ವೀಕರಿಸಬಾರದು. ಹೀಗೆ ಹೇಳಿದ್ದರಿಂದ ಸತ್ಯಕಾಮತ್ವಾದಿಗಳೂ ಕೂಡ ಬ್ರಹ್ಮಲಿಂಗಗಳೇ ಆಗಿವೆಯೆಂದು ಸಿದ್ಧವಾಯಿತು.

**एतेनैवाकाशेऽप्यभिमान्यभिप्रायमपहतपाप्मत्वादीत्यपि निरस्तम् ।**

ಹೀಗೆ ಹೇಳಿದ್ದರಿಂದಲೇ ಆಕಾಶವನ್ನು ಹೃತ್ಪದ್ಮಸ್ಥವೆಂದು ಹೇಳಿ ಆಕಾಶಕ್ಕೆ ಅಭಿಮಾನಿಯಾದ ದೇವತೆಗಳಲ್ಲಿ ಸತ್ಯಕಾಮತ್ವಾದಿಗಳನ್ನು ಕೂಡಿಸಬೇಕೆಂಬ ಪಕ್ಷವನ್ನು ನಿರಾಕರಿಸಿದಂತಾಯಿತು. ಅಭಿಮಾನಿ ಚೇತನರಲ್ಲಿಯೂ ಕೂಡ ಸ್ವತಂತ್ರವಾದ ಸತ್ಯಕಾಮತ್ವಾದಿ ಧರ್ಮಗಳು ಇರುವುದಿಲ್ಲ.

**प्रकाशः –**

**''दहरपद्मस्थो विष्णुरेव भवेत्'' इत्यादिटीकार्थमनूद्य व्यनक्ति – हृत्पद्मस्थत्वमिति ।।**

ವಿವರಣೆ - ಸಿದ್ಧಾಂತ ಸ್ಥಾಪನೆಯನ್ನು ಮಾಡುವುದಕ್ಕಾಗಿ 'ದಹರಪದ್ಮಸ್ಥೋ ವಿಷ್ಣುರೇವ ಭವೇತ್' ಇತ್ಯಾದಿ ಟೀಕಾ ಮಾತಿನ ಅಭಿಪ್ರಾಯವನ್ನು ಅನುವಾದ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ 'ಹೃತ್ಪದ್ಮಸ್ಥತ್ವಮ್' ಇತ್ಯಾದಿ ವಾಕ್ಯದಿಂದ.

**प्रकाशः – लिङ्गानां बहुत्वेन सूत्रादौ बहुवचननिर्देशेऽपि प्रत्येकं हेतुत्वं सूचयितुं लिङ्गादित्येकवचननिर्देशः ।**

ಲಿಂಗಗಳು ಅನೇಕವಾದ್ದರಿಂದ ಸೂತ್ರದಲ್ಲಿ 'ಉತ್ತರೇಭ್ಯಃ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿದ್ದಾರೆ. ಆದರೆ ಈ ಎಲ್ಲಾ ಲಿಂಗಗಳು ಪ್ರತ್ಯೇಕವಾಗಿ ಹೇತುಗಳಾಗುತ್ತವೆಂದು ತಿಳಿಸಲು ಗ್ರಂಥಕಾರರು 'ಲಿಂಗಾತ್' ಎಂದು ಏಕವಚನವನ್ನು ಪ್ರಯೋಗಿಸಿದ್ದಾರೆ.

**प्रकाशः** – एतच्च ''गतिशब्दाभ्यां तथाहि दृष्टं लिङ्गं च'' । ''धृतेश्च महिम्नोऽस्यास्मिन्नुपलब्धेः'' ''प्रसिद्धेश्च'' इति सौत्रसाधकानामुपलक्षणम् । **उक्तदोषाः** सुषिरश्रुतिविरोधादय इत्यर्थः ।

ಗ್ರಂಥದಲ್ಲಿ ಮೊದಲನೆಯ ಸೂತ್ರದ ಸಾಧಕಲಿಂಗವನ್ನಷ್ಟೇ ಸ್ವೀಕರಿಸಿದ್ದಾರೆ. ಆದರೆ 'ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ' 'ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ' 'ಪ್ರಸಿದ್ಧೇಶ್ಚ' ಇತ್ಯಾದಿ ಸೂತ್ರಗಳಲ್ಲಿರುವ ಸಾಧಕಲಿಂಗಗಳನ್ನೂ ಕೂಡ ಉಪಲಕ್ಷಣಯಾ ಸ್ವೀಕರಿಸಬೇಕು. 'ಉಕ್ತದೋಷಾಃ' ಸುಷಿರಶ್ರುತಿವಿರೋಧಾದಿ ದೋಷಗಳು ಎಂದರ್ಥ.

**प्रकाशः** – लिङ्गनिवकाशत्वोक्तिपरां ''नचाकाशस्यापि पापाद्यभावेन'' इत्यादिटीकां व्यनक्ति – **नच गगन इति ।। दर्शनं हीति ।। हिर्हेतौ ।** प्रसिद्धौ वा । नन्वस्त्विहापि सजातीये जडान्तरे पापदर्शनाद्गगने तन्निषेध इत्यत आह – **जडे तु नेति ।।**

ವಿಷ್ಣುವಿನಲ್ಲಿ ಲಿಂಗಗಳು ನಿರವಕಾಶವಾಗಿವೆಯೆಂಬುದಾಗಿ 'ನಚಾಕಾಶಸ್ಯಾಪಿ ಪಾಪಾದ್ಯಭಾವೇನ' ಇತ್ಯಾದಿ ಟೀಕಾಪಂಕ್ತಿಯು ಸಮರ್ಥಿಸುತ್ತಿದೆ. ಅದನ್ನೇ ಗ್ರಂಥಕಾರರು 'ನಚ ಗಗನೇ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸಿದ್ದಾರೆ. 'ದರ್ಶನಂ ಹಿ' ಎಂಬಲ್ಲಿರುವ 'ಹಿ' ಶಬ್ದವು ಹೇತ್ವರ್ಥದಲ್ಲಿದೆ. ಪ್ರಸಿದ್ಧಿಯೆಂಬರ್ಥವನ್ನೂ ಕೂಡ ಹೇಳಬಹುದು.

ಇಲ್ಲಿಯೂ ಕೂಡ ಸಜಾತಿಯವಾದ ಜಡಾಂತರದಲ್ಲಿ ಪಾಪವಿರುವುದು ಕಂಡಿದೆಯಲ್ಲವೇ! ಅದನ್ನೇ ಗಗನದಲ್ಲಿ ನಿಷೇಧ ಮಾಡಿದರೆ ಏನು ತಪ್ಪು? ಎಂಬ ಪ್ರಶ್ನೆಗೆ 'ಜಡೇ ತು ನ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – यदपि जीवे सावकाशमित्युक्तं तदपि नेति भावेन 'असम्भवात्' । 'उत्तराच्चेदाविर्भूतस्वरूपस्तु' इति सूत्रभाष्यटीकोक्तं व्यनक्ति – **जीवस्य त्विति ।।**

ಇಲ್ಲಿಯ ತನಕ ಆಕಾಶವೇ ಹೃತ್ಪದ್ಮಸ್ಥವಾಗಿದೆಯೆಂಬ ಪೂರ್ವಪಕ್ಷವನ್ನು ನಿರಾಕರಣೆ ಮಾಡಿ ಹೃತ್ ಪದ್ಮಸ್ಥತ್ವವು ಜೀವನಲ್ಲೇ ಬರುತ್ತದೆ. ಅಪಹತಪಾಪ್ಮತ್ವಾದಿ ಲಿಂಗಗಳೆಲ್ಲವೂ ಜೀವನಲ್ಲಿ ಸಾವಕಾಶವಾಗಿವೆ ಎಂಬ ಪೂರ್ವಪಕ್ಷವನ್ನು 'ಜೀವಸ್ಯತು' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. 'ಅಸಂಭವಾತ್' ಮತ್ತು 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಸೂತ್ರದಿಂದ ಹಾಗೂ ಅದರ ಭಾಷ್ಯ ಟೀಕೆಗಳಿಂದ ತಿಳಿಯುವ ಅಭಿಪ್ರಾಯವನ್ನೇ ಈ 'ಜೀವಸ್ಯ' ಎಂಬ ಗ್ರಂಥದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – ननूक्तं भाविभावाभिप्रायेण संसारिण्यपि युक्तमिति । तथाऽऽकाशोऽप्यभिमानिद्वारा युज्यत इति चेत्यतो भाष्यटीकोक्तरीत्याऽनवकाशत्वमाह – **किञ्चेति ।।**

ಸಂಸಾರಿಯಾದ ಜೀವನಲ್ಲೂ ಕೂಡ ಮೋಕ್ಷಾವಸ್ಥೆಯಲ್ಲಿ ಸತ್ಯಕಾಮತ್ವಾದಿಗಳು ಬರುವುದರಿಂದ ಅಪಹತಪಾಪ್ಮತ್ವಾದಿಗಳನ್ನು ಪ್ರಯೋಗಿಸಬಹುದು. ಅದರಂತೆ ಆಕಾಶದಲ್ಲಿಯೂ ಕೂಡ ಅಭಿಮಾನಿ-ಚೇತನರನ್ನು ವಿವಕ್ಷಿಸಿ ಸತ್ಯಕಾಮತ್ವಾದಿಗಳನ್ನು ಹೇಳಬಹುದಲ್ಲವೇ ಎಂಬ ಪ್ರಶ್ನೆಗೆ ಭಾಷ್ಯ ಮತ್ತು ಟೀಕೆಯಲ್ಲಿ ಹೇಳಿದ ಪ್ರಕಾರ ಹಾಗೇ ಹೇಳಲು ಅವಕಾಶ ಇಲ್ಲ ಎಂದು ಸಮರ್ಥಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः – श्रुत्यादिभिः** ''एष सर्वेभ्यः पाप्मभ्य उदितः'' इति ''सर्वे पाप्मानोऽतोऽनिवर्तन्ते'' इति ''न ह वै देवान् पापं गच्छति'' इत्यादि श्रुतिभिः,

नित्यतीर्णाशनायादिरेक एव हरिः स्वतः ।
अशनायादिकानन्ये तत्प्रसादात्तरन्ति हि ।।

सत्यकामः परो नास्ति तमृते विष्णुमव्ययम् ।
सत्यकामत्वमन्येषां भवेत्तत्काम्यकामिता ।।

इत्यादिस्मृतिभिरित्यर्थः ।।

'ಶ್ರುತ್ಯಾದಿಭಿಃ' ಎಂದರೆ ಶ್ರುತಿ ಮತ್ತು ಸ್ಮೃತಿಗಳಿಂದ ಎಂದರ್ಥ. 'ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ' ಎಂದು, 'ಸರ್ವೇ ಪಾಪ್ಮಾನೋಽತೋಽನಿವರ್ತಂತೇ' ಎಂದು, 'ನ ಹ ವೈ ದೇವಾನ್ ಪಾಪಂ ಗಚ್ಛತಿ' ಇವೇ ಮೊದಲಾದ ಶ್ರುತಿಗಳಿಂದ ಮತ್ತು

'ನಿತ್ಯತೀರ್ಣಾಶನಾಯಾದಿರೇಕ ಏವ ಹರಿಃ ಸ್ವತಃ ।
ಅಶನಾಯಾದಿಕಾನ್ಯೇ ತತ್ಪ್ರಸಾದಾತ್ತರಂತಿ ಹಿ ।
ಸತ್ಯಕಾಮಃ ಪರೋ ನಾಸ್ತಿ ತಮೃತೇ ವಿಷ್ಣುಮವ್ಯಯಮ್ ।
ಸತ್ಯಕಾಮತ್ವಮನ್ಯೇಷಾಂ ಭವೇತ್ತತ್ಕಾಮ್ಯಕಾಮಿತಾ ।।'

ಇವೇ ಮೊದಲಾದ ಸ್ಮೃತಿಗಳಿಂದಲೂ ಕೂಡ ಸತ್ಯಕಾಮತ್ವಾದಿ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಸ್ವತಂತ್ರವಾಗಿರುತ್ತದೆಂದು ಸ್ಪಷ್ಟವಾಗಿ ತಿಳಿಯುತ್ತದೆ.

**प्रकाशः – जीवस्य त्विति ।।** एतेन ''आविर्भूतस्वरूपस्तु'' इति सौत्रखण्डस्य तात्पर्यमुक्तं भवति । **नच निरपेक्षेति ।।** ''यस्य पर्णमयी जुहूर्भवति'' इति श्रुतजुहूवदिति भावः ।

'ಜೀವಸ್ಯ ತು' = 'ಆದರೆ ಜೀವನಲ್ಲಿ ಸತ್ಯಕಾಮತ್ವಾದಿಗಳು ವಿಷ್ಣುವಿನ ಅಧೀನವಾಗಿರುತ್ತವೆ'. ಹೀಗೆ ಹೇಳಿದ್ದರಿಂದ 'ಆವಿರ್ಭೂತಸ್ವರೂಪಸ್ತು' ಎಂಬ ಸೂತ್ರ ಭಾಗದ ತಾತ್ಪರ್ಯವನ್ನು ಹೇಳಿದಂತಾಯಿತು. 'ನಚ ನಿರಪೇಕ್ಷ' ಎಂಬ ವಾಕ್ಯದಿಂದ ನಿರಪೇಕ್ಷಿತವಾದದ್ದನ್ನೇ ಮುಖ್ಯವಾಗಿ ಸ್ವೀಕರಿಸಬೇಕೆಂದು ಹೇಳಿದ್ದಾರೆ. 'ಯಸ್ಯ ಪರ್ಣಮಯೀ ಜುಹೂರ್ಭವತಿ' ಎಂಬುದಾಗಿ ಪೂರ್ವಮೀಮಾಂಸೆಯಲ್ಲಿ ಇದರ ಬಗ್ಗೆ ವಿಚಾರ ಮಾಡಿ,

ನಿರಪೇಕ್ಷಿತವಾದ ಜುಹೂವನ್ನೇ ಸ್ವೀಕರಿಸಬೇಕೆಂದು ನಿರ್ಣಯಿಸಿದ್ದಾರೆ. (ಈ ಅಧಿಕರಣವು ಅಕ್ಷರಾಧಿಕರಣದಲ್ಲಿ ಬಂದಿರುತ್ತದೆ.)

**प्रकाशः** – अत एव च ''यद्योन्यां तदुत्तरयोर्गायति'' इत्यत्रोत्तराशब्दस्योत्तराग्रन्थे निरपेक्षवृत्तित्वेन तद्गतयोरेवोत्तरयोर्ग्रहणम् । न पुनस्सापेक्षयो र्योन्युत्तरयोरित्युक्तं नवमे ।

ಆದ್ದರಿಂದಲೇ 'ಯದ್ಯೋನ್ಯಾಂ ತದುತ್ತರಯೋರ್ಗಾಯತಿ' ಎಂಬ ಪೂರ್ವಮೀಮಾಂಸೆಯಲ್ಲಿ ಮತ್ತೊಂದು ಕಡೆ 'ಉತ್ತರಾ' ಶಬ್ದಕ್ಕೆ 'ಉತ್ತರಾ' ಎಂಬ ಗ್ರಂಥದಲ್ಲಿ ಎಂಬರ್ಥವನ್ನು ಸ್ವೀಕರಿಸಿದ್ದಾರೆ. ಒಂದು ವೇಳೆ 'ಉತ್ತರಾ' ಎಂಬ ಶಬ್ದಕ್ಕೆ ಮುಂದಿನ ಭಾಗದಲ್ಲಿ ಎಂಬರ್ಥವನ್ನು ಸ್ವೀಕರಿಸಿದರೆ ಅದು ಸಸಂಬಂಧಿಕವಾದ್ದರಿಂದ ಸಾಪೇಕ್ಷಿತವಾಗುತ್ತದೆ. ಆದರೆ 'ಉತ್ತರಾ' ಎಂಬ ಗ್ರಂಥವಿಶೇಷದಲ್ಲಿ ಎಂಬರ್ಥವನ್ನು ಸ್ವೀಕರಿಸಿದಾಗ ಸಸಂಬಂಧಿಕವಲ್ಲದ ಕಾರಣ ನಿರಪೇಕ್ಷಿತವಾದ ಅರ್ಥವನ್ನು ಹೇಳಿದಂತಾಗುತ್ತದೆ. ಸಾಪೇಕ್ಷ ಹಾಗೂ ನಿರಪೇಕ್ಷ ಇವೆರಡರಲ್ಲಿ ನಿರಪೇಕ್ಷಿತವಾದ ಅರ್ಥವನ್ನೇ ಸ್ವೀಕರಿಸುವುದು ಶ್ರೇಷ್ಠವೆಂದು ಈ ಅಧಿಕರಣದಲ್ಲಿ ನಿರ್ಣಯಿಸಿದ್ದಾರೆ. ಇದು ಒಂಭತ್ತನೆಯ ಅಧ್ಯಾಯದಲ್ಲಿರುವಂತಹ ವಿಚಾರ.

**गुरुराजीयम्** – प्रथमसूत्रोक्तं हेतुमाह – **हृत्पद्मस्थत्वमिति** ।। **येनोक्तदोष इति** ।। सुषिरस्य दहरस्थाकाशत्वप्रतिपादकश्रुतिविरोध इत्युक्तदोषो नेत्यर्थः । ननु चेतनत्वेन साजात्यविवक्षया जीवे पापप्रसक्त्येश्वरे तन्निषेधे पारतन्त्र्येण जीवजडाकाशयोरपि साजात्यविवक्षया जीवे पापप्रसक्त्या भूताकाशेऽपि तन्निषेधोपपत्तिरित्यरुचेराह – **किञ्चेति** ।। **एतेनेति** ।। अपहतपाप्मत्वादेः ब्रह्मधर्मत्वोपपादनेनेत्यर्थः । **एतेनेति** ।। जीवस्यापहतपाप्मत्वस्येशदत्तत्वेन तत्सापेक्षत्वोपपादनेनेत्यर्थः । तथाहीत्यादिवाक्यान्वयानुपपत्तिपरिहारकटीकाग्रन्थोऽनुपपन्नः ।




ಹೃದಯಕಮಲದಲ್ಲಿ ಸಣ್ಣ ಆಕಾಶವಿದೆ. ಅದರಲ್ಲಿ ಕುಳಿತಿರುವವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತ. ಏಕೆಂದರೆ ಯಾವ ಪ್ರಕರಣದಲ್ಲಿ ಈ ವಿಚಾರವು ಪ್ರಸಕ್ತವಾಗುತ್ತದೋ, ಅದೇ ಪ್ರಕರಣದ ಮುಂದಿನ ಭಾಗದಲ್ಲಿ ಅಪಹತಪಾಪ್ಮತ್ವ, ಸತ್ಯಕಾಮತ್ವ ಮೊದಲಾದ ವಿಷ್ಣುವಿನ ಅಸಾಧಾರಣ ಲಿಂಗಗಳೇ ಶ್ರುತವಾಗಿವೆ.

ದಹರಾಧಿಕರಣ (೧-೩-೫)

ಅಪಹತಪಾಪ್ಮತ್ವಾದಿಗಳನ್ನು ಆಕಾಶದಲ್ಲಿ ಹೇಳಲೇ ಬಾರದು. ಒಂದು ವೇಳೆ ಪಾಪ ಮೊದಲಾದವುಗಳಿಗೆ ಪ್ರಸಕ್ತಿಯಿದ್ದಲ್ಲಿ ಅವುಗಳ ನಿಷೇಧಕ್ಕೆ ಅವಕಾಶವಿರುತ್ತಿತ್ತು. ಜೀವನಲ್ಲಿಯೂ ಕೂಡ ಅಪಹತಪಾಪ್ಮತ್ವಾದಿಗಳನ್ನು ಸಂಸಾರದಸೆಯಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿ-ಸ್ಮೃತಿಗಳ ಆಧಾರದಂತೆ ಅಪಹತಪಾಪ್ಮತ್ವಾದಿಗಳೆಲ್ಲವೂ ವಿಷ್ಣುವಿನಲ್ಲೇ ಸ್ವತಂತ್ರವಾಗಿರುತ್ತವೆ. ಜೀವಾದಿಗಳಲ್ಲಿದ್ದರೂ ಕೂಡ ಅಸ್ವತಂತ್ರವಾಗಿರುತ್ತದೆ. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷಿತವಾದ ಅರ್ಥವನ್ನು ಸ್ವೀಕರಿಸುವುದೇ ಶ್ರೇಷ್ಠವಾದ್ದರಿಂದ, ಸ್ವತಂತ್ರವಾದ ಸತ್ಯಕಾಮತ್ವಾದಿಗಳನ್ನೇ ಸ್ವೀಕರಿಸಬೇಕು. ಆದ್ದರಿಂದ ಪರಮಾತ್ಮನೇ ಹೃದಯಪದ್ಮದಲ್ಲಿದ್ದಾನೆ ಸ್ಪಷ್ಟವಾಗುತ್ತದೆ.

• • • • •

## ಹೃದಯಕಮಲದಲ್ಲಿರುವ ಪರಮಾತ್ಮನ ವರ್ಣನೆಯು ಅಸಂಗತವಲ್ಲ

### तात्पर्यचन्द्रिका

**अन्वयानुपपत्तिश्च "योऽन्वेष्टव्यो भगवांस्तस्यान्तर्हृदये यावान्वा अयमाकाशस्तावानाकाशस्तस्मिन् द्यावापृथिवी अन्तरेव समाहिते सच भगवानपहतपाप्मेत्यन्वयः" इति न्यायविवरणे परिहृता ।**

ಅನುವಾದ - ಹಿಂದೆ ಪೂರ್ವಪಕ್ಷ ಮಾಡುವಾಗ ಅನ್ವಯಾನುಪಪತ್ತಿಯೆಂಬ ದೋಷವನ್ನು ಹೇಳಿದ್ದರು. ಅದೂ ಸಹ ಈಗ ಬರುವುದಿಲ್ಲ. ಏಕೆಂದರೆ 'ಯೋಽನ್ವೇಷ್ಟವ್ಯೋ ಭಗವಾಂಸ್ತಸ್ಯಾಂತರ್ಹೃದಯೇ ಯಾವಾನ್ವಾ ಅಯಮಾಕಾಶಸ್ತಾವಾನಾಕಾಶಸ್ತಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ । ಸಚ ಭಗವಾನಪಹತಪಾಪ್ಮೇತ್ಯನ್ವಯಃ' ಎಂಬ ನ್ಯಾಯವಿವರಣ ವಾಕ್ಯದಲ್ಲಿಯೇ ಈ ದೋಷವನ್ನು ಪರಿಹರಿಸಿದ್ದಾರೆ.

**तद्विवृतं "तथाहि" इत्यादिटीकायाम् ।**

ಇದನ್ನು 'ತಥಾಹಿ' ಇತ್ಯಾದಿ ಟೀಕಾಪಂಕ್ತಿಯಲ್ಲಿ ವಿವರಿಸಿದ್ದಾರೆ.

**तत्रायं भावः । शरीरहृत्पुण्डरीकयोर्ब्रह्म प्रति पुरत्ववेश्मत्वोक्त्यैवान्वेष्टव्यस्य ब्रह्मत्वे सिद्धे तस्मिन्यदन्तरित्यत्र हृत्पद्मस्थाकाशगतं ब्रह्मान्वेष्टव्यमित्युक्ते किं तदित्यत्र तद्ब्रह्म किं प्रकारमिति पृष्टे यावानिति परिहारवाक्ये यद्ब्रह्मान्वेष्टव्यतयोक्तं तस्यान्तर्हृदये यावानेष आकाशस्तावान् सर्वोऽपि विद्यते । द्यावापृथिव्यादिकं चास्मिन्समाहितमिति ब्रह्मण आकाशादिसर्वाश्रयत्वापहतपाप्मत्वादिप्रकार उक्तः ।**

ನ್ಯಾಯವಿವರಣ ಹಾಗೂ ಟೀಕಾಪಂಕ್ತಿಯ ಅಭಿಪ್ರಾಯ ಹೀಗಿದೆ - ಶ್ರುತಿಯಲ್ಲಿರುವ ಶರೀರಶಬ್ದವು 'ಬ್ರಹ್ಮನ ಪಟ್ಟಣ' ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. 'ಪುಂಡರೀಕ' ಶಬ್ದವು 'ಬ್ರಹ್ಮನ ಮನೆ' ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಹೀಗೆ ಶ್ರುತಿಯಲ್ಲಿ ಹೇಳಿದ್ದರಿಂದಲೇ ಅನ್ವೇಷ್ಟವ್ಯನಾದವನು ಬ್ರಹ್ಮನೆಂದು ಸಿದ್ಧವಾಯಿತು. ಹೀಗೆ ಜಿಜ್ಞಾಸ್ಯನೆಂದು ಸಿದ್ಧನಾದ್ದರಿಂದಲೇ 'ತಸ್ಮಿನ್ ಯದಂತಃ' ಎಂಬ ವಾಕ್ಯದಲ್ಲಿ ಹೃತ್ಪದ್ಮದ ಆಕಾಶದಲ್ಲಿರುವವನು ಬ್ರಹ್ಮನಾಗಿದ್ದಾನೆ. ಅವನನ್ನು ಜಿಜ್ಞಾಸೆ ಮಾಡಬೇಕೆಂದು ಹೇಳಿದಂತಾಯಿತು. ಅನಂತರ 'ಕಿಂ ತದತ್ರ ವಿದ್ಯತೇ' ಎಂಬ ವಾಕ್ಯವು ಪ್ರಸಕ್ತವಾಗಿದೆ. ಅಂದರೆ ಹೃದಯಪುಂಡರೀಕದಲ್ಲಿರುವ ಬ್ರಹ್ಮನು ಎಂತಹ ಮಹಿಮೆಯನ್ನು ಹೊಂದಿರುತ್ತಾನೆ ಎಂದು ಪ್ರಶ್ನಿಸಲಾಗಿದೆ. ಅನಂತರ 'ಯಾವಾನ್ವಾ' ಎಂಬ ಉತ್ತರ ನೀಡುವ ವಾಕ್ಯದಲ್ಲಿ ಹೊರಗಡೆ ಎಷ್ಟು ವಿಶಾಲವಾದ ಆಕಾಶವಿದೆಯೋ, ಆ ಆಕಾಶವು ಹೃದಯಪುಂಡರೀಕದಲ್ಲಿರುವ ಬ್ರಹ್ಮನ ಹೃದಯದಲ್ಲಿಯೂ ಇರುತ್ತದೆ ಎಂಬುದಾಗಿ ಜಿಜ್ಞಾಸ್ಯನಾದ ಬ್ರಹ್ಮನಲ್ಲಿ ಮಹಿಮೆಯನ್ನು ಹೇಳಲಾಗಿದೆ. ಇದರಿಂದ ಆಕಾಶದ ಮಹಿಮೆಯನ್ನು ಹೇಳಿದಂತಾಗುವುದಿಲ್ಲ. ಹೊರತಾಗಿ, ಪರಮಾತ್ಮನು ಎಲ್ಲೆಡೆ ವ್ಯಾಪ್ತನಾಗಿದ್ದಾನೆಂದು ಪರಮಾತ್ಮನ ಮಹಿಮೆಯನ್ನು ಹೇಳಿದಂತಾಯಿತು. ಮತ್ತು ದ್ಯಾವ್ಯಾಪೃಥಿವ್ಯಾದಿಗಳೆಲ್ಲವೂ ಇಂತಹ ಬ್ರಹ್ಮನಲ್ಲಿ ಆಶ್ರಿತವಾಗಿವೆ ಎಂದೂ ಕೂಡ ಹೇಳಲಾಗಿದೆ. ಆದ್ದರಿಂದ ಆಕಾಶ ಮೊದಲಾದ ಸಕಲ ಪದಾರ್ಥಗಳಿಗೂ ಆಶ್ರಯನಾಗಿರುವಿಕೆ, ಅಪಹತಪಾಪ್ಮತ್ವ, ಸತ್ಯಕಾಮತ್ವ ಮೊದಲಾದ ಮಹಿಮೆಯನ್ನು ಹೊಂದಿರುವಿಕೆ, ಇತ್ಯಾದಿಯಾಗಿ ಬ್ರಹ್ಮನ ಗುಣವನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ ಹೊರತು, ಭೂತಾಕಾಶವನ್ನಾಗಲೀ, ಜೀವನನ್ನಾಗಲೀ ಹೇಳಿರುವುದಿಲ್ಲ.

**एवञ्च प्रश्नवाक्ये ब्रह्मणः किं तदिति प्रथमया आकाशस्यतु अत्रेति सप्तम्या निर्देशेऽपि परिहारवाक्ये ब्रह्मणोऽस्मिन्निति सप्तम्या आकाशादेस्तु प्रथमया निर्देशो नायुक्तः ।**

ಹೀಗೆ ಹೇಳಿದ್ದರಿಂದ ಪ್ರಶ್ನವಾಕ್ಯದಲ್ಲಿ ಬ್ರಹ್ಮನಿಗೆ 'ಕಿಂ ತತ್' ಎಂಬುದಾಗಿ ಪ್ರಥಮಾ ವಿಭಕ್ತಿಯಿಂದ, ಆಕಾಶವನ್ನು 'ಅತ್ರ' ಎಂಬ ಸಪ್ತಮೀ ವಿಭಕ್ತಿಯಿಂದ ನಿರ್ದೇಶ ಮಾಡಿದ್ದರೂ ಕೂಡ ಉತ್ತರ ನೀಡುವ ವಾಕ್ಯದಲ್ಲಿ ಬ್ರಹ್ಮನನ್ನು 'ಅಸ್ಮಿನ್' ಎಂಬುದಾಗಿ ಸಪ್ತಮೀ ವಿಭಕ್ತಿಯಿಂದ, ಆಕಾಶಾದಿಗಳನ್ನು ಪ್ರಥಮಾವಿಭಕ್ತಿಯಿಂದ ನಿರ್ದೇಶ ಮಾಡಿದ್ದರೂ ಕೂಡ ತಪ್ಪಾಗುವುದಿಲ್ಲ.

**प्रकारे पृष्ट आकाशादिसर्वाश्रयत्वादिप्रकारोक्तेः ।**

ಏಕೆಂದರೆ ಪ್ರಕಾರದ ಬಗ್ಗೆ ಪ್ರಶ್ನಿಸಲಾಗಿದೆ. ಆಕಾಶಾದಿ ಸರ್ವಾಶ್ರಯತ್ವ ಮೊದಲಾದ ಪ್ರಕಾರಗಳನ್ನೇ ಹೇಳುವ ಮೂಲಕ ಉತ್ತರಿಸಲಾಗಿದೆ. ಹೀಗೆ ಸಮಾನವಿಷಯಕತ್ವವಿರುವುದರಿಂದ ಪ್ರಶ್ನೋತ್ತರಗಳು ಸಂಗತವಾಗುತ್ತದೆ.

**न प्रश्नोत्तरभावे हि हेतुस्तुल्यविभक्तिता ।**
**समानविषयत्वं तु हेतुस्तच्चात्र विद्यते ।। १ ।। इति ।**

ನ ಪ್ರಶ್ನೋತ್ತರಭಾವೇ ಹಿ ಹೇತುಸ್ತುಲ್ಯವಿಭಕ್ತಿತಾ ।
ಸಮಾನವಿಷಯತ್ವಂ ತು ಹೇತುಸ್ತಚ್ಚಾತ್ರ ವಿದ್ಯತೇ ।। ೧ ।।

ಪ್ರಶ್ನೋತ್ತರ ಭಾವವು ಉಪಪನ್ನವಾಗಬೇಕಾದರೆ, ಪ್ರಶ್ನೆ ಹಾಗೂ ಉತ್ತರಗಳಲ್ಲಿ ಸಮಾನ ವಿಭಕ್ತಿಯೇ ಇರಬೇಕೆಂಬ ನಿಯಮವಿಲ್ಲ. ಆದರೆ ಪ್ರಶ್ನೆ ಹಾಗೂ ಉತ್ತರಗಳು ಸಮಾನವಿಷಯಕಗಳಾಗಿರಬೇಕು. ಅಂತಹ ಸಮಾನವಿಷಯತ್ವವೆಂಬುದು ಪ್ರಕೃತದಲ್ಲಿ ಇದ್ದೇ ಇರುತ್ತದೆ. ಆದ್ದರಿಂದ ವಿರುದ್ಧ ವಿಭಕ್ತಿಯು ಬಾಧಕವಾಗುವುದಿಲ್ಲ.

**प्रकाशः –**

एवम् 'उत्तरेभ्यः' इति सौत्रलिङ्गानां निरवकाशतोक्त्या हृत्पद्मस्थदहराकाशस्थो विष्णुरित्युक्तम् । इदानीं परोक्तबाधकं निरसिष्यन्नन्वयानुपपत्तिं तावत्परिहर्तुमाह – **अन्वयेति ।।**

ವಿವರಣೆ - ಇಲ್ಲಿಯತನಕ 'ಉತ್ತರೇಭ್ಯಃ' ಎಂಬ ಸೂತ್ರದ ಭಾಗದಲ್ಲಿರುವ ಲಿಂಗಗಳಿಗೆ ನಿರವಕಾಶತ್ವವನ್ನು ಹೇಳಿ, ಹೃದಯಪದ್ಮದಲ್ಲಿರುವ ದಹರಾಕಾಶದಲ್ಲಿ ನೆಲೆಸಿರುವವನು ಮಹಾವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಿದರು. ಈಗ ಈ ವಿಷಯದಲ್ಲಿ ಪೂರ್ವಪಕ್ಷಕಾರರು ಹೇಳಿದ ಬಾಧಕಗಳನ್ನು ನಿರಾಕರಿಸುವವರಾಗಿ ಮೊದಲು ಅನ್ವಯಾನುಪಪತ್ತಿ ದೋಷವನ್ನು ಪರಿಹರಿಸುತ್ತಿದ್ದಾರೆ 'ಅನ್ವಯ' ಇತ್ಯಾದಿ ಗ್ರಂಥದಿಂದ.

**प्रकाशः – टीकायामिति ।।** "प्रसिद्धेश्च" इतिसूत्रटीकायामित्यर्थः । एतेन भाष्येऽनुक्तावपि टीकायामन्वयोक्तिर्न्यायविवरणमूलेति दर्शितम् ।

'ಟೀಕಾಯಾಂ' ಎಂದರೆ 'ಪ್ರಸಿದ್ಧೇಶ್ಚ' ಎಂಬ ಸೂತ್ರದ ಟೀಕೆಯಲ್ಲಿ ಎಂದರ್ಥ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ ಅನ್ವಯಾನುಪಪತ್ತಿದೋಷವನ್ನು ಹೇಳದಿದ್ದರೂ ಟೀಕೆಯಲ್ಲಿ ವಿವರಿಸಿದ ಅನ್ವಯವು ನ್ಯಾಯವಿವರಣದ ವ್ಯಾಖ್ಯಾನವಾಗಿದೆಯೆಂದು ಹೇಳಿದಂತಾಯಿತು.

**प्रकाशः –** नन्वत्र टीकाद्युक्तान्वयघटना न युक्तेव । प्रश्नवाक्ये "किं तदत्र" इति ब्रह्माकाशयोः प्रथमासप्तमीभ्यां निर्दिष्टयोः परिहारे सप्तमीप्रथमाभ्यां निर्देशायोगेन परिहारानन्वयस्योक्तत्वादित्यतस्तदुक्तिव्यक्तिपूर्वमुक्तशङ्कां परिहरति – **तत्रायं भाव इति ।।**

ಟೀಕೆಯಲ್ಲಿ ಹೇಳಲ್ಪಟ್ಟ ಅನ್ವಯದ ಯೋಜನೆಯು ಅಯುಕ್ತವಾಗಿದೆ. ಏಕೆಂದರೆ ಪ್ರಶ್ನವಾಕ್ಯದಲ್ಲಿ 'ಕಿಂ ತದತ್ರ' ಎಂಬುದಾಗಿ ಬ್ರಹ್ಮನ ವಿಷಯದಲ್ಲಿ ಪ್ರಥಮಾ ವಿಭಕ್ತಿಯು ನಿರ್ದೇಶಿಸಲ್ಪಟ್ಟಿದೆ. ಆಕಾಶದವಿಷಯದಲ್ಲಿ 'ಅಸ್ಮಿನ್' ಎಂಬುದಾಗಿ ಸಪ್ತಮೀ ವಿಭಕ್ತಿಯು ನಿರ್ದೇಶಿಸಲ್ಪಟ್ಟಿದೆ. ಆದರೆ ಪರಿಹಾರ ವಾಕ್ಯದಲ್ಲಿ ಬ್ರಹ್ಮನ ವಿಷಯದಲ್ಲಿ ಸಪ್ತಮೀ ವಿಭಕ್ತಿಯನ್ನು ಆಕಾಶದ ವಿಷಯದಲ್ಲಿ ಪ್ರಥಮಾ ವಿಭಕ್ತಿಯನ್ನು ವಿಪರೀತವಾಗಿ ನಿರ್ದೇಶಿಸಲಾಗಿದೆ. ಇದು ಅತ್ಯಂತ ಅಯುಕ್ತವಾಗುತ್ತದೆ. ಆದ್ದರಿಂದ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಅನನ್ವಯ ದೋಷವನ್ನು ಸಿದ್ಧಾಂತಿಗಳಿಗೆ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಟೀಕೆಯ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶಂಕೆಯನ್ನು ಪರಿಹರಿಸಿಕೊಳ್ಳುತ್ತಿದ್ದಾರೆ 'ತತ್ರಾಯಂ ಭಾವಃ' ಇತ್ಯಾದಿ ಗ್ರಂಥದಿಂದ.

**प्रकाशः** – यद्यपि पुण्डरीकं वेश्मेत्येव श्रुतम् । नतु ब्रह्म वेश्मेति । तथापि वेश्मेत्युक्तौ कस्येत्याकाङ्क्षायां 'ब्रह्मपुरे' इत्युक्तपुरस्वामिनो ब्रह्मण एव पदिन्यायेनान्वय इति भावेन ब्रह्मप्रति वेश्मत्वोक्तयेत्युक्तम् ।

ವಸ್ತುತಃ ಶ್ರುತಿಯಲ್ಲಿ 'ಪುಂಡರೀಕಂ ವೇಶ್ಮ' 'ಕಮಲವು ಮನೆಯಾಗಿದೆ' ಎಂದಷ್ಟೇ ಹೇಳಿದೆ. ಬ್ರಹ್ಮನ ಮನೆಯೆಂದು ಹೇಳಿಲ್ಲ. ಆದರೂ ಸಹ 'ವೇಶ್ಮ' = ಮನೆ ಎಂದು ಹೇಳಿದಾಗ, ಯಾರ ಮನೆ ಎಂಬ ಆಕಾಂಕ್ಷೆಯು ಹುಟ್ಟುತ್ತದೆ. ಹಿಂದೆ 'ಬ್ರಹ್ಮಪುರೇ' ಎಂದು ಬ್ರಹ್ಮನ ಪಟ್ಟಣವೆಂದು ಹೇಳಿದ್ದರಿಂದ ಪಟ್ಟಣಕ್ಕೆ ಸ್ವಾಮಿಯಾದ ಬ್ರಹ್ಮನೇ ಇಲ್ಲಿಯೂ ಕೂಡ ಪದಿನ್ಯಾಯದಿಂದ ಅನ್ವಿತನಾಗುತ್ತಾನೆ. ಯಾವರೀತಿಯಾಗಿ 'ಸಪ್ತಮಂ ಪದಂ ಅಧ್ವರ್ಯುಃ ಅಂಜಲಿನಾ ಗೃಹ್ಣಾತಿ' ಎಂದು ಹೇಳಿದಾಗ, ಏಳನೇ ಹೆಜ್ಜೆ ಎಂದರೆ ಹಿಂದೆ ಪ್ರಸಕ್ತವಾದ ಒಂದು ವರ್ಷದ ಹಸುವಿನ ಹೆಜ್ಜೆಯೆಂದೇ ಅರ್ಥವಾಗುತ್ತದೋ, ಅದರಂತೆ ಇಲ್ಲಿಯೂ ಕೂಡ ಹಿಂದೆ ಪ್ರಸಕ್ತನಾದ ಬ್ರಹ್ಮನೇ ಅನ್ವಿತನಾಗುತ್ತಾನೆ.

**प्रकाशः** – 'हृदये' इत्यत्र कस्येत्याकाङ्क्षायां तत्रापि प्रकृतं ब्रह्मैवान्वेतीत्याह – **यद्ब्रह्मेति** ।। अस्मिन् ब्रह्मणीत्यर्थः ।

'ಹೃದಯೇ' ಎಂದರೆ ಯಾರ ಹೃದಯದಲ್ಲಿ ಎಂಬ ಆಕಾಂಕ್ಷೆಯು ಪ್ರಾಪ್ತವಾಗುತ್ತದೆ. ಇಲ್ಲಿಯೂ ಕೂಡ ಪ್ರಕೃತನಾದ ಬ್ರಹ್ಮನ ಹೃದಯವೆಂದೇ ತಿಳಿಯಬೇಕು. ಈ ಅಭಿಪ್ರಾಯದಿಂದ 'ಯದ್ಬ್ರಹ್ಮ' ಇತ್ಯಾದಿ ವಾಕ್ಯವು ಹೊರಟಿದೆ. 'ಅಸ್ಮಿನ್' ಎಂದರೆ ಬ್ರಹ್ಮನಲ್ಲಿ ಎಂದರ್ಥ.

**गुरुराजीयम्** – समानविभक्तिकत्वस्य प्रश्नोत्तरभावे प्रयोजकत्वेन प्रकृते च प्रश्नवाक्ये ब्रह्मणः किं तदिति प्रथमया आकाशस्य त्वत्रेति सप्तम्या निर्देशेन समानविभक्तिकत्वाभावेन प्रश्नोत्तरभावानुपपत्तिरित्यतष्टीकाभिप्रायमाह – तत्रायं भाव इति ।।

**न प्रश्नोत्तरभावे हि हेतुस्तुल्यविभक्तिता ।**
**समानविषयत्वं तु हेतुस्तच्चात्र विद्यते ।। १ ।। इति ।**

ನ ಪ್ರಶ್ನೋತ್ತರಭಾವೇ ಹಿ ಹೇತುಸ್ತುಲ್ಯವಿಭಕ್ತಿತಾ ।
ಸಮಾನವಿಷಯತ್ವಂ ತು ಹೇತುಸ್ತಚ್ಚಾತ್ರ ವಿದ್ಯತೇ ॥ ೧ ॥

ಪ್ರಶ್ನೋತ್ತರ ಭಾವವು ಉಪಪನ್ನವಾಗಬೇಕಾದರೆ, ಪ್ರಶ್ನೆ ಹಾಗೂ ಉತ್ತರಗಳಲ್ಲಿ ಸಮಾನ ವಿಭಕ್ತಿಯೇ ಇರಬೇಕೆಂಬ ನಿಯಮವಿಲ್ಲ. ಆದರೆ ಪ್ರಶ್ನೆ ಹಾಗೂ ಉತ್ತರಗಳು ಸಮಾನವಿಷಯಕಗಳಾಗಿರಬೇಕು. ಅಂತಹ ಸಮಾನವಿಷಯತ್ವವೆಂಬುದು ಪ್ರಕೃತದಲ್ಲಿ ಇದ್ದೇ ಇರುತ್ತದೆ. ಆದ್ದರಿಂದ ವಿರುದ್ಧ ವಿಭಕ್ತಿಯು ಬಾಧಕವಾಗುವುದಿಲ್ಲ.

**प्रकाशः –**

एवम् 'उत्तरेभ्यः' इति सौत्रलिङ्गानां निरवकाशतोक्त्या हृत्पद्मस्थदहराकाशस्थो विष्णुरित्युक्तम् । इदानीं परोक्तबाधकं निरसिष्यन्नन्वयानुपपत्तिं तावत्परिहर्तुमाह – **अन्वयेति** ।।

ವಿವರಣೆ - ಇಲ್ಲಿಯತನಕ 'ಉತ್ತರೇಭ್ಯಃ' ಎಂಬ ಸೂತ್ರದ ಭಾಗದಲ್ಲಿರುವ ಲಿಂಗಗಳಿಗೆ ನಿರವಕಾಶತ್ವವನ್ನು ಹೇಳಿ, ಹೃದಯಪದ್ಮದಲ್ಲಿರುವ ದಹರಾಕಾಶದಲ್ಲಿ ನೆಲೆಸಿರುವವನು ಮಹಾವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಿದರು. ಈಗ ಈ ವಿಷಯದಲ್ಲಿ ಪೂರ್ವಪಕ್ಷಕಾರರು ಹೇಳಿದ ಬಾಧಕಗಳನ್ನು ನಿರಾಕರಿಸುವವರಾಗಿ ಮೊದಲು ಅನ್ವಯಾನುಪಪತ್ತಿ ದೋಷವನ್ನು ಪರಿಹರಿಸುತ್ತಿದ್ದಾರೆ 'ಅನ್ವಯ' ಇತ್ಯಾದಿ ಗ್ರಂಥದಿಂದ.

**प्रकाशः – टीकायामिति** ।। ''प्रसिद्धेश्च'' इतिसूत्रटीकायामित्यर्थः । एतेन भाष्येऽनुक्तावपि टीकायामन्वयोक्तिर्न्यायविवरणमूलेति दर्शितम् ।

'ಟೀಕಾಯಾಂ' ಎಂದರೆ 'ಪ್ರಸಿದ್ಧೇಶ್ಚ' ಎಂಬ ಸೂತ್ರದ ಟೀಕೆಯಲ್ಲಿ ಎಂದರ್ಥ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ ಅನ್ವಯಾನುಪಪತ್ತಿದೋಷವನ್ನು ಹೇಳದಿದ್ದರೂ ಟೀಕೆಯಲ್ಲಿ ವಿವರಿಸಿದ ಅನ್ವಯವು ನ್ಯಾಯವಿವರಣದ ವ್ಯಾಖ್ಯಾನವಾಗಿದೆಯೆಂದು ಹೇಳಿದಂತಾಯಿತು.

**प्रकाशः** – नन्वत्र टीकाद्युक्तान्वयघटना न युक्तेव । प्रश्नवाक्ये ''किं तदत्र'' इति ब्रह्माकाशयोः प्रथमासप्तमीभ्यां निर्दिष्टयोः परिहारे सप्तमीप्रथमाभ्यां निर्देशायोगेन परिहारानन्वयस्योक्तत्वादित्यतस्तदुक्तिव्यक्तिपूर्वमुक्तशङ्कां परिहरति – **तत्रायं भाव इति** ।।

ಟೀಕೆಯಲ್ಲಿ ಹೇಳಲ್ಪಟ್ಟ ಅನ್ವಯದ ಯೋಜನೆಯು ಅಯುಕ್ತವಾಗಿದೆ. ಏಕೆಂದರೆ ಪ್ರಶ್ನವಾಕ್ಯದಲ್ಲಿ 'ಕಿಂ ತದತ್ರ' ಎಂಬುದಾಗಿ ಬ್ರಹ್ಮನ ವಿಷಯದಲ್ಲಿ ಪ್ರಥಮಾ ವಿಭಕ್ತಿಯು ನಿರ್ದೇಶಿಸಲ್ಪಟ್ಟಿದೆ. ಆಕಾಶದವಿಷಯದಲ್ಲಿ 'ಅಸ್ಮಿನ್' ಎಂಬುದಾಗಿ ಸಪ್ತಮೀ ವಿಭಕ್ತಿಯು ನಿರ್ದೇಶಿಸಲ್ಪಟ್ಟಿದೆ. ಆದರೆ ಪರಿಹಾರ ವಾಕ್ಯದಲ್ಲಿ ಬ್ರಹ್ಮನ ವಿಷಯದಲ್ಲಿ ಸಪ್ತಮೀ ವಿಭಕ್ತಿಯನ್ನು ಆಕಾಶದ ವಿಷಯದಲ್ಲಿ ಪ್ರಥಮಾ ವಿಭಕ್ತಿಯನ್ನು ವಿಪರೀತವಾಗಿ ನಿರ್ದೇಶಿಸಲಾಗಿದೆ. ಇದು ಅತ್ಯಂತ ಅಯುಕ್ತವಾಗುತ್ತದೆ. ಆದ್ದರಿಂದ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಅನನ್ವಯ ದೋಷವನ್ನು ಸಿದ್ಧಾಂತಿಗಳಿಗೆ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಟೀಕೆಯ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶಂಕೆಯನ್ನು ಪರಿಹರಿಸಿಕೊಳ್ಳುತ್ತಿದ್ದಾರೆ 'ತತ್ರಾಯಂ ಭಾವಃ' ಇತ್ಯಾದಿ ಗ್ರಂಥದಿಂದ.

**प्रकाशः** – यद्यपि पुण्डरीकं वेश्मेत्येव श्रुतम् । नतु ब्रह्म वेश्मेति । तथापि वेश्मेत्युक्तौ कस्येत्याकाङ्क्षायां 'ब्रह्मपुरे' इत्युक्तपुरस्वामिनो ब्रह्मण एव पदिन्यायेनान्वय इति भावेन ब्रह्मप्रति वेश्मत्वोक्तयेत्युक्तम् ।

ವಸ್ತುತಃ ಶ್ರುತಿಯಲ್ಲಿ 'ಪುಂಡರೀಕಂ ವೇಶ್ಮ' 'ಕಮಲವು ಮನೆಯಾಗಿದೆ' ಎಂದಷ್ಟೇ ಹೇಳಿದೆ. ಬ್ರಹ್ಮನ ಮನೆಯೆಂದು ಹೇಳಿಲ್ಲ. ಆದರೂ ಸಹ 'ವೇಶ್ಮ' = ಮನೆ ಎಂದು ಹೇಳಿದಾಗ, ಯಾರ ಮನೆ ಎಂಬ ಆಕಾಂಕ್ಷೆಯು ಹುಟ್ಟುತ್ತದೆ. ಹಿಂದೆ 'ಬ್ರಹ್ಮಪುರೇ' ಎಂದು ಬ್ರಹ್ಮನ ಪಟ್ಟಣವೆಂದು ಹೇಳಿದ್ದರಿಂದ ಪಟ್ಟಣಕ್ಕೆ ಸ್ವಾಮಿಯಾದ ಬ್ರಹ್ಮನೇ ಇಲ್ಲಿಯೂ ಕೂಡ ಪದಿನ್ಯಾಯದಿಂದ ಅನ್ವಿತನಾಗುತ್ತಾನೆ. ಯಾವರೀತಿಯಾಗಿ 'ಸಪ್ತಮಂ ಪದಂ ಅರ್ಧ್ವಯುಃ ಅಂಜಲಿನಾ ಗೃಹ್ಣಾತಿ' ಎಂದು ಹೇಳಿದಾಗ, ಏಳನೇ ಹೆಜ್ಜೆ ಎಂದರೆ ಹಿಂದೆ ಪ್ರಸಕ್ತವಾದ ಒಂದು ವರ್ಷದ ಹಸುವಿನ ಹೆಜ್ಜೆಯೆಂದೇ ಅರ್ಥವಾಗುತ್ತದೋ, ಅದರಂತೆ ಇಲ್ಲಿಯೂ ಕೂಡ ಹಿಂದೆ ಪ್ರಸಕ್ತನಾದ ಬ್ರಹ್ಮನೇ ಅನ್ವಿತನಾಗುತ್ತಾನೆ.

**प्रकाशः** – 'हृदये' इत्यत्र कस्येत्याकाङ्क्षायां तत्रापि प्रकृतं ब्रह्मैवान्वेतीत्याह – यद्ब्रह्मेति ।। अस्मिन् ब्रह्मणीत्यर्थः ।

'ಹೃದಯೇ' ಎಂದರೆ ಯಾರ ಹೃದಯದಲ್ಲಿ ಎಂಬ ಆಕಾಂಕ್ಷೆಯು ಪ್ರಾಪ್ತವಾಗುತ್ತದೆ. ಇಲ್ಲಿಯೂ ಕೂಡ ಪ್ರಕೃತನಾದ ಬ್ರಹ್ಮನ ಹೃದಯವೆಂದೇ ತಿಳಿಯಬೇಕು. ಈ ಅಭಿಪ್ರಾಯದಿಂದ 'ಯದ್ಬ್ರಹ್ಮ' ಇತ್ಯಾದಿ ವಾಕ್ಯವು ಹೊರಟಿದೆ. 'ಅಸ್ಮಿನ್' ಎಂದರೆ ಬ್ರಹ್ಮನಲ್ಲಿ ಎಂದರ್ಥ.

**गुरुराजीयम्** – समानविभक्तिकत्वस्य प्रश्नोत्तरभावे प्रयोजकत्वेन प्रकृते च प्रश्नवाक्ये ब्रह्मणः किं तदिति प्रथमया आकाशस्य त्वत्रेति सप्तम्या निर्देशेन समानविभक्तिकत्वाभावेन प्रश्नोत्तरभावानुपपत्तिरित्यतष्टीकाभिप्रायमाह – तत्रायं भाव इति ।।



ಹಿಂದೆ ಪೂರ್ವಪಕ್ಷ ಮಾಡುವಾಗ ಹೃದಯಕಮಲದಲ್ಲಿ ಬ್ರಹ್ಮನ ಮಹಿಮೆಯನ್ನು ಹೇಳಿದರೆ ಅಸಾಂಗತ್ಯ ದೋಷವನ್ನು ಹೇಳಲಾಗಿತ್ತು. 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದಾಗ ಹೃದಯದಲ್ಲಿ ಆಕಾಶವಿದೆ ಎಂಬ ಉತ್ತರವು ಅತ್ಯಂತ ಅಸಂಗತವಾಗುತ್ತದೆಂದು ಪೂರ್ವಪಕ್ಷಕಾರರ ಅಭಿಪ್ರಾಯ. ಆದರೆ ನಮ್ಮೆಲ್ಲರ ಶರೀರವು ಪರಮಾತ್ಮನ ಪಟ್ಟಣವಾಗಿದೆ. ಹೃದಯ ಕಮಲವು ಪರಮಾತ್ಮನ ಮನೆಯಾಗಿದೆ. ಹೀಗೆ ಉಪನಿಷತ್ತು ವರ್ಣಿಸುತ್ತಾ 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದೆ. ಅಂದರೆ ಶರೀರವೆಂಬ ಪಟ್ಟಣದಲ್ಲಿ ಹೃದಯಕಮಲವೆಂಬ ಮನೆಯಲ್ಲಿರುವ ಪರಮಾತ್ಮನ ಮಹಿಮೆಯೇನು? ಎಂದೇ ಪ್ರಶ್ನೆಯ ಅಭಿಪ್ರಾಯ ಹೊರತು ಹೃದಯದಲ್ಲಿ ಯಾವ ಪದಾರ್ಥವಿದೆಯೆಂಬ ಪ್ರಶ್ನೆ ಇಲ್ಲಿ ಹುಟ್ಟುವುದಿಲ್ಲ. ಹೀಗೆ ಪ್ರಶ್ನಿಸಿದಾಗ 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ಶ್ರುತಿಯು ಹೃದಯ ಕಮಲದಲ್ಲಿರುವ ಪರಮಾತ್ಮನ ಹೃದಯದಲ್ಲಿ ಎಷ್ಟು ಆಕಾಶವಿದೆಯೆಂದರೆ ಹೊರಗಡೆ ಎಷ್ಟು ವಿಶಾಲವಾದ ಆಕಾಶವಿದೆಯೋ ಅಷ್ಟು ಆಕಾಶ ಪರಮಾತ್ಮನ ಹೃದಯದಲ್ಲಿದೆಯೆಂದು ಅವನ ಮಹಿಮೆಯನ್ನು ಹೇಳುತ್ತಿದೆ. ಅಂದರೆ ಅಷ್ಟೊಂದು ವಿಶಾಲವಾದ ಆಕಾಶವೂ ಅಣುಸ್ವರೂಪನಾದ ಪರಮಾತ್ಮನಹೃದಯದಲ್ಲಿದೆ ಎಂದರೆ, ಪರಮಾತ್ಮನು ಎಲ್ಲೆಡೆ ವ್ಯಾಪ್ತನಾಗಿದ್ದಾನೆ ಎಂದೇ ಹೇಳಿದಂತಾಯಿತು. ಹೀಗೆ ಬ್ರಹ್ಮನ ಮಹಿಮೆಯ ಬಗ್ಗೆ ಪ್ರಶ್ನಿಸಿದಾಗ ಅವನ ಅದ್ಭುತವಾದ ಮಹಿಮೆಯನ್ನೇ ಉಪನಿಷತ್ತು ಹೇಳುತ್ತಿದೆ. ಆದ್ದರಿಂದ ಪ್ರಶ್ನೋತ್ತರಗಳಲ್ಲಿ ಅಸಾಂಗತ್ಯ ದೋಷವನ್ನು ಪೂರ್ವಪಕ್ಷಕಾರರಿಗೆ ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಅನನ್ವಯ' ಎಂಬ ಬಾಧಕವನ್ನು ಸಿದ್ಧಾಂತಿಗಳಿಗೆ ಹೇಳಲು ಸಾಧ್ಯವಿಲ್ಲ.



## ಛಾಂದೋಗ್ಯ ಭಾಷ್ಯದ ಪ್ರಕಾರ ಶ್ರುತ್ಯರ್ಥ ವಿಚಾರ

### तात्पर्यचन्द्रिका

**छान्दोग्यभाष्ये तु 'अस्मिन्भूताकाशे ब्रह्माख्य आकाशो वर्तते । स च यावान्बहिः परमात्मा व्याप्तोऽस्ति तावानेव विद्यते' इति पक्षान्तरमुक्तम् । तद्विवृतमथवेत्यादिटीकायाम् ।**

ಅನುವಾದ - ಛಾಂದೋಗ್ಯ ಭಾಷ್ಯದಲ್ಲಿ ಮತ್ತೊಂದು ಬಗೆಯಲ್ಲಿ ಈ ಶ್ರುತಿಯನ್ನು ಯೋಜನೆ ಮಾಡಿದ್ದಾರೆ. ಛಾಂದೋಗ್ಯ ಭಾಷ್ಯದ ಮಾತು ಹೀಗಿದೆ - 'ಅಸ್ಮಿನ್ ಭೂತಾಕಾಶೇ ಬ್ರಹ್ಮಾಖ್ಯ ಆಕಾಶೋ ವರ್ತತೇ । ಸ ಚ ಯಾವಾನ್ ಬಹಿಃ ಪರಮಾತ್ಮಾ ವ್ಯಾಪ್ತೋಽಸ್ತಿ ತಾವಾನೇವ ವಿದ್ಯತೇ' ಹೃದಯದಲ್ಲಿರುವ ಭೂತಾಕಾಶದಲ್ಲಿ 'ಬ್ರಹ್ಮ' ಎಂಬ ಆಕಾಶವಿದೆ. ಹೊರಗಿನ ಆಕಾಶದಲ್ಲಿ ಪರಮಾತ್ಮನು ಎಷ್ಟು ವ್ಯಾಪ್ತನಾಗಿದ್ದಾನೋ ಅಷ್ಟೇ ಪರಿಮಾಣದಿಂದ ಹೃದಯಾಕಾಶದಲ್ಲೂ ಇರುತ್ತಾನೆ ಎಂದು ಮತ್ತೊಂದು ಪಕ್ಷವನ್ನು ಹೇಳಿದ್ದಾರೆ. ಇದನ್ನು ಟೀಕೆಯಲ್ಲಿ 'ಅಥವಾ' ಇತ್ಯಾದಿ ವಾಕ್ಯಗಳಿಂದ ವಿವರಿಸಿದ್ದಾರೆ.

**तत्रायं भावः । ब्रह्म प्रति शरीरादेः पुरत्वादेरुक्तावपि दहराकाशस्थस्य न स्पष्टं ब्रह्मत्वं सिद्धम् । अन्यपुरेऽप्यन्यस्य वेश्मसम्भवात् । अन्यवेश्मन्यप्यन्यावस्थान-सम्भवाच्च ।**

ಟೀಕಾ ಮಾತಿನ ಅಭಿಪ್ರಾಯ ಹೀಗಿದೆ - ಬ್ರಹ್ಮನಿಗೆ ಶರೀರವು ಪಟ್ಟಣವಾಗಿದೆಯೆಂದು ಉಪನಿಷತ್ತು ಹೇಳುತ್ತಿದೆ. ಇದರಿಂದ ದಹರಾಕಾಶದಲ್ಲಿರುವವನು ಬ್ರಹ್ಮನೇ ಆಗಿದ್ದಾನೆಂದು ಸ್ಪಷ್ಟವಾಗಿ ಹೇಳಿದಂತಾಗುವುದಿಲ್ಲ. ಏಕೆಂದರೆ ಬೇರೆಯವರ ಪಟ್ಟಣದಲ್ಲಿ ಮತ್ತೊಬ್ಬರ ಮನೆ ಇರಬಾರದೆಂದೇನೂ ನಿಯಮವಿಲ್ಲ. ಹಾಗೂ ಬೇರೆಯವರ ಮನೆಯಲ್ಲಿ ಮತ್ತೊಬ್ಬ ಇರಬಾರದೆಂಬ ನಿಯಮವೂ ಕೂಡ ಇರುವುದಿಲ್ಲ. ಆದ್ದರಿಂದ ಬ್ರಹ್ಮನ ಪಟ್ಟಣವಾದ ಮಾತ್ರಕ್ಕೆ ಬ್ರಹ್ಮನೇ ಇರಬೇಕೆಂದಾಗಲೀ, ಬ್ರಹ್ಮನ ಮನೆ ಎಂದಾದ ಮಾತ್ರಕ್ಕೆ ಬ್ರಹ್ಮನೇ ಇರಬೇಕೆಂಬುದಾಗಿ ನಿಯಮವನ್ನು ಮಾಡಲಾಗದು.

**तथाच दहराकाशस्थमन्वेष्टव्यमिति सामान्योक्तौ किं तदित्यत्राधेयस्वरूपप्रश्नः।**

ಆದ್ದರಿಂದ ದಹರಾಕಾಶದಲ್ಲಿರುವವನನ್ನು ಅನ್ವೇಷಣೆ ಮಾಡಬೇಕೆಂದು ಸಾಮಾನ್ಯವಾಗಿ ಹೇಳಿದ ಮೇಲೆ, 'ಕಿಂ ತದತ್ರ ವಿದ್ಯತೇ' ಎಂಬುದಾಗಿ ಆಧೇಯನ ಬಗ್ಗೆ ಅಂದರೆ ದಹರಾಕಾಶದಲ್ಲಿರುವವನ ಸ್ವರೂಪದ ಬಗ್ಗೆ ಪ್ರಶ್ನೆಯನ್ನು ಮಾಡಲಾಗಿದೆ ಹೊರತು, ದಹರಾಕಾಶದಲ್ಲಿರುವವನ ಮಹಿಮೆಯ ಬಗ್ಗೆ ಪ್ರಶ್ನೆಯನ್ನು ಮಾಡುತ್ತಿಲ್ಲ.

**तस्य च सन्निहितं यावान्वा इत्याद्युत्तरम् ।**

ಈ ಸ್ವರೂಪದ ಬಗ್ಗೆ ಪ್ರಶ್ನಿಸಿದಾಗ ಸನ್ನಿಹಿತವಾದ 'ಯಾವಾನ್ ವಾ ಅಯಮಾಕಾಶಃ' ಎಂಬ ವಾಕ್ಯವೇ ಉತ್ತರವನ್ನು ನೀಡುತ್ತಿದೆಯೆಂದು ಹೇಳಬೇಕು. ಹೊರತು, ವ್ಯವಹಿತವಾದ 'ಉಭೇ ಅಸ್ಮಿನ್' ಎಂಬ ವಾಕ್ಯವು ಉತ್ತರ ನೀಡುತ್ತಿದೆಯೆಂದು ಹೇಳಬಾರದು.

**तत्र सप्तम्यन्तेन हृदयननिमित्तकेन हृदयशब्देनान्तस्स्थत्वलिङ्गेन च दहरोऽस्मिन्नन्तराकाशस्तस्मिन्नत्यंतस्स्थत्वयुक्तपूर्ववाक्ये किं तदत्रेति प्रश्नवाक्ये च सप्तम्याऽऽधारत्वेनोक्तस्याकाशस्य प्रत्यभिज्ञायमानतया हृदयशब्देन भूताकाशमनूद्याकाशशब्देन प्रथमान्तेन ''तल्लिङ्गात्'' इति न्यायेन ब्रह्मणि मुख्येन प्रश्नवाक्ये किं तदिति प्रथमानिर्दिष्टाधेयस्य ब्रह्मत्वं विधाय ''यावान्वा अयमाकाशस्तावान्'' इत्यनेन च तस्य व्याप्तत्वोक्तेः ।**

'ಯಾವಾನ್ವಾ ಅಯಮಾಕಾಶಃ ತಾವಾನೇವ ಏಷ ಅಂತರ್ಹೃದಯೇ ಆಕಾಶಃ' ಎಂದು ಶ್ರುತಿಯು ಇರುತ್ತದೆ. ಛಾಂದೋಗ್ಯ ಭಾಷ್ಯದ ಪ್ರಕಾರ 'ಹೃದಯ' ಶಬ್ದಕ್ಕೆ 'ಆಕಾಶ' ಎಂದರ್ಥ. ಆಕಾಶವನ್ನು ಹೃದಯವೆಂದು ಹೇಗೆ ಕರೆಯುವುದು ಎಂದರೆ ? 'ಅಯಪಯಗತೌ' ಎಂಬ ಧಾತುವಿನಿಂದ 'ಹೃತ್ ಅಯ' ಎಂದು ಪದವಿಭಾಗ ಮಾಡಿದರೆ, 'ಹೃದಿ ಅಯನ' ಎಂಬ ನಿಮಿತ್ತದಿಂದ 'ಹೃದಿ ಗಚ್ಛತಿ' ಅಂದರೆ ಹೃದಯದಲ್ಲಿರುತ್ತಾನೆ ಎಂಬರ್ಥವು ಪ್ರಾಪ್ತವಾಗುತ್ತದೆ. ಆದ್ದರಿಂದ ಸಪ್ತಮ್ಯಂತವಾದ ಹೃದಯ ಶಬ್ದದಿಂದ ಆಕಾಶವು ಪ್ರತಿಪಾದ್ಯವಾಗುತ್ತದೆ. ಹಿಂದೆ 'ದಹರೋಽಸ್ಮಿನ್ನಂತರಾಕಾಶಃ' ಎಂಬುದಾಗಿ ಆಕಾಶದಲ್ಲಿ ಅಂತಃಸ್ಥತ್ವವನ್ನು ಹೇಳಲಾಗಿತ್ತು. ಇಲ್ಲಿಯೂ ಕೂಡ 'ಅಂತರ್ಹೃದಯೇ' ಎಂಬುದಾಗಿ ಅದೇ ಅಂತಸ್ಥತ್ವಲಿಂಗವನ್ನು ಹೇಳಲಾಗಿದೆ. ಹೀಗೆ ಅಂತಃಸ್ಥತ್ವವೆಂಬ ಲಿಂಗವೂ ಪ್ರತ್ಯಭಿಜ್ಞಾಯಮಾನ-ವಾಗಿದೆ. ಮತ್ತು ಹಿಂದೆ ಆಕಾಶವನ್ನು 'ತಸ್ಮಿನ್' ಎಂಬುದಾಗಿ ಸಪ್ತಮ್ಯಂತವಾದ ಪದದಿಂದ ಕರೆಯಲಾಗಿತ್ತು. ಮತ್ತು ಪ್ರಶ್ನವಾಕ್ಯದಲ್ಲಿಯೂ ಕೂಡ 'ಕಿಂ ತದತ್ರ' ಎಂಬುದಾಗಿ ಸಪ್ತಮ್ಯಂತವಾದ ಪದದಿಂದಲೇ ಕರೆಯಲಾಗಿದೆ. ಇಲ್ಲಿಯೂ ಕೂಡ 'ಅಂತರ್ಹೃದಯೇ' ಎಂಬುದಾಗಿ ಸಪ್ತಮೀ ವಿಭಕ್ತ್ಯಂತವಾದ ಪದದಿಂದಲೇ ಪ್ರಯೋಗ ಮಾಡಿದ್ದರಿಂದ ಹಿಂದೆ ಯಾವ ಆಕಾಶವು ಹೇಳಲ್ಪಟ್ಟಿದೆಯೋ, ಅದೇ ಆಕಾಶವು ಇಲ್ಲಿಯೂ ಸಹ ಹೇಳಲ್ಪಟ್ಟಿದೆಯೆಂದು ತಿಳಿಯುತ್ತದೆ.

ಮತ್ತು 'ಅಂತರ್ಹೃದಯೇ ಆಕಾಶಃ' ಎಂಬಲ್ಲಿರುವ ಆಕಾಶಶಬ್ದವು ಪರಮಾತ್ಮ ವಾಚಕವಾಗಿದೆ. ವ್ಯಾಪ್ತತ್ವ, ದ್ಯಾವಾಪೃಥಿವ್ಯಾದ್ಯಾಶ್ರಯತ್ವ ಮೊದಲಾದ ಪರಮಾತ್ಮನ ಲಿಂಗಗಳು ಶ್ರುತವಾದ್ದರಿಂದ 'ಆಕಾಶಸ್ತಲ್ಲಿಂಗಾತ್' ಎಂಬ ನ್ಯಾಯದಂತೆ ಆಕಾಶಶಬ್ದವು ಮುಖ್ಯವಾಗಿ ಪರಮಾತ್ಮ ಪರವಾಗುತ್ತದೆಂದು ನಿರ್ಣಯವಾಗುತ್ತದೆ. ಹೀಗೆ ಆಕಾಶಶಬ್ದವು ಪರಮಾತ್ಮ ಪರವೇ ಆಗಿದೆಯೆನ್ನಲು ಮತ್ತೊಂದು ಜ್ಞಾಪಕವಿದೆ. ಹಿಂದೆ 'ಯತ್ ತದನ್ವೇಷ್ಟವ್ಯಂ' ಎಂಬಲ್ಲಿ ಪ್ರಥಮಾ ವಿಭಕ್ತಿಯಿಂದ ಆಕಾಶವನ್ನು ಕರೆಯಲಾಗಿದೆ. ಅದೇ ಆಕಾಶವನ್ನು ಇಲ್ಲಿ 'ಆಕಾಶಃ' ಎಂದು ಪ್ರಥಮಾ ವಿಭಕ್ತಿಯಲ್ಲೇ ಕರೆದಿದ್ದರಿಂದ, ಸಮಾನವಿಭಕ್ತಿಕತ್ವ ಎಂಬ ಸಾಮ್ಯವಿರುವ ಪ್ರಯುಕ್ತ 'ಆಕಾಶ' ಶಬ್ದದಿಂದ ಪ್ರತಿಪಾದ್ಯನಾದವನು ಪರಮಾತ್ಮನೇ ಆಗಿದ್ದಾನೆಂದು ನಿಶ್ಚಯವಾಗುತ್ತದೆ. ಆದ್ದರಿಂದ ಹೃದಯಪುಂಡರೀಕದಲ್ಲಿರುವ ಆಕಾಶದಲ್ಲಿ ಆಕಾಶನಾಮಕನಾದ ಪರಮಾತ್ಮನು ಇರುತ್ತಾನೆ. ಇವನು ವ್ಯಾಪ್ತನಾಗಿದ್ದಾನೆ ಮತ್ತು ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನಾಗಿದ್ದಾನೆಂದು ಛಾಂದೋಗ್ಯ ಭಾಷ್ಯದ ಪ್ರಕಾರ ಅರ್ಥವನ್ನು ತಿಳಿದಂತಾಗುತ್ತದೆ.

**अस्मिन्पक्षे प्रश्नोत्तरयोस्तुल्यविभक्तिताऽप्यस्ति । व्यवहितम् "उभे अस्मिन्" इत्यादिकं तु जिज्ञास्यत्वोपपादकम् ।**

ಛಾಂದೋಗ್ಯಭಾಷ್ಯದ ಪ್ರಕಾರ ಹೀಗೆ ವ್ಯಾಖ್ಯಾನವನ್ನು ತಿಳಿದರೆ ಪ್ರಶ್ನೋತ್ತರಗಳಿಗೆ ಸಮಾನ ವಿಷಯಕತ್ವವಷ್ಟೇ ಅಲ್ಲದೇ ಸಮಾನ ವಿಭಕ್ತಿಯನ್ನೂ ಕೂಡ ಹೊಂದಿಸಿದಂತಾಗುತ್ತದೆ.

ಆಧಾರವಾದದ್ದನ್ನು ಸಪ್ತಮೀ ವಿಭಕ್ತಿಯಲ್ಲಿಯೂ ಆಧೇಯವಾದದ್ದನ್ನು ಪ್ರಥಮಾವಿಭಕ್ತಿಯಲ್ಲೂ ಸಮಾನವಾಗಿ ಹೇಳಿದಂತಾಗುತ್ತದೆ. ವ್ಯವಹಿತವಾದ (ದೂರದಲ್ಲಿರುವ) 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯವಾದರೂ ಕೂಡ ಬ್ರಹ್ಮನ ಜಿಜ್ಞಾಸ್ಯತ್ವಕ್ಕೆ ಉಪಪಾದಕವಾಗಿದೆಯೆಂದು ತಿಳಿಯಬೇಕು.

**नतु तत्र सप्तम्या ''किं तत्र विद्यते'' इति प्रश्नवाक्यस्थाधारोक्तिः । न वा ''उभे'' इत्यादिना प्रथमान्तेन प्रश्नवाक्यस्थाधारप्रतियोगिकाधेयोक्तिः ।**

ಇದರಿಂದ ಪೂರ್ವಪಕ್ಷಿಯ ಮತ್ತೊಂದು ಭ್ರಾಂತಿಯನ್ನು ನಿರಾಕರಿಸಿದಂತಾಯಿತು. 'ಉಭೇ ಅಸ್ಮಿನ್' ಎಂಬ ವಾಕ್ಯದಲ್ಲಿಯೂ ಕೂಡ 'ಅಸ್ಮಿನ್' ಎಂಬ ಸಪ್ತಮ್ಯಂತವಾದ ಪದವಿದೆ. ಇಲ್ಲಿರುವ ಸಪ್ತಮ್ಯಂತವಾದ ಈ ಪದದಿಂದ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನವಾಕ್ಯದಲ್ಲಿ ಹೇಳಲ್ಪಟ್ಟ ವಿಷಯವೇ ಇಲ್ಲಿ ಹೇಳಲ್ಪಟ್ಟಿದೆಯೆಂದಾಗಲೀ, ಅಥವಾ 'ಉಭೇ' ಎಂಬ ಪ್ರಥಮಾವಿಭಕ್ತ್ಯಂತವಾದ ಪದದಿಂದ ಪ್ರಶ್ನವಾಕ್ಯದಲ್ಲಿರುವ ಆಧಾರಪ್ರತಿಯೋಗಿಯಾದ ಆಧೇಯವು ಹೇಳಲ್ಪಟ್ಟಿದೆಯೆಂದಾಗಲೀ ಇಲ್ಲಿ ವಿವಕ್ಷಿಸಬಾರದು. ಕಾರಣವೇನೆಂದರೆ 'ಉಭೇ ಅಸ್ಮಿನ್' ಎಂಬ ವಾಕ್ಯವು ವ್ಯವಹಿತವಾಗಿದೆ. ಈ ವಾಕ್ಯಕ್ಕೂ ಪ್ರಶ್ನಿಸುವ ವಾಕ್ಯಕ್ಕೂ ಮಧ್ಯದಲ್ಲಿ 'ಯಾವಾನ್ವಾ' ಎಂಬ ವಾಕ್ಯದ ತಡೆಯಿದೆ. ಆದ್ದರಿಂದ ಸನ್ನಿಹಿತವಾದ 'ಯಾವಾನ್ವಾ' ಎಂಬ ವಾಕ್ಯದ ಜೊತೆಗೆ ಸಮಾನ ವಿಭಕ್ತಿ ಮೊದಲಾದವುಗಳನ್ನು ಚಿಂತನೆ ಮಾಡಬೇಕೇ ಹೊರತು, ವ್ಯವಹಿತವಾದ 'ಉಭೇ ಅಸ್ಮಿನ್' ಎಂಬ ವಾಕ್ಯದ ಜೊತೆಗೆ ಸಮಾನ ವಿಭಕ್ತಿ ಮೊದಲಾದವುಗಳನ್ನು ಚಿಂತನೆ ಮಾಡಬಾರದು.

**यथाहि लोके को वाऽन्तर्वर्तते योऽसौ संसेव्य इति चोदिते राजाऽन्तर्वर्तते तस्मिन्राष्ट्रं सर्वं समाहितमित्युक्ते आधेयप्रश्नस्य सन्निहितं राजेत्यादिकमेवोत्तरम् । व्यवहितं तु राष्ट्रमित्यादिकं संसेव्यत्वोपपादकम् । तद्वत् ।**

ಈ ವಿಷಯದಲ್ಲಿ ಒಳ್ಳೆಯ ಉದಾಹರಣೆ ಹೀಗಿದೆ - ಯಾರು ಒಳಗಿದ್ದಾರೆ, ಯಾರನ್ನು ನಾನು ಸೇವಿಸಬೇಕು? ಎಂದು ಪ್ರಶ್ನಿಸಿದಾಗ. ರಾಜನು ಒಳಗಿದ್ದಾನೆ; ಅವನಲ್ಲಿ ರಾಷ್ಟ್ರವು ಇರುತ್ತದೆ (ರಾಷ್ಟ್ರವು ಅವನ ಅಧೀನವಾಗಿದೆ) ಎಂದು ಉತ್ತರಿಸುತ್ತಾನೆ. ಇಲ್ಲಿ ಒಳಗಿರುವವನು ಯಾರು? ಎಂಬುದಾಗಿ ಆಧೇಯದ ಬಗ್ಗೆ ಪ್ರಶ್ನಿಸಿದಾಗ ಸನ್ನಿಹಿತವಾದ ರಾಜನು ಒಳಗಿದ್ದಾನೆ ಎಂಬ ವಾಕ್ಯವೇ ಉತ್ತರವಾಗುತ್ತದೆ ಹೊರತು, ದೂರದಲ್ಲಿರುವ ರಾಷ್ಟ್ರವು ಅವನಲ್ಲಿದೆ ಎಂಬ ವಾಕ್ಯವು ಉತ್ತರವಾಗುವುದಿಲ್ಲ. ಅದು ಕೇವಲ ನೀನು ರಾಜನನ್ನು ಸೇವನೆ ಮಾಡಬೇಕು. ಏಕೆಂದರೆ ರಾಷ್ಟ್ರವೇ ಅವನ ಅಧೀನವಾಗಿದೆ. ಎಂಬುದಾಗಿ ಸೇವೆ ಮಾಡಲು ಕಾರಣವನ್ನಷ್ಟೇ ತಿಳಿಸಲು ಹೊರಟಿರುತ್ತದೆ. ಅದರಂತೆ ಪ್ರಕೃತದಲ್ಲಿಯೂ ಸನ್ನಿಹಿತವಾದ ವಾಕ್ಯವನ್ನೇ ಉತ್ತರವಾಕ್ಯವೆಂದು ತಿಳಿಯಬೇಕು. ದೂರದಲ್ಲಿರುವ ವಾಕ್ಯವನ್ನು ಆಧೇಯದ ಬಗ್ಗೆ ಉತ್ತರವೆಂದು ತಿಳಿಯಬಾರದು.

**उक्तं चास्यामेव श्रुतावुपरि "तस्यैतदेव निरुक्तं हृदयमिति । तस्माद्धृदयम्" इति हृदयशब्दस्य हृदयननिमित्तकत्वम् ।**

ಇದೇ ಶ್ರುತಿಯಲ್ಲಿ ಮುಂದೆ 'ತಸ್ಯೈತದೇವ ನಿರುಕ್ತಂ ಹೃದಯಮ್ ಇತಿ । ತಸ್ಮಾತ್ ಹೃದಯಮ್' ಎಂಬುದಾಗಿ ಹೃದಯ ಶಬ್ದಕ್ಕೆ 'ಹೃದಿ ಅಯನ' ಎಂಬ ಯೋಗವಿಭಾಗದಿಂದ ಹೃದಯದಲ್ಲಿರುವಿಕೆಯೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ ಅರ್ಥವನ್ನು ಹೇಳಲಾಗಿದೆ.

**अस्मिंश्च पक्षे "दहरोऽस्मिन्नन्तराकाशः" इति वाक्यस्थ आकाशो भूताकाशः । दहरत्वादन्वेष्टव्यं प्रत्याधारत्वाच्च । यावानिति वाक्यस्थस्तु ब्रह्माकाशः । पूर्णत्वादन्वेष्टव्यत्वाद् द्यावापृथिव्याद्याधारत्वाच्चेति ।**

ಈ ಛಾಂದೋಗ್ಯಭಾಷ್ಯದ ವ್ಯಾಖ್ಯಾನವನ್ನು ಅನುಸರಿಸಿದ ಪಕ್ಷದಲ್ಲಿ 'ದಹರೋऽಸ್ಮಿನ್ನಂತರಾಕಾಶಃ' ಎಂಬ ವಾಕ್ಯದಲ್ಲಿರುವ 'ಆಕಾಶ' ಶಬ್ದವು ಭೂತಾಕಾಶವನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ ಅಲ್ಪವಾಗಿರುವುದರಿಂದ ಮತ್ತು ಅನ್ವೇಷ್ಟವ್ಯಕ್ಕೆ ಆಧಾರವಾಗಿರುವುದರಿಂದ. 'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಆಕಾಶವು ಬ್ರಹ್ಮಪರವಾಗಿದೆ. ಏಕೆಂದರೆ ಪೂರ್ಣವಾದ್ದರಿಂದ ಮತ್ತು ಅನ್ವೇಷ್ಟವ್ಯವಾದ್ದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯವೂ ಕೂಡ ಆಗಿರುವುದರಿಂದ.

**प्रकाशः –**

**अत्र परिहारान्तरमप्यनुसन्धेयमिति भावेन टीकोक्तपक्षान्तरं मूलोक्तिपूर्वं प्रागुक्तरीत्या ब्रह्मान्वेष्टव्यम् इत्यस्य लाभेन पुनः 'किं तदत्र विद्यते' इत्यन्वेष्टव्यस्वरूपप्रश्नायोगेन परिहारस्य ब्रह्मस्वरूपाविषयत्वादिति प्रतीतानुपपत्ति-निरासेन व्यनक्ति – छान्दोग्येति ।।**

**ವಿವರಣೆ** - ಇಲ್ಲಿಯ ತನಕ ಸೂತ್ರ ಪ್ರಸ್ಥಾನಕ್ಕೆ ಸಂಬಂಧಪಟ್ಟ ನ್ಯಾಯವಿವರಣವನ್ನು ಅನುಸರಿಸಿ ಶ್ರುತಿಗೆ ವ್ಯಾಖ್ಯಾನಿಸುವ ಮೂಲಕ ಹೃತ್ಪದ್ಮಸ್ಥನಾದವನು ಪರಮಾತ್ಮನೇ ಆಗಿದ್ದಾನೆಂದು ಸಮರ್ಥಿಸಿದರು. ಈಗ ಉಪನಿಷತ್‌ಪ್ರಸ್ಥಾನಕ್ಕೆ ಸಂಬಂಧಪಟ್ಟಂತೆ, ಛಾಂದೋಗ್ಯಭಾಷ್ಯದಲ್ಲಿ ವಿಷಯವಾಕ್ಯಕ್ಕೆ ಹೇಗೆ ವ್ಯಾಖ್ಯಾನ ಮಾಡಿದ್ದಾರೆಂಬುದನ್ನು ಅನುವಾದ ಮಾಡುತ್ತಾ ಮತ್ತೊಂದು ಪಕ್ಷವನ್ನು ಸಮರ್ಥಿಸುತ್ತಿದ್ದಾರೆ. ಟೀಕೆಯಲ್ಲಿ ಛಾಂದೋಗ್ಯಭಾಷ್ಯದ ಈ ಪಕ್ಷವನ್ನು 'ಅಥವಾ' ಇತ್ಯಾದಿ ವಾಕ್ಯಗಳಿಂದ ನಿರೂಪಣೆ ಮಾಡಿದ್ದಾರೆ ಅದಕ್ಕೆ ಛಾಂದೋಗ್ಯಭಾಷ್ಯವೇ ಮೂಲವಾಗಿದೆ ಎಂದು ಪ್ರಕೃತ ಗ್ರಂಥಕಾರರು ತೋರಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಈ ಪಕ್ಷದಲ್ಲಿ 'ಬ್ರಹ್ಮಾನ್ವೇಷ್ಟವ್ಯಮ್' ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕೆಂದು ಮೊದಲೇ ತಿಳಿದಿರುವಾಗ ಪುನಃ 'ಕಿಂ ತದತ್ರ ವಿದ್ಯತೇ' ಎಂಬುದಾಗಿ ಅನ್ವೇಷ್ಟವ್ಯನಾದ ಬ್ರಹ್ಮನ ಸ್ವರೂಪದ ಬಗ್ಗೆ ಪ್ರಶ್ನಿಸುವುದು ತಪ್ಪಾಗುತ್ತದೆ. ಆದ್ದರಿಂದ ಉತ್ತರ ನೀಡುವ ವಾಕ್ಯವು ಬ್ರಹ್ಮಸ್ವರೂಪವಿಷಯವೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಆಪಾತತಃ ತೋರುವ ಅನುಪಪತ್ತಿಯನ್ನು ನಿರಾಕರಿಸುತ್ತಾ ಟೀಕಾ ಮಾತುಗಳನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಛಾಂದೋಗ್ಯ ಭಾಷ್ಯೇ ತು' ಇತ್ಯಾದಿ ಗ್ರಂಥದಿಂದ.

**प्रकाशः – शरीरादेरित्यादिपदेन 'हृत्पुण्डरीकम् गृह्यते' । 'पुरत्वादेः' इत्यादि पदेन वेश्म गृह्यते ।। हृदयनेति ।। हृद्युपपदे ''अय गतौ'' इत्यस्माद्धातोः पचादित्वादच्प्रत्यये हृद्गतवाचिना हृदयशब्देनेत्यर्थः ।**

'ಶರೀರಾದೇಃ' ಎಂಬ ಆದಿಪದದಿಂದ ಹೃತ್ಪುಂಡರೀಕವನ್ನು ತೆಗೆದುಕೊಳ್ಳಬೇಕು. 'ಪುರಾತ್ವಾದೇಃ' ಎಂಬ ಆದಿಪದದಿಂದ 'ವೇಶ್ಮ' ಎಂಬುದನ್ನು ತೆಗೆದುಕೊಳ್ಳಬೇಕು. 'ಹೃದಯನ' ಎಂಬುದರ ಅರ್ಥ ಹೀಗಿದೆ - 'ಹೃತ್' ಎಂಬ ಉಪಪದ ಮೇಲೆ 'ಅಯ ಗತೌ' ಎಂಬ ಧಾತು ಇರುತ್ತದೆ. ಅಯ ಧಾತುವಿಗೆ 'ಪಚಾದ್ಯಚ್' ಎಂಬುದಾಗಿ 'ಅಚ್' ಪ್ರತ್ಯಯವನ್ನು ಹೇಳಿದಾಗ 'ಅಯ್' ಧಾತುವಿಗೆ ಅಕಾರವು ಅಯ ಎಂದಾಗುತ್ತದೆ. 'ಹೃತ್ + ಅಯ = ಹೃದಯ' ಎಂದು ಶಬ್ದವು ನಿಷ್ಪನ್ನವಾಗುತ್ತದೆ. ಆದ್ದರಿಂದ ಹೃದಯದಲ್ಲಿರುವವನು ಎಂಬರ್ಥವು ಹೃದಯಶಬ್ದದಿಂದಲೇ ತಿಳಿಯುತ್ತದೆಂದು ಭಾವಿಸಬೇಕು.

**प्रकाशः – हृदयनमप्यन्यस्य स्यादित्यत उक्तम् – अन्तःस्थत्वलिङ्गेनेत्यादि ।। अन्तश्शब्दसमानाधिकृतत्वलिङ्गेनेत्यर्थः ।**

ಹೃದಯದಲ್ಲಿರುವುದು ಆಕಾಶವೇ ಏಕಾಗಬೇಕು? ಎಂಬ ಪ್ರಶ್ನೆಗೆ 'ಅಂತಃಸ್ಥತ್ವಲಿಂಗೇನ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಅಂತಃ' ಎಂಬ ಶಬ್ದವು ಆಕಾಶವನ್ನೇ ಹೇಳುತ್ತಿರುವುದರಿಂದ, ಅದರ ಎಂದರೆ 'ಅಂತಃ' ಎಂಬ ಶಬ್ದದ ಜೊತೆಗೆ ಸಾಮಾನಾಧಿಕರಣ್ಯವನ್ನು ಹೊಂದಿರುವುದರಿಂದ ಹೃದಯಶಬ್ದವು ಆಕಾಶವನ್ನೇ ಹೇಳುತ್ತದೆ.

**प्रकाशः – इति न्यायेनेति ।। अत्रापि सर्वाधारत्वरूपब्रह्मलिङ्गश्रवणादिति भावः । पूर्वस्मादप्यस्य पक्षस्य विशेषोऽस्तीत्याह – अस्मिन्निति ।।**

'ತಲ್ಲಿಂಗಾದಿತಿ ನ್ಯಾಯೇನ' ಎಂದು ಹೇಳಿದರು. ಇಲ್ಲಿಯೂ ಕೂಡ ಸರ್ವಾಧಾರತ್ವವೆಂಬ ಬ್ರಹ್ಮನ ಲಿಂಗವು ಕೇಳಿಸುತ್ತಿರುವುದರಿಂದ ಆಕಾಶಶಬ್ದವು ಪರಮಾತ್ಮ ಪರವಾಗುತ್ತದೆಂದು ಆಕಾಶಾಧಿಕರಣ ನ್ಯಾಯದಿಂದ ತಿಳಿಯಬೇಕು ಎಂದಭಿಪ್ರಾಯ. ನ್ಯಾಯವಿವರಣ ಪಕ್ಷಕ್ಕಿಂತ ಈ ಪಕ್ಷದಲ್ಲಿ ತುಲ್ಯವಿಭಕ್ತಿಕತ್ವ ಎಂಬ ಹೆಚ್ಚಿನ ಸ್ವಾರಸ್ಯವೂ ಕೂಡ ಇರುತ್ತದೆಂದು 'ಅಸ್ಮಿನ್' ಎಂಬ ವಾಕ್ಯದಿಂದ ಹೇಳಿರುತ್ತಾರೆ.

**प्रकाशः** – नन्वेवमाधेयप्रश्नस्य 'यावान्' इत्यनेनैवोत्तरितत्वेन 'उभे अस्मिन्' इत्यादिकं व्यर्थमित्यत आह – **व्यवहितमिति** ।। सन्निहितव्यवहितपदे हेतुगर्भे इति भावेन तत्फलमाह – **न त्विति** ।।

ಆಧೇಯದ ಬಗ್ಗೆ ಪ್ರಶ್ನಿಸಿದಾಗ 'ಯಾವಾನ್ವಾ' ಇತ್ಯಾದಿ ವಾಕ್ಯದಿಂದಲೇ ಉತ್ತರಿಸಿದಂತಾಯಿತು. ಪುನಃ 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯವನ್ನು ಹೇಳಿದ್ದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ, 'ವ್ಯವಹಿತಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಗ್ರಂಥದಲ್ಲಿರುವ ಸನ್ನಿಹಿತ ಮತ್ತು ವ್ಯವಹಿತ ಎಂಬೆರಡು ಪದಗಳು ಹೇತುಗರ್ಭಿತವಾಗಿವೆಯೆಂಬ ಅಭಿಪ್ರಾಯದಿಂದ ಅದರ ಪ್ರಯೋಜನವನ್ನು 'ನತು' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**प्रकाशः** – तद्दृष्टान्तेन व्यनक्ति ।। **यथा हीति** ।। **चोदिते** शङ्किते सतीत्यर्थः । एतेन ''स च पृथिव्याद्याश्रयत्वात्'' इत्यादिटीका विवृता ।

ಇದನ್ನೇ ದೃಷ್ಟಾಂತಪುರಸ್ಸರವಾಗಿ ವ್ಯಾಖ್ಯಾನಿಸುತ್ತಿದ್ದಾರೆ 'ಯಥಾ ಹಿ' ಇತ್ಯಾದಿ ವಾಕ್ಯದಿಂದ. 'ಚೋದಿತೇ' ಎಂಬ ಶಬ್ದಕ್ಕೆ ಪ್ರಶ್ನಿಸಲು ಎಂದರ್ಥ. ಹೀಗೆ ಹೇಳಿದ್ದರಿಂದ 'ಸ ಚ ಪೃಥಿವ್ಯಾದ್ಯಾಶ್ರಯತ್ವಾತ್' ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು.

**प्रकाशः** – हृदयशब्दस्य रूढ्या मनःपरत्वाद्योगेन दुर्बलेन कथमेतदर्थग्रहणमित्यतो वाक्यशेषबलादाज्यादिशब्दवददोष इत्याह – **उक्तञ्चेति** ।।

ಹೃದಯ ಶಬ್ದವು ಸಾಮಾನ್ಯವಾಗಿ ರೂಢಿಯಿಂದ 'ಮನಸ್ಸು' ಎಂಬರ್ಥವನ್ನೇ ಹೇಳುತ್ತದೆ. ಹೀಗಿರುವಾಗ ದುರ್ಬಲವಾದ ಯೋಗದಿಂದ 'ಆಕಾಶ' ಎಂಬರ್ಥವನ್ನು ತೆಗೆದುಕೊಳ್ಳುವುದು ಅಸ್ವರಸ್ವವಲ್ಲವೇ? ಎಂಬ ಪ್ರಶ್ನೆಗೆ ವಾಕ್ಯಶೇಷದ ಬಲದಿಂದ ಆಜ್ಯಾದಿಶಬ್ದಗಳಂತೆ ರೂಢಾರ್ಥವನ್ನು ಬಿಟ್ಟು ಯೋಗಾರ್ಥವನ್ನು ಸ್ವೀಕರಿಸುವುದು ತಪ್ಪಲ್ಲವೆಂಬ ಅಭಿಪ್ರಾಯದಿಂದ 'ಉಕ್ತಂಚ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः** – ननूक्तमत्र पूर्वोक्तप्रसिद्धाकाशस्यैवेहापि ''यावान्वा अयमाकाशः'' इत्याकाशश्रुत्या प्रत्यभिज्ञानादाकाशो न विष्णुरिति तत्राह – **अस्मिंश्चेति** ।। बाधकात्प्रत्यभिज्ञा बाध्यत इति भावः ।

'ದಹರೋಽಸ್ಮಿನ್ ಆಕಾಶಃ' ಎಂಬಲ್ಲಿಯೂ ಕೂಡ ಆಕಾಶ ಶಬ್ದವಿದೆ. ಅದರಂತೆ 'ಯಾವಾನ್ವಾ ಅಯಮಾಕಾಶಃ' ಎಂಬಲ್ಲಿಯೂ ಕೂಡ ಆಕಾಶ ಶಬ್ದವಿದೆ. ಹೀಗಿರುವಾಗ ಹಿಂದಿರುವ 'ಆಕಾಶ' ಶಬ್ದವು ಪ್ರಸಿದ್ಧವಾದ ಆಕಾಶವನ್ನು ಹೇಳಿದ ಮೇಲೆ ಇಲ್ಲಿಯೂ ಕೂಡ ಅದನ್ನೇ ಹೇಳಬೇಕು. ವಿಷ್ಣುವೆಂಬರ್ಥವನ್ನು ಹೇಳಲು ಸಾಧ್ಯವಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಅಸ್ಮಿಂಶ್ಚ' ವಾಕ್ಯದಿಂದ ವಾಕ್ಯದಿಂದ ಉತ್ತರಿಸಿದ್ದಾರೆ. ಒಂದೇ ಆಕಾಶ ಶಬ್ದವಿದ್ದರೂ ಕೂಡ ಬಾಧಕವಿರುವ ಕಾರಣ ಇಲ್ಲಿರುವ ಆಕಾಶ ಶಬ್ದಕ್ಕೆ ವಿಷ್ಣುವೆಂಬರ್ಥವನ್ನೇ

ಸ್ವೀಕರಿಸಬೇಕು. ಹಾಗೂ ಬಾಧಕವಿರುವ ಕಾರಣದಿಂದಲೇ ಪ್ರತ್ಯಭಿಜ್ಞಾನವನ್ನು ಬಿಡಬೇಕು ಎಂದು ಅಭಿಪ್ರಾಯ.

**प्रकाशः – ब्रह्माकाश इति ।।** ''आ समन्तात्काशनादासमन्तात्कमश्नातीति वा। 'अस्मिन्कामास्समाहिताः' इति वाक्यशेषात् । आ समन्तात्कामानश्नातीति वा'' इति छान्दोग्यभाष्योक्तव्युत्पत्त्येति ध्येयम् ।

'ಬ್ರಹ್ಮಾಕಾಶಃ' 'ಬ್ರಹ್ಮನು ಆಕಾಶ' ಎಂದು ಗ್ರಂಥದಲ್ಲಿದೆ. 'ಆ ಸಮಂತಾತ್ ಕಾಶನಾದಾಸಮಂತಾತ್ ಕಮಶ್ನಾತೀತಿ ವಾ । ಅಸ್ಮಿನ್ ಕಾಮಾಸ್ಸಮಾಹಿತಾ ಇತಿ ವಾಕ್ಯಶೇಷಾತ್ । ಆ ಸಮಂತಾತ್ ಕಾಮಾನಶ್ನಾತೀತಿ ವಾ' 'ಆ ಸಮಂತಾತ್ ಕಾಮಾನಶ್ನಾತಿ' ಎಲ್ಲೆಡೆ ಪ್ರಕಾಶನಾಗುತ್ತಾನಾದ್ದರಿಂದ ಆಕಾಶನಾಗಿದ್ದಾನೆ. ಅಥವಾ 'ಆ ಸಮಂತಾತ್ ಕಮ್ ಅಶ್ನಾತಿ' ಸಂಪೂರ್ಣವಾದ ಸುಖವನ್ನು ಅನುಭವಿಸುತ್ತಾನಾದ್ದರಿಂದ ಆಕಾಶನಾಗಿದ್ದಾನೆ. ಅಥವಾ 'ಆ ಸಮಂತಾತ್ ಕಾಮಾನ್ ಅಶ್ನಾತಿ' ಎಂಬ ವ್ಯುತ್ಪತ್ತಿಯಿಂದ ಸಕಲವಿಧವಾದ ಕಾಮನೆಗಳನ್ನು ತಿನ್ನುತ್ತಾನಾದ್ದರಿಂದಲೂ ಆಕಾಶನಾಗಿದ್ದಾನೆಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿರುತ್ತಾರೆ. ಈ ಮೂರು ಬಗೆಯ ವ್ಯುತ್ಪತ್ತಿಯಿಂದ ಆಕಾಶಶಬ್ದ ಪ್ರತಿಪಾದ್ಯನಾದವನು ಪರಮಾತ್ಮನೇ ಆಗಿದ್ದಾನೆಂದು ತಿಳಿಯಬೇಕು.

**गुरुराजीयम्** – अथवेत्यादिटीकाऽनुपपन्ना । शरीरपुण्डरीकयोर्ब्रह्मप्रतिपुरत्व-वेश्मत्वोक्त्यैवान्वेष्टव्यस्य ब्रह्मत्वसिद्धेः कथं ब्रह्मावस्थाननिश्चयाभिप्रायेण किं तदित्यादिप्रश्नानुपपत्तेः पूर्वपक्षोत्तरपक्षयोर्भेदाप्रतीतेश्चेत्यतोऽभिप्रायमाह – अयं भाव इति ।।




ಛಾಂದೋಗ್ಯ ಭಾಷ್ಯದ ಪ್ರಕಾರ ವಿಷಯವಾಕ್ಯದ ಅರ್ಥವನ್ನು ಹೀಗೆ ತಿಳಿಯಬೇಕು - ಶಿಷ್ಯರಿಗೆ ಗುರುಗಳು ಹೀಗೆ ಹೇಳುತ್ತಾರೆ. ಶರೀರದಲ್ಲಿ ವ್ಯಾಪ್ತನಾದ ಪೂರ್ಣಗುಣವುಳ್ಳವನು, ಪೂರ್ಣಕಾಮನೂ ಆದ ಪರಮಾತ್ಮನಲ್ಲಿ ಹೃದಯಕಮಲವೆಂಬ ಸಣ್ಣಮನೆಯೂ ಆಶ್ರಿತವಾಗಿದೆ. ಈ ಮನೆಯಲ್ಲಿ ಸಣ್ಣ ಆಕಾಶವಿದೆ. ಆದರಲ್ಲಿರುವುದನ್ನು ಹುಡುಕಬೇಕು. ಮನನ ಮಾಡಬೇಕು.

ಶಿಷ್ಯರು ಗುರುಗಳನ್ನು ಹೀಗೆ ಪ್ರಶ್ನಿಸುತ್ತಾರೆ - ಸಣ್ಣದಾದ ಹೃದಯಕಮಲದಲ್ಲಿರುವ ಆಕಾಶದಲ್ಲಿ ಏನನ್ನು ಹುಡುಕಬೇಕು, ಏನನ್ನು ಮನನ ಮಾಡಬೇಕು ? ಎಂದು.

ಗುರುಗಳು ಉತ್ತರಿಸುತ್ತಾರೆ - ಶರೀರದಲ್ಲಿರುವ ಹೃದಯಕಮಲದಲ್ಲಿ ಸಣ್ಣ ಆಕಾಶವಿದೆ. ಆದರೊಳಗೆ ಆಕಾಶನಾಮಕನಾದ ಪರಬ್ರಹ್ಮನಿದ್ದಾನೆ. ಹೃದಯದ ಹೊರಗೆ ದೇಶ ಕಾಲಗುಣಗಳಿಂದ ಎಷ್ಟು ವ್ಯಾಪ್ತನಾಗಿದ್ದಾನೋ,

ಅದರಂತೆ ಹೃತ್ಕಮಲದಲ್ಲಿರುವ ಆಕಾಶದಲ್ಲಿಯೂ ವ್ಯಾಪ್ತನಾಗಿದ್ದಾನೆ. ಒಬ್ಬನೇ ಪರಬ್ರಹ್ಮನು, ಅಣುವೂ-ಮಹತ್ತೂ ಆಗಿರುವುದರಿಂದ ಇದು ಅಸಂಭಾವಿತವಲ್ಲ. ಆದ್ದರಿಂದ ಅವನನ್ನೇ ಮನನ ಮಾಡಬೇಕು. ಮುಕ್ತಾಮುಕ್ತರು, ಸಕಲ ಲೋಕಗಳು, ಸಕಲ ದೇವತೆಗಳು ಇವನನ್ನೇ ಆಶ್ರಿಯಿಸಿದ್ದಾರೆ.

ಹೀಗೆ ಛಾಂದೋಗ್ಯಭಾಷ್ಯದ ಪ್ರಕಾರ, ಶ್ರುತ್ಯರ್ಥವನ್ನು ತಿಳಿಯಬೇಕು. ಬ್ರಹ್ಮನ ಪಟ್ಟಣವೆನಿಸಿದ ಈ ಶರೀರದಲ್ಲಿ ಯಾವ ಹೃತ್ಕಮಲವೆಂಬ ಮನೆಯಿದೆಯೋ, ಆ ಮನೆಯಲ್ಲಿರುವ ಭೂತಾಕಾಶದಲ್ಲಿ ಪರಮಾತ್ಮನೆಂಬ ವಸ್ತುವಿದೆಯೆಂದು ಹೇಳಿದಂತಾಯಿತು. ಆದ್ದರಿಂದ 'ಅಂತರ್ಹೃದಯೇ ಆಕಾಶಃ' ಎಂಬ ಮುಂದಿನ ವಾಕ್ಯದಲ್ಲಿರುವ ಹೃದಯಶಬ್ದದಿಂದ ಅಂತಃಕರಣದಲ್ಲಿರುವ ಭೂತಾಕಾಶವನ್ನು ಹೇಳಲಾಗಿದೆ ಹೊರತು, ಅಂತಃಕರಣವನ್ನಲ್ಲ. 'ಹೃದಿ ಅಯನಾತ್ ಹೃದಯಂ' ಅಂತಃಕರಣದಲ್ಲಿರುವುದರಿಂದ ಹೃದಯವೆನಿಸಿದೆ ಎಂಬ ವ್ಯುತ್ಪತ್ತಿಯನ್ನಿಟ್ಟುಕೊಂಡಾಗ ಹೃದಯ ಶಬ್ದವು ಅಂತಃಕರಣದಲ್ಲಿರುವ ಭೂತಾಕಾಶವನ್ನು ಪ್ರತಿಪಾದಿಸುತ್ತದೆ. ಹೀಗೆ 'ಅಂತರ್ಹೃದಯೇ ಆಕಾಶಃ' ಎಂಬ ಮುಂದಿನ ವಾಕ್ಯಕ್ಕೆ ಅಂತಃಕರಣದಲ್ಲಿರುವ ಭೂತಾಕಾಶದಲ್ಲಿ ಆಕಾಶನಾಮಕನಾದ ಪರಬ್ರಹ್ಮನಿದ್ದಾನೆಂದು ಅಭಿಪ್ರಾಯ ಹೊರತಾಗಿ, ಅಂತಃಕರಣದಲ್ಲಿ ಭೂತಾಕಾಶವಿದೆ ಎಂದಲ್ಲ. ಆದ್ದರಿಂದ 'ಅಂತರ್ಹೃದಯೇ ಆಕಾಶಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟಿರುವ ಆಕಾಶವು ಭೂತಾಕಾಶ ಪರವಾಗದೇ, ಬ್ರಹ್ಮಪರವೇ ಆಗುತ್ತದೆ.

'ದಹರೋऽಸ್ಮಿನ್ನಂತರಾಕಾಶಃ' ಎಂದು ಮೊದಲು ಹೇಳಿರುವ 'ಆಕಾಶ' ಶಬ್ದವು ಭೂತಾಕಾಶಪರವಾದರೆ, 'ಅಂತರ್ಹೃದಯ ಆಕಾಶಃ' ಎಂಬ ಮುಂದಿರುವ ಆಕಾಶವು ಭೂತಾಕಾಶವೇ ಆಗಲಿ, ಪರಬ್ರಹ್ಮನಲ್ಲವೆಂದು ಆಕ್ಷೇಪಮಾಡಬಾರದು. ಈ ಆಕಾಶವು ಭೂತಾಕಾಶ ಪರವಾದಲ್ಲಿ, 'ಉಭೇ ಅಸ್ಮಿನ್' ಇತ್ಯಾದಿಯಾಗಿ ಮುಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಸರ್ವಾಧಾರತ್ವ, ನಿತ್ಯತ್ವ, ಪೂರ್ಣಕಾಮತ್ವ ಮೊದಲಾದ ಧರ್ಮಗಳು ವಿರುದ್ಧವಾಗುತ್ತವೆ. ಆದ್ದರಿಂದ ಹಿಂದಿನ 'ಆಕಾಶ' ಶಬ್ದದಿಂದ ಭೂತಾಕಾಶವೇ ಪ್ರತಿಪಾದ್ಯವಾಗಿದೆ. ಮುಂದಿನ 'ಆಕಾಶ' ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ.

• • • • •

## ಹಲವು ಬಗೆಯಿಂದ ಪೂರ್ವಪಕ್ಷಕಾರರಿಗೆ ಅಸಾಂಗತ್ಯದೋಷ

## तात्पर्यचन्द्रिका

**पक्षद्वयेऽपि "अथ यदिदम्" इति वाक्ये ब्रह्मपुरशब्दः शरीरेऽपि वर्तते । "ब्रह्मपुरे सर्वं समाहितम् । एतत्सत्यं ब्रह्मपुरम्" इत्यादौ तु पूर्णत्वात्पुरमिति व्युत्पत्त्या ब्रह्मण्येवेति द्रष्टव्यम् ।**

ಅನುವಾದ - ಛಾಂದೋಗ್ಯ ಭಾಷ್ಯ ಹಾಗೂ ನ್ಯಾಯವಿವರಣ ಎರಡೂ ಪಕ್ಷಗಳಲ್ಲಿಯೂ 'ಅಥ ಯದಿದಮ್' ಎಂಬ ವಾಕ್ಯದಲ್ಲಿರುವ ಬ್ರಹ್ಮಪುರಶಬ್ದವು ಶರೀರವಾಚಕವಾಗಿದೆ. 'ಬ್ರಹ್ಮಪುರೇ ಸರ್ವಂ ಸಮಾಹಿತಮ್ । ಏತತ್ ಸತ್ಯಂ ಬ್ರಹ್ಮಪುರಮ್' ಇತ್ಯಾದಿ ಸ್ಥಳಗಳಲ್ಲಿ ಪುರಶಬ್ದವು 'ಪೂರ್ಣಾರ್ಥಕವಾದ್ದರಿಂದ 'ಪುರ' ಎನಿಸುತ್ತದೆ' ಎಂಬ ವ್ಯುತ್ಪತ್ತಿಯನ್ನು ಅವಲಂಬಿಸಿ

ಬ್ರಹ್ಮವಾಚಕವಾಗಿದೆ. ಆದ್ದರಿಂದ ಒಂದೇ ಪ್ರಕರಣದಲ್ಲಿದ್ದರೂ ಕೂಡ ಬೇರೆ ವಾಕ್ಯಗಳಲ್ಲಿರುವ ಬ್ರಹ್ಮಶಬ್ದಕ್ಕೆ ಬೇರೆ ಬೇರೆ ಅರ್ಥವನ್ನೇ ಹೇಳಬೇಕು.

**अत्र न्यायविवरणे ''आकाशपक्ष एवान्वयाभावः'' इत्युक्तम् । तद्विवृतं ''न चाकाशपक्षेऽन्वयोऽस्ति'' इत्यादिटीकायाम् ।**

ನ್ಯಾಯವಿವರಣದಲ್ಲಿ ಅನ್ವಯಾಭಾವದೋಷವು ಪೂರ್ವಪಕ್ಷಕಾರರಿಗೆ ಬರುತ್ತದೆಂದು 'ಆಕಾಶಪಕ್ಷ ಏವಾನ್ವಯಾಭಾವಃ' ಎಂದಿದ್ದಾರೆ. ಅದನ್ನು 'ನಚ ಆಕಾಶಪಕ್ಷೇ ಅನ್ವಯೋಽಸ್ತಿ' 'ಆಕಾಶಪಕ್ಷದಲ್ಲಿ ಅನ್ವಯವಿರುವುದಿಲ್ಲ' ಇತ್ಯಾದಿ ಟೀಕಾ ಮಾತುಗಳಿಂದ ವಿವರಿಸಿರುತ್ತಾರೆ.

**अत्रायं भावः । हृत्पद्मस्थाकाशस्थं किमिति पृष्टे आकाशं हृत्पद्मस्थमिति परिहारोऽनन्वितः । वैयधिकरण्यात् ।**

ನ್ಯಾಯವಿವರಣ ಹಾಗೂ ಟೀಕೆಯ ಅಭಿಪ್ರಾಯ ಹೀಗಿದೆ - ಹೃದಯಪದ್ಮದ ಆಕಾಶದಲ್ಲಿ ಏನಿದೆ? ಎಂದು ಪ್ರಶ್ನಿಸಿದಾಗ 'ಹೃದಯಪದ್ಮದಲ್ಲಿ ಆಕಾಶವಿದೆ' ಎಂಬ ಪರಿಹಾರವು ಅನನ್ವಿತವಾಗಿವೆ. ಅಂದರೆ ಆಕಾಶದಲ್ಲಿ ಏನಿದೆ ? ಎಂಬ ಪ್ರಶ್ನೆಗೆ 'ಆಕಾಶವಿದೆ' ಎಂಬ ಉತ್ತರವು ವ್ಯಧಿಕರಣವಾಗಿದೆ.

**'दहरोऽस्मिन्नन्तराकाशः' इत्यत्रैवाकाशं हृत्पद्मस्थमित्युक्तत्वेनाकाङ्क्षा-भावाच्चानन्वयः ।**

ಮತ್ತು 'ದಹರೋಽಸ್ಮಿನ್ನಂತರಾಕಾಶಃ' ಎಂಬ ಹಿಂದಿನ ವಾಕ್ಯದಲ್ಲಿಯೇ ಆಕಾಶವು ಹೃದಯಪದ್ಮದಲ್ಲಿದೆಯೆಂದು ಹೇಳಿದ ಮೇಲೆ ಪುನಃ ಆಕಾಂಕ್ಷೆ ಬರಲು ಸಾಧ್ಯವಿಲ್ಲ. ಆದ್ದರಿಂದಲೂ ಅನನ್ವಯ ದೋಷವು ಪೂರ್ವಪಕ್ಷಕಾರರಿಗೆ ಬರುತ್ತದೆ.

**अथ यावानित्यादिवाक्ये द्वितीयस्याकाशशब्दस्य सप्तम्यन्ततामाश्रित्य दहराकाशस्थो व्याप्ताकाशोऽन्वेष्टव्य इति उच्येत तदेश्वरवदचिन्त्यशक्त्यभावेन व्याप्ताकाशस्य दहराकाशस्थत्वाभावात् ''तमेवैकं जानथ'' इत्यादिश्रुतौ ब्रह्मण एवान्वेष्टव्यत्वसर्वाधारत्वयोरुक्तत्वेनाकाशे तयोरयोगाच्चानन्वय एव ।**

ಅಥವಾ 'ಅಂತರ್ಹೃದಯೇ ಆಕಾಶೇ' ಎಂಬ ಮುಂದಿರುವ ಆಕಾಶಶಬ್ದವನ್ನು ಸಪ್ತಮ್ಯಂತವಾಗಿ ವಿವಕ್ಷಿಸಬೇಕು. ಅಂದರೆ 'ಹೃದ್ಸ್ಥವಾದ ದಹರಾಕಾಶದಲ್ಲಿ' ಎಂಬರ್ಥವು ಲಭಿಸುತ್ತದೆ. ಇದರಲ್ಲಿ

ವ್ಯಾಪ್ತವಾದ ಬಾಹ್ಯಾಕಾಶವು ಇರುತ್ತದೆ. ದಹರಾಕಾಶದಲ್ಲಿ ವ್ಯಾಪ್ತಾಕಾಶವೇ ಅನ್ವೇಷ್ಟವ್ಯವಾಗಿದೆ. ಹೀಗೆ ಹೇಳುವುದೂ ಕೂಡ ಸರಿಯಲ್ಲ. ಏಕೆಂದರೆ ಭಗವಂತನಲ್ಲಾದರೆ ಅಚಿಂತ್ಯಶಕ್ತಿಯಿರುವುದರಿಂದ ಅಲ್ಪವಾದ ಭಗವಂತನ ಹೃದಯದಲ್ಲಿ ವ್ಯಾಪ್ತಾಕಾಶವನ್ನು ಕೂಡಿಸಬಹುದು. ಆದರೆ ಜಡಭೂತವಾದ ಅಲ್ಪಆಕಾಶದಲ್ಲಿ ವ್ಯಾಪ್ತವಾದ ಆಕಾಶವನ್ನು ಹೇಳಲು ಸಾಧ್ಯವೇ ಇಲ್ಲ. ಮತ್ತು 'ತಮೇವೈಕಂ ಜಾನಥ' ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮನಲ್ಲಿಯೇ ಅನ್ವೇಷ್ಟವ್ಯತ್ವ ಮತ್ತು ಸರ್ವಾಧಾರತ್ವಗಳನ್ನು ಹೇಳಿದ್ದರಿಂದ ಆಕಾಶದಲ್ಲಿ ಇವುಗಳನ್ನು ಹೇಳುವುದು ಅಯುಕ್ತವಾಗುತ್ತದೆ. ಆದ್ದರಿಂದಲೂ ಅನನ್ವಯದೋಷವು ಪೂರ್ವಪಕ್ಷಕಾರರಿಗೆ ಬರುತ್ತದೆಂದು ತಿಳಿಯಬೇಕು.

**यदि च पूर्वोक्तहृत्पद्मस्थाकाशानुवादेन तस्यापरिच्छिन्नत्वं विधाय द्यावापृथिव्यादेरन्वेष्टव्यतोच्येत तदापि परिच्छिन्नेऽपरिच्छिन्नत्वस्यायोग्यत्वादनन्वय एव ।**

ಒಂದು ವೇಳೆ ಹಿಂದೆ ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ಆಕಾಶವನ್ನು ಅನುವಾದ ಮಾಡಿ, ಆ ಆಕಾಶಕ್ಕೆ ಅಪರಿಚ್ಛಿನ್ನತ್ವವನ್ನು ವಿಧಾನ ಮಾಡುವ ಮೂಲಕ ದ್ಯಾವಾಪೃಥಿವ್ಯಾದಿಗಳ ಅನ್ವೇಷ್ಟವ್ಯತ್ವವನ್ನು ಅದರಲ್ಲಿ ಹೇಳುವುದಾದರೆ, ಪುನಃ ಪರಿಚ್ಛಿನ್ನವಾದ ಆಕಾಶದಲ್ಲಿ ಅಪರಿಚ್ಛಿನ್ನತ್ವವನ್ನು ಹೇಳಬೇಕಾದ್ದರಿಂದ ಅನನ್ವಯದೋಷವು ಬಂದೇ ಬರುತ್ತದೆ. ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯವಾಗಿರುವಿಕೆಯು ಅಪರಿಚ್ಛಿನ್ನವಾದ ಬಾಹ್ಯಾಕಾಶದ ಧರ್ಮವಾಗಿದೆ. ಪರಿಚ್ಛಿನ್ನವಾದ ಆಕಾಶದಲ್ಲಿ ಇದನ್ನು ವಿಧಾನ ಮಾಡುವುದು ಯೋಗ್ಯವಲ್ಲದ ಕಾರಣ, ಅನನ್ವಯದೋಷವು ಪೂರ್ವಪಕ್ಷಕಾರರಿಗೆ ತಪ್ಪಿದ್ದಲ್ಲ.

**किं चोक्तरीत्या ''यावान्वा अयम्'' इत्यादेः सन्निहितस्यैवाधेयप्रश्नोत्तरत्वेनान्वये ''उभे अस्मिन्द्यावापृथिवी'' इत्यादेरसन्निधानादनन्वयः ।**

ಮತ್ತು ಹಿಂದೆ ಹೇಳಿದ ಪ್ರಕಾರ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ ಸನ್ನಿಹಿತವಾದ 'ಯಾವಾನ್ವಾ ಅಯಮ್' ಎಂಬ ವಾಕ್ಯದಿಂದಲೇ ಉತ್ತರಿಸುವುದು ಸಂಗತವಾಗುತ್ತದೆ. ವ್ಯವಹಿತವಾದ 'ಉಭೇ ಅಸ್ಮಿನ್‌ದ್ಯಾವಾಪೃಥಿವೀ' ಎಂಬ ವಾಕ್ಯದಿಂದ ಉತ್ತರವನ್ನು ನೀಡುವುದು ಅಸಂಗತವಾಗುತ್ತದೆ. ಈ ಬಗೆಯಲ್ಲಿಯೂ ಕೂಡ ಅನನ್ವಯ ದೋಷವು ಪೂರ್ವಪಕ್ಷಕಾರರಿಗೆ ಬರುತ್ತದೆ.

**अपि च ''किं तदत्र विद्यते यदन्वेष्टव्यं यद्वाव विजिज्ञासितव्यम्'' इत्यन्वेष्टव्ये पृष्टे ''द्यावापृथिवी'' इत्याद्यनन्वेष्टव्योक्तेरनन्वय एव ।**

ಮತ್ತು 'ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮ್' ಎಂಬುದಾಗಿ ಅನ್ವೇಷ್ಟವ್ಯ ಯಾವುದು? ಯಾವುದರ ಬಗ್ಗೆ ಜಿಜ್ಞಾಸೆ ಮಾಡಬೇಕು ? ಎಂದು ಪ್ರಶ್ನಿಸಿದಾಗ, ಅನ್ವೇಷ್ಟವ್ಯವಾದದ್ದರ ಬಗ್ಗೆಯೇ ಉತ್ತರ ನೀಡಬೇಕು. ಅದನ್ನು ಬಿಟ್ಟು ಅನ್ವೇಷ್ಟವ್ಯವಲ್ಲದ ದ್ಯಾವಾಪೃಥಿವೀಗಳ ಬಗ್ಗೆ ಉತ್ತರ ನೀಡುವುದು ಅಸಂಗತವಾಗುತ್ತದೆ. ಇದರಿಂದಲೂ ಅನನ್ವಯ ದೋಷವನ್ನು ಹೇಳಿದಂತಾಯಿತು.

**तमेवैकं जानथेति वाक्ये द्युभ्वादिकं प्रति ।**
**आधारस्य ज्ञेयतोक्ता नतु द्युभ्वादिकस्य हि ।। १ ।।**

ತಮೇವೈಕಂ ಜಾನಥೇತಿ ವಾಕ್ಯೇ ದ್ಯುಭ್ವಾದಿಕಂ ಪ್ರತಿ ।
ಆಧಾರಸ್ಯ ಜ್ಞೇಯತೋಕ್ತಾ ನತು ದ್ಯುಭ್ವಾದಿಕಸ್ಯ ಹಿ ॥೧॥

'ತಮೇವೈಕಂ ಜಾನಥ' ಎಂಬ ವಾಕ್ಯದಲ್ಲಿ ದ್ಯುಭ್ವಾದಿಗಳಿಗೆ ಆಧಾರವಾದದ್ದು ಯಾವುದಿದೆಯೋ, ಅದನ್ನು ಜಿಜ್ಞಾಸೆ ಮಾಡಬೇಕೆಂದು ಹೇಳಲಾಗಿದೆ ಹೊರತು, ಆಧೇಯವಾದ ದ್ಯುಭ್ವಾದಿಗಳನ್ನೇ ಜಿಜ್ಞಾಸೆ ಮಾಡಬೇಕೆಂದು ಹೇಳಿಲ್ಲ. ಆದರೆ ನೀವು (ಪೂರ್ವಪಕ್ಷಕಾರರು) ದ್ಯುಭ್ವಾದಿಗಳನ್ನೇ ಜಿಜ್ಞಾಸೆ ಮಾಡಬೇಕೆಂದು ಹೇಳುತ್ತಿದ್ದೀರಿ. ಇದು ಅನನ್ವಿತವಾಗಿದೆ.

**किञ्च ''तदन्वेष्टव्यं तद्वाव विजिज्ञासितव्यम्'' इत्यत्रैकत्वस्य विधेयविशेषणत्वेन पश्वेकत्ववद्विवक्षितत्वात् 'वाव' इत्यवधारणाच्च जिज्ञास्यस्यैकत्वं भाति । तच्च द्यावापृथिव्यादीनामनेकेषामन्वेष्टव्यत्वेऽनन्वितं स्यात् ।**

ಮತ್ತು 'ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್' ಎಂಬಲ್ಲಿ ಅನ್ವೇಷಣದಲ್ಲಿ ಏಕತ್ವವು ವಿಶೇಷಣವಾಗಿದೆ. ಉದ್ದೇಶವಿಶೇಷಣವಾದರೆ ಏಕತ್ವವನ್ನು ಬಿಡಬಹುದು. ಆದರೆ ವಿಧಿಯ-ವಿಶೇಷಣವಾದಾಗ ಆ ಏಕತ್ವವನ್ನು ವಿವಕ್ಷೆಮಾಡಲೇ ಬೇಕಾಗುತ್ತದೆ. ಪೂರ್ವಮೀಮಾಂಸೆಯಲ್ಲಿ 'ಪಶುಮಾಲಭೇತ' ಎಂದು ಹೇಳಿದಾಗ 'ಪಶು' ಎಂಬುದು ವಿಧೇಯವಾದ್ದರಿಂದ ಅದರಲ್ಲಿ ವಿಶೇಷಣವಾದ ಏಕತ್ವವನ್ನು ವಿವಕ್ಷಿಸಿ ಒಂದೇ ಪಶುವನ್ನು ಆಲಂಭನ ಮಾಡಬೇಕೆಂದು ಪರಿಗಣಿಸಲಾಗಿದೆ. ಅದರಂತೆ ಇಲ್ಲಿಯೂ ಕೂಡ 'ಅನ್ವೇಷ್ಟವ್ಯಮ್' ಎಂಬುದು ವಿಧೇಯವಾಗಿದೆ. ಆದ್ದರಿಂದ ಅದರಲ್ಲಿ ವಿಶೇಷಣವಾದ ಏಕತ್ವವನ್ನೂ ವಿವಕ್ಷೆ ಮಾಡಲೇಬೇಕು. ಒಂದು ವೇಳೆ, ದ್ಯಾವಾಪೃಥಿವ್ಯಾದಿಗಳನ್ನೇ ಅನ್ವೇಷಣ ಮಾಡಬೇಕೆಂದು ನೀವು ಹೇಳುವುದಾದರೆ, ಈ ಏಕತ್ವವನ್ನು ತಿರಸ್ಕರಿಸಿದಂತಾಗುತ್ತದೆ. ಏಕೆಂದರೆ ದ್ಯಾವಾಪೃಥಿವ್ಯಾದಿಗಳು ಅನೇಕವಿರುವುದರಿಂದ ಅವುಗಳಲ್ಲಿ ಏಕತ್ವವು ಅನನ್ವಿತವಾಗಿದೆ. ಅಷ್ಟೇ ಅಲ್ಲದೇ 'ವಾ ವ' ಎಂಬುದಾಗಿ ಅವಧಾರಣೆಯಿರುವುದರಿಂದ

ಜಿಜ್ಞಾಸ್ಯವಾದದ್ದು ಒಂದೇ ಎಂದು ತಿಳಿಯುತ್ತಿದೆ. ಅನೇಕ ಜಿಜ್ಞಾಸೆಗಳು ಇದ್ದಲ್ಲಿ, ಅವಧಾರಣೆಯ ಮುಖಾಂತರ ಉಳಿದವುಗಳನ್ನು ವ್ಯಾವೃತ್ತಿ ಮಾಡಬೇಕಾಗಿರಲಿಲ್ಲ. ಆದ್ದರಿಂದ ಅನೇಕವಾದ ದ್ಯಾವಾಪೃಥಿವ್ಯಾದಿಗಳನ್ನು ಅನ್ವೇಷಣ ಮಾಡಬೇಕೆಂಬ ಅರ್ಥವನ್ನು ಹೇಳಿದರೆ ಅನನ್ವಯ ದೋಷವು ಬರುತ್ತದೆ.

**किञ्च हृत्पद्मस्थाकाशस्थस्य जडत्वे शरीरपुण्डरीकयोः पुरवेश्मत्वोक्तिरनन्विता।**

**पुरत्वं वेश्मता चैव चेतनं प्रति हि स्वतः ।**
**पुरं वा वेश्म वा दृष्टं नहि लोके जडं प्रति ।। १ ।।**

ಮತ್ತು ಹೃದಯಪದ್ಮದಲ್ಲಿ ಆಕಾಶವಿದೆ. ಅಂತಹ ಆಕಾಶದಲ್ಲಿ ಜಡವಾದ ಪದಾರ್ಥವೇ ಇದೆ ಎಂದು ಹೇಳುವುದಾದರೆ, ಶರೀರ ಮತ್ತು ಪುಂಡರೀಕಗಳಿಗೆ 'ಪುರ' ಎಂದಾಗಲೀ, 'ವೇಶ್ಮ' ಎಂದಾಗಲೀ ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ

ಪುರತ್ವಂ ವೇಶ್ಮತಾ ಚೈವ ಚೇತನಂ ಪ್ರತಿ ಹಿ ಸ್ವತಃ ।
ಪುರಂ ವಾ ವೇಶ್ಮ ವಾ ದೃಷ್ಟಂ ನಹಿ ಲೋಕೇ ಜಡಂ ಪ್ರತಿ ॥೧॥

ಇದು ಪಟ್ಟಣ, ಇದು ಮನೆ ಎಂದು ಹೇಳಿದಾಗ ಚೇತನನಿಗೆ ಸಂಬಂಧಪಟ್ಟಂತೆ ಎಂದು ಎಲ್ಲರೂ ತಿಳಿಯುತ್ತಾರೆ. ಜಡವಾದ ಪದಾರ್ಥವನ್ನು ಕುರಿತು, ಪಟ್ಟಣ ಎಂದಾಗಲೀ, ಮನೆಯೆಂದಾಗಲೀ ಯಾರೂ ವ್ಯವಹರಿಸುವುದಿಲ್ಲ. ಆದರೆ ಜಡವಾದ ಭೂತಾಕಾಶಕ್ಕೆ ಶರೀರವನ್ನು ಪಟ್ಟಣವೆಂದು ಪುಂಡರೀಕವನ್ನು ಮನೆಯೆಂದು ನೀವು ಮಾಡುತ್ತಿರುವ ವ್ಯವಹಾರವು ಅತ್ಯಂತ ಅಸಂಗತವಾಗಿದೆ. ಆದ್ದರಿಂದ ಪೂರ್ವಪಕ್ಷದಲ್ಲಿ ಹುರುಳಿಲ್ಲ.

**प्रकाशः —**

अत्र प्रकरणे ब्रह्मपुरशब्दस्य बहुधा श्रुतत्वात्तस्य ब्रह्मरूपैकार्थत्वे ''दहरं पुण्डरीकं वेश्म'' इत्याद्ययोगात् शरीरमात्रार्थत्वे च ''ब्रह्मपुरे सर्वं समाहितम् । नास्य जरयैतज्जीर्यते न वधेनास्य हन्यते तदेतत्सत्यं ब्रह्मपुरम्'' इत्यादेरयोगात् ।

ವಿವರಣೆ - ಇಲ್ಲಿಯ ತನಕ ಆಕಾಶ ಶಬ್ದದ ಬಗ್ಗೆ ಚರ್ಚೆಯನ್ನು ಮಾಡಿದ್ದಾಯಿತು. ಈಗ ಅದೇ ಪ್ರಕರಣದಲ್ಲಿರುವ 'ಬ್ರಹ್ಮಪುರೇ' ಎಂಬ ಶಬ್ದವು ಏನನ್ನು ಪ್ರತಿಪಾದಿಸುತ್ತಿದೆ ಎಂಬುದರ ಬಗ್ಗೆ ಚರ್ಚಿಸಲು ಹೊರಟಿದ್ದಾರೆ.

ಶ್ರುತಿಯಲ್ಲಿ ಅನೇಕ ಬಾರಿ 'ಬ್ರಹ್ಮಪುರೇ' ಎಂಬ ಶಬ್ದವು ಶ್ರುತವಾಗಿದೆ. ಎಲ್ಲೆಡೆ ಇರುವ 'ಬ್ರಹ್ಮಪುರೇ' ಎಂಬ ಶಬ್ದಕ್ಕೆ 'ಬ್ರಹ್ಮ' ಎಂಬ ಒಂದೇ ಅರ್ಥವನ್ನು ಒಪ್ಪಿದ್ದರೆ, 'ದಹರಂ ಪುಂಡರೀಕಂ ವೇಶ್ಮ' ಇತ್ಯಾದಿ ಪ್ರಯೋಗವು ತಪ್ಪಾಗುತ್ತದೆ. ಏಕೆಂದರೆ 'ಬ್ರಹ್ಮಪುರೇ' ಎಂಬ ಶಬ್ದಕ್ಕೆ ಬ್ರಹ್ಮನೆಂಬ ಅರ್ಥವನ್ನು ಒಪ್ಪಿದ ಮೇಲೆ 'ಬ್ರಹ್ಮನ ಹೃದಯದಲ್ಲಿ ಸಣ್ಣದಾದ ಕಮಲವಿದೆ. ಅದೇ ಬ್ರಹ್ಮನ ಮನೆ' ಎಂದು ಹೇಳಿದಂತಾಗುತ್ತದೆ. ಇದು ಸರಿಯಲ್ಲ. ಒಂದು ವೇಳೆ ಎಲ್ಲೆಡೆ ಇರುವ 'ಬ್ರಹ್ಮಪುರೇ' ಎಂಬ ಶಬ್ದಕ್ಕೆ ಶರೀರ ಎಂಬರ್ಥವನ್ನು ಒಪ್ಪಿದರೆ, ಆವಾಗ 'ಬ್ರಹ್ಮಪುರೇ ಸರ್ವಂ ಸಮಾಹಿತಮ್. ನಾಸ್ಯ ಜರಯೈತಜ್ಜೀರ್ಯತೇ ನ ವಧೇನಾಸ್ಯ ಹನ್ಯತೇ, ತದೇತತ್ ಸತ್ಯಂ ಬ್ರಹ್ಮಪುರಮ್' ಇತ್ಯಾದಿ ಪ್ರಯೋಗಗಳು ಅಯುಕ್ತವಾಗುತ್ತವೆ. ಏಕೆಂದರೆ ಬ್ರಹ್ಮಪುರದಲ್ಲಿ ಎಲ್ಲವೂ ಆಶ್ರಿತವಾಗಿವೆ. ಮುಪ್ಪು ಮೊದಲಾದವುಗಳಿಂದ ಜೀರ್ಣತ್ವವನ್ನು ಇದು ಹೊಂದುವುದಿಲ್ಲ. ಮರಣವನ್ನೂ ಕೂಡ ಹೊಂದುವುದಿಲ್ಲ. ಇದೇ ಸತ್ಯವಾದ ಬ್ರಹ್ಮಪುರ. ಇತ್ಯಾದಿಯಾಗಿ ಹೇಳಲ್ಪಟ್ಟ ಲಕ್ಷಣವು ಜಡಭೂತವಾದ ಮುಪ್ಪು, ಮರಣ ಮೊದಲಾದ ದೋಷಗಳಿಂದ ಕೂಡಿರುವ ಈ ಶರೀರದಲ್ಲಿ ಯುಕ್ತವಾಗುವುದಿಲ್ಲ.

**प्रकाशः** – पूर्वस्य ब्रह्मपुरशब्दस्य शरीरपरत्वे पश्चात्तनस्य ब्रह्मपरत्वे प्रकृतहानाप्रकृतस्वीकारापाताद्विवेकमाह – **पक्षद्वयेऽपीति** ।।

ಮೊದಲು ಶ್ರುತವಾದ 'ಬ್ರಹ್ಮಪುರ' ಶಬ್ದಕ್ಕೆ ಶರೀರ ಎಂಬರ್ಥವನ್ನು ಒಪ್ಪಿ, ಅನಂತರವಿರುವ ಬ್ರಹ್ಮಪುರ ಶಬ್ದಕ್ಕೆ 'ಬ್ರಹ್ಮ' ಎಂಬರ್ಥವನ್ನು ಒಪ್ಪಿದರೆ, ಪ್ರಕೃತಹಾನ ಹಾಗೂ ಅಪ್ರಕೃತ ಸ್ವೀಕಾರ ಎಂಬ ದೋಷಗಳು ಬರುತ್ತವೆ. ಆದ್ದರಿಂದ ಸ್ಪಷ್ಟವಾಗಿ ಶ್ರುತಿಗೆ ಹೇಗೆ ಅರ್ಥೈಸಬೇಕೆಂಬ ವಿವೇಕವನ್ನು ಪ್ರದರ್ಶನ ಮಾಡುತ್ತಿದ್ದಾರೆ 'ಪಕ್ಷದ್ವಯೇಽಪಿ' ಇತ್ಯಾದಿ ಗ್ರಂಥದಿಂದ.

**प्रकाशः** – न्यायविवरणपक्षे छान्दोग्यपक्षेऽपीत्यर्थः । तथा च ''नष्टेऽपि देहे न नश्यति । अपहतपाप्मत्वादिगुणं च'' इत्यादिटीका युक्तेति भावः ।

'ಪಕ್ಷದ್ವಯೇಽಪಿ' ಎಂದರೆ ನ್ಯಾಯವಿವರಣ ಪಕ್ಷದಲ್ಲಿ ಹಾಗೂ ಛಾಂದೋಗ್ಯಭಾಷ್ಯದ ಪಕ್ಷದಲ್ಲಿ ಎಂದರ್ಥ. ಆದ್ದರಿಂದ 'ನಷ್ಟೇಽಪಿ ದೇಹೇ ನ ನಶ್ಯತಿ । ಅಪಹತಪಾಪ್ಮತ್ವಾದಿ ಗುಣಂ ಚ' ಇತ್ಯಾದಿ ಟೀಕೆಯು ಅತ್ಯಂತ ಸಮಂಜಸವಾಗಿದೆಯೆಂದು ಹೇಳಿದಂತಾಯಿತು.

**प्रकाशः** – तथा च ब्रह्मपुरे हरौ तदाधारतया स्थितं यद्ब्रह्मपुरं शरीरं तत्र दहरं पुण्डरीकमित्यादियोजना ब्रह्मपुरपदस्य तन्त्रावृत्त्यन्यतराश्रयणेन ध्येयेति भावः ।

ಪ್ರಕೃತ ಹಾನ ಹಾಗೂ ಅಪ್ರಕೃತ ಸ್ವೀಕಾರ ದೋಷವನ್ನು ಹೀಗೆ ಸ್ವೀಕರಿಸಬೇಕು ಎಂದರೆ - ಮೊದಲು ಶ್ರುತವಾದ ಬ್ರಹ್ಮಪುರ ಶಬ್ದವನ್ನು ತಂತ್ರದಿಂದಲೋ, ಆವೃತ್ತಿಯಿಂದಲೋ, ಎರಡು ಬಾರಿ ವಿವಕ್ಷಿಸಬೇಕು. ಆವಾಗ 'ಬ್ರಹ್ಮಪುರೇ' ಶ್ರೀಹರಿಯಲ್ಲಿ, ಶ್ರೀಹರಿಗೆ ಆಧಾರವಾಗಿರುವಂತಹ ಯಾವ 'ಬ್ರಹ್ಮಪುರಮ್' ಶರೀರವು

ಇದೆಯೋ, ಅಂತಹ ಶರೀರದಲ್ಲಿ ಸಣ್ಣಗಾತ್ರದ ಕಮಲವಿದೆ ಎಂದು ಯೋಜನೆ ಮಾಡಿಕೊಳ್ಳಬೇಕು. ಹೀಗೆ ಎರಡು ಬಾರಿ ಬ್ರಹ್ಮಪುರ ಶಬ್ದವನ್ನು ತಂತ್ರವನ್ನೋ ಆವೃತ್ತಿಯನ್ನೋ ಮಾಡಿಕೊಂಡಾಗ, ಪ್ರಕೃತಹಾನ ಹಾಗೂ ಅಪ್ರಕೃತಸ್ವೀಕಾರ ದೋಷಗಳಿಗೆ ಅವಕಾಶವಿಲ್ಲ.

**प्रकाशः – उक्तञ्च -**

बृहत्त्वात्पूर्णकामत्वाद्विष्णुर्ब्रह्मपुराभिधः ।
तस्मिंस्तस्य पुरं देहस्तस्मिन्हृदयमास्थितम् ।। इत्यादि ।

ಪರಮಾತ್ಮನು ಎಲ್ಲೆಡೆ ವ್ಯಾಪ್ತನಾದ್ದರಿಂದ, ಪೂರ್ಣವಾದ ಕಾಮನೆಯುಳ್ಳವನಾದ್ದರಿಂದ 'ಬ್ರಹ್ಮಪುರ' ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಇಂತಹ ಪರಮಾತ್ಮನಲ್ಲಿ ಅವನ ಪಟ್ಟಣವಿದೆ ಎಂದರೆ, ಈ ಶರೀರವಿದೆ ಎಂದರ್ಥ. ಆ ಶರೀರದಲ್ಲಿ ಹೃದಯವಿದೆ ಇತ್ಯಾದಿಯಾದ ಪ್ರಮಾಣದಿಂದಲೂ ಮೇಲೆ ಹೇಳಿದ ಅರ್ಥವು ಸಿದ್ಧವಾಗುತ್ತದೆ.

**प्रकाशः – नन्वेवं ब्रह्मपुरशब्देनोभयोः प्रकृतत्वे कथमुत्तरत्रैकस्यैव ग्रहणमिति चेन्न ।**

ಹೀಗೆ ತಂತ್ರ ಅಥವಾ ಆವೃತ್ತಿಯಿಂದ ಒಂದೇ ಬ್ರಹ್ಮ ಶಬ್ದವನ್ನು ಎರಡು ಬಾರಿ ವಿವಕ್ಷಿಸಿ, ಎರಡೂ ವಿಧವಾದ ಅರ್ಥಗಳನ್ನು ವಿವಕ್ಷಿಸುವುದಾದರೆ ಪರಮಾತ್ಮ ಹಾಗೂ ದೇಹ ಎರಡೂ ಕೂಡ ಪ್ರಸಕ್ತವಾದವು. ಹೀಗಿರುವಾಗ ಮುಂದೆ 'ತದೇತತ್ ಸತ್ಯಂ ಬ್ರಹ್ಮಪುರಂ' ಎಂಬಲ್ಲಿರುವ ಬ್ರಹ್ಮಪುರ ಶಬ್ದಕ್ಕೆ ಕೇವಲ ವಿಷ್ಣು ಎಂಬ ಒಂದೇ ಅರ್ಥವನ್ನು ಸ್ವೀಕರಿಸಲು ಹೇಗೆ ಸಾಧ್ಯ ?

**प्रकाशः – द्वयोस्सहनिर्देशेऽपि बुद्ध्या विभागेनैकस्यैव ग्रहणोपपत्तेः ।**

ಪರಮಾತ್ಮ ಹಾಗೂ ಶರೀರ ಎರಡೂ ಕೂಡ ಪ್ರಸಕ್ತವಾಗಿದ್ದರೂ ಬುದ್ಧಿಯಿಂದ ವಿಭಾಗ ಮಾಡಿಕೊಂಡು ಎರಡರಲ್ಲಿ ಪರಮಾತ್ಮ ಎಂಬರ್ಥವನ್ನು ಮಾತ್ರ ಸ್ವೀಕರಿಸಬೇಕು. ಎರಡು ಪ್ರಸಕ್ತವಾದಾಗ ಒಂದನ್ನು ಸ್ವೀಕರಿಸುವುದು ತಪ್ಪಲ್ಲ.

**प्रकाशः –"अथैतामैश्वरीं मायां दुस्तरामकृतात्मभिः । तरन्त्यञ्जस्स्थूलधियः" इत्यत्र भागवते जडप्रकृतेरिव । उक्तञ्च च तात्पर्ये –**

बहूनां सहनिर्देश एकयाऽभिधयैव तु ।
तयैवाभिधया तेषां परामृश्यैकमुच्यते ।। इति ।

अत एव गीतायां ''प्रकृतिं पुरुषं चैव'' इत्यत्र पुरुषपदेन जीवपरयोर्ग्रहणेऽपि ''पुरुषः प्रकृतिस्थः'' इत्यत्र पुरुषपदेन जीवस्यैव ग्रहणम् । तथैव तद्भाष्योक्तेरिति ।

'ಅಥೈತಾಮೈಶ್ವರೀಂ ಮಾಯಾಂ ದುಸ್ತರಾಮಕೃತಾತ್ಮಭಿಃ । ತರಂತ್ಯಂಜಃಸ್ಥೂಲಧಿಯಃ' ಎಂಬ ಭಾಗವತದಲ್ಲಿ ಮಾಯಾಶಬ್ದದಿಂದ ಈಶ್ವರ, ಇಚ್ಛೆ ಮೊದಲಾದವುಗಳು ಸಹ ಪ್ರಸಕ್ತವಾಗಿದ್ದರೂ ಸಹ ಅವುಗಳನ್ನು ಸ್ವೀಕರಿಸದೇ ಜಡಪ್ರಕೃತಿಯನ್ನಷ್ಟೇ ಮಾಯಾಶಬ್ದದಿಂದ ಸ್ವೀಕರಿಸಿದ್ದು ಕಂಡಿದೆ. ಇದನ್ನೇ ತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ -

ಬಹೂನಾಂ ಸಹನಿರ್ದೇಶ ಏಕಯಾऽಭಿಧಯ್ಯೆವ ತು ।
ತಯ್ಯೈವಾಭಿಧಯಾ ತೇಷಾಂ ಪರಾಮೃಶ್ಯೈಕಮುಚ್ಯತೇ ।

ಒಂದೇ ಶಬ್ದದಿಂದ ಅನೇಕ ಅರ್ಥಗಳು ಪ್ರಸಕ್ತವಾಗಿದ್ದರೂ ಅವುಗಳಲ್ಲಿ ಒಂದನ್ನು ಮಾತ್ರ ಪರಾಮರ್ಶ ಮಾಡಿ ಒಂದೇ ಅರ್ಥವನ್ನು ಸಂದರ್ಭಾನುಸಾರವಾಗಿ ಮಾಡಬೇಕು ಎಂದು ಇದರ ಅಭಿಪ್ರಾಯ.

ಮತ್ತು ಗೀತೆಯಲ್ಲಿಯೂ ಕೂಡ 'ಪ್ರಕೃತಿಂ ಪುರುಷಂ ಚೈವ' ಎಂಬುದಾಗಿ 'ಪುರುಷ' ಪದದಿಂದ ಜೀವ ಪರಮಾತ್ಮರಿಬ್ಬರೂ ಕೂಡ ಪ್ರಸಕ್ತರಾಗಿರುತ್ತಾರೆ. ಆದರೆ ಮುಂದೆ 'ಪುರುಷಃ ಪ್ರಕೃತಿಸ್ಥಃ' ಎಂಬಲ್ಲಿರುವ ಪುರುಷಶಬ್ದದಿಂದ ಪರಮಾತ್ಮನನ್ನು ಬಿಟ್ಟು, ಜೀವನನ್ನು ಮಾತ್ರ ಸ್ವೀಕರಿಸಲಾಗಿದೆ. ಹಾಗಾಗಿಯೇ ಗೀತಾಭಾಷ್ಯದಲ್ಲಿ ವ್ಯಾಖ್ಯಾನಿಸಿದ್ದಾರೆ.

**प्रकाशः** – एवमन्वयानुपपत्तिबाधकं परिहृत्य सुषिरश्रुतिविरोधरूपबाधकमग्रे निरसिष्यन्परपक्षे ''नच'' इत्यादिटीकातात्पर्यवर्णनमिषेण बाधकं वक्तुं तट्टीकां दुर्गमत्वान्मूलोक्तिपूर्वं व्यनक्ति – **अत्रेत्यादिना** ।।

ಇಲ್ಲಿಯ ತನಕ ಪೂರ್ವಪಕ್ಷಕಾರರು ಹೇಳಲ್ಪಟ್ಟ ಅನ್ವಯಾನುಪಪತ್ತಿಯೆಂಬ ಬಾಧಕವನ್ನು ಪರಿಹರಿಸಿದ್ದಾಯಿತು. ಸುಷಿರ ಶ್ರುತಿವಿರೋಧವೆಂಬ ಮತ್ತೊಂದು ಬಾಧಕವನ್ನು ಮುಂದೆ ಪರಿಹರಿಸುತ್ತಾರೆ. ಈಗ ಪ್ರಸಕ್ತವಾದ್ದರಿಂದ ಅನ್ವಯಾನುಪಪತ್ತಿಯು ನಮಗೆ ಬಾಧಕವಲ್ಲ ಹೊರತು, ಪೂರ್ವಪಕ್ಷಕಾರರಿಗೆ ಬಾಧಕವಾಗಿದೆಯೆಂದು 'ನಚ' ಇತ್ಯಾದಿ ಟೀಕೆಯು ಸಮರ್ಥಿಸಿದೆ. ಅದರ ತಾತ್ಪರ್ಯವನ್ನು ಸ್ಪಷ್ಟಪಡಿಸುವ ನೆಪದಿಂದ ಪೂರ್ವಪಕ್ಷಕಾರರಿಗೆ ಬಾಧಕವನ್ನು ಹೇಳಲು 'ಅತ್ರ' ಇತ್ಯಾದಿ ವಾಕ್ಯವು ಹೊರಟಿದೆ. ಮತ್ತು 'ನಚ' ಇತ್ಯಾದಿ ಟೀಕಾವಾಕ್ಯಕ್ಕೆ ವ್ಯಾಖ್ಯೇಯವಾದದ್ದನ್ನು ಯಾವುದೆಂದೂ ಕೂಡ ತೋರಿಸುತ್ತಿದಾರೆ.

**प्रकाशः** – अन्वयादर्शनादित्येतद्द्वेधा व्याचष्टे – **हृत्पद्मेति** ।। ''नहि दहराकाशस्थः'' इति टीकावाक्यं शङ्कापूर्वं विवृणोति – **अथेति** ।। ''तदभावादयोगाच्च'' इति हेतुद्वयं टीकोक्तं स्फुटयति – **तदेति** ।।

ಅನ್ವಯವಿರುವುದು ಕಾಣಿಸುತ್ತಿಲ್ಲವೆಂಬುದನ್ನು ಎರಡು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ - 'ಹೃತ್ಪದ್ಮ' ಇತ್ಯಾದಿ ವಾಕ್ಯದಿಂದ. 'ನಹಿ ದಹರಾಕಾಶಸ್ಥಃ' ಎಂಬ ಟೀಕಾವಾಕ್ಯವನ್ನು ಶಂಕಾಪೂರ್ವಕವಾಗಿ ವಿವರಿಸುತ್ತಿದ್ದಾರೆ 'ಅಥ' ಇತ್ಯಾದಿ ಗ್ರಂಥದಿಂದ. 'ತದಭಾವಾದಯೋಗಾಚ್ಚ' ಎಂಬ ಎರಡು ಹೇತುಗಳು ಟೀಕೆಯಲ್ಲಿ ಹೇಳಲ್ಪಟ್ಟಿವೆ. ಅದನ್ನೇ 'ತದಾ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – आदिपदेन ''यस्मिन्द्यौः पृथिवी'' इत्यादिश्रुताविति गृह्यते । ''नापि'' इत्यादिटीकाग्रन्थं योजयति – **यदीति** ।। ''दहरस्य व्याप्तत्वायोगात्'' इत्युपलक्षणमिति भावेनाह – **किञ्चेति** ।।

ಆದಿಪದದಿಂದ 'ಯಸ್ಮಿನ್ದ್ಯೌಃ ಪೃಥಿವೀ' ಇತ್ಯಾದಿ ಶ್ರುತಿಯಲ್ಲಿ ಎಂಬುದನ್ನು ತಿಳಿಯಬೇಕು. 'ನಾಪಿ' ಇತ್ಯಾದಿ ಟೀಕಾಗ್ರಂಥವನ್ನು 'ಯದಿ' ಇತ್ಯಾದಿ ಗ್ರಂಥದಿಂದ ಯೋಜನೆ ಮಾಡುತ್ತಿದ್ದಾರೆ. 'ದಹರಸ್ಯ ವ್ಯಾಪ್ತತ್ವಾಯೋಗಾತ್' ಎಂಬುದು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – उक्तेति** ।। 'यथा हि लोके' इति प्रागुक्तरीत्येत्यर्थः । 'मुख्यतः' इति हेतुं व्यनक्ति – **अपि चेति** ।। अनन्वेष्टव्यमसिद्धमित्यत आह – **तमेवेति** ।। हिर्हेतौ प्रसिद्धौ वा । एतदप्युपलक्षणं मत्वाऽऽह – **किञ्चेति** ।।

'ಉಕ್ತ' ಎಂದರೆ ಹಿಂದೆ 'ಯಥಾ ಹಿ ಲೋಕೇ' ಇತ್ಯಾದಿ ವಾಕ್ಯದಿಂದ ರಾಜನು ಒಳಗಿದ್ದಾನೆಯೇ? ಇತ್ಯಾದಿ ದೃಷ್ಟಾಂತವನ್ನು ನೀಡುವ ಮೂಲಕ ಉಪಪಾದಿಸಲಾಗಿದೆ ಎಂದರ್ಥ. 'ಮುಖ್ಯತಃ' ಎಂಬ ಹೇತುವನ್ನು 'ಅಪಿ ಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಅನ್ವೇಷಣೆ ಮಾಡದಿರುವಿಕೆಯು ಅಸಿದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ತಮೇವ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಹಿ' ಶಬ್ದವು ಹೇತ್ವರ್ಥದಲ್ಲಿದೆ. ಅಥವಾ ಪ್ರಸಿದ್ಧಾರ್ಥವನ್ನು ಕೂಡ ಹೇಳಬಹುದು. ಇಲ್ಲಿಯ ತನಕ ಹೇಳಿದ್ದನ್ನು ಉಪಲಕ್ಷಣವನ್ನಾಗಿ ತಿಳಿದು 'ಕಿಂಚ' ಇತ್ಯಾದಿ ಮುಂದಿನ ವಾಕ್ಯವು ಹೊರಟಿದೆ.

**प्रकाशः – पश्वेकत्ववदिति** ।। उक्तमधिकरणशरीरं प्राक् छन्दोधिकरणे । पशुना यजेतेत्यत्रैकत्वं यथा विधेयकरणकारकविशेषणत्वाद्विवक्षितं तथेहापि तदित्येकवचन प्राप्तमेकत्वमपीत्यर्थः ।

ಗ್ರಂಥದಲ್ಲಿ 'ಪಶ್ವೇಕತ್ವವತ್' ಎಂಬುದಾಗಿ ಪೂರ್ವಮೀಮಾಂಸಾ ದೃಷ್ಟಾಂತವನ್ನು ನೀಡಿದ್ದಾರೆ. ಈ ಅಧಿಕರಣವನ್ನು ಹಿಂದೆ ಛಂದೋಽಧಿಕರಣದಲ್ಲಿ ವಿವರಿಸಿದ್ದಾಗಿದೆ. 'ಪಶುನಾ ಯಜೇತ' ಎಂಬಲ್ಲಿ ಏಕತ್ವವು ಹೇಗೆ ವಿಧೇಯವಾದ ಕಾರಣ ಕಾರಕದಲ್ಲಿವಿಶೇಷಣವಾಗಿದೆಯೋ, ಅದರಂತೆ ಇಲ್ಲಿಯೂ ಕೂಡ ಏಕವಚನ ಪ್ರಾಪ್ತವಾದ ಏಕತ್ವವೂ ಕೂಡ ವಿಧೇಯದಲ್ಲಿ ವಿಶೇಷಣವಾಗಿದೆ ಎಂದು ತಿಳಿಯಬೇಕು.

**प्रकाशः** – कुत इत्यत आह – पुरत्वमिति ।। हि यस्मादेवं तस्मात्तदुक्तिरनन्वितेति । चेतनं प्रत्येवेत्यन्वयः ।

ಜಡವಾದ ಪದಾರ್ಥಕ್ಕೆ ಪುರತ್ವವು ಹಾಗೂ ವೇಶ್ಮತ್ವವು ಏಕೆ ಕೂಡುವುದಿಲ್ಲ? ಎಂಬ ಪ್ರಶ್ನೆಗೆ 'ಪುರತ್ವಮ್' ಎಂಬ ಶ್ಲೋಕದಿಂದಲೇ ಉತ್ತರಿಸಿದ್ದಾರೆ. ಯಾವ ಕಾರಣದ ಚೇತನದ ವಿಷಯದಲ್ಲಿ ಮಾತ್ರ ಪಟ್ಟಣ, ಮನೆ ಇತ್ಯಾದಿ ವ್ಯವಹಾರವಿರುತ್ತದೋ, ಆದ್ದರಿಂದಲೇ ಜಡಪದಾರ್ಥದಲ್ಲಿ ಕೂಡುವುದಿಲ್ಲವೆಂದು 'ಅನನ್ವಯ' ದೋಷವನ್ನು ತಿಳಿಯಬೇಕು. 'ಚೇತನಮ್' ಎಂಬ ಪದಕ್ಕೆ 'ಪ್ರತ್ಯೇವ' ಎಂಬಲ್ಲಿ ಅನ್ವಯ.




ಪೂರ್ವಪಕ್ಷಕಾರರು ಹಿಂದೆ ನಮ್ಮನ್ನು ಕುರಿತು ಅಸಾಂಗತ್ಯ ದೋಷವನ್ನು ಹೇಳುತ್ತಿದ್ದರು. ಇಲ್ಲಿಯ ತನಕ ವಿಚಾರ ಮಾಡಿದಂತೆ ಅಸಾಂಗತ್ಯ ದೋಷ ನಮಗೆ ತಟ್ಟುವುದೇ ಇಲ್ಲ. ಹೊರತಾಗಿ ಪೂರ್ವಪಕ್ಷಕಾರರಿಗೇನೇ ಹಲವು ಬಗೆಯಲ್ಲಿ ಹತ್ತಾರು ಕ್ರಮದಿಂದ ಅಸಾಂಗತ್ಯ ದೋಷವು ಬಾಧಿಸುತ್ತದೆ. ಅದು ಹೀಗೆ -

೧. ಹೃತ್ಪದ್ಮಸ್ಥವಾದ ಆಕಾಶದಲ್ಲಿ ಏನಿದೆ? ಎಂದು ಪ್ರಶ್ನಿಸಿದಾಗ, ಭೂತಾಕಾಶವಿದೆ ಎಂಬ ಉತ್ತರ ಅಸಂಗತ.

೨. 'ದಹರೋಽಸ್ಮಿನ್ನಂತರಾಕಾಶಃ' ಎಂಬ ಹಿಂದಿನ ವಾಕ್ಯದಲ್ಲಿಯೇ ಹೃತ್ಪದ್ಮಸ್ಥವಾದದ್ದು ಆಕಾಶವೆಂದು ಹೇಳಿದ ಮೇಲೆ ಪುನಃ ಮುಂದಿನ ವಾಕ್ಯದಲ್ಲಿ ಅದೇ ವಿಚಾರವನ್ನು ಹೇಳುವುದು ಅಸಂಗತ.

೩. ಪೂರ್ವಪಕ್ಷಕಾರರು 'ಯಾವಾನ್ವಾ' ಎಂಬ ವಾಕ್ಯದಲ್ಲಿರುವ ಆಕಾಶ ಪದವನ್ನು ಸಪ್ತಮ್ಯಂತವೆಂದು ಹೇಳುತ್ತಾರೆ. ಆವಾಗ ಹೃದಯದಲ್ಲಿರುವ ಸಣ್ಣ ಆಕಾಶದಲ್ಲಿ ಬಾಹ್ಯವಾದ ವ್ಯಾಪ್ತಾಕಾಶವಿದೆ ಎಂದು ಹೇಳಿದಂತಾಗುತ್ತದೆ. ಸಣ್ಣದಾದ ಆಕಾಶದಲ್ಲಿ ವ್ಯಾಪ್ತಾಕಾಶ ಇರಲು ಹೇಗೆ ಸಾಧ್ಯ ? ಪರಮಾತ್ಮನಲ್ಲಿ ಅಚಿಂತ್ಯಾದ್ಭುತ ಶಕ್ತಿಯಿರುವುದರಿಂದ ವಿರೋಧವಿಲ್ಲ. ಆದರೆ ಜಡಪದಾರ್ಥದಲ್ಲಿ ಇಂತಹ ಅಚಿಂತ್ಯ ಶಕ್ತಿಯಿಲ್ಲದ ಕಾರಣ. ಸಣ್ಣ ಆಕಾಶದಲ್ಲಿ ವ್ಯಾಪ್ತಾಕಾಶದ ಇರುವಿಕೆಯನ್ನು ಹೇಳುವುದು ಅಸಂಗತ.

೪. 'ತಮೇವೈಕಂ ಜಾನಥ' ಎಂಬ ಸೂತ್ರದಲ್ಲಿ ಬ್ರಹ್ಮನು ಮಾತ್ರ ಜಿಜ್ಞಾಸ್ಯನೆಂದು ಹೇಳಲಾಗಿದೆ. ಆದರೆ ನೀವು ಹೃದಯದಲ್ಲಿರುವ ಆಕಾಶದಲ್ಲಿ ಜಿಜ್ಞಾಸ್ಯತ್ವವನ್ನು, ಸರ್ವಾಧಾರತ್ವವನ್ನು ಹೇಳುತ್ತಿದ್ದೀರಿ. ಇವೆರಡೂ ಅಸಂಗತವಾಗಿದೆ.

೫. ಪರಿಚ್ಛಿನ್ನವಾದ ಹೃದಯಾಕಾಶದಲ್ಲಿ ಅಪರಿಚ್ಛಿನ್ನತ್ವವನ್ನು ವಿಧಾನ ಮಾಡಿ, ದ್ಯಾವಾಪೃಥಿವ್ಯಾದಿಗಳನ್ನು ಜಿಜ್ಞಾಸೆ ಮಾಡಬೇಕೆಂದು ಹೇಳಿದರೆ ಪರಿಚ್ಛಿನ್ನದಲ್ಲಿ ಅಪರಿಚ್ಛಿನ್ನತ್ವವನ್ನು ಹೇಳುವುದು ಅಯೋಗ್ಯವಾದ್ದರಿಂದ ಅಸಂಗತವಾಗಿದೆ.

೬. 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದಾಗ ಮುಂದಿರುವ 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯವನ್ನೇ ಉತ್ತರರೂಪವೆಂದು ಪರಿಗಣಿಸಲು ಬರುವಾಗ ದೂರದಲ್ಲಿರುವ 'ಉಭೇ ಅಸ್ಮಿನ್ ದ್ಯಾವ್ಯಾಪೃಥಿವೀ' ಎಂಬ ವಾಕ್ಯವನ್ನು ಉತ್ತರರೂಪವಾಗಿದೆಯೆಂದು ಹೇಳುವುದು ಅಸಂಗತ.

೭. 'ಕಿಂ ತದತ್ರ ವಿದ್ಯತೇ' ಎಂಬ ವಾಕ್ಯದಿಂದ ಯಾವುದನ್ನು ಜಿಜ್ಞಾಸೆ ಮಾಡಬೇಕೆಂದು ಚರ್ಚಿಸಿದಾಗ ಜಿಜ್ಞಾಸೆಗೆ ಅನರ್ಹವಾದ ದ್ಯಾವಾಪೃಥಿವ್ಯಾದಿಗಳ ಜಿಜ್ಞಾಸೆಯನ್ನು ಹೇಳುವುದು ಅಸಂಗತ.

೮. 'ತಮೇವೈಕಂ ಜಾನಥ' ಎಂಬ ಶ್ರುತಿಯಲ್ಲಿ ದ್ಯುಭ್ವಾದಿಗಳಿಗೆ ಯಾವುದು ಆಧಾರವಾಗಿದೆಯೋ, ಅದರ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಲಾಗಿದೆ. ನೀವು ಆಧೇಯವಾದ ದ್ಯುಭ್ವಾದಿಗಳ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳುತ್ತಿದ್ದೀರಿ. ಇದು ಅಸಂಗತ.

೯. 'ತದನ್ವೇಷ್ಟವ್ಯಮ್' ಎಂಬುದು ಉದ್ದೇಶವಾಗಿದೆ. ಉದ್ದೇಶದಲ್ಲಿ ವಿಶೇಷಣವಾದ ಏಕತ್ವವನ್ನು ತಿರಸ್ಕರಿಸಬಾರದು. ಆದ್ದರಿಂದ ಒಂದು ಪದಾರ್ಥದ ಜಿಜ್ಞಾಸೆಯನ್ನೇ ಶ್ರುತಿಯು ಹೇಳುತ್ತಿದೆ ಹೊರತು, ಸ್ವರ್ಗಲೋಕ, ಭೂಲೋಕ, ಸೂರ್ಯ-ಚಂದ್ರ ಮೊದಲಾದ ಅನೇಕ ಪದಾರ್ಥಗಳ ಜಿಜ್ಞಾಸೆಯನ್ನು ಶ್ರುತಿಯು ಹೇಳುತ್ತಿಲ್ಲ. ನೀವು ಹಾಗೇ ವ್ಯಾಖ್ಯಾನಿಸಿದರೆ ಅಸಂಗತವಾಗುತ್ತದೆ.

೧೦. 'ತದ್ವಾವ ವಿಜಿಜ್ಞಾಸಿತವ್ಯಮ್' ಎಂಬಲ್ಲಿ 'ವಾ' ಶಬ್ದದಿಂದ ಅವಧಾರಣೆಯನ್ನು ಮಾಡುತ್ತಾ ಬೇರೆ ಪದಾರ್ಥಗಳ ಜಿಜ್ಞಾಸೆಯನ್ನು ವ್ಯಾವರ್ತನೆ ಮಾಡಿ, ಒಂದೇ ಪದಾರ್ಥದ ಜಿಜ್ಞಾಸೆಯನ್ನು ವಿಧಿಸಲಾಗಿದೆ. ನೀವು ಅನೇಕ ಪದಾರ್ಥಗಳ ಜಿಜ್ಞಾಸೆಯನ್ನು ಹೇಳುವುದು ಅಸಂಗತ.

೧೧. ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ಜಡವಾದ ಆಕಾಶವೇ ಇದೆಯೆಂದು ಹೇಳುವುದಾದರೆ, ಶರೀರವನ್ನು ಪಟ್ಟಣವೆಂದು, ಪುಂಡರೀಕವನ್ನು ಮನೆಯೆಂದು ಹೇಳಿದ್ದು ಅಸಂಗತ. ಚೇತನರಿಗೆ ಮಾತ್ರ ಆಧಾರವಾಗಿ ಪಟ್ಟಣ-ಮನೆಯೆಂಬ ವ್ಯವಹಾರವಿದೆ. ಜಡಪದಾರ್ಥಗಳಿಗೆ ಆಧಾರವಾದದ್ದನ್ನು ಪಟ್ಟಣ ಅಥವಾ ಮನೆಯೆಂದು ಯಾರೂ ವ್ಯವಹರಿಸುವುದಿಲ್ಲ.

ಹೀಗೆ ಪೂರ್ವಪಕ್ಷಕಾರರಿಗೆ ಹತ್ತಾರು ಮುಖದಲ್ಲಿ ಅಸಾಂಗತ್ಯದೋಷವು ಬಾಧಿಸುತ್ತದೆ.

• • • • •

## ಮಂದಿರೇ ಮಣಿಮಾಲಾ ನ್ಯಾಯದಿಂದ ಸಕಲ ವಿರೋಧ ಪರಿಹಾರ

### तात्पर्यचन्द्रिका

**यच्चोक्तं एष आत्मेति वाक्य एतच्छब्दः परज्योतिः परश्चेन्नपुंसकलिङ्गः स्यादिति**

ಅನುವಾದ - ಹಿಂದೆ ಜೀವವಿಷಯಕವಾದ ಪೂರ್ವಪಕ್ಷ ಮಾಡುವಾಗ ಸಿದ್ಧಾಂತಿಗಳಿಗೆ ಮತ್ತೊಂದು ಬಾಧಕವನ್ನು ಹೇಳಿದ್ದರು - 'ಏಷ ಆತ್ಮಾ' ಎಂಬಲ್ಲಿರುವ 'ಏತತ್' ಶಬ್ದವು ಪರಂಜ್ಯೋತಿಯನ್ನು ಹೇಳುವುದಾದರೆ ನಪುಂಸಕಲಿಂಗವಾಗಬೇಕು. ಜ್ಯೋತಿಯು ನಪುಂಸಕ-ಲಿಂಗವಾದ್ದರಿಂದ ಅದನ್ನು ಪರಾಮರ್ಶಿಸುವ 'ಏತತ್' ಶಬ್ದವೂ ಕೂಡ ನಪುಂಸಕಲಿಂಗದಲ್ಲಿಯೇ ಪ್ರಯೋಗಿಸಬೇಕು. 'ಏಷಃ' ಎಂಬ ಪುಲ್ಲಿಂಗ ಪ್ರಯೋಗವು ತಪ್ಪಾಗುತ್ತದಲ್ಲವೇ? ಎಂದು.

**तन्न । यतः –**

**विधेयापेक्षया चैतच्छब्दे पुल्लिङ्गता मता ।**
**शैत्यं हि यत्सा प्रकृतिर्जलस्येत्यादिकेष्विव ।। १ ।।**

ಈ ಶಂಕೆಯೂ ಕೂಡ ತಪ್ಪು. ಏಕೆಂದರೆ

'ವಿಧೇಯಾಪೇಕ್ಷಯಾ ಚೈತಚ್ಛಬ್ದೇ ಪುಲ್ಲಿಂಗತಾ ಮತಾ ।
ಶೈತ್ಯಂ ಹಿ ಯತ್ಸಾ ಪ್ರಕೃತಿರ್ಜಲಸ್ಯೇತ್ಯಾದಿಕೇಷ್ವಿವ ॥ ೧ ॥

ವಿಶೇಷಣವು ವಿಧೇಯಲಿಂಗವನ್ನು ಅನುಸರಿಸುತ್ತದೆ. ವಿಧೇಯವಾದ ಆತ್ಮಶಬ್ದವು ಪುಲ್ಲಿಂಗದಲ್ಲಿರುವುದರಿಂದ 'ಏತತ್' ಶಬ್ದವನ್ನೂ ಕೂಡ ಪುಲ್ಲಿಂಗದಲ್ಲಿಯೇ ಪ್ರಯೋಗಿಸಬೇಕು. 'ಶೈತ್ಯಂ ಹಿ ಯತ್ಸಾ ಪ್ರಕೃತಿರ್ಜಲಸ್ಯ' ಎಂಬಲ್ಲಿ 'ಸಾ' ಎಂಬ ಪದವು ಶೈತ್ಯವನ್ನು ಪರಾಮರ್ಶಿಸುತ್ತಿದೆ. ಶೈತ್ಯ ಶಬ್ದವು ನಪುಂಸಕಲಿಂಗವಾದ್ದರಿಂದ 'ತತ್' ಎಂದು ಹೇಳಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ವಿಧೇಯವಾದ ಪ್ರಕೃತಿಯು ಸ್ತ್ರೀಲಿಂಗದಲ್ಲಿರುವುದರಿಂದ ಅದಕ್ಕನುಗುಣವಾಗಿ 'ತತ್' ಶಬ್ದವನ್ನು ಸ್ತ್ರೀಲಿಂಗದಲ್ಲಿಯೇ ಪ್ರಯೋಗಿಸಲಾಗಿದೆ.

ಅದರಂತೆ ಪ್ರಕೃತ ಆತ್ಮಶಬ್ದವು ಪುಲ್ಲಿಂಗಲಿಂಗದಲ್ಲಿರುವುದರಿಂದ 'ಏಷಃ' ಎಂಬುದಾಗಿ ವಿಧೇಯಲಿಂಗವನ್ನೇ 'ಏತತ್' ಶಬ್ದವು ಅನುಸರಿಸುತ್ತದೆ.

**यद्यपि ''एष सम्प्रसादोऽस्माच्छरीरात्समुत्थाय परञ्ज्योतिः'' इति पूर्ववाक्ये प्रथमान्तेन पुँल्लिङ्गेनैतच्छब्देन जीवः प्रस्तुतः । परमात्मा तु द्वितीयान्तेन नपुंसकलिङ्गेन परज्योतिःशब्देन ।**

ಪ್ರಶ್ನೆ - 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿಃ' ಎಂಬ ಹಿಂದಿನ ವಾಕ್ಯದಲ್ಲಿ ಪ್ರಥಮಾವಿಭಕ್ತಿಯಲ್ಲಿರುವ ಪುಲ್ಲಿಂಗಾಂತವಾದ 'ಏತತ್' ಶಬ್ದದಿಂದ ಜೀವನು ಪ್ರಸ್ತುತನಾಗಿದ್ದಾನೆ. ಆದರೆ ಪರಮಾತ್ಮನು ದ್ವಿತೀಯಾಂತವಾದ ನಪುಂಸಕಲಿಂಗದಲ್ಲಿರುವ ಪರಂಜ್ಯೋತಿ ಶಬ್ದದಿಂದ ಹೇಳಲ್ಪಟ್ಟಿದ್ದಾನೆ. ಪ್ರಥಮಾವಿಭಕ್ತಿಯಲ್ಲಿಯೂ ಪುಲ್ಲಿಂಗದಲ್ಲಿಯೂ ಇರುವ ಇಂತಹ 'ಏತತ್' ಶಬ್ದದಿಂದ ಜೀವನನ್ನು ಪರಾಮರ್ಶಿಸುವುದೇ ಸೂಕ್ತ ಹೊರತು, ದ್ವಿತೀಯಾವಿಭಕ್ತಿಯಿಂದ ನಪುಂಸಕಲಿಂಗದಿಂದ ಹೇಳಲ್ಪಟ್ಟ ಪರಮಾತ್ಮನನ್ನು ಪರಾಮರ್ಶಿಸುವುದು ತಪ್ಪಲ್ಲವೇ?

**तथापि ''एष आत्मेति होवाच । एतदमृतमभयमेतद्ब्रह्म'' इत्यत्रैष इति शब्देन ब्रह्मैव ग्राह्यम् । निरवकाशात्मश्रुतेरमृतत्वादिलिङ्गाच्च ।**

ಉತ್ತರ - 'ಏಷ ಆತ್ಮೇತಿ ಹೋವಾಚ । ಏತದಮೃತಮಭಯಮೇತದ್ಬ್ರಹ್ಮ' ಎಂಬಲ್ಲಿ ಶ್ರುತವಾದ 'ಏಷಃ' ಎಂಬ ಶಬ್ದದಿಂದ ಬ್ರಹ್ಮನನ್ನೇ ಪರಾಮರ್ಶಿಸಬೇಕು. ಏಕೆಂದರೆ ನಿರವಕಾಶವಾದ ಆತ್ಮಶ್ರುತಿ

ಮತ್ತು ಬ್ರಹ್ಮನಲ್ಲೇ ಅಸಾಧಾರಣವಾದ ಅಭಯತ್ವ-ಅಮೃತತ್ವ ಮೊದಲಾದ ಲಿಂಗಗಳು ಶ್ರುತವಾದ್ದರಿಂದ.

**न ह्येतच्छब्देन परामर्शे समानविभक्तिकेनैतच्छब्देन प्रस्तावः प्रयोजकः । चैत्र आगतस्तं भोजयेत्यादौ तदर्शनात् । किन्तु प्रस्तावमात्रम् ।**

'ಏತತ್' ಶಬ್ದದಿಂದ ಪರಾಮರ್ಶ ಮಾಡಬೇಕಾದರೆ, ಸಮಾನವಿಭಕ್ತಿಕವಾದ 'ಏತತ್' ಶಬ್ದದಿಂದ ಪ್ರಸ್ತುತವಾಗಿರಬೇಕೆಂಬ ನಿಯಮವಿಲ್ಲ. 'ಚೈತ್ರಃ ಆಗತಃ; ತಂ ಭೋಜಯ' 'ಚೈತ್ರನು ಬಂದಿದ್ದಾನೆ. ಅವನಿಗೆ ಊಟ ಮಾಡಿಸು' ಎಂದು ಹೇಳಿದಾಗ ಪ್ರಥಮಾವಿಭಕ್ತಿಯಿಂದ ಪ್ರಕೃತನಾದ ಚೈತ್ರನನ್ನು ದ್ವಿತೀಯಾವಿಭಕ್ತಿಯಿಂದ ಕೂಡಿರುವ 'ತತ್' ಶಬ್ದದಿಂದ ಪರಾಮರ್ಶಿಸುವುದು ಕಂಡಿರುತ್ತದೆ. ಆದ್ದರಿಂದ ಲಿಂಗವಾಗಲೀ, ವಿಭಕ್ತಿಯಾಗಲೀ, ಪ್ರಯೋಜಕವಲ್ಲ. ಹಿಂದೆ ಪ್ರಸ್ತುತವಾಗಿದ್ದರೆ ಸಾಕು, ಅದನ್ನು 'ತತ್' ಶಬ್ದದಿಂದ ಪರಾಮರ್ಶಿಸಬಹುದು. ಪ್ರಕೃತ ಪರಂಜ್ಯೋತಿ ಶಬ್ದದಿಂದ ಪರಮಾತ್ಮನು ಪ್ರಸ್ತುತನಾದ್ದರಿಂದ 'ಏಷಃ' ಎಂಬುದಾಗಿ ಅವನನ್ನು ಪರಾಮರ್ಶಿಸಬಹುದು.

**पुँल्लिङ्गं तु विधेयात्मापेक्षम् । 'सा प्रकृतिर्जलस्य' इत्यत्र तच्छब्दे स्त्रीलिङ्गतावत् । ''णेरणौ यत्कर्मणौ चेत्स कर्ता'' इत्यत्र तच्छब्दस्य पुँल्लिङ्गतावत् ।**

ಪ್ರಕೃತ ಪುಲ್ಲಿಂಗ ಪ್ರಯೋಗವಾದರೂ ಕೂಡ ವಿಧೇಯವಾದ ಆತ್ಮಶಬ್ದವನ್ನು ಅನುಸರಿಸಿ ಇರುತ್ತದೆಂದು ತಿಳಿಯಬೇಕು. ಹೇಗೆಂದರೆ 'ಸಾ ಪ್ರಕೃತಿರ್ಜಲಸ್ಯ' ಎಂಬಲ್ಲಿ 'ತತ್' ಶಬ್ದವು 'ಪ್ರಕೃತಿಃ' ಎಂಬ ವಿಧೇಯವನ್ನು ಅನುಸರಿಸಿ ಸ್ತ್ರೀಲಿಂಗವನ್ನು ಹೇಗೆ ಹೊಂದಿದೆಯೋ ಅದರಂತೆ. ಮತ್ತು 'ಣೇರಣೌ ಯತ್ಕರ್ಮಣೌ ಚೇತ್ಸ ಕರ್ತಾ' ಎಂಬುದಾಗಿ ವ್ಯಾಕರಣದಲ್ಲಿ ಕರ್ಮಶಬ್ದವು ನಪುಂಸಕಲಿಂಗವಾಗಿದ್ದರೂ ಸಹ 'ಸಃ' ಎಂಬುದಾಗಿ ಪುಲ್ಲಿಂಗವಾದ 'ತತ್' ಶಬ್ದದಿಂದ ಆ ಕರ್ಮವನ್ನು ಪರಾಮರ್ಶಿಸಲಾಗಿದೆ. ಏಕೆಂದರೆ ವಿಧೇಯವಾದ ಕರ್ತೃಶಬ್ದವು ಪುಲ್ಲಿಂಗದಲ್ಲಿರುವುದರಿಂದ. ಅದರಂತೆ ಇಲ್ಲಿಯೂ ತಿಳಿಯಬೇಕು.

**अस्मिन्नेव प्रकरणे ''एतत्सत्यं ब्रह्मपुरम् । एष आत्मा'' इत्यत्रैष इत्यस्य पुँल्लिङ्गतावत् ।**

ಮತ್ತು ಇದೇ ಪ್ರಕರಣದಲ್ಲಿ 'ಏತತ್ ಸತ್ಯಂ ಬ್ರಹ್ಮಪುರಮ್ । ಏಷ ಆತ್ಮಾ' ಎಂಬ ವಾಕ್ಯವಿದೆ. ಇಲ್ಲಿರುವ 'ಏಷಃ' ಎಂಬ ಪದದಿಂದ ಬ್ರಹ್ಮಪುರವನ್ನು ಪರಾಮರ್ಶಿಸಲಾಗಿದೆ. ಆದರೆ ಬ್ರಹ್ಮಪುರ ಶಬ್ದವು ನಪುಂಸಕಲಿಂಗದಲ್ಲಿದೆ. 'ಏತತ್' ಶಬ್ದವು ಪುಲ್ಲಿಂಗದಲ್ಲಿದೆ. ಇಲ್ಲಿಯೂ ಕೂಡ ನೀವು ವಿಧೇಯವಾದ ಆತ್ಮಶಬ್ದಕ್ಕೆ ಅನುಗುಣವಾದ ಲಿಂಗವನ್ನೇ 'ಏಷಃ' ಎಂಬ ಪದವು ಅನುಸರಿಸಿದೆಯೆಂದೇ ಉತ್ತರಿಸಬೇಕು.

**अस्मिन्नेव वाक्ये ''एतदमृतमभयमेतद्ब्रह्म'' इत्यत्रैतच्छब्दस्य नपुंसकतावच्च ।**

ಮತ್ತು ಇದೇ ವಾಕ್ಯದಲ್ಲಿಯೇ 'ಏತದಮೃತಮಭಯಮ್ ಏತದ್ ಬ್ರಹ್ಮ' ಎಂಬಲ್ಲಿಯೇ 'ಏತತ್' ಶಬ್ದವು ನಪುಂಸಕಲಿಂಗದಲ್ಲಿದೆ. ಜೀವನನ್ನು ಪರಾಮರ್ಶಿಸುತ್ತದೆ ಎಂದು ಹೇಳುವ ನೀವು ಇಲ್ಲಿರುವ ನಪುಂಸಕಲಿಂಗದ 'ಏತತ್' ಶಬ್ದವನ್ನು ಹೇಗೆ ಕೂಡಿಸುತ್ತೀರಿ? ಆದ್ದರಿಂದ ವಿಧೇಯವಾದ ಬ್ರಹ್ಮಶಬ್ದಕ್ಕೆ ಅನುಗುಣವಾದ ಲಿಂಗವನ್ನೇ 'ಏತತ್' ಶಬ್ದವು ಹೊಂದಿರುತ್ತದೆಂದೇ ಉತ್ತರಿಸಬೇಕು.

**नच सुषिरस्य सर्वाश्रयत्वश्रुतिविरोधः ।**

**सुषिरस्थब्रह्मसंस्थं सुषिरस्थमितीर्यते ।**
**मञ्जूषास्थोऽपि हि मणिर्गेहस्थ इति गीयते ।। १ ।।**

ಬ್ರಹ್ಮನೇ ಸಕಲಕ್ಕೂ ಆಧಾರನಾಗಿದ್ದಾನೆಂದು ಸಿದ್ಧಾಂತಿಗಳು ಹೇಳುವುದಾದರೆ 'ಸುಷಿರ' ಶ್ರುತಿ ವಿರೋಧ ಬರುತ್ತದೆಂದು ಹಿಂದೆ ಆಕ್ಷೇಪಿಸಲಾಗಿತ್ತು. ಏಕೆಂದರೆ 'ಸುಷಿರ' ಶ್ರುತಿಯು ಹೃದಯದಲ್ಲಿರುವ ಸುಷಿರವೇ ಸರ್ವಕ್ಕೂ ಆಧಾರವಾಗಿದೆಯೆಂದು ಹೇಳುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ

ಸುಷಿರಸ್ಥಬ್ರಹ್ಮಸಂಸ್ಥಂ ಸುಷಿರಸ್ಥಮಿತೀರ್ಯತೇ ।
ಮಂಜೂಷಾಸ್ಥೋಽಪಿ ಹಿ ಮಣಿರ್ಗೇಹಸ್ಥ ಇತಿ ಗೀಯತೇ ॥ ೧ ॥

ಸುಷಿರದಲ್ಲಿ ಬ್ರಹ್ಮನಿದ್ದಾನೆ. ಅವನಲ್ಲಿ ಸಕಲ ಪದಾರ್ಥಗಳು ಇವೆಯೆಂದೇ ಸುಷಿರಶ್ರುತಿಯ ಅರ್ಥ. ಸುಷಿರದಲ್ಲಿರುವ ಬ್ರಹ್ಮನಲ್ಲಿ ಎಲ್ಲವೂ ಇದೆ ಎಂಬುದನ್ನು ಸುಷಿರದಲ್ಲಿಯೇ ಎಲ್ಲವೂ ಇದೆಯೆಂದು ಪ್ರಯೋಗಿಸಲಾಗಿದೆ. ಇದು ತಪ್ಪಲ್ಲ. ಮನೆಯಲ್ಲಿ ಮಣಿಯಿದೆ ಎಂದರೆ, ಮನೆಯಲ್ಲಿರುವ ಪೆಟ್ಟಿಗೆಯಲ್ಲಿ ಮಣಿ ಇದೆ ಎಂದರ್ಥ. ಮನೆಯಲ್ಲಿರುವ ಪೆಟ್ಟಿಗೆಯಲ್ಲಿದ್ದರೂ ಕೂಡ ಮನೆಯಲ್ಲಿ ಮಣಿಯಿದೆ ಎಂಬ ಪ್ರಯೋಗವು ಹೇಗೆ ಇದೆಯೋ ಅದರಂತೆ.

**'सप्तदशारत्निर्वाजपेयस्य यूपः' इत्यत्र वाजपेयसम्बन्धिपशुसम्बन्धिनोऽपि यूपस्य वाजपेयसम्बन्धव्यपदेशवच्च सुषिराश्रिताश्रितस्य सुषिराश्रितत्वव्यपदेशो युक्त एवेति ।**

ಅಥವಾ 'ಸಪ್ತದಶಾರತ್ನಿರ್ವಾಜಪೇಯಸ್ಯ ಯೂಪಃ' ಎಂಬಲ್ಲಿ ವಾಜಪೇಯಯಾಗಕ್ಕೆ ಸಂಬಂಧಿಯಾದ ಪಶುವಿಗೆ ಸಂಬಂಧಿಸಿದ ಯೂಪವನ್ನು ವಾಜಪೇಯಯಾಗಕ್ಕೆ ಸಂಬಂಧಿಸಿದ್ದೆಂದು ಹೇಗೆ ಪ್ರಯೋಗಿಸಲಾಗುತ್ತದೋ, ಅದರಂತೆ ಸುಷಿರದಲ್ಲಿ ಆಶ್ರಿತವಾದ ಪರಮಾತ್ಮನಲ್ಲಿ

ಮತ್ತು ಬ್ರಹ್ಮನಲ್ಲೇ ಅಸಾಧಾರಣವಾದ ಅಭಯತ್ವ-ಅಮೃತತ್ವ ಮೊದಲಾದ ಲಿಂಗಗಳು ಶ್ರುತವಾದ್ದರಿಂದ.

**न ह्येतच्छब्देन परामर्शे समानविभक्तिकेनैतच्छब्देन प्रस्तावः प्रयोजकः । चैत्र आगतस्तं भोजयेत्यादौ तददर्शनात् । किन्तु प्रस्तावमात्रम् ।**

'ಏತತ್' ಶಬ್ದದಿಂದ ಪರಾಮರ್ಶ ಮಾಡಬೇಕಾದರೆ, ಸಮಾನವಿಭಕ್ತಿಕವಾದ 'ಏತತ್' ಶಬ್ದದಿಂದ ಪ್ರಸ್ತುತವಾಗಿರಬೇಕೆಂಬ ನಿಯಮವಿಲ್ಲ. 'ಚೈತ್ರಃ ಆಗತಃ; ತಂ ಭೋಜಯ' 'ಚೈತ್ರನು ಬಂದಿದ್ದಾನೆ. ಅವನಿಗೆ ಊಟ ಮಾಡಿಸು' ಎಂದು ಹೇಳಿದಾಗ ಪ್ರಥಮಾವಿಭಕ್ತಿಯಿಂದ ಪ್ರಕೃತನಾದ ಚೈತ್ರನನ್ನು ದ್ವಿತೀಯಾವಿಭಕ್ತಿಯಿಂದ ಕೂಡಿರುವ 'ತತ್' ಶಬ್ದದಿಂದ ಪರಾಮರ್ಶಿಸುವುದು ಕಂಡಿರುತ್ತದೆ. ಆದ್ದರಿಂದ ಲಿಂಗವಾಗಲೀ, ವಿಭಕ್ತಿಯಾಗಲೀ, ಪ್ರಯೋಜಕವಲ್ಲ. ಹಿಂದೆ ಪ್ರಸ್ತುತವಾಗಿದ್ದರೆ ಸಾಕು, ಅದನ್ನು 'ತತ್' ಶಬ್ದದಿಂದ ಪರಾಮರ್ಶಿಸಬಹುದು. ಪ್ರಕೃತ ಪರಂಜ್ಯೋತಿ ಶಬ್ದದಿಂದ ಪರಮಾತ್ಮನು ಪ್ರಸ್ತುತನಾದ್ದರಿಂದ 'ಏಷಃ' ಎಂಬುದಾಗಿ ಅವನನ್ನು ಪರಾಮರ್ಶಿಸಬಹುದು.

**पुँल्लिङ्गं तु विधेयात्मापेक्षम् । 'सा प्रकृतिर्जलस्य' इत्यत्र तच्छब्दे स्त्रीलिङ्गतावत् । ''णेरणौ यत्कर्मणौ चेत्स कर्ता'' इत्यत्र तच्छब्दस्य पुँल्लिङ्गतावत् ।**

ಪ್ರಕೃತ ಪುಲ್ಲಿಂಗ ಪ್ರಯೋಗವಾದರೂ ಕೂಡ ವಿಧೇಯವಾದ ಆತ್ಮಶಬ್ದವನ್ನು ಅನುಸರಿಸಿ ಇರುತ್ತದೆಂದು ತಿಳಿಯಬೇಕು. ಹೇಗೆಂದರೆ 'ಸಾ ಪ್ರಕೃತಿರ್ಜಲಸ್ಯ' ಎಂಬಲ್ಲಿ 'ತತ್' ಶಬ್ದವು 'ಪ್ರಕೃತಿಃ' ಎಂಬ ವಿಧೇಯವನ್ನು ಅನುಸರಿಸಿ ಸ್ತ್ರೀಲಿಂಗವನ್ನು ಹೇಗೆ ಹೊಂದಿದೆಯೋ ಅದರಂತೆ. ಮತ್ತು 'ಣೇರಣೌ ಯತ್ಕರ್ಮಣೌ ಚೇತ್ಸ ಕರ್ತಾ' ಎಂಬುದಾಗಿ ವ್ಯಾಕರಣದಲ್ಲಿ ಕರ್ಮಶಬ್ದವು ನಪುಂಸಕಲಿಂಗವಾಗಿದ್ದರೂ ಸಹ 'ಸಃ' ಎಂಬುದಾಗಿ ಪುಲ್ಲಿಂಗವಾದ 'ತತ್' ಶಬ್ದದಿಂದ ಆ ಕರ್ಮವನ್ನು ಪರಾಮರ್ಶಿಸಲಾಗಿದೆ. ಏಕೆಂದರೆ ವಿಧೇಯವಾದ ಕರ್ತೃಶಬ್ದವು ಪುಲ್ಲಿಂಗದಲ್ಲಿರುವುದರಿಂದ. ಅದರಂತೆ ಇಲ್ಲಿಯೂ ತಿಳಿಯಬೇಕು.

**अस्मिन्नेव प्रकरणे ''एतत्सत्यं ब्रह्मपुरम् । एष आत्मा'' इत्यत्रैष इत्यस्य पुँल्लिङ्गतावत् ।**

ಮತ್ತು ಇದೇ ಪ್ರಕರಣದಲ್ಲಿ 'ಏತತ್ ಸತ್ಯಂ ಬ್ರಹ್ಮಪುರಮ್ । ಏಷ ಆತ್ಮಾ' ಎಂಬ ವಾಕ್ಯವಿದೆ. ಇಲ್ಲಿರುವ 'ಏಷಃ' ಎಂಬ ಪದದಿಂದ ಬ್ರಹ್ಮಪುರವನ್ನು ಪರಾಮರ್ಶಿಸಲಾಗಿದೆ. ಆದರೆ ಬ್ರಹ್ಮಪುರ ಶಬ್ದವು ನಪುಂಸಕಲಿಂಗದಲ್ಲಿದೆ. 'ಏತತ್' ಶಬ್ದವು ಪುಲ್ಲಿಂಗದಲ್ಲಿದೆ. ಇಲ್ಲಿಯೂ ಕೂಡ ನೀವು ವಿಧೇಯವಾದ ಆತ್ಮಶಬ್ದಕ್ಕೆ ಅನುಗುಣವಾದ ಲಿಂಗವನ್ನೇ 'ಏಷಃ' ಎಂಬ ಪದವು ಅನುಸರಿಸಿದೆಯೆಂದೇ ಉತ್ತರಿಸಬೇಕು.

**अस्मिन्नेव वाक्ये "एतदमृतमभयमेतद्ब्रह्म" इत्यत्रैतच्छब्दस्य नपुंसकतावच्च ।**

ಮತ್ತು ಇದೇ ವಾಕ್ಯದಲ್ಲಿಯೇ 'ಏತದಮೃತಮಭಯಮ್ ಏತದ್ ಬ್ರಹ್ಮ' ಎಂಬಲ್ಲಿಯೇ 'ಏತತ್' ಶಬ್ದವು ನಪುಂಸಕಲಿಂಗದಲ್ಲಿದೆ. ಜೀವನನ್ನು ಪರಾಮರ್ಶಿಸುತ್ತದೆ ಎಂದು ಹೇಳುವ ನೀವು ಇಲ್ಲಿರುವ ನಪುಂಸಕಲಿಂಗದ 'ಏತತ್' ಶಬ್ದವನ್ನು ಹೇಗೆ ಕೂಡಿಸುತ್ತೀರಿ? ಆದ್ದರಿಂದ ವಿಧೇಯವಾದ ಬ್ರಹ್ಮಶಬ್ದಕ್ಕೆ ಅನುಗುಣವಾದ ಲಿಂಗವನ್ನೇ 'ಏತತ್' ಶಬ್ದವು ಹೊಂದಿರುತ್ತದೆಂದೇ ಉತ್ತರಿಸಬೇಕು.

**नच सुषिरस्य सर्वाश्रयत्वश्रुतिविरोधः ।**

**सुषिरस्थब्रह्मसंस्थं सुषिरस्थमितीर्यते ।**
**मञ्जूषास्थोऽपि हि मणिर्गेहस्थ इति गीयते ।। १ ।।**

ಬ್ರಹ್ಮನೇ ಸಕಲಕ್ಕೂ ಆಧಾರನಾಗಿದ್ದಾನೆಂದು ಸಿದ್ಧಾಂತಿಗಳು ಹೇಳುವುದಾದರೆ 'ಸುಷಿರ' ಶ್ರುತಿ ವಿರೋಧ ಬರುತ್ತದೆಂದು ಹಿಂದೆ ಆಕ್ಷೇಪಿಸಲಾಗಿತ್ತು. ಏಕೆಂದರೆ 'ಸುಷಿರ' ಶ್ರುತಿಯು ಹೃದಯದಲ್ಲಿರುವ ಸುಷಿರವೇ ಸರ್ವಕ್ಕೂ ಆಧಾರವಾಗಿದೆಯೆಂದು ಹೇಳುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ

ಸುಷಿರಸ್ಥಬ್ರಹ್ಮಸಂಸ್ಥಂ ಸುಷಿರಸ್ಥಮಿತೀರ್ಯತೇ ।
ಮಂಜೂಷಾಸ್ಥೋऽಪಿ ಹಿ ಮಣಿರ್ಗೇಹಸ್ಥ ಇತಿ ಗೀಯತೇ ॥ ೧ ॥

ಸುಷಿರದಲ್ಲಿ ಬ್ರಹ್ಮನಿದ್ದಾನೆ. ಅವನಲ್ಲಿ ಸಕಲ ಪದಾರ್ಥಗಳು ಇವೆಯೆಂದೇ ಸುಷಿರಶ್ರುತಿಯ ಅರ್ಥ. ಸುಷಿರದಲ್ಲಿರುವ ಬ್ರಹ್ಮನಲ್ಲಿ ಎಲ್ಲವೂ ಇದೆ ಎಂಬುದನ್ನು ಸುಷಿರದಲ್ಲಿಯೇ ಎಲ್ಲವೂ ಇದೆಯೆಂದು ಪ್ರಯೋಗಿಸಲಾಗಿದೆ. ಇದು ತಪ್ಪಲ್ಲ. ಮನೆಯಲ್ಲಿ ಮಣಿಯಿದೆ ಎಂದರೆ, ಮನೆಯಲ್ಲಿರುವ ಪೆಟ್ಟಿಗೆಯಲ್ಲಿ ಮಣಿ ಇದೆ ಎಂದರ್ಥ. ಮನೆಯಲ್ಲಿರುವ ಪೆಟ್ಟಿಗೆಯಲ್ಲಿದ್ದರೂ ಕೂಡ ಮನೆಯಲ್ಲಿ ಮಣಿಯಿದೆ ಎಂಬ ಪ್ರಯೋಗವು ಹೇಗೆ ಇದೆಯೋ ಅದರಂತೆ.

**'सप्तदशारत्निर्वाजपेयस्य यूपः' इत्यत्र वाजपेयसम्बन्धिपशुसम्बन्धिनोऽपि यूपस्य वाजपेयसम्बन्धव्यपदेशवच्च सुषिराश्रिताश्रितस्य सुषिराश्रितत्वव्यपदेशो युक्त एवेति ।**

ಅಥವಾ 'ಸಪ್ತದಶಾರತ್ನಿರ್ವಾಜಪೇಯಸ್ಯ ಯೂಪಃ' ಎಂಬಲ್ಲಿ ವಾಜಪೇಯಯಾಗಕ್ಕೆ ಸಂಬಂಧಿಯಾದ ಪಶುವಿಗೆ ಸಂಬಂಧಿಸಿದ ಯೂಪವನ್ನು ವಾಜಪೇಯಯಾಗಕ್ಕೆ ಸಂಬಂಧಿಸಿದ್ದೆಂದು ಹೇಗೆ ಪ್ರಯೋಗಿಸಲಾಗುತ್ತದೋ, ಅದರಂತೆ ಸುಷಿರದಲ್ಲಿ ಆಶ್ರಿತವಾದ ಪರಮಾತ್ಮನಲ್ಲಿ

ಆಶ್ರಿತವಾದದ್ದನ್ನು ಸುಷಿರದಲ್ಲಿಯೇ ಆಶ್ರಿತವಾಗಿದೆಯೆಂದು ಪ್ರಯೋಗಿಸಲಾಗಿದೆ. ಇದು ತಪ್ಪಾಗುವುದಿಲ್ಲ.

**प्रकाशः –**

एवमाकाशजीवपूर्वपक्षौ निरवकाशभगवल्लिङ्गादिना निरस्यानन्वयबाधकं चान्वयोपपादनेन निराकृत्य परपक्षेऽनन्वयबाधकं चोक्त्वा अधुना यज्जीव-पूर्वपक्षवादिनोक्तं स्वसाधकं परबाधकं तत् ''अन्यार्थश्च परामर्शः'' इति सूत्रभाष्य-टीकाकृतविवरणेन परिहरति – **यच्चेति** ।।

ವಿವರಣೆ - ಇಲ್ಲಿಯ ತನಕ ಆಕಾಶ ಹಾಗೂ ಜೀವ ಇವರಿಬ್ಬರೂ ಹೃತ್ಪದ್ಮಸ್ಥರಾಗಿದ್ದಾರೆಂಬ ಎರಡು ಬಗೆಯ ಪೂರ್ವಪಕ್ಷಗಳನ್ನು ನಿರವಕಾಶವಾದ ಪರಮಾತ್ಮನ ಲಿಂಗಗಳಿಂದ ನಿರಾಕರಿಸಿದ್ದಾಯಿತು. ಮತ್ತು ಪೂರ್ವಪಕ್ಷಕಾರರಿಂದ ಆಕ್ಷೇಪಿಸಲ್ಪಟ್ಟ ಅನನ್ವಯ ಎಂಬ ಬಾಧಕವನ್ನು ಅನ್ವಯವನ್ನು ತೋರಿಸುವ ಮುಖಾಂತರ ನಿರಾಕರಿಸಿದ್ದಾಯಿತು. ಮತ್ತು 'ಅನನ್ವಯ' ಎಂಬ ಬಾಧಕವು ಪೂರ್ವಪಕ್ಷಕಾರರಿಗೇ ತಟ್ಟುತ್ತದೆ ಹೊರತು, ನಮಗಲ್ಲ ಎಂದೂ ಕೂಡ ಹೇಳಿದ್ದಾಯಿತು. ಈಗ ಜೀವನೇ ಹೃತ್ಪದ್ಮಸ್ಥನಾಗಿದ್ದಾನೆಂದು ವಾದಿಸುವ ಪೂರ್ವಪಕ್ಷಿಗಳು ಸ್ವಪಕ್ಷ ಸಾಧಕವಾಗಿ, ಪರಪಕ್ಷ ಬಾಧಕವಾಗಿ ಯಾವ ಸುಷಿರಶ್ರುತಿ ವಿರೋಧವನ್ನು ಹೇಳಿದ್ದಾರೋ, ಅದನ್ನು 'ಅನ್ಯಾರ್ಥಶ್ಚ ಪರಾಮರ್ಶಃ' ಎಂಬ ಸೂತ್ರ ಹಾಗೂ ಭಾಷ್ಯ-ಟೀಕೆಗಳಲ್ಲಿ ಹೇಳಿದ ವಿಚಾರವನ್ನೇ ವ್ಯಾಖ್ಯಾನಿಸುತ್ತಾ ಪರಿಹಾರ ಮಾಡುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ.

**प्रकाशः –** यत इत्यस्य श्लोकेनान्वयः । विशेषशङ्कानुवादपूर्वकं श्लोकं व्याचष्टे – **यद्यपीति** ।। **प्रस्तावः** प्रकृतत्वम् । हृत्पद्मगताकाशस्थो विष्णुरित्युपेत्य तस्य सर्वाधारत्वाङ्गीकारे प्रागुक्तं बाधकान्तरमप्यनूद्यापाकरोति – **नचेति** ।।

'ಯತಃ' ಎಂಬ ಪದಕ್ಕೆ ಶ್ಲೋಕದ ಜೊತೆಗೆ ಅನ್ವಯ ಮಾಡಬೇಕು. ವಿಶೇಷವಾದ ಶಂಕೆಯನ್ನು ಅನುವಾದ ಮಾಡುವ ಮೂಲಕ ಶ್ಲೋಕವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ. 'ಪ್ರಸ್ತಾವಃ' ಎಂಬ ಪದಕ್ಕೆ ಪ್ರಕೃತವಾಗಿರುವಿಕೆ ಎಂದರ್ಥ. ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ವಿಷ್ಣು ಇದ್ದಾನೆಂದು ಅಂಗೀಕರಿಸಿ ಅವನಲ್ಲಿ ಸರ್ವಾಧಾರತ್ವವನ್ನು ಒಪ್ಪಿದರೆ ಪೂರ್ವಪಕ್ಷಕಾರರು ಹಿಂದೆ ಹೇಳಿದ ಮತ್ತೊಂದು ಬಾಧಕವನ್ನೂ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ನಚ' ಇತ್ಯಾದಿ ವಾಕ್ಯದಿಂದ.

**प्रकाशः –** हि यस्मात्तस्मान्न चेति पूर्वेणान्वयः । **मञ्जूषेति** ।। गृहगतमञ्जूषास्थ इत्यर्थः । श्लोकोक्तो लौकिकदृष्टान्तस्स्फुट इत्युपेक्षणमिति भावेन वैदिकदृष्टान्तपूर्वं पूर्वार्धं व्यनक्ति – **सप्तदशेति** ।।

ಯಾವ ಕಾರಣದಿಂದ ಸರ್ವಾಶ್ರಯತ್ವ ಶ್ರುತಿವಿರೋಧವು ಬರುವುದಿಲ್ಲವೋ, ಆ ಕಾರಣದಿಂದಲೇ ಸುಷಿರಕ್ಕೆ ಸರ್ವಾಶ್ರಯತ್ವವನ್ನು ಹೇಳಬಹುದೆಂದು ಹಿಂದಿನ ವಾಕ್ಯದ ಜೊತೆಗೆ ಅನ್ವಯ ಮಾಡಬೇಕು. 'ಮಂಜೂಷಾ' ಎಂದರೆ ಮನೆಯಲ್ಲಿರುವ ಆಭರಣವನ್ನಿಡುವ ಪೆಟ್ಟಿಗೆ (ಕಪಾಟು) ಎಂದರ್ಥ. ಶ್ಲೋಕದಲ್ಲಿ ಹೇಳಲ್ಪಟ್ಟ ಲೌಕಿಕದೃಷ್ಟಾಂತವನ್ನು ಸ್ಪಷ್ಟವಾಗಿ ತಿಳಿಯುವ ಕಾರಣ ಅದರ ಬಗ್ಗೆ ವಿವರಿಸದೇ ವೈದಿಕದೃಷ್ಟಾಂತವನ್ನು ನೀಡುವ ಮೂಲಕ ತಮ್ಮ ಶ್ಲೋಕಕ್ಕೆ ವ್ಯಾಖ್ಯಾನಿಸುತ್ತಿದ್ದಾರೆ 'ಸಪ್ತದಶ' ಇತ್ಯಾದಿ ವಾಕ್ಯದಿಂದ.

**प्रकाशः** – प्राग्विवृतमधिकरणशरीरं जिज्ञासाधिकरणे । यथा साक्षात्परम्परा-साधारण्येन सम्बन्धमात्रे षष्ठ्यनुशासनाद्देवदत्तस्य नप्तेत्यादाविव परम्परया वाजपेयसम्बन्धिनो यूपस्य वाजपेयसम्बन्धव्यपदेशस्तथात्रापीत्यर्थः ।

ಪೂರ್ವಮೀಮಾಂಸೆಯ ಈ ಅಧಿಕರಣವನ್ನು ಹಿಂದೆ ಜಿಜ್ಞಾಸಾಧಿಕರಣದಲ್ಲೇ ವಿವರಿಸಿದ್ದಾಗಿದೆ. ಈ ವಿಷಯದಲ್ಲಿ ಮತ್ತೊಂದು ದೃಷ್ಟಾಂತವನ್ನು ಹೀಗೆ ತಿಳಿಯಬಹುದು. 'ದೇವದತ್ತಸ್ಯ ನಪ್ತಾ' ಎಂಬ ಪ್ರಯೋಗವಿದೆ. ಮೊಮ್ಮಗನ ಮಗನನ್ನು 'ನಪ್ತಾ' ಎನ್ನುತ್ತಾರೆ. 'ದೇವದತ್ತಸ್ಯ' ಎಂಬಲ್ಲಿರುವ ಷಷ್ಠೀವಿಭಕ್ತಿಗೆ ಸಂಬಂಧಿ ಎಂದರ್ಥ. ದೇವದತ್ತನಿಗೆ ಸಾಕ್ಷಾತ್ ಸಂಬಂಧಪಟ್ಟಿರುವವನು ಮೊಮ್ಮಗನ ಮಗನು ಆಗಲು ಸಾಧ್ಯವಿಲ್ಲ. ಹೊರತಾಗಿ ದೇವದತ್ತನಿಗೆ ಸಂಬಂಧಪಟ್ಟಿರುವವನು ದೇವದತ್ತನ ಮಗ, ಅವನಿಗೆ ಸಂಬಂಧಪಟ್ಟಿರುವವನು ಅವನ ಮಗ. ಆ ಮಗನಿಗೆ ಸಂಬಂಧಪಟ್ಟಿರುವವನು 'ನಪ್ತಾ' ಎನಿಸುತ್ತಾನೆ. ಹೀಗೆ ಪರಂಪರೆಯಿಂದ ಸಂಬಂಧಿಯಾದ ಮೊಮ್ಮಗನ ಮಗನಲ್ಲಿ 'ದೇವದತ್ತಸ್ಯ' ಎಂಬ ಷಷ್ಠೀವಿಭಕ್ತಿಯಿಂದ ಸಂಬಂಧವನ್ನು ಹೇಳಲಾಗಿದೆ. ಆದ್ದರಿಂದ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಸಂಬಂಧಸಾಮಾನ್ಯದಲ್ಲಿ ಷಷ್ಠೀಪ್ರಯೋಗವನ್ನು ಮಾಡಿದ್ದು ಕಾಣಿಸುತ್ತಿದೆ. ಅದರಂತೆ ಪರಂಪರೆಯಿಂದ ವಾಜಪೇಯ ಯಾಗಕ್ಕೆ ಸಂಬಂಧಪಟ್ಟ ಯೂಪದಲ್ಲಿ ವಾಜಪೇಯ ಯಾಗದ ಸಂಬಂಧದ ವ್ಯಪದೇಶವಿರುತ್ತದೆ. ಹೀಗೆ ದೃಷ್ಟಾಂತವನ್ನು ತಿಳಿಯಬೇಕು.

**प्रकाशः** – न चायं न्यायोऽङ्गाङ्गिभावविषयः । तथैव रेवत्यधिकरणे द्वितीयेऽभिधानादिति वाच्यम् । अत्रापि सुषिराधेयतया श्रुतं सर्वं तदाऽधेये हरौ युक्तमित्यङ्गाङ्गिभावतुल्यत्वादिति भावः ।।

ಈ ಪೂರ್ವಮೀಮಾಂಸಾ ನ್ಯಾಯವು ಅಂಗಾಂಗಿ ಭಾವಕ್ಕೆ ಸಂಬಂಧಪಟ್ಟಿಲ್ಲವೆಂದು ಎರಡನೆಯ ಅಧ್ಯಾಯದಲ್ಲಿ ರೇವತ್ಯಧಿಕರಣದಲ್ಲಿ ಹೇಳಲಾಗಿದೆ. ವಾಜಪೇಯಕ್ಕೆ ಅಂಗವಾದದ್ದು ಯೂಪ. ಯೂಪಕ್ಕೆ ಅಂಗವಾದದ್ದು ಪಶು. ಹೀಗೆ ಪರಂಪರಯೂ ಅಂಗವಾಗುವುದರಿಂದ ಷಷ್ಠೀ ವಿಭಕ್ತಿಯನ್ನು ಪ್ರಯೋಗಿಸಲಾಗಿದೆ. ಆದರೆ ಪ್ರಕೃತ ಸುಷಿರಕ್ಕೂ ಸರ್ವಾಧಾರತ್ವಕ್ಕೂ ಅಂಗಾಂಗಿ ಭಾವವನ್ನು ಹೇಳಲು ಬರುವುದಿಲ್ಲವಲ್ಲ ಎಂದು ಪ್ರಶ್ನಿಸಬಾರದು. ಅಂಗಾಂಗಿ ಭಾವವನ್ನು ಇಲ್ಲಿ ಹೇಳಲು ಬಾರದಿದ್ದರೂ ಆಧಾರಾಧೇಯಭಾವವಿರುತ್ತದೆ. ಸುಷಿರದಲ್ಲಿ ಆಧೇಯವಾಗಿ ಶ್ರುತವಾದ ಸಕಲ ಪದಾರ್ಥಗಳು ಸುಷಿರದಲ್ಲಿ ಇರುವಂತಹ ಪರಮಾತ್ಮನಲ್ಲಿ ಇರುತ್ತವೆಂದು ತಿಳಿಯಬೇಕು. ಆದ್ದರಿಂದ ಅಂಗಾಂಗಿ ಭಾವಕ್ಕೆ ಸಮಾನವಾದ

ಆಧಾರಾಧೇಯ ಭಾವವಿರುವ ಕಾರಣ ಸುಷಿರದಲ್ಲೇ ಸಕಲ ಪದಾರ್ಥಗಳು ಇರುತ್ತವೆಂದು ಶ್ರುತಿಯು ಹೇಳಿದೆ. ಆದ್ದರಿಂದ ಯಾವುದೇ ಬಾಧಕಗಳಿಗೂ ಅವಕಾಶವಿಲ್ಲ.

**गुरुराजीयम्** – ब्रह्मैव पूर्णत्वात्पुरमित्युपपत्तेरित्युक्त्या सर्वत्र ब्रह्मपुरशब्दस्य ब्रह्मपरत्वमिति प्रतीतिनिरासायाऽह – **पक्षद्वयेऽपीति** ।। न चाकाशपक्षेऽन्वयोऽस्तीति टीकाऽनुपपन्ना । पूर्वोक्तहृत्पद्मस्थाकाशानुवादेन तस्यापरिच्छिन्नत्वं विधाय द्यावापृथिव्यादेरन्वेष्टव्यताया उच्यमानत्वेनान्वयोपपत्तेरित्यतोऽभिप्रायमाह – **तत्रायं भाव इति** ।। ननु नात्र दहराकाशस्थविषयः प्रश्नः । येन परिहारे दहराकाशोक्तावनन्वयः स्यात् । किन्तु हृत्पद्मस्थविषय एव । तच्छब्दस्य व्यवहितपुण्डरीकपरामर्शकत्वेन दहराकाशपरामर्शकत्वाभावादित्यत आह – **दहरोऽस्मिन्निति** । पृथिव्यादीनां मुख्यतो जिज्ञास्यत्वादिति टीका । तत्र हेत्वनुक्तेस्तदुक्तिपूर्वकं टीकां व्याख्याति – **अपि चेति** ।।




ಹಿಂದೆ ಜೀವನೇ ಹೃತ್ಪದ್ಮಸ್ಥನಾಗಿದ್ದಾನೆಂದು ಪೂರ್ವಪಕ್ಷ ಮಾಡುವಾಗ ಸಿದ್ಧಾಂತಿಗಳಿಗೆ ಬಾಧಕವೊಂದನ್ನು ಹೇಳಲಾಗಿತ್ತು. 'ಏತತ್' ಶಬ್ದದಿಂದ ಪರಮಾತ್ಮನನ್ನು ಪರಾಮರ್ಶಿಸಲು ಸಾಧ್ಯವಿಲ್ಲ. ಏಕೆಂದರೆ 'ಪರಂಜ್ಯೋತಿಃ' ಎಂಬ ಶಬ್ದವು ನಪುಂಸಕಲಿಂಗದಲ್ಲಿದೆ. ಈ ಶಬ್ದದಿಂದ ಪ್ರತಿಪಾದ್ಯನಾದ ಬ್ರಹ್ಮನನ್ನು ಪುಲ್ಲಿಂಗ ಶಬ್ದದಲ್ಲಿರುವ 'ಏಷಃ' ಎಂಬ ಶಬ್ದದಿಂದ ಪರಾಮರ್ಶಿಸಲು ಸಾಧ್ಯವಿಲ್ಲವೆಂದು.

ಇದೂ ಸಹ ತಪ್ಪು. ವಿಧೇಯವು ಯಾವ ಲಿಂಗದಲ್ಲಿರುತ್ತದೋ, ಆ ಲಿಂಗವನ್ನೇ ಅನುಸರಿಸಿ ಪರಾಮರ್ಶ ಮಾಡುವಂತಹ ಸರ್ವನಾಮ ಶಬ್ದವನ್ನು ಪ್ರಯೋಗಿಸುವುದು ಕಾಣಸುತ್ತದೆ. ''ಶೈತ್ಯಂ ಹಿ ಯತ್ಸಾ ಪ್ರಕೃತಿರ್ಜಲಸ್ಯ' ಎಂಬ ಪ್ರಯೋಗವು ಲೋಕದಲ್ಲಿ ಪ್ರಸಿದ್ಧವಾಗಿದೆ. 'ನೀರಿನ ಸ್ವಭಾವ ಶೈತ್ಯ' ಎಂಬುದು ಇದರ ಅರ್ಥ. 'ಸಾ' ಎಂಬ ಸ್ತ್ರೀಲಿಂಗವಾದ ಶಬ್ದದಿಂದ ಶೈತ್ಯವನ್ನು ಪರಾಮರ್ಶಿಸುತ್ತಾರೆ. ಆದರೆ ಶೈತ್ಯ ಶಬ್ದವು ನಪುಂಸಕಲಿಂಗದಲ್ಲೇ ಇದೆ. ಆದ್ದರಿಂದ ಪ್ರಕೃತಿ ಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ವಿಧೇಯಕವಾದ ಲಿಂಗವನ್ನೇ 'ತತ್' ಶಬ್ದವು ಅನುಸರಿಸಿದೆಯೆಂದು ಉತ್ತರಿಸಬೇಕು. ಅದರಂತೆ ಪ್ರಕೃತ 'ಆತ್ಮ' ಎಂಬ ವಿಧೇಯವಾಚಕ ಶಬ್ದವು ಪುಲ್ಲಿಂಗದಲ್ಲಿರುವ ಪ್ರಯುಕ್ತ 'ಏಷಃ' ಎಂಬುದಾಗಿ ಪುಲ್ಲಿಂಗ ಪ್ರಯೋಗವು ಯುಕ್ತವಾಗಿದೆಯೆಂದು ತಿಳಿಯಬೇಕು. ಮತ್ತು ಅಮೃತತ್ವ, ಅಭಯತ್ವ ಮೊದಲಾದ ನಿರವಕಾಶವಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರುವುದರಿಂದ ಪರಮಾತ್ಮನೇ ಪರಾಮರ್ಶಕ್ಕೆ ಯೋಗ್ಯನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. 'ಏತತ್' ಶಬ್ದದಿಂದ ಪರಾಮರ್ಶ ಮಾಡಬೇಕಾದರೆ ಸಮಾನವಿಭಕ್ತಿಯಾಗಲೀ, ಸಮಾನಲಿಂಗವಾಗಲೀ ಪ್ರಯೋಜಕವಲ್ಲ. ಹಿಂದೆ ಪ್ರಸ್ತುತನಾಗಿದ್ದರೆ ಸಾಕು. ಚೈತ್ರನು ಬಂದನು; ಅವನಿಗೆ ಊಟ ಮಾಡಿಸು. 'ಚೈತ್ರಃ ಆಗತಃ ತಂ ಭೋಜಯ' ಎಂಬ ಪ್ರಯೋಗವಿದೆ. ಚೈತ್ರ ಶಬ್ದವು ಪ್ರಥಮಾವಿಭಕ್ತಿಯಲ್ಲಿದ್ದರೂ

ಕೂಡ ದ್ವಿತೀಯಾವಿಭಕ್ತ್ಯಂತದಲ್ಲಿರುವ 'ತಂ' ಎಂಬ 'ತತ್' ಶಬ್ದದಿಂದ ಚೈತ್ರನನ್ನು ಪರಾಮರ್ಶಿಸುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ಲಿಂಗವಾಗಲೀ, ವಿಭಕ್ತಿಯಾಗಲೀ ಪ್ರಯೋಜಕವಲ್ಲವೆಂದು ತಿಳಿಯಬೇಕು.

ಮತ್ತು ಪರಮಾತ್ಮನೇ ಎಲ್ಲಕ್ಕೂ ಆಧಾರನಾಗಿದ್ದಾನೆಂದು ಹೇಳುವುದಾದರೆ, ಸುಷಿರ ಶ್ರುತಿಯಲ್ಲಿ ಸುಷಿರಕ್ಕೆ ಹೇಳಲ್ಪಟ್ಟ ಸರ್ವಾಧಾರತ್ವವು ಎಂಬುದು ಪೂರ್ವಪಕ್ಷಕಾರರ ಮತ್ತೊಂದು ಪ್ರಶ್ನೆ. ಇದೂ ಕೂಡ ತಪ್ಪು. ಮನೆಯಲ್ಲಿ ಮಣಿಮಾಲೆಯಿದೆ ಎಂಬ ಪ್ರಯೋಗವಿದೆ. ಮಣಿಮಾಲೆಯನ್ನು ಮನೆಯಲ್ಲಿಟ್ಟಿರುವುದಿಲ್ಲ ಹೊರತಾಗಿ ಮನೆಯಲ್ಲಿರುವ ಪೆಟ್ಟಿಗೆಯಲ್ಲಿ ಭದ್ರವಾಗಿ ಇಟ್ಟಿರುತ್ತಾರೆ. ಆದರೂ ಕೂಡ 'ಮನೆಯಲ್ಲಿ ಮಣಿಮಾಲೆಯಿದೆ' ಎಂಬ ಪ್ರಯೋಗವನ್ನು ಹೇಗೆ ಮಾಡುತ್ತೇವೋ, ಅದರಂತೆ ಸುಷಿರದಲ್ಲಿ ಎಲ್ಲವೂ ಇದೆಯೆಂದರೆ ಸುಷಿರದಲ್ಲಿ ಬ್ರಹ್ಮನಿದ್ದಾನೆ. ಅವನಲ್ಲಿ ಎಲ್ಲ ಪದಾರ್ಥವೂ ಕೂಡ ಅಡಕವಾಗಿದೆಯೆಂದೇ ಅಭಿಪ್ರಾಯ. ಯಾವುದೇ ಬಾಧಕಗಳಿಲ್ಲದ ಕಾರಣ ಹೃದಯಪದ್ಮದಲ್ಲಿರುವ ಸುಷಿರದಲ್ಲಿ ನೆಲೆಸಿರುವವನು ಪರಮಾತ್ಮನೇ ಆಗಿದ್ದಾನೆಂದು ತೀರ್ಮಾನವಾಯಿತು.

//////////////////////////////////////////

● ● ● ● ●

## ಪ್ರಥಮಸೂತ್ರ ಹಾಗೂ ದ್ವಿತೀಯಸೂತ್ರಗಳ ಸ್ವಾರಸ್ಯ ವರ್ಣನೆ

### तात्पर्यचन्द्रिका

**अत्राद्ये सूत्रे स्वपक्षसाधनाय विषयवाक्ये सन्निहितात्मश्रुतेरपहतपाप्मत्वादि-लिङ्गानां चोक्तिः । तत्र च दहरशब्दः सप्तम्यन्तो नतु परमत इव प्रथमान्तः ।**

ಅನುವಾದ - 'ಓಂ ದಹರ ಉತ್ತರೇಭ್ಯಃ ಓಂ' ಎಂಬುದು ಪ್ರಥಮ ಸೂತ್ರ. ಇದರಲ್ಲಿ ಸ್ವಪಕ್ಷ ಸಾಧಕ ಪ್ರಮಾಣಗಳನ್ನು ಹೇಳುತ್ತಿದ್ದಾರೆ. ಮತ್ತು ವಿಷಯ ವಾಕ್ಯದಿಂದ ಹತ್ತಿರದಲ್ಲೇ ಶ್ರುತವಾದ ಆತ್ಮಶ್ರುತಿ ಹಾಗೂ ಅಪಹತಪಾಪ್ಮತ್ವ ಮೊದಲಾದ ಲಿಂಗಗಳು ಬ್ರಹ್ಮನೇ ಹೃತ್ಪದ್ಮಸ್ಥನಾಗಿದ್ದಾನೆನ್ನಲು ಸಾಧಕಪ್ರಮಾಣಗಳಾಗಿವೆ. ಸೂತ್ರದಲ್ಲಿರುವ 'ದಹರೇ' ಎಂಬುದಾಗಿ ಸಪ್ತಮೀವಿಭಕ್ತ್ಯಂತವಾಗಿದೆ ಹೊರತು, ಪರಮತದಲ್ಲಿ ಹೇಳುವಂತೆ 'ದಹರಃ' ಎಂಬುದಾಗಿ ಪ್ರಥಮಾವಿಭಕ್ತ್ಯಂತವಾಗಿಲ್ಲ.

**द्वितीये व्यवहितब्रह्मश्रुतेः सुप्तगम्यत्वादिलिङ्गस्य चोक्तिः ।**

'ಓಂ ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಚ ಓಂ' ಎಂಬುದು ಎರಡನೆಯ ಸೂತ್ರ. ಈ ಇದರಲ್ಲಿ ವಿಷಯವಾಕ್ಯದಿಂದ ಸ್ವಲ್ಪದೂರದಲ್ಲಿರುವ ಬ್ರಹ್ಮಶ್ರುತಿ ಹಾಗೂ ಸುಪ್ತಗಮ್ಯತ್ವ ಮೊದಲಾದ ಲಿಂಗಗಳನ್ನು ಬ್ರಹ್ಮನೇ ಹೃತ್ಪದ್ಮಸ್ಥನಾಗಿದ್ದನೆನ್ನಲು ಪ್ರಮಾಣವನ್ನಾಗಿ ಹೇಳಿರುತ್ತಾರೆ. ಪ್ರಥಮಸೂತ್ರದಲ್ಲಿ ಸನ್ನಿಹಿತವಾದ ಶ್ರುತಿಲಿಂಗಗಳನ್ನು ಹೇಳಿದರೆ, ಇದರಲ್ಲಿ ವ್ಯವಹಿತವಾದ ಶ್ರುತಿಲಿಂಗಗಳನ್ನು ಹೇಳುತ್ತಿರುವ ಕಾರಣ ಇದಕ್ಕೆ ದ್ವಿತೀಯ ಸ್ಥಾನವು ಯುಕ್ತವಾಗಿದೆ.

**अत्र यदा सौत्रेण लिङ्गशब्देन ब्रह्मलोकशब्दस्य विष्णुलोकपरत्वेऽरण्याख्य-सुधासमुद्राश्रयलोकत्वरूपलिङ्गोक्तिः तदा तस्य हेतुसाधकहेतुत्वाद्गतिशब्दयोरिव हृत्पद्मस्थस्य ब्रह्मत्वरूपप्रधानसाध्ये हेतुत्वाभावात्तस्य लिङ्गशब्देन पृथगुक्तिर्युक्ता ।**

ಪ್ರಕೃತ ವಿಷಯವಾಕ್ಯದಲ್ಲಿ ಶ್ರುತವಾದ ಬ್ರಹ್ಮಲೋಕಶಬ್ದವು ವಿಷ್ಣುಲೋಕ ಎಂಬರ್ಥವನ್ನೇ ಹೇಳುತ್ತಿದೆ. ಕಾರಣವೇನೆಂದರೆ 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳಿಗೆ ವಿಷ್ಣುಲೋಕವು ಆಧಾರವಾಗಿದೆಯೆಂದು ವರ್ಣಿಸುವಾಗ ಬ್ರಹ್ಮಲೋಕಶಬ್ದವನ್ನು ಪ್ರಯೋಗಿಸಲಾಗಿದೆ. ಅದೇ ಬ್ರಹ್ಮಲೋಕಶಬ್ದವು ಪ್ರಕೃತ ಹೃತ್ಪದ್ಮಸ್ಥನನ್ನು ವರ್ಣಿಸುವಾಗಲೂ ಕೂಡ ಪ್ರಯೋಗಿಸಿರುವುದರಿಂದ ಇದು ವಿಷ್ಣುಲೋಕವನ್ನೇ ಹೇಳುತ್ತದೆಂದು ತಿಳಿಯುತ್ತದೆ. ಸೂತ್ರದಲ್ಲಿರುವ ಲಿಂಗಶಬ್ದದಿಂದ ಬ್ರಹ್ಮಲೋಕಶಬ್ದವು ವಿಷ್ಣುಲೋಕಪರವಾಗಿದೆಯೆಂಬುದನ್ನು ಸಾಧಿಸಲಾಗಿದೆ. ಈ ಪಕ್ಷವನ್ನು ಇಟ್ಟುಕೊಂಡಾಗ ಲಿಂಗಶಬ್ದವು ಹೇತುಸಾಧಕ ಹೇತುವಾಗುತ್ತದೆ ಹೊರತು, ಸುಪ್ತಗಮ್ಯತ್ವ ಮತ್ತು ಬ್ರಹ್ಮಶ್ರುತಿಗಳಂತೆ ನೇರವಾಗಿ ಹೃತ್ಪದ್ಮಸ್ಥನು ಬ್ರಹ್ಮನೇ ಆಗಿದ್ದಾನೆನ್ನಲು ಸಾಧಕವಾಗುವುದಿಲ್ಲ. ಆದ್ದರಿಂದಲೇ ಸೂತ್ರದಲ್ಲಿ 'ತಥಾಹಿ ದೃಷ್ಟಂ ಲಿಂಗಂ ಚ' ಎಂಬುದಾಗಿ ಇದನ್ನು ಪ್ರತ್ಯೇಕವಾಗಿ ಉಲ್ಲೇಖಿಸಿದ್ದಾರೆ. ಇಲ್ಲದಿದ್ದರೆ 'ಗತಿಶಬ್ದಾಭ್ಯಾಂ' ಎಂಬುದರಿಂದಲೇ ಈ ಲಿಂಗವನ್ನೂ ಕೂಡ ಸಂಗ್ರಹಿಸಬಹುದಿತ್ತು. ಈ ಸ್ವಾರಸ್ಯವನ್ನು ಗಮನಿಸಬೇಕು.

**यदा तु लिङ्गशब्देन प्रधानसाध्य एवारण्याश्रयलोकवत्वरूपलिङ्गोक्तिस्तदापि ''अहरहर्गच्छन्त्य एतं ब्रह्मलोकम्'' इत्यस्यानन्तरं ''स एष आत्मा हृदि'' इति श्रवणाद्गतिशब्दयोर्हृत्पद्मस्थनिष्ठता सिद्धेति तौ द्वन्द्वेनोपात्तौ । अरण्याश्रयलोकवत्त्व-लिङ्गस्य तु न सा सिद्धा ।**

ಒಂದು ವೇಳೆ ಲಿಂಗಶಬ್ದದಿಂದ ಪ್ರಧಾನವಾದ ಸಾಧ್ಯದಲ್ಲಿಯೇ ಅರಣ್ಯಾಶ್ರಯಲೋಕವತ್ತ್ವವೆಂಬ ಲಿಂಗವನ್ನೂ ಕೂಡ ವಿವಕ್ಷಿಸಿದರೆ ಆವಾಗ 'ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಮ್' ಎಂಬುದರ ಅನಂತರವೇ 'ಸ ಏಷ ಆತ್ಮಾ ಹೃದಿ' ಎಂಬ ವಾಕ್ಯವಿರುವುದರಿಂದ ಸುಪ್ತಗಮ್ಯತ್ವಕ್ಕೂ ಆತ್ಮಶಬ್ದಕ್ಕೂ ಹೃತ್ಪದ್ಮಸ್ಥನಿಷ್ಠತ್ವವು ಸಿದ್ಧವಾಗುತ್ತದೆ. ಹೀಗೆ ಸಿದ್ಧವಾದ ಕಾರಣ ದ್ವಂದ್ವಸಮಾಸದಿಂದ, ಸುಪ್ತಗಮ್ಯತ್ವ ಹಾಗೂ ಆತ್ಮಶಬ್ದಗಳನ್ನು ಹೇತುವನ್ನಾಗಿ ಬಳಸಿದ್ದಾರೆ. ಈ ಎರಡು ಹೇತುಗಳಂತೆ 'ಅರಣ್ಯಾಶ್ರಯ-ಲೋಕವತ್' ಎಂಬ ಲಿಂಗವು ಸಿದ್ಧವಾಗಿಲ್ಲ. ಆದ್ದರಿಂದ ಅದನ್ನು ದ್ವಂದ್ವಸಮಾಸದಲ್ಲಿ ಸೇರಿಸಿರುವುದಿಲ್ಲ.

**''अरश्च ह वैण्यश्चार्णवौ ब्रह्मलोके'' इत्यस्य सन्निधौ हृत्पद्मस्थस्यानुक्तेः । किन्तु साध्येति लिङ्गशब्देन तस्य पृथगुक्तिर्युक्ता ।**

'ಅರಶ್ಚ ಹ ವೈಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂಬ ವಾಕ್ಯದ ಹತ್ತಿರ ಹೃತ್ಪದ್ಮಸ್ಥತ್ವವನ್ನು ಹೇಳಿರುವುದಿಲ್ಲ. ಆದ್ದರಿಂದ ಹೃತ್ಪದ್ಮಸ್ಥನಿಷ್ಠವಾಗಿ ಸುಧಾಸಮುದಾಶ್ರಯತ್ವವೆಂಬ ಲಿಂಗವು ಸಿದ್ಧವಾಗುವುದಿಲ್ಲ. ಹೊರತಾಗಿ ಅದನ್ನು ಹೃತ್ಪದ್ಮಸ್ಥನಿಷ್ಠವೆಂದು ಸಾಧನೆ ಮಾಡಬೇಕು. ಅದಕ್ಕೋಸ್ಕರವೇ ಸೂತ್ರಕಾರರು 'ತಥಾಹಿ ದೃಷ್ಟಂ ಲಿಂಗಂಚ' ಎಂಬಲ್ಲಿರುವ ಲಿಂಗಶಬ್ದದಿಂದ ಈ ಹೇತುವನ್ನು ಪ್ರತ್ಯೇಕವಾಗಿ ಉಲ್ಲೇಖಿಸಿದ್ದಾರೆ.

**तथा 'दृष्टम्' इत्यनेन तु यथा गतिर्हृत्पद्मस्थनिष्ठा दृष्टा तथा लिङ्गमपि तन्निष्ठं दृष्टम् । हृत्पद्मस्थस्यावासत्वेन तल्लोके हृत्पद्मे ''एतं ब्रह्मलोकम्'' इति प्रयुक्तस्य ब्रह्मलोकशब्दस्यारण्याश्रयलोकेऽपि प्रयोगादिति हृत्पद्मस्थनिष्ठता साधिता ।**

'ತಥಾ ದೃಷ್ಟಮ್' ಎಂಬುದರ ಅಭಿಪ್ರಾಯ ಹೀಗಿದೆ - ಯಾವರೀತಿಯಾಗಿ ಸುಪ್ತಗಮ್ಯತ್ವವು ಹೃತ್ಪದ್ಮಸ್ಥನಿಷ್ಠವಾಗಿರುವುದು ಕಂಡಿದೆಯೋ, ಅದೇ ರೀತಿಯಾಗಿ ಲಿಂಗವೂ ಕೂಡ ಹೃತ್ಪದ್ಮಸ್ಥನಿಷ್ಠವಾಗಿ ಕಂಡಿದೆ. ಏಕೆಂದರೆ ಹೃತ್ಪದ್ಮವು ಪರಮಾತ್ಮನ ಆವಾಸಸ್ಥಾನವಾದ್ದರಿಂದ ಅವನ ಲೋಕದಲ್ಲಿ ಅಂದರೆ ಹೃತ್ಪದ್ಮದಲ್ಲಿ 'ಏತಂ ಬ್ರಹ್ಮಲೋಕಮ್' ಎಂಬುದಾಗಿ ಬ್ರಹ್ಮಲೋಕ ಶಬ್ದವು ಪ್ರಯೋಗಿಸಲ್ಪಟ್ಟಿದೆ. 'ಅರಣ್ಯ' ಎಂಬ ಸುಧಾಸಮುದ್ರಕ್ಕೆ ಆಶ್ರಯವಾದ ಲೋಕದಲ್ಲಿಯೂ ಕೂಡ ಈ 'ಬ್ರಹ್ಮಲೋಕ' ಶಬ್ದವನ್ನು ಪ್ರಯೋಗಿಸಬಹುದು. ಆದ್ದರಿಂದ ಅರಣ್ಯಾಶ್ರಯತ್ವವು ಹೃತ್ಪದ್ಮಸ್ಥನಿಷ್ಠವೆಂದು ಸಿದ್ಧವಾಗುತ್ತದೆ. ಹೀಗೆ ಸುಪ್ತಗಮ್ಯತ್ವ ಎಂಬ ಲಿಂಗದ ಉದಾಹರಣೆಯಿಂದ ಅರಣ್ಯಾಶ್ರಯಲೋಕವತ್ವವನ್ನೂ ಕೂಡ ಹೃತ್ಪದ್ಮಸ್ಥನಲ್ಲಿ ಸಾಧಿಸಬೇಕು.

**एवमरण्याश्रयलोकवत्त्वस्य हृत्पद्मस्थनिष्ठत्वेन पक्षधर्मतायां सिद्धायां साध्येन विष्णुत्वेन व्याप्त्युपपादनाय भाष्योक्तस्मृतिषु या विष्णुलिङ्गत्वप्रसिद्धिस्तद्द्योतकः सूत्रे हिशब्दः ।**

ಹೀಗೆ ಅರಣ್ಯಾಶ್ರಯಲೋಕವತ್ತ್ವವು ಹೃತ್ಪದ್ಮಸ್ಥನಿಷ್ಠವೆಂದು ತಿಳಿದ ಮೇಲೆ ಈ ಹೇತುವಿಗೆ ಪಕ್ಷಧರ್ಮತ್ವವನ್ನು ಸಾಧಿಸಬೇಕು. ಅಂದರೆ ಹೃತ್ಪದಸ್ಥಃ, ವಿಷ್ಣುರೇವ, ಅರಣ್ಯಾಶ್ರಯಲೋಕವತ್ವಾತ್ ಎಂದು ಅನುಮಾನವನ್ನು ಪ್ರಯೋಗಿಸಿದಾಗ 'ಅರಣ್ಯಾಶ್ರಯಲೋಕತ್ವಾತ್' ಎಂಬ ಹೇತುವಿಗೆ ಪಕ್ಷನಿಷ್ಠತ್ವವನ್ನು ಸಾಧಿಸಬೇಕು. ಇಲ್ಲಿ ಸಾಧ್ಯ ವಿಷ್ಣು ಈ ಸಾಧ್ಯಕ್ಕೂ ಹೇತುವಿಗೂ ವ್ಯಾಪ್ತಿಯನ್ನು ಹೇಳ ಬೇಕು. ಈ ವ್ಯಾಪ್ತಿಯ ವಿಷಯದಲ್ಲಿ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಸ್ಮೃತಿಯೇ ಆಧಾರವಾಗಿದೆ. ಅಂದರೆ ಅರಣ್ಯಾಶ್ರಯಲೋಕವತ್ವವು ವಿಷ್ಣುವಿನ ಲಿಂಗವಾಗಿರುವುದು ಪ್ರಸಿದ್ಧವಾಗಿದೆ. ಇದನ್ನು ತಿಳಿಸುವುದಕ್ಕಾಗಿ, ಸೂತ್ರದಲ್ಲಿ 'ಹಿ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

**प्रकाशः –**

**अत्राद्य इति ।। ''दहर उत्तरेभ्यः'' इत्यत्र यद्यपि ''य आत्माऽपहतपाप्मा विजरो विमृत्युरित्यादिभ्य उत्तरेभ्यो गुणेभ्यः'' इति भाष्ये ''गुणश्रवणात्'' इति टीकायां लिङ्गान्येवोक्तानीति भाति ।**

ವಿವರಣೆ - ಅತ್ರ ಆದ್ಯೇ' ಎಂದರೆ 'ಓಂ ದಹರೇ ಉತರೇಭ್ಯಃ ಓಂ' ಎಂಬ ಪ್ರಥಮಸೂತ್ರದಲ್ಲಿ ಎಂದರ್ಥ.

ಪ್ರಶ್ನೆ - 'ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುರಿತ್ಯಾದಿಭ್ಯ ಉತ್ತರೇಭ್ಯೋ ಗುಣೇಭ್ಯಃ' ಎಂಬ ಭಾಷ್ಯದಲ್ಲಿ ಮತ್ತು 'ಗುಣಶ್ರವಣಾತ್' ಎಂಬ ಟೀಕೆಯಲ್ಲಿ 'ಅಪಹತಪಾಪ್ಮತ್ವಾದಿ ಲಿಂಗಗಳನ್ನಷ್ಟೇ ಹೇಳಿದಂತೆ ಕಾಣಿಸುತ್ತದೆ. ಆದರೆ ಗ್ರಂಥಕಾರರು ಆತ್ಮಶ್ರುತಿಯನ್ನೂ ಕೂಡ ಪ್ರಮಾಣವನ್ನಾಗಿ ಉಲ್ಲೇಖಿಸುತ್ತಿದ್ದಾರೆ. ಇದು ಹೇಗೆ?

**प्रकाशः –** तथापि ''य आत्मा'' इत्यंशस्याप्युदाहृतत्वात्प्रथमश्रुतात्मशब्दत्यागे हेत्वभावात्स्पष्टत्वेन भाष्यादावनुल्लेखसम्भवादात्मश्रुतिरित्युक्तम् ।

ಉತ್ತರ - ಭಾಷ್ಯದಲ್ಲಿ ಅಪಹತಪಾಪ್ಮತ್ವಾದಿಲಿಂಗಗಳನ್ನು ಉಲ್ಲೇಖ ಮಾಡಿದ್ದರೂ ಕೂಡ ಪ್ರಾರಂಭದಲ್ಲಿ 'ಯ ಆತ್ಮಾ' ಎಂಬಂಶವನ್ನು ಉಲ್ಲೇಖಿಸಿದ್ದಾರೆ. ಪ್ರಥಮ ಶ್ರುತವಾದ ಆತ್ಮಶಬ್ದವನ್ನು ಬಿಡಲು ಕಾರಣವಿಲ್ಲ. ಆದ್ದರಿಂದ ಆತ್ಮಶ್ರುತಿಯು ಸ್ಪಷ್ಟವಾಗಿ ಕೇಳಿಸುತ್ತಿರುವುದರಿಂದ ಭಾಷ್ಯದಲ್ಲಿ ಆದನ್ನು ಉಲ್ಲೇಖಿಸಿಲ್ಲ ಹೊರತು, ಆತ್ಮಶ್ರುತಿಯು ಪ್ರಮಾಣವಲ್ಲವೆಂಬ ಕಾರಣದಿಂದಲ್ಲ. ಆದ್ದರಿಂದ ಗ್ರಂಥದಲ್ಲಿ ಹೇಳಿದ್ದು ಭಾಷ್ಯಕ್ಕೆ ಸಮ್ಮತವೇ ಆಗಿದೆ.

**प्रकाशः –** गतिसूत्रे श्रुतिलिङ्गयोर्द्वयोरप्युक्त्या तस्य प्राथम्यनिरासाय विषयवाक्ये सन्निहितेत्युक्तम् ।

ಎರಡನೆಯ 'ಗತಿಶಬ್ದಾಭ್ಯಾಂ' ಎಂಬ ಸೂತ್ರದಲ್ಲಿಯೂ ಕೂಡ ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆನ್ನಲು ಶ್ರುತಿ ಹಾಗೂ ಲಿಂಗಗಳನ್ನೇ ಪ್ರಮಾಣವನ್ನಾಗಿ ಹೇಳಿದ್ದಾರೆ. ಈ ಸೂತ್ರದಲ್ಲಿಯೂ ಕೂಡ ಶ್ರುತಿಲಿಂಗಗಳನ್ನೇ ಹೇಳುತ್ತಿದ್ದಾರೆ. ಹೀಗೆ ಎರಡೂ ಸಮಾನವಾಗಿರುವಾಗ 'ದಹರ ಉತ್ತರೇಭ್ಯಃ' ಎಂಬ ಸೂತ್ರವನ್ನೇ ಮೊದಲು ಹೇಳಲು ಏನು ಕಾರಣ? ಎಂಬ ಪ್ರಶ್ನೆಗೆ 'ವಿಷಯವಾಕ್ಯೇ ಸನ್ನಿಹಿತ' ಎಂಬುದರಿಂದ ಉತ್ತರಿಸಿದ್ದಾರೆ. ಅಂದರೆ ವಿಷಯವಾಕ್ಯದಲ್ಲಿ ಸನ್ನಿಹಿತವಾದ ಶ್ರುತಿಲಿಂಗಗಳನ್ನು ಪ್ರಥಮಸೂತ್ರದಲ್ಲಿ ಹೇಳಿದ್ದಾರೆ. ವ್ಯವಹಿತವಾದ ಶ್ರುತಿಲಿಂಗಗಳನ್ನು ಎರಡನೆಯ ಸೂತ್ರದಲ್ಲಿ ಹೇಳಿದ್ದರಿಂದ ಎರಡನೆಯ ಸ್ಥಾನವು 'ಗತಿಶಬ್ದಾಭ್ಯಾಂ' ಎಂಬ ಸೂತ್ರಕ್ಕೆ ಸಮಂಜಸವಾಗಿದೆ.

**ಪರಿಪೂರ್ಣಚಂದ್ರಿಕಾ**

**प्रकाशः** – ननु सूत्रे दहरो ब्रह्मेति भाति । कथं दहरस्थो ब्रह्मेत्युक्तिरित्यत आह – तत्रेति ॥

ಸೂತ್ರವನ್ನು ನೋಡಿದಾಗ 'ದಹರಃ ಬ್ರಹ್ಮ' ದಹರನು ಬ್ರಹ್ಮನಾಗಿದ್ದಾನೆಂದು ತೋರುತ್ತದೆ. ಆದರೆ ನೀವು ದಹರದಲ್ಲಿರುವವನನ್ನು ಬ್ರಹ್ಮನೆನ್ನುತ್ತಿದ್ದೀರಿ. ಇದು ಹೇಗೆ ? ಎಂಬ ಪ್ರಶ್ನೆಗೆ 'ತತ್ರ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ದಹರ' ಶಬ್ದವು ಸಪ್ತಮ್ಯಂತವಾದ್ದರಿಂದ ದಹರಸ್ಥನೆಂದೇ ಸೂತ್ರದ ಅಭಿಪ್ರಾಯ.

**प्रकाशः** – निर्देशस्येत्थमपि सम्भवात् । "य एषोऽन्तर्हृदय आकाशस्तस्मिन् शेते" "दिव्ये ब्रह्मपुरे ह्येष व्योम्न्यात्मा सम्प्रतिष्ठितः" "य एषोऽन्तर्हृदय आकाशस्तस्मिन्नयं पुरुषः" "यो वेद निहितं गुहायां परमे व्योमन्" इत्यादिश्रुत्यन्तरबलात्प्रथमान्त-पक्षे बाधकभावाच्चेति भावः ।

'ದಹರ ಉತ್ತರೇಭ್ಯಃ' ಎಂಬ ಸೂತ್ರದಲ್ಲಿ ದಹರ ಶಬ್ದದ ಮುಂದೆ ಉಕಾರವಿದೆ. ಉಕಾರವು ಮುಂದಿದ್ದಾಗ 'ದಹರಃ' ಎಂದು ವಿಸರ್ಗವನ್ನೂ ತಿಳಿಯಬಹುದು. ಅಥವಾ ದಹರೇ ಎಂಬುದಾಗಿ 'ಏ' ಕಾರವನ್ನೂ ಕೂಡ ತಿಳಿಯಬಹುದು. ಆದ್ದರಿಂದ 'ದಹರೇ' ಎಂಬ ಪದಚ್ಛೇದ ಮಾಡಿದರೆ ವ್ಯಾಕರಣದ ಪ್ರಕಾರ ತಪ್ಪಾಗುವುದಿಲ್ಲ. ಹೀಗಿರುವಾಗ ಪ್ರಥಮಾವಿಭಕ್ತಿಯನ್ನು ವಿವಕ್ಷಿಸಿದರೆ ಬಾಧಕವೇ ಇದೆ. ಏನೆಂದರೆ 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ' ಎಂಬ ಶ್ರುತಿಯಲ್ಲಿ ಸಪ್ತಮೀ ವಿಭಕ್ತಿಯಿಂದ ಹೃದಯದಲ್ಲಿ ಆಕಾಶವಿದೆ. ಅದರಲ್ಲಿ ಪರಮಾತ್ಮನಿದ್ದಾನೆಂದು ತಿಳಿಯುತ್ತಿದೆ. ಮತ್ತು 'ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ' ಎಂಬುದಾಗಿ ಹೃದಯಾಕಾಶದಲ್ಲೇ ಪರಮಾತ್ಮನಿದ್ದಾನೆಂದು ಹೇಳಲಾಗಿದೆ. 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ನಯಂ ಪುರುಷಃ' ಎಂಬ ಶ್ರುತಿಯಲ್ಲಿಯೂ ಹೃದಯಾಕಾಶದಲ್ಲಿ ಪುರುಷನಾಮಕನಾದ ಪರಮಾತ್ಮನಿದ್ದಾನೆಂದು ತಿಳಿಯುತ್ತಿದೆ. 'ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್' ಎಂಬ ಶ್ರುತಿಯಲ್ಲಿಯೂ ಕೂಡ ಹೃದಯಗುಹೆಯಲ್ಲಿ ಪರಮಾತ್ಮನೇ ಇದ್ದಾನೆಂದು ಹೇಳಲಾಗಿದೆ. ಹೀಗೆ ಅನೇಕ ಶ್ರುತಿಗಳು ಹೃದಯದಲ್ಲಿ ಆಕಾಶವಿದೆ. ಆಕಾಶದಲ್ಲಿ ಪರಮಾತ್ಮನಿದ್ದಾನೆಂದೇ ಹೇಳುತ್ತಿವೆ. ಹೀಗಿರುವಾಗ ಹೃದಯಾಕಾಶವನ್ನೇ ಪರಮಾತ್ಮನೆಂದು ಹೇಳಲು ಸಾಧ್ಯವಿಲ್ಲ. ಒಂದು ವೇಳೆ ಪ್ರಥಮಾವಿಭಕ್ತಿಯನ್ನು ಇಟ್ಟುಕೊಂಡು 'ದಹರಃ' ಎಂದು ಪದವಿಭಾಗ ಮಾಡಿದರೆ ಈ ಎಲ್ಲ ಶ್ರುತಿಗಳ ವಿರೋಧ ಬರುತ್ತದೆ.

**प्रकाशः** – नन्वेवमाकाश उत्तरेभ्य इत्येव कस्मान्न सूत्रितं शब्दलाघवादपि प्रतिपत्तिलाघवस्य ज्यायस्त्वात् ।

ಪ್ರಶ್ನೆ - ಹಾಗಾದರೆ ಸೂತ್ರದಲ್ಲಿ 'ಆಕಾಶ ಉತ್ತರೇಭ್ಯಃ' ಎಂದೇ ಹೇಳಬಹುದಿತ್ತು. ವಸ್ತುತಃ ಆಕಾಶ ಶಬ್ದಕ್ಕಿಂತ 'ದಹರ' ಶಬ್ದದಲ್ಲಿ ಲಾಘವವಿದೆ. ಏಕೆಂದರೆ 'ಆಕಾಶ' ಎಂದಾಗ ಎರಡು ದೀರ್ಘಗಳನ್ನು ಉಚ್ಚರಿಸಬೇಕಾಗುತ್ತದೆ. 'ದಹರ' ಶಬ್ದದಲ್ಲಿ ಅದು ಇರುವುದಿಲ್ಲ. ಆದರೆ ಶಬ್ದಲಾಘವಕ್ಕಿಂತ

**प्रकाशः –**

**अत्राद्य इति ।।** ''दहर उत्तरेभ्यः'' इत्यत्र यद्यपि ''य आत्माऽपहतपाप्मा विजरो विमृत्युरित्यादिभ्य उत्तरेभ्यो गुणेभ्यः'' इति भाष्ये ''गुणश्रवणात्'' इति टीकायां लिङ्गान्येवोक्तानीति भाति ।

**ವಿವರಣೆ** - ಅತ್ರ ಆದ್ಯೇ' ಎಂದರೆ 'ಓಂ ದಹರೇ ಉತರೇಭ್ಯಃ ಓಂ' ಎಂಬ ಪ್ರಥಮಸೂತ್ರದಲ್ಲಿ ಎಂದರ್ಥ.

ಪ್ರಶ್ನೆ - 'ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುರಿತ್ಯಾದಿಭ್ಯ ಉತ್ತರೇಭ್ಯೋ ಗುಣೇಭ್ಯಃ' ಎಂಬ ಭಾಷ್ಯದಲ್ಲಿ ಮತ್ತು 'ಗುಣಶ್ರವಣಾತ್' ಎಂಬ ಟೀಕೆಯಲ್ಲಿ 'ಅಪಹತಪಾಪ್ಮತ್ವಾದಿ ಲಿಂಗಗಳನ್ನಷ್ಟೇ ಹೇಳಿದಂತೆ ಕಾಣಿಸುತ್ತದೆ. ಆದರೆ ಗ್ರಂಥಕಾರರು ಆತ್ಮಶ್ರುತಿಯನ್ನೂ ಕೂಡ ಪ್ರಮಾಣವನ್ನಾಗಿ ಉಲ್ಲೇಖಿಸುತ್ತಿದ್ದಾರೆ. ಇದು ಹೇಗೆ?

**प्रकाशः –** तथापि ''य आत्मा'' इत्यंशस्याप्युदाहृतत्वात्प्रथमश्रुतात्मशब्दत्यागे हेत्वभावात्स्पष्टत्वेन भाष्यादावनुल्लेखसम्भवादात्मश्रुतिरित्युक्तम् ।

ಉತ್ತರ - ಭಾಷ್ಯದಲ್ಲಿ ಅಪಹತಪಾಪ್ಮತ್ವಾದಿಲಿಂಗಗಳನ್ನು ಉಲ್ಲೇಖ ಮಾಡಿದ್ದರೂ ಕೂಡ ಪ್ರಾರಂಭದಲ್ಲಿ 'ಯ ಆತ್ಮಾ' ಎಂಬಂಶವನ್ನು ಉಲ್ಲೇಖಿಸಿದ್ದಾರೆ. ಪ್ರಥಮ ಶ್ರುತವಾದ ಆತ್ಮಶಬ್ದವನ್ನು ಬಿಡಲು ಕಾರಣವಿಲ್ಲ. ಆದ್ದರಿಂದ ಆತ್ಮಶ್ರುತಿಯು ಸ್ಪಷ್ಟವಾಗಿ ಕೇಳಿಸುತ್ತಿರುವುದರಿಂದ ಭಾಷ್ಯದಲ್ಲಿ ಅದನ್ನು ಉಲ್ಲೇಖಿಸಿಲ್ಲ ಹೊರತು, ಆತ್ಮಶ್ರುತಿಯು ಪ್ರಮಾಣವಲ್ಲವೆಂಬ ಕಾರಣದಿಂದಲ್ಲ. ಆದ್ದರಿಂದ ಗ್ರಂಥದಲ್ಲಿ ಹೇಳಿದ್ದು ಭಾಷ್ಯಕ್ಕೆ ಸಮ್ಮತವೇ ಆಗಿದೆ.

**प्रकाशः –** गतिसूत्रे श्रुतिलिङ्गयोर्द्वयोरप्युक्त्या तस्य प्राथम्यनिरासाय विषयवाक्ये सन्निहितेत्युक्तम् ।

ಎರಡನೆಯ 'ಗತಿಶಬ್ದಾಭ್ಯಾಂ' ಎಂಬ ಸೂತ್ರದಲ್ಲಿಯೂ ಕೂಡ ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆನ್ನಲು ಶ್ರುತಿ ಹಾಗೂ ಲಿಂಗಗಳನ್ನೇ ಪ್ರಮಾಣವನ್ನಾಗಿ ಹೇಳಿದ್ದಾರೆ. ಈ ಸೂತ್ರದಲ್ಲಿಯೂ ಕೂಡ ಶ್ರುತಿಲಿಂಗಗಳನ್ನೇ ಹೇಳುತ್ತಿದ್ದಾರೆ. ಹೀಗೆ ಎರಡೂ ಸಮಾನವಾಗಿರುವಾಗ 'ದಹರ ಉತ್ತರೇಭ್ಯಃ' ಎಂಬ ಸೂತ್ರವನ್ನೇ ಮೊದಲು ಹೇಳಲು ಏನು ಕಾರಣ? ಎಂಬ ಪ್ರಶ್ನೆಗೆ 'ವಿಷಯವಾಕ್ಯೇ ಸನ್ನಿಹಿತ' ಎಂಬುದರಿಂದ ಉತ್ತರಿಸಿದ್ದಾರೆ. ಅಂದರೆ ವಿಷಯವಾಕ್ಯದಲ್ಲಿ ಸನ್ನಿಹಿತವಾದ ಶ್ರುತಿಲಿಂಗಗಳನ್ನು ಪ್ರಥಮಸೂತ್ರದಲ್ಲಿ ಹೇಳಿದ್ದಾರೆ. ವ್ಯವಹಿತವಾದ ಶ್ರುತಿಲಿಂಗಗಳನ್ನು ಎರಡನೆಯ ಸೂತ್ರದಲ್ಲಿ ಹೇಳಿದ್ದರಿಂದ ಎರಡನೆಯ ಸ್ಥಾನವು 'ಗತಿಶಬ್ದಾಭ್ಯಾಂ' ಎಂಬ ಸೂತ್ರಕ್ಕೆ ಸಮಂಜಸವಾಗಿದೆ.

**प्रकाशः – ननु सूत्रे दहरो ब्रह्मेति भाति । कथं दहरस्थो ब्रह्मेत्युक्तिरित्यत आह – तत्रेति ॥**

ಸೂತ್ರವನ್ನು ನೋಡಿದಾಗ 'ದಹರಃ ಬ್ರಹ್ಮ' ದಹರನು ಬ್ರಹ್ಮನಾಗಿದ್ದಾನೆಂದು ತೋರುತ್ತದೆ. ಆದರೆ ನೀವು ದಹರದಲ್ಲಿರುವವನನ್ನು ಬ್ರಹ್ಮನೆನ್ನುತ್ತಿದ್ದೀರಿ. ಇದು ಹೇಗೆ ? ಎಂಬ ಪ್ರಶ್ನೆಗೆ 'ತತ್ರ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ದಹರ' ಶಬ್ದವು ಸಪ್ತಮ್ಯಂತವಾದ್ದರಿಂದ ದಹರಸ್ಥನೆಂದೇ ಸೂತ್ರದ ಅಭಿಪ್ರಾಯ.

**प्रकाशः – निर्देशस्येत्थमपि सम्भवात् । ''य एषोऽन्तर्हृदय आकाशस्तस्मिन् शेते'' ''दिव्ये ब्रह्मपुरे ह्येष व्योम्न्यात्मा सम्प्रतिष्ठितः'' ''य एषोऽन्तर्हृदय आकाशस्तस्मिन्नयं पुरुषः'' ''यो वेद निहितं गुहायां परमे व्योमन्'' इत्यादिश्रुत्यन्तरबलात्प्रथमान्त-पक्षे बाधकभावाच्चेति भावः ।**

'ದಹರ ಉತ್ತರೇಭ್ಯಃ' ಎಂಬ ಸೂತ್ರದಲ್ಲಿ ದಹರ ಶಬ್ದದ ಮುಂದೆ ಉಕಾರವಿದೆ. ಉಕಾರವು ಮುಂದಿದ್ದಾಗ 'ದಹರಃ' ಎಂದು ವಿಸರ್ಗವನ್ನೂ ತಿಳಿಯಬಹುದು. ಅಥವಾ ದಹರೇ ಎಂಬುದಾಗಿ 'ಏ' ಕಾರವನ್ನೂ ಕೂಡ ತಿಳಿಯಬಹುದು. ಆದ್ದರಿಂದ 'ದಹರೇ' ಎಂಬ ಪದಚ್ಛೇದ ಮಾಡಿದರೆ ವ್ಯಾಕರಣದ ಪ್ರಕಾರ ತಪ್ಪಾಗುವುದಿಲ್ಲ. ಹೀಗಿರುವಾಗ ಪ್ರಥಮಾವಿಭಕ್ತಿಯನ್ನು ವಿವಕ್ಷಿಸಿದರೆ ಬಾಧಕವೇ ಇದೆ. ಏನೆಂದರೆ 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ' ಎಂಬ ಶ್ರುತಿಯಲ್ಲಿ ಸಪ್ತಮೀ ವಿಭಕ್ತಿಯಿಂದ ಹೃದಯದಲ್ಲಿ ಆಕಾಶವಿದೆ. ಅದರಲ್ಲಿ ಪರಮಾತ್ಮನಿದ್ದಾನೆಂದು ತಿಳಿಯುತ್ತಿದೆ. ಮತ್ತು 'ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ' ಎಂಬುದಾಗಿ ಹೃದಯಾಕಾಶದಲ್ಲೇ ಪರಮಾತ್ಮನಿದ್ದಾನೆಂದು ಹೇಳಲಾಗಿದೆ. 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ನಯಂ ಪುರುಷಃ' ಎಂಬ ಶ್ರುತಿಯಲ್ಲಿಯೂ ಹೃದಯಾಕಾಶದಲ್ಲಿ ಪುರುಷನಾಮಕನಾದ ಪರಮಾತ್ಮನಿದ್ದಾನೆಂದು ತಿಳಿಯುತ್ತಿದೆ. 'ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್' ಎಂಬ ಶ್ರುತಿಯಲ್ಲಿಯೂ ಕೂಡ ಹೃದಯಗುಹೆಯಲ್ಲಿ ಪರಮಾತ್ಮನೇ ಇದ್ದಾನೆಂದು ಹೇಳಲಾಗಿದೆ. ಹೀಗೆ ಅನೇಕ ಶ್ರುತಿಗಳು ಹೃದಯದಲ್ಲಿ ಆಕಾಶವಿದೆ. ಆಕಾಶದಲ್ಲಿ ಪರಮಾತ್ಮನಿದ್ದಾನೆಂದೇ ಹೇಳುತ್ತಿವೆ. ಹೀಗಿರುವಾಗ ಹೃದಯಾಕಾಶವನ್ನೇ ಪರಮಾತ್ಮನೆಂದು ಹೇಳಲು ಸಾಧ್ಯವಿಲ್ಲ. ಒಂದು ವೇಳೆ ಪ್ರಥಮಾವಿಭಕ್ತಿಯನ್ನು ಇಟ್ಟುಕೊಂಡು 'ದಹರಃ' ಎಂದು ಪದವಿಭಾಗ ಮಾಡಿದರೆ ಈ ಎಲ್ಲ ಶ್ರುತಿಗಳ ವಿರೋಧ ಬರುತ್ತದೆ.

**प्रकाशः – नन्वेवमाकाश उत्तरेभ्य इत्येव कस्मान्न सूत्रितं शब्दलाघवादपि प्रतिपत्तिलाघवस्य ज्यायस्त्वात् ।**

ಪ್ರಶ್ನೆ - ಹಾಗಾದರೆ ಸೂತ್ರದಲ್ಲಿ 'ಆಕಾಶ ಉತ್ತರೇಭ್ಯಃ' ಎಂದೇ ಹೇಳಬಹುದಿತ್ತು. ವಸ್ತುತಃ ಆಕಾಶ ಶಬ್ದಕ್ಕಿಂತ 'ದಹರ' ಶಬ್ದದಲ್ಲಿ ಲಾಘವವಿದೆ. ಏಕೆಂದರೆ 'ಆಕಾಶ' ಎಂದಾಗ ಎರಡು ದೀರ್ಘಗಳನ್ನು ಉಚ್ಚರಿಸಬೇಕಾಗುತ್ತದೆ. 'ದಹರ' ಶಬ್ದದಲ್ಲಿ ಅದು ಇರುವುದಿಲ್ಲ. ಆದರೆ ಶಬ್ದಲಾಘವಕ್ಕಿಂತ

ಪ್ರತಿಪತ್ತಿಲಾಘವವೇ ಶ್ರೇಷ್ಠ. 'ದಹರ' ಶಬ್ದವನ್ನು ಕೇಳಿದಾಗ, 'ಆಕಾಶ' ಎಂಬರ್ಥವೂ ಶೀಘ್ರವಾಗಿ ಉಪಸ್ಥಿತವಾಗುವುದಿಲ್ಲ. ಆದ್ದರಿಂದ 'ಆಕಾಶೇ ಉತ್ತರೇಭ್ಯಃ' ಎಂದೇ ಸೂತ್ರಕಾರರು ಏಕೆ ಹೇಳಲಿಲ್ಲ?

**प्रकाशः** – मैवम् । वाक्यविशेषद्योतनार्थत्वात् दहरपदस्य प्राथम्यादल्पश्रुतेरिति चेदिति शङ्कोत्थानार्थत्वात् 'तत्रापि दहं गगनम्' इति समाख्यारूपवाक्यविशेषस्य ''प्रसिद्धेश्च'' इत्यत्रोपादानमिति सूचनार्थत्वाच्च दहरपदस्यैवोक्तिरिति ।

ಉತ್ತರ - ಹೀಗೆ ಹೇಳಲು ಅನೇಕ ಕಾರಣಗಳಿವೆ. ವೇದದಲ್ಲಿ 'ಆಕಾಶ' ಶಬ್ದವು ನೂರಾರು ಕಡೆಯಿದೆ. ಆದ್ದರಿಂದ 'ದಹರೋऽಸ್ಮಿನ್ನಂತರಾಕಾಶಃ' ಎಂಬ ಶ್ರುತಿಯೇ ಈ ಅಧಿಕರಣದ ವಿಷಯವೆಂದು ತಿಳಿಸಲು 'ದಹರ' ಪದವನ್ನು ಹೇಳಿರುತ್ತಾರೆ.

ಅಥವಾ 'ದಹರೋऽಸ್ಮಿನ್ನಂತರಾಕಾಶೇ' ಎಂಬಲ್ಲಿ ಆಕಾಶ ಪದಕ್ಕಿಂತ ಮೊದಲು 'ದಹರ' ಪದವೇ ಇರುತ್ತದೆ. ಆದ್ದರಿಂದಲೂ ಸೂತ್ರಕಾರರು 'ದಹರ' ಪದವನ್ನು ಪ್ರಯೋಗಿಸಿದ್ದಾರೆ.

ಮತ್ತು 'ಅಲ್ಪಶ್ರುತೇಃ ಇತಿಚೇತ್' ಎಂಬ ಕೊನೆಯ ಸೂತ್ರದಲ್ಲಿ ಶಂಕೆಯು ಹುಟ್ಟುವುದಕ್ಕಾಗಿ 'ದಹರ' ಪದವನ್ನು ಇಲ್ಲಿ ಬಳಸಿದ್ದಾರೆ. ಅಂದರೆ 'ದಹರ' ಶಬ್ದಕ್ಕೆ ಕೇವಲ ಆಕಾಶವೆಂದರ್ಥವಲ್ಲ. 'ಸಣ್ಣ ಆಕಾಶ' ಎಂದರ್ಥ. ಸಣ್ಣ ಆಕಾಶದಲ್ಲಿ ಪರಮಾತ್ಮನಿರಲು ಹೇಗೆ ಸಾಧ್ಯ ? ಎಂದು ಕೊನೆಯ ಸೂತ್ರದಲ್ಲಿ ಪ್ರಶ್ನಿಸುತ್ತಾರೆ.

ಮತ್ತು 'ಪ್ರಸಿದ್ಧೇಶ್ಚ' ಎಂಬ ಮೂರನೆಯ ಸೂತ್ರದಲ್ಲಿ ದಹರಾಕಾಶದಲ್ಲಿರುವವನು ಪರಮಾತ್ಮನೇ ಆಗಿದ್ದಾನೆಂಬುದು ಪ್ರಸಿದ್ಧವಾಗಿದೆ ಎನ್ನುತ್ತಾರೆ. ಎಲ್ಲಿ ಪ್ರಸಿದ್ಧವೆಂದರೆ 'ತತ್ರಾಪಿ ದಹ್ರಂ ಗಗನಂ ವಿಶೋಕಃ' ಎಂಬ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ ಎಂದು ತಿಳಿಯಬೇಕು. ಈ ಶ್ರುತಿಯಲ್ಲೂ ಕೂಡ 'ದಹರ' ಪದವೇ ಇರುವುದರಿಂದ ಸಮಾಖ್ಯಾಪ್ರಮಾಣವನ್ನು ತೋರಿಸುವುದಕ್ಕಾಗಿ ಈ ಸೂತ್ರದಲ್ಲಿ 'ದಹರ' ಪದವನ್ನು ಪ್ರಯೋಗಿಸಿದ್ದಾರೆ.

**प्रकाशः** – नन्वेवं तर्हि सूत्रे यथा श्रुतश्रौतपदानुकरणं न प्राप्तं स्यात् । श्रुतौ ''दहरः'' इति प्रथमान्तत्वादिति चेत् ।

ಪ್ರಶ್ನೆ - ಭಾಷ್ಯವು ಸೂತ್ರದಲ್ಲಿರುವ ಪದಗಳನ್ನು ಅನುಸರಿಸಬೇಕು. ಸೂತ್ರವು ಶ್ರುತಿಯಲ್ಲಿರುವ ಪದಗಳನ್ನು ಅನುಸರಿಸಬೇಕು. ಆದರೆ ಸೂತ್ರಕಾರರು ಇಲ್ಲಿ ಶ್ರುತಿಯಲ್ಲಿರುವ ಪದವನ್ನು ಅನುಸರಿಸಿಲ್ಲ. ಏಕೆಂದರೆ ಶ್ರುತಿಯಲ್ಲಿ 'ದಹರೋऽಸ್ಮಿನ್' ಎಂಬುದಾಗಿ 'ದಹರ' ಪದವು ಪ್ರಥಮಾವಿಭಕ್ತಿಯಲ್ಲಿರುತ್ತದೆ. ಸೂತ್ರಕಾರರು ಅದಕ್ಕೆ ವಿರುದ್ಧವಾಗಿ ಸಪ್ತಮೀ ವಿಭಕ್ತಿಯಲ್ಲಿ 'ದಹರೇ' ಎಂದು ಪ್ರಯೋಗಿಸಿದ್ದಾರೆ. ಹಾಗಾಗಿ ಸೂತ್ರವು ಶ್ರುತಿಗೆ ಅನುಸಾರಿಯಾಗಲಿಲ್ಲವಲ್ಲ?

**प्रकाशः** – न । ''तस्मिन् यदन्तः'' इति निर्देशेन तस्य श्रुतावपि सप्तम्या निर्देशात् तस्मिन्नित्येतत्पुण्डरीकपरामर्शि नतु दहराकाशपरामर्शि । येन श्रुतौ दहरपदं सप्तमीनिर्दिष्टं स्यादिति तु परमतप्रक्रियाखण्डने निरसिष्यते ।

ಪರಿಪೂರ್ಣಚಂದ್ರಿಕಾ

ಇದು ತಪ್ಪು. 'ತಸ್ಮಿನ್ ಯದಂತಃ' ಎಂಬ ಶ್ರುತಿಯಲ್ಲಿ 'ತಸ್ಮಿನ್' ಎಂಬುದಾಗಿ ಸಪ್ತಮೀ ವಿಭಕ್ತಿಯಿಂದಲೂ ಕೂಡ ನಿರ್ದೇಶಿಸಲಾಗಿದೆ. ಶ್ರುತಿಗೆ ಅನುಸಾರಿಯಾಗಿಯೇ ಸೂತ್ರದಲ್ಲಿಯೂ ಸಪ್ತಮೀ ವಿಭಕ್ತಿಯನ್ನು ಪ್ರಯೋಗಿಸಿದ್ದಾರೆ. ಇನ್ನು 'ತಸ್ಮಿನ್ ಯದಂತಃ' ಎಂಬಲ್ಲಿರುವ 'ತಸ್ಮಿನ್' ಎಂಬ ಪದವು ಹೃದಯದಲ್ಲಿರುವ ಪುಂಡರೀಕವನ್ನು ಪರಾಮರ್ಶಿಸುತ್ತಿದೆ ಹೊರತು, ದಹರಾಕಾಶವನ್ನಲ್ಲ. ಒಂದು ವೇಳೆ ದಹರಾಕಾಶವನ್ನೇ ಪರಾಮರ್ಶಿಸಿದ್ದಲ್ಲಿ, ಅದಕ್ಕನುಗುಣವಾಗಿ ಸೂತ್ರಕಾರರು ಸಪ್ತಮಿಯನ್ನು ನಿರ್ದೇಶಿಸಿದ್ದು ಸರಿಯಾಗುತ್ತಿತ್ತು ಎಂಬ ಪ್ರಶ್ನೆಗೆ ಅದ್ವೈತಮತವನ್ನು ನಿರಾಕರಿಸುವ ಸಂದರ್ಭದಲ್ಲಿ ನಿರಾಕರಿಸುತ್ತೇವೆ.

**प्रकाशः – द्वितीय इति ।। ''गतिशब्दाभ्यां तथा हि दृष्टं लिङ्गं च'' इत्यत्र ।। व्यवहितेति ।। विषयवाक्य इत्यनुषङ्गः ।**

'ದ್ವಿತಿಯೇ' ಎಂದರೆ 'ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ' ಎಂಬ ಎರಡನೆಯ ಸೂತ್ರದಲ್ಲಿ ಎಂದರ್ಥ. 'ವ್ಯವಹಿತ' ಎಂದರೆ ವಿಷಯವಾಕ್ಯಕ್ಕಿಂತ ದೂರದಲ್ಲಿರುವ ಎಂದರ್ಥ. 'ವಿಷಯವಾಕ್ಯೇ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು.

**प्रकाशः – श्रुतौ ''अहरहर्गच्छन्त्य एतं ब्रह्मलोकम्'' इत्युक्तया तत्क्रमानुरोधेन ''द्वन्द्वे घि'' इति स्मृत्यनुरोधेन च सूत्रे गतेः पूर्वं निर्देशोऽपि प्राधान्यादुक्तिसौकर्याय च ब्रह्मश्रुतेस्सुप्तगम्यत्वादिलिङ्गस्य चेति व्युत्क्रमेणानुवादः ।**

ಸೂತ್ರದಲ್ಲಿ 'ಗತಿ ಶಬ್ದಾಭ್ಯಾಂ' ಎಂದು ಹೇಳಿದ್ದಾರೆ. ಆದರೆ ಪ್ರಕೃತ ಗ್ರಂಥಕಾರರು ಬ್ರಹ್ಮಶಬ್ದವನ್ನು ಮೊದಲು ಹೇಳಿ, ಸುಪ್ತಗಮ್ಯತ್ವವನ್ನು ಅನಂತರ ಹೇಳಿದರು. ಹೀಗೆ ಸೂತ್ರಕ್ಕಿಂತ ವಿಪರೀತವಾಗಿ ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆಯು ಸಹಜವಾಗಿ ಬರುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ತಿಳಿಯುವ ಮೊದಲು ಸೂತ್ರದಲ್ಲಿ 'ಗತಿ' ಶಬ್ದವನ್ನು ಮೊದಲು ಏಕೆ ಪ್ರಯೋಗಿಸಿದ್ದಾರೆಂಬುದನ್ನು ತಿಳಿಯಬೇಕು. 'ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಮ್' ಎಂಬ ಶ್ರುತಿಯಲ್ಲಿ ಗತಿಯನ್ನು ಮೊದಲು ಹೇಳಿ ಅನಂತರ ಲಿಂಗವನ್ನು ಹೇಳಲಾಗಿದೆ. ಈ ಶ್ರುತಿಯ ಕ್ರಮವನ್ನು ಅನುಸರಿಸಿ ಸೂತ್ರಕಾರರೂ ಕೂಡ ಗತಿಯನ್ನೇ ಮೊದಲು ಹೇಳಿದ್ದಾರೆ. ಮತ್ತು 'ದ್ವಂದ್ವೇ ಘಿ' ಎಂಬ ಪಾಣಿನಿ ಸೂತ್ರವು ದ್ವಂದ್ವ ಸಮಾಸದಲ್ಲಿ 'ಘಿ' ಸಂಜ್ಞೆಯಿರುವ ಪದವು ಮೊದಲು ಬರುತ್ತದೆಂದು ಹೇಳಿದೆ.

ಪ್ರಕೃತ ಗತಿ ಹಾಗೂ ಶಬ್ದ ಇವೆರಡು ಪದಗಳಲ್ಲಿ 'ಗತಿ' ಶಬ್ದಕ್ಕೆ 'ಘಿ' ಸಂಜ್ಞೆಯಿದೆ. ಆದ್ದರಿಂದ 'ಗತಿ' ಶಬ್ದವನ್ನೇ ಮೊದಲು ಸೂತ್ರಕಾರರು ಹೇಳಿದ್ದು ಅತ್ಯಂತ ಸಂಗತವಾಗಿದೆ. ಹೀಗಿರುವಾಗ ಗ್ರಂಥಕಾರರು ಕೂಡ ಸುಪ್ತಗಮ್ಯತ್ವಲಿಂಗವನ್ನೇ ಮೊದಲು ಹೇಳಬೇಕಿತ್ತಲ್ಲವೇ? ಎಂದರೆ. ಹೌದು, ಆದರೂ ಕೂಡ ಬ್ರಹ್ಮಶಬ್ದವು ಶ್ರುತಿಯಾಗುತ್ತದೆ. ಸುಪ್ತಗಮ್ಯತ್ವವು ಲಿಂಗವಾಗುತ್ತದೆ. ಲಿಂಗಕ್ಕಿಂತ ಶ್ರುತಿಯು ಪ್ರಬಲವಾಗಿರುವುದರಿಂದ ಪ್ರಧಾನ್ಯಕ್ರಮವನ್ನನುಸರಿಸಿ ಗ್ರಂಥಕಾರರು ಬ್ರಹ್ಮಶಬ್ದವನ್ನೇ ಮೊದಲು ಹೇಳಿರುತ್ತಾರೆ.

(ನ್ಯಾಯಸುಧೆಯ ಮಂಗಲಾಚರಣೆ ಶ್ಲೋಕದಲ್ಲಿ 'ಅಶೇಷಾಮ್ನಾಯಸ್ಮೃತಿ ಹೃದಯ ದೀಪ್ತಾಯ' ಎಂಬಲ್ಲಿಯೂ ಕೂಡ ಇದೇ ರೀತಿ ಪ್ರಶ್ನೆಯು ಬರುತ್ತದೆ. 'ಸ್ಮೃತಿ' ಶಬ್ದಕ್ಕೆ 'ಘಿ' ಸಂಜ್ಞೆಯಿರುವುದರಿಂದ

'ಆಮ್ನಾಯ' ಶಬ್ದವನ್ನು ಅನಂತರ ಹೇಳಿ 'ಸ್ಮೃತಿ' ಶಬ್ದವನ್ನು ಮೊದಲು ಹೇಳಬೇಕಿತ್ತು. ಈ ಪ್ರಶ್ನೆಗೆ ಟಿಪ್ಪಣಿಕಾರರು ಸ್ಮೃತಿಗಿಂತ ವೇದವು ಶ್ರೇಷ್ಠವಾದ್ದರಿಂದ ಪ್ರಾಧಾನ್ಯಕ್ರಮವನ್ನು ಅನುಸರಿಸಿ ಆಮ್ನಾಯವನ್ನೇ ಮೊದಲು ಪ್ರಯೋಗಿಸಿದ್ದಾರೆಂದು ಉತ್ತರಿಸಿದ್ದಾರೆ. ಅದೇ ರೀತಿಯಾದ ಸಮಾಧಾನವನ್ನು ಇಲ್ಲಿಯೂ ಕೂಡ ತಿಳಿಯಬೇಕು.)

ಮತ್ತು 'ಉಕ್ತಿ' ಸೌಕರ್ಯವೂ ಇದೆ. ಅಂದರೆ ಪ್ರಥಮ ಸೂತ್ರದಲ್ಲಿ ಶ್ರುತಿಯನ್ನು ಮೊದಲು ಹೇಳಿ, ಅನಂತರ ಲಿಂಗವನ್ನು ಹೇಳಿದ್ದಾರೆ. ಇಲ್ಲಿ ವಿಪರೀತವಾಗಿ ಹೇಳಿದರೆ ಸ್ವಲ್ಪ ಕ್ಲೇಶವಿದೆ. ಪ್ರಥಮ-ಸೂತ್ರಕ್ಕನುಗುಣವಾಗಿ ಎರಡನೆಯ ಸೂತ್ರದಲ್ಲಿಯೂ ಹೇಳಿದಾಗ 'ಉಕ್ತಿ' ಸೌಕರ್ಯವೂ ಇದೆಯೆಂದು ಗ್ರಂಥಕಾರರು ಹಾಗೇ ಪ್ರಯೋಗಿಸಿದ್ದಾರೆ.

**प्रकाशः** – टीकायां ''तद्यथापि हिरण्यनिधिं निहितमक्षेत्रज्ञा उपर्युपरि सञ्चरन्तो न विन्देयुरेवमेवेमाः सर्वाः प्रजा अहरहर्गच्छन्त्य एतं ब्रह्मलोकं न विन्दन्ति । अनृतेन हि प्रत्यूढाः । स वा एष आत्मा हृदि । तस्यैतदेव निरुक्तं हृदयमिति'' इति सुप्तप्रजाप्राप्यत्वव्यपदेशात् हृत्पद्मस्य ब्रह्मलोकत्वोक्त्या तदन्तर्गते ब्रह्मशब्दश्रवणाच्च विष्णुरेव दहरस्थः'' इति गतिशब्दौ व्याख्याय ''तथा हि दृष्टं लिङ्गं च'' इत्यंशस्य ''अरश्च ह वैण्यश्चार्णवौ ब्रह्मलोके तृतीयस्यामितो दिवि तदैरं मदीयं सरस्तदश्वत्थस्सोमसवनस्तदपराजिता पूर्ब्रह्मणः प्रभुविमितं हिरण्मयम्''- इत्यरण्याख्यसुधासमुद्राश्रयलोकवत्त्वरूपलिङ्गं च दृष्टमित्येकमर्थमुक्त्वा 'अथ वा' इत्यादिना ब्रह्मलोकशब्दस्य सत्यलोके प्रसिद्ध्या प्रागुक्तगतिब्रह्मशब्दरूपहेत्वोर-सिद्ध्यापत्तेर्हृत्पद्मे प्रयुक्तब्रह्मलोकपदोक्तस्य विष्णुलोकत्वसाधकत्वेन हृत्पद्मस्थस्य विष्णुत्वसाधकगतिब्रह्मशब्दाख्यहेतुसाधकपरतयाऽर्थान्तरमुक्तम् ।

ಟೀಕೆಯಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ. - 'ತದ್ಯಥಾಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ । ಅನೃತೇನ ಹಿ ಪ್ರತ್ಯೂಢಾಃ । ಸ ವಾ ಏಷ ಆತ್ಮಾ ಹೃದಿ । ತಸ್ಯೈತದೇವ ನಿರುಕ್ತಂ ಹೃದಯಮಿತಿ' ಇತಿ ಸುಪ್ತಪ್ರಜಾಪ್ರಾಪ್ಯತ್ವವ್ಯಪದೇಶಾತ್ ಹೃತ್ಪದ್ಮಸ್ಥಬ್ರಹ್ಮಲೋಕತ್ವೋಕ್ತ್ಯಾ ತದಂತರ್ಗತೇ ಬ್ರಹ್ಮಶಬ್ದಶ್ರವಣಾಚ್ಚ ವಿಷ್ಣುರೇವ ದಹರಸ್ಥಃ'

'ಮನೆಯಲ್ಲಿಯೇ ಭೂಮಿಯಲ್ಲಿ ಬಂಗಾರದ ನಿಧಿಯಿದ್ದರೂ ಕೂಡ ಅದನ್ನು ತಿಳಿಯದೇ ಅದರ ಮೇಲೆ ಸಂಚರಿಸುತ್ತ ಬಡತನವನ್ನು ಅನುಭವಿಸುವಂತೆ ಸಕಲವಿಧ ಪ್ರಜೆಗಳು ಹಗಲು-ರಾತ್ರಿ ನಿದ್ರಾಕಾಲದಲ್ಲಿ ಬ್ರಹ್ಮಲೋಕವನ್ನು ಕುರಿತು ಹೋಗುತ್ತಾರೆ. ಆದರೂ ಕೂಡ ಅದರ ಅರಿವು ಇರುವುದಿಲ್ಲ. ಏಕೆಂದರೆ ಅಜ್ಞಾನದಿಂದ ಮುಳುಗಿದ್ದಾರೆ. ಇದನ್ನು ಶ್ರುತಿಯಲ್ಲಿರುವ 'ಹೃದಯ' ಶಬ್ದವು 'ಹೃದಿ-ಅಯನ' ಎಂಬ

ನಿಷ್ಪತ್ತಿಯಿಂದ ಸುಪ್ತಪ್ರಾಪ್ಯತ್ವವನ್ನು ಹೇಳುತ್ತಿದೆ. ಮತ್ತು ಬ್ರಹ್ಮಲೋಕವೆಂದರೆ, ಬೇರೆ ಯಾವುದೋ ಲೋಕವೆಂದಲ್ಲ. ಹೃದಯಪದ್ಮವನ್ನೇ ಬ್ರಹ್ಮಲೋಕವೆಂದು ಕರೆಯಲಾಗಿದೆ. ಹೃದಯಪದ್ಮದಲ್ಲಿರುವವನು ಬ್ರಹ್ಮನೆಂದಾದರೆ ಮಾತ್ರ ಹೃದಯಪದ್ಮವು ಬ್ರಹ್ಮಲೋಕವೆನಿಸಲು ಸಾಧ್ಯ. ಆದ್ದರಿಂದ ಶ್ರುತಿಯಲ್ಲಿ ನೇರವಾಗಿ ಹೃತ್ಪದ್ಮಸ್ಥನಾದವನು ಪರಮಾತ್ಮನೆಂದು ಹೇಳದಿದ್ದರೂ ಹೃತ್ಪದ್ಮವನ್ನು ಬ್ರಹ್ಮನ ಲೋಕವೆಂದು ಹೇಳಿದ್ದರಿಂದ ಹೃದಯಪದ್ಮದಲ್ಲಿರುವವನು ಬ್ರಹ್ಮನೇ ಆಗಿದ್ದಾನೆಂದು ಹೇಳಿದಂತಾಯಿತು. ಹೀಗೆ 'ಗತಿ' ಶಬ್ದವನ್ನು ವ್ಯಾಖ್ಯಾನಿಸಲಾಗಿದೆ.

ಮುಂದೆ 'ತಥಾ ಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರದ ಭಾಗವನ್ನು 'ಅರಶ್ಚ ಹ ವೈಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ ತದೈರಂ ಮದೀಯಂ ಸರಸ್ತದಶ್ವತ್ಥಃ ಸೋಮಸವನಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಂ ಹಿರಣ್ಮಯಮ್' ಎಂದು ಹೇಳಲಾಗಿದೆ. ಭೂಲೋಕದಿಂದ ಮೂರನೆಯ ಲೋಕವೆಂದರೆ 'ದ್ಯುಲೋಕ' ಛಂದೋಽಧಿಕರಣದಲ್ಲಿ ಹೇಳಿದಂತೆ ಅಂತರಿಕ್ಷಲೋಕಕ್ಕಿಂತ ಮೇಲಿರುವುದೆಲ್ಲವೂ ಕೂಡ 'ದ್ಯು'ಲೋಕವೇ ಆಗುತ್ತದೆ. ಆದ್ದರಿಂದ ಬ್ರಹ್ಮಲೋಕದಲ್ಲಿ 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳು ಇರುತ್ತವೆ. ಅಷ್ಟೇ ಅಲ್ಲದೇ ಒಂದು ಸರೋವರವಿದೆ. ಅಶ್ವತ್ಥಮರವಿದೆ. ಮತ್ತು ಸೋಮ ಮೊದಲಾದವುಗಳು ಕೂಡ ಇರುತ್ತವೆ. ಯಾರಿಂದಲೂ ಗೆಲ್ಲಲು ಸಾಧ್ಯವಿಲ್ಲದ್ದಾಗಿದೆ. ಇಂತಹ ಬಂಗಾರದ ಪಟ್ಟಣವು ಬ್ರಹ್ಮನದ್ದೆಂದು ಶ್ರುತಿಯು ಹೇಳುತ್ತಿದೆ. ಹೀಗೆ 'ಅರಣ್ಯ' ಎಂಬ ಸುಧಾಸಮುದ್ರಗಳಿಗೆ ಆಶ್ರಯವಾಗಿರುವ ಲೋಕವುಳ್ಳದ್ದೆಂಬ ಲಿಂಗವು ಈ ವಿಷಯದಲ್ಲಿ ಪ್ರಮಾಣವಾಗಿದೆ. ನಮ್ಮ ಹೃದಯದಲ್ಲಿರುವ ಬ್ರಹ್ಮನ ಲೋಕವು ಇಷ್ಟು ಮಹಿಮೆಯಿಂದ ಕೂಡಿರುತ್ತದೆಂದು ಒಂದು ಬಗೆಯಲ್ಲಿ ವ್ಯಾಖ್ಯಾನಿಸಿ ಅಥವಾ ಇತ್ಯಾದಿ ವಾಕ್ಯದಿಂದ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸಿದ್ದಾರೆ -

ಬ್ರಹ್ಮಲೋಕಶಬ್ದವು ಸತ್ಯಲೋಕದಲ್ಲಿಯೂ ಕೂಡ ಪ್ರಸಿದ್ಧವಾದ್ದರಿಂದ ಹಿಂದೆ ಹೇಳಲ್ಪಟ್ಟ ಸುಪ್ತಗಮ್ಯತ್ವ ಹಾಗೂ ಬ್ರಹ್ಮಶಬ್ದ ಎಂಬೆರಡು ಹೇತುಗಳಿಗೆ ಅಸಿದ್ಧಿದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಹೃತ್ಪದ್ಮದಲ್ಲಿ ಪ್ರಯೋಗಿಸಲ್ಪಟ್ಟ ಬ್ರಹ್ಮಲೋಕಪದವು ವಿಷ್ಣುಲೋಕವೇ ಆಗಿದೆಯೆಂಬ ವಿಷಯದಲ್ಲಿ ಹೃತ್ಪದ್ಮಸ್ಥತ್ವವೇ ಸಾಧಕವಾದ ಲಿಂಗವೆಂದು ತಿಳಿಸಲು ಗತಿ ಹಾಗೂ ಬ್ರಹ್ಮ ಶಬ್ದಗಳೆಂಬ ಹೇತುಗಳನ್ನು ಪ್ರಯೋಗಿಸಿದ್ದಾರೆ. ಈ ಪಕ್ಷದಲ್ಲಿ 'ಗತಿ' 'ಶಬ್ದ'ಗಳು ಹೇತುಸಾಧಕ ಹೇತುಗಳಾಗಿವೆ. ಪ್ರಥಮ ಪಕ್ಷದಲ್ಲಿ ನೇರವಾಗಿ ಹೇತುಗಳಾಗಿದ್ದವು. ಹೀಗೆ ಎರಡು ಬಗೆಯಲ್ಲಿ ಟೀಕೆಯ ವ್ಯಾಖ್ಯಾನವನ್ನು ಗಮನಿಸಬೇಕು.

**प्रकाशः** – तत्पक्षद्वयाभिप्रायव्यक्तिपूर्वं सूत्रे हेतुत्रयस्य गतिशब्दलिङ्गेभ्य इति निर्देष्टव्यत्वेऽन्यथानिर्देशो न युक्त इति चोद्यनिरासाय सूत्रविन्यासं समर्थयते – अत्रेति ।।

ಈ ಎರಡೂ ಪಕ್ಷಗಳ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ ಸೂತ್ರದಲ್ಲಿ 'ಗತಿಶಬ್ದಲಿಂಗೇಭ್ಯಃ' ಎಂಬುದಾಗಿ ಮೂರು ಹೇತುಗಳನ್ನು ಉಲ್ಲೇಖಿಸಬೇಕಿತ್ತು. ಕೇವಲ 'ಗತಿಶಬ್ದಾಭ್ಯಾಂ' ಎಂಬ ಎರಡು ಪ್ರಮಾಣಗಳನ್ನಷ್ಟೇ ಏಕೆ ಉಲ್ಲೇಖಿಸಿದರು ? ಎಂಬ ಪ್ರಶ್ನೆಯನ್ನು ನಿರಾಕರಿಸುವವರಾಗಿ ಸೂತ್ರದ ವಿನ್ಯಾಸ ಶೈಲಿಯನ್ನು ಸಮರ್ಥಿಸುತ್ತಿದ್ದಾರೆ 'ಅತ್ರ' ಇತ್ಯಾದಿ ವಾಕ್ಯದಿಂದ.

**प्रकाशः – अरण्याख्येति ।। ''अरश्च ह वैण्यश्चार्णवौ ब्रह्मलोके'' इत्युत्तरवाक्येऽरण्याख्यसुधासमुद्राश्रयत्वलिङ्गेन ब्रह्मलोकशब्दस्य विष्णुलोकार्थकत्वेनावधृतस्येह ''ब्रह्मलोकं न विन्दन्ति'' इति सुप्तगतिपरवाक्ये प्रयोगादत्रत्यब्रह्मलोकशब्दस्य विष्णुलोकपरत्वेऽरण्याश्रयलोकत्वरूपलिङ्गोक्तिरित्यर्थः ।।**

ಅಭಿಪ್ರಾಯ ಹೀಗಿದೆ - 'ಅರಶ್ಚ ಹವೈಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂಬ ಮುಂದಿನ ವಾಕ್ಯದಲ್ಲಿ 'ಅರಣ್ಯಾಖ್ಯ' ಎಂಬುದರ 'ಅರ' 'ಣ್ಯ ಎಂಬ ಸುಧಾಸಮುದ್ರಗಳಿಗೆ ಆಶ್ರಯವಾಗಿರುವಿಕೆಯೆಂಬ ಲಿಂಗವಿರುವುದರಿಂದ ಬ್ರಹ್ಮಲೋಕಶಬ್ದವು ವಿಷ್ಣುಲೋಕ ಪರವಾಗಿದೆಯೆಂದು ತಿಳಿಯಬೇಕು. ಅಲ್ಲಿ ಪ್ರಯೋಗಿಸಲ್ಪಟ್ಟ ಬ್ರಹ್ಮಲೋಕ ಶಬ್ದವು ವಿಷ್ಣುಪರವಾದ ಮೇಲೆ ಹೃದಯಪದ್ಮದಲ್ಲಿ 'ಬ್ರಹ್ಮಲೋಕಂ ನ ವಿಂದಂತಿ' ಎಂದು ಬ್ರಹ್ಮಲೋಕ ಶಬ್ದವನ್ನು ಪ್ರಯೋಗಿಸಿದ್ದರಿಂದ ಇದೂ ಕೂಡ ವಿಷ್ಣುಲೋಕವೇ ಆಗುತ್ತದೆಂದು ಪರಂಪರಯಾ ಸಾಧನೆ ಮಾಡಬೇಕು.

ಒಟ್ಟು ಹೀಗೆ ಹೇಳಿದಂತಾಯಿತು. ಹೃದಯಪದ್ಮದಲ್ಲಿರುವವನು ವಿಷ್ಣುವೇ ಆಗಿದ್ದಾನೆ. 'ಆತ್ಮಶಬ್ದ' 'ಅಪಹತಪಾಪ್ಮತ್ವ' ಮೊದಲಾದ ಲಿಂಗಗಳಿರುವುದರಿಂದ ಎಂದು ಪ್ರಥಮಸೂತ್ರದಲ್ಲಿ ಹೇಳಿದ್ದಾಯಿತು. ಎರಡನೆಯ ಸೂತ್ರದಲ್ಲಿ ಹೃದಯಪದ್ಮದಲ್ಲಿರುವವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಹೃದಯಪದ್ಮದಲ್ಲಿರುವವನು ಸುಪ್ತಪ್ರಾಪ್ತನಾದ್ದರಿಂದ. ಸುಪ್ತಪ್ರಾಪ್ಯತ್ವವು ವಿಷ್ಣುವಿನ ಲಿಂಗವೆಂದು ಶ್ರುತ್ಯಂತರಗಳಿಂದ ನಿರ್ಣಯವಾಗಿದೆ. ಹೀಗೆ 'ಅಹರಹರ್ಗಚ್ಛಂತ್ಯ ಏತಂ ಹೃತ್ಪದ್ಮಮ್' ಎಂದು ಹೇಳದೇ 'ಏತಮ್ ಬ್ರಹ್ಮಲೋಕಂ' ಎಂದು ಕರೆಯಲಾಗಿದೆ. ಹೃತ್ಪದ್ಮನೆಂದು ಕರೆಯದೇ 'ಬ್ರಹ್ಮಲೋಕ' ಎಂದು ಕರೆದದ್ದರಿಂದ ಹೃತ್ಪದ್ಮದಲ್ಲಿರುವವನು ಬ್ರಹ್ಮನೆಂದು ಹೇಳಿದಂತಾಯಿತು. ಹೀಗೆ ಸುಪ್ತಗಮ್ಯತ್ವವೆಂಬ ಲಿಂಗ ಹಾಗೂ ಬ್ರಹ್ಮಶಬ್ದ ಈ ಎರಡು ಪ್ರಮಾಣಗಳಿಂದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಎಂದಂತಾಯಿತು.

ಇಲ್ಲಿರುವ ಬ್ರಹ್ಮಲೋಕ ಪದವು ವಿಷ್ಣುಲೋಕವನ್ನೇ ಹೇಳುತ್ತದೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ತಥಾಹಿ ದೃಷ್ಟಂ ಲಿಂಗಂಚ' ಎಂಬ ಸೂತ್ರದ ಭಾಗವು ಉತ್ತರಿಸಿದೆ. ವಿಷ್ಣುಲೋಕದಲ್ಲಿ 'ಅರ' ಮತ್ತು 'ಣ್ಯ' ಎಂಬ ಸುಧಾಸಮುದ್ರಗಳಿವೆ. ಅಂತಹ ವಿಷ್ಣುಲೋಕಕ್ಕೆ ಬ್ರಹ್ಮಲೋಕವೆಂದು ಹೆಸರು. ಅದೇ ಬ್ರಹ್ಮಲೋಕ ಎಂಬ ಪದವನ್ನು ಹೃತ್ಪದ್ಮದಲ್ಲಿ ಪ್ರಯೋಗಿಸಿದ್ದರಿಂದ ಹೃತ್ಪದ್ಮವೂ ಕೂಡ ವಿಷ್ಣುಲೋಕವೆಂದು ನಿಶ್ಚಯವಾಗುತ್ತದೆ. ಆದ್ದರಿಂದ ಹೃದಯದಲ್ಲಿರುವವನು ವಿಷ್ಣುವೇ ಎಂದು ತಿಳಿಯಬೇಕು. ಇಷ್ಟು ಅಭಿಪ್ರಾಯ.

**प्रकाशः – हेतुसाधकेति ।। गतिब्रह्मशब्दरूपहेतुसाधकेत्यर्थः । किन्तु साध्येत्युक्तसाधनप्रकारं सूत्रखण्डविवरणेनाह – तथेति ।।**

ಹೇತುಸಾಧಕಹೇತು ಎಂದರೆ ಸುಪ್ತಗಮ್ಯತ್ವ ಮತ್ತು ಬ್ರಹ್ಮಶಬ್ದ ಎಂಬ ಹೇತುಗಳಿಗೆ ಸಾಧಕವಾದ ಹೇತು ಎಂದರ್ಥ. 'ಕಿಂತು ಸಾಧ್ಯ' ಎಂಬ ವಾಕ್ಯದಲ್ಲಿರುವ ಸಾಧನ ಪ್ರಕಾರವನ್ನು ಸೂತ್ರದ ಭಾಗವನ್ನು ವಿವರಣೆ ಮಾಡುವ ಮೂಲಕ ವ್ಯಾಖ್ಯಾನಿಸುತ್ತಿದ್ದಾರೆ 'ತಥಾ' ಇತ್ಯಾದಿ ವಾಕ್ಯದಿಂದ.

ಪರಿಪೂರ್ಣಚಂದ್ರಿಕಾ

**प्रकाशः** – टीकायां ''हृत्पद्मस्थस्यारण्याश्रयलोकवत्त्वरूपलिङ्गश्रवणेऽपि कुतोऽयं विष्णुरिति चेत्तस्य विष्णुलोकैकलिङ्गत्वादिति हिशब्दाभिप्रायमाह ।। 'अरश्च वै ण्यश्च सुधासमुद्रौ तत्रैव सर्वाभिमतप्रदौ द्वाविति भाष्येण'' इत्युक्तम् । तद्विवृण्वन्सौत्रहिशब्दार्थमाह – एवमिति ।।

ಟೀಕೆಯಲ್ಲಿ 'ಹೃತ್ಪದ್ಮಸ್ಥಸ್ಯಾರಣ್ಯಾಶ್ರಯಲೋಕವತ್ತ್ವರೂಪಲಿಂಗಶ್ರವಣೇಽಪಿ ಕುತೋಽಯಂ ವಿಷ್ಣುರಿತಿ ಚೇತ್ತಸ್ಯ ವಿಷ್ಣುಲೋಕೈಕಲಿಂಗತ್ವಾದಿತಿ ಹಿಶಬ್ದಾಭಿಪ್ರಾಯಮಾಹ - ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವಾವಿತಿ ಭಾಷ್ಯೇಣ' ಎಂದರೆ ಹೃತ್ಪದ್ಮಸ್ಥನಿಗೆ 'ಅರ' 'ಣ್ಯ' ಎಂಬ ಸುಧಾಸಮುದ್ರಾಶ್ರಯ ಲೋಕವತ್ತ್ವವೆಂಬ ಲಿಂಗವನ್ನು ಹೇಳಲಾಗಿದೆ. ಈ ಲಿಂಗವನ್ನು ಹೇಳಿದ ಮಾತ್ರದಿಂದ ವಿಷ್ಣುವೇ ಹೃತ್ಪದ್ಮಸ್ಥನೆಂದು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ 'ಅರ' 'ಣ್ಯ' ಎಂಬ ಸುಧಾಸಮುದ್ರಾಶ್ರಯತ್ವವು ಕೇವಲ ವಿಷ್ಣುಲೋಕದ ಲಿಂಗವೇ ಆಗಿದೆ. ಇದನ್ನು 'ಹಿ' ಶಬ್ದವು ತಿಳಿಸುತ್ತಿದೆ. ಈ ಅಭಿಪ್ರಾಯದಿಂದ 'ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ' ಎಂಬ ಭಾಷ್ಯವು ಹೊರಟಿದೆ ಎಂದು ಹೇಳಿದ್ದಾರೆ. ಟೀಕೆಯ ಈ ಮಾತನ್ನು ವಿವರಿಸುತ್ತಾ ಸೂತ್ರದಲ್ಲಿರುವ 'ಹಿ' ಶಬ್ದದ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಏವಂ' ಇತ್ಯಾದಿ ಗ್ರಂಥದಿಂದ.




'ದಹರ ಉತ್ತರೇಭ್ಯಃ' ಎಂಬ ಪ್ರಥಮ ಸೂತ್ರದಲ್ಲಿ ಸ್ವಪಕ್ಷಸಾಧಕಪ್ರಮಾಣವನ್ನು ಹೇಳುತ್ತಿದ್ದಾರೆ. ಮತ್ತು ವಿಷಯವಾಕ್ಯಕ್ಕೆ ಅತ್ಯಂತ ಹತ್ತಿರವಿರುವ ಆತ್ಮಶ್ರುತಿ ಮತ್ತು ಅಪಹತಪಾಪ್ಮತ್ವಾದಿ ಲಿಂಗಗಳನ್ನು ಸಾಧಿಸುತ್ತಿದ್ದಾರೆ. ಈ ಕಾರಣದಿಂದ ಸೂತ್ರಕ್ಕೆ ಪ್ರಾಥಮ್ಯವು ಸಮಂಜಸವಾಗಿದೆ.

'ಓಂ ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಚ ಓಂ' ಈ ಸೂತ್ರದಲ್ಲಿಯೂ ಕೂಡ ಬ್ರಹ್ಮಶ್ರುತಿ, ಮತ್ತು ಸುಪ್ತಗಮ್ಯತ್ವ ಎಂಬೆರಡು ಲಿಂಗಗಳನ್ನೇ ಹೃತ್ಪದ್ಮಸ್ಥನಾದವನು ಪರಮಾತ್ಮನೇ ಆಗಿದ್ದಾನೆನ್ನಲು ಪ್ರಮಾಣವನ್ನಾಗಿ ಹೇಳಿರುತ್ತಾರೆ. ಆದರೆ ವಿಷಯವಾಕ್ಯಕ್ಕಿಂತ ಸ್ವಲ್ಪದೂರದಲ್ಲಿರುವ ಶ್ರುತಿಯಲ್ಲಿ ಹೇಳಲ್ಪಟ್ಟ ಶ್ರುತಿಲಿಂಗಗಳನ್ನು ಈ ಸೂತ್ರವು ಉಲ್ಲೇಖ ಮಾಡುತ್ತಿರುವ ಕಾರಣ, ಎರಡನೆಯ ಸ್ಥಾನವನ್ನು ಪಡೆದಿರುತ್ತದೆ.

ಸೂತ್ರದಲ್ಲಿರುವ 'ಗತಿಶಬ್ದಾಭ್ಯಾಂ' ಎಂಬ ಪದವನ್ನು ಗಮನಿಸಿದಾಗ ಸುಪ್ತಗಮ್ಯತ್ವ ಹಾಗೂ ಬ್ರಹ್ಮಶಬ್ದ ಇವೆರಡೂ ವಿಷ್ಣುವಿನ ಹೃತ್ಪದ್ಮಸ್ಥತ್ವಕ್ಕೆ ಆಧಾರವಾದ ಪ್ರಮಾಣಗಳಾಗಿವೆ ಎಂದು ತಿಳಿಯುತ್ತದೆ. ಆದರೆ 'ತಥಾ ಹಿ ದೃಷ್ಟಂ ಲಿಂಗಂ ಚ' ಎಂಬ ಮುಂದಿನ ಮಾತುಗಳು ಏಕೆ ಹೊರಟಿವೆ ? ಎಂದು ಸ್ಪಷ್ಟವಾಗಿ ನಮಗೆ ತಿಳಿಯುವುದಿಲ್ಲ. ಇಲ್ಲಿರುವ ಪ್ರತಿಯೊಂದು ಪದಗಳ ಸ್ವಾರಸ್ಯವನ್ನು ಚಂದ್ರಿಕಾಚಾರ್ಯರು ಹೃದಯಂಗಮವಾಗಿ ವರ್ಣಿಸಿದ್ದಾರೆ.

'ಅರ' ಮತ್ತು 'ಣ್ಯ' ಎಂಬೆರಡು ಅಮೃತಸಮುದ್ರಗಳು ವಿಷ್ಣುಲೋಕದಲ್ಲಿವೆ. ವಿಷ್ಣುಲೋಕದಲ್ಲಿ ಬಿಟ್ಟು ಬೇರೆ ಎಲ್ಲಿಯೂ ಸಹ ಈ ಲೋಕಗಳಿಲ್ಲ. ಹೀಗೆ ವಿಷ್ಣುವಿನ ಲೋಕದಲ್ಲಿ ಅಸಾಧಾರಣವಾದ ಲಿಂಗಗಳಿರುವುದನ್ನು

ಶ್ರುತಿಯು ವರ್ಣನೆ ಮಾಡಿದೆ. ಹಾಗೆ ವಿಷ್ಣುಲೋಕವನ್ನು ವರ್ಣಿಸುವಾಗ ಅದೇ ಶ್ರುತಿಯು 'ಬ್ರಹ್ಮಲೋಕ' ಎಂಬ ಪದವನ್ನು ಪ್ರಯೋಗಿಸಿದೆ. ಆದ್ದರಿಂದ ವಿಷ್ಣುಲೋಕವನ್ನೇ ಬ್ರಹ್ಮಲೋಕವೆನ್ನಬೇಕೆಂದು ನಮಗೆ ಸ್ಪಷ್ಟವಾಗುತ್ತದೆ. ಅದೇ 'ಬ್ರಹ್ಮಲೋಕ' ಶಬ್ದವು ಹೃತ್ಪದ್ಮಸ್ಥ ಪ್ರಕರಣದಲ್ಲಿಯೂ ಇರುತ್ತದೆ. ಇದರಿಂದ ನಾವು ಏನನ್ನು ತಿಳಿಯಬೇಕೆಂದರೆ ಹೃತ್ಪದ್ಮವು ವಿಷ್ಣುವಿನ ಲೋಕವೇ ಆಗಿದೆ. ವಿಷ್ಣುವಿನ ಲೋಕವಾಗಬೇಕೆಂದರೆ ಹೃತ್ಪದ್ಮದಲ್ಲಿರುವವನು ವಿಷ್ಣುವೇ ಆಗಿದ್ದಾನೆಂದು ತಿಳಿಯಬೇಕು.

ಈ ಸ್ವಾರಸ್ಯವನ್ನು ತಿಳಿಸುವುದಕ್ಕಾಗಿ 'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಮುಂದಿನ ಸೂತ್ರದ ಭಾಗವು ಹೊರಟಿದೆ. ಹಾಗಾದರೆ ಗತಿ ಶಬ್ದಾಭ್ಯಾಂ' ಎಂಬ ದ್ವಂದ್ವಸಮಾಸದಲ್ಲಿಯೇ ಈ ಲಿಂಗವನ್ನೂ ಕೂಡ ಸೇರಿಸಬಹುದಿತ್ತಲ್ಲವೇ? ಪ್ರತ್ಯೇಕವಾಗಿ ಏಕೆ ಹೇಳಿದರು ಎಂಬುದು ಮುಂದಿನ ಪ್ರಶ್ನೆ. ಆದರೆ ಸ್ವಲ್ಪ ವ್ಯತ್ಯಾಸವಿದೆ. ಸುಪ್ತಗಮ್ಯತ್ವ ಹಾಗೂ ಬ್ರಹ್ಮಶಬ್ದಗಳು ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆನ್ನಲು ನೇರವಾದ ಹೇತುಗಳು.

'ಅರ' 'ಣ್ಯ' ಎಂಬ ಸುಧಾಸಮುದ್ರಾಶ್ರಯತ್ವವು ನೇರವಾದ ಹೇತುಗಳಾಗುವುದಿಲ್ಲ, ಹೊರತಾಗಿ ಹೇತುಸಾಧಕ ಹೇತುಗಳಾಗಿವೆ. ಆದ್ದರಿಂದ ಪ್ರತ್ಯೇಕವಾಗಿ ಸೂತ್ರಕಾರರು ಇದನ್ನು ಉಲ್ಲೇಖ ಮಾಡಿದ್ದಾರೆ. ಮತ್ತು 'ಅಹರಹರ್ಗಚ್ಛಂತ್ಯಃ' ಇತ್ಯಾದಿ ಶ್ರುತಿಯನ್ನು ಗಮನಿಸಿದಾಗ ಗತಿ ಮತ್ತು ಶಬ್ದಗಳು ಹೃತ್ಪದ್ಮಸ್ಥನಲ್ಲಿವೆ ಎಂದು ಸಿದ್ಧವಾಗಿವೆ. ಸುಧಾಸಮುದ್ರಾಶ್ರಯತ್ವವು ಹೃತ್ಪದ್ಮಸ್ಥನಲ್ಲಿದೆಯೆಂದು ಸಿದ್ಧವಾಗಿಲ್ಲ ಹೊರತು, ಸಾಧ್ಯವಾಗಿದೆ. ಸಿದ್ಧವಾದ ಹೇತುಗಳ ಜೊತೆಗೆ ಸಾಧ್ಯವಾದ್ದನ್ನು ಸೇರಿಸುವುದು ಸ್ವರಸವಲ್ಲ ಎಂಬ ದೃಷ್ಟಿಯಿಂದ ಪ್ರತ್ಯೇಕವಾಗಿ ಹೇಳಿದ್ದಾರೆ. ಸಾಧ್ಯವಾದದ್ದನ್ನು ಸುಪ್ತಗಮ್ಯತ್ವ ಲಿಂಗದ ಉದಾಹರಣೆಯಿಂದ ಹೃತ್ಪದ್ಮಸ್ಥನಲ್ಲಿ ಇದೆಯೆಂದು ಸಾಧಿಸಬೇಕು. ಅದಕ್ಕೋಸ್ಕರವೇ 'ತಥಾ ದೃಷ್ಟಮ್' ಎಂಬ ಪದಗಳನ್ನು ಪ್ರಯೋಗಿಸಿದ್ದಾರೆ.

ಸುಧಾಸಮುದ್ರಾಶ್ರಯತ್ವವೆಂಬ ಲಿಂಗವು ಹೃತ್ಪದ್ಮಸ್ಥವೆಂಬ ಪಕ್ಷದಲ್ಲಿ ಇದೆಯೋ? ಇಲ್ಲವೋ? ಎಂಬ ಸಂಶಯವು ಬಂದರೆ 'ಹಿ' ಶಬ್ದವನ್ನು ಸೂತ್ರಕಾರರು ಪ್ರಯೋಗಿಸುತ್ತಾರೆ. ಅನೇಕ ಸ್ಮೃತಿವಾಕ್ಯಗಳ ಆಧಾರದಿಂದ ಹೃತ್ಪದ್ಮಸ್ಥನಲ್ಲಿ ಇಂತಹ ಸುಧಾಸಮುದ್ರಾಶ್ರಯಲೋಕವತ್ವವು ಇರುತ್ತದೆಂಬುದು ಪ್ರಸಿದ್ಧವಾಗಿದೆ. ಹೀಗೆ ಸೂತ್ರದಲ್ಲಿರುವ ಪ್ರತಿಯೊಂದು ಪದಗಳು ಅತ್ಯಂತ ಸ್ವರಸವಾಗಿವೆ. ಮತ್ತು 'ಗತಿಶಬ್ದಾಭ್ಯಾಂ ಎಂಬ ಸೂತ್ರಕ್ಕೆ ಎರಡನೆಯ ಸ್ಥಾನವನ್ನು ನೀಡಿದ್ದೂ ಕೂಡ ಅತ್ಯಂತ ಪೂರ್ಣವಾಗಿದೆಯೆಂದು ತಿಳಿಯಬೇಕು.

• • • • •

## ಎಂಟು ಸೂತ್ರಗಳಲ್ಲಿರುವ ಸ್ವಾರಸ್ಯ ವರ್ಣನೆ

### तात्पर्यचन्द्रिका

**तृतीये तु ''स सेतुर्विधृतिः'' इति स्वप्रकरणस्थधृतिरूपलिङ्गस्य ''एष सेतुर्विधरणे'' इति धृतियुक्तायाः ''य एषोऽन्तर्हृदय आकाशस्तस्मिन्'' इति वाजसनेयश्रुतिसमाख्यायाश्चोक्तिः ।**

ಪರಿಪೂರ್ಣಚಂದ್ರಿಕಾ

ಅನುವಾದ - 'ಓಂ ಧೃತೇಶ್ಚ ಮಹಿಮ್ನೋಸ್ಯಾಸ್ಮಿನ್ ಉಪಲಬ್ಧೇಃ ಓಂ' ಎಂಬುದು ಮೂರನೆಯ ಸೂತ್ರ. ಸೂತ್ರದಲ್ಲಿರುವ 'ಧೃತೇಃ' ಎಂಬ ಪದಕ್ಕೆ ಎರಡು ಅರ್ಥಗಳನ್ನು ತಿಳಿಯಬೇಕು. ಈ ಪ್ರಕರಣದಲ್ಲೇ ಶ್ರುತವಾದ ಧೃತಿರೂಪಲಿಂಗದಿಂದ ಎಂಬುದು ಮೊದಲನೆಯ ಅರ್ಥ. ಧೃತಿ ಪದ ಘಟಿತವಾದ ಸಮಾಖ್ಯಾಪ್ರಮಾಣವು ಬೇರೆ ಕಡೆ ಶ್ರುತವಾಗಿರುವುದರಿಂದ ಎಂಬುದು ಮತ್ತೊಂದು ಅರ್ಥ. ಛಾಂದೋಗ್ಯೋಪನಿಷತ್ತಿನಲ್ಲಿಯೇ ಹೃತ್ಪದ್ಮಸ್ಥನನ್ನು ಹೇಳುವಾಗ 'ಸ ಸೇತುರ್ವಿಧೃತಿಃ' ಎಂಬುದಾಗಿ ಸರ್ವಧಾರಣೆ ಎಂಬ ಲಿಂಗವು ಶ್ರುತವಾಗಿದೆ. ಮತ್ತು 'ಏಷ ಸೇತುರ್ವಿಧರಣೇ' ಎಂಬುದಾಗಿ ಧೃತಿಪದದಿಂದ ಕೂಡಿರುವಂತಹ 'ಯ ಏಷೋಽಂತಹೃದಯೇ ಆಕಾಶಸ್ತಸ್ಮಿನ್' ಎಂಬ ಬೃಹದಾರಣ್ಯಕಶ್ರುತಿಯ ಸಮಾಖ್ಯಾಪ್ರಮಾಣವನ್ನು ವಿವಕ್ಷಿಸಬೇಕು. ಆರಂಭದಲ್ಲಿ ಧೃತಿಯನ್ನು ಹೇಳಿ, ಅನಂತರ ಹೃದಯಪದ್ಮಸ್ಥವಾದ ಆಕಾಶದಲ್ಲಿ ಪರಮಾತ್ಮನಿದ್ದಾನೆಂದು ಬೃಹದಾರಣ್ಯಕೋಪನಿಷತ್ತು ಹೇಳುತ್ತಿದೆ. ಹೀಗೆ ಒಂದೇ ಧೃತಿಪದದಿಂದ 'ಧೃತಿ' ಎಂಬ ಲಿಂಗ ಹಾಗೂ ಧೃತಿಪದಘಟಿತವಾದ ಸಮಾಖ್ಯಾಪ್ರಮಾಣ ಇದರೆಡರ ಬಲದಿಂದ ಹೃತ್ಪದ್ಮಸ್ಥನಾದವನು ಪರಮಾತ್ಮನೆಂದು ತಿಳಿಯಬೇಕು.

**समाख्याया विष्णुविषयत्वोपपादनाय तु महिमरूपविष्णुलिङ्गोक्तिः । अत्र चास्य भूताधिपतित्वादिविष्णुमहिम्नः अस्मिन् दहराकाशस्थे वस्तुनि वाजसनेयशाखायामुपलब्धेश्चेति चशब्दो भिन्नक्रमः ।**

'ನಿರ್ಣೀತಸಮಾನೋಕ್ತಿಃ' ಎಂಬುದು ಸಮಾಖ್ಯಾಪ್ರಮಾಣದ ಲಕ್ಷಣ. ಬೃಹದಾರಣ್ಯಕೋಪನಿಷತ್ತು ವಿಷ್ಣುವಿಷಯಕವೆಂದು ನಿರ್ಣಯವಾಗಿದ್ದರೆ ಮಾತ್ರ ಅದನ್ನು ಸಮಾಖ್ಯಾಪ್ರಮಾಣವೆಂದು ಪರಿಗಣಿಸಬಹುದು. ಆದರೆ ಅದು ವಿಷ್ಣುವಿಷಯಕವೆಂದೇ ಹೇಗೆ ಹೇಳುವುದು ? ಎಂಬ ಪ್ರಶ್ನೆಗೆ 'ಅಸ್ಯ ಮಹಿಮ್ನಃ ಅಸ್ಮಿನ್ ಉಪಲಬ್ಧೇಃ' ಎಂಬ ಸೂತ್ರದ ಮುಂದಿನ ಭಾಗವು ಉತ್ತರಿಸುತ್ತಿದೆ. ಸಮಾಖ್ಯಾಪ್ರಮಾಣಕ್ಕೆ ವಿಷ್ಣುವಿಷಯಕತ್ವವನ್ನು ಉಪಪಾದನೆ ಮಾಡುವುದಕ್ಕಾಗಿ 'ಮಹಿಮಾ' ಎಂಬ ವಿಷ್ಣುಲಿಂಗವು ಹೇಳಲ್ಪಟ್ಟಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಅಸ್ಯ = ಭೂತಾಧಿಪತಿತ್ವಾದಿ ವಿಷ್ಣುವಿನ ಮಹಿಮೆಯನ್ನು, ಅಸ್ಮಿನ್ = ದಹರಾಕಾಶಸ್ಥವಾದ ವಸ್ತುವಿನಲ್ಲಿ, ಉಪಲಬ್ಧೇಶ್ಚ = ವಾಜಸನೇಯ ಶಾಖಾದಲ್ಲಿ ಉಪಲಬ್ಧವಾಗಿರುವುದೂ ಕೂಡ ಮತ್ತೊಂದು ಕಾರಣ. ಹೀಗೆ 'ಧೃತೇಶ್ಚ' ಎಂಬಲ್ಲಿರುವ 'ಚ' ಶಬ್ದವನ್ನು ಭಿನ್ನಕ್ರಮದಲ್ಲಿ ಯೋಜನೆ ಮಾಡಿ ಅನ್ವಯವನ್ನು ತಿಳಿಯಬೇಕು.

**चतुर्थे तैत्तिरीयश्रुतिसमाख्यामात्रोक्तिः ।**

'ಓಂ ಪ್ರಸಿದ್ಧೇಶ್ಚ ಓಂ' ಎಂಬುದು ನಾಲ್ಕನೆಯ ಸೂತ್ರ. ತೈತ್ತಿರೀಯಶ್ರುತಿಯಲ್ಲಿ 'ದಹರಂ ವಿಪಾಪ್ಮಮ್' ಇತ್ಯಾದಿಯಾಗಿ ಹೃತ್ಪದ್ಮಸ್ಥತ್ವವು ವಿಷ್ಣುವಿನಲ್ಲಿ ಶ್ರುತವಾಗಿದೆ. ಈ ಸಮಾಖ್ಯಾ-ಪ್ರಮಾಣವನ್ನಷ್ಟೇ ಸೂತ್ರವು ಹೇಳುತ್ತಿದೆ. ಆದ್ದರಿಂದ ನಾಲ್ಕನೆಯ ಸ್ಥಾನವು ಇದಕ್ಕೆ ಸಮಂಜಸವಾಗಿದೆ.

**पञ्चमे स्वपक्षबाधके परपक्षसाधके च शङ्किते परपक्षे तावदपहतपाप्मत्वाद्यसम्भवरूपबाधकोक्तिः ।**

'ಓಂ ಇತರಪರಾಮರ್ಶಾತ್ಸ ಇತಿ ಚೇನ್ನ ಅಸಂಭವಾತ್ ಓಂ' ಎಂಬುದು ಐದನೆಯ ಸೂತ್ರ. ಇತರಪರಾಮರ್ಶಾತ್ = ಜೀವನನ್ನೇ ಪರಾಮರ್ಶ ಮಾಡಿ ಶ್ರುತಿಯು 'ಆತ್ಮಾ' ಎಂದು ಕರೆದಿದೆ. 'ಪರಂಜ್ಯೋತಿಃ ಉಪಸಂಪದ್ಯ' ಎಂದು ಹೇಳಿ 'ಏಷ ಆತ್ಮಾ' ಎಂದು ಶ್ರುತಿಯಲ್ಲಿದೆ. ಆದ್ದರಿಂದ ಹೃದಯಪದ್ಮಸ್ಥನಾದವನು ಜೀವನೇ ಆಗಬಹುದಲ್ಲವೇ? ಎಂಬುದು ಸ್ವಪಕ್ಷಕ್ಕೆ ಬಾಧಕವಾಗಿದೆ. ಪರಪಕ್ಷಕ್ಕೆ ಸಾಧಕವಾಗಿದೆ. 'ಇತಿ ಚೇನ್ನ' = ಎಂದು ಹೇಳಿದರೆ ಇದು ತಪ್ಪು ಏಕೆಂದರೆ. ಅಸಂಭವಾತ್ = ಜೀವನಲ್ಲಿ ಅಪಹತಪಾಪ್ಮತ್ವವೇ ಮೊದಲಾದ ಬ್ರಹ್ಮನ ಅಸಾಧಾರಣ ಧರ್ಮಗಳನ್ನು ಸಮನ್ವಯ ಮಾಡಲು ಬರುವುದಿಲ್ಲ. ಹೀಗೆ ಪರಪಕ್ಷಕ್ಕೆ ಬಾಧಕ ಪ್ರಮಾಣವನ್ನು ಸಾಮಾನ್ಯವಾಗಿ ಹೇಳಲಾಗಿದೆ.

**षष्ठे जीवेऽपि मुक्तिदशायामपहतपाप्मत्वादिसम्भवं शङ्कित्वा स्वतोऽपहतपाप्मत्वाद्यसम्भवाद्बाधकतादवस्थ्यमित्युक्तिः ।**

'ಓಂ ಉತ್ತರಾಚ್ಚೇತ್ ಆವಿರ್ಭೂತಸ್ವರೂಪಸ್ತು ಓಂ' ಎಂಬುದು ಆರನೆಯ ಸೂತ್ರ. ಈ ಸೂತ್ರದಲ್ಲಿ 'ಉತ್ತರಾಚ್ಚೇತ್' = ಮುಂದಿರುವ ವಾಕ್ಯಗಳ ಬಲದಿಂದ ಮುಖ್ಯಾವಸ್ಥೆಯಲ್ಲಿ ಜೀವನಿಗೂ ಕೂಡ ಅಪಹತಪಾಪ್ಮತ್ವಾದಿ ಲಿಂಗಗಳನ್ನು ಹೇಳಬಹುದಲ್ಲವೇ? ಎಂದು ಆಶಂಕೆ ಮಾಡಿ, ಆವಿರ್ಭೂತ ಸ್ವರೂಪಸ್ತು = ಮುಕ್ತನಲ್ಲಿರುವ ಅಪಹತಪಾಪ್ಮತ್ವಾದಿಗಳು ಸ್ವರೂಪಾವಿರ್ಭಾವದ ಅಧೀನವಾಗಿದೆ. ಸ್ವರೂಪಾವಿರ್ಭಾವವೂ ಕೂಡ ಪರಮಾತ್ಮನ ಅಧೀನವಾಗಿದೆ. ಆದ್ದರಿಂದ ಸ್ವತಂತ್ರವಾದ ಅಪಹತಪಾಪ್ಮತ್ವಾದಿಗಳಿಲ್ಲದ ಕಾರಣ, ಬಾಧಕ ಇರುವ ಪ್ರಯುಕ್ತ ಜೀವನನ್ನು ಹೃತ್ಪದ್ಮಸ್ಥನೆಂದು ಹೇಳಲಾಗದೆಂದು ಸಾಧಿಸಲಾಗಿದೆ.

**सप्तमे पञ्चमे शङ्कितस्य जीवपरामर्शकैतच्छब्दरूपस्य स्वपक्षबाधकस्य परपक्षसाधकस्य च परिहारोक्तिः ।**

'ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ' ಎಂಬುದು ಏಳನೆಯ ಸೂತ್ರ - ಐದನೆಯ ಸೂತ್ರದಲ್ಲಿ ಸಮಾನವಾದ ಲಿಂಗ ಹಾಗೂ ವಚನಗಳ ಆಧಾರದಿಂದ ಜೀವನನ್ನೇ ಪರಾಮರ್ಶಿಸಬೇಕೆಂದು ಆಕ್ಷೇಪಿಸಲಾಗಿತ್ತು. ಆ ಆಕ್ಷೇಪಕ್ಕೆ ಉತ್ತರನೀಡಲು ಈ ಸೂತ್ರ ಹೊರಟಿದೆ. 'ಏತತ್' ಶಬ್ದದಿಂದ ಪರಮಾತ್ಮನನ್ನೇ ಪರಾಮರ್ಶಿಸಬೇಕು. ಪರಾಮರ್ಶಮಾಡುವ ಶಬ್ದದಲ್ಲಿ ವಿಧೇಯಗತವಾದ ಲಿಂಗವಚನಗಳಿರಬೇಕೆಂಬ ನಿಯಮವಿದೆ. ಆದ್ದರಿಂದ ಪುಲ್ಲಿಂಗ ಪ್ರಯೋಗವು ಪ್ರಯೋಜಕವಾಗುವು-ದಿಲ್ಲವೆಂದು ಸ್ವಪಕ್ಷಬಾಧಕಕ್ಕೆ ಮತ್ತು ಪರಪಕ್ಷಸಾಧಕಕ್ಕೆ ಪರಿಹಾರವನ್ನು ಹೇಳಲಾಗಿದೆ.

**अष्टमे तु दहरस्थत्वलिङ्गरूपे स्वपक्षबाधके परपक्षसाधके च शङ्किते पूर्वोक्तपरिहारस्मारणम् ।**

'ಓಂ ಅಲ್ಪಶ್ರುತೇಃ ಇತಿ ಚೇತ್ ತದುಕ್ತಮ್ ಓಂ' ಎಂಬುದು ಎಂಟನೆಯ ಸೂತ್ರ. ದಹರಸ್ಥತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಬರುವುದಿಲ್ಲ. ಅಲ್ಪಸ್ಥಾನಸ್ಥಿತನಲ್ಲಿ ಸರ್ವಗತತ್ವವನ್ನು ಹೇಳುವುದು ಅಸಂಭಾವಿತವಲ್ಲವೇ? ಎಂಬುದಾಗಿ ದಹರಸ್ಥತ್ವವೆಂಬ ಲಿಂಗವೇ ಸ್ವಪಕ್ಷದಲ್ಲಿ ಬಾಧಕವಾಗಿ, ಜೀವನೇ ಹೃತ್ಪದ್ಮಸ್ಥನಾಗಿದ್ದಾನೆಂಬ ಪರಪಕ್ಷದಲ್ಲಿ ಸಾಧಕವನ್ನಾಗಿ ಆಶಂಕಿಸಿದಾಗ 'ಅರ್ಭಕೌಕಸ್ತ್ವಾತ್' ಇತ್ಯಾದಿ ಸೂತ್ರದಲ್ಲಿ ಹೇಳಿದ ಪರಿಹಾರವನ್ನು ಈ ಸೂತ್ರವು ಸ್ಮರಿಸುತ್ತಿದೆ.

**नच स्मारणं व्यर्थम् । युक्तं व्योम्नोऽशतोऽल्पौकस्त्वम् । अंशस्यापूर्णत्वात् । ब्रह्मणि त्वंशोऽपि पूर्ण इत्यधिकाशङ्कायां ब्रह्मणोऽचिन्त्यशक्तित्वात् ''एष म आत्माऽन्तर्हृदये ज्यायान्'' इत्यादिश्रुतौ हृदयस्थांशस्यैव सर्वज्यायस्त्वोक्तेः ''गुणाः श्रुताः सुविरुद्धाश्च'' इत्यादिश्रुतेश्चेत्यधिकपरिहारार्थत्वादिति सूत्रक्रमः ।**

ಒಮ್ಮೆ ಹೇಳಿದ ವಿಷಯವನ್ನು ಮತ್ತೆ ಮತ್ತೆ ಸ್ಮರಿಸುತ್ತಿದ್ದರೆ, ಶಾಸ್ತ್ರವು ಅಪರ್ಯವಸಾನ-ವಾಗಬೇಕಾದ್ದರಿಂದ ಹೀಗೆ ಹೇಳುವುದು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಹೆಚ್ಚಿನ ಆಶಂಕೆಯಿರುವುದರಿಂದ ಅದಕ್ಕೆ ಉತ್ತರ ನೀಡಲು ಈ ಸೂತ್ರವು ಹೊರಟಿದೆ. ಆ ಶಂಕೆ ಹೀಗಿದೆ - ಆಕಾಶದ ಅಂಶಕ್ಕೆ ಅಲ್ಪಸ್ಥಾನಸ್ಥಿತತ್ವವನ್ನು ಹೇಳಬಹುದು. ಏಕೆಂದರೆ ಆಕಾಶದ ಅಂಶವು ಅಪೂರ್ಣವಾಗಿದೆ. ಆದರೆ ಬ್ರಹ್ಮನ ವಿಷಯದಲ್ಲಿ ಅಂಶವನ್ನೂ ಕೂಡ ಪೂರ್ಣವೆಂದು ನೀವು ಹೇಳುತ್ತಿರಿ. ಇದು ಹೇಗೆ ಕೂಡುತ್ತದೆ ಎಂಬ ಅಧಿಕಾಶಂಕೆಗೆ ಸೂತ್ರವು ಉತ್ತರಿಸುತ್ತಿದೆ.

ಬ್ರಹ್ಮನಿಗೆ ಅಚಿಂತ್ಯಶಕ್ತಿಯಿರುವುದರಿಂದ ಮತ್ತು 'ಏಷ ಮ ಆತ್ಮಾಂತರ್ಹೃದಯೇ ಜ್ಯಾಯಾನ್' ಇತ್ಯಾದಿ ಶ್ರುತಿಯಲ್ಲಿ ಹೃದಯದಲ್ಲಿರುವ ಪರಮಾತ್ಮನ ಅಂಶವೇ ಸಕಲಪದಾರ್ಥಗಳಿಂದ ಶ್ರೇಷ್ಠವಾಗಿದೆಯೆಂದು ಹೇಳಿರುವುದರಿಂದ ಮತ್ತು 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ' ಇತ್ಯಾದಿ ಶ್ರುತಿಯಲ್ಲಿ ಪರಮಾತ್ಮನಲ್ಲಿ ಅಣುತ್ವ-ಮಹತ್ವಗಳೆಂಬ ವಿರುದ್ಧಧರ್ಮಗಳು ಒಟ್ಟಿಗೆ ಇರಬಹುದೆಂದು ಹೇಳುವುದರಿಂದಲೂ ಪರಮಾತ್ಮನ ಅಂಶವನ್ನು ಪೂರ್ಣವಾಗಿದೆಯೆಂದು ಹೇಳಬಹುದು. ಹೀಗೆ ಸೂತ್ರಗಳ ವಿನ್ಯಾಸಕ್ರಮವು ಬಹಳ ಸುಂದರವಾಗಿದೆ.

**प्रकाशः –**

धृतेश्च महिम्नोऽस्यास्मिन्नुपलब्धेरिति सूत्रटीकार्थं निष्कृष्य व्यनक्ति – तृतीये त्विति ।। 'य एषः' इति वाक्योक्तिस्तस्य हृत्पद्मस्थविषयत्वसूचनाय ।

ವಿವರಣೆ - 'ಓಂ ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ' ಎಂಬ ಮೂರನೆಯ ಸೂತ್ರದ ಟೀಕಾರ್ಥವನ್ನು ಪರಿಷ್ಕಾರ ಮಾಡಿ, ಸೂತ್ರದ ಸ್ವಾರಸ್ಯವನ್ನು ವರ್ಣಿಸುತ್ತಿದ್ದಾರೆ 'ತೃತೀಯೇ ತು' ಇತ್ಯಾದಿ

ಗ್ರಂಥದಿಂದ. ಗ್ರಂಥದಲ್ಲಿ 'ಯ ಏಷಃ' ಎಂಬ ವಾಕ್ಯವನ್ನು ಏಕೆ ಹೇಳಿದ್ದಾರೆಂದರೆ, 'ಯ ಏಷಃ ಸೇತುಃ ವಿಧಾರಣಃ' ಎಂಬ ವಾಕ್ಯವು ಹೃತ್ಪದ್ಮಸ್ಥವಿಷಯಕವಾಗಿದೆಯೆಂಬುದನ್ನು ಸೂಚನೆ ಮಾಡುವುದಕ್ಕಾಗಿ ತಿಳಿಯಬೇಕು.

**प्रकाशः** – एतेन 'गतिधृतिशब्देभ्यः' इति निर्देशेन 'लिङ्गं च' इत्यनेन वाक्योपादानसम्भवे योगविभागो विफल इति प्रत्युक्तम् । समाख्यापरत्वस्यापि सत्त्वात् ।

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯನ್ನು ಪರಿಹರಿಸಿದಂತಾಯಿತು. ಶಂಕೆ ಹೀಗಿದೆ - 'ಧೃತೇಶ್ಚ' ಎಂಬುದನ್ನು ಪ್ರತ್ಯೇಕ ಸೂತ್ರವನ್ನಾಗಿಯೇ ಮಾಡಬೇಕಾಗಿಲ್ಲ. 'ಗತಿ ಶಬ್ದಾಭ್ಯಾಂ' ಎಂಬ ಸೂತ್ರದ ಜೊತೆಗೆ ಸೇರಿಸಿ 'ಗತಿಧೃತಿಶಬ್ದೇಭ್ಯಃ' ಎಂದು ಸೂತ್ರವನ್ನು ನಿರ್ದೇಶ ಮಾಡಬಹುದಿತ್ತು. ಲಿಂಗವನ್ನು ಪ್ರತ್ಯೇಕವಾಗಿ ಹೇಳಬೇಕೆನ್ನಲು ಕಾರಣವನ್ನು ಹೇಳಿದ್ದರಿಂದ, 'ಗತಿಧೃತಿಶಬ್ದೇಭ್ಯಃ ಲಿಂಗಂ ಚ' ಎಂದು ಎರಡನೆಯ ಸೂತ್ರದಲ್ಲಿಯೇ ಮೂರನೆಯ ಸೂತ್ರದ ಅಭಿಪ್ರಾಯವನ್ನು ಅಂತರ್ಭಾವ ಮಾಡಬಹುದಿತ್ತು. ಪ್ರತ್ಯೇಕವಾಗಿ ಮೂರನೆಯ ಸೂತ್ರವನ್ನು ವಿಭಾಗಿಸಿದ್ದು ತಪ್ಪಲ್ಲವೇ?

ಈ ಶಂಕೆ ಈಗ ಪರಿಹಾರವಾಯಿತು. ಏಕೆಂದರೆ 'ಧೃತಿ' ಎಂಬ ಲಿಂಗವನ್ನು ಹೇಳುವುದರ ಜೊತೆಗೆ ಸಮಾಖ್ಯಾಪ್ರಮಾಣವನ್ನೂ ಕೂಡ ಮೂರನೆಯ ಸೂತ್ರವು ಉಲ್ಲೇಖಿಸುತ್ತಿದೆ. ಆದ್ದರಿಂದ ಪ್ರತ್ಯೇಕವಾಗಿ ಹೇಳಿದ್ದು ಸಾರ್ಥಕ.

**प्रकाशः** – एतेनैव चारण्याश्रयलोकवत्त्वलिङ्गापेक्षया धृतिरूपलिङ्गस्य पूर्ववाक्यगतत्वात् लिङ्गं चेत्यतः प्रागेवास्य निर्देशः कार्य इत्यपि निरस्तम् । लिङ्गं चेत्यस्य पूर्वहेतुसाधकतारूपत्वस्यापि सत्त्वाच्चेति ।

ಮತ್ತೊಂದು ಶಂಕೆ ಹೀಗಿದೆ - ಅರಣ್ಯಾಶ್ರಯಲೋಕವತ್ತ್ವವೆಂಬ ಲಿಂಗಕ್ಕಿಂತಲೂ 'ಸಃ ಸೇತುರ್ವಿಧಾರಣಃ' ಎಂಬ ಧೃತಿಯೆಂಬ ಲಿಂಗವು ಶ್ರುತವಾಗಿದೆ. ಆದ್ದರಿಂದ ಅರಣ್ಯಾಶ್ರಯಲೋಕವತ್ತ್ವವೆಂಬ ಲಿಂಗವನ್ನು ಹೇಳುವುದಕ್ಕಿಂತ ಮೊದಲೇ 'ಧೃತಿ' ಎಂಬ ಲಿಂಗವನ್ನು ಹೇಳಬೇಕಿತ್ತಲ್ಲವೇ? ಎಂಬ ಈ ಆಶಂಕೆಯನ್ನೂ ಕೂಡ ಇದರಿಂದಲೇ ಪರಿಹರಿಸಿದಂತಾಯಿತು.

ಏಕೆಂದರೆ ಕೇವಲ ಶ್ರುತಿ ಹಾಗೂ ಲಿಂಗಗಳನ್ನು ಹೇಳಲು ಮೊದಲನೇ ಮತ್ತು ಎರಡನೆಯ ಸೂತ್ರಗಳು ಹೊರಟಿದೆ. ಈ ಮಧ್ಯದಲ್ಲಿ ಸಮಾಖ್ಯಾಪ್ರಮಾಣವನ್ನು ಹೇಳುವುದು ಯುಕ್ತವಾಗುವುದಿಲ್ಲ. ಮತ್ತು ಹೇತುಸಾಧಕ ಹೇತುವನ್ನು ಹೇಳುವುದಕ್ಕಾಗಿಯೂ ಎರಡನೆಯ ಸೂತ್ರವು ಹೊರಟಿದೆ ಎಂದು ಹೇಳಿದಾಗ ಅದರ ಮಧ್ಯದಲ್ಲಿ ಸಮಾಖ್ಯಾಪ್ರಮಾಣವನ್ನು ಹೇಳುವುದು ಅಸಂಗತವಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – एवं तर्हि समुच्चेयलिङ्गान्तरस्यानुक्तेः ''धृतेश्च'' इति चशब्दोऽस्मिन्पक्षे न युक्त इत्यतोऽस्मिन्नित्यस्यार्थद्वयं वदंश्चशब्दान्वयमाह – **अत्र चेति** ।।

ಹಾಗಾದರೆ ಸಮುಚ್ಚಯ ಮಾಡಬೇಕಾದ ಮತ್ತೊಂದು ಲಿಂಗವನ್ನು ಮೂರನೆಯ ಸೂತ್ರದಲ್ಲಿ ಹೇಳುತ್ತಿಲ್ಲವೆಂದಂತಾಯಿತು. ಹಾಗಾದರೆ 'ಚ' ಶಬ್ದವನ್ನು ಹೇಳಿದ್ದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಸೂತ್ರದಲ್ಲಿರುವ 'ಅಸ್ಮಿನ್' ಎಂಬ ಪದಕ್ಕೆ ಎರಡು ಅರ್ಥಗಳನ್ನು ತಿಳಿಸುತ್ತಾ 'ಚ' ಶಬ್ದಕ್ಕೆ 'ಉಪಲಬ್ಧೇಶ್ಚ' ಎಂಬಲ್ಲಿ ಅನ್ವಯ ಮಾಡಿ ಭಿನ್ನ ಕ್ರಮದಲ್ಲಿ ಯೋಜನೆ ಮಾಡಬೇಕೆಂದು ಹೇಳುತ್ತಿದ್ದಾರೆ 'ಅತ್ರ ಚ' ಇತ್ಯಾದಿ ಗ್ರಂಥದಿಂದ.

**प्रकाशः** – चतुर्थे ''प्रसिद्धेश्च'' इत्यत्र ''दह्रं विपापं परवेश्मभूतं यत्पुण्डरीकं पुरमध्यसंस्थम् । तत्रापि दह्रं गगनं विशोकस्तस्मिन्यदन्तस्तदुपासितव्यम्'' इति विष्णोर्हृत्पद्मस्थत्वप्रसिद्धेश्चेत्युक्तत्वादिति भावः ।

'ಓಂ ಪ್ರಸಿದ್ಧೇಶ್ಚ ಓಂ' ಎಂಬ ನಾಲ್ಕನೆಯ ಸೂತ್ರದಲ್ಲಿ 'ದಹ್ರಂ ವಿಪಾಪಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಮ್ । ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಮ್' ಎಂಬ ಮಹಾನಾರಾಯಣೋಪನಿಷತ್ತಿನಲ್ಲಿ ವಿಷ್ಣುವಿಗೆ ಹೃತ್ಪದ್ಮಸ್ಥತ್ವವು ಪ್ರಸಿದ್ಧವಾಗಿದೆಯೆಂದು ಹೇಳಲಾಗಿದೆ.

**प्रकाशः** – मात्रपदेन लिङ्गं व्यावर्त्यते । तेन पूर्वानन्तर्यमिति भावः ।

'ಸಮಾಖ್ಯಾ ಮಾತ್ರೋಕ್ತಿಃ' ಎಂಬಲ್ಲಿರುವ 'ಮಾತ್ರ' ಪದದಿಂದ ಲಿಂಗವನ್ನು ವ್ಯಾವೃತ್ತಿ ಮಾಡಲಾಗಿದೆ. ಲಿಂಗವನ್ನು ಹೇಳಿದ ಅನಂತರ ಸಮಾಖ್ಯಾಪ್ರಮಾಣವನ್ನು ಹೇಳುತ್ತಿರುವುದರಿಂದ ಈ ಸೂತ್ರಕ್ಕೆ ಆನಂತರ್ಯವು ಯುಕ್ತವಾಗಿದೆಯೆಂದು ತಿಳಿಯಬೇಕು.

**प्रकाशः** – पञ्चमे ''इतरपरामर्शात्स इति चेन्नासम्भवात्'' इत्यत्र । एष आत्मेति जीवपरामर्शात्स एव दहरस्थ इति शङ्कितेऽपहतपाप्मत्वादीनां जीवेऽसम्भवादित्यर्थोक्तेरिति भावः ।

ಓಂ ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್ ಓಂ' ಎಂಬುದು ಐದನೆಯ ಸೂತ್ರ. ಇದರ ಅಭಿಪ್ರಾಯ ಹೀಗಿದೆ. 'ಯ ಏಷ ಆತ್ಮಾ' ಎಂಬ ಶ್ರುತಿಯಲ್ಲಿ ಜೀವನನ್ನು ಪರಾಮರ್ಶ ಮಾಡಿರುವುದರಿಂದ ಅವನೇ ದಹರಾಕಾಶಸ್ಥಿತನಾಗಿದ್ದಾನೆಂದು ಆಶಂಕಿಸಿದಾಗ ಅಪಹತಪಾಪ್ಮತ್ವಾದಿ ಲಿಂಗಗಳು ಜೀವನಲ್ಲಿ ಅಸಂಭಾವಿತವಾಗಿವೆಯೆಂದು ಈ ಸೂತ್ರ ಹೇಳುತ್ತಿದೆ.

**प्रकाशः** – षष्ठे ''उत्तराच्चेदाविर्भूतस्वरूपस्तु'' इत्यत्र उत्तराच्चेदित्यंशेन ''स तत्र पर्येति जक्षन् क्रीडन्'' इत्युत्तरवचनाज्जीवेऽपहतपाप्मत्वादीनां भाविभावाभिप्रायेण सम्भवं शङ्कित्वा ''आविर्भूत'' इत्यंशेन परमेश्वरं गुणप्रदातृतया परञ्ज्योतिरिति पूर्ववाक्येऽभिधाय ''स तत्र पर्येति'' इत्यादिना परमेश्वरप्रसादेनाविर्भूतगुण-स्वरूपस्यैवोत्तरवाक्ये कथनादिति व्याख्यानादिति भावः ।

'ಓಂ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ಓಂ' ಎಂಬುದು ಆರನೆಯ ಸೂತ್ರ. ಇದರಲ್ಲಿ 'ಉತ್ತರಾಚ್ಚೇತ್' ಎಂಬ ಭಾಗದಿಂದ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್' ಎಂಬ ಮುಂದಿನ ವಾಕ್ಯದಲ್ಲಿ ಜೀವನಿಗೂ ಕೂಡ ಅಪಹತಪಾಪ್ಮತ್ವಾದಿ ಧರ್ಮಗಳು ಇರುತ್ತವೆಂದು ಶ್ರುತವಾಗಿವೆ. ಹೀಗೆ ಭಾವಿಭಾವಾಭಿಪ್ರಾಯದಿಂದ ಜೀವನಲ್ಲಿಯೂ ಬ್ರಹ್ಮನ ಲಿಂಗಗಳನ್ನು ಆಶಂಕಿಸಿ, 'ಆವಿರ್ಭೂತ' ಎಂಬ ಅಂಶದಿಂದ ಪರಮಾತ್ಮನ ಅಧೀನವಾಗಷ್ಟೇ ಇಂತಹ ಗುಣಗಳು ಜೀವನಲ್ಲಿರುತ್ತವೆ. ಪರಮಾತ್ಮನೇ ಗುಣಪ್ರದಾತೃವಾಗಿದ್ದಾನೆಂದು 'ಪರಂಜ್ಯೋತಿಃ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲಾಗಿದೆ. ಅನಂತರ 'ಸ ತತ್ರ ಪರ್ಯೇತಿ' ಎಂಬ ಮುಂದಿನ ವಾಕ್ಯದಲ್ಲಿ ಜೀವನು ಪರಮಾತ್ಮನ ಪ್ರಸಾದದಿಂದ ಆವಿರ್ಭೂತವಾದ ಗುಣಸ್ವರೂಪವುಳ್ಳವನೆಂದು ಹೇಳಲಾಗಿದೆ. ಆದ್ದರಿಂದ ಜೀವನಲ್ಲಿ ಅಪಹತಪಾಪ್ಮತ್ವಾದಿ ಗುಣಗಳು ಸ್ವತಂತ್ರವಾಗಿಲ್ಲ. ಹೊರತು, ಅಸ್ವತಂತ್ರವಾಗಿವೆಯೆಂದು ಹೇಳಿದಂತಾಯಿತಾದ್ದರಿಂದ ಮುಖ್ಯವಾದ ಅರ್ಥವನ್ನು ಸ್ವೀಕರಿಸಲಾಗದು.

**प्रकाशः** – ''पूर्वादिभ्यो नवभ्यो वा'' इति स्मात्स्मिनोर्विकल्पितत्वादुत्तरादिति सौत्रनिर्देशस्साधुः ।

ಸೂತ್ರದಲ್ಲಿ 'ಉತ್ತರಾಚ್ಚೇತ್' ಎಂದು ಪ್ರಯೋಗಿಸಿದ್ದಾರೆ. ಆದರೆ 'ಉತ್ತರಸ್ಮಾತ್' ಎಂಬುದಾಗಿ ಪ್ರಯೋಗಿಸಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು. 'ಪೂರ್ವಾದಿಭ್ಯೋ ನವಭ್ಯೋ ವಾ' ಎಂಬ ಪಾಣಿನಿ ಸೂತ್ರದಲ್ಲಿ ಪೂರ್ವ-ಪಶ್ಚಿಮ ಮೊದಲಾದ ಒಂಭತ್ತು ಬಗೆಯ ಶಬ್ದಗಳಿಗೆ 'ಸ್ಮಾತ್' ಮತ್ತು 'ಸ್ಮಿನ್' ಪ್ರತ್ಯಯಗಳು ವಿಕಲ್ಪವಾಗಿ ಬರುತ್ತವೆಂದು ನಿರ್ದೇಶಿಸಲಾಗಿದೆ. ಆದ್ದರಿಂದ ಉತ್ತರ ಶಬ್ದದ ಮುಂದೆ 'ಸ್ಮಾತ್' ಪ್ರತ್ಯಯವು ಬಂದರೆ 'ಉತ್ತರಸ್ಮಾತ್' ಎಂದಾಗುತ್ತದೆ, ಬಾರದಿದ್ದರೆ 'ಉತ್ತರಾತ್' ಎಂದಾಗುತ್ತದೆ. ವಿಕಲ್ಪವಾದ್ದರಿಂದ ಎರಡು ಬಗೆಯ ಪ್ರಯೋಗಗಳೂ ಕೂಡ ತಪ್ಪಾಗುವುದಿಲ್ಲ. ಆದ್ದರಿಂದ ಸೂತ್ರಕಾರರ ಪ್ರಯೋಗವು ಸಾಧುವೇ ಆಗಿದೆ.

**प्रकाशः** – सप्तमे ''अन्यार्थश्च परामर्शः'' इत्यत्र ''इतरपरामर्शात्स इति चेत्'' इति शङ्कितस्य यं ज्योतिराख्यं भगवन्तमभिसम्पद्य जीवस्स्वेन रूपेणाभिनिष्पद्यते स एष आत्मेति परमात्मानमेवैष इति परामृश्य तस्यात्मत्वोक्त्याऽन्यार्थत्वेन परामर्शोपपत्तेरुक्तत्वात्पुंल्लिङ्गतायाश्च समर्थनादिति भावः ।

'ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ' ಎಂಬುದು ಏಳನೆಯ ಸೂತ್ರ. ಇದರಲ್ಲಿ 'ಇತರಪರಾಮರ್ಶಾತ್ಸ ಇತಿ ಚೇತ್' ಎಂಬ ಐದನೆಯ ಸೂತ್ರದಲ್ಲಿ ಜೀವನನ್ನೇ ಹೃತ್ಪದ್ಮಸ್ಥನೆಂದು ವಿವಕ್ಷಿಸಬೇಕೆಂಬ ಆಕ್ಷೇಪಕ್ಕೆ ಪರಿಹಾರವನ್ನು ನೀಡಲಾಗಿದೆ. ಜೀವನನ್ನು ಪರಾಮರ್ಶಿಸಲು ಬರುವುದಿಲ್ಲ. ಏಕೆಂದರೆ ಯಾವ ಭಗವಂತನನ್ನು ಹೊಂದಿ ಜೀವನು ತನ್ನಸ್ವರೂಪದಿಂದ ಅಭಿವ್ಯಕ್ತನಾಗುತ್ತಾನೋ ಅಂತಹ ಜ್ಯೋತಿ ಸ್ವರೂಪನಾದ ಭಗವಂತನನ್ನೇ 'ಸ ಏಷ ಆತ್ಮಾ' ಎಂಬಲ್ಲಿ ಪರಾಮರ್ಶ ಮಾಡಬೇಕೆಂದು ತಿಳಿಯುತ್ತದೆ. ಏಕೆಂದರೆ ಆ ಪರಮಾತ್ಮನೇ ಇಲ್ಲಿ 'ಏಷಃ' ಎಂಬುದಾಗಿ ಪ್ರಸಕ್ತನಾಗಿದ್ದಾನೆ. ಪುಲ್ಲಿಂಗ ಪ್ರಯೋಗವೂ ಕೂಡ ತಪ್ಪಾಗುವುದಿಲ್ಲವೆಂದು ಸಮರ್ಥಿಸಲಾಗಿದೆ.

**प्रकाशः** – अष्टमे ''अल्पश्रुतेरिति चेत्तदुक्तम्'' इत्यत्र दहराकाशस्थत्वेनाल्पस्थानस्थितत्वमयुक्तमित्याशङ्क्य ''अर्भकौकस्त्वात्'' इति सूत्रे ''व्योमवत्'' इत्युक्तस्य सर्वगतस्याप्यल्पस्थानस्थत्वरूपपरिहारस्य स्मारणमित्यर्थः ।

'ಓಂ ಅಲ್ಪಶ್ರುತೇರಿತಿ ಚೇತ್ ತದುಕ್ತಂ ಓಂ' ಎಂಬುದು ಎಂಟನೆಯ ಸೂತ್ರ. ಇದರಲ್ಲಿ ದಹರಸ್ಥನಾದ ಪರಮಾತ್ಮನಿಗೆ ಅಲ್ಪಸ್ಥಾನಸ್ಥಿತತ್ವವು ಅಯುಕ್ತವಾಗುತ್ತದಲ್ಲವೇ? ಎಂದು ಆಶಂಕಿಸಿ, 'ಅರ್ಭಕೌಕಸ್ತ್ವಾತ್' ಎಂಬ ಸೂತ್ರದಲ್ಲಿ ವ್ಯೋಮದ ದೃಷ್ಟಾಂತದಿಂದ ಸರ್ವಗತನಾದ ಭಗವಂತನಿಗೂ ಅಲ್ಪಸ್ಥಾನಸ್ಥಿತತ್ವವು ಉಪಪನ್ನವಾಗುತ್ತದೆಂಬ ಪರಿಹಾರವನ್ನು ಹೇಳಲಾಗಿದೆಯೆಂದು ಸ್ಮರಿಸಲಾಗಿದೆ.

**प्रकाशः** –प्रागुक्तस्मारणेऽभ्यधिकाशङ्कातत्परिहारयोरुक्तिपरां''नव्योमवदीश्वरस्य'' इति टीकां विवृणोति – **नचेति** ।। **अंशोऽपि पूर्ण इति** ।। विश्वतश्चक्षुरित्यादेरिति भावः । विवृतं चावयवस्य पूर्णत्वमानन्दमयनये ।।

ಪ್ರಾಗುಕ್ತಸ್ಮರಣೆಯಲ್ಲಿಯೂ ಕೂಡ ಅಭ್ಯಧಿಕಾಶಂಕೆಯನ್ನು, ಅದರ ಪರಿಹಾರವನ್ನು 'ನ ವ್ಯೋಮವದೀಶ್ವರಸ್ಯ' ಇತ್ಯಾದಿ ಟೀಕೆಯಲ್ಲಿಯೇ ಹೇಳಿದ್ದಾರೆ. ಅದನ್ನು ಗ್ರಂಥಕಾರರು 'ನಚ' ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ. ಅಂಶೋऽಪಿ ಪೂರ್ಣಂ ಎಂದರೆ 'ವಿಶ್ವತಶ್ಚಕ್ಷುಃ' ಇತ್ಯಾದಿ ಶ್ರುತಿಯಿಂದ ಭಗವಂತನ ಅಂಶವೂ ಕೂಡ ಪೂರ್ಣವಾಗಿದೆಯೆಂದು ತಿಳಿಯುತ್ತದೆ ಎಂದರ್ಥ. ಭಗವಂತನ ಅವಯವಗಳಿಗೆ ಪೂರ್ಣತ್ವವಿದೆಯೆಂಬುದನ್ನು ಆನಂದಮಯಾಧಿಕರಣದಲ್ಲಿ ವಿವರಿಸಲಾಗಿದೆ.

**गुरुराजीयम्** – हेतुसाधकहेतुत्वादिति ।। ब्रह्मणो हृत्पद्मस्थत्वसाधकं सुषगम्यत्वम् । तस्य ब्रह्मलिङ्गत्वसाधकमरण्याख्यसुधासमुद्राश्रयलोकवत्त्वमिति भावः । **स्वपक्षबाधके** सिद्धान्तपक्षबाधके । **परपक्षसाधके** पूर्वपक्षसाधके । एवमुत्तरत्रापि ज्ञातव्यम् । ननु चाचिन्त्यशक्तिः प्रामाणिकेऽर्थे कल्प्यते । नच पूर्णस्यांशस्य दहरस्थत्वं प्रमितमित्यत आह – **एष इति** ।। ननु विरुद्धं प्रमाणेनापि कथं प्रतिपादयितुं शक्यमित्यत आह – **गुणा इति** ।।



## ಸಾರ

ಪ್ರಥಮಸೂತ್ರದಲ್ಲಿ ದಹರಸ್ಥನಾದವನು ಪರಮಾತ್ಮನೇ ಆಗಿದ್ದಾನೆನ್ನಲು ಪ್ರಬಲವಾದ ಶ್ರುತಿ ಹಾಗೂ ಲಿಂಗಪ್ರಮಾಣಗಳನ್ನು ಹೇಳಲಾಯಿತು. ವಿಷಯವಾಕ್ಯಕ್ಕಿಂತ ಸ್ವಲ್ಪದೂರದಲ್ಲಿರುವ ಶ್ರುತಿಲಿಂಗಗಳನ್ನು ಎರಡನೆಯ ಸೂತ್ರದಲ್ಲಿ ಹೇಳಿ ಹೇತುಸಾಧಕ ಹೇತುವನ್ನೂ ಕೂಡ ಸಮರ್ಥಿಸಲಾಯಿತು. ಹೀಗೆ ಶ್ರುತಿಲಿಂಗ ಪ್ರಮಾಣಗಳನ್ನು ಮೊದಲೆರಡು ಸೂತ್ರಗಳಲ್ಲಿ ಹೇಳಿದ ಮೇಲೆ ಸಮಾಖ್ಯಾಪ್ರಮಾಣವನ್ನು ಹೇಳುವುದಕ್ಕಾಗಿ ಮೂರನೆಯ ಸೂತ್ರವು ಹೊರಟಿದೆ. ಛಾಂದೋಗ್ಯದಲ್ಲಿ ಹೃತ್ಪದ್ಮದಲ್ಲಿರುವ ಆಕಾಶಸ್ಥನಾದವನನ್ನು ಪರಮಾತ್ಮನೆಂದು ಹೇಗೆ ವರ್ಣಿಸಲಾಗಿದೆಯೋ, ಅದರಂತೆ ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಕೂಡ ವರ್ಣನೆ ಇರುತ್ತದೆ. ಆದ್ದರಿಂದ ವಿಷ್ಣುವೇ ದಹರಾಕಾಶಸ್ಥನೆಂದು ಸ್ಪಷ್ಟವಾಗುತ್ತದೆ. ಮೂರನೆಯ ಈ ಸೂತ್ರದಲ್ಲಿ ಸಮಾಖ್ಯಾಪ್ರಮಾಣವನ್ನಷ್ಟೇ ಹೇಳುವುದಷ್ಟೇ ಅಲ್ಲದೇ ಭೂತಾಧಿಪತಿತ್ವ ಮೊದಲಾದ ವಿಷ್ಣುವಿನ ಮಹಿಮೆಯನ್ನೂ ಕೂಡ ಹೇಳಲಾಗಿದೆ.

'ಪ್ರಸಿದ್ಧೇಶ್ಚ' ಎಂಬ ನಾಲ್ಕನೆಯ ಸೂತ್ರಲ್ಲಿ ಕೇವಲ ಸಮಾಖ್ಯಾಪ್ರಮಾಣವನ್ನು ಹೇಳಿದ್ದಾರೆ. ಆದ್ದರಿಂದ. ಮೂರನೆಯ ಸೂತ್ರದ ಅನಂತರವೇ ಇದು ಪ್ರಸಕ್ತವಾಗುತ್ತದೆ. 'ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್' ಎಂಬ ಐದನೆಯ ಸೂತ್ರದಲ್ಲಿ ಸ್ವಪಕ್ಷ ಬಾಧಕ ಪ್ರಮಾಣವನ್ನು ಹೇಳಿ, ಪರಪಕ್ಷ ಸಾಧಕ ಪ್ರಮಾಣವನ್ನು ಆಶಂಕಿಸಿ; ಈ ಆಶಂಕೆಗಳನ್ನು ಪರಿಹರಿಸುವ ಮೂಲಕ ಪರಮಾತ್ಮನಲ್ಲಿಯೇ ಹೃತ್ಪದ್ಮಸ್ಥತ್ವವು ಬರುತ್ತದೆಂದು ಸಾಧಿಸಿರುವ ಕಾರಣ ಪರಪಕ್ಷ ನಿರಾಕರಣೆಗಾಗಿ ಹೊರಟಿರುವ ಈ ಸೂತ್ರಕ್ಕೆ ಐದನೆಯ ಸ್ಥಾನವು ಅತ್ಯಂತ ಸಮಂಜಸವಾಗಿದೆ. 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಆರನೆಯ ಸೂತ್ರದಲ್ಲಿ ಜೀವನಲ್ಲಿಯೂ ಕೂಡ ಬ್ರಹ್ಮನ ಧರ್ಮಗಳನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ ಮೋಕ್ಷಾವಸ್ಥೆಯಲ್ಲಿ ಅಪಹತಪಾಪ್ಮತ್ವಾದಿಗಳನ್ನು ಹೇಳಬಹುದಾದರೂ ಕೂಡ ಭಗವದಧೀನವೇ ಆಗಿರುವುದರಿಂದ ಸ್ವತಂತ್ರವಾದ, ಮುಖ್ಯವಾದ ಲಿಂಗವನ್ನು ಜೀವನಲ್ಲಿ ಉಪಪಾದಿಸಲು ಬರುವುದಿಲ್ಲವೆಂದು ಉತ್ತರಿಸಿದ್ದಾರೆ.

'ಅನ್ಯಾರ್ಥಶ್ಚ ಪರಾಮರ್ಶಃ' ಎಂಬ ಏಳನೆಯ ಸೂತ್ರದಲ್ಲಿ ಹಿಂದೆ ಪ್ರಸಕ್ತನಾದವನು ಪರಮಾತ್ಮನೇ ಆಗಿದ್ದಾನೆ. ಅವನನ್ನೇ 'ಏತತ್' ಶಬ್ದದಿಂದ ಪರಾಮರ್ಶಿಸಬೇಕೆಂದು ಸಮರ್ಥಿಸಲಾಗಿದೆ. 'ಅಲ್ಪಶ್ರುತೇರಿತಿ ಚೇತ್ ತದುಕ್ತಮ್' ಎಂಬ ಎಂಟನೆಯ ಸೂತ್ರದಲ್ಲಿ ಅಲ್ಪಸ್ಥಾನಸ್ಥಿತನಾದ ಪರಮಾತ್ಮನಿಗೆ ಸರ್ವಗತತ್ವವನ್ನು ಹೇಳುವುದು ಅನುಪಪನ್ನವಲ್ಲ. ಈ ವಿಷಯವನ್ನು 'ಅರ್ಭಕೌಕಸ್ತ್ವಾತ್' ಎಂಬ ಸರ್ವಗತಾಧಿಕರಣದಲ್ಲಿಯೇ ವಿವರಿಸಿದ್ದೇವೆಂದು ಸ್ಮರಿಸಿದ್ದಾರೆ. ಭಗವಂತನು ಹೇಗೆ ಪರಿಪೂರ್ಣನೋ, ಅದರಂತೆ ಅವನ ಅಂಶವೂ ಕೂಡ ಪರಿಪೂರ್ಣವಾದ್ದರಿಂದ ಎಲ್ಲೆಡೆ ವ್ಯಾಪ್ತನಾದ ಪರಮಾತ್ಮನು ಅಲ್ಪವಾದ ಹೃದಯಪ್ರದೇಶದಲ್ಲೂ ಇರುತ್ತಾನೆಂಬುದನ್ನು ತಿಳಿಯಬೇಕು. ಈ ವಿಷಯದಲ್ಲಿ ಶ್ರುತಿ-ಸ್ಮೃತಿಗಳೇ ಆಧಾರವಾಗಿವೆ.



## तात्पर्यचन्द्रिका

**अत्रान्यैः कैश्चिचोक्तं दहराकाशस्य भूताकाशत्वे जीवत्वे वा प्राप्ते ब्रह्मत्वेन सिद्धान्तः । सूत्रे दहरपदं च प्रथमान्तं नतु सप्तम्यन्तमिति ।**

ಅನುವಾದ - ಅದ್ವೈತಭಾಷ್ಯದಲ್ಲಿ ಮತ್ತು ರಾಮಾನುಜ ಭಾಷ್ಯದಲ್ಲಿ ಈ ಅಧಿಕರಣದ ಶರೀರ ಹೀಗಿದೆ - ಶ್ರುತ್ಯುಕ್ತವಾದ ದಹರಾಕಾಶವು ಭೂತಾಕಾಶವೇ ಆಗಿದೆ. ಅಥವಾ ಜೀವನೇ ಆಗಿದ್ದಾನೆಂದು ಪೂರ್ವಪಕ್ಷ. ಬ್ರಹ್ಮನೆಂದು ಸಿದ್ಧಾಂತ. ಸೂತ್ರದಲ್ಲಿರುವ 'ದಹರ' ಪದವು ಪ್ರಥಮಾಂತವಾಗಿದೆ ಹೊರತು, 'ದಹರೇ' ಎಂಬುದಾಗಿ ಸಪ್ತಮ್ಯಂತವಾಗಿಲ್ಲವೆಂದು ಹೇಳುತ್ತಾರೆ.

**तन्न । दहराकाशस्य ब्रह्मत्वे 'तस्मिन्यदन्तः' इति दहराकाशस्थस्यान्वेष्टव्यत्वाद्युक्त्ययोगात् ।**

ಇವರಿಬ್ಬರ ಅಭಿಪ್ರಾಯವೂ ಸರಿಯಲ್ಲ. ದಹರಾಕಾಶವನ್ನೇ ಬ್ರಹ್ಮನೆಂದು ಹೇಳುವುದಾದರೆ, 'ತಸ್ಮಿನ್ ಯದಂತಃ' ಎಂಬುದಾಗಿ ದಹರಾಕಾಶದಲ್ಲಿರುವ ವಸ್ತುವನ್ನು ಅನ್ವೇಷಣೆ ಮಾಡಬೇಕೆಂದು ಹೇಳುತ್ತಿರುವುದು ತಪ್ಪಾಗುತ್ತದೆ.

**प्रकाशः —**

**अत्रान्यैः कैश्चिचेति ।।** अन्येषामयं भावः । अथ 'यदिदमस्मिन्ब्रह्मपुरे' इति वाक्ये श्रुतो दहराकाशः किं भूताकाश उत जीवोऽथ ब्रह्मेति संशये आकाशशब्दस्य भूताकाशे रूढत्वात् "यावान्" इति वाक्ये हृत्पुण्डरीकावच्छिन्नस्याकाशस्यबाह्याकाशेनोपमितत्वाद् द्यावापृथिव्यादिसर्वाधारत्वस्योपचारेणोपपत्तेर्भूताकाश एव दहराकाश इत्येकः पक्षः ।

ವಿವರಣೆ - ಅದ್ವೈತಭಾಷ್ಯ ಹಾಗೂ ರಾಮಾನುಜಭಾಷ್ಯದ ಅಧಿಕರಣ ಶರೀರವನ್ನು ಒಟ್ಟಿಗೆ ಅನುವಾದ ಮಾಡುತ್ತಿದ್ದಾರೆ 'ಅತ್ರಾನ್ಯೈಃ ಕಶ್ಚಿತ್' ಇತ್ಯಾದಿ ಗ್ರಂಥದಿಂದ.

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ಅಥ ಯದಿದಮಸ್ಮಿನ್ ಬ್ರಹ್ಮಪುರೇ' ಎಂಬ ವಾಕ್ಯದಲ್ಲಿ ದಹರಾಕಾಶವು ಶ್ರುತವಾಗಿದೆ. ಇದು ಭೂತಾಕಾಶಪರವೋ, ಜೀವಪರವೋ, ಅಥವಾ ಬ್ರಹ್ಮಪರವೋ ಎಂದು ಸಂಶಯ.



## ಸಾರ

ಪ್ರಥಮಸೂತ್ರದಲ್ಲಿ ದಹರಸ್ಥನಾದವನು ಪರಮಾತ್ಮನೇ ಆಗಿದ್ದಾನೆನ್ನಲು ಪ್ರಬಲವಾದ ಶ್ರುತಿ ಹಾಗೂ ಲಿಂಗಪ್ರಮಾಣಗಳನ್ನು ಹೇಳಲಾಯಿತು. ವಿಷಯವಾಕ್ಯಕ್ಕಿಂತ ಸ್ವಲ್ಪದೂರದಲ್ಲಿರುವ ಶ್ರುತಿಲಿಂಗಗಳನ್ನು ಎರಡನೆಯ ಸೂತ್ರದಲ್ಲಿ ಹೇಳಿ ಹೇತುಸಾಧಕ ಹೇತುವನ್ನೂ ಕೂಡ ಸಮರ್ಥಿಸಲಾಯಿತು. ಹೀಗೆ ಶ್ರುತಿಲಿಂಗ ಪ್ರಮಾಣಗಳನ್ನು ಮೊದಲೆರಡು ಸೂತ್ರಗಳಲ್ಲಿ ಹೇಳಿದ ಮೇಲೆ ಸಮಾಖ್ಯಾಪ್ರಮಾಣವನ್ನು ಹೇಳುವುದಕ್ಕಾಗಿ ಮೂರನೆಯ ಸೂತ್ರವು ಹೊರಟಿದೆ. ಛಾಂದೋಗ್ಯದಲ್ಲಿ ಹೃತ್ಪದ್ಮದಲ್ಲಿರುವ ಆಕಾಶಸ್ಥನಾದವನನ್ನು ಪರಮಾತ್ಮನೆಂದು ಹೇಗೆ ವರ್ಣಿಸಲಾಗಿದೆಯೋ, ಅದರಂತೆ ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಕೂಡ ವರ್ಣನೆ ಇರುತ್ತದೆ. ಆದ್ದರಿಂದ ವಿಷ್ಣುವೇ ದಹರಾಕಾಶಸ್ಥನೆಂದು ಸ್ಪಷ್ಟವಾಗುತ್ತದೆ. ಮೂರನೆಯ ಈ ಸೂತ್ರದಲ್ಲಿ ಸಮಾಖ್ಯಾಪ್ರಮಾಣವನ್ನಷ್ಟೇ ಹೇಳುವುದಷ್ಟೇ ಅಲ್ಲದೇ ಭೂತಾಧಿಪತಿತ್ವ ಮೊದಲಾದ ವಿಷ್ಣುವಿನ ಮಹಿಮೆಯನ್ನೂ ಕೂಡ ಹೇಳಲಾಗಿದೆ.

'ಪ್ರಸಿದ್ಧೇಶ್ಚ' ಎಂಬ ನಾಲ್ಕನೆಯ ಸೂತ್ರಲ್ಲಿ ಕೇವಲ ಸಮಾಖ್ಯಾಪ್ರಮಾಣವನ್ನು ಹೇಳಿದ್ದಾರೆ. ಆದ್ದರಿಂದ. ಮೂರನೆಯ ಸೂತ್ರದ ಅನಂತರವೇ ಇದು ಪ್ರಸಕ್ತವಾಗುತ್ತದೆ. 'ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್' ಎಂಬ ಐದನೆಯ ಸೂತ್ರದಲ್ಲಿ ಸ್ವಪಕ್ಷ ಬಾಧಕ ಪ್ರಮಾಣವನ್ನು ಹೇಳಿ, ಪರಪಕ್ಷ ಸಾಧಕ ಪ್ರಮಾಣವನ್ನು ಆಶಂಕಿಸಿ; ಈ ಆಶಂಕೆಗಳನ್ನು ಪರಿಹರಿಸುವ ಮೂಲಕ ಪರಮಾತ್ಮನಲ್ಲಿಯೇ ಹೃತ್ಪದ್ಮಸ್ಥತ್ವವು ಬರುತ್ತದೆಂದು ಸಾಧಿಸಿರುವ ಕಾರಣ ಪರಪಕ್ಷ ನಿರಾಕರಣೆಗಾಗಿ ಹೊರಟಿರುವ ಈ ಸೂತ್ರಕ್ಕೆ ಐದನೆಯ ಸ್ಥಾನವು ಅತ್ಯಂತ ಸಮಂಜಸವಾಗಿದೆ. 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಆರನೆಯ ಸೂತ್ರದಲ್ಲಿ ಜೀವನಲ್ಲಿಯೂ ಕೂಡ ಬ್ರಹ್ಮನ ಧರ್ಮಗಳನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ ಮೋಕ್ಷಾವಸ್ಥೆಯಲ್ಲಿ ಅಪಹತಪಾಪ್ಮತ್ವಾದಿಗಳನ್ನು ಹೇಳಬಹುದಾದರೂ ಕೂಡ ಭಗವದಧೀನವೇ ಆಗಿರುವುದರಿಂದ ಸ್ವತಂತ್ರವಾದ, ಮುಖ್ಯವಾದ ಲಿಂಗವನ್ನು ಜೀವನಲ್ಲಿ ಉಪಪಾದಿಸಲು ಬರುವುದಿಲ್ಲವೆಂದು ಉತ್ತರಿಸಿದ್ದಾರೆ.

'ಅನ್ಯಾರ್ಥಶ್ಚ ಪರಾಮರ್ಶಃ' ಎಂಬ ಏಳನೆಯ ಸೂತ್ರದಲ್ಲಿ ಹಿಂದೆ ಪ್ರಸಕ್ತನಾದವನು ಪರಮಾತ್ಮನೇ ಆಗಿದ್ದಾನೆ. ಅವನನ್ನೇ 'ಏತತ್' ಶಬ್ದದಿಂದ ಪರಾಮರ್ಶಿಸಬೇಕೆಂದು ಸಮರ್ಥಿಸಲಾಗಿದೆ. 'ಅಲ್ಪಶ್ರುತೇರಿತಿ ಚೇತ್ ತದುಕ್ತಮ್' ಎಂಬ ಎಂಟನೆಯ ಸೂತ್ರದಲ್ಲಿ ಅಲ್ಪಸ್ಥಾನಸ್ಥಿತನಾದ ಪರಮಾತ್ಮನಿಗೆ ಸರ್ವಗತತ್ವವನ್ನು ಹೇಳುವುದು ಅನುಪಪನ್ನವಲ್ಲ. ಈ ವಿಷಯವನ್ನು 'ಅರ್ಭಕೌಕಸ್ತ್ವಾತ್' ಎಂಬ ಸರ್ವಗತಾಧಿಕರಣದಲ್ಲಿಯೇ ವಿವರಿಸಿದ್ದೇವೆಂದು ಸ್ಮರಿಸಿದ್ದಾರೆ. ಭಗವಂತನು ಹೇಗೆ ಪರಿಪೂರ್ಣನೋ, ಅದರಂತೆ ಅವನ ಅಂಶವೂ ಕೂಡ ಪರಿಪೂರ್ಣವಾದ್ದರಿಂದ ಎಲ್ಲೆಡೆ ವ್ಯಾಪ್ತನಾದ ಪರಮಾತ್ಮನು ಅಲ್ಪವಾದ ಹೃದಯಪ್ರದೇಶದಲ್ಲೂ ಇರುತ್ತಾನೆಂಬುದನ್ನು ತಿಳಿಯಬೇಕು. ಈ ವಿಷಯದಲ್ಲಿ ಶ್ರುತಿ-ಸ್ಮೃತಿಗಳೇ ಆಧಾರವಾಗಿವೆ.



**तात्पर्यचन्द्रिका**

**अत्रान्यैः कैश्चिचोक्तं दहराकाशस्य भूताकाशत्वे जीवत्वे वा प्राप्ते ब्रह्मत्वेन सिद्धान्तः । सूत्रे दहरपदं च प्रथमान्तं नतु सप्तम्यन्तमिति ।**

ಅನುವಾದ - ಅದ್ವೈತಭಾಷ್ಯದಲ್ಲಿ ಮತ್ತು ರಾಮಾನುಜ ಭಾಷ್ಯದಲ್ಲಿ ಈ ಅಧಿಕರಣದ ಶರೀರ ಹೀಗಿದೆ - ಶ್ರುತ್ಯುಕ್ತವಾದ ದಹರಾಕಾಶವು ಭೂತಾಕಾಶವೇ ಆಗಿದೆ. ಅಥವಾ ಜೀವನೇ ಆಗಿದ್ದಾನೆಂದು ಪೂರ್ವಪಕ್ಷ. ಬ್ರಹ್ಮನೆಂದು ಸಿದ್ಧಾಂತ. ಸೂತ್ರದಲ್ಲಿರುವ 'ದಹರ' ಪದವು ಪ್ರಥಮಾಂತವಾಗಿದೆ ಹೊರತು, 'ದಹರೇ' ಎಂಬುದಾಗಿ ಸಪ್ತಮ್ಯಂತವಾಗಿಲ್ಲವೆಂದು ಹೇಳುತ್ತಾರೆ.

**तन्न । दहराकाशस्य ब्रह्मत्वे 'तस्मिन्यदन्तः' इति दहराकाशस्थस्यान्वेष्टव्यत्वाद्युक्त्ययोगात् ।**

ಇವರಿಬ್ಬರ ಅಭಿಪ್ರಾಯವೂ ಸರಿಯಲ್ಲ. ದಹರಾಕಾಶವನ್ನೇ ಬ್ರಹ್ಮನೆಂದು ಹೇಳುವುದಾದರೆ, 'ತಸ್ಮಿನ್ ಯದಂತಃ' ಎಂಬುದಾಗಿ ದಹರಾಕಾಶದಲ್ಲಿರುವ ವಸ್ತುವನ್ನು ಅನ್ವೇಷಣೆ ಮಾಡಬೇಕೆಂದು ಹೇಳುತ್ತಿರುವುದು ತಪ್ಪಾಗುತ್ತದೆ.

**प्रकाशः —**

**अत्रान्यैः कैश्चिचेति** ।। अन्येषामयं भावः । अथ 'यदिदमस्मिन्ब्रह्मपुरे' इति वाक्ये श्रुतो दहराकाशः किं भूताकाश उत जीवोऽथ ब्रह्मेति संशये आकाशशब्दस्य भूताकाशे रूढत्वात् ''यावान्'' इति वाक्ये हृत्पुण्डरीकावच्छिन्नस्याकाशस्य-बाह्याकाशेनोपमितत्वाद् द्यावापृथिव्यादिसर्वाधारत्वस्योपचारेणोपपत्तेर्भूताकाश एव दहराकाश इत्येकः पक्षः ।

ವಿವರಣೆ - ಅದ್ವೈತಭಾಷ್ಯ ಹಾಗೂ ರಾಮಾನುಜಭಾಷ್ಯದ ಅಧಿಕರಣ ಶರೀರವನ್ನು ಒಟ್ಟಿಗೆ ಅನುವಾದ ಮಾಡುತ್ತಿದ್ದಾರೆ 'ಅತ್ರಾನ್ಯೈಃ ಕಶ್ಚಿತ್' ಇತ್ಯಾದಿ ಗ್ರಂಥದಿಂದ.

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ಅಥ ಯದಿದಮಸ್ಮಿನ್ ಬ್ರಹ್ಮಪುರೇ' ಎಂಬ ವಾಕ್ಯದಲ್ಲಿ ದಹರಾಕಾಶವು ಶ್ರುತವಾಗಿದೆ. ಇದು ಭೂತಾಕಾಶಪರವೋ, ಜೀವಪರವೋ, ಅಥವಾ ಬ್ರಹ್ಮಪರವೋ ಎಂದು ಸಂಶಯ.

ಪೂರ್ವಪಕ್ಷ - 'ಆಕಾಶ' ಶಬ್ದವು ಭೂತಾಕಾಶದಲ್ಲೇ ರೂಢವಾಗಿದೆ 'ಯಾವಾನ್ವಾ' ಎಂಬ ವಾಕ್ಯದಲ್ಲಿ ಹೃತ್ಪುಂಡರೀಕಾವಚ್ಛಿನ್ನವಾದ ಆಕಾಶಕ್ಕೆ ಬಾಹ್ಯಾಕಾಶದ ಪರಿಮಾಣದಷ್ಟೇ ಪರಿಮಾಣವನ್ನು ಹೇಳಲಾಗಿದೆ. ದ್ಯಾವ್ಯಾಪೃಥಿವ್ಯಾದ್ಯಾಶ್ರಯತ್ವವನ್ನು ಗೌಣವಾಗಿ ಕೂಡಿಸಬೇಕು. ಆದ್ದರಿಂದ ಭೂತಾಕಾಶವೇ ದಹರಾಕಾಶವಾಗುತ್ತವೆಂಬುದು ಮೊದಲನೆಯ ಪೂರ್ವಪಕ್ಷ.

**प्रकाशः** – अयं चाकाशशब्दस्य ''तल्लिङ्गात्'' इत्यादौ रूढित्यागस्याश्रितत्वाद्वाक्यशेषगतबहुतरश्रुतिलिङ्गादिविरोधाद् गत्यन्तरसम्भवेऽगतिकस्य स्वेनैव स्वस्योपमेयत्वस्यायोगाच्च भूतपक्षस्तुच्छ इति जीव एव दहर इति पक्षान्तरमुक्तम् ।

ಮೊದಲನೆಯ ಪೂರ್ವಪಕ್ಷದಲ್ಲಿ ಸ್ವಾರಸ್ಯವಿಲ್ಲ. ಏಕೆಂದರೆ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಆಕಾಶಶಬ್ದದಿಂದ ರೂಢ್ಯರ್ಥವನ್ನು ವಿವಕ್ಷಿಸಬಾರದೆಂದು ನಿರಾಕರಿಸಿದ್ದಾಗಿದೆ. ಅಷ್ಟೇ ಅಲ್ಲದೆ ವಾಕ್ಯಶೇಷದಲ್ಲಿರುವ ಅನೇಕ ಶ್ರುತಿ ಹಾಗೂ ಲಿಂಗಗಳಿಂದ ವಿರೋಧವೂ ಕೂಡ ಬರುತ್ತದೆ. ಮತ್ತು ತನ್ನಿಂದಲೇ ತನಗೆ ಉಪಮಾನವನ್ನು ಕೊಡುವುದೂ ಕೂಡ ಅಯುಕ್ತವಾಗಿದೆ. ಏಕೆಂದರೆ - ಬೇರೆ ಗತಿಯಿಲ್ಲದಾಗಷ್ಟೇ ಹೀಗೆಲ್ಲಾ ಹೊಂದಿಸುವುದು ಅನಿವಾರ್ಯವಾಗುತ್ತಿತ್ತು. ಆದ್ದರಿಂದ ಭೂತಾಕಾಶವು ದಹರಾಕಾಶವಾಗಿದೆಯೆಂಬ ಪೂರ್ವಪಕ್ಷವು ಅತ್ಯಂತ ಹೇಯವಾಗಿದೆ. ಆದ್ದರಿಂದ ಜೀವನೇ ದಹರಾಕಾಶನಾಗಿದ್ದಾನೆಂದು ಎರಡನೆಯ ಪೂರ್ವಪಕ್ಷವನ್ನು ಸಮರ್ಥಿಸಿದ್ದಾರೆ.

**प्रकाशः** – तथा हि । जीवं प्रति देहस्य ब्रह्मपुरशब्दोक्तपुरत्वं युज्यते । जीवस्य परिच्छिन्नत्वेन ''ब्रह्मपुरे'' इति सप्तमीनिर्दिष्टाधारं प्रत्याधेयत्वसम्भवात् ।

ಅದು ಹೀಗೆ - ಜೀವನಿಗೆ ದೇಹವು ಪುರವಾಗುತ್ತದೆಂದು ಹೇಳಬಹುದು. ದೇಹದಿಂದ ಬೃಂಹಿತನಾದ ಕಾರಣ ಜೀವನನ್ನು ಬ್ರಹ್ಮನೆಂದು ಅಂತಹ ಜೀವನಿಗೆ ದೇಹವು ಆಧಾರವಾದ್ದರಿಂದ ಅದನ್ನು ಪುರವೆಂದು ಕರೆಯುವುದು ತಪ್ಪಾಗುವುದಿಲ್ಲ. ಜೀವನು ಪರಿಚ್ಛಿನ್ನನಾದ್ದರಿಂದ 'ಬ್ರಹ್ಮಪುರೇ' ಎಂಬುದಾಗಿ ಸಪ್ತಮೀ ವಿಭಕ್ತಿಯಿಂದ ನಿರ್ದಿಷ್ಟವಾದ ಆಧಾರಕ್ಕೆ ಜೀವನು ಆಧೇಯನಾಗಬಹುದು. ಜೀವನು ಆಧೇಯನಾದಾಗ ದೇಹವು ಆಧಾರವಾಗುತ್ತದೆಂದು ತಿಳಿಯಬೇಕು.

**प्रकाशः** – देहस्य जीवकर्मार्जितत्वेन तत्सम्बन्धविशेषसद्भावाज्जीवस्य ब्रह्मणः पुरमिति षष्ठ्युक्तसम्बन्धोपपत्तेः ।

ದೇಹವು ಜೀವನ ಕರ್ಮದಿಂದ ಸಂಪಾದಿಸಲ್ಪಟ್ಟಿದೆ. ಆದ್ದರಿಂದ ಜೀವನ ಸಂಬಂಧವಿಶೇಷವನ್ನೂ ದೇಹಕ್ಕೆ ಹೇಳಬಹುದು. ಆದ್ದರಿಂದಲೇ 'ಬ್ರಹ್ಮಣಃ ಪುರಮ್' ಎಂಬ ಸಂಬಂಧಾರ್ಥದಲ್ಲಿರುವ ಷಷ್ಠೀವಿಭಕ್ತಿಯೂ ಕೂಡ ಉಪಪನ್ನವಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – ब्रह्मणस्तु स्वमहिम्नि प्रतिष्ठितस्य तदाधेयत्वाभावात्तदार्जितकर्म-शून्यत्वाच्च देहस्य तदीयताव्यपदेशायोगात् ।

ಬ್ರಹ್ಮನಿಗೆ ದೇಹವು ಆಧಾರವಾಗಲು ಸಾಧ್ಯವಿಲ್ಲ. 'ಸ್ವಮಹಿಮ್ನಿ ಪ್ರತಿಷ್ಠಿತಃ' ಎಂಬಂತೆ ತನ್ನಲ್ಲೇ ತಾನು ಇರುತ್ತಾನೆ ಹೊರತು, ಮತ್ತೊಂದು ಕಡೆ ಇರಲು ಸಾಧ್ಯವಿಲ್ಲ. ಮತ್ತು ದೇಹದ ಸಂಪಾದನೆಗೆ ಬೇಕಾಗಿರುವಂತಹ ಕರ್ಮವೂ ಕೂಡ ಬ್ರಹ್ಮನಲ್ಲಿರುವುದಿಲ್ಲ. ಆದ್ದರಿಂದ ದೇಹವನ್ನು ಬ್ರಹ್ಮನ ಶರೀರವೆಂದು ವ್ಯವಹರಿಸುವುದು ತಪ್ಪಾಗುತ್ತದೆ.

**प्रकाशः** – 'ब्रह्मपुरे' इति ब्रह्मशब्दस्य देहबृंहणादिना जीवेऽप्युपपत्तेः । नीरूपत्वादिना सादृश्यनिमित्तेन गौणस्याकाशशब्दस्य जीवेऽप्युपपत्तेश्च ।

'ಬ್ರಹ್ಮಪುರೇ' ಎಂಬಲ್ಲಿರುವ ಬ್ರಹ್ಮಶಬ್ದವು ದೇಹದಿಂದ ಬೃಂಹಿತನಾದ ಕಾರಣ (ಕೂಡಿದ ಕಾರಣ) ಜೀವನಲ್ಲಿಯೂ ಕೂಡ ಉಪಪನ್ನವಾಗುತ್ತದೆ. ಆಕಾಶದಲ್ಲಿ ಯಾವುದೇ ರೂಪವು ಇರುವುದಿಲ್ಲ. ಅದರಂತೆ ಜೀವನಲ್ಲಿಯೂ ಕೂಡ ಯಾವುದೇ ರೂಪವಿಲ್ಲ. ಹೀಗೆ ರೂಪವಿಲ್ಲದಿರುವಿಕೆ ಎಂಬ ಸಾದೃಶ್ಯನಿಮಿತ್ತದಿಂದ ಆಕಾಶಶಬ್ದವನ್ನು ಜೀವನಲ್ಲಿಯೂ ಕೂಡ ಗೌಣವಾಗಿ ಕೂಡಿಸಬಹುದು.

**प्रकाशः** – नच राजपुरे स्वगृहे चैत्र इव जीवस्वामिके देहाख्यपुरे स्ववेश्मनि हृत्पुण्डरीक आकाशाख्यं ब्रह्म वर्ततामिति वाच्यम् ।

ರಾಜನ ಪಟ್ಟಣದಲ್ಲಿ ಒಂದು ಮನೆಯಿರುತ್ತದೆ. ಆ ಮನೆಯಲ್ಲಿ ಬೇರೆ ಯಾರೋ ಒಬ್ಬ ಚೈತ್ರನೆಂಬ ವ್ಯಕ್ತಿಯಿರುತ್ತದೆ. ರಾಜನ ಪಟ್ಟಣ ಎಂದ ಮಾತ್ರಕ್ಕೆ, ಎಲ್ಲಾ ಮನೆಗಳಲ್ಲೂ ಚೈತ್ರನೇ ಇರಬೇಕೆಂದೇನೂ ಇಲ್ಲ. ಅದರಂತೆ ಈ ದೇಹವು ಜೀವನ ಪಟ್ಟಣವೆಂದೇ ಆಗಲಿ. ಆದರೆ 'ಪುಂಡರೀಕ' ಎಂಬ ಮನೆಯಲ್ಲಿ ಆಕಾಶನೆಂಬ ಬ್ರಹ್ಮನಿದ್ದಾನೆಂದು ಹೇಳಬಹುದಲ್ಲವೇ?

**प्रकाशः** – "पुण्डरीकं वेश्म दहरोऽस्मिन्नन्तराकाशे" इत्यत्रास्मिन्निति निर्दिष्टा-धारत्वस्याधेयाकाङ्क्षायां ब्रह्मपुरशब्दसन्निधापितपुरस्वामिनो जीवस्यैवाधेयत्वेना-न्वयादिति ।

ಹೀಗೆ ಹೇಳಬಾರದು. 'ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶೇ' ಎಂಬಲ್ಲಿರುವ 'ಅಸ್ಮಿನ್' ಎಂಬ ಸಪ್ತಮೀ ವಿಭಕ್ತಿಯಿಂದ ಆಧಾರತ್ವವು ತಿಳಿಯುತ್ತಿದೆ. ಆಧಾರತ್ವವನ್ನು ಕೇಳಿದಾಗ ಆಧೇಯದ ಆಕಾಂಕ್ಷೆಯು ಸಹಜವಾಗಿ ಬರುತ್ತದೆ. ಆವಾಗ ಬ್ರಹ್ಮಪುರಶಬ್ದದಿಂದ ಬುದ್ಧಿಯಲ್ಲಿ ಸನ್ನಿಹಿತನಾದ ಪುರಸ್ವಾಮಿಯಾದ ಜೀವನೇ ಉಪಸ್ಥಿತನಾಗುತ್ತಾನೆ. ಹೀಗೆ ಉಪಸ್ಥಿತನಾದ ಜೀವನನ್ನೇ ಆಧೇಯನೆಂದು ಹೇಳುವುದು ಅತ್ಯಂತ ಸಂಗತವಾಗುತ್ತದೆ.

**प्रकाशः – तदुक्तं भामत्यां -**

आधेयत्वाद्विशेषाच्च पुरं जीवस्य युज्यते ।
देहो न ब्रह्मणो युक्तो हेतुद्वयवियोगतः ।। इति ।

एवं प्राप्ते

ಇದನ್ನೇ ಭಾಮತಿಯಲ್ಲಿ ಸಂಗ್ರಹಿಸಲಾಗಿದೆ -

ಆಧೇಯತ್ವಾದ್ವಿಶೇಷಾಚ್ಚ ಪುರಂ ಜೀವಸ್ಯ ಯುಜ್ಯತೇ।
ದೇಹೋ ನ ಬ್ರಹ್ಮಣೋ ಯುಕ್ತೋ ಹೇತುದ್ವಯವಿಯೋಗತಃ॥

ದೇಹದಲ್ಲಿ ಜೀವನು ಆಧೇಯನಾಗಿದ್ದಾನೆ. ಮತ್ತು ಕರ್ಮಾರ್ಜಿತತ್ವವೆಂಬ ಸಂಬಂಧ ವಿಶೇಷವು ಇರುತ್ತದೆ. ಆದ್ದರಿಂದ ದೇಹವೆಂಬ ಪಟ್ಟಣದಲ್ಲಿ ಜೀವನೇ ಇದ್ದಾನೆಂದು ಹೇಳುವುದು ಯುಕ್ತ. ಬ್ರಹ್ಮನಲ್ಲಿ ಆಧೇಯತ್ವವೂ ಇಲ್ಲ. ಕರ್ಮಾರ್ಜಿತತ್ವವೆಂಬ ಸಂಬಂಧವಿಶೇಷವೂ ಕೂಡ ಇರುವುದಿಲ್ಲ. ಇಂತಹ ಬ್ರಹ್ಮನನ್ನು ದೇಹದಲ್ಲಿದ್ದಾನೆಂದು ಹೇಳುವುದು ತಪ್ಪಾಗುತ್ತದೆ. ಇಷ್ಟು ಪೂರ್ವಪಕ್ಷ.

**प्रकाशः – ब्रह्मप्रातिपदिकार्थस्य विशेष्यस्य प्रधानतया तदनुसारेणाप्रधानषष्ठ्यर्थ-सम्बन्धस्य नेयत्वात्**

'ಬ್ರಹ್ಮಣಃ' ಎಂಬಲ್ಲಿ ಬ್ರಹ್ಮ ಎಂಬ ಪ್ರಾತಿಪದಿಕಾರ್ಥವಾದ ವಿಶೇಷ್ಯವು ಪ್ರಧಾನವಾಗಿದೆ. ವಿಭಕ್ತ್ಯರ್ಥ ಮತ್ತು ಪ್ರಾತಿಪದಿಕಾರ್ಥಗಳಲ್ಲಿ ಪ್ರಾತಿಪಾದಿಕಾರ್ಥವೇ ಶ್ರೇಷ್ಠವಾದ್ದರಿಂದ ಅದಕ್ಕನುಸಾರಿಯಾಗಿ 'ಬ್ರಹ್ಮಣಃ' ಎಂಬಲ್ಲಿರುವ ಷಷ್ಠ್ಯರ್ಥ ರೂಪವಾದ ಸಂಬಂಧವನ್ನು ಅನುಸರಿಸಬೇಕು. ಅಂದರೆ ಪ್ರಾತಿಪದಿಕಾರ್ಥನಾದ ಬ್ರಹ್ಮನನ್ನೇ ಪ್ರತಿಪಾದ್ಯನೆಂದು ವಿವಕ್ಷಿಸಿ, ಷಷ್ಠ್ಯರ್ಥವನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕು.

**प्रकाशः – ब्रह्मणो देह एवोपलब्ध्या तस्य देहेन सहोपलब्धिद्वारकसम्बन्ध-सम्भवादाधारपरसप्तम्या अपि प्रथमश्रुतब्रह्मशब्दानुसारेण ब्रह्मोपलब्ध्याधारपरत्वात्**

ಮತ್ತು ಬ್ರಹ್ಮನು ದೇಹದಲ್ಲಷ್ಟೇ ಉಪಲಬ್ಧನಾಗಬೇಕು. ಭೂತಲದಲ್ಲಿ ಘಟವು ಉಪಲಬ್ಧವಾಗುವಾಗ ಭೂತಲದ ಜೊತೆಗೆ ಹೇಗೆ ತೋರುತ್ತದೋ, ಅದರಂತೆ ದೇಹದಲ್ಲಿ ಬ್ರಹ್ಮನು ಉಪಲಬ್ದನಾಗುವಾಗ ದೇಹದ ಜೊತೆಗೆ ತೋರುತ್ತಾನೆ. ಹೀಗೆ ದೇಹಕ್ಕೂ ಬ್ರಹ್ಮನಿಗೂ ಸಂಬಂಧವಿದೆ. ಮತ್ತು 'ತಸ್ಮಿನ್' ಎಂಬ ಸಪ್ತಮೀ ವಿಭಕ್ತಿಯೂ ಕೂಡ 'ಆಧಾರ' ಎಂಬರ್ಥವನ್ನು ಹೇಳುತ್ತಿದೆ. ಇದಕ್ಕೆ ಪ್ರಥಮಶ್ರುತವಾದ ಬ್ರಹ್ಮಶಬ್ದವನ್ನು ಅನುಸರಿಸಿ, ಬ್ರಹ್ಮನ ಉಪಲಬ್ಧಿಗೆ ದೇಹವು ಆಧಾರವಾಗಿದೆಯೆಂದೇ ಅರ್ಥೈಸಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ब्रह्मपुरस्य जीवपुरत्वेऽपि वा राजपुरे चैत्र सद्मवज्जीवपुरे ब्रह्मसद्महृत्पुण्डरीकसम्भवात्

ಬ್ರಹ್ಮಪುರವು ಜೀವಪುರವೇ ಆಗಿರಬಹುದು. ಆದರೆ ರಾಜನ ಪಟ್ಟಣದಲ್ಲಿ ಚೈತ್ರನ ಮನೆಯಿರುವಂತೆ ಜೀವನ ಪಟ್ಟಣದಲ್ಲಿ ಬ್ರಹ್ಮನ ಮನೆಯಿರಬಹುದು. ಬ್ರಹ್ಮನ ಮನೆಯೆಂದರೆ ಪುಂಡರೀಕವೆಂದು ಹೇಳಿದರೆ ಏನೂ ತೊಂದರೆಯಿಲ್ಲ.

**प्रकाशः** –प्रागुक्त सन्निधानस्य चोत्तरवाक्यगतब्रह्मलिङ्गैर्बाधसम्भवाद्दहरो ब्रह्मेति सिद्धान्त इति ।

ಸನ್ನಿಹಿತನಾದ ಜೀವನನ್ನೇ ವಿವಕ್ಷಿಸುವುದು ಸೂಕ್ತವಲ್ಲವೇ? ಎಂಬ ಶಂಕೆಗೂ ಅವಕಾಶವಿಲ್ಲ. ಮುಂದಿನ ವಾಕ್ಯದಲ್ಲಿರುವ ಅನೇಕ ಬ್ರಹ್ಮನ ಲಿಂಗಗಳಿಂದ ಜೀವನು ಉಪಸ್ಥಿತನಾದರೂ ಸಹ ಬಾಧಿತನಾಗುತ್ತಾನೆ. ಹೀಗೆ ಅನೇಕ ಸಮಾಧಾನವನ್ನು ಹೇಳಬಹುದಾದ್ದರಿಂದ ದಹರ ಶಬ್ದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆಂದು ಸಿದ್ಧಾಂತ.

**प्रकाशः** – उक्तं च भामत्यां

उपलब्धेरधिष्ठानं ब्रह्मणो देह इष्यते ।
तेनासाधारणत्वेन देहो ब्रह्मपुरं भवेत् ।। इति ।

ಇದನ್ನೇ ಭಾಮತಿಯಲ್ಲಿ ಸಂಗ್ರಹಿಸಲಾಗಿದೆ -

ಉಪಲಬ್ಧೇರಧಿಷ್ಠಾನಂ ಬ್ರಹ್ಮಣೋ ದೇಹ ಇಷ್ಯತೇ।
ತೇನಾಸಾಧಾರಣತ್ವೇನ ದೇಹೋ ಬ್ರಹ್ಮಪುರಂ ಭವೇತ್ ॥

ಬ್ರಹ್ಮನ ಉಪಲಬ್ಧಿಗೆ ದೇಹವು ಅಧಿಷ್ಠಾನವಾಗಿದೆಯೆಂದು ಒಪ್ಪುತ್ತೇವೆ. ಹೀಗೆ ದೇಹಕ್ಕೂ ಬ್ರಹ್ಮನಿಗೂ ಅಸಾಧಾರಣವಾದ ಸಂಬಂಧವಿರುವ ಕಾರಣ ದೇಹವನ್ನು ಬ್ರಹ್ಮಪುರವೆಂದು ಕರೆಯಬಹುದು. ಇಷ್ಟು ಅದ್ವೈತಿಗಳ ಅಧಿಕರಣ ಶರೀರ.

**प्रकाशः** – केषाञ्चिद्दहराकाश एव पूर्ववत्संशये आकाशशब्दस्य भूते प्रसिद्धेः "तस्मिन्यदन्तस्तदन्वेष्टव्यम्" इत्यन्यस्यैवान्वेष्टव्यत्वोक्तेर्दहरस्य ब्रह्मत्वायोगाच्च भूताकाश इत्येकः पूर्वपक्षः ।

ರಾಮಾನುಜರ ಅಧಿಕರಣಶರೀರ ಹೀಗಿದೆ - ದಹರಾಕಾಶವು ಭೂತಾಕಾಶವೋ, ಜೀವನೋ, ಬ್ರಹ್ಮನೋ ಎಂದು ಸಂಶಯ. ಆಕಾಶ ಶಬ್ದವು ಭೂತಾಕಾಶದಲ್ಲೇ ಪ್ರಸಿದ್ಧವಾದ್ದರಿಂದ 'ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಎಂಬುದಾಗಿ ಬೇರೆ ವಸ್ತುವಿನ ಅನ್ವೇಷಣವನ್ನೇ ಹೇಳಿರುವುದರಿಂದ ದಹರಾಕಾಶವು ಬ್ರಹ್ಮನೆಂದಾಗುವುದಿಲ್ಲ. ಭೂತಾಕಾಶವೇ ದಹರಾಕಾಶವೆನ್ನಬೇಕೆಂದು ಮೊದಲನೆಯ ಪೂರ್ವಪಕ್ಷ.

**प्रकाशः** – सम्प्रसादवाक्ये जीवप्रतीतेस्तस्यैव चोत्तरत्रेन्द्रविरोचनयोर्हिरण्यगर्भ-संवादाख्यायिकायां ''य आत्माऽपहतपाप्मा'' इत्यादिनाऽपहतपाप्मत्वादिप्रतीतेश्च जीव इति द्वितीयः ।

ಸಂಪ್ರಸಾದ ವಾಕ್ಯದಲ್ಲಿ ಜೀವನ ಪ್ರತೀತಿಯಿರುವ ಕಾರಣ, ಅಂತಹ ಜೀವನ ಪ್ರತೀತಿ ಮುಂದಿನ ವಾಕ್ಯದಲ್ಲಿಬರುತ್ತಿದೆ ಎಂದರೆ ಮುಂದೆ ಇಂದ್ರವಿರೋಚನರಿಗೂ ಮತ್ತು ಬ್ರಹ್ಮದೇವರಿಗೂ ನಡೆಯುವ ಸಂವಾದದ ಪ್ರಕರಣದಲ್ಲಿ 'ಯ ಆತ್ಮಾಽಪಹತಪಾಪ್ಮಾ' ಇತ್ಯಾದಿ ವಾಕ್ಯಗಳು ಇರುತ್ತವೆ. ಈ ವಾಕ್ಯದಲ್ಲಿ ಇರುವ ಅಪಹತಪಾಪ್ಮತ್ವಾದಿ ಲಿಂಗಗಳು ಜೀವನಲ್ಲಿ ಮಾತ್ರ ಉಪಪನ್ನವಾಗುವುದರಿಂದ ಜೀವನೇ ದಹರಾಕಾಶನೆನಿಸುತ್ತಾನೆಂಬುದು ಎರಡನೆಯ ಪೂರ್ವಪಕ್ಷ.

**प्रकाशः** – एवं प्राप्ते ''किं तदत्र विद्यते'' इति प्रश्ने ''यावान्वा'' इत्यादिना ''एतत्सत्यं ब्रह्मपुरम्'' इत्यन्तेन दहरस्यातिमहत्त्वसर्वाश्रयत्वाद्युक्त्वा ''तस्मिन्कामास्समाहिताः'' इत्याकाशान्तर्वर्तिनः कामा अन्वेष्टव्या इति प्रतिपाद्य कोऽयं दहर इति निर्दिष्टः, के तदाश्रया अन्वेष्टव्या इत्यपेक्षायां ''एष आत्माऽपहतपाप्मा'' इत्यारभ्य ''सत्यसङ्कल्पः'' इत्यन्तेनाकाशशब्दनिर्दिष्टः परमात्मा, तदाश्रिता अन्वेष्टव्याः कामा अपहतपाप्मत्वादय इत्युक्त्वा ''तद्यदात्मानमनुविद्य'' इत्यादिना ''कामचारो भवति'' इत्यन्तेनान्वेष्टव्याधारतया प्रतिज्ञात आकाशः परमात्मा तद्विशेषणीभूता अन्वेष्टव्याः कामा अपहतपाप्मत्वादय इत्युपसंहाराच्च न भूताकाशो दहरः ।

ಹೀಗೆ ಪೂರ್ವಪಕ್ಷ ಬಂದಾಗ - ಸಿದ್ಧಾಂತ ಕ್ರಮ ಹೀಗಿದೆ - 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಯಾವಾನ್ವಾ' ಇತ್ಯಾದಿ ವಾಕ್ಯದಿಂದ ಪ್ರಾರಂಭಿಸಿ 'ಏತತ್ ಸತ್ಯಂ ಬ್ರಹ್ಮ ಪುರಮ್' ಎಂಬ ವಾಕ್ಯದ ತನಕ ದಹರಾಕಾಶಕ್ಕೆ ಅತಿಮಹತ್ತ್ವವನ್ನು ಹಾಗೂ ಸರ್ವಾಶ್ರಯತ್ವವನ್ನು ಹೇಳಿ ಮುಂದೆ, 'ತಸ್ಮಿನ್‌ಕಾಮಾ ಸಮಾಹಿತಾಃ' ಇತ್ಯಾದಿ ವಾಕ್ಯದಿಂದ ಆಕಾಶದಲ್ಲಿರುವಂತಹ ಕಾಮಾದಿಗಳನ್ನು ಅನ್ವೇಷಣೆ ಮಾಡಬೇಕೆಂದು ಹೇಳಲಾಗಿದೆ. ಅನಂತರ 'ದಹರಾಕಾಶ' ಎಂದರೆ ಯಾರು? ದಹರಾಕಾಶದಲ್ಲಿ ಯಾವ ಪದಾರ್ಥಗಳು ಆಶ್ರಿತವಾಗಿವೆ ? ಅಂತಹ ಯಾವ ಪದಾರ್ಥಗಳನ್ನು ಅನ್ವೇಷಣೆ ಮಾಡಬೇಕು? ಎಂಬುದಾಗಿ ಪುನಃ ಆಕಾಂಕ್ಷೆಯು ಪ್ರಾಪ್ತವಾದರೆ; 'ಯ ಏಷ ಆತ್ಮಾಽಪಹತಪಾಪ್ಮಾ' ಎಂಬಲ್ಲಿಂದ ಪ್ರಾರಂಭಿಸಿ 'ಸತ್ಯಸಂಕಲ್ಪಃ' ಎಂಬಲ್ಲಿಯ ತನಕ 'ಆಕಾಶ' ಶಬ್ದದಿಂದ ನಿರ್ದೇಶಿಸಲ್ಪಟ್ಟವನು ಪರಮಾತ್ಮನೇ ಆಗಿದ್ದಾನೆ. ಅವನಲ್ಲಿ ಅನ್ವೇಷಣೆ ಮಾಡಬೇಕಾದ ಕಾಮನೆಗಳೆಂದರೆ ಅಪಹತಪಾಪ್ಮತ್ವಾದಿ ಗುಣಗಳು ಎಂದು ಹೇಳಲಾಗಿದೆ. ಮುಂದೆ 'ತದ್ಯದಾತ್ಮಾನಮನುವಿದ್ಯ' ಎಂಬಲ್ಲಿಂದ ಆರಂಭಿಸಿ 'ಕಾಮಚಾರೋ ಭವತಿ' ಎಂಬಲ್ಲಿಯತನಕ ಅನ್ವೇಷಣಕ್ಕೆ ಆಧಾರನಾಗಿದ್ದಾನೆಂದು ಪ್ರತಿಜ್ಞೆ ಮಾಡಲ್ಪಟ್ಟ ಆಕಾಶನಾಮಕನಾದ ಪರಮಾತ್ಮನಲ್ಲಿಯೇ ವಿಶೇಷಣವನ್ನಾಗಿ ಅಪಹತಪಾಪ್ಮತ್ವಾದಿ ಗುಣಗಳನ್ನು ಹೇಳುತ್ತಾ ಉಪಸಂಹಾರ ಮಾಡಲಾಗಿದೆ. ಹೀಗೆ ಪರಮಾತ್ಮನೇ

ಮೊದಲಿಂದ ಕೊನೆಯ ತನಕ ಪ್ರಸಕ್ತನಾದ್ದರಿಂದ ಭೂತಾಕಾಶವನ್ನು ದಹರವೆಂದು ಹೇಳಬಾರದು. ಆದ್ದರಿಂದ ಮೊದಲನೆಯ ಪೂರ್ವಪಕ್ಷ ಸರಿಯಲ್ಲ.

**प्रकाशः** – नापि जीवः । प्रजापतिवाक्ये कर्मपरवशतया जाग्रदाद्यवस्थाभिस्तिरोहिता पहतपाप्मत्वादिगुणकस्य परमात्मोपसत्तिमतस्त त्प्रसादाविर्भूतगुणकस्य प्रत्यगात्मनः प्रतिपादितत्वेऽपि पूर्ववाक्येऽतिरोहितनिरुपाधिकापहतपाप्मत्वादिगुणकत्वेन जीवेऽसम्भाव्यमानजगद्विधारणसर्वचिदचिद्वस्तुनियमनाद्यनन्तगुणकत्वेन दहराकाशस्य प्रतिपन्नतया दहरो ब्रह्मेति सिद्धान्त इति ।

ಜೀವನೂ ಸಹ ದಹರ ಆಗುವುದಿಲ್ಲ. ಏಕೆಂದರೆ ಇಂದ್ರದೇವರು ಹಾಗೂ ವಿರೋಚನ ಇಬ್ಬರಿಗೂ ಉಪದೇಶಿಸುವ ಬ್ರಹ್ಮದೇವರ ವಾಕ್ಯದಲ್ಲಿಯೂ ಕೂಡ ಅಪಹತಪಾಪ್ಮತ್ವಾದಿ ಗುಣಗಳು ಹೇಳಲ್ಪಟ್ಟಿವೆ. ಅಲ್ಲಿ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಗುಣಗಳೆಲ್ಲವೂ ಜೀವನಲ್ಲಿರತಕ್ಕಂಥವು. ಜಾಗ್ರದಾದ್ಯವಸ್ಥೆಗಳಿಂದ ಅಪಹತಪಾಪ್ಮತ್ವಾದಿ ಗುಣಗಳು ಜೀವನಲ್ಲಿ ಸ್ವಾಭಾವಿಕವಾಗಿದ್ದರೂ ಕೂಡ ತಿರೋಹಿತವಾಗಿವೆ. ಜೀವನು ಯಾವಾಗ ಪರಮಾತ್ಮನನ್ನು ಉಪಸತ್ತಿ ಮಾಡುತ್ತಾನೋ, ಆವಾಗ ಪರಮಾತ್ಮನ ಪ್ರಸಾದದಿಂದ ಅವನಲ್ಲಿ ಅಪಹತಪಾಪ್ಮತ್ವಾದಿ ಗುಣಗಳೆಲ್ಲವೂ ಆವಿರ್ಭೂತವಾಗುತ್ತವೆ. ಹೀಗೆ ಪ್ರತ್ಯಗಾತ್ಮನೆನಿಸಿದ ಜೀವನೇ ಪ್ರಜಾಪತಿ ವಾಕ್ಯದಲ್ಲಿ ಪ್ರತಿಪಾದಿತನಾಗಿದ್ದಾನೆ. ಆದರೆ ದಹರಾಕಾಶದಲ್ಲಿರುವ ವಾಕ್ಯದಲ್ಲಿ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಗುಣಗಳು ಜೀವವಿಷಯಕವಲ್ಲ. ಏಕೆಂದರೆ ಅತಿರೋಹಿತವಾದ ಪರ-ಅನಪೇಕ್ಷಿತವಾದ ಅಪಹತಪಾಪ್ಮತ್ವಾದಿ ಗುಣಗಳೇ ಇಲ್ಲಿ ಪ್ರತಿಪಾದ್ಯವಾಗಿವೆ. ಆದ್ದರಿಂದ ಇಲ್ಲಿರುವ ಗುಣಗಳು ಬ್ರಹ್ಮನಲ್ಲಿ ಮಾತ್ರ ಬರುತ್ತವೆ. ಆದ್ದರಿಂದಲೇ ಬ್ರಹ್ಮನೇ ಇಲ್ಲಿ ಪ್ರತಿಪಾದ್ಯನಾಗುತ್ತಾನೆ. ಈ ವಾಕ್ಯದಲ್ಲಿರುವ ಜಗದ್ವಿಧಾರಣ, ಸರ್ವಚಿದಚಿದ್ವಸ್ತು ನಿಯಮನ, ಮುಂತಾದ ಈ ಯಾವ ಧರ್ಮವನ್ನೂ ಕೂಡ ಜೀವನಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅನಂತಗುಣಕತ್ವೇನ ಪ್ರತಿಪನ್ನನಾದ ಬ್ರಹ್ಮನೇ ದಹರಾಕಾಶನಾಗಿದ್ದಾನೆಂದು ಸಿದ್ಧಾಂತ.

**प्रकाशः** – अत्रावान्तरवैलक्षण्यमल्पं विहाय दूष्यांशमात्रं साधारण्येनानुवदति – **दहरेति** ।।

ಹೀಗೆ ಅದ್ವೈತಭಾಷ್ಯದಲ್ಲಿ ಮತ್ತು ರಾಮಾನುಜಭಾಷ್ಯದಲ್ಲಿ ಅಧಿಕರಣಶರೀರಗಳನ್ನು ನಿರೂಪಣೆ ಮಾಡಲಾಗಿದೆ. ಇವರಿಬ್ಬರ ಅಧಿಕರಣ ಶರೀರದಲ್ಲಿ ಸ್ವಲ್ಪಮಾತ್ರ ಅವಾಂತರವೈಲಕ್ಷಣ್ಯವಿದೆ. ಅಂತಹ ವೈಲಕ್ಷಣ್ಯವನ್ನು ಪರಿಗಣಿಸದೇ, ದೂಷಿಸಬೇಕಾದ ಅಂಶವನ್ನು ಮಾತ್ರ ಉಭಯಮತಸಾಧಾರಣವಾಗಿ ಅನುವಾದ ಮಾಡುತ್ತಿದ್ದಾರೆ 'ದಹರ' ಇತ್ಯಾದಿ ಗ್ರಂಥದಿಂದ.

**प्रकाशः** – यदवादि भामत्यां भूतपक्षस्तुच्छ इति तदयुक्तम् । 'तल्लिङ्गात्' इत्यत्र निरवकाशब्रह्मलिङ्गेन रूढित्यागेऽपि इह प्रागुक्तनिरवकाशसुषिरश्रुतिरूपसमाख्याविरोधेन वाक्यशेषस्थापहतपाप्मत्वादिधर्माणां पूर्वं चन्द्रिकोक्तदिशा भूताकाशे

सावकाशत्वेन वैषम्यात् ।

ಭಾಮತಿಯಲ್ಲಿ ಭೂತಾಕಾಶವೇ ದಹರ ಶಬ್ದ ಪ್ರತಿಪಾದ್ಯವಾಗಿದೆಯೆಂಬ ಪೂರ್ವಪಕ್ಷವನ್ನು ಮಾಡಲು ಬರುವುದೇ ಇಲ್ಲವೆಂದು ನಿರಾಕರಿಸಲಾಗಿದೆ. ಇದು ತಪ್ಪು. ಏಕೆಂದರೆ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ನಿರವಕಾಶವೆಂಬ ಬ್ರಹ್ಮಲಿಂಗವಿದ್ದಾಗ ರೂಢಿಯನ್ನು ಪರಿತ್ಯಾಗ ಮಾಡಬೇಕೆಂದಷ್ಟೇ ಹೇಳಿರುತ್ತಾರೆ. ಆದರೆ ಪ್ರಕೃತ ಹಿಂದೆ ಹೇಳಿದಂತೆ ನಿರವಕಾಶವಾದ ಸುಷಿರಶ್ರುತಿ ಎಂಬ ಸಮಾಖ್ಯಾವಿರೋಧವಿರುವ ಪ್ರಯುಕ್ತ ವ್ಯಾಕ್ಯಶೇಷದಲ್ಲಿ ಅಪಹತಪಾಪ್ಮತ್ವಾದಿ ಧರ್ಮಗಳನ್ನು ಚಂದ್ರಿಕಾದಲ್ಲಿ ಹೇಳಿದಂತೆ ಭೂತಾಕಾಶದಲ್ಲಿಯೂ ಸಾವಕಾಶ ಮಾಡಬಹುದು. ಹೀಗೆ 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿರುವ 'ಆಕಾಶ' ಶಬ್ದಕ್ಕೂ ಇಲ್ಲಿರುವ 'ಆಕಾಶ' ಶಬ್ದಕ್ಕೂ ಬಹಳ ವೈಲಕ್ಷಣ್ಯವಿರುವುದರಿಂದ ಭೂತಾಕಾಶಪರವೆಂದು ಇಲ್ಲಿ ಪೂರ್ವಪಕ್ಷ ಮಾಡಬಹುದು.

**प्रकाशः** – बाह्याभ्यन्तरत्वोपाधिनाऽऽकाशभेदेनोपमानसम्भवाच्च । आकाशशब्दस्य जीवेऽस्वारस्याच्च ।

ಮತ್ತು ಒಂದೇ ಆಕಾಶಕ್ಕೆ ಉಪಮಾನ-ಉಪಮೇಯಭಾವವೇ ಕೂಡುವುದಿಲ್ಲವೆಂದು ಭಾಮತಿಯಲ್ಲಿ ಹೇಳಲಾಗಿತ್ತು. ಇದೂ ಸಹ ತಪ್ಪು. ಒಂದೇ ಆಕಾಶದಲ್ಲಿ ಔಪಾಧಿಕ ಭೇದವನ್ನು ಹೇಳಬಹುದು. 'ಬಾಹ್ಯ' ಮತ್ತು 'ಆಭ್ಯಂತರ' ಎಂಬೆರಡು ಉಪಾಧಿಗಳಿಂದ ಆಭ್ಯಂತರಾಕಾಶಕ್ಕೆ ಬಾಹ್ಯಾಕಾಶದ ಉಪಮಾನವನ್ನು ನೀಡಿದರೆ ಏನೂ ತಪ್ಪಿಲ್ಲ. ಮತ್ತು ಆಕಾಶಶಬ್ದದ ಪ್ರಯೋಗ ಜೀವನಲ್ಲಿರುವುದು ಎಲ್ಲಿಯೂ ಕಂಡಿಲ್ಲವಾದ್ದರಿಂದ, ನಿಮ್ಮ ಪಕ್ಷದಲ್ಲಿಯೇ ಅಸ್ವಾರಸ್ಯವಿದೆ ಹೊರತು, ಭೂತಾಕಾಶಪಕ್ಷದಲ್ಲಿ ಅಸ್ವಾರಸ್ಯವು ಕಾಣಿಸುವುದಿಲ್ಲ.

**प्रकाशः** – यदपि मतद्वयेऽप्याकाशस्य जीवत्वेन पूर्वपक्षान्तरकरणं तदप्यसाधु । भूते रूढस्याकाशशब्दस्य जीवेऽस्वारस्यात् ।

ಮತ್ತು ಇಬ್ಬರೂ ಕೂಡ ಆಕಾಶವನ್ನೇ ಜೀವವೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ. ನಾವು ಹೃದಯಾಕಾಶದಲ್ಲಿ ಜೀವನಿದ್ದಾನೆಂದು ಪೂರ್ವಪಕ್ಷ ಮಾಡಿದ್ದೆವು. ಆದರೆ ಇವರಿಬ್ಬರು ಆಕಾಶವನ್ನೇ ಜೀವನೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ. ಭೂತಾಕಾಶದಲ್ಲಿ ರೂಢವಾದ ಆಕಾಶಶಬ್ದವನ್ನು ಹೀಗೆ ಜೀವನಲ್ಲಿ ಹೇಳುವುದು ಅಸ್ವರಸವಾಗುತ್ತದೆ.

**प्रकाशः** – सम्प्रसादवाक्यादावुत्तरत्रापहतपाप्मत्वादिना जीवप्रतीत्यादिना पूर्ववाक्ये तस्य ग्राह्यत्वेऽपि आकाशान्तर्वर्तित्वेनापि जीवग्रहणसम्भवे दहराकाशत्वेनैव तस्य ग्रहणे प्रमाणाभावात् ।

ಸಂಪ್ರಸಾದ ವಾಕ್ಯಗಳಲ್ಲಿ ಅಪಹತಪಾಪ್ಮತ್ವಾದಿ ಲಿಂಗಗಳಿಂದ ಜೀವನೇ ಪ್ರತೀತನಾಗುತ್ತಿದ್ದಾನೆ. ಆದ್ದರಿಂದ ಅದಕ್ಕನುಸಾರಿಯಾಗಿ ಹಿಂದಿನ ವಾಕ್ಯದಲ್ಲಿಯೂ ಜೀವನನ್ನೇ ಸ್ವೀಕರಿಸಬೇಕು. ಆದರೆ ಹೃದಯಾಕಾಶದಲ್ಲಿ

ಜೀವನಿದ್ದಾನೆಂದು ಪೂರ್ವಪಕ್ಷ ಮಾಡಿದಾಗಲೂ ಆ ಅಪಹತಪಾಪ್ಮತ್ವಾದಿಗಳನ್ನು ಜೀವನಲ್ಲಿ ಕೂಡಿಸಲು ಬರುತ್ತದೆ. ಹೀಗಿರುವಾಗ ಜೀವನು ದಹರಾಕಾಶಸ್ವರೂಪನಾಗಿದ್ದಾನೆಂಬ ಪೂರ್ವಪಕ್ಷವನ್ನೇ ಮಾಡಬೇಕೆನ್ನಲು ಪ್ರಮಾಣವಿಲ್ಲ.

**प्रकाशः** – य एष आत्मेत्याद्युत्तरवाक्ये दहराकाशस्थस्यैव परामर्शसम्भवेन दहरस्य परामर्शे प्रमाणाभावाच्चेत्यादिपूर्वपक्षदोषस्य स्फुटत्वात्तमुपेक्ष्य सिद्धान्तांशमात्रं मतद्वयेऽपि दूषयति – **दहराकाशस्येति** ।।

'ಯ ಏಷ ಆತ್ಮಾ' ಇತ್ಯಾದಿಯಾದ ಮುಂದಿನ ವಾಕ್ಯದಲ್ಲಿ ದಹರಾಕಾಶದಲ್ಲಿರುವ ಜೀವನನ್ನೇ ಪರಾಮರ್ಶಿಸಲು ಬರುವಾಗ ದಹರಾಕಾಶವನ್ನೇ ಪರಾಮರ್ಶಿಸಬೇಕೆನ್ನಲು ಪ್ರಮಾಣವಿರುವುದಿಲ್ಲ. ಹೀಗೆ ಶಂಕರ-ರಾಮಾನುಜರು ಮಾಡಿದ ಪೂರ್ವಪಕ್ಷಗಳಲ್ಲಿ ಅನೇಕ ದೋಷಗಳಿವೆ. ಆದರೆ ಪೂರ್ವಪಕ್ಷ ದೋಷಗಳು ಅತ್ಯಂತ ಸ್ಪಷ್ಟವಾಗಿರುವುದರಿಂದ ಇದನ್ನು ಉಲ್ಲೇಖ ಮಾಡದೇ ಇಬ್ಬರು ಸಾಧಿಸಿದ ಸಿದ್ಧಾಂತದ ಅಂಶದಲ್ಲಿರುವ ದೋಷಗಳನ್ನಷ್ಟೇ ತೋರಿಸುತ್ತಿದ್ದಾರೆ 'ದಹರಾಕಾಶಸ್ಯ' ಇತ್ಯಾದಿ ಗ್ರಂಥದಿಂದ.




ಅದ್ವೈತಿಭಾಷ್ಯದ ಅಧಿಕರಣ ಶರೀರ - 'ಅಥ ಯದಿದಮಸ್ಮಿನ್ ಬ್ರಹ್ಮಪುರೇ' 'ದಹರಂ ಪುಂಡರೀಕಮ್' 'ದಹರೋಽಸ್ಮಿನ್ನಂತರಾಕಾಶಃ' ಎಂಬ ಛಾಂದೋಗ್ಯೋಪನಿಷತ್ತಿನ ಎಂಟನೆಯ ಅಧ್ಯಾಯದ ಪ್ರಥಮಖಂಡದ ಮಂತ್ರಗಳು ಇಲ್ಲಿನ ವಿಷಯವಾಕ್ಯ.

ಇಲ್ಲಿರುವ ದಹರಾಕಾಶಪದವು ಭೂತಾಕಾಶ ಪ್ರತಿಪಾದಕವೋ, ಜೀವಪ್ರತಿಪಾದಕವೋ, ಬ್ರಹ್ಮಪ್ರತಿಪಾದಕವೋ? ಎಂದು ಸಂಶಯ.

ಪೂರ್ವಪಕ್ಷ - ಹೃತ್ಪುಂಡರೀಕಾವಚ್ಛಿನ್ನವಾದ ಆಕಾಶಕ್ಕೆ ಬಾಹ್ಯಾಕಾಶದ ಉಪಮಾನವನ್ನು ನೀಡಿದ್ದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯತ್ವವನ್ನು ಹೇಳಿದ್ದರಿಂದ ಭೂತಾಕಾಶವೇ ದಹರಾಕಾಶವೆಂದು ಪ್ರಥಮ ಪೂರ್ವಪಕ್ಷ.

ಭಾಮತಿಯಲ್ಲಿ ಈ ಪೂರ್ವಪಕ್ಷವನ್ನು ನಿರಾಕರಿಸಿ, ಜೀವವೇ ದಹರಾಕಾಶವೆಂಬ ಎರಡನೆಯ ಪೂರ್ವಪಕ್ಷವನ್ನು ಸಮರ್ಥಿಸಲಾಗಿದೆ. ದೇಹದಿಂದ ಕೂಡಿರುವ ಕಾರಣ, ಜೀವನು ಬ್ರಹ್ಮನೆನಿಸುತ್ತಾನೆ. ಅವನ 'ಪುರ' ಎಂದರೆ, ದೇಹವೇ ಆಗುತ್ತದೆ. ಇಂತಹ ದೇಹದಲ್ಲಿ ಇರುವವನು ಜೀವನೆಂದು ಹೇಳಬೇಕು. ಆಕಾಶದಲ್ಲಿ ಹೇಗೆ ರೂಪಾದಿಗಳಿಲ್ಲವೋ, ಅದರಂತೆ ಜೀವನಲ್ಲಿಯೂ ಕೂಡ ರೂಪಾದಿಗಳಿಲ್ಲದ ಕಾರಣ 'ಆಕಾಶ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಜೀವನ ಕರ್ಮದಿಂದ ಶರೀರವು ನಿರ್ಮಿತವಾದ ಕಾರಣ, ದೇಹವು ಬ್ರಹ್ಮಪುರವೆನಿಸಿದೆ. ಶರೀರಕ್ಕೆ ಒಡೆಯನಾದ್ದರಿಂದ, ರಾಜನು ಪಟ್ಟಣದಲ್ಲಿದ್ದಂತೆ ಜೀವನು ಈ ಶರೀರದ ಹೃದಯಭಾಗದಲ್ಲಿರುತ್ತಾನೆ. ಆದ್ದರಿಂದ ಹೃತ್ಪದ್ಮಸ್ಥನಾದವನು ಜೀವನೇ ಆಗಿದ್ದಾನೆ.

ಸಿದ್ಧಾಂತ - ಬ್ರಹ್ಮ'ಎಂಬ ಪ್ರಾತಿಪದಿಕಾರ್ಥವೇ ಮುಖ್ಯವಾದ್ದರಿಂದ ಅದಕ್ಕನುಸಾರಿಯಾಗಿ ಷಷ್ಠ್ಯರ್ಥವನ್ನು ಅರ್ಥೈಸಬೇಕು. 'ಬ್ರಹ್ಮಣಃ ಪುರಮ್' ಎಂದು ಹೇಳಿದಾಗ ನಮಗೆ 'ಬ್ರಹ್ಮನ ಪಟ್ಟಣ' ಎಂಬರ್ಥವೇ ಉಪಸ್ಥಿತವಾಗುತ್ತದೆ ಹೊರತು; ಜೀವನ ಉಪಸ್ಥಿತಿಯು ಬರುವುದಿಲ್ಲ. ಆದ್ದರಿಂದ ರಾಜನ ಪಟ್ಟಣದಲ್ಲಿ ಚೈತ್ರನು ವಾಸ ಮಾಡುವಂತೆ ಜೀವನ ದೇಹವೆಂಬ ಪಟ್ಟಣದಲ್ಲಿ ಬ್ರಹ್ಮನು ವಾಸಿಸುತ್ತಾನೆಂದು ಹೇಳಬೇಕು. ಮತ್ತು ಬಾಹ್ಯಾಕಾಶವು ಎಷ್ಟು ವಿಶಾಲವಾಗಿದೆಯೋ ಅಷ್ಟೇ ಬ್ರಹ್ಮನೂ ಕೂಡ ಅಪರಿಮಿತನಾಗಿದ್ದಾನೆ. ಪರಿಮಿತನಾದ ಜೀವನಲ್ಲಿ ಈ ದೃಷ್ಟಾಂತವು ಉಪಪನ್ನವಾಗುವುದಿಲ್ಲ. ಅಪಹತಪಾಪ್ಮತ್ವಾದಿ ಗುಣಗಳೂ ಕೂಡ ಬ್ರಹ್ಮನಲ್ಲಿಯೇ ಯುಕ್ತವಾಗುತ್ತದೆ. ಆದ್ದರಿಂದ ಬ್ರಹ್ಮನೇ ಹೃತ್ಪದ್ಮಸ್ಥಿತನಾಗಿದ್ದಾನೆ.

ಸೂತ್ರದಲ್ಲಿ 'ದಹರೇ' ಎಂದು ಪದವಿಭಾಗ ಮಾಡಬೇಕು. 'ದಹರಃ' ಎಂದು ಪದವಿಭಾಗ ಮಾಡಬಾರದು. ಆದ್ದರಿಂದ ದಹರಾಕಾಶನೇ ಬ್ರಹ್ಮನಾಗಿದ್ದಾನೆಂದು ಸೂತ್ರದ ಅರ್ಥ.

ರಾಮಾನುಜ ಭಾಷ್ಯದ ಅಧಿಕರಣ ಶರೀರ - 'ತಸ್ಮಿನ್ಯದಂತಃ ತದನ್ವೇಷ್ಟವ್ಯಮ್' ಎಂಬುದೇ ವಿಷಯವಾಕ್ಯ. ಭೂತಾಕಾಶವು ಹೃತ್ಪದ್ಮಸ್ಥಿತವಾಗಿದೆಯೆಂಬುದು ಮೊದಲನೆಯ ಪೂರ್ವಪಕ್ಷ. ದಹರಾಕಾಶಕ್ಕೆ ಬ್ರಹ್ಮತ್ವವನ್ನು ಹೇಳಲು ಸಾಧ್ಯವಿಲ್ಲವಾದ್ದರಿಂದ ಭೂತಾಕಾಶವನ್ನೇ ಹೃದಯಸ್ಥಿತವೆಂದು ಹೇಳಬೇಕು. ಅಥವಾ ಸಂಪ್ರಸಾದ ವಾಕ್ಯದಲ್ಲಿ ಜೀವನು ಪ್ರತಿಪಾದ್ಯನಾದ್ದರಿಂದ ಅಪಹತ್ಮಪಾಪ್ಮತ್ವಾದಿ ಗುಣಗಳೂ ಕೂಡ ಶ್ರುತವಾದ್ದರಿಂದ ಜೀವನೇ ಹೃತ್ಪದ್ಮಸ್ಥಿತನೆಂಬುದು ಎರಡನೆಯ ಪೂರ್ವಪಕ್ಷ.

ಸಿದ್ಧಾಂತ - 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಯಾವಾನ್ವಾ' ಎಂಬ ವಾಕ್ಯದಿಂದ ಪ್ರಾರಂಭಮಾಡಿ 'ಏತತ್ ಸತ್ಯಂ ಬ್ರಹ್ಮಪುರಮ್' ಎಂಬಲ್ಲಿಯ ತನಕ ದಹರಾಕಾಶವನ್ನು ಅತಿಮಹತ್ತ್ವಪೂರ್ಣವಾಗಿ ಸರ್ವಕ್ಕೂ ಆಶ್ರಯವಾಗಿದೆ ಎಂದು ವಿವರಣೆ ಮಾಡಿದ್ದರಿಂದ ಪರಮಾತ್ಮನೇ ಹೃದಯಪದ್ಮಸ್ಥಿತನಾಗಿದ್ದಾನೆ. ಅಪಹತಪಾಪ್ಮತ್ವ, ಸತ್ಯಸಂಕಲ್ಪತ್ವಾದಿ ಗುಣಗಳೆಲ್ಲವೂ ಪರಮಾತ್ಮನ ಅಸಾಧಾರಣಧರ್ಮವಾಗಿರುವುದರಿಂದ ಅವನನ್ನೇ ದಹರಾಕಾಶನೆನ್ನಬೇಕು. ಹೀಗೆ ಇವರೂ ಕೂಡ ದಹರಾಕಾಶವನ್ನೇ ಬ್ರಹ್ಮನೆಂದು ಸಿದ್ಧಾಂತ ಮಾಡಿದ್ದಾರೆ.

ಇವರಿಬ್ಬರ ಅಧಿಕರಣ ಶರೀರವೂ ಸರಿಯಲ್ಲ. ಏಕೆಂದರೆ ದಹರಾಕಾಶದಲ್ಲಿ ಬ್ರಹ್ಮನಿದ್ದಾನೆಂದು ಸೂತ್ರದ ಅಭಿಪ್ರಾಯ. ಆದ್ದರಿಂದ 'ದಹರೇ ಉತ್ತರೇಭ್ಯಃ' ಎಂದೇ ಸೂತ್ರವನ್ನು ಓದಬೇಕು. 'ದಹರಃ ಉತ್ತರೇಭ್ಯಃ' ಎಂದು ಓದಬಾರದು. ಆದರೆ ಇವರಿಬ್ಬರು ದಹರಾಕಾಶನನ್ನೇ ಬ್ರಹ್ಮನೆಂದು ಸಿದ್ಧಾಂತ ಮಾಡಿದ್ದಾರೆ. 'ದಹರಂ ಪುಂಡರೀಕವಮ್' 'ದಹರೋಽಸ್ಮಿನ್ನಂತರಾಕಾಶಃ' 'ತಸ್ಮಿನ್ಯದಂತಃ ತದುಪಾಸಿತವ್ಯಮ್' ಎಂಬುದಾಗಿ ಸ್ಪಷ್ಟವಾಗಿ ಉಪನಿಷತ್ತು ಹೃದಯಕಮಲವನ್ನು ಉಲ್ಲೇಖ ಮಾಡಿ ಅದರಲ್ಲಿ ಆಕಾಶವಿದೆ. ಅದರಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ಹೇಳುತ್ತಿದೆ. ಹೀಗಿರುವಾಗ ಹೃದಯಪದ್ಮದಲ್ಲಿರುವ ದಹರಾಕಾಶವನ್ನೇ ಬ್ರಹ್ಮನೆಂದು ವ್ಯಾಖ್ಯಾನ ಮಾಡುವುದು ತಪ್ಪಾಗುತ್ತದೆ.

///////////////////////////////////////////////////

● ● ● ● ●

ಪರಿಪೂರ್ಣಚಂದ್ರಿಕಾ

## तात्पर्यचन्द्रिका

अत्रोक्तं परैः तस्मिन्यदन्तरिति तच्छब्देन हृत्पुण्डरीकमेव परामृश्य तदन्तर्गतदहरस्यैव अन्वेष्टव्यत्वादि उच्यते ।[१]

(१) शाङ्करभाष्यम् -

दहर उत्तरेभ्यः ॥ १४ ॥

**दहरः को वियज्जीवो ब्रह्म वाऽऽकाशशब्दतः ।**
**वियत् स्यादथवाल्पत्वश्रुतेर्जीवो भविष्यति ॥**
**बाह्याकाशोपमानेन द्युभूम्यादिसमाहितेः ।**
**आत्मापहृतपाप्मत्वात् सेतुत्वाच्च परेश्वरः ॥**

'अथ यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तराकाशस्तस्मिन् यदन्तस्तदन्वेष्टव्यं तद्वाव विजिज्ञासितव्यम् ।' इत्यादिवाक्यं समाम्नायते । तत्र योऽयं दहरे हृदयपुण्डरीके दहर आकाशः श्रुतः स किं भूताकाशोऽथवा विज्ञानात्माऽथवा परमात्मेति संशय्यते । कुतः संशयः? आकाशब्रह्मपुरशब्दाभ्याम् । आकाशशब्दो ह्ययं भूताकाशे परस्मिंश्च प्रयुज्यमानो दृश्यते । तत्र किं भूताकाश एव दहरः स्यात्? किंवा परः? इति संशयः । तथा ब्रह्मपुरमिति किं जीवोऽत्र ब्रह्मनामा तस्येदं पुरं शरीरं ब्रह्मपुरमथवा परस्यैव ब्रह्मणः पुरं ब्रह्मपुरमिति । तत्र जीवस्य परस्य वाऽन्यतरस्य पुरस्वामिनो दहराकाशत्वे संशयः । तत्राकाशशब्दस्य भूताकाशे रूढत्वाद्भूताकाश एव दहरशब्द इति प्राप्तम् । तस्य च दहरायतनापेक्षया दहरत्वम् । 'यावान् वा अयमाकाशस्तावानेषोऽन्तर्हृदय आकाशः' इति च बाह्याभ्यन्तरभावकृतभेदस्योपमानोपमेयभावः द्यावापृथिव्यादि च तस्मिन्नन्तः समाहितम्, अवकाशात्मनाकाशस्यैकत्वात् । अथवा जीवो दहर इति प्राप्तम्, ब्रह्मपुरशब्दात् । जीवस्य हीदं पुरं सच्छरीरं ब्रह्मपुरमित्युच्यते । तस्य स्वकर्मणोपार्जितत्वात् । भक्त्या च तस्य ब्रह्मशब्दवाच्यत्वम् । नहि परस्य ब्रह्मणः शरीरेण स्वस्वामिभावः सम्बन्धोऽस्ति । तत्र पुरस्वामिनः पुरैकदेशेऽवस्थानं दृष्टं यथा राज्ञः । मनउपाधिकश्च जीवः, मनश्च प्रायेण हृदये प्रतिष्ठितमित्यतो जीवस्यैवेदं हृदयेऽन्तरवस्थानं स्यात् । दहरत्वमपि तस्यैव आराग्रोपमितत्वादवकल्पते । आकाशोपमितत्वादि च ब्रह्माभेदविवक्षया भविष्यति । नचात्र दहरस्याकाशस्यान्वेष्यत्वं विजिज्ञासितव्यत्वं च

श्रूयते । 'तस्मिन् यदन्तः' इति परविशेषणत्वेनोपादानादिति । अत उत्तरं ब्रूमः–
परमेश्वर एवात्र दहराकाशो भवितुमर्हति न भूताकाशो जीवो वा । कस्मात्? उत्तरेभ्यो वाक्यशेषगतेभ्यो हेतुभ्यः । तथाहि – अन्वेष्टव्यतयाभिहितस्य दहरस्याकाशस्य 'तं चेद् ब्रूयुः' इत्युपक्रम्य 'किं तदत्र विद्यते यदन्वेष्टव्यं यद्वाव विजिज्ञासितव्यम्' इत्येवमाक्षेपपूर्वकं प्रतिसमाधानवचनं भवति । 'स ब्रूयाद् यावान्वा अयमाकाशस्तावानेषोऽन्तर्हृदय आकाश उभे अस्मिन् द्यावापृथिवी अन्तरेव समाहिते' इत्यादि । तत्र पुण्डरीकदहरत्वेन प्राप्तदहरत्वस्याकाशस्य प्रसिद्धाकाशौपम्येन दहरत्वं निवर्तयन् भूताकाशत्वं दहरस्याकाशस्य निवर्तयतीति गम्यते । यद्यप्याकाशशब्दो भूताकाशे रूढस्तथापि तेनैव तस्योपमा नोपपद्यत इति भूताकाशशङ्का निवर्तिता भवति ।
नन्वेकस्याप्याकाशस्य बाह्याभ्यन्तरत्वकल्पितेन भेदेनोपमानोपमेयभावः सम्भवतीत्युक्तम् । नैवं सम्भवति । अगतिका हीयं गतिः, यत्काल्पनिकभेदाश्रयणम् । अपिच कल्पयित्वापि भेदमुपमानोपमेयभावं वर्णयतः परिच्छिन्नत्वादभ्यन्तराकाशस्य न बाह्याकाशपरिमाणत्वमुपपद्येत । ननु परमेश्वरस्यापि 'ज्यायानाकाशाद्' इति श्रुत्यन्तरान्नैवाकाशपरिमाणत्वमुपपद्यते । नैष दोषः । पुण्डरीकवेष्टनप्राप्तदहरत्वनिवृत्तिपरत्वाद् वाक्यस्य न तावत्त्वप्रतिपादनपरत्वम् । उभयप्रतिपादने हि वाक्यं भिद्येत । नच कल्पितभेदे पुण्डरीकवेष्टित आकाशैकदेशे द्यावापृथिव्यादीनामन्तः समाधानमुपपद्यते । 'एष आत्माऽपहतपाप्मा विजरो विमृत्युर्विशोको विजिघत्सोऽपिपासः सत्यकामः सत्यसङ्कल्पः' इति चात्मत्वापहतपाप्मत्वादयश्च गुणा न भूताकाशे सम्भवन्ति । यद्यप्यात्मशब्दो जीवे सम्भवति तथापीतरेभ्यः कारणेभ्यो जीवाशङ्काऽपि निवर्तिता भवति । नह्युपाधिपरिच्छिन्नस याराग्रोपमितस्य जीवस्य पुण्डरीकवेष्टनकृतं दहरत्वं शक्यं निवर्तयितुम् । ब्रह्माभेदविवक्षया जीवस्य सर्वगतत्वादि विवक्ष्येतेति चेत् । यदात्मतया जीवस्य सर्वगतत्वादि विवक्ष्येत, तस्यैव ब्रह्मणः साक्षात् सर्वगतत्वादि विवक्ष्यतामिति युक्तम् ।
यदप्युक्तं ब्रह्मपुरमिति जीवेन पुरस्योपलक्षितत्वाद् राज्ञ इव जीवस्यैवेदं पुरस्वामिनः पुरैकदेशवर्तित्वमस्त्विति । अत्र ब्रूमः – परस्यैवेदं ब्रह्मणः पुरं सच्छरीरं ब्रह्मपुरमित्युच्यते, ब्रह्मशब्दस्य तस्मिन्मुख्यत्वात् । तस्याप्यस्ति पुरेणानेन सम्बन्धः, उपलब्ध्यधिष्ठानत्वात् । 'स एतस्माज्जीवघनात् परात्परं पुरिशयं पुरुषमीक्षते' 'स वा अयं पुरुषः सर्वासु पूर्षु पुरिशयः' इत्यादिश्रुतिभ्यः । अथवा जीवपुर एवास्मिन् ब्रह्म सन्निहितमुपलक्ष्यते । यथा शालग्रामे विष्णुः सन्निहित इति तद्वत् । 'तद् यथेह कर्मचितो लोकः क्षीयते एवमेवामुत्र पुण्यचितो लोकः क्षीयते' इतिच कर्मणामन्तवत्फलत्वमुक्त्वा 'अथ य इहात्मानमनुविद्य व्रजन्त्येतांश्च सत्यान्कामांस्तेषां सर्वेषु लोकेषु कामचारो भवति' इति

प्रकृतदहराकाशविज्ञानस्यानन्तफलत्वं वदन् परमात्मत्वमस्य सूचयति ।
यदप्येतदुक्तम्, न दहरस्याकाशस्यान्वेष्टव्यत्वं विजिज्ञासितव्यत्वं च श्रुतम्, परविशेषणत्वेनोपादानादिति । अत्र ब्रूमः – यद्याकाशो नान्वेष्टव्यत्वेनोक्तः स्यात् 'यावान्वा अयमाक ाशस्तावानेषोऽन्तर्हृदय आकाशः' इत्याद्याकाशस्वरूपप्रदर्शनं नोपयुज्येत । नन्वेतदप्यन्तर्वर्तिवस्तुसद्भावप्रदर्शनायैव प्रदर्श्यते । 'तं चेद् ब्रूयुर्यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तराकाशः किं तदत्र विद्यते यदन्वेष्टव्यं यद्वाव विजिज्ञासितव्यम्' इत्याक्षिप्य परिहारावसर आकाशौपम्योपक्रमेण द्यावापृथिव्यादीनामन्तःसमाहितत्वाददर्शनात् । नैतदेवम् । एवं हि सति यदन्तः समाहितं द्यावापृथिव्यादि, तदन्वेष्टव्यम्, विजिज्ञासितव्यं चोक्तं स्यात् । तत्र वाक्यशेषो नोपपद्येत । 'अस्मिन् कामाः समाहिताः' 'एष आत्माऽपहतपाप्मा' इति हि प्रकृतं द्यावापृथिव्यादिसमाधानाधारमाकाशमाकृष्य 'अथ य इहात्मानमनुविद्य व्रजन्त्येतांश्च सत्यान् कामान्' इति समुच्चयार्थेन चशब्देनात्मानं कामाधारमाश्रितांश्च कामान् विज्ञेयान् वाक्यशेषो दर्शयति । तस्माद्वाक्योपक्रमेऽपि दहर एवाकाशो हृदयपुण्डरीकाधिष्ठानः सहान्तःस्थैः समाहितैः पृथिव्यादिभिः सत्यैश्च कामैर्विज्ञेय उक्त इति गम्यते । स चोक्तेभ्यो हेतुभ्यः परमेश्वर इति ।। १४ ।।

**गतिशब्दाभ्यां तथाहि दृष्टं लिङ्गञ्च ।। १५ ।।**

दहरः परमेश्वर उत्तरेभ्यो हेतुभ्य इत्युक्तम् । त एवोत्तरे हेतव इदानीं प्रपञ्च्यन्ते । इतश्च परमेश्वर एव दहरः, यस्माद् दहरवाक्यशेषे परमेश्वरस्यैव प्रतिपादकौ गतिशब्दौ भवतः 'इमाः सर्वाः प्रजा अहरहर्गच्छन्त्य एतं ब्रह्मलोकं न विन्दन्ति' इति । तत्र प्रकृतं दहरं ब्रह्मलोकशब्देनाभिधाय तद्विषया गतिः प्रजाशब्दवाच्यानां जीवानाममभिधीयमाना दहरस्य ब्रह्मतां गमयति । तथा ह्यहरहर्जीवानां सुषुप्तावस्थायां ब्रह्मविषयं गमनं दृष्टं श्रुत्यन्तरे 'सता सोम्य तदा सम्पन्नो भवति' इत्येवमादौ । लोकेऽपि किल गाढं सुषुप्तमाचक्षते ब्रह्मीभूतो ब्रह्मतां गत इति । तथा ब्रह्मलोकशब्दोऽपि प्रकृते दहरे प्रयुज्यमानो जीवभूताकाशशङ्कां निवर्तयन् ब्रह्मतामस्य गमयति । ननु कमलासनलोकमपि ब्रह्मलोकशब्दो गमयेत् । गमयेद् यदि ब्रह्मणो लोक इति षष्ठीसमासवृत्त्या व्युत्पद्येत । सामानाधिकरण्यवृत्त्या तु व्युत्पाद्यमानो ब्रह्मैव लोको ब्रह्मलोक इति परमेव ब्रह्म गमयिष्यति । एतदेव चाहरहर्ब्रह्मलोकगमनं दृष्टं ब्रह्मलोकशब्दस्य सामानाधिकरण्यवृत्तिपरिग्रहे लिङ्गम् । नह्यहरहररिमाः प्रजाः कार्यब्रह्मलोकं सत्यलोकाख्यं गच्छन्तीति शक्यं कल्पयितुम् ।।१५।।

**धृतेश्च महिम्नोऽस्यास्मिन्नुपलब्धेः ।। १६ ।।**

धृतेश्च हेतोः परमेश्वर एवायं दहरः । कथम्? 'दहरोऽस्मिन्नन्तराकाशः' इति हि प्रकृत्याकाशौपम्यपूर्वकं तस्मिन् सर्वसमाधानमुक्त्वा तस्मिन्नेव चात्मशब्दं प्रयुज्यापहत-

पाप्मत्वादिगुणयोगं चोपदिश्य तमेवानतिवृत्तप्रकरणं निर्दिशति 'अथ य आत्मा स सेतुर्विधृतिरेषां लोकानामसम्भेदाय' (छा. ८-४-१) इति । तत्र विधृतिरित्यात्मशब्द-सामानाधिकरण्याद्विधारयितोच्यते, क्तिचः कर्तरि स्मरणात् । यथोदकसन्तानस्य विधारयिता लोके सेतुः क्षेत्रसम्पदामसम्भेदाय, एवमयमात्मैषामध्यात्मादिभेदभिन्नानां लोकानां वर्णाश्रमादीनां च विधारयिता सेतुरसम्भेदायासङ्करायेति । एवमिह प्रकृते दहरे विधारणलक्षणं महिमानं दर्शयति । अयञ्च महिमा परमेश्वर एव श्रुत्यन्तरादुलभ्यते 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' इत्यादेः । तथान्यत्रापि निश्चिते परमेश्वरवाक्ये श्रूयते 'एष सर्वेश्वर एष भूताधिपतिरेष भूतपाल एष सेतुर्विधरण एषां लोकानामसम्भेदाय' इति । एवं धृतेश्च हेतोः परमेश्वर एवायं दहरः ।। १६ ।।

**प्रसिद्धेश्च ॥ १७ ॥**

इतश्च परमेश्वर एव 'दहरोऽस्मिन्नन्तराकाशः' इत्युच्यते । यत्कारणमाकाशब्दः परमेश्वरे प्रसिद्धः । 'आकाशो वै नाम नामरूपयोर्निर्वहिता' 'सर्वाणि हवा इमानि भूतान्याकाशादेव समुत्पद्यन्ते' इत्यादिप्रयोगदर्शनात् । जीवे तु न कचिदाकाशशब्दः प्रयुज्यमानो दृश्यते । भूताकाशस्तु सत्यामप्याकाशशब्दप्रसिद्धावुपमानोपमेयभावाद्यसम्भवान्न ग्रहीतव्य इत्युक्तम् ।। १७ ।।

**इतरपरामर्शात्स इति चेन्नासम्भवात् ॥ १८ ॥**

यदि वाक्यशेषबलेन दहर इति परमेश्वरः परिगृह्येतास्तीतरस्यापि जीवस्य वाक्यशेषे परामर्शः 'अथ य एष सम्प्रसादोऽस्माच्छरीरात् समुत्थाय परं ज्योतिरुपसम्पद्य स्वेन रूपेणाभिनिष्पद्यत एष आत्मेति होवाच' इति । अत्र हि सम्प्रसादशब्दः श्रुत्यन्तरे सुषुप्तावस्थायां दृष्टत्वात् तदवस्थावन्तं जीवं शक्नोत्युपस्थापयितुम्, नार्थान्तरम् । तथा शरीरव्यपाश्रयस्यैव जीवस्य शरीरात्समुत्थानं सम्भवति । यथाकाशव्यपाश्रयाणां वाय्वादीनामाकाशात्समुत्थानम्, तद्वत् । यथा चादृष्टोऽपि लोके परमेश्वरविषय आकाशशब्दः परमेश्वरधर्मसमभिव्याहाराद् 'आकाशो वै नाम नामरूपयोर्निर्वहिता' इत्येवमादौ परमेश्वरविषयोऽभ्युपगतः । एवं जीवविषयोऽपि भविष्यति । तस्मादितरपरामर्शाद्दहरोऽस्मिन्नन्तराकाश इत्यत्र स एव जीव उच्यत इति चेत् । नैतदेवं स्यात् । कस्मात्? असम्भवात् । नहि जीवो बुद्ध्याद्युपाधि-परिच्छेदाभिमानी सन्नाकाशेनोपमीयेत । नचोपाधिधर्मानभिमन्यमानस्यापहतपाप्मत्वादयो धर्माः सम्भवन्ति । प्रपञ्चितं चैतत् प्रथमसूत्रे । अतिरेकाशङ्कापरिहारायात्र तु पुनरुपन्यस्तम् । पठिष्यति चोपरिष्टाद् 'अन्यार्थश्च परामर्शः' इति ।। १८ ।।

**उत्तराच्चेदाविर्भूतस्वरूपस्तु ॥ १९ ॥**

इतरपरामर्शाद्या जीवाशङ्का जाता साऽसम्भवान्निराकृता । अथेदानीं मृतस्येवामृतसेकात् पुनः समुत्थानं जीवाशङ्कायाः क्रियते उत्तरस्मात् प्राजापत्याद्वाक्यात् । तत्र हि 'य आत्माऽपहतपाप्मा' इत्यपहतपाप्मत्वादिगुणकमात्मानमन्वेष्टव्यं विजिज्ञासितव्यं च प्रतिज्ञाय 'य एषोऽक्षिणि पुरुषो दृश्यत एष आत्मा' इति ब्रुवन्नक्षिस्थं द्रष्टारं जीवमात्मानं निर्दिशति । 'एतं त्वेव ते भूयोऽनुव्याख्यास्यामि' इतिच तमेव पुनःपुनः परामृश्य 'य एष स्वप्ने महीयमानश्चरत्येष आत्मा इति 'तद् यत्रैतत्सुप्तः समस्तः सम्प्रसन्नः स्वप्नं न विजानात्येव आत्मा' इति च जीवमेवावस्थान्तरगतं व्याचष्टे । तस्यैव चापहतपाप्मत्वादि दर्शयति 'तदेमृतमभयमेतद् ब्रह्म' इति । 'नाहं खल्वयमेवं सम्प्रत्यात्मानं जानात्ययमहमस्मीति नो एवेमानि भूतानि' इति च सुषुप्तावस्थायां दोषमुपलभ्य 'एतं त्वेव ते भूयोऽनुव्याख्यास्यामि नो एवान्यत्रैतस्मात्' इति चोपक्रम्य शरीरसम्बन्धनिन्दापूर्वकं 'एष सम्प्रसादोऽस्माच्छरीरात्समुत्थाय परं ज्योतिरुपसम्पद्य स्वेन रूपेणाभिनिष्पद्यते स उत्तमः पुरुषः' इति जीवमेव शरीरात्समुत्थितमुत्तमपुरुषं दर्शयति । तस्मादस्ति सम्भवो जीवे पारमेश्वराणां धर्माणाम् । अतः 'दहरोऽस्मिन्नन्तराकाशः' इति जीव एवोक्त इति चेत् कश्चिद् ब्रूयात् । तं प्रति ब्रूयात् 'आविर्भूतस्वरूपस्तु' इति । तुशब्दः पूर्वपक्षव्यावृत्त्यर्थः । नोत्तरस्मादपि वाक्यादिह जीवस्याशङ्का सम्भवतीत्यर्थः । कस्मात्? यतस्तत्राप्याविर्भूतस्वरूपो जीवो विवक्ष्यते । आविर्भूतं स्वरूपमस्येत्याविर्भूतस्वरूपः । भूतपूर्वगत्या जीववचनम् ।

एतदुक्तं भवति । 'य एषोऽक्षिणि' इत्यक्षिलक्षितं द्रष्टारं निर्दिश्योदशरावब्राह्मणेनैनं शरीरात्मताया व्युत्थाप्य 'एतं त्वेव ते' इति पुनःपुनस्तमेव व्याख्येयत्वेनाकृष्य स्वप्न-सुषुप्तोपन्यासक्रमेण 'परं ज्योतिरुपसम्पद्य स्वेन रूपेणाभिनिष्पद्यते' इति यदस्य पारमार्थिकं स्वरूपं परं ब्रह्म तद्रूपतयैनं जीवं व्याचष्टे न जैवेन रूपेण । 'यत्परं ज्योतिरुपसम्पत्तव्यं श्रुतं तत्परं ब्रह्म । तच्चापहतपाप्मत्वादिधर्मकम्, तदेव च जीवस्य पारमार्थिकं स्वरूपं 'तत्त्वमसि' इत्यादिशास्त्रेभ्यः, नेतरदुपाधिकल्पितम् । यावदेव हि स्थाणाविव पुरुषबुद्धिं द्वैतलक्षणामविद्यां निवर्तयन् कूटस्थनित्यदृक्स्वरूपमात्मानमहं ब्रह्मास्मीति न प्रतिपद्यते, तावज्जीवस्य जीवत्वम् । यदा तु देहेन्द्रियमनोबुद्धिसङ्घाताद् व्युत्थाप्य श्रुत्या प्रतिबोध्यते, नासि त्वं देहेन्द्रियमनोबुद्धिसङ्घातः, नासि संसारी, किं तर्हि तद् यत्सत्यं स आत्मा चैतन्यमात्रस्वरूपस्तत्त्वमसीति, तदा कूटस्थनित्यदृक्स्वरूपमात्मानं प्रतिबुध्यास्माच्छरीराद्य-भिमानात् समुत्तिष्ठन् स एव कूटस्थनित्यदृक्स्वरूप आत्मा भवति । 'स यो ह वै तत्परमं ब्रह्म वेद ब्रह्मैव भवति' (मुण्ड. ३-२-९) इत्यादिश्रुतिभ्यः । तदेव चास्य पारमार्थिकं स्वरूपं येन शरीरात् समुत्थाय स्वेन रूपेणाभिनिष्पद्यते । कथं पुनः स्वं च रूपं स्वेनैव

च निष्पद्यत इति सम्भवति कूटस्थनित्यस्य । सुवर्णादीनां तु द्रव्यान्तरसम्पर्कादभिभूत-स्वरूपाणामनभिव्यक्तासाधारणविशेषाणां क्षारप्रक्षेपादिभिः शोद्ध्यमानानां स्वरूपेणाभि-निष्पत्तिः स्यात् । नतु तथाऽऽत्मचैतन्यज्योतिषो नित्यस्य केनचिदभिभवः सम्भवत्यसंसर्गित्वाद् व्योम्न इव, दृष्टविरोधाच्च । दृष्टिश्रुतिमतिविज्ञातयो हि जीवस्य स्वरूपम् । तच्च शरीरादसमुत्थितस्यापि जीवस्य सदा निष्पन्नमेव दृश्यते । सर्वो हि जीवः पश्यन् शृण्वन् मन्वानो विजानन् व्यवहरस्यन्यथा व्यवहारानुपपत्तेः । तच्चेच्छरीरात्समुत्थितस्य निष्पद्येत प्राक् समुत्थानादृष्टो व्यवहारो विरुद्ध्येत । अतः किमात्मकमिदं शरीरात्समुत्थानम्? किमात्मिका वा स्वरूपेणाभिनिष्पत्तिरिति ।

अत्रोच्यते – प्राग् विवेकविज्ञानोत्पत्तेः शरीरेन्द्रियमनोबुद्धिविषयवेदनोपाधिभिरविविक्तमिव जीवस्य दृष्ट्यादिज्योतिःस्वरूपं भवति । यथा शुद्धस्य स्फटिकस्य स्वाच्छ्यं शौक्ल्यं च स्वरूपं प्राग् विवेकग्रहणाद्रक्तनीलाद्युपाधिभिरविविक्तमिव भवति । प्रमाणजनितविवेक-ग्रहणात्तु पराचीनः स्फटिकः स्वाच्छ्येन शौक्ल्येन च स्वेन रूपेणाभिनिष्पद्यत इत्युच्यते प्रागपि तथैव सन् । तथा देहाद्युपाध्यविविक्तस्यैव सतो जीवस्य श्रुतिकृतं विवेकविज्ञानं शरीरात् समुत्थानम्, विवेकविज्ञानफलं स्वरूपेणाभिनिष्पत्तिः केवलात्मस्वरूपावगतिः । तथा विवेकाविवेकमात्रेणैवात्मनोऽशरीरत्वं सशरीरत्वं च, मन्त्रवर्णाद् 'अशरीरं शरीरेषु' इति । 'शरीरस्थोऽपि कौन्तेय न करोति न लिप्यते' इति च सशरीरत्वाशरीरत्वविशेषा भावस्मरणात्। तस्माद् विवेकविज्ञानाभावादनाविर्भूतस्वरूपः सन् विवेकविज्ञानादाविर्भूतस्व ारूप इत्युच्यते। न त्वन्यादृशावाविर्भावानाविर्भावौ स्वरूपस्य सम्भवतः स्वरूपत्वादेव । एवं मिथ्याज्ञानकृत एव जीवपरमेश्वरयोर्भेदो न वस्तुकृतः, व्योमवदसङ्गत्वाविशेषात् ।

कुतश्चैतदेवं प्रतिपत्तव्यम् । यतो 'य एषोऽक्षिणि पुरुषो दृश्यते' इत्युपदिश्य 'एतदमृतमभयमेतद् ब्रह्म' इत्युपदिशति । योऽक्षिणि प्रसिद्धो द्रष्टा द्रष्टृत्वेन विभाव्यते सोऽमृताभयलक्षणाद् ब्रह्मणोऽन्यश्चेत् स्यात्ततोऽमृताभयब्रह्मसामानाधिकरण्यं न स्यात् । नापि प्रतिच्छायात्माऽयमक्षिलक्षितो निर्दिश्यते, प्रजापतेर्मृषावादित्वप्रसङ्गात् । तथा द्वितीयेऽपि पर्याये 'य एष स्वप्ने महीयमानश्चरति' इति न प्रथमपर्यायनिर्दिष्टादक्षिपुरुषाद्द्र ष्टुरन्यो निर्दिष्टः, 'एतं त्वेव ते भूयोऽनुव्याख्यास्यामि' इत्युपक्रमात् । किञ्चाहमद्य स्वप्ने हस्तिनमद्राक्षं नेदानीं तं पश्यामीति दृष्टमेव प्रतिबुद्धः प्रत्याचष्टे । द्रष्टारं तु तमेव प्रत्यभिजानाति य एवाहं स्वप्नमद्राक्षं स एवाहं जागरितं पश्यामीति । तथा तृतीयेऽपि पर्याये 'नहि खल्वयमेवं सम्प्रत्यात्मानं जानात्ययमहमस्मीति नो एवेमानि भूतानि' इति सुषुप्तावस्थायां विशेषविज्ञानाभावमेव दर्शयति न विज्ञातारं प्रतिषेधति ।।

यत्तु तत्र 'विनाशमेवापीतो भवति' इति, तदपि विशेषविज्ञानविनाशाभिप्रायमेव न

विज्ञातृविनाशाभिप्रायम् । 'नहि विज्ञातुर्विज्ञातेर्विपरिलोपो विद्यतेऽविनाशित्वाद्' इति श्रुत्यन्तरात् । तथा 'एतं त्वेव ते भूयोऽनुव्याख्यास्यामि नो एवान्यत्रैतस्माद्' इत्युपक्रम्य 'मघवन् मर्त्यं वा इदं शरीरम्' इत्यादिना प्रपञ्चेन शरीराद्युपाधिसम्बन्धप्रत्याख्यानेन सम्प्रसादशब्दोदितं जीवं 'स्वेन रूपेणाभिनिष्पद्यते' इति ब्रह्मस्वरूपापन्नं दर्शयन्न परस्माद् ब्रह्मणोऽमृताभयस्वरूपादन्यं जीवं दर्शयति । केचित्तु परमात्मविवक्षायां 'एतं त्वेव ते' इति जीवाकर्षणमन्याय्यं मन्यमाना एतमेव वाक्योपक्रम- सूचितमपहतपाप्मत्वादिगुणकमात्मानं ते भूयोऽनुव्याख्यास्यामीति कल्पयन्ति । तेषामेतमिति सन्निहितावलम्बिनी सर्वनामश्रुतिर्विप्रकृष्येत । भूयःश्रुतिश्चोपरुद्ध्येत, पर्यायान्तराभिहितस्य पर्यायान्तरेऽनभिधीयमानत्वात् । 'एतं त्वेव ते' इति च प्रतिज्ञाय प्राक्चतुर्थात्पर्यायादन्यमन्यं व्याचक्षाणस्य प्रजापतेः प्रतारकत्वं प्रसज्येत । तस्माद् यदविद्याप्रत्युपस्थापितमपारमार्थिकं जैवं रूपं कर्तृभोक्तृरागद्वेषादिदोषकलुषितमनेकानर्थयोगि तद्विलयनेन तद्विपरीतमपहतपाप्मत्वादिगुणकं पारमेश्वरं स्वरूपं विद्यया प्रतिपाद्यते, सर्पादिविलयनेनेव रज्ज्वादीन् ।

अपरे तु वादिनः पारमार्थिकमेव जैवं रूपमिति मन्यन्तेऽस्मदीयाश्च केचित् । तेषां सर्वेषामात्मैकत्वसम्यग्दर्शनमप्रतिपक्षभूतचानां प्रतिबोधायेदं शारीरकमारब्धम् । एक एव परमेश्वरः कूटस्थनित्यो विज्ञानधातुरविद्यया मायया मायाविवदनेकधा विभाव्यते नान्यो विज्ञानधातुरस्तीति । यत्त्विदं परमेश्वरवाक्ये जीवमाशङ्क्य प्रतिषेधति सूत्रकारः – 'नासम्भवाद्' इत्यादिना । तत्रायमभिप्रायः – नित्यशुद्धबुद्धमुक्तस्वभावे कूटस्थनित्ये एकस्मिन्नसङ्गे परमात्मनि तद् विपरीतं जैवं रूपं व्योम्नीव तलमलादि परिकल्पितम् । तदात्मैकत्वप्रतिपादनपरैर्वाक्यैर्न्यायोपेतैर्द्वैतवादप्रतिषेधैश्चापनेष्यामीति परमात्मनो जीवादन्यत्वं द्रढयति । जीवस्य तु न परस्मादन्यत्वं प्रतिपिपादयिषति किं त्वनुवदत्येवाविद्याकल्पितं लोकप्रसिद्धं जीवभेदम् । एवं हि स्वाभाविककर्तृत्वभोक्तृत्वानुवादेन प्रवृत्ताः कर्मविधयो न विरुद्ध्यन्त इति मन्यते । प्रतिपाद्यं तु शास्त्रार्थमात्मैकत्वमेव दर्शयति – 'शास्त्रदृष्ट्या तूपदेशो वामदेववत्' इत्यादिना । वर्णितश्चास्माभिर्विद्वदविद्वद्भेदेन कर्मविधिविरोधपरिहारः ।।१९।।

**अन्यार्थश्च परामर्शः ॥ २० ॥**

अथ यो दहरवाक्यशेषे जीवपरामर्शो दर्शितः – 'अथ य एष सम्प्रसादः' इत्यादिः, स दहरे परमेश्वरे व्याख्यायमाने न जीवोपासनोपदेशो न प्रकृतरूपविशेषोपदेश इत्यनर्थकत्वं प्राप्नोतीति । अथ आह – अन्यार्थोऽयं जीवपरामर्शो न जीवस्वरूपपर्यवसायी, किं तर्हि? परमेश्वरस्वरूपपर्यवसायी । कथम्? सम्प्रसादशब्दोदितो जीवो जागरितव्यवहारे देहेन्द्रियपञ्जराध्यक्षो भूत्वा तद्वासनानिर्मितांश्च स्वप्नान्नाडीचजरोऽनुभूय श्रान्तः शरणं

ಅನುವಾದ - ಅದ್ವೈತಿಗಳು ಶ್ರುತ್ಯರ್ಥವನ್ನು ಹೀಗೆ ಹೇಳಿರುತ್ತಾರೆ. 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ಹೃತ್ಪುಂಡರೀಕವನ್ನೇ ಪರಾಮರ್ಶಿಸಬೇಕು. ಹೃದಯಪುಂಡರೀಕದಲ್ಲಿರುವ ದಹರಾಕಾಶವನ್ನು ಅನ್ವೇಷಣ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ ಎಂದು.

**तन्न, तस्मिन् इत्यस्य सन्निहितदहरपरित्यागेन व्यवहित हृत्पुण्डरीक-परत्वायोगात् ।**

ಇದು ತಪ್ಪು. 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ಹಿಂದೆ ಬುದ್ಧಿಯಲ್ಲಿ ಪ್ರಸಕ್ತವಾದ ದಹರಾಕಾಶವನ್ನೇ ಪರಾಮರ್ಶಿಸಲು ಬರುವಾಗ ಅದನ್ನು ಬಿಟ್ಟು ದೂರದಲ್ಲಿರುವ ಹೃದಯ-ಪುಂಡರೀಕವನ್ನು ಪರಾಮರ್ಶ ಮಾಡುವುದು ಅಯುಕ್ತವಾಗಿದೆ.

**अत एव सप्तमे चातुर्मास्यस्य तृतीये पर्वणि साकमेधीये ''एतद्ब्राह्मण एककपाल'' इति श्रुतस्यैतच्छब्दस्य व्यवहितवैश्वदेविकैककपालत्यागेन सन्निहितवारुणप्रघासिकैककपालपरत्वमुक्तम् ।**

ಸನ್ನಿಹಿತವಾದದ್ದನ್ನು ಪರಾಮರ್ಶಿಸಲು ಬರುವಾಗ ವ್ಯವಹಿತವಾದದ್ದನ್ನು ಪರಾಮರ್ಶ ಮಾಡಬಾರದೆನ್ನಲು ಪೂರ್ವಮೀಮಾಂಸೆಯ ದೃಷ್ಟಾಂತವು ಇರುತ್ತದೆ. ಏಳನೆಯ ಅಧ್ಯಾಯದಲ್ಲಿ ಚಾತುರ್ಮಾಸ್ಯದ ಮೂರನೆಯ ಪರ್ವದಲ್ಲಿ ಬರುವಂತಹ 'ಸಾಕಮೇಧೀಯ' ಎಂಬ ಯಾಗದಲ್ಲಿ 'ಏತದ್ಬ್ರಾಹ್ಮಣ ಏಕಕಪಾಲಃ' ಎಂಬ ವಾಕ್ಯವು ಶ್ರುತವಾಗಿದೆ. ಇಲ್ಲಿರುವ 'ಏತತ್' ಶಬ್ದದಿಂದ ದೂರದಲ್ಲಿರುವ ವೈಶ್ವದೇವಿಕವಾದ ಏಕಕಪಾಲವನ್ನು ಸ್ವೀಕರಿಸಬಾರದು. ಸನ್ನಿಹಿತವಾದ

---

प्रेप्सुरुभयरूपादपि शरीराभिमानात् समुत्थाय सुषुप्तावस्थायां परंज्योतिराकाशशब्दितं परं ब्रह्मोपसम्पद्य विशेषविज्ञानवत्त्वं च परित्यज्य स्वेन रूपेणाभिनिष्पद्यते । यदस्योपसम्पत्तव्यं परं ज्योतिर्येन स्वेन रूपेणायमभिनिष्पद्यते, स एव आत्माऽपहतपाप्मत्वादिगुण उपास्य इत्येवमर्थोऽयं जीवपरामर्शः परमेश्वरवादिनोऽप्युपपद्यते ।। २० ।।

अल्पश्रुतेरिति चेत् तदुक्तम् ॥ २१ ॥

यदप्युक्तम्, 'दहरोऽस्मिन्नन्तराकाशः' इत्याकाशस्याल्पत्वं श्रूयमाणं परमेश्वरे नोपपद्यते, जीवस्य त्वाराग्रोपमितस्याल्पत्वमवकल्पत इति, तस्य परिहारो वक्तव्यः । उक्तो ह्यस्य परिहारः परमेश्वरस्यापेक्षिकमल्पत्वमवकल्पत इति 'अर्भकौकस्त्वात् तद्व्यपदेशाच्च नेति चेन्न निचाय्यत्वादेवं व्योमवच्च' इत्यत्र । स एवेह परिहारोऽनुसन्धातव्य इति सूचयति । श्रुत्यैव चेदमल्पत्वं प्रत्युक्तं प्रसिद्धेनाकाशेनोपमिमानया 'यावान् वा अयमाकाशस्तावानेषोऽन्तर्हृदय आकाशः' इति ।। २१ ।।

ವಾರುಣಪ್ರಘಾಸಿಕವಾದ ಏಕಕಪಾಲವನ್ನೇ ಪರಾಮರ್ಶಿಸಬೇಕು. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಸನ್ನಿಹಿತವಾದ ದಹರಾಕಾಶವನ್ನೇ ಪರಾಮರ್ಶ ಮಾಡಬೇಕು.

**दहरस्य हृत्पुण्डरीकस्थतायाः ''दहरोऽस्मिन्'' इत्यत्रैवोक्तत्वेन पुनस्तदुक्ति-वैयर्थ्याच्च ।**

ಮತ್ತು ದಹರಾಕಾಶವು ಹೃದಯಪುಂಡರೀಕದಲ್ಲಿದೆಯೆಂದು 'ದಹರೋಽಸ್ಮಿನ್' ಎಂಬ ಹಿಂದಿನ ಶ್ರುತಿವಾಕ್ಯದಲ್ಲಿಯೇ ಹೇಳಿದ್ದಾಗಿದೆ. ಪುನಃ ಅದನ್ನೇ ಹೇಳುವುದು ವ್ಯರ್ಥವಾಗುತ್ತದೆ.

**यदन्तरित्यत्र यच्छब्दस्य ''तदन्वेष्टव्यं तद्वाव विजिज्ञासितव्यम्'' इत्यत्र तच्छब्दस्य च दहरपरत्वे पुल्लिङ्गतापत्तेश्च ।**

ಮತ್ತು 'ಯದಂತಃ' ಎಂಬಲ್ಲಿರುವ 'ಯತ್' ಶಬ್ದವು, 'ತದನ್ವೇಷ್ಟವ್ಯಮ್ ತದ್ವಾವ ವಿಜಿಜ್ಞಾಸಿತವ್ಯಂ' ಎಂಬಲ್ಲಿರುವ 'ತತ್' ಶಬ್ದವು ದಹರಾಕಾಶಪರವಾದರೆ ಪುಲ್ಲಿಂಗದಲ್ಲಿಯೇ ಪ್ರಯೋಗಮಾಡಬೇಕಿತ್ತು. ಆದ್ದರಿಂದ ಅದ್ವೈತಿಗಳ ವ್ಯಾಖ್ಯಾನವು ಅಸಾಧುವಾಗಿದೆ.

**प्रकाशः –**

तस्मिन्यदन्तरित्यत्र तच्छब्दोऽनन्तरमप्याकाशमतिलङ्घ्य हृत्पुण्डरीकं परामृशतीति भामत्युक्तमनुवदति – **अत्रोक्तं परैरिति** ।।

ವಿವರಣೆ - 'ತಸ್ಮಿನ್ ಯದಂತಃ' ಎಂಬಲ್ಲಿರುವ 'ತತ್' ಶಬ್ದವು ಮುಂದಿರುವ ಆಕಾಶವನ್ನು ಪರಾಮರ್ಶಿಸದೇ ಅದನ್ನು ಮೀರಿ, ಇನ್ನೂ ಮುಂದಿರುವ 'ಹೃತ್ಪುಂಡರೀಕ'ವನ್ನು ಪರಾಮರ್ಶಿಸುತ್ತದೆ ಎಂದು ಭಾಮತೀಕಾರರ ಅಭಿಪ್ರಾಯ. ಅದನ್ನು ಅನುವಾದಿಸುತ್ತಿದ್ದಾರೆ - 'ಅತ್ರೋಕ್ತಂ' ಎಂಬ ಗ್ರಂಥದಿಂದ.

**अत एवेति** ।। सन्निहितत्यागेन व्यवहितपरत्वायोगादेवेत्यर्थः ।

सप्तमस्याद्यपादे ''एककपालानां वैश्वदेविकः प्रकृतिराग्रयणे सर्वहोमापरिवृत्तिदर्शनादवभृथे च सकृद्यवदानस्य वचनात्'' इत्यन्तिमेऽधिकरणे चातुर्मास्याख्ये कर्मणि चत्वारः पर्वशब्दिताः कर्मसमुदाया वैश्वदेववरुणप्रघाससाकमेधशुनासीरीयनामकाः । तत्र वैश्वदेवे द्यावापृथिव्य एककपालश्श्रुतः । वरुणप्रघासेष्वपि काय एककपालः । तयोः पृथग्ब्राह्मणं समाम्नातम् । साकमेधेषु वैश्वकर्मण एककपालः । तत्र साकमेधेषु श्रूयते ''एतद्ब्राह्मण एककपालः'' इति । तत्र साकमेधीयैककपाले किं वैश्वदेविकैक-

कपालब्राह्मणस्यातिदेश उत वारुणप्रघासिकस्येति संशये वैश्वदेवे बहवो धर्माः । आविः प्रष्टः कार्यः इत्यादयः प्रकृतित्वात् । वारुणप्रघासेषु विकृतित्वादल्पा एव धर्मविशेषाःशमीमय्यो हिरण्मय्यो वा स्रुचो भवन्तीत्यादय उपदिष्टाः । अतो बह्वनुग्रहाय वैश्वदेविकस्येति प्राप्ते वारुणप्रघासिकस्य सन्निहितत्वाद्वारुणप्रघासिकैककपालब्राह्मणातिदेश इति सिद्धान्तितम् । तत्र यथैतच्छब्दस्य व्यवहितपरत्वपरित्यागेन सन्निहितपरत्वं तथाऽत्रापि न्याय्यमित्यर्थः ।

ವಿವರಣೆ - 'ಅತ ಏವ' ಎಂದರೆ ಸನ್ನಿಹಿತವಾದದ್ದನ್ನು ಬಿಟ್ಟು ವ್ಯವಹಿತವಾದದ್ದನ್ನು ಸ್ವೀಕರಿಸಲು ಬರುವುದಿಲ್ಲವಾದ್ದರಿಂದಲೇ ಎಂದರ್ಥ.

'ಏಕಕಪಾಲಾನಾಂ ವೈಶ್ವದೇವಿಕಃ ಪ್ರಕೃತಿರಾಗ್ರಯಣೇ ಸರ್ವಹೋಮಾಪರಿವೃತ್ತಿದರ್ಶನಾದವಭೃಥೇ ಚ ಸಕೃದ್ ವ್ಯವದಾನಸ್ಯ ವಚನಾತ್' (೭-೧-ಅಂತಿಮಾಧಿಕರಣ)[१]

(१) भाट्टसङ्ग्रहः –

**अथ पञ्चमं साकमेधे वारुणप्रघासिकैककपालातिदेशाधिकरणम्**

**एककपालानां वैश्वदेविकः प्रकृतिराग्रयणे सर्वहोमापर्यावृत्तिदर्शनादवभृथे च सकृद्व्यवदानस्य वचनात् ॥ २३ ॥**

सामान्यतः पूर्वत्र सर्वातिदेशे स्थिते तत्र विशेषचिन्तनात्**सङ्गतिः** । साकमेधे श्रुतेन 'एतद्ब्राह्मणः' इत्यनेन वैश्वदेविकस्यातिदेशः, उत वारुणप्रघासिकस्येति **सन्देहे** वैश्वदेवपर्वणः प्रकृतित्वात् तत्र बहूनां धर्माणामुपदेशाद्वरुणप्रघासस्य विकृतित्वेन तत्र 'शमीमयो हिरण्मयो वा स्रुवो भवति' इत्यादयोऽल्पा एव विशेषा विहिताः । अतो बहुधर्मलाभाय **वैश्वदेविकैककपालब्राह्मणातिदेश इति, प्राप्ते, सिद्धान्तः** 'एतद्ब्राह्मणः' इत्यत्रैतच्छब्दस्य सन्निहितपरामर्शित्वाद्वैश्वदैविकस्य च व्यवहितत्वादैन्द्राग्रब्राह्मणस्य च वारुणप्रघासिकस्यैवातिदेशेन तत्समभिव्याहाराच्च सन्निहितवारुणप्रघासिकस्यैककपालस्यैव ब्राह्मणस्यातिदेश इति । तदाह **सूत्रकारः, आग्रयणे** द्यावापृथिव्यैककपालं विधाय, वैकल्पिकाज्यादिविधायकात् 'यत्सर्वं हुतं करोति सा त्वेका परिचक्षा, हुतो हुतः पर्यावर्तते सा द्वितीया, आज्यस्यैव द्यावापृथिव्योर्यजेत्' इति वाक्यादाग्रयणैककपाले **सर्वहोमापर्यावृत्ति-दर्शनात्, अवभृथैककपाले** 'इदमेवैककपालस्य द्विरवद्यति' इत्यवधारणेन **सकृदेव व्यवदानवचनादन्यत्र** सर्वत्र सकृदवदानलाभा**च्चैककपालानां** सर्वेषां **वैश्वदेविककपालः प्रकृतिरि**ति विज्ञायते । ततस्तद्ब्राह्मणस्य न्यायादेव प्राप्तेर्वचनसार्थक्याय वारुणप्रघासिकैककपालस्यैव हिरण्मयत्वाद्यधिकधर्मलाभायातिदेश इति । **फलं** व्यक्तम् ।

**इति पञ्चमं साकमेधे वारुणप्रघासिकैककपालातिदेशाधिकरणम् ॥**

ಪರಿಪೂರ್ಣಚಂದ್ರಿಕಾ

ಚಾತುರ್ಮಾಸ್ಯ ಎಂಬ ಕರ್ಮದಲ್ಲಿ ಕರ್ಮಸಮುದಾಯವೆಂಬ ನಾಲ್ಕು ಪರ್ವಗಳನ್ನು ಹೇಳಿರುತ್ತಾರೆ.

೧. ವೈಶ್ವದೇವ, ೨. ವರುಣ ಪ್ರಘಾಸ, ೩. ಸಾಕಮೇಧೀಯ, ೪. ಶುನಾಸೀರೀಯ ಎಂದು ಅವುಗಳ ಹೆಸರು. ವೈಶ್ವದೇವ ಕರ್ಮದಲ್ಲಿ ದ್ಯಾವಾಪೃಥಿವೀಗಳೇ ದೇವತೆಗಳು. ಏಕಕಪಾಲದಲ್ಲಿ ಸಿದ್ಧವಾದ ಪುರೋಡಾಶವೇ ದ್ರವ್ಯ. ವರುಣಪ್ರಘಾಸಕರ್ಮದಲ್ಲಿ ಪ್ರಜಾಪತ್ಯ ದೇವತೆ, ಪ್ರಜಾಪತಿಗೆ ಸಂಬಂಧಪಟ್ಟ ಏಕಕಪಾಲವೇ ದ್ರವ್ಯ. ಈ ಎರಡು ಕರ್ಮಗಳಲ್ಲಿ ಬ್ರಾಹ್ಮಣವು ಪ್ರತ್ಯೇಕವಾಗಿ ವಿಹಿತವಾಗಿದೆ. ಸಾಕಮೇಧದಲ್ಲಿ ವಿಶ್ವಕರ್ಮನೇ ದೇವತೆ, ವಿಶ್ವಕರ್ಮನಿಗೆ ಸಂಬಂಧಪಟ್ಟ ಏಕಕಪಾಲವೇ ದ್ರವ್ಯ. ಈ ಯಾಗವನ್ನು ವಿಧಿಸುವಾಗ 'ಏತತ್ ಬ್ರಾಹ್ಮಣಃ ಏಕಕಪಾಲಃ' ಎಂಬ ವಾಕ್ಯವು ಶ್ರುತವಾಗಿದೆ. ಇಲ್ಲಿರುವ 'ಏತತ್' ಶಬ್ದವು ಸಾಕಮೇಧೀಯ ಏಕಕಪಾಲದಲ್ಲಿ ವೈಶ್ವದೇವಿಕವಾದ ಏಕಕಪಾಲಬ್ರಾಹ್ಮಣವನ್ನು ಅತಿದೇಶ ಮಾಡುತ್ತಿದೆಯೋ, ಅಥವಾ ವಾರುಣಪ್ರಘಾಸಿಕವಾದ ಏಕಕಪಾಲ ಬ್ರಾಹ್ಮಣವನ್ನು ಅತಿದೇಶ ಮಾಡುತ್ತಿದೆಯೋ? ಎಂದು ಸಂಶಯ.

ಪೂರ್ವಪಕ್ಷ - ವೈಶ್ವದೇವಕರ್ಮದಲ್ಲಿ ಅನೇಕ ಕರ್ಮಗಳನ್ನು ಹೇಳಿದ್ದಾರೆ. ಆದರೆ ವರುಣಪ್ರಘಾಸದ ಕರ್ಮದಲ್ಲಿ ಸ್ವಲ್ಪವೇ ಧರ್ಮಗಳನ್ನು ಹೇಳಿರುತ್ತಾರೆ. ವೈಶ್ವದೇವದಲ್ಲಿ 'ಆವಿಃ, ಪ್ರಷ್ಟಃ, ಕಾರ್ಯಃ' ಇತ್ಯಾದಿಯಾಗಿ ಅನೇಕ ಧರ್ಮಗಳನ್ನು ಹೇಳಿರುತ್ತಾರೆ. ಪ್ರಕೃತಿ ಯಾಗವಾದ್ದರಿಂದ ಅನೇಕ ಧರ್ಮಗಳನ್ನು ಹೇಳಲಾಗಿದೆಯೆಂದು ತಿಳಿಯಬೇಕು. ಆದರೆ ವರುಣಪ್ರಘಾಸಕರ್ಮವು ವಿಕೃತಿಯಾಗವಾದ್ದರಿಂದ ಸ್ವಲ್ಪವೇ ಧರ್ಮವಿಶೇಷಗಳನ್ನು ಹೇಳಿರುತ್ತಾರೆ. 'ಶಮೀಮಯ್ಯಃ ಹಿರಣ್ಮಯ್ಯೋ ವಾ ಸ್ರುಚೋ ಭವಂತಿ' ಆಹುತಿ ನೀಡುವಂತಹ 'ಸ್ರುಕ್' ಎಂಬುದು ಶಮೀವೃಕ್ಷದ್ದಾಗಿರಬೇಕೋ, ಅಥವಾ ಬಂಗಾರದ್ದಾಗಿರಬೇಕೋ ? ಇತ್ಯಾದಿಯಾದ ಕೆಲವೇ ಧರ್ಮಗಳನ್ನು ಹೇಳಲಾಗಿದೆ. ಪ್ರಕೃತ 'ಏತತ್ ಬ್ರಾಹ್ಮಣಃ ಏಕಕಪಾಲಃ' ಎಂಬ 'ಏತತ್' ಶಬ್ದದಿಂದ ವರುಣಪ್ರಘಾಸದಲ್ಲಿರುವ ಅಂಗಗಳನ್ನು ಪರಾಮರ್ಶ ಮಾಡಿದರೆ ಅಂಗಗಳು ಕೆಲವೇ ಇರುತ್ತವೆ. ವರುಣಪ್ರಘಾಸಿಕವಾದ ಕರ್ಮದ ಅಂಗವನ್ನು ಪರಾಮರ್ಶ ಮಾಡಿದರೆ, ಧರ್ಮಗಳು ಅನೇಕವಾಗುತ್ತವೆ. ಅನೇಕ ಕರ್ಮಗಳಿಗೆ ಅನುಗ್ರಹ ಮಾಡುವುದಕ್ಕಾಗಿ ವೈಶ್ವದೇವಿಕವಾದ ಬ್ರಾಹ್ಮಣವನ್ನೇ ಪರಾಮರ್ಶಮಾಡುವುದು ಸೂಕ್ತ. ವಾರುಣಪ್ರಘಾಸದ ಬ್ರಾಹ್ಮಣವನ್ನು ಪರಾಮರ್ಶ ಮಾಡಿದರೆ, ಬಹ್ವನುಗ್ರಹವು ಸಿದ್ಧವಾಗುವುದಿಲ್ಲ. ಆದ್ದರಿಂದ ವಾರುಣಪ್ರಘಾಸ ಬ್ರಾಹ್ಮಣವು ಹತ್ತಿರದಲ್ಲಿದ್ದರೂ ವ್ಯವಹಿತವಾದ ವೈಶ್ವದೇವ ಬ್ರಾಹ್ಮಣವನ್ನೇ ಪರಾಮರ್ಶಿಸಬೇಕು.

ಸಿದ್ಧಾಂತ - ಬಹ್ವನುಗ್ರಹವು ಮುಖ್ಯವಲ್ಲ. ಬುದ್ಧಿಯಲ್ಲಿ ಯಾವುದು ಉಪಸ್ಥಿತವಾಗಿದೆಯೋ, ಅದರ ಪರಾಮರ್ಶವೇ ಸೂಕ್ತವಾಗುತ್ತದೆ. ಹಿಂದೆ ವಾರುಣಪ್ರಘಾಸದ ಬ್ರಾಹ್ಮಣವೇ ಬುದ್ಧಿಯಲ್ಲಿ ಪ್ರಕೃತವಾಗಿದೆ. ಅದನ್ನೇ ಇಲ್ಲಿ ಪರಾಮರ್ಶಿಸಬೇಕೇ ಹೊರತು, ಬುದ್ಧಿಯಲ್ಲಿಲ್ಲದ ವೈಶ್ವದೇವದ ಬ್ರಾಹ್ಮಣವನ್ನು ಪರಾಮರ್ಶಿಸಬಾರದು. ಆದ್ದರಿಂದ ವರುಣಪ್ರಘಾಸಿಕವಾದ ಏಕಕಪಾಲ ಬ್ರಾಹ್ಮಣದ ಅತಿದೇಶವನ್ನೇ 'ಏತತ್' ಶಬ್ದದಿಂದ ಮಾಡಬೇಕೆಂದು ಸಿದ್ಧಾಂತ. ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಯಾವರೀತಿಯಾಗಿ 'ಏತತ್' ಶಬ್ದಕ್ಕೆ ವ್ಯವಹಿತವಾದ ವೈಶ್ವದೇವ ಬ್ರಾಹ್ಮಣವನ್ನು ಪರಾಮರ್ಶಮಾಡಬಾರದೆಂದು ನಿರ್ಣಯಿಸಿ, ಸನ್ನಿಹಿತವಾದ ವಾರುಣಪ್ರಘಾಸ ಬ್ರಾಹ್ಮಣವನ್ನೇ ಪರಾಮರ್ಶಿಸಬೇಕೆಂದು ನಿರ್ಣಯಿಸಲಾಗಿದಯೋ,

ಅದರಂತೆ ಪ್ರಕೃತದಲ್ಲಿಯೂ 'ತಸ್ಮಿನ್' ಎಂಬುದರಿಂದ ಸನ್ನಿಹಿತವಾದ ದಹರಾಕಾಶವನ್ನು ಪರಾಮರ್ಶ ಮಾಡದೇ ವ್ಯವಹಿತವಾದ ಹೃತ್ಪುಂಡರೀಕವನ್ನು ಪರಾಮರ್ಶ ಮಾಡುವುದು, ನ್ಯಾಯಸಮ್ಮತವಲ್ಲ.[1]

**प्रकाशः** – यद्यपि ''यच्चातुर्मास्यैर्यजते'' इत्युत्पत्तिवाक्यगतबहुत्वस्य विवक्षितत्वाच्चातुर्मास्यानामिति वाच्यम् । तथापि सामान्याभिप्रायेणैकवचनम् ।

ಗ್ರಂಥದಲ್ಲಿ 'ಚಾತುರ್ಮಾಸ್ಯ' ಎಂಬುದಾಗಿ ಏಕವಚನವನ್ನು ಪ್ರಯೋಗಿಸಿದ್ದಾರೆ. ಆದರೆ 'ಯತ್ ಚಾತುರ್ಮಾಸ್ಯೈ ರ್ಯಜತೇ' ಎಂಬ ಉತ್ಪತ್ತಿವಾಕ್ಯದಿಂದ ಚಾತುರ್ಮಾಸ್ಯಯಾಗದಲ್ಲಿ ಬಹುತ್ವವು ವಿವಕ್ಷಿತವಾಗಿದೆ. ಅದಕ್ಕನುಸಾರಿಯಾಗಿ ಪ್ರಕೃತ ಗ್ರಂಥದಲ್ಲಿಯೂ 'ಚಾತುರ್ಮಾಸಸ್ಯ' ಎಂದು ಹೇಳದೆ, 'ಚಾತುರ್ಮಾಸ್ಯಾನಾಂ' ಎಂದು ಹೇಳಬೇಕಿತ್ತು. ಆದರೂ ಕೂಡ ಚಾತುರ್ಮಾಸ್ಯ ಯಾಗಗಳಲ್ಲಿ 'ಚಾತುರ್ಮಾಸ್ಯತ್ವ' ಎಂಬ ಸಾಮಾನ್ಯಧರ್ಮವಿರುವ ಪ್ರಯುಕ್ತ ಅದನ್ನು ವಿವಕ್ಷಿಸಿ ಗ್ರಂಥಕಾರರು ಏಕವಚನವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಉತ್ಪತ್ತಿವಾಕ್ಯದಿಂದ ವಿರೋಧಕ್ಕೆ ಅವಕಾಶವಿಲ್ಲ.

**प्रकाशः** – एतेन वाक्यशेषस्थबहुतरश्रुतिलिङ्गानुरोधेन दहराकाशस्यैवान्वेष्टव्यत्वावश्यम्भावाद्बह्वनुग्रहाय सन्निधित्यागो युक्तः । ''लिङ्गैः सन्निधिर्बाध्यते'' इति कल्पतरूक्तेरिति प्रत्युक्तम् ।

ಪೂರ್ವಮೀಮಾಂಸಾನ್ಯಾಯವನ್ನು ಹೀಗೆ ಉದಾಹರಿಸಿದ್ದರಿಂದ ಕಲ್ಪತರುವಿನ ಮತ್ತೊಂದು ಶಂಕೆಯನ್ನು ಪರಿಹರಿಸಿದಂತಾಯಿತು.

ಕಲ್ಪತರುವಿನಲ್ಲಿ ಹೀಗೆ ಹೇಳಲಾಗಿದೆ - 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ಸನ್ನಿಹಿತವಾದ ಹೃತ್ಪುಂಡರೀಕವನ್ನೇ ಪರಾಮರ್ಶ ಮಾಡಬೇಕು. ಆದರೆ ವಾಕ್ಯಶೇಷದಲ್ಲಿರುವ 'ಅಪಹತಪಾಪ್ಮತ್ವವೇ ಮೊದಲಾದ ಅನೇಕ ಲಿಂಗಗಳಿಂದ ಮತ್ತು ಬ್ರಹ್ಮ ಮೊದಲಾದ ಶ್ರುತಿಗಳಿಂದ ದಹರಾಕಾಶನನ್ನೇ ಅನ್ವೇಷಣೆ ಮಾಡಬೇಕೆಂದು ಸಿದ್ಧವಾಗಿದೆ. ಈ ವಾಕ್ಯಶೇಷದ ಶ್ರುತಿಲಿಂಗಗಳಿಗೆ ಅನುಸಾರಿಯಾಗಿ ಸನ್ನಿಹಿತವಾದ ಹೃತ್ಪುಂಡರೀಕವನ್ನು ತ್ಯಾಗ ಮಾಡಬೇಕು. ಅಂದರೆ ಹೃತ್ಪುಂಡರೀಕದ ಪರಾಮರ್ಶವು ಸನ್ನಿಹಿತವಾಗಿದ್ದರೂ ಅದನ್ನು ಬಿಟ್ಟು ದೂರದಲ್ಲಿರುವ ದಹರಾಕಾಶವನ್ನೇ ಪರಾಮರ್ಶಿಸಬೇಕು. 'ಲಿಂಗೈಃ ಸನ್ನಿಧಿಃ ಬಾಧ್ಯತೇ' ಅನೇಕ ಲಿಂಗಗಳಿಂದ ಸನ್ನಿಧಿಯು ಬಾಧಿತವಾಗುತ್ತದೆ ಎಂದು.

**प्रकाशः** – तथात्वे साकमेधीयैककपालेऽपि बह्वनुग्रहाय वैश्वदेविकैककपालब्राह्मणातिदेश एव स्यान्न तु वारुणप्रघासिकैककपालब्राह्मणातिदेशः । स च नेत्युक्तम् । तथा च तन्न्यायविरोध इति ।

---

(೧) ಇಲ್ಲಿ ಗಮನಿಸಬೇಕಾದ ವಿಶೇಷಾಂಶವೇನೆಂದರೆ - ಈ ಅಧಿಕರಣದ ನಿರೂಪಣೆ ಮಾಡುವಾಗ ಭಾಟ್ಟಸಂಗ್ರಹ, ಪ್ರಕಾಶಗಳಲ್ಲಿ ವಾಕ್ಯಗಳು ವಿಭಿನ್ನವಾಗಿವೆ. ಭಾಟ್ಟಸಂಗ್ರಹದಲ್ಲಿ 'ಸ್ರುವೋಭವತಿ' ಎಂದು ಪುಲ್ಲಿಂಗಾಂತಶಬ್ದಗಳು, ಏಕವಚನ ಇದೆ. ಆದರೆ ಪ್ರಕಾಶದಲ್ಲಿ 'ಸ್ರುಚೋ ಭವಂತಿ' ಎಂದು ಸ್ತ್ರೀಲಿಂಗ ಬಹುವಚನಗಳು ಇವೆ. ಹಾಗೂ ಸ್ರುಕ್, ಸ್ರುವ ಎಂಬ ಪದಾರ್ಥವು ಬೇರೆ ಬೇರೆ.

ಕಲ್ಪತರುವಿನ ಈ ವಿಚಾರವನ್ನೂ ಕೂಡ ಈಗ ನಿರಾಕರಿಸಿದಂತಾಯಿತು. ಹೇಗೆಂದರೆ - ಪೂರ್ವಪಕ್ಷಿಗಳಂತೆ ಹೇಳಿದರೆ - ಸಾಕಮೇಧೀಯ ಏಕಕಪಾಲದಲ್ಲಿಯೂ ಬಹ್ವನುಗ್ರಹಕ್ಕೋಸ್ಕರ ವೈಶ್ವದೇವಿಕವಾದ ಏಕಕಪಾಲದ ಬ್ರಾಹ್ಮಣದ ಅತಿದೇಶವನ್ನೇ ಪೂರ್ವಮೀಮಾಂಸೆಯಲ್ಲಿ ಮಾಡಬೇಕಿತ್ತು ಹೊರತು, ವಾರುಣಪ್ರಘಾಸಿಕವಾದ ಏಕಕಪಾಲ ಬ್ರಾಹ್ಮಣದ ಅತಿದೇಶವನ್ನು ಮಾಡದಿರಬೇಕಾದೀತು. ಆದರೆ ಪೂರ್ವಮೀಮಾಂಸಾ ಸೂತ್ರದಲ್ಲಿ ಹೀಗೆ ನಿರ್ಣಯಿಸಿಲ್ಲ. ಆದ್ದರಿಂದ ಆ ಸೂತ್ರನ್ಯಾಯದ ವಿರೋಧವು ಕಲ್ಪತರುವಿಗೆ ಬರುತ್ತದೆಂದು ತಿಳಿಯಬೇಕು.

**प्रकाशः** – किञ्च ''एष आत्माऽपहतपाप्मा'' इत्यादिवाक्यशेषे न दहराकाश-परामर्शः । येन बह्वनुग्रहाय सन्निधित्यागः ।

ಮತ್ತು 'ಏಷ ಆತ್ಮಾऽಪಹತಪಾಪ್ಮಾ' ಇತ್ಯಾದಿ ವಾಕ್ಯಶೇಷದಲ್ಲಿ ದಹರಾಕಾಶವನ್ನು ಪರಾಮರ್ಶಿಸಬಾರದು. ಹಾಗೇ ಪರಾಮರ್ಶಿಸುವುದಾಗಿದ್ದರೆ, ಬಹ್ವನುಗ್ರಹಕ್ಕೋಸ್ಕರ ಸನ್ನಿಧಿಪ್ರಮಾಣವನ್ನು ತ್ಯಾಗಮಾಡಬಹುದಿತ್ತು.

**प्रकाशः** – किन्तु ''किं तदत्र विद्यते'' इति दहराकाशस्थ आधेये पृष्टे ''यावान्वा'' इति सन्निहितवाक्ये हृदयशब्देन हृदयननिमित्तकेन दहराकाशमनूद्याकाश-शब्देन प्रथमान्तेनाधेयस्य ब्रह्मत्वं विधाय

ಹೊರತಾಗಿ ಹಿಂದೆ ಹೇಳಿದಂತೆ 'ಕಿಂ ತದತ್ರ ವಿದ್ಯತೇ' ಎಂಬುದಾಗಿ ದಹರಾಕಾಶದಲ್ಲಿ ಇರುವವನು ಯಾರು? ಎಂದು ಆಧೇಯವನ್ನು ಪ್ರಶ್ನಿಸಿದಾಗ, 'ಯಾವಾನ್ವಾ' ಎಂಬ ಸನ್ನಿಹಿತವಾದ ವಾಕ್ಯದಲ್ಲಿ ಹೃದಯಶಬ್ದದಿಂದ 'ಹೃದಿ ಅಯನ' ಎಂಬ ವ್ಯುತ್ಪತ್ತಿಯನ್ನು ಅವಲಂಬಿಸಿ ದಹರಾಕಾಶವನ್ನೇ ಅನುವಾದ ಮಾಡಲಾಗಿದೆ. ಹಾಗೆ ಅನೂದಿತವಾದ ಪ್ರಥಮಾಂತವಾದ 'ದಹರಾಕಾಶ' ಶಬ್ದದಿಂದ ಆಧೇಯವಾದ ಪದಾರ್ಥದಲ್ಲಿ ಬ್ರಹ್ಮತ್ವವನ್ನು ವಿಧಾನ ಮಾಡಲಾಗಿದೆ.

**प्रकाशः** – यावानित्यनेन च तस्य व्याप्तत्वं चोक्त्वा ''उभेऽस्मिन्'' इत्यादिना सर्वाधारत्वं च तस्योक्त्वा ''एष आत्माऽपहतपाप्मा'' इत्यादिवाक्यशेषे व्याप्ताकाशशब्दितस्य दहराकाशस्थस्य सर्वाधारत्वेनोक्तस्य ब्रह्मण एव परामर्शेनात्म-त्वापहतपाप्मत्वाद्युक्तिरिति प्रागेव व्यक्तमेतत् ।

ಅನಂತರ 'ಯಾವಾನ್' ಎಂಬ ಪದದಿಂದ ಅಂತಹ ಬ್ರಹ್ಮನಿಗೆ ವ್ಯಾಪ್ತತ್ವವನ್ನು ಹೇಳಿ, 'ಉಭೇऽಸ್ಮಿನ್' ಇತ್ಯಾದಿ ವಾಕ್ಯದಿಂದ, ಅಂತಹ ಬ್ರಹ್ಮನು ಸಕಲ ಪದಾರ್ಥಗಳಿಗೂ ಆಧಾರನಾಗಿದ್ದಾನೆಂದು ಹೇಳಲಾಗಿದೆ. ಹೀಗೆ ಹೇಳಿ, 'ಏಷ ಆತ್ಮಾऽಪಹತಪಾಪ್ಮಾ' ಇತ್ಯಾದಿ ವಾಕ್ಯಶೇಷದಲ್ಲಿ ವ್ಯಾಪ್ತವಾದ ಆಕಾಶಶಬ್ದದಿಂದ ಪ್ರತಿಪಾದ್ಯನಾದ ದಹರಾಕಾಶದಲ್ಲಿರುವ ಸಕಲಕ್ಕೂ ಆಧಾರನೆಂದು ಪ್ರತಿಪಾದ್ಯನಾದ ಬ್ರಹ್ಮನ ಪರಾಮರ್ಶವನ್ನೇ ಮಾಡಬೇಕು. ಹೀಗಿರುವುದರಿಂದ ಇಂತಹ ಬ್ರಹ್ಮನಲ್ಲಿ ಅಪಹತಪಾಪ್ಮತ್ವವೇ ಮೊದಲಾದ ಧರ್ಮಗಳನ್ನು ಮುಂದಿನ ಶ್ರುತಿಯು ಹೇಳುತ್ತಿದೆ. ಹೀಗೆ ಶ್ರುತಿಯ ಪ್ರಸಂಗವನ್ನು ಈ ಹಿಂದೆಯೇ ವ್ಯಾಖ್ಯಾನಿಸಿದ್ದೇವೆ.

**प्रकाशः** – ननु तत्र न सन्निहितत्वमात्रेण वारुणप्रघासिकस्य परामर्शः । किन्तु वैश्वदेविकधर्माणां ''स्वरसामैककपालामिक्षं च लिङ्गदर्शनात्'' इति सप्तस्य तृतीयपादीयदशमाधिकरणेऽन्यत्र श्रुतैककपालस्य वैश्वदेविकैककपालविकारत्वमित्युक्त्या तन्न्यायेनैव सिद्धेः ''एतद्ब्राह्मणः'' इति वचनानर्थक्यप्रसङ्गादपीति चेत्

ಶಂಕೆ - 'ಏತತ್ ಬ್ರಾಹ್ಮಣಃ' ಎಂಬಲ್ಲಿರುವ 'ಏತತ್' ಶಬ್ದದಿಂದ ವಾರುಣಪ್ರಘಾಸಿಕವನ್ನು ಸನ್ನಿಹಿತವಾಗಿದೆಯೆಂಬ ಕಾರಣಕ್ಕಷ್ಟೇ ನಾವು ಪರಾಮರ್ಶಮಾಡುತ್ತಿರುವುದಲ್ಲ. ಹೊರತಾಗಿ, ಮತ್ತೊಂದು ಕಾರಣವೂ ಕೂಡ ಇದೆ. ವೈಶ್ವದೇವಿಕ ಬ್ರಾಹ್ಮಣವನ್ನು 'ಏತತ್' ಶಬ್ದದಿಂದ ಪರಾಮರ್ಶ ಮಾಡಿದರೆ ಏಕೆಂದರೆ 'ಸ್ವರಸಾಮ್ಯೈಕಕಪಾಲಾಮಿಕ್ಷಂ ಚ ಲಿಂಗದರ್ಶನಾತ್' ಎಂಬುದಾಗಿ ಏಳನೆಯ ಅಧ್ಯಾಯದ ಮೂರನೆಯ ಪಾದದ ಹತ್ತನೇ ಅಧಿಕರಣದಲ್ಲಿ ಎಲ್ಲೆಲ್ಲಿ ಏಕಕಪಾಲವು ಶ್ರುತವಾಗಿದೆಯೋ, ಅಲ್ಲೆಲ್ಲೆಡೆ ವೈಶ್ವದೇವಿಕವಾದ ಏಕಕಪಾಲವಿಕಾರಿತ್ವವನ್ನೇ ಇಟ್ಟುಕೊಳ್ಳಬೇಕೆಂಬ ವ್ಯಾಪ್ತಿಯನ್ನು ಹೇಳಿದ್ದಾರೆ. ಪ್ರಕೃತ ಸಾಕಮೇಧೀಯ ಏಕಕಪಾಲವೂ ಕೂಡ ಏಕಕಪಾಲವಾಗಿರುವುದರಿಂದ, ವೈಶ್ವದೇವಿಕವಾದ ಏಕಕಪಾಲದ ವಿಕಾರವೆಂದೇ ಹೇಳಬೇಕು. ಹೀಗೆ ವ್ಯಾಪ್ತಿಯ ಬಲದಿಂದಲೇ ಸಿದ್ಧವಾಗುವಾಗ ಪುನಃ 'ಏತತ್ ಬ್ರಾಹ್ಮಣಃ' ಎಂಬ ವಾಕ್ಯವು ವ್ಯರ್ಥವಾಗಿದೆ. ಆದ್ದರಿಂದ ಸನ್ನಿಹಿತವಾಗಿರುವುದಷ್ಟೇ ಕಾರಣವಲ್ಲವೆಂದು ಇದರಿಂದ ತಿಳಿಯುತ್ತದೆ. ಆದರೆ ನೀವು ಸನ್ನಿಹಿತವಾಗಿದೆಯೆಂಬ ಕಾರಣದಿಂದಷ್ಟೇ ದಹರಾಕಾಶವನ್ನು ಪರಾಮರ್ಶಮಾಡಬೇಕೆಂದು ಹೇಳುತ್ತಿದ್ದೀರಿ. ಇದು ಸರಿಯಲ್ಲವಲ್ಲವೇ?

**प्रकाशः** – इहाप्युक्तसुषिरश्रुतिविरोधवाक्यानन्वयादेरप्युक्तत्वाद्वक्ष्यमाणबाधकाच्च तथाऽस्तु ।

ಸಮಾಧಾನ - ಹಾಗಾದರೆ ಇಲ್ಲಿಯೂ ಕೂಡ ದಹರಾಕಾಶವನ್ನೇ 'ತತ್' ಶಬ್ದದಿಂದ ಪರಾಮರ್ಶ ಮಾಡಬೇಕೆನ್ನಲು ಸನ್ನಿಹಿತತ್ವವಷ್ಟೇ ಕಾರಣವಲ್ಲ. ಸುಷಿರ ಶ್ರುತಿ ವಿರೋಧ, ವಾಕ್ಯಅನನ್ವಯ ಮೊದಲಾದ ಅನೇಕ ಕಾರಣಗಳಿವೆಯೆಂದು ಈ ಹಿಂದೆ ಹೇಳಿದ್ದೇವೆ. ಮತ್ತು ದಹರಾಕಾಶವನ್ನು ಪರಾಮರ್ಶ ಮಾಡದಿದ್ದರೆ, ಬಾಧಕಗಳು ಇರುತ್ತದೆಂಬ ವಿಚಾರವನ್ನು ಮುಂದೆ ಹೇಳುತ್ತೇವೆ. ಆದ್ದರಿಂದ ಪೂರ್ವಮೀಮಾಂಸಾ ದೃಷ್ಟಾಂತದಂತೆ ಅನೇಕ ಕಾರಣಗಳಿರುವುದದರಿಂದ ಇಲ್ಲಿಯೂ ಕೂಡ ದಹರಾಕಾಶವನ್ನೇ ಪರಾಮರ್ಶ ಮಾಡಬೇಕು.

**प्रकाशः** – किं चेहापि 'तस्मिन्यदन्तः' इति वाक्यावैयर्थ्यायैव सन्निहितदहराकाशपरत्वमुपेयमिति भावेनाह – दहरस्येति ।।

ಮತ್ತೇನೆಂದರೆ ಇಲ್ಲಿಯೂ ಸಹ 'ತಸ್ಮಿನ್ಯದಂತಃ' ಎಂಬ ವಾಕ್ಯವು ವ್ಯರ್ಥವಾಗಬಾರದೇ ಸನ್ನಿಹಿತವಾದ ದಹರಾಕಾಶವನ್ನೇ ಪರಾಮರ್ಶಿಸಬೇಕೆಂಬ ಅಭಿಪ್ರಾಯದಿಂದ 'ದಹರಸ್ಯ' ಇತ್ಯಾದಿ ವಾಕ್ಯವು ಹೊರಟಿದೆ.

ಪರಿಪೂರ್ಣಚಂದ್ರಿಕಾ

**प्रकाशः** – अस्मिन्नित्यस्याधिकरणसप्तम्यन्तस्य सन्निहितपुण्डरीकपरत्वादिति भावः ।

'ಅಸ್ಮಿನ್' ಎಂಬ ಹಿಂದಿನ ವಾಕ್ಯದಲ್ಲಿ ಪುಂಡರೀಕದಲ್ಲಿ ಎಂಬರ್ಥವನ್ನು ಹೇಳಿದ್ದಾಗಿದೆ. ಪುನಃ ಹೃದಯಪುಂಡರೀಕವನ್ನು ಹೇಳಿದ ಮೇಲೆ ಪುನಃ ಅದರಲ್ಲಿ ಏನಿದೆಯೆಂಬ ಜಿಜ್ಞಾಸೆ ಮಾಡುವುದು ಅಯುಕ್ತವಾಗಿದೆ. 'ಅಸ್ಮಿನ್' ಎಂಬ ಅಧಿಕರಣದ ಸಪ್ತಮ್ಯಂತವಾದ ಪದವು ಸನ್ನಿಹಿತವಾದ ಪುಂಡರೀಕಪರವಾಗಿದೆಯೆಂದು ತಿಳಿಯಬೇಕು.

**प्रकाशः** – उपलक्षणमेतत् । 'तस्मिन्यदन्तः' इति वाक्यं दहराकाशस्य पुण्डरीकवेश्माधारत्वप्रतिपादनपरं चेत्तदनन्तरवाक्यस्य तदाक्षेपपरतया व्याख्यानं चायुक्तम्।

ಉಪಲಕ್ಷಣಯಾ ಇದನ್ನು ತಿಳಿಯಬೇಕು. 'ತಸ್ಮಿನ್ಯದಂತಃ' ಎಂಬ ವಾಕ್ಯವು ದಹರಾಕಾಶವು ಪುಂಡರೀಕವೆಂಬ ವೇಶ್ಮಕ್ಕೆ ಆಧಾರವಾಗಿದೆಯೆಂದು ಪ್ರತಿಪಾದಿಸುವುದಾದರೆ, ಆದರ ಅನಂತರದಲ್ಲಿರುವ ವಾಕ್ಯಕ್ಕೆ ತದಾಕ್ಷೇಪಪರತಯಾ ವ್ಯಾಖ್ಯಾನವು ಅಯುಕ್ತವಾಗುತ್ತದೆ.

**प्रकाशः** – परमात्मनोऽन्तर्वर्तितत्कारणसूक्ष्मं किमपि न सम्भवतीति ''किं तदत्र विद्यते'' इति वाक्येनाक्षिप्य द्यावापृथिव्यादिकार्यस्य तदन्तर्वर्तितया समाधानमिति परैर्व्याख्यातत्वादिति ध्येयम् ।

ಪರಮಾತ್ಮನ ಒಳಗಡೆ ತತ್ಕಾರಣಭೂತವಾದ ಸೂಕ್ಷ್ಮವಾದ ಪದಾರ್ಥವಿರಲು ಸಾಧ್ಯವಿಲ್ಲ ಎಂದು 'ಕಿಂ ತದತ್ರ ವಿದ್ಯತೇ' ಎಂಬ ವಾಕ್ಯದಿಂದ ಆಕ್ಷೇಪ ಮಾಡಿ, ದ್ಯಾವಾಪೃಥಿವ್ಯಾದಿಕಾರ್ಯಕ್ಕೆ ಪರಮಾತ್ಮನ ಅಂತರ್ವರ್ತಿತ್ವದ ಸಮಾಧಾನವನ್ನು ಹೇಳಬೇಕೆಂದು ಪರರು ವ್ಯಾಖ್ಯಾನಿಸಿದ್ದಾರೆಂದು ತಿಳಿಯಬೇಕು.




ಅದ್ವೈತಿಗಳು ಶ್ರುತ್ಯರ್ಥವನ್ನು ಹೀಗೆ ಹೇಳಿರುತ್ತಾರೆ. 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ಹೃತ್ಪುಂಡರೀಕವನ್ನೇ ಪರಾಮರ್ಶಿಸಬೇಕು. ಹೃದಯಪುಂಡರೀಕದಲ್ಲಿರುವ ದಹರಾಕಾಶವನ್ನು ಅನ್ವೇಷಣ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ ಎಂದು.

ಇದು ತಪ್ಪು. 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ಹಿಂದೆ ಬುದ್ಧಿಯಲ್ಲಿ ಪ್ರಸಕ್ತವಾದ ದಹರಾಕಾಶವನ್ನೇ ಪರಾಮರ್ಶಿಸಲು ಬರುವಾಗ ಅದನ್ನು ಬಿಟ್ಟು ದೂರದಲ್ಲಿರುವ ಹೃದಯಪುಂಡರೀಕವನ್ನು ಪರಾಮರ್ಶ ಮಾಡುವುದು ಅಯುಕ್ತವಾಗಿದೆ.

ಸನ್ನಿಹಿತವಾದದ್ದನ್ನು ಪರಾಮರ್ಶಿಸಲು ಬರುವಾಗ ವ್ಯವಹಿತವಾದದ್ದನ್ನು ಪರಾಮರ್ಶ ಮಾಡಬಾರದೆನ್ನಲು ಪೂರ್ವಮೀಮಾಂಸೆಯ ದೃಷ್ಟಾಂತವು ಇರುತ್ತದೆ. ಏಳನೆಯ ಅಧ್ಯಾಯದಲ್ಲಿ ಒಂದು ಅಧಿಕರಣದಲ್ಲಿ ಹೀಗಿದೆ - ಚಾತುರ್ಮಾಸ್ಯದ ಮೂರನೆಯ ಪರ್ವದಲ್ಲಿ ಬರುವಂತಹ 'ಸಾಕಮೇಧೀಯ' ಎಂಬ ಯಾಗದಲ್ಲಿ 'ಏತದ್ಬ್ರಾಹ್ಮಣ ಏಕಕಪಾಲಃ' ಎಂಬ ವಾಕ್ಯವು ಶ್ರುತವಾಗಿದೆ. ಇಲ್ಲಿರುವ 'ಏತತ್' ಶಬ್ದದಿಂದ ದೂರದಲ್ಲಿರುವ ವೈಶ್ವದೇವಿಕವಾದ ಏಕಕಪಾಲವನ್ನು ಸ್ವೀಕರಿಸಬಾರದು. ಸನ್ನಿಹಿತವಾದ ವಾರುಣಪ್ರಘಾಸಿಕವಾದ ಏಕಕಪಾಲವನ್ನೇ ಪರಾಮರ್ಶಿಸಬೇಕು. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಸನ್ನಿಹಿತವಾದ ದಹರಾಕಾಶವನ್ನೇ ಪರಾಮರ್ಶ ಮಾಡಬೇಕು.

ಮತ್ತು ದಹರಾಕಾಶವು ಹೃದಯಪುಂಡರೀಕದಲ್ಲಿದೆಯೆಂದು 'ದಹರೋಽಸ್ಮಿನ್' ಎಂಬ ಹಿಂದಿನ ಶ್ರುತಿವಾಕ್ಯದಲ್ಲಿಯೇ ಹೇಳಿದ್ದಾಗಿದೆ. ಪುನಃ ಅದನ್ನೇ ಹೇಳುವುದು ವ್ಯರ್ಥವಾಗುತ್ತದೆ.

ಮತ್ತು 'ಯದಂತಃ' ಎಂಬಲ್ಲಿರುವ 'ಯತ್' ಶಬ್ದವು, 'ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್' ಎಂಬಲ್ಲಿರುವ 'ತತ್' ಶಬ್ದವು ದಹರಾಕಾಶಪರವಾದರೆ ಪುಲ್ಲಿಂಗದಲ್ಲಿಯೇ ಪ್ರಯೋಗಮಾಡಬೇಕಿತ್ತು. ಆದ್ದರಿಂದ ಅದ್ವೈತಿಗಳ ವ್ಯಾಖ್ಯಾನವು ಅಸಾಧುವಾಗಿದೆ.

* * * * *

## ರಾಮಾನುಜರ ಶ್ರುತ್ಯರ್ಥ ವಿಮರ್ಶೆ

### तात्पर्यचन्द्रिका

**केचित्तु 'यदन्तः' इत्यत्राध्याहृतेन 'यः' इत्यनेन पुल्लिङ्गेन दहरः परामृश्यते । श्रुतेन 'यत्' इत्यनेन तु दहरान्तर्वर्तिगुणजातमुच्यते ।**

ಅನುವಾದ - ರಾಮಾನುಜರ ಶ್ರುತ್ಯರ್ಥ ಹೀಗಿದೆ - 'ಯದಂತಃ' ಎಂಬಲ್ಲಿ 'ಯಃ' ಎಂಬ ಪುಲ್ಲಿಂಗ ಶಬ್ದವನ್ನೂ ಕೂಡ ಅಧ್ಯಾಹಾರ ಮಾಡಿಕೊಳ್ಳಬೇಕು. ಪುಲ್ಲಿಂಗದಲ್ಲಿರುವ 'ಯಃ' ಎಂಬ ಶಬ್ದದಿಂದ ದಹರಾಕಾಶವನ್ನು ಪರಾಮರ್ಶಿಸಬೇಕು. ಶ್ರುತಿಯಲ್ಲಿರುವ 'ಯತ್' ಎಂಬ ನಪುಂಸಕಲಿಂಗದ ಶಬ್ದದಿಂದ ದಹರಾಕಾಶದಲ್ಲಿರುವ ಗುಣಜಾತವನ್ನು (ಗುಣಗಳ ಸಮೂಹ) ಪರಾಮರ್ಶಿಸಬೇಕು.

**यद्वा 'यः' 'यत्' इति पुंनपुंसकलिङ्गयोर्यच्छब्दयोः ''त्यदादीनि सर्वैर्नित्यम्'' इत्यनेनैकशेषे ''नपुंसकमनपुंसकेनैकवच्चास्यान्यतरस्याम्'' इति नपुंसके एकवचने च कृते यदिति रूपम् ।**

ಅಥವಾ ಅಧ್ಯಾಹಾರ ಮಾಡಿಕೊಳ್ಳಬೇಕಾಗಿಲ್ಲ. 'ಯಃ' 'ಯತ್' ಎಂಬೆರಡು ಶಬ್ದಗಳಿಗೆ ಏಕಶೇಷ ಸಮಾಸ ಮಾಡಿದಾಗ ಕೇವಲ 'ಯತ್' ಎಂದೇ ಉಳಿಯುತ್ತದೆ. 'ಯಃ' ಎಂಬ ಶಬ್ದವು ಪುಲ್ಲಿಂಗದಲ್ಲಿದೆ.

'ಯತ್' ಎಂಬುದು ನಪುಂಸಕಲಿಂಗದಲ್ಲಿದೆ. ಈ ಎರಡೂ ಲಿಂಗಗಳ ಶಬ್ದಗಳಿಗೆ ವಿಗ್ರಹ ಮಾಡುವಾಗ 'ತ್ಯದಾದೀನಿ ಸರ್ವೈರ್ನಿತ್ಯಮ್' ಎಂಬ ಸೂತ್ರವು 'ತ್ಯತ್' ಮೊದಲಾದ ಸರ್ವನಾಮ ಶಬ್ದಗಳಿಗೆ ನಿತ್ಯವಾಗಿ ಏಕಶೇಷವನ್ನು ವಿಧಾನ ಮಾಡಿದೆ. ಅನಂತರ 'ನಪುಂಸಕಮನಪುಂಸಕೇನೈಕವಚ್ಚಾಸ್ಯಾನ್ಯತರಸ್ಯಾಮ್' ಎಂಬ ಸೂತ್ರವು ನಪುಂಸಕಲಿಂಗವು ಮತ್ತು ಏಕವಚನವು ಬರುತ್ತದೆಂದು ವಿಧಾನ ಮಾಡಿದೆ. ಆದ್ದರಿಂದ ನಪುಂಸಕಲಿಂಗ, ಏಕವಚನ ಎರಡೂ ಮಾಡಿದಾಗ 'ಯತ್' ಎಂದೇ ರೂಪವನ್ನು ಮಾಡಿದಂತಾಗುತ್ತದೆ.

**एवञ्च यो दहरः यच्च तदन्तर्वर्तिगुणजातं तदुभयमन्वेष्टव्यमिति श्रुत्यर्थ इत्याहुः ।**

ಆದ್ದರಿಂದ 'ಯಃ' ಎಂಬ ಪದದಿಂದ ವಾಚ್ಯವಾದ ದಹರಾಕಾಶವನ್ನು 'ಯತ್' ಎಂಬ ಪದದಿಂದ ವಾಚ್ಯವಾದ ದಹರಾಕಾಶದಲ್ಲಿರುವ ಗುಣಜಾತವನ್ನು ಅನ್ವೇಷಣ ಮಾಡಬೇಕೆಂದು ಶ್ರುತ್ಯರ್ಥ. ಇಷ್ಟು ರಾಮಾನುಜರ ಅಭಿಪ್ರಾಯ.

**तन्न । अन्यथोपपत्तावध्याहारस्यैकशेषादिकल्पनस्य चायोगात् ।**

ಇದು ತಪ್ಪು. ಹಿಂದೆ ನಾವು ಸಿದ್ಧಾಂತ ಮಾಡಿದಂತೆ ಶ್ರುತಿಗೆ ಸುಲಭವಾಗಿ ವ್ಯಾಖ್ಯಾನಿಸಲು ಬರುವಾಗ 'ಯಃ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದಾಗಲೀ, ಅಥವಾ ಏಕಶೇಷ ವೃತ್ತಿಯನ್ನು ಮಾಡುವುದಾಗಲೀ, ತಪ್ಪಾಗುತ್ತದೆ.[1]

**लोके प्रातिपदिकार्थैकदेशस्य पदार्थान्तरेणान्वयस्याव्युत्पन्नतया यच्छब्दोक्तयोर्द्वयोरप्यन्तर्वर्तित्वान्वयापाताच्च । नहि यावन्तर्वर्तेते तावानयेत्युक्त एकस्यैवान्तर्वर्तित्वधीः । किन्तु द्वयोः ।**

ಮತ್ತು ಲೋಕದಲ್ಲಿ ಪ್ರಾತಿಪದಿಕಾರ್ಥದ ಏಕದೇಶಕ್ಕೆ ಪದಾರ್ಥಾನಂತರದಿಂದ ಅನ್ವಯ ಮಾಡುವುದು ಅವ್ಯುತ್ಪನ್ನವೆಂದು ಸಿದ್ಧವಾಗಿದೆ. ಪ್ರಕೃತ ಏಕಶೇಷವೃತ್ತಿಯನ್ನು ಹೊಂದಿರುವ 'ಯತ್' ಶಬ್ದದಿಂದ, ದಹರಾಕಾಶ ಮತ್ತು ಗುಣಜಾತಗಳೆರಡೂ ಅರ್ಥವೆಂದು ತಿಳಿಯುತ್ತದೆ. ಈ ಎರಡಕ್ಕೂ ಕೂಡ ಅಂತವರ್ತಿತ್ವದಲ್ಲಿ ಅನ್ವಯ ಮಾಡಬೇಕು ಹೊರತು ಕೇವಲ ಗುಣಜಾತಕ್ಕೆ ಮಾತ್ರ ಅಂತವರ್ತಿತ್ವದಲ್ಲಿ ಅನ್ವಯ ಮಾಡಬಾರದು. ಏಕೆಂದರೆ 'ಯೌ ಅಂತರ್ವರ್ತೇತೇ ತೌ ಆನಯ' ಯಾರಿಬ್ಬರು ಒಳಗಿದ್ದಾರೋ, ಅವರನ್ನು ಕರೆದುಕೊಂಡು ಬಾ ಎಂದು ಹೇಳಿದಾಗ. ಒಬ್ಬನು ಮಾತ್ರ ಒಳಗಿದ್ದಾನೆಂಬ ಪ್ರತೀತಿಯು ಬರಲು ಸಾಧ್ಯವಿಲ್ಲ. ಇಬ್ಬರು ಒಳಗಿದ್ದಾರೆಂಬ ಪ್ರತೀತಿಯೇ ಬರುತ್ತದೆ.

(೧) ಏಕಶೇಷವನ್ನು ಸಮಾಸವೆಂದು ಕರೆಯಬಾರದು. ಸಮಾಸವೇ ಬೇರೆ ವೃತ್ತಿ, ಏಕಶೇಷವೇ ಬೇರೆ ವೃತ್ತಿ. ಇದನ್ನು ಗಮನದಲ್ಲಿಟ್ಟುಕೊಂಡು ಓದುಗರು ವ್ಯವಹರಿಸಬೇಕು.

**प्रकाशः –**

**प्रागुक्तदोषनिरासाय श्रुतप्रकाशोक्तं समाधानद्वयमनूद्यापाकरोति – केचित्त्वति ।। गुणजातमिति ।। सत्यकामत्वादीत्यर्थः ।।**

ವಿವರಣೆ - ಹಿಂದೆ ಅದ್ವೈತಿಗಳಿಗೆ ಹೇಳಲ್ಪಟ್ಟ ದೋಷಗಳನ್ನು ಪರಿಹರಿಸುವುದಕ್ಕಾಗಿ ರಾಮಾನುಜರು ಪ್ರಯತ್ನ ಪಟ್ಟಿದ್ದಾರೆ. ಮೇಲಿನ ಆಕ್ಷೇಪಗಳಿಗೆ ಶ್ರುತಪ್ರಕಾಶದಲ್ಲಿ ಹೇಳಲ್ಪಟ್ಟ ಎರಡು ಸಮಾಧಾನಗಳನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಕೇಚಿತ್ತು' ಇತ್ಯಾದಿ ವಾಕ್ಯದಿಂದ. 'ಗುಣಜಾತಮ್' ಎಂದರೆ 'ಸತ್ಯಕಾಮತ್ವವೇ ಮೊದಲಾದ ಗುಣಗಳ ಸಮೂಹ' ಎಂದರ್ಥ.

**प्रकाशः – त्यदादीनीति ।।** त्यद्तद्यदित्यादीनि शब्दरूपाणि सर्वैः इत्यदादिभिरन्यैश्च सह वचने नित्यं शिष्यन्ते, इत्येकस्य शेषे पुल्लिङ्गशेषः कुतो नेत्यत आह – **नपुंसकमिति ।।**

'ತ್ಯದಾದೀನಾಮ್' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ತ್ಯತ್, ತತ್, ಯತ್ ಇವೇ ಮೊದಲಾದ ಶಬ್ದಗಳು ಸರ್ವನಾಮ ಶಬ್ದವೆನಿಸಿದ, ತ್ಯತ್, ತತ್ ಇವೇ ಮೊದಲಾದ ಶಬ್ದಗಳಿಂದಲೇ, ಮತ್ತು ಬೇರೆ ವಿಧವಾದ ಶಬ್ದಗಳಿಂದಲೂ ಒಟ್ಟಿಗೆ ಪ್ರಯೋಗ ಮಾಡಿದಾಗ ನಿತ್ಯವಾಗಿ ಒಂದು ಶಬ್ದವಷ್ಟೇ ಉಳಿಯುತ್ತದೆ. ಹೀಗೆ ಏಕವದ್ಭಾವವನ್ನು ದ್ವಂದ್ವ ಸಮಾಸದಲ್ಲಿ 'ತ್ಯದಾದೀನಿ ಸರ್ವೈರ್ನಿತ್ಯಮ್' ಎಂಬ ಸೂತ್ರವು ವಿಧಾನ ಮಾಡಿದೆ. ಹೀಗೆ ಏಕವದ್ಭಾವವು ಬರುವುದಾದರೆ ಪುಲ್ಲಿಂಗವೇ ಕೊನೆಯಲ್ಲೇಕೆ ಉಳಿಯಬೇಕು ಎಂಬ ಪ್ರಶ್ನೆಗೆ 'ನಪುಂಸಕಮ್' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः –** नपुंसकानपुंसकमात्रकृतविशेषेऽनपुंसकेन सहोक्तौ च नपुंसकं शिष्यते । एकवच्चास्य कार्यं विकल्पेन भवतीति नपुंसकस्य शेष एकवचनं चेत्यर्थः।

ಏಕವದ್ಭಾವ ಮಾಡುವಾಗ ಪ್ರಾತಿಪದಿಕ ಅರ್ಥ ಮೊದಲಾದವುಗಳಿಗೆ ಯಾವ ವ್ಯತ್ಯಾಸವೂ ಇಲ್ಲದೇ ಕೇವಲ ನಪುಂಸಕ ಮತ್ತು ಅನಪುಂಸಕ ಎಂಬ ನಿಮಿತ್ತದಿಂದಷ್ಟೇ ವ್ಯತ್ಯಾಸವಿರಬೇಕು. ಇಂತಹ ನಪುಂಸಕ ಶಬ್ದವನ್ನು ಅನಪುಂಸಕ ಶಬ್ದದ ಜೊತೆಗೆ ಹೇಳಿದಾಗ ನಪುಂಸಕವೇ ಕೊನೆಯಲ್ಲಿ ಉಳಿಯುತ್ತದೆ. ಮತ್ತು ಏಕವದ್ಭಾವವನ್ನೂ ಕೂಡ ಹೊಂದುತ್ತದೆ. ಇದು ವಿಕಲ್ಪ. ಇದರಿಂದ ಸರ್ವನಾಮಶಬ್ದಗಳಿಗೆ ದ್ವಂದ್ವ ಸಮಾಸ ಮಾಡಿದಾಗ ಏಕವದ್ಭಾವವೂ ಮತ್ತು ಕೊನೆಯಲ್ಲಿ ನಪುಂಸಕಲಿಂಗವೂ ಬರುತ್ತದೆಂದು ತಿಳಿಯಿತು.

**प्रकाशः –** ननु किमिह सूत्रद्वयोदाहरणेन कृत्यम् । यावता ''नपुंसकमनपुंसकेन'' इति सूत्रेणैव 'यः' 'यत्' इति पुन्नपुंसकयोर्विग्रहे नपुंसकैकशेषस्सिध्यति ।

ಪ್ರಶ್ನೆ - ಗ್ರಂಥದಲ್ಲಿ 'ನಪುಂಸಕಮನಪುಂಸಕೇನ' ಮತ್ತು 'ತ್ಯದಾದೀನಿ ಸರ್ವೈರ್ನಿತ್ಯಮ್' ಎಂಬರೆಡು ಸೂತ್ರಗಳನ್ನು ಉಲ್ಲೇಖಿಸಿದ್ದಾರೆ. ಎರಡು ಸೂತ್ರಗಳನ್ನೇಕೆ ಉಲ್ಲೇಖಿಸಬೇಕು. ಏಕೆಂದರೆ

'ನಪುಂಸಕಮನಪುಂಸಕೇನ' ಎಂಬ ಸೂತ್ರದಿಂದಲೇ 'ಯಃ' ಮತ್ತು 'ಯತ್' ಎಂಬೆರಡು ಪುಲ್ಲಿಂಗ-ನಪುಂಸಕಲಿಂಗಗಳಿಗೆ ವಿಗ್ರಹ ಮಾಡಿದಾಗ, ನಪುಂಸಕ ಲಿಂಗವು ಹಾಗೂ ಏಕಶೇಷವದ್ಭಾವವೂ ಕೂಡ ಸಿದ್ಧವಾಗುವುದರಿಂದ, ಪುನಃ 'ತ್ಯದಾದೀನಿ ಸರ್ವೈರ್ನಿತ್ಯಮ್' ಎಂಬ ಸೂತ್ರವನ್ನು ಉಲ್ಲೇಖ ಮಾಡುವ ಅನಿವಾರ್ಯತೆ ಇರಲಿಲ್ಲ.

**प्रकाशः** – नच नित्यमेकशेषसिद्ध्यर्थं त्यदादीनीत्यस्योक्तिरिति वाच्यम् ।

ಅವಾಂತರ ಉತ್ತರ - ನಿತ್ಯವಾಗಿ ಏಕಶೇಷಭಾವವು ಬರುತ್ತದೆಂದು 'ನಪುಂಸಕಮ್' ಇತ್ಯಾದಿ ಸೂತ್ರದಿಂದ ತಿಳಿಯುವುದಿಲ್ಲ. ಅದಕ್ಕೋಸ್ಕರ 'ತ್ಯದಾದೀನಾಮ್' ಇತ್ಯಾದಿ ಸೂತ್ರವನ್ನು ಗ್ರಂಥದಲ್ಲಿ ಹೇಳಿದ್ದಾರೆ.

**प्रकाशः** – एकवद्भावसूत्र एकवद्भावस्यैव वैकल्पिकत्वेनैकशेषस्य तत्रापि नित्यत्वात् । यथोक्तं मञ्जर्याम् ''अन्यतरस्यां ग्रहणमानन्तर्यादेकवच्चेत्यनेन सम्बध्यते । न त्वेकशेषेणेत्याह'' इतीति ।

ಪ್ರಶ್ನೆ - ಸೂತ್ರದಲ್ಲಿರುವ 'ಅನ್ಯತರಸ್ಯಾಮ್' ಎಂಬ ಪದದಿಂದ ಹೇಳಲ್ಪಟ್ಟ ವಿಕಲ್ಪವು ಏಕವಚನಕ್ಕೆ ಮಾತ್ರ ಸಂಬಂಧ ಪಡುತ್ತದೆ ಹೊರತು, ಏಕಶೇಷಕ್ಕೆ ಅನ್ವಯವಾಗುವುದಿಲ್ಲ. ಆವಾಗ ಏಕವಚನವು ಮಾತ್ರ ವಿಕಲ್ಪವಾಗುತ್ತದೆ ಹೊರತು, ಏಕಶೇಷವು ನಿತ್ಯವೆಂದೇ ಸಿದ್ಧವಾಗುತ್ತದೆ. ಏಕವದ್ಭಾವಿಷಯದಲ್ಲಷ್ಟೇ ಅನ್ವಯ ಹೊಂದುತ್ತದೆ. ಇದನ್ನೇ ಮಂಜರೀ ವ್ಯಾಖ್ಯಾನದಲ್ಲಿ 'ಅನ್ಯತರಸ್ಯಾಂ ಗ್ರಹಣಮ್ ಆನಂತರ್ಯಾದ್ ಏಕವಚನದ್ ಇತ್ಯನೇನ ಸಂಬಧ್ಯತೇ । ನತು ಏಕಶೇಷೇಣ' ಎಂದರೆ ಸೂತ್ರದಲ್ಲಿರುವ 'ಅನ್ಯತರಸ್ಯಾಮ್' ಎಂಬ ಪದದ ಗ್ರಹಣವು ಹತ್ತಿರವಿರುವ ಕಾರಣ, ಏಕವಚನದಲ್ಲಷ್ಟೇ ಅನ್ವಯ ಹೊಂದುತ್ತದೆ. ಏಕಶೇಷದ ಜೊತೆಗೆ ಅನ್ವಯ ಹೊಂದುವುದಿಲ್ಲ ಎಂದು ಹೇಳಲಾಗಿದೆ. ಆದ್ದರಿಂದ 'ನಪುಂಸಕ' ಇತ್ಯಾದಿ ಸೂತ್ರವನ್ನು ಉಲ್ಲೇಖ ಮಾಡಿದ್ದರೆ ಸಾಕಾಗುತ್ತಿತ್ತು. ಪುನಃ 'ತ್ಯದಾದೀನಿ' ಇತ್ಯಾದಿ ಸೂತ್ರವನ್ನು ಉಲ್ಲೇಖ ಮಾಡುವ ಅವಶ್ಯಕತೆ ಇರಲಿಲ್ಲವಲ್ಲವೇ?

**प्रकाशः** – सत्यम् । तथापि 'यः' 'यत्' इत्यनयोः ''नपुंसकम्'' इति सूत्रविषयत्वेऽपि त्यदादिषु पाठाद्विशिष्य त्यदादिविषयसूत्रेणैवैकशेषनिर्वाहश्श्रुत-प्रकाशे दर्शित इत्यभिप्रेत्य यथाश्रुततद्ग्रन्थानुवादोऽत्र कृत इत्यदोषः ।

ಉತ್ತರ - ಗ್ರಂಥಕಾರರು ಶ್ರುತಪ್ರಕಾಶದಲ್ಲಿ ಹೇಳಿದ್ದನ್ನಷ್ಟೇ ಅನುವಾದ ಮಾಡಿದ್ದಾರೆ ಹೊರತು, ಸ್ವತಂತ್ರವಾಗಿ ಸೂತ್ರದ್ವಯಗಳನ್ನು ಉದಾಹರಿಸಿಲ್ಲ. ಹಾಗಾದರೆ ಶ್ರುತಪ್ರಕಾಶದಲ್ಲಿ ಎರಡು ಸೂತ್ರಗಳನ್ನು ಉಲ್ಲೇಖಿಸಲು ಏನು ಕಾರಣ? ಎಂದರೆ, 'ಯಃ' 'ಯತ್' ಎಂಬೆರಡು ಪದಗಳು 'ನಪುಂಸಕಮ್' ಎಂಬ ಸೂತ್ರಕ್ಕೆ ವಿಷಯಗಳಾಗಿದ್ದರೂ ತ್ಯದಾದಿಗಣಪಾಠದಲ್ಲಿ ಪಠಿತವಾದ್ದರಿಂದ, 'ತ್ಯದಾದಿ' ವಿಷಯಕವಾದ ಸೂತ್ರದಿಂದಲೇ ಏಕಶೇಷವನ್ನು ನಿರ್ವಾಹ ಮಾಡಬೇಕೆಂದು ಶ್ರುತಪ್ರಕಾಶದಲ್ಲಿ ಹೇಳಲಾಗಿದೆ. ಅಂದರೆ

**प्रकाशः –**

प्रागुक्तदोषनिरासाय श्रुतप्रकाशोक्तं समाधानद्वयमनूद्यापाकरोति – **केचित्त्वति** ।। **गुणजातमिति** ।। सत्यकामत्वादीत्यर्थः ।।

ವಿವರಣೆ - ಹಿಂದೆ ಅದ್ವೈತಿಗಳಿಗೆ ಹೇಳಲ್ಪಟ್ಟ ದೋಷಗಳನ್ನು ಪರಿಹರಿಸುವುದಕ್ಕಾಗಿ ರಾಮಾನುಜರು ಪ್ರಯತ್ನ ಪಟ್ಟಿದ್ದಾರೆ. ಮೇಲಿನ ಆಕ್ಷೇಪಗಳಿಗೆ ಶ್ರುತಪ್ರಕಾಶದಲ್ಲಿ ಹೇಳಲ್ಪಟ್ಟ ಎರಡು ಸಮಾಧಾನಗಳನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಕೇಚಿತ್ತು' ಇತ್ಯಾದಿ ವಾಕ್ಯದಿಂದ. 'ಗುಣಜಾತಮ್' ಎಂದರೆ 'ಸತ್ಯಕಾಮತ್ವವೇ ಮೊದಲಾದ ಗುಣಗಳ ಸಮೂಹ' ಎಂದರ್ಥ.

**प्रकाशः – त्यदादीनीति** ।। त्यद्तद्यदित्यादीनि शब्दरूपाणि सर्वैः इत्यदादिभिरन्यैश्च सह वचने नित्यं शिष्यन्ते, इत्येकस्य शेषे पुल्लिङ्गशेषः कुतो नेत्यत आह – **नपुंसकमिति** ।।

'ತ್ಯದಾದೀನಾಮ್' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ತ್ಯತ್, ತತ್, ಯತ್ ಇವೇ ಮೊದಲಾದ ಶಬ್ದಗಳು ಸರ್ವನಾಮ ಶಬ್ದವೆನಿಸಿದ, ತ್ಯತ್, ತತ್ ಇವೇ ಮೊದಲಾದ ಶಬ್ದಗಳಿಂದಲೇ, ಮತ್ತು ಬೇರೆ ವಿಧವಾದ ಶಬ್ದಗಳಿಂದಲೂ ಒಟ್ಟಿಗೆ ಪ್ರಯೋಗ ಮಾಡಿದಾಗ ನಿತ್ಯವಾಗಿ ಒಂದು ಶಬ್ದವಷ್ಟೇ ಉಳಿಯುತ್ತದೆ. ಹೀಗೆ ಏಕವದ್ಭಾವವನ್ನು ದ್ವಂದ್ವ ಸಮಾಸದಲ್ಲಿ 'ತ್ಯದಾದೀನಿ ಸರ್ವೈರ್ನಿತ್ಯಮ್' ಎಂಬ ಸೂತ್ರವು ವಿಧಾನ ಮಾಡಿದೆ. ಹೀಗೆ ಏಕವದ್ಭಾವವು ಬರುವುದಾದರೆ ಪುಲ್ಲಿಂಗವೇ ಕೊನೆಯಲ್ಲೇಕೆ ಉಳಿಯಬೇಕು ಎಂಬ ಪ್ರಶ್ನೆಗೆ 'ನಪುಂಸಕಮ್' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः –** नपुंसकानपुंसकमात्रकृतविशेषेऽनपुंसकेन सहोक्तौ च नपुंसकं शिष्यते । एकवच्चास्य कार्यं विकल्पेन भवतीति नपुंसकस्य शेष एकवचनं चेत्यर्थः।

ಏಕವದ್ಭಾವ ಮಾಡುವಾಗ ಪ್ರಾತಿಪದಿಕ ಅರ್ಥ ಮೊದಲಾದವುಗಳಿಗೆ ಯಾವ ವ್ಯತ್ಯಾಸವೂ ಇಲ್ಲದೇ ಕೇವಲ ನಪುಂಸಕ ಮತ್ತು ಅನಪುಂಸಕ ಎಂಬ ನಿಮಿತ್ತದಿಂದಷ್ಟೇ ವ್ಯತ್ಯಾಸವಿರಬೇಕು. ಇಂತಹ ನಪುಂಸಕ ಶಬ್ದವನ್ನು ಅನಪುಂಸಕ ಶಬ್ದದ ಜೊತೆಗೆ ಹೇಳಿದಾಗ ನಪುಂಸಕವೇ ಕೊನೆಯಲ್ಲಿ ಉಳಿಯುತ್ತದೆ. ಮತ್ತು ಏಕವದ್ಭಾವವನ್ನೂ ಕೂಡ ಹೊಂದುತ್ತದೆ. ಇದು ವಿಕಲ್ಪ. ಇದರಿಂದ ಸರ್ವನಾಮಶಬ್ದಗಳಿಗೆ ದ್ವಂದ್ವ ಸಮಾಸ ಮಾಡಿದಾಗ ಏಕವದ್ಭಾವವೂ ಮತ್ತು ಕೊನೆಯಲ್ಲಿ ನಪುಂಸಕಲಿಂಗವೂ ಬರುತ್ತದೆಂದು ತಿಳಿಯಿತು.

**प्रकाशः –** ननु किमिह सूत्रद्वयोदाहरणेन कृत्यम् । यावता ''नपुंसकमनपुंसकेन'' इति सूत्रेणैव 'यः' 'यत्' इति पुन्नपुंसकयोर्विग्रहे नपुंसकैकशेषस्सिध्यति ।

ಪ್ರಶ್ನೆ - ಗ್ರಂಥದಲ್ಲಿ 'ನಪುಂಸಕಮನಪುಂಸಕೇನ' ಮತ್ತು 'ತ್ಯದಾದೀನಿ ಸರ್ವೈರ್ನಿತ್ಯಮ್' ಎಂಬರೆಡು ಸೂತ್ರಗಳನ್ನು ಉಲ್ಲೇಖಿಸಿದ್ದಾರೆ. ಎರಡು ಸೂತ್ರಗಳನ್ನೇಕೆ ಉಲ್ಲೇಖಿಸಬೇಕು. ಏಕೆಂದರೆ

'ನಪುಂಸಕಮನಪುಂಸಕೇನ' ಎಂಬ ಸೂತ್ರದಿಂದಲೇ 'ಯಃ' ಮತ್ತು 'ಯತ್' ಎಂಬೆರಡು ಪುಲ್ಲಿಂಗ-ನಪುಂಸಕಲಿಂಗಗಳಿಗೆ ವಿಗ್ರಹ ಮಾಡಿದಾಗ, ನಪುಂಸಕ ಲಿಂಗವು ಹಾಗೂ ಏಕಶೇಷವದ್ಭಾವವೂ ಕೂಡ ಸಿದ್ಧವಾಗುವುದರಿಂದ, ಪುನಃ 'ತ್ಯದಾದೀನಿ ಸರ್ವೈರ್ನಿತ್ಯಮ್' ಎಂಬ ಸೂತ್ರವನ್ನು ಉಲ್ಲೇಖ ಮಾಡುವ ಅನಿವಾರ್ಯತೆ ಇರಲಿಲ್ಲ.

**प्रकाशः** – नच नित्यमेकशेषसिद्ध्यर्थं त्यदादीनीत्यस्योक्तिरिति वाच्यम् ।

ಅವಾಂತರ ಉತ್ತರ - ನಿತ್ಯವಾಗಿ ಏಕಶೇಷಭಾವವು ಬರುತ್ತದೆಂದು 'ನಪುಂಸಕಮ್' ಇತ್ಯಾದಿ ಸೂತ್ರದಿಂದ ತಿಳಿಯುವುದಿಲ್ಲ. ಅದಕ್ಕೋಸ್ಕರ 'ತ್ಯದಾದೀನಾಮ್' ಇತ್ಯಾದಿ ಸೂತ್ರವನ್ನು ಗ್ರಂಥದಲ್ಲಿ ಹೇಳಿದ್ದಾರೆ.

**प्रकाशः** – एकवद्भावसूत्र एकवद्भावस्यैव वैकल्पिकत्वेनैकशेषस्य तत्रापि नित्यत्वात् । यथोक्तं मञ्जर्याम् ''अन्यतरस्यां ग्रहणमानन्तर्यादेकवच्चेत्यनेन सम्बध्यते । न त्वेकशेषेणेत्याह'' इतीति ।

ಪ್ರಶ್ನೆ - ಸೂತ್ರದಲ್ಲಿರುವ 'ಅನ್ಯತರಸ್ಯಾಮ್' ಎಂಬ ಪದದಿಂದ ಹೇಳಲ್ಪಟ್ಟ ವಿಕಲ್ಪವು ಏಕವಚನಕ್ಕೆ ಮಾತ್ರ ಸಂಬಂಧ ಪಡುತ್ತದೆ ಹೊರತು, ಏಕಶೇಷಕ್ಕೆ ಅನ್ವಯವಾಗುವುದಿಲ್ಲ. ಆವಾಗ ಏಕವಚನವು ಮಾತ್ರ ವಿಕಲ್ಪವಾಗುತ್ತದೆ ಹೊರತು, ಏಕಶೇಷವು ನಿತ್ಯವೆಂದೇ ಸಿದ್ಧವಾಗುತ್ತದೆ. ಏಕವದ್ಭಾವಿಷಯದಲ್ಲಷ್ಟೇ ಅನ್ವಯ ಹೊಂದುತ್ತದೆ. ಇದನ್ನೇ ಮಂಜರೀ ವ್ಯಾಖ್ಯಾನದಲ್ಲಿ 'ಅನ್ಯತರಸ್ಯಾಂ ಗ್ರಹಣಮ್ ಆನಂತರ್ಯಾದ್ ಏಕವಚನದ್ ಇತ್ಯನೇನ ಸಂಬಧ್ಯತೇ । ನತು ಏಕಶೇಷೇಣ' ಎಂದರೆ ಸೂತ್ರದಲ್ಲಿರುವ 'ಅನ್ಯತರಸ್ಯಾಮ್' ಎಂಬ ಪದದ ಗ್ರಹಣವು ಹತ್ತಿರವಿರುವ ಕಾರಣ, ಏಕವಚನದಲ್ಲಷ್ಟೇ ಅನ್ವಯ ಹೊಂದುತ್ತದೆ. ಏಕಶೇಷದ ಜೊತೆಗೆ ಅನ್ವಯ ಹೊಂದುವುದಿಲ್ಲ ಎಂದು ಹೇಳಲಾಗಿದೆ. ಆದ್ದರಿಂದ 'ನಪುಂಸಕ' ಇತ್ಯಾದಿ ಸೂತ್ರವನ್ನು ಉಲ್ಲೇಖ ಮಾಡಿದ್ದರೆ ಸಾಕಾಗುತ್ತಿತ್ತು. ಪುನಃ 'ತ್ಯದಾದೀನಿ' ಇತ್ಯಾದಿ ಸೂತ್ರವನ್ನು ಉಲ್ಲೇಖ ಮಾಡುವ ಅವಶ್ಯಕತೆ ಇರಲಿಲ್ಲವಲ್ಲವೇ?

**प्रकाशः** – सत्यम् । तथापि 'यः' 'यत्' इत्यनयोः ''नपुंसकम्'' इति सूत्रविषयत्वेऽपि त्यदादिषु पाठाद्विशिष्य त्यदादिविषयसूत्रेणैवैकशेषनिर्वाहश्श्रुतप्रकाशे दर्शित इत्यभिप्रेत्य यथाश्रुततद्ग्रन्थानुवादोऽत्र कृत इत्यदोषः ।

ಉತ್ತರ - ಗ್ರಂಥಕಾರರು ಶ್ರುತಪ್ರಕಾಶದಲ್ಲಿ ಹೇಳಿದ್ದನ್ನಷ್ಟೇ ಅನುವಾದ ಮಾಡಿದ್ದಾರೆ ಹೊರತು, ಸ್ವತಂತ್ರವಾಗಿ ಸೂತ್ರದ್ವಯಗಳನ್ನು ಉದಾಹರಿಸಿಲ್ಲ. ಹಾಗಾದರೆ ಶ್ರುತಪ್ರಕಾಶದಲ್ಲಿ ಎರಡು ಸೂತ್ರಗಳನ್ನು ಉಲ್ಲೇಖಿಸಲು ಏನು ಕಾರಣ? ಎಂದರೆ, 'ಯಃ' 'ಯತ್' ಎಂಬೆರಡು ಪದಗಳು 'ನಪುಂಸಕಮ್' ಎಂಬ ಸೂತ್ರಕ್ಕೆ ವಿಷಯಗಳಾಗಿದ್ದರೂ ತ್ಯದಾದಿಗಣಪಾಠದಲ್ಲಿ ಪಠಿತವಾದ್ದರಿಂದ, 'ತ್ಯದಾದಿ' ವಿಷಯಕವಾದ ಸೂತ್ರದಿಂದಲೇ ಏಕಶೇಷವನ್ನು ನಿರ್ವಾಹ ಮಾಡಬೇಕೆಂದು ಶ್ರುತಪ್ರಕಾಶದಲ್ಲಿ ಹೇಳಲಾಗಿದೆ. ಅಂದರೆ

'ತ್ಯದಾದಿ' ಸೂತ್ರವು ವಿಶೇಷ ಸೂತ್ರವಾಗಿದೆ. 'ನಪುಂಸಕಮ್' ಇತ್ಯಾದಿ ಸೂತ್ರವು ಸಾಮಾನ್ಯ ಸೂತ್ರವಾಗಿದೆ. 'ಯಃ' 'ಯತ್' ಇತ್ಯಾದಿ ಪದಗಳಿಗೆ ಏಕಶೇಷ ಮಾಡಬೇಕೆಂದು ಸ್ಪಷ್ಟವಾಗಿ ತಿಳಿಯುವುದು 'ತ್ಯದಾದಿ' ಸೂತ್ರದಿಂದಲೇ. ನಪುಂಸಕಲಿಂಗದಲ್ಲಿ ಉಳಿಯುತ್ತದೆಂದು ತಿಳಿಯುವುದು 'ನಪುಂಸಕಮ್' ಎಂಬ ಸೂತ್ರದಿಂದ. ಆದ್ದರಿಂದ, ಎರಡೂ ಸೂತ್ರಗಳನ್ನು ಶ್ರುತಪ್ರಕಾಶದಲ್ಲಿ ಉಲ್ಲೇಖಿಸಲಾಗಿದೆ. ಆದ್ದರಿಂದ ಪ್ರಕೃತ ಗ್ರಂಥಕಾರರು, ಯಥಾ ಶ್ರುತವಾದ ಶ್ರುತಪ್ರಕಾಶವನ್ನೇ ಇಲ್ಲಿ ಅನುವಾದ ಮಾಡಿರುತ್ತಾರೆ. ಆದ್ದರಿಂದ ಯಾವುದೇ ದೋಷವಿಲ್ಲ.

**प्रकाशः** – ननु च यच्छब्दस्य त्यदादिषु पाठेऽपि ''नपुंसकमनपुंसकेन'' इत्यनेनैवैकशेषो वाच्यः । अन्यथैकवद्भावाप्राप्तेः । सूत्रेऽस्येत्यनेन ''नपुंसकेन'' इत्यनेन प्राप्तैकशेषस्यैव परामर्शेनैकवद्भावोक्तेः । यथोक्तं मञ्जर्यां ''अस्य ग्रहणमेकवद्वेत्यस्योत्तरत्रानुवृत्तिर्मा भूत्'' इति ।

ಪ್ರಶ್ನೆ - 'ಯತ್' ಶಬ್ದವನ್ನು ತ್ಯದಾದಿ ಗಣದಲ್ಲಿ ಪಠಿಸಿದ್ದರೂ ಕೂಡ 'ನಪುಂಸಕಮನಪುಂಸಕೇನ' ಎಂಬ ಸೂತ್ರದಿಂದಲೇ ಏಕಶೇಷವನ್ನು ಹೇಳಬೇಕು. ಈ ಸೂತ್ರದ ಹೊರತಾಗಿ ಬೇರೆ ಸೂತ್ರದಿಂದ ಏಕವದ್‌ಭಾವ ವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ - 'ತ್ಯದಾದಿ' ಸೂತ್ರದಿಂದ ಏಕವದ್ಭಾವವಂತೂ ಬರಲು ಸಾಧ್ಯವಿಲ್ಲ. ಏಕವದ್ಭಾವ ಬರುವುದು 'ನಪುಂಸಕಮ್' ಎಂಬ ಸೂತ್ರದಿಂದಲೇ. ಏಕೆಂದರೆ 'ನಪುಂಸಕಮ್' ಎಂಬ ಸೂತ್ರದಲ್ಲಿ 'ಅಸ್ಯ' ಎಂಬ ಪದದಿಂದ ಪ್ರಾಪ್ತವಾದ ಏಕಶೇಷವನ್ನು ಪರಾಮರ್ಶ ಮಾಡಿ ಏಕವಚನವನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ಏಕವದ್ಭಾವ ಸಿದ್ಧವಾಗುವುದು ಎರಡನೆಯ ಸೂತ್ರದಿಂದಲೇ ಹೊರತು, ಮೊದಲನೆಯ ಸೂತ್ರದಿಂದಲ್ಲ. ಇದನ್ನೇ ಮಂಜರೀ ವ್ಯಾಖ್ಯಾನದಲ್ಲಿ 'ಅಸ್ಯ ಗ್ರಹಣಮ್ ಏಕವಚ್ಚೇತ್ಯ-ಸ್ಯೋತ್ತರತ್ರಾನುವೃತ್ತಿರ್ಮಾ ಭೂತ್' ಸೂತ್ರದಲ್ಲಿರುವ 'ಏಕವಚ್ಚ' ಎಂಬುದು ಮುಂದಿನ ಸೂತ್ರಗಳಲ್ಲಿ ಅನುವೃತ್ತವಾಗಬಾರದೆಂಬ ಉದ್ದೇಶದಿಂದಲೇ 'ಅಸ್ಯ' ಎಂಬ ಪದವನ್ನು ಉಲ್ಲೇಖಿಸಲಾಗಿದೆ ಎಂದು ಹೇಳಿದ್ದಾರೆ. ಹೀಗೆ 'ಅಸ್ಯ' ಎಂಬ ಪದಗ್ರಹಣದ ಬಲದಿಂದ, ಏಕವಚನ ಹಾಗೂ ಏಕೋದ್ಭಾವಗಳೆರಡೂ ಇದೇ ಸೂತ್ರದಿಂದ ಸಿದ್ಧವಾಗುತ್ತದೆಂದು ತಿಳಿಯುತ್ತದೆ. ಹೀಗಿರುವಾಗ 'ತ್ಯದಾದಿ' ಸೂತ್ರವನ್ನು ಉಲ್ಲೇಖಿಸುವುದು ತಪ್ಪಲ್ಲವೇ?

**प्रकाशः** – मैवम् । ''त्यदादीनि'' इत्यनेन सामान्यत एकशेषप्राप्तौ नपुंसकैकशेषस्य ''नपुंसकम्'' इति सूत्रेणैव प्राप्तत्वेनैकवद्भावसिद्धेरिति ।

ಉತ್ತರ - ಈಗಾಗಲೇ ಹೇಳಿದಂತೆ 'ತ್ಯದಾದೀನಾಮ್' ಎಂಬ ಸೂತ್ರವು ಸಾಮಾನ್ಯವಾಗಿ ಏಕಶೇಷವನ್ನು ಹೇಳುತ್ತಿದೆ. ಕೊನೆಯಲ್ಲಿ ನಪುಂಸಕಲಿಂಗವೇ ಉಳಿಯುತ್ತದೆಂದು ಮತ್ತು ಏಕವದ್ಭಾವವು ಪ್ರಾಪ್ತವಾಗುತ್ತದೆಂದು 'ನಪುಂಸಕಮ್' ಎಂಬ ವಿಶೇಷ ಸೂತ್ರದಿಂದ ತಿಳಿಯುತ್ತದೆ. ಆದ್ದರಿಂದ ಸಾಮಾನ್ಯ ವಿಧಾಯಕ ವಿಶೇಷ ವಿಧಾಯಕ ಎಂಬ ಕಾರಣದಿಂದ ಎರಡೂ ಸೂತ್ರಗಳು ಸಾರ್ಥಕಗಳೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ''यदन्ते'' इत्यत्र यच्चाकाशश्चेति यदित्यभिप्रायेण त्यदादि-सूत्रोक्तिः । यच्च यश्चेति यदित्याशयेन नपुंसकसूत्रोक्तिरिति केचित् ।

ಈ ವಿಷಯದಲ್ಲಿ ಕೆಲವರು ಹೇಳುವ ಸಮಾಧಾನ ಹೀಗಿದೆ - 'ತ್ಯದಾದಿ' ಸೂತ್ರದಲ್ಲಿ ಸರ್ವನಾಮ ಸಂಜ್ಞೆಯುಳ್ಳ 'ತ್ಯತ್' ಮೊದಲಾದವುಗಳ ಜೊತೆಗೆ ಸಮಾಸವಾಗಿ ಏಕಶೇಷವನ್ನು ಹೊಂದುತ್ತವೆಂದು ಹೇಳಿದ್ದಲ್ಲದೇ, 'ಸರ್ವೈಃ' ಎಂಬುದಾಗಿ ಸರ್ವನಾಮ ಸಂಜ್ಞೆಯನ್ನು ಹೊಂದದ ಬೇರೆ ಶಬ್ದಗಳ ಜೊತೆಗೆ ಸಮಾಸವಾದಾಗಲೂ ಕೂಡ ಏಕಶೇಷವು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ. ಉದಾಹರಣೆ - 'ಯಚ್ಚ ಆಕಾಶಶ್ಚ ಯತ್' ಎಂದೇ ಆಗುತ್ತದೆ. ಇಲ್ಲಿರುವ 'ಆಕಾಶ' ಶಬ್ದವು ಸರ್ವನಾಮವಾಗಿಲ್ಲ. ಆದರೂ ಕೂಡ ಇದರ ಜೊತೆಗೆ 'ಯತ್' ಎಂಬ ಸರ್ವನಾಮ ಶಬ್ದವು ಸೇರಿದಾಗ ಕೊನೆಯಲ್ಲಿ 'ಯತ್' ಎಂದೇ ಉಳಿದಿದೆ. ಅಥವಾ ನಪುಂಸಕಲಿಂಗಶಬ್ದವು ನಪುಂಸಕಲಿಂಗವಲ್ಲದ ಶಬ್ದದ ಜೊತೆಗೆ ಸೇರಿದಾಗ ಕೊನೆಯಲ್ಲಿ ನಪುಂಸಕಲಿಂಗವಾದ ಶಬ್ದವೇ ಉಳಿಯುತ್ತದೆಂದು ತಿಳಿಸಲು 'ನಪುಂಸಕಮ್' ಎಂಬ ಸೂತ್ರವು ಹೊರಡುತ್ತದೆ. ಉದಾಹರಣೆ - 'ಯಚ್ಚ + ಯಶ್ಚ =ಯತ್' ಎಂದು ಸಮಾಸ ಮಾಡಿದಾಗ, 'ಯಃ' ಎಂಬ ಪುಲ್ಲಿಂಗ ಶಬ್ದದ ಜೊತೆಗೆ ಸೇರಿದಾಗಲೂ ಕೊನೆಯಲ್ಲಿ 'ಯತ್' ಎಂದು ನಪುಂಸಕಲಿಂಗವೇ ಉಳಿಯುತ್ತದೆ. ಹೀಗೆ ಎರಡು ಬಗೆಯ ವಿಗ್ರಹಗಳು ಲೋಕದಲ್ಲಿರುವುದರಿಂದ ಎರಡು ಸೂತ್ರಗಳನ್ನು ಶ್ರುತಪ್ರಕಾಶದಲ್ಲಿ ಉಲ್ಲೇಖ ಮಾಡಲಾಗಿದೆ.

**प्रकाशः** – यच्छब्दद्वयनिर्दिष्टमुभयं तच्छब्देन प्रतिनिर्दिश्यत इति भावेनाह – **एवञ्चेति** ।।

ಶ್ರುತಿಯಲ್ಲಿರುವ 'ಯತ್' ಶಬ್ದದಿಂದ ದಹರಾಕಾಶವೆಂಬ ಬ್ರಹ್ಮ ಮತ್ತು ಗುಣಗಳ ಸಮೂಹ ಎರಡನ್ನೂ ವಿವಕ್ಷಿಸಬೇಕೆಂದು ಹೇಳಲಾಯಿತು. ಹಾಗಾದರೆ ಇವೆರಡನ್ನು 'ತತ್' ಶಬ್ದದಿಂದ ನಿರ್ದೇಶ ಮಾಡಬೇಕಲ್ಲವೇ? ಎಂದರೆ ಅದನ್ನೇ ಗ್ರಂಥಕಾರರು ಇವೆರಡನ್ನು 'ತತ್' ಶಬ್ದದಿಂದ ಪರಾಮರ್ಶ ಮಾಡಿರುತ್ತಾರೆ. ಈ ವಿಷಯವು 'ಏವಂಚ' ಇತ್ಯಾದಿ ವಾಕ್ಯದಲ್ಲಿ ಸ್ಪಷ್ಟವಾಗಿದೆ.

**प्रकाशः** – यथोक्तं तद्भाष्ये ''तस्मिन् दहरपुण्डरीकवेश्मनि यो दहराकाशो यच्च तदन्तर्वर्तिगुणजातं तदुभयमन्वेष्टव्यम्'' इति ।।

ಇದನ್ನೇ ರಾಮಾನುಜ ಭಾಷ್ಯದಲ್ಲಿ 'ತಸ್ಮಿನ್‌ದಹರಪುಂಡರೀಕವೇಶ್ಮನಿ ಯೋ ದಹರಾಕಾಶೋ ಯಚ್ಚ ತದಂತರ್ವರ್ತಿಗುಣಜಾತಂ ತದುಭಯಮನ್ವೇಷ್ಟವ್ಯಮ್' ದಹರಪುಂಡರೀಕವೆಂಬ ಮನೆಯಲ್ಲಿ ಯಾವ ದಹರಾಕಾಶ ಮತ್ತು ತದಂತರ್ವರ್ತಿಯಾದ ಗುಣಸಮೂಹಗಳು ಇವೆಯೋ, ಅವೆರಡನ್ನು ಅನ್ವೇಷಣೆ ಮಾಡಬೇಕು ಎಂದು ಹೇಳಲಾಗಿದೆ.

**प्रकाशः** – **अन्यथेति** ।। सिद्धान्ते प्रागुपपादितदिशेति भावः ।। एतेन दहराकाशस्य तद्गुणजातस्य चोत्तरवाक्ये श्रवणात्तदनुरोधेनोक्तकल्पनं न्याय्यमिति प्रत्युक्तम् । उक्तरीत्याऽन्यथोपपत्तेः ।

'ತ್ಯದಾದಿ' ಸೂತ್ರವು ವಿಶೇಷ ಸೂತ್ರವಾಗಿದೆ. 'ನಪುಂಸಕಮ್' ಇತ್ಯಾದಿ ಸೂತ್ರವು ಸಾಮಾನ್ಯ ಸೂತ್ರವಾಗಿದೆ. 'ಯಃ' 'ಯತ್' ಇತ್ಯಾದಿ ಪದಗಳಿಗೆ ಏಕಶೇಷ ಮಾಡಬೇಕೆಂದು ಸ್ಪಷ್ಟವಾಗಿ ತಿಳಿಯುವುದು 'ತ್ಯದಾದಿ' ಸೂತ್ರದಿಂದಲೇ. ನಪುಂಸಕಲಿಂಗದಲ್ಲಿ ಉಳಿಯುತ್ತದೆಂದು ತಿಳಿಯುವುದು 'ನಪುಂಸಕಮ್' ಎಂಬ ಸೂತ್ರದಿಂದ. ಆದ್ದರಿಂದ, ಎರಡೂ ಸೂತ್ರಗಳನ್ನು ಶ್ರುತಪ್ರಕಾಶದಲ್ಲಿ ಉಲ್ಲೇಖಿಸಲಾಗಿದೆ. ಆದ್ದರಿಂದ ಪ್ರಕೃತ ಗ್ರಂಥಕಾರರು, ಯಥಾ ಶ್ರುತವಾದ ಶ್ರುತಪ್ರಕಾಶವನ್ನೇ ಇಲ್ಲಿ ಅನುವಾದ ಮಾಡಿರುತ್ತಾರೆ. ಆದ್ದರಿಂದ ಯಾವುದೇ ದೋಷವಿಲ್ಲ.

**प्रकाशः** – ननु च यच्छब्दस्य त्यदादिषु पाठेऽपि ''नपुंसकमनपुंसकेन'' इत्यनेनैवैकशेषो वाच्यः । अन्यथैकवद्भावाप्राप्तेः । सूत्रेऽस्येत्यनेन ''नपुंसकेन'' इत्यनेन प्राप्तैकशेषस्यैव परामर्शेनैकवद्भावोक्तेः । यथोक्तं मञ्जर्यां ''अस्य ग्रहणमेकवच्चेत्यस्योत्तरत्रानुवृत्तिर्मा भूत्'' इति ।

ಪ್ರಶ್ನೆ - 'ಯತ್' ಶಬ್ದವನ್ನು ತ್ಯದಾದಿ ಗಣದಲ್ಲಿ ಪಠಿಸಿದ್ದರೂ ಕೂಡ 'ನಪುಂಸಕಮನಪುಂಸಕೇನ' ಎಂಬ ಸೂತ್ರದಿಂದಲೇ ಏಕಶೇಷವನ್ನು ಹೇಳಬೇಕು. ಈ ಸೂತ್ರದ ಹೊರತಾಗಿ ಬೇರೆ ಸೂತ್ರದಿಂದ ಏಕವದ್‌ಭಾವ ವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ - 'ತ್ಯದಾದಿ' ಸೂತ್ರದಿಂದ ಏಕವದ್ಭಾವವಂತೂ ಬರಲು ಸಾಧ್ಯವಿಲ್ಲ. ಏಕವದ್ಭಾವ ಬರುವುದು 'ನಪುಂಸಕಮ್' ಎಂಬ ಸೂತ್ರದಿಂದಲೇ. ಏಕೆಂದರೆ 'ನಪುಂಸಕಮ್' ಎಂಬ ಸೂತ್ರದಲ್ಲಿ 'ಅಸ್ಯ' ಎಂಬ ಪದದಿಂದ ಪ್ರಾಪ್ತವಾದ ಏಕಶೇಷವನ್ನು ಪರಾಮರ್ಶ ಮಾಡಿ ಏಕವಚನವನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ಏಕವದ್ಭಾವ ಸಿದ್ಧವಾಗುವುದು ಎರಡನೆಯ ಸೂತ್ರದಿಂದಲೇ ಹೊರತು, ಮೊದಲನೆಯ ಸೂತ್ರದಿಂದಲ್ಲ. ಇದನ್ನೇ ಮಂಜರೀ ವ್ಯಾಖ್ಯಾನದಲ್ಲಿ 'ಅಸ್ಯ ಗ್ರಹಣಮ್ ಏಕವಚ್ಚೇತ್ಯ-ಸ್ಯೋತ್ತರತ್ರಾನುವೃತ್ತಿರ್ಮಾ ಭೂತ್' ಸೂತ್ರದಲ್ಲಿರುವ 'ಏಕವಚ್ಚ' ಎಂಬುದು ಮುಂದಿನ ಸೂತ್ರಗಳಲ್ಲಿ ಅನುವೃತ್ತವಾಗಬಾರದೆಂಬ ಉದ್ದೇಶದಿಂದಲೇ 'ಅಸ್ಯ' ಎಂಬ ಪದವನ್ನು ಉಲ್ಲೇಖಿಸಲಾಗಿದೆ ಎಂದು ಹೇಳಿದ್ದಾರೆ. ಹೀಗೆ 'ಅಸ್ಯ' ಎಂಬ ಪದಗ್ರಹಣದ ಬಲದಿಂದ, ಏಕವಚನ ಹಾಗೂ ಏಕೋದ್ಭಾವಗಳೆರಡೂ ಇದೇ ಸೂತ್ರದಿಂದ ಸಿದ್ಧವಾಗುತ್ತದೆಂದು ತಿಳಿಯುತ್ತದೆ. ಹೀಗಿರುವಾಗ 'ತ್ಯದಾದಿ' ಸೂತ್ರವನ್ನು ಉಲ್ಲೇಖಿಸುವುದು ತಪ್ಪಲ್ಲವೇ?

**प्रकाशः** – मैवम् । ''त्यदादीनि'' इत्यनेन सामान्यत एकशेषप्राप्तौ नपुंसकैकशेषस्य ''नपुंसकम्'' इति सूत्रेणैव प्राप्तत्वेनैकवद्भावसिद्धेरिति ।

ಉತ್ತರ - ಈಗಾಗಲೇ ಹೇಳಿದಂತೆ 'ತ್ಯದಾದೀನಾಮ್' ಎಂಬ ಸೂತ್ರವು ಸಾಮಾನ್ಯವಾಗಿ ಏಕಶೇಷವನ್ನು ಹೇಳುತ್ತಿದೆ. ಕೊನೆಯಲ್ಲಿ ನಪುಂಸಕಲಿಂಗವೇ ಉಳಿಯುತ್ತದೆಂದು ಮತ್ತು ಏಕವದ್ಭಾವವು ಪ್ರಾಪ್ತವಾಗುತ್ತದೆಂದು 'ನಪುಂಸಕಮ್' ಎಂಬ ವಿಶೇಷ ಸೂತ್ರದಿಂದ ತಿಳಿಯುತ್ತದೆ. ಆದ್ದರಿಂದ ಸಾಮಾನ್ಯ ವಿಧಾಯಕ ವಿಶೇಷ ವಿಧಾಯಕ ಎಂಬ ಕಾರಣದಿಂದ ಎರಡೂ ಸೂತ್ರಗಳು ಸಾರ್ಥಕಗಳೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ''यदन्ते'' इत्यत्र यच्चाकाशश्चेति यदित्यभिप्रायेण त्यदादि-सूत्रोक्तिः । यच्च यश्चेति यदित्याशयेन नपुंसकसूत्रोक्तिरिति केचित् ।

ಈ ವಿಷಯದಲ್ಲಿ ಕೆಲವರು ಹೇಳುವ ಸಮಾಧಾನ ಹೀಗಿದೆ - 'ತ್ಯದಾದಿ' ಸೂತ್ರದಲ್ಲಿ ಸರ್ವನಾಮ ಸಂಜ್ಞೆಯುಳ್ಳ 'ತ್ಯತ್' ಮೊದಲಾದವುಗಳ ಜೊತೆಗೆ ಸಮಾಸವಾಗಿ ಏಕಶೇಷವನ್ನು ಹೊಂದುತ್ತವೆಂದು ಹೇಳಿದ್ದಲ್ಲದೇ, 'ಸರ್ವೈಃ' ಎಂಬುದಾಗಿ ಸರ್ವನಾಮ ಸಂಜ್ಞೆಯನ್ನು ಹೊಂದದ ಬೇರೆ ಶಬ್ದಗಳ ಜೊತೆಗೆ ಸಮಾಸವಾದಾಗಲೂ ಕೂಡ ಏಕಶೇಷವು ಪ್ರಾಪ್ತವಾಗುತ್ತದೆಂದು ಹೇಳಲಾಗಿದೆ. ಉದಾಹರಣೆ - 'ಯಚ್ಚ ಆಕಾಶಶ್ಚ ಯತ್' ಎಂದೇ ಆಗುತ್ತದೆ. ಇಲ್ಲಿರುವ 'ಆಕಾಶ' ಶಬ್ದವು ಸರ್ವನಾಮವಾಗಿಲ್ಲ. ಆದರೂ ಕೂಡ ಇದರ ಜೊತೆಗೆ 'ಯತ್' ಎಂಬ ಸರ್ವನಾಮ ಶಬ್ದವು ಸೇರಿದಾಗ ಕೊನೆಯಲ್ಲಿ 'ಯತ್' ಎಂದೇ ಉಳಿದಿದೆ. ಅಥವಾ ನಪುಂಸಕಲಿಂಗಶಬ್ದವು ನಪುಂಸಕಲಿಂಗವಲ್ಲದ ಶಬ್ದದ ಜೊತೆಗೆ ಸೇರಿದಾಗ ಕೊನೆಯಲ್ಲಿ ನಪುಂಸಕಲಿಂಗವಾದ ಶಬ್ದವೇ ಉಳಿಯುತ್ತದೆಂದು ತಿಳಿಸಲು 'ನಪುಂಸಕಮ್' ಎಂಬ ಸೂತ್ರವು ಹೊರಡುತ್ತದೆ. ಉದಾಹರಣೆ - 'ಯಚ್ಚ + ಯಶ್ಚ =ಯತ್' ಎಂದು ಸಮಾಸ ಮಾಡಿದಾಗ, 'ಯಃ' ಎಂಬ ಪುಲ್ಲಿಂಗ ಶಬ್ದದ ಜೊತೆಗೆ ಸೇರಿದಾಗಲೂ ಕೊನೆಯಲ್ಲಿ 'ಯತ್' ಎಂದು ನಪುಂಸಕಲಿಂಗವೇ ಉಳಿಯುತ್ತದೆ. ಹೀಗೆ ಎರಡು ಬಗೆಯ ವಿಗ್ರಹಗಳು ಲೋಕದಲ್ಲಿರುವುದರಿಂದ ಎರಡು ಸೂತ್ರಗಳನ್ನು ಶ್ರುತಪ್ರಕಾಶದಲ್ಲಿ ಉಲ್ಲೇಖ ಮಾಡಲಾಗಿದೆ.

**प्रकाशः** – यच्छब्दद्वयनिर्दिष्टमुभयं तच्छब्देन प्रतिनिर्दिश्यत इति भावेनाह – **एवञ्चेति** ।।

ಶ್ರುತಿಯಲ್ಲಿರುವ 'ಯತ್' ಶಬ್ದದಿಂದ ದಹರಾಕಾಶವೆಂಬ ಬ್ರಹ್ಮ ಮತ್ತು ಗುಣಗಳ ಸಮೂಹ ಎರಡನ್ನೂ ವಿವಕ್ಷಿಸಬೇಕೆಂದು ಹೇಳಲಾಯಿತು. ಹಾಗಾದರೆ ಇವೆರಡನ್ನು 'ತತ್' ಶಬ್ದದಿಂದ ನಿರ್ದೇಶ ಮಾಡಬೇಕಲ್ಲವೇ? ಎಂದರೆ ಅದನ್ನೇ ಗ್ರಂಥಕಾರರು ಇವೆರಡನ್ನು 'ತತ್' ಶಬ್ದದಿಂದ ಪರಾಮರ್ಶ ಮಾಡಿರುತ್ತಾರೆ. ಈ ವಿಷಯವು 'ಏವಂಚ' ಇತ್ಯಾದಿ ವಾಕ್ಯದಲ್ಲಿ ಸ್ಪಷ್ಟವಾಗಿದೆ.

**प्रकाशः** – यथोक्तं तद्भाष्ये ''तस्मिन् दहरपुण्डरीकवेश्मनि यो दहराकाशो यच्च तदन्तर्वर्तिगुणजातं तदुभयमन्वेष्टव्यम्'' इति ।।

ಇದನ್ನೇ ರಾಮಾನುಜ ಭಾಷ್ಯದಲ್ಲಿ 'ತಸ್ಮಿನ್‌ದಹರಪುಂಡರೀಕವೇಶ್ಮನಿ ಯೋ ದಹರಾಕಾಶೋ ಯಚ್ಚ ತದಂತರ್ವರ್ತಿಗುಣಜಾತಂ ತದುಭಯಮನ್ವೇಷ್ಟವ್ಯಮ್' ದಹರಪುಂಡರೀಕವೆಂಬ ಮನೆಯಲ್ಲಿ ಯಾವ ದಹರಾಕಾಶ ಮತ್ತು ತದಂತರ್ವರ್ತಿಯಾದ ಗುಣಸಮೂಹಗಳು ಇವೆಯೋ, ಅವೆರಡನ್ನು ಅನ್ವೇಷಣೆ ಮಾಡಬೇಕು ಎಂದು ಹೇಳಲಾಗಿದೆ.

**प्रकाशः** – **अन्यथेति** ।। सिद्धान्ते प्रागुपपादितदिशेति भावः ।। एतेन दहराकाशस्य तद्गुणजातस्य चोत्तरवाक्ये श्रवणात्तदनुरोधेनोक्तकल्पनं न्याय्यमिति प्रत्युक्तम् । उक्तरीत्याऽन्यथोपपत्तेः ।

ಸಿದ್ಧಾಂತದಲ್ಲಿ ಹಿಂದೆ ಉಪಪಾದಿಸಿದಂತೆ ಎಲ್ಲವನ್ನೂ ಕೂಡಿಸಬೇಕೆಂದು 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. ಇದರಿಂದ ಶ್ರುತಪ್ರಕಾಶದ ಮತ್ತೊಂದು ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು - 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ವಾಕ್ಯದಲ್ಲಿ ದಹರಾಕಾಶವನ್ನು ಹೇಳಲಾಗಿದೆ. 'ಯ ಆತ್ಮಾಽಪಹತಪಾಪ್ಮಾ' ಇತ್ಯಾದಿ ವಾಕ್ಯದಿಂದ ಗುಣಜಾತವನ್ನು ಹೇಳಲಾಗಿದೆ. ಆದ್ದರಿಂದ ಮೊದಲಿರುವ ವಾಕ್ಯದಲ್ಲಿಯೂ 'ಯಚ್ಚ' 'ಯಶ್ಚ' ಇತ್ಯಾದಿಯಾಗಿ ಸಮಾಸವನ್ನು ವಿವಕ್ಷಿಸಬೇಕು. ಆದ್ದರಿಂದ ಇದು ನ್ಯಾಯಪ್ರಾಪ್ತವಾಗಿದೆ ಎಂದು. ಇದನ್ನು ಈಗ ನಿರಾಕರಿಸಿದಂತಾಯಿತು. ಹೇಗೆಂದರೆ ಹಿಂದೆ ನಾವು ಸಿದ್ಧಾಂತದಲ್ಲಿ ಹೇಳಿದಂತೆ ಹೀಗೆ ಏಕಶೇಷವನ್ನು ಕಲ್ಪನೆ ಮಾಡದಿದ್ದರೂ ಕೂಡ 'ಯಾವಾನ್ವಾ' ಇತ್ಯಾದಿ ಮುಂದಿನ ವಾಕ್ಯವನ್ನು ಉಪಪಾದಿಸಲು ಬರುವಾಗ ಆದರ ಅನ್ಯಥಾನುಪಪತ್ತಿಯಿಂದ ಹೀಗೆ ಏಕಶೇಷವನ್ನು ಸಮರ್ಥಿಸುವುದು ಸರಿಯಲ್ಲವೆಂದು ತಿಳಿಯಬೇಕು.

**प्रकाशः** – दहरस्य ब्रह्मत्वे बाधकानां भावाच्चेति भावः ।

ಮತ್ತು ದಹರಾಕಾಶವನ್ನೇ ಬ್ರಹ್ಮವೆಂದು ಹೇಳಿದರೆ, ಅನೇಕ ಬಾಧಕಗಳಿವೆ. ಆದ್ದರಿಂದಲೂ, ದಹರಾಕಾಶದಲ್ಲಿರುವವನನ್ನು ಬ್ರಹ್ಮನೆಂದು ಹೇಳಬೇಕು.

**प्रकाशः** – यदुक्तं तस्मिन्हृदयवेश्मनि यदन्तर्वर्तते दहराख्यं तदन्तर्गुणजातं च यच्छब्दप्रातिपदिकार्थः । तत्र गुणजाते दहरान्तर्वृत्तित्वमन्वेति । दहरे च पुण्डरीकस्थत्वमिति । तदयुक्तमित्याह – **लोक इति** ।। तदेव व्यनक्ति ।। **नहीति** ।।

'ಯತ್' ಎಂಬ ಪ್ರಾದಿಪದಿಕಕ್ಕೆ ಎರಡು ಅರ್ಥಗಳು. ಹೃದಯಪುಂಡರೀಕದೊಳಿರುವ ದಹರ ಹಾಗೂ ಗುಣಸಮೂಹ ಎಂದು. ಅವರೆಡರಲ್ಲಿ 'ತಸ್ಮಿನ್' ಎಂಬಲ್ಲಿ ಹೇಳಲ್ಪಟ್ಟ ಪುಂಡರೀಕಾಂತಃಸ್ಥತ್ವವು ದಹರಾಕಾಶದಲ್ಲಿ ಅನ್ವಯವಾಗುತ್ತದೆ. ಆದರೆ ಗುಣಜಾತಗಳಿಗೆ ಪುಂಡರೀಕಾಂತಃಸ್ಥತ್ವವು ಅನ್ವಯ-ವಾಗುವುದಿಲ್ಲ. ಪುಂಡರೀಕಾಂತಃಸ್ಥವಾದ ದಹರಾಕಾಶಾಂತಸ್ಥತ್ವವು ಅನ್ವಯವಾಗುತ್ತದೆ. ಹೀಗೆ ಶ್ರುತಪ್ರಕಾಶದಲ್ಲಿ ಸಮರ್ಥಿಸಲಾಗಿದೆ. ಇದು ಅಯುಕ್ತವೆಂದು 'ಲೋಕ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಇದನ್ನೇ ವ್ಯಾಖ್ಯಾನಿಸುತ್ತಿದ್ದಾರೆ 'ನಹಿ' ಇತ್ಯಾದಿ ವಾಕ್ಯದಿಂದ.

**प्रकाशः** – एतेन 'तस्मिन्' इत्यनेन वेश्मनिर्देशे व्यवहितपरामर्शदोषः । दहरवद्गुणजातस्यापि वेश्मस्थतापत्त्या दहराकाशान्तर्वर्तित्वासिद्धिः ।

ಹೀಗೆ ಹೇಳಿದ್ದರಿಂದ ಇನ್ನು ಕೆಲವು ದೋಷಗಳನ್ನು ಪರಿಹಾರ ಮಾಡಿ ತೋರಿಸಿದಂತಾಯಿತು. 'ತಸ್ಮಿನ್' ಎಂಬುದರಿಂದ ಪುಂಡರೀಕವೇಶ್ಮವನ್ನು ಪರಾಮರ್ಶಿಸುವುದಾದರೆ ವ್ಯವಹಿತವಾದದ್ದನ್ನು ಪರಾಮರ್ಶಿಸಿ-ದಂತಾಗುತ್ತದೆ. ದಹರಾಕಾಶವು ಹೇಗೆ ಪುಂಡರೀಕವೇಶ್ಮದಲ್ಲಿದೆಯೆಂಬ ಪ್ರತೀತಿ ಬರುತ್ತದೋ, ಅದರಂತೆ ಗುಣಜಾತಗಳೂ ಕೂಡ ಆ ಪುಂಡರೀಕವೇಶ್ಮದಲ್ಲಿಯೇ ಇವೆ ಎಂಬ ಪ್ರತೀತಿಯೂ ಬರಬೇಕಾದೀತು. ಇದರಿಂದ ಗುಣಜಾತವು ದಹರಾಕಾಶಾಂತರ್ಗತವಾಗದೇ ಇರಬೇಕಾದೀತು.

**प्रकाशः** – दहराकाशनिर्देशे तु दहरस्य स्वान्तर्वर्तित्वाभावेनान्तर्वर्तिन एवान्वेष्टव्यत्वोक्त्या दहरस्यान्वेष्टव्यत्वासिद्धिः । उभयनिर्देशस्तु सति गत्यन्तरे क्लिष्टः ।

'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ದಹರಾಕಾಶವನ್ನೇ ಪರಾಮರ್ಶ ಮಾಡಿ, ಅಂತಹ ದಹರಾಕಾಶನಲ್ಲಿರುವ ಗುಣಜಾತಗಳನ್ನು ಅನ್ವೇಷಣೆ ಮಾಡಬೇಕೆಂದೇ ಹೇಳುತ್ತೇವೆಂದರೆ, ದಹರಾಕಾಶಕ್ಕೆ ಸ್ವಾಂತರ್ವರ್ತಿತ್ವವು ಇರುವುದಿಲ್ಲ. ಅಂದರೆ ತನ್ನಲ್ಲಿ ತನ್ನ ಇರುವಿಕೆಯು ಕೂಡುವುದಿಲ್ಲ. ದಹರಾಕಾಶದಲ್ಲಿ ಗುಣಜಾತವನ್ನು ಹೇಳಬಹುದೇ ಹೊರತು, ದಹರಾಕಾಶದಲ್ಲಿ ದಹರಾಕಾಶವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ದಹರಾಕಾಶದ ಅಂತರ್ವರ್ತಿಯನ್ನು ಅನ್ವೇಷಣೆ ಮಾಡಬೇಕೆಂದು ಹೇಳಿದ್ದರಿಂದ ದಹರಾಕಾಶದ ಅನ್ವೇಷಣವು ಸಿದ್ಧವಾಗುವುದಿಲ್ಲ. 'ತಸ್ಮಿನ್' ಎಂಬ 'ತತ್' ಶಬ್ದದಿಂದ 'ದಹರಾಕಾಶ' 'ವೇಶ್ಮ' ಎರಡನ್ನೂ ಕೂಡ ಪರಾಮರ್ಶಿಸಬಹುದಲ್ಲವೇ ? ಎಂದರೆ, ಬೇರೆ ಗತಿಯಿಲ್ಲದಿದ್ದಾಗ ಮಾತ್ರ ಹೀಗೆ ಉಭಯನಿರ್ದೇಶ ಮಾಡಬೇಕು. ಆದರೆ ನಾವು ಸಿದ್ಧಾಂತದಲ್ಲಿ ಹೇಳಿದಂತೆ ಬೇರೆ ಗತಿಯು ಇಲ್ಲಿ ಇರುತ್ತದೆ.

**प्रकाशः** – यच्छब्दप्रातिपदिकार्थयोर्दहराकाशगुणजातयोर्द्वयोरपि साक्षाद्वेश्मस्थत्वस्य वा दहराकाशान्तर्वर्तित्वस्य वाऽऽपातेन दहरस्य वेश्मस्थत्वं गुणजातस्य दहरान्तर्वर्तित्वमित्यस्यासिद्धिरेव । तथा व्युत्पत्त्यभावादित्यपि सूचितम् ।

ಹಿಂದೆ ಹೇಳಿದಂತೆ ಯಚ್ಛಬ್ದವೆನಿಸಿದ 'ದಹರಾಕಾಶ' ಮತ್ತು ಪ್ರಾತಿಪದಿಕಾರ್ಥವಾದ 'ಗುಣಜಾತ' ಇವೆರಡಕ್ಕೂ ಕೂಡ ಸಾಕ್ಷಾತ್ತಾಗಿ ವೇಶ್ಮಸ್ಥತ್ವವು ಮತ್ತು ದಹರಾಕಾಶಾಂತರ್ವರ್ತಿತ್ವವು ಬರಬೇಕಾದೀತಾದ್ದರಿಂದ ದಹರಕ್ಕೆ ವೇಶ್ಮಸ್ಥತ್ವವು ಹಾಗೂ ಗುಣಜಾತಕ್ಕೆ ದಹರಾಕಾಶದಲ್ಲಿ ಇರುವಿಕೆಯು ಅಸಿದ್ಧವಾಗುತ್ತದೆ. ಹಾಗೇ ಸಾಧಿಸಲು ವ್ಯುತ್ಪತ್ತಿಯಿರುವುದಿಲ್ಲ ತಿಳಿಸಿದಂತಾಯಿತು.

**गुरुराजीयम्** – अत एवेति ।। सन्निहितपरत्वसम्भवे तत्त्यागेन व्यवहितपरत्वस्यायोगादेवेत्यर्थः । ननु च सन्निहितपरत्वे व्यवहितकल्पनमन्याय्यम् । नतु तदसम्भवे । प्रकृते च सन्निहितदहरपरामर्शे ब्रह्मान्तःस्थस्यान्वेष्टव्यत्वं समायाति । नच तत्सम्भवतीत्यतो व्यवहितपुण्डरीकपरत्वमभ्युपगम्यत इत्यतो दोषान्तरमाह – दहरस्येति ।।




ರಾಮಾನುಜರ ಶ್ರುತಿ ವ್ಯಾಖ್ಯಾನ ಹೀಗಿದೆ - 'ತಸ್ಮಿನ್ಯಂದತಃ' ಎಂಬ ಶ್ರುತಿಯಲ್ಲಿ 'ಯತ್' ಎಂಬ ಪದದ ಜೊತೆಗೆ 'ಯಃ' ಎಂಬುದನ್ನೂ ಕೂಡ ಅನುವೃತ್ತಿ ಮಾಡಬೇಕು. ಆವಾಗ ಪುಲ್ಲಿಂಗದ 'ಯಃ' ಎಂಬ ಪದದಿಂದ

ದಹರಾಕಾಶವನ್ನು, 'ಯತ್' ಎಂಬ ನಪುಂಸಕಲಿಂಗದ ಶಬ್ದದಿಂದ ದಹರಾಕಾಶದಲ್ಲಿರುವ ಗುಣಗಳ ಸಮೂಹವನ್ನು ಪರಾಮರ್ಶಿಸಬೇಕು. ಅಥವಾ ಏಕಶೇಷವೃತ್ತಿಯನ್ನು ಅನುಸರಿಸಿದಾಗ, 'ಯಶ್ಚ' + 'ಯಚ್ಚ' = 'ಯತ್' ಎಂದೇ ರೂಪವಾಗುತ್ತದೆ. ಶ್ರುತಿಯಲ್ಲಿ ಒಮ್ಮೆ 'ಯತ್' ಎಂದು ಹೇಳಿದ್ದರೂ 'ಯಃ' ಎಂಬುದನ್ನೂ ಕೂಡ ವಿವಕ್ಷಿಸಲು ಬರುತ್ತದೆ. ಆದ್ದರಿಂದ 'ದಹರಾಕಾಶ ಮತ್ತು ಅದರಲ್ಲಿರುವ 'ಗುಣಸಮೂಹ' ಎರಡನ್ನೂ ಕೂಡ ಜಿಜ್ಞಾಸೆ ಮಾಡಬೇಕೆಂದು ಶ್ರುತಿಯಿಂದ ಸುಲಭವಾಗಿ ತಿಳಿಯುತ್ತದೆಂದು ವ್ಯಾಖ್ಯಾನಿಸುತ್ತಾರೆ.

ಇದು ತಪ್ಪು. ಹೃದಯಕಮಲದಲ್ಲಿ ದಹರಾಕಾಶವಿದೆ. ಅದರಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ಶ್ರುತಿಯಿಂದ ಸ್ಪಷ್ಟವಾಗಿ ತಿಳಿಯುತ್ತಿದೆ. ಇಲ್ಲಿರುವ 'ತಸ್ಮಿನ್ಯದಂತಃ' ಎಂಬುದಕ್ಕೆ ಹೃದಯಪದ್ಮದಲ್ಲಿ ಎಂಬರ್ಥವನ್ನು ಮಾಡಬಾರದು. ಏಕೆಂದರೆ ಪದ್ಮ, ಆಕಾಶಗಳನ್ನೂ ಹೇಳಿ, 'ತಸ್ಮಿನ್' ಎಂದು ಹೇಳಿರುವಾಗ 'ತತ್' ಪದಕ್ಕೆ ಹಿಂದೆ ಪ್ರಸಕ್ತವಾದ ಆಕಾಶವೆಂಬರ್ಥವೇ ಸ್ವರಸವಾಗುತ್ತದೆ.

• • • • •

## ಶಾಂಕರ-ರಾಮಾನುಜರ ಪ್ರಥಮ ಸೂತ್ರಾರ್ಥ ವಿಮರ್ಶೆ

## तात्पर्यचन्द्रिका

**किञ्च ''य एषोऽन्तर्हृदय आकाशस्तस्मिन् शेते सर्वस्य वशी सर्वस्येशानः'' ''दिव्ये ब्रह्मपुरे ह्येष व्योम्न्यात्मा सम्प्रतिष्ठितः''**

ಅನುವಾದ - ಅದ್ವೈತ ಮತದಲ್ಲಿ ಮತ್ತು ವಿಶಿಷ್ಟಾದ್ವೈತ ಮತದಲ್ಲಿ 'ದಹರ ಉತ್ತರೇಭ್ಯಃ' ಎಂಬ ಸೂತ್ರದಲ್ಲಿರುವ 'ದಹರ' ಶಬ್ದವನ್ನು ಪ್ರಥಮಾವಿಭಕ್ತ್ಯಂತವೆಂದು ವಿವಕ್ಷಿಸಿ, ದಹರಾಕಾಶವನ್ನೇ ಬ್ರಹ್ಮನೆಂದು ಸಮರ್ಥಿಸುತ್ತಾರೆ. ಈಗಾಗಲೇ ಹೇಳಿದಂತೆ ಇದು ತಪ್ಪು. ಹಿಂದೆ ಹೇಳಿದ ದೋಷಗಳು ಬರುವುದಷ್ಟೇ ಅಲ್ಲದೇ ಅನೇಕ ಶ್ರುತಿಗಳ ವಿರೋಧವೂ ಕೂಡ ಬರುತ್ತದೆ. ಬೃಹದಾರಣ್ಯಕದ 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ' ಎಂಬ ವಾಕ್ಯದಲ್ಲಿ ಸ್ಪಷ್ಟವಾಗಿ ಹೃದಯದಲ್ಲಿ ಆಕಾಶವಿದೆ. ಅಂತಹ ಆಕಾಶದಲ್ಲಿ ಪರಮಾತ್ಮನಿದ್ದಾನೆ. ಅವನೇ ಎಲ್ಲರಿಗೂ ಸ್ವಾಮಿಯಾಗಿದ್ದಾನೆ. ಎಲ್ಲವೂ ಅವನ ಅಧೀನವಾಗಿದೆ ಎಂದು ಸ್ಪಷ್ಟವಾಗಿ ಹೃದಯಾಕಾಶದಲ್ಲಿ ಪರಮಾತ್ಮನಿದ್ದಾನೆಂದು ಹೇಳಲಾಗಿದೆ. ಮತ್ತು ಆಥರ್ವಣೋಪನಿಷತ್ತಿನಲ್ಲಿ 'ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ' ಎಂಬುದಾಗಿ ದಿವ್ಯವಾದ ದೇಹದಲ್ಲಿ ಆಕಾಶವಿದೆ. ಅವನಲ್ಲಿ ಆತ್ಮಾ ಎನಿಸಿದ ಬ್ರಹ್ಮನಿದ್ದಾನೆಂದು ಹೇಳಲಾಗಿದೆ.

**''य एषोऽन्तर्हृदय आकाशस्तस्मिन्नयं पुरुषः'' ''यो वेद निहितं गुहायां परमे व्योमन्'' ''दहरं विपाप्मं परवेश्मभूतं यत्पुण्डरीकं पुरमध्यसंस्थम् । तत्रापि दहं**

गगनं विशोकस्तस्मिन्यदन्तस्तदुपासितव्यम्'' इत्यादिश्रुतिषु ब्रह्मणो हृदयाकाशस्थ-तैवोक्ता ।[१] नतु हृदयस्थाकाशता ।

(१) रामानुजभाष्यम् –

दहर उत्तरेभ्यः ॥ १३ ॥

इदमामनन्ति च्छन्दोगाः 'अथ यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तर आकाशस्तस्मिन् यदन्तस्तदन्वेष्टव्यं तद्वाव विजिज्ञासितव्यम्' इति । तत्र सन्देहः किमसौ हृदयपुण्डरीकमध्यवर्ती दहराकाशो महाभूतविशेषः, उत प्रत्यगात्मा? अथ परमात्मा? इति । किं तावद् युक्तम्? महाभूतविशेष इति । कुतः? आकाशशब्दस्य भूताकाशे ब्रह्मणि च प्रसिद्धत्वेऽपि भूताकाशे प्रसिद्धिप्रकर्षात्, 'तस्मिन् यदन्तस्तदन्वेष्टव्यम्' इत्यन्वेष्टव्यान्तरस्याधारतया प्रतीतेश्च, इत्येवं प्राप्तेऽभिधीयते – दहर उत्तरेभ्यः ॥ दहराकाशः परं ब्रह्म, कुतः? उत्तरेभ्यो वाक्यगतेभ्यो हेतुभ्यः । 'एष आत्माऽपहतपाप्मा विजरो विमृत्युर्विशोको विजिघत्सोऽपिपासस्सत्यकामस्सत्यसङ्कल्पः' इति निरुपाधिकात्मत्वमपहतपाप्मत्वादिकं सत्यकामत्वं सत्यसङ्कल्पत्वं चेति दहराकाशे श्रूयमाणा गुणाः दहराकाशं परं ब्रह्मेति ज्ञापयन्ति । 'अथ य इहात्मानमनुविद्य व्रजन्त्येतांश्च सत्यान् कामांस्तेषां सर्वेषु लोकेषु कामचारो भवति' इत्यादिना । 'यं कामं कामयते, सोऽस्य सङ्कल्पादेव समुत्तिष्ठति, तेन सम्पन्नो महीयते' इत्यन्तेन दहराकाशवेदिनस्सत्यसङ्कल्पत्व-प्राप्तिश्चोच्यमाना दहराकाशं परं ब्रह्मेत्येव गमयति । 'यावान् वा अयमाकाशस्तावानेषोऽन्तर्हृदय आकाशः' इत्युपमानोपमेयभावश्च दहराकाशस्य भूताकाशत्वे नोपपद्यते । हृदयावच्छेदनिबन्धन उपमानोपमेयभाव इति चेत्, तथा सति हृदयावच्छिन्नस्य द्यावापृथिव्यादिसर्वाश्रयत्वं नोपपद्यते ।

ननु च दहराकाशस्य परमात्मत्वेऽपि बाह्याकाशोपमेयत्वं न सम्भवति, 'ज्यायान् पृथिव्या ज्यायानन्तरिक्षात्' इत्यादौ सर्वस्माज्ज्यायस्त्वश्रवणात्, नैवम् । दहराकाशस्य हृदयपुण्डरीक-मध्यवर्तित्वप्राप्ताल्पत्वनिवृत्तिपरत्वादस्य वाक्यस्य । यथा अधिकजवेऽपि सवितरि 'इषुवद् गच्छति सविता' इति वचनं गतिमान्द्यनिवृत्तिपरम् । अथ स्यात् 'एष आत्माऽपहतपाप्मा' इत्यादिना दहराकाशो न निर्दिश्यते 'दहरोऽस्मिन्नन्तर आकाशस्तस्मिन् यदन्तस्तदन्वेष्टव्यम्' इति दहराकाशान्तर्वर्तिनस्ततोऽन्यस्यान्वेष्टव्यत्वेन प्रकृतत्वादिह 'एष आत्माऽपहतपाप्मा' इति तस्यैवान्वेष्टव्यस्य निर्देष्टुं युक्तत्वात् । स्यादेतदेवम्, यदि श्रुतिरेव दहराकाशं तदन्तर्वर्तिनं च न व्यभाङ्क्ष्यात्, व्यभाङ्क्षीत्तु सा, तथाहि 'अथ यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तर आकाशस्तस्मिन् यदन्तस्तदन्वेष्टव्यम्' इति ब्रह्मपुरशब्देनोपास्यतया सन्निहितपरब्रह्मणः पुरत्वेनोपासकशरीरं निर्दिश्य च तन्मध्यवर्ति

ಮತ್ತು ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯಲ್ಲಿ 'ಯ ಏಷೋಽಂತರ್ಹೃದಯ ಆಕಾಶಃ

---

च तदवयवभूतं पुण्डरीकाकारमल्पपरिमाणं हृदयं परस्य ब्रह्मणो वेश्मतयाऽभिधाय सर्वज्ञं सर्वशक्तिमाश्रितवात्सल्यैकजलधिमुपासकानुग्रहाय तस्मिन् वेश्मनि सन्निहितं सूक्ष्मतया ध्येयं दहराकाशशब्देन निर्दिश्य तदन्तर्वर्तिचापहतपाप्मत्वादिस्वभावतो निरस्तनिखिलहेयत्व-सत्यकामत्वादि स्वाभाविकानवधिकातिशयकल्याणगुणजातं च ध्येयम् । 'तदन्वेष्टव्यम्' इत्युपदिश्यते । अत्र 'तदन्वेष्टव्यम्' इति तच्छब्देन दहराकाशम्, तदन्तर्वर्तिगुणजातं च परामृश्य तदुभयमन्वेष्टव्यमित्युपदिश्यते । 'यदिदमस्मिन् ब्रह्मपुरे दहरं पुण्डरीकं वेश्म' इत्यनूद्य तस्मिन् दहरपुण्डरीकवेश्मनि यो दहराकाशः, यच्च तदन्तर्वर्तिगुणजातम्, तदुभयमन्वेष्टव्यमिति विधीयत इत्यर्थः ।। दहराकाशशब्दनिर्दिष्टस्य परब्रह्मत्वं 'तस्मिन् यदन्तः' इति निर्दिष्टस्य च तद्गुणत्वम्, तच्छब्देनोभयं परामृश्योभयस्याप्यन्वेष्टव्यतया विधानं च कथमवगम्यत इति चेत् । तदवहितमनाश्शृणु ।

'यावान् वा अयमाकाशस्तावानेषोऽन्तर्हृदय आकाशः' इति दहराकाशस्यातिमहत्तामभिधाय 'उभे अस्मिन् द्यावापृथिवी अन्तरेव समाहिते । उभावग्निश्च वायुश्च सूर्याचन्द्रमसावुभौ विद्युन्नक्षत्राणि' इति प्रकृतमेव दहराकाशमस्मिन्निति निर्दिश्य तस्य सर्वजगदाधारत्वमभिधाय 'यच्चास्येहास्ति यच्च नास्ति, सर्वं तदस्मिन् समाहितम्' इति पुनरप्यस्मिन्निति तमेव दहराकाशं परामृश्य तस्मिन्नस्योपासकस्येह लोके यद् भोग्यजातमस्ति, यच्च मनोरथमात्रगोचरमिह नास्ति, सर्वं तद्भोग्यजातमस्मिन् दहराकाशे समाहितमिति निरतिशयभोग्यत्वं दहराकाशस्याभिधाय तस्य दहराकाशस्य देहावयवभूतहृदयान्तर्वर्तित्वेऽपि देहस्य जराप्रध्वंसादौ सत्यपि परमकारणतयाऽतिसूक्ष्मत्वेन निर्विकारत्वमुक्त्वा तत एव 'एतत्सत्यं ब्रह्मपुरम्' इति तमेव दहराकाशं सत्यभूतं ब्रह्माख्यं पुरं निखिलजगदावास-भूतमित्युपपाद्य 'अस्मिन् कामास्समाहिताः' इति दहराकाशमस्मिन्निति निर्दिश्य काम्यभूतांश्च गुणान् कामा इति निर्दिश्य तेषां दहराकाशान्तर्वर्तित्वमुक्त्वा तदेव दहराकाशस्य काम्यभूतकल्याणगुणविशिष्टत्वं तस्याऽत्मत्वं च 'एष आत्माऽपहतपाप्मा' इत्यादिना 'सत्यसङ्कल्पः' इत्यन्तेन स्फुटीकृत्य 'यथा ह्येवेह प्रजा अन्वाविशन्ति' इत्यारभ्य 'तेषां सर्वेषु लोकेष्वकामचारो भवति' इत्यन्तेन तदिदं गुणाष्टकं तद्विशिष्टं दहराकाशशब्दनिर्दिष्टमात्मानं चाविदुषामेतद्व्यतिरिक्तभोग्यसिद्धये च कर्म कुर्वतामन्तवत्फला वाप्तिमसत्यसङ्कल्पत्वं चाभिधाय 'अथ य इहात्मानमनुविद्य व्रजन्त्येतांश्च सत्यान् कामांस्तेषां सर्वेषु लोकेषु कामचारो भवति' इत्यादिना दहराकाशशब्दनिर्दिष्टमात्मानं तदन्तर्वर्तिनश्च काम्यभूतानपहतपाप्मत्वादिकान् गुणान् विजानतामुदारगुणसागरस्य तस्य परमपुरुषस्य प्रसादादेव सर्वकामावाप्तिस्सत्यसङ्कल्पता चोच्यते । अतो दहराकाशः परं

ब्रह्म, तदन्तर्वर्ति चापहतपाप्मत्वादिकाम्यगुणजातम्, तदुभयमन्वेष्टव्यं विजिज्ञासितव्यमिति चोच्यत इति निश्चीयते । तदेतद्वाक्यकारोऽपि स्पष्टयति 'तस्मिन् यदन्तरिति कामव्यपदेशः' इत्यादिना । अत एतेभ्यो हेतुभ्यो दहराकाशः परमेव ब्रह्म ।। १३ ।।

**गतिशब्दाभ्यां तथाहि दृष्टं लिङ्गं च ।। १४ ।।**

इतश्च दहराकाशः परं ब्रह्म 'तद् यथा हिरण्यनिधिं निहितमक्षेत्रज्ञा उपर्युपरि सञ्चरन्तो न विन्देयुरेवमेवेमास्सर्वाः प्रजा अहरहर्गच्छन्त्य एतं ब्रह्मलोकं न विन्दन्त्यनृतेन हि प्रत्यूढाः' इति । एतमिति प्रकृतं दहराकाशं निर्दिश्य तत्राहरहस्सर्वेषां क्षेत्रज्ञानां गमनम्, गन्तव्यस्य तस्य दहराकाशस्य ब्रह्मलोकशब्दनिर्देशश्च दहराकाशस्य परब्रह्मतां गमयतः । कथमनयोरस्य परब्रह्मत्वसाधकत्वमित्यत आह – **तथाहि दृष्टमिति** ।। परस्मिन् ब्रह्मणि सर्वेषां क्षेत्रज्ञानामहरहस्सुषुप्तिकाले गमनमन्यत्राभिधीयमानं दृष्टम् । 'एवमेव खलु सोम्येमास्सर्वाः प्रजास्सति सम्पद्य न विदुस्सति सम्पत्स्यामह इति' इति । 'सत आगम्य न विदुस्सत आगच्छामह इति' इतिच । तथा ब्रह्मलोकशब्दश्च परस्मिन् ब्रह्मणि दृष्टः । 'एष ब्रह्मलोकः सम्राडिति होवाच' इति । मा भूदन्यत्र ब्रह्मणि गमनदर्शनम् । एतदेव तु दहराकाशे सर्वेषां क्षेत्रज्ञानां प्रलयकाल इव निरस्तनिखिलदुःखानां सुषुप्तिकालेऽवस्थानं श्रूयमाणस्य परब्रह्मत्वे पर्याप्तं लिङ्गम् । तथा ब्रह्मलोकशब्दश्च समानाधिकरणवृत्त्याऽस्मिन् दहराकाशे प्रयुज्यमानोऽस्य ब्रह्मत्वे प्रयोगान्तरनिरपेक्षं पर्याप्तं लिङ्गमित्याह – **लिङ्गं चेति** ।। निषादस्थपतिन्यायाच्च षष्ठीसमासात् समानाधिकरणसमासो न्याय्यः ।

अथवा 'अहरहर्गच्छन्त्यः' इति न सुषुप्तिविषयं गमनमुच्यते । अपित्वन्तरात्मत्वेन सर्वदा वर्तमानस्य दहराकाशस्य परमपुरुषार्थभूतस्योपर्युपर्यहरहर्गच्छन्त्यः सर्वस्मिन् काले वर्तमानाः तमजानत्यस्तं न विन्दन्ति । न लभन्ते । यथा हिरण्यनिधिं निहितं तत्स्थानमजानानास्तदुपरि सर्वदा वर्तमाना अपि न लभन्ते, तद्वदित्यर्थः । सेयमेवमन्तरात्मत्वेन स्थितस्य दहराकाशस्योपरि तन्नियमितानां सर्वासां प्रजानामजानतीनां सर्वदा गतिरस्य दहराकाशस्य परब्रह्मतां गमयति । तथाह्यन्यत्र परस्य ब्रह्मणोऽन्तरात्मतयाऽवस्थितस्य स्वनियम्याभिः स्वस्मिन् वर्तमानाभिः प्रजाभिरवेदनं दृष्टम् । यथाऽन्तर्यामिब्राह्मणे 'य आत्मनि तिष्ठन् आत्मनोऽन्तरो यमात्मा न वेद, यस्याऽत्मा शरीरं य आत्मानमन्तरो यमयति ।' इति 'अदृष्टो द्रष्टा अश्रुतः श्रोता' इति च । मा भूदन्यत्र दर्शनम् । स्वयमेव त्वियं निधिदृष्टान्तावगतपरमपुरुषार्थभावस्यास्य हृदयस्थस्योपरि तदाधारतयाऽहरहस्सर्वदा सर्वासां प्रजानामजानतीनां गतिरस्य परब्रह्मत्वे पर्याप्तं लिङ्गम् ।। १४ ।।

ದಹರಾಧಿಕರಣ (೧-೩-೫)

इतश्च दहराकाशः परं ब्रह्म –

**धृतेश्च महिम्नोऽस्यास्मिन्नुपलब्धेः ॥ १५ ॥**

'अथ य आत्मा' इति प्रकृतं दहराकाशं निर्दिश्य 'स सेतुर्विधृतिरेषां लोकानामसम्भेदाय' इत्यस्मिन् जगद्विधरणं श्रूयमाणं दहराकाशस्य परब्रह्मतां गमयति । जगद्विधरणं हि परस्य ब्रह्मणो महिमा 'एष सर्वेश्वर एष सर्वभूताधिपतिरेष भूतपाल एष सेतुर्विधरण एषां लोकानामसम्भेदाय' इति । 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' इत्यादिभ्यः । स चायं तस्य परस्य ब्रह्मणो धृत्याख्यो महिमाऽस्मिन् दहराकाशे उपलभ्यते । दहराकाशः परं ब्रह्म ॥ १५ ॥

**प्रसिद्धेश्च ॥ १६ ॥**

आकाशशब्दश्च परस्मिन् ब्रह्मणि प्रसिद्धः । 'को ह्येवाऽन्यात् कः प्राण्यात् । यदेष आकाश आनन्दो न स्यात्' 'सर्वाणि ह वा इमानि भूतान्याकाशादेव समुत्पद्यन्ते' इत्यादिषु । अपहतपाप्मत्वादिगुणसनाथा प्रसिद्धिर्भूताकाशप्रसिद्धेर्बलीयसीत्यभिप्रायः ॥ १६ ॥

एवं तावद्दहराकाशस्य भूताकाशत्वं प्रतिक्षिप्तम् । अथेदानीं दहराकाशस्य प्रत्यगात्मत्वमाशङ्क्य निराकर्तुमुपक्रमते –

**इतरपरामर्शात्स इति चेन्नासम्भवात् ॥ १७ ॥**

यदुक्तं वाक्यशेषवशाद्दहराकाशः परं ब्रह्मेति, तदयुक्तम् । वाक्यशेषे परस्मादितरस्य जीवस्यैव साक्षात्परामशात् 'अथ य एष सम्प्रसादोऽस्माच्छरीरात् समुत्थाय परं ज्योतिरुपसम्पद्य स्वेन रूपेणाभिनिष्पद्यते एष आत्मेति होवाच एतदमृतमभयमेतद् ब्रह्म' इति । यद्यपि 'दहरोऽस्मिन्नन्तर आकाशः' इति हृदयपुण्डरीकमध्यवर्तितयोपदिष्टस्याकाशस्योपमानोपमेयभावाद्यसम्भवाद् भूताकाशत्वं न सम्भवति । तथापि वाक्यशेषवशात् प्रत्यगात्मत्वं युक्तमाश्रयितुम् । आकाशशब्दोऽपि प्रकाशादियोगाज्जीव एव वर्तिष्यत इति चेत्, अत्रोत्तरम् – **नासम्भवात्** ॥ नायं जीवः, नह्यपहतपाप्मत्वादयो गुणा जीवे सम्भवन्ति ॥ १७ ॥

**उत्तराच्चेदाविर्भूतस्वरूपस्तु ॥ १८ ॥**

उत्तरात् प्रजापतिवाक्यात्, जीवस्यैवापहतपाप्मत्वादिगुणयोगो निश्चीयत इति चेत्, एतदुक्तं भवति । प्रजापतिवाक्यं जीवपरमेव । तथाहि 'य आत्माऽपहतपाप्मा विजरो विमृत्युर्विशोको विजिघत्सोऽपिपासस्सत्यकामस्सत्यसङ्कल्पस्सोऽन्वेष्टव्यस्स विजिज्ञासितव्यस्स सर्वांश्च लोकानाप्नोति सर्वांश्च कामान् यस्तमात्मानमनुविद्य विजानाति' इति प्रजापतिवचनमैतिह्यरूपेणोपश्रुत्यान्वेष्टव्यात्मस्वरूपजिज्ञासया प्रजापतिमुपसेदुषे मघवते प्रजापतिर्जागरितस्वप्नसुषुप्त्यवस्थं जीवात्मानं सशरीरं क्रमेण

शुश्रूषुयोग्यतापरीचिक्षिषयोपदिश्य तत्रतत्र भोगमपश्यते परिशुद्धात्मस्वरूपोपदेशयोग्याय तस्मै मघवते 'मघवन् मर्त्यं वा इदं शरीरमात्तं मृत्युना तदस्यामृतस्याशरीरस्यात्मनोऽधिष्ठानम्' इति शरीरस्याधिष्ठानतामात्मनश्चाधिष्ठातृतामशरीरस्य च तस्यामृतत्वस्वरूपतां चोक्त्वा 'न ह वै सशरीरस्य सतः प्रियाप्रिययोरपहतिरस्ति । अशरीरं वाव सन्तं न प्रियाप्रिये स्पृशतः' इति कर्मारब्धशरीरयोगिनस्तनुगुणसुखदुःखभागित्वरूपानर्थं तद्विमोक्षे च तदभावमधिष्ठाय 'एवमेवैष सम्प्रसादोऽस्माच्छरीरात् समुत्थाय परं ज्योतिरुपसम्पद्य स्वेन रूपेणाभिनिष्पद्यते' इति जीवात्मनस्स्वरूपमेव शरीरवियुक्तमुपदिदेश ।

'स उत्तमः पुरुषः स तत्र पर्येति जक्षन् क्रीडन् रममाणः स्त्रीभिर्वा यानैर्वा ज्ञातिभिर्वा नोपजनं स्मरन्निदं शरीरम्' इति प्राप्यस्य परस्य ज्योतिषः पुरुषोत्तमत्वम्, निवृत्तितिरोधानस्य परं ज्योतिरुपसम्पन्नस्य प्रत्यगात्मनो ब्रह्मलोके यथेष्टभोगावाप्तिम्, प्रियाप्रियावियुक्तकर्मनिर्मितशरीराद्यपुरुषार्थाननुसन्धानं चाभिधाय 'स यथा प्रयोग्य आचरणे युक्त एवमस्मिन् शरीरे प्राणो युक्तः' इति यथोक्तस्वरूपस्यैव संसारदशायां कर्मतन्त्रं शरीरयोगं युग्यशकटयोगदृष्टान्तेनाभिधाय 'अथ यत्रैतदाकाशमनुविषण्णं चक्षुस्स चाक्षुषः पुरुषो दर्शनाय चक्षुरथ यो वेदेदं जिघ्राणीति स आत्मा गन्धाय घ्राणमथ यो वेदेदमभिव्याहाराणीति स आत्माऽभिव्याहाराय वागथ यो वेदेदं शृणवनीति स आत्मा श्रवणाय श्रोत्रम् । अथ यो वेदेदं मन्वानीति स आत्मा मनोऽस्य दैवं चक्षुः' इति चक्षुरादीनां करणत्वं रूपादीनां ज्ञेयत्वमस्य च ज्ञातृत्वं प्रदर्श्य, ततः शरीरेन्द्रियेभ्योऽस्य व्यतिरेकमुपपाद्य 'स वा एष एतेन दिव्येन चक्षुषा मनसैतान् कामान् पश्यन् रमते, य एते ब्रह्मलोके' इति तस्यैव विधूतकर्मनिमित्तशरीरेन्द्रियस्य मनश्शब्दाभिहितेन दिव्येन स्वाभाविकेन ज्ञानेन सर्वकामानुभवमुक्त्वा 'तं वा एतं देवा आत्मानमुपासते तस्मात्तेषां सर्वे च लोका आप्तास्सर्वे च कामाः' इत्येवंविधमात्मानं ज्ञानिनो जानन्तीत्यभिधाय 'सर्वांश्च लोकानाप्नोति सर्वांश्च कामान् यस्तमात्मानमनुविद्य विजानातीति ह प्रजापतिरुवाच' इत्येवंविधमात्मानं विदुषस्सर्वलोकसर्वकामावाप्त्युपलक्षितं ब्रह्मानुभवं फलमभिधायोपसंहृतम् । अतस्तत्रापहतपाप्मत्वादिगुणको ज्ञातव्यतया प्रक्रान्तो जीव एवेत्यवगमत् । अतो जीवस्यापहतपाप्मत्वादयस्सम्भवन्ति । अतो दहरवाक्यशेषे श्रूयमाणस्य जीवस्यापहतपाप्मत्वादिगुणसम्भवात्स एव दहराकाश इति निश्चीयते इति चेत्तत्राह –

**आविर्भूतस्वरूपस्तु इति ॥**

पूर्वमनृततिरोहितापहतपाप्मत्वादिगुणकस्वरूपः पश्चाद् विमुक्तकर्मबन्धश्शरीरात् समुत्थितः परं ज्योतिरुपसम्पन्नः आविर्भूतस्वरूपरसन्नपहतपाप्मत्वादिगुणविशिष्टस्तत्र प्रजापतिवाक्येऽभिधीयते । दहरवाक्ये त्वतिरोहितस्वभावापहतपाप्मत्वादिविशिष्ट एव दहराकाशः प्रतीयते । आविर्भूतस्वरूपस्यापि जीवस्यासम्भावनीयास्सेतुत्वसर्वलोकविधरणत्वादयस्सत्यशब्दनिर्वचनावगतं चेतनाचेतनयोर्नियन्तृत्वं दहराकाशस्य परब्रह्मतां साधयन्ति ।

ಪುರುಷನಾಮಕನಾದ ಪರಮಾತ್ಮನಿದ್ದಾನೆಂದು ಹೇಳಲಾಗಿದೆ. ಬ್ರಹ್ಮವಲ್ಲಿಯಲ್ಲಿ 'ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್' ಎಂಬುದಾಗಿ ಹೃದಯ ಗುಹೆಯಲ್ಲಿ ಇರುವಂತಹ ಆಕಾಶದಲ್ಲಿ ಪರಮಾತ್ಮನನ್ನು ತಿಳಿಯಬೇಕೆಂದು ಹೇಳಲಾಗಿದೆ. ಮಹಾನಾರಾಯಣೋಪನಿಷತ್ತಿನಲ್ಲಿಯೂ 'ದಹ್ರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಮ್ । ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ಯದಂತಃ ತದುಪಾಸಿತವ್ಯಮ್' ದೇಹದ ಹೃದಯದಲ್ಲಿ ಕಮಲವಿದೆ. ಅಂತಹ ಕಮಲದಲ್ಲಿ ದಹರಾಕಾಶವಿದೆ. ಅಂತಹ ದಹರಾಕಾಶದಲ್ಲಿ ಪಾಪರಾಹಿತ್ಯಾದಿಗಳಿಂದ ಕೂಡಿರುವ ಪರಮಾತ್ಮನನ್ನು ಉಪಾಸನೆ ಮಾಡಬೇಕು ಎಂದು ಹೇಳಲಾಗಿದೆ. ಹೀಗೆ ಎಲ್ಲಾ ಶ್ರುತಿಗಳಲ್ಲಿಯೂ ಹೃದಯಾಕಾಶದಲ್ಲಿರುವವನ್ನೇ ಬ್ರಹ್ಮನೆಂದು ಹೇಳಲಾಗಿದೆ ಹೊರತು, ಹೃದಯದಲ್ಲಿರುವ ಆಕಾಶವನ್ನೇ ಬ್ರಹ್ಮವೆಂದು ಎಲ್ಲಿಯೂ ಹೇಳಿಲ್ಲ.

---

सेतुत्वसर्वलोकविधरणत्वादय आविर्भूतस्वरूपस्यापि न सम्भवन्तीति 'जगद्व्यापारवर्जम्' इत्यत्रोपपादयिष्यामः ।। १८।।

यद्येवम्, दहरवाक्ये 'अथ य एष सम्प्रसादः' इत्यादिना जीवप्रस्तावः किमर्थः? इति चेत्तत्राह –

**अन्यार्थश्च परामर्शः ॥ १९ ॥**

दहराकाशस्यैवापहतपाप्मत्वजगद्विधरणत्वादिवन्मुक्तस्य तदुपसम्पत्त्याऽपहतपाप्मत्वादि-कल्याणगुणविशिष्टस्वाभाविकरूपप्राप्तिकथनेन तद्धेतुत्वरूपं परमपुरुषसाधारणं गुणमुपदेष्टुं प्रजापतिवाक्योक्तस्य जीवस्यात्र परामर्शः । प्रजापतिवाक्ये च मुक्तात्मस्वरूपयाथात्म्य-विज्ञानं दहरविद्योपयोगितयोक्तम् । ब्रह्मप्रेप्सोर्हि जीवात्मनस्स्वस्वरूपं च ज्ञातव्यमेव, स्वयमपि कल्याणगुण एव सन्ननवधिकातिशयासङ्ख्येयकल्याणगुणगणं परं ब्रह्मानुभविष्यतीति ब्रह्मोपासनफलान्तर्गतत्वात् स्वरूपयाथात्म्यविज्ञानस्य । 'सर्वांश्च लोकानाप्नोति सर्वांश्च कामान्' 'स तत्र पर्येति जक्षन् क्रीडन्' इत्यादिकं प्रजापतिवाक्ये कीर्त्यमानं फलमपि दहरविद्याफलमेव ।। १९ ।।

**अल्पश्रुतेरिति चेत्तदुक्तम् ॥ २० ॥**

'दहरोऽस्मिन्' इत्यल्पपरिमाणश्रुतिराराग्रोपमितस्य जीवस्यैवोपपद्यते, नतु सर्वस्माज्ज्यायसो ब्रह्मण इति चेत्, तत्र यदुत्तरं वक्तव्यम्, तत्पूर्वमेवोक्तं 'निचाय्यत्वादेवम्' इत्यनेन । अतो दहराकाशोऽनाघ्रातविद्याद्यशेषदोषगन्धः स्वाभाविकनिरतिशयज्ञानबलैश्वर्यवीर्यशक्तितेजः प्रभृत्यपरिमितोदारगुणसागरः पुरुषोत्तम एव । प्रजापतिवाक्यनिर्दिष्टस्तु 'घ्नन्ति त्वेवैनं विच्छादयन्ति' इत्येवमादिभिरवगतकर्मनिमित्तदेहपरिग्रहः पश्चात् परंज्योतिरुपसम्पद्याऽ-विर्भूतापहतपाप्मत्वादिगुणस्वस्वरूप इति न दहराकाशः ।। २० ।।

**प्रकाशः –**

एवं श्रुत्यर्थास्वारस्यं दहरस्य ब्रह्मत्वे व्युत्पाद्यानेकमानविरुद्धं च दहरस्य ब्रह्मत्वमिति भावेन मतद्वयेऽपि सूत्रार्थं निराह – **किञ्चेति** ॥

ವಿವರಣೆ - ಇಲ್ಲಿಯ ತನಕ ಅದ್ವೈತಿಗಳ ಮತ್ತು ರಾಮಾನುಜರ ಶ್ರುತಿ ವ್ಯಾಖ್ಯಾನದಲ್ಲಿ ಅಸ್ವಾರಸ್ಯವನ್ನು ತೋರಿಸಿದ್ದಾಯಿತು. ಈಗ ದಹರಾಕಾಶವನ್ನೇ ಬ್ರಹ್ಮವೆಂದು ಹೇಳಿದರೆ, ಅನೇಕ ಶ್ರುತಿಗಳ ವಿರೋಧ ಬರುತ್ತದಾದ್ದರಿಂದ ಇಬ್ಬರ ಪ್ರಥಮ ಸೂತ್ರ ವ್ಯಾಖ್ಯಾನವು ಅಸಾಧುವಾಗಿದೆಯೆಂದು ನಿರಾಕರಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ.

**प्रकाशः** – एतेन दहरस्याब्रह्मत्वे "यावान्वा" इत्यादिना दहराकाशमाहात्म्यवर्णनं न स्यादिति निरस्तम् ।

ಹೀಗೆ ಹೇಳಿದ್ದರಿಂದ, ದಹರಾಕಾಶವನ್ನು ಬ್ರಹ್ಮನೆಂದು ಹೇಳದಿದ್ದರೆ, 'ಯಾವಾನ್ವಾ' ಇತ್ಯಾದಿ ವಾಕ್ಯದಲ್ಲಿ ದಹರಾಕಾಶದ ಮಹಿಮೆಯನ್ನು ವರ್ಣಿಸಿದ್ದು ತಪ್ಪಾಗಬೇಕಾದೀತು ಎಂಬ ಅವರ ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು.

**प्रकाशः** – अनेकमानविरोधेनोक्तरीत्या तस्य दहराकाशस्थाकाशाख्यभगवन्-माहात्म्यपरत्वोपपत्तेरिति ।

ಏಕೆಂದರೆ ದಹರಾಕಾಶವನ್ನೇ ಬ್ರಹ್ಮನೆಂದು ಹೇಳಿದರೆ, ಅನೇಕ ಪ್ರಮಾಣಗಳ ವಿರೋಧ ಬರುತ್ತದೆ. ಆದ್ದರಿಂದ ದಹರಾಕಾಶದಲ್ಲಿರುವ ಭಗವಂತನ ಮಹಿಮೆಯನ್ನು ವರ್ಣಿಸುವುದಕ್ಕಾಗಿಯೇ 'ಯಾವಾನ್ವಾ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः** – 'य एषः' इति वाजसनेयश्रुतौ सर्ववशित्वादिलिङ्गाद्ब्रह्मपरत्वं "दिव्ये" इत्याथर्वणे –

"मनोमयः प्राणशरीरनेता प्रतिष्ठितोऽन्ये हृदयं सन्निधाय ।
तद्विज्ञानेन परिपश्यन्ति धीरा आनन्दरूपममृतं यद्विभाति"

इति वाक्यशेषाद्धृद्गताकाशस्थस्य ब्रह्मत्वं सिद्धम् ।

'ಯ ಏಷಃ' ಇತ್ಯಾದಿಯಾದ ಬೃಹದಾರಣ್ಯಕೋಪನಿಷತ್ತಿನಲ್ಲಿ ಸಕಲ ಪದಾರ್ಥಗಳೂ ಅಸ್ವತಂತ್ರವಾಗಿವೆ. ಎಂಬ ಲಿಂಗವು ಶ್ರುತವಾದ್ದರಿಂದ, 'ಯ ಏಷಃ' ಎಂಬ ವಾಕ್ಯವು ಬ್ರಹ್ಮಪರವಾಗಿದೆಯೆಂದು ನಿರ್ಣಯವಾಗುತ್ತದೆ. 'ದಿವ್ಯೇ' ಎಂಬ ಅಥರ್ವಣೋಪನಿಷತ್ತೂ ಕೂಡ ಬ್ರಹ್ಮಪರವೇ ಆಗಿದೆ.

'ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ।
ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ ಆನಂದರೂಪಮಮೃತಂ ಯದ್ವಿಭಾತಿ'

ಎಂಬ ಮುಂದಿನ ವಾಕ್ಯದಲ್ಲಿ ಪರಮಾತ್ಮನ ವರ್ಣನೆಯನ್ನೇ ಮಾಡಿರುವುದರಿಂದ 'ವ್ಯೋಮ್ನ್ಯಾತ್ಮಾ' ಎಂಬಲ್ಲಿರುವ 'ಆತ್ಮ' ಶಬ್ದವು ಪರಮಾತ್ಮನನ್ನೇ ಪ್ರತಿಪಾದಿಸುತ್ತದೆಂದು ಸ್ಪಷ್ಟವಾಗುತ್ತದೆ.

**प्रकाशः** – य एष इत्यादि त्रीण्यपि वाक्यानि तैत्तिरीयोपनिषदि क्रमेण शिक्षाब्रह्मवल्लीनारायणेषु श्रुतानि ।

'ಯ ಏಷಃ' ಎಂಬಲ್ಲಿಂದ ಪ್ರಾರಂಭ ಮಾಡಿ ಮೂರು ವಾಕ್ಯಗಳು ಕ್ರಮವಾಗಿ ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿ, ಬ್ರಹ್ಮವಲ್ಲಿ ಹಾಗೂ ನಾರಾಯಣವಲ್ಲಿಗಳಲ್ಲಿ ಶ್ರುತವಾಗಿದೆಯೆಂದು ತಿಳಿಯಬೇಕು.

**प्रकाशः** – व्योमन् व्योम्नि । ''सुपांसुलुक्'' इत्यादिना सप्तम्या लुकि ''न ङिसम्बुद्ध्योः'' इति नलोपाभावः ।

ಶ್ರುತಿಯಲ್ಲಿ 'ಪರಮೇ ವ್ಯೋಮನ್' ಎಂದು ಹೇಳಲಾಗಿದೆ. ಅಂದರೆ ಹೃದಯಾಕಾಶದಲ್ಲಿ ಎಂದು ಸಪ್ತಮ್ಯರ್ಥವನ್ನು ಹೇಳಬೇಕು. 'ಸುಪಾಂಸುಲುಕ್' ಎಂಬ ಸೂತ್ರದಿಂದ ಸಪ್ತಮೀ ವಿಭಕ್ತಿಯೆನಿಸಿದ 'ಙಿ' ಎಂಬುದು 'ಲುಕ್' ಆಗಿದೆ. ಹಾಗಾದರೆ 'ನಲೋಪಃ ಪ್ರಾತಿಪದಿಕಾಂತಸ್ಯ' ಎಂಬ ಸೂತ್ರದಿಂದ 'ನ' ಕಾರಕ್ಕೆ ಲೋಪವನ್ನು ಹೇಳಬೇಕಲ್ಲವೇ ? ಎಂದು ಪ್ರಶ್ನಿಸಬಾರದು 'ನ ಙಿಸಂಬುದ್ಧ್ಯೋಃ' ಎಂಬ ಸೂತ್ರವು ಸಪ್ತಮೀ ವಿಭಕ್ತಿ ಮತ್ತು ಸಂಬುದ್ಧಿ ಸಂಜ್ಞೆಯು ಇರುವಾಗ ನಲೋಪವಾಗುವುದಿಲ್ಲವೆಂದು ಹೇಳಿದೆ. ಆದ್ದರಿಂದ 'ವ್ಯೋಮನ್' ಎಂಬ ಪ್ರಯೋಗವು ಸಾಧುವೇ ಆಗಿದೆ.




'ತಸ್ಮಿನ್ ಯಂದತಃ' ಎಂಬ ಶ್ರುತಿಯಲ್ಲಿ ಹೃದಯಪದ್ಮದಲ್ಲಿರುವ ಆಕಾಶವನ್ನೇ ಬ್ರಹ್ಮನೆಂದು ಹೇಳಿಲ್ಲ ಹೊರತಾಗಿ, ಹೃದಯಪದ್ಮದಲ್ಲಿ ಆಕಾಶವಿದೆ. ಅದರಲ್ಲಿ ಬ್ರಹ್ಮನಿದ್ದಾನೆಂದೇ ಹೇಳಲಾಗಿದೆ. ಒಂದು ವೇಳೆ ಹೃದಯಾಕಾಶವನ್ನೇ ಪರವ[illegible]ನೆಂದು ಹೇಳಿದರೆ, 'ಯ ಏಷೋ ಅಂತರ್ಹೃದಯ ಆಕಾಶಃ' ಇತ್ಯಾದಿ ಶ್ರುತಿಗಳೆಲ್ಲವೂ ಪರಮಾತ್ಮನು ಹೃದಯಾಕಾಶದಲ್ಲಿ ನೆಲೆಸಿದ್ದಾನೆಂದು ಸ್ಪಷ್ಟವಾಗಿ ಸಾರುತ್ತಿರುವುದರಿಂದ; ಇವುಗಳ ವಿರೋಧವೂ ಬರುತ್ತಿದೆ.. ಆದ್ದರಿಂದ ಅದ್ವೈತಿಗಳು, ವಿಶಿಷ್ಟಾದ್ವೈತಿಗಳು ಪ್ರಥಮ ಸೂತ್ರದಲ್ಲಿ 'ದಹರಃ' ಎಂದು ಪ್ರಥಮಾ ವಿಭಕ್ತ್ಯಂತವಾಗಿ ಪದಚ್ಛೇದ ಮಾಡಿ ದಹರಾಕಾಶವನ್ನೇ ಬ್ರಹ್ಮನೆಂದು ವ್ಯಾಖ್ಯಾನ ಮಾಡಿದ್ದು ಅತ್ಯಂತ ಅಯುಕ್ತವಾಗಿದೆ.





ಪರಿಪೂರ್ಣಚಂದ್ರಿಕಾ

ಪರಕೀಯರ ದ್ವಿತೀಯ-ತೃತೀಯ ಸೂತ್ರವ್ಯಾಖ್ಯಾನ ವಿಮರ್ಶೆ

## तात्पर्यचन्द्रिका

**यच्चोक्तं द्वितीयसूत्रे "तथा हि दृष्टम्" इत्यस्य "सता सोम्य तदा सम्पन्नो भवति" इत्यादिश्रुत्यन्तरे सुप्तौ जीवानां ब्रह्मविषयकं गमनं दृष्टमित्यर्थ इति**

ಅನುವಾದ - 'ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಎರಡನೆಯ ಸೂತ್ರದಲ್ಲಿರುವ 'ತಥಾ ಹಿ ದೃಷ್ಟಮ್' ಎಂಬುದಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಇತ್ಯಾದಿಯಾದ ಬೇರೆ ಶ್ರುತಿಯಲ್ಲಿ ಸುಪ್ತರಾದ ಜೀವರಿಗೆ ಬ್ರಹ್ಮವಿಷಯಕವಾದ ಗಮನವನ್ನು ಹೇಳಿರುವುದು ಕಂಡಿದೆ. ಆದ್ದರಿಂದ ಬ್ರಹ್ಮವಿಷಯಕ ಗಮನವು ದಹರಾಕಾಶವೇ ಬ್ರಹ್ಮನಾಗಿದ್ದಾನೆನ್ನಲು ಲಿಂಗವಾಗಿದೆಯೆಂದು ನಿಶ್ಚಯವಾಗುತ್ತದೆ ಎಂದು.

**तन्न । सूत्रे गमनस्य समासैकदेशेन स्त्रीलिङ्गेन च गतिशब्देन निर्दिष्टस्य नपुंसकलिङ्गेन दृष्टपदेनानन्वयात् ।**

ಅದ್ವೈತಿಗಳ ಈ ವ್ಯಾಖ್ಯಾನ ಸರಿಯಲ್ಲ. 'ಗತಿ ಶಬ್ದಾಭ್ಯಾಂ' ಎಂಬ ದ್ವಂದ್ವಸಮಾಸದಲ್ಲಿ ಗರ್ಭಿತವಾದ 'ಗತಿ' ಶಬ್ದವು ಸಮಾಸದ ಏಕದೇಶವಾಗಿದೆ. ಮತ್ತು ಸ್ತ್ರೀಲಿಂಗದಲ್ಲಿದೆ. ಇಂತಹ 'ಗತಿ' ಶಬ್ದದಿಂದ ನಪುಂಸಕಲಿಂಗವಾದ ದೃಷ್ಟಪದದ ಜೊತೆಗೆ ಅನ್ವಯವನ್ನು ಮಾಡುವುದು ತಪ್ಪಾಗುತ್ತದೆ. ಎಂದರೆ ಸಮಾಸದ ಏಕದೇಶದಿಂದ ಅನ್ವಯ ಮಾಡುವುದು ಮತ್ತು ನಪುಸಂಕಲಿಂಗಶಬ್ದದಲ್ಲಿ ಸ್ತ್ರೀಲಿಂಗಪದದಿಂದ ಅನ್ವಯ ಮಾಡುವುದು ಎರಡೂ ಕೂಡ ಅಯುಕ್ತವಾಗಿದೆ.

**एतेन दृष्टशब्दो गतिशब्दरूपोभयविशेषणमिति केषाञ्चित्पक्षोऽपि निरस्तः ।**

ಹೀಗೆ ಅದ್ವೈತಮತವನ್ನು ನಿರಾಕರಣೆ ಮಾಡಿದ್ದರಿಂದ ರಾಮಾನುಜರ ವ್ಯಾಖ್ಯಾನವನ್ನೂ ಕೂಡ ನಿರಾಕರಿಸಿದಂತಾಯಿತು - 'ತಥಾ ಹಿ ದೃಷ್ಟಮ್' ಎಂಬಲ್ಲಿರುವ 'ದೃಷ್ಟ' ಶಬ್ದವು 'ಗತಿ' ಮತ್ತು 'ಶಬ್ದ' ಎರಡರಲ್ಲಿಯೂ ವಿಶೇಷಣವಾಗಿದೆಯೆಂದು ಇವರ ವ್ಯಾಖ್ಯಾನ. ಸುಪ್ತ ಪ್ರಜೆಗಳ ಗಮನ ಮತ್ತು ಬ್ರಹ್ಮಶಬ್ದ ಎರಡೂ ಕೂಡ ಶ್ರುತ್ಯಂತರದಲ್ಲಿ ಬ್ರಹ್ಮವಿಷಯಕವೆಂದು ಸಿದ್ಧವಾಗಿದೆಯೆಂದು ಅಭಿಪ್ರಾಯ. ಇದೂ ಸಹ ತಪ್ಪು.

**तथात्वे दृष्टशब्दस्य पुल्लिङ्गत्वद्विवचनान्तत्वयोरापातात् ।**

ರಾಮಾನುಜರು ಹೇಳುವಂತೆ 'ದೃಷ್ಟ' ಶಬ್ದವು 'ಗತಿ' 'ಶಬ್ದ' ಇವುಗಳಲ್ಲಿ ವಿಶೇಷಣವಾಗುವುದಾದರೆ, ಪುಲ್ಲಿಂಗದಲ್ಲಿ ಮತ್ತು ದ್ವಿವಚನದಲ್ಲಿ ಪ್ರಯೋಗಿಸಬೇಕಿತ್ತು. ಏಕೆಂದರೆ 'ಗತಿಶಬ್ದಾಭ್ಯಾಂ' ಎಂಬುದು

ಪುಲ್ಲಿಂಗದಲ್ಲಿಯೂ, ದ್ವಿವಚನದಲ್ಲಿಯೂ ಇರುವುದರಿಂದ ಅದಕ್ಕೆ ವಿಶೇಷಣವಾದ ದೃಷ್ಟಪದವೂ ಕೂಡ ಪುಲ್ಲಿಂಗದಲ್ಲಿ ಮತ್ತು ದ್ವಿವಚನದಲ್ಲಿಯೇ ಪ್ರಯೋಗಿಸಬೇಕಿತ್ತು.

**यच्चोक्तमुभाभ्यां लिङ्गमित्यस्य तदेवगमनं ब्रह्मलोकशब्दे ब्रह्मैव लोक इति सामानाधिकरणसमासो नतु षष्ठी समास इत्यत्र लिङ्गम् । नहि जीवानामहरहः सत्यलोकगमनमस्तीत्यर्थ इति ।**

ಇನ್ನು ಶಾಂಕರ-ರಾಮಾನುಜರು ಇಬ್ಬರೂ ಕೂಡ; ಸೂತ್ರದಲ್ಲಿರುವ 'ಲಿಂಗಮ್' ಎಂಬ ಪದವು ಶ್ರುತಿಯಲ್ಲಿರುವ ಬ್ರಹ್ಮಲೋಕ ಶಬ್ದಕ್ಕೆ ಕರ್ಮಧಾರಯ ಸಮಾಸವನ್ನೇ ಮಾಡಬೇಕೆಂದು ತಿಳಿಸುತ್ತಿದೆ. ಶ್ರುತಿಯಲ್ಲಿರುವ ಬ್ರಹ್ಮಲೋಕ ಶಬ್ದಕ್ಕೆ 'ಬ್ರಹ್ಮೈವ ಲೋಕಃ ಬ್ರಹ್ಮಲೋಕಃ' ಎಂದು ಕರ್ಮಧಾರಯ ಸಮಾಸವನ್ನು ಮಾಡಿದಾಗ ಬ್ರಹ್ಮನೇ ಲೋಕನೆನಿಸಿದ್ದಾನೆ. ಅಂತಹ ಬ್ರಹ್ಮನನ್ನು ಸುಪ್ತನಾದ ಜೀವನು ಹೊಂದುತ್ತಾನೆಂದು ವ್ಯಾಖ್ಯಾನಿಸಿದಂತಾಗುತ್ತದೆ. ಹೊರತು 'ಬ್ರಹ್ಮಣಃ ಲೋಕಃ' ಎಂದು ಷಷ್ಠೀ ತತ್ಪುರುಷ ಸಮಾಸವನ್ನು ಮಾಡಬಾರದು. 'ಬ್ರಹ್ಮಣಃ ಲೋಕಃ' ಎಂದು ಷಷ್ಠೀ ತತ್ಪುರುಷ ಸಮಾಸ ಮಾಡಿದಾಗ, ಬ್ರಹ್ಮನ ಲೋಕವನ್ನು ಕುರಿತು ಸುಪ್ತಜೀವನು ಹೋಗುತ್ತಾನೆಂದು ಹೇಳಿದಂತಾಗುತ್ತದೆ. ಆದರೆ ಪ್ರತಿನಿತ್ಯ ಸತ್ಯಲೋಕಕ್ಕೆ ಹೋಗಲು ಜೀವನಿಗೆ ಸಾಮರ್ಥ್ಯವಿಲ್ಲ. ಆದ್ದರಿಂದ ಷಷ್ಠೀ ತತ್ಪುರುಷ ಸಮಾಸವನ್ನು ಮಾಡದೇ, ಕರ್ಮಧಾರಯ ಸಮಾಸವನ್ನೇ ಆಶ್ರಯಿಸಿ ಬ್ರಹ್ಮನನ್ನು ಕುರಿತು ಹೋಗುತ್ತಾನೆಂಬ ವ್ಯಾಖ್ಯಾನವನ್ನೇ ವಿವಕ್ಷಿಸಬೇಕೆಂದು ಸೂತ್ರದಲ್ಲಿರುವ 'ಲಿಂಗಮ್' ಎಂಬ ಪದವು ತಿಳಿಸುತ್ತಿದೆ ಎಂದು ವ್ಯಾಖ್ಯಾನಿಸುತ್ತಾರೆ.

**तन्न । उत्तरत्र ''अरश्च ह वैण्यश्चार्णवौ ब्रह्मलोके तृतीयस्यामितो दिवि तदैरं मदीयं सरः तदश्वत्थः सोमसवनस्तदपराजिता पूर्ब्रह्मणः'' इति श्रुतौ ''परस्य ब्रह्मणो लोके श्वेतद्वीपाभिधे परे अरो ण्यश्चार्णवौ दिव्यौ'' इत्यादिस्मृतौ च षष्ठीश्रवणादरण्याख्यसुधासमुद्रसरोश्वत्थाद्याश्रयत्वलिङ्गाच्च षष्ठीसमासस्य युक्तत्वात् ।**

ಈ ವ್ಯಾಖ್ಯಾನವೂ ತಪ್ಪು. ಏಕೆಂದರೆ ಶ್ರುತಿಯ ಮುಂದಿನ ವಾಕ್ಯದಲ್ಲಿಯೂ ಬ್ರಹ್ಮಲೋಕ ಪದವಿದೆ. ಅಲ್ಲಿರುವ ಬ್ರಹ್ಮಲೋಕಪದಕ್ಕೆ ಷಷ್ಠೀತತ್ಪುರುಷ ಸಮಾಸವನ್ನೇ ಆಶ್ರಯಿಸುವುದು ಅನಿವಾರ್ಯ. 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ ತದೈರಂ ಮದೀಯಂ ಸರಃ ತದಶ್ವತ್ಥಃ ಸೋಮಸವನಸ್ತದಪರಾಜಿತಾಪೂಃ ಬ್ರಹ್ಮಣಃ' 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳು ಬ್ರಹ್ಮಲೋಕದಲ್ಲಿವೆ. ಭೂಲೋಕದಿಂದ ಮೂರನೆಯ ಲೋಕವೆನಿಸಿದ ದ್ಯುಲೋಕದಲ್ಲಿ ಮಧ್ಯದಿಂದ ಕೂಡಿರುವ ಮದದಾಯಕವಾದ ಸರೋವರವಿದೆ. ಅಮೃತವನ್ನು ಸ್ರವಿಸುವ ಅಶ್ವತ್ಥ ಮರವಿದೆ, ಯಾರಿಂದಲೂ ಗೆಲ್ಲಲಾಗದ ಪಟ್ಟಣವೇ ಈ ಬ್ರಹ್ಮನ ಪಟ್ಟಣ' ಎಂದು ಬ್ರಹ್ಮನ ಲೋಕವನ್ನು ವರ್ಣನೆ ಮಾಡುತ್ತಿದೆ. ಆದ್ದರಿಂದ ಬ್ರಹ್ಮಲೋಕ ಶಬ್ದಕ್ಕೆ

ಬ್ರಹ್ಮನೇ ಲೋಕನಾಗಿದ್ದಾನೆಂದು ವ್ಯಾಖ್ಯಾನಿಸಬಾರದು. ಬ್ರಹ್ಮನಿಗೆ ಸಂಬಂಧಪಟ್ಟ ಲೋಕವೆಂದೇ ವ್ಯಾಖ್ಯಾನಿಸಬೇಕು. ಮತ್ತು 'ಪರಸ್ಯ ಬ್ರಹ್ಮಣೋ ಲೋಕೇ ಶ್ವೇತದ್ವೀಪಾಭಿಧೇ ಪರೇ । ಅರೋಣ್ಯಾಶ್ಚಾರ್ಣವೌ ದಿವ್ಯೌ' ಎಂಬ ಛಾಂದೋಗ್ಯ ಭಾಷ್ಯದಲ್ಲಿ ಹೇಳಲ್ಪಟ್ಟ ಸ್ಮೃತಿಯೂ ಕೂಡ ಬ್ರಹ್ಮಲೋಕವನ್ನೇ ವರ್ಣನೆ ಮಾಡಿದೆ. ಈ ಸ್ಮೃತಿಯ ಆಧಾರದಿಂದಲೂ 'ಬ್ರಹ್ಮಣಃ ಲೋಕೇ' ಎಂಬುದಾಗಿ ಷಷ್ಠೀ ಸಮಾಸವೇ ಕೇಳಿಸುತ್ತಿದೆ. ಮತ್ತು 'ಅರ' ಮತ್ತು 'ಣ್ಯ' ಎಂಬೆರಡು ಸುಧಾಸಮುದ್ರಗಳಿಗೆ, ಸರೋವರಕ್ಕೆ, ಅಶ್ವತ್ಥವೃಕ್ಷಕ್ಕೆ ಆಶ್ರಯವಾಗಿರುವಿಕೆಯೆಂಬ ಲಿಂಗದ ಬಲದಿಂದಲೂ ಷಷ್ಠೀಸಮಾಸ ಮಾಡುವುದೇ ಅತ್ಯಂತ ಯುಕ್ತವಾಗಿದೆಯೆಂದು ತಿಳಿಯಬೇಕು.

**''एतया निषादस्थपतिम्'' इत्यत्र तु वाक्यशेषे षष्ठ्या अश्रवणात्समानाधिकरण-समासो युक्तः ।**

'ಏತಯಾ ನಿಷಾದಸ್ಥಪತಿಮ್' ಎಂಬ ಶ್ರುತಿಯನ್ನು ವಿಚಾರ ಮಾಡುವಾಗ ಪೂರ್ವಮೀಮಾಂಸೆಯಲ್ಲಿ ಷಷ್ಠೀ ಸಮಾಸಕ್ಕಿಂತ ಕರ್ಮಧಾರಯ ಸಮಾಸವನ್ನೇ ಶ್ರೇಷ್ಠವೆಂದು ಪರಿಗಣಿಸಿದ್ದಾರಲ್ಲವೇ? ಆದ್ದರಿಂದ ಇಲ್ಲಿಯೂ ಕೂಡ ಕರ್ಮಧಾರಯ ಸಮಾಸವನ್ನು ಮಾಡುವುದೇ ಯುಕ್ತವಾಗುತ್ತದೆಂದು ಪ್ರಶ್ನಿಸಬಾರದು. ಏಕೆಂದರೆ 'ಏತಯಾ ನಿಷಾದಸ್ಥಪತಿಮ್' ಎಂಬ ಶ್ರುತಿಯ ವಾಕ್ಯಶೇಷದಲ್ಲಿ ಷಷ್ಠೀ ವಿಭಕ್ತಿಯು ಕೇಳಿಸುತ್ತಿಲ್ಲ. ಷಷ್ಠೀ ಸಮಾಸವನ್ನು ಆಶ್ರಯಿಸಬೇಕೆನ್ನಲು ಬೇರೆ ಯಾವ ಲಿಂಗಗಳೂ ಕೂಡ ಇರುವುದಿಲ್ಲ. ಸಮಾನಾಧಿಕರಣ ಸಮಾಸವೆನಿಸಿದ ಕರ್ಮಧಾರಯ ಸಮಾಸವನ್ನು ಮಾಡಬೇಕಾಗುತ್ತದೆ. ಆದರೆ ಪ್ರಕೃತ ವಾಕ್ಯಶೇಷದಲ್ಲಿ ಷಷ್ಠೀ ಸಮಾಸವು ಅನೇಕ ಲಿಂಗಗಳೂ ಇರುವ ಪ್ರಯುಕ್ತ, ಕರ್ಮಧಾರಯ ಸಮಾಸವನ್ನು ಆಶ್ರಯಿಸದೇ ಷಷ್ಠೀ ಸಮಾಸವನ್ನೇ ಮಾಡಬೇಕು.

**एवं चोत्तरवाक्यानुसारेण ''अहरहर्गच्छन्त्य एतं ब्रह्मलोकम्'' इत्यत्रापि ब्रह्मण आवासस्थानत्वाद्दहराकाशो ब्रह्मलोकशब्दार्थः ।**

ಆದ್ದರಿಂದ ಮುಂದಿನ ವಾಕ್ಯಕ್ಕೆ ಅನುಸಾರಿಯಾಗಿ 'ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಮ್' ಎಂಬಲ್ಲಿಯೂ ಕೂಡ ಬ್ರಹ್ಮನಿಗೆ ಆವಾಸಸ್ಥಾನವಾದ ಕಾರಣ ದಹರಾಕಾಶವನ್ನೇ 'ಬ್ರಹ್ಮಲೋಕ' ಎಂದು ಕರೆಯಬೇಕು. ಹೊರತು ಬ್ರಹ್ಮನನ್ನೇ ಬ್ರಹ್ಮಲೋಕ ಶಬ್ದದ ಅರ್ಥವೆಂದು ಕರೆಯಬಾರದು.

**यथा ब्रह्मपुरे दहरमित्यत्र शरीरं ब्रह्मपुरशब्दार्थस्तद्वत् ।**

ಯಾವರೀತಿಯಾಗಿ 'ಬ್ರಹ್ಮಪುರೇ ದಹರಮ್' ಎಂಬಲ್ಲಿ ಶರೀರವು ಬ್ರಹ್ಮಪುರ ಶಬ್ದದ ಅರ್ಥವಾಗಿದೆಯೋ, ಆದರಂತೆ 'ಏತಂ ಬ್ರಹ್ಮಲೋಕಮ್' ಎಂಬಲ್ಲಿಯೂ ಕೂಡ ಬ್ರಹ್ಮನ ಆವಾಸಸ್ಥಾನವೆನಿಸಿದ ಹೃದಯದಲ್ಲಿರುವ ದಹರಾಕಾಶವೇ ಬ್ರಹ್ಮಲೋಕವೆನಿಸಿದೆ.

**नहि तदावासस्थानप्राप्तिं विना तत्प्राप्तिः ।**

ಬ್ರಹ್ಮಲೋಕವನ್ನು ಕುರಿತು ಹೋಗದವನು ಬ್ರಹ್ಮನನ್ನು ಕುರಿತೂ ಕೂಡ ಹೋಗಲು ಸಾಧ್ಯವಿಲ್ಲ. ಬ್ರಹ್ಮನನ್ನು ಸುಪ್ತನಾದ ಜೀವನು ಪಡೆಯುತ್ತಾನೆಂದು ಹೇಳುವ ಅದ್ವೈತಿಗಳು ಬ್ರಹ್ಮನ ಆವಾಸಸ್ಥಾನವನ್ನೂ ಕೂಡ ತೆರಳುತ್ತಾನೆಂದು ಕೂಡ ಒಪ್ಪಲೇ ಬೇಕು.

**यच्चोक्तमुभाभ्यां तृतीयसूत्रे धृतेर्महिम्न इति पदद्वयं समानाधिकरणमिति । महिम्नोऽस्यास्मिन्नुपलब्धेः**

'ಧೃತೇಶ್ಚ ಮಹಿಮ್ನೋಽಸ್ಮಿನ್ನುಪಲಬ್ಧೇಃ ಎಂಬ ಮೂರನೆಯ ಸೂತ್ರದಲ್ಲಿ 'ಧೃತೇಃ ಮಹಿಮ್ನಾ' ಎಂಬೆರಡು ಪದಗಳು ಧಾರಕತ್ವವೆಂಬ ಮಹಿಮೆಯಿರುವುದರಿಂದ ಸಮಾನಾಧಿಕರಣದಲ್ಲಿ ಪ್ರಯುಕ್ತವಾಗಿವೆ ಎಂದು ಶಂಕರ-ರಾಮಾನುಜರಿಬ್ಬರೂ ಕೂಡ ವ್ಯಾಖ್ಯಾನ ಮಾಡುತ್ತಾರೆ. ದಹರಾಕಾಶನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಸಕಲ ವಸ್ತುಗಳಿಗೆ ಧಾರಕತ್ವ ಮಹಿಮೆಯು ಅವನಲ್ಲಿರುವುದರಿಂದ ಎಂದು ಇವರ ವ್ಯಾಖ್ಯಾನ.

**तन्न । अम्बरान्तधृतेरित्यादाविव धृतेरित्यनेनैव सेतुर्विधृतिरिति श्रौतस्य धारकत्वस्योक्तिसम्भवेन महिम्न इत्यस्य वैयर्थ्यात् ।**

ಇದೂ ಕೂಡ ತಪ್ಪು. 'ಧೃತೇಃ' ಎಂದಷ್ಟೇ ಹೇಳಿದರೆ ಸಾಕು. 'ಮಹಿಮ್ನಾ' ಎಂಬ ಪದವು ವ್ಯರ್ಥ. ಯಾವರೀತಿಯಾಗಿ 'ಅಂಬರಾಂತಧೃತೇಃ' ಇತ್ಯಾದಿ ಸ್ಥಳಗಳಲ್ಲಿ 'ಧೃತೇಃ' ಎಂಬ ಪದದಿಂದಲೇ 'ಸೇತುರ್ವಿಧೃತಿಃ' ಎಂಬ ಶ್ರುತಿಯಲ್ಲಿರುವ ಧಾರಕತ್ವ ಮಹಿಮೆಯನ್ನು ಹೇಳಿದಂತಾಗುತ್ತದೋ, ಅದರಂತೆ ಇಲ್ಲಿಯೂ ಕೂಡ 'ಧೃತೇಃ' ಎಂಬ ಪದದಿಂದಲೇ ಧಾರಕತ್ವ ಮಹಿಮೆಯನ್ನು ಹೇಳಿದಂತಾಗುತ್ತದೆ. ಪುನಃ 'ಮಹಿಮ್ನಃ' ಎಂಬ ಪದವು ಇವರಿಬ್ಬರ ಪ್ರಕಾರವೂ ವ್ಯರ್ಥವೇ ಆಗಿದೆ. ಬೇರೊಂದು ಕೃತ್ಯವನ್ನು ಇವರಿಬ್ಬರಿಂದಲೂ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಸಾಧುವಾಗಿದೆ.

**प्रकाशः –**

मतद्वयेऽपि द्वितीयसूत्रैकदेशार्थं दूषयितुं परमतं तावदनूद्य प्रत्याह – यच्चेति ।। परैरिति वर्तते ।

**ವಿವರಣೆ -** ಶಾಂಕರಭಾಷ್ಯ ಹಾಗೂ ರಾಮಾನುಜಭಾಷ್ಯದಲ್ಲಿ ಎರಡನೆಯ 'ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರದ ಏಕದೇಶಕ್ಕೆ ಹೇಗೆ ವ್ಯಾಖ್ಯಾನಿಸಿದ್ದಾರೋ, ಅದನ್ನು ಅನುವಾದ ಮಾಡಿ

ದೂಷಿಸುತ್ತಿದ್ದಾರೆ 'ಯಚ್ಚೋಕ್ತಂ' ಇತ್ಯಾದಿ ಗ್ರಂಥದಿಂದ. 'ಯಚ್ಚೋಕ್ತಂ' ಎಂಬ ಪದದ ಅನಂತರ 'ಪರೈಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆದ್ದರಿಂದ ಕೇವಲ ಅದ್ವೈತಿಗಳ ವ್ಯಾಖ್ಯಾನವನ್ನು ಮೊದಲು ಅನುವಾದ ಮಾಡಿ ನಿರಾಕರಿಸಿದ್ದಾರೆಂದು ತಿಳಿಯುತ್ತದೆ.

**प्रकाशः** – ''अहरहर्गच्छन्त्य एतं ब्रह्मलोकम्'' इत्युक्तं यत्सुप्तप्रजानां ब्रह्मलोकगमनं यश्च ब्रह्मैव लोक्यते इति लोक इति ब्रह्मलोकशब्दः ताभ्यां गतिशब्दाभ्यां दहरो ब्रह्म ।

ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - 'ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಮ್' ಇತ್ಯಾದಿ ವಾಕ್ಯದಲ್ಲಿ ಸುಪ್ತರಾದ ಜೀವಿಗಳು ಬ್ರಹ್ಮನ ಲೋಕವನ್ನು ಕುರಿತು ಹೋಗುತ್ತಾರೆಂದು ಹೇಳಲಾಗಿದೆ. ಮತ್ತು 'ಲೋಕ್ಯತೇ ಇತಿ ಲೋಕಃ', 'ಬ್ರಹ್ಮೈವ ಲೋಕಃ ಬ್ರಹ್ಮಲೋಕಃ' ಎಂಬ ವ್ಯುತ್ಪತ್ತಿಯಿಂದ ಬ್ರಹ್ಮಲೋಕಶಬ್ದಕ್ಕೆ ಬ್ರಹ್ಮನೆಂದೇ ಅರ್ಥವಾಗುತ್ತದೆ. ಹೀಗೆ ಸುಪ್ತಪ್ರಜೆಗಳ 'ಗತಿ' ಮತ್ತು 'ಬ್ರಹ್ಮಲೋಕ' ಶಬ್ದ ಇವೆರಡರ ಬಲದಿಂದ ದಹರಾಕಾಶನು ಬ್ರಹ್ಮನೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

**प्रकाशः** – तद्धि सुप्तजीवानां ब्रह्मविषयगमनरूपलिङ्गं च ''सता सोम्य तदा सम्पन्नः'' इत्यादौ दृष्टम् ।

ಸುಪ್ತಜೀವರಿಗೆ ಬ್ರಹ್ಮವಿಷಯಕವಾದ ಗಮನವೆಂಬ ಲಿಂಗವು 'ಸತಾ ಸೋಮ್ಯ ತದಾ ಸಂಪನ್ನಃ' ಇತ್ಯಾದಿ ವಾಕ್ಯದಲ್ಲಿ ಹೇಳಿರುವುದು ಕಂಡಿದೆ.

**प्रकाशः** – तथा ब्रह्मलोकशब्दः सत्यलोकपरः किं न स्यादित्याशङ्क्य तथा हि इदमेव सुप्तानां ब्रह्मलोकगमनरूपलिङ्गं ब्रह्मलोकशब्दस्य समानाधिकरणसमासे दृष्टम् । नहि सुप्तानामहरहस्सत्यलोकगमनमस्तीत्यर्थः परेषाम् ।

'ತಥಾಹಿ ದೃಷ್ಟಮ್' ಎಂಬುದರ ಮತ್ತೊಂದು ಅಭಿಪ್ರಾಯ ಹೀಗಿದೆ - 'ಬ್ರಹ್ಮಣಃ ಲೋಕಃ' 'ಬ್ರಹ್ಮಲೋಕಃ' ಎಂದು ಷಷ್ಠೀತತ್ಪುರುಷ ಸಮಾಸವನ್ನು ಮಾಡಬಾರದು. ಹಾಗೇ ಷಷ್ಠೀತತ್ಪುರುಷ ಸಮಾಸವನ್ನು ಮಾಡಿದಾಗ ಬ್ರಹ್ಮಲೋಕ ಶಬ್ದವು ಸತ್ಯಲೋಕವೆಂಬರ್ಥವನ್ನು ಹೇಳುತ್ತದೆ. ಆದರೆ ಹೀಗೆ ಸಮಾಸ ಮಾಡಬಾರದೆಂಬುದಕ್ಕೆ ಬ್ರಹ್ಮಲೋಕ ಗಮನವೆಂಬ ಲಿಂಗವೇ ಆಧಾರವಾಗಿದೆ. ಸಮಾನಾಧಿಕರಣ ಸಮಾಸವೆನಿಸಿದ, ಕರ್ಮಧಾರಯ ಸಮಾಸವನ್ನೇ ಮಾಡಬೇಕೆನ್ನಲು ಆಧಾರವಾಗಿದೆ. ಏಕೆಂದರೆ ಸುಪ್ತರಾದ ಜೀವಿಗಳು ಪ್ರತಿನಿತ್ಯ ಸತ್ಯಲೋಕವನ್ನು ಕುರಿತು ಹೋಗುವುದು ಅಸಂಭಾವಿತವಷ್ಟೇ, ಇದು ಅದ್ವೈತಿಗಳ ವ್ಯಾಖ್ಯಾನ.

**प्रकाशः** – केषाञ्चित्तूक्ताभ्यामेव गतिशब्दाभ्यां दहरो ब्रह्म । तथा हि सुप्तौ जीवानां गमनरूपं लिङ्गं च ब्रह्मविषयं दृष्टं ''सति सम्पद्य न विदुः'' इत्यादौ ।

ರಾಮಾನುಜರ ವ್ಯಾಖ್ಯಾನ ಹೀಗಿದೆ - ಹಿಂದೆ ಹೇಳಿದಂತೆ 'ಗತಿ' ಹಾಗೂ 'ಶಬ್ದ' ಇವುಗಳ ಆಧಾರದಿಂದಲೇ ದಹರಾಕಾಶವು ಬ್ರಹ್ಮನೆಂದು ತಿಳಿಯುತ್ತದೆ. ಅದು ಹೀಗೆ - ಸುಪ್ತ್ಯವಸ್ಥೆಯಲ್ಲಿ ಜೀವರು ಬ್ರಹ್ಮನನ್ನು ಕುರಿತು ಹೋಗುತ್ತಾರೆ. ಹೀಗೆ ಜೀವರುಗಳ ಗಮನವೆಂಬ ಲಿಂಗ ಬ್ರಹ್ಮವಿಷಯಕವಾಗಿರುವುದು 'ಸತಿ ಸಂಪದ್ಯ ನ ವಿದುಃ' ಇತ್ಯಾದಿ ಶ್ರುತಿಗಳಲ್ಲಿ ಕಂಡಿದೆ.

**ಪ್ರಕಾಶಃ – तथा ब्रह्मलोकशब्दश्च ''एष ब्रह्मलोकस्सम्राडिति होवाच'' इत्यादौ ब्रह्मविषयो दृष्टः ।**

ಅದರಂತೆ ಬ್ರಹ್ಮಲೋಕ ಶಬ್ದವೂ ಕೂಡ 'ಏಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ' ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮವಿಷಯಕವಾಗಿರುವುದು ಕಂಡಿದೆ.

**प्रकाशः – तथा सुप्तगमनं लिङ्गं ब्रह्मलोकशब्दस्य समानाधिकरणसमासेऽपि दृष्टम् । सुप्तानामहरहस्सत्यलोकगमनाभावादित्यर्थः ।**

ಅದರಂತೆ ಸುಪ್ತಗಮನವೆಂಬ ಲಿಂಗ ಮತ್ತು ಬ್ರಹ್ಮಲೋಕಶಬ್ದ ಇವೆರಡೂ ಸಮಾನಾಧಿಕರಣ ಸಮಾಸದಲ್ಲಿಯೂ ಕಂಡಿದೆ ಎಂದರೆ - ಸಮಾನಾಧಿಕರಣ ಸಮಾಸವೆನಿಸಿದ ಕರ್ಮಧಾರಯ ಸಮಾಸವನ್ನು ಮಾಡಿದಾಗ ಬ್ರಹ್ಮಲೋಕಶಬ್ದಕ್ಕೆ ಬ್ರಹ್ಮನೆಂದೇ ಅರ್ಥವಾಗುತ್ತದೆ. ಬ್ರಹ್ಮನನ್ನು ಕುರಿತು ಸುಪ್ತರು ತೆರಳುತ್ತಾರೆಂದು ಅರ್ಥ. ಹೊರತು ಬ್ರಹ್ಮನ ಲೋಕವೆನಿಸಿದ ಸತ್ಯಲೋಕಾದಿಗಳನ್ನು ಹಗಲು-ರಾತ್ರಿ ಹೋಗಲು ಸಾಧ್ಯವಿಲ್ಲ ಎಂದು ತಿಳಿಯಬೇಕು.

**प्रकाशः – तत्र गतिशब्दाभ्यामित्यंशार्थस्याविरोधादनिरासेनांशान्तरार्थस्यैव निरासः ।**

'ಗತಿಶಬ್ದಾಭ್ಯಾಮ್' ಎಂಬ ಸೂತ್ರಭಾಗದ ವ್ಯಾಖ್ಯಾನದಲ್ಲಿ ವಿರೋಧವಿಲ್ಲದ ಕಾರಣ ಅದನ್ನು ನಿರಾಸ ಮಾಡದೇ 'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರಭಾಗದ ವ್ಯಾಖ್ಯಾನವನ್ನಷ್ಟೇ ಗ್ರಂಥಕಾರರು ನಿರಾಕರಿಸುತ್ತಿದ್ದಾರೆ.

**प्रकाशः – एतेनेति ।। परमते सूत्रखण्डार्थनिरासेनेत्यर्थः ।। तथात्व इति ।। उभयविशेषणत्वे तथा हि लिङ्गशब्दौ दृष्टाविति विन्यासः स्यादित्यर्थः । सूत्रखण्डस्य द्वाभ्यामप्युक्तमर्थान्तरमप्यनूद्य निराह – यच्चेति ।।**

'ಏತೇನ' ಎಂದರೆ ಅದ್ವೈತಮತದಲ್ಲಿ ಸೂತ್ರಖಂಡಾರ್ಥವನ್ನು ನಿರಾಕರಣೆ ಮಾಡಿದ್ದರಿಂದ ಎಂದರ್ಥ. 'ತಥಾತ್ವೇ' ಎಂದರೆ ಉಭಯವಿಶೇಷಣವಾದರೆ 'ಲಿಂಗಶಬ್ದೌ ದೃಷ್ಟೌ' ಎಂದೇ ಸೂತ್ರದ ವಿನ್ಯಾಸವಿರಬೇಕಿತ್ತು ಎಂದರ್ಥ. ಸೂತ್ರಖಂಡಕ್ಕೆ ಉಭಯವಾದಿಗಳು ಹೇಳಿದ ಅರ್ಥಾಂತರಗಳನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ವಾಕ್ಯದಿಂದ.

ಪರಿಪೂರ್ಣಚಂದ್ರಿಕಾ

**प्रकाशः – नतु षष्ठीति ।।** तथात्वे कमलासनलोकपरः स्यादिति भावः । तस्य लिङ्गत्वं व्यनक्ति **– न हीति ।।**

'ನತು ಷಷ್ಠೀ' ಎಂದರೆ - 'ಬ್ರಹ್ಮಲೋಕ' ಶಬ್ದಕ್ಕೆ ಷಷ್ಠೀ ಸಮಾಸವನ್ನು ಮಾಡಬಾರದು. ಹಾಗೇ ಷಷ್ಠೀ ಸಮಾಸ ಮಾಡಿದರೆ ಸತ್ಯಲೋಕವೆಂಬರ್ಥವು ಹೇಳಿದಂತಾಗುತ್ತದೆ ಎಂದಭಿಪ್ರಾಯ. ಹೀಗೆ ಸಮಾಸವನ್ನು ಆಶ್ರಯಿಸ- ಬಾರದೆನ್ನಲು ಕಾರಣವನ್ನು ಹೇಳುತ್ತಿದ್ದಾರೆ 'ನಹಿ' ಇತ್ಯಾದಿ ವಾಕ್ಯದಿಂದ.

**प्रकाशः –** अत्र प्रयुक्तस्यैव ब्रह्मलोकशब्दस्याग्रे षष्ठ्यन्तविग्रहाश्रयणदर्शनादिहापि तथैव युक्त इत्याह **– उत्तरत्रेति ।।**

ಇಲ್ಲಿ ಪ್ರಯೋಗಿಸಲ್ಪಟ್ಟ 'ಬ್ರಹ್ಮಲೋಕ' ಶಬ್ದವನ್ನೇ ಮುಂದೆಯೂ ಕೂಡ ಪ್ರಯೋಗಿಸಲಾಗಿದೆ. ಮುಂದೆ ಪ್ರಯೋಗಿಸಿರುವ 'ಬ್ರಹ್ಮಲೋಕ' ಶಬ್ದಕ್ಕೆ ಷಷ್ಠೀ ಸಮಾಸವನ್ನೇ ಮಾಡಬೇಕಾದ್ದರಿಂದ ಇಲ್ಲಿಯೂ ಕೂಡ ಷಷ್ಠೀ ಸಮಾಸವನ್ನೇ ಆಶ್ರಯಿಸುವುದು ಯುಕ್ತವಾಗುತ್ತದೆಂಬ ಅಭಿಪ್ರಾಯದಿಂದ 'ಉತ್ತರತ್ರ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः –** तत्रापि कथं षष्ठ्यन्तसमास इत्यतस्तस्य लोकपरत्वेन ब्रह्मपरत्वाभावात्तथासमास इति भावेन वाक्यशेषमुदाहरति **– तृतीयस्यामिति ।।**

ಮುಂದೆಯಾದರೂ ಕೂಡ ಷಷ್ಠೀ ಸಮಾಸವನ್ನೇ ಏಕೆ ಆಶ್ರಯಿಸಬೇಕು ಎಂದರೆ, ಅಲ್ಲಿರುವ ಬ್ರಹ್ಮಲೋಕ ಶಬ್ದಕ್ಕೆ ಸತ್ಯಲೋಕವೆಂದೇ ಅರ್ಥ. ಬ್ರಹ್ಮವೆಂಬರ್ಥವನ್ನು ಸ್ವೀಕರಿಸುವುದು ತಪ್ಪಾಗುತ್ತಾದ್ದರಿಂದ ಷಷ್ಠೀಸಮಾಸವನ್ನು ಆಶ್ರಯಿಸುವುದು ಅನಿವಾರ್ಯವೆಂಬ ಅಭಿಪ್ರಾಯದಿಂದ ವಾಕ್ಯಶೇಷವನ್ನು ಉದಾಹರಿಸುತ್ತಿದ್ದಾರೆ 'ತೃತೀಯಸ್ಯಾಮ್' ಇತ್ಯಾದಿ ವಾಕ್ಯದಿಂದ.

**प्रकाशः – ऐरं** मद्ययुक्तम् । **मदीयं** मदकरम् । **सरः** सरोवरम् । **सोमसवनः** अमृतस्रावी । **पूः** पुरी । ''दिव्यौ चिदानन्दरसात्मकौ'' इति छान्दोग्यभाष्योक्तस्मृतावित्यर्थः ।

'ಇತಃ ತೃತೀಯಸ್ಯಾಮ್' ಎಂದರೆ ಈ ಲೋಕದಿಂದ ಮೂರನೆಯ ಲೋಕವೆನಿಸಿದ ದ್ಯುಲೋಕದಲ್ಲಿ, ಐರಂ = ಮದ್ಯದಿಂದ ಕೂಡಿರುವ, ಮದೀಯಂ = ಮದವನ್ನು ಹುಟ್ಟಿಸುವ, ಸರಃ = ಸರೋವರವು, ಸೋಮಸವನಃ = ಅಮೃತವನ್ನು ಸ್ರವಿಸುವ ಮರವು, ತದಪರಾಜಿತಃ = ಯಾರಿಂದಲೂ ಸೋಲಿಸಲಾಗದ, ಪೂಃ = ಪಟ್ಟಣವು, ಬ್ರಹ್ಮಣಃ = ಬ್ರಹ್ಮನದ್ದು. ಹೀಗೆ ಶ್ರುತ್ಯರ್ಥ. 'ದಿವ್ಯೌ ಚಿದಾನಂದರಸಾತ್ಮಕೌ' ಎಂಬುದು ಛಾಂದೋಗ್ಯಭಾಷ್ಯದಲ್ಲಿ ಹೇಳಲ್ಪಟ್ಟ ಸ್ಮೃತಿಯೆಂದು ತಿಳಿಯಬೇಕು.

**प्रकाशः –** अत्र यद्यपि पूर्वतन्त्र एव निषादस्थपतिनये कर्मधारयबलवत्त्वस्य सिद्धत्वान्न तल्लिङ्गेनेह साध्यमिति सूत्रखण्डो व्यर्थ एवेत्यपि सुवचम् ।

ಪ್ರಶ್ನೆ - ಗ್ರಂಥಕಾರರು ಸುಲಭವಾಗಿಯೇ ಇವರಿಬ್ಬರ ಮತವನ್ನು ನಿರಾಕರಿಸಬಹುದಿತ್ತು. ಅಂದರೆ, ಕರ್ಮಧಾರಯ ಸಮಾಸವನ್ನು ಆಶ್ರಯಿಸಬೇಕು, ಷಷ್ಠೀಸಮಾಸವನ್ನು ಆಶ್ರಯಿಸಬಾರದೆನ್ನಲು 'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರದ ಭಾಗವನ್ನು ಇವರಿಬ್ಬರೂ ಉಪಯೋಗಿಸಿ ಕೊಳ್ಳುತ್ತಿದ್ದಾರೆ. ಆದರೆ ಷಷ್ಠೀ ಸಮಾಸ ಹಾಗೂ ಕರ್ಮಧಾರಯ ಸಮಾಸಗಳೆರಡೂ ಪ್ರಾಪ್ತವಾದಾಗ ಕರ್ಮಧಾರಯ ಸಮಾಸವೇ ಶ್ರೇಷ್ಠವಾದ್ದರಿಂದ ಅದನ್ನೇ ಆಶ್ರಯಿಸಬೇಕೆಂದು ಪೂರ್ವಮೀಮಾಂಸಾದಲ್ಲಿ ಸಿದ್ಧವಾಗಿದೆ. 'ನಿಷಾದಸ್ಥಪತ್ಯಧಿ-ಕರಣದಲ್ಲಿ ಕರ್ಮಧಾರಯ ಸಮಾಸವೇ ಬಲಿಷ್ಠವೆಂದು ಪೂರ್ವಮೀಮಾಂಸಕರು ಒಪ್ಪಿದ್ದಾರೆ. ಪೂರ್ವಮೀಮಾಂಸಕರು ಹೇಳಿದ ಲಿಂಗದ ಬಲದಿಂದಲೇ ಬ್ರಹ್ಮಲೋಕ ಶಬ್ದಕ್ಕೂ ಕೂಡ ಕರ್ಮಧಾರಯ ಸಮಾಸವನ್ನೇ ಆಶ್ರಯಿಸಬಹುದೆಂದು ಉಭಯವಾದಿಗಳು ಸಮರ್ಥಿಸಬಹುದು. ಹೀಗಿರುವಾಗ ಅದರ ಸಮರ್ಥನೆಗಾಗಿ 'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರಭಾಗವು ಹೊರಟಿರುತ್ತದೆ ಎಂದು ಹೇಳುವುದು ವ್ಯರ್ಥವಾಗಿದೆ. ಹೀಗೆಯೇ ಪರವಾದಿಗಳನ್ನು ಸುಲಭವಾಗಿ ನಿರಾಕರಿಸಬಹುದಿತ್ತಲ್ಲವೇ?

**प्रकाशः** – तथापीह षष्ठीसमासनिराकरणेन कर्मधारयस्थापनाय लिङ्गमप्यधिकमस्तीति तदप्युक्तं सूत्रकारेणेति भामत्यामुक्तत्वात्तद्दूषणमुपेक्ष्य श्रुतिविरुद्धं चैतद्व्याख्यानमिति वक्तुं दूषणान्तरमेवोक्तम् ।

ಉತ್ತರ - ಗ್ರಂಥಕಾರರು ಹಾಗೆ ಹೇಳದಿರಲು ಕಾರಣವಿದೆ. ಷಷ್ಠೀಸಮಾಸವನ್ನು ನಿರಾಕರಿಸುವ ಮೂಲಕ ಕರ್ಮಧಾರೆಯ ಸಮಾಸವನ್ನೇ ಆಶ್ರಯಿಸಬೇಕೆನ್ನಲು ಲಿಂಗವೂ ಕೂಡ ಅಧಿಕವಾಗಿದೆಯೆಂದು ಸೂತ್ರಕಾರರು 'ತಥಾಹಿ ದೃಷ್ಟಂ ಲಿಂಗಂ ಚ' ಎಂದು ಹೇಳಿರುತ್ತಾರೆ. ಹೀಗೆ ಭಾಮತಿಯಲ್ಲಿ ಇದರ ಸಮರ್ಥನೆಯಿದೆ. ಪೂರ್ವಮೀಮಾಂಸಾ ದೃಷ್ಟಾಂತದ ಜೊತೆಗೆ ಮತ್ತೊಂದು ಕಾರಣವನ್ನು ಸೂತ್ರದಲ್ಲಿರುವಂತೆ ವಿವಕ್ಷಿಸಿದಾಗ, ಕರ್ಮಧಾರೆಯ ಸಮಾಸವನ್ನೇ ಆಶ್ರಯಿಸಬೇಕೆಂದು ನಿಶ್ಚಯವಾಗುತ್ತದೆಂದು ಭಾಮತಿಕಾರರ ಅಭಿಪ್ರಾಯ. ಆದ್ದರಿಂದ ಗ್ರಂಥಕಾರರು ಕೇವಲ ಪೂರ್ವಮೀಮಾಂಸಾ ದೃಷ್ಟಾಂತದಿಂದ ದೂಷಣೆ ಮಾಡಿರುವುದಿಲ್ಲ. ಮತ್ತು ಮುಂದಿರುವ ಬ್ರಹ್ಮಲೋಕ ಶಬ್ದದ ವಿರೋಧವೂ ಕೂಡ ಇವರ ವ್ಯಾಖ್ಯಾನಕ್ಕೆ ಬರುತ್ತದೆಂದು ತಿಳಿಸಬೇಕಾಗಿದೆ. ಆದ್ದರಿಂದ ಬೇರೆ ದೋಷವನ್ನು ಹೇಳಿದ್ದು ಸಮಂಜಸವಾಗಿದೆ.

**प्रकाशः** – यदुक्तं भामतीरामानुजभाष्ययोर्निषादस्थपतिन्यायेन च कर्मधारय इति तत्र तद्वैषम्यमाह – एतयेति ।।

ಭಾಮತಿ ಹಾಗೂ ರಾಮಾನುಜಭಾಷ್ಯಗಳಲ್ಲಿ ನಿಷಾದಸ್ಥಪತ್ಯಧಿಕರಣ ನ್ಯಾಯದಿಂದ ಕರ್ಮಧಾರಯ ಸಮಾಸವನ್ನು ಆಶ್ರಯಿಸಬೇಕೆಂದು ಸಮರ್ಥಿಸಲಾಗಿದೆ. ಆದರೆ ದೃಷ್ಟಾಂತವೇ ವಿಷಮವಾಗಿದೆಯೆಂದು 'ಏತಯಾ' ಇತ್ಯಾದಿ ದೃಷ್ಟಾಂತದಿಂತ ಸಮರ್ಥಿಸುತ್ತಿದ್ದಾರೆ.

**प्रकाशः** – षष्ठे ''स्थपतिर्निषादः स्याच्छब्दसामर्थ्यात्'' इत्याद्यपादीयान्तिमाधिकरणे ''रौद्रं वास्तुमयं चरुं निर्वपेत्'' इति रौद्रेष्टिं प्रकृत्य श्रुते ''एतया निषादस्थपतिं याजयेत्'' इत्यत्र द्विजातिरेव यो निषादानामाधिपत्यं

करोति तस्यात्राधिकारः षष्ठीसमास एवायमथ निषाद एव स्थपतिः तस्याधिकारः कर्मधारय एव समास इति संशये पक्षद्वयेऽप्यस्य यौगिकत्वात्षष्ठीसमासत्वेऽग्निविद्यावत एव त्रैवर्णिकस्याधिकारलाभात् कर्मधारयपक्षेऽग्निविद्याशून्यस्यापि तत्प्राप्तेः षष्ठीसमास एवेति प्राप्ते अस्मिन्पक्षे षष्ठ्यश्रवणेन निषादशब्दस्य तत्सम्बन्धिनि स्थपतौ लक्षणापत्तेः कर्मधारये तदभावाद्वचनबलादग्निविद्याहीनस्याप्यधिकारोपपत्तेः कर्मधारय एवेति सिद्धान्तितम् ।

'ಸ್ಥಪತಿರ್ನಿಷಾದಃ ಸ್ಯಾಚ್ಛಬ್ದಸಾಮರ್ಥ್ಯಾತ್'[1] (೬-೧-೫೧)

ಈ ಅಧಿಕರಣದಲ್ಲಿ 'ರೌದ್ರಂ ವಾಸ್ತುಮಯಂ ಚರುಂ ನಿರ್ವಪೇತ್' ಎಂಬುದಾಗಿ ರುದ್ರದೇವತಾಕವಾದ

(१) भाट्टसङ्ग्रहः –

**अथ त्रयोदशं त्रैवर्णिकभिन्नस्य निषादस्य रौद्रयागेऽधिकाराधिकरणम्**

**(निषादस्थपतिन्यायः (सूत्रे - ५१-५२)**

**स्थपतिर्निषादः स्याच्छब्दसामर्थात् ॥ ५१ ॥**

**(लिङ्गदर्शनाच्च ॥५२॥)**

पूर्ववैषम्येणात्र शङ्कनात्सङ्गतिः । ''वास्तुमयं रौद्रं चरुं निर्वपेत्'' इति प्रकृत्य श्रूयते ''एतया निषादस्थपतिं याजयेत्'' इति । वास्तुशब्दो द्रव्यविशेषवचनः । तत्र **सन्देहः**, निषादानामाधिपत्यं कुर्वन् द्विज एव निषादस्थपतिशब्देनोच्यते । तस्यात्राधिकारः किं वा निषाद एव यः स्थपतिस्तस्यात्रेष्टावधिकार इति । **पूर्वपक्षस्तु**, युक्तं पूर्वत्र योगाद्रूढेर्बलीयस्त्वेन रथकारशब्दस्य त्रैवर्णिकेतरजातिविशेषपरत्वेनात्रैवर्णिकपरत्वम् । निषादस्थपतिशब्दस्य त्रैवर्णिके जातिविशेषे च यौगिकत्वाविशेषात् षष्ठीसमासाश्रयेण स्वतस्सिद्धाग्निविद्यत्रैवर्णिकपरतैव युक्ता । त्रैवर्णिकपरत्वे च स्थपतीष्टेरग्निविद्यावत्त्रैवर्णिकाधिकारिकत्वेनाग्निविद्याकल्पनागौरवाभावः । कर्मधारयमाश्रित्य जातिविशेषपरत्वोक्तावग्निविद्याकल्पनाप्रसङ्गः । तस्मात् त्रैवर्णिकाधिकारिकतेष्टेरिति । **सिद्धान्तस्तु**, षष्ठीतत्पुरुषपक्षे सम्बन्धवाचिषष्ठ्या आश्रयणेन निषादपदस्य निषादसम्बन्धीति सम्बन्धिनि लक्षणापातात्, कर्मधारये तु न कस्यापि लक्षणेति शब्दसामर्थ्यादनग्निविद्यस्यापि निषादस्यैव स्थपतेरिष्टावधिकार इति । **तदाह सूत्रे, स्थपतिर्निषादः स्यादित्यादि** । व्यक्तः सूत्रार्थः । **फलन्तु**, रौद्रेष्टिर्निषादस्येति ।

**इति त्रयोदशं त्रैवर्णिकभिन्नस्य निषादस्य रौद्रयागेऽधिकाराधिकरणम्**

**(निषादस्थपतिन्यायः सूत्रे ५१-५२)**

ದಹರಾಧಿಕರಣ (೧-೩-೫)

ಚರುದ್ರವ್ಯಕವಾದ ರೌದ್ರೇಷ್ಟಿಯ ಬಗ್ಗೆ ವಿಚಾರ ಮಾಡಲಾಗಿದೆ. 'ಏತಯಾ ನಿಷಾದಸ್ಥಪತಿಂ ಯಾಜಯೇತ್' ಎಂಬ ವಾಕ್ಯದಲ್ಲಿ ನಿಷಾದಸ್ಥಪತಿಯಿಂದ ರೌದ್ರೇಷ್ಟಿಯನ್ನು ಮಾಡಿಸಬೇಕೆಂದು ತಿಳಿಸಲಾಗಿದೆ. ಇಲ್ಲಿರುವ 'ನಿಷಾದಸ್ಥಪತಿ' ಶಬ್ದಕ್ಕೆ ಏನರ್ಥ? 'ನಿಷಾದ' ಶಬ್ದಕ್ಕೆ ಬೇಡಜಾತಿಯವನು ಎಂದರ್ಥ. 'ಸ್ಥಪತಿ' ಶಬ್ದಕ್ಕೆ ಅಧಿಪತಿ ಎಂದರ್ಥ. 'ನಿಷಾದಾನಾಂ ಸ್ಥಪತಿಃ ನಿಷಾದಸ್ಥಪತಿಃ' ಎಂದು ಷಷ್ಠೀ ತತ್ಪುರುಷ ಸಮಾಸವನ್ನು ಆಶ್ರಯಿಸಿದಾಗ, ಬೇಡಜಾತಿಯವರಿಗೆ ಅಧಿಪತಿಯಾದವನಿಂದ ಯಾಗವನ್ನು ಮಾಡಿಸಬೇಕೆಂದು ಹೇಳಿದಂತಾಗುತ್ತದೆ. ಈ ಪಕ್ಷದಲ್ಲಿ ಬೇಡಜಾತಿಯವನೇ ಯಾಗ ಮಾಡಬೇಕೆಂದು ತಿಳಿಯುವುದಿಲ್ಲ. ಅವರಿಗೆ ಅಧಿಪತಿಯಾದ ಬ್ರಾಹ್ಮಣರೂ ಹೋಮವನ್ನು ಮಾಡಬಹುದು. ಅಥವಾ 'ನಿಷಾದ ಏವ ಸ್ಥಪತಿಃ ನಿಷಾದಸ್ಥಪತಿಃ' ಎಂದು ಕರ್ಮಧಾರಯ ಸಮಾಸವನ್ನು ಆಶ್ರಯಿಸಿದರೆ, ಬೇಡಜಾತಿಯವನೇ ಅಧಿಪತಿಯಾಗುತ್ತಾನೆ. ಅವನೇ ಯಾಗಕ್ಕೆ ಅಧಿಕಾರಿಯೆಂದೆನಿಸುತ್ತಾನೆ. ಆದ್ದರಿಂದ ಬೇಡರಿಗೆ ಅಧಿಪತಿಯಾದ ಬ್ರಾಹ್ಮಣಾದಿಗಳು ಯಾಗಕ್ಕೆ ಅಧಿಕಾರಿಗಳೋ, ಅಥವಾ ಬೇಡನೇ ಅಧಿಕಾರಿಯೋ ? ಎಂದು ಸಂಶಯ ಬರುತ್ತದೆ.

ಪೂರ್ವಪಕ್ಷ - ಎರಡೂ ಪಕ್ಷಗಳಲ್ಲಿಯೂ ಯೌಗಿಕಾರ್ಥವನ್ನು ಆಶ್ರಯಿಸಬೇಕಾದ್ದರಿಂದ ಅಸ್ವಾರಸ್ಯ ಸಮಾನ. ಆದರೆ ಷಷ್ಠೀ ಸಮಾಸವನ್ನು ಆಶ್ರಯಿಸಿದರೆ ಅಗ್ನಿವಿದ್ಯೆಯಲ್ಲಿ ಅಧಿಕಾರವಿರುವ ತ್ರೈವರ್ಣಿಕರಿಗೆ ಮಾತ್ರ ಯಾಗಾಧಿಕಾರವಿರುವುದರಿಂದ ಅವರಿಂದಲೇ ಯಾಗ ಮಾಡಬೇಕೆಂದು ಹೇಳಿದಂತಾಗುತ್ತದೆ. ಆದರೆ ಕರ್ಮಧಾರಯ ಪಕ್ಷವನ್ನು ಆಶ್ರಯಿಸಿದರೆ, ಆದರೆ ಅಗ್ನಿವಿದ್ಯೆಯಲ್ಲಿ ಅಧಿಕಾರವಿಲ್ಲದ ಬೇಡಜಾತಿಯವರಿಗೆ ಯಾಗಾಧಿಕಾರವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಷಷ್ಠೀ ಸಮಾಸವನ್ನು ಆಶ್ರಯಿಸುವುದು ಸೂಕ್ತ.

ಸಿದ್ಧಾಂತ - ಷಷ್ಠೀ ಸಮಾಸವನ್ನೇ ಮಾಡಬೇಕೆನ್ನಲು ಪ್ರಮಾಣವಿಲ್ಲ. ಮತ್ತು ಷಷ್ಠೀ ಸಮಾಸವನ್ನು ಆಶ್ರಯಿಸಿದರೆ 'ನಿಷಾದಾನಾಂ ಸ್ಥಪತಿಃ' ಎಂದು ಹೇಳಿದಂತಾಗುತ್ತದೆ. ಆವಾಗ ಷಷ್ಠೀಗೆ ನಿಷಾದ ಸಂಬಂಧಿಯಲ್ಲಿ ಲಕ್ಷಣಾ ಮಾಡುವ ಪ್ರಸಂಗ ಬರುತ್ತದೆ. ಕರ್ಮಧಾರಯ ಸಮಾಸವನ್ನು ಆಶ್ರಯಿಸಿದಾಗ ಈ ಸಮಸ್ಯೆ ಇಲ್ಲ. ಆದ್ದರಿಂದ, ಶ್ರುತಿಯನ್ನು ನೋಡಿದಾಗ ನಮಗೆ ಬೇಡಜಾತಿಯವನೇ ಯಾಗಕ್ಕೆ ಅಧಿಕಾರಿಯೆಂದು ನೇರವಾಗಿ ತಿಳಿಯುತ್ತದೆ. ಅದರ ಬಲದಿಂದ ಅಗ್ನಿವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ ಕೂಡ ಆ ಯಾಗದಲ್ಲಿ ಮಾತ್ರ ಬೇಡಜಾತಿಯವನು ಅಧಿಕಾರಿಯಾಗಿರುತ್ತಾನೆಂದು ತಿಳಿಯಬೇಕು. ಆದ್ದರಿಂದ ಷಷ್ಠೀ ಸಮಾಸಕ್ಕಿಂತ ಕರ್ಮಧಾರಯ ಸಮಾಸವೇ ಶ್ರೇಷ್ಠವೆಂದು ಈ ಅಧಿಕರಣದಿಂದ ತಿಳಿದಿದೆ.

**प्रकाशः – तत्र षष्ठीग्राहकवाक्यशेषोऽत्रैव नास्तीत्यर्थः । तथा चेह वाक्यशेषान्यथानुपपत्त्या प्रबलोऽपि कर्मधारयस्त्याज्यः ।**

ಪೂರ್ವಮೀಮಾಂಸಾಧಿಕರಣದಲ್ಲಿ ಷಷ್ಠೀ ಸಮಾಸವನ್ನೇ ಆಶ್ರಯಿಸಬೇಕನ್ನಲು ಕಾರಣವಿಲ್ಲ. ಆದರೆ ಪ್ರಕೃತ ಬ್ರಹ್ಮಲೋಕಶಬ್ದದಲ್ಲಿ ಷಷ್ಠೀ ಸಮಾಸವನ್ನೇ ಆಶ್ರಯಿಸಲು ಉತ್ತರವಾಕ್ಯದ ಬೆಂಬಲವಿದೆ. ಆದ್ದರಿಂದ ವಾಕ್ಯಶೇಷಾನ್ಯಥಾನುಪಪತ್ತ್ಯಾ ಕರ್ಮಧಾರಯಸಮಾಸವು ಪ್ರಬಲವಾಗಿದ್ದರೂ ಕೂಡ ಇಲ್ಲಿ ಅದನ್ನು ಆಶ್ರಯಿಸಬಾರದೆಂದು ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – यथा ''श्येनेनाभिचरन्यजेत'' इत्यत्र ''यथा वै श्येनः'' इति वाक्यशेषबलाच्छ्येनशब्दे प्रबलरूढित्यागस्तद्वदिति भावः ।

ಯಾವರೀತಿಯಾಗಿ 'ಶ್ಯೇನೇನಾಭಿಚರನ್ ಯಜೇತ' ಎಂಬಲ್ಲಿ 'ಯಥಾ ವೈ ಶ್ಯೇನಃ' ಎಂಬ ವಾಕ್ಯಶೇಷದ ಬಲದಿಂದ ಶ್ಯೇನ' ಶಬ್ದಕ್ಕೆ ಪ್ರಬಲವಾದ ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನು ಸ್ವೀಕರಿಸಲಾಗುತ್ತದೋ, ಅದರಂತೆ ಇಲ್ಲಿಯೂ ಕೂಡ ವಾಕ್ಯಶೇಷದ ಬಲದಿಂದ ಪ್ರಬಲವಾದ ಕರ್ಮಧಾರಯ ಸಮಾಸವನ್ನು ಬಿಟ್ಟು ಷಷ್ಠೀ ಸಮಾಸವನ್ನೇ ಆಶ್ರಯಿಸಬೇಕು.

**प्रकाशः** – नन्वेवं कथं तर्हि टीकायां ब्रह्मैव सर्वलोकाश्रयत्वादिना लोकपदोक्तं वेति कर्मधारयस्स्वीकृत इति चेत् ।

ಪ್ರಶ್ನೆ - ಹಾಗಾದರೆ ಟೀಕೆಯಲ್ಲಿ 'ಬ್ರಹ್ಮೈವ ಲೋಕಃ' ಬ್ರಹ್ಮಲೋಕಃ' ಎಂದು ಕರ್ಮಧಾರಯ ಸಮಾಸವನ್ನೂ ಕೂಡ ಏಕೆ ಸ್ವೀಕರಿಸಿದ್ದಾರೆ? ಸರ್ವಲೋಕಕ್ಕೂ ಆಶ್ರಯನಾದ್ದರಿಂದ ಬ್ರಹ್ಮನೇ ಲೋಕಪದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಅರ್ಥವನ್ನು ಟೀಕೆಯಲ್ಲಿ ಹೇಳಿದ್ದು ತಪ್ಪಾಯಿತಲ್ಲವೇ?

**प्रकाशः** – न । षष्ठ्यर्थात्यागेनैवार्थान्तरस्योक्तेः । अत एव ''परं ब्रह्मैव लोकनात् । ब्रह्मलोक इति प्रोक्तस्तस्य लोकोऽपि कथ्यते'' इति छान्दोग्यभाष्यविरोधोऽपि प्रत्युक्तः ।

ಉತ್ತರ - ಟೀಕೆಯಲ್ಲಿ ಕರ್ಮಧಾರಯ ಸಮಾಸವನ್ನು ಆಶ್ರಯಿಸಿರಬಹುದು. ಆದರೆ ಷಷ್ಠೀ ಸಮಾಸವನ್ನು ಬಿಡದೇ, ಮತ್ತೊಂದು ವ್ಯಾಖ್ಯಾನವನ್ನು ಮಾಡುವ ಮೂಲಕ ಕರ್ಮಧಾರಯ ಸಮಾಸವನ್ನು ಸಮರ್ಥಿಸಿದ್ದಾರೆ. ಆದ್ದರಿಂದಲೇ ಛಾಂದೋಗ್ಯಭಾಷ್ಯದಲ್ಲಿ 'ಪರಂ ಬ್ರಹ್ಮೈವ ಲೋಕನಾತ್ । ಬ್ರಹ್ಮಲೋಕ ಇತಿ ಪ್ರೋಕ್ತಸ್ತಸ್ಯ ಲೋಕೋಽಪಿ ಕಥ್ಯತೇ' ಪರಬ್ರಹ್ಮನೇ ಲೋಕಶಬ್ದಪ್ರತಿಪಾದ್ಯನಾಗಿದ್ದಾನೆ. ಅಷ್ಟೇ ಅಲ್ಲದೇ ಅವನ ಲೋಕವೂ ಕೂಡ ಬ್ರಹ್ಮಲೋಕವೆನಿಸಿದೆ ಎಂದು ಎರಡೂ ಅರ್ಥವನ್ನು ಸಮರ್ಥಿಸಿದ್ದಾರೆ. ಹೀಗೆ ಹೇಳಿದ್ದರಿಂದ ಟೀಕಾಕ್ಕೆ ಛಾಂದೋಗ್ಯಭಾಷ್ಯದ ವಿರೋಧವನ್ನೂ ಕೂಡ ಪರಿಹರಿಸಿದಂತಾಯಿತು.

**प्रकाशः** – अस्त्वेवं तत्र ततश्च किमित्यत आह – **एवञ्चेति ।। दहराकाशो ब्रह्मलोकशब्दार्थ इति ।।**

ಷಷ್ಠೀ ತತ್ಪುರುಷ ಸಮಾಸವನ್ನು ಆಶ್ರಯಿಸಬೇಕೆಂದು ಹೇಳಿದ್ದರಿಂದ ಪ್ರಕೃತದಲ್ಲಿ ಏನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ 'ಏವಂಚ' ಇತ್ಯಾದಿ ವಾಕ್ಯವು ಉತ್ತರಿಸುತ್ತಿದೆ. 'ದಹರಾಕಾಶಃ, ಬ್ರಹ್ಮಲೋಕಶಬ್ದಾರ್ಥಃ ಎಂದು ಗ್ರಂಥದಲ್ಲಿ ಹೇಳಿದ್ದಾರೆ ಇದರಿಂದ ತಿಳಿಯುವ ವಿಚಾರ ಹೀಗಿದೆ -

**प्रकाशः** – यद्यपि टीकायां ''हृत्पद्मस्य ब्रह्मलोकत्वोक्त्या'' इत्यादिना हृत्पद्मं ब्रह्मलोकशब्दार्थ इति भाति ।

ಪ್ರಶ್ನೆ - ಟೀಕೆಯಲ್ಲಿ 'ಹೃತ್ಪದ್ಮಸ್ಯ ಬ್ರಹ್ಮಲೋಕತ್ವೋಕ್ತ್ಯಾ' ಎಂಬ ಮಾತನ್ನು ನೋಡಿದಾಗ ಹೃತ್ಪದ್ಮವೇ ಬ್ರಹ್ಮಲೋಕ ಶಬ್ದದ ಅರ್ಥವೆಂದು ತೋರುತ್ತದೆ. ಆದರೆ ಈಗ ಹೃತ್ಪದ್ಮದಲ್ಲಿರುವ ಆಕಾಶವನ್ನು ಬ್ರಹ್ಮಲೋಕವೆಂದು ವ್ಯಾಖ್ಯಾನಿಸುತ್ತಿದ್ದೀರಿ. ಆದ್ದರಿಂದ ಟೀಕೆಯ ವಿರೋಧ ಬರುತ್ತದಲ್ಲವೇ?

**प्रकाशः** – तथापि परैर्दहराकाशस्य कर्मधारयेण ब्रह्मलोकशब्दार्थत्वेन ब्रह्मत्वोक्तेस्तन्निरासतात्पर्येणैवमुक्तिः ।

ಉತ್ತರ - ದಹರಾಕಾಶವನ್ನು ಬ್ರಹ್ಮಲೋಕವೆಂದು ನಾವು ಹೇಳುತ್ತೇವೆ, ಅವರೂ ಕೂಡ ಹೇಳುತ್ತಾರೆ. ಆದರೆ ಬ್ರಹ್ಮನ ಆವಾಸಸ್ಥಾನವೆಂದು ನಮ್ಮ ವ್ಯಾಖ್ಯಾನ. ಕರ್ಮಧಾರಯ ಸಮಾಸದಿಂದ ಬ್ರಹ್ಮನೇ ಲೋಕಶಬ್ದಾರ್ಥನಾಗಿದ್ದಾನೆಂಬುದು ಅವರ ವ್ಯಾಖ್ಯಾನ. ಈ ಅವರ ವಾದವನ್ನು ನಿರಾಕರಿಸುವುದಕ್ಕಾಗಿ ಟೀಕೆಯಲ್ಲಿ 'ಹೃತ್ಪದ್ಮಸ್ಯ ಬ್ರಹ್ಮಲೋಕತ್ವೋಕ್ತ್ಯಾ ' ಎಂದು ಹೇಳಿದ್ದಾರೆ.

**प्रकाशः** – नन्वेवं दहराकाशगत्या दहरस्थस्य कथं ब्रह्मत्वम् । दहरस्थगतेरेव वक्तव्यत्वात् । अतो दहरमेव ब्रह्मेत्यत आह – **न हीति** ।।

ಪ್ರತಿನಿತ್ಯವೂ ಸುಪ್ತಿಯಲ್ಲಿ ಪ್ರಜೆಗಳು ದಹರಾಕಾಶವನ್ನು ಕುರಿತು ಹೋಗುತ್ತಾರೆಂದು ಹೇಳಿದಂತಾಯಿತು. ಬ್ರಹ್ಮನನ್ನು ಕುರಿತು ಹೋಗುತ್ತಾರೆಂದು ಹೇಳಿದಂತಾಗಲಿಲ್ಲ. ಆದ್ದರಿಂದ ದಹರವನ್ನೇ ಬ್ರಹ್ಮನೆಂದು ಹೇಳುವ ನಮ್ಮ ಅಭಿಪ್ರಾಯವೇ ಸರಿಯಲ್ಲವೇ? ಎಂಬ ಪ್ರಶ್ನೆಗೆ 'ನಹಿ' ವಾಕ್ಯದಿಂದ ಉತ್ತರಿಸಿದ್ದಾರೆ. ಬ್ರಹ್ಮನ ಆವಾಸಸ್ಥಾನವನ್ನು ಹೊಂದದೇ, ಬ್ರಹ್ಮನನ್ನು ಹೊಂದಲು ಸಾಧ್ಯವಿಲ್ಲವೆಂದು ಇದರ ಅಭಿಪ್ರಾಯ.

**प्रकाशः** – **वैयर्थ्यादिति** ।। सिद्धान्ते तु 'महिम्नः' इत्यादेस्समाख्याप्रदर्शकत्वेन सार्थक्यमिति भावः ।

ಸಿದ್ಧಾಂತದಲ್ಲಿ 'ಮಹಿಮ್ನಃ' ಇತ್ಯಾದಿ ಪದಗಳು ಸಮಾಖ್ಯಾಪ್ರಮಾಣಕ್ಕೆ ಜ್ಞಾಪಕವಾದ್ದರಿಂದ ಸಾರ್ಥಕವಾಗಿದೆಯೆಂದು 'ವೈಯರ್ಥ್ಯಾತ್' ಎಂಬುದರ ಅಭಿಪ್ರಾಯವೆಂದು ತಿಳಿಯಬೇಕು.

**प्रकाशः** – ननु धृतेर्धारणाद्दहराकाशो ब्रह्मेत्युक्ते कुत इत्याशङ्कायां धृतिरूपलिङ्गस्य ब्रह्मधर्मतासाधनाय महिम्न इत्यादि सार्थकम् । अस्य धारणलक्षणस्य महिम्नोऽस्मिन्नीश्वरे "एष सेतुर्विधारणः" इत्यादिश्रुत्यन्तरे उपलब्धेरिति भामत्याद्युक्तेरित्यत उक्तम् **अम्बरान्तेति** ।।

'ಮಹಿಮ್ನಃ' ಇತ್ಯಾದಿ ಪದಗಳಿಗೆ ವೈಯರ್ಥ್ಯವಿಲ್ಲ. ಏಕೆಂದರೆ 'ಧೃತೇಃ' ಸಕಲವನ್ನೂ ಧರಿಸಿದ್ದರಿಂದ ದಹರಾಕಾಶವು ಬ್ರಹ್ಮನಾಗಿದ್ದಾನೆಂದು ಹೇಳಿದಾಗ, ಸಕಲವನ್ನು ಧರಿಸಿದ ಮಾತ್ರಕ್ಕೆ ಬ್ರಹ್ಮನೇ ಏಕಾಗಬೇಕೆಂಬ ಪ್ರಶ್ನೆಯು ಬರುತ್ತದೆ. ಈ ಪ್ರಶ್ನೆಗೆ ಉತ್ತರಿಸಲು ಸಕಲವನ್ನು ಧರಿಸಿರುವಿಕೆಯು ಬ್ರಹ್ಮನ ಧರ್ಮವೇ ಆಗಿದೆಯೆಂದು ಸಾಧಿಸಬೇಕು. ಅದಕ್ಕಾಗಿ 'ಮಹಿಮ್ನಃ' ಇತ್ಯಾದಿ ಪದಗಳು ಸಾರ್ಥಕವಾಗಿವೆ. ಸಕಲವನ್ನು

ಧರಿಸಿರುವಿಕೆ ಎಂಬುದು ಪರಮಾತ್ಮನ ಲಕ್ಷಣವಾಗಿದೆಯೆಂದು ಬೇರೆ ಶ್ರುತಿಯಲ್ಲಿ 'ಏಷ ಸೇತುರ್ವಿಧಾರಣಃ' ಇತ್ಯಾದಿಯಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಸಕಲಧಾರಕತ್ವವೂ ಬ್ರಹ್ಮನ ಲಕ್ಷಣವಾಗಿದೆ. ಇದರಿಂದ ದಹರಾಕಾಶನೆನಿಸಿದವನು ಬ್ರಹ್ಮನೇ ಆಗಿದ್ದಾನೆಂದು ತಿಳಿಯುತ್ತದೆ. ಹೀಗೆ ಭಾಮತಿಯಲ್ಲಿ 'ಮಹಿಮ್ನಃ' ಇತ್ಯಾದಿ ಪದಗಳ ಸಾರ್ಥಕ್ಯವನ್ನು ಸಮರ್ಥಿಸಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ಅಂಬರಾಂತ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – अन्यथा तत्रापि साधनप्रसङ्ग इति भावः । ब्रह्मधर्मतासाधकत्वेऽप्यस्यास्मिन्नुपलब्धेरित्येतावतैव पूर्तौ महिम्न इति व्यर्थमिति भावेनोक्तं – **महिम्न इत्यस्येति** ।। श्रुत्यन्तरेष्वित्यध्याहारप्रसङ्गाच्चेत्यपि ध्येयम् ।।

ಇಲ್ಲದ್ದಿದರೆ ಅಲ್ಲಿಯೂ ಎಂದರೆ 'ಅಂಬರಾಂತಧೃತೇಃ' ಎಂಬಲ್ಲಿಯೂ ಸಾಧನೆ ಮಾಡುವ ಪ್ರಸಂಗ ಬರುತ್ತಿತ್ತು ಎಂದಭಿಪ್ರಾಯ. ಬ್ರಹ್ಮಧರ್ಮತ್ವಕ್ಕೆ ಸಾಧಕವನ್ನಾಗಿ ಹೇಳುವುದಾದರೂ 'ಅಸ್ಯಾಸ್ಮಿನ್ ಉಪಲಬ್ಧೇಃ' ಎಂದಷ್ಟೇ ಸಾಕು. 'ಮಹಿಮ್ನಃ' ಎಂಬ ಪದವು ವ್ಯರ್ಥವೇ ಆಗುತ್ತದೆಂದು 'ಮಹಿಮ್ನಃ ಇತ್ಯಸ್ಯ' ಎಂಬ ವಾಕ್ಯದಿಂದ ಹೇಳಿರುತ್ತಾರೆ. ಮತ್ತು 'ಶ್ರುತ್ಯಂತರೇಷು' ಎಂಬುದನ್ನು ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳುವ ಪ್ರಸಂಗವೂ ಬರುತ್ತದೆ. ಆದ್ದರಿಂದ ಅದ್ವೈತಿಗಳ ಮೂರನೆಯ ಸೂತ್ರವ್ಯಾಖ್ಯಾನವೂ ಕೂಡ ಅಸಾಧುವಾಗಿದೆ.

**गुरुराजीयम्** – ब्रह्मणो दहराकाशस्थत्वाभ्युपगमे श्रुत्यन्तरविरोधं चाह – **किञ्चेति** ।। नन्वेवं निषादस्थपतिमित्यत्रापि निषादश्चासौ स्थपतिश्चेति कर्मधारयो न स्यात् । किन्तु निषादानां स्थपतिरिति षष्ठीसमास एवेत्यत आह – **एतयेति** ।। ननु षष्ठीसमासे निरन्तरं ब्रह्मलोकगमनं वक्तव्यम् । नच तदस्तीति कथं षष्ठीसमास इत्यत आह – **न हीति** ।। ब्रह्मैव लोकमिति समानाधिकरणसमासो न स्यात् । ब्रह्मप्राप्तेर्ब्रह्मलोकप्राप्तिं विनाऽयोगादित्यभिप्रायः ।




ಅದ್ವೈತಿಗಳು ಎರಡನೆಯ ಸೂತ್ರದಲ್ಲಿರುವ 'ತಥಾಹಿ ದೃಷ್ಟಂ' ಎಂಬುದಕ್ಕೆ ಸುಪ್ತಜೀವರ ಗಮನವು ಬ್ರಹ್ಮವಿಷಯಕವಾಗಿದೆಯೆಂದು ಬೇರೆ ಶ್ರುತಿಯಲ್ಲಿಯೂ ಕಂಡಿದೆ ಎಂದು ವ್ಯಾಖ್ಯಾನಿಸುತ್ತಾರೆ. ರಾಮಾನುಜರು 'ಬ್ರಹ್ಮನ ಗತಿ' ಮತ್ತು 'ಬ್ರಹ್ಮಶಬ್ದ' ಎರಡೂ ಕೂಡ ಬೇರೆ ಶ್ರುತಿಯಲ್ಲಿ ಕಂಡಿದೆಯೆಂದು ವ್ಯಾಖ್ಯಾನಿಸುತ್ತಾರೆ. ಇವರಿಬ್ಬರ ವ್ಯಾಖ್ಯಾನವೂ ಕೂಡ ಸರಿಯಲ್ಲ. ಅದ್ವೈತಿಗಳ ಪ್ರಕಾರ ಸಮಾಸದಲ್ಲಿ ಅಂತರ್ಗತವಾದ ಗತಿಶಬ್ದಾರ್ಥಕ್ಕೆ 'ದೃಷ್ಟಮ್' ಎಂಬ ಪದಾರ್ಥದಲ್ಲಿ ಅನ್ವಯ ಮಾಡುವುದು ಅವ್ಯುತ್ಪನ್ನವಾಗಿದೆ. ಮತ್ತು ನಪುಂಸಕಲಿಂಗದಲ್ಲಿರುವ ದೃಷ್ಟಪದಕ್ಕೆ ಸ್ತ್ರೀಲಿಂಗದಲ್ಲಿರುವ 'ಗತಿ' ಶಬ್ದದಿಂದ ಅನ್ವಯಮಾಡುವುದಂತೂ ವ್ಯುತ್ಪತ್ತಿಯಿಲ್ಲದವರ ವ್ಯಾಖ್ಯಾನವಾಗಿದೆ. ರಾಮಾನುಜರು ಕೂಡ 'ಗತಿ ಶಬ್ದಾಭ್ಯಾಂ' ಎಂಬಲ್ಲಿ ವಿಶೇಷಣವೆಂದು ಹೇಳಬೇಕಾದರೆ, 'ದೃಷ್ಟಮ್' ಎಂಬುದನ್ನು

ಪುಲ್ಲಿಂಗದಲ್ಲಿ ಮತ್ತು ದ್ವಿವಚನದಲ್ಲಿ ಪ್ರಯೋಗಿಸಬೇಕಾಗುತ್ತದೆ. ಆದ್ದರಿಂದ ಇವರಿಬ್ಬರ ವ್ಯಾಖ್ಯಾನವೂ ಕೂಡ ಅತ್ಯಂತ ಬಾಲಿಶವಾದದ್ದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮತ್ತು ಇಬ್ಬರು ವಾದಿಗಳೂ ಕೂಡ ಶ್ರುತಿಯಲ್ಲಿರುವ ಬ್ರಹ್ಮಲೋಕ ಶಬ್ದಕ್ಕೆ ಬ್ರಹ್ಮನೇ ಲೋಕಸ್ವರೂಪನಾಗಿದ್ದಾನೆಂಬ ಅರ್ಥವನ್ನು ಹೇಳುವವರಾಗಿ ಕರ್ಮಧಾರಯ ಸಮಾಸವನ್ನು ಆಶ್ರಯಿಸಿದ್ದಾರೆ. ಬ್ರಹ್ಮಲೋಕವನ್ನು ಕುರಿತು ಪ್ರತಿನಿತ್ಯ ಜೀವರು ತೆರಳಲು ಸಾಧ್ಯವಿಲ್ಲವೆಂದು ಇವರ ವಾದ. ಆದರೆ ಇದೇ ಶ್ರುತಿಯ ಮುಂದಿನ ವಾಕ್ಯದಲ್ಲಿ ಬ್ರಹ್ಮಲೋಕವು ಸುಧಾಸಮುದ್ರಗಳಿಂದ ಯುಕ್ತವಾಗಿದೆ. ಅಮೃತವನ್ನು ಸ್ರವಿಸುವ ಅಶ್ವತ್ಥಮರದಿಂದ ಕಂಗೊಳಿಸುತ್ತಿದೆ. ಜಯಶಾಲಿಯಾಗಿದೆ ಎಂದು 'ಬ್ರಹ್ಮಣಃ ಪೂಃ' ಎಂಬುದಾಗಿ ಷಷ್ಠೀ ಸಮಾಸದಿಂದಲೇ ಬ್ರಹ್ಮನ ಲೋಕವನ್ನು ವರ್ಣಿಸಲಾಗಿದೆ. ಈ ವಾಕ್ಯಶೇಷದ ಬಲದಿಂದ, ಹಿಂದಿನ ಬ್ರಹ್ಮಲೋಕ ಶಬ್ದಕ್ಕೂ ಕೂಡ ಷಷ್ಠೀ ಸಮಾಸವನ್ನೇ ಆಶ್ರಯಿಸಬೇಕೆಂಬ ವಿಚಾರವು ಸ್ಪಷ್ಟವಾಗುತ್ತದೆ. 'ನಿಷಾದಸ್ಥಪತಿಮ್' ಎಂಬ ನ್ಯಾಯದಿಂದ ಕರ್ಮಧಾರಯ ಸಮಾಸವನ್ನು ಮಾಡಬೇಕೆಂಬುದು ಇವರ ಮತ್ತೊಂದು ವಾದ. ಆದರೆ ಪೂರ್ವಮೀಮಾಂಸಾದಲ್ಲಿ 'ನಿಷಾದಸ್ಥಪತಿಮ್' ಎಂಬುದಕ್ಕೆ ಕರ್ಮಧಾರಯ ಸಮಾಸವನ್ನು ಆಶ್ರಯಿಸಬೇಕೆನ್ನಲು ಕಾರಣವನ್ನು ನೀಡಿದ್ದಷ್ಟೇ ಅಲ್ಲದೆ, ಷಷ್ಠೀ ಸಮಾಸವನ್ನು ಆಶ್ರಯಿಸಬೇಕೆನ್ನಲು ವಾಕ್ಯಶೇಷದ ಬೆಂಬಲವಿರುವುದಿಲ್ಲ. ಆದ್ದರಿಂದ ಅಲ್ಲಿ ಕರ್ಮಧಾರಯ ಸಮಾಸವನ್ನು ಆಶ್ರಯಿಸಿದ ಮಾತ್ರಕ್ಕೆ ಪ್ರಕೃತ ಶ್ರುತಿಯಲ್ಲಿರುವ ಬ್ರಹ್ಮಲೋಕ ಶಬ್ದಕ್ಕೆ ಕರ್ಮಧಾರಯ ಸಮಾಸವನ್ನು ಆಶ್ರಯಿಸಬೇಕೆನ್ನಲು ಕಾರಣವಿಲ್ಲ. ಆದ್ದರಿಂದ 'ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಮ್' ಎಂಬಲ್ಲಿರುವ ಬ್ರಹ್ಮಲೋಕ ಶಬ್ದವು ಬ್ರಹ್ಮನಿಗೆ ಆವಾಸಸ್ಥಾನವೆನಿಸಿದ ದಹರಾಕಾಶವನ್ನೇ ಹೇಳುತ್ತಿದೆ.

'ಧೃತೇಶ್ಚ ಮಹಿಮ್ನೋಽಸ್ಮಿನ್ ಉಪಲಬ್ಧೇಃ' ಎಂಬ ಸೂತ್ರವ್ಯಾಖ್ಯಾನದಲ್ಲಿಯೂ ಕೂಡ ಶಂಕರ-ರಾಮಾನುಜರು ಇವರಿಬ್ಬರೂ ಕೂಡ ಎಡವಿದ್ದಾರೆ. 'ಧೃತೇಃ' ಮಹಿಮ್ನಃ' ಎಂಬೆರಡು ಪದಗಳಿಗೆ ಧಾರಕತ್ವವೆಂಬ ಮಹಿಮೆ ಇರುವುದರಿಂದ ಎಂದು ಒಂದೇ ಅರ್ಥವನ್ನು ಹೇಳಿರುತ್ತಾರೆ. 'ಧೃತೇಃ' ಎಂಬ ಪದದಿಂದಲೇ ಧಾರಕತ್ವದ ಮಹಿಮೆಯು ತಿಳಿಯುವಾಗ ಪುನಃ 'ಮಹಿಮ್ನಃ' ಎಂಬ ಪದವು ವ್ಯರ್ಥವಾಗುತ್ತದೆ. 'ಅಂಬರಾಂತಧೃತೇಃ' ಎಂದು ಹಿಂದೆ ಹೇಳಿದಂತೆ ಇಲ್ಲಿಯೂ ಕೂಡ 'ಧೃತೇಃ' ಎಂದಷ್ಟೇ ಹೇಳಿದರೆ ಸಾಕು. ಆದರೆ ನಮ್ಮ ಪ್ರಕಾರ ಧೃತಿ ಮತ್ತು ಬೇರೆ ಮಹಿಮೆಗಳು ಇರುವುದರಿಂದ ಎಂಬರ್ಥವಿರುವುದರಿಂದ ನಮ್ಮಲ್ಲಿ ಎರಡೂ ಪದಗಳು ಸಾರ್ಥಕವಾಗಿವೆ.



## ನಾಲ್ಕನೆಯ ಮತ್ತು ಐದನೆಯ ಸೂತ್ರವ್ಯಾಖ್ಯಾನ ವಿಮರ್ಶೆ

### तात्पर्यचन्द्रिका

**यच्चोक्तमुभाभ्यां ''आकाश इति होवाच'' इत्यादावाकाशशब्दस्य ब्रह्मणि प्रसिद्धेरिति चतुर्थसूत्रार्थ इति ।**

ಅನುವಾದ - ಅದ್ವೈತಮತದಲ್ಲಿ ಮತ್ತು ವಿಶಿಷ್ಟಾದ್ವೈತಮತದಲ್ಲಿ ನಾಲ್ಕನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ - 'ಆಕಾಶ ಇತಿ ಹೋವಾಚ' ಇತ್ಯಾದಿ ಶ್ರುತಿಯಲ್ಲಿ ಇರುವಂತಹ ಆಕಾಶ ಶಬ್ದವು ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ ಎಂಬುದಾಗಿ 'ಪ್ರಸಿದ್ಧೇಃ' ಎಂಬ ಸೂತ್ರದ ಅಭಿಪ್ರಾಯವೆಂದು.

ಪರಿಪೂರ್ಣಚಂದ್ರಿಕಾ

**तन्न । अस्मद्रीत्या समन्वीयमानाकाशस्थत्वस्य ब्रह्मणि प्रसिद्ध्युक्तिसम्भवेऽसमन्वीयमानदहरशब्दसमानाधिकरणाकाशशब्दस्य ब्रह्मणि प्रसिद्ध्युक्तेरयोगात् ।**

ಇದು ತಪ್ಪು. ನಾವು ಹೇಳುವಂತೆ ಸಮನ್ವಯ ಮಾಡುವಂತಹ ಆಕಾಶಸ್ಥತ್ವವು ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆಯೆಂದೇ ವ್ಯಾಖ್ಯಾನಿಸಲು ಬರುವಾಗ ಸಮನ್ವಯ ಮಾಡದಿರುವ ದಹರಶಬ್ದಕ್ಕೆ ಸಮಾನಾಧಿಕರಣವಾದ ಆಕಾಶಶಬ್ದಕ್ಕೆ ಬ್ರಹ್ಮನಲ್ಲಿ ಪ್ರಸಿದ್ಧಿಯನ್ನು ಹೇಳುವುದು ಅಯುಕ್ತವಾಗುತ್ತದೆ.

**यच्चोक्तं पञ्चमसूत्रे असम्भवादित्यस्य बुद्ध्याद्युपाधिपरिच्छिन्ने जीवे ''यावान्वा अयमाकाशः'' इत्याकाशोपमेयत्वाद्यसम्भवादित्यर्थ इति ।**

ಐದನೆಯ ಸೂತ್ರದಲ್ಲಿ 'ಅಸಂಭವಾತ್' ಎಂಬ ಪದಕ್ಕೆ ಬುದ್ಧಿ ಮೊದಲಾದ ಉಪಾಧಿಗಳಿಂದ ಪರಿಚ್ಛಿನ್ನನಾದ ಜೀವನಿಗೆ 'ಯಾವಾನ್ವಾ ಅಯಮಾಕಾಶಃ' ಎಂಬುದಾಗಿ ಆಕಾಶದ ದೃಷ್ಟಾಂತವನ್ನು ನೀಡುವುದು ಅಸಂಭಾವಿತವಾಗುತ್ತದೆ. ಆದ್ದರಿಂದ ಜೀವನನ್ನು ದಹರಾಕಾಶನೆಂದು ಹೇಳಬಾರದು ಹೊರತಾಗಿ, ಅಪರಿಚ್ಛಿನ್ನನಾದ ಉಪಮೇಯಕ್ಕೆ ಅರ್ಹನಾದ ಬ್ರಹ್ಮನೇ ದಹರಾಕಾಶನೆನ್ನಬೇಕೆಂದು ವ್ಯಾಖ್ಯಾನಿಸುತ್ತಾರೆ.

**तन्न । ब्रह्मणोऽपि ''ज्यायानाकाशात्'' इत्यादिश्रुत्याऽऽकाशादपि ज्यायस्त्वेन तदुपमेयत्वायोगात् ।**

ಇದೂ ಸಹ ತಪ್ಪು. ಬ್ರಹ್ಮನೂ ಕೂಡ 'ಜ್ಯಾಯಾನಾಕಾಶಾತ್' ಇತ್ಯಾದಿ ಶ್ರುತಿಯ ಬಲದಿಂದ ಭೂತಾಕಾಶಕ್ಕಿಂತ ಹೆಚ್ಚಿನ ಪರಿಮಾಣವುಳ್ಳವನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಜೀವನು ಹೇಗೆ ಪರಿಚ್ಛಿನ್ನನಾದ ಕಾರಣ ಉಪಮೇಯನಾಗಲಾರನೆಂದು ಹೇಳುತ್ತೀರೋ, ಅದರಂತೆ ಆಕಾಶಕ್ಕಿಂತ ಹೆಚ್ಚಿನ ಪರಿಮಾಣವನ್ನು ಹೊಂದಿರುವ ಕಾರಣ ಬ್ರಹ್ಮನೂ ಕೂಡ ಉಪಮೇಯನಾಗಲು ಸಾಧ್ಯವಿಲ್ಲ.

**पुण्डरीकवेष्टनप्राप्तदहरत्वनिवृत्तिपरं तदिति चेत् ।**

ಶಂಕಾ - 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯದ ಅಭಿಪ್ರಾಯವೇನೆಂದರೆ ಪುಂಡರೀಕದಲ್ಲಿ ಬ್ರಹ್ಮನಿದ್ದಾನೆಂದು ತಿಳಿಯುತ್ತಿದೆ. ಇದರಿಂದ ಅತ್ಯಂತ ಅಲ್ಪಪರಿಮಾಣವು ಬ್ರಹ್ಮನಲ್ಲಿ ಪ್ರಾಪ್ತವಾಗಿದೆ. ಇದನ್ನು ಅಲ್ಲಗಳೆಯುವುದಕ್ಕಾಗಿ ಅಪರಿಚ್ಛಿನ್ನವಾದ ಪರಿಮಾಣವನ್ನು ಹೊಂದಿರುತ್ತಾನೆಂದು ಸಮರ್ಥಿಸುವುದಕ್ಕಾಗಿ 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ಶ್ರುತಿಯು ಹೊರಟಿದೆ. ಆದ್ದರಿಂದ ಬ್ರಹ್ಮನಲ್ಲಿ ಈ ಶ್ರುತಿಯನ್ನು ಉಪಪಾದಿಸಬಹುದಲ್ಲವೇ ಎಂದು.

**न । त्वन्मते सुषुप्त्यादावनुगतजीवभावे तदननुगतबुद्ध्यादेरनुपाधित्वात्तदनुगताविद्याया एव चोपाधित्वादविद्योपाधिकजीवेऽपि पुण्डरीकवेष्टनकृतदहरत्वनिवृत्तेः सम्भवात् ।**

**ಸಮಾಧಾನ** - ಈ ಸಮರ್ಥನೆಯೂ ಸಹ ಸರಿಯಲ್ಲ. ಹೀಗೆ ಹೇಳುವುದಾದರೆ 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯವು ಬ್ರಹ್ಮಪರವಾದಂತೆ ಜೀವಪರವೂ ಕೂಡ ಆಗುತ್ತದೆ. ಏಕೆಂದರೆ ಅದ್ವೈತಮತದಲ್ಲಿ ಸುಷುಪ್ತ್ಯಾದ್ಯವಸ್ಥೆಯಲ್ಲಿ ಅನುಗತವಾದ ಜೀವಭಾವದಲ್ಲಿ ಅನನುಗತವಾದ ಬುದ್ಧ್ಯಾದಿಗಳು ಉಪಾಧಿಯಾಗಲು ಸಾಧ್ಯವಿಲ್ಲ. ಆದ್ದರಿಂದ ಸುಷುಪ್ತ್ಯಾದ್ಯವಸ್ಥೆಯಲ್ಲಿ ಅನುಗತವಾದ ಅವಿದ್ಯೆಯೇ ಉಪಾಧಿಯಾಗಿದೆ ಎಂದು ಹೇಳಬೇಕು. ಅವಿದ್ಯೋಪಾಧಿಕನಾದ ಜೀವನನ್ನು ಅಪರಿಚ್ಛಿನ್ನನೆಂದು ಅದ್ವೈತಿಗಳೂ ಕೂಡ ಒಪ್ಪಿದ್ದಾರೆ. ಇಂತಹ ಅಪರಿಚ್ಛಿನ್ನನಾದ ಜೀವನಲ್ಲಿ ಪುಂಡರೀಕದಲ್ಲಿರುವಿಕೆ ಎಂಬ ಕಾರಣದಿಂದ ಅಲ್ಪಪರಿಮಾಣವು ಪ್ರಾಪ್ತವಾಗಿದೆ. ಅದರ ಪರಿಹಾರಕ್ಕಾಗಿ 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯವು ಪ್ರವೃತ್ತವಾಗಿದೆಯೆಂದು ಹೇಳಬಹುದು. ಆದ್ದರಿಂದ ಐದನೆಯ ಸೂತ್ರವ್ಯಾಖ್ಯಾನವು ಸರಿಯಿಲ್ಲ.

**प्रकाशः –**

**यचेति ।।** ''अस्य लोकस्य का गतिरित्याकाश इति होवाच आकाशो वै नाम नामरूपयोर्निर्वहिता'' इत्यादावाकाशशब्दस्य ब्रह्मणि प्रसिद्धेर्दहराकाशो ब्रह्मेत्यर्थ इति तन्मते सूत्रार्थः ।

ವಿವರಣೆ - 'ಅಸ್ಯ ಲೋಕಸ್ಯ ಕಾ ಗತಿಃ ಇತ್ಯಾಕಾಶ ಇತಿ ಹೋವಾಚ ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ 'ಆಕಾಶ' ಶಬ್ದವು ಬ್ರಹ್ಮನಲ್ಲೇ ಪ್ರಸಿದ್ಧವಾಗಿದೆ. ಆದ್ದರಿಂದ ಬ್ರಹ್ಮನೇ ದಹರಾಕಾಶನೆನಿಸುತ್ತಾನೆಂದು ಅದ್ವೈತಿಗಳ ಸೂತ್ರವ್ಯಾಖ್ಯಾನ.

**प्रकाशः – दहरशब्दसमानाधिकरणेति ।।** सूत्रे दहरशब्दस्यैवामक्तया तस्यैवान्यत्र ब्रह्मणि प्रसिद्धिस्तद्घटितश्रुत्युदाहरणेनैव युक्ता । नतु दहरपदरहितश्रुतिषु सूत्रानुपात्तकेवलाकाशपदस्येत्यर्थः ।

'ದಹರ ಶಬ್ದಸಮಾನಾಧಿಕರಣ' ಎಂದು ಗ್ರಂಥದಲ್ಲಿದೆ. ಇದಕ್ಕೆ ಸೂತ್ರದಲ್ಲಿ 'ದಹರ' ಶಬ್ದವನ್ನೇ ಹೇಳಿದ್ದರಿಂದ 'ದಹರ' ಶಬ್ದಕ್ಕೆ ಮಾತ್ರ ಉಭಯತ್ರಪ್ರಸಿದ್ಧಿಯನ್ನು ಹೇಳಬೇಕು. 'ದಹರ' ಶಬ್ದ ಘಟಿತವಾದ ಶ್ರುತಿಯನ್ನೇ ಈ ವಿಷಯದಲ್ಲಿ ಉದಾಹರಿಸುವುದು ಯುಕ್ತವಾಗುತ್ತದೆ ಹೊರತು, 'ದಹರ' ಪದವಿಲ್ಲದ

ಶ್ರುತಿಗಳಲ್ಲಿ ಸೂತ್ರದಲ್ಲಿಯೂ ಉಲ್ಲೇಖ ಮಾಡದ, ಕೇವಲ ಆಕಾಶ ಪದಕ್ಕೆ ಉಭಯತ್ರಪ್ರಸಿದ್ಧಿಯನ್ನು ಸ್ಪರ್ಧಿಸಿ ಅದರ ಸಮನ್ವಯ ಮಾಡುವುದು ಯುಕ್ತವಲ್ಲ ಎಂದರ್ಥ.

**प्रकाशः** – अस्माकं तु सूत्रे दहर इति सप्तम्या दहराकाशस्थत्वस्याभिमतत्वात्तस्य च ''दहं गगनं विशोकस्तस्मिन्यदन्तस्तदुपासितव्यम्'' इति श्रुत्यन्तरे श्रवणान्न दोष इति भावेनोक्तम् – **अस्मद्रीत्येति** ।

ನಮ್ಮ ಪ್ರಕಾರ ಸೂತ್ರದಲ್ಲಿ 'ದಹರೇ' ಎಂದು ಪದವಿಭಾಗ ಮಾಡಿದ್ದರಿಂದ ದಹರಾಕಾಶಸ್ಥಿತತ್ವವೇ ಅಭಿಮತವಾಗಿದೆ. ಇದು 'ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಮ್' ಎಂದು ಬೇರೊಂದು ಶ್ರುತಿಯಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಸೂತ್ರಾರ್ಥದಲ್ಲಿ ಯಾವುದೇ ದೋಷವಿಲ್ಲವೆಂದು ತಿಳಿಯಬೇಕು. ಈ ಅಭಿಪ್ರಾಯವನ್ನು 'ಅಸ್ಮದ್ರೀತ್ಯಾ' ಎಂಬ ಪದದಿಂದ ತಿಳಿಸಿರುತ್ತಾರೆ.

**प्रकाशः** – **यच्चेति** ।। परैरिति सम्बध्यते । ''एष सम्प्रसादोऽस्माच्छरीरात्समुत्थाय'' इत्यादिना सम्प्रसादशब्देन सुप्त्यवस्थापन्नं जीवं परामृश्य तस्यैव शरीरात्समुत्थानाभिधानाद्दहरो जीव इति चेन्न । बुद्ध्याद्युपाधिपरिच्छिन्ने जीवे ''यावान्वा'' इत्यादिवाक्योक्ताकाशोपमितत्वाद्यसम्भवादित्यन्येषामर्थः ।

ಅದ್ವೈತಿಗಳ ಐದನೆಯ ಸೂತ್ರವ್ಯಾಖ್ಯಾನವನ್ನು 'ಯಚ್ಚೋಕ್ತಂ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. ಇಲ್ಲಿ 'ಪರೈಃ' ಎಂಬುದನ್ನು ಶೇಷಪೂರ್ಣ ಮಾಡಿಕೊಳ್ಳಬೇಕು. ಆದ್ದರಿಂದ ಕೇವಲ ಅದ್ವೈತಿಗಳ ವ್ಯಾಖ್ಯಾನವೆಂದು ತಿಳಿಯುತ್ತದೆ. 'ಏಷ ಸಂಪ್ರಾಸದೋಽಸ್ಮಾಚ್ಛರೀರಾತ್ಸಮುತ್ಥಾಯ' ಇತ್ಯಾದಿ ವಾಕ್ಯದಲ್ಲಿರುವ ಸಂಪ್ರಸಾದ ಶಬ್ದದಿಂದ ಅಂತಹ ಜೀವನಿಗೆ ಶರೀರದಿಂದ ಸಮುತ್ಥಾನವನ್ನು ಹೇಳಲಾಗಿದೆ. ಆದ್ದರಿಂದ ದಹರಾಕಾಶನಾದವನು ಜೀವನೇ ಆಗುತ್ತಾನೆಂದು ಹೇಳಬಾರದು. ಏಕೆಂದರೆ ಬುದ್ಧ್ಯಾದಿ ಉಪಾಧಿಗಳಿಂದ ಪರಿಚ್ಛಿನ್ನನಾದ ಜೀವನಲ್ಲಿ 'ಯಾವಾನ್ವಾ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಭೂತಾಕಾಶದ ಉಪಮಾನವು ಅಸಂಭಾವಿತವಾಗುತ್ತದೆ. ಹೀಗೆ ಅವರು ವ್ಯಾಖ್ಯಾನಿಸುತ್ತಾರೆ.

**प्रकाशः** – ननु न भूताकाशमानत्वं ब्रह्मणोऽत्र विधीयते । येन ज्यायानयमाकाश इति श्रुतिविरोधस्स्यात् । अधिभूताकाशोपमानेन पुण्डरीकोपाधिप्राप्तदहरत्वं निवर्त्यत इति भाष्यभामतीभ्यामुक्तमाशङ्कते – **पुण्डरीकेति** ।।

ಭೂತಾಕಾಶದ ಪರಿಮಾಣವನ್ನು ಬ್ರಹ್ಮನು ಹೊಂದಿದ್ದಾನೆಂದು 'ಯಾವಾನ್ವಾ' ಎಂಬ ವಾಕ್ಯವು ವಿಧಿಸುತ್ತಿಲ್ಲ. ಹಾಗೇ ವಿಧಿಸಿದ್ದಲ್ಲಿ 'ಜ್ಯಾಯಾನಯಮಾಕಾಶಃ' ಎಂಬ ಶ್ರುತಿಯ ವಿರೋಧವು ಬರುತ್ತಿತ್ತು. ಹೊರತಾಗಿ ಭೂತಾಕಾಶದ ಉಪಮಾನವನ್ನು ನೀಡಿದ್ದರಿಂದ, ಪುಂಡರೀಕದಷ್ಟೇ ಉಪಾಧಿಯನ್ನು ಹೊಂದಿರುವಂತಹ ದಹರತ್ವವನ್ನು ಬ್ರಹ್ಮನಲ್ಲಿ ಅಲ್ಲಗಳೆದಂತಾಗುತ್ತದೆ. ಹೀಗೆ ಶಾಂಕರಭಾಷ್ಯ ಹಾಗೂ ಭಾಮತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಅದನ್ನೇ 'ಪುಂಡರೀಕ' ಇತ್ಯಾದಿ ವಾಕ್ಯದಿಂದ ಆಶಂಕಿಸಿದ್ದಾರೆ.

**प्रकाशः – तदननुगतेति ।।** अन्तःकरणलयस्य सुप्तावभ्युपेतत्वादिति भावः । अस्त्वेवमित्यत आह – **अविद्येति ।।** तस्य सर्वगतत्वाभ्युपगमात् । तथा चानूदितं प्रतिकर्मव्यवस्थाभङ्गे ग्रन्थकारैरविद्योपाधिकं सत्सर्वगतमन्तःकरणोपाधिकं सत्परिच्छिन्नं चेति ।

ಅಂತಃಕರಣಕ್ಕೆ ಸುಪ್ತಾವಸ್ಥೆಯಲ್ಲಿ ಲಯವನ್ನು ಅದ್ವೈತಿಗಳು ಒಪ್ಪಿದ್ದಾರೆಂದು 'ತದನನುಗತ' ಎಂಬ ಪದದಿಂದ ತಿಳಿಸಿದ್ದಾರೆ. 'ಹಾಗೇ ಆಗಲಿ' ಎಂಬ ಪ್ರಶ್ನೆಗೆ 'ಅವಿದ್ಯಾ' ಎಂಬ ಪದದಿಂದ ಉತ್ತರಿಸಿದ್ದಾರೆ. ಅವಿದ್ಯೆಯು ಎಲ್ಲಾ ಅವಸ್ಥೆಗಳಲ್ಲಿಯೂ ಅನುಗತವಾಗಿರುತ್ತದೆಂದು ಅದ್ವೈತಿಗಳ ಅಭಿಪ್ರಾಯ. ಹೀಗೆ ಇಲ್ಲಿ ಅನುವಾದ ಮಾಡಲ್ಪಟ್ಟ ವಿಚಾರವು ನ್ಯಾಯಾಮೃತದ ಪ್ರತಿಕರ್ಮವ್ಯವಸ್ಥಾಭಂಗ ಪ್ರಕರಣದಲ್ಲಿ ಗ್ರಂಥಕಾರರಿಂದಲೇ ಸಮರ್ಥಿಸಲ್ಪಟ್ಟಿದೆ. ಅವಿದ್ಯೋಪಾಧಿಕವಾದ ಜೀವನು ಸರ್ವಗತನಾಗಿರುತ್ತಾನೆ. ಅಂತಃಕರಣೋಪಾಧಿಕನಾದ ಜೀವನು ಪರಿಚ್ಛಿನ್ನನಾಗಿರುತ್ತಾನೆಂದು.

**प्रकाशः –** तथा च जीवपूर्वपक्षनिरासकः सौत्रो हेतुर्न स्यादिति भावः । अत्रापहतपाप्मत्वाद्यसम्भवस्यैव हेत्वर्थतया रामानुजीयैरुक्तत्वात्तस्य चानुमतत्वात्तन्न दूषितम् ।।

ಮೇಲೆ ಹೇಳಿದ ಕಾರಣದಿಂದ ಜೀವನೆಂಬ ಪೂರ್ವಪಕ್ಷವನ್ನು ನಿರಾಸ ಮಾಡುವುದಕ್ಕಾಗಿ ಸೂತ್ರದಲ್ಲಿರುವ ಹೇತು ಪ್ರಯುಕ್ತವಾಗಿದೆ ಎಂದು ಹೇಳಬಾರದೆಂದು ತಿಳಿಯಿತು.

ಗ್ರಂಥಕಾರರು ರಾಮಾನುಜಮತವನ್ನೇಕೆ ನಿರಾಕರಿಸಿಲ್ಲ ಎಂದರೆ? ಅವರು 'ಅಪಹತಪಾಪ್ಮತ್ವಾದಿಗಳು ಜೀವನಲ್ಲಿ ಅಸಂಭಾವಿತವಾದ್ದರಿಂದ' ಎಂಬರ್ಥವನ್ನು ಸೂತ್ರಕ್ಕೆ ಹೇಳುತ್ತಾರೆ. ಈ ಅರ್ಥವು ನಮಗೆ ಸಮ್ಮತವಾದ್ದರಿಂದ ಅದನ್ನು ಪ್ರತ್ಯೇಕವಾಗಿ ದೂಷಿಸಿಲ್ಲ.




ಅದ್ವೈತಿಗಳು ಹಾಗೂ ರಾಮಾನುಜರಿಬ್ಬರೂ ನಾಲ್ಕನೆಯ ಸೂತ್ರಕ್ಕೆ ಒಂದೇ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. 'ಆಕಾಶ ಇತಿ ಹೋವಾಚ' ಎಂಬ ಶ್ರುತಿಯಲ್ಲಿರುವ 'ಆಕಾಶ' ಶಬ್ದವು ಬ್ರಹ್ಮನಲ್ಲಿ ಪ್ರಸಿದ್ಧವಾಗಿವೆ. ಈ ಕಾರಣದಿಂದ ದಹರಾಕಾಶನನ್ನು ಬ್ರಹ್ಮನೆನ್ನಬಹುದೆಂದು. ಇದು ತಪ್ಪು. ನಾವು ಹೇಳುವಂತೆ ಆಕಾಶದಲ್ಲಿರುವವನು ಬ್ರಹ್ಮನಾಗಿದ್ದಾನೆಂದು ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿದೆಯೆಂಬುದು ಸೂಕ್ತವಾದ ವಿಚಾರ. ಇದನ್ನು ಬಿಟ್ಟು ಈ ಅಧಿಕರಣದಲ್ಲಿ ಸಮನ್ವಯ ಮಾಡದ 'ಆಕಾಶ' ಶಬ್ದಕ್ಕೆ ಪ್ರಸಿದ್ಧಿಯನ್ನು ಹೇಳುವುದು ಅಯುಕ್ತವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಐದನೆಯ ಸೂತ್ರದಲ್ಲಿ 'ಅಸಂಭವಾತ್' ಎಂಬ ಪದಕ್ಕೆ ಅದ್ವೈತಿಗಳು ವಿಭಿನ್ನರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಜೀವನು ಬುದ್ಧ್ಯಾದಿ ಉಪಾಧಿಗಳಿಂದ ಪರಿಚ್ಛಿನ್ನನಾಗಿದ್ದಾನೆ. ಆದ್ದರಿಂದ 'ಯಾವಾನ್ವಾ ಅಯಮಾಕಾಶಃ' ಎಂಬ ಶ್ರುತಿಯು ಆಕಾಶವನ್ನು ಉಪಮಾನವನ್ನಾಗಿ ನೀಡಿದ್ದು ತಪ್ಪಾಗುತ್ತದೆ. ಆದ್ದರಿಂದ ಜೀವನನ್ನು ದಹರಾಕಾಶವೆಂದು ವಿವಕ್ಷಿಸಬಾರದೆಂದು ವ್ಯಾಖ್ಯಾನಿಸುತ್ತಾರೆ. ಇದು ತಪ್ಪು. 'ಜ್ಯಾಯಾನಾಕಾಶಃ' ಇತ್ಯಾದಿ ಶ್ರುತಿಯು ಆಕಾಶಕ್ಕಿಂತಲೂ ಬ್ರಹ್ಮನು ಹೆಚ್ಚು ಪರಿಮಾಣವನ್ನು ಹೊಂದಿದ್ದಾನೆಂದು ಹೇಳುತ್ತಿದೆ. ಇಂತಹ ಬ್ರಹ್ಮನಿಗೂ ಕೂಡ ಆಕಾಶವು ಉಪಮಾನವಾಗಲು ಸಾಧ್ಯವಿಲ್ಲ. ಆದ್ದರಿಂದ ಅದ್ವೈತಿಗಳ ವ್ಯಾಖ್ಯಾನವು ಅಸಾಧುವಾಗಿದೆ.

• • • • •

## ಅದ್ವೈತಿಗಳ ಉಳಿದ ಸೂತ್ರಾರ್ಥ ವಿಮರ್ಶೆ

### तात्पर्यचन्द्रिका

**यच्चोक्तं षष्ठस्य परं ज्योतिरित्याद्युत्तरवाक्य आविर्भूतो जीव उच्यते । न त्वविद्यावृतः । आविर्भूतं च स्वरूपं ब्रह्मैवेति तद्वाक्यं शुद्धब्रह्मपरमेव । न तूपहितजीवपरमित्यर्थ इति ।**

ಅನುವಾದ - 'ಉತ್ತರಾಚ್ಚೇತ್ ಆವಿರ್ಭೂತಸ್ವರೂಪಸ್ತು' ಎಂಬ ಆರನೆಯ ಸೂತ್ರಕ್ಕೆ ಅದ್ವೈತಿಗಳು ಹೀಗೆ ವ್ಯಾಖ್ಯಾನಿಸುತ್ತಾರೆ. 'ಪರಂಜ್ಯೋತಿಃ' ಇತ್ಯಾದಿಯಾದ ಮುಂದಿನ ವಾಕ್ಯದಲ್ಲಿ ಆವಿರ್ಭೂತನಾದ ಜೀವನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಅವಿದ್ಯಾವೃತನಾದ ಜೀವನಲ್ಲ. ಆವಿರ್ಭೂತಸ್ವರೂಪನಾದ ಜೀವನೆಂದರೆ ಬ್ರಹ್ಮನೇ ಆಗಿದ್ದಾನೆ. ಆದ್ದರಿಂದ 'ಪರಂಜ್ಯೋತಿ' ಇತ್ಯಾದಿ ವಾಕ್ಯವು ಶುದ್ಧಬ್ರಹ್ಮಪರವೇ ಆಗಿದೆ ಹೊರತು, ಉಪಹಿತನಾದ ಜೀವಪರವಲ್ಲ ಎಂದು.

**तन्न । ''स तत्र पर्येति जक्षन् क्रीडन् रममाणः'' इति तत्र विशिष्टस्यैवोक्त्या शुद्धपरत्वायोगादिति दिक् ।**

ಈ ಸೂತ್ರವ್ಯಾಖ್ಯಾನವೂ ಕೂಡ ತಪ್ಪು. ಏಕೆಂದರೆ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದಿಯಾಗಿ ಅಲ್ಲಿಯೇ ಶ್ರುತವಾದ ವಾಕ್ಯದಿಂದ ವಿಶಿಷ್ಟಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಹೀಗಿರುವಾಗ ಶುದ್ಧಬ್ರಹ್ಮನು ಪ್ರತಿಪಾದ್ಯನೆಂದು ಹೇಳುವುದು ತಪ್ಪು. ಇನ್ನು ಹತ್ತು ಹಲವಾರು ದೋಷಗಳನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು. ಏಳನೆಯ, ಎಂಟನೆಯ ಸೂತ್ರವ್ಯಾಖ್ಯಾನದಲ್ಲಿರುವ ತಪ್ಪುಗಳನ್ನೂ ಸಹ ಇದರಂತೆ ಗಮನಿಸಿ ತಿಳಿದುಕೊಳ್ಳಬೇಕು.

ದಹರಾಧಿಕರಣ (೧-೩-೫)

**अत्रापि परमते दहरस्य जीवत्वनिषेधेन ब्रह्मत्वोक्तेः ''गतिशब्दाभ्याम्'' इत्यनेन च जीवस्य ब्रह्मगत्युक्तेः, दहरवाक्यशेषे च ''सत्यकामः सत्यसङ्कल्प'' इति श्रवणात्परपक्षप्रतिकूलता व्यक्तैव । एवमुत्तरत्राप्यूह्यम् ।**

ಉಳಿದ ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಸಹ ಅದ್ವೈತಿಗಳು ಜೀವಬ್ರಹ್ಮಭೇದವನ್ನೇ ಒಪ್ಪಿಕೊಂಡಿದ್ದಾರೆ. ಏಕೆಂದರೆ ದಹರಾಕಾಶವನ್ನು ಜೀವನೆಂದು ಒಪ್ಪದೇ ಬ್ರಹ್ಮನೆಂದು ಸಮರ್ಥಿಸಿದ್ದಾರೆ. ಮತ್ತು 'ಗತಿಶಬ್ದಾಭ್ಯಾಮ್' ಎಂಬ ವಿಶೇಷಣದಿಂದ ಜೀವನು ಬ್ರಹ್ಮನನ್ನು ಹೊಂದುತ್ತಾನೆಂದು ಒಪ್ಪಿದ್ದಾರೆ. ಇದರಿಂದ ಜೀವನೇ ಬೇರೆ, ಬ್ರಹ್ಮನೇ ಎಂದು ಒಪ್ಪಿಕೊಂಡಂತಾಯಿತು. 'ಸತ್ಯಕಾಮಃ ಸತ್ಯಸಂಕಲ್ಪಃ' ಇತ್ಯಾದಿಯಾಗಿ ದಹರವಾಕ್ಯಶೇಷದಲ್ಲಿ ಸತ್ಯಕಾಮತ್ವಾದಿ ಗುಣಗಳು ಕೇಳಿಸುತ್ತಿರುವುದರಿಂದ ಬ್ರಹ್ಮನು ನಿರ್ಗುಣನಾಗಿದ್ದಾನೆನ್ನಲೂ ಕೂಡ ಪ್ರತಿಕೂಲವೇ ಆಗಿದೆ. ಇದರಂತೆ ಮುಂದೆಯೂ ಕೂಡ ತಿಳಿಯಬೇಕು.

**प्रकाशः –**

**यच्चेति ।। अत्रापि परैरिति योज्यम् । इन्द्रविरोचनोपाख्यानरूपोत्तरवाक्यसन्दर्भे ''य आत्माऽपहतपाप्मा'' इत्याद्युपक्रम्य ''य एषोऽन्तरक्षिणि पुरुषो दृश्यते'' इत्यक्षिस्थं जीवं निर्दिश्य ''एतं त्वेव भूयोऽनुव्याख्यास्यामि'' इति तमेव पुनः परामृश्य ''य एष स्वप्ने महीयमानश्चरत्येष आत्मा'' इति ''मर्त्यं वा इदं शरीरम्'' इति शरीरसम्बन्धिनिन्दापूर्वं ''एष सम्प्रसादः'' इत्यादिश्रवणाज्जीवपरमेवैतद्वाक्यम् इति चेन्न ।**

ವಿವರಣೆ - ಇಲ್ಲಿಯೂ 'ಯಚ್ಚೋಕ್ತಂ' ಎಂಬ ಶಬ್ದದ ನಂತರ 'ಪರೈಃ' ಎಂದು ಸೇರಿಸಿಕೊಳ್ಳಬೇಕು. 'ಉತ್ತರಾಚ್ಚೇತ್ ಆವಿರ್ಭೂತ ಸ್ವರೂಪಸ್ತು' ಎಂಬ ಆರನೆಯ ಸೂತ್ರ ವ್ಯಾಖ್ಯಾನ ಹೀಗಿದೆ - ಇಂದ್ರವಿರೋಚನೋಪಾಖ್ಯಾನರೂಪವಾದ ಮುಂದಿನವಾಕ್ಯದ ಸಂದರ್ಭದಲ್ಲಿ 'ಯ ಆತ್ಮಾಽಪಹತಪಾಪ್ಮಾ' ಎಂದು ಪ್ರಾರಂಭವಾಗಿ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ವಾಕ್ಯದಿಂದ ಕಣ್ಣಿನಲ್ಲಿರುವ ಜೀವನನ್ನು ನಿರ್ದೇಶಿಸಲಾಗಿದೆ. ಮುಂದೆ 'ಏತಂ ತ್ವೇವ ಭೂಯೋಽನುವ್ಯಾಖ್ಯಾಸ್ಯಾಮಿ' ಎಂಬುದಾಗಿ ಅಂತಹ ಜೀವನನ್ನೇ ಪರಾಮರ್ಶ ಮಾಡಿ, 'ಯ ಏಷ ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮಾ' ಎಂದು, 'ಮರ್ತ್ಯಂ ವಾ ಇದಂ ಶರೀರಮ್' ಎಂದೂ ಸಹ ಶರೀರಸಂಬಂಧಿಯಾದ ಜೀವನನ್ನು ನಿಂದನೆ ಮಾಡಿ, 'ಏಷ ಸಂಪ್ರಸಾದಃ' ಇತ್ಯಾದಿ ವಾಕ್ಯದಿಂದ ಮುಕ್ತನಾದ ಜೀವನನ್ನು ಪ್ರಂಶಸಿಸಲಾಗಿದೆ. ಹೀಗೆ ಜೀವನೇ ಮೊದಲಿನಿಂದಲೂ ಪ್ರಸಕ್ತನಾದ್ದರಿಂದ ಅವನೇ ದಹರಾಕಾಶನಾಗುತ್ತಾನೆಂದು ಶಂಕೆಯು ಪ್ರಾಪ್ತವಾಗುತ್ತದೆ. ಆದರೆ ಇದು ತಪ್ಪು.

**प्रकाशः** – तत्राप्याविर्भूतस्वरूपस्य विवक्षितत्वात् । तादृशं च ब्रह्मैवेत्यपहत-पाप्मत्वादिकं तत्र युक्तमित्यर्थ इत्युक्तमित्यर्थः । सूत्रान्तरेऽप्यनुपपत्तिरूह्येत्याह – दिगिति ॥

ಆವಿರ್ಭೂತಸ್ವರೂಪನಾದ ವ್ಯಕ್ತಿಯೇ ಈ ವಾಕ್ಯದಲ್ಲಿ ವಿವಕ್ಷಿತನಾಗಿದ್ದಾನೆ. ಇಂತಹ ಆವಿರ್ಭೂತಸ್ವರೂಪನಾದವನು ಬ್ರಹ್ಮನೇ ಆಗುತ್ತಾನೆ ಹೊರತು, ಇಲ್ಲಿ ಮುಕ್ತನಾದ ಜೀವನನ್ನು ವಿವಕ್ಷಿಸಲು ಬರುವುದಿಲ್ಲ. ಏಕೆಂದರೆ ಅಪಹತಪಾಪ್ಮತ್ವಾದಿ ಗುಣಗಳಿರುವುದು ಬ್ರಹ್ಮನಲ್ಲಿ ಮಾತ್ರ. ಆದ್ದರಿಂದ ದಹರಾಕಾಶನಾದವನು ಬ್ರಹ್ಮನೇ ಆಗಿದ್ದಾನೆಂದು ವ್ಯಾಖ್ಯಾನಿಸುತ್ತಾರೆ. ಇವರ ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂಬ ಮುಂದಿನ ವಾಕ್ಯದಲ್ಲಿ ವಿಶಿಷ್ಟಬ್ರಹ್ಮನನ್ನೇ ಪ್ರತಿಪಾದನೆ ಮಾಡಿರುವಾಗ ಹಿಂದಿನ ವಾಕ್ಯದಲ್ಲಿ ಶುದ್ಧಬ್ರಹ್ಮನು ಪ್ರತಿಪಾದ್ಯನೆಂದು ಹೇಳುವುದು ತಪ್ಪಾಗುತ್ತದೆ. ಹೀಗೆ ಅನುಪಪತ್ತಿ ಇರುವ ಕಾರಣ, ಆರನೇ ಸೂತ್ರ ವ್ಯಾಖ್ಯಾನವೂ ಕೂಡ ಸರಿಯಲ್ಲ.

ಬೇರೆ ಸೂತ್ರಗಳಲ್ಲಿಯೂ ಕೂಡ ಇದರಂತೆ ಅನುಪಪತ್ತಿಗಳನ್ನು ಸ್ವತಃ ಊಹಿಸಿಕೊಳ್ಳಬೇಕೆಂಬ ದೃಷ್ಟಿಯಿಂದ 'ದಿಕ್' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

**प्रकाशः** – तथा हि । जपाकुसुमसन्निधानात्स्फटिकादेरिव शरीरेन्द्रियादि-सन्निधानात्कलुषितस्य जीवस्य स्वाभाविकब्रह्मभावोपदेशार्थं "य एषोऽन्तरक्षिणि" इत्यादौ तिसृष्वप्यवस्थासु जीवपरामर्श इति सप्तमार्थ इति ॥

ಗ್ರಂಥಕಾರರು ಹೇಳದ ವಿಷಯದ ವಿಸ್ತಾರ ಹೀಗಿದೆ - ಅಂದರೆ ಅದ್ವೈತಿಗಳ 'ಅನ್ಯಾರ್ಥಶ್ಚ ಪರಾಮರ್ಶಃ' ಎಂಬ ಏಳನೆಯ ಸೂತ್ರವ್ಯಾಖ್ಯಾನ ಹೀಗಿದೆ - 'ಜಪಾಕುಸುಮದ ಸನ್ನಿಧಾನದಿಂದ ಸ್ವಚ್ಛವಾದ ಸ್ಫಟಿಕದಲ್ಲಿ ಕೆಂಪು ಬಣ್ಣವು ಪ್ರತಿಬಿಂಬಿಸುವಂತೆ ಸ್ವಚ್ಛವಾದ ಬ್ರಹ್ಮನಲ್ಲಿ ಕಲುಷಿತವಾದ ಶರೀರೇಂದ್ರಿಯಾದಿಗಳ ಸನ್ನಿಧಾನದಿಂದ ಜೀವಭಾವವು ತೋರುತ್ತಿದೆ. ಆದ್ದರಿಂದ ಸ್ವಾಭಾವಿಕವಾದ ಬ್ರಹ್ಮಸ್ವರೂಪದ ಉಪದೇಶಕ್ಕೋಸ್ಕರ 'ಯ ಏಷೋಽಂತರಕ್ಷಿಣಿ' ಇತ್ಯಾದಿಯಾಗಿ ಮೂರು ಅವಸ್ಥೆಗಳಲ್ಲಿಯೂ ಜೀವನನ್ನೇ ಪರಾಮರ್ಶಿಸಬೇಕೆಂದು ಹೇಳುತ್ತಾರೆ. ಅಂದರೆ 'ಏಷ ಸಂಪ್ರಸಾದಃ' ಎಂಬಲ್ಲಿ ಜೀವಾತ್ಮನನ್ನು ಪರಮಾತ್ಮನ ಉಪಾಸನೆಗೋಸ್ಕರ ಉಲ್ಲೇಖ ಮಾಡಲಾಗಿದೆ. ನಾನಾವಿಧ ದುಃಖಗಳನ್ನು ಮೂರು ಅವಸ್ಥೆಗಳಲ್ಲಿ ಅನುಭವಿಸುವ ಜೀವನು ನಿದ್ರೆಯಲ್ಲಿ ಪರಮಜ್ಯೋತಿಯನ್ನು ಹೊಂದಿ ತನ್ನ ಸ್ವರೂಪವನ್ನು ಪಡೆದುಕೊಳ್ಳುತ್ತಾನೆ. ಅಂತಹ ಪರಮಾತ್ಮನನ್ನು ಅಪಹತಪಾಪನೆಂದು ಉಪಾಸನೆ ಮಾಡಬೇಕು. ಹೀಗೆ ಪರಮಾತ್ಮನ ಮಹಿಮೆಯನ್ನು ತಿಳಿಸುವುದಕ್ಕಾಗಿ ಜೀವನನ್ನು ಉಲ್ಲೇಖ ಮಾಡಲಾಗಿದೆಯೆಂದು ಏಳನೆಯ ಸೂತ್ರಾರ್ಥ.

**प्रकाशः** – तन्न । "उपसम्पद्य" इति समीपप्राप्तेरेवोक्त्या जीवस्य ब्रह्मभावस्यैवाभावात् । "स तत्र पर्येति जक्षन्" इत्याद्ययोगाच्च ।

ಇದೂ ಸಹ ತಪ್ಪು. ಏಕೆಂದರೆ 'ಉಪಸಂಪದ್ಯ' ಎಂಬ ಪದದಿಂದ 'ಜೀವನಿಗೆ ಬ್ರಹ್ಮನ ಸಾನ್ನಿಧ್ಯವನ್ನಷ್ಟೇ ಹೇಳಲಾಗಿದೆ ಹೊರತು, ಬ್ರಹ್ಮಭಾವವನ್ನು ಹೇಳಿರುವುದಿಲ್ಲ. ಮತ್ತು 'ಸ ತತ್ರ ಪರ್ಯೇತಿ ಜಕ್ಷನ್' ಎಂಬ ಮುಂದಿನ ವಾಕ್ಯದಲ್ಲಿ ವಿಶಿಷ್ಟಬ್ರಹ್ಮನನ್ನು ಗುಣಗಾನ ಮಾಡಿದ್ದೂ ಕೂಡ ಅಯುಕ್ತವಾಗುತ್ತದೆ.

**प्रकाशः** – यदपि दहरहृत्पद्मस्थतयाऽल्पश्रुतेर्दहरो न ब्रह्मेति चेत् तदुक्तं ''अर्भकौकस्त्वात्'' इत्यत्र । ''यावान्वा'' इत्यादिश्रुत्या बाह्याकाशोपमितित्वोक्त्या च प्रत्युक्तमित्यष्टमार्थ इति तन्न ।

ವ್ಯಾಪ್ತನಾದ ಬ್ರಹ್ಮನು ಅಲ್ಪವಾದ ಹೃದಯಾಕಾಶದಲ್ಲಿರಲು ಹೇಗೆ ಸಾಧ್ಯ? ಆದ್ದರಿಂದ ದಹರನು ಬ್ರಹ್ಮನಾಗುವುದಿಲ್ಲವೆ? ಎಂಬ ಪ್ರಶ್ನೆಗೆ 'ಅರ್ಭಕೌಕಸ್ತ್ವಾತ್' ಎಂದು ಹಿಂದೆಯೇ ಉತ್ತರಿಸಿದ್ದಾಗಿದೆ. 'ಯಾವಾನ್ವಾ' ಇತ್ಯಾದಿ ಶ್ರುತಿಯ ಬಲದಿಂದ ಮತ್ತು ಬಾಹ್ಯಾಕಾಶದ ಉಪಮಾನದಿಂದಲೂ ದಹರತ್ವವನ್ನು ಬ್ರಹ್ಮನಲ್ಲಿ ನಿರಾಕರಿಸಿದ್ದಾಗಿದೆ ಎಂದು 'ಅಲ್ಪಶ್ರುತೇರಿತಿ ಚೇತ್ ತದುಕ್ತಮ್' ಎಂಬ ಎಂಟನೆಯ ಸೂತ್ರಾರ್ಥ.

**प्रकाशः** – अत्रोक्तरीत्याऽल्पत्वस्य ब्रह्मण्यप्युपासनार्थत्वे जीवेऽपि ब्रह्मधर्माणामुपासनार्थत्वापत्तेः । ''यावान्वा'' इत्यादिश्रुत्याऽत्राल्पत्वं प्रत्युक्तमित्यप्ययुक्तम् । तस्य दहरत्वनिवृत्तिपरत्वेन तस्याऽविद्योपाधिके जीवेऽपि सम्भवादिति ।

ಇದೂ ಸಹ ತಪ್ಪು. ಬ್ರಹ್ಮನಲ್ಲಿ ಅಲ್ಪತ್ವವನ್ನು ಹೇಳಿದ್ದು ಉಪಾಸನೆಗೋಸ್ಕರವೆಂದು ಹೇಳುವುದಾದರೆ, ಜೀವನಲ್ಲಿಯೂ ಕೂಡ ಬ್ರಹ್ಮನ ಧರ್ಮಗಳನ್ನು ಉಪಾಸನೆ ಮಾಡುವುದಕ್ಕಾಗಿ ಶ್ರುತಿಯು ಹೇಳುತ್ತಿದೆಯೆಂದು ವ್ಯಾಖ್ಯಾನಿಸಬಹುದಲ್ಲವೇ? ಮತ್ತು 'ಯಾವಾನ್ವಾ' ಎಂಬ ಶ್ರುತಿಯಿಂದ ಬ್ರಹ್ಮನಲ್ಲಿ ಅಲ್ಪತ್ವವನ್ನು ನಿರಾಕರಿಸಲಾಗಿದೆಯೆಂಬ ವಿಚಾರವೂ ತಪ್ಪು. ಈಗಾಗಲೇ ಹಿಂದೆ ಹೇಳಿದಂತೆ ಬ್ರಹ್ಮನಲ್ಲಿ ದಹರತ್ವವನ್ನು ನಿರಾಕರಿಸುವುದಾದರೆ, ಅವಿದ್ಯೋಪಾಧಿಕನಾದ ಜೀವನೂ ಕೂಡ ಅಪರಿಮಿತನಾದ್ದರಿಂದ ಇವನಲ್ಲಿರುವ ಅಲ್ಪತ್ವದ ನಿರಾಕರಣೆಗಾಗಿಯೂ 'ಯಾವಾನ್ವಾ' ಎಂಬ ಶ್ರುತಿಯು ಹೊರಟಿದೆಯೆಂದು ವ್ಯಾಖ್ಯಾನಿಸಬಹುದು. ಆದ್ದರಿಂದ ಎಂಟನೆಯ ಸೂತ್ರಾರ್ಥವೂ ಕೂಡ ಸರಿಯಲ್ಲ.

**प्रकाशः** – इदमधिकरणं निर्गुणजीवाभेदप्रतिकूलत्वात्परैरेतन्नारम्भणीयमित्याह – **अत्रापीति** ।। मिथ्यार्थपरमेतदिति च प्रत्युक्तमन्तर्यामिनय इति भावः । एवं परप्रातिकूल्यमित्यर्थः ।

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣವೂ ಕೂಡ ಅದ್ವೈತಿಗಳಿಗೆ ನಿರ್ಗುಣಬ್ರಹ್ಮನಿಗೆ ಜೀವನಿಂದ ಅಭೇದವನ್ನು ಪ್ರತಿಪಾದಿಸಲು ಪ್ರತಿಕೂಲವೇ ಆಗಿದೆ. ಆದ್ದರಿಂದ ಅವರ ಪ್ರಕಾರ ಇದು ಅನಾರಂಭಣೀಯವೇ ಆಗಿದೆಯೆಂದು 'ಅತ್ರಾಪಿ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ಸತ್ಯಕಾಮತ್ವಾದಿಗಳೆಲ್ಲವೂ ಮಿಥ್ಯಾಭೂತವಾದ್ದರಿಂದ ಅಭೇದವನ್ನು ಹೇಳಬಹುದಲ್ಲವೇ? ಎಂಬ ಆಶಂಕೆಯನ್ನು ಅಂತರ್ಯಾಮ್ಯಧಿಕರಣದಲ್ಲಿಯೇ ನಿರಾಕರಿಸಿದ್ದಾಗಿದೆ. ಹಾಗೇ ಶ್ರುತಿಯಲ್ಲಿರುವ

ಸತ್ಯಕಾಮತ್ವಾದಿಗುಣಗಳಿಗೆ ಮಿಥ್ಯಾಪರತ್ವವನ್ನು ಒಪ್ಪಿದರೆ ಅತತ್ವಾವೇದಕವಾಗಿರುವ ಕಾರಣ ಅಪ್ರಾಮಾಣ್ಯದೋಷವು ಬರುತ್ತದೆಂದು ತಿಳಿಯಬೇಕು. ಈ ಕ್ರಮದಲ್ಲಿ ಅದ್ವೈತಿಗಳಿಗೆ ಈ ಅಧಿಕರಣವು ಪ್ರತಿಕೂಲವಾಗಿದೆ ಎಂದರ್ಥ.

**प्रकाशः** – यत्तु हृत्पद्मस्थदहराकाशः किं भूतमुत जीवः किं वा शिव इति संशये आकाशश्रुतेर्भूते रूढत्वाद्भूताकाशः । अल्पत्वश्रुतेर्जीवो वा । न व्यापी शिव इति प्राप्ते अपहतपाप्मत्वादिभ्यो हेतुभ्यो दहराकाशश्शिव एवेति ।

ಶೈವರ ಅಧಿಕರಣ ಶರೀರ - ಹೃತ್ಪದ್ಮದಲ್ಲಿರುವ ದಹರಾಕಾಶವು ಭೂತಾಕಾಶವೋ ಅಥವಾ ಜೀವನೋ ಅಥವಾ ಶಿವನೋ? ಎಂದು ಸಂಶಯ. ಆಕಾಶಶ್ರುತಿಯು ಭೂತಾಕಾಶದಲ್ಲಿ ರೂಢವಾದ್ದರಿಂದ ಭೂತಾಕಾಶವೇ ದಹರಾಕಾಶವಾಗುತ್ತದೆ. ಅಥವಾ ದಹರತ್ವವೆಂಬ ಅಲ್ಪತ್ವವನ್ನು ಹೇಳಿರುವ ಕಾರಣ ಜೀವನೂ ಕೂಡ ದಹರಾಕಾಶನಾಗಬಹುದು. ಹೊರತು ಸರ್ವತ್ರವ್ಯಾಪ್ತನಾದ ಶಿವನನ್ನು ಆಕಾಶಶಬ್ದ ಪ್ರತಿಪಾದ್ಯನೆಂದು ಹೇಳಲಾಗದು. ಇಷ್ಟು ಪೂರ್ವಪಕ್ಷ.

ಅಪಹತಪಾಪ್ಮತ್ವವೇ ಮೊದಲಾದ ಹೇತುಗಳಿರುವ ಪ್ರಯುಕ್ತ ಇಂತಹ ಧರ್ಮಗಳು ಜೀವನಲ್ಲಾಗಲೀ, ಭೂತಾಕಾಶದಲ್ಲಾಗಲೀ, ಬರಲು ಸಾಧ್ಯವಿಲ್ಲದ ಕಾರಣ ಶಿವನೇ ದಹರಾಕಾಶನಾಗುತ್ತಾನೆಂದು ಸಿದ್ಧಾಂತ.

**प्रकाशः** – तन्न । दहराकाशस्य ब्रह्मत्वे तद्गतस्यान्वेष्टव्यत्वाद्युक्त्ययोगस्योक्तत्वात् । तस्मिन्नित्यस्य व्यवहितपुण्डरीकपरत्वस्यान्याय्यत्वात् । ''तस्मिन्यदन्तः'' इत्यस्य व्यर्थत्वाच्च ।

ಶೈವರ ಈ ಅಧಿಕರಣಶರೀರವೂ ಸಹ ಸರಿಯಲ್ಲ. ದಹರಾಕಾಶವನ್ನೇ ಬ್ರಹ್ಮನೆಂದು ಹೇಳುವುದಾದರೆ, ದಹರಾಕಾಶದಲ್ಲಿ ಬ್ರಹ್ಮನ ಅನ್ವೇಷಣವನ್ನು ಹೇಳುತ್ತಿರುವ ಶ್ರುತಿಗಳು ಅಯುಕ್ತವಾಗುತ್ತವೆ. ಮತ್ತು 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದದಿಂದ ವ್ಯವಹಿತವಾದ ಪುಂಡರೀಕವನ್ನು ಪರಾಮರ್ಶಿಸುವುದು ಅನ್ಯಾಯವಾಗಿದೆ. ಮತ್ತು 'ತಸ್ಮಿನ್ ಯದಂತಃ' ಎಂಬುದಾಗಿ 'ಹೃದಯಾಕಾಶದಲ್ಲಿ' ಎಂಬುದೂ ಕೂಡ ವ್ಯರ್ಥವಾಗುತ್ತದೆ.

**प्रकाशः** – यदन्तरिति यच्छब्दस्य पुल्लिङ्गतापत्तेश्च । यदत्र शिवार्कमणिदीपिकायामुक्तं लिङ्गव्यत्ययेन वा नपुंसकलिङ्गस्त्रीलिङ्गपुल्लिङ्गानुगतं सामान्यमेव नतु विशेषान्तरमिति शाब्दिकमर्यादया लिङ्गान्तरनिर्दिष्टे नपुंसकलिङ्गं युक्तमिति वा ''सुपां सुलुक्'' इति सोर्लुकि सति पुल्लिङ्गस्यैवैतद्रूपमिति वेति ।

ಶಿವನೇ ಆಕಾಶವೆಂದು ಹೇಳುವುದಾದರೆ 'ಯದಂತಃ' ಎಂಬಲ್ಲಿರುವ 'ಯತ್' ಎಂಬ ನಪುಂಸಕಲಿಂಗ ಪ್ರಯೋಗವು ತಪ್ಪಾಗುತ್ತದೆ. ಹೊರತಾಗಿ, 'ಯಃ' ಎಂದು ಪುಲ್ಲಿಂಗದಲ್ಲಿಯೇ ಪ್ರಯೋಗವಿರಬೇಕಾಗುತ್ತದೆ. ಈ ವಿಷಯದಲ್ಲಿ ಶಿವಾರ್ಕಮಣಿದೀಪಿಕೆಯಲ್ಲಿ ಮೂರು ಬಗೆಯ ಪರಿಹಾರಗಳನ್ನು ಹೇಳಲಾಗಿದೆ. ೧. ಲಿಂಗವ್ಯತ್ಯಾಸದಿಂದ ನಪುಂಸಕಲಿಂಗ ಪ್ರಯೋಗವಿದೆ. ೨. ನಪುಂಸಕಲಿಂಗ, ಸ್ತ್ರೀಲಿಂಗ ಮತ್ತು ಪುಲ್ಲಿಂಗ

ಇವುಗಳಲ್ಲಿ ಅನುಗತವಾದ ಒಂದು ಸಾಮಾನ್ಯವೇ ನಪುಂಸಕಲಿಂಗವೆನಿಸಿದೆ ಹೊರತು, ಸ್ತ್ರೀಲಿಂಗ ಪುಲ್ಲಿಂಗಗಳಂತೆ ಪ್ರತ್ಯೇಕವಾದ ಒಂದು ಲಿಂಗವೇ ಅಲ್ಲ ಎಂಬ ಶಾಬ್ದಿಕಮರ್ಯಾದೆಯಿಂದ, ಬೇರೆ ಲಿಂಗದಲ್ಲಿ ರೂಪವನ್ನು ನಪುಂಸಕಲಿಂಗದಲ್ಲಿ ಪ್ರಯೋಗ ಮಾಡಬಹುದು. ಆದ್ದರಿಂದಲೂ 'ಯತ್' ಎಂಬ ನಪುಂಸಕಲಿಂಗವು ಯುಕ್ತವಾಗಿದೆ. ೩. 'ಸುಪಾಂ ಸುಲುಕ್' ಎಂಬ ಸೂತ್ರದಿಂದ 'ಸು' ಪ್ರತ್ಯಯವು ಲೋಪವಾಗಿರುವುದರಿಂದ 'ಯಃ' ಎಂಬ ಪುಲ್ಲಿಂಗಪ್ರಯೋಗದ ಪ್ರಾತಿಪದಿಕವೇ 'ಯತ್' ಎಂಬ ಪದವಾಗಿದೆ ಎಂದು.

**प्रकाशः** – तन्न । अस्मद्रीत्या गतौ सत्यां क्लेशायोगात् ।

ಈ ಮೂರು ಸಮಾಧಾನಗಳೂ ಕೂಡ ಸರಿಯಿಲ್ಲ. ಏಕೆಂದರೆ ನಾವು ಹೇಳುವಂತೆ ಬೇರೆ ರೀತಿಯಾಗಿಯೇ ಶ್ರುತಿಗೆ ಅರ್ಥೈಸಿ, ವ್ಯಾಖ್ಯಾನಿಸಲು ಬರುವಾಗ ಇಷ್ಟು ಕ್ಲೇಶ ಪಡುವುದು ಸರಿಯಲ್ಲ.

**प्रकाशः** – उत्तराधिकरणे तु प्रबलबाधकाद्गत्यन्तराभावाच्च व्यत्ययादिनोपपत्तिर्वक्ष्यत इति नास्मत्प्रतिबन्दी ।

ಮುಂದಿನ ಅಧಿಕರಣದಲ್ಲಿ ಪ್ರಬಲವಾದ ಬಾಧಕವಿದ್ದಾಗ ಮತ್ತು ಬೇರೆ ಗತಿಯಿಲ್ಲದಿದ್ದಾಗ ಲಿಂಗವ್ಯತ್ಯಾಸ ದೋಷವನ್ನು ಸಹಿಸಬೇಕೆಂಬ ಉಪಪತ್ತಿಯನ್ನು ಸಮರ್ಥಿಸುತ್ತೇವೆ. ಆದ್ದರಿಂದ ದಹರಾಕಾಶದಲ್ಲಿರುವವನನ್ನು ಬ್ರಹ್ಮನೆಂದು ಹೇಳುವುದು ಅನಿವಾರ್ಯವಾದ್ದರಿಂದ ಈ ಲಿಂಗವ್ಯತ್ಯಾಸವು ನಮ್ಮಲ್ಲಿ ಸಹ್ಯವಾಗಿದೆ. ಆದ್ದರಿಂದ ಇದೇ ದೋಷವನ್ನು ನಮಗೆ ಪ್ರತಿಬಂದಿಯಾಗಿ ಶೈವರು ಹೇಳಲು ಸಾಧ್ಯವಿಲ್ಲ.

**प्रकाशः** – ''य एषोऽन्तर्हृदय आकाशः'' इत्यादिभिर्दहराकाशस्थस्य ब्रह्मत्वबोधकानेक श्रुतिस्मृतिभिर्विरोधस्योक्तत्वाच्च ।

'ಯ ಏಷೋಽಂತರ್ಹೃದಯ ಆಕಾಶಃ' ಇವೇ ಮೊದಲಾದ ಬ್ರಹ್ಮತ್ವ ಬೋಧಕವಾದ ಶ್ರುತಿ-ಸ್ಮೃತಿಗಳು ದಹರಾಕಾಶದಲ್ಲಿ ಬ್ರಹ್ಮನಿದ್ದಾನೆಂದೇ ಘೋಷಿಸುತ್ತಿವೆ. ಈ ಎಲ್ಲಾ ಶ್ರುತಿ-ಸ್ಮೃತಿಗಳ ವಿರೋಧವನ್ನು ಶೈವರು ಎದುರಿಸಬೇಕಾಗುತ್ತದೆ.

**प्रकाशः** – ''दहरं विपाप्मम्'' इति श्रुतावग्रे ''तत्परः स महेश्वरः'' इति श्रुतत्वेऽपि ''विश्वं नारायणं देवमक्षरं परमं पदम्'' इत्यादिनारायणशब्दबाहुल्यात् ''यो देवानां नामधा एक एव'' इत्यादौ ''अजस्य नाभौ'' इति पद्मनाभत्वलिङ्गेन विष्णोः सर्वनामवत्त्वस्येवान्यस्य तदभावेन

'ದಹರಂ ವಿಪಾಪ್ಮಮ್' ಎಂಬ ಶ್ರುತಿಯಲ್ಲಿ ಮುಂದೆ 'ತತ್ಪರಃ ಸಮಹೇಶ್ವರಃ' ಎಂದು ಈಶ್ವರ ವಾಚಕವಾದ ಪರಮೇಶ್ವರ ಶಬ್ದವಿದ್ದರೂ ಕೂಡ 'ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ' ಇತ್ಯಾದಿ ವಾಕ್ಯಗಳು ಬಹಳವಾಗಿ ಕೇಳಿಸುತ್ತಿರುವುದರಿಂದ ನಾರಾಯಣ ಪರವಾದ ಶಬ್ದಗಳೇ ಅಧಿಕವಾಗಿವೆ. 'ಯೋ ದೇವಾನಾಂ ನಾಮಧಾ ಏಕ ಏವ' ಇತ್ಯಾದಿ ಶ್ರುತಿಯಲ್ಲಿ 'ಅಜಸ್ಯ ನಾಭೌ' ಎಂಬುದಾಗಿ

ಪದ್ಮನಾಭತ್ವಲಿಂಗದಿಂದ ವಿಷ್ಣುವೇ ಸಕಲಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಹೊರತು ಇತರ ದೇವತೆಗಳು ಸಕಲಶಬ್ದಗಳಿಂದ ಪ್ರತಿಪಾದ್ಯರಲ್ಲ ಎಂದು ಹೇಳಲಾಗಿದೆ.

**प्रकाशः** – ''महादेवो महत्त्वतः । अन्यनाम्नां गतिर्विष्णुः'' इत्यादिद्युभ्वादिनय-भाष्योक्तस्मृतिभिर्महेश्वरशब्दस्यापि वैष्णवत्वात् ''नित्यतीर्णाशनायादिरेक एव हरिस्स्वतः'' इत्यादिभाष्योक्तपाद्मस्मृत्या ''सत्यकामः परो नास्ति तमृते विष्णुमव्ययम्'' इति स्कान्दस्मृत्या चापहतपाप्मत्वादीनां विष्ण्वेकनिष्ठत्वेन शिवे हेतोरसिद्धेश्च ।

ಮತ್ತು 'ಮಹಾದೇವೋ ಮಹತ್ತ್ವತಃ' 'ಅನ್ಯನಾಮ್ನಾಂ ಗತಿರ್ವಿಷ್ಣುಃ' ಇವೇ ಮೊದಲಾದ ದ್ಯುಭ್ವಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಸ್ಮೃತಿಗಳಿಂದ 'ಮಹೇಶ್ವರ' ಶಬ್ದವೂ ಕೂಡ ವಿಷ್ಣುಪರವೇ ಆಗಿದೆ. 'ನಿತ್ಯತೀರ್ಣಾಶನಾಯಾದಿರೇಕ ಏವ ಹರಿಃ ಸ್ವತಃ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಪದ್ಮಪುರಾಣದ ವಾಕ್ಯದಲ್ಲಿ ಮತ್ತು 'ಸತ್ಯಕಾಮಃ ಪರೋ ನಾಸ್ತಿ ತಮೃತೇ ವಿಷ್ಣುಮವ್ಯಯಮ್' ಎಂಬ ಸ್ಕಾಂದ ಪುರಾಣದ ಮಾತಿನಲ್ಲಿ ಅಪಹತಪಾಪ್ಮತ್ವವೇ ಮೊದಲಾದ ಗುಣಗಳೆಲ್ಲವೂ ವಿಷ್ಣುವಿನಲ್ಲಿ ಮಾತ್ರ ಇವೆ ಹೊರತು, ಶಿವನಲ್ಲಿ ಇಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಶಿವನೇ ದಹರಾಕಾಶನೆನ್ನಲು ಹೇಳಲ್ಪಟ್ಟ ಅಪಹತಪಾಪ್ಮತ್ವಾದಿಗುಣಗಳಿಗೆ ಅಸಿದ್ಧಿದೋಷವನ್ನು ಹೇಳಿದಂತಾಯಿತು.

**प्रकाशः** – ''परस्य ब्रह्मणो लोके'' इत्यादिस्मृतिसिद्धसुधा समुद्राश्रयश्वेतद्वीपाख्य-ब्रह्मलोकत्वरूपलिङ्गविरोधाच्च ।

'ಪರಸ್ಯ ಬ್ರಹ್ಮಣೋ ಲೋಕೇ' ಇತ್ಯಾದಿ ಸ್ಮೃತಿಸಿದ್ಧವಾದ ಸುಧಾಸಮುದ್ರಾಶ್ರಯತ್ವ, ಶ್ವೇತದ್ವೀಪವೆಂಬ ಬ್ರಹ್ಮಲೋಕತ್ವ ಇತ್ಯಾದಿ ಲಿಂಗಗಳ ವಿರೋಧವೂ ಕೂಡ ಶೈವರಿಗೆ ಬರುತ್ತದೆ.

**प्रकाशः** – असकृद्विष्णुवाचितया प्रतिपादितब्रह्मशब्दविरोधाच्च । सूत्रार्थानां प्रायो रामानुजीयरीत्यविशिष्टत्वात्तथैव दूषणं ध्येयम् ।

ಅನೇಕ ಬಾರಿ ಶ್ರುತವಾದ ವಿಷ್ಣುವಾಚಕವಾದ ಬ್ರಹ್ಮಶಬ್ದದ ವಿರೋಧವೂ ಕೂಡ ಬರುತ್ತದೆ.

ಶೈವರ ಉಳಿದ ಸೂತ್ರಾರ್ಥಗಳು ಸಾಮಾನ್ಯವಾಗಿ ರಾಮಾನುಜರ ವ್ಯಾಖ್ಯಾನವನ್ನೇ ಪ್ರತಿಬಿಂಬಿಸಿದೆ. ರಾಮಾನುಜ ಮತದ ದೋಷಗಳೆಲ್ಲವೂ ಇವರಿಗೂ ಕೂಡ ಬರುತ್ತವಾದ್ದರಿಂದ ಪ್ರತ್ಯೇಕವಾಗಿ ದೂಷಿಸಿಲ್ಲ.

**प्रकाशः** – यदत्रोक्तं शिवार्कमणिदीपिकायां गतिसूत्रे दृष्टशब्दः ''चेतोऽर्पणनिगदात्तथा हि दर्शनम्'' इत्यादाविव भावप्रत्ययान्तो न कर्मणि निष्ठान्तः । तथा च दृष्टशब्दस्य गतिशब्दौ प्रति विशेषणत्वाभावात्पुल्लिङ्गेन द्विवचनेन च भाव्यमिति शङ्काऽनवकाश इति ।

ಇವುಗಳಲ್ಲಿ ಅನುಗತವಾದ ಒಂದು ಸಾಮಾನ್ಯವೇ ನಪುಂಸಕಲಿಂಗವೆನಿಸಿದೆ ಹೊರತು, ಸ್ತ್ರೀಲಿಂಗ ಪುಲ್ಲಿಂಗಗಳಂತೆ ಪ್ರತ್ಯೇಕವಾದ ಒಂದು ಲಿಂಗವೇ ಅಲ್ಲ ಎಂಬ ಶಾಬ್ದಿಕಮರ್ಯಾದೆಯಿಂದ, ಬೇರೆ ಲಿಂಗದಲ್ಲಿ ರೂಪವನ್ನು ನಪುಂಸಕಲಿಂಗದಲ್ಲಿ ಪ್ರಯೋಗ ಮಾಡಬಹುದು. ಆದ್ದರಿಂದಲೂ 'ಯತ್' ಎಂಬ ನಪುಂಸಕಲಿಂಗವು ಯುಕ್ತವಾಗಿದೆ. ೩. 'ಸುಪಾಂ ಸುಲುಕ್' ಎಂಬ ಸೂತ್ರದಿಂದ 'ಸು' ಪ್ರತ್ಯಯವು ಲೋಪವಾಗಿರುವುದರಿಂದ 'ಯಃ' ಎಂಬ ಪುಲ್ಲಿಂಗಪ್ರಯೋಗದ ಪ್ರಾತಿಪದಿಕವೇ 'ಯತ್' ಎಂಬ ಪದವಾಗಿದೆ ಎಂದು.

**प्रकाशः** – तन्न । अस्मद्रीत्या गतौ सत्यां क्लेशायोगात् ।

ಈ ಮೂರು ಸಮಾಧಾನಗಳೂ ಕೂಡ ಸರಿಯಿಲ್ಲ. ಏಕೆಂದರೆ ನಾವು ಹೇಳುವಂತೆ ಬೇರೆ ರೀತಿಯಾಗಿಯೇ ಶ್ರುತಿಗೆ ಅರ್ಥೈಸಿ, ವ್ಯಾಖ್ಯಾನಿಸಲು ಬರುವಾಗ ಇಷ್ಟು ಕ್ಲೇಶ ಪಡುವುದು ಸರಿಯಲ್ಲ.

**प्रकाशः** – उत्तराधिकरणे तु प्रबलबाधकाद्गत्यन्तराभावाच्च व्यत्ययादिनोपपत्तिर्वक्ष्यत इति नास्मत्प्रतिबन्दी ।

ಮುಂದಿನ ಅಧಿಕರಣದಲ್ಲಿ ಪ್ರಬಲವಾದ ಬಾಧಕವಿದ್ದಾಗ ಮತ್ತು ಬೇರೆ ಗತಿಯಿಲ್ಲದಿದ್ದಾಗ ಲಿಂಗವ್ಯತ್ಯಾಸ ದೋಷವನ್ನು ಸಹಿಸಬೇಕೆಂಬ ಉಪಪತ್ತಿಯನ್ನು ಸಮರ್ಥಿಸುತ್ತೇವೆ. ಆದ್ದರಿಂದ ದಹರಾಕಾಶದಲ್ಲಿರುವವನನ್ನು ಬ್ರಹ್ಮನೆಂದು ಹೇಳುವುದು ಅನಿವಾರ್ಯವಾದ್ದರಿಂದ ಈ ಲಿಂಗವ್ಯತ್ಯಾಸವು ನಮ್ಮಲ್ಲಿ ಸಹ್ಯವಾಗಿದೆ. ಆದ್ದರಿಂದ ಇದೇ ದೋಷವನ್ನು ನಮಗೆ ಪ್ರತಿಬಂದಿಯಾಗಿ ಶೈವರು ಹೇಳಲು ಸಾಧ್ಯವಿಲ್ಲ.

**प्रकाशः** – "य एषोऽन्तर्हृदय आकाशः" इत्यादिभिर्दहराकाशस्थस्य ब्रह्मत्वबोधकानेक श्रुतिस्मृतिभिर्विरोधस्योक्तत्वाच्च ।

'ಯ ಏಷೋಽಂತರ್ಹೃದಯ ಆಕಾಶಃ' ಇವೇ ಮೊದಲಾದ ಬ್ರಹ್ಮತ್ವ ಬೋಧಕವಾದ ಶ್ರುತಿ-ಸ್ಮೃತಿಗಳು ದಹರಾಕಾಶದಲ್ಲಿ ಬ್ರಹ್ಮನಿದ್ದಾನೆಂದೇ ಘೋಷಿಸುತ್ತಿವೆ. ಈ ಎಲ್ಲಾ ಶ್ರುತಿ-ಸ್ಮೃತಿಗಳ ವಿರೋಧವನ್ನು ಶೈವರು ಎದುರಿಸಬೇಕಾಗುತ್ತದೆ.

**प्रकाशः** – "दहरं विपाप्मम्" इति श्रुतावग्रे "तत्परः स महेश्वरः" इति श्रुतत्वेऽपि "विश्वं नारायणं देवमक्षरं परमं पदम्" इत्यादिनारायणशब्दबाहुल्यात् "यो देवानां नामधा एक एव" इत्यादौ "अजस्य नाभौ" इति पद्मनाभत्वलिङ्गेन विष्णोः सर्वनामवत्त्वस्येवान्यस्य तदभावेन

'ದಹರಂ ವಿಪಾಪ್ಮಮ್' ಎಂಬ ಶ್ರುತಿಯಲ್ಲಿ ಮುಂದೆ 'ತತ್ಪರಃ ಸಮಹೇಶ್ವರಃ' ಎಂದು ಈಶ್ವರ ವಾಚಕವಾದ ಪರಮೇಶ್ವರ ಶಬ್ದವಿದ್ದರೂ ಕೂಡ 'ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ' ಇತ್ಯಾದಿ ವಾಕ್ಯಗಳು ಬಹಳವಾಗಿ ಕೇಳಿಸುತ್ತಿರುವುದರಿಂದ ನಾರಾಯಣ ಪರವಾದ ಶಬ್ದಗಳೇ ಅಧಿಕವಾಗಿವೆ. 'ಯೋ ದೇವಾನಾಂ ನಾಮಧಾ ಏಕ ಏವ' ಇತ್ಯಾದಿ ಶ್ರುತಿಯಲ್ಲಿ 'ಅಜಸ್ಯ ನಾಭೌ' ಎಂಬುದಾಗಿ

ಪದ್ಮನಾಭತ್ವಲಿಂಗದಿಂದ ವಿಷ್ಣುವೇ ಸಕಲಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಹೊರತು ಇತರ ದೇವತೆಗಳು ಸಕಲಶಬ್ದಗಳಿಂದ ಪ್ರತಿಪಾದ್ಯರಲ್ಲ ಎಂದು ಹೇಳಲಾಗಿದೆ.

**प्रकाशः** – ''महादेवो महत्त्वतः । अन्यनाम्नां गतिर्विष्णुः'' इत्यादिद्युम्वादिनय-भाष्योक्तस्मृतिभिर्महेश्वरशब्दस्यापि वैष्णवत्वात् ''नित्यतीर्णाशनायादिरेक एव हरिस्स्वतः'' इत्यादिभाष्योक्तपाद्मस्मृत्या ''सत्यकामः परो नास्ति तमृते विष्णुमव्ययम्'' इति स्कान्दस्मृत्या चापहतपाप्मत्वादीनां विष्ण्वेकनिष्ठत्वेन शिवे हेतोरसिद्धेश्च ।

ಮತ್ತು 'ಮಹಾದೇವೋ ಮಹತ್ತ್ವತಃ' 'ಅನ್ಯನಾಮ್ನಾಂ ಗತಿರ್ವಿಷ್ಣುಃ' ಇವೇ ಮೊದಲಾದ ದ್ಯುಭ್ವಾದ್ಯಧಿ-ಕರಣದಲ್ಲಿ ಹೇಳಲ್ಪಟ್ಟ ಸ್ಮೃತಿಗಳಿಂದ 'ಮಹೇಶ್ವರ' ಶಬ್ದವೂ ಕೂಡ ವಿಷ್ಣುಪರವೇ ಆಗಿದೆ. 'ನಿತ್ಯತೀರ್ಣಾಶನಾಯಾದಿರೇಕ ಏವ ಹರಿಃ ಸ್ವತಃ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಪದ್ಮಪುರಾಣದ ವಾಕ್ಯದಲ್ಲಿ ಮತ್ತು 'ಸತ್ಯಕಾಮಃ ಪರೋ ನಾಸ್ತಿ ತಮೃತೇ ವಿಷ್ಣುಮವ್ಯಯಮ್' ಎಂಬ ಸ್ಕಾಂದ ಪುರಾಣದ ಮಾತಿನಲ್ಲಿ ಅಪಹತಪಾಪ್ಮತ್ವವೇ ಮೊದಲಾದ ಗುಣಗಳೆಲ್ಲವೂ ವಿಷ್ಣುವಿನಲ್ಲಿ ಮಾತ್ರ ಇವೆ ಹೊರತು, ಶಿವನಲ್ಲಿ ಇಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಶಿವನೇ ದಹರಾಕಾಶನೆನ್ನಲು ಹೇಳಲ್ಪಟ್ಟ ಅಪಹತಪಾಪ್ಮತ್ವಾದಿಗುಣಗಳಿಗೆ ಅಸಿದ್ಧಿದೋಷವನ್ನು ಹೇಳಿದಂತಾಯಿತು.

**प्रकाशः** – ''परस्य ब्रह्मणो लोके'' इत्यादिस्मृतिसिद्धसुधा समुद्राश्रयश्वेतद्वीपाख्य-ब्रह्मलोकत्वरूपलिङ्गविरोधाच्च ।

'ಪರಸ್ಯ ಬ್ರಹ್ಮಣೋ ಲೋಕೇ' ಇತ್ಯಾದಿ ಸ್ಮೃತಿಸಿದ್ಧವಾದ ಸುಧಾಸಮುದ್ರಾಶ್ರಯತ್ವ, ಶ್ವೇತದ್ವೀಪವೆಂಬ ಬ್ರಹ್ಮಲೋಕತ್ವ ಇತ್ಯಾದಿ ಲಿಂಗಗಳ ವಿರೋಧವೂ ಕೂಡ ಶೈವರಿಗೆ ಬರುತ್ತದೆ.

**प्रकाशः** – असकृद्विष्णुवाचितया प्रतिपादितब्रह्मशब्दविरोधाच्च । सूत्रार्थानां प्रायो रामानुजीयरीत्यविशिष्टत्वात्तथैव दूषणं ध्येयम् ।

ಅನೇಕ ಬಾರಿ ಶ್ರುತವಾದ ವಿಷ್ಣುವಾಚಕವಾದ ಬ್ರಹ್ಮಶಬ್ದದ ವಿರೋಧವೂ ಕೂಡ ಬರುತ್ತದೆ.

ಶೈವರ ಉಳಿದ ಸೂತ್ರಾರ್ಥಗಳು ಸಾಮಾನ್ಯವಾಗಿ ರಾಮಾನುಜರ ವ್ಯಾಖ್ಯಾನವನ್ನೇ ಪ್ರತಿಬಿಂಬಿಸಿದೆ. ರಾಮಾನುಜ ಮತದ ದೋಷಗಳೆಲ್ಲವೂ ಇವರಿಗೂ ಕೂಡ ಬರುತ್ತವಾದ್ದರಿಂದ ಪ್ರತ್ಯೇಕವಾಗಿ ದೂಷಿಸಿಲ್ಲ.

**प्रकाशः** – यदत्रोक्तं शिवार्कमणिदीपिकायां गतिसूत्रे दृष्टशब्दः ''चेतोऽर्पणनिगदात्तथा हि दर्शनम्'' इत्यादाविव भावप्रत्ययान्तो न कर्मणि निष्ठान्तः । तथा च दृष्टशब्दस्य गतिशब्दौ प्रति विशेषणत्वाभावात्पुल्लिङ्गेन द्विवचनेन च भाव्यमिति शङ्काऽनवकाश इति ।

'ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಎರಡನೆಯ ಸೂತ್ರವನ್ನು ವ್ಯಾಖ್ಯಾನಿಸುವಾಗ **ಶಿವಾರ್ಕಮಣಿದೀಪಿಕೆಯಲ್ಲಿ** ರಾಮಾನುಜರಿಗಿಂತ ವಿಭಿನ್ನವಾದ ಸಮರ್ಥನೆಯು ಕಾಣುತ್ತದೆ - ಸೂತ್ರದಲ್ಲಿರುವ ದೃಷ್ಟಶಬ್ದವು 'ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಮ್' ಇತ್ಯಾದಿ ಸೂತ್ರಗಳಲ್ಲಿರುವಂತೆ ಭಾವಪ್ರತ್ಯಯಾಂತವಾಗಿದೆ ಹೊರತು, ಕರ್ಮಾರ್ಥದಲ್ಲಿ ಇರುವ ನಿಷ್ಠಾಪ್ರತ್ಯಾಂತವಾಗಿಲ್ಲ. ಆದ್ದರಿಂದ ದೃಷ್ಟಶಬ್ದವು ಗತಿ ಮತ್ತು ಶಬ್ದ ಇವುಗಳಲ್ಲಿ ವಿಶೇಷಣವಾಗಿಲ್ಲ. ಆದ್ದರಿಂದಲೇ ಪುಲ್ಲಿಂಗದಲ್ಲಿ ಮತ್ತು ದ್ವಿವಚನದಲ್ಲಿ ಪ್ರಯೋಗಿಸಬೇಕೆಂಬ ಶಂಕೆಗೆ ಅವಕಾಶವಿಲ್ಲವೆಂದು.

**प्रकाशः – तन्न । दृष्टशब्दस्य लिङ्गं चेत्यनेनानन्वयापत्तेः ।**

ಇದು ತಪ್ಪು. ಏಕೆಂದರೆ ಹೀಗೆ ಹೇಳಿದಾಗ ಗತಿ ಮತ್ತು ಶಬ್ದಗಳಲ್ಲಿ ವಿಶೇಷಣವಾಗದ ದೃಷ್ಟಶಬ್ದಕ್ಕೆ 'ಲಿಂಗಮ್' ಎಂಬಲ್ಲಿ ಅನ್ವಯವನ್ನು ಹೇಳಬೇಕಾಗುತ್ತದೆ.

**प्रकाशः – यदि ''तथा हि दर्शनम्'' इत्यस्य गतिशब्दयोः ''सति सम्पद्य'' इत्यादावन्यत्र ब्रह्मविषयतया दर्शनमुच्यते । लिङ्गं चेत्यनेन च मास्त्वन्यत्रानयोर्दर्शनमत्रैव प्रकरणे सुप्तगतिब्रह्मलोकशब्दावीश्वरस्य दहराकाशत्वे लिङ्गं पर्याप्तगमकमित्यर्थ इत्युक्तिः तदापि लिङ्गं चेत्यस्याभ्युपेत्य प्रवृत्तत्वे व्यर्थत्वात् । पर्याप्तत्वानुपपादनाच्च ।**

ಒಂದು ವೇಳೆ 'ತಥಾ ಹಿ ದರ್ಶನಮ್' ಎಂಬುದಕ್ಕೆ ಸುಪ್ತಗಮ್ಯತ್ವ ಮತ್ತು ಬ್ರಹ್ಮಲೋಕ ಶಬ್ದ ಇವೆರಡೂ ಕೂಡ ಬ್ರಹ್ಮವಿಷಯಕವೇ ಆಗಿವೆ ಎಂದು 'ಸತಿ ಸಂಪದ್ಯ' ಇತ್ಯಾದಿ ಶ್ರುತಿಗಳಲ್ಲಿ ಕಂಡಿದೆ ಎಂದರ್ಥ. 'ಲಿಂಗಂಚ' ಎಂಬುದಕ್ಕೆ ಹೀಗರ್ಥ - ಈ ಶಬ್ದಗಳು ಬೇರೆ ಶ್ರುತಿಯಲ್ಲಿ ಶಿವಪರವಾಗಿದೆಯೆಂದು ಕಂಡಿರಬೇಕಾಗಿಲ್ಲ. ಇದೇ ಪ್ರಕರಣದಲ್ಲಿಯೇ ಸುಪ್ತಗತಿ ಹಾಗೂ ಬ್ರಹ್ಮಲೋಕಶಬ್ದಗಳು ಈಶ್ವರನೇ ದಹರಾಕಾಶನಾಗಿದ್ದಾನೆನ್ನಲು ಲಿಂಗವು ಕಂಡಿದೆ ಎಂದರ್ಥ. ಹೀಗೆ ಲಿಂಗಪದಕ್ಕೆ ಅನ್ವಯ ಹೇಳುತ್ತವೆ ಎಂದರೆ-

ಇದು ತಪ್ಪು. 'ಗತಿಶಬ್ದಾಭ್ಯಾಂ' ಎಂಬೆರಡು ಪದಗಳಿಂದಲೇ ಸುಪ್ತಗತಿ, ಬ್ರಹ್ಮಲೋಕ ಶಬ್ದಗಳು ಶಿವಪರವೆಂದು ಹೇಳಿದ್ದಾಯಿತು. 'ತಥಾ ಹಿ ದೃಷ್ಟಮ್' ಎಂಬುದರಿಂದ ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿದೆಯೆಂದೂ ಸಹ ಹೇಳಿದ್ದಾಯಿತು. ಹೀಗಿರುವಾಗ ಪುನಃ 'ಲಿಂಗಂಚ' ಎಂಬ ಪದವನ್ನು ಅಭ್ಯುಪೇತ್ಯ ವ್ಯಾಖ್ಯಾನಿಸಿದರೆ ಅದು ವ್ಯರ್ಥವೇ ಆಗುತ್ತದೆ. ಈ ಪದದ ವ್ಯಾಖ್ಯಾನವು ಹಿಂದಿನ ಪದಗಳಿಂದಲೇ ಸಿದ್ಧವಾಗಿರುವಾಗ ಇದಕ್ಕೆ ಸಾರ್ಥಕ್ಯವನ್ನು ಶೈವರಿಂದ ಸಮರ್ಥಿಸಲಾಗದು. ಮತ್ತು ಸುಪ್ತಗಮ್ಯತ್ವ, ಬ್ರಹ್ಮಲೋಕ ಎಂಬೆರಡು ಲಿಂಗಗಳೇ ಶಿವಪರವೆನ್ನಲು ಸಾಕಾಗುತ್ತವೆ ಎಂಬ ಪರ್ಯಾಪ್ತತ್ವವನ್ನು ಎಂದೇನು ಹೇಳುತ್ತಿದ್ದೀರೋ, ಇದನ್ನು ಸೂತ್ರದಲ್ಲಿ ಹೇಳಿಯೇ ಇಲ್ಲ. ಆದ್ದರಿಂದ ಸೂತ್ರಕ್ಕೂ ಮೀರಿದ ವ್ಯಾಖ್ಯಾನ ಶೈವರದ್ದು.

ಪರಿಪೂರ್ಣಚಂದ್ರಿಕಾ

**प्रकाशः** – लिङ्गशब्दस्य रूढार्थत्यागापाताच्च । गतिशब्दावित्यध्याहारापाताच्च । लिङ्गमित्यस्याक्लेशेनैवास्मद्रीत्याऽऽन्वयसम्भवे क्लेशायोगाच्च ।

ಮತ್ತು ಲಿಂಗಶಬ್ದಕ್ಕೆ ಪರ್ಯಾಪ್ತಗಮಕವೆಂಬರ್ಥವನ್ನು ಹೇಳುತ್ತಿದ್ದೀರಿ. ಹೀಗೆ ಹೇಳುವುದಾದರೆ ರೂಢಾರ್ಥವನ್ನು ಬಿಟ್ಟು, ಯೋಗಾರ್ಥವನ್ನು ಲಿಂಗಶಬ್ದಕ್ಕೆ ಹೇಳಿದಂತಾಗುತ್ತದೆ. ಅಷ್ಟೇ ಅಲ್ಲದೇ ಗತಿಶಬ್ದಗಳೇ ಪರ್ಯಾಪ್ತಗಮಕಗಳೆಂದಾಗ 'ಗತಿಶಬ್ದೌ' ಎಂಬುದನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. ಮತ್ತು ಲಿಂಗಶಬ್ದಕ್ಕೆ ಸುಲಭವಾಗಿ ನಮ್ಮ ಪ್ರಕಾರ ವ್ಯಾಖ್ಯಾನಿಸಲು ಬರುವಾಗ ಇಷ್ಟೆಲ್ಲಾ ಕಷ್ಟಪಡುವುದು ಸರಿಯಲ್ಲ.

**प्रकाशः** – यदप्युक्तमस्तु वा तद्विशेषणम् । तथापि न दोषः । विशेष्यस्य पुल्लिङ्गद्विवचनान्तनिर्दिष्टत्वेऽपि "द्विगुरेकवचनम्" इत्यत्र लिङ्गसामान्यविवक्षया पुल्लिङ्ग-विशेषणे नपुंसकलिङ्गवत् "कर्मणो रोमन्थतपोभ्यां वर्तिचरः" इत्यत्र द्विवचनान्तस्य विशेषणे विशेष्यद्वयगतप्रातिस्विकैकत्वविवक्षयैकवचनाच्चात्रानपुंसकस्यैकवचनस्य चोपपत्तिरिति तदप्यनेनैव निरस्तम् ।

'ದೃಷ್ಟಮ್' ಎಂಬುದು 'ಗತಿ' 'ಶಬ್ದ'ಗಳಲ್ಲಿ ವಿಶೇಷಣವೇ ಆಗಿಲ್ಲ. ಇದು ಭಾವೇ 'ಕ್ತ' ಪ್ರತ್ಯಯವನ್ನು ಹೊಂದಿರುವುದರಿಂದ ಇದಕ್ಕೆ 'ದರ್ಶನಮ್' ಎಂಬರ್ಥವನ್ನು ಮಾಡಬೇಕು. ಆವಾಗ ಯಾವ ಬಾಧಕವೂ ಬರುವುದಿಲ್ಲವೆಂದು ಹಿಂದೆ ವ್ಯಾಖ್ಯಾನಿಸಲಾಯಿತು. ಅಥವಾ ಗತಿಶಬ್ದಗಳಲ್ಲಿಯೇ 'ದೃಷ್ಟಮ್' ಎಂಬುದನ್ನು ವಿಶೇಷಣವಾಗಿದೆಯೆಂದೇ ಒಪ್ಪೋಣ. ಆದರೂ ಸಹ ನಪುಂಸಕಲಿಂಗದ ಪ್ರಯೋಗವು ತಪ್ಪಾಗುವುದಿಲ್ಲ. ವಿಶೇಷ್ಯವು ಪುಲ್ಲಿಂಗ ಮತ್ತು ದ್ವಿಚವನದಲ್ಲಿ ನಿರ್ದಿಷ್ಟವಾಗಿದೆ. ವಿಶೇಷಣವು ನಪುಂಸಕಲಿಂಗ ಮತ್ತು ಏಕವಚನದಲ್ಲಿ ನಿರ್ದಿಷ್ಟವಾಗಿದೆ. ಹೀಗಿರುವಾಗ ಇವೆರಡಕ್ಕೆ ವಿಶೇಷ್ಯ-ವಿಶೇಷಣಭಾವವನ್ನು ಹೇಗೆ ಹೇಳುವುದು ? ಎಂದರೆ ಈ ವಿಷಯದಲ್ಲಿ ದೃಷ್ಟಾಂತ ಹೀಗಿದೆ - 'ದ್ವಿಗುರೇಕವಚನಮ್' ಎಂಬಲ್ಲಿ 'ದ್ವಿಗುಃ' ಎಂಬುದು ಪುಲ್ಲಿಂಗದಲ್ಲಿದೆ. 'ಏಕವಚನಮ್' ಎಂಬ ವಿಶೇಷಣವು ನಪುಂಸಕಲಿಂಗದಲ್ಲಿದೆ. ಅಥವಾ 'ಕರ್ಮಣೋ ರೋಮಂಥತಪೋಭ್ಯಾಂ ವರ್ತಿಚರಃ' ಎಂಬಲ್ಲಿ 'ರೋಮಂಥತಪೋಭ್ಯಾಂ' ಎಂಬ ವಿಶೇಷ್ಯವು ದ್ವಿವಚನದಲ್ಲಿ ಪ್ರಯುಕ್ತವಾಗಿದೆ. 'ಕರ್ಮಣಃ' ಎಂಬ ವಿಶೇಷಣವು ಏಕವಚನದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ದ್ವಿವಚನಾಂತವಾದ ಶಬ್ದದ ವಿಶೇಷಣವು ಹೇಗೆ ಏಕವಚನವಾಗಿದೆಯೋ ಅದರಂತೆ ಇಲ್ಲಿಯೂ ಕೂಡ ಹೇಳಬಹುದು. ಈ ಆಕ್ಷೇಪವನ್ನೂ ಕೂಡ ಈಗ ನಿರಾಕರಿಸಿದಂತಾಯಿತು.

**प्रकाशः** – गतिसम्भवेऽस्य क्लिष्टत्वात् ।

ನಾವು ಹೇಳುವಂತೆ ಬೇರೆ ಬಗೆಯಲ್ಲಿಯೇ ವ್ಯಾಖ್ಯಾನಿಸಲು ಬರುವಾಗ ಇಷ್ಟು ಕ್ಲೇಶಕರವಾದ ವ್ಯಾಖ್ಯಾನವು ಸರಿಯಲ್ಲವೆಂದು.

**प्रकाशः** –यच्चोक्तं प्रसिद्धेरित्यस्य "दहरं विपाप्मं परवेश्मभूतम्" इत्यत्र "हृत्पुण्डरीकं विरजम्" इत्यारभ्य "उमासहायं परमेश्वरं प्रभुं त्रिलोचनं नीलकण्ठं

**प्रशान्तम् । ध्यात्वा'' इत्यादि कैवल्योपनिषदि च शिवस्य हृत्पद्मस्थत्वप्रसिद्धेश्चेत्यर्थ इति ।**

'ಪ್ರಸಿದ್ಧೇಃ' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಶೈವರು ಹೀಗೆ ಹೇಳಿದ್ದಾರೆ - 'ದಹರಂ ವಿಪಾಪ್ಮಂ ಪರವೇಶ್ಮಭೂತಮ್' ಎಂಬ ಶ್ರುತಿಯಲ್ಲಿ ಶಿವನೇ ಹೃತ್ಪದ್ಮಸ್ಥನಾಗಿದ್ದಾನೆಂಬುದು ಪ್ರಸಿದ್ಧವಾಗಿದೆ. ಮತ್ತು 'ಹೃತ್ಪುಂಡರೀಕಂ ವಿರಜಮ್' ಎಂದು ಪ್ರಾರಂಭವಾಗಿ 'ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಮ್ ಧ್ಯಾತ್ವಾ' ಎಂಬಲ್ಲಿಯ ತನಕ ಇರುವಂತಹ ಕೈವಲ್ಯೋಪನಿಷತ್ತಿನಲ್ಲಿಯೂ ಶಿವನೇ ಹೃತ್ಪದ್ಮಸ್ಥನಾಗಿದ್ದಾನೆಂಬುದು ಪ್ರಸಿದ್ಧವಾಗಿದೆ ಎಂದು.

**प्रकाशः – तन्न । अनेकश्रुतिस्मृतिविरोधेन नारायणादिशब्दविरोधेन च तेषां शब्दानां विष्णुवाचकत्वात् । उक्तं च गीताभाष्ये ''तत्रापीष्टसिद्धिर्नामवैशेष्यात्'' इतीत्याद्यूह्यम् ।**

ಇದೂ ಸಹ ತಪ್ಪು. ಅನೇಕ ಶ್ರುತಿ-ಸ್ಮೃತಿಗಳ ವಿರೋಧವಿರುವುದರಿಂದ ನಾರಾಯಣ, ಬ್ರಹ್ಮ ಮೊದಲಾದ ಶಬ್ದಗಳ ವಿರೋಧವಿರುವುದರಿಂದಲೂ ಅಂತಹ ಈಶ್ವರ, ನೀಲಕಂಠ ಮೊದಲಾದ ಶಬ್ದಗಳಿಗೆಲ್ಲಾ ವಿಷ್ಣುಪರತ್ವವನ್ನೇ ಒಪ್ಪಬೇಕು. ಇದನ್ನು ಶ್ರೀಮದಾಚಾರ್ಯರು ಗೀತಾಭಾಷ್ಯದಲ್ಲಿ 'ತತ್ರಾಪೀಷ್ಟಸಿದ್ಧಿರ್ನಾಮ-ವೈಶೇಷ್ಯಾತ್' ಇತ್ಯಾದಿಯಾಗಿ ಸಕಲ ನಾಮಗಳು ಭಗವಂತನನ್ನೇ ಪ್ರತಿಪಾದಿಸುತ್ತಿವೆಯೆಂದು ಹೇಳಿರುತ್ತಾರೆ. ಆದ್ದರಿಂದ ಶೈವರ ಅಧಿಕರಣಶರೀರವಾಗಲೀ, ಅವರು ಮಾಡುವ ಸೂತ್ರವ್ಯಾಖ್ಯಾನವಾಗಲೀ ಅತ್ಯಂತ ಅಸಾಧುವಾಗಿದೆಯೆಂದು ತಿಳಿಯಬೇಕು.




'ಉತ್ತರಾಚ್ಚೇದ್ ಆವಿರ್ಭೂತಸ್ವರೂಪಸ್ತು' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾ, ಅದ್ವೈತಿಗಳು ಶುದ್ಧಬ್ರಹ್ಮನನ್ನು ಪ್ರತಿಪಾದ್ಯನೆಂದು ಸಮರ್ಥಿಸಿದ್ದಾರೆ. ಆವಿರ್ಭೂತನಾದ ಜೀವನನ್ನು 'ಪರಂಜ್ಯೋತಿಃ' ಇತ್ಯಾದಿ ಶ್ರುತಿಯು ಪ್ರತಿಪಾದಿಸುತ್ತಿದೆ. ಆವಿರ್ಭೂತಸ್ವರೂಪನಾದ ಜೀವನೆಂದರೆ ಶುದ್ಧಬ್ರಹ್ಮನೇ ಆಗಿದ್ದಾನೆ. ಅವನೇ ದಹರಾಕಾಶನೆಂದು ಇವರ ವಾದ. ಇದೂ ಸಹ ತಪ್ಪು. ಅದೇ ಪ್ರಕರಣದಲ್ಲಿ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂಬುದಾಗಿ ಶುದ್ಧಬ್ರಹ್ಮನಲ್ಲಿ ಇಲ್ಲದ ಕ್ರೀಡಾದಿಗುಣಗಳು ಕೇಳಿಬರುತ್ತಿದೆ. ಇದರಿಂದಲೇ ಇದು ಶುದ್ಧಬ್ರಹ್ಮಪ್ರತಿಪಾದಕವಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೆ ಅದ್ವೈತಿಗಳು ಪ್ರತಿಯೊಂದು ಸೂತ್ರವ್ಯಾಖ್ಯಾನದಲ್ಲಿಯೂ ಕೂಡ ಎಡವಿದ್ದಾರೆ. ಏಳನೆಯ ಮತ್ತು ಎಂಟನೆಯ ಸೂತ್ರವ್ಯಾಖ್ಯಾನದಲ್ಲಿಯೂ ಸಹ ಅನೇಕ ದೋಷಗಳಿವೆ ಎಂಬುದನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು ಎಂದು ಚಂದ್ರಿಕಾಕಾರರು ಹೇಳಿದ್ದನ್ನು ರಾಯರು ಪ್ರಕಾಶದಲ್ಲಿ ಬಿಡಿಸಿ ತೋರಿಸಿದ್ದಾರೆ.

ಉಳಿದ ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಸಹ ಅದ್ವೈತಿಗಳು ಜೀವಬ್ರಹ್ಮಭೇದವನ್ನೇ ಒಪ್ಪಿಕೊಂಡಿದ್ದಾರೆ. ಏಕೆಂದರೆ ದಹರಾಕಾಶವನ್ನು ಜೀವನೆಂದು ಒಪ್ಪದೇ ಬ್ರಹ್ಮನೆಂದು ಸಮರ್ಥಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

ಮತ್ತು 'ಗತಿಶಬ್ದಾಭ್ಯಾಮ್' ಎಂಬ ವಿಶೇಷಣದಿಂದ ಜೀವನು ಬ್ರಹ್ಮನನ್ನು ಹೊಂದುತ್ತಾನೆಂದು ಒಪ್ಪಿದ್ದಾರೆ. ಇದರಿಂದ ಜೀವನೇ ಬೇರೆ, ಬ್ರಹ್ಮನೇ ಎಂದು ಒಪ್ಪಿಕೊಂಡಂತಾಯಿತು. 'ಸತ್ಯಕಾಮಃ ಸತ್ಯಸಂಕಲ್ಪಃ' ಇತ್ಯಾದಿಯಾಗಿ ದಹರವಾಕ್ಯಶೇಷದಲ್ಲಿ ಸತ್ಯಕಾಮತ್ವಾದಿ ಗುಣಗಳು ಕೇಳಿಸುತ್ತಿರುವುದರಿಂದ ಬ್ರಹ್ಮನು ನಿರ್ಗುಣನಾಗಿದ್ದಾನೆನ್ನಲೂ ಕೂಡ ಪ್ರತಿಕೂಲವೇ ಆಗಿದೆ. ಇದರಂತೆ ಮುಂದೆಯೂ ಕೂಡ ತಿಳಿಯಬೇಕು.

• • • • •

## ಟೀಕೆಯ ಕಠಿಣಪದಾರ್ಥ

### तात्पर्यचन्द्रिका

**टीकाक्षरार्थस्तु । पूर्वं हृत्पद्मस्थस्य ब्रह्मत्वे हेत्वन्तरोक्त्यर्थं सौत्रं लिङ्गपदमित्येवं परतयाऽरश्चेत्यादिभाष्यं व्याख्यातम् । अधुना ब्रह्मलोकशब्दस्य प्रसिद्ध्या सत्यलोक परत्वाशङ्कानिरासार्थं तदित्येवम्परतयाऽरश्चेत्यादिभाष्यं व्याचष्टे – अथवा ब्रह्मलोकमिति ।**

ಅನುವಾದ - 'ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರದಲ್ಲಿ 'ತಥಾಹಿ ದೃಷ್ಟಂ ಲಿಂಗಂ ಚ' ಎಂಬುದನ್ನು ವ್ಯಾಖ್ಯಾನ ಮಾಡುವಾಗ 'ಅರಶ್ಚ' ಇತ್ಯಾದಿ ಭಾಷ್ಯಕ್ಕೆ ಟೀಕೆಯು ಮೊದಲು ಹೀಗೆ ವ್ಯಾಖ್ಯಾನಿಸಿದೆ. ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆನ್ನಲು ಮತ್ತೊಂದು ಹೇತುವನ್ನು ಹೇಳುವುದಕ್ಕಾಗಿ ಸೂತ್ರದಲ್ಲಿರುವ ಲಿಂಗಪದವು ಪ್ರಯುಕ್ತವಾಗಿದೆ ಎಂದು. ಹೀಗೆ ವ್ಯಾಖ್ಯಾನ ಮಾಡಿ, ಪ್ರಕೃತ 'ಅರಶ್ಚ' ಇತ್ಯಾದಿ ಭಾಷ್ಯಕ್ಕೆ ಈಗ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ - ಬ್ರಹ್ಮಲೋಕ ಶಬ್ದಕ್ಕೆ ಪ್ರಸಿದ್ಧಿಬಲದಿಂದ ಸತ್ಯಲೋಕ ಎಂಬರ್ಥವು ಪ್ರತೀತವಾಗುತ್ತದೆ. ಈ ಶಂಕೆಯನ್ನು ನಿರಾಸಮಾಡುವುದಕ್ಕಾಗಿ 'ಅರಣ್ಯಾಖ್ಯಸಮುದ್ರಾಶ್ರಯಲೋಕವತ್ವ' ಎಂಬ ಲಿಂಗವನ್ನು ತಿಳಿಸುವುದಕ್ಕಾಗಿ ಸೂತ್ರದಲ್ಲಿರುವ ಲಿಂಗಪದವು ಪ್ರಯುಕ್ತವಾಗಿದೆ ಎಂದು ಭಾಷ್ಯವು ಹೇಳುತ್ತಿದೆಯೆಂದು ವ್ಯಾಖ್ಯಾನಿಸುತ್ತಿದ್ದಾರೆ - 'ಅಥವಾ ಬ್ರಹ್ಮಲೋಕಮ್' ಇತ್ಯಾದಿ ವಾಕ್ಯದಿಂದ

**तल्लक्षणोक्तेश्चेति ।।** 'एष आत्मा अपहतपाप्मा' इत्यत्र हृत्पद्मस्थलक्षणत्वे-नोक्तस्यापहतपाप्मत्वस्य 'सर्वे पाप्मानोऽतो निवर्तन्ते' इत्यनेन 'स सेतुः' इत्युक्त-सेतुधर्मत्वोक्तेरित्यर्थः ।

ಟೀಕೆಯಲ್ಲಿರುವ 'ತಲ್ಲಕ್ಷಣೋಕ್ತೇಶ್ಚ' ಎಂಬುದರ ಅಭಿಪ್ರಾಯ ಹೀಗಿದೆ - 'ಏಷ ಆತ್ಮಾ ಅಪಹತಪಾಪ್ಮಾ' ಎಂಬಲ್ಲಿ ಹೃತ್ಪದ್ಮಸ್ಥನ ಲಕ್ಷಣವನ್ನು ಅಪಹತಪಾಪ್ಮತ್ವವೆಂದು ಹೇಳಿದ್ದಾರೆ. ಇದೇ ಲಕ್ಷಣವು 'ಸರ್ವೇ ಪಾಪ್ಮನೋಽತೋ ನಿವರ್ತಂತೇ' ಎಂಬುದರಿಂದ 'ಸ ಸೇತುಃ' ಎಂಬಲ್ಲಿ ಹೇಳಲ್ಪಟ್ಟ

ಹೇತುವಿನ ಧರ್ಮವೆಂದು ಹೇಳಲಾಗಿದೆ. ಆದ್ದರಿಂದ ಅಪಹತಪಾಪ್ಮತ್ವವು ಬ್ರಹ್ಮನ ಧರ್ಮವೇ ಎಂದು ನಿಶ್ಚಯವಾಗುತ್ತದೆಂದು.

**एतस्येति प्रतीकग्रहणेनेति ।। प्रतीकग्रहणेन ''एतस्य वा अक्षरस्य प्रशासने गार्गि सूर्याचन्द्रमसौ । एतस्य वा अक्षरस्य प्रशासने गार्गि द्यावापृथिव्यौ'' इत्यादीनि बहुवाक्यानि सूचयतीत्यर्थः ।।**

'ಏತಸ್ಯೇತಿ ಪ್ರತೀಕಗ್ರಹಣೇನ' ಎಂದು ಟೀಕೆಯಲ್ಲಿದೆ. ಭಾಷ್ಯದಲ್ಲಿ 'ಏತಸ್ಯ' ಎಂದು ಪ್ರತೀಕವನ್ನು ಗ್ರಹಣ ಮಾಡಿದ್ದರಿಂದ ಅನೇಕ ಶ್ರುತಿವಾಕ್ಯಗಳನ್ನು ಸೂಚಿಸಿದಂತಾಯಿತು. ಅವು ಹೀಗಿವೆ - 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ' ಎಂದು 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ' ಇವೇ ಮೊದಲಾದ ಬಹುವಾಕ್ಯಗಳನ್ನು ಸೂಚಿಸಲಾಗಿದೆ ಎಂದರ್ಥ.

**विष्णुरित्यभ्युपगमे सुषिरश्रुतिविरोध इति ।। ब्रह्मणो हृत्पद्मस्थत्वे सुषिरस्य ''तस्यान्ते सुषिरम्'' इति हृत्पद्मस्थत्वश्रुतिविरोध इति निरस्तम् । सुषिरस्य ''दहरोऽस्मिन्नन्तराकाशे'' इति वाक्योक्तहृत्पद्मस्थत्वमुपेत्यैव ब्रह्मणो ''दहरं विपाप्मम्'' इत्यादिश्रुतिबलात्तस्मिन्यदन्तरिति वाक्योक्तहृत्पद्मस्थ-सुषिरस्थताया एव स्वीकारादित्यर्थः ।। तदाधारतया पृथिव्यादिकमिति ।। आकाशाभिमान्याश्रितं पृथिव्याद्यभिमान्यादिकमित्यर्थः ।**

ಟೀಕೆಯಲ್ಲಿ 'ವಿಷ್ಣುರಿತ್ಯಭ್ಯುಪಗಮೇ ಸುಷಿರಶ್ರುತಿವಿರೋಧಃ' ಎಂದಿದೆ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - ಬ್ರಹ್ಮನು ಹೃತ್ಪದ್ಮಸ್ಥನಾಗಿದ್ದಾನೆಂದು ಒಪ್ಪಿದರೆ 'ತಸ್ಯಾಂತೇ ಸುಷಿರಮ್' ಎಂಬ ಶ್ರುತಿಯಲ್ಲಿ ಸುಷಿರಕ್ಕೆ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವದ ವಿರೋಧ ಬರುತ್ತದಲ್ಲವೇ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ ಸುಷಿರಕ್ಕೆ 'ದಹರೋಽಸ್ಮಿನ್ನಂತರಾಕಾಶೇ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವನ್ನು ಅಂಗೀಕಾರ ಮಾಡಿಯೇ ಬ್ರಹ್ಮನಿಗೆ 'ದಹರಂ ವಿಪಾಪ್ಮಮ್' ಇತ್ಯಾದಿ ಶ್ರುತಿಯ ಬಲದಿಂದ 'ತಸ್ಮಿನ್ ಯಂದತಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಹೃತ್ಪದ್ಮದಲ್ಲಿರುವ ಸುಷಿರಸ್ಥತ್ವವನ್ನೇ ನಾವು ಅಂಗೀಕರಿಸಿದ್ದೇವೆ ಎಂದರ್ಥ. 'ತದಾಧಾರತಯಾ ಪೃಥಿವ್ಯಾದಿಕಮ್' ಎಂದು ಟೀಕೆಯಲ್ಲಿದೆ. ಜಡಕ್ಕೆ ಜಡವು ಆಶ್ರಯವಾಗಲು ಸಾಧ್ಯವಿಲ್ಲ. ಆದ್ದರಿಂದ ಆಕಾಶಾಭಿಮಾನಿಯಲ್ಲಿ ಆಶ್ರಿತವಾದ ಪೃಥಿವ್ಯಾದ್ಯಭಿಮಾನಿಗಳು ಎಂದು ಇದಕ್ಕೆ ಅರ್ಥೈಸಬೇಕು.

**ब्रह्मैव पूर्णत्वात्पुरमिति ।। एतत्सत्यं ब्रह्मपुरमिति प्रकृतस्य शरीरस्यैवैष आत्मेति परामर्शादात्मा न विष्णुरिति न शङ्क्यम् । छान्दोग्यभाष्योक्तरीत्या ''यदिदमस्मिन्ब्रह्मपुरे'' इत्याद्यस्य ब्रह्मपुरशब्दस्य षष्ठीतत्पुरुषकर्मधारययोराश्रयणेन**

**शरीरब्रह्मोभयपरत्वेऽपि ''ब्रह्मपुरे सर्वं समाहितम्'' इति द्वितीयस्य ''एतत्सत्यं ब्रह्मपुरम्'' इति तृतीयस्य च ब्रह्ममात्रपरत्वादिति भावः ।।**

'ಬ್ರಹ್ಮೈವ ಪೂರ್ಣತ್ವಾತ್ಪುರಮ್' ಎಂದು ಟೀಕೆಯಲ್ಲಿದೆ. ಇದರ ಅಭಿಪ್ರಾಯ ಹೀಗಿದೆ - 'ಏತತ್ ಸತ್ಯಂ ಬ್ರಹ್ಮಪುರಮ್' ಎಂದು ಪ್ರಕೃತವಾದ ಶರೀರವನ್ನು 'ಏಷ ಆತ್ಮಾ' ಎಂಬಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶ ಮಾಡಿರುವ ಕಾರಣ, ಶರೀರವೇ ಆತ್ಮವೆನಿಸುತ್ತದೆ ಹೊರತು, ವಿಷ್ಣುವಲ್ಲ ಎಂದು ಶಂಕಿಸಬಾರದು. ಛಾಂದೋಗ್ಯಭಾಷ್ಯದಲ್ಲಿ ಹೇಳಿದ ಪ್ರಕಾರ 'ಯದಿದಮಸ್ಮಿನ್ ಬ್ರಹ್ಮಪುರೇ' ಎಂಬ ಮೊದಲಿನ ವಾಕ್ಯದಲ್ಲಿರುವ ಬ್ರಹ್ಮಪುರ ಶಬ್ದಕ್ಕೆ ಷಷ್ಠೀತತ್ಪುರುಷ ಸಮಾಸವನ್ನು ಅಥವಾ ಕರ್ಮಧಾರಯ ಸಮಾಸವನ್ನು ಆಶ್ರಯಿಸುವ ಪ್ರಯುಕ್ತ ಶರೀರ ಅಥವಾ ಬ್ರಹ್ಮ ಎಂಬೆರಡರ್ಥವನ್ನು ಹೇಳಬಹುದು. ಆದರೆ 'ಬ್ರಹ್ಮಪುರೇ ಸರ್ವಂ ಸಮಾಹಿತಮ್' ಎಂಬ ಎರಡನೆಯ ವಾಕ್ಯದಲ್ಲಿರುವ ಮತ್ತು 'ಏತತ್ ಸತ್ಯಂ ಬ್ರಹ್ಮಪುರಮ್' ಎಂಬ ಮೂರನೆಯ ವಾಕ್ಯದಲ್ಲಿರುವ ಬ್ರಹ್ಮಪುರ ಶಬ್ದಕ್ಕೆ ಕೇವಲ 'ಬ್ರಹ್ಮ' ಎಂದೇ ಅರ್ಥ.

**शरीरनाशेनास्याविनाशोक्तेरिति ।। यद्यपि ''एतज्जराऽवाप्नोति'' इति पूर्वत्रैतच्छब्देन शरीरस्य प्रकृतत्वात् ''एतत्सत्यं ब्रह्मपुरम्'' इत्यत्रापि तस्य प्राप्तिः । तथापि 'नास्य जरयैतज्जीर्यते' इति सन्निहितपूर्ववाक्ये शरीरमस्येति निर्दिश्यैतच्छब्देन ब्रह्मनिर्देशाच्छरीरनाशेऽप्यविनाशित्वलिङ्गाच्च न शरीरमिह ब्रह्मपुरशब्दार्थ इत्यर्थः ।।**

ಟೀಕೆಯಲ್ಲಿ 'ಶರೀರನಾಶೇನಾಸ್ಯಾವಿನಾಶೋಕ್ತೇಃ' ಎಂಬ ಮಾತಿನ ಅರ್ಥ ಹೀಗಿದೆ - ವಸ್ತುತಃ 'ಏತಜ್ಜರಾऽವಾಪ್ನೋತಿ' ಎಂಬ ಹಿಂದಿನ ವಾಕ್ಯದಲ್ಲಿರುವ 'ಏತತ್' ಶಬ್ದದಿಂದ ಶರೀರವೇ ಪ್ರಕೃತವಾಗಿದೆ. ಹಾಗಾಗಿ 'ಏತತ್ ಸತ್ಯಂ ಬ್ರಹ್ಮಪುರಮ್' ಎಂಬಲ್ಲಿರುವ ಬ್ರಹ್ಮಪುರ ಶಬ್ದವೂ ಸಹ ಶರೀರವನ್ನೇ ಹೇಳುತ್ತದೆ. ಆದರೂ ಕೂಡ 'ನಾಸ್ಯ ಜರಯೈತಜ್ಜೀರ್ಯತೇ' ಎಂಬ ಹತ್ತಿರದಲ್ಲಿರುವ ಹಿಂದಿನ ವಾಕ್ಯದಲ್ಲಿ 'ಶರೀರಮಸ್ಯ' ಎಂದು ನಿರ್ದೇಶ ಮಾಡಿ 'ಏತತ್' ಶಬ್ದದಿಂದ ಬ್ರಹ್ಮನನ್ನು ಉಲ್ಲೇಖ ಮಾಡಿದ್ದರಿಂದ; ಅಷ್ಟೇ ಅಲ್ಲದೇ, ಶರೀರನಾಶವಾದರೂ ಇವನಿಗೆ ನಾಶವಿಲ್ಲವೆಂಬ ಲಿಂಗವನ್ನು ಹೇಳಿದ್ದರಿಂದಲೂ ಬ್ರಹ್ಮಪುರ ಶಬ್ದದಿಂದ ಶರೀರವನ್ನು ವಿವಕ್ಷಿಸಬಾರದು. ಹೊರತಾಗಿ ಬ್ರಹ್ಮನನ್ನೇ ವಿವಕ್ಷಿಸಬೇಕು ಎಂದು.

**न चैवमङ्गीकारेऽपि सुषिरश्रुतिविरोध इति ।। सुषिरस्य सर्वाधारत्वश्रुतिविरोध इत्यर्थः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायां दहराधिकरणं सम्पूर्णम् ।।**

ದಹರಾಧಿಕರಣ (೧-೩-೫)

ಟೀಕೆಯಲ್ಲಿ 'ನ ಚೈವಮಂಗೀಕಾರೇಽಪಿ ಸುಷಿರಶ್ರುತಿ ವಿರೋಧಃ' ಎಂದಿದೆ. ಇಲ್ಲಿರುವ ಸುಷಿರಶ್ರುತಿ ವಿರೋಧ ಶಬ್ದಕ್ಕೆ ಸುಷಿರಕ್ಕೆ ಸರ್ವಾರ್ಧಾರತ್ವವನ್ನು ಹೇಳುವ ಶ್ರುತಿಯ ವಿರೋಧ ಬರುವುದಿಲ್ಲ ಎಂದರ್ಥ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ದಹರಾಧಿಕರಣವು ಸಂಪೂರ್ಣವಾಯಿತು.

**प्रकाशः –**

अथवेत्यादिटीकाया उद्भाष्यत्वभ्रान्तिं निवारयन्पक्षयोरर्थभेदं व्यञ्जयन् भाष्यव्याख्यानमेतदित्याह – **पूर्वमिति** ॥

ವಿವರಣೆ - ಟೀಕೆಯ ಕೆಲವು ಕಠಿಣಪದಗಳ ಅರ್ಥವನ್ನು ವಿವರಿಸುತ್ತಿದ್ದಾರೆ. ಮೊದಲು 'ಅಥವಾ ಇತ್ಯಾದಿ' ಟೀಕೆಯು ಭಾಷ್ಯದಲ್ಲಿ ಹೇಳದ ವಿಚಾರವನ್ನು ಪ್ರಸ್ತಾಪಮಾಡುತ್ತಿದೆಯೆಂಬ ಭ್ರಾಂತಿಯನ್ನು ಪರಿಹರಿಸುವುದಕ್ಕಾಗಿ ಹಿಂದಿನ ಮುಂದಿನ ಪಕ್ಷಗಳಲ್ಲಿರುವ ಅರ್ಥವೈಲಕ್ಷಣ್ಯವನ್ನು ವ್ಯಕ್ತಪಡಿಸುತ್ತಾ ಟೀಕೆಯು ಭಾಷ್ಯಕ್ಕೆ ವ್ಯಾಖ್ಯಾನ ರೂಪವೇ ಆಗಿದೆಯೆಂದು ಸಮರ್ಥಿಸುತ್ತಿದ್ದಾರೆ 'ಪೂರ್ವಮ್' ಇತ್ಯಾದಿ ಗ್ರಂಥದಿಂದ.

**प्रकाशः –** "धृतिसूत्रे सर्वे पाप्मानोऽतो निवर्तन्त इति तल्लक्षणोक्तेः" इति वाक्ये तच्छब्देन परामृश्यमानं न स्फुटम् । किञ्च तल्लक्षणमिति न स्फुटं प्रतीयते । तथात्वे वा स हृत्पद्मस्थः कुत इत्यतो व्यनक्ति – **एष इति** ॥

'ಧೃತಿಸೂತ್ರೇ ಸರ್ವೇ ಪಾಪ್ಮಾನೋಽತೋ ನಿವರ್ತಂತ ಇತಿ ತಲ್ಲಕ್ಷಣೋಕ್ತೇಃ' ಎಂಬ ವಾಕ್ಯದಲ್ಲಿ 'ತತ್' ಶಬ್ದದಿಂದ ಯಾವುದನ್ನು ಪರಾಮರ್ಶ ಮಾಡಬೇಕೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಮತ್ತು ಪಾಪವಿದೂರತ್ವವು ಯಾರ ಲಕ್ಷಣವೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಹೀಗೀರುವಾಗ ಹೃತ್ಪದ್ಮಸ್ಥವಾದ ವಸ್ತು ಯಾವುದು? ಎಂಬ ಗೊಂದಲವೂ ಕೂಡ ಪರಿಹಾರವಾಗುವುದಿಲ್ಲ. ಈ ಎಲ್ಲಾ ಪ್ರಶ್ನೆಗೆ 'ಏಷಃ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः –** "एतस्येति प्रतीकग्रहणेन बहुवाक्यानि सूचितानि" इत्यत्रोक्तानि बहुवाक्यानि च दर्शयति – **प्रतीकेति** ॥

ಭಾಷ್ಯದಲ್ಲಿ 'ಏತಸ್ಯ' ಎಂಬ ಸೂತ್ರದ ಪ್ರತೀಕವನ್ನು ಉಲ್ಲೇಖ ಮಾಡಿದ್ದರಿಂದ ಅನೇಕ ವಾಕ್ಯಗಳನ್ನು ಸೂಚನೆ ಮಾಡಿದ್ದಾರೆಂದು 'ಏತಸ್ಯೇತಿ ಪ್ರತೀಕಗ್ರಹಣೇನ ಬಹುವಾಕ್ಯಾನಿ ಸೂಚಿತಾನಿ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಆ ಬಹುವಾಕ್ಯಗಳನ್ನು ಗ್ರಂಥಕಾರರು 'ಪ್ರತೀಕ' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ.

**प्रकाशः** – ''प्रसिद्धेश्च'' इति सूत्रे ''हृत्पद्मस्थाकाशो विष्णुरित्यभ्युपगमे सुषिरश्रुतिविरोध इत्येतदनेनैव निरस्तम्'' इति वाक्यविरोधतच्छान्त्योरस्फुटत्वादाह – **ब्रह्मण इति** ।।

'ಪ್ರಸಿದ್ಧೇಶ್ಚ' ಎಂಬ ಸೂತ್ರದಲ್ಲಿ 'ಹೃತ್ಪದ್ಮಸ್ಥಾಕಾಶೋ ವಿಷ್ಣುರಿತ್ಯಭ್ಯುಪಗಮೇ ಸುಷಿರಶ್ರುತಿವಿರೋಧಃ ಇತ್ಯೇತದನೇನೈವ ನಿರಸ್ತಮ್' 'ಹೃತ್ಪದ್ಮಸ್ಥನಾದ ಆಕಾಶನು ವಿಷ್ಣುವೆಂದು ಅಂಗೀಕರಿಸಿದರೆ ಸುಷಿರಶ್ರುತಿವಿರೋಧ ಬರುತ್ತದೆಂಬ ಶಂಕೆಯೂ ಕೂಡ ಇದರಿಂದಲೇ ನಿರಸ್ತವಾಯಿತು' ಎಂಬ ವಾಕ್ಯವನ್ನು ನೋಡಿದಾಗ ವಿರೋಧವಾಗಲೀ, ಅದರ ಪರಿಹಾರವಾಗಲೀ ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕೋಸ್ಕರ 'ಬ್ರಹ್ಮಣಃ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – ''यद्ब्रह्मान्वेष्टव्यतयोक्तं तस्यान्तर्हृदये यावानेष आकाशस्तावान्सर्वोऽपि विद्यन्ते । तदाधारतया पृथिव्यादिकं च समाहितम्'' इत्यत्र जडस्यैव जडाधारताप्रतीतेराह – **आकाशेति** ।।

'ಯದ್ಬ್ರಹ್ಮಾನ್ವೇಷ್ಟವ್ಯತಯೋಕ್ತಂ ತಸ್ಯಾಂತರ್ಹೃದಯೇ ಯಾವಾನೇಷ ಆಕಾಶಸ್ತಾವಾನ್ ಸರ್ವೇऽಪಿ ವಿದ್ಯಂತೇ । ತದಾಧಾರತಯಾ ಪೃಥಿವ್ಯಾದಿಕಂ ಚ ಸಮಾಹಿತಮ್' ಎಂದರೆ 'ಯಾವ ಬ್ರಹ್ಮನನ್ನು ಅನ್ವೇಷಣೆ ಮಾಡಬೇಕೆಂದು ಹೇಳಲಾಗಿದೆಯೋ, ಅಂತಹ ಹೃದಯದಲ್ಲಿ ಆಕಾಶವಿದೆ. ಅದು ಪೃಥಿವ್ಯಾದಿ ಸಕಲ ಪದಾರ್ಥಗಳಿಗೂ ಆಧಾರವಾಗಿದೆಯೆಂದು ಹೇಳಲಾಗಿದೆ. ಈ ವಾಕ್ಯವನ್ನು ನೋಡಿದಾಗ ಜಡವಾದ ಪೃಥಿವ್ಯಾದಿಗಳಿಗೆ, ಜಡವಾದ ಆಕಾಶವೇ ಆಧಾರವೆಂದು ತಿಳಿಯುತ್ತದೆ. ಇದರ ಪರಿಹಾರಕ್ಕಾಗಿ 'ಆಕಾಶ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – एतच्छब्देन शरीरस्य प्रकृतत्वान्नेति चेन्न । शरीरनाशेनास्याविनाशोक्तेरित्येतदप्रतीतेश्शङ्कोत्तरयोर्भावं व्यनक्ति – **यद्यपीति** ।।

'ಏತತ್' ಶಬ್ದದಿಂದ ಶರೀರವೇ ಪ್ರಕೃತವಾಗಿರುವ ಪ್ರಯುಕ್ತ ಬ್ರಹ್ಮನನ್ನು ಪರಾಮರ್ಶಿಸಲು ಸಾಧ್ಯವಿಲ್ಲ. ಎಂದು ಪ್ರಶ್ನಿಸಬಾರದು. ಏಕೆಂದರೆ ಶರೀರನಾಶವಾದರೂ ಕೂಡ ಹೃತ್ಪದ್ಮಸ್ಥನಿಗೆ ನಾಶವಿಲ್ಲವೆಂದು ಹೇಳಿದ್ದರಿಂದ. ಈ ಶಂಕಾ ಮತ್ತು ಉತ್ತರಗಳ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ.

ದಹರಾಧಿಕರಣ (೧-೩-೫)

**प्रकाशः** – दहराकाशस्थस्य विष्णोरेव सर्वाधारत्वमिति प्रकृतेऽर्थे शङ्कितश्रुतिविरोधं सङ्गमयति – **सुषिरस्येति** ।। शिष्टमुपन्यासमुखेन विवृतमिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे दहराधिकरणं सम्पूर्णम् ॥**

ದಹರಾಕಾಶದಲ್ಲಿರುವವನು ವಿಷ್ಣುವೇ ಆಗಿದ್ದಾನೆ. ಅಂತಹ ವಿಷ್ಣುವೇ ಸಕಲಕ್ಕೂ ಆಧಾರನಾಗಿದ್ದಾನೆಂದು ಸಮರ್ಥಿಸಿದಾಗ ಸುಷಿರಕ್ಕೆ ಸರ್ವಾಧಾರತ್ವವನ್ನು ಹೇಳುವ ಶ್ರುತಿವಿರೋಧ ಬರುತ್ತದೆಂದು ಪೂರ್ವಪಕ್ಷಿಯು ಆಕ್ಷೇಪಿಸುತ್ತಾನೆ. ಈ ಅಭಿಪ್ರಾಯವನ್ನು ಟೀಕೆಯಲ್ಲಿ 'ನಚೈವಮ್' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. ಅದನ್ನೇ ಗ್ರಂಥಕಾರರು 'ಸುಷಿರಸ್ಯ' ಎಂಬ ವಾಕ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ಉಳಿದ ಟೀಕೆಯ ಕಠಿಣಪದಗಳ ಅರ್ಥವನ್ನು ಉಪನ್ಯಾಸ ಶೈಲಿಯಿಂದ ವ್ಯಾಖ್ಯಾನ ಮಾಡುವಾಗಲೇ ವಿವರಿಸಿದ್ದಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ದಹರಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – समानविषयत्वस्य विकल्पप्रयोजकत्वात्प्रकृते तदभावाद्विकल्पद्योतकोऽथ वेति वाशब्दोऽनुपपन्न इत्यतो व्याख्यानान्तराभिप्रायेण वाशब्द इत्याह – **पूर्वमिति** ।। सर्वत्र ब्रह्मपुरशब्दस्य ब्रह्मपरत्वभ्रान्तिनिरासायाह – **एतत्सत्यं ब्रह्मपुरमिति** ।। पौनरुक्त्यपरिहाराय व्याख्याति – **सुषिरस्येति** ।। दहराधिकरणम् ।। ५ ।।

।। इति श्रीकेशवभट्टारकेण विरचितायां भावदीपिकायां दहराधिकरणं सम्पूर्णम् ।। ५ ।।

ಪರಿಪೂರ್ಣಚಂದ್ರಿಕಾ

# ದಹರಾಧಿಕರಣ

(೧-೩-೫)

## ಭಾಗ -೩

### ಅಣುಭಾಷ್ಯ, ತತ್ವಮಂಜರೀ, ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ ಸರಳ ಕನ್ನಡ ಅನುವಾದ

***

### ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री श्रीमदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## दहराधिकरणम् (१।३।५)

**हृदब्जग**

'ಹೃತ್ಪದ್ಮಸ್ಥ'ನಾದವನು ಜನಾರ್ದನನೇ ಆಗಿದ್ದಾನೆ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## दहराधिकरणम् (१।३।५)

नन्वथापि 'सोऽक्षरः' इति सूर्यचन्द्रादिसर्वाधारोऽक्षरो हरिरित्ययुक्तम् । छान्दोग्येऽष्टमे 'ब्रह्मपुरे दहरं पुण्डरीकं वेश्म दहरोस्मिन्नन्तराकाशः तस्मिन्यदन्तस्तदन्वेष्टव्यम्' इत्यादिना हृत्पद्मस्थं किञ्चिदुक्त्वाऽस्य 'उभे अस्मिन् द्यावापृथिवी सूर्याचन्द्रमसावुभौ' इत्यादिना सूर्यचन्द्रादिसर्वाधारत्वोक्तेः हृत्पद्मस्थस्य चाकाशश्रुत्याऽकाशत्वात् 'हृदि ह्येष आत्मा' इत्यादेः जीवत्वाद्वेत्यतः प्राप्तं - दहर उत्तरेभ्य इत्यादिसूत्राष्टकम् । तदर्थो - हृदब्जग इति ।

ಶಂಕೆ - ಅಕ್ಷರಾಧಿಕರಣದಲ್ಲಿ 'ಸೋಽಕ್ಷರಃ' ಎಂಬುದರಿಂದ ಸೂರ್ಯಚಂದ್ರಾದಿ ಸಕಲಪದಾರ್ಥಗಳಿಗೆ ಆಧಾರನಾದವನು ವಿಷ್ಣುವೇ ಆಗಿದ್ದಾನೆಂದು ಹೇಳಲಾಯಿತು. ಇದು ಸರಿಯಲ್ಲ. ಏಕೆಂದರೆ ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದಲ್ಲಿ 'ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಇತ್ಯಾದಿಯಾಗಿ ಹೃತ್ಪದ್ಮದಲ್ಲಿ ಯಾವುದೋ ಒಂದು ಪದಾರ್ಥವಿದೆ ಎಂದು ಹೇಳಿ 'ಉಭೇ ಅಸ್ಮಿನ್ ದ್ಯಾವಾಪೃಥಿವೀ ಸೂರ್ಯಾಚಂದ್ರಮಸಾವುಭೌ' ಇತ್ಯಾದಿಯಾಗಿ ಸೂರ್ಯಚಂದ್ರಾದಿ ಸರ್ವಾಧಾರತ್ವವನ್ನು ಹೇಳಲಾಗಿದೆ. ಆಕಾಶಶ್ರುತಿಯಿರುವುದರಿಂದ ಹೃತ್ಪದ್ಮಸ್ಥವಾದದ್ದು ಆಕಾಶವೇ ಆಗುತ್ತದೆ. ಅಥವಾ 'ಏಷ ಆತ್ಮಾ' ಇತ್ಯಾದಿಯಾಗಿ ಮುಂದೆ ಆತ್ಮಶಬ್ದವಿರುವುದರಿಂದ ಜೀವನೂ ಸಹ ಸರ್ವಾಧಾರನಾಗುತ್ತಾನೆ. ಹೊರತು, ವಿಷ್ಣು ಸರ್ವಾಧಾರನಾಗುವುದಿಲ್ಲ. ಹೀಗಿರುವಾಗ ಅಕ್ಷರಾಧಿಕರಣದಲ್ಲಿ ವಿಷ್ಣುವಿಗೆ ಹೇಳಲ್ಪಟ್ಟ ಸರ್ವಾಧಾರತ್ವವು ಹೇಗೆ ಯುಕ್ತವಾಗುತ್ತದೆ ?

ಸಮಾಧಾನ - ಈ ಶಂಕೆಗೆ ಪರಿಹಾರವನ್ನು ನೀಡಲು 'ದಹರ ಉತ್ತರೇಭ್ಯಃ' ಇತ್ಯಾದಿಯಾದ ಎಂಟು ಸೂತ್ರಗಳು ಹೊರಟಿವೆ. ಇದರ ಸಾರವನ್ನೇ ಶ್ರೀಮದಾಚಾರ್ಯರು 'ಹೃದಬ್ಜಗಃ' ಎಂಬುದರಿಂದ ಹೇಳಿರುತ್ತಾರೆ.

पूर्ववदनुषङ्गः । सर्वाश्रयः सन्निति वर्तते । 'तस्मिन् यदन्तः' इत्यादौ हृत्स्थाकाशस्थतया परम्परया श्रुतो वा, साक्षात्परम्परासाधारण्येन वा, अथवा पृथिव्यादिसर्वाश्रयः सन्सर्वाधारो भूत्वा हृदब्जगः । हृत्पद्मस्थः । सः 'सोऽक्षरः' इत्यत्र सर्वाधारत्वेनोक्तः एको जनार्दनः ।

'ಸರ್ವಾಶ್ರಯಃ' 'ಸನ್' ಎಂಬೆರಡು ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ 'ಸರ್ವಾಶ್ರಯಃ ಸನ್ ಹೃದಬ್ಜಗಃ ಏಕಃ ಜನಾರ್ದನಃ' ಎಂದು ಹೇಳಿದಂತಾಗುತ್ತದೆ. 'ತಸ್ಮಿನ್ ಯದಂತಃ' ಇತ್ಯಾದಿ ಶ್ರುತಿಯಲ್ಲಿ ಹೃದಯಾಕಾಶದಲ್ಲಿರುವವನೆಂದು ಪರಂಪರೆಯಿಂದ ಶ್ರುತನಾದವನು, ಅಥವಾ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದಲೂ ಹೇಳಲ್ಪಟ್ಟ ಅಥವಾ ಪೃಥಿವ್ಯಾದಿ ಸರ್ವಾಶ್ರಯನಾದ ಹೃತ್ಪದ್ಮಸ್ಥನಾದ ಶ್ರುತಿಯಲ್ಲಿ ಸರ್ವಾಶ್ರಯನೆಂದು ಹೇಳಲ್ಪಟ್ಟ ಜನಾರ್ದನನು ಒಬ್ಬನೇ ಆಗಿದ್ದಾನೆ. 'ಸೋಽಕ್ಷರಃ' ಶ್ರುತಿಯಲ್ಲಿ ಸರ್ವಾಶ್ರಯನೆಂದು ಹೇಳಲ್ಪಟ್ಟ ಜನಾರ್ದನನೂ ಸಹ ಒಬ್ಬನೇ ಆಗಿದ್ದಾನೆ.

तस्मात् 'यो वेद निहितं गुहायाम्' इति श्रुतेः विष्णाविव 'तस्यान्ते सुषिरं सूक्ष्मं तस्मिन्सर्वं प्रतिष्ठितं', 'हृदि ह्येष आत्मा' इति श्रुत्यन्तरादन्यत्र वाचकतया प्रतीतैः 'यदन्तस्तदन्वेषितव्यं तद्वाव विजिज्ञासितव्यं किं तदत्र विद्यते यदन्वेष्टव्यं यद्वाव विजिज्ञासितव्यं यावान्वा अयमाकाशः' इति श्रुतौ यदन्तराकाश इत्यादिसर्वशब्दैः हृत्पद्मस्थनिष्ठैर्मुख्यतोऽन्वयात् आकाशस्थ एको जनार्दन एव वाच्यो नत्वनेको जीवादिः ।

ದಹರಾಧಿಕರಣ (೧-೩-೫)

ಆದ್ದರಿಂದ 'ಯೋ ವೇದ ನಿಹಿತಮ್ ಗುಹಾಯಾಮ್' ಎಂಬ ಶ್ರುತಿಯ ಬಲದಿಂದ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂದು ಹೇಗೆ ಸಿದ್ಧವಾಗುತ್ತದೋ; ಅದರಂತೆ 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ' 'ಹೃದಿ ಹ್ಯೇಷ ಆತ್ಮಾ' ಇತ್ಯಾದಿ ಶ್ರುತಿಗಳಲ್ಲಿಯೂ ಅನ್ಯತ್ರವಾಚಕವೆಂದು ಪ್ರತೀತವಾಗುವ 'ಯದಂತಸ್ತದನ್ವೇಷಿತವ್ಯಮ್ ತದ್ವಾವ ವಿಜಿಜ್ಞಾಸಿತವ್ಯಂ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಂ ಯಾವಾನ್ವಾ ಅಯಮಾಕಾಶಃ' ಎಂಬ ಶ್ರುತಿಯಲ್ಲಿ ಇರುವಂತಹ ಅಂತರಾಕಾಶ, ಹೃತ್ಪದ್ಮನಿಷ್ಠ ಮೊದಲಾದ ಪದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಜನಾರ್ದನನ್ನೇ ಪ್ರತಿಪಾದನೆ ಮಾಡುತ್ತವೆ. 'ಜೀವ' 'ಭೂತಾಕಾಶ' ಮೊದಲಾದವುಗಳನ್ನು ಪ್ರತಿಪಾದನೆ ಮಾಡುವುದಿಲ್ಲ.

**कुतः । उक्तरूपहृदब्जगो विष्णुः लिङ्गैः सर्वैर्युतो हि । उपलक्षणमेतत् । बाहुल्यात्स्वशब्देन लिङ्गोक्तिः । आत्मब्रह्मश्रुति-अपहतपाप्मत्वादि-सत्यकामत्वादि-सुप्तप्रजाप्राप्यत्व - अरण्याख्य - सुधासमुद्राश्रयलोकवत्त्व - सर्वलोकाधारत्वादिलिङ्ग-वाजसनेय तैत्तिरिय - समाख्यानैर्युतत्वात् तेषां भाष्योक्तवाक्यैः विष्णौ प्रसिद्धेरिति। एतेषां जीवाकाशयोरसम्भवात्, मुक्तजीवस्यापहतपाप्मत्वादेः सम्भवेऽपि तस्य हृत्पद्मस्थत्वाभावात्, ईशायत्तत्वेन निरपेक्षस्य तस्यासम्भवाच्चेति भावः ।**

ವಿಷ್ಣುವೇ ಏಕೆ ಪ್ರತಿಪಾದ್ಯನಾಗುತ್ತಾನೆ ? ಎಂದರೆ, ಹಿಂದೆ ಹೇಳಿದ ಹೃದಯಕಮಲದಲ್ಲಿರುವವನು ವಿಷ್ಣುವೇ ಆಗಿದ್ದಾನೆ. ಅವನ ಅಸಾಧಾರಣಧರ್ಮಗಳೇ ಶ್ರುತವಾಗುತ್ತಿರುವುದರಿಂದ. ಆದ್ದರಿಂದ ಇಲ್ಲಿಯೂ ಸಹ 'ಲಿಂಗೈಃ ಸರ್ವೈರ್ಯುತೋ ಹಿ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಉಪಲಕ್ಷಣಯಾ ಇದನ್ನೂ ಸಹ ತಿಳಿಯಬೇಕು. ಲಿಂಗಗಳು ಬಹಳವಾಗಿರುವುದರಿಂದ ಸ್ವಶಬ್ದದಿಂದ ಹೇಳಿರುತ್ತಾರೆ. ಆತ್ಮ, ಬ್ರಹ್ಮ ಮೊದಲಾದ ಶ್ರುತಿಗಳು ಅಪಹತಪಾಪತ್ವ, ಸತ್ಯಕಾಮತ್ವ, ಸುಪ್ತಪ್ರಜಾಪ್ರಾಪ್ಯತ್ವ, 'ಅರ' ಮತ್ತು 'ಣ್ಯ' ಎಂಬ ಸುಧಾಸಮುದ್ರಾಶ್ರಯಲೋಕವತ್ತ್ವ, ಸರ್ವಲೋಕಾಧಾರತ್ವ ಮೊದಲಾದ ಲಿಂಗಗಳು ವಾಜಸನೇಯ ಮತ್ತು ತೈತ್ತಿರೀಯೋಪನಿಷತ್ತುಗಳಲ್ಲಿರುವ ಸಮಾಖ್ಯಾದಿಗಳು ವಿಷ್ಣುಪರವೇ ಆಗಿವೆ. ಭಾಷ್ಯದಲ್ಲಿ ಉದಾಹರಿಸಿದ ವಚನಗಳಿಂದ ವಿಷ್ಣುವಿನಲ್ಲಿ ಮಾತ್ರ ಇವುಗಳು ಇರುತ್ತವೆಂದು ಪ್ರಸಿದ್ಧವಾಗಿದೆ. ಜೀವ ಮತ್ತು ಆಕಾಶಗಳಲ್ಲಿ ಯಾವ ಲಿಂಗಗಳೂ ಸಹ ಇರುವುದಿಲ್ಲ. ಮುಕ್ತಜೀವರಲ್ಲಿ ಅಪಹತಪಾಪ್ಮತ್ವಾದಿಗಳನ್ನು ಹೇಳಬಹುದಾದರೂ, ಹೃತ್ಪದ್ಮಸ್ಥತ್ವವು ಅವರಲ್ಲಿ ಯುಕ್ತವಾಗುವುದಿಲ್ಲ. ಮತ್ತು ಮುಕ್ತಜೀವರು ಪರಮಾತ್ಮನ ಅಧೀನರಾಗಿರುವುದರಿಂದ, ನಿರಪೇಕ್ಷಿತವಾಗಿ ಅಪಹತಪಾಪ್ಮತ್ವಾದಿಗುಣಗಳೂ ಸಹ ಇರುವುದಿಲ್ಲವೆಂದು ತಿಳಿಯಬೇಕು.

तथा हि वाक्यशेषाः । ''य आत्माऽपहतपाप्मा विजरो विमृत्युर्विशोकोऽविजिघत्सोऽपिपासः सत्यकामः सत्यसङ्कल्पः सोऽन्वेष्टव्यः'' इत्यादौ आत्मश्रुत्यपहत-पाप्मत्वादिलिङ्गानि । तथा 'प्रजा अहरहर्गच्छन्त्य एतं ब्रह्मलोकं न विन्दन्ति' इत्यत्र सुप्तप्रजाप्राप्यत्वब्रह्मलिङ्गश्रुती । ब्रह्मणो लोको ब्रह्मलोक इति हृत्पद्मस्थस्य

ब्रह्मलोकत्वोक्त्या तत्स्थस्य ब्रह्मशब्दवत्त्वस्य सुप्तप्राप्यत्वस्य च सिद्धेः । तथा 'अरश्च ह वै ण्यश्चार्णवौ ब्रह्मलोक' इत्युत्तरवाक्ये सुधासमुद्राश्रयविष्णुलोके प्रयुक्तब्रह्मलोकपदस्य हृत्पद्मे 'ब्रह्मलोकं न विन्दति' इति प्रयोगेण तत्स्थस्य तादृशसमुद्राश्रयलोकवत्त्वस्य च सिद्धेः ।

ಮೇಲೆ ಹೇಳಿದ ಶ್ರುತಿಲಿಂಗಾದಿಗಳ ವಾಕ್ಯಶೇಷ ಹೀಗಿದೆ - 'ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋऽವಿಜಿಘತ್ಸೋऽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ, ಸೋऽನ್ವೇಷ್ಟವ್ಯಃ' ಇತ್ಯಾದಿ ಶ್ರುತಿ- ವಾಕ್ಯಗಳಲ್ಲಿ ಆತ್ಮಶ್ರುತಿ, ಅಪಹತಪಾಪ್ಮತ್ವ ಮೊದಲಾದ ಲಿಂಗಗಳು ನಿರೂಪಿತವಾಗಿವೆ. ಅದರಂತೆ 'ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ' ಇತ್ಯಾದಿ ಶ್ರುತಿಯಲ್ಲಿ ಸುಪ್ತಪ್ರಜಾಪ್ರಾಪ್ಯತ್ವ, ಬ್ರಹ್ಮಶ್ರುತಿ, ಮೊದಲಾದವುಗಳು ಶ್ರುತವಾಗಿವೆ. 'ಬ್ರಹ್ಮಣೋ ಲೋಕಃ ಬ್ರಹ್ಮಲೋಕಃ' ಎಂಬುದಾಗಿ ಹೃತ್ಪದ್ಮಸ್ಥನಾದವನನ್ನು ಬ್ರಹ್ಮಲೋಕವೆಂದು ಕರೆದದ್ದರಿಂದ, ಹೃತ್ಪದ್ಮದಲ್ಲಿರುವವನು ಬ್ರಹ್ಮಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ ಮತ್ತು ಸುಪ್ತಪ್ರಾಪ್ಯತ್ವವೆಂಬ ಲಿಂಗವು ಅವನಲ್ಲಿ ಸಿದ್ಧವಾಗುತ್ತದೆ. ಅದರಂತೆ 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕಃ' ಎಂಬ ಮುಂದಿನ ವಾಕ್ಯದಲ್ಲಿ ಸುಧಾಸಮುದ್ರಾಶ್ರಯವಾದ ವಿಷ್ಣುಲೋಕದಲ್ಲಿ ಬ್ರಹ್ಮಲೋಕಪದವನ್ನು ಪ್ರಯೋಗಿಸಿದ್ದರಿಂದ, 'ಬ್ರಹ್ಮಲೋಕಂ ನವಿಂದಂತಿ' ಎಂಬ ಹಿಂದಿನ ವಾಕ್ಯದಲ್ಲಿ ಹೃತ್ಪದ್ಮದಲ್ಲಿ ಪ್ರಯೋಗಿಸಿದ್ದರಿಂದ, ಹೃತ್ಪದ್ಮದಲ್ಲಿರುವವನೇ ಅಂತಹ ಸುಧಾಸಮುದ್ರಾಶ್ರಯವಾದ ಲೋಕವುಳ್ಳವನೆಂದು ಸಿದ್ಧವಾಗುತ್ತದೆ.

तथा 'स सेतुर्विधृतिरेषां लोकनामसम्भेदाय' इति सर्वलोकधारणसमर्थः । सेतुराश्रय इत्युक्तेः । 'य एषोऽन्तर्हृदय आकाशस्तस्मिन् शेते सर्वस्य वशी' इत्यादिवाजसनेयश्रुतौ, 'यत्पुण्डरीकं पुरमध्यसंस्थं तत्रापि दहरं गगनं विशोकः । तस्मिन् यदन्तस्तदुपासितव्यम्' इति तैत्तिरीयश्रुतौ चैकार्थ्यप्रतीतेः ।

ಇದರಂತೆ 'ಸ ಸೇತುರ್ವಿಧೃತಿರೇಷಾಂ ಲೋಕನಾಮಸಂಭೇದಾಯ' ಇತ್ಯಾದಿ ಶ್ರುತಿಯಲ್ಲಿ ಹೃತ್ಪದ್ಮಸ್ಥನಾದವನು ಸಕಲಲೋಕಧಾರಕನಾಗಿದ್ದಾನೆ. ಆದ್ದರಿಂದಲೇ ಸೇತುಯನಿಸಿದ್ದಾನೆಂದು ಹೇಳಲಾಗಿದೆ. 'ಯ ಏಷೋऽಂತರ್ಹೃದಯ ಆಕಾಶಃ ತಸ್ಮಿನ್ ಶೇತೇ ಸರ್ವಸ್ಯ ವಶೀ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ, ಮತ್ತು 'ಯತ್ ಪುಂಡರೀಕಂ ಪುರಮಧ್ಯಸಂಸ್ಥಂ ತತ್ರಾಪಿ ದಹರಂ ಗಗನಂ ವಿಶೋಕಃ । ತಸ್ಮಿನ್ ಯದಂತಃ ತದುಪಾಸಿತವ್ಯಮ್' ಎಂಬ ತೈತ್ತಿರೀಯೋಪನಿಷತ್ತಿನಲ್ಲಿಯೂ ಇದೇ ಅರ್ಥವನ್ನು ಸಮಾನವಾಗಿ ಹೇಳಲಾಗಿದೆ. ಹೀಗೆ ಸಮಾಖ್ಯಾಶ್ರುತಿಯ ಬಲದಿಂದಲೂ ಹೃತ್ಪದ್ಮಸ್ಥನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

नन्वेवं 'किं तदत्र विद्यते' इति प्रश्नस्य ब्रह्म विद्यत इति परिहारं विना 'यावान्वा' इत्यादेरनन्वय इत्यतोऽपि हृदब्जग इति । सर्वाश्रय इत्यादि

सर्वमिहान्वेति। अयमर्थः । कीदृशं तदत्र विद्यत इति प्रश्ने यावान् परमात्माऽकाशाख्यः पूर्णगुणस्तिष्ठति तावान् पूर्णगुणो हृदब्जगः हृद्ययनात् हृदयनामके हृत्पद्मस्थाकाशे विद्यमानः सः द्यावापृथिव्यादिसर्वाश्रयः अक्षरः सन्नविनाशी सन् 'नास्य जरयैतज्जीर्यते न वधेनास्य हन्यते' इत्याद्युक्त्या देहनाशेऽप्यनश्यन् संविद्यमानापहता-पाप्मेत्याद्युक्तापहतपाप्मत्वादिलिङ्गैः सर्वैर्युत इति वाक्यान्वय इति ।

ಹೃತ್ಪದ್ಮಸ್ಥನಾದವನು ಬ್ರಹ್ಮನಾದಲ್ಲಿ, 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಬ್ರಹ್ಮ ವಿದ್ಯತೇ' ಎಂಬ ಉತ್ತರವನ್ನು ನೀಡದೇ 'ಯಾವಾನ್ವಾ ಅಯಮಕಾಶಃ' ಎಂದು ಹೊರಗಿನ ಆಕಾಶವೇ ಒಳಗಿದೆ ಎಂಬ ಉತ್ತರವನ್ನು ನೀಡಿದ್ದು ಅನನ್ವಿತವಾಗುತ್ತದಲ್ಲವೇ? ಎಂಬ ಪ್ರಶ್ನೆಗೂ ಸಹ 'ಹೃದಬ್ಜಗಃ' ಎಂಬುದರಿಂದಲೇ ಉತ್ತರಿಸಲಾಗಿದೆ. 'ಸರ್ವಾಶ್ರಯಃ' ಇತ್ಯಾದಿಗಳೆಲ್ಲವೂ ಇಲ್ಲಿಯೂ ಅನ್ವಯವನ್ನು ಹೊಂದುತ್ತವೆ.

ಒಟ್ಟು ಅಭಿಪ್ರಾಯ - 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ, ಹೃತ್ಪದ್ಮದಲ್ಲಿರುವವನು ಯಾರು? ಎಂಬರ್ಥ ಅಭಿಪ್ರೇತವಲ್ಲ. ಹೊರತಾಗಿ 'ಕೀದೃಶಂ ತದತ್ರ ವಿದ್ಯತೇ' ಎಂದು ಅಭಿಪ್ರಾಯ. ಅಂದರೆ ಹೃತ್ಪದ್ಮದಲ್ಲಿರುವವನ ಸ್ವರೂಪವೇನು ? ಎಂದು ಪ್ರಶ್ನಿಸಿದಾಗ, ಅದಕ್ಕೆ ಉತ್ತರವಾಗಿ ಗುಣಪೂರ್ಣನಾದ ಆಕಾಶನೆಂಬ ಪರಮಾತ್ಮನು ಗುಣಪೂರ್ಣನಾಗಿಯೇ ಹೃತ್ಪದ್ಮದಲ್ಲಿ ಇರುತ್ತಾನೆಂದು ತಿಳಿಯಬೇಕು. ದ್ಯಾವಾಪೃಥಿವ್ಯಾದಿಸಕಲಪದಾರ್ಥಗಳಿಗೂ ಇವನು ಆಶ್ರಯನಾಗಿದ್ದಾನೆ, ಮತ್ತು ಅವಿನಾಶಿಯಾಗಿದ್ದಾನೆ. 'ನಾಸ್ಯ ಜರಯೈತಜ್ಜೀರ್ಯತೇ' ಇತ್ಯಾದಿಯಾದ ಶ್ರುತಿ ಹೇಳುವಂತೆ ದೇಹನಾಶವಿಲ್ಲದ ಕಾರಣದಿಂದಲೂ ಅವಿನಾಶಿಯಾಗಿದ್ದಾನೆ. ಅಪಹತಪಾಪ್ಮತ್ವಾದಿಗುಣಗಳಿಂದ ಕೂಡಿದ್ದಾನೆ ಎಂದು ಉತ್ತರವಾಕ್ಯದಲ್ಲಿ ವಿವರಿಸಲಾಗಿದೆ. 'ಹೃದಬ್ಜಗಃ' ಎಂಬುದಕ್ಕೆ 'ಸರ್ವಾಶ್ರಯಃ ಅಕ್ಷರಃ ಸನ್' ಎಂಬ ಪದಗಳನ್ನು ಅನ್ವಯಿಸಿ ಕೊಂಡಾಗ, ಈ ಅಭಿಪ್ರಾಯವು ಸ್ಪಷ್ಟವಾಗುತ್ತದೆಂದು ತಿಳಿಯಬೇಕು.

सर्वाश्रयो हृदब्जगो हरिरित्युक्तौ च 'तस्यान्ते' इति वाक्ये सुषिरे सर्वाधारत्वोक्तिरपि मन्दिरे मणिमालेतिवत् सुषिरस्थहर्यपेक्षया समाहिता ।

ಹೃತ್ಪದ್ಮಸ್ಥವಾದ ಆಕಾಶದಲ್ಲಿ ವಿಷ್ಣುವಿದ್ದಾನೆಂದು ಹೇಳಿ, ಅವನೇ ಸಕಲಕ್ಕೂ ಆಶ್ರಯನಾಗಿದ್ದಾನೆಂದು ಅಂಗೀಕಾರ ಮಾಡಿದರೆ 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬ ಸುಷಿರ ಶ್ರುತಿಯಲ್ಲಿ ಆಕಾಶವೇ ಸರ್ವಾಶ್ರಯ ಎಂದು ಹೇಳಿದ್ದರ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಮನೆಯಲ್ಲಿ ರತ್ನದ ಮಾಲೆಯಿದೆ ಎಂದು ಹೇಳಿದಾಗ, ಮನೆಯಲ್ಲಿರುವ ರತ್ನದ ಪೆಟ್ಟಿಗೆ ಯಲ್ಲಿ ರತ್ನದ ಮಾಲೆಯಿದೆ ಎಂಬರ್ಥವನ್ನು ಹೇಗೆ ತಿಳಿಯುತ್ತೇವೋ, ಅದರಂತೆ ಆಕಾಶವು ಸರ್ವಾಶ್ರಯ ವಾಗಿದೆ ಎಂಬ ಶ್ರುತಿಗೆ ಸುಷಿರದಲ್ಲಿರುವ ಪರಮಾತ್ಮನು ಸರ್ವಾಶ್ರಯನಾಗಿದ್ದಾನೆಂಬ ಅರ್ಥವನ್ನು ತಿಳಿಯಬೇಕು.

अल्पस्थानत्वं च खवत् सर्वग इत्यत्र समाहितमिति भावः ।

ಪರಿಪೂರ್ಣಚಂದ್ರಿಕಾ

ಸರ್ವಗತನಾದ ಪರಮಾತ್ಮನು ಅತ್ಯಂತ ಅಲ್ಪಸ್ಥಾನವೆನಿಸಿದ ಹೃತ್ಪದ್ಮದಲ್ಲಿ ಹೇಗೆ ಇರುತ್ತಾನೆ ಎಂದರೆ ಸರ್ವಗತನಾದ ಪರಮಾತ್ಮನು ಆಕಾಶದಂತೆ ಅಲ್ಪಸ್ಥಾನದಲ್ಲಿಯೂ ಸಹ ಇರಬಲ್ಲನು ಎಂದು ಈ ಸಮಾಧಾನವನ್ನು ಹಿಂದೆಯೇ ಹೇಳಿದ್ದಾಗಿದೆ.

ननु व्योम्नेंऽशतोऽल्पस्थानमित्युपपत्तावपि विष्णोरंशतोऽपि व्याप्तत्वान्न खवदुपपत्तिरित्यस्याप्युत्तरम् - **पूर्णगुणो हृदब्जग इति** । सर्वगतत्वादिगुणपूर्णत्वेनैव हृदब्जगतत्वस्य 'एष आत्माऽन्तर्हृदये ज्यायान्' इत्यादिश्रुतिप्रसिद्धेरिति हेरर्थः । अचिन्त्यशक्त्योपपत्तेरिति भावः ।

ಆಕಾಶವು ಅಂಶವುಳ್ಳದಾದ್ದರಿಂದ ಅಲ್ಪಸ್ಥಾನದಲ್ಲಿರಬಹುದು. ಆದರೆ ವಿಷ್ಣು ಅಂಶದಿಂದಲೂ ವ್ಯಾಪ್ತನಾದ್ದರಿಂದ ಆಕಾಶದಂತೆ ಅಲ್ಪಸ್ಥಾನದಲ್ಲಿರಲು ಸಾಧ್ಯವಿಲ್ಲವಲ್ಲವೇ? ಎಂಬ ಪ್ರಶ್ನೆ ಸರಿಯಲ್ಲ. ಈ ಪ್ರಶ್ನೆಗೂ ಸಹ 'ಪೂರ್ಣಗುಣಃ ಹೃದಬ್ಜಗಃ' ಎಂಬುದರಿಂದಲೇ ಉತ್ತರಿಸಿದ್ದಾರೆ. ಸರ್ವಗತತ್ವಾದಿ-ಗುಣಪೂರ್ಣನಾಗಿಯೇ ಪರಮಾತ್ಮನು ಹೃತ್ಪದ್ಮಸ್ಥನಾಗಿದ್ದಾನೆಂದು 'ಏಷ ಆತ್ಮಾಽಂತರ್ಹೃದಯೇ ಜ್ಯಾಯಾನ್' ಇತ್ಯಾದಿ ಶ್ರುತಿಯಿಂದ ಪ್ರಸಿದ್ಧವಾಗಿದೆ. ಈ ಪ್ರಸಿದ್ಧಿಯನ್ನು 'ಹಿ' ಶಬ್ದವು ತಿಳಿಸುತ್ತಿದೆ. ಸರ್ವತ್ರವ್ಯಾಪ್ತನಾದ ಪರಮಾತ್ಮನಿಗೆ ಅಲ್ಪಸ್ಥಾನಸ್ಥಿತತ್ವವು ಅಚಿಂತ್ಯಶಕ್ತಿಯಿಂದ ಉಪಪನ್ನವಾಗುತ್ತದೆಂದು ಅಭಿಪ್ರಾಯ.

जनार्दन इति संसारार्दको हृदब्जग इत्युक्त्या 'परंज्योतिरुपसम्पद्य स्वेन रूपेणाभिनिष्पद्यते एष आत्मा' इत्येतच्छब्देन जीवं परामृश्य हृत्पद्मस्थतया प्रागुक्तात्मत्वविधानात् सर्वाश्रयो हृदब्जगो जीव इति निरस्तम् । ज्योतिःपदोक्तस्य मोचकस्यैव एष इति परामृश्यात्मत्वोक्तेः जीवपरामर्शाभावादिति । अजत्ववाचिना जनेत्यंशेन देहनाशेऽप्यनश्यन्निति प्रागुक्तो वाक्यान्वय उपपादितः ।

'ಜನಾರ್ದನಃ' ಎಂದರೆ 'ಸಂಸಾರವನ್ನು ನಾಶಮಾಡುವವನು' ಎಂದರ್ಥ. ಇಂತಹವನು ಹೃತ್ಪದ್ಮಸ್ಥನಾಗಿದ್ದಾನೆಂದು ಹೇಳಿದ್ದರಿಂದ, 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮಾ' ಎಂದು 'ಏತತ್' ಶಬ್ದದಿಂದ ಜೀವನನ್ನು ಪರಾಮರ್ಶ ಮಾಡಿ ಅವನು ಹೃತ್ಪದ್ಮಸ್ಥನಾದ ಆತ್ಮನಾಗಿದ್ದಾನೆಂದು ಹೇಳಿದ್ದರಿಂದ, ಸರ್ವಾಶ್ರಯನು, ಹೃತ್ಪದ್ಮಸ್ಥನೂ ಆದವನು ಜೀವನೇ ಆಗಿದ್ದಾನೆಂಬ ಆಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ 'ಏತತ್' ಶಬ್ದದಿಂದ 'ಜ್ಯೋತಿಃ' ಪದದಿಂದ ಪ್ರತಿಪಾದ್ಯನಾದ ಮೋಚಕನಾದ ಪರಮಾತ್ಮನೇ ಪರಾಮರ್ಶಿಸಲು ಯೋಗ್ಯನಾಗಿದ್ದಾನೆ. ಅವನನ್ನೇ ಹೃತ್ಪದ್ಮಸ್ಥನಾದ ಆತ್ಮನೆಂದು ಶ್ರುತಿಯು ಹೇಳುತ್ತಿದೆ. ಹೀಗಿರುವಾಗ ಜೀವನ ಪರಾಮರ್ಶವೂ ಯುಕ್ತವಾಗುವುದಿಲ್ಲ. ಅಜತ್ವವನ್ನು ತಿಳಿಸುವ 'ಜನ' ಎಂಬ ಅಂಶದಿಂದ ದೇಹನಾಶವಾದರೂ ನಾಶವಿಲ್ಲ ಎಂಬ ಹಿಂದೆ ಹೇಳಿದ ಪ್ರಮೇಯವನ್ನು ಉಪಪಾದಿಸಿದಂತಾಯಿತು.

ದಹರಾಧಿಕರಣ (೧-೩-೫)

हृदब्जगो हरिः पूर्णगुण इत्युक्त्यैव 'तदेतत्सत्यं ब्रह्मपुरम्' इति देहवाचिपदप्रयोगादात्मा न विष्णुरिति प्रत्युक्तम् । ब्रह्मैव पूर्णत्वात्पुरमित्युपपत्तेः । एक इत्यनेककोटिकपूर्वपक्षनिरासायेति ।।५।।

'ಹೃದಬ್ಜಗಃ ಹರಿಃ ಪೂರ್ಣಗುಣಃ' ಎಂದು ಹೇಳಿದ್ದರಿಂದಲೇ 'ತದೇತತ್ ಸತ್ಯಂ ಬ್ರಹ್ಮಪುರಮ್' ಎಂಬಲ್ಲಿರುವ ದೇಹವಾಚಕವಾದ 'ಪುರ' ಶಬ್ದದ ಪ್ರಯೋಗದಿಂದ ಆತ್ಮನು ವಿಷ್ಣುವಲ್ಲವೆಂಬ ಶಂಕೆಯನ್ನು ನಿರಾಕರಿಸಿದಂತಾಗುತ್ತದೆ. ಏಕೆಂದರೆ 'ಪುರ' ಶಬ್ದಕ್ಕೆ 'ಪೂರ್ಣ' ಎಂದರ್ಥ. ಇಂತಹ ಪೂರ್ಣನಾದ ಬ್ರಹ್ಮನನ್ನು ಉದ್ದೇಶಿಸಿಯೇ 'ಪುರಮ್' ಎಂದು ಶ್ರುತಿಯು ಹೇಳುತ್ತಿದೆ. 'ಏಕ' ಎಂಬುದರಿಂದ ಅನೇಕ ವಿಧವಾದ ಪೂರ್ವಪಕ್ಷಗಳನ್ನು ನಿರಾಕರಿಸಿದಂತಾಯಿತು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ದಹರಾಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।
।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## दहराधिकरणम् (१।३।५)

।। ॐ दहर उत्तरेभ्यः ॐ ।। १-३-१४ ।।

अत्र हृत्पद्मस्थत्वलिङ्गं समन्वीयते । तत्त्वित्यस्ति । द्युभ्वाद्यायतनमिति मण्डूकप्लुत्याऽन्वेति । पूर्वस्मात् सदिति च ।

ಈ ಅಧಿಕರಣದಲ್ಲಿ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. 'ತತ್' ಎಂಬ ಪದಗಳು ಈ ಅಧಿಕರಣದಲ್ಲಿಯೂ ಸಹ ಅನುವೃತ್ತವಾಗುತ್ತವೆ.

'ದುಭ್ವಾದ್ಯಾಯತನಮ್' ಎಂಬುದು ಮಂಡೂಕಪ್ಲುತಿಯಿಂದ ಹಿಂದಿನ ಅಧಿಕರಣದಲ್ಲಿ ಅನ್ವಯವಾಗದಿದ್ದರೂ ಇಲ್ಲಿ ಅನ್ವಿತವಾಗುತ್ತದೆ. ಹಿಂದಿನ ಅಧಿಕರಣದಿಂದ 'ಸತ್' ಎಂಬ ಪದವು ಅನುವೃತ್ತವಾಗುತ್ತದೆ.

''उभे अस्मिन् द्यावापृथिवी'' इत्यादिनोक्तं द्युभ्वाद्यायतनं सत् दहरे ''दहरं पुण्डरीकं वेश्म'' इत्याद्युक्तदहरे हृत्पद्मे तत्तु ब्रह्मैव न जीवादिः । उत्तरेभ्यः ''य आत्मा अपहतपाप्मा'' इत्याद्युत्तरवाक्यस्थापहतपाप्मत्वादिधर्मेभ्य इत्यर्थः ।।

ಸೂತ್ರಾರ್ಥ ಹೀಗಿದೆ - ದ್ಯುಭ್ವಾದ್ಯಾಯತನಮ್ ಸತ್ = 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನನು, ದಹರೇ = 'ದಹರಂ ಪುಂಡರೀಕಂ ವೇಶ್ಮ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಸಣ್ಣದಾದ ಹೃತ್ಪದ್ಮದಲ್ಲಿರುವವನು 'ತತ್' ಬ್ರಹ್ಮನೇ ಆಗಿದ್ದಾನೆ ಹೊರತು, ಜೀವಾದಿಗಳಲ್ಲ. ಏಕೆಂದರೆ ಉತ್ತರೇಭ್ಯಃ = ''ಯ ಆತ್ಮಾ ಅಪಹತಪಾಪ್ಮಾ'' ಇತ್ಯಾದಿ ಮುಂದಿನ ವಾಕ್ಯದಲ್ಲಿ ಹೇಳಿರುವ ಅಪಹತಪಾಪ್ಮತ್ವ ಮೊದಲಾದ ಧರ್ಮಗಳಿರುವುದರಿಂದ ಎಂದು.

इतश्चैवमित्याह -

**।। ॐ गतिशब्दाभ्यां तथा हि दृष्टं लिङ्गं च ॐ ।।**

दहरे तत्त्वित्यस्ति । गतिः सुप्तप्राप्तिः । शब्दो ब्रह्मशब्दः ।

ಮತ್ತೊಂದು ಕಾರಣದಿಂದಲೂ ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆಂದು ಹೇಳುತ್ತಿದ್ದಾರೆ 'ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ' ಈ ಸೂತ್ರದಲ್ಲಿಯೂ 'ದಹರೇ' ಮತ್ತು 'ತತ್' ಎಂಬ ಪದಗಳು ಅನುವೃತ್ತವಾಗುತ್ತದೆ. 'ಗತಿ' ಎಂದರೆ ಸುಪ್ತಜೀವನದಿಂದ ಹೊಂದುವಿಕೆ ಎಂದರ್ಥ. 'ಶಬ್ದ' ಎಂದರೆ ಬ್ರಹ್ಮಶಬ್ದ ಎಂದರ್ಥ.

ताभ्यां सुप्तगम्यत्वलिङ्गब्रह्मशब्दाभ्यामुक्तरूपदहरस्थं ब्रह्मैवेत्यर्थः । ''अहरहर्गच्छन्त्य एतं ब्रह्मलोकं न विन्दन्ति'' इति हृत्पद्मस्थस्य सुप्तप्रजाप्राप्यत्वोक्त्या ब्रह्मणो लोकमिति ब्रह्मलोकत्वोक्त्या च तत्स्थस्य सुप्तप्राप्यत्वं ब्रह्मशब्दवाच्यत्वं च सिद्धमिति भावः ।

ಸೂತ್ರಾರ್ಥ ಹೀಗಿದೆ - ಗತಿ ಶಬ್ದಾಭ್ಯಾಂ = ಸುಪ್ತಗಮ್ಯತ್ವವೆಂಬ ಲಿಂಗ ಹಾಗೂ ಬ್ರಹ್ಮಶಬ್ದ ಇವುಗಳಿಂದ ಹಿಂದೆ ಹೇಳಿದ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಆಗಿದ್ದಾನೆ ಎಂದು 'ಗತಿಶಬ್ದಾಭ್ಯಾಂ' ಎಂಬ ಸೂತ್ರಾಂಶದ ಅರ್ಥ. ಏಕೆಂದರೆ 'ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಂ

ನ ವಿಂದಂತಿ' ಸುಪ್ತರಾದ ಪ್ರಜೆಗಳು ಪ್ರತಿನಿತ್ಯ ಬ್ರಹ್ಮನನ್ನು ಹೊಂದುವವರಾದರೂ ಬ್ರಹ್ಮನ ಸ್ಥಳವೆನಿಸಿದ ಹೃತ್ಪದ್ಮವನ್ನಾಗಲೀ, ಬ್ರಹ್ಮನನ್ನಾಗಲೀ ತಿಳಿಯುವುದಿಲ್ಲ ಎಂದು ಶ್ರುತಿಯು ಹೃತ್ಪದ್ಮಸ್ಥನಿಗೆ ಸುಪ್ತಜೀವಪ್ರಾಪ್ಯತ್ವವನ್ನು ಹೇಳುತ್ತಿದೆ. ಮತ್ತು 'ಬ್ರಹ್ಮಣಃ ಲೋಕಮ್' ಎಂಬುದಾಗಿ, ಹೃತ್ಪದ್ಮವನ್ನು ಬ್ರಹ್ಮಲೋಕವೆಂದು ಹೇಳುತ್ತಿದೆ. ಈ ಕಾರಣದಿಂದ ಹೃತ್ಪದ್ಮಸ್ಥನಲ್ಲಿ ಸುಪ್ತಪ್ರಾಪ್ಯತ್ವ ಹಾಗೂ ಬ್ರಹ್ಮಶಬ್ದ ವಾಚ್ಯತ್ವಗಳು ಸಿದ್ಧವಾಗುತ್ತವೆಂದು ಅಭಿಪ್ರಾಯ.

**इतश्चैवमित्याह तथाहीत्यादिना । यथा गतिशब्दौ हृत्पद्मस्थगौ तथा लिङ्गमरण्याख्यसुधासमुद्राश्रयलोकवत्त्वरूपं लिङ्गं च हृत्पद्मस्थगं दृष्टं यतोऽतोऽपि दहरस्थं ब्रह्मेत्यर्थः । एतल्लोकवत्त्वं च विष्णौ प्रसिद्धमिति हेरर्थः ।**

'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರಭಾಗದ ಅರ್ಥ ಹೀಗಿದೆ - ಮತ್ತೊಂದು ಕಾರಣದಿಂದಲೂ ಹೃತ್ಪದ್ಮಸ್ಥನು ಬ್ರಹ್ಮನೇ ಆಗಿದ್ದಾನೆಂದು ಹೇಳಲಾಗಿದೆ. ಗತಿ ಮತ್ತು ಶಬ್ದಗಳು ಹೃತ್ಪದ್ಮಸ್ಥನಿಗೆ ಹೇಗೆ ಸಂಬಂಧಪಟ್ಟಿವೆಯೋ, ತಥಾ = ಅದರಂತೆ ಲಿಂಗಮ್ = 'ಅರ' ಮತ್ತು 'ಣ್ಯ' ಎಂಬ ಸುಧಾಸಮುದ್ರಾಶ್ರಯಲೋಕವತ್ವ ಎಂಬ ಲಿಂಗವು ಹೃತ್ಪದ್ಮಸ್ಥನಲ್ಲಿದೆ ಎಂದು, ದೃಷ್ಟಮ್ = ಶ್ರುತಿಯಿಂದ ಸಿದ್ಧವಾಗಿದೆ. ಆದ್ದರಿಂದಲೂ ದಹರಾಕಾಶಸ್ಥನು ಬ್ರಹ್ಮನೇ ಆಗಿದ್ದಾನೆಂದರ್ಥ. ಇಂತಹ ಲೋಕವನ್ನು ಹೊಂದಿರುವುದು ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆಯೆಂದು 'ಹಿ' ಶಬ್ದವು ಹೇಳುತ್ತಿದೆ.

**''अरश्च ह वै ण्यश्चार्णवौ ब्रह्मलोके'' इत्युत्तरवाक्येऽरण्याख्यसुधासमुद्राश्रये विष्णुलोके प्रयुक्तस्य ब्रह्मलोकशब्दस्य हृत्पद्मे ''एतं ब्रह्मलोकम्'' इति प्रयोगात् तत्स्थस्य तल्लोकवत्त्वमिति भावः ।**

'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' 'ಅರ' ಮತ್ತು 'ಣ್ಯ' ಎಂಬ ಹೆಸರಿನ ಎರಡು ಸುಧಾಸಮುದ್ರಗಳು ವಿಷ್ಣುಲೋಕವಾದ ಶ್ವೇತದ್ವೀಪದಲ್ಲಿವೆ ಎಂಬುದಾಗಿ ಮುಂದಿನವಾಕ್ಯದಲ್ಲಿ 'ಅರ' ಮತ್ತು 'ಣ್ಯ' ಗಳೆಂಬ ಸುಧಾಸಮುದ್ರಗಳಿಗೆ ಆಶ್ರಯವಾದ ವಿಷ್ಣುಲೋಕವನ್ನು ಉದ್ದೇಶಿಸಿ ಪ್ರಯೋಗ ಮಾಡಿರುವ ಬ್ರಹ್ಮಲೋಕ ಶಬ್ದಕ್ಕೆ 'ಏತಂ ಬ್ರಹ್ಮಲೋಕಮ್' ಎಂಬುದಾಗಿ ಹೃತ್ಪದ್ಮದಲ್ಲಿ ಪ್ರಯೋಗ ಮಾಡಿದ್ದರಿಂದ, ಹೃತ್ಪದ್ಮಸ್ಥನು 'ಅರ' ಮತ್ತು 'ಣ್ಯ' ಎಂಬ ಸುಧಾಸಮುದ್ರಾಶ್ರಯವಾದ ಲೋಕವುಳ್ಳವನೆಂದು ಸಿದ್ಧವಾಗುತ್ತದೆ.

**अस्य लिङ्गस्य हृत्पद्मस्थगत्वं न स्पष्टमिति पृथगुक्तिः । अत एवास्य तत्स्थतां वक्तुं तथेत्युक्तिः ।**

ಈ ಲಿಂಗವು ಹೃತ್ಪದ್ಮಸ್ಥನಿಗೆ ಸಂಬಂಧಿಸಿವೆಯೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದಲೇ ಪ್ರತ್ಯೇಕವಾಗಿ ಗತಿಶಬ್ದಗಳಿಗಿಂತ ಲಿಂಗಶಬ್ದವನ್ನು ಹೇಳಿರುತ್ತಾರೆ. ಆದ್ದರಿಂದಲೇ ಈ ಲಿಂಗವು ಹೃತ್ಪದ್ಮಸ್ಥನಲ್ಲಿದೆ ಎಂದು ಹೇಳಲು 'ತಥಾ' ಎಂದು ಸೂತ್ರಕಾರರು ಹೇಳಿದ್ದಾರೆ.

यद्वा ब्रह्मलोकमिति हृत्पद्मस्य विष्णुलोकत्वोक्त्या तत्स्थो विष्णुरित्युक्तम् । ब्रह्मलोकपदस्य विष्णुलोकवाचित्वं कुत इत्यत इदमुच्यते । लिङ्गं सुधासमुद्राश्रयलोकवत्त्वरूपलिङ्गं च दृष्टं तदाश्रयलोकवत्त्वं च विष्णुलोकलिङ्गं प्रसिद्धमिति हेरर्थः । हृत्पद्मे प्रयुक्तब्रह्मलोकपदमुत्तरत्र प्रयुज्य ''अरश्च ह वै ण्यश्चार्णवौ ब्रह्मलोके'' इति तदाश्रयलोकत्वोक्तेर्न सत्यलोको ब्रह्मलोकपदार्थ इति भावः । अत्र पक्षे ब्रह्मशब्दरूपहेतुसाधकत्वादस्य लिङ्गस्य पृथगुक्तिः ।।

ಅಥವಾ 'ಬ್ರಹ್ಮಲೋಕಮ್' ಎಂಬಲ್ಲಿ ಹೃತ್ಪದ್ಮವನ್ನೇ ವಿಷ್ಣುಲೋಕವೆಂದೇ ಹೇಳಲಾಗಿದೆ. ಹೃತ್ಪದ್ಮದಲ್ಲಿರುವವನು ವಿಷ್ಣುವಾಗಿದ್ದಾನೆಂದೂ ಕೂಡ ಹೇಳಲಾಗಿದೆ. ಆದರೆ ಬ್ರಹ್ಮಲೋಕ ಪದವು ವಿಷ್ಣುಲೋಕವನ್ನು ಹೇಳುತ್ತದೆಂಬ ವಿಷಯದಲ್ಲಿ ಏನು ಪ್ರಮಾಣ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಈ ಲಿಂಗವನ್ನು ಹೇಳಿದ್ದಾರೆ. 'ಲಿಂಗಮ್' = ಸುಧಾಸಮುದ್ರಾಶ್ರಯಲೋಕವತ್ತ್ವ ಎಂಬ ಲಿಂಗವು, ದೃಷ್ಟಂ ಚ = ಸುಧಾಸಮುದ್ರಾಶ್ರಯಲೋಕವತ್ತ್ವವು ವಿಷ್ಣುಲೋಕದ ಧರ್ಮವೆಂದು ಪ್ರಸಿದ್ಧವಾಗಿದೆ. ಇದನ್ನು 'ಹಿ' ಶಬ್ದವು ಹೇಳುತ್ತಿದೆ. ಹೃತ್ಪದ್ಮದಲ್ಲಿ ಪ್ರಯೋಗ ಮಾಡುತ್ತಿರುವ ಬ್ರಹ್ಮಲೋಕಪದವನ್ನೇ ಮುಂದೆ ಪ್ರಯೋಗಿಸಿ 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂಬುದಾಗಿ ಬ್ರಹ್ಮಲೋಕವನ್ನು ಸುಧಾಸಮುದ್ರಾಶ್ರಯಲೋಕವೆಂದು ಹೇಳಿದ್ದರಿಂದ, ಸತ್ಯಲೋಕವನ್ನೇ ಬ್ರಹ್ಮಲೋಕವೆಂದು ತಿಳಿಯಬಾರದೆಂದು ಸ್ಪಷ್ಟವಾಗುತ್ತದೆ. ಈ ಪಕ್ಷದಲ್ಲಿ ಬ್ರಹ್ಮಶಬ್ದವೆಂಬ ಹೇತುವಿಗೆ ಸಾಧಕವಾದ್ದರಿಂದ, ಅಂದರೆ ಬ್ರಹ್ಮಶಬ್ದವೆಂಬ ಹೇತು ವಿಷ್ಣುಪರವಾಗಿದೆಯೆಂದು ಸಾಧನೆ ಮಾಡಲು, 'ಸುಧಾಸಮುದ್ರಾಶ್ರಯಲೋಕವತ್ತ್ವ' ಎಂಬ ಲಿಂಗವನ್ನು ಹೇಳಿದ್ದರಿಂದ, ಈ ಲಿಂಗವು ನೇರವಾಗಿ ವಿಷ್ಣು ಹೃತ್ಪದ್ಮಸ್ಥನಾಗಿದ್ದಾನೆಂದು ಸಾಧನೆ ಮಾಡುವುದಿಲ್ಲ. ಆದ್ದರಿಂದಲೇ ಇದನ್ನು ಪ್ರತ್ಯೇಕವಾಗಿ ಹೇಳಿರುತ್ತಾರೆ.

इतश्चैवमित्याह -

**।। ॐ धृतेश्च महिम्नोऽस्यास्मिन्नुपलब्धेः ॐ ।।१-३-१६।।**

धृतेर्धारणाच्च ''य आत्मा स सेतर्विधुतिः'' इति सर्वधारकत्वलिङ्गश्रवणाच्च दहरे ब्रह्मैव । एतल्लिङ्गं हृत्पद्मस्थगमिति । कुतः ? अस्य हृत्पद्मस्थस्य महिम्नोऽपहत-पाप्मत्वादेरस्मिन् वाक्ये उपलब्धेरित्येकोऽर्थः ।

ಮತ್ತೊಂದು ಕಾರಣದಿಂದಲೂ ಹೃತ್ಪದ್ಮಸ್ಥನು ಬ್ರಹ್ಮನೇ ಆಗಿದ್ದಾನೆಂದು ಸಮರ್ಥಿಸುತ್ತಿದ್ದಾರೆ 'ಓಂ ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ಓಂ' ಎಂಬುದಾಗಿ. ಸೂತ್ರಾರ್ಥ ಹೀಗಿದೆ - 'ಧೃತೇಃ' =

ಧಾರಣೆ ಮಾಡಿದ್ದರಿಂದಲೂ, 'ಯ ಆತ್ಮಾ ಸ ಸೇತುರ್ವಿಧೃತಿಃ' 'ಹೃತ್ಪದ್ಮಸ್ಥನಾದ ಆತ್ಮನೇ ಸಕಲ ಲೋಕಗಳಿಗೆ ಆಶ್ರಯನು' ಎಂಬುದಾಗಿ 'ಸಕಲಧಾರಕತ್ವ' ಎಂಬ ಲಿಂಗವು ಶ್ರುತವಾಗಿದೆ. ಈ ಕಾರಣದಿಂದಲೂ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಆಗಿರುತ್ತಾನೆ. ಈ ಲಿಂಗವು ಹೃತ್ಪದ್ಮಸ್ಥನಲ್ಲಿದೆಯೆನ್ನಲು ಏನು ಪ್ರಮಾಣ? ಎಂದರೆ, ಅಸ್ಯ = ಹೃತ್ಪದ್ಮಸ್ಥನ, ಮಹಿಮ್ನಃ = ಅಪಹತ ಪಾಪ್ಮತ್ವವೇ ಮೊದಲಾದ ಮಹಿಮೆಗಳು, ಅಸ್ಮಿನ್ = ಈ ವಾಕ್ಯದಲ್ಲಿ ಉಪಲಬ್ಧವಾಗಿರುವುದರಿಂದ, ಹೃತ್ಪದ್ಮಸ್ಥನು ಬ್ರಹ್ಮನೇ ಆಗಿರುತ್ತಾನೆ. ಇದು ಈ ಸೂತ್ರದ ಮೊದಲನೆಯ ಅರ್ಥ.

**''य आत्मा'' इति प्रागुक्तहृत्पद्मस्थात्मपरामर्शेन ''स सेतुः'' इत्याद्युक्त्वा सर्वे पाप्मनोऽतो निवर्तन्ते इत्याद्युक्तेरिति भावः ।**

'ಯ ಆತ್ಮಾ' ಎಂಬುದಾಗಿ ಹಿಂದೆ ಹೇಳಿದ ಹೃತ್ಪದ್ಮಸ್ಥನಾದ ಆತ್ಮನನ್ನು ಪರಾಮರ್ಶ ಮಾಡಿ, 'ಸ ಸೇತುಃ' ಇತ್ಯಾದಿಯಾಗಿ ಹೇಳಿ 'ಸರ್ವೇ ಪಾಪ್ಮನೋಽತೋ ನಿವರ್ತಂತೇ' ಇತ್ಯಾದಿಯಾಗಿ ಹೇಳಿದ್ದರಿಂದ 'ಯ ಆತ್ಮಾ' ಎಂಬುದಾಗಿ ಮೊದಲು ಹೇಳಿ, ಹೃತ್ಪದ್ಮಸ್ಥನಾದ ಆತ್ಮನನ್ನು ಪರಾಮರ್ಶ ಮಾಡುವ ಮೂಲಕ 'ಸ ಸೇತುಃ' ಇತ್ಯಾದಿಯಾಗಿ ಹೇಳಿ 'ಸರ್ವೇ ಪಾಪ್ಮನೋಽತೋ ನಿವರ್ತಂತೇ' ಎಂದು ಹೇಳಿದ್ದರಿಂದ ಎಂದು ಅಭಿಪ್ರಾಯ.

**अन्यस्तु धृतिपदेन धृतियुक्तं वाक्यं गृह्यते । अस्मिन्निति च तन्त्रम् । चशब्द उपलब्धेश्चेत्यन्वेति । धृतेर्धृतिप्रतिपादकादेषसेतुर्विधारण इति वाक्यात् वाजसनेयसमाख्यानाद्दहरे ब्रह्मैवेति यावत् । तत्रापि ब्रह्मेति कुतः ? अस्य विष्णोर्महिम्नः सर्वाधिपतित्वादेरस्मिन् हृत्पद्मस्थे अस्मिन् वाजसनेये उपलब्धेश्चेत्यर्थः ।**

ಸೂತ್ರದ ಮತ್ತೊಂದು ಅರ್ಥ ಹೀಗಿದೆ - ಧೃತಿಪದದಿಂದ ಧೃತಿಯನ್ನು ಹೇಳುವ ವಾಕ್ಯವನ್ನು ತೆಗೆದುಕೊಳ್ಳಬೇಕು. 'ಅಸ್ಮಿನ್' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. 'ಧೃತೇಶ್ಚ' ಎಂಬಲ್ಲಿರುವ 'ಚ' ಶಬ್ದವು 'ಉಪಲಬ್ಧೇಃ' ಎಂಬಲ್ಲಿ ಅನ್ವಯವನ್ನು ಹೊಂದುತ್ತದೆ.

ಧೃತೇಃ = ಧೃತಿಯನ್ನು ಪ್ರತಿಪಾದನೆ ಮಾಡುವ 'ಏಷ ಸೇತುರ್ವಿಧಾರಣಃ' ಎಂಬ ವಾಕ್ಯದಿಂದ ಬೃಹದಾರಣ್ಯಕದ ಸಮಾಖ್ಯಾನವಿರುವುದರಿಂದ, ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಆಗಿದ್ದಾನೆ. ಬೃಹದಾರಣ್ಯಕದಲ್ಲಿ ಬ್ರಹ್ಮನೇ ಪ್ರತಿಪಾದಿತನಾಗಿದ್ದಾನೆಂಬುದು ಹೇಗೆ ಸಿದ್ಧವಾಗುತ್ತದೆ? ಎಂದರೆ, ಅಸ್ಯ = ವಿಷ್ಣುವಿನ, ಮಹಿಮ್ನಃ = ಸರ್ವಾಧಿಪತಿತ್ವ ಮೊದಲಾದ ಮಹಿಮೆಯು, ಅಸ್ಮಿನ್ = ಹೃತ್ಪದ್ಮಸ್ಥನಲ್ಲಿ, ಅಸ್ಮಿನ್ = ಈ ಬೃಹದಾರಣ್ಯಕೋಪನಿಷತ್ತಿನಲ್ಲಿ, ಉಪಲಬ್ಧೇಶ್ಚ = ಉಪಲಬ್ಧವಾಗಿರುವುದರಿಂದಲೂ ಕೂಡ ಎಂದು ಸೂತ್ರಾರ್ಥ.

''य एषोऽन्तर्हृदय आकाशस्तस्मिन् शेते सर्वस्य वशी'' इत्याद्युक्त्वा ''एष सर्वेश्वर एष भूतपालः'' इति विष्णुलिङ्गोक्त्या तस्य वैष्णवत्वं सिद्धमिति तत्समाख्यानाद्दहरे विष्णुरिति भावः ।

'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ' ಇತ್ಯಾದಿಯಾಗಿ ಮೊದಲು ಹೇಳಿ, 'ಏಷ ಸರ್ವೇಶ್ವರ ಏಷ ಭೂತಪಾಲಃ' ಎಂದು ಮುಂದೆ ವಿಷ್ಣುಲಿಂಗಗಳನ್ನು ಹೇಳಿದ್ದರಿಂದ ಬೃಹದಾರಣ್ಯಕೋಪನಿಷತ್ತಿನಲ್ಲಿ ಸರ್ವಾಶ್ರಯನೆಂದು ಹೇಳಲ್ಪಟ್ಟವನು ವಿಷ್ಣುವೇ ಆಗಿದ್ದಾನೆಂದು ಸಿದ್ಧವಾಗುತ್ತದೆ. ಆದ್ದರಿಂದ ಬೃಹದಾರಣ್ಯಕೋಪನಿಷತ್ತಿನ ಸಮಾಖ್ಯಾಪ್ರಮಾಣದಿಂದ ದಹರಾಕಾಶ-ದಲ್ಲಿರುವವನು ವಿಷ್ಣುವೆಂದು ಸಿದ್ಧವಾಗುತ್ತದೆ.

इतश्चैवमित्याह -

॥ ॐ प्रसिद्धेश्च ॐ ॥ १-३-१७

''दहरं विपाप्मम्'' इत्यादितैत्तिरीये विष्णोर्हृत्पद्मस्थत्वप्रसिद्धेश्च तत्समाख्यानाद्दहरे ब्रह्मैवेत्यर्थः ।

ಮತ್ತೊಂದು ಕಾರಣದಿಂದಲೂ ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆಂದು ಹೇಳುತ್ತಿದ್ದಾರೆ. ಸೂತ್ರಾರ್ಥ ಹೀಗಿದೆ - ಪ್ರಸಿದ್ಧೇಶ್ಚ = 'ದಹರಂ ವಿಪಾಪ್ಮಮ್' ಇತ್ಯಾದಿಯಾಗಿ ತೈತ್ತಿರೀಯೋಪ-ನಿಷತ್ತಿನಲ್ಲಿ ವಿಷ್ಣುವಿಗೆ ಹೃತ್ಪದ್ಮಸ್ಥತ್ವದ ಪ್ರಸಿದ್ಧಿವಿರುವುದರಿಂದಲೂ ತೈತ್ತಿರೀಯೋಪನಿಷತ್ತಿನ ಸಮಾಖ್ಯಾಪ್ರಮಾಣವಿರುವುದರಿಂದ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಆಗಿದ್ದಾನೆಂದು ಸೂತ್ರಾರ್ಥ.

उक्तमाक्षिप्याह -

॥ ॐ इतरपरामर्शात्स इति चेन्नासम्भवात् ॐ ॥१-३-१८॥

''परंज्योतिरुपसम्पद्य'' इति प्रकृतस्येतरस्य जीवस्य परामर्शात् ''एष आत्मा'' इत्येतच्छब्देन ''य आत्माऽपहतपाप्मा'' इत्यादिनोक्तहृत्पद्मस्थस्यात्मत्वविधानाद्दहरे स जीव इति चेन्न । असम्भवात् । अपहतपाप्मत्वादिधर्माणां हृत्पद्मस्थे श्रुतानां जीवे असम्भवात् ''एतदमृतमभयम्'' इत्युक्तामृतत्वादेश्च असम्भवादित्यर्थः ।

ಧಾರಣೆ ಮಾಡಿದ್ದರಿಂದಲೂ, 'ಯ ಆತ್ಮಾ ಸ ಸೇತುರ್ವಿಧೃತಿಃ' 'ಹೃತ್ಪದ್ಮಸ್ಥನಾದ ಆತ್ಮನೇ ಸಕಲ ಲೋಕಗಳಿಗೆ ಆಶ್ರಯನು' ಎಂಬುದಾಗಿ 'ಸಕಲಧಾರಕತ್ವ' ಎಂಬ ಲಿಂಗವು ಶ್ರುತವಾಗಿದೆ. ಈ ಕಾರಣದಿಂದಲೂ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಆಗಿರುತ್ತಾನೆ. ಈ ಲಿಂಗವು ಹೃತ್ಪದ್ಮಸ್ಥನಲ್ಲಿದೆಯೆನ್ನಲು ಏನು ಪ್ರಮಾಣ? ಎಂದರೆ, ಅಸ್ಯ = ಹೃತ್ಪದ್ಮಸ್ಥನ, ಮಹಿಮ್ನಃ = ಅಪಹತ ಪಾಪ್ಮತ್ವವೇ ಮೊದಲಾದ ಮಹಿಮೆಗಳು, ಅಸ್ಮಿನ್ = ಈ ವಾಕ್ಯದಲ್ಲಿ ಉಪಲಬ್ಧವಾಗಿರುವುದರಿಂದ, ಹೃತ್ಪದ್ಮಸ್ಥನು ಬ್ರಹ್ಮನೇ ಆಗಿರುತ್ತಾನೆ. ಇದು ಈ ಸೂತ್ರದ ಮೊದಲನೆಯ ಅರ್ಥ.

''य आत्मा'' इति प्रागुक्तहृत्पद्मस्थात्मपरामर्शेन ''स सेतुः'' इत्याद्युक्त्वा सर्वे पाप्मनोऽतो निवर्तन्ते इत्याद्युक्तेरिति भावः ।

'ಯ ಆತ್ಮಾ' ಎಂಬುದಾಗಿ ಹಿಂದೆ ಹೇಳಿದ ಹೃತ್ಪದ್ಮಸ್ಥನಾದ ಆತ್ಮನನ್ನು ಪರಾಮರ್ಶ ಮಾಡಿ, 'ಸ ಸೇತುಃ' ಇತ್ಯಾದಿಯಾಗಿ ಹೇಳಿ 'ಸರ್ವೇ ಪಾಪ್ಮನೋಽತೋ ನಿವರ್ತಂತೇ' ಇತ್ಯಾದಿಯಾಗಿ ಹೇಳಿದ್ದರಿಂದ 'ಯ ಆತ್ಮಾ' ಎಂಬುದಾಗಿ ಮೊದಲು ಹೇಳಿ, ಹೃತ್ಪದ್ಮಸ್ಥನಾದ ಆತ್ಮನನ್ನು ಪರಾಮರ್ಶ ಮಾಡುವ ಮೂಲಕ 'ಸ ಸೇತುಃ' ಇತ್ಯಾದಿಯಾಗಿ ಹೇಳಿ 'ಸರ್ವೇ ಪಾಪ್ಮನೋಽತೋ ನಿವರ್ತಂತೇ' ಎಂದು ಹೇಳಿದ್ದರಿಂದ ಎಂದು ಅಭಿಪ್ರಾಯ.

अन्यस्तु धृतिपदेन धृतियुक्तं वाक्यं गृह्यते । अस्मिन्निति च तन्त्रम् । चशब्द उपलब्धेश्चेत्यन्वेति । धृतेर्धृतिप्रतिपादकादेषसेतुर्विधारण इति वाक्यात् वाजसनेयसमाख्यानाद्दहरे ब्रह्मैवेति यावत् । तत्रापि ब्रह्मेति कुतः ? अस्य विष्णोर्महिम्नः सर्वाधिपतित्वादेरस्मिन् हृत्पद्मस्थे अस्मिन् वाजसनेये उपलब्धेश्चेत्यर्थः ।

ಸೂತ್ರದ ಮತ್ತೊಂದು ಅರ್ಥ ಹೀಗಿದೆ - ಧೃತಿಪದದಿಂದ ಧೃತಿಯನ್ನು ಹೇಳುವ ವಾಕ್ಯವನ್ನು ತೆಗೆದುಕೊಳ್ಳಬೇಕು. 'ಅಸ್ಮಿನ್' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. 'ಧೃತೇಶ್ಚ' ಎಂಬಲ್ಲಿರುವ 'ಚ' ಶಬ್ದವು 'ಉಪಲಬ್ಧೇಃ' ಎಂಬಲ್ಲಿ ಅನ್ವಯವನ್ನು ಹೊಂದುತ್ತದೆ.

ಧೃತೇಃ = ಧೃತಿಯನ್ನು ಪ್ರತಿಪಾದನೆ ಮಾಡುವ 'ಏಷ ಸೇತುರ್ವಿಧಾರಣಃ' ಎಂಬ ವಾಕ್ಯದಿಂದ ಬೃಹದಾರಣ್ಯಕದ ಸಮಾಖ್ಯಾನವಿರುವುದರಿಂದ, ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಆಗಿದ್ದಾನೆ. ಬೃಹದಾರಣ್ಯಕದಲ್ಲಿ ಬ್ರಹ್ಮನೇ ಪ್ರತಿಪಾದಿತನಾಗಿದ್ದಾನೆಂಬುದು ಹೇಗೆ ಸಿದ್ಧವಾಗುತ್ತದೆ? ಎಂದರೆ, ಅಸ್ಯ = ವಿಷ್ಣುವಿನ, ಮಹಿಮ್ನಃ = ಸರ್ವಾಧಿಪತಿತ್ವ ಮೊದಲಾದ ಮಹಿಮೆಯು, ಅಸ್ಮಿನ್ = ಹೃತ್ಪದ್ಮಸ್ಥನಲ್ಲಿ, ಅಸ್ಮಿನ್ = ಈ ಬೃಹದಾರಣ್ಯಕೋಪನಿಷತ್ತಿನಲ್ಲಿ, ಉಪಲಬ್ಧೇಶ್ಚ = ಉಪಲಬ್ಧವಾಗಿರುವುದರಿಂದಲೂ ಕೂಡ ಎಂದು ಸೂತ್ರಾರ್ಥ.

ಪರಿಪೂರ್ಣಚಂದ್ರಿಕಾ

''य एषोऽन्तर्हृदय आकाशस्तस्मिन् शेते सर्वस्य वशी'' इत्याद्युक्त्वा ''एष सर्वेश्वर एष भूतपालः'' इति विष्णुलिङ्गोक्त्या तस्य वैष्णवत्वं सिद्धमिति तत्समाख्यानाद्दहरे विष्णुरिति भावः ।

'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ' ಇತ್ಯಾದಿಯಾಗಿ ಮೊದಲು ಹೇಳಿ, 'ಏಷ ಸರ್ವೇಶ್ವರ ಏಷ ಭೂತಪಾಲಃ' ಎಂದು ಮುಂದೆ ವಿಷ್ಣುಲಿಂಗಗಳನ್ನು ಹೇಳಿದ್ದರಿಂದ ಬೃಹದಾರಣ್ಯಕೋಪನಿಷತ್ತಿನಲ್ಲಿ ಸರ್ವಾಶ್ರಯನೆಂದು ಹೇಳಲ್ಪಟ್ಟವನು ವಿಷ್ಣುವೇ ಆಗಿದ್ದಾನೆಂದು ಸಿದ್ಧವಾಗುತ್ತದೆ. ಆದ್ದರಿಂದ ಬೃಹದಾರಣ್ಯಕೋಪನಿಷತ್ತಿನ ಸಮಾಖ್ಯಾಪ್ರಮಾಣದಿಂದ ದಹರಾಕಾಶ-ದಲ್ಲಿರುವವನು ವಿಷ್ಣುವೆಂದು ಸಿದ್ಧವಾಗುತ್ತದೆ.

इतश्चैवमित्याह -

**।। ॐ प्रसिद्धेश्च ॐ ।। १-३-१७**

''दहरं विपाप्मम्'' इत्यादितैत्तिरीये विष्णोर्हृत्पद्मस्थत्वप्रसिद्धेश्च तत्समाख्यानाद्दहरे ब्रह्मैवेत्यर्थः ।

ಮತ್ತೊಂದು ಕಾರಣದಿಂದಲೂ ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆಂದು ಹೇಳುತ್ತಿದ್ದಾರೆ. ಸೂತ್ರಾರ್ಥ ಹೀಗಿದೆ - ಪ್ರಸಿದ್ಧೇಶ್ಚ = 'ದಹರಂ ವಿಪಾಪ್ಮಮ್' ಇತ್ಯಾದಿಯಾಗಿ ತೈತ್ತಿರೀಯೋಪ-ನಿಷತ್ತಿನಲ್ಲಿ ವಿಷ್ಣುವಿಗೆ ಹೃತ್ಪದ್ಮಸ್ಥತ್ವದ ಪ್ರಸಿದ್ಧಿವಿರುವುದರಿಂದಲೂ ತೈತ್ತಿರೀಯೋಪನಿಷತ್ತಿನ ಸಮಾಖ್ಯಾಪ್ರಮಾಣವಿರುವುದರಿಂದ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಆಗಿದ್ದಾನೆಂದು ಸೂತ್ರಾರ್ಥ.

उक्तमाक्षिप्याह -

**।। ॐ इतरपरामर्शात्स इति चेन्नासम्भवात् ॐ ।।१-३-१८।।**

''परंज्योतिरुपसम्पद्य'' इति प्रकृतस्येतरस्य जीवस्य परामर्शात् ''एष आत्मा'' इत्येतच्छब्देन ''य आत्माऽपहतपाप्मा'' इत्यादिनोक्तहृत्पद्मस्थस्यात्मत्वविधानाद्दहरे स जीव इति चेन्न । असम्भवात् । अपहतपाप्मत्वादिधर्माणां हृत्पद्मस्थे श्रुतानां जीवे असम्भवात् ''एतदमृतमभयम्'' इत्युक्तामृतत्वादेश्च असम्भवादित्यर्थः ।

ಹಿಂದೆ ಹೇಳಿದ್ದನ್ನೇ ಆಕ್ಷೇಪ ಮಾಡಿ ಮುಂದಿನ ಸೂತ್ರ ಹೊರಟಿದೆ. 'ಓಂ ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್ ಓಂ' 'ಪರಂಜ್ಯೋತಿರುಪಸಂಪದ್ಯ' ಇತ್ಯಾದಿಯಾಗಿ ಪ್ರಕೃತನಾದ, ಇತರಸ್ಯ = ಜೀವನ, ಪರಾಮರ್ಶಾತ್ = 'ಏಷ ತೇ ಆತ್ಮಾ' ಎಂಬುದಾಗಿ 'ಏತತ್' ಶಬ್ದದಿಂದ, ಯ = ಜೀವನನ್ನು ಪರಾಮರ್ಶ ಮಾಡಿ 'ಯ ಆತ್ಮಾSಪಹತಪಾಪ್ಮಾ' ಇತ್ಯಾದಿ ಶ್ರುತಿಯಿಂದ ಹೃತ್ಪದ್ಮಸ್ಥನಿಗೆ ಆತ್ಮತ್ವವನ್ನು ವಿಧಾನ ಮಾಡಿದ್ದರಿಂದ ಹೃತ್ಪದ್ಮಸ್ಥನು ಜೀವನೇ ಆಗಿದ್ದಾನೆ ಎಂದು ಶಂಕಿಸಬಾರದು. ಏಕೆಂದರೆ ಅಸಂಭವಾತ್ = ಹೃತ್ಪದ್ಮಸ್ಥನಲ್ಲಿ ಶ್ರುತವಾದ ಅಪಹತಪಾಪ್ಮತ್ವಾದಿಧರ್ಮಗಳು ಜೀವನಲ್ಲಿ ಅಸಂಭಾವಿತವಾಗಿವೆ. 'ಏತದಮೃತಮಭಯಮ್' ಎಂಬಲ್ಲಿ ಹೇಳಿರುವ ಅಮೃತತ್ವ ಮೊದಲಾದ ಧರ್ಮಗಳೂ ಕೂಡ ಜೀವನಲ್ಲಿ ಅಸಂಭಾವಿತವಾಗಿವೆಯೆಂದು ಸೂತ್ರಾರ್ಥ.

उक्तासम्भवमाक्षिप्याह -

**।। ॐ उत्तराच्चेदाविर्भूतस्वरूपस्तु ॐ ।।१-३-१९।।**

तुरेव । स इति दहर इति चास्ति । नेति शेषः । उत्तरात् जीवस्य सत्यकामत्वप्रतिपादकात् ''स तत्र पर्येति'' इत्याद्युत्तरवाक्यात् । तत एवापहतपाप्मत्वादिसम्भवेन दहरे जीव इति चेन्न । आविर्भूतस्वरूपस्तु मुक्त एवोच्यते सत्यकामत्वेन तत्रेत्यर्थः । ''स्वेन रूपेणाभिनिष्पद्यते'' इत्युक्तेः । हृत्पद्मस्थस्य देहान्तर्वर्तितया मुक्तत्वायोगादिति भावः ।

ಹಿಂದಿನ ಸೂತ್ರದಲ್ಲಿ ಹೇಳಿದ ಅಸಂಭವದೋಷವನ್ನು ಆಕ್ಷೇಪ ಮಾಡಿ ಸಮಾಧಾನವನ್ನು ಹೇಳುವುದಕ್ಕಾಗಿ ಮುಂದಿನ ಸೂತ್ರವು ಹೊರಟಿದೆ. 'ಓಂ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ಓಂ' ಸೂತ್ರದಲ್ಲಿರುವ 'ತು' ಶಬ್ದಕ್ಕೆ 'ಏವ' ಎಂದರ್ಥ. 'ಸಃ' ಎಂಬ ಪದವನ್ನು, 'ದಹರೇ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ನ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಸೂತ್ರಾರ್ಥ ಹೀಗಿದೆ - 'ಉತ್ತರಾಚ್ಚೇತ್' = ಜೀವನಿಗೆ ಸತ್ಯಕಾಮತ್ವವನ್ನು ಪ್ರತಿಪಾದನೆ ಮಾಡುವ 'ಸ ತತ್ರ ಪರ್ಯೇತಿ' ಎಂಬ ಮುಂದಿನ ವಾಕ್ಯದ ಬಲದಿಂದ, ಆ ವಾಕ್ಯದಿಂದಲೇ ಅಪಹತ-ಪಾಪ್ಮತ್ವಾದಿಗಳು ಜೀವನಲ್ಲಿವೆಯೆಂದು ಸಿದ್ಧವಾಗುತ್ತವೆ. ಆದ್ದರಿಂದ ದಹರಾಕಾಶದಲ್ಲಿರುವವನು ಜೀವನೇ ಏಕಾಗಬಾರದು? ಎಂದು ಪ್ರಶ್ನಿಸಬಾರದು. ಆವಿರ್ಭೂತಸ್ವರೂಪಸ್ತು = ಆವಿರ್ಭೂತ-ಸ್ವರೂಪನೆನಿಸಿದ ಮುಕ್ತಜೀವನೇ ಸತ್ಯಕಾಮತ್ವ ಮೊದಲಾದ ಧರ್ಮಗಳಿಂದ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯು ಮುಕ್ತಜೀವನನ್ನು ಪ್ರತಿಪಾದನೆ ಮಾಡುತ್ತಿದೆ. ಆದರೆ ಹೃತ್ಪದ್ಮಸ್ಥನು ದೇಹದ ಒಳಗಿರುವುದರಿಂದ, ಮುಕ್ತಜೀವನು ದೇಹದಲ್ಲಿದ್ದಾನೆಂದು ಹೇಳುವುದು ಅಯುಕ್ತವಾಗುತ್ತದೆ.

ಪರಿಪೂರ್ಣಚಂದ್ರಿಕಾ

मुक्तस्त्विति वाच्ये श्रौतमुक्तिस्वरूपोक्त्यर्थैवमुक्तिः । "पूर्वादिभ्यो नवभ्यो वा" इत्युक्तेरुत्तरादिति साधु ॥

'ಮುಕ್ತಸ್ತು' ಎಂದೇ ಸೂತ್ರದಲ್ಲಿ ಹೇಳಬಹುದಿತ್ತು. ಆದರೂ ಸಹ ಶ್ರುತಿಪ್ರತಿಪಾದಿತವಾದ ಮುಕ್ತಿಸ್ವರೂಪವನ್ನು ತಿಳಿಸಲು 'ಆವಿರ್ಭೂತಸ್ವರೂಪಸ್ತು' ಎಂಬುದಾಗಿ ಹೇಳಿರುತ್ತಾರೆ. 'ಪೂರ್ವಾದಿಭ್ಯೋ ನವಭ್ಯೋ ವಾ' ಎಂಬ ಸೂತ್ರದಂತೆ 'ಉತ್ತರಾತ್' ಎಂಬ ಪದಪ್ರಯೋಗವು ಸಾಧುವಾಗಿದೆ. 'ಉತ್ತರತ್ವಾತ್' ಎಂದೇನೂ ಹೇಳಬೇಕಾಗಿಲ್ಲ.

एष आत्मेति जीवपरामर्शबलात् कथञ्चिज्जीव एव दहरस्थ इत्यत आह -

**॥ ॐ अन्यार्थश्च परामर्शः ॐ ॥१-३-२०॥**

च एव । अन्योऽर्थो विषयो यस्य सः । परंज्योतिरित्युक्तज्योतीरूपब्रह्मविषय एव परामर्शः । परामृश्यात्मत्वविधानमित्यर्थः । एष इति पुल्लिङ्गं त्वन्त्यात्मापेक्षयेति भावः ।

'ಏಷ ಆತ್ಮಾ' ಎಂಬಲ್ಲಿ ಜೀವನನ್ನು ಪರಾಮರ್ಶಿಸಿರುವ ಬಲದಿಂದಲೇ ಹೇಗಾದರೂ ಜೀವನೇ ದಹರಾಕಾಶದಲ್ಲಿದ್ದಾನೆಂದು ಏಕೆ ಹೇಳಬಾರದು? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ನೀಡುತ್ತಿದ್ದಾರೆ 'ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ' ಎಂಬುದಾಗಿ. ಸೂತ್ರದಲ್ಲಿರುವ 'ಚ' ಶಬ್ದವು 'ಏವ' ಎಂಬರ್ಥದಲ್ಲಿದೆ. ಬೇರೆಯದಾದ ವಿಷಯವುಳ್ಳದ್ದೂ ಅನ್ಯಾರ್ಥವೆನಿಸುತ್ತದೆ. 'ಪರಂಜ್ಯೋತಿಃ' ಎಂಬುದಾಗಿ ಜ್ಯೋತಿರೂಪವಾದ ಬ್ರಹ್ಮವಿಷಯದಲ್ಲೇ 'ಏಷಃ' ಎಂದು ಪರಾಮರ್ಶ ಮಾಡಿ, ಆತ್ಮತ್ವವನ್ನು ವಿಧಾನ ಮಾಡಲಾಗಿದೆ. 'ಏಷಃ' ಎಂಬ ಪುಲ್ಲಿಂಗ ಪ್ರಯೋಗವು ಆತ್ಮಶಬ್ದಕ್ಕೆ ಅನುಸಾರಿಯಾಗಿದೆಯೆಂದು ತಿಳಿಯಬೇಕು.

उक्तमाक्षिप्याह -

**॥ ॐ अल्पश्रुतेरिति चेत्तदुक्तम् ॐ ॥१-३-२१॥**

"दहरं पुण्डरीकम्" इत्यादिना अल्पस्य स्थानस्य श्रवणाद्दहरे सः न ब्रह्मेति चेत् नेति शेषः । तत् अल्पस्थानस्थत्वमुक्तं निचाय्यत्वादित्यादिना समाहितमित्यर्थः।

ಬ್ರಹ್ಮನೇ ಹೃತ್ಪದ್ಮಸ್ಥನಾಗಿದ್ದಾನೆಂದು ಅದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುವ ಮುಂದಿನ ಸೂತ್ರ ಹೀಗಿದೆ - 'ಓಂ ಅಲ್ಪಶ್ರುತೇರಿತಿ ಚೇತ್ತದುಕ್ತಮ್ ಓಂ'

ದಹರಾಧಿಕರಣ (೧-೩-೫)

'ದಹರಂ ಪುಂಡರೀಕಮ್' ಇತ್ಯಾದಿಯಾಗಿ ಅಲ್ಪವಾದ ಸ್ಥಾನವು ಶ್ರುತವಾಗಿರುವುದರಿಂದ, ಅಲ್ಪವಾದ ಹೃದಯದಲ್ಲಿರುವವನು ಬ್ರಹ್ಮನಲ್ಲ ಎಂದು ಹೇಳಬಾರದು. 'ನ' ಎಂಬುದನ್ನು ಇಲ್ಲಿಯೂ ಶೇಷಪೂರಣ ಮಾಡಿಕೊಳ್ಳಬೇಕು. 'ತತ್' = ಅಲ್ಪಸ್ಥಾನದಲ್ಲಿರುವಿಕೆಯೂ, 'ಉಕ್ತಮ್' = 'ನಿಚಾಯ್ಯತ್ವಾತ್' ಇತ್ಯಾದಿ ಸೂತ್ರದಿಂದ ಸಮಾಧಾನವನ್ನು ಹೇಳಿದ್ದಾಗಿದೆಯೆಂದು ಸೂತ್ರಾರ್ಥ.

व्योम्नोंऽशतोऽल्पौकस्त्वं युक्तम् । विष्णोरंशस्यापि पूर्णत्वादिति विशेषशङ्कानिरासार्थमिदं स्मरणम् । तन्निरासश्च तदुक्तं तत्सर्वगतत्वेनैव हृत्पद्मस्थत्वं "एष म आत्माऽन्तर्हृदये ज्यायान् पृथिव्या" इत्यादिश्रुतावुक्तिमिति वृत्त्यन्तराद्बोध्यः। अचिन्त्यशक्तित्वाद्युज्यत इति भावः ।।५।।

ಭೂತಾಕಾಶಕ್ಕೆ ಅಂಶಗಳಿರುವುದರಿಂದ ಅಲ್ಪಸ್ಥಾನದಲ್ಲಿರುವಿಕೆಯನ್ನು ಕೂಡಿಸಬಹುದು. ಆದರೆ ವಿಷ್ಣುವಿನ ಅಂಶಗಳೂ ಕೂಡ ಪರಿಪೂರ್ಣವಾಗಿರುವುದರಿಂದ ಅಲ್ಪಸ್ಥಾನದಲ್ಲಿರುವಿಕೆಯನ್ನು ಹೇಗೆ ಹೇಳಲು ಸಾಧ್ಯ ? ಎಂಬ ವಿಶೇಷವಾದ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ 'ನಿಚಾಯ್ಯತ್ವಾತ್' ಎಂಬ ಸೂತ್ರವು ಹೊರಟಿದೆ. ಈ ಶಂಕೆಯ ಪರಿಹಾರವನ್ನು 'ತದುಕ್ತಮ್' = ಸರ್ವಗತನಾದ್ದರಿಂದಲೇ ಹೃತ್ಪದ್ಮಸ್ಥನು ಆಗುತ್ತಾನೆಂಬುದು 'ಏಷ ಮ ಆತ್ಮಾಽಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾಃ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿದೆಯೆಂದು ವ್ಯಾಖ್ಯಾನಾಂತರದಿಂದ ತಿಳಿಯಬೇಕು. ಅಚಿಂತ್ಯಶಕ್ತಿಯಿರುವುದರಿಂದ ಸರ್ವಗತನಾದ ಬ್ರಹ್ಮನು ಅಲ್ಪಸ್ಥಾನದಲ್ಲಿಯೂ ಇರುತ್ತಾನೆಂಬುದು ಅಭಿಪ್ರಾಯ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ದಹರಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## दहराधिकरणम् (१।३।५)

।। ॐ दहर उत्तरेभ्यः ॐ ।।५।।

।। ॐ गतिशब्दाभ्यां तथा हि दृष्टं लिङ्गं च ॐ ।।

।। ॐ धृतेश्च महिम्नोऽस्यास्मिन्नुपलब्धेः ॐ ।।

।। ॐ प्रसिद्धेश्च ॐ ।।

।। ॐ इतरपरामर्शात्स इति चेन्न असम्भवात् ॐ ।।

।। ॐ उत्तराच्चेदाविर्भूतस्वरूपस्तु ॐ ।।

।। ॐ अन्यार्थश्च परामर्शः ॐ ।।

।। ॐ अल्पश्रुतेरिति चेत्तदुक्तम् ॐ ।।

अत्र "उभे अस्मिन्द्यावापृथिवी" इत्यादिना हृत्पद्मस्थस्य सर्वाधारत्वश्रवणात् तस्य विष्णवन्यत्वे इमाः प्रजाः सदायतना इत्यादिना तथोक्तं तत् सदप्यन्यदिति पूर्वाक्षेपेण पूर्वपक्षोत्थानात्सङ्गतिः ।

ಈ ಅಧಿಕರಣದಲ್ಲಿ 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಇತ್ಯಾದಿ ವಾಕ್ಯದಿಂದ ಹೃತ್ಪದ್ಮಸ್ಥನಲ್ಲಿ ಸರ್ವಾಧಾರತ್ವವು ಶ್ರುತವಾಗುತ್ತಿದೆ. ಇಂತಹ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಒಂದು ವೇಳೆ ಹೃತ್ಪದ್ಮಸ್ಥನಾದವನು ವಿಷ್ಣುವಿಗಿಂತ ಭಿನ್ನನಾದಲ್ಲಿ 'ಇಮಾಃ ಪ್ರಜಾಃ ಸದಾಯತನಾಃ' ಇತ್ಯಾದಿ ವಾಕ್ಯದಲ್ಲಿ ಪ್ರತಿಪಾದ್ಯವಾದ 'ಸತ್' ಪದಾರ್ಥವೂ ಸಹ ಬೇರೆ ಪದಾರ್ಥವೇ ಆಗುತ್ತದೆಂದು ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಸಂಗತಿಯನ್ನು ತಿಳಿಯಬೇಕು.

छान्दोग्ये अष्टमाध्यायाद्यखण्डे "यदिदमस्मिन्ब्रह्मपुरे दहरं पुण्डरीकं वेश्म दहरोऽस्मिन्नन्तर आकाशस्तस्मिन्यदन्तस्तदन्वेष्टव्यं तद्वाव विजिज्ञासितव्यमिति तं

चेद्ब्रूयुर्यदिदमस्मिन्ब्रह्मपुरे दहरं पुण्डरीकं वेश्म दहरोऽस्मिन्नन्तर आकाशः किं तदत्र विद्यते यदन्वेष्टव्यं यद्वाव विजिज्ञासितव्यमिति स ब्रूयात् यावान्वाऽयमाकाशस्तावानेषोऽन्तर्हृदय आकाशः उभे अस्मिन् द्यावापृथिवी अन्तरेव समाहिते'' इत्यादिना (छां. ८-१-१) सर्वाधारत्वेन श्रुतं हृत्पद्मस्थं किमाकाशः जीवो वा विष्णुर्वेति सन्देहः ।

ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದ ಪ್ರಥಮಖಂಡದಲ್ಲಿ ಬರುವಂತಹ ವಿಷಯ ವಾಕ್ಯ ಹೀಗಿದೆ - 'ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಃ ತಸ್ಮಿನ್ಯದಂತಃ ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ ತಂ ಚೇದ್‌ಬ್ರೂಯುರ್ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ ಸ ಬ್ರೂಯಾತ್ ಯಾವಾನ್ವಾಽಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ' 'ಪೂರ್ಣಬ್ರಹ್ಮನಿಗೆ ಆಧಾರವಾದ ಈ ಶರೀರದಲ್ಲಿ ಅಲ್ಪವಾದ ಪದ್ಮವೆಂಬ ಮನೆಯಿದೆ. ಅದರಲ್ಲಿ ಸೂಕ್ಷ್ಮವಾದ ಭೂತಾಕಾಶವಿದೆ. ಅದರಲ್ಲಿ ಯಾವ ಪದಾರ್ಥವಿದೆಯೋ, ಅದನ್ನು ಜಿಜ್ಞಾಸೆ ಮಾಡಬೇಕು. ಎಂದು ಗುರುಗಳು ಉಪದೇಶಿಸಿದಾಗ ಶಿಷ್ಯರು ಪ್ರಶ್ನಿಸುತ್ತಾರೆ. ಈ ಶರೀರದಲ್ಲಿ ಅಲ್ಪವಾದ ಪದ್ಮವೆಂಬ ಮನೆಯಲ್ಲಿ ಅಲ್ಪವಾದ ಭೂತಾಕಾಶವಿದೆ. ಅದರಲ್ಲಿರುವ ಪದಾರ್ಥವನ್ನು ಜಿಜ್ಞಾಸೆ ಮಾಡಬೇಕೆಂದು ಹೇಳಿದಿರಿ. ಆ ಜಿಜ್ಞಾಸ್ಯವಾದ ಪದಾರ್ಥ ಯಾವುದು? ಇದಕ್ಕೆ ಗುರುಗಳು ಉತ್ತರಿಸುತ್ತಾರೆ - ಹೊರಗಡೆ ಇರುವ ಆಕಾಶವೆಂಬ ಭಗವಂತನು ಕಾಲತಃ ದೇಶತಃ ಗುಣತಃ ಎಷ್ಟು ಪರಿಮಾಣವುಳ್ಳವನೋ, ಅಷ್ಟೇ ಇರುವ ಆಕಾಶವೆಂಬ ಭಗವಂತನು ಹೃತ್ಪದ್ಮದಲ್ಲಿರುವ ಆಕಾಶದಲ್ಲೂ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನಾಗಿ ನೆಲೆಸಿರುತ್ತಾನೆ'. ಹೀಗೆ ಸಿದ್ಧಾಂತದ ಪ್ರಕಾರ ಶ್ರುತಿಯ ಅರ್ಥ. ಈ ವಾಕ್ಯವನ್ನು ಮೇಲ್ನೋಟದಲ್ಲಿ ನೋಡಿದಾಗ ಸರ್ವಾಧಾರತ್ವೇನ ಶ್ರುತವಾದ ಹೃತ್ಪದ್ಮಸ್ಥವು ಆಕಾಶವೋ? ಜೀವನೋ? ಅಥವಾ ವಿಷ್ಣುವೋ? ಎಂಬ ಸಂಶಯವು ಪ್ರಾಪ್ತವಾಗುತ್ತದೆ.

आकाश एव नतु ब्रह्मेति पूर्वः पक्षः ।।

ಆಕಾಶವೇ ಹೃತ್ಪದ್ಮಸ್ಥ ಹೊರತು, ಬ್ರಹ್ಮನಲ್ಲವೆಂದು ಪೂರ್ವಪಕ್ಷ.

गगने प्रसिद्धस्यैवाकाशंब्दस्य हृत्पद्मस्थे प्रयोगात् । नच तस्य सर्वाधारत्वाख्य ब्रह्मलिङ्गश्रवणात् आकाशस्तल्लिङ्गादितिन्यायेन ब्रह्मवाचित्वमिति वाच्यम् ।

ಗಗನದಲ್ಲಿ ಪ್ರಸಿದ್ಧವಾದ ಆಕಾಶಶಬ್ದವನ್ನೇ ಹೃತ್ಪದ್ಮಸ್ಥದಲ್ಲಿ ಪ್ರಯೋಗ ಮಾಡಿದ್ದರಿಂದ ಭೂತಾಕಾಶವೇ ಪ್ರತಿಪಾದ್ಯವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಸರ್ವಾಧಾರತ್ವವೆಂಬ ಬ್ರಹ್ಮನ ಲಿಂಗವು ಹೃತ್ಪದ್ಮಸ್ಥನಲ್ಲಿ ಶ್ರುತವಾದ್ದರಿಂದ 'ಆಕಾಶಸ್ತಲ್ಲಿಂಗಾತ್' ಎಂಬ ನ್ಯಾಯದಂತೆ ಈ ಶ್ರುತಿಯು ಬ್ರಹ್ಮಪರವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

**पद्मकोशप्रतीकाशं हृदयमिति प्रकृत्य तस्यान्ते सुषिरं सूक्ष्मं तस्मिन्सर्वं प्रतिष्ठितमिति श्रुत्यन्तरे (महाना. उ) सुषिरशब्दिताकाशस्यैव हृत्पद्मस्थत्व-सर्वाधारत्वयोरुक्त्या तत्समाख्याविरोधात् ।**

ಏಕೆಂದರೆ 'ಪದ್ಮಕೋಶಪ್ರತೀಕಾಶಂ ಹೃದಯಮ್' ಎಂದು ಪ್ರಕೃತನಾದವನಿಗೆ 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಎಂಬ ಮತ್ತೊಂದು ಶ್ರುತಿಯಲ್ಲಿ ಸುಷಿರಶಬ್ದದಿಂದ ಪ್ರತಿಪಾದ್ಯವಾದ ಆಕಾಶಕ್ಕೆ ಹೃತ್ಪದ್ಮಸ್ಥತ್ವ ಮತ್ತು ಸರ್ವಾಧಾರತ್ವಗಳನ್ನು ಹೇಳಿದ್ದರಿಂದ ಸಮಾಖ್ಯಾ-ಪ್ರಮಾಣದ ವಿರೋಧ ಬರುತ್ತದೆ.

**आकाशस्यैव ब्रह्मत्वे तत्स्थस्यान्वेष्टव्यत्वोक्तेरयोगाच्च ।**

ಆಕಾಶವೇ ಬ್ರಹ್ಮನಾದರೆ ಅಲ್ಲಿರುವ ವಸ್ತುವನ್ನು ಅನ್ವೇಷಣೆ ಮಾಡಬೇಕೆಂದು ಹೇಳುವುದು ಕೂಡುವುದಿಲ್ಲ.

**न चाकाशस्य प्रसिद्धाकाशत्वेऽपितत्स्थतया परम्परया हृत्पद्मस्थं ब्रह्मेति वाच्यम् । वाक्यान्वयायोगात् ।**

ಆಕಾಶವು ಪ್ರಸಿದ್ಧಾಕಾಶವನ್ನು ಪ್ರತಿಪಾದನೆ ಮಾಡುವುದಾದರೆ, ಆಕಾಶದಲ್ಲಿರುವವನು ಪರಂಪರೆಯಿಂದ ಬ್ರಹ್ಮನೆಂದೇ ಸಿದ್ಧನಾಗುತ್ತಾನಲ್ಲವೇ? ಎಂದು ಪ್ರಶ್ನಿಸಬಾರದು. ವಾಕ್ಯಕ್ಕೆ ಅನ್ವಯವೇ ಕೂಡುವುದಿಲ್ಲ.

**किं तदत्र विद्यते इति प्रश्ने ब्रह्म विद्यत इत्येव वाच्ये यावान्वेत्यादिनान्त-र्हृदयाकाशस्य बाह्याकाशतौल्योक्तेरसङ्गतत्वात् सुषिरश्रुतिविरोधापत्त्या यावानिति वाक्ये सर्वाधारतयोक्ताकाशस्य ब्रह्मत्वाङ्गीकारेणापि तद्वाक्यसङ्गत्युक्त्ययोगाच्च ।**

'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನಿಸಿದಾಗ, 'ಬ್ರಹ್ಮ ವಿದ್ಯತೇ' ಎಂದೇ ಉತ್ತರಿಸಬೇಕಾಗುತ್ತದೆ. ಅದನ್ನು ಬಿಟ್ಟು 'ಯಾವಾನ್ವಾ' ಇತ್ಯಾದಿ ವಾಕ್ಯದಿಂದ ಒಳಗಿರುವ ಆಕಾಶವು ಹೊರಗಿನ ಆಕಾಶದ ಸಾಮ್ಯವನ್ನು ಹೊಂದಿದೆಯೆಂದು ಹೇಳುವುದು ಅಸಂಗತವಾಗುತ್ತದೆ. ಮತ್ತು ಸುಷಿರಶ್ರುತಿಯ ವಿರೋಧ ಬರುವುದರಿಂದ 'ಯಾವಾನ್ವಾ' ಎಂಬ ವಾಕ್ಯದಲ್ಲಿ ಸರ್ವಾಧಾರತ್ವೇನ ಹೇಳಲ್ಪಟ್ಟ ಆಕಾಶಕ್ಕೆ ಬ್ರಹ್ಮತ್ವವನ್ನು ಹೇಳುವ ಮೂಲಕ, ಸಂಗತಿಯನ್ನು ಹೇಳುವುದೂ ಸಹ ಕೂಡುವುದಿಲ್ಲ.

ದಹರಾಧಿಕರಣ (೧-೩-೫)

प्रागुक्तमेव दहराकाशं बाह्याकाशतुल्यतया विशिष्य तत्र द्यावापृथिव्यादिकं विद्यत इति उभे अस्मिन्नित्यादिनोच्यत इत्युक्तेरेव सङ्गतत्वेन द्यावापृथिव्यादेरेवाकाशान्तस्थत्वौचित्यात् ।

ಆದ್ದರಿಂದ ಹಿಂದೆ ಹೇಳಲ್ಪಟ್ಟ ದಹರಾಕಾಶಕ್ಕೆ ಬಾಹ್ಯಾಕಾಶದ ಸಾಮ್ಯವನ್ನು ಹೇಳಿ, ಅಂತಹ ಆಕಾಶದಲ್ಲಿ ದ್ಯಾವಾಪೃಥಿವ್ಯಾದಿಗಳು ಇರುತ್ತವೆಂದು 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸಲಾಗಿದೆ ಎಂದು ಹೇಳುವುದೇ ಸಂಗತವಾಗುತ್ತದೆ. ದ್ಯಾವಾಪೃಥಿವ್ಯಾದಿಗಳಿಗೆ ಆಕಾಶದಲ್ಲಿರುವಿಕೆಯನ್ನು ಹೇಳುವುದೂ ಸಹ ಉಚಿತವಾಗುತ್ತದೆ.

अतः साक्षात् हृत्पद्मस्थमाकाशं परम्परया तु द्यावापृथिव्यादिकमित्येकः ।

ಆದ್ದರಿಂದ ನೇರವಾಗಿ ಹೃತ್ಪದ್ಮಸ್ಥವಾದದ್ದು ಆಕಾಶವಾಗಿದೆ. ಪರಂಪರೆಯಾ ಹೃತ್ಪದ್ಮಸ್ಥವಾದದ್ದು ದ್ಯಾವಾಪೃಥಿವ್ಯಾದಿಗಳಾಗಿವೆ ಎಂಬುದು ಮೊದಲನೆಯ ಪೂರ್ವಪಕ್ಷ.

जीवो वा दहराकाशान्तस्थ इत्यन्यः ।

ಅಥವಾ ಜೀವನು ದಹರಾಕಾಶದಲ್ಲಿ ಇರುತ್ತಾನೆಂಬುದು ಎರಡನೆಯ ಪೂರ್ವಪಕ್ಷ.

दहराकाशस्थे य आत्माऽपहतपाप्मेति वाक्यशेषे आत्मशब्दप्रयोगात् तस्यैव आत्मेत्युत्तरवाक्ये प्राक्सम्प्रसादपदेन प्रस्तुतं जीवमेव इति पुल्लिङ्गैतच्छब्देन परामृश्य आत्मत्वविधानेन जीवार्थत्वात् ।

ಏಕೆಂದರೆ ದಹರಾಕಾಶದಲ್ಲಿರುವವನಲ್ಲಿ 'ಯ ಆತ್ಮಾಽಪಹತಪಾಪ್ಮಾ' ಎಂಬ ವಾಕ್ಯಶೇಷದಿಂದ ಆತ್ಮಶಬ್ದವು ಪ್ರಯುಕ್ತವಾಗಿದೆ. ಅಂತಹ ಜೀವನಿಗೆ 'ಏಷ ಆತ್ಮಾ' ಎಂಬ ಮುಂದಿನ ವಾಕ್ಯದಲ್ಲಿ ಸಂಪ್ರಸಾದ ಪದದಿಂದ ಪ್ರಸ್ತುತನಾದ ಜೀವನನ್ನು 'ಏಷಃ' ಎಂಬ ಪುಲ್ಲಿಂಗ ಶಬ್ದದಿಂದ ಪರಾಮರ್ಶ ಮಾಡಿ ಆತ್ಮತ್ವವನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ಜೀವನನ್ನೇ ಇಲ್ಲಿ ವಿವಕ್ಷಿಸಬೇಕು.

दहरस्थत्वलिङ्गाच्च तस्य सर्वगते विष्णावयोगात् । दहरस्थत्वलिङ्गाच्च तस्य सर्वगते विष्णावयोगात् ।

ದಹರಸ್ಥತ್ವವೆಂಬ ಲಿಂಗವು ಜೀವನಲ್ಲಿ ಹೇಳಬಹುದೇ ಹೊರತು, ಸರ್ವಗತನಾದ ವಿಷ್ಣುವಿನಲ್ಲಿ ಹೇಳಲು ಸಾಧ್ಯವೇ ಇಲ್ಲ.

व्योम्नोंऽशस्यापूर्णत्वेन अंशतोऽल्पौकस्त्वयोगेऽपि ब्रह्मणोंऽशस्यापि पूर्णत्वेन व्योमवत्समाधानायोगाच्च यावान्वेत्यादिवाक्यान्वयस्य ब्रह्मपक्षेऽपि सामान्यादिति ।।

ಪರಿಪೂರ್ಣಚಂದ್ರಿಕಾ

ಆಕಾಶದ ಅಂಶಗಳು ಅಪೂರ್ಣವಾದ್ದರಿಂದ ಅಶಂತಃ ಅಲೌಕಿಕತ್ವವನ್ನು ಭೂತಾಕಾಶದಲ್ಲಿ ಹೇಳಬಹುದು. ಆದರೆ ಬ್ರಹ್ಮನ ಅಂಶಗಳೆಲ್ಲವೂ ಪೂರ್ಣವೇ ಆಗಿರುವುದರಿಂದ ಆಕಾಶದ ದೃಷ್ಟಾಂತದಿಂದ ಶ್ರುತಿಯನ್ನು ಅರ್ಥೈಸಲು ಬರುವುದಿಲ್ಲ. ಆದ್ದರಿಂದ 'ಯಾವಾನ್ವಾ' ಇತ್ಯಾದಿ ವಾಕ್ಯದ ಅನ್ವಯವು ಬ್ರಹ್ಮಪಕ್ಷದಲ್ಲೂ ಕೂಡ ಉಪಪನ್ನವಾಗುವುದಿಲ್ಲ. ಹೀಗೆ ಭೂತಾಕಾಶವಾಗಲೀ, ಜೀವನಾಗಲೀ, ಹೃತ್ಪದ್ಮಸ್ಥನಾಗುತ್ತಾನೆಂದು ಪೂರ್ವಪಕ್ಷ.

सिद्धान्तस्तु ।। हृदयस्थदहराकाशान्तःस्थतया हृत्पद्मस्थं ब्रह्मैव । य आत्मा अपहतपाप्मेत्युत्तरवाक्ये श्रुतापहतपाप्मत्वविजरत्वविमृत्युत्वविशोकत्वादिलिङ्गेभ्यः ।

ಸಿದ್ಧಾಂತ ಹೀಗಿದೆ - ಹೃದಯದಲ್ಲಿರುವ ದಹರಾಕಾಶದಲ್ಲಿರುವವನಾಗಿ ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆ. 'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿಯಾಗಿ ಮುಂದಿನ ವಾಕ್ಯಗಳಲ್ಲಿ ಅಪಹತ ಪಾಪ್ಮತ್ವ, ವಿಜರತ್ವ, ವಿಮೃತ್ಯುತ್ವ, ವಿಶೋಕತ್ವ ಮೊದಲಾದ ವಿಷ್ಣುವಿನ ಅಸಾಧಾರಣಲಿಂಗಗಳೇ ಶ್ರುತವಾಗಿರುವುದರಿಂದ.

तेषां च ''स एष सर्वेभ्यः पाप्मभ्यः उदितः'' (छां. १-६-७) ''योऽशनायापिपासे शोकं मोहं जरां मृत्युमत्येति'' (बृ. ५-५-१) इत्यादिना विष्ण्वेकनिष्ठत्वात् ।

ಈ ಎಲ್ಲ ಲಿಂಗಗಳು 'ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ' ಎಂಬ ಛಾಂದೋಗ್ಯೋಪ-ನಿಷತ್ತಿನ ಆಧಾರದಿಂದ, 'ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ' ಎಂಬ ಬೃಹದಾರಣ್ಯಕೋಪನಿಷತ್ತಿನ ಆಧಾರದಿಂದ ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ಸಿದ್ಧವಾಗಿವೆ.

तथा ''अहरहर्गच्छन्त्यः एतं ब्रह्मलोकं न विन्दन्ति'' इति (छा. ८-३-२) सुप्तप्राप्यत्वलिङ्गात् तस्य च ''सता सौम्य तदा सम्पन्नो भवति'' इति (छां. ६-८-१) वाक्ये ईक्षतिनयन्यायेन ब्रह्मधर्मतया श्रवणात् ।

ಇದರಂತೆ 'ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಂ ನ ವಿದಂತಿ' ಎಂಬ ಛಾಂದೋಗ್ಯೋಪ-ನಿಷತ್ತಿನಲ್ಲಿ ಸುಪ್ತಪ್ರಾಪ್ಯತ್ವವೆಂಬ ಲಿಂಗವು, 'ಸತಾ ಸೌಮ್ಯ ತದಾ ಸಂಪನ್ನೋ ಭವತಿ' ಎಂಬ ಛಾಂದೋಗ್ಯೋಪನಿಷತ್ತಿನ ಮಾತಿನಲ್ಲಿ ಈಕ್ಷತ್ಯಧಿಕರಣದ ನ್ಯಾಯದಂತೆ ಬ್ರಹ್ಮಧರ್ಮವೆಂದೇ ಸಿದ್ಧವಾಗಿದೆ.

ब्रह्मणो लोकमिति हृत्पद्मस्थे ब्रह्मलोकपदप्रयोगेण ब्रह्मैव वा सर्वाश्रयत्वादिना-लोकपदोक्तमिति हृत्पद्मस्थे ब्रह्मपदश्रवणात् । तथा ''अरश्च ह वै ण्यश्चार्णवौ

ब्रह्मलोके'' (छां. ८-५-३) इत्यरण्याख्यसुधासमुद्राश्रयलोके प्रयुक्तस्य ब्रह्मलोकपदस्य हृत्पद्मे प्रयोगेण तत्स्थस्य सुधासमुद्राश्रयलोकवत्त्वलिङ्गश्रवणात् ।

'ಬ್ರಹ್ಮಣಃ ಲೋಕಮ್' ಎಂಬುದಾಗಿ ಹೃತ್ಪದ್ಮಸ್ಥನಲ್ಲಿ ಬ್ರಹ್ಮಲೋಕಪದವು ಪ್ರಯುಕ್ತವಾಗಿದೆ. ಆದ್ದರಿಂದ ಬ್ರಹ್ಮನೇ ಸಕಲಪದಾರ್ಥಗಳಿಗೆ ಆಶ್ರಯನಾದ್ದರಿಂದ ಲೋಕಪದದಿಂದ ಪ್ರತಿಪಾದ್ಯ-ನಾಗಿದ್ದಾನೆ. ಆದ್ದರಿಂದ ಹೃತ್ಪದ್ಮಸ್ಥನಲ್ಲಿ ಬ್ರಹ್ಮಪದವು ಶ್ರುತವಾಗಿದೆ. ಅದರಂತೆ 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ 'ಅರ' ಮತ್ತು 'ಣ್ಯ' ಎಂಬ ಸುಧಾಸಮುದ್ರಾಶ್ರಯವಾದ ಲೋಕದಲ್ಲಿ ಬ್ರಹ್ಮಲೋಕಪದವನ್ನು ಪ್ರಯೋಗಿಸಲಾಗಿದೆ. ಅದೇ ಬ್ರಹ್ಮಲೋಕಪದವನ್ನು ಹೃತ್ಪದ್ಮದಲ್ಲಿ ಪ್ರಯೋಗ ಮಾಡಿದ್ದರಿಂದ, ಹೃತ್ಪದ್ಮದಲ್ಲಿರುವವನಲ್ಲಿ ಸುಧಾಸಮುದ್ರಾಶ್ರಯಲೋಕವತ್ತ್ವವೆಂಬ ಲಿಂಗವೆಂದು ಹೇಳುವಂತೆ ಆಗುತ್ತದೆ. ಇದು ಬ್ರಹ್ಮನ ಅಸಾಧಾರಣಧರ್ಮವಾದ್ದರಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ.

तस्य च ''अरश्च ह वैण्यश्च सुधासमुद्रौ'' इत्यादिभाष्योक्तश्रुत्या विष्णुधर्मत्वात् ।

ಈ 'ಸುಧಾಸಮುದ್ರಾಶ್ರಯಲೋಕವತ್ತ್ವ' ಎಂಬ ಲಿಂಗವು 'ಅರಶ್ಚ ಹ ವೈ ಣ್ಯಶ್ಚ ಸುಧಾಸಮುದ್ರೌ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಂತೆ ವಿಷ್ಣುವಿನ ಅಸಾಧಾರಣ-ಧರ್ಮವೂ ಆಗಿದೆಯೆಂದು ಸಿದ್ಧವಾಗಿದೆ.

तथा ''अयमात्मा स सेतुर्विधृतिः एषां लोकानां असम्भेदाय'' इति (छां. ८-४-१) हृत्पद्मस्थे श्रुतसर्वाधारत्वलिङ्गात् ।

ಅದರಂತೆ 'ಅಯಮಾತ್ಮಾ ಸ ಸೇತುರ್ವಿಧೃತಿಃ ಏಷಾಂ ಲೋಕಾನಾಂ ಅಸಂಭೇದಾಯ' ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ ಹೃತ್ಪದ್ಮಸ್ಥನು ಸಕಲಕ್ಕೂ ಆಧಾರನಾಗಿದ್ದಾನೆಂದು ಸರ್ವಾಧಾರತ್ವ-ಲಿಂಗವನ್ನು ಹೇಳಲಾಗಿದೆ.

तस्य च अक्षरादिनये विष्णुधर्मत्वेन निर्णयात् ।

ಈ ಸರ್ವಾಧಾರತ್ವಲಿಂಗವು ಅಕ್ಷರಾಧಿಕರಣದ ನ್ಯಾಯದಂತೆ ವಿಷ್ಣುವಿನ ಧರ್ಮವೆಂದು ನಿಶ್ಚಯವಾಗಿದೆ.

तथा ''य एषोऽन्तर्हृदय आकाशः तस्मिन् शेते सर्वस्य वशी'' इत्यादि (बृ. ६-४-२२) काण्वश्रुतिसमाख्यानात् ।

ಇದರಂತೆ 'ಯ ಏಷೋಽಂತರ್ಹೃದಯ ಆಕಾಶಃ ತಸ್ಮಿನ್ ಶೇತೇ ಸರ್ವಸ್ಯ ವಶೀ' ಇತ್ಯಾದಿಯಾದ ಬೃಹದಾರಣ್ಯಕೋಪನಿಷತ್ತಿನ ಮಾತು, ಕಾಣ್ವಶ್ರುತಿಯ ಮಾತು ಸಮಾಖ್ಯಾಪ್ರಮಾಣರೂಪವಾಗಿದೆ.

तस्याश्च सर्वेश्वरत्वादिविष्णुमहिमोक्त्या वैष्णवत्वात् ।

ಇವೆಲ್ಲವೂ ಸರ್ವೇಶ್ವರತ್ವವೇ ಮೊದಲಾದ ವಿಷ್ಣುವಿನ ಮಹಿಮೆಯನ್ನು ಹೇಳುತ್ತಿರುವುದರಿಂದ ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ಸಿದ್ಧವಾಗಿದೆ.

तथा ''दहरं विपापं परवेश्मभूतं हृत्पुण्डरीकं पुरमध्यसंस्थम्, तत्रापि दह्रं गगनं विशोकः तस्मिन् यदन्तः तदुपासितव्यम्'' इति (महाना.उ.) विष्णुपरतया प्रसिद्धतैत्तिरीयसमाख्यानाच्च ।

ಇದರಂತೆ 'ದಹರಂ ವಿಪಾಪಂ ಪರವೇಶ್ಮಭೂತಂ ಹೃತ್ಪುಂಡರೀಕಂ ಪುರಮಧ್ಯಸಂಸ್ಥಮ್, ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಃ ತದುಪಾಸಿತವ್ಯಮ್' ಎಂಬ ಮಹಾನಾರಾಯಣೋಪ-ನಿಷತ್ತಿನಲ್ಲಿ ದೇಹವೆಂಬ ಬ್ರಹ್ಮಪುರದ ಮಧ್ಯದಲ್ಲಿ ಅಲ್ಪವಾದ ಪರಬ್ರಹ್ಮನ ನಿವಾಸವಿದೆ. ಆದ್ದರಿಂದಲೇ ಅದು ಪಾಪರಹಿತವೂ ಆಗಿದೆ. ಅಂತಹ ಯಾವ ಹೃದಯಕಮಲವಿದೆಯೋ, ಅದರಲ್ಲೂ ಅಲ್ಪವಾದ ಗಗನವಿದೆ. ಅಲ್ಲಿರುವ ಶೋಕರಹಿತವಾದ ಬ್ರಹ್ಮವು ಉಪಾಸ್ಯಕ್ಕೆ ಅರ್ಹವಾಗಿದೆಯೆಂದು ಹೇಳಲಾಗಿದೆ. ಹೀಗೆ ವಿಷ್ಣುಪರವೆಂದು ಪ್ರಸಿದ್ಧವಾದ ತೈತ್ತಿರೀಯಶಾಖೆಯ ಮಹಾನಾರಾಯಣೋಪನಿಷತ್ತಿನ ಸಮಾಖ್ಯಾಪ್ರಮಾಣವು ಇರುತ್ತದೆ.

साधकाभावाज्जीवादौ अपहतपाप्मत्वादीनां ''अशनायादिकानन्ये तत्प्रसादात्तरन्ति हि'' (पाद्म.पु.) इत्यादेः स्वातन्त्र्येणासम्भवात् ।

ಯಾವುದೇ ಸಾಧಕಪ್ರಮಾಣಗಳಿಲ್ಲದ ಕಾರಣ ಜೀವ ಅಥವಾ ಭೂತಾಕಾಶಗಳಲ್ಲಿ ಅಪಹತ-ಪಾಪ್ಮತ್ವಾದಿಗಳನ್ನು 'ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ತರಂತಿ ಹಿ' ಎಂಬ ಪದ್ಮಪುರಾಣದ ಮಾತಿನ ಆಧಾರದಿಂದ ಸ್ವತಂತ್ರವಾಗಿ ಉಪಪಾದಿಸಲು ಬರುವುದಿಲ್ಲ.

''स तत्र पर्येति'' इत्यादिवाक्ये (छां. ८-१२-३) च मुक्तस्यैव सत्यकामत्वाद्युक्तेः। तस्य च हृत्पद्मस्थत्वायोगात् ।

'ಸ ತತ್ರ ಪರ್ಯೇತಿ' ಇತ್ಯಾದಿ ಛಾಂದೋಗ್ಯೋಪನಿಷತ್ತಿನಲ್ಲಿ ಮುಕ್ತನಾದ ಜೀವನೇ ಸತ್ಯಕಾಮತ್ವಾದಿ ಧರ್ಮಗಳುಳ್ಳವನಾಗಿದ್ದಾನೆಂದು ಹೇಳಲಾಗಿದೆ. ಆದರೆ ಮುಕ್ತನಾದ ಜೀವನಿಗೆ ಶರೀರದಲ್ಲಿರುವ ಹೃತ್ಪದ್ಮದಲ್ಲಿರುವಿಕೆಯನ್ನು ಹೇಳಲು ಸಾಧ್ಯವೇ ಇಲ್ಲ.

''एष आत्मा'' इति वाक्ये (छां. ८-३-४) विधेयापेक्षया पुल्लिङ्गेनैतच्छब्देन परंज्योतिरिति प्रस्तुतस्य ''ॐ आत्मा प्रकरणात् ॐ'' (ब्र.सू. ४-४-३) इत्यत्र

ब्रह्मतया निर्णेष्यमाणस्य ज्योतीरूपब्रह्मण एव परामर्शेन हृत्पद्मस्थात्मत्वविधानात्। अल्पौकस्त्वस्य सर्वत्रेति नये (ब्र.सू.१-२-१) विष्णावपि साधितत्वात् ।

'ಏಷ ಆತ್ಮಾ' ಎಂಬ ಛಾಂದೋಗ್ಯದ ಮಾತಿನಲ್ಲಿ ವಿಧೇಯಾಪೇಕ್ಷೆಯಿಂದ ಪುಲ್ಲಿಂಗವಾದ 'ಏತತ್' ಶಬ್ದದಿಂದ 'ಪರಂಜ್ಯೋತಿ' ಎಂದು ಪ್ರಸ್ತುತವಾದ 'ಓಂ ಆತ್ಮಾ ಪ್ರಕರಣಾತ್ ಓಂ' ಎಂಬಲ್ಲಿ ಬ್ರಹ್ಮನೆಂದು ನಿರ್ಣಯಿಸಲ್ಪಡುವ ಜ್ಯೋತಿಯೆಂಬ ಬ್ರಹ್ಮನನ್ನೇ ಪರಾಮರ್ಶ ಮಾಡಿ, ಹೃತ್ಪದ್ಮಸ್ಥನಲ್ಲಿ ಆತ್ಮತ್ವವನ್ನು ವಿಧಾನ ಮಾಡಲಾಗಿದೆ. ಅಲ್ಪೌಕಸ್ತ್ವವನ್ನು ಸರ್ವಗತತ್ವಾಧಿಕರಣದಲ್ಲಿ ವಿಷ್ಣುವಿಗೂ ಸಮರ್ಥಿಸಲಾಗಿದೆ.

अचिन्त्यशक्त्यादिना पूर्णस्याप्यल्पौकस्त्वोपपत्तेः ।

ಅಚಿಂತ್ಯಶಕ್ತಿಯಿರುವುದರಿಂದ ಸರ್ವಗತನಾದ ಪರಬ್ರಹ್ಮನು ಅಲ್ಪದೇಶದಲ್ಲೂ ಕೂಡ ಇರಲು ಸಮರ್ಥನಾಗಿದ್ದಾನೆ.

शरीरपुण्डरीकयोः ब्रह्म प्रति पुरत्ववेश्मत्वोक्त्यैव आकाशस्थस्य अन्वेष्टव्यस्य ब्रह्मत्वसिद्धौ कीदृशं तदिति भावेन ''किं तदत्र'' इति प्रश्ने तस्य ब्रह्मणो हृदये यावानयं बाह्याकाशः तावान् सर्वोऽप्यस्ति तस्मिन् द्यावापृथिव्यादिकमस्ति इत्याकाशादिसर्वाश्रयत्वादिकमुच्यत इति यावानित्यादिवाक्यान्वयोपपत्तेः ।

ಶರೀರವು ಬ್ರಹ್ಮನಿಗೆ ಪಟ್ಟಣವಾಗಿದೆ. ಹೃತ್ಪದ್ಮವು ಬ್ರಹ್ಮನಿಗೆ ಮನೆಯಾಗಿದೆ ಎಂದು ಹೇಳಿದ್ದರಿಂದ, ಆಕಾಶದಲ್ಲಿರುವವನ್ನು ಜಿಜ್ಞಾಸೆ ಮಾಡಬೇಕೆಂದರೆ ಅವನು ಬ್ರಹ್ಮನೇ ಆಗಿದ್ದಾನೆಂದು ಸಿದ್ಧವಾಗುತ್ತದೆ. ಅಂತಹ ಬ್ರಹ್ಮನು ಹೇಗಿದ್ದಾನೆಂಬ ಉದ್ದೇಶದಿಂದ 'ಕಿಂ ತದತ್ರ' ಎಂದು ಪ್ರಶ್ನಿಸಲಾಗಿದೆ. ಆ ಸಂದರ್ಭದಲ್ಲಿ ಅಂತಹ ಬ್ರಹ್ಮನು ಬಾಹ್ಯದಲ್ಲಿರುವ ಆಕಾಶನಾಮಕನಾಗಿ ಹೇಗೆ ಗುಣಾದಿಗಳಿಂದ ಪೂರ್ಣನಾಗಿದ್ದಾನೋ, ಅದರಂತೆ ಹೃದಯಪದ್ಮದಲ್ಲಿರುವ ಬ್ರಹ್ಮನೂ ಕೂಡ ಪೂರ್ಣನಾಗಿದ್ದಾನೆಂದು ಉತ್ತರಿಸಲಾಗಿದೆ. ಮತ್ತು ಬಾಹ್ಯದಲ್ಲಿರುವ ಪರಮಾತ್ಮನು ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನಾದಂತೆ ಹೃದಯದಲ್ಲಿರುವ ಪರಮಾತ್ಮನೂ ಕೂಡ ದ್ಯಾವಾಪೃಥಿವ್ಯಾದಿಗಳಿಗೆ ಆಶ್ರಯನಾಗಿದ್ದಾನೆಂದು 'ಯಾವಾನ್ವಾ ಅಯಮಾಕಾಶಃ' ಇತ್ಯಾದಿ ವಾಕ್ಯವು ಪ್ರತಿಪಾದನೆ ಮಾಡುತ್ತಿದೆ. ಹೀಗೆ ಅತ್ಯಂತ ಸಮಂಜಸವಾಗಿಯೇ ಶ್ರುತಿಯನ್ನು ವ್ಯಾಖ್ಯಾನ ಮಾಡಲು ಬರುತ್ತದೆ.

परपक्ष एव आकाशस्थं किमिति पृष्टे आकाशस्य बाह्याकाशतौल्योक्त्यनुपपत्तिः।

ವಿಚಾರ ಮಾಡಿದರೆ ಪೂರ್ವಪಕ್ಷದಲ್ಲಿ 'ಆಕಾಶಸ್ಥಂ ಕಿಂ' ಎಂದು ಪ್ರಶ್ನಿಸಿದಾಗ, ಹೃತ್ಪದ್ಮದಲ್ಲಿರುವ ಆಕಾಶಕ್ಕೆ ಬಾಹ್ಯಾಕಾಶದ ಸಾಮ್ಯವನ್ನು ಹೇಳುವುದೇ ತಪ್ಪಾಗುತ್ತದೆ.

मन्दिरे मणिमालेतिवत् सुषिरस्थेशस्य सर्वाधारत्वाशयेन सुषिरश्रुत्युपपत्तेश्च बाधकाभावाच्चेति ॥

ಆದರೆ ವಿಷ್ಣುವೆಂಬ ಪಕ್ಷದಲ್ಲಿ ಈ ದೋಷವಿಲ್ಲ. ಮಂದಿರೇ ಮಣಿಮಾಲಾನ್ಯಾಯದಿಂದ, ಸುಷಿರದಲ್ಲಿರುವ ಪರಮಾತ್ಮನಿಗೆ ಸರ್ವಾಧಾರತ್ವವನ್ನು ಹೇಳುವ ಉದ್ದೇಶದಿಂದ ಸುಷಿರವೇ ಸರ್ವಕ್ಕೂ ಆಧಾರವಾಗಿದೆಯೆಂದು ಅರ್ಥೈಸಬಹುದು. ಈ ಅರ್ಥದಲ್ಲಿ ಯಾವುದೇ ಬಾಧಕಗಳು ಇರುವುದಿಲ್ಲ.

फलं तु चन्द्राद्याधारत्वमुखेन अक्षराधिकरणाक्षेपः तत्समाधिश्चेति ॥५॥

ಫಲಫಲಿಭಾವ ಹೀಗಿದೆ - ಚಂದ್ರಾದ್ಯಾಧಾರತ್ವದ ಮೂಲಕ ಅಕ್ಷರಾಧಿಕರಣವನ್ನು ಆಕ್ಷೇಪ ಮಾಡುವುದೇ ಪೂರ್ವಪಕ್ಷದ ಫಲ. ಆದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ದಹರಾಧಿಕರಣವು ಸಮಾಪ್ತವಾಯಿತು.

# सूत्रार्थरत्नावलिः

## दहाधिकरणम् (१।३।५)

(अत्र सर्वाधारतया, अन्वेष्टव्यतया च साक्षाद्वा व्यवधानेन वा सामान्यतो हृत्पद्मस्थत्वलिङ्गस्य ब्रह्मणि समन्वयः क्रियते)

**ॐ॥ दहर उत्तरेभ्यः ॥ ॐ ॥१४॥**

ननु आकाश एव हृत्पद्मस्थो भवेत् । 'दहरोऽस्मिन्' इति (छां. ८।१) पद्मस्थे दहराकाशस्थितिश्रवणात् । 'तस्यान्ते सुषिरम्' (महा.ना.११) इति व्याख्यानाच्च । आकाशशब्देन

यदि सुषिरमेवाभिमतं तस्मिंश्च 'यदन्तः' इति हृत्पद्मस्थाकाशगतः सर्वाधारतयोच्यते, तर्हि वाक्यान्वयानुपपत्तेः । तथाहि – 'तस्मिन्' इत्यत्र विष्णुत्वाभिप्राये किं तत्र विद्यते? इति प्रश्नस्य 'ब्रह्म विद्यते' इति परिहारं विना 'यावान् वा' इत्यादेरभिप्रायासङ्गतिः । आकाशपक्षे तु अस्त्यस्यान्वयः । हृदयाकाशस्थमुपास्यम् इत्युक्ते किं तत्र स्थितम्? इति प्रश्ने 'यावान् वा' इति प्रागुक्ताकाशस्य विशिष्य 'उभेऽस्मिन्' इत्यादिपरिहारसंश्लेषात् । नच 'यावान् वा' इत्यादिना आकाशाख्यो विष्णुः सर्वाधारतया परिहारे कथ्यत इत्यन्वयोपपत्तिः । 'तस्मिन् सर्वं प्रतिष्ठितम्' इति साक्षात् सुषिरस्यैव सर्वाधारत्वोक्तिविरोधात् । अतः 'आकाशस्यैव सर्वाधारतया हृत्पद्मस्थत्वम्' । अतः भगवदितरदेव चन्द्रादित्याधाराक्षरमिति प्राप्ते, सूत्रितम् –

ॐ ।। दहर उत्तरेभ्य इति ।। अस्यार्थः – दहरे दहरं पुण्डरीकं वेश्मेति वाक्योक्तहृत्पद्मस्थाल्पाकाशे स्थितो विष्णुरेव न जीवादिः । कुतः? उत्तरेभ्यः 'य आत्मा अपहतपाप्मा' (छां. ८।७) इत्याद्युत्तरवाक्योक्तनिर्गत-पाप्मत्वादिधर्म्येभ्य इत्यर्थः ।

एवञ्च दहरपद्मस्थो विष्णुरेव भवेत् । अपहतपाप्मा इत्याद्युत्तरवाक्ये हृत्पद्मस्थस्य अपहतप ाप्मत्वादिगुणश्रवणात् । पापाद्यभावस्य अन्यत्र कथञ्चिद्योगेऽपि सर्वथा सत्यकामत्वादिकस्या-योगात् । 'योऽशनाय' (बृ.५।५) इति श्रुतेः । निरपेक्षगुणानामन्यत्राभावात् । 'नित्यतीर्णे'ति (पाद्म) वचनात् । सापेक्षनिरपेक्षयोर्निरपेक्षस्य स्वीकार्यत्वात् । अतो हृत्पदस्थो विष्णुरेवेति सिद्धम् ।।

ॐ।। गतिशब्दाभ्यां तथा हि दृष्टं लिङ्गं च ।। ॐ ।।१५।।

युक्त्यन्तरेण विष्णोर्हृत्पद्मस्थत्वं प्रतिपादयत्सूत्रम् उपन्यस्यति –

ॐ गतिशब्दाभ्यां तथा हि दृष्टं लिङ्गं चेति ।। अस्यार्थः – गतिशब्दाभ्याम् 'अहरहर्गच्छन्त्य एतं ब्रह्मलोकम्' (छां. ८।३।२) इति वाक्ये श्रुताभ्यां सुप्तप्राप्यत्वब्रह्मशब्दाभ्यां हेतुभ्यां दहरहृत्पद्मस्थं ब्रह्मैव । किञ्च यतः 'अरश्च' इति (छां.८।५।३) श्रुतौ तथा सुप्तप्राप्यत्ववत् । हि विष्णुनिष्ठत्वेन प्रसिद्धम्।

लिङ्गम् अरण्याख्यसुधासमुद्राश्रयलोकवत्त्वरूपज्ञापकम् । हृत्पद्मस्थत्वे दृष्टम् उक्तम् । अतोऽपि 'दहरहृत्पद्मस्थो विष्णुरेव' इत्यर्थः ।

एवञ्च 'अहरहर्गच्छन्त्यः' इति सुप्तप्राप्यत्वाभिधानात् । सुप्तप्राप्यात्वस्य विष्णुलिङ्गत्वात्। 'सता सोम्य' (छां. ६।८) इति श्रुतेः । अरण्यनामामृतसमुद्रद्वयाश्रयलोकवत्त्वरूपलिङ्गस्य हृत्पद्मस्थस्य दृष्टत्वाच्च । 'अरश्च' इति श्रुतेः । ततश्च विष्णुरेव हृत्पद्मस्थ इति सिद्धम् ।।*।।

### ॐ ।। धृतेश्च महिम्नोऽस्यास्मिन्नुपलब्धेः ।। ॐ ।।१६।।

हेत्वन्तरेण विष्णोः हृत्पद्मस्थत्वं प्रतिपादयत्सूत्रं पठति –

।। ॐ धृतेश्च महिम्नोऽस्यास्मिन्नुपलब्धेरिति ।। अस्यार्थः – धृतेः = 'स एष सेतुर्विधृतिः' (छां. ८।४) इति हृत्पद्मस्थस्य सर्वाधारत्वश्रवणाच्च विष्णुरेव हृत्पद्मस्थः । किञ्च छान्दोग्ये हृत्पद्मस्थनिष्ठतयोक्तमहिम्नः सर्वेश्वरत्वादेः। 'अस्मिन् एष सर्वेश्वरः' इति वाजसनेयवाक्ये । उपलब्धेः = श्रवणात् । तत्समाख्यानादपि विष्णुरेव हृत्पद्मस्थः । ननु समाख्यानादपि कुतो विष्णुरेव? इत्यत उक्तम् – अस्येत्यादि ।। अस्मिन् = वाजसनेयकवाक्ये । श्रवणादेवेत्यर्थः ।

एवञ्च वाजसनेयके वाक्ये 'य एषोऽन्तर्हृदयः' (बृ.६।४।२२) इत्याद्युक्त्वा, 'एष सर्वेश्वरः' इत्यादिना हृदये विष्णोरुक्तत्वेन तत्समाख्यानात् । 'एतस्मिन् खल्वक्षरे' (बृ.५।८।११), 'स हि सर्वाधिपतिः' (महाना. ११) 'सर्वेशो विष्णुरेवैकः' (स्कान्दे) इत्यादि श्रुतिस्मृतीषूक्तलिङ्गानामन्यत्र सावकाशत्वाभावात् । अतः 'हृत्पद्मस्थो विष्णुरेव' इति सिद्धम् ।।*।।

### ॐ।। प्रसिद्धेश्च ।। ॐ ।।१७।।

समाख्यारूपयुक्त्यन्तरेण विष्णोर्हृत्पद्मगताकाशस्थत्वं समादधत्सूत्रं पठति –

ॐ प्रसिद्धेश्चेति ।। अस्यार्थः – 'दहरं विपाप्मम्' (महाना. १०।७)

इति श्रुतौ विष्णोर्हृत्पद्मस्थत्वप्रसिद्धेश्च स एव हृत्पद्मस्थ इत्यर्थः ।।

एवञ्च 'दहरं विपाप्मम्' इति समाख्यारूपश्रुत्यन्तरे विष्णोः हृत्पद्मस्थत्वप्रसिद्धेः । नच प्रश्नोत्तरयोरसङ्गतिः । ब्रह्मपुरशब्देनैव हृत्पद्मस्थस्य ब्रह्मत्वे सिद्धे स्वरूपमात्रे प्रश्नायोगात् । कीदृशं तत्? इति भावेन, किं तत्? इति प्रश्ने ब्रह्मस्वरूपनिरूपणाय 'यावान्' इत्यादिपरिहारसंश्लेषात् । नच साक्षात् पद्मगतस्य विष्णुत्वाभ्युपगमे सुषिरशब्दस्याकाश-वाचित्वेन पद्मगताकाशस्यैव विष्णुत्वाङ्गीकारे वा; दहरपद्मस्याकाशत्वम्, विष्णोस्त्वाकाशगतत्वम् इति तस्यैव सर्वाधारत्वम् इत्यभ्युपगमेऽपि वा; साक्षात् सुषिरस्य सर्वाधारत्वोक्तेः सुषिरश्रुतिविरोधः । यथा मन्दिरस्थमञ्जूषान्तर्गतमपि वस्तु मन्दिरस्थमिति सञ्ज्ञीयते, तथा इहापि सुषिरश्रुतेः सुषिरस्याकाशस्यैव साक्षात् सर्वाधारत्वप्रतिपादिकायाः 'तस्यान्ते' (महाना. ११) सुषिरपदघटितश्रुतेः पद्मगतसुषिरान्तस्थपरमात्मानमपेक्ष्य प्रवृत्तत्वात् । अतः 'हृत्पद्मस्थो विष्णुरेव' इति सिद्धम् ।।*।।

ॐ ।। इतरपरामर्शात् स इति चेन्नासम्भवात् ।। ॐ ।।१८।।

ननु आकाशस्य सर्वाधारतया हृत्पद्मस्थत्वं जीवस्यैव भवेत् । उत्तरत्र 'परं ज्योतिः' (छां.८।१२।३) इत्युक्तहृत्पद्मस्थात्मतया परामर्शात् । दहरस्थत्वलिङ्गात् । न चान्वयानुपपत्तिः । विष्णुपक्षे वाक्ययोजनावज्जीवपक्षेऽपि योजयितुं शक्यत्वादित्यादिना भगवतो हृत्पद्मस्थत्वमाक्षिप्य समादधत्सूत्रमाह –

ॐ ।। इतरपरामर्शात् स इति चेन्नासम्भवादिति ।। अस्यार्थः – इतरपरामर्शात् = 'स्वेन रूपेणाभिनिष्पद्यते' (छां. ८।१२।३) इत्युक्तस्य जीवस्य हृत्पद्मस्थात्मतया 'एष आत्मा' (छां. ४।१५।१) इत्येतच्छब्देन परामर्शात्, ग्रहणात् जीव एव हृत्पद्मस्थ इति चेन्न । कुतः? असम्भवात् = हृत्पद्मस्थनिष्ठतया श्रुतानाम् अपहतपाप्मत्वादिगुणानां जीवे स्वातन्त्र्येणासम्भवादित्यर्थः ।

एवञ्च जीवस्यापहतपाप्मत्वाद्यसम्भवेन विष्णुरेव हृत्पद्मस्थ इति सिद्धम् ।

ॐ ।। उत्तराच्चेदाविर्भूतस्वरूपस्तु ।। ॐ ।।१९।।

ननु 'एषः सम्प्रसादः' इत्युक्तजीवस्य 'स तत्र पर्येति' इत्यादिना सत्यकामत्वप्रतीतेः, तत एव विशोकत्वादिसिद्धेरुक्तगुणसम्भवादिति जीव एव हृत्पद्मस्थ इति प्राप्ते, समादधत्सूत्रं पठति –

ॐ।। उत्तराच्चेदाविर्भूतस्वरूपस्तु इति ।। अस्यार्थः – तुशब्द एवार्थे । नेति शेषः । तथा च उत्तरात् 'स तत्र पर्येति' (छां.८।१२।३) इत्युत्तरवाक्यात् जीवस्य सत्यकामत्वादि प्रतीतेः । तत एव विशोकत्वादेः सम्भवात् । स एव हृत्पद्मस्थ इति चेन्न । कुतः? यतः तद्वाक्ये 'स्वेन' इत्युत्तरवाक्यबलात् आविर्भूतस्वरूपः मुक्त एव प्रतिपाद्यः । न जीवमात्रम् । मुक्तश्च न स्वतोऽपहतपाप्मत्वादिगुणकः । अतो न तस्यापि हृत्पद्मस्थत्वमित्यर्थः ।

एवञ्च उत्तरवाक्ये मुक्तजीवस्योच्यमानत्वेन हृत्पद्मस्थस्य देहान्तर्वर्तितया मुक्तत्वायोगात् । न चैतद्वाक्यस्य मुक्तविषयत्वेऽपि मुक्तस्यापि जीवत्वेऽपहतपाप्मत्वादिसम्भवाभावेन जीव एव तद्गुणको हृत्पद्मगततया भाविभाविनोच्यते इति वाच्यम् । मुक्तस्यापीश्वरप्रसादादेव तद्गुणाविर्भावेन स्वतोऽपहतपाप्मत्वाद्यसम्भवात् । हृत्पद्मस्थो विष्णुरेवेति सिद्धम् ।।*।।

ॐ ।। अन्यार्थश्च परामर्शः ।। ॐ ।।२०।।

ननु 'एषः' (छां ८।३।४) इति जीवं परामृश्य, 'आत्मा' इति तस्य हृत्पद्मस्थात्मत्वाभिधानाद-मुख्यापहतपाप्मत्वादिगुणोऽपि जीव एतच्छब्दपरामर्शबलाद्हृत्पद्मस्थात्मा स्यादिति प्राप्ते, सूत्रितम् –

ॐ ।। अन्यार्थश्च परामर्श इति ।। अस्यार्थः – चः एवार्थे । परामर्शः 'एष आत्मा' इति वाक्यगत एतत् शब्दः । अन्यार्थः 'परंज्योतिः' इत्युक्तपरमात्मार्थ एव न जीवार्थ इत्यर्थः ।

एवञ्च 'एष आत्मा' इति परमात्मानमेव 'एषः' इति परामृश्य, तस्यात्मत्वोक्तेः, 'न जीवः किन्तु विष्णुरेव हृत्पद्मस्थः' इति सिद्धम् ।।*।।

**ॐ।। अल्पश्रुतेरिति चेत्तदुक्तम् ।। ॐ।।२१।।**

ननु यथा जीवेऽसम्भाव्यमानापहतपाप्मत्वादिगुणश्रवणात् न जीवः तथा परमात्मनि असम्भाव्यमानजीवलिङ्गस्याप्यल्पस्थानस्थितत्वस्य श्रवणात् । ततश्च हृत्पद्मस्थो जीव एवेति प्राप्ते, सूत्रं पठति –

ॐ।। अल्पश्रुतेरिति चेत्तदुक्तमिति ।। अस्यार्थः – अल्पश्रुतेः 'दहर' (छां. ८।१।१) इत्यल्पस्थानस्थितत्वोक्तेः, जीव एव हृत्पद्मस्थ इति चेत्; नेति शेषः । कुतः? यतस्तदुक्तम् तत्तु अल्पस्थानस्थितत्वम् । उक्तम् 'निचाय्यत्वद् एवं व्योमवच्च' इत्यत्र व्याप्तस्यापि विष्णोः उपासनार्थमुच्यत इत्युक्तम्, 'आत्मान्तर्हृदये' इति श्रुत्युक्तं च । अत इत्यर्थः ।

एवञ्च निचाय्यत्वादेवम्(?) इत्यत्र सर्वगतस्यापि विष्णोर्व्योमवदल्पस्थानस्थितेरुक्तत्वात्। 'एष म' (छां. ३।१४।३) इत्यत्र सर्वगततया श्रुत्युक्तत्वाच्च हृत्पद्मस्थो विष्णुरेवेति सिद्धम् ।।*।।

।। इति सूत्रार्थरत्नावळ्यां दहराधिकरणम् ।।

॥ ಪರಿಪೂರ್ಣಚಂದ್ರಿಕೆಯಲ್ಲಿ ದಹರಾಧಿಕರಣವು ಮುಗಿಯಿತು ॥
॥ ಶ್ರೀಮಧ್ವೇಶಾರ್ಪಣಮಸ್ತು ॥

# ಅನುಕೃತ್ಯಧಿಕರಣ

(೧-೩-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಅನುಕೃತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಆನುಕೂಲ್ಯೇನ ಗೃಹ್ಯಮಾಣನು ಪರಮಾತ್ಮನೇ

॥ अथ अनुकृत्यधिकरणम् ॥

**स — ॥ ॐ अनुकृतेस्तस्य च ॐ ॥ २२ ॥**

ಸೂತ್ರಾರ್ಥ - "ಕಥಂ ನು ತದ್ವಿಜಾನೀಯಾಂ' ಎಂಬ ಕಾಠಕದ ಶ್ರುತಿಯಲ್ಲಿ 'ಪ್ರಾರ್ಥಿತತ್ವ' ಎಂಬ 'ಆನುಕೂಲ್ಯೇನ ಗೃಹ್ಯಮಾಣ'ನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಸೂರ್ಯ ಮುಂತಾದವರ ಪ್ರಕಾಶನ ಕ್ರಿಯೆಯು, ಭಗವದಧೀನವಾಗಿದೆ ಎಂದು 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सत्रदीपिका** — चः समुच्चये । तस्येति श्रुतिप्रतीकग्रहणम् । अनुकृतिरनुक्रिया । तथाच "कथं नु तद्विजानीयाम्" (कठ. २-२-१४.) इति ज्ञानार्थं प्रार्थितत्वरूपानुकूल्येन गृह्यमाणं ब्रह्मैव । कुतः ? अनुकृतेः "तमेव भान्तमनुभाति सर्वम्" (कठ. २-२-१५.) इति वाक्यशेषे सूर्यादीनां भगवत्क्रियानुसारि-

प्रकाशाख्यक्रियाकर्तृत्वश्रवणात् । ''तस्य भासा सर्वमिदं विभाति'' (कठ. २-२-१५.) इति जगतः परमात्मप्रभाप्रकाश्यत्वश्रुतेश्चेत्यर्थः ।। १ ।।

ಅರ್ಥ -- 'ಚ' ಎಂಬ ಶಬ್ದವು ಸಮುಚ್ಚಯಾರ್ಥದಲ್ಲಿದೆ, 'ತಸ್ಯ' ಎಂಬ ಪದವು 'ತಸ್ಯ ಭಾಸಾ' ಎಂಬ ಶ್ರುತಿಯ ಪ್ರತೀಕವಾಗಿದೆ, 'ಅನುಕೃತೇಃ' ಎಂಬ ಪದಕ್ಕೆ 'ಅನುಕ್ರಿಯಾ' ಪ್ರಾರ್ಥನೆ ಎಂದರ್ಥ. ಆದ್ದರಿಂದ 'ಕಥಂ ನು ತದ್ವಿಜಾನೀಯಾಂ' ಎಂಬ ಶ್ರುತಿಯಲ್ಲಿ ಜ್ಞಾನಕ್ಕೋಸ್ಕರ ಪ್ರಾರ್ಥಿತನಾದವನು (ಅನುಕೂಲ್ಯೇನ ಗೃಹ್ಯಮಾಣನಾದವನು) ಮಹಾವಿಷ್ಣುವೇ ಆಗಿದ್ದಾನೆ. ಏಕೆಂದರೆ 'ಅನುಕೃತೇಃ ತಮೇವ ಭಾಂತಂ ಅನುಭಾತಿ ಸರ್ವಮ್' ಎಂಬ ಕಾಠಕದ ವಾಕ್ಯಶೇಷದಲ್ಲಿ ಸೂರ್ಯ ಮೊದಲಾದವರ ಪ್ರಕಾಶನಕ್ರಿಯೆಯು ಭಗವಂತನ ಕ್ರಿಯೆಗೆ ಅನುಸಾರಿಯಾಗಿದೆ ಎಂದು ಶ್ರುತವಾಗಿದೆ. ತಸ್ಯ ಚ = 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬ ಶ್ರುತಿಯಿಂದ ಜಗತ್ತು ಭಗವಂತನ ತೇಜಸ್ಸಿನಿಂದಲೇ ಬೆಳಗುತ್ತಿದೆ ಎಂದು ತಿಳಿಯುತ್ತದೆ.

## श्रीमदानन्दतीर्थभगवत्पादाचार्यविरचित-
## ब्रह्मसूत्रभाष्यम्

**भाष्यम् — अदृश्यत्वादयः परमेश्वरगुणा उक्ताः । 'तेषां सुखं शाश्वतं नेतरेषाम् । तदेतदिति मन्यन्तेऽनिर्देश्यं परमं सुखम्' (कठ. ५, १२,१४) इत्यादिना ज्ञानिसुखस्याप्यनिर्देश्यत्वमज्ञेयत्वं चोच्यत इति ।।**

ಅನುವಾದ - ಹಿಂದೆ ಆನಂದಮಯಾಧಿಕರಣದಲ್ಲಿ ಅದೃಶ್ಯತ್ವಾದಿಗುಣಗಳು ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ಸಮರ್ಥಿಸಲಾಯಿತು. ಆದರೆ ಇದು ಸರಿಯಲ್ಲ. ಜ್ಞಾನಿಗಳಿಗೆ ಮಾತ್ರ ಶಾಶ್ವತವಾದ ಸುಖವು ದೊರೆಯುತ್ತದೆ, ಬೇರೆಯವರಿಗೆ ದೊರೆಯುವುದಿಲ್ಲ. ಇಂತಹ ಶಾಶ್ವತವಾದ ಸುಖವೇ ಪರಮಸುಖವೆಂದು ಕರೆಯಲ್ಪಟ್ಟಿದೆ. 'ಹೀಗೆ ಕಾಠಕದಲ್ಲಿರುವ ವಾಕ್ಯಗಳಿಂದ ಅದೃಶ್ಯತ್ವಾದಿಗಳಲ್ಲಿ ಸೇರಿರುವ ಅನಿರ್ದೇಶ್ಯತ್ವವನ್ನು ಅಜ್ಞೇಯತ್ವವನ್ನೂ ಸಹ ಜ್ಞಾನಿಗಳ ಸುಖದಲ್ಲಿ ಹೇಳಲಾಗಿದೆ'. ಆದ್ದರಿಂದ ಜ್ಞಾನಿಗಳ ಸುಖವೇ ಅದೃಶ್ಯವಾಗುತ್ತದೆಂದು ಪೂರ್ವಪಕ್ಷ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಮೊದಲು ಶ್ರುತ್ಯಾದಿಸಂಗತಿ ವಿಷಯ ಮೊದಲಾದವುಗಳನ್ನು ಸೂಚಿಸುತ್ತಾ ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ತೋರಿಸುತ್ತಾ ಇದ್ದಾರೆ -

ಪ್ರತಿಪದಾರ್ಥ -- ಅದೃಶ್ಯತ್ವಾದಯಃ = ಅದೃಶ್ಯತ್ವವೇ ಮೊದಲಾದ ಗುಣಗಳು, ಪರಮೇಶ್ವರಗುಣಾಃ = ವಿಷ್ಣುವಿನದ್ದೇ ಗುಣಗಳಾಗಿವೆ ಎಂದು, ಉಕ್ತಾಃ = ಆನಂದಮಯಾಧಿಕರಣದಲ್ಲಿ ಹೇಳಲಾಯಿತು.

ತೇಷಾಂ = ಜ್ಞಾನಿಗಳ, ಸುಖಂ = ಸುಖವು, ಶಾಶ್ವತಂ = ಶಾಶ್ವತವಾಗಿದೆ, ಇತರೇಷಾಂ = ಅಜ್ಞಾನಿಗಳ ಸುಖವು, ನ = ಶಾಶ್ವತವಲ್ಲ, ತದೇತತ್ = ಇಂತಹ ಜ್ಞಾನಿಗಳ ಸುಖವು, ಅನಿರ್ದೇಶ್ಯಂ = ಇಷ್ಟೇ ಎಂದು ನಿರ್ದೇಶ ಮಾಡಲು ಸಾಧ್ಯವಿಲ್ಲದ್ದು, ಪರಮಂ ಸುಖಂ = ಪರಮಸುಖಸ್ವರೂಪವಾದದ್ದು, ಇತಿ = ಎಂದು, ಮನ್ಯಂತೇ = ತಿಳಿಯುತ್ತಾರೆ, ಇತ್ಯಾದಿನಾ = ಇವೇ ಮೊದಲಾದ ಕಾಠಕದ ಮಾತುಗಳಿಂದ, ಜ್ಞಾನಿಸುಖಸ್ಯಾಪಿ = ಜ್ಞಾನಿಗಳ ಸುಖಕ್ಕೂ ಸಹ, ಅನಿರ್ದೇಶ್ಯತ್ವಂ = ಇಷ್ಟೇ ಎಂದು ನಿರ್ದೇಶಿಸಲು ಸಾಧ್ಯವಿಲ್ಲದ್ದೆಂದು, ಅಜ್ಞೇಯತ್ವಂ = ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದ್ದೆಂದು, ಉಚ್ಯತೇ = ಹೇಳಲಾಗಿದೆ, ಇತಿ = ಇಷ್ಟು ಪೂರ್ವಪಕ್ಷ.(೧)

---

(१) **भाष्यदीपिका** – अत्राधिकरणे **'कथं नु तद् विजानीयाम्'** इति वाक्योक्तं ज्ञानार्थं ज्ञेयप्रार्थनाविषयत्वं वा 'कथं नु तद् विजानीयां किमु भाति' इति ब्रह्मज्ञानानुकूलाभिव्यक्त्याख्यभानप्रार्थनाविषयत्वरूपं वा आनुकूल्येन गृह्यमाणत्वं लिङ्गं ब्रह्मणि समन्वीयते । श्रुत्यादिसङ्गतिं विषयादिकं च सूचयन् सयुक्तिकं पूर्वपक्षं दर्शयति – **अदृश्यत्वादीति** ।। 'उक्ताः' आनन्दमयाधिकरणे उदाहृतादृश्य इति वाक्ये इति भावः । उक्ता इत्यनन्तरं तत्र प्रविष्टमिति शेषः । प्रथमादिपदेनानिरुक्तत्वादेः, द्वितीयेन तु **'कथं नु तद् विजानीयां किमु भाति न भाति वा'** (कठ.५-१४) इति समन्वेतव्यलिङ्गबोधकोत्तरार्धस्य च ग्रहणम् । न केवलं विष्णोः, किन्तु ज्ञानिसुखस्यापीत्यपेरर्थः । एवार्थो वाऽपिशब्दः आनुमानिकसूत्रगतापिपदवत् । 'अज्ञेयत्वं' साकल्येनाज्ञेयत्वं दुर्ज्ञेयत्वमिति यावत् । चशब्दः परस्परसमुच्चये, आनुकूल्येन गृह्यमाणत्वरूपसमन्वेतव्यलिङ्गसमुच्चये वा । पूर्वश्रुत्यनुसाराददृश्यत्वादय इति, एतच्छ्रुत्यनुसारादनिर्देश्यत्वमिति व्युत्क्रमः । यद्यपि **'तदेतदिति'** एतदेवोदाहर्तव्यम् । तथाऽपि पूर्वपक्षे तच्छब्दार्थप्रदर्शनाय **'तेषाम्'** इति पूर्ववाक्यैकदेशोपन्यासः । अत एव तत्त्वप्रदीपे तेषामिति प्रस्तुतिः पूर्वपक्षोत्थापिकेत्युक्तम् ।

तथा चेत्थं योजना – पूर्वमानन्दमयाधिकरणे येऽदृश्यत्वादयो गुणाः परमेश्वरस्योक्ताः। तत्र तेषु प्रविष्टमनिर्देश्यत्वमज्ञेयत्वं च **'तेषां सुखम्'** इति प्रकृत्याऽऽम्नातेन **'तदेतत्'** इत्यादिना काठकवाक्येन पूर्वपक्षिरीत्या समीपस्थात् तच्छब्दात् परामृष्टस्य **'ज्ञानिसुखस्यापि'** ज्ञानिसुखस्यैवोच्यत इति । पूर्वार्धेनानिर्देश्यत्वस्योत्तरार्धे च **'किमु भाति न भाति'** इत्यनेन दुर्ज्ञेयत्वपर्यवसिताज्ञेयत्वस्य चार्थादुक्तत्वादिति भावः । टीकायामदृश्यत्वपदस्यानिर्देश्यत्वपरत्वादनिर्देश्यत्वमिति पाठाभ्युपगमाद्वा न तद्विरोधः। अत्रानिर्देश्यत्वमज्ञेयत्वं चोच्यत इति फलोक्तिः, आनुकूल्येन गृह्यमाणत्वस्यैवात्र विचार्यत्वात् । तत्तु द्वितीयादिशब्दोपात्तवाक्येन चशब्देन वा सूचितमिति द्रष्टव्यम् । यत एवमतः पूर्वोक्तमयुक्तमिति भावः । अनेनाऽनन्दमयाधिकरणोक्तादृश्यत्वाज्ञेयत्वरूपस्यानिर्देश्यत्वानिरुक्तत्वरूपस्य च तत्रान्यत्र च सत्त्वे ज्ञानिसुखेऽतिव्याप्त्याक्षेपाद्

तत्वप्रकाशिका –

ॐ ।। अपि स्मर्यते ।। ॐ ।।

यदेतल्लिङ्गद्वयस्य विष्णुनिष्ठत्वं श्रु(त्यो)त्युपपादितं तत्स्मृत्याप्युपपादयत्सूत्रं पठित्वा तां स्मृतिमुदाहरति ।। अपीति ।।

ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ 'ಸೂರ್ಯಾದಿತೇಜೋನಿಯಾಮಕತ್ವ' ಮತ್ತು 'ಜಗತ್‌ಭಾಸಕತ್ವ' ಎಂಬೆರಡು ಲಿಂಗಗಳು ವಿಷ್ಣುನಿಷ್ಠವಾಗಿವೆ ಎಂದು ಶ್ರುತಿಯಿಂದ ಹಿಂದಿನ ಸೂತ್ರದಲ್ಲೇ ಉಪಪಾದನೆ ಮಾಡಿದ್ದಾಯಿತು. ಈಗ ಅದೇ ವಿಷಯವನ್ನು ಸ್ಮೃತಿಯಿಂದಲೂ ಕೂಡ ಉಪಪಾದನೆ ಮಾಡಲು ಹೊರಟಿದ್ದಾರೆ. ಹಾಗೆ ಹೇಳುವ ಸೂತ್ರವನ್ನು ಪಠಿಸಿ ಸ್ಮೃತಿಯನ್ನು ಉದಾಹರಿಸುತ್ತಿದ್ದಾರೆ 'ಅಪಿ' ಇತ್ಯಾದಿ ಭಾಷ್ಯದಿಂದ.

तत्वप्रकाशिका – न केवलमेतच्छ्रूयतेऽपि तु स्मर्यतेऽपीत्यर्थः । मामकं मदधीनं मदीयं च ।।

ಈ ಎರಡು ಲಿಂಗಗಳು ಕೇವಲ ಶ್ರುತಿಯಲ್ಲಷ್ಟೇ ಹೇಳಲ್ಪಟ್ಟಿಲ್ಲ, ಸ್ಮೃತಿಯಲ್ಲಿಯೂ ಕೂಡ ಹೇಳಲ್ಪಟ್ಟಿದೆ. ಎಂದು ಸೂತ್ರದ ಅರ್ಥ. 'ಮಾಮಕಂ' ಎಂಬ ಗೀತೆಯಲ್ಲಿರುವ ಪದಕ್ಕೆ ನನ್ನ ಅಧೀನವಾದ ಮತ್ತು ನನಗೆ ಸಂಬಂಧ ಪಟ್ಟ ಎಂದರ್ಥ.

तत्वप्रकाशिका – किन्चतत 'न तत्र सूर्यो भाति न चन्द्रतारकं नेमा विद्युतो भान्ति कुतोऽयमग्निः' इत्यानुकूल्येन गृह्यमाणस्य सूर्याद्यप्रकाश्यत्वमुच्यते । तच्च विष्णोरेव स्मर्यते ।

ಮತ್ತು 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ', ಆ ಪರಮಾತ್ಮನನ್ನು ಸೂರ್ಯ, ಚಂದ್ರ, ನಕ್ಷತ್ರಗಳು ಪ್ರಕಾಶ ಪಡಿಸುವುದಿಲ್ಲವೆಂದ ಮೇಲೆ, ಅಗ್ನಿಯು ಹೇಗೆ ತಾನೆ ಪ್ರಕಾಶಪಡಿಸಿಯಾನು?ಎಂಬುದಾಗಿ ಆನುಕೂಲ್ಯೇನ ಗೃಹ್ಯಮಾಣನಾದವನಿಗೆ ಸೂರ್ಯಾದಿಗಳಿಂದ ಅಪ್ರಕಾಶ್ಯತ್ವವನ್ನು ಶ್ರುತಿಯು ಹೇಳಿದೆ. ಇದೇ ವಿಷಯವನ್ನು ಸ್ಮೃತಿಯೂ ಕೂಡ ವಿಷ್ಣುವಿನಲ್ಲೇ ಹೇಳುತ್ತಿದೆ.

तत्वप्रकाशिका – अतो विष्णुरेवात्र प्रतिपाद्य(त) इति सूत्रस्यार्थान्तरमभिप्रेत्य तां स्मृतिमुदाहरति ।। न तदिति ।।

ಆದ್ದರಿಂದ ವಿಷ್ಣುವೇ ಈ ಸ್ಮೃತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಹೇಳುತ್ತಾ ಆ ಸ್ಮೃತಿಯನ್ನು ಉದಾಹರಿಸುತ್ತಾ ಇದ್ದಾರೆ 'ನ ತತ್' ಇತ್ಯಾದಿಯಾಗಿ.

**तत्वप्रकाशिका – धाम स्वरुपम् । 'तेजः स्वरूपं च गृहं प्राज्ञैर्धामेतिगीयते' इत्यभिधानात् । युक्तिसमुच्चयेऽपिपदम् ।**

'ಧಾಮ' ಎಂಬ ಪದಕ್ಕೆ 'ಸ್ವರೂಪ' ಎಂದರ್ಥ, 'ತೇಜಃ ಸ್ವರೂಪಂ ಚ ಗೃಹಂ ಪ್ರಾಜ್ಞೈರ್ಧಾಮೇತಿ ಗೀಯತೇ' ಎಂಬುದಾಗಿ ಧಾಮ ಶಬ್ದಕ್ಕೆ ಸ್ವರೂಪ ಎಂಬರ್ಥದಲ್ಲಿ ಕೋಶ ಇದೆ. ಸೂತ್ರದಲ್ಲಿರುವ 'ಅಪಿ' ಶಬ್ದವು ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ, 'ಸೂರ್ಯಾದಿತೇಜೋನಿಯಾಮಕತ್ವ' ಮತ್ತು 'ಜಗತ್ ಪ್ರಕಾಶಕತ್ವ' ಎಂಬ ಯುಕ್ತಿಗಳನ್ನು ಸಮುಚ್ಚಯ ಮಾಡುತ್ತಿದೆ.

**तत्वप्रकाशिका – नच मन्तव्यं न तत्र सूर्यो भातीत्यादि पुलिङ्गेन प्रकृतपरमा (त्मनए)त्मैवोच्यते नतु आनुकूल्येन गृह्यमाणस्य । अतस्तज्ज्ञानिसुखमिति ग्रहणेऽपि बाधकाभाव इति ।**

'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದಲ್ಲಿ 'ಏಕೋ ವಶೀ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಪರಮಾತ್ಮನನ್ನೇ ಪುಲ್ಲಿಂಗದಲ್ಲಿ ಹೇಳಲಾಗಿದೆ ಹೊರತು ನಪುಂಸಕಲಿಂಗದಲ್ಲಿರುವ ಆನುಕೂಲ್ಯೇನ ಗೃಹ್ಯಮಾಣವಾದ ಸುಖವನ್ನು ಹೇಳಿರುವುದಿಲ್ಲ. ಆದ್ದರಿಂದ ಪರಮಾತ್ಮನಿಗೆ ಈ ಸುಖವು ಸಂಬಂಧಪಡದ ಕಾರಣ ಜ್ಞಾನಿಸುಖವನ್ನು ತೆಗೆದುಕೊಂಡರೆ ಏನೂ ಬಾಧಕವಿಲ್ಲವೆಂದು ಶಂಕಿಸಬಾರದು.

**तत्वप्रकाशिका – किमु भाति न भाति वेति प्रकृतस्यैव न तत्रेत्यनुसन्धान-प्रतीतेः । यस्यैवं सुखं रूपं तत्रेति वाक्ययोजनोपपत्तेश्च ।**

'ನ ತತ್ರ ಸೂರ್ಯೋ ಭಾತೀ' ಎಂಬುದರ ಹಿಂದಿನ ಮಂತ್ರದಲ್ಲಿ 'ಕಿಮು ಭಾತಿ ನ ಭಾತಿ ವಾ' ಎಂಬುದಾಗಿ ಪ್ರಸಕ್ತವಾದ ಆನುಕೂಲ್ಯೇನ ಗೃಹ್ಯಮಾಣವಾದ ಸುಖವನ್ನು 'ನ ತತ್ರ' ಎಂಬಲ್ಲಿ ಅನುಸಂಧಾನ ಮಾಡಬೇಕೆಂದು ಪ್ರತೀತವಾಗುತ್ತದೆ. ಮತ್ತು ಅನಿರ್ದೇಶ್ಯವಾದ ಸುಖವು ಯಾರ ಸ್ವರೂಪವೋ ಅವರನ್ನು ಸೂರ್ಯಾದಿಗಳು ಪ್ರಕಾಶ ಪಡಿಸುವುದಿಲ್ಲವೆಂದು ವಾಕ್ಯಯೋಜನೆ ಮಾಡಿದಾಗ ಅದೂ ಕೂಡ ಉಪಪನ್ನವಾಗುತ್ತದೆ.

**तत्वप्रकाशिका – दूरोक्तग्रहणे बिभ्यतोऽतिदूरोक्तग्रहणे कथं न भीतिः । अनिर्देश्यत्वाद्ययोगाच्च । ।**

'ತದೇತತ್' ಎಂಬಲ್ಲಿರುವ 'ತತ್' ಎಂಬ ಸರ್ವನಾಮಶಬ್ದದಿಂದ 'ಏಕೋ ವಶೀ' ಎಂಬ ದೂರದ ವಾಕ್ಯದಲ್ಲಿರುವ ಪರಮಾತ್ಮನನ್ನು, ಸ್ವೀಕಾರ ಮಾಡಲು ಪೂರ್ವಪಕ್ಷಕಾರರಿಗೆ ಹೆದರಿಕೆ ಆಗುವುದಾದರೆ, 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದಲ್ಲಿ 'ತದೇತತ್' ಎಂಬ ವಾಕ್ಯಕ್ಕಿಂತಲೂ ಬಹಳದೂರದಲ್ಲಿರುವ 'ಏಕೋ ವಶೀ' ಇತ್ಯಾದಿ ವಾಕ್ಯದಲ್ಲಿರುವ ಪರಮಾತ್ಮನನ್ನು ಪರಾಮರ್ಶ-ಮಾಡಲು ಭಯವಾಗುವುದಿಲ್ಲವೇನು? ಮತ್ತು ಜ್ಞಾನಿಸುಖದಲ್ಲಿ ಅದೃಶ್ಯತ್ವವು ಕೂಡುವುದಿಲ್ಲ-ವಾದ್ದರಿಂದ 'ತದೇತತ್' ಎಂಬ ವಾಕ್ಯದಿಂದ ಜ್ಞಾನಿಸುಖವನ್ನು ಸ್ವೀಕರಿಸಲು ಸಾಧ್ಯವಿಲ್ಲ.

**तत्वप्रकाशिका – तस्मादानुकूल्येन गृह्यमाणो हरिरेवेति तस्यैव अनिर्देश्यत्वादीति सिद्धम् ।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**
**अनुकृत्यधिकरणम् ।।**

ಈ ಎಲ್ಲಾಕಾರಣಗಳಿಂದ 'ಸೂರ್ಯಾದಿತೇಜೋನಿಯಾಮಕತ್ವ', 'ಜಗತ್‌ಪ್ರಕಾಶಕತ್ವ' ಮತ್ತು ಸೂರ್ಯಾದಿಗಳಿಂದ ಅಪ್ರಕಾಶ್ಯತ್ವ, ಈ ಎಲ್ಲ ಲಿಂಗಗಳೂ ಆನುಕೂಲ್ಯೇನ ಗೃಹ್ಯಮಾಣನಾದ ಪರಮಾತ್ಮನಲ್ಲಿ ಸಮಂಜಸವಾಗಿ ಉಪಪನ್ನವಾಗುವುದರಿಂದ ಶ್ರೀಹರಿಯೇ ಆನುಕೂಲ್ಯೇನ ಗೃಹ್ಯಮಾಣನಾಗುತ್ತಾನೆ. ಆದ್ದರಿಂದ ಅನಿರ್ದೇಶ್ಯತ್ವಾದಿಗುಣಗಳೂ ಕೂಡ ಅವನಲ್ಲಿಯೇ ಸಿದ್ಧವಾಗುತ್ತವೆ.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಅನುಕೃತ್ಯಧಿಕರಣವು ಮುಗಿಯಿತು

**भावदीपः –**

**ॐ अपि स्मर्यते ॐ ।।**

**न केवलमिति** ।। एतेन प्रागुक्ता श्रुतिरेतत्सूत्रस्थापिपदेन समुच्चितैवोक्तेति सूचितम् । भाष्यस्य सूत्रेणान्वय इति भावः ।

'ಓಂ ಅಪಿ ಸ್ಮರ್ಯತೇ ಓಂ'

ಟೀಕೆಯಲ್ಲಿ 'ನ ಕೇವಲಮ್' ಇತ್ಯಾದಿಯಾಗಿ ಹೇಳಿದ್ದರಿಂದ, ಹಿಂದಿನ ಸೂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಸೂತ್ರವನ್ನು ಈ ಸೂತ್ರದಲ್ಲಿರುವ 'ಅಪಿ' ಪದದಿಂದ ಸಮುಚ್ಚಯ ಮಾಡಬೇಕೆಂದು ಸೂಚಿಸಿದಂತಾಯಿತು. ಭಾಷ್ಯದ ಮಾತಿಗೆ ಸೂತ್ರದ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು.

**भावदीपः** – अत्राद्यसूत्रे चशब्देन न तत्रेति वाक्यशेषोक्तलिङ्गं समुच्चीयते । तत्र सूर्याद्यप्रकाश्यत्वसूर्यादिनियन्तृत्वजगद्भासकत्वरूपलिङ्गानां मध्ये द्वयोरपि शब्देन प्रागुक्तश्रुतिसिद्धत्वमुक्त्वा त्रयाणामपि विष्णुनिष्ठत्वं स्मार्तं चेत्याहेति योजना तु स्फुटत्वान्नोक्तेत्याहुः ।

ಈ ಅಧಿಕರಣದ ಪ್ರಥಮಸೂತ್ರದಲ್ಲಿರುವ 'ಚ' ಶಬ್ದದಿಂದ 'ನ ತತ್ರ' ಇತ್ಯಾದಿ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಲಿಂಗವನ್ನು ಸಮುಚ್ಚಯ ಮಾಡಲಾಗಿದೆ. ಆ ಶ್ರುತಿಯಲ್ಲಿ ಸೂರ್ಯಾದ್ಯಪ್ರಕಾಶ್ಯತ್ವ, ಸೂರ್ಯಾದಿನಿಯಂತೃತ್ವ, ಜಗತ್‌ಭಾಸಕತ್ವ ಮೊದಲಾದ ಲಿಂಗಗಳ ಮಧ್ಯದಲ್ಲಿ ಎರಡನ್ನು 'ಅಪಿ' ಶಬ್ದದಿಂದ ಸ್ವೀಕರಿಸಿ, ಅವುಗಳನ್ನು ಹಿಂದೆ ಉಲ್ಲೇಖಿಸಿದ, ಶ್ರುತಿಯಿಂದ ಸಿದ್ಧವಾಗಿವೆಯೆಂದು ಸಮರ್ಥಿಸಿ, ಮೂರುಲಿಂಗಗಳೂ ಸಹ ವಿಷ್ಣುನಿಷ್ಠವಾಗಿವೆಯೆಂಬ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗಿದೆಯೆಂದು ತಿಳಿಯಬೇಕು. ಈ ವಿಷಯವು ಸ್ಪಷ್ಟವಾದ್ದರಿಂದ ಪ್ರತ್ಯೇಕವಾಗಿ ಹೇಳಿಲ್ಲ.

**भावदीपः** – न तदिति स्मृत्युपयोगाय सूत्रस्यार्थान्तरं व्यक्तीकुर्वन्नवतारयति – **किञ्चनेति** ।। सौत्रापिशब्दार्थोऽयम् । भाति भासयति । सूर्यादयस्तं न भासयन्तीत्याथर्वणभाष्योक्तेः ।।

'ನ ತದ್ಭಾಸಯತೇ' ಎಂಬ ಸ್ಮೃತಿಗೆ ಉಪಯೋಗವಾಗುವುದಕ್ಕಾಗಿ ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಹೇಳಲು ಅವತಾರಿಕೆ ನೀಡುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ. ಇದು ಸೂತ್ರದಲ್ಲಿರುವ 'ಅಪಿ' ಶಬ್ದದ ಅರ್ಥವಾಗಿದೆ. ಭಾತಿ' ಎಂಬುದಕ್ಕೆ ಪ್ರಕಾಶಪಡಿಸುತ್ತಾನೆ ಎಂದರ್ಥ. ಸೂರ್ಯಾದಿಗಳು ವಿಷ್ಣುವನ್ನು ಪ್ರಕಾಶ ಪಡಿಸುವುದಿಲ್ಲವೆಂದು ಆಥರ್ವಣ ಭಾಷ್ಯದಲ್ಲಿ ಹೇಳಿರುವುದರಿಂದ.

**भावदीपः** – युक्तीति ।। पूर्वयोजनायाम् आद्यसूत्रोपात्तस्य युक्तिद्वयस्य विष्णौ श्रौतत्वसमुच्चयेऽपिशब्द इति दर्शितम् । इदानीं सूर्याद्यप्रकाश्यत्वस्यापि स्मार्तत्वमिति सूर्याद्यप्रकाश्यत्वाद्यानुकूल्येन गृह्यमाणो विष्णुरेवेति सूर्याद्यप्रकाश्यत्वरूपयुक्ति समुच्चयेऽपि पदमित्यर्थः ।

ಹಿಂದಿನ ಯೋಜನೆಯಲ್ಲಿ ಮೊದಲನೆಯ ಸೂತ್ರದಿಂದ ಸ್ವೀಕರಿಸಲ್ಪಟ್ಟ ಎರಡು ಯುಕ್ತಿಗಳಿಗೆ, ವಿಷ್ಣುವಿನಲ್ಲಿ ಶ್ರುತಿಸಿದ್ಧತ್ವವನ್ನು ಸಮುಚ್ಚಯ ಮಾಡುವುದಕ್ಕಾಗಿ 'ಅಪಿ' ಶಬ್ದವು ಉಕ್ತವಾಗಿದೆಯೆಂದು ಹೇಳಲಾಯಿತು. ಈಗ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಲಿಂಗವೂ ಸಹ ಶ್ರುತಿಸಿದ್ಧವೇ ಆಗಿದೆ. ಆದ್ದರಿಂದ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಲಿಂಗದ ಬಲದಿಂದಲೂ ಆನುಕೂಲ್ಯೇನ ಗೃಹ್ಯಮಾಣನಾದವನು ವಿಷ್ಣುವೇ ಆಗಿದ್ದಾನೆ ಎಂಬುದಾಗಿ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಯುಕ್ತಿಯನ್ನು ಸಮುಚ್ಚಯ ಮಾಡುವುದಕ್ಕಾಗಿ ಅಪಿಶಬ್ದವನ್ನು ಪ್ರಯೋಗಿಸಲಾಗಿದೆಯೆಂದು ಈಗ ಯೋಜನೆ ಮಾಡಿಕೊಳ್ಳಬೇಕು.

ಪರಿಪೂರ್ಣಚಂದ್ರಿಕಾ

**भावदीपः** – श्रुतौ न तत्रेति वाक्यशेषोक्तलिङ्गस्य प्राथम्येन सूर्याद्यप्रकाश्यत्वाद् 'अनुकृतेस्तस्य च' इति वक्तव्ये अनुकृतिशब्देन 'तमेव भान्तम्' इति द्वितीय वाक्योक्तानुभानोक्त्या सूचितं चोद्यमाशङ्क्योत्तरयति – **नचेति** ।।

ಶ್ರುತಿಯಲ್ಲಿ 'ನ ತತ್ರ' ಎಂಬ ವಾಕ್ಯಶೇಷದಿಂದ ಹೇಳಲ್ಪಟ್ಟ ಲಿಂಗಕ್ಕೆ ಪ್ರಾಥಮ್ಯವಿರುವುದರಿಂದ 'ಸೂರ್ಯಾದ್ಯಪ್ರಕಾಶ್ಯತ್ವಾತ್' 'ಅನುಕೃತೇಸ್ತಸ್ಯ ಚ' ಎಂಬ 'ಅನುಕೃತಿ' ಶಬ್ದದಿಂದ 'ತಮೇವ ಭಾಂತಮ್' ಎಂಬ ಎರಡನೆಯ ವಾಕ್ಯದಲ್ಲಿ ಹೇಳಲ್ಪಟ್ಟ ಅನುಭಾನದಿಂದ ಸೂಚಿತವಾದ ಆಶಂಕೆಯನ್ನು ತೋರಿಸಿ ಉತ್ತರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**भावदीपः** – **इत्यादि पुल्लिङ्गेनेति** ।। तत्र तं तस्येति तच्छब्दत्रयगतेनेत्यर्थः । मध्ये तमिति पुल्लिङ्गश्रवणात् पूर्वोत्तरतच्छब्दयोरपि तथात्वमिति भावः ।। **प्रकृतेति**।। 'चेतनश्चेतनानाम्' इत्यनेनेत्यर्थः ।

'ಇತ್ಯಾದಿ ಪುಲ್ಲಿಂಗೇನ' ಎಂದರೆ 'ತತ್ರ ತಂ ತಸ್ಯ' ಇತ್ಯಾದಿ ಸ್ಥಳಗಳಲ್ಲಿರುವ ಮೂರು 'ತತ್' ಶಬ್ದಗಳಿಂದ ಎಂದರ್ಥ. ಈ ಮೂರರ ಮಧ್ಯೇ 'ತಮ್' ಎಂಬುದು ಮಾತ್ರ ಪುಲ್ಲಿಂಗದಲ್ಲಿದೆ. ಹಿಂದಿನ-ಮುಂದಿನ ಪದಗಳಲ್ಲಿಯೂ ಪುಲ್ಲಿಂಗವನ್ನೇ ಪ್ರಯೋಗಿಸಬೇಕಾಗಿತ್ತು. 'ಪ್ರಕೃತ' ಎಂದರೆ 'ಚೇತನಶ್ಚೇತನಾನಾಮ್' ಎಂಬುದರಿಂದ ಪ್ರಕೃತವಾದ ಎಂದರ್ಥ.

**भावदीपः** – उच्यते । सूर्याद्यप्रकाश्यत्वतत्प्रकाशनियन्तृत्वजगत्प्रकाशकत्वरूप लिङ्गत्रयमित्यर्थः ।। **प्रकृतस्यैवेति** ।। दुर्ज्ञेयत्वेनोक्तस्यैव वस्तुनो 'न तत्र सूर्यो भाति' इत्यत्र प्रत्यभिज्ञानादित्यर्थः ।

'ಉಚ್ಯತೇ' ಎಂದರೆ ಸೂರ್ಯಾದ್ಯಪ್ರಕಾಶ್ಯತ್ವ, ತತ್ಪ್ರಕಾಶನಿಯಂತೃತ್ವ, ಜಗತ್ಪ್ರಕಾಶಕತ್ವ ಎಂಬ ಮೂರು ಲಿಂಗಗಳು ಹೇಳಲ್ಪಟ್ಟಿವೆ ಎಂದರ್ಥ. 'ಪ್ರಕೃತಸ್ಯೈವ' ಎಂದರೆ ದುರ್ಜ್ಞೇಯವೆಂದು ಹೇಳಲ್ಪಟ್ಟ ವಸ್ತುವೇ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದಿಂದ ಪ್ರತ್ಯಭಿಜ್ಞಾನಮಾಯವಾಗಿದೆ ಎಂದರ್ಥ.

**भावदीपः** – तथाच तदैकार्थ्यमेव तं तस्येति तच्छब्दयोरपीति भावः । कथं तर्हि तत्र तमित्यादिपुल्लिङ्गनिर्वाह इत्यत आह – **यस्येति** ।।

ಆದ್ದರಿಂದ ಆ ಶ್ರುತಿಯ ಜೊತೆಗೆ 'ತಂ ತಸ್ಯ' ಎಂಬಲ್ಲಿರುವ ತತ್ಶ್ರುತಿಗಳೂ ಸಹ ಏಕಾರ್ಥತ್ವವನ್ನು ಹೊಂದುತ್ತವೆ. ಹಾಗಾದರೆ 'ತತ್ರ ತಮ್' ಇತ್ಯಾದಿಯಾಗಿ ಪುಲ್ಲಿಂಗವನ್ನು ಹೇಗೆ ನಿರ್ವಹಿಸುವುದು? ಎಂಬ ಪ್ರಶ್ನೆಗೆ 'ಯಸ್ಯ' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ.

ಅನುಕೃತ್ಯಧಿಕರಣ (೧-೩-೬)

**भावदीपः** – यदनिर्देश्यं सुखम् आनुकूल्येन ग्राह्यं च तत्परमात्मनः एतत्प्रकृतं रूपम् । यस्य परमात्मनो रूपमेवमनिर्देश्यपरमसुखात्मकमानुकूल्येन ग्राह्यं च तत्र परमात्मनि तं परमात्मानम् इति च पुल्लिङ्गस्य सन्निहितपरत्वस्य चोपपत्तेरित्यर्थः ।

ಯಾವ ಅನಿರ್ದೇಶ್ಯವಾದ ಸುಖವಿದೆಯೋ, ಮತ್ತು ಆನುಕೂಲ್ಯೇನ ಗೃಹ್ಯಮಾಣವಾಗಿದೆಯೋ, ಆ ಸುಖವು ಪರಮಾತ್ಮಸ್ವರೂಪವೇ ಆಗಿದೆ. ಯಾವ ಪರಮಾತ್ಮನ ರೂಪವು ಅನಿರ್ದೇಶ್ಯವಾದ ಪರಮಸುಖಸ್ವರೂಪವೂ ಆನುಕೂಲ್ಯೇನ ಗೃಹ್ಯಮಾಣವೂ ಆಗಿದೆಯೋ, ಅಂತಹ ತತ್ರ = ಪರಮಾತ್ಮನಲ್ಲಿ 'ತಂ' = ಪರಮಾತ್ಮನನ್ನು ಎಂಬುದಾಗಿ ಪುಲ್ಲಿಂಗಕ್ಕೆ ಸನ್ನಿಹಿತಪರತ್ವವು ಉಪಪನ್ನವಾಗುತ್ತದೆಂದರ್ಥ.

**भावदीपः** – तर्हि यस्येत्यध्याहारदोषः । व्यवहितपरत्वपक्षे तु 'यो विदधाति कामान्' 'न तत्र सूर्यो भाति' इत्युपपत्तेरित्यत आह – **दूरोक्तेति** ।। 'तदेतद्' इति श्रुतेर्व्यवहितेश्वरपरत्वे बिभ्यतः न तत्रेत्यादेरतिदूरोक्तस्य 'चेतनश्चेतनानाम्' इति वाक्योक्तग्रहणे कथं न भीतिरित्यर्थः ।

ಹಾಗಾದರೆ 'ಯಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಲ್ಲವೇ? ವ್ಯವಹಿತಪರತ್ವವನ್ನು ಒಪ್ಪುವ ಪಕ್ಷದಲ್ಲಿ 'ಯಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕಾಗಿಲ್ಲ. 'ಯೋ ವಿದಧಾತಿ ಕಾಮಾನ್ ನ ತತ್ರ ಸೂರ್ಯೋ ಭಾತಿ' ಎಂಬುದಾಗಿಯೇ ಅನ್ವಯವನ್ನು ಕೂಡಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ದೂರೋಕ್ತ' ಇತ್ಯಾದಿ ಟೀಕೆಯಿಂದ ಉತ್ತರಿಸಿದ್ದಾರೆ. 'ತದೇತತ್' ಎಂಬ ಶ್ರುತಿಗೆ ವ್ಯವಹಿತಪರತ್ವವನ್ನು ಒಪ್ಪಬೇಕಾಗುತ್ತದೆಂದು ಹೆದರುವವನು 'ನ ತತ್ರ' ಎಂಬ ವಾಕ್ಯಕ್ಕೆ ಅತ್ಯಂತ ದೂರದಲ್ಲಿರುವ 'ಚೇತನಶ್ಚೇತನಾನಾಮ್' ಎಂಬ ವಾಕ್ಯದಲ್ಲಿ ಪ್ರತಿಪಾದ್ಯನಾದವನನ್ನು ಪರಾಮರ್ಶ ಮಾಡಲು ಹೆದರುವುದಿಲ್ಲವೇನು?

**भावदीपः** – सन्निहितपरामर्शितच्छब्दप्रातिपदिकस्वारस्यानुरोधेन गुणभूतं लिङ्गं कथञ्चिदुक्तदिशा निर्वाह्यमिति भावः । पुल्लिङ्गानुरोधेन 'न तत्र' इत्यादेर्व्यवहितपरत्वमुपेत्य 'तदेतद्' इत्यादेर्ज्ञानिसुखपरत्वोपगतौ बाधकान्तरं चाऽऽह – **अनिर्देश्यत्वाद्ययोगाच्चेति** ।।

ಸನ್ನಿಹಿತವಾದದ್ದನ್ನು ಪರಾಮರ್ಶಿಸುವ 'ತತ್' ಎಂಬ ಪ್ರಾತಿಪದಿಕದ ಸ್ವಾರಸ್ಯಕ್ಕೆ ಅನುಸಾರಿಯಾಗಿ ಗೌಣವಾದ ಲಿಂಗವನ್ನು ಹೇಗಾದರೂ ಕಷ್ಟದಿಂದ ನಿರ್ವಹಿಸಬೇಕೆಂದು ಅಭಿಪ್ರಾಯ. ಪುಲ್ಲಿಂಗವನ್ನೇ ಅನುಸರಿಸಿ 'ನ ತತ್ರ' ಇತ್ಯಾದಿ ವಾಕ್ಯಕ್ಕೆ ವ್ಯವಹಿತಪರತ್ವವನ್ನು ಅಂಗೀಕಾರ ಮಾಡಿ 'ತದೇತತ್' ಇತ್ಯಾದಿ ವಾಕ್ಯಕ್ಕೆ ಜ್ಞಾನಿಸುಖಪರತ್ವವನ್ನು ಒಪ್ಪಿದಾಗ ಮತ್ತೊಂದು ಬಾಧಕ ಬರುತ್ತದೆಂದು 'ಅನಿರ್ದೇಶ್ಯತ್ವಾದ್ಯ-ಯೋಗಾಚ್ಚ' ಎಂಬ ಟೀಕೆಯಿಂದ ಸಮರ್ಥಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**भावदीपः** – 'यतो वाचो निवर्तन्ते' इत्यादि श्रुत्या ब्रह्मरूपानन्दस्यैवानिर्देश्यत्वात् । 'एष परम आनन्दः' इत्यादिश्रुत्या तस्यैव परमानन्दत्वाच्च ज्ञानिसुखस्य च 'अव्यक्तादितृणान्तास्तु विप्रुडानन्दभागिनः' इति पूर्वोक्तदिशा वा 'ब्रह्मादीनां तु युक्तानां सुखं विष्णुसुखस्य तु । प्रतिबिम्बस्तु विप्रुट्को विष्णोरेव परं सुखम् ।।' इति काठकभाष्योक्तवाराहस्मृत्या वा अनिर्देश्यत्वपरमत्वयोरयोगाच्चेत्यर्थः ।।

'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಯ ಬಲದಿಂದ ಬ್ರಹ್ಮಸ್ವರೂಪವಾದ ಆನಂದವೇ ಅನಿರ್ದೇಶ್ಯವಾಗಿದೆಯೆಂದು ಸ್ಪಷ್ಟವಾಗುತ್ತದೆ. 'ಏಷ ಪರಮ ಆನಂದಃ' ಇತ್ಯಾದಿ ಶ್ರುತಿಯಿಂದ ಅಂತಹ ಪರಮಾತ್ಮನೇ ಪರಮಾನಂದಸ್ವರೂಪನೆಂದು ತಿಳಿಯುತ್ತದೆ. ಜ್ಞಾನಿಸುಖವಾದರೂ 'ಅವ್ಯಕ್ತಾದಿತೃಣಾಂತಾಸ್ತು ವಿಪ್ರುಡಾನಂದಭಾಗಿನಃ' ಇತ್ಯಾದಿ ಹಿಂದೆ ಹೇಳಿದ ಮಾತಿನಂತೆ ಅನಿರ್ದೇಶ್ಯವೆಂದಾಗಲೀ, ಪರಮಾನಂದಸ್ವರೂಪವಾಗಿದೆಯೆಂದಾಗಲೀ ಹೇಳಲು ಸಾಧ್ಯವಿಲ್ಲ. 'ಬ್ರಹ್ಮಾದೀನಾಂ ತು ಯುಕ್ತಾನಾಂ ಸುಖಂ ವಿಷ್ಣುಸುಖಸ್ಯ ತು । ಪ್ರತಿಬಿಂಬಸ್ತು ವಿಪ್ರುಟ್ಕೋ ವಿಷ್ಣೋರೇವ ಪರಂ ಸುಖಮ್ ॥' ಎಂಬ ಕಾಠಕಭಾಷ್ಯದಲ್ಲಿ ಉದಾಹರಿಸಿದ ವರಾಹಪುರಾಣದ ಮಾತಿನ ಬಲದಿಂದಲೂ ಜ್ಞಾನಿಸುಖಕ್ಕೆ ಪರಮತ್ವವನ್ನು ಹೇಳಲು ಸಾಧ್ಯವಿಲ್ಲ ಎಂದರ್ಥ.

**भावदीपः – तस्मादिति ।।** सूर्यादितेजोनियन्तृत्वजगत्प्रकाशकत्वसूर्याद्यप्रकाश्यत्वरूपसूत्रोक्तसाधकभावात् सुखश्रुतिविरोधादिबाधकाभावाच्चेत्यर्थः । सूत्रेऽध्याहृतप्रतिज्ञार्थः – आनुकूल्येनेति ।। अदृश्यत्वादीति फलोक्तिः अज्ञेयत्वमादिपदार्थः । अत्र श्रुतं प्राक् श्रुतं चेत्यर्थः ।। २३ ।।

।। इति श्रीराघवेन्द्रयतिकृते भावदीपे अनुकृत्यधिकरणम् ।।

'ತಸ್ಮಾತ್' ಎಂದರೆ ಸೂರ್ಯಾದಿತೇಜೋನಿಯಂತೃತ್ವ, ಜಗತ್‌ಪ್ರಕಾಶಕತ್ವ, ಸೂರ್ಯಾದ್ಯಪ್ರಕಾಶ್ಯತ್ವ ಎಂಬ ಸೂತ್ರದಲ್ಲಿ ಹೇಳಿದ ಮೂರು ಸಾಧಕಲಿಂಗಗಳಿರುವುದರಿಂದ ಸುಖಶ್ರುತಿಗಳ ವಿರೋಧವೆಂಬ ಬಾಧಕವೂ ಇಲ್ಲದ ಕಾರಣ ಎಂದರ್ಥ. ಸೂತ್ರದಲ್ಲಿ ಅಧ್ಯಾಹಾರ ಮಾಡಲ್ಪಟ್ಟ ಪ್ರತಿಜ್ಞೆಯ ಅರ್ಥವನ್ನು 'ಆನುಕೂಲ್ಯೇನ' ಎಂಬುದರಿಂದ ಹೇಳುತ್ತಿದ್ದಾರೆ. 'ಅದೃಶ್ಯತ್ವಾದಿ' ಎಂಬುದು ಅಧಿಕರಣದಫಲ. 'ಅಜ್ಞೇಯತ್ವ' ಎಂಬುದು ಆದಿಪದದ ಅರ್ಥ. ಇಲ್ಲಿ ಶ್ರುತವಾದ ಮತ್ತು ಹಿಂದೆ ಶ್ರುತವಾದ ಧರ್ಮಗಳು ಎಂದು ತಿಳಿಯಬೇಕು.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅನುಕೃತ್ಯಧಿಕರಣವು ಮುಗಿಯಿತು ॥

ಅನುಕೃತ್ಯಧಿಕರಣ (೧-೩-೬)

**वाक्यार्थमञ्जरी –**

**ॐ अपि स्मर्यते ॐ ।।**

लिङ्गद्वयं स्मर्यतेऽपि स्मृतौ प्रतिपाद्यतेऽपीत्यर्थः । तत्र तद्भगवद्रूपे सूर्यो भाति भासयते । चन्द्रतारकमिति द्वन्द्वैकवद्भावः । यदा प्रौढप्रकाशाः सूर्यादयो न भान्ति, तदा अल्पप्रकाशोऽयमग्निः कुतो भाति न कुतोऽपीत्यर्थः । व्याख्यानान्तरे स्मृतेः समुच्चयासम्भवादाह – **युक्तीति** ।। किञ्चेत्यादिनोक्तयुक्तीत्यर्थः । 'न तत्र सूर्यो भाति' इति 'तमेव भान्तम्' इत्यत्र तमिति पुल्लिङ्गान्तशब्देन परमात्मैवोच्यत इति तदेकार्थत्वलाभाय 'न तत्र सूर्यो भाति' इति वाक्यस्थतत्रेत्यनेन परमात्मोच्यत इत्यर्थः ।। **किमु भाति न भाति वेति** ।। **प्रकृतस्येति** ।। तत्रोक्तदुर्विज्ञेयत्वस्य न तत्र सूर्यो भातीत्यादिना प्रत्यभिज्ञायमानत्वादिति भावः ।। **यस्यैवमिति** ।। तथाच न लिङ्गानुपपत्तिरिति भावः । दूरोक्तं ब्रह्म ।। **अतिदूरोक्तिग्रहण इति** ।। तदेतदित्यस्मिन् वाक्ये ज्ञानिसुखापेक्षया दूरोक्तपरमात्मग्रहणे बिभ्यतस्तव ततोऽप्युत्तरत्र विद्यमानेन तत्रेत्यस्मिन् वाक्ये चेतनश्चेतनानामिति वाक्योक्तपरमात्मग्रहणे कथन्न भीतिरित्यर्थः। न तत्रेत्यत्र विष्णुमात्रनिष्ठसूर्याद्यप्रकाश्यप्रकाशत्वलिङ्गबलाद्दूरोक्तपरमात्मपरामर्श इति यदि तर्हि तदेतदिति वाक्येऽपि विष्णुमात्रनिष्ठत्वेन साधिताऽनिर्देश्यत्वलिङ्गबलात् परमात्मन एव परामर्श इति भावेनाह – **अनिर्देश्यत्वायोगाच्चेति** ।। २३ ।।

**।। इति श्रीशर्कराश्रीनिवासविरचितायां वाक्यार्थमञ्जर्याम् अनुकृत्यधिकरणम् ।।**

ಅನುಕೃತ್ಯಧಿಕರಣ

(೧-೩-೬)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ಭಾಮತೀ,

ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

**वाक्यार्थमञ्जरी –**

**ॐ अपि स्मर्यते ॐ ॥**

लिङ्गद्वयं स्मर्यतेऽपि स्मृतौ प्रतिपाद्यतेऽपीत्यर्थः । तत्र तद्भगवद्रूपे सूर्यो भाति भासयते । चन्द्रतारकमिति द्वन्द्वैकवद्भावः । यदा प्रौढप्रकाशाः सूर्यादयो न भान्ति, तदा अल्पप्रकाशोऽयमग्निः कुतो भाति न कुतोऽपीत्यर्थः । व्याख्यानान्तरे स्मृतेः समुच्चयासम्भवादाह – **युक्तीति** ॥ किञ्चेत्यादिनोक्तयुक्तीत्यर्थः । 'न तत्र सूर्यो भाति' इति 'तमेव भान्तम्' इत्यत्र तमिति पुल्लिङ्गान्तशब्देन परमात्मैवोच्यत इति तदेकार्थत्वलाभाय 'न तत्र सूर्यो भाति' इति वाक्यस्थतत्रेत्यनेन परमात्मोच्यत इत्यर्थः ॥ **किमु भाति न भाति वेति** ॥ **प्रकृतस्येति** ॥ तत्रोक्तदुर्विज्ञेयत्वस्य न तत्र सूर्यो भातीत्यादिना प्रत्यभिज्ञायमानत्वादिति भावः ॥ **यस्यैवमिति** ॥ तथाच न लिङ्गानुपपत्तिरिति भावः । **दूरोक्तं ब्रह्म** ॥ **अतिदूरोक्तिग्रहण इति** ॥ तदेतदित्यस्मिन् वाक्ये ज्ञानिसुखापेक्षया दूरोक्तपरमात्मग्रहणे बिभ्यतस्तव ततोऽप्युत्तरत्र विद्यमानेन तत्रेत्यस्मिन् वाक्ये चेतनश्चेतनानामिति वाक्योक्तपरमात्मग्रहणे कथन्न भीतिरित्यर्थः। न तत्रेत्यत्र विष्णुमात्रनिष्ठसूर्याद्यप्रकाश्यप्रकाशत्वलिङ्गबलाद्दूरोक्तपरमात्मपरामर्श इति यदि तर्हि तदेतदिति वाक्येऽपि विष्णुमात्रनिष्ठत्वेन साधिताऽनिर्देश्यत्वलिङ्गबलात् परमात्मन एव परामर्श इति भावेनाह – **अनिर्देश्यत्वायोगाच्चेति** ॥ २३ ॥

**॥ इति श्रीशर्कराश्रीनिवासविरचितायां वाक्यार्थमञ्जर्याम् अनुकृत्यधिकरणम् ॥**

## ಅನುಕೃತ್ಯಧಿಕರಣ
## (೧-೩-೬)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,
ಶಾಂಕರಭಾಷ್ಯ, ಭಾಮತೀ,
ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अनुकृत्यधिकरणम्

### 'ಅನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗಸ್ವರೂಪದ ವಿಚಾರ

**ॐ अनुकृतेस्तस्य च ॐ ॥ अत्रानुव्याख्याने अनुग्रहाख्यलिङ्गस्य समन्वय इत्युक्तम् । अनुग्रहश्चानुकूल्येन गृह्यमाणत्वमित्युक्तं न्यायविवरणे ।**

ಅನುವಾದ - 'ಓಂ ಅನುಕೃತೇಸ್ತಸ್ಯ ಚ ಓಂ' ಎಂಬುದಾಗಿ ಅನುಕೃತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ಅನುವ್ಯಾಖ್ಯಾನದಲ್ಲಿ 'ಅನುಗ್ರಹ' ಎಂಬ ಲಿಂಗದ ಸಮನ್ವಯವು ಉದ್ದೇಶಿತವಾಗಿದೆಯೆಂದು ಹೇಳಲಾಗಿದೆ. ನ್ಯಾಯವಿವರಣದಲ್ಲಿ 'ಅನುಗ್ರಹ' ಶಬ್ದಕ್ಕೆ 'ಅನುಕೂಲ್ಯೇನ ಗೃಹ್ಯಮಾಣತ್ವಂ' ಎಂದರ್ಥ ಎಂಬುದಾಗಿ ಅನುವ್ಯಾಖ್ಯಾನದ ಮಾತನ್ನು ವಿವರಿಸಲಾಗಿದೆ.[೧]

---

(೧) ಈ ಅಧಿಕರಣದಲ್ಲಿ 'ಅನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಅಂದರೆ ನಮಗೆ ಅನುಕೂಲನಾಗಿದ್ದಾನೆಂದು ತಿಳಿಯಲು ಅರ್ಹನಾದವನು ಪರಮಾತ್ಮನೇ ಹೊರತು, ಇತರ ಯಾವುದೇ ಪದಾರ್ಥಗಳಲ್ಲ ಎಂಬುದೇ ಈ ಲಿಂಗಸಮನ್ವಯದ ಉದ್ದೇಶ. ಅನುಕೂಲ ವೇದನೀಯನಾದವನು ಪರಮಾತ್ಮನೆಂದು ಈ ಲಿಂಗಸಮನ್ವಯದ ಅರ್ಥ. ಎಲ್ಲಿ ಆನುಕೂಲ್ಯೇನ ಗೃಹ್ಯಮಾಣತ್ವವು ಇರುತ್ತದೋ, ಅಲ್ಲಿ ಪರಮಪ್ರೇಮಾಸ್ಪದತ್ವವು ಇರುತ್ತದೆ. ಒಂದು ವೇಳೆ ಸುಖವೇ ಆನುಕೂಲ್ಯೇನ ಗೃಹ್ಯಮಾಣವಾದಲ್ಲಿ ಅದೇ ಪರಮಪ್ರೇಮಾಸ್ಪದವೆಂದಾಗಬೇಕಾದೀತು. ಆದರೆ ನಮಗೆ ಪರಮಪ್ರೇಮಾಸ್ಪದನಾದವನು ಪರಮಾತ್ಮನೇ ಹೊರತು, ಸುಖವಲ್ಲ. ಈ ಆನುಕೂಲ್ಯೇನ ಗೃಹ್ಯಮಾಣತ್ವಕ್ಕೂ ಪರಮಪ್ರೇಮಾಸ್ಪದತ್ವಕ್ಕೂ ಪರಸ್ಪರ ವ್ಯಾಪ್ಯವ್ಯಾಪಕ ಭಾವವಿದೆ. ಎಲ್ಲಿ ಆನೂಕೂಲ್ಯೇನ ಗೃಹ್ಯಮಾಣತ್ವವು ಇರುತ್ತದೋ. ಅಲ್ಲಿ ಪರಮಪ್ರೇಮಾಸ್ಪದತ್ವ ಇದ್ದೇ ಇರುತ್ತದೆ ಎಂದು. ಪರಮಪ್ರೇಮಾಸ್ಪದವನ್ನೇ ಆನುಕೂಲ್ಯೇನ ಗೃಹ್ಯಮಾಣವೆಂದು ಬುಭುತ್ಸುಗಳು ತಿಳಿಯಬಾರದು. ಆನುಕೂಲ್ಯೇನ ಗೃಹ್ಯಮಾಣತ್ವವಿದ್ದಲ್ಲಿ ಪರಮಪ್ರೇಮಾಸ್ಪದತ್ವವಿರುತ್ತದೆಂಬ ಸೂಕ್ಷ್ಮವನ್ನು ತಿಳಿಯಬೇಕು. ಜ್ಞಾನಕ್ಕೋಸ್ಕರ ಪ್ರಾರ್ಥನೆ ಮಾಡುವುದು ಎಂಬ ಉದ್ದೇಶದಿಂದಲೇ ಆನುಕೂಲ್ಯೇನ ಗೃಹ್ಯಮಾಣವೆಂಬ ವ್ಯವಹಾರವಿದೆ.

**तच्च "कथं नु तद्विजानीयामिति ज्ञानार्थं प्रार्थितत्वम्" इत्युक्तं टीकायाम् ।**

ನ್ಯಾಯವಿವರಣದ ಈ ಮಾತನ್ನು 'ಕಥಂ ನು ತದ್ವಿಜಾನೀಯಾಮಿತಿ ಜ್ಞಾನಾರ್ಥಂ ಪ್ರಾರ್ಥಿತತ್ವಮ್' ಎಂಬುದಾಗಿ ಟೀಕೆಯಲ್ಲಿ 'ಜ್ಞಾನಾರ್ಥಂ ಪ್ರಾರ್ಥಿತತ್ವಮ್' ಎಂಬುದಾಗಿ ವಿವರಿಸಿದ್ದಾರೆ.

**तच्च विजानीयामिति लिङा ज्ञानार्थं ज्ञेयस्य प्रार्थनाधीरित्यभिप्रेत्य वा कथं नु पुत्रं पश्येयं स आगच्छति वा न वेत्यत्र यथा पुत्रज्ञानार्थं तदागमनप्रार्थनाधीः तथा "कथं नु तद्विजानीयाम्" इत्यादिवाक्ये ज्ञानार्थमाविर्भावरूपभानप्रार्थनाधीरित्यभिप्रेत्य वेति द्रष्टव्यम् ।**

ಟೀಕಾ ಮಾತಿನ ಅಭಿಪ್ರಾಯ ಹೀಗಿದೆ - 'ವಿಜಾನೀಯಾಮ್' ಎಂಬಲ್ಲಿ 'ಲಿಙ್' ಲಕಾರವು ಶ್ರುತವಾಗಿದೆ. ಈ 'ಲಿಙ್' ಲಕಾರದಿಂದ ಜ್ಞಾನಕ್ಕೋಸ್ಕರ ಜ್ಞೇಯವಾದ ವಸ್ತುವನ್ನು ಪ್ರಾರ್ಥನೆ ಮಾಡುವಂತಹ ಬುದ್ಧಿ ಎಂಬರ್ಥವು ತಿಳಿಯುತ್ತದೆ. ಅಥವಾ 'ಕಥಂ ನು ಪುತ್ರಂ ಪಶ್ಯೇಯಂ; ಸ ಆಗಚ್ಛತಿ ವಾ ನವಾ' 'ಮಗನನ್ನು ಹೇಗೆ ಕಾಣಲಿ ? ಅವನು ಬರುತ್ತಾನೋ ಇಲ್ಲವೋ? ಎಂದು ಹೇಳಿದಾಗ ಮಗನ ಆಗಮನವೇ ಮುಖ್ಯವಲ್ಲ. ಅವನ ದರ್ಶನವೂ ಮುಖ್ಯವಾಗಿದೆ. ಆದರಂತೆ ಪ್ರಕೃತದಲ್ಲಿ 'ಕಥಂ ನು ತದ್ವಿಜಾನೀಯಾಮ್' ಇತ್ಯಾದಿ ವಾಕ್ಯದಲ್ಲಿ ಭಗವಂತನ ಜ್ಞಾನಕ್ಕೋಸ್ಕರ ಜ್ಞಾನಿಯಾದವನು ಆವಿರ್ಭಾವರೂಪ ಜ್ಞಾನದ ಪ್ರಾರ್ಥನೆಯನ್ನು ಮಾಡುತ್ತಿದ್ದಾನೆ. ಈ ಪ್ರಾರ್ಥನಾ ಬುದ್ಧಿಯೇ ಆನುಕೂಲ್ಯೇನ ಗೃಹ್ಯಮಾಣವೆನಿಸುತ್ತದೆಂದು ತಿಳಿಯಬೇಕು.

**"परमात्मैवानिर्देश्यसुखरूपः" इति सिद्धान्तभाष्यं तु फलितोक्तिपरम् ।**

ಹೀಗೆ ಈ ಅಧಿಕರಣದಲ್ಲಿ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗದ ಸಮನ್ವಯವನ್ನು ಮಾಡುತ್ತಿದ್ದಾರೆಂದು ಹೇಳಲಾಯಿತು. ಆದರೆ ಇದೇ ಅಧಿಕರಣದ ಸಿದ್ಧಾಂತ ಭಾಷ್ಯದಲ್ಲಿ 'ಪರಮಾತ್ಮೈವಾನಿರ್ದೇಶ್ಯಸುಖರೂಪಃ' ಎಂದು ಪರಮಾತ್ಮನೇ ಅನಿರ್ದೇಶ್ಯಸುಖರೂಪನಾಗಿದ್ದಾನೆಂದು, ಅನಿರ್ದೇಶ್ಯಸುಖರೂಪತ್ವವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆಯೆಂದು ಹೇಳಿದಂತೆ ಕಾಣಿಸುತ್ತಿದೆ. ಆದರೆ ಕೇವಲ ಈ ವಾಕ್ಯವು ಅಧಿಕರಣದ ಫಲವನ್ನಷ್ಟೇ ಹೇಳಲು ಹೊರಟಿದೆ ಹೊರತು, ಅಧಿಕರಣದ ಲಿಂಗವನ್ನು ಹೇಳುವುದಕ್ಕಾಗಲ್ಲ. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣತ್ವಲಿಂಗದ ಸಮನ್ವಯವೇ ಈ ಅಧಿಕರಣದ ಉದ್ದೇಶ.

**केचित्तु एतद्भाष्यानुसारान्न्यायविवरणोक्तमानुकूल्येन गृह्यमाणत्वं सुखत्वमेवेत्याहुः ।**

ಕೆಲವರು 'ಪರಮಾತ್ಮೈವಾನಿರ್ದೇಶ್ಯಸುಖರೂಪಮ್' ಎಂಬ ಭಾಷ್ಯಕ್ಕೆ ಅನುಸಾರಿಯಾಗಿ ನ್ಯಾಯವಿವರಣದ ಮಾತನ್ನು ಅರ್ಥೈಸುತ್ತಾರೆ. ಅಂದರೆ ಆನುಕೂಲ್ಯೇನ ಗೃಹ್ಯಮಾಣತ್ವವು ಸುಖಸ್ವರೂಪವಾಗಿದೆ. ಇಂತಹ ಸುಖತ್ವವು ಜ್ಞಾನಿಗಳ ಸುಖ ಮತ್ತು ಪರಮಾತ್ಮ ಇಬ್ಬರಲ್ಲಿಯೂ ಸಾಧಾರಣವಾಗಿದೆಯೆಂದು ಹೇಳುತ್ತಾರೆ.

**अत्र च "कथं नु तद्विजानीयाम्" इत प्रार्थनं ज्ञानिनः । तत्प्रार्थनस्य तत्सुखमिवेश्वरोऽपि तं प्रति प्रियत्वाद्विषयः । परमं सुखमिति समभिव्याहृत-सुखशब्दश्चोभयसाधारणः ।**

ಪ್ರಕೃತ 'ಕಥಂ ನು ತದ್ವಿಜಾನೀಯಾಮ್' ಎಂಬುದು ಜ್ಞಾನಿಗಳ ಪ್ರಾರ್ಥನೆಯಾಗಿದೆ. ಈ ಪ್ರಾರ್ಥನೆಯು ತಮ್ಮ ಸುಖವು ಜ್ಞಾನಿಗಳಿಗೆ ಹೇಗೆ ಪ್ರಿಯವಾಗಿದೆಯೋ ಅದರಂತೆ ಪರಮಾತ್ಮನೂ ಕೂಡ ಅವರಿಗೆ ಪ್ರಿಯನಾಗಿದ್ದಾನೆ. ಆದ್ದರಿಂದ ಜ್ಞಾನಿಗಳ ಪ್ರಾರ್ಥನಾವಿಷಯತ್ವವು ಜ್ಞಾನಿಗಳ ಸುಖ ಮತ್ತು ಪರಮಾತ್ಮ ಇಬ್ಬರಲ್ಲಿಯೂ ಸಾಧಾರಣವಾಗುತ್ತದೆ. ಅಥವಾ 'ಪರಮಂ ಸುಖಮ್' ಎಂಬ ಶ್ರುತಿಯಲ್ಲಿ ಸುಖಶಬ್ದದ ಸಮಭಿವ್ಯಾಹಾರವಿರುವುದರಿಂದ; ಈ ಸುಖವು ಇಬ್ಬರಲ್ಲಿಯೂ ಸಾಧಾರಣವಾಗಿರುವುದರಿಂದ ಉಭಯತ್ರಪ್ರಸಿದ್ಧವೆಂದು ತಿಳಿಯಬೇಕು.

**ततश्चानुकूल्येन गृह्यमाणत्वमीश्वरज्ञानिसुखयोः साधारणमिति ज्ञेयम् । अनन्तरसङ्गतिस्तु पूर्वाधिकरणन्यायेन तद्वैषम्येण वा पूर्वपक्षोत्थानात् ।**

ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣತ್ವ ಎಂಬ ಲಿಂಗವು ಪರಮಾತ್ಮ ಹಾಗೂ ಜ್ಞಾನಿಸುಖ ಎರಡರಲ್ಲಿಯೂ ಸಾಧಾರಣವಾಗಿದೆಯೆಂದು ಅಭಿಪ್ರಾಯ. ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನೇ ಅವಲಂಬಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಪವಾದಿಕೀ ಸಂಗತಿಯನ್ನು, ಹಾಗೂ ಪೂರ್ವಾಧಿಕರಣದ ವೈಷಮ್ಯಪ್ರದರ್ಶನದ ಮೂಲಕವಾಗಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಪ್ರತ್ಯುದಾಹರಣ ರೂಪವಾದ ಸಂಗತಿಯನ್ನೂ ತಿಳಿಯಬೇಕು. ಹೀಗೆ ಪೂರ್ವಾಧಿಕರಣ ಆನಂತರ್ಯ ಸಂಗತಿ ಇರುತ್ತದೆ.

## ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः – ॐ अनुकृतेस्तस्य च ॐ ।।** अत्र समन्वीयमानलिङ्गस्योभयसाधारण्येन टीकोक्तपादसङ्गतिं विवरितुं तत्स्वरूपकथनपरटीकाया मूलं वदंस्तन्निर्धारयति – अत्रेति ।।

## ಪರಿಪೂರ್ಣಚಂದ್ರಿಕಾ

ವಿವರಣೆ - ಅನುಕೃತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಮೊದಲು ಈ ಲಿಂಗವು ಉಭಯತ್ರ-ಪ್ರಸಿದ್ಧವಾಗಿದೆಯೆಂದು ಸಮರ್ಥಿಸುವಂತಹ ಟೀಕೆಯಲ್ಲಿ ಹೇಳಿದ ಪಾದಸಂಗತಿಯನ್ನು ವಿವರಣೆ ಮಾಡಬೇಕು. ಆದರೆ ಸಂಗತಿಯನ್ನು ತೋರಿಸುವುದಕ್ಕಿಂತಲೂ ಮೊದಲು 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗದ ಸ್ವರೂಪವನ್ನು ಸ್ಪಷ್ಟಪಡಿಸುತ್ತಾ ಟೀಕೆಯಲ್ಲಿ ಹೇಳಲ್ಪಟ್ಟ ಲಿಂಗಕ್ಕೆ ವ್ಯಾಖ್ಯೇಯವಾದದ್ದು ಯಾವುದು? ಎಂಬ ಪ್ರಶ್ನೆಗೆ ಉತ್ತರಿಸುತ್ತಾ ಲಿಂಗಸ್ವರೂಪವನ್ನು ನಿರ್ಧಾರ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – ''स्थानं लिङ्गमनुग्रहः'' इत्यनुव्याख्याने ''कथं नु तद्विजानीया-मित्यानुकूल्येन ग्रहणं कस्येति विचार्यमनुग्रहः'' इति न्यायविवरणे ।

ಅನುವ್ಯಾಖ್ಯಾನದ ವಿಷಯಮಾಲೆಯಲ್ಲಿ 'ಸ್ಥಾನಂ ಲಿಂಗಮನುಗ್ರಹಃ' ಎಂದು ಹೇಳಿದ್ದಾರೆ. ಇಲ್ಲಿರುವ 'ಅನ್ರುಗಹಃ' ಎಂಬ ಪದವು ಈ ಅಧಿಕರಣದಲ್ಲಿ ಸಮನ್ವಯ ಮಾಡುವಂತಹ ಲಿಂಗಸ್ವರೂಪವನ್ನು ತಿಳಿಸುತ್ತಿದೆ. ಮತ್ತು ನ್ಯಾಯವಿವರಣದಲ್ಲಿ 'ಕಥಂ ನು ತದ್ವಿಜಾನೀಯಾಮ್ ಇತ್ಯಾನುಕೂಲ್ಯೇನ ಗ್ರಹಣಂ ಕಸ್ಯೇತಿ ವಿಚಾರ್ಯಮನುಗ್ರಹಃ' 'ಕಥಂ ನು ತದ್ವೀಜಾನಿಯಾಮ್' ಎಂಬುದಾಗಿ ಶ್ರುತಿಯಲ್ಲಿ ಆನುಕೂಲ್ಯೇನ ಗೃಹ್ಯಮಾಣತ್ವವು ಪರಮಾತ್ಮನಲ್ಲಿದೆಯೋ? ಜ್ಞಾನಿಸುಖದಲ್ಲಿದೆಯೋ? ಎಂಬ ವಿಚಾರವೇ 'ಅನುಗ್ರಹ' ಎನಿಸುತ್ತದೆ ಎಂದು ಹೇಳಿದ್ದಾರೆ. ಹೀಗೆ ಟೀಕೆಯಲ್ಲಿ ಹೇಳಿದ ಆನುಕೂಲ್ಯೇನ ಗೃಹ್ಯಮಾಣತ್ವವೆಂಬ ಲಿಂಗಕ್ಕೆ ಅನುವ್ಯಾಖ್ಯಾನ ಹಾಗೂ ನ್ಯಾಯವಿವರಣಗಳೇ ವ್ಯಾಖ್ಯೇಯವಾಗಿವೆ ಎಂದು ತಿಳಿಯಬೇಕು.

**प्रकाशः** – ननु टीकोक्तं कथं शब्दलभ्यमित्यत आह – **तच्चेति** ।। **लिङेति** ।। 'विधिनिमन्त्रणामन्त्रणाधीष्टसंप्रश्नप्रार्थनेषु लिङ्' इति स्मरणादिति भावः ।।

ಟೀಕೆಯಲ್ಲಿ 'ಜ್ಞಾನಾರ್ಥಂ ತಾತ್ವಿಕತ್ವಮ್' ಎಂಬುದು ಶ್ರುತಿಯಿಂದ ತಿಳಿಯುತ್ತಿದೆ ಎಂದು ಹೇಳಿದ್ದಾರೆ. ಆದರೆ ಶ್ರುತಿಯಿಂದ ಇದು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ 'ತಚ್ಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಶ್ರುತಿಯಲ್ಲಿ 'ವಿಜಾನೀಯಾಮ್' ಎಂಬ ಶ್ರುತಿಯಲ್ಲಿರುವ 'ಲಿಙ್' ಲಕಾರದಿಂದ ಪ್ರಾರ್ಥನೆಯು ತಿಳಿಯುತ್ತದೆ. ಏಕೆಂದರೆ 'ವಿಧಿನಿಮಂತ್ರಣಾಮಂತ್ರಣಾಧೀಷ್ಟಸಂಪ್ರಶ್ನಪ್ರಾರ್ಥನೇಷು 'ಲಿಙ್' ವಿಧಿ, ನಿಮಂತ್ರಣ, ಆಮಂತ್ರಣ, ಅಧೀಷ್ಟ, ಸಂಪ್ರಶ್ನ, ಪ್ರಾರ್ಥನೆ ಇಷ್ಟು ಅರ್ಥಗಳಲ್ಲಿ 'ಲಿಙ್' ಲಕಾರವು ಬರುವುದರಿಂದ ಪ್ರಕೃತ 'ವಿಜಾನೀಯಾಮ್' ಎಂಬಲ್ಲಿ ಪ್ರಾರ್ಥನೆ ಎಂಬರ್ಥದಲ್ಲಿ 'ಲಿಙ್' ಲಕಾರವನ್ನು ಪ್ರಯೋಗಿಸಲಾಗಿದೆ. ಹೀಗೆ ಜ್ಞಾನಾರ್ಥಂ ಪ್ರಾರ್ಥಿತತ್ವವು ಶಬ್ದದಿಂದಲೇ ಲಭ್ಯವಾಗುತ್ತದೆಂದು ತಿಳಿಯಬೇಕು.

**प्रकाशः** – **भानेति** ।। ''किमु भाति न भाति वा'' इति श्रवणादिति भावः । भाष्यविरोधमाशङ्क्याह – **परमात्मेति** ।। द्विरूपस्यापि प्रार्थनस्य भगवत्परत्वे सिद्धेऽत्रोक्ततादृशसुखरूपोऽपि स एवेति फलिष्यतीत्यभिप्रायमित्यर्थः ।

'ಭಾನಕ್ಕೋಸ್ಕರ ಜ್ಞಾನದ ಪ್ರಾರ್ಥನೆಯೆಂದು' ಗ್ರಂಥದಲ್ಲಿ ಹೇಳಿದ್ದಾರೆ. 'ಜ್ಞಾನ' ಮತ್ತು 'ಭಾನ' ಶಬ್ದಗಳ ಅರ್ಥವೇನು ? ಎಂದರೆ. 'ಜ್ಞಾನ' ಎಂದರೆ 'ಅನುಭವ' ಎಂದರ್ಥ. 'ಭಾನ' ಎಂದರೆ ವಸ್ತುವಿನ ಆವಿರ್ಭಾವ ಎಂದರ್ಥ. 'ಕಿಮು ಭಾತಿ ನ ಭಾತಿ ವಾ' ಎಂಬ ಶ್ರುತಿಯೇ ಈ ಅರ್ಥದಲ್ಲಿ ಆಧಾರವಾಗಿದೆ.

ಈ ಅಧಿಕರಣದಲ್ಲಿ 'ಅನುಗ್ರಹ' ಎಂಬ ಲಿಂಗದ ಸಮನ್ವಯವೆಂದು ಹೇಳಿದಿರಿ. 'ಅನುಗ್ರಹ' ಶಬ್ದಕ್ಕೆ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂದರ್ಥ. 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂದರೆ 'ಜ್ಞಾನಾರ್ಥಂ ಜ್ಞೇಯಸ್ಯ ಪ್ರಾರ್ಥನಾ' ಎಂಬರ್ಥವನ್ನು ಹೇಳಿದಿರಿ. ಆದರೆ ಆಚಾರ್ಯರು ಈ ಅಧಿಕರಣದ ಕೊನೆಯಲ್ಲಿ ಪರಮಾತ್ಮನು ಅನಿರ್ದೇಶಸುಖಸ್ವರೂಪನಾಗಿದ್ದಾನೆಂದು ಹೇಳಿದ್ದಾರೆ. ಇದರಿಂದ ಅನಿರ್ದೇಶಕಸುಖರೂಪತ್ವವೇ ಈ ಅಧಿಕರಣದ ಸಮನ್ವಯಕವಿಲಿಂಗವೆಂದು ತಿಳಿಯುತ್ತದೆ. ಆದ್ದರಿಂದ ಭಾಷ್ಯದ ವಿರೋಧ ಬರುತ್ತದಲ್ಲವೇ? ಎಂಬ ಆಶಂಕೆಗೆ 'ಪರಮಾತ್ಮ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

'ಜ್ಞಾನಾರ್ಥಂ ಜ್ಞೇಯಸ್ಯ ಪ್ರಾರ್ಥನಾ' ಎಂದು 'ಜ್ಞಾನಾರ್ಥಂ ಭಾನಸ್ಯ ಪ್ರಾರ್ಥನಾ' ಎಂದು ಎರಡು ವಿಧದಲ್ಲಿ ಪ್ರಾರ್ಥನೆಗಳಿವೆ. ಎರಡೂ ವಿಧವಾದ ಪ್ರಾರ್ಥನೆಗಳು ಸುಖಪರವಲ್ಲ, ಭಗವತ್ಪರವಾಗಿವೆಯೆಂದು ಸಾಧಿಸಿದಾಗ 'ಅನಿರ್ದೇಶ್ಯಂ ಪರಮಂ ಸುಖಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅನಿರ್ದೇಶ್ಯ ಸುಖಸ್ವರೂಪನೂ ಕೂಡ ಪರಮಾತ್ಮನೇ ಆಗಿದ್ದಾನೆಂಬುದು ಫಲತಃ ಸಿದ್ಧವಾಗುತ್ತದೆಂದು ಭಾಷ್ಯದ ಅಭಿಪ್ರಾಯ. ಆದ್ದರಿಂದ ಕೇವಲ ಈ ಅಧಿಕರಣದ ಫಲವನ್ನು ಹೇಳುವುದಕ್ಕಾಗಿ ಭಾಷ್ಯದ ಮಾತು ಹೊರಟಿದೆ ವಿನಃ, ಈ ಅಧಿಕರಣದ ಸಮನ್ವೇತವ್ಯಲಿಂಗವನ್ನು ಹೇಳುವುದಕ್ಕಾಗಿ ಅಲ್ಲ. ಆದ್ದರಿಂದ ಭಾಷ್ಯದ ವಿರೋಧಕ್ಕೆ ಅವಕಾಶವಿಲ್ಲ.

**प्रकाशः – सुखत्वमेवेति** ।। तथा च तस्योभयत्रप्रसिद्धिस्सुशकेति भावः । साधारण्योपपादनाय लिङा प्रतीतं प्रार्थनं न सर्वकर्तृकमित्याह – **अत्र चेति** ।। ''तमात्मस्थं येऽनुपश्यन्ति धीरा'' इति ज्ञानिन एव प्रकृतत्वादिति भावः ।

ಕೇಚಿತ್ತುಕಾರರ ಪಕ್ಷದಲ್ಲಿ ಆನುಕೂಲ್ಯೇನ ಗೃಹ್ಯಮಾಣತ್ವವನ್ನು ಸುಖತ್ವ ಸ್ವರೂಪವೆನ್ನುತ್ತಾರೆ. ಇವರ ಪಕ್ಷದಲ್ಲಿ ಸುಖತ್ವವನ್ನು ಉಭಯಸಾಧಾರಣವೆಂದು ಸಮರ್ಥಿಸುವುದು ಬಹಳ ಸುಲಭ.

ಆನುಕೂಲ್ಯೇನ ಗೃಹ್ಯಮಾಣತ್ವವು ಉಭಯಸಾಧಾರಣವಾಗಿವೆಯೆಂಬುದನ್ನು ಸಮರ್ಥಿಸಲು ಲಿಙ್ ಲಕಾರದಿಂದ ಪ್ರತೀತವಾದ ಪ್ರಾರ್ಥನೆಯು ಸರ್ವಕರ್ತೃಕವಾಗಿಲ್ಲವೆಂದು ಹೇಳುತ್ತಿದ್ದಾರೆ 'ಅತ್ರ ಚ' ಇತ್ಯಾದಿ ಗ್ರಂಥದಿಂದ. ಏಕೆಂದರೆ 'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ' ಎಂಬುದಾಗಿ ಜ್ಞಾನಿಗಳೇ ಹಿಂದೆ ಪ್ರಕೃತರಾಗಿದ್ದಾರೆ. ಆದ್ದರಿಂದ ಜ್ಞಾನಿಗಳ ಪ್ರಾರ್ಥನೆಯನ್ನೇ ಇಲ್ಲಿ ವಿವಕ್ಷಿಸಬೇಕು.

**प्रकाशः –** एवं लिङ्गस्वरूपं निर्धार्येदानीं ''आनुकूल्येन गृह्यमाणत्वलिङ्गस्य भगवति ज्ञानिसुखे च सुखशब्दवृत्त्या साधारणस्य'' इति टीकोक्तं साधारण्यं स्वत एवोभयसाधारणसुखशब्दसमभिव्याहारोण वेति द्वेधोपपादयति – **तत्प्रार्थनस्य चेति** ।।

ಇಲ್ಲಿಯತನಕ ಲಿಂಗಸ್ವರೂಪದ ಬಗ್ಗೆ ನಿರ್ಧಾರ ಮಾಡಿ, ಈಗ 'ಆನುಕೂಲ್ಯೇನ ಗೃಹ್ಯಮಾಣತ್ವಲಿಂಗಸ್ಯ ಭಗವತಿ ಜ್ಞಾನಿಸುಖೇ ಚ ಸುಖಶಬ್ದವೃತ್ತ್ಯಾ ಸಾಧಾರಣಸ್ಯ' ಆನುಕೂಲ್ಯೇನ ಗೃಹ್ಯಮಾಣತ್ವವೆಂಬ ಲಿಂಗಕ್ಕೆ ಭಗವಂತನಲ್ಲಿ ಮತ್ತು ಜ್ಞಾನಿಸುಖದಲ್ಲಿ ಸುಖಶಬ್ದದ ಇರುವಿಕೆಯಿಂದ ಉಭಯಸಾಧಾರಣ್ಯವಿರುತ್ತದೆ. ಟೀಕೆಯಲ್ಲಿ ಹೇಳಲ್ಪಟ್ಟ ಈ ಸಾಧಾರಣ್ಯವು ಸ್ವಾಭಾವಿಕವಾಗಿ ಉಭಯಸಾಧಾರಣವಾಗಿದೆ ಮತ್ತು 'ಸುಖ' ಶಬ್ದದ ಸಮಭಿವ್ಯಾಹಾರದಿಂದಲೂ ಉಭಯಸಾಧಾರಣವಾಗಿದೆಯೆಂದು ಎರಡು ಬಗೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ತತ್ಪ್ರಾರ್ಥನಸ್ಯ ಚ' ಇತ್ಯಾದಿ ಗ್ರಂಥದಿಂದ.

**प्रकाशः – तं ज्ञानिनं प्रति । ''प्रियो हि ज्ञानिनोऽत्यर्थमहं स च मम प्रियः'' इत्यादेरिति भावः । उभयेति ।। 'एष परम आनन्दः' 'यो वै भूमा तत्सुखम्' इत्यादौ भगवतोऽपि परमसुखरूपत्वात्तत्र सुखशब्ददृष्टेरिति भावः ।**

ಗ್ರಂಥದಲ್ಲಿರುವ 'ತಂ ಪ್ರತಿ' ಎಂಬುದಕ್ಕೆ 'ಜ್ಞಾನಿ ಜನರನ್ನು ಕುರಿತು' ಎಂದರ್ಥ. 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ' 'ಜ್ಞಾನಿಗಳಿಗೆ ನಾನು ಬಹಳ ಪ್ರಿಯನು, ನನಗೆ ಅವರು ಬಹಳ ಪ್ರಿಯರು' ಎಂದು ಗೀತೆಯಲ್ಲಿ ಹೇಳಿದ್ದರಿಂದ ಸುಖದಂತೆ ಪರಮಾತ್ಮನು ಕೂಡ ಜ್ಞಾನಿ ಜನರಿಗೆ ಪ್ರಿಯನಾಗಿದ್ದಾನೆಂದು ತಿಳಿಯಬೇಕು: ಗ್ರಂಥದಲ್ಲಿ 'ಉಭಯಸಾಧಾರಣಃ' ಎಂದಿದೆ 'ಏಷ ಪರಮ ಆನಂದಃ' 'ಯೋ ವೈ ಭೂಮಾ ತತ್ ಸುಖಮ್' ಇತ್ಯಾದಿ ಸ್ಥಳಗಳಲ್ಲಿ ಭಗವಂತನೂ ಕೂಡ ಪರಮಸುಖಸ್ವರೂಪನೆಂದು ಹೇಳಿದ್ದರಿಂದ ಸುಖಶಬ್ದವು ಭಗವಂತನಲ್ಲಿಯೂ ಪ್ರಯುಕ್ತವಾದ ಕಾರಣ ಉಭಯಸಾಧಾರಣವೆಂದು ಅಭಿಪ್ರಾಯ.

**प्रकाशः – एतेन टीकायां ''सुखशब्दवृत्त्या'' इत्येतत्सुखशब्दवृत्त्या चेति चशब्दानुषङ्गेण पक्षान्तरतया योज्यमित्युक्तं भवति ।**

ಹೀಗೆ ಎರಡು ಬಗೆಯಲ್ಲಿ ಉಭಯಸಾಧಾರಣ್ಯವನ್ನು ಹೇಳಿದ್ದರಿಂದ ಟೀಕೆಯಲ್ಲಿ 'ಸುಖಶಬ್ದವೃತ್ತ್ಯಾ' ಎಂಬುದನ್ನು 'ಸುಖಶಬ್ದವೃತ್ತ್ಯಾ ಚ' ಎಂಬುದಾಗಿ 'ಚ' ಶಬ್ದದ ಅನುಷಂಗದ ಮೂಲಕ ವ್ಯಾಖ್ಯಾನ ಮಾಡಬೇಕು. ಇಲ್ಲಿರುವ 'ಚ' ಶಬ್ದಕ್ಕೆ 'ವಿಕಲ್ಪ' ಎಂದರ್ಥ. ಅಂದರೆ ಸುಖಶಬ್ದದ ಪ್ರಯೋಗದಿಂದ ಮತ್ತು ಸಮಭಿವ್ಯಾಹೃತವಾದ ಸುಖಶಬ್ದದಿಂದ ಉಭಯಸಾಧಾರಣವಾಗಿದೆಯೆಂದು ತಿಳಿಯಬೇಕು.

**प्रकाशः – नन्वानुकूल्येन गृह्यमाणत्वस्य समभिव्याहृतसुखनिष्ठतया तस्य च द्वयसाधारण्येन लिङ्गस्य चोभयत्र प्रसिद्धिरयुक्ता । सुखशब्दस्याज्ञसुखेऽपि सत्त्वात् । तस्येह पूर्वपक्ष्यनभिमतत्वात् । द्वयमात्रसाधारण्येन वक्तव्यत्वस्योक्तत्वादिति चेत् ।**

ಪ್ರಶ್ನೆ - ಆನುಕೂಲ್ಯೇನ ಗೃಹ್ಯಮಾಣತ್ವ ಲಿಂಗವು ಸಮಭಿವ್ಯಾಹೃತವಾದ ಸುಖದಲ್ಲಿ ಇರುತ್ತದೆಂದು ಅದಕ್ಕೆ ಉಭಯಸಾಧಾರಣ್ಯವನ್ನು ಹೇಳುವ ಮೂಲಕ, ಲಿಂಗವೂ ಸಹ ಉಭಯತ್ರಪ್ರಸಿದ್ಧವಾಗಿದೆಯೆಂದು ಹೇಳಿದಿರಿ. ಆದರೆ ಇದು ತಪ್ಪು. ಏಕೆಂದರೆ ಸುಖಶಬ್ದವು ಪರಮಾತ್ಮ ಮತ್ತು ಜ್ಞಾನಿಸುಖದಲ್ಲಷ್ಟೇ

ಪ್ರಸಿದ್ಧವಾಗಿರುವುದಲ್ಲ. ಅಜ್ಞಾನಿಗಳ ಸುಖದಲ್ಲಿಯೂ ಪ್ರಸಿದ್ಧವಾಗಿದೆ. ಆದರೆ ಅಜ್ಞಾನಿಗಳ ಸುಖವು ಇಲ್ಲಿ ಪೂರ್ವಪಕ್ಷಿಗೆ ಅಭಿಮತವಾಗಿಲ್ಲ. ಆದ್ದರಿಂದ ದ್ವಯಮಾತ್ರ ಸಾಧಾರಣ್ಯವನ್ನಷ್ಟೇ ಆನುಕೂಲ್ಯೇನ ಗೃಹ್ಯಮಾಣತ್ವಕ್ಕೆ ಹೇಳಬೇಕೆಂದು ಹೇಳಿದ್ದರಿಂದ, ಲಿಂಗಕ್ಕೆ ಉಭಯಸಾಧಾರಣ್ಯವನ್ನು ಹೇಳಿದ್ದು ಹೇಗೆ ಯುಕ್ತವಾಗುತ್ತದೆ ?

**प्रकाशः** – न प्रकरणविशेषितस्य तस्य द्वयमात्रसाधारण्यात्प्रकरणस्य च ज्ञानीश्वरमात्रसम्बन्धित्वात्पूर्वत्रकारणत्ववदस्याप्युपपत्तेः ।

ಉತ್ತರ - ಹೀಗೆ ಪ್ರಶ್ನಿಸ ಬಾರದು. ಏಕೆಂದರೆ ಕೇವಲ ಸುಖವು ಅಜ್ಞಾನಿಗಳ ಸುಖದಲ್ಲಿ ಪ್ರಸಿದ್ಧವಾಗಿದ್ದರೂ ಪ್ರಕರಣ ವಿಶೇಷಿತವಾದ ಸುಖವು ದ್ವಯಮಾತ್ರ ಸಾಧಾರಣವಾಗಿದೆ. ಅಂದರೆ ಶ್ರುತಿಪ್ರಕರಣದಲ್ಲಿ ಜ್ಞಾನಿಗಳ ಸುಖ ಮತ್ತು ಪರಮಾತ್ಮ ಸುಖ ಇವೆರಡನ್ನು ಮಾತ್ರ, ತೆಗೆದುಕೊಳ್ಳುವುದು ಸೂಕ್ತವಾಗುತ್ತದೆ. ಏಕೆಂದರೆ ಜ್ಞಾನಿಗಳಿಗೆ ಮತ್ತು ಈಶ್ವರನಿಗೆ ಮಾತ್ರ ಪ್ರಕರಣವು ಸಂಬಂಧಪಟ್ಟಿದೆ. ಆದ್ದರಿಂದ ಯಾವರೀತಿಯಾಗಿ ಹಿಂದಿನ ಸದಧಿಕರಣದಲ್ಲಿ ಎಲ್ಲೆಡೆ ಕಾರಣತ್ವವು ಸಾಧಾರಣವಾಗಿದ್ದರೂ, ಕೇವಲ ಪ್ರಕೃತಿ ಮತ್ತು ಪರಮಾತ್ಮರಿಬ್ಬರನ್ನೇ ವಿವಕ್ಷಿಸಿ ಸಕಲ ಜಗತ್‌ಕಾರಣತ್ವವಿರುವುದು ಇಬ್ಬರಲ್ಲಿ ಮಾತ್ರವೆಂದು ವಿವಕ್ಷಿಸಲಾಯಿತೋ, ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು.

**प्रकाशः** – केचित्तु सुखशब्देन पारम्यविशेषितसुखपरेणानेवंरूपाज्ञसुखानभिधायिना द्वयमात्रसाधारण्यम् । अत एव ''परमं सुखमिति समभिव्याहृतसुखशब्दश्च'' इत्युक्तमित्याहुः ।

ಕೆಲವರು ಸುಖಶಬ್ದದಲ್ಲಿ ಪರಮತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ, ಪರಮಸುಖಶಬ್ದದಿಂದ, ಅಜ್ಞಾನಿಗಳ ಸುಖವನ್ನು ವಿವಕ್ಷಿಸಲು ಸಾಧ್ಯವಿಲ್ಲ. ಇಂತಹ ಪರಮಸುಖತ್ವವು ಜ್ಞಾನಿಸುಖ ಮತ್ತು ಪರಮಾತ್ಮರಲ್ಲಿ ಮಾತ್ರ ಸಾಧಾರಣವಾಗಿದೆ. ಆದ್ದರಿಂದಲೇ ಗ್ರಂಥಕಾರರು 'ಪರಮಂ ಸುಖಮಿತಿ ಸಮಭಿವ್ಯಾಹೃತಸುಖಶಬ್ದಶ್ಚ' ಎಂಬುದಾಗಿ 'ಪರಮಂ' ಎಂಬುದಾಗಿ ವಿಶೇಷಣವನ್ನಾಗಿ ಹೇಳಿರುತ್ತಾರೆ.

**प्रकाशः** – **अनन्तरेति** ।। पूर्वत्र ''तस्मिन् यदन्तः'' इति तच्छब्दस्य सन्निहितत्यागेन व्यवहितपरत्वायोगवदिहापि सन्निहितज्ञानिसुखत्यागेनव्यवहितेश्वरपरत्वायोग इति पूर्वन्यायेन वा ''एष आत्मा'' इत्येतच्छब्दस्य प्रकृतज्योतिःपरत्वेऽपि विधेयात्मापेक्षया पुल्लिङ्गत्वेऽपीह तदेतच्छब्दयोर्मध्य एकस्योद्देशकत्वावश्यम्भावेन द्वयोर्नपुंसकत्वायोगादिति पूर्ववैषम्येण वेत्यग्रे स्पष्टमिति भावः ।

ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯನ್ನು ಹೀಗೆ ತಿಳಿಯಬೇಕು. ಹಿಂದಿನ ಅಧಿಕರಣದ 'ತಸ್ಮಿನ್ ಯದಂತಃ' ಎಂಬ ವಿಷಯವಾಕ್ಯದಲ್ಲಿ 'ತತ್' ಶಬ್ದದಿಂದ ಸನ್ನಿಹಿತವಾದ ಆಕಾಶವನ್ನೇ ಪರಾಮರ್ಶ ಮಾಡಬೇಕು ಹೊರತು, ವ್ಯವಹಿತವಾದ ಪುಂಡರೀಕವನ್ನು ಪರಾಮರ್ಶ ಮಾಡಬಾರದೆಂದು

ಸಮರ್ಥಿಸಲಾಯಿತು. ಅದರಂತೆ ಇಲ್ಲಿಯೂ ಸಹ 'ತದೇತದಿತಿ ಮನ್ಯಂತೇ ಅನಿರ್ದೇಶ್ಯಂ ಪರಮಂ ಸುಖಂ' ಎಂಬಲ್ಲಿ ಶ್ರುತವಾದ 'ತತ್' ಶಬ್ದದಿಂದ ಸನ್ನಿಹಿತವಾದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕು ಹೊರತು, ವ್ಯವಹಿತನಾದ ಈಶ್ವರಸುಖವನ್ನು ಪರಾಮರ್ಶ ಮಾಡಬಾರದು ಎಂಬುದಾಗಿ ಹಿಂದಿನ ಅಧಿಕರಣದ ಸಿದ್ಧಾಂತದಿಂದ ಆಕ್ಷೇಪ ಮಾಡಲಾಗಿದೆ. ಅಥವಾ ಹಿಂದಿನ ಅಧಿಕರಣದಲ್ಲಿ 'ಏಷ ಆತ್ಮಾ' ಎಂಬಲ್ಲಿರುವ ಪುಲ್ಲಿಂಗದ 'ಏತತ್' ಶಬ್ದದಿಂದ ಜ್ಯೋತಿಸ್ವರೂಪನಾದ ಪರಮಾತ್ಮನನ್ನು ಪರಾಮರ್ಶ ಮಾಡಬೇಕು. ಹಾಗಾದರೆ ಪುಲ್ಲಿಂಗ ಪ್ರಯೋಗವು ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ವಿಧೇಯವಾದ ಆತ್ಮಶಬ್ದವು ಪುಲ್ಲಿಂಗದಲ್ಲಿರುವುದರಿಂದ ಅದಕ್ಕನುಸಾರಿಯಾಗಿ 'ಏಷಃ' ಎಂಬ ಪ್ರಯೋಗವು ಯುಕ್ತವಾಗುತ್ತದೆ. 'ಶೈತ್ಯಂಹಿ ಯಶ್ಚ ಪ್ರಕೃತಿರ್ಜಲಸ್ಯ ' ಇತ್ಯಾದಿ ದೃಷ್ಟಾಂತದಿಂದ ಸಮರ್ಥಿಸಲಾಯಿತು. ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ 'ತದೇತದಿತಿ ಮನ್ಯಂತೇ' ಎಂಬಲ್ಲಿ 'ತತ್' 'ಏತತ್' ಎಂಬೆರಡು ಪದಗಳೂ ಕೂಡ ನಪುಂಸಕಲಿಂಗದಲ್ಲಿಯೇ ಇದ್ದು ಹಿಂದೆ ಪ್ರಸಕ್ತನಾದ ಪರಮಾತ್ಮನನ್ನು ಪರಾಮರ್ಶ ಮಾಡುತ್ತಿವೆ. ಹಿಂದಿನ ವಾಕ್ಯದಲ್ಲಿ 'ಆತ್ಮ' ಮತ್ತು 'ತಂ' ಎಂಬುದಾಗಿ ಪುಲ್ಲಿಂಗದಶಬ್ದಗಳಿಂದ ಪರಮಾತ್ಮನು ಪ್ರಕೃತನಾಗಿದ್ದಾನೆ. ಅವನನ್ನು ಪರಾಮರ್ಶ ಮಾಡಲು 'ತತ್' 'ಏತತ್' ಎಂಬೆರಡು ನಪುಂಸಕಲಿಂಗದಲ್ಲಿರುವ 'ಸರ್ವನಾಮ' ಶಬ್ದವು ಪ್ರಯುಕ್ತವಾಗಿದೆ. ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ವಿಧೇಯವಾದ ಸುಖಶಬ್ದವು, ನಪುಂಸಕಲಿಂಗದಲ್ಲಿರುವುದರಿಂದ 'ತತ್' 'ಏತತ್' ಎಂಬೆರಡು ಶಬ್ದಗಳ ನಡುವೆ ಒಂದು ಶಬ್ದವು ನಪುಂಸಕಲಿಂಗದಲ್ಲಿದ್ದರೆ ಸಾಕು. ಎರಡೂ ಕೂಡ ನಪುಂಸಕಲಿಂಗದಲ್ಲಿಯೇ ಏಕಿರಬೇಕು ? ಆದ್ದರಿಂದ ಪುಲ್ಲಿಂಗದ ಶಬ್ದದಿಂದ ಪ್ರಸಕ್ತನಾದ ಪರಮಾತ್ಮನನ್ನು ಪರಾಮರ್ಶ ಮಾಡಲು ಎರಡನ್ನೂ ನಪುಂಸಕಲಿಂಗದಲ್ಲಿಯೇ ಹೇಳಿದ್ದು ತಪ್ಪಾಗುತ್ತದೆ. ಹೀಗೆ ಹಿಂದಿನ ಅಧಿಕರಣದಿಂದ ವೈಷಮ್ಯವಿರುವುದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು. ಇದು ಮುಂದೆ ಮತ್ತಷ್ಟು ಸ್ಪಷ್ಟವಾಗುತ್ತದೆ.

**प्रकाशः** – तथा चापवादिकी वा प्रत्युदाहरणरूपा वेत्यर्थः । ''अदृश्यत्वादयः'' इति भाष्यादि तु फलपरमिति भावः ।

ಹೀಗೆ ಹಿಂದಿನ ಅಧಿಕರಣ ಸಿದ್ಧಾಂತನ್ಯಾಯವನ್ನು ಮೀರಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಪವಾದಿಕೀ ಸಂಗತಿಯನ್ನು, ಅಥವಾ ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯಕ್ಕೆ ವೈಷಮ್ಯವನ್ನು ತೋರಿಸುವ ಮೂಲಕ ಸಂಗತಿಯನ್ನು ತೋರಿಸುತ್ತಿರುವುದರಿಂದ ಪ್ರತ್ಯುದಾಹರಣ ಸಂಗತಿಯನ್ನು ಇಲ್ಲಿ ತಿಳಿಯಬೇಕು. 'ಅದೃಶ್ಯತ್ವಾದಯಃ' ಇತ್ಯಾದಿ ಭಾಷ್ಯ ಹಾಗೂ ಟೀಕೆಗಳು ಫಲಪರವಾಗಿದೆಯೆಂದು ಅಭಿಪ್ರಾಯ. ಅಂದರೆ ಈ ಅಧಿಕರಣದಲ್ಲಿ ಅನಿರ್ದೇಶ್ಯತ್ವಾದಿಗಳನ್ನು ಹೇಳುತ್ತಿರುವುದರಿಂದ, ಅದೃಶ್ಯತ್ವಾಧಿಕರಣದಲ್ಲಿ ಸಾಧಿಸಲ್ಪಟ್ಟ ಅದೃಶ್ಯತ್ವಾದಿಗುಣಗಳು ಪರಮಾತ್ಮನಲ್ಲಿ ಸಿದ್ಧವಾಗುತ್ತದೆಂದು ಭಾಷ್ಯಾದಿಗಳ ಅಭಿಪ್ರಾಯ.

**प्रकाशः** – एतेन यदुक्तं कल्पतरौ ''पूर्वमेतं त्वेव त इत्येतच्छब्दस्य प्रकृतार्थत्वाद्दहरस्य जीवता निरासि'' इति । तदसाधु । तत्रेत्यादौ प्रकृतार्थत्वानियमादिति शङ्कानिरासात्सङ्गतिरिति तदयुक्तमिति सूचितम् ।

ಅನುಕೃತ್ಯಧಿಕರಣ (೧-೩-೬)

ಈ ಅಧಿಕರಣಕ್ಕೆ ಸಂಗತಿಯನ್ನು ತೋರಿಸುವಾಗ ಕಲ್ಪತರುವಿನಲ್ಲಿ 'ಪೂರ್ವಮೇತಂ ತ್ವೇವ ತ ಇತ್ಯೇತಚ್ಛಬ್ದಸ್ಯ ಪ್ರಕೃತಾರ್ಥತ್ವಾದ್ ದಹರಸ್ಯ ಜೀವತಾ ನಿರಾಸಿ' ಹಿಂದಿನ ಅಧಿಕರಣದಲ್ಲಿ 'ಏತಂ ತ್ವೇವ ತೇ' ಎಂಬ ಶ್ರುತಿಯಲ್ಲಿರುವ 'ಏತತ್' ಶಬ್ದವು ಪ್ರಕೃತನಾದ ಪರಮಾತ್ಮನನ್ನೇ ಪರಾಮರ್ಶ ಮಾಡುವುದರಿಂದ ದಹರನನ್ನು ಜೀವನೆಂದು ಹೇಳಬಾರದು ಎಂದು ಹೇಳಲಾಗಿದೆ. ಇದು ತಪ್ಪು. ಏಕೆಂದರೆ 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ಸ್ಥಳಗಳಲ್ಲಿರುವ 'ತತ್ರ' ಇತ್ಯಾದಿ ಪದಗಳು ಪ್ರಕೃತಾರ್ಥವನ್ನೇ ಪರಾಮರ್ಶಮಾಡುತ್ತವೆಂದೇನಿಲ್ಲ ಪ್ರಕೃತವಾದ ಸೂರ್ಯ, ಚಂದ್ರಾದ್ಯರ್ಥಗಳನ್ನು ಬಿಟ್ಟು ಅಪ್ರಕೃತನಾದ ಪರಮಾತ್ಮನನ್ನು ಪರಾಮರ್ಶ ಮಾಡುತ್ತಿವೆ. ಆದ್ದರಿಂದ 'ಏತಮ್ ತ್ವೇವ' ಎಂಬಲ್ಲಿರುವ 'ಏತತ್' ಶಬ್ದವು ಪ್ರಕೃತನಾದ ಪರಮಾತ್ಮನನ್ನೇ ಪರಾಮರ್ಶ ಮಾಡಬೇಕಾಗಿಲ್ಲ. ಅಪ್ರಕೃತನಾದ ಜೀವನನ್ನೂ ಕೂಡ ಪರಾಮರ್ಶ ಮಾಡಬಹುದು ಎಂಬ ಅಧಿಕಾಶಂಕೆಯನ್ನು ನಿರಾಕರಿಸುವುದಕ್ಕಾಗಿ ಈ ಅಧಿಕರಣವು ಹೊರಟಿರುತ್ತದೆ. ಹೀಗೆ ಸಂಗತಿಯನ್ನು ತೋರಿಸಿದ್ದಾರೆ. ಈ ಸಂಗತಿಯು ತಪ್ಪೆಂದು ಗ್ರಂಥಕಾರರು ಸೂಚನೆ ಮಾಡಿದ್ದಾರೆ.

**प्रकाशः –** तन्मते ''तस्मिन् यदन्तः'' इत्यत्र पूर्ववाक्य एव ''ब्रह्मपुरे जीवदेहे'' इत्यर्थोक्त्याऽप्रकृतस्यापि ब्रह्मणो ''यदन्तस्तदन्वेष्टव्यम्'' इत्यत्र यच्छब्दार्थत्वस्य तस्मिन्नित्यस्य समीपप्रकृतदहराकाशपरत्वानियमस्य स्वीकारेणैतच्छङ्कायाः प्रागेव निरसनीयत्वेन पुनरिह तथा शङ्कोत्थानायोगादिति ।

ಏಕೆಂದರೆ ಈ ಶಂಕೆಯನ್ನು ಅವರು ಹಿಂದಿನ ಅಧಿಕರಣದಲ್ಲಿಯೇ ಪರಿಹರಿಸಬೇಕು. ಈ ಅಧಿಕರಣದಲ್ಲಿ ಪರಿಹರಿಸುವುದು ತಪ್ಪಾಗುತ್ತದೆ. ಏಕೆಂದರೆ 'ತಸ್ಮಿನ್ ಯದಂತಃ' ಎಂಬ ಹಿಂದಿನ ವಾಕ್ಯದಲ್ಲಿ ಶ್ರುತವಾದ 'ಬ್ರಹ್ಮಪುರೇ' ಎಂಬ ಪದಕ್ಕೆ ಜೀವನ ದೇಹದಲ್ಲಿ ಎಂಬರ್ಥವನ್ನು ಅವರು ಹೇಳುತ್ತಾರೆ. ಆದ್ದರಿಂದ ಹಿಂದೆ ಜೀವನ ದೇಹವಷ್ಟೇ ಪ್ರಕೃತವಾಗಿದೆ ಹೊರತು ಬ್ರಹ್ಮನು ಪ್ರಕೃತನಾಗಿಲ್ಲ. ಹೀಗೆ ಪ್ರಕೃತನಾಗದೇ ಇರುವ ಬ್ರಹ್ಮನನ್ನು 'ಯದಂತಃ' ಎಂಬಲ್ಲಿರುವ 'ಯತ್' ಶಬ್ದದಿಂದ ಪರಾಮರ್ಶ ಮಾಡುತ್ತಾರೆ. ಮತ್ತು 'ತಸ್ಮಿನ್' ಎಂಬಲ್ಲಿರುವ 'ತತ್' ಶಬ್ದವು ಸಮೀಪದಲ್ಲಿರುವ ದಹರಾಕಾಶವನ್ನು ಪರಾಮರ್ಶ ಮಾಡದೇ ವ್ಯವಹಿತವಾದ ಬ್ರಹ್ಮನನ್ನು ಪರಾಮರ್ಶ ಮಾಡುತ್ತಿದೆ ಎಂದು ಹೇಳುತ್ತಾರೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿಯೇ ಈ ಪ್ರಶ್ನೆಯನ್ನು ಮಾಡಿ ನೀವು ಉತ್ತರವನ್ನು ನೀಡಬೇಕು. ಅಲ್ಲೇ ಉತ್ತರ ನೀಡಿದ ಮೇಲೆ ಪುನಃ ಇಲ್ಲಿ ಶಂಕೆಯೇ ಉದ್ಭವಿಸುವುದಿಲ್ಲವಾದ್ದರಿಂದ ಶಂಕೆಯನ್ನು ಮಾಡುವುದು ತಪ್ಪಾಗುತ್ತದೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् – ॐ अनुकृतेस्तस्य च ॐ** ।। ननु टीकाभाष्यविरोधः । भाष्येऽनिर्देश्यसुखरूपलिङ्गसमन्वयस्य प्रतिपाद्यत्वाभ्युपगमात् । टीकायां ज्ञानार्थं

प्रार्थितत्वरूपलिङ्गसमन्वयस्य प्रतिपाद्यत्वाभ्युपगमात् । किं चानुकूल्यन गृह्यमाणत्वं नाम ज्ञानार्थं प्रार्थितत्वमिति नोपपद्यते । कोशाद्यभावेन तत्र रूढेरभावेन योगस्याप्यसम्भवादित्यतो भाष्यटीकयोर्विरोधप्रदर्शनपूर्वकं टीकोक्तं ज्ञानार्थं प्रार्थितत्वरूपत्वमानुकूल्येन गृह्यमाणत्वस्योपपादयति – **अत्रेति** ।। सुखशब्द-प्रवृत्त्या साधारण्यमुक्तमिति नाभिप्रायः । किं त्वानुकूल्यस्य साक्षादेवोभयत्र-प्रसिद्धत्वसम्भवेऽपि सुखशब्दप्रवृत्त्याऽपि साधारण्यस्य सत्त्वादित्यभिप्रायेण सर्वेषामपि स्वसुखस्यैवानुकूल्येन गृह्यमाणत्वेन परमात्मनश्च सुखत्वाभावेन कथं तस्यानुकूल्येन गृह्यमाणत्वमित्यतस्तदुपपादयति – **अत्र चेति** ।। **तत्प्रार्थनस्येति** ।। ज्ञानार्थिप्रार्थनस्येत्यर्थः । टीकोक्तं सुखशब्दप्रवृत्त्या साधारण्यमप्याह – **परमं सुखमितीति** । **पूर्वाधिकरणन्यायेनेति** ।। तस्मिन् यदन्तरिति तच्छब्देन सन्निहितदहरस्यैव परामर्शः । नतु व्यवहितपुण्डरीकस्येति पूर्वाधिकरणन्यायेनैव प्रकृतेऽपि तदेतदित्यत्र सन्निहितज्ञानिसुखस्यैव परामर्शः । नतु व्यवहितप्रकृतेश्वरस्येति पूर्वाधिकरणन्यायेन पूर्वपक्षोत्थानादित्यर्थः । **वैषम्येण वेति** ।। पूर्वाधिकरणे परंज्योतिश्शब्देन प्रकृतस्य ब्रह्मणः पुल्लिङ्गेन "एषः" इत्येतच्छब्देन परामर्शसम्भवेऽपि प्रकृते तदेतच्छब्दयोर्मध्ये एकस्योद्देश्यत्वावश्यम्भावेन द्वयोर्नपुंसकलिङ्गत्वायोगेन विधेयसुखापेक्षया नपुंसकलिङ्गत्वायोगेनेति वैषम्येणेत्यर्थः ।




ಈ ಅಧಿಕರಣದಲ್ಲಿ 'ಅನುಗ್ರಹ' ಎಂಬ ಲಿಂಗದ ಸಮನ್ವಯವನ್ನು ಮಾಡಲಾಗುತ್ತಿದೆ. 'ಅನುಗ್ರಹ' ಎಂದರೆ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂದರ್ಥ. 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂದರೆ 'ಜ್ಞಾನಾರ್ಥಂ ಜ್ಞೇಯಸ್ಯ ಪ್ರಾರ್ಥನಾ' ಎಂದರ್ಥ. ಅಂದರೆ ಜ್ಞಾನಕ್ಕಾಗಿ ಜ್ಞಾನಿಜನರು ಮಾಡುವಂತಹ ಪ್ರಾರ್ಥನೆಯೇ 'ಆನುಕೂಲ್ಯೇನ ಗೃಹ್ಯಮಾಣತ್ವ' ಎನಿಸುತ್ತದೆ.

ಇದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಮಗನನ್ನು ಹೇಗೆ ಕಾಣಲಿ? ಅವನು ಬರುತ್ತಾನೋ ? ಇಲ್ಲವೋ? ಎಂದು ಹೇಳಿದಾಗ ಮಗನ ಆಗಮನವೇ ತಂದೆಗೆ ಮುಖ್ಯಗುರಿಯಲ್ಲ. ಹೊರತು, ಅವನನ್ನು ನೋಡುವಿಕೆಯೇ ಮುಖ್ಯಗುರಿ. ಅದರಂತೆ ಪ್ರಕೃತದಲ್ಲಿ 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂಬುದಾಗಿ ಭಗವಂತನ ಆವಿರ್ಭಾವಕ್ಕೋಸ್ಕರ ಜ್ಞಾನಿಯಾದವನು ಭಗವಂತನ ಜ್ಞಾನವನ್ನು ಪ್ರಾರ್ಥಿಸುತ್ತಾನೆ. ಈ ಪ್ರಾರ್ಥನೆಗೆ ಮುಖ್ಯವಿಷಯನಾದವನು ಅವನ ಜ್ಞಾನವಲ್ಲ. ಹೊರತು ಪರಮಾತ್ಮನೇ. ಹೀಗೆ ಆನುಕೂಲ್ಯೇನ ಗೃಹ್ಯಮಾಣತ್ವವು

ಪರಮಾತ್ಮನಲ್ಲಿ ಬರುತ್ತದೆಂದು ಈ ಅಧಿಕರಣದಲ್ಲಿ ಸಿದ್ಧಾಂತ ಮಾಡಲಾಗುತ್ತದೆ. ಆದರೆ ಯಾವ ರೀತಿಯಾಗಿ ಪರಮಾತ್ಮನು ಜ್ಞಾನಿಜನರಿಗೆ ಪ್ರಿಯನಾದ್ದರಿಂದ ಪ್ರಾರ್ಥನಾವಿಷಯನಾಗಿದ್ದಾನೋ ಅದರಂತೆ ತಮ್ಮ ಸುಖವೂ ಸಹ ಜ್ಞಾನಿಗಳಿಗೆ ಪ್ರಿಯವೇ ಆಗಿರುತ್ತದೆ. ಹಾಗಾಗಿ ಆನುಕೂಲ್ಯೇನ ಗೃಹ್ಯಮಾಣತ್ವವು ಜ್ಞಾನಿಜನರ ಸುಖದಲ್ಲಿಯೂ ಕೂಡ ಬರುತ್ತದೆ. ಹೀಗೆ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವು ಜ್ಞಾನಿಸುಖ ಮತ್ತು ಪರಮಾತ್ಮ ಇಬ್ಬರಲ್ಲಿಯೂ ಸಾಧಾರಣವಾದ್ದರಿಂದ ಉಭಯತ್ರಪ್ರಸಿದ್ಧವಾಯಿತು.

ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆನಂತರ್ಯ ಸಂಗತಿಯು ಇರುತ್ತದೆ. ಹಿಂದಿನ ಅಧಿಕರಣದಲ್ಲಿ 'ತಸ್ಮಿನ್ ಯದಂತಃ' ಇತ್ಯಾದಿ ವಾಕ್ಯದಲ್ಲಿರುವ 'ತತ್' ಶಬ್ದದಿಂದ ಸನ್ನಿಹಿತವಾದದ್ದನ್ನೇ ಪರಾಮರ್ಶ ಮಾಡಬೇಕೆಂದು ಸಾಧಿಸಲಾಯಿತು. ಇಲ್ಲಿಯೂ ಸಹ ಸನ್ನಿಹಿತವಾದ ಜ್ಞಾನಿಸುಖವನ್ನೇ 'ತದೇತದಿತಿ ಮನ್ಯಂತೇ' ಎಂಬಲ್ಲಿರುವ 'ತತ್ ಶಬ್ದದಿಂದ ಪರಾಮರ್ಶ ಮಾಡಬೇಕೆಂದು ಪೂರ್ವಪಕ್ಷ ಮಾಡಲಾಗುತ್ತಿದೆ. ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು ಅವಲಂಬಿಸಿ, ಪೂರ್ವಪಕ್ಷ ಮಾಡುತ್ತಿರುವುದರಿಂದ ಆಪವಾದಿಕೀ ಸಂಗತಿ ಇರುತ್ತದೆ. ಅಥವಾ ಹಿಂದಿನ ಅಧಿಕರಣದಲ್ಲಿ 'ಏಷ ಆತ್ಮಾ' ಎಂಬಲ್ಲಿರುವ 'ಏಷಃ' ಎಂಬ ಶಬ್ದವು ಪುಲ್ಲಿಂಗದಲ್ಲಿದ್ದರೂ ನಪುಂಸಕಲಿಂಗದಿಂದ ಪ್ರಸಕ್ತನಾದ ಪರಮಾತ್ಮನನ್ನು ಪರಾಮರ್ಶ ಮಾಡಬಹುದೆಂದು ಸಮರ್ಥಿಸಲಾಯಿತು. ಆದರೆ ಈ ಅಧಿಕರಣದಲ್ಲಿ 'ತದೇತತ್' ಎಂಬಲ್ಲಿರುವ ಎರಡು ನಪುಂಸಕಲಿಂಗದ ಶಬ್ದಗಳು ತಪ್ಪಾಗುತ್ತವೆ ಎಂದು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯಕ್ಕೆ ವಿಪರೀತವಾದ ಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಪ್ರತ್ಯುದಾಹರಣಸಂಗತಿಯನ್ನೂ ಕೂಡ ತಿಳಿಯಬಹುದು.



• • • • •

## ಸಂಶಯ ಪರಂಪರೆ

## तात्पर्यचन्द्रिका

**अत्र ''कथं नु तद्विजानीयां किमु भाति न भाति वा'' इति काठकोक्तमानुकूल्येन गृह्यमाणं किं ज्ञानिसुखं किं वा ब्रह्मेति चिन्ता ।**

ಅನುವಾದ - ಈ ಅಧಿಕರಣದ ಸಂಶಯಕೋಟಿಗಳು ಹೀಗಿವೆ - ಕಾಠಕೋಪನಿಷತ್ತಿನಲ್ಲಿ 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂಬ ವಾಕ್ಯದಿಂದ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವು ಶ್ರುತವಾಗಿದೆ. ಈ ಲಿಂಗವು ಜ್ಞಾನಿಗಳ ಸುಖದಲ್ಲಿದೆಯೋ? ಅಥವಾ ಬ್ರಹ್ಮನಲ್ಲಿದೆಯೋ? ಎಂದು ಸಂಶಯವು ಬರುತ್ತದೆ.

**तदर्थं ''तदेतदिति मन्यन्ते'' इति पूर्ववाक्यस्थं तच्छब्दादिकं किं सन्निहितज्ञानिसुखपरं किं वा व्यवहितेश्वरपरमिति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ 'ತದೇತದಿತಿ ಮನ್ಯಂತೇ' ಎಂಬ ಹಿಂದಿನ

ಶ್ರುತಿವಾಕ್ಯದಲ್ಲಿರುವ 'ತತ್' 'ಏತತ್' ಎಂಬ ಶಬ್ದಗಳು ಸನ್ನಿಹಿತವಾದ ಜ್ಞಾನಿಸುಖವನ್ನು ಪರಾಮರ್ಶ ಮಾಡುತ್ತಿವೆಯೋ? ಅಥವಾ ವ್ಯವಹಿತನಾದ ಈಶ್ವರನನ್ನು ಪರಾಮರ್ಶ ಮಾಡುತ್ತಿವೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं सन्निहितपरत्वे ''तमेव भान्तमनुभाति'' इत्यनुकृतिप्रतिपादकमुत्तरवाक्यं न विरुध्यत उत विरुध्यत इति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ 'ತತ್' 'ಏತತ್' ಎಂಬ ಶಬ್ದಗಳು ಸನ್ನಿಹಿತವಾದದ್ದನ್ನು ಪರಾಮರ್ಶ ಮಾಡುವುದಾದಲ್ಲಿ 'ತಮೇವಭಾಂತಮ್ ಅನುಭಾತಿ' ಇತ್ಯಾದಿಯಾದ ಅನುಕೃತಿಪ್ರತಿಪಾದಕವಾದ ಮುಂದಿನ ವಾಕ್ಯದಿಂದ ವಿರೋಧ ಬರುವುದಿಲ್ಲವೋ? ಅಥವಾ ಬರುತ್ತದೆಯೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं तत्स्थस्तमेवेति तच्छब्दः किं पुल्लिङ्गानुसाराद्व्यवहितप्रकृतेश्वरपरः किं वा प्रातिपदिकानुसारात्सन्निहितप्रकृतानुकूलगृह्यमाणपर इति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ 'ತಮೇವ ಭಾಂತಿ' ಎಂಬ ಶ್ರುತಿಯಲ್ಲಿರುವ, 'ತಮೇವ' ಎಂಬಲ್ಲಿರುವ ಪುಲ್ಲಿಂಗದ 'ತತ್' ಶಬ್ದವು ಅನುಸಾರಿಯಾಗಿ ವ್ಯವಹಿತನಾಗಿದ್ದರೂ ಪ್ರಕೃತನಾದ ಈಶ್ವರನನ್ನೇ ಪರಾಮರ್ಶ ಮಾಡುತ್ತದೋ ಅಥವಾ ಲಿಂಗಕ್ಕಿಂತಲೂ ಪ್ರಾತಿಪದಿಕವು ಪ್ರಬಲವಾದ್ದರಿಂದ ಅದಕ್ಕನುಸಾರಿಯಾಗಿ ಸನ್ನಿಹಿತವಾದ ಪ್ರಕೃತವಾದ ಜ್ಞಾನಿಸುಖವನ್ನು ಪರಾಮರ್ಶ ಮಾಡಿ, ಆನುಕೂಲ್ಯೇನ ಗೃಹ್ಯಮಾಣತ್ವವನ್ನು ತೀರ್ಮಾನಿಸಬೇಕೋ?

**यद्याद्यस्तदाऽनुकृतेरानुकूल्येन गृह्यमाणनिष्ठत्वाभावेन ब्रह्मपक्षे साधकाभावात् ''तदेतत्'' इति तच्छब्दादेः सन्निहितज्ञानिसुखपरत्वत्यागे कारणाभावेन ज्ञानिसुखपक्षे साधकसद्भावाच्चानुकूल्येन गृह्यमाणं ज्ञानिसुखमेव ।**

ಪೂರ್ವಪಕ್ಷದ ಫಲ - ಈ ವಿಕಲ್ಪಗಳಲ್ಲಿ ಮೊದಲನೆಯ ಪಕ್ಷವನ್ನು ಅಂಗೀಕಾರ ಮಾಡಿದರೆ, ಅನುಕೃತಿಯು ಆನುಕೂಲ್ಯೇನ ಗೃಹ್ಯಮಾಣದಲ್ಲಿದೆಯೆಂದು ಹೇಳಿದಂತಾಗುವುದಿಲ್ಲ. ಆವಾಗ ಬ್ರಹ್ಮಪಕ್ಷದಲ್ಲಿ ಸಾಧಕಪ್ರಮಾಣವೂ ಕೂಡ ಇರದ ಕಾರಣ, 'ತದೇತತ್' ಎಂಬಲ್ಲಿರುವ 'ತತ್' ಶಬ್ದಾದಿಗಳಿಂದ ಪರಾಮರ್ಶ ಮಾಡುವಾಗ ಸನ್ನಿಹಿತವಾದ ಜ್ಞಾನಿಸುಖವನ್ನು ಪರಿತ್ಯಾಗ ಮಾಡಲು, ಕಾರಣವಿರುವುದಿಲ್ಲ. ಹಾಗೂ ಜ್ಞಾನಿಸುಖಪಕ್ಷದಲ್ಲಿ ಸಾಧಕಪ್ರಮಾಣವಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಗಳ ಸುಖವೆಂದೇ ಹೇಳಬೇಕು.

**यदि तु द्वितीयस्तदाऽनुकृतेरानुकूल्येन गृह्यमाणनिष्ठत्वेन ब्रह्मपक्षे साधकसद्भावात्तेनैव कारणेन ''तदेतत्'' इति तच्छब्दादेः सन्निहितज्ञानिसुखपरत्वा-**

**भावेन ज्ञानिसुखपक्षे साधकाभावाच्चानुकूल्येन गृह्यमाणं ब्रह्मैव ।**

ಒಂದು ವೇಳೆ ಎರಡನೆಯ ಪಕ್ಷವನ್ನು ಒಪ್ಪಿದರೆ, ಆವಾಗ ಅನುಕೃತಿಗೆ ಆನುಕೂಲ್ಯೇನ ಗೃಹ್ಯಮಾಣನಿಷ್ಠತ್ವವನ್ನು ಹೇಳಿದಂತಾಗುತ್ತದೆ. ಈಗ ಬ್ರಹ್ಮಪಕ್ಷದಲ್ಲಿ ಸಾಧಕಪ್ರಮಾಣವಿರುವುದರಿಂದ ಅದೇ ಕಾರಣದಿಂದಲೇ 'ತದೇತತ್' ಎಂಬಲ್ಲಿರುವ 'ತತ್' ಶಬ್ದಾದಿಗಳಿಂದ ಸನ್ನಿಹಿತವಾದ ಜ್ಞಾನಿಸುಖಪರತ್ವವನ್ನು ಪರಾಮರ್ಶ ಮಾಡಲಾಗದು. ಈ ಪಕ್ಷದಲ್ಲಿ ಜ್ಞಾನಿಸುಖವನ್ನು ಪರಾಮರ್ಶ ಮಾಡಲು ಸಾಧಕಪ್ರಮಾಣಗಳೂ ಕೂಡ ಇಲ್ಲದ ಕಾರಣ ಆನುಕೂಲ್ಯೇನ ಗೃಹ್ಯಮಾಣನಾದವನು ಬ್ರಹ್ಮನೆಂದೇ ಸಿದ್ಧವಾಗುತ್ತದೆ.

**प्रकाशः –**

**विषयसंशयटीकां व्यनक्ति – अत्रेति ।। ''हन्त त इदं प्रवक्ष्यामि गुह्यं ब्रह्मसनातनम्'' इत्युपक्रम्य**

ವಿವರಣೆ - ಈ ಅಧಿಕರಣದ ವಿಷಯವಾಕ್ಯ ಹಾಗೂ ಸಂಶಯವನ್ನು ನಿರೂಪಿಸುವ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ.

ವಿಷಯ ವಾಕ್ಯ ಹೀಗಿದೆ -. 'ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮಸನಾತನಮ್' ಎಲೈ ! ನಚಿಕೇತನೇ, ನಿನಗೆ ನಾನು ಅತ್ಯಂತ ಗೋಪ್ಯವಾದ ಸನಾತನವಾದ ಬ್ರಹ್ಮಸ್ವರೂಪವನ್ನು ಉಪದೇಶ ಮಾಡುತ್ತೇನೆ ಎಂದು ಕಾಠಕೋಪನಿಷತ್ತಿನ ಈ ಪ್ರಕರಣವು ಪ್ರಾರಂಭವಾಗಿದೆ.

**प्रकाशः –**

''एको वशी सर्वभूतान्तरात्मा एकं रूपं बहुधा यः करोति ।
तमात्मस्थं येऽनुपश्यन्ति धीरास्तेषां सुखं शाश्वतं नेतरेषाम् ।।

नित्यो नित्यानां चेतनश्चेतनानाम् एको बहूनां यो विदधाति कामान् ।
तमात्मस्थं येऽनुपश्यन्ति धीरास्तेषां शान्तिश्शाश्वती नेतरेषाम् ।

'ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್''

ಎಲ್ಲವನ್ನು ತನ್ನ ಅಧೀನದಲ್ಲಿಟ್ಟುಕೊಂಡು ಸಕಲ ಜೀವರ ಅಂತರ್ಯಾಮಿಯಾಗಿದ್ದು ಸ್ವತಂತ್ರನಾದ ಯಾವಾತನು ಅನೇಕ ಜೀವರಲ್ಲಿ ಅಂತರ್ಯಾಮಿಯಾಗಿ ಇರಲು ತನ್ನ ಒಂದು ರೂಪವನ್ನೇ ಅನೇಕ ರೂಪವನ್ನಾಗಿ ಮಾಡಿಕೊಳ್ಳುತ್ತಾನೋ, ಅಂತಹ ಭಗವಂತನನ್ನು ತಮ್ಮಲ್ಲಿ ಯಾವ ಜ್ಞಾನಿಗಳು ಕಾಣುತ್ತಾರೋ, ಅವರಿಗೆ ಮಾತ್ರ ಶಾಶ್ವತವಾದ ಮೋಕ್ಷಸುಖವು ದೊರೆಯುತ್ತದೆ. ಬೇರೆಯವರಿಗೆ ದೊರೆಯುವುದಿಲ್ಲ.

'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।
ತಮಾತ್ಮಸ್ಥಂ ಯೇऽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್'

ಪದಾರ್ಥಗಳಿಗೆ ನಿತ್ಯತ್ವವನ್ನು ಕೊಟ್ಟು ಅಥವಾ ನಿತ್ಯಪದಾರ್ಥಗಳಿಗಿಂತಲೂ ಪರಮನಿತ್ಯನಾಗಿರುವ, ಎಲ್ಲಾ ಚೇತನರಿಗಿಂತಲೂ ಪರಮಚೇತನನಾಗಿರುವ, ಸರ್ವತಂತ್ರ ಸ್ವತಂತ್ರನಾದ ಯಾವಾತನು ಆಯಾ ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತಾನೋ, ಅಂತಹ ಭಗವಂತನನ್ನು ಯಾವ ಧೀರರು ತಮ್ಮಲ್ಲಿ ಕಾಣುತ್ತಾರೋ, ಅವರಿಗೆ ಮಾತ್ರ ಮೋಕ್ಷಸುಖವು ದೊರೆಯುತ್ತದೆ. ಬೇರೆಯವರಿಗೆ ದೊರೆಯುವುದಿಲ್ಲ ಎಂದು ಈ ಪ್ರಕರಣವು ಮುಂದುವರೆದಿದೆ.

**प्रकाशः –**

तदेतदिति मन्यन्तेऽनिर्देश्यं परमं सुखम् ।
कथं नु तद्विजानीयां किमु भाति न भाति वा ।
न तत्र सूर्यो भाति न चन्द्रतारकं नेमा विद्युतो भान्ति कुतोऽयमग्निः ।
तमेव भान्तमनुभाति सर्वं तस्य भासा सर्वमिदं विभाति'' इति
पञ्चमखण्डगतवाक्यस्थमानुकूल्येन गृह्यमाणं विषय इत्यर्थः ।।

'ತದೇತದಿತಿ ಮನ್ಯಂತೇऽನಿರ್ದೇಶ್ಯಂ ಪರಮಂ ಸುಖಮ್ । ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' 'ಗೃಹ್ಯಬ್ರಹ್ಮ ಪ್ರವಕ್ಷ್ಯಾಮಿ' ಎಂಬಲ್ಲಿಂದ ಪ್ರಾರಂಭ ಮಾಡಿ 'ಏಕಂ ರೂಪಂ ಬಹುಧಾ' ಎಂಬಲ್ಲಿಯ ತನಕ ಹೇಳಿರುವ ಬ್ರಹ್ಮಸ್ವರೂಪವು ಹೀಗೆಯೇ ಇದೆಯೆಂದು ಸಂಪೂರ್ಣವಾಗಿ ತಿಳಿಸಲು ಸಾಧ್ಯವಿಲ್ಲ. ಮತ್ತು ಶ್ರೇಷ್ಠಸುಖರೂಪವಾಗಿದೆಯೆಂದು ಜ್ಞಾನಿಗಳು ಅದನ್ನು ತಿಳಿಯುತ್ತಾರೆ. ಇಂತಹ ಭಗವತ್‌ಸ್ವರೂಪವನ್ನು ಭಗವಂತನ ಅನುಗ್ರಹವಿಲ್ಲದೇ ನಾನಾದರೂ ಹೇಗೆ ತಿಳಿದೇನು? ಎಂದು ಯಮದೇವರ ಮಾತು. ಭಗವಂತನ ಅನುಗ್ರಹದಿಂದಲಾದರೂ ಅವನನ್ನು ಪೂರ್ತಿಯಾಗಿ ತಿಳಿಯಲು ಸಾಧ್ಯವೇ? ಎಂಬ ನಚಿಕೇತನ ಪ್ರಶ್ನೆಗೆ, ಭಗವಂತನ ಪ್ರಸಾದದಿಂದಲೂ ಅವನನ್ನು ಸಮಗ್ರವಾಗಿ ತಿಳಿಯಲು ಸಾಧ್ಯವಿಲ್ಲವೆಂದು ಯಮದೇವರ ಉತ್ತರ.

'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋऽಯಮಗ್ನಿಃ।
ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ'

ಬ್ರಹ್ಮನನ್ನು ಸೂರ್ಯನು ಪ್ರಕಾಶಗೊಳಿಸುವುದಿಲ್ಲ, ನಕ್ಷತ್ರಗಳು ಪ್ರಕಾಶಗೊಳಿಸುವುದಿಲ್ಲ, ಮಿಂಚುಗಳೂ ಕೂಡ ಪ್ರಕಾಶಗೊಳಿಸುವುದಿಲ್ಲ, ಅಗ್ನಿಯು ಪ್ರಕಾಶಗೊಳಿಸುವುದಿಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕೇನು? ಭಗವಂತನು ಪ್ರಕಾಶಿಸುವುದರಿಂದಲೇ, ಸೂರ್ಯ, ನಕ್ಷತ್ರ ಮೊದಲಾದವುಗಳೆಲ್ಲವೂ ಪ್ರಕಾಶವಾಗುತ್ತವೆ. ಭಗವಂತನ ಪ್ರಕಾಶದಿಂದಲೇ ಈ ಸಮಸ್ತ ಪ್ರಪಂಚವು ಬೆಳಗುತ್ತಿದೆ. ಹೀಗೆ ಎರಡನೆಯ ವಲ್ಲಿಯಲ್ಲಿ ಐದನೆಯ ಖಂಡದ ಶ್ರುತಿವಾಕ್ಯಗಳಿಂದ ತಿಳಿಯುತ್ತಿರುವ ಆನುಕೂಲ್ಯೇನ ಗೃಹ್ಯಮಾಣವು ಈ ಅಧಿಕರಣದ ವಿಷಯವೆಂದು ತಿಳಿಯಬೇಕು.

ಅನುಕೃತ್ಯಧಿಕರಣ (೧-೩-೬)

**प्रकाशः – काठकेति ।।** अन्यगतं वाक्यं विषय इत्येतन्निरसिष्यत इति भावः ।। **तच्छब्दादिकमिति ।।** आदिपदेनैतच्छब्दस्तत्समानाधिकरणपरमसुखपदं च गृह्यते ।

ಗ್ರಂಥದಲ್ಲಿ 'ಕಾಠಕಸ್ಥಮ್' ಹೇಳಿದ್ದರಿಂದ ಬೇರೆ ಉಪನಿಷತ್ತಿನ ವಾಕ್ಯವು ಈ ಅಧಿಕರಣದ ವಿಷಯವಲ್ಲವೆಂದು ಮುಂದೆ ಅದ್ವೈತಿಗಳನ್ನು ನಿರಾಕರಿಸಲಾಗುತ್ತದೆಂದು ತಿಳಿಯಬೇಕು. 'ತಚ್ಛಬ್ದಾದಿಕಂ' ಎಂಬಲ್ಲಿರುವ ಆದಿಪದದಿಂದ 'ಏತತ್' ಶಬ್ದವನ್ನು ಹಾಗೂ ಅದಕ್ಕೆ ಸಮಾನಾಧಿಕರಣವಾದ 'ಪರಮಸುಖ' ಪದವನ್ನೂ ಕೂಡ ವಿವಕ್ಷಿಸಬೇಕು.

**प्रकाशः –** ''कथं नु तद्विजानीयाम्'' इत्यत्र तच्छब्दस्य ''तदेतत्'' इति पूर्ववाक्योक्तपरामर्शकत्वं सिद्धमिति पूर्ववाक्यमेव किं परमिति चिन्तितम् । तथा च वक्ष्यति ''तद्विजानीयामिति तच्छब्देन'' इत्यादि ।

'ಕಥಂ ನು ತದ್ವಿಜಾನೀಯಾಮ್' ಎಂಬ ವಾಕ್ಯದಲ್ಲಿರುವ 'ತತ್' ಶಬ್ದದಿಂದ 'ತದೇತತ್' ಎಂಬ ಹಿಂದಿನ ವಾಕ್ಯದಲ್ಲಿ ಹೇಳಿದ್ದನ್ನೇ ಪರಾಮರ್ಶ ಮಾಡಬೇಕೆಂಬುದು ಸಿದ್ಧವಾಗಿದೆ. ಆದ್ದರಿಂದ 'ಕಥಂ ನು ತದ್ವಿಜಾನೀಯಾಮ್' ಎಂಬ ಮುಂದಿನ ವಾಕ್ಯವನ್ನು ವಿಚಾರ ಮಾಡದೇ 'ತದೇತತ್' ಎಂಬ ಹಿಂದಿನ ವಾಕ್ಯವನ್ನೇ ಇಲ್ಲಿ ವಿಚಾರ ಮಾಡಿದ್ದಾರೆ. ಇದನ್ನೇ ಗ್ರಂಥಕಾರರು 'ತದ್ವಿಜಾನೀಯಮಿತಿ ತಚ್ಛಬ್ದೇನ' ಎಂದು ಮುಂದೆ ಹೇಳುತ್ತಾರೆ.

**प्रकाशः –** अतः ''तदेतदिति मन्यन्ते कथं नु तद्विजानीयामिति तेषां सुखं शाश्वतमित्युक्तज्ञानिसुखग्रहणमिति विपरीतश्रुतिभ्रमः'' इति न्यायविवरणविरोध-शङ्कानवकाशः ।

ಆದ್ದರಿಂದ 'ತದೇತದಿತಿ ಮನ್ಯಂತೇ' 'ಕಥಂ ನು ತದ್ವಿಜಾನೀಯಾಮ್' 'ಇತಿ ತೇಷಾಂ ಸುಖಂ ಶಾಶ್ವತಮಿತ್ಯುಕ್ತ ಜ್ಞಾನಿಸುಖಗ್ರಹಣಮಿತಿ ವಿಪರೀತಶ್ರುತಿಭ್ರಮಃ' ಎಂಬ ನ್ಯಾಯವಿವರಣದ ವಿರೋಧಾಶಂಕೆಗೆ ಅವಕಾಶವಿಲ್ಲ. ಅಂದರೆ 'ತದೇತದಿತಿ ಮನ್ಯಂತೇ' ಎಂಬುದು ವಿಚಾರಕ್ಕೆ ವಿಷಯವಾದ ವಾಕ್ಯವೆಂಬುದನ್ನು ತಿಳಿಯಬೇಕು.

**प्रकाशः – सन्निहितेति ।।** तेषां सुखमिति वाक्येनेत्यर्थः । **व्यवहितेति ।।** एको वशीति वाक्योक्तेश्वरेत्यर्थः । यद्यप्यत्र ''तेषां सुखम्'' इति वाक्यात् ''नित्यो नित्यानाम्'' इतीश्वरवाक्यस्यं परत्वादीश्वरस्सन्निहितः । ज्ञानिसुखं तु तदपेक्षया व्यवहितम् ।

ಗ್ರಂಥದಲ್ಲಿರುವ 'ಸನ್ನಿಹಿತ' ಶಬ್ದಕ್ಕೆ 'ತೇಷಾಂ ಸುಖಮ್' ಎಂಬ ವಾಕ್ಯದಿಂದ ಸನ್ನಿಹಿತವಾದ ಎಂದರ್ಥ. 'ವ್ಯವಹಿತ' ಎಂದರೆ 'ಏಕೋ ವಶೀ' ಎಂಬ ಅದರ ಹಿಂದಿನ ವಾಕ್ಯದಿಂದ ಪ್ರತಿಪಾದ್ಯನಾದ ಈಶ್ವರನೆಂದರ್ಥ.

ಪರಿಪೂರ್ಣಚಂದ್ರಿಕಾ

ವಸ್ತುತಃ ಇಲ್ಲಿ 'ತೇಷಾಂ ಸುಖಮ್' ಎಂಬ ವಾಕ್ಯಕ್ಕಿಂತಲೂ 'ನಿತ್ಯೋ ನಿತ್ಯಾನಾಮ್' ಎಂಬ ಭಗವತ್ ಪ್ರತಿಪಾದಕವಾದ ವಾಕ್ಯವು ಅನಂತರವಿರುವುದರಿಂದ ಈಶ್ವರನೇ ಸನ್ನಿಹಿತನಾಗಿದ್ದಾನೆ. ಆದರೆ ಜ್ಞಾನಿಸುಖವು ಇದಕ್ಕಿಂತಲೂ ವ್ಯವಹಿತವಾಗಿದೆ.

**प्रकाशः –** तथापि ''नित्यो नित्यानाम्'' इत्यस्मादपि परस्मिन् ''तमात्मस्थं येऽनुपश्यन्ति धीरास्तेषां शान्तिः'' इत्यत्र प्रकृतेन ज्ञानफलेन शान्तिशब्दार्थेन सुखेन ''नित्यो नित्यानाम्'' इति वाक्योक्तस्य व्यवहितत्वादिति पूर्वपक्ष्यभिप्राया-देवमुक्तम् । वक्ष्यति चैतद्यद्वेत्यादिना सिद्धान्ते ।

ಆದರೂ ಸಹ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯಕ್ಕಿಂತಲೂ ಅನಂತರದಲ್ಲಿ ಇರುವ 'ತಮಾತ್ಮಸ್ಥಂ ಯೇऽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ' ಎಂಬ ವಾಕ್ಯದಿಂದ ಪ್ರಕೃತವಾದ ಜ್ಞಾನದ ಫಲವೆನಿಸಿದ ಶಾಂತಿ ಎಂಬ ಶಬ್ದದ ಅರ್ಥವೆನಿಸಿದ ಸುಖದಿಂದ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯಪ್ರತಿಪಾದ್ಯನಿಗೆ ವ್ಯವಹಿತತ್ವವು ಬರುತ್ತದೆಂಬುದು ಪೂರ್ವಪಕ್ಷಿಯ ಅಭಿಪ್ರಾಯ. ಈ ದೃಷ್ಟಿಯಿಂದ 'ವ್ಯವಹಿತ' ಎಂದು ಹೇಳಲಾಗಿದೆ. ಇದನ್ನು ಮುಂದೆ 'ಯದ್ವಾ' ಇತ್ಯಾದಿ ಸಿದ್ಧಾಂತ ಗ್ರಂಥದಲ್ಲಿ ಹೇಳುತ್ತಾರೆ. ಆದ್ದರಿಂದ ಜ್ಞಾನಿಸುಖವೇ ಸನ್ನಿಹಿತ ಹೊರತು ಪರಮಾತ್ಮನಲ್ಲವೆಂದು ತಿಳಿಯಬೇಕು.

**गुरुराजीयम् – अनुकृतीति** ।। सूर्यादितेजसां भगवत्कृत्यनुसारिकृतिमत्त्व-प्रतिपादकं ''तमेव भान्तमनुभाति'' इति वाक्यमित्यर्थः। अनुभानप्रतिपादकमिति वक्तव्येऽनुकृतीति वचनं तु श्रुतौ भानस्य कृतिमात्रोपलक्षणतया तमेव कुर्वन्तमनुकरोति सर्वमिति श्रुत्यर्थमभिप्रेत्य सूत्रेऽनुकृतेरित्युक्तत्वात्सौत्रहेत्वनुवादायेति ध्येयम् । **तत्स्थः** उत्तरवाक्यस्थः । न तत्र सूर्यो भातीत्यस्य सूर्याद्यप्राकाश्यत्व-रूपलिङ्गप्रतिपादकवाक्यस्यादित्वेऽपि तस्य पुन्नपुंसकसाधारण्याद्वक्ष्यमाणदिशा युक्तिसूचनाय सूत्रोपात्तपुंल्लिङ्गोपेतं तमित्येतदेव गृहीतम् । **व्यवहितेति** ।। एको वशीति वाक्योक्तेत्यर्थः । **सन्निहितेति** ।। कथं नु तदिति वाक्योक्तेत्यर्थः । **साधकसद्भावादिति** । सन्निहितपरत्वरूपेत्यर्थः ।। **द्वितीय इति** ।। आनुकूल्येन गृह्यमाणपर इत्यर्थः ।




ಪೂರ್ವಪಕ್ಷದ ಫಲ - ಈ ವಿಕಲ್ಪಗಳಲ್ಲಿ ಮೊದಲನೆಯ ಪಕ್ಷವನ್ನು ಅಂಗೀಕಾರ ಮಾಡಿದರೆ, ಅನುಕೃತಿಯು ಆನುಕೂಲ್ಯೇನ ಗೃಹ್ಯಮಾಣದಲ್ಲಿದೆಯೆಂದು ಹೇಳಿದಂತಾಗುವುದಿಲ್ಲ. ಆವಾಗ ಬ್ರಹ್ಮಪಕ್ಷದಲ್ಲಿ ಸಾಧಕಪ್ರಮಾಣವೂ

ಕೂಡ ಬಾರದ ಕಾರಣ, 'ತದೇತತ್' ಎಂಬಲ್ಲಿರುವ 'ತತ್' ಶಬ್ದಾದಿಗಳಿಗೆ ಸನ್ನಿಹಿತವಾದ ಜ್ಞಾನಿಸುಖವನ್ನು ಪರಿತ್ಯಾಗ ಮಾಡಲು, ಕಾರಣವಿರುವುದಿಲ್ಲ. ಜ್ಞಾನಿಸುಖಪಕ್ಷದಲ್ಲಿ ಸಾಧಕಪ್ರಮಾಣವಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಗಳ ಸುಖವೆಂದೇ ಹೇಳಬೇಕು.

ಸಿದ್ಧಾಂತದ ಫಲ - ಒಂದು ವೇಳೆ ಎರಡನೆಯ ಪಕ್ಷವನ್ನು ಒಪ್ಪಿದರೆ, ಆವಾಗ ಅನುಕೃತಿಗೆ ಆನುಕೂಲ್ಯೇನ ಗೃಹ್ಯಮಾಣನಿಷ್ಠತ್ವವನ್ನು ಹೇಳಿದಂತಾಗುತ್ತದೆ. ಬ್ರಹ್ಮಪಕ್ಷದಲ್ಲಿ ಸಾಧಕಪ್ರಮಾಣವಿರುವುದರಿಂದ ಅದೇ ಕಾರಣದಿಂದಲೇ 'ತದೇತತ್' ಎಂಬಲ್ಲಿರುವ 'ತತ್' ಶಬ್ದಾದಿಗಳಿಗೆ ಸನ್ನಿಹಿತವಾದ ಜ್ಞಾನಿಸುಖಪರತ್ವವನ್ನು ಹೇಳಲಾಗದು. ಜ್ಞಾನಿಸುಖ ಪಕ್ಷದಲ್ಲಿ ಸಾಧಕಪ್ರಮಾಣಗಳೂ ಕೂಡ ಇಲ್ಲದ ಕಾರಣ ಆನುಕೂಲ್ಯೇನ ಗೃಹ್ಯಮಾಣನಾದವನು ಬ್ರಹ್ಮನೆಂದೇ ಸಿದ್ಧವಾಗುತ್ತದೆ.

• • • • •

## ಪೂರ್ವಪಕ್ಷ - ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೇ

## तात्पर्यचन्द्रिका

**पूर्वपक्षस्तु । इदमानुकूल्येन गृह्यमाणं ज्ञानिसुखमेव । नतु ब्रह्म । तद्विजानीयामिति तच्छब्देन ''तदेतदिति मन्यन्तेऽनिर्देश्यं परमं सुखम्'' इति प्रकृतसुखपरामर्शात् ।**

ಅನುವಾದ – ಪೂರ್ವಪಕ್ಷ ಹೀಗಿದೆ - ಕಾಠಕೋಪನಿಷತ್ತಿನ ಈ ಪ್ರಕರಣದಲ್ಲಿ ಕೇಳಿಸುತ್ತಿರುವ ಆನುಕೂಲ್ಯೇನ ಗೃಹ್ಯಮಾಣವು ಜ್ಞಾನಿಸುಖವೇ ಆಗಿದೆ ಹೊರತು, ಪರಮಾತ್ಮನಲ್ಲ. ಕಾರಣವೇನೆಂದರೆ 'ಕಥಂ ನು ತದ್ವಿಜಾನೀಯಾಮ್' ಎಂಬಲ್ಲಿರುವ ತತ್‌ಶಬ್ದದಿಂದ ಹಿಂದಿನ ವಾಕ್ಯದಲ್ಲಿ 'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್' ಎಂದು ಪ್ರಕೃತವಾದ ಸುಖವನ್ನು ಪರಾಮರ್ಶ ಮಾಡಲಾಗಿದೆ. ಹಿಂದಿನ ವಾಕ್ಯದಲ್ಲಿ ಪ್ರಕೃತವಾದ ಸುಖವು ಜ್ಞಾನಿಸುಖವಾದ್ದರಿಂದ, ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೆಂದೇ ಹೇಳಬೇಕು.

**नच ''हन्त त इदं प्रवक्ष्यामि गुह्यं ब्रह्म सनातनम्'' इति ब्रह्मप्रकरणादनिर्देश्यत्वलिङ्गाच्च तत्सुखं ब्रह्मेति वाच्यम् ।**

ಪ್ರಶ್ನೆ - 'ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್' 'ಎಲೈ ! ನಚಿಕೇತನೇ, ಗೂಢವಾದ ಸನಾತನವಾದ ಬ್ರಹ್ಮನ ಬಗ್ಗೆ ನಿನಗೆ ಉಪದೇಶಿಸುತ್ತೇನೆ' ಎಂಬ ಯಮದೇವರ ಮಾತಿನೊಂದಿಗೆ ಪ್ರಕರಣವು ಪ್ರಾರಂಭವಾಗುತ್ತಿದೆ. ಇದರಿಂದಲೇ ಇದು ಬ್ರಹ್ಮಪ್ರಕರಣವೆಂದು

ನಿರ್ಣಯವಾಗುತ್ತದೆ. ಮತ್ತು 'ಅನಿರ್ದೇಶ್ಯಂ ಪರಮಂ ಸುಖಮ್' ಎಂದು, ಅನಿರ್ದೇಶ್ಯತ್ವ ಲಿಂಗವೂ ಕೂಡ ಶ್ರುತವಾಗಿದೆ. ಇದು ಬ್ರಹ್ಮನ ಅಸಾಧಾರಣ ಲಿಂಗ. ಹೀಗೆ ಪ್ರಕರಣ ಹಾಗೂ ಲಿಂಗಗಳ ಬಲದಿಂದ ಹಿಂದೆ ಪ್ರಕೃತವಾದ ಸುಖವೂ ಕೂಡ ಬ್ರಹ್ಮಸ್ವರೂಪವೆಂದೇ ಹೇಳಬಹುದಲ್ಲವೇ?

**प्रकरणाल्लिङ्गाच्च ''तदेतत्'' इति सर्वनामश्रुतेर्बलवत्त्वात् ।**

ಉತ್ತರ - ಪ್ರಕರಣ ಹಾಗೂ ಲಿಂಗಗಳ ಆಧಾರದಿಂದ ಬ್ರಹ್ಮಪರವೆಂದು ಹೇಳಬಹುದು. ಆದರೆ ಪ್ರಕರಣಲಿಂಗಗಳಿಗಿಂತಲೂ ಶ್ರುತಿಯು ಸ್ವಾಭಾವಿಕವಾಗಿ ಬಲಿಷ್ಠವಾಗಿವೆ. 'ತದೇತದಿತಿ ಮನ್ಯಂತೇ' ಎಂಬಲ್ಲಿರುವ 'ತತ್' ಮತ್ತು 'ಏತತ್' ಎಂಬೆರಡು ಸರ್ವನಾಮಶ್ರುತಿಗಳು ಜ್ಞಾನಿಸುಖವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ, ಶ್ರುತಿಯ ಆಧಾರದಿಂದ ಜ್ಞಾನಿಸುಖವೇ ಆನುಕೂಲ್ಯೇನ ಗೃಹ್ಯಮಾಣವಾಗಿದೆಯೆಂದು ನಿರ್ಣಯಿಸುತ್ತೇವೆ.

**तस्य च ''एकं रूपं बहुधा यः करोति । तमात्मस्थं येऽनुपश्यन्ति धीरास्तेषां सुखं शाश्वतं नेतरेषाम्'' इति प्रकृतज्ञानिसुखपरत्वात् ।**

'ತದೇತತ್' ಎಂಬ ಶ್ರುತಿಯಲ್ಲಿರುವ 'ತತ್' ಮತ್ತು 'ಏತತ್' ಎಂಬೆರಡು ಶಬ್ದಗಳು 'ಏಕಂ ರೂಪಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇऽನುಪಶ್ಯಂತಿಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್' ಎಂಬ ವಾಕ್ಯದಿಂದ ಪ್ರಕೃತವಾದ ಜ್ಞಾನಿಸುಖವನ್ನು ಪರಾಮರ್ಶ ಮಾಡುತ್ತಿವೆ.

**नच तत्रेश्वरोऽपि प्रकृत इति वाच्यम् ।**

ಪ್ರಶ್ನೆ - ಅದೇ ವಾಕ್ಯದಲ್ಲಿ 'ತಮಾತ್ಮಸ್ಥಂ' ಎಂಬುದಾಗಿ ಈಶ್ವರನೂ ಕೂಡ ಪ್ರಕೃತನೇ ಆಗಿದ್ದಾನಲ್ಲವೇ? ಹೀಗಿರುವಾಗ ಜ್ಞಾನಿಸುಖವನ್ನು ಮಾತ್ರ ಪರಾಮರ್ಶ ಮಾಡಲು ಏನು ಕಾರಣ?

**तस्य पुल्लिङ्गेन प्रकृततया तत्परत्वे तदेतच्छब्दयोः पुल्लिङ्गतापातात् ।**

ಉತ್ತರ - ಪರಮಾತ್ಮನು ಪುಲ್ಲಿಂಗವಾದ 'ತಮ್' ಎಂಬ ಶಬ್ದದಿಂದ ಪ್ರಕೃತನಾಗಿದ್ದಾನೆ. ಅಂತಹ ಪರಮಾತ್ಮನನ್ನು ಪರಾಮರ್ಶ ಮಾಡಬೇಕೆಂದರೆ 'ತತ್' ಮತ್ತು 'ಏತತ್' ಶಬ್ದಗಳೂ ಕೂಡ ಪುಲ್ಲಿಂಗದಲ್ಲೇ ಇರಬೇಕಾಗುತ್ತದೆ.

**पूर्वाधिकरणे ''तस्मिन् यदन्तः'' इत्यत्र तच्छब्दस्य सन्निहिताकाशत्यागेन पुण्डरीकपरत्वायोगवदिहापि सन्निहितज्ञानिसुखत्यागेन व्यवहितेश्वरपरत्वायोगाच्च ।**

ಮತ್ತು ಹಿಂದಿನ ಅಧಿಕರಣದ ಸಿದ್ಧಾಂತದಲ್ಲಿ 'ತಸ್ಮಿನ್ ಯದಂತಃ' ಎಂಬಲ್ಲಿರುವ 'ತತ್' ಶಬ್ದದಿಂದ ಸನ್ನಿಹಿತವಾದ ಆಕಾಶವನ್ನು ಪರಾಮರ್ಶ ಮಾಡುವುದನ್ನು ಬಿಟ್ಟು, ವ್ಯವಹಿತವಾದ

ಪುಂಡರೀಕವನ್ನು ಪರಾಮರ್ಶ ಮಾಡಬಾರದೆಂದು ನೀವು ಸಾಧಿಸಿದಿರಿ. ಅದರಂತೆ ಇಲ್ಲಿಯೂ ಕೂಡ ಸನ್ನಿಹಿತವಾದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಲು ಬರುತ್ತಿರುವಾಗ ವ್ಯವಹಿತವಾದ ಈಶ್ವರನನ್ನು ಪರಾಮರ್ಶ ಮಾಡುವುದು ಅಯುಕ್ತವಾಗುತ್ತದೆ.

**तेषां सुखमिति सुखशब्देन प्रकृतज्ञानिसुखस्यैव "परमं सुखम्" इत्यनेन प्रत्यभिज्ञानाच्च ।**

ಮತ್ತು 'ತೇಷಾಂ ಸುಖಮ್' ಎಂಬಲ್ಲಿರುವ ಸುಖಶಬ್ದದಿಂದ ಪ್ರಕೃತವಾದ ಜ್ಞಾನಿಸುಖವೇ 'ಪರಮಂ ಸುಖಮ್' ಎಂಬುದರ ಪ್ರತ್ಯಭಿಜ್ಞಾಕ್ಕೆ ವಿಷಯವಾಗುತ್ತದೆ.

**प्रकाशः –**

**पूर्वपक्षटीकायां यथा भाष्यं "तद्विजानीयाम्" इति तच्छब्दस्य प्रकृतसुखपरत्वमनुक्त्वा "तदेतत्" इति वाक्यस्य प्रकृतज्ञानिसुखपरत्वसमर्थनात् "तदेतत्" इत्यादिवक्ष्यमाणन्यायविवरणरीत्या "तद्विजानीयाम्" इति तच्छब्दस्य प्रकृतसुखपरत्वोक्तिपूर्वं तां विवृणोति – इदमित्यादिना ॥**

ವಿವರಣೆ - ಪೂರ್ವಪಕ್ಷ ಟೀಕೆಯಲ್ಲಿ ಭಾಷ್ಯಕ್ಕೆ ಅನುಸಾರಿಯಾಗಿ 'ತದ್ವಿಜಾನೀಯಾಮ್' ಎಂಬಲ್ಲಿರುವ 'ತತ್' ಶಬ್ದಕ್ಕೆ ಪ್ರಕೃತವಾದ ಜ್ಞಾನಿಸುಖಪರತ್ವವನ್ನು ಅಂಗೀಕರಿಸಿಲ್ಲ. ಹೊರತಾಗಿ ಪೂರ್ವಾರ್ಧದಲ್ಲಿರುವ 'ತದೇತತ್' ಎಂಬ ವಾಕ್ಯದ 'ತತ್' ಶಬ್ದಕ್ಕೆ ಜ್ಞಾನಿಸುಖಪರತ್ವವನ್ನು ಸಮರ್ಥನೆ ಮಾಡಿರುತ್ತಾರೆ. ಅಂತಹ ಟೀಕೆಯನ್ನು ಪ್ರಕೃತ ವಿವರಣೆ ಮಾಡುತ್ತಿದ್ದಾರೆ. ಉತ್ತರಾರ್ಧದಲ್ಲಿರುವ 'ತತ್' ಶಬ್ದವು ಜ್ಞಾನಿಸುಖಪರವೆಂದು ಹೇಳಬೇಕಾದರೆ, ಪೂರ್ವಾರ್ಧದಲ್ಲಿರುವ 'ತತ್' ಮತ್ತು 'ಏತತ್' ಶಬ್ದಗಳು ಜ್ಞಾನಿಸುಖಪರವೆಂಬುದನ್ನು ಸಮರ್ಥನೆ ಮಾಡಬೇಕು. ಅದಕ್ಕೋಸ್ಕರ 'ತದೇತತ್' ಇತ್ಯಾದಿ ನ್ಯಾಯವಿವರಣ ಮಾತು ಹೊರಟಿರುತ್ತದೆ. ಹೀಗೆ ಮುಂದೆ ನ್ಯಾಯವಿವರಣದಲ್ಲಿ ಹೇಳಿದ ಪ್ರಕಾರ 'ತದ್ವಿಜಾನೀಯಾಮ್' ಎಂಬಲ್ಲಿರುವ 'ತತ್' ಶಬ್ದಕ್ಕೆ ಜ್ಞಾನಿಸುಖಪರತ್ವವನ್ನು ಹೇಳುವ ಮೂಲಕ ವಿವರಿಸುತ್ತಿದ್ದಾರೆ ಎಂಬುದನ್ನು ತಿಳಿಯಬೇಕು. ಆದ್ದರಿಂದ ಈ ಅಧಿಕರಣಕ್ಕೆ ಅನುಕೂಲ್ಯೇನ ಗೃಹ್ಯಮಾಣತ್ವವು ಎಂದರೆ 'ಕಥಂ ನು ತದ್ವಿಜಾನೀಯಾಮ್' ಎಂಬ ಮುಂದಿನ ವಾಕ್ಯವೇ ವಿಷಯವಾಗಿದೆ ಹೊರತು, 'ತದೇತದಿತಿ ಮನ್ಯಂತೇ' ಎಂಬ ಹಿಂದಿನ ವಾಕ್ಯವು ಈ ಅಧಿಕರಣದ ವಿಷಯವಾಗಿಲ್ಲ. ಹಿಂದೆ ಹೇಳಲ್ಪಟ್ಟ ಕೇಚಿತ್ಕಾರರ ಪಕ್ಷದಲ್ಲಿ ಪೂರ್ವಾರ್ಧವೇ ವಿಷಯವಾಗುತ್ತದೆ. ಏಕೆಂದರೆ, ಅನಿರ್ದೇಶ್ಯಪರಮಸುಖತ್ವವನ್ನೇ ಸಮನ್ವೇತವ್ಯಲಿಂಗವೆಂದು ಅವರು ಹೇಳುವುದರಿಂದ 'ತದೇತದಿತಿ' ಎಂಬ ವಾಕ್ಯವು ಆ ಪಕ್ಷದಲ್ಲಿ ವಿಷಯವಾಗುತ್ತದೆ.

**प्रकाशः – आद्यचिन्ताहेतुव्यक्तिपूर्वं द्वितीयचिन्तां प्रपञ्चयन् "नच सुखश्रुतिर्विष्णावपि सावकाशः" इत्यादि टीकां सोपपत्तिकं व्यनक्ति – नचेति ॥**

ತದರ್ಥ ಚಿಂತೆಗಳ ನಡುವೆ ಮೊದಲನೆಯ ಚಿಂತೆಯ ಪ್ರಕಾರವನ್ನು ವಿವರಿಸಿ, ಈಗ ಎರಡನೆಯ ಚಿಂತೆಯನ್ನು ವಿವರಿಸುತ್ತಿದ್ದಾರೆ. ಆದರಲ್ಲಿ 'ನಚ ಸುಖಶ್ರುತಿರ್ವಿಷ್ಣಾವಪಿ ಸಾವಕಾಶಃ' ಎಂಬ ಟೀಕೆಯನ್ನು ಯುಕ್ತಿಬದ್ಧವಾಗಿ 'ನಚ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः** – ते वक्ष्यामीति नचिकेतसं प्रति यमवाक्यम् । यथाऽत्तेत्यत्र ''नैवेह किञ्चनाग्र आसीत्'' इति ब्रह्मप्रकरणात्सर्वात्तृत्वलिङ्गाच्चादितिर्ब्रह्म तद्वदिति भावः । श्रुतेरिति जात्येकवचनम् । श्रुत्योरित्यर्थः ।

'ತೇ ವಕ್ಷ್ಯಾಮಿ' ಎಂಬುದು ನಚಿಕೇತನನ್ನು ಕುರಿತು ಯಮದೇವರು ಹೇಳುವ ಮಾತು. ಯಾವರೀತಿಯಾಗಿ 'ಅತ್ತಾಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ 'ನೈವೇಹ ಕಿಂಚನಾಗ್ರ ಆಸೀತ್' ಎಂಬ ಬ್ರಹ್ಮಪ್ರಕರಣದಿಂದ ಹಾಗೂ ಸರ್ವಾತ್ತೃತ್ವವೆಂಬಲಿಂಗದ ಬಲದಿಂದಲೂ ಅದಿತಿ ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸಲಾಯಿತೋ, ಆದರಂತೆ ಇಲ್ಲಿಯೂ ಕೂಡ ಪ್ರಕರಣ ಹಾಗೂ ಲಿಂಗಗಳ ಬಲದಿಂದ ವಿಷ್ಣುವೇ ಪ್ರತಿಪಾದ್ಯನೆಂದು ಹೇಳಬಹುದಲ್ಲವೇ? ಎಂದು ಪ್ರಶ್ನೆಯ ಅಭಿಪ್ರಾಯ. ಆದರೆ ಪ್ರಕರಣ ಹಾಗೂ ಲಿಂಗಗಳಿಗಿಂತಲೂ ಶ್ರುತಿಯು ಬಲಿಷ್ಠವಾಗಿರುವುದರಿಂದ ಬ್ರಹ್ಮನು ಪ್ರತಿಪಾದ್ಯನಾಗುವುದಿಲ್ಲ ಹೊರತಾಗಿ, ಜ್ಞಾನಿಸುಖವೇ ಪ್ರತಿಪಾದ್ಯವಾಗುತ್ತದೆ. 'ಶ್ರುತೇಃ' ಎಂಬಲ್ಲಿರುವ ಏಕವಚನವು ಜಾತ್ಯರ್ಥದಲ್ಲಿರುತ್ತದೆಂದು ತಿಳಿಯಬೇಕು. ಆದ್ದರಿಂದ 'ತತ್' ಮತ್ತು 'ಏತತ್' ಎಂಬೆರಡು ಶ್ರುತಿಗಳು ಎಂದು ಹೇಳಿದಂತಾಗುತ್ತದೆ.

**प्रकाशः** – शब्दादेवेत्यत्र वक्ष्यमाणदिशा जात्या प्राबल्यादित्यर्थः । अस्तु श्रुतिरीश्वरपरेत्यत आह – **तस्य चेति** ।। सर्वनाम्न इत्यर्थः । एकं रूपमित्याद्यंशोक्तिः सावकाशत्वशङ्कोत्थानाय

'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಲಿಂಗ ಮತ್ತು ಪ್ರಕರಣಗಳಿಗಿಂತಲೂ ಶ್ರುತಿಯೇ ಬಲಿಷ್ಠವಾಗಿರುತ್ತದೆಂದು ಸಮರ್ಥಿಸುತ್ತಾರೆ. ಹಾಗಾದರೆ 'ತದೇತತ್' ಎಂಬ ಶ್ರುತಿಗಳು ಈಶ್ವರಪರವೇಕೆ ಆಗಬಾರದು? ಎಂಬ ಪ್ರಶ್ನೆಗೆ 'ತಸ್ಯಚ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. 'ತಸ್ಯ ಚ' ಎಂದರೆ 'ತತ್' ಮತ್ತು 'ಏತತ್' ಎಂಬೆರಡು ಸರ್ವನಾಮಶಬ್ದಗಳು ಎಂದರ್ಥ. 'ತದೇತತ್' ಎಂಬ ಶಬ್ದಗಳು ಜ್ಞಾನಿಸುಖಪರವಾಗಿವೆಯೆಂದು ತಿಳಿಸುವ ಉದ್ದೇಶವಿರುವುದಾದಲ್ಲಿ, 'ತೇಷಾಂ ಸುಖಂ ಶಾಶ್ವತಂ ನೇತರೇಷಾಮ್' ಎಂಬ ಕೊನೆಯ ಪಾದವನ್ನಷ್ಟೇ ಗ್ರಂಥಕಾರರು ಉಚ್ಚರಿಸಿದ್ದರೆ ಸಾಕಾಗುತ್ತಿತ್ತು. 'ಏಕಂ ರೂಪಮ್' ಎಂಬ ಹಿಂದಿನ ಪಾದಗಳ ಉಲ್ಲೇಖವನ್ನೇಕೆ ಮಾಡಿದ್ದಾರೆ? ಎಂದರೆ. ಮುಂದೆ 'ನ ತತ್ರ' ಇತ್ಯಾದಿ ವಾಕ್ಯಗಳಿಂದ ಸಾವಕಾಶತ್ವ ಶಂಕೆಯನ್ನು ಮಾಡುತ್ತಾರೆ. ಆದಕ್ಕೆ ಅನುಕೂಲವಾಗಲಿ ಎಂದು ಸಂಪೂರ್ಣವಾಕ್ಯವನ್ನು ಉಚ್ಚಾರ ಮಾಡಿದ್ದಾರೆಂದು ತಿಳಿಯಬೇಕು.

**प्रकाशः** – **ज्ञानिसुखपरत्वादिति** ।। एतेन ''तदेतत्'' इत्यस्य ज्ञानिसुखपरत्वेऽपि तद्वाक्योक्तमपरामृश्य ''तद्विजानीयाम्'' इति तच्छब्दः प्राकरणिकब्रह्मपर एव किं न

**स्यादिति चोद्यं प्रत्युक्तम् । दुर्बलात्प्रकरणात्सर्वनामश्रुतेस्सन्निहितपरत्व-स्वारस्यभङ्गायोगादिति ।**

'ಜ್ಞಾನಿಸುಖಪರತ್ವಾತ್' ಎಂದು ಗ್ರಂಥದಲ್ಲಿದೆ. ಹೀಗೆ ಹೇಳಿದ್ದರಿಂದ ಮತ್ತೊಂದು ಅವಾಂತರ ಶಂಕೆಯನ್ನು ಪರಿಹರಿಸಿದಂತಾಯಿತು. 'ತದೇತದಿತಿ ಮನ್ಯಂತೇ' ಎಂಬ ಪೂರ್ವಾರ್ಧವು ಜ್ಞಾನಿಸುಖ ಪರವಾಗಲಿ; ಆದರೆ 'ಕಥಂ ನು ತದ್ವಿಜಾನೀಯಾಂ' ಎಂಬ ಉತ್ತರಾರ್ಧದಲ್ಲಿರುವ 'ತತ್' ಶಬ್ದವು ಪ್ರಕರಣ ಪ್ರತಿಪಾದ್ಯನಾದ ಬ್ರಹ್ಮನನ್ನು ಪರಾಮರ್ಶ ಮಾಡಬಹುದಲ್ಲವೇ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ ಕೇವಲ ಪ್ರಕರಣದ ಬಲದಿಂದ 'ತತ್' ಶಬ್ದವು ಬ್ರಹ್ಮಪರವೆಂದು ಸಿದ್ಧಾಂತಿಗಳು ಹೇಳಬೇಕು. ಆದರೆ ದುರ್ಬಲವಾದ ಪ್ರಕರಣಕ್ಕಿಂತಲೂ 'ತತ್' ಎಂಬ ಶ್ರುತಿಯು ಶ್ರೇಷ್ಠವಾಗಿರುವುದರಿಂದ, ಸನ್ನಿಹಿತವಾದ ಜ್ಞಾನಿಸುಖಪರತ್ವವನ್ನು ಕೇವಲ ಪ್ರಕರಣದ ಬಲದಿಂದ ಪ್ರಚ್ಯಾವನ ಮಾಡಲು ಸಾಧ್ಯವಿಲ್ಲ. ಆದಕ್ಕಾಗಿ ಉತ್ತರಾರ್ಧವೂ ಕೂಡ, ಪೂರ್ವಾರ್ಧಕ್ಕೆ ಸಮಾನ ವಿಷಯವಾಗಿ ಜ್ಞಾನಿಸುಖಪರವಾಗಿದೆಯೆಂದೇ ಒಪ್ಪಬೇಕು.

**प्रकाशः – ननु श्रुतिस्सावकाशा चेल्लिङ्गप्रकरणाभ्यां बाधार्हैवादित्यादि-श्रुतिरिवेत्यतस्सर्वनामश्रुतिसावकाशत्वशङ्कानिरासपरां ''नच वाच्यं भगवतोऽपि'' इत्यादिटीकां व्यनक्ति – नच तत्रेति ।।**

'ತತ್' ಎಂಬ ಶ್ರುತಿಯೇ ಸಾವಕಾಶವಾದಾಗ ಲಿಂಗ ಮತ್ತು ಪ್ರಕರಣಗಳಿಂದ ಬಾಧವನ್ನು ಹೇಳಬಹುದು. ಯಾವರೀತಿಯಾಗಿ ಅತ್ತ್ಯತ್ವಾಧಿಕರಣದಲ್ಲಿ ಲಿಂಗಪ್ರಕರಣಗಳ ಬಲದಿಂದ ಸಾವಕಾಶವಾದ ಅದಿತಿಶ್ರುತಿಗೆ ಬಾಧವನ್ನು ಹೇಳಲಾಗಿತ್ತೋ, ಅದರಂತೆ ಇಲ್ಲಿಯೂ ಕೂಡ ಜ್ಞಾನಿಸುಖಪರವಾದ 'ತದೇತತ್' ಶ್ರುತಿಗಳಿಗೆ ಬಾಧವನ್ನು ಹೇಳಬಹುದಲ್ಲವೇ? ಸರ್ವನಾಮ ಶ್ರುತಿಯು ಸಾವಕಾಶವಾಗಿದೆಯಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸುವಂತಹ 'ನಚ ವಾಚ್ಯಂ ಭಗವತೋಽಪಿ' ಇತ್ಯಾದಿ ಟೀಕೆಯನ್ನು 'ನಚ ತತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः – ''नपुंसकसुखशब्देनाप्रकृतस्य तदित्यादिपरामर्शायोगात्'' इति टीकायां नपुंसकेत्युक्तिसूचितां पुल्लिङ्गत्वापातादिति युक्तिमुक्त्वा ''सम्भवत्समीपे'' इति वाक्योक्तयुक्तिमाह – पूर्वाधिकरण इति ।।**

ಪರಮಾತ್ಮನು ನಪುಂಸಕವಾದ, ಸುಖಶಬ್ದದಿಂದ ಪ್ರಕೃತನಾಗಿಲ್ಲ. ಆದರೆ ಜ್ಞಾನಿಸುಖವು ನಪುಂಸಕವಾದ ಸುಖಶಬ್ದದಿಂದ ಪ್ರಕೃತವಾಗಿದೆ. ಹೀಗೆ ಅಪ್ರಕೃತವಾದ ಪರಮಾತ್ಮನನ್ನು 'ತತ್' ಎಂಬ ಶಬ್ದದಿಂದ ಪರಾಮರ್ಶ ಮಾಡಲು ಸಾಧ್ಯವಿಲ್ಲವೆಂದು 'ನಪುಂಸಕಸುಖಶಬ್ದೇನಾಪ್ರಕೃತಸ್ಯ ತದಿತ್ಯಾದಿಪರಾಮರ್ಶಾಯೋಗಾತ್' ಎಂಬ ಟೀಕಾ ಮಾತಿನಲ್ಲಿ ಹೇಳಲಾಗಿದೆ. ಈ ಟೀಕಾ ಮಾತಿನಲ್ಲಿ 'ನಪುಂಸಕ' ಎಂಬ ಶಬ್ದದಿಂದ ಪುಲ್ಲಿಂಗತ್ವವು ಬರಬೇಕಾದೀತು ಎಂಬ ಯುಕ್ತಿಯನ್ನು ಸೂಚನೆ ಮಾಡಿದ್ದಾರೆ. 'ಸಂಭವತ್ ಸಮೀಪೇ' ಎಂಬ ಟೀಕಾವಾಕ್ಯದಲ್ಲಿ ಹೇಳಲ್ಪಟ್ಟ ಯುಕ್ತಿಯನ್ನು 'ಪೂರ್ವಾಧಿಕರಣ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಸಮೀಪದಲ್ಲಿರುವುದನ್ನೇ ಪರಾಮರ್ಶ ಮಾಡಲು ಬರುವಾಗ ದೂರಸ್ಥಪರಾಮರ್ಶ ಮಾಡಬಾರದೆಂದು ನೀವೇ ಹಿಂದಿನ ಅಧಿಕರಣದಲ್ಲಿ ಸಿದ್ಧಾಂತ ಮಾಡಿರುತ್ತೀರಿ ಎಂದಭಿಪ್ರಾಯ.

**प्रकाशः** – एतेन पूर्वाधिकरणन्यायेनेति पूर्वोक्तं विवृतं बोध्यम् । ईश्वरोऽपि नित्यो नित्यानामिति सन्निहित इति प्रत्युक्तं चिन्ताव्याख्यानप्रस्तावे । टीकास्थसुखपदसूचितां युक्तिमाह – तेषामिति ॥

ಹೀಗೆ ಸನ್ನಿಹಿತವಾದದ್ದನ್ನು ಪರಾಮರ್ಶ ಮಾಡಲು ಬರುವಾಗ, ದೂರಸ್ಥವಾದದ್ದನ್ನು ಪರಾಮರ್ಶ ಮಾಡಬಾರದೆಂದು ಹೇಳಿದ್ದರಿಂದ, 'ಪೂರ್ವಾಧಿಕರಣನ್ಯಾಯೇನ' ಎಂದು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಆಕ್ಷೇಪ ಮಾಡಲಾಗಿದೆ ಎಂಬ ಮಾತನ್ನು ವಿವರಿಸಿದಂತಾಯಿತು. ಈಶ್ವರನೂ ಸಹ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯದಿಂದ ಸನ್ನಿಹಿತನೇ ಆಗಿದ್ದಾನಲ್ಲವೇ ಎಂಬ ಆಶಂಕೆಯನ್ನು ಚಿಂತಾವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ನಾವೇ ನಿರಾಕರಿಸಿದ್ದೇವೆ. ಟೀಕೆಯಲ್ಲಿರುವ ಸುಖಪದದಿಂದ ಸೂಚಿತವಾದ ಯುಕ್ತಿಯನ್ನು 'ತೇಷಾಮ್' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**गुरुराजीयम् – नच तत्रेति** ॥ एकं रूपं बहुधा यः करोति । तमित्यनेनेश्वरः प्रकृत इत्यर्थः । पूर्वाधिकरणन्यायेन पूर्वपक्षादित्युक्तम् । तदुपपादयति – **पूर्वाधिकरण इति** ॥ **तेषां सुखमिति** ॥ यद्यप्यत्र तेषां सुखं नेतरेषामिति प्रकृतज्ञानिसुखापेक्षयापि नित्यो नित्यानामितीश्वरस्यैव सन्निहितत्वेन सन्निहित-सुखपरामर्शो इत्यनुपपन्नम् । तथापि नित्यो नित्यानामित्येतदपि परस्मिन् तमात्मस्थं येऽनुपश्यन्ति धीरास्तेषां सुखं शाश्वतं नेतरेषामित्यत्र प्रकृतज्ञानफलेन शान्तिशब्दार्थेन सुखेन तदेतदिति मन्यन्तेऽनिर्देश्यं परमं सुखमित्यनेन प्रत्यभिज्ञानादित्यत्रैव तात्पर्यान्न दोषः ।




ಕಾಠಕೋಪನಿಷತ್ತಿನಲ್ಲಿ ಹೇಳಲ್ಪಟ್ಟ ಆನುಕೂಲ್ಯೇನ ಗೃಹ್ಯಮಾಣವು ಜ್ಞಾನಿಸುಖವೇ ಆಗಿದೆ ಹೊರತು, ಬ್ರಹ್ಮನಲ್ಲ. ಏಕೆಂದರೆ 'ಕಥಂ ನು ತದ್ವಿಜಾನೀಯಾಮ್' ಎಂಬಲ್ಲಿರುವ 'ತತ್' ಶಬ್ದದಿಂದ ಹಿಂದೆ ಪ್ರಕೃತವಾದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕು.

ಇದು ಬ್ರಹ್ಮಪ್ರಕರಣವಾಗಿರುವುದರಿಂದ ಮತ್ತು ಬ್ರಹ್ಮನ ಲಿಂಗವು ಕೇಳಿಸುತ್ತಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣನಾದವನು ಬ್ರಹ್ಮನೇ ಏಕೆ ಆಗಬಾರದು ಎಂದು ಪ್ರಶ್ನಿಸಬಾರದು. ಏಕೆಂದರೆ

ಪ್ರಕರಣ ಹಾಗೂ ಲಿಂಗಗಳಿಗಿಂತಲೂ 'ತತ್' 'ಏತತ್' ಎಂಬೆರಡು ಶ್ರುತಿಗಳು ಬಲಿಷ್ಠವಾಗಿವೆ. ಆದ್ದರಿಂದ 'ತಮಾತ್ಮಸ್ಥಂ ಯೇಽನುಪಶ್ಯಂತಿಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್' ಎಂಬಲ್ಲಿ ಪರಮಾತ್ಮನನ್ನು ಕಂಡ ಜ್ಞಾನಿಗಳಿಗೆ ಪರಮಸುಖವಾಗುತ್ತದೆಂದು ಹೇಳಲಾಗಿದೆ. ಆ ಸುಖವನ್ನು 'ತದೇತದಿತಿ ಮನ್ಯಂತೇ' ಎಂಬ ಮುಂದಿನ ವಾಕ್ಯದಲ್ಲಿ 'ತದೇತತ್' ಎಂದು ಪರಾಮರ್ಶ ಮಾಡಿ, ಅನಿರ್ದೇಶ್ಯತ್ವವನ್ನು ಹೇಳಿದ್ದರಿಂದ ಜ್ಞಾನಿಸುಖವೇ ಆನುಕೂಲ್ಯೇನ ಗೃಹ್ಯಮಾಣವಾಗಿದೆಯೆಂದು ತಿಳಿಯುತ್ತದೆ.

• • • • •

## 'ತದೇತತ್' ಶ್ರುತಿಯು ಹತ್ತಿರದ ಜ್ಞಾನಿಸುಖ ಪರ

## तात्पर्यचन्द्रिका

**नच पूर्वाधिकरणे विधेयात्मापेक्षयैतच्छब्दस्य पुल्लिङ्गतावदिहापि विधेयसुखापेक्षया नपुंसकलिङ्गत्वमिति युक्तम् ।**

ಅನುವಾದ - ಪ್ರಶ್ನೆ - ಹಿಂದಿನ ಅಧಿಕರಣದಲ್ಲಿ ವಿಧೇಯವಾದ ಆತ್ಮಶಬ್ದದ ಸಮಾನಾಧಿಕರಣ್ಯದ ಬಲದಿಂದ 'ಏತತ್' ಶಬ್ದವು ಪುಲ್ಲಿಂಗದಲ್ಲಿ ಪ್ರಯುಕ್ತವಾಗಿದೆಯೆಂದು ಸಮರ್ಥಿಸಲಾಯಿತು. ಅದರಂತೆ ಇಲ್ಲಿಯೂ ಕೂಡ ವಿಧೇಯವಾದ ಸುಖಶಬ್ದವು ನಪುಂಸಕಲಿಂಗದಲ್ಲಿರುವುದರಿಂದ ಅದಕ್ಕನುಸಾರಿಯಾಗಿ 'ತತ್' ಮತ್ತು 'ಏತತ್' ಶಬ್ದಗಳೂ ಕೂಡ ನಪುಂಸಕಲಿಂಗದಲ್ಲಿಯೇ ಪ್ರಯುಕ್ತವಾಗಿವೆ. ಇಂತಹ ನಪುಂಸಕಲಿಂಗದ ಶಬ್ದಗಳು ಪುಲ್ಲಿಂಗದಿಂದ ಪ್ರಸಕ್ತನಾದ ಪರಮಾತ್ಮನನ್ನು ಪರಾಮರ್ಶ ಮಾಡಬಹುದಲ್ಲವೇ?

**तदेतच्छब्दयोर्मध्य एकस्योद्देशकत्वावश्यम्भावेन द्वयोर्नपुंसकलिङ्गत्वायोगात् ।**

ಉತ್ತರ - 'ತತ್' ಮತ್ತು 'ಏತತ್' ಶಬ್ದಗಳ ನಡುವೆ ಎಂದರೆ ಉದ್ದೇಶ್ಯ-ವಿಧೇಯಗಳ ಮಧ್ಯದಲ್ಲಿ ಒಂದು ಶಬ್ದ ಮಾತ್ರ ವಿಧೇಯವಾದ ಸುಖಶಬ್ದಕ್ಕೆ ಅನುಸಾರಿಯಾಗಿ ನಪುಂಸಕಲಿಂಗವಾಗಬಹುದು. ಆದರೆ ಎರಡೂ ಶಬ್ದಗಳನ್ನು ವಿಧೇಯ ಶಬ್ದಕ್ಕೆ ಸಮಾನಾಧಿಕರಣವಾಗಿ ನಪುಂಸಕಲಿಂಗದಲ್ಲಿ ಪ್ರಯೋಗಿಸಲು ಕಾರಣವಿಲ್ಲ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ವಿಧೇಯವಾದ ಆತ್ಮಶಬ್ದಕ್ಕೆ ಅನುಸಾರಿಯಾಗಿ ಒಂದೇ 'ಏತತ್' ಶಬ್ದಕ್ಕೆ ಪುಲ್ಲಿಂಗವನ್ನು ಸಮರ್ಥಿಸಲಾಗಿತ್ತು.

**अत एव टीकायां ''तदित्यादि'' इत्यादिशब्दः ।**

ಆದ್ದರಿಂದಲೇ ಟೀಕೆಯಲ್ಲಿ 'ತದಿತ್ಯಾದಿ' ಎಂಬಲ್ಲಿ 'ಆದಿ' ಶಬ್ದವು ಪ್ರಯೋಗಿಸಿದ್ದಾರೆ. ಅಂದರೆ 'ತತ್' ಮತ್ತು 'ಏತತ್' ಎಂಬೆರಡು ಶಬ್ದಗಳಿಗೆ ನಪುಂಸಕಲಿಂಗವನ್ನು ಸಮರ್ಥಿಸಲು ಸಾಧ್ಯವಿಲ್ಲವೆಂದು ಟೀಕೆಯ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**यदनिर्देश्यं परमं सुखं तदेतत्परमात्मनो रूपमिति नपुंसकलिङ्गनिर्वाहे च रूपशब्दाध्याहारः स्यात् ।**

ಪ್ರಶ್ನೆ - 'ಅನಿರ್ದೇಶ್ಯಂ ಪರಮಂ ಸುಖಂ ತದೇತತ್ ಪರಮಾತ್ಮನೋ ರೂಪಮ್' ಯಾವ ಅನಿರ್ದೇಶ್ಯವಾದ ಪರಮಸುಖವಿದೆಯೋ ಅದು ಪರಮಾತ್ಮನ ಸ್ವರೂಪವಾಗಿದೆ ಎಂಬುದಾಗಿ ರೂಪಶಬ್ದವನ್ನು ಅಧ್ಯಾಹಾರ ಮಾಡುತ್ತೇವೆ. ಆವಾಗ ರೂಪಶಬ್ದವು ನಪುಂಸಕಲಿಂಗದಲ್ಲಿರುವುದರಿಂದ, ಅಂತಹ ನಪುಂಸಕಲಿಂಗದಿಂದ ಪ್ರಸಕ್ತನಾದ ಪರಮಾತ್ಮನು 'ತತ್' ಮತ್ತು 'ಏತತ್' ಎಂಬೆರಡು ನಪುಂಸಕದಲ್ಲಿರುವ ಶಬ್ದಗಳಿಂದಲೇ ಪರಾಮರ್ಶ ಮಾಡಬಹುದಲ್ಲವೇ?

ಉತ್ತರ - ಇದೂ ಸಹ ತಪ್ಪು. ಈ ಪಕ್ಷದಲ್ಲಿ ರೂಪಶಬ್ದವನ್ನು ಅಧ್ಯಾಹಾರ ಮಾಡಬೇಕಾಗುತ್ತದೆಂಬ ದೋಷವಿದೆ. ಏನನ್ನೂ ಅಧ್ಯಾಹಾರ ಮಾಡದೇ ಸಹಜವಾಗಿ ಜ್ಞಾನಿಸುಖಪರತ್ವವೆಂಬರ್ಥವನ್ನು ಹೇಳಲು ಬರುವಾಗ, ಇದು ಕ್ಲಿಷ್ಟಕಲ್ಪನೆಯಾಗಿದೆ.

**अध्याहारेण लिङ्गनिर्वाहे च ''प्रास्मा अग्निम्'' इत्यत्र पशुशब्दाध्याहारेणास्मै-शब्दस्य पुल्लिङ्गनिर्वाहान्न मेषीपरत्वं स्यात् । तच्च नेत्युक्तं नवमे ।**

ಮತ್ತು ಅಧ್ಯಾಹಾರ ಮಾಡುವ ಮೂಲಕ ನಪುಂಸಕಲಿಂಗವನ್ನು ನಿರ್ವಾಹ ಮಾಡುವುದು ಪೂರ್ವಮೀಮಾಂಸೆಗೆ ವಿರುದ್ಧವಾಗಿದೆ. ಏಕೆಂದರೆ 'ಪ್ರಾಸ್ಮಾ ಅಗ್ನಿಮ್' ಎಂಬಲ್ಲಿ 'ಪಶು' ಶಬ್ದವನ್ನು ಅಧ್ಯಾಹಾರ ಮಾಡುವ ಮೂಲಕ 'ಅಸ್ಮೈ' ಎಂಬ ಶಬ್ದಕ್ಕೆ ಪುಲ್ಲಿಂಗತ್ವವನ್ನು ನಿರ್ವಾಹ ಮಾಡಬಹುದಾದ್ದರಿಂದ, ಹೆಣ್ಣು ಪಶುವನ್ನೂ ಕೂಡ ಸ್ವೀಕರಿಸಬೇಕೆಂದಾಗುತ್ತದೆ. ಆದರೆ ಅಧ್ಯಾಹಾರ ಮಾಡಬಾರದಾದ್ದರಿಂದ ಹೆಣ್ಣುಪಶುವನ್ನು ಸ್ವೀಕರಿಸಬಾರದೆಂದು ಪೂರ್ವಮೀಮಾಂಸೆಯ ನವಮಾಧ್ಯಾಯದಲ್ಲಿ ನಿರ್ಣಯಿಸಿದ್ದಾರೆ. ಅದರಂತೆ ಇಲ್ಲೂ ಕೂಡ 'ತದೇತತ್' ಶಬ್ದಗಳಿಂದ ಪರಮಾತ್ಮನನ್ನು ಪರಾಮರ್ಶ ಮಾಡಬೇಕೆಂಬ ಅಪೇಕ್ಷೆಯಿಂದ, ರೂಪಶಬ್ದವನ್ನು ಅಧ್ಯಾಹಾರ ಮಾಡುವುದು ತಪ್ಪಾಗುತ್ತದೆ.

**न चानुकृत्यादिहेतुभिरानुकूल्येन गृह्यमाणस्य ब्रह्मता ।**

ಪ್ರಶ್ನೆ - 'ತಮೇವ ಭಾಂತಮ್ ಅನುಭಾತಿ ಸರ್ವಮ್' ಇತ್ಯಾದಿ ಶ್ರುತಿಯಲ್ಲಿ ಸೂರ್ಯಾದಿ ಪ್ರಕಾಶಗಳೆಲ್ಲವೂ ಪರಮಾತ್ಮನ ಅಧೀನವಾಗಿದೆ. ಪರಮಾತ್ಮನೇ ಪ್ರಥಮ ಪ್ರಕಾಶರೂಪನಾಗಿದ್ದಾನೆ. ಸೂರ್ಯಾದಿಗಳು ಪ್ರಕಾಶಸ್ವರೂಪರಲ್ಲ. ಇತ್ಯಾದಿಯಾಗಿ ಅನೇಕ ಹೇತುಗಳು ಹೇಳಲ್ಪಟ್ಟಿವೆ. ಈ ಎಲ್ಲಾ ಅಸಾಧಾರಣವಾದ ಪರಮಾತ್ಮನ ಲಿಂಗಗಳ ಬಲದಿಂದ, ಆನುಕೂಲ್ಯೇನ ಗೃಹ್ಯಮಾಣನಾದವನು ಪರಮಾತ್ಮನೇ ಆಗಿದ್ದಾನೆಂದು ಹೇಳಬಹುದಲ್ಲವೇ?

ಅನುಕೃತ್ಯಧಿಕರಣ (೧-೩-೬)

**अनुकृतिवाक्यस्थस्य तमेवेति तच्छब्दस्य पुंल्लिङ्गत्वेनेश्वरपरतयाऽऽनुकूल्येन गृह्यमाणपरत्वाभावात् ।**

ಉತ್ತರ - ಅನುಕೃತಿವಾಕ್ಯದಲ್ಲಿ ಶ್ರುತವಾದ 'ತಮೇವ' ಎಂಬಲ್ಲಿರುವ 'ತತ್' ಶಬ್ದವು ಪುಲ್ಲಿಂಗದಲ್ಲಿರುವುದರಿಂದ ಈಶ್ವರ ಪರವಾಗಿದೆಯೆಂದೇ ಒಪ್ಪುತ್ತೇವೆ. ತನ್ಮಾತ್ರದಿಂದ ಆನುಕೂಲ್ಯೇನ ಗೃಹ್ಯಮಾಣನಾದವನು ಪರಮಾತ್ಮನೆಂದು ನಿರ್ಣಯಿಸಲಾಗದು. ಆದ್ದರಿಂದ 'ತಮೇವ ಭಾಂತಮ್' ಇತ್ಯಾದಿ ಶ್ರುತಿಯಲ್ಲಿ ಪರಮಾತ್ಮನೇ ಪ್ರತಿಪಾದ್ಯನಾಗಲಿ ಆದರೆ ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೇ ಆಗುತ್ತದೆ.

**तदेतदभिप्रेत्योक्तं न्यायविवरणे ''तदेतदिति मन्यन्ते । कथं नु तद्विजानीयामिति । तेषां सुखं शाश्वतमित्युक्तज्ञानिसुखपरामर्शः'' इति । भाष्ये च ''परमात्मैवानिर्देश्यसुखरूप'' इति ।**

ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ 'ತದೇತದಿತಿ ಮನ್ಯಂತೇ । ಕಥಂ ನು ತದ್ವಿಜಾನೀಯಾಮಿತಿ । ತೇಷಾಂ ಸುಖಂ ಶಾಶ್ವತಮಿತ್ಯುಕ್ತಜ್ಞಾನಿಸುಖಪರಾಮರ್ಶಃ' ಎಂದರೆ 'ತದೇತದಿತಿ ಮನ್ಯಂತೇ । ಕಥಂ ನು ತದ್ವಿಜಾನೀಯಾಮ್' ಎಂಬಲ್ಲಿ 'ತೇಷಾಂ ಸುಖಂ ಶಾಶ್ವತಮ್' ಎಂಬ ಹಿಂದಿನ ವಾಕ್ಯದಲ್ಲಿ ಪ್ರಸಕ್ತವಾದ ಜ್ಞಾನಿಸುಖವನ್ನು ಪರಾಮರ್ಶ ಮಾಡಬೇಕೆಂದು ಹೇಳಿರುತ್ತಾರೆ. ಹಾಗೂ ಭಾಷ್ಯದಲ್ಲೂ ಸಹ 'ಪರಮಾತ್ಮೈವಾನಿರ್ದೇಶ್ಯಸುಖರೂಪಃ' ಪರಮಾತ್ಮನೇ ಅನಿರ್ದೇಶ್ಯ ಸ್ವರೂಪನಾಗಿದ್ದಾನೆಂದು ಹೇಳಲಾಗಿದೆ.

**तस्मात्तदेतदित्यादौ तत्पदं सन्निहितपरप्रातिपदिकानुरोधात्प्रत्ययार्थभूत-लिङ्गानुसारात्समभिव्याहृतसुखपदानुसाराच्च सन्निहितज्ञानिसुखपरमिति आनुकूल्येन गृह्यमाणत्वमपि तस्यैवेति ।**

ಇಲ್ಲಿಯ ತನಕ ಮಾಡಿದ ವಿಚಾರದಂತೆ 'ತದೇತತ್' ಎಂಬ ಶ್ರುತಿಯಲ್ಲಿರುವ 'ತತ್' ಎಂಬ ಪದವು ಸನ್ನಿಹಿತವಾದದ್ದನ್ನೇ ಪರಾಮರ್ಶ ಮಾಡುವಂತಹ ಪ್ರಾತಿಪಾದಿಕವಾಗಿದೆ. ಅದಕ್ಕನುಸಾರಿಯಾಗಿ ಪ್ರತ್ಯಯಾರ್ಥವೆನಿಸಿದ ಲಿಂಗವನ್ನು ಅರ್ಥೈಸಬೇಕು. ಮತ್ತು ಸಮಭಿವ್ಯಾಹೃತವಾದ ಸುಖಪದದ ಅನುಸಾರಿಯೂ ಆಗಿರುವುದರಿಂದ 'ತತ್' ಶಬ್ದವು ಸನ್ನಿಹಿತವಾದ ಜ್ಞಾನಿಸುಖವನ್ನೇ ಪರಾಮರ್ಶ ಮಾಡುತ್ತದೆ. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣತ್ವವೂ ಕೂಡ ಜ್ಞಾನಿಗಳ ಸುಖದಲ್ಲೇ ಬರುತ್ತದೆ ಹೊರತು, ಪರಮಾತ್ಮನಲ್ಲವೆಂಬ ಪೂರ್ವಪಕ್ಷವು ದೃಢವಾಯಿತು.

**प्रकाशः –**

**टीकायां "तदित्यादिपरामर्शायोगात्" इत्यादिपदोक्तिस्वारस्यं शङ्कापूर्वं व्यनक्ति – नच पूर्वेति ।।**

ವಿವರಣೆ - ಈ ಹಿಂದೆ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಪೂರ್ವಪಕ್ಷವನ್ನು ಸ್ಥಾಪನೆ ಮಾಡಲಾಯಿತು. ಈಗ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯಕ್ಕೆ ವೈಷಮ್ಯವನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿದ್ದಾರೆ. ಟೀಕೆಯಲ್ಲಿ 'ತದಿತ್ಯಾದಿಪರಾಮರ್ಶಾಯೋಗಾತ್' ಎಂಬಲ್ಲಿರುವ ಆದಿಪದದ ಸ್ವಾರಸ್ಯವನ್ನು ತಿಳಿಸುವುದಕ್ಕಾಗಿ ಶಂಕೆಯನ್ನು ಮಾಡುವ ಮೂಲಕ ವ್ಯಾಖ್ಯಾನ ಮಾಡುತ್ತಿದ್ದಾರೆ 'ನಚ ಪೂರ್ವ' ಇತ್ಯಾದಿ ಗ್ರಂಥದಿಂದ.

**प्रकाशः – एतेन पूर्ववैषम्येण वेति प्रागुक्तं विवृतं बोध्यम् । सिद्धान्त्यभिमत-लिङ्गनिर्वाहमाशङ्क्य निराह – यदिति ।।**

'ನಚ ಪೂರ್ವ' ಇತ್ಯಾದಿ ಗ್ರಂಥದ ಮಾತುಗಳಿಂದ ಹಿಂದಿನ ಅಧಿಕರಣದ ಸಿದ್ಧಾಂತದಿಂದ ವೈಷಮ್ಯವನ್ನು ತೋರಿಸುತ್ತಿರುವುದರಿಂದ, ಪ್ರತ್ಯುದಾಹರಣರೂಪವಾದ ಸಂಗತಿಯಿದೆ ಎಂದು ಹಿಂದೆ ಹೇಳಿದ ಮಾತನ್ನು ವಿವರಿಸಿದಂತಾಯಿತು. ಸಿದ್ಧಾಂತಿಗಳಿಗೆ ಅಭಿಮತವಾದ ಲಿಂಗದ ನಿರ್ವಾಹವನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ಯತ್' ಇತ್ಯಾದಿ ಗ್ರಂಥದಿಂದ.

**प्रकाशः – प्रास्मा अग्निमिति ।। विवृतमधिकरणशरीरमाकाशाधिकरणे । तथा च यदि रूपशब्दाध्याहारेण नपुंसकलिङ्गनिर्वाहस्तदा "प्रास्मा अग्निं भरत" इति वाक्ये पशुशब्दाध्याहारेण प्रास्मै पशव इति मेष्यामपि लिङ्गनिर्वाहसम्भवेनाध्याहार-निरासपराधानेष्ट्यधिकरणसिद्धान्तहानिः स्यादित्यर्थः ।**

'ಪ್ರಾಸ್ಮಾ ಅಗ್ನಿಮ್' ಎಂಬ ಪೂರ್ವಮೀಮಾಂಸೆಯಲ್ಲಿ ಬರುವ ಈ ಶ್ರುತ್ಯರ್ಥವಿಚಾರವನ್ನು ಹಿಂದೆ ಆಕಾಶಾಧಿಕರಣದಲ್ಲಿಯೇ ವಿವರಿಸಿದ್ದೇವೆ. ಪ್ರಕೃತ ಒಂದು ವೇಳೆ ರೂಪಶಬ್ದವನ್ನು ಅಧ್ಯಾಹಾರ ಮಾಡುವ ಮೂಲಕ ನಪುಂಸಕಲಿಂಗವನ್ನು ನಿರ್ವಾಹ ಮಾಡುವುದಾದರೆ, 'ಪ್ರಾಸ್ಮಾ ಅಗ್ನಿಂ ಭರತ' ಎಂಬ ವಾಕ್ಯದಲ್ಲಿಯೂ ಪಶುಶಬ್ದವನ್ನು ಆಧ್ಯಾಹಾರ ಮಾಡಿ 'ಪಾಸ್ಮೈಪಶವಃ' ಎಂದು ಹೆಣ್ಣುಪಶುವನ್ನೂ ಕೂಡ ಸ್ವೀಕರಿಸಲು ಬರುವುದರಿಂದ ಆ ಯಾಗದಲ್ಲಿ ಹೆಣ್ಣು ಪಶುವೂ ಕೂಡ ದ್ರವ್ಯವೆಂದಾಗಬೇಕಾದೀತು. ಆದರೆ ಪೂರ್ವಮೀಮಾಂಸಕರು ಅಧ್ಯಾಹಾರ ಮಾಡಿಕೊಳ್ಳಬಾರದೆಂದು ಈ ಆಧಾನೇಷ್ಟ್ಯಧಿಕರಣದಲ್ಲಿ ಸಿದ್ಧಾಂತ ಮಾಡಿ ಹೆಣ್ಣು ಪಶುವನ್ನು ದ್ರವ್ಯವನ್ನಾಗಿ ಸ್ವೀರಿಸಬಾರದೆಂದು ನಿರ್ಣಯಿಸಿದ್ದಾರೆ. ಅದು ತಪ್ಪಾಗಬೇಕಾದೀತು.

**प्रकाशः – निरवकाशलिङ्गबलेन श्रुतेस्सन्निहितपरत्वत्यागो युक्त इत्याशङ्का-निरासाय द्वितीयचिन्ताहेतुत्वं व्यञ्जयंस्तृतीयचिन्तां सिद्धान्तहेत्वाशङ्कासमाधानाभ्यां विशदयति – नचेति ।।**

ನಿರವಕಾಶವಾದ ವಿಷ್ಣುವಿನ ಲಿಂಗದ ಬಲದಿಂದ ಜ್ಞಾನಿಸುಖಪರವಾದ ಶ್ರುತಿಗೆ ಸನ್ನಿಹಿತಪರತ್ವವನ್ನು ಬಿಡಬಹುದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸುತ್ತಾ, ಎರಡನೆಯ ಸಂಶಯಕೋಟಿಗೆ ಕಾರಣವನ್ನು ಸ್ಪಷ್ಟಪಡಿಸುತ್ತಾ, ಮೂರನೇ ಸಂಶಯಕೋಟಿಯನ್ನು ಸಿದ್ಧಾಂತ ಹೇತುವಿನ ಆಶಂಕಾ ಮತ್ತು ಸಮಾಧಾನಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः – ईश्वरपरतयेति ।।** अत एव सिद्धान्तटीकायां ''नच मन्तव्यम्'' इत्यादिनैतदाशङ्क्य समाधीयत इति भावः ।

ಗ್ರಂಥದಲ್ಲಿ 'ಈಶ್ವರಪರತಯಾ' ಎಂಬ ಪದದಿಂದ 'ತಮೇವ' ಎಂಬ ಶಬ್ದದಲ್ಲಿರುವ 'ತತ್' ಶಬ್ದವು ಈಶ್ವರಪರವಾಗಿರುವುದರಿಂದ ಎಂದು ಹೇಳಿದ್ದಾರೆ. ಆದ್ದರಿಂದಲೇ ಸಿದ್ಧಾಂತ ಟೀಕೆಯಲ್ಲಿ 'ನಚ ಮಂತವ್ಯಮ್' ಇತ್ಯಾದಿ ವಾಕ್ಯಗಳಿಂದ ಇದನ್ನು ಆಶಂಕಿಸಿ ಸಮಾಧಾನ ನೀಡಿದ್ದಾರೆಂಬುದನ್ನು ಗಮನಿಸಬೇಕು.

**प्रकाशः –** तमेवेति तच्छब्दस्येश्वरपरत्वे तत्र तस्येति तच्छब्दयोरपि तथात्वमिति भावेन तमेवेति तच्छब्दस्येश्वरपरतयेत्युक्तम् । भाष्यविवरणपराऽपि टीका न्यायविवरणपराऽपीति भावेनाह – **तदेतदिति ।।**

'ತಮೇವ ಭಾಂತಂ' ಎಂಬ ಶ್ರುತಿಯಲ್ಲಿರುವ 'ತತ್' ಶಬ್ದವು ಈಶ್ವರ ಪ್ರತಿಪಾದಕವಾದರೆ, 'ತತ್ರ' 'ತಸ್ಯ' ಎಂಬಲ್ಲಿರುವ 'ತತ್' ಶಬ್ದವೂ ಕೂಡ ಈಶ್ವರಪರವೇ ಆಗುತ್ತದೆ. ಈ ಅಭಿಪ್ರಾಯದಿಂದ 'ತಮೇವ' ಎಂಬ 'ತತ್' ಶಬ್ದಕ್ಕೆ ಈಶ್ವರಪರತ್ವವನ್ನು ಹೇಳಿದ್ದಾರೆ. ಭಾಷ್ಯವನ್ನು ವಿವರಿಸುವಂತಹ ಟೀಕಾವಾಕ್ಯವು ನ್ಯಾಯವಿವರಣವನ್ನೂ ಕೂಡ ವ್ಯಾಖ್ಯಾನ ಮಾಡುತ್ತಿದೆ ಎಂಬ ಅಭಿಪ್ರಾಯದಿಂದ 'ತದೇತತ್' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – भाष्ये चेति ।।** सिद्धान्तीयभाष्य इत्यर्थः । तथा च तत्प्रतिभटपूर्वपक्षे ज्ञानिसुखमेवानिर्देश्यसुखमिति वक्तव्यमिति भावः ।

'ಭಾಷ್ಯೇ ಚ' ಎಂದರೆ ಸಿದ್ಧಾಂತ ಭಾಷ್ಯದಲ್ಲಿ ಎಂದರ್ಥ. ಆದ್ದರಿಂದ ಪರಮಾತ್ಮನು ಅನಿರ್ದೇಶ್ಯ ಸುಖಸ್ವರೂಪನಲ್ಲವೆಂದು ಪ್ರತಿಭಟಿಸುವ ಪೂರ್ವಪಕ್ಷನು ಜ್ಞಾನಿಸುಖವೇ ಅನಿರ್ದೇಶ್ಯ ಸುಖರೂಪ ವಾಗಿದೆಯೆಂದು ಹೇಳಬೇಕೆಂದು ಇದರ ಅಭಿಪ್ರಾಯ.

**प्रकाशः –** अतो ज्ञानिसुखस्यैवेत्याद्युपसंहारटीकां व्यनक्ति – **तस्मादिति ।।** बाधकाभावादित्यर्थः । एतेन चिन्तास्थपूर्वपक्षकोटीनां हेतुहेतुमद्भावोप्युपसंहारेण विवृतः ।

ಆದ್ದರಿಂದ ಜ್ಞಾನಿಸುಖವೇ ಆನುಕೂಲ್ಯೇನ ಗೃಹ್ಯಮಾಣವಾಗಿದೆಯೆಂಬ ಉಪಸಂಹಾರ ಟೀಕೆಯನ್ನು 'ತಸ್ಮಾತ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ತಸ್ಮಾತ್' ಎಂದರೆ ಬಾಧಕವಿಲ್ಲದ ಕಾರಣ ಎಂದರ್ಥ.

ಇದರಿಂದ ಸಂಶಯಪರಂಪರೆಯಲ್ಲಿರುವ ಪೂರ್ವಪಕ್ಷಕೋಟಿಗಳನ್ನು ಹೇತುಹೇತುಮದ್ಭಾವದ ಮೂಲಕ ಉಪಸಂಹಾರದ ವಾಕ್ಯದಲ್ಲಿ ವಿವರಿಸಿದಂತಾಯಿತು.

**गुरुराजीयम्** – वैषम्येण पूर्वपक्षं दर्शयितुं साम्यं शङ्कते – **नचेति** ।। न चानुकृत्यादिहेतुभिरिति ।। सूर्यादिप्रकाशनियामकत्वमनुकृतिशब्दार्थः । आदिपदेन सर्वजगत्प्रकाशकत्वसूर्याद्यप्रकाश्यत्वयोर्ग्रहः । सन्निहितपरप्रातिपदिकानुरोधात् तदेतदित्यादौ सन्निहितपरतच्छब्दप्रातिपदिकानुरोधादित्यर्थः । **प्रत्ययार्थेति** ।। प्रत्ययार्थभूतनपुंसकलिङ्गानुसारादित्यर्थः ।




ಹಿಂದಿನ ದಹರಾಧಿಕರಣದಲ್ಲಿ ವಿಧೇಯವಾದ ಆತ್ಮಶಬ್ದದ ಬಲದಿಂದ 'ಏತತ್' ಶಬ್ದವು ಪುಲ್ಲಿಂಗದಲ್ಲಿ ಪ್ರಯುಕ್ತವಾಗಿರುವುದು ಸಾಧುವೇ ಆಗಿದೆಯೆಂದು ಸಮರ್ಥಿಸಲಾಯಿತು. ಅದರಂತೆ ಪ್ರಕೃತ 'ತದೇತತ್' ಎಂಬಲ್ಲಿರುವ ಎರಡು ನಪುಂಸಕಲಿಂಗದ ಶಬ್ದಗಳಲ್ಲಿ ಒಂದು ಮಾತ್ರ ಉದ್ದೇಶ್ಯವಾಚಕ ಪದಕ್ಕೆ ಸಮಾನಾಧಿಕರಣವಾಗಬಹುದು. ಹೊರತು, ಎರಡೂ ಅಲ್ಲ ಆದ್ದರಿಂದ ಎರಡಕ್ಕೂ ನಪುಂಸಕಲಿಂಗತ್ವವನ್ನು ಸಮರ್ಥಿಸಲು ಬರುವುದಿಲ್ಲ. ಆದ್ದರಿಂದ ಪುಲ್ಲಿಂಗದಿಂದ ಪ್ರಸಕ್ತನಾದ ಪರಮಾತ್ಮನನ್ನು ಪರಾಮರ್ಶ ಮಾಡದೇ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕು.

'ಅನಿರ್ದೇಶ್ಯಂ ಪರಮಂ ಸುಖಮ್' ಎಂಬ ವಾಕ್ಯದಲ್ಲಿ 'ರೂಪ' ಶಬ್ದವನ್ನು ಅಧ್ಯಾಹಾರ ಮಾಡಿ ಅಂತಹ ನಪುಂಸಕಲಿಂಗದ 'ರೂಪ' ಶಬ್ದದಿಂದ ಪರಮಾತ್ಮನು ಪ್ರಸಕ್ತನಾಗಿದ್ದಾನೆಂದು ಉತ್ತರಿಸಬೇಕು. ಆದರೆ ಯಾವುದೇ ಶಬ್ದಗಳನ್ನು ಅಧ್ಯಾಹಾರ ಮಾಡದೇ ನೇರವಾಗಿ ಜ್ಞಾನಿಸುಖಪರಾಮರ್ಶಕವೆಂದು ಸುಲಭವಾಗಿ ಹೇಳಲು ಬರುವಾಗ, ಕ್ಲಿಷ್ಟಕಲ್ಪನೆಯನ್ನು ಮಾಡಬಾರದು. ಮತ್ತು 'ತಮೇವ ಭಾಂತಮ್ ಅನುಭಾತಿ ಸರ್ವಮ್' ಎಂಬ ಶ್ರುತಿಯಲ್ಲಿರುವ 'ತಂ' ಎಂಬ ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯ-ನಾಗಿದ್ದಾನೆ. ಹಾಗೂ ಸೂರ್ಯಾದಿ ಪ್ರಕಾಶಕತ್ವ ಮೊದಲಾದ ಲಿಂಗಗಳು ಪರಮಾತ್ಮಪರವಾಗಿದ್ದರೂ 'ತದೇತತ್' ಎಂಬ ಶ್ರುತಿಯು ಜ್ಞಾನಿಸುಖವನ್ನೇ ಪರಾಮರ್ಶ ಮಾಡುತ್ತದೆ. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೇ ಆಗುತ್ತದೆಂದು ಪೂರ್ವಪಕ್ಷವು ದೃಢವಾಯಿತು.

• • • • •

ಅನುಕೃತ್ಯಧಿಕರಣ (೧-೩-೬)

## ಆನುಕೂಲ್ಯೇನ ಗೃಹ್ಯಮಾಣನಾದವನು ಪರಮಾತ್ಮನೇ ಆಗಿದ್ದಾನೆಂದು ಸಿದ್ಧಾಂತ

**तात्पर्यचन्द्रिका**

**सिद्धान्तस्तु । उपसंहारे ''न तत्र सूर्यो भाति न चन्द्रतारकम्'' इति सूर्याद्य-प्रकाश्यत्वं ''तमेव भान्तमनुभाति सर्वम्'' इति सूर्यादिप्रकाशहेतुत्वं ''तस्य भासा सर्वमिदं विभाति'' इति सर्वजगत्प्रकाशकत्वं चोक्तम् । तानि च भाष्योक्त-श्रुत्यादिभिर्ब्रह्मण एव ।**

ಅನುವಾದ - ಸಿದ್ಧಾಂತ ಹೀಗಿದೆ - ಕಾಠಕೋಪನಿಷತ್ತಿನ ಪಂಚಮಖಂಡದ ಕೊನೆಯಲ್ಲಿ 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಮ್' ಎಂಬ ವಾಕ್ಯದಿಂದ ಪರಮಾತ್ಮನು ಸೂರ್ಯ, ಚಂದ್ರ ಮೊದಲಾದ ಯಾವುದೇ ಬೆಳಗುವಂತಹ ವಸ್ತುಗಳಿಂದ ಪ್ರಕಾಶ್ಯನಾಗಿಲ್ಲವೆಂದು ಹೇಳಲಾಗಿದೆ. ಆದ್ದರಿಂದ ಸೂರ್ಯಾದ್ಯಪ್ರಕಾಶ್ಯತ್ವವು ಪರಮಾತ್ಮನಲ್ಲಿ ಮಾತ್ರ ಇರುವಂತಹ ಅಸಾಧಾರಣ ಧರ್ಮವಾಗಿದೆ. ಮತ್ತು 'ತಮೇವ ಭಾಂತಮನುಭಾತಿ ಸರ್ವಮ್' ಎಂಬ ಶ್ರುತಿಯಲ್ಲಿ ಸೂರ್ಯಚಂದ್ರಾದಿಗಳ ಪ್ರಕಾಶಕ್ಕೆ ಪರಮಾತ್ಮನೇ ಕಾರಣನೆಂದು ಹೇಳಲಾಗಿದೆ. ಇದರಿಂದ ಪರಮಾತ್ಮನಲ್ಲಿ ಮಾತ್ರ ಇರುವಂತ ಸೂರ್ಯಾದಿ ಪ್ರಕಾಶ ಹೇತುತ್ವವನ್ನು ಹೇಳಿದಂತಾಗುತ್ತದೆ. 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬ ವಾಕ್ಯದಿಂದ, ಸಕಲ ಜಗತ್ತೂ ಕೂಡ ಪರಮಾತ್ಮನಿಂದಲೇ ಬೆಳಗುತ್ತಿದೆ ಎಂದು ಹೇಳಲಾಗಿದೆ. ಆದ್ದರಿಂದ ಸರ್ವಜಗತ್‌ಪ್ರಕಾಶಕತ್ವ ಲಕ್ಷಣವನ್ನು ಹೇಳಿದಂತಾಗುತ್ತದೆ. ಇಂತಹ 'ಸೂರ್ಯಾದ್ಯಪ್ರಕಾಶ್ಯತ್ವ', 'ಸೂರ್ಯಾದಿ ಪ್ರಕಾಶಾದಿ ಹೇತುತ್ವ', 'ಸರ್ವಜಗತ್ ಪ್ರಕಾಶಕತ್ವ' ಮೊದಲಾದ ಧರ್ಮಗಳೆಲ್ಲವೂ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿ-ಸ್ಮೃತಿಗಳಿಂದ ಪರಮಾತ್ಮನಲ್ಲಿ ಮಾತ್ರವೇ ಇರುತ್ತವೆಂದು ಸಿದ್ಧವಾಗುತ್ತದೆ.

**''न तत्र सूर्यः'' इत्यादिना च ''कथं नु तद्विजानीयाम्'' इत्यादिसन्निहित-वाक्यप्रकृतमानुकूल्येन गृह्यमाणमेवोच्यत इत्यानुकूल्येन गृह्यमाणत्वं ब्रह्मण एव ।**

ಇದರಿಂದ ಏನಾಯಿತು ? ಎಂದರೆ, 'ನ ತತ್ರ ಸೂರ್ಯಃ' ಇತ್ಯಾದಿ ವಾಕ್ಯಗಳಿಂದ ಮತ್ತು 'ಕಥಂ ನು ತದ್ವಿಜಾನೀಯಾಮ್' ಇತ್ಯಾದಿಯಾದ ಸನ್ನಿಹಿತವಾದ ವಾಕ್ಯದಲ್ಲಿ ಪ್ರಕೃತವಾದ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತುವೇ ಇಲ್ಲಿ ಪ್ರತಿಪಾದ್ಯವಾಗಿರುವುದರಿಂದ, ಬ್ರಹ್ಮನೇ ಆನುಕೂಲ್ಯೇನ ಗೃಹ್ಯಮಾಣನಾಗಿದ್ದಾನೆಂದು ಸಿದ್ಧವಾಗುತ್ತದೆ.

ಪರಿಪೂರ್ಣಚಂದ್ರಿಕಾ

**ननु यद्यपि ''नित्यो नित्यानाम्'' इत्यादिकमीश्वरवाक्यं ''न तत्र सूर्यो भाति'' इत्यस्य व्यवहितम् । ''कथं नु तद्विजानीयाम्'' इत्यादिकं तु सन्निहितम् । तथापि ''तमेव भान्तम्'' इत्यत्र तमिति शब्दस्तावत्पुल्लिङ्गत्वात्प्रकृतेश्वरपर एवेति तदेकार्थत्वाय ''न तत्र सूर्यः तस्य भासा'' इत्यादिकमपि तत्परमेवेति सूर्यादिप्रकाशहेतुत्वादिकं नानुकूल्येन गृह्यमाणगतमिति चेन्न ।**

ಆಕ್ಷೇಪ - ವಸ್ತುತಃ 'ನಿತ್ಯೋ ನಿತ್ಯಾನಾಮ್' ಇತ್ಯಾದಿ ಈಶ್ವರ ವಾಕ್ಯವು 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯಕ್ಕಿಂತಲೂ ದೂರದಲ್ಲಿದೆ. 'ಕಥಂ ನು ತದ್ವಿಜಾನೀಯಾಮ್' ಇತ್ಯಾದಿ ವಾಕ್ಯವು ಹತ್ತಿರದಲ್ಲಿದೆ. ಆದರೂ ಕೂಡ 'ತಮೇವ ಭಾಂತಮ್' ಎಂಬಲ್ಲಿರುವ 'ತಮ್' ಎಂಬ ಶಬ್ದವು ಪುಲ್ಲಿಂಗದಲ್ಲಿರುವ ಕಾರಣ, ಪ್ರಕೃತನಾದ ಈಶ್ವರನನ್ನೇ ಈ 'ತಮ್' ಎಂಬ ಶಬ್ದದಿಂದ ಪರಾಮರ್ಶ ಮಾಡಬೇಕು. ಇದರ ಜೊತೆಗೆ ಏಕಾರ್ಥತ್ವವನ್ನು ಕೂಡಿಸುವುದಕ್ಕಾಗಿ 'ನ ತತ್ರ ಸೂರ್ಯಃ ತಸ್ಯ ಭಾಸಾ' ಇತ್ಯಾದಿ ವಾಕ್ಯವನ್ನು ಈಶ್ವರ ಪರವೆಂದೇ ಹೇಳಬೇಕು. ಆದ್ದರಿಂದ ಸೂರ್ಯಾದಿ ಪ್ರಕಾಶ ಹೇತುತ್ವಾದಿಗಳು ಆನುಕೂಲ್ಯೇನ ಗೃಹ್ಯಮಾಣನಲ್ಲಿ ಬರುವುದಿಲ್ಲ. ಆದ್ದರಿಂದ ಪರಮಾತ್ಮನನ್ನು ಆನುಕೂಲ್ಯೇನ ಗೃಹ್ಯಮಾಣನಾಗಿದ್ದಾನೆಂದು ಹೇಗೆ ಹೇಳಿದ್ದೀರಿ?

**''किमु भाति न भाति वा'' इत्यत्रोक्तस्य दुर्ज्ञेयस्यैव ''न तत्र सूर्यो भाति'' इत्यत्र प्रत्यभिज्ञानात् ।**

ಸಮಾಧಾನ - 'ಕಿಮು ಭಾತಿ ನ ಭಾತಿ ವಾ' ಎಂಬ ವಾಕ್ಯದಲ್ಲಿ 'ಯಾವುದೇ ಇಂದ್ರಿಯದಿಂದಲೂ ತಿಳಿಯಲಾರನೆಂದು ಹೇಳಲಾಗಿದೆ. ಇಂತಹ ದುರ್ಜ್ಞೇಯತ್ವವು ಪರಮಾತ್ಮನಲ್ಲಿ ಮಾತ್ರ ಉಪಪನ್ನ-ವಾಗುತ್ತದೆ. ಅಂತಹ ದುರ್ಜ್ಞೇಯನಾದ ಪರಮಾತ್ಮನನ್ನೇ 'ನ ತತ್ರ ಸೂರ್ಯೋ ಭಾತಿ' ಎಂಬ ಶ್ರುತಿಯಿಂದ ಪ್ರತ್ಯಭಿಜ್ಞಾನ ಮಾಡಲಾಗಿದೆ.

**गुणभूतप्रत्ययार्थलिङ्गानुग्रहाय प्रधानभूतानां तत्र तमेव तस्येत्यनेकेषां प्रातिपदिकानां स्वतः प्राप्तसन्निहितपरत्वत्यागायोगाच्च ।**

ಮತ್ತು ಗೌಣವಾದ ಪ್ರತ್ಯಯಾರ್ಥವೆನಿಸಿದ ಲಿಂಗವನ್ನು ಅನುಗ್ರಹ ಮಾಡುವುದಕ್ಕಾಗಿ ಪ್ರಧಾನವಾಗಿರುವ 'ತತ್ರ', 'ತಮೇವ', 'ತಸ್ಯ' ಇತ್ಯಾದಿ ಅನೇಕ ಪ್ರತಿಪಾದಿಕಗಳಿಗೆ ಸ್ವತಃ ಪ್ರಾಪ್ತವಾದ ಸನ್ನಿಹಿತ ಪರಮಾತ್ಮ ಪರತ್ವವನ್ನು ತ್ಯಾಗಮಾಡುವುದೂ ಅಯುಕ್ತವಾಗುತ್ತದೆ.

**पाशमन्त्रादौ हि प्रातिपदिकानुसारेण प्रत्ययास्वारस्यमाश्रितम् ।**

ಪೂರ್ವಮೀಮಾಂಸೆಯಲ್ಲಿ ಪ್ರಸಕ್ತವಾಗುವ ಪಾಶಮಂತ್ರಾದಿಗಳಲ್ಲಿ ಪ್ರಾತಿಪದಿಕಕ್ಕೆ ಅನುಸಾರಿಯಾಗಿ ಪ್ರತ್ಯಯಕ್ಕೆ ಅಸ್ವಾರಸ್ಯವನ್ನೇ ಆಶ್ರಯಿಸಲಾಗಿದೆ.

**तथा ''प्रयाजशेषेण हवींष्यभिघारयेत्'' इत्यादौ प्रयाजशेषप्रातिपदिक-स्वारस्याय तृतीयाव्यत्ययेन द्वितीयार्था स्वीकृता । नतु तृतीयानुसारेण प्रातिपदिकस्य लक्षणा ।**

ಅದರಂತೆ 'ಪ್ರಯಾಜಶೇಷೇಣ ಹವೀಂಷ್ಯಭಿಘಾರಯೇತ್' ಇತ್ಯಾದಿ ವಾಕ್ಯದಲ್ಲಿ ಪ್ರಯಾಜಶೇಷ ಪ್ರಾತಿಪಾದಿಕ ಸ್ವಾರಸ್ಯಕ್ಕೋಸ್ಕರ ತೃತೀಯಾ ವಿಭಕ್ತಿಯನ್ನು ದ್ವಿತೀಯಾವಿಭಕ್ತ್ಯರ್ಥದಲ್ಲಿ ಸ್ವೀಕರಿಸ-ಲಾಗಿದೆ. ಹೊರತು, ತೃತೀಯಾ ವಿಭಕ್ತಿಗೆ ಅನುಸಾರಿಯಾಗಿ ಪ್ರಾತಿಪದಿಕಕ್ಕೆ ಲಕ್ಷಣಾವನ್ನು ಆಶ್ರಯಿಸಿಲ್ಲ.

**एवञ्च –**

**प्रयाजशेषेणेतिवत् प्रकृत्यर्थानुसारतः ।**
**प्रत्ययस्य स्वरसताभङ्ग एवात्र युज्यते ।। १ ।।**

ಆದ್ದರಿಂದ -

ಪ್ರಯಾಜಶೇಷೇಣೇತಿವತ್ ಪ್ರಕೃತ್ಯರ್ಥಾನುಸಾರತಃ ।
ಪ್ರತ್ಯಯಸ್ಯ ಸ್ವರಸತಾಭಂಗ ಏವಾತ್ರ ಯುಜ್ಯತೇ ॥೧॥

'ಪ್ರಯಾಜಶೇಷೇಣ' ಎಂಬಲ್ಲಿ ಪ್ರಕೃತ್ಯರ್ಥಕ್ಕೆ ಅನುಸಾರಿಯಾಗಿ ಪ್ರತ್ಯಯಾರ್ಥದ ಅಸ್ವಾರಸ್ಯವನ್ನು ಒಪ್ಪಿದಂತೆ ಇಲ್ಲಿಯೂ ಪ್ರತ್ಯಯಕ್ಕೆ ಸ್ವಾರಸ್ಯಾರ್ಥ ಹೇಳದಿರುವುದೇ ಸರಿ.

**उपपत्स्येते च सिद्धान्तरीत्या ''तदेतत्'' इत्यादेः ''कथं नु तत्'' इत्यादेश्चेश्वररूपैकार्थपरत्वे तमित्यस्य पुल्लिङ्गत्वसन्निहितपरत्वे ।**

ಮತ್ತು ಸಿದ್ಧಾಂತದ ಪ್ರಕಾರ 'ತದೇತತ್' ಇತ್ಯಾದಿ ಪದಗಳು 'ಕಥಂ ನು ತತ್' ಎಂಬಲ್ಲಿರುವ 'ತತ್' ಪದವು ಈಶ್ವರ ಎಂಬ ಒಂದೇ ಅರ್ಥವನ್ನು ಪ್ರತಿಪಾದನೆ ಮಾಡಿದರೂ 'ತಮ್' ಎಂಬುದಕ್ಕೆ ಪುಲ್ಲಿಂಗತ್ವವು ಸನ್ನಿಹಿತಪರತ್ವವೆರಡು ಉಪಪನ್ನವಾಗುತ್ತದೆಂದು ತಿಳಿಯಬೇಕು.

**प्रकाशः —**

अनुकृतेस्तस्य चेति सूत्रोपात्तश्रौतोपसंहारस्थलिङ्गैश्श्रौतोपसंहारस्थानोक्त तच्छब्दप्रातिपदिकस्वारस्यानुरोधेन चानुकूल्येन गृह्यमाणो विष्णुरेवेति तदेतदिति सर्वनाम्नो व्यवहितेश्वरपरत्वं न्याय्यमिति भावेन सिद्धान्तटीकां विवृण्वन् ''तमेव भान्तमनुभाति सर्वमिति वाक्यशेषे'' इत्यादिटीकां तावद्विवृणोति – उपसंहार इति।।

ವಿವರಣೆ - 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ ಹೇಳಿದ ಶ್ರುತಿಯಲ್ಲಿ ಉಪಸಂಹಾರದಲ್ಲಿ ಅನೇಕ ಲಿಂಗಗಳನ್ನು ಉಲ್ಲೇಖಿಸಿದ್ದಾರೆ. ಇವುಗಳ ಬಲದಿಂದ ಮತ್ತು ಶ್ರುತಿಯ ಉಪಸಂಹಾರದಲ್ಲೇ ಇರುವ ಅನೇಕ 'ತತ್' ಶಬ್ದ ಪ್ರಾತಿಪದಿಕದ ಸ್ವಾರಸ್ಯದಿಂದ ಆನುಕೂಲ್ಯೇನ ಗೃಹ್ಯಮಾಣನಾದವನು ವಿಷ್ಣುವೇ ಆಗಿದ್ದಾನೆ. ಆದ್ದರಿಂದ 'ತತ್' 'ಏತತ್' ಎಂಬ ಸರ್ವನಾಮಶಬ್ದದಿಂದ ವ್ಯವಹಿತನಾಗಿದ್ದರೂ ಈಶ್ವರನನ್ನೇ ಪರಾಮರ್ಶ ಮಾಡುವುದು ನ್ಯಾಯಸಮ್ಮತವಾಗಿದೆ. ಈ ಅಭಿಪ್ರಾಯದಿಂದ ಸಿದ್ಧಾಂತ ಟೀಕೆಯನ್ನು ವ್ಯಾಖ್ಯಾನಿಸಲು ಹೊರಟಿದ್ದಾರೆ. ಮೊದಲು 'ತಮೇವ ಭಾಂತಮನುಭಾತಿ ಸರ್ವಮಿತಿ ವಾಕ್ಯಶೇಷೇ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಉಪಸಂಹಾರೇ' ಇತ್ಯಾದಿ ಗ್ರಂಥದಿಂದ.

**प्रकाशः** – टीकायामाद्यसूत्रे यथाभाष्यं लिङ्गद्वयमात्रोपादानेऽपि द्वितीयसूत्रे ''किञ्च न तत्र सूर्यो भाति'' इत्याद्युक्तेः बोधसौकर्याय लिङ्गत्रयमप्येकत्रैवोक्तम् ।

ಗ್ರಂಥಕಾರರು ಸೂರ್ಯಾದ್ಯಪ್ರಕಾಶ್ಯತ್ವ, ಸೂರ್ಯಾದಿ ಪ್ರಕಾಶ ಹೇತುತ್ವ, ಸರ್ವಜಗತ್ಪ್ರಕಾಶಕತ್ವ ಎಂಬ ಮೂರು ಲಿಂಗಗಳನ್ನು ಒಟ್ಟಿಗೆ ಹೇಳಿದ್ದಾರೆ. ಆದರೆ ಟೀಕೆಯಲ್ಲಿ ಮೊದಲನೆಯ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಎರಡೇ ಲಿಂಗಗಳನ್ನು ಹೇಳಿದ್ದಾರೆ ಅಂದರೆ 'ಅನುಕೃತೇಸ್ತಸ್ಯಚ' ಎಂಬ ಸೂತ್ರದಲ್ಲಿರುವ 'ಅನುಕೃತೇಃ' ಎಂಬ ಪದದಿಂದ ಸೂರ್ಯಾದಿ ಪ್ರಕಾಶಹೇತುತ್ವವು, 'ತಸ್ಯಚ' ಎಂಬುದರಿಂದ ಸರ್ವಜಗತ್ ಪ್ರಕಾಶಕತ್ವವು ಹೇಳಿದಂತಾಗುತ್ತದೆಂದು ಭಾಷ್ಯಕ್ಕೆ ಅನುಸಾರಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ 'ಅಪಿ ಸ್ಮರ್ಯತೇ' ಎಂಬ ಎರಡನೆಯ ಸೂತ್ರದಲ್ಲಿ 'ಕಿಂಚ ನ ತತ್ರ ಸೂರ್ಯೋ ಭಾತಿ' ಇತ್ಯಾದಿ ಮಾತುಗಳಿಂದ ಸೂರ್ಯಾದ್ಯಪ್ರಕಾಶ್ಯತ್ವ ಹೇತುವನ್ನು ಹೇಳಿರುತ್ತಾರೆ. ಹೀಗೆ ಟೀಕೆಯಲ್ಲಿ ಬೇರೆ ಬೇರೆ ಸೂತ್ರಗಳ ಸಂದರ್ಭದಲ್ಲಿ, ಉಲ್ಲೇಖ ಮಾಡಿದ್ದರೂ ಕೂಡ ಹೇಳಿರುತ್ತಾರೆಂದು ತಿಳಿಯಬೇಕು.[೧]

(೧) ಅಡಿಟಿಪ್ಪಣಿ - ಈ ಅಧಿಕರಣದಲ್ಲಿ, ಆನುಕೂಲ್ಯೇನ ಗೃಹ್ಯಮಾಣತ್ವವು ಪರಮಾತ್ಮನ ಧರ್ಮವೆಂದು ನಿರ್ಣಯಿಸುತ್ತಿದ್ದಾರೆ. ಆದರೆ ಸೂತ್ರದಲ್ಲಿ ಸಮನ್ವಯ ಮಾಡುವ ಈ ಧರ್ಮಿಯನ್ನು ನಿರ್ದೇಶ ಮಾಡಿಲ್ಲ. ಆಶ್ಚರ್ಯವೆಂದರೆ, ಈ ಅಧಿಕರಣದಿಂದ ಪ್ರಾರಂಭಮಾಡಿ ಅಧ್ಯಾಯ ಮುಗಿಯುವ ತನಕ ಯಾವುದೇ ಅಧಿಕರಣಗಳಲ್ಲಿಯೂ ಸಮನ್ವಯ ಮಾಡುವಂತಹ ಧರ್ಮಿಯನ್ನು ಸೂತ್ರಕಾರರು ಉಲ್ಲೇಖ ಮಾಡಿಯೇ ಇಲ್ಲ. ಆದರೆ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾऽನುಪರೋಧಾತ್' ಎಂಬ ಸೂತ್ರ ಮಾತ್ರ ಈ ವಿಷಯದಲ್ಲಿ ಅಪವಾದವಾಗಿದೆ.

**प्रकाशः – श्रुत्यादिभिरिति ।।** 'अहं तत्तेजोरश्मीत्', 'न तद्भासयते सूर्यः', 'यदादित्यगतं तेजः' इत्यादिभिरित्यर्थः । श्रुतौ तेजः सर्वजगत्प्रकाशकम् । रश्मीत् रश्मिप्रेरकमिति सर्वजगत्प्रकाशकत्वसूर्यादिप्रकाशहेतुत्वयोरुत्त्या तयोश्श्रुत्यन्तरैः सिद्धत्वेऽपि सूर्याद्यप्रकाश्यत्वस्य श्रुत्यन्तरसिद्धत्वं भाष्येऽनुक्तत्वादूह्यम् ।

'ಶ್ರುತ್ಯಾದಿಭಿಃ' ಎಂದರೆ 'ಅಹಂ ತತ್ತೇಜೋರಶ್ಮೀತ್' ಎಂಬ ಶ್ರುತಿಯಿಂದ, 'ನ ತದ್ಭಾಸಯತೇ ಸೂರ್ಯಃ', 'ಯದಾದಿತ್ಯಗತಂ ತೇಜಃ' ಇತ್ಯಾದಿ ಸ್ಮೃತಿಗಳಿಂದ ಎಂದರ್ಥ. ಶ್ರುತಿಯಲ್ಲಿರುವ 'ತೇಜಃ' ಎಂಬ ಪದಕ್ಕೆ ಸರ್ವಜಗತ್ ಪ್ರಕಾಶಕನಾಗಿದ್ದಾನೆಂದು ಅರ್ಥ. 'ರಶ್ಮೀತ್' ಎಂದರೆ ರಶ್ಮಿಗಳಿಗೆ ಪ್ರೇರಕನಾಗಿದ್ದಾನೆಂದು ಅರ್ಥ. ಹೀಗೆ ಹೇಳಿದ್ದರಿಂದ ಸರ್ವಜಗತ್ ಪ್ರಕಾಶಕತ್ವ ಮತ್ತು ಸೂರ್ಯಾದಿ ಪ್ರಕಾಶಹೇತುತ್ವ ಎಂಬೆರಡು ಹೇತುಗಳು ಒಂದೇ ಶ್ರುತಿಸಿದ್ಧವೆಂದಂತಾಯಿತು. ಆದರೆ ಸೂರ್ಯಾದ್ಯ-ಪ್ರಕಾಶ್ಯತ್ವವು ಬೇರೆ ಶ್ರುತಿಯಿಂದ ಸಿದ್ಧವಾಗಿದೆ. ಅದನ್ನು ಭಾಷ್ಯದಲ್ಲಿ ಉಲ್ಲೇಖ ಮಾಡದಿದ್ದರೂ ಸ್ವತಃ ಊಹಿಸಿಕೊಳ್ಳಬೇಕು.

**प्रकाशः –** स्मृतौ ''मामकम्'' इत्यस्य मदधीनं मदीयं चेति व्याख्यानेन लिङ्गद्वयस्य स्मृतिसिद्धब्रह्मधर्मत्वं, ''न तद्भासयते'' इत्यनेन च सूर्याद्यप्रकाश्यत्वस्य स्मृतिसिद्धं तथात्वमिति ध्येयम् ।

ಭಗವದ್ಗೀತೆಯಲ್ಲೂ ಸಹ 'ತತ್ತೇಜೋ ವಿದ್ಧಿಮಾಮಕಮ್' ಎಂಬಲ್ಲಿ 'ಮಾಮಕಮ್' ಎಂಬ ಪದಕ್ಕೆ 'ನನ್ನ ಅಧೀನ ಹಾಗೂ ನನ್ನದು' ಎಂಬೆರಡು ಅರ್ಥಗಳನ್ನು ಹೇಳಿದ್ದರಿಂದ, ಸೂರ್ಯಾದಿ ಪ್ರಕಾಶ ಹೇತುತ್ವ, ಮತ್ತು ಸರ್ವಜಗತ್ಪ್ರಕಾಶಕತ್ವ ಎಂಬೆರಡು ಹೇತುಗಳು, ಪರಮಾತ್ಮನದ್ದೆಂದು ತಿಳಿಯುತ್ತದೆ. ಮತ್ತು 'ನ ತದ್ಭಾಸಯತೇ ಸೂರ್ಯಃ' ಎಂಬ ಅದೇ ಗೀತಾವಾಕ್ಯದಿಂದಲೇ ಸೂರ್ಯಾದ್ಯಪ್ರಕಾಶ್ಯತ್ವವೂ ಸಹ ಪರಮಾತ್ಮನ ಧರ್ಮವೆಂಬುದು ಸ್ಮೃತಿಸಿದ್ಧವೆಂದು ಹೇಳಿದಂತಾಯಿತು.

**प्रकाशः –** ननूक्तं नैतान्यानुकूल्येन गृह्यमाणनिष्ठानीति । तत्राह – **न तत्रेति।।** ''नच मन्तव्यम्'' इत्यादिटीकां विवृण्वन्पूर्वोक्तपुल्लिङ्गविरोधशङ्कां विस्तरेणानूद्या-पाकरोति – **नन्विति ।।**

ಪೂರ್ವಪಕ್ಷದಲ್ಲಿ ಹೇಳಿದಂತೆ ಇವೆಲ್ಲವೂ ಸಹ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತುವಿನಲ್ಲಿ ಬರುವುದೇ ಇಲ್ಲವಲ್ಲವೇ? ಎಂಬ ಪ್ರಶ್ನೆಗೆ 'ನ ತತ್ರ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ನಚ ಮಂತವ್ಯಮ್' ಇತ್ಯಾದಿ ಟೀಕೆಯನ್ನು ವಿವರಿಸುತ್ತಾ, ಹಿಂದೆ ಪೂರ್ವಪಕ್ಷದಲ್ಲಿ ಮಾಡಲ್ಪಟ್ಟ ಪುಲ್ಲಿಂಗ ಪ್ರಯೋಗದ ವಿರೋಧಾಶಂಕೆಯನ್ನು ವಿಸ್ತಾರವಾಗಿ ಅನುವಾದ ಮಾಡಿ, ನಿರಾಕರಿಸುತ್ತಿದ್ದಾರೆ 'ನನು' ಇತ್ಯಾದಿ ಗ್ರಂಥದಿಂದ.

**प्रकाशः –** नन्वियं शङ्का पूर्वपक्षावसर एव कुतो न सम्यगुपपादितेति चेत्

ಪ್ರಶ್ನೆ - ಪೂರ್ವಪಕ್ಷ ಮಾಡುವಾಗಲೇ, ವಿಸ್ತಾರವಾಗಿ ಈ ಆಕ್ಷೇಪವನ್ನು ಮಾಡಬಹುದಿತ್ತಲ್ಲವೇ? ಪೂರ್ವಪಕ್ಷ ಸಂದರ್ಭದಲ್ಲಿ ಆಕ್ಷೇಪ ಮಾಡದೇ, ಸಿದ್ಧಾಂತದ ಸಂದರ್ಭದಲ್ಲಿ ಪೂರ್ವಪಕ್ಷವನ್ನು ವಿಸ್ತಾರವಾಗಿ ತೋರಿಸುವುದು ತಪ್ಪಲ್ಲವೇ?

**प्रकाशः – मैवम् । 'न तत्र' इत्यादेस्सन्निहितपरत्वानवकाशत्वयोरुक्त्यै-तद्बाधकत्वेनोपपादनस्यात्रैव सङ्गतत्वाद् अनेकप्रातिपदिकभङ्गादिरूपदूषणस्य सुखबोधत्वाच्चात्रोपपादितेति ।**

ಉತ್ತರ - 'ನ ತತ್ರ' ಇತ್ಯಾದಿ ಶ್ರುತಿ ವಾಕ್ಯವು ಸನ್ನಿಹಿತ ಪರವಾಗಿದೆ. ಮತ್ತು ನಿರವಕಾಶವಾಗಿದೆಯೆಂದು ತೋರಿಸಿದರೆ ಮಾತ್ರ, ಪೂರ್ವಪಕ್ಷಿಯು ಪುಲ್ಲಿಂಗ ಪ್ರಯೋಗದ ಬಾಧಕವನ್ನು ಆಕ್ಷೇಪ ಮಾಡಲು ಸಾಧ್ಯ. ಆದ್ದರಿಂದ, ಸಿದ್ಧಾಂತದಲ್ಲಿ ಮೊದಲು ಸನ್ನಿಹಿತ ಪರತ್ವವನ್ನು ಸಮರ್ಥಿಸಿ, ಅನಂತರ ಪುಲ್ಲಿಂಗ ಪ್ರಯೋಗದ ಆಕ್ಷೇಪವನ್ನು ವಿಸ್ತಾರವಾಗಿ ತೋರಿಸುವುದು ಅತ್ಯಂತ ಸಂಗತವಾಗುತ್ತದೆ. ಮತ್ತು ಅನೇಕ ಪ್ರಾತಿಪದಿಕಗಳ ಸ್ವರಸವಾದ ಅರ್ಥವನ್ನು ಪೂರ್ವಪಕ್ಷಕಾರರು ಬಿಟ್ಟಂತಾಗುತ್ತದೆಂಬ ದೋಷವನ್ನು ಇಲ್ಲಿ ಹೇಳುತ್ತಿದ್ದಾರೆ. ಆ ದೋಷವನ್ನು ತಿಳಿಯಲು ಅನುಕೂಲವಾಗುವುದಕ್ಕಾಗಿಯೂ ಇಲ್ಲಿಯೇ ಪುಲ್ಲಿಂಗ ಪ್ರಯೋಗದ ಆಕ್ಷೇಪವನ್ನು ವಿಸ್ತಾರವಾಗಿ ತೋರಿಸಿರುತ್ತಾರೆ.

**प्रकाशः – टीकोक्तं दुर्ज्ञेयत्वप्रत्यभिज्ञानमुपलक्षणमिति भावेनाह – गुणेति ।। न्यायसिद्धोऽयमर्थ इत्याह – पाशेति ।। उक्तं पाशाधिकरणशरीरं 'गुहाम्' इत्यत्र ।**

ಟೀಕೆಯಲ್ಲಿ ಹೇಳಲ್ಪಟ್ಟ ದುರ್ಜ್ಞೇಯತ್ವ ಪ್ರತ್ಯಭಿಜ್ಞಾನವು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ 'ಗುಣ' ಇತ್ಯಾದಿ ವಾಕ್ಯವು ಹೊರಟಿದೆ. ಅಂದರೆ ಅನೇಕ ಪ್ರಾತಿಪದಿಕಗಳ ಸ್ವರಸವಾದ ಅರ್ಥವನ್ನು ಬಿಡಬಾರದು. ಹೊರತಾಗಿ, ಗೌಣವಾದ ಪ್ರತ್ಯಯಾರ್ಥಕ್ಕೇನೇ ಅಸ್ವಾರಸ್ಯವನ್ನು ಹೇಳಬೇಕೆಂಬುದು, ಪೂರ್ವಮೀಮಾಂಸಾ ನ್ಯಾಯಸಿದ್ಧವಾಗಿದೆ. ಇದನ್ನೇ 'ಪಾಶಾ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. ಈ ಪಾಶಾಧಿಕರಣ ಶರೀರವನ್ನು ಗುಹಾಧಿಕರಣದಲ್ಲಿ ವಿವರಿಸಿದ್ದೇವೆ.

**प्रकाशः – अत्र यद्यपि प्रधानभूतकर्मकारकरूपप्रत्ययार्थानुग्रहाय सङ्ख्यानादरो न प्रातिपदिकस्वारस्यानुग्रहायेत्यपि सुवचम् ।**

ಪ್ರಶ್ನೆ - ಪೂರ್ವಮೀಮಾಂಸೆಯಲ್ಲಿ ಪ್ರಧಾನವಾದ ಕರ್ಮಕಾರಕವೆಂಬ ಪ್ರತ್ಯಯಾರ್ಥಕ್ಕೆ ಅನುಗ್ರಹ ಮಾಡುವುದಕ್ಕಾಗಿ, ಪ್ರತ್ಯಯಾರ್ಥವೇ ಆಗಿರುವಂತಹ ಸಂಖ್ಯೆಯನ್ನು ಅನಾದರ ಮಾಡಿದ್ದಾರೆ. ಹೊರತು, ಪ್ರಾತಿಪದಿಕದ ಸ್ವಾರಸ್ಯದ ಅನುಗ್ರಹಕ್ಕೋಸ್ಕರ ಸಂಖ್ಯೆಯನ್ನು ಅನಾದರ ಮಾಡಿದ್ದಲ್ಲ. ಅಂದರೆ 'ಪಾಶಾನ್' ಎಂಬಲ್ಲಿರುವಂತಹ ದ್ವಿತೀಯಾ ವಿಭಕ್ತಿಗೆ ಕರ್ಮಕಾರಕ ಎಂಬರ್ಥವಿರುವಂತೆ, ಬಹುತ್ವಸಂಖ್ಯೆಯೂ ಸಹ ಅರ್ಥವೇ ಆಗಿದೆ. ಇವೆರಡರಲ್ಲಿ ಕರ್ಮಕಾರಕವೇ ಶ್ರೇಷ್ಠವಾಗಿದೆ. ಸಂಖ್ಯೆಯು ಶ್ರೇಷ್ಠವಾಗಿಲ್ಲ. ಆದ್ದರಿಂದ, ಕರ್ಮಕಾರಕವನ್ನು ಪ್ರಧಾನವನ್ನಾಗಿ ವಿವಕ್ಷಿಸಬೇಕಾದ್ದರಿಂದ ಸಂಖ್ಯೆಯನ್ನು ಅನಾದರ ಮಾಡಬೇಕೆನ್ನಲು

ಪೂರ್ವಮೀಮಾಂಸಕರು ಈ ದೃಷ್ಟಾಂತವನ್ನು ನೀಡಿದ್ದಾರೆ. ಆದರೆ, ಪ್ರಕೃತ ಗ್ರಂಥಕಾರರು ಪ್ರಾತಿಪದಿಕ ಸ್ವಾರಸ್ಯದ ಅನುಗ್ರಹಕ್ಕಾಗಿ ಪ್ರತ್ಯಯಾರ್ಥವನ್ನು ಗೌಣಮಾಡಬೇಕೆನ್ನಲು ದೃಷ್ಟಾಂತವನ್ನು ನೀಡಿದ್ದು ಹೇಗೆ ಸರಿ?

**प्रकाशः** – तथापि -

प्रकृत्यर्थस्य पाशस्य विभक्त्यर्थस्य कर्मणः ।
उभयोः प्रकृते भावान्नोत्कर्षोऽस्यावकल्पते ॥

इत्युक्तत्वादेवमुक्तम् । अत एवोदाहरणान्तरं – तथेति ॥

ಉತ್ತರ - ಹಾಗೇನಿಲ್ಲ. ಪೂರ್ವಮೀಮಾಂಸಕರು ಪ್ರಕೃತ್ಯರ್ಥ ಹಾಗೂ ವಿಭಕ್ತ್ಯರ್ಥವೆನಿಸಿದ ಕರ್ಮಕಾರಕ, ಎರಡನ್ನೂ ಮುಖ್ಯವಾಗಿ ಸ್ವೀಕರಿಸಲು ವಿಭಕ್ತ್ಯರ್ಥವೇ ಆಗಿರುವಂತಹ ಸಂಖ್ಯೆಯನ್ನು ಅನಾದರಿಸಬೇಕೆಂದು ಹೇಳಿರುತ್ತಾರೆ.

ಪ್ರಕೃತ್ಯರ್ಥಸ್ಯ ಪಾಶಸ್ಯ ವಿಭಕ್ತ್ಯರ್ಥಸ್ಯ ಕರ್ಮಣಃ।
ಉಭಯೋಃ ಪ್ರಕೃತೇ ಭಾವಾನ್ನೋತ್ಕರ್ಷೋಽಸ್ಯಾವಕಲ್ಪತೇ॥

ಪ್ರಕೃತ್ಯರ್ಥವೆನಿಸಿದ ಪಾಶ, ವಿಭಕ್ತ್ಯರ್ಥವೆನಿಸಿದ ಕರ್ಮ ಎರಡನ್ನೂ ಮುಖ್ಯವಾಗಿ ಸ್ವೀಕರಿಸಬೇಕಾದ್ದರಿಂದ ಶಂಕೆಯನ್ನು ಗೌಣ ಮಾಡಬೇಕು. ಹೀಗೆ ಪೂರ್ವಮೀಮಾಂಸಕರೇ ಹೇಳಿರುವುದರಿಂದ ಗ್ರಂಥಕಾರರು ನೀಡಿದ ದೃಷ್ಟಾಂತ ಸಮಂಜಸವೇ ಆಗಿದೆ. ಆದ್ದರಿಂದಲೇ ಮತ್ತೊಂದು ಉದಾಹರಣೆಯನ್ನು ನೀಡುತ್ತಿದ್ದಾರೆ. 'ತಥಾ' ಇತ್ಯಾದಿ ಗ್ರಂಥದಿಂದ.

**प्रकाशः** – चतुर्थे ''अभिघारणे विप्रकर्षादनुयाजवत्पात्रभेदस्स्यात्'' इत्याद्यपादीयत्रयोदशाधिकरणे ''प्रयाजशेषेण हवींष्यभिघारयति'' इति वाजपेयगतं वाक्यमुदाहृत्य किं हविस्संस्कारार्थमभिघारणमुत प्रयाजशेषप्रतिपत्तिरिति संशये उपयोक्ष्यमाणसंस्कारस्योपयुक्तसंस्कारापेक्षयाऽभ्यर्हितत्वाद्द्वितीयातृतीयाभ्यां प्रधानोपसर्जनभावावगमाच्च न्यायतश्शब्दतश्च हविस्संस्कारार्थमिति प्राप्ते शेषस्य प्रतिपत्त्यपेक्षत्वात्तादर्थ्यादभिघारणं दृष्टार्थम् । हविस्संस्कारोऽनपेक्षितोऽदृष्टः कल्प्येत । नच दृष्टे सत्यदृष्टकल्पनं न्याय्यमिति प्रयाजशेषं हविष्षु क्षारयेदिति वाक्यार्थवर्णनेन प्रतिपत्तिरिति सिद्धान्तितम् ।

"ಅಭಿಘಾರಣೇ ವಿಪ್ರಕರ್ಷಾದನುಯಾಜವತ್ ಪಾತ್ರಭೇದಸ್ಸ್ಯಾತ್" (೪-೧-೧೩)[1]

(१) भाट्टसङ्ग्रहः –

अथ चतुर्दशम् अभिघारणे शेषधारणतत्पात्रयोरननुष्ठानाधिकरणम्(सूत्राणि ३३-३९)

अभिघारणे विप्रकर्षादनुयाजवत्पात्रभेदः स्यात् ॥ ३३ ॥

(न वाऽपात्रत्वादपात्रत्वं त्वेकदेशत्वात् ॥३४॥ हेतुत्वाच्च सह प्रयोगस्य ॥३५॥ अभावदर्शनाच्च ॥३६॥ सति सव्यवचनम् ॥३७॥ न तस्येति चेत् ॥३८॥ स्यात्तस्य मुख्यत्वात् ॥३९॥)

पूर्वन्यायेनात्र शङ्कनात्सङ्गतिः । प्रकृतावग्नीषोमीयपशौ "प्रयाजशेषेण हवींष्यभिघारयति" इति श्रुतम् । तदेतत्प्रयाजशेषेण हविरभिघारणं चोदकपरम्परया वाजपेयगतपशुषु विकृतिभूतेषु प्राप्तम् । ते च द्विविधाः । क्रतुपशवः प्राजापत्यपशवश्चेति । "आग्नेयं पशुमालभेत" इत्यादिना विहिताः क्रतुपशवः । अन्ये तु "सप्तदश प्राजापत्यान् पशूनालभते" इति विहिताः । एते च द्विविधाः पशवः प्रातस्सवने सहैवोपक्रम्यन्ते । तत्रैव सर्वेषामर्थे प्रयाजा अनुष्ठीयन्ते । तत्रैव क्रतुपशव आलभ्यन्ते । प्राजापत्यास्तु "ब्रह्मसाम्न्यालभते" इति वचनाद्ब्रह्मसामस्तोत्रकाले माध्यन्दिनसवने आलभ्यन्ते । तत्र सन्देहः, किं प्रातस्सवनेऽनुष्ठितानां प्रयाजानां शेषो माध्यन्दिनकालीनप्राजपत्यवपाभिघारणाय धारयितव्यः । तदर्थश्च पात्रान्तरं सम्पाद्यम् । जुह्वाः क्रत्वनुष्ठाने व्यापृतत्वात् । उत न धारयितव्यः, अतो न पात्रान्तरसम्पादनमिति । प्राजापत्यवपाभिः स्वाभिघारणाय प्रातःसवनीयप्रयाजशेषस्य धारणं प्रयुज्यते न वेति **फलितार्थः** ।

**पूर्वपक्षस्तु,** प्रयाजशेषेणेति तृतीयया शेषे संस्कारकत्वस्य हवींषीति द्वितीयया हविषां संस्कार्यत्वस्य च श्रवणात्, शेषस्य प्रतिपत्तित्वे "प्रयाजशेषं हविष्षु क्षारयेत्" इति श्रवणापातात्, उपयुक्तसंस्कारादप्युपयोक्ष्यमाणसंस्कारस्याभ्यर्हितत्वाच्च, यथाऽन्यार्थस्याप्युत्तरार्धस्य वचनात्स्विष्टकृदर्थता तथाऽन्यार्थस्यापि प्रयाजशेषस्य हविरभिघारणार्थं धारणं तावत्कालं कर्तव्यम् । अन्यथा तदभिघारणासिद्धेः । तदर्थं पात्रान्तरं सम्पाद्यमिति। तदाह **सूत्रे, अभिघारणे** निमित्ते तद्धारणार्थं **पात्रभेदः स्यात्** । **अनुयाजवत्** यथा पशावनूयाजार्थपृषदाज्यधारणार्थं पात्रभेदस्तद्वत् । कुतः? **विप्रकर्षात्** प्राजपत्यवपानां विप्रकृष्टत्वादिति । **सिद्धान्तस्तु,** शेषस्य हि प्रतिपत्तिरपेक्षिता । जुह्वां विद्यमानप्रयाजशेषभूताऽज्यस्य करिष्यमाणाऽज्यभागार्थाज्येनासाङ्कर्यार्थत्वात् । हविस्संकारस्त्वनपेक्षितः । उपस्तरणाभिघारणाभ्यामेव पात्रासंसर्गार्थस्नेहनसिद्धेः । अनपेक्षितविधानादपेक्षितविधिरौचित्यप्राप्तः । प्रतिपत्तित्वे चाऽज्यभागार्थाज्येनासाङ्कर्यार्थं जुह्वा रिक्तताकरणं दृष्टमेव प्रयोजनं लभ्यते । नच दृष्टे सम्भवति हविस्संस्काररूपादृष्टकल्पना युक्ता । तस्माच्छेषः

[1] ಅನುಕೃತ್ಯಧಿಕರಣ (೧-೩-೬)

'ಪ್ರಯಾಜಶೇಷೇಣ ಹವೀಂಷಿ ಅಭಿಘಾರಯತಿ' ಎಂಬ ವಾಜಪೇಯಯಾಗದಲ್ಲಿ ಪ್ರಸಕ್ತವಾದ ವಾಕ್ಯವು, ಈ ಅಧಿಕರಣದ ವಿಷಯವಾಗಿದೆ. ಇದನ್ನು ನೋಡಿದಾಗ, ಹವಿಸ್ಸಿನ ಸಂಸ್ಕಾರಕ್ಕಾಗಿ ಅಭಿಘಾರಣವನ್ನು ಮಾಡಬೇಕೋ, ಅಥವಾ ಪ್ರಯಾಜಶೇಷಕ್ಕೆ ಪ್ರತಿಪತ್ತಿಯಾಗಿದೆಯೋ? ಎಂದು ಸಂಶಯ ಬರುತ್ತದೆ.

ಪೂರ್ವಪಕ್ಷ - ಉಪಯುಕ್ತ ಸಂಸ್ಕಾರಕ್ಕಿಂತಲೂ ಉಪಯೋಕ್ಷ್ಯಮಾಣ ಸಂಸ್ಕಾರವು ಶ್ರೇಷ್ಠವಾಗಿದೆ. ಆದ್ದರಿಂದ ಮುಂದಿನ ಯಾಗದ ಹವಿಸ್ಸಂಸ್ಕಾರಕ್ಕಾಗಿ ಅಭಿಘಾರಣವನ್ನು ಶ್ರುತಿಯು ಹೇಳುತ್ತಿದೆ ಎಂಬುದೇ ಸೂಕ್ತವಾದದ್ದು. ಮತ್ತು 'ಪ್ರಯಾಜ ಶೇಷೇಣ' ಎಂಬ ತೃತೀಯಾವಿಭಕ್ತಿಗಿಂತಲೂ 'ಹವೀಂಷಿ' ಎಂಬಲ್ಲಿರುವ ದ್ವಿತೀಯಾ ವಿಭಕ್ತಿಯು ಶ್ರೇಷ್ಠವಾದ್ದರಿಂದ ಹವಿಸ್ಸಂಸ್ಕಾರಕ್ಕೋಸ್ಕರವೇ ಅಭಿಘಾರಣವನ್ನು ಹೇಳಿದ್ದಾರೆಂಬುದು ಸೂಕ್ತವಾಗಿದೆ. ಹೀಗೆ ನ್ಯಾಯದಬಲದಿಂದ ಮತ್ತು ದ್ವಿತೀಯಾವಿಭಕ್ತಿಯೆಂಬ ಶಬ್ದದ ಬಲದಿಂದಲೂ ಹವಿಸ್ಸಂಸ್ಕಾರಕಾಗಿ ಅಭಿಘಾರಣವನ್ನು ಹೇಳಲಾಗಿದೆ.

ಸಿದ್ಧಾಂತ - ಶೇಷವು ಪ್ರತಿಪತ್ತ್ಯಪೇಕ್ಷಿತವಾದ್ದರಿಂದ ಅಭಿಘಾರಣಕ್ಕೆ ದೃಷ್ಟಾರ್ಥ ಪ್ರಯೋಜವನವನ್ನು ಹೇಳುವುದೇ ಒಳ್ಳೆಯದು. ಹವಿಸ್ಸಂಸ್ಕಾರಕ್ಕೋಸ್ಕರವೆಂದು ಹೇಳಿದರೆ, ಅನಪೇಕ್ಷಿತವಾದ ಅದೃಷ್ಟಾರ್ಥವನ್ನು ಕಲ್ಪನೆ ಮಾಡಬೇಕಾದ ಪ್ರಸಂಗ ಬರುತ್ತದೆ. ಸುಲಭವಾಗಿ ದೃಷ್ಟಾರ್ಥತ್ವವನ್ನೇ ಹೇಳಲು ಬರುವಾಗ, ಅದೃಷ್ಟ ಕಲ್ಪನೆ ಮಾಡುವುದು ನ್ಯಾಯಸಮ್ಮತವಲ್ಲ. ಆದ್ದರಿಂದ 'ಪ್ರಯಾಜಶೇಷೇಣ ಹವೀಂಷಿ' ಎಂಬಲ್ಲಿರುವ ತೃತೀಯಾ ವಿಭಕ್ತಿಯನ್ನು ದ್ವಿತೀಯಾಂತವಾಗಿ ಪರಿಣಾಮ ಮಾಡಿಕೊಂಡು, 'ಹವೀಂಷಿ' ಎಂಬಲ್ಲಿರುವ ದ್ವಿತೀಯಾ ವಿಭಕ್ತಿಯನ್ನು ಸಪ್ತಮ್ಯಂತವಾಗಿ ವ್ಯತ್ಯಾಸ ಮಾಡಿಕೊಂಡು, 'ಪ್ರಯಾಜಶೇಷಂ ಹವಿಷ್ಷು ಕ್ಷಾರಯೇತ್' ಎಂದು ವಾಕ್ಯಾರ್ಥವನ್ನು ತಿಳಿಯಬೇಕು. ಪ್ರಯಾಜಶೇಷ ಪ್ರತಿಪತ್ತಿಯೆಂದೇ ಹೇಳಬೇಕು.

तत्र यथा प्रातिपदिकस्वारस्यानुग्रहाय प्रत्ययस्वारस्यत्यागः तथाऽत्रापीत्यर्थः । अत्र वक्तव्यो विशेषो ''न सङ्ख्योपसङ्ग्रहात्'' इत्यत्र वक्ष्यते ।

ಪೂರ್ವಮೀಮಾಂಸೆಯ ಈ ದೃಷ್ಟಾಂತದಲ್ಲಿ 'ಪ್ರಯಾಜ ಶೇಷ' ಎಂಬ ಪ್ರಾತಿಪದಿಕ ಸ್ವಾರಸ್ಯವನ್ನು ಅನುಸರಿಸಿ, ತೃತೀಯಾವಿಭಕ್ತಿಯ ಅರ್ಥವನ್ನು ಅಸ್ವಾರಸ್ಯ ಮಾಡಲಾಗಿದೆ. ಅದರಂತೆ ಪ್ರಕೃತದಲ್ಲಿಯೂ 'ತಮ್' ಇತ್ಯಾದಿ ಅನೇಕ ಪ್ರಾತಿಪಾದಿಕಗಳ ಅರ್ಥಸ್ವಾರಸ್ಯಕ್ಕಾಗಿ ದ್ವಿತೀಯಾದಿ ವಿಭಕ್ತಿಗಳ ಅರ್ಥಕ್ಕೆ ಅಸ್ವಾರಸ್ಯವನ್ನು ಹೇಳುವುದು ತಪ್ಪಾಗುವುದಿಲ್ಲ. ಈ ವಿಷಯದ ಬಗ್ಗೆ ಹೆಚ್ಚಿನ ವಿವರಣೆಯನ್ನು 'ನ ಸಂಖ್ಯೋಪಸಂಗ್ರಹಾತ್' ಎಂಬ ಸೂತ್ರದ ಸಂದರ್ಭದಲ್ಲಿ ಹೇಳುವವರಿದ್ದೇವೆ.

**प्रकाशः** – उक्तं सङ्गृह्णाति – एवञ्चेति ।। अत्रेति ।। तमिति शब्द इत्यर्थः ।

---

स्वप्रतिपत्तिरूपसंस्कारार्थः । अतः प्रधानभूतशेषेतिप्रातिपदिकानुरोधेन गुणभूतविभक्तिबाधेन ''प्रयाजशेषं हविष्षु क्षारयति'' इति वाक्यार्थः । तानि च सन्निधानात्प्रातःसवनीयपशुहर्वींष्येव । एवञ्च हविराघारनियमात्तत्संस्कारोऽपि भवतीति स्विष्टकृद्वत्सूक्तवाकवच्चोभयार्थं हविष्षु शेषस्थापनमिति । फलन्तु, घारणपृथक्पात्रसम्पादनयोरकर्तव्यता ।

**इति चतुर्दशमभिघारणे शेषधारणतत्पात्रयोरनुष्ठानाधिकरणम् (सूत्राणि ३३-३९)**

ಪರಿಪೂರ್ಣಚಂದ್ರಿಕಾ

अभ्युपेत्येदमुक्तम् । वस्तुतस्तु ''यस्यैवं सुखं रूपं तत्रेति वाक्ययोजनोपपत्तेश्च'' इति टीकोक्तरी ा प्रत्ययार्थास्वारस्यमपि नेत्याह – उपपत्स्येते चेति ।।

ಇಲ್ಲಿಯತನಕ ಹೇಳಿದ್ದನ್ನು ಗ್ರಂಥಕಾರರು ಸಂಗ್ರಹ ಮಾಡಿ ಹೇಳುತ್ತಿದ್ದಾರೆ 'ಏವಂಚ' ಇತ್ಯಾದಿ ವಾಕ್ಯದಿಂದ. 'ಅತ್ರ' ಎಂದರೆ 'ತಮ್' ಎಂಬ ಶಬ್ದದಲ್ಲಿ ಎಂದರ್ಥ.

ವಸ್ತುತಃ ಇಲ್ಲಿಯತನಕ ಪ್ರತ್ಯಯಾರ್ಥಕ್ಕೆ ಅಸ್ವಾರಸ್ಯವನ್ನು ಹೇಳಬೇಕೆಂದು ಸಮರ್ಥನೆ ಮಾಡಿದ್ದು, ಅಂಗೀಕಾರವಾದ ಮಾಡಿ ವಿಚಾರ ಮಾಡಿದರೆ, ಪ್ರತ್ಯಯಾರ್ಥಕ್ಕೆ ಅಸ್ವಾರಸ್ಯವನ್ನೂ ಸಹ ಆಶ್ರಯಿಸಬೇಕಾಗಿಲ್ಲ. ಮಧ್ಯದಲ್ಲಿ ಒಮ್ಮೆ ಮಾತ್ರ ನಪುಂಸಕಲಿಂಗವು ಪ್ರಸಕ್ತವಾಗಿದೆ. ಅದರ ಹಿಂದಿನ ಮತ್ತು ಮುಂದಿನ ವಾಕ್ಯಗಳಲೆಲ್ಲಾ ಪುಲ್ಲಿಂಗ ಶಬ್ದವೇ ಪ್ರಯೋಗಿಸಲ್ಪಟ್ಟಿದೆ. ಒಮ್ಮೆ ಪ್ರಯುಕ್ತವಾದ ನಪುಂಸಕ ಲಿಂಗದಲ್ಲಿ 'ಯಸ್ಯೈವ ಸುಖಂ ರೂಪಂ ತತ್ರೇತಿ ವಾಕ್ಯಯೋಜನೋಪಪತ್ತೇಶ್ಚ' ಇತ್ಯಾದಿ ಟೀಕೆಯಲ್ಲಿ **ಹೇಳಿದಂತೆ** 'ರೂಪ' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳುವ ಮೂಲಕವೇ ಸಮಸ್ಯೆಯನ್ನು ಪರಿಹರಿಸಬಹುದು. ಆದ್ದರಿಂದ ಪ್ರತ್ಯಯಾರ್ಥಕ್ಕೆ ಅಸ್ವಾರಸ್ಯವನ್ನೂ ಕೂಡ ಕಲ್ಪನೆ ಮಾಡಬೇಕಾಗಿಲ್ಲ. ಈ ಅರ್ಥವನ್ನು ಹೇಗೆ ಕೂಡಿಸಬೇಕೆಂಬುದನ್ನು ಮುಂದೆ ಉಪಪಾದಿಸುತ್ತೇವೆಂದು ಗ್ರಂಥಕಾರರು ಹೇಳುತ್ತಿದ್ದಾರೆ 'ಉಪಪತ್ಸ್ಯೇತೇ ಚ' ಇತ್ಯಾದಿ ವಾಕ್ಯದಿಂದ.

**प्रकाशः – पुल्लिङ्गत्वेति** ।। रूपशब्दापेक्षया मध्ये तदित्यादेर्नपुंसकत्वेऽपि ''एको वशी'' इत्यादिना सर्वत्रेश्वरस्य पुल्लिङ्गशब्दैः प्रकृतत्वेन तत्परामर्शितया पुंस्त्वमानुकूल्येन गृह्यमाणपरत्वाच्च सन्निहितपरत्वं चेत्यर्थः ।

'ರೂಪ' ಶಬ್ದದ ವಿವಕ್ಷೆಯಿಂದ ಮಧ್ಯದಲ್ಲಿ ಮಾತ್ರ 'ತತ್' 'ಏತತ್' ಎಂಬುದಾಗಿ ನಪುಂಸಕ ಲಿಂಗಶಬ್ದಗಳಿದ್ದರೂ 'ಏಕೋ ವಶೀ' ಇತ್ಯಾದಿ ವಾಕ್ಯಗಳಲ್ಲೆಲ್ಲಾ ಈಶ್ವರನೇ ಪುಲ್ಲಿಂಗಶಬ್ದಗಳಿಂದ ಪ್ರಸಕ್ತನಾಗಿದ್ದಾನೆ. ಅವನನ್ನು ಪರಾಮರ್ಶ ಮಾಡಲು ಪುಲ್ಲಿಂಗ ಶಬ್ದದ ಪ್ರಯೋಗವು ತಪ್ಪಾಗುವುದಿಲ್ಲ. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣನಾದವನು ಈಶ್ವರನೆಂದು ಹೇಳಿದಾಗ ಪುಲ್ಲಿಂಗಪ್ರಯೋಗವು ಉಪಪನ್ನವಾಗುವುದಷ್ಟೇ ಅಲ್ಲದೇ, ಸನ್ನಿಹಿತ ಪರತ್ವವನ್ನೂ ಕೂಡ ಹೇಳಿದಂತಾಗುತ್ತದೆ.

**गुरुराजीयम् – प्रथमसूत्रसूचितान् हेतूनाह – सिद्धान्तस्त्विति** ।। यद्यप्यत्र सूत्रे प्रथमत उक्तत्वात्सूर्यादिप्रकाशनियामकत्वस्यैव वक्तव्यत्वाच्चशब्दोक्तस्य सूर्याद्यप्रकाश्यत्वस्य प्रथममुक्तिरनुपपन्ना । तथापि विषयवाक्ये सूर्याद्यप्रकाश्यत्वस्य प्रथममुक्तत्वात्तत्प्रतिपादकवाक्योदाहरणं युक्तमेवेति । **भाष्योक्तश्रुत्यादिभिरिति** ।। 'अहं तत्तेजोरश्मीत्', 'यदादित्यगतं तेजः', 'न तद्भासयते सूर्यः' इत्यादिश्रुति-स्मृतिभिरित्यर्थः ।। गुणभूतप्रत्ययार्थलिङ्गानुग्रहाय प्रधानभूतस्य तत्रेत्यादि-प्रातिपदिकस्य स्वतः प्राप्तसन्निहितपरत्वत्यागे बाधकमाह – **पाशमन्त्रादाविति** ।।

**अन्यथा 'अदितिः पाशान्' इत्यत्रापि प्रत्ययार्थभूतबहुत्वानुसारेण पाशप्रातिपदिकस्यास्वारस्यं स्यादिति भावः । तथेति ।। प्रयाजशेषेणेत्यत्र तृतीयया प्रयाजशेषस्य करणत्वस्य बोधितत्वेन प्रत्ययार्थभूतकरणत्वानुसरणे प्रातिपदिकस्य लक्षणापत्त्या तस्याश्चानङ्गीकृतत्वेन प्रयाजशब्दप्रातिपदिकस्वारस्यार्थं तृतीयाया व्यत्ययेन द्वितीयार्थत्वं वदतां मीमांसकानामपि प्रातिपदिकस्वारस्यार्थं प्रत्ययास्वारस्यं सम्प्रतिपन्नमित्यर्थः ।**




ಕಠೋಪನಿಷತ್ತಿನ ಕೊನೆಯಲ್ಲಿ 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಮ್' ಇತ್ಯಾದಿ ವಾಕ್ಯಗಳಿಂದ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಹೇತುವು, ಹಾಗೂ 'ತಮೇವ ಭಾಂತಮ್ ಅನುಭಾತಿ ಸರ್ವಮ್' ಇತ್ಯಾದಿ ವಾಕ್ಯದಿಂದ 'ಸೂರ್ಯಾದಿಪ್ರಕಾಶಹೇತುತ್ವ' ಎಂಬ ಹೇತುವು, ಮತ್ತು 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಇತ್ಯಾದಿ ವಾಕ್ಯದಿಂದ 'ಸರ್ವಜಗತ್‌ಪ್ರಕಾಶಕತ್ವ' ಹೇತುವು ಹೇಳಲ್ಪಟ್ಟಿದೆ. ಈ ಎಲ್ಲಾ ಹೇತುಗಳು ಪರಮಾತ್ಮನ ಅಸಾಧಾರಣ ಧರ್ಮವಾಗಿವೆ ಎಂಬುದು ಶ್ರುತಿ-ಸ್ಮೃತಿಗಳಿಂದ ಸಿದ್ಧವಾದ ವಿಚಾರ. ಆದ್ದರಿಂದ 'ಕಥಂ ನು ತದ್ವಿಜಾನೀಯಾಮ್' ಇತ್ಯಾದಿ ಹತ್ತಿರದಲ್ಲಿರುವ ವಾಕ್ಯದಿಂದ ಪ್ರಕೃತವಾದ ಆನುಕೂಲ್ಯೇನ ಗೃಹ್ಯಮಾಣನಾದವನು ಪರಮಾತ್ಮನೇ ಆಗುತ್ತಾನೆ.

ವಾಸ್ತವಿಕವಾಗಿ ಈಶ್ವರ ಪ್ರತಿಪಾದಕವಾದ 'ನಿತ್ಯೋ ನಿತ್ಯಾನಾಮ್' ಇತ್ಯಾದಿ ವಾಕ್ಯವು 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯಕ್ಕಿಂತಲೂ ದೂರದಲ್ಲಿದೆ. 'ಕಥಂ ನು ತದ್ವಿಜಾನೀಯಾಮ್' ಇತ್ಯಾದಿ ವಾಕ್ಯವು ಹತ್ತಿರದಲ್ಲಿದೆ. ಆದರೂ 'ತಮೇವ ಭಾಂತಮ್' ಎಂಬ ಶ್ರುತಿಯಲ್ಲಿ 'ತಮ್' ಎಂಬ ಶಬ್ದವು ಪುಲ್ಲಿಂಗವಾದ್ದರಿಂದ ಈಶ್ವರ ಪರವೇ ಆಗಿದೆ. ಇದರ ಜೊತೆಗೆ ಸಮಾನಾರ್ಥವನ್ನು ಹೇಳಬೇಕಾದ್ದರಿಂದ, 'ನ ತತ್ರ ಸೂರ್ಯಃ' 'ತಸ್ಯ ಭಾಸಾ' ಇತ್ಯಾದಿ ವಾಕ್ಯಗಳೂ ಕೂಡ ಈಶ್ವರ ಪರವೇ ಆಗಿರುತ್ತವೆ. ಆದ್ದರಿಂದ ಸೂರ್ಯಾದಿ ಪ್ರಕಾಶ ಹೇತುತ್ವಾದಿಗಳನ್ನು ಆನುಕೂಲ್ಯೇನ ಗೃಹ್ಯಮಾಣನಲ್ಲಿ ಹೇಳಲು ಸಾಧ್ಯವಿಲ್ಲ. ಅಂದರೆ ಈಶ್ವರನನ್ನು ಸೂರ್ಯಾದಿ ಪ್ರಕಾಶಗಳಿಗೆ ಕಾರಣನಾಗಿದ್ದಾನೆಂದು ಒಪ್ಪೋಣ. ಹೊರತು, ಆನುಕೂಲ್ಯೇನ ಗೃಹ್ಯಮಾಣನಾಗಿದ್ದಾನೆಂದು ಒಪ್ಪಬೇಕಾಗಿಲ್ಲವಲ್ಲವೇ?

ಹೀಗೆ ಪ್ರಶ್ನಿಸಬಾರದು. ಏಕೆಂದರೆ, 'ಕಿಮು ಭಾತಿ ನ ಭಾತಿ ವಾ' ಎಂಬ ವಾಕ್ಯದಲ್ಲಿ ಯಾರಿಂದಲೂ ತಿಳಿಯಲು ಸಾಧ್ಯವಿಲ್ಲದವನೆಂದು ಹೇಳಲಾಗಿದೆ. ಅಂತಹ ವ್ಯಕ್ತಿಯೇ, 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದಿಂದ ಪ್ರತ್ಯಭಿಜ್ಞಾಯಮಾನನಾಗಿದ್ದಾನೆ. ಆದ್ದರಿಂದ ಗೌಣವಾದ ಪುಲ್ಲಿಂಗವೆಂಬ ಪ್ರತ್ಯಯಾರ್ಥವನ್ನು ಅನುಸರಿಸುವುದಕ್ಕಾಗಿ ಪ್ರಧಾನವಾದ 'ತತ್ರ' 'ತಮ್', ತಸ್ಯ' ಇವೇ ಮೊದಲಾದ ಅನೇಕ ಪ್ರಾತಿಪದಿಕಗಳ ಅರ್ಥಕ್ಕೆ ಅಸ್ವಾರಸ್ಯವನ್ನು ಹೇಳುವುದು ಸರ್ವಥಾ ಅನ್ಯಾಯವಾಗುತ್ತದೆ.

ವಿಚಾರ ಮಾಡಿದರೆ 'ತತ್', 'ಏತತ್' ಎಂಬ ಶ್ರುತಿವಾಕ್ಯದಲ್ಲಿ ನಪುಂಸಕಲಿಂಗದ ಪ್ರಯೋಗ ಬಿಟ್ಟರೆ, ಹಿಂದಿನ-ಮುಂದಿನ ವಾಕ್ಯಗಳೆಲ್ಲಾ ಇಂತಹ ಪುಲ್ಲಿಂಗ ಪ್ರಯೋಗವೇ ಕಾಣಿಸುತ್ತಿದೆ. ಇಂತಹ ಪುಲ್ಲಿಂಗ

ಶಬ್ದಗಳಿಗಳಿಂದೆಲ್ಲಾ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ 'ತದೇತತ್' ಎಂಬಲ್ಲಿ ಮಾತ್ರ 'ರೂಪವತ್' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿ ಸಮಸ್ಯೆಯನ್ನು ಪರಿಹರಿಸಲು ಬರುವಾಗ, ಈಶ್ವರಪರತ್ವವನ್ನು ಬಿಡುವುದರಲ್ಲಿ ಅರ್ಥವಿಲ್ಲ. ಆದ್ದರಿಂದ ಕಠೋಪನಿಷತ್ತಿನಲ್ಲಿ ಆನುಕೂಲ್ಯೇನ ಗೃಹ್ಯಮಾಣನಾದವನೆಂದು ಪ್ರತಿಪಾದ್ಯನಾದವನು ಪರಮಾತ್ಮನೇ ಆಗಿದ್ದಾನೆಂದು ತಿಳಿಯಬೇಕು.

• • • • •

## 'ತದೇತತ್' ಶಬ್ದಗಳು ಈಶ್ವರ ಪರಾಮರ್ಶಕಗಳು

### तात्पर्यचन्द्रिका

**एवञ्च ''कथं नु तत्'' इत्यादेः सन्निहितज्ञानिसुखपरत्वाय ''तमेव भान्तम्'' इत्यादेर्व्यवहितेश्वरपरत्वं वा ''तमेव भान्तम्'' इत्यादेः सन्निहितानुकूलगृह्यमाण-परत्वाय ''कथं नु तत्'' इत्यादेर्व्यवहितेश्वरपरत्वं वेति विशये**

ಅನುವಾದ - ಇಲ್ಲಿಯ ತನಕ ಮಾಡಿದ ವಿಚಾರದಂತೆ ಹೀಗೆ ಸಂಶಯ ಬರುತ್ತದೆ. ಪೂರ್ವಪಕ್ಷಿ ಹೇಳುವಂತೆ - 'ಕಥಂ ನು ತತ್' ಎಂಬಲ್ಲಿರುವ 'ತತ್' ಪದವು ಸನ್ನಿಹಿತವಾದ ಜ್ಞಾನಿಸುಖಪರ-ವಾಗಿರುವುದರಿಂದ 'ತಮೇವ ಭಾಂತಮ್' ಎಂಬ ವಾಕ್ಯಕ್ಕೆ 'ನಿತ್ಯೋ ನಿತ್ಯಾನಾಮ್' ಎಂಬಲ್ಲಿ ಪ್ರಕೃತನಾದ ವ್ಯವಹಿತನಾದ ಈಶ್ವರಪರತ್ವವನ್ನು ಒಪ್ಪಬೇಕೋ, ಅಥವಾ ಸಿದ್ಧಾಂತಿ ಹೇಳುವಂತೆ - 'ತಮೇವ ಭಾಂತಮ್' ಇತ್ಯಾದಿ ವಾಕ್ಯಕ್ಕೆ ಸನ್ನಿಹಿತವಾದ ಆನುಕೂಲ್ಯೇನ ಗೃಹ್ಯಮಾಣಪರತ್ವವನ್ನು ಹೇಳುವುದಕ್ಕಾಗಿ 'ಕಥಂ ನು ತತ್' ಇತ್ಯಾದಿ ವಾಕ್ಯಕ್ಕೆ ವ್ಯವಹಿತವಾದ ಈಶ್ವರಪರತ್ವವನ್ನು ಒಪ್ಪಬೇಕೋ? ಎಂಬುದಾಗಿ.

**यद्यप्याद्यपक्षे तदित्यादेः सन्निहितपरत्वं नपुंसकलिङ्गत्वं तमित्यस्य पुल्लिङ्गत्वं च युज्यते । तथापि द्वितीयपक्ष एव युक्तः ।**

ವಾಸ್ತವಿಕವಾಗಿ ಪೂರ್ವಪಕ್ಷಿಗೆ ಸಮ್ಮತವಾದ ಮೊದಲನೆಯ ಪಕ್ಷದಲ್ಲಿ 'ತತ್' ಮೊದಲಾದ ಪದಗಳಿಗೆ ಸನ್ನಿಹಿತಪರತ್ವವು ಹಾಗೂ ನಪುಂಸಕಲಿಂಗತ್ವವು ಮತ್ತು 'ತಮ್' ಎಂಬುದಕ್ಕೆ ಪುಲ್ಲಿಂಗ ಪ್ರಯೋಗವೂ ಯುಕ್ತವಾಗುತ್ತದೆ. ಆದರೂ ಸಹ ನಾವು ಎರಡನೆಯ ಪಕ್ಷವನ್ನೇ ಸ್ವೀಕರಿಸುತ್ತೇವೆ.

**यतः -**

**बलवानुपसंहारस्तद्वश्या तदिति श्रुतिः ।**
**कथं पश्येत्तद्विरुद्धपूर्ववाक्यावबोधितम् ।। १ ।।**

ಅನುಕೃತ್ಯಧಿಕರಣ (೧-೩-೬)

ಏಕೆಂದರೆ -

ಬಲವಾನುಪಸಂಹಾರಃ ತದ್ವಶ್ಯಾ ತದಿತಿ ಶ್ರುತಿಃ ।
ಕಥಂ ಪಶ್ಯೇತ್ತದ್ ವಿರುದ್ಧಪೂರ್ವವಾಕ್ಯಾವ ಬೋಧಿತಮ್ ॥ ೧೧ ॥

'ತದೇತತ್' ಎಂಬ ಶ್ರುತಿಯು ಬಲಿಷ್ಠವಾದ ಉಪಸಂಹಾರದ ಅಧೀನವಾಗಿದೆ. ಇಂತಹ ಶ್ರುತಿಯು ಉಪಸಂಹಾರಕ್ಕೆ ವಿರುದ್ಧವಾದ ಪೂರ್ವಪ್ರಕೃತವಾದ ಜ್ಞಾನಿಸುಖಪರವಾಗಲು ಹೇಗೆ ಸಾಧ್ಯ ?

**नहि ''तदेतत्'' इत्यादिश्रुतेर्बलवदुपसंहारस्थाभिः 'तत्र' 'तमेव' 'तस्य' इत्यनेकप्रातिपदिकश्रुतिभिर्गृहीतायास्तदविरुद्धपूर्वप्रकृतेश्वरपरत्वे सम्भवति तद्विरुद्ध-पूर्वप्रकृत ज्ञानिसुखपरत्वं युक्तम् ।**

ಶ್ಲೋಕದ ಅಭಿಪ್ರಾಯ ಹೀಗಿದೆ - 'ತದೇತತ್' ಇತ್ಯಾದಿ ಶ್ರುತಿಯು ಬಲಿಷ್ಠವಾದ ಉಪಸಂಹಾರದಲ್ಲಿರುವ 'ತತ್ರ' 'ತಮೇವ' 'ತಸ್ಯ' ಇವೇ ಮೊದಲಾದ ಅನೇಕ ಪ್ರಾತಿಪದಿಕ ಶ್ರುತಿಗಳಿಂದ ಗೃಹೀತವಾಗಿದೆ. ಅಂದರೆ ಉಪಸಂಹಾರದಲ್ಲಿರುವ ಈ ಎಲ್ಲಾ ಶ್ರುತಿಗಳ ಆಧಾರದಿಂದ ಉಪಸಂಹಾರಕ್ಕೆ ವಿರುದ್ಧವಾಗದಂತೆ ಪೂರ್ವಪ್ರಕೃತವಾದ ಈಶ್ವರಪರತ್ವವೇ ಯುಕ್ತವಾಗುತ್ತದೆ. ಹೀಗೆ ಹೇಳಲು ಬರುವಾಗ ಉಪಸಂಹಾರ ವಾಕ್ಯಗಳಿಗೆ ವಿರುದ್ಧವಾಗಿ, ಪೂರ್ವಪ್ರಕೃತವಾದ ಜ್ಞಾನಿಸುಖಪರತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲ.

**किञ्च ''न तत्र'' इत्यस्य ''एकं रूपं बहुधा यः करोति'' इत्येतदतिदूरस्थम् । तदेतदित्यस्य तु किञ्चिद्दूरस्थम् । तत्र 'तदेतत्' इत्यस्य किञ्चिद्दूरस्थपरत्वाद्बिभ्यतो न 'तत्र' इत्यादेरतिव्यवहितपरत्वात्कथं न भीतिः ।**

ಮತ್ತು 'ನ ತತ್ರ ಸೂರ್ಯೋ ಭಾತಿ' ಎಂಬಲ್ಲಿ ಈ ವಾಕ್ಯಕ್ಕೆ ಈಶ್ವರಪರತ್ವವನ್ನು ಹೇಳುವ ಪೂರ್ವಪಕ್ಷಿಗೆ 'ಏಕಂ ರೂಪಂ ಬಹುಧಾ ಯಃ ಕರೋತಿ' ಎಂಬ ವಾಕ್ಯವು ಬಹಳ ದೂರದಲ್ಲಿದೆ. 'ತದೇತತ್' ಎಂಬಲ್ಲಿ ಈಶ್ವರನು ಕೇವಲ ಒಂದೇ ಶ್ಲೋಕದ ಪಾದದಿಂದ ವ್ಯವಹಿತನಾಗಿದ್ದಾನೆ. ಹೀಗಿರುವಾಗ 'ತದೇತತ್' ಎಂಬ ವಾಕ್ಯಕ್ಕೆ ಈಶ್ವರ ಪರತ್ವವನ್ನು ಒಪ್ಪಿದರೆ, ವ್ಯವಹಿತಪರತ್ವವನ್ನು ಹೇಳಿದಂತಾಗುತ್ತಿದೆಂದು ಸ್ವಲ್ಪ ದೂರದಲ್ಲಿರುವುದಕ್ಕೆ ಪೂರ್ವಪಕ್ಷಿಯು ಹೆದರುವುದಾದರೆ, 'ನ ತತ್ರ ಸೂರ್ಯೋ ಭಾತಿ' ಎಂಬ ಬಹಳದೂರದಲ್ಲಿರುವ ವಾಕ್ಯದಲ್ಲಿ ಈಶ್ವರನನ್ನು ಪರಾಮರ್ಶ ಮಾಡಿ, ತತ್‌ಪರತ್ವವನ್ನು ಒಪ್ಪುವ ಪೂರ್ವಪಕ್ಷಿಗೆ ಏಕೆ ಹೆದರಿಕೆಯಾಗುವುದಿಲ್ಲ? ಎಂದರೆ ಕಿಂಚಿದ್ದೂರಸ್ಥ-ಪರತ್ವದಿಂದ ಹೆದರುವ ಪೂರ್ವಪಕ್ಷಿಗೆ ಅತ್ಯಂತ ವ್ಯವಹಿತಪರತ್ವವನ್ನು ಒಪ್ಪುವುದು ತಪ್ಪಾಗುವುದಿಲ್ಲವೇ? ಎಂದಭಿಪ್ರಾಯ.

ಪರಿಪೂರ್ಣಚಂದ್ರಿಕಾ

**न चेश्वरपरत्वे 'तदेतत्' इति नपुंसकलिङ्गायोगः । व्यत्ययादिनाऽपि तत्सम्भवात् ।**

ಮತ್ತು 'ತದೇತತ್' ಎಂಬ ವಾಕ್ಯಕ್ಕೆ ಈಶ್ವರಪರತ್ವವನ್ನು ಒಪ್ಪಿದಾಗ ನಪುಂಸಕಲಿಂಗವೂ ಕೂಡ ಅಯುಕ್ತವಾಗುವುದಿಲ್ಲ. ಏಕೆಂದರೆ 'ತತ್-ಏತತ್' ಎಂಬೆರಡು ನಪುಂಸಕಲಿಂಗ ಪ್ರಯೋಗಗಳನ್ನು 'ಸಃ' 'ಏಷಃ' ಎಂದು ಪುಲ್ಲಿಂಗದಲ್ಲಿ ವ್ಯತ್ಯಾಸ ಮಾಡಿಕೊಳ್ಳಬಹುದು. ಅಥವಾ ಪುಲ್ಲಿಂಗ ಶಬ್ದಗಳೇ ಆದ 'ಸಃ' 'ಏಷಃ' ಎಂಬೆರಡು ಪದಗಳ ಪ್ರಾತಿಪದಿಕವನ್ನಷ್ಟೇ ಶ್ರುತಿಯು ಉಲ್ಲೇಖಿಸಿದೆ ಎಂದೂ ಕೂಡ ಹೇಳಬಹುದು.

**अपि च विनैव व्यत्ययादिकं लिङ्गं युक्तम् । ''यतो वाचो निवर्तन्ते'' ''एषोऽस्य परम आनन्दः'' इत्यादौ प्रसिद्धं यदनिर्देश्यं परमं सुखं तदेतद्ब्रह्मणो रूपमिति तच्छब्दस्य सुखपरत्वात् ।**

ಅಥವಾ 'ತದೇತತ್' ಎಂಬ ಶಬ್ದಗಳನ್ನು ವ್ಯತ್ಯಾಸ ಮಾಡಿಕೊಳ್ಳದೆಯೂ, ನಪುಂಸಕಲಿಂಗವನ್ನು ಉಪಪಾದಿಸಬಹುದು. ಹೇಗೆಂದರೆ, 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯಲ್ಲಿ ಮತ್ತು 'ಏಷೋಽಸ್ಯ ಪರಮಃ ಆನಂದಃ' ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧವಾದ ಯಾವ ಅನಿರ್ದೇಶ್ಯವಾದ ಪರಮ ಸುಖವಿದೆಯೋ, ಅದನ್ನೇ 'ತದೇತತ್' ಎಂಬ ಶ್ರುತಿಯು ಬ್ರಹ್ಮನ ಸ್ವರೂಪವೆಂದು ಹೇಳುತ್ತಿದೆ. ಅಂದರೆ ಅಂತಹ ಪರಮ ಸುಖವೇ ಬ್ರಹ್ಮನ ಸ್ವರೂಪವಾಗಿದೆ ಎಂದು 'ತತ್' ಶಬ್ದವು ಸುಖವನ್ನು ಪರಾಮರ್ಶ ಮಾಡುತ್ತಿದೆಯೆಂದು ವ್ಯಾಖಾನಿಸಬಹುದು. 'ಸುಖ' ಶಬ್ದವು ನಪುಂಸಕ-ಲಿಂಗದಲ್ಲಿರುವುದರಿಂದ 'ತತ್' ಶಬ್ದವೂ ಸಹ ನಪುಂಸಕಲಿಂಗದಲ್ಲಿಯೇ ಪ್ರಯುಕ್ತವಾಗಿವೆ.

**एतच्छब्दस्य च ''एकं रूपं बहुधा यः करोति'' इति प्रकृतेश्वररूपपरत्वात् ।**

ಹೀಗೆ 'ತತ್' ಶಬ್ದವು ಪರಮಸುಖವನ್ನು ಪರಾಮರ್ಶಮಾಡಿದರೆ, 'ಏತತ್' ಶಬ್ದವು ಈಶ್ವರರೂಪವನ್ನು ಪರಾಮರ್ಶ ಮಾಡುತ್ತಿದೆ. ಅಂದರೆ ಇದೇ ಶ್ರುತಿಯಲ್ಲಿ 'ಏಕಂ ರೂಪಂ ಬಹುಧಾ ಯಃ ಕರೋತಿ' ಎಂಬುದಾಗಿ ಪ್ರಕೃತವಾದ ಈಶ್ವರರೂಪವನ್ನು ಪರಾಮರ್ಶ ಮಾಡುತ್ತಿದೆ. ಹಾಗಾಗಿ ಯಾವ ಅನಿರ್ದೇಶ್ಯವಾದ ಪರಮಸುಖವಿದೆಯೋ, ಅದು 'ಭಗವಂತನ ರೂಪ' ಎಂದು ಶ್ರುತಿಗೆ ವ್ಯಾಖ್ಯಾನ ಮಾಡಿದಂತಾಯಿತು.

**एवञ्च यथा ''तप्ते पयसि दध्यानयति सा वैश्वदेव्यामिक्षा'' इत्यत्र ''सर्वनाम्ना परामर्शस्तस्यैवातोऽवकल्पते'' इत्युक्तत्वेन तच्छब्दस्य पयःपरामर्शकत्वेऽप्यामिक्षा-**

**शब्दसामानाधिकरण्यात् स्त्रीलिङ्गता तथेहाप्येतच्छब्दस्येश्वरपरामर्शकत्वेऽपि रूपशब्द-सामानाधिकरण्यान्नपुंसकलिङ्गता ।**

'ಏತತ್' ಶಬ್ದವು ಈಶ್ವರನನ್ನು ಪರಾಮರ್ಶ ಮಾಡುವುದಾದರೆ ಪುಲ್ಲಿಂಗದಲ್ಲಿರಬೇಕಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರ. ಯಾವರೀತಿಯಾಗಿ ಪೂರ್ವಮೀಮಾಂಸೆಯಲ್ಲಿ 'ತಪ್ತೇ ಪಯಸಿ ದಧ್ಯಾನಯತಿ ಸಾ ವೈಶ್ವದೇವ್ಯಾಮಿಕ್ಷಾ' ಎಂಬ ಶ್ರುತಿಯನ್ನು ವಿಚಾರ ಮಾಡುವಾಗ 'ಸರ್ವನಾಮ್ನಾ ಪರಾಮರ್ಶಸ್ತಸ್ಯೈ - ವಾತೋಽವಕಲ್ಪತೇ' ಎಂದು ಹೇಳಿರುತ್ತಾರೆ. ಹಿಂದೆ ಪ್ರಸಕ್ತವಾದ ಪಯಸ್ಸನ್ನೇ 'ಸಃ' ಎಂಬ 'ತತ್' ಶಬ್ದದಿಂದ ಪರಾಮರ್ಶ ಮಾಡುತ್ತಿದ್ದರೂ ಮುಂದಿರುವ 'ಆಮೀಕ್ಷಾ' ಎಂಬ ಶಬ್ದಕ್ಕೆ ಸಾಮಾನಾಧಿಕರಣ್ಯ ಸಿದ್ಧವಾಗಬೇಕೆಂಬ ಉದ್ದೇಶದಿಂದ ಸ್ತ್ರೀಲಿಂಗದಲ್ಲಿಯೇ ಪ್ರಯೋಗಿಸಲಾಗಿದೆ. ಅದರಂತೆ ಇಲ್ಲಿಯೂ ಸಹ 'ಏತತ್' ಶಬ್ದವು ಈಶ್ವರನನ್ನು ಪರಾಮರ್ಶ ಮಾಡುತ್ತಿರುವುದಾದರೂ ಈಶ್ವರನ ರೂಪ ಎಂಬರ್ಥವನ್ನು ವಿವಕ್ಷಿಸಿದ್ದರಿಂದ, 'ರೂಪ' ಶಬ್ದದ ಸಾಮಾನಾಧಿಕರಣ್ಯಕ್ಕಾಗಿ ನಪುಂಸಕಲಿಂಗದಲ್ಲಿಯೇ ಪ್ರಯೋಗಿಸಲಾಗಿದೆ. ಆದ್ದರಿಂದ ಇದು ತಪ್ಪಾಗುವುದಿಲ್ಲವೆಂದು ತಿಳಿಯಬೇಕು.

**तदुक्तं न्यायविवरणे ''यद्ब्रह्मानिर्देश्यं सुखमिति वदन्ति तदेतत्स्वरूपमिति मन्यन्ते'' इति ।**

ಹೀಗೆ 'ತತ್' ಶಬ್ದವು ಸುಖಪರಾಮರ್ಶಕ, 'ಏತತ್' ಶಬ್ದವು ಭಗವತ್‌ಸ್ವರೂಪ ಪರಾಮರ್ಶಕವೆಂದು ವ್ಯಾಖ್ಯಾನ ಮಾಡಿದ್ದಕ್ಕೆ ನ್ಯಾಯವಿವರಣವೇ ಮೂಲವಾಗಿದೆ - 'ಯದ್ ಬ್ರಹ್ಮಾನಿರ್ದೇಶ್ಯಂ ಸುಖಮಿತಿ ವದಂತಿ ತದೇತತ್ ಸ್ವರೂಪಮಿತಿ ಮನ್ಯಂತೇ' ಎಂದರೆ ಯಾವ ಬ್ರಹ್ಮನ ಅನಿರ್ದೇಶ್ಯವಾದ ಸುಖವಿದೆಯೋ ಅದು ಅವನ ಸ್ವರೂಪವೇ ಆಗಿದೆಯೆಂದು ತಿಳಿಯುತ್ತಾರೆ. ಈ ವಾಕ್ಯದ ಆಧಾರದಿಂದ 'ತದೇತತ್' ಶಬ್ದಗಳು ಭಿನ್ನವಿಷಯಕವೆಂದು ತಿಳಿಯುತ್ತದೆ.

**काठकभाष्ये तु ''तदेतदेव भगवद्रूपं परमं सुखम्'' इति सुखं विधेयमित्युक्तम्। तत्र 'तत्' 'गुह्यं ब्रह्म सनातनम्' इत्युपक्रान्तम्' 'एतत्' 'एकं रूपम्' इति मध्ये उक्तं ब्रह्मणो रूपं परमं सुखमिति तदेतच्छब्दयोर्ब्रह्मरूपपरत्वान्नपुंसकतेति द्रष्टव्यम् ।**

ಆದರೆ ಕಾಠಕೋಪನಿಷತ್ತಿನ ಭಾಷ್ಯದಲ್ಲಿ 'ತದೇತದೇವ ಭಗವದ್ರೂಪಂ ಪರಮಂ ಸುಖಮ್' ಎಂದು ಸುಖವನ್ನೇ ವಿಧೇಯವೆಂದು ಹೇಳಿರುತ್ತಾರೆ. ಈ ವ್ಯಾಖ್ಯಾನದಲ್ಲಿ 'ಗುಹ್ಯಂ ಬ್ರಹ್ಮ ಸನಾತನಂ' ಎಂದು ಉಪಕ್ರಮದಲ್ಲಿ; 'ಏಕಂ ರೂಪಮ್' ಎಂಬುದಾಗಿ ಮಧ್ಯದಲ್ಲಿ ಪ್ರತಿಪಾದ್ಯನಾದ ಬ್ರಹ್ಮನ

ರೂಪವೇ ಪರಮಸುಖಸ್ವರೂಪವಾಗಿದೆಯೆಂದು 'ತದೇತತ್' ಶಬ್ದಗಳಿಗೆ ಬ್ರಹ್ಮರೂಪಪರತ್ವವನ್ನು ಹೇಳಬೇಕು. ಹೀಗೆ ಎರಡೂ ಶಬ್ದಗಳು ಬ್ರಹ್ಮರೂಪವನ್ನೇ ಪರಾಮರ್ಶ ಮಾಡುವುದರಿಂದ ನಪುಂಸಕಲಿಂಗವು ಯುಕ್ತವಾಗುತ್ತದೆಂದು ತಿಳಿಯಬೇಕು. ನ್ಯಾಯವಿವರಣಕ್ಕೂ ಕಾಠಕಭಾಷ್ಯದಲ್ಲೂ ಇರುವ ಈ ವ್ಯತ್ಯಾಸವನ್ನು ಗಮನಿಸಬೇಕು. ಅಂದರೆ ಎರಡೂ ವ್ಯಾಖ್ಯಾನಗಳ ಅಭಿಪ್ರಾಯ ಒಂದೇ ಆಗಿದ್ದರೂ ಯೋಜನೆಯಲ್ಲಿ ಮಾತ್ರ ವ್ಯತ್ಯಾಸವಿರುತ್ತದೆ.

**प्रकाशः –**

स्यादेवं यदि तदित्यादेरीश्वरपरत्वमेव भवेत्तदा टीकारीत्या ''यस्येश्वरस्यैवं सुखं रूपं तत्र तम्'' इत्यादौ पुल्लिङ्गत्वोपपत्तिः । तदेवायुक्तम् । व्यवहितत्वान्नपुंसक-लिङ्गविरोधात्सुखश्रुतिप्रकृतप्रत्यभिज्ञाविरोधाच्चेति । तथा 'तम्' इत्यस्य व्यवहितेश्वरपरत्वे पुंस्त्वोपपत्तेश्चोक्तत्वादित्यतो ''नच वक्तव्यं समीपस्थपरामर्शं विहाय कथञ्चिदेव दूरस्थग्रहणे कारणाभाव इति'' इत्यादिटीकोक्तमेव विचारपूर्वं साधयति – एवञ्चेति ।।

ವಿವರಣೆ - ಒಂದು ವೇಳೆ 'ತದೇತದಿತಿ ಮನ್ಯಂತೇ' ಎಂಬ ವಾಕ್ಯವು ಈಶ್ವರಪರವಾಗಿದ್ದಲ್ಲಿ ಆವಾಗ ಟೀಕೆಯ ಪ್ರಕಾರ 'ಯಸ್ಯ ಈಶ್ವರಸ್ಯೈವ ಸುಖಂ ರೂಪಂ ತತ್ರ ತಮ್' ಇತ್ಯಾದಿಯಾಗಿ ಪುಲ್ಲಿಂಗ ಪ್ರಯೋಗದ ಸಾಧುತ್ವ ಸಮರ್ಥನೆಯು ಉಪಪನ್ನವಾಗುತ್ತಿತ್ತು. ಆದರೆ 'ತದೇತತ್' ಇತ್ಯಾದಿ ವಾಕ್ಯವು ಈಶ್ವರಪರವಾಗಲು ಸಾಧ್ಯವಿಲ್ಲ. ಏಕೆಂದರೆ ಈಶ್ವರನು ವ್ಯವಹಿತನಾಗಿದ್ದಾನೆ. ಹಾಗೂ 'ತತ್' 'ಏತತ್' ಇತ್ಯಾದಿ ನಪುಂಸಕಲಿಂಗಗಳ ವಿರೋಧವೂ ಕೂಡ ಬರುತ್ತದೆ. ಮತ್ತು 'ತೇಷಾಂ ಸುಖಂ ಶಾಶ್ವತಂ ನೇತರೇಷಾಮ್' ಎಂಬ ವಾಕ್ಯದಿಂದ ಪ್ರಕೃತವಾದ, ಜ್ಞಾನಿಸುಖದ ಪ್ರತ್ಯಭಿಜ್ಞಾನವೇ ಬರುತ್ತಿದೆ. ಅದರ ವಿರೋಧವೂ ಸಹ ಬರುತ್ತದೆ. ಮತ್ತು 'ತಮ್' ಎಂಬುದು ವ್ಯವಹಿತವಾದ ಈಶ್ವರಪರ ಎಂದು ಹೇಳಿದಾಗ ನಮ್ಮಲ್ಲಿ ಪುಂಸ್ತ್ವವು ಉಪಪನ್ನವಾಗುತ್ತದೆ. ಆದ್ದರಿಂದ 'ತದೇತತ್' ಎಂಬ ವಾಕ್ಯವು ಈಶ್ವರಪರವಾಗಲು ಸಾಧ್ಯವೇ ಇಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಏವಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಇದನ್ನೇ ಟೀಕೆಯಲ್ಲಿ 'ನಚ ವಕ್ತವ್ಯಂ ಸಮೀಪಸ್ಥಪರಾಮರ್ಶಂ ವಿಹಾಯ ಕಥಂಚಿದೇವ ದೂರಸ್ಥಗ್ರಹಣೇ ಕಾರಣಾಭಾವ ಇತಿ' ಸಮೀಪದಲ್ಲಿರುವ ಜ್ಞಾನಿಸುಖವನ್ನು ಪರಾಮರ್ಶ ಮಾಡದೇ ದೂರದಲ್ಲಿರುವ ಈಶ್ವರನನ್ನು ಪರಾಮರ್ಶ ಮಾಡಲು ಕಾರಣವಿರುವುದಿಲ್ಲವೆಂದು ಹೇಳಬಾರದು ಎಂದು ಹೇಳಲಾಗಿದೆ. ಈ ವಾಕ್ಯವನ್ನೇ ವಿಚಾರ ಪೂರ್ವಕ ಗ್ರಂಥಕಾರರು ವಿವರಣೆ ಮಾಡುತ್ತಿದ್ದಾರೆಂದು ತಿಳಿಯಬೇಕು.

**प्रकाशः –** 'यतः' इत्यस्य श्लोकेनान्वयः । 'कथम्' इत्याक्षेपः । यतस्तद्विरुद्धं न पश्यति ततो युक्त इति पूर्वेणान्वयः ।

'ಯತಃ' ಎಂಬ ಪದಕ್ಕೆ ಶ್ಲೋಕದ ಜೊತೆಗೆ ಅನ್ವಯವನ್ನು ಮಾಡಬೇಕು. 'ಕಥಮ್' ಎಂಬ ಶಬ್ದವು ಆಕ್ಷೇಪಾರ್ಥದಲ್ಲಿದೆ. ಆದ್ದರಿಂದ ಯಾವ ಕಾರಣದಿಂದ ಉಪಸಂಹಾರಕ್ಕೆ ವಿರುದ್ಧವಾದುದ್ದನ್ನು 'ತದೇತತ್'

ಎಂಬ ಶ್ರುತಿಯು ನೋಡುವುದಿಲ್ಲವೋ, ಆದ್ದರಿಂದಲೇ ಎರಡನೆಯ ಪಕ್ಷವು ಯುಕ್ತವಾಗಿದೆ ಎಂದು ಪೂರ್ವ ವಾಕ್ಯದಿಂದ ಅನ್ವಯ ಮಾಡಿಕೊಳ್ಳಬೇಕು.

**प्रकाशः** – उपसंहारबलवत्त्वं तद्बीजं च समन्वयसूत्र एव प्रतिपादितम् । आश्रितं च तत्प्राबल्यं ''प्रथमेऽश्रवणात्'' इत्यत्र तृतीयाद्यपाद इति भावः ।

ಉಪಸಂಹಾರವೇ ಪ್ರಬಲವಾಗಿದೆಯೆನ್ನಲು ಕಾರಣವನ್ನು ಈಗಾಗಲೇ ಸಮನ್ವಯಾಧಿಕರಣದಲ್ಲಿ ಪ್ರತಿಪಾದಿಸಿದ್ದಾಗಿದೆ. ಮತ್ತು ಸೂತ್ರಕಾರರೂ ಸಹ ಮೂರನೆಯ ಅಧ್ಯಾಯದ ಮೊದಲನೆಯ ಪಾದದ 'ಪ್ರಥಮೇಽಶ್ರವಣಾತ್ ಇತಿ ಚೇನ್ನ, ತಾ ಏವ ಹ್ಯುಪಪತ್ತೇಃ' ಎಂಬ ಸೂತ್ರದಲ್ಲಿ ಸಮರ್ಥಿಸುವವರಿದ್ದಾರೆ. ಪಂಚಾಗ್ನಿವಿದ್ಯೆಯನ್ನು ಹೇಳುವಾಗ ಉಪಕ್ರಮದಲ್ಲಿ 'ಶ್ರದ್ಧಾಂ ಜುಹ್ವತಿ' ಎಂದಿದೆ. ಭೂತಗಳನ್ನು ಹೇಳಿರುವುದಿಲ್ಲ. ಉಪಸಂಹಾರದಲ್ಲಿ 'ಆಪಃ' ಎಂಬ ಶಬ್ದವನ್ನು ಪ್ರಯೋಗ ಮಾಡಿದ್ದರಿಂದ ಉಪಲಕ್ಷಣಯಾ ಪಂಚಭೂತಗಳನ್ನು ತೆಗೆದುಕೊಳ್ಳಬೇಕು. ಉಪಸಂಹಾರವು ಪ್ರಬಲವಾದ್ದರಿಂದ, ಉಪಕ್ರಮದಲ್ಲಿಯೂ ಕೂಡ ಪಂಚಭೂತಗಳಿಂದ ಸಹಿತನಾಗಿಯೇ ಜೀವನು ಸ್ವರ್ಗಕ್ಕೆ ಹೋಗುತ್ತಾನೆಂದು ವಿವಕ್ಷಿಸಬೇಕು. ಹೀಗೆ ಸೂತ್ರಕಾರರು ಸಮರ್ಥಿಸುತ್ತಾರೆ.

**प्रकाशः – श्लोकं व्याचष्टे – नहीति ।। गृहीताया इति ।।** ताश्च भगवद्धर्माणां सूर्याद्यप्रकाश्यत्वादीनां धर्मिसमर्पिका इति भावः ।

ಶ್ಲೋಕವನ್ನು ಸ್ವತಃ ತಾವೇ ವ್ಯಾಖ್ಯಾನ ಮಾಡುತ್ತಿದ್ದಾರೆ. 'ನಹಿ' ಇತ್ಯಾದಿ ವಾಕ್ಯದಿಂದ. 'ಗೃಹೀತಾಯಾಃ' ಎಂಬುದರ ಅಭಿಪ್ರಾಯ ಹೀಗಿದೆ - 'ತತ್ರ-ತಸ್ಯೈವ-ತಸ್ಯ' ಮೊದಲಾದ ಶಬ್ದಗಳು ಭಗವತ್ಪರವೇ ಆಗಿವೆ ಎಂಬುದು ಅತ್ಯಂತ ದೃಢವಾದ ವಿಚಾರ. ಏಕೆಂದರೆ ಸೂರ್ಯಾದ್ಯಪ್ರಕಾಶ್ಯತ್ವ, ಸೂರ್ಯಾದಿಭಾಸಕತ್ವ, ಸರ್ವಜಗತ್‌ಪ್ರಕಾಶಕತ್ವ ಮೊದಲಾದ ಈಶ್ವರನ ಅಸಾಧಾರಣ ಧರ್ಮಗಳು ಈಶ್ವರನೆಂಬ ಧರ್ಮಿಯಲ್ಲಿ ಸ್ಥಿರವಾಗಿವೆ. ಇವುಗಳಿಂದ 'ತದೇತತ್' ಶಬ್ದಗಳು ಗೃಹೀತವಾಗಿವೆಯೆಂದು ತಿಳಿಯಬೇಕು.

**प्रकाशः** – ''दूरोक्तग्रहणे बिभ्यतोऽतिदूरोक्तग्रहणे कथं न भीतिः'' इति टीकोक्तं युक्त्यन्तरमिति भावेन तद्व्यनक्ति – **किञ्चेति ।।**

'ದೂರೋಕ್ತಗ್ರಹಣೇ ಬಿಭ್ಯತೋಽತಿದೂರೋಕ್ತಗ್ರಹಣೇ ಕಥಂ ನ ಭೀತಿಃ' ದೂರದಲ್ಲಿರುವುದನ್ನು ಪರಾಮರ್ಶ ಮಾಡಲು ಹೆದರುವ ನೀನು, ಅದಕ್ಕಿಂತಲೂ ಅತ್ಯಂತ ದೂರದಲ್ಲಿರುವುದನ್ನು ಪರಾಮರ್ಶ ಮಾಡಲು ಏಕೆ ಹೆದರುವುದಿಲ್ಲ? ಎಂದು ಟೀಕೆಯಲ್ಲಿಯೇ ಹೇಳಿದ್ದಾರೆ. ಈ ಯುಕ್ತ್ಯಂತರವನ್ನು ತೋರಿಸುತ್ತಾ ಟೀಕಾ ಮಾತನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः** – ननूक्तं तदित्यादेरीश्वरपरत्वे नपुंसकलिङ्गविरोधः व्यवहितपरामर्शः सुखश्रुतिप्रत्यभिज्ञाविरोधश्चेत्यतस्सर्वं क्रमेण परिजिहीर्षुः ''नच परमात्मनो नपुंसक

सुखशब्देनाप्रकृतत्वात्तदेतदिति परामर्शायोगः'' इति शङ्काटीकार्थं तावदनूद्य स्वयमेकं समाधिं तावदाह – न चेश्वरपरत्व इति ।।

'ತದೇತತ್' ಎಂಬ ವಾಕ್ಯವು ಭಗವತ್‌ಪರವಾದರೆ, ನಪುಂಸಕಲಿಂಗದವಿರೋಧ ಬರುತ್ತದೆ. ಮತ್ತು ವ್ಯವಹಿತ ಪರಾಮರ್ಶ ಮಾಡಿದಂತಾಗುತ್ತದೆ. ಮತ್ತು ಸುಖಶ್ರುತಿಪ್ರತ್ಯಭಿಜ್ಞಾವಿರೋಧವೂ ಸಹ ಬರುತ್ತದಲ್ಲವೇ? ಎಂಬ ಶಂಕೆಗಳನ್ನೆಲ್ಲಾ ಪರಿಹರಿಸುವವರಾಗಿ ಮೊದಲು ನಪುಂಸಕಲಿಂಗ ವಿರೋಧದ ಪರಿಹಾರವನ್ನು ಮಾಡುತ್ತಿದ್ದಾರೆ. 'ನಚ ಪರಮಾತ್ಮನೋ ನಪುಂಸಕ ಸುಖಶಬ್ದೇನಾಪ್ರಕೃತತ್ವಾತ್ತದೇತದಿತಿ ಪರಾಮರ್ಶಾಯೋಗಃ' ಪರಮಾತ್ಮನು ನಪುಂಸಕಲಿಂಗದ ಸುಖಶಬ್ದದಿಂದ ಪ್ರಕೃತನಾಗದ ಕಾರಣ 'ತದೇತತ್' ಎಂಬ ಶಬ್ದಗಳಿಂದ ಅವನನ್ನು ಪರಾಮರ್ಶ ಮಾಡಲು ಬರುವುದಿಲ್ಲ ಎಂಬ ಶಂಕಾಭಾಗದ ಟೀಕಾವಾಕ್ಯವನ್ನು ಅನುವಾದ ಮಾಡಿ ಮೊದಲು ಸ್ವತಃ ಗ್ರಂಥಕಾರರೇ ಒಂದು ಸಮಾಧಾನವನ್ನು ಹೇಳುತ್ತಿದ್ದಾರೆ 'ನಚ ಈಶ್ವರಪರತ್ವೇ' ಇತ್ಯಾದಿ ಗ್ರಂಥದಿಂದ.

**प्रकाशः – व्यत्ययादिनेति ।। तमेतमिति वक्तव्ये तदेतदिति छान्दसो लिङ्गव्यत्ययो वा ''सुपां सुलुक् पूर्वसवर्णाच्छेयाडाड्यायाजालः'' इति सूत्रेण तमेतमित्यत्र सुपो लुकि सति तमेतमिति पदयोः प्रातिपदिकनिर्देशमात्रं वा स्त्रीलिङ्गपुल्लिङ्गानुगतं सामान्यमेव नपुंसकलिङ्गमिति वैयाकरणोक्तमर्यादया पुल्लिङ्गनिर्दिष्टस्यापि नपुंसकलिङ्गेन परामर्शो युक्त इति वा तत्सम्भवादित्यर्थः ।**

ಗ್ರಂಥದಲ್ಲಿ 'ವ್ಯತ್ಯಯಾದಿನಾಪಿ ತತ್‌ಸಂಭವಾತ್' ಎಂದು 'ತದೇತತ್' ಶಬ್ದಗಳನ್ನು ವ್ಯತ್ಯಾಸ ಮಾಡಿಕೊಂಡು ಈಶ್ವರಪರವೆನ್ನಬಹುದೆನ್ನುತ್ತಾರೆ. ಇದರ ಅಭಿಪ್ರಾಯ ಹೀಗಿದೆ - ವಾಸ್ತವಿಕವಾಗಿ ಶ್ರುತಿಯಲ್ಲಿ 'ತಮೇತಂ' ಎಂದು ಹೇಳಬೇಕಿತ್ತು. ಆದರೆ ಛಾಂದಸವಾದ್ದರಿಂದ 'ತದೇತತ್' ಎಂಬ ಪ್ರಯೋಗವು ತಪ್ಪಾಗುವುದಿಲ್ಲ. ಅಥವಾ 'ತದೇತತ್' ಎಂಬ ನಪುಂಸಕಲಿಂಗದ ಶಬ್ದಗಳನ್ನು ಪುಲ್ಲಿಂಗದಲ್ಲಿ ವ್ಯತ್ಯಾಸಮಾಡಿಕೊಳ್ಳಬೇಕು. ಅಥವಾ 'ಸುಪಾಂ ಸುಲುಕ್‌ಪೂರ್ವಸವರ್ಣಾಚ್ಛೇಯಾಡಾಡ್ಯಾಯಾಜಾಲಃ' ಎಂಬ ಸೂತ್ರದಿಂದ 'ತಮ್' 'ಏತಮ್' ಎಂಬಲ್ಲಿರುವ ಸುಪ್‌ಪ್ರತ್ಯಯಕ್ಕೆ ಲುಕ್ ಮಾಡಿದಾಗ 'ತತ್' 'ಏತತ್' ಎಂಬ ಪ್ರಾತಿಪದಿಕಗಳಷ್ಟೇ ಉಳಿಯುತ್ತವೆ. ಈ ಪ್ರಾತಿಪದಿಕಗಳನ್ನು ಶ್ರುತಿಯು ಉಲ್ಲೇಖ ಮಾಡಿದೆಯೆಂದೂ ಕೂಡ ತಿಳಿಯಬಹುದು. ಅಥವಾ ನಪುಂಸಕಲಿಂಗವೆಂಬುದು ಪ್ರತ್ಯೇಕ ಲಿಂಗವೇ ಅಲ್ಲವೆಂದು ವೈಯ್ಯಾಕರಣರ ನಿಯಮ. ಸ್ತ್ರೀಲಿಂಗ ಮತ್ತು ಪುಲ್ಲಿಂಗಗಳಲ್ಲಿ ಅನುಗತವಾದ ಸಾಮಾನ್ಯವೇ ನಪುಂಸಕಲಿಂಗವೆನಿಸುತ್ತದೆಂದು ಅವರು ಅಭಿಪ್ರಾಯ ಪಡುತ್ತಾರೆ. ಹೀಗಿರುವಾಗ ಪುಲ್ಲಿಂಗದಿಂದ ಪ್ರಸಕ್ತನಾದ ಪರಮಾತ್ಮನನ್ನು ನಪುಂಸಕಲಿಂಗದಿಂದ ಪರಾಮರ್ಶ ಮಾಡುವುದು ತಪ್ಪಾಗುವುದಿಲ್ಲ. ಹೀಗೆ ಅನೇಕ ಕಾರಣಗಳಿಂದ, 'ತದೇತತ್' ಎಂಬ ಶಬ್ದಗಳಿಂದ ಪರಮಾತ್ಮನನ್ನು ಪರಾಮರ್ಶ ಮಾಡುವುದು ಅಸಾಧುವಾಗುವುದಿಲ್ಲ.

ಅನುಕೃತ್ಯಧಿಕರಣ (೧-೩-೬)

**प्रकाशः** – व्यत्ययादिकल्पकस्य निरवकाशवाक्यशेषस्थलिङ्गबहुत्वस्य सत्त्वादित्यर्थः ।

ಮತ್ತು 'ನ ತತ್ರ ಸೂರ್ಯೋ ಭಾತಿ' ಎಂಬ ಉಪಸಂಹಾರದ ವಾಕ್ಯದಲ್ಲಿ ಪರಮಾತ್ಮನ ಅಸಾಧಾರಣಲಿಂಗಗಳು ಶ್ರುತವಾಗಿವೆ. ಅನೇಕ ಅಸಾಧಾರಣಧರ್ಮಗಳಿರುವುದಷ್ಟೇ ಅಲ್ಲದೇ, ಅವುಗಳು ನಿರವಕಾಶವೂ ಆಗಿವೆ. ಇಂತಹ ನಿರವಕಾಶತ್ವ ಮತ್ತು ಅನೇಕತ್ವವು ಲಿಂಗವ್ಯತ್ಯಾಸದ ಕಲ್ಪನೆಗೆ ಕಾರಣಗಳಾಗಿವೆ ಎಂದು ತಿಳಿಯಬೇಕು.

**प्रकाशः** – उक्तं च ''नपुंसकमनपुंसकेनैकवच्च'' इति सूत्रकैयटे ''स्थितिर्नपुंसकं सा च सर्वत्र विद्यत इति स्थितिरूपत्वेनैव स्त्रीपुंसयोर्विवक्षायां सिद्धस्त्रीपुंसयोर्नपुंसक प्रयोगः'' इति ।

'ತದೇತತ್' ಎಂಬ ನಪುಂಸಕಲಿಂಗದ ಶಬ್ದಗಳಿಂದ ಈಶ್ವರನನ್ನು ಪರಾಮರ್ಶ ಮಾಡುವುದು ತಪ್ಪಲ್ಲವೆಂಬುದು ಕೈಯಟನ ಪ್ರಕಾರವೂ ಸಿದ್ಧವಾಗುತ್ತದೆ. ಏಕೆಂದರೆ 'ನಪುಂಸಕಮನಪುಂಸಕೇನ್ಯೆಕವಚ್ಚ' ಎಂಬ ಸೂತ್ರದ ಕೈಯಟದಲ್ಲಿ ''ಸ್ಥಿತಿರ್ನಪುಂಸಕಂ ಸಾ ಚ ಸರ್ವತ್ರ ವಿದ್ಯತೇ ಇತಿ ಸ್ಥಿತಿರೂಪತ್ವೇನ್ಯೆವ ಸ್ತ್ರೀಪುಂಸಯೋರ್ವಿವಕ್ಷಾಯಾಂ ಸಿದ್ಧಸ್ತ್ರೀಪುಂಸಯೋರ್ನಪುಂಸಕಪ್ರಯೋಗಃ'' ಎಂದು ಹೇಳಲಾಗಿದೆ. ಅಂದರೆ ನಪುಂಸಕಶಬ್ದ ಹಾಗೂ ಅನಪುಂಸಕ ಶಬ್ದಗಳಿಗೆ ಏಕವದ್ಭಾವ ಬರುವ ಸಂದರ್ಭದಲ್ಲಿ ನಪುಂಸಕ ಲಿಂಗವೇ ಕೊನೆಯಲ್ಲಿ ಉಳಿಯುತ್ತದೆಂದು ಪಾಣಿನಿ ಸೂತ್ರದಲ್ಲಿ ಹೇಳಲಾಗಿದೆ. ಅದನ್ನೇ ವ್ಯಾಖ್ಯಾನ ಮಾಡುತ್ತಾ ಕೈಯಟಕಾರನು ಸ್ಥಿತಿರೂಪತ್ವದಿಂದಲೇ ಸ್ತ್ರೀಲಿಂಗ-ಪುಲ್ಲಿಂಗಗಳನ್ನು, ಹಾಗೂ ಕೇವಲ ಸ್ಥಿತಿಮಾತ್ರದಿಂದ ನಪುಂಸಕಲಿಂಗವನ್ನು ಶಬ್ದದಿಂದ ವ್ಯವಹರಿಸಬಹುದೆಂದು ಅಭಿಪ್ರಾಯಪಡುತ್ತಾನೆ. ಅದರಂತೆ ಪ್ರಕೃತದಲ್ಲಿ ಪುಲ್ಲಿಂಗನಾದ ಪರಮಾತ್ಮನನ್ನು ನಪುಂಸಕಲಿಂಗಶಬ್ದದಿಂದ ಪ್ರಯೋಗಿಸುವುದು ತಪ್ಪಾಗುವುದಿಲ್ಲ.

**प्रकाशः** – इदानीं ''यदनिर्देश्यं परमं सुखम्'' इत्यादिटीकोक्तमेव समाधिं व्यनक्ति – **अपि चेति** ।।

ಈಗ 'ಯದನಿರ್ದೇಶ್ಯಂ ಪರಮಂ ಸುಖಮ್' ಇತ್ಯಾದಿ ಟೀಕೆಯಲ್ಲಿ ಹೇಳಿದ ಸಮಾಧಾನವನ್ನೇ 'ಅಪಿಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಈ ಪಕ್ಷದಲ್ಲಿ ಲಿಂಗವ್ಯತ್ಯಾಸದ ಸಮಸ್ಯೆಯೇ ಬರುವುದಿಲ್ಲ.

**प्रकाशः** – ''यतो वाचो निवर्तन्ते । अप्राप्य मनसा सह । आनन्दं ब्रह्मणो विद्वान्'' इत्यादितैत्तिरीये सुखस्य वागाद्यगोचरत्वेनानिर्देश्यत्वं श्रूयते । वाजसनेये ''एष ब्रह्मलोकस्सम्राडिति होवाच'' इति प्रकृत्य ''एष परम आनन्दः । एतस्यैवानन्दस्यान्यानि भूतानि मात्रामुपजीवन्ति'' इति ब्रह्मानन्दस्य परमत्वं सिद्धमिति तदनुवादो यदनिर्देश्यमिति टीकायां दर्शित इत्यर्थः ।

ಪರಿಪೂರ್ಣಚಂದ್ರಿಕಾ

'ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿಯಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಸುಖಕ್ಕೆ ವಾಗಾದ್ಯಗೋಚರತ್ವೇನ ಅನಿರ್ದೇಶ್ಯತ್ವವನ್ನು ಹೇಳಲಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ 'ಏಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ' ಎಂದು ಪರಮಾತ್ಮನ ಬಗ್ಗೆ ಹೇಳಿ, ಮುಂದೆ 'ಏಷ ಪರಮ ಆನಂದಃ' । ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' ಇತ್ಯಾದಿಯಾಗಿ ಪರಮಾತ್ಮನ ಅನಂತವಾದ ಆನಂದದಲ್ಲಿ ಬಿಂದುಮಾತ್ರದ ಆನಂದವನ್ನಷ್ಟೇ ಉಳಿದವರೆಲ್ಲರೂ ಅನುಭವಿಸುತ್ತಾರೆ ಎಂದು ಪರಮಾತ್ಮನ ಆನಂದಕ್ಕೆ ಪರಮತ್ವವನ್ನು ಹೇಳಲಾಗಿದೆ. ಇದರ ಅನುವಾದವನ್ನೇ ಕಾಠಕೋಪನಿಷತ್ತು 'ಯದನಿರ್ದೇಶ್ಯಮ್' ಇತ್ಯಾದಿಯಾಗಿ ಮಾಡುತ್ತಿದೆ. ಅದನ್ನು ಟೀಕೆಯಲ್ಲಿ ತೋರಿಸಿರುತ್ತಾರೆಂದು ತಿಳಿಯಬೇಕು.

**प्रकाशः** – ''अदृष्टमव्यवहार्यमव्यपदेश्यं सुखं ज्ञानमोजो बलमिति ब्रह्मणस्तस्माद्ब्रह्मेत्याचक्षते'' इत्यादिरादिपदार्थः । तद्दृष्टान्तेनोपपादयति – **एवञ्च यथेति ।।**

ಗ್ರಂಥದಲ್ಲಿರುವ 'ಇತಾದೌ ಪ್ರಸಿದ್ಧಮ್' ಎಂಬ ಆದಿಪದದಿಂದ 'ಅದೃಷ್ಟಮವ್ಯವಹಾರ್ಯಮ್ ಅವ್ಯಪದೇಶ್ಯಂ ಸುಖಂ ಜ್ಞಾನಮೋಜೋ ಬಲಮಿತಿ ಬ್ರಹ್ಮಣಃ ತಸ್ಮಾದ್ಬ್ರಹ್ಮೇತ್ಯಾಕ್ಷತೇ'' ಇತ್ಯಾದಿ ಶ್ರುತಿಯನ್ನು ವಿವಕ್ಷಿಸಬೇಕು. ಪರಮಾತ್ಮನ ಸುಖವನ್ನು 'ತತ್' ಶಬ್ದದಿಂದ ಪರಾಮರ್ಶ ಮಾಡಿ, 'ಏತತ್' ಶಬ್ದದಿಂದ ಪರಮಾತ್ಮನನ್ನು ಪರಾಮರ್ಶ ಮಾಡುವುದು ತಪ್ಪಲ್ಲವೆಂಬುದನ್ನು ಪೂರ್ವಮೀಮಾಂಸೆಯ ದೃಷ್ಟಾಂತದಿಂದ ಉಪಪಾದನೆ ಮಾಡುತ್ತಿದ್ದಾರೆ 'ಏವಂಚ' ಇತ್ಯಾದಿ ಗ್ರಂಥದಿಂದ.

**प्रकाशः** – चतुर्थेऽध्याये ''एकनिष्पत्तेस्सर्वं समं स्यात्'' इत्याद्यपादीयाष्टमाधिकरणे ''तप्ते पयसि दध्यानयति सा वैश्वदेव्यामिक्षा वाजिभ्यो वाजिनम्'' इत्युदाहृत्य किमामिक्षायागेनैव दध्यानयनं युज्यतेऽथ वाजिनयागेनापीति संशये वैश्वदेवयागस्यामिक्षाद्रव्यकत्वात् तस्याश्च घनीभावाद् रूपभेदेन मधुराम्रादिरस-भेदेन च क्षीरादन्यत्वात् । तथा च दध्यानयनस्यासंयुक्तस्यैव विधानेन केवलं सामर्थ्यलिङ्गेनामिक्षार्थताया वक्तव्यत्वात् तादृशसामर्थ्यस्य वाजिनेऽपि सत्त्वादुभय-प्रयुक्तमानयनमिति प्राप्ते आस्तां तावदामिक्षापदम् । सा वैश्वदेवीति तच्छब्दपरामृष्टस्य हविष्ट्वात्पूर्ववाक्य आनयतेर्द्विकर्मकत्वेन प्रथमेन कर्मणा दध्ना, द्वितीयकर्मणः पयसो व्याप्यमानत्वेन प्रधानतया पयस एव तच्छब्दपरामृष्टत्वात्पय एव देवतासम्बन्धाद्धविः। तथा च मन्त्रः 'जुषतां युज्यं पयः' इति । पय एव घनीभूतमामिक्षेति आमिक्षापदं नित्यानुवादः । तत्सामानाधिकरण्यात्सेति स्त्रीलिङ्गम् । रसभेदादिकमन्यप्रयुक्तमिति वैश्वदेवयागप्रयुक्तं दध्यानयनमिति सिद्धान्तितम् ।

'ಏಕನಿಷ್ಪತ್ತೇಃ ಸರ್ವಂ ಸಮಂ ಸ್ಯಾತ್' (೪-೧-೮)[1]

'ತಪ್ತೇ ಪಯಸಿ ದಧ್ಯಾನಯತಿ ಸಾ ವೈಶ್ವದೇವ್ಯಾಮಿಕ್ಷಾ ವಾಜಿಭ್ಯೋ ವಾಜಿನಮ್' ಎಂಬ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. ಕುದಿಯುವಂತಹ ಹಾಲಿನಲ್ಲಿ ಮೊಸರನ್ನು ಹಾಕಿದಾಗ, ಹಾಲು ಒಡೆಯುತ್ತದೆ. ಒಡೆದಾಗ ಯಾವ ಗಟ್ಟಿಯಾದ ಭಾಗವಿದೆಯೋ, ಅದನ್ನು 'ಆಮಿಕ್ಷಾ' ಎನ್ನುತ್ತಾರೆ. ನೀರಾದ ಭಾಗವನ್ನು 'ವಾಜಿನಾ' ಎನ್ನುತ್ತಾರೆ. 'ಆಮೀಕ್ಷಾದಿಂದ ವಿಶ್ವೇದೇವತಾಕವಾದ ಯಾಗವನ್ನು ಮಾಡಬೇಕು. ವಾಜಿನ ದ್ರವ್ಯದಿಂದ ವಾಜಿಯಾಗವನ್ನು ಮಾಡಬೇಕು' ಎಂದು ಈ ಶ್ರುತಿಯು ಹೇಳುತ್ತಿದೆ.

ಬಿಸಿಯಾದ ಹಾಲಿನಲ್ಲಿ ಮೊಸರನ್ನು ಹಾಕಬೇಕೆಂದು 'ತಪ್ತೇ ಪಯಸಿ ದಧ್ಯಾನಯತಿ' ಎಂಬ ವಾಕ್ಯವು ಹೇಳುತ್ತಿದೆ. ಇಲ್ಲಿರುವ ದಧ್ಯಾನಯನವು ಆಮಿಕ್ಷಾದ್ರವ್ಯದ ಸಿದ್ಧಿಯಿಂದ, ಆಮಿಕ್ಷಾಯಾಗಕ್ಕೆ ಅಂಗವನ್ನಾಗಿ ಹೇಳಲ್ಪಟ್ಟಿದೆಯೋ? ಅಥವಾ ವಾಜಿನದ್ರವ್ಯದ ಸಿದ್ಧಿಯೂ ಸಹ ಇದರಿಂದಾಗುವುದರಿಂದ ವಾಜಿನಯಾಗಕ್ಕೂ ಕೂಡ ಅಂಗವಾಗಿದೆಯೋ? ಎಂದು ಸಂಶಯ ಬರುತ್ತದೆ.

ಪೂರ್ವಪಕ್ಷ - ದಧ್ಯಾನಯನವು ಉಭಯಪ್ರಯುಕ್ತವೇ ಆಗಿವೆ. ಅಂದರೆ ಆಮಿಕ್ಷಾಯಾಗ ಮತ್ತು

---

(१) **भाट्टसङ्ग्रहः –**

**अथ नवमं तप्ते पयसि दध्यानयनस्याऽमिक्षाप्रयुक्तताधिकरणम्(सूत्राणि २२-२४)**

**एकनिष्पत्तेः सर्वं समं स्यात् ॥ २२ ॥**

**(संसर्गरसनिष्पत्तेरामिक्षा वा प्रधानं स्यात् ॥२३॥ मुख्यशब्दाभिसंस्तवाच्च ॥२४॥)**

आश्रयिणामुभयार्थतावद्दध्यानयनस्याप्युभयार्थतेति शङ्कनात्सङ्गतिः । चातुर्मास्येषु वैश्वदेवपर्वणि श्रूयते 'तप्ते पयसि दध्यानयति, सा वैश्वदेव्यामिक्षा, वाजिभ्यो वाजिनम्' इति । तत्र किमामिक्षायागेनैव दध्यानयनं प्रयुज्यते उत वाजिनयागेनापीति **सन्देहः । पूर्वपक्षस्तु,** आमिक्षा हि वैश्वदेवयागस्य हविः । सा च क्षीराद्रूपरसाऽकृतिभेदादर्थान्तरम् । एवञ्च दधिसंसृष्टेन पयसा यथा आमिक्षाख्यं वस्त्वन्तरमुत्पद्यते तथा वाजिनमपीति दध्यानयनमुभयार्थं सदुभयप्रयुक्तं स्यादिति । तदाह सूत्रे, **एकस्मादेव** दध्यानयनादामिक्षा-वाजिनयोर्द्वयोरपि **निष्पत्तेः सर्वमामिक्षा** वाजिनञ्च दध्यानयनप्रयुक्तौ **सममिति । सिद्धान्तस्तु,** पयोरसस्य माधुर्यस्याऽमिक्षायामनुवृत्तेर्घनीभूतं पय एवाऽमिक्षा । न द्रव्यान्तरम् । 'यस्मिन् पयसि दधिप्रक्षेपः साऽऽमिक्षा' इति तच्छब्देन पय एव परामृश्य तस्याऽमिक्षात्वोक्तेः । आमिक्षायागपुरोनुवाक्यामन्त्रे ''जुषन्तां युज्यं पयः'' इति पयस एवोक्तेश्च । पयसो घनीभावार्थं पयःसंस्कारतया विहितं दध्यानयनं पयोऽर्थमेवेत्यामिक्षा-यागप्रयुक्तमेव दध्यानयनम् । न वाजिनप्रयुक्तमिति । **फलन्तु, पूर्वपक्षे** दधिधर्मातिदेश आमिक्षायाम् । **सिद्धान्ते** तु पयोधर्मतेति ।

**इति नवमं तप्ते पयसि दध्यानयनस्याऽमिक्षाप्रयुक्तताधिकरणम् (सूत्राणि २२-२४)**

ವಾಜಿನಯಾಗಗಳೆರಡಕ್ಕೂ ಅಂಗವಾಗಿದೆ. ಅದು ಹೀಗೆ - ವೈಶ್ವದೇವ ಯಾಗವು 'ಆಮಿಕ್ಷಾ' ಎಂಬ ದ್ರವ್ಯವುಳ್ಳದ್ದು, 'ಆಮಿಕ್ಷಾ' ದ್ರವ್ಯವು ಕ್ಷೀರಕ್ಕಿಂತ ಭಿನ್ನವಾಗಿದೆ. ಏಕೆಂದರೆ ಕ್ಷೀರದಲ್ಲಿ ದ್ರವರೂಪತ್ವವಿದೆ. ಆಮಿಕ್ಷಾ ದ್ರವ್ಯದಲ್ಲಿ ಘನರೂಪತ್ವವಿದೆ. ಹೀಗೆ ರೂಪಭೇದವಿರುವ ಪ್ರಯುಕ್ತ; ಮತ್ತು ಕ್ಷೀರದಲ್ಲಿ ಮಾಧುರ್ಯ ರಸ, ಆಮಿಕ್ಷಾದ್ರವ್ಯದಲ್ಲಿ ಆಮ್ರರಸ. ಹೀಗೆ ರಸಭೇದವಿರುವುದರಿಂದಲೂ ಆಮಿಕ್ಷಾದ್ರವ್ಯವನ್ನು ಕ್ಷೀರಕ್ಕಿಂತ ಭಿನ್ನವೆಂದು ಹೇಳಬೇಕು. 'ವೈಶ್ವದೇವ್ಯಾಮಿಕ್ಷಾ' ಎಂಬ ವಾಕ್ಯದಿಂದ ಆಮಿಕ್ಷಾ ದ್ರವ್ಯಕ್ಕೆ ವೈಶ್ವದೇವ ಎಂಬ ಪದದಿಂದ ದೇವತಾ ಸಂಬಂಧವನ್ನು ಹೇಳಲಾಗಿದೆ. 'ತಪ್ತೇ ಪಯಸಿ' ಎಂಬ ವಾಕ್ಯದಲ್ಲಿ ದಧ್ಯಾನಯನಕ್ಕೆ ಯಾವುದೇ ಫಲವಿಶೇಷಸಂಯೋಗವನ್ನು ವಿಧಾನ ಮಾಡಿರುವುದಿಲ್ಲ. ಹೀಗಿರುವಾಗ ದಧ್ಯಾನಯನವು 'ಆಮಿಕ್ಷಾ' ಎಂಬ ದ್ರವ್ಯದ ಸಿದ್ಧಿಗೋಸ್ಕರವೆಂದು ಹೇಗೆ ನಿರ್ಣಯಿಸುತ್ತೀರಿ ಎಂದರೆ, 'ಸಾಮರ್ಥ್ಯ' ಎಂಬ ಲಿಂಗದ ಬಲದಿಂದ ಸಿದ್ಧವಾಗುತ್ತದೆಂದು ಹೇಳಬೇಕು. ಇದೇ ಸಾಮರ್ಥ್ಯಲಿಂಗವು ವಾಜಿನದ್ರವ್ಯದಲ್ಲಿಯೂ ಕೂಡ ಇರುತ್ತದೆ. ಆದ್ದರಿಂದ ದಧ್ಯಾನಯನಕ್ಕೆ ಆಮಿಕ್ಷಾದ್ರವ್ಯದ ಸಿದ್ಧಿಯಷ್ಟೇ ಪ್ರಯೋಜನವಲ್ಲ. ವಾಜಿನದ್ರವ್ಯದ ಸಿದ್ಧಿಯೂ ಕೂಡ ಪ್ರಯೋಜನವಾಗಿದೆ ಎಂದು ಹೇಳಬೇಕಾಗುತ್ತದೆ. ಆದ್ದರಿಂದ ವೈಶ್ವದೇವ ಯಾಗಕ್ಕೆ ಅಂಗವಾದಂತೆ ವಾಜಿನಯಾಗಕ್ಕೂ ಕೂಡ ಅಂಗವಾಗುತ್ತದೆ.

ಸಿದ್ಧಾಂತ - ದಧ್ಯಾನಯನವು ಆಮಿಕ್ಷಾದ್ರವ್ಯದ ಸಿದ್ಧಿಗೋಸ್ಕರವೇ ಆಗಿರುತ್ತದೆ. 'ಸಾ ವೈಶ್ವದೇವೀ ಆಮಿಕ್ಷಾ' ಎಂಬಲ್ಲಿರುವ 'ಸಾ' ಎಂಬ ಪದವು ಪಯಸ್ಸನ್ನೇ ಪರಾಮರ್ಶೆ ಮಾಡುತ್ತಿದೆ. ಏಕೆಂದರೆ ಹಿಂದೆ 'ತಪ್ತೇ ಪಯಸಿ' ಎಂಬಲ್ಲಿ 'ಪಯಸ್' ಪ್ರಕೃತವಾಗಿದೆ. ಇಂತಹ ಪಯಸ್ಸನ್ನು ಪರಾಮರ್ಶೆ ಮಾಡಿದಾಗ, ವೈಶ್ವದೇವಯಾಗಕ್ಕೂ ಕೂಡ, ಪಯಸ್ಸೇ ದ್ರವ್ಯವಾಗುತ್ತದೆ. ಅಂದರೆ ವಿಕೃತವಾದ ಪಯಸ್ಸು ದ್ರವ್ಯವಾಗಿದೆ ಎಂದರ್ಥ. 'ಆನಯತಿ' ಎಂಬ ಕ್ರಿಯಾಪದವು ದ್ವಿಕರ್ಮಕವಾಗಿದೆ. ನಿಞ್ ಧಾತುವಿದ್ದಾಗ ಎರಡು ಕರ್ಮಗಳಿರುತ್ತವೆ. ಪ್ರಕೃತ 'ದಧಿ' ಎಂಬುದು ಒಂದು ಕರ್ಮ. ಪಯಸ್ಸೆಂಬುದು ಮತ್ತೊಂದು ಕರ್ಮ. ಪಯಸ್ಸು ಕರ್ಮವಾಗಿರುವುದರಿಂದ 'ಪಯಃ ದಧಿ ಆನಯತಿ' ಎಂದೇ ಹೇಳಬೇಕು. ಹೀಗೆ ಹೇಳಿದಾಗ ಪಯಸ್ಸು ಪ್ರಧಾನ ಕರ್ಮವಾಗುತ್ತದೆ. ದಧಿಯು ಅಪ್ರಧಾನಕರ್ಮವಾಗುತ್ತದೆ. 'ಸಾ' ಎಂಬ ಸರ್ವನಾಮಶಬ್ದದಿಂದ ಪ್ರಧಾನವಾದ ಪಯಸ್ಸನ್ನೇ ಪರಾಮರ್ಶೆ ಮಾಡಬೇಕು ಹೊರತು, ಅಪ್ರಧಾನವಾದ ದಧಿಯನ್ನು ಪರಾಮರ್ಶೆ ಮಾಡಲು ಬರುವುದಿಲ್ಲ. ಹೀಗೆ ಪರಾಮರ್ಶೆ ಮಾಡಲ್ಪಟ್ಟ ಪಯಸ್ಸನ್ನು ವೈಶ್ವದೇವಯಾಗದ ದ್ರವ್ಯವೆಂದು ಹೇಳಬೇಕು. ಅಂದರೆ ವಿಕೃತವಾದ ಪಯಸ್ಸು ದ್ರವ್ಯವಾಗಿದೆ ಎಂದರ್ಥ. ದಧ್ಯಾನಯನವು ಕೇವಲ ಆಮಿಕ್ಷಾದ್ರ್ಯವದ ಸಿದ್ಧಿಗಾಗಿ ಎಂದು ಹೇಳಿದಂತಾಗುತ್ತದೆ. ಆದ್ದರಿಂದಲೇ ಆಮಿಕ್ಷಾದ್ರವ್ಯಕ್ಕೆ ಸಂಬಂಧಪಟ್ಟ ಮಂತ್ರ ಹೀಗಿದೆ 'ಜುಷತಾಂ ಯುಜ್ಯಂ ಪಯಃ' ಎಂದು. ಇದರಿಂದ 'ಪಯಸ್ಸು' ಎಂಬುದೇ ದ್ರವ್ಯವಾಗಿದೆಯೆಂದು ಸಿದ್ಧವಾಗುತ್ತದೆ. ಇಂತಹ ಪಯಸ್ಸೇ ಘನೀಭೂತವಾದ 'ಆಮಿಕ್ಷಾ' ಎನಿಸಿಕೊಳ್ಳುತ್ತದೆ. ಆದ್ದರಿಂದ 'ಆಮಿಕ್ಷಾ' ಪದವು ಅದನ್ನೇ ಅನುವಾದ ಮಾಡುತ್ತಿದೆಯೆಂದು ತಿಳಿಯಬೇಕು. ಇಂತಹ ಪಯಸ್ಸಿನ ಸಮಾನಾಧಿಕರಣ್ಯದಿಂದಲೇ 'ಸಾ' ಎಂಬ ಸ್ತ್ರೀಲಿಂಗ ಪ್ರಯೋಗವೂ ಯುಕ್ತವಾಗುತ್ತದೆ. ಹಾಗಾದರೆ ರೂಪಭೇದ, ರಸಭೇದಗಳಿಂದ ಪಯಸ್ಸೇ ಬೇರೆ, ಆಮಿಕ್ಷಾ ದ್ರವ್ಯವೇ ಬೇರೆ ಎಂದು ಪೂರ್ವಪಕ್ಷದಲ್ಲಿ ಹೇಳಿದ್ದೇವಲ್ಲವೇ ಎಂದು ಪ್ರಶ್ನಿಸಬಾರದು. ಏಕೆಂದರೆ ರೂಪಭೇದ ಹಾಗೂ ರಸಭೇದಗಳನ್ನು ವಿಕಾರ ಪ್ರಯುಕ್ತವಾಗಿ ಕೂಡಿಸಬಹುದು. ಆದ್ದರಿಂದ ಪಯಸ್ಸು ವೈಶ್ವದೇವಯಾಗಕ್ಕೆ

ದ್ರವ್ಯವೆಂದು ಸಿದ್ಧವಾಗುವ ಕಾರಣ. ಬೇರೆ ಮಾರ್ಗವಿಲ್ಲದೆ, ದಧ್ಯಾನಯನವೂ ಕೂಡ ಆಮಿಕ್ಷಾದ್ರ್ಯವದ ವಿಕಾರಕ್ಕಾಗಿ ಎಂದು ಪ್ರಯೋಜನವನ್ನು ಹೇಳಿದಂತಾಗುತ್ತದೆ. ಇಷ್ಟು ಸಿದ್ಧಾಂತ.

**प्रकाशः** – अत्रत्येन न्यायेनाष्टमस्य द्वितीये पादे ''आमिक्षोभयभाव्यत्वादुभय-विकारस्स्यात्'' इति चतुर्थेऽधिकरणे

पयसस्तु प्रधानत्वं तत्र कर्मसमाश्रितः ।
दध्ना हि नीयमानेन तदेव व्याप्यते पयः ।

कर्मतोऽपि प्रधानत्वं तस्य स्यात्सम्प्रदानवत् ।
सर्वनाम्ना परामर्शस्तस्यैवातोऽवकल्पते ।।

इत्युक्तं शास्त्रदीपिकायाम् ।

ಈ ಪೂರ್ವಮೀಮಾಂಸಾಧಿಕರಣದ ನ್ಯಾಯದಿಂದಲೇ ಎಂಟನೇ ಅಧ್ಯಾಯದ ಎರಡನೇ ಪಾದದ ನಾಲ್ಕನೇ ಅಧಿಕರಣದಲ್ಲಿ 'ಆಮಿಕ್ಷೋಭಯಭಾವ್ಯತ್ವಾದುಭಯವಿಕಾರಃ ಸ್ಯಾತ್' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಶಾಸ್ತ್ರದೀಪಿಕೆಯಲ್ಲಿ ಹೀಗೆ ಹೇಳಲಾಗಿದೆ -

ಪಯಸಸ್ತು ಪ್ರಧಾನತ್ವಂ ತತ್ರ ಕರ್ಮಸಮಾಶ್ರಿತಃ।
ದಧ್ನಾ ಹಿ ನೀಯಮಾನೇನ ತದೇವ ವ್ಯಾಪ್ಯತೇ ಪಯಃ।
ಕರ್ಮತೋಽಪಿ ಪ್ರಧಾನತ್ವಂ ತಸ್ಯ ಸ್ಯಾತ್ ಸಂಪ್ರದಾನವತ್।
ಸರ್ವನಾಮ್ನಾ ಪರಾಮರ್ಶಸ್ತಸ್ಯೈವಾತೋಽವಕಲ್ಪತೇ॥

'ತಪ್ತೇ ಪಯಸಿ ದಧ್ಯಾನಯತಿ' ಎಂಬಲ್ಲಿ 'ದಧಿ' ಎಂಬುದು ಹೇಗೆ ಕರ್ಮವಾಗಿದೆಯೋ ಅದರಂತೆ ಪಯಸ್ಸೂ ಕೂಡ ಕರ್ಮವಾಗಿದೆ. ಕರ್ಮವಾಚಕ ವಿಭಕ್ತಿ ಇಲ್ಲದಿದ್ದರೂ ಕೂಡ ಪ್ರಧಾನವಾದ ಕರ್ಮವೆಂದೇ ಇದನ್ನು ತಿಳಿಯಬೇಕು. 'ವಿಪ್ರಾಯ ಗಾಂ ದಧಾತಿ' ಎಂಬಲ್ಲಿ ವಿಪ್ರನು ಪ್ರಧಾನ ಕರ್ಮನಾಗಿದ್ದರೂ ವಿಪ್ರಶಬ್ದಕ್ಕೆ ಸಂಪ್ರದಾನ ಸಂಜ್ಞೆ ಬಂದು ಚತುರ್ಥಿ ವಿಭಕ್ತಿಯನ್ನು ಹೇಗೆ ಹೇಳುತ್ತಾರೋ, ಅದರಂತೆ ಇಲ್ಲಿಯೂ ಕೂಡ ಇದನ್ನು ತಿಳಿಯಬೇಕು. ಇಂತಹ ಪ್ರಧಾನವಾದ ಪಯಸ್ಸನ್ನೇ 'ಸಾ' ಎಂದು ಪರಾಮರ್ಶ ಮಾಡಲಾಗಿದೆ.

**प्रकाशः** – तथा च तत्र यथा पयःपरत्वेऽपि स्त्रीलिङ्गता तद्वदत्रापीत्यर्थः ।

ಪೂರ್ವಮೀಮಾಂಸೆಯ ಈ ದೃಷ್ಟಾಂತದಲ್ಲಿ ಯಾವ ರೀತಿಯಾಗಿ 'ಸಾ' ಎಂಬ ಸರ್ವನಾಮ ಶಬ್ದವು ನಪುಂಸಕಲಿಂಗದಲ್ಲಿರುವ ಪಯಸ್ಸನ್ನು ಪರಾಮರ್ಶ ಮಾಡುತ್ತಿದ್ದರೂ, ಸ್ತ್ರೀಲಿಂಗದಲ್ಲಿ ಪ್ರಯುಕ್ತವಾಗಿದೆಯೋ, ಅದರಂತೆ ಇಲ್ಲಿಯೂ ಕೂಡ ಪರಮಾತ್ಮನನ್ನು ಪರಾಮರ್ಶ ಮಾಡುವ 'ಏತತ್' ಶಬ್ದವನ್ನೂ ನಪುಂಸಕಲಿಂಗದಲ್ಲಿ ಪ್ರಯೋಗ ಮಾಡಿದ್ದು ತಪ್ಪಾಗುವುದಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः**–नन्वेवमुद्देश्यविधेयव्यत्ययेन लिङ्गसमर्थनं भाष्यानुक्तम् । काठकभाष्यविरुद्धं च । तत्र ''तदेतदेव भगवद्रूपं परमं सुखम् । ज्ञानिसुखं तु विष्णुमात्रम्'' इत्युक्तेरित्यतो योजनान्तरमेतदिति भावेन टीकोक्तयोजन(नाया)स्य मूलमाह – **तदुक्तमिति** ।।

ಇಲ್ಲಿಯತನಕ ವ್ಯಾಖ್ಯಾನ ಮಾಡಿದಂತೆ 'ಯತ್ ಅನಿರ್ದೇಶ್ಯಂ ಪರಮಂ ಸುಖಂ ತದ್ ಬ್ರಹ್ಮಣಃ ರೂಪಮ್' ಎಂದು ಶ್ರುತಿಯನ್ನು ಯೋಜನೆ ಮಾಡಿದಂತಾಯಿತು. ಆದರೆ ಈ ಯೋಜನೆಯನ್ನು ಸೂತ್ರಭಾಷ್ಯದಲ್ಲಿಯೂ ಹೇಳಿಲ್ಲ. ಕಾಠಕಭಾಷ್ಯದಲ್ಲಂತೂ ಬೇರೆ ರೀತಿಯಲ್ಲಿಯೇ ಯೋಜನೆ ಹೇಳಿದ್ದರಿಂದ, ಅದರ ವಿರೋಧವೂ ಕೂಡ ಬರುತ್ತದೆ. ಕಾಠಕಭಾಷ್ಯದ ವಾಕ್ಯ ಹೀಗಿದೆ - 'ತದೇತದೇವ ಭಗವದ್ರೂಪಂ ಪರಮಂ ಸುಖಮ್ । ಜ್ಞಾನಿಸುಖಂ ತು ವಿಷ್ಣುಮಾತ್ರಮ್' 'ತದೇದತ್' = ಪರಮಾತ್ಮನ ಸ್ವರೂಪವು, ಪರಮಸುಖಸ್ವರೂಪವಾಗಿದೆ ಎಂದು 'ತದೇತತ್' ಎಂಬೆರಡನ್ನು ಉದ್ದೇಶವನ್ನಾಗಿಟ್ಟುಕೊಂಡು ಪರಮಸುಖವನ್ನು ವಿಧೇಯವನ್ನಾಗಿ ಹೇಳಿದ್ದಾರೆ. ಆದರೆ ಪ್ರಕೃತ ಗ್ರಂಥದಲ್ಲಿ 'ಯತ್ ಅನಿರ್ದೇಶ್ಯಂ ಸುಖಂ ತತ್ ಪರಮಾತ್ಮಸ್ವರೂಪಮ್' ಎಂದು ಸುಖವನ್ನೇ ಉದ್ದೇಶವನ್ನಾಗಿ ಮಾಡಿ, ಪರಮಾತ್ಮನ ಸ್ವರೂಪವನ್ನು ವಿಧೇಯವನ್ನಾಗಿ ಮಾಡಲಾಗಿದೆ. ಆದ್ದರಿಂದ ಇದು ಕಾಠಕಭಾಷ್ಯಕ್ಕೆ ವಿರುದ್ಧವೂ ಕೂಡ ಆಗಿದೆಯಲ್ಲವೇ? ಎಂಬ ಪ್ರಶ್ನೆಗೆ ಕಾಠಕಭಾಷ್ಯದಲ್ಲಿ ಹೇಳಿದ್ದು ಮತ್ತೊಂದು ಬಗೆಯ ಯೋಜನೆ. ಇಲ್ಲಿ ಹೇಳಿರುವ ಕ್ರಮವು ಇನ್ನೊಂದು ರೀತಿಯ ಯೋಜನೆ. ಆದ್ದರಿಂದ ವಿರೋಧವಿಲ್ಲ ಎಂದು ತಿಳಿಯಬೇಕು. ಅಂದರೆ ಗ್ರಂಥದಲ್ಲಿ ಹೇಳಿರುವ ಯೋಜನೆಯನ್ನು ಟೀಕೆಯಲ್ಲಿ ಹೇಳಿದ್ದಾರೆ. ಆ ಟೀಕೆಗೂ ಕೂಡ ನ್ಯಾಯವಿವರಣವೇ ಮೂಲವಾಗಿದೆಯೆಂದು 'ತದುಕ್ತಮ್' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – काठकभाष्योक्तयोजनायां तदेतच्छब्दयोरर्थं वदन्नेव नपुंसकोपपत्तिमाह – **काठकभाष्ये त्विति** ।

ಕಾಠಕಭಾಷ್ಯದಲ್ಲಿ ಮಾಡಿದ ಯೋಜನೆಯನ್ನು ಅನುಸರಿಸಿ 'ತದೇತತ್' ಶಬ್ದಗಳ ಅರ್ಥವನ್ನು ಹೇಳುತ್ತಾ, ನಪುಂಸಕಲಿಂಗವೂ ಕೂಡ ಉಪಪನ್ನವಾಗುತ್ತದೆಂದು 'ಕಾಠಕಭಾಷ್ಯೇತು' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**गुरुराजीयम्** – दूरोक्तग्रहणे बिभ्यतोऽतिदूरोक्तग्रहणे कथं न भीतिरिति टीकावाक्यमप्रतीतेर्व्याचष्टे – **किञ्चेति** ।। अस्मिन्पक्षे लिङ्गव्यत्ययो भवतीतीममेवा-स्वरसं दृष्ट्वा पक्षान्तरमाह – **अपि चेति** ।। अनेन तदेतच्छब्दयोर्द्वयोर्मध्ये एकस्योद्देश्यत्वावश्यंभावेन द्वयोर्नपुंसकलिङ्गत्वायोग इति परिहृतं भवति । नन्वेवमपि रूपशब्दाध्याहारो दोष इत्यत आह – **एकं रूपं बहुधा यः करोतीति प्रकृतेश्वररूपपरत्वादिति** ।।



'ಕಥಂ ನು ತದ್ವಿಜಾನೀಯಾತ್' ಎಂಬಲ್ಲಿರುವ 'ತತ್' ಶಬ್ದಕ್ಕೆ ಸನ್ನಿಹಿತ ಪರತ್ವವನ್ನು ಹೇಳುವುದಕ್ಕಾಗಿ ಜ್ಞಾನಿಸುಖವೇ ಆನುಕೂಲ್ಯೇನ ಗೃಹ್ಯಮಾಣವೆಂದು ಪೂರ್ವಪಕ್ಷಿಯು ಆಗ್ರಹಿಸುತ್ತಾನೆ. ಅದಕ್ಕಾಗಿ 'ತಮೇವ ಭಾಂತಮ್' ಎಂಬಲ್ಲಿರುವ 'ತಮ್' ಎಂಬ ಶಬ್ದವು ವ್ಯವಹಿತವಾದ ಈಶ್ವರಪರವಾಗಿದೆಯೆಂದೂ ಕೂಡ ಅವನು ಒಪ್ಪುತ್ತಾನೆ. ನಾವು 'ತಮೇವ ಭಾಂತಮ್' ಇತ್ಯಾದಿ ವಾಕ್ಯದಲ್ಲಿ ಸನ್ನಿಹಿತವಾದದ್ದು ಆನುಕೂಲ್ಯೇನ ಗೃಹ್ಯಮಾಣವಾಗಿರುವುದರಿಂದ 'ಕಥಂ ನು ತದ್ವಿಜಾನೀಯಾಂ' ಎಂಬಲ್ಲಿರುವ 'ತತ್' ಶಬ್ದಕ್ಕೆ ವ್ಯವಹಿತ ಈಶ್ವರಪರತ್ವವನ್ನು ಒಪ್ಪುತ್ತೇವೆ. ಈ ಎರಡು ಪಕ್ಷಗಳಲ್ಲಿ ಯಾವುದನ್ನು ಸ್ವೀಕರಿಸಬೇಕು ಎಂದರೆ, 'ತತ್ರ' 'ತಸ್ಯ' 'ತಮ್' ಎಂಬ ಮೂರು ಸ್ಥಳಗಳ ಮಧ್ಯದಲ್ಲಿ 'ತಮ್' ಎಂಬಲ್ಲಿ ಮಾತ್ರ ಪುಲ್ಲಿಂಗ ಇರುವುದನ್ನು ನೋಡಿ, ಅದು ಆನುಕೂಲ್ಯೇನ ಗೃಹ್ಯಮಾಣಪರವಲ್ಲವೆಂದು ಅದಕ್ಕೆ ವ್ಯವಹಿತವಾದ ಈಶ್ವರಪರತ್ವವನ್ನು ಪೂರ್ವಪಕ್ಷಿಯು ಒಪ್ಪುತ್ತಾನೆ. ಆದರೆ ನಾವು 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ಸ್ಥಳಗಳಲ್ಲಿರುವ 'ತತ್ರ' 'ತಸ್ಯ' 'ತಮ್' ಇತ್ಯಾದಿ ಪದಗಳಿಗೆ, ಸನ್ನಿಹಿತವಾದ ಆನುಕೂಲ್ಯೇನ ಗೃಹ್ಯಮಾಣಪರತ್ವವನ್ನೇ ಒಪ್ಪುತ್ತೇವೆ. ಆದರೆ 'ತದೇತದಿತಿ ಮನ್ಯಂತೇ' ಎಂಬಲ್ಲಿರುವ 'ತದೇತತ್' ಶಬ್ದಗಳಿಗೆ ವ್ಯವಹಿತವಾದ ಈಶ್ವರ ಪರತ್ವವನ್ನೇ ಸಾಧಿಸುತ್ತೇವೆ. ಈಶ್ವರ ಪರವಾದಾಗ ನಪುಂಸಕಪದ ಪ್ರಯೋಗವು ಹೇಗೆ ಉಪಪನ್ನವಾಗುತ್ತದೆ ? ಎಂಬುದು ಮುಂದಿನ ಪ್ರಶ್ನೆ. ಇದಕ್ಕೆ ಹೀಗೆ ಉತ್ತರಿಸಬೇಕು. 'ಯದ್ಬ್ರಹ್ಮ ಅನಿರ್ದೇಶ್ಯಮ್' 'ಯತ್ ಬ್ರಹ್ಮಣಃ ಅನಿರ್ದೇಶ್ಯಂ ಸುಖಂ ಸ್ವರೂಪಂ ತದ್ ಬ್ರಹ್ಮಣಃ ಸ್ವರೂಪಮ್' ಎಂದು ಯೋಜನೆಯನ್ನು ಮಾಡಬೇಕು. ಹೀಗೆ ಯೋಜನಾಭೇದದಿಂದ ನಪುಂಸಕಲಿಂಗದ ಪ್ರಯೋಗದ ವಿರೋಧವನ್ನು ಪರಿಹರಿಸಬಹುದು. ಆದ್ದರಿಂದ 'ತದೇತತ್' ಶಬ್ದಗಳು ಈಶ್ವರಪರವಾದರೆ ಏನೂ ಬಾಧಕವಿರುವುದಿಲ್ಲ.

• • • • •

## ಈಶ್ವರನಲ್ಲಿ ವ್ಯವಹಿತತ್ವ ದೋಷ ಪರಿಹಾರ

### तात्पर्यचन्द्रिका

**नापि व्यवहितपरत्वम् । 'तेषां सुखम्' इति वाक्यादुत्तरस्मिन् । ''नित्यो नित्यानां चेतनश्चेतनानाम्'' इति वाक्य ईश्वरस्य सन्निहितत्वात् ।**

ಅನುವಾದ - ವಿಚಾರ ಮಾಡಿದರೆ, 'ತದೇತತ್' ಎಂಬ ಶ್ರುತಿಯು ಈಶ್ವರ ಪರಾಮರ್ಶಕವಾದರೂ ವ್ಯವಹಿತ ಪರವಾಗುವುದಿಲ್ಲ. ಏಕೆಂದರೆ 'ತೇಷಾಂ ಸುಖಮ್' ಎಂಬ ಯಾವ ವಾಕ್ಯದಿಂದ ಜ್ಞಾನಿಸುಖವು ಪ್ರಕೃತವಾಗಿದೆಯೆಂದು ಪೂರ್ವಪಕ್ಷಿಗಳು ಹೇಳುತ್ತಿದ್ದಾರೋ, ಆ ವಾಕ್ಯಕ್ಕಿಂತಲೂ ಹತ್ತಿರದಲ್ಲಿರುವ 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್' ಎಂಬ ವಾಕ್ಯದಿಂದ ಈಶ್ವರನು

ಪ್ರಕೃತನಾಗಿದ್ದಾನೆ. ಆದ್ದರಿಂದ ಜ್ಞಾನಿಸುಖಕ್ಕಿಂತಲೂ ಈಶ್ವರನು ಅತ್ಯಂತ ಹತ್ತಿರದಲ್ಲಿ ಪ್ರಸಕ್ತನಾದ್ದರಿಂದ ಈಶ್ವರಪರವಾದ 'ತದೇತತ್' ಇತ್ಯಾದಿ ಶ್ರುತಿಯು ಸನ್ನಿಹಿತಪರವೇ ಆಗುತ್ತವೆ.

**अस्तु वा "तेषां सुखम्" इति वाक्यात्पूर्वस्मिन् "एको वशी" इत्यादि-व्यवहितवाक्ये प्रकृतेश्वरपरामर्शः । तथापि न दोषः ।**

ಅಥವಾ 'ತೇಷಾಂ ಸುಖಮ್' ಎಂಬ ವಾಕ್ಯಕ್ಕಿಂತಲೂ ಹಿಂದಿರುವ 'ಏಕೋ ವಶೀ ಸರ್ವಭೂತಾಂತರಾತ್ಮಾ' ಎಂಬ ವಾಕ್ಯದಿಂದಲೇ ಈಶ್ವರನು ಪ್ರಕೃತನಾಗಿದ್ದಾನೆಂದೇ ಒಪ್ಪೋಣ. ಈ ಪಕ್ಷದಲ್ಲಿ 'ತದೇತತ್' ಎಂಬ ವಾಕ್ಯವು ವ್ಯವಹಿತ ಪರವಾಗಬಹುದು. ವ್ಯವಹಿತನಾಗಿ ಪ್ರಕೃತನಾದ ಈಶ್ವರನನ್ನು ಹೀಗೆ ಪರಾಮರ್ಶ ಮಾಡಿದರೂ ಕೂಡ ತಪ್ಪಾಗುವುದಿಲ್ಲ. ಏಕೆಂದರೆ -

**सन्निकृष्टमयोग्यं चेद्योग्यं दूरेऽपि संस्थितम् ।**
**गृह्यते सन्निधानाद्धि योग्यतैव बलीयसी ॥ १ ॥**

ಸನ್ನಿಕೃಷ್ಟಮಯೋಗ್ಯಂ ಚೇದ್ಯೋಗ್ಯಂ ದೂರೇऽಪಿ ಸಂಸ್ಥಿತಮ್ ।
ಗೃಹ್ಯತೇ ಸನ್ನಿಧಾನಾದ್ಧಿ ಯೋಗ್ಯತೈವ ಬಲೀಯಸೀ ॥೧॥

ಹತ್ತಿರದಲ್ಲಿರುವುದು ಅಯೋಗ್ಯವಾಗಿದ್ದರೆ, ಪರಾಮರ್ಶ ಮಾಡಲು ಅರ್ಹವಾಗುವುದಿಲ್ಲ. ದೂರದಲ್ಲಿದ್ದರೂ ಕೂಡ ಯೋಗ್ಯವಾಗಿದ್ದಲ್ಲಿ, ಪರಾಮರ್ಶ ಮಾಡಲು ಅರ್ಹವಾಗುತ್ತದೆ. ಏಕೆಂದರೆ ಸನ್ನಿಧಿ ಪ್ರಮಾಣಕ್ಕಿಂತಲೂ ಯೋಗ್ಯತಾಪ್ರಮಾಣವು ಬಲಿಷ್ಠವಾಗಿದೆ.

ಆದ್ದರಿಂದ 'ಏಕೋ ವಶೀ' ಎಂಬ ವಾಕ್ಯವು ದೂರದಲ್ಲಿದ್ದರೂ ಈಶ್ವರವಿಷಯದಲ್ಲಿ ಯೋಗ್ಯತಾದಿಗಳನ್ನು ಹೊಂದಿರುವ ಕಾರಣ ಪರಾಮರ್ಶಕ್ಕೆ ಅರ್ಹವಾಗಿದೆ. 'ತೇಷಾಂ ಸುಖಮ್' ಎಂಬ ವಾಕ್ಯವು ಹತ್ತಿರದಲ್ಲಿದ್ದರೂ ಯೋಗ್ಯತಾದಿಗಳು ಇಲ್ಲದ ಕಾರಣ ಪರಾಮರ್ಶಕ್ಕೆ ಅಯೋಗ್ಯವಾಗಿದೆ.

**उक्तं हि जैमिनिसूत्रे "आनन्तर्यमचोदना" इति । वार्तिके च**

**यस्य येनार्थसम्बन्धो दूरस्थेनापि तेन सः ।**
**अर्थतो ह्यसमर्थानामानन्तर्यमकारणम् ॥ इति ।**

ಇದನ್ನೇ 'ಆನಂತರ್ಯಮಚೋದನಾ' ಎಂಬ ಜೈಮಿನಿ ಸೂತ್ರದಲ್ಲಿಯೂ ಸಮರ್ಥಿಸಿರುತ್ತಾರೆ. ಆ ಜೈಮಿನಿ ಸೂತ್ರದ ವಾರ್ತಿಕದಲ್ಲಿ ಹೀಗೆ ಹೇಳಲಾಗಿದೆ -

ಯಸ್ಯ ಯೇನಾರ್ಥಸಂಬಂಧೋ ದೂರಸ್ಥೇನಾಪಿ ತೇನ ಸಃ ।
ಅರ್ಥತೋ ಹ್ಯಸಮರ್ಥಾನಾಮಾನಂತರ್ಯಮಕಾರಣಮ್ ॥
ಅನುಕೃತ್ಯಧಿಕರಣ (೧-೩-೬)

ಯಾವ ಶಬ್ದಕ್ಕೆ ಯಾವ ಅರ್ಥದ ಜೊತೆ ಸಂಬಂಧವು ಯೋಗ್ಯವಾಗಿರುತ್ತದೋ ಆ ಶಬ್ದವು ದೂರದಲ್ಲಿದ್ದರೂ ಕೂಡ ಯೋಗ್ಯತಾದಿಗಳು ಇದ್ದಲ್ಲಿ ಆ ಶಬ್ದದಿಂದ ಆ ಅರ್ಥವನ್ನು ಪರಾಮರ್ಶ ಮಾಡಬಹುದು. ಆದರೆ ಯೋಗ್ಯತಾದಿಗಳು ಇಲ್ಲದಿದ್ದಲ್ಲಿ, ಹತ್ತಿರದಲ್ಲಿದೆ ಎಂಬ ಕಾರಣದಿಂದ ಆ ಅರ್ಥದ ಜೊತೆಗೆ ಸಂಬಂಧವನ್ನು ಹೇಳಿ ಪರಾಮರ್ಶ ಮಾಡಲು ಸಾಧ್ಯವಿಲ್ಲ.'.

**अयोग्यं च ज्ञानिसुखमनिर्देश्यत्वनिरुपपदपरमत्वसूर्यप्रकाशहेतुत्वादिनाऽन्वेतुम् ।**

ಜ್ಞಾನಿಸುಖದಲ್ಲಿ ಯೋಗ್ಯತಾದಿಗಳು ಇರುವುದಿಲ್ಲ. ಏಕೆಂದರೆ ಅನಿರ್ದೇಶ್ಯತ್ವ, ಉಪಪದ ರಹಿತವಾದ ಪರಮತ್ವ, ಸೂರ್ಯಪ್ರಕಾಶಕತ್ವ ಇವೆಲ್ಲವೂ ಪರಮಾತ್ಮನ ಅಸಾಧಾರಣ ಧರ್ಮವಾಗಿರುವುದರಿಂದ, ಜ್ಞಾನಿಸುಖದಲ್ಲಿ ಈ ಧರ್ಮಗಳು ಬರಲು ಸಾಧ್ಯವೇ ಇಲ್ಲ. ಹೀಗೆ ಯೋಗ್ಯತಾ ಇಲ್ಲದ ಕಾರಣ ಜ್ಞಾನಿಸುಖವನ್ನು ಪರಾಮರ್ಶ ಮಾಡಬಾರದು. ಪರಮಾತ್ಮನನ್ನೇ ಪರಾಮರ್ಶ ಮಾಡಬೇಕು.

**टीकायामपि ''व्यवधानेनान्वयोऽपि योग्यतापेक्षया भवेत्'' इति व्यवधानोक्तिरभ्युपेत्यवादेन ।**

ಟೀಕೆಯಲ್ಲಿಯೂ ಕೂಡ 'ವ್ಯವಧಾನೇನಾನ್ವಯೋಽಪಿ ಯೋಗ್ಯತಾಪೇಕ್ಷಯಾ ಭವೇತ್' ಎಂಬುದಾಗಿ ಹೇಳಿದ್ದಾರೆ. ಅಂದರೆ ಈಶ್ವರನು ವ್ಯವಹಿತನೇ ಆಗಿಲ್ಲ. ಒಂದು ವೇಳೆ ವ್ಯವಹಿತನಾಗಿದ್ದಾನೆಂದು ನಿಮ್ಮ ಪ್ರಕಾರ ಒಪ್ಪಿದರೂ ಯೋಗ್ಯತಾದಿಗಳಿರುವುದರಿಂದ, ಅವನನ್ನು ಪರಾಮರ್ಶ ಮಾಡುವುದು ತಪ್ಪಾಗುವುದಿಲ್ಲವೆಂದು ವ್ಯವಧಾನವನ್ನು ಅಭ್ಯುಗಮವಾದದಿಂದ ಸಮರ್ಥನೆ ಮಾಡಿದ್ದಾರೆ.

**अत एव ''चेतनश्चेतनानामित्यादौ परमात्मनोऽपि प्रकृतत्वात्'' इति टीकायां सन्निहितवाक्य एव प्रकृततोक्ता ।**

ಆದ್ದರಿಂದಲೇ 'ಚೇತನಶ್ಚೇತನಾನಾಮಿತ್ಯಾದೌ ಪರಮಾತ್ಮನೋಽಪಿ ಪ್ರಕೃತತ್ವಾತ್' ಎಂಬ ಟೀಕಾಮಾತಿನಲ್ಲಿ ಈಶ್ವರನು ಹತ್ತಿರದ ವಾಕ್ಯದಿಂದಲೇ ಪ್ರಕೃತನಾಗಿದ್ದಾನೆಂದು ಹೇಳಿದ್ದಾರೆ.

**यद्वा ''नित्यो नित्यानाम्'' इत्यस्मादपि परस्मिन् ''तमात्मस्थं येऽनुपश्यन्ति धीराः तेषां शान्तिः शाश्वती नेतरेषाम्'' इत्यत्र प्रकृतेन ज्ञानफलेन शान्तिशब्दार्थेन सुखेन ''नित्यो नित्यानाम्'' इति वाक्योक्तस्याप्यात्मनो व्यवहितत्वाट्टीकायां सन्निधानाद्योग्यताया बलीयस्त्वोक्तिः ।**

ಅಥವಾ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯಕ್ಕಿಂತಲೂ 'ತಮಾತ್ಮಸ್ಥಂ ಯೇऽನುಪಶ್ಯಂತಿ ಧೀರಾಃ ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್' ಎಂಬ ವಾಕ್ಯವು ಹತ್ತಿರದಲ್ಲಿದೆ. ಈ ವಾಕ್ಯದಲ್ಲಿ ಜ್ಞಾನಫಲವೆನಿಸಿದ ಶಾಂತಿಶಬ್ದದ ಅರ್ಥವಾದ ಸುಖವು ಪ್ರಸಕ್ತವಾಗಿದೆ. ಇಂತಹ ಸುಖಕ್ಕಿಂತಲೂ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯದಲ್ಲಿ ಪ್ರಸಕ್ತನಾದ ಆತ್ಮನು ವ್ಯವಹಿತನೇ ಆಗಿದ್ದಾನೆ. ಅಂದರೆ ಪೂರ್ವಪಕ್ಷಿಗಳು 'ತೇಷಾಂ ಸುಖಮ್' ಎಂಬ ವಾಕ್ಯದಿಂದ ಜ್ಞಾನಿಸುಖವು ಪ್ರಕೃತವಾಗಿದೆಯೆಂದು ಹೇಳಬೇಕು. ಏಕೆಂದರೆ ಸುಖಶಬ್ದವು ನಪುಂಸಕಲಿಂಗದಲ್ಲೇ ಪ್ರಸಕ್ತವಾದ್ದರಿಂದ 'ತದೇತತ್' ಶಬ್ದಗಳಿಂದ, ಅದನ್ನು ಪರಾಮರ್ಶ ಮಾಡುವುದು ಸುಲಭವಾಗುತ್ತದೆ. ಒಂದು ವೇಳೆ 'ತಮಾತ್ಮಸ್ಥಮ್' ಎಂಬ ವಾಕ್ಯದಲ್ಲಿರುವ ಶಾಂತಿ ಶಬ್ದದಿಂದ, ಸುಖವು ಪ್ರಸಕ್ತವಾಗಿದೆಯೆಂದು ಅವರು ಹೇಳಿದರೆ, ಆಗ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯವೇ ದೂರವಾಗುತ್ತವೆ. ಜ್ಞಾನಿಸುಖಪ್ರತಿಪಾದಕವಾದ ವಾಕ್ಯವು ಹತ್ತಿರವಾಗುತ್ತದೆ. ಈ ಪಕ್ಷದಲ್ಲಿ ಸನ್ನಿಧಾನ ಪ್ರಮಾಣಕ್ಕಿಂತಲೂ ಯೋಗ್ಯತಾ ಪ್ರಮಾಣವು ಶ್ರೇಷ್ಠವಾದ್ದರಿಂದ ಈಶ್ವರನನ್ನು ಪರಾಮರ್ಶ ಮಾಡುವುದೇ ಅನಿವಾರ್ಯವೆಂದು ಟೀಕೆಯಲ್ಲಿ ಹೇಳಿರುತ್ತಾರೆ. ಈ ಪಕ್ಷದಲ್ಲಿ ಅಭ್ಯುಗಮವಾದದಿಂದ ಟೀಕಾಮಾತನ್ನು ಕೂಡಿಸಬೇಕಾಗಿಲ್ಲ.

**एतेनैव सुखशब्दैकत्वनिमित्ता प्रत्यभिज्ञाऽपि निरस्ता ।**

ಹೀಗೆ ಹೇಳಿದ್ದರಿಂದ 'ತೇಷಾಂ ಸುಖಂ ಶಾಶ್ವತಂ ನೇತರೇಷಾಮ್' ಎಂಬಲ್ಲಿಯೂ ಸುಖ ಶಬ್ದವಿದೆ. 'ತದೇತದಿತಿ ಮನ್ಯಂತೇ ಅನಿರ್ದೇಶ್ಯಂ ಪರಮಂ ಸುಖಮ್' ಎಂಬಲ್ಲಿಯೂ ಸುಖಶಬ್ದವಿದೆ. ಒಂದೇ ಸುಖಶಬ್ದವು ಎರಡೂಕಡೆ ಇರುವುದರಿಂದ ಜ್ಞಾನಿಸುಖದ ಪ್ರತ್ಯಭಿಜ್ಞಾನವೇ ಬರುತ್ತದೆಂಬ ಪೂರ್ವಪಕ್ಷವನ್ನು ನಿರಾಕರಿಸಿದಂತಾಯಿತು. ಏಕೆಂದರೆ -

**अस्य सुखस्यानिर्देश्यत्वादिभिर्ज्ञानिसुखाद्भेदस्यैव भानात् ।**

'ಸುಖ' ಶಬ್ದವು ಎರಡೂ ಕಡೆ ಒಂದೇ ಇರಬಹುದು. ಆದರೆ 'ಶಾಶ್ವತಂ ಸುಖಮ್' ಎಂಬಲ್ಲಿ ಸುಖಶಬ್ದದಲ್ಲಿ ಶಾಶ್ವತವೆಂದಷ್ಟೇ ವಿಶೇಷಣವನ್ನು ಹೇಳಲಾಗಿದೆ. ಆದರೆ 'ಅನಿರ್ದೇಶ್ಯಂ ಪರಮಂ ಸುಖಮ್' ಎಂಬಲ್ಲಿ ಅನಿರ್ದೇಶ್ಯತ್ವ, ಪರಮತ್ವ ಮೊದಲಾದವುಗಳನ್ನು ವಿಶೇಷಣವನ್ನಾಗಿ ಹೇಳಲಾಗಿದೆ. ಹೀಗೆ ಸ್ಪಷ್ಟವಾಗಿ ಎರಡೂ ಕಡೆ ಇರುವ ಸುಖದಲ್ಲಿ ವ್ಯತ್ಯಾಸವು ತಿಳಿಯುತ್ತಿರುವಾಗ ಜ್ಞಾನಿಸುಖಕ್ಕಿಂತ ಭಿನ್ನವಾದ ಸುಖವೇ ಇಲ್ಲಿ ಪ್ರತಿಪಾದ್ಯವಾಗಿದೆಯೆಂದು ಇಲ್ಲಿ ಹೇಳಬೇಕು.

**प्रत्युत ब्रह्मपक्ष एव ''तमात्मस्थं तदेतत्'' इति तच्छब्दैक्यकृता प्रत्यभिज्ञाऽस्तीति ।**

ವಿಪರೀತವಾಗಿ ಬ್ರಹ್ಮಪಕ್ಷದಲ್ಲಿಯೇ ಶಬ್ದೈಕ್ಯವು ಇರುತ್ತದೆಂದೇ ಹೇಳಬೇಕು. ಏಕೆಂದರೆ 'ತಮಾತ್ಮಸ್ಥಂ ಯೇऽನುಪಶ್ಯಂತಿ ಧೀರಾಃ' ಎಂಬಲ್ಲಿ 'ತತ್' ಶಬ್ದವಿದೆ. 'ತದೇತದಿತಿ ಮನ್ಯಂತೇ

ಅನಿರ್ದೇಶ್ಯಂ ಪರಮಂ ಸುಖಮ್' ಎಂದು ಒಂದೇ 'ತತ್' ಶಬ್ದವು ಎರಡೂ ಕಡೆ ಕೇಳಿಸುತ್ತಿವೆ. ಹಿಂದೆ 'ತತ್' ಶಬ್ದದಿಂದ ಯಾವ ಪರಮಾತ್ಮನು ಪ್ರಸಕ್ತನಾಗಿದ್ದಾನೋ, ಅವನೇ 'ತದೇತತ್' ಎಂಬಲ್ಲಿರುವ 'ತತ್' ಶಬ್ದದಿಂದಲೂ ಪ್ರಕೃತನಾಗಿದ್ದಾನೆಂಬ ಎಂಬ ಪ್ರತ್ಯಭಿಜ್ಞೆಯೇ ಬರುತ್ತದೆ. ಆದ್ದರಿಂದ 'ತದೇತತ್' ಎಂಬ ಶ್ರುತಿಯಿಂದ ಈಶ್ವರನನ್ನು ಪರಾಮರ್ಶ ಮಾಡುವುದೇ ಅತ್ಯಂತ ಶ್ರೇಯಸ್ಕರ.

**प्रकाशः –**

तदेतदित्यादेर्व्यवहितपरामर्शित्वदोषं द्वेधा परिहरति – **नापीत्यादिना** ।।

ವಿವರಣೆ - 'ತದೇತತ್' ಎಂಬಲ್ಲಿರುವ ಸರ್ವನಾಮಶಬ್ದಗಳಿಂದ ವ್ಯವಹಿತನಾದ ಈಶ್ವರನನ್ನು ಪರಾಮರ್ಶ ಮಾಡುವುದು ತಪ್ಪಾಗುತ್ತದೆಂಬ ಪೂರ್ವಪಕ್ಷಿಗಳು ಹೇಳಿರುವ ದೋಷಕ್ಕೆ ಎರಡು ಬಗೆಯಲ್ಲಿ ಪರಿಹಾರಗಳನ್ನು 'ನಾಪಿ' ಇತ್ಯಾದಿ ಗ್ರಂಥದಿಂದ ನೀಡುತ್ತಿದ್ದಾರೆ. ಜ್ಞಾನಿಸುಖಕ್ಕಿಂತ ಈಶ್ವರನು ಸನ್ನಿಹಿತನೇ ಆಗಿದ್ದಾನೆಂಬುದು ಮೊದಲನೆಯ ಪರಿಹಾರ. ಯೋಗ್ಯತಾದಿಗಳು ಇರುವ ಕಾರಣ ದೂರಸ್ಥನಾಗಿದ್ದರೂ ಸಹ ಪರಾಮರ್ಶಕ್ಕೆ ಅರ್ಹನಾಗಿದ್ದಾನೆಂಬುದು ಎರಡನೆಯ ಪರಿಹಾರ.

**प्रकाशः – सन्निहितत्वादिति** ।। एतेन ''चेतनश्चेतनानाम् इत्यादौ परमात्मनोऽपि प्रकृतत्वात्'' इति टीकायां प्रकृतत्वात्सन्निहितत्वादित्यर्थो दर्शितः ।

ಗ್ರಂಥದಲ್ಲಿ 'ಸನ್ನಿಹಿತತ್ವಾತ್' ಎಂದು ಹೇಳಿದ್ದರಿಂದ 'ಚೇತನಶ್ಚೇತನಾನಾಮ್ ಇತ್ಯಾದೌ ಪರಮಾತ್ಮನೋಽಪಿ ಪ್ರಕೃತತ್ವಾತ್' ಎಂದರೆ 'ಚೇತನಶ್ಚೇತನಾನಾಮ್' ಇತ್ಯಾದಿ ಶ್ಲೋಕದಲ್ಲಿ ಪರಮಾತ್ಮನು ಕೂಡ ಪ್ರಕೃತನಾಗಿದ್ದಾನಾದ್ದರಿಂದ ಎಂಬ ಟೀಕೆಯಲ್ಲಿರುವ 'ಪ್ರಕೃತತ್ವಾತ್' ಎಂಬ ಪದಕ್ಕೆ ಸನ್ನಿಹಿತನಾದ್ದರಿಂದ ಎಂಬರ್ಥವನ್ನು ಹೇಳಿದಂತಾಯಿತು.

**प्रकाशः** – ''दूरोक्तस्यापि समीपोक्तपरित्यागेन ग्रहणम्'' इति टीकावाक्यानुरोधेन पक्षान्तरमाह – **अस्तु वेति** ।।

'ದೂರೋಕ್ತಸ್ಯಾಪಿ ಸಮೀಪೋಕ್ತಪರಿತ್ಯಾಗೇನ ಗ್ರಹಣಮ್' ಪರಮಾತ್ಮನು ದೂರದಲ್ಲಿ ಹೇಳಲ್ಪಟ್ಟಿದ್ದರೂ ಸಮೀಪದಲ್ಲಿರುವ ಜ್ಞಾನಿಸುಖವನ್ನು ತ್ಯಾಗಮಾಡಿ ಪರಮಾತ್ಮನನ್ನೇ ಸ್ವೀಕರಿಸುವುದು ಯುಕ್ತವಾಗಿದೆಯೆಂಬ ಟೀಕಾವಾಕ್ಯಕ್ಕೆ ಅನುಸಾರಿಯಾದ ಮತ್ತೊಂದು ಪಕ್ಷವನ್ನು 'ಅಸ್ತುವಾ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

**प्रकाशः** – कुत इत्यत ''एतदुभयस्य ज्ञानिसुखेऽसम्भवात्परमात्मनि सम्भवाद्दूरोक्तस्यापि'' इत्यादिटीकार्थं सङ्गृह्य हेतुमाह – **सन्निकृष्टमिति** ।।

ಜ್ಞಾನಿಸುಖವು ಸನ್ನಿಹಿತವಾಗಿದ್ದರೂ ಏಕೆ ಅಯೋಗ್ಯವಾಗಿದೆ ? ಎಂಬ ಪ್ರಶ್ನೆಗೆ 'ಏತದುಭಯಸ್ಯ ಜ್ಞಾನಿಸುಖೇऽಸಂಭವಾತ್ ಪರಮಾತ್ಮನಿ ಸಂಭವಾದ್ ದೂರೋಕ್ತಸ್ಯಾಪಿ' ಇತ್ಯಾದಿ ಟೀಕಾವಾಕ್ಯದ ಅರ್ಥವನ್ನು ಸಂಗ್ರಹ ಮಾಡಿ ಕಾರಣವನ್ನು ಹೇಳುತ್ತಿದ್ದಾರೆ 'ಸನ್ನಿಕೃಷ್ಟಮ್' ಇತ್ಯಾದಿ ವಾಕ್ಯದಿಂದ.

**प्रकाशः** – श्लोके हिशब्दो हेतौ । यस्मात्तस्मान्न दोष इत्यर्थः । सन्निधितो योग्यताबलवत्त्वं मीमांसकसम्मत्या द्रढयति – **उक्तं हीति** ।।

ಶ್ಲೋಕದಲ್ಲಿರುವ 'ಹಿ' ಶಬ್ದಕ್ಕೆ ಯಾವ ಕಾರಣದಿಂದ ಎಂದರ್ಥ. ಯಾವಕಾರಣದಿಂದ ಸನ್ನಿಧಿಗಿಂತಲೂ ಯೋಗ್ಯತೆಯು ಬಲಿಷ್ಠವಾಗಿದೆಯೋ, ಆ ಕಾರಣದಿಂದಲೇ ಈಶ್ವರನನ್ನು ಪರಾಮರ್ಶ ಮಾಡುವುದು ದೋಷವಲ್ಲ ಎಂದರ್ಥ. ಶ್ಲೋಕಕ್ಕಿಂತ ಮೊದಲಿನ ವಾಕ್ಯದಲ್ಲಿರುವ 'ನ ದೋಷಃ' ಎಂಬಪದಗಳಿಗೆ ಶ್ಲೋಕದ ಜೊತೆಗೆ ಹೀಗೆ ಅನ್ವಯ ಮಾಡಬೇಕು. ಸನ್ನಿಧಿಗಿಂತಲೂ ಯೋಗ್ಯತೆಯು ಶ್ರೇಷ್ಠವಾಗಿದೆಯೆಂಬುದು ಎಲ್ಲಿ ಕಂಡಿದೆ? ಎಂಬ ಪ್ರಶ್ನೆಗೆ ಉತ್ತರವನ್ನು ಪೂರ್ವಮೀಮಾಂಸಾ ದೃಷ್ಟಾಂತದಿಂದ ಸಾಧಿಸುತ್ತಿದ್ದಾರೆ 'ಉಕ್ತಂಹಿ' ಇತ್ಯಾದಿ ಗ್ರಂಥದಿಂದ.

**प्रकाशः** – तृतीयस्याद्यपादे ''आनन्तर्यमचोदना'' इत्युपान्त्याधिकरणे हस्तावववनेनिक्ते । उलपराजिंस्तृणाति'' इति दर्शपूर्णमासगतं ''मुष्टीकरोति । वाचं यच्छति । दीक्षितमावेदयति'' इति ज्योतिष्टोमगतं च वाक्यमुदाहृत्य चिन्तितम् । हस्तावनेजनं हस्तसंस्कारार्थम् । मुष्टीकरणवाग्यमने मनःप्रणिधानार्थे । तेन त्रयमपि तावत्सामर्थ्यरूपाल्लिङ्गात् करिष्यमाणकर्माङ्गम् । तत्किमनन्तरयोरुलपराज्यास्तरण-दीक्षितावेदनयोरेवाङ्गमुत सर्वकर्माङ्गमिति संशये तत्रानन्तर्यादेकवाक्यत्वादवान्तर-प्रकरणाद्वा तन्मात्राङ्गत्वे प्राप्ते लिङ्गप्रकरणाभ्यां प्राकरणिकसर्वकर्मार्थत्वप्रतीतेरानन्त र्य-शब्दितपाठसन्निधिरूपक्रमस्य दुर्बलत्वात्सर्वकर्माङ्गतेति सिद्धान्त इति । वेद्यामास्तरितुं सम्पादिततृणविशेषा उलपराजयः । दीक्षितावेदनप्रकारश्चैवं श्रुतः । ''अदीक्षिष्टायं ब्राह्मण इति त्रिरुपांश्वाह देवेभ्य एवैनं प्राह । त्रिरुच्चैरुभयेभ्य एवैनं देवमनुष्येभ्यः प्राह'' इति ।।

'ಆನಂತರ್ಯಮಚೋದನಾ' (೩-೧-೨೪)[1]

---

(१) भाट्टसङ्ग्रहः –

अथ चतुर्दशं हस्तावनेजनादीनां कृत्स्नप्राकरणिकाङ्गताधिकरणम्(सूत्रे २४-२५)

आनन्तर्यमचोदना ।।२४।।

(वाक्यानाञ्च समाप्तत्वात् ।।२५।।)

ಅನುಕೃತ್ಯಧಿಕರಣ (೧-೩-೬)

'ಹಸ್ತಾವವನೇನಿಕ್ತೇ । ಉಲಪರಾಜಿಂಸ್ತೃಣಾತಿ' ಎಂಬ ದರ್ಶಪೂರ್ಣಮಾಸ ಪ್ರಕರಣದಲ್ಲಿರುವ ವಾಕ್ಯವನ್ನು 'ಮುಷ್ಟೀಕರೋತಿ । ವಾಚಂ ಯಚ್ಛತಿ । ದೀಕ್ಷಿತಮಾವೇದಯತಿ' ಎಂಬ ಜ್ಯೋತಿಷ್ಟೋಮ ಪ್ರಕರಣದಲ್ಲಿರುವ ವಾಕ್ಯವನ್ನು ಉದಾಹರಿಸಿ ವಿಚಾರ ಮಾಡಲಾಗಿದೆ. 'ಹಸ್ತಾವವನೇನಿಕ್ತೇ' ಎಂದರೆ ಎರಡು ಕೈಗಳನ್ನು ಚೆನ್ನಾಗಿ ತೊಳೆದುಕೊಳ್ಳಬೇಕು' ಎಂದರ್ಥ. 'ಉಲಪರಾಜಿಂಸ್ತೃಣಾತಿ' ಎಂದರೆ 'ಯಜ್ಞವೇದಿಕೆಯಲ್ಲಿ ಆಸ್ತರಣ ಮಾಡುವಂತಹ ದರ್ಭವಿಶೇಷಗಳೇ ಉಲಪ ಎನಿಸುತ್ತವೆ. ಇವುಗಳ ರಾಜಿ ಎಂದರೆ ಸಮೂಹ ಇವುಗಳನ್ನು ಹಾಕುವುದು ಎಂದರ್ಥ. 'ಮುಷ್ಟೀ ಕರೋತಿ' ಎಂದರೆ 'ಕೈಗಳನ್ನು ಮುಗಿಯಬೇಕು ಎಂದರ್ಥ. 'ವಾಚಂ ಯಚ್ಛತಿ' ಎಂದರೆ ಮೌನದಿಂದಿರಬೇಕೆಂದರ್ಥ. 'ದೀಕ್ಷಿತಮಾವೇದಯತಿ' ಎಂದರೆ ಬ್ರಾಹ್ಮಣನು ದೀಕ್ಷಿತನಾಗಿದ್ದಾನೆಂದು ತಿಳಿಸಬೇಕು. 'ಅದೀಕ್ಷಿಷ್ಟಾಯಾಂ ಬ್ರಾಹ್ಮಣಃ' ಎಂಬುದಾಗಿ ಮೂರುಬಾರಿ ದೇವತೆಗಳಿಗೋಸ್ಕರ ಮೆಲ್ಲನೆ ಹೇಳಬೇಕು. ಪುನಃ ಮೂರುಬಾರಿ ಗಟ್ಟಿಯಾಗಿ 'ಅದೀಕ್ಷಿಷ್ಟಾಯಾಂ ಬ್ರಾಹ್ಮಣಃ' ಎಂದು ದೇವತೆಗಳನ್ನು ಹಾಗೂ ಮನುಷ್ಯರನ್ನು ಕುರಿತು ಹೇಳಬೇಕು ಎಂದರ್ಥ. ಇವುಗಳಲ್ಲಿ ಹಸ್ತಾವನೇಜನವು ಅಂದರೆ ಕೈಗಳನ್ನು ತೊಳೆದುಕೊಳ್ಳುವುದು ಹಸ್ತ ಸಂಸ್ಕಾರದ ಸಿದ್ಧಿಗೋಸ್ಕರ, ಮುಷ್ಟೀಕರಣ ಹಾಗೂ ವಾಗ್ಯಮನಗಳು ಮನಸ್ಸಿನ ಏಕಾಗ್ರತೆಗೋಸ್ಕರ. ಈ ಮೂರು ಅನ್ವಯವ್ಯತಿರೇಕವೆಂಬ ಸಾಮರ್ಥ್ಯಲಿಂಗದಿಂದ ಮುಂದೆ ಮಾಡುವಂತಹ ಕರ್ಮಕ್ಕೆ ಅಂಗಗಳಾಗುತ್ತವೆಂದು ತಿಳಿಯುತ್ತದೆ.

ಇಲ್ಲಿ ಹೇಳಲ್ಪಟ್ಟ ಹಸ್ತಾವನೇಜನವು ಅಂದರೆ ಕೈ ತೊಳೆದುಕೊಳ್ಳುವಿಕೆಯು ಅವ್ಯವಹಿತವಾಗಿ ಮುಂದಿನ

अत्रापि पूर्वन्यायेन शङ्कनात् **सङ्गतिः** । दर्शपूर्णमासयोः प्रकरणे श्रूयते 'हस्तावनेनिक्ते' 'उलपरजिँस्तृणाति' इति । उलपानां तृणविशेषणां राजिं पङ्क्तिं वेद्यामास्तृणातीत्यर्थः । तद्धस्तावनेजनमास्तरणमात्राङ्गमुत करिष्यमाणसर्वकर्माङ्गमिति **सन्देहः** । यथा हि पूर्वत्रानुवाक्यानां यथासङ्ख्याम्नानरूपक्रमेणाऽज्यभागान्वयस्तथा अत्राप्यनान्तर्यलक्षणक्रम-प्रमाणेन हस्तावनेजनरूपहस्तसंस्कारस्याऽनन्तरश्रुतोलपराज्यास्तरणमात्राङ्गत्वमिति **प्राप्ते** अभिधीयते । अवनेजनं हि हस्तसंस्कारः । संस्कृतौ च हस्तौ सर्वकर्मानुष्ठानयोग्यावित्ये-तादृशसामर्थ्यरूपलिङ्गेन दर्शपूर्णमासप्रकरणेन च आनन्तर्यरूपक्रमस्य बाधेन करिष्यमाणसर्वकर्माङ्गं हस्तावनेजनम्, नास्तरणमात्राङ्गम् । एवं ज्योतिष्टोमे 'मुष्टीकरोति' 'वाचं यच्छति' 'दीक्षितमावेदयति' इति श्रुतमुष्टीकरणवाग्यमनयोः मनःप्रणिधानार्थयोः 'अदीक्षिष्टायं ब्राह्मणः' इति देवेभ्यो मनुष्येभ्यश्चाऽवेदनरूपदीक्षितावेदनस्याङ्गत्वमानन्तर्यादिति **प्राप्ते** लिङ्गप्रकरणाभ्यां सर्वकर्माङ्गता ज्ञेया । तथा च **सूत्रम्, आनन्तर्यं** सन्निध्याम्नानम् **अचोदना** अङ्गत्वे प्रमाणं न भवतीति । **फलन्तु** यदा प्रमादादिना हस्तावनेजनादिकमकृत्वा आस्तरणादिकमनुष्ठाय पश्चात्तदकरणं स्मर्यते तदा तदकरणप्रायश्चित्तमेव कार्यं पूर्वपक्षे । **सिद्धान्ते तु** विपर्यासप्रायश्चित्तमपि कृत्वा पुनरुत्तरकर्मावैगुण्याय हस्तावनेजनादिकं कार्यमिति ।

**इति चतुर्दशं हस्तावनेजनादीनां कृत्स्नप्राकरणिकाङ्गताधिकरणम्** (सूत्रे २४-२५)

ಪರಿಪೂರ್ಣಚಂದ್ರಿಕಾ

ವಾಕ್ಯದಲ್ಲಿ ಹೇಳಲ್ಪಟ್ಟ ಉಲಪರಾಜ್ಯಾಸ್ತರಣಕ್ಕೆ ಮಾತ್ರ ಅಂಗವೋ? ಅಥವಾ ಮುಂದೆ ಮಾಡಲ್ಪಟ್ಟ ಸಕಲ ಕರ್ಮಗಳಿಗೂ ಕೂಡ ಅಂಗವೋ? ಆದರಂತೆ ಮುಷ್ಟೀಕರಣ ಮತ್ತು ವಾಗ್ಯಮನಗಳು ಅವ್ಯವಹಿತವಾಗಿ ಮುಂದೆ ವಾಕ್ಯದಲ್ಲಿ ಹೇಳಲ್ಪಟ್ಟ ದೀಕ್ಷಿತಾವೇದನಕ್ಕೆ ಮಾತ್ರ ಅಂಗವೋ? ಅಥವಾ ಮುಂದೆ ಮಾಡಲ್ಪಡುವ ಸಕಲ ಕರ್ಮಗಳಿಗೂ ಕೂಡ ಅಂಗವೋ? ಎಂದು ಸಂಶಯ ಬರುತ್ತದೆ.

ಪೂರ್ವಪಕ್ಷ - ಹಸ್ತಾವನೇಜನವು ಉಲಪರಾಜಿ ಆಸ್ತರಣಕ್ಕೆ ಮಾತ್ರ ಅಂಗವಾಗಿದೆ. ಮುಷ್ಟೀಕರಣ ಮತ್ತು ವಾಗ್ಯಮನಗಳು ದೀಕ್ಷಿತಾವೇದನಕ್ಕೆ ಮಾತ್ರ ಅಂಗಗಳಾಗಿವೆ. ಏಕೆಂದರೆ ಅವ್ಯವಹಿತವಾಗಿ ಮುಂದಿನ ವಾಕ್ಯದಲ್ಲೇ ಕರ್ಮವನ್ನು ವಿಧಾನ ಮಾಡಿದ್ದರಿಂದ ಮತ್ತು ಏಕವಾಕ್ಯತ್ವವಿರುವುದರಿಂದ ಮತ್ತು 'ದೀಕ್ಷಿತಮಾವೇದಯತಿ' ಎಂಬ ವಾಕ್ಯದ ಅನಂತರ ಕಥಂಭಾವಾಕ್ಷಾಂಕ್ಷೆಯನ್ನು ಮಾಡಿದಾಗ, ಮುಷ್ಟೀಕರಣ ಮತ್ತು ವಾಗ್ಯಮನಗಳಿಂದ ಅನ್ವಯಗಳನ್ನು ಹೇಳಬೇಕಾದ್ದರಿಂದ ಅವ್ಯಹಿತವಾಗಿ ಮುಂದಿನ ವಾಕ್ಯದಲ್ಲಿರುವ ದೀಕ್ಷಿತಾವೇದನಕ್ಕೆ ಮಾತ್ರ ಮುಷ್ಟೀಕರಣ ಹಾಗೂ ವಾಗ್ಯಮನಗಳು ಅಂಗಗಳಾಗುತ್ತವೆಂದು ತಿಳಿಯುತ್ತದೆ.

ಸಿದ್ಧಾಂತ - ಲಿಂಗ ಹಾಗೂ ಪ್ರಕರಣಗಳಿಗಿಂತಲೂ 'ಸನ್ನಿಧಿ' ಎಂಬ ಸ್ಥಾನ ಪ್ರಮಾಣವು ದುರ್ಬಲವಾಗಿದೆ. ಹಸ್ತಾವನೇಜನಗಳು ಇದ್ದರೆ ಮಾತ್ರ ಸಂಪೂರ್ಣ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಆಚರಿಸಲು ಸಾಧ್ಯವೆಂಬ ಸಾಮರ್ಥ್ಯವೆಂಬ ಲಿಂಗದಿಂದ ಹಸ್ತಾವನೇಜನವು ಸರ್ವಕರ್ಮಕ್ಕೂ ಕೂಡ ಅಂಗವೆಂದು ತಿಳಿಯುತ್ತದೆ. ಮತ್ತು ಕಥಂ ಭಾವಾಕಾಂಕ್ಷೆಯು ಮಹಾಪ್ರಕರಣದಲ್ಲಿ ಸ್ವತಃ ಸಿದ್ಧವಾಗಿರುವುದರಿಂದ ಪ್ರಕರಣದ ಬಲದಿಂದಲೂ ಇದು ಸಕಲ ಕರ್ಮಕ್ಕೂ ಅಂಗವೆಂದು ತಿಳಿಯುತ್ತದೆ. ಆದ್ದರಿಂದ ಆನಂತರ್ಯ ಶಬ್ದದಿಂದ ಪ್ರತಿಪಾದ್ಯವಾದ ಪಾಠಸನ್ನಿಧಾನವೆಂಬ ಉಪಕ್ರಮವು ದುರ್ಬಲವಾಗಿರುವುದರಿಂದ ಹಸ್ತಾವನೇಜನವು ಕೇವಲ ಉಲಪರಾಜ್ಯಾಸ್ತರಣಕ್ಕೆ ಮಾತ್ರ ಅಂಗವೆಂದು ಹೇಳುವುದು ತಪ್ಪಾಗುತ್ತದೆ.

**प्रकाशः** – **सूत्रार्थस्तु** आनन्तर्यं सन्निधानम् । अचोदना निमित्तं न भवतीति योग्यताबलवत्त्वस्य सूत्रेऽप्रतीतेराह – **वार्तिके चेति** ।। अस्त्वेवं ततः किमित्यत आह – **अयोग्यं चेति** ।।

ಸೂತ್ರದಲ್ಲಿರುವ ಆನಂತರ್ಯ ಶಬ್ದಕ್ಕೆ 'ಸನ್ನಿಧಾನ' ಎಂದರ್ಥ. 'ಅಚೋದನಾ' ಎಂದರೆ ನಿಮಿತ್ತವಾಗುವುದಿಲ್ಲ ಎಂದರ್ಥ. ಸನ್ನಿಧಿಪ್ರಮಾಣಕ್ಕಿಂತ ಯೋಗ್ಯತಾಪ್ರಮಾಣವು ಬಲಿಷ್ಠವಾಗಿದೆಯೆಂದು ಸೂತ್ರದಿಂದ ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ 'ವಾರ್ತಿಕೇ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಈ ಪೂರ್ವಮೀಮಾಂಸಾ ದೃಷ್ಟಾಂತದಿಂದ ಸನ್ನಿಧಿಗಿಂತಲೂ ಯೋಗ್ಯತೆಯೇ ಬಲಿಷ್ಠವೆಂದು ನಿರ್ಣಯವಾಯಿತು. ಪ್ರಕೃತದಲ್ಲೇನು ? ಎಂಬ ಪ್ರಶ್ನೆಗೆ 'ಅಯೋಗ್ಯಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. ಅಂದರೆ ಜ್ಞಾನಿಸುಖದಲ್ಲಿ ಅಂತಹ ಯೋಗ್ಯತೆ ಇಲ್ಲದ ಕಾರಣ ಅದನ್ನು ಪರಾಮರ್ಶ ಮಾಡಲು ಸಾಧ್ಯವಿಲ್ಲವೆಂದು ತಿಳಿಯಬೇಕು.

ಅನುಕೃತ್ಯಧಿಕರಣ (೧-೩-೬)

**प्रकाशः** – टीकायां ''एतदुभयस्य ज्ञानिसुखेऽसम्भवात्'' इति वाक्यशेषस्थ-लिङ्गद्वयमात्रासम्भवोक्तावपि ''अनिर्देश्यत्वाद्ययोगाच्च'' इत्युत्तरग्रन्थपर्यालोचनयाऽभिप्रेताननेकहेतूनाह – **अनिर्देश्यत्वेति** ।।

ಗ್ರಂಥದಲ್ಲಿ 'ಸೂರ್ಯಾದಿಪ್ರಕಾಶಹೇತುತ್ವ', 'ಸೂರ್ಯಾದ್ಯಪ್ರಕಾಶತ್ವ', 'ಅನಿರ್ದೇಶ್ಯತ್ವ' ಮೊದಲಾದ ಅನೇಕ ಧರ್ಮಗಳನ್ನು ಹೇಳಿದ್ದಾರೆ. ಆದರೆ ಟೀಕೆಯಲ್ಲಿ 'ಏತದುಭಯಸ್ಯ ಜ್ಞಾನಿಸುಖೇऽಸಂಭವಾತ್' ಎಂದು 'ಸೂರ್ಯಾದ್ಯಪ್ರಕಾಶ್ಯತ್ವ' ಮತ್ತು 'ಸೂರ್ಯಾದಿಪ್ರಕಾಶಹೇತುತ್ವ' ಎಂಬೆರಡು ಹೇತುಗಳನ್ನಷ್ಟೇ ಹೇಳಿರುತ್ತಾರೆ. ಟೀಕೆಯ ಈ ಮಾತು ಉಪಲಕ್ಷಣವಾಗಿದೆಯೆಂದು ತಿಳಿಯಬೇಕು. ಏಕೆಂದರೆ ಮುಂದಿನ ಟೀಕಾ ವಾಕ್ಯದಲ್ಲಿ 'ಅನಿರ್ದೇಶ್ಯತ್ವಾದ್ಯಯೋಗಾಚ್ಚ' ಎಂದು ಹೇಳಿದ್ದಾರೆ. ಅದನ್ನೂ ಕೂಡ ಒಟ್ಟಿಗೆ ಗ್ರಂಥಕಾರರು ಇಲ್ಲಿ ಸಂಗ್ರಹಿಸಿ ಅನಿರ್ದೇಶ್ಯಸುಖತ್ವವನ್ನೂ ಕೂಡ ಉಲ್ಲೇಖ ಮಾಡಿದ್ದಾರೆ. ಆದ್ದರಿಂದ ಗ್ರಂಥಕಾರರು ಟೀಕೆಯಲ್ಲಿ ಹೇಳಿದ್ದನ್ನಷ್ಟೇ ಹೇಳುತ್ತಿದ್ದಾರೆ ಹೊರತು, ಸ್ವತಃ ತಾವಾಗಿಯೇ ಏನನ್ನೂ ಹೇಳುತ್ತಿಲ್ಲ.[೧]

**प्रकाशः** – आदिपदेन सूर्याद्यप्रकाश्यत्वजगत्प्रकाशकत्वयोर्ग्रहः । आद्यपक्षे पूर्वोत्तरटीकावाक्ययोर्विरोधमाशङ्क्योत्तरवाक्यस्य गतिमाह – **टीकायामपीति** ।। **टीकायामिति** ।। **पूर्वमिति योज्यम्** ।

ಗ್ರಂಥದಲ್ಲಿರುವ ಆದಿಪದದಿಂದ 'ಸೂರ್ಯಾದ್ಯಪ್ರಕಾಶ್ಯತ್ವ', 'ಜಗತ್‌ಪ್ರಕಾಶಕತ್ವ' ಮೊದಲಾದ ಪರಮಾತ್ಮನ ಅಸಾಧಾರಣ ಗುಣಗಳನ್ನು ಸಂಗ್ರಹಿಸಬೇಕು. ಪ್ರಥಮ ಪಕ್ಷದಲ್ಲಿ ಹಿಂದಿನ-ಮುಂದಿನ ವಾಕ್ಯಗಳಿಗೆ ವಿರೋಧವನ್ನು ಆಶಂಕಿಸಿ, ಮುಂದಿನ ವಾಕ್ಯಕ್ಕೆ ಗತಿಯನ್ನು ಹೇಳುತ್ತಿದ್ದಾರೆ 'ಟೀಕಾಯಾಮಪಿ'

(೧) ಶ್ರೀಮಂತ್ರಾಲಯ ಪ್ರಭುಗಳು ಹೆಜ್ಜೆ-ಹೆಜ್ಜೆಗೂ ಗ್ರಂಥಕಾರರ ಮಾತುಗಳನ್ನು ಟೀಕಾರೂಢ ಮಾಡುತ್ತಾರೆ. ಕಾರಣ ಹೀಗಿರಬಹುದು. ಶ್ರೀವ್ಯಾಸತೀರ್ಥರೇ ಮಂತ್ರಾಲಯ ಪ್ರಭುಗಳಾಗಿ ಅವತಾರ ಮಾಡಿದರೆಂಬ ಪ್ರತೀತಿಯಿದೆ. ಬಹುಶಃ ತಾವು ಬರೆದ ವಿಚಾರವೆಲ್ಲವೂ ಶ್ರೀಮಟ್ಟೀಕಾಕೃತ್ಪಾದರು ಬರೆದಿರುವ ವಿಚಾರವನ್ನಷ್ಟೇ ತಾವು ಗ್ರಂಥದಲ್ಲಿ ಬರೆದಿದ್ದೇವೆ ಹೊರತು, ಸ್ವತಃ ತಾವೇನೂ ಬರೆದಿದ್ದಲ್ಲ ಎಂದು ಸಾಬೀತು ಪಡಿಸುವುದಕ್ಕಾಗಿಯೋ ಏನೋ, ಪುನಃ ಮಂತ್ರಾಲಯ ಪ್ರಭುಗಳಾಗಿ ಅವತರಿಸಿ, ತಮ್ಮ ಗ್ರಂಥಕ್ಕೆ ವ್ಯಾಖ್ಯಾನ ಬರೆದು ಎಲ್ಲಾ ವಾಕ್ಯಗಳನ್ನು ಟೀಕಾರೂಢ ಮಾಡಿದ್ದಾರೆಂದು ಹೇಳಬಹುದು. ಚಂದ್ರಿಕಾ ಗ್ರಂಥದಲ್ಲಿ ಹೇಳಿರುವ ವಿಚಾರವೆಲ್ಲವೂ ಟೀಕೆಯ ಯಾವ ಪಂಕ್ತಿಯಲ್ಲಿದೆ? ಅಥವಾ ಶ್ರೀಮದಾಚಾರ್ಯರ ಭಾಷ್ಯಗಳ ಯಾವ ಮಾತಿನಲ್ಲಿದೆ? ಎಂದು ಹುಡುಕುವುದೇ ಮಂತ್ರಾಲಯ ಪ್ರಭುಗಳ ಕೆಲಸ. ಆದ್ದರಿಂದಲೇ ತಮ್ಮ ವ್ಯಾಖ್ಯಾನಕ್ಕೆ ಪ್ರಕಾಶ ಎಂದು ಹೆಸರಿಟ್ಟಿದ್ದಾರೆ. ಅಂದರೆ ಬೆಳಕಿನ ಮೂಲಕ ಹುಡುಕಿ ಮೂಲಾರೂಢ ಮಾಡುವುದೇ ಇದರ ಉದ್ದೇಶವಾಗಿದೆ.

ಆದರೆ ಈ ಪರಿಯ ವ್ಯಾಖ್ಯಾನ ಸೊಬಗನ್ನು ಇತರ ಯಾವುದೇ ಮತೀಯರ ವ್ಯಾಖ್ಯಾನಗಳಲ್ಲಿ ನಮ್ಮಿಂದ ಕಾಣಲು ಸಾಧ್ಯವೇ ಇಲ್ಲ. ಭಾಮತೀ ಮೊದಲಾದವರು ಯಾವುದೇ ವಿಚಾರವನ್ನೂ ಕೂಡ ಮೂಲಾರೂಢ ಮಾಡಲಾರರು. ಇದನ್ನು ಸಜ್ಜನರು ಗಮನಿಸಬೇಕು.

ಇತ್ಯಾದಿ ವಾಕ್ಯದಿಂದ. 'ಟೀಕಾಯಾಮ್' ಎಂಬಲ್ಲಿ 'ಪೂರ್ವಮ್' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು.

**प्रकाशः** – अस्तु वेत्युक्तद्वितीयपक्ष एव टीकाभिमत इति भावेन टीकास्थपूर्ववाक्यविरोधं निराकर्तुं तेन सन्निध्यलाभप्रकारमाह – **यद्वा नित्यो नित्यानामिति ॥**

ಗ್ರಂಥದಲ್ಲಿ 'ಅಸ್ತುವಾ' ಇತ್ಯಾದಿ ವಾಕ್ಯಗಳಿಂದ ವ್ಯವಹಿತಪರತ್ವವನ್ನು ಹೇಳಿದರೂ ಕೂಡ ದೋಷವಾಗುವುದಿಲ್ಲವೆಂದು ಸಾಧಿಸಿದ್ದಾರೆ. ಈ ಎರಡನೆಯ ಪಕ್ಷವೇ ಟೀಕೆಗೆ ಅಭಿಮತವಾಗಿದೆಯೆಂಬ ಅಭಿಪ್ರಾಯದಿಂದ ಟೀಕೆಯಲ್ಲಿರುವ ಹಿಂದಿನ ವಾಕ್ಯದ ವಿರೋಧವನ್ನು ನಿರಾಕರಿಸುವುದಕ್ಕಾಗಿ ಪ್ರಕೃತವಾಗುವ ಮಾತ್ರದಿಂದ ಸಾನ್ನಿಧ್ಯವು ಲಾಭವಾಗುವುದಿಲ್ಲವೆಂಬ ಪ್ರಕಾರವನ್ನು ಹೇಳುತ್ತಿದ್ದಾರೆ - 'ಯದ್ವಾ ನಿತ್ಯೋ ನಿತ್ಯಾನಾಮ್' ಎಂಬ ಗ್ರಂಥದಿಂದ.

**प्रकाशः** – एतेन टीकायां ''चेतनश्चेतनानाम्' इत्यादौ परमात्मनोऽपि प्रकृतत्वात्'' इत्युक्तिस्तु प्रकृतत्वमात्राभिप्राया । नतु सन्निहितत्वाभिप्रायेत्युक्तं भवति ।

ಹೀಗೆ ಹೇಳಿದ್ದರಿಂದ ಟೀಕೆಯಲ್ಲಿರುವ 'ಚೇತನಶ್ಚೇತನಾನಾಮ್ ಇತ್ಯಾದೌ ಪರಮಾತ್ಮನೋऽಪಿ ಪ್ರಕೃತತ್ವಾತ್' ಎಂಬಲ್ಲಿರುವ 'ಪ್ರಕೃತತ್ವಾತ್' ಎಂಬ ಶಬ್ದಕ್ಕೆ ಹಿಂದೆ 'ಸನ್ನಿಹಿತವಾದ್ದರಿಂದ' ಎಂದು ವ್ಯಾಖ್ಯಾನಿಸಲಾಗಿತ್ತು. ಈ ಪಕ್ಷದಲ್ಲಿ ಪ್ರಕೃತವಾಗಿರುವುದರಿಂದ ಎಂದಷ್ಟೇ ಅರ್ಥ.

**प्रकाशः** – एवं च 'ईश्वरस्य व्यवहितत्वमुपेत्य दूरस्थस्यापि योग्यतया परामर्शः' इत्युपरितनटीकावाक्यं न विरुद्धम् । नाप्यभ्युपगमवादेन नेतव्यमिति तात्पर्यम् ।

ಆದ್ದರಿಂದಲೇ ಈಶ್ವರನು ವ್ಯವಹಿತನಾಗಿದ್ದಾನೆಂಬ ಪಕ್ಷವನ್ನು ಅಂಗೀಕರಿಸಿ, ದೂರದಲ್ಲಿ ಪ್ರಕೃತನಾಗಿದ್ದರೂ ಯೋಗ್ಯತಾಬಲದಿಂದ ಪರಾಮರ್ಶ ಮಾಡಬಹುದೆಂದು ಹೇಳುವ ಮುಂದಿನ ಟೀಕಾವಾಕ್ಯದಿಂದ ವಿರೋಧವೂ ಕೂಡ ಬರುವುದಿಲ್ಲ. ಅಭ್ಯುಪಗಮವಾದದಿಂದಲೂ ಕೂಡ ಆ ಟೀಕಾಮಾತನ್ನು ಹೊಂದಿಸುವ ಅವಶ್ಯಕತೆ ಇಲ್ಲ.

**प्रकाशः** – 'व्यवहितत्वात्' इत्येतदेव प्राचीनपक्षेऽस्वारस्यबीजं ध्येयम् ।

ಹಾಗಾದರೆ ಎರಡನೆಯ ಪಕ್ಷವನ್ನಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. ಮೊದಲನೆಯ ಪಕ್ಷವನ್ನು ಗ್ರಂಥಕಾರರು ಏಕೆ ಹೇಳಿದರು ? ಎಂದರೆ, ಎರಡನೆಯ ಪಕ್ಷದಲ್ಲಿ ವ್ಯವಹಿತವಾಗಿದೆಯಲ್ಲವೇ? ಎಂಬ ಒಂದು ಅಸ್ವಾರಸ್ಯವಿದೆ. ಅದಕ್ಕೋಸ್ಕರ ಮಾತ್ರ ಮೊದಲನೆಯ ಪಕ್ಷವನ್ನು ಸ್ವೀಕರಿಸಿದ್ದಾರೆ.

ಅನುಕೃತ್ಯಧಿಕರಣ (೧-೩-೬)

**प्रकाशः** – यदपि सुखश्रुतिकृतप्रत्यभिज्ञाविरोध इति तदपि ''अनिर्देश्यत्वाद्ययोगाच्च'' इति टीकया निरस्तमिति भावेनाह – **एतेनेति** ।। एतच्छब्दार्थं व्यनक्ति – **अस्येति** ।।

ಪೂರ್ವಪಕ್ಷಕಾರನು ಹಿಂದೆ ಪ್ರಸಕ್ತವಾದ ಸುಖಶ್ರುತಿಯನ್ನು ಪ್ರತ್ಯಭಿಜ್ಞಾ ಮಾಡಬಹುದೆಂದು ಸಮರ್ಥಿಸಿದ್ದನು. ಅದನ್ನು ಟೀಕೆಯಲ್ಲಿ 'ಅನಿರ್ದೇಶ್ಯತ್ವಾದ್ಯಯೋಗಾಚ್ಚ' ಎಂಬ ಮಾತಿನಿಂದ ನಿರಾಕರಿಸಿದ್ದಾರೆ. ಅದನ್ನೇ ಗ್ರಂಥಕಾರರು 'ಏತೇನ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ಏತತ್' ಶಬ್ದದ ಅರ್ಥವನ್ನು 'ಅಸ್ಯ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**गुरुराजीयम्** – ननु च कथं ज्ञानिसुखापेक्षयेश्वरस्य सन्निहितत्वम् । नित्यो नित्यानामित्येतस्मादुपरितने ''तेषां शान्तिः शाश्वती नेतरेषाम्'' इति वाक्ये शान्तिशब्दार्थभूतसुखस्यैव सन्निहितत्वादित्यस्वरसादाह – **अस्तु वेति** ।। **अत एवेति** ।। टीकायां व्यवधानेनोक्तेरभ्युपेत्यवादत्वादेवेत्यर्थः । अस्मिन्पक्षे सन्निधानाद्योग्यतायाः बलीयस्त्वोक्तेरमुख्यत्वं भवतीत्यतः पक्षान्तरमाह – **यद्वेति** ।। एतेनेत्यनेनैव परामृष्टं हेतुं दर्शयति – **अस्य सुखस्येति** ।।




ಈಶ್ವರನು ವ್ಯವಹಿತನಾಗಿದ್ದಾನೆಂದು ಪೂರ್ವಪಕ್ಷಿಗಳು ಹೇಳಿದ್ದು ತಪ್ಪು. ಎರಡು ಬಗೆಯಲ್ಲಿ ಈಶ್ವರನ ಪರಾಮರ್ಶವೇ 'ತದೇತತ್' ಶಬ್ದಗಳಿಂದ ಮಾಡಬೇಕೆಂಬುದು ಸಿದ್ಧವಾಗುತ್ತದೆ. 'ತದೇತದಿತಿಮನ್ಯಂತೇ' ಎಂಬ ಶ್ರುತಿಯ ಹಿಂದಿನ ವಾಕ್ಯದಲ್ಲಿ ಜ್ಞಾನಿಸುಖವು ಪ್ರಕೃತವಾಗಿದೆಯೆಂದು ಪೂರ್ವಪಕ್ಷಿಗಳು ಹೇಗೆ ಹೇಳುತ್ತಾರೆ? ಏಕೆಂದರೆ 'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್' ಎಂಬಲ್ಲಿ ಶಾಂತಿಶಬ್ದದಿಂದ ಜ್ಞಾನಿಸುಖವು ಪ್ರಕೃತವಾಗಿದೆಯೆಂದು ಹೇಳುವುದಾದರೆ, 'ತದೇತತ್' ಶಬ್ದಗಳಿಂದ ಇಂತಹ ಸುಖವನ್ನು ಪರಾಮರ್ಶ ಮಾಡಲು ಸಾಧ್ಯವಿಲ್ಲ. ಏಕೆಂದರೆ ಶಾಂತಿಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ನಪುಂಸಕಲಿಂಗದ 'ತದೇತತ್' ಶಬ್ದಗಳಿಂದ ಪರಾಮರ್ಶ ಮಾಡಲು ಪೂರ್ವಪಕ್ಷಿಗಳಿಗೆ ಸಾಧ್ಯವಿಲ್ಲ. ಆದ್ದರಿಂದ ಅದಕ್ಕಿಂತಲೂ ಹಿಂದಿರುವ 'ತೇಷಾಂ ಸುಖಮ್' ಎಂಬ ವಾಕ್ಯದಲ್ಲಿ ಸುಖಶಬ್ದದಿಂದ ಪ್ರಕೃತವಾದದ್ದನ್ನು ಪರಾಮರ್ಶ ಮಾಡಬೇಕು. ಸುಖಶಬ್ದವು ನಪುಂಸಕಲಿಂಗದಲ್ಲಿರುವುದರಿಂದ 'ತದೇತತ್' ಶಬ್ದಗಳಿಂದ ಇದನ್ನು ಪರಾಮರ್ಶ ಮಾಡುವುದು ಸುಲಭವಾಗುತ್ತದೆ. ಆದರೆ 'ತೇಷಾಂ ಸುಖಮ್' ಎಂಬ ವಾಕ್ಯದ ಅನಂತರ 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾಮ್' ಎಂಬ ವಾಕ್ಯವು ಪ್ರಸಕ್ತವಾಗಿದೆ. ಈ ವಾಕ್ಯದಿಂದ ಈಶ್ವರನೇ ಪ್ರತಿಪಾದ್ಯನೆಂಬುದು ಪೂರ್ವಪಕ್ಷಿಗಳಿಗೂ ಸಮ್ಮತ. ಆದ್ದರಿಂದ 'ತದೇತತ್' ಶ್ರುತಿಗೆ ಅತ್ಯಂತ ಹತ್ತಿರದಲ್ಲೇ ಇರುವ ಈಶ್ವರನನ್ನು ಪರಾಮರ್ಶ ಮಾಡಲು ಸಾಧ್ಯವಿರುವಾಗ 'ತೇಷಾಂ ಸುಖಮ್' ಎಂಬ ದೂರದ ವಾಕ್ಯದಲ್ಲಿರುವ ಜ್ಞಾನಿಸುಖವನ್ನು ಪರಾಮರ್ಶ ಮಾಡುವುದು ತಪ್ಪಾಗುತ್ತದೆ.

ಪರಿಪೂರ್ಣಚಂದ್ರಿಕಾ

ಈಶ್ವರನು 'ಏಕೋ ವಶೀ ಸರ್ವಭೂತಾಂತ್ಮರಾತ್ಮಾ' ಎಂಬ ವಾಕ್ಯದಿಂದ ಪ್ರಕೃತನಾಗಿದ್ದಾನೆ. ಈ ವಾಕ್ಯವು 'ತೇಷಾಂ ಸುಖಮ್' ಎಂಬ ವಾಕ್ಯಕ್ಕಿಂತಲೂ ದೂರದಲ್ಲಿದೆ. ಆದ್ದರಿಂದ ಜ್ಞಾನಿಸುಖದ ಪರಾಮರ್ಶವೇ ಹತ್ತಿರವಾಗುತ್ತದೆಂದು ಪೂರ್ವಪಕ್ಷಿಗಳು ಇದರ ಮೇಲೆ ವಾದ ಮಾಡಬಹುದು. ಆದರೆ ಹಾಗೇ ಒಪ್ಪಿದರೂ ಕೂಡ ಈಶ್ವರನ ಪರಾಮರ್ಶವೇ ಯುಕ್ತವಾಗುತ್ತದೆ. ವ್ಯವಹಿತವಾಗಿದ್ದರೂ ಯೋಗ್ಯತಾವಿದ್ದಲ್ಲಿ ಅದರ ಪರಾಮರ್ಶವು ನ್ಯಾಯಸಮ್ಮತ. ಆದ್ದರಿಂದ ಸನ್ನಿಹಿತವಾಗಿದೆಯೆಂಬ ಕಾರಣದಿಂದ ಯೋಗ್ಯತಾವಿಲ್ಲದಿದ್ದರೂ ಜ್ಞಾನಿಸುಖವನ್ನು ಪರಾಮರ್ಶ ಮಾಡುವುದು ತಪ್ಪಾಗುತ್ತದೆ. ದೂರದಲ್ಲಿದ್ದರೂ ಯೋಗ್ಯತಾದಿಗಳಿರುವ ಕಾರಣ ಈಶ್ವರನನ್ನು ಪರಾಮರ್ಶ ಮಾಡುವುದು ಸಮಂಜಸವಾಗುತ್ತದೆ.

ಅಥವಾ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯಕ್ಕಿಂತಲೂ 'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್' ಎಂಬ ವಾಕ್ಯವು ಹತ್ತಿರದಲ್ಲಿದೆ. ಇದರಿಂದ ಜ್ಞಾನಿಸುಖವನ್ನು ನಾವು ಪರಾಮರ್ಶ ಮಾಡುತ್ತೇವೆ. ಶಾಂತಿಶಬ್ದವು ಸ್ತ್ರೀಲಿಂಗದಲ್ಲಿದ್ದರೂ ಕೂಡ ಶಾಂತಿಶಬ್ದದ ಅರ್ಥ ಸುಖವಾದ್ದರಿಂದ, ಅದನ್ನು ವಿವಕ್ಷಿಸಿ ನಪುಂಸಕಲಿಂಗದ ಪ್ರಯೋಗವು ತಪ್ಪಾಗುವುದಿಲ್ಲವೆಂದು ಪೂರ್ವಪಕ್ಷಿಗಳ ಈ ಆಕ್ಷೇಪವು ತಪ್ಪು. ಏಕೆಂದರೆ ಜ್ಞಾನಿಸುಖವು ಹೀಗೆ ಅತ್ಯಂತ ಸನ್ನಿಹಿತವಾಗಿರಬಹುದು. ಆದರೆ ಅನಿರ್ದೇಶ್ಯತ್ವ, ಸೂರ್ಯಪ್ರಕಾಶಹೇತುತ್ವ, ಮೊದಲಾದ ಧರ್ಮಗಳಿಲ್ಲದ ಕಾರಣ ಯೋಗ್ಯತೆಯೇ ಇರುವುದಿಲ್ಲ. ಇಂತಹ ಧರ್ಮಗಳನ್ನು ಹೊಂದಿರುವ ಕಾರಣ ಯೋಗ್ಯತೆಯಿರುವಂತಹ ಈಶ್ವರನನ್ನು ವ್ಯವಹಿತನಾಗಿದ್ದರೂ ಪರಾಮರ್ಶ ಮಾಡುವುದು ನ್ಯಾಯಸಮ್ಮತವಾಗುತ್ತದೆ. ಆದ್ದರಿಂದ 'ತದೇತತ್' ಶಬ್ದಗಳಿಂದ ಈಶ್ವರನ ಪರಾಮರ್ಶ ಮಾಡುವುದೇ ಯುಕ್ತಿಯುಕ್ತವೆಂದು ಸಿದ್ಧವಾಯಿತು.

• • • • •

## ಸೂತ್ರಾರ್ಥಸ್ವಾರಸ್ಯ ವರ್ಣನೆ

### तात्पर्यचन्द्रिका

**अत्र चाद्यसूत्रे तस्येत्यनेन समन्वेतव्यमानुकूल्येन गृह्यमाणमुच्यते । 'तस्य भासा' इति वाक्यं च प्रतीकेनोपादीयते ।**

ಅನುವಾದ - ಈ ಅಧಿಕರಣದಲ್ಲಿರುವ ಮೊದಲನೆಯ ಸೂತ್ರದಲ್ಲಿ 'ತಸ್ಯ' ಎಂಬ ಪದದಿಂದ ಸಮನ್ವಯ ಮಾಡುವಂತಹ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವನ್ನು ಹೇಳಿರುತ್ತಾರೆ. ಅದೇ 'ತಸ್ಯ' ಎಂಬ ಪದದಿಂದಲೇ 'ತಸ್ಯ ಭಾಸಾ' ಎಂಬ ವಾಕ್ಯವನ್ನೂ ಕೂಡ ಸಂಗ್ರಹಿಸಿದ್ದಾರೆ.

**तथा च तस्य आनुकूल्येन गृह्यमाणस्य । अनुकृतेः सूर्यादितेजोभिरनुकरणात् । सूर्यादितेजसां तदधीनप्रकाशत्वात् । 'तस्य भासा' इति वाक्येन सर्वस्य जगतस्तत्प्रभाप्रकाश्यत्वेनोक्तेश्चेति सूत्रार्थः ।**

ಆದ್ದರಿಂದ ಸೂತ್ರಾರ್ಥವನ್ನು ಹೀಗೆ ಹೇಳಿದಂತಾಯಿತು - ತಸ್ಯ = 'ಆನುಕೂಲ್ಯೇನ ಗೃಹ್ಯಮಾಣಸ್ಯ', ಅನುಕೃತೇಃ = ಸೂರ್ಯಾದಿತೇಜೋಭಿಃ ಅನುಕರಣಾತ್ = ಸೂರ್ಯಾದಿತೇಜಸಾಂ ತದಧೀನಪ್ರಕಾಶತ್ವಾತ್, ತಸ್ಯ = ತಸ್ಯ ಭಾಸೇತಿ ವಾಕ್ಯೇನ ಸರ್ವಸ್ಯ ಜಗತಃ ತತ್ ಪ್ರಭಾಪ್ರಕಾಶ್ಯತ್ವೇನೋಕ್ತೇಶ್ಚ' (ತಸ್ಯ = ಆನುಕೂಲ್ಯೇನ ಗೃಹ್ಯಮಾಣನಾದವನಿಗೆ, ಅನುಕೃತೇಃ = ಸೂರ್ಯಾದಿ ತೇಜಸ್ಸುಗಳಿಂದ ಅನುಕರಣವನ್ನು ಹೇಳಿದ್ದರಿಂದ. ಅಂದರೆ ಸೂರ್ಯಾದಿಗಳ ತೇಜಸ್ಸು, ಆನುಕೂಲ್ಯೇನ ಗೃಹ್ಯಮಾಣನಾದ ವ್ಯಕ್ತಿಯ ಆಧೀನವಾದ್ದರಿಂದ. ಮತ್ತು 'ತಸ್ಯ ಭಾಸಾ' ಎಂಬ ವಾಕ್ಯದಲ್ಲಿ ಸಕಲ ಜಗತ್ತಿಗೆ ಆನುಕೂಲ್ಯೇನ ಗೃಹ್ಯಮಾಣನಾದ ವ್ಯಕ್ತಿಯಿಂದ ಬೆಳಗುವಿಕೆಯನ್ನು ಹೇಳಿದ್ದರಿಂದಲೂ, ಈಶ್ವರನೇ ಆನುಕೂಲ್ಯೇನ ಗೃಹ್ಯಮಾಣನಾಗಿದ್ದಾನೆ ಎಂದು ಸೂತ್ರಾರ್ಥವನ್ನು ಹೇಳಿದಂತಾಯಿತು.) ಎಂಬುದಾಗಿ.

**अत एव टीकायाम् ''एतदधीनप्रकाश'' इति ''तस्य भासा'' इति चोक्तम् ।**

ಹೀಗೆ ಸೂತ್ರದಲ್ಲಿರುವ 'ತಸ್ಯ' ಎಂಬ ಪದಕ್ಕೆ ಎರಡು ಅರ್ಥಗಳನ್ನು ಹೇಳುವುದು ಟೀಕೆಗೂ ಸಮ್ಮತವಾಗಿದೆ. 'ಏತದಧೀನಪ್ರಕಾಶ' ಎಂಬ ಟೀಕಾಮಾತಿನಲ್ಲಿರುವ 'ಏತತ್' ಶಬ್ದದಿಂದ, ಆನುಕೂಲ್ಯೇನ ಗೃಹ್ಯಮಾಣನಾದವನಿಗೆ ಎಂಬರ್ಥವನ್ನು ಸೂಚನೆ ಮಾಡಿದ್ದಾರೆ. ಹಾಗೂ 'ತಸ್ಯ' ಎಂಬ ಸೌತ್ರ (??) ಪದವು 'ತಸ್ಯ ಭಾಸಾ' ಎಂಬ ಶ್ರುತಿಯ ಪ್ರತೀಕಗ್ರಹಣರೂಪವೂ ಆಗಿದೆಯೆಂದು ಸೂಚನೆ ಮಾಡಿದ್ದಾರೆ.

**सूत्रे चशब्दस्तु द्वितीयसूत्रस्याद्यव्याख्याने सूर्याद्यप्रकाश्यत्वरूपानुक्तहेतु-समुच्चये । द्वितीयव्याख्याने सर्वजगत्प्रकाशकत्वरूपोक्तहेतुसमुच्चये ।**

ಸೂತ್ರದಲ್ಲಿರುವ 'ಚ' ಶಬ್ದವೂ ಕೂಡ ಎರಡು ಪ್ರಕಾರಗಳಲ್ಲಿ ಸಮುಚ್ಚಯವನ್ನು ಹೇಳುತ್ತಿದೆ. 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ ಎರಡು ಅರ್ಥಗಳಿವೆ. ಅವುಗಳಲ್ಲಿ ಮೊದಲನೆಯ ಅರ್ಥದಲ್ಲಿ; ಸೂರ್ಯಾದ್ಯಪ್ರಕಾಶ್ಯತ್ವ ಎಂಬ ಹೇತುವನ್ನು ಶ್ರುತಿ-ಸ್ಮೃತಿಸಿದ್ಧವಾಗಿದೆಯೆಂದು ಹೇಳುವುದಿಲ್ಲ. ಆದನ್ನು ಈ ಸೂತ್ರದಲ್ಲಿರುವ 'ಚ' ಶಬ್ದವು ಸಮುಚ್ಚಯ ಮಾಡುತ್ತಿದೆ. ಎರಡನೆಯ ವ್ಯಾಖ್ಯಾನದಲ್ಲಿ ಸರ್ವಜಗತ್‌ಪ್ರಕಾಶಕತ್ವವೆಂಬ ಹೇತುವನ್ನು ಸಮುಚ್ಚಯ ಮಾಡಲು 'ಚ' ಶಬ್ದವು ನಿವಿಷ್ಟ-ವಾಗಿದೆಯೆಂದು ಹೇಳಿದಂತಾಗುತ್ತದೆ. .

ಸ್ಪಷ್ಟವಾಗಿ ಹೀಗೆ ತಿಳಿಯಬೇಕು - 'ಅನುಕೃತೇಸ್ತಸ್ಯಚ' ಎಂಬ ಸೂತ್ರದಲ್ಲಿ ಅನುಕೃತಿಯೆಂಬ ಶಬ್ದದಿಂದ ಒಂದು ಲಿಂಗವನ್ನು 'ತಸ್ಯ' ಎಂಬ ವಾಕ್ಯಪ್ರತೀಕದಿಂದ ಮತ್ತೊಂದು ಲಿಂಗವನ್ನು 'ಚ' ಶಬ್ದದಿಂದ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಮೂರನೆಯ ಲಿಂಗವನ್ನು ಹೇಳಿದಂತಾಯಿತು. ಅನಂತರ 'ಅಪಿ ಸ್ಮರ್ಯತೇ' ಎಂಬ ಎರಡನೆಯ ಸೂತ್ರದಲ್ಲಿ ಮೂರೂ ಲಿಂಗಗಳಿಗೂ ಶ್ರುತಿಸಮಾಖ್ಯಾವನ್ನು

ಹೇಳುತ್ತಿಲ್ಲ. ಹೊರತಾಗಿ, 'ಸರ್ವಜಗತ್‌ಪ್ರಕಾಶಕತ್ವ' ಮತ್ತು 'ಸೂರ್ಯಾದಿಪ್ರಕಾಶಹೇತುತ್ವ' ಎಂಬೆರಡು ಹೇತುಗಳಿಗೆ ಮಾತ್ರ ಶ್ರುತಿಸಮಾಖ್ಯಾಪ್ರಮಾಣವನ್ನು ಹೇಳಲಾಗಿದೆ. 'ಚ'ಶಬ್ದದಿಂದ ಸೂಚಿತವಾದ ಸೂರ್ಯಾದ್ಯಪ್ರಕಾಶ್ಯತ್ವ ಎಂಬ ಹೇತುವಿಗೆ ಶ್ರುತಿಸಮಾಖ್ಯಾಪ್ರಮಾಣವನ್ನು ಹೇಳುತ್ತಿಲ್ಲ. ಇದು ಮೊದಲನೆಯ ವ್ಯಾಖ್ಯಾನ. 'ಅಪಿ ಸ್ಮರ್ಯತೇ' ಎಂಬ ಸೂತ್ರದ ಎರಡನೆಯ ವ್ಯಾಖ್ಯಾನದಲ್ಲಿ ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಮೂರೂ ಲಿಂಗಗಳಿಗೂ ಕೂಡ ಸ್ಮೃತಿಸಮಾಖ್ಯಾಪ್ರಮಾಣವನ್ನು ಹೇಳುತ್ತಿದ್ದಾರೆಂದು ಸಮರ್ಥಿಸಿದ್ದಾರೆ. 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ ಮೊದಲನೆಯ ವ್ಯಾಖ್ಯಾನವನ್ನು ವಿವಕ್ಷಿಸಿದಾಗ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಹೇತು ಅನುಕ್ತವಾಗುತ್ತದೆ. ಅದನ್ನು ಇಲ್ಲಿಯರುವ 'ಚ' ಶಬ್ದವು ಸಮುಚ್ಚಯ ಮಾಡುತ್ತಿದೆ ಎಂದು ಹೇಳಿದಂತಾಗುತ್ತದೆ. ಎರಡನೆಯ ವ್ಯಾಖ್ಯಾನದಲ್ಲಿ ಸೂರ್ಯಾದ್ಯಪ್ರಕಾಶ್ಯತ್ವವು ಎರಡನೆಯ ಸೂತ್ರದಿಂದ ಅನುಕ್ತವಾಗುವುದಿಲ್ಲ. ಉಕ್ತಪ್ರಾಯವೇ ಆಗುತ್ತದೆ. ಈ ಪಕ್ಷದಲ್ಲಿ 'ಸರ್ವಜಗತ್‌ಪ್ರಕಾಶಕತ್ವ' ಎಂಬ ಉಕ್ತವಾದ ಹೇತುವನ್ನೇ ಸಮುಚ್ಚಯ ಮಾಡುತ್ತಿದೆಯೆಂದು ಹೇಳಿದಂತಾಗುತ್ತದೆ. ಹೀಗೆ ಇಲ್ಲಿರುವ ಸಣ್ಣ ವ್ಯತ್ಯಾಸವನ್ನು ಗಮನಿಸಬೇಕು.

**तेनास्याधिकरणान्तरत्वे चशब्दायोग इति यत्कैश्चिदुक्तं तन्निरस्तम् ।**

ಹೀಗೆ 'ಚ' ಶಬ್ದದ ಸ್ವಾರಸ್ಯವನ್ನು ಹೇಳಿದ್ದರಿಂದ ಕೆಲವರ ವಾದವನ್ನು ನಿರಾಕರಿಸಿದಂತಾಯಿತು. ಸೂತ್ರದಲ್ಲಿ 'ಚ' ಶಬ್ದವಿರುವುದರಿಂದ ಹಿಂದಿನ ಅಧಿಕರಣಕ್ಕೆ ಈ ಸೂತ್ರವು ಸಂಬಂಧಪಡುತ್ತದೆ ಹೊರತು, ಇದು ಅಧಿಕರಣಾಂತರವಲ್ಲವೆಂದು ರಾಮಾನುಜರು ಹೇಳುತ್ತಾರೆ. ಅವರ ಮತವನ್ನು ಈಗ ನಿರಾಕರಿಸಿದಂತಾಯಿತು.

**यद्यप्यत्र ''अनुभाति'' इति श्रुत्यनुसारात्सूत्रेऽप्यनुभानादिति वक्तव्यम् । तथापि यदन्यदपि सूर्यादिकृतं प्रतपनादि तदपीशाधीनमिति दर्शयितु-मनुकृतेरित्युक्तम् ।**

ವಾಸ್ತವಿಕವಾಗಿ 'ಅನುಭಾತಿ' ಎಂಬ ಶ್ರುತಿಗೆ ಅನುಸಾರಿಯಾಗಿ ಸೂತ್ರದಲ್ಲಿ 'ಅನುಭಾನಮ್' ಎಂಬ ಪದಪ್ರಯೋಗವನ್ನೇ ಮಾಡಬೇಕಿತ್ತು. 'ಅನುಕೃತೇಃ' ಎಂದು ಮಾಡಬಾರದಾಗಿತ್ತು. ಆದರೂ ಸಹ ಸೂರ್ಯನ ಇತರ ವ್ಯಾಪಾರಗಳನ್ನೂ ಕೂಡ ಸಂಗ್ರಹ ಮಾಡಬೇಕಾಗಿದೆ. ತಾಪನ, ಶೋಷಣ ಮೊದಲಾದ ಸೂರ್ಯನ ಕೃತಿಗಳೆಲ್ಲವೂ ಈಶಾಧೀನವಾಗಿದೆಯೆಂದು ತೋರಿಸುವ ಉದ್ದೇಶದಿಂದ ಸೂತ್ರಕಾರರು 'ಅನುಕೃತೇಃ' ಎಂದು ಹೇಳಿದ್ದಾರೆ.

**उक्तं हि भारते**

**तापिनी पाचिनी चैव शोषिणी च प्रकाशिनी ।**
**नैव राजन् रवेः शक्तिः शक्तिर्नारायणस्य सा ।। इति ।**

ಮಹಾಭಾರತದ ಮಾತು ಹೀಗಿದೆ -

'ತಾಪಿನೀ ಪಾಚಿನೀ ಚೈವ ಶೋಷಿಣೀ ಚ ಪ್ರಕಾಶಿನೀ ।
ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥

ಎಲೈ ! ರಾಜನೇ, ಸೂರ್ಯನು ಎಲ್ಲವನ್ನೂ ಸುಡುತ್ತಾನೆ, ಬೇಯಿಸುತ್ತಾನೆ, ಒಣಗಿಸುತ್ತಾನೆ. ಪ್ರಕಾಶ ಪಡಿಸುತ್ತಾನೆ. ಆದರೆ ಅವನಲ್ಲಿರುವ ಈ ಎಲ್ಲ ಶಕ್ತಿಗಳು ನಾರಾಯಣನದ್ದೇ ಹೊರತು, ಅವನದ್ದಲ್ಲ ಎಂದು.

**द्वितीये आद्यसूत्रोक्तहेतूनां विष्ण्वेकनिष्ठत्वे श्रुतिस्मृती उक्ते ।**

'ಅಪಿ ಸ್ಮರ್ಯತೇ' ಎಂಬ ಎರಡನೆಯ ಸೂತ್ರದಲ್ಲಿ ಪ್ರಥಮಸೂತ್ರೋಕ್ತವಾದ ಮೂರೂ ಹೇತುಗಳಿಗೆ ವಿಷ್ಣು ಮಾತ್ರ ನಿಷ್ಠತ್ವವನ್ನು ಸಮರ್ಥಿಸಲು ಶ್ರುತಿ-ಸ್ಮೃತಿಗಳ ಸಮಾಖ್ಯಾಪ್ರಮಾಣವನ್ನು ಹೇಳಲಾಗಿದೆ.

**तत्र च "अहं तत्तेजः" इत्यादिश्रुतौ "यदादित्यगतम्" इत्यादिस्मृताविव विवक्षितार्थो न स्पष्टः ।**

ಆದರೆ 'ಅಹಂ ತತ್ತೇಜೋ ರಶ್ಮೀತ್' ಇತ್ಯಾದಿ ಶ್ರುತಿಯಲ್ಲಿ 'ಯದಾದಿತ್ಯಗತಂ ತೇಜಃ' ಎಂಬ ಗೀತಾ ಮಾತಿನಲ್ಲಿ ಪ್ರಥಮ ಸೂತ್ರೋಕ್ತವಾದ ಹೇತುಗಳೆಲ್ಲವೂ ವಿಷ್ಣುಮಾತ್ರ ನಿಷ್ಠವೆಂದು ಹೇಗೆ ಸ್ಪಷ್ಟವಾಗಿ ಹೇಳಲಾಗಿದೆಯೋ, ಅದರಂತೆ ಸ್ಪಷ್ಟವಾಗಿ ಹೇಳಿರುವುದಿಲ್ಲ.

**यत्र तु "न तत्र सूर्यो भाति" इत्याथर्वणश्रुतौ स्पष्टः, तत्र विष्णुविषयत्वमद्याप्यसिद्धमिति स्मृतिश्शब्देनोक्ता । श्रुतिस्त्वपिशब्देन समुचिता ।**

ಇನ್ನು ಯಾವ 'ನ ತತ್ರ ಸೂರ್ಯೋ ಭಾತಿ' ಇತ್ಯಾದಿಯಾದ ಆಥರ್ವಣಶ್ರುತಿಯಲ್ಲಿ ಪ್ರಥಮ ಸೂತ್ರೋಕ್ತವಾದ ಹೇತುಗಳು ಸ್ಪಷ್ಟವಾಗಿ ಶ್ರುತವಾಗಿವೆಯೋ, ಅದರಲ್ಲಿ ವಿಷ್ಣುಮಾತ್ರ ನಿಷ್ಠತ್ವವು ಇದುವರೆಗೂ ಸಿದ್ಧವಾಗಿಲ್ಲ. ಆದ್ದರಿಂದ 'ಅಹಂ ತತ್ತೇಜೋ ರಶ್ಮೀತ್' ಎಂಬ ಶ್ರುತಿಯನ್ನು ತೆಗೆದುಕೊಂಡರೆ, ಪ್ರಥಮಸೂತ್ರೋಕ್ತವಾದ ಹೇತುಗಳು ಉಕ್ತವಾಗಿಲ್ಲ. 'ನ ತತ್ರ ಸೂರ್ಯೋ ಭಾತಿ' ಎಂಬ ಆಥರ್ವಣ ಶ್ರುತಿಯನ್ನು ತೆಗೆದುಕೊಂಡರೆ ವಿಷ್ಣುವಿಷಯತ್ವವು ಸಿದ್ಧವಾಗಿಲ್ಲ. ಆದರೆ 'ಯದಾದಿತ್ಯಗತಂ ತೇಜಃ' ಇತ್ಯಾದಿ ಗೀತಾವಾಕ್ಯಗಳಲ್ಲಿ ಪ್ರಥಮಸೂತ್ರೋಕ್ತವಾದ ಹೇತುಗಳೆಲ್ಲವೂ ಹೇಳಲ್ಪಟ್ಟಿವೆ. ಮತ್ತು ಅವುಗಳು ಕೇವಲ ವಿಷ್ಣುನಿಷ್ಠವಾಗಿವೆಯಂದೂ ಕೂಡ ಹೇಳಲಾಗಿದೆ. ಆದ್ದರಿಂದ ಎರಡನೆಯ ಸೂತ್ರದಲ್ಲಿ 'ಅಪಿ ಸ್ಮರ್ಯತೇ' ಎಂದು ಸ್ಮೃತಿಯನ್ನೇ ಕಂಠತಃ ಹೇಳಿರುತ್ತಾರೆ. ಶ್ರುತಿಯೂ ಈ ವಿಷಯದಲ್ಲಿ ಸ್ಪಷ್ಟವಾಗಿಲ್ಲದ ಕಾರಣ 'ಅಪಿ' ಶಬ್ದದಿಂದ ಸಮುಚ್ಚಯ ಮಾಡಿದ್ದಾರೆ.

ಪರಿಪೂರ್ಣಚಂದ್ರಿಕಾ

**यद्यपि चात्रानुकूल्येन गृह्यमाणस्य विष्णुत्वरूपे प्रधानसाध्ये 'तदेतत्प्रेयः' 'प्रियो हि ज्ञानिनोऽत्यर्थमहम्' इत्यादिश्रुतिस्मृत्युक्तिपरत्वेनेदं सूत्रं व्याख्यातुं शक्यम् ।**

ಪ್ರಶ್ನೆ - 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ ಆನುಕೂಲ್ಯೇನ ಗೃಹ್ಯಮಾಣತ್ವವನ್ನು ವಿಷ್ಣುವಿನಲ್ಲಿ ಸಾಧಿಸಲಾಗಿದೆ. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣತ್ವವೇ ಸಾಧ್ಯ. ಈ ಸಾಧ್ಯದ ವಿಷಯದಲ್ಲೇ ಮುಂದಿನ ಸೂತ್ರವು ಶ್ರುತಿ-ಸ್ಮೃತಿ ಸಮಾಖ್ಯಾಪ್ರಮಾಣವನ್ನು ಹೇಳಬಹುದಿತ್ತು. 'ತದೇತತ್ ಪ್ರೇಯಃ' ಎಂಬ ಶ್ರುತಿಯಲ್ಲಿ ಹಾಗೂ 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಮ್' ಎಂಬ ಸ್ಮೃತಿಯಲ್ಲಿ ಆನುಕೂಲ್ಯೇನ ಗೃಹ್ಯಮಾಣತ್ವವನ್ನು ವಿಷ್ಣುವಿನಲ್ಲಿ ಹೇಳಲಾಗಿದೆ. ಈ ಶ್ರುತಿ-ಸ್ಮೃತಿ ಸಮಾಖ್ಯಾ-ಪ್ರಮಾಣದಿಂದ ಪ್ರಧಾನ ಸಾಧ್ಯವಾದದ್ದನ್ನೇ ಸಮರ್ಥಿಸಲು ಬರುವಾಗ, ಪ್ರಧಾನ ಸಾಧ್ಯಕ್ಕೆ ಹೇತುಗಳೆನಿಸಿದ ಸೂರ್ಯಾದಿಪ್ರಕಾಶ ಹೇತುತ್ವಾದಿಗಳ ವಿಷಯಗಳಲ್ಲಿ ಶ್ರುತಿ-ಸ್ಮೃತಿ ಪ್ರಮಾಣಗಳನ್ನು ನೀಡಲಾಗಿದೆ ಎಂದೇಕೆ ವ್ಯಾಖ್ಯಾನಿಸುತ್ತೀರಿ.

**तथापि "प्रियो हि" इत्यादौ ज्ञानार्थं प्रार्थितत्वरूपस्यानुकूल्येन गृह्यमाणत्वस्या स्फुटत्वादाद्यसूत्रोक्तहेतूनां विष्ण्वेकनिष्ठत्वस्यावश्यसाध्यत्वाच्च तत्परतयैव भाष्यकृता व्याख्यातम् ॥**

ಉತ್ತರ - 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಮ್' ಇತ್ಯಾದಿ ವಾಕ್ಯದಲ್ಲಿ ಜ್ಞಾನಕ್ಕೋಸ್ಕರ ಪ್ರಾರ್ಥನೆಯು ಶ್ರುತವಾಗಿದೆ ಹೊರತು, ಆನುಕೂಲ್ಯೇನ ಗೃಹ್ಯಮಾಣತ್ವವು ಸ್ಫುಟವಾಗಿ ಹೇಳಲ್ಪಟ್ಟಿಲ್ಲ. ಮತ್ತು ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಹೇತುಗಳಿಗೆ ವಿಷ್ಣ್ವೇಕನಿಷ್ಠತ್ವವನ್ನು (ಪಕ್ಷಧರ್ಮತಾವನ್ನು) ಅವಶ್ಯವಾಗಿ ಸಮರ್ಥಿಸಲೇಬೇಕು. ಅದಕ್ಕೋಸ್ಕರ ಭಾಷ್ಯಕಾರರು ಪ್ರಧಾನಸಾಧ್ಯಕ್ಕೆ ಪೂರಕವಾಗಿ ಎರಡನೆಯ ಸೂತ್ರವನ್ನು ವ್ಯಾಖ್ಯಾನ ಮಾಡದೇ ಹೇತುವಿನ ಸಮರ್ಥನೆಗಾಗಿ ಎರಡನೆಯ ಸೂತ್ರವನ್ನು ವ್ಯಾಖ್ಯಾನ ಮಾಡಿರುತ್ತಾರೆ.

**प्रकाशः –**

सूत्रार्थस्य भाष्यादावस्फुटत्वात्समन्वेतव्याप्रतीतेश्च सूत्रार्थं वदन् क्रमं च सूचयति – **अत्रेति ॥ वाक्यं चेति ॥** तन्त्रावृत्त्योरन्यतराश्रयणेनेति भावः ।

ವಿವರಣೆ - ಈ ಅಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳಿವೆ - ಇವುಗಳ ಅರ್ಥವು ಭಾಷ್ಯ-ಟೀಕಾದಿಗಳಿಂದ ಸ್ಪಷ್ಟವಾಗಿ ತಿಳಿಯುವುದಿಲ್ಲ. ಮತ್ತು ಸೂತ್ರದಲ್ಲಿ ಸಮನ್ವಯ ಮಾಡುವಂತಹ

ಲಿಂಗದ ಉಲ್ಲೇಖ ಮಾಡದ ಕಾರಣ ಆನುಕೂಲ್ಯೇನ ಗೃಹ್ಯಮಾಣತ್ವಲಿಂಗದ ಸಮನ್ವಯವು ಸೂತ್ರಕ್ಕೆ ಅಭಿಪ್ರೇತವಾಗಿದೆಯೆಂದು ಹೇಗೆ ತಿಳಿಯುತ್ತದೆ ಎಂಬ ಪ್ರಶ್ನೆಗೆ ಸೂತ್ರಾರ್ಥವನ್ನು ಹೇಳುತ್ತಾ, ಸೂತ್ರಗಳ ಕ್ರಮದಲ್ಲಿರುವ ಸ್ವಾರಸ್ಯವನ್ನೂ ಕೂಡ ಗ್ರಂಥಕಾರರು ಸೂಚನೆ ಮಾಡಿ ಹೇಳುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ.

ಸೂತ್ರದಲ್ಲಿರುವ 'ತಸ್ಯಚ' ಎಂಬ ವಾಕ್ಯವು 'ತಸ್ಯಭಾಸಾ' ಎಂಬ ವಾಕ್ಯಗ್ರಹಣಕ್ಕೆ ಪ್ರತೀಕವಾಗಿದೆ. ಮತ್ತು ಆನುಕೂಲ್ಯೇನ ಗೃಹ್ಯಮಾಣತ್ವವನ್ನೂ ಕೂಡ ಹೇಳುತ್ತಿದೆ. ಒಂದೇ ಶಬ್ದಕ್ಕೆ ಎರಡು ಅರ್ಥವನ್ನು ಹೇಗೆ ಹೇಳುವುದೆಂದರೆ, ತಂತ್ರದಿಂದ ಅಥವಾ ಆವೃತ್ತಿಯಿಂದ ಎಂದರೆ 'ತಸ್ಯ' ಎಂಬ ಶಬ್ದವನ್ನು ಎರಡುಬಾರಿ ಅನುಸಂಧಾನ ಮಾಡಿಕೊಳ್ಳಬೇಕು. ಒಮ್ಮೆ ಉಚ್ಚರಿಸಿದ 'ತಸ್ಯ' ಎಂಬ ಶಬ್ದವು ಪ್ರತೀಕಗ್ರಹಣವಾಗಿದೆ. ಮತ್ತೊಮ್ಮೆ ಉಚ್ಚರಿಸಿದ 'ತಸ್ಯ' ಎಂಬ ಶಬ್ದವು ಆನುಕೂಲ್ಯೇನ ಗೃಹ್ಯಮಾಣತ್ವವನ್ನು ಹೇಳುತ್ತಿದೆಯೆಂದು ಭಾವಿಸಬೇಕು.

**प्रकाशः – एतेन यदुक्तं श्रुतप्रकाशे ''तस्येत्यस्य प्रतीकत्वे यदेव विद्ययेति हीतिवदिति शब्दस्स्यात्'' इति । तन्निरस्तम् । समन्वेतव्यपरत्वस्यापि सत्त्वेनेति शब्दाभावोपपत्तेः ।**

ಹೀಗೆ ಸೂತ್ರದಲ್ಲಿರುವ 'ತಸ್ಯ' ಎಂಬ ಶಬ್ದಕ್ಕೆ ವ್ಯಾಖ್ಯಾನ ಮಾಡಿದ್ದರಿಂದ, ಶ್ರುತಪ್ರಕಾಶದಲ್ಲಿ ಮಾಡಿದ ವ್ಯಾಖ್ಯಾನವನ್ನು ನಿರಾಕರಣೆ ಮಾಡಿದಂತಾಯಿತು. ಶ್ರುತಪ್ರಕಾಶದ ವ್ಯಾಕ ಹೀಗಿದೆ - 'ತಸ್ಯೇತ್ಯಸ್ಯ ಪ್ರತೀಕತ್ವೇ ಯದೇವ ವಿದ್ಯಯೇತಿ ಹೀತಿವದಿತಿಶಬ್ದಃ ಸ್ಯಾತ್' ಸೂತ್ರದಲ್ಲಿರುವ 'ತಸ್ಯ' ಎಂಬ ಪದವು ಪ್ರತೀಕವಾದಲ್ಲಿ 'ಇತಿ' ಶಬ್ದವನ್ನು ಸೂತ್ರಕಾರರು ಹೇಳಬೇಕಾಗಿತ್ತು. ಯಾವರೀತಿಯಾಗಿ 'ಯದೇವ ವಿದ್ಯಯೇತಿ' ಎಂಬ ಸೂತ್ರದಲ್ಲಿ 'ಯದೇವ ವಿದ್ಯಯಾ' ಎಂಬ ಶ್ರುತಿಯ ಪ್ರತೀಕಗ್ರಹಣ ಮಾಡುವಾಗ ಸೂತ್ರಕಾರರು 'ಇತಿ' ಎಂಬ ಪದವನ್ನು ಬಳಸಿದ್ದಾರೋ ಅದರಂತೆ ಇಲ್ಲಿಯೂ ಕೂಡ 'ತಸ್ಯ' 'ಇತಿ' ಎಂದು ಹೇಳಬೇಕಾಗಿತ್ತು ಎಂದು.

ಶ್ರುತಪ್ರಕಾಶದ ಈ ವಾದವನ್ನು ನಿರಾಕರಿಸಿದಂತಾಯಿತು. ಏಕೆಂದರೆ ಕೇವಲ ಪ್ರತೀಕಗ್ರಹಣವೆಂಬ ಒಂದೇ ಅರ್ಥವನ್ನು ನಾವು ಹೇಳಿದ್ದಲ್ಲಿ 'ಇತಿ' ಶಬ್ದದ ಅನಿವಾರ್ಯತೆ ಇರುತ್ತಿತ್ತು. ಆದರೆ ಸಮನ್ವಯ ಮಾಡುವಂತಹ ಆನುಕೂಲ್ಯೇನ ಗೃಹ್ಯಮಾಣತ್ವಲಿಂಗವನ್ನೂ ಕೂಡ ಈ 'ತಸ್ಯ' ಎಂಬ ಪದವು ತಿಳಿಸುತ್ತಿರುವುದರಿಂದ, ಕೇವಲ ಪ್ರತೀಕ ಗ್ರಹಣವಾಗಿಲ್ಲದ ಕಾರಣ 'ಇತಿ' ಶಬ್ದವನ್ನು ಹೇಳಬೇಕಾಗಿಲ್ಲ.

**प्रकाशः – ''अवस्थितिवैशेष्यादिति चेन्नाभ्युपगमाद्धृदि हि । अस्यैव चोपपत्तेरूष्मेत्यादौ तदभावाच्चेति ।**

ಅಥವಾ 'ತಸ್ಯ' ಎಂಬ ಪದವು ಪ್ರತೀಕಗ್ರಹಣವಾಗಿದೆಯೆಂದೇ ಇಟ್ಟುಕೊಳ್ಳೋಣ. ಆದರೂ ಸಹ 'ಇತಿ' ಶಬ್ದವನ್ನು ಹೇಳಬೇಕಾಗಿಲ್ಲ. ಏಕೆಂದರೆ 'ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ' ಎಂಬ

ಸೂತ್ರದಲ್ಲಿ 'ಹೃದಿ' ಎಂಬ ಪದವು 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯ ಪ್ರತೀಕಗ್ರಹಣವಾಗಿದೆ. ಮತ್ತು 'ಅಸ್ಯೈವ ಚೋಪಪತ್ತೇರೂಷ್ಮಾ' ಎಂಬ ಸೂತ್ರದಲ್ಲಿಯೂ 'ಊಷ್ಮಾ' ಎಂಬ ಪದವು ಪ್ರತೀಕಗ್ರಹಣವಾಗಿದೆ. ಆದರೂ ಸಹ ಸೂತ್ರಕಾರರು ಅಲ್ಲೆಲ್ಲೂ 'ಇತಿ' ಶಬ್ದವನ್ನು ಬಳಸಿಲ್ಲ. 'ಹೃದಿ' ಮತ್ತು 'ಊಷ್ಮಾ' ಎಂಬ ಪದಗಳು ಪ್ರತೀಕಗ್ರಹಣವಾಗಿದೆ ಎಂಬ ವಿಚಾರವನ್ನು ಪರವಾದಿಗಳೂ ಕೂಡ ಒಪ್ಪಿಕೊಂಡಿರುತ್ತಾರೆ. ಆದ್ದರಿಂದ 'ಇತಿ' ಶಬ್ದವಿದ್ದರೆ ಮಾತ್ರ ಪ್ರತೀಕಗ್ರಹಣವಾಗುತ್ತದೆ. ಇಲ್ಲದಿದ್ದರೆ ಪ್ರತೀಕಗ್ರಹಣವಾಗುವುದಿಲ್ಲವೆಂಬ ಶ್ರುತಪ್ರಕಾಶದ ಧೋರಣೆಯು ಅಸಾಧುವಾಗಿದೆ.

**प्रकाशः** – आद्यपक्षेऽन्वयपूर्वमर्थमाह – **तथा चेति** ।। किमिदं सूर्यादिभिस्तदनुकरणमित्यतस्तात्पर्यमाह – **सूर्यादीति** ।।

'ತಸ್ಯ' ಎಂಬ ಪದಕ್ಕೆ 'ಆನುಕೂಲ್ಯೇನ ಗೃಹ್ಯಮಾಣಸ್ಯ' ಎಂಬುದು ಮೊದಲನೆಯ ಅರ್ಥ. ಇದು 'ತಸ್ಯ ಭಾಸಾ' ಎಂಬ ವಾಕ್ಯದ ಪ್ರತೀಕವೆಂಬುದು ಎರಡನೆಯ ಅರ್ಥ. ಇಲ್ಲಿ 'ಆನುಕೂಲ್ಯೇನ ಗೃಹ್ಯಮಾಣಸ್ಯ' ಎಂಬ ಮೊದಲನೆಯ ಪಕ್ಷದಲ್ಲಿ ಅನ್ವಯವನ್ನು ಹೇಳುವ ಮೂಲಕ, ಸಂಪೂರ್ಣ ಸೂತ್ರಾರ್ಥವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ತಥಾ ಚ' ಇತ್ಯಾದಿ ಗ್ರಂಥದಿಂದ. ಆನುಕೂಲ್ಯೇನ ಗೃಹ್ಯಮಾಣನಾದ ವ್ಯಕ್ತಿಯನ್ನೇ ಸೂರ್ಯಾದಿ ಸಕಲ ಪ್ರಕಾಶಕ ವಸ್ತುಗಳು ಅನುಕರಣ ಮಾಡುತ್ತಿವೆ ಎಂಬುದಕ್ಕೆ ಏನರ್ಥ? ಈ ಪ್ರಶ್ನೆಗೆ 'ಸೂರ್ಯಾದಿ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – 'तमेव भान्तमनुभाति सर्वम्' इति वाक्यशेषे सर्वं सूर्यादितेजोजातं कर्तृ, तं भान्तमनु तदिच्छानुरोधेन भाति नतु स्वातन्त्र्येणेत्युक्त्या सूर्यादितेजसां तदधीनप्रकाशत्वं लब्धमित्यर्थः ।

'ತಮೇವ ಭಾಂತಮನುಭಾತಿ ಸರ್ವಮ್' ಎಂಬ ವಾಕ್ಯಶೇಷದಲ್ಲಿ 'ಸರ್ವಂ' ಎಂದರೆ ಸೂರ್ಯಾದಿ ಸಕಲತೇಜೋವಸ್ತುಗಳು ಎಂದರ್ಥ. ಪ್ರಕಾಶ ಸ್ವರೂಪನಾದ ಪರಮಾತ್ಮನನ್ನು ಅನುಸರಿಸಿ, ಅಂದರೆ ಪರಮಾತ್ಮನ ಇಚ್ಛೆಗೆ ಅನುಸಾರಿಯಾಗಿ ಸೂರ್ಯಾದಿಗಳೆಲ್ಲರೂ ಪ್ರಕಾಶಮಾನರಾಗಿದ್ದಾರೆ ಹೊರತು, ಸ್ವತಂತ್ರವಾಗಿ ಪ್ರಕಾಶಮಾನವಾಗಿಲ್ಲ ಎಂದು ಅರ್ಥ. ಹೀಗೆ ಹೇಳಿದ್ದರಿಂದ ಸೂರ್ಯಾದಿಗಳ ತೇಜಸ್ಸು ಭಗವಂತನ ಪ್ರಕಾಶದ ಅಧೀನವೆಂದು ಹೇಳಿದಂತಾಯಿತು.

**प्रकाशः** – प्रतीकग्रहणपक्षेऽर्थमाह – **तस्येति** ।। सर्वं जगत्तस्य भासा भातीत्युक्त्या तत्प्रकाश्यत्वं सर्वस्योक्तमिति सूत्रे तस्येति प्रतीकेन तदर्थो हेतुत्वेनोक्त इत्युक्तं भवति ।

ಸೂತ್ರದಲ್ಲಿರುವ 'ತಸ್ಯ' ಎಂಬ ಪದವು ಪ್ರತೀಕಗ್ರಹಣವಾಗಿದೆ ಎಂಬ ಎರಡನೆಯ ಪಕ್ಷದಲ್ಲಿ ಸೂತ್ರಾರ್ಥವನ್ನು ಹೇಳುತ್ತಿದ್ದಾರೆ 'ತಸ್ಯ' ಇತ್ಯಾದಿ ವಾಕ್ಯದಿಂದ. ಸಕಲ ಜಗತ್ತು ಪರಮಾತ್ಮನ ಪ್ರಕಾಶದಿಂದ

ಬೆಳಗುತ್ತಿದೆಯೆಂದು ಹೇಳಿದ್ದರಿಂದ, ಶ್ರುತಿಯಲ್ಲಿ ಸಕಲ ಜಗತ್ತು ಪರಮಾತ್ಮನ ಅಧೀನವಾಗಿ ಪ್ರಕಾಶಿಸುತ್ತದೆ ಎಂದು ಹೇಳಿದ್ದರಿಂದ ಸಕಲಜಗತ್‌ಪ್ರಕಾಶಕತ್ವವೆಂಬ ಧರ್ಮವನ್ನು 'ತಸ್ಯ' ಎಂಬ ಪ್ರತೀಕಗ್ರಹಣದಿಂದಲೇ ಹೇಳಿದಂತಾಯಿತು.

**प्रकाशः – अत एवेति ।।** तस्येत्यस्य समन्वेतव्यपरत्वस्यापि सत्त्वादेव टीकायां ''तमेव भान्तमनुभाति सर्वमिति वाक्यशेषे सूर्यादीनामेतदधीनप्रकाशश्रवणात्'' इत्येतच्छब्दप्रयोगः ।

ಗ್ರಂಥದಲ್ಲಿರುವ 'ಅತ ಏವ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - 'ತಸ್ಯ' ಎಂಬ ಶಬ್ದಕ್ಕೆ 'ಆನುಕೂಲ್ಯೇನ ಗೃಹ್ಯಮಾಣಸ್ಯ' ಎಂಬುದಾಗಿ ಸಮನ್ವಯ ಮಾಡುವಂತಹ ಲಿಂಗವನ್ನು ಅರ್ಥವನ್ನಾಗಿ ಹೇಳಿದ್ದರಿಂದಲೇ ಟೀಕೆಯಲ್ಲಿ, 'ತಮೇವ ಭಾಂತಮನುಭಾತಿ ಸರ್ವಮಿತಿ ವಾಕ್ಯಶೇಷೇ ಸೂರ್ಯಾದೀನಾಮೇತದಧೀನಪ್ರಕಾಶಶ್ರವಣಾತ್' ಎಂದು 'ಏತತ್' ಶಬ್ದವನ್ನು ಪ್ರಯೋಗ ಮಾಡಿದ್ದಾರೆ ಎಂದರೆ ಸೂತ್ರದಲ್ಲಿ 'ತಸ್ಯ' ಎಂಬ ಪದದ ಅಭಿಪ್ರಾಯವನ್ನೇ ಟೀಕೆಯಲ್ಲಿ 'ಏತತಧೀನಪ್ರಕಾಶಶ್ರವಣಾತ್' ಎಂದು ಹೇಳಿದ್ದಾರೆ. ಇಲ್ಲದಿದ್ದಲ್ಲಿ ಅಂದರೆ ಕೇವಲ ವಾಕ್ಯಪ್ರತೀಕ ಮಾತ್ರವಾಗಿದ್ದಲ್ಲಿ ತದಧೀನಪ್ರಕಾಶತ್ವವು ಉತ್‌ಸೂತ್ರಿತವಾಗಬೇಕಿತ್ತು. 'ಸರ್ವಜಗತ್ ಪ್ರಕಾಶಕತ್ವ' ಮತ್ತು ಅನುಕರಣಗಳು 'ಅನುಕೃತೇಃ' ಎಂಬ ಪದದಿಂದಲೇ ಹೇಳಿದಂತಾಗುತ್ತವೆ. ಆದರೆ ತದಧೀನಪ್ರಕಾಶತ್ವವು ತಿಳಿಯುವುದು 'ತಸ್ಯ' ಎಂಬ ಪದಕ್ಕೆ ಆನುಕೂಲ್ಯೇನ ಗೃಹ್ಯಮಾಣಸ್ಯ ಎಂದು ಅರ್ಥೈಸಿದರೆ ಮಾತ್ರ. ಆದ್ದರಿಂದ ಈ ಅರ್ಥವು ಟೀಕಾಕಾರರಿಗೆ ಸಮ್ಮತವೇ ಆಗಿದೆಯೆಂದು ಸ್ಪಷ್ಟವಾಗುತ್ತದೆ.

**प्रकाशः –** ''तस्य भासेति सर्वजगतस्तत्प्रकाश्यत्वप्रतीतेश्च'' इत्युक्तमित्यर्थः ।

ಮತ್ತು ಟೀಕೆಯಲ್ಲಿ 'ತಸ್ಯ ಭಾಸೇತಿ ಸರ್ವಜಗತಸ್ತತ್‌ಪ್ರಕಾಶ್ಯತ್ವಪ್ರತೀತೇಶ್ಚ' ಎಂದು ಹೇಳಿದ್ದರಿಂದ 'ತಸ್ಯ' ಎಂಬ ಪದವು ಪ್ರತೀಕಗ್ರಹಣವೂ ಆಗಿದೆಯೆಂದು ತಿಳಿಸಿದ್ದಾರೆ. ಆದ್ದರಿಂದ ಇಲ್ಲಿ ಗ್ರಂಥಕಾರರ ಎರಡೂ ಬಗೆಯ ವ್ಯಾಖ್ಯಾನಗಳು ಟೀಕೆಗೆ ಸಮ್ಮತವೇ ಆಗಿವೆ.

**प्रकाशः –** तस्य चेति चशब्दार्थं व्यनक्ति – **सूत्र इति ।।** ''अपि स्मर्यते'' इत्यस्य ''यदादित्यगतं तेजः'' इति स्मृतौ प्रागुक्तं लिङ्गद्वयं विष्णुनिष्ठतया स्मर्यतेऽपीत्येका व्याख्या ।

'ತಸ್ಯ ಚ' ಎಂಬ ಸೂತ್ರದಲ್ಲಿರುವ 'ಚ' ಶಬ್ದದ ಅರ್ಥವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಸೂತ್ರ' ಇತ್ಯಾದಿ ವಾಕ್ಯದಿಂದ. 'ಅಪಿ ಸ್ಮರ್ಯತೇ' ಎಂಬ ಎರಡನೆಯ ಸೂತ್ರದಲ್ಲಿ 'ಯದಾದಿತ್ಯಗತಂ ತೇಜಃ' ಎಂಬ ಗೀತಾ ಸ್ಮೃತಿಯು ಸರ್ವಜಗತ್‌ಪ್ರಕಾಶಕತ್ವ ಮತ್ತು ಸೂರ್ಯಾದಿ ಪ್ರಕಾಶಹೇತುತ್ವವೆಂಬ ಎರಡು ಲಿಂಗಗಳು ಕೇವಲ ವಿಷ್ಣುನಿಷ್ಠವಾಗಿವೆಯೆಂಬ ವಿಷಯದಲ್ಲಿ ಪ್ರಮಾಣವಾಗಿದೆಯೆಂದು ಹೇಳುತ್ತಿದೆ. ಇದು 'ತಸ್ಯ ಚ' ಎಂಬಲ್ಲಿರುವ 'ಚ' ಶಬ್ದದ ಮೊದಲನೆಯ ವ್ಯಾಖ್ಯಾನ.

**प्रकाशः –** मामकमित्यस्य मदधीनं मदीयं चेत्यर्थान्मत्तेज एवादित्यादिस्थितं तत्तेजः प्रेरकत्वेनाखिलं भासयतीति व्याख्यानात् ।

ಗೀತೆಯ ವಾಕ್ಯದಲ್ಲಿ 'ಮಾಮಕಮ್' ಎಂಬ ಪದಕ್ಕೆ ನನ್ನ ಅಧೀನ ಮತ್ತು ನನ್ನದು ಎಂಬೆರೆಡರ್ಥಗಳೂ ಇರುವುದರಿಂದ ನನ್ನ ತೇಜಸ್ಸೇ ಆದಿತ್ಯಾದಿಗಳಲ್ಲಿದೆ. ಅವರಲ್ಲಿ ಪ್ರೇರಕನಾಗಿದ್ದು ಸಕಲಜಗತ್ತನ್ನು ಬೆಳಗುತ್ತೇನೆ ಎಂದು ಹೇಳಿದ್ದರಿಂದ ಸೂರ್ಯಾದಿ ಪ್ರಕಾಶಹೇತುತ್ವ ಮತ್ತು ಸರ್ವಜಗತ್‌ಪ್ರಕಾಶಕತ್ವ ಎಂಬೆರಡು ಹೇತುಗಳು ಕೇವಲ ವಿಷ್ಣುನಿಷ್ಠವಾಗಿವೆ ಎಂಬ ವಿಷಯದಲ್ಲಿ ಸ್ಮೃತಿವಾಕ್ಯವು ಪ್ರಮಾಣವಾಗುತ್ತವೆ.

**प्रकाशः –** तथा ''न तत्र सूर्यो भाति'' इत्यनेन यदानुकूल्येन गृह्यमाणस्य सूर्याद्यप्रकाश्यत्वमुक्तं तच्च विष्णोरेव स्मर्यत इत्यपरा व्याख्या । तत्राद्यव्याख्यान इत्यर्थः ।।

ಮತ್ತೊಂದು ವ್ಯಾಖ್ಯಾನ ಹೀಗಿದೆ - 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದಿಂದ, ಆನುಕೂಲ್ಯೇನ ಗೃಹ್ಯಮಾಣನಿಗೆ ಸೂರ್ಯಾದ್ಯಪ್ರಕಾಶಕತ್ವವು ಹೇಳಲ್ಪಟ್ಟಿದೆ. ಇದೂ ಕೂಡ ವಿಷ್ಣುವಿನಲ್ಲಿ ಮಾತ್ರ ಇರುತ್ತದೆಂಬುದು ಸ್ಮೃತಿಪ್ರಮಾಣ ಸಿದ್ಧವಾಗಿದೆ ಎಂಬುದು ಎರಡನೆಯ ವ್ಯಾಖ್ಯಾನ. ಪ್ರಕೃತ ಗ್ರಂಥಕಾರರು 'ಸೂತ್ರೇ' ಎಂಬ ವಾಕ್ಯದಲ್ಲಿ ಮೊದಲನೆಯ ವ್ಯಾಖ್ಯಾನವನ್ನು ಅನುಸರಿಸಿ, ಅರ್ಥವನ್ನು ಹೇಳಿದ್ದಾರೆ.

**प्रकाशः – सर्वजगदिति** ।। तस्येति प्रतीकग्रहणेन लब्धहेतोः कण्ठोक्तानुकृतिरूपहेतुना समुच्चयार्थ इत्यर्थः ।।

'ತಸ್ಯ' ಎಂಬ ಪ್ರತೀಕಗ್ರಹಣದಿಂದ ತಿಳಿಯಲ್ಪಡುವ ಹೇತುವಿಗೆ ಕಂಠತಃ 'ಅನುಕೃತೇಃ' ಎಂಬ ಪದದಿಂದ ಹೇಳಲ್ಪಟ್ಟ 'ಅನುಕೃತಿ' ಎಂಬ ಹೇತುವಿನಿಂದ ಸಮುಚ್ಚಯ ಮಾಡಲಾಗಿದೆ ಎಂದರ್ಥ.

**प्रकाशः – कैश्चिदिति** ।। पूर्वाधिकरणशेषत्वं वदद्भिरित्यर्थः ।

ರಾಮಾನುಜರು 'ಅನುಕೃತೇಸ್ತಸ್ಯ ಚ' ಎಂಬ ಸೂತ್ರವನ್ನು ಹಿಂದಿನ ಅಧಿಕರಣದಲ್ಲೇ ಸೇರಿಸುತ್ತಾರೆ. ಅವರನ್ನು ಗ್ರಂಥಕಾರರು 'ಕೈಶ್ಚಿತ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ.

**प्रकाशः –** ''अन्यकृतीनामप्युपसङ्ग्रहार्थमनुकृतेरित्युक्तम्'' इति तत्वप्रदीपानुरोधेन परिहारमाह – **तथापीति** ।।

ಸೂತ್ರದಲ್ಲಿ 'ಅನುಭಾನಮ್' ಎಂದು ಹೇಳುವ ಬದಲು, 'ಅನುಕೃತೇಃ' ಎಂದೇಕೆ ಹೇಳಿದರು ? ಎಂಬ ಪ್ರಶ್ನೆಗೆ ತತ್ವಪ್ರದೀಪದಲ್ಲಿ 'ಅನುಕೃತೀನಾಮಪ್ಯುಪಸಂಗ್ರಹಾರ್ಥಮನುಕೃತೇರಿತ್ಯುಕ್ತಮ್' ಎಂಬ ಪರಿಹಾರವನ್ನು ಹೇಳಿದ್ದಾರೆ. ಅಂದರೆ ಸೂರ್ಯನಿಗೆ ಇನ್ನೂ ಕೆಲವು ತಾಪನ, ಪಾಚನ ಮೊದಲಾದ ಕೃತಿಗಳಿವೆ ಅವುಗಳೂ

ಕೂಡ ಈಶ್ವರನ ಅಧೀನವೆಂದು ಸಂಗ್ರಹ ಮಾಡಲು ಸೂತ್ರದಲ್ಲಿ 'ಅನುಕೃತೇಃ' ಎಂದೇ ಹೇಳಿದ್ದಾರೆ. ಹೀಗೆ ತತ್ವಪ್ರದೀಪಕ್ಕೆ ಅನುಸಾರಿಯಾದ ಪರಿಹಾರವನ್ನು ಹೇಳುತ್ತಿದ್ದಾರೆ 'ತಥಾಪಿ' ಇತ್ಯಾದಿ ಗ್ರಂಥದಿಂದ.

**प्रकाशः** – ''भानश्रुत्यापि कृतिरुपसङ्गृहीता । भानपूर्वकत्वात्कृतेः'' इति तत्वप्रदीपोक्तया श्रुतावपि भानमुपलक्षणमिति भावः ।

'ಭಾನಶ್ರುತ್ಯಾಪಿ ಕೃತಿರುಪಸಂಗೃಹೀತಾ । ಭಾನಪೂರ್ವಕತ್ವಾತ್ ಕೃತೇಃ' ಎಂದು ತತ್ವಪ್ರದೀಪದಲ್ಲಿ ಹೇಳಿದ್ದರಿಂದ ಶ್ರುತಿಯಲ್ಲೂ ಸಹ ಭಾನವನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂದು ತಿಳಿಯಬೇಕು.

**प्रकाशः** – ऐतरेयभाष्योदाहृतं वाक्यमाह – उक्तं हि भारत इति ।। श्रुतिस्मृती इति ।। न केवलं श्रूयते किन्तु स्मर्यतेऽपीति व्याख्यानादिति भावः ।

ಐತರೇಯಭಾಷ್ಯದಲ್ಲಿ ಉದಾಹರಿಸಿದ ಮಹಾಭಾರತದ ವಾಕ್ಯವನ್ನು 'ಉಕ್ತಂ ಹಿ ಭಾರತೇ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.[೧] 'ಶ್ರುತಿ-ಸ್ಮೃತಿ' ಎಂದರೆ ಕೇವಲ ಶ್ರುತಿ ಮಾತ್ರ ಪ್ರಮಾಣವಾಗಿರುವುದಲ್ಲ. ಹೊರತಾಗಿ ಸ್ಮೃತಿಯೂ ಕೂಡ ಪ್ರಮಾಣವಾಗಿದೆ ಎಂದು ವ್ಯಾಖ್ಯಾನ ಮಾಡಿದ್ದರಿಂದ ಎಂದರ್ಥ.

**प्रकाशः** – सूत्रे स्मृतेरेव प्रतीत्या कथं द्वयोरुक्तिरित्यतस्तद्विशदयन्नेवं विन्यासे हेतुं चाह – तत्र चेति ।। 'अहं तत्तेजो रश्मीत्' इति श्रुतावित्यर्थः ।

ಸೂತ್ರದಲ್ಲಿ ಸ್ಮೃತಿಯನ್ನಷ್ಟೇ ಹೇಳಿದ್ದು ಕಾಣಿಸುತ್ತಿದೆ. ಹೀಗಿರುವಾಗ ನೀವು ಶ್ರುತಿ-ಸ್ಮೃತಿಗಳೆರಡನ್ನೂ ಕೂಡ ಹೇಗೆ ಹೇಳುತ್ತಿದ್ದೀರಿ ? ಎಂಬ ಪ್ರಶ್ನೆಗೆ ಸೂತ್ರಾರ್ಥವನ್ನು ಸ್ಪಷ್ಟಪಡಿಸುತ್ತಾ, ಸ್ಮೃತಿಯನ್ನು ಕಂಠತಃ ಉಚ್ಚಾರ ಮಾಡಿ 'ಅಪಿ' ಶಬ್ದದಿಂದ ಸ್ಮೃತಿಯನ್ನು ಸಮುಚ್ಚಯ ಮಾಡಲು ಕಾರಣವೇನೆಂಬುದನ್ನು 'ತತ್ರ ಚ'

(೧) ಪುರಾಣವನ್ನು ಅಥವಾ ಮಹಾಭಾರತವನ್ನು ಟಿಪ್ಪಣಿಕಾರರು ಉಲ್ಲೇಖ ಮಾಡುವಾಗ ಮಹಾಭಾರತದಲ್ಲಿ ಇಂತಹ ಸ್ಥಳದಲ್ಲಿದೆ ಎಂದಾಗಲೀ, ಅಥವಾ ಪುರಾಣದಲ್ಲಿ ಇಷ್ಟನೇ ಅಧ್ಯಾಯದಲ್ಲಿ ಇದೆ ಎಂದಾಗಲೀ, ಸಾಮಾನ್ಯವಾಗಿ ಉಲ್ಲೇಖ ಮಾಡುವುದಿಲ್ಲ. ಅಂದರೆ ಉಲ್ಲೇಖ ಮಾಡಲ್ಪಡುವ ಶ್ಲೋಕ ಎಲ್ಲಿದೆ ಎಂದು ಸ್ಪಷ್ಟವಾಗಿ ತೋರಿಸುವುದಿಲ್ಲ. ಹೊರತಾಗಿ, ಶ್ರೀಮದಾಚಾರ್ಯರು ಸರ್ವಮೂಲಗ್ರಂಥದಲ್ಲಿ ಎಲ್ಲಿ ಉಲ್ಲೇಖ ಮಾಡಿದ್ದಾರೆಂದಷ್ಟೇ ಟಿಪ್ಪಣಿಕಾರರು ಹೇಳುತ್ತಾರೆ. ಇದಕ್ಕೆ ಕಾರಣ ಹೀಗಿರಬಹುದು. ಪುರಾಣ ಹಾಗೂ ಮಹಾಭಾರತಗಳು ಬಹಳಷ್ಟು ಪ್ರಕ್ಷಿಪ್ತವಾಗಿ ಬಂದಿವೆ. ಶ್ರೀಮದಾಚಾರ್ಯರು ಉಲ್ಲೇಖ ಮಾಡುವಂತಹ ಶ್ಲೋಕಗಳೇ, ಕೆಲವೆಡೆ ಸಿಗುವುದಿಲ್ಲ. ಕೆಲವೊಮ್ಮೆ ಸಿಕ್ಕರೂ ಅನ್ಯಾರ್ಥವೇ ಭಾಸವಾಗುತ್ತದೆ. ಈ ದೃಷ್ಟಿಯಿಂದ ಟಿಪ್ಪಣಿಕಾರರೆಲ್ಲರೂ ಶ್ರೀಮದಾಚಾರ್ಯರು ಉಲ್ಲೇಖಿಸಿದ್ದನ್ನಷ್ಟೇ ತೋರಿಸಿ ಬಿಡುತ್ತಾರೆ. ಅಂದರೆ ಶ್ರೀಮದಾಚಾರ್ಯರು ಉಲ್ಲೇಖ ಮಾಡಿದ್ದಾರೆಂದರೆ ಅದು ಮಹಾಭಾರತದಲ್ಲಿ ಇದ್ದೇ ಇರುತ್ತದೆ.ಮತ್ತು ಯಾವ ಅರ್ಥದಲ್ಲಿ ಶ್ರೀಮದಾಚಾರ್ಯರು ಅದನ್ನು ಉಲ್ಲೇಖ ಮಾಡಿದ್ದಾರೋ ಆ ಅರ್ಥವೇ ಅದಕ್ಕೆ ನಿಜವಾದ ಅರ್ಥವೆಂದೂ ಕೂಡ ತಿಳಿಯಬೇಕು ಎಂಬುದು ಟಿಪ್ಪಣಿಕಾರರ ಅಭಿಪ್ರಾಯವಿರಬಹುದು. ಇಲ್ಲಿಯೂ ಕೂಡ ಓದುಗರು ಗಮನಿಸಬಹುದು. ಮಂತ್ರಾಲಯ ಪ್ರಭುಗಳು 'ಐತರೇಯ ಭಾಷ್ಯೋದಾಹೃತಂ ವಾಕ್ಯಮಾಹ' ಎಂದಷ್ಟೇ ಹೇಳಿದ್ದಾರೆ ಹೊರತು, ಮಹಾಭಾರತದಲ್ಲಿ ಎಲ್ಲಿದೆಯೆಂದು ಉಲ್ಲೇಖ ಮಾಡಿಲ್ಲ.

ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಶ್ರುತಿಯೆಂದರೆ 'ಅಹಂ ತತ್ತೇಜೋ ರಶ್ಮೀತ್' ಎಂಬ ಶ್ರುತಿಯಲ್ಲಿ ಎಂದರ್ಥ.

**प्रकाशः** – व्याख्यानान्तरमाशङ्क्य भाष्यकृतव्याख्याने बीजमाह – **यद्यपीति** ।। इदं द्वितीयसूत्रम् । एतेनाद्यसूत्रे लिङ्गोक्तिः । द्वितीये तत्समर्थनमिति क्रमोऽप्युक्तो भवति ।

ಆನುಕೂಲ್ಯೇನ ಗೃಹ್ಯಮಾಣತ್ವವು ಸಾಧ್ಯವಾಗಿದೆ. ಈ ವಿಷಯದಲ್ಲಿಯೇ ಶ್ರುತಿ-ಸ್ಮೃತಿಗಳನ್ನು ಪ್ರಮಾಣವನ್ನಾಗಿ ಎರಡನೆಯ ಸೂತ್ರವು ಹೇಳಬಹುದಿತ್ತಲ್ಲವೇ? ಎಂಬ ಮತ್ತೊಂದು ಸೂತ್ರದ ವ್ಯಾಖ್ಯಾನವನ್ನು ಆಶಂಕಿಸಿ, ಭಾಷ್ಯಕಾರರು ಮಾಡಲ್ಪಟ್ಟ ವ್ಯಾಖ್ಯಾನದಲ್ಲಿಯೇ ಕಾರಣವೇನೆಂಬುದನ್ನು ವಿಮರ್ಶೆ ಮಾಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ. 'ಇದಂ' ಎಂಬ ಶಬ್ದಕ್ಕೆ ಎರಡನೆಯ ಸೂತ್ರ ಎಂದರ್ಥ.

ಇಲ್ಲಿಯ ತನಕ ವ್ಯಾಖ್ಯಾನ ಮಾಡಿದಂತೆ, ಮೊದಲನೆಯ ಸೂತ್ರವು ಆನುಕೂಲ್ಯೇನ ಗೃಹ್ಯಮಾಣನಾದವನು ಪರಮಾತ್ಮನೇ ಎಂಬ ವಿಷಯದಲ್ಲಿ ಲಿಂಗಗಳನ್ನು ಹೇಳುತ್ತಿದೆ. ಎರಡನೆಯ ಸೂತ್ರವು ಆ ಲಿಂಗಗಳೆಲ್ಲವೂ ಕೇವಲ ವಿಷ್ಣುನಿಷ್ಠವಾಗಿವೆಯೆಂದು ಸಮರ್ಥನೆ ಮಾಡುತ್ತಿದೆ. ಅಂದರೆ ಸಕಲ ಜಗತ್‌ಪ್ರಕಾಶಕತ್ವಾದಿ ಹೇತುಗಳಿಗೆ ಪಕ್ಷಧರ್ಮತ್ವವನ್ನು ಸಮರ್ಥನೆ ಮಾಡುತ್ತಿದೆ. ಆದ್ದರಿಂದ ಎರಡೂ ಸೂತ್ರಗಳ ಕ್ರಮವು ಸುಸಂಗತವಾಗಿದೆ.

**गुरुराजीयम्** – **आद्यव्याख्यान इति** ।। न केवलं सूर्यादिप्रकाशनियामकत्वं सर्वजगत्प्रकाशकत्वं च लिङ्गं श्रूयते किन्तु स्मर्यतेऽपीत्याद्यव्याख्यान इत्यर्थः । **आद्यसूत्रोक्तहेतूनामिति** ।। सूर्यादिप्रकाशनियामकत्वसर्वजगत्प्रकाशकत्वसूर्याद्य-प्रकाश्यत्वरूपहेतूनामित्यर्थः । न चैतल्लिङ्गद्वयस्य विष्णुनिष्ठत्वमिति टीकाविरोध इति वाच्यम् । द्वितीयसूत्रस्य द्वितीयव्याख्यानानुसारेण तदुपपत्तेः । अत्र चाद्ययोजनाभिप्रायेण हेतूनामित्युक्तत्वादित्यदोषः ।।




ಈ ಅಧಿಕರಣದಲ್ಲಿ 'ಅನುಕೃತೇಸ್ತಸ್ಯ ಚ' ಎಂದು 'ಅಪಿ ಸ್ಮರ್ಯತೇ' ಎಂದು ಎರಡು ಸೂತ್ರಗಳಿವೆ. ಪ್ರಥಮಸೂತ್ರದಲ್ಲಿರುವ 'ತಸ್ಯ'ಎಂಬ ಪದದಿಂದ ಸಮನ್ವಯ ಮಾಡುವಂತಹ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವು ತಿಳಿಯುತ್ತಿದೆ. ಯಾವ 'ತಸ್ಯ' ಎಂಬ ಪದವು ಸಮನ್ವಯ ಮಾಡುವಂತಹ ಲಿಂಗವನ್ನು ತಿಳಿಸುತ್ತಿದೆಯೋ, ಅದೇ ಪದವು 'ತಸ್ಯಭಾಸಾ' ಎಂಬ ಶ್ರುತಿಯ ಪ್ರತೀಕಗ್ರಹಣವೂ ಆಗಿದೆಯೆಂಬುದೇ ಇಲ್ಲಿ ಗಮನಿಸಬೇಕಾದ ಸ್ವಾರಸ್ಯ.

ಅನುಕೃತ್ಯಧಿಕರಣ (೧-೩-೬)

ಸೂತ್ರದಲ್ಲಿರುವ 'ಅನುಕೃತೇಃ' ಎಂಬ ಪದದಿಂದ ಸೂರ್ಯಾದಿಪ್ರಕಾಶ ಹೇತುತ್ವವೆಂಬ ಹೇತು ತಿಳಿಯುತ್ತದೆ. 'ತಸ್ಯ' ಎಂಬ ಪ್ರತೀಕ ಗ್ರಹಣದಿಂದ ಸಕಲಜಗತ್ಪ್ರಕಾಶಕತ್ವವೆಂಬ ಹೇತು, ಹಾಗೂ 'ಚ' ಶಬ್ದದಿಂದ ಸೂರ್ಯಾದ್ಯಪ್ರಕಾಶ್ಯತ್ವ ಎಂಬ ಹೇತು ತಿಳಿಯುತ್ತದೆ. ಹೀಗೆ ಸೂತ್ರದಲ್ಲಿರುವ ಮೂರು ಪದಗಳಿಂದ ಮೂರು ಹೇತುಗಳನ್ನು ಸೂತ್ರಕಾರರು ಹೇಳಿರುತ್ತಾರೆ.

ಸೂತ್ರದಲ್ಲಿರುವ 'ಚ' ಶಬ್ದವೂ ಕೂಡ ಎರಡು ಪ್ರಕಾರಗಳಲ್ಲಿ ಸಮುಚ್ಚಯವನ್ನು ಹೇಳುತ್ತಿದೆ. 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ ಎರಡು ಅರ್ಥಗಳಿವೆ. ಮೊದಲನೆಯ ಅರ್ಥದಲ್ಲಿ ಸೂರ್ಯಾದ್ಯಪ್ರಕಾಶತ್ವ ಹೇತುವನ್ನು ಶ್ರುತಿ-ಸ್ಮೃತಿಸಿದ್ಧವಾಗಿದೆಯೆಂದು ಹೇಳುವುದಿಲ್ಲ. ಅದನ್ನು ಈ ಸೂತ್ರದಲ್ಲಿರುವ 'ಚ' ಶಬ್ದವು ಸಮುಚ್ಚಯ ಮಾಡುತ್ತಿದೆ. ಎರಡನೆಯ ವ್ಯಾಖ್ಯಾನದಲ್ಲಿ ಸರ್ವಜಗತ್ಪ್ರಕಾಶಕತ್ವವೆಂಬ ಹೇತುವನ್ನು ಸಮುಚ್ಚಯ ಮಾಡಲು 'ಚ' ಶಬ್ದವು ನಿವಿಷ್ಟವಾಗಿದೆಯೆಂದು ಹೇಳಿದಂತಾಗುತ್ತದೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು - 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ ಅನುಕೃತಿಯೆಂಬ ಶಬ್ದದಿಂದ ಒಂದು ಲಿಂಗವನ್ನು 'ತಸ್ಯ' ಎಂಬ ವಾಕ್ಯಪ್ರತೀಕದಿಂದ ಮತ್ತೊಂದು ಲಿಂಗವನ್ನು 'ಚ' ಶಬ್ದದಿಂದ 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ಮೂರನೆಯ ಲಿಂಗವನ್ನು ಹೇಳಿದಂತಾಯಿತು. ಅನಂತರ 'ಅಪಿ ಸ್ಮರ್ಯತೇ' ಎಂಬ ಎರಡನೆಯ ಸೂತ್ರದಲ್ಲಿ ಮೂರೂ ಲಿಂಗಗಳಿಗೂ ಶ್ರುತಿಸಮಾಖ್ಯಾವನ್ನು ಹೇಳುತ್ತಿಲ್ಲ. ಹೊರತಾಗಿ, 'ಸರ್ವಜಗತ್ಪ್ರಕಾಶಕತ್ವ' ಮತ್ತು 'ಸೂರ್ಯಾದಿಪ್ರಕಾಶಹೇತುತ್ವ' ಎಂಬೆರಡು ಹೇತುಗಳಿಗೆ ಮಾತ್ರ ಶ್ರುತಿಸಮಾಖ್ಯಾಪ್ರಮಾಣವನ್ನು ಹೇಳಲಾಗಿದೆ. 'ಚ'ಶಬ್ದದಿಂದ ಸೂಚಿತವಾದ ಸೂರ್ಯದ್ಯಪ್ರಕಾಶ್ಯತ್ವ ಎಂಬ ಹೇತುವಿಗೆ ಶ್ರುತಿಸಮಾಖ್ಯಾಪ್ರಮಾಣವನ್ನು ಹೇಳುತ್ತಿಲ್ಲ. ಇದು ಮೊದಲನೆಯ ವ್ಯಾಖ್ಯಾನ. 'ಅಪಿ ಸ್ಮರ್ಯತೇ' ಎಂಬ ಸೂತ್ರದ ಎರಡನೆಯ ವ್ಯಾಖ್ಯಾನದಲ್ಲಿ ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಮೂರೂ ಲಿಂಗಗಳಿಗೂ ಕೂಡ ಸ್ಮೃತಿಸಮಾಖ್ಯಾಪ್ರಮಾಣವನ್ನು ಹೇಳುತ್ತಿದ್ದಾರೆಂದು ಸಮರ್ಥಿಸಿದ್ದಾರೆ. 'ಅಪ್ರಿ ಸ್ಮರ್ಯತೇ' ಎಂಬ ಸೂತ್ರಕ್ಕೆ ಮೊದಲನೆಯ ವ್ಯಾಖ್ಯಾನವನ್ನು ವಿವಕ್ಷಿಸಿದಾಗ 'ಸೂರ್ಯಾದ್ಯಪ್ರಕಾಶಕತ್ವ' ಎಂಬ ಹೇತು ಅನುಕ್ತವಾಗುತ್ತದೆ. ಅದನ್ನು ಇಲ್ಲಿಯರುವ 'ಚ' ಶಬ್ದವು ಸಮುಚ್ಚಯ ಮಾಡುತ್ತಿದೆ ಎಂದು ಹೇಳಿದಂತಾಗುತ್ತದೆ. ಎರಡನೆಯ ವ್ಯಾಖ್ಯಾನದಲ್ಲಿ ಸೂರ್ಯಾದ್ಯಪ್ರಕಾಶ್ಯತ್ವವು ಎರಡನೆಯ ಸೂತ್ರದಿಂದ ಅನುಕ್ತವಾಗುವುದಿಲ್ಲ; ಉಕ್ತಪ್ರಾಯವೇ ಆಗುತ್ತದೆ. ಈ ಪಕ್ಷದಲ್ಲಿ 'ಸರ್ವಜಗತ್ಪ್ರಕಾಶಕತ್ವ' ಎಂಬ ಉಕ್ತವಾದ ಹೇತುವನ್ನೇ ಸಮುಚ್ಚಯ ಮಾಡುತ್ತಿದೆಯೆಂದು ಹೇಳಿದಂತಾಗುತ್ತದೆ. ಅಂದರೆ ಇಲ್ಲಿರುವ ಸಣ್ಣ ವ್ಯತ್ಯಾಸವನ್ನು ಗಮನಿಸಬೇಕು -

ರಾಮಾನುಜರು ಈ ಸೂತ್ರದಲ್ಲಿ 'ಚ' ಶಬ್ದವಿರುವುದರಿಂದ ಇದು ಬೇರೆ ಅಧಿಕರಣವೇ ಆಗುವುದಿಲ್ಲವೆಂದು ವಾದ ಮಾಡುತ್ತಾರೆ. ಅವರನ್ನು ಈಗ ನಿರಾಕರಿಸಿದಂತಾಯಿತು.

ಸೂರ್ಯನಲ್ಲಿ ಕೇವಲ ಪ್ರಕಾಶಶಕ್ತಿಯಷ್ಟೇ ಇರುವುದಲ್ಲ.

'ತಾಪಿನೀ ಪಾಚಿನೀ ಚೈವ ಶೋಷಿಣೀ ಚ ಪ್ರಕಾಶಿನೀ ।
ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥

ಎಲೈ ! ರಾಜನೇ, ಸೂರ್ಯನು ಎಲ್ಲವನ್ನೂ ಸುಡುತ್ತಾನೆ, ಬೇಯಿಸುತ್ತಾನೆ, ಒಣಗಿಸುತ್ತಾನೆ. ಪ್ರಕಾಶ ಪಡಿಸುತ್ತಾನೆ. ಆದರೆ ಅವನಲ್ಲಿರುವ ಈ ಎಲ್ಲ ಶಕ್ತಿಗಳು ನಾರಾಯಣನದ್ದೇ ಹೊರತು, ಅವನದ್ದಲ್ಲ ಎಂದು. ಮಹಾಭಾರತದ

ಈ ಮಾತಿನಂತೆ ಪಾಚನ ಮೊದಲಾದ ಕೃತಿಗಳು ಸೂರ್ಯನಲ್ಲಿ ಪ್ರಸಿದ್ಧವಾಗಿವೆ. ಇವುಗಳ ಸಮನ್ವಯ ಮಾಡುವ ಉದ್ದೇಶದಿಂದ ಸೂತ್ರದಲ್ಲಿ 'ಅನುಭಾನಮ್' ಎಂದು ಹೇಳದೇ 'ಅನುಕೃತೇಃ' ಎಂದು ಹೇಳಿದ್ದಾರೆ.

ಎರಡನೆಯ ಸೂತ್ರದಲ್ಲಿ ಸ್ಮೃತಿಯನ್ನೇ ಕಂಠತಃ ಹೇಳಿ, ಶ್ರುತಿಯನ್ನು 'ಅಪಿ' ಶಬ್ದದಿಂದ ಸಮುಚ್ಚಯ ಮಾಡಿದ್ದಾರೆ. ಸ್ಮೃತಿಗಿಂತಲೂ ಶ್ರುತಿಯೇ ಪ್ರಬಲವೆಂದು ಅಭಿಪ್ರಾಯ.

• • • • •

## ಶಾಂಕರಭಾಷ್ಯ ವಿಮರ್ಶೆ

### तात्पर्यचन्द्रिका

**अन्ये तु आथर्वणस्थं ''न तत्र सूर्यः'' इत्यादिकं विषयवाक्यमित्याहुः ।**

ಅನುವಾದ - ಅದ್ವೈತಿಗಳು ಆಥರ್ವಣೋಪನಿಷತ್ತಿನಲ್ಲಿರುವ 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ವಾಕ್ಯವನ್ನು ಈ ಅಧಿಕರಣದ ವಿಷಯವೆಂದು ಹೇಳುತ್ತಾರೆ.

**तन्न । त्वया हि ''यत्तदद्रेश्यम्'' इत्यादिप्रकरणस्य ब्रह्मपरत्वसाधकेनादृश्यत्वाद्यधिकरणेनैव तत्प्रकरणस्थस्य ''यस्मिन्द्यौः'' इत्यादेरपि तत्परत्वे सिद्धे द्युभ्वाद्यधिकरणं व्यर्थमिति शङ्कित्वा ''यत्तदद्रेश्यम्'' इत्यादिप्रकरणे ''यस्मिन्द्यौरित्यादिवाक्यं नास्तीति कृत्वा चिन्तया द्युभ्वाद्यधिकरणमित्युक्तम् ।**

ಇದು ತಪ್ಪು. ಏಕೆಂದರೆ ಅದ್ವೈತಿಗಳಾದ ನೀವು ಈ ಅಧಿಕರಣದ ಸಾರ್ಥಕ್ಯವನ್ನು ಹೀಗೆ ಸಮರ್ಥನೆ ಮಾಡಬೇಕು - 'ಯತ್ತದದ್ರೇಶ್ಯಮ್' ಇತ್ಯಾದಿ ಪ್ರಕರಣವು ಬ್ರಹ್ಮಪರವಾಗಿದೆಯೆಂದು ಅದೃಶ್ಯತ್ವಾಧಿಕರಣದಲ್ಲಿ ಸಮರ್ಥನೆ ಮಾಡಿದ್ದಾಗಿದೆ. ಹೀಗಿರುವಾಗ ಅದೇ ಪ್ರಕರಣದಲ್ಲಿರುವ 'ಯಸ್ಮಿನ್‌ದ್ಯೌಃ' ಎಂಬ ವಾಕ್ಯವೂ ಕೂಡ ಬ್ರಹ್ಮಪರವೆಂದು ಸಿದ್ಧವಾಗುತ್ತದೆ. ಪುನಃ ಇದರ ಸಮನ್ವಯಕ್ಕಾಗಿ ದ್ಯುಭ್ವಾದ್ಯಧಿಕರಣವು ಹೊರಟಿದ್ದು ವ್ಯರ್ಥವಲ್ಲವೇ? ಎಂದು ಆಶಂಕಿಸಿ, 'ಯತ್ತದದ್ರೇಶ್ಯಮ್' ಇತ್ಯಾದಿ ಬ್ರಹ್ಮಪ್ರಕರಣದಲ್ಲಿ 'ಯಸ್ಮಿನ್‌ದ್ಯೌಃ' ಇತ್ಯಾದಿ ವಾಕ್ಯವು ಇಲ್ಲವೆಂದು ಇಟ್ಟುಕೊಂಡು ಆಶಂಕಿಸಬೇಕು. ಆಗ ಅದರ ಪರಿಹಾರಕ್ಕಾಗಿ ದ್ಯುಭ್ವಾದ್ಯಧಿಕರಣವು ಹೊರಟಿದೆಯೆಂದು ಅದ್ವೈತಿಗಳಾದ ನೀವು ದ್ಯುಭ್ವಾದ್ಯಧಿಕರಣದ ಸಾರ್ಥಕ್ಯವನ್ನು ಹೇಳುತ್ತೀರಿ.

**आथर्वणस्थं च ''न तत्र'' इत्यादिवाक्यं ''यत्तदद्रेश्यम्'' इत्यादिप्रकरणे द्युभ्वादिसूत्रस्थित्यदनसूत्रविषयभूतयोः ''यस्मिन्द्यौः अनश्नन्नन्यः'' इति वाक्ययोर्मध्ये च वर्तते । तथा चास्याधिकरणस्यादृश्यत्वाधिकरणद्युभ्वाद्यधिकरणाभ्यामगतार्थत्वाय**

**"न तत्र" इत्यादिवाक्यं "यत्तदद्रेश्यम्" इत्यादिप्रकरणे "यस्मिन्द्यौः" इत्यादि-वाक्यद्वयमध्ये च नास्तीति कृत्वा चिन्तयेदमधिकरणमिति वाच्यम् । नच तद्युक्तम् ।**

ಇದೇ ನ್ಯಾಯದಿಂದಲೇ ಪ್ರಕೃತದಲ್ಲಿಯೂ ಆರ್ಥವಣೋಪನಿಷತ್ತಿನಲ್ಲಿರುವ 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ವಾಕ್ಯವು 'ಯತ್ತದದ್ರೇಶ್ಯಮ್' ಇತ್ಯಾದಿ ಪ್ರಕರಣದಲ್ಲಿಯೇ ಪ್ರಾಪ್ತವಾಗಿದೆ. ಅದೃಶ್ಯತ್ವಾಧಿಕರಣದ ನ್ಯಾಯದಿಂದಲೇ 'ಯತ್ತದದ್ರೇಶ್ಯಮ್' ಎಂಬ ವಾಕ್ಯವು ಬ್ರಹ್ಮಪರವೆಂದು ಸಿದ್ಧವಾದಾಗ, 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ವಾಕ್ಯವೂ ಕೂಡ ಬ್ರಹ್ಮಪರವೆಂದು ಸಿದ್ಧವಾದಂತಾಯಿತು. ಮತ್ತು 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದ ಹಿಂದಿನ ವಾಕ್ಯದಲ್ಲಿ 'ಯಸ್ಮಿನ್‌ದ್ಯೌಃ' ಎಂಬ ವಾಕ್ಯವು ಪ್ರಸಕ್ತವಾಗಿದೆ. ಇದು ದ್ಯುಭ್ವಾದ್ಯಧಿಕರಣದಿಂದ ಬ್ರಹ್ಮಪರವೆಂದು ಸಿದ್ಧವಾಗಿದೆ. 'ನ ತತ್ರ ಸೂರ್ಯೋ ಭಾತಿ' ಎಂಬ ಮುಂದಿನ 'ಅನಶ್ನನ್ನನ್ಯಃ' ಎಂಬ ವಾಕ್ಯವು 'ಸ್ಥಿತ್ಯದನಾಭ್ಯಾಂ ಚ' ಎಂಬ ಅಧಿಕರಣದಿಂದ ಬ್ರಹ್ಮಪರವೆಂದು ಸಿದ್ಧವಾಗಿದೆ. ಹೀಗೆ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದ ಪ್ರಾರಂಭದ ಪ್ರಕರಣವು ಮತ್ತು ಹಿಂದಿನ ಮುಂದಿನ ವಾಕ್ಯಗಳೆಲ್ಲವೂ ಬ್ರಹ್ಮಪರವೆಂದು ಸಿದ್ಧವಾಗಿರುವಾಗ, ಪುನಃ ಈ ಅಧಿಕರಣಕ್ಕೆ ಅದೃಶ್ಯತ್ವಾಧಿಕರಣ, ದ್ಯುಭ್ವಾದ್ಯಧಿಕರಣಗಳಿಂದ ಅಗತಾರ್ಥತ್ವವನ್ನು ಹೇಳುವ ಮೂಲಕ ಸಾರ್ಥಕ್ಯವನ್ನು ಹೇಗೆ ಹೇಳುವುದು? ಎಂಬ ಪ್ರಶ್ನೆಗೆ ಅದ್ವೈತಿಗಳಾದ ನೀವು ಹೀಗೆ ಉತ್ತರಿಸಬೇಕು. 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ವಾಕ್ಯವು 'ಯತ್ತದದ್ರೇಶ್ಯಮ್' ಇತ್ಯಾದಿ ಪ್ರಕರಣದಲ್ಲಿ ಮತ್ತು 'ಯಸ್ಮಿನ್‌ದ್ಯೌಃ' ಇತ್ಯಾದಿ ವಾಕ್ಯದ್ವಯಗಳ ಮಧ್ಯದಲ್ಲಿ ಇರುವುದೇ ಇಲ್ಲವೆಂದು ಕೃತ್ವಾಚಿಂತೆಯನ್ನು ಮಾಡಲಾಗಿದೆ. ಈ ಕೃತ್ವಾಚಿಂತೆಯ ಪರಿಹಾರಕ್ಕೋಸ್ಕರ ಈ ಅನುಕೃತ್ಯಧಿಕರಣವು ಹೊರಟಿರುತ್ತ. ಹೀಗೆ ಅದ್ವೈತಿಗಳು ಉತ್ತರಿಸಬೇಕು. ಆದರೆ ಈ ಕೃತ್ವಾಚಿಂತೆಯನ್ನು ಮಾಡಿಕೊಂಡು ಅಧಿಕರಣ ಸಾರ್ಥಕ್ಯವನ್ನು ಹೇಳುವುದು ಯುಕ್ತವಲ್ಲ.

**यतः**

**एकत्रापि च नास्तीति कृत्वा चिन्ता न युज्यते ।**
**अनेकस्मिन्न युक्तेति किमु गत्यन्तरे सति ।। १ ।।**

ಏಕೆಂದರೆ -

'ಏಕತ್ರಾಪಿ ಚ ನಾಸ್ತೀತಿ ಕೃತ್ವಾ ಚಿಂತಾ ನ ಯುಜ್ಯತೇ ।
ಅನೇಕಸ್ಮಿನ್ನ ಯುಕ್ತೇತಿ ಕಿಮು ಗತ್ಯಂತರೇ ಸತಿ ॥೧॥

ಒಂದು ಕಡೆಯೂ ಇಲ್ಲವೆಂದು ಕೃತ್ವಾಚಿಂತೆಯನ್ನು ಮಾಡುವುದು ಯುಕ್ತವಾಗುವುದಿಲ್ಲ.

ಹೀಗಿರುವಾಗ ಅನೇಕ ವಾಕ್ಯಗಳಿಂದ ಬ್ರಹ್ಮಪ್ರಕರಣವೆಂದು ನಿರ್ಣಯವಾಗುತ್ತಿರುವಾಗ ಆ ಎಲ್ಲಾ ವಾಕ್ಯಗಳನ್ನು ಇಲ್ಲವೆಂದು ತಿಳಿದು 'ನ ತತ್ರ' ಎಂಬ ವಾಕ್ಯವು ಮಾತ್ರ ಇರುತ್ತದೆಂದು ಕೃತ್ವಾಚಿಂತೆ ಮಾಡುವುದು ಸರಿಯಲ್ಲ. ಗತ್ಯಂತರವಿದ್ದಾಗಂತಲೂ ಈ ಕೃತ್ವಾಚಿಂತೆಯು ಅತ್ಯಂತ ಅನ್ಯಾಯವಾಗುತ್ತದೆ.

**अस्ति हि काठकवाक्यरूपं गत्यन्तरम् । अन्यथा ''अत एव प्राणः'' इत्यस्य ''प्राणबन्धनं हि सोम्य मनः'' इति वाक्यं ब्रह्मप्रकरणस्थत्वेनासन्दिग्धत्वान्न विषयः । किन्तु ''प्राण इति होवाच'' इति वाक्यमेवेति प्राणाधिकरणे यत्त्वयोक्तं तदयुक्तं स्यात् । तद्वाक्यं तत्प्रकरणे नास्तीति कृत्वा चिन्तया तत्सम्भवात् ।**

ಪ್ರಕೃತ ಕಾಠಕವಾಕ್ಯವನ್ನೇ ಈ ಅಧಿಕರಣದ ವಿಷಯವೆಂದು ಹೇಳಬಹುದೆಂಬ ಗತ್ಯಂತರವಿರುವಾಗ ನೀವು ಮಾಡುವ ಕೃತ್ವಾಚಿಂತೆಯು ಯುಕ್ತವೇ ಆಗುವುದಿಲ್ಲ. ಒಂದು ವೇಳೆ ಗತ್ಯಂತರವಿದ್ದಾಗಲೂ ಕೃತ್ವಾಚಿಂತೆಯನ್ನು ಮಾಡುವುದಾದರೆ, 'ಅತ ಏವ ಪ್ರಾಣಃ' ಎಂಬ ಸೂತ್ರದ ವೃತ್ತಿಯಲ್ಲಿ 'ಪ್ರಾಣಬಂಧನಂ ಹಿ ಸೋಮ್ಯ ಮನಃ'(೧) ಎಂಬ ವಾಕ್ಯವನ್ನು ವಿಷಯವೆಂದು ಪರಿಗಣಿಸಲಾಗಿದೆ. ಆದರೆ ಅದ್ವೈತಿಗಳಾದ ನೀವು 'ಪ್ರಾಣಬಂಧನಂ ಹಿ ಸೋಮ್ಯ ಮನಃ ಇತಿ ವಾಕ್ಯಂ ಬ್ರಹ್ಮಪ್ರಕರಣಸ್ಥತ್ವೇನಾಸಂದಿಗ್ಧತ್ವಾನ್ನ ವಿಷಯಃ । ಕಿಂತು ಪ್ರಾಣ ಇತಿ ಹೋವಾಚ' ಇತಿ ವಾಕ್ಯಮೇವ' ಎಂದು 'ಪ್ರಾಣಬಂಧನಂ ಹಿ ಸೋಮ್ಯ ಮನಃ' ಎಂಬ ವಾಕ್ಯವು ಬ್ರಹ್ಮಪ್ರಕರಣದಲ್ಲಿ ಸಂದಿಗ್ಧವೇ ಆಗಿಲ್ಲ. ಹಾಗಾಗಿ ಇದನ್ನು ವಿಷಯವೆಂದು ಪರಿಗಣಿಸದೇ 'ಪ್ರಾಣ ಇತಿ ಹೋವಾಚ' ಎಂಬ ವಾಕ್ಯವನ್ನೇ ವಿಷಯವೆನ್ನಬೇಕೆಂದು ಪ್ರಾಣಾಧಿಕರಣದಲ್ಲಿ ಅದ್ವೈತಿಗಳಾದ ನೀವು ಸಮರ್ಥನೆ ಮಾಡಿದ್ದೀರಿ. ಇದು ಅಯುಕ್ತವಾಗಬೇಕಾದೀತು. ಏಕೆಂದರೆ 'ಪ್ರಾಣಬಂಧನಂ ಹಿ ಸೋಮ್ಯ ಮನಃ' ಎಂಬ ವಾಕ್ಯವನ್ನು ಬ್ರಹ್ಮಪ್ರಕರಣದಲ್ಲಿ ಇಲ್ಲವೆಂದು ಕೃತ್ವಾಚಿಂತೆಯನ್ನು ಮಾಡಿಯೇ ವಿಷಯವೆಂದು ಪರಿಗಣಿಸಬಹುದು. ಆದರೂ ಕೂಡ ನೀವು ಹಾಗೇ ಮಾಡದೇ ಬೇರೆಗತಿಯನ್ನು ತೋರಿಸಿದ್ದೀರಿ. ಅದರಂತೆ ಇಲ್ಲಿಯೂ ಕೂಡ ಕಾಠಕವಾಕ್ಯವೆಂಬ ಗತ್ಯಂತರವಿರುವಾಗ ಅಥರ್ವಣೋಪನಿಷತ್ತಿನಲ್ಲಿರುವ ವಾಕ್ಯವನ್ನು ಕೃತ್ವಾಚಿಂತೆಯ ಮೂಲಕ ವಿಷಯವೆಂದು ಪ್ರತಿಪಾದಿಸುವುದು ತಪ್ಪಾಗುತ್ತದೆ.

(೧) ಪ್ರತಿಯೊಂದು ಸೂತ್ರಗ್ರಂಥಗಳಿಗೂ ವೃತ್ತಿಯೆಂಬುದು ಇರುತ್ತದೆ. ಜೈಮಿನಿಸೂತ್ರ, ಪಾಣಿನಿಸೂತ್ರ ಹೀಗೆ ಸಕಲ ಸೂತ್ರಗ್ರಂಥಗಳಿಗೂ ವೃತ್ತಿಕಾರರು ವೃತ್ತಿಯನ್ನು ಬರೆದಿರುತ್ತಾರೆ. ಅದರಂತೆ ಬ್ರಹ್ಮಸೂತ್ರಗಳಿಗೂ ಕೂಡ ಪ್ರಾಚೀನವೃತ್ತಿಕಾರರು ವೃತ್ತಿಗ್ರಂಥಗಳನ್ನು ಬರೆದಿದ್ದಾರೆ. ೨೧ ಕುಭಾಷ್ಯಗಳು ಬರೆಯುವುದಕ್ಕಿಂತ ಮೊದಲೇ ಈ ವೃತ್ತಿಗ್ರಂಥವು ಲಿಖಿತವಾಗಿದೆ. 'ಅತ ಏವ ಪ್ರಾಣಃ' ಎಂಬ ಸೂತ್ರಕ್ಕೆ 'ಪ್ರಾಣಬಂಧನಂ ಹಿ ಸೋಮ್ಯ ಮನಃ' ಎಂಬುದನ್ನು ವಿಷಯವಾಕ್ಯವೆಂದು ಪರಿಗಣಿಸಲಾಗಿದೆ. ಅದನ್ನು ಶಂಕರಾಚಾರ್ಯರು ತಮ್ಮ ಗ್ರಂಥದಲ್ಲಿ ವಿಷಯವಾಕ್ಯವಲ್ಲವೆಂದು ನಿರಾಕರಿಸಿದ್ದಾರೆ. ಶಂಕರ ಭಾಷ್ಯದ ಹಿಂದಿನ ಭಾಷ್ಯದಲ್ಲಿ

**किं चाथर्वणे पूर्वत्र ''विरजं ब्रह्म निष्कलम्'' इत्यादीनां परत्र च ''ब्रह्मैवेदममृतं पुरस्तात्'' इत्यादीनां ब्रह्मश्रुतिलिङ्गादीनां स्पष्टत्वादस्माकं पक्ष इव दृढपूर्वपक्षहेत्वभावाच्च न तत्र संशयः ।**

ಮತ್ತು ನೀವು ವಿಷಯವಾಕ್ಯವೆಂದು ಪರಿಗಣಿಸುವ ಆಥರ್ವಣೋಪನಿಷತ್ತಿನ ವಾಕ್ಯದ ಹಿಂದಿನ ವಾಕ್ಯದಲ್ಲಿ 'ವಿರಜಂ ಬ್ರಹ್ಮ ನಿಷ್ಕಲಮ್' ಎಂಬ ವಾಕ್ಯವಿದೆ. ಮುಂದೆ 'ಬ್ರಹ್ಮೈವೇದಮಮೃತಂ ಪುರಸ್ತಾತ್' ಎಂದಿದೆ. ಹೀಗೆ ಬ್ರಹ್ಮಶ್ರುತಿಲಿಂಗಗಳೆಲ್ಲವೂ ಹಿಂದಿನ-ಮುಂದಿನ ವಾಕ್ಯಗಳಲ್ಲಿ ಅತ್ಯಂತ ಸ್ಪಷ್ಟವಾಗಿರುವಾಗ ನಮ್ಮ ಪಕ್ಷದಂತೆ ದೃಢವಾದ ಪೂರ್ವಪಕ್ಷಕ್ಕೆ ಕಾರಣವನ್ನೇ ನಿಮಗೆ ಸಮರ್ಥಿಸಲಾಗದು. ಆದ್ದರಿಂದ ಆಥರ್ವಣೋಪನಿಷತ್ತಿನ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯವನ್ನು ನೋಡಿದಾಗ ಸಂಶಯವೇ ಹುಟ್ಟುವುದಿಲ್ಲ. ಆದ್ದರಿಂದ ವಿಷಯವಾಕ್ಯವೂ ಕೂಡ ಆಗುವುದಿಲ್ಲ.

**अपि च परपक्षे ब्रह्मणो भानमात्रतया ''भान्तम्'' इति शत्रन्तशब्दः ''तस्य भास'' इति षष्ठी चायुक्ता ।**

ಮತ್ತು ಅದ್ವೈತಿಗಳ ಮತದಲ್ಲಿ ಬ್ರಹ್ಮನು ಜ್ಞಾನಸ್ವರೂಪನಾಗಿದ್ದಾನೆ. ಭಾನರೂಪನಾದ ಬ್ರಹ್ಮನಲ್ಲಿ 'ಭಾಂತಮ್' ಎಂಬ ಶತ್ರಂತ ಶಬ್ದಪ್ರಯೋಗವೇ ತಪ್ಪಾಗುತ್ತದೆ. ಏಕೆಂದರೆ ಕರ್ತ್ರರ್ಥದಲ್ಲಿ ಶತೃ ಪ್ರತ್ಯಯವು ಬಂದು 'ಭಾಂತಮ್' ಎಂಬ ರೂಪವು ಸಿದ್ಧವಾಗಿದೆ. ಭಾನಸ್ವರೂಪನಾದ ಬ್ರಹ್ಮನು ಭಾನಕರ್ತೃವಾಗಲು ಸಾಧ್ಯವಿಲ್ಲ. ಮತ್ತು 'ತಸ್ಯಭಾಸಾ' ಎಂಬ ಷಷ್ಠೀಪ್ರಯೋಗವೂ ಕೂಡ ತಪ್ಪಾಗುತ್ತದೆ. ಭಾನಸ್ವರೂಪನಾದ ಬ್ರಹ್ಮನನ್ನು ಕುರಿತು ಅವನ ಕಾಂತಿಯಿಂದ ಎಂದು ಅರ್ಥವನ್ನು ಹೇಳಲಾಗದು.

**किञ्च प्रपञ्चे ब्रह्मभानान्यभानाभावेनानुशब्दायोगः, ''धावन्तमनुधावति'' इत्यादौ हि धावनभेदे सत्येवानुशब्दो दृष्टः ।**

ಮತ್ತು 'ಧಾವಂತಮನುಧಾವತಿ' ಎಂದು ಹೇಳಿದಾಗ ಓಡುವಂತಹ ಕಳ್ಳನನ್ನು ಅನುಸರಿಸಿ, ಆರಕ್ಷಕನು ಹಿಂದೆ ಓಡುತ್ತಾನೆ ಎಂಬ ಪ್ರಯೋಗವಿದೆ. ಹೀಗೆ ಎಲ್ಲಿ 'ಅನು' ಎಂಬ ಉಪಸರ್ಗ ಇರುತ್ತದೋ, ಅಲ್ಲಿ ಕ್ರಿಯಾಭೇದವು ನಿಯಮೇನ ಇದ್ದೇ ಇರುತ್ತದೆ. ಅಂದರೆ ಇಬ್ಬರು ಓಡುವವರಿದ್ದು, ಇಬ್ಬರ ಕ್ರಿಯೆಯೂ ಭಿನ್ನವಾಗಿರುತ್ತದೆ. ಅದರಂತೆ ಪ್ರಕೃತದಲ್ಲಿ 'ಭಾಂತಮ್ ಅನುಭಾತಿ' ಎಂಬ ಶ್ರುತಿಯಲ್ಲಿ 'ಅನು' ಎಂಬ ಉಪಸರ್ಗ ಮೂಲಕವಾಗಿ ಭಾನಕ್ರಿಯೆಯನ್ನು ಹೇಳಲಾಗಿದೆ. ಅಂದರೆ ಎರಡು ಪ್ರಕಾಶಗಳಿದ್ದಲ್ಲಿ ಮಾತ್ರ ಈ ಪ್ರಯೋಗವು ಸಾಧುವಾಗುತ್ತದೆ ಹೊರತು, ಒಂದೇ ಪ್ರಕಾಶವಿದ್ದರೆ

ಸಾಧುವಾಗುವುದಿಲ್ಲ. ಬ್ರಹ್ಮನ ಪ್ರಕಾಶವೇ ಬೇರೆ, ಸೂರ್ಯಾದಿಗಳ ಪ್ರಕಾಶವೇ ಬೇರೆಯಾಗಿದ್ದಲ್ಲಿ, ಪ್ರಯೋಗವನ್ನು ಕೂಡಿಸಬಹುದು. ಆದರೆ ನಿಮ್ಮ ಪ್ರಕಾರ ಬ್ರಹ್ಮಭಾನಕ್ಕಿಂತ ಅತಿರಿಕ್ತವಾದ ಭಾನವೇ ಇಲ್ಲದ ಕಾರಣ 'ಅನು' ಶಬ್ದವು ಅಯುಕ್ತವಾಗುತ್ತದೆ.

**नच श्रौतो व्यपदेशो ''वह्निं दहन्तमयोऽनुदहति'' इत्यादिवदारोपितभेदनिमित्तको युक्तः ।**

ವಸ್ತುತಃ ಬ್ರಹ್ಮಭಾನಕ್ಕಿಂತ ಜಗತ್ತಿನಭಾನವು ಭಿನ್ನವಲ್ಲ. ಆದರೂ ಸಹ ಆರೋಪಿತವಾದ ಭೇದದಿಂದ 'ಅನು' ಎಂಬ ಶಬ್ದವನ್ನು ಪ್ರಯೋಗ ಮಾಡಬಹುದಲ್ಲವೇ? ಉದಾ : 'ವಹ್ನಿಂ ದಹಂತಮಯೋಽನುದಹತಿ' ಸುಡುವ ಬೆಂಕಿಯನ್ನು ಅನುಸರಿಸಿ, ಕಬ್ಬಿಣವು ಸುಡುತ್ತದೆ ಎಂಬ ಪ್ರಯೋಗವಿದೆ. ಇಲ್ಲಿ ಸುಡುವಿಕೆಯು ಬೆಂಕಿಯಲ್ಲಿ ಮಾತ್ರವಿದ್ದರೂ 'ಅಯಃ ಅನುದಹತಿ' ಎಂದು 'ಅನು' ಶಬ್ದದ ಪ್ರಯೋಗವಿದೆ. ಇಲ್ಲಿ ಅಯಸ್ಸಿನಲ್ಲಿರುವ ದಾಹಕ್ಕೂ, ಬೆಂಕಿಯಲ್ಲಿರುವ ದಾಹಕ್ಕೂ ಭೇದವಿಲ್ಲದಿದ್ದರೂ ಆರೋಪಿತವಾದ ಭೇದವನ್ನು ವಿವಕ್ಷಿಸಿ, 'ಅನುದಹತಿ' ಎಂಬ ಪ್ರಯೋಗ ಮಾಡುವಂತೆ ಪ್ರಕೃತಿಯಲ್ಲಿಯೂ 'ಭಾಂತಮ್ ಅನುಭಾತಿ' ಎಂಬ ಶ್ರೌತ ಪ್ರಯೋಗವನ್ನು ಕೂಡಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಸಿದ್ಧವಾದ ಪ್ರಯೋಗವನ್ನು ಆರೋಪಿತ ವಿಷಯಕವೆಂದು ಹೇಳಬಾರದು. ಹಾಗೇ ಹೇಳಿದರೆ ಶ್ರುತಿಗೆ ಅಪ್ರಾಮಾಣ್ಯ ದೋಷವನ್ನು ಒಪ್ಪಿದಂತಾಗುತ್ತದೆ.

**किञ्च 'अपि स्मर्यते' इति सूत्रविषयत्वेन त्वयोदाहृते ''न तद्भासयते' 'यदादित्यगतम्' इत्यादिवाक्ये ब्रह्मणः सूर्याद्यभास्यत्वस्य सूर्यादितेजसोऽपि भगवदधीनत्वस्य चैवोक्तत्वेन त्वदभिप्रेतस्य ब्रह्मज्ञानान्तरावेद्यमित्यस्यास्मदादि-सम्बन्धिघटादिज्ञानं ब्रह्मरूपमित्यस्य चासिद्धिः ।'**

---

(१) **शाङ्करभाष्यम् –**

**अनुकृतेस्तस्य च ॥**
**न तत्र सूर्यो भातीति तेजोऽन्तरमुतापि चित् ।**
**तेजोऽभिभावकत्वेन तेजोऽन्तरमिदं महत् ॥**
**चित् स्यात् सूर्याद्यभाम्यत्वात् तादृक् तेजोऽप्रसिद्धितः ।**
**सर्वस्मात् पुरतो भानाद् यद्भासा चान्यभासनात् ॥**

'न तत्र सूर्यो भाति न चन्द्रतारकं नेमा विद्युतो भान्ति कुतोऽयमग्निः । तमेव भान्तमनुभाति सर्वं तस्य भासा सर्वमिदं विभाति' इति समामनन्ति । यत्र यं भान्तमनुभाति सर्वं यस्य

च भासा सर्वमिदं विभाति स किं तेजोधातुः कश्चिदुत प्राज्ञ आत्मेति विचिकित्सायां तेजोधातुरिति तावत् प्राप्तम् । कुतः? तेजोधातूनामेव सूर्यादीनां भानप्रतिषेधात् । तेजःस्वभावकं हि चन्द्रतारकादि, तेजःस्वभावक एव सूर्ये भासमानेऽहनि न भासत इति प्रसिद्धम् । तथा सह सूर्येण सर्वमिदं चन्द्रतारकादि यस्मिन्न भासते सोऽपि तेजःस्वभाव एव कश्चिदित्यवगम्यते । अनुभानमपि तेजःस्वभावक एवोपपद्यते, समानस्वभावकेष्वनुकार-दर्शनात् । गच्छन्तमनुगच्छतीतिवत् । तस्मात्तेजोधातुः कश्चिदित्येवं प्राप्ते ब्रूमः – प्राज्ञ एवात्मा भवितुमर्हति । कस्माद्? अनुकृतेः । अनुकरणमनुकृतिः । यदेतत् 'तमेव भान्तमनुभाति सर्वम्' इत्यनुभानम्, तत्प्राज्ञपरिग्रहेऽवकल्पते । 'भारूपः सत्यसङ्कल्पः' इति हि प्राज्ञमात्मानमामनन्ति । नतु तेजोधातुं कश्चित् सूर्यादयोऽनुभान्तीति प्रसिद्धम्। समत्वाच्च तेजोधातूनां सूर्यादीनां न तेजोधातुमन्यं प्रत्यपेक्षास्ति, यं भान्तमनुभायुः । नहि प्रदीपः प्रदीपान्तरमनुभपाति । यदप्युक्तम्, समानस्वभावकेष्वनुकारो दृश्यत इति । नायमेकान्तो नियमः । भिन्नस्वभावकेष्वपि ह्यनुकारो दृश्यते । यथा सुतप्तोऽयःपिण्डोऽग्म्यनुकृतिरग्निं दहन्तमनुदहति, भौमं वा रजो वायुं वहन्तमनुवहतीति । अनुकृतेरित्यनुभानमसूसूचत् । तस्य चेति चतुर्थं पादमस्य श्लोकस्य सूचयति । 'तस्य भासा सर्वमिदं विभाति' इति तद्धेतुकं भानं सूर्यादेरुच्यमानं प्राज्ञमात्मानं गमयति । 'तद्देवा ज्योतिषां ज्योतिरायुर्होपासतेऽमृतम्' इति हि प्राज्ञमात्मानमामनन्ति । तेजोऽन्तरेण सूर्यादितेजो विभातीत्यप्रसिद्धं विरुद्धं च, तेजोऽन्तरेण तेजोऽन्तरस्य प्रतिघातात् । अथवा न सूर्यादीनामेव श्लोकपरिपठितानामिदं तद्धेतुकं विभानमुच्यते । किं तर्हि? 'सर्वमिदम्' इत्यविशेषश्रुतेः सर्वस्यैवास्य नामरूपक्रियाकारकफलजातस्य याऽभिव्यक्तिः, सा ब्रह्मज्योतिःसत्तानिमित्ता । यथा सूर्यादिज्योतिःसत्तानिमित्ता सर्वस्य रूपजातस्याभिव्यक्तिस्तद्वत् । 'न तत्र सूर्यो भाति' इतिच तत्र शब्दमाहरन् प्रकृतग्रहणं दर्शयति । प्रकृतं च ब्रह्म 'यस्मिन् द्यौः पृथिवी चान्तरिक्षमोतम्' इत्यादिना । अनन्तरं च 'हिरण्मये परे कोशे विरजं ब्रह्म निष्कलम् । तच्छुभ्रं ज्योतिषां ज्योतिस्तद् यदात्मविदो विदुः' इति । कथं तज्ज्योतिषां ज्योतिरित्यत इदमुत्थितम् –'न तत्र सूर्यो भाति' इति । यदप्युक्तं सूर्यादीनां तेजसां भानप्रतिषेधस्तेजोधातावेवान्यस्मिन्नवकल्पते सूर्य इवेतरेषामिति । तत्र तु स एव तेजोधातुरन्यो न सम्भवतीत्युपपादितम् । ब्रह्मण्यपि चैषां भानप्रतिषेधोऽवकल्पते । यतो यदुपलभ्यते तत्सर्वं ब्रह्मणैव ज्योतिषोपलभ्यते, ब्रह्म तु नान्येन ज्योतिषोपलभ्यते, स्वयंज्योतिःस्वरूपत्वात्, येन सूर्यादयस्तस्मिन् भायुः । ब्रह्म ह्यन्यद् व्यनक्ति, नतु ब्रह्मान्येन व्यज्यते । 'आत्मनैवायं ज्योतिषाऽस्ते' 'अगृह्यो नहि गृह्यते' इत्यादिश्रुतिभ्यः ।। २२ ।।

ಪರಿಪೂರ್ಣಚಂದ್ರಿಕಾ

ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ 'ನ ತದ್ಭಾಸಯತೇ ಸೂರ್ಯಃ' ಎಂದು, ಮತ್ತು 'ಯದಾದಿತ್ಯಗತಮ್ ತೇಜಃ' ಎಂಬ ಗೀತಾವಾಕ್ಯಗಳನ್ನು ವಿಷಯವೆಂದು ನೀವೂ ಕೂಡ ಹೇಳುತ್ತೀರಿ. 'ನ ತದ್ಭಾಸಯತೇ ಸೂರ್ಯಃ' ಎಂಬ ಗೀತಾವಾಕ್ಯದಲ್ಲಿ ಬ್ರಹ್ಮನಿಗೆ ಸೂರ್ಯಾದ್ಯಭಾಸ್ಯತ್ವವು ಹೇಳಲ್ಪಟ್ಟಿದೆ. 'ಯದಾದಿತ್ಯಗತಂ ತೇಜಃ' ಎಂಬ ವಾಕ್ಯದಲ್ಲಿ ಸೂರ್ಯಾದಿ ತೇಜಸ್ಸುಗಳಿಗೆ ಭಗವದಧೀನತ್ವವು ಹೇಳಲ್ಪಟ್ಟಿದೆ. ಆದರೆ ನೀನು ವ್ಯಾಖ್ಯಾನ ಮಾಡುವಂತೆ ಬ್ರಹ್ಮನು ಜ್ಞಾನಾಂತರದಿಂದ ವೇದ್ಯವಲ್ಲವೆಂದಾಗಲೀ, ಅಥವಾ ಅಸ್ಮದಾದಿ ಸಂಬಂಧಿಯಾದ ಘಟಾದಿ ಜ್ಞಾನವು ಬ್ರಹ್ಮರೂಪವಾಗಿದೆ-ಯೆಂದಾಗಲೀ, ಈ ವಾಕ್ಯದಲ್ಲಿ ಹೇಳುತ್ತಿಲ್ಲ. ಆದ್ದರಿಂದ ಯಾವ ಉದ್ದೇಶಕ್ಕೋಸ್ಕರ ಗೀತಾವಾಕ್ಯಗಳನ್ನು ವಿಷಯವೆಂದು ಹೇಳುತ್ತಿದ್ದೀರೋ, ಅದು ವ್ಯಧಿಕರಣವಾಗಿದೆ.

**प्रकाशः –**

अन्ये त्विति ।। तेषामिदमधिकरणशरीरम् । ''न तत्र सूर्यो भाति न चन्द्रतारकम्'' इत्यादौ सूर्याद्यप्रकाश्यत्वादिनाऽवगतं किं तेजोऽन्तरमुत ब्रह्मेति संशये

ವಿವರಣೆ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಮ್' ಇತ್ಯಾದಿ ಆಥರ್ವಣೋಪನಿಷತ್ತಿನ ಮಾತಿನಲ್ಲಿ ಸೂರ್ಯಾದ್ಯಪ್ರಕಾಶ್ಯತ್ವಾದಿಗಳನ್ನು ಹೇಳಲಾಗಿದೆ. ಸೂರ್ಯ, ಚಂದ್ರ ಮೊದಲಾದ ಪ್ರಕಾಶವುಳ್ಳ ಯಾವುದೇ ವಸ್ತುಗಳಿಂದಲೂ ಪ್ರಕಾಶಿಸಲಾಗದ ವಸ್ತು ಯಾವುದು? ಮತ್ತೊಂದು ತೇಜಸ್ಸೋ ಅಥವಾ ಬ್ರಹ್ಮನೋ ? ಎಂದು ಸಂಶಯ.

**प्रकाशः –** तत्रेति सतिसप्तम्या तस्मिन्सति सूर्यादिकं न भातीत्युक्त्या तत्रेत्यनेन सूर्यादितेजोभिभावकस्य वस्तुनः प्रतीतेस्सूर्यादेश्चन्द्रतारादितेजोन्तराभिभावकत्वदृष्ट्या प्रकृतेऽपि तत्रेत्यनेन तेजोन्तरस्यैव सूर्याद्यभिभावकस्य ग्राह्यत्वात्

ಶ್ರುತಿಯಲ್ಲಿ 'ತತ್ರ' ಎಂಬ ಪದವು ಸತಿಸಪ್ತಮ್ಯರ್ಥದಲ್ಲಿದೆ. ಆದ್ದರಿಂದ ಯಾವ ವಸ್ತು ಇದ್ದಾಗ, ಸೂರ್ಯ-ಚಂದ್ರಾದಿಗಳು ಬೆಳಗಲಾರರೋ ಎಂಬರ್ಥವನ್ನು ಹೇಳಿದಂತಾಗುತ್ತದೆ. ಹೀಗೆ 'ತತ್ರ' ಎಂಬ

**अपिच स्मर्यते ।। २३ ।।**

अपिचेदृग्रूपत्वं प्राज्ञस्यैवात्मनः स्मर्यते भगवद्गीतासु –'न तद् भासयते सूर्यो न शशाङ्को न पावकः । यद् गत्वा न निवर्तन्ते तद्धाम परमं मम ।।' इति, 'यदादित्यगतं तेजो जगद् भासयतेऽखिलम् । यच्चन्द्रमसि यच्चाग्नौ तत् तेजो विद्धि मामकम् ।।' इति च ।।२३।।

ಪದದಿಂದ ಸೂರ್ಯಾದಿಗಳ ತೇಜಸ್ಸನ್ನೂ ಸಹ ಮುಚ್ಚುವಂತಹ ಸಾಮರ್ಥ್ಯ ಆ ವಸ್ತುವಿಗಿದೆಯೆಂದು ತಿಳಿಯುತ್ತದೆ. ಸೂರ್ಯನು ಬೆಳಗುತ್ತಿರುವಾಗ ಚಂದ್ರ, ನಕ್ಷತ್ರ ಮೊದಲಾದ ಉಳಿದ ಪ್ರಕಾಶವಸ್ತುಗಳು ಮುಚ್ಚಿಹೋಗುವುದು ಕಂಡಿದೆ. ಅದರಂತೆ ಪ್ರಕೃತದಲ್ಲಿಯೂ 'ತತ್ರ' ಎಂಬ ಶ್ರುತಿಯಿಂದ ಮತ್ತೊಂದು ವಸ್ತು ಸೂರ್ಯಾದಿಗಳ ಪ್ರಕಾಶವನ್ನೂ ಸಹ ಮುಚ್ಚುತ್ತದೆಂದು ತಿಳಿಯಬೇಕು. ಅಂದರೆ ಯಾವ ವಸ್ತು ಬೆಳಗುವುದರಿಂದ ಸೂರ್ಯ, ಚಂದ್ರ ಮೊದಲಾದವರೆಲ್ಲರ ಪ್ರಕಾಶವು ಮುಚ್ಚಿಹೋಗುತ್ತದೋ, ಅಂತಹ ವಸ್ತು ಎಂದು ಹೇಳಿದಂತಾಯಿತು. ಆದ್ದರಿಂದ ಆ ವಸ್ತುವನ್ನು ಮತ್ತೊಂದು ತೇಜಸ್ಸೆಂದೇ ಹೇಳಬೇಕು.

**ಪ್ರಕಾಶಃ** – ''तमेव भान्तमनुभाति'' इति वाक्ये चानुकारावगमादनुकारस्य च सजातीय एव ''धावन्तमनुधावति'' इत्यादौ दर्शनात्

ಮತ್ತು 'ತಮೇವ ಭಾಂತಂ ಅನುಭಾತಿ' ಎಂಬ ವಾಕ್ಯದಲ್ಲಿ ಅನುಕಾರವನ್ನು ಹೇಳಲಾಗಿದೆ. 'ಧಾವಂತಮನುಧಾವತಿ' ಇತ್ಯಾದಿ ದೃಷ್ಟಾಂತಗಳಂತೆ ಸಜಾತಿಯ ವಸ್ತುಗಳಲ್ಲಿ ಮಾತ್ರ ಅನುಕಾರವನ್ನು ಹೇಳಲು ಸಾಧ್ಯ. ಆದ್ದರಿಂದ ಈ ಎಲ್ಲಾ ತೇಜಸ್ಸುಗಳು ಅನುಸರಿಸಿ ಇವೆ ಎಂದು ಹೇಳಿದಾಗ, ಆ ವಸ್ತುವೂ ಕೂಡ ತೇಜೋರೂಪವೇ ಆಗಿರಬೇಕು.

**ಪ್ರಕಾಶಃ** – 'तस्य भासा' इति वाक्ये सर्वभासकत्वावगमाच्च तुल्यरूपमप्रकृतमपि तेजोन्तरमेवात्रोपास्यत्वेनोच्यते ।

ಮತ್ತು 'ತಸ್ಯ ಭಾಸಾ' ಎಂಬ ವಾಕ್ಯದಲ್ಲಿ ಸರ್ವಭಾಸಕತ್ವವನ್ನು ಹೇಳಿರುವ ಕಾರಣ. ಸೂರ್ಯ-ಚಂದ್ರಾದಿಗಳ ಪ್ರಕಾಶಕ್ಕೆ ಸಮಾನ ಧರ್ಮವನ್ನು ಹೊಂದಿರುವ ತೇಜೋಽಂತರವನ್ನೇ ಸ್ವೀಕರಿಸಬೇಕು. ಅಪ್ರಕೃತವಾದ ತೇಜೋಽಂತರವನ್ನು 'ತತ್' ಪದದಿಂದ ಹೇಗೆ ಪರಾಮರ್ಶಿಸುವುದು ? ಎಂಬ ಗೊಂದಲಕ್ಕೆ ಅವಕಾಶವಿಲ್ಲ.

**ಪ್ರಕಾಶಃ** – 'तेन रक्तं रागात्' 'तस्यापत्यम्' इत्यादावप्रकृतेऽपि तच्छब्द-दर्शनात् ।

ಏಕೆಂದರೆ 'ತೇನ ರಕ್ತಂ ರಾಗಾತ್' ಎಂಬಲ್ಲಿ ಮತ್ತು 'ತಸ್ಯಾಪತ್ಯಮ್' ಎಂಬ ಸೂತ್ರದಲ್ಲಿ ಅಪ್ರಕೃತವಾದದ್ದನ್ನೂ ಕೂಡ 'ತತ್' ಶಬ್ದದಿಂದ ಪರಾಮರ್ಶ ಮಾಡಿದ್ದು ಕಂಡಿದೆ.

**ಪ್ರಕಾಶಃ** – तदुक्तं भामत्याम् –

अभानं तेजसो दृष्टं सति तेजोऽन्तरे यतः ।
तेजो धात्वन्तरं तस्मादनुकाराच्च गम्यते ।। इति ।

ಇದನ್ನು ಭಾಮತಿಯಲ್ಲಿ ಹೀಗೆ ಸಂಗ್ರಹಿಸಲಾಗಿದೆ -

ಅಭಾನಂ ತೇಜಸೋ ದೃಷ್ಟಂ ಸತಿ ತೇಜೋಽಂತರೇ ಯತಃ।
ತೇಜೋ ಧಾತ್ವಂತರಂ ತಸ್ಮಾದನುಕಾರಾಚ್ಚ ಗಮ್ಯತೇ॥

ಮತ್ತೊಂದು ತೇಜಸ್ಸು ಇದ್ದಾಗ ಸಣ್ಣ ತೇಜಸ್ಸು ಪ್ರಕಾಶವಾಗುವುದಿಲ್ಲ. ಆದ್ದರಿಂದ 'ನ ತತ್ರ ಸೂರ್ಯೋ ಭಾತಿ' ಎಂಬ ಶ್ರುತಿಯಲ್ಲಿ 'ತತ್ರ' ಎಂಬ ಪದಪ್ರತಿಪಾದ್ಯವಾದ ವಸ್ತು ತೇಜೋಽಂತರವೇ ಆಗುತ್ತದೆ. ಅನುಕಾರಶ್ರವಣವೂ ಈ ವಿಷಯದಲ್ಲಿ ಪ್ರಧಾನ ಹೇತು ಎಂದು.

**प्रकाशः** – एवं तस्य वाक्यस्य ''यस्मिन्द्यौः'' इत्यादिब्रह्मप्रकरणगतत्वेऽप्य-सम्भवानुकारसामर्थ्यलक्षणेन लिङ्गेन प्रकरणबाध इति प्राप्ते

ಆದ್ದರಿಂದ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯವು 'ಯಸ್ಮಿನ್ದ್ಯೌಃ' ಇತ್ಯಾದಿ ಬ್ರಹ್ಮನಲ್ಲಿ ಅಸಂಭಾವಿತವಾದ ಅನುಕಾರಸಾಮರ್ಥ್ಯವೆಂಬ ಲಿಂಗದಿಂದ ಪ್ರಕರಣವು ಬಾಧಿತವಾಗುತ್ತದೆ. ಅಂದರೆ ಕೃತ್ವಾ ಚಿಂತೆಯನ್ನು ಮಾಡಿಕೊಂಡು ಈ ವಾಕ್ಯವು ಬ್ರಹ್ಮಪರವಲ್ಲವೆಂದು ಹೇಳಬೇಕು. ಇಷ್ಟು ಪೂರ್ವಪಕ್ಷ.

**प्रकाशः** – ''तमेव भान्तम्'' इत्यादौ ''भारूपः सत्यसङ्कल्पः'' इति श्रुतिसिद्धभारूपब्रह्मार्थत्वसम्भवेऽलौकिकतेजोन्तरकल्पनायोगात्

ಸಿದ್ಧಾಂತ - 'ತಮೇವ ಭಾಂತಮ್' ಇತ್ಯಾದಿ ಶ್ರುತಿಯಲ್ಲಿ 'ಭಾರೂಪಃ ಸತ್ಯಸಂಕಲ್ಪಃ' ಇತ್ಯಾದಿ ಶ್ರುತಿಸಿದ್ಧವಾದ ಪ್ರಕಾಶ ಸ್ವರೂಪನಾದ ಬ್ರಹ್ಮ ಎಂಬರ್ಥವನ್ನೇ ವಿವಕ್ಷಿಸಲು ಬರುವಾಗ ಅಲೌಕಿಕವಾದ ಮತ್ತೊಂದು ತೇಜಸ್ಸನ್ನು ಕಲ್ಪನೆ ಮಾಡವುದು ಅಯುಕ್ತವಾಗುತ್ತದೆ.

**प्रकाशः** – ''तत्र'' इत्यस्य विषयसप्तम्यततया तद्वाक्योक्तसूर्याद्यप्रकाश्यत्वस्य ब्रह्मलिङ्गत्वात्

ಮತ್ತು 'ತತ್ರ' ಎಂಬುದು ಸತಿಸಪ್ತಮ್ಯಂತಪದವಲ್ಲ. ಹೊರತು ವಿಷಯಸಪ್ತಮ್ಯಂತವಾದ ಪದವಾಗಿದೆ. ಅಂದರೆ ಬ್ರಹ್ಮನವಿಷಯದಲ್ಲಿ ಸೂರ್ಯಚಂದ್ರಾದಿಗಳು ಪ್ರಕಾಶಕರಾಗುವುದಿಲ್ಲ ಎಂದು ಹೇಳಿದಂತಾಗುತ್ತದೆ. ಆದ್ದರಿಂದ ಸೂರ್ಯಾದ್ಯಪ್ರಕಾಶತ್ವವು ಬ್ರಹ್ಮನಲಿಂಗವೇ ಆಗಿರುತ್ತವೆ.

**प्रकाशः** – ''तस्य भासा'' इत्युक्तसर्वजगद्विषयकभानवत्त्वस्य ब्रह्मण्येवोपपत्तेः ''अग्निं दहन्तमयःपिण्डोऽनुदहति । वायुं गच्छन्तं रजोऽनुगच्छति'' इत्यादौ विसदृशेऽप्यनुकारदर्शनेन ''तमेव'' इति वाक्ये विसदृशेऽप्यनुकार-सम्भवाद्ब्रह्मैवात्रोच्यते ।

ಮತ್ತು 'ತಸ್ಯ ಭಾಸಾ' ಎಂಬಲ್ಲಿ ಹೇಳಲ್ಪಟ್ಟ ಸರ್ವಜಗದ್ವಿಷಯಕ ಭಾನವತ್ತ್ವವು ಬ್ರಹ್ಮನಲ್ಲೇ ಉಪಪನ್ನವಾಗುತ್ತದೆ. ಹಾಗಾದರೆ ವಿಜಾತೀಯವಸ್ತುವಿನಲ್ಲಿ ಅನುಕಾರವನ್ನು ಹೇಳಿದಂತಾಗುತ್ತದಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಸಜಾತೀಯವಸ್ತುಗಳಲ್ಲಷ್ಟೇ ಅನುಕರಣವನ್ನು ಹೇಳಬೇಕೆಂಬ ನಿಯಮವಿಲ್ಲ.

ಏಕೆಂದರೆ 'ಅಗ್ನಿಂ ದಹಂತಮ್ ಅಯಃ ಪಿಂಡೋಽನುದಹತಿ' ಎಂದು ಹೇಳಿದಾಗ ಅಗ್ನಿಗಿಂತಲೂ ಕಬ್ಬಿಣವು ವಿಜಾತೀಯವಾಗಿದ್ದರೂ ಅನುಕರಣವನ್ನು ಹೇಳುತ್ತೇವೆ. ಅದರಂತೆ 'ವಾಯುಂ ಗಚ್ಛಂತಂ ರಜೋಽನುಗಚ್ಛತಿ' ಇತ್ಯಾದಿಗಳಲ್ಲಿ ವಾಯುವಿಗಿಂತಲೂ ಪಾರ್ಥಿವಕಣಗಳೆನಿಸಿದ ರಜಸ್ಸು ವಿಜಾತೀಯವಾಗಿದ್ದರೂ ಅನುಕರಣವನ್ನು ಹೇಳಲಾಗುತ್ತದೆ. ಹೀಗೆ ವಿಸದೃಶವಾದ ವಸ್ತುಗಳಲ್ಲಿಯೂ ಅನುಕಾರವು ಕಂಡಿರುವುದರಿಂದ 'ತಮೇವ ಭಾಂತಮ್' ಎಂಬ ವಾಕ್ಯದಲ್ಲಿ ಬ್ರಹ್ಮನು ವಿಸದೃಶನಾಗಿದ್ದರೂ ಅನುಕಾರವನ್ನು ಹೇಳಬಹುದು. ಆದ್ದರಿಂದ ಬ್ರಹ್ಮನೇ 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆ.

**प्रकाशः – उक्तञ्च भामत्यां**

**ब्रह्मण्येव हि तल्लिङ्गं नतु तेजस्यलौकिके ।**
**तस्माच्च तदुपास्यं किं ब्रह्म ज्ञेयं तु गम्यते ।। इति ।**

ಈ ಸಿದ್ಧಾಂತವನ್ನು ಭಾಮತಿಯಲ್ಲಿ ಹೀಗೆ ಸಂಗ್ರಹಿಸಲಾಗಿದೆ -

ಬ್ರಹ್ಮಣ್ಯೇವ ಹಿ ತಲ್ಲಿಂಗಂ ನತು ತೇಜಸ್ಯಲೌಕಿಕೇ ।
ತಸ್ಮಾನ್ನ ತದುಪಾಸ್ಯಂ ಕಿಂ ಬ್ರಹ್ಮ ಜ್ಞೇಯಂ ತು ಗಮ್ಯತೇ ॥

ಭಾನಸ್ವರೂಪವು ಬ್ರಹ್ಮನಲಿಂಗವೇ ಆಗಿದೆ ಹೊರತು, ಅಲೌಕಿಕವಾದ ತೇಜಸ್ಸಿನ ಲಿಂಗವಲ್ಲ. ಆದ್ದರಿಂದಲೇ ಅಲೌಕಿಕವಾದ ತೇಜಸ್ಸು ಈ ಶ್ರುತಿಯಲ್ಲಿ ಉಪಾಸ್ಯವೆಂದು ಪ್ರತಿಪಾದ್ಯವಾಗಿಲ್ಲ. ಹೊರತಾಗಿ, ನಿರ್ವಿಶೇಷವಾದ ಜ್ಞೇಯನಾದ ಬ್ರಹ್ಮನೇ ಉಪಾಸ್ಯತ್ವೇನ ಪ್ರತಿಪಾದ್ಯನಾಗಿದ್ದಾನೆ ಎಂದು.

**प्रकाशः – तत्र विषयसंशयपूर्वपक्षादिबीजानि क्रमेण निराह – तन्नेत्यादिना ।। इत्युक्तमिति ।। विवृतमेतत्तत्रैव ।। इति वाच्यमिति ।। अन्यथा व्यर्थतापत्तेः ।**

ಹೀಗೆ ಅದ್ವೈತಿಗಳ ಅಧಿಕರಣಶರೀರದಲ್ಲಿ ವಿಷಯ, ಸಂಶಯ, ಪೂರ್ವಪಕ್ಷ ಇವುಗಳ ಕಾರಣಗಳನ್ನು ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ತನ್ನ' ಇತ್ಯಾದಿ ಗ್ರಂಥದಿಂದ. 'ಇತ್ಯುಕ್ತಮ್' ಎಂದರೆ ದ್ಯುಭ್ವಾದ್ಯಧಿಕರಣದಲ್ಲಿಯೇ ಇದನ್ನು ವಿವರಿಸಿದ್ದನ್ನು ತಿಳಿಯಬೇಕು. 'ಇತಿ ವಾಚ್ಯಮ್' ಎಂದರೆ ನೀವು ಹೀಗೆ ಕೃತ್ವಾಶಂಕೆಯನ್ನು ಮಾಡಬೇಕು. ಇಲ್ಲದ್ದಿದರೆ ಅಧಿಕರಣಕ್ಕೆ ವೈಯರ್ಥದೋಷಬರುತ್ತದೆ ಎಂದರ್ಥ.

**प्रकाशः – "लिङ्गेन प्रकरणबाधः" इति भामत्युक्तं तु दृढपूर्वपक्षहेत्वभावाच्चेत्यग्रे निरसिष्याम इति भावः ।**

'ಲಿಂಗೇನ ಪ್ರಕರಣಬಾಧಃ' ಲಿಂಗದಿಂದ ಪ್ರಕರಣವು ಬಾಧಿತವಾಗುತ್ತದೆಂದು ಭಾಮತಿಯಲ್ಲಿ ಹೇಳಲಾಗಿದೆ. ಆದರೆ ಇದು ಪೂರ್ವಪಕ್ಷಕ್ಕೆ ದೃಢವಾದ ಹೇತುವಾಗುವುದಿಲ್ಲವೆಂದು ಮುಂದೆ ನಿರಾಕರಿಸುವವರಿದ್ದೇವೆ.

ಪರಿಪೂರ್ಣಚಂದ್ರಿಕಾ

**प्रकाशः** – 'यतः' इत्यस्य श्लोकेनान्वयः । 'इति यतस्ततो न युक्तम्' इति । गत्यन्तरमसिद्धमित्यत आह – **अस्ति हीति** ।। अन्यथा गत्यन्तरे सत्येवमाश्रयणे ।

'ಯತಃ' ಎಂಬುದನ್ನೂ ಶ್ಲೋಕದ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು. 'ಇತಿ ಯಸಃ ತತೋ ನ ಯುಕ್ತಮ್' ಎಂದು ಅನ್ವಯ. ಬೇರೆ ಗತಿ ಇಲ್ಲವಲ್ಲ ? ಎಂಬ ಪ್ರಶ್ನೆಗೆ 'ಅಸ್ತಿಹಿ' ಎಂಬ ವಾಕ್ಯದಿಂದ ಗತ್ಯಂತರವನ್ನು ಹೇಳುತ್ತಿದ್ದಾರೆ. 'ಅನ್ಯಥಾ' ಎಂದರೆ ಗತ್ಯಂತರವಿದ್ದಾಗಲೂ ಹೀಗೆ ಹೇಳುವುದಾದರೆ ಎಂದರ್ಥ.

**प्रकाशः** – ननु न कृत्वाचिन्तयेदमारभ्यते । किं तर्ह्यनुकारसामर्थ्यरूपलिङ्गेन प्रकरणबाधया पूर्वपक्षे तत्समाधानार्थम् । तथैव भामत्युक्तेरित्यत आह – **किञ्चेति** ।।

ಕೃತ್ವಾಚಿಂತೆಯಿಂದ ಈ ಅಧಿಕರಣಕ್ಕೆ ಸಾರ್ಥಕ್ಯವನ್ನು ಅದ್ವೈತಿಗಳು ಹೇಳಿಯೇ ಇಲ್ಲ. ಹೊರತಾಗಿ ಅನುಕಾರಸಾಮರ್ಥ್ಯವೆಂಬ ಲಿಂಗದಿಂದ ಪ್ರಕರಣವು ಬಾಧಿತವಾಗುತ್ತದೆಂಬ ಪೂರ್ವಪಕ್ಷದ ನಿರಾಕರಣೆಗಾಗಿ ಈ ಅಧಿಕರಣವು ಹೊರಟಿದೆಯೆಂದು ಹೇಳಿದ್ದಾರೆ. ಭಾಮತಿಯ ಮಾತುಗಳು ಹೀಗೆ ಕಾಣಸುತ್ತಿವೆ. ಹೀಗಿರುವಾಗ ಗ್ರಂಥಕಾರರು ಕೃತ್ವಾಚಿಂತೆಯಿಂದ ಅಧಿಕರಣಕ್ಕೆ ಸಾರ್ಥಕ್ಯವನ್ನು ಹೇಳಬೇಕೆಂದು ಹೇಳಿದ್ದು ಹೇಗೆ ಉಪಪನ್ನವಾಗುತ್ತದೆ ? ಎಂಬ ಪ್ರಶ್ನೆಗೆ 'ಕಿಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – सत्यमेवं सति तु तादृशलिङ्गे । तदेव नास्ति । अनुकारस्य विसदृशेऽपि दर्शनेन सावकाशतयाऽनेकपूर्वोत्तरगतश्रुतिलिङ्गबाधकत्वायोगात् ।

ಒಂದು ವೇಳೆ ಅಂತಹ ಪ್ರಬಲವಾದ ಲಿಂಗವಿದ್ದಲ್ಲಿ ಪೂರ್ವಪಕ್ಷವನ್ನು ಭಾಮತಿಯಲ್ಲಿ ಹೇಳಿದಂತೆ ಸಮರ್ಥಿಸಬಹುದಿತ್ತು. ಆದರೆ ಅಂತಹ ಪ್ರಬಲವಾದ ಲಿಂಗವೇ ಪೂರ್ವಪಕ್ಷ ವಿಷಯದಲ್ಲಿ ಇರುವುದಿಲ್ಲ. ಅನುಕಾರವೆಂಬ ಹೇತು ವಿಸದೃಶವಾದ ವಸ್ತುಗಳಲ್ಲಿಯೂ ಕಂಡಿರುವುದರಿಂದ, ಇಂತಹ ಸಾವಕಾಶವಾದ ಅನುಕಾರಲಿಂಗವು ಅನೇಕವಾದ ಪೂರ್ವೋತ್ತರ ವಾಕ್ಯಗಳಲ್ಲಿರುವ ಬ್ರಹ್ಮನ ಲಿಂಗಗಳನ್ನೆಲ್ಲಾ ಬಾಧಿಸಲು ಸಮರ್ಥವಾಗುವುದಿಲ್ಲ.

**प्रकाशः** – तत्रेति सतिसप्तमीत्यत्रासाधारणहेत्वभावे तस्यापि सावकाशत्वात् । तस्य भासेत्यपि सावकाशमेव । शब्दानुशासनपरे सूत्रे तच्छब्दस्य पूर्वाप्रकृतपरत्वदर्शनेऽप्येकार्थप्रतिपादनपरवाक्येषु क्वापि सर्वनाम्नोऽप्रकृतपरत्वादर्शनाच्चेति भावेनोक्तं – **दृढपूर्वपक्षहेत्वभावाच्चेति** ।

ಮತ್ತು 'ಸರ್ವತೇಜೋಽಬಿಭಾವಕತ್ವ' ಎಂಬ ಹೇತುವೂ ಕೂಡ ಸಾವಕಾಶವಾಗಿದೆ. ಒಂದು ವೇಳೆ ಸತಿಸಪ್ತಮೀಯನ್ನು ಆಶ್ರಯಿಸಿದ್ದಲ್ಲಿ ಸರ್ವತೇಜೋಽಭಿಭಾವಕತ್ವವನ್ನು ಹೇಳಬಹುದು. ಆದರೆ ಪೂರ್ವಪಕ್ಷ

ಮಾಡುವಾಗ ಸತಿಸಪ್ತಮಿಯನ್ನೇ ಆಶ್ರಯಿಸಬೇಕೆನ್ನಲು ಅಸಾಧಾರಣವಾದ ಕಾರಣವನ್ನು ಹೇಳಿಲ್ಲ. ಆದ್ದರಿಂದ ಇದೂ ಸಹ ಸಾವಕಾಶವಾಗಿದೆ. ಮತ್ತು 'ತಸ್ಯ ಭಾಸಾ ಸರ್ವಮಿದಂಭಾತಿ' ಎಂಬುದೂ ಕೂಡ ಸಾವಕಾಶವಾಗಿದೆ. 'ತಸ್ಯ' ಎಂಬಲ್ಲಿರುವ 'ತತ್' ಶಬ್ದವು ಪೂರ್ವವಾಕ್ಯದಲ್ಲಿರುವುದನ್ನು ಪರಾಮರ್ಶ ಮಾಡುತ್ತಿದೆ. ಪೂರ್ವವಾಕ್ಯದಲ್ಲಿ ಬ್ರಹ್ಮನೇ ಪ್ರಕೃತನಾದ್ದರಿಂದ ಅವನನ್ನು ಪರಾಮರ್ಶ ಮಾಡಬೇಕೇ ಹೊರತು, ಅಪ್ರಕೃತವಾದ ಯಾವುದೋ ಒಂದು ಅಲೌಕಿಕವಾದ ತೇಜಸ್ಸನ್ನು ಪರಾಮರ್ಶ ಮಾಡಲು ಸಾಧ್ಯವಿಲ್ಲ. 'ತೇನ ರಕ್ತಂ ರಾಗಾತ್' ಇತ್ಯಾದಿ ಸೂತ್ರಗಳಲ್ಲಿ ಅಪ್ರಕೃತವಾದದ್ದನ್ನು ಪರಾಮರ್ಶ ಮಾಡಿದ್ದು ಕಂಡಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಶಬ್ದಾನುಶಾಸನ ಪರವಾದ ಶಾಸ್ತ್ರದಲ್ಲಿ ಪೂರ್ವಾಪ್ರಕೃತವಾದದ್ದನ್ನು ಪರಾಮರ್ಶ ಮಾಡುವುದು ತಪ್ಪಾಗುವುದಿಲ್ಲ. ಆದರೆ ಅರ್ಥಾನುಶಾಸನ ಪರವಾದ ಈ ಶಾಸ್ತ್ರದಲ್ಲಿ ಪೂರ್ವಪ್ರಸಕ್ತವಾದದ್ದನ್ನೇ ಪರಾಮರ್ಶ ಮಾಡಬೇಕಾಗುತ್ತದೆ. ಇಂತಹ ಅರ್ಥಪ್ರತಿಪಾದಕವಾದ ಶಾಸ್ತ್ರಗಳಲ್ಲಿ ಸರ್ವನಾಮ ಶಬ್ದವು ಅಪ್ರಕೃತವಾದದ್ದನ್ನು ಪರಾಮರ್ಶ ಮಾಡುತ್ತದೆಂಬ ವಿಷಯವು ಎಲ್ಲಿಯೂ ಕಂಡಿಲ್ಲ. ಈ ದೃಷ್ಟಿಯಿಂದ ದೃಢವಾದ ಪೂರ್ವಪಕ್ಷಕ್ಕೆ ಕಾರಣವೇ ಇಲ್ಲವೆಂದು ಗ್ರಂಥಕಾರರ ಅಭಿಪ್ರಾಯವಾಗಿದೆ.

**ಪ್ರಕಾಶಃ** – सिद्धान्तोऽप्ययुक्तः । श्रुत्यननुसारादित्याह – अपिचेति ॥

ಸಿದ್ಧಾಂತವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಶ್ರುತಿಯ ಆನುಗುಣ್ಯ ಇಲ್ಲ. 'ತಮೇವ ಭಾಂತಮ್ ಅನುಭಾತಿ' ಎಂಬಲ್ಲಿರುವ ಶತೃ ಪ್ರತ್ಯಯಾಂತವಾದ ಶಬ್ದದ ಅರ್ಥವನ್ನು ಬ್ರಹ್ಮನಲ್ಲಿ ಹೇಳಲು ಸಾಧ್ಯವೇ ಇಲ್ಲವೆಂದು 'ಅಪಿಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**ಪ್ರಕಾಶಃ** –''लः कर्मणि च भावे चाकर्मकेभ्यः'' इति भा दीप्तावित्यस्य कर्तरि लट्प्रत्यये ''लटश्शतृशानचावप्रथमासमानाधिकरणे'' इति विहितलडादेशशतृप्रत्ययस्य कर्तृवाचित्वेन भान्तमित्युक्तभानकर्तृत्वं न चैतन्ये युक्तमित्यर्थः । तस्येति षष्ठ्यर्थस्य भेदघटितत्वादिति भावः ।

'ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ' ಎಂಬ ಸೂತ್ರದಿಂದ ಎಲ್ಲಾ ಲಕಾರಗಳಿಗೂ ಕರ್ಮಾರ್ಥದಲ್ಲಿ, ಭಾವಾರ್ಥದಲ್ಲಿ, ಕರ್ತ್ರರ್ಥದಲ್ಲಿ ಪ್ರತ್ಯಯಗಳು ಬರುತ್ತವೆಂದು ವಿಧಿಸಲಾಗಿದೆ. ಪ್ರಕೃತ 'ಭಾ ದೀಪ್ತೌ' ಎಂಬ ಧಾತುವಿಗೆ ಕರ್ತ್ರರ್ಥದಲ್ಲಿ ಲಟ್ ಪ್ರತ್ಯಯವು ಬಂದರೆ, 'ಲಟಃಶತೃಶಾನಚಾವಪ್ರಥಮಾಸ ಮಾನಾಧಿಕರಣೇ' ಎಂಬ ಸೂತ್ರದಿಂದ 'ಲಟ್' ಪ್ರತ್ಯಯಕ್ಕೆ 'ಶತೃ' ಪ್ರತ್ಯಯವನ್ನು ಕರ್ತ್ರರ್ಥದಲ್ಲಿ ಹೇಳಲಾಗಿದೆ. ಆದ್ದರಿಂದ 'ಭಾಂತಮ್' ಎಂಬ ಪದಕ್ಕೆ 'ಭಾನಕರ್ತೃತ್ವ' ಎಂಬರ್ಥವನ್ನು ಹೇಳಿದಂತಾಯಿತು. ನಿರ್ವಿಕಾರನಾದ ಶುದ್ಧಬ್ರಹ್ಮನು ಭಾನಸ್ವರೂಪನಾದ್ದರಿಂದ ಭಾನಕರ್ತೃತ್ವವು ಅವನಲ್ಲಿ ಬರುವುದಿಲ್ಲವೆಂದು ಅಭಿಪ್ರಾಯ. ಮತ್ತು 'ತಸ್ಯ ಭಾಸಾ' ಎಂಬಲ್ಲಿರುವ 'ತಸ್ಯ' ಎಂಬ ಷಷ್ಠಿಯು ಸಂಬಂಧಾರ್ಥದಲ್ಲಿರುವುದರಿಂದ ಭೇದಘಟಿತವಾಗಿದೆ. ಪ್ರಕಾಶಕ್ಕೂ, ಬ್ರಹ್ಮನಿಗೂ ಭೇದವಿಲ್ಲದ ಕಾರಣ 'ತಸ್ಯ ಭಾಸಾ' ಎಂಬ ಪ್ರಯೋಗವನ್ನೂ ಕೂಡ ನಿರ್ವಿಶೇಷಬ್ರಹ್ಮನಲ್ಲಿ ಕೂಡಿಸಲಾಗದು.

**ಪ್ರಕಾಶಃ** – ननु ''वह्निं दहन्तमयोऽनुदहतीत्यत्र क्रियाभेदाभावेऽपि द्रव्यभेदेन

क्रियाभेदं कल्पयित्वा क्रियासादृश्यं व्याख्येयम्'' इति भामत्युक्तत्वादिहापि तथा स्यादित्यत आह – **नचेति** ।। अप्रामाण्यापत्तेरिति भावः ।

'ವಹ್ನಿಂ ದಹಂತಮಯೋಽನುದಹತೀತ್ಯತ್ರ ಕ್ರಿಯಾಭೇದಾಭಾವೇಽಪಿ ದ್ರವ್ಯಭೇದೇನ ಕ್ರಿಯಾಭೇದಂ ಕಲ್ಪಯಿತ್ವಾ ಕ್ರಿಯಾಸಾದೃಶ್ಯಂ ವ್ಯಾಖ್ಯೇಯಮ್' ಎಂದರೆ 'ವಹ್ನಿ ದಹಂತಮ್ ಅಯೋಽನುದಹತಿ' ಎಂಬಲ್ಲಿ ದಹನಕ್ರಿಯೆಯಲ್ಲಿ ಭೇದವಿಲ್ಲದಿದ್ದರೂ 'ವಹ್ನಿ' ಮತ್ತು 'ಕಬ್ಬಿಣ' ಎಂಬ ದ್ರವ್ಯಗಳಿಗೆ ಭೇದವಿರುವುದರಿಂದ, ಕ್ರಿಯೆಯಲ್ಲಿಯೂ ಭೇದ ಬರುತ್ತದೆಂದು ಕಲ್ಪನೆ ಮಾಡಿ, ಕ್ರಿಯಾಸಾದೃಶ್ಯವನ್ನು ಕೂಡಿಸಬೇಕೆಂದು ಭಾಮತಿಯಲ್ಲಿ ಹೇಳಲಾಗಿದೆ. ಅದರಂತೆ ಇಲ್ಲಿಯೂ ಕೂಡ ಜಗತ್, ಬ್ರಹ್ಮ ಇಬ್ಬರಿಗೂ ಭೇದವಿರುವುದರಿಂದ 'ಭಾನ' ಎಂಬ ಕ್ರಿಯೆಯಲ್ಲಿ ಆರೋಪಿತವಾದ ಭೇದವನ್ನು ಹೇಳಬೇಕೆಂದು ಅದ್ವೈತಿಗಳ ಅಭಿಪ್ರಾಯ. ಇದನ್ನು 'ನಚ' ಇತ್ಯಾದಿ ಗ್ರಂಥದಿಂದ ಆಶಂಕಿಸಿ ನಿರಾಕರಿಸಿದ್ದಾರೆ. ಒಂದು ವೇಳೆ ಆರೋಪಿತವಾದ ಭೇದವನ್ನು ಶ್ರುತಿಪ್ರತಿಪಾದ್ಯವೆಂದು ಹೇಳಿದರೆ, ಶ್ರುತಿಗೆ ಅಪ್ರಾಮಾಣ್ಯ ದೋಷಬರುತ್ತದೆಂದು ತಿಳಿಯಬೇಕು.

**प्रकाशः** – एतेनानुकृतेरनुभानात्तस्येति प्रतीकग्रहणेन 'तस्य भासा' इति सर्वस्य तद्धेतुकभानोक्तेः, 'न तत्र' इति सूर्याद्यप्रकाश्यं ब्रह्मेत्याद्यसूत्रार्थः प्रत्युक्तः । द्वितीयसूत्रार्थमपि प्रत्याह – **किञ्चेति** ।।

ಹೀಗೆ ಹೇಳಿದ್ದರಿಂದ ಅದ್ವೈತಿಗಳ ಸೂತ್ರವ್ಯಾಖ್ಯಾನವನ್ನು ನಿರಾಕರಿಸಿದಂತಾಯಿತು. 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ 'ಅನುಕೃತೇಃ' ಎಂಬ ಪದಕ್ಕೆ ಅನುಸರಿಸಿ ಪ್ರಕಾಶಪಡಿಸುವುದರಿಂದ ಎಂದು ಅರ್ಥ. 'ತಸ್ಯ' ಎಂಬ ಪದವು 'ತಸ್ಯಭಾಸಾ' ಎಂಬ ಶ್ರುತಿಯ ಪ್ರತೀಕ ಗ್ರಹಣವಾಗಿದೆ. ಇದರಿಂದ ಸಕಲ ಪ್ರಕಾಶಗಳಿಗೂ ಬ್ರಹ್ಮನೇ ಕಾರಣವೆಂದು ಹೇಳಿದಂತಾಗುತ್ತದೆ. ಆದ್ದರಿಂದ 'ನ ತತ್ರ' ಎಂಬ ಶ್ರುತಿಯಲ್ಲಿ ಸೂರ್ಯಾದ್ಯಪ್ರಕಾಶನಾದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂಬುದು ಮೊದಲನೆಯ ಸೂತ್ರಾರ್ಥ. ಆದರೆ ಈಗಾಗಲೇ ಹೇಳಿದಂತೆ ಪೂರ್ವಪಕ್ಷಲಿಂಗ, ಸಿದ್ಧಾಂತಲಿಂಗಗಳೆಲ್ಲವೂ ಅಯುಕ್ತವಾದ್ದರಿಂದ ಇವರ ಸೂತ್ರಾರ್ಥವು ನಿರಾಕೃತವಾಯಿತು. ದ್ವಿತೀಯ ಸೂತ್ರಾರ್ಥವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ.

**गुरुराजीयम्** – **अन्यथेति** ।। 'यत्तदद्रेश्यम्' इत्यादिप्रकरणे 'यस्मिन्द्यौः' 'अनश्नन्नन्यः' इति वाक्यद्वयमध्ये च नास्तीति कृत्वाचिन्तयैतदधिकरणारम्भ इत्यर्थः । ननु धावन्तमनुधावतीत्यादौ धावनभेदेऽनुशब्दप्रयोगवद्वह्निं दहन्तमयोऽनुदहतीत्यत्र दहनभेदाभावेऽप्यनुशब्दप्रयोगदर्शनात् प्रकृतजगति ब्रह्मभानान्यभानाभावेन भानभेदाभावेऽप्यनुशब्दप्रयोगः किं न स्यादित्यत आह – **नचेति** ।। श्रौत इति हेतुगर्भं विशेषणम् । अन्यथा श्रुतेरारोपितविषयकत्वेनाप्रामाण्यं स्यादित्यर्थः ।




ಕಾಠಕೋಪನಿಷತ್ತಿನಲ್ಲಿರುವ 'ತದೇತದಿತಿ ಮನ್ಯಂತೇ' ಇತ್ಯಾದಿ ವಾಕ್ಯವನ್ನು ವಿಷಯವೆಂದು ನಾವು ಹೇಳಿದರೆ, ಅದ್ವೈತಿಗಳು ಅಥರ್ವಣೋಪನಿಷತ್ತಿನಲ್ಲಿರುವ ಅದೇ ವಾಕ್ಯವನ್ನು ವಿಷಯವೆಂದು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಅಲ್ಲಿರುವ ಪ್ರಕರಣವು ಬ್ರಹ್ಮಪರವೆಂದು ಅದ್ವೈತಿಗಳೇ ನಿರ್ಣಯಿಸಿದ್ದಾರೆ. 'ಯತ್ತದದ್ರೇಶ್ಯಮ್' ಇತ್ಯಾದಿಯಾಗಿ ಪ್ರಾರಂಭವಾಗುವ ಪ್ರಕರಣವು ಅದೃಶ್ಯತ್ವಾಧಿಕರಣದ ನ್ಯಾಯದಿಂದ ಬ್ರಹ್ಮಪರವೆಂದು, 'ಯಸ್ಮಿನ್ ದ್ಯೌಃ' ಇತ್ಯಾದಿ ಹಿಂದಿನ ವಾಕ್ಯವು ಬ್ರಹ್ಮಪರವೆಂದು ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಸಿದ್ಧವಾಗಿದೆ. ಮತ್ತು ಮುಂದಿನ 'ಅನಶ್ನನ್ನನ್ಯಃ' ಎಂಬ ವಾಕ್ಯವು 'ಸ್ಥಿತ್ಯದನಾಭ್ಯಾಂಚ' ಎಂಬ ಸೂತ್ರದಿಂದ ಬ್ರಹ್ಮಪರವೆಂದು ಸಿದ್ಧವಾಗಿದೆ. ಹೀಗೆ ಬ್ರಹ್ಮಪರವೆಂದು ನಿರ್ಣೀತವಾದ ಮಂತ್ರಗಳ ಮಧ್ಯದಲ್ಲಿ ಈ ಮಂತ್ರವಿರುವುದರಿಂದ, ಇದೂ ಸಹ ಬ್ರಹ್ಮಪರವೆಂದೇ ಸಿದ್ಧವಾಗಿದೆ. ಮತ್ತು ಈ ವಾಕ್ಯದ ಪ್ರಾರಂಭದಲ್ಲಿ 'ವಿರಜಂ ಬ್ರಹ್ಮ ನಿಷ್ಕಲಮ್' ಎಂದು, ಅನಂತರ 'ಬ್ರಹ್ಮೈವೇದಮಮೃತಂ ಪುರಸ್ತಾತ್' ಎಂಬುದಾಗಿಯೂ ಬ್ರಹ್ಮಶಬ್ದದ ಉಲ್ಲೇಖವಿದೆ. ಹೀಗೆ ಅನೇಕ ಆಧಾರಗಳಿಂದ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯವು ಬ್ರಹ್ಮಪರವೆಂದು ಸಿದ್ಧವಾಗಿರುವಾಗ ಇದನ್ನೇ ಪುನಃ ಈ ಅಧಿಕರಣದಲ್ಲಿ ವಿಚಾರ ಮಾಡುವುದು ವ್ಯರ್ಥವಾಗಿದೆ. ಇದನ್ನು ಪರಿಹರಿಸಬೇಕೆಂದರೆ ಅದ್ವೈತಿಗಳು 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯವು ಬ್ರಹ್ಮಪ್ರಕರಣದಲ್ಲಿಲ್ಲವೆಂದು ಅನುಸಂಧಾನ ಮಾಡಿಕೊಂಡಾಗ ಮಾತ್ರ ಇದು ವಿಷಯವಾಗುತ್ತದೆಂದು ಉತ್ತರಿಸಬೇಕು. ಆದರೆ ಬೇರೆ ಗತಿಯಿಲ್ಲದಾಗ, ಹೀಗೆ ಕೃತ್ವಾಚಿಂತೆಯಿಂದ ಪೂರ್ವಪಕ್ಷ ಮಾಡಿಕೊಂಡು ಸಮಾಧಾನ ಮಾಡಬಹುದು. ಆದರೆ, ನಾವು ಹೇಳುವಂತೆ ಕಾಠಕಮಂತ್ರವನ್ನು ವಿಷಯವಾಕ್ಯವನ್ನಾಗಿ ಪರಿಗಣಿಸಲು ಬರುವಾಗ ಅಥರ್ವಣ ಮಾತನ್ನೇ ವಿಷಯವಾಕ್ಯವೆಂದು ಪರಿಗಣಿಸುವುದು ತಪ್ಪಾಗುತ್ತದೆ.

ವಿಚಾರ ಮಾಡಿದರೆ, ಕೃತ್ವಾಚಿಂತೆಯಿಂದಷ್ಟೇ ಅದ್ವೈತಿಗಳಿಗೆ ಈ ಅಧಿಕರಣಕ್ಕೆ ಸಾರ್ಥಕ್ಯವನ್ನು ಹೇಳಲು ಸಾಧ್ಯ. ಇತರ ಯಾವುದೇ ಬಲಿಷ್ಠವಾದ ಪೂರ್ವಪಕ್ಷ ಲಿಂಗಗಳನ್ನು ಅದ್ವೈತಿಗಳಿಗೆ ಹೇಳಲು ಸಾಧ್ಯವಿಲ್ಲ. ಮತ್ತು ಬ್ರಹ್ಮನನ್ನು ಜ್ಞಾನಸ್ವರೂಪವೆಂದು ಒಪ್ಪಿರುವುದರಿಂದ, 'ತಮೇವ ಭಾಂತಂ' ಎಂಬಲ್ಲಿ ಕರ್ತ್ರರ್ಥದಲ್ಲಿರುವ ಶತೃ ಪ್ರತ್ಯಯಾಂತ ಶಬ್ದಪ್ರತಿಪಾದ್ಯತ್ವವನ್ನು, 'ತಸ್ಯ ಭಾಸಾ' ಎಂಬಲ್ಲಿರುವ ಷಷ್ಠೀ ಪ್ರಯೋಗವನ್ನು ಅದ್ವೈತಿಗಳಿಂದ ಕೂಡಿಸಲಾಗದು.

ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರಕ್ಕೆ 'ನ ತದ್ಭಾಸಯತೇ ಸೂರ್ಯಃ' ಎಂದು, ಮತ್ತು 'ಯದಾದಿತ್ಯಗತಂ ತೇಜಃ' ಎಂಬ ಗೀತಾವಾಕ್ಯಗಳನ್ನು ವಿಷಯವೆಂದು ನೀವೂ ಕೂಡ ಹೇಳುತ್ತೀರಿ. 'ನ ತದ್ಭಾಸಯತೇ ಸೂರ್ಯಃ' ಎಂಬ ಗೀತಾವಾಕ್ಯದಲ್ಲಿ ಬ್ರಹ್ಮನಿಗೆ ಸೂರ್ಯಾದ್ಯಭಾಸ್ಯತ್ವವು ಹೇಳಲ್ಪಟ್ಟಿದೆ. 'ಯದಾದಿತ್ಯಗತಮ್ ತೇಜಃ' ಎಂಬ ವಾಕ್ಯದಲ್ಲಿ ಸೂರ್ಯಾದಿ ತೇಜಸ್ಸುಗಳಿಗೆ ಭಗವದಧೀನತ್ವವು ಹೇಳಲ್ಪಟ್ಟಿದೆ. ಆದರೆ ನೀನು ವ್ಯಾಖ್ಯಾನ ಮಾಡುವಂತೆ ಬ್ರಹ್ಮನು ಜ್ಞಾನಾಂತರದಿಂದ ವೇದ್ಯವಲ್ಲವೆಂದಾಗಲೀ, ಅಥವಾ ಅಸ್ಮದಾದಿ ಸಂಬಂಧಿಯಾದ ಘಟಾದಿ ಜ್ಞಾನವು ಬ್ರಹ್ಮರೂಪವಾಗಿದೆಯೆಂದಾಗಲೀ, ಈ ವಾಕ್ಯದಲ್ಲಿ ಹೇಳುತ್ತಿಲ್ಲ. ಆದ್ದರಿಂದ ಯಾವ ಉದ್ದೇಶಕ್ಕೋಸ್ಕರ ಗೀತಾವಾಕ್ಯಗಳನ್ನು ವಿಷಯವೆಂದು ಹೇಳುತ್ತಿದ್ದೀರೋ, ಅದು ವ್ಯಧಿಕರಣವಾಗಿದೆ.

ಪರಿಪೂರ್ಣ ಚಂದ್ರಿಕಾ

## तात्पर्यचन्द्रिका

केचित्तु छान्दोग्य उत्तरस्मिन्प्रजापतिवाक्येऽपहतपाप्मत्वादिरूपेण जीव उच्यते । तत्र कर्मादिनाऽतिरोहितस्यापहतपाप्मत्वादिगुणस्याविर्भावोक्तेः ।[1]

ಅನುವಾದ - ರಾಮಾನುಜರ ವ್ಯಾಖ್ಯಾನ ಹೀಗಿದೆ - ಇವರು 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಿಂದ ಪ್ರತ್ಯೇಕ ಅಧಿಕರಣವೆಂದು ಹೇಳದೆ, ಹಿಂದಿನ ಸೂತ್ರಕ್ಕೆ ಶೇಷವೆಂದು ಹೇಳುತ್ತಾರೆ. ಛಾಂದೋಗ್ಯದ ಮುಂದಿನ ಪ್ರಜಾಪತಿ ವಾಕ್ಯದಲ್ಲಿ ಅಪಹತಪಾಪ್ಮತ್ವಾದಿ ರೂಪದಿಂದ, ಜೀವನನ್ನು ಪ್ರತಿಪಾದನೆ ಮಾಡಲಾಗಿದೆ. ಏಕೆಂದರೆ ಆ ವಾಕ್ಯದಲ್ಲಿ ಕರ್ಮಾದಿಗಳಿಂದ ತಿರೋಹಿತವಾದ ಅಪಹತಪಾಪ್ಮತ್ವಾದಿ ಗುಣಗಳ ಆವಿರ್ಭಾವವನ್ನು ಹೇಳಿದ್ದರಿಂದ ಜೀವನೇ ಮುಂದಿನ ಪ್ರಜಾಪತಿ ವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆ.

---

(१) रामानुजभाष्यम् —

इतश्चैतदेवम् —

अनुकृतेस्तस्य च ॥ २१ ॥

तस्य दहराकाशस्य परस्य ब्रह्मणः । अनुकाराद् अयमपहतपाप्मत्वादिगुणको विमुक्तबन्धः प्रत्यगात्मा न दहराकाशः । तदनुकारः, तत्साम्यम् । तथाहि-प्रत्यगात्मनो विमुक्तस्य परब्रह्मानुकारः श्रूयते 'यदा पश्यः पश्यते रुग्मवर्णं कर्तारमीशं पुरुषं ब्रह्मयोनिम् । तदा विद्वान् पुण्यपापे विधूय निरञ्जनः परमं साम्यमुपैति' इति । अतोऽनुकर्ता प्रजापतिवाक्यनिर्दिष्टः । अनुकार्यं ब्रह्म दहराकाशः ॥ २१ ॥

अपि स्मर्यते ॥ २२ ॥

संसारिणोऽपि मुक्तावस्थायां परमसाम्यापत्तिलक्षणः परब्रह्मानुकारः स्मर्यते 'इदं ज्ञानमुपाश्रित्य मम साधर्म्यमागताः । सर्गेऽपि नोपजायन्ते प्रलये न व्यथन्ति च ॥' इति । केचित् 'अनुकृतेस्तस्य च' 'अपि स्मर्यते' इति सूत्रद्वयमधिकरणान्तरम्, 'तमेव भान्तमनुभाति सर्वं तस्य भासा सर्वमिदं विभाति' इत्यस्याः श्रुतेः परब्रह्मपरत्वनिर्णयाय प्रवृत्तं वदन्ति । तत्तु 'अदृश्यत्वादिगुणको धर्मोक्तेः' 'द्युभ्वाद्यायतनं स्वशब्दात्' इत्यधिकरणद्वयेन तस्य प्रकरणस्य परब्रह्मविषयत्वप्रतिपादनात् 'ज्योतिश्चरणाभिधानात्' इत्यादिषु परस्य ब्रह्मणो भारूपत्वावगतेश्च पूर्वपक्षानुत्थानादयुक्तम्, सूत्राक्षरवैरूप्यं च ॥२२॥

**पूर्वस्मिन्दहरवाक्ये तु ब्रह्म । तत्रातिरोहितस्य स्वाभाविकस्यैव तस्योक्तेरित्येवम्परतया**

ಹಿಂದಿನ 'ದಹರ' ವಾಕ್ಯದಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ ಆ ವಾಕ್ಯದಲ್ಲಿ ಅತಿರೋಹಿತವಾದ ಸ್ವಾಭಾವಿಕವಾದ ಅಪಹತಪಾಪ್ಮತ್ವಾದಿ ಗುಣಗಳನ್ನು ಹೇಳಲಾಗಿದೆ. ಸ್ವಾಭಾವಿಕವಾದ ಗುಣಗಳು ಬ್ರಹ್ಮನಲ್ಲಿ ಮಾತ್ರ ಬರುವುದರಿಂದ, 'ದಹರ' ವಾಕ್ಯದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗುತ್ತಾನೆ.

**"उत्तराचेदाविर्भूतस्वरूपस्तु" इति सूत्रं व्याचक्षाणाः "अनुकृतेः" इत्यादिसूत्रद्वयं तस्य ब्रह्मणोऽनुकृतेः सादृश्यात् "मम साधर्म्यमागताः" इति स्मृतेश्च प्रजापतिवाक्योक्तो जीवो दहरवाक्योक्तं तु ब्रह्मेति पूर्वाधिकरणशेषतया व्याचक्षते ।**

ಹೀಗೆ 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವ ರಾಮಾನುಜರು 'ಅನುಕೃತೇಸ್ತಸ್ಯ ಚ' ಎಂಬ ಸೂತ್ರವನ್ನು ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರವನ್ನು ಅದಕ್ಕೆ ಪೂರಕವಾಗಿಯೇ ವ್ಯಾಖ್ಯಾನಿಸುತ್ತಾರೆ. ಅಂದರೆ ಬ್ರಹ್ಮನ ಅನುಕರಣದ ಸಾದೃಶ್ಯದಿಂದ ಮತ್ತು "ಮಮ ಸಾಧರ್ಮ್ಯಮಾಗತಾಃ" ಎಂಬ ಸ್ಮೃತಿ ಪ್ರಮಾಣದಿಂದ ಪ್ರಜಾಪತಿ ವಾಕ್ಯಪ್ರತಿಪಾದ್ಯನಾದವನು ಜೀವನಾಗಿದ್ದಾನೆ. ಹಾಗೂ 'ದಹರ' ವಾಕ್ಯಪ್ರತಿಪಾದ್ಯನಾದವನು ಬ್ರಹ್ಮನಾಗಿದ್ದಾನೆಂದು ಹಿಂದಿನ ದಹರಾಧಿಕರಣಕ್ಕೆ ಅಂಗಭೂತವಾಗಿ ಈ ಸೂತ್ರಗಳನ್ನು ವ್ಯಾಖ್ಯಾನಿಸಿದ್ದಾರೆ.

**तन्न । प्रजापतिवाक्येऽपि दहरवाक्य इव 'य आत्माऽपहतपाप्मा' 'विजरो विमृत्युः' इत्यादेरेव श्रवणेन तत्राप्यपहतपाप्मत्वादिप्रादुर्भावोक्त्यभावात् । "स्वेन रूपेणाभिनिष्पद्यते" इति वाक्यशेषस्तूभयत्राप्यस्ति ।**

ರಾಮಾನುಜರ ಈ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ದಹರವಾಕ್ಯದಲ್ಲಿ 'ಯ ಆತ್ಮಾಽಪಹತಪಾಪ್ಮಾ' 'ವಿಜರೋ ವಿಮೃತ್ಯುಃ' ಇತ್ಯಾದಿ ವಾಕ್ಯಗಳು ಹೇಗಿವೆಯೋ, ಅದೇ ತರಹ ಪ್ರಜಾಪತಿವಾಕ್ಯದಲ್ಲಿಯೂ ಕೂಡ ಅಪಹತಪಾಪ್ಮತ್ವಾದಿ ವಾಕ್ಯಗಳು ಶ್ರುತವಾಗಿವೆ. ಹೊರತು, ನೀವು ಹೇಳುವಂತೆ ಅಪಹತಪಾಪ್ಮತ್ವಾದಿಗಳ ಪ್ರಾದುರ್ಭಾವವನ್ನು ಹೇಳಿಯೇ ಇಲ್ಲ. 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವಾಕ್ಯಶೇಷದಿಂದ ಅಪಹತಪಾಪ್ಮತ್ವಾದಿಗಳ ಆವಿರ್ಭಾವವು ಪ್ರಜಾಪತಿವಾಕ್ಯದಲ್ಲಿ ಇದೆಯಲ್ಲವೇ? ಎಂದರೆ, ಇದೇ ತರಹದ ವಾಕ್ಯವು 'ದಹರ' ವಾಕ್ಯದಲ್ಲಿಯೂ ಇರುತ್ತದೆ. ಆದ್ದರಿಂದ ದಹರವಾಕ್ಯಕ್ಕಿಂತ ವೈಲಕ್ಷಣ್ಯವನ್ನು ತೋರಿಸಲು ಸಾಧ್ಯವಿಲ್ಲ.

ಪರಿಪೂರ್ಣಚಂದ್ರಿಕಾ

**दहरवाक्ये जीवस्याभिनिष्पत्त्युक्तिर्जीवस्वरूपाभिनिष्पादकत्वरूपब्रह्मगुणात्त्यर्था चेत् । प्रजापतिवाक्येऽपि तदर्थाऽस्तु ।**

ದಹರವಾಕ್ಯವು ಹೇಳಲ್ಪಟ್ಟ ಜೀವಸ್ವರೂಪವನ್ನು ಬ್ರಹ್ಮನು ಅಭಿನಿಷ್ಪಾದನೆ ಮಾಡುತ್ತಾನೆಂದು ಹೇಳುವುದರಲ್ಲಿ ತಾತ್ಪರ್ಯವನ್ನು ಹೊಂದಿದೆ. ಇದರಿಂದ ಬ್ರಹ್ಮನ ಗುಣವನ್ನು ಹೇಳುವುದಕ್ಕಾಗಿಯೇ ಜೀವಸ್ವರೂಪದ ಆವಿರ್ಭಾವವನ್ನು ದಹರವಾಕ್ಯವು ಹೇಳುತ್ತಿದೆಯೆಂದು ಉತ್ತರಿಸಿದರೆ; ಪ್ರಜಾಪತಿ-ವಾಕ್ಯದಲ್ಲಿಯೂ ಇದು ಸಮಾನ. ಅಲ್ಲಿಯೂ ಕೂಡ ಜೀವಸ್ವರೂಪದ ಅಭಿನಿಷ್ಪಾದಕತ್ವ ಧರ್ಮವನ್ನು ಬ್ರಹ್ಮನಲ್ಲಿ ಹೇಳುವುದಕ್ಕಾಗಿಯೇ ಆವಿರ್ಭಾವವನ್ನು ಹೇಳಿದ್ದಾರೆಂದು ವ್ಯಾಖ್ಯಾನಿಸಬಹುದು. ಹೀಗಿರುವಾಗ ಯಾವ ವೈಷಮ್ಯವನ್ನು ವಿವಕ್ಷಿಸಿ ದಹರವಾಕ್ಯವು ಬ್ರಹ್ಮಪರವೆಂದು, ಪ್ರಜಾಪತಿ ವಾಕ್ಯವು ಜೀವಪರವೆಂದು ನೀವು ವ್ಯಾಖ್ಯಾನಿಸುತ್ತೀರಿ.

**किञ्च अपहतपाप्मत्वादिगुणक आत्मनीन्द्रेण पुनः पुनः पृष्टे प्रजापतिः ''य एषोऽन्तरक्षिणि पुरुषो दृश्यत एष आत्मा'' इति ''य एष स्वप्ने महीयमानश्चरत्येष आत्मा'' इति ''यत्रैतत्सुप्तः समस्तः सम्प्रसन्नः स्वप्नं न विजानात्येष आत्मा'' इति ''तदस्यामृतस्याशरीरस्यात्मनोऽधिष्ठानम्'' इत्यसकृदुपदिदेश ।**

ದಹರ ವಾಕ್ಯದಿಂದ ಪ್ರತಿಪಾದ್ಯನಾದ ಬ್ರಹ್ಮನೇ ಪ್ರಜಾಪತಿವಾಕ್ಯದಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆನ್ನಲು ಮತ್ತೊಂದು ಕಾರಣ ಹೀಗಿದೆ - ಅಪಹತಪಾಪ್ಮತ್ವಾದಿ ಗುಣವುಳ್ಳ ಆತ್ಮನ ಬಗ್ಗೆ ಇಂದ್ರ ದೇವರು ಪುನಃ ಪುನಃ ಪ್ರಶ್ನಿಸುತ್ತಾರೆ. ಆವಾಗ ಚತುರ್ಮುಖಬ್ರಹ್ಮದೇವರು ಆತ್ಮನ ವಿಷಯದಲ್ಲಿ ಹೀಗೆ ಉಪದೇಶ ಮಾಡುತ್ತಾರೆ - 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಚಕ್ಷುರಿಂದ್ರಿಯದಲ್ಲಿರುವ ಪುರುಷನೇ 'ಆತ್ಮಾ' ಎನಿಸಿದ್ದಾನೆ ಎಂದು. 'ಯ ಏಷ ಸ್ವಪ್ನೇ ಮಹಿಮಾನಶ್ಚರತ್ಯೇಷ ಆತ್ಮಾ' ಯಾವಾತನು ಸ್ವಪ್ನದಲ್ಲಿ ಅತ್ಯಂತ ಮಹಿಮೋಪೇತನಾಗಿ ಸಂಚಾರ ಮಾಡುತ್ತಾನೋ, ಅವನೇ ಆತ್ಮನು ಎಂದು. 'ಯತ್ರೈತತ್‌ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮಾ' ಯಾವ ವಿಷಯದಲ್ಲಿ ಸುಪ್ತನು ಆಲಿಂಗಿತನಾಗಿರುತ್ತಾನೋ, ಅತ್ಯಂತ ಪ್ರಸನ್ನ ಮನಸ್ಕನಾಗಿರುತ್ತಾನೋ, ಸ್ವಪ್ನವನ್ನೂ ಕೂಡ ಕಾಣಲಾರನೋ ಅಂತಹ ಜೀವನಿಗೆ ಅಧಿಷ್ಠಾನಭೂತ-ನಾದವನೇ ಆತ್ಮನು ಎಂದು ಮತ್ತು 'ತದಸ್ಯಾಮೃತಸ್ಯಾಶರೀರಸ್ಯಾತ್ಮನೋಽಧಿಷ್ಠಾನಮ್' ಅಮೃತಸ್ವರೂಪನಾದ ಅಶರೀರಿಯಾದ ಆತ್ಮನಿಗೆ ಅಧಿಷ್ಠಾನನಾಗಿದ್ದಾನೆ. ಹೀಗೆ ಅನೇಕ ಮಾತುಗಳಿಂದ ಆತ್ಮನ ಬಗ್ಗೆ ಉಪದೇಶ ಮಾಡಿದ್ದಾರೆ.

**तत्र चाक्षिवाक्यं तावद्ब्रह्मविषयम् । 'अन्तस्तद्धर्मोपदेशात्' । 'अन्तर उपपत्तेः' इत्यत्र च निर्णीतब्रह्मत्वस्य ''य एषोऽन्तरक्षिणि पुरुषो दृश्यते'' इति श्रुत्यन्तरोक्तस्यैवेह प्रत्यभिज्ञानात् । जीवस्य हृत्स्थत्वेनाक्षिस्थत्वाभावाच्च ।**

ಈ ಉಪದೇಶ ವಾಕ್ಯಗಳಲ್ಲಿ ಪ್ರಥಮಶ್ರುತವಾದ ಅಕ್ಷಿವಾಕ್ಯವು ಬ್ರಹ್ಮವಿಷಯಕವೇ ಆಗಿದೆ. 'ಅಂತಸ್ತದ್ಧರ್ಮೋಪದೇಶಾತ್' 'ಅಂತರ ಉಪಪತ್ತೇಃ' ಇತ್ಯಾದಿ ಸೂತ್ರಗಳಿಂದ ನಿರ್ಣೀತನಾದ ಬ್ರಹ್ಮನೇ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ಶ್ರುತ್ಯಂತರದಿಂದಲೂ ಪ್ರತಿಪಾದ್ಯನಾದವನು. ಅಂತಹ ಬ್ರಹ್ಮನೇ ಇಲ್ಲಿ ಪ್ರತ್ಯಭಿಜ್ಞಾಕ್ಕೆ ವಿಷಯನಾಗಿದ್ದಾನೆ. ಜೀವನು ಹೃದಯದಲ್ಲಿರುವುದರಿಂದ ಕಣ್ಣಿನಲ್ಲಿರಲು ಸಾಧ್ಯವಿಲ್ಲ. ಆದ್ದರಿಂದ ಈ ಅಕ್ಷಿವಾಕ್ಯವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆ.

**स्वप्नवाक्यमपि तथा । ''स्वप्नेन शारीरमभिप्रहत्यासुप्तः सुप्तानभिचाकशीति'' इति श्रुत्यन्तरात् । अत्रापि महीयमानत्वलिङ्गाच ।**

'ಸ್ವಾಪ್ನ' ವಾಕ್ಯವೂ ಕೂಡ ಬ್ರಹ್ಮವಿಷಯಕವೇ ಆಗಿದೆ. ಏಕೆಂದರೆ 'ಸ್ವಪ್ನೇನ ಶಾರೀರಮಭಿಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಸ್ವಪ್ನಕಾಲದಲ್ಲಿ ಶಾರೀರನಾದ ಜೀವನನ್ನು ಹೊಂದಿ, ಸುಪ್ತರಾದ ಜೀವರನ್ನೆಲ್ಲಾ ನೋಡುತ್ತಾನೆ. ಹೀಗೆ ಶ್ರುತ್ಯಂತರ ಬಲದಿಂದ, ಸ್ವಪ್ನನಿಯಾಮಕನಾದ ಪರಮಾತ್ಮನೇ 'ಯ ಏಷಃ ಸ್ವಪ್ನ' ಎಂಬ ವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಏಕೆಂದರೆ ಮಹೀಯಮಾನತ್ವಲಿಂಗವು ಎರಡೂ ಕಡೆ ಶ್ರುತವಾಗಿರುವುದರಿಂದ.

**सुप्तवाक्यमपि तथा । ''प्राज्ञेनात्मना सम्परिष्वक्तः'' इत्यादिश्रुत्यन्तरात् । अत्रापि ''यत्र सुप्तः'' इति यच्छब्दोक्तस्य समस्तसुप्ताधारस्यैव ''एष आत्मा'' इत्येतच्छब्देन परामर्शाच ।**

ಸುಪ್ತವಾಕ್ಯವೂ ಕೂಡ ಬ್ರಹ್ಮಪ್ರತಿಪಾದಕವೇ ಆಗಿದೆ. ಏಕೆಂದರೆ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಇತ್ಯಾದಿ ಶ್ರುತಿಯು ಸುಷುಪ್ತ್ಯವಸ್ಥಾ ಪ್ರೇರಕನಾದವನು ಬ್ರಹ್ಮನೆಂದೇ ಹೇಳಿದೆ. ಅದರ ಬಲದಿಂದ 'ಯತ್ರೈತತ್ಸುಪ್ತಃ' ಎಂಬ ವಾಕ್ಯವೂ ಕೂಡ ಬ್ರಹ್ಮಪ್ರತಿಪಾದಕವೇ ಆಗುತ್ತದೆ. ಏಕೆಂದರೆ 'ಯತ್ರ ಸುಪ್ತಃ' ಎಂಬಲ್ಲಿರುವ 'ಯತ್' ಶಬ್ದದಿಂದ ಪ್ರತಿಪಾದ್ಯನಾದವನೇ ಸಕಲವಿಧ ಸುಪ್ತಜೀವರಿಗೆ ಆಧಾರನಾಗಿದ್ದಾನೆ. ಅವನನ್ನೇ 'ಏಷ ಆತ್ಮಾ' ಎಂಬಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶಿಸಲಾಗಿದೆ.

**अशरीरवाक्यमपि तथा । अशरीरशब्देन निरपेक्षस्य सार्वकालिकस्य च शरीरराहित्यस्य स्वरसतः प्रतीतेः । तस्य चेश्वर एव सम्भवात् ।**

ಬ್ರಹ್ಮದೇವರಿಂದ ಉಪದೇಶಿಸಲ್ಪಟ್ಟ ಅಶರೀರವಾಕ್ಯವೂ ಕೂಡ ಪರಮಾತ್ಮನನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ ಅಶರೀರ ಶಬ್ದಕ್ಕೆ ನಿರಪೇಕ್ಷಿತವಾದ ಸಾರ್ವಕಾಲಿಕವಾದ ಶರೀರರಾಹಿತ್ಯ ಎಂಬ ಸಹಜವಾದ ಅರ್ಥವನ್ನೇ ವಿವಕ್ಷಿಸಲು ಬರುವಾಗ ಸಾಪೇಕ್ಷಿತವಾದ ತಾತ್ಕಾಲಿಕವಾದ ಶರೀರರಾಹಿತ್ಯದಿಂದ

ಜೀವನೆಂಬ ಅರ್ಥವನ್ನು ವಿವಕ್ಷಿಸುವುದು ತಪ್ಪಾಗುತ್ತದೆ. ನಿರಪೇಕ್ಷಿತವಾದ ಸಾರ್ವಕಾಲಿಕವಾದ ಶರೀರರಾಹಿತ್ಯವು ಈಶ್ವರನಲ್ಲಷ್ಟೇ ಉಪಪನ್ನವಾಗುತ್ತದೆ.

**किञ्चाक्ष्यादिवाक्येषु प्रतिवाक्यं "एष आत्मेति होवाचैतदमृतमभयमेतद्ब्रह्म" इति श्रवणात्कथं तेषां जीवविषयता ।**

ಮತ್ತು ಅಕ್ಷ್ಯಾದಿ ವಾಕ್ಯಗಳ ನಡುವೆ ಪ್ರತಿವಾಕ್ಯಗಳಲ್ಲಿಯೂ 'ಏಷ ಆತ್ಮೇತಿ ಹೋವಾಚ' 'ಏತದಮೃತಮಭಯಮೇತದ್ ಬ್ರಹ್ಮ' ಎಂಬುದಾಗಿ ಅಮೃತತ್ವ-ಅಭಯತ್ವಾದಿಲಿಂಗಗಳನ್ನು ಹೇಳಿರುವುದರಿಂದ ಇವೆಲ್ಲವೂ ಜೀವವಿಷಯಕವಾಗಲು ಹೇಗೆ ಸಾಧ್ಯ ?

**किञ्च प्रजापतिवाक्ये "य आत्माऽपहतपाप्मा" इति प्रसिद्धार्थेन प्रकृत-परामर्शिना च य इति सर्वनाम्ना "एष आत्माऽपहतपाप्म" इति प्रस्तुतदहरवाक्ये प्रसिद्धेश्वरपरामर्श एव युक्तः ।**

ಮತ್ತು ಪ್ರಜಾಪತಿ ವಾಕ್ಯದಲ್ಲಿ 'ಯ ಆತ್ಮಾಽಪಹತಪಾಪ್ಮಾ' ಎಂದಿದೆ. ಪ್ರಸಿದ್ಧಾರ್ಥವಾದ ಪ್ರಕೃತವಾದದ್ದನ್ನು ಪರಾಮರ್ಶಿಸುವ ಇಲ್ಲಿರುವ 'ಯಃ' ಎಂಬ ಸರ್ವನಾಮಶಬ್ದದಿಂದ 'ಏಷ ಆತ್ಮಾ ಅಪಹತಪಾಪ್ಮಾ' ಎಂಬಲ್ಲಿ ಪ್ರಸ್ತುತವಾದ ದಹರವಾಕ್ಯದಲ್ಲಿ ಪ್ರಸಿದ್ಧನಾದ ಈಶ್ವರನನ್ನು ಪರಾಮರ್ಶ ಮಾಡುವುದೇ ಯುಕ್ತವಾಗುತ್ತದೆ.

**अपि च "तेषां सर्वेषु लोकेषु कामचारो भवति" इति दहरवाक्ये यन्मोक्षाख्यं फलं तस्यैव "तेषां सर्वे लोका आप्ताः" इति प्रजापतिवाक्येऽपि श्रुतत्वात्**

ಮತ್ತು 'ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂಬುದಾಗಿ ಯಾವ ದಹರವಾಕ್ಯದಲ್ಲಿ ದಹರನ ತಿಳುವಳಿಕೆಯಿಂದ ಯಾವ ಮೋಕ್ಷವೆಂಬ ಫಲವನ್ನು ಹೇಳಲಾಗಿದೆಯೋ, ಅದೇ ಮೋಕ್ಷ ಫಲವನ್ನು 'ತೇಷಾಂ ಸರ್ವೇ ಲೋಕಾ ಆಪ್ತಾಃ' ಎಂಬ ಪ್ರಜಾಪತಿ ವಾಕ್ಯದಲ್ಲಿಯೂ ಹೇಳಲಾಗಿದೆ.

**तथा दहरवाक्ये "तस्मिन्यदन्तस्तदन्वेष्टव्यम्" इति यदन्वेष्टव्यत्वादिकमुक्तं तस्यैव प्रजापतिवाक्ये "सोऽन्वेष्टव्यः स विजिज्ञासितव्यः" इति श्रवणात्**

ಅದರಂತೆ ದಹರವಾಕ್ಯದಲ್ಲಿ 'ತಸ್ಮಿನ್ಯದಂತಃ ತದನ್ವೇಷ್ಟವ್ಯಮ್' ಎಂದು ಯಾವ ದಹರನಲ್ಲಿ ಅನ್ವೇಷಣ ವಿಷಯತ್ವವು ಶ್ರುತವಾಗಿದೆಯೋ, ಅವನಿಗೇ ಪ್ರಜಾಪತಿವಾಕ್ಯದಲ್ಲಿ 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಎಂಬುದಾಗಿ ಅನ್ವೇಷಣವಿಷಯತ್ವವು ಶ್ರುತವಾಗಿದೆ.

ಅನುಕೃತ್ಯಧಿಕರಣ (೧-೩-೬)

**"इन्द्रो विरोचनश्चैव श्रुत्वा तं ब्रह्मणोऽक्षिगम् । विष्णुमानन्दरूपेतम्" इत्यादिस्मृतेश्च न तयोर्भिन्नार्थतेति दिक् ।**

'ಇಂದ್ರೋ ವಿರೋಚನಶ್ಚೈವ ಶ್ರುತ್ವಾ ತಂ ಬ್ರಹ್ಮಣೋಽಕ್ಷಿಗಮ್ । ವಿಷ್ಣುಮಾನಂದರೂಪೇತಮ್' ಇತ್ಯಾದಿ ಸ್ಮೃತಿಯೂ ಕೂಡ ದಹರ ಬ್ರಹ್ಮನೇ ಪ್ರಜಾಪತಿವಾಕ್ಯದಿಂದಲೂ ಪ್ರತಿಪಾದ್ಯನಾಗಿದ್ದಾನೆನ್ನಲು ಪ್ರಮಾಣವಾಗಿದೆ. ಆದ್ದರಿಂದ ದಹರವಾಕ್ಯವು ಬ್ರಹ್ಮಪರವಾಗಿದೆ. ಪ್ರಜಾಪತಿ ವಾಕ್ಯವು ಜೀವಪರ-ವಾಗಿದೆಯೆಂಬ ರಾಮಾನುಜರ ನಿಲುವು ಅತ್ಯಂತ ಅಸಾಧುವಾಗಿದೆ.

**अनुकृतेरित्यादिसूत्रद्वये च किं मुक्तस्यापहतपाप्मत्वादिरूपेणेश्वरसाम्यं साध्यं किं वाऽन्यत्रप्रसिद्धेन तेन दहरप्रजापतिवाक्योक्तयोर्ब्रह्मत्वजीवत्वे साध्ये ।**

ರಾಮಾನುಜರ ಸೂತ್ರವ್ಯಾಖ್ಯಾನವು ಕೂಡ ಸರಿಯಿಲ್ಲ. ಏಕೆಂದರೆ 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ ಮತ್ತು 'ಅಪಿ ಸ್ಮರ್ಯತೇ' ಎಂಬ ಸೂತ್ರದಲ್ಲಿ ಮುಕ್ತನಾದ ಜೀವನಿಗೆ ಅಪಹತಪಾಪ್ಮತ್ವಾದಿ ರೂಪದಿಂದ ಈಶ್ವರನ ಜೊತೆಗಿರುವ ಸಾಮ್ಯವನ್ನು ಸಾಧಿಸಲಾಗಿದೆಯೋ, ಅಥವಾ ಅನ್ಯತ್ರಪ್ರಸಿದ್ಧವಾದ ಸಾಮ್ಯದಿಂದ ದಹರವಾಕ್ಯದಲ್ಲಿ ಪ್ರತಿಪಾದ್ಯನಾದವನು ಬ್ರಹ್ಮನೆಂದು ಮತ್ತು ಪ್ರಜಾಪತಿವಾಕ್ಯದಲ್ಲಿ ಪ್ರತಿಪಾದ್ಯನಾದವನು ಜೀವನೆಂದು ಸಾಧನೆ ಮಾಡುತ್ತೀರೋ?

**नाद्यः । तस्य त्वन्मते चतुर्थे "सम्पद्य" इत्यादावेव सिद्धेः । समन्वयाध्याया-सङ्गतेश्च । सूत्रेऽनुकृतेरिति साम्यस्य हेतुत्वोक्तेश्च ।**

ಮೊದಲನೆಯ ಪಕ್ಷ ಸರಿಯಿಲ್ಲ. ಏಕೆಂದರೆ ಮುಕ್ತಜೀವರಿಗೆ ಈಶ್ವರನಿಂದ ಸಾಮ್ಯವಿದೆಯೆಂದು ನಾಲ್ಕನೆಯ ಅಧ್ಯಾಯಲ್ಲಿರುವ 'ಸಂಪದ್ಯಾವಿಹಾಯ' ಇತ್ಯಾದಿ ಸೂತ್ರದಲ್ಲಿ ಸಮರ್ಥಿಸಲಾಗುತ್ತದೆ. ಪುನಃ ಇಲ್ಲಿ ಅದರ ಸಾಧನೆಯು ಅನಾವಶ್ಯಕ. ಮತ್ತು ಸಮನ್ವಯಾಧ್ಯಾಯದಲ್ಲಿ ಈ ವಿಚಾರವು ಅಪ್ರಸ್ತುತ. ಮತ್ತು ಸೂತ್ರದಲ್ಲಿ 'ಅನುಕೃತೇಃ' ಎಂಬುದಾಗಿ ಸಾಮ್ಯವನ್ನು ಹೇತುವನ್ನಾಗಿ ಮಾಡಿರುವಾಗ ಅದನ್ನೇ ಸಾಧ್ಯವೆಂದು ಹೇಳುವುದು ತಪ್ಪಾಗುತ್ತದೆ.

**नान्त्यः । अनुकृतिमात्रेण पूर्वोक्तं ब्रह्म पश्चादुक्तस्तु जीव इत्यस्यासिद्धेः ।**

ಎರಡನೆಯ ಪಕ್ಷವೂ ಕೂಡ ಸರಿಯಿಲ್ಲ. ಏಕೆಂದರೆ ಅನುಕೃತಿಯಿಂದಷ್ಟೇ ಹಿಂದಿನ ದಹರವಾಕ್ಯದಲ್ಲಿ ಪ್ರತಿಪಾದ್ಯನಾದವನು ಬ್ರಹ್ಮನು. ಮುಂದಿನ ಪ್ರಜಾಪತಿವಾಕ್ಯದಲ್ಲಿ ಪ್ರತಿಪಾದ್ಯನಾದವನು ಜೀವನೆಂಬುದು ಸಿದ್ಧವಾಗುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣಶರೀರ ಹಾಗೂ ಸೂತ್ರಾರ್ಥಗಳು ಅತ್ಯಂತ ಅಸಾಧುವಾಗಿದೆ. ಹಿಂದಿನ ಅಧಿಕರಣದ ಜೊತೆಗೇ ಈ ಎರಡು ಸೂತ್ರಗಳು ಸೇರಿವೆ ಎಂಬ ವಿಚಾರಗಳೂ ಕೂಡ ಅಸಾಧುವಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः –**

**केचित्त्विति ।।** ''इति व्याचक्षाणाः पूर्वाधिकरणशेषतया व्याचक्षते'' इत्यन्वयः । अयमर्थः । ''इतरपरामर्शात्स इति चेन्नासम्भवात्'' इत्यत्र ''एष सम्प्रसादोऽस्माच्छरीरात्समुत्थाय'' इति जीवपरामर्शात्स एव दहराकाश इति चेन्न ।

ವಿವರಣೆ - ರಾಮಾನುಜರ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಕೇಚಿತ್ತು' ಇತ್ಯಾದಿ ಗ್ರಂಥದಿಂದ. 'ಇತಿ ವ್ಯಾಚಕ್ಷಾಣಾಃ ಪೂರ್ವಾಧಿಕರಣಶೇಷತಯಾ ವ್ಯಾಚಕ್ಷತೇ' ಎಂದು ಗ್ರಂಥದಲ್ಲಿರುವ ಪದಗಳಿಗೆ ಪರಸ್ಪರ ಅನ್ವಯವನ್ನು ತಿಳಿಯಬೇಕು.

ದಹರಾಧಿಕರಣದಲ್ಲಿಯೇ ಈ ಸೂತ್ರಗಳೆರಡೂ ಸೇರಿರುವುದರಿಂದ ಪ್ರತ್ಯೇಕ ಅಧಿಕರಣವಲ್ಲವೆಂಬುದು, ರಾಮಾನುಜರ ಅಭಿಪ್ರಾಯ. ಆದ್ದರಿಂದ ದಹರಾಧಿಕರಣದಲ್ಲಿರುವ ಸೂತ್ರಗಳಿಗೆ ಅವರ ವ್ಯಾಖ್ಯಾನ ಹೀಗಿದೆ- ಮೊದಲು 'ಇತರ ಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್' ಎಂಬ ಸೂತ್ರದಲ್ಲಿ 'ಏಷ ಸಂಪ್ರಸಾದೋಽಸ್ಮಾತ್ ಶರೀರಾತ್ ಸಮುತ್ಥಾಯ' ಎಂದು ಜೀವನನ್ನು ಪರಾಮರ್ಶ ಮಾಡಿ, ಅಂತಹ ಜೀವನೇ ದಹರಾಕಾಶಾನಾಗಿದ್ದಾನೆಂದು ಆಕ್ಷೇಪ. ಆದರೆ 'ಏಷ ಸಂಪ್ರಸಾದಃ' ಎಂಬುದರ ಹಿಂದಿನ-ಮುಂದಿನ ವಾಕ್ಯಗಳಲ್ಲಿ ಅಪಹತಪಾಪ್ಮತ್ವಾದಿಗುಣಗಳನ್ನು ಹೇಳಿರುವುದರಿಂದ ಜೀವನಲ್ಲಿ ಈ ಗುಣಗಳೆಲ್ಲವೂ ಅಸಂಭಾವಿತವಾದ್ದರಿಂದ, ದಹರಾಕಾಶನಾಗಲಾರನು ಎಂದು ಉತ್ತರಿಸಲಾಗಿದೆ.

**प्रकाशः –** तस्मिन्पूर्वोक्तापहतपाप्मत्वादेरसम्भवादित्युक्ते उत्तरस्मात् ''य आत्माऽपहतपाप्मात्यादि प्राजापत्यवाक्याज्जीवस्यैवापहतपाप्मत्वादिगुणयोगो निश्चीयत इत्याशङ्क्य प्राजापत्यवाक्ये न स्वाभाविकापहतपाप्मत्वादिगुणक उच्यते ।

'ಏಷ ಸಂಪ್ರಸಾದಃ' ಎಂಬ ವಾಕ್ಯದ ಹಿಂದಿನ ವಾಕ್ಯದಲ್ಲಿ ಅಪಹತಪಾಪ್ಮತ್ವಾದಿಗುಣಗಳನ್ನು ಹೇಳಲಾಗಿದೆ. ಈ ಗುಣಗಳೆಲ್ಲವೂ ಜೀವನಲ್ಲಿ ಅಸಂಭಾವಿತವಾಗಿವೆ. ಪುನಃ 'ಉತ್ತರಾಚ್ಚೇತ್ ಆವಿರ್ಭೂತಸ್ವರೂಪತಸ್ತು' ಎಂಬ ಮುಂದಿನ ಸೂತ್ರದಲ್ಲಿ 'ಯ ಆತ್ಮಾऽಪಹತಪಾಪ್ಮಾ' ಇತ್ಯಾದಿಯಾದ ಪ್ರಾಜಾಪತ್ಯವಾಕ್ಯದಿಂದ ಜೀವನಲ್ಲಿಯೇ ಅಪಹತಪಾಪ್ಮತ್ವಾದಿಗುಣಗಳ ಇರುವಿಕೆಯನ್ನು ಹೇಳಲಾಗಿದೆಯಲ್ಲವೇ? ಎಂಬ ಆಶಂಕೆಗೆ ಪ್ರಾಜಾಪತ್ಯವಾಕ್ಯದಲ್ಲಿ ಸ್ವಾಭಾವಿಕವಾದ ಅಪಹತಪಾಪ್ಮತ್ವಾದಿಗುಣಗಳನ್ನು ಹೇಳಿರುವುದಿಲ್ಲ.

**प्रकाशः –** अपि तु प्राक्तिरोहितस्वरूपस्सन् ''परं ज्योतिरुपसंपद्य स्वेन रूपेणाभिनिष्पद्यते'' इति भगवत्प्रसादाविर्भूतगुणक एव ।

ಹೊರತು ಹಿಂದೆ ತಿರೋಹಿತವಾದ ಸ್ವರೂಪವುಳ್ಳ ಜೀವನು 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವಾಕ್ಯ ಹೇಳುವಂತೆ ಭಗವಂತನ ಪ್ರಸಾದದಿಂದಷ್ಟೇ ಆವಿರ್ಭೂತಗುಣವುಳ್ಳವನಾಗಿದ್ದಾನೆಂದು ಹೇಳಲಾಗಿದೆ.

ಅನುಕೃತ್ಯಧಿಕರಣ (೧-೩-೬)

**प्रकाशः** – अत उत्तरवाक्यं जीवपरमिति युक्तम् । पूर्वत्र दहरवाक्ये त्वपहत-पाप्मत्वादयस्स्वाभाविका एव श्रूयन्ते ।

ಆದ್ದರಿಂದ ಮುಂದಿನ ವಾಕ್ಯವನ್ನು ಜೀವಪರವೆಂದು ಹೇಳಬಾರದು. ಹಿಂದಿನ ದಹರ ವಾಕ್ಯದಲ್ಲಿ ಅಪಹತಪಾಪ್ಮತ್ವಾದಿ ಗುಣಗಳನ್ನು ಸ್ವಾಭಾವಿಕವಾಗಿ ಹೇಳಿದ್ದೇ ಕೇಳಿಸುತ್ತಿದೆ.

**प्रकाशः** – तेच जीवे न युक्ता इति दहराकाशो न जीवः । किन्तु तथोच्यमानः परमात्मैवेत्यत्र हेत्वन्तरमत्रोच्यते ।

ಈ ಗುಣಗಳು ಜೀವನಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ದಹರಾಕಾಶವು ಜೀವನಾಗಿದ್ದಾನೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಹೊರತಾಗಿ ಅಂತಹ ಗುಣಗಳುಳ್ಳ ಪರಮಾತ್ಮನೇ ದಹರಾಕಾಶನಾಗಿದ್ದಾನೆ. ಅವನ ವಿಷಯದಲ್ಲಿಯೇ ಹೇತ್ವಂತರವನ್ನು ಹೇಳಲಾಗಿದೆ.

**प्रकाशः** – तस्य दहराकाशस्य परमात्मनोऽनुकृतेरनुकारात् ''परमं साम्यमुपैति'' इत्युक्तसाम्यापत्तेश्चेति यावत् । अतोऽनुकृत्या प्रजापतिवाक्ये तादृशगुणवत्त्वेन निर्दिष्टो जीवः अनुकार्यं ब्रह्म दहराकाश इति ''इदं ज्ञानमुपाश्रित्य मम साधर्म्यमागताः'' इति संसारिणो मुक्त्यवस्थायां परमसाम्यापत्तिलक्षणः परब्रह्मानु-कारस्स्मर्यतेऽपीति पूर्वाधिकरणशेषतया व्याचक्षत इति ।

ಇಂತಹ ದಹರಾಕಾಶನಾದ ಪರಮಾತ್ಮನಿಗೆ ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ 'ಪರಮಂ ಸಾಮ್ಯಮುಪೈತಿ' ಎಂಬ ಸೂತ್ರವು ಅನುಕಾರವನ್ನು ಹೇಳುತ್ತಿರುವುದರಿಂದ ಪ್ರಜಾಪತಿ ವಾಕ್ಯದಲ್ಲಿ ಪ್ರತಿಪಾದ್ಯನಾದವನು ಜೀವನೇ ಆಗಿದ್ದಾನೆ. ಅನುಕಾರ್ಯನಾದ ಬ್ರಹ್ಮನು ದಹರಾಕಾಶನಾಗಿದ್ದಾನೆ. ಮತ್ತು 'ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ' ಎಂದು ಸಂಸಾರಿ ಜೀವರು ಮೋಕ್ಷಾವಸ್ಥೆಯನ್ನು ಹೊಂದಿದಾಗ, ಪರಮಾತ್ಮನ ಜೊತೆಗೆ ಪರಮಸಾಮ್ಯವನ್ನು ಹೊಂದುತ್ತಾರೆ. ಹೀಗೆ ಪರಬ್ರಹ್ಮನ ಅನುಕಾರವು ಸ್ಮೃತಿಸಿದ್ಧವೂ ಆಗಿರುವುದರಿಂದ 'ಅನುಕೃತೇಸ್ತಸ್ಯ ಚ' ಎಂಬ ಸೂತ್ರವು, 'ಅಪಿ ಸ್ಮೃತೇಶ್ಚ' ಎಂಬ ಸೂತ್ರವು ಹಿಂದಿನ ಅಧಿಕರಣದ ವಿಷಯಸಾಧನೆಗೆ ಅಂಗಭೂತವೇ ಆಗಿವೆ ಎಂದು ಈ ಸೂತ್ರಗಳನ್ನು ರಾಮಾನುಜರು ವ್ಯಾಖ್ಯಾನ ಮಾಡುತ್ತಾರೆ.

**प्रकाशः** – पूर्वोत्तरवाक्ययोः परोक्तं वैलक्षण्यमसिद्धमिति भावेनाह – तन्नेति ॥

ಹಿಂದು-ಮುಂದಿನ ವಾಕ್ಯಗಳಿಗೆ ರಾಮಾನುಜರು ಹೇಳುವ ವೈಲಕ್ಷಣ್ಯವು ಅಸಿದ್ಧ ಎಂಬ ಅಭಿಪ್ರಾಯ - ತನ್ನ.

**प्रकाशः** – ननु ''य आत्माऽपहतपाप्मा विजरो विमृत्युर्विशोकोऽ-विजिघत्सोऽपिपासः सत्यकामस्सत्यसङ्कल्पस्सोऽन्वेष्टव्यस्स विजिज्ञासितव्यः सर्वांश्च

लोकानाप्नोति सर्वांश्च कामान् यस्तमात्मानमनुविद्य विजानाति'' इति प्रजापति-वचनमैतिह्यरूपेणोपश्रुत्या

ಆಕ್ಷೇಪ - 'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಸ್ಸ ವಿಜಿಜ್ಞಾಸಿತವ್ಯಃ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತಿ' ಎಂಬ ವಾಕ್ಯದಲ್ಲಿ ಬ್ರಹ್ಮದೇವರು ಆತ್ಮನನ್ನು ತಿಳಿಯುವ ವ್ಯಕ್ತಿಗೆ ಸಕಲ ಕಾಮನೆಗಳು ಈಡೇರುತ್ತವೆ, ಸಕಲ ಲೋಕಗಳು ದೊರೆಯುತ್ತವೆಂದು ಹೇಳಿದ್ದಾರೆ. ಈ ವಾಕ್ಯವು ಐತಿಹ್ಯ ರೂಪದಿಂದ ಇರುತ್ತದೆ. ಇದನ್ನು ಇಂದ್ರದೇವರು ಬ್ರಹ್ಮದೇವರ ಮೂಲಕ ಕೇಳಿದ್ದಾರೆ.

**प्रकाशः** – अन्वेष्टव्यात्मस्वरूपजिज्ञासया प्रजापतिमुपसेदुषे मघवते प्रजापति-र्जागरितस्वप्नसुषुप्त्यवस्थजीवात्मानमशरीरं क्रमेण शुश्रूषुयोग्यतापरिचिक्षिषयोपदिश्य

ಇಂತಹ ಇಂದ್ರದೇವರು ಅನ್ವೇಷ್ಟವ್ಯನಾದ ಆತ್ಮಸ್ವರೂಪದ ಬಗ್ಗೆ ಜಿಜ್ಞಾಸೆಯಿಂದ ಬ್ರಹ್ಮದೇವರ ಬಳಿ ಉಪಸತ್ತಿ ಮಾಡುತ್ತಾರೆ. ಅಂತಹ ಇಂದ್ರದೇವರನ್ನು ಕುರಿತು ಬ್ರಹ್ಮದೇವರು ಜಾಗ್ರತ್, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿರುವ ಜೀವಾತ್ಮನನ್ನು ಅಶರೀರನೆಂದು ಕ್ರಮವಾಗಿ ಶ್ರವಣಕ್ಕೆ ಉಪಯೋಗಿಯಾದ ಯೋಗ್ಯತಾದಿಗಳನ್ನು ಪರೀಕ್ಷೆ ಮಾಡಿ, ಉಪದೇಶಿಸಿದರು.

**प्रकाशः** – तत्र परिशुद्धात्मस्वरूपोपदेशयोग्याय मघवते ''मघवन्मर्त्यं वा इदं शरीरमात्तं मृत्युना तदस्यामृतस्याशरीरस्याधिष्ठानम्'' इति शरीरस्याधिष्ठानतामा-त्मनश्चाधिष्ठातृतामशरीरस्यामृतस्वरूपतां चोक्त्वा

ಬ್ರಹ್ಮದೇವರು ಇಂದ್ರದೇವರ ಬಗ್ಗೆ ಅವರು ಪರಿಶುದ್ಧವಾದ ಆತ್ಮಸ್ವರೂಪವುಳ್ಳವರೆಂದು ತಿಳಿದು ಉಪದೇಶಕ್ಕೆ ಯೋಗ್ಯರಾಗಿದ್ದಾರೆಂಬ ಉದ್ದೇಶದಿಂದ ಹೀಗೆ ಉಪದೇಶಿಸುತ್ತಾರೆ. 'ಮಘವನ್ಮರ್ತ್ಯಂ ವಾ ಇದಂ ಶರೀರಮಾತ್ತಂ ಮೃತ್ಯುನಾ ತದಸ್ಯಾಮೃತಸ್ಯಾಶರೀರಸ್ಯಾಧಿಷ್ಠಾನಮ್' ಎಲೈ ! ಇಂದ್ರದೇವರೇ, ಈ ಶರೀರವು ಮರಣಶೀಲವಾಗಿದೆ. ಮೃತ್ಯುವಿನಿಂದ ಉಪಪನ್ನವಾಗಿದೆ. ಅಮೃತನಾದ ಅಶರೀರನಾದ ಜೀವನಿಗೆ ಈ ಶರೀರವು ಅಧಿಷ್ಠಾನವಾಗಿದೆ. ಹೀಗೆ ಶರೀರವು ಅಧಿಷ್ಠಾನವೆಂದು, ಆತ್ಮನು ಅಧಿಷ್ಠಾತೃವೆಂದು ಅಶರೀರನಾದ ಜೀವನು ಅಮೃತಸ್ವರೂಪನೆಂದು ಉಪದೇಶಿಸುತ್ತಾರೆ.

**प्रकाशः** – ''नह वै सशरीरस्य सतः प्रियाप्रिययोरपहतिरस्ति । अशरीरं वाव सन्तं न प्रियाप्रिये स्पृशतः'' इति कर्मारब्धशरीरयोगिनस्तदनुगुणसुखदुःखभात्त्वरूपानर्थं तद्विमोक्षे च तदभावमभिधाय

ಅನಂತರ ಬ್ರಹ್ಮದೇವರ ಮುಂದಿನ ಉಪದೇಶ ಹೀಗಿದೆ - 'ನಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ । ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ' ಶರೀರದಿಂದ

ಕೂಡಿರುವ ಜೀವನಿಗೆ ಸುಖ-ದುಃಖಗಳ ನಾಶವು ಇರುವುದಿಲ್ಲ. ಆದರೆ ಶರೀರವನ್ನು ಕಳೆದುಕೊಂಡ ಮೇಲೆ ಅಂತಹ ಜೀವನನ್ನು ಸುಖ-ದುಃಖಗಳು ಮುಟ್ಟುವುದಿಲ್ಲ. ಹೀಗೆ ಕರ್ಮದಿಂದ ಆರಬ್ಧವಾದ ಶರೀರವನ್ನು ಪಡೆದ ಜೀವನಿಗೆ ಕರ್ಮಗಳಿಗೆ ಅನುಗುಣವಾಗಿ ಸುಖ-ದುಃಖಗಳ ಇರುವಿಕೆಯನ್ನು ಶರೀರ ಮೋಕ್ಷದ ಅನಂತರ ಸುಖ-ದುಃಖಗಳ ಅಭಾವವನ್ನು ಉಪದೇಶಿಸಿದ್ದಾರೆ.

**प्रकाशः** – ''एवमेवैष सम्प्रसादोऽस्माच्छरीरात्समुत्थाय परञ्ज्योतिरुपसम्पद्य स्वेन रूपेणाभिनिष्पद्यते'' इति जीवात्मनस्स्वरूपमेव शरीरवियुक्तमुपदिदेश ।

ಮುಂದೆ 'ಏವಮೇವೈಷ ಸಂಪ್ರಸಾದೋऽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಹೀಗೆ ಜಾಗ್ರದಾದ್ಯವಸ್ಥೆಗಳನ್ನು ಮೀರಿದ ಜೀವಿಯು ಶರೀರದಿಂದ ಹೊರಟು ಪರಂಜ್ಯೋತಿ ಸ್ವರೂಪನಾದ ಪರಮಾತ್ಮನನ್ನು ಹೊಂದಿ ತನ್ನ ಸ್ವರೂಪದ ಆವಿರ್ಭಾವದಿಂದ ಇರುತ್ತಾನೆ ಎಂದು. ಹೀಗೆ ಜೀವಾತ್ಮನ ಸ್ವರೂಪಕ್ಕೆ ಮಾತ್ರ ಶರೀರವಿಯೋಗವನ್ನು ಉಪದೇಶಿಸಿದ್ದಾರೆ.

**प्रकाशः** – 'स उत्तमः पुरुषः' । 'स तत्र पर्येति जक्षन्क्रीडन्' इत्यादिना प्राप्यस्य परस्य ज्योतिषः पुरुषोत्तमत्वं निवृत्ततिरोधानस्य परञ्ज्योतिरूपसम्पन्नस्य प्रत्यगात्मनो ब्रह्मलोके यथेष्टभोगावास्यादिकमभिधाय

'ಸ ಉತ್ತಮಃ ಪುರುಷಃ' । 'ಸ ತತ್ರ ಪರ್ಯೇತಿ ಜಕ್ಷನ್‌ಕ್ರೀಡನ್' ಇತ್ಯಾದಿ ವಾಕ್ಯದಿಂದ ಪ್ರಾಪ್ಯನಾದ ಪರಜ್ಯೋತಿ ಸ್ವರೂಪನಾದ ಪರಮಾತ್ಮನು ಪುರುಷೋತ್ತಮನಾಗಿದ್ದಾನೆಂದು ಹೇಳಿ, ಸಂಸಾರವನ್ನು ಕಳಚಿಕೊಂಡ ಪರಂಜ್ಯೋತಿರೂಪವನ್ನು ಪಡೆದ ಪ್ರತ್ಯಗಾತ್ಮನಿಗೆ ಬ್ರಹ್ಮಲೋಕದಲ್ಲಿ ಯಥೇಷ್ಟವಾದ ಭೋಗವು ದೊರೆಯುತ್ತದೆಂದು ಮುಂದೆ ಹೇಳಲಾಗಿದೆ.

**प्रकाशः** – ''स यथा प्रायोग्य आचरणे युक्त एवमस्मिन् शरीरे प्राणो युक्तः'' इति यथोक्तस्वरूपस्यैव संसारदशायां कर्मतन्त्रं शरीरयोगं युग्यशकटयोगदृष्टान्तेनाभि धाय

ಅನಂತರ; 'ಸ ಯಥಾ ಪ್ರಾಯೋಗ್ಯ ಆಚರಣೇ ಯುಕ್ತ ಏವಮಸ್ಮಿನ್ ಶರೀರೇ ಪ್ರಾಣೋ ಯುಕ್ತಃ' ಎಂಬುದಾಗಿ 'ಯಥೋಕ್ತ ಸ್ವರೂಪನಾದ ಜೀವನಿಗೇನೇ ಸಂಸಾರದಶೆಯಲ್ಲಿ ಕರ್ಮದ ಅಧೀನವಾಗಿ ಶರೀರವು ಬರುತ್ತದೆ. ಯಾವರೀತಿಯಾಗಿ ದಂಡವು ಎತ್ತಿನ ಗಾಡಿಯ ಎರಡು ಚಕ್ರಗಳನ್ನು ಹಿಡಿದಿರುತ್ತದೋ, ಅದರಂತೆ ಕರ್ಮವು ಶರೀರವನ್ನು ಧಾರಣೆ ಮಾಡಿರುತ್ತದೆ' ಎಂಬ ದೃಷ್ಟಾಂತವನ್ನು ಕೂಡ ನೀಡಲಾಗಿದೆ.

**प्रकाशः** – ''यत्रैतदाकाशमनुविषण्णं चक्षुः स चाक्षुषः पुरुषो दर्शनाय चक्षुरथ यो वेदेदं जिघ्राणीति स आत्मा गन्धाय घ्राणम्'' इत्यादिना चक्षुरादीनां करणत्वं रूपादीनां ज्ञेयत्वमस्य च ज्ञातृत्वं प्रदर्श्य

ಮುಂದೆ ; 'ಯತ್ರೈತದಾಕಾಶಮನುವಿಷಣ್ಣಂ ಚಕ್ಷುಃ ಸ ಚಾಕ್ಷುಷಃ ಪುರುಷೋ ದರ್ಶನಾಯ ಚಕ್ಷುರಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ ಗಂಧಾಯ ಘ್ರಾಣಮ್' ಇತ್ಯಾದಿ ವಾಕ್ಯದಿಂದ ಚಕ್ಷುರಾದಿಗಳಿಗೆ ಕರಣತ್ವವನ್ನು ಹಾಗೂ ರೂಪಾದಿಗಳಿಗೆ ಜ್ಞೇಯತ್ವವನ್ನು ಮತ್ತು ಜೀವನಿಗೆ ಜ್ಞಾತೃತ್ವವನ್ನು ಹೇಳಲಾಗಿದೆ.

**प्रकाशः –** तत एव शरीरेन्द्रियेभ्यो व्यतिरेकमुपपाद्य ''स वा एष एतेन दैवेन चक्षुषा मनसैतान्कामान् पश्यन् रमते य एते ब्रह्मलोके'' इति तस्यैव विधूतकर्म-निमित्तशरीरन्द्रियमनश्शब्दाभिहितेन दिव्येन स्वाभाविकेन ज्ञानेन सर्वकामानुभवमुक्त्वा ''तं वा एतं देवा आत्मानमुपासते । तस्मात्तेषां सर्वे च लोका आप्तास्सर्वे च कामाः'' इत्येवंविधमात्मानं ज्ञानिनो जानन्तीत्यभिधाय

ಹಿಂದೆ ಹೇಳಿದ ಕಾರಣದಿಂದಲೇ ಶರೀರ ಇಂದ್ರಿಯಗಳಿಂದ ಜೀವನಿಗೆ ವ್ಯತಿರೇಕಭೇದವನ್ನು ಉಪಪಾದನೆ ಮಾಡಿ, 'ಸ ವಾ ಏಷ ಏತೇನ ದೈವೇನ ಚಕ್ಷುಷಾ ಮನಸೈತಾನ್ ಕಾಮಾನ್ ಪ್ರಶ್ಯನ್ ರಮತೇ ಯ ಏತೇ ಬ್ರಹ್ಮಲೋಕೇ' ಎಂಬುದಾಗಿ ಅಂತಹ ಜೀವನಿಗೇನೇ ಕರ್ಮದ ಸಂಪರ್ಕವಿಲ್ಲದ, ಆದ್ದರಿಂದಲೇ ಶರೀರೇಂದ್ರಿಯ ಮನಸ್ಸುಗಳಿಂದಲೂ ರಹಿತವಾದ ದಿವ್ಯವಾದ ಸ್ವಾಭಾವಿಕವಾದ ಜ್ಞಾನದಿಂದಲೇ ಸರ್ವಕಾಮನೆಗಳ ಅನುಭವವನ್ನು ಹೇಳಿ. 'ತಂ ವಾ ಏತಂ ದೇವಾ ಆತ್ಮಾನಮುಪಾಸತೇ । ತಸ್ಮಾತ್ತೇಷಾಂ ಸರ್ವೇ ಚ ಲೋಕಾ ಆಪ್ತಾಸ್ಸರ್ವೇ ಚ ಕಾಮಾಃ' ಎಂಬುದಾಗಿ ಇಂತಹ ಆತ್ಮನನ್ನು ಜ್ಞಾನಿಗಳು ಕೂಡ ತಿಳಿಯುತ್ತಾರೆಂದು ಉಪದೇಶಿಸಲಾಗಿದೆ.

**प्रकाशः –** ''सर्वांश्च लोकानवाप्नोति सर्वांश्च कामान्यस्तमात्मानमनुविद्य-विजानाति' इति हि प्रजापतिरुवाचेत्येवंविधमात्मानं विदुषस्सर्वलोकसर्वकामा-वास्त्युंपलक्षितं ब्रह्मानुभवं फलमभिधायोपसंहृतम्'' इत्यन्तेन तदीयभाष्येण प्रजापतिवाक्यजातस्य सर्वस्यापि जीवपरत्वमुक्तम् । तत्कथमुच्यते दहरवाक्याद्वैलक्षण्यं नेतीत्यतः –

ಅನಂತರ, 'ಸರ್ವಾಂಶ್ಚ ಲೋಕಾನಾವಾಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತಿ' 'ಯಾವಾತನು ಹೀಗೆ ಆತ್ಮನನ್ನು ತಿಳಿಯುತ್ತಾನೋ, ಅವನು ಸಕಲ ಲೋಕಗಳನ್ನು ಹೊಂದುತ್ತಾನೆ. ಸಕಲ ಕಾಮನೆಗಳನ್ನು ಪಡೆಯುತ್ತಾನೆ' ಎಂದು ಬ್ರಹ್ಮದೇವರು ಉಪದೇಶ ಮಾಡಿದ್ದಾರೆ. ಹೀಗೆ ಆತ್ಮನನ್ನು ತಿಳಿದವನಿಗೆ ಸರ್ವಲೋಕ ಅವಾಪ್ತಿ ಮತ್ತು ಸರ್ವಕಾಮನೆಗಳ ಅವಾಪ್ತಿಯನ್ನು ಹೇಳಿದ್ದು ಉಪಲಕ್ಷಣವಾಗಿದೆ. ಇದರಿಂದ ಬ್ರಹ್ಮಾನುಭವವೆಂಬ ಫಲವನ್ನು ಹೇಳಿದಂತಾಯಿತು. ಹೀಗೆ ಉಪಸಂಹಾರ ಮಾಡಿದ್ದಾರೆ. ಹೀಗೆ ರಾಮಾನುಜ ಭಾಷ್ಯದಲ್ಲಿ ಸಂಪೂರ್ಣ ಪ್ರಜಾಪತಿವಾಕ್ಯಗಳೆಲ್ಲವೂ ಜೀವಪರವಾಗಿದೆಯೆಂದು ವ್ಯಾಖ್ಯಾನ ಮಾಡಲಾಗಿದೆ. ಹೀಗಿರುವಾಗ ದಹರ ವಾಕ್ಯ ಹಾಗೂ ಪ್ರಜಾಪತಿವಾಕ್ಯಗಳಲ್ಲಿ ವೈಲಕ್ಷಣ್ಯವಿಲ್ಲವೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ? ಎಂದರೆ ಈಗಾಗಲೇ ದೀರ್ಘವಾಗಿ ಆಲೋಚನೆ ಮಾಡಿದಂತೆ ಪ್ರಜಾಪತಿ-ವಾಕ್ಯವಿರುವ ಪ್ರಕರಣವೆಲ್ಲವೂ ಜೀವಪರವೇ ಆಗಿದೆ. ಆದರೆ ದಹರ ವಾಕ್ಯವು ಬ್ರಹ್ಮಪರವಾಗಿದೆ. ಆದ್ದರಿಂದ

ಅದು ಜೀವಪರವಾದರೆ, ದಹರ ವಾಕ್ಯವೂ ಕೂಡ ಜೀವಪರವೇ ಆಗಲಿ ಎಂಬ ಗ್ರಂಥಕಾರರ ಆಕ್ಷೇಪವು ಹೇಗೆ ತಾನೆ ಸಮಂಜಸವಾಗುತ್ತದೆ ಎಂದು ಆಕ್ಷೇಪ.

**प्रकाशः – जागरितस्वप्नसुषुप्ताशरीरवाक्यानि प्रकरणचतुष्टयगतानि तावत्क्रमेणोदाहृत्य तेषां ब्रह्मपरत्वं साधयति – किञ्चेत्यादिना ।।**

ಸಮಾಧಾನ - ಈ ಆಕ್ಷೇಪಕ್ಕೆ ಉತ್ತರ ಹೀಗೆ - ಜಾಗ್ರತ್, ಸ್ವಪ್ನ, ಸುಷುಪ್ತಾವಸ್ಥೆಗಳಲ್ಲಿರುವ ಶರೀರವಾಕ್ಯಗಳು ನಾಲ್ಕು ಪ್ರಕರಣಗಳಲ್ಲಿ ಕ್ರಮವಾಗಿ ಇವೆ. ಅವು ಬ್ರಹ್ಮಪರವೇ ಆಗಿವೆ. ಹೇಗೆಂದರೆ - ಅದನ್ನು ಕ್ರಮವಾಗಿಯೇ ಉದಾಹರಿಸಿ, ಅವುಗಳಿಗೆಲ್ಲ ಬ್ರಹ್ಮಪರತ್ವವನ್ನು ಸಾಧನೆ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः – उपदिदेश प्रजापतिरिन्द्रायेत्यर्थः । अन्तरिति तन्मतरीत्योपन्यासः । तत्रत्यविषयवाक्यं य एषोऽन्तरिति । हृत्स्थत्वेनेति ।। ''अवस्थितिवैशेष्यादिति चेन्नाभ्युपगमाद्धृदि हि'' इति सूत्रे ''हृदि एष आत्मा'' इति श्रुतौ च सिद्धत्वादिति भावः ।**

'ಉಪದಿದೇಶ' ಎಂದರೆ ಬ್ರಹ್ಮದೇವರು ಇಂದ್ರದೇವರನ್ನು ಕುರಿತು ಉಪದೇಶ ಮಾಡಿದರು ಎಂದು ಅರ್ಥ. 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಅಕ್ಷಿವಾಕ್ಯವು ಬ್ರಹ್ಮಪರವೆಂದು ನಿರ್ಣಯಿಸಿದ್ದು ರಾಮಾನುಜ ಮತದಂತೆ ಎಂದು ತಿಳಿಯಬೇಕು. ಅಲ್ಲಿರುವ ವಿಷಯವಾಕ್ಯವನ್ನು 'ಯ ಏಷೋಽಂತಃ' ಎಂಬುದರಿಂದ ಹೇಳಿದ್ದಾರೆ. 'ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ' ಎಂಬ ಸೂತ್ರದಲ್ಲಿ ಮತ್ತು 'ಹೃದಿಹ್ಯೇಷ ಆತ್ಮಾ' ಎಂಬ ಶ್ರುತಿಯಲ್ಲಿಯೂ ಕೂಡ ಜೀವನಿಗೆ ಹೃದಯಸ್ಥಿತತ್ವವನ್ನಷ್ಟೇ ಹೇಳಲಾಗಿದೆ ಹೊರತು, ಅಕ್ಷಿಸ್ಥತ್ವವನ್ನು ಹೇಳಿಲ್ಲವೆಂದು ಅಭಿಪ್ರಾಯ.

**प्रकाशः – ''हृदयस्थात्पराज्जीवो दूरस्थो जाग्रदेष्यति'' इत्यादित्वदभिमानातिशयाभिप्रायम् । यथा चैतत्तथावोचामान्तराधिकरणे**

'ಹೃದಯಸ್ಥಾತ್ಪರಾಜ್ಜೀವೋ ದೂರಸ್ಥೋ ಜಾಗ್ರದೇಷ್ಯತಿ' ಎಂಬಲ್ಲಿ ಜಾಗ್ರತ್ಕಾಲದಲ್ಲಿ ಜೀವನು ಕಣ್ಣಿಗೆ ಬರುತ್ತಾನೆಂದರೆ, ವಿಶೇಷವಾಗಿ ಕಣ್ಣಿನಲ್ಲಿ ಅಭಿಮಾನವನ್ನು ಹೊಂದಿರುತ್ತಾನೆಂದಷ್ಟೇ ಅರ್ಥ ಹೊರತು, ಅಕ್ಷಿಸ್ಥತ್ವವನ್ನು ಜೀವನಿಗೆ ಹೇಳಿರುವುದಿಲ್ಲ. ಈ ವಿಷಯವನ್ನು ಮುಂದೆ ಅಂತರಾಧಿಕರಣದಲ್ಲಿ ಹೇಳುವವರಿದ್ದೇವೆ.

**प्रकाशः – तथेति ।।** ब्रह्मविषयमित्यर्थः । शारीरम् = जीवम्, अभिप्रहृत्य संयोज्यम्, इति वाजसनेयवाक्यादित्यर्थः । नच तत्रापि विवादः । ''शुक्रमादाय पुनरेति स्थानं हिरण्मयः पुरुष एकहंसः'' इति वाक्यशेषे जीवमादाय गच्छतीति श्रवणात्पूर्वोक्तार्थे श्लोकत्वेनोदाहरणाच्चेति भावः ।

'ಸ್ವಾಪ್ನವಾಕ್ಯಮಪಿ ತಥಾ' ಎಂಬಲ್ಲಿರುವ 'ತಥಾ' ಎಂಬ ಶಬ್ದಕ್ಕೆ ಅದರಂತೆ ಬ್ರಹ್ಮವಿಷಯವಾಗಿದೆ ಎಂದರ್ಥ. 'ಸ್ವಪ್ನೇನ ಶಾರೀರಮ್' ಎಂಬುದು ಬೃಹದಾರಣ್ಯಕದಲ್ಲಿರುವ ಶ್ರುತಿವಾಕ್ಯ. ಇಲ್ಲಿರುವ ಶಾರೀರ ಪದಕ್ಕೆ 'ಜೀವನನ್ನು' ಎಂದು ಅರ್ಥ. ಇದನ್ನು 'ಅಭಿಪ್ರಹತ್ಯ' = ಎಂಬ ಶಬ್ದದ ಜೊತೆ ಸೇರಿಸಿ ವ್ಯಾಖ್ಯಾನಿಸ ಬೇಕು. ಬೃಹದಾರಣ್ಯಕದ ಈ ಮಾತೂ ಸಹ ಜೀವಪರವಾಗಿದೆ ಎಂದೇ ಹೇಳಬಹುದಲ್ಲವೇ? ಎಂಬ ವಿವಾದಕ್ಕೆ ಅವಕಾಶವಿಲ್ಲ. ಏಕೆಂದರೆ 'ಶುಕ್ರಮಾದಾಯ ಪುನರೇತಿ ಸ್ಥಾನಂ ಹಿರಣ್ಮಯಃ ಪುರುಷ ಏಕಹಂಸಃ' ಎಂಬ ವಾಕ್ಯಶೇಷದಲ್ಲಿ ಜೀವನನ್ನು ಕರೆದುಕೊಂಡು, ಹಿರಣ್ಮಯಪುರುಷನಾದ ಪರಮಾತ್ಮನು ಹೋಗುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಹಿಂದೆ ಪ್ರಸಕ್ತವಾದ ಅರ್ಥದಲ್ಲಿ ಈ ಶ್ಲೋಕವನ್ನು ಉದಾಹರಿಸಿದ್ದರಿಂದ ವಾಜಸನೇಯ ವಾಕ್ಯವು ಬ್ರಹ್ಮಪರವೆಂದು ನಿಶ್ಚಯವಾಗುತ್ತದೆ.

**प्रकाशः** – महीयमानत्वं च जीवस्य तदा न युक्तम् । भयादेरप्युपलम्भात् । नच कदाचिन्महीयमानत्वम् । नित्यवच्छ्रवणविरोधात् ।

ಸ್ವಪ್ನಾವಸ್ಥೆಯಲ್ಲಿ ಮಹೀಯಮಾನತ್ವವನ್ನು ಶ್ರುತಿಯು ಹೇಳಿದೆ. ಜೀವನಲ್ಲಿ ಇದು ಯುಕ್ತವಾಗುವುದಿಲ್ಲ. ಏಕೆಂದರೆ ಸ್ವಪ್ನಕಾಲದಲ್ಲಿಯೂ ಭಯಾದಿಗಳು ಜೀವನನ್ನು ಆವರಿಸುವುದರಿಂದ ಮಹೀಯಮಾನತ್ವವನ್ನು ಹೇಳಲು ಸಾಧ್ಯವಿಲ್ಲ. ಕೆಲವೊಂದು ಕಾಲದಲ್ಲಿ ಮಾತ್ರ ಮಹೀಯಮಾನತ್ವವನ್ನು ವಿವಕ್ಷಿಸಿ, ಶ್ರುತಿಪ್ರತಿಪಾದ್ಯತ್ವವನ್ನು ಜೀವನಿಗೆ ಹೇಳಬಾರದು. ಏಕೆಂದರೆ ನಿತ್ಯವಾಗಿಯೂ ಇಂತಹ ಮಹಿಮೆಯಿರುತ್ತದೆಂದು ಶ್ರುತಿಯು ಹೇಳಿದೆ.

**प्रकाशः** – ''प्राज्ञेनात्मना सम्परिष्वक्तो न बाह्यं किञ्चन वेद नान्तरम्'' इति वाजसनेये सुप्तौ भगवत्परिष्वङ्गेनैव बाह्याद्यज्ञानश्रवणेन तत्समाख्ययाऽत्रापि तथात्वमित्यर्थः । ''मर्त्यं वा इदं शरीरं तदस्यामृतस्याधिष्ठानम्'' इति वाक्यमपि ब्रह्मपरमित्याह – **अशरीरेति** ।।

ಇದರಂತೆ ಸುಪ್ತವಾಕ್ಯವೂ ಕೂಡ ಬ್ರಹ್ಮಪರವೇ ಆಗಿದೆ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಮ್' ಎಂಬ ಬೃಹದಾರಣ್ಯಕ ಶ್ರುತಿಯು ಸುಷುಪ್ತ್ಯವಸ್ಥೆಯಲ್ಲಿ ಭಗವಂತನ ಆಲಿಂಗನದಿಂದಲೇ ಜೀವನು ಬಾಹ್ಯಪದಾರ್ಥಗಳ ಅಜ್ಞಾನವನ್ನು ಹೊಂದಿರುತ್ತಾನೆಂದು ಹೇಳಲಾಗಿದೆ. ಇದರ ಸಮಾಖ್ಯಾನದಿಂದಲೇ ಸುಪ್ತವಾಕ್ಯವು ಜೀವಪರವಾಗುವುದಿಲ್ಲವೆಂದು ತಿಳಿಯುತ್ತದೆ.

'ಮರ್ತ್ಯಂ ವಾ ಇದಂ ಶರೀರಂ ತದಸ್ಯಾಮೃತಸ್ಯಾಧಿಷ್ಠಾನಮ್' ಎಂಬ ವಾಕ್ಯವೂ ಕೂಡ ಬ್ರಹ್ಮಪರವೇ ಆಗಿದೆಯೆಂದು 'ಅಶರೀರ' ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः** – **तस्य चेति** ।। ''अरूपवदेव'' इत्यत्र वक्ष्यमाणत्वादिति भावः । अक्षिस्वप्नसुप्तिवाक्येषु त्रिषु ब्रह्मपरत्वे युक्त्यन्तरं चाह – **किञ्चेति** ।।

ಅಶರೀರವಾಕ್ಯವು ಬ್ರಹ್ಮಪರವೇ ಆಗಿದೆಯೆಂಬುದನ್ನು 'ಅರೂಪವದೇವ' ಎಂಬ ಸೂತ್ರದಲ್ಲಿ ಮುಂದೆ ಸಮರ್ಥಿಸುವವರಿದ್ದೇವೆ ಎಂದು 'ತಸ್ಯ ಚ' ಎಂಬ ಗ್ರಂಥದ ಅಭಿಪ್ರಾಯ.

ಅನುಕೃತ್ಯಧಿಕರಣ (೧-೩-೬)

ಅಕ್ಷಿವಾಕ್ಯ, ಸ್ವಪ್ನವಾಕ್ಯ, ಸುಪ್ತಿವಾಕ್ಯ ಮೂರೂ ಸಹ ಬ್ರಹ್ಮಪರವೇ ಆಗಿವೆ ಎನ್ನಲು ಮತ್ತೊಂದು ಯುಕ್ತಿಯನ್ನು ಸಮರ್ಥಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः** – ननूपक्रमे ''य आत्माऽपहतपाप्मा'' इत्यादिना जीवस्योपक्रान्तत्वात्तत्परत्वं सर्वस्य वाच्यमित्यतस्तदपि न जीवविषयमित्याह – **किञ्च प्रजापतीति ॥**

ಪ್ರಾರಂಭದಲ್ಲಿ 'ಯ ಆತ್ಮಾಽಪಹತಪಾಪ್ಮಾ' ಇತ್ಯಾದಿ ವಾಕ್ಯವು ಜೀವಪ್ರತಿಪಾದಕವಾಗಿದೆ. ಹೀಗೆ ಜೀವನ ಬಗ್ಗೆ ಪ್ರಾರಂಭವಾಗುವ ಪ್ರಕರಣವೆಲ್ಲವೂ ಜೀವನನ್ನೇ ಪ್ರತಿಪಾದಿಸಬೇಕಲ್ಲವೇ? ಎಂಬ ಪ್ರಶ್ನೆಗೆ ಉಪಕ್ರಮವಾಕ್ಯವೂ ಕೂಡ ಜೀವಪರವಲ್ಲವೆಂದು ಹೇಳುತ್ತಿದ್ದಾರೆ 'ಕಿಂಚ ಪ್ರಜಾಪತಿ' ಇತ್ಯಾದಿ ವಾಕ್ಯದಿಂದ.

**प्रकाशः** – प्रकारान्तरेण दहरवाक्यावैलक्षण्यमाह – **अपि चेति ॥** विष्णुमानन्दरूपेतं सम्यग्ज्ञानविपर्ययौ । आप तुः इत्यादिछान्दोग्यभाष्योदाहृतस्मृतेरित्यर्थः ।

ಮತ್ತೊಂದು ಪ್ರಕಾರದಿಂದ ಪ್ರಜಾಪತಿ ವಾಕ್ಯಕ್ಕೆ ದಹರವಾಕ್ಯದಿಂದ ವೈಲಕ್ಷಣ್ಯವಿಲ್ಲವೆಂದು ತೋರಿಸುತ್ತಿದ್ದಾರೆ 'ಅಪಿ ಚ' ಇತ್ಯಾದಿ ಗ್ರಂಥದಿಂದ. 'ವಿಷ್ಣುಮಾನಂದರೂಪೇತಂ ಸಮ್ಯಗ್ ಜ್ಞಾನವಿಪರ್ಯಯೌ ಆಪತುಃ' ಎಂಬ ಪ್ರಮಾಣ ವಾಕ್ಯಕ್ಕೆ ಆನಂದ ಸ್ವರೂಪದಿಂದ ಕೂಡಿರುವ ಚಕ್ಷುರಿಂದ್ರಿಯದಲ್ಲಿರುವ ವಿಷ್ಣುವಿನ ವಿಷಯದಲ್ಲಿ ಇಂದ್ರದೇವರು ಸಮ್ಯಗ್‌ಜ್ಞಾನವನ್ನು ಹಾಗೂ ವಿರೋಚನನು ವಿಪರೀತಜ್ಞಾನವನ್ನು ಹೊಂದಿದನು ಎಂದರ್ಥ. ಈ ವಾಕ್ಯವನ್ನು ಛಾಂದೋಗ್ಯಭಾಷ್ಯದಲ್ಲಿ ಉದಾಹರಿಸಲಾಗಿದೆ.

**प्रकाशः** – एवं वाक्यान्तराण्यपि ब्रह्मपरतया साधनीयानीत्याह – **दिगिति ॥ तथा हि ॥** ''प्रायोग्य आचारणे युक्त एवमस्मिन् शरीरे प्राणो युक्तः'' इत्यत्र प्राणशब्दस्य ''अत एव प्राण'' इत्यादौ परब्रह्मण्येव प्रसिद्धत्वात्

ಹೀಗೆಯೇ ಬೇರೆ ವಾಕ್ಯಗಳನ್ನೂ ಕೂಡ ಬ್ರಹ್ಮಪರವೆಂದು ಸಾಧನೆ ಮಾಡಬೇಕೆನ್ನುತ್ತಿದ್ದಾರೆ 'ದಿಕ್' ಎಂಬ ಪದದಿಂದ. ಅದು ಹೀಗೆ - 'ಪ್ರಾಯೋಗ್ಯ ಆಚಾರಣೇ ಯುಕ್ತ ಏವಮಸ್ಮಿನ್ ಶರೀರೇ ಪ್ರಾಣೋ ಯುಕ್ತಃ' ಎಂಬಲ್ಲಿ ಶ್ರುತವಾದ ಪ್ರಾಣಶಬ್ದವು ಬ್ರಹ್ಮಪರ. ಏಕೆಂದರೆ ಪ್ರಾಣಶಬ್ದವು 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಪರಬ್ರಹ್ಮನಲ್ಲೇ ಇರುತ್ತದೆಂದು ಸಮರ್ಥಿಸಲಾಗಿದೆ.

**प्रकाशः** – ''आकाशमनुविषण्णं चक्षुः'' इत्यादिवाक्यस्य ''इदं पश्यामि जिघ्राणि'' इत्यत्रापि ''जीवा न वै विदुः । द्रव्याणामपि चाज्ञानाद्भेदासौ पुरुषोत्तमः'' इत्यादिस्मृत्या विष्णुपरत्वात् ।

'ಆಕಾಶಮನುವಿಷಣ್ಣಂ ಚಕ್ಷುಃ' ಇತ್ಯಾದಿ ವಾಕ್ಯವು ಹಾಗೂ 'ಇದಂ ಪಶ್ಯಾಮಿ ಜಿಘ್ರಾಣಿ' ಎಂಬುದೂ ಸಹ ಮತ್ತು 'ಜೀವಾ ನ ವೈ ವಿದುಃ । ದ್ರವ್ಯಾಣಾಮಪಿ ಚಾಜ್ಞಾನಾದ್ವೇದಾಸೌ ಪುರುಷೋತ್ತಮಃ' ಇತ್ಯಾದಿ ಸ್ಮೃತಿಯಿಂದ ವಿಷ್ಣುಪರವಾಗಿದೆಯೆಂದು ತಿಳಿಯುತ್ತದೆ.

**प्रकाशः** – ''एतं देवा आत्मानमुपासते'' इति देवोपास्यत्वश्रवणाच्च । तदुक्तं भगवत्पादैः ''नहि जीवमात्रं देवा उपासते । ऊर्जं पृथिव्या भक्त्वायोरुगायमुपासत इति हि श्रुतिः'' इति । अन्यस्तु क्षुद्रोपद्रवोऽग्रे निरसिष्यते ।

'ಏತಂ ದೇವಾ ಆತ್ಮಾನಮುಪಾಸತೇ' ಎಂಬ ಶ್ರುತಿಯು ದೇವತೆಗಳಿಂದ ಉಪಾಸ್ಯನಾಗಿದ್ದಾನೆಂದು ಹೇಳುತ್ತಿದೆ. ಇದು ಜೀವನಲ್ಲಿ ಸರ್ವಥಾ ಕೂಡುವುದಿಲ್ಲ. ಇದನ್ನೇ ಶ್ರೀಮದಾಚಾರ್ಯರು 'ನಹಿ ಜೀವಮಾತ್ರಂ ದೇವಾ ಉಪಾಸತೇ । ಊರ್ಜಂ ಪೃಥಿವ್ಯಾ ಭಕ್ತ್ವಾಯೋರುಗಾಯಮುಪಾಸತೇ ಇತಿ ಶ್ರುತಿಃ' 'ಜೀವನನ್ನು ದೇವತೆಗಳು ಉಪಾಸನೆ ಮಾಡುವುದಿಲ್ಲ. 'ಉರುಗಾಯ' ಎಂದೆನಿಸಿದ ಭಗವಂತನನ್ನು ಉಪಾಸನೆ ಮಾಡುತ್ತಾರೆ' ಎಂದು ಹೇಳಿದ್ದಾರೆ. ಉಳಿದ ಕ್ಷುದ್ರೋಪದ್ರವಗಳನ್ನು ಮುಂದೆ ನಿರಾಕರಿಸುವವರಿದ್ದೇವೆ.

**प्रकाशः** – सूत्रार्थं च पराचष्टे – अनुकृतेरिति ।। तेन ईश्वरसाम्येन । ''सम्पद्याविहाय स्वेन शब्दात्'' इत्यत्रेत्यर्थः ।

ಸೂತ್ರಾರ್ಥವನ್ನು ನಿರಾಕರಿಸುತ್ತಿದ್ದಾರೆ 'ಅನುಕೃತೇಃ' ಇತ್ಯಾದಿ ವಾಕ್ಯದಿಂದ. 'ತೇನ' ಎಂಬ ಪದಕ್ಕೆ ಈಶ್ವರಸಾಮ್ಯ ಇರುವುದರಿಂದ ಎಂದರ್ಥ. 'ಸಂಪದ್ಯಾವಿಹಾಯ ಸ್ವೇನ ಶಬ್ದಾತ್' ಎಂಬಲ್ಲಿ ಈಶ್ವರನ ಸಾಮ್ಯವನ್ನು ಹೇಳಲಾಗಿದೆಯೆಂದು ತಿಳಿಯಬೇಕು.

**प्रकाशः** – एतेन प्रायो रामानुजरीतिमनुसरतः कस्यचिच्छैवस्य मतमपि प्रत्युक्तं बोध्यम् । तदत्र शिवार्कमणिदीपिकायां चन्द्रिकोक्तरीत्याक्ष्यादिवाक्यानां ब्रह्मपरत्वमाशङ्क्य समाधानमुक्तम् । स्वप्नवाक्ये स्वप्नप्रयोजकत्वेन सुषुप्तिवाक्ये सुषुप्त्याधारत्वेन ब्रह्मणि सम्भवन्स्वप्नसुषुप्तिसम्बन्धो नोच्यते ।

ಇಲ್ಲಿಯತನಕ ರಾಮಾನುಜಮತವನ್ನು ನಿರಾಕರಿಸಿದ್ದಾಯಿತು. ರಾಮಾನುಜಮತದ ಅಭಿಪ್ರಾಯವನ್ನು ಹೊಂದುವ ಕೆಲವು ಶೈವರಮತವನ್ನೂ ಕೂಡ ರಾಮಾನುಜಮತ ನಿರಾಕರಣೆಯಿಂದಲೇ ನಿರಾಕರಿಸಿದಂತಾಯಿತು.

ಶೈವರಮತ ಹೀಗಿದೆ - ಶಿವಾರ್ಕಮಣಿದೀಪಿಕೆಯಲ್ಲಿ ಚಂದ್ರಿಕೆಯಲ್ಲಿ ಹೇಳಿದಂತೆ ಅಕ್ಷ್ಯಾದಿವಾಕ್ಯಗಳು ಬ್ರಹ್ಮಪರವಾಗಿವೆಯೆಂದು ಆಶಂಕಿಸಿ ಸಮಾಧಾನವನ್ನು ಹೇಳಿದ್ದಾರೆ. ಸ್ವಪ್ನವಾಕ್ಯದಲ್ಲಿ ಸ್ವಪ್ನಪ್ರಯೋಜಕತ್ವದಿಂದ, ಸುಷುಪ್ತಿವಾಕ್ಯದಲ್ಲಿ ಸುಷುಪ್ತ್ಯಾಧಾರತ್ವದಿಂದ ಬ್ರಹ್ಮನಲ್ಲಿ ಶ್ರುತಿಪ್ರತಿಪಾದ್ಯತ್ವ ಬಂದರೂ ಕೂಡ ಸ್ವಪ್ನಸುಷುಪ್ತಿಗಳ ಸಂಬಂಧವು ಹೇಳಲ್ಪಟ್ಟಿಲ್ಲ.

## ಅನುಕೃತ್ಯಧಿಕರಣ (೧-೩-೬)

**प्रकाशः** – येन समाख्यादिबलाद्ब्रह्म स्यात् । किन्तु स्वप्नसुप्त्यवस्थावत्त्वमेव ।

ಹಾಗೆ ಸ್ವಪ್ನ-ಸುಷುಪ್ತಿಗಳ ಸಂಬಂಧವನ್ನು ಹೇಳಿದ್ದಲ್ಲಿ ಸಮಾಖ್ಯಾಪ್ರಮಾಣದ ಬಲದಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಹೇಳಬಹುದಿತ್ತು. ಆದ್ದರಿಂದ ಸ್ವಪ್ನಾವಸ್ಥಾ ಹಾಗೂ ಸುಷುಪ್ತ್ಯವಸ್ಥೆಗಳೇ ಶ್ರುತಿಪ್ರತಿಪಾದ್ಯವಾಗಿವೆ.

**प्रकाशः** – स्वप्नसम्बन्ध्यात्मोपदेशानन्तरं ''घ्नन्तित्वेवैनं विच्छाययन्ति वा'' इत्यादिनेन्द्रेण तस्य हन्यमानत्वादिप्रतिभासतो दुष्टत्वस्य सुप्तिसम्बन्ध्यात्मोपदेशानन्तरं ''नाहं खल्वयमेवं सम्प्रत्यात्मानं जानातीत्ययमहमस्मीति नो एवैमानि भूतानि विनाशमेवापीतो भवति'' इति तस्य ज्ञानशून्यतया विनष्टप्रायत्वस्योक्तत्वात् ।

ಸ್ವಪ್ನಸಂಬಂಧಿಯಾದ ಆತ್ಮೋಪದೇಶದ ಅನಂತರ 'ಘ್ನಂತಿತ್ವೇವೈನಂ ವಿಚ್ಛಾಯಯಂತಿ ವಾ' ಎಂದು ಇಂದ್ರದೇವರು ಹೇಳುತ್ತಾರೆ. ಇಲ್ಲಿ ಹೊಡೆಯುತ್ತಾನೆ, ಕಾಂತಿಹೀನನಾಗುತ್ತಾನೆಂದು ಹೇಳಿದ್ದರಿಂದ ಜೀವನಲ್ಲಿಯೇ ಇದು ಉಪಪನ್ನವಾಗುತ್ತದೆ. ಹೀಗೆ ಹನ್ಯಮಾನತ್ವಾದಿಪ್ರತಿಭಾಸದಿಂದ ದುಷ್ಟತ್ವವು ತಿಳಿಯುತ್ತದೆ. ಮತ್ತು ಸುಪ್ತಿಸಂಬಂಧಿಯಾದ ಆತ್ಮೋಪದೇಶದ ಅನಂತರವೂ ಕೂಡ ಇಂದ್ರದೇವರು 'ನಾಹಂ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತೀತ್ಯಯಮಹಮಸ್ಮೀತಿ ನೋ ಏವೈಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ' ಎಂದರೆ ಸುಷುಪ್ತಿ ಅವಸ್ಥೆಯನ್ನು ಹೊಂದಿದ ಮೇಲೆ ನನ್ನನ್ನೂ ವಜ್ರಧರನೆಂದೂ ಕೂಡ ತಿಳಿಯುವುದಿಲ್ಲ. ಯಾರಿಗೂ ತಮ್ಮ ಬಗ್ಗೆ ಅರಿವಿರುವುದಿಲ್ಲ. ಭೂತಗಳೆಲ್ಲವೂ ತಮ್ಮ ಬಗ್ಗೆ ಅರಿವಿಲ್ಲದೇ ವಿನಾಶವನ್ನು ಹೊಂದಿದಂತೆ ಇರುತ್ತಾರೆ. ಇಲ್ಲಿ ಜ್ಞಾನವಿಲ್ಲದ ಕಾರಣ ಅವರಿಗೆ ವಿನಷ್ಟಪ್ರಾಯತ್ವವನ್ನು ಹೇಳಲಾಗಿದೆ.

**प्रकाशः** – अक्षिवाक्ये ''एतदमृतमभयम्'' इत्यादि तु मुक्त्यवस्थायां भाविरूपापेक्षयोपपद्यत इति ।

ಅಕ್ಷಿವಾಕ್ಯದಲ್ಲಿ 'ಏತದಮೃತಮಭಯಮ್' ಇತ್ಯಾದಿ ವಾಕ್ಯಗಳೆಲ್ಲವೂ ಮುಕ್ತ್ಯವಸ್ಥಾಪನ್ನನಾದ ಜೀವನಲ್ಲಿ ಅಮೃತತ್ವಾದಿಗಳನ್ನು ಹೇಳುತ್ತಿವೆ. ಹೀಗೆ ಮುಂದೆ ಬರುವಂತಹ ಧರ್ಮಗಳನ್ನು ವಿವಕ್ಷಿಸಿ, ಮೊದಲೇ ಜೀವನಲ್ಲಿ ಅಮೃತತ್ವಾದಿಧರ್ಮಗಳನ್ನು ವಿಧಿಸಲಾಗಿದೆ. ಹೀಗೆ ಶೈವರು ಪ್ರಜಾಪತಿ ವಾಕ್ಯವನ್ನೆಲ್ಲಾ ಜೀವಪರವೆಂದೇ ಸಿದ್ಧಾಂತ ಮಾಡಿದ್ದಾರೆ.

**प्रकाशः** – तदसारम् । स्वप्नादिवाक्यशेषे ''घ्नन्तीव'' इत्यादिश्रवणेऽपि इन्द्रः ''एष स्वप्ने महीयमानः'' इति प्रजापतिनोक्तस्वप्नप्रदर्शकं ब्रह्मैवेति जानन्नप्यसुरमोहाय जीवविवक्षया घ्नन्तीत्यादिदोषान् वक्तीत्युपपत्तेः ।

ಪರಿಪೂರ್ಣಚಂದ್ರಿಕಾ

ಶೈವರ ಈ ಅಭಿಪ್ರಾಯ ಸರಿಯಿಲ್ಲ - ಏಕೆಂದರೆ ಸ್ವಪ್ನಾದಿವಾಕ್ಯಶೇಷದಲ್ಲಿ 'ಘ್ನಂತೀವ' ಇತ್ಯಾದಿ ವಾಕ್ಯವು ಶ್ರುತವಾಗಿದ್ದರೂ ಮುಂದೆ ಇಂದ್ರದೇವರು 'ಏಷ ಸ್ವಪ್ನೇ ಮಹೀಯಮಾನಃ' ಎಂದು ಬ್ರಹ್ಮದೇವರಿಂದ ಉಪದೇಶಿಸಲ್ಪಟ್ಟ ಸ್ವಾಪ್ನವಾಕ್ಯವನ್ನು ಬ್ರಹ್ಮಪರವೆಂದೇ ತಿಳಿದಿದ್ದಾರೆ. ಆದರೂ ಅಸುರಮೋಹಕ್ಕೋಸ್ಕರ ಜೀವವಿವಕ್ಷೆಯಿಂದ 'ಘ್ನಂತಿ' ಇತ್ಯಾದಿ ದೋಷಗಳನ್ನು ಹೇಳುತ್ತಿದ್ದಾರೆಂದು ಕೂಡಿಸಬಹುದು.

**प्रकाशः** – उक्तश्च –

पुनः पुनश्च मोहाय गत्वा गत्वा निवर्तते ।
कथञ्चिदेव विज्ञातं मयेत्यज्ञान्विमोहितुम् ।
तद्योग्यान्येव वाक्यानि ब्रह्माप्याह पुनः पुनः ।। इति ।
''दर्शयन्नासुरीं बुद्धिं स्वप्नदृश्यविवक्षया ।
घ्नन्तीवैनमदन्तीव''

इत्यादि च ।

ಇದನ್ನೇ -

ಪುನಃ ಪುನಶ್ಚ ಮೋಹಾಯ ಗತ್ವಾ ಗತ್ವಾ ನಿವರ್ತತೇ ।
ಕಥಂಚಿದೇವ ವಿಜ್ಞಾತಂ ಮಯೇತ್ಯಜ್ಞಾನ್ವಿಮೋಹಿತುಮ್ ॥

ಬ್ರಹ್ಮದೇವರು ಇಂದ್ರದೇವರನ್ನು ಕುರಿತು ಆತ್ಮೋಪದೇಶವನ್ನು ಮಾಡಿದ್ದಾರೆ. ಇಂದ್ರದೇವರ ಅಜ್ಞಾನವನ್ನು ಪರಿಹರಿಸಿದ್ದಾರೆಂದು ಎಂದು ಹೇಳಿದ್ದಾರೆ. ಮತ್ತು

'ದರ್ಶಯನ್ನಾಸುರೀಂ ಬುದ್ಧಿಂ ಸ್ವಪ್ನದೃಶ್ಯವಿವಕ್ಷಯಾ । ಘ್ನಂತೀವೈನಮದಂತೀವ'

ಇತ್ಯಾದಿ ವಾಕ್ಯಗಳೂ ಕೂಡ ಈ ವಿಷಯದಲ್ಲಿ ಆಧಾರವಾಗಿವೆ.

**प्रकाशः** – यदप्यमृतत्वादिकं मुक्तयवस्थाभिप्रायेणेति तन्न । तथात्वेऽन्तराद्यधिकरणेऽपि तथात्वापत्त्या तत्रत्यसिद्धान्तहान्यापत्तेः ।

ಮತ್ತು ಅಮೃತತ್ವಾದಿಗಳು ಮುಕ್ತ್ಯವಸ್ಥಾದೃಷ್ಟಿಯಿಂದ ಜೀವನಲ್ಲಿ ಉಪಪಾದಿಸಬಹುದೆಂದು ಆಕ್ಷೇಪಿಸಿದ್ದು ಸರಿಯಲ್ಲ. ಹಾಗಾದಲ್ಲಿ ಅಂತರಾಧಿಕರಣದಲ್ಲಿಯೂ ಹೀಗೆ ಭಾವಿಭಾವಾಭಿಪ್ರಾಯದಿಂದ ಕೂಡಿಸಬಹುದಾದ್ದರಿಂದ ಅಮೃತತ್ವಾದಿಲಿಂಗಗಳಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂಬ ಅಲ್ಲಿನ ಅಧಿಕರಣದ ಸಿದ್ಧಾಂತವೇ ಭಗ್ನವಾಗುತ್ತದೆ.

**प्रकाशः** – महीयमानत्वस्य दुरुपपादत्वाच्च । अक्षिस्थत्वायोगस्मृतिविरोधादेरनुद्धृतत्वाच्च यत्किञ्चिदेतत् ।

ಮತ್ತು ಮಹೀಯಮಾನತ್ವವೆಂಬ ಧರ್ಮವನ್ನು ಶೈವರ ಪ್ರಕಾರ ಕೂಡಿಸಲು ಸಾಧ್ಯವೇ ಇಲ್ಲ. ಅಷ್ಟೇ

ಅಲ್ಲದೇ ಅಕ್ಲಿಷ್ಟತ್ವವನ್ನಾಗಲೀ, ಸ್ಮೃತಿವಿರೋಧಗಳನ್ನಾಗಲೀ, ಇವರು ಉಪಪಾದನೆ ಮಾಡಿಯೇ ಇಲ್ಲ. ಆದ್ದರಿಂದ ಇವರ ಸಿದ್ಧಾಂತವು ಪರಿಪೂರ್ಣವಾಗಿಲ್ಲ.

**प्रकाशः** – यच्चोक्तं सूत्रे तस्येति कर्तृषष्ठ्यन्तेन जीवः परामृश्यते । दहरपदं कर्मणि षष्ठ्यन्ततया विपरिणामेन दहरस्येतीहानुवर्तते । तथा च जीवस्य दहरानुकृतेरनुकर्त्रनुकार्ययोर्भेदाद्दहरो न जीव इति सूत्रार्थ इति

ಶೈವರ ಸೂತ್ರಾರ್ಥ ಹೀಗಿದೆ - ಸೂತ್ರದಲ್ಲಿರುವ 'ತಸ್ಯ' ಎಂಬ ಪದವು ಕರ್ತ್ರರ್ಥಕವಾದ ಷಷ್ಠ್ಯಂತವಾಗಿದೆ. ಇದರಿಂದ ಜೀವನನ್ನು ಪರಾಮರ್ಶ ಮಾಡಬೇಕು. 'ದಹರ ಉತ್ತರೇಭ್ಯಃ' ಎಂಬಲ್ಲಿರುವ 'ದಹರ' ಪದವನ್ನು ಕರ್ಮಾರ್ಥದಲ್ಲಿ ಷಷ್ಠ್ಯಂತವಾಗಿ ಪರಿಣಾಮ ಮಾಡಿಕೊಂಡು 'ದಹರಸ್ಯ' ಎಂದು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಆದ್ದರಿಂದ ಜೀವನಿಗೆ ದಹರದ ಅನುಕರಣವನ್ನು ಹೇಳಿದ್ದರಿಂದ ಅನುಕರ್ತೃ ಮತ್ತು ಅನುಕಾರ್ಯಗಳಿಗೆ ಭೇದವಿರುವುದರಿಂದ ಜೀವನು ದಹರನಾಗುವುದಿಲ್ಲವೆಂದು ಸೂತ್ರಾರ್ಥ.

**प्रकाशः** – तन्न । अनुवृत्तिविपरिमणामप्रथमान्तावृत्तीनां क्लिष्टत्वात् । अस्मद्रीत्याऽनुकृतेस्साक्षात्साध्यान्वयसम्भवे तया भेदं प्रसाध्य तस्य साध्यान्वयोक्तेरयुक्तत्वात् । "गगनं गगनाकारं सागरस्सागरोपमः" इत्यादावभेदेऽप्यनुकर्त्रनुकार्यभावनिर्देशाच्चेति ।

ಇದು ತಪ್ಪು. ಏಕೆಂದರೆ ಈ ವ್ಯಾಖ್ಯಾನದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ವಿಪರಿಣಾಮ ಮಾಡಿಕೊಳ್ಳಬೇಕು. ಪ್ರಥಮಾಂತವಾದ ದಹರ ಶಬ್ದವನ್ನು ಪುನಃ ಆವೃತ್ತಿಮಾಡಿಕೊಳ್ಳಬೇಕು. ಇವೆಲ್ಲವೂ ಬಹಳ ಕ್ಲಿಷ್ಟಕಲ್ಪನೆಯಾಗಿದೆ. ಇದಕ್ಕಿಂತ ನಾವು ಹೇಳುವಂತೆ ಅನುಕೃತಿಯು ಸಾಕ್ಷಾತ್‌ಸಾಧ್ಯವಾಗಿದೆಯೆಂದೇ ಅನ್ವಯವನ್ನು ಹೇಳಲು ಬರುವಾಗ ಇದರಿಂದ ಭೇದವನ್ನು ಸಾಧನೆ ಮಾಡಿ, ಅದಕ್ಕೆ ಸಾಧ್ಯಾನ್ವಯವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು 'ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ' ಇತ್ಯಾದಿ ಸ್ಥಳಗಳಲ್ಲಿ ಅಭೇದವಿದ್ದರೂ ಕೂಡ ಅನುಕರ್ತೃ ಹಾಗೂ ಅನುಕಾರ್ಯಭಾವಗಳ ನಿರ್ದೇಶವಿದೆ. ಆದ್ದರಿಂದ ಅನುಕರ್ತೃ ಅನುಕಾರ್ಯಭಾವವಿದ್ದಲ್ಲೆಲ್ಲಾ ಭೇದವೇ ಇರಬೇಕೆಂಬ ನಿಯಮವಿಲ್ಲ. ಆದ್ದರಿಂದ ಶೈವಮತದ ಸೂತ್ರಾರ್ಥಗಳೆಲ್ಲವೂ ಅಸಾಧುವಾಗಿದೆ.

**गुरुराजीयम् – स्वप्नवाक्यमपि तथेति** ।। एष स्वप्ने महीयमान इति स्वप्नवाक्यमपि ब्रह्मविषयकमित्यर्थः । **सुप्तवाक्यमपीति** ।। तद्यत्रैतत्सुप्तस्समस्तं सम्पन्न इति सुप्तवाक्यमपि ब्रह्मविषयकमित्यर्थः । **अशरीरवाक्यमपीति** ।। तदस्यामृतस्याधिष्ठानमित्यशरीरवाक्यमपि ब्रह्मविषयमित्यर्थः । **तेन** अनुकरणेनेत्यर्थः। **तस्येति** ।। साम्यस्येत्यर्थः । तथा च तेन पौनरुक्त्यमित्यर्थः । **साम्यस्य हेतुत्वोक्तेश्चेति** ।। तथा च साम्यस्य साध्यत्वे सूत्रविरोध इत्यर्थः । **असिद्धेरिति** ।। विशिष्टसाध्ये हेतोरप्रयोजकत्वादिति भावः ।



ರಾಮಾನುಜರ ಅಭಿಪ್ರಾಯ ಹೀಗಿದೆ - 'ಅನುಕೃತೇಸ್ತಸ್ಯ ಚ' ಮತ್ತು 'ಅಪಿ ಸ್ಮರ್ಯತೇ' ಎಂಬೆರಡು ಸೂತ್ರಗಳು ಸೇರಿ ಪ್ರತ್ಯೇಕವಾಗಿ 'ಅನುಕೃತ್ಯಧಿಕರಣ' ಎಂಬ ವಿಚಾರವೇ ತಪ್ಪು. ಹೊರತಾಗಿ, ಇವು ಹಿಂದಿನ ದಹರಾಧಿಕರಣದ ಗುಣಸೂತ್ರಗಳೇ ಆಗಿವೆ. ಛಾಂದೋಗ್ಯೋಪನಿಷತ್ತಿನ ಅಷ್ಟಮಾಧ್ಯಾಯದ ಪ್ರಥಮ ಖಂಡದಲ್ಲಿ ದಹರವಿದ್ಯೆಯನ್ನು ಉಪದೇಶಿಸಿ, ಎರಡನೆಯ ಖಂಡದಲ್ಲಿ ಪ್ರಜಾಪತಿ ವಿದ್ಯೆಯು ಇರುತ್ತದೆ. ಅಂದರೆ ಇಂದ್ರ ಮತ್ತು ಪುರೋಚನರು ಬ್ರಹ್ಮದೇವರ ಬಳಿ ವಿದ್ಯಾರ್ಜನೆಗಾಗಿ ಉಪಸತ್ತಿ ಮಾಡುತ್ತಾರೆ. ಆ ಸಂದರ್ಭದಲ್ಲಿ ಬ್ರಹ್ಮದೇವರು ಅವರಿಬ್ಬರನ್ನು ಕುರಿತು 'ಏಷ ಸಂಪ್ರಸಾದಃ' ಇತ್ಯಾದಿಯಾಗಿ ವಾಕ್ಯಗಳಿಂದ ಉಪದೇಶಗಳನ್ನು ಮಾಡಿರುತ್ತಾರೆ. ಬ್ರಹ್ಮದೇವರು ಉಪದೇಶಿಸಿದ ಮಾತುಗಳಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಹಿಂದೆ ಪ್ರಸಕ್ತನಾದ ದಹರಬ್ರಹ್ಮನಲ್ಲ.

ವಿಚಾರ ಮಾಡಿದಾಗ ಈ ಪ್ರಕರಣದಲ್ಲಿಯೂ ದಹರಬ್ರಹ್ಮನಲ್ಲಿ ಶ್ರುತವಾದ ಅಮೃತತ್ವಾದಿಗುಣಗಳ ಉಲ್ಲೇಖವಿದೆ. ಆದ್ದರಿಂದ ಪ್ರಜಾಪತಿ ಪ್ರಕರಣದಲ್ಲಿಯೂ ದಹರಬ್ರಹ್ಮನೇ ಪ್ರತಿಪಾದ್ಯನಾಗಿರಬಹುದಲ್ಲವೇ? ಎಂಬ ಆಶಂಕೆಗೆ 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಸೂತ್ರವು ಉತ್ತರಿಸಿದೆ. ಸ್ವರೂಪಾವಿರ್ಭಾವವನ್ನು ಹೊಂದಿರುವಂತಹ ಜೀವನೇ ಪ್ರಜಾಪತಿ ವಾಕ್ಯಗಳಿಂದ ಪ್ರತಿಪಾದ್ಯನು ದಹರಬ್ರಹ್ಮನಲ್ಲ. ಮೋಕ್ಷಾವಸ್ಥೆಯಲ್ಲಿ ಜೀವನಿಗಿರುವಂತಹ ಗುಣಗಳನ್ನು ವಿವಕ್ಷಿಸಿ ಅಂತಹ ಗುಣಗಳನ್ನು ಹೇಳಿರಬಹುದು.

ಈ ಸಂದರ್ಭದಲ್ಲಿ 'ಅನುಕೃತೇಸ್ತಸ್ಯ ಚ' ಎಂಬ ಸೂತ್ರವು ಜೀವನಿಗೆ ಮೋಕ್ಷಾವಸ್ಥೆಯಲ್ಲಿ ಬ್ರಹ್ಮಸಾದೃಶ್ಯವಿದೆಯೆಂದು ಹೇಳಿದೆ. 'ಅನುಕೃತಿ' ಎಂದರೆ 'ಸಾದೃಶ್ಯ' ಎಂದರ್ಥ. ಪ್ರಜಾಪತಿ ಪ್ರಕರಣದಲ್ಲಿ ಬ್ರಹ್ಮನ ಸಾದೃಶ್ಯವನ್ನು ಪಡೆದಿರುವ ಮುಕ್ತಜೀವನೇ ಪ್ರತಿಪಾದ್ಯನೆಂದು ಇದರಿಂದ ಸಾಧಿಸಿದಂತಾಗುತ್ತದೆ. ಆದ್ದರಿಂದ ಹಿಂದಿನ ದಹರಪ್ರಕರಣವು ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಈ ಪ್ರಜಾಪತಿ ಪ್ರಕರಣವು ಜೀವನನ್ನೇ ಪ್ರತಿಪಾದಿಸುತ್ತದೆ.

ಇದೇ ವಿಷಯದಲ್ಲಿ 'ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ' ಎಂಬ ಸ್ಮೃತಿವಾಕ್ಯವೂ ಕೂಡ ಪ್ರಮಾಣವಾಗಿವೆ ಎಂದು 'ಅಪಿ ಸ್ಮರ್ಯತೇ' ಎಂಬ ಸೂತ್ರದ ಅಭಿಪ್ರಾಯ. ಹೀಗೆ ದಹರಾಧಿಕರಣದ ಪ್ರಮೇಯವನ್ನು ಪ್ರತಿಪಾದಿಸುವುದಕ್ಕಾಗಿಯೇ ಈ ಎರಡು ಸೂತ್ರಗಳ ಪ್ರವೃತ್ತಿ.

ಇಷ್ಟು ರಾಮಾನುಜರ ಅಭಿಪ್ರಾಯ.

ಇದು ಸರಿಯಲ್ಲ. ಪ್ರಜಾಪತಿವಾಕ್ಯಕ್ಕೂ, ದಹರವಾಕ್ಯಕ್ಕೂ ಏನೂ ವ್ಯತ್ಯಾಸವಿಲ್ಲದಿದ್ದಾಗ, ದಹರ ವಾಕ್ಯವು ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಪ್ರಜಾಪತಿವಾಕ್ಯವು ಜೀವನನ್ನು ಪ್ರತಿಪಾದಿಸುತ್ತದೆ ಎಂಬ ವ್ಯತ್ಯಾಸವನ್ನು ಹೇಳುವುದು ಬಹಳ ತಪ್ಪು. ಮತ್ತು ದೇವೇಂದ್ರನು ದಹರಾತ್ಮನಲ್ಲಿ ಹೇಳಿರುವ ಗುಣಗಳನ್ನೇ ಅನುವಾದ ಮಾಡಿ ಆತ್ಮನ ಬಗ್ಗೆ ಪ್ರಶ್ನಿಸಿದಾಗ ಪ್ರಜಾಪತಿಯು ಹಿಂದೆ ಪ್ರಸಕ್ತನಾದ ದಹರಬ್ರಹ್ಮನ ಬಗ್ಗೆಯೇ ಉತ್ತರಿಸಬೇಕು ಹೊರತು, ಜೀವಾತ್ಮನ ಬಗ್ಗೆ ಉತ್ತರ ನೀಡುವುದು ಅಸಂಗತವಾಗುತ್ತದೆ. ಮತ್ತು ಈ ಪ್ರಜಾಪತಿ ಪ್ರಕರಣದಲ್ಲಿ 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂಬ ವಾಕ್ಯವಿದ್ದಂತೆ ಮೊದಲಿನ ದಹರಪ್ರಕರಣದಲ್ಲಿಯೂ ಇದೇ ವಾಕ್ಯವಿದೆ. ದಹರಪ್ರಕರಣದಲ್ಲಿ ಈ ವಾಕ್ಯವನ್ನು ಬ್ರಹ್ಮಪರವಾಗಿ ಅರ್ಥೈಸುವುದಾದರೆ, ಪ್ರಜಾಪತಿ ಪ್ರಕರಣದಲ್ಲಿಯೂ ಇದೇ ಅರ್ಥವನ್ನು ಏಕೆ ಹೇಳಬಾರದು?

ಅಪಹತಪಾಪ್ಮತ್ವಾದಿಗುಣಗಳುಳ್ಳ ಆತ್ಮನ ಬಗ್ಗೆ ಇಂದ್ರದೇವರು ಪುನಃ ಪುನಃ ಪ್ರಜಾಪತಿಯ ಬಳಿ ಪ್ರಶ್ನಿಸಿದಾಗ, ಅಕ್ಷಿಯಲ್ಲಿರುವವನು ಆತ್ಮನೆನಿಸಿದ್ದಾನೆಂದು ಸ್ವಪ್ನಕಾಲದಲ್ಲಿ ಮಹಿಮೋಪೇತನಾದವನು ಆತ್ಮನಾಗಿದ್ದಾನೆ. ಸುಪ್ತನಾದ

ಜೀವನಿಗೆ ನಿಯಾಮಕನಾದವನು ಆತ್ಮನಾಗಿದ್ದಾನೆ. ಅಮೃತತ್ವ, ಅಶರೀರತ್ವ ಮೊದಲಾದ ಧರ್ಮಗಳಿಂದ ಕೂಡಿದವನೇ ಆತ್ಮನಾಗಿದ್ದಾನೆಂದು ಉಪದೇಶಿಸಿದ್ದಾರೆ. ಆಕ್ಷಿಸ್ಥನಾದವನು, ಸ್ವಪ್ನನಿಯಾಮಕನಾದವನು, ಸುಷುಪ್ತಿನಿಯಾಮಕನಾದವನು, ಅಮೃತತ್ವ, ಅಶರೀರತ್ವ ಮೊದಲಾದ ಧರ್ಮಗಳಿರುವವನು ಎಲ್ಲವೂ ಪರಮಾತ್ಮನೇ ಆಗಿದ್ದಾನೆ ಹೊರತು, ಜೀವನಲ್ಲ. ಇವೆಲ್ಲವೂ ಪರಮಾತ್ಮನ ಅಸಾಧಾರಣಗುಣಗಳೇ ಆಗಿವೆ. ಈ ವಿಷಯದಲ್ಲಿ ಅನೇಕ ಶ್ರುತಿ-ಸ್ಮೃತಿಗಳೆಲ್ಲವೂ ಆಧಾರವಾಗಿವೆ.

ಮತ್ತು ದಹರಪ್ರಕರಣದಲ್ಲಿ ದಹರಬ್ರಹ್ಮನನ್ನು ತಿಳಿಯುವುದರಿಂದ ಯಾವ ಮೋಕ್ಷವೆಂಬ ಫಲವನ್ನು ಹೇಳಲಾಗಿದೆಯೋ, ಅದೇ ಫಲವನ್ನು ಪ್ರಜಾಪತಿ ವಾಕ್ಯದಲ್ಲಿಯೂ ಹೇಳಲಾಗಿದೆ. ದಹರಬ್ರಹ್ಮನಲ್ಲಿ ಯಾವ ಜಿಜ್ಞಾಸಾವಿಷಯತ್ವವನ್ನು ಹೇಳಲಾಗಿದೆಯೋ, ಅದನ್ನೇ ಪ್ರಜಾಪತಿ ವಾಕ್ಯದಲ್ಲಿಯೂ ಹೇಳಲಾಗಿದೆ. ಹೀಗೆ ಎರಡೂ ಪ್ರಕರಣಗಳು ಒಂದೇ ರೀತಿಯಲ್ಲಿರುವಾಗ ದಹರಪ್ರಕರಣವು ಮಾತ್ರ ಬ್ರಹ್ಮಪರ, ಪ್ರಜಾಪತಿ ಪ್ರಕರಣವು ಜೀವಪರವೆಂಬ ವ್ಯತ್ಯಾಸವು ಅಸಾಧುವಾಗುತ್ತದೆ. ಆದ್ದರಿಂದ ರಾಮಾನುಜರ ಧೋರಣೆಗಳು ಸರಿಯಾದದ್ದಲ್ಲ.

• • • • •

## ಟೀಕೆಯ ಕಠಿಣಪದಾರ್ಥ

## तात्पर्यचन्द्रिका

**टीकाक्षरार्थस्तु । ''नहि ज्ञानिसुखम्'' इति भाष्ये सर्वशब्दस्तेजःपर इत्याह – सर्वसूर्यादीति ।।**

ಅನುವಾದ - ಟೀಕೆಯ ಕೆಲವು ಕಠಿಣಪದಗಳ ಅರ್ಥ ಹೀಗಿದೆ - 'ನಹಿ ಜ್ಞಾನಿಸುಖಮ್' ಇತ್ಯಾದಿ ಭಾಷ್ಯದಲ್ಲಿರುವ ಸರ್ವಶಬ್ದವು ಪ್ರಥಮಾವಿಭಕ್ತ್ಯಂತವಾಗಿದೆ. 'ಜ್ಞಾನಿಸುಖಮ್' ಎಂಬ ಪದವು ದ್ವಿತೀಯಾ ವಿಭಕ್ತ್ಯಂತವಾಗಿದೆ. ಸರ್ವಶಬ್ದಕ್ಕೆ ಸೂರ್ಯಾದಿ ಸಕಲ ತೇಜಸ್ಸುಗಳು ಎಂದರ್ಥ. ಇವುಗಳು ಜ್ಞಾನಿ ಸುಖವನ್ನು ಅನುಸರಿಸಿ ಬೆಳಗುವುದಿಲ್ಲವೆಂದು ಭಾಷ್ಯದ ಅಭಿಪ್ರಾಯವೆಂದು 'ಸರ್ವಸೂರ್ಯಾದಿ' ಇತ್ಯಾದಿ ಟೀಕೆಯಲ್ಲಿ ಹೇಳುತ್ತಿದ್ದಾರೆ.

**''नच तद्भासा'' इति भाष्ये 'जगत्' 'भाति' इति पदद्वयमध्याहार्यमित्याह – जगद्भातीति शेष इति ।।**

'ನಚ ತದ್ಭಾಸಾ' ಎಂಬ ಭಾಷ್ಯದಲ್ಲಿ 'ಜಗತ್ ಭಾತಿ' ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು 'ಜಗತ್‌ದ್ಭಾತಿ ಇತಿ ಶೇಷಃ' ಎಂಬ ಟೀಕೆಯಲ್ಲಿ ಹೇಳಿರುತ್ತಾರೆ. ಅಂದರೆ ಜ್ಞಾನಿಸುಖದಿಂದ ಜಗತ್ತು ಪ್ರಕಾಶಿಸುತ್ತದೆಂದು ಹೇಳಲು ಸಾಧ್ಯವಿಲ್ಲ ಎಂದಭಿಪ್ರಾಯ.

**रश्मीदिति सूर्यादितेजसां नारायणाधीनत्वमुच्यत इति । अग्नीच्छब्दस्याग्नि-समिन्धकत्वमिव रश्मीच्छब्दस्य रश्मिसमिन्धकत्वमर्थ इति भावः ।।**

ಪರಿಪೂರ್ಣಚಂದ್ರಿಕಾ

ಮುಂದಿನ 'ಅಪಿ ಸ್ಮರ್ಯತೇ ಎಂಬ ಸೂತ್ರದಲ್ಲಿ 'ಅಹಂ ತತ್ತೇಜೋ ರಶ್ಮೀತ್' ಎಂಬಲ್ಲಿರುವ 'ರಶ್ಮೀತ್' ಎಂಬ ಪದಕ್ಕೆ ಸೂರ್ಯಾದಿರಶ್ಮಿಗಳನ್ನೆಲ್ಲಾ ಸಮಿಂಧನ ಮಾಡುವ ಕಾರಣ ಪರಮಾತ್ಮನನ್ನು 'ರಶ್ಮೀತ್' ಎಂದು ಕರೆಯುತ್ತಾರೆ. ಯಾವ ರೀತಿಯಾಗಿ ಅಗ್ನಿಯನ್ನು ಸಮಿಂಧನ ಮಾಡುವಂತಹ ಕಟ್ಟಿಗೆ ಮೊದಲಾದವುಗಳನ್ನು 'ಅಗ್ನೀತ್' ಕರೆಯುತ್ತಾರೋ, ಆದರಂತೆ ಇಲ್ಲಿಯೂ ತಿಳಿಯಬೇಕು.

**''नारायणभासा हि'' इति भाष्यस्य सूर्यादितेजसां नारायणाधीनप्रकाशत्वं नारायणस्य सर्वजगत्प्रकाशकत्वं चार्थ इत्यभिप्रेत्य तदनुगुणतया नारायणभासेति पदं सर्वपदं भातिपदं चार्थद्वयपरतया व्याचष्टे – तदधीनभासेत्यादिना ।।**

'ನಾರಾಯಣಭಾಸಾ ಹಿ' ಎಂಬ ಭಾಷ್ಯದಿಂದ ನಾರಾಯಣನ ಪ್ರಕಾಶದಿಂದಲೇ ಎಲ್ಲವೂ ಪ್ರಕಾಶಿಸುತ್ತದೆಂದು ಹೇಳಿರುತ್ತಾರೆ. ಇದಕ್ಕೆ ಎರಡರ್ಥ. ಪರಮಾತ್ಮನ ಸ್ವರೂಪಭೂತವಾದ ಪ್ರಕಾಶದಿಂದಲೇ ಸಮಸ್ತ ಜಗತ್ತು ಬೆಳಗುತ್ತದೆಂದು ಮೊದಲನೆಯ ಅರ್ಥ. ಸೂರ್ಯಾದಿಗಳ ತೇಜಸ್ಸೆಲ್ಲವೂ ಪರಮಾತ್ಮನ ಆಧೀನವಾಗಿದೆಯೆಂಬುದು ಎರಡನೆಯ ಅರ್ಥ. ಹೀಗೆ ಹೇಳುವುದರಿಂದ ಸೂರ್ಯಾದಿ ತೇಜಸ್ಸುಗಳಿಗೆ ನಾರಾಯಣಾಧೀನ ಪ್ರಕಾಶತ್ವವು, ನಾರಾಯಣನಿಗೆ ಸರ್ವಜಗತ್ ಪ್ರಕಾಶಕತ್ವವು ಎರಡನ್ನೂ ಹೇಳಿದಂತಾಗುತ್ತದೆ. ಇಲ್ಲಿರುವ 'ನಾರಾಯಣಭಾಸಾ' 'ಸರ್ವಂ' 'ಭಾತಿ' ಈ ಮೂರು ಪದಗಳಿಗೆ ಎರಡು ಅರ್ಥಗಳನ್ನು ಹೇಳಿದಂತಾಯಿತು. 'ನಾರಾಯಣಭಾಸಾ' ಎಂದರೆ ನಾರಾಯಣನ ಸ್ವರೂಪಭೂತವಾದ ಪ್ರಕಾಶದಿಂದ ಎಂದು, 'ಸರ್ವಂ' ಎಂದರೆ ಸೂರ್ಯಾದಿ ತೇಜಸ್ಸುಗಳೆಲ್ಲವೂ, 'ಭಾತಿ' ಎಂದರೆ ಪ್ರಕಾಶವಂತ ಎಂಬುದು, 'ಸರ್ವಂ' ಎಂಬ ಪದಕ್ಕೆ ಜಗತ್ತು ಎಂದು, 'ಭಾತಿ' ಎಂದರೆ ಜಗತ್ತು ಪ್ರಕಾಶಿತವಾಗಿದೆ ಎಂದು ಮೊದಲನೆಯ ಅರ್ಥ. ಅಥವಾ 'ನಾರಾಯಣ ಭಾಸಾ' ಎಂದರೆ ನಾರಾಯಣಾಧೀನವಾದ ಸೂರ್ಯಾದಿಗಳ ಕಾಂತಿಯಿಂದ, ಎರಡನೆಯ ಅರ್ಥ. ಈ ಅಭಿಪ್ರಾಯದಿಂದ 'ತದಧೀನಭಾಸ ಇತ್ಯಾದಿ' ಟೀಕಾ ಪಂಕ್ತಿಗಳು ಹೊರಟಿವೆ.

**युक्तिसमुच्चयेऽपिपदमिति ।। यद्यप्याद्यव्याख्याने सौत्रोऽपिशब्दः आद्यसूत्रे आनुकूल्येन गृह्यमाणस्य ब्रह्मत्वरूपप्रधानसाध्ये हेतूकृतानुकृत्यादेर्ब्रह्मधर्मत्वसाधक-श्रुतिसमुच्चयार्थः ।**

'ಅಪಿ ಸ್ಮರ್ಯತೇ' ಎಂಬ ಎರಡನೆಯ ಸೂತ್ರದಲ್ಲಿ 'ಯುಕ್ತಿಸಮುಚ್ಚಯೇऽಪಿದಮ್' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ ಮೊದಲನೆಯ ವ್ಯಾಖ್ಯಾನದಲ್ಲಿ ಸೂತ್ರದಲ್ಲಿರುವ 'ಅಪಿ' ಶಬ್ದವು ಪ್ರಥಮ ಸೂತ್ರದಲ್ಲಿ ಆನುಕೂಲ್ಯೇನ ಗೃಹ್ಯಮಾಣನಾದವನು ಬ್ರಹ್ಮನೇ ಆಗಿದ್ದಾನೆಂಬ ಪ್ರಧಾನ ಸಾಧ್ಯದಲ್ಲಿ ಹೇತುವನ್ನಾಗಿ ಮಾಡಲ್ಪಟ್ಟ ಸರ್ವಜಗತ್‌ಪ್ರಕಾಶಕತ್ವ, ಸೂರ್ಯಾದ್ಯಪ್ರಕಾಶ್ಯತ್ವ, ಸೂರ್ಯಾದಿತೇಜಸಾಂ ತದಧೀನ ಪ್ರಕಾಶತ್ವ ಮೊದಲಾದ ಧರ್ಮಗಳೆಲ್ಲವೂ ಬ್ರಹ್ಮನ ಅಸಾಧಾರಣ ಧರ್ಮಗಳೇ ಆಗಿವೆ

ಎಂಬ ವಿಷಯದಲ್ಲಿ ಸ್ಮೃತಿಯನ್ನು ಪ್ರಮಾಣವನ್ನಾಗಿ ನೀಡಿದ್ದಾರೆ. ಈಗ ಅದೇ ವಿಷಯದಲ್ಲಿ ಶ್ರುತಿ ಪ್ರಮಾಣವು ಇರುತ್ತದೆಂದು ಶ್ರುತಿಸಮುಚ್ಚಯಾರ್ಥಕವಾಗಿದೆ.

**तथापि द्वितीयव्याख्याने प्रधानसाध्य एव हेतोः सूर्याद्यप्रकाश्यत्वरूपयुक्तेः समुच्चयार्थ इत्यर्थः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अनुकृत्यधिकरणं सम्पूर्णम् ।।**

ಆದರೂ ಸಹ ಎರಡನೆಯ ವ್ಯಾಖ್ಯಾನದಲ್ಲಿ ಪ್ರಧಾನಸಾಧ್ಯದಲ್ಲಿಯೇ ಹೇತುವೆನಿಸಿರುವ ಸೂರ್ಯಾದ್ಯಪ್ರಕಾಶ್ಯತ್ವವೆಂಬ ಯುಕ್ತಿಯನ್ನು ಪ್ರಥಮ ಸೂತ್ರದಲ್ಲಿ ಹೇಳಿಲ್ಲ. ಆದನ್ನು ಸಮುಚ್ಚಯ ಮಾಡುವುದಕ್ಕಾಗಿ 'ಅಪಿ' ಪದವನ್ನು ಹೇಳಿರುತ್ತಾರೆಂದು ತಿಳಿಯಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅನುಕೃತ್ಯಧಿಕರಣವು ಸಂಪೂರ್ಣವಾಯಿತು.

**प्रकाशः –**

**''सर्वं सूर्यादिजगद्भातीति शेषः'' इति टीकायां सर्वशब्दस्यैव सूर्यादिजगदित्यर्थ इति प्रतीयते । भातीत्यस्य क्वान्वय इत्यपि न ज्ञायते । नारायणभासा हि सर्वमित्यत्रत्यसर्वशब्दार्थ इति वा प्रतीयते । अत आह – नहीति ।।**

ವಿವರಣೆ - 'ಸರ್ವಂ ಸೂರ್ಯಾದಿಜಗತ್ ಭಾತೀತಿ ಶೇಷಃ' ಎಂಬ ಟೀಕಾ ಪಂಕ್ತಿಯನ್ನು ನೋಡಿದಾಗ, ಬಹಳ ಭ್ರಾಂತಿ ಬರುತ್ತದೆ. 'ಸರ್ವ' ಶಬ್ದಕ್ಕೆ 'ಸೂರ್ಯಾದಿ ಜಗತ್' ಎಂಬರ್ಥವು ತೋರುತ್ತದೆ. 'ಭಾತಿ' ಎಂಬ ಪದಕ್ಕೆ ಅನ್ವಯವೇ ತಿಳಿಯುವುದಿಲ್ಲ. ಮತ್ತು 'ನಾರಾಯಣಭಾಸಾ ಹಿ' ಎಂಬಲ್ಲಿರುವ 'ಸರ್ವ' ಶಬ್ದದ ಅರ್ಥವನ್ನು ಹೇಳುತ್ತಿದ್ದಾರೋ ಏನೋ? ಇತ್ಯಾದಿ ಹಲವು ವಿಧವಾದ ಭ್ರಾಂತಿಗಳಿಗೆ ಪರಿಹಾರ ನೀಡುತ್ತಿದ್ದಾರೆ 'ನಹಿ' ಇತ್ಯಾದಿ ಗ್ರಂಥದಿಂದ. ಅಂದರೆ 'ಸರ್ವಂ ಸೂರ್ಯಾದಿ' ಎಂಬುದೇ ಬೇರೆ ವಾಕ್ಯ, 'ಜಗತ್ ಭಾತೀತಿ ಶೇಷ' ಎಂಬುದೇ ಬೇರೆ ಎಂದು ತಿಳಿಯಬೇಕು.

**प्रकाशः – तत्तेजोरश्मीदिति रश्मीच्छब्देनायमर्थः कथं लब्ध इत्यत आह – अग्नीदिति ।।**

'ತತ್ತೇಜೋರಶ್ಮೀತ್' ಎಂಬ ಶ್ರುತಿಯಲ್ಲಿರುವ 'ರಶ್ಮೀತ್' ಎಂಬ ಶಬ್ದದಿಂದ ಸೂರ್ಯಾದಿ ಪ್ರಕಾಶಕತ್ವ ಎಂಬ ಅರ್ಥವು ಹೇಗೆ ತಿಳಿಯುತ್ತಿದೆ ? ಎಂಬ ಪ್ರಶ್ನೆಗೆ 'ಅಗ್ನೀತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – यथाग्निशब्दोपपदात् ञि इन्धी दीप्तावित्यस्मात्क्विपि ''अनिदितां हल उपधायाः क्ङिति'' इति नलोपे रूपमिति ''अग्नीदग्नीन्विहर'' इत्यादौ वह्निदीपकत्वमर्थः तथेहापि रश्मिपदोपपदादिन्धेःक्विपि रूपमित्युक्तं भवति ।

'ಅಗ್ನಿ' ಶಬ್ದವೆಂಬ ಉಪಪದದ ಮುಂದೆ 'ಇಂಧೀ' ಎಂಬ ಧಾತುವು 'ಬೆಳಗಿಸುವಿಕೆ' ಎಂಬರ್ಥದಲ್ಲಿ ಬರುತ್ತದೆ. ಆದರ ಮೇಲೆ ಕೃತ್ ಪ್ರತ್ಯಯವನ್ನು ಮಾಡಿದಾಗ ಗುಣ ಬರಲು ಅವಕಾಶವಿಲ್ಲ. 'ಇಂಧೀ' ಎಂಬ ಧಾತುವಿನಲ್ಲಿ ಇರುವಂತಹ 'ಈ' ಕಾರವು ಅನುಬಂಧವಾದ್ದರಿಂದ 'ಇಂಧ್' ಎಂದಷ್ಟೇ ಉಳಿಯುತ್ತದೆ. ಹೀಗಿರುವಾಗ, 'ಅನಿದಿತಾಂ ಹಲ ಉಪಧಾಯಾಃ ಕಿತಿ' ಎಂಬ ಸೂತ್ರದಿಂದ ಉಪಧಾಕ್ಷರವೆನಿಸಿದ 'ನಕಾರಕ್ಕೆ ಕೃತ್ ಪ್ರತ್ಯಯವು ಪರದಲ್ಲಿರುವ ಲೋಪವು ಪ್ರಾಪ್ತವಾಗುತ್ತದೆ. ಆವಾಗ 'ಇಧ್' ಎಂದಷ್ಟೇ ಉಳಿಯುತ್ತದೆ. ಆದ್ದರಿಂದ 'ರಶ್ಮೀಧ್' ಎಂಬ ರೂಪವು ನಿಷ್ಪನ್ನವಾಗಿ ಪ್ರಥಮಾ ವಿಭಕ್ತಿಯ ಏಕವಚನದಲ್ಲಿ 'ರಶ್ಮೀತ್' ಎಂದಾಗುತ್ತದೆ. 'ಅಗ್ನೀದಗ್ನೀನ್ವಿಹರ' ಇತ್ಯಾದಿ ಸ್ಥಳಗಳಲ್ಲಿ 'ಅಗ್ನೀತ್' ಎಂಬಪದಕ್ಕೆ ಅಗ್ನಿಯನ್ನು ಬೆಳಗಿಸುವಿಕೆ ಎಂಬರ್ಥವನ್ನು ಹೇಳುವಂತೆ ರಶ್ಮಿಯೆಂಬ ಉಪಪದದ ಮುಂದೆ ಇರುವ 'ಇಂಧ್' ಧಾತುವಿಗೆ 'ಕ್ವಿಪ್' ಪ್ರತ್ಯಯ ಮಾಡುವಾಗ ಆಗುವಂತಹ 'ರಶ್ಮೀತ್' ಎಂಬ ಪದಕ್ಕೆ ಸೂರ್ಯಾದಿ ತೇಜಸ್ಸನ್ನು ಪ್ರಕಾಶಿಸುವವನು ಎಂಬರ್ಥವು ದೊರೆಯುತ್ತದೆ.

**प्रकाशः** – ''नारायणभासा तदधीनभासा तदीयभासा च । सर्वं सूर्यादिजगच्च भाति प्रकाशते प्रकाश्यते च'' इति टीकायास्सम्यगर्थाप्रतीतेरुद्भाष्यत्वप्रतीतेश्चाह – **नारायणेति** ।।

'ನಾರಾಯಣ ಭಾಸಾ' ಎಂಬ ಪದಕ್ಕೆ ನಾರಾಯಣನ ಅಧೀನವಾದ ಕಾಂತಿಯಿಂದ ಮತ್ತು ನಾರಾಯಣನ ಕಾಂತಿಯಿಂದ ಎಂದರ್ಥ. 'ಸರ್ವಂ' ಎಂಬ ಪದಕ್ಕೆ 'ಸೂರ್ಯಾದಿ ಜಗತ್ ಚ' ಎಂದರ್ಥ. 'ಭಾತಿ' ಎಂಬ ಪದಕ್ಕೆ ಪ್ರಕಾಶಿಸುತ್ತದೆ. ಮತ್ತು ಪ್ರಕಾಶ್ಯವಾಗಿದೆ ಎಂಬರ್ಥವನ್ನು ತಿಳಿಯಬೇಕು. ಹೀಗೆ 'ನಾರಾಯಣ ಭಾಸಾ ತತಧೀನಭಾಸಾ ತದೀಯಭಾಸಾ ಚ । ಸರ್ವಂ ಸೂರ್ಯಾದಿಜಗಚ್ಚ ಭಾತಿ ಪ್ರಕಾಶತೇ ಪ್ರಕಾಶ್ಯತೇ ಚ' ಎಂಬ ಟೀಕಾ ಮಾತಿನಲ್ಲಿ ಹೇಳಿರುತ್ತಾರೆ. ಇದರ ಅರ್ಥವು ಸ್ಪಷ್ಟವಾಗಿ ತಿಳಿಯದ ಕಾರಣ, ಭಾಷ್ಯದಲ್ಲಿ ಹೇಳದ ಅರ್ಥವನ್ನು ಟೀಕೆಯಲ್ಲಿ ಹೇಳಿದ್ದಾರಲ್ಲವೇ? ಎಂಬ ಭ್ರಾಂತಿಯನ್ನು ನಿರಾಕರಿಸುತ್ತಿದ್ದಾರೆ 'ನಾರಾಯಣ' ಇತ್ಯಾದಿ ಗ್ರಂಥದಿಂದ.

**प्रकाशः** – ''अपि स्मर्यते'' इत्यत्र ''युक्तिसमुच्चयेऽपिपदम्'' इति वाक्यमाक्षिप्य समाधत्ते – **यद्यपीत्यादिना** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे अनुकृत्यधिकरणं सम्पूर्णम् ।।**

ಅನುಕೃತ್ಯಧಿಕರಣ (೧-೩-೬)

ಎಂಬ ವಿಷಯದಲ್ಲಿ ಸ್ಮೃತಿಯನ್ನು ಪ್ರಮಾಣವನ್ನಾಗಿ ನೀಡಿದ್ದಾರೆ. ಈಗ ಅದೇ ವಿಷಯದಲ್ಲಿ ಶ್ರುತಿ ಪ್ರಮಾಣವು ಇರುತ್ತದೆಂದು ಶ್ರುತಿಸಮುಚ್ಚಯಾರ್ಥಕವಾಗಿದೆ.

**तथापि द्वितीयव्याख्याने प्रधानसाध्य एव हेतोः सूर्याद्यप्रकाश्यत्वरूपयुक्तेः समुच्चयार्थ इत्यर्थः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अनुकृत्यधिकरणं सम्पूर्णम् ।।**

ಆದರೂ ಸಹ ಎರಡನೆಯ ವ್ಯಾಖ್ಯಾನದಲ್ಲಿ ಪ್ರಧಾನಸಾಧ್ಯದಲ್ಲಿಯೇ ಹೇತುವೆನಿಸಿರುವ ಸೂರ್ಯಾದ್ಯಪ್ರಕಾಶ್ಯತ್ವವೆಂಬ ಯುಕ್ತಿಯನ್ನು ಪ್ರಥಮ ಸೂತ್ರದಲ್ಲಿ ಹೇಳಿಲ್ಲ. ಅದನ್ನು ಸಮುಚ್ಚಯ ಮಾಡುವುದಕ್ಕಾಗಿ 'ಅಪಿ' ಪದವನ್ನು ಹೇಳಿರುತ್ತಾರೆಂದು ತಿಳಿಯಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅನುಕೃತ್ಯಧಿಕರಣವು ಸಂಪೂರ್ಣವಾಯಿತು.

**प्रकाशः –**

**''सर्वं सूर्यादिजगद्भातीति शेषः'' इति टीकायां सर्वशब्दस्यैव सूर्यादिजगदित्यर्थ इति प्रतीयते । भातीत्यस्य क्वान्वय इत्यपि न ज्ञायते । नारायणभासा हि सर्वमित्यत्रत्यसर्वशब्दार्थ इति वा प्रतीयते । अत आह – नहीति ।।**

**ವಿವರಣೆ** – 'ಸರ್ವಂ ಸೂರ್ಯಾದಿಜಗತ್ ಭಾತೀತಿ ಶೇಷಃ' ಎಂಬ ಟೀಕಾ ಪಂಕ್ತಿಯನ್ನು ನೋಡಿದಾಗ, ಬಹಳ ಭ್ರಾಂತಿ ಬರುತ್ತದೆ. 'ಸರ್ವ' ಶಬ್ದಕ್ಕೆ 'ಸೂರ್ಯಾದಿ ಜಗತ್' ಎಂಬರ್ಥವು ತೋರುತ್ತದೆ. 'ಭಾತಿ' ಎಂಬ ಪದಕ್ಕೆ ಅನ್ವಯವೇ ತಿಳಿಯುವುದಿಲ್ಲ. ಮತ್ತು 'ನಾರಾಯಣಭಾಸಾ ಹಿ' ಎಂಬಲ್ಲಿರುವ 'ಸರ್ವ' ಶಬ್ದದ ಅರ್ಥವನ್ನು ಹೇಳುತ್ತಿದ್ದಾರೋ ಏನೋ? ಇತ್ಯಾದಿ ಹಲವು ವಿಧವಾದ ಭ್ರಾಂತಿಗಳಿಗೆ ಪರಿಹಾರ ನೀಡುತ್ತಿದ್ದಾರೆ 'ನಹಿ' ಇತ್ಯಾದಿ ಗ್ರಂಥದಿಂದ. ಅಂದರೆ 'ಸರ್ವಂ ಸೂರ್ಯಾದಿ' ಎಂಬುದೇ ಬೇರೆ ವಾಕ್ಯ, 'ಜಗತ್ ಭಾತೀತಿ ಶೇಷ' ಎಂಬುದೇ ಬೇರೆ ಎಂದು ತಿಳಿಯಬೇಕು.

**प्रकाशः – तत्तेजोरश्मीदिति रश्मीच्छब्देनायमर्थः कथं लब्ध इत्यत आह – अग्नीदिति ।।**

'ತತ್ತೇಜೋರಶ್ಮೀತ್' ಎಂಬ ಶ್ರುತಿಯಲ್ಲಿರುವ 'ರಶ್ಮೀತ್' ಎಂಬ ಶಬ್ದದಿಂದ ಸೂರ್ಯಾದಿ ಪ್ರಕಾಶಕತ್ವ ಎಂಬ ಅರ್ಥವು ಹೇಗೆ ತಿಳಿಯುತ್ತಿದೆ ? ಎಂಬ ಪ್ರಶ್ನೆಗೆ 'ಅಗ್ನೀತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः –** यथाग्निशब्दोपपदात् ञि इन्धी दीप्तावित्यस्मात्क्विपि "अनिदितां हल उपधायाः क्निति" इति नलोपे रूपमिति "अग्नीदग्नीन्विहर" इत्यादौ वह्निदीपकत्वमर्थः तथेहापि रश्मिपदोपपदादिन्धेःक्विपि रूपमित्युक्तं भवति ।

'ಅಗ್ನಿ' ಶಬ್ದವೆಂಬ ಉಪಪದದ ಮುಂದೆ 'ಇಂಧೀ' ಎಂಬ ಧಾತುವು 'ಬೆಳಗಿಸುವಿಕೆ' ಎಂಬರ್ಥದಲ್ಲಿ ಬರುತ್ತದೆ. ಅದರ ಮೇಲೆ ಕ್ವಿಪ್ ಪ್ರತ್ಯಯವನ್ನು ಮಾಡಿದಾಗ ಗುಣ ಬರಲು ಅವಕಾಶವಿಲ್ಲ. 'ಇಂಧೀ' ಎಂಬ ಧಾತುವಿನಲ್ಲಿ ಇರುವಂತಹ 'ಈ' ಕಾರವು ಅನುಬಂಧವಾದ್ದರಿಂದ 'ಇಂಧ್' ಎಂದಷ್ಟೇ ಉಳಿಯುತ್ತದೆ. ಹೀಗಿರುವಾಗ, 'ಅನಿದಿತಾಂ ಹಲ ಉಪಧಾಯಾಃ ಕಿತಿ' ಎಂಬ ಸೂತ್ರದಿಂದ ಉಪಧಾಕ್ಷರವೆನಿಸಿದ 'ನಕಾರಕ್ಕೆ ಕೃತ್ ಪ್ರತ್ಯಯವು ಪರದಲ್ಲಿರುವ ಲೋಪವು ಪ್ರಾಪ್ತವಾಗುತ್ತದೆ. ಆವಾಗ 'ಇಧ್' ಎಂದಷ್ಟೇ ಉಳಿಯುತ್ತದೆ. ಆದ್ದರಿಂದ 'ರಶ್ಮೀಧ್' ಎಂಬ ರೂಪವು ನಿಷ್ಪನ್ನವಾಗಿ ಪ್ರಥಮಾ ವಿಭಕ್ತಿಯ ಏಕವಚನದಲ್ಲಿ 'ರಶ್ಮೀತ್' ಎಂದಾಗುತ್ತದೆ. 'ಅಗ್ನೀದಗ್ನೀನ್ವಿಹರ' ಇತ್ಯಾದಿ ಸ್ಥಳಗಳಲ್ಲಿ 'ಅಗ್ನೀತ್' ಎಂಬಪದಕ್ಕೆ ಅಗ್ನಿಯನ್ನು ಬೆಳಗಿಸುವಿಕೆ ಎಂಬರ್ಥವನ್ನು ಹೇಳುವಂತೆ ರಶ್ಮಿಯೆಂಬ ಉಪಪದದ ಮುಂದೆ ಇರುವ 'ಇಂಧ್' ಧಾತುವಿಗೆ 'ಕ್ವಿಪ್' ಪ್ರತ್ಯಯ ಮಾಡುವಾಗ ಆಗುವಂತಹ 'ರಶ್ಮೀತ್' ಎಂಬ ಪದಕ್ಕೆ ಸೂರ್ಯಾದಿ ತೇಜಸ್ಸನ್ನು ಪ್ರಕಾಶಿಸುವವನು ಎಂಬರ್ಥವು ದೊರೆಯುತ್ತದೆ.

**प्रकाशः –** "नारायणभासा तदधीनभासा तदीयभासा च । सर्वं सूर्यादिजगच्च भाति प्रकाशते प्रकाश्यते च" इति टीकायास्सम्यगर्थाप्रतीतेरुद्भाष्यत्वप्रतीतेश्चाह – **नारायणेति ।।**

'ನಾರಾಯಣ ಭಾಸಾ' ಎಂಬ ಪದಕ್ಕೆ ನಾರಾಯಣನ ಅಧೀನವಾದ ಕಾಂತಿಯಿಂದ ಮತ್ತು ನಾರಾಯಣನ ಕಾಂತಿಯಿಂದ ಎಂದರ್ಥ. 'ಸರ್ವಂ' ಎಂಬ ಪದಕ್ಕೆ 'ಸೂರ್ಯಾದಿ ಜಗತ್ ಚ' ಎಂದರ್ಥ. 'ಭಾತಿ' ಎಂಬ ಪದಕ್ಕೆ ಪ್ರಕಾಶಿಸುತ್ತದೆ. ಮತ್ತು ಪ್ರಕಾಶ್ಯವಾಗಿದೆ ಎಂಬರ್ಥವನ್ನು ತಿಳಿಯಬೇಕು. ಹೀಗೆ 'ನಾರಾಯಣ ಭಾಸಾ ತತಧೀನಭಾಸಾ ತದೀಯಭಾಸಾ ಚ । ಸರ್ವಂ ಸೂರ್ಯಾದಿಜಗಚ್ಚ ಭಾತಿ ಪ್ರಕಾಶತೇ ಪ್ರಕಾಶ್ಯತೇ ಚ' ಎಂಬ ಟೀಕಾ ಮಾತಿನಲ್ಲಿ ಹೇಳಿರುತ್ತಾರೆ. ಇದರ ಅರ್ಥವು ಸ್ಪಷ್ಟವಾಗಿ ತಿಳಿಯದ ಕಾರಣ, ಭಾಷ್ಯದಲ್ಲಿ ಹೇಳದ ಅರ್ಥವನ್ನು ಟೀಕೆಯಲ್ಲಿ ಹೇಳಿದ್ದಾರಲ್ಲವೇ? ಎಂಬ ಭ್ರಾಂತಿಯನ್ನು ನಿರಾಕರಿಸುತ್ತಿದ್ದಾರೆ 'ನಾರಾಯಣ' ಇತ್ಯಾದಿ ಗ್ರಂಥದಿಂದ.

**प्रकाशः –** "अपि स्मर्यते" इत्यत्र "युक्तिसमुच्चयेऽपिपदम्" इति वाक्यमाक्षिप्य समाधत्ते – **यद्यपीत्यादिना ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे अनुकृत्यधिकरणं सम्पूर्णम् ।।**

ಅನುಕೃತ್ಯಧಿಕರಣ (೧-೩-೬)

'ಅಪಿ ಸ್ಮರ್ಯತೇ' ಎಂಬ ಸೂತ್ರದಲ್ಲಿರುವ 'ಅಪಿ' ಪದವು ಯುಕ್ತಿಸಮುಚ್ಚಯಾರ್ಥದಲ್ಲಿದೆ ಎಂದು ಹೇಳುವ 'ಯುಕ್ತಿಸಮುಚ್ಚಯೇಽಪಿಪದಮ್' ಎಂಬ ಟೀಕಾ ವಾಕ್ಯವನ್ನು ಆಕ್ಷೇಪ ಮಾಡಿ ಸಮಾಧಾನ ನೀಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅನುಕೃತ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – न तत्र सूर्यो भातीत्यादिश्रुतौ सूर्यादिप्रकाशनियामकत्वस्यैवोक्तत्वेन तस्यैव प्रकृत उपयुक्तत्वेन भाष्यकारेणापि नहि ज्ञानसुखमनुभाति सूर्यादिकमिति सूर्यादिप्रकाशनियामकत्वमेव वक्तव्यम् । सर्वप्रकाशकत्वकथनमसङ्गतमित्यभिप्रेत्य टीकाकारेण सर्वं सूर्यादीति व्याख्यानमित्यभिप्रेत्याह – **नहि ज्ञानसुखमिति भाष्य इति** ।। नच तद्भासेत्यस्य सापेक्षत्वात् पूर्ववाक्यात्सर्वशब्दस्यानुषङ्गे तस्य सूर्यपरतयोक्तत्वेनात्रापि सूर्यपरत्वापातेन सूर्यादिपरत्वे चानेनापि सूर्यादिप्रकाशनियामकत्वमेव लभ्यते । तच्च पूर्वमेवोक्तमिति पौनरुक्त्यं स्यात् । अतो जगद्भातीति पदद्वयं शेषं सम्पूर्य टीकाकारो व्याख्यातीत्याह – **नच तद्भासेति भाष्य इति** ।। नारायणस्य सूर्यादिप्रकाशनियामकत्वे अहं तत्तेजो रश्मीदिति वाक्यं प्रमाणीकृतम् । तत्र चोक्तार्थाप्रतीतेरसङ्गतिशङ्कायां टीकाकारैः रश्मीदित्यनेन सूर्यादितेजसो भगवदधीनत्वमुच्यत इत्युक्तम् । तत्रापि रश्मीदित्यनेनापि सूर्यादितेजसां भगवदधीनत्वं न प्रतीयते । अतो रश्मीनिन्ध इति व्युत्पत्तिमाश्रित्य तद्वाक्यं व्याख्याति – **अग्नीच्छब्दस्येत्यादिना**।। अन्यत् स्पष्टम् ।।

।। इति श्रीकेशवभट्टारकेण विरचितायां भावदीपिकायाम्
अनुकृत्यधिकरणं सम्पूर्णम् ।। ६ ।।

ಪರಿಪೂರ್ಣಚಂದ್ರಿಕಾ

# ಅನುಕೃತ್ಯಧಿಕರಣ

(೧-೩-೬)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री श्रीमदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## अनुकृत्यधिकरणम् (१।३।६)

**सूर्यादिभासकः**

ಸೂರ್ಯಾದಿಗಳಿಗೆ ಪ್ರಕಾಶವನ್ನು ಕೊಡುವ ಪರಮಾತ್ಮನೇ ಅದೃಶ್ಯತ್ವಾದಿಗುಣವುಳ್ಳವನಾಗಿದ್ದಾನೆ. ಹೊರತು ಜ್ಞಾನಿಸುಖವಲ್ಲ.

***

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

## अनुकृत्यधिकरणम् (१।३।६)

नन्वथापि दृश्यत्वाद्युज्झितो विष्णुरित्यसाधु । काठके 'तदेतदिति मन्यन्तेऽनिर्देश्यं परमं सुखम् । कथं नु तद्विजानीयां किमु भाति न भाति वा' इति पूर्वोत्तराभ्यां अर्धाभ्यां 'तेषां सुखं शाश्वतं' इति पूर्वप्रकृतज्ञानिसुखपरामर्शेन तस्यादृश्यत्वाज्ञेयत्वयोरुक्तेरित्यतः प्राप्तं – **अनुकृतेस्तस्य चेति सूत्रद्वयम्** । तदर्थः – **सूर्यादिभासक इति** ।

ಶಂಕೆ - ಅದೃಶ್ಯತ್ವಾಧಿಕರಣದಲ್ಲಿ ಅದೃಶ್ಯತ್ವಾದಿಧರ್ಮಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಇದು ಸರಿಯಲ್ಲ. ಏಕೆಂದರೆ ಕಾಠಕೋಪನಿಷತ್ತಿನಲ್ಲಿ 'ತದೇತದಿತಿ ಮನ್ಯಂತೇಽನಿರ್ದೇಶ್ಯಂ

ಪರಮಂ ಸುಖಂ' 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಇತ್ಯಾದಿ ಪೂರ್ವೋತ್ತರವಾಕ್ಯಗಳಲ್ಲಿ 'ತೇಷಾಂ ಸುಖಮ್ ಶಾಶ್ವತಮ್' ಎಂಬುದಾಗಿ ಹಿಂದೆ ಪ್ರಕೃತವಾದ ಜ್ಞಾನಿಸುಖವನ್ನು ಉದ್ದೇಶಿಸಿ ಅದರಲ್ಲಿ ಅದೃಶ್ಯತ್ವ, ಅಜ್ಞೇಯತ್ವ ಮೊದಲಾದ ಧರ್ಮಗಳನ್ನು ವಿಧಿಸಲಾಗಿದೆ. ಆದ್ದರಿಂದ ಜ್ಞಾನಿಸುಖವೇ ಅದೃಶ್ಯತ್ವಾದಿಗುಣಗಳುಳ್ಳದ್ದು.

ಸಮಾಧಾನ - ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಅನುಕೃತೇಸ್ತಸ್ಯಚ' ಎಂಬೆರಡು ಸೂತ್ರಗಳು ಹೊರಟಿವೆ. ಈ ಅಧಿಕರಣದ ಸಾರಾಂಶವನ್ನು ಅಣುಭಾಷ್ಯದಲ್ಲಿ 'ಸೂರ್ಯಾದಿಭಾಸಕಃ' ಎಂದು ಸಂಗ್ರಹಿಸಿದ್ದಾರೆ.

उपलक्षणमेतत् । 'न तत्र सूर्यो भाति' इति वाक्योक्त सूर्याद्यप्रकाश्यः 'तस्य भासा' इति वाक्योक्तजगत्प्रकाशकश्चेत्यपि ग्राह्यम् । पूर्ववदनुषङ्गः । 'तमेव भान्तमनुभाति सर्वम्' इत्युत्तरावाक्ये यस्य परमात्मनो रूपमनिर्देश्यं परमं सुखं कथं नु तदित्याविर्भावं प्रार्थयन्ते तं परमात्मानं भान्तमनुसृत्य सर्वं सूर्यचन्द्रतारकादितेजोजातं भाति प्रकाशत इत्यादिना श्रुतः सूर्यादिभासकः सः प्राक् दृश्यत्वाद्युज्झितत्वेनोक्त एको जनार्दनः । नतु ज्ञानिसुखम् । तत्तस्मात्साधारणसुखश्रुत्या तदन्यवाचकतया प्रतीतैः तदेतच्छब्दैः आनुकूल्येन गृह्यमाणनिष्ठैः सर्वैरेको जनार्दनो मुख्यतो व्यवहितपरामार्शनपुंकक्लेशादि ना विना वाच्यः । 'यतो वाचो' इत्यादिश्रुतौ प्रसिद्धं यदनिर्देश्यं परमं सुखं कथं नु तद्विजानीयामित्यानुकूल्येन गृह्णन्ति तदनिर्देश्यं सुखम् । एतत् 'चेतनश्चेतनानाम्' इति सन्निहितपरमात्मनो रूपमिति मन्यन्त इति वाक्ययोजनोपपत्तेः । कुत एवं कल्पनेत्यतः प्रागुक्तमुपलक्षणं मत्वाऽह । **लिङ्गैर्युतो हि** । सूर्यादितेजोराशिभासकत्व-तदुपलक्षितसूर्याद्यप्रकाश्यत्व - जगत्प्रकाशकत्वलिङ्गैर्युतत्वस्य भाष्योक्तश्रुतिस्मृतिभिः वैष्णवत्वप्रसिद्धेरित्यर्थः ।

ಅಣುಭಾಷ್ಯದಲ್ಲಿ 'ಸೂರ್ಯಾದಿಭಾಸಕಃ' ಎಂದು ಹೇಳಿದ್ದು ಉಪಲಕ್ಷಣವಾಗಿದೆ. 'ನ ತತ್ರ ಸೂರ್ಯೋಭಾತಿ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ 'ಸೂರ್ಯಾದ್ಯಪ್ರಕಾಶ್ಯತ್ವ, ತಸ್ಯಾಭಾಸಾ ಸರ್ವಮಿದಂ ವಿಭಾತಿ' ಎಂಬಲ್ಲಿ ಹೇಳಲ್ಪಟ್ಟ, ಸರ್ವಜಗತ್‌ಪ್ರಕಾಶಕತ್ವ ಮೊದಲಾದವುಗಳನ್ನು ಇಲ್ಲಿ ಇಟ್ಟುಕೊಳ್ಳಬೇಕು.

ಇಲ್ಲಿಯೂ ಸಹ ಹಿಂದಿನಂತೆ ಅನುಷಂಗ ಮಾಡಿಕೊಳ್ಳಬೇಕು. 'ತಮೇವ ಭಾಂತಂ ಅನುಭಾತಿ ಸರ್ವಮ್' ಎಂಬ ಮುಂದಿನ ವಾಕ್ಯದಲ್ಲಿ ಯಾವ ಪರಮಾತ್ಮನ ರೂಪವು ಅನಿರ್ದೇಶ್ಯವಾಗಿ ಪರಮಸುಖರೂಪವಾಗಿದೆಯೋ, ಮತ್ತು 'ಕಥಂ ನು ತತ್' ಇತ್ಯಾದಿಯಾಗಿ ಯಾವುದರ ಆವಿರ್ಭಾವವನ್ನು ಪ್ರಾರ್ಥಿಸುತ್ತಾರೋ, ಆ ಪರಮಾತ್ಮನ ಪ್ರಕಾಶದಿಂದ, ಸೂರ್ಯ-ಚಂದ್ರಾದಿಗಳೆಲ್ಲವೂ ಪ್ರಕಾಶಿಸುತ್ತವೆ. ಹೀಗೆ ಸೂರ್ಯ-ಚಂದ್ರಾದಿಗಳ ಪ್ರಕಾಶಕನೆಂದು ಶ್ರುತನಾಗಿರುವ ದೃಶ್ಯತ್ವಾದಿಧರ್ಮಗಳಿಂದ ರಹಿತನಾಗಿ

ಉಕ್ತನಾದವನೆಂದರೆ ಜನಾರ್ದನನು ಮಾತ್ರ. ಹೊರತು, ಜ್ಞಾನಿಸುಖವಲ್ಲ. ಆದ್ದರಿಂದ ಸುಖಶಬ್ದವು ಜ್ಞಾನಿಸುಖ ಹಾಗೂ ಪರಮಾತ್ಮ ಎರಡೂ ಕಡೆ ಸಾಧಾರಣವಾಗಿರುವುದರಿಂದ ಅದನ್ನು ಪರಾಮರ್ಶಿಸುವ 'ತತ್' ಮತ್ತು 'ಏತತ್' ಶಬ್ದಗಳಿಂದ ಎರಡನ್ನೂ ಪರಾಮರ್ಶ ಮಾಡಲು ಬರುತ್ತದೆ. ಆದರೆ ಆನುಕೂಲ್ಯೇನ ಗೃಹ್ಯಮಾಣನಾದ ಪರಮಾತ್ಮನನ್ನೇ ಪರಮಮುಖ್ಯವೃತ್ತಿಯಿಂದ ಬೋಧಿಸುವುದು ಸುಲಭವಾಗುತ್ತದೆ. ವ್ಯವಹಿತವಾದ ಪರಾಮರ್ಶ ಮಾಡುವುದು ನಪುಂಸಕಲಿಂಗದ ಕ್ಲೇಶವು ಮೊದಲಾದವುಗಳು ಇರುವುದಿಲ್ಲ. 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಯಲ್ಲಿ ಪ್ರಸಿದ್ಧನಾದ ಅನಿರ್ದೇಶ್ಯಸುಖರೂಪನಾದ ಪರಮಾತ್ಮನು 'ಕಥಂ ನು ತದ್ವಿಜಾನೀಯಾಮ್' ಎಂಬುದಾಗಿ ಆನುಕೂಲ್ಯೇನ ಗೃಹ್ಯಮಾಣನನಾಗಿದ್ದಾನೆ. 'ಚೇತನಶ್ಚೇತನಾನಾಂ' ಎಂಬ ಸನ್ನಿಹಿತವಾದ ವಾಕ್ಯದಲ್ಲಿಯೂ ಪರಮಾತ್ಮನ ರೂಪವೇ ಪ್ರಕೃತವಾದ್ದರಿಂದ, 'ತದೇತದಿತಿ ಮನ್ಯಂತೇ' ಎಂಬ ವಾಕ್ಯದ ಜೊತೆಗೆ ಅನ್ವಯವು ಯುಕ್ತವಾಗುತ್ತದೆ. ಹೀಗೇಕೆ ಕಲ್ಪಿಸಬೇಕು? ಎಂದರೆ ಹಿಂದೆ ಹೇಳಿದ ಉಪಲಕ್ಷಣಯಾ ತಿಳಿಯಬೇಕಾದ ಲಿಂಗಾದಿಗಳನ್ನು ವಿವಕ್ಷಿಸಿ, 'ಲಿಂಗೈರ್ಯುತೋ ಹಿ' ಎಂದು ಹೇಳಿದ್ದಾರೆ. ಅಂದರೆ ಸೂರ್ಯಾದಿತೇಜೋರಾಶಿಭಾಸಕತ್ವ, ತದುಪಲಕ್ಷಿತವಾದ ಸೂರ್ಯಾದ್ಯಪ್ರಕಾಶ್ಯತ್ವ, ಜಗತ್‌ಪ್ರಕಾಶಕತ್ವ ಮೊದಲಾದ ಲಿಂಗಗಳಿಂದ ಪರಮಾತ್ಮನೇ ಯುಕ್ತನಾಗಿದ್ದಾನೆ. ಇವೆಲ್ಲವೂ ಪರಮಾತ್ಮನಲ್ಲಿ ಮಾತ್ರ ಇರುತ್ತವೆಂದು ಭಾಷ್ಯದಲ್ಲಿ ಉದಾಹರಿಸಿದ ಶ್ರುತಿ-ಸ್ಮೃತಿಗಳಿಂದ ಸಿದ್ಧವಾಗಿದೆಯೆಂದು ತಿಳಿಯಬೇಕು.

अत्रैक इत्युक्तिः 'तदेतत्' इति श्रुतौ 'एकं रूपम्' इति प्राक्प्रकृतरूपपरामर्श इति वा, 'एको बहूनाम्' इति सन्निहितत्वं वा सूचयितुम् । जनार्दन इत्यजत्वमोचकत्वयोरुक्त्या 'नित्यो नित्यानाम्' इति, 'तमात्मस्थं येऽनुपश्यन्ति धीराः तेषां शान्तिः' इति हरेः सान्निध्याद्यस्य रूपमेवं सुखरूपं तमेव भान्तं इति प्रागुक्तयोजनासूचनात्तदेतदि-त्यादिनपुंसकस्य तमित्यादिपुल्लिङ्गस्य चोपपत्तिरिति सूचितम् । अत एवानुग्राह्यत्वस्य समन्वयलिङ्गस्य निर्देशो कार्ये सूर्यादिभासकत्वरूपसाधकहेतोरेवोक्तिः । उक्तयोजनोप-पादनसूचनार्थत्वात् । सूत्रानुसाराच्चेति ।

'ಏಕೋ ಜನಾರ್ದನಃ' ಎಂಬಲ್ಲಿ 'ಏಕಃ' ಎಂಬುದರಿಂದ 'ತದೇತತ್' ಇತ್ಯಾದಿಯಾದ ಶ್ರುತಿಯಲ್ಲಿ 'ಏಕಂ ರೂಪಮ್' ಎಂಬುದಾಗಿ ಹಿಂದೆ ಪ್ರಕೃತವಾದ ಪರಮಾತ್ಮನ ರೂಪವನ್ನು ತೆಗೆದುಕೊಳ್ಳಬೇಕು. ಅಥವಾ 'ಏಕೋ ಬಹೂನಾಮ್' ಎಂಬ ಸನ್ನಿಹಿತವಾದ ವಾಕ್ಯವನ್ನೂ ಕೂಡ ತೆಗೆದುಕೊಳ್ಳಬಹುದೆಂದು ಸೂಚಿಸಲಾಗಿದೆ. 'ಜನಾರ್ದನಃ' ಎಂಬುದರಿಂದ ಪರಮಾತ್ಮನ ಅಜತ್ವ, ಮೋಚಕತ್ವ ಧರ್ಮಗಳು ಸೂಚಿತವಾಗಿವೆ. 'ನಿತ್ಯೋಽನಿತ್ಯಾನಾಮ್' ಎಂದು 'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಶಾಂತಿಃ' ಎಂಬ ಶ್ರುತಿಗಳು ಶ್ರೀಹರಿಯ ಸಾನ್ನಿಧ್ಯದಿಂದ ಯಾರ ರೂಪವು ಸುಖರೂಪವಾಗಿದೆಯೋ, 'ತಮೇವ ಭಾಂತಮ್' ಎಂಬುದಾಗಿ ಹಿಂದೆ ಹೇಳಿದ ಶ್ರುತಿವಾಕ್ಯದ ಯೋಜನೆಯನ್ನು ಸೂಚನೆ ಮಾಡಿದ್ದರಿಂದ, 'ತದೇತತ್' ಎಂಬ ನಪುಂಸಕಲಿಂಗದ ಪ್ರಯೋಗವು 'ತಮ್' ಎಂಬ ಪುಲ್ಲಿಂಗ

ಪ್ರಯೋಗವೂ ಕೂಡ ಉಪಪನ್ನವಾಗುತ್ತವೆ. ಈ ಯೋಜನೆಯನ್ನು ಸೂಚನೆ ಮಾಡುವುದಕ್ಕಾಗಿಯೇ 'ಅನುಗ್ರಾಹ್ಯತ್ವ' ಎಂಬ ಸಮನ್ವಯ ಮಾಡಬೇಕಾದ ಧರ್ಮವನ್ನು ಹೇಳದೇ ಅದಕ್ಕೆ ಸಾಧಕವಾದ 'ಸೂರ್ಯಾದಿಭಾಸಕತ್ವ' ಧರ್ಮವನ್ನು ಅಣುಭಾಷ್ಯದಲ್ಲಿ ಹೇಳಿದ್ದಾರೆ. ಮತ್ತು ಸೂತ್ರದಲ್ಲಿ ಹೇಳಿದ ಧರ್ಮಗಳನ್ನು ಅನುಸರಿಸಿ, ವ್ಯಾಖ್ಯಾನ ಮಾಡುವ ಉದ್ದೇಶವು ಇದಾಗಿರುತ್ತದೆ.

ननु कथं सूर्यादिभासक इति कर्तरि चेति सूत्रे तृजकाभ्यां योगे कर्तृकर्मणोः कृतीति या षष्ठी सा न समस्यत इति समासनिषेधात् । मैवम् । याजकादिभिश्चेति प्रतिप्रसवात् । यद्वा शेषषष्ठीत्वेन समासः । अथवा भासयतीति भासः । 'नन्दिग्रहिपचादिभ्यो ल्युणिन्यचः' इति सूत्रे पचादिराकृतिगण इति वृत्तावुक्तत्वात्, अज्विधिः सर्वधातुभ्यो वक्तव्य इति महाभाष्योक्तेर्वा, 'यङोऽचि च' इति सूत्रे अज्ग्रहणेन सर्वधातुभ्योऽच्प्रत्ययविधेः मञ्जर्यां ज्ञापितत्वाद्वा, अच्प्रत्ययान्तण्यन्तभासशब्देन सूर्यादेर्भासः सूर्यादिभास इति समासः । अज्ञात इति सूत्रेण कप्रत्यये सूर्यादिभासक इत्युपपत्तेः । यथोक्तं लिङ्गपादे सुधायां 'तत्र तत्र स्थितो विष्णुस्तत्तच्छक्तिप्रबोधकः' इत्येतव्द्याख्यावसरे 'तत्तच्छक्तिप्रबोधक इति कथं? कर्तरि चेति समासनिषेधात् । न । याजकादिभिश्चेति प्रतिप्रसवात् । यद्वा प्रकृष्टो बोधो यस्मादिति वा, पचाद्यजन्तत्वेन वा प्रबोधः । शक्तीनां प्रबोधः शक्तिप्रबोधः । ततश्चज्ञात इति कप्रत्यय इति ।।६।।

'ಭಾಸಕಃ' ಎಂಬಲ್ಲಿ ಕರ್ತರ್ಥದಲ್ಲಿ 'ಅಕ್' ಪ್ರತ್ಯಯವು ಬಂದಿದೆ. 'ಕರ್ತರಿಚ' ಎಂಬ ಸೂತ್ರದಲ್ಲಿ ಕರ್ತರ್ಥದಲ್ಲಿ 'ಅಕ್' ಪ್ರತ್ಯಯವು ಬಂದಾಗ ಷಷ್ಠೀಸಮಾಸವಾಗುವುದಿಲ್ಲವೆಂದು ಹೇಳಲಾಗಿದೆ. ಹೀಗಿರುವಾಗ 'ಸೂರ್ಯಾದಿಭಾಸಕಃ' ಎಂಬ ಸಮಸ್ತಪದಪ್ರಯೋಗ ಹೇಗೆ ಸರಿಯಾಗುತ್ತದೆ? ಎಂದು ಶಂಕಿಸಬಾರದು. ಏಕೆಂದರೆ 'ಯಾಜಕಾದಿಭಿಶ್ಚ' ಎಂಬ ಸೂತ್ರದಲ್ಲಿ ಯಾಜಕಾದಿಗಳ ಗಣದಲ್ಲಿ ಸೇರಿಸುವಂತಹ ಪದಗಳಿಗೆ 'ಅಕ್' ಪ್ರತ್ಯಯವು ಬಂದಾಗಲೂ ಕೂಡ ಷಷ್ಠೀ ಸಮಾಸವಾಗುತ್ತದೆಂದು ವಿಧಾನ ಮಾಡಲಾಗಿದೆ. ಪ್ರಕೃತ 'ಭಾಸಕಃ' ಎಂಬುದು ಯಾಜಕಾದಿಗಣದಲ್ಲಿ ಸೇರಿರುವುದರಿಂದ 'ಸೂರ್ಯಾದಿಭಾಸಕಃ' ಎಂಬ ಪದ ಪ್ರಯೋಗವು ತಪ್ಪಾಗುವುದಿಲ್ಲ. ಅಥವಾ ಶೇಷಷಷ್ಠೀಸಮಾಸವೆಂದು ಪರಿಗಣಿಸಿದಾಗ ದೋಷಕ್ಕೆ ಅವಕಾಶವೇ ಇಲ್ಲ. ಅಥವಾ 'ಭಾಸಯತೀತಿ ಭಾಸಃ' ಎಂದು ವಿವರಿಸಿದಾಗ 'ಸೂರ್ಯಾದೇಃ ಭಾಸಃ' ಎಂದು ಹೇಳಿದಂತಾಗುತ್ತದೆ. ಆವಾಗ 'ಅಜ್ಞಾತೇ' ಎಂಬ ಸೂತ್ರದಿಂದ 'ತತ್' ಪ್ರತ್ಯಯವು ಬಂದು 'ಸೂರ್ಯಾದಿಭಾಸಕಃ' ಎಂಬ ರೂಪವು ನಿಷ್ಪನ್ನವಾಗುತ್ತದೆ. 'ಭಾಸಃ' ಎಂಬಲ್ಲಿ 'ನಂದೀಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ' ಎಂಬ ಸೂತ್ರದಿಂದ, 'ಪಚಾದಿರಾಕೃತಿಗಣಃ' ಎಂದು ವೃತ್ತಿಯಲ್ಲಿ ಹೇಳಿದ್ದರಿಂದ. 'ಅಚ್' ಪ್ರತ್ಯಯವು ಬರುತ್ತದೆ. ಅಥವಾ 'ಅಜ್ವಿಧಿಃ ಸರ್ವಧಾತುಭ್ಯಃ' ಎಂಬ ಮಹಾಭಾಷ್ಯದ ಮಾತಿನಿಂದಲೂ 'ಯಜ್ಞೋಚಿ ಚ' ಎಂಬ ಸೂತ್ರದಲ್ಲಿ 'ಅಜ್' ಗ್ರಹಣವನ್ನು ಮಾಡಿದ್ದರಿಂದ ಸರ್ವಧಾತುಗಳ ಮೇಲೆ 'ಅಚ್' ಪ್ರತ್ಯಯವು ಬರುತ್ತದೆಂದು 'ಮಂಜರೀ' ಎಂಬ ವ್ಯಾಖ್ಯಾನದಲ್ಲಿ ಹೇಳಲಾಗಿದೆ. ಹೀಗೆ 'ಭಾಸಃ' ಎಂಬ ಶಬ್ದವು

ಅಚ್‌ಪ್ರತ್ಯಯಾಂತವಾಗಿದೆ. ಣ್ಯಂತವಾಗಿದೆ. ಪುನಃ ಅದರ ಮೇಲೆ 'ಕ' ಪ್ರತ್ಯಯವು ಬಂದು 'ಭಾಸಕಃ' ಎಂಬ ರೂಪವು ನಿಷ್ಪನ್ನವಾಗಿದೆ. ಹೊರತು, 'ಅಕ್' ಪ್ರತ್ಯಯವು ಬಂದಿರುವುದಿಲ್ಲ. ಆದ್ದರಿಂದಲೇ ಷಷ್ಠೀಸಮಾಸವನ್ನು ಮಾಡಲು ಬರುವುದಿಲ್ಲವೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಈ ಸಮರ್ಥನೆಯು ತಪ್ಪಾಗುವುದಿಲ್ಲವೆನ್ನಲು ನ್ಯಾಯಸುಧೆಯ ಸಮ್ಮತಿಯೂ ಇರುತ್ತದೆ. ಲಿಂಗಪಾದದ ನ್ಯಾಯಸುಧೆಯಲ್ಲಿ 'ತತ್ರ ತತ್ರ ಸ್ಥಿತೋ ವಿಷ್ಣೋ ತತ್ತಚ್ಛಕ್ತಿಃ ಪ್ರಬೋಧಕಃ' ಎಂಬ ವಾಕ್ಯವನ್ನು ವ್ಯಾಖ್ಯಾನ ಮಾಡುವಾಗ 'ತತ್ತಚ್ಛಕ್ತಿ ಪ್ರಬೋಧಕಃ' ಎಂಬ ರೂಪವು ಹೇಗೆ ನಿಷ್ಪನ್ನವಾಗಿದೆಯೆಂದು ? ಪ್ರಶ್ನಿಸಿಕೊಂಡು ಹೀಗೆ ಉತ್ತರಿಸಿದ್ದಾರೆ - 'ಕರ್ತರಿ ಚ' ಎಂಬ ಸೂತ್ರದಲ್ಲಿ ಕರ್ತರ್ಥಕವಾದ 'ಅಕ್' ಪ್ರತ್ಯಯವು ಬಂದಾಗ 'ತತ್ತಚ್ಛಕ್ತಿ ಪ್ರಬೋಧಕಃ' ಎಂಬ ಸಮಸ್ತ ಪದವು ಹೇಗಾಗುತ್ತದೆಂದು ಶಂಕಿಸಿ, 'ಯಾಜಕಾದಿಭಿಶ್ಚ' ಎಂಬ ಸೂತ್ರದಲ್ಲಿ ಪ್ರತಿಪ್ರಸವವನ್ನು ಮಾಡಲಾಗಿದೆ. ಅಂದರೆ ಯಾಜಕಾದಿಗಣದಲ್ಲಿ ಸೇರಿರುವ ಪದಗಳಲ್ಲಿ 'ಅಕ್' ಪ್ರತ್ಯಯವು ಬಂದರೂ ಕೂಡ ಷಷ್ಠೀಸಮಾಸವಾಗುತ್ತದೆಂದು ಹೇಳಿದ್ದರಿಂದ ಬಾಧಕವಿಲ್ಲವೆಂದು ಸಮರ್ಥಿಸಿದ್ದಾರೆ. ಅಥವಾ 'ಪ್ರಕೃಷ್ಟೋ ಬೋಧಃ ಯಸ್ಮಾತ್' ಎಂದಾಗಲೀ, 'ಪಚಾದ್ಯಜಂತ' ರೂಪವೆಂದಾಗಲೀ ಇಟ್ಟುಕೊಂಡಾಗ 'ಪ್ರಬೋಧಃ' ಎಂದಾಗುತ್ತದೆ. ಅನಂತರ 'ಶಕ್ತೀನಾಂ ಪ್ರಬೋಧಃ ಶಕ್ತಿಪ್ರಬೋಧಃ' ಎಂದು ಸಮಾಸ ಮಾಡಿ, 'ಅಜ್ಞಾತೇ' ಎಂಬ ಸೂತ್ರದಿಂದ 'ಕ' ಪ್ರತ್ಯಯವನ್ನು ಹೇಳಿದಾಗ 'ತತ್ತಚ್ಛಕ್ತಿ ಪ್ರಬೋಧಕಃ' ಎಂಬ ರೂಪವು ನಿಷ್ಪನ್ನವಾಗುತ್ತದೆಂದು ಸಮರ್ಥಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ 'ಸೂರ್ಯಾದಿಭಾಸಕಃ' ಎಂಬ ಪದ ಪ್ರಯೋಗವನ್ನು ಸಾಧುವೆಂದು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಅನುಕೃತ್ಯಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## अनुकृत्यधिकरणम् (१।३।६)

**।। ॐ अनुकृतेस्तस्य च ॐ ।।१-३-२२**

अत्र ज्ञानार्थं प्रार्थितत्वरूपमानुकूल्येन गृह्यमाणत्वं लिङ्गं समन्वीयते । आनुकूल्येन गृह्यमाणमिति योग्यतयाऽन्वेति ।

ಈ ಅಧಿಕರಣದಲ್ಲಿ 'ಜ್ಞಾನಾರ್ಥಂ ಪ್ರಾರ್ಥಿತತ್ವ' ಎಂಬ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. 'ಆನುಕೂಲ್ಯೇನ ಗೃಹ್ಯಮಾಣಮ್' ಎಂಬ ಪದಗಳು ಯೋಗ್ಯವಾದ್ದರಿಂದ ಅನ್ವಯವನ್ನು ಹೊಂದುತ್ತವೆ.

अनुकृतिपदेनानुभानमुच्यते । तस्यापि क्रियात्वात् । तस्येति तन्त्रम् । ''कथं नु तद्विजानीयां किमु भाति न भाति वा'' इत्युक्तमानुकूल्येन गृह्यमाणं तत्तु ब्रह्मैव । नतु ज्ञानिसुखम् । कुतः? तस्याऽनुकूल्येन गृह्यमाणस्यानुकृतेः सूर्यादिभिरनुभानात् । ''तमेव भान्तमनुभाति सर्वम्'' इति तदधीनभानश्रवणात् सूर्यादेरिति यावत् ।

'ಅನುಕೃತಿ' ಎಂದರೆ 'ಅನುಭಾನ' ಅಥವಾ ಭಗವಂತನ ಪ್ರಕಾಶವನ್ನು ಅನುಸರಿಸಿ ಪ್ರಕಾಶಿಸುವಿಕೆ ಎಂದರ್ಥ. ಇದು ಕ್ರಿಯಾರೂಪವಾಗಿದೆ. 'ತಸ್ಯ' ಎಂಬುದನ್ನು ಎರಡು ಬಾರಿ ಅನ್ವಯ ಮಾಡಿಕೊಳ್ಳಬೇಕು. 'ಕಥಂ ನು ತದ್ವಿಜಾನೀಯಾಮ್ ಕಿಮು ಭಾತಿ ನ ಭಾತಿ ವಾ' ಎಂಬ ಕಾಠಕೋಪನಿಷತ್ತಿನಲ್ಲಿ ಹೇಳಿರುವ ಆನುಕೂಲ್ಯೇನ ಗೃಹ್ಯಮಾಣನು, ತತ್ = ಬ್ರಹ್ಮನೇ ಆಗಿದ್ದಾನೆ ಹೊರತು, ಜ್ಞಾನಿಸುಖವಲ್ಲ. ಏಕೆಂದರೆ 'ತಸ್ಯ' = ಆನುಕೂಲ್ಯೇನ ಗೃಹ್ಯಮಾಣಕ್ಕೆ, 'ಅನುಕೃತೇಃ' = ಸೂರ್ಯಾದಿಗಳಿಂದ ಅನುಭಾನವನ್ನು ಹೇಳಿದ್ದರಿಂದ 'ತಮೇವ ಭಾಂತಂ ಅನುಭಾತಿ ಸರ್ವಮ್'

ಎಂಬ ಶ್ರುತಿಯಲ್ಲಿ ಪರಮಾತ್ಮನ ಅಧೀನವಾದ ಪ್ರಕಾಶವನ್ನು ಸೂರ್ಯಾದಿಗಳಿಗೆ ಹೇಳಿರುವುದರಿಂದ ಎಂದು ಅಭಿಪ್ರಾಯ.

**किञ्च तस्य, वाक्यप्रतीकं चैतत्, ''तस्य भासा सर्वमिदं विभाति'' इति सर्वस्य तत्प्रकाश्यत्वोक्तेरित्यर्थः । चशब्देन ''न तत्र सूर्यो भाति'' इत्याद्युक्तसूर्याद्यप्रकाश्य त्वाच्चेति समुच्चीयते ।**

ಮತ್ತು 'ತಸ್ಯ' ಎಂಬುದು ವಾಕ್ಯಪ್ರತೀಕವೂ ಆಗಿದೆ. 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬುದಾಗಿ ಸಕಲವೂ ಸಹ ಅವನಿಂದ ಪ್ರಕಾಶಿಸುತ್ತದೆಂದು ಹೇಳಿರುವುದರಿಂದ ಎಂದರ್ಥ. ('ತಸ್ಯ' ಎಂಬ ಎರಡನೆಯ ಬಾರಿ ಅನ್ವಯ ಮಾಡಿಕೊಂಡ ಪದದ ಅರ್ಥ.)

'ಚ' ಶಬ್ದದಿಂದ 'ನ ತತ್ರ ಸೂರ್ಯೋಽಭಾತಿ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವ ಸೂರ್ಯಾದಿಗಳಿಂದ ಪರಮಾತ್ಮನು ಪ್ರಕಾಶನಾಗಿಲ್ಲ ಎಂಬುದನ್ನೂ ಕೂಡ ಸಮುಚ್ಚಯ ಮಾಡಿಕೊಳ್ಳಬೇಕು.

**''कथं नु तद्विजानीयाम्'' इति वाक्यशेषे तमिति तस्येति तत्रेति तच्छब्दैरानुकूल्येन गृह्यमाणं परामृश्य सूर्यादितेजोनियन्तृत्व-सर्वप्रकाशकत्व-सूर्याद्यप्रकाश्यत्वाख्यनिरवकाशलिङ्गत्रयोक्तेर्ब्रह्मैवेति भावः ।**

'ಕಥಂ ನು ತದ್ವಿಜಾನೀಯಾಮ್' ಎಂಬ ವಾಕ್ಯಶೇಷದಲ್ಲಿ 'ತಂ' 'ತಸ್ಯ' 'ತತ್ರ' ಎಂಬಲ್ಲಿರುವ 'ತತ್' ಶಬ್ದಗಳಿಂದ ಆನುಕೂಲ್ಯೇನ ಗೃಹ್ಯಮಾಣನನ್ನು ಪರಾಮರ್ಶ ಮಾಡಿ, 'ಸೂರ್ಯಾದಿ ತೇಜೋನಿಯಾಮಕತ್ವ', 'ಸರ್ವಪ್ರಕಾಶಕತ್ವ', 'ಸೂರ್ಯಾದ್ಯಪ್ರಕಾಶ್ಯತ್ವ' ಎಂಬ ನಿರವಕಾಶವಾದ ಮೂರು ಲಿಂಗವನ್ನು ಹೇಳಿರುವುದರಿಂದ, ಆನುಕೂಲ್ಯೇನ ಗೃಹಮಾಣನಾದವನು ಬ್ರಹ್ಮನೇ ಆಗಿದ್ದಾನೆಂದು ಅಭಿಪ್ರಾಯ.

**अनुभानादिति वाच्ये अनुकृतेरित्युक्तिः सूर्यादिकृतमन्यदपि तपनादीशाधीनमिति दर्शयितुमित्युक्तं तत्त्वप्रदीपादौ । ''तापनी पाचनी चैव'' इत्यादिस्मृतेः । श्रुतौ सूर्याद्यप्रकाश्यत्वस्यादित्वेऽप्यनुकृत्युक्तिः तमिति पुल्लिङ्गत्वात् कथं ''कथं नु तत्'' इत्युक्तं तमित्यादिना परामृश्यत इति पूर्वपक्षमूलत्वाद्वा, क्रियान्तरमपि तदधीनमिति ज्ञापयितुं वेति ।**

'ಅನುಭಾನಾತ್' ಎಂದೇ ಸೂತ್ರದಲ್ಲಿ ಹೇಳಬೇಕಿತ್ತು. ಆದರೆ 'ಅನುಕೃತೇಃ' ಎಂದು ಹೇಳಿದ್ದರಿಂದ ಸೂರ್ಯಾದಿಗಳ ತಾಪನೀ, ಪಾಚನೀ ಮೊದಲಾದ ಸ್ಮೃತಿಗಳೆಲ್ಲವೂ ಭಗವದಧೀನವಾಗಿವೆಯೆಂದು

ತಿಳಿಸಲಾಗಿದೆ. 'ತಾಪನೀ', 'ಪಾಚನೀ' ಇತ್ಯಾದಿ ಸ್ಮೃತಿಗಳೇ ಈ ವಿಷಯದಲ್ಲಿ ಆಧಾರವೆಂದು ತತ್ವಪ್ರದೀಪಾದಿ ಗ್ರಂಥಗಳಲ್ಲಿ ಹೇಳಲಾಗಿದೆ. ಶ್ರುತಿಯಲ್ಲಿ ಸೂರ್ಯಾದ್ಯಪ್ರಕಾಶ್ಯತ್ವವನ್ನು ಹೇಳಲಾಗಿದೆ. ಅದಕ್ಕನುಸಾರಿಯಾಗಿ ಹೇಳದೆ, 'ಅನುಕೃತೇಃ' ಎಂದು ಏಕೆ ಹೇಳಿದ್ದಾರೆಂದರೆ, 'ತಮ್' ಎಂಬ ಪದವು ಪುಲ್ಲಿಂಗದಲ್ಲಿರುವುದರಿಂದ 'ಕಥಂ ನು ತದ್ವಿಜಾನೀಯಾಮ್' ಎಂದು ಹೇಳಿರುವುದನ್ನು ಪರಾಮರ್ಶ ಮಾಡಲು ಹೇಗೆ ಸಾಧ್ಯ ? ಎಂಬ ಪೂರ್ವಪಕ್ಷಕ್ಕೆ ಮೂಲವಾದ್ದರಿಂದ, ಅಥವಾ ಬೇರೆ ಕ್ರಿಯೆಗಳೂ ಕೂಡ ಭಗವದಧೀನವಾಗಿವೆಯೆಂಬುದನ್ನು ತಿಳಿಸುವ ಉದ್ದೇಶದಿಂದ.

अत एव "किमु भाति" इत्युक्तदुर्ज्ञेयस्य "न तत्र सूर्यो भाति" इति प्रत्यभिज्ञानात् सन्निहितपरामर्शिप्रातिपदिकप्राबल्याच्च तदेव परामृश्यत इति वक्तुं तस्यानुकृतेरित्याह । अन्यथाऽनुकृतेरित्येवावक्ष्यत् ॥

ಆದ್ದರಿಂದ ಶ್ರುತಿಯಲ್ಲಿ ಸೂರ್ಯಾದ್ಯಪ್ರಕಾಶ್ಯತ್ವವನ್ನು ಮೊದಲು ಹೇಳಿದ್ದರೂ ಸೂತ್ರದಲ್ಲಿ ಅನುಕೃತಿಯನ್ನು ಹೇಳಲಾಗಿದೆ. ಪುಲ್ಲಿಂಗದಲ್ಲಿರುವ 'ತತ್' ಶಬ್ದದಿಂದ 'ಕಥಂ ನು ತತ್' ಎಂಬಲ್ಲಿ ನಪುಂಸಕಲಿಂಗದ 'ತತ್' ಶಬ್ದದಿಂದ ಪರಾಮರ್ಶಿಸುವುದು ಯುಕ್ತವಾದ್ದರಿಂದಲೇ 'ಕಿಮು ಭಾತಿ' ಎಂಬಲ್ಲಿ ಹೇಳಿರುವ ದುರ್ಜ್ಞೇಯತ್ವವನ್ನು 'ನ ತತ್ರ ಸೂರ್ಯೋಭಾತಿ' ಎಂಬಲ್ಲಿ ಪ್ರತ್ಯಭಿಜ್ಞಾ ಮಾಡಬೇಕಾದ್ದರಿಂದ ಅಷ್ಟೇ ಅಲ್ಲದೆ ಸನ್ನಿಹಿತವಾದದ್ದನ್ನು ಪರಾಮರ್ಶ ಮಾಡುವ ಪ್ರಾತಿಪದಿಕದ ಬಲದಿಂದಲೂ ಆನುಕೂಲ್ಯೇನ ಗೃಹ್ಯಮಾಣನಾದವನೇ 'ತಮ್' ಎಂಬುದರಿಂದ ಪರಾಮರ್ಶಮಾಡಲು ಅರ್ಹನಾಗಿದ್ದಾನೆ. ಇದನ್ನು ಹೇಳಲು ಸೂತ್ರದಲ್ಲಿ 'ತಸ್ಯಾನುಕೃತೇಃ' ಎಂದೇ ಹೇಳಿದ್ದಾರೆ. ಇಲ್ಲದಿದ್ದರೆ 'ಅನುಕೃತೇಃ' ಎಂದಷ್ಟೇ ಹೇಳುತ್ತಿದ್ದರು.

पूर्वोक्तलिङ्गत्रयस्य वैष्णवत्वं श्रुतिस्मृतिभ्यामाह -

**॥ ॐ अपि स्मर्यते ॐ ॥ १-३-२३**

अपिः श्रूयत इति समुच्चिनोति । "अहं तत्तेजो रश्मीत्" इत्यत्र तेज इति सर्वप्रकाशकत्वं रश्मीदिति सूर्यादितेजोनियन्तृत्वं श्रूयते ।

ಹಿಂದೆ ಹೇಳಿದ ಮೂರು ಲಿಂಗಗಳು ವಿಷ್ಣುವಿನಲ್ಲಿ ಮಾತ್ರ ಬರುತ್ತವೆಂಬುದನ್ನು ಶ್ರುತಿ-ಸ್ಮೃತಿಗಳ ಆಧಾರದಿಂದ ಸಮರ್ಥಿಸುತ್ತಿದ್ದಾರೆ 'ಓಂ ಅಪಿಸ್ಮರ್ಯತೇ ಓಂ'. 'ಅಪಿ' ಶಬ್ದವು 'ಶ್ರೂಯತೇ' ಎಂಬ ಪದವನ್ನು ಸಮುಚ್ಚಯ ಮಾಡುತ್ತಿದೆ. 'ಅಹಂ ತತ್ತೇಜೋ ರಶ್ಮೀತ್' ಎಂಬ ಶ್ರುತಿಯಲ್ಲಿ 'ತೇಜಸ್' ಶಬ್ದದಿಂದ ಸೂರ್ಯಪ್ರಕಾಶಕತ್ವವು 'ರಶ್ಮೀತ್' ಎಂಬುದರಿಂದ ಸೂರ್ಯಾದಿತೇಜೋನಿಯಾಮಕತ್ವವು ನಾರಾಯಣನಲ್ಲಿ ಶ್ರುತವಾಗಿದೆ.

ಅನುಕೃತ್ಯಧಿಕರಣ (೧-೩-೬)

''यदादित्यगतं तेजः'' इति स्मृतौ ''मामकम्'' इत्यनेन तद्द्वयं स्मर्यते । मामकं मदधीनं मदीयश्चेत्यर्थात् । ''न तद्भासयते सूर्यः'' इति तृतीयं स्मर्यत इत्यर्थः ।

'ಯದಾದಿತ್ಯಗತಂ ತೇಜಃ' ಎಂಬ ಸ್ಮೃತಿಯಲ್ಲಿ 'ಮಾಮಕಮ್' ಎಂಬುದರಿಂದ ಈ ಎರಡು ಲಿಂಗಗಳು ಹೇಳಲ್ಪಟ್ಟಿವೆ. 'ಮಾಮಕಮ್' ಎಂಬ ಪದಕ್ಕೆ 'ನನ್ನ ಅಧೀನವಾಗಿವೆ' ಮತ್ತು 'ನನ್ನ ಸಂಬಂಧಿಯಾಗಿದೆ' ಎಂದು ಎರಡರ್ಥ. 'ನ ತದ್ಭಾಸೇತಿ ಸೂರ್ಯಃ' ಎಂಬ ಶ್ರುತಿಯಿಂದ ಮೂರನೆಯ ಲಿಂಗವು ಸಿದ್ಧವಾಗಿದೆ.

यद्वा यथाटीकं सूत्रद्वयं लिङ्गद्वयपरम् । स्मृताविव श्रुतौ विवक्षितार्थस्यास्फुटत्वात् सा अपिना समुचिता । स्मृतिस्तु स्वशब्दोक्ता ।

ಅಥವಾ ತತ್ವಪ್ರಕಾಶಿಕೆಗೆ ಅನುಸಾರಿಯಾಗಿ ಎರಡು ಸೂತ್ರಗಳು ಎರಡು ಲಿಂಗಗಳನ್ನು ಸಮರ್ಥಿಸಲು ಹೊರಟಿವೆ. ಸ್ಮೃತಿಯಲ್ಲಿ ಹೇಗೆ ಸ್ಪಷ್ಟವಾಗಿ ಅರ್ಥವು ತಿಳಿಯುತ್ತಿದೆಯೋ, ಅದರಂತೆ ಶ್ರುತಿಯಲ್ಲಿ ಸ್ಪಷ್ಟವಾಗಿ ತಿಳಿಯುತ್ತಿಲ್ಲ. ಆದ್ದರಿಂದಲೇ ಸ್ಮೃತಿಯನ್ನು ಕಂಠತಃ ಹೇಳಿ, 'ಅಪಿ' ಶಬ್ದದಿಂದ ಶ್ರುತಿಯನ್ನು ಸಮುಚ್ಚಯ ಮಾಡಲಾಗಿದೆ.

यद्वा पूर्वत्र चशब्दोऽनुकृतेस्तस्येत्युक्तसर्वप्रकाशकत्वाच्चेति हेतुद्वयसमुच्चये । अत्रापि हेत्वन्तरसमुच्चये । ''न तद्भासयते'' इति सूर्याद्यप्रकाश्यत्वं विष्णोः स्मर्यते । अतोऽप्यानुकूल्येन गृह्यमाणं ब्रह्मैवेत्यस्य वृत्त्यन्तरं बोध्यम् ॥६॥

ಅಥವಾ ಹಿಂದಿನ ಸೂತ್ರದಲ್ಲಿ 'ಚ' ಶಬ್ದವು ಅನುಕೃತಿಯಿಂದ ಮತ್ತು 'ತಸ್ಯ' ಎಂಬಲ್ಲಿ ಹೇಳಿರುವ ಸರ್ವಪ್ರಕಾಶಕತ್ವದಿಂದ ಎಂದು ಎರಡು ಹೇತುಗಳನ್ನು ಸಮುಚ್ಚಯ ಮಾಡುತ್ತಿದೆ. ಎರಡನೆಯ ಸೂತ್ರದಲ್ಲಿಯೂ 'ಅಪಿ' ಶಬ್ದವು ಸೂರ್ಯಾದ್ಯಪ್ರಕಾಶಕತ್ವ ಎಂಬ ಮತ್ತೊಂದು ಹೇತುವನ್ನು ಸಮುಚ್ಚಯ ಮಾಡುತ್ತಿದೆ. 'ನ ತದ್ಭಾಸಯತೇ' ಎಂಬ ಸ್ಮೃತಿಯಿಂದ ಸಿದ್ಧವಾದ ಸೂರ್ಯಾದ್ಯಪ್ರಕಾಶ್ಯತ್ವವು ವಿಷ್ಣುವಿನಲ್ಲಿದೆಯೆಂದು ಸಿದ್ಧವಾಗಿದೆ. ಆದ್ದರಿಂದಲೂ ಆನುಕೂಲ್ಯೇನ ಗೃಹ್ಯಮಾಣನು ಬ್ರಹ್ಮನೇ ಆಗಿದ್ದಾನೆಂದು ಮತ್ತೊಂದು ಬಗೆಯ ವ್ಯಾಖ್ಯಾನವನ್ನು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅನುಕೃತ್ಯಧಿಕರಣವು ಸಮಾಪ್ತವಾಯಿತು.

ಪರಿಪೂರ್ಣಚಂದ್ರಿಕಾ

श्री राघवेन्द्रतीर्थविरचिता

# श्रीन्यायमुक्तावलिः

## अनुकृत्यधिकरणम् (१।३।६)

।। ॐ अनुकृतेस्तस्य च ॐ ।।६।।

।। ॐ अपि स्मर्यते ॐ ।।

पूर्वत्र एष आत्मेत्येतच्छब्दस्य ज्योतिःशब्दितब्रह्मपरामर्शित्वेऽपि विधेयात्मापेक्षया पुंस्त्वं युक्तम् । इह तु तदेतदितिशब्दयोर्द्वयोः प्राक्तनेशपरत्वे क्लीबत्वमयुक्तमिति पूर्ववैषम्येण शङ्कनात्सङ्गतिः ।

ಹಿಂದಿನ ಅಧಿಕರಣದಲ್ಲಿ 'ಏಷ ಆತ್ಮಾ' ಎಂಬಲ್ಲಿರುವ 'ಏತತ್' ಶಬ್ದದಿಂದ ಜ್ಯೋತಿಸ್ ಶಬ್ದಪ್ರತಿಪಾದ್ಯನಾದ ಬ್ರಹ್ಮನನ್ನು ಪರಾಮರ್ಶ ಮಾಡಿದರೂ, ವಿಧೇಯವಾದ ಆತ್ಮಶಬ್ದದ ಅಪೇಕ್ಷೆಯಿರುವುದರಿಂದ ಪುಂಸ್ತ್ವವನ್ನು ಹೇಳಬಹುದು. ಆದರೆ ಪ್ರಕೃತ 'ತತ್' 'ಏತತ್' ಎಂಬೆರಡು ಶಬ್ದಗಳು ಈಶ್ವರನನ್ನು ಪರಾಮರ್ಶ ಮಾಡುವುದಾದರೆ, ನಪುಂಸಕಲಿಂಗವು ಅಯುಕ್ತವಾಗುತ್ತದೆ. ಹೀಗೆ ಹಿಂದಿನ ಅಧಿಕರಣದ ವೈಷಮ್ಯವನ್ನು ತೋರಿಸುವ ಮೂಲಕ ಪೂರ್ವಪಕ್ಷ ಮಾಡುತ್ತಿರುವುದರಿಂದ ಸಂಗತಿಯನ್ನು ತಿಳಿಯಬೇಕು.

काठके ''तदेतदिति मन्यन्तेऽनिर्देश्यं परमं सुखम् । कथं नु तद्विजानीयां किमु भाति न भाति वा'' इति (का. २-२-१२, १४) श्रुतं ज्ञानार्थतप्रार्थित्वरूपं आनुकूल्येन गृह्यमाणत्वं किं ज्ञानिसुखस्य उत विष्णोरिति सन्देहः ।।

ಕಾಠಕೋಪನಿಷತ್ತಿನಲ್ಲಿ 'ತದೇತದಿತಿ ಮನ್ಯಂತೇऽನಿರ್ದೇಶ್ಯಂ ಪರಮಂ ಸುಖಮ್' 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂದು ಹೇಳಲಾಗಿದೆ. ಇಲ್ಲಿ ಶ್ರುತವಾದ ಜ್ಞಾನಕ್ಕೋಸ್ಕರ ಪ್ರಾರ್ಥಿತತ್ವವೆಂಬ ಆನುಕೂಲ್ಯೇನ ಗೃಹ್ಯಮಾಣತ್ವವೆಂಬ ಲಿಂಗವು ಜ್ಞಾನಿಸುಖದಲ್ಲಿದೆಯೋ? ವಿಷ್ಣುವಿನಲ್ಲೋ ? ಎಂದು ಸಂದೇಹ.

पूर्वपक्षस्तु ।। ''तद्विजानीयाम्'' इति तच्छब्दस्य पूर्वार्धोक्तसुखपरामर्शात् तस्य च ''तमात्मस्थं येऽनुपश्यन्ति धीरास्तेषां सुखं शाश्वतं नेतरेषाम्'' इति पूर्वत्र प्रकृतसन्निहितज्ञानिसुखपरामर्शितदेतच्छब्दबलेन प्रत्यभिज्ञाज्ञापकसुखपदेन च

ज्ञानिसुखत्वात् ''एको वशी'' (का. २-२-१२) इत्यादिना ईशस्य प्रकृतत्वेऽपि व्यवधानात् द्वयोर्नपुंसकत्वायोगाच्च ज्ञानिसुखस्यैवेति ।।

ಪೂರ್ವಪಕ್ಷ ಹೀಗಿದೆ - 'ತದ್ವಿಜಾನೀಯಾಮ್' ಎಂಬಲ್ಲಿ 'ತತ್' ಶಬ್ದದಿಂದ ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಸುಖವನ್ನು ಪರಾಮರ್ಶ ಮಾಡಬೇಕಾದ್ದರಿಂದ, ಅಂತಹ ಸುಖವು 'ತಮಾತ್ಮಸ್ಥಂ ಯೇऽನುಪಶ್ಯಂತಿ ಧೀರಾಃ ತೇಷಾಂ ಸುಖಮ್ ಶಾಶ್ವತಂ ನೇತರೇಷಾಮ್' ಎಂಬುದಾಗಿ ಹಿಂದೆ ಪ್ರಕೃತವಾದ ಸನ್ನಿಹಿತವಾದ ಜ್ಞಾನಿಸುಖವನ್ನೇ ಹೇಳುತ್ತದೆ. ಅದನ್ನೇ 'ತತ್' ಮತ್ತು 'ಏತತ್' ಶಬ್ದಗಳಿಂದ ಪ್ರತ್ಯಭಿಜ್ಞಾ ಮಾಡಬೇಕು. ಈ ಪ್ರತ್ಯಭಿಜ್ಞೆಗೆ ಜ್ಞಾಪಕವಾದ ಸುಖಪದದಿಂದ ಜ್ಞಾನಿಸುಖವನ್ನೇ ವಿವಕ್ಷಿಸಬೇಕು. 'ಏಕೋ ವಶೀ' ಇತ್ಯಾದಿ ಕಾಠಕೋಪನಿಷತ್ತಿನಲ್ಲಿ ಈಶ್ವರನು ಪ್ರಕೃತನಾಗಿದ್ದರೂ ವ್ಯವಹಿತನಾದ್ದರಿಂದ ಮತ್ತು ಎರಡು ಶಬ್ದಗಳಿಗೆ ನಪುಂಸಕತ್ವವು ಅಯುಕ್ತವಾದ್ದರಿಂದಲೂ ಈಶ್ವರನನ್ನು ಪರಾಮರ್ಶಿಸಲು ಬರುವುದಿಲ್ಲ. ಜ್ಞಾನಿಸುಖವನ್ನೇ ಪರಾಮರ್ಶಿಸಬೇಕು. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೇ ಆಗಿದೆಯೆಂದು ಪೂರ್ವಪಕ್ಷ.

सिद्धान्तस्तु ।। ''न तत्र सूर्यो भाति'' इति ''तमेव भान्तमनुभाति सर्वम्'' इति ''तस्य भासा सर्वमिदं विभाति'' इतिच (का. २-२-१५) श्रुतानां सूर्याद्यप्रकाश्यत्व सूर्यादिप्रकाशनहेतुत्व सर्वजगत्प्रकाशकत्वानां लिङ्गानां ''न तद्भासयते सूर्यः'' (भ.गी. १५-६) ''अहं तत्तेजो रश्मीत्'' (चतुर्वेदशिखा) ''यदादित्यगतं तेजः'' (भ.गी. १५-१२) इत्यादिवचनैः ईशैकनिष्ठत्वात् ।

ಸಿದ್ಧಾಂತ ಹೀಗಿದೆ - 'ನ ತತ್ರ ಸೂರ್ಯೋ ಭಾತಿ' 'ತಮೇವ ಭಾಂತಮನುಭಾತಿ ಸರ್ವಮ್' 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಈ ಮೂರು ಕಾಠಕೋಪನಿಷತ್ತಿನ ವಾಕ್ಯಗಳಲ್ಲಿ 'ಸೂರ್ಯಾದ್ಯಪ್ರಕಾಶಕತ್ವ', 'ಸೂರ್ಯಾದಿಪ್ರಕಾಶನಹೇತುತ್ವ', 'ಸರ್ವಜಗತ್‌ಪ್ರಕಾಶಕತ್ವ' ಎಂಬ ಲಿಂಗಗಳು ಶ್ರುತವಾಗಿವೆ. ಇವುಗಳು 'ನ ತದ್ಭಾಸಯತೇ ಸೂರ್ಯಃ,' 'ಅಹಂ ತತ್ತೇಜೋ ರಶ್ಮೀತ್', 'ಯದಾದಿತ್ಯಗತಂ ತೇಜಃ' ಇತ್ಯಾದಿ ಶ್ರುತಿ-ಸ್ಮೃತಿಗಳಿಂದ ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ಸಿದ್ಧವಾಗಿವೆ.

तत्रेत्यादेः सन्निहित ''तद्विजानीयाम्'' इत्येतत्परामर्शित्वस्वारस्यात् ''तदेतद्' इत्यत्र ईशपरामर्शित्वेऽपि गृह्णन्ति विज्ञानार्थं प्रार्थयन्त इति यावत्, तदनिर्देश्यं सुखं एतत् प्रस्तुतात्मरूपं इति योजनायां तदेतच्छब्दयोरपि क्लीबतोपपत्तेः ।

'ತತ್ರ' ಇತ್ಯಾದಿಗಳಲ್ಲಿ ಸನ್ನಿಹಿತವಾದ 'ತದ್ವಿಜಾನೀಯಾಮ್' ಎಂಬುದನ್ನು ಪರಾಮರ್ಶ ಮಾಡುವುದೇ ಸ್ವರಸವಾಗುತ್ತದೆ. 'ತದೇತತ್' ಎಂಬಲ್ಲಿ ಈಶ್ವರನನ್ನು ಪರಾಮರ್ಶ ಮಾಡಿದರೂ, 'ಏತತ್' ಶಬ್ದದಿಂದ 'ಅನಿರ್ದೇಶ್ಯಂ ಪರಮ್ ಸುಖಮ್ ಕಥಂ ನು ತದ್ವಿಜಾನೀಯಾಮ್' ಎಂಬಲ್ಲಿ

ಆನುಕೂಲ್ಯೇನ ಗೃಹ್ಯಮಾಣನಾದವನು ಅಂದರೆ ಜ್ಞಾನಕ್ಕೋಸ್ಕರ ಪ್ರಾರ್ಥನೆಗೆ ಅರ್ಹನಾದವನು ಪರಮಾತ್ಮನೇ ಆಗಿರುತ್ತಾನೆ. ಅಂತಹ ಅನಿರ್ದೇಶ್ಯವಾದ ಪರಮಾತ್ಮನ ಸ್ವರೂಪವಾಗಿದೆಯೆಂದು ಯೋಜನೆ ಮಾಡಬೇಕು. ಹೀಗೆ ಪರಮಾತ್ಮನ ಸುಖರೂಪವನ್ನು ಯೋಜನೆ ಮಾಡಿದಾಗ 'ತತ್' ಮತ್ತು 'ಏತತ್' ಶಬ್ದಗಳ ನಪುಂಸಕತ್ವವೂ ಕೂಡ ಯುಕ್ತವಾಗುತ್ತದೆ.

चेतनश्चेतनानामिति ईशस्यापि सन्निधानेन प्रकृतत्वादीशस्यैवेति ॥

'ಚೇತನಶ್ಚೇತನಾನಾಮ್' ಎಂಬುದಾಗಿ ಈಶ್ವರನೂ ಕೂಡ ಸನ್ನಿಹಿತನಾಗಿ ಪ್ರಕೃತನಾದ್ದರಿಂದ ಅವನೇ ಇಲ್ಲಿ ಪ್ರತಿಪಾದ್ಯನು.

फलं तु अनिर्देश्यमित्यादिनोक्तादृश्यत्वमुखेन अदृश्यत्वनयाक्षेपस्तत्समाधिश्च ॥६॥

'ಅನಿರ್ದೇಶ್ಯಮ್' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಅನಿರ್ದೇಶ್ಯತ್ವವು ಜ್ಞಾನಿಸುಖದಲ್ಲಿ ಬರುತ್ತದೆಂದು ಆಕ್ಷೇಪ ಮಾಡಿದ್ದರಿಂದ ಅದೃಶ್ಯತ್ವಾಧಿಕರಣದ ಪ್ರಮೇಯವು ಕೂಡುವುದಿಲ್ಲವೆಂಬುದೇ ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಅನುಕೃತ್ಯಧಿಕರಣವು ಸಮಾಪ್ತವಾಯಿತು.

# सूत्रार्थरत्नावलिः

## अनुकृत्यधिकरणम् (१।३।६)

ॐ ॥ अनुकृतेस्तस्य च ॥ ॐ ॥२२॥

अत्रानुकूल्येन गृह्यमाणत्वं लिङ्गं ब्रह्मणि समन्वीयते ।

ननु ज्ञानिसुखस्यैव आनुकूल्येन गृह्यमाणत्वं भवेत् । 'परमं सुखम्' (कठ.५।१३,१४) इति सुखश्रुतेः । तेषां सुखम् इति ज्ञानिसुखस्यैव प्रकृतत्वात् । तस्यैव तच्छब्देन परामर्शस्य युक्तत्वात् । नच वाच्यं भगवतोऽपि प्रकृतत्वात् तत्परामर्शोऽयमिति । तस्य नपुंसकशब्देनाप्रकृतस्य तदित्यादिपरामर्शायोगात् । सम्भवत्समीपपरामर्शं विहाय दूरस्थपरामर्शग्रहणे कारणाभावादिति प्राप्ते, सूत्रितम् –

ॐ।। अनुकृतेस्तस्य चेति ।। अस्यार्थः – चः समुच्चये । 'तस्य' इति श्रुतिप्रतीकग्रहणम् । अनुकृतिः अनुक्रिया । तथाच 'कथं नु तद्विजानीयाम्' (कठ. ५।१४) इति ज्ञानार्थं प्रार्थितत्वरूपानुकूल्येन गृह्यमाणं ब्रह्मैव । कुतः? अनुकृतेः = 'तमेव भान्तमनुभाति सर्वम्' (कठ. २।५।१५) वाक्यशेषे सूर्यादीनां भगवत्क्रियानुसारिप्रकाशाख्यक्रियाकर्तृत्वश्रवणात् । 'तस्य भासा सर्वमिदं विभाति' (कृ.२।५।१५) जगतः परमात्मप्रभाप्रकाशत्व श्रुतेरित्यर्थः ।।

एवञ्च 'तमेव भान्तम्' इति सूर्यादितेजसां विष्ण्वधीनत्वश्रवणात् । 'तस्य भासा' इति सर्वजगत्प्रकाशकत्वोक्तेश्च । 'अहं तत्तेजः' (चतुर्वेदशिखायां) इति श्रुत्या, 'यदादित्यगतम्' (भ.गी. १५।१२) स्मृत्या च तल्लिङ्गद्वयस्य विष्णुलिङ्गत्वावगतेः नच सुखश्रुतिविरोधः । 'परमं सुखम्' इति सुखश्रुतेरपि तत्परत्वात् । 'चेतनश्चेतनानाम्' इति परमात्मनोऽपि प्रकृतत्वात् । यदनिर्देश्यं परमं सुखं कथं नु तद्विजानीयाम् इत्यानुकूल्येन गृह्णन्ति । तदनिर्देश्यं सुखमेतत्प्रकृत-परमात्मनो रूपमिति मन्यन्त इति वाक्ययोजनया परमात्मनः परामर्शोपपत्तेः । सूर्यादिप्रकाश-नियामकत्वादीनां लिङ्गानामन्यत्रानवकाशेन दूरस्थ परामर्शस्यैव न्याय्यत्वात् । ततश्चानुकूल्येन गृह्यमाणो विष्णुरेवेति सिद्धम् ।।*।।

**ॐ।। अपि स्मर्यते ।।ॐ ।। २३।।**

यदेतल्लिङ्गद्वयस्य विष्णुनिष्ठत्वम् 'अहम्'(चतुर्वेदशिखायां) इति श्रुत्योपपादितं तत्स्मृत्याऽप्युपपादयत्सूत्रमुपन्यस्यति –

ॐ।। अपि स्मर्यत इति ।। अस्यार्थः – न केवलं हेतुकृतानुकृत्वादेर्विष्णुधर्मत्वं श्रूयते, किन्तु कृष्णादिभिः 'यदादित्यगतं तेजः' (भ.गी. १५।१२) इत्यादिस्मृत्यादिषूच्यत इत्यर्थः ।

एवञ्च 'यदादित्यगतं तेजः' इत्यादिस्मृत्युक्तत्वेनापि विष्णुधर्मत्वश्रवणादानुकूल्येन गृह्यमाणं ब्रह्मैवेति सिद्धम् ।।*।।

।। इति सूत्रार्थरत्नावळ्यां अनुकृत्यधिकरणम् ।।

॥ ಪರಿಪೂರ್ಣಚಂದ್ರಿಕೆಯಲ್ಲಿ ಅನುಕೃತ್ಯಧಿಕರಣವು ಮುಗಿಯಿತು ॥

॥ ಶ್ರೀಮದ್ಧ್ವೇಶಾರ್ಪಣಮಸ್ತು ॥

ಪರಿಪೂರ್ಣಚಂದ್ರಿಕಾ

# ವಾಮನಾಧಿಕರಣ

(೧-೩-೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

|| ಶ್ರೀಗುರುಭ್ಯೋ ನಮಃ ||

# ವಾಮನಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ವಾಮನಶಬ್ದದಿಂದ ಈಶಾನ ಶಬ್ದದ ಸಮನ್ವಯ

**।। अथ वामनाधिकरणम् ।।**

**स – ॐ ।। शब्दादेव प्रमितः ॐ ।। २४ ।।**

ಸೂತ್ರಾರ್ಥ - 'ಈಶಾನೋ ಭೂತಭವ್ಯಸ್ಯ' ಎಂಬ ಕಾಠಕ ಶ್ರುತಿಯಲ್ಲಿ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ ಹೊರತು ವಾಯುದೇವರಲ್ಲ. ಏಕೆಂದರೆ 'ಮಧ್ಯೇ ವಾಮನಮ್' ಇತ್ಯಾದಿಯಾದ ನಿರವಕಾಶ ವಾಮನಶ್ರುತಿ ಇರುವುದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सत्रदीपिका –** ॐ शब्दादेव प्रमितः ॐ ।। विष्णुरेव ''ईशानो भूतभव्यस्य'' (कठ. २-१-१२.) इति ईशानशब्दवाच्यत्वेन प्रमितः । तत्त्वतो निश्चितः। नतु वायुः । कुतः? शब्दादेव ''मध्ये वामनम्'' (कठ. २-२-३.) इति निरवकाशवामनश्रुतेरेवेत्यर्थः ।।१।।

ಪರಿಪೂರ್ಣಚಂದ್ರಿಕಾ

ಅರ್ಥ -- ಪ್ರಮಿತಃ = 'ಈಶಾನೋ ಭೂತಭವ್ಯಸ್ಯ' ಎಂಬ ಕಾಠಕದಲ್ಲಿರುವ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಪ್ರಮಾಣ ಸಿದ್ಧವಾಗಿದೆ. ಹೊರತು ವಾಯುದೇವರಲ್ಲ. ಏಕೆಂದರೆ ಶಬ್ದಾದೇವ = 'ಮಧ್ಯೇ ವಾಮನಂ' ಎಂಬುದಾಗಿ ಮುಂದಿನ ಶ್ರುತಿಯಲ್ಲಿ ನಿರವಕಾಶವಾದ ವಾಮನಶ್ರುತಿ ಇರುವುದರಿಂದ. ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಹೃದಯದಲ್ಲಿರುವ ಅವಕಾಶ ಕೇವಲ ಅಂಗುಷ್ಠದಷ್ಟು. ಈ ದೃಷ್ಟಿಯಿಂದಲೇ ವಿಷ್ಣುವಿಗೆ ಅಂಗುಷ್ಠಪರಿಮಾಣವು ಹೇಳಲ್ಪಟ್ಟಿದೆ. ಅಂಗುಷ್ಠಮಾತ್ರ ಉಪಾಸನೆ ಎಂಬ ವಿದ್ಯೆಗೆ ಅಧಿಕಾರಿಗಳಾದವರು ಮನುಷ್ಯರು ಮಾತ್ರ, ಆದ್ದರಿಂದ ಪಶುಗಳಿಗೆ ಅಂಗುಷ್ಠಪರಿಮಾಣವಿಲ್ಲದಿದ್ದರೂ ಬಾಧಕ ವಿಲ್ಲ.

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् – विष्णुरेव जिज्ञास्य इत्युक्तम् । तत्र**
**'ऊर्ध्वं प्राणमुन्नयत्यपानं प्रत्यगस्यति ।**
**मध्ये वामनमासीनं विश्वेदेवा उपासते ॥' (कठ.५.३)**
**इति सर्वदेवोपास्यः कश्चित् प्रतीयते ।**

ಅನುವಾದ - ಈ ಅಧಿಕರಣದಲ್ಲಿ 'ಈಶಾನ' ಎಂಬ ಶಬ್ದದ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುತ್ತಿದ್ದಾರೆ. ॥ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ॥ ಎಂಬ ಮೊದಲನೆಯ ಸೂತ್ರದಲ್ಲಿ ವಿಷ್ಣುವನ್ನೇ ಜಿಜ್ಞಾಸೆ ಮಾಡಬೇಕೆಂದು ಸಾಧಿಸಲಾಯಿತು. ಆದರೆ ಕಾಠಕಶ್ರುತಿಯಲ್ಲಿ 'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ವಾಕ್ಯಗಳಿಂದ ಮತ್ತೊಬ್ಬನಲ್ಲಿ ಜಿಜ್ಞಾಸ್ಯತ್ವವನ್ನು ಹೇಳಲಾಗಿದೆ. ಯಾವಾತನು ಪ್ರಾಣನನ್ನು ಮೇಲಕ್ಕೆ ತರುತ್ತಾನೋ, ಅಪಾನವಾಯುವನ್ನು ಕೆಳಗೆ ತಳ್ಳುತ್ತಾನೋ, ಹೃದಯಮಧ್ಯದಲ್ಲಿ ನೆಲೆಸಿರುವ ಇಂತಹ ಸುಂದರನನ್ನು ಸಮಸ್ತ ದೇವತೆಗಳೂ ಉಪಾಸನೆ ಮಾಡುತ್ತಾರೆ ಎಂಬುದಾಗಿ 'ಸರ್ವದೇವೋಪಾಸ್ಯತ್ವ' ಎಂಬ ಧರ್ಮವನ್ನು ಹೊಂದಿರುವ ಮತ್ತೊಬ್ಬ ಯಾವುದೋ ವ್ಯಕ್ತಿಯಲ್ಲಿ ಜಿಜ್ಞಾಸ್ಯತ್ವವು ಶ್ರುತವಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ, 'ಈಶಾನ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲಾಗಿದೆ. ಶ್ರುತ್ಯಾದಿಸಂಗತಿ, ವಿಷಯ, ಸಂಶಯಗಳನ್ನು ಮೊದಲು ತೋರಿಸುತ್ತಿದ್ದಾರೆ.

ವಿಷ್ಣುರೇವ = ವಿಷ್ಣುವೇ, ಜಿಜ್ಞಾಸ್ಯಃ = ಜಿಜ್ಞಾಸೆಗೆ ವಿಷಯನಾಗಿದ್ದಾನೆ, ಇತಿ = ಹೀಗೆ, ಉಕ್ತಂ = ಜಿಜ್ಞಾಸಾಧಿಕರಣದಲ್ಲಿ ಹೇಳಲಾಯಿತು, ತತ್ರ = ಆ ಜಿಜ್ಞಾಸಾವಿಷಯದಲ್ಲಿ, ಕಾಠಕವು, ಪ್ರಾಣಮ್ = ಪ್ರಾಣನನ್ನು, ಊರ್ಧ್ವಮ್ = ಮೇಲ್ಮುಖವಾಗಿ, ಉನ್ನಯತಿ = ತರುತ್ತಾನೆ, ಅಪಾನಂ = ಅಪಾನವಾಯುವನ್ನು, ಪ್ರತ್ಯಗಸ್ಯತಿ = ಕೆಳಮುಖನನ್ನಾಗಿ ನಿಯಂತ್ರಿಸುತ್ತಾನೆ, ಮಧ್ಯೇ = ಹೃದಯ ಮಧ್ಯದಲ್ಲಿದ್ದು, ಆಸೀನಮ್ = ಕುಳಿತಿರುವ, ವಾಮನಂ = ಸುಂದರನಾದ ಇವನನ್ನು, ವಿಶ್ವೇದೇವಾಃ = ಸಮಸ್ತದೇವತೆಗಳು, ಉಪಾಸತೇ

= ಉಪಾಸಿಸುತ್ತಾರೆ, ಇತಿ = ಹೀಗೆ, ಸರ್ವದೇವೋಪಾಸ್ಯಃ = ಸಕಲದೇವತೆಗಳಿಂದ ಉಪಾಸ್ಯನಾದವನು, ಕಶ್ಚಿತ್ = ಒಬ್ಬ, ಪ್ರತೀಯತೇ = ತೋರುತ್ತಿದ್ದಾನೆ.(೧)

**ಭಾಷ್ಯಮ್ – स च 'एवमेवैष प्राण इतरान् प्राणान् पृथक् पृथमेव सन्निधत्ते' (प्रश्न. ३४.) 'योऽयं मध्यमः प्राणः' (बृ. ३-५-२१.) 'कुविदङ्ग' (ऋ. ७-९-११.) इत्यादिना प्राणव्यवस्थापकत्वान्मध्यमत्वात् सर्वदेवोपास्यत्वाच्च वायुरेवेति प्रतीयते ।**

ಅನುವಾದ - ಅವನು ಯಾರು ಎಂದರೆ ಮೂರು ಕಾರಣಗಳಿಂದ 'ವಾಯು' ಎಂದು ತಿಳಿಯುತ್ತಿದೆ. ಹೇಗೆಂದರೆ- 'ಏವಮೇವೈಷಃ' ಎಂಬ ಶ್ರುತಿಯು ಪ್ರಾಣ-ಅಪಾನಾದಿ ವಾಯುಗಳ ವ್ಯವಸ್ಥಾಪಕತ್ವವನ್ನು, ಹಾಗೂ 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಬೃಹದಾರಣ್ಯಕವು ಮಧ್ಯಮತ್ವವನ್ನು 'ಕುವಿದಂಗ' ಎಂಬ ಋಗ್ವೇದವು ಸರ್ವದೇವೋಪಾಸ್ಯತ್ವವನ್ನು ಹೇಳುತ್ತಿದೆ. ಹೀಗೆ ಮೂರು ಧರ್ಮಗಳಿಂದ ಕೂಡಿರುವ ವ್ಯಕ್ತಿಯು ವಾಯುದೇವರು ಎಂದು ತಿಳಿಯುತ್ತದೆ.

---

(१) **भाष्यदीपिका** – अत्राधिकरणे ईशाननामसमन्वयः क्रियते । श्रुत्यादिसङ्गतिं विषयसंशयौ च सूचयति – विष्णुरेवेति ।। जिज्ञासासूत्रे विष्णुरेव सर्वैर्मुमुक्षुभिर्मोक्षार्थं जिज्ञास्य इत्युक्तमित्यर्थः। नच तत्र जिज्ञास्यत्वायोगव्यवच्छेद एव कृतः, न त्वन्ययोगव्यवच्छेद इति वाच्यम् । अन्यस्यापि जिज्ञास्यत्वे तस्यापि मोक्षदातृत्वापत्त्या 'यतो नारायणप्रसादमृते' इत्यादिविवरणानुपपत्तेरन्ययोगव्यवच्छेदस्यापि तत्राभिप्रेतत्वात् । अतोऽत्रैवकार उभयान्वयितया व्याख्येयः । ततः किमित्यत आह – तत्रेति ।। इदं चाऽवर्तते । तत्रेत्यव्ययं तदित्यर्थेऽपि । तथा च 'अथातो ब्रह्मजिज्ञासा' इति यत् पूर्वं विष्णोर्जिज्ञास्यत्वमुक्तं 'तत्र' जिज्ञास्यत्वे 'तत्र' 'ईशानो भूतभव्यस्य' इत्युक्त्वा आम्नाते 'ऊर्ध्वम्' इति काठकवाक्ये 'कश्चित्' ईशानो धर्मित्वेन प्रतीयते । कथम् ? यतोऽयं 'सर्वदेवोपास्यः' तैर्जिज्ञास्यः प्रतीयत अत इति वाक्ययोजना । नच वायोः सर्वदेवोपास्यत्वेऽपि न विष्णोः सर्वदेवोपास्यत्वहानिरिति वाच्यम् । तावताऽपि सर्वैर्मुमुक्षुभिर्विष्णुरेव जिज्ञास्य इति नियमस्यासिद्धेः । नच श्रुतिगतविश्वेदेवशब्दस्य गणविशेषवाचित्वात् सर्वदेवोपास्य इत्युक्तिरनुपपन्नेति वाच्यम् । गणविशेषपरत्वे तस्य गुणाधिक्यासिद्ध्या सर्वदेवपरत्वावश्यम्भावात् । अनेन – ईशानशब्दस्यान्यनिष्ठत्वाक्षेप मुखेन फलतो मुमुक्षुकर्तृकजिज्ञास्यत्वस्यान्यनिष्ठत्वाक्षेपाद् जिज्ञासाधिकरणेनास्याऽक्षेपिकी सङ्गतिरुक्ता भवति । तथेशानाख्यो विषयश्च सूचितः ।

ಆದ್ದರಿಂದ ವಾಯುವೇ ಜಿಜ್ಞಾಸ್ಯನಾಗುತ್ತಾನೆ. ಈ ಆಕ್ಷೇಪದ ಪರಿಹಾರಕ್ಕಾಗಿ ಸೂತ್ರಕಾರರು ಸೂತ್ರವನ್ನು ರಚಿಸಿದ್ದಾರೆ.

ಪ್ರತಿಪದಾರ್ಥ -- ಯುಕ್ತಿಬದ್ಧವಾಗಿ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ -

ಸ ಚ = ಹೃದಯದಲ್ಲಿರುವವನು, ಏವಮೇವ = ಇದೇ ಪ್ರಕಾರದಲ್ಲಿ, ಏಷಃ = ಪ್ರಸಿದ್ಧನಾದ, ಪ್ರಾಣಃ = ಮುಖ್ಯ ಪ್ರಾಣನು, ಇತರಾನ್ = ಇತರೆ ತನ್ನ ಶಿಷ್ಯರಾದ, ಪ್ರಾಣಾನ್ = ಅಪಾನ, ವ್ಯಾನ ಮೊದಲಾದ ಪ್ರಾಣಗಳನ್ನು, ಪೃಥಕ್‌ಪೃಥಗೇವ = ಪ್ರತ್ಯೇಕ ಪ್ರತ್ಯೇಕವಾಗಿ, ಸನ್ನಿಧತ್ತೇ = ದೇಹದ ಅಂಗಾಂಗಗಳಲ್ಲಿ ಅವರನ್ನು ವ್ಯವಸ್ಥೆಗೊಳಿಸುತ್ತಾನೆ, ಯೋಽಯಂ = ಆ ಯಾವ, ಮಧ್ಯಮಃ ಪ್ರಾಣಃ = ಮಧ್ಯಮ ಪ್ರಾಣನು ಇತರ ಪ್ರಾಣಗಳ ನಿಯಾಮಕನಾಗಿದ್ದಾನೆ,

ಋಗ್ವೇದದಲ್ಲಿಯೂ ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ । ತೇ ವಾಯವೇ ಮನವೇ ಬಾಧಿತಾಯಾವಾಸಯನ್ ಉಷಸಂ ಸೂರ್ಯೇಣ ॥ ಎಂಬುದಾಗಿ ಹೇಳಲಾಗಿದೆ. ಅಂಗ = ಪ್ರಿಯನೇ, ಯೇ = ಯಾವ ದೇವತೆಗಳು, ನಮಸಾ = ನಮಸ್ಕಾರವೇ ಮೊದಲಾದ ಕ್ರಿಯೆಗಳಿಂದ, ವೃಧಾಸಃ = ಜ್ಞಾನಾದಿಗುಣಗಳಿಂದ ಸಂಪನ್ನರಾಗಿದ್ದಾರೆಯೋ, ಅನವದ್ಯಾಸಃ = ಅಜ್ಞಾನಾದಿ ದೋಷಗಳಿಂದ ರಹಿತರಾಗಿದ್ದರೋ, ಪುರಾ = ಮೊದಲೇ, ಆಸನ್ = ಇದ್ದರೋ ಅಂತಹ ದೇವತೆಗಳು, ಸೂರ್ಯೇಣ ಸಹ = ಸೂರ್ಯನ ಜೊತೆಗೆ, ಕ್ವಚಿತ್ = ರಹಸ್ಯ ಸ್ಥಳದಲ್ಲಿ, ಮನವೇ = ಜ್ಞಾನಿಯಾದ, ಬಾಧಿತಾಯ = ಸಂಸಾರಬಾಧಿತರಿಂದ ಶರಣಾಗತನಾದ, ವಾಯವೇ = ವಾಯುದೇವನನ್ನು ಉದ್ದೇಶಿಸಿ, ಉಷಸಮ್ = ತಮ್ಮ ಬುದ್ಧಿಯನ್ನು, ಆವಾಸಯನ್ = ನೆಲೆಗೊಳಿಸಿದರು. ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಪ್ರಾಣವ್ಯವಸ್ಥಾಪಕತ್ವಾತ್ = ಅಪಾನ ಮೊದಲಾದ ಪ್ರಾಣಗಳ ನಿಯಾಮಕತ್ವವು ಶ್ರುತವಾದ್ದರಿಂದ, ಮಧ್ಯಮತ್ವಾತ್ = ಹೃದಯದ ಮಧ್ಯದಲ್ಲಿರುವುದರಿಂದ, ಸರ್ವದೇವೋಪಾಸ್ಯತ್ವಾತ್ = ಸಕಲ ದೇವತೆಗಳ ಉಪಾಸ್ಯತ್ವ ಇರುವುದರಿಂದಲೂ, ವಾಯುರೇವ = ಮುಖ್ಯಪ್ರಾಣನೇ, 'ಈಶಾನ' ಎಂಬ ಶಬ್ದ ಪ್ರತಿಪಾದ್ಯನು, ಇತಿ = ಎಂದು, ಪ್ರತೀಯತೇ = ಕಾಣಸುತ್ತದೆ. (१)

(१) **भाष्यदीपिका** – सयुक्तिकं पूर्वपक्षयति – स चेति ।। अत्रेत्थं योजना – **'स च'** सर्वदेवोपास्यश्चेशानो वायुरेव भवेत्, न विष्णुः । कुतः ? अत्र प्राणव्यवस्थापकत्वश्रवणात्। तथा मध्यमत्वोक्तेः सर्वदेवतोपास्यत्वोक्तेश्च । न चैषां वाय्वेकनिष्ठत्वासिद्धिः । यतोऽयं वायुः **'एवमेवैष प्राणः'** (प्रश्न.३.४) **'योऽयं मध्यमः'** **'कुविदङ्ग'** (ऋ.७.९१.१) इत्यादिना वाक्येन प्राणव्यवस्थापकत्वादिमान् प्रतीयते, अत इति । काठके हि –
**'अङ्गुष्ठमात्रः पुरुषो मध्य आत्मनि तिष्ठति ।**
**ईशानो भूतभव्यस्य ।।'** *(कठ.४.१२)*

इत्यनेन भगवतोऽङ्गुष्ठमात्रत्वं, पूर्णषड्गुणत्वं, देहमध्यस्थत्वं, भूतभविष्यद्वर्तमानेशानत्वमित्यादिमाहात्म्यमभिधायेशानपदोक्तस्य तस्यैव 'ऊर्ध्वम्' इत्यादिना महिमान्तरमुच्यते।

तत्र मध्यमशब्दः सिद्धान्ते ऊर्ध्वंप्रत्यक्छब्दसमभिव्याहाराद् देशविशेषवचनः, न त्ववान्तरेश्वरत्वादिरूपमध्यमत्वार्थकः । तथा च यः प्राणाख्यरूपेण **'प्राणं'** प्राणाख्यवायुमूर्ध्वम् 'उन्नयति' उद्गमयति ऊर्ध्वगतिमत्तया प्रेरयति । अपानरूपी चापानाख्यं वायुं **'प्रत्यक्'** अधस्ताद् विण्मूत्रादिनिष्कासनहेतुतया **'अस्यति'** निरस्यति प्रेरयतीति यावत् । तं **'देहमध्ये'** हृदये **'आसीनम्'** उपविष्टं **'वामनं'** सौन्दर्यप्रधानाः स्त्रियो वामाः ताः नेतारं विष्णुं **'विश्वे देवाः'** सर्वे देवाः **'उपासते'** जिज्ञासन्त इति सिद्धान्तरीत्या श्रुत्यर्थः । पूर्वपक्षी त्विदं वायुपरं मत्वा मध्यशब्दो **'योऽयं मध्यमः'** इति श्रुत्यन्तर-समाख्यानान्मध्यमेश्वरत्ववचनो न देशविशेषवचन इत्याह ।

**'एवम्'** इति षट्प्रश्नवाक्यं च **'यथा सम्राडेवाधिकृतान् विनियुङ्क्ते एतान् ग्रामानधितिष्ठस्वेति'** इति दृष्टान्तवाक्येन सह व्याख्येयम् । तत्प्रकारस्तु – यथा **'सम्राट्'** सार्वभौमः अधिकृतान् नियोगिनोऽधिकृत्य विनियुङ्क्ते । कथम् ? त्वम् **'एतान्'** पाटलीपुत्रादीन् ग्रामान् **'अधितिष्ठस्व'** तदाधिपत्येन तिष्ठस्वेति । **'एवमेवैषः'** **'आत्मत एष प्राणो जायते'** (प्रश्न.३.२.) इत्यात्मजातत्वेनोक्तो मुख्यप्राणः **'इतरान्'** भिन्नान् स्वजन्यत्वेनोपचारेणाऽत्मप्रविभागान् प्राणान् वायून् पृथक्स्थानेषु हृदयादिषु स्थापयतीति । **'योऽयम्'** इत्यादिबृहदारण्यकवाक्यम् । तत्र हि पूर्वं वागादीनां मृत्युग्रस्तत्वमुक्त्वा **'अथैनमेव नाऽप्नोत्'** इत्यनेन मुख्यप्राणस्य तदनात्तत्वेन तेभ्यः श्रैष्ठ्यमभिधाय **'योऽयम्'** इत्यनेन प्राणशब्दवाच्येषु विष्णुवायुतदितरेषु चेतनेषु त्रिषु विष्णोरुत्तमत्वादन्येषामधमत्वाद् वायोर्मध्यमत्वादस्मान्निमित्ताद्वा अवान्तरेश्वरत्वाद्वा मुख्यप्राणस्य सर्वोत्तमत्वरूपकाष्ठात्वाविरोधिमध्यस्थत्वमेवोच्यते, नतु मध्यदेशस्थत्वम्। तथा तत्रैव चतुर्थाध्याये **'अयं वाव शिशुः योऽयं मध्यमः प्राणः'** (बृ.४–२–१) इति चन्द्रिकोदाहृते वाक्ये स्थूलदेहाख्यविस्तृतप्रदेशगतलिङ्गशरीररूपगृहे विष्णुरूपायां स्थूणायाम् अन्नाख्येन श्रीरूपेण दाम्ना बद्धो गोवत्सरूपो वायुर्मध्यमत्वेनोच्यते ।

**'कुविदङ्ग नमसा ये वृधासः पुरा देवा अनवद्यास आसन् ।**
**ते वायवे मनवे बाधितायाऽवासयन्नुषसं सूर्येण ।।'** *(ऋ.७–९१–१)*

इति ऋङ्मन्त्रे **'अङ्ग'** इति प्रियसम्बोधनम् । तथा च ये देवाः वायोः 'नमसा' नमस्कारोपलक्षितसेवादिना **'वृधासः'** वृद्धा ज्ञानादिगुणपूर्णाः **'अनवद्यासः'** अनवद्याः अज्ञानरागाद्यवद्यविधुराश्च पुरा ससूर्या आसन् । ते **'कुवित्'** क्वचिद् रहस्यस्थाने सूर्येण साकं **'मनवे'** ज्ञानिने **'बाधिताय'** संसारक्लेशवद्भिः शरणं प्राप्ताय **'वायवे'** वायुमुद्दिश्य **'उषसम्'** उष प्रकाशे, असुन्, बुद्धिम् **'अवासयन्'** तद्विषयामकुर्वन्निति श्रुत्यर्थः । सिद्धान्तयत्सूत्रमवतार्य व्याचष्टे – अत इति ।। **'वामनशब्दात्'** वामनश्रुतेः । एवकारो

**भाष्यम् – अतोऽब्रवीत् ॥ ॐ शब्दादेव प्रमितः ॥ ॐ**

ಅನುವಾದ - ಹಿಂದಿನ ಆಕ್ಷೇಪವನ್ನು ನಿರಾಕರಿಸುವುದಕ್ಕಾಗಿಯೇ ಸೂತ್ರಕಾರರು 'ಶಬ್ದಾದೇವ ಪ್ರಮಿತಃ' ಎಂದು ಹೇಳಿದ್ದಾರೆ.

ಪ್ರತಿಪದಾರ್ಥ -- ಅತಃ = ಈ ಆಕ್ಷೇಪದ ಪರಿಹಾರಕ್ಕಾಗಿ, ಅಬ್ರವೀತ್ = ಸೂತ್ರಕಾರರು ಹೇಳುತ್ತಿದ್ದಾರೆ. ॥ ಓಂ ಶಬ್ದಾದೇವ ಪ್ರಮಿತಃ ಓಂ ॥ ಎಂದು.

**भाष्यम् – वामनशब्दादेव विष्णुरिति प्रमितः । नहि श्रुतेर्लिङ्गं बलवत् ।**

ಅನುವಾದ - 'ಮಧ್ಯೇ ವಾಮನಮ್ ಆಸೀನಂ' ಎಂಬ ಕಾಠಕದಲ್ಲಿ ವಾಮನ ಶಬ್ದವಿರುವುದರಿಂದಲೇ, ಲಿಂಗವು ಶ್ರುತಿಗಿಂತ ಪ್ರಬಲವಾಗಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಸೂತ್ರದಲ್ಲಿ 'ಏವ' ಎಂದು ಪ್ರಯೋಗಿಸಿದ್ದರಿಂದ ಶ್ರುತಿಯು ಪ್ರಬಲವಾಗಿದೆ ಎಂದು ಸೂಚಿಸಿದಂತಾಯಿತು. ಇದರಿಂದ ಲಿಂಗದ ಪ್ರಾಬಲ್ಯವನ್ನು ನಿಷೇಧಿಸಿದಂತಾಯಿತು ಎಂದು ತೋರಿಸುತ್ತಿದ್ದಾರೆ-

ವಿಷ್ಣುರಿತಿ = ವಿಷ್ಣುವೇ ಈಶಾನ ಶಬ್ದದಿಂದ ಪ್ರತಿಪಾದ್ಯ ಎಂದು, ಪ್ರಮಿತಃ = ನಿಶ್ಚಯವಾಗುತ್ತದೆ.

ಶ್ರುತೇಃ = ಶ್ರುತಿಗಿಂತಲೂ, ಲಿಂಗಂ = ಲಿಂಗವು, ನಹಿ ಬಲವತ್ = ಬಲಿಷ್ಠವಲ್ಲವಷ್ಟೇ.[१]

---

वायुलिङ्गसद्भावाद् वायुरेवेशानः किं न स्यादिति चोद्यपरिहाराय लिङ्गेभ्यः श्रुतेः प्राबल्यमाह – यथोक्तं सुधायाम् – एवशब्दव्याख्यानं बलवदिति **'शब्दादेव प्रमितः'** इति यथेति । समन्वयसूत्रादनुवृत्तस्य तदित्यस्यार्थो विष्णुरिति । विधेयभूतविष्णुत्वस्यान्वययोग्योद्देश्यद्योतनायेतिशब्दप्रयोगः । आवर्तते चायम् । इतिशब्दात् परमपि एवशब्दो योज्यः । तेनानुवृत्तस्तुशब्दो व्याख्यातः । तथा च **'ईशानो भूतभव्यस्य'**(कठ.४.१२) इति श्रुत ईशानो विष्णुरेव भवेत् । कुतः ? यस्तत्र प्रमितो विष्णावेव महायोगविद्वद्रूढिभ्यां प्रसिद्धो **'मध्ये वामनम्'** इति श्रुतो वामनशब्दस्तस्मादेवेति योजना । प्रमितपदं श्रुतेर्निरवकाशत्वसूचकम् । अनेन सूत्रे इतिशब्दोऽध्याहार्य इति सूचितम् । तथा च **'ईशानो भूतभव्यस्य'** इति श्रुत ईशानः **'तत्तु'** विष्णुरेव भवेत् । कुतः ? यस्तत्र विष्णावेव प्रमितो महायोगविद्वद्रूढिभ्यां प्रसिद्धोऽन्यत्र निरवकाशो **'मध्ये वामनमासीनम्'**(कठ.५.३) इति श्रुतो लिङ्गात् प्रबलो वामनशब्दस्तच्छ्रुतिस्तस्मादिति सूत्रार्थः ।

(१) **भाष्यदीपिका** – सूत्रे एवकारप्रयोगेन सूचितं श्रुतेः प्राबल्यं लिङ्गस्य प्राबल्यनिषेधमुखेन दर्शयति – **न हीति** ।। श्रुतेरिति पञ्चमी । हिशब्दो वक्ष्यमाणप्रमाणविरोधादिति हेतुसूचकः। तथा च **'हि'** यस्मान्न श्रुतेर्लिङ्गं बलवत्, किन्तु दुर्बलमेव । तस्माल्लिङ्गात् प्रबलाद् वामनशब्दादेवेशानो विष्णुरेवेत्यर्थः ।

**भाष्यम् – 'श्रुतिर्लिङ्गं समाख्या च वाक्यं प्रकरणं तथा ।**
**पूर्वं पूर्वं बलीयः स्यादेवमागमनिर्णयः ।' इति स्कान्दे ।**

ಅನುವಾದ - 'ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ, ಪ್ರಕರಣ ಇವುಗಳಲ್ಲಿ ಮುಂದಿನವುಗಳಿಗಿಂತ ಹಿಂದಿನವು ಪ್ರಬಲವಾಗುತ್ತವೆ. ಇವುಗಳ ಪ್ರಾಬಲ್ಯ ದೌರ್ಬಲ್ಯಗಳಿಂದಲೇ, ಆಗಮದ ನಿಜವಾದ ಅರ್ಥವನ್ನು ನಿಶ್ಚಯಿಸಬೇಕು' - ಹೀಗೆ ಸ್ಕಾಂದ ಪುರಾಣವು ಹೇಳಿದೆ.

ಪ್ರತಿಪದಾರ್ಥ -- ಲಿಂಗವು ಶ್ರುತಿಗಿಂತ ಏಕೆ ಪ್ರಬಲವಲ್ಲ? ಒಂದು ವೇಳೆ ಶ್ರುತಿಗಿಂತ ಲಿಂಗವೇ ಪ್ರಬಲವಾದರೆ, ಸ್ಕಾಂದಪುರಾಣದ ವಿರೋಧ ಬರುತ್ತದೆ. ಅದು ಹೀಗೆ -

ಶ್ರುತಿಃ = ವೇದವು, ಲಿಂಗಂ = ಯುಕ್ತಿಯು, ಚ = ಮತ್ತು, ಸಮಾಖ್ಯಾ = ಸಮಾನವಾದ ಅರ್ಥದಲ್ಲಿರುವ ಮತ್ತೊಂದು ಪ್ರಮಾಣವು, ವಾಕ್ಯಂ = ಸ್ಮೃತಿವಾಕ್ಯವು, ತಥಾ= ಅದರಂತೆ, ಪ್ರಕರಣಂ = ಪ್ರಕರಣವು ಇವುಗಳಲ್ಲಿ, ಪೂರ್ವಂ ಪೂರ್ವಂ = ಹಿಂದಿನವುಗಳು, ಬಲೀಯಃ = ಬಲಿಷ್ಠವಾದ ಪ್ರಮಾಣಗಳು, ಏವಂ = ಹೀಗೆ, ಆಗಮನಿರ್ಣಯಃ = ವೇದದಲ್ಲಿ ನಿರ್ಣೀತವಾಗಿದೆ. ಇತಿ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಹೇಳಲಾಗಿದೆ.(१)

---

(१) **भाष्यदीपिका** – कुतो न श्रुतेर्लिङ्गं बलवदित्यतस्तथा सति श्रुतेर्लिङ्गात् प्राबल्यवचनविरोधापत्तेरित्याशयेन तद्वाक्यं पठति – **श्रुतिरिति** ।। इति स्कान्द इत्यनन्तरं वचनादिति शेषः । अस्य न हीत्यनेनान्वयः ।

वाचकशब्दः श्रुतिः । असाधारणधर्मो वा, तद्बोधकशब्दो वा लिङ्गम् । निर्णीतस्यान्यत्र समानोक्तिः समाख्या । सा द्विविधा – अर्थतः शब्दतोऽपीति । समभिव्याहृतपदैरेवाऽकाङ्क्षापूर्तौ तच्छान्त्यर्थं पदान्तरनिरपेक्षाणि पदानि वाक्यम् । एकप्रमेयप्रतिपादकानेकवाक्यानि प्रकरणम् । अनुक्तस्थानसमुच्चये तथेति शब्दः । अनेकप्रमेयप्रतिपादकमेकार्थतात्पर्ययुक्त वचनं स्थानम् । अत्र **'वाक्यं प्रकरणं स्थानं समाख्या च तथाविधा'** इत्यनुव्याख्यानुसारेण समाख्यायाः स्थानानन्तर्यमेव ग्राह्यं, न त्वत्रोक्तक्रमानुसारेण वाक्याद्यपेक्षया प्राथम्यम् । अत्रोक्तक्रमस्याविवक्षितत्वात् । उक्तं हि प्रमाणलक्षणटीकायां – समाख्यादित्वेन ग्रहणं **'श्रुतिर्लिङ्गं समाख्या च'** इत्यविवक्षितक्रमं वाक्यमनुसृत्येति । अत एव जैमिनिः – **'श्रुतिलिङ्गवाक्यप्रकरणस्थानसमाख्यानां समवाये पारदौर्बल्यमर्थविप्रकर्षात्'** इति स्मृत्युक्तादन्यथाक्रममाह ।। **पूर्वं पूर्वमिति** ।। पूर्वोद्दिष्टमित्यर्थः । एकत्र समवेतं विरुद्धमिति च शेषः । 'बलीयः' अतिशयेन स्वभावतो बलवत् । यथाऽत्रैवाधिकरणे अनन्तरोद्दिष्टलिङ्गापेक्षया पूर्वोद्दिष्टा वामनश्रुतिः स्वतः प्रबला । वाक्यापेक्षया प्रबलं लिङ्गम् । यथा – दहराधिकरणे दहराकाशस्य साक्षात् सर्वाधारत्वप्रापकात् 'किं तदत्र विद्यते' 'उभे अस्मिन् द्यावापृथिवी' (छां.८.१.२,३) इति वाक्यात् प्रबलं विष्णोस्तत्प्रापकापहतपाप्मत्वादिकं

**भाष्यम् – तच्च लिङ्गं विष्णोरेव । तस्यैव प्राणत्वोक्तेः 'तद्वै त्वं प्राणो अभवः' इति ॥**

ಅನುವಾದ - ವಾಯುದೇವನ ವಿಷಯದಲ್ಲಿ ಹೇಳಲ್ಪಟ್ಟ ಧರ್ಮಗಳು ವಿಷ್ಣುವಿನದ್ದೇ ಆಗಿವೆ. ಏಕೆಂದರೆ 'ತದ್ವೈ ತ್ವಂ ಪ್ರಾಣೋ ಅಭವಃ' ಎಂಬುದಾಗಿ ವಿಷ್ಣುವೇ ಪ್ರಾಣಶಬ್ದದಿಂದ ಪ್ರತಿಪಾದ್ಯನೆಂಬ ವಿಚಾರವನ್ನು, ಹಿಂದೆ ಪ್ರಾಣಾಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ.

ಪ್ರತಿಪದಾರ್ಥ -- ಶ್ರುತಿಯು ಸ್ವಾಭಾವಿಕವಾಗಿ ಬಲಿಷ್ಠವಾಗಲಿ, ಆದರೂ ಸಹ ಪೂರ್ವಪಕ್ಷ-ಲಿಂಗಗಳೂ ಸಹ ಪ್ರಬಲವಾಗಿರುವುದರಿಂದ ನಿರ್ಣಯವನ್ನು ಮಾಡಲಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ತಚ್ಚ ಲಿಂಗಂ = ಆ ಮುಖ್ಯಪ್ರಾಣನ ಧರ್ಮಗಳು, ವಿಷ್ಣೋರೇವ = ವಿಷ್ಣುವಿನದ್ದೇ ಆಗಿವೆ, ತಸ್ಯೈವ = ಆ ವಿಷ್ಣುವಿಗೆ, ತದ್ವೈ ತ್ವಂ ಅಭವಃ = ಆ ಪ್ರಸಿದ್ಧನಾದ ವಿಷ್ಣುವೇ ಪ್ರಾಣನಾದವನು, ಇತಿ = ಹೀಗೆ, ಪ್ರಮಾಣಗಳಿರುವುದರಿಂದ ಪ್ರಾಣತೋಕ್ತೇಃ = ಪ್ರಾಣಶಬ್ದಪ್ರತಿಪಾದ್ಯತ್ವವನ್ನು ಸಮರ್ಥಿಸಿದ್ದರಿಂದ ವಿಷ್ಣುವೇ ಸರ್ವದೇವೋಪಾಸ್ಯನು.[१]

---

लिङ्गम् । प्रकरणापेक्षया प्रबलं वाक्यम् । यथा – 'ज्योतिर्दर्शनात् 'इत्यधिकरणे जीवस्य 'हृद्यन्तर्ज्योतिः' (बृ.६.३.७) इति वाक्यबोध्यज्योतिष्ट्वसाधकाज्जीवप्रकरणात् प्रबलं विष्णोर्ज्योतिष्ट्वप्रापकं 'कतम आत्मा' (बृ.६.३.७) इति प्रश्नवाक्यम् । स्थानापेक्षया प्रबलं प्रकरणम् । यथा – समग्रोपनिषद ईश्वरपरत्वसाधकात् षट्प्रश्नरूपस्थानात् प्रबलम् 'आत्मत एष प्राणो जायते' (प्रश्न. ३.३) इत्येतत्खण्डरूपं मुख्यप्राणप्रकरणम् । अत एवात्राधिकरणे षट्प्रश्नोक्तप्राणव्यवस्थापकत्वादीनां मुख्यप्राणलिङ्गत्वमुपेत्य श्रुत्या बाध उक्तः । समाख्यापेक्षया प्रबलं स्थानम् । यथा – अन्नमयादिशब्दानां कोशपरत्वसाधकात् 'अन्नमयप्राणमयमनोमयविज्ञानमयानन्दमया मे शुध्यन्ताम्' (याज्ञिकी. ६६.) इति नारायणानुवाकसमाख्यायाः प्रबलं तेषां विष्णुत्वसाधकं ब्रह्मपरानेकप्रकरणसन्दर्भरूपं स्थानम् । एतान्येव श्रुत्यादिनाऽर्थनिर्णयस्थलानि । आद्यया समाख्यया निर्णेतव्यं यथा – पुरुषसूक्तसमाख्यया वैश्वानरस्य विष्णुत्वम् । द्वितीयया यथा – अम्भ्रिणीसूक्तसमाख्यया-विश्वकर्मसूक्तोक्तस्याजस्य विष्णुत्वम् । अस्त्वेवं ततः किमित्यत आह – एवमिति ॥ विरुद्धैतेषां समवाये सति प्रबलेन पूर्वेणोत्तरबाधे च सति 'आगमनिर्णयः' आगमार्थस्य विप्रतिपन्नस्यैतैः निर्णयो भवतीत्यर्थः ।

(१)भाष्यदीपिका – नन्वस्तु श्रुतेः स्वभावतः प्राबल्यम् । तथाऽपि बाहुल्येन पूर्वपक्ष्युक्तलिङ्गानामपि प्राबल्यात् साम्येनानिर्णय एवेत्यत आह – तच्चेति ॥ चस्त्वर्थः। लिङ्गमिति समुदायैकवचनम् । तथा च 'तत्' पूर्ववाद्युक्तं लिङ्गजातं तु विष्णोरेव युक्तम्, न वायोरित्यर्थः । तथा च बाहुल्येऽपि लिङ्गानां सावकाशत्वात्तेभ्यः श्रुतेरेकस्या अपि

निरवकाशायाः प्राबल्यान्नानिर्णय इति भावः । ननु न लिङ्गं विष्णौ सावकाशं, पूर्वपक्ष्युदाहृतसमाख्यारूपश्रुत्यन्तरेण तस्य प्राणनिष्ठतयैवोक्तत्वादित्यत आह – **तस्यैवेति** ।। **'तद्वै त्वम्'** इति श्रुतौ **'तस्य'** विष्णोः प्राणत्वस्य प्राणशब्द- वाच्यत्वस्योक्तेरुक्तत्वादित्यर्थः । एवं **'अत एव'** इत्यत्राऽध्यात्मिकाशेषशब्दस्य समन्वयं ब्रुवता तथा – **'शास्त्रदृष्ट्या'** इत्यत्रान्तर्यामिपरत्वं ब्रुवता सूत्रकारेणेतरव्यावृत्त्या तस्यैव प्राणत्वोक्तेः साधितत्वादित्यपि व्याख्येयमेतत् । तथा च श्रुत्यन्तरे प्राणनिष्ठतया लिङ्गस्योक्तावपि न तद्विरोधः । तस्य प्राणस्य विष्णुत्वाभ्युपगमादिति भावः ।

ननु तथाऽपि **'कुविदङ्ग'** इति ऋचि वायुनिष्ठतया लिङ्गोक्तेस्तद्विरोध इत्यस्यापीदमेवोत्तरम्। अस्मिन् पक्षे प्राणत्वमिति वायुत्वमुपलक्ष्यते । तथा चान्तर्नये आधिदैविकाशेषशब्द-समन्वयं ब्रुवता सूत्रकारेण **'तस्यैव'** विष्णोरेव **'प्राणत्वोक्तेः'** वायुशब्दवाच्यत्वरूप-वायुत्वस्योक्तत्वादित्यर्थः । तथा च न तद्विरोधोऽपीति भावः । नच सिद्धान्तेऽपि स्थानापेक्षया प्रबलात् प्रकरणात् **'एवमेवैषः'** इति श्रुत्यन्तरगतप्राणशब्दस्य, तथा **'योऽयं मध्यमः'** (बृ.३.५.२१) इत्यस्य, तथा **'कुविदङ्ग'** इति मन्त्रस्थवायुशब्दस्य मुख्यवायुपरत्वं, तत्रोक्तलिङ्गानामपि तत्परत्वमुपेत्य तेषां श्रुत्या बाधस्योक्तत्वात् कथं श्रुत्यन्तरस्थ-प्राणवायुशब्दयोः विष्णुपरत्वाङ्गीकारेण समाधानम् । अत एव चन्द्रिकायाम् – मध्यमशब्दोऽपि **'ऊर्ध्वं प्राणम्'** (कठ.२.२.३) इति प्राणस्य स्थानान्तरनिर्देशात् तत्त्यागेन मध्यमस्थानस्थब्रह्मपरः, नतु श्रुत्यन्तरे मध्यमशब्दोक्तप्राणपर इत्युक्तम् । अतः **'एवमेवैषः'** (प्रश्न.३.४) इति वाक्यं स्थानात् प्रकरणस्य प्राबल्ये उदाहृतमिति वाच्यम् । उक्तरीत्या मुख्यतः श्रुत्यन्तरगतप्राणशब्दादेर्ब्रह्मपरत्वेन लिङ्गानां तत्तदन्तर्यामिनिष्ठत्वेऽपि समाकर्ष-न्यायेनान्यपरत्वस्याप्यङ्गीकारात् । श्रुत्यन्तरोक्तलिङ्गानामन्यनिष्ठत्वेऽपि वा नानुपपत्तिः । न चैवं काठकोक्तलिङ्गानामप्यन्यनिष्ठत्वापत्त्याऽन्येषामीशानत्वाद्यापत्तिः । निरवकाशश्रुत्या काठकोक्तलिङ्गानां विष्णुनिष्ठतानिर्णयोपपत्तेः ।

ननु तथाऽपि कथमीशानो विष्णुर्भवेच्छ्रुतावीशानस्याङ्गुष्ठपरिमितत्वोक्तेः । सर्वगते च हरौ तदयोगात् । नच व्योमवत् सर्वगतस्याप्यणुत्वं युज्यत इति प्रतिपादितमिति वाच्यम् । तथाऽपि **'अङ्गुष्ठमात्रः'** इति तन्मात्रपरिमाणत्वोक्तेरयोगात् । नच **'अङ्गुष्ठमात्रः'** इत्यत्र श्रुतः परिमाणार्थको मात्रच्प्रत्यय एव, न त्ववधारणार्थको मात्रशब्दः । **'देहाङ्गुष्ठमितो देहे जीवाङ्गुष्ठमितो हृदि'** इति स्मृतौ मित इत्यनेन परिमाणस्यैवोक्तेः । तथा च नानुपपत्तिरिति वाच्यम् । तथात्वेऽङ्गुष्ठमात्रत्वाभिधात्र्याम् **'अङ्गुष्ठमात्रः'**(कठ.४.१२) इति

## श्रीपद्मनाभतीर्थविरचितसत्तर्कदीपावलिः

ॐ ।। शब्दादेव प्रमितः ॐ ।। १-३-२४ ।।

'विष्णुरेव जिज्ञास्यः' इत्यादेरयमर्थः । 'ऊर्ध्वं प्राणमुन्नयति' इत्याद्याम्नायते । तत्र तावल्लिङ्गान्मुख्यप्राणः प्रतीयते ।

'ವಿಷ್ಣುರೇವ ಜಿಜ್ಞಾಸ್ಯಃ' ಇತ್ಯಾದಿ ಭಾಷ್ಯದ ಅರ್ಥ ಹೀಗಿದೆ -

'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿಯಾಗಿ ಕಾಠಕೋಪನಿಷತ್ತಿನ ಪ್ರಕರಣ ಇದೆ. ಈ ವಾಕ್ಯವು ಮುಖ್ಯಪ್ರಾಣದೇವರ ಲಿಂಗದಿಂದ ಕೂಡಿರುವ ಕಾರಣ ಮುಖ್ಯಪ್ರಾಣದೇವರು ಪ್ರತಿಪಾದ್ಯರಾಗಿದ್ದಾರೆಂದು ಪ್ರತೀತವಾಗುತ್ತದೆ.

यदत्र प्राणापानादिविनियोजकत्वं यन्मध्यस्थितत्वम्, यच्च सर्वदेवोपास्यत्वम्, तत् 'सर्वमेव प्राणः' इत्यादि श्रुत्यन्तरेषु मुख्यप्राणशब्दाभिधेयस्य प्रधानवायोर्लिङ्गत्वेन उच्यते ।

ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಪ್ರಾಣಾಪಾನಾದಿಲಿಂಗನಿಯಾಮಕತ್ವ, ಮಧ್ಯಸ್ಥಿತತ್ವ, ಮತ್ತು ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳು ಮುಖ್ಯಪ್ರಾಣದೇವರಲ್ಲಿ ಇರುತ್ತವೆಂದು ಬೇರೆ ಸ್ಮೃತಿಗಳಿಂದ ಸಿದ್ಧವಾಗಿವೆ. ಆದ್ದರಿಂದ ಮುಖ್ಯಪ್ರಾಣದೇವರ ಲಿಂಗಗಳು ಇರುವ ಕಾರಣ ಅವರೇ ಪ್ರತಿಪಾದ್ಯರಾಗುತ್ತಾರೆ.

कुविदङ्गेत्यस्यायमर्थः । अङ्गेति सम्बोधनम् । नमस्कारादिरूपया भक्त्या प्रवृद्धा अनवद्याः पुरा ये देवाः सूर्येण सहासन् ते ज्ञानिने क्लेशबाधितैः शरणत्वेन प्राप्ताय वायवे कचिदेकान्ते उषसः प्रकाशरूपाः बुद्धिं ध्यानाख्याम् आवसन् स्थापयामासुरकुर्वन्निति ।

'ಕುವಿದಂಗ' ಇತ್ಯಾದಿ ಋಕ್‌ಸಂಹಿತೆಯ ಶ್ರುತ್ಯರ್ಥಹೀಗಿದೆ -

'ಅಂಗ' ಎಂಬುದು ಸಂಬೋಧಕವಾಚಕಶಬ್ದ, ಸೂರ್ಯನ ಜೊತೆಗೆ ಸೇರಿಕೊಂಡು ದೇವತೆಗಳು

---

श्रुतौ 'मध्य आत्मनि' इत्यस्य स्मृतौ हृदीत्यस्य च वैयर्थ्यापातात् । तन्मात्रपरिमितत्वोक्त्यर्थं हि तत्र हृदयरूपसूक्ष्मस्थानोक्तिः । तस्मादवधारणार्थकमात्रशब्द एवायमङ्गीकार्यः । उक्तं हि चन्द्रिकायाम् – मात्रशब्दस्यावधारणार्थकत्वादिति ।
ವಾಮನಾಧಿಕರಣ (೧-೩-೭)

ವಾಯುದೇವರಲ್ಲಿ ನಮಸ್ಕಾರವೇ ಮೊದಲಾದ ಸೇವೆಯಿಂದ ಭಕ್ತಿಮಾಡುತ್ತಾ ಜ್ಞಾನಾದಿಗುಣಗಳಿಂದ ಪ್ರವೃದ್ಧರಾಗಿ, ಅಜ್ಞಾನಾದಿ ದೋಷಗಳಿಂದ ವಿದೂರರಾದರು. ಅಂತಹ ದೇವತೆಗಳು ಒಮ್ಮೆ ಏಕಾಂತಸ್ಥಳದಲ್ಲಿ ಜ್ಞಾನಿಜನರು ಮತ್ತು ಸಂಸಾರದಲ್ಲಿ ಬಳಲಿದ ಜನರು ಯಾರನ್ನು ಶರಣು ಹೊಂದುತ್ತಾರೋ ಅಂತಹ ವಾಯುದೇವರಲ್ಲಿ ಧ್ಯಾನ ಮಾಡಲು ಬುದ್ಧಿಯನ್ನು ಇಟ್ಟರು.

**अतो यदुक्तम्, प्राग् विष्णुरेव निदिध्यासितव्य इति, तन्न सिद्ध्यतीति चेत्,**

ಆದ್ದರಿಂದ ವಿಷ್ಣುವೇ ನಿದಿಧ್ಯಾಸನಕ್ಕೆ ವಿಷಯನಾಗಿದ್ದಾನೆಂದು ಹಿಂದೆ ಹೇಳಿದ್ದು ತಪ್ಪಾಯಿತಲ್ಲವೆ?

**मैवम् । विष्णुरेवात्र प्रतिपाद्यते । 'वामनमासीनम्' इति वामनश्रुतेः । यदुक्तं मुख्यप्राणलिङ्गम्, तच्छ्रुत्या बाध्यते, दुर्बलत्वात् ।**

ಇದು ತಪ್ಪು. ವಿಷ್ಣುವೇ 'ಕುವಿದಂಗ' ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆ. 'ವಾಮನಮಾಸೀನಮ್' ಎಂಬ 'ವಾಮನ' ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಮುಖ್ಯಪ್ರಾಣಲಿಂಗವಿರುವುದರಿಂದ ಶ್ರುತಿಯು ಮುಖ್ಯಪ್ರಾಣಕಲಿಂಗಕವೆಂದು ಹೇಳಿದ್ದು ತಪ್ಪು. ಮುಖ್ಯಪ್ರಾಣಲಿಂಗವು ಶ್ರುತಿಯಿಂದ ದುರ್ಬಲವಾದ್ದರಿಂದ ಬಾಧಿತವಾಗುತ್ತದೆ.

**तदुक्तं जैमिनिना 'श्रुतिलिङ्गवाक्यप्रकरणस्थानसमाख्यानां समवाये परदौर्बल्य मर्थविप्रकर्षात्' इति ।**

ಇದನ್ನೇ ಜೈಮಿನಿ ಋಷಿಗಳು 'ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪರದೌರ್ಬಲ್ಯಮರ್ಥವಿಪ್ರಕರ್ಷಾದ್' ಎಂಬ ಸೂತ್ರದಲ್ಲಿ ದುರ್ಬಲವಾದ ಲಿಂಗವು ಶ್ರುತಿಯಿಂದ ಬಾಧಿತವಾಗುತ್ತದೆಂದು ಹೇಳಿರುತ್ತಾರೆ.

**यत्र श्रुतिलिङ्गादयः परस्परं विरुद्ध्यन्ते, तत्र पूर्वपूर्वबलीयस्त्वं पुराणवचनेन साधयति श्रुतिरिति ॥**

ಯಾವವಿಷಯದಲ್ಲಿ ಶ್ರುತಿಲಿಂಗಾದಿಗಳು ಪರಸ್ಪರವಿರುದ್ಧವಾಗಿರುತ್ತವೋ, ಅಂತಹ ಸಂದರ್ಭದಲ್ಲಿ ಮುಂದಿನವುಗಳಿಗಿಂತ ಹಿಂದಿನವುಗಳಿಗೆ ಪ್ರಾಬಲ್ಯವಿರುತ್ತದೆ ಎಂದು ಸ್ಕಾಂದಪುರಾಣದ ಮಾತಿನಿಂದ ಸಾಧನೆ ಮಾಡುತ್ತಿದ್ದಾರೆ 'ಶ್ರುತಿಃ' ಇತ್ಯಾದಿಯಾಗಿ.

**अत्र समाख्या नाम समानप्रकरणमुच्यते । विष्णावप्युपपन्नत्वेनान्यथा-सिद्धत्वादप्यत्र मुख्यप्राणलिङ्गं न विरोधीत्याह – तच्चेति ॥**

ಈ ಶ್ಲೋಕದಲ್ಲಿರುವ 'ಸಮಾಖ್ಯಾ' ಎಂಬ ಶಬ್ದಕ್ಕೆ ಸಮಾನವಾದ ಪ್ರಕರಣ ಎಂದರ್ಥ. ಮುಖ್ಯಪ್ರಾಣನ ಲಿಂಗಗಳೆಲ್ಲವೂ ವಿಷ್ಣುವಿನಲ್ಲೂ ಉಪಪನ್ನವಾಗುವುದರಿಂದ ಸಾವಕಾಶವಾಗಿವೆ.

ಆದ್ದರಿಂದ ಮುಖ್ಯಪ್ರಾಣನ ಲಿಂಗಗಳು ವಿಷ್ಣುವೇ 'ಈಶಾನ' ಶಬ್ದದಿಂದ ಪ್ರತಿಪಾದ್ಯನೆನ್ನಲು ಹೇಳಲು ಬಾಧಕಗಳಾಗುವುದಿಲ್ಲ.

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः।।ॐ।।**

**तत्वप्रकाशिका –**

**ॐ ।। शब्दादेव प्रमितः ॐ ।। १-३-२४ ।।**

**अत्र प्रेरकत्वसाम्येन भगवति वायौ च साधारणस्येशाननाम्नो विष्णौ समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयसंशयौ च सूचयति – विष्णुरेवेति ।।**

ಈ ಅಧಿಕರಣದಲ್ಲಿ 'ಈಶಾನ' ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ವಿಷ್ಣು ಹಾಗೂ ವಾಯು ಇಬ್ಬರಲ್ಲಿಯೂ ಪ್ರೇರಕತ್ವಧರ್ಮವು ಸಮಾನವಾಗಿ ಶ್ರುತವಾದ್ದರಿಂದ 'ಈಶಾನ' ಶಬ್ದವು ಉಭಯಸಾಧಾರಣವಾಯಿತು. ಆದ್ದರಿಂದಲೇ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳಿರುತ್ತವೆ ಎಂದು ತಿಳಿಯಬೇಕು. ಶ್ರುತಿಸಂಗತಿ, ಅಧಿಕರಣಸಂಗತಿ ಹಾಗೂ ವಿಷಯ ಸಂಶಯಗಳನ್ನು ಸೂಚನೆ ಮಾಡುತ್ತಿದ್ದಾರೆ 'ವಿಷ್ಣುರೇವ' ಇತ್ಯಾದಿ ಭಾಷ್ಯದಿಂದ.

**तत्वप्रकाशिका – 'अथातो ब्रह्मजिज्ञासा' इति जिज्ञास्यत्वं विष्णोरुक्तम् । तज्जिज्ञास्यत्वमीशानस्य काठके प्रतीयते ।**

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ ವಿಷ್ಣುವನ್ನೇ ಜಿಜ್ಞಾಸೆ ಮಾಡಬೇಕೆಂದು ಸಮರ್ಥಿಸಲಾಯಿತು. ಆದರೆ ಕಾಠಕದಲ್ಲಿ 'ಈಶಾನ' ಶಬ್ದ ಪ್ರತಿಪಾದ್ಯವ್ಯಕ್ತಿಯನ್ನು ಜಿಜ್ಞಾಸ್ಯನೆಂದು ಹೇಳಲಾಗಿದೆ.

**तत्वप्रकाशिका – अङ्गुष्ठमात्रः पुरुषो मध्य आत्मनि तिष्ठति । ईशानो भूतभव्यस्येत्युक्त्वा 'ऊर्ध्वं प्राणम्' इत्यादौ 'विश्वेदेवा उपासते' इति जिज्ञासोपासनायोरैक्यात् ।**

'ಅಂಗುಷ್ಠಮಾತ್ರಃ ಪುರುಷೋ ಮಧ್ಯೇ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ' 'ಅಂಗುಷ್ಠಪ್ರಮಾಣವುಳ್ಳ ಭೂತಭವಿಷ್ಯತ್‌ಕಾಲೀನವಾದ ವಿಷಯಗಳನ್ನು ಪ್ರೇರಣೆ ಮಾಡುವ ದೇಹದ

ಮಧ್ಯದಲ್ಲಿ ಕುಳಿತಿರುವವನೇ ಈಶಾನಶಬ್ದಪ್ರತಿಪಾದ್ಯನು' ಎಂದು ಹೇಳಿ ಮುಂದೆ 'ಊರ್ಧ್ವಂ ಪ್ರಾಣಮ್' ಇತ್ಯಾದಿ ಮಂತ್ರದಿಂದ ಆ ಈಶಾನನನ್ನು 'ವಿಶ್ವೇದೇವಾಃ ಉಪಾಸತೇ' ಎಂಬುದಾಗಿ ಸರ್ವದೇವತೆಗಳೂ, ಉಪಾಸನೆ ಮಾಡುತ್ತಾರೆಂದು ಹೇಳಲಾಗಿದೆ. ಜಿಜ್ಞಾಸೆಗೂ, ಉಪಾಸನೆಗೂ ಐಕ್ಯವಿರುವುದರಿಂದ ಇಂತಹ ಈಶಾನನನ್ನೇ ಜಿಜ್ಞಾಸೆ ಮಾಡಬೇಕೆಂದು ಹೇಳಿದಂತಾಯಿತು.

**तत्वप्रकाशिका – श्रवणादिरूपविचारो हि जिज्ञासोच्यते । उपासना च सैव ।**

ಶ್ರವಣಾದಿರೂಪ ವಿಚಾರಣೆ ಜಿಜ್ಞಾಸೆ ಎನಿಸಿಕೊಳ್ಳುತ್ತದೆ. ಉಪಾಸನೆಯೂ ಶ್ರವಣಾದಿರೂಪದ ಜಿಜ್ಞಾಸೆಯಾದ್ದರಿಂದ, ಉಪಾಸನೆಗೆ ಹಾಗೂ ಜಿಜ್ಞಾಸೆಗೆ ಐಕ್ಯವಿದೆ ಎಂದು ತಿಳಿಯಬೇಕು.

**तत्वप्रकाशिका – यदाहुः ।**

**'सोपासना च द्विविधा शास्त्राभ्यासस्वरूपिणी ।**
**ध्यानरूपा परा चैव तदङ्गं धारणादिकम्' इति।**

ಉಪಾಸನೆಯು ಜಿಜ್ಞಾಸಾರೂಪವಾಗಿಯೇ ಇದೆ ಎನ್ನಲು ಶ್ರೀಮದಾಚಾರ್ಯರ ಮಾತೇ ಆಧಾರವಾಗಿದೆ. 'ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ । ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾದಿಕಮ್' ಉಪಾಸನೆ ಎರಡು ಪ್ರಕಾರದಲ್ಲಿರುತ್ತದೆ, ಒಂದು ಶಾಸ್ತ್ರಾಭ್ಯಾಸ ರೂಪವಾದದ್ದು, ಮತ್ತೊಂದು ಯಮ, ನಿಯಮ ಪ್ರಾಣಾಯಾಮಾದಿ ಅಂಗಗಳಿಂದ ಕೂಡಿರುವ ಧ್ಯಾನರೂಪವಾದದ್ದು.

**तत्वप्रकाशिका – स च यदि विष्णोरन्यः स्यात्तदा जिज्ञास्यत्वं चान्यस्यैव प्रसज्जते । इत्यवश्यं निर्णयः । स ईशानोऽत्र विषयः ।**

ಹೀಗೆ ಉಪಾಸನೆಗೆ ಅಂದರೆ ಜಿಜ್ಞಾಸೆಗೆ ವಿಷಯನಾದವನು ವಿಷ್ಣುವಿಗಿಂತ ಬೇರೆಯವನಾದರೆ ಜಿಜ್ಞಾಸ್ಯತ್ವವೂ ಕೂಡ ಅವನಲ್ಲೇ ಬರುತ್ತದೆ. ಆದುದರಿಂದ ಸರ್ವದೇವೋಪಾಸ್ಯತ್ವವು ಯಾರ ಧರ್ಮವೆಂದು ಅವಶ್ಯವಾಗಿ ವಿವರಣೆ ಮಾಡಬೇಕು. ಆದ್ದರಿಂದ ಸರ್ವದೇವೋಪಾಸ್ಯತ್ವಕ್ಕೆ ವಿಷಯನಾದ ಈಶಾನನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ.

**तत्वप्रकाशिका – किं विष्णुर्वायुर्वेति सन्देहः । प्रागुक्तसाधारण्यमेव सन्देहबीजमिति भावः ।**

'ಈಶಾನ' ಶಬ್ದಪ್ರತಿಪಾದ್ಯನಾದವನು ವಿಷ್ಣುವೋ ಅಥವಾ ವಾಯುವೋ ? ಎಂದು ಸಂದೇಹ. ಹಿಂದೆ ಹೇಳಲ್ಪಟ್ಟ ಪ್ರೇರಕತ್ವಧರ್ಮವು ಸಾಧಾರಣವಾಗಿ ಇಬ್ಬರಲ್ಲಿಯೂ ಇರುವುದೇ ಸಂದೇಹಕ್ಕೆ ಕಾರಣ.

**तत्वप्रकाशिका – ईशानशब्दस्य रुद्रे प्रसिद्धावपि तद्विषयसंशयः सर्वदेवोपास्यत्वलिङ्गभिया गर्भस्रावेणैव निवृत्तः ।**

ವಸ್ತುತಃ 'ಈಶಾನ' ಶಬ್ದವು ರುದ್ರದೇವರಲ್ಲೂ ಪ್ರಸಿದ್ಧವಾಗಿದೆ. ಆದ್ದರಿಂದ ರುದ್ರವಿಷಯಕವಾದ ಸಂಶಯವನ್ನೂ ಕೂಡ ತೋರಿಸಬೇಕಿತ್ತಲ್ಲವೆ? ಎಂಬ ಪ್ರಶ್ನೆಯು 'ಸರ್ವದೇವೋಪಾಸ್ಯತ್ವ' ಧರ್ಮ ಹೇಳಿರುವುದರಿಂದ ರುದ್ರನಲ್ಲಿ ಈ ಧರ್ಮವು ಇಲ್ಲದ ಕಾರಣ ರುದ್ರದೇವರು ಸಂದೇಹಕೋಟಿಯಲ್ಲಿ ವಿವಕ್ಷಿತರಾಗುವುದಿಲ್ಲವೆಂದು ಗರ್ಭಸ್ರಾವದಿಂದಲೇ ಪರಿಹಾರವಾಯಿತು.

**तत्वप्रकाशिका – य उन्नयति तमित्यन्वयः । सयुक्तिकं पूर्वपक्षयति – स चेति ।।**

ಶ್ರುತಿಯಲ್ಲಿ 'ಯ ಉನ್ನಯತಿ ತಮ್' 'ಯಾರು ಮೇಲಕ್ಕೆ ಒಯ್ಯುತ್ತಾರೋ ಅವರು' ಎಂದು ಅನ್ವಯವನ್ನು ತಿಳಿಯಬೇಕು. ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ಸ ಚ' ಇತ್ಯಾದಿ ಭಾಷ್ಯದ ಮಾತುಗಳಿಂದ ತೋರಿಸುತ್ತಿದ್ದಾರೆ.

**तत्वप्रकाशिका – स चेशानो वायुरेव भवेत् । ईशानस्योर्ध्वं प्राणमुन्नयतीति वाक्ये प्राणव्यवस्थापकत्वमध्यमत्वसर्वदेवोपास्यत्वश्रवणात् ।**

ಶ್ರುತ್ಯುಕ್ತನಾದ ಈಶಾನನು ವಾಯುದೇವರೇ ಆಗಿದ್ದಾರೆ. ಏಕೆಂದರೆ 'ಊರ್ಧ್ವಂ ಪ್ರಾಣಮ್ ಉನ್ನಯತಿ' ಎಂಬ ವಾಕ್ಯದಲ್ಲಿ 'ಪ್ರಾಣವ್ಯವಸ್ಥಾಪಕತ್ವ', 'ಮಧ್ಯಮತ್ವ' ಮತ್ತು 'ಸರ್ವದೇವೋಪಾಸತ್ವ' ಧರ್ಮಗಳನ್ನು ಈಶಾನನಲ್ಲಿ ಹೇಳಿರುವುದರಿಂದ.

**तत्वप्रकाशिका – न चैतल्लिङ्गश्रवणेऽपि कुतोऽयं वायुर्विष्णुः किं न स्यादिति ।**

ಈ ಲಿಂಗಗಳು ಇದ್ದರೂ ಕೂಡ 'ಈಶಾನ' ಶಬ್ದಕ್ಕೆ ವಾಯುದೇವರೇ ಎಂಬ ಅರ್ಥವನ್ನು ಸ್ವೀಕರಿಸಲು ಏನು ಕಾರಣ? 'ಈಶಾನ' ಪದಕ್ಕೆ 'ವಿಷ್ಣು' ಎಂಬ ಅರ್ಥವನ್ನು ಏಕೆ ಸ್ವೀಕರಿಸಬಾರದು?

**तत्वप्रकाशिका – 'यथा सम्राडेवाधिकृतान्विनियुङ्क्ते एतान् ग्रामान् अधितिष्ठस्वैतान् ग्रामाधितिष्ठस्व इत्येवमेवैष प्राण इतरान् प्राणान् पृथक्पृथगेव सन्निधत्ते' इति प्राणव्यवस्थापकत्वस्य वायुलिङ्गत्वश्रवणात् ।**

ಹೀಗೆ ಪ್ರಶ್ನಿಸಬಾರದು ಏಕೆಂದರೆ, 'ಯಥಾ ಸಮ್ರಾಡೇವಾಧಿಕೃತಾನ್ವಿನಿಯುಂಗುಕ್ತೆ ಏತಾನ್ ಗ್ರಾಮಾನ್ ಅಧಿತಿಷ್ಠಸ್ವೈತಾನ್ ಗ್ರಾಮಾಧಿತಿಷ್ಠಸ್ವ ಇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್

ಪೃಥಕ್‌ಪೃಥಗೇವ ಸನ್ನಿಧತ್ತೇ' 'ಯಾವರೀತಿಯಾಗಿ ಸಾರ್ವಭೌಮನಾದ ರಾಜನು ತನ್ನ ಅಧಿಕಾರದಲ್ಲಿರುವ ಪುರುಷರನ್ನು ಕುರಿತು, ಈ ಊರುಗಳ ಮೇಲೆ ನೀನು ಅಧಿಕಾರನಿಯಂತ್ರಣ ಮಾಡು ಎಂದು ನಿಯೋಗಮಾಡುತ್ತಾನೆ. ಅದೇ ರೀತಿ ಮುಖ್ಯಪ್ರಾಣದೇವರು ಬೇರೆ ಪ್ರಾಣ, ಅಪಾನ ಮೊದಲಾದ ಅಧೀನ ವಾಯುದೇವತೆಗಳನ್ನು ಶರೀರದಲ್ಲಿ ಬೇರೆಬೇರೆ ಸ್ಥಳಗಳನ್ನು ನಿಯತ್ರಣ ಮಾಡಲು ಆಜ್ಞೆಮಾಡುತ್ತಾರೆ. ಈ ರೀತಿಯಾಗಿ ಪ್ರಾಣ, ಅಪಾನದಿಗಳನ್ನು ವ್ಯವಸ್ಥೆ ಮಾಡುವ ವಾಯುದೇವರ ಧರ್ಮವನ್ನು ಇಲ್ಲಿ ಹೇಳಲಾಗಿದೆ.

**तत्वप्रकाशिका – 'अथेममेव नाप्नोद्योऽयं मध्यमः प्राणः' इति मध्यमत्वस्य तद्धर्मत्वोक्तेः ।**

ಅದರಂತೆ 'ಅಥೇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ' 'ಮೃತ್ಯು' ಎಂಬ ಪ್ರಾಣನು ಮಧ್ಯಮ ಪ್ರಾಣನೆನಿಸಿದ್ದಾನೆ, ಅಂದರೆ ಚಕ್ರಾದಿ ದೇವತೆಗಳಿಗಿಂತ ಶ್ರೇಷ್ಠನೂ ಪರಮಾತ್ಮನಿಗಿಂತ ಕನಿಷ್ಠನೂ ಆಗಿದ್ದಾನೆಂದರ್ಥ. ಇಂಥಹ ಪ್ರಾಣನು ಪ್ರಾಪ್ತನಾಗಲಿಲ್ಲ'. ಈ ಶ್ರುತಿಯಲ್ಲಿ ಪ್ರಾಣನಿಗೆ ಮಧ್ಯಮತ್ವ ಧರ್ಮವನ್ನು ಹೇಳಲಾಗಿದೆ.

**तत्वप्रकाशिका – कुविदङ्गेति तस्य सर्वदेवोपास्यत्वप्रतीतेश्च ॥**

ಮತ್ತು 'ಕುವಿದಂಗ' ಎಂಬ ಮಂತ್ರದಿಂದ ಆ ವಾಯದೇವರಿಗೆ ಸರ್ವದೇವೋಪಾಸತ್ವವೂ ಕೂಡ ಶ್ರುತವಾಗಿದೆ.

**तत्वप्रकाशिका – अतो वाय्वेकनिष्ठलिङ्गश्रवणादीशानो वायुरेवेति हेतोस्तस्यैव जिज्ञास्यत्वम् ।**

ಆದ್ದರಿಂದ ಕೇವಲ ವಾಯುದೇವರಲ್ಲಿ ಮಾತ್ರ ಇರುವ ಧರ್ಮವನ್ನು 'ಊರ್ಧ್ವಂ ಪ್ರಾಣಂ' ಎಂಬ ಶ್ರುತಿಯಲ್ಲಿ ಹೇಳಿರುವ ಕಾರಣ 'ಈಶಾನ' ಶಬ್ದದಿಂದ ಪ್ರತಿಪಾದ್ಯರಾದವರು ವಾಯುದೇವರೇ ಆಗುತ್ತಾರೆ. ಅವರೇ ಜಿಜ್ಞಾಸ್ಯರೂ ಕೂಡ ಆಗುತ್ತಾರೆ ಎಂದು ತಿಳಿಯಬೇಕು.

**तत्वप्रकाशिका – नच वाच्यं नेदमनिष्टं वायोरपि जिज्ञास्यताभ्युपगमाद् विष्णुजिज्ञास्यत्वस्याबाधादिति ।**

ವಾಯುದೇವರು ಜಿಜ್ಞಾಸ್ಯರೇ ಆಗಿರಲಿ, ಆದರೂ ವಿಷ್ಣುಜಿಜ್ಞಾಸ್ಯತ್ವಕ್ಕೆ ಬಾಧವು ಬರುವುದಿಲ್ಲ ಆದ್ದರಿಂದ ಈ ಆಕ್ಷೇಪವು ಅನಿಷ್ಟ ಆಗಿಲ್ಲವಲ್ಲ? ಎಂದು ಪ್ರಶ್ನಿಸಬಾರದು.

**तत्वप्रकाशिका – वायोः सर्वदेवोपास्यत्वे तस्य मोक्षदातृत्वापातात् । नहि प्राप्तसमस्तैश्वर्याणां देवानां प्रयोजनान्तरमस्ति ।**

ವಾಯುದೇವರು ಸರ್ವದೇವೋಪಾಸ್ಯರೆಂದು ನಿಶ್ಚಯವಾದರೆ, ಮೋಕ್ಷದಾತೃತ್ವವೂ ಕೂಡ ಅವರಲ್ಲಿಯೇ ಬರುತ್ತದೆ. ಏಕೆಂದರೆ ಸಮಸ್ತ ಐಶ್ವರ್ಯವನ್ನು ಹೊಂದಿರುವಂತಹ ದೇವತೆಗಳಿಗೆ ಮೋಕ್ಷವನ್ನು ಬಿಟ್ಟ ಬೇರೆ ಯಾವ ಪ್ರಯೋಜನಗಳೂ ಕೂಡ ಇರುವುದಿಲ್ಲ.

**तत्वप्रकाशिका – तथा च किं विष्णुजिज्ञासानियमेनेति विष्णुरेव मोक्षार्थं जिज्ञास्य इत्यस्यानुपपत्तिरिति भावः ।**

ಆದ್ದರಿಂದ ಮೋಕ್ಷಕ್ಕೋಸ್ಕರ ವಿಷ್ಣು ಜಿಜ್ಞಾಸೆ ಮಾಡಬೇಕೆಂಬ ನಿಯಮವಾದರೂ ಏಕೆ? ಎಂಬುದಾಗಿ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಹೀಗೆ ಮೋಕ್ಷಕ್ಕೋಸ್ಕರ ವಿಷ್ಣು ಜಿಜ್ಞಾಸ್ಯನಾಗಿದ್ದಾನೆಂಬ ಮಾತುಗಳಿಗೆ ವೈಯರ್ಥ್ಯದೋಷವು ಬರುತ್ತದೆಂಬುದು ಭಾಷ್ಯದ ಅಭಿಪ್ರಾಯ.

**तत्वप्रकाशिका – अयं मन्त्रार्थः । अङ्गेति सम्बोधनम् । ये देवा वायोर्नमस्कारादिना ज्ञानादिगुणपूर्णा अज्ञानाद्यवद्यविधुराश्च पुरा आसंस्ते कचिद्रहस्यस्थाने सूर्येण साकं ज्ञानिने संसारबाधवद्भिः शरणं प्राप्ताय यवे बुद्धिमावासयंस्तद्विषयामकुर्वन्निति ।**

'ಕುವಿದಂಗ' ಇತ್ಯಾದಿ ಮಂತ್ರದ ಅರ್ಥ ಹೀಗಿದೆ - 'ಅಂಗ' ಎಂಬುದು ಸಂಬೋಧವಾಚಕಪದ. ಯಾವದೇವತೆಗಳು ವಾಯುದೇವನ ಉಪಾಸನೆಯಿಂದ ಅಂದರೆ ನಮಸ್ಕಾರಾದಿಸೇವೆಯಿಂದ ಜ್ಞಾನಾದಿಗುಣಪೂರ್ಣರಾಗಿದ್ದಾರೋ ಮತ್ತು ಅಜ್ಞಾನಾದಿದೋಷಗಳಿಂದ ರಹಿತರಾಗಿದ್ದಾರೋ ಅವರು ಒಮ್ಮೆ ಏಕಾಂತ ಸ್ಥಳದಲ್ಲಿ ಸೂರ್ಯನ ಜೊತೆಗೆ ಕೂಡಿಕೊಂಡು ಜ್ಞಾನಿಗಳು ಮತ್ತು ಸಂಸಾರಿಗಳು ಯಾರನ್ನು ಶರಣು ಹೊಂದುತ್ತಾರೋ ಅಂತಹ ವಾಯುದೇವರನ್ನು ಶರಣಾದರು. ಮತ್ತು ಅಂತಹ ವಾಯುದೇವರಲ್ಲಿ ತಮ್ಮ ಬುದ್ಧಿಯನ್ನಿಟ್ಟು ಧ್ಯಾನದಲ್ಲಿ ನಿರತರಾದರು ಎಂದು.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ॥ विष्णुरेवेशानो भवेत् । 'मध्ये वामनम्' इति वामनश्रुतेः ।**

ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತಃ' ಇತ್ಯಾದಿ ಭಾಷ್ಯದಿಂದ. 'ಮಧ್ಯೇ ವಾಮನಮ್' ಎಂಬ ವಾಮನಶ್ರುತಿಯ ಬಲದಿಂದ 'ಈಶಾನ' ಶಬ್ದಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ.

**तत्वप्रकाशिका – तस्याश्च विष्णौ महायोगरुढिसिद्धायास्तत्प्रमापकत्वात् । अतो विष्णोरीशानत्वेन तस्यैव जिज्ञास्यत्वमिति भावः ।**

ವಾಮನಶಬ್ದವಾದರೂ ಮಹಾಯೋಗ ಮತ್ತು ವಿದ್ವದ್‌ರೂಢಿಗಳಿಂದ ವಿಷ್ಣುಪರವೇ ಆಗಿದೆ ಎಂದು ನಿಶ್ಚಯವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿರುವ 'ಈಶಾನ' ಪದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಅವನೇ ಜಿಜ್ಞಾಸ್ಯನಾಗುತ್ತಾನೆಂದು ಅಭಿಪ್ರಾಯ.

**तत्वप्रकाशिका – अत्र प्रमितपदं श्रुतेर्निरवकाशत्वसूचनार्थम् । ननु वायुलिङ्गसद्भावादीशानो वायुरेव किं न स्यादित्यत आह – न हीति ।।**

ಭಾಷ್ಯದಲ್ಲಿ 'ಪ್ರಮಿತ' ಎಂಬ ಪದವು ಶ್ರುತಿಯಲ್ಲಿರುವ 'ವಾಮನ' ಶಬ್ದಕ್ಕೆ ನಿರವಕಾಶತ್ವವನ್ನು ಸೂಚನೆ ಮಾಡುತ್ತಿದೆ.

ಶ್ರುತಿಯಲ್ಲಿ ವಾಯುದೇವರ ಲಿಂಗಗಳು ಇರುವುದರಿಂದ 'ಈಶಾನ' ಶಬ್ದಪ್ರತಿಪಾದ್ಯರು ವಾಯುದೇವರೇ ಏಕಾಗಬಾರದು? ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – भवेत्सत्यामपि श्रुतौ लिङ्गेन वायुत्वनिश्चयो यदि श्रुतेर्लिङ्गं बलवद्भवेन्न च तदस्तीत्यर्थः । अनेन शब्दादेव इत्येवकाराभिप्रायो वर्णितो भवति । कुतो न श्रुतेर्लिङ्गं बलवदित्यत आह – श्रुतिरिति ।।**

ಶ್ರುತಿ ಇದ್ದರೂ ಕೂಡ ಲಿಂಗದ ಬಲದಿಂದ ವಾಯುದೇವರೇ ಪ್ರತಿಪಾದ್ಯರೆಂದು ನಿಶ್ಚಯಿಸಬಹುದಿತ್ತು, ಒಂದುವೇಳೆ ಶ್ರುತಿಗಿಂತ ಲಿಂಗವು ಬಲಿಷ್ಠವಾಗಿದ್ದ ಪಕ್ಷದಲ್ಲಿ, ನಿಮ್ಮ ಮಾತು ಸರಿಯಾಗುತ್ತಿತ್ತು. ಆದರೆ ಇದನ್ನು ಹೇಗೆ ಸಾಧಿಸುತ್ತೀರಿ? ಎಂಬ ಪ್ರಶ್ನೆಗೆ 'ಶ್ರುತಿ' ಇತ್ಯಾದಿ ಭಾಷ್ಯವು ಹೊರಟಿದೆ. ಹಾಗೆ ನಿಯಮವಿಲ್ಲ. ಹೀಗೆ ಹೇಳಿದ್ದರಿಂದ 'ಶಬ್ದಾದೇವ' ಎಂಬ ಸೂತ್ರದಲ್ಲಿರುವ 'ಏವ' ಶಬ್ದದ ಅಭಿಪ್ರಾಯವನ್ನು ವರ್ಣಿಸಿದಂತಾಯಿತು.

**तत्वप्रकाशिका – नाममात्रेण निर्देशः श्रुतिः । असाधारणधर्मो लिङ्गम् । निराकाङ्क्षपदानि वाक्यम् । एकप्रमेयप्रतिपादकानेकवाक्यानि प्रकणम् । अनेकप्रमेय-प्रतिपादकमेकार्थे तात्पर्ययुक्तं स्थानम् । समानोक्तिः समाख्या ।**

ಸ್ಕಾಂದಪುರಾಣದ ಶ್ಲೋಕದಲ್ಲಿರುವ ಪ್ರತಿಯೊಂದು ಶಬ್ದಗಳ ಅರ್ಥ ಹೀಗಿದೆ. ಶ್ರುತಿ ಎಂದರೆ ನಾಮಮಾತ್ರದಿಂದ ಅರ್ಥವನ್ನು ನಿರ್ದೇಶ ಮಾಡುವುದೇ ಶ್ರುತಿ. ಅಸಾಧಾರಣಧರ್ಮವೇ ಲಿಂಗವಾಗಿದೆ. ಯಾವ ಪದಸಮೂಹಗಳಲ್ಲಿ ಪರಸ್ಪರ ಆಕಾಂಕ್ಷೆಯು ಶಾಂತವಾಗಿರುತ್ತದೋ, ಅಂತಹ ಪದಸಮೂಹವನ್ನೇ ವಾಕ್ಯವೆನ್ನುತ್ತಾರೆ. ಒಂದೇ ವಿಷಯವನ್ನು ಪ್ರತಿಪಾದನೆ ಮಾಡುವ ಅನೇಕ ವಾಕ್ಯಗಳ ಗುಂಪನ್ನು 'ಪ್ರಕರಣ'ವೆನ್ನುತ್ತಾರೆ. ಅನೇಕ ಪ್ರಮೇಯವನ್ನು ಪ್ರತಿಪಾದನೆ ಮಾಡುವ, ಒಂದೇ ಅರ್ಥದಲ್ಲಿ ತಾತ್ಪರ್ಯವುಳ್ಳ ಪ್ರಕರಣಗಳ ಗುಂಪನ್ನೇ 'ಸ್ಥಾನ'ವೆನ್ನುತ್ತಾರೆ. ಬೇರೆಕಡೆ ಸಮಾನವಾದ ಅರ್ಥವನ್ನು ಪ್ರತಿಪಾದಿಸುವಂತಹ ವಾಕ್ಯವನ್ನು 'ಸಮಾಖ್ಯಾ' ಎನ್ನುತ್ತಾರೆ.

**तत्वप्रकाशिका – तत्र श्रुतेः साक्षादर्थधीजनकत्वात् सर्वतः प्राबल्यम् । लिङ्गस्यानुमापकतयाऽर्थबोधकत्वात् तदानन्तर्यम् ।**

ಶ್ರುತಿಯು ನೇರವಾಗಿ ಅರ್ಥಜ್ಞಾನವನ್ನು ತಂದುಕೊಡುವುದರಿಂದ ಎಲ್ಲಾ ಪ್ರಮಾಣಗಳಿಗಿಂತಲೂ ಅತ್ಯಂತ ಶ್ರೇಷ್ಠವಾಗಿದೆ. ಲಿಂಗವು ಅನುಮಾನದ ಮೂಲಕವಾಗಿ ಅಂದರೆ ವ್ಯಾಪ್ತಿಜ್ಞಾನ ಮೊದಲಾದುವುಗಳನ್ನು ಅನುಸರಿಸುವ ಮೂಲಕ ಅರ್ಥನಿಶ್ಚಯವನ್ನು ತಂದುಕೊಡುವ ಕಾರಣ ಎರಡನೆಯ ಸ್ಥಾನದಿಂದ ಪ್ರಾಬಲ್ಯವನ್ನು ಹೊಂದಿದೆ.

**तत्वप्रकाशिका – वाक्यस्यानेकार्थकथनद्वाराऽर्थानुमापकत्वात् ततोऽपि दौर्बल्यम् ।**

ವಾಕ್ಯದಲ್ಲಿ ಅನೇಕ ಪದಗಳಿರುವುದರಿಂದ ಆ ಎಲ್ಲಾ ಪದಗಳ ಅರ್ಥವನ್ನು ತಿಳಿಯುವ ಮೂಲಕ ಪ್ರಮೇಯವನ್ನು ತಿಳಿಯಬೇಕಾದ್ದರಿಂದ ಲಿಂಗಕ್ಕಿಂತಲೂ ದುರ್ಬಲವಾಗಿದೆ.

**तत्वप्रकाशिका – प्रकरणस्य बह्वर्थपरत्वेनार्थानुमितिहेतुत्वात्तदवमता ।**

ಪ್ರಕರಣವು ಅನೇಕ ವಾಕ್ಯಗಳ ಪುಂಜವಾದ್ದರಿಂದ ಅನೇಕ ಪದಗಳ ಅರ್ಥವನ್ನು ತಿಳಿಸುವ ಮೂಲಕ ವಾಕ್ಯಗಳ ಅರ್ಥವನ್ನು ತಿಳಿದು ಅನಂತರ ಪ್ರಮೇಯದ ಜ್ಞಾನವು ಬರುವ ಕಾರಣ ವಾಕ್ಯಕ್ಕಿಂತಲೂ ದುರ್ಬಲವಾಗಿದೆ.

**तत्वप्रकाशिका – स्थानस्यातिबह्वर्थकथनेनाभिप्रायतोऽर्थानुमितिजनकस्य ततोऽपि दौर्बल्यम् ।**

ಸ್ಥಾನವಾದರೂ ಸಹ ಅನೇಕ ಪ್ರಕರಣಗಳ ಜ್ಞಾನವನ್ನು ಅಪೇಕ್ಷಿಸಿರುವ ಕಾರಣ ಆದರಿಂದ ಪ್ರತೀತವಾಗುವ ಅರ್ಥವು ಪ್ರಕರಣಕ್ಕಿಂತ ಅನಂತರ ಬರುವುದರಿಂದ ಸ್ಥಾನವು ಪ್ರಕರಣಕ್ಕಿಂತ ದುರ್ಬಲವಾಗಿದೆ.

ಒಂದು ಸ್ಥಾನದಲ್ಲಿರುವ ಅಭಿಧೇಯವಾದ ಅರ್ಥನಿಶ್ಚಯಕ್ಕೆ ಸಮಾನವಾದ ಮತ್ತೊಂದು ಸ್ಥಾನದಲ್ಲಿರುವ ವಾಕ್ಯದಿಂದ ಅರ್ಥನಿಶ್ಚಯವನ್ನು ಮಾಡಬೇಕು. ಅಂದರೆ ಸಮಾಖ್ಯಾಪ್ರಮಾಣವು ಸಾದೃಶ್ಯದಿಂದ ಅರ್ಥಕ್ಕೆ ಅನುಮಾಪಕವಾಗಿದೆ. ಆದ್ದರಿಂದ ಉಳಿದೆಲ್ಲಾ ಪ್ರಮಾಣಗಳಿಗಿಂತ ದುರ್ಬಲವಾಗಿದೆ.

**तत्वप्रकाशिका – अत्रापि पूर्ववन्निनरवकाशात् स्वभावदुर्बलादपि स्वभावप्रबलसावकाशस्य दौर्बल्यमित्यादि द्रष्टव्यम् ।**

ವಾಮನಾಧಿಕರಣ (೧-೩-೭)

ಇಲ್ಲಿಯೂ ಸಹ 'ಉಪಕ್ರಮೋಪಸಂಹಾರೋ' ಎಂಬಲ್ಲಿ ಹೇಳಿದ ಪ್ರಕಾರ ಸ್ವಭಾವತಃ ದುರ್ಬಲವಾಗಿದ್ದರೂ ನಿರವಕಾಶವಾಗಿದ್ದರೆ ಬಲಿಷ್ಠವಾಗುತ್ತದೆ. ಸ್ವಭಾವತಃ ಪ್ರಬಲವಾಗಿದ್ದರೂ ಸಾವಕಾಶವಾಗಿದ್ದರೆ ದುರ್ಬಲವೇ ಆಗುತ್ತದೆ. ಅಂದರೆ ಮುಂದಿನ ಪ್ರಮಾಣಗಳಿಗಿಂತ ಹಿಂದಿನ ಪ್ರಮಾಣಗಳು ಶ್ರೇಷ್ಠವೇ ಆಗಿವೆ. ಒಂದು ವೇಳೆ ನಿರವಕಾಶವಾಗಿದ್ದಲ್ಲಿ ಮುಂದಿನ ಪ್ರಮಾಣವಾಗಿದ್ದರೂ ಸಾವಕಾಶವಾದ ಹಿಂದಿನ ಪ್ರಮಾಣಕ್ಕಿಂತ ಶ್ರೇಷ್ಠವಾಗುತ್ತದೆಂದು ತಿಳಿಯಬೇಕು.

**तत्वप्रकाशिका – अत्र विरुद्धैतेषां समवाये सत्येवं पूर्वपूर्वेणोत्तरोत्तरबाधयाग मार्थनिर्णयो भवतीत्यर्थः ।**

ಸ್ಕಾಂದಪುರಾಣದ ಈ ವಚನದಲ್ಲಿ ವಿರುದ್ಧವಾದ ಶ್ರುತಿ ಲಿಂಗಾದಿಗಳು ಒಂದೇಕಡೆ ಸೇರಿದಾಗ ಹಿಂದಿನ ಪ್ರಮಾಣಗಳಿಗಿಂತ, ಮುಂದಿನ ಪ್ರಮಾಣಗಳು ಬಾಧಿತವಾಗುತ್ತವೆಂಬುದು ಆಗಮಾರ್ಥದ-ನಿರ್ಣಯವೆಂದು ತಿಳಿಯಬೇಕು.

**तत्वप्रकाशिका – नच यथास्थित एव क्रमः । आत्मा प्रकरणदित्यत्र समाख्यायाः प्रकरणेन बाधितत्वात् ।**

ಈ ಮಾತಿನಲ್ಲಿ ಪ್ರಮಾಣಗಳ ಕ್ರಮ ಹೇಗಿರುವುದೊ ಹಾಗೆಯೇ ಪ್ರಾಬಲ್ಯವನ್ನು ತಿಳಿಯಬಾರದು ಏಕೆಂದರೆ 'ಆತ್ಮಾಪ್ರಕರಣಾತ್' ಎಂಬ ಸೂತ್ರದಲ್ಲಿ ಭಾಷ್ಯಕಾರರು ಪ್ರಕರಣದಿಂದ ಸಮಾಖ್ಯಾಪ್ರಮಾಣಕ್ಕೆ ಬಾಧವನ್ನು ಹೇಳಿದ್ದಾರೆ. ಅಂದರೆ ಸ್ಕಾಂದಪುರಾಣದಲ್ಲಿ ಸಮಾಖ್ಯಾಪ್ರಮಾಣಕ್ಕಿಂತ ಅನಂತರ ಪ್ರಕರಣವು ಪಠಿತವಾಗಿರುವುದರಿಂದ ಸಮಾಖ್ಯಾಕ್ಕಿಂತ ಪ್ರಕರಣವು ಬಾಧಿತವಾಗಬೇಕಾದೀತು. ಆದ್ದರಿಂದ ಈ ಕ್ರಮವೇ ಎಲ್ಲೆಡೆ ಅನ್ವಯಿಸುತ್ತದೆಂಬುದು ಭಾಷ್ಯಕಾರರ ಅಭಿಪ್ರಾಯವಲ್ಲ.

**तत्वप्रकाशिका – तदाह जैमिनिः 'श्रुतिलिङ्गवाक्यप्रकरणस्थानसमाख्यानां समवाये परदौर्बल्यमर्थविप्रकर्षात्' इति ।**

ಜೈಮಿನಿಋಷಿಗಳು ಹೀಗೆ ಹೇಳಿದ್ದಾರೆ - 'ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್' ಶ್ರುತ್ಯಾದಿ ಪ್ರಮಾಣಗಳ ವಿರೋಧವು ಪೂರ್ಣವಾಗಿ ಒಂದೆಡೆ ಪ್ರಾಪ್ತವಾದರೆ ಮುಂದಿನ ಪ್ರಮಾಣಗಳು ಹಿಂದಿನ ಪ್ರಮಾಣಕ್ಕಿಂತ ದುರ್ಬಲವಾಗುತ್ತವೆ. ಏಕೆಂದರೆ ಅರ್ಥಪ್ರತೀತಿಯನ್ನು ತಂದುಕೊಡುವಲ್ಲಿ ಹಿಂದಿನ ಪ್ರಮಾಣಗಳಿಗಿಂತ ಮುಂದಿನ ಪ್ರಮಾಣಗಳಲ್ಲಿ ವಿಳಂಬವಿರುತ್ತದೆ.

**तत्वप्रकाशिका – भाष्यकारोऽपि । 'वाक्यं प्रकरणं स्थानं सामाख्या च तथाविधा' इति ।**

ಭಾಷ್ಯಕಾರರೂ ಸಹ 'ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾ' ಎಂಬುದಾಗಿ ಕ್ರಮವನ್ನು ಹೇಳಿದ್ದಾರೆ.

**तत्वप्रकाशिका – श्रुतिलिङ्गवाक्यानां साक्षाद्विप्रतिपन्नार्थनिष्ठत्वे श्रुत्यादित्वेनैव ज्ञापकत्वम् ।**

ಶ್ರುತಿ, ಲಿಂಗ, ವಾಕ್ಯಗಳಿಗೆ ವಿಪ್ರತಿಪನ್ನವಾದ ಅರ್ಥದಲ್ಲಿ, ಸಾಕ್ಷಾತ್ ಪ್ರವೃತ್ತಿ ಇದ್ದರೆ ಮಾತ್ರ ಶ್ರುತ್ಯಾದಿಗಳೇ ಸ್ವಭಾವದಿಂದ ಆಯಾ ಅರ್ಥಗಳನ್ನು ನಿಶ್ಚಯ ಮಾಡಿಕೊಡುತ್ತವೆ.

**तत्वप्रकाशिका – उपक्रमोपसंहारयोः श्रुतत्वे तन्निश्चायकतया लिङ्गत्वमन्यत्र चेत्प्रकरणनिश्चायकत्वेन ।**

ಉಪಕ್ರಮೋಪಸಂಹಾರಗಳಲ್ಲಿ ಈ ಪ್ರಮಾಣಗಳು ಪ್ರಾಪ್ತವಾದರೆ ಉಪಕ್ರಮೋಪಸಂಹಾರಗಳ ನಿಶ್ಚಯ ಮಾಡಿ ಅನಂತರ ಅವುಗಳ ಮೂಲಕ ವಿಪ್ರತಿಪನ್ನವಾದ ಅರ್ಥವನ್ನು ನಿಶ್ಚಯ ಮಾಡಲು ಇವು ಕಾರಣವಾಗುತ್ತವೆ. ಮತ್ತು ಉಪಕ್ರಮೋಪಸಂಹಾರಗಳನ್ನು ಬಿಟ್ಟು ಬೇರೆಕಡೆ ಪ್ರಾಪ್ತವಾದರೆ ಆವಾಗ ಪ್ರಕರಣವನ್ನು ನಿಶ್ಚಯ ಮಾಡಿ ವಿಪ್ರತಿಪನ್ನವಾದ ಅರ್ಥದ ನಿಶ್ಚಯ ಮಾಡಲು ಕಾರಣಗಳಾಗುತ್ತವೆ.

**तत्वप्रकाशिका – उपक्रमोपसंहरावपि श्रुत्यादिना सत्यामर्थसिद्धौ तात्पर्यलिङ्गे । अन्यथा प्रकरणनिश्चायकौ । समाख्यापि साक्षाद्विप्रतिपन्ननिष्ठा समाख्यात्वेनैव लिङ्गम् । अन्यथा प्रकरणनिश्चायकत्वेन भवति । लिङ्गवाक्ययोः साक्षादसाक्षात्त्वेन भेदः । 'गोत्रभिदं प्रवक्षणा अभिनत्पर्वतानाम्' इत्यादिवदिति।**

ಉಪಕ್ರಮೋಪಸಂಹಾರಗಳೂ ಸಹ ತಮಗಿಂತ ಬೇರೆ ಕಡೆ ಪ್ರಾಪ್ತವಾದ ಶ್ರುತ್ಯಾದಿ-ಪ್ರಮಾಣಗಳಿಂದ, ವಿಪ್ರತಿಪನ್ನವಾದ ಅರ್ಥವನ್ನು ನಿಶ್ಚಯ ಮಾಡಿದ ಮೇಲೆ ಆ ವಿಷಯದಲ್ಲಿ ತಾತ್ಪರ್ಯಸೂಚಕವಾಗುತ್ತವೆ. ಶ್ರುತ್ಯಾದಿ ಪ್ರಮಾಣಗಳು ವಿಪ್ರತಿಪನ್ನ ವಿಷಯದಲ್ಲಿ ನಿಶ್ಚಾಯಕ-ವಾಗದಿದ್ದಾಗ ಉಪಕ್ರಮ ಮತ್ತು ಉಪಸಂಹಾರಗಳು ಪ್ರಕರಣಕ್ಕೆ ನಿಶ್ಚಾಯಕಗಳಾಗುತ್ತವೆ. ಇದರಂತೆ ಸಮಾಖ್ಯಾಪ್ರಮಾಣವೂ ಕೂಡ ವಿಪ್ರತಿಪನ್ನವಿಷಯದಲ್ಲಿ ನೇರವಾಗಿದ್ದರೆ ಸ್ವತಃ ಅದೇ ವಿಪ್ರತಿಪನ್ನವಾದ ಅರ್ಥವನ್ನು ನಿಶ್ಚಯಮಾಡುತ್ತದೆ. ಒಂದು ವೇಳೆ ಸಾಕ್ಷಾತ್ತಾಗಿ ಇಲ್ಲದಿದ್ದರೆ ಪ್ರಕರಣ-ನಿಶ್ಚಾಯಕತ್ವದ ಮೂಲಕವಾಗಿ ವಿಪ್ರತಿಪನ್ನವಾದ ಅರ್ಥವನ್ನು ನಿಶ್ಚಯ ಮಾಡುತ್ತದೆ. ಲಿಂಗ ಮತ್ತು ವಾಕ್ಯ ಇವುಗಳೆರಡರಲ್ಲಿ ಒಂದು ನೇರವಾಗಿ ಧರ್ಮಪ್ರತಿಪಾದಕವಾಗುತ್ತದೆ. ಮತ್ತೊಂದು ಪರಂಪರೆಯಿಂದ ಧರ್ಮಪ್ರತಿಪಾದಕವಾಗುತ್ತದೆ. 'ಗೋತ್ರಭಿದಂ' ಮತ್ತು 'ಅಭಿನತ್ಪರ್ವತಾನಾಮ್'

ಎಂಬುದು ಉದಾಹರಣೆ. ಅಸಾಧಾರಣಧರ್ಮ ವಾಚಕವಾದ 'ಗೋತ್ರಭಿತ್' ಎಂಬ ಪದವು ಬೇರೆ ಪದಾರ್ಥವನ್ನು ಅಪೇಕ್ಷೆ ಪಡದಿರುವುದರಿಂದ 'ಇಂದ್ರ' ಎಂಬರ್ಥವನ್ನು ತಿಳಿಸುವುದರಲ್ಲಿ ಲಿಂಗವಾಗುತ್ತದೆ. 'ಅಭಿನತ್ಪರ್ವತಾನಾಮ್' ಎಂಬ ವಾಕ್ಯವು ತನ್ನಲ್ಲಿರುವ ಪದಗಳ ಅರ್ಥವನ್ನು ತಿಳಿಸಿದ ಅನಂತರ 'ಪರ್ವತಭೇಧನ' ಎಂಬ ಧರ್ಮವನ್ನು ತಿಳಿಸುತ್ತದೆ. ಆದ್ದರಿಂದ ಇದಕ್ಕೆ ವಾಕ್ಯವೆಂದು ಹೆಸರು.

**तत्वप्रकाशिका – नन्वस्तु श्रुतेः स्वभावप्राबल्यं तथापि बाहुल्येन लिङ्गानामपि प्राबल्यादनिर्णय एवेत्यत आह – तच्चेति ।।**

ಶ್ರುತಿಗೆ ಸ್ವಾಭಾವಿಕವಾಗಿ ಪ್ರಾಬಲ್ಯವಿದೆ. ಆದರೂ ಸಹ ಬಲಿಷ್ಠವೇ ಆದ ಅನೇಕ ಲಿಂಗಗಳು ಸೇರಿದಾಗ ಶ್ರುತಿಯನ್ನು ಬಾಧಿಸಬಹುದಲ್ಲವೆ? ಆದ್ದರಿಂದ ಶ್ರುತಿಯು ಸ್ವಾಭಾವಿಕವಾಗಿ ಬಲಿಷ್ಠವಾಗಿದೆ, ಲಿಂಗಗಳು ಬಾಹುಲ್ಯಪ್ರಯುಕ್ತವಾಗಿ ಬಲಿಷ್ಠವಾಗಿವೆ ಇಂತಹ ಸಂದರ್ಭಗಳಲ್ಲಿ 'ಇದಮಿತ್ಥಂ' ಎಂಬ ನಿರ್ಣಯವು ಅಸಾಧ್ಯವಲ್ಲವೆ? ಎಂಬ ಪ್ರಶ್ನೆಗೆ 'ತಚ್ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – न बाहुल्येऽपि लिङ्गानां श्रुतिसाम्येनानिर्णयः । श्रुतेर्निरवकाशत्वात् । लिङ्गानां विष्णाववकाशत् । सावकाशतादपि निरवकाशैकस्य प्रावल्यादिति भावः ।**

ಲಿಂಗಗಳು ಬಹಳವಾಗಿದ್ದರೂ ಶ್ರುತಿಯ ಸಾಮ್ಯವನ್ನು ಹೊಂದಲು ಸಾಧ್ಯವಿಲ್ಲ. ಏಕೆಂದರೆ ಶ್ರುತಿಯು ನಿರವಕಾಶವಾಗಿದೆ, ಲಿಂಗಗಳು ಸಾವಕಾಶವಾಗಿವೆ. ಸಾವಕಾಶಪ್ರಮಾಣಕ್ಕಿಂತ ನಿರವಕಾಶಕ್ಕೆ ಹೆಚ್ಚಿನ ಪ್ರಾಬಲ್ಯವಿರುವುದರಿಂದ ಅನೇಕ ಲಿಂಗಗಳನ್ನು ನಿರವಕಾಶಶ್ರುತಿಯು ಬಾಧಿಸುತ್ತದೆ ಎಂದು ತಿಳಿಯಬೇಕು.

**तत्वप्रकाशिका – श्रुत्यन्तरेण प्राणनिष्ठतया लिङ्गोक्तेः । कथं तद्विष्णोरित्यत आह – तस्यैवेति ।। वायुत्वमत्रोपलक्ष्यते ।।**

'ಏವಮೇಷ ಪ್ರಾಣಃ' ಇತ್ಯಾದಿ ಶ್ರುತಿಗಳಿಂದಲೇ 'ಲಿಂಗಗಳು ಮುಖ್ಯ ಪ್ರಾಣನಲ್ಲಿವೆ' ಎಂದು ಸಿದ್ಧವಾಗುತ್ತಿರುವುದರಿಂದ ಲಿಂಗಗಳು ವಿಷ್ಣುವಿನಲ್ಲಿ ಹೇಗೆ ಸಾವಕಾಶವಾಗುತ್ತವೆ? ಎಂಬ ಪ್ರಶ್ನೆಗೆ 'ತಸ್ಯೈವಾ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ. ಇಲ್ಲಿರುವ 'ಪ್ರಾಣ' ಶಬ್ದದಿಂದ ಉಪಲಕ್ಷಣಯಾ 'ವಾಯು' ಶಬ್ದವನ್ನೂ ಕೂಡ ತಿಳಿಯಬೇಕು.

**भावदीपः –**

**।। ॐ शब्दादेव प्रमितः ॐ ।।**

अत्र न्यायविवरणे पुनरीशानशब्द इत्येतावन्मात्रोक्तावपि प्राणप्रेरक इति सङ्क्षेपभाष्योक्त्या सूचितम् 'ऊर्ध्वं प्राणमुन्नयतीति भाष्योक्तवाक्यशेषलब्धं धर्ममादाय साधारण्यमक्षरनयन्यायेनाह – **प्रेरकत्वेति** ।।

'ಓಂ ಶಬ್ದಾದೇವ ಪ್ರಮಿತಃ ಓಂ' ಎಂಬುದಾಗಿ ವಾಮನಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ 'ಈಶಾನ' ಎಂಬ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಪ್ರೇರಕತ್ವ' ಎಂಬ 'ಈಶಾನಾ' ಶಬ್ದದಪ್ರವೃತ್ತಿ ನಿಮಿತ್ತವು ಮುಖ್ಯಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆ ಎಂದು ಗೀತೆಯಲ್ಲಿ ಹೇಳಿದ್ದಾರೆ. ನ್ಯಾಯವಿವರಣದಲ್ಲಿ 'ಈಶಾನಶಬ್ದಃ' ಎಂದಷ್ಟೇ ಹೇಳಿದ್ದರೂ, ಅಣುಭಾಷ್ಯದಲ್ಲಿ 'ಪ್ರಾಣಪ್ರೇರಕಃ' ಎಂದು ಹೇಳಿದ್ದರಿಂದ ಪ್ರೇರಕತ್ವವು 'ಈಶಾನ' ಶಬ್ದದ ಪ್ರವೃತ್ತಿನಿಮಿತ್ತವೆಂದು ಸೂಚಿಸಿದಂತಾಗುತ್ತದೆ. ಮತ್ತು 'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಭಾಷ್ಯದ ವಾಕ್ಯಶೇಷದಿಂದ ಪ್ರೇರಕತ್ವವು ತಿಳಿಯುತ್ತದೆ. ಹೀಗೆ ಪ್ರೇರಕತ್ವ ಎಂಬ ಧರ್ಮವನ್ನು ವಿವಕ್ಷಿಸಿ ಅಕ್ಷರಾಧಿಕರಣದ ನ್ಯಾಯದಿಂದ ಇದು ಉಭಯಸಾಧಾರಣವಾಗಿದೆಯೆಂದು ತೋರಿಸುತ್ತಿದ್ದಾನೆ 'ಪ್ರೇರಕತ್ವಸಾಮ್ಯೇನ' ಇತ್ಯಾದಿ ಟೀಕೆಯಿಂದ.

**भावदीपः** – उपलक्षणमेतत् । रूढिसाम्येन चेत्यपि ध्येयम् । 'ईशानः प्राणदः प्राणः' इति विष्णाविव 'ईशानो मारुतः प्राणः वायुर्जिष्णुस्तथैव च' इति प्रथमाध्यायबृहद्भाष्योक्त्या वायावपि रूढेः सत्वात् ।

ಮುಖ್ಯಪ್ರಾಣ ಹಾಗೂ ಮಹಾವಿಷ್ಣು ಇಬ್ಬರಲ್ಲಿಯೂ ಪ್ರೇರಕತ್ವಧರ್ಮವು ಸಾಧಾರಣವಾಗಿದೆಯೆಂದು ಟೀಕೆಯಲ್ಲಿ ಹೇಳಿದ್ದು ಉಪಲಕ್ಷಣವಾಗಿದೆ. 'ಈಶಾನ' ಶಬ್ದದ ರೂಢಿಯೂ ಸಹ ಇಬ್ಬರಲ್ಲಿ ಸಾಧಾರಣವಾಗಿದೆ. ಏಕೆಂದರೆ 'ಈಶಾನಃ ಪ್ರಾಣದಃ ಪ್ರಾಣಃ' ಎಂಬ ವಿಷ್ಣುಸಹಸ್ರನಾಮದ ಮಾತಿನಿಂದ ಮಹಾವಿಷ್ಣುವಿನಲ್ಲಿ ಈಶಾನಶಬ್ದದ ರೂಢಿಯು ಪ್ರಸಿದ್ಧವಾದರೆ 'ಈಶಾನೋ ಮಾರುತಃ ಪ್ರಾಣಃ ವಾಯುರ್ಜಿಷ್ಣುಸ್ತಥೈವ ಚ' ಎಂಬ ಬೃಹದಾರಣ್ಯಕಭಾಷ್ಯದ ಪ್ರಥಮಾಧ್ಯಾಯದಲ್ಲಿ ಹೇಳಿದ ಮಾತಿನಂತೆ ಮುಖ್ಯಪ್ರಾಣದೇವರಲ್ಲಿಯೂ ಕೂಡ 'ಈಶಾನ' ಶಬ್ದದ ರೂಢಿಯು ಪ್ರಸಿದ್ಧವಾಗಿದೆ.

**भावदीपः** – सङ्गतिपरत्वेन तावद् भाष्यं व्याकुर्वन् प्रतीयत इत्यन्तस्यार्थमाह – **अथात इत्यादिना** ।।

ಹೀಗೆ ಉಭಯತ್ರಪ್ರಸಿದ್ಧವಾದ 'ಈಶಾನ' ಶಬ್ದದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಮೂರನೇ ಪಾದದಲ್ಲಿ ಈ ಅಧಿಕರಣವು ಸಂಗತವಾಗಿದೆ ಎಂದು ಭಾಷ್ಯವನ್ನು

ವ್ಯಾಖ್ಯಾನಿಸುವವರಾಗಿ 'ಪ್ರತೀಯತೇ' ಎಂಬಲ್ಲಿಯ ತನಕ ಇರುವ ಭಾಷ್ಯದ ವಾಕ್ಯಗಳ ಅರ್ಥವನ್ನು 'ಅಥಾತಃ' ಇತ್ಯಾದಿ ಟೀಕೆಯಿಂದ ತೋರಿಸುತ್ತಿದ್ದಾರೆ.

**भावदीपः – ईशानस्येति** ।। तेन भाष्ये कश्चिदित्यस्यार्थो दर्शितः । सङ्गत्यादिद्योतनाय भाष्ये उपासनावाक्योक्तावपि समन्वेतव्यशब्दादि दर्शयितुं पूर्ववाक्यं चाऽह – **अङ्गुष्ठेति** ।।

'ಈಶಾನಸ್ಯ' ಎಂದು ಹೇಳಿದ್ದರಿಂದ ಭಾಷ್ಯದಲ್ಲಿರುವ 'ಕಶ್ಚಿತ್' ಎಂಬ ಪದದ ಅರ್ಥವನ್ನು ಹೇಳಿದಂತಾಯಿತು. ಭಾಷ್ಯದಲ್ಲಿ ಸಂಗತಿಯನ್ನು ತೋರಿಸುವುದಕ್ಕಾಗಿ ಉಪಾಸನಾವಾಕ್ಯವನ್ನು ಹೇಳಿರುತ್ತಾರೆ. ಆದರೆ ಸಮನ್ವಯ ಮಾಡಬೇಕಾದ ಶಬ್ದವನ್ನು ತೋರಿಸುವುದಕ್ಕಾಗಿ ಟೀಕೆಯಲ್ಲಿ ಉಪಾಸನಾವಾಕ್ಯದ ಹಿಂದಿನ ವಾಕ್ಯವನ್ನು 'ಅಂಗುಷ್ಠ' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः – इत्यादाविति** ।। प्राणोन्नयनादिप्रतिपादकवाक्य इति योज्यम् । तेनोक्तेति युक्तम् । भाष्ये विश्वेदेवा इत्यादावेव वाच्ये ऊर्ध्वमित्यादि पूर्वशेषोक्तेरुपयोगोऽग्रे व्यक्तः ।।

'ಇತ್ಯಾದೌ' ಎಂಬಲ್ಲಿ 'ಪ್ರಾಣೋನ್ನಯನಾದಿಪ್ರತಿಪಾದಕವಾಕ್ಯೇ' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು ಆದ್ದರಿಂದ 'ಉಕ್ತ' ಹೇಳಲಟ್ಟಿದೆ ಎಂದು ಹೇಳಿದ್ದು ಸಂಗತವಾಗುತ್ತದೆ. ಭಾಷ್ಯದಲ್ಲಿ 'ವಿಶ್ವೇದೇವಾಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. 'ಊರ್ಧ್ವಮ್' ಇತ್ಯಾದಿಯಾದ ಹಿಂದಿನ ವಾಕ್ಯವನ್ನು ಏಕೆ ಹೇಳಿದ್ದಾರೆ ಎಂಬುದರ ಉಪಯೋಗವನ್ನು ಮುಂದೆ ಸ್ಪಷ್ಟಪಡಿಸುತ್ತೇವೆ.

**भावदीपः – यदाहुरिति** ।। अनुभाष्ये तृतीये सर्ववेदान्तनय इत्यर्थः । स चेत्यादेर्भावमाह – **स च यदीति** ।। वक्ष्यमाणदिशा प्राणव्यवस्थापकत्वादिना वायुः स्यादित्यर्थः । उक्तमित्यन्तवाक्यस्य भावमाह – **तदेति** ।।

'ಯದಾಹುಃ' ಎಂದರೆ ಅನುವ್ಯಾಖ್ಯಾನದ ಮೂರನೇ ಅಧ್ಯಾಯದ ಸರ್ವವೇದಾಂತಾಧಿಕರಣದಲ್ಲಿ ಹೇಳಿದ್ದಾರೆಂದು ಅರ್ಥ. 'ಸ ಚ ' ಇತ್ಯಾದಿಭಾಷ್ಯದ ಅಭಿಪ್ರಾಯವನ್ನು 'ಸ ಚ ಯದಿ' ಇತ್ಯಾದಿ ಶ್ರುತಿಯಿಂದ ಸ್ಪಷ್ಟಪಡಿಸುತ್ತಿದ್ದಾರೆ. ಮುಂದೆ ಹೇಳುವಂತೆ ಪ್ರಾಣವ್ಯವಸ್ಥಾಪಕತ್ವಾದಿ ಧರ್ಮಗಳಿರುವುದರಿಂದ ಮುಖ್ಯಪ್ರಾಣದೇವರೂ ಕೂಡ ಪ್ರತಿಪಾದ್ಯರಾಗಬಹುದು ಎಂದರ್ಥ. 'ಉಕ್ತಮ್' ಎಂಬಲ್ಲಿಯ ತನಕ ಇರುವ ಭಾಷ್ಯದ ಅಭಿಪ್ರಾಯವನ್ನು 'ಯದಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**भावदीपः** – इत्यवश्यमित्युक्तार्थम् । निर्णयः ईशान इत्यनुषङ्गः । श्रुतौ देवमात्रोक्तावपि कैमुत्यलब्धं मत्वाऽह – **अधिकारिसर्वेति** ।।

'ಇತ್ಯವಶ್ಯಮ್' ಎಂಬುದು ಹಿಂದೆ ಹೇಳಿದ್ದರ ಸಮರ್ಥನೆಗಾಗಿ ಎಂದು ತಿಳಿಯಬೇಕು. 'ನಿರ್ಣಯಃ' ಎಂಬ ಪದದ ನಂತರ 'ಈಶಾನಃ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. ಶ್ರುತಿಗಳಲ್ಲಿ ದೇವತೆಗಳಿಂದಷ್ಟೇ ಉಪಾಸ್ಯನಾಗಿದ್ದಾನೆಯೆಂದು ಹೇಳಿದ್ದರೂ ಕೈಮುತ್ಯನ್ಯಾಯದಿಂದ ಅಧಿಕಾರಿಗಳಾದ ಸಕಲ ಜೀವರಿಂದಲೂ ಉಪಾಸ್ಯನಾಗಿದ್ದಾನೆಂಬುದು ಲಭ್ಯವಾಗುತ್ತದೆ. ಅದನ್ನೇ ಟೀಕೆಯಲ್ಲಿ 'ಅಧಿಕಾರಿ-ಸರ್ವೋಪಾಸ್ಯ' ಎಂದು ಹೇಳಿರುತ್ತಾರೆ.

**भावदीपः** – 'इयदामननादित्यादौ रुद्रादप्यधिकाधिकारिणो वक्ष्यमाणत्वादिति भावः । स्वेतरेत्यधिकारिविशेषणं बोध्यम् । तेन न वायावप्यनुपपत्तिरिति ।

'ಇಯದಾಮನಾನಾದ್' ಎಂಬ ಅಧಿಕರಣದಲ್ಲಿ ರುದ್ರಾದಿಗಳಿಗಿಂತಲೂ ಹೆಚ್ಚಿನ ಯೋಗ್ಯತೆಯುಳ್ಳ ಅಧಿಕಾರಿಗಳು ಇರುತ್ತಾರೆಂದು ಸಮರ್ಥಿಸಲಾಗುತ್ತದೆ. ಆದ್ದರಿಂದ ರುದ್ರದೇವರನ್ನು ಇಲ್ಲಿ 'ಈಶಾನ' ಶಬ್ದದಿಂದ ವಿವಕ್ಷಿಸಲು ಬರುವುದಿಲ್ಲ. 'ಸ್ವೇತರ' ಎಂಬುದನ್ನು ಅಧಿಕಾರಿಯಲ್ಲಿ ವಿಶೇಷಣವನ್ನಾಗಿ ವಿವಕ್ಷಿಸಬೇಕು. ಆದ್ದರಿಂದ ವಾಯುದೇವರಲ್ಲೂ ಸಕಲೋಪಾಸ್ಯತ್ವವು ಬರುವುದಿಲ್ಲವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಆದ್ದರಿಂದ ರುದ್ರದೇವರಲ್ಲಿ ಸರ್ವದೇವೋಪಾಸ್ಯತ್ವವೆಂಬ ಲಿಂಗವು ಇಲ್ಲದ ಕಾರಣ ಸಂಶಯಕೋಟಿಯಲ್ಲಿ ಅವರನ್ನು ಸೇರಿಸಲಾಗದು.

**भावदीपः** – एतेन प्रेरकत्वस्यान्यत्रापि वृत्तेः कथं द्वयसाधारण्यमित्यपि शङ्काऽपास्ता ।

ಹೀಗೆ ಹೇಳಿದ್ದರಿಂದ ಪ್ರೇರಕತ್ವಧರ್ಮವು ಬೇರೆಯವರಲ್ಲಿಯೂ ಇರುವಾಗ ವಿಷ್ಣು ಹಾಗೂ ವಾಯು ಉಭಯಮಾತ್ರ ಸಾಧಾರಣವಾಗಿದೆಯೆಂದು ಹೇಗೆ ಹೇಳುತ್ತೀರಿ? ಎಂಬ ಶಂಕೆಯನ್ನು ನಿರಾಕರಿಸಿದಂತಾಗುತ್ತದೆ. ಏಕೆಂದರೆ ಉಳಿದವರಲ್ಲಿ ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳು ಇರುವುದಿಲ್ಲ.

**भावदीपः** – ननूर्ध्वं प्राणमुन्नयतीत्यत्र कर्तुरन्यस्याप्रतीतेः प्रकृतेशानस्यैव कर्तृत्वेनान्वयेऽपि नोत्तरार्धे । तत्र 'वामनमिति श्रुतेः अन्यस्यैवोपास्यत्वप्रतीतेः । अस्य तदप्रतीतेश्च कथं तल्लिङ्गतयेत्युक्तिरित्यत आह – य इति ।।

ಪ್ರಶ್ನೆ - 'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಕಾಠಕೋಪನಿಷತ್ತಿನ ಶ್ಲೋಕದಲ್ಲಿ ಪ್ರಾಣಪ್ರೇರಕನಾದ ಬೇರೆ ಕರ್ತೃ ಕಾಣಿಸುತ್ತಿಲ್ಲ, ಆದ್ದರಿಂದ ಪ್ರಕೃತನಾದ ಈಶಾನನೇ ಕರ್ತೃವೆಂದು ತಿಳಿಯುತ್ತದೆ. ಆದರೆ ಮಧ್ಯೇ 'ವಾಮನಮ್' ಇತ್ಯಾದಿ ಉತ್ತರಾರ್ಧದಲ್ಲಿ ಈಶಾನನೇ ಕರ್ತೃ ಎಂದು ವಿವಕ್ಷಿಸಲಾಗದು. ಏಕೆಂದರೆ 'ವಾಮನಮ್' ಎಂಬುದಾಗಿ ಈಶಾನನಿಗಿಂತ ಬೇರೆಯವನಾದ ವಾಮನನನ್ನೇ ಉಪಾಸ್ಯನೆಂದು ಹೇಳಲಾಗಿದೆ. ಇಂತಹ ವಾಮನನಲ್ಲಿ ಪ್ರಾಣಪ್ರೇರಕತ್ವಾದಿಗಳು ಪ್ರತೀತವಾಗುತ್ತಿಲ್ಲ. ಹೀಗಿರುವಾಗ ಪ್ರೇರಕತ್ವವು ಈಶಾನನ ಲಿಂಗವಾಗಿದೆಯೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ಯಃ ಉನ್ನಯತಿ' ಇತ್ಯಾದಿಯಾಗಿ

ಅನ್ವಯಕ್ರಮವನ್ನು ತೋರಿಸಿದ್ದಾರೆ. ಅಂದರೆ 'ಯಃ' ಎಂಬ ಪದವನ್ನು ಉತ್ತರಾರ್ಧದಲ್ಲಿ 'ತಮ್' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು.

**भावदीपः** – अन्यथा समभिव्याहारेण प्रतीतैकवाक्यताभङ्गप्रसङ्गात् । 'मध्य आत्मनीत्युक्तस्य मध्ये वामनमिति प्रत्यभिज्ञानाच्चेत्यर्थः ।

ಹೀಗೆ ಅನ್ವಯವನ್ನು ಮಾಡದಿದ್ದರೆ 'ಸಮಭಿವ್ಯಾಹಾರ'ದಿಂದ ಪ್ರತೀತವಾಗುವ ಏಕವಾಕ್ಯತ್ವಕ್ಕೆ ಭಂಗ ಬರುತ್ತದೆ. 'ಮಧ್ಯೇ ಆತ್ಮನಿ' ಎಂಬಲ್ಲಿ ಹೇಳಿದವನನ್ನೇ 'ಮಧ್ಯೇ ವಾಮನಮ್' ಎಂಬುವುದರಿಂದ ಪ್ರತ್ಯಭಿಜ್ಞಾನ ಮಾಡಬೇಕು.

**भावदीपः** – पूर्वपक्षतद्युक्तितत्फलपरत्वेनापि भाष्यं व्याचक्षाणः स चेत्याद्यंशमवतार्य 'स च वायुरेवेति प्रतिज्ञांशार्थमाह सयुक्तिकमिति ।।

ಈ ಅಧಿಕರಣದ ಪೂರ್ವಪಕ್ಷ, ಪೂರ್ವಪಕ್ಷಯುಕ್ತಿ, ಪೂರ್ವಪಕ್ಷಫಲ ಇವುಗಳನ್ನು ತೋರಿಸುವಂತೆ ಭಾಷ್ಯಗಳಲ್ಲಿ ವ್ಯಾಖ್ಯಾನ ಮಾಡುವವರಾಗಿ 'ಸ ಚ' ಎಂಬ ಭಾಷ್ಯದ ಮಾತನ್ನು ಅನುವಾದ ಮಾಡುತ್ತಾ 'ಸ ಚ ವಾಯುರೇವ' ಎಂಬ ಪ್ರತಿಜ್ಞೆಯ ಅರ್ಥವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಸಯುಕ್ತಿಕಮ್' ಇತ್ಯಾದಿಯಾಗಿ.

**भावदीपः** – स चेत्यनुवादः ईशान इति व्याख्या । कुतः इत्याकाङ्क्षायाम् 'एवमेवैष प्राणः' इत्यादिवाक्यत्रयं श्रवणोपलक्षणमुपेत्य तद्व्याचष्टे – ईशानस्येति।।

ಟೀಕೆಯಲ್ಲಿರುವ 'ಸ ಚ' ಎಂಬುದು ಭಾಷ್ಯದ ಅನುವಾದವಾಗಿದೆ. 'ಈಶಾನ' ಎಂಬುದು ಅದರ ವ್ಯಾಖ್ಯಾನವಾಗಿದೆ. ವಾಯುದೇವರೇ 'ಈಶಾನ' ಶಬ್ದಪ್ರತಿಪಾದ್ಯರೆಂದು ಏಕೆ ಒಪ್ಪಬೇಕು? ಎಂಬ ಆಕಾಂಕ್ಷೆಗೆ 'ಏವಮೇವೈಷ ಪ್ರಾಣಃ' ಇತ್ಯಾದಿ ಮೂರುವಾಕ್ಯಗಳಲ್ಲಿರುವ ಮಾತು ಉಪಲಕ್ಷಣವಾಗಿದೆ ಎಂದು ತಿಳಿದು ಶ್ರುತಿಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ 'ಈಶಾನಸ್ಯ' ಇತ್ಯಾದಿಯಾಗಿ.

**भावदीपः** – अनेन ईशान एवात्र वाक्ये कर्तृत्वेनान्वेतीति दर्शितम् ।। इति वाक्य इति ।। एतेन भाष्ये पूर्वम् ऊर्ध्वमित्यादि त्रिपाद्युक्तेरुपयोगो दर्शितः ।

ಹೀಗೆ ಹೇಳಿದ್ದರಿಂದ 'ಊರ್ಧ್ವಂ ಪ್ರಾಣಮ್' ಎಂಬ ವಾಕ್ಯದಲ್ಲಿ ಈಶಾನನೇ ಕರ್ತೃವಾಗಿದ್ದಾನೆಂದು ಹೇಳಿದಂತಾಯಿತು. 'ಇತಿ ವಾಕ್ಯೇ' ಎಂದು ಹೇಳಿದ್ದರಿಂದ ಭಾಷ್ಯದಲ್ಲಿ 'ಊರ್ಧ್ವಂ' ಇತ್ಯಾದಿಯಾಗಿ ಮೂರುಭಾಗಗಳನ್ನು ಹೇಳಿದ್ದರ ಉಪಯೋಗವನ್ನು ತಿಳಿಸಿದಂತಾಯಿತು.

**भावदीपः** – इदानीम् 'ऊर्ध्वं प्राणमुन्नयतीत्यादिलिङ्गानां प्राणादन्यत्रावकाशराहित्यमित्यन्यत्रोक्तलिङ्गनिरवकाशत्वविवरणपरतया 'एवमेवैषः' इत्यादि उपास्यत्वाच्च' इत्यन्तं भाष्यं शङ्कापूर्वं व्याचष्टे – नचेति ।।

'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಲಿಂಗಗಳು ಮುಖ್ಯಪ್ರಾಣದೇವರಲ್ಲಿ ಬಿಟ್ಟು ಬೇರೆ ಯಾರಲ್ಲಿಯೂ ಇರುವುದಿಲ್ಲವೆಂದು ನಿರವಕಾಶತ್ವವನ್ನು ಬೇರೆಕಡೆ ಹೇಳಲಾಗಿದೆ. ಅದನ್ನೇ ಈಗ ವಿವರಣೆ ಮಾಡುವ ಮೂಲಕ 'ಏವಮೇವೈಷಃ' ಎಂಬಲ್ಲಿಂದ ಪ್ರಾರಂಭಿಸಿ 'ಉಪಾಸ್ಯತ್ವಾಚ್ಚ' ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಆಕ್ಷೇಪ ಪರವಾಗಿದೆಯೆಂದು ವ್ಯಾಖ್ಯಾನ ಮಾಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**भावदीपः – भाष्यस्थैवम्पदार्थविवरणाय षट्प्रश्नस्थपूर्वशेषमाह – यथेति ।।**

ಭಾಷ್ಯದಲ್ಲಿರುವ 'ಏವಂ' ಎಂಬ ಪದದ ಅರ್ಥವನ್ನು ವಿವರಿಸುವುದಕ್ಕಾಗಿ ಷಟ್‌ಪ್ರಶ್ನದಲ್ಲಿರುವ ಹಿಂದಿನ ವಾಕ್ಯವನ್ನು ಹೇಳುತ್ತಿದ್ದಾರೆ 'ಯಥಾ' ಇತ್ಯಾದಿಯಾಗಿ.

**भावदीपः – सम्राट् सार्वभौमोऽधिकृतान्नियोगिनो विनियुङ्क्ते । कथम् एतान् ग्रामानधितिष्ठस्व, तदाधिपत्येन तिष्ठेति । एवमेवैष आत्मत एष प्राणो जायत इति आत्मजातत्वेनोक्तः प्राणो मुख्यप्राणः इतरान् भिन्नान् स्वस्माज्जातत्वेन उपचारेण आत्मप्रविभागान् प्राणान्वायून् पृथक्पृथगेव स्थानेषु स्थापयतीत्यर्थः ।।**

ಉದಾಹರಣೆ - ಸಾರ್ವಭೌಮನಾದ ರಾಜನು ತನ್ನ ಅಧಿಕಾರದಿಂದ ಉಳಿದ ಸಾಮಂತರಾಜರನ್ನು ಆಯಾಪ್ರದೇಶಗಳಲ್ಲಿ ವಿನಿಯೋಗಿಸುತ್ತಾನೆ. ಹೇಗೆಂದರೆ ನೀನು ಈ ಗ್ರಾಮವನ್ನು ನಿಯಂತ್ರಣ ಮಾಡು, ಈ ಗ್ರಾಮಕ್ಕೆಲ್ಲ ಅಧಿಪತಿಯಾಗಿ ರಕ್ಷಣೆ ಮಾಡು ಎಂದು ಪ್ರತಿಯೊಬ್ಬರನ್ನು ನಿಯೋಜಿಸುತ್ತಾನೆ. ಅದರಂತೆ 'ಆತ್ಮತ ಏಷ ಪ್ರಾಣೋ ಜಾಯತೇ' ಇತ್ಯಾದಿ ಶ್ರುತಿಯಲ್ಲಿ ಮುಖ್ಯಪ್ರಾಣದೇವರೂ ಕೂಡ ತನಗಿಂತ ಭಿನ್ನರಾದ, ತನ್ನಿಂದ ಹುಟ್ಟಿದ ಕಾರಣ 'ಪ್ರಾಣ' ಶಬ್ದ ಪ್ರತಿಪಾದ್ಯರಾದ ಉಳಿದ ಪ್ರಾಣಗಳನ್ನು ಪ್ರತ್ಯೇಕ ಪ್ರತ್ಯೇಕ ಸ್ಥಾನಗಳಲ್ಲಿ ನಿಲ್ಲಿಸಿ ಆಯಾ ಕೆಲಸಗಳಲ್ಲಿ ನಿಯಂತ್ರಣ ಮಾಡುವಂತೆ ಆಜ್ಞೆ ಮಾಡುತ್ತಾರೆ ಎಂದು ಶ್ರುತಿಯ ಅಭಿಪ್ರಾಯ.

**भावदीपः – अथेति ।।** वाजसनेये तृतीये वागादीनां मृत्युनात्तत्वमुक्त्वा 'अथेमं वायुं मृत्युर्नाऽप्नोदिति वागादिश्रैष्ठ्यं प्राणस्योच्यत इति तस्य मुख्यप्राणत्वद्योतनाय पूर्वशेषोक्तिः ।

ಬೃಹದಾರಣ್ಯಕೋಪನಿಷತ್ತಿನ ಮೂರನೇ ಅಧ್ಯಾಯದಲ್ಲಿ ವಾಗಾದ್ಯಭಿಮಾನಿದೇವತೆಗಳನ್ನು ಮೃತ್ಯುವು ತಿನ್ನುತ್ತದೆಂದು ಹೇಳಲಾಗಿದೆ. ಆನಂತರ 'ಅಥೇಮಂ ವಾಯುಂ ಮೃತ್ಯುರ್ನಾಪ್ನೋತ್' 'ಮುಖ್ಯಪ್ರಾಣದೇವರನ್ನು ಮೃತ್ಯು ತಿನ್ನುವುದಿಲ್ಲ' ಎಂದು ವಾಗಾದ್ಯಮಾನಿದೇವತೆಗಳಿಗಿಂತಲೂ ಉತ್ತಮತ್ವವನು ಮುಖ್ಯಪ್ರಾಣದೇವರಿಗೆ ಹೇಳಲಾಗಿದೆ. ಆದ್ದರಿಂದ ಪ್ರಾಣಾದಿಪ್ರೇರಕರಾದವರು ಮುಖ್ಯಪ್ರಾಣದೇವರೇ ಆಗಿದ್ದಾರೆಂಬುದನ್ನು ತಿಳಿಸುವುದಕ್ಕಾಗಿ ಹಿಂದಿನ ವಾಕ್ಯವನ್ನು ಹೇಳಿರುತ್ತಾರೆ.

**भावदीपः** – 'अयं वा शिशुः योऽयं मध्यमः प्राणः' 'प्राणः स्थूणेत्युपरि चतुर्थे शिशुब्राह्मणेऽप्यस्ति । फलितमाह – **अत इति** ।। तस्य व्याख्या **वाय्वेकेति** ।।

'ಅಯಂ ವಾ ಶಿಶುಃ ಯೋऽಯಂ ಮಧ್ಯಮಃ ಪ್ರಾಣಃ' ಎಂಬುದಾಗಿ ನಾಲ್ಕನೆಯ ಶಿಶುಬ್ರಾಹ್ಮಣದಲ್ಲಿಯೂ ಈ ವಾಕ್ಯವು ಇರುತ್ತದೆ. ಫಲಿತವಾದ ವಾಕ್ಯವನ್ನು 'ಅತಃ' ಇತ್ಯಾದಿಯಾಗಿ ಹೇಳಿದ್ದಾರೆ. ಅದರ ಅರ್ಥವನ್ನೇ 'ವಾಯ್ವೇಕ' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः** – यद्वा अतः 'एवमेवैषः' इत्यादि समाख्यानादित्यर्थः । सर्वदेवोपास्यः कश्चित्प्रतीयत इत्यस्य तात्पर्यमाह – **इति हेतोस्तस्यैवेति** ।।

ಅಥವಾ 'ಅತಃ' ಎಂದರೆ 'ಏವಮೇವೈಷಃ' ಇತ್ಯಾದಿ ಸಮಾಖ್ಯಾನ ಇರುವುದರಿಂದ ಎಂದರ್ಥ. 'ಸರ್ವದೇವೋಪಾಸ್ಯಃ ಕಶ್ಚಿತ್' ಎಂಬುದರ ಅಭಿಪ್ರಾಯವನ್ನು 'ಇತಿ ಹೇತೋಸ್ತಸ್ಯೈವಾ' ಎಂಬುದರಿಂದ ಹೇಳಿದ್ದಾರೆ.

**भावदीपः** – उक्तमित्यन्तभाष्यभावं वक्तुं **विष्णोरेव** । इत्यवधारणोक्तेर्भावं शङ्कोत्तराभ्यां व्यनक्ति – **नच वाच्यमिति** ।।

'ಉಕ್ತಂ' ಎಂಬಲ್ಲಿಯ ತನಕ ಇರುವ ಭಾಷ್ಯದ ಅಭಿಪ್ರಾಯವನ್ನು ಹೇಳುವುದಕ್ಕಾಗಿ 'ವಿಷ್ಣೋರೇವ' ಎಂದು ಹೇಳಿದ್ದಾರೆ. 'ವಿಷ್ಣೋರೇವ' ಎಂಬಲ್ಲಿರುವ ಅವಧಾರಣೆಯ ಅಭಿಪ್ರಾಯವನ್ನು ಶಂಕೆ ಹಾಗೂ ಉತ್ತರಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ 'ನಚ ವಾಚ್ಯಮ್' ಇತ್ಯಾದಿಯಾಗಿ.

**भावदीपः** – **वायोरपीति** ।। 'अङ्गावबद्धास्तु न शाखासु हि प्रतिवेदम्' इति तृतीये वक्ष्यमाणत्वादिति भावः ।

'ವಾಯೋರಪಿ' ಎಂದು ಟೀಕೆಯಲ್ಲಿದೆ. 'ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್' ಎಂಬುದಾಗಿ ಮೂರನೇ ಅಧ್ಯಾಯದಲ್ಲಿ ವಾಯುದೇವರಲ್ಲಿಯೂ ಇದನ್ನು ಸಮರ್ಥಿಸುತ್ತಾರೆ.

**भावदीपः** – भाष्ये उपास्यः कश्चित्प्रतीयत इत्युक्त्यैव पूर्तौ सर्वदेवेत्युक्तिलब्धमाह – **न हीति** ।।

ಭಾಷ್ಯದಲ್ಲಿ 'ಉಪಾಸ್ಯಃ ಕಶ್ಚಿತ್ ಪ್ರತೀಯತೇ' ಎಂದು ಹೇಳಿದ್ದರಿಂದಲೇ ಅರ್ಥವು ಸ್ಪಷ್ಟವಾಗುವಾಗ ಸರ್ವದೇವೋಪಾಸ್ಯತ್ವವನ್ನು ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**भावदीपः** – एवमुक्तेस्तात्प (कतं ताप्य) र्यं मोक्षार्थमिति शेषपूर्त्या भाष्यवाक्यारूढं करोति – **विष्णुरेवेति** ।।

ಇಲ್ಲಿಯ ತನಕ ಹೇಳಿದರ ತಾತ್ಪರ್ಯವನ್ನು ಮೋಕ್ಷಾರ್ಥವೆಂದು ಶೇಷಪೂರಣ ಮಾಡುವುದರ ಮೂಲಕ ಭಾಷ್ಯಾರೂಢ ಮಾಡುತ್ತಿದ್ದಾರೆ 'ವಿಷ್ಣುರೇವ' ಇತ್ಯಾದಿಯಾಗಿ.

**भावदीपः** – पूर्वं 'कुविदङ्गेति नस्य सर्वदेवोपास्यत्वप्रतीतेरित्युक्तं तद्व्याख्यानेन व्यनक्ति – अयं मन्त्रार्थ इति ॥

ಹಿಂದೆ 'ಕುವಿದಂಗ' ಎಂಬ ಮಂತ್ರದಲ್ಲಿ ಸರ್ವದೇವೋಪಾಸ್ಯತ್ವವನ್ನು ಹೇಳಲಾಗಿದೆಯೆಂದು ಹೇಳಿದರು. ಅದನ್ನೇ ವ್ಯಾಖ್ಯಾನಮಾಡುವ ಮೂಲಕ ಸ್ಪಷ್ಟಪಡಿಸುತ್ತಿದ್ದಾರೆ 'ಅಯಂ ಮಂತ್ರಾರ್ಥಃ ಇತಿ' ಎಂಬುದಾಗಿ.

**भावदीपः** – 'कुविदंग नमसा ये वृधासः पुरा देवा अनवद्यास आसन् । ते वायवे मनवे बाधितायावासयन्नुषसंसूर्येण' इति मन्त्रः ।

'ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ । ತೇ ವಾಯವೇ ಮನವೇ ಬಾಧಿತಾಯಾವಾಸಯನ್ನುಷಸಂ ಸೂರ್ಯೇಣ' ಎಂಬುದು ಋಗ್ವೇದದಲ್ಲಿ ಬರುವ ಮಂತ್ರ.

**भावदीपः** – नमसेत्युपलक्षणं मत्वाऽह – नमस्कारादिनेति ॥ वृधासः ज्ञानादिगुणपूर्णाः कुवित् कश्चित् । बाद्भिः इतायेत्युपेत्याऽह – संसारेति ॥

ಇಲ್ಲಿರುವ 'ನಮಸಾ' ಎಂಬುದು ಉಪಲಕ್ಷಣವಾಗಿದೆ ಎಂಬುದಾಗಿ 'ನಮಸ್ಕಾರಾದಿನಾ' ಇತ್ಯಾದಿಯಾಗಿ ಹೇಳಿದ್ದಾರೆ. 'ವೃಧಾಸಃ' ಎಂದರೆ ಜ್ಞಾನಾದಿಗುಣಗಳಿಂದ ಪೂರ್ಣರಾಗಿ, 'ಕುವಿತ್' ಎಂದರೆ 'ರಹಸ್ಯಸ್ಥಳದಲ್ಲಿ' ಎಂದರ್ಥ, 'ಬಾದ್ಭಿಃ ಇತಾಯ ಬಾಧಿತಾಯ' ಎಂಬ ವ್ಯುತ್ಪತ್ತಿಯನ್ನು ವಿವಕ್ಷಿಸಿ 'ಸಂಸಾರ' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः** – उषसं बुद्धिम् । त्रयोऽर्थाः सर्ववेदेष्वित्युक्त्या 'कल्पनोपदेशादित्यादिचतुर्थपादोक्तन्यायैरन्यपरत्वस्यापि सत्त्वाद्वा सर्वसूक्तानां तत्र तत्रस्थवाय्वादि शब्दानां च ज्योतिरादिनयैर्वैष्णवत्वसिद्धावपि इह मन्त्रे विष्णुलिङ्गाभावेन अन्तरादि नयन्यायाविषयत्वाद्वाऽयं मन्त्रोऽत्र वायुपरत्वेनोक्तो व्याख्यातश्च ।

'ಉಷಸಂ' = ಬುದ್ಧಿಯನ್ನು, ವೇದಗಳಲ್ಲಿರುವ ಪ್ರತಿಯೊಂದು ಮಂತ್ರಕ್ಕೂ, ಮೂರು ಅರ್ಥಗಳಿರುವುದರಿಂದ 'ಕಲ್ಪನೋಪದೇಶಾತ್' ಎಂಬ ನಾಲ್ಕನೇ ಪಾದದ ನ್ಯಾಯದಂತೆ ಅನ್ಯಪರತ್ವವನ್ನು ಹೇಳಬಹುದಾದ್ದರಿಂದ; ಅಥವಾ ಸಕಲಸೂಕ್ತಗಳಲ್ಲಿರುವ ವಾಯು ಮೊದಲಾದ ಶಬ್ದಗಳಿಗೆ ಜ್ಯೋತಿರಧಿಕರಣದ ನ್ಯಾಯದಂತೆ ವಿಷ್ಣುವಿನಲ್ಲಿ ಸಮನ್ವಯ ಮಾಡಬಹುದಾದರೂ, ಈ ಮಂತ್ರದಲ್ಲಿ ಯಾವುದೇ ವಿಷ್ಣುಲಿಂಗಗಳಿಲ್ಲದ ಕಾರಣ ಅಂತರಾಧಿಕರಣದ ನ್ಯಾಯಕ್ಕೆ ವಿಷಯವಾಗದ ಕಾರಣವೂ ಈ ಮಂತ್ರವು ಮುಖ್ಯಪ್ರಾಣಪರವೇ ಆಗಿದೆ ಎಂದು ಹೇಳಿದ್ದಾರೆ ಮತ್ತು ಮುಖ್ಯಪ್ರಾಣಪರವಾಗಿ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – वक्ष्यते चैतत्तृतीये 'मन्त्रादिवद्वाऽविरोध इति सूत्रे । उक्तं च ऋग्भाष्ये 'पूर्वप्रसिद्धवर्जं तु शक्रान्ता देवता मता' इति । प्रमित इत्यत्र विशेषाकाङ्क्षायाम् ईशानशब्दोक्तो विष्णुरेवेत्यन्यत्रोक्तेनैव पूरयन् भाष्यं व्याचष्टे – **विष्णुरेवेति** ।।

ಇದರ ಬಗ್ಗೆ ಮುಂದೆ 'ಮಂತ್ರಾದಿವದ್ವಾಽವಿರೋಧಃ'ಎಂಬ ಮೂರನೇ ಅಧ್ಯಾಯದಲ್ಲಿ ವಿವರಿಸುತ್ತೇವೆ. ಋಗ್ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ - 'ಪೂರ್ವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾ' ಮುಖ್ಯ ಪ್ರಾಣದೇವರನ ತನಕ ಪ್ರಸಿದ್ಧವಾದ ವೇದಮಂತ್ರಗಳನ್ನು ಬಿಟ್ಟು ಉಳಿದೆಲ್ಲ ಮಂತ್ರಗಳಿಂದ ಇಂದ್ರದೇವರ ತನಕ ಸಕಲದೇವತೆಗಳೂ ಪ್ರತಿಪಾದ್ಯರಾಗಿದ್ದಾರೆ ಎಂದು. 'ಪ್ರಮಿತಃ' ಎಂಬಲ್ಲಿ ವಿಶೇಷದ ಆಕಾಂಕ್ಷೆಯು ಪ್ರಾಪ್ತವಾದರೆ 'ಈಶಾನ' ಶಬ್ದಪ್ರತಿಪಾದ್ಯ ವಿಷ್ಣುವೇ ವಿಶೇಷ್ಯನಾಗಿದ್ದಾನೆಂದು ಹೇಳುವ ಮೂಲಕ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ವಿಷ್ಣುರೇವ' ಇತ್ಯಾದಿಯಾಗಿ.

**भावदीपः** – ननु वामनश्रुतिरप्यणुश्चेति सूत्रे द्वितीये वक्ष्यमाणदिशाऽणुभूत-प्राणरूपाद्यभिप्रायेण वायावपि सावकाशेत्यतो वामनश्रुतेरेवानवकाश इत्यन्यत्रोक्तमनवकाशत्वं सौत्रप्रमितपदोक्तमिति दर्शयन् भाष्यस्थप्रमितपदतात्पर्यमाह – **तस्याश्चेति** ।।

ಪ್ರಶ್ನೆ - ವಾಮನಶ್ರುತಿಯು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು ಹೇಳುವುದು ಸರಿಯಲ್ಲ. ಏಕೆಂದರೆ ಎರಡನೇ ಅಧ್ಯಾಯದಲ್ಲಿ ಇರುವಂತಹ 'ಅಣುಶ್ಚ' ಎಂಬ ಸೂತ್ರದಲ್ಲಿ ಮುಖ್ಯಪ್ರಾಣದೇವರು ಅಣುಸ್ವರೂಪರೆಂದು ಸಮರ್ಥಿಸಲಾಗುತ್ತದೆ. ಅಂತಹ ಮುಖ್ಯಪ್ರಾಣದೇವರನ್ನು ಪ್ರತಿಪಾದಿಸುವುದಕ್ಕಾಗಿ ಶ್ರುತಿಯು ವಾಮನಶಬ್ದವನ್ನು ಹೇಳಿದೆ. ಆದ್ದರಿಂದ ವಾಮನಶ್ರುತಿಯು ಮುಖ್ಯಪ್ರಾಣದೇವರಲ್ಲಿ ಸಾವಕಾಶವಾಗಿದೆಯಲ್ಲವೆ?

ಉತ್ತರ - ವಾಮನಶ್ರುತಿಯು ವಿಷ್ಣುವಿನಲ್ಲಿ ಮಾತ್ರ ಇರುವಂತಹ ನಿರವಕಾಶಶ್ರುತಿಯಾಗಿದೆ. ಈ ವಿಚಾರವನ್ನು ಬೇರೆ ಗ್ರಂಥಗಳಲ್ಲಿ ಪ್ರತಿಪಾದಿಸಲಾಗಿದೆ. ಇದೇ ನಿರವಕಾಶವಾಗಿದೆ ಎಂಬುದನ್ನು ಸೂತ್ರದಲ್ಲಿರುವ 'ಪ್ರಮಿತ' ಪದವು ಹೇಳುತ್ತದೆ. ಅದನ್ನೇ ವ್ಯಾಖ್ಯಾನ ಮಾಡುತ್ತಾ ಭಾಷ್ಯದಲ್ಲಿರುವ ಪ್ರಮಿತಪದದ ತಾತ್ಪರ್ಯವನ್ನೂ ಸಹ ಹೇಳುತ್ತಿದಾರೆ 'ತಸ್ಯಾಶ್ಚ' ಇತ್ಯಾದಿ ವಾಕ್ಯದಿಂದ.

**भावदीपः** – अन्तरनये स्थानादीति गुणसूत्रोक्ते 'एष उ एव वामनिरेष हि सर्वाणि वामानि नयति' इत सावधारणश्रुतिवाक्ये वामनिशब्दनिरुक्त्या 'एकदेश-विकृतमनन्यवद्भवतीति न्यायेन 'देवासो देवा' इत्यादेरिव वामनिवामन-

शब्दयोरैकार्थ्येन महायोगस्य 'स वामनः स आनन्दः सोऽच्युतः' इति तद्भाष्योक्तश्रौतप्रयोगस्य 'उपेन्द्रो वामनः प्रांशुरिति सहस्रनामोक्तस्मार्तप्रयोगस्य च सत्त्वेन रूढेश्च सत्वादिति भावः ।

ಅಂತರಾಧಿಕರಣದ ಸ್ಥಾನಾದಿ ಗುಣಸೂತ್ರದಲ್ಲಿ 'ಏಷ ಉ ಏವ ವಾಮನಿರೇಷ ಹಿ ಸರ್ವಾಣಿ ವಾಮಾನಿ ನಯತಿ' ಎಂಬ ಶ್ರುತಿಯನ್ನು ಹೇಳಲಾಗಿದೆ. ಈ ಸಾವಧಾರಣ ಶ್ರುತಿವಾಕ್ಯದಲ್ಲಿ 'ವಾಮನಿ' ಶಬ್ದದ ನಿರುಕ್ತಿಯನ್ನು ಪ್ರತಿಪಾದಿಸಲಾಗಿದೆ. ಸಕಲ ಸ್ತ್ರೀಯರ ಸೌಂದರ್ಯವನ್ನು ನೀಡುವವನಾದ್ದರಿಂದ ಪರಮಾತ್ಮನು 'ವಾಮನಿ' ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. 'ಏಕದೇಶವಿಕೃತಮನನ್ಯವದ್ಭವತಿ' ಏಕದೇಶದ ವಿಕಾರದಿಂದ ತನ್ನ ಸ್ವರೂಪವನ್ನು ಕಳೆದುಕೊಳ್ಳುವುದಿಲ್ಲ ಎಂಬ ನ್ಯಾಯದಂತೆ 'ವಾಮನಿ' ಹಾಗೂ 'ವಾಮನ' ಶಬ್ದಗಳು ಒಂದೇ ಅರ್ಥವನ್ನು ಪ್ರತಿಪಾದಿಸುತ್ತವೆ. 'ದೇವಾಸಃ' ಎಂಬ ಶಬ್ದವು 'ದೇವಾಃ' ಎಂಬ ಪದದ ಅರ್ಥವನ್ನು ಹೇಗೆ ಪ್ರತಿಪಾದಿಸುತ್ತದೋ ಅದರಂತೆ. ಮತ್ತು 'ಸ ವಾಮನಃ ಸ ಆನಂದಃ ಸೋಽಚ್ಯುತಃ' ಎಂಬುದಾಗಿ ಉಪನಿಷದ್‌ಭಾಷ್ಯದ ಮಾತಿನಂತೆ ವಾಮನಶಬ್ದದ ಮಹಾಯೋಗವು ಪರಮಾತ್ಮನಲ್ಲಿ ಮಾತ್ರ ಇರುತ್ತದೆ. ಅಷ್ಟೇ ಅಲ್ಲದೆ 'ಉಪೇಂದ್ರೋ ವಾಮನಃ ಪ್ರಾಂಶುಃ' ಎಂಬ ವಿಷ್ಣುಸಹಸ್ರನಾಮದ ಪ್ರಯೋಗವು ಮಹಾವಿಷ್ಣುವಿನಲ್ಲಿರುವುದರಿಂದ ರೂಢಿಯು ಇರುತ್ತದೆ ಹೀಗೆ ಮಹಾಯೋಗ ಮತ್ತು ರೂಢಿಗಳ ಬಲದಿಂದ 'ವಾಮನ' ಶಬ್ದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಸ್ಪಷ್ಟವಾಗುತ್ತದೆ.

**भावदीपः** – अस्त्वेवं प्रागुक्तजिज्ञासानियमाक्षेपे किमुक्तमुत्तरमित्यत आह – **अत इति ।।**

ಹಾಗಾದರೆ ಹಿಂದೆ ಹೇಳಲ್ಪಟ್ಟ ಜಿಜ್ಞಾಸಾನಿಯಮದ ಆಕ್ಷೇಪಕ್ಕೆ ಏನು ಉತ್ತರವನ್ನು ನೀಡಿದಂತಾಯಿತು ಎಂಬ ಪ್ರಶ್ನೆಗೆ 'ಅತಃ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**भावदीपः** – निरवकाशश्रुतेरेवेत्यर्थः । निरवकाशत्वं भाष्ये कुतो नोक्तमित्यत आह – **अत्रेति ।।** भाष्ये सूत्रे चेत्यर्थः ।

ನಿರವಕಾಶಶ್ರುತಿ ಇರುವುದರಿಂದಲೇ ಎಂದರ್ಥ. ವಾಮನ ಶ್ರುತಿಗೆ ನಿರವಕಾಶತ್ವವನ್ನು ಭಾಷ್ಯದಲ್ಲಿ ಏಕೆ ಹೇಳಲಿಲ್ಲ ? ಎಂಬ ಪ್ರಶ್ನೆಗೆ 'ಅತ್ರ 'ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ. 'ಅತ್ರ' ಎಂಬ ಪದಕ್ಕೆ ಭಾಷ್ಯದಲ್ಲಿ ಹಾಗೂ ಸೂತ್ರದಲ್ಲಿ ಎಂದರ್ಥ. ಅಂದರೆ ಭಾಷ್ಯ ಹಾಗೂ ಸೂತ್ರಗಳಲ್ಲಿ 'ಪ್ರಮಿತ' ಪದದಿಂದ ನಿರವಕಾಶತ್ವವನ್ನು ತಿಳಿಸಿದ್ದಾರೆಂದು ಅಭಿಪ್ರಾಯ.

**भावदीपः** – यद्वा 'अत एव प्राणः' इत्यत्र 'लिङ्गं बलवदेव स्यात्' इत्यनुभाष्ये लिङ्गनिरवकाशत्वस्यैवकारार्थत्वोक्त्या तत्रेवात्राप्येवकारो निरवकाशत्वार्थ इति भ्रमनिरासायोक्तम् – **अत्रेति ।।**

ಅಥವಾ 'ಅತ ಏವ ಪ್ರಾಣಃ' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಅನುವ್ಯಾಖ್ಯಾನದಲ್ಲಿ 'ಲಿಂಗಂ ಬಲವದೇವ ಸ್ಯಾತ್' ಎಂದು ಹೇಳಿದ್ದಾರೆ. ಅಂದರೆ ಸೂತ್ರದಲ್ಲಿರುವ 'ಏವ' ಕಾರವು ಲಿಂಗಕ್ಕೆ ನಿರವಕಾಶತ್ವವನ್ನು ಹೇಳುತ್ತಿದೆ ಎಂದು ವ್ಯಾಖ್ಯಾನಿಸುತ್ತಿದ್ದಾರೆ. ಅದರಂತೆ ಇಲ್ಲಿಯೂ ಸಹ 'ಶಬ್ದಾದೇವ' ಎಂಬಲ್ಲಿರುವ ಏವಕಾರವೇ ನಿರವಕಾಶತ್ವವನ್ನು ಪ್ರತಿಪಾದಿಸುತ್ತಿದೆಯೆಂಬ ಭ್ರಮೆಯನ್ನು ನಿರಾಕರಿಸುವುದಕ್ಕಾಗಿಯೂ 'ಅತ್ರ' ಇತ್ಯಾದಿ ಟೀಕಾಮಾತು ಹೊರಟಿದೆ.

**भावदीपः** – एवकारस्तु श्रुतेर्लिङ्गादितोऽपि जात्या प्राबल्योक्त्यर्थ इत्याह – **अनेनेति** ।। एवं सति श्रुत्यैव निर्णयोपपत्तौ तन्निरवकाशत्वमभ्युच्चयत्वेनोक्तमिति भावः ।

ಸೂತ್ರದಲ್ಲಿರುವ ಪ್ರಮಿತಪದವೇ ನಿರವಕಾಶತ್ವವನ್ನು ಹೇಳುವುದಾದರೆ ಏವಕಾರದ ಅರ್ಥವೇನು ಎಂದರೆ ಶ್ರುತಿಯು ಲಿಂಗಾದಿಗಳಿಗಿಂತಲೂ ಸ್ವಾಭಾವಿಕವಾಗಿ ಬಲಿಷ್ಠವಾಗಿದೆ ಎಂಬ ವಿಚಾರವನ್ನು ಏವಕಾರವು ಪ್ರತಿಪಾದಿಸುತ್ತಿದೆಯೆಂದು 'ಅನೇನ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ. ಹಾಗಾದರೆ ಶ್ರುತಿಯಿಂದಲೇ ಸ್ವಾಭಾವಿಕವಾಗಿ ನಿರ್ಣಯವು ಉಂಟಾಗುವಾಗ ಶ್ರುತಿಗೆ ನಿರವಕಾಶತ್ವವನ್ನು ಹೇಳಿದ್ದು ಕೇವಲ 'ಅಭ್ಯುಚ್ಚಯ' ಯುಕ್ತಿಯೆಂದು ತಿಳಿಯಬೇಕು.

**भावदीपः** – स्मार्तक्रमो न विवक्षित इति भावेन 'श्रुतिर्नाम समुद्दिष्टं लिङ्गं तल्लक्षणं स्मृतम् । पदानि निरपेक्षाणि वाक्यं प्रकरणं तथा ।। एकस्य प्रतिपत्त्यङ्गवचनं स्थानमुच्यते । अन्यत्र तत्समोक्तिस्तु समाख्या स्थानमेव च ।। अध्यायादिप्रबन्धास्तु प्रभेदा आगमस्य च' इति तत्त्वप्रदीपोक्तवचनानुरोधेन क्रममुपेत्य लक्षणान्याह – **नाममात्रेणेति** ।।

ಶ್ರುತಿ ಲಿಂಗಾದಿಗಳ ಸ್ವರೂಪ ಹಾಗೂ ಲಕ್ಷಣಗಳು ಹೀಗಿವೆ - ' ಶ್ರುತಿರ್ನಾಮ ಸಮುದ್ದಿಷ್ಟಂ ಲಿಂಗಂ ತಲ್ಲಕ್ಷಣಂ ಸ್ಮೃತಮ್ । ಪದಾನಿ ನಿರಪೇಕ್ಷಾಣಿ ವಾಕ್ಯಂ ಪ್ರಕರಣಂ ತಥಾ ॥ ಏಕಸ್ಯ ಪ್ರತಿಪತ್ತ್ಯಂಗವಚನಂ ಸ್ಥಾನಮುಚ್ಯತೇ । ಅನ್ಯತ್ರ ತತ್ಸಮೋಕ್ತಿಸ್ತು ಸಮಾಖ್ಯಾ ಸ್ಥಾನಮೇವ ಚ ॥ ಅಧ್ಯಾಯಾದಿ ಪ್ರಬಂಧಾಸ್ತು ಪ್ರಭೇದಾ ಆಗಮಸ್ಯ ಚ ॥' ನಾಮಾತ್ಮಕ ಶಬ್ದವೇ ಶ್ರುತಿ. ಅಸಾಧಾರಣಧರ್ಮವೇ ಲಿಂಗ, ಪೂರ್ಣವಾದ ಆಕಾಂಕ್ಷಾದಿಗಳುಳ್ಳ ಪದಗಳ ಸಮುಹವೇ ವಾಕ್ಯ, ಪೂರ್ಣವಾದ ಆಕಾಂಕ್ಷಾದಿಗಳುಳ್ಳ ವಾಕ್ಯಗಳ ಸಮೂಹವೇ ಪ್ರಕರಣ, ಅಂತಹ ಅನೇಕ ಪ್ರಕರಣಗಳ ಸಮೂಹವೇ ಸ್ಥಾನ, ಸಮಾನವಾದ ಮತ್ತೊಂದು ವಚನವೇ ಸಮಾಖ್ಯಾ.

**भावदीपः** – आपाततः धर्मद्वारं विना धर्मिनिर्देशकः शब्द इत्यर्थः । यथा द्युभ्वाद्यायतनं स्वशब्दादित्यत्र तमेवैकं जानथ अत्मानम् इत्यत्राऽऽत्मश्रुतिः। यथा वा अत्रैव वामनश्रुतिः ।।

ಆಪಾತತಃ ಧರ್ಮವನ್ನು ಅಪೇಕ್ಷೆ ಪಡದೆ ನೇರವಾಗಿ ಧರ್ಮಿಯನ್ನು ನಿರ್ದೇಶಿಸುವಂತಹ ಶಬ್ದವೇ 'ಶ್ರುತಿ' ಎನಿಸುತ್ತದೆ. ಉದಾಹರಣೆ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಸೂತ್ರದಲ್ಲಿ 'ತಮೇವೈಕಂ ಜಾನಾಥ ಆತ್ಮಾನಂ' ಎಂಬ ಅತ್ರಶ್ರುತಿಯು ಧರ್ಮವನ್ನು ಉಪಸ್ಥಾಪನೆ ಮಾಡದೆ ಧರ್ಮಿಯನ್ನೇ ನಿರ್ದೇಶ ಮಾಡುತ್ತಿರುವುದರಿಂದ ಶ್ರುತಿರೂಪವಾದ ಪ್ರಮಾಣವಾಗಿದೆ. ಅಥವಾ ಇದೇ ಅಧಿಕರಣದ ವಾಮನ ಶ್ರುತಿಯೂ ಸಹ ಇದಕ್ಕೆ ಉದಾಹರಣೆ.

**भावदीपः – असाधारणेति ।।** एकपदार्पितो वाऽनेकपदार्पितो वेत्यर्थः । तथा च तादृशधर्मबोधशब्दोऽपि लिङ्गमित्युच्यते । योग्यतावद्वाक्यमपि तथेति भावः ।

ಅಸಾಧಾರಣಧರ್ಮವೇ ಲಿಂಗವೆಂದು ಟೀಕೆಯಲ್ಲಿ ಹೇಳಿದ್ದಾರೆ. ಅಂತಹ ಲಿಂಗವು ಒಂದು ಪದದಿಂದಲೂ ತಿಳಿಯಬಹುದು ಅಥವಾ ಅನೇಕ ಪದದಿಂದಲೂ ತಿಳಿಯಬಹುದು. ಆದ್ದರಿಂದ ಅಂತಹ ಅಸಾಧಾರಣಧರ್ಮಬೋಧಕವಾದ ಶಬ್ದಕ್ಕೂ ಲಿಂಗವೆಂದೇ ಹೆಸರು. ಯೋಗ್ಯತಾದಿಗಳುಳ್ಳ ವಾಕ್ಯದ ಲಕ್ಷಣವು ಹೀಗೆಯೇ ಇರುತ್ತದೆ.

**भावदीपः –** तत्राऽद्यं यथा 'आकाशस्तल्लिङ्गात्' इत्यत्र 'स एषोऽनन्तः' इत्यनन्तत्वम् । द्वितीयं तु 'अत एव प्राणः' इत्यत्र 'श्रीश्च ते लक्ष्मीश्च पत्न्याविति श्रीपत्नीकत्वादिकम् ।

ಏಕಪದಾರ್ಪಿತ ಲಿಂಗಕ್ಕೆ ಉದಾಹರಣೆ ಹೀಗಿದೆ - 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ 'ತಲ್ಲಿಂಗಾತ್' ಎಂಬುದರಿಂದ 'ಸ ಏಷೋಽನಂತಃ'ಎಂಬ ಶ್ರುತಿಪ್ರತಿಪಾದ್ಯವಾದ ಅನಂತತ್ವಪ್ರತಿಪಾದಿತವಾದ ಲಿಂಗವನ್ನು ಹೇಳಿದ್ದಾರೆ. 'ಅನಂತಃ' ಎಂಬ ಒಂದೇ ಪದದಿಂದ ತಿಳಿಯುವಂತಹ ಅನಂತತ್ವವೆಂಬುವ ಲಿಂಗವು ಏಕಪದಾರ್ಪಿತ ಲಿಂಗಕ್ಕೆ ಉದಾಹರಣೆಯಾಗಿದೆ. ಅನೇಕಪದಾರ್ಪಿತಲಿಂಗಕ್ಕೆ ಉದಾಹರಣೆ ಹೀಗಿದೆ - 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ಅನೇಕ ಪದಗಳಿಂದ ಶ್ರೀಲಕ್ಷ್ಮೀಪತಿತ್ವವೆಂಬ ಲಿಂಗವು ತಿಳಿಯುತ್ತದೆ.

**भावदीपः –** एतेन 'श्रीश्च ते' इत्यादेर्वाक्यत्वेऽपि तद्बोध्यस्यासाधारणधर्मत्वात् तदभिप्रायेण तत्र सूत्रभाष्यादौ लिङ्गत्वोक्तिर्युक्तेति भावः ।।

ಹೀಗೆ ಹೇಳಿದ್ದರಿಂದ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬುದು ವಾಕ್ಯರೂಪವಾಗಿದ್ದರೂ ಇದರಿಂದ ಪ್ರತಿಪಾದ್ಯವಾದದ್ದು ಅಸಾಧಾರಣಧರ್ಮವಾದ್ದರಿಂದ ಸೂತ್ರ ಹಾಗೂ ಭಾಷ್ಯಗಳಲ್ಲಿ ಇದನ್ನು ಲಿಂಗವೆಂದು ಹೇಳಿದ್ದು ಸಮಂಜಸವಾಗಿದೆ ಎಂದು ಸಮರ್ಥಿಸಿದಂತಾಯಿತು.

**भावदीपः – निराकाङ्क्षेति ।।** स्वस्मिन्नेव पूर्णाकाङ्क्षत्वेनान्यत्र निराकाङ्क्षाणि पदानीत्यर्थः ।

ನಿರಾಕಾಂಕ್ಷಿತವಾದ ಪದಗಳ ಸಮೂಹವೇ ವಾಕ್ಯವೆಂದು ಟೀಕೆಯಲ್ಲಿ ಹೇಳಿದ್ದಾರೆ. ಅಂದರೆ ತನ್ನಲ್ಲಿರುವ ಪದಗಳಿಂದಲೇ ಆಕಾಂಕ್ಷೆಯು ಪೂರ್ಣವಾಗಿ ಮತ್ತೊಂದು ಪದದ ಅಪೇಕ್ಷೆ ಇಲ್ಲದ ಕಾರಣ ಪದಗಳು ನಿರಾಕಾಂಕ್ಷಿತವೆನಿಸುತ್ತವೆ.

**भावदीपः – एतच्च वाक्यं विप्रतिपन्नस्वान्तर्गतपदार्थनिर्णायकं वा समभिव्याहृतवाक्यान्तर्गतविप्रतिपन्नपदार्थनिर्णायकं वा भवति ।**

ಇಂತಹ ವಾಕ್ಯವು ಎರಡು ವಿಧ - ೧. ವಿಪ್ರತಿಪನ್ನವಾದ ಅರ್ಥವನ್ನು ಸ್ವಾಂತರ್ಗತವಾದ ಪದಗಳಿಂದಲೇ ನಿರ್ಣಯ ಮಾಡುವುದು. ೨. ಸಮಭಿವ್ಯಾಹೃತವಾದ ವಾಕ್ಯಗಳಿಂದ ವಿಪ್ರತಿಪನ್ನವಾದ ಪದಗಳ ಅರ್ಥವನ್ನು ನಿರ್ಣಯಿಸುವುದು.

**भावदीपः – आद्यं यथा हेयत्वावचनाच्चेति सूत्रे 'जानथ आत्मानम्' इति वाक्यम् अहेयत्वरूपलिङ्गोपस्थापनद्वारा जीवं निवार्य परमात्मानम् आत्मपदार्थं निर्णाययति ।**

ಸ್ವಾಂತರ್ಗತವಾದ ಪದಗಳೇ ಅರ್ಥ ನಿರ್ಣಾಯಕವಾಗುತ್ತವೆಂಬುದಕ್ಕೆ ದೃಷ್ಟಾಂತ ಹೀಗಿದೆ - 'ಹೇಯತ್ವಾವಚನಾಚ್ಚ' ಎಂಬ ಸೂತ್ರದಲ್ಲಿ 'ತಮೇವೈಕಮ್ ಜಾನಥ ಆತ್ಮಾನಮ್' ಎಂಬ ಶ್ರುತಿಯನ್ನು ಉಲ್ಲೇಖಿಸಲಾಗಿದೆ. ಇದು 'ಅಹೇಯತ್ವ' ಎಂಬ ಲಿಂಗವನ್ನು ಉಪಸ್ಥಾಪನೆ ಮಾಡುವ ಮೂಲಕ ಜೀವನನ್ನು ನಿರಾಕರಿಸಿ ಪರಮಾತ್ಮನೇ ಆತ್ಮಶಬ್ದಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸುತ್ತದೆ. ಹೀಗೆ ಸ್ವಾಂತರ್ಗತವಾದ ಪದಗಳಿಂದಲೇ ಅರ್ಥವು ನಿರ್ಣಯವಾಗಿದೆ.

**भावदीपः – द्वितीयमपि वाक्यान्तरनिर्णायकश्रुत्यादियुक्तत्वेन वा सहपाठमात्रेण वेति द्वेधा ।**

ಸಮಭಿವಾಹೃತವಾದ ವಾಕ್ಯಾಂತರ್ಗದ ಪದಗಳಿಂದಲೂ ಅರ್ಥನಿರ್ಣಯವಾಗುತ್ತದೆಂಬುದು ಎರಡುವಿಧ, ವಾಕ್ಯಾಂತರನಿರ್ಣಾಯಕವಾದ ಶ್ರುತ್ಯಾದಿಗಳಿಂದ ಕೂಡಿರುವಿಕೆ ಅಥವಾ ಸಹಪಾಠಮಾತ್ರದಿಂದ ಕೂಡಿರುವಿಕೆ ಎಂದು.

**भावदीपः – आद्यं यथा तत्रैव 'स एषोऽन्तश्चरते बहुधा जायमानः' इति जीवलिङ्गोपस्थापकवाक्यसमभिव्याहारेण पुनरात्मशब्दे जीवपरत्वे विप्रतिपत्तौ 'अमृतस्यैष सेतुः' इति मुक्तोपसृप्यत्वलिङ्गोपेतवाक्यान्तरस्य 'जानथ आत्मानम्' इति वाक्यस्यात्मपदार्थस्य परमात्मत्वनिर्णायकत्वम् ।**

ಮೊದಲನೆಯದಕ್ಕೆ ಉದಾಹರಣೆ ಹೀಗಿದೆ - 'ಸ ಏಷೋಂತಶ್ಚರತೇ ಬಹುಧಾ ಜಾಯಮಾನಃ' ಎಂಬಲ್ಲಿ ಜೀವಲಿಂಗಕ್ಕೆ ಉಪಸ್ಥಾಪಕವಾದ ವಾಕ್ಯದ ಸಮಭಿವ್ಯಾಹಾರದಿಂದ 'ಆತ್ಮ' ಶಬ್ದವು ಜೀವಪರವಾಗಿದೆಯೆಂದು 'ವಿಪ್ರತಿಪತ್ತಿ' ಬಂದಾಗ 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯು 'ಮುಕ್ತೋಪಸೃಪ್ಯತ್ವ' ಎಂಬ ಲಿಂಗದಿಂದ 'ಜಾನಥ ಆತ್ಮಾನಮ್' ಎಂಬಲ್ಲಿರುವ 'ಆತ್ಮ' ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸುತ್ತದೆ.

**भावदीपः** – द्वितीयं यथा – दहरनये 'किं तदत्र विद्यते?' इति प्रश्नवाक्यम् 'एषोऽन्तर्हृदय आकाशः' इति वाक्यस्थाकाशपदस्य ब्रह्मरूपार्थत्वं निर्णाययति

ಎರಡನೆಯದ್ದಕ್ಕೆ ದೃಷ್ಟಾಂತ ಹೀಗಿದೆ - ದಹರಾಧಿಕರಣದಲ್ಲಿ 'ಕಿಂ ತದತ್ರ ವಿದ್ಯತೇ?' ಎಂಬ ಪ್ರಶ್ನ ವಾಕ್ಯವು 'ಏಷೋಽಂತರ್ಹೃದಯೇ ಆಕಾಶಃ' ಎಂಬ ವಾಕ್ಯದಲ್ಲಿರುವ 'ಆಕಾಶ' ಪದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸುತ್ತದೆ.

**भावदीपः** – **एकेति** ।। एकप्रमेयतात्पर्यकानेकवाक्यानीत्यर्थः । यथा द्युभ्वादिनये 'प्रकरणाद्' इत्यत्र 'जुष्टं यदा पश्यत्यन्यमीशम्' इतीशशब्दार्थे विप्रतिपत्तौ 'द्वे विद्ये' निर्बाधोपक्रमेण ब्रह्मपरतया निर्णीतं प्रकरणं स्वान्तर्गतेशशब्दार्थब्रह्मेति निर्णाययति ।

ಒಂದೇ ಪ್ರಮೇಯದಲ್ಲಿ ತಾತ್ಪರ್ಯವುಳ್ಳ ಅನೇಕ ವಾಕ್ಯಗಳೇ ಪ್ರಕರಣವೆನಿಸುತ್ತದೆ. ಉದಾಹರಣೆ - ದ್ಯುಭ್ವಾದ್ಯಧಿಕರಣದಲ್ಲಿರುವ 'ಪ್ರಕರಣಾತ್' ಸೂತ್ರದಲ್ಲಿ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬ ಶ್ರುತಿಯಲ್ಲಿರುವ 'ಈಶ' ಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೋ ರುದ್ರನನ್ನೋ ? ಎಂಬ ವಿಪ್ರತಿಪತ್ತಿಯು ಉಂಟಾದಾಗ 'ದ್ವೇ ವಿದ್ಯೇ' ಎಂಬ ನಿರ್ಬಾಧಿತವಾದ ಉಪಕ್ರಮದ ಬಲದಿಂದ ಬ್ರಹ್ಮಪರವೇ ಆಗಿದೆ ಎಂದು ನಿರ್ಣಯಿಸಲಾಗಿದೆ. ಹೀಗೆ ಪ್ರಕರಣವು ಸ್ವಾಂತರ್ಗತವಾದ 'ಈಶ' ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯ-ನಾಗಿದ್ದಾನೆಂದು ನಿರ್ಣಯಿಸುತ್ತದೆ.

**भावदीपः** – स्मृतौ ऐकस्येत्यादिकमुत्तरेणाप्यन्वेतीति मत्वाऽह – **अनेकेति** ।। एकार्थे तात्पर्ययुक्तानेकप्रमेयप्रतिपादकप्रकरणजातं स्थानमित्यर्थः ।

ಸ್ಮೃತಿಯಲ್ಲಿರುವ 'ಏಕಸ್ಯಾ' ಎಂಬುದು ಮುಂದಿನ ವಾಕ್ಯದಲ್ಲಿಯೂ ಅನ್ವಯವಾಗುತ್ತದೆಂದು ಅನೇಕ ಇತ್ಯಾದಿ ಟೀಕೆಯು ಹೊರಟಿದೆ. ಒಂದೇ ಅರ್ಥದಲ್ಲಿ ತಾತ್ಪರ್ಯವುಳ್ಳ ಅನೇಕ ಪ್ರಮೇಯವನ್ನು ಪ್ರತಿಪಾದಿಸುವಂತಹ ಪ್ರಕರಣಗಳ ಸಮೂಹವೇ 'ಸ್ಥಾನ' ಎನಿಸುತ್ತದೆ.

**भावदीपः – यथा 'शन्नोमित्रादिभिर्वाक्यैस्तैरेव हरिमस्तुवत् । भृगुः पञ्चात्मकं पूर्णमन्नादिमयच्युतम् । मुक्तगीतावसनैस्तु' इति स्मृत्या ब्रह्मपरत्वेनावधारितवल्लीत्रयात्मकस्थानस्य स्वान्तर्गतान्नमयादीनां ब्रह्मत्वनिर्णायकत्वम् ।**

ಉದಾಹರಣೆ - 'ಶನ್ನೋ ಮಿತ್ರಾದಿಭಿರ್ವಾಕ್ಯೈಸ್ತೈರೇವ ಹರಿಮಸ್ತುವತ್ । ಭೃಗುಃ ಪಂಚಾತ್ಮಕಂ ಪೂರ್ಣಮನ್ನಾದಿಮಯಚ್ಯುತಮ್ । ಮುಕ್ತಾಗೀತಾವಸಾನೈಸ್ತು' ಎಂಬ ಸ್ಮೃತಿಯಿಂದ ಬ್ರಹ್ಮಪರವೆಂದು ನಿರ್ಣೀತವಾದ ಮೂರು ವಲ್ಲಿಗಳೆಂಬ ಸ್ಥಾನವು ಸ್ವಾಂತರ್ಗತವಾದ ಅನ್ನಮಯಾದಿ ಶಬ್ದಗಳು ಬ್ರಹ್ಮಪರವೇ ಆಗಿವೆಯೆಂದು ನಿರ್ಣಯಿಸುತ್ತವೆ.

**भावदीपः – समानेति ।। निर्णीतस्थले समानोक्तिरित्यर्थः । सा च शब्दतोऽर्थतश्चेति द्वेधा ।**

ನಿರ್ಣೀತವಾದ ಸ್ಥಾನದಲ್ಲಿ ಸಮಾನವಾದ ವಚನವನ್ನು ಹೇಳುವಿಕೆಯೇ ಸಮಾಖ್ಯಾ ಎನಿಸುತ್ತದೆ. ಇದು 'ಅರ್ಥತಃ ಸಮಾಖ್ಯಾ', 'ಶಬ್ದತಃ ಸಮಾಖ್ಯಾ' ಎಂದು ಎರಡುವಿಧ.

**भावदीपः – आद्या यथा अन्तर्यामिनये 'शारीरश्च' इति सूत्रे 'य आत्मनि तिष्ठन्नात्मनोऽन्तरः' इत्यादिसमाख्याया 'यो विज्ञाने तिष्ठन्' इत्यादिवाक्यस्थविज्ञानस्य जीवत्वनिर्णायकत्वम् ।**

'ಶಬ್ದತಃ' ಸಮಾಖ್ಯೆಗೆ ಉದಾಹರಣೆ ಹೀಗಿದೆ - ಅಂತರ್ಯಾಮ್ಯಧಿಕರಣದಲ್ಲಿರುವ 'ಶಾರೀರಶ್ಚ' ಎಂಬ ಸೂತ್ರದಲ್ಲಿ 'ಯ ಆತ್ಮನಿ ತಿಷ್ಠನ್ನಾತ್ಮನೋಽಂತರ' ಇತ್ಯಾದಿ ಸಮಾಖ್ಯೆಯು 'ಯೋ ವಿಜ್ಞಾನೇ ತಿಷ್ಠನ್' ಎಂಬ ವಾಕ್ಯದಲ್ಲಿರುವ ವಿಜ್ಞಾನಶಬ್ದದಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸುತ್ತದೆ.

**भावदीपः – उक्तं च तट्टीकायाम् विज्ञानपदेन शारीरः कुतः? इति चेद् उदाहृतश्रुतिसमाख्यानादेवेति । द्वितीया तु वैश्वानरनये वैश्वानरस्य विष्णुत्वे पुरुषसूक्तसमाख्यानिर्णायिकेत्याद्यूह्यम् ।**

ಅದೇ ಅಧಿಕರಣದ ಟೀಕೆಯಲ್ಲಿ 'ವಿಜ್ಞಾನಪದೇನ ಶಾರೀರಃ ಕುತಃ? ಇತಿ ಚೇದ್ ಉದಾಹೃತಶ್ರುತಿ-ಸಮಾಖ್ಯಾನಾದೇವ' ಎಂದು ಹೇಳಿದ್ದಾರೆ. ಅರ್ಥತಃ ಸಮಾಖ್ಯೆಗೆ ಉದಾಹರಣೆ ಹೀಗಿದೆ - ವೈಶ್ವಾನರಾಧಿಕರಣದಲ್ಲಿ ವಿಷ್ಣುವೇ ವೈಶ್ವಾನರಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ಪುರುಷಸೂಕ್ತದ ಸಮಾಖ್ಯೆಯನ್ನು ಹೇಳಲಾಗಿದೆ. ವೈಶ್ವಾನರ ಸೂಕ್ತದಲ್ಲಿರುವ ಪದಗಳೇ ಬೇರೆ, ಪುರುಷಸೂಕ್ತದಲ್ಲಿರುವ ಪದಗಳೇ ಬೇರೆ. ಆದರೂ ಅರ್ಥದಲ್ಲಿ ವ್ಯತ್ಯಾಸವಿಲ್ಲದ ಕಾರಣ ಪುರುಷಸೂಕ್ತವು ಸಮಾಖ್ಯಾ-ಪ್ರಮಾಣವಾಗುತ್ತದೆ.

**भावदीपः** – अत्र लक्षणेषु विशेषणकृत्यं स्पष्टम् । तेषु पूर्वबलीयस्त्वं बीजोक्त्या व्यनक्ति – तत्रेति ।। साक्षात् लिङ्गवद्व्याप्त्यादिबुद्धिमनपेक्ष्य शब्दविधयेत्यर्थः ।।

ಈ ಶ್ರುತಿಲಿಂಗಾದಿಗಳ ಲಕ್ಷಣಗಳಲ್ಲಿರುವ ವಿಶೇಷಣಗಳ ಸಾರ್ಥಕ್ಯವು ಸ್ಪಷ್ಟವಾಗಿರುವುದರಿಂದ ಸ್ವತಃ ತಾವೇ ತಿಳಿದುಕೊಳ್ಳಬೇಕು. ಇವುಗಳಲ್ಲಿ ಮುಂದಿನ ಪ್ರಮಾಣಗಳಿಗಿಂತ ಹಿಂದಿನ ಪ್ರಮಾಣಗಳು ಬಲಿಷ್ಠವಾಗಿದೆ. ಈ ವಿಷಯದಲ್ಲಿ ಕಾರಣವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ತತ್ರ' ಇತ್ಯಾದಿ ಟೀಕೆಯಿಂದ. ಸಾಕ್ಷಾತ್ ಎಂದರೆ ಲಿಂಗದಂತೆ ವ್ಯಾಪ್ತಿಜ್ಞಾನ ಮೊದಲಾದವುಗಳನ್ನು ಅಪೇಕ್ಷಿಪಡದೆ ಶಬ್ದರೂಪವಾಗಿಯೇ ಅರ್ಥನಿರ್ಣಾಯಕಗಳಾಗಿದೆ ಎಂದರ್ಥ.

**भावदीपः** – अनुमापकतयेति ।। 'इदमेतदर्थकं तदसाधारणधर्मबोधकशब्द-समानाधिकृतत्वात् य एवं स एवं यथाऽमुक' इति वा । 'अयमेतत्पदार्थः तत्समानाधिकृतपदबोध्यासाधारणधर्मवत्त्वात् य एवं स एवं यथाऽमुकः' इति वाऽनुमापकतयेत्यर्थः । व्याप्त्यादिबुद्धिव्यवधानेनानुमापकत्वात् तदानन्तर्यमित्यर्थः ।

ಶ್ರುತಿಯು ಸ್ವಾಭಾವಿಕವಾಗಿ ಅರ್ಥನಿರ್ಣಾಯಕವಾದರೆ, ಲಿಂಗವು ವ್ಯಾಪ್ತಿಜ್ಞಾನವನ್ನು ಅಪೇಕ್ಷಿಪಡುವ ಮೂಲಕ ಅರ್ಥನಿರ್ಣಾಯಕವಾಗುತ್ತದೆ. ಅದು ಹೀಗೆ 'ಇದಮೇತದರ್ಥಕಂ ತದಸಾಧಾರಣಧರ್ಮ-ಬೋಧಕಶಬ್ದಸಮಾನಾಧಿಕೃತತ್ವಾತ್ । ಯ ಏವಂ ಸ ಏವಂ ಯಥಾऽಮುಕಃ' ಅಸಾಧಾರಣ ಧರ್ಮಬೋಧಕವಾದ ಶಬ್ದದ ಸಾಮಾನಾಧಿಕರಣ್ಯವಿರುವ ಪ್ರಯುಕ್ತ ಈ ಪದವು ಇಂತಹ ಅರ್ಥವನ್ನೇ ಪ್ರತಿಪಾದಿಸಬೇಕು. ಇದೇತರಹ ಅನೇಕ ದೃಷ್ಟಾಂತಗಳು ಕಂಡಿವೆ' ಎಂಬ ಅನುಮಾನದಿಂದ ಲಿಂಗವು ಅರ್ಥನಿರ್ಣಾಯಕವಾಗುತ್ತದೆ. ಅಥವಾ 'ಅಯಮೇತತ್ಪದಾರ್ಥಃ ತತ್ಸಮಾನಾಧಿಕೃತಪದಬೋಧ್ಯಾಸಾಧಾರಣ ಧರ್ಮವತ್ತ್ವಾತ್ ಯ ಏವಂ ಸ ಏವಂ ಯಥಾಮುಕಃ' 'ಆ ಪದದ ಸಾಮಾನ್ಯಾಧಿಕರಣವು ಈ ಪದದಲ್ಲಿರುವದರಿಂದ. ಅದೇಪದ ಪ್ರತಿಪಾದನೆ ಮಾಡುವ ಅಸಾಧಾರಣಧರ್ಮವನ್ನೇ ಈ ಪದವೂ ಸಹ ಪ್ರತಿಪಾದನೆ ಮಾಡುವುದರಿಂದ ಈ ಅರ್ಥವು ಇಂಥಹ ಪದದ ಅರ್ಥವೇ ಆಗುತ್ತದೆ. ಈ ವಿಷಯದಲ್ಲೂ ಅನೇಕ ದೃಷ್ಟಾಂತಗಳು ಕಂಡಿವೆ' ಎಂಬ ಅನುಮಾನವೂ ಸಹ ಅರ್ಥನಿರ್ಣಾಯಕವಾಗುತ್ತದೆ. ಹೀಗೆ ವ್ಯಾಪ್ತ್ಯಾದಿ ಬುದ್ಧಿಗಳನ್ನು ಅಪೇಕ್ಷಿಸಿ, ಅನಂತರ ಅರ್ಥನಿರ್ಣಯವನ್ನು ಹುಟ್ಟಿಸುವುದರಿಂದ ಶ್ರುತಿಗಿಂತ ಲಿಂಗವು ದುರ್ಬಲವಾಗಿದೆ ಎಂದು ತಿಳಿಯಬೇಕು.

**भावदीपः** – यथाऽत्रैव वामनश्रुतितः प्राणादिव्यवस्थापकत्वलिङ्गस्य ।

ಉದಾಹರಣೆ ಇದೇ ಅಧಿಕರಣದ ವಾಮನಶ್ರುತಿಯು ಪ್ರಾಣಾದಿವ್ಯವಸ್ಥಾಪಕತ್ವವೆಂಬ ಲಿಂಗಕ್ಕಿಂತಲೂ ಶೀಘ್ರವಾಗಿ ಅರ್ಥೋಪಸ್ಥಾಪಕತ್ವವಾಗಿ ಪ್ರಬಲವಾಗಿದೆ.

**भावदीपः –** यदोर्ध्वं प्राणमुन्नयतीति शब्दावगतो धर्मः वाय्वविनाभावानुसन्धानवत एव, ईशानशब्दार्थो वायुरेव । तत्समानाधिकृतशब्दबोध्यतदविनाभूतप्राणव्यवस्थापकत्वरूपधर्मवत्त्वात् । यो यत्समानाधिकृतशब्दबोध्यासाधारणधर्मवान्, स तच्छब्दार्थः ।

'ಯದೋರ್ಧ್ವಂ ಪ್ರಾಣಮುನ್ನಯತಿ' ಎಂಬ ಶಬ್ದದಿಂದ ತಿಳಿಯಲ್ಪಟ್ಟ ಯಾವ ಪ್ರಾಣವ್ಯವಸ್ಥಾಪಕತ್ವ ಧರ್ಮವಿದೆಯೋ ಅಂತಹ ಧರ್ಮದಿಂದ ಅವಿನಾಭೂತರಾದ ಕಾರಣ 'ಈಶಾನ' ಶಬ್ದಪ್ರತಿಪಾದ್ಯರಾದವರು ವಾಯುದೇವರೇ ಆಗುತ್ತಾರೆ. ಏಕೆಂದರೆ ತತ್ಸಮಾನಾಧಿಕೃತಶಬ್ದಬೋಧ್ಯವಾದ ಅವಿನಾಭೂತವಾದ ಪ್ರಾಣವ್ಯವಸ್ಥಾಪಕತ್ವವೆಂಬ ಧರ್ಮವನ್ನು ಹೊಂದಿರುವುದರಿಂದ ಯಾರು ಯಾವ ಶಬ್ದದ ಸಾಮಾನಾಧಿಕರಣ್ಯದಿಂದ ಬೋಧ್ಯವಾದ ಅಸಾಧಾರಣಧರ್ಮವುಳ್ಳವನೋ ಅವನು ಆ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

**भावदीपः –** यथा 'तल्लिङ्गाद्' इत्यादौ 'स एषोऽनन्तः' इत्याकाशशब्दसमानाधिकृतानन्तशब्दबोध्यासाधारणधर्मवान् विष्णुः आकाशशब्दार्थ इति ईशानशब्दार्थं वायुरिति निर्णाययितुं प्रवर्तन्ते, ततः प्रागेव ईशानशब्दसमानाधिकृता वामनश्रुतिः व्याप्तिधियं विनैवेशान् शब्दार्थरूपं स्वार्थं स्वनिष्ठशक्त्यैव निश्चाययतीति प्राबल्यमित्यर्थः ।।

ಉದಾಹರಣೆ - 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ 'ತಲ್ಲಿಂಗಾತ್' ಎಂಬ ಪದದಿಂದ 'ಸ ಏಷೋಽನಂತಃ' ಎಂಬಲ್ಲಿರುವ ಆಕಾಶಶಬ್ದದ ಸಾಮಾನಾಧಿಕರಣ್ಯ ಇರುವಂತಹ ಅನಂತ ಶಬ್ದ ಪ್ರತಿಪಾದ್ಯವಾದ ಅಸಾಧಾರಣಧರ್ಮವುಳ್ಳ ಯಾವ ವಿಷ್ಣುವಿದ್ದಾನೋ ಆವನೇ 'ಆಕಾಶ' ಶಬ್ದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲಾಗುತ್ತದೆ. ಯಾವಾಗ 'ಈಶಾನ' ಶಬ್ದವು ವಾಯುವನ್ನು ಪ್ರತಿಪಾದನೆ ಮಾಡುತ್ತದೋ ಆದಕ್ಕಿಂತ ಮೊದಲೇ 'ಈಶಾನ' ಶಬ್ದದ ಸಮಾನ್ಯಾಧಿಕರಣ್ಯವನ್ನು ಹೊಂದಿರುವಂತಹ ವಾಮನಶ್ರುತಿಯು ವ್ಯಾಪ್ತಿಜ್ಞಾನವನ್ನು ಅಪೇಕ್ಷಿಪಡದೆ ವಿಷ್ಣುವೇ ಈಶಾನಪದಪ್ರತಿಪಾದ್ಯನಾಗಿದ್ದಾನೆಂದು ನಿಶ್ಚಯಿಸಿಬಿಡುತ್ತದೆ. ಹೀಗೆ ಶ್ರುತಿಯು ಲಿಂಗಕ್ಕಿಂತ ಪ್ರಬಲವಾಗಿದೆ ಎಂಬುದನ್ನು ತಿಳಿಯಬೇಕು.

**भावदीपः – अनेकेति** ।। अनेकपदार्थकथनद्वारा स्वार्थान्वययोग्य एव समभिव्याहृतवाक्यान्तरार्थ इत्यादिरूपेणानुमापकत्वादित्यर्थः ।

ಲಿಂಗಕ್ಕಿಂತಲೂ ವಾಕ್ಯವು ವಿಳಂಬವಾಗಿ ಅರ್ಥನಿರ್ಣಾಯಕವಾಗುತ್ತದೆ. ಆದ್ದರಿಂದ ವಾಕ್ಯಕ್ಕಿಂತ ಲಿಂಗವೇ ಪ್ರಬಲವಾಗಿದೆ. ಏಕೆಂದರೆ ಅನೇಕ ಪದಾರ್ಥಗಳನ್ನು ತಿಳಿಸುವ ಮೂಲಕ ವಿಪ್ರತಿಪನ್ನವಾದ ವಾಕ್ಯದ ಅರ್ಥವನ್ನು ನಿರ್ಣಯಿಸಬೇಕಾಗಿರುವುದರಿಂದ ವಿಳಂಬವಾಗಿ ಅರ್ಥನಿರ್ಣಾಯಕವಾಗುತ್ತದೆ.

ಪರಿಪೂರ್ಣಚಂದ್ರಿಕಾ

**भावदीपः** – यथा दहरनये 'एषोऽन्तर्हृदय आकाशः' इति वाक्यं हृत्स्थदहराकाशस्थितब्रह्मार्थकम् । तद्गतान्वेष्टव्यवस्तुप्रश्नार्थककिंतदत्रेत्यादिवाक्य समभिव्याहारात् । यद्यदर्थकवाक्यसमभिव्याहृतं तद्वाक्यं तदर्थान्वययोग्यार्थकम् । यथा स य एवंविदिति ब्रह्मज्ञानिवाक्यसमभिव्याहृतम् 'अन्नमयमात्मानमुप-सङ्क्रामतीत्यादिवाक्यं ब्रह्मप्राप्त्यर्थकमिति सामान्यव्याप्त्या वा यथा 'अधीहि भगवो ब्रह्म' इति ब्रह्मप्रश्नार्थकवाक्यसमभिव्याहृतं चक्षुःश्रोत्रमित्याद्युत्तरवाक्यं ब्रह्मार्थकमित्यादिरूपेण विशिष्य वाऽनुमापकत्वादित्यर्थः ।

ಅನುಮಾನದ ಸ್ವರೂಪ ಹೀಗಿದೆ - ದಹರಾಧಿಕರಣದಲ್ಲಿರುವಂತಹ 'ಏಷೋಽಂತರರ್ಹ್ಯದಯೇ ಆಕಾಶಃ' ಎಂಬ ವಾಕ್ಯವು ಹೃದಯದಲ್ಲಿರುವ ದಹರಾಕಾಶದಲ್ಲಿರುವವನು ಬ್ರಹ್ಮನೇ ಆಗಿದ್ದಾನೆಂದು ಹೇಳುತ್ತಿದೆ ಏಕೆಂದರೆ ಹೃದಯದಲ್ಲಿ ಅನ್ವೇಷಣೆ ಮಾಡಲು ಯೋಗ್ಯವಾದ ವಸ್ತುವಿನ ಬಗ್ಗೆ ಪ್ರಶ್ನೆ ಹಾಗೂ ಉತ್ತರಗಳು ಇರುವುದರಿಂದ. 'ಏಷೋಽಂತರ್ಹ್ಯದಯ ಆಕಾಶಃ ಇತಿ ವಾಕ್ಯಂ ಹೃತ್ಸ್ಥದಹರಾಕಾಶಸ್ಥಿತ-ಬ್ರಹ್ಮಾರ್ಥಕಮ್ । ತದ್ಗತಾನ್ವೇಷ್ಟವ್ಯವಸ್ತುಪ್ರಶ್ನಾರ್ಥಕಕಿಂತದತ್ರೇತ್ಯಾದಿವಾಕ್ಯಸಮಭಿವ್ಯಾಹಾರಾತ್ । ಯದ್ ಯದರ್ಥಕವಾಕ್ಯಸಮಭಿವ್ಯಾಹೃತಮ್, ತದ್ ವಾಕ್ಯಂ ತದರ್ಥಾನ್ವಯಯೋಗ್ಯಾರ್ಥಕಮ್ । ಯಥಾ ಸ ಯ ಏವಂವಿದ್ ಇತಿ ಬ್ರಹ್ಮಜ್ಞಾನಿವಾಕ್ಯಸಮಭಿವ್ಯಾಹೃತಮ್ ಅನ್ನಮಯಮಾತ್ಮಾನಮುಪಸಂಕ್ರಾಮತಿ ಇತ್ಯಾದಿವಾಕ್ಯಂ ಬ್ರಹ್ಮಪ್ರಾಪ್ತ್ಯರ್ಥಕಮ್ । ಎಂದು. ಯಾವರೀತಿಯಾಗಿ ಬ್ರಹ್ಮಜ್ಞಾನಿವಾಕ್ಯದ ಸಮಭಿವ್ಯಾಹಾರವಿರುವುದರಿಂದ 'ಅನ್ನಮಯಮಾತ್ಮಾನಮುಪಸಂಕ್ರಾಮತಿ' ಎಂಬ ವಾಕ್ಯವು ಬ್ರಹ್ಮನ ಪ್ರಾಪ್ತಿಯನ್ನೇ ಹೇಳುತ್ತದೆಯೋ ಅದರಂತೆ 'ಕಿಂ ತದತ್ರ' ಎಂಬ ವಾಕ್ಯದ ಸಮವ್ಯಾಹಾರವಿರುವುದರಿಂದ ಅನ್ವೇಷಣವಾಕ್ಯವು ಹೃದಯಾಕಾಶದಲ್ಲಿರುವವನು ಬ್ರಹ್ಮನೇ ಆಗಿದ್ದಾನೆಂದು ಹೇಳುತ್ತದೆ. ಮತ್ತೊಂದು ಉದಾಹರಣೆ - 'ಅಧೀಹಿ ಭಗವೋ ಬ್ರಹ್ಮ' ಎಂಬಲ್ಲಿರುವ ಬ್ರಹ್ಮನ ಬಗ್ಗೆ ಪ್ರಶ್ನಿಸುವ ವಾಕ್ಯದ ಸಮಭಿವ್ಯಾಹಾರವಿರುವುದರಿಂದ 'ಚಕ್ಷುಃ ಶ್ರೋತ್ರಮ್' ಇವೇ ಮೊದಲಾದ ಮುಂದಿನ ವಾಕ್ಯಗಳು ಬ್ರಹ್ಮ ಪ್ರತಿಪಾದಕವೇ ಆಗಿವೆಯೆಂದು ತಿಳಿಯುತ್ತದೆ.

**भावदीपः** – तथा 'जानथ आत्मानमित्याद्यपि वाक्यं अन्या वाचो विमुञ्चथ इत्यादिवाक्यसहपाठात् ब्रह्मार्थकम् । तथा 'एतमेव ब्रह्मेत्याचक्षत' इतिवाक्यं ब्रह्मपदं मुख्यपरब्रह्मार्थकम् । अन्यत्रायोग्यान्वयप्रतियोग्यर्थकसावधारणपद समभिव्याहारात् । सामान्यव्याप्त्या सम्मतवदिति स्वान्तर्गतपदार्थानुमापकमित्याद्यूह्यम् ।

ಮೇಲಿನ ಉದಾಹರಣೆಯಂತೆ 'ತಮೇವೈಕಮ್‌ಜಾನಥ ಆತ್ಮಾನಮ್' ಎಂಬ ವಾಕ್ಯವೂ ಕೂಡ 'ಅನ್ಯ ವಾಚೋ ವಿಮುಂಚಥಾ' ಎಂಬ ವಾಕ್ಯದ ಸಹಪಾಠವಿರುವುದರಿಂದ ಬ್ರಹ್ಮಪ್ರತಿಪಾದಕವೇ ಆಗಿದೆ. ಅದರಂತೆ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ವಾಕ್ಯದಲ್ಲಿರುವ ಬ್ರಹ್ಮಪದವೂ ಕೂಡ ಮುಖ್ಯವಾಗಿ ಪರಬ್ರಹ್ಮನನ್ನೇ

ಪ್ರತಿಪಾದಿಸುತ್ತದೆ. ಇದನ್ನು ಅನುಮಾನ ರೂಪದಲ್ಲಿ ಹೀಗೆ ಹೇಳಬಹುದು. 'ಏತಮೇವ ಬ್ರಹ್ಮೇತ್ಯಾಚಕ್ಷತೇ ಇತಿ ವಾಕ್ಯಮ್ ಬ್ರಹ್ಮಪದಂ ಮುಖ್ಯಪರಬ್ರಹ್ಮಾರ್ಥಕಮ್'. 'ಅನ್ಯತ್ರಾಯೋಗ್ಯಾನ್ವಯಪ್ರತಿಯೋಗ್ಯರ್ಥಕ ಸಾವಧಾರಣಪದ ಸಮಭಿವ್ಯಾಹಾರಾತ್' 'ಸಮ್ಮತವತ್'. ಎಂದು ಹೀಗೆ ಸ್ವಾಂತರ್ಗತವಾದ ಪದಾರ್ಥಗಳನ್ನು ನಿರ್ಣಯಿಸುವ ಮೂಲಕ ವಾಕ್ಯತಾತ್ಪರ್ಯವಿಷಯವನ್ನು ನಿರ್ಣಯಿಸಬೇಕಾಗಿರುವುದರಿಂದ ವಿಳಂಬವಾಗಿ ಅರ್ಥನಿರ್ಣಾಯಕ- ವಾಗುತ್ತದೆಂಬುದನ್ನು ಸ್ವತಃ ಊಹಿಸಿಕೊಳ್ಳಬೇಕು.

**भावदीपः – बह्वर्थेति** ।। अनेकवाक्यात्मकस्य प्रकरणस्यानेकवाक्यार्थधीपूर्वकमिदं प्रकरणमेतत्परमिति यज्ज्ञानं तज्ज्ञानपूर्वकं स्वान्तर्गतविप्रतिपन्नवाक्यस्य प्रकरणानुगुण एवार्थ इत्यनेकवाक्यार्थधीद्वारा लिङ्गत्वादित्यर्थः । यथा प्रागुक्तप्रकरणं अन्यमीशमिति वाक्यं जीवब्रह्मभेदार्थकमित्यस्यानुमापकमित्यादि बोध्यम् ।।

ವಾಕ್ಯಕ್ಕಿಂತಲೂ ಪ್ರಕರಣ ಮತ್ತಷ್ಟು ವಿಳಂಬವಾಗಿ ಅರ್ಥನಿರ್ಣಾಯಕವಾಗಿದೆ. ಏಕೆಂದರೆ ಪ್ರಕರಣವು ಅನೇಕವಾಕ್ಯಸಮೂಹರೂಪವಾಗಿದೆ. ಆ ಎಲ್ಲಾ ವಾಕ್ಯಗಳ ಅರ್ಥಜ್ಞಾನವನ್ನು ಹುಟ್ಟಿಸಿ ತನ್ಮೂಲಕ ಪದಾರ್ಥಗಳ ಜ್ಞಾನವನ್ನು ಹುಟ್ಟಿಸಿ, ತನ್ಮೂಲಕ ಅರ್ಥವನ್ನು ನಿರ್ಣಯಿಸಬೇಕು. ಅಂದರೆ ಸ್ವಾಂತರ್ಗತ ವಿಪ್ರತಿಪನ್ನವಾಕ್ಯವು ಪ್ರಕರಣಕ್ಕೆ ಅನುಗುಣವಾಗಿದೆಯೆಂದು ಸಮರ್ಥಿಸಬೇಕು. ಹೀಗೆ ಅನೇಕ ವಾಕ್ಯಾರ್ಥಜ್ಞಾನವನ್ನು ತಂದು ಕೊಡುವ ಮುಖಾಂತರ ಲಿಂಗರೂಪವಾಗಿರುವುದರಿಂದ ವಾಕ್ಯಕ್ಕಿಂತ ವಿಳಂಬವಾಗಿ ಅರ್ಥೋಪಸ್ಥಾಪಕವಾಗಿದೆಯೆಂದು ಅಭಿಪ್ರಾಯ. ಹಿಂದೆ ಹೇಳಲ್ಪಟ್ಟ ಪ್ರಕರಣವು 'ಅನ್ಯಮೀಶಮ್' ಎಂಬಲ್ಲಿರುವ ವಾಕ್ಯವು ಜೀವ-ಬ್ರಹ್ಮ ಭೇದ ಪ್ರತಿಪಾದಕವಾಗಿದೆ ಎಂಬುದಕ್ಕೆ ಅನುಮಾಪಕವಾಗಿದೆಯೆಂಬುದನ್ನು ಈ ವಿಷಯದಲ್ಲಿ ದೃಷ್ಟಾಂತವಾಗಿ ತಿಳಿಯಬೇಕು.

**भावदीपः – अतिबह्वर्थेति** ।। अनेकप्रकरणार्थधीपूर्वकमिदं स्थानमेतत्परमिति यज्ज्ञानं तत्पूर्वकं स्वान्तर्गतस्य विप्रतिपन्नवाक्यस्य स्थानानुगुण एवार्थ इत्यनेक-प्रकरणार्थधीद्वाराऽनुमापकत्वादित्यर्थः ।

ಅನೇಕ ಪ್ರಕರಣಗಳ ಅರ್ಥಜ್ಞಾನವನ್ನು ತಂದುಕೊಡುವ ಮೂಲಕ ಸ್ಥಾನವು ಅರ್ಥನಿರ್ಣಾಯಕವಾಗುವುದರಿಂದ ಪ್ರಕರಣಗಳಿಗಿಂತ ಸ್ಥಾನವು ದುರ್ಬಲವಾಗಿದೆ. ಹೀಗೆ ಪ್ರಕರಣದ ಜ್ಞಾನವನ್ನು ತಂದುಕೊಡುವ ಮೂಲಕ ಸ್ವಾಂತರ್ಗತವಿಪ್ರತಿಪನ್ನವಾಕ್ಯವು ಸ್ಥಾನಕ್ಕೆ ಅನುಗುಣವಾಗಿದೆಯೆಂದು ತಿಳಿಸಬೇಕಾದ್ದರಿಂದ ಇದೂ ಕೂಡ ಅನುಮಾಪಕವಾಗಿದೆಯೆಂದು ತಿಳಿಯಬೇಕು.

**भावदीपः** – प्रागुक्तमेवोदाहरणम् – **स्थानान्तरेति** ।। स्थानान्तरस्थाया अत्रोक्तमेव स्थानान्तरस्थविप्रतिपन्नवाक्येनापि बोध्यमिति स्थानद्वयानुसन्धानपूर्वकं तत्सदृशत्वादिदं तत्परमित्येवं सादृश्यमात्रेण लिङ्गत्वादित्यर्थः ।

ಈ ವಿಷಯದಲ್ಲೂ ಹಿಂದಿನದ್ದೇ ಉದಾಹರಣೆ. ಒಂದು ಸ್ಥಾನದಲ್ಲಿರುವ ವಾಕ್ಯಕ್ಕೆ ಮತ್ತೊಂದು ಸ್ಥಾನದಲ್ಲಿರುವ ಸಮಾನವಾಕ್ಯವು ಸಮಾಖ್ಯಾ ಪ್ರಮಾಣವೆನಿಸುತ್ತದೆ. ಮತ್ತೊಂದು ಸ್ಥಾನದಲ್ಲಿರುವ ವಾಕ್ಯದ ಬಲದಿಂದ ವಿಪ್ರತಿಪನ್ನವಾದ ವಾಕ್ಯದ ಅರ್ಥವನ್ನು ನಿರ್ಣಯಿಸಬೇಕಾದ್ದರಿಂದ ಸ್ಥಾನಭೇದ ಅನುಸಂಧಾನದ ಮೂಲಕ 'ತತ್ಸದೃಶತ್ವಾದಿದಂ ತತ್ಪರಮ್' ಎಂಬ ಸಾದೃಶ್ಯದಿಂದ ಅರ್ಥವು ನಿಶ್ಚಯವಾಗುವುದರಿಂದ ಸ್ಥಾನಕ್ಕಿಂತಲೂ ವಿಳಂಬವಾಗಿ ಅರ್ಥನಿರ್ಣಾಯಕವಾಗುತ್ತದೆ. ಹೀಗೆ ಎಲ್ಲಾ ಪ್ರಮಾಣಗಳಿಗಿಂತಲೂ ಸಮಾಖ್ಯಾಪ್ರಮಾಣವು ಅತ್ಯಂತ ದುರ್ಬಲವಾಗುತ್ತೆಂದು ತಿಳಿಯಬೇಕು. ಈ ವಿಷಯದಲ್ಲೂ ಹಿಂದೆ ಹೇಳಿದ್ದನ್ನೇ ಉದಾಹರಣೆಯಾಗಿ ತಿಳಿಯಬೇಕು.

**भावदीपः** – उक्तमेवोदाहरणम् । नन्वेवं कथमन्तरादिनयेषु लिङ्गात् श्रुतेर्दौर्बल्योक्तिः । कथं वा वैश्वानरनये असम्भवात्पुरुषविधमिति प्रकरणादिना पाचकत्वादिलिङ्गबाधः इत्यत आह – **अत्रापीति** ।।

ಹಾಗಾದರೆ ಅಂತರಾಧಿಕರಣದಲ್ಲಿ ಲಿಂಗಕ್ಕಿಂತ ಶ್ರುತಿಯು ದುರ್ಬಲವಾಗಿದೆಯೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ? ಮತ್ತು ವೈಶ್ವಾನರಾಧಿಕರಣದಲ್ಲಿರುವ 'ಅಸಂಭವಾತ್ಪುರುಷವಿಧಮ್' ಇತ್ಯಾದಿ ಸೂತ್ರದಲ್ಲಿ ಪ್ರಕರಣ ಪ್ರಮಾಣದಿಂದ 'ಪಾಚಕತ್ವ' ವೆಂಬ ಲಿಂಗಗಳಿಗೆ ಬಾಧವನ್ನು ಹೇಳಿದ್ದು ಹೇಗೆ ಯುಕ್ತವಾಗುತ್ತದೆ? ಇತ್ಯಾದಿ ಪ್ರಶ್ನೆಗೆ 'ಅತ್ರಾಪಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः** – नोपक्रमादावेवेत्यपेरर्थः । पूर्ववत्समन्वयसूत्रोक्तोपक्रमादाविवेत्यर्थः। एवं त्रिपादीं व्याख्याय अस्त्वेवं ततश्च किमित्यत एवमागमनिर्णय इति चतुर्थपादं व्याचष्टे – **अत्र विरुद्धेति** ।।

ಉಪಕ್ರಮಾದಿಗಳಲ್ಲಷ್ಟೇ ಅಲ್ಲ ಎಂಬುದು 'ಅಪಿ' ಶಬ್ದದ ಅರ್ಥ. ಹಿಂದೆ ಸಮನ್ವಯ ಸೂತ್ರದಲ್ಲಿ ಹೇಳಲ್ಪಟ್ಟ ಉಪಕ್ರಮಾದಿ ಪ್ರಮಾಣಗಳಂತೆ ಎಂದು ಹೇಳಿದಂತಾಯಿತು. ಹೀಗೆ ಶ್ಲೋಕದಲ್ಲಿರುವ ಮೂರು ಪಾದಗಳನ್ನು ವ್ಯಾಖ್ಯಾನ ಮಾಡಿ ಮುಂದೇನು? ಎಂಬ ಪ್ರಶ್ನೆಗೆ 'ಏವಮಾಗಮನಿರ್ಣಯಃ' ಎಂಬ ನಾಲ್ಕನೆಯ ಪಾದವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಅತ್ರ ವಿರುದ್ಧ' ಇತ್ಯಾದಿ ಟೀಕೆಯಿಂದ.

**भावदीपः** – एवमित्यनुवादः पूर्वेणोत्तरेण च वाक्यद्वयेन व्याख्येयतयान्वेति । एवं विरुद्धैतेषां समवाये सतीति । एवं पूर्वपूर्वेण उत्तरोत्तरबाधायेति च । आगमार्थविनिर्णय इत्युक्त्या श्रुत्यादिषट्कम् आगमार्थ एव लिङ्गतया निर्णायकम् ।

'ಏವಂ' ಎಂಬುದು ಅನುವಾದರೂಪವಾಗಿದೆ. ಹಿಂದಿನ ಮುಂದಿನ ವಾಕ್ಯಗಳಿಂದ ವ್ಯಾಖ್ಯೇಯರೂಪವಾಗಿ ಅನ್ವಯವನ್ನು ಹೊಂದುತ್ತದೆ. 'ಏವಂ' ಎಂದರೆ ವಿರುದ್ಧವಾದ ವಿಷಯದಲ್ಲಿ ಇತ್ಯಾದಿಗಳು ಸೇರಿದಾಗ ಹಿಂದಿನವುಗಳಿಗಿಂತ ಮುಂದಿನ ಪ್ರಮಾಣಗಳಿಗೆ ಬಾಧವನ್ನು ಹೇಳಬೇಕು ಎಂದಂತಾಯಿತು.

ಪ್ರತಿಪಾದಿಸುತ್ತದೆ. ಇದನ್ನು ಅನುಮಾನ ರೂಪದಲ್ಲಿ ಹೀಗೆ ಹೇಳಬಹುದು. 'ಏತಮೇವ ಬ್ರಹ್ಮೇತ್ಯಾಚಕ್ಷತೇ ಇತಿ ವಾಕ್ಯಮ್ ಬ್ರಹ್ಮಪದಂ ಮುಖ್ಯಪರಬ್ರಹ್ಮಾರ್ಥಕಮ್'. 'ಅನ್ಯತ್ರಾಯೋಗ್ಯಾನ್ವಯಪ್ರತಿಯೋಗ್ಯರ್ಥಕ ಸಾವಧಾರಣಪದ ಸಮಭಿವ್ಯಾಹಾರಾತ್' 'ಸಮ್ಮತವತ್'. ಎಂದು ಹೀಗೆ ಸ್ವಾಂತರ್ಗತವಾದ ಪದಾರ್ಥಗಳನ್ನು ನಿರ್ಣಯಿಸುವ ಮೂಲಕ ವಾಕ್ಯತಾತ್ಪರ್ಯವಿಷಯವನ್ನು ನಿರ್ಣಯಿಸಬೇಕಾಗಿರುವುದರಿಂದ ವಿಳಂಬವಾಗಿ ಅರ್ಥನಿರ್ಣಾಯಕ- ವಾಗುತ್ತದೆಂಬುದನ್ನು ಸ್ವತಃ ಊಹಿಸಿಕೊಳ್ಳಬೇಕು.

**भावदीपः – बह्वर्थेति** ।। अनेकवाक्यात्मकस्य प्रकरणस्यानेकवाक्यार्थधीपूर्वकमिदं प्रकरणमेतत्परमिति यज्ज्ञानं तज्ज्ञानपूर्वकं स्वान्तर्गतविप्रतिपन्नवाक्यस्य प्रकरणानुगुण एवार्थ इत्यनेकवाक्यार्थधीद्वारा लिङ्गत्वादित्यर्थः । यथा प्रागुक्तप्रकरणं अन्यमीशमिति वाक्यं जीवब्रह्मभेदार्थकमित्यस्यानुमापकमित्यादि बोध्यम् ।।

ವಾಕ್ಯಕ್ಕಿಂತಲೂ ಪ್ರಕರಣ ಮತ್ತಷ್ಟು ವಿಳಂಬವಾಗಿ ಅರ್ಥನಿರ್ಣಾಯಕವಾಗಿದೆ. ಏಕೆಂದರೆ ಪ್ರಕರಣವು ಅನೇಕವಾಕ್ಯಸಮೂಹರೂಪವಾಗಿದೆ. ಆ ಎಲ್ಲಾ ವಾಕ್ಯಗಳ ಅರ್ಥಜ್ಞಾನವನ್ನು ಹುಟ್ಟಿಸಿ ತನ್ಮೂಲಕ ಪದಾರ್ಥಗಳ ಜ್ಞಾನವನ್ನು ಹುಟ್ಟಿಸಿ, ತನ್ಮೂಲಕ ಅರ್ಥವನ್ನು ನಿರ್ಣಯಿಸಬೇಕು. ಅಂದರೆ ಸ್ವಾಂತರ್ಗತ ವಿಪ್ರತಿಪನ್ನವಾಕ್ಯವು ಪ್ರಕರಣಕ್ಕೆ ಅನುಗುಣವಾಗಿದೆಯೆಂದು ಸಮರ್ಥಿಸಬೇಕು. ಹೀಗೆ ಅನೇಕ ವಾಕ್ಯಾರ್ಥಜ್ಞಾನವನ್ನು ತಂದು ಕೊಡುವ ಮುಖಾಂತರ ಲಿಂಗರೂಪವಾಗಿರುವುದರಿಂದ ವಾಕ್ಯಕ್ಕಿಂತ ವಿಳಂಬವಾಗಿ ಅರ್ಥೋಪಸ್ಥಾಪಕವಾಗಿದೆಯೆಂದು ಅಭಿಪ್ರಾಯ. ಹಿಂದೆ ಹೇಳಲ್ಪಟ್ಟ ಪ್ರಕರಣವು 'ಅನ್ಯಮೀಶಮ್' ಎಂಬಲ್ಲಿರುವ ವಾಕ್ಯವು ಜೀವ-ಬ್ರಹ್ಮ ಭೇದ ಪ್ರತಿಪಾದಕವಾಗಿದೆ ಎಂಬುದಕ್ಕೆ ಅನುಮಾಪಕವಾಗಿದೆಯೆಂಬುದನ್ನು ಈ ವಿಷಯದಲ್ಲಿ ದೃಷ್ಟಾಂತವಾಗಿ ತಿಳಿಯಬೇಕು.

**भावदीपः – अतिबह्वर्थेति** ।। अनेकप्रकरणार्थधीपूर्वकमिदं स्थानमेतत्परमिति यज्ज्ञानं तत्पूर्वकं स्वान्तर्गतस्य विप्रतिपन्नवाक्यस्य स्थानानुगुण एवार्थ इत्यनेक-प्रकरणार्थधीद्वाराऽनुमापकत्वादित्यर्थः ।

ಅನೇಕ ಪ್ರಕರಣಗಳ ಅರ್ಥಜ್ಞಾನವನ್ನು ತಂದುಕೊಡುವ ಮೂಲಕ ಸ್ಥಾನವು ಅರ್ಥನಿರ್ಣಾಯಕವಾಗುವುದರಿಂದ ಪ್ರಕರಣಗಳಿಗಿಂತ ಸ್ಥಾನವು ದುರ್ಬಲವಾಗಿದೆ. ಹೀಗೆ ಪ್ರಕರಣದ ಜ್ಞಾನವನ್ನು ತಂದುಕೊಡುವ ಮೂಲಕ ಸ್ವಾಂತರ್ಗತವಿಪ್ರತಿಪನ್ನವಾಕ್ಯವು ಸ್ಥಾನಕ್ಕೆ ಅನುಗುಣವಾಗಿದೆಯೆಂದು ತಿಳಿಸಬೇಕಾದ್ದರಿಂದ ಇದೂ ಕೂಡ ಅನುಮಾಪಕವಾಗಿದೆಯೆಂದು ತಿಳಿಯಬೇಕು.

**भावदीपः – प्रागुक्तमेवोदाहरणम् – स्थानान्तरेति** ।। स्थानान्तरस्थाया अत्रोक्तमेव स्थानान्तरस्थविप्रतिपन्नवाक्येनापि बोध्यमिति स्थानद्वयानुसन्धानपूर्वकं तत्सदृशत्वादिदं तत्परमित्येवं सादृश्यमात्रेण लिङ्गत्वादित्यर्थः ।

ಈ ವಿಷಯದಲ್ಲೂ ಹಿಂದಿನದ್ದೇ ಉದಾಹರಣೆ. ಒಂದು ಸ್ಥಾನದಲ್ಲಿರುವ ವಾಕ್ಯಕ್ಕೆ ಮತ್ತೊಂದು ಸ್ಥಾನದಲ್ಲಿರುವ ಸಮಾನವಾಕ್ಯವು ಸಮಾಖ್ಯಾ ಪ್ರಮಾಣವೆನಿಸುತ್ತದೆ. ಮತ್ತೊಂದು ಸ್ಥಾನದಲ್ಲಿರುವ ವಾಕ್ಯದ ಬಲದಿಂದ ವಿಪ್ರತಿಪನ್ನವಾದ ವಾಕ್ಯದ ಅರ್ಥವನ್ನು ನಿರ್ಣಯಿಸಬೇಕಾದ್ದರಿಂದ ಸ್ಥಾನಭೇದ ಅನುಸಂಧಾನದ ಮೂಲಕ 'ತತ್ಸದೃಶತ್ವಾದಿದಂ ತತ್ಪರಮ್' ಎಂಬ ಸಾದೃಶ್ಯದಿಂದ ಅರ್ಥವು ನಿಶ್ಚಯವಾಗುವುದರಿಂದ ಸ್ಥಾನಕ್ಕಿಂತಲೂ ವಿಳಂಬವಾಗಿ ಅರ್ಥನಿರ್ಣಾಯಕವಾಗುತ್ತದೆ. ಹೀಗೆ ಎಲ್ಲಾ ಪ್ರಮಾಣಗಳಿಗಿಂತಲೂ ಸಮಾಖ್ಯಾಪ್ರಮಾಣವು ಅತ್ಯಂತ ದುರ್ಬಲವಾಗುತ್ತೆಂದು ತಿಳಿಯಬೇಕು. ಈ ವಿಷಯದಲ್ಲೂ ಹಿಂದೆ ಹೇಳಿದ್ದನ್ನೇ ಉದಾಹರಣೆಯಾಗಿ ತಿಳಿಯಬೇಕು.

**भावदीपः** – उक्तमेवोदाहरणम् । नन्वेवं कथमन्तरादिनयेषु लिङ्गात् श्रुतेर्दौर्बल्योक्तिः । कथं वा वैश्वानरनये असम्भवात्पुरुषविधमिति प्रकरणादिना पाचकत्वादिलिङ्गबाधः इत्यत आह – **अत्रापीति** ।।

ಹಾಗಾದರೆ ಅಂತರಾಧಿಕರಣದಲ್ಲಿ ಲಿಂಗಕ್ಕಿಂತ ಶ್ರುತಿಯು ದುರ್ಬಲವಾಗಿದೆಯೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ? ಮತ್ತು ವೈಶ್ವಾನರಾಧಿಕರಣದಲ್ಲಿರುವ 'ಅಸಂಭವಾತ್ಪುರುಷವಿಧಮ್' ಇತ್ಯಾದಿ ಸೂತ್ರದಲ್ಲಿ ಪ್ರಕರಣ ಪ್ರಮಾಣದಿಂದ 'ಪಾಚಕತ್ವ' ವೆಂಬ ಲಿಂಗಗಳಿಗೆ ಬಾಧವನ್ನು ಹೇಳಿದ್ದು ಹೇಗೆ ಯುಕ್ತವಾಗುತ್ತದೆ? ಇತ್ಯಾದಿ ಪ್ರಶ್ನೆಗೆ 'ಅತ್ರಾಪಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः** – नोपक्रमादावेवेत्यपेरर्थः । पूर्ववत्समन्वयसूत्रोक्तोपक्रमादाविवेत्यर्थः। एवं त्रिपादीं व्याख्याय अस्त्वेवं ततश्च किमित्यत एवमागमनिर्णय इति चतुर्थपादं व्याचष्टे – **अत्र विरुद्धेति** ।।

ಉಪಕ್ರಮಾದಿಗಳಲ್ಲಷ್ಟೇ ಅಲ್ಲ ಎಂಬುದು 'ಅಪಿ' ಶಬ್ದದ ಅರ್ಥ. ಹಿಂದೆ ಸಮನ್ವಯ ಸೂತ್ರದಲ್ಲಿ ಹೇಳಲ್ಪಟ್ಟ ಉಪಕ್ರಮಾದಿ ಪ್ರಮಾಣಗಳಂತೆ ಎಂದು ಹೇಳಿದಂತಾಯಿತು. ಹೀಗೆ ಶ್ಲೋಕದಲ್ಲಿರುವ ಮೂರು ಪಾದಗಳನ್ನು ವ್ಯಾಖ್ಯಾನ ಮಾಡಿ ಮುಂದೇನು? ಎಂಬ ಪ್ರಶ್ನೆಗೆ 'ಏವಮಾಗಮನಿರ್ಣಯಃ' ಎಂಬ ನಾಲ್ಕನೆಯ ಪಾದವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಅತ್ರ ವಿರುದ್ಧ' ಇತ್ಯಾದಿ ಟೀಕೆಯಿಂದ.

**भावदीपः** – एवमित्यनुवादः पूर्वेणोत्तरेण च वाक्यद्वयेन व्याख्येयतयान्वेति । एवं विरुद्धैतेषां समवाये सतीति । एवं पूर्वपूर्वेण उत्तरोत्तरबाधायेति च । आगमार्थविनिर्णय इत्युक्त्या श्रुत्यादिषट्कम् आगमार्थ एव लिङ्गतया निर्णायकम् ।

'ಏವಂ' ಎಂಬುದು ಅನುವಾದರೂಪವಾಗಿದೆ. ಹಿಂದಿನ ಮುಂದಿನ ವಾಕ್ಯಗಳಿಂದ ವ್ಯಾಖ್ಯೇಯರೂಪವಾಗಿ ಅನ್ವಯವನ್ನು ಹೊಂದುತ್ತದೆ. 'ಏವಂ' ಎಂದರೆ ವಿರುದ್ಧವಾದ ವಿಷಯದಲ್ಲಿ ಇತ್ಯಾದಿಗಳು ಸೇರಿದಾಗ ಹಿಂದಿನವುಗಳಿಗಿಂತ ಮುಂದಿನ ಪ್ರಮಾಣಗಳಿಗೆ ಬಾಧವನ್ನು ಹೇಳಬೇಕು ಎಂದಂತಾಯಿತು.

'ಆಗಮಾರ್ಥವಿನಿರ್ಣಯೇ' ಎಂದು ಹೇಳಿದ್ದರಿಂದ ಶ್ರುತ್ಯಾದಿ ಆರು ಪ್ರಮಾಣಗಳು ಆಗಮಾರ್ಥಯ ನಿರ್ಣಯದಲ್ಲಷ್ಟೇ ಲಿಂಗರೂಪವಾಗಿ ನಿರ್ಣಾಯಕವಾಗಿದೆ.

**भावदीपः –** उपक्रमादिकं तु तात्पर्यानुमापकमिति दर्शितम् । अत एव तत्र 'लिङ्गं तात्पर्यनिर्णये' इत्युक्तम् । 'समाख्यावाक्यप्रकरणस्थानानि च' इति प्रमाणलक्षणटीकायां उपक्रमादीनां तात्पर्यलिङ्गत्वम् एतेषां पुनरर्थ एवेति योगविभाग इति ।

ಉಪಕ್ರಮಾದಿಗಳಾದರೂ ಆಗಮದ ತಾತ್ಪರ್ಯಕ್ಕೆ ಅನುಮಾಪಕವಾಗಿದೆಯೆಂದು ಹೇಳಿದಂತಾಯಿತು. ಆದ್ದರಿಂದಲೇ ಉಪಕ್ರಮಾದಿಗಳನ್ನು ಉಲ್ಲೇಖಿಸುವಾಗ 'ಲಿಂಗಂ ತಾತ್ಪರ್ಯನಿರ್ಣಯೇ' ಎಂಬುದಾಗಿ 'ತಾತ್ಪರ್ಯ' ಶಬ್ದವನ್ನು ಉಪಯೋಗಿಸಿದ್ದಾರೆ. 'ಸಮಾಖ್ಯಾವಾಕ್ಯಪ್ರಕರಣಸ್ಥಾನಾನಿ ಚ' ಎಂದು ಪ್ರಮಾಣಲಕ್ಷಣಟೀಕೆಯಲ್ಲಿ ಉಪಕ್ರಮಾದಿಗಳಿಗೆ ತಾತ್ಪರ್ಯವಿಷಯಲ್ಲಿ ಲಿಂಗತ್ವವನ್ನು ಶ್ರುತ್ಯಾದಿಗಳಲ್ಲಿ ಲಿಂಗವಿಷಯದಲ್ಲಿ ಲಿಂಗತ್ವವನ್ನು ಹೇಳುವ ಮೂಲಕ ಯೋಗವಿಭಾಗ ಮಾಡಿದ್ದಾರೆ.

**भावदीपः – वक्ष्यते चात्रैवाग्रे उपक्रमेत्यादिना ।।** अत्रैषामुदाहरणानि तु चन्द्रिकायामुक्तानि । विवृतानि च तानि चन्द्रिकाप्रकाशेऽस्माभिः । तत्र श्रुत्यादिलिङ्गबाधोऽत्रैव स्पष्टः ।

ಈ ವಿಷಯವು ಮುಂದೆ ಉಪಕ್ರಮಾದಿಟೀಕೆಯಿಂದ ಸ್ಪಷ್ಟಪಡಿಸಲಾಗುತ್ತದೆ. ಈ ಎಲ್ಲಾವಿಷಯಗಳಲ್ಲಿ ಉದಾಹರಣೆಗಳನ್ನು ತಾತ್ಪರ್ಯಚಂದ್ರಿಕೆಯಲ್ಲಿ ತಿಳಿಯಬೇಕು. ನಾವೂ ಸಹ ಚಂದ್ರಿಕಾಪ್ರಕಾಶದಲ್ಲಿ ವಿವರಿಸಿದ್ದೇವೆ. ಶ್ರುತ್ಯಾದಿಗಳಿಂದ ಲಿಂಗ ಮೊದಲಾದವು ಹೇಗೆ ಬಾಧಿತವಾಗುತ್ತವೆಂಬುದು ಮಾತ್ರ ಇಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ.

**भावदीपः –** स्मृतावुक्तक्रमो न विवक्षितः, किन्तु सौत्र एवेति वक्तुमाह – **न चेति ।।**

ಸ್ಮೃತಿಯಲ್ಲಿ ಮೇಲೆ ಹೇಳಿದ ಕ್ರಮವು ವಿವಕ್ಷಿತವಾಗಿಲ್ಲ ಸೂತ್ರಕಾರರಿಗಷ್ಟೇ ಈ ಅರ್ಥವು ಸಮ್ಮತವಾಗಿದೆ 'ನಚ' ಇತ್ಯಾದಿ ಟೀಕೆಯಿಂದ ಸಮರ್ಥಿಸಲಾಗಿದೆ.

**भावदीपः – आत्मेति ।।** चतुर्थस्य चतुर्थपादे 'आत्मा प्रकरणादिति नये परं ज्योतिरुपसंपद्येति दहरविद्यास्थवाक्यगतं ज्योतिः किं सूर्यः विष्णुर्वेति सन्देहे 'सूर्यमगन्मज्योतिरिरिति ज्योतिःपदस्य सूर्य इव विष्णावपि तद्देवान् ज्योतिषां ज्योतिः' इत्यादौ प्रयोगसत्त्वेऽपि स तेजसि सूर्ये संपन्नो यथा पादोदरस्त्वचा

विनिर्मुच्यते । एव हैव स पाप्मना विनिर्मुक्त इति श्रुतिसमाख्यानात् सूर्य इति प्राप्ते सिद्धान्तितम् । ज्योतिः परमात्मैव । य आत्माऽपहतपाप्मेति परमात्मप्रकरणात् । समाख्या तु विष्णौ सावकाशेति । तथा च तद्विरोधः स्यादिति भावः ।

ನಾಲ್ಕನೇ ಅಧ್ಯಾಯದ ನಾಲ್ಕನೇ ಪಾದದಲ್ಲಿ 'ಆತ್ಮಾ ಪ್ರಕರಣಾತ್' ಎಂಬ ಸೂತ್ರವಿದೆ. ಇದರಲ್ಲಿ 'ಪರಂಜ್ಯೋತಿರುಪಸಂಪದ್ಯಾ' ಎಂಬ ದಹರವಿದ್ಯೆಯಲ್ಲಿರುವ ವಾಕ್ಯದ 'ಜ್ಯೋತಿ' ಶಬ್ದವು ಸೂರ್ಯನನ್ನು ಪ್ರತಿಪಾದಿಸುತ್ತದೋ, ವಿಷ್ಣುವನ್ನು ಪ್ರತಿಪಾದಿಸುತ್ತದೋ ? ಎಂಬ ಸಂಶಯವು ಪ್ರಾಪ್ತವಾಗುತ್ತದೆ. 'ಸೂರ್ಯಮಗನ್ಮ ಜ್ಯೋತಿಃ' ಎಂಬ ಶ್ರುತಿಯಲ್ಲಿ 'ಜ್ಯೋತಿಃ' ಎಂಬ ಪದವು ಸೂರ್ಯನಲ್ಲಿ ಪ್ರಯುಕ್ತವಾದಂತೆ 'ತದ್ದೇವಾ ಜ್ಯೋತಿಷಾಮ್ ಜ್ಯೋತಿಃ' ಎಂಬಲ್ಲಿ ವಿಷ್ಣುವಿನಲ್ಲೂ ಕೂಡ ಪ್ರಸಿದ್ಧವಾಗಿದೆ. ಹೀಗೆ ವಿಷ್ಣುವಿನಲ್ಲಿ 'ಜ್ಯೋತಿಸ್' ಶಬ್ದದ ರೂಢಿ ಇರಬಹುದು. 'ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ । ಏವ ಹೈವ ಸ ಪಾಪ್ಮನಾ ವಿನಿರ್ಮುಕ್ತಃ' ಎಂಬ ಶ್ರುತಿ ಸಮಾಖ್ಯಾನದಿಂದ 'ಅಪಹತಪಾಪ್ಮತ್ವವೆಂಬ ಗುಣವು ಸೂರ್ಯನಲ್ಲಿ ಮಾತ್ರ ಬರುವುದರಿಂದ ಸಮಾಖ್ಯಾ ಶ್ರುತಿಯ ಬಲದಿಂದ ಸೂರ್ಯನೇ 'ಜ್ಯೋತಿಸ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ.

'ಜ್ಯೋತಿಸ್' ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನು. ಏಕೆಂದರೆ 'ಯ ಆತ್ಮಾ ಅಪಹತಪಾಪ್ಮಾ' ಎಂಬುದು ಪರಮಾತ್ಮನ ಪ್ರಕರಣವಾಗಿದೆ ಸಮಾಖ್ಯಾಪ್ರಮಾಣವಾದರೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಆದ್ದರಿಂದ ಸಮಾಖ್ಯಾಪ್ರಮಾಣದ ವಿರೋಧದಿಂದ ಪ್ರಕರಣಕ್ಕೆ ಬಾಧವನ್ನು ಹೇಳಲು ಸಾಧ್ಯವಿಲ್ಲ, ಆದ್ದರಿಂದ ಪ್ರಕರಣದಿಂದ ಸಮಾಖ್ಯೆಗೆ ವಿರೋಧವನ್ನು ಹೇಳಿದಂತಾಗುತ್ತದೆ.

**भावदीपः – तर्हि स्वोक्त एव क्रमः कुतः इत्यत आह – तदाहेति ।।** अस्माभिरुक्तं श्रुत्यादिपौर्वापर्यं तृतीयेऽध्याय इत्यर्थः ।

ಹಾಗಾದರೆ ನೀವು ಹೇಳಿದ ಕ್ರಮವನ್ನು ಏಕೆ ಅನುಸರಿಸಬೇಕು? ಎಂಬ ಪ್ರಶ್ನೆಗೆ 'ತದಾಹ' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ. ಮೂರನೇ ಅಧ್ಯಾಯದಲ್ಲಿ ಶ್ರುತಿಲಿಂಗಾದಿಗಳಲ್ಲಿರುವಂತಹ ಪೌರ್ವಾಪರ್ಯ ವಿಚಾರವನ್ನು ವಿವರವಾಗಿ ನಿರೂಪಣೆ ಮಾಡಿದ್ದೇವೆ.

**भावदीपः – यद्वा श्रुत्यादिबलाबलबीजमस्माभिरुक्तमेव जैमिनिसूत्रेऽप्यभिमतं न तु पूर्वमीमांसाकारैरुक्तमित्यभिप्रेत्याऽह – तदाह जैमिनिरिति ।।**

ಅಥವಾ ಶ್ರುತಿಲಿಂಗಾದಿಗಳ ಪ್ರಾಬಲ್ಯದೌರ್ಬಲ್ಯಕ್ಕೆ ಕಾರಣವನ್ನು ನಾವು ಹೇಳಿದ್ದೇ ಜೈಮಿನಿಸೂತ್ರದ ಅಭಿಪ್ರಾಯ ಹೊರತು ಪೂರ್ವಮೀಮಾಂಸಕಾರರು ಹೇಳಿದ್ದು ಜೈಮಿನಿಸೂತ್ರದ ಅಭಿಪ್ರಾಯವಲ್ಲವೆಂಬ ದೃಷ್ಟಿಯಿಂದ 'ತದಾಹ ಜೈಮಿನಿಃ' ಎಂಬ ಮಾತನ್ನು ಹೇಳಿರುತ್ತಾರೆ.

ವಾಮನಾಧಿಕರಣ (೧-೩-೭)

**भावदीपः** – श्रुत्यादिबलाबलबीजमित्यर्थः । परोक्तबलाबलबीजखण्डनं तु तर्कताण्डवे द्वितीयपरिच्छेदान्ते प्रपञ्चितम् । सूत्रे विरुद्धानामिति योज्यम् । भाष्यमपि स्वोक्तक्रमे संवादयति – **भाष्यकारोऽपीति** ।।

ಶ್ರುತಿಲಿಂಗಾದಿಗಳ ಬಲಾಬಲಬೀಜವನ್ನು ಜೈಮಿನಿಋಷಿಗಳು ಹೇಳಿದ್ದಾರೆಂದು 'ತದಾಹ ಜೈಮಿನಿಃ' ಎಂಬುದರ ಅಭಿಪ್ರಾಯ. ಪೂರ್ವಮೀಮಾಂಸಕರು ಹೇಳುವಂತಹ ಪ್ರಾಬಲ್ಯ-ದೌರ್ಬಲ್ಯಗಳ ಕಾರಣವನ್ನು ತರ್ಕತಾಂಡವದ ಎರಡನೇ ಪರಿಚ್ಛೇದದ ಕೊನೆಯಲ್ಲಿ ವಿವರಿಸಿದ್ದೇವೆ. ಸೂತ್ರದಲ್ಲಿ ವಿರುದ್ಧವಾದವುಗಳನ್ನು ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು, ಭಾಷ್ಯವೂ ಸಹ ಈ ವಿಷಯದಲ್ಲಿ ಸಂವಾದವಾಗಿದೆ ಎಂಬುದನ್ನು 'ಭಾಷ್ಯಕಾರೋऽಪಿ' ಎಂಬ ಟೀಕೆಯಿಂದ ಹೇಳುತ್ತಿದ್ದಾರೆ.

**भावदीपः** – भक्तिपादीयानुव्याख्यानकारोऽप्याहेत्यर्थः । 'आगमार्थावसित्यर्था नियतव्याप्तयोऽखिलाः ।' इति पूर्वशेषः ।

ಭಕ್ತಿಪಾದದ ಅನುವ್ಯಾಖ್ಯಾನದಲ್ಲೂ ಶ್ರೀಮದಾಚಾರ್ಯರು ಹೇಳಿರುತ್ತಾರೆಂದು ತಿಳಿಯಬೇಕು. 'ಆಗಮಾರ್ಥಾವಸಿತ್ಯರ್ಥಾ ನಿಯತವ್ಯಾಪ್ತಯೋऽಖಿಲಾಃ' ಎಂಬ ಹಿಂದಿನ ವಾಕ್ಯವನ್ನು ಶೇಷಪೂರಣ ಮಾಡಿಕೊಳ್ಳಬೇಕು.

**भावदीपः** – ननु वैश्वानरनये 'असम्भवात्' इति गुणसूत्रे 'को न आत्मा किं ब्रह्मेति श्रुतात्मादिश्रुतेरुपक्रमनिश्चयद्वारा प्रकरणनिश्चायकत्वमुक्तम् । अत्र तूच्यते विप्रतिपन्नेशानशब्दार्थप्रमापकत्वं वामनश्रुतेः । तथा 'तल्लिङ्गादित्यादौ अनन्तत्वादि-लिङ्गस्य विप्रतिपन्नार्थनिर्णायकत्वमुक्तम् । 'अत्ता चराचरग्रहणात्' इत्यादौ अप्संवत्सरसृष्ट्यादेर्लिङ्गस्य प्रकरणनिर्णायकत्वमुक्तम् । तथा मान्त्रवर्णिकसूत्रे 'ब्रह्मविदाप्नोति परमिति वाक्यं ब्रह्मप्रकरणनिर्णायक (मित्यु)मुक्तम् । दहरनयादौ 'किं तदत्रेत्यादिवाक्यं समभिव्याहृतवाक्यान्तरार्थनिर्णायकं भवति । तत्कथमित्यत आह – **श्रुतिलिङ्गवाक्यानामिति** ।।

ವೈಶ್ವಾನರಾಧಿಕರಣದ 'ಅಸಂಭವಾತ್' ಎಂಬ ಗುಣಸೂತ್ರದಲ್ಲಿ 'ಕೋ ನ ಆತ್ಮಾ ಕಿಂ ಬ್ರಹ್ಮ' ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ ಆತ್ಮಾದಿ ಶಬ್ದಗಳು ಉಪಕ್ರಮದ ವಾಕ್ಯವನ್ನು ನಿರ್ಣಯಿಸುವ ಮೂಲಕ ಪ್ರಕರಣಕ್ಕೆ ನಿಶ್ಚಾಯಕವಾಗುವುದೆಂದು ಹೇಳಲಾಗಿದೆ. ಈ ಅಧಿಕರಣದಲ್ಲೂ ವಿಪ್ರತಿಪನ್ನವಾದ 'ಈಶಾನ' ಶಬ್ದದ ಅರ್ಥವನ್ನು ವಾಮನ ಶ್ರುತಿಯು ನಿರ್ಣಯಿಸುತ್ತದೆಂದು ಹೇಳಲಾಗಿದೆ. ಇದರಂತೆ 'ಆಕಾಶಾಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಅನಂತತ್ವವೆಂಬ ಲಿಂಗವು ವಿಪ್ರತಿಪನ್ನವಾದ ಅರ್ಥನಿರ್ಣಾಯಕವಾಗುತ್ತದೆಂದು ಹೇಳಲಾಗಿದೆ. 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ 'ಅಪ್ಸಂವತ್ಸರಸೃಷ್ಟಿ' ಎಂಬ ಲಿಂಗವು ಪ್ರಕರಣಕ್ಕೆ

ನಿಶ್ಚಾಯಕವಾಗುತ್ತದೆಂದು ಹೇಳಲಾಗಿದೆ. ಮತ್ತು ಮಾತ್ರವರ್ಣಕಸೂತ್ರದಲ್ಲಿ 'ಬ್ರಹ್ಮವಿದಾಪ್ನೋತಿ ಪರಮ್' ಎಂಬ ವಾಕ್ಯಕ್ಕೆ ಬ್ರಹ್ಮಪ್ರಕರಣನಿರ್ಣಾಯಕತ್ವವನ್ನು ಹೇಳಲಾಗಿದೆ. ಅದರಂತೆ ದಹರಾಧಿಕರಣದಲ್ಲಿ 'ಕಿಂ ತದತ್ರ' ಎಂಬ ವಾಕ್ಯವು ಸಮಭಿವ್ಯಾಹೃತವಾದ ವಾಕ್ಯಾಂತರಾರ್ಥಕ್ಕೆ ನಿರ್ಣಾಯಕವಾಗಿದೆಯೆಂದು ಹೇಳಲಾಗಿದೆ. ಇದೆಲ್ಲ ಹೇಗೆ ಕೂಡುತ್ತದೆ ? ಎಂಬ ಪ್ರಶ್ನೆಗೆ 'ಶ್ರುತಿಲಿಂಗವಾಕ್ಯಾನಾಮ್' ಇತ್ಯಾದಿ ಟೀಕೆಯಿಂದ ಉತ್ತರಿಸಿದ್ದಾರೆ.

**भावदीपः – एतेषामुदाहरणानि चन्द्रिकायां व्यक्तानि । तर्हि उपक्रमादिकं व्यर्थमित्यत आह – उपक्रमेति ।। अन्यथेति ।। अर्थसिद्ध्यभावे ।**

ಶ್ರುತಿ, ಲಿಂಗ, ವಾಕ್ಯಗಳು ನೇರವಾಗಿ ವಿಪ್ರತಿಪನ್ನವಾದ ವಾಕ್ಯದಲ್ಲಿದ್ದರೆ, ಶ್ರುತಿ, ಲಿಂಗ ಮೊದಲಾದ ಸ್ವರೂಪದಿಂದಲೇ ನಿರ್ಣಾಯಕವಾಗುತ್ತವೆ. ಉಪಕ್ರಮ, ಉಪಸಂಹಾರಗಳಲ್ಲಿ ಶ್ರುತವಾಗಿದ್ದರೆ ಉಪಕ್ರಮ, ಉಪಸಂಹಾರ ವಾಕ್ಯಗಳ ಅರ್ಥವನ್ನು ನಿರ್ಣಯಿಸುವ ಮೂಲಕ ಪ್ರತಿಪನ್ನವಾದ ವಾಕ್ಯಕ್ಕೆ ನಿಶ್ಚಾಯಕವಾಗುತ್ತದೆಯೆಂಬ ವಿಚಾರವನ್ನು ಚಂದ್ರಿಕೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಮತ್ತು ಪ್ರತಿಯೊಂದಕ್ಕೂ ಉದಾಹರಣೆಯನ್ನು ತೋರಿಸಲಾಗಿದೆ. ಹಾಗಾದರೆ ಉಪಕ್ರಮಾದಿಗಳನ್ನು ಹೇಳಿದ್ದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಉಪಕ್ರಮ' ಇತ್ಯಾದಿ ಟೀಕೆಯಿಂದ ಉತ್ತರಿಸಲಾಗಿದೆ. 'ಅನ್ಯಥಾ' ಎಂದರೆ ಅರ್ಥವೇ ಸಿದ್ಧವಾಗದಿದ್ದರೆ ಎಂದರ್ಥ.

**भावदीपः – नन्वसाधारणधर्मो लिङ्गमिति निराकाङ्क्षपदानि वाक्यमिति चोक्तम् । तदयुक्तमिव । तथात्वे श्रीश्च त इत्यादेर्लिङ्गत्वेनोक्तस्य वाक्यतापत्तेरित्यत आह – लिङ्गेति ।।**

ಅಸಾಧಾರಣಧರ್ಮವನ್ನೇ ಲಿಂಗವೆಂದು ಹೇಳಿದಿರಿ, ನಿರಾಕಾಂಕ್ಷ ಪದಗಳನ್ನೇ ವಾಕ್ಯವೆಂದು ಹೇಳಿದಿರಿ, ಇದು ತಪ್ಪು. ಹಾಗಾದರೆ 'ಶ್ರೀಶ್ಚತೇ, ಲಕ್ಷ್ಮೀಶ್ಚ' ಇತ್ಯಾದಿ ವಾಕ್ಯಗಳಿಂದ ತಿಳಿಯುವಂತಹ ಲಿಂಗವು ವಾಕ್ಯರೂಪವಾಗಬೇಕಾದೀತಲ್ಲವೆ? ಎಂಬ ಪ್ರಶ್ನೆಗೆ 'ಲಿಂಗ' ಇತ್ಯಾದಿ ಟೀಕೆಯಿಂದ ಉತ್ತರಿಸಿದ್ದಾರೆ.

**भावदीपः – असाधारणधर्मबोधकत्वाविशेषेऽपि एकः कर्ता वर्तमानकाले स्वार्थं पाकक्रियां निर्वर्तयतीत्यस्य पचते इत्यस्य चैकार्थत्वेऽपि एक इत्यादिवाक्यात् पचते इति पदस्यैव झडित्यर्थबोधकत्वादेकपदात्मकं लिङ्गम्, अन्यत्तु वाक्यमिति भेद इत्यर्थः ।**

ವಾಕ್ಯ ಹಾಗೂ ಲಿಂಗ ಎರಡೂ ಸಹ ಅಸಾಧಾರಣಧರ್ಮವನ್ನೇ ಬೋಧಿಸುತ್ತದೆ. ಆದರೂ ಸಹ ವಾಕ್ಯದಿಂದ ತಿಳಿಯುವಂತಹ ಅರ್ಥವು ವಿಳಂಬವಾಗುತ್ತದೆ. ಲಿಂಗದಿಂದ ತಿಳಿಯುವಂತಹ ಅರ್ಥವು ಶೀಘ್ರವಾಗಿರುತ್ತದೆ. ಉದಾಹರಣೆ - 'ಏಕಃ ಕರ್ತಾ ವರ್ತಮಾನಕಾಲೇ ಸ್ವಾರ್ಥಂ ಪಾಕಕ್ರಿಯಾಂ ನಿರ್ವರ್ತಯತಿ' 'ಒಬ್ಬ ಕರ್ತೃವು ವರ್ತಮಾನ ಕಾಲದಲ್ಲಿ ತನಗಾಗಿ ಪಾಕಕ್ರಿಯೆಯಲ್ಲಿ ತೊಡಗುತ್ತಾನೆ' ಎಂಬ ವಾಕ್ಯದಿಂದ ಯಾವ ಶಾಬ್ದಬೋಧ ಬರುತ್ತದೋ, 'ಪಚತೇ' ಎಂಬ ಒಂದೇ ಧಾತುವಿನಿಂದ ಅದೇ

ಶಾಬ್ದಬೋಧವು ಬರುತ್ತದೆ. 'ಏಕಃ ಕರ್ತಾ' ಎಂಬ ವಾಕ್ಯಕ್ಕಿಂತಲೂ 'ಪಚತೇ' ಎಂಬ ಪದದಿಂದ ಶೀಘ್ರವಾಗಿ ಅರ್ಥಜ್ಞಾನವು ಬರುವುದರಿಂದ ಪದರೂಪವಾದ ಲಿಂಗವು ವಾಕ್ಯಕ್ಕಿಂತಲೂ ಪ್ರಬಲವಾಗಿದೆ ಎಂದು ತಿಳಿಯಬೇಕು. ಹೀಗೆ ವಾಕ್ಯ ಹಾಗೂ ಲಿಂಗಗಳಲ್ಲಿರುವ ವ್ಯತ್ಯಾಸವನ್ನು ಗಮನಿಸಬೇಕು.

**भावदीपः** – तथा चान्तरादिनये यस्याण्डकोशं शुष्मम् श्रीश्च ते लक्ष्मीश्च पत्न्यौ । वि मे कर्णा पतयतो' इत्यादीनां वाक्यत्वेऽपि लिङ्गत्वोक्तिः तद्बोध्यस्य असाधारणधर्मत्वात्तद्विवक्षयेति भावः ।

ಇದರಂತೆ ಅಂತರಾಧಿಕರಣದಲ್ಲಿ 'ಯಸ್ಯಾಂಡಕೋಶಂ ಶುಷ್ಮಮ್', 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ', 'ವಿಮೇ ಕರ್ಣಾ ಪತಯತೋ' ಇವೇ ಮೊದಲಾದ ವಾಕ್ಯಗಳಿಗೆ ಲಿಂಗತ್ವವನ್ನು ಏಕೆ ಹೇಳಿದ್ದಾರೆಯೆಂದರೆ ಈ ವಾಕ್ಯಗಳಿಂದ ತಿಳಿಯಲ್ಪಡುವ ಧರ್ಮವು ಅಸಾಧಾರಣಧರ್ಮವಾಗಿರುವುದರಿಂದ.

**भावदीपः** – प्रवक्षणाः पक्षान् । इत्यादिवत् इत्यादौ यथा साक्षादसाक्षादर्थबोधकत्वेन लिङ्गं वाक्यमिति व्यवहारः । तथा अनन्तः श्रीश्च त इत्यादाविति भावः ।

'ಪ್ರವಕ್ಷಣಾಃ ಪಕ್ಷಾನ್' ಇತ್ಯಾದಿ ಸ್ಥಳಗಳಲ್ಲಿ ಹೇಗೆ ನೇರವಾಗಿ ಮತ್ತು ಪರಂಪರೆಯಿಂದ ಅರ್ಥಬೋಧಕವಾದ ಲಿಂಗ ಮತ್ತು ವಾಕ್ಯವೆಂಬ ವ್ಯವಹಾರವಿದೆಯೋ ಅದರಂತೆ ಅನಂತಃ ಎಂಬುದು ಲಿಂಗವಾಗಿದೆ, 'ಶ್ರೀಶ್ಚತೇ' ಎಂಬುದು ವಾಕ್ಯವಾಗಿದೆಯೆಂದು ತಿಳಿಯಬೇಕು.

**भावदीपः** – एतेन ऊर्ध्वं प्राणमुन्नयतीत्यादेः शब्दस्य वाक्यत्वेऽपि तद्बोध्यस्य लिङ्गत्वाभिप्रायेण भाष्यादौ लिङ्गत्वोक्तिर्युक्तेति भावः ।

ಹೀಗೆ ಹೇಳಿದ್ದರಿಂದ 'ಊರ್ಧ್ವಂ ಪ್ರಾಣಮುನ್ನಯತಿ' ಶಬ್ದವು ವಾಕ್ಯರೂಪವಾಗಿದ್ದರೂ ತದ್ಬೋಧ್ಯವಾದ ಪ್ರಾಣವ್ಯವಸ್ಥಾಪಕತ್ವವು ಲಿಂಗರೂಪವಾದ್ದರಿಂದ ಭಾಷ್ಯಾದಿಗಳಲ್ಲಿ ಲಿಂಗವೆಂದೇ ಇದನ್ನು ಪರಿಗಣಿಸಿದ್ದಾರೆ.

**भावदीपः** – ननु सौत्रैवकारसूचितस्वभावप्राबल्येनैव श्रुतेर्लिङ्गबाधकत्वोपपत्तौ भाष्ये तच्च लिङ्गमित्यादिना लिङ्गस्य सावकाशत्वोक्तिरयुक्तेत्यतो व्यावर्त्यचोद्यमाह – नन्विति ।।

ಪ್ರಶ್ನೆ - ಸೂತ್ರದಲ್ಲಿ ಏವಕಾರದಿಂದ ಸೂಚಿತವಾದ ಸ್ವಭಾವಿಕವಾದ ಪ್ರಾಬಲ್ಯವು ಶ್ರುತಿಯಲ್ಲಿರುವುದರಿಂದ ಇಂತಹ ಶ್ರುತಿಯು ಲಿಂಗಕ್ಕೆ ಬಾಧಕವಾಗುತ್ತದೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗಿರುವಾಗ ಭಾಷ್ಯದಲ್ಲಿ 'ತಚ್ಚ ಲಿಂಗಮ್' ಇತ್ಯಾದಿ ವಾಕ್ಯದಿಂದ ಲಿಂಗಕ್ಕೆ ಸಾವಕಾಶತ್ವವನ್ನು ಹೇಳಿದ್ದು ತಪ್ಪಲ್ಲವೆ? ಎಂಬ ಪ್ರಶ್ನೆಗೆ 'ನನು' ಇತ್ಯಾದಿ ವಾಕ್ಯದಿಂದ ಆಶಂಕಿಸಿ ಉತ್ತರಿಸುತ್ತಿದ್ದಾರೆ.

**भावदीपः – बाहुल्येनेति ।।** द्विविधं बलवत्त्वं च बहुत्वाच्च स्वभावत इत्युक्तेरिति भावः ।

'ದ್ವಿವಿಧಂ ಬಲವತ್ವಂ ಚ ಬಹುತ್ವಾಚ್ಚ ಸ್ವಭಾವತಃ' ಎಂಬ ಮಾತಿನಂತೆ ಪ್ರಾಬಲ್ಯವನ್ನು ಸ್ವಾಭಾವಿಕವಾಗಿ ಮತ್ತು ಬಹುತ್ವ ಪ್ರಯುಕ್ತವಾಗಿ ಎರಡು ಬಗೆಯಲ್ಲಿ ಹೇಳಬಹುದು.

**भावदीपः –** यद्यपि तयोः स्वभावो बलवानित्युक्त्या अनेकलिङ्गानामप्येकश्रुत्या बाधो युज्यते । उक्तश्चायमर्थः पादान्त्यप्राणनयटीकायाम् ।

ವಾಸ್ತವಿಕವಾಗಿ 'ತಯೋಃ ಸ್ವಭಾವೋ ಬಲವಾನ್' ಎಂಬ ಮಾತಿನಿಂದ ಸ್ವಭಾವತಃ ಬಲಿಷ್ಠವಾದ ಅನೇಕ ಲಿಂಗಗಳಿಗೂ ಸ್ವಭಾವತಃ ಬಲಿಷ್ಠವಾದ ಒಂದೇ ಶ್ರುತಿಯಿಂದ ಬಾಧವನ್ನು ಹೇಳಬಹುದು. ಇದರ ಬಗ್ಗೆ ಅಂತಿಮಪ್ರಾಣಾಧಿಕರಣದ ಟೀಕೆಯಲ್ಲಿ ಹೇಳಿದ್ದಾಗಿದೆ

**भावदीपः –** तथापि सौत्रप्रमितपदसूचितश्रुतिनिरवकाशत्ववैयर्थ्यायाभ्युपेत्य-वादेन वा प्रागुक्तदिशा लिङ्गानां निरवकाशत्वमप्यस्तीति हृदि कृत्वा लिङ्गानामपि प्राबल्यादनिर्णय एवेत्युक्तम् । ततश्च किमित्यतो भावमाह – **न बाहुल्येऽपीति ।।**

ಆದರೂ ಸಹ ಸೂತ್ರದಲ್ಲಿರುವ 'ಪ್ರಮಿತ' ಪದದಿಂದ ಸೂಚಿತವಾದ ಶ್ರುತಿಯ ನಿರವಕಾಶತ್ವಕ್ಕೆ ವೈಯರ್ಥ್ಯ ಬರಬಾರದೆಂದು ಅಂಗೀಕರಿಸಿ ಹಿಂದೆ ಹೇಳಿದಂತೆ ಲಿಂಗಗಳಿಗೆ ನಿರವಕಾಶತ್ವವು ಇರುತ್ತದೆಂದು ಮನಸ್ಸಿನಲ್ಲಿ ಇಟ್ಟುಕೊಂಡು ಲಿಂಗಗಳೂ ಪ್ರಬಲವಾದ್ದರಿಂದ ನಿರ್ಣಯಿಸುವುದು ಕಷ್ಟವೆಂದು ಹೇಳಿದ್ದಾರೆ. ಇದರಿಂದೇನಾಯಿತು ? ಎಂಬುದಕ್ಕೆ 'ನ ಬಾಹುಲ್ಯೇಪಿ' ಇತ್ಯಾದಿವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः – निरवकाशादिति ।।** तस्याश्च विष्णौ महायोगेति प्रागुक्तदिशेति भावः – **अवकाशादिति ।।** वक्ष्यमाणदिशेति भावः ।

'ತಸ್ಯಾಶ್ಚ ವಿಷ್ಣೌ ಮಹಾಯೋಗ' ಇತ್ಯಾದಿಯಾಗಿ ಹಿಂದೆ ಹೇಳಿದಂತೆ ವಿಷ್ಣುವಿನಲ್ಲಿ ಮಹಾಯೋಗವೃತ್ತಿಯಿಂದ ಶಬ್ದವು ಇರುತ್ತದೆಂದು ತಿಳಿಯಬೇಕು. 'ಅವಕಾಶಾತ್' ಎಂಬುದನ್ನು ಮುಂದೆ ಹೇಳುವ ಪ್ರಕಾರ ತಿಳಿಯಬೇಕು.

**भावदीपः –** एतेन लिङ्गानां परमात्मन्यवकाशो विद्यत एव वामनश्रुतेरेवानवकाश इत्यन्यत्र श्रुतिलिङ्गयोर्निरवकाशत्वसावकाशत्वोक्तेरप्यभिप्रायो विवृतः ।।

ಹೀಗೆ ಹೇಳಿದ್ದರಿಂದ ಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶವಿದೆ ಆದರೆ ವಾಮನಶ್ರುತಿಗೆ ಬೇರೆ ಕಡೆ ಅವಕಾಶವಿಲ್ಲ ಎಂಬುದಾಗಿ ಶ್ರುತಿ ಹಾಗೂ ಲಿಂಗಗಳಿಗೆ ನಿರವಕಾಶತ್ವ ಹಾಗೂ ಸಾವಕಾಶತ್ವಗಳನ್ನು ಹೇಳಿದ ಅಭಿಪ್ರಾಯವನ್ನು ವಿವರಿಸಿದಂತಾಯು.

**भावदीपः** – इत्यत आहेति ।। तद्वै त्वमिति वाक्ये यद्देवान्प्राणयो नव तस्मात्त्वं प्राणोऽभवः इत्युक्तप्राणनेतृत्वरूपप्राणत्वस्यात एव प्राण इत्यत्र विष्णौ साधितत्वात् । समाख्याया वायुपरत्वे प्राणमुन्नयतीत्याद्यं विष्णोरेव । तथा योऽयं मध्यम इत्युक्तमध्यमत्वस्य वायुधर्मत्वेऽपि इह न तत्प्रतीयते । मध्ये वामनमिति मध्यदेशस्थत्वस्यैव प्रतीतेः । तच्चाल्पश्रुतेरित्युक्तदिशा विष्णोरेवेति भावः ।

'ತದ್ವೈ ತ್ವಮ್' ಎಂಬ ವಾಕ್ಯದಲ್ಲಿ 'ಯದ್ದೇವಾನ್ ಪ್ರಾಣಯೋ ನವ', 'ತಸ್ಮಾತ್ತ್ವಂ ಪ್ರಾಣೋಽಭವಃ' ಇತ್ಯಾದಿಯಾಗಿ ಹೇಳಲ್ಪಟ್ಟ 'ಪ್ರಾಣನೇತೃತ್ವ' ಮೊದಲಾದ ಲಿಂಗಗಳಿಗೆ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ವಿಷ್ಣುಪರತ್ವವನ್ನು ಸಮರ್ಥಿಸಿದ್ದಾಯಿತು. ಸಮಾಖ್ಯೆಯು ವಾಯುಪರವಾದಲ್ಲಿ 'ಪ್ರಾಣಮ್ ಉನ್ನಯತಿ' ಇತ್ಯಾದಿ ವಾಕ್ಯಗಳು ವಿಷ್ಣುಪರವೇ ಆಗುತ್ತವೆ. ಅದರಂತೆ 'ಯೋಽಯಂ ಮಧ್ಯಮಃ' ಎಂಬ ವಾಕ್ಯದಿಂದ ಹೇಳಲ್ಪಟ್ಟ ಮಧ್ಯಮತ್ವವು ವಾಯುಧರ್ಮವಾಗಿದ್ದರೂ ಸಹ ಇಲ್ಲಿ ಆ ಧರ್ಮವು ತೋರುತ್ತಿಲ್ಲ. ಏಕೆಂದರೆ 'ಮಧ್ಯೇ ವಾಮನಂ' ಎಂಬುದಾಗಿ ಮಧ್ಯದೇಶಸ್ಥತ್ವವನ್ನೇ ಹೇಳಲಾಗಿದೆ. ಇದು 'ಅಲ್ಪಶ್ರುತೇಃ' ಎಂಬ ಸೂತ್ರದಂತೆ ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುತ್ತದೆ.

**भावदीपः** – अथापि कुविदङ्गेति मन्त्रे वायोर्देवोपास्यत्वमुक्तमित्यत आह – **वायुत्वमिति** ।। अत्र प्राणत्वेति भाष्ये अन्तर्नये आधिदैविकसर्वशब्दानां महायोगविद्वद्रूढिभ्यां विष्णावुक्तत्वेन वायुशब्दस्याप्युक्तेरित्यर्थो बोध्य इति भावः ।।

ಆದರೂ ಸಹ 'ಕುವಿದಂಗ' ಎಂಬ ಮಂತ್ರವು ವಾಯುದೇವರಲ್ಲಿ ದೇವೋಪಾಸ್ಯತ್ವವನ್ನು ಹೇಳಿದೆಯಲ್ಲವೆ? ಎಂಬ ಪ್ರಶ್ನೆಗೆ 'ವಾಯುತ್ವಮ್' ಎಂಬುದರಿಂದ ಉತ್ತರಿಸಿದ್ದಾರೆ. 'ಅತ್ರ ಪ್ರಾಣತು' ಎಂಬ ಭಾಷ್ಯದಲ್ಲಿ ಅಂತರಧಿಕರಣದಲ್ಲಿ ಆಧಿದೈವಿಕವಾದ ಸಕಲ ಶಬ್ದಗಳಿಗೆ ಮಹಾಯೋಗ ಮತ್ತು ವಿದ್ವದ್ರೂಢಿಯಿಂದ ವಿಷ್ಣುವಿನಲ್ಲಿ ಸಮನ್ವಯವನ್ನು ಹೇಳಿದ್ದರಿಂದ ವಾಯುಶಬ್ದವೂ ವಿಷ್ಣುವಿನಲ್ಲೇ ಸಮನ್ವಯವಾಗುತ್ತದೆಂದು ತಿಳಿಯಬೇಕು. ಹೀಗೆ ಈ ಸೂತ್ರದಲ್ಲಿ ವಾಮನಶಬ್ದಬಲದಿಂದ 'ಈಶಾನ' ಶಬ್ದಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಿದಂತಾಯಿತು.

**वाक्यार्थमञ्जरी –**

ॐ शब्दादेव प्रमितः ॐ ।।

**अङ्गुष्ठमात्र इति** ।। हृद्यवकाशापेक्षयाङ्गुष्ठपरिमाणः भूतभव्यस्य अतीतानागतस्य ईशानः प्रेरकः पुरुषः आत्मनि देहमध्ये हृद्गुहायां तिष्ठतीत्यर्थः – **ऊर्ध्वमिति** ।। यो हरिः प्राणवायुं मुख्यप्राणस्वरूपम् ऊर्ध्वभागं प्रापयति । अपानं मुख्यवायुरूपं

प्रत्यग् अधः अस्यति क्षिपति । तं हृदयमध्ये आसीन् सन्तं वामनं सौन्दर्यनेतृत्वेन तच्छब्दवाच्यं भगवन्तं सर्वे देवा उपासत इत्यर्थः । नन्वत्र उपास्यत्वमेवोच्यते न जिज्ञास्यत्वमित्यत आह – **जिज्ञासोपासनयोरिति** ।। **श्रवणादीति** ।। नन्विदमयुक्तं युक्तिभिरनुचिन्तनरूपमननस्य त्वविचाररूपत्वे औपदेशिकवाक्यार्थग्रहणरूप-श्रवणस्याखण्डस्मृतिरूप निदिध्यासनस्य च विचाररूपत्वाभावात् । नच श्रवणमादिर्यस्य मननस्य तच्छ्रवणादीत्यतद्गुणसंविज्ञानबहुव्रीहिणा मननस्यैव विचाररूपत्वमुक्तमिति वाच्यम् । तथा सति श्रवणादित्रितयस्यापि विचारापर-पर्यायोपासनत्वप्रतिपादकवाक्योदाहरणा सङ्गतिः । तच्च श्रवणमनननिदिध्यासनरूपा जिज्ञासैवेत्युक्तमिति वक्ष्यमाणविरोधाच्चेति चेन्न । अत्र विचारपदेनाजहत्स्वार्थलक्षण यौपदेशिकवाक्यार्थग्रहणमखण्डस्मृतिश्च गृह्यते । शक्यसम्बन्धश्च तज्जनकत्वात् स्मृतेश्च तज्जन्यत्वाज्जन्यजनकभावः, तथाच श्रवणमनननिदिध्यासनापरपर्या-यौपदेशिकवाक्यार्थग्रहणमखण्डस्मृतिरूपा जिज्ञासेति लभ्यत इति न कोऽपि दोषः। यदाहुरनुव्याख्याने । अत्र शास्त्राभ्यासशब्देनोपदिष्ट शास्त्रार्थज्ञानरूपश्रवणं युक्तिभिस्तदनुचिन्तनरूपं मननं चोच्यते । ध्यानम् अखण्डस्मृतिः । धारणा खण्डस्मृतिः । यथाहुः 'खण्डस्मृतिर्धारणा स्यादखण्डा ध्यानमुच्यते ।' इति । आदिपदेन प्राणायामादि ।। **प्रसिद्धावपीति** ।। ईश्वरः सर्व ईशान इत्यादावित्यर्थः । श्रुतावन्वयाप्रतीतेर्यत्तच्छब्दाध्याहारेण तं दर्शयति – **उन्नयतीति** ।। व्यवस्थापकत्वेनेति।। **नियोजकत्वेत्यर्थः** ।। **यथेति** ।। यथा लोके सम्राट् सार्वभौमोऽधिकृतान्नियोगिनः विनियुङ्क्ते, व्यवस्थापयति । कथम्? त्वमेतान् पाटलीपुत्रादीन् ग्रामानधितिष्ठस्व, तदाधिपत्ये तिष्ठस्व । त्वमेतान् कौशाम्बिप्रभृतीन् ग्रामानधितिष्ठस्वेति । एवमेवैष मुख्यप्राणः इतरान् भिन्नानात्मजातत्वादुपचारेणात्म विभागान् प्राणान् वायून् पृथग् पृथगेव हृदयगुहास्थानेषु सन्निधत्ते संस्थापयति । स्वयञ्च तत्र तत्प्रवर्तकतया प्राणादिरूपोऽवतिष्ठत इत्यर्थः – **अथेममिति** ।। अथेतरदेवानां श्रमप्राप्त्यनन्तरं प्रजापतिर्योऽयं मध्यमप्राणस्तमिममेव नाप्नोद् ब्रह्मणो वायुसमशक्तित्वात्तन्नापेत्यर्थः । प्राणशब्दवाच्येषु विष्णोरुत्तमत्वादन्येषामधमत्वाद् वायोर्मध्यमत्वान्मध्यम इत्युक्तम् । अभ्युपगमात् सिद्धान्तिभिः ।। **अबाधादिति** ।। अत्र विष्णोर्जिज्ञास्यत्वनिषेधेऽपि अन्यत्रानिराकरणादिति भावः । न देवा मोक्षार्थं वायूपासां कुर्वन्ति, येन तस्य मोक्षदातृत्वं स्यात्, किन्त्वैश्वर्यादिप्रयोजना-

न्तरायेत्यत आह – **नहीति** ।। 'कुविदङ्ग नमसा ये वृधासः पुरा देवा अनवद्यास आसन् । ते वायवे मनवे बाधिताय' इत्यस्य संसार इत्यादि । उषसमित्यस्य बुद्धिमिति ।। **ॐ शब्दादेव प्रमितः ॐ** ।। ईशानो विष्णुरेव प्रमितः 'मध्ये वामनम्' इति वामनशब्दादित्यर्थः ।। **महायोगरूढीति** ।। 'एष उ एव वामनिरेष एव हि भामनिरेष हि सर्वाणि वामानि नयति' इति वामनिवामनशब्दयोरेकार्थत्वेन महायोगस्य 'स वामनः स भामनः' 'उपेन्द्रो वामनः प्रांशुः' इति रूढश्च सत्त्वादिति भावः । अनेन श्रुतेः प्राबल्यनिरूपणेन । निर्देशः वस्तुप्रतिपादकशब्दः । यथा 'वामनम्' इत्यादि । अत्र केवलयौगिकशब्दव्यावृत्त्यर्थं मात्रपदम् । तेन योगरूढानां वामनादिशब्दानां श्रुतित्वहानिरिति ध्येयम् ।। **असाधारणधर्म इति** ।। यथा मध्यमत्वादि ।। **निराकाङ्क्षपदानीति** ।। पर्यवसिताकाङ्क्षापदानीत्यर्थः । यथा 'सर्वाणि ह वा इमानि भूतानि आकाशादेव समुत्पद्यन्ते' इति ।। **एकप्रमेयेति** ।। यथा अग्निरूपैकार्थप्रतिपादकं 'मूर्धानं दिवः' इत्यादि । अत्र स्थानेति व्याप्तिवारणाय – **एकप्रमेयप्रतिपादकेति** ।। **वाक्येति** ।। व्याप्तिवारणाय – **अनेकेति** ।। अनेकाक्षरपदादावतिव्याप्तिवारणाय वाक्येत्युक्तम् ।। **अनेकप्रमेयेति** ।। यथा विष्णौ तात्पर्योपेतानेकार्थप्रतिपादकषट्प्रश्नोपनिषदादि । अत्र प्रकरणव्यावृत्त्र्थम् – **अनेक प्रमेयप्रातिपदिकमिति** ।। विरुद्धार्थयोः शास्त्रयोर्मिलितयोः स्थानत्वव्यावृत्त्यर्थम् एकार्थतात्पर्ययुक्तमित्युक्तम् ।। **समानोक्तिरिति** ।। निर्णीतस्थल इत्युपस्कर्तव्यम् । तेन विप्रतिपन्नप्रकरणादिगतसमानोक्तेः समाख्यात्वव्यवच्छेदः । यथा 'स वा एषः' इत्यादिनोक्तान्नमयादिपञ्चकस्य 'अन्नमयप्राणमयमनोमयविज्ञानमयानन्दमया मे शुद्ध्यन्ताम्' इत्यत्रोक्तिः । इदानीं प्राबल्यादि निरूपयति – **तत्रेत्यादिना** ।। **साक्षादर्थधीजनकत्वादिति** ।। व्याप्त्यादिप्रतिपादनद्वारमन्तरेणागमतयाऽविप्रतिपन्नार्थ धीजनकत्वादित्यर्थः । यथा वामनश्रुतिश्रवणमात्रेणेशानस्य विष्णुप्रतिपत्तिः ।। **अनुमापकतयेति** ।। व्याप्त्यादिप्रतिपत्तिद्वारेत्यर्थः । यथा मध्यमपदस्य मध्यमत्वरूप-व्याप्यप्रतिपादनद्वारेशानस्य वायुत्वनिश्चायकत्वम् । तदानन्तर्यम् । ततो दौर्बल्यम्। यथाऽत्र वामनश्रुतितो मध्यमत्वादिलिङ्गानां दौर्बल्यम् ।। **अनेककथनद्वारेति** ।। यथा सर्वाणि हवेत्यस्य भूताद्यनेकार्थप्रतिपादनद्वारा भूतकारणत्वरूपव्याप्य-प्रतिपादकत्वेनाकाशपदोक्तस्य भूताकाशानुमापकत्वम् ।। **ततोऽपि दौर्बल्यमिति** ।। यथा परोवरीयस्त्वानन्तत्वादिलिङ्गापेक्षया 'सर्वाणि हवा' इति वाक्यस्य

दौर्बल्यम् ।। **बह्वर्थपरत्वेनेति** ।। यथा 'मूर्धानं दिवः' इत्यस्य देवमुखत्वय-ज्ञनाभित्वाद्यग्निज्ञापकबह्वर्थप्रतिपादकत्वेन ज्योतिर्हृदयाहितेति ज्योतिःशब्द-स्याग्नित्वानुमापकत्वम् ।। **तदवमतेति** ।। यथोदाहृतप्रकरणस्य कर्णादिविदूरत्वलिङ्ग-प्रतिपादक 'वि मे कर्णा' इति वाक्याद्दौर्बल्यम् ।। **अतिबह्वर्थकथनेनाभिप्राय इति** ।। यथा षट्प्रश्नोपनिषद्रूपस्थानस्य बह्वर्थानेकप्रकरणार्थपूर्वकविष्णुपरस्थानगतः 'एषः प्राणः' इति वास्यस्य तत्परत्वेनैतद्वाक्यस्थप्राणशब्दस्यापि विष्णुपरत्वानुमापकत्वम् ।। **ततोऽपि दौर्बल्यमिति** ।। यथाऽस्यैव स्थानस्य 'भगवन्, कुत एष प्राणो जायते' इति खण्डरूपान्मुख्यप्राणधर्मप्रतिपादकत्वेन मुख्यप्राणप्रकरणाद्दौर्बल्यम् ।। **सादृश्यमात्रेणेति** ।। यथा 'अन्नमयप्राणमय' इति को शसमाख्यायास्तत्सदृशत्वादिदं तदर्थकसादृश्यमित्येवंरूपसादृश्यमात्रेण 'एतमन्नमयमा त्मानमुपसङ्क्रमति' इत्याद्य- न्नमयादिशब्दोक्तस्य कोशत्वानुमापकत्वम् ।। **ततोऽपि दौर्बल्यमिति** ।। यथा 'ब्रह्मविदाप्नोति परम्' 'भृगुर्वै वारुणिः' इति विष्णुधर्मप्रतिपादकतया विष्णुस्थानादुदाहृतसमाख्यानाद्दौर्बल्यम् । नन्वेवं लिङ्गादेः श्रुत्यादेः सकाशाद्दौर्बल्ये कथम् 'आकाशस्तल्लिङ्गाद्' इत्यादौ लिङ्गादिना श्रुत्यादेर्बाध इत्यत आह – **अत्रापीति** ।। **पूर्ववदिति** ।। समन्वयाधिकरणोक्तोपक्रमादिवदित्यर्थः। इत्यादीनात्यादिपदेन निरवकाशादेकस्माद्बहुत्वेन प्रबलस्य सावकाशस्य दौर्बल्यमित्यस्य ग्रहणम् । निरवकाशत्वादिरहितश्रुत्यादावेव जातिकृतप्राबल्यादिकमिदं प्रदर्शितमिति भावः । समवाये सम्मेलने । ननु श्रुतिलिङ्गेति वाक्यानुसारेण समाख्यायाः वाक्यप्रकरणाभ्यां प्राबल्यं किं नाश्रितम्? इत्यत आह – **नचेति** ।। उदाहृतवाक्यानुक्तं स्थानं किमर्थं सूच्यते? इति शङ्कापरिहारं सूचयन्नेव स्वोक्तक्रमसाधकजैमिनिसूत्रानुव्याख्याने क्रमेणोदाहरति – **श्रुतिरित्यादिना** ।। विरुद्धानां श्रुत्यादीनां समवाये सति परदौर्बल्यम् । परेषामुत्तरोक्तानां दौर्बल्यम् । कुतः? तेषां तत्र श्रुतेः साक्षादित्यादिनोक्तरीत्या विलम्बेनार्थसाधकत्वादिति जैमिनिसूत्रार्थः । ननु श्रुत्यादेः किं श्रुत्यादित्वेन साक्षादवयवार्थनिश्चायकत्वमुतोप-क्रमादिनिश्चायकत्वेन, परम्परया वा? नाद्यः, क्वचित्परम्परयापि हेतुत्वात् । न द्वितीयः, क्वचित्साक्षादपि हेतुत्वादिति । अतोऽत्र नियमो न विवक्षित इत्याशयेनाह – **श्रुतिलिङ्गवाक्यानामित्यादिना इत्यादिवदित्यन्तेन** ।। यथा 'आत्मानं वैश्वानरम्' त्यत्र विप्रतिपन्नवैश्वानरगतात्मश्रुतेर्विष्णुत्वनिश्चायकत्वम् । यथाच 'आकाशः

परायणं स एष परोवरीयान्' इत्यत्र विप्रतिपन्नाकाशगतपरोवरीयस्त्वलिङ्गस्य विष्णुत्वनिश्चायकत्वम् । यथाच 'वि मे कर्णा पतयतो विचक्षुर्विदं ज्योतिः' इति प्रतिपन्नज्योतिर्निष्ठोदाहृतवाक्यस्य विष्णुत्वनिश्चायकत्वम् ।। **उपक्रमोपसंहारयोः श्रुतत्व इति** ।। यथा 'को नाम' इत्युपक्रमे श्रुतात्मश्रुतेरुपक्रमस्य विष्णुपरत्व-निश्चायकतया 'वैश्वानरमुपास्ते' इत्युक्तवैश्वानरस्य विष्णुत्वनिश्चायकत्वम् । यथाच 'पञ्चम्यामाहुतावापः' इत्युपसंहारे श्रुतापश्रुतेरुपसंहारस्य भूतपरत्व-निश्चायकतया 'श्रद्धां जुह्वति' इत्यत्र श्रद्धाशब्दस्य भूतपरत्वनिश्चायकत्वम् । यथाच 'य एष तपति' इत्युप्रमे श्रुतसूर्यस्थत्वलिङ्गस्योपक्रमस्य विष्णुपरत्वनिश्चायकतया 'आत्मा वा इदमेक एवे' इत्युक्तात्मनो विष्णुत्वनिश्चायकत्वम् । यथाच 'स योऽतोऽश्रुतः' इत्युपसंहारे श्रुताश्रुतत्वलिङ्गस्योपसंहारस्य विष्णुपरत्वनिश्चायकतया 'य एषोऽन्तरक्षिणि पुरुषः' इत्युक्तचक्षुरन्तःस्थस्य विष्णुत्वनिश्चायकत्वम् । यथाच 'कं ब्रह्म खं ब्रह्म' इत्युपक्रमे श्रुतवाक्यस्योपक्रमस्य विष्णुपरत्वनिश्चायकत्वेनान्त-रक्षिणीत्युक्तस्य विष्णुत्वनिश्चायकत्वम् । यथाच 'ता वा एताः सर्वाः ऋचः' इत्युपसंहारे श्रुतवाक्यस्योपसंहारस्य विष्णुपरत्वनिश्चायकतया 'चक्षुर्मनोवाक्प्राणः' इत्युक्तप्राणस्य विष्णुत्वनिश्चायकत्वम् ।। **अन्यत्रेति** ।। विप्रतिपन्नार्थप्रतिपादक-वाक्योपक्रमोपसंहारेभ्योऽन्यत्रेत्यर्थः । यथा 'ब्रह्मेमं पुरुषम्' इति प्रकरणे श्रुतब्रह्मश्रुतेः प्रकरणस्य वैष्णवत्वनिश्चायकतया 'मनो वाक् प्राणः' इत्युक्तप्राणस्य विष्णुत्वनिश्चायकत्वम् । यथाच 'अपहतपाप्मा' इति प्रकरणे श्रुतापहतपाप्मेति प्रकरणे श्रुतापहतपाप्मत्वलिङ्गस्य प्रकरणस्य वैष्णवत्वनिश्चायकतया 'दहरेऽस्मिन्नन्तर आकाशः' इत्युक्ताकाशस्य विष्णुत्वनिश्चायकत्वम् । यथाच 'श्रीश्च ते लक्ष्मीश्च पत्न्यौ' इति प्रकरणे श्रुतस्यास्य वाक्यस्य प्रकरणस्य वैष्णवत्वनिश्चायकतया 'तद्वै त्वं प्राणः' इत्युक्तप्राणस्य विष्णुत्वनिश्चायकत्वमिति । यद्यपि श्रुत्यादिना अर्थ-निश्चयदशायामुपक्रमोपसंहारे श्रुतश्रुत्यादेरपि प्रकरणनिश्चायकत्वम्, तथापि तत्र साक्षादन्यत्र परम्परयेति भेदः । प्रसङ्गात्पूर्वमनुक्तत्वेनावश्यकत्वाच्चाह – **उपक्रमोपसंहारावपीति** ।। उपक्रमोपसंहारावपि उपक्रमोपसंहाराभ्यामन्यत्र श्रुतश्रुत्यादिनार्थनिश्चये सति तस्मिन्नेवार्थे तात्पर्यज्ञापकावित्यर्थः । यथा 'सर्वं वा अत्तीति तददितेः' इत्युक्तात्तुः सर्वात्तृत्वलिङ्गेन विष्णुत्वनिश्चये सति 'नैवेह किञ्चनाग्र आसीद्' इत्युपक्रम्य अत्तुर्विष्णुत्वनिश्चायकत्वम् । यथाच 'सर्वेषु

ಬಾಧಿತವಾಗುತ್ತದೆ. ಆವಾಗ ಮುಖ್ಯಪ್ರಾಣದೇವರೇ 'ಈಶಾನ' ಶಬ್ದದಿಂದ ಪ್ರತಿಪಾದ್ಯವಾಗುತ್ತದೆಂಬುದು ಪೂರ್ವಪಕ್ಷಕಾರರ ಉದ್ದೇಶ. ಇದೇ ಪೂರ್ವ ಪಕ್ಷದ ಫಲ.

**प्रकाशः** – यदि सावकाशानि तदा श्रुत्यैव लिङ्गानां बाधाद्विष्णुरेवेशान इति सिद्धान्ते फलमिति स्पष्टः फलफलिभाव इति भावः ।

ಒಂದು ವೇಳೆ ಅನೇಕಲಿಂಗಗಳೆಲ್ಲವೂ ಸಾವಕಾಶವಾದರೆ, ಪ್ರಬಲವಾದ ಶ್ರುತಿಯಿಂದಲೇ ಲಿಂಗಗಳು ಬಾಧಿತವಾಗುತ್ತವೆ. ಆವಾಗ ವಿಷ್ಣುವೇ 'ಈಶಾನ' ಎಂಬ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತಕಾರರ ಉದ್ದೇಶ. ಇದು ಸಿದ್ಧಾಂತದ ಫಲ. ಹೀಗೆ ಫಲಫಲಿಭಾವವು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಪ್ರತ್ಯೇಕವಾಗಿ ಹೇಳಿಲ್ಲ.

**प्रकाशः** – अत्र यद्यपि श्रुतिः प्रबलेति चिन्तानन्तरं किमनेकत्वप्रयुक्तप्राबल्यं बलवदुत श्रुतित्वप्रयुक्तप्राबल्यं बलवदित्येव चिन्ता वाच्या । श्रुतिस्वभावप्राबल्यस्यैवात्र समर्थनात् । नतु निरवकाशत्वादिचिन्ता ।

ಪ್ರಶ್ನೆ - ವಾಸ್ತವಿಕವಾಗಿ 'ಶ್ರುತಿಃ ಪ್ರಬಲಾ' ಎಂಬ ಮೂರನೆಯ ಸಂಶಯಕೋಟಿಯ ಅನಂತರ, ಅನೇಕತ್ವಪ್ರಯುಕ್ತವಾದ ಪ್ರಾಬಲ್ಯವು ಬಲಿಷ್ಠವೋ, ಅಥವಾ ಶ್ರುತಿತ್ವ ಪ್ರಯುಕ್ತವಾದ ಪ್ರಾಬಲ್ಯವು ಬಲಿಷ್ಠವೋ? ಎಂಬ ಚಿಂತೆಯನ್ನೇ ತೋರಿಸಬೇಕು. ಏಕೆಂದರೆ ಈ ಅಧಿಕರಣದಲ್ಲಿ ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದೆಯೆಂದೇ ಸಮರ್ಥಿಸುತ್ತಾರೆ. ಹೀಗಿರುವಾಗ ನಿರವಕಾಶತ್ವ ಪ್ರಯುಕ್ತವಾದ ಸಂಶಯಗಳನ್ನು ತೋರಿಸುವುದು ಇಲ್ಲಿ ಪ್ರಸಕ್ತವಾಗುವುದಿಲ್ಲವಲ್ಲವೇ?

**प्रकाशः** – तथापि सा पूर्वत्रैकानेकपदप्रयोगादेव सूचितेति सौत्रैवकार-प्रमितशब्दाभ्यां श्रुतित्वनिरवकाशत्वोभयप्रयुक्तप्राबल्यस्य सूचितत्वात्न्याय-विवरणानुसारेणाभ्युच्चयत्वेन सावकाशत्वादिचिन्ता प्रदर्शिता ।

ಆದರೂ ಸಹ ಶ್ರುತಿತ್ವ ಪ್ರಯುಕ್ತವಾದ ಪ್ರಾಬಲ್ಯವನ್ನು ಹಿಂದೆ 'ಏಕ' ಮತ್ತು 'ಅನೇಕ' ಎಂಬ ಪದಪ್ರಯೋಗದಿಂದಲೇ ಸೂಚಿಸಿದ್ದಾಗಿದೆ. ಮತ್ತು ಸೂತ್ರದಲ್ಲಿ ಏವಕಾರದಿಂದ ಮತ್ತು ಪ್ರಮಿತ ಶಬ್ದದಿಂದ ಶ್ರುತಿಗೆ ಶ್ರುತಿತ್ವ ಪ್ರಯುಕ್ತವಾಗಿ, ಮತ್ತು ನಿರವಕಾಶತ್ವ ಪ್ರಯುಕ್ತವಾಗಿಯೂ ಪ್ರಾಬಲ್ಯವನ್ನು ಸೂಚನೆ ಮಾಡಿದ್ದಾರೆ. ಆದ್ದರಿಂದ ನ್ಯಾಯವಿವರಣಕ್ಕೆ ಅನುಸಾರಿಯಾಗಿ ಅಭ್ಯುಚ್ಚಯಯುಕ್ತಿಗೋಸ್ಕರ ಇಲ್ಲಿ ಸಾವಕಾಶತ್ವಾದಿಚಿಂತೆಯನ್ನು ತೋರಿಸಿದ್ದಾರೆಂದು ತಿಳಿಯಬೇಕು.

**गुरुराजीयम्** – **विपरीतमिति** ।। वामनश्रुत्यनुसारेण प्राणव्यवस्थापकत्वादि-लिङ्गं नेयमिति विपरीतमित्यर्थः ।

ವಾಮನಾಧಿಕರಣ (೧-೩-೭)




ಈ ಅಧಿಕರಣದಲ್ಲಿ ಕಾಠಕೋಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿರುವ 'ಮಧ್ಯೇ ವಾಮನಮಾಸೀನಂ ವಿಶ್ವದೇವಾ ಉಪಾಸತೇ' ಎಂಬ ವಾಕ್ಯವು ವಿಷಯವಾಗಿದೆ. ಈ ವಾಕ್ಯದಲ್ಲಿರುವ 'ವಾಮನ' ಶಬ್ದವು ಮುಖ್ಯಪ್ರಾಣದೇವರನ್ನು ಪ್ರತಿಪಾದಿಸುತ್ತಿದೆಯೋ, ಅಥವಾ ವಿಷ್ಣುವನ್ನು ಪ್ರತಿಪಾದಿಸುತ್ತಿದೆಯೋ? ಎಂಬ ಗೊಂದಲವು ಪ್ರಾಪ್ತವಾದಾಗ ಅನೇಕ ಮುಖ್ಯಪ್ರಾಣಲಿಂಗಗಳಿರುವುದರಿಂದ ಲಿಂಗಗಳು ನಿರವಕಾಶವಾಗಿರುವುದರಿಂದ ವಿಷ್ಣುವಿಷಯಕವಾದ ವಾಮನಶ್ರುತಿಯು ಬಾಧಿತವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣದೇವರೇ 'ಈಶಾನ' ಶಬ್ದದಿಂದ ಪ್ರತಿಪಾದ್ಯರಾಗುತ್ತಾರೆಂಬುದು ಪೂರ್ವಪಕ್ಷಕಾರರು ಸಮರ್ಥಿಸುತ್ತಾರೆ.

ಲಿಂಗಗಳು ಮುಖ್ಯಪ್ರಾಣದೇವರಲ್ಲಿ ಅನೇಕವಾಗಿದ್ದರೂ ಅವೆಲ್ಲವೂ ಸಾವಕಾಶವಾಗಿರುವುದರಿಂದ, ಶ್ರುತಿಯು ಸ್ವಭಾವತಃ ಮತ್ತು ನಿರವಕಾಶತ್ವ ಪ್ರಯುಕ್ತವಾಗಿ ಬಲಿಷ್ಠವಾದ್ದರಿಂದ, ಅನೇಕ ಲಿಂಗಗಳನ್ನೆಲ್ಲಾ ಬಾಧಿಸುತ್ತದೆ. ಆದ್ದರಿಂದ ವಿಷ್ಣುವೇ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತಿಗಳು ಸ್ಥಾಪನೆ ಮಾಡುತ್ತಾರೆ.



● ● ● ● ●

## 'ಈಶಾನ' ಶಬ್ದವಾಚ್ಯರು ಮುಖ್ಯಪ್ರಾಣದೇವರೇ ಎಂದು ಪೂರ್ವಪಕ್ಷ

## तात्पर्यचन्द्रिका

**पूर्वपक्षस्तु ।। अयमीशानो वायुरेव । ईशाने ''ऊर्ध्वं प्राण उन्नयति'' इति प्राणव्यवस्थापकत्वस्य ''मध्ये वामनमासीनम्'' इति मध्यमत्वस्य ''विश्वेदेवा उपासते'' इति सर्वदेवोपास्यत्वस्य च श्रवणात् ।**

ಅನುವಾದ - 'ಈಶಾನ' ಶಬ್ದ ಪ್ರತಿಪಾದ್ಯರಾದವರು ಮುಖ್ಯಪ್ರಾಣದೇವರೇ ಆಗಿದ್ದಾರೆ ಹೊರತು, ವಿಷ್ಣುವಲ್ಲ. ಏಕೆಂದರೆ ಯಾವಾತನು 'ಈಶಾನ' ಎನಿಸಿದ್ದಾನೋ ಅವನಲ್ಲಿ 'ಊರ್ಧ್ವಂ ಪ್ರಾಣ ಉನ್ನಯತಿ' ಎಂಬ ಶ್ರುತಿಯು ಪ್ರಾಣವ್ಯವಸ್ಥಾಪಕತ್ವ ಎಂಬ ಲಿಂಗವನ್ನು 'ಮಧ್ಯೇ ವಾಮನಮಾಸೀನಮ್' ಎಂಬ ಶ್ರುತಿಯು 'ಮಧ್ಯಮತ್ವ' ಎಂಬ ಲಿಂಗವನ್ನು 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯು 'ಸರ್ವದೇವೋಪಾಸ್ಯತ್ವ' ಎಂಬ ಲಿಂಗವನ್ನು ಹೇಳುತ್ತಿದೆ.

**तेषां च ''एवमेवैष प्राणः योऽयं मध्यमः प्राणः कुविदङ्ग'' इति भाष्योक्त-श्रुतिभिर्वायुधर्मत्वात् ।**

ಪರಿಪೂರ್ಣಚಂದ್ರಿಕಾ

ಈ ಮೂರೂ ಲಿಂಗಗಳು ಮುಖ್ಯಪ್ರಾಣದೇವರಲ್ಲಿಯೇ ಅಸಾಧಾರಣವಾಗಿ ಇರುತ್ತವೆ. 'ಏವಮೇವೈಷ ಪ್ರಾಣಃ' ಎಂಬ ಶ್ರುತಿಯು ಮುಖ್ಯಪ್ರಾಣದೇವರಲ್ಲಿಯೇ ಪ್ರಾಣವ್ಯವಸ್ಥಾಪಕತ್ವ-ಲಿಂಗವಿದೆಯೆಂದು, 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಶ್ರುತಿಯು ಮಧ್ಯಮತ್ವವು ಮುಖ್ಯಪ್ರಾಣದೇವರಲ್ಲಿದೆಯೆಂದು, 'ಕುವಿದಂಗ' ಎಂಬ ಮಂತ್ರವು 'ಸರ್ವದೇವೋಪಾಸ್ಯತ್ವವು' ಮುಖ್ಯಪ್ರಾಣದೇವರಲ್ಲಿ ಇದೆಯೆಂದು ಸಾಧಿಸುತ್ತಿವೆ. ಭಾಷ್ಯದಲ್ಲಿ ಉದಾಹರಿಸಿದ ಈ ಎಲ್ಲ ಶ್ರುತಿಗಳ ಆಧಾರದಿಂದ ಮೇಲಿನ ಮೂರು ಲಿಂಗಗಳು ಮುಖ್ಯಪ್ರಾಣದೇವರ ಅಸಾಧಾರಣಲಿಂಗಗಳೆಂದು ಸಿದ್ಧವಾಗುತ್ತದೆ.

**''एवमेव'' इत्यत्र च प्राणशब्दो मुख्यप्राणपरः । ''आत्मत एष प्राणो जायते'' इति पूर्ववाक्ये तस्यैव प्रकृतत्वात् ।**

'ಏವಮೇವ ಏಷಃ ಪ್ರಾಣಃ' ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದವು ಮುಖ್ಯಪ್ರಾಣದೇವರನ್ನೇ ಪ್ರತಿಪಾದಿಸುತ್ತದೆ. 'ಆತ್ಮತ ಏಷ ಪ್ರಾಣೋ ಜಾಯತೇ' ಎಂಬ ಹಿಂದಿನ ವಾಕ್ಯದಲ್ಲಿ ಹುಟ್ಟುವಿಕೆಯೆಂಬ ಧರ್ಮವನ್ನು ಹೊಂದಿರುವ ಮುಖ್ಯಪ್ರಾಣದೇವರೇ ಪ್ರಸಕ್ತರಾಗಿದ್ದಾರೆ. ಅವರನ್ನೇ ಇಲ್ಲಿ ಪರಾಮರ್ಶ ಮಾಡಬೇಕು. ಹುಟ್ಟುವಿಕೆ ಇಲ್ಲದ ವಿಷ್ಣುವನ್ನು 'ಏವಮೇವ' ಎಂಬ ಶ್ರುತಿಯಿಂದ ಪರಾಮರ್ಶ ಮಾಡಲು ಸಾಧ್ಯವಿಲ್ಲ.

**विष्णुलिङ्गाभावाच्च ।**

ಮತ್ತು 'ಏವಮೇವ ಏಷಃ ಪ್ರಾಣಃ' ಇತ್ಯಾದಿ ಶ್ರುತಿಯಲ್ಲಿ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆನ್ನಲು ಯಾವುದೇ ಲಿಂಗಗಳಿರುವುದಿಲ್ಲ.

**अत एव ''कुविदङ्ग'' इति ऋच्यपि वायुशब्दो न विष्णुपरः ।**

ಹೀಗೆ 'ಏವಮೇವ ಏಷಃ ಪ್ರಾಣಃ' ಎಂಬ ಶ್ರುತಿಯಲ್ಲಿರುವ 'ಪ್ರಾಣ' ಶಬ್ದವು ಯಾವ ಕಾರಣದಿಂದ ಮುಖ್ಯಪ್ರಾಣದೇವರನ್ನೇ ಪ್ರತಿಪಾದಿಸುತ್ತದೋ, ಅದೇ ಕಾರಣದಿಂದ 'ಕುವಿದಂಗ' ಎಂಬ 'ಋಚ್' ಮಂತ್ರವೂ ಕೂಡ ಮುಖ್ಯಪ್ರಾಣದೇವರನ್ನೇ ಪ್ರತಿಪಾದಿಸುತ್ತದೆ ಹೊರತು ವಿಷ್ಣುವನ್ನಲ್ಲ.

**नच ऋचि देवोपास्यत्वमात्रमिह तु सर्वदेवोपास्यत्वमिति भेदः ।**

'ಕುವಿದಂಗ' ಎಂಬ ಮಂತ್ರದಲ್ಲಿ ದೇವತೆಗಳಿಂದ ಮುಖ್ಯಪ್ರಾಣದೇವರು ಉಪಾಸ್ಯರಾಗಿದ್ದಾರೆಂದಷ್ಟೇ ತಿಳಿಯುತ್ತಿದೆ. ಆದರೆ 'ವಿಶ್ವೇ ದೇವಾ ಉಪಾಸತೇ' ಎಂಬ ಶ್ರುತಿಯಲ್ಲಿ ಸರ್ವದೇವೋಪಾಸ್ಯತ್ವವು ಶ್ರುತವಾಗಿದೆ. ಆದ್ದರಿಂದ ಸರ್ವದೇವೋಪಾಸ್ಯತ್ವವು ಮುಖ್ಯಪ್ರಾಣದೇವರ ಧರ್ಮವೆನ್ನಲು

'ಕುವಿದಂಗ' ಎಂಬ ಶ್ರುತಿಯು ಹೇಗೆ ಪ್ರಮಾಣವಾಗುತ್ತದೆ ? ಎಂದು ಪ್ರಶ್ನಿಸಬಾರದು. ಏಕೆಂದರೆ

**ऋच्यपि ''देवाः'' इति बहुत्वस्यासङ्कोचाय कात्स्न्येऽपि पर्यवसानात् । त्रित्वे पर्यवसाने गुणातिशयासिद्धेः ।**

'ಕುವಿದಂಗ' ಎಂಬ ಮಂತ್ರದಲ್ಲಿಯೂ 'ದೇವಾಃ' ಎಂಬ ಬಹುವಚನವಿದೆ. ಇಲ್ಲಿರುವ ಬಹುವಚನಕ್ಕೆ ಕೇವಲ ಮೂರು ದೇವತೆಗಳು ಎಂದು ಅರ್ಥಸಂಕೋಚ ಮಾಡಲು ಕಾರಣವಿಲ್ಲ. ಹೊರತಾಗಿ, ಸಕಲ ದೇವತೆಗಳು ಎಂದು ಕಾತ್ಸ್ನ್ಯಾರ್ಥದಲ್ಲಿಯೇ ಬಹುವಚನವನ್ನು ಕೂಡಿಸಬೇಕು. ಕೇವಲ ಮೂರು ಎಂಬರ್ಥದಲ್ಲಿ ಬಹುವಚನವನ್ನು ಪರ್ಯವಸಾನ ಮಾಡಿದರೆ, ಅದರಿಂದ ಮುಖ್ಯಪ್ರಾಣದೇವರಲ್ಲಿ ಯಾವುದೇ ಗುಣಾತಿಶಯವು ಸಿದ್ಧವಾಗುವುದಿಲ್ಲ.

**नहि ''नरेन्द्रं चराः सेवन्ते'' इत्यादौ त्रित्वे पर्यवसानम् ।**

'ನರೇಂದ್ರಂ ಚರಾಃ ಸೇವಂತೇ' ಇತ್ಯಾದಿ ಪ್ರಯೋಗಗಳಲ್ಲಿ 'ಚರಾಃ' ಎಂಬಲ್ಲಿರುವ ಬಹುವಚನಕ್ಕೆ ಕೇವಲ ಮೂರುಮಂದಿ ಎಂದಷ್ಟೇ ಅರ್ಥವಲ್ಲ. ಅಂದರೆ ಮೂರುಮಂದಿ ಸೇವಕರಷ್ಟೇ ರಾಜನನ್ನು ಸೇವನೆ ಮಾಡುತ್ತಾರೆ ಎಂಬರ್ಥವನ್ನು ವಿವಕ್ಷಿಸದೇ, ಸಕಲ ಸೇವಕರು ರಾಜನನ್ನು ಸೇವಿಸುತ್ತಾರೆ ಎಂದೇ ಹೇಳಬೇಕು. ಆದ್ದರಿಂದ ಪ್ರಕೃತ 'ದೇವಾಃ' ಎಂಬಲ್ಲಿರುವ ಬಹುವಚನಕ್ಕೂ ಕೂಡ ಮೂವರು ಎಂಬಷ್ಟೇ ಅರ್ಥವನ್ನು ವಿವಕ್ಷೆ ಮಾಡದೇ, ಸಕಲ ಎಂಬರ್ಥವನ್ನು ವಿವಕ್ಷಿಸಬೇಕು.

**''वसन्ताय कपिञ्जलान्'' इत्यत्र तु त्रित्वापर्यवसाने सर्वकपिञ्जलालम्भनस्याशक्यानुष्ठानत्वादष्टदोषदुष्टविकल्पापातात् ।**

ಪೂರ್ವಮೀಮಾಂಸೆಯಲ್ಲಿ 'ವಂಸತಾಯ ಕಪಿಂಜಲಾನ್' ಎಂಬಲ್ಲಿರುವ ಬಹುವಚನಕ್ಕೆ ಕೇವಲ ಮೂರು ಕಪಿಂಜಲ ಗೋವುಗಳನ್ನು ಆಲಂಭನ ಮಾಡಬೇಕೆಂದು ನಿರ್ಣಯಿಸಿದ್ದಾರೆ. ಒಂದು ವೇಳೆ ನೀವು ಹೇಳುವಂತೆ ಬಹುವಚನಕ್ಕೆ ಸಕಲವನ್ನು ಅರ್ಥವನ್ನಾಗಿ ಹೇಳಬೇಕೆಂದು ವಿವಕ್ಷಿಸುವುದಾದರೆ, ಇಲ್ಲಿಯೂ ಕೂಡ ಸಕಲ ಕಪಿಂಜಲಗೋವುಗಳ ಆಲಂಭನವನ್ನು ಮಾಡಬೇಕೆಂದಾಗುತ್ತದೆ. ಆದ್ದರಿಂದ ಪೂರ್ವಮೀಮಾಂಸೆಯ ಈ ದೃಷ್ಟಾಂತದಂತೆ ಪ್ರಕೃತದಲ್ಲಿಯೂ ಬಹುವಚನಕ್ಕೆ ಕೇವಲ ಮೂರು ದೇವತೆಗಳು ಎಂದಷ್ಟೇ ಅರ್ಥವನ್ನು ಸ್ವೀಕರಿಸಬಹುದಲ್ಲವೇ? ಎಂಬ ಪ್ರಶ್ನೆಗೂ ಈಗ ಅವಕಾಶವಿಲ್ಲ. ಏಕೆಂದರೆ 'ವಸಂತಾಯ ಕಪಿಂಜಲಾನ್' ಎಂಬಲ್ಲಿ ಶ್ರುತವಾದ ಬಹುವಚನಕ್ಕೆ ಮೂರು ಗೋವುಗಳು ಎಂದಷ್ಟೇ ಅರ್ಥವನ್ನು ವಿವಕ್ಷಿಸಬೇಕು. ಏಕೆಂದರೆ ಸಕಲ ಕಪಿಂಜಲಗಳ ಆಲಂಭನವು ಯಾಗದಲ್ಲಿ ಅಶಕ್ಯವಾಗಿದೆ. ಮೂರು ಕಪಿಂಜಲಗಳ ಆಲಂಭನ ಮಾಡುವಿಕೆಯಿಂದಲೇ 'ಕಪಿಂಜಲಾನ್' ಎಂಬ ಬಹುವಚನಕ್ಕೆ ಸಾರ್ಥಕ್ಯವನ್ನು ಉಪಪಾದಿಸಲು ಬರುವಾಗ ಅಶಕ್ಯವಾದ ಸಕಲ ಕಪಿಂಜಲಗಳ

ಆಲಂಭನವನ್ನು ವಿಧಿಸುವುದು ತಪ್ಪಾಗುತ್ತದೆ. ಮತ್ತು ವಿಕಲ್ಪವು ಅಷ್ಟದೋಷಗಳಿಂದ ದುಷ್ಟವಾದ್ದರಿಂದ ಮೂರಕ್ಕಿಂತ ಹೆಚ್ಚು ಕಪಿಂಜಲಗೋವುಗಳ ಆಲಂಭನವು ಅನಾವಶ್ಯಕ.

**''न हिंस्यात्'' इति शास्त्रस्यासङ्कोचसम्भवे सङ्कोचायोगाच्च त्रित्वे पर्यवसानम्।**

ಮತ್ತು ಒಂದು ವೇಳೆ, 'ವಸಂತಾಯ ಕಪಿಂಜಲಾನ್' ಎಂಬಲ್ಲಿರುವ ಬಹುವಚನದಿಂದ ಸಕಲ ಕಪಿಂಜಲಗಳ ಆಲಂಭನವನ್ನು ವಿವಕ್ಷಿಸುವುದಾದರೆ 'ನ ಹಿಂಸ್ಯಾತ್' ಸರ್ವಾಭೂತಾನಿ' ಎಂಬ ನಿಷೇಧಶಾಸ್ತ್ರಕ್ಕೆ ಸಂಕೋಚ ಮಾಡಬೇಕಾಗುತ್ತದೆ. ಅಂದರೆ ಕಪಿಂಜಲ ಗೋವುಗಳ ಹಿಂಸೆಯನ್ನು ಬಿಟ್ಟು ಉಳಿದ ಪ್ರಾಣಿಗಳ ಹಿಂಸೆಯನ್ನು ಮಾಡಬಾರದು ಎಂದಂತಾಗುತ್ತದೆ. ಏಕೆಂದರೆ ಬಹುವಚನದಿಂದ ಸಕಲ ಕಪಿಂಜಲಗಳ ಆಲಂಭನವನ್ನು ನೀವು ವಿವಕ್ಷಿಸುವುದರಿಂದ. ಹೀಗೆ 'ನ ಹಿಂಸ್ಯಾತ್' ಎಂಬ ನಿಷೇಧವಾಕ್ಯದಲ್ಲಿ ಸಕಲ ಕಪಿಂಜಲ ಗೋವುಗಳನ್ನು ಬಿಟ್ಟು ಉಳಿದ ಪ್ರಾಣಿಗಳ ಹಿಂಸೆಯ ನಿಷೇಧವನ್ನಷ್ಟೇ ವಿವಕ್ಷಿಸುವುದು ಅನಿವಾರ್ಯವಾಗುತ್ತದೆ. ಆದರೆ 'ನ ಹಿಂಸ್ಯಾತ್' ಎಂಬ ನಿಷೇಧಶಾಸ್ತ್ರಕ್ಕೆ ಸಂಕೋಚ ಮಾಡದೇ ಸಕಲ ಪ್ರಾಣಿಗಳ ಹಿಂಸಾ ನಿಷೇಧವೂ ವಿಹಿತವಾಗಿದೆಯೆಂದೇ ಹೇಳಲು ಬರುವಾಗ ಸಂಕೋಚ ಮಾಡುವುದು ತಪ್ಪಾಗುತ್ತದೆ. ಆದ್ದರಿಂದಲೂ 'ಕಪಿಂಜಲಾನ್' ಎಂಬಲ್ಲಿರುವ ಬಹುವಚನಕ್ಕೆ ಮೂರು ಗೋವುಗಳು ಎಂದಷ್ಟೇ ಅರ್ಥವನ್ನು ವಿವಕ್ಷಿಸಬೇಕು. ಆದರೆ ಪ್ರಕೃತ 'ಕುವಿದಂಗ' ಎಂಬ ಮಂತ್ರದಲ್ಲಿರುವ 'ದೇವಾಃ' ಎಂಬ ಬಹುವಚನಕ್ಕೆ ಸಂಕೋಚ ಮಾಡಿ ಅರ್ಥೈಸಲು ಯಾವುದೇ ಇಂತಹ ಕಾರಣಗಳಿರುವುದಿಲ್ಲ. ಆದ್ದರಿಂದ ಸಕಲದೇವೋಪಾಸ್ಯತ್ವವೇ 'ಕುವಿದಂಗ' ಎಂಬ ವೇದಮಂತ್ರ ವಿವಕ್ಷಿತವಾಗಿದೆಯೆಂದು ತಿಳಿಯಬೇಕು.

**प्रकाशः –**

उत्तरोत्तरचिन्ताफलत्वं पूर्वपूर्वचिन्तायाः प्रदर्शयन् लिङ्गानेकत्वव्यक्तिपूर्वं तन्निरवकाशत्वकथनेन पूर्वपक्षयन् ''स ईशानो वायुरेव'' इत्यादिटीकां विवृणोति – पूर्वपक्षस्त्वित्यादिना ॥

ವಿವರಣೆ - ಹಿಂದೆ ತೋರಿಸಿದ ಸಂಶಯ ಪರಂಪರೆಯಲ್ಲಿ ಮುಂದಿನ ಮುಂದಿನ ಸಂಶಯಕೋಟಿಗಳ ವಿಚಾರಕ್ಕೆ ಹಿಂದಿನ ಹಿಂದಿನ ಸಂಶಯಕೋಟಿಗಳೇ ಫಲರೂಪವಾಗಿವೆಯೆಂದು ತೋರಿಸುತ್ತಿದ್ದಾರೆ. ಮತ್ತು ಮುಖ್ಯಪ್ರಾಣದೇವರ ವಿಷಯದಲ್ಲಿ ಲಿಂಗಗಳು ಅನೇಕವಾಗಿವೆ. ಮತ್ತು ಅವು ನಿರವಕಾಶತ್ವಪ್ರಯುಕ್ತವಾಗಿ ಬಲಿಷ್ಠವಾಗಿದೆಯೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ. ಇದರಿಂದ 'ಸ ಈಶಾನೋ ವಾಯುರೇವ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸಿದಂತಾಗುತ್ತದೆ.

**प्रकाशः –** अत्र त्रयः पूर्वपक्षप्रापकाः । एकस्तावल्लिङ्गानामनेकत्वाद्वामन-श्रुतेरेकत्वादनेकैरेकस्य बाध इत्यनेकत्वरूपस्सौत्रावधारणसूचितः । अयं च स्पष्टत्वाद्भाष्यटीकयोर्न प्रपञ्चितः ।

ಒಟ್ಟು ಮೂರು ಬಗೆಯ ಪೂರ್ವಪಕ್ಷಗಳನ್ನು ಇಲ್ಲಿ ತಿಳಿಯಬೇಕು. ಲಿಂಗಗಳು ಅನೇಕವಾಗಿರುವುದರಿಂದ ವಾಮನಶ್ರುತಿಯು ಒಂದೇ ಆಗಿರುವುದರಿಂದ, ಅನೇಕ ಲಿಂಗಗಳಿಂದ ಒಂದು ಶ್ರುತಿಯು ಬಾಧಿತ-ವಾಗುತ್ತದೆಂಬ ಅನೇಕತ್ವ ಪ್ರಯುಕ್ತವಾದ ಪೂರ್ವಪಕ್ಷ. ಇದು ಸೂತ್ರದಲ್ಲಿರುವ 'ಶಬ್ದಾದೇವ' ಎಂಬ ಏವಕಾರದಿಂದ ಸೂಚಿತವಾಗಿದೆ. ಇದು ಮೊದಲನೆಯ ಪೂರ್ವಪಕ್ಷ. ಈ ಪೂರ್ವಪಕ್ಷವು ಅತ್ಯಂತ ಸ್ಪಷ್ಟವಾಗಿರುವುದರಿಂದ ಭಾಷ್ಯ ಹಾಗೂ ಟೀಕೆಗಳಲ್ಲಿ ಇದನ್ನು ವಿವರಿಸಿಲ್ಲ.

**प्रकाशः –** द्वितीयस्तु सौत्रप्रमितपदसूचितो निरवकाशत्वादिरूपः । सत्वस्पष्ट इति ''यथासम्राट्'' इत्यादौ टीकायां प्रपञ्चितः । तं व्यनक्ति – **तेषामित्यादिना** ।।

ಸೂತ್ರದಲ್ಲಿರುವ 'ಪ್ರಮಿತ' ಪದದಿಂದ ನಿರವಕಾಶತ್ವಪ್ರಯುಕ್ತವಾದ ಪೂರ್ವಪಕ್ಷವು ಸೂಚಿತವಾಗಿದೆ. ಇದು ಅಸ್ಪಷ್ಟವಾದ್ದರಿಂದ 'ಯಥಾಸಮ್ರಾಟ್' ಇತ್ಯಾದಿ ವಾಕ್ಯದಿಂದ ಟೀಕೆಯಲ್ಲಿ ವಿವರಿಸಿದ್ದಾರೆ. ಅದನ್ನೇ 'ತೇಷಾಂ' ಇತ್ಯಾದಿ ವಾಕ್ಯದಿಂದ ಪ್ರಕೃತ ಗ್ರಂಥಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः –** तृतीयस्तु द्वितीयसूत्रसूचितोऽङ्गुष्ठमात्रत्वरूपोऽग्रे स्पष्ट इति ध्येयम्।

ಎರಡನೆಯ ಸೂತ್ರದಿಂದ ಸೂಚಿತವಾದ ಅಂಗುಷ್ಠಮಾತ್ರತ್ವ ಎಂಬ ಪೂರ್ವಪಕ್ಷವು ಮೂರನೆಯದ್ದಾಗಿದೆ. ಇದನ್ನು ಆ ಸೂತ್ರವ್ಯಾಖ್ಯಾನದಲ್ಲಿಯೇ ಸ್ಪಷ್ಟಪಡಿಸಲಾಗುತ್ತದೆಂದು ತಿಳಿಯಬೇಕು.

**प्रकाशः –** ''यथा सम्राडेवाधिकृतान् विनियुङ्क्त एतान्ग्रामानधितिष्ठस्वैतान्ग्रामानधितिष्ठस्वेत्येवमेवैष प्राण इतरान् प्राणान् पृथक् पृथगेव सन्निधत्ते'' इति षट्प्रश्ने प्राणव्यवस्थापकत्वस्य

'ಪ್ರಾಣವ್ಯವಸ್ಥಾಪಕತ್ವ' ಎಂಬ ಲಿಂಗವನ್ನು ಷಟ್‌ಪ್ರಶ್ನೋಪನಿಷತ್ತಿನಲ್ಲಿ ಉದಾಹರಣಪೂರ್ವಕವಾಗಿ ಸಮರ್ಥಿಸಲಾಗಿದೆ - 'ಯಥಾ ಸಾಮ್ರಾಡೇವಾಧಿಕೃತಾನ್ ವಿನಿಯುಂಕ್ತ ಏತಾನ್ ಗ್ರಾಮಾನಧಿತಿಷ್ಠಸ್ವೈತಾನ್ ಗ್ರಾಮಾನಧಿತಿಷ್ಠಸ್ವೇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ'. 'ಚಕ್ರವರ್ತಿಯು ತನ್ನ ವಿಶಾಲವಾದ ಸಾಮ್ರಾಜ್ಯದಲ್ಲಿ ಒಂದೊಂದು ಭಾಗವನ್ನು ಆಡಳಿತದ ಸುವ್ಯವಸ್ಥೆಗಾಗಿ ಹಂಚಿ ಈ ಗ್ರಾಮವನ್ನು ನೀನು ಆಳಬೇಕು, ಈ ಗ್ರಾಮವನ್ನು ನೀನು ಆಳಬೇಕು ಎಂದು ನಿಯಂತ್ರಿಸುವಂತೆ ಮುಖ್ಯಪ್ರಾಣದೇವರೂ ಕೂಡ ಉಳಿದ ಪ್ರಾಣ, ಅಪಾನ ಮೊದಲಾದವರನ್ನು ದೇಹದ ಪ್ರತ್ಯೇಕ-ಪ್ರತ್ಯೇಕ ಸ್ಥಳಗಳಲ್ಲಿ ನಿಯಂತ್ರಣ ಮಾಡಲು ವ್ಯವಸ್ಥೆ ಮಾಡಿದ್ದಾರೆ'. ಹೀಗೆ ಪ್ರಾಣವ್ಯವಸ್ಥಾಪಕಲಿಂಗವು ಮುಖ್ಯಪ್ರಾಣದೇವರಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – "अथ इममेव नाप्नोद्योऽयं मध्यमः प्राणः" इति वाजसनेये मध्यमत्वस्य

ಬೃಹದಾರಣ್ಯಕೋಪನಿಷತ್ತಿನಲ್ಲಿ ಮಧ್ಯಮತ್ವಲಿಂಗವನ್ನು ಮುಖ್ಯಪ್ರಾಣದೇವರಲ್ಲಿ ಸಮರ್ಥಿಸಲಾಗಿದೆ - 'ಅಥ ಇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ' ಎಂದು. ವಾಗಾದ್ಯಭಿಮಾನಿ ದೇವತೆಗಳು ಮೃತ್ಯುಗ್ರಸ್ತರೆಂದು ಹೇಳಿ 'ಅಥೇಮಂ ನಾಪ್ನೋತ್ ಯೋಽಯಂ ಮಧ್ಯಮಃ ಪ್ರಾಣಃ' ಎಂದು ಹೇಳಿದೆ. ಜೀವಿಸುವರೆಲ್ಲರೂ ಪ್ರಾಣರು. ಅವರಲ್ಲಿ ಮೃತ್ಯುಭಯವಿರುವ ಪ್ರಾಣರು ಅಧಮರು. ವಾಯುದೇವರು ಮತ್ತು ವಿಷ್ಣು ಇವರಿಬ್ಬರು ಮರಣಭಯವಿಲ್ಲದ ಪ್ರಾಣರು. ಅವರಿಬ್ಬರಲ್ಲಿ ವಿಷ್ಣು ಸರ್ವೋತ್ತಮನು. ವಾಯು ಮಧ್ಯಮನು. ಹೀಗೆ 'ಮಧ್ಯೇ ವಾಮನಮಾಸೀನಂ' ಎಂದು ಹೇಳಿರುವ ಮಧ್ಯಮತ್ವವು ಮುಖ್ಯಪ್ರಾಣದೇವರ ಧರ್ಮವಾಗಿದೆ.

**प्रकाशः** –

"कुविदङ्ग नमसा ये वृधासः पुरा देवा अनवद्यास आसन् ।
ते वायवे मनवे बाधितायावासयन्नुषसं सूर्येण"

इत्यस्यामृचि देवोपास्यत्वस्य वायुधर्मत्वेन सिद्धत्वादित्यर्थः ।

'ಸರ್ವದೇವೋಪಾಸ್ಯತ್ವ' ಎಂಬ ಧರ್ಮವು ಮುಖ್ಯಪ್ರಾಣದೇವರದ್ದೆಂದು 'ಋಜ್' ಮಂತ್ರವು ತಿಳಿಸುತ್ತಿದೆ.

"ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ ।
ತೇ ವಾಯವೇ ಮನವೇ ಬಾಧಿತಾಯಾವಾಸಯನ್ ಉಷಸಂ ಸೂರ್ಯೇಣ'

ಈ 'ಋಜ್' ಮಂತ್ರದಲ್ಲಿ ದೇವೋಪಾಸ್ಯತ್ವವು ವಾಯುದೇವರ ಧರ್ಮವೆಂದು ಸಾಧಿಸಲಾಗಿದೆ.

**प्रकाशः** – ऋगर्थस्तु "अङ्गेति सम्बोधनम् । ये देवा वायोर्नमस्कारादिना ज्ञानादिगुणपूर्णा अज्ञानाद्यवद्यविधुराश्च पुराऽऽसन् ते क्वचिद्रहस्यस्थाने सूर्येण साकं ज्ञानिने संसारबाधवद्भिश्शरणं प्राप्ताय वायवे बुद्धिमवासयन् । तद्विषयामकुर्वन्" इति टीकायां व्यक्तः ।

'ಕುವಿದಂಗ' ಎಂಬ 'ಋಜ್' ಮಂತ್ರದ ಅರ್ಥ ಹೀಗಿದೆ - 'ಅಂಗ' = ಎಲೈ ಪ್ರಿಯನೇ, ಯೇ = ಯಾವ ದೇವತೆಗಳು, ನಮಸಾ = ನಮಸ್ಕಾರವೇ ಮೊದಲಾದ ಸೇವೆಗಳಿಂದ, ವೃಧಾಸಃ = ಜ್ಞಾನಾದಿ ಗುಣಗಳಿಂದ ಸಂಪನ್ನರು, ಅನವದ್ಯಾಸಃ = ಅಜ್ಞಾನಾದಿ ದೋಷಗಳಿಂದ ರಹಿತರು, ಪುರಾ = ಮೊದಲೇ, ಆಸನ್ = ಆಗಿದ್ದರೋ, ತೇ = ಅಂತಹ ದೇವತೆಗಳು, ಸೂರ್ಯೇಣ ಸಹ = ಸೂರ್ಯನೊಂದಿಗೆ, ಕುವಿತ್ = ರಹಸ್ಯಸ್ಥಳದಲ್ಲಿ, ಮನವೇ = ಜ್ಞಾನಿಯಾದ, ಬಾಧಿತಾಯ = ಸಂಸಾರ ಬಾಧಿತರಿಂದ ಶರಣಾಗತರಾದ,

ವಾಯವೇ = ವಾಯುದೇವರನ್ನು ಉದ್ದೇಶಿಸಿ, ಉಷಸಂ = ತಮ್ಮ ಬುದ್ಧಿಯನ್ನು, ಆವಾಸಯನ್ = ನೆಲೆಗೊಳಿಸಿದರು. ಈ ಅರ್ಥವು ಟೀಕೆಯಲ್ಲಿ ಹೇಳಲ್ಪಟ್ಟಿದೆ.

**प्रकाशः** – श्रुत्यन्तराणां वायुपरत्वं टीकायामस्पष्टमिति स्वयं साधयति – **एवमेवेत्यादिना** ।।

'ಕುವಿದಂಗ' ಎಂಬ ಶ್ರುತ್ಯರ್ಥವು ಟೀಕೆಯಲ್ಲಿ ಸ್ಪಷ್ಟವಾಗಿದ್ದರೂ ಉಳಿದ ಶ್ರುತ್ಯರ್ಥಗಳು ವಾಯುಪರ-ವಾಗಿರುವುದು ಅಸ್ಪಷ್ಟವಾಗಿರುವುದರಿಂದ ಸ್ವತಃ ಗ್ರಂಥಕಾರರೇ ಅವುಗಳ ಅರ್ಥವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಏವಮೇವ' ಇತ್ಯಾದಿ ವಾಕ್ಯದಿಂದ.

**प्रकाशः** – ननु "अत एव प्राणः" इति न्यायेनोपक्रमबाधेन प्राणशब्दो विष्णुपरः स्यादित्यत आह – **विष्ण्विति** ।।

'ಅತ ಏವ ಪ್ರಾಣಃ' ಎಂಬ ಪ್ರಥಮ ಪಾದದ ಸೂತ್ರನ್ಯಾಯದಂತೆ, ಉಪಕ್ರಮಬಾಧಿತವಾಗುವುದರಿಂದ ಪ್ರಾಣಶಬ್ದವು ವಿಷ್ಣುಪರವೇ ಆಗಬೇಕಲ್ಲವೇ? ಎಂಬ ಪ್ರಶ್ನೆಗೆ 'ವಿಷ್ಣುಲಿಂಗಾಭಾವಾಚ್ಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः** – **अत एव विष्णुलिङ्गाभावादेव** ।

'ಅತ ಏವ' ಎಂದರೆ ವಿಷ್ಣುಲಿಂಗವಿಲ್ಲವಾದ್ದರಿಂದ ಎಂದರ್ಥ. 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ವಿಷ್ಣುಲಿಂಗವಿದ್ದರೆ ಮಾತ್ರ 'ಪ್ರಾಣ' ಶಬ್ದವು ವಿಷ್ಣುಪರವೆಂದು ಹೇಳಲಾಗಿದೆ. ಇಲ್ಲಿ ಅಂತಹ ವಿಷ್ಣುಲಿಂಗಗಳಿಲ್ಲದ ಕಾರಣ, ವಿಷ್ಣುಪರವಾಗುವುದಿಲ್ಲವೆಂದು ತಿಳಿಯಬೇಕು.

**प्रकाशः** – ननु कथं तर्हि कपिञ्जलाधिकरणे त्रित्वे पर्यवसानमुक्तमित्यत आह – **वसन्तायेति** ।।

'ದೇವಾಃ' ಎಂಬಲ್ಲಿರುವ ಬಹುವಚನವು ತ್ರಿತ್ವದಲ್ಲಿ ಪರ್ಯವಸಾನವಾಗುವುದಿಲ್ಲವೆನ್ನುವುದಾದರೆ ಪೂರ್ವಮೀಮಾಂಸೆಯ ಕಪಿಂಜಲಾಧಿಕರಣದಲ್ಲಿ 'ಕಪಿಂಜಲಾನ್' ಎಂಬಲ್ಲಿರುವ ಬಹುವಚನವನ್ನು ತ್ರಿತ್ವದಲ್ಲೇ ಪರ್ಯವಸಾನ ಮಾಡಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ವಸಂತಾಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – एकादशाध्याये "बहुवचनेन सर्वप्राप्तेर्विकल्पस्स्यात्" इत्याद्यपादीयाष्टमाधिकरणे "वसन्ताय कपिञ्जलानालभते" इत्यत्र किं त्रयाणामेवालम्भ उत त्रिप्रभृतीनामिति संशये बहुवचनस्य सर्वत्र प्रवृत्तेः सर्वसङ्ख्यानां शास्त्रार्थत्वाच्छास्त्रीयाच्च प्रयासगौरवात् फलभूयस्त्वमिति यावदुत्साहं

विकल्पेन नानासङ्ख्योपादानमिति प्राप्ते बहुत्वमात्रस्यैव शास्त्रार्थत्वात् त्रीननालभ्य चतुर्थालम्भासम्भवादवश्यं त्रयाणामालम्भे तावतैव शास्त्रार्थसिद्धेर्नाधिकालम्भं शास्त्रं कारयतीति निवृत्तव्यापारे विधौ ''न हिंस्यात्'' इति निषेधशास्त्रप्रवृत्तेरष्टदोषदुष्टविकल्पापाताच्च त्रयाणामेवालम्भ इत्युक्तम् ।

'ಬಹುವಚನೇನ ಸರ್ವಪ್ರಾಪ್ತೇರ್ವಿಕಲ್ಪಃ ಸ್ಯಾತ್'[1] (೧೧-೧-೮)

'ವಸಂತಾಯ ಕಪಿಂಜಲಾನಾಲಭತೇ' ಎಂಬ ವಾಕ್ಯವನ್ನು ಈ ಕಪಿಂಜಲಾಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಈ ವಾಕ್ಯದಲ್ಲಿ ಮೂರು ಕಪಿಂಜಲ ಗೋವುಗಳ ಆಲಂಭನವನ್ನಷ್ಟೇ ಹೇಳಲಾಗಿದೆಯೋ, ಅಥವಾ ಮೂರಕ್ಕಿಂತ ಹೆಚ್ಚು ಕಪಿಂಜಲ ಗೋವುಗಳ ಆಲಂಭನವನ್ನು ಹೇಳಲಾಗಿದೆಯೋ? ಎಂದು ಸಂಶಯ.

---

(१) भाट्टसङ्ग्रहः –

**अथ षष्ठं कपिञ्जलाधिकरणम् (सूत्राणि ३८-४५)**

**बहुवचनेन सर्वप्राप्तेर्विकल्पः स्यात् ॥३८॥**

**(दृष्टः प्रयोग इति चेत् ॥३९॥ भक्त्येति चेत् ॥४०॥ तथेतरस्मिन् ॥४१॥ प्रथमं वा नियम्येन कारणादतिक्रमः स्यात् ॥४२॥ श्रुत्यर्थाविशेषात् ॥४३॥ तथा चान्यार्थदर्शनम् ॥४४॥ प्रकृत्या च पूर्ववत्तदासत्तेः ॥४५॥)**

पूर्ववैषम्येण शङ्कात्सङ्गतिः । ''वसन्ताय कपिञ्जलानालभते'' इत्यादिषु किं त्रयाणामालम्भः, उत त्रिप्रभृतीनामिति सन्देहे, बहुवचनं द्वित्वाधिकं सामान्यतो निमित्तीकृत्य त्रित्वप्रभृतिषु प्रवर्तते । तथा चाङ्गाभ्यासस्याशास्त्रीयत्वेन तेन फलाभावेऽपीह त्रिप्रभृतिसर्वसङ्ख्यानां बहुवचनरूपशास्त्रार्थत्वाच्छास्त्रीयायासगौरवेण फलभूमाऽस्तीत्यस्य षड्देया, द्वादश देयेत्यादौ सिद्धत्वात् । अतो यावदुत्साहं त्रिप्रभृति नानासाङ्ख्योपादानम्। तदाह **सूत्रे, बहुवचनेन** सर्वसङ्ख्याप्राप्तेर्विकल्पः स्यादिति । **सिद्धान्तस्तु,** बहुवचनं हि द्वित्वाधिक्यरूपबहुत्वप्रकारकज्ञानजनकतया बहुमात्र एव शक्तम् । बहुत्वं निमित्तीकृत्य त्रित्वादौ वर्तते । त्रित्वाद्यनन्तप्रतीतित्वात् । अतः त्रित्वादीनां षड्देयेत्यत्रेव न भेदेन शास्त्रार्थताऽस्ति । न चाशास्त्रीयायासगौरवेणादृष्टं फलमस्ति । अतस्त्रीननालभ्य चतुर्णामनालम्भादवश्यं त्रयाणामालम्भ्ये तावता शास्त्रार्थसिद्धेर्नाधिकालम्भे शास्त्रप्रवृत्तिः । निर्वृत्ते च शास्त्रविधौ ''न हिंस्यात्'' इति निषेधशास्त्रं प्रवर्तत इति नाधिकालम्भ इति । फलं तु त्रयाणामेवानुष्ठानम् ।

**इति षष्ठं कपिञ्जलाधिकरणम् (सूत्राणि ३८-४५)**

ವಾಮನಾಧಿಕರಣ (೧-೩-೭)

ಪೂರ್ವಪಕ್ಷ - ಮೂರಕ್ಕಿಂತ ಹೆಚ್ಚು ಯಥಾಶಕ್ತಿ ಸಕಲ ಕಪಿಂಜಲ ಗೋವುಗಳ ಆಲಂಭನವನ್ನೇ ಈ ವಾಕ್ಯವು ವಿಧಿಸುತ್ತಿದೆ. ಏಕೆಂದರೆ 'ಕಪಿಂಜಲಾನ್' ಎಂಬಲ್ಲಿರುವ ಬಹುವಚನಕ್ಕೆ 'ಸಾಕಲ್ಯ' ಎಂಬರ್ಥವನ್ನೇ ಧಾರಾಳವಾಗಿ ಸ್ವೀಕರಿಸಲು ಬರುತ್ತದೆ. ಮತ್ತು ಸಕಲ ಕಪಿಂಜಲಗಳು ಶಾಸ್ತ್ರಾರ್ಥವೇ ಆಗುವುದರಿಂದ, ಶಾಸ್ತ್ರೀಯವಾದದ್ದರಲ್ಲಿ ಪ್ರಯಾಸಗೌರವವಿದ್ದರೂ ಅದು ಫಲಭೂಯಸ್ತ್ವಕ್ಕೆ ಕಾರಣವಾಗುತ್ತದೆ. ಆದ್ದರಿಂದ ಎಷ್ಟು ಉತ್ಸಾಹವಿರುತ್ತದೋ, ಅಷ್ಟು ಉತ್ಸಾಹವನ್ನು ಹೊಂದಿ, ಸಕಲ ಕಪಿಂಜಲ ಗೋವುಗಳ ಆಲಂಭನವನ್ನು ಯಾಗದಲ್ಲಿ ಮಾಡಬೇಕು. ಹೊರತು, ಕೇವಲ ಮೂರು ಕಪಿಂಜಲ ಗೋವುಗಳನ್ನಷ್ಟೇ ವಿವಕ್ಷಿಸುವುದು ತಪ್ಪಾಗುತ್ತದೆ.

ಸಿದ್ಧಾಂತ - 'ಕಪಿಂಜಲಾನ್' ಎಂಬಲ್ಲಿರುವ ಬಹುವಚನವು ಬಹುತ್ವವನ್ನಷ್ಟೇ ಹೇಳುತ್ತದೆ. ಆದ್ದರಿಂದ, ಬಹುತ್ವವಷ್ಟೇ ಶಾಸ್ತ್ರಾರ್ಥವಾಯಿತು. ಮೂರು ಕಪಿಂಜಲ ಗೋವುಗಳನ್ನು ಆಲಂಭನ ಮಾಡದೇ ನಾಲ್ಕನೆಯ ಕಪಿಂಜಲ ಗೋವನ್ನು ಆಲಂಭನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಮೂರು ಕಪಿಂಜಲ ಗೋವುಗಳ ಆಲಂಭನವಂತೂ ಅನಿವಾರ್ಯ. ಈ ಮೂರರಿಂದಲೇ ಶಾಸ್ತ್ರಾರ್ಥವು ಕೃತಕೃತ್ಯವಾಗಿರುವಾಗ ಅಧಿಕವಾದ ಕಪಿಂಜಲ ಗೋವುಗಳ ಆಲಂಭನವು ವ್ಯರ್ಥವಾಗುತ್ತವೆ. ಅಧಿಕವಾದ ಕಪಿಂಜಲ ಗೋವುಗಳ ಆಲಂಭನವು ಶಾಸ್ತ್ರೀಯವಾಗುವುದಿಲ್ಲ. ಹೀಗೆ ಬಹುವಚನವು ಮೂರರಲ್ಲಿಯೇ ಕೃತಕೃತ್ಯವಾಗಿ ನಿರ್ವ್ಯಾಪಾರವಾದಾಗ 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬ ನಿಷೇಧ ಶಾಸ್ತ್ರವು ಪ್ರವೃತ್ತವಾಗುತ್ತದೆ. ಆಗ ಉಳಿದ ಕಪಿಂಜಲ ಗೋವುಗಳ ಆಲಂಭನವನ್ನು ಮಾಡುವುದು ಶಾಸ್ತ್ರವಿರುದ್ಧವೇ ಆಗುತ್ತದೆ. ಮತ್ತು ನಾಲ್ಕು ಅಥವಾ ಐದು ಅಥವಾ ಆರು ಹೀಗೆ ಹೆಚ್ಚಿನ ಸಂಖ್ಯೆಯಲ್ಲಿ ಕಪಿಂಜಲ ಗೋವುಗಳ ಆಲಂಭನವನ್ನು ವಿಕಲ್ಪರೂಪದಿಂದ ವಿವಕ್ಷಿಸುವುದಾದರೆ, ವಿಕಲ್ಪವು ಅಷ್ಟದೋಷಗಳಿಂದ ದುಷ್ಟವಾಗುತ್ತದೆ. ಆದ್ದರಿಂದ ಮೂರು ಗೋವುಗಳ ಆಲಂಭನವೇ ವಿಹಿತವಾಗಿದೆ.

**प्रकाशः – बहुवचनार्थो मुख्य उपादीयते अथ यथोत्साहं कदाचित्किञ्चित् सङ्कुचितः । आद्ये दोषमाह – सर्वेति ।। द्वितीये दोषमाह – अष्टदोषेति ।।**

'ಕಪಿಂಜಲಾನ್' ಎಂಬಲ್ಲಿರುವ ಬಹುವಚನಕ್ಕೆ ಮುಖ್ಯಾರ್ಥವನ್ನು ಸ್ವೀಕರಿಸುತ್ತೀರೋ? ಅಥವಾ ಉತ್ಸಾಹಕ್ಕೆ ಅನುಸಾರಿಯಾಗಿ ಕೆಲವೊಮ್ಮೆ ಕೆಲವು ಗೋವುಗಳೆಂಬ ಸಂಕುಚಿತವಾದ ಅರ್ಥವನ್ನು ಸ್ವೀಕರಿಸುತ್ತೀರೋ? ಮೊದಲನೆಯ ಪಕ್ಷದಲ್ಲಿ 'ಸರ್ವ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಎರಡನೆಯ ಪಕ್ಷದಲ್ಲಿ 'ಅಷ್ಟದೋಷ' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – एकस्योपादाने तस्याप्रामाण्यत्यागः प्रामाण्यस्वीकारोऽन्यस्य प्रामाण्यत्यागोऽप्रामाण्यस्वीकार इति चत्वारो दोषाः । अन्यस्योपादानदशायां तस्य पूर्वक्लृप्ताप्रामाण्यत्यागस्त्यक्तप्रामाण्यस्वीकारस्तत्प्रतियोगिनोऽन्यस्य तु प्राक्क्लृप्तप्रामाण्यत्यागस्त्यक्ताप्रामाण्यस्वीकारश्चेति चत्वारो दोषा इति मिलित्वा अष्टौ दोषा ध्येयाः

ಅಷ್ಟದೋಷಗಳು ಹೀಗಿವೆ - ೧. ಏಕಸ್ಯ ಉಪಾದಾನೇ ತಸ್ಯ ಅಪ್ರಾಮಾಣ್ಯತ್ಯಾಗಃ, ೨. ಪ್ರಾಮಾಣ್ಯ ಸ್ವೀಕಾರಃ, ೩. ಅನ್ಯಸ್ಯ ಪ್ರಮಾಣ್ಯತ್ಯಾಗಃ, ೪. ಅಪ್ರಾಮಾಣ್ಯಸ್ವೀಕಾರಃ, ೫. ಅನ್ಯಸ್ಯ ಉಪಾದಾನದಶಾಯಾಂ ತಸ್ಯ ಪೂರ್ವಕ್ಲ್ಪಪ್ತಾಪ್ರಾಮಾಣ್ಯತ್ಯಾಗಃ, ೬. ತ್ಯಕ್ತ ಪ್ರಮಾಣ್ಯಸ್ವೀಕಾರಃ, ೭. ತತ್‌ಪ್ರತಿಯೋಗಿನಃ ಅನ್ಯಸ್ಯ ತು ಪ್ರಾಕ್ ಕ್ಲೃಪ್ತಪ್ರಾಮಾಣ್ಯತ್ಯಾಗಃ ೮. ತ್ಯಕ್ತಾಪ್ರಮಾಣ್ಯಸ್ವೀಕಾರಃ. ಹೀಗೆ ವಿಕಲ್ಪ ಪಕ್ಷದಲ್ಲಿ ಎಂಟು ದೋಷಗಳು ಬರುತ್ತವೆಂದು ತಿಳಿಯಬೇಕು.

**प्रकाशः – असङ्कोचेति ।।** त्रित्वव्यतिरिक्ते प्रवृत्तिसम्भवे सर्वकपिञ्जल-व्यतिरिक्तत्वरूपसङ्कोच इत्यर्थः ।

ಗ್ರಂಥದಲ್ಲಿರುವ 'ಅಸಂಕೋಚಸಂಭವೇ' ಎಂಬ ಪದಕ್ಕೆ ಹೀಗರ್ಥ - 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬ ವಾಕ್ಯಕ್ಕೆ ತ್ರಿತ್ವವ್ಯತಿರಿಕ್ತವಾದ ಕಪಿಂಜಲ ಗೋವುಗಳ ಹಿಂಸೆಯು ನಿಷಿದ್ಧವಾಗಿವೆ ಎಂದೇ ಅರ್ಥೈಸಲು ಬರುವಾಗ ಸಕಲ ಕಪಿಂಜಲ ಗೋವುಗಳ ಹಿಂಸೆಯನ್ನು ಬಿಟ್ಟು ಉಳಿದ ಪ್ರಾಣಿಗಳ ಹಿಂಸೆಯನ್ನು ಮಾಡಬಾರದೆಂಬ ಅರ್ಥದಲ್ಲಿ ಸಂಕೋಚ ಮಾಡಲು ಕಾರಣವಿಲ್ಲ ಎಂದರ್ಥ.

**गुरुराजीयम् –** प्राणव्यवस्थापकत्वेन कुत ईशानस्य वायुतेति शङ्कानिरासाय टीकायां यथा सम्राडित्यादिना प्राणव्यवस्थापकत्वस्य वायुधर्मत्वादित्युक्तम् । तदयुक्तम् । तत्रापि प्राणशब्दस्य 'अत एव प्राणः' इत्यधिकरणन्यायेन विष्णुपरत्वे तद्बलेन वायोरीशानत्वालाभादित्यतस्तां टीकामुपपादयति – **एवमेवेत्यत्रेति ।।** किञ्च विष्णुलिङ्गे सति तच्छब्दानां विष्णुपरत्वमिति हि प्राणाधिकरणन्यायः । न चात्र विष्णुलिङ्गमस्तीति न प्राणाधिकरणन्यायविषयतेत्याह – **विष्णुलिङ्गाभावाचेति – अत एवेति ।।** ऋचि विष्णुलिङ्गाभावेन प्राणाधिकन्यायविषयत्वाभावादेवेत्यर्थः । कुविदङ्गेत्यस्य सर्वदेवोपास्यत्वमुपपादयितुं तावच्छङ्कते – **नच ऋचीति ।।** कपिञ्जलाधिकरणन्यायविरोधं परिहरति – **वसन्ताय कपिञ्जलानिति ।।** ननु नैकदा सर्वकपिञ्जलालम्भ उच्यते । किन्तु कदाचित्कस्यचित् । अत उक्तं विकल्पापातादिति। अस्तु विकल्पोऽपीत्यत उक्तम् – **अष्टदोषेति ।** 'आग्नेयोऽष्टाकपालः' इत्यादिवाक्य-निर्दिष्टपुरोडाशाक्षेपादेव व्रीहियवश्यामाकादिषु प्राप्तेषु द्रव्यान्तरप्रसक्तिनिमित्तनियम-निरासाय व्रीह्यादिशब्दैर्नियम आश्रीयते व्रीहिभिरेव यवैरेवेति । तथा च व्रीहिपुरोडाशप्रयोगे यवशास्त्रे प्रतीतप्रामाण्यत्यागः । निर्दोषवेदे दोषजन्यसंशय-विपर्ययरूपाप्रामाण्यायोगात् । प्रामाण्योपलम्भे सत्यपि प्रामाण्यानुपलम्भरूपानुप-लब्धिगम्यप्रामाण्याभावरूपाप्रामाण्यस्वीकारः । यवपुरोडाशप्रयोगेषु पूर्वकल्पिता-

प्रामाण्यस्य पूर्वत्यक्तप्रामाण्यस्य च यवशास्त्रस्याप्रामाण्यस्वीकारौ विना तदर्थानुष्ठाना-योगाद्यवशास्त्रे त्यक्तप्रामाण्यस्वीकारोऽङ्गीकृतप्रामाण्यपरित्याग इति च दोषद्वयम् । एवञ्च यवशास्त्रे दोषचतुष्टयम् । एवं यवपुरोडाशप्रयोगे व्रीहिशास्त्रे दोषद्वयं पुनर्व्रीह्युपादाने दोषद्वयमिति व्रीहियवशास्त्रेऽपि दोषचतुष्टयमित्यष्टदोषदुष्टो विकल्पः। एवं ग्रहणाग्रहणवाक्ययोरपि योजनीयम् । तदुक्तं वार्तिके -

प्रमाणस्याप्रमाणत्वकल्पनाच्च द्विदोषभाक् ।
प्रमाणत्वं प्रतीतं यदुज्ज्वलं तदपह्नुतम् ।।
एकस्तावदयं दोषः प्रमाणार्थविपर्ययात् ।
तथा तदप्रमाणत्वं यदभावप्रमाणकम् ।।
भावेऽपि सत्यभावेन विनैव परिकल्पितम् ।
सोऽपि स्यादपरो दोषः प्रमाणार्थविपर्ययात् ।।
अङ्गीकृत्यापि तौ दोषौ पूर्वं केनापि हेतुना ।
प्रयोगान्तरकाले च पुनर्दोषद्वयं भवेत् ।।
यदभावे प्रमाणत्वं पूर्वमेतस्य कल्पितम् ।
सम्प्रत्यपह्नुवानस्य दोष एको हि जायते ।।
प्रत्यक्षं दृढरूपं च यत्पुरस्तान्निराकृतम् ।
उपजायेत दोषोऽन्यस्तदुज्जीवयतः पुनः ।।
एवमेकत्र चत्वारो दोषा वाक्ये प्रदर्शिताः ।
तत एव प्रसज्येरन् द्वितीयेऽपि प्रकल्पिते ।।
एवमेषोऽष्टदोषोऽपि यद् व्रीहियववाक्ययोः ।
विकल्प आश्रितस्तत्र गतिरन्या न विद्यते ।। इति ।

अस्यार्थः -

द्विदोषभागित्युक्तदोषद्वयमुपपादयति । **प्रमाणत्वमिति** । प्रमाणत्वापह्नवस्य दोषत्वमुपपादयति । **प्रतीतमिति** । प्रतीतप्रमाणत्वापह्नवः प्रतीतिविरोधादेव दोष इत्यर्थः । प्रतीताप्रामाण्यकल्पनं द्वितीयो दोष इत्याह । **तथेति** । तस्य प्रमाणस्य सतोऽप्रमाणत्वकल्पनमित्यर्थः । **अभावेति** । प्रामाण्यानुपलम्भरूपाभाव-प्रमाणकमित्यर्थः । सन्देहविपर्यययोर्दोषजन्यत्वान्निर्दोषवेदे च दोषाभावात्प्रामाण्या-

भावरूपमेवाप्रामाण्यं वाच्यम् । तस्मिंश्च प्रामाण्योपलम्भाभावः प्रमाणं वाच्यम् । स च न सम्भवति । प्रामाण्योपलम्भस्य भावे सत्त्वे सत्यपीत्यर्थः । **प्रमाणेति** । प्रमाणस्योपलम्भाभावस्यार्थस्य प्रमेयस्याप्रामाण्यस्य विपर्ययात् विरोधादित्यर्थः । **अभावेति** । प्रामाण्योपलम्भाभावप्रमाणकत्वम् । **एतस्याप्रमाणत्वस्येत्यर्थः** । इदमप्रामाण्यं स्वीकृतं पूर्वं तस्य त्यागस्तृतीयो दोषः । **प्रत्यक्षमिति** । यत्प्रामाण्यं पूर्वं निराकृतं तस्योज्जीवनं स्वीकारश्चतुर्थो दोषः । सङ्ग्रहश्च -

व्रीहेरेते यवस्योक्तेर्मा त्वस्य त्यागकल्पने ।
यवे नैवं चेति दोषा व्रीहेश्चैवं द्वयेऽष्टता ।। इति ।

व्रीहिमये पुरोडाशे कृते यवस्योक्तेर्यववाक्यस्य द्वौ दोषौ । यवमये पुरोडाशे कृतेऽपि यववाक्यस्य द्वौ दोषौ । एवं यववाक्ये चत्वारो दोषाः । एवं मिलित्वोक्तेर्द्वये ते दोषा अष्टौ ।




ಕಾಠಕೋಪನಿಷತ್ತಿನಲ್ಲಿ 'ಊರ್ಧ್ವಂ ಪ್ರಾಣಮ್ ಉನ್ನಯತಿ ಅಪಾನಂ ಪ್ರತ್ಯಗಸ್ಯತಿ । ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ' ಎಂಬ ವಾಕ್ಯವಿದೆ. ತಾನು ಮಧ್ಯದಲ್ಲಿದ್ದು ಪ್ರಾಣನನ್ನು ಮೇಲ್ಮುಖವಾಗಿ, ಅಪಾನನನ್ನು ಕೆಳಮುಖವಾಗಿ ನಿಯಂತ್ರಿಸುವ ವಾಮನನನ್ನು ಎಲ್ಲ ದೇವತೆಗಳು ಉಪಾಸನೆ ಮಾಡುತ್ತಾರೆ ಎಂದು ಈ ಶ್ರುತಿಯ ಅರ್ಥ. ಇದರ ಹಿಂದಿನ ವಾಕ್ಯದಲ್ಲಿ 'ಈಶಾನೋ ಭೂತಭವ್ಯಸ್ಯ' ಹಿಂದಿನ-ಮುಂದಿನ ಪದಾರ್ಥಗಳಿಗೆಲ್ಲಾ ಅವನೇ ಒಡೆಯನು ಎಂಬುದಾಗಿ 'ಈಶಾನ' ಎಂಬ ಶಬ್ದದ ಉಲ್ಲೇಖವಿದೆ. ಇದರಿಂದ ಪ್ರಾಣಾದಿಗಳ ವ್ಯವಸ್ಥಾಪಕನು ಈಶಾನನೆಂದು ಹೇಳಿದಂತಾಗುತ್ತದೆ. ಪ್ರಾಣಾದಿ ವ್ಯವಸ್ಥಾಪಕತ್ವವು ಮುಖ್ಯಪ್ರಾಣದೇವರ ಲಿಂಗವಾದ್ದರಿಂದ ವಾಯುದೇವರೇ 'ಈಶಾನ' ಎನಿಸುತ್ತಾರೆ. ಏಕೆಂದರೆ ಈ ಮಂತ್ರದಲ್ಲಿ ಮೂರು ಲಿಂಗಗಳಿವೆ. ಒಂದು ಪ್ರಾಣಾದಿ ವ್ಯಾವಸ್ಥಾಪಕತ್ವ, ೨. ಮಧ್ಯಮತ್ವ, ೩. ಸರ್ವದೇವೋಪಾಸ್ಯತ್ವ. ಈ ಮೂರೂ ಲಿಂಗಗಳು ಮುಖ್ಯಪ್ರಾಣದೇವರ ಧರ್ಮಗಳೇ ಆಗಿವೆ. ಷಟ್ ಪ್ರಶ್ನೋಪನಿಷತ್ತಿನಲ್ಲಿ 'ಏವಮೇವ ಏಷಃ ಪ್ರಾಣಃ' ಎಂಬ ವಾಕ್ಯದಿಂದ ಪ್ರಾಣಾದಿ ವ್ಯವಸ್ಥಾಪಕತ್ವವು ಮುಖ್ಯಪ್ರಾಣದೇವರಲಿಂಗವೆಂದು ನಿರ್ಣಯಿಸಲಾಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ವಾಕ್ಯದಿಂದ ಮಧ್ಯಮತ್ವವು ಮುಖ್ಯಪ್ರಾಣದೇವರ ಲಿಂಗವೆಂದು ಸಮರ್ಥಿಸಲಾಗಿದೆ. 'ಕುವಿದಂಗ' ಎಂಬ 'ಋಜ್' ಮಂತ್ರದಲ್ಲಿ ಸರ್ವದೇವೋಪಾಸ್ಯತ್ವವು ಮುಖ್ಯಪ್ರಾಣದೇವರ ಲಿಂಗವೆಂದು ನಿರ್ಣಯಿಸಲಾಗಿದೆ. ಇದೇ ಮೂರು ಲಿಂಗಗಳು ಈಶಾನನಲ್ಲಿ ಸ್ಥಿತವಾದ್ದರಿಂದ ಈಶಾನನು ಮುಖ್ಯಪ್ರಾಣದೇವರೇ ಆಗುತ್ತಾರೆ.

• • • • •

## ಮುಖ್ಯಪ್ರಾಣ ಧರ್ಮಗಳಿಗೆ ನಿರವಕಾಶತ್ವಸಮರ್ಥನೆ

### तात्पर्यचन्द्रिका

**एतेन विश्वदेवशब्दो गणविशेषपर इति निरस्तम् । गुणातिशयासिद्धेः ।**

ಅನುವಾದ - 'ವಿಶ್ವೇದೇವಾಃ ಉಪಾಸತೇ' ಎಂಬ ಶ್ರುತಿಯಲ್ಲಿರುವ ವಿಶ್ವದೇವ ಶಬ್ದವು ವಿಶ್ವೇದೇವತೆಗಳೆಂಬ ಗಣವಿಶೇಷವನ್ನು ಹೇಳುತ್ತಿದೆ. ಅಂತಹ ವಿಶ್ವೇದೇವ ಗಣದಲ್ಲಿರುವ ದೇವತೆಗಳಷ್ಟೇ ಉಪಾಸನೆ ಮಾಡುತ್ತಾರೆಂದು 'ಕುವಿದಂಗ' ಎಂಬ ಮಂತ್ರವು ಹೇಳುತ್ತಿದೆ. ಇದರಿಂದ ಸರ್ವದೇವೋಪಾಸ್ಯತ್ವವು ಹೇಗೆ ಸಿದ್ಧವಾಗುತ್ತದೆ?

ಈ ಪ್ರಶ್ನೆಯೂ ಕೂಡ ಹಿಂದಿನ ವಿಚಾರದಿಂದಲೇ ನಿರಸ್ತವಾಯಿತು. ಏಕೆಂದರೆ ಕೇವಲ ವಿಶ್ವೇದೇವಗಣದಲ್ಲಿರುವ ದೇವತೆಗಳಿಂದ ಉಪಾಸ್ಯತ್ವವನ್ನು ಹೇಳಿದ ಮಾತ್ರಕ್ಕೆ ಯಾವ ಗುಣಾತಿಶಯವೂ ಕೂಡ ಮುಖ್ಯಪ್ರಾಣದೇವರಲ್ಲಿ ಸಿದ್ಧವಾಗುವುದಿಲ್ಲ.

**भूतभव्येशानत्वानानुगुण्याच्च ।**

ಮತ್ತು ಹಿಂದಿನ-ಮುಂದಿನ ಸಕಲ ದೇವತೆಗಳಿಗೆ ನಿಯಾಮಕರಾಗಿದ್ದಾರೆಂದು ಅದೇ ಶ್ರುತಿಯಲ್ಲಿ ಹೇಳಲಾಗಿದೆ. ಸಕಲ ದೇವತೆಗಳನ್ನು 'ದೇವಾಃ' ಎಂಬ ಪದದಿಂದ ವಿವಕ್ಷಿಸದಿದ್ದಲ್ಲಿ, ಈ ಸಕಲದೇವತೆಗಳ ನಿಯಾಮಕತ್ವವು ಅನನುಗುಣವಾಗುತ್ತದೆ. ಆದ್ದರಿಂದಲೂ 'ವಿಶ್ವದೇವ' ಪದಕ್ಕೆ ಗಣವಿಶೇಷವೆಂಬರ್ಥವನ್ನು ಸ್ವೀಕರಿಸಬಾರದು.

**''योऽयं मध्यमः प्राणः'' इति श्रुत्यन्तरोक्तं मध्यमत्वं तु न परस्मिन् शक्यशङ्कम् ।**

'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಶ್ರುತ್ಯಂತರದಲ್ಲಿ ಹೇಳಲ್ಪಟ್ಟ ಮಧ್ಯಮತ್ವವನ್ನು ವಿಷ್ಣುವಿನಲ್ಲಿ ಶಂಕಿಸಬಾರದು.

**''अयं वाव शिशुर्योऽयं मध्यमः प्राणः तस्य प्राणः स्थूणा'' इत्युत्तरवाक्ये तस्य शिशुत्वब्रह्माश्रितत्वाद्युक्तेः ।**

ಏಕೆಂದರೆ 'ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ ತಸ್ಯ ಪ್ರಾಣಃ ಸ್ಥೂಣಾ' ಎಂಬ ಮುಂದಿನ ವಾಕ್ಯದಲ್ಲಿ ಅದೇ ಮಧ್ಯಮನಿಗೆ ಶಿಶುತ್ವವನ್ನು ಹಾಗೂ ಬ್ರಹ್ಮಾಶ್ರಿತತ್ವವನ್ನು ಹೇಳಲಾಗಿದೆ. ಹುಟ್ಟಿದ ಮಗುವನ್ನಷ್ಟೇ ಶಿಶುವೆನ್ನಲು ಸಾಧ್ಯ. ಈ ಶಿಶುತ್ವವು ಮುಖ್ಯಪ್ರಾಣದೇವರಲ್ಲಿ

ಬರುತ್ತದೆ ಹೊರತು, ವಿಷ್ಣುವಿನಲ್ಲಿ ಬರುವುದಿಲ್ಲ. ಬ್ರಹ್ಮಾಶ್ರಿತತ್ವವೂ ಕೂಡ ಮುಖ್ಯಪ್ರಾಣದೇವರಲ್ಲೇ ಬರುತ್ತದೆ. ಆದ್ದರಿಂದ 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಮಧ್ಯಮತ್ವವು ಮುಖ್ಯಪ್ರಾಣದೇವರ ಧರ್ಮವಾಗಿದೆ.

**अवान्तरेश्वरत्वेन तस्येश्वरवचो भवेत् ।**
**अतो मध्यमतामाहुः तस्य वेदेषु वेदिनः ।। इति स्मृतेश्च ।**

ಅವಾಂತರೇಶ್ವರತ್ವೇನ ತಸ್ಯೇಶ್ವರವಚೋ ಭವೇತ್ ।
ಅತೋ ಮಧ್ಯಮತಾಮಾಹುಃ ತಸ್ಯ ವೇದೇಷು ವೇದಿನಃ ।।

ಮುಖ್ಯಪ್ರಾಣದೇವರು ಅವಾಂತರ ನಿಯಾಮಕರಾದ್ದರಿಂದ ಈಶ್ವರ ವಾಚಕಪದಗಳಿಂದ ಪ್ರತಿಪಾದ್ಯರಾಗಿದ್ದಾರೆ. ಆದ್ದರಿಂದಲೇ ಇವರನ್ನು ಮಧ್ಯಮರೆಂದು ವೇದವಾಕ್ಯಗಳಿಂದ ಜ್ಞಾನಿಗಳು ಕರೆಯುತ್ತಾರೆ. ಈ ಸ್ಮೃತಿವಾಕ್ಯವೂ ಕೂಡ ಮುಖ್ಯಪ್ರಾಣದೇವರೇ ಮಧ್ಯಮರಾಗಿದ್ದಾರೆನ್ನಲು ಆಧಾರವಾಗಿದೆ.

**तत्समाख्यानादिहापि "मध्ये वामनमासीनम्" इति सर्वोत्तमत्वरूपकाष्ठात्व-विरोधिमध्यस्थत्वमेवोच्यते ।**

ಬೃಹದಾರಣ್ಯಕೋಪನಿಷತ್ತಿನ ಸಮಾಖ್ಯಾನದಿಂದ ಪ್ರಕೃತ ಕಾಠಕೋಪನಿಷತ್ತಿನಲ್ಲಿರುವ 'ಮಧ್ಯೇ ವಾಮನಮಾಸೀನಮ್' ಎಂಬ ವಾಕ್ಯವೂ ಕೂಡ ಅವಾಂತರ ನಿಯಾಮಕರಾದ ಮುಖ್ಯಪ್ರಾಣದೇವರನ್ನೇ ಮಧ್ಯಮರೆಂದು ಕರೆಯುತ್ತಿವೆ. ಸರ್ವೋತ್ತಮತ್ವವೆಂಬ ಕಾಷ್ಠಾತ್ವಕ್ಕೆ ವಿರೋಧಿಯಾದ ಮಧ್ಯಸ್ಥತ್ವವು ಮುಖ್ಯಪ್ರಾಣದೇವರಲ್ಲೇ ಇದೆಯೆಂದು 'ಮಧ್ಯೇ ವಾಮನಮಾಸೀನಮ್' ಎಂಬ ಶ್ರುತಿಯು ಹೇಳುತ್ತಿದೆ.

**"तदन्तरेण सर्वा अन्या देवताः" इतिवत् । नतु मध्यदेशस्थत्वम् ।**

'ತದಂತರೇಣ ಸರ್ವಾ ಅನ್ಯಾ ದೇವತಾಃ' ಎಂಬಲ್ಲಿ ವಿಷ್ಣು ಸರ್ವೋತ್ತಮನು, ಅಗ್ನಿಯು ಅಧಮದೇವತೆಯು. ಉಳಿದೆಲ್ಲ ದೇವತೆಗಳು ಮಧ್ಯಮ ದೇವತೆಗಳು ಎಂದು ಹೇಳುವಂತೆ ಇಲ್ಲಿಯೂ ಕೂಡ ಮುಖ್ಯಪ್ರಾಣದೇವರನ್ನು ತಾರತಮ್ಯವಿಚಾರದಲ್ಲಿ ಮಧ್ಯಮರೆಂದು ಕರೆಯಲಾಗಿದೆ. ಆದ್ದರಿಂದ ಹೃದಯಮಧ್ಯದಲ್ಲಿರುವ ಕಾರಣ, ಮುಖ್ಯಪ್ರಾಣದೇವರು ಮಧ್ಯಮರೆನಿಸಿದ್ದಾರೆಂದು ಮಧ್ಯಮಶಬ್ದಕ್ಕೆ ಅರ್ಥೈಸಬಾರದು. ಇಲ್ಲಿ ಮಧ್ಯದೇಶಸ್ಥತ್ವವನ್ನು ಹೇಳದೇ ತಾರತಮ್ಯದಲ್ಲಿ ಅವಾಂತರ-ನಿಯಾಮಕರಾದ್ದರಿಂದ ಮಧ್ಯಮರೆನಿಸಿದ್ದಾರೆಂದು ಮಧ್ಯಸ್ಥತ್ವವನ್ನೇ ಹೇಳಬೇಕು.

ವಾಮನಾಧಿಕರಣ (೧-೩-೭)

**यद्यपि विष्णोरपि ''अन्तर्यामि'' इत्यत्र सर्वनियामकता ''दहरः'' इत्यत्र सर्वजिज्ञास्यत्वरूपसर्वोपास्यता चोक्ता । नच तत्रोक्तजिज्ञास्यत्वमिह पूर्वपक्ष आक्षिप्यत इति शङ्क्यम् । उपास्यत्वस्य वाय्वेकनिष्ठत्वस्याद्याप्यसिद्ध्याऽन्योन्याश्रयात् ।**

ಪ್ರಶ್ನೆ - 'ಅಂತರ್ಯಾಮಿ' ಇತ್ಯಾದಿ ಸೂತ್ರದಲ್ಲಿ ವಿಷ್ಣುವಿಗೆ ಸರ್ವನಿಯಾಮಕತ್ವವನ್ನು ಹೇಳಲಾಗಿದೆ. 'ದಹರ ಉತ್ತರೇಭ್ಯಃ' ಎಂಬ ಸೂತ್ರದಲ್ಲಿ ಸಕಲರಿಂದಲೂ ಜಿಜ್ಞಾಸ್ಯನೆಂದು ಹೇಳಿದೆ. ಸರ್ವನಿಯಾಮಕತ್ವವನ್ನು ಹೇಳಿದೆ. ಆದ್ದರಿಂದ, ಭೂತಭವ್ಯದೇವತೆಗಳ ನಿಯಾಮಕತ್ವವನ್ನು ಹೇಳಿದಂತಾಗುತ್ತದೆ. ಸಕಲ ದೇವತೆಗಳಿಂದ ಜಿಜ್ಞಾಸ್ಯನೆಂದು ಹೇಳಿದ್ದರಿಂದ ಸರ್ವದೇವೋಪಾಸ್ಯತ್ವವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಸಕಲದೇವತಾನಿಯಾಮಕತ್ವವಾಗಲೀ, ಸರ್ವದೇವೋಪಾಸ್ಯತ್ವವಾಗಲೀ ಮುಖ್ಯಪ್ರಾಣದೇವರ ಅಸಾಧಾರಣಧರ್ಮವೆಂದು ಹೇಗೆ ಹೇಳುತ್ತೀರಿ?

ದಹರಾಧಿಕರಣದಲ್ಲಿ ಹೇಳಲ್ಪಟ್ಟ ಜಿಜ್ಞಾಸ್ಯತ್ವವನ್ನೇ ಈ ಅಧಿಕರಣದ ಪೂರ್ವಪಕ್ಷದಲ್ಲಿ ಆಕ್ಷೇಪಿಸುತ್ತಿದ್ದೇವೆಂದು ಹೇಳಬಾರದು. ಉಪಾಸ್ಯತ್ವವು ಕೇವಲ ಮುಖ್ಯಪ್ರಾಣದೇವರಲ್ಲೇ ಇದೆಯೆಂದು ಇಲ್ಲಿಯ ತನಕ ಸಿದ್ಧವಾಗಿಲ್ಲ. ಒಂದು ವೇಳೆ ಮುಖ್ಯಪ್ರಾಣದೇವರಲ್ಲಿ ಮಾತ್ರ ಉಪಾಸ್ಯತ್ವ ಇದೆಯೆಂದು ಸಿದ್ಧವಾದಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಸರ್ವಜಿಜ್ಞಾಸ್ಯತ್ವವನ್ನು ಆಕ್ಷೇಪ ಮಾಡಬಹುದು. ಆದರೆ ಹಿಂದಿನ ಅಧಿಕರಣದಲ್ಲಿ ಹೇಳಿದ ಸರ್ವಜಿಜ್ಞಾಸ್ಯತ್ವವು ವಿಷ್ಣುವಿನಲ್ಲಿದೆ ಎಂಬುದನ್ನು ಇಲ್ಲಿ ಆಕ್ಷೇಪ ಮಾಡುತ್ತಿದ್ದಾರೆಂದು ಸಿದ್ಧವಾದರೆ ಮಾತ್ರ, ಉಪಾಸ್ಯತ್ವವು ಮುಖ್ಯಪ್ರಾಣದೇವರಲ್ಲಿ ಮಾತ್ರ ಇರುತ್ತದೆಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುವುದರಿಂದ ಹಿಂದಿನ ಅಧಿಕರಣದ ಸಕಲ ಜಿಜ್ಞಾಸ್ಯತ್ವವನ್ನು ವಿಷ್ಣುವಿನಲ್ಲಿ ಆಕ್ಷೇಪ ಮಾಡಲಾಗುತ್ತಿದೆಯೆಂದು ಉತ್ತರಿಸಲಾಗದು. ಹಾಗಾಗಿ ಸರ್ವನಿಯಾಮಕತ್ವ ಮತ್ತು ಸರ್ವಜಿಜ್ಞಾಸ್ಯತ್ವವು ವಿಷ್ಣುವಿನಲ್ಲಿಯೂ ಕೂಡ ಬರುತ್ತದಲ್ಲವೇ?

**तथापि वायोर्यत् श्रुत्यन्तरसिद्धं प्राणनियामकत्वं देवोपास्यत्वं च तदेवेह भाति । नतु ब्रह्मधर्मभूतं सर्वनियामकत्वं सर्वोपास्यत्वं च ।**

ಉತ್ತರ - ಶ್ರುತ್ಯಂತರದಲ್ಲಿ ಪ್ರಾಣನಿಯಾಮಕತ್ವವಾಗಲಿ, ದೇವೋಪಾಸ್ಯತ್ವವಾಗಲೀ ವಾಯುದೇವರಲ್ಲಿಯೇ ತಿಳಿಯುತ್ತದೆ. ಅಂದರೆ ವಾಯುದೇವರ ಧರ್ಮಗಳನ್ನೇ ಶ್ರುತ್ಯಂತರದಲ್ಲಿ ಹೇಳಲಾಗಿದೆ ಹೊರತು, ಬ್ರಹ್ಮನಧರ್ಮವೆನಿಸಿದ ಸರ್ವನಿಯಾಮಕತ್ವವಾಗಲೀ, ಸರ್ವೋಪಾಸ್ಯತ್ವ-ವಾಗಲೀ, ಈ ಶ್ರುತ್ಯಂತರಗಳಲ್ಲಿ ತಿಳಿಯುತ್ತಿಲ್ಲ.

**नहि ''आग्नेयं चतुर्धा करोति'' इत्यादावाग्नेयादिशब्दैरैन्द्राग्नादिधीः ।**

'ಆಗ್ನೇಯಂ ಚತುರ್ಧಾಕರೋತಿ' ಎಂಬಲ್ಲಿ ಅಗ್ನಿದೇವತಾಕ ದ್ರವ್ಯವನ್ನು ನಾಲ್ಕು ಭಾಗ ಮಾಡುತ್ತಾನೆ ಎಂದು ಹೇಳಲಾಗುತ್ತದೆ. ಇಲ್ಲಿರುವ ಆಗ್ನೇಯ ಶಬ್ದದಿಂದ ಕೇವಲ ಅಗ್ನಿದೇವತಾಕತ್ವದ (ಏಕದೇವತಾಕ) ಪ್ರತೀತಿ ಬರುತ್ತದೆಯೋ ಹೊರತು ಐಂದ್ರಾಗ್ನದೇವತಾಕವಾದ ಎಂದರೆ ದ್ವಿರ್ದೇವ ತಾಕವಾದ ಪ್ರತೀತಿ ಬರುವುದಿಲ್ಲ. ಆದ್ದರಿಂದ ಕೇವಲ ಪ್ರಾಣನೇ ಇಲ್ಲಿ ಪ್ರತೀತನು ಹೊರತು ಬ್ರಹ್ಮನಲ್ಲ.

**नच ब्रह्मणः सर्वोपास्यत्वाङ्गीकारे तदाक्षेपायोगः । मुमुक्षुभिर्ब्रह्मैव जिज्ञास्यमित्यवधारणस्यैवाक्षेपात् ।**

ಹಾಗಾದರೆ ಬ್ರಹ್ಮನಿಗೆಲ್ಲಿ ಸರ್ವೋಪಾಸ್ಯತ್ವವನ್ನು ಅಂಗೀಕರಿಸಿದ್ದಾರೆಂದು ಹೇಳಿದಂತಾಯಿತು. ಆವಾಗ ಅದನ್ನು ಆಕ್ಷೇಪ ಮಾಡಲು ಬರುವುದೇ ಇಲ್ಲವಲ್ಲ? ಹೀಗೆ ಪ್ರಶ್ನಿಸಬಾರದು. ಮುಮುಕ್ಷುಗಳಿಂದ ಬ್ರಹ್ಮನೊಬ್ಬನೇ ಜಿಜ್ಞಾಸ್ಯನಾಗಿದ್ದಾನೆ ಎಂಬ ಅವಧಾರಣವನ್ನಷ್ಟೇ ಈ ಅಧಿಕರಣದಲ್ಲಿ ಆಕ್ಷೇಪ ಮಾಡಲಾಗಿದೆ ಹೊರತು, ಬ್ರಹ್ಮನು ಜಿಜ್ಞಾಸ್ಯನಲ್ಲವೆಂದು ಆಕ್ಷೇಪ ಮಾಡುತ್ತಿಲ್ಲ.

**अत एव टीकायां ''किं विष्णुजिज्ञासानियमेन'' इत्युक्तम् । तदेतदभिप्रेत्योक्तं न्यायविवरणे ''ऊर्ध्वं प्राणमुन्नयतीत्यादिलिङ्गानां प्राणादन्यत्रावकाशराहित्यम्'' इति ।**

ಆದ್ದರಿಂದಲೇ ಟೀಕೆಯಲ್ಲಿ 'ಕಿಂ ವಿಷ್ಣುಜಿಜ್ಞಾಸಾನಿಯಮೇನ' ಎಂಬುದಾಗಿ 'ನಿಯಮ' ಶಬ್ದದಿಂದ ಅವಧಾರಣದ ಆಕ್ಷೇಪವನ್ನು ಸೂಚನೆ ಮಾಡಿದ್ದಾರೆ. ಇದೇ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ ''ಊರ್ಧ್ವಂ ಪ್ರಾಣಮುನ್ನಯತಿ ಇತ್ಯಾದಿ ಲಿಂಗಾನಾಂ ಪ್ರಾಣಾದನ್ಯತ್ರ ಅವಕಾಶರಾಹಿತ್ಯಮ್' ಎಂದರೆ 'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ಲಿಂಗಗಳಿಗೆ ಮುಖ್ಯಪ್ರಾಣದೇವರನ್ನು ಬಿಟ್ಟು ಬೇರೆಕಡೆ ಅವಕಾಶವಿಲ್ಲವೆಂದು ನಿರವಕಾಶತ್ವವನ್ನು ಹೇಳಿದ್ದಾರೆ.

**वामनशब्दस्तु वायावेव युक्तः । नतु ब्रह्मणि । तत्राल्पमात्रपरिमाणत्वादिरूप वामनत्वायोगात् ।**

'ವಾಮನ' ಶಬ್ದವು ಮುಖ್ಯಪ್ರಾಣದೇವರಲ್ಲೇ ಯುಕ್ತವಾಗುತ್ತದೆ. ಹೊರತು, ಬ್ರಹ್ಮನಲ್ಲಲ್ಲ. ಏಕೆಂದರೆ ಬ್ರಹ್ಮನಲ್ಲಿ 'ವಾಮನ' ಶಬ್ದ ಹೇಳುವ ಅಲ್ಪಪರಿಮಾಣವು ಬರುವುದಿಲ್ಲ. ಆದ್ದರಿಂದ ಅಲ್ಪಪರಿಮಾಣತ್ವವೆಂಬ ಪ್ರವೃತ್ತಿನಿಮಿತ್ತವಿಲ್ಲದ ಕಾರಣ 'ವಾಮನ' ಶಬ್ದ ಪ್ರಯೋಗವನ್ನು ಬ್ರಹ್ಮನಲ್ಲಿ ಮಾಡಲಾಗದು.

**"अन्यभावव्यावृत्तेश्च"** इत्यादौ सर्वगतस्यापि ब्रह्मणोऽणुत्वाद्युक्तावपि **"अङ्गुष्ठमात्रः"** इतीशाने श्रुतस्य मात्रशब्दार्थस्याधिकपरिमाणराहित्यस्यायोगाच्चेति ।

ವಾಸ್ತವಿಕವಾಗಿ 'ಅನ್ಯಭಾವವ್ಯಾವೃತ್ತೇಶ್ಚ' ಇತ್ಯಾದಿ ಸೂತ್ರದಲ್ಲಿ ಸರ್ವಗತನಾದರೂ ಕೂಡ ಬ್ರಹ್ಮನಲ್ಲಿ ಅಣುತ್ವಧರ್ಮವನ್ನು ಹೇಳಿರಬಹುದು. ಆದರೆ 'ಅಂಗುಷ್ಠಮಾತ್ರಃ' ಎಂಬ ಶ್ರುತಿಯಲ್ಲಿ ಮಾತ್ರಶಬ್ದದಿಂದ ಅಧಿಕಪರಿಮಾಣರಾಹಿತ್ಯವನ್ನು ಹೇಳುವ ಮೂಲಕ, ಅಂಗುಷ್ಠಪರಿಮಾಣವನ್ನಷ್ಟೇ ಹೇಳಲಾಗಿದೆ. ಇದು ವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ. ಆದ್ದರಿಂದ 'ವಾಮನ' ಶಬ್ದದಿಂದಲೂ ಮುಖ್ಯಪ್ರಾಣದೇವರೇ ಪ್ರತಿಪಾದ್ಯರಾಗುತ್ತಾರೆ.

**प्रकाशः –**

एतेनेत्युक्तं विशदयति – **गुणेति** ।। गणपरत्वं नेत्यत्र युक्त्यन्तरमाह – **भूतेति** ।।

ವಿವರಣೆ - 'ಏತೇನ' ಎಂಬ ಪದದ ಅರ್ಥವನ್ನೇ 'ಗುಣಾತಿಶಯ' ಎಂಬುದರಿಂದ ವಿವರಿಸಿದ್ದಾರೆ. 'ವಿಶ್ವೇದೇವಾಃ' ಎಂಬ ಪದದಿಂದ ವಿಶ್ವದೇವ ಗಣವನ್ನು ವಿವಕ್ಷಿಸಬಾರದೆನ್ನಲು ಮತ್ತೊಂದು ಯುಕ್ತಿಯನ್ನು 'ಭೂತಭವ್ಯ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – क्रममुल्लङ्घ्य प्रसङ्गादागतमृचो वायुपरत्वं लिङ्गैक्यं च समर्थ्य "योऽयं मध्यमः प्राणः" इत्येतदपि वायुपरमिति साधयति – **योयमिति** ।।

ಹಿಂದೆ ಗ್ರಂಥಕಾರರು ಪ್ರಾಣವ್ಯವಸ್ಥಾಪಕತ್ವಲಿಂಗವನ್ನು ಮೊದಲು ಹೇಳಿ, ಅನಂತರ ಮಧ್ಯಮತ್ವಲಿಂಗವನ್ನು ಕೊನೆಯಲ್ಲಿ ಸರ್ವದೇವೋಪಾಸ್ಯತ್ವಲಿಂಗವನ್ನು ಉದ್ದೇಶ ಮಾಡಿ ಹೇಳಿದರು. ಆದರೆ ಅದೇ ಲಿಂಗಗಳಿಗೆ, ನಿರವಕಾಶತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಸಮಾಖ್ಯಾಶ್ರುತಿಗಳೆಲ್ಲವೂ ವಾಯುಪರವೇ ಆಗಿವೆ ಎಂದು ಸಮರ್ಥಿಸುವಾಗ, ಪ್ರಾಣವ್ಯವಸ್ಥಾಪಕತ್ವವನ್ನು ಮೊದಲು ಸಮರ್ಥಿಸಿ, ಅನಂತರ ಸರ್ವದೇವೋಪಾಸ್ಯತ್ವವನ್ನು ಸಮರ್ಥಿಸಿ, ಕೊನೆಯಲ್ಲಿ ಮಧ್ಯಮತ್ವವನ್ನು ಸಮರ್ಥಿಸಿದ್ದಾರೆ. ಹೀಗೆ ಕ್ರಮವನ್ನು ಉಲ್ಲಂಘನೆ ಮಾಡಿದ್ದಾರೆ. ಮತ್ತು 'ಕುವಿದಂಗ' ಎಂಬ ಋಕ್ ಮಂತ್ರದಲ್ಲಿ ವಿಷ್ಣುಲಿಂಗಗಳಿಲ್ಲದ ಕಾರಣ, ಈ ಮಂತ್ರವು ವಾಯುಪರವೇ ಆಗಿದೆಯೆಂದು ಸಮರ್ಥಿಸಿದರು. ಮತ್ತು ಈ ಶ್ರುತಿಯಲ್ಲಿಯೂ ಕೂಡ ಸರ್ವದೇವೋಪಾಸ್ಯತ್ವವೇ ಪ್ರತಿಪಾದಿತವಾಗಿದೆ ಎಂದು ಲಿಂಗಗಳಿಗೆ ಐಕ್ಯವನ್ನೂ ಕೂಡ ಸಮರ್ಥಿಸಿದರು. ಈಗ 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ವಾಕ್ಯವೂ ಕೂಡ ವಾಯುಪರವೇ ಆಗಿದೆಯೆಂದು ಸಾಧನೆ ಮಾಡುತ್ತಿದ್ದಾರೆ 'ಯೋಽಯಮ್' ಇತ್ಯಾದಿ ವಾಕ್ಯದಿಂದ.

**प्रकाशः** – वाजसनेये तृतीयेऽध्याये ''अथातो व्रतमीमांसा'' इत्युपक्रम्याधीते पञ्चमे ब्राह्मणेऽभिहितस्यैव ''अथेममेव नाप्नोद्योऽयं मध्यमः प्राणः'' इत्यस्य चतुर्थाध्यायद्वितीयब्राह्मणे ''यो ह वै शिशुं साधानं सप्रत्याधानं सस्थूणं सदामं वेद सप्त ह द्विषतो भ्रातृव्यानवरुणद्धि । अयं वाव शिशुर्योऽयं मध्यमः प्राणस्तस्येदमेवाधानमिदं प्रत्याधानं प्राणः स्थूणाऽन्नं दामा'' इत्यत्र शिशुत्वप्राण-शब्दितविष्ण्वाश्रयत्वोक्तेरित्यर्थः

ಬೃಹದಾರಣ್ಯಕೋಪನಿಷತ್ತಿನ ಮೂರನೆಯ ಅಧ್ಯಾಯದಲ್ಲಿ 'ಅಥಾತೋ ವ್ರತಮೀಮಾಂಸಾ' ಎಂದು ಪ್ರಾರಂಭವಾಗಿ, ಪಂಚಮ ಬ್ರಾಹ್ಮಣದಲ್ಲಿ ಪ್ರತಿಪಾದ್ಯನಾದವನಿಗೇನೇ 'ಅಥೇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ' ಎಂಬಲ್ಲಿ ಹೇಳಲ್ಪಟ್ಟ ಮಧ್ಯಮ ಪ್ರಾಣನಿಗೆ, ನಾಲ್ಕನೆಯ ಅಧ್ಯಾಯದ ಎರಡನೆಯ ಬ್ರಾಹ್ಮಣದಲ್ಲಿ 'ಯೋ ಹ ವೈ ಶಿಶುಂ ಸಾಧಾನಂ ಸಪ್ರತ್ಯಾಧಾನಂ ಸಸ್ಥೂಣಂ ಸದಾಮಂ ವೇದ ಸಪ್ತ ಹ ದ್ವಿಷತೋ ಭ್ರಾತೃವ್ಯಾನವರುಣದ್ಧಿ । ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಸ್ತಸ್ಯೇದಮೇವಾಧಾನಮಿದಂ ಪ್ರತ್ಯಧಾನಂ ಪ್ರಾಣಃ ಸ್ಥೂಣಾಽನ್ನಂ ದಾಮಾ' ಎಂಬುದಾಗಿ ಶಿಶುತ್ವ ಮತ್ತು ಪ್ರಾಣಶಬ್ದಿತ ವಿಷ್ಣ್ವಾಶ್ರಯತ್ವಗಳನ್ನು ಹೇಳಲಾಗಿದೆ.

**प्रकाशः – स्मृतेश्चेति** ।। ''चक्षुरादिवत्तु तत्सहशिष्ट्यादिभ्यः'' इत्यत्र भाष्योक्तस्मृतेरित्यर्थः ।।

'ಅವಾಂತರೇಶ್ವರತ್ವೇನ' ಎಂದು ಎರಡನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿರುವ 'ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ' ಎಂಬ ಸೂತ್ರಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಿಂದ ಎಂದು 'ಸ್ಮೃತೇಃ' ಎಂಬುದರ ಅರ್ಥ.

**प्रकाशः – तदन्तरेणेति** ।। बह्वृचब्राह्मणे ''अग्निर्वै देवानामवमो विष्णुः परमस्तदन्तरेण सर्वा अन्या देवताः'' इत्यत्र यथाऽन्यदेवतानामग्नाविष्णुमध्यत्वं तथेहापीत्यर्थः ।

ಬಹ್ವೃಚಬ್ರಾಹ್ಮಣದಲ್ಲಿ 'ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಸ್ತದಂತರೇಣ ಸರ್ವಾ ಅನ್ಯಾ ದೇವತಾಃ' ಎಂಬಲ್ಲಿ ಉಳಿದ ದೇವತೆಗಳು ಅಗ್ನಿ ಹಾಗೂ ವಿಷ್ಣು ಇಬ್ಬರ ಮಧ್ಯದಲ್ಲಿದ್ದಾರೆಂದು ಹೇಗೆ ಹೇಳಲಾಗಿದೆಯೋ, ಅದರಂತೆ ಇಲ್ಲಿಯೂ ಸಹ ತಾರತಮ್ಯದ ಪ್ರಕಾರ ಮುಖ್ಯಪ್ರಾಣದೇವರು ಮಧ್ಯದಲ್ಲಿದ್ದಾರೆಂದು 'ಮಧ್ಯಮ' ಶಬ್ದವು ಹೇಳುತ್ತಿದೆ.

**प्रकाशः** – ननु नैतानि निरवकाशानि । विष्णावपि सम्भवादित्याक्षिप्य समाधत्ते – **यद्यपीति** ।। **अन्योन्येति** ।। वाय्वेकनिष्ठत्वे सिद्धे प्राक्तनमपि तस्यैवेति

सिध्यति । प्रागुक्तं न विष्णोः किन्तु वायोरेवेति सिद्धौ तस्य वाय्वेकनिष्ठत्व-सिद्धिरित्यर्थः। तदेवेहेति ।। विश्वशब्दस्य श्रुत्यन्तरानुरोधेन योग्यसर्वपरत्वादिति भावः ।

ಇವೆಲ್ಲ ಲಿಂಗಗಳು ನಿರವಕಾಶವಾಗಿಲ್ಲ. ಏಕೆಂದರೆ ವಿಷ್ಣುವಿನಲ್ಲಿಯೂ ಸಾವಕಾಶವಾಗಿವೆಯಲ್ಲವೇ? ಎಂದು ಆಕ್ಷೇಪಿಸಿ, ಸಮಾಧಾನ ನೀಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ.

ಅನ್ಯೋನ್ಯಾಶ್ರಯವನ್ನು ಹೀಗೆ ತಿಳಿಯಬೇಕು. ಸರ್ವದೇವೋಪಾಸ್ಯತ್ವವು ಕೇವಲ ವಾಯುದೇವರಲ್ಲಿ ಮಾತ್ರ ಇದೆಯೆಂದು ಸಿದ್ಧವಾದರೆ, ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ವಿಷ್ಣುವಿನ ಜಿಜ್ಞಾಸ್ಯತ್ವವನ್ನು ಆಕ್ಷೇಪ ಮಾಡಬಹುದು. ಹಿಂದಿನ ಅಧಿಕರಣದಲ್ಲಿ ಹೇಳಿದ, ವಿಷ್ಣುವಿನ ಜಿಜ್ಞಾಸ್ಯತ್ವವನ್ನು ಆಕ್ಷೇಪ ಮಾಡಿದರೆ ಮಾತ್ರ ವಾಯ್ವೇಕನಿಷ್ಠತ್ವವನ್ನು ಇಲ್ಲಿ ಸಮರ್ಥಿಸಲು ಸಾಧ್ಯ. ಹೀಗೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ.

'ವಿಶ್ವದೇವಾಃ' ಎಂಬಲ್ಲಿರುವ 'ವಿಶ್ವ' ಶಬ್ದವು ಶ್ರುತ್ಯಂತರಕ್ಕೆ ಅನುಸಾರಿಯಾಗಿ ಯೋಗ್ಯರಾದ ಸಕಲರು ಎಂಬರ್ಥದಲ್ಲಿದೆ. ಅಂದರೆ ಯೋಗ್ಯರಾದ ಸಕಲ ದೇವತೆಗಳು ಎಂದಭಿಪ್ರಾಯ. ಆದ್ದರಿಂದ ದೇವೋಪಾಸ್ಯತ್ವವಷ್ಟೇ ಮುಖ್ಯಪ್ರಾಣದೇವರಲ್ಲಿ ತಿಳಿಯುತ್ತದೆ. ಸಕಲ ದೇವೋಪಾಸ್ಯತ್ವವೆಂಬ ವಿಷ್ಣುಧರ್ಮವು ಮುಖ್ಯಪ್ರಾಣದೇವರಲ್ಲಿ ತಿಳಿಯುವುದಿಲ್ಲ.

**प्रकाशः** – प्राणादिनियामकत्वादिधीरित्येतद्दृष्टान्तेनोपपादयति – नह्याग्नेयमिति।।

ಪ್ರಾಣಶ್ರುತಿಗಳಲ್ಲಿ ದೇವೋಪಾಸ್ಯತ್ವವಷ್ಟೇ ತಿಳಿಯುತ್ತದೆ. ಮತ್ತು ಪ್ರಾಣಾದಿನಿಯಾಮಕತ್ವವಷ್ಟೇ ತಿಳಿಯುತ್ತದೆ. ಸಕಲ ಉಪಾಸ್ಯತ್ವವಾಗಲೀ, ಸಕಲ ನಿಯಾಮಕತ್ವವಾಗಲೀ ತಿಳಿಯುವುದಿಲ್ಲವೆಂದು ಹೇಳಿದರು. ಇದನ್ನೇ ದೃಷ್ಟಾಂತದಿಂದ ಉಪಪಾದನೆ ಮಾಡುತ್ತಿದ್ದಾರೆ 'ನಹ್ಯಾಗ್ನೇಯಮ್' ಇತ್ಯಾದಿ ವಾಕ್ಯದಿಂದ.

**प्रकाशः** – तृतीयस्याद्यपादे ''शेषस्तु गुणसंयुक्तस्साधारणः प्रतीयेतमिथस्तेषाम-सम्बन्धात्'' इत्यन्तिमाधिकरणे दार्शपौर्णमासिकेष्वाग्नेयाग्नीषोमीयैन्द्राग्नपुरोडाशेषु ''आग्नेयं चतुर्धा करोति'' इत्युदाहृत्य किमाग्नेयस्यैव चतुर्धाकरणमुत सर्वेषामिति विशये

'ಶೇಷಸ್ತು ಗುಣಸಂಯುಕ್ತಃ ಸಾಧಾರಣಃ ಪ್ರತೀಯೇತ ಮಿಥಸ್ತೇಷಾಮಸಂಬಂಧಾತ್'[1] (೩-೧-೨೬)

(१) भाट्टसङ्ग्रहः –

अथ पञ्चदशं चतुर्धाकरणादीनामाग्नेयमात्राङ्गताधिकरणम् (सूत्रे २६-२७)

शेषस्तु गुणसंयुक्तः साधारणः प्रतीयेत मिथस्तेषामसम्बन्धात् ॥ २६ ॥

(व्यवस्था वाऽर्थसंयोगाल्लिङ्गस्यार्थेन सम्बन्धाल्लक्षणार्था गुणश्रुतिः ॥२७॥)

अत्रापि पूर्वन्यायेन शङ्कनात् सङ्गतिः । दर्शपूर्णमासयोराग्नेयाग्नीषोमीयैन्द्राग्नपुरोडाशाः

ದರ್ಶಪೂರ್ಣಮಾಸಯಾಗಕ್ಕೆ ಸಂಬಂಧಪಟ್ಟಂತೆ 'ಆಗ್ನೇಯ ಪುರೋಡಾಶ' 'ಅಗ್ನಿಷೋಮೀಯ ಪುರೋಡಾಶ', 'ಐಂದ್ರಾಗ್ನ ಪುರೋಡಾಶ' ಇವುಗಳನ್ನು ವಿಧಿಸುವಾಗ 'ಆಗ್ನೇಯಂ ಚತುರ್ಧಾ ಕರೋತಿ' ಎಂಬ ವಾಕ್ಯವು ಪ್ರಸಕ್ತವಾಗಿದೆ. ಇದನ್ನು ನೋಡಿದಾಗ, ಆಗ್ನೇಯ ಪುರೋಡಾಶವನ್ನಷ್ಟೇ ನಾಲ್ಕು ಭಾಗಮಾಡಬೇಕೆಂದು ತಿಳಿಯಬೇಕೋ, ಅಥವಾ ಆಗ್ನೇಯ ಅಗ್ನಿಷೋಮೀಯ, ಮತ್ತು ಇಂದ್ರಾಗ್ನ ಈ ಮೂರೂ ಪುರೋಡಾಶಗಳನ್ನು ನಾಲ್ಕು ಭಾಗಮಾಡಬೇಕೆಂದು ತಿಳಿಯಬೇಕೋ? ಎಂದು ಸಂಶಯ.

**प्रकाशः** – अग्नेश्चतुर्धाकरणविषयद्रव्योपलक्षणमात्रत्वेन स्वयं कार्ययोगित्वाभावात् सम्बन्धमात्रेणोपलक्षणत्वसम्भवे देवतात्वाकारानपेक्षणात् सर्वत्र ''अग्निकलिभ्यां ढग्वक्तव्यः'' इति स्मरणादग्नेरिदमिति सम्बन्धमात्रेप्याग्नेयशब्दनिष्पत्तेः अग्निसम्बन्धस्य चाविशिष्टत्वात्सर्वत्र चतुर्धाकरणमिति प्राप्ते

ಪೂರ್ವಪಕ್ಷ- 'ಆಗ್ನೇಯಂ ಚತುರ್ಧಾಕರೋತಿ' ಎಂಬಲ್ಲಿ ಚತುರ್ಧಾಕರಣ ಎಂಬುದು ಕ್ರಿಯೆಯಾಗಿದೆ. ಈ ಕ್ರಿಯೆಗೆ ಪುರೋಡಾಶ ದ್ರವ್ಯವು ವಿಷಯವಾಗಿದೆ. ಚತುರ್ಧಾಕರಣವಿಷಯವಾದ ಈ ಪುರೋಡಾಶ ದ್ರವ್ಯಕ್ಕೆ ಅಗ್ನಿಯು ಕೇವಲ ಉಪಲಕ್ಷಣ. ಆದ್ದರಿಂದ ಅಗ್ನಿದೇವತಾಕವಾದ ಪುರೋಡಾಶವೆಂದು ಇಲ್ಲಿ ಹೇಳಿಲ್ಲ. ಆದ್ದರಿಂದ ಸ್ವತಃ ಕ್ರಿಯೆಯಲ್ಲಿ ಅಗ್ನಿಗೆ ಸಂಬಂಧವಿಲ್ಲ. ಹೀಗೆ ಅಗ್ನಿಯು ಸಂಬಂಧ ಮಾತ್ರದಿಂದಲೇ ಉಪಲಕ್ಷಣವಾಗುವಾಗ ದೇವತಾತ್ವಾಕಾರದ ಅಪೇಕ್ಷೆಯು ಇರುವುದಿಲ್ಲ. ಆದ್ದರಿಂದ ಅಗ್ನಿದೇವತಾಕವಾದ ಪುರೋಡಾಶ ಎಂಬರ್ಥವು ತಿಳಿಯದೇ ಅಗ್ನಿಸಂಬಂಧಿಯಾದ ಪುರೋಡಾಶ ಎಂಬರ್ಥವೇ ತಿಳಿಯುತ್ತದೆ. 'ಆಗ್ನೇಯ' ಎಂಬ ಶಬ್ದಕ್ಕೆ ಅಗ್ನಿಸಂಬಂಧಿಯಾದ ಎಂದಷ್ಟೇ ಅರ್ಥ. ಏಕೆಂದರೆ 'ಅಗ್ನಿಕಲಿಭ್ಯಾಂ ಢಗ್ವಕ್ತವ್ಯಃ' ಎಂಬ ಸೂತ್ರದಂತೆ ಅಗ್ನಿಶಬ್ದದ ಮೇಲೆ 'ಢಕ್' ಪ್ರತ್ಯಯ ಬಂದು ಆಗ್ನೇಯ ಎಂಬ ರೂಪವು ನಿಷ್ಪನ್ನವಾಗಿದೆ. ಸಂಬಂಧಾರ್ಥದಲ್ಲಿ 'ಢಕ್' ಪ್ರತ್ಯಯವು ಬಂದಿರುವುದರಿಂದ ಆಗ್ನೇಯ ಶಬ್ದಕ್ಕೆ ಅಗ್ನಿಸಂಬಂಧಿಯಾದದ್ದು ಎಂಬರ್ಥವಷ್ಟೇ ತಿಳಿಯುತ್ತದೆ. ಆದ್ದರಿಂದ ಅಗ್ನಿಸಂಬಂಧಿಯಾದ ಪುರೋಡಾಶವೆಂದರೆ - 'ಆಗ್ನೇಯ ಪುರೋಡಾಶ', 'ಅಗ್ನಿಷೋಮೀಯ ಪುರೋಡಾಶ,' 'ಐಂದ್ರಾಗ್ನ ಪುರೋಡಾಶ' ಎಲ್ಲವನ್ನೂ ಕೂಡ

श्रुताः । तत्र 'आग्नेयं चतुर्धा करोति' इति श्रुतं चतुर्धाकरणं किं पुरोडाशस्यापि, उत आग्नेयस्यैवेति **सन्देहः** । यथा हि पूर्वत्र हस्तावनेजनादेरसङ्कोचेन सर्वकर्माङ्गता तथेहापि आग्नेयवदग्निसम्बन्धस्य अग्नीषोमीयैन्द्राग्नयोरपि पुरोडाशयोः सत्त्वात्तयोरपि चतुर्धा करणम् । सङ्कोचे हेत्वभावात् इति **प्राप्तम्** । **सूत्रं चैवम्, गुणसंयुक्तः** अग्न्याद्युपलक्षणयुक्तः चतुर्धाकरणादिः शेषोऽग्नीषोमीयादिसा**धारण एव प्रतीयेत** । कुतः? **तेषां** गुणानां **शेषाणाञ्च मिथः** सम्बन्धविशेषाभावादिति । **सिद्धान्तस्तु** 'अग्नेर्ढक्' इति देवतार्थे विहिततद्धितान्तोऽयमाग्नेयशब्दो नाग्निसम्बन्धमात्रार्थः । अग्निश्च केवलो द्विदैवत्ययोः पुरोडाशयोर्न देवतेति देवतात्वेनाग्निसम्बन्धस्य द्विदैवत्यपुरोडाशयोर्न मुख्यत्वमिति मुख्याग्नेयस्यैव चतुर्धाकरणमिति । **फलन्तु, पूर्वपक्षे** त्रयाणां चतुर्धाकरणम् । **सिद्धान्ते** त्वेकस्यैवेति व्यक्तम् ।।

**इति पञ्चदशं चतुर्धाकरणादीनामाग्नेयमात्राङ्गताधिकरणम् (सूत्रे २६-२७)**

ವಾಮನಾಧಿಕರಣ (೧-೩-೭)

ವಿವಕ್ಷಿಸಬಹುದು. ಇವೆಲ್ಲವನ್ನು ನಾಲ್ಕು ಭಾಗವನ್ನಾಗಿ ಮಾಡಬೇಕೆಂದೇ 'ಆಗ್ನೇಯಂ ಚತುರ್ಧಾ ಕರೋತಿ' ಎಂಬ ವಾಕ್ಯವು ಪ್ರತಿಪಾದನೆ ಮಾಡುತ್ತಿದೆ.

**प्रकाशः** – देवताभूतस्तावदिहाग्निशब्दस्तद्धितेनोपलक्षणमुपादीयते । सम्भवति तु तस्य यथाश्रुत्यैवोपलक्षणत्वं केवलाग्नेयस्यापि सत्त्वात् । अतो न शब्दानवगतेन सम्बन्धमात्रेणोपलक्षणत्वं युक्तम् । विनाकारणेन श्रुतबाधप्रसङ्गात् । अग्नीषोमीयादौ च समासादुत्पन्नस्तद्धितो द्वयोः सापेक्षयोर्देवतात्वमाह । तेन तत्रान्यसापेक्षस्याग्नेर्देवतात्वम् । नच सापेक्षितस्य तद्धितेन सामर्थ्यमस्ति । तेनाग्नेयशब्दो न शक्नोत्यग्नीषोमीयादिकमभिवदितुम् ।

ಸಿದ್ಧಾಂತ - ದೇವತಾ ಸ್ವರೂಪವೇ ಆಗಿರುವ 'ಅಗ್ನಿ' ಶಬ್ದವು 'ತದ್ಧಿತ' ಪ್ರತ್ಯಯದಿಂದ ಉಪಲಕ್ಷಣವಾಗಿವೆಯೆಂದೇ ತಿಳಿಯುತ್ತದೆ. ಹೀಗೆ 'ಆಗ್ನೇಯ' ಶಬ್ದದಿಂದಲೇ ಯಥಾಶ್ರುತವಾಗಿ ಉಪಲಕ್ಷಣವೆಂದು ತಿಳಿಯುವಾಗ, ಸಂಬಂಧ ಮಾತ್ರದಿಂದ ಉಪಲಕ್ಷಣವೆಂದು ಹೇಳುವುದು ತಪ್ಪು. ಏಕೆಂದರೆ, ಉಳಿದ ದೇವತೆಗಳ ಅಪೇಕ್ಷೆಯಿಲ್ಲದ 'ಆಗ್ನೇಯ' ಶಬ್ದವೇ ಇಲ್ಲಿ ಇರುವುದರಿಂದ ಅಗ್ನಿದೇವತೆಯನ್ನೇ ಉಪಲಕ್ಷಣವೆಂದು ತಿಳಿಯುವಾಗ ಶಬ್ದದಿಂದ ತಿಳಿಯದಿರುವ ಸಂಬಂಧ ಮಾತ್ರದಿಂದ ಉಪಲಕ್ಷಣವೆಂದು ತಿಳಿಯುವುದು ತಪ್ಪಾಗುತ್ತದೆ. ಕಾರಣವಿಲ್ಲದೇ ಶ್ರುತವಾದದ್ದನ್ನು ಬಾಧಿಸಿದಂತಾಗುತ್ತದೆ. ಅಗ್ನಿಷೋಮೀಯಾದಿಗಳಲ್ಲಿ ಸಮಾಸದ ಮೇಲೆ ಬಂದಿರುವಂತಹ ತದ್ಧಿತ ಪ್ರತ್ಯಯವು ಸಾಪೇಕ್ಷಿತವಾದ ಇಬ್ಬರಿಗೆ ದೇವತಾತ್ವವನ್ನು ಹೇಳುತ್ತಿದೆ. ಆದ್ದರಿಂದ ಅಗ್ನಿಷೋಮಿಯಾದಿಗಳಲ್ಲಿ ಅನ್ಯಸಾಪೇಕ್ಷಿತವಾದ ಅಗ್ನಿಗಷ್ಟೇ ದೇವತಾತ್ವವು ಬರುತ್ತದೆ ಹೊರತು, ಅನ್ಯಸಾಪೇಕ್ಷಿತವಲ್ಲದ ಅಗ್ನಿಗೆ ದೇವತಾತ್ವವು ಬರುವುದಿಲ್ಲ. ಆದರೆ ಪ್ರಕೃತ ಆಗ್ನೇಯ ಶಬ್ದದಲ್ಲಿ ಅನ್ಯಸಾಪೇಕ್ಷಿತತ್ವವು ಇರುವುದಿಲ್ಲ. ಆದ್ದರಿಂದ ಆಗ್ನೇಯ ಶಬ್ದವು ಅಗ್ನಿಷೋಮಿಯಾದಿ ಪುರೋಡಾಶಗಳನ್ನು ಹೇಳಲು ಸಮರ್ಥವಾಗುವುದಿಲ್ಲ.

**प्रकाशः** – यद्यपि सम्बन्धमात्रेऽप्यविरुद्धस्तद्धितः । तथापीह देवतार्थतैव । उपलक्षणार्थत्वात् । प्रसिद्धसम्बन्धं हि लक्षणं भवति । प्रसिद्धश्च देवतासम्बन्ध एव न सम्बन्धमात्रम् । अतो देवतात्वमेवोपलक्षणम् । तच्चाग्नीषोमीयादौ नास्तीत्याग्नेयस्यैव चतुर्धाकरणमिति सिद्धान्तितम् ।

ವಾಸ್ತವಿಕವಾಗಿ 'ಆಗ್ನೇಯ' ಎಂಬಲ್ಲಿರುವ 'ತದ್ಧಿತ' ಪ್ರತ್ಯಯವು ಸಂಬಂಧ ಮಾತ್ರದಲ್ಲಿಯೂ ಹೇಳಬಹುದು. 'ಅಗ್ನಿಕಲಿಭ್ಯಾಂ ಢಗ್ವಕ್ತವ್ಯಃ' ಎಂಬ ಸೂತ್ರವು ಇದನ್ನು ವಿಧಿಸುತ್ತದೆ. ಈ ಪಕ್ಷದಲ್ಲಿ ಅಗ್ನಿಷೋಮಿಯಾದಿಗಳನ್ನೂ ಕೂಡ ವಿವಕ್ಷಿಸಲು ಬರುತ್ತದೆ. ಆದರೆ ಪ್ರಕೃತ 'ತದ್ಧಿತ' ಪ್ರತ್ಯಯಕ್ಕೆ 'ದೇವತಾ' ಎಂಬರ್ಥವನ್ನೇ ವಿವಕ್ಷಿಸಬೇಕು. ಏಕೆಂದರೆ ಅಗ್ನಿದೇವತೆಯನ್ನು ಇಲ್ಲಿ ಉಪಲಕ್ಷಣವನ್ನಾಗಿ ಸ್ವೀಕಾರ ಮಾಡುತ್ತಿದ್ದೇವೆ. ಉಪಲಕ್ಷಣವಾಗಲೀ, ಲಕ್ಷಣವಾಗಲೀ, ಲಕ್ಷ್ಯದ ಸಂಬಂಧವನ್ನು ಹೊಂದಿರಬೇಕು.

ಯಾವುದಕ್ಕೆ ಯಾವುದರ ಸಂಬಂಧ ಪ್ರಸಿದ್ಧವಾಗಿದೆಯೋ ಅದು ಅದರ ಲಕ್ಷಣವಾಗುತ್ತದೆ. ಪುರೋಡಾಶಕ್ಕೆ ಅಗ್ನಿಯ ಸಂಬಂಧವೆಂದರೆ, ದೇವತಾ ಸಂಬಂಧವೆಂದೇ ಹೊರತು, ಕೇವಲ ಸಂಬಂಧ ಮಾತ್ರವಲ್ಲ. ಆದ್ದರಿಂದ ಪ್ರಕೃತ 'ತದ್ಧಿತ' ಪ್ರತ್ಯಯದಿಂದ ಕೇವಲ ಸಂಬಂಧವನ್ನಷ್ಟೇ ಸ್ವೀಕರಿಸಬಾರದು. ದೇವತಾತ್ವ ರೂಪವಾದ ಉಪಲಕ್ಷಣವನ್ನೇ ತೆಗೆದುಕೊಳ್ಳಬೇಕು. ಆದ್ದರಿಂದ 'ಅಗ್ನಿಃ ಅಸ್ಯ ದೇವತಾ ಇತಿ ಆಗ್ನೇಯಃ' ಎಂದೇ ಹೇಳಬೇಕು. ನಿರಪೇಕ್ಷಿತವಾದ ದೇವತಾತ್ವವು ಅಗ್ನಿಷೋಮೀಯಾದಿಗಳಲ್ಲಿ ಬರುವುದಿಲ್ಲ. ಆದ್ದರಿಂದ ಆಗ್ನೇಯ ಪುರೋಡಾಶವನ್ನೇ ನಾಲ್ಕು ವಿಭಾಗಮಾಡಬೇಕೆಂದು ಶ್ರುತಿಯ ಅಭಿಪ್ರಾಯ.

**प्रकाशः** – तत्र यथाग्नेयशब्देनैन्द्राग्नादिर्धीर्न भवति तथेत्यर्थः ।

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ 'ಆಗ್ನೇಯ' ಶಬ್ದದಿಂದ ಐಂದ್ರಾಗ್ನ್ಯಾದಿಗಳನ್ನು ತೆಗೆದುಕೊಳ್ಳಬಾರದೆಂದು ಹೇಗೆ ಸಮರ್ಥಿಸಿದ್ದಾರೋ ಅದರಂತೆ ಪ್ರಕೃತ ಪ್ರಾಣವ್ಯವಸ್ಥಾಪಕತ್ವವೆಂಬ ಲಿಂಗದಿಂದ ವಿಷ್ಣುವಿನ ಸರ್ವನಿಯಾಮಕತ್ವವನ್ನು ತೆಗೆದುಕೊಳ್ಳಬಾರದು. ಆದ್ದರಿಂದ ಶ್ರುತ್ಯಂತರದಲ್ಲಿ ಮುಖ್ಯಪ್ರಾಣದೇವರಲ್ಲಿ ಯಾವ ಪ್ರಾಣವ್ಯವಸ್ಥಾಪಕತ್ವವು ಶ್ರುತವಾಗಿದೆಯೋ, ಅದನ್ನೇ ಇಲ್ಲಿ ಇಟ್ಟುಕೊಳ್ಳಬೇಕು ಹೊರತು, ವಿಷ್ಣುವಿನ ಸರ್ವನಿಯಾಮಕತ್ವವನ್ನು ಇಟ್ಟುಕೊಳ್ಳಬಾರದು. ಮತ್ತು 'ವಿಶ್ವೇದೇವಾ ಉಪಾಸತೇ' ಎಂಬ ವಾಕ್ಯದಿಂದಲೂ ದೇವೋಪಾಸ್ಯತ್ವವೆಂಬ ಮುಖ್ಯಪ್ರಾಣದೇವರ ಧರ್ಮವನ್ನಷ್ಟೇ ತಿಳಿಯುತ್ತದೆ ಹೊರತು, ವಿಷ್ಣುವಿನ ಸರ್ವದೇವೋಪಾಸ್ಯತ್ವವು ತಿಳಿಯುವುದಿಲ್ಲ.

**प्रकाशः** – नन्वेवं भाष्योक्तजिज्ञासासूत्राक्षेपो न युक्तस्स्यादित्याशङ्क्य तदाक्षेपप्रकारमाह – **नचेति** ।।

ಹಾಗಾದರೆ ಭಾಷ್ಯದಲ್ಲಿ ಜಿಜ್ಞಾಸಾಸೂತ್ರದಿಂದ ಆಕ್ಷೇಪವನ್ನು ತೋರಿಸಿದ್ದಾರೆ. ಅದು ಅಯುಕ್ತ-ವಾಗುತ್ತದಲ್ಲವೇ? ಎಂಬ ಆಕ್ಷೇಪಕ್ಕೆ, ಜಿಜ್ಞಾಸಾಸೂತ್ರದಿಂದ ಹೇಗೆ ಆಕ್ಷೇಪ ಮಾಡಬಹುದೆಂಬುದನ್ನು 'ನಚ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

**प्रकाशः** – लिङ्गानामनवकाशत्वमुक्त्वा श्रुतिविरोधं निराह – **वामनेति** ।। द्वितीयसूत्रव्यावर्त्यहेतुमाह – **अन्यभावेति** ।। आदिपदेन 'अल्पश्रुतेः' 'अर्भकौकस्त्वात्' इत्येतद्गृह्यते ।

ಹೀಗೆ ಮಧ್ಯಮತ್ವಲಿಂಗವು ವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ. ಪ್ರಾಣವ್ಯವಸ್ಥಾಪಕತ್ವವನ್ನು 'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಶ್ರುತಿ, ಹಾಗೂ 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯು ದೇವೋಪಾಸ್ಯತ್ವ ಲಿಂಗವನ್ನು ಹೇಳುತ್ತಿದೆ. ಈ ಶ್ರುತಿಗಳಿಂದ ಮುಖ್ಯಪ್ರಾಣದೇವರ ಧರ್ಮಗಳನ್ನೇ ವಿವಕ್ಷಿಸಬೇಕು ಹೊರತು, ವಿಷ್ಣುವಿನ ಸರ್ವನಿಯಾಮಕತ್ವವನ್ನಾಗಲೀ, ಸರ್ವದೇವೋಪಾಸ್ಯತ್ವವನ್ನಾಗಲೀ ವಿವಕ್ಷಿಸಬಾರದು. ಆದ್ದರಿಂದ ಮೂರೂ ವಿಧವಾದ ಮುಖ್ಯಪ್ರಾಣದೇವರ ಲಿಂಗಗಳು ನಿರವಕಾಶ-ವಾಗಿವೆಯೆಂದು ಇಲ್ಲಿಯವರೆಗೆ ಸಮರ್ಥಿಸಿದರು. ಪ್ರಕೃತ ಶ್ರುತಿವಿರೋಧವನ್ನು ಪರಿಹರಿಸುತ್ತಿದ್ದಾರೆ 'ವಾಮನ'

ಇತ್ಯಾದಿ ಗ್ರಂಥದಿಂದ. ದ್ವಿತೀಯಸೂತ್ರದಿಂದ ವ್ಯಾವರ್ತ್ಯವಾದ ಹೇತುವನ್ನು 'ಅನ್ಯಭಾವ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಆದಿಪದದಿಂದ 'ಅಲ್ಪಶ್ರುತೇಃ' ಎಂಬ ಸೂತ್ರವನ್ನು, ಹಾಗೂ 'ಅರ್ಭಕೌಕಸ್ತ್ವಾತ್' ಎಂಬ ಸೂತ್ರವನ್ನು ಸ್ವೀಕರಿಸಬೇಕು.

**प्रकाशः – मात्र इतीति ।।** एतेन वायोरपि ''अणुश्च'' इत्यणुत्वस्य वक्ष्यमाणत्वादतिसूक्ष्मे तस्मिन्नङ्गुष्ठमितत्वमयुक्तमिति निरस्तम् । अधिकपरिमाण-राहित्यपरत्वेन तत्परिमाणविधावतात्पर्यादिति । पञ्चम्यन्तहेतूनामीशानो वायुरेवेति साध्येनान्वयः ।

'ಮಾತ್ರ ಇತಿ' ಎಂದು ಗ್ರಂಥದಲ್ಲಿ ಹೇಳಿದ್ದರಿಂದ ಒಂದು ಆಕ್ಷೇಪವನ್ನು ಪರಿಹರಿಸಿದಂತಾಯಿತು. ಆಕ್ಷೇಪ ಹೀಗಿದೆ - ಯಾವರೀತಿಯಾಗಿ ಸರ್ವತ್ರವ್ಯಾಪ್ತನಾದ ವಿಷ್ಣುವಿನಲ್ಲಿ ಅಂಗುಷ್ಠಮಾತ್ರ ಪರಿಮಾಣವು ಬರುವುದಿಲ್ಲವೋ, ಅದರಂತೆ 'ಅಣುಶ್ಚ' ಎಂಬ ಸೂತ್ರದಲ್ಲಿ ಹೇಳಿದಂತೆ ಮುಖ್ಯಪ್ರಾಣದೇವರು ಅಣುಪರಿಮಾಣರಾಗಿರುವುದರಿಂದ ಅಂಗುಷ್ಠಪರಿಮಾಣವು ಇವರಲ್ಲಿಯೂ ಬರುವುದಿಲ್ಲವಲ್ಲವೇ? ಎಂಬ ಶಂಕೆಗೆ ಅವಕಾಶವಿಲ್ಲ. 'ಮಾತ್ರ' ಶಬ್ದವು ಅಧಿಕಪರಿಮಾಣವಿಲ್ಲವೆಂದಷ್ಟೇ ಹೇಳುತ್ತಿದೆ ಹೊರತು, ಅಂಗುಷ್ಠಪರಿಮಾಣವನ್ನು ವಿಧಿಸುವುದರಲ್ಲಿ ತಾತ್ಪರ್ಯವನ್ನು ಹೊಂದಿಲ್ಲ. ಗ್ರಂಥದಲ್ಲಿರುವ ಪಂಚಮ್ಯಂತಹೇತುಗಳಿಗೆಲ್ಲಾ 'ವಾಯುರೇವ' ಎಂಬ ಸಾಧ್ಯದ ಜೊತೆಗೆ ಅನ್ವಯವನ್ನು ತಿಳಿದುಕೊಳ್ಳಬೇಕು.

**गुरुराजीयम् –** मध्यमत्वस्येशानस्य वायुत्वसाधकत्वं टीकायामुक्तम् ।। मध्यमदेशस्थत्वरूपस्य मध्यमत्वस्य सर्वगते विष्णावपि सम्भवादयुक्तम् । **अतस्तदुपपादयति ।। योऽयं मध्यमः प्राण इति ।। अन्योन्याश्रयादिति ।।** उपास्यत्वस्य वाय्वेकनिष्ठत्वे सिद्धे जिज्ञास्यत्वादेराक्षेपसिद्धिः तदाक्षेपसिद्धौ चोपास्यत्वस्य वाय्वेकनिष्ठत्वसिद्धिरित्यन्योन्याश्रयादित्यर्थः । ननु देवोपास्यत्वाभावे सर्वदेवोपास्यत्वमपि भासत एवेत्यत आह – **नहीति ।। अत एवेति ।।** मुमुक्षुभिर्ब्रह्मैव जिज्ञास्यमित्यवधारणाक्षेपस्य टीकाभिप्रेतत्वादेवेत्यर्थः । सिद्धान्तसाधकवामनश्रुतेः सावकाशत्वमाह – **वामनशब्दस्त्विति ।**




'ಪ್ರಾಣಾದಿ ನಿಯಾಮಕತ್ವ', 'ಮಧ್ಯಮತ್ವ', 'ಸರ್ವದೇವೋಪಾಸ್ಯತ್ವ' ಈ ಮೂರು ಲಿಂಗಗಳು ಮುಖ್ಯಪ್ರಾಣದೇವರೇ ಈಶಾನರಾಗಿದ್ದಾರೆನ್ನಲು ಹೇತುಗಳಾಗಿವೆ. ಈ ಮೂರೂ ವಿಧವಾದ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆಯೆಂದು ಶಂಕಿಸಬಾರದು. ಏಕೆಂದರೆ 'ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಶ್ರುತಿಯು ಶಿಶುವೆನಿಸಿದ ಮುಖ್ಯಪ್ರಾಣದೇವರನ್ನೇ 'ಮಧ್ಯಮ' ಎಂದು ಕರೆಯುತ್ತಿದೆ. ಈ ಶ್ರುತಿಯ ಸಮಾಖ್ಯಾನದಿಂದ

'ಮಧ್ಯೇ ವಾಮನಮಾಸೀನಂ' ಎಂಬಲ್ಲಿಯೂ ಕೂಡ ಮುಖ್ಯಪ್ರಾಣದೇವರೇ ಪ್ರತಿಪಾದ್ಯರಾಗಿದ್ದಾರೆ. ಈ ಮಧ್ಯಮ ಶಬ್ದವು ತಾರತಮ್ಯ ಕಕ್ಷೆಯಲ್ಲಿ ಮುಖ್ಯಪ್ರಾಣದೇವರು ಅವಾಂತರನಿಯಾಮಕರಾಗಿದ್ದಾರೆಂದೇ ಹೇಳುತ್ತಿದೆ. ಹೊರತು, ಹೃದಯಮಧ್ಯದಲ್ಲಿರುತ್ತಾರೆ ಎಂಬರ್ಥವನ್ನು ಹೇಳುತ್ತಿಲ್ಲ. ಆದ್ದರಿಂದ ಈ ಮಧ್ಯಮತ್ವವು ಮುಖ್ಯಪ್ರಾಣದೇವರನ್ನು ಬಿಟ್ಟು ವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ.

ಇನ್ನು ಸರ್ವನಿಯಾಮಕತ್ವವಾಗಲೀ, 'ಊರ್ಧ್ವಂ ಪ್ರಾಣಮಮುನ್ನಯತಿ' ಎಂಬ ಶ್ರುತಿಯು ಪ್ರಾಣವ್ಯವಸ್ಥಾಪಕತ್ವ ಲಿಂಗವನ್ನು ಹೇಳುತ್ತಿದೆ. 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯು ದೇವೋಪಾಸ್ಯತ್ವವನ್ನು ಹೇಳುತ್ತಿದೆ. ಈ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಏಕೆಂದರೆ, ಸರ್ವನಿಯಾಮಕನಾದ್ದರಿಂದ ಸರ್ವದೇವೋಪಾಸ್ಯನಾದ್ದರಿಂದ, ಮಹಾವಿಷ್ಣುವು ಪ್ರಾಣಾದಿ ವ್ಯವಸ್ಥಾಪಕನು ಮತ್ತು ದೇವೋಪಾಸ್ಯನು ಆಗುತ್ತಾನಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಯಲ್ಲಿ ಸ್ಪಷ್ಟವಾಗಿ ಪ್ರಾಣನಿಯಾಮಕತ್ವ, ದೇವೋಪಾಸ್ಯತ್ವಗಳನ್ನು ಹೇಳಿರುವಾಗ, ಸಕಲ ನಿಯಾಮಕತ್ವವನ್ನಾಗಲೀ, ಸಕಲ ದೇವೋಪಾಸ್ಯತ್ವವನ್ನಾಗಲೀ ಇಟ್ಟುಕೊಳ್ಳುವುದು ತಪ್ಪಾಗುತ್ತದೆ. ಪೂರ್ವಮೀಮಾಂಸೆಯ 'ಶೇಷಸ್ತು ಗುಣಸಂಯುಕ್ತಃ' ಎಂಬ ಅಧಿಕರಣದಲ್ಲಿ ಆಗ್ನೇಯ ಶಬ್ದದಿಂದ ಆಗ್ನೇಯಪುರೋಡಾಶವನ್ನಷ್ಟೇ ವಿವಕ್ಷಿಸಬೇಕು ಹೊರತು, ಐಂದ್ರಾಗ್ನ್ಯಾದಿ ಪುರೋಡಾಶಗಳನ್ನು ವಿವಕ್ಷಿಸಬಾರದೆಂದು ನಿರ್ಣಯಿಸಿದ್ದಾರೆ. ಅದರಂತೆ ಇಲ್ಲಿಯೂ ಕೂಡ ಶ್ರುತ್ಯಂತರದಲ್ಲಿ ಕೇವಲ ಪ್ರಾಣನಿಯಾಮಕತ್ವ, ದೇವೋಪಾಸ್ಯತ್ವಗಳಷ್ಟೇ ಕೇಳಿಸುತ್ತಿರುವಾಗ ಇದರಿಂದ ವಿಷ್ಣುವಿನಲ್ಲಿರುವ ಸಕಲ ನಿಯಾಮಕತ್ವವನ್ನಾಗಲೀ, ಸಕಲ ದೇವೋಪಾಸ್ಯತ್ವವನ್ನಾಗಲೀ ವಿವಕ್ಷಿಸುವುದು ತಪ್ಪಾಗುತ್ತದೆ. ಆದ್ದರಿಂದ ಮೂರೂ ವಿಧವಾದ ಲಿಂಗಗಳು ನಿರವಕಾಶಗಳಾಗಿದೆ ಎಂದು ತಿಳಿಯಬೇಕು.

• • • • •

## ಸಿದ್ಧಾಂತ -
## 'ಈಶಾನ' ಶಬ್ದವಾಚ್ಯನಾದವನು ಮಹಾವಿಷ್ಣುವೇ

### तात्पर्यचन्द्रिका

सिद्धान्तस्तु ॥

**सहस्रादपि लिङ्गानां श्रुतिर्बलवती स्वतः ।**
**अवकाशोज्झिता सावकाशात्तु किमु लिङ्गतः ॥ १ ॥**

ಅನುವಾದ - ಸಿದ್ಧಾಂತ ಹೀಗಿದೆ -

ಸಹಸ್ರಾದಪಿ ಲಿಂಗಾನಾಂ ಶ್ರುತಿರ್ಬಲವತೀ ಸ್ವತಃ ।
ಅವಕಾಶೋಜ್ಝಿತಾ ಸಾವಕಾಶಾತ್ತು ಕಿಮು ಲಿಂಗತಃ ॥೧॥
ವಾಮನಾಧಿಕರಣ (೧-೩-೭)

ಶ್ರುತಿಯು ಸಾವಿರ ಲಿಂಗಗಳಿಗಿಂತಲೂ ಸ್ವಾಭಾವಿಕವಾಗಿಯೇ ಬಲಿಷ್ಠವಾಗಿವೆ. ಹೀಗಿರುವಾಗ ಸಾವಕಾಶವಾದ ಲಿಂಗಗಳಿಗಿಂತಲೂ ಬಲಿಷ್ಠವಾಗಿದೆಯೆಂದು ಪ್ರತ್ಯೇಕವಾಗಿ ಹೇಳಬೇಕೇನು?

**वामनश्रुतिर्हि निरवकाशा । "एष उ एव वामनिः एष हि सर्वाणि वामानि नयति" इति श्रुत्यन्तरेऽवधारणात् ।**

ವಾಮನಶ್ರುತಿಯು ವಿಷ್ಣುವಿನಲ್ಲಿ ನಿರವಕಾಶವಾಗಿದೆ. ಏಕೆಂದರೆ 'ಏಷ ಉ ಏವ ವಾಮನಿಃ, ಏಷ ಹಿ ಸರ್ವಾಣಿ ವಾಮಾನಿ ನಯತಿ' ಇಂತಹ ಮಹಾವಿಷ್ಣುವೇ ವಾಮನಿಯೆನಿಸಿದ್ದಾನೆ. 'ಯಾವಾತನು ಸಕಲ ಸುಂದರ ವಸ್ತುಗಳನ್ನು ನೀಡುವ ಮೂಲಕ ಪ್ರೇರಣೆ ಮಾಡುತ್ತಾನೋ' ಎಂಬುದಾಗಿ ಬೇರೆ ಶ್ರುತಿಯಲ್ಲಿ ಅವಧಾರಣಪುರಸ್ಸರವಾಗಿ ವಿಷ್ಣುವನ್ನೇ 'ವಾಮನ' ಎಂದು ಕರೆಯಲಾಗಿದೆ.

**"उपेन्द्रो वामनः प्रांशुः" इति स्मृतेः । आर्यप्रसिद्धेश्च ।**

ವಿಷ್ಣುಸಹಸ್ರನಾಮದಲ್ಲಿ 'ಉಪೇಂದ್ರೋ ವಾಮನಃ ಪ್ರಾಂಶುಃ' ಎಂಬುದಾಗಿ ಮಹಾವಿಷ್ಣುವನ್ನೇ 'ವಾಮನ' ಎಂದು ಕರೆಯಲಾಗಿದೆ. ಇದೂ ಸಹ ಈ ವಿಷಯದಲ್ಲಿ ಆಧಾರವಾಗಿದೆ. ಮತ್ತು ಜ್ಞಾನಿಜನರೆಲ್ಲರೂ ಭಗವಂತನನ್ನೇ 'ವಾಮನ' ಎಂದು ಕರೆಯುತ್ತಾರೆ.

**वामनवामनिशब्दयोश्च लोकवेदाधिकरणन्यायेन वर्णविकारादिनैकदेशस्यान्यथात्वेऽपि देवासः देवाः इत्यादाविव लाघवेन प्रत्यभिज्ञयैकत्वे सम्भवति भेदकल्पनायोगात् ।**

'ಏಷ ಉ ಏವ ವಾಮನಿಃ' ಎಂಬ ಶ್ರುತಿಯು ವಿಷ್ಣುವನ್ನು 'ವಾಮನಿ' ಎಂದು ಕರೆಯುತ್ತಿದೆ. ಆದರೆ ನೀವು ವಾಮನನಾಗಿದ್ದಾನೆನ್ನಲು ಪ್ರಮಾಣವನ್ನಾಗಿ ಹೇಳುತ್ತಿದ್ದೀರಿ. 'ವಾಮನಿ' ಶಬ್ದವೇ ಬೇರೆ, ವಾಮನ ಶಬ್ದವೇ ಬೇರೆ? ಹೀಗಿರುವಾಗ ವಾಮನನು ವಿಷ್ಣುವಾಗಿದ್ದಾನೆನ್ನಲು ಇದು ಹೇಗೆ ಆಧಾರವಾಗುತ್ತದೆ?

ಹೀಗೆ ಪ್ರಶ್ನಿಸಬಾರದು. ಲೋಕವೇದಾಧಿಕರಣ ನ್ಯಾಯದಿಂದ ಶಬ್ದಗಳಲ್ಲಿ ಸ್ವಲ್ಪ ಆಧಿಕ್ಯವಿದ್ದ ಮಾತ್ರದಲ್ಲಿ ಅರ್ಥದಲ್ಲಿ ವ್ಯತ್ಯಾಸ ಬರುವುದಿಲ್ಲವೆಂದು ನಿರ್ಣಯಿಸಲಾಗಿದೆ. ಆದ್ದರಿಂದ 'ವಾಮನ' ಶಬ್ದದಿಂದಲೂ 'ವಾಮನಿ' ಎಂಬ ಶಬ್ದದಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದು. ಇಂತಹ ವರ್ಣವಿಕಾರದಿಂದ ಏಕದೇಶವು ಅನ್ಯಥಾಭೂತವಾದ ಮಾತ್ರಕ್ಕೆ 'ವಾಮನ' ಹಾಗೂ 'ವಾಮನಿ' ಎಂಬೆರಡೂ ಶಬ್ದಗಳ ಅರ್ಥದಲ್ಲಿ ವ್ಯತ್ಯಾಸ ಬರುವುದಿಲ್ಲ.

ಉದಾ: 'ದೇವಾಸಃ' 'ದೇವಾಃ' ಎಂಬೆರಡು ಶಬ್ದಗಳು ಒಂದೇ ಅರ್ಥದಲ್ಲಿ ಪ್ರಸಿದ್ಧವಾಗಿವೆ. ಈ ಎರಡು ವಿಧ ಶಬ್ದಗಳಲ್ಲಿ ಪ್ರತ್ಯಭಿಜ್ಞಾನದಿಂದ ಒಂದೇ ಅರ್ಥವನ್ನು ವಿವಕ್ಷಿಸಲು ಬರುವಾಗ, ಶಬ್ದಗಳು ಭಿನ್ನವಾದ ಮಾತ್ರದಿಂದ ಅರ್ಥವೂ ಕೂಡ ಭಿನ್ನವಾಗುತ್ತದೆಂದು ಕಲ್ಪಿಸುವುದು ಯುಕ್ತವಾಗುವುದಿಲ್ಲ.

**नहि "न किरिन्द्रः" इत्यादौ किरित्यस्य लोकप्रसिद्धात्क इत्यस्माद्भेदः ।**

ವೇದದಲ್ಲಿಯೂ ಕೂಡ 'ನ ಕಿರಿಂದ್ರಃ' ಎಂಬ ಪ್ರಯೋಗವಿದೆ. ಇಲ್ಲಿರುವ 'ಕಿಃ' ಎಂಬ ಪದವು 'ಕಃ' ಎಂಬ ಶಬ್ದದ ಅರ್ಥವನ್ನೇ ನೀಡುತ್ತಿದೆ. ಲೋಕದಲ್ಲಿ 'ಕಃ' ಎಂಬ ಯಾವ ಶಬ್ದವಿದೆಯೋ, ಅದಕ್ಕಿಂತಲೂ ವರ್ಣವಿಕಾರವು ಇಲ್ಲಿ ಕಾಣಿಸುತ್ತಿರುವುದರಿಂದ ಇದು ಬೇರೆಯೇ ಅರ್ಥವನ್ನು ನೀಡುತ್ತದೆಂದು ಹೇಳಬಾರದು. ಹೊರತಾಗಿ, ಸ್ವಲ್ಪ ವ್ಯತ್ಯಾಸವಿದ್ದರೂ ಲೋಕಪ್ರಸಿದ್ಧವಾಗಿರುವ 'ಕಃ' ಎಂಬ ಪದದ ಅರ್ಥವನ್ನೇ ಇದೂ ಸಹ ಹೇಳುತ್ತಿದೆಯೆಂದೇ ಒಪ್ಪಬೇಕು.

**तदुक्तं वार्तिके -**

**आकृतीनामभिव्यक्तिर्या कथञ्चिन्निरूपिता ।**
**नासाववयवाधिक्यविनाशेषु विनश्यति ।। इति ।**

ಇದನ್ನೇ ಪೂರ್ವಮೀಮಾಂಸೆಯ ತಂತ್ರವಾರ್ತಿಕದಲ್ಲಿ ಹೀಗೆ ಹೇಳಲಾಗಿದೆ -

ಆಕೃತೀನಾಮಭಿವ್ಯಕ್ತಿರ್ಯಾ ಕಥಂಚಿನ್ನಿರೂಪಿತಾ ।
ನಾಸಾವವಯವಾಧಿಕ್ಯವಿನಾಶೇಷು ವಿನಶ್ಯತಿ ॥

ದೇವತಾತ್ವ ಮೊದಲಾದ ಧರ್ಮಗಳಿಂದ ಉತ್ಪನ್ನವಾದ ಯಾವ ಅಯವವಾಧಿಕ್ಯವಿದೆಯೋ ಅದರ ವಿನಾಶಮಾತ್ರದಿಂದ ಶಬ್ದಗಳ ಅರ್ಥದಲ್ಲಿ ನಾಶವಾಗುವುದಿಲ್ಲ ಎಂದು.

**एवञ्च यथा "यद्योन्यां तदुत्तरयोर्गायति" इत्यत्रोत्तराशब्द उत्तराग्रन्थे सञ्ज्ञारूपो निरपेक्ष इति तत्पर एव ।**

ಆದ್ದರಿಂದ ಪೂರ್ವಮೀಮಾಂಸೆಯ 'ಯದ್ಯೋನ್ಯಾಂ ತದುತ್ತರಯೋರ್ಗಾಯತಿ' ಎಂಬ ಅಧಿಕರಣದಲ್ಲಿ 'ಉತ್ತರಾ' ಎಂಬ ಶಬ್ದವನ್ನು 'ಉತ್ತರಾ' ಎಂಬ ಗ್ರಂಥದಲ್ಲಿ ಸಂಜ್ಞಾರೂಪವಾಗಿ ಪ್ರಸಿದ್ಧವಾಗಿದೆ. ಈ 'ಉತ್ತರಾ' ಎಂಬ ಗ್ರಂಥವಿಶೇಷವನ್ನು 'ಉತ್ತರಾ' ಶಬ್ದದಿಂದ ವಿವಕ್ಷಿಸುವುದು ಅನ್ಯನಿರಪೇಕ್ಷಿತವಾದ್ದರಿಂದ ಸಾಧುವಾಗಿದೆ.

**नतु योनिऋग्रूपप्रतियोगसापेक्षोत्तरऋक्परः तथा वामनशब्दोऽपि रूढ्या विष्णुपरः । नतु दीर्घप्रतियोगिह्रस्वपरः ।**

ಹೊರತು, 'ಉತ್ತರಾ' ಎಂಬ 'ಋಜ್' ಮಂತ್ರವನ್ನು ವಿವಕ್ಷಿಸಿರುವುದಿಲ್ಲ. 'ಯೋನಿ' ಎಂಬ 'ಋಜ್' ಮಂತ್ರಕ್ಕಿಂತ ಮುಂದಿರುವುದನ್ನು 'ಉತ್ತರಾ' ಎಂಬ ಶಬ್ದದಿಂದ ಸ್ವೀಕರಿಸಿದರ

ಅನ್ಯಸಾಪೇಕ್ಷಿತವಾಗುವುದರಿಂದ ಸಾವಕಾಶವಾಗುತ್ತದೆ. ಸಾಪೇಕ್ಷಕ್ಕಿಂತಲೂ ನಿರಪೇಕ್ಷವೇ ಪ್ರಬಲವಾದ್ದರಿಂದ 'ಉತ್ತರಾ' ಎಂಬ ಗ್ರಂಥವಿಶೇಷವನ್ನೇ 'ಉತ್ತರಯೋರ್ಗಾಯತಿ' ಎಂಬಲ್ಲಿರುವ 'ಉತ್ತರಾ' ಎಂಬ ಶಬ್ದದಿಂದ ಸ್ವೀಕರಿಸಬೇಕೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಲಾಗಿದೆ.

ಅದರಂತೆ ಪ್ರಕೃತ 'ವಾಮನ' ಶಬ್ದವೂ ಪ್ರತಿಯೋಗಿನಿರಪೇಕ್ಷಿತವಾಗಿ ರೂಢಿಯಿಂದ ವಿಷ್ಣುಪರವಾಗಿದೆಯೆಂದೇ ಸ್ವೀಕರಿಸಬೇಕು. ಹೊರತಾಗಿ, ದೀರ್ಘಕ್ಕೆ ಪ್ರತಿಯೋಗಿಯಾದ ಹ್ರಸ್ವ ಎಂಬರ್ಥವನ್ನು ಸ್ವೀಕರಿಸಿ ಸಣ್ಣದಾದ ವಸ್ತು ಎಂಬರ್ಥವನ್ನು ಹೇಳಬಾರದು. ಆದ್ದರಿಂದ 'ವಾಮನ' ಶಬ್ದಕ್ಕೆ ಜ್ಞಾನಿಗಳ ಪ್ರಯೋಗವಿರುವಂತೆ ವಿಷ್ಣುವೆಂಬರ್ಥವನ್ನೇ ಸ್ವೀಕರಿಸುವುದು ನ್ಯಾಯಸಮ್ಮತವಾಗಿದೆ.

**तदेतदभिप्रेत्योक्तं न्यायविवरणे ''वामनश्रुतेरेवानवकाशः'' इति ।**

ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ 'ವಾಮನಶ್ರುತೇರೇವಾನವಕಾಶಃ' ವಿಷ್ಣುವಿಷಯಕವಾದ ವಾಮನಶ್ರುತಿಯು ನಿರವಕಾಶವಾಗಿದೆಯೆಂದು ಹೇಳಿರುತ್ತಾರೆ.

**प्रकाशः –**

**सौत्रैवकारप्रमितशब्दाभ्यां श्रुतेर्जात्याऽनवकाशत्वेन च प्राबल्यसूचनादेकयाऽपि श्रुत्याऽनेकेषां सावकाशलिङ्गानां बाधो युक्त एवेति भावेन ''विष्णुरेवेशानः'' इत्यादि टीकां विवृण्वन् सूत्राद्युक्तन्यायं सङ्गृह्णाह – सहस्रादिति ॥**

ವಿವರಣೆ - ಸೂತ್ರದಲ್ಲಿರುವ 'ಏವಕಾರ' ಮತ್ತು 'ಪ್ರಮಿತ' ಶಬ್ದಗಳಿಂದ ಶ್ರುತಿಯು ಸ್ವಾಭಾವಿಕವಾಗಿ ಮತ್ತು ನಿರವಕಾಶತ್ವ ಪ್ರಯುಕ್ತವಾಗಿ ಪ್ರಬಲವಾಗಿದೆಯೆಂದು ಸೂಚನೆ ಮಾಡಿದ್ದಾರೆ. ಆದ್ದರಿಂದ ಶ್ರುತಿ ಒಂದೇ ಆಗಿದ್ದರೂ ಸಾವಕಾಶವಾದ ಅನೇಕ ಲಿಂಗಗಳನ್ನು ಬಾಧಿಸಲು ಸಮರ್ಥವಾಗುತ್ತದೆ. ಈ ಅಭಿಪ್ರಾಯದಿಂದ 'ವಿಷ್ಣುರೇವ ಈಶಾನಃ' ಇತ್ಯಾದಿ ಟೀಕೆಯು ಹೊರಟಿರುತ್ತದೆ. ಅದನ್ನೇ ಪ್ರಕೃತ ಗ್ರಂಥಕಾರರು ವಿವರಿಸುವವರಾಗಿ ಸೂತ್ರಗಳಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ ಸಂಗ್ರಹಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸಹಸ್ರಾತ್' ಇತ್ಯಾದಿ ಗ್ರಂಥದಿಂದ.

**प्रकाशः – स्वतः अऽनवकाशत्वादिकमनपेक्ष्य । स्वभावप्राबल्यमग्रे प्रतिपिपादयिषुरादौ ''तस्याश्च विष्णौ महायोगरूढिसिद्धायाः तत्प्रमापकत्वात्'' इति टीकोक्तयोगरूढी विवृण्वन्नुत्तरार्धोक्तं निरवकाशत्वं तावद् व्यनक्ति – वामनेति ॥**

ಶ್ಲೋಕದಲ್ಲಿರುವ 'ಸ್ವತಃ' ಎಂಬ ಪದಕ್ಕೆ ನಿರಕಾಶತ್ವಾದಿಗಳನ್ನು ಅಪೇಕ್ಷಿಸದೇ ಎಂದರ್ಥ.

ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದೆಯೆಂಬ ವಿಚಾರವನ್ನು ಮುಂದೆ ಪ್ರತಿಪಾದನೆ ಮಾಡುತ್ತಾರೆ. ಈಗ

'ತಸ್ಯಾಶ್ಚ ವಿಷ್ಣೌ ಮಹಾಯೋಗರೂಢಿಸಿದ್ಧಾಯಾಃ ತತ್ಪ್ರಮಾಪಕತ್ವಾತ್' ಇತ್ಯಾದಿ ಟೀಕೆಯಲ್ಲಿ ಹೇಳಲ್ಪಟ್ಟ ಯೋಗರೂಢಿಗಳನ್ನು ವಿವರಿಸುವವರಾಗಿ, ಶ್ಲೋಕದ ಉತ್ತರಾರ್ಧದಲ್ಲಿ ಹೇಳಲ್ಪಟ್ಟ ನಿರವಕಾಶತ್ವವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ವಾಮನ' ಇತ್ಯಾದಿ ಗ್ರಂಥದಿಂದ.

**प्रकाशः** – अत्रैवं क्रमः । ईशानो विष्णुरेव । ''मध्ये वामनम्'' इति वामनश्रुतेः। ननु सावकाशा श्रुतिरित्युक्तमिति चेदत्रेदमुपतिष्ठते – **वामनश्रुतिर्हीति** ।

ತಿಳಿಯ ಬೇಕಾದ ವಿಚಾರದ ಕ್ರಮ ಹೀಗಿದೆ - 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. ಈ ವಿಷಯದಲ್ಲಿ 'ಮಧ್ಯೇ ವಾಮನಮ್' ಎಂಬ ವಾಮನಶ್ರುತಿಯೇ ಆಧಾರವಾಗಿದೆ. ಹಾಗಾದರೆ ಪೂರ್ವಪಕ್ಷದಲ್ಲಿ ಶ್ರುತಿಯನ್ನು ಸಾವಕಾಶವೆಂದು ಸಮರ್ಥಿಸಿದ್ದೇವಲ್ಲವೇ? ಎಂಬ ಪ್ರಶ್ನೆಗೆ ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದೆಯೆಂದು ಪ್ರಕೃತಗ್ರಂಥವು 'ವಾಮನಶ್ರುತಿರ್ಹಿ' ಇತ್ಯಾದಿಯಾಗಿ ಪ್ರಾರಂಭವಾಗುತ್ತಿದೆ. ಈ ಕ್ರಮದಲ್ಲಿ ಗ್ರಂಥವನ್ನು ಅರ್ಥೈಸಿಕೊಳ್ಳಬೇಕು.

**प्रकाशः** – योगमाह – **एष इति** ।। श्रुत्यन्तरे छान्दोग्ये । रूढिमाह – **उपेन्द्र इति** ।। ''उपेन्द्रो वामनः प्रांशुरमोघश्शुचिरूर्जितः'' इति सहस्रनामसु । **आर्येति** ।। वृद्धानां वामनशब्दस्य विष्णावेव प्रयोगादित्यर्थः ।

'ವಾಮನ' ಶಬ್ದವು ವಿಷ್ಣುವಿನಲ್ಲೇ ಯೋಗವೃತ್ತಿಯಿಂದ ಸಿದ್ಧವಾಗಿದೆಯೆಂದು 'ಏಷಃ' ಇತ್ಯಾದಿ ಗ್ರಂಥವು ಪ್ರತಿಪಾದನೆ ಮಾಡುತ್ತಿದೆ. 'ಶ್ರುತ್ಯಂತರೇ' ಎಂದರೆ ಛಾಂದೋಗ್ಯೋಪನಿಷತ್ತಿನಲ್ಲಿ ಎಂದರ್ಥ. ಅದೇ 'ವಾಮನ' ಶಬ್ದವು ಪರಮಾತ್ಮನಲ್ಲಿ ರೂಢವಾಗಿದೆಯೆಂದು 'ಉಪೇಂದ್ರ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. 'ಉಪೇಂದ್ರೋ ವಾಮನಃ ಪ್ರಾಂಶುರಮೋಘಃ ಶುಚಿರೂರ್ಜಿತಃ' ಎಂಬ ವಿಷ್ಣುಸಹಸ್ರನಾಮದಲ್ಲಿ 'ವಾಮನ' ಶಬ್ದವನ್ನು ಪರಮಾತ್ಮನಲ್ಲಿ ಪ್ರಯೋಗಿಸಲಾಗಿದೆ. 'ಆರ್ಯ' ಪ್ರಯೋಗ ಎಂದರೆ ವೃದ್ಧರೆಲ್ಲರೂ 'ವಾಮನ' ಶಬ್ದವನ್ನು ಮಹಾವಿಷ್ಣುವಿನಲ್ಲೇ ಪ್ರಯೋಗಿಸುತ್ತಾರೆಂದರ್ಥ.

**प्रकाशः** – ननु वामनिशब्दनिर्वचनेऽपि वामनशब्दस्य किमायातमित्यत आह – **वामनेति** ।।

ವಾಮನಿಶಬ್ದವನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡಿರಬಹುದು. ಆದರೆ ಇದರಿಂದ 'ವಾಮನ' ಶಬ್ದವನ್ನು ವಿಷ್ಣುಪರವೆಂದು ಹೇಗೆ ಸಮರ್ಥಿಸಿದಂತಾಗುತ್ತದೆ ? ಎಂಬ ಪ್ರಶ್ನೆಗೆ 'ವಾಮನ' ಇತ್ಯಾದಿ ಗ್ರಂಥದಿಂದ ಪೂರ್ವಮೀಮಾಂಸಾ ದೃಷ್ಟಾಂತವನ್ನು ಹೇಳಿ ಉತ್ತರಿಸುತ್ತಿದ್ದಾರೆ.

**प्रकाशः** – आद्यस्याध्यायस्य तृतीयपादे ''प्रयोगचोदनाभावादर्थैकत्वमविभागात्'' इत्यन्तिाधिकरणे प्रथमवर्णके लोकवेदयोः पदपदार्थानामन्यत्वमुतानन्यत्वमिति संशये

ಅನ್ಯಸಾಪೇಕ್ಷಿತವಾಗುವುದರಿಂದ ಸಾವಕಾಶವಾಗುತ್ತದೆ. ಸಾಪೇಕ್ಷಕ್ಕಿಂತಲೂ ನಿರಪೇಕ್ಷವೇ ಪ್ರಬಲವಾದ್ದರಿಂದ 'ಉತ್ತರಾ' ಎಂಬ ಗ್ರಂಥವಿಶೇಷವನ್ನೇ 'ಉತ್ತರಯೋರ್ಗಾಯತಿ' ಎಂಬಲ್ಲಿರುವ 'ಉತ್ತರಾ' ಎಂಬ ಶಬ್ದದಿಂದ ಸ್ವೀಕರಿಸಬೇಕೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಲಾಗಿದೆ.

ಅದರಂತೆ ಪ್ರಕೃತ 'ವಾಮನ' ಶಬ್ದವೂ ಪ್ರತಿಯೋಗಿನಿರಪೇಕ್ಷಿತವಾಗಿ ರೂಢಿಯಿಂದ ವಿಷ್ಣುಪರವಾಗಿದೆಯೆಂದೇ ಸ್ವೀಕರಿಸಬೇಕು. ಹೊರತಾಗಿ, ದೀರ್ಘಕ್ಕೆ ಪ್ರತಿಯೋಗಿಯಾದ ಹ್ರಸ್ವ ಎಂಬರ್ಥವನ್ನು ಸ್ವೀಕರಿಸಿ ಸಣ್ಣದಾದ ವಸ್ತು ಎಂಬರ್ಥವನ್ನು ಹೇಳಬಾರದು. ಆದ್ದರಿಂದ 'ವಾಮನ' ಶಬ್ದಕ್ಕೆ ಜ್ಞಾನಿಗಳ ಪ್ರಯೋಗವಿರುವಂತೆ ವಿಷ್ಣುವೆಂಬರ್ಥವನ್ನೇ ಸ್ವೀಕರಿಸುವುದು ನ್ಯಾಯಸಮ್ಮತವಾಗಿದೆ.

**तदेतदभिप्रेत्योक्तं न्यायविवरणे ''वामनश्रुतेरेवानवकाशः'' इति ।**

ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ 'ವಾಮನಶ್ರುತೇರೇವಾನವಕಾಶಃ' ವಿಷ್ಣುವಿಷಯಕವಾದ ವಾಮನಶ್ರುತಿಯು ನಿರವಕಾಶವಾಗಿದೆಯೆಂದು ಹೇಳಿರುತ್ತಾರೆ.

**प्रकाशः –**

**सौत्रैवकारप्रमितशब्दाभ्यां श्रुतेर्जात्याऽनवकाशत्वेन च प्राबल्यसूचनादेकयाऽपि श्रुत्याऽनेकेषां सावकाशलिङ्गानां बाधो युक्त एवेति भावेन ''विष्णुरेवेशानः'' इत्यादि टीकां विवृण्वन् सूत्राद्युक्तन्यायं सङ्गृह्णाह – सहस्रादिति ।।**

ವಿವರಣೆ - ಸೂತ್ರದಲ್ಲಿರುವ 'ಏವಕಾರ' ಮತ್ತು 'ಪ್ರಮಿತ' ಶಬ್ದಗಳಿಂದ ಶ್ರುತಿಯು ಸ್ವಾಭಾವಿಕವಾಗಿ ಮತ್ತು ನಿರವಕಾಶತ್ವ ಪ್ರಯುಕ್ತವಾಗಿ ಪ್ರಬಲವಾಗಿದೆಯೆಂದು ಸೂಚನೆ ಮಾಡಿದ್ದಾರೆ. ಆದ್ದರಿಂದ ಶ್ರುತಿ ಒಂದೇ ಆಗಿದ್ದರೂ ಸಾವಕಾಶವಾದ ಅನೇಕ ಲಿಂಗಗಳನ್ನು ಬಾಧಿಸಲು ಸಮರ್ಥವಾಗುತ್ತದೆ. ಈ ಅಭಿಪ್ರಾಯದಿಂದ 'ವಿಷ್ಣುರೇವ ಈಶಾನಃ' ಇತ್ಯಾದಿ ಟೀಕೆಯು ಹೊರಟಿರುತ್ತದೆ. ಅದನ್ನೇ ಪ್ರಕೃತ ಗ್ರಂಥಕಾರರು ವಿವರಿಸುವವರಾಗಿ ಸೂತ್ರಗಳಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ ಸಂಗ್ರಹಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸಹಸ್ರಾತ್' ಇತ್ಯಾದಿ ಗ್ರಂಥದಿಂದ.

**प्रकाशः – स्वतः** अऽनवकाशत्वादिकमनपेक्ष्य । स्वभावप्राबल्यमग्रे प्रतिपिपादयिषुरादौ ''तस्याश्च विष्णौ महायोगरूढिसिद्धायाः तत्प्रमापकत्वात्'' इति टीकोक्तयोगरूढी विवृण्वन्नुत्तरार्धोक्तं निरवकाशत्वं तावद् व्यनक्ति – **वामनेति ।।**

ಶ್ಲೋಕದಲ್ಲಿರುವ 'ಸ್ವತಃ' ಎಂಬ ಪದಕ್ಕೆ ನಿರಕಾಶತ್ವಾದಿಗಳನ್ನು ಅಪೇಕ್ಷಿಸದೇ ಎಂದರ್ಥ.

ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದೆಯೆಂಬ ವಿಚಾರವನ್ನು ಮುಂದೆ ಪ್ರತಿಪಾದನೆ ಮಾಡುತ್ತಾರೆ. ಈಗ

'ತಸ್ಯಾಶ್ಚ ವಿಷ್ಣೌ ಮಹಾಯೋಗರೂಢಿಸಿದ್ಧಾಯಾಃ ತತ್ಪ್ರಮಾಪಕತ್ವಾತ್' ಇತ್ಯಾದಿ ಟೀಕೆಯಲ್ಲಿ ಹೇಳಲ್ಪಟ್ಟ ಯೋಗರೂಢಿಗಳನ್ನು ವಿವರಿಸುವವರಾಗಿ, ಶ್ಲೋಕದ ಉತ್ತರಾರ್ಧದಲ್ಲಿ ಹೇಳಲ್ಪಟ್ಟ ನಿರವಕಾಶತ್ವವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ವಾಮನ' ಇತ್ಯಾದಿ ಗ್ರಂಥದಿಂದ.

**प्रकाशः** – अत्रैवं क्रमः । ईशानो विष्णुरेव । ''मध्ये वामनम्'' इति वामनश्रुतेः। ननु सावकाशा श्रुतिरित्युक्तमिति चेदत्रेदमुपतिष्ठते – **वामनश्रुतिर्हीति** ।

ತಿಳಿಯ ಬೇಕಾದ ವಿಚಾರದ ಕ್ರಮ ಹೀಗಿದೆ - 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. ಈ ವಿಷಯದಲ್ಲಿ 'ಮಧ್ಯೇ ವಾಮನಮ್' ಎಂಬ ವಾಮನಶ್ರುತಿಯೇ ಆಧಾರವಾಗಿದೆ. ಹಾಗಾದರೆ ಪೂರ್ವಪಕ್ಷದಲ್ಲಿ ಶ್ರುತಿಯನ್ನು ಸಾವಕಾಶವೆಂದು ಸಮರ್ಥಿಸಿದ್ದೇವಲ್ಲವೇ? ಎಂಬ ಪ್ರಶ್ನೆಗೆ ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದೆಯೆಂದು ಪ್ರಕೃತಗ್ರಂಥವು 'ವಾಮನಶ್ರುತಿರ್ಹಿ' ಇತ್ಯಾದಿಯಾಗಿ ಪ್ರಾರಂಭವಾಗುತ್ತಿದೆ. ಈ ಕ್ರಮದಲ್ಲಿ ಗ್ರಂಥವನ್ನು ಅರ್ಥೈಸಿಕೊಳ್ಳಬೇಕು.

**प्रकाशः** – योगमाह – **एष इति** ।। श्रुत्यन्तरे छान्दोग्ये । रूढिमाह – **उपेन्द्र इति** ।। ''उपेन्द्रो वामनः प्रांशुरमोघश्शुचिरूर्जितः'' इति सहस्रनामसु । **आर्येति** ।। वृद्धानां वामनशब्दस्य विष्णावेव प्रयोगादित्यर्थः ।

'ವಾಮನ' ಶಬ್ದವು ವಿಷ್ಣುವಿನಲ್ಲೇ ಯೋಗವೃತ್ತಿಯಿಂದ ಸಿದ್ಧವಾಗಿದೆಯೆಂದು 'ಏಷಃ' ಇತ್ಯಾದಿ ಗ್ರಂಥವು ಪ್ರತಿಪಾದನೆ ಮಾಡುತ್ತಿದೆ. 'ಶ್ರುತ್ಯಂತರೇ' ಎಂದರೆ ಛಾಂದೋಗ್ಯೋಪನಿಷತ್ತಿನಲ್ಲಿ ಎಂದರ್ಥ. ಅದೇ 'ವಾಮನ' ಶಬ್ದವು ಪರಮಾತ್ಮನಲ್ಲಿ ರೂಢವಾಗಿದೆಯೆಂದು 'ಉಪೇಂದ್ರ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. 'ಉಪೇಂದ್ರೋ ವಾಮನಃ ಪ್ರಾಂಶುರಮೋಘಃ ಶುಚಿರೂರ್ಜಿತಃ' ಎಂಬ ವಿಷ್ಣುಸಹಸ್ರನಾಮದಲ್ಲಿ 'ವಾಮನ' ಶಬ್ದವನ್ನು ಪರಮಾತ್ಮನಲ್ಲಿ ಪ್ರಯೋಗಿಸಲಾಗಿದೆ. 'ಆರ್ಯ' ಪ್ರಯೋಗ ಎಂದರೆ ವೃದ್ಧರೆಲ್ಲರೂ 'ವಾಮನ' ಶಬ್ದವನ್ನು ಮಹಾವಿಷ್ಣುವಿನಲ್ಲೇ ಪ್ರಯೋಗಿಸುತ್ತಾರೆಂದರ್ಥ.

**प्रकाशः** – ननु वामनिशब्दनिर्वचनेऽपि वामनशब्दस्य किमायातमित्यत आह – **वामनेति** ।।

ವಾಮನಿಶಬ್ದವನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡಿರಬಹುದು. ಆದರೆ ಇದರಿಂದ 'ವಾಮನ' ಶಬ್ದವನ್ನು ವಿಷ್ಣುಪರವೆಂದು ಹೇಗೆ ಸಮರ್ಥಿಸಿದಂತಾಗುತ್ತದೆ ? ಎಂಬ ಪ್ರಶ್ನೆಗೆ 'ವಾಮನ' ಇತ್ಯಾದಿ ಗ್ರಂಥದಿಂದ ಪೂರ್ವಮೀಮಾಂಸಾ ದೃಷ್ಟಾಂತವನ್ನು ಹೇಳಿ ಉತ್ತರಿಸುತ್ತಿದ್ದಾರೆ.

**प्रकाशः** – आद्यस्याध्यायस्य तृतीयपादे ''प्रयोगचोदनाभावादर्थैकत्वम-विभागात्'' इत्यन्तिगाधिकरणे प्रथमवर्णके लोकवेदयोः पदपदार्थानामन्यत्वमुतान-न्यत्वमिति संशये

'ಪ್ರಯೋಗಚೋದನಾಭಾವಾದರ್ಥೈಕತ್ವಮವಿಭಾಗಾತ್'[1] (೧-೩-ಕೊನೆಯ ಅಧಿಕರಣ)

ಈ ಅಧಿಕರಣದ ಪ್ರಥಮವ್ಯಾಖ್ಯಾನದಲ್ಲಿ ಹೀಗೆ ವಿಚಾರ ಮಾಡಲಾಗಿದೆ - ಲೌಕಿಕವ್ಯವಹಾರದಲ್ಲಿ ಹಾಗೂ ವೈದಿಕಪ್ರಯೋಗಗಳಲ್ಲಿ ಪದ ಮತ್ತು ಪದಾರ್ಥಗಳು ಬೇರೆಯಾಗಿವೆಯೋ, ಅಥವಾ ಒಂದೇ ಆಗಿವೆಯೋ ? ಎಂದು ಸಂಶಯ.

**प्रकाशः** – सत्यपि वर्णाभेदे स्वरछान्दसवर्णागमलोपविकारविपर्ययाध्यायानध्यायादिधर्मभेदेन जराराजपदयोरिव क्रमभेदेन व्यपदेशभेदात्स्पष्टः पदानां भेदः । पदान्यत्वादेवार्थभेदोऽपीति प्राप्ते

ಪೂರ್ವಪಕ್ಷ - ಪದ ಮತ್ತು ಪದಾರ್ಥಗಳು ಭಿನ್ನವೇ ಆಗಿವೆ ಏಕೆಂದರೆ ವರ್ಣಗಳು ಒಂದೇ ಆಗಿದ್ದರೂ

(१) **भाट्टसङ्ग्रहः** –

**अथ दशमं लोकवेदयोः शब्दार्थैक्याधिकरणम् (सूत्रे ३०-३५)**

**(प्रथमं वर्णकम्)**

**प्रयोगचोदनाभावाद् अर्थैकत्वमविभागात् ॥३०॥**

**(अद्रव्यशब्दत्वात् ॥३१॥ अन्यदर्शनाच्च ॥३२॥ आकृतिस्तु क्रियार्थत्वात् ॥३३॥ न क्रिया स्यादिति चेदर्थान्तरे विधानं न द्रव्यमिति चेत् ॥३४॥ तदर्थत्वात्प्रयोगस्याविभागः ॥३५॥)**

वाचकप्रसङ्गाद्वाच्यविशेषोऽत्र चिन्त्यत इति प्रासङ्गिकी **सङ्गतिः** । तत्र जात्यादिविचारात् प्रागुपोद्घातत्वेनेदं **वर्णकान्तरमारभ्यते** । लौकिकेभ्यः शब्देभ्योऽर्थेभ्यश्च वैदिकाः शब्दा अर्थाश्च भिन्नाः, उत त एवेति **सन्देहः** । अन्ये इति **प्राप्तम्** एते वैदिका एते लौकिका इति व्यपदेशभेदात् । 'ब्राह्मणासः पितरः सौम्यासः' इति 'ब्राह्मणाः सौम्याः' इति लौकिकेभ्यो रूपभेदात् । 'उत्ताना वै देवगवा वहन्ति' इति वेदे देवगवानां उत्तानवाहित्वोक्त्या अधोवाहिलौकिकबलीवर्देभ्योऽर्थान्यत्वस्य स्फुटत्वादिति । **सिद्धान्तस्तु** वर्णानामैक्यप्रत्यभिज्ञानेन तदात्मपदानामप्यैक्यमेव लोकवेदयोः । पदैक्यादेव चार्थैक्यम् । व्यपदेशादिभेदस्त्वप्रयोजकः । अर्थभेदौपयिकभेदस्यैव शब्दभेदकल्पकत्वेनात्र तदभावात् । काचित्कव्यपदेशादिभेदमात्रेण बहुषु स्थलेषु प्रत्यभिज्ञावगतशब्दैक्यबाधायोगात् । 'उत्तानाः' इत्यादेस्तु यज्ञद्रव्यार्थत्वेन देवसम्बन्धिन्यो या मनुष्याणां गावस्तत्स्तुत्यर्थत्वेनार्थवादत्वान्नार्थभेदोऽपीति । **फलन्तु** लोकवेदयोः शब्दार्थैक्ये लोके वृद्धव्यवहारादिना गृहीतसङ्गतिकानां पदानां वेदे अर्थबोधकत्वसम्भवोऽन्यथा तु नेति । तथा च **सूत्रम्** ॥ **प्रयोगेत्यादि** ॥ **सूत्रार्थस्तु**, 'व्रीहिभिर्यजेत' इत्यादिप्र**योगचोदनानां भावात्** तासां च शब्दार्थैक्यपक्षे एव अर्थप्रत्यायकत्वोपपत्तेः **अर्थैक्यमि**ति । शब्दैकत्वस्याप्युपलक्षणमेतत् **प्रयोगचोदनेति** ॥

**इति दशमं लोकवेदयोः शब्दार्थैक्याधिकरणम् (सूत्रे ३०-३५) (प्रथमं वर्णकम्)**

ಸ್ವರದಲ್ಲಿ ಭೇದವಿದೆ. ಮತ್ತು ಛಾಂದಸವಾದ ವರ್ಣಾಗಮದಲ್ಲಿ ವರ್ಣಲೋಪ, ವರ್ಣವಿಕಾರ, ವರ್ಣವಿಪರ್ಯಯ ಇವುಗಳಲ್ಲಿ ಭೇದವಿರುವುದು ಕಾಣಿಸುತ್ತಿದೆ. ಮತ್ತು ಅಧ್ಯಾಯ-ಅನಧ್ಯಾಯ ಮೊದಲಾದ ಧರ್ಮಭೇದವಿದೆ. ಜರಾ ಮತ್ತು ರಾಜ ಪದಗಳಲ್ಲಿ ಒಂದೇ ಅಕ್ಷರಗಳಿದ್ದರೂ ಕ್ರಮಭೇದವಿರುವುದರಿಂದ ಅರ್ಥಭೇದವಿರುವುದೂ ಸಹ ಅನುಭೂತವಾಗಿದೆ. ಆದ್ದರಿಂದ ಪದಗಳೆಲ್ಲವೂ ಭಿನ್ನವೇ ಆಗಿವೆ. ಪದಗಳು ಭಿನ್ನವಾದ್ದರಿಂದಲೇ ಅರ್ಥವೂ ಕೂಡ ಭಿನ್ನವೆಂದೇ ಹೇಳಬೇಕು. ಆದ್ದರಿಂದ ಅಕ್ಷರಗಳಲ್ಲಿ ಒಂದೇ ತರಹ ಇರುವಂತಹ ಎರಡು ಪದಗಳ ಅಕ್ಷರಗಳಲ್ಲಿ ಅಭೇದವಿದ್ದರೂ ಕ್ರಮದಲ್ಲಿ ಅಥವಾ ಉಳಿದ ಧರ್ಮಗಳಲ್ಲಿ ಭೇದವಿರುವ ಕಾರಣ ಪ್ರತಿಯೊಂದು ಪದಗಳು ಭಿನ್ನ-ಭಿನ್ನವೆಂದೇ ಹೇಳಬೇಕು. ಪದಗಳು ಭಿನ್ನವಾದ್ದರಿಂದಲೇ ಅರ್ಥವೂಕೂಡ ಭಿನ್ನವೇ ಆಗುತ್ತವೆ.

**प्रकाशः –** प्रत्यक्षप्रत्यभिज्ञानाद्वर्णाभेदे तदात्मकत्वात्पदानां यत्किञ्चिद्धर्मभेदेऽप्यर्थभेदापादकधर्मभेदस्यैव पदान्यत्वे प्रयोजकत्वाद्यत्किञ्चिद्धर्मभेदेनाप्यर्थभेदाभावात्पदानामनन्यत्वम् । तदभेदादर्थानामप्यनन्यत्वमिति सिद्धान्तितम् ।

ಸಿದ್ಧಾಂತ - ಪ್ರತ್ಯಕ್ಷವಾದ ಅಕ್ಷರಗಳಲ್ಲಿ ಪ್ರತ್ಯಭಿಜ್ಞಾನಬಲದಿಂದಲೇ ವರ್ಣಗಳ ಅಭೇದವು ಸಿದ್ಧವಾಗುತ್ತದೆ. ವರ್ಣಸ್ವರೂಪವೇ ಆಗಿರುವಂತಹ ಪದಗಳಲ್ಲಿ ಯತ್ಕಿಂಚಿತ್ ಧರ್ಮಭೇದದಿಂದ ಅರ್ಥಭೇದವು ಸಿದ್ಧವಾಗುವುದಿಲ್ಲ. ಹೊರತಾಗಿ ಅರ್ಥಭೇದಾಪಾದಕವಾದ ಧರ್ಮಭೇದವೇ ಪದಾನ್ಯತ್ವಕ್ಕೆ ಪ್ರಯೋಜಕವಾಗುತ್ತದೆ. ನಗ-ನಾಕಾದಿ ಶಬ್ದಗಳಲ್ಲಿ ಇಂತಹ ಅರ್ಥಭೇದಾಪಾದಕವಾದ ಧರ್ಮಭೇದವಿರುವುದರಿಂದ ಪದಗಳು ಭಿನ್ನವಾಗಿವೆ, ಅರ್ಥವೂ ಭಿನ್ನವಾಗುತ್ತದೆ. ಆದ್ದರಿಂದ ಯತ್ಕಿಂಚಿತ್ ಧರ್ಮಭೇದವಿದ್ದರೂ ಅರ್ಥಭೇದಾಪಾದಕವಾದ ಧರ್ಮವಿಲ್ಲದಿದ್ದರೆ ಪದಗಳು ಭಿನ್ನವಾಗುವುದಿಲ್ಲ. ಹೀಗೆ ಪದಗಳು ಭಿನ್ನವಾಗದ ಕಾರಣ ಅರ್ಥಗಳೂ ಕೂಡ ಭಿನ್ನವಾಗುವುದಿಲ್ಲವೆಂದು ಸಿದ್ಧಾಂತ ಮಾಡಲಾಗಿದೆ.

**प्रकाशः –** अत्रोक्तन्यायेन यथा 'देवासः' इत्यादौ ''आज्जसेरसुक्'' इति जसेः प्रत्ययस्यासुगागमेनैकदेशस्याधिक्येऽपि देवा इति पदादनन्यत्वं तथेत्यर्थः ।

ಪೂರ್ವಮೀಮಾಂಸೆಯ ಈ ಅಧಿಕರಣನ್ಯಾಯದಿಂದ ಒಂದು ಪದಕ್ಕಿಂತ ಮತ್ತೊಂದು ಪದದಲ್ಲಿ ಕಿಂಚಿದಾಧಿಕ್ಯ ಬರುವ ಮಾತ್ರದಿಂದ ಅರ್ಥದಲ್ಲಿ ವ್ಯತ್ಯಾಸ ಬರುವುದಿಲ್ಲವೆಂದು ತಿಳಿಯಬೇಕು. 'ದೇವಾಃ' ಎಂಬ ಶಬ್ದಕ್ಕಿಂತ 'ದೇವಾಸಃ' ಎಂಬ ಶಬ್ದದಲ್ಲಿ ಕಿಂಚಿದಾಧಿಕ್ಯವಿರುತ್ತದೆ. ಆದರೂ ಸಹ 'ದೇವಾಃ' ಎಂಬ ಪದದ ಅರ್ಥವೇ 'ದೇವಾಸಃ' ಎಂಬ ಪದದ ಅರ್ಥವಾಗಿದೆ. 'ದೇವಾಸಃ' ಎಂಬ ಶಬ್ದದ ನಿಷ್ಪತ್ತಿಯನ್ನು ಹೀಗೆ ತಿಳಿಯಬೇಕು. 'ದೇವ' ಎಂಬ ಶಬ್ದಕ್ಕೆ 'ಸ್ವೌಜಸಮೌಟ್' ಇತ್ಯಾದಿ ಸೂತ್ರದಿಂದ 'ಜಸ್' ಪ್ರತ್ಯಯ ಬರುತ್ತದೆ. 'ದೇವ-ಜಸ್' ಎಂದಿರಬೇಕಾದರೆ, 'ಆಜ್ಜಸೇರಸುಕ್' ಎಂಬ ಸೂತ್ರವು ಅಕಾರಕಾಂತವಾದ ಪದದ ಮುಂದೆ 'ಜಸ್' ಪ್ರತ್ಯಯ ಇರುವಾಗ 'ಅಸುಕ್' ಆಗಮವನ್ನು ವಿಧಿಸುತ್ತಿದೆ. ಆವಾಗ 'ದೇವ-ಅಸುಕ್-ಜಸ್' ಎಂದಾಗುತ್ತದೆ. 'ಅಸುಕ್' ಆಗಮದಲ್ಲಿ ಉಕಾರ, ಕಕಾರಗಳು 'ಇತ್' ಸಂಜ್ಞೆಯನ್ನು ಹೊಂದಿದರೆ 'ಅಕ್' ಎಂದಷ್ಟೇ ಉಳಿಯುತ್ತದೆ. 'ದೇವ' ಶಬ್ದದ ಜೊತೆಗೆ ಸವರ್ಣದೀರ್ಘಸಂಧಿ ರುತ್ವವಿಸರ್ಗಗಳನ್ನು ಮಾಡಿದಾಗ 'ದೇವಾಃ' ಎಂದಾಗುತ್ತದೆ. ಜಸ್ ಪ್ರತ್ಯಯದಲ್ಲಿ ಜಕಾರವು ಇತ್ ಸಂಜ್ಞೆಯನ್ನು ಹೊಂದಿದರೆ, 'ದೇವಾಸ್

-ಅಸ್' ಎಂದಾಗುತ್ತದೆ. ಹೀಗೆ 'ದೇವಾಸುಸ್' ಎಂದಿರುವಾಗ ರುತ್ವ ಮತ್ತು ವಿಸರ್ಗಗಳು ಬಂದರೆ 'ದೇವಾಸಃ' ಎಂಬ ರೂಪವು ನಿಷ್ಪನ್ನವಾಗುತ್ತದೆಂದು ತಿಳಿಯಬೇಕು. ಹೀಗೆ 'ದೇವ' ಶಬ್ದದ ಮೇಲೆ ಅಸುಕ್ ಆಗಮವು ಅಧಿಕವಾಗಿ ಬಂದರೂ 'ದೇವಾಃ' ಎಂಬ ಪದಕ್ಕಿಂತ ಅಭಿನ್ನವಾಗಿದೆಯೆಂದೇ ತಿಳಿಯಬೇಕು.

**प्रकाशः** –आदिपदेन 'रुद्रेभिः रुद्रैः' इत्यादि गृह्यते । उक्तञ्च महाभाष्ये "एकदेशविकृतमनन्यवद्भवति ।। श्वापुच्छे च्छिन्ने नाश्वो न गर्दभः" इति ।

ಗ್ರಂಥದಲ್ಲಿರುವ ಆದಿಪದದಿಂದ 'ರುದ್ರೇಭಿಃ ರುದ್ರೈಃ' ಎಂಬೆರಡು ಪದಗಳಲ್ಲಿ ಕಿಂಚಿದಾಧಿಕ್ಯವಿದ್ದರೂ ಒಂದೇ ಅರ್ಥವು ಕಾಣಿಸುತ್ತದೆ. ಅದನ್ನೂ ಸಹ ದೃಷ್ಟಾಂತವನ್ನಾಗಿ ವಿವಕ್ಷಿಸಬೇಕು. ಇದನ್ನು ಮಹಾಭಾಷ್ಯದಲ್ಲಿ 'ಏಕದೇಶವಿಕೃತಮನನ್ಯವದ್ಭವತಿ । ಶ್ವಾಪುಚ್ಛೇ ಚ್ಛಿನ್ನೇ ನಾಶ್ವೋ ನ ಗರ್ದಭಃ' ಏಕದೇಶದ ವಿಕಾರದಿಂದ ಪದವು ತನ್ನ ಸ್ವರೂಪವನ್ನು ಕಳೆದುಕೊಳ್ಳುವುದಿಲ್ಲ. ನಾಯಿಯ ಬಾಲ ತುಂಡಾದರೆ, ನಾಯಿಯು ಕುದುರೆಯಾಗುವುದಿಲ್ಲ ಅಥವಾ ಕತ್ತೆಯಾಗುವುದಿಲ್ಲ ಎಂದು ಹೇಳಿರುತ್ತಾರೆ.

**प्रकाशः** – तदेव प्रयोगदर्शनेनाह – नहीति ।। "न किरिन्द्र त्वदुत्तरो न ज्यायाँ अस्ति वृत्रहन्" इत्यत्र किरित्यस्य क इत्यस्य चाभेदस्तथेहापीत्यर्थः ।

ಇದನ್ನೇ ಲೋಕಪ್ರಯೋಗದಿಂದ ಸಮರ್ಥಿಸುತ್ತಿದ್ದಾರೆ 'ನಹಿ' ಇತ್ಯಾದಿ ಗ್ರಂಥದಿಂದ. 'ನ ಕಿರಿಂದ್ರ ತ್ವದುತ್ತರೋ ನ ಜ್ಯಾಯಾಂ ಅಸ್ತಿ ವೃತ್ರಹನ್' ಎಂಬಲ್ಲಿ 'ಕಿಃ' ಎಂಬ ಪದಕ್ಕೂ 'ಕ' ಎಂಬ ಪದಕ್ಕೂ ಅಭೇದವೇ ಇರುವುದು ಕಂಡಿದೆ. ಅದರಂತೆ ಇಲ್ಲಿಯೂ ತಿಳಿಯಬೇಕೆಂದರ್ಥ.

**प्रकाशः** – कथञ्चिन्निरूपिता, या देवतात्वाद्याकृत्यभिव्यक्तिरसाववयवाधिक्य-विनाशमात्रेण न नश्यतीति तन्त्रवार्तिकार्थः ।

ಕಥಂಚಿತ್ ಉತ್ಪನ್ನವಾದ ದೇವತಾತ್ವ ರೂಪವಾದ ಧರ್ಮದ ಅಭಿವ್ಯಕ್ತಿಯು ಅವಯವಾಧಿಕ್ಯ ವಿನಾಶಮಾತ್ರದಿಂದ ನಾಶವಾಗುವುದಿಲ್ಲವೆಂದು ತಂತ್ರವಾರ್ತಿಕ ಶ್ಲೋಕದ ಅಭಿಪ್ರಾಯ.

**प्रकाशः** – ननूक्तमल्पमात्रपरिमाणवत्त्वरूपं वामनत्वं कथं ब्रह्मणि युक्तमित्यतो नायमत्रान्यसापेक्षशब्दः किन्तु रूढ इति सदृष्टान्तमाह – एवञ्चेति ।।

ಅಲ್ಪಮಾತ್ರಪರಿಮಾಣತ್ವವೆಂಬ ಪ್ರವೃತ್ತಿನಿಮಿತ್ತವುಳ್ಳ 'ವಾಮನ' ಶಬ್ದವು ಬ್ರಹ್ಮನಲ್ಲಿ ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೆ, ಈ ಶಬ್ದವು ಅನ್ಯಸಾಪೇಕ್ಷಿತವಾಗಿಲ್ಲ, ಹೊರತು ವಿಷ್ಣುವಿನಲ್ಲಿ ರೂಢವಾಗಿದೆಯೆಂಬುದನ್ನು ದೃಷ್ಟಾಂತ ಪುರಸ್ಸರವಾಗಿ ಸಮರ್ಥಿಸುತ್ತಿದ್ದಾರೆ 'ಏವಂಚ' ಇತ್ಯಾದಿ ಗ್ರಂಥದಿಂದ.

**प्रकाशः** – नवमस्य द्वितीये पादे "नैमित्तिकं तूत्तरात्वमानन्तर्यात्प्रतीयेत" इति षष्ठाधिकरणे "यद्योन्यां तदुत्तरयोर्गायति" इत्यत्र किं योनिनामकऋगपेक्षयोत्तर-देशेऽधीतयोर्ऋचोर्गानमुतोत्तरासञ्ज्ञकग्रन्थविशेषाधीतयोरिति संशये

ನೈಮಿತ್ತಿಕಂ ತೂತ್ತರಾತ್ವಮಾನಂತರ್ಯಾತ್ ಪ್ರತೀಯೇತ' (೯-೨-೬)[१]

'ಯದ್ಯೋನ್ಯಾಂ ತದುತ್ತರಯೋರ್ಗಾಯತಿ' ಎಂಬುದು ಈ ಅಧಿಕರಣದ ವಿಷಯವಾಕ್ಯ. ಈ ವಾಕ್ಯದಲ್ಲಿ ಯೋನಿನಾಮಕವಾದ 'ಋಜ್' ಮಂತ್ರಗಳ ಅಪೇಕ್ಷೆಯಿಂದ ಮುಂದಿನ 'ಋಜ್' ಮಂತ್ರಗಳಲ್ಲಿ ಋಕ್‌ಗಳನ್ನು ಗಾನ ಮಾಡಬೇಕೆಂದು 'ಉತ್ತರ' ಎಂಬ ಶಬ್ದವು ಹೇಳುತ್ತಿದೆಯೋ? ಅಥವಾ 'ಉತ್ತರಾ' ಎಂಬ ಗ್ರಂಥವಿಶೇಷದಲ್ಲಿ ಇರುವ ಆ 'ಋಜ್' ಮಂತ್ರವನ್ನು ಗಾನ ಮಾಡಬೇಕೆಂದು 'ಉತ್ತರಾ' ಎಂಬ ಶಬ್ದವು ಹೇಳುತ್ತಿದೆಯೋ? ಎಂದು ಸಂಶಯ.

---

**(१) भाट्टसङ्ग्रहः –**

**अथ पञ्चमम् ''उत्तरयोर्गायति'' इत्यवोत्तराग्रन्थसमधीतयोरेव ऋचोर्ग्रहणाधिकरणम् (सूत्रे २३-२४) (प्रथमं वर्णकम्)**

**नैमित्तिकं तूत्तरात्वमानन्तर्यात्प्रतीयेत् ॥२३॥**

**(ऐकार्थ्याच्च तदभ्यासः ॥२४॥)**

**प्रथमं वर्णकम्** । पूर्वाक्षेपेणात्र शङ्कनात्सङ्गतिः । सामगानां छन्दोनामके ग्रन्थे उत्तराग्रन्थे च सामाश्रयभूता ऋचः पठिताः । छन्दोग्रन्थे रथन्तरबृहदादिसाम्नां योनिभूता ऋच एव पठिताः । उत्तराग्रन्थे तु रथन्तरयोनिम् ''अभि त्वा शूर'' इत्यृचं पठित्वा साम्नः कस्यचियोदप्ययोनिभूते ''न त्वा वाम्'' इत्यादिके द्वे ऋचौ पठिते । एवं बृहदादिसाम्नो योनिपाठान्तरं द्वे द्वे ऋचावयोनिभूते पठिते । एवं स्थिते सति ''यद्योन्यां तदुत्तरयोर्गायति'' इत्यत्रोत्तराशब्दः किं योन्युत्तरपरः, उतोत्तराग्रन्थस्थपर इति **सन्देहे**, उत्तराशब्दस्य सम्बन्धिशब्दत्वेन पूर्वपठितयोन्युत्तरदेशपठितऋक्पर एवात्रोत्तराशब्दः । तथा च रथन्तरयोनेः परतो बृहदादियोनेः पाठात्तयोः ''त्वामिद्धि हवामहे'' इत्यादिकयो रथन्तरसाम्नो गानम् । उत्तराग्रन्थे तु रथन्तरयोनेरुत्तरत्र ''न त्वा त्वाम्'' इत्यादिकयोः पाठात्तत्र गानमिति, कदाचिद् बृहदादियोनिभूतयो ऋचो रथन्तरस्य गानं, कदाचित्तु ''न त्वा वाम्'' इत्याद्युत्तराग्रन्थस्थयो ऋचोर्गानमित्यनियमः । द्वयोरपि रथन्तरयोन्युत्तरत्वात् । एवञ्च पूर्वत्रोक्तं समास्वेव गानमित्ययुक्तम् । विषमछन्दस्कयोरपि योन्युत्तरयोर्गानस्यावर्जनीयत्वादिति **प्राप्ते सिद्धान्तः**, उत्तराशब्दस्य सम्बन्धिशब्दत्वेऽपीह न तस्य ग्रहणम् । उत्तराग्रन्थे सञ्ज्ञाशब्दत्वात् । तस्य निरपेक्षस्य सापेक्षसम्बन्धिशब्दादपि बलवत्त्वान्निरपेक्षस्यैव ग्रहणमत्रेत्युत्तराग्रन्थस्थयोः ''न त्वा वाम्'' इत्यादिकयोरेव गानमिति । तदाह **सूत्रे, नैमित्तिकं तु** सञ्ज्ञानिमित्तिकमेवोत्तरात्वं **प्रतीयेत** ज्ञातव्यम् । कुतः? **आनन्तर्यात्** अन्याव्यवधानेनार्थबोधकत्वात्सञ्ज्ञाया इत्यर्थः । **फलं** व्यक्तम् ।

**इति पञ्चमम् ''उत्तरयोर्गायति' इत्यत्रोत्तराग्रन्थसमधीतयोरेव ऋचोर्ग्रहणाधिकरणम् (सूत्रे २३-२३) (प्रथमं वर्णकम्)**

ವಾಮನಾಧಿಕರಣ (೧-೩-೭)

**प्रकाशः** – उत्तराशब्दस्य सम्बन्धिशब्दत्वाद्यैव योनेः परत्र पठिता सैवोत्तरा । ततश्च रथन्तरयोनेः परतो बृहद्योनेः पठितत्वात्तस्यां गानम् । उत्तराग्रन्थे तु रथन्तरयोनेः परतो "न त्वा वाँ अन्यो दिव्याः" इत्यस्याः पठितत्वात्तस्यां गानम्। अतोऽपि विकल्पः । द्वयोरपि रथन्तरयोन्युत्तरत्वादिति प्राप्ते –

'ಉತ್ತರಾ' ಎಂಬ ಶಬ್ದವು ಸಂಬಂಧಿಶಬ್ದವಾಗಿರುವುದರಿಂದ ಮುಂದಿನ ಋಜ್ ಮಂತ್ರದಲ್ಲಿ ಯೋನಿನಾಮಕವಾದ 'ಋಜ್' ಮಂತ್ರವನ್ನೇ ಪಠಿಸಬೇಕೆಂಬುದೇ ಸರಿಯಾದದ್ದು. ಆದ್ದರಿಂದ 'ರಥಂತರಯೋನಿ' ಎಂಬ 'ಋಜ್' ಮಂತ್ರಕ್ಕಿಂತ ಮುಂದೆ 'ಬೃಹದ್ಯೋನಿ' ಎಂಬ 'ಋಜ್' ಮಂತ್ರವು ಪಠಿತವಾಗಿದೆ. ಅಂತಹ ಶ್ರುತಿಯೆಂದೇ ಇದನ್ನು ಗಾನಮಾಡಬೇಕು. 'ಉತ್ತರಾ' ಗ್ರಂಥದಲ್ಲಾದರೂ ರಥಂತರಯೋನೇಃ' ಎಂಬ 'ಋಜ್' ಎಂಬ ಮಂತ್ರಕ್ಕಿಂತ ಮುಂದೆ 'ನ ತ್ವಾ ವಾಂ ಅನ್ಯೋ ದಿವ್ಯಾಃ' ಎಂಬ ಮಂತ್ರವು ಪಠಿತವಾಗಿದೆ. ಅಲ್ಲಿಯೂ ಕೂಡ ಈ ಮಂತ್ರವನ್ನು ಪಠಿಸಬೇಕು. ಹೀಗಿರುವಾಗ ಎಲ್ಲಿ ಪಠಿಸಬೇಕೆಂದು ಗೊಂದಲವಾದರೆ, ವಿಕಲ್ಪವನ್ನೇ ಆಶ್ರಯಿಸಬೇಕು. ಏಕೆಂದರೆ ಎರಡೂ ಮಂತ್ರಗಳೂ 'ರಥಂತರಯೋನಿ' ಎಂಬ ಮಂತ್ರಕ್ಕಿಂತ ಉತ್ತರದಲ್ಲೇ ಇರುತ್ತದೆ. ಆದ್ದರಿಂದ ಉತ್ತರಾ' ಎಂಬ ಶಬ್ದವು ಮುಂದಿನ ವಾಕ್ಯದಲ್ಲಿ ಎಂಬರ್ಥವನ್ನು ತಿಳಿಸುತ್ತದೆ ಹೊರತು 'ಉತ್ತರಾ' ಎಂಬ ಗ್ರಂಥವಿಶೇಷವನ್ನು ತಿಳಿಸುವುದಿಲ್ಲ.

**प्रकाशः** – यद्यप्ययं सम्बन्धिशब्दो लोके तथाऽप्युत्तराग्रन्थे सञ्ज्ञारूपेण प्रसिद्धः । तत्र सञ्ज्ञाशब्दस्यानपेक्षवृत्तित्वात्सापेक्षवृत्तेस्सम्बन्धिशब्दाद्बलीयस्त्वम् । प्रकरणपाठाच्चोत्तराग्रन्थः क्रत्वङ्गम् । तस्मादुत्तराग्रन्थाधीतास्वेव गानमिति सिद्धान्तितम् ।

ವಾಸ್ತವಿಕವಾಗಿ ಈ 'ಉತ್ತರಾ' ಎಂಬ ಶಬ್ದವು ಲೋಕದಲ್ಲಿ ಸಂಬಂಧಿಶಬ್ದವಾಗಿದೆ. ಆದರೂ ಸಹ 'ಉತ್ತರಾ' ಎಂಬ ಗ್ರಂಥವಿಶೇಷದಲ್ಲಿ ರೂಢವಾಗಿಯೇ ಪ್ರಸಿದ್ಧವಾಗಿದೆ. 'ಉತ್ತರಾ' ಎಂಬ ಗ್ರಂಥವಿಶೇಷದ ಹೆಸರು ಸಂಬಂಧಿಶಬ್ದವಾಗದ ಕಾರಣ ಅನಪೇಕ್ಷವೃತ್ತಿಯುಳ್ಳದ್ದಾಗಿದೆ. ಇದು ಸಂಬಂಧಿ ಶಬ್ದಕ್ಕಿಂತಲೂ ಬಲಿಷ್ಠವಾಗಿದೆ. ಮತ್ತು ಅದೇ ಪ್ರಕರಣದಲ್ಲಿಯೇ 'ಉತ್ತರಾ' ಎಂಬ ಗ್ರಂಥವು ಪ್ರಸಕ್ತವಾಗಿವೆ. ಇದು ಕ್ರತ್ವಂಗವಾದ್ದರಿಂದ 'ಉತ್ತರಾ' ಎಂಬ ಗ್ರಂಥವಿಶೇಷವನ್ನೇ ಇಲ್ಲಿ ವಿವಕ್ಷಿಸಬೇಕು. ಆದ್ದರಿಂದ 'ಉತ್ತರಾ' ಎಂಬ ಗ್ರಂಥವಿಶೇಷದಲ್ಲೇ ಈ ಋಜ್ ಮಂತ್ರವನ್ನು ಗಾನ ಮಾಡಬೇಕೆಂದು ಸಿದ್ಧಾಂತ ಮಾಡಲಾಗಿದೆ.

**प्रकाशः** – अत्र यथोत्तराशब्दः प्रतियोगिनिरपेक्षार्थस्तथा वामनशब्दोऽपीत्यर्थः।

ಪೂರ್ವಮೀಮಾಂಸೆಯ ಈ ದೃಷ್ಟಾಂತದಲ್ಲಿ ಯಾವರೀತಿಯಾಗಿ 'ಉತ್ತರಾ' ಎಂಬ ಶಬ್ದವು ಪ್ರತಿಯೋಗಿ ನಿರಪೇಕ್ಷಿತವಾಗಿದೆ ಎಂದು ನಿರ್ಣಯಿಸಲಾಗಿದೆಯೋ, ಅದರಂತೆ ಪ್ರಕೃತ 'ವಾಮನ' ಶಬ್ದವೂ ಕೂಡ ಪ್ರತಿಯೋಗಿನಿರಪೇಕ್ಷಿತವಾಗಿದೆಯೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ



ವಿಷ್ಣುವೇ 'ಈಶಾನ' ಎಂಬ ಶಬ್ದದಿಂದ ಪ್ರತಿಪಾದ್ಯನು ಹೊರತು, ಮುಖ್ಯಪ್ರಾಣದೇವರಲ್ಲ. ಕಾರಣವೇನೆಂದರೆ 'ಮಧ್ಯೇ ವಾಮನಮಾಸೀನಂ' ಎಂಬ ವಾಮನ ಶ್ರುತಿಯು ವಿಷ್ಣುಪ್ರತಿಪಾದಕವಾಗಿದೆ. ಅದೇ ಶ್ರುತಿಯಲ್ಲಿ 'ಈಶಾನ' ಶಬ್ದವಿರುವುದರಿಂದ, ವಿಷ್ಣುವೇ ಈಶಾನನಾಗುತ್ತಾನೆಂದು ಸಿದ್ಧಾಂತ.

ವಾಮನ ಶ್ರುತಿಯು ವಿಷ್ಣುಪರವಾಗಿದೆಯೆಂದು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಶ್ರುತಿಯು ಸಹಜವಾಗಿ ಸಾವಿರಲಿಂಗಗಳಿಗಿಂತಲೂ ಬಲಿಷ್ಠವಾಗಿರುತ್ತದೆ. ಒಂದು ವೇಳೆ ನಿರವಕಾಶವಾಗಿದ್ದಲ್ಲಿ ಅದೇ ಶ್ರುತಿಯು ಸಾವಕಾಶವಾದ ಸಾವಿರಾರು ಶ್ರುತಿಗಳಿಗಿಂತ ಬಲಿಷ್ಠವಾಗಿದೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಪ್ರಕೃತ ಪೂರ್ವಪಕ್ಷಕಾರರು ಹೇಳಿದ ಸಕಲಲಿಂಗಗಳು ಸಾವಕಾಶವಾಗಿದೆ. ವಿಷ್ಣುವಿಷಯಕವಾದ ವಾಮನಶ್ರುತಿಯು ನಿರವಕಾಶವಾಗಿದೆ.

'ಏಷ ಉ ಏವ ವಾಮನಿಃ ಏಷ ಹಿ ಸರ್ವಾಣಿ ವಾಮಾನಿ ನಯತಿ' ಎಂಬ ಶ್ರುತಿಯಲ್ಲಿ ಅವಧಾರಣ-ಪುರಸ್ಸರವಾಗಿ ವಿಷ್ಣುವೇ ವಾಮನನೆಂದು ಸಮರ್ಥಿಸಲಾಗಿದೆ. 'ಉಪೇಂದ್ರೋ ವಾಮನಃ ಪ್ರಾಂಶುಃ' ಎಂಬ ವಿಷ್ಣುಸಹಸ್ರನಾಮವೂ ಸಹ ಈ ವಿಷಯದಲ್ಲಿ ಪರಮಪ್ರಮಾಣವಾಗಿದೆ. ಲೋಕದಲ್ಲಿಯೂ ಜ್ಞಾನಿ-ಜನರೆಲ್ಲರೂ ವಿಷ್ಣುವನ್ನೇ ವಾಮನನೆನ್ನುತ್ತಾರೆ. ಆದ್ದರಿಂದ 'ವಾಮನ' ಶಬ್ದವು ವಿಷ್ಣುಪರವಾಗಿದೆ-ಯೆಂಬುದರಲ್ಲಿ ಎರಡು ಮಾತಿಲ್ಲ. ಇನ್ನು ಇಲ್ಲಿರುವ 'ವಾಮನ' ಶಬ್ದಕ್ಕೆ ದೀರ್ಘಕ್ಕೆ ಪ್ರತಿಯೋಗಿಯಾದ ಹ್ರಸ್ವ ಎಂಬರ್ಥವನ್ನು ವಿವಕ್ಷಿಸಬಾರದು. ಅಂದರೆ ಗಿಡ್ಡದಾದ ಯಾವುದಾದರೊಂದು ವಸ್ತುವನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಹೇಳಬಾರದು. ಏಕೆಂದರೆ 'ವಾಮನ' ಶಬ್ದಕ್ಕೆ ನಿರಪೇಕ್ಷಿತವಾದ ರೂಢಿಯ ಬಲದಿಂದ ವಿಷ್ಣುವೆಂಬರ್ಥವನ್ನು ಸಹಜವಾಗಿ ಸ್ವೀಕರಿಸಲು ಬರುವಾಗ ಸಾಪೇಕ್ಷವಾದ ಹ್ರಸ್ವ ಎಂಬರ್ಥವನ್ನು ಯೋಗಬಲದಿಂದ ಸ್ವೀಕರಿಸುವುದು ಬಹಳ ತಪ್ಪಾಗುತ್ತದೆ. ಪೂರ್ವಮೀಮಾಂಸೆಯ 'ಯದ್ಯೋಽನ್ಯಾಂ ತದುತ್ತರಯೋರ್ಗಾಯತಿ' ಎಂಬ ಅಧಿಕರಣವು ಸಾಪೇಕ್ಷವಾದ ಅರ್ಥಕ್ಕಿಂತಲೂ ನಿರಪೇಕ್ಷಿತವಾದ ಅರ್ಥವೇ ಪ್ರಬಲವೆಂದು ಸಮರ್ಥಿಸಿದೆ. ಆದ್ದರಿಂದ ವಾಮನಶ್ರುತಿಯು ವಿಷ್ಣುವಿನಲ್ಲಿ ನಿರವಕಾಶವಾಗಿದೆಯೆಂದು ತಿಳಿಯಬೇಕು.



## 'ಪ್ರಾಣಾದಿ ನಿಯಾಮಕತ್ವ' 'ದೇವೋಪಾಸ್ಯತ್ವ' ಈ ಎರಡೂ ಲಿಂಗಗಳು ಸಾವಕಾಶವಾಗಿವೆ

### तात्पर्यचन्द्रिका

**लिङ्गानि तु सावकाशानि । सर्वनियामकत्वादिमति प्राणादिनियामकत्वादेः प्रासादवासिन्यायेन सम्भवात् ।**

ಅನುವಾದ - ಲಿಂಗಗಳೂ ಸಹ ಸಾವಕಾಶವಾಗಿವೆ. ಸರ್ವನಿಯಾಮಕನಾದ ಭಗವಂತನಲ್ಲಿ ಪ್ರಾಣಾದಿಗಳ ನಿಯಾಮಕತ್ವವು ಪ್ರಾಸಾದವಾಸಿನ್ಯಾಯದಿಂದ ಉಪಪನ್ನವಾಗುತ್ತವೆ.

**ऐन्द्राग्नादौ तु देवतात्वं व्यासज्यवृत्तीत्यग्नेः प्रत्येकं तत्र देवतात्वाभावान्नाग्नेयता।**

ಐಂದ್ರಾಗ್ನ್ಯಾದಿಗಳಲ್ಲಿ ದೇವತಾತ್ವವು ವ್ಯಾಸಜ್ಯವೃತ್ತಿಧರ್ಮವಾಗಿರಬಹುದು. ಏಕೆಂದರೆ ಪ್ರತ್ಯೇಕವಾಗಿ ಅಗ್ನಿಯಲ್ಲಿ ದೇವತಾತ್ವವೇ ಇಲ್ಲದ ಕಾರಣ ಆಗ್ನೇಯವೆಂದು ಕರೆಯಲು ಸಾಧ್ಯವಾಗುವುದಿಲ್ಲ.

**नियमनं तु न व्यासज्यवृत्तिः । ''यः पृथिवीमन्तरो यमयति'' इत्यारभ्य ''यः प्राणमन्तरो यमयति'' इति प्रत्येकं नियमनश्रवणात् ।**

ಆದರೆ ಭಗವಂತನಲ್ಲಿರುವ ನಿಯಮನಕ್ರಿಯೆಯು ವ್ಯಾಸಜ್ಯವೃತ್ತಿಧರ್ಮವಲ್ಲ. 'ಯಃ ಪೃಥಿವೀ-ಮಂತರೋ ಯಮಯತಿ' ಎಂಬಲ್ಲಿಂದ ಪ್ರಾರಂಭಿಸಿ, 'ಯಃ ಪ್ರಾಣಮಂತರೋ ಯಮಯತಿ' ಎಂಬಲ್ಲಿಯ ತನಕ ಪೃಥಿವೀ ಮೊದಲಾದವುಗಳ ನಿಯಮನವನ್ನು ಪ್ರತ್ಯೇಕವಾಗಿ ಹೇಳಲಾಗಿದೆ.

**''यद्देवान् प्राणयो नव । देवा उपासाञ्चक्रिरे'' इत्यादिश्रुतिषु ब्रह्मणो विशिष्य प्राणनियामकत्वादिश्रवणाच्च ।**

'ಯದ್ದೇವಾನ್ ಪ್ರಾಣಯೋ ನವ । ದೇವಾ ಉಪಾಸಾಂಚಕ್ರಿರೇ' ಇತ್ಯಾದಿ ಶ್ರುತಿಗಳಲ್ಲಿ ಕ್ರಿಯೆಗಳಲ್ಲಿ ಪ್ರಾಣನಿಯಾಮಕತ್ವಧರ್ಮಗಳನ್ನು ಬ್ರಹ್ಮನಲ್ಲಿ ವಿಶೇಷವಾಗಿ ಹೇಳಲಾಗಿದೆ.

**''एवमेवैष प्राण इतरान्प्राणान्पृथक्पृथगेव सन्निधत्ते पायूपस्थेऽपानं चक्षुः श्रोत्रे मुखनासिकाभ्याम्'' इति श्रुत्यन्तरे मुख्यप्राण उक्तस्य सर्वप्राणनियामकत्वस्य**

"ऊर्ध्वं प्राणमुन्नयत्यपानं प्रत्यगस्यति" इत्यनेनाप्रतीतेश्च।

'ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ ಪಾಯೂಪಸ್ಥೇಽ-ಪಾನಂ ಚಕ್ಷುಃ ಮುಖನಾಸಿಕಾಭ್ಯಾಮ್' ಎಂಬ ಮತ್ತೊಂದು ಶ್ರುತಿಯಲ್ಲಿ ಮುಖ್ಯಪ್ರಾಣನಲ್ಲಿ ಹೇಳಲ್ಪಟ್ಟ ಸರ್ವಪ್ರಾಣನಿಯಾಮಕತ್ವವು 'ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ' ಎಂಬಲ್ಲಿ ಪ್ರತೀತವಾಗುತ್ತಿಲ್ಲ. ಈ ಎಲ್ಲಾ ಕಾರಣಗಳಿಂದ ಪ್ರಾಣಾದಿನಿಯಾಮಕತ್ವಧರ್ಮವು ವಿಷ್ಣುವಿನಲ್ಲಿ ಸಾವಕಾಶವಾಗಿದೆಯೆಂದು ಸ್ಪಷ್ಟವಾಗುತ್ತದೆ.

**प्रकाशः –**

ननूक्तं लिङ्गान्यप्यनवकाशानीत्यतो न्यायविवरणोक्तं सावकाशत्वं "तच्च लिङ्गं विष्णोरेव" इति भाष्यादौ किञ्चिद्विवृतं प्रपञ्चयति – लिङ्गानि त्विति ।।

ವಿವರಣೆ - ಹಿಂದಿನ ಮೂಲದಲ್ಲಿ ಶ್ರುತಿಗಳೆಲ್ಲವೂ ವಿಷ್ಣುವಿನಲ್ಲಿ ನಿರವಕಾಶವಾಗಿವೆಯೆಂದು ಸಮರ್ಥಿಸಲಾಯಿತು. ಪ್ರಕೃತ ಪೂರ್ವಪಕ್ಷಿಯು ಶ್ರುತಿಗಳಂತೆ ಲಿಂಗಗಳೆಲ್ಲವೂ ಮುಖ್ಯಪ್ರಾಣದೇವರ ವಿಷಯದಲ್ಲಿ ನಿರವಕಾಶವೇ ಆಗಿವೆಯಲ್ಲವೇ? ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಉತ್ತರವನ್ನು ನೀಡುವುದಕ್ಕಾಗಿ ನ್ಯಾಯವಿವರಣದಲ್ಲಿ ಪೂರ್ವಪಕ್ಷಲಿಂಗಗಳಿಗೆಲ್ಲಾ ಸಾವಕಾಶತ್ವವನ್ನು ಹೇಳಿರುತ್ತಾರೆ. ಮತ್ತು ಭಾಷ್ಯದಲ್ಲಿಯೂ ಸಹ 'ತಚ್ಚ ಲಿಂಗಂ ವಿಷ್ಣೋರೇವ' ಎಂಬ ವಾಕ್ಯದಿಂದ ಪೂರ್ವಪಕ್ಷಲಿಂಗಗಳಿಗೆ ಸಾವಕಾಶತ್ವವನ್ನು ಸ್ವಲ್ಪ ವಿವರಿಸಿದ್ದಾರೆ. ಅದನ್ನು ಪ್ರಕೃತ ಗ್ರಂಥಕಾರರು 'ಲಿಂಗಾನಿ ತು' ಇತ್ಯಾದಿ ಗ್ರಂಥದಿಂದ ವಿಸ್ತಾರವಾಗಿ ಹೇಳುತ್ತಿದ್ದಾರೆ.

**प्रकाशः** – प्राणादिनियन्तृत्वं विष्णावाह – **सर्वेति** ।। **प्रासादेति** ।। केचित्प्रासादवासिनः केचिद्भूमिवासिनः केचिदुभयवासिनः । तत्र यथोभयवासिनः प्रासादवासिग्रहणेन भूमिवासिग्रहणेन च गृह्यन्ते तथेहापि प्राणादिनियामकग्रहणेन प्राणतदितरसर्वनियामको ग्रहीतुं शक्य इत्यर्थः ।

ಪ್ರಾಣಾದಿನಿಯಂತೃತ್ವವನ್ನು ವಿಷ್ಣುವಿನಲ್ಲಿ ಸಾವಕಾಶವೆಂದು 'ಸರ್ವ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

ಪ್ರಾಸಾದವಾಸಿನ್ಯಾಯವನ್ನು ಹೀಗೆ ತಿಳಿಯಬೇಕು - ಕೆಲವರು ಮಹಡಿಯಲ್ಲಿ ವಾಸಿಸುತ್ತಾರೆ, ಕೆಲವರು ಭೂಮಿಯಲ್ಲಿ ವಾಸಿಸುತ್ತಾರೆ, ಇನ್ನೂ ಕೆಲವರು ಎರಡೂ ಕಡೆಯೂ ವಾಸಿಸುತ್ತಾರೆ. ಮಹಡಿಯಲ್ಲಿ ವಾಸಿಸುತ್ತಾರೆಂದು ಹೇಳಿದಾಗ ಎರಡೂ ಕಡೆ ವಾಸಿಸುವವರನ್ನು ವಿವಕ್ಷಿಸಬಹುದು. ಅದರಂತೆ ಭೂಮಿಯಲ್ಲಿ

ವಾಸಿಸುತ್ತಾರೆಂಬುದನ್ನು ವಿವಕ್ಷಿಸಿದಾಗಲೂ ಎರಡೂ ಕಡೆ ವಾಸಿಸುವವರನ್ನು ವಿವಕ್ಷಿಸಲು ಬರುತ್ತದೆ. ಅದರಂತೆ ಪ್ರಕೃತ ಪ್ರಾಣಾದಿನಿಯಾಮಕ ಎಂಬ ಪ್ರಯೋಗದಿಂದ ಪ್ರಾಣ ಹಾಗೂ ಇತರ ಸರ್ವನಿಯಾಮಕನನ್ನು ಸ್ವೀಕರಿಸಲು ಬರುತ್ತದೆ.

**प्रकाशः – विवृतश्चायं प्रासादवासिन्यायो महाभाष्ये प्रथमपादे ''मुखनासिकावचनोऽनुनासिकः'' इत्यत्र ।**

ಈ ಪ್ರಾಸಾದವಾಸಿನ್ಯಾಯವನ್ನು ಮಹಾಭಾಷ್ಯದ ಪ್ರಥಮಪಾದದಲ್ಲಿ 'ಮುಖನಾಸಿಕಾವಚನೋಽನುನಾಸಿಕಃ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ವಿವರಿಸಲಾಗಿದೆ.

**प्रकाशः – प्रागुक्तैन्द्राग्नादिवैषम्यमाह – ऐन्द्रेति ।। ''ऐन्द्राग्नमेकादशकपालम्'' इत्यादाविन्द्राग्नीदेवता अस्येति विगृह्य ''साऽस्य देवता''- इत्यण्प्रत्ययस्योभाभ्यां परत उत्पादितत्वेन द्वयोरन्योन्यसापेक्षयोरेकमेव देवतात्वं व्यासज्यवृत्तिः । अन्यथा प्रत्येकं देवतात्वे ''समर्थः पदविधिः'' इति सूत्रात्समर्थानुवृत्तेस्तद्धितेऽपि भावेन प्रत्येकं देवताकारकात्तद्धितोत्पत्तेरैन्द्रमाग्नेयमिति पृथङ्निर्देशस्स्यात् । आग्नेयमित्यत्र त्वितरनिरपेक्षाग्नेरेव देवतात्वस्य तद्धितेन बोधितत्वात्तदाऽत्र तस्यैव ग्रहणं नान्यस्येत्यर्थः ।।**

ಹಿಂದೆ ಪೂರ್ವಪಕ್ಷಿಯು ಆಗ್ನೇಯಶಬ್ದದಿಂದ ಅಗ್ನಿಸಂಬಂಧಿಯಾದ ಪುರೋಡಾಶವನ್ನಷ್ಟೇ ಸ್ವೀಕರಿಸಲಾಗುತ್ತದೆ. ಐಂದ್ರಾಗ್ನ ಸಂಬಂಧಿಯಾದ ಪುರೋಡಾಶವನ್ನಾಗಲೀ, ಅಗ್ನೀಷೋಮೀಯ ಸಂಬಂಧಿಯಾದ ಪುರೋಡಾಶವನ್ನಾಗಲೀ ಸ್ವೀಕರಿಸುವುದಿಲ್ಲವೆಂದು ಹೇಳಿದ್ದನು. ಪೂರ್ವಮೀಮಾಂಸೆಯ ಈ ದೃಷ್ಟಾಂತವು ವಿಷಮವಾಗಿದೆಯೆಂಬುದನ್ನು ಪ್ರಕೃತ ಗ್ರಂಥಕಾರರು 'ಐಂದ್ರಾಗ್ನಾದೌ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

'ಐಂದ್ರಾಗ್ನಮೇಕಾದಶಕಪಾಲಮ್' ಇತ್ಯಾದಿ ಸ್ಥಳಗಳಲ್ಲಿ 'ಇಂದ್ರಾಗ್ನೀದೇವತಾ ಅಸ್ಯ' ಎಂದು ವಿಗ್ರಹ ಮಾಡಿದಾಗ 'ಸಾ ಸ್ಯ ದೇವತಾ' ಎಂಬರ್ಥದಲ್ಲಿ ಇಂದ್ರ ಮತ್ತು ಅಗ್ನಿ ಶಬ್ದಗಳ ಮೇಲೆ ಒಟ್ಟಿಗೆ 'ಅಣ್' ಪ್ರತ್ಯಯವನ್ನು ವಿಧಿಸಲಾಗಿದೆ. ಇಬ್ಬರಲ್ಲಿರುವ ದೇವತಾತ್ವವೂ ಕೂಡ ಪರಸ್ಪರ ಸಾಪೇಕ್ಷಿತವಾಗಿದೆ. ಆದ್ದರಿಂದ ದೇವತಾತ್ವವು ವ್ಯಾಸಜ್ಯವೃತ್ತಿ ಧರ್ಮವಾಗಿದೆ. ಒಂದು ವೇಳೆ ಇಂದ್ರನಲ್ಲಿರುವ ದೇವತಾತ್ವವೇ ಬೇರೆ, ಅಗ್ನಿಯಲ್ಲಿರುವ ದೇವತಾತ್ವವೇ ಬೇರೆ ಎಂದಾಗಿದ್ದಲ್ಲಿ, ಎರಡೂ ಪ್ರಾತಿಪದಿಕಗಳ ಮೇಲೆ ತದ್ಧಿತ ಪ್ರತ್ಯಯವು ಉತ್ಪನ್ನವಾಗಬೇಕು. 'ಇಂದ್ರೋ ಅಸ್ಯ ದೇವತಾ ಇತಿ ಐಂದ್ರಃ' 'ಅಗ್ನಿಃ ಅಸ್ಯ ದೇವತಾ ಇತಿ ಆಗ್ನೇಯಃ' ಎಂಬುದಾಗಿ. ಆದ್ದರಿಂದ 'ಐಂದ್ರಮ್ ಆಗ್ನೇಯಮ್' ಎಂಬುದಾಗಿಯೇ ಪ್ರಯೋಗವಿರಬೇಕಿತ್ತು. 'ಐಂದ್ರಾಗ್ನಮ್' ಎಂಬ ಪ್ರಯೋಗವು ತಪ್ಪಾಗಬೇಕಾದೀತು. ಈ ವಿಷಯದಲ್ಲಿ 'ಸಮರ್ಥಃ ಪದವಿಧಿಃ' ಎಂಬ ಸೂತ್ರವೇ ಆಧಾರವಾಗಿವೆ. ಏಕೆಂದರೆ ಸಾಮರ್ಥ್ಯವಿದ್ದರೆ ಸಮಾಸವಾಗುತ್ತದೆಂದು ಈ ಸೂತ್ರದಲ್ಲಿ

ಹೇಳಲಾಗಿದೆ. 'ತದ್ಧಿತಾಃ' ಎಂಬ ತದ್ಧಿತಾಧಿಕಾರದಲ್ಲಿಯೂ ಈ ಸೂತ್ರವು ಅನುವೃತ್ತವಾಗುತ್ತಿದೆ. ಆವಾಗ ಸಮರ್ಥವಾದ ಪದದ ಮೇಲೆಯೇ ತದ್ಧಿತಪ್ರತ್ಯಯವನ್ನು ವಿಧಿಸಿದಂತಾಗುತ್ತದೆ. ಯಾವ ಪದವು ಇತರ ನಿರಪೇಕ್ಷಿತವಾಗಿ ಸಮರ್ಥವಾಗಿರುತ್ತದೋ, ಅದಕ್ಕೆ 'ತದ್ಧಿತ' ಪ್ರತ್ಯಯವು ಬರುತ್ತದೆಂದು ಹೇಳಿದಂತಾಗುತ್ತದೆ. ಒಂದು ವೇಳೆ ಇತರ ನಿರಪೇಕ್ಷವಾಗಿ ಇಂದ್ರನಿಗೆ ದೇವತಾತ್ವವು ಇರುವುದಾದರೆ, ಅದರ ಮೇಲೆ ತದ್ಧಿತಪ್ರತ್ಯಯವು ಬಂದು 'ಐಂದ್ರಮ್' ಎಂದಾಗಬೇಕಾದೀತು. ಕೇವಲ ಅಗ್ನಿಗೂ ದೇವತಾತ್ವವು ಪ್ರತ್ಯೇಕವಾಗಿರುವುದರಿಂದ, ಹೀಗೆ ಅಗ್ನಿಪ್ರಾತಿಪದಿಕದ ಮೇಲೆ ತದ್ಧಿತಪ್ರತ್ಯಯವು ಬಂದು 'ಆಗ್ನೇಯಮ್' ಎಂಬ ಪ್ರಯೋಗವು ಬರಬೇಕಾದೀತು. ಹೀಗೆ 'ಐಂದ್ರಾಗ್ನಮ್' ಎಂಬ ಪ್ರಯೋಗವು ತಪ್ಪಾಗುತ್ತದೆ. ಆದರೆ 'ಆಗ್ನೇಯಮ್' ಎಂಬಲ್ಲಿ ಇತರ ನಿರಪೇಕ್ಷಿತವಾದ ಅಗ್ನಿಗೆ ಮಾತ್ರ ದೇವತಾತ್ವವನ್ನು ತದ್ಧಿತಪ್ರತ್ಯಯವು ಬೋಧಿಸುತ್ತಿದೆ. ಆದ್ದರಿಂದ ಅಲ್ಲಿ ಕೇವಲ ಅಗ್ನಿಯನ್ನಷ್ಟೇ ಸ್ವೀಕರಿಸಬೇಕು. ಉಳಿದ ದೇವತೆಯನ್ನು ಸ್ವೀಕರಿಸಬಾರದು. ಹೀಗೆ 'ಆಗ್ನೇಯ' ಶಬ್ದದಿಂದ ಅಗ್ನೀಷೋಮಾದಿಗಳಿಗೆ ಸಂಬಂಧಿಸಿದ ಪುರೋಡಾಶವನ್ನು ಸ್ವೀಕರಿಸಬಾರದೆಂದು ವ್ಯಾಕರಣದಿಂದಲೇ ಸ್ಪಷ್ಟವಾಗುತ್ತದೆ.

**प्रकाशः – प्रत्येकमिति ।।** अन्यथा पृथिव्यप्तेजोवाय्वादीन् यमयतीति श्रूयेतेति भावः ।

ಆದರೆ ಪ್ರಕೃತ ಪರಮಾತ್ಮನಲ್ಲಿರುವ ನಿಯಮನ ಎಂಬ ಕ್ರಿಯೆಯು ವ್ಯಾಸಜ್ಯವೃತ್ತಿಯಾಗಿಲ್ಲ. ಏಕೆಂದರೆ ಶ್ರುತಿಯಲ್ಲಿ ಪೃಥಿವೀ, ಅಪ್, ತೇಜಸ್ಸು, ವಾಯು ಮೊದಲಾದವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ನಿಯಮನ ಮಾಡುತ್ತಾನೆಂದು ಹೇಳಲಾಗಿದೆ. ಹೊರತು, 'ಪೃಥಿವ್ಯಪ್ತೋಜೋವಾಯ್ವಾದೀನ್ ಯಮಯತಿ' ಎಂದು ಒಟ್ಟಿಗೆ ಹೇಳಿರುವುದಿಲ್ಲ. ಪ್ರತ್ಯೇಕ ಪ್ರತ್ಯೇಕವಾಗಿ ನಿಯಮನ ಮಾಡುತ್ತಾನೆಂದು ಹೇಳಿದ್ದರಿಂದ ವ್ಯಾಸಜ್ಯವೃತ್ತಿ ಧರ್ಮವಾಗುವುದಿಲ್ಲವೆಂದು ತಿಳಿಯಬೇಕು.

**प्रकाशः – यद्देवानिति ।** ''तद्वै त्वं प्राणोऽभवः । महान् भोगः प्रजापतेः । भुजः करिष्यमाणः । यद्देवान्'' इति तैत्तिरीयवाक्यस्य वैष्णवत्वं च ''अत एव प्राणः'' इत्यत्र सिद्धमिति भावः ।

'ತದ್ವೈ ತ್ವಂ ಪ್ರಾಣಃ ಅಭವಃ । ಮಹಾನ್ ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯಮಾಣಃ । ಯದ್ದೇವಾನ್' ಎಂಬ ತೈತ್ತಿರೀಯವಾಕ್ಯದಲ್ಲಿ ಶ್ರುತವಾದ ಪ್ರಾಣನಿಯಾಮಕತ್ವವು ವಿಷ್ಣುವಿನಲ್ಲಿಯೇ ಇರುತ್ತದೆಂದು 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲೇ ಸಿದ್ಧವಾಗಿದೆಯೆಂದು ತಿಳಿಯಬೇಕು.

**प्रकाशः –** उक्तं च भाष्ये ''तस्यैव प्राणत्वोक्तेस्तद्वै त्वं प्राणोऽभव इति'' इति । ''तं भूतिरिति देवा उपासाञ्चक्रिरे'' इत्यैतरेये ''प्राणस्तथा'' इत्यत्रोक्तरीत्या विष्णोरेव सर्वदेवतोपास्यत्वश्रवणादित्यर्थः ।

ಇದನ್ನೇ ಭಾಷ್ಯದಲ್ಲಿ 'ತಸ್ಯೈವ ಪ್ರಾಣತ್ವೋಕ್ತೇಸ್ತದ್ವೈ ತ್ವಂ ಪ್ರಾಣೋಽಭವ ಇತಿ' ಇತ್ಯಾದಿ ವಾಕ್ಯಗಳಿಂದ ಸಮರ್ಥಿಸಿದ್ದಾರೆ.

'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ' ಎಂದು ಐತರೇಯೋಪನಿಷತ್ತಿನಲ್ಲಿ 'ಪ್ರಾಣಸ್ತಥಾಽನುಗಮಾತ್' ಎಂಬ ಸೂತ್ರದಲ್ಲಿ ಹೇಳಿದಂತೆ ವಿಷ್ಣುವೇ ಸರ್ವದೇವೋಪಾಸ್ಯನಾಗಿದ್ದಾನೆಂದು ಕೇಳಿಸುತ್ತಿದೆ.

**प्रकाशः – श्रुत्यन्तरे षट्प्रश्ने । प्राणशब्दितसर्वेन्द्रियाभिमानिनियामकत्व-श्रवणेऽपीह प्राणापाननियामकत्वस्यैव श्रुतत्वेन वायुलिङ्गाप्रतीतेरित्यर्थः ।**

'ಶ್ರುತ್ಯಂತರೇ' ಎಂದರೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ ಎಂದರ್ಥ. 'ಪ್ರಾಣ' ಶಬ್ದದಿಂದ ಸರ್ವೇಂದ್ರಿಯಾಭಿಮಾನಿ ನಿಯಾಮಕತ್ವವು ಶ್ರುತವಾಗಿದ್ದರೂ ಪ್ರಕೃತ ಪ್ರಾಣಾಪಾನನಿಯಾಮಕತ್ವವಷ್ಟೇ ಶ್ರುತವಾಗಿದೆ. ಮುಖ್ಯಪ್ರಾಣದೇವರ ಲಿಂಗವು ಶ್ರುತವಾಗಿರುವುದಿಲ್ಲ ಎಂದು ಪೂರ್ವಪಕ್ಷಕಾರರಿಗೆ ಇದು ಬಾಧಕವೇ ಆಗಿದೆಯೆಂದು ತಿಳಿಯಬೇಕು.

**गुरुराजीयम् –** ननु वामनिशब्दस्य एष उ एव वामनिरित्यादिश्रुत्यादिभि-र्ब्रह्मनिष्ठत्वेऽपि वामनशब्दस्य न युक्तः । तयोर्भिन्नविषयत्वादित्यत आह – **वामनवामनिशब्दयोश्चेति ।। लोकवेदाधिकरणन्यायेनेति ।।** य एव लौकिकास्त एव वैदिका इति लोकवेदाधिकरणन्यायेनेत्यर्थः । ननु ब्रह्मणि वामनशब्दो न युज्यते । तत्राल्पमात्रपरिमाणत्वादिरूपवामनत्वायोगादित्यत आह – **एवञ्चेति ।।** ननु परमात्मनः सर्वनियामकत्वाद्विशेषाकारेण प्राणादिनियामकत्वव्यपदेशोऽनुपपन्न इत्यत आह – **सर्वनियामकत्वादिमतीति ।। प्रासादवासिन्यायेनेति ।।** प्रासादादधो वसति ऊर्ध्वं च वसत्यपि कदाचित्प्रासादवासित्वस्यापि सत्त्वात्प्रासादवासित्व-व्यपदेशवदित्यर्थः । नन्वेवमाग्नेयं चतुर्धा करोतीत्युक्त ऐन्द्राग्नस्यापि धीः स्यादित्यत आह – **ऐन्द्राग्नादौ त्विति ।।** परोक्तं समाख्यानं दूषयति – **एवमेवैष प्राण इति ।। प्रतीतेश्चेति ।।** अप्रतीतेर्वाक्यद्वये प्राणस्य स्थानभेदोक्तिरिति भावः ।

## ಸಾರ

ಪೂರ್ವಪಕ್ಷ ಮಾಡುವಾಗ ಪ್ರಾಣಾದಿನಿಯಾಮಕತ್ವ ಹಾಗೂ ಸರ್ವದೇವೋಪಾಸ್ಯತ್ವ ಎಂಬೆರಡು [illegible]ಳು ಮುಖ್ಯಪ್ರಾಣದೇವರಲ್ಲಿ ಸಾವಕಾಶವಾಗಿವೆ. ವಿಷ್ಣುವಿನಲ್ಲಿ ಕಥಂಚಿದಪಿ ಬರಲು ಸಾಧ್ಯವಿಲ್ಲವೆಂದು [illegible]ರ್ಥಿಸಿ[illegible]ರು. ಆದರೆ ಎಲ್ಲರನ್ನು ನಿಯಮನ ಮಾಡುವಂತಹ ಭಗವಂತನಿಗೆ ಪ್ರಾಣಾದಿನಿಯಾಮಕತ್ವವು [illegible]ಂದೇ ಬರ[illegible]ತ್ತದೆ. ಆದರೆ ಸಕಲ ದೇವತೆಗಳಿಂದ ಉಪಾಸ್ಯನಾದ ವಿಷ್ಣುವಿನಲ್ಲಿ ದೇವೋಪಾಸ್ಯತ್ವವೂ ಕೂಡ

ಬಂದೇ ಬರುತ್ತದೆ. ಉದಾಹರಣೆ - ಮಹಡಿಯಲ್ಲಿ ಮನೆಯನ್ನು ಕಟ್ಟಿ ವಾಸಿಸುತ್ತಾರೆ. ಕೆಲವರು ಭೂಮಿಯಲ್ಲಿ ಮನೆಯನ್ನು ಕಟ್ಟಿ ವಾಸಿಸುತ್ತಾರೆ. ಕೆಲವರು ಎರಡೂ ಕಡೆಯೂ ವಾಸಮಾಡುತ್ತಿರುತ್ತಾರೆ. ಭೂಮಿಯಲ್ಲಿ ವಾಸಿಸುವವರು ಎಂದು ಹೇಳಿದಾಗ ಎರಡೂ ಕಡೆ ವಾಸಿಸುವವರನ್ನು ವಿವಕ್ಷಿಸಲು ಬರುತ್ತದೆ. ಮಹಡಿಯಲ್ಲಿ ವಾಸಿಸುವವರು ಎಂದು ಹೇಳಿದಾಗಲೂ, ಎರಡೂ ಕಡೆ ವಾಸಿಸುವವರನ್ನು ವಿವಕ್ಷಿಸಲು ಬರುತ್ತದೆ. ಇದು ಲೋಕಪ್ರಸಿದ್ಧವಾದ ಪ್ರಾಸಾದವಾಸಿನ್ಯಾಯ. ಈ ನ್ಯಾಯದಂತೆ ಪ್ರಕೃತ ಸರ್ವನಿಯಾಮಕನಾದ ವಿಷ್ಣು ಪ್ರಾಣಾಪಾನಾದಿಗಳಿಗೂ ಕೂಡ ನಿಯಾಮಕನಾಗಲೇ ಬೇಕು. ಅದರಂತೆ ಸಕಲ ದೇವತೆಗಳಿಂದ ಉಪಾಸ್ಯನಾದ ವಿಷ್ಣು ಕೆಲವು ದೇವತೆಗಳಿಂದಲೂ ಉಪಾಸ್ಯನಾಗಲೇಬೇಕು. ಆದ್ದರಿಂದ ವಿಷ್ಣುವಿನಲ್ಲಿ ಈ ಎರಡು ಮುಖ್ಯಪ್ರಾಣದೇವರ ಲಿಂಗಗಳು ಸಾವಕಾಶವಾಗಿವೆಯೆಂದು ತಿಳಿಯಬೇಕು.

///////////////////////////////////////////////////////////

• • • • •

## ಮಧ್ಯಮತ್ವಲಿಂಗಕ್ಕೆ ಸಾವಕಾಶತ್ವ ಸಮರ್ಥನೆ

### तात्पर्यचन्द्रिका

**मध्ये वामनमित्यत्र च मध्यशब्दो देशवाची । ''ऊर्ध्वं प्राणम्'' इति देशवाचकोर्ध्वशब्दसाहचर्यात् । ऊर्ध्वत्वप्रतियोगित्वाच्च ।**

ಅನುವಾದ - ಮಧ್ಯಮತ್ವಲಿಂಗವೂ ಸಹ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಏಕೆಂದರೆ 'ಮಧ್ಯೇ ವಾಮನಮಾಸೀನಮ್' ಎಂಬಲ್ಲಿರುವ ಮಧ್ಯ ಶಬ್ದವು ತಾರತಮ್ಯದಲ್ಲಿರುವ ಮಧ್ಯಮತ್ವವನ್ನು ಹೇಳುತ್ತಿಲ್ಲ. ಹೊರತಾಗಿ ದೇಶವಿಶೇಷವನ್ನೇ ಹೇಳುತ್ತಿದೆ. ಏಕೆಂದರೆ 'ಊರ್ಧ್ವಂ ಪ್ರಾಣಮ್' ಎಂಬುದಾಗಿ ದೇಶವಾಚಿಯಾದ ಊರ್ಧ್ವಶಬ್ದದ ಸಾಹಚರ್ಯವಿರುವುದರಿಂದ. ಮತ್ತು ಊರ್ಧ್ವತ್ವಕ್ಕೆ ಪ್ರತಿಯೋಗಿಯಾದ್ದರಿಂದ 'ಮಧ್ಯ' ಎಂಬ ದೇಶವಿಶೇಷವನ್ನೇ 'ಮಧ್ಯಮ' ಶಬ್ದವು ಹೇಳಬೇಕು.

**एवञ्च यथा ''त्रिःप्रथमामन्वाह'' इत्यत्र प्रथमाशब्दो या ऋक् यत्र प्रकृतौ विकृतौ वा प्रथमस्थानस्था तत्पर एव । नतु प्रकृतौ प्रथमस्थानस्थप्रवोवाजीयऋग्विशेषमात्रपरः ।**

ಆದ್ದರಿಂದ ಮಧ್ಯಮಶಬ್ದಕ್ಕೆ ದೇಶವಿಶೇಷವೆಂಬರ್ಥವನ್ನು ಹೇಳುವುದು ತಪ್ಪಲ್ಲ. ಪೂರ್ವಮೀಮಾಂಸೆಯಲ್ಲಿ 'ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಮ್' ಎಂಬ ವಾಕ್ಯವನ್ನು ವಿಚಾರ ಮಾಡುವಾಗ ಹೀಗೆ ನಿರ್ಣಯಿಸಿದ್ದಾರೆ. ಇಲ್ಲಿರುವ ಪ್ರಥಮಾ ಎಂಬ ಶಬ್ದವು ಪ್ರಕೃತಿಯಾಗದಲ್ಲಾಗಲೀ, ವಿಕೃತಿಯಾಗದಲ್ಲಾಗಲೀ, ಪ್ರಥಮಸ್ಥಾನದಲ್ಲಿರುವ ಋಕ್ ಮಂತ್ರವನ್ನೇ ಪ್ರತಿಪಾದಿಸುತ್ತದೆ. ಹೊರತು, ಪ್ರಕೃತಿಯಾಗದಲ್ಲಷ್ಟೇ ಪ್ರಥಮಸ್ಥಾನದಲ್ಲಿರುವ 'ಪ್ರವೋವಾಜೀಯ' ಎಂಬ ಋಗ್ವಿಶೇಷವನ್ನಷ್ಟೇ ಹೇಳುತ್ತಿಲ್ಲ. ಕೇವಲ ಪ್ರಥಮಸ್ಥಾನವೆಂಬ ದೇಶವಿಶೇಷವನ್ನೇ ಹೇಳುತ್ತಿದೆ ಎಂದು ಹೇಳಲಾಗಿದೆ.

**एवं मध्यशब्दोऽपीह "ऊर्ध्वं प्राणम्" इति प्राणस्य स्थानान्तरनिर्देशात्तत्यागेन मध्यमस्थानस्थब्रह्मपरः ।**

ಈ ದೃಷ್ಟಾಂತದಂತೆ ಪ್ರಕೃತ 'ಮಧ್ಯ' ಎಂಬ ಶಬ್ದವೂ ಸಹ 'ಊರ್ಧ್ವಂ ಪ್ರಾಣಮ್' ಎಂಬಲ್ಲಿ ಪ್ರಾಣನಿಗೆ ಸ್ಥಾನಾಂತರವನ್ನು ನಿರ್ದೇಶ ಮಾಡಿರುವುದರಿಂದ ಅಂತಹ ಊರ್ಧ್ವ ದೇಶವನ್ನು ಬಿಟ್ಟು, ಮಧ್ಯದೇಶದಲ್ಲಿ ಬ್ರಹ್ಮನಿದ್ದಾನೆಂದು ಹೇಳುತ್ತಿದೆ.

**नतु श्रुत्यन्तरे मध्यमशब्दोक्तप्राणपरः । तस्माल्लिङ्गानि सावकाशानि ।**

ಹೊರತು, ಶ್ರುತ್ಯಂತರದಲ್ಲಿರುವ ಮಧ್ಯಮಶಬ್ದದಿಂದ ಪ್ರತಿಪಾದ್ಯನಾದ ಮುಖ್ಯಪ್ರಾಣನನ್ನು ಹೇಳುತ್ತಿಲ್ಲ. ದೇಶವಿಶೇಷವನ್ನೇ ಹೇಳುತ್ತಿದೆ. ಆದ್ದರಿಂದ ಮಧ್ಯಮತ್ವ ಎಂಬ ಲಿಂಗವೂ ಕೂಡ ಸಾವಕಾಶವೆಂದು ಸಿದ್ಧವಾಯಿತು.

**तदुक्तं न्यायविवरणे "लिङ्गानां परमात्मन्यवकाशो विद्यत एव" इति ।**

ಇದನ್ನೇ ನ್ಯಾಯವಿವರಣದಲ್ಲಿ 'ಲಿಂಗಾನಾಂ ಪರಮಾತ್ಮನ್ಯವಕಾಶೋ ವಿದ್ಯತೇ ಏವ' ಮಧ್ಯಮತ್ವಾದಿಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶವಿದ್ದೇ ಇರುತ್ತದೆ ಎಂದು ಹೇಳಿದ್ದಾರೆ.

**प्रकाशः –**

एवं लिङ्गद्वयं विष्णावुपपाद्य मध्यमत्वमपि सावकाशयति – **मध्य इति** ।।

ವಿವರಣೆ - ಇಲ್ಲಿಯ ತನಕ 'ಪ್ರಾಣವ್ಯವಸ್ಥಾಪಕತ್ವ', 'ದೇವೋಪಾಸ್ಯತ್ವ' ಎಂಬೆರಡು ಲಿಂಗಗಳಿಗೆ ಸಾವಕಾಶತ್ವವನ್ನು ಉಪಪಾದನೆ ಮಾಡಿ, ಪ್ರಕೃತ ಮಧ್ಯಮತ್ವವೆಂಬ ಲಿಂಗಕ್ಕೂ ಕೂಡ ಸಾವಕಾಶತ್ವವನ್ನು ಉಪಪಾದನೆ ಮಾಡುತ್ತಿದ್ದಾರೆ 'ಮಧ್ಯೇ' ಇತ್ಯಾದಿ ಗ್ರಂಥದಿಂದ.

**प्रकाशः – साहचर्यादिति** ।। यथा "वत्समालभेत" इति श्रुतवत्सालम्भस्य गोदोहनादिगुणकर्मसाहचर्येण गुणकर्मत्वं तथेति भावः ।

ಪೂರ್ವಮೀಮಾಂಸೆಯಲ್ಲಿ 'ವತ್ಸಮಾಲಭೇತ' ಎಂಬಲ್ಲಿ ಶ್ರುತವಾದ ವತ್ಸಾಲಂಭನವು ಗುಣಕರ್ಮವೆಂದು ನಿರ್ಣಯಿಸಿದ್ದಾರೆ. ಗೋದೋಹನವೇ ಮೊದಲಾದ ಅನೇಕ ಗುಣಕರ್ಮಗಳ ಸಾಹಚರ್ಯದಿಂದ ವತ್ಸಾಲಂಭನವೂ ಕೂಡ ಗುಣಕರ್ಮವೇ ಆಗುತ್ತದೆ. ಅದರಂತೆ ಪ್ರಕೃತ ಊರ್ಧ್ವತ್ವ ಮೊದಲಾದ ದೇಶವಿಶೇಷವಾಚಕಶಬ್ದಗಳ ಸಾಹಚರ್ಯದಿಂದ ಮಧ್ಯಶಬ್ದವೂ ಕೂಡ ದೇಶವಿಶೇಷಪ್ರತಿಪಾದಕವೇ ಆಗುತ್ತದೆ.

**प्रकाशः – ऊर्ध्वेति ।।** ऊर्ध्वशब्दस्य पूर्वसापेक्षत्वेन तत्प्रतियोगिसमर्पकत्वाच्च मध्यदेशवाचीत्यर्थः ।

'ಊರ್ಧ್ವ' ಶಬ್ದವು ಮತ್ತೊಂದು ದೇಶವಿಶೇಷವನ್ನು ಅಪೇಕ್ಷಿಸುತ್ತದೆ. ಆದ್ದರಿಂದ ಅದಕ್ಕೆ ಪ್ರತಿಯೋಗಿ ಸಮರ್ಪಕವಾದ ಮಧ್ಯಶಬ್ದವು ದೇಶವಿಶೇಷವನ್ನೇ ಪ್ರತಿಪಾದನೆ ಮಾಡಬೇಕು. ಹೊರತು ಅದಕ್ಕೆ ವಿರುದ್ಧವಾಗಿ ತಾರತಮ್ಯವನ್ನು ಹೇಳುವುದು ಅಸಂಗತವಾಗುತ್ತದೆ.

**प्रकाशः – अस्त्वेवं किं तत इत्यतो दृष्टान्तपूर्वं सङ्गमयति – एवन्ति ।।**

'ಮಧ್ಯ' ಶಬ್ದವು ದೇಶವಿಶೇಷವಾಚಕವೇ ಆಗಲಿ, ಇದರಿಂದೇನಾಯಿತು? ಎಂಬ ಪ್ರಶ್ನೆಗೆ ಪೂರ್ವಮೀಮಾಂಸೆಯ ದೃಷ್ಟಾಂತವನ್ನು ನೀಡುತ್ತಾ ಪ್ರಕೃತದಲ್ಲಿ ಸಮನ್ವಯ ಮಾಡುತ್ತಿದ್ದಾರೆ 'ಏವಂಚ' ಇತ್ಯಾದಿ ಗ್ರಂಥದಿಂದ.

**प्रकाशः –** नवमस्याद्यपादे "अभ्यासस्सामिधेनीनां प्राथम्यात् स्थानधर्मस्स्यात्" इति नवमेऽधिकरणे दर्शपूर्णमासयोः पञ्चदशसामिधेनीर्विधायैकादशर्चः पठित्वा "त्रिःप्रथमामन्वाह । त्रिरुत्तमाम् । ताः पञ्चदश सम्पद्यन्ते" इति श्रुतं वाक्यमुदाहृत्य त्रिरभ्यासः किं प्राथम्योपलक्षिताया ऋचः प्रवोवाजीयाया धर्मः । तथाच यत्र तत्रस्थप्रवोवाजीया त्रिरभ्यसितव्या उत प्रथमस्थानधर्मः । ततश्च प्रवोवाजीयाया अन्याऽपि या विकृतिषु प्रथममुच्यते साऽप्यूहेन त्रिरभ्यसितव्येति विशये

'ಅಭ್ಯಾಸ ಸಾಮಧೇನೀನಾಂ ಪ್ರಾಥಮ್ಯಾತ್ ಸ್ಥಾನಧರ್ಮಃ ಸ್ಯಾತ್'[१] (೯-೧-೯)

---

(१) भाट्टसङ्ग्रहः –

**अथ दशमं त्रिः प्रथमामन्वाहेत्यादिष्वभ्यासस्य स्थानधर्मताधिकरणम् (सूत्रम् ३२)**

**अभ्यासः सामिधेनीनां प्राथम्यात्स्थानधर्मः स्यात् ॥३२॥**

पूर्वन्यायेन शङ्कनात्सङ्गतिः । दर्शपूर्णमासयोः "पञ्चदश सामिधेनीरनुब्रूयात्" इति विधायैकादशर्चः पठित्वा "त्रिः प्रथमामन्वाह त्रिरुत्तमाम् । ताः पञ्चदश सम्पद्यन्ते" इति श्रूयते । तत्र त्रिरभ्यासः किं प्रथमाशब्दलक्षितायाः प्रकरणे प्रथमपठितायाः "प्र वो वाजा अभिद्यवः" इति ऋचो धर्मः, उत यत् प्रथमस्थानगतं तद्धर्म इति सन्देहः । पूर्वत्र पत्नीसंयाजान्तताऽन्त्याहर्व्यतिरिक्ताहर्विशेषधर्मः, तथा स्त्रीलिङ्गनिर्देशात्प्रथमाशब्देन "प्र वो वाजा" इति ऋच एव ग्रहणात्तस्या एव त्रिरभ्यासरूपो धर्म इति प्राप्ते, प्रत्ययादपि प्रबलप्रतिपादिकेन वचनवृत्त्या प्रथमस्थानं प्रतीयते । ऋक् तु लक्षणया । नच प्रातिपदिकानुसारेण मुख्यार्थसम्भवे दुर्बलस्त्रीप्रत्ययानुरोधेन लक्षणा युक्ता ।

ದರ್ಶಪೂರ್ಣಮಾಸ ಪ್ರಕರಣದಲ್ಲಿ ಸಾಮಿಧೇನೀ ಮಂತ್ರಗಳನ್ನು ಹದಿನೈದು ಬಾರಿ ಉಚ್ಚರಿಸಬೇಕೆಂದು ವಿಧಿಸಲಾಗಿದೆ. ಆದರೆ ಕೇವಲ ಹನ್ನೊಂದು 'ಋಜ್' ಮಂತ್ರಗಳಷ್ಟೇ ಶ್ರುತವಾಗುತ್ತಿವೆ. ಹೀಗಿರುವಾಗ ಹದಿನೈದು ಮಂತ್ರಗಳನ್ನು ಪಠಿಸುವುದು ಹೇಗೆ ಸಾಧ್ಯ? ಎಂಬ ವಿಚಾರವು ಪ್ರಾಪ್ತವಾದಾಗ ಶ್ರುತಿಯೇ ಪರಿಹಾರ ನೀಡುತ್ತದೆ. 'ತ್ರಿಃ ಪ್ರಥಮಾಮನ್ವಾಹ । ತ್ರಿರುತ್ತಮಾಮ್ । ತಾಃ ಪಂಚದಶ ಸಂಪದ್ಯಂತೇ' ಮೊದಲಿನ ಮೂರು ಮಂತ್ರಗಳನ್ನು ಮೂರುಬಾರಿ ಹೇಳಬೇಕು. ಕೊನೆಯದ್ದನ್ನು ಮೂರುಬಾರಿ ಹೇಳಬೇಕು. ಆವಾಗ ಹನ್ನೊಂದು ಮಂತ್ರಗಳೇ, ಹದಿನೈದು ಸಂಖ್ಯೆಯನ್ನು ಪಡೆಯುತ್ತವೆ ಎಂದು ಶ್ರುತಿಯು ಸಮಸ್ಯೆಯನ್ನು ಹೀಗೆ ಪರಿಹರಿಸಿದೆ. ಇಲ್ಲಿರುವ 'ತ್ರಿಃ ಪ್ರಥಮಾಮನ್ವಾಹ । ತ್ರಿರುತ್ತಮಾಮ್' ಎಂಬ ವಾಕ್ಯವನ್ನು ನೋಡಿದಾಗ ಪುನಃ ಸಂಶಯವು ಪ್ರಾಪ್ತವಾಗುತ್ತದೆ. 'ಪ್ರಥಮಾ' ಎಂಬ ಶಬ್ದವು ಪ್ರಥಮಸ್ಥಾನದಲ್ಲಿ ಇರುವಂತಹ 'ಪ್ರವೋವಾಜೀಯಾ' ಎಂಬ ಮಂತ್ರವನ್ನು ಮೂರುಬಾರಿ ಹೇಳಬೇಕೆಂದು ವಿಧಿಸುತ್ತಿದೆಯೋ, ಅಂದರೆ ಪ್ರಕೃತಿಯಾಗದಲ್ಲಾಗಲೀ, ವಿಕೃತಿಯಾಗದಲ್ಲೇ ಆಗಲಿ, ಪ್ರವೋವಾಜೀಯಾ ಮಂತ್ರವು ಎಲ್ಲಿದ್ದರೂ ಸಹ ಮೂರು ಬಾರಿ ಪಠಿಸಬೇಕೆಂದು ಹೇಳುತ್ತಿದೆಯೆಂಬುದಾಗಿ ಪ್ರಾಥಮ್ಯವು ಪ್ರವೋವಾಜೀಯಾ ಮಂತ್ರದ ಧರ್ಮವೋ, ಅಥವಾ ಪ್ರಥಮಸ್ಥಾನದಲ್ಲಿ ಯಾವುದೇ ಮಂತ್ರಗಳಿದ್ದರೂ ಅದನ್ನು ಮೂರುಬಾರಿ ಉಚ್ಚರಿಸಬೇಕೆಂದು ವಿವಕ್ಷಿಸಬೇಕಾದ್ದರಿಂದ ಪ್ರಾಥಮ್ಯವು ಪ್ರಥಮಸ್ಥಾನದ ಧರ್ಮವೋ? ಆದ್ದರಿಂದ ಪ್ರವೋವಾಜೀಯಾ ಮಂತ್ರವಷ್ಟೇ ಅಲ್ಲದೆ, ಬೇರೆ ಯಾವುದೇ ಮಂತ್ರಗಳಿದ್ದರೂ ಪ್ರಕೃತಿಯಾಗದಲ್ಲಾಗಲೀ, ವಿಕೃತಿಯಾಗದಲ್ಲಾಗಲೀ, ಮೊದಲಿರುವಂತಹ ಮಂತ್ರವನ್ನು ಮೂರು ಬಾರಿ ಉಚ್ಚರಿಸಬೇಕೆಂದು ತಿಳಿಯುತ್ತದೆ. ಹೀಗೆ ಪ್ರಾಥಮ್ಯವು ಪ್ರವೋವಾಜೀಯಾ ಮಂತ್ರದಧರ್ಮವೋ, ಅಥವಾ ಪ್ರಥಮಸ್ಥಾನದ ಧರ್ಮವೋ? ಎಂದು ಸಂಶಯ.

**ಪ್ರಕಾಶಃ – प्रथमामिति स्त्रीलिङ्गनिर्देशात्तस्या एवर्चः त्रिरभ्यास इति प्राप्ते**

ಪೂರ್ವಪಕ್ಷ - ಪ್ರಥಮಸ್ಥಾನವನ್ನು ನಿರ್ದೇಶಮಾಡುವ ವಿವಕ್ಷೆಯಿದ್ದಲ್ಲಿ, 'ಪ್ರಥಮಮ್' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. ಆದರೆ 'ಪ್ರಥಮಾಮ್' ಎಂಬುದಾಗಿ ಸ್ತ್ರೀಲಿಂಗವನ್ನು ನಿರ್ದೇಶಮಾಡಿರುವುದರಿಂದ, 'ಪ್ರವೋವಾಜೀಯಾ' ಎಂಬ ಶ್ರುತಿಯೆಂದೇ ವಿವಕ್ಷಿಸಬೇಕೆಂದು ತಿಳಿಯುತ್ತದೆ. ಆದ್ದರಿಂದ 'ಪ್ರವೋವಾಜೀಯಾ' ಮಂತ್ರವನ್ನು ಮೂರು ಬಾರಿ ಪಠಿಸಬೇಕೆಂದೇ ಶ್ರುತಿಯ ಅಭಿಪ್ರಾಯ.

---

तस्मात्प्रथमस्थानधर्मः ''यत्प्रथमं तत्त्रिरभ्यसितव्यम्'' इति । तच्च प्राथम्यं ''ताः पञ्चदश'' इति वाक्यशेषबलेन ऋगाश्रयत्वेनैव भवतीति स्त्रीलिङ्गं नित्यानुवादः । तथा **चायमर्थः** ''या प्रथमस्थानपठिता ऋक् ''प्र वो वाजा इति वा, अन्या वा, या काचित्तां त्रिरभ्यसेत्'' इति । तथा च **सूत्रम्** ॥ **अभ्यास इत्यादि** ॥ प्रथमोत्तमयोरिति शेषः । **सामिधेनीनां** प्रथमोत्तमयोरभ्यासः । **प्राथम्यात्** प्राथम्येनोपबन्धात् **स्थानधर्मः** प्रथमस्थानधर्मः **स्यादिति** । **फलन्तु पूर्वपक्षे,** ''प्र वो वाजा'' इति मन्त्रस्य विकृतिष्वादावन्ते मध्ये वा यत्र कचित् स्थितायास्त्रिरभ्यासः । तथा च नोहः । **सिद्धान्ते** तु, प्र वो वाजीयातोऽन्या या काचिद्विकृतौ प्रथमपठिता सा ऊहेन त्रिरभ्यसितव्येति ।

**इति दशमं त्रिः प्रथमामन्वाहेत्यादिष्वभ्यासस्य स्थानधर्मताधिकरणम् (सूत्रम् ३२)**

ಪರಿಪೂರ್ಣಚಂದ್ರಿಕಾ

**प्रकाशः** – प्रथमाशब्देनैव श्रुत्या प्राथम्याभिधानात् ऋचस्तु लक्षणीयत्वाद्यत्प्रथममुच्यते तत् त्रिरिति प्राथम्यैकार्थसमवेतत्रिरभ्यासस्य विधिः । स्त्रीलिङ्गं तु प्राथम्यस्य ऋगाश्रयत्वेनैव प्राप्तत्वाद्गुणवाचिनामाश्रयलिङ्गवचनत्वान्नित्यानुवादः । तस्मात्प्रथम-स्थानधर्म एव त्रिरभ्यास इति सिद्धान्तितम् ।

ಸಿದ್ಧಾಂತ - 'ಪ್ರಥಮಾ' ಎಂಬ ಶಬ್ದವು ಪ್ರಥಮಸ್ಥಾನವನ್ನೇ ಹೇಳುತ್ತಿದೆ. ಹೊರತು, 'ಪ್ರವೋವಾಜೀಯಾ' ಎಂಬ 'ಋಜ್' ಮಂತ್ರವಿಶೇಷವನ್ನು ಹೇಳುತ್ತಿಲ್ಲ. ಒಂದು ವೇಳೆ ಸಾಮಾನ್ಯವಾಚಕವಾದ ಪ್ರಥಮಾಶಬ್ದಕ್ಕೆ 'ಪ್ರವೋವಾಜೀಯಾ' ಎಂಬ 'ಋಜ್' ಮಂತ್ರವಿಶೇಷವನ್ನು ಅರ್ಥವೆಂದು ವಿವಕ್ಷಿಸುವುದಾದರೆ, ಲಕ್ಷಣಾಮಾಡುವ ಪ್ರಸಂಗ ಬರುತ್ತದೆ. (ಮೀಮಾಂಸಕರು ಸಾಮಾನ್ಯವಾಚಕ ಧರ್ಮಕ್ಕೆ ವಿಶೇಷಾರ್ಥವನ್ನು ಹೇಳಿದಾಗ ಲಕ್ಷಣಾವೃತ್ತಿಯನ್ನು ಒಪ್ಪುತ್ತಾರೆ.) ಆದ್ದರಿಂದ ಶಕ್ತಿವೃತ್ತಿಯಿಂದ ಪ್ರಥಮಸ್ಥಾನವೆಂಬರ್ಥವನ್ನೇ ಸ್ವೀಕರಿಸುವುದೇ ಉಚಿತ. ಪ್ರಥಮಸ್ಥಾನದಲ್ಲಿ ಯಾವುದೇ ಮಂತ್ರವು ಪಠಿತವಾಗಿದ್ದರೂ ಅದನ್ನು ಮೂರು ಬಾರಿ ಉಚ್ಚರಿಸಬೇಕೆಂದು 'ತ್ರಿಃ ಪ್ರಥಮಾಮನ್ವಾಹ' ಎಂಬ ಶ್ರುತಿಯು ವಿಧಾನ ಮಾಡುತ್ತಿದೆ. ಆದ್ದರಿಂದ ಪ್ರಾಥಮ್ಯ ಮತ್ತು ತ್ರಿರಭಾಸವು ಏಕಾರ್ಥಸಮವೇತವಾಗಿದೆಯೆಂದು ಈ ವಿಧಿವಾಕ್ಯದ ಅಭಿಪ್ರಾಯ. (ತಾರ್ಕಿಕರು 'ಸಮಾನಾಧಿಕರಣ' ಎಂಬ ಶಬ್ದವನ್ನು ಎಲ್ಲಿ ಪ್ರಯೋಗಿಸುತ್ತಾರೋ, ಮೀಮಾಂಸಕರು ಅಲ್ಲಿ 'ಏಕಾರ್ಥಸಮವಾಯ' ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ.)

ಹಾಗಾದರೆ 'ಪ್ರಥಮಾಮ್' ಎಂಬ ಸ್ತ್ರೀಲಿಂಗ ಪ್ರಯೋಗವೇಕೆ? ಎಂದರೆ ಪ್ರಾಥಮ್ಯವು ಋಗಾಶ್ರಿತ ವಾಗಿದೆ. 'ಋಕ್' ಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ಪ್ರಥಮಾ ಎಂಬ ಶಬ್ದವೂ ಸಹ ಸ್ತ್ರೀಲಿಂಗದಲ್ಲೇ ಇದೆ. ಆದ್ದರಿಂದ ಪ್ರಾಥಮ್ಯವೆಂಬ ಗುಣಕ್ಕೆ ವಾಚಕವಾದ 'ಪ್ರಥಮಾ' ಎಂಬ ನಾಮಕ್ಕೆ ಆಶ್ರಯವಾದ ಯಾವ 'ಋಕ್' ಇದೆಯೋ, ಅದರಲ್ಲಿರುವ ಲಿಂಗವನ್ನು 'ಪ್ರಥಮಾಮ್' ಎಂಬ ಶಬ್ದವು ಹೇಳುತ್ತಿದೆ. ಆದ್ದರಿಂದ 'ಪ್ರಥಮಾಮ್' ಎಂಬ ಶಬ್ದವು ಪ್ರಥಮ ಸ್ಥಾನದ ಧರ್ಮವಾಚಕವೇ ಆಗಿರುವುದರಿಂದ ಅಭ್ಯಾಸವು ಈ ಸ್ಥಾನ ಧರ್ಮ ವಿಷಯಕವೇ ಎಂದರೆ, ಮೊದಲು ಯಾವುದೇ ಮಂತ್ರವಿದ್ದರೂ ಅದನ್ನು ಮೂರುಬಾರಿ ಪಠಿಸಬೇಕೆಂದು ಸಿದ್ಧಾಂತ ಎಂದರ್ಥ.

**प्रकाशः** – तत्र यथा प्रथमाशब्दः प्रथमस्थानस्थऋङ्मात्रपरो नतु विशेषपरः ।

ಪೂರ್ವಮೀಮಾಂಸೆಯ ಈ ದೃಷ್ಟಾಂತದಲ್ಲಿ 'ಪ್ರಥಮಾ' ಎಂಬ ಸ್ಥಾನವು ಪ್ರಥಮಸ್ಥಾನದಲ್ಲಿರುವ 'ಋಜ್' ಮಂತ್ರವನ್ನೇ ಪ್ರತಿಪಾದಿಸುತ್ತದೆ. ಹೊರತು, 'ಪ್ರವೋವಾಜೀಯಾ' ಎಂಬ ಮಂತ್ರವಿಶೇಷವನ್ನು ಪ್ರತಿಪಾದಿಸುವುದಿಲ್ಲವೆಂದು ಸಿದ್ಧವಾಯಿತು.

**प्रकाशः** – एवमिहापि मध्यस्थानस्थपरो नतु तत्रस्थप्राणरूपविशेषपरः ।

ಅದರಂತೆ ಪ್ರಕೃತ ಮಧ್ಯಶಬ್ದವೂ ಸಹ ಮಧ್ಯಸ್ಥಾನದಲ್ಲಿರುವ ವ್ಯಕ್ತಿಯನ್ನೇ ಪ್ರತಿಪಾದನೆ ಮಾಡುತ್ತದೆ ಹೊರತು, ಮಧ್ಯಸ್ಥಾನದಲ್ಲಿರುವ 'ಮುಖ್ಯಪ್ರಾಣ' ಎಂಬ ಅರ್ಥವಿಶೇಷವನ್ನು ಪ್ರತಿಪಾದನೆ ಮಾಡುವುದಿಲ್ಲ.

**प्रकाशः – तस्य स्थलान्तरे निर्देशात् । तथाच मध्यस्थं ब्रह्मैवेति तत्पर इति सिध्यतीत्यर्थः ।**

ಏಕೆಂದರೆ ಮುಖ್ಯಪ್ರಾಣದೇವರು ಊರ್ಧ್ವದೇಶದಲ್ಲಿದ್ದಾರೆಂದು ಶ್ರುತ್ಯಂತರದಿಂದ ಸಿದ್ಧವಾಗಿದೆ. ಮುಖ್ಯಪ್ರಾಣದೇವರು ಊರ್ಧ್ವಸ್ಥಾನದಲ್ಲಿರುವುದರಿಂದ, ಮಧ್ಯಸ್ಥಾನದಲ್ಲಿ ಪರಮಾತ್ಮನಿದ್ದಾನೆಂದೇ ಹೇಳಬೇಕು. ಆದ್ದರಿಂದ ಒಂದು ಕಡೆ ಮಧ್ಯಮಶಬ್ದದಿಂದ ಮುಖ್ಯಪ್ರಾಣದೇವರನ್ನು ಸ್ವೀಕರಿಸಿದ ಮಾತ್ರಕ್ಕೆ, ಇಲ್ಲಿಯೂ ಸಹ ಮಧ್ಯಶಬ್ದದಿಂದ ಅವರನ್ನೇ ಸ್ವೀಕರಿಸಬೇಕೆಂದೇನೂ ನಿಯಮವಿಲ್ಲ ಹೊರತಾಗಿ, ಮಧ್ಯಸ್ಥಾನದಲ್ಲಿರುವ ವ್ಯಕ್ತಿಯನ್ನು ಪ್ರತಿಪಾದನೆ ಮಾಡುತ್ತದೆ. ಅವನು ವಿಷ್ಣುವೇ ಆಗಿರುವುದರಿಂದ ಮಧ್ಯಮತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಯಿತೆಂದು ತಿಳಿಯಬೇಕು.




ಪೂರ್ವಪಕ್ಷಕಾರರು ಮಧ್ಯಮತ್ವವೆಂಬ ಲಿಂಗವನ್ನು ನಿರವಕಾಶವೆಂದು ಸಮರ್ಥನೆ ಮಾಡಿದ್ದರು. ಅದು ಸರಿಯಲ್ಲ. ಏಕೆಂದರೆ 'ಮಧ್ಯೇ ವಾಮನಮಾಸೀನಂ' ಎಂಬ ಶ್ರುತಿವಾಕ್ಯವನ್ನು ವಿಚಾರ ಮಾಡಿದಾಗ ಮಧ್ಯಶಬ್ದವು ದೇಶವಿಶೇಷವನ್ನೇ ಹೇಳುತ್ತಿದೆ ಹೊರತು, ತಾರತಮ್ಯವಿಚಾರವನ್ನು ಹೇಳುತ್ತಿಲ್ಲ. 'ಊರ್ಧ್ವಂ ಪ್ರಾಣ'ಮ್ ಎಂಬ ಶ್ರುತಿಯಲ್ಲಿ ಪ್ರಾಣದೇವರು ಊರ್ಧ್ವದೇಶದಲ್ಲಿದ್ದಾರೆಂದು ಹೇಳಿ 'ಮಧ್ಯೇ ವಾಮನಮಾಸೀನಮ್' ಎಂದು ಹೇಳಿದಾಗ ಹೃದಯಮಧ್ಯಪ್ರದೇಶದಲ್ಲಿ ವಾಮನರೂಪಿಯಾದ ಪರಮಾತ್ಮನಿದ್ದಾನೆಂದೇ ಶ್ರುತಿಯ ಅಭಿಪ್ರಾಯ. ಊರ್ಧ್ವದೇಶದಲ್ಲಿ ಮುಖ್ಯಪ್ರಾಣದೇವರನ್ನು ಹೇಳಿದ ಮೇಲೆ, ಪುನಃ ಮಧ್ಯಪ್ರದೇಶದಲ್ಲಿ ಮುಖ್ಯಪ್ರಾಣದೇವರನ್ನು ಹೇಳಲು ಸಾಧ್ಯವಿಲ್ಲ. ಅಥವಾ ಅಪ್ರಸ್ತುತವಾಗಿ ತಾರತಮ್ಯವಿಚಾರವನ್ನೂ ಸಹ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಬೇರೆ ಶ್ರುತಿಯಲ್ಲಿರುವ ಮಧ್ಯಮ ಶಬ್ದದಿಂದ ಮುಖ್ಯಪ್ರಾಣದೇವರು ಪ್ರತಿಪಾದಿತರಾಗಿದ್ದಾರೆಂದ ಮಾತ್ರಕ್ಕೆ ಇಲ್ಲಿರುವ ಮಧ್ಯಶಬ್ದದಿಂದಲೂ ಅವರೇ ಪ್ರತಿಪಾದ್ಯರಾಗಬೇಕೆಂದೇನೂ ನಿಯಮವಿಲ್ಲ. ಹೀಗೆ ಮಧ್ಯಮತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಈ ಕಾರಣದಿಂದಲೂ ವಿಷ್ಣುವನ್ನೇ 'ಈಶಾನ' ಶಬ್ದ ಪ್ರತಿಪಾದ್ಯನೆಂದು ಹೇಳಬಹುದು.

ಎರಡನೆಯ ಸೂತ್ರವ್ಯಾಖ್ಯಾನ

## तात्पर्यचन्द्रिका

**अङ्गुष्ठमात्रत्वं च मूर्तिविशेषस्य व्यक्त्यात्मनाऽङ्गुष्ठमात्रत्वाद्वा स्थानहृदयगतस्य स्थानिनि ब्रह्मण्युपचाराद्वा युक्तम् ।**

ಅನುವಾದ - 'ಅಂಗುಷ್ಠಮಾತ್ರತ್ವ' ಎಂಬ ಲಿಂಗವೂ ಸಹ ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಹೃದಯದಲ್ಲಿರುವ ಪರಮಾತ್ಮನ ಮೂರ್ತಿವಿಶೇಷವು ಅಂಗುಷ್ಠಪರಿಮಾಣದಷ್ಟೇ ಇರುತ್ತದೆ. ವಸ್ತುತಃ ಪರಮಾತ್ಮನ ಎಲ್ಲಾ ರೂಪಗಳಲ್ಲಿಯೂ ಅಣುತ್ವ-ಮಹತ್ವಗಳಿದ್ದರೂ ವ್ಯಕ್ತ್ಯಾತ್ಮನಾ ಅಂಗುಷ್ಠಪರಿಮಾಣ-ಮಾತ್ರ ಹೃದಯದಲ್ಲಿರುತ್ತದೆಂದು ತಿಳಿಯಬೇಕು. ಅಥವಾ ಹೃದಯ ಪ್ರದೇಶವು ಅಂಗುಷ್ಠದಷ್ಟೇ ಪರಿಮಾಣವನ್ನು ಹೊಂದಿರುವುದರಿಂದಲೂ ಪರಮಾತ್ಮನ ರೂಪವನ್ನು ಅಂಗುಷ್ಠಮಾತ್ರ ಪರಿಮಾಣವೆಂದು ಶ್ರುತಿಯು ಹೇಳಿದೆ. ಸ್ಥಾನದಲ್ಲಿ ಪ್ರಯೋಗಿಸಲ್ಪಟ್ಟ 'ಅಂಗುಷ್ಠಮಾತ್ರ' ಎಂಬ ಶಬ್ದವನ್ನು ಸ್ಥಾನಿಯಾದ ಬ್ರಹ್ಮನಲ್ಲಿ ಔಪಚಾರಿಕವಾಗಿ ಪ್ರಯೋಗಿಸಲಾಗಿದೆ. ಆದ್ದರಿಂದ ಅಂಗುಷ್ಠಮಾತ್ರ ಪರಿಮಾಣವನ್ನು ಪರಮಾತ್ಮನಿಗೆ ಹೇಳುವುದು ತಪ್ಪಾಗುವುದಿಲ್ಲ.

**ननु परिमाणार्थकमात्रच्प्रत्यययोऽयं न त्ववधारणार्थो मात्रशब्दः । ''देहाङ्गुष्ठमितो देहे जीवाङ्गुष्ठमितो हृदि'' इति स्मृतौ मित इति परिमाणस्यैवोक्तेः । अङ्गुष्ठपरिमाणत्वं च सर्वगतस्यापि व्योमवदित्युक्तमित्येव सूत्रे कस्मान्न समाहितमिति चेत्**

ಪ್ರಶ್ನೆ - 'ಮಾತ್ರಚ್' ಪ್ರತ್ಯಯವನ್ನು ಇತರ ವ್ಯಾವರ್ತಕದಲ್ಲಿ ಪ್ರಯೋಗಿಸಿ, ಅಂಗುಷ್ಠದಷ್ಟೇ ಪರಿಮಾಣವನ್ನು ಹೇಳಬೇಕೆಂದು ಏಕೆ ವಿವಕ್ಷಿಸುತ್ತಿದ್ದೀರಿ? ಅವಧಾರಣಾರ್ಥದಲ್ಲಿ 'ಮಾತ್ರಚ್' ಪ್ರತ್ಯಯವನ್ನು ವಿವಕ್ಷಿಸುವುದು ಬೇಡ. ಇಲ್ಲಿರುವ 'ಮಾತ್ರಚ್' ಪ್ರತ್ಯಯವು ಪರಿಮಾಣಾರ್ಥ-ದಲ್ಲಿದೆಯೆಂದು ಹೇಳಬಹುದು. 'ದೇಹಾಂಗುಷ್ಠಮಿತೋ ದೇಹೇ ಜೀವಾಂಗುಷ್ಠಮಿತೋ ಹೃದಿ' ಎಂಬ ಶ್ರುತಿಯಲ್ಲಿ 'ಮಿತ' ಎಂಬ ಪದವನ್ನು 'ಪರಿಮಾಣ' ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಆದ್ದರಿಂದ ಅದೇ ಅರ್ಥದಲ್ಲಿರುವ 'ಮಾತ್ರಚ್' ಪ್ರತ್ಯಯವನ್ನೂ ಕೂಡ 'ಪರಿಮಾಣ' ಎಂಬರ್ಥದಲ್ಲಿಯೇ ಪ್ರಯೋಗಿಸಬಹುದು. ಆದ್ದರಿಂದ ಅಂಗುಷ್ಠಪರಿಮಾಣವೆಂದು ಸರ್ವಗತನಾದ ಪರಮಾತ್ಮನಿಗೂ ಕೂಡ ಆಕಾಶದಂತೆ ಹೇಳಬಹುದು. ಹೀಗೆಯೇ ಸೂತ್ರದ ಅಭಿಪ್ರಾಯವೆಂದು ಏಕೆ ಸಮಾಧಾನವನ್ನು ನೀಡುತ್ತಿಲ್ಲ?

**तथात्वे अङ्गुष्ठमात्रवाक्ये "मध्य आत्मनि" इत्यस्य हृदीत्यस्य च वैयर्थ्यापातात् ।**

ಉತ್ತರ - ಇದು ಸರಿಯಲ್ಲ. 'ಮಾತ್ರಚ್' ಪ್ರತ್ಯಯಕ್ಕೆ ಪರಿಮಾಣವೆಂಬರ್ಥವನ್ನು ವಿವಕ್ಷಿಸುವುದಾದಲ್ಲಿ 'ಅಂಗುಷ್ಠಮಾತ್ರ' ಎಂಬ ವಾಕ್ಯದಲ್ಲಿ 'ಮಧ್ಯೇ ಆತ್ಮನಿ' ಎಂದು ಮತ್ತು 'ಹೃದಿ' ಎಂದು ಹೇಳಿದ್ದು ವ್ಯರ್ಥವಾಗಬೇಕಾಗುತ್ತದೆ. ಆದ್ದರಿಂದ ಅವಧಾರಣಾರ್ಥದಲ್ಲಿಯೇ 'ಮಾತ್ರಚ್' ಪ್ರತ್ಯಯವನ್ನು ವಿವಕ್ಷಿಸಬೇಕು.

**"अङ्गुष्ठमात्रः पुरुषोऽङ्गुष्ठं च समाश्रितः" इति श्रुत्यन्तरे चाङ्गुष्ठमात्रहृदयगतत्वेनाङ्गुष्ठमात्रत्वोक्तेः ।**

'ಮಧ್ಯೇ ಆತ್ಮನಿ' ಎಂಬುದಕ್ಕೆ ಮತ್ತು 'ಹೃದಿ' ಎಂಬುದಕ್ಕೆ ಏಕೆ ವೈಯರ್ಥ್ಯ ಬರುತ್ತದೆಂದರೆ 'ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ' ಎಂಬ ಮತ್ತೊಂದು ಶ್ರುತಿಯಲ್ಲಿ ಅಂಗುಷ್ಠಮಾತ್ರ ಪರಿಮಾಣವುಳ್ಳ ಹೃದಯಪ್ರದೇಶದಲ್ಲಿ ಪರಮಾತ್ಮನಿರುತ್ತಾನೆಂದು ಹೇಳಲಾಗಿದೆ. ಅಂದರೆ ಹೃದಯಪ್ರದೇಶವು ಅಂಗುಷ್ಠದಷ್ಟೇ ಪರಿಮಾಣವನ್ನು ಹೊಂದಿರುವುದರಿಂದ ಅಲ್ಲಿರುವ ಪರಮಾತ್ಮನೂ ಕೂಡ ಅಂಗುಷ್ಠಪರಿಮಾಣದಷ್ಟೇ ಇರುತ್ತಾನೆಂದು ಶ್ರುತಿಯು ಹೇಳಿದೆ.

**स्मृतावपि हृदीत्यादेरवैयर्थ्यायावधारणस्य विवक्षणीयत्वाच्च ।**

'ದೇಹಾಂಗುಷ್ಠಮಿತೋ ದೇಹೇ' ಇತ್ಯಾದಿ ಸ್ಮೃತಿವಾಕ್ಯದಲ್ಲಿಯೂ ಸಹ 'ಹೃದಿ' ಇತ್ಯಾದಿ ಪದಗಳಿಗೆ ವೈಯರ್ಥ್ಯವು ಬರಬಾರದೆಂದರೆ 'ಅವಧಾರಣ' ಎಂಬರ್ಥವನ್ನೇ ವಿವಕ್ಷಿಸಬೇಕು.

**प्राण्यन्तरस्याङ्गुष्ठाभावेऽपि शास्त्रस्य मनुष्याधिकारिकत्वात् । मनुष्याणां चाङ्गुष्ठस्य सत्त्वेनादोषत्वात् ।**

ಹೃದಯಪ್ರದೇಶದಲ್ಲಿ ಅಂಗುಷ್ಠಪರಿಮಾಣದಷ್ಟು ಪರಮಾತ್ಮನಿರುತ್ತಾನೆಂದು ಹೇಳಿದಿರಿ. ಬೇರೆ ಪ್ರಾಣಿಗಳಿಗೆ, ಅಂಗುಷ್ಠವೇ ಇಲ್ಲದ ಕಾರಣ, ಅಂಗುಷ್ಠಪರಿಮಾಣವನ್ನು ಹೃದಯಕ್ಕೆ ಹೇಳಲು ಹೇಗೆ ಸಾಧ್ಯ ? ಎಂದರೆ, ಬೇರೆ ಪ್ರಾಣಿಗಳಿಗೆ ಅಂಗುಷ್ಠವಿಲ್ಲದಿದ್ದರೂ ಈ ಶಾಸ್ತ್ರವು ಮನುಷ್ಯಾಧಿಕಾರಿಕವಾದ್ದರಿಂದ ಮನುಷ್ಯರನ್ನು ಉದ್ದೇಶಿಸಿಯೇ ಸೂತ್ರದಲ್ಲಿ ಅಂಗುಷ್ಠಪರಿಮಾಣವನ್ನು ಪರಮಾತ್ಮನಿಗೆ ಹೇಳಲಾಗಿದೆ. ಮನುಷ್ಯರಿಗೆ ಅಂಗುಷ್ಠವು ಇರುವುದರಿಂದ ತತ್ಪರಿಣಾಮವನ್ನು ಹೃದಯದಲ್ಲಿರುವ ಪರಮಾತ್ಮನಿಗೆ ಹೇಳಬಹುದಾದ್ದರಿಂದ ಯಾವುದೇ ದೋಷಕ್ಕೂ ಅವಕಾಶವಿಲ್ಲ.

**प्रमितग्रहणेनात्र श्रुतेर्निरवकाशताम् ।**
**एवकारेण लिङ्गेभ्यः प्राबल्यं सूत्रकृज्जगौ ।। १ ।।**

ಪ್ರಮಿತಗ್ರಹಣೇನಾತ್ರ ಶ್ರುತೇರ್ನಿರವಕಾಶತಾಮ್ ।
ಏವಕಾರೇಣ ಲಿಂಗೇಭ್ಯಃ ಪ್ರಾಬಲ್ಯಂ ಸೂತ್ರಕೃಜ್ಜಗೌ ॥೧॥

'ಶಬ್ದಾದೇವ ಪ್ರಮಿತಃ' ಎಂಬಲ್ಲಿರುವ 'ಪ್ರಮಿತ' ಶಬ್ದದಿಂದ ವಾಮನಶ್ರುತಿಗೆ ಪರಮಾತ್ಮನಲ್ಲಿ ನಿರವಕಾಶತ್ವವನ್ನು ಹೇಳಿರುತ್ತಾರೆ. ಏವಕಾರದಿಂದ ಪೂರ್ವಪಕ್ಷಲಿಂಗಗಳಿಗಿಂತಲೂ ಶ್ರುತಿಯು ಬಲಿಷ್ಠವಾಗಿದೆಯೆಂದು ಸೂತ್ರಕಾರರು ಹೇಳಿರುತ್ತಾರೆ.

**प्रकाशः –**

एवं प्रथमसूत्रोक्ते श्रुतिलिङ्गयोर्निरवकाशत्वसावकाशत्वे समर्थ्येदानीं पूर्वपक्ष्युक्ताङ्गुष्ठमात्रत्वस्यापि "हृद्यपेक्षया तु" इति द्वितीयसूत्रोक्तं सावकाशत्वं हृदि विद्यमानावकाशापेक्षयेत्यादिटीकायां द्वेधाऽभिप्रेतमिति भावेन टीकां विवृण्वन्नाह – **अङ्गुष्ठेति** ।।

ವಿವರಣೆ - ಇಲ್ಲಿಯ ತನಕ 'ಶಬ್ದಾದೇವ ಪ್ರಮಿತಃ' ಎಂಬ ಪ್ರಥಮ ಸೂತ್ರದಲ್ಲಿ ಪ್ರಮಿತಶಬ್ದದಿಂದ ಹಾಗೂ ಏವಕಾರದಿಂದ ಶ್ರುತಿಗೆ ಸಾವಕಾಶತ್ವವನ್ನು, ಲಿಂಗಗಳಿಗೆ ಸಾವಕಾಶತ್ವವನ್ನು ಸಮರ್ಥನೆ ಮಾಡಿದರು. ಈಗ ಪೂರ್ವಪಕ್ಷಿಯು ಅಂಗುಷ್ಠಮಾತ್ರತ್ವವನ್ನು ಪೂರ್ವಪಕ್ಷಿಯುಕ್ತಿಯನ್ನಾಗಿ ಹೇಳಿದ್ದನು. ಅದನ್ನು ನಿರಾಕರಿಸಲು 'ಹೃದ್ಯಪೇಕ್ಷಯಾ ತು' ಎಂಬ ಎರಡನೆಯ ಸೂತ್ರದಲ್ಲಿ ಹೇಳಿದಂತೆ ಅಂಗುಷ್ಠಮಾತ್ರತ್ವಕ್ಕೆ ಸಾವಕಾಶತ್ವವನ್ನು ಸಮರ್ಥಿಸುತ್ತಿದ್ದಾರೆ. ಸರ್ವತ್ರವ್ಯಾಪ್ತನಾದ ಪರಮಾತ್ಮನಿಗೆ ಅಂಗುಷ್ಠಪರಿಮಾಣದಷ್ಟೇ ಪರಿಮಾಣವನ್ನು ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಟೀಕೆಯಲ್ಲಿ ಎರಡು ರೀತಿಯ ಸಮಾಧಾನಗಳನ್ನು ವಿವಕ್ಷಿಸಿದ್ದಾರೆಂದು ಪ್ರಕೃತಗ್ರಂಥಕಾರರು 'ಅಂಗುಷ್ಠ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – एतेन टीकावाक्यं वाशब्दसंयोजनेन योज्यमित्युक्तं भवति । टीकायां क्वचिद्वाशब्देनापि पाठः ।

ಹೀಗೆ ಗ್ರಂಥಕಾರರು ವ್ಯಾಖ್ಯಾನ ಮಾಡಿದ್ದರಿಂದ, ಟೀಕಾವಾಕ್ಯದಲ್ಲಿ 'ವಾ' ಎಂಬ ಶಬ್ದವನ್ನು ಸಂಯೋಜನೆ ಮಾಡಿ, ಅರ್ಥವನ್ನು ತಿಳಿಯಬೇಕು. ಕೆಲವು ಪುಸ್ತಕಗಳ ಟೀಕೆಯಲ್ಲಿ 'ವಾ' ಶಬ್ದ ಸಹಿತವಾದ ಪಾಠವೇ ಇರುತ್ತದೆ.

**प्रकाशः** – सौत्रं समाधानमाक्षिप्य समाधत्ते – **नन्विति** ।। "प्रमाणे द्वयसज्दघ्नञ्मात्रच्" इति सूत्रादङ्गुष्ठशब्दान्मात्रच्प्रत्यये "जानुमात्रं जलम्" इतिवदङ्गुष्ठपरिमाण इत्यर्थो लभ्यते ।

ಸೂತ್ರದಲ್ಲಿರುವ ಸಮಾಧಾನವನ್ನು ಆಕ್ಷೇಪ ಮಾಡಿ ಸಮಾಧಾನ ನೀಡುತ್ತಿದ್ದಾರೆ 'ನನು' ಇತ್ಯಾದಿ ಗ್ರಂಥದಿಂದ. 'ಪ್ರಮಾಣೇ ದ್ವಯಸಜುದಘ್ನಞ್‌ಮಾತ್ರಚ್' ಎಂಬ ಸೂತ್ರದಿಂದ ಅಂಗುಷ್ಠಶಬ್ದದ ಮೇಲೆ

'ಮಾತ್ರಚ್' ಎಂಬ ಪ್ರತ್ಯಯವು ಬಂದಾಗ 'ಜಾನುಮಾತ್ರಂ ಜಲಮ್' ಇತ್ಯಾದಿ ಪ್ರಯೋಗದಂತೆ ಅಂಗುಷ್ಠಪರಿಮಾಣ ಎಂಬರ್ಥವು ದೊರೆಯುತ್ತದೆಂದು ತಿಳಿಯಬೇಕು.

**प्रकाशः** – ततश्च किमित्यत आह – अङ्गुष्ठेति ।। वैयर्थ्येति ।। अङ्गुष्ठपरिमितत्वस्य स्थानसापेक्षत्वाभावादिति भावः ।

ಇದರಿಂದ ಏನು ಹೇಳಿದಂತಾಯಿತು ? ಎಂಬ ಪ್ರಶ್ನೆಗೆ 'ಅಂಗುಷ್ಠ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಂಗುಷ್ಠಪರಿಮಿತತ್ವಕ್ಕೆ ಸ್ಥಾನಸಾಪೇಕ್ಷತ್ವವನ್ನು ಹೇಳಲಾಗದ ಕಾರಣ 'ಹೃದಿ' ಇತ್ಯಾದಿ ಶಬ್ದಗಳು ವ್ಯರ್ಥವಾಗುತ್ತವೆಂದು 'ವೈಯರ್ಥ್ಯ' ಎಂಬ ಶಬ್ದದ ಅರ್ಥ ಎಂದು ತಿಳಿಯಬೇಕು.

**प्रकाशः** – नन्विदं समाधानं पश्वादीनामङ्गुष्ठाभावेन तदन्तर्गतविष्णाव- सम्भवीत्यतो मनुष्याधिकारत्वादिति सूत्रशेषतात्पर्यं भाष्यटीकयोरुक्तमाह – प्राणीति ।।

ಪ್ರಕೃತ ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಈ ಸಮಾಧಾನವನ್ನು ಪಶು ಮೊದಲಾದವುಗಳ ವಿಷಯದಲ್ಲಿ ಹೇಳಲು ಹೇಗೆ ಸಾಧ್ಯ ? ಏಕೆಂದರೆ ಅವುಗಳಿಗೆ ಅಂಗುಷ್ಠವೇ ಇಲ್ಲದ ಕಾರಣ ತದಂತರ್ಗತನಾದ ವಿಷ್ಣುವಿಗೆ ಅಂಗುಷ್ಠಪರಿಮಾಣವನ್ನೂ ಕೂಡ ಹೇಳಲು ಬರುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರಶೇಷದ ತಾತ್ಪರ್ಯವನ್ನು ಭಾಷ್ಯಟೀಕೆಯಲ್ಲಿ ಹೇಳಿದ್ದನ್ನೇ ಉಲ್ಲೇಖ ಮಾಡುತ್ತಿದ್ದಾರೆ. 'ಪ್ರಾಣ' ಇತ್ಯಾದಿ ಗ್ರಂಥದಿಂದ.

**प्रकाशः** – अत्राद्यसूत्रस्य हेतूक्तिपरत्वाद्द्वितीयस्य बाधकनिरसनपरत्वात्पौर्वापर्य- सङ्गतिः स्पष्टेत्युपेक्ष्योक्तन्यायस्य सूत्राक्षरारूढतां टीकोक्तामेव सङ्गृह्य दर्शयति – प्रमितेति ।। अत्र आद्यसूत्रे ।

ಈ ಅಧಿಕರಣದಲ್ಲಿ ಗ್ರಂಥಕಾರರು ಸೂತ್ರವಿನ್ಯಾಸ ಸ್ವಾರಸ್ಯವನ್ನು ಸುಲಭವಾದ್ದರಿಂದ ತೋರಿಸಿಲ್ಲ. ಮೊದಲನೆಯ ಸೂತ್ರವು ಈಶಾನ ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆನ್ನಲು ಹೇತುವನ್ನು ಹೇಳುತ್ತಿದೆ. ಎರಡನೆಯ ಸೂತ್ರವು ಬಾಧಕಗಳನ್ನು ನಿರಾಕರಿಸುತ್ತಿದೆ. ಹೀಗೆ ಪ್ರಥಮ ಸೂತ್ರ ಹಾಗೂ ದ್ವಿತೀಯ ಸೂತ್ರಗಳ ಪೌರ್ವಾಪರ್ಯವು ಸಂಗತವಾದ್ದರಿಂದ ಸ್ಪಷ್ಟವಾಗಿದೆಯೆಂದು ಉಪೇಕ್ಷಿಸಿದ್ದಾರೆ.

ಇದುವರೆಗೂ ಹೇಳಿದ ನ್ಯಾಯವನ್ನು ಸೂತ್ರಾಕ್ಷರಗಳಲ್ಲಿ ಸಮನ್ವಯ ಮಾಡುತ್ತಾ ಟೀಕೆಯಲ್ಲಿ ಹೇಳಿದ ಎಲ್ಲ ತಾತ್ಪರ್ಯವನ್ನು ಸಂಗ್ರಹ ಮಾಡಿ, ಶ್ಲೋಕರೂಪದಲ್ಲಿ ತೋರಿಸುತ್ತಿದ್ದಾರೆ 'ಪ್ರಮಿತ' ಇತ್ಯಾದಿಯಾಗಿ. 'ಅತ್ರ' ಎಂಬ ಪದಕ್ಕೆ ಪ್ರಥಮಸೂತ್ರದಲ್ಲಿ ಎಂದರ್ಥ.

**गुरुराजीयम्** – मध्ये वामनमासीनमिति सर्वोत्तमत्वरूपकाष्ठात्वविरोधि- मध्यस्थमुच्यमानं वायावेवोपपद्यते । ननु विष्णाविति कथं तस्य सावकाशत्वमित्यत

आह – **मध्ये वामनमित्यत्र चेति ।। अङ्गुष्ठमात्रवाक्य इति ।।** अङ्गुष्ठमात्रः पुरुषो मध्य आत्मनि तिष्ठतीत्यङ्गुष्ठमात्रवाक्ये मध्य आत्मनीत्यस्य देहाङ्गुष्ठमितो देहे जीवाङ्गुष्ठमितो हृदीत्यत्र हृदीत्यस्य च वैयर्थ्यापातादिति भावः । **स्मृतावपीति ।।** देहाङ्गुष्ठमितो देहे जीवाङ्गुष्ठमितो हृदीति स्मृतावपीत्यर्थः ।



## ಸಾರ

ಅಂಗುಷ್ಠಮಾತ್ರತ್ವವೂ ಸಹ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಪರಮಾತ್ಮನು ಎಲ್ಲೆಡೆ ವ್ಯಾಪ್ತನಾದ್ದರಿಂದ, ಅಂಗುಷ್ಠದಷ್ಟೇ ಪರಿಮಾಣವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಮುಖ್ಯಪ್ರಾಣದೇವರನ್ನೇ ವಿವಕ್ಷಿಸಬೇಕೆಂದು ಹಿಂದೆ ಪೂರ್ವಪಕ್ಷಿಯು ಹೇಳಿದ್ದನು. ಆದರೆ ಪರಮಾತ್ಮನು ಸರ್ವಗತನಾಗಿದ್ದರೂ ಹೃದಯದಲ್ಲಿರುವ ಪರಮಾತ್ಮನ ಮೂರ್ತಿವಿಶೇಷವು ವ್ಯಕ್ತಿರೂಪದಿಂದ ಅಂಗುಷ್ಠದಷ್ಟೇ ಪರಿಮಾಣವನ್ನು ಹೊಂದಿರುತ್ತದೆ. ಶಕ್ತಿರೂಪದಿಂದ ಅಣುತ್ವ-ಮಹತ್ವಗಳೆರಡೂ ಇದ್ದರೂ ಅದನ್ನು ಶ್ರುತಿಯು ವಿವಕ್ಷಿಸಿಲ್ಲ. ಅಥವಾ ಪರಮಾತ್ಮನು ವಾಸಮಾಡುವಂತಹ ಹೃದಯಪ್ರದೇಶವು ಅಂಗುಷ್ಠದಷ್ಟೇ ಪರಿಮಾಣವನ್ನು ಹೊಂದಿರುವುದರಿಂದಲೂ ಅಂಗುಷ್ಠಮಾತ್ರತ್ವವನ್ನು ಪರಮಾತ್ಮನಿಗೆ ಗೌಣವಾಗಿ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಅಂಗುಷ್ಠಮಾತ್ರ ಪರಿಮಾಣವನ್ನು ಪರಮಾತ್ಮನಿಗೆ ಹೇಳುವುದರಿಂದ ಯಾವುದೇ ಬಾಧಕಗಳಿಗೆ ಅವಕಾಶಗಳಿಲ್ಲ.

ಪ್ರಾಣಗಳಿಗೆ ಅಂಗುಷ್ಠಪರಿಮಾಣವೇ ಇಲ್ಲದ ಕಾರಣ, ಅವುಗಳ ಅಂತರ್ಯಾಮಿಯಾದ ಪರಮಾತ್ಮನಿಗೆ ಅಂಗುಷ್ಠಪರಿಮಾಣವನ್ನು ಹೇಳುವುದು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಈ ಶಾಸ್ತ್ರವು ಮನುಷ್ಯರನ್ನು ಕುರಿತು ಹೊರಟಿರುವುದರಿಂದ ಅವರ ಅಂತರ್ಯಾಮಿಯ ಬಗ್ಗೆ ಮಾತ್ರ ಇಲ್ಲಿ ವಿಚಾರ ಮಾಡಲಾಗಿದೆ. ಮನುಷ್ಯರೆಲ್ಲರಿಗೂ ಅಂಗುಷ್ಠವಿರುವುದರಿಂದ ಅವರ ಹೃದಯವೂ ಸಹ ಅಂಗುಷ್ಠಪರಿಮಾಣವನ್ನು ಹೊಂದಿರುತ್ತದೆ. ಅಲ್ಲಿರುವಂತಹ ಭಗವಂತನ ಮೂರ್ತಿವಿಶೇಷದಲ್ಲಿಯೂ ಅಂಗುಷ್ಠಮಾತ್ರಪರಿಮಾಣವನ್ನು ಹೇಳಬಹುದು.

ಒಟ್ಟು ಅಭಿಪ್ರಾಯ -

ಪ್ರಮಿತಗ್ರಹಣೇನಾತ್ರ ಶ್ರುತೇರ್ನಿರವಕಾಶತಾಮ್ ।
ಏವಕಾರೇಣ ಲಿಂಗೇಭ್ಯಃ ಪ್ರಾಬಲ್ಯಂ ಸೂತ್ರಕೃಜ್ಜಗೌ ॥೧॥

'ಶಬ್ದಾದೇವ ಪ್ರಮಿತಃ' ಎಂಬಲ್ಲಿರುವ 'ಪ್ರಮಿತ' ಶಬ್ದದಿಂದ ವಾಮನಶ್ರುತಿಗೆ ಪರಮಾತ್ಮನಲ್ಲಿ ನಿರವಕಾಶತ್ವವನ್ನು ಹೇಳಿರುತ್ತಾರೆ. ಏವಕಾರದಿಂದ ಪೂರ್ವಪಕ್ಷಲಿಂಗಗಳಿಗಿಂತಲೂ ಶ್ರುತಿಯು ಬಲಿಷ್ಠವಾಗಿದೆಯೆಂದು ಸೂತ್ರಕಾರರು ಹೇಳಿರುತ್ತಾರೆ.





**तात्पर्यचन्द्रिका**

**अन्येतु "अङ्गुष्ठमात्रः पुरुषः" इति श्रुतोऽङ्गुष्ठमात्रो जीवः । परिच्छिन्ने तत्र तन्मात्रत्वसम्भवात् ।**

ಅನುವಾದ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ಅಂಗುಷ್ಠಮಾತ್ರಃ ಪುರುಷಃ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಅಂಗುಷ್ಠಮಾತ್ರ ಸ್ವರೂಪನು ಜೀವನೇ ಆಗಿದ್ದಾನೆ. ಪರಿಚ್ಛಿನ್ನನಾದ ಜೀವನಲ್ಲಿ ಅಂಗುಷ್ಠಮಾತ್ರತ್ವವನ್ನು ಹೇಳುವುದು ತಪ್ಪಾಗುವುದಿಲ್ಲ.

**"ईशानो भूतभव्यस्य" इति चरमश्रुतमीशानत्वं तु प्रथमश्रुताङ्गुष्ठ-मात्रत्वानुरोधात्सङ्कोचयितव्यम् ।**

ಹಾಗಾದರೆ 'ಈಶಾನೋ ಭೂತಭವ್ಯಸ್ಯ' ಎಂಬುದಾಗಿ ಕೊನೆಯಲ್ಲಿ ಈಶಾನತ್ವಧರ್ಮವು ಶ್ರುತವಾಗುತ್ತಿದೆ. ಇದನ್ನು ಜೀವನಲ್ಲಿ ಹೇಳಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. ಪ್ರಥಮಶ್ರುತವಾದ ಅಂಗುಷ್ಠಮಾತ್ರತ್ವಕ್ಕೆ ಅನುಸಾರಿಯಾಗಿ ಕೊನೆಯಲ್ಲಿರುವ ಈಶಾನತ್ವವನ್ನು ಸಂಕೋಚ ಮಾಡಬೇಕು.

**नच "अल्पश्रुतेः" इति न्यायेनेश्वरेऽप्यङ्गुष्ठमात्रत्वम् । तत्र हृत्पुण्डरीकस्येवेह स्थानविशेषस्यानिर्देशादिति प्राप्ते**

'ಅಲ್ಪಶ್ರುತೇಽರಿತಿ ಚೇತ್ ತದುಕ್ತಮ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಈಶ್ವರನಲ್ಲಿಯೂ ಕೂಡ ಅಂಗುಷ್ಠಮಾತ್ರತ್ವವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. 'ಅಲ್ಪಶ್ರುತೇಃ' ಎಂಬ ಸೂತ್ರದಲ್ಲಿ ಹೃತ್ಪುಂಡರೀಕವನ್ನು ಪರಮಾತ್ಮನ ವಾಸಸ್ಥಳವೆಂದು ನಿರ್ದೇಶಿಸಲಾಗಿತ್ತು. ಅದರಂತೆ ಇಲ್ಲಿ ಅಂತಹ ಸ್ಥಾನವಿಶೇಷವನ್ನೇನೂ ನಿರ್ದೇಶ ಮಾಡಿರುವುದಿಲ್ಲ. ಆದ್ದರಿಂದ ಜೀವನೇ ಅಂಗುಷ್ಠಮಾತ್ರ-ನಾಗಿದ್ದಾನೆಂದು ಪೂರ್ವಪಕ್ಷ.

**ब्रह्मप्रश्नोत्तरत्वादस्येशानत्वमसङ्कुचितमेव । अङ्गुष्ठमात्रत्वोक्तिस्तु ब्रह्मणो जीवैक्याभिप्रायेति सिद्धान्त इत्याहुः ।**

ಬ್ರಹ್ಮನ ಬಗ್ಗೆ ಪ್ರಶ್ನಿಸಿದಾಗ 'ಈಶಾನೋ ಭೂತಭವ್ಯಸ್ಯ' ಇತ್ಯಾದಿಯಾಗಿ ಉತ್ತರಿಸಲಾಗಿದೆ. ಆದ್ದರಿಂದ ಈಶಾನತ್ವವನ್ನು ಸಂಕೋಚ ಮಾಡಲು ಸಾಧ್ಯವೇ ಇಲ್ಲ. ಆದ್ದರಿಂದ ಈಶಾನತ್ವವನ್ನೇ

ಮುಖ್ಯವನ್ನಾಗಿ ಸ್ವೀಕರಿಸಿ ಅಂಗುಷ್ಠಮಾತ್ರತ್ವವನ್ನು ಗೌಣವನ್ನಾಗಿ ವ್ಯಾಖ್ಯಾನ ಮಾಡಬೇಕು. ಅಂದರೆ ಅಂಗುಷ್ಠಪರಿಮಾಣವು ಜೀವನಲ್ಲಿ ಮಾತ್ರವಿದ್ದರೂ ಅಂತಹ ಜೀವನಿಂದ ಬ್ರಹ್ಮನಿಗೆ ಐಕ್ಯವಿರುವುದರಿಂದ, ಬ್ರಹ್ಮನೂ ಕೂಡ ಅಂಗುಷ್ಠಮಾತ್ರನಾಗಿದ್ದಾನೆಂದು ವ್ಯಾಖ್ಯಾನಿಸಬಹುದು. ಆದ್ದರಿಂದ ಬ್ರಹ್ಮನೇ ಈ ಪ್ರಕರಣದಲ್ಲಿ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ. ಇಷ್ಟು ಅದ್ವೈತಿಗಳ ಅಧಿಕರಣ ಶರೀರ.

**तत्र तावत्पूर्वपक्ष एवायुक्तः । ''ईशानो भूतभव्यस्य'' इत्यस्याङ्गुष्ठ-वाक्याच्चरमत्वेऽपि ''ईशानं भूतभव्यस्य'' इत्यस्य प्रथमत्वेनाङ्गुष्ठवाक्यस्येशानश्रुतिभ्यां सन्दष्टत्वात् ।**

ಅದ್ವೈತಿಗಳ ಈ ಅಧಿಕರಣಶರೀರದಲ್ಲಿ ಪೂರ್ವಪಕ್ಷವೇ ಅಯುಕ್ತವಾಗಿವೆ. ಏಕೆಂದರೆ 'ಈಶಾನೋ ಭೂತಭವ್ಯಸ್ಯ' ಎಂಬ ವಾಕ್ಯವು 'ಅಂಗುಷ್ಠಮಾತ್ರಃ ಪುರುಷಃ' ಎಂಬ ವಾಕ್ಯಕ್ಕಿಂತ ಚರಮಶ್ರುತವಾಗಿರಬಹುದು. ಆದರೆ ಅಂಗುಷ್ಠವಾಕ್ಯಕ್ಕಿಂತಲೂ ಮೊದಲು 'ಈಶಾನಂ ಭೂತಭವ್ಯಸ್ಯ' ಎಂಬ ವಾಕ್ಯವು ಶ್ರುತವಾಗಿದೆ. ಆದ್ದರಿಂದ ಅಂಗುಷ್ಠವಾಕ್ಯಕ್ಕಿಂತ ಮೊದಲು ಮತ್ತು ಕೊನೆಯಲ್ಲಿ 'ಈಶಾನ' ಶಬ್ದವಿರುವ ಶ್ರುತಿಗಳು ಯುಕ್ತವಾಗಿರುವುದರಿಂದ ಸಂದಂಶ ನ್ಯಾಯದಿಂದ ಅಂಗುಷ್ಠವಾಕ್ಯವನ್ನೂ ಕೂಡ ಬ್ರಹ್ಮಪರವೆಂದೇ ಹೇಳಬೇಕಾಗುತ್ತದೆ.

**''अङ्गुष्ठमात्रः पुरुषो मध्य आत्मनि' 'अङ्गुष्ठमात्रः पुरुषो ज्योतिरिव'' इति वाक्यद्वये स्थानस्यानिर्देशेऽपि ''अङ्गुष्ठमात्रः पुरुषोऽन्तरात्मा सदा जनानां हृदये सन्निविष्टः'' इति तृतीयवाक्ये स्थाननिर्देशाच्च ।** [1]

(१) **शाङ्करभाष्यम् –**

**शब्दादेव प्रमिताः ॥ २४ ॥**

**अङ्गुष्ठमात्रो जीवः स्यादीशो वाऽल्पप्रमाणतः ।**
**देहमध्ये स्थितेश्चैव जीवो भवितुमर्हति ॥**
**भूतभव्येशता जीवो नास्यतोऽसाविहेश्वरः ।**
**स्थितिप्रमाणे ईशेऽपि स्तो हृद्यस्योपलब्धितः ॥**

'अङ्गुष्ठमात्रः पुरुषो मध्य आत्मनि तिष्ठति' इति श्रूयते । तथा 'अङ्गुष्ठमात्रः पुरुषो ज्योतिरिवाधूमकः । ईशानो भूतभव्यस्य स एवाद्य स उ श्वः । एतद्वै तत् ॥' इति च । तत्र योऽयमङ्गुष्ठमात्रः पुरुषः श्रूयते, स किं विज्ञानात्मा? किंवा परमात्मा? इति संशयः । तत्र परिमाणोपदेशात्तावद् विज्ञानात्मेति प्राप्तम् । नह्यनन्तायामविस्तारस्य परमात्मनोऽ-ङ्गुष्ठपरिमाणमुपपद्यते । विज्ञानात्मनस्तूपाधिमत्त्वात् सम्भवति कयाचित् कल्पनयाऽ-ङ्गुष्ठमात्रत्वम् । स्मृतेश्च 'अथ सत्यवतः कायात् पाशबद्धं वशं गतम् । अङ्गुष्ठमात्रं पुरुषं

ಮತ್ತು 'ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ' ಹಾಗೂ 'ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವ' ಎಂಬೆರಡು ವಾಕ್ಯಗಳಲ್ಲಿ ಅಂಗುಷ್ಠಮಾತ್ರಪರಿಮಾಣವುಳ್ಳ ಪುರುಷನಿಗೆ ಸ್ಥಾನವನ್ನು ನಿರ್ದೇಶ ಮಾಡದಿರಬಹುದು. ಆದರೆ 'ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ' ಎಂಬ ಮೂರನೆಯ ವಾಕ್ಯದಲ್ಲಿ ಹೃದಯಸ್ಥಾನವನ್ನು ನಿರ್ದೇಶಿಸಲಾಗಿದೆ. ಹಾಗಾಗಿ 'ಅಲ್ಪಶ್ರುತೇಃ' ಎಂಬ ಸೂತ್ರನ್ಯಾಯದಂತೆ ಇಲ್ಲಿ ಸ್ಥಾನವಿಶೇಷವನ್ನೇ ನಿರ್ದೇಶ ಮಾಡಿರುವುದಿಲ್ಲವೆಂದು ಹೇಳಲಾಗದು. ಆದ್ದರಿಂದ ಅದ್ವೈತಿಗಳು ಮಾಡಿಕೊಂಡ ಪೂರ್ವಪಕ್ಷವು ಅಸಾಧುವಾಗಿದೆ.

**सिद्धान्तोऽप्ययुक्तः । तत्पक्षे ''अन्यत्र धर्मादन्यत्राधर्मात्'' इत्यत्र ब्रह्मण इव ''येऽयं प्रेते विचिकित्सा मनुष्ये'' इत्यत्र जीवस्यापि पृष्टत्वेनाङ्गुष्ठवाक्यस्य जीवपरत्वेऽप्यदोषात् ।**

ಅದ್ವೈತಿಗಳ ಸಿದ್ಧಾಂತವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಅದ್ವೈತಸಿದ್ಧಾಂತದಲ್ಲಿ ಉಪನಿಷತ್ತನ್ನು ಹೀಗೆ ವ್ಯಾಖ್ಯಾನಿಸಲಾಗಿದೆ. 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್' ಎಂಬ ವಾಕ್ಯದಲ್ಲಿ ಬ್ರಹ್ಮನ ಬಗ್ಗೆ ಹೇಗೆ ಪ್ರಶ್ನಿಸಲಾಗಿದೆಯೋ, ಅದರಂತೆ 'ಯೇಽಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ' ಎಂಬ ವಾಕ್ಯದಲ್ಲಿ ಜೀವನ ಬಗ್ಗೆಯೂ ಕೂಡ ಪ್ರಶ್ನಿಸಲಾಗಿದೆ. ಅದಕ್ಕನುಗುಣವಾಗಿ ಜೀವನ ಬಗ್ಗೆಯೇ 'ಅಂಗುಷ್ಠಮಾತ್ರಃ ಪುರುಷಃ' ಎಂಬ ವಾಕ್ಯದಿಂದ ಯಮದೇವರು ಉತ್ತರಿಸಿದ್ದಾರೆಂದು ಹೇಳಿದರೆ ಏನೂ ತಪ್ಪಾಗುವುದಿಲ್ಲ.

**किञ्च निर्विशेषं ब्रह्मैवैतत्पादार्थः । नच तस्य किञ्चिदपि प्रतीशितृत्वमस्ति । जीवस्य तु स्वनियम्यं देहादिकं प्रत्यस्ति ।**

ಮತ್ತು ಅದ್ವೈತಿಗಳ ಪ್ರಕಾರ ಈ ಪಾದವು ನಿರ್ವಿಶೇಷಬ್ರಹ್ಮ ಪ್ರತಿಪಾದಕವಾಗಿದೆ. ಇಂತಹ ನಿರ್ವಿಶೇಷಬ್ರಹ್ಮನಲ್ಲಿ ಈಶಾನತ್ವಧರ್ಮವನ್ನು ಹೇಗೆ ಹೇಳುತ್ತಿದ್ದೀರಿ? ಸ್ವಲ್ಪ ಈಶಿತೃತ್ವವೂ ಸಹ

निश्चकर्ष यमो बलात् ।।' इति । नहि परमेश्वरो बलाद् यमेन निष्क्रष्टुं शक्यस्तेन तत्र संसार्यङ्गुष्ठमात्रो निश्चितः, स एवेहापीत्येवं प्राप्ते ब्रूमः – परमात्मैवायमङ्गुष्ठमात्रपरिमितः पुरुषो भवितुमर्हति । कस्मात्? शब्दात्, 'ईशानो भूतभव्यस्य' इति । नह्यन्यः परमेश्वराद् भूतभव्यस्य निरङ्कुशमीशितः । 'एतद्वै तत्' इति च प्रकृतं पृष्टमिहानुसन्दधाति। एतद्वै तद् यत्पृष्टं ब्रह्मेत्यर्थः । पृष्टं चेह ब्रह्म 'अन्यत्र धर्मादन्यत्राधर्मादन्यत्रास्मात् कृताकृतात् । अन्यत्र भूताच्च भव्याच्च यत् तत्पश्यसि तद्वद ।।' इति । शब्दादेवेत्यभिधान-श्रुतेरेवेशान इति परमेश्वरोऽयं गम्यत इत्यर्थः ।। २४ ।।

ನಿರ್ವಿಶೇಷಬ್ರಹ್ಮನಲ್ಲಿ ಬರುವುದಿಲ್ಲ. ಜೀವನಿಗಾದರೂ ತನ್ನಿಂದ ನಿಯಮ್ಯವಾದ ದೇಹ, ಇಂದ್ರಿಯಾದಿಗಳನ್ನು ಕುರಿತಾದರೂ ಈಶಿತೃತ್ವವು ಬರಬಹುದು. ಬ್ರಹ್ಮನಿಗಂತೂ ಸುತರಾಂ ಬರುವುದಿಲ್ಲ.

**एवञ्च -**

**ईशानो जीव एव स्यात्स्वदेहादेर्नियामकः ।**
**निर्विशेषं तु नेशानमेकस्याप्यनियामकम् ।। १ ।।**

ಆದ್ದರಿಂದ ಅದ್ವೈತಿಗಳ ಸಿದ್ಧಾಂತದ ಅಸ್ವಾರಸ್ಯದ ಸಾರ ಹೀಗಿದೆ -

ಈಶಾನೋ ಜೀವ ಏವ ಸ್ಯಾತ್ ಸ್ವದೇಹಾದೇರ್ನಿಯಾಮಕಃ ।
ನಿರ್ವಿಶೇಷಂ ತು ನೇಶಾನಮೇಕಸ್ಯಾಪ್ಯನಿಯಾಮಕಮ್ ॥೧॥

ಜೀವನಿಗೆ ತನ್ನ ದೇಹಾದಿಗಳನ್ನು ಕುರಿತು ಸ್ವಲ್ಪವಾದರೂ ಸ್ವಾಮ್ಯವು ಬರಬಹುದು. ನಿರ್ವಿಶೇಷಬ್ರಹ್ಮನಿಗೆ ಒಂದೇ ಒಂದು ಪದಾರ್ಥದ ಸ್ವಾಮ್ಯತ್ವವೂ ಬರಲು ಸಾಧ್ಯವೇ ಇಲ್ಲ.

**ऐक्याभिप्रायत्वमपि न तावन्मुख्यार्थत्वाय कल्प्यम् । वाच्यार्थयोरैक्यानङ्गीकारात् ।**

ಮತ್ತು ತಮ್ಮ ಸಿದ್ಧಾಂತದಲ್ಲಿ ಅದ್ವೈತಿಗಳು ಅಂಗುಷ್ಠಮಾತ್ರತ್ವವನ್ನು ಜೀವೈಕ್ಯದಿಂದ ಬ್ರಹ್ಮನಲ್ಲಿ ಉಪಪಾದನೆ ಮಾಡಿದರು. ಇದೂ ಸಹ ತಪ್ಪು. 'ಅಂಗುಷ್ಠಮಾತ್ರಃ ಪುರುಷಃ' ಎಂಬ ಶ್ರುತಿಗೆ ಮುಖ್ಯಾರ್ಥತ್ವವನ್ನು ಸ್ವೀಕರಿಸುವುದಕ್ಕಾಗಿ ಹೀಗೆ ಐಕ್ಯವನ್ನು ಕಲ್ಪಿಸುವುದು ಸರಿಯಾಗುವುದಿಲ್ಲ. ಏಕೆಂದರೆ ಎರಡೂ ಶಬ್ದಗಳ ವಾಚ್ಯಾರ್ಥಗಳಿಗೆ ಐಕ್ಯವನ್ನು ಅದ್ವೈತಿಗಳು ಒಪ್ಪುವುದಿಲ್ಲ.

**नापि प्रामाण्याय । भेदेऽप्यङ्गुष्ठमात्रहृदयनिष्ठत्वेन गौणाङ्गुष्ठमात्रत्वसम्भवात् ।**

ಶ್ರುತಿಯ ಪ್ರಾಮಾಣ್ಯಕ್ಕೋಸ್ಕರವೂ ಸಹ ಐಕ್ಯವನ್ನು ಕಲ್ಪಿಸಬಾರದು. ಏಕೆಂದರೆ ಜೀವಬ್ರಹ್ಮರಿಗೆ ಭೇದವಿದ್ದರೂ ಕೂಡ ಹೃದಯದಲ್ಲಿ ಅಂಗುಷ್ಠಮಾತ್ರ ಇರುವ ಕಾರಣ, ಬ್ರಹ್ಮನಿಗೆ ಗೌಣವಾದ ಅಂಗುಷ್ಠಪರಿಮಾಣವನ್ನು ಹೇಳುವುದು ಯುಕ್ತವಾಗುತ್ತದೆ.

**युक्तं चाभेदायाङ्गुष्ठमात्रादिश्रुतीनामीशानादिश्रुतीनां चामुख्यार्थत्वादप्यङ्गुष्ठमात्रत्वश्रुतिमात्रस्य भेदेन गौणार्थत्वम् ।**

ಮತ್ತು ಐಕ್ಯದ ರಕ್ಷಣೆಗೋಸ್ಕರ ಅಂಗುಷ್ಠಮಾತ್ರಾದಿ ಶ್ರುತಿಗಳಿಗೆ ಮತ್ತು ಈಶಾನಾದಿ ಶ್ರುತಿಗಳಿಗೆಲ್ಲಾ ಅಮುಖ್ಯಾರ್ಥತ್ವವನ್ನು ಒಪ್ಪುವುದಕ್ಕಿಂತ ಭೇದವನ್ನು ಒಪ್ಪಿ ಅಂಗುಷ್ಠಮಾತ್ರತ್ವ ಶ್ರುತಿಗಷ್ಟೇ ಗೌಣಾರ್ಥತ್ವವನ್ನು ಹೇಳುವುದು ಯುಕ್ತವಾಗುತ್ತದೆ.

**किञ्च त्वत्पक्षे जीवस्यापि न स्वतोऽङ्गुष्ठमात्रत्वम् । किन्तु हृत्कमलकोशोऽङ्गुष्ठमात्रो मनश्च प्रायेण तत्स्थं तदवच्छिन्नश्च जीव इत्येवमौपाधिकम् ।**

ಮತ್ತು ಅದ್ವೈತಿಗಳ ಸಿದ್ಧಾಂತದಲ್ಲಿಯೂ ಜೀವನಿಗೆ ಸ್ವಾಭಾವಿಕವಾಗಿ ಅಂಗುಷ್ಠಮಾತ್ರಪರಿಮಾಣವು ಇರುವುದಿಲ್ಲ. ಹೊರತು, ಔಪಾಧಿಕವಾಗಿ ಹೃತ್ಕಮಲಕೋಶವು ಅಂಗುಷ್ಠಪರಿಮಾಣದಷ್ಟು ಇದೆ. ಮನಸ್ಸೂ ಎಂದರೆ ಪ್ರಾಯಶಃ ಸಣ್ಣದಾಗಿರುವುದರಿಂದ ಹೃತ್ಕಮಲಕೋಶದಲ್ಲಿ ಇದೆ. ಜೀವನನ್ನು ಅಂಗುಷ್ಠಪರಿಮಾಣವೆಂದು ಹೇಳಲಾಗಿದೆ. ಅಂಗುಷ್ಠಪರಿಮಾಣವುಳ್ಳ ಮನಸ್ಸಿನಿಂದ ಜೀವನು ಅವಚ್ಛಿನ್ನನಾಗಿರುವುದರಿಂದ ಜೀವನು ಅಂಗುಷ್ಠಪರಿಮಾಣವುಳ್ಳವನಾಗಿದ್ದಾನೆ. ಹೀಗೆ ಔಪಾಧಿಕವಾಗಿಯೇ ನೀವೂ ಸಹ ಅಂಗುಷ್ಠಪರಿಮಾಣವನ್ನು ಜೀವನಿಗೆ ಹೇಳಬೇಕು.

**एवं चेश्वरस्य जीवाभेदं विनैव दहराधिकरणोक्ताङ्गुष्ठमात्रहृत्कमलकोशस्थत्वादङ्गुष्ठमात्रत्वोपपत्तौ किं जीवाभेदकल्पनया ।**

ಆದ್ದರಿಂದ ಈಶ್ವರನಿಗೆ ಜೀವಾಭೇದವನ್ನು ಒಪ್ಪದಿದ್ದರೂ ದಹರಾಧಿಕರಣದಲ್ಲಿ ಹೇಳಿದಂತೆ ಅಂಗುಷ್ಠಮಾತ್ರವಾದ ಹೃತ್ಕಮಲಕೋಶದಲ್ಲಿರುವುದರಿಂದ ಬ್ರಹ್ಮನೂ ಸಹ ಅಂಗುಷ್ಠಮಾತ್ರ-ಪರಿಮಾಣವುಳ್ಳವನಾಗಿದ್ದಾನೆಂದೇ ಒಪ್ಪಲು ಬರುವಾಗ ಬ್ರಹ್ಮನಿಗೆ ಜೀವಾಭೇದವನ್ನು ಏಕೆ ಕಲ್ಪನೆ ಮಾಡಬೇಕು?

**किञ्च पूर्वत्र ''आत्मानं जीवमन्तिकात्'' इति ''तं देवाः सर्वेऽर्पिताः'' इति उत्तरत्र च ''अङ्गुष्ठमात्रः पुरुषो मध्य आत्मनि तिष्ठति'' इति ''तादृगेव भवति'' इति इतरेण तु जीवन्ति'' इति ''सुप्तेषु जागर्ति'' इति ''नित्योऽनित्यानां चेतनश्चेतनानामेको बहूनां यो विदधाति कामान्'' इति ''तमात्मस्थम्'' इति ''भयादस्याग्निस्तपति'' इति भेदस्यैव श्रुतेः कथमभेदपरत्वम् ।**

ಮತ್ತು ಹಿಂದಿನ ಮುಂದಿನ ಶ್ರುತಿ ವಾಕ್ಯಗಳಲ್ಲೆಲ್ಲಾ ಜೀವಬ್ರಹ್ಮರ ಭೇದವೇ ಪ್ರತಿಪಾದಿತವಾಗಿದೆ. 'ಆತ್ಮಾನಂ ಜೀವಮಂತಿಕಾತ್' ಎಂಬ ಶ್ರುತಿಯಲ್ಲಿ ಜೀವನಿಗಿಂತಲೂ ಆತ್ಮಶಬ್ದವಾಚ್ಯನಾದ ಪರಮಾತ್ಮನಿಗೆ ಸಾಮೀಪ್ಯವನ್ನು ಹೇಳಿದ್ದರಿಂದ ಭೇದವು ನಿರ್ದಿಷ್ಟವಾಗಿದೆ. 'ತಂ ದೇವಾಃ ಸರ್ವೇಽರ್ಪಿತಾಃ' ಎಂಬುದಾಗಿ ಹಿಂದಿನ ವಾಕ್ಯಗಳಲ್ಲಿ; ಮುಂದಿನ ವಾಕ್ಯದಲ್ಲಿಯೂ, 'ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ'ಎಂಬ ಶ್ರುತಿಯಲ್ಲಿ, ಮತ್ತು 'ತಾದೃಗೇವ ಭವತಿ' ಎಂಬ ಶ್ರುತಿಯಲ್ಲಿ, 'ಇತರೇಣ ತು ಜೀವಂತಿ' ಎಂಬಲ್ಲಿ, 'ಸುಪ್ತೇಷು ಜಾಗರ್ತಿ' ಎಂಬಲ್ಲಿ, 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್' ಎಂಬಲ್ಲಿ

'ತಮಾತ್ಮಸ್ಥಮ್' ಎಂಬಲ್ಲಿ, 'ಭಯಾದಸ್ಯಾಗ್ನಿಸ್ತಪತಿ' ಎಂಬಲ್ಲಿ ಹೀಗೆ ಪರಮಾತ್ಮನಿಗೆ ಜೀವನಿಂದ ಭೇದವೇ ಶ್ರುತವಾಗಿದೆ. ಹೀಗಿರುವಾಗ ಅಭೇದವನ್ನು ನೀವು ಹೇಳುವುದು ಹೇಗೆ ಯುಕ್ತವಾಗುತ್ತದೆ?

**किञ्चाङ्गुष्ठमात्रे श्रुतं सर्वदेवोपास्यत्वं न पूर्वपक्षस्यानुगुणम् । जीवमात्रस्य सर्वदेवोपास्यत्वायोगात् ।**

ಮತ್ತು ಅಂಗುಷ್ಠಮಾತ್ರದಲ್ಲಿ ಸರ್ವದೇವೋಪಾಸ್ಯತ್ವವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಅದ್ವೈತಿಗಳು ಮಾಡಿದ ಈ ಶ್ರುತ್ಯರ್ಥದ ಈ ಸರ್ವದೇವೋಪಾಸ್ಯತ್ವವು ಜೀವನಲ್ಲಿ ಕಥಂಚಿದಪಿ ಯುಕ್ತವಾಗುವುದೇ ಇಲ್ಲ.

**नापि सिद्धान्तस्य । ज्ञेये निर्विशेषे ब्रह्मण्युपास्यत्वायोगादिति ।**

ಸಿದ್ಧಾಂತಕ್ಕೂ ಸಹ ಈ ಸರ್ವದೇವೋಪಾಸ್ಯತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ನಿರ್ವಿಶೇಷ-ಬ್ರಹ್ಮನನ್ನು ಅದ್ವೈತಿಗಳು ಜ್ಞೇಯನೆಂದು ಹೇಳುತ್ತಾರೆ ಹೊರತು, ಉಪಾಸ್ಯನೆಂದು ಹೇಳುವುದಿಲ್ಲ. ಆದ್ದರಿಂದ ಅಂಗುಷ್ಠಮಾತ್ರನಲ್ಲಿ ಶ್ರುತವಾದ ದೇವೋಪಾಸ್ಯತ್ವವು ಪೂರ್ವಪಕ್ಷಕ್ಕೂ ಅನುಕೂಲವಾಗಿಲ್ಲ, ಸಿದ್ಧಾಂತಕ್ಕೂ ಸಹ ಅನುಕೂಲವಾಗಿರುವುದಿಲ್ಲವೆಂದು ಭಾವಿಸಬೇಕು.

**प्रकाशः —**

**अन्ये त्विति** ।। तत्र भामत्यां -

नाञ्जसा मानभेदोऽस्ति परस्मिन् मानवर्जिते ।
भूतभव्येशता जीवे नाञ्जसा तेन संशयः ।।

इत्यादिना संशयपूर्वोत्तरपक्षा उक्ताः ।

ವಿವರಣೆ - 'ಅನ್ಯೇತು' ಇತ್ಯಾದಿ ಗ್ರಂಥದಿಂದ ಶಾಂಕರಭಾಷ್ಯವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. ಭಾಮತಿಯಲ್ಲಿ ಹೀಗೆ ಹೇಳಲಾಗಿದೆ -

ನಾಂಜಸಾ ಮಾನಭೇದೋಽಸ್ತಿ ಪರಸ್ಮಿನ್ ಮಾನವರ್ಜಿತೇ।
ಭೂತಭವ್ಯೇಶತಾ ಜೀವೇ ನಾಂಜಸಾ ತೇನ ಸಂಶಯಃ॥

ಯಾವುದೇ ಪರಿಮಾಣವಿಲ್ಲದ ಬ್ರಹ್ಮನಲ್ಲಿ ಅಂಗುಷ್ಠಮಾತ್ರಪರಿಮಾಣವನ್ನು ಸರಿಯಾಗಿ ಉಪಪಾದಿಸಲಾಗದು. ಜೀವನಲ್ಲಿ ಅಂಗುಷ್ಠಮಾತ್ರಪರಿಮಾಣವನ್ನು ಉಪಪಾದಿಸಬಹುದಾದರೂ ಭೂತಭವ್ಯೇಶಿತೃತ್ವವನ್ನು ಸರಿಯಾಗಿ ಉಪಪಾದನೆ ಮಾಡಲಾಗದು. ಆದ್ದರಿಂದ, 'ಅಂಗುಷ್ಠಮಾತ್ರಃ ಪುರುಷಃ'

ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯನಾದವನು ಬ್ರಹ್ಮನೋ ಅಥವಾ ಜೀವನೋ? ಎಂಬ ಸಂಶಯವು ಉಂಟಾಗುತ್ತದೆ.

ಇತ್ಯಾದಿ ಶ್ಲೋಕದಿಂದ ಸಂಶಯವನ್ನು ತೋರಿಸಿ, ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳನ್ನು ತೋರಿಸಲಾಗಿದೆ.

**प्रकाशः** – तथाहि । किमङ्गुष्ठमात्रश्रुत्यनुग्रहाय जीवोपासनपरमेतद्वाक्यमस्तु तदनुरोधेनेशानश्रुतिः कथञ्चिन्नीयतामाहोस्विदीशानश्रुत्यनुग्रहाय ब्रह्मपरमेतदस्तु तदनुरोधेनाङ्गुष्ठमात्रश्रुतिः कथञ्चिन्नीयताम् । तत्रान्यतरस्यान्यतरानुरोधविशये भामत्युक्तरीत्यैव पूर्वोत्तरपक्षावनुवदति – अङ्गुष्ठेति ।।

ಅಂಗುಷ್ಠಮಾತ್ರ ಶ್ರುತಿಯನ್ನು ಉಪೋದ್ಬಲಿಸುವುದಕ್ಕಾಗಿ ಜೀವೋಪಾಸನೆಯನ್ನು ಈ ವಾಕ್ಯವು ಪ್ರತಿಪಾದನೆ ಮಾಡುತ್ತಾನೆಂದು ಒಪ್ಪಿ, ಅದಕ್ಕನುಸಾರಿಯಾಗಿ ಈಶಾನಶ್ರುತಿಯನ್ನು ಕಥಂಚಿತ್ ಜೀವನಲ್ಲಿ ಸಮನ್ವಯ ಮಾಡಬೇಕೋ, ಅಥವಾ ಈಶಾನಶ್ರುತಿಯನ್ನೇ ಮುಖ್ಯವಾಗಿ ಪರಿಗಣಿಸಿ, ಅದನ್ನು ಉಪೋದ್ಬಲಿಸುವುದಕ್ಕಾಗಿ ಉಪಾಸನಶ್ರುತಿಯು ಬ್ರಹ್ಮಪರವಾಗಿದೆ. ಅದಕ್ಕನುಸಾರಿಯಾಗಿ ಅಂಗುಷ್ಠಮಾತ್ರ ಶ್ರುತಿಯನ್ನು ಕಥಂಚಿತ್ ಸಮನ್ವಯಗೊಳಿಸಬೇಕೋ? ಹೀಗೆ ಪರಸ್ಪರವಾಗಿ ಯಾವುದನ್ನು ಅನುಸರಿಸ ಬೇಕೆಂದು ಸಂಶಯವು ಪ್ರಾಪ್ತವಾದರೆ, ಭಾಮತಿಯಲ್ಲಿ ಹೇಳಿದಂತೆಯೇ, ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ಅನುವಾದ ಮಾಡುತ್ತಿದ್ದಾರೆ, 'ಅಂಗುಷ್ಠ' ಇತ್ಯಾದಿ ಗ್ರಂಥದಿಂದ.

**प्रकाशः** – तत्र जीवे । तस्यान्तःकरणाद्युपाधिकल्पितब्रह्मभागत्वात् अन्तःकरणस्य च प्रायो हृत्कमलकोशस्थानत्वात् हृत्कमलकोशस्य च मनुष्याणामङ्गुष्ठ-परिमितत्वात्तदवच्छिन्नो जीवोऽपि तथा । नभ इव वंशपर्वावच्छिन्नमरत्निमात्र-मित्यर्थः । नतु ब्रह्मणि । अपरिच्छिन्नत्वादिति भावः ।

'ತತ್ರ' ಎಂದರೆ ಜೀವನಲ್ಲಿ ಎಂದರ್ಥ. ಜೀವನು ಅಂತಃಕರಣವೆಂಬ ಉಪಾಧಿಯಿಂದ ಕಲ್ಪಿತವಾದ ಬ್ರಹ್ಮನ ಭಾಗವೆಂದೆನಿಸಿದ್ದಾನೆ. ಅಂತಃಕರಣವು ಪ್ರಾಯಶಃ ಹೃತ್ಕಮಲಕೋಶದಲ್ಲಿರುವುದರಿಂದ ಹೃತ್ಕಮಲಕೋಶವು ಮನುಷ್ಯರಿಗೆ ಅಂಗುಷ್ಠಪರಿಮಾಣದಷ್ಟೇ ಇರುತ್ತದೆ. ತದವಚ್ಛಿನ್ನವಾದ ಜೀವನೂ ಸಹ ಅಂಗುಷ್ಠಪರಿಮಾಣವುಳ್ಳವನೇ ಆಗುತ್ತಾನೆ. ಯಾವರೀತಿಯಾಗಿ ಆಕಾಶವು ಎಲ್ಲೆಡೆ ವ್ಯಾಪ್ತವಾಗಿದ್ದರೂ ಬಿದಿರಿನ ಗಂಟಿನಲ್ಲಿ ಮೊಳದಷ್ಟು ಪರಿಮಾಣವನ್ನು ವಂಶಪರ್ವಾವಚ್ಛಿನ್ನದಿಂದ ಹೊಂದುತ್ತದೋ, ಅದರಂತೆ ಜೀವನೂ ಸಹ ಅಂಗುಷ್ಠಪರಿಮಾಣವನ್ನು ಹೊಂದುತ್ತಾನೆ. ಈ ಪರಿಮಾಣವನ್ನು ಜೀವನಲ್ಲಿ ಹೇಳಬಹುದು ಹೊರತು, ಬ್ರಹ್ಮನಲ್ಲಿ ಹೇಳಲಾಗದು. ಏಕೆಂದರೆ ಬ್ರಹ್ಮನು ಅಪರಿಚ್ಛಿನ್ನನಾಗಿದ್ದಾನೆಂದು ತಿಳಿಯಬೇಕು.

**प्रकाशः** – किञ्च ''अङ्गुष्ठमात्रं पुरुषं निश्चकर्ष यमो बलात्'' इति स्मृत्या च जीव एवाङ्गुष्ठमात्रः । सर्वेश्वरस्य यमेन समाकर्षायोगादित्यपि बोध्यम् ।

ಮತ್ತು 'ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್' ಎಂಬ ಸ್ಮೃತಿಯಲ್ಲಿ ಯಮನು ಅಂಗುಷ್ಠಮಾತ್ರಪುರುಷನನ್ನು ಎಳೆದನೆಂದು ಹೇಳಲಾಗಿದೆ. ಆದ್ದರಿಂದಲೂ ಜೀವನೇ ಅಂಗುಷ್ಠ-ಪರಿಮಾಣವುಳ್ಳವನಾಗಬೇಕು. ಸರ್ವೇಶ್ವರನು, ಸರ್ವತ್ರವ್ಯಾಪ್ತನೂ ಆಗಿರುವಂತಹ ಬ್ರಹ್ಮನನ್ನು ಯಮನು ಎಳೆದೊಯ್ಯಲು ಸಾಧ್ಯವಿಲ್ಲವಷ್ಟೇ.

**प्रकाशः – ननु कथं जीवे भूतभव्येशानत्वं युक्तमित्यत आह – ईशान इति ।। दहराधिकरणापौनरुक्त्याय शङ्कोत्तरे अनुवदति – नचेति ।।**

ಹಾಗಾದರೆ ಜೀವನಲ್ಲಿ ಭೂತಭವ್ಯಈಶಿತೃತ್ವವನ್ನು ಹೇಗೆ ಹೇಳುವುದು ? ಎಂಬ ಪ್ರಶ್ನೆಗೆ 'ಈಶಾನಃ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

ದಹರಾಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿ ಬರಬಾರದೆಂಬ ಉದ್ದೇಶದಿಂದ ಪ್ರಶ್ನೆ ಹಾಗೂ ಉತ್ತರಗಳನ್ನು ಅನುವಾದ ಮಾಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः – युक्तं हृत्पुण्डरीकदहरस्थानत्वं परब्रह्मणः । तदुपलब्धिस्थानविशेषस्य हृत्पुण्डरीकस्य तत्र निर्देशात् । इह तदभावात् ।**

ಹೃತ್ಪುಂಡರೀಕದಲ್ಲಿರುವ ದಹರಾಕಾಶವು ಬ್ರಹ್ಮನಸ್ಥಾನವೆಂದು ಹೇಳುವುದು ಯುಕ್ತವಾಗುತ್ತದೆ. ಏಕೆಂದರೆ ಪರಮಾತ್ಮನ ಉಪಲಬ್ಧಿಯ ಸ್ಥಾನವಿಶೇಷವೇ ಹೃತ್ಪುಂಡರೀಕವಾಗಿದೆಯೆಂದು ಶ್ರುತಿಯಲ್ಲಿ ನಿರ್ದೇಶಿಸಲಾಗಿದೆ. ಆದರೆ ಪ್ರಕೃತದಲ್ಲಿ ಶ್ರುತಿಯು ಅಂತಹ ಸ್ಥಾನವಿಶೇಷವನ್ನು ಹೇಳಿದ್ದು ಕಾಣಸುವುದಿಲ್ಲ.

**प्रकाशः – नच "मध्य आत्मनि" इत्यत्रापि स्थानभेदो निर्दिष्ट इति शङ्क्यम्। आत्मशब्दस्य स्वभावब्रह्मजीवसाधारणतया स्वभावस्य स्वभवित्रधीननिरूपणतया स्वस्य च भवितुरनिर्दिष्टतया कस्य मध्ये इत्यज्ञानाज्जीवपरयोश्चाञ्जस्येन मध्या-सम्भवान्नात्रस्थाननिर्देशस्स्पष्ट इति भावः ।।**

'ಮಧ್ಯ ಆತ್ಮನಿ' ಎಂಬ ಶ್ರುತಿಯಲ್ಲಿಯೂ ಸಹ 'ಮಧ್ಯ' ಶಬ್ದದಿಂದ ಸ್ಥಾನವನ್ನು ನಿರ್ದೇಶಿಸಿದ್ದಾರಲ್ಲವೇ? ಎಂದು ಪ್ರಶ್ನಿಸಬಾರದು. ಆತ್ಮಶಬ್ದಕ್ಕೆ ಸ್ವಭಾವ, ಬ್ರಹ್ಮ, ಜೀವ ಎಂದು ಮೂರು ಅರ್ಥಗಳಿರುವುದರಿಂದ, ಸ್ವಭಾವವು ಕರ್ತೃವಿನ ಅಧೀನವಾಗಿದೆ. ಅಂತಹ ಕರ್ತೃವನ್ನು ಶ್ರುತಿಯಲ್ಲಿ ನಿರ್ದೇಶಿಸಿಲ್ಲ. ಆದ್ದರಿಂದ 'ಮಧ್ಯೇ' ಎಂಬ ಪದವನ್ನು ಕೇಳಿದಾಗ, ಯಾರ ಮಧ್ಯದಲ್ಲಿ ಎಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಜೀವನ ಮಧ್ಯದಲ್ಲಿಯೋ, ಪರಮಾತ್ಮನ ಮಧ್ಯದಲ್ಲಿಯೋ ? ಎಂಬ ಗೊಂದಲವು ಉಂಟಾಗುವುದರಿಂದ, 'ಮಧ್ಯೇ' ಎಂಬ ಶಬ್ದವು ಸ್ಥಾನನಿರ್ದೇಶಕವಾಗಿದೆಯೆಂದು ನಿಶ್ಚಯಿಸಲಾಗದು.

**प्रकाशः – ब्रह्मेति ।। "अन्यत्र धर्मादन्यत्राधर्मादन्यत्रास्मात्कृताकृतात् । अन्यत्र भूताच्च भव्याच्च यत्तत्पश्यसि तद्वद" इति प्राग्ब्रह्मणः पृष्टत्वादुत्तरग्रन्थसन्दर्भस्य तत्प्रतिवचनत्वमेव युक्तमिति भूतभव्येशानत्वं निरङ्कुशमेव । न सङ्कोचनीयमित्यर्थः।**

'ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ' ಎಂಬುದಾಗಿ ಹಿಂದೆ ಬ್ರಹ್ಮನ ಬಗ್ಗೆ ಪ್ರಶ್ನೆಯನ್ನು ಮಾಡಿದ್ದರಿಂದ ಮುಂದೆ 'ಈಶಾನೋ ಭೂತಭವ್ಯಸ್ಯ' ಎಂಬ ವಾಕ್ಯದಿಂದ ಬ್ರಹ್ಮನ ವಿಷಯದಲ್ಲಿಯೇ ಉತ್ತರವನ್ನು ನೀಡಬೇಕು. ಆದ್ದರಿಂದ ಭೂತಭವ್ಯ ಈಶಾನತ್ವವನ್ನು ಬ್ರಹ್ಮನಲ್ಲಿ ನಿರಂಕುಶವಾಗಿ ಅಸಂಕುಚಿತವಾದ ವೃತ್ತಿಯಿಂದಲೇ ಹೇಳಲು ಬರುವಾಗ, ಸಂಕೋಚವನ್ನು ಮಾಡಿ, ಜೀವನಲ್ಲಿ ಈಶಾನತ್ವವನ್ನು ಕೂಡಿಸುವುದು ತಪ್ಪಾಗುತ್ತದೆ.

**ಪ್ರಕಾಶಃ – जीवैक्येति ।।** यथा ''तत्वमसि'' इति जीवस्य त्वम्पदार्थस्य तदिति परमात्मना विरुद्धांशत्यागेनैकत्वमुच्यते तथेहाप्यङ्गुष्ठपरिमितस्यापि जीवस्येशानश्रुत्या ब्रह्माभेदः प्रतिपाद्यत इत्यर्थः ।

ಯಾವರೀತಿಯಾಗಿ 'ತತ್ವಮಸಿ' ಎಂಬಲ್ಲಿ 'ತ್ವಂ' ಪದಾರ್ಥನೆನಿಸಿದ ಜೀವನಿಗೆ, 'ತತ್' ಪದಾರ್ಥನೆನಿಸಿದ ಪರಮಾತ್ಮನಿಂದ ವಿರುದ್ಧಾಂಶಗಳೆನ್ನಲ್ಲಾ ಬಿಟ್ಟು ಐಕ್ಯವನ್ನು ಹೇಳಲಾಗುತ್ತದೋ, ಅದರಂತೆ ಇಲ್ಲಿಯೂ ಸಹ ಅಂಗುಷ್ಠಪರಿಮಾಣವನ್ನು ಈಶಾನತ್ವವನ್ನು ಬಿಟ್ಟು ಜೀವಬ್ರಹ್ಮರಿಗೆ ಅಭೇದವನ್ನು ಹೇಳಬಹುದೆಂದು 'ಜೀವೈಕ್ಯ' ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡಿರುತ್ತಾರೆ.

**ಪ್ರಕಾಶಃ – तदुक्तं भामत्यां -**

प्रश्नोत्तरत्वादीशानश्रवणस्याविशेषतः ।
जीवस्य ब्रह्मरूपत्वप्रत्यायनपरं वचः ।। इति ।।

ಇದನ್ನೇ ಭಾಮತಿಯಲ್ಲಿ ಹೀಗೆ ಸಂಗ್ರಹಿಸಲಾಗಿದೆ -

ಪ್ರಶ್ನೋತ್ತರತ್ವಾದೀಶಾನಶ್ರವಣಸ್ಯಾವಿಶೇಷತಃ।
ಜೀವಸ್ಯ ಬ್ರಹ್ಮರೂಪತ್ವಪ್ರತ್ಯಾಯನಪರಂ ವಚಃ॥

ಬ್ರಹ್ಮನ ಬಗ್ಗೆ ಪ್ರಶ್ನೆಯನ್ನು ಮಾಡಿರುವುದರಿಂದ, 'ಅಂಗುಷ್ಠಮಾತ್ರಃ' ಇತ್ಯಾದಿ ವಾಕ್ಯದಿಂದಲೂ ಅವನೇ ಪ್ರತಿಪಾದ್ಯನಾಗಬೇಕು. ಹೀಗೆ ಶ್ರುತಿಯಲ್ಲಿರುವ 'ಈಶಾನ' ಶಬ್ದಕ್ಕೆ ಸಂಕೋಚ ಮಾಡದೇ ಅಸಂಕುಚಿತವಾದ ಅರ್ಥವನ್ನೇ ಸ್ವೀಕರಿಸಲು ಬರುವಾಗ, ಜೀವನಿಗೆ ಬ್ರಹ್ಮನಿಂದ ಅಭೇದವನ್ನು ವಿವಕ್ಷಿಸಿ ಅಂಗುಷ್ಠಮಾತ್ರ ಪರಿಮಾಣವನ್ನು ಉಪಪಾದಿಸಬಹುದು ಎಂದು.

**ಪ್ರಕಾಶಃ –** यत्तावदुक्तं प्रथमश्रुताङ्गुष्ठमात्रत्वानुरोधेन चरमेशानत्वं नेयमिति तत्तावन्नेत्याह – **ईशान इति ।।**

ಪೂರ್ವಪಕ್ಷದಲ್ಲಿ ಪ್ರಥಮಶ್ರುತವಾದ ಅಂಗುಷ್ಠಮಾತ್ರತ್ವವನ್ನು ಅನುಸರಿಸಿ, ಚರಮಶ್ರುತವಾದ ಈಶಾನತ್ವವನ್ನು ಅರ್ಥೈಸಬೇಕೆಂದು ಹೇಳಿದ್ದು ತಪ್ಪೆಂದು 'ಈಶಾನಃ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**ಪ್ರಕಾಶಃ –** यदपि दहराधिकरणवैषम्यं तदपि नेत्याह – **अङ्गुष्ठेति ।।**

ದಹರಾಧಿಕರಣದಿಂದ ಈ ಅಧಿಕರಣದಲ್ಲಿ ವೈಷಮ್ಯವಿದೆಯೆಂದು ಹೇಳಿದ್ದೂ ಸಹ ತಪ್ಪೆಂದು 'ಅಂಗುಷ್ಠ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – अभ्युपेत्येदमुदितम् । वस्तुतस्तु ''मध्यआत्मनि'' इत्यत्र देहादि-मध्य· पस्थाननिर्देशोऽस्ति । तथा तृतीयवाक्येऽपि हृदय इति स्पष्टः स्थाननिर्देशोऽस्तीत्यपि ध्येयम् ।

'ಅಂಗುಷ್ಠ' ಇತ್ಯಾದಿ ವಾಕ್ಯದಿಂದ ಮೂರನೆಯ ವಾಕ್ಯದಲ್ಲಿ ಮಾತ್ರ ಸ್ಥಾನವನ್ನು ನಿರ್ದೇಶಿಸಲಾಗಿದೆ ಎಂದು ಹೇಳಿದ್ದು, ಅಂಗೀಕಾರ ವಾದ. ವಾಸ್ತವಿಕವಾಗಿ 'ಮಧ್ಯಆತ್ಮನಿ' ಎಂಬಲ್ಲಿ 'ಮಧ್ಯ' ಶಬ್ದದಿಂದ ದೇಹದ ಮಧ್ಯವೆಂಬ ಸ್ಥಾನದ ನಿರ್ದೇಶವೂ ಸಹ ಇರುತ್ತದೆ. ಆದರೆ, ಮೂರನೆಯ ವಾಕ್ಯದಲ್ಲಿ 'ಹೃದಯೇ' ಎಂಬುದಾಗಿ ಸ್ಪಷ್ಟವಾಗಿ ಸ್ಥಾನನಿರ್ದೇಶವಿದೆಯೆಂದು ತಿಳಿಯಬೇಕು.

**प्रकाशः** – यदपीशानत्वमसङ्कुचितं ब्रह्मणीति तदपि नेत्याह – **किञ्चेति** ।।

ಈಶಾನತ್ವವನ್ನು ಅಸಂಕುಚಿತವಾಗಿ ಬ್ರಹ್ಮನಲ್ಲಿ ಉಪಪಾದಿಸಬಹುದೆಂದು ಅದ್ವೈತಿಗಳು ಹೇಳಿದ್ದರು. ವಿಚಾರ ಮಾಡಿದರೆ, ಈಶಾನತ್ವವನ್ನು ಸ್ವಲ್ಪಮಟ್ಟಿಗೂ ಸಹ ಬ್ರಹ್ಮನಲ್ಲಿ ಕೂಡಿಸಲು ಸಾಧ್ಯವಿಲ್ಲವೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – यदप्यङ्गुष्ठमात्रोक्तिरैक्याभिप्रायेति तत्किं वाक्यस्य मुख्यार्थतालाभाय कल्प्यत उत प्रामाण्याय । न द्वयमपि युक्तमित्याह – **ऐक्येति** ।।

ಇನ್ನು ಶ್ರುತಿಯಲ್ಲಿ ಅಂಗುಷ್ಠಮಾತ್ರತ್ವವನ್ನು ಹೇಳಲಾಗಿದೆ. ಇದನ್ನು ಐಕ್ಯವಿವಕ್ಷೆಯಿಂದ ಬ್ರಹ್ಮನಲ್ಲಿ ಕೂಡಿಸಬೇಕೆಂದು ಅದ್ವೈತಿಗಳು ಹೇಳಿದರು. ನಿಮ್ಮ ಅದ್ವೈತಿಗಳ ಅಭಿಪ್ರಾಯವೇನು? 'ಅಂಗುಷ್ಠಮಾತ್ರಃ' ಇತ್ಯಾದಿ ವಾಕ್ಯಕ್ಕೆ ಮುಖ್ಯಾರ್ಥತ್ವವನ್ನು ಕೂಡಿಸುವುದಕ್ಕಾಗಿ ಹೀಗೆ ಕಲ್ಪಿಸುತ್ತಿದ್ದಾರೋ, ಅಥವಾ ಶ್ರುತಿಪ್ರಾಮಾಣ್ಯಕ್ಕೋಸ್ಕರ ಹೀಗೆ ಐಕ್ಯವನ್ನು ಕಲ್ಪಿಸುತ್ತಿದ್ದಾರೋ, ಎರಡು ಪಕ್ಷಗಳೂ ಸಹ ಯುಕ್ತವಲ್ಲವೆಂದು 'ಐಕ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – **सम्भवादिति** ।। ब्रह्मण इति भावः । ननु को विशेष इत्यत आह – **युक्तञ्चेति** ।।

'ಸಂಭವಾತ್' ಎಂದರೆ ಬ್ರಹ್ಮನಲ್ಲಿ ಗೌಣವಾದ ಅಂಗುಷ್ಠಮಾತ್ರತ್ವವನ್ನು ಕೂಡಿಸಬಹುದೆಂದು ಅಭಿಪ್ರಾಯ. ಎರಡು ಪಕ್ಷಗಳಲ್ಲಿಯೂ ಏನು ವ್ಯತ್ಯಾಸ? ಎಂಬ ಪ್ರಶ್ನೆಗೆ 'ಯುಕ್ತಂ ಚ' ಇತ್ಯಾದಿ ವಾಕ್ಯದಿಂದ ವಿವರಣೆ ನೀಡುತ್ತಿದ್ದಾರೆ.

**प्रकाशः** – प्रकारान्तरेणान्यथोपपत्तिं वदन्नाभेदकल्पनं युक्तमित्याह – किञ्चेति।।

ಮತ್ತೊಂದು ಪ್ರಕಾರದಿಂದ ಅನ್ಯಥಾಉಪಪತ್ತಿಯನ್ನು ಹೇಳುತ್ತಾ, ಅಭೇದಕಲ್ಪನೆಯು ಯುಕ್ತವಲ್ಲವೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – अत्र तथा स्थाननिर्देशो नेति तु प्रत्युक्तमिति ध्येयम् । कल्पकाभावमुक्त्वा तत्प्रकरणगतपूर्वोत्तरबहुवाक्यविरोधमाह – किञ्च पूर्वत्रेति ।।

ಮೂರನೆಯ ವಾಕ್ಯದಲ್ಲಿ ಸ್ಥಾನವನ್ನು ನಿರ್ದೇಶಿಸಿದಂತೆ ಮೊದಲೆರಡು ವಾಕ್ಯಗಳಲ್ಲಿ ಸ್ಥಾನವನ್ನು ನಿರ್ದೇಶಿಸಿಲ್ಲವಲ್ಲ ? ಎಂಬ ಪ್ರಶ್ನೆಗೆ ಈಗಾಗಲೇ ಉತ್ತರಿಸಿದ್ದಾಗಿದೆ. ಈ ವಿಷಯದಲ್ಲಿ ಯಾವುದೇ ಕಲ್ಪಕಗಳಿಲ್ಲವೆಂದು ಹೇಳಿ, ಆ ಪ್ರಕರಣದಲ್ಲಿರುವ ಅನೇಕ ಪೂರ್ವೋತ್ತರವಾಕ್ಯಗಳಿಂದ ಅಭೇದವಿಷಯದಲ್ಲಿ ವಿರೋಧವನ್ನೇ ಹೇಳುತ್ತಿದ್ದಾರೆ 'ಕಿಂಚ ಪೂರ್ವತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – ''य इदं मध्वदं वेद आत्मानं जीवमन्तिकात्'' इति जीवस्य समीपस्थमात्मानं वेदेति वाक्ये अन्तिकशब्देन भेदप्रतीतेः

'ಯ ಇದಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್' ಎಂಬ ವಾಕ್ಯದಲ್ಲಿ ಜೀವನ ಸಮೀಪದಲ್ಲಿರುವ ಆತ್ಮನನ್ನು ತಿಳಿದುಕೊಳ್ಳಬೇಕು ಎಂದು ಹೇಳಲಾಗಿದೆ. ಈ ಶ್ರುತಿಯಲ್ಲಿ 'ಅಂತಿಕ' ಎಂಬ ಶಬ್ದದಿಂದ ಸಮೀಪದಲ್ಲಿದ್ದಾನೆಂದು ಹೇಳಲಾಗಿದೆ. ಸಮೀಪದಲ್ಲಿರಬೇಕಾದರೆ ಭೇದವಿರಲೇ ಬೇಕೆಂದು ತಿಳಿಯುತ್ತದೆ.

**प्रकाशः** – ''तं देवाः सर्वेऽर्पितास्तदु नात्येति कश्चन'' इति वाक्ये अर्पिताः प्राप्ता इति प्राप्तृप्राप्यभावेन भेदः ।

'ತಂ ದೇವಾಃ ಸರ್ವೇಽರ್ಪಿತಾಸ್ತದು ನಾತ್ಯೇತಿ ಕಶ್ಚನ' ಎಂಬ ವಾಕ್ಯದಲ್ಲಿ 'ಅರ್ಪಿತಾಃ' ಅಂದರೆ 'ಹೊಂದಿದರು' ಎಂಬರ್ಥವನ್ನು ಹೇಳಲಾಗಿದೆ. ಪರಮಾತ್ಮನನ್ನು ದೇವತೆಗಳು ಹೊಂದಬೇಕಾದರೆ, ಪ್ರಾಪ್ಯಪ್ರಾಪ್ಯಭಾವವಿರಬೇಕು. ಇದರಿಂದ ಭೇದವು ಸಿದ್ಧವಾಗುತ್ತದೆ.

**प्रकाशः** – आत्मनि जीव इत्याधारसप्तम्या भेदसिद्धिः ।

'ಅಂಗುಷ್ಠಮಾತ್ರ ಪುರುಷಃ ಮಧ್ಯೇ ಆತ್ಮನಿ' ಎಂಬ ಶ್ರುತಿಯಲ್ಲಿ 'ಆತ್ಮನಿ' ಎಂಬ ಸಪ್ತಮೀ ವಿಭಕ್ತಿಯು ಆಧಾರಾರ್ಥದಲ್ಲಿದೆ. ಆಧಾರವು ಭೇದವ್ಯಾಪ್ತವಾದ್ದರಿಂದಲೂ ಭೇದವು ಸಿದ್ಧವಾಗುತ್ತದೆ.

**प्रकाशः** –

यथोदकं शुद्धेऽशुद्धमासिक्तं तादृगेव भवति ।
एवं मुनेर्विजानत आत्मा भवति गौतम ।।

इति सादृश्यवाचिना तादृक्शब्देन भेदसिद्धिः ।

'ಯಥೋದಕಂ ಶುದ್ಧೇಽಶುದ್ಧಮಾಸಿಕ್ತಂ ತಾದೃಗೇವ ಭವತಿ।
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ॥'

ಎಂಬಲ್ಲಿ ಸಾದೃಶ್ಯವಾಚಿಯಾದ ತಾದೃಕ್‌ಶಬ್ದವನ್ನು ಬಳಸಲಾಗಿದೆ. ಸಾದೃಶ್ಯವಿದ್ದಲ್ಲಿ ಭೇದವು ಇದ್ದೇ ಇರುತ್ತದೆ. ಆದ್ದರಿಂದಲೂ ಇದರಿಂದ ಜೀವಬ್ರಹ್ಮರಿಗೆ ಭೇದವು ಸಿದ್ಧವಾಗುತ್ತದೆ.

**प्रकाशः –**

न प्राणेन नापानेन मर्त्यो जीवति कश्चन ।
इतरेण तु जीवन्ति यस्मिन्नेतावुपाश्रितौ ।।

इत्यत्रोपजीव्योपजीवकभावेन "य एष सुप्तेषु" इत्यादौ स्पष्टो भेदः । व्यावहारिकभेद पराण्येतानीति प्रत्युक्तमन्तर्यामिनये । ज्ञेय इति हेतुगर्भं ।

ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ।
ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ॥

ಎಂಬ ಶ್ರುತಿಯಲ್ಲಿ ಉಪಜೀವ್ಯೋಪಜೀವಕಭಾವದಿಂದ ಭೇದವು ತಿಳಿಯುತ್ತದೆ. 'ಯ ಏಷ ಸುಪ್ತೇಷು' ಇತ್ಯಾದಿ ವಾಕ್ಯದಲ್ಲಂತೂ ಜೀವನು ಸುಪ್ತನಾಗಿದ್ದರೂ ಬ್ರಹ್ಮನು ಎಚ್ಚರದಿಂದಿರುತ್ತಾನೆಂದು ಹೇಳಿದ್ದರಿಂದ ಭೇದವು ಸ್ಪಷ್ಟವಾಗಿ ತಿಳಿಯುತ್ತದೆ. ಈ ಎಲ್ಲಾ ಶ್ರುತಿಗಳಲ್ಲಿ ಭೇದವು ಹೇಳಲ್ಪಟ್ಟದ್ದರೂ ವ್ಯಾವಹಾರಿಕ ಭೇದವನ್ನಷ್ಟೇ ಶ್ರುತಿಗಳು ಹೇಳುತ್ತಿವೆಯೆಂಬ ಅದ್ವೈತಿಗಳ ವಾದವನ್ನು ಅಂತರ್ಯಾಮ್ಯಧಿಕರಣದಲ್ಲಿ ನಿರಾಕರಿಸಿದ್ದೇವೆ. ಗ್ರಂಥದಲ್ಲಿರು 'ಜ್ಞೇಯೇ' ಎಂಬ ಪದವು ಹೇತುಗರ್ಭಿತವಾಗಿದೆಯೆಂದು ತಿಳಿಯಬೇಕು.

**गुरुराजीयम् – किं चाल्पश्रुतेरित्युक्तन्यायेनेश्वरेऽङ्गुष्ठमात्रत्वं सम्भवत्येवेति** तेनैव गतार्थता । नच तत्र हृत्पुण्डरीकस्येवेह स्थानविशेषस्यानिर्देशान्नाङ्गुष्ठमात्रत्वमीश्वरस्येत्युक्तम् । तत्राह – **अङ्गुष्ठमात्र इति** ।। यद्यप्यत्र मध्य आत्मनीत्यनेनापि स्थाननिर्देशाद्वाक्यद्वये स्थाननिर्देशाभावोक्तिरयुक्ता । तथापि स्पष्टमधिष्ठानस्यानुक्तत्वाभिप्रायेणेयमुक्तिरिति बोध्यम् । यदुक्तमङ्गुष्ठमात्रत्वोक्तिस्तु जीवैक्याभिप्रायेति तत्रैक्याभिप्रायार्थत्वं किं मुख्यार्थत्वाय कल्प्यं किं वा प्रामाण्याय । नाद्य इत्याह – **न तावदिति** ।। ननु च मत्पक्षे लक्षणावत्, भवत्पक्षेऽङ्गुष्ठमात्रत्वस्य गौणत्वं भवतीत्यविशेषात्कुतो भवन्मतमेव प्रामाणिकमित्यतो लक्षणापेक्षया गौण्या मुख्यत्वादिति परिहारे सत्येव परिहारान्तरमाह – **युक्तश्चेति** ।। **ज्ञेय इति** ।। तत्पादप्रतिपाद्य इत्यर्थः । यद्वा ज्ञेये ज्ञानविषय इत्यर्थः । उपासनाया अविद्यमानविषयकत्वाद्ब्रह्मविषयत्वं न सम्भवति । ब्रह्मणो ज्ञानविषयत्वेन ज्ञानस्य च

परमार्थसत्कर्मत्वेन तत्कर्मभूतब्रह्मणः परमार्थसत्त्वेनारोपितत्वाभावादित्यर्थः । नाममात्रेण निर्देशः श्रुतिरिति टीकायां श्रुतिलक्षणमुक्तम् । तदयुक्तम् । तथात्वे मात्रशब्देन योगमात्रस्य व्यावर्तितत्वेन योगरूढानां वामनादिशब्दानां यौगिकत्वस्यापि विद्यमानत्वेन नाममात्रेण निर्देशत्वाभावेन श्रुतित्वं न स्यात् ।




ಕಾಠಕೋಪನಿಷತ್ತಿನಲ್ಲಿರುವ 'ಅಂಗುಷ್ಠಮಾತ್ರಃ ಪುರುಷಃ' ಎಂಬ ವಾಕ್ಯವನ್ನು ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಅಂಗುಷ್ಠಪರಿಮಾಣವು ಪರಬ್ರಹ್ಮನಲ್ಲಿ ಬರುವುದಿಲ್ಲ. ಜೀವನಲ್ಲಿ ಭೂತಭವಿಷ್ಯತ್‌ವಸ್ತುವಿನ ಒಡೆತನವೂ ಬರುವುದಿಲ್ಲ. ಆದ್ದರಿಂದ ಈ ವಾಕ್ಯದಿಂದ ಪ್ರತಿಪಾದ್ಯನಾದವನು ಜೀವನೋ, ಅಥವಾ ಬ್ರಹ್ಮನೋ ಎಂದು ಸಂಶಯ.

ಅಣುವಾದ ಜೀವನು ಹೃತ್ಕಮಲದಲ್ಲಿರುವ ಅಂತಃಕರಣಾದ್ಯುಪಾಧಿಗಳಿಂದ ವಿಶಿಷ್ಟನಾದ ಕಾರಣ ಅಂಗುಷ್ಠಪರಿಮಾಣವನ್ನು ಹೊಂದಿರುತ್ತಾನೆ. ಪ್ರಥಮಶ್ರುತವಾದ ಅಂಗುಷ್ಠಪರಿಮಾಣಕ್ಕೆ ಅನುಸಾರಿಯಾಗಿ ಅನಂತರ ಶ್ರುತವಾದ ಭೂತಭವಿಷ್ಯತ್ ವಸ್ತುಗಳ ಒಡೆತನವನ್ನು ಸ್ವಲ್ಪ ಸಂಕೋಚ ಮಾಡಬೇಕು. ಆದ್ದರಿಂದ ಜೀವನೇ ಶ್ರುತಿಪ್ರತಿಪಾದ್ಯನೆಂದು ಪೂರ್ವಪಕ್ಷ.

ನಚಿಕೇತನು 'ಅನ್ಯತ್ರ ಧರ್ಮಾತ್' ಇತ್ಯಾದಿ ವಾಕ್ಯದಿಂದ ಬ್ರಹ್ಮನ ಬಗ್ಗೆ ಪ್ರಶ್ನೆಯನ್ನು ಮಾಡುತ್ತಿದ್ದಾನೆ. ಅದಕ್ಕೆ ಉತ್ತರ ನೀಡುವ ಸಂದರ್ಭದಲ್ಲಿ 'ಈಶಾನೋ ಭೂತಭವಸ್ಯ' ಎಂಬ ವಾಕ್ಯವಿರುತ್ತದೆ. ಆದ್ದರಿಂದ ಈ ವಾಕ್ಯವು ಬ್ರಹ್ಮಪರವೇ ಆಗಬೇಕು ಹೊರತು, ಜೀವನಲ್ಲಿ ಸಂಕೋಚ ಮಾಡಿ ಅರ್ಥೈಸಲು ಬರುವುದಿಲ್ಲ. ಆದ್ದರಿಂದ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ಪರಬ್ರಹ್ಮನೇ ಆಗುತ್ತಾನೆ. ಹಾಗಾದರೆ, ಇವನಲ್ಲಿ ಅಂಗುಷ್ಠಪರಿಮಾಣವನ್ನು ಹೇಗೆ ಕೂಡಿಸುವುದು? ಎಂದರೆ, ಜೀವನಿಂದ ಅಭಿನ್ನನಾದ ಕಾರಣ ಜೀವನಲ್ಲಿರುವ ಅಂಗುಷ್ಠಪರಿಮಾಣವನ್ನು ಬ್ರಹ್ಮನಲ್ಲಿ ಶ್ರುತಿಯು ಹೇಳುತ್ತಿದೆಯೆಂದು ಉತ್ತರಿಸಬೇಕು. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣ ಶರೀರ ಅಯುಕ್ತವಾಗಿದೆ. ಏಕೆಂದರೆ ಪೂರ್ವಪಕ್ಷದಲ್ಲಿ ಅನಂತರ ಶ್ರುತವಾದ ಭೂತಭವಿಷ್ಯತ್ ವಸ್ತುಗಳ ಒಡೆತನವನ್ನು ಸಂಕೋಚ ಮಾಡಬೇಕೆಂದು ಸಮರ್ಥಿಸಿದರು. ಸರಿಯಾಗಿ ಗಮನಿಸಿದರೆ 'ಅಂಗುಷ್ಠಮಾತ್ರಃ' ಎಂಬ ವಾಕ್ಯಕ್ಕಿಂತ ಮೊದಲೂ ಸಹ 'ಈಶಾನೋ ಭೂತಭವ್ಯಸ್ಯ' ಎಂಬ ವಾಕ್ಯವು ಇರುತ್ತದೆ. ಹೀಗೆ ಪೂರ್ವೋತ್ತರವಾಕ್ಯಗಳಲ್ಲಿ ಭೂತಭವಿಷ್ಯತ್ ವಸ್ತುಗಳ ಒಡೆತನವು ಉಕ್ತವಾಗಿರುವುದರಿಂದ ಸಂದಂಶ ನ್ಯಾಯದಿಂದ ಅಂಗುಷ್ಠಮಾತ್ರತ್ವವನ್ನು ಬ್ರಹ್ಮನಲ್ಲೇ ಹೇಳಬೇಕಾಗುತ್ತದೆ ಹೊರತು, ಜೀವನಲ್ಲಿ ಹೇಳಲಾಗದು. ಸಿದ್ಧಾಂತವೂ ಸಹ ಸರಿಯಲ್ಲ. ಏಕೆಂದರೆ ನಚಿಕೇತನು ಬ್ರಹ್ಮನ ಬಗ್ಗೆ ಪ್ರಶ್ನಿಸಿದಾಗ, ಯಮದೇವರು ಬ್ರಹ್ಮನ ಬಗ್ಗೆಯೇ ಉತ್ತರಿಸಬೇಕೆಂದು ಹೇಳಿದಿರಿ. ಆದರೆ ಕಾಠಕೋಪನಿಷತ್ತಿನ ಅದ್ವೈತಿಗಳ ವ್ಯಾಖ್ಯಾನದಲ್ಲಿ 'ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ' ಎಂಬ ನಚಿಕೇತನ ಪ್ರಶ್ನೆ ಜೀವಾತ್ಮವಿಷಯಕವಾಗಿದೆಯೆಂದು ಹೇಳಲಾಗಿದೆ. ಅಂದಮೇಲೆ ಬ್ರಹ್ಮಪ್ರಕರಣವಾದಂತೆ ಇದು ಜೀವಪ್ರಕರಣವೂ ಸಹ ಏಕಾಗಬಾರದು?

ಪರಿಪೂರ್ಣಚಂದ್ರಿಕಾ

ಮತ್ತು ಈ ಪಾದದಲ್ಲಿ ನಿರ್ವಿಶೇಷ ಬ್ರಹ್ಮನೇ ಪ್ರತಿಪಾದ್ಯನೆಂದು ಅದ್ವೈತಿಗಳು ಸಮರ್ಥಿಸುತ್ತಾರೆ. ಆದರೆ ಇಲ್ಲಿ ಈಶಿತೃತ್ವವನ್ನು ಬ್ರಹ್ಮನಧರ್ಮವೆಂದು ಪರಿಗಣಿಸುತ್ತಿದ್ದಾರೆ. ಜೀವನಲ್ಲಾದರೂ ತನ್ನ ದೇಹಾದಿಗಳನ್ನು ಕುರಿತು ಈಶಿತೃತ್ವವನ್ನು ಸ್ವಲ್ಪಮಟ್ಟಿಗಾದರೂ ಹೇಳಬಹುದು. ನಿರ್ವಿಶೇಷಬ್ರಹ್ಮನಲ್ಲಿ ಸ್ವಲ್ಪವೂ ಸಹ ಈಶಿತೃತ್ವವನ್ನು ಹೇಳಲು ಸಾಧ್ಯವಿಲ್ಲ.

ಈಶಾನೋ ಜೀವ ಏವ ಸ್ಯಾತ್ ಸ್ವದೇಹಾದೇರ್ನಿಯಾಮಕಃ ।
ನಿರ್ವಿಶೇಷಂ ತು ನೇಶಾನಮೇಕಸ್ಯಾಪ್ಯನಿಯಾಮಕಮ್ ॥

ಜೀವನಿಗೆ ತನ್ನ ದೇಹಾದಿಗಳನ್ನು ಕುರಿತು ಸ್ವಲ್ಪವಾದರೂ ಸ್ವಾಮಿತ್ವವು ಬರಬಹುದು. ನಿರ್ವಿಶೇಷಬ್ರಹ್ಮನಿಗೆ ಒಂದೇ ಒಂದು ಪದಾರ್ಥದ ಸ್ವಾಮಿತ್ಯವೂ ಬರಲು ಸಾಧ್ಯವೇ ಇಲ್ಲ.

ಮತ್ತು ಕಾಠಕೋಪನಿಷತ್ತಿನ ಈ ಪ್ರಕರಣದ ಹಿಂದಿನ ಮುಂದಿನ ವಾಕ್ಯಗಳಲ್ಲೆಲ್ಲಾ ಜೀವಬ್ರಹ್ಮಭೇದವೇ ಪ್ರತಿಪಾದಿತವಾಗಿರುವಾಗ ಜೀವನಿಂದ ಐಕ್ಯವನ್ನು ವಿವಕ್ಷಿಸಿ, ಪರಬ್ರಹ್ಮನಲ್ಲಿ ಅಂಗುಷ್ಠಪರಿಮಾಣವನ್ನು ಸಮರ್ಥಿಸುವುದೂ ಸಹ ಬಹಳ ತಪ್ಪಾಗುತ್ತದೆ.



## ರಾಮಾನುಜಭಾಷ್ಯ ವಿಮರ್ಶೆ

### तात्पर्यचन्द्रिका

**केचित्तु "प्राणाधिपः सञ्चरति स्वकर्मभिरङ्गुष्ठमात्रः" इति श्रुत्यन्तरे जीवस्याङ्गुष्ठमात्रत्वश्रवणादीश्वरस्य च क्वापि तदश्रवणादिहाङ्गुष्ठमात्रो जीव एवेति प्राप्ते**

ಅನುವಾದ - ರಾಮಾನುಜರ ಅಧಿಕರಣ ಶರೀರ ಹೀಗಿದೆ - 'ಪ್ರಾಣಾಧಿಪಃ ಸಂಚರತಿ ಸ್ವಕರ್ಮಭಿರಂಗುಷ್ಠಮಾತ್ರಃ' ಎಂಬ ಬೇರೊಂದು ಶ್ರುತಿಯಲ್ಲಿ ಜೀವನಿಗೆ ಅಂಗುಷ್ಠಪರಿಮಾಣವನ್ನು ಹೇಳಲಾಗಿದೆ. ಆದರೆ ಇಂತಹ ಪರಿಮಾಣವನ್ನು ಈಶ್ವರನಿಗೆ ಯಾವುದೇ ಶ್ರುತಿಯಲ್ಲಿಯೂ ಹೇಳಿರುವುದಿಲ್ಲ. ಆದ್ದರಿಂದ ಪ್ರಕೃತ ಕಾಠಕೋಪನಿಷತ್ತಿನಲ್ಲಿ 'ಅಂಗುಷ್ಠಮಾತ್ರಃ' ಇತ್ಯಾದಿ ವಾಕ್ಯದಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ.

**अन्यत्राश्रुतमप्यङ्गुष्ठमात्रत्वमिहेश्वरस्यैव । ईशानशब्दादिति सिद्धान्त इत्याहुः ।**

ಬೇರೆ ಶ್ರುತಿಯಲ್ಲಿ ಅಂಗುಷ್ಠಪರಿಮಾಣವನ್ನು ಈಶ್ವರನಿಗೆ ಹೇಳದಿದ್ದರೂ 'ಅಂಗುಷ್ಠಮಾತ್ರಃ' ಇತ್ಯಾದಿ ವಾಕ್ಯವು ಅವನನ್ನೇ ಪ್ರತಿಪಾದಿಸುತ್ತದೆ. ಕಾರಣವೇನೆಂದರೆ 'ಭೂತಭವಸ್ಯ ಈಶಾನಃ'

ಇತ್ಯಾದಿಯಾಗಿ ಭೂತಭವಿಷ್ಯತ್ ಪದಾರ್ಥಗಳ ಒಡೆತನವನ್ನು ಶ್ರುತಿಯು ಹೇಳುತ್ತಿದೆ. ಇದು ಈಶ್ವರನ ಅಸಾಧಾರಣ ಧರ್ಮವಾದ್ದರಿಂದ ಈಶ್ವರನೇ ಈಶಾನ ಶಬ್ದಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ.

**तन्न । ''अङ्गुष्ठमात्रः पुरुषोऽन्तरात्मा सदा जनानां हृदये सन्निविष्टः । हृदा मनीषा मनसाऽभिक्लृप्तो य एनं विदुरमृतास्ते भवन्ति'' इति श्वेताश्वतरे,**

ರಾಮಾನುಜರ ಈ ಅಧಿಕರಣ ಶರೀರವು ತಪ್ಪು. ಏಕೆಂದರೆ - ಬೇರೆ ಶ್ರುತಿಗಳಲ್ಲಿ ಪರಮಾತ್ಮನಿಗೆ ಅಂಗುಷ್ಠಪರಿಮಾಣವನ್ನು ಹೇಳಿಯೇ ಇಲ್ಲವೆಂದು ಪೂರ್ವಪಕ್ಷ ಮಾಡಿದ್ದು ತಪ್ಪು. ಏಕೆಂದರೆ 'ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ । ಹೃದಾ ಮನಿಷಾ ಮನಸಾಽಭಿಕ್ಲೃಪ್ತೋ ಯ ಏನಂ ವಿದುರಮೃತಾಸ್ತೇ ಭವಂತಿ' ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿ ಸಕಲ ಮನುಷ್ಯರ ಹೃದಯದಲ್ಲಿ ಅಂತರಾತ್ಮನಾಗಿರುವಂತಹ ಪುರುಷನಾದ ಪರಮಾತ್ಮನು ಅಂಗುಷ್ಠ ಪರಿಮಾಣವುಳ್ಳವನಾಗಿದ್ದಾನೆ. ಜ್ಞಾನಿಜನರು ಇವನನ್ನು ತಿಳಿದು ಮೋಕ್ಷವನ್ನು ಪಡೆಯುತ್ತಾರೆಂದು ಹೇಳಲಾಗಿದೆ. ಹೀಗೆ ಸ್ಪಷ್ಟವಾಗಿ ಅಂಗುಷ್ಠಪರಿಮಾಣವನ್ನು ಈಶ್ವರನಿಗೂ ಸಹ ಶ್ರುತಿಯು ಹೇಳುತ್ತಿದೆ.

**अङ्गुष्ठमात्रः पुरुषोऽङ्गुष्ठं च समाश्रितः ।**
**ईशः सर्वस्य जगतः प्रभुः प्रीणाति विश्वभुक् ।।**[१]

---

(१) **रामानुजभाष्यम् –**

**शब्दादेव प्रमितः ॥ २३ ॥**

कठवल्लीषु श्रूयते 'अङ्गुष्ठमात्रः पुरुषो मध्य आत्मनि तिष्ठति । ईशानो भूतभव्यस्य न ततो विजुगुप्सते । एतद्वै तत् । 'अङ्गुष्ठमात्रः पुरुषो ज्योतिरिवाधूमकः । ईशानो भूतभव्यस्य स एवाद्य स उ श्वः । एतद्वै तत्' 'अङ्गुष्ठमात्रः पुरुषोऽन्तरात्मा सदा जनानां हृदये सन्निविष्टः । तं स्वाच्छरीरात् प्रवृहेन्मुञ्जादिवैषीकां धैर्येण । तं विद्याच्छुक्रममृतम् ।' इति । तत्र सन्दिह्यते किमयमङ्गुष्ठमात्रप्रमितं प्रत्यगात्मा, उत परमात्मा? इति । किं युक्तम्? प्रत्यगात्मेति । कुतः? जीवस्यान्यत्राङ्गुष्ठमात्रत्वश्रुतेः 'प्राणाधिपस्सञ्चरतिस्वकर्मभिः । अङ्गुष्ठमात्रो रवितुल्यरूपः सङ्कल्पाहङ्कारसमन्वितो यः' इति । नचान्यत्रोपासनार्थतयाऽपि परमात्मनोऽङ्गुष्ठमात्रत्वं श्रूयते । एवं निश्चिते जीवत्वे ईशानत्वं शरीरेन्द्रियभोग्य-भोगोपकरणापेक्षयाऽपि भविष्यति, इति प्राप्ते ब्रूमः – **शब्दादेव प्रमितः** ॥ अङ्गुष्ठप्रमितः परमात्मा । कुतः? 'ईशानो भूतभव्यस्य' इति शब्दादेव । नच भूतभव्यस्य सर्वस्येशितृत्वं कर्मपरवशस्य जीवस्योपपद्यते ।। २३ ।।

कथं तर्हि परमात्मनोऽङ्गुष्ठमात्रत्वम् इत्यत्राह –

**हृद्यपेक्षया तु मनुष्याधिकारत्वात् ॥ २४ ॥**

**इति तैत्तिरीये चान्यत्रेश्वरस्यापि तच्छ्रवणात् ।**

ಮತ್ತು ತೈತ್ತಿರೀಯೋಪನಿಷತ್ತಿನಲ್ಲಿಯೂ ಸಹ

ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ ।
ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ॥

ಪುರುಷನ ಅಂಗುಷ್ಠದಂತೆ ಪರಿಮಾಣವನ್ನು ಹೊಂದಿ, ಈಶ್ವರನು ಮನುಷ್ಯರ ಹೃದಯದಲ್ಲಿ ವಾಸಮಾಡುತ್ತಾನೆ. ಇವನೇ ಜಗದೊಡೆಯನಾಗಿದ್ದಾನೆ. ಸಮಸ್ತ ಜಗತ್ತನ್ನು ಸಂಹಾರ ಮಾಡುವ ಇವನು ಪ್ರೀತನಾಗುತ್ತಾನೆ.

ಹೀಗೆ ಬೇರೆ ಶ್ರುತಿಯಲ್ಲಿಯೂ ಈಶ್ವರನಿಗೆ ಅಂಗುಷ್ಠಪರಿಮಾಣವನ್ನು ಹೇಳಿದ್ದು ಕಾಣಿಸುತ್ತಿದೆ.

**ईश्वरस्यान्यत्र तच्छ्रवणं नास्तीति कृत्वाचिन्ता त्वस्मदुक्ते गत्यन्तरे सति न युक्ता ।**

ಬೇರೆ ಶ್ರುತಿಗಳಲ್ಲಿ ಅಂಗುಷ್ಠಪರಿಮಾಣವನ್ನು ಈಶ್ವರನಿಗೆ ಹೇಳಿರಬಹುದು. ಆದರೆ ಈ ಅಧಿಕರಣದ ಪೂರ್ವಪಕ್ಷದ ಸಂದರ್ಭದಲ್ಲಿ ಬೇರೆ ಶ್ರುತಿಗಳಲ್ಲಿ ಈಶ್ವರನಿಗೆ ಅಂಗುಷ್ಠಪರಿಮಾಣವನ್ನು ಹೇಳಿಲ್ಲವೆಂದು ಅನುಸಂಧಾನ ಮಾಡಿಕೊಂಡು (ಕೃತ್ವಾಚಿಂತೆಯನ್ನು ಮಾಡಿಕೊಂಡು) ಆಕ್ಷೇಪಿಸಬೇಕು ಎಂದು ಹೇಳಬಾರದು. ಏಕೆಂದರೆ ಬೇರೆ ಗತಿಯಿಲ್ಲದಿದ್ದಾಗ ಮಾತ್ರ, ಕೃತ್ವಾಚಿಂತೆಯನ್ನು ಮಾಡುವುದು ಯುಕ್ತವಾಗುತ್ತದೆ. ಆದರೆ ನಾವು ಹೇಳುವಂತೆ ಪೂರ್ವಪಕ್ಷವನ್ನು ಮಾಡಲು ಬರುವಾಗ (ಬೇರೆಗತಿಯಿರುವಾಗ) ಹೀಗೆ ಕೃತ್ವಾಚಿಂತೆಯನ್ನು ಮಾಡುವುದು ತಪ್ಪಾಗುತ್ತದೆಂದು ಭಾವಿಸಬೇಕು.

**यदि च श्वेताश्वेताश्वतरादेरीश्वरविषयत्वे पूर्वपक्षिणो विप्रतिपत्तिस्तर्हि "प्राणाधिपः सञ्चरति" इत्यादेर्जीवविषयत्वे सिद्धान्तिनोऽपि सा किं न स्यादिति दिक् ।**

ಒಂದು ವೇಳೆ, ಶ್ವೇತಾಶ್ವೇತಾಶ್ವತರೋಪನಿಷತ್ತು ಈಶ್ವರ ವಿಷಯಕವೇ ಅಲ್ಲವೆಂದು ಆಕ್ಷೇಪಿಸುವುದಾದರೆ, ಆವಾಗ 'ಪ್ರಾಣಾದಿಪಃ ಸಂಚರತಿ' ಇತ್ಯಾದಿ ವಾಕ್ಯವೂ ಸಹ ಜೀವವಿಷಯಕವೆಂದು

परमात्मन उपासनार्थमुपासकहृदये वर्तमानत्वादुपासकहृदयस्याङ्गुष्ठप्रमाणत्वात्तदपेक्षयेदमङ्गुष्ठप्रमितत्वमुपपद्यते । जीवस्याप्यङ्गुष्ठप्रमितत्वं हृदयान्तर्वर्तित्वात्तदपेक्षमेव । तस्याराग्रमात्रत्वमश्नुते । मनुष्याणामेवोपासकत्वसम्भावनया शास्त्रस्य मनुष्याधिकारत्वान्मनुष्यहृदयस्य च तत्तदङ्गुष्ठप्रमितत्वात् खरतुरगभुजगादीनामनङ्गुष्ठप्रमितत्वेऽपि न कश्चिद्दोषः । स्थितं तावदुत्तरत्र समापयिष्यते ।। २४ ।।

ಸಿದ್ಧಾಂತಿಗಳಾದ ನಾವೂ ಒಪ್ಪುವುದಿಲ್ಲ. ಆದ್ದರಿಂದ ಶ್ವೇತಾಶ್ವೇತಾಶ್ವತರೋಪನಿಷತ್ತು ಈಶ್ವರ ವಿಷಯಕವೆಂದು ರಾಮಾನುಜರು ಒಪ್ಪಲೇಬೇಕು.

ಈ ರಾಮಾನುಜರ ಈ ನಿರಾಕರಣೆಯು ಕೇವಲ ದಿಕ್‌ಪ್ರದರ್ಶನವಾಗಿದೆ. ಇನ್ನೂ ಹೆಚ್ಚಿನ ದೋಷಗಳನ್ನು ಸ್ವತಃ ಊಹಿಸಿಕೊಳ್ಳಬೇಕು.

**प्रकाशः —**

**केचित्त्विति ।। ''अङ्गुष्ठमात्रः पुरुषः'' इति वाक्यत्रये श्रुतोऽङ्गुष्ठमात्रः प्रत्यगात्मोत परमात्मेति विशये तृतीये ''हृदये'' इति स्थाननिर्देशेन परोक्तरीतिरयुक्तेत्यन्यथाऽधिकरणशरीरं वर्णितम् । तदनुवदति ''प्राणाधिपस्सञ्चरति स्वकर्मभिरङ्गुष्ठमात्रो रवितुल्यरूपः । सङ्कल्पाहङ्कारसमन्वितोऽयम्'' इति वाक्यस्य कर्मवशत्वादिना जीवपरत्वं सिद्धमिति भावः ।**

ವಿವರಣೆ - ರಾಮನುಜರ ಅಧಿಕರಣಶರೀರವನ್ನು 'ಕೇಚಿತ್' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. 'ಅಂಗುಷ್ಠಮಾತ್ರಃ ಪುರುಷಃ' ಎಂಬ ಮೂರುವಾಕ್ಯಗಳಲ್ಲಿ, ಶ್ರುತನಾದ ಅಂಗುಷ್ಠ-ಪರಿಮಾಣವುಳ್ಳ ಪುರುಷನು, ಪ್ರತ್ಯಗಾತ್ಮನೆನಿಸಿದ ಜೀವನೋ, ಅಥವಾ ಪರಮಾತ್ಮನೋ ಎಂದು ಸಂಶಯ.

ಮೂರನೆಯ ಶ್ರುತಿಯಲ್ಲಿ 'ಹೃದಯೇ' ಎಂಬುದಾಗಿ ಸ್ಥಾನವನ್ನು ನಿರ್ದೇಶ ಮಾಡಿದ್ದರಿಂದ, ಅದ್ವೈತಿಗಳ ಅಧಿಕರಣಶರೀರವು ಅಯುಕ್ತವಾಗಿದೆಯೆಂದು ತಿಳಿದು, ರಾಮಾನುಜರು ಬೇರೆ ರೀತಿಯಲ್ಲಿ ಅಧಿಕರಣ-ಶರೀರವನ್ನು ವರ್ಣನೆ ಮಾಡಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು ಅನುವಾದ ಮಾಡುತ್ತಿದ್ದಾರೆಂದು ತಿಳಿಯಬೇಕು.

'ಪ್ರಾಣಾಧಿಪಃ ಸಂಚರತಿ ಸ್ವಕರ್ಮಭಿರಂಗುಷ್ಠಮಾತ್ರೋ ರವಿತುಲ್ಯರೂಪಃ । ಸಂಕಲ್ಪಾಹಂಕಾರ-ಸಮನ್ವಿತೋಽಯಮ್' ಎಂಬ ವಾಕ್ಯದಲ್ಲಿ ಕರ್ಮವಶತ್ವವನ್ನು ಹೇಳಿದ್ದರಿಂದ ಮೂರುವಾಕ್ಯಗಳೂ ಜೀವಪರವಾಗಿದೆಯೆಂದೇ ತಿಳಿಯಬೇಕು.

**प्रकाशः — जीव एवेति ।। ईशानत्वं तु प्रथमाङ्गुष्ठमात्रत्वानुरोधेन शरीरेन्द्रियभोग्यभोगोपकरणापेक्षया नेयमिति भावः ।**

'ಭೂತಭವ್ಯಸ್ಯ ಈಶಾನಃ' ಎಂಬ ಶ್ರುತಿಯಲ್ಲಿ ಭೂತಭವಿಷ್ಯತ್ ಪದಾರ್ಥಗಳಿಗೆ ಒಡೆತನವನ್ನು ಹೇಳಿದ್ದರೂ ಪ್ರಥಮ ಪ್ರತೀತವಾದ ಅಂಗುಷ್ಠಮಾತ್ರತ್ವಕ್ಕೆ ಅನುಸಾರಿಯಾಗಿ ಕೇವಲ ಜೀವನಿಗೆ ಸಂಬಂಧಪಟ್ಟ ಶರೀರ, ಇಂದ್ರಿಯ, ಭೋಗ್ಯ, ಭೋಗೋಪಕರಣ ಇವುಗಳ ಒಡೆತನದಲ್ಲಿ ಅರ್ಥವನ್ನು ಸಂಕೋಚ ಮಾಡಬೇಕು. ಅಂದರೆ ಅಸಂಕುಚಿತವಾದ ಸರ್ವಸ್ವಾಮ್ಯವನ್ನು ವಿವಕ್ಷಿಸದೇ, ಸಂಕೋಚ ಮಾಡಿ ಶರೀರಾದಿಗಳ ಒಡೆತನವನ್ನು ಜೀವನು ಪಡೆದಿದ್ದಾನೆಂದು ಅರ್ಥೈಸಬೇಕು.

**प्रकाशः – ईशानेति ।।** भूतभव्यस्य सर्वस्येशितृत्वं जीवेऽयुक्तमितीशानत्वं निरवकाशम् । अङ्गुष्ठमात्रत्वं तूपासनार्थम् । उपासकहृदयेऽङ्गुष्ठमात्रे वर्तमानत्वात्तदपेक्षया युक्तमिति भावः ।

ಭೂತಭವಿಷ್ಯತ್ ಸಕಲಪದಾರ್ಥಗಳಿಗೆ ಈಶಿತೃತ್ವವು ಜೀವನಲ್ಲಿ ಅಯುಕ್ತವಾಗಿದೆ. ಆದ್ದರಿಂದ ಈಶಾನತ್ವಲಿಂಗವು ನಿರವಕಾಶವಾಗಿದೆಯೆಂದು ತಿಳಿಯಬೇಕು. ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ಕೇವಲ ಉಪಾಸನೆಗೋಸ್ಕರ. ಅಂದರೆ ಉಪಾಸಕನಾದ ಜೀವಿಯ ಹೃದಯದಲ್ಲಿ ಪರಮಾತ್ಮನು ಅಂಗುಷ್ಠದಷ್ಟೇ ಪರಿಮಾಣವನ್ನು ಹೊಂದಿರುವುದರಿಂದ, ಪರಮಾತ್ಮನನ್ನು ಅಂಗುಷ್ಠಪರಿಮಾಣನೆಂದು ಹೇಳಲಾಗಿದೆ.

**प्रकाशः – ईश्वरस्यापीति ।।** अन्तरात्मत्वमोक्षप्रदत्वसर्वजगदीशानत्वानामीश्वरलिङ्गानामन्यत्र श्रवणादिति भावः ।

ಬೇರೆ ಶ್ರುತಿಗಳಲ್ಲಿ ಪರಮಾತ್ಮನಿಗೆ ಅಂಗುಷ್ಠಪರಿಮಾಣವನ್ನು ಹೇಳಿದೆಯೆಂದು ಹೇಗೆ ನಿಶ್ಚಯಿಸುತ್ತೀರಿ? ಆ ಶ್ರುತಿಗಳಲ್ಲಿಯೂ ಜೀವನ ಪರಿಮಾಣವನ್ನೇ ಹೇಳಿರಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಅಂತರಾತ್ಮತ್ವ, ಮೋಕ್ಷಪ್ರದತ್ವ, ಸರ್ವಜಗದೀಶಾನತ್ವ' ಮೊದಲಾದ ಈಶ್ವರನ ಅಸಾಧಾರಣಲಿಂಗಗಳೆಲ್ಲವೂ ಆ ಶ್ರುತಿಗಳಲ್ಲಿ ಕೇಳಿಸುತ್ತಿವೆ.

**प्रकाशः –** ननु श्रुतप्रकाश एवैतदाशङ्क्य ''कृत्वाचिन्तेयम् । परमात्मनोऽन्यत्राङ्गुष्ठमितत्वश्रवणाभावमुपेत्यानेन वाक्येनाङ्गुष्ठमितत्वं सिध्यति नेति विचार्यते'' इत्यादिना समाहितमित्यत आह – **ईश्वरस्येति ।।**

ನೀವು ಮಾಡುತ್ತಿರುವ ಆಕ್ಷೇಪವನ್ನು ಶ್ರುತಪ್ರಕಾಶದಲ್ಲಿಯೇ ಆಶಂಕಿಸಿ ಉತ್ತರಿಸಲಾಗಿದೆ - 'ಕೃತ್ವಾಚಿಂತೇಯಮ್ । ಪರಮಾತ್ಮನೋಽನ್ಯತ್ರಾಂಗುಷ್ಠಮಿತತ್ವಶ್ರವಣಾಭಾವಮುಪೇತ್ಯಾನೇನ ವಾಕ್ಯೇನಾಂಗುಷ್ಠಮಿತತ್ವಂ ಸಿಧ್ಯತಿ ನೇತಿ ವಿಚಾರ್ಯತೇ' ಎಂದರೆ ಈ ಅಧಿಕರಣದಲ್ಲಿ ಕೃತ್ವಾಚಿಂತೆಯನ್ನು ಮಾಡಿ, ಬೇರೆ ಶ್ರುತಿಗಳಲ್ಲಿ ಪರಮಾತ್ಮನಿಗೆ ಅಂಗುಷ್ಠಪರಿಮಾಣವನ್ನು ಹೇಳಿಲ್ಲವೆಂದು ವಿವಕ್ಷಿಸಿ, ಜೀವನೇ ಪ್ರತಿಪಾದ್ಯನೆಂದು ಪೂರ್ವಪಕ್ಷ ಮಾಡಬೇಕೆಂದು ತಿಳಿಯಬೇಕು. ಆದ್ದರಿಂದ ಈ ಅಧಿಕರಣವು ಆರಂಭಣೀಯವಾಗಿದೆಯೆಂದು ಸಮಾಧಾನವನ್ನು ನೀಡಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ಈಶ್ವರಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः –** ''यदा मन्त्रगतं ब्रह्मलिङ्गं क्लिष्टं कृत्वा तावपि मन्त्रौ विवादास्पदीकृतौ तदानीं न कृत्वाचिन्तेयम्'' इति श्रुतप्रकाशोक्तं पक्षान्तरमप्यपाकरोति – **यदि चेति ।।**

'ಯದಾ ಮಂತ್ರಗತಂ ಬ್ರಹ್ಮಲಿಂಗಂ ಕ್ಲಿಷ್ಟಂ ಕೃತ್ವಾ ತಾವಪಿ ಮಂತ್ರೌ ವಿವಾದಾಸ್ಪದೀಕೃತೌ ತದಾನೀಂ ನ ಕೃತ್ವಾಚಿಂತೇಯಮ್' ಎಂಬ ಶ್ರುತಪ್ರಕಾಶದಲ್ಲೇ ಹೇಳಲ್ಪಟ್ಟ ಮತ್ತೊಂದು ಪಕ್ಷವನ್ನು 'ಯದಿ ಚ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – ननु तत्र कर्मवशत्वादिकं जीवलिङ्गं श्रुतं चेदिहाप्यन्तरात्मत्वादि-ब्रह्मलिङ्गानि श्रुतानीति समम् ।

'ಅಂಗುಷ್ಠಮಾತ್ರಃ' ಎಂಬ ವಾಕ್ಯದಲ್ಲಿ ಜೀವನನ್ನೇ ವಿವಕ್ಷಿಸಬೇಕು. ಏಕೆಂದರೆ ಕರ್ಮವಶತ್ವಾದಿ ಜೀವನ ಅಸಾಧಾರಣಲಿಂಗಗಳು ಇರುವುದರಿಂದ ಆದ್ದರಿಂದ ಬ್ರಹ್ಮನನ್ನು ವಿವಕ್ಷಿಸಲಾಗದಲ್ಲವೇ? ಎಂದರೆ ಪ್ರಕೃತ ಶ್ರುತಿ ಮೊದಲಾದವುಗಳಲ್ಲಿಯೂ ಅಂತರಾತ್ಮತ್ವ ಮೊದಲಾದ ಬ್ರಹ್ಮನಲಿಂಗಗಳು ಕೇಳಿಸುತ್ತಿವೆ. ಆದ್ದರಿಂದ ಇವುಗಳನ್ನೂ ಸಹ ಬ್ರಹ್ಮಪರವೆಂದು ನೀವು ಹೇಳಲೇಬೇಕು.

**प्रकाशः** – एतेषां जीवेऽपि क्लेशेन नयने तेषामपि कथञ्चिद्ब्रह्मणि नेतुं शक्यत्वादिति समम् ।

ಬ್ರಹ್ಮನ ಅಸಾಧಾರಣ ಲಿಂಗಗಳೆಲ್ಲವನ್ನೂ ಕಷ್ಟಪಟ್ಟು ಜೀವನಲ್ಲಿ ಸಮನ್ವಯ ಮಾಡುವುದಾದರೆ, ಕರ್ಮವಶತ್ವಾದಿ ಜೀವನಲಿಂಗಗಳನ್ನೂ ಸಹ ಬ್ರಹ್ಮನಲ್ಲಿ ಕಷ್ಟದಿಂದ ಸಮನ್ವಯ ಮಾಡಬಹುದಲ್ಲವೇ?

**प्रकाशः** – किञ्च वाक्यद्वयक्लेशापेक्षया "प्राणाधिपः" इत्येकस्यैवान्यथानयन-मुचितम् ।

ಮತ್ತು ಎರಡು ವಾಕ್ಯಗಳನ್ನು ಕಷ್ಟದಿಂದ ಕೂಡಿಸುವುದಕ್ಕಿಂತಲೂ 'ಪ್ರಾಣಾಧಿಪಃ' ಎಂಬ ಒಂದೇ ವಾಕ್ಯವನ್ನು ಅನ್ಯಥಾ ವ್ಯಾಖ್ಯಾನ ಮಾಡುವುದು ಉಚಿತವಾಗಿದೆ.

**प्रकाशः** – अपि च कृत्वाचिन्तात्वपक्षे "हृदये सन्निविष्टः" इति वाक्ये हृदय इति स्थाननिर्देशो नास्तीत्येव कृत्वाचिन्तासम्भवे किं पररीतिमवधीर्य वाक्यान्तरान्वेषणक्लेशेन ।

ಮತ್ತು ಕೃತ್ವಾಚಿಂತೆಯನ್ನು ಮಾಡಿಯೇ ಪೂರ್ವಪಕ್ಷ ಮಾಡುವುದಾದರೆ, 'ಹೃದಯೇ ಸನ್ನಿವಿಷ್ಟಃ' ಎಂಬ ವಾಕ್ಯದಲ್ಲಿ 'ಹೃದಯೇ' ಎಂಬುದಾಗಿ ಸ್ಥಾನವನ್ನು ನಿರ್ದೇಶ ಮಾಡಿಲ್ಲವೆಂದು ವಿವಕ್ಷಿಸಿ, ಕೃತ್ವಾಚಿಂತೆಯನ್ನು ಮಾಡಲು ಬರುವಾಗ ಅದ್ವೈತಿಗಳನ್ನು ನಿರಾಕರಿಸಿ, ಮತ್ತೊಂದು ವಾಕ್ಯವನ್ನು ಸ್ವೀಕರಿಸಿ, ಅಲ್ಲಿ ಕೃತ್ವಾಚಿಂತೆಯನ್ನು ಮಾಡುವುದು ಬಹಳ ತಪ್ಪಾಗುತ್ತದಲ್ಲವೇ?

**प्रकाशः** – अपि च जीवस्याप्याराग्रमात्रस्याङ्गुष्ठमात्रत्वममुख्यमित्युपासनार्थं तदिति निर्वाह्यम् । तत्परमात्मपरत्वेऽपि सम्भवति । उपासनार्थमल्पपरिमाणत्वस्य परस्मिन्नुक्तदिशा श्रवणात् । अन्यथा जीवेऽप्यश्रवणात् ।

ಮತ್ತು ಜೀವನಲ್ಲಿಯೂ ಅಂಗುಷ್ಠಮಾತ್ರ ಪರಿಮಾಣವನ್ನು ರಾಮಾನುಜರಿಗೆ ಉಪಪಾದಿಸಲು ಸಾಧ್ಯವಿಲ್ಲ. ಜೀವನು ಅತ್ಯಂತ ಅಣುಸ್ವರೂಪನೆಂದು ರಾಮಾನುಜರ ಸಿದ್ಧಾಂತ. ಹೀಗಿರುವಾಗ ಅಂಗುಷ್ಠಮಾತ್ರ ಪರಿಮಾಣವನ್ನು ಕೇವಲ ಉಪಾಸನೆಗಾಗಿ ಶ್ರುತಿಯು ಹೇಳುತ್ತಿದೆಯೆಂದು ವ್ಯಾಖ್ಯಾನ ಮಾಡಬೇಕು. ಹೀಗಿರುವಾಗ ಸರ್ವತ್ರವ್ಯಾಪ್ತನಾದ ಪರಮಾತ್ಮನ ಉಪಾಸನೆಗಾಗಿ ಅಂಗುಷ್ಠಪರಿಮಾಣವನ್ನು ಶ್ರುತಿಯು ಹೇಳುತ್ತಿದೆಯೆಂದೇಕೆ ವ್ಯಾಖ್ಯಾನಿಸಬಾರದು. ಅಲ್ಪಪರಿಮಾಣತ್ವವನ್ನು ಪರಬ್ರಹ್ಮನಲ್ಲಿ ಉಪಾಸನೆಗೋಸ್ಕರ ಹೇಳಿದ್ದು ಅನೇಕ ಕಡೆ ಕಾಣಿಸುತ್ತಿದೆ. ಒಂದು ವೇಳೆ ಪರಬ್ರಹ್ಮನಲ್ಲಿ ಉಪಾಸನೆಗೋಸ್ಕರ ಹೀಗೆ ಕೂಡಿಸಬಹುದೆಂದು ನೀವು ಒಪ್ಪದಿದ್ದರೆ, ಅಣುರೂಪನಾದ ಜೀವನಿಗೂ ಕೂಡ ಅಂಗುಷ್ಠಪರಿಮಾಣವನ್ನು ಉಪಪಾದಿಸಲು ಸಾಧ್ಯವಿಲ್ಲ.

**प्रकाशः** – यदपि जीवो ब्रह्म वेति विचारे नेश्वरसम्बन्धिलिङ्गान्निर्णयः । किं त्वीश्वरत्ववाचिशब्दादेवेति वा पूर्वपक्ष्याशङ्किताया ईशानशब्दान्यथासिद्धेर्निरासार्थो वेति सौत्रैवकारार्थकथनं तदपि "स्वशब्दात्" इत्यादाविवावधारणेन विनाऽप्युपपत्तेरतिशयार्थालाभाच्चापेशलम् । तदेतदभिप्रेत्योक्तं दिगिति ।।

ಮತ್ತು ಈ ಶ್ರುತಿಯಿಂದ ಪ್ರತಿಪಾದ್ಯನಾದವನು ಜೀವನೋ ಅಥವಾ ಬ್ರಹ್ಮನೋ? ಎಂದು ವಿಚಾರ ಮಾಡಿದಾಗ ಈಶ್ವರ ಸಂಬಂಧಿಯಾದ ಅಸಾಧಾರಣಲಿಂಗಗಳಿಂದ ನಿರ್ಣಯವನ್ನು ಮಾಡದೇ ಈಶ್ವರಪ್ರತಿಪಾದಕವಾದ ಶಬ್ದದಿಂದ ಈಶ್ವರನೇ ಪ್ರತಿಪಾದ್ಯನೆಂದು ಹೇಳುತ್ತಿದ್ದೀರಿ. ಆದ್ದರಿಂದಲೇ ಸೂತ್ರದಲ್ಲಿ 'ಶಬ್ದಾದೇವ' ಎಂದು ಹೇಳಿದ್ದಾರೆ. ಅಥವಾ ಪೂರ್ವಪಕ್ಷಿಯು ಆಶಂಕಿಸಲ್ಪಟ್ಟ 'ಈಶಾನ' ಶಬ್ದವು ಅನ್ಯಥಾಸಿದ್ಧವಾಗಿದೆಯೆಂಬುದನ್ನು ನಿರಾಸ ಮಾಡುವುದಕ್ಕಾಗಿಯೂ ಸೂತ್ರದಲ್ಲಿ ಏವಕಾರವನ್ನು ಹೇಳಿದ್ದಾರೆಂದು ರಾಮಾನುಜರಾದ ನೀವು ವ್ಯಾಖ್ಯಾನ ಮಾಡುತ್ತೀರಿ.

ಇದೂ ಸಹ ಸರಿಯಲ್ಲ. ಒಂದುವೇಳೆ ಶಬ್ದದಿಂದಲೇ ನಿರ್ಣಯ ಮಾಡುವುದಾದಲ್ಲಿ, ಏವಕಾರವು ಸೂತ್ರದಲ್ಲಿ ವ್ಯರ್ಥವಾಗುತ್ತದೆ. ಯಾವರೀತಿಯಾಗಿ 'ಸ್ವಶಬ್ದಾತ್' ಎಂಬುದಾಗಿ ಸೂತ್ರದಲ್ಲಿ ಅವಧಾರಣವಿಲ್ಲದೇ ಕೇವಲ 'ಶಬ್ದಾತ್' ಎಂಬ ಪ್ರಯೋಗದಿಂದಲೇ ಶಬ್ದಪ್ರಮಾಣವನ್ನು ಹೇಳಿದ್ದಾರೋ, ಅದರಂತೆ ಇಲ್ಲಿಯೂ ಸಹ ಏವಕಾರವನ್ನು ಹೇಳುವ ಅವಶ್ಯಕತೆಯಿರುವುದಿಲ್ಲ. ಬೇರೆ ಸಾರ್ಥಕ್ಯವನ್ನು ಈ ಅವಧಾರಣೆಗೆ ನಿಮ್ಮಿಂದ ಉಪಪಾದಿಸಲು ಸಹ ಸಾಧ್ಯವಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣಶರೀರವು ಅಸ್ವರಸವಾಗಿದೆ. ಹೀಗೆ ಅನೇಕ ದೋಷಗಳನ್ನು ತಿಳಿಯಬೇಕೆಂಬ ದೃಷ್ಟಿಯಿಂದ ಗ್ರಂಥಕಾರರು 'ದಿಕ್' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

**प्रकाशः** – एतेन यत्केनचिदुक्तमङ्गुष्ठमात्रो जीवः शिवो वेति संशये रामानुजरीत्या पूर्वपक्षयित्वा "सर्वैश्वर्यसम्पन्नः सर्वेश्वरश्च शम्भुराकाशमध्ये" इति श्रुत्या भूतभव्येशितृत्वस्य शिवलिङ्गत्वादीशानश्रुतेस्तत्र रूढत्वाच्च शिव एवाङ्गुष्ठमात्र इति ।

ಹೀಗೆ ರಾಮಾನುಜರ ಮತವನ್ನು ನಿರಾಕರಿಸಿದ್ದರಿಂದ ಶೈವಮತವನ್ನೂ ಸಹ ನಿರಾಕರಿಸಿದಂತಾಯಿತು.

ಶೈವರ ಅಧಿಕರಣ ಶರೀರ ಹೀಗಿದೆ - ಕಾಠಕೋಪನಿಷತ್ತಿನಲ್ಲಿ ಶ್ರುತವಾದ 'ಅಂಗುಷ್ಠಮಾತ್ರಃ' ಎಂಬ ವಾಕ್ಯದಿಂದ ಪ್ರತಿಪಾದ್ಯನಾದವನು ಜೀವನೋ, ಅಥವಾ ಶಿವನೋ? ಎಂದು ಸಂಶಯ.

ರಾಮಾನುಜರ ಮತದಂತೆ ಪೂರ್ವಪಕ್ಷ ಮಾಡಿ, 'ಸರ್ವೈಶ್ವರ್ಯಸಂಪನ್ನಃ ಸರ್ವೇಶ್ವರಶ್ಚ ಶಂಭುರಾಕಾಶಮಧ್ಯೇ' ಇತ್ಯಾದಿ ಶ್ರುತಿಯಿಂದ ಮತ್ತು ಭೂತಭವಿಷ್ಯತ್ ಪದಾರ್ಥಗಳ ಈಶಿತೃತ್ವವೆಂಬ ಶಿವನ ಅಸಾಧಾರಣಲಿಂಗದಿಂದ 'ಈಶಾನ' ಶ್ರುತಿ ಪ್ರತಿಪಾದ್ಯನಾದವನು ಶಿವನೇ ಆಗಿದ್ದಾನೆ. ಮತ್ತು ಶಿವನಲ್ಲಿ ರೂಢವಾದ 'ಈಶಾನ' ಶಬ್ದವೂ ಸಹ ಈ ವಿಷಯದಲ್ಲಿ ಆಧಾರವಾಗಿದೆ. ಆದ್ದರಿಂದ ಶಿವನೇ ಅಂಗುಷ್ಠ-ಪರಿಮಾಣವುಳ್ಳವನಾಗಿದ್ದಾನೆಂದು ಸಿದ್ಧಾಂತವನ್ನು ಮಾಡಿರುತ್ತಾರೆ.

**प्रकाशः –** तन्निरस्तम् । पूर्वपक्षे तन्मतोक्तदोषग्रासात् ।

ಇವರ ಮತವನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಾಗಿಲ್ಲ. ರಾಮಾನುಜರ ಪೂರ್ವಪಕ್ಷದಲ್ಲಿ ಹೇಳಿದ ದೋಷಗಳೆಲ್ಲವೂ ಇವರ ಮತದಲ್ಲಿಯೂ ಬರುತ್ತದೆ.

**प्रकाशः –** यदत्रोक्तं ''अङ्गुष्ठं च समाश्रितः'' इत्यादिमन्त्रोऽप्यङ्गुष्ठमात्रत्वश्रवणा देव जीवपर इत्यत्राक्षिप्यते । अतो न दोष इति तन्न । अङ्गुष्ठमात्रत्वस्याद्यापि जीवमात्रधर्मत्वासिद्धेः ।

ಈ ಸಂದರ್ಭದಲ್ಲಿ ಶೈವರ ಸಮರ್ಥನೆ ಹೀಗಿದೆ - 'ಅಂಗುಷ್ಠಂ ಚ ಸಮಾಶ್ರಿತಃ' ಇತ್ಯಾದಿ ಮಂತ್ರವೂ ಸಹ ಅಂಗುಷ್ಠ ಮಾತ್ರ ಪರಿಮಾಣವನ್ನು ಹೇಳುತ್ತಿರುವುದರಿಂದ ಜೀವಪರವೇ ಆಗಿದೆಯೆಂದು ಆಕ್ಷೇಪಿಸುತ್ತೇವೆ. ಆದ್ದರಿಂದ ರಾಮಾನುಜರಿಗೆ ಹೇಳಿದ ದೋಷ ನಮಗೆ ಬರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಜೀವನಿಗೆ ಅಂಗುಷ್ಠಪರಿಮಾಣವಿದೆಯೆಂದು ಇಲ್ಲಿಯತನಕ ಸಿದ್ಧವೇ ಆಗಿಲ್ಲ. ಹೀಗಿರುವಾಗ ಜೀವನ ಅಸಾಧಾರಣಲಿಂಗವೆಂದು ಹೇಗೆ ವಿವಕ್ಷಿಸುತ್ತೀರಿ?

**प्रकाशः –** 'प्राणाधिपः' इति श्रुतेरपि जीवपरत्वे विवादादित्युक्तत्वात् ।

अथ सत्यवतः कायात्पाशबन्धवशं गतम् ।<br>
अङ्गुष्ठमात्रं पुरुषं निश्चकर्ष यमो बलात् ।।

इति स्मार्तवचसोऽपि तैत्तिरीयाद्यनेकवाक्यबाधकत्वासामर्थ्यात् ।

'ಪ್ರಾಣಾಧಿಪಃ' ಎಂಬ ಶ್ರುತಿಯೂ ಸಹ ಜೀವಪರವಾಗಿದೆಯೆಂಬ ವಿಷಯದಲ್ಲಿ ವಿಪ್ರತಿಪತ್ತಿಯನ್ನು ಈ ಹಿಂದೆಯೇ ತೋರಿಸಿದ್ದೇವೆ. ಇನ್ನು

ಅಥ ಸತ್ಯವತಃ ಕಾಯಾತ್ಪಾಶಬಂಧವಶಂ ಗತಮ್ ।
ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ॥

ಎಂಬ ಸ್ಮೃತಿವಾಕ್ಯವೂ ಸಹ ಜೀವನೇ ಅಂಗುಷ್ಠಪರಿಮಾಣವುಳ್ಳವನಾಗಿದ್ದಾನ್ನೆನ್ನಲು ಆಧಾರವಾಗುವುದಿಲ್ಲ. ಏಕೆಂದರೆ ತೈತ್ತಿರೀಯ ಮೊದಲಾದ ಉಪನಿಷತ್ತುಗಳಲ್ಲಿ ಪರಮಾತ್ಮನೇ ಅಂಗುಷ್ಠಪರಿಮಾಣವುಳ್ಳವನೆಂದು ಹೇಳಿದ್ದರಿಂದ ಜೀವನನ್ನು ವಿವಕ್ಷಿಸಿದರೆ ಅಸಾಮರ್ಥ್ಯ ದೋಷವು ಬರುತ್ತದೆ.

**प्रकाशः** – किञ्च अङ्गुष्ठमात्रे श्रुतस्य सर्वदेवोपास्यत्वस्य जीवमात्रेऽनुपपत्तिश्च ।

ಮತ್ತು ಅಂಗುಷ್ಠಮಾತ್ರನಲ್ಲಿ ಶ್ರುತವಾದ ಸರ್ವದೇವೋಪಾಸ್ಯತ್ವವನ್ನು ಕೇವಲ ಜೀವನಲ್ಲಿ ಉಪಪಾದಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಶೈವರ ಪೂರ್ವಪಕ್ಷವು ಅಯುಕ್ತವಾಗಿದೆ.

**प्रकाशः** – सिद्धान्तोऽप्ययुक्तः । "नते विष्णो जायमानो न जातः सहि सर्वाधिपतिस्सहि सर्वपालस्स ईशस्स विष्णुः सप्तार्धगर्भा भुवनस्य रेतः" इत्यादिश्रुतिभिः

सर्वेशो विष्णुरेवैको नान्योऽस्ति जगतःपतिः ।
ब्रह्मेशानादिभिर्देवैर्यत्प्राप्तुं नैव शक्यते ।।

इत्यादिस्मृतिभिस्सर्वेशितृत्वस्य विष्ण्वेकनिष्ठत्वात् ।

ಸಿದ್ಧಾಂತವೂ ಸಹ ಅಯುಕ್ತವಾಗಿದೆ. ಅನೇಕ ಶ್ರುತಿ-ಸ್ಮೃತಿಗಳ ಆಧಾರದಿಂದ ವಿಷ್ಣುವೇ ಈಶಾನ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಅಂಗುಷ್ಠಪರಿಮಾಣವುಳ್ಳವನಾಗಿದ್ದಾನೆಂದು ತಿಳಿಯುತ್ತಿದೆ - 'ನ ತೇ ವಿಷ್ಣೋ ಜಾಯಮಾನೋ ನ ಜಾತಃ' ಎಂಬ ವಾಕ್ಯವು, 'ಸಹಿ ಸರ್ವಾಧಿಪತಿಃ ಸಹಿ ಸರ್ವಪಾಲಸ್ಸ ಈಶಃ ಸ ವಿಷ್ಣುಃ' ಎಂಬ ವಾಕ್ಯವು, 'ಸಪ್ತಾರ್ಧಗರ್ಭಾಭುವನಸ್ಯ ರೇತಃ' ಇತ್ಯಾದಿ ಶ್ರುತಿಗಳಿಂದ ವಿಷ್ಣುವೇ ಸರ್ವಪಾಲಕನೆಂದು ತಿಳಿಯುತ್ತಿದೆ. ಮತ್ತು

ಸರ್ವೇಶೋ ವಿಷ್ಣುರೇವೈಕೋ ನಾನ್ಯೋಽಸ್ತಿ ಜಗತಃ ಪತಿಃ ।
ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ ॥

ಇತ್ಯಾದಿ ಸ್ಮೃತಿವಾಕ್ಯಗಳು ವಿಷ್ಣುವೊಬ್ಬನೇ ಭೂತಭವಿಷ್ಯತ್ ಸಕಲಪದಾರ್ಥಗಳಿಗೆ ಒಡೆಯನಾಗಿದ್ದಾನೆಂದು ಸಾರುತ್ತಿವೆ.

**प्रकाशः** – विष्णौ निरूढवामनश्रुतिविरोधाच्च । ईशानशब्दस्य यौगिकार्थप्रतिसम्बन्धिभूतभव्याद्युपादाने रूढ्यनुन्मेषाच्च । "ईशानः प्राणदः प्राणः" इति विष्णौ प्रयोगाच्चेति ।

ಮತ್ತು ಇದೇ ಪ್ರಕರಣದಲ್ಲಿ ವಾಮನಶ್ರುತಿಯೂ ಸಹ ಕೇಳಿಸುತ್ತಿದೆ. ಇದು ಕೇವಲ ವಿಷ್ಣುವಿನಲ್ಲಿ ಮಾತ್ರ ರೂಢವಾದ ಶಬ್ದ. ಇದನ್ನು ರುದ್ರನಲ್ಲಿ ಕಥಂಚಿದಪಿ ಹೇಳಲು ಬರುವುದಿಲ್ಲ. ಮತ್ತು 'ಈಶಾನ' ಶಬ್ದದ ರೂಢಿಯನ್ನು ರುದ್ರನಲ್ಲಿ ಹೇಳಬಹುದೆಂದು ಶೈವರು ಹೇಳಿದರು. ಆದರೆ ಭೂತಭವಿಷ್ಯತ್ ಸಕಲ ಪದಾರ್ಥಗಳ ಒಡೆತನ ಎಂಬ ಯೋಗಾರ್ಥವನ್ನು ವಿವಕ್ಷಿಸುವುದು ಶ್ರುತಿಗೆ ಸಮ್ಮತವಾಗಿರುವುದಿಲ್ಲ. ರೂಢ್ಯರ್ಥವು ಶಕ್ತಿಹೀನವಾಗುತ್ತದೆ. ಅಂದರೆ ರೂಢಿಯಿಂದ ಶಿವನನ್ನು ವಿವಕ್ಷಿಸಲು ಸಾಧ್ಯವಾಗುವುದಿಲ್ಲ. ವಿಚಾರ ಮಾಡಿದರೆ 'ಈಶಾನಃ ಪ್ರಾಣದಃ ಪ್ರಾಣಃ' ಎಂಬ ವಿಷ್ಣುಸಹಸ್ರನಾಮದಿಂದ 'ಈಶಾನ' ಶಬ್ದದ ರೂಢಿಯೂ ಸಹ ವಿಷ್ಣುವಿನಲ್ಲೇ ಇರುತ್ತದೆ. ಆದ್ದರಿಂದ ಶೈವರ ಅಧಿಕರಣಶರೀರವು ಅತ್ಯಂತ ಅಯುಕ್ತವಾಗಿದೆಯೆಂದು ತಿಳಿಯಬೇಕು.




ರಾಮಾನುಜರು ಈ ಅಧಿಕರಣಕ್ಕೆ 'ಪ್ರಮಿತಾಧಿಕರಣ' ಎಂಬ ಹೆಸರನ್ನಿಟ್ಟು ದೇವತಾಧಿಕರಣವನ್ನು ಇದರಲ್ಲೇ ಸೇರಿಸಿದ್ದಾರೆ.

'ಪ್ರಾಣಾಧಿಪಃ ಸಂಚರತಿ ಸ್ವಕರ್ಮಭಿಃ' 'ಅಂಗುಷ್ಠಮಾತ್ರಃ' ಇತ್ಯಾದಿ ಬೇರೆ ಶ್ರುತಿಗಳಲ್ಲಿ ಜೀವನಿಗೆ ಅಂಗುಷ್ಠಪರಿಮಾಣವು ಉಕ್ತವಾಗಿರುವುದರಿಂದ, ಪ್ರಕೃತ ಕಾಠಕೋಪನಿಷತ್ತಿನ 'ಅಂಗುಷ್ಠಮಾತ್ರಃ ಪುರುಷಃ' ಇತ್ಯಾದಿ ವಾಕ್ಯವು ಜೀವನನ್ನೇ ಪ್ರತಿಪಾದಿಸಬೇಕೆಂದು ಪೂರ್ವಪಕ್ಷ. ಭೂತಭವಿಷ್ಯತ್ ಸಕಲಪದಾರ್ಥಗಳ ಒಡೆತನವನ್ನು 'ಈಶಾನ' ಶಬ್ದವು ಹೇಳುತ್ತಿರುವುದರಿಂದ ಈಶ್ವರನೇ ಪ್ರಕರಣ ಪ್ರತಿಪಾದ್ಯನೆಂದು ಸಿದ್ಧಾಂತ.

ಈ ಅಧಿಕರಣಶರೀರ ಸರಿಯಿಲ್ಲ. ಏಕೆಂದರೆ ವಿಷ್ಣುವಿನಲ್ಲಿಯೂ ಅಂಗುಷ್ಠಪರಿಮಾಣವನ್ನು ಹೇಳಿದ್ದು ಬೇರೆ ಶ್ರುತಿಗಳಲ್ಲಿ ಕಾಣಸುತ್ತಿದೆ. 'ಅಂಗುಷ್ಠಮಾತ್ರಃ ಪುರುಷಃ' ಇತ್ಯಾದಿಯಾಗಿ ಶ್ವೇತಾಶ್ವೇತರೋಪನಿಷತ್ತಿನಲ್ಲಿ, 'ಅಂಗುಷ್ಠಮಾತ್ರಃ ಪುರುಷಃ' ಇತ್ಯಾದಿಯಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಸ್ಪಷ್ಟವಾಗಿ ಈಶ್ವರನನ್ನೇ ಅಂಗುಷ್ಠಪರಿಮಾಣವುಳ್ಳವನೆಂದು ಹೇಳಿರುವಾಗ ಜೀವನನ್ನು ಅಂಗುಷ್ಠಪರಿಮಾಣವುಳ್ಳವನೆಂದು ಇಲ್ಲಿ ವಿವಕ್ಷಿಸುವುದು ತಪ್ಪಾಗುತ್ತದೆ. ಆದ್ದರಿಂದ ರಾಮಾನುಜರ ಪೂರ್ವಪಕ್ಷಸಿದ್ಧಾಂತಗಳು ಸರಿಯಲ್ಲವೆಂದು ತಿಳಿಯಬೇಕು.



## ಶ್ರುತಿ-ಲಿಂಗಾದಿಗಳು ವೇದದ ಅರ್ಥನಿಶ್ಚಾಯಕಗಳು

**तात्पर्यचन्द्रिका**

**अत्र "श्रुतिर्लिङ्गम्" इत्यादिभाष्ये श्रुत्यादौ पूर्वबलीयस्त्वमुक्तम् । तदुपपादयितुं टीकायां –**

ಅನುವಾದ - ಈ ಅಧಿಕರಣ ಭಾಷ್ಯದಲ್ಲಿ 'ಶ್ರುತಿರ್ಲಿಂಗಮ್' ಇತ್ಯಾದಿಯಾದ ಮಾತಿನಿಂದ ಶ್ರುತಿ -ಲಿಂಗಾದಿಗಳಿಗೆ ಪೂರ್ವಪೂರ್ವಪ್ರಾಬಲ್ಯವನ್ನು ಹೇಳಿರುತ್ತಾರೆ. ಅದನ್ನೇ ಉಪಪಾದನೆ ಮಾಡುವುದಕ್ಕಾಗಿ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ.

**श्रुतिर्नाम समुद्दिष्टं लिङ्गं तल्लक्षणं स्मृतम् ।**
**पदानि निरपेक्षाणि वाक्यं प्रकरणं तथा ।**

ಶ್ರುತಿರ್ನಾಮ ಸಮುದ್ದಿಷ್ಟಂ ಲಿಂಗಂ ತಲ್ಲಕ್ಷಣಂ ಸ್ಮೃತಮ್ ।
ಪದಾನಿ ನಿರಪೇಕ್ಷಾಣಿ ವಾಕ್ಯಂ ಪ್ರಕರಣಂ ತಥಾ ॥

ಶ್ರುತಿಯೆಂದರೆ ರೂಢವಾದ ನಾಮಾತ್ಮಕ ಶಬ್ದ, ಲಿಂಗ ಎಂದರೆ ಅಸಾಧಾರಣ ಧರ್ಮ. ನಿರಾಕಾಂಕ್ಷಿತವಾದ ಪದಗಳ ಸಮೂಹವೇ ವಾಕ್ಯ. ಒಂದೇ ಅರ್ಥವನ್ನು ತಿಳಿಸುವ ಅನೇಕ ವಾಕ್ಯಗಳ ಗುಂಪು ಪ್ರಕರಣ.

**एकस्य प्रतिपत्त्यङ्गवचनं स्थानमुच्यते ।**
**अन्यत्र तत्समोक्तिस्तु समाख्यास्थानमेव च ।**
**अध्यायादि प्रबन्धास्तु प्रभेदा आगमस्य तु ॥**

ಏಕಸ್ಯ ಪ್ರತಿಪತ್ತ್ಯಂಗವಚನಂ ಸ್ಥಾನಮುಚ್ಯತೇ ।
ಅನ್ಯತ್ರ ತತ್ಸಮೋಕ್ತಿಸ್ತು ಸಮಾಖ್ಯಾಸ್ಥಾನಮೇವ ಚ ॥
ಅಧ್ಯಾಯಾದಿಪ್ರಬಂಧಾಸ್ತು ಪ್ರಭೇದಾ ಆಗಮಸ್ಯ ತು ।

ಸಮಾನವಾದ ಪ್ರಮಾಣವನ್ನೇ ನೀಡುವುದೇ ಸಮಾಖ್ಯಾ. ಅನೇಕ ಪ್ರಕರಣಗಳ ಸಮೂಹವೇ ಸ್ಥಾನ. (ಎಂದರೆ ಒಂದು ವಿಷಯಕ್ಕೆ ಸಂಬಂಧಿಸಿದ ವಾಕ್ಯವಿರುವ ಪ್ರಕರಣವು ಸ್ಥಾನ ಎನಿಸಿದೆ) ಅಧ್ಯಾಯ, ವರ್ಗ ಇತ್ಯಾದಿಗಳು ಪ್ರಬಂಧ ಎನಿಸುತ್ತವೆ. ಹೀಗೆ ವೇದಗಳಲ್ಲಿ ಬೇರೆ ಬೇರೆ ವಿಷಯಾನುಸಾರವಾಗಿ ಪ್ರಭೇದಗಳಿವೆ.

**इति तत्वप्रदीपोदाहृतवचनानुसारेण श्रुत्यादिलक्षणमुक्त्वा तद्बलाबलबीजमुक्तम् ।**

ಹೀಗೆ ತತ್ವಪ್ರದೀಪದಲ್ಲಿ ಉದಾಹರಿಸಿದ ಮಾತಿಗನುಸಾರಿಯಾಗಿ ಶ್ರುತಿಮೊದಲಾದವುಗಳ ಲಕ್ಷಣವನ್ನು ಹೇಳಿ ಅವುಗಳ ಬಲಾಬಲಕ್ಕೆ ಕಾರಣವನ್ನು ಹೇಳಿದ್ದಾರೆ.

**तत्रायं भावः । वाचक(रूढः)शब्दश्श्रुतिः । ''नाममात्रेण'' इति टीकायां मात्रशब्देन शुद्धो योगो व्यावर्त्यः । नतु रूढिसहितः । तेन योगरूढानां वामनादिशब्दानां न श्रुतित्वहानिः ।**

ಇಲ್ಲಿ ತಿಳಿಯಬೇಕಾದದ್ದು ಇಷ್ಟು. ವಾಚಕವಾದ (ರೂಢವಾದ) ಶಬ್ದವೇ ಶ್ರುತಿಯೆನಿಸುತ್ತದೆ. ಟೀಕೆಯಲ್ಲಿ
'ನಾಮಮಾತ್ರೇಣ' ಎಂಬುದಾಗಿ ಮಾತ್ರಪದದಿಂದ ಶುದ್ಧವಾದ ಯೌಗಿಕಪದವನ್ನಷ್ಟೇ ವ್ಯಾವೃತ್ತಿ ಮಾಡಿದ್ದಾರೆ ಹೊರತು, ರೂಢಿಸಹಿತವಾದ ಯೌಗಿಕಶಬ್ದವನ್ನು ವ್ಯಾವೃತ್ತಿಮಾಡಿಲ್ಲ. ಆದ್ದರಿಂದಲೇ ಯೋಗರೂಢವಾದ ವಾಮನಾದಿ ಶಬ್ದಗಳು ಶ್ರುತಿರೂಪಪ್ರಮಾಣವಾಗುವುದಿಲ್ಲವೆಂಬ ಶಂಕೆಗೆ ಅವಕಾಶವಿಲ್ಲ.

**प्रकाशः –**

टीकोक्तश्रुत्यादिलक्षणस्य प्रकृतोपयोगं वदंस्तन्मूलप्रमाणमाह – **अत्रेति** ।।

ವಿವರಣೆ - ಇಲ್ಲಿಯ ತನಕ ವಾಮನಾಧಿಕರಣವನ್ನು ಸಂಪೂರ್ಣ ವಿಚಾರ ಮಾಡಿದ್ದಾಯಿತು. ಈಗ ಪ್ರಾಸಂಗಿಕವಾಗಿ ಶ್ರುತಿಲಿಂಗಾದಿಗಳ ಬಲಾಬಲ ವಿಚಾರವನ್ನು ಮಾಡುತ್ತಿದ್ದಾರೆ. ಟೀಕೆಯಲ್ಲಿ ಶ್ರುತಿ, ಲಿಂಗ, ವಾಕ್ಯ ಇವುಗಳ ಲಕ್ಷಣವನ್ನು ಹೇಳಿದ್ದಾರೆ. ಹಾಗೇ ಲಕ್ಷಣ ಹೇಳಲು ಪ್ರಕೃತಕ್ಕೆ ಏನು ಉಪಯೋಗ? ಎಂಬುದನ್ನು ತೋರಿಸುತ್ತಾ, ಬಲಾಬಲವಿಚಾರವನ್ನು ಗ್ರಂಥಕಾರರು ವಿವರವಾಗಿ ಮಾಡುತ್ತಿದ್ದಾರೆ. ಮತ್ತು ಪ್ರಾಬಲ್ಯ-ದೌರ್ಬಲ್ಯದ ನಿರ್ಧಾರಕ್ಕೆ ಮೂಲಪ್ರಮಾಣವನ್ನೂ ಸಹ ಹೇಳುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ.

**प्रकाशः –** टीकायामुक्तमित्यन्वयः । अस्पष्टत्वादाह – **तत्रायं भाव इति** ।।

ಗ್ರಂಥದಲ್ಲಿರುವ 'ಟೀಕಾಯಾಂ' ಎಂಬ ಪದಕ್ಕೆ ಶ್ಲೋಕ ಮುಗಿದ ಮೇಲೆ ಇರುವ 'ಉಕ್ತಮ್' ಎಂಬ ಪದದ ಜೊತೆಗೆ ಅನ್ವಯ ಮಾಡಬೇಕು. ಪ್ರಮಾಣಶ್ಲೋಕಗಳಿಂದ, ಪ್ರಾಬಲ್ಯ-ದೌರ್ಬಲ್ಯದ ವಿಚಾರವು ಸ್ಪಷ್ಟವಾಗಿ ತಿಳಿಯದ ಕಾರಣ, ಗ್ರಂಥಕಾರರು ಸ್ಪಷ್ಟವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ತತ್ರಾಯಂ ಭಾವಃ' ಇತ್ಯಾದಿ ಗ್ರಂಥದಿಂದ.

**प्रकाशः** – टीकायां ''नाममात्रेण निर्देशश्श्रुतिः'' इत्युक्तम् । तत्र यानि रूढानि तानि नामानीत्युक्त्या रूढशब्दस्यैव श्रुतित्वापत्त्या योगरूढे वामनादि-शब्देऽव्याप्तिरित्यतो भावमाह – **वाचकेति** ।।

ಟೀಕೆಯಲ್ಲಿ 'ನಾಮಮಾತ್ರೇಣ ನಿರ್ದೇಶ ಶ್ರುತಿಃ' ಎಂಬುದಾಗಿ ಶ್ರುತಿಯ ಲಕ್ಷಣವನ್ನು ಹೇಳಿರುತ್ತಾರೆ. ಇದರಿಂದ ರೂಢಪದಗಳಷ್ಟೇ ನಾಮಾತ್ಮಕವಾಗಿರುವುದರಿಂದ ರೂಢಶಬ್ದಕ್ಕೆ ಮಾತ್ರ ಶ್ರುತಿತ್ವವನ್ನು ಹೇಳಿದಂತಾಗುತ್ತದೆ. ಆದರೆ ಈ ಅಧಿಕರಣದಲ್ಲಿ ವಾಮನಾದಿಶಬ್ದಗಳಿಗೆ ಶ್ರುತಿತ್ವವನ್ನು ವಿವಕ್ಷಿಸಿದ್ದಾರೆ. ವಾಮನ ಶಬ್ದವು ಯೌಗಿಕವೂ ಆಗಿದೆ, ರೂಢವೂ ಆಗಿದೆ. ಈಗ ನೀವು ಹೇಳುವಂತೆ ಕೇವಲ ರೂಢವಾದದ್ದಷ್ಟೇ ಶ್ರುತಿಯೆನಿಸುತ್ತದೆಂದು ಹೇಳಿದರೆ, ವಾಮನಾದಿ ಶಬ್ದಗಳಲ್ಲಿ ಕೇವಲ ರೂಢತ್ವವು ಇಲ್ಲದ ಕಾರಣ ಅವ್ಯಾಪ್ತಿದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಟೀಕೆಯ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ವಾಚಕ' ಇತ್ಯಾದಿಯಾಗಿ.

**प्रकाशः** – रूढ्या योगरूढ्या वेत्यर्थः । योगरूढस्यापि नामत्वस्य प्रागेवोक्तेरिति भावः ।

ಗ್ರಂಥದಲ್ಲಿರುವ 'ವಾಚಕಶಬ್ದಃ' ಎಂಬುದಕ್ಕೆ ರೂಢಿಯಿಂದ ಅಥವಾ ಯೋಗರೂಢಿಯಿಂದ ಎಂದರ್ಥ. ಅಂದರೆ ರೂಢಿಯಿಂದ ಅಥವಾ ಯೋಗರೂಢಿಯಿಂದ ಶಬ್ದವು ಅರ್ಥಪ್ರತಿಪಾದಕವಾದಲ್ಲಿ, ಶ್ರುತಿಯೆಂದೆನಿಸುತ್ತದೆಂದು ತಿಳಿಯಬೇಕು. ಯೋಗರೂಢವಾದ ಶಬ್ದಗಳಿಗೂ ನಾಮಾತ್ಮಕತ್ವವಿರುತ್ತದೆಂದು ಆನಂದಮಯಾಧಿಕರಣದಲ್ಲಿ ಸಮರ್ಥಿಸಿದ್ದೇವೆ. 'ಆಪಾತತಃ ಧರ್ಮ್ಯುಪಸ್ಥಾಪತ್ವಂ' ಆಪಾತತಃ ಧರ್ಮಿಯಸ್ಥಾಪಕವಾದಲ್ಲಿ ಆ ಶಬ್ದವು ಯೋಗಿಕವೂ ಆಗಿರಬಹುದು, ಯೋಗರೂಢವೂ ಆಗಿರಬಹುದೆಂದು ಅಲ್ಲಿ ಸಮರ್ಥಿಸಿದ್ದೇವೆ. ಆದರಂತೆ ಪ್ರಕೃತ ಶ್ರುತಿತ್ವವು ಯೋಗರೂಢಪದದಲ್ಲಿಯೂ ಇರುತ್ತದೆ.

**प्रकाशः** – नन्वेवं तल्लिङ्गादित्यत्रोक्तानन्तत्वोद्गीथत्वादिलिङ्गवाचिशब्देऽति-व्याप्तिः । तस्यापि योगरूढिभ्यां विष्णुवाचित्वादिति चेत् ।

ಶಂಕೆ - ಯೌಗಿಕಶಬ್ದದಲ್ಲಿಯೂ ಶ್ರುತಿತ್ವವು ಬರುತ್ತದೆಂದು ನೀವು ಹೇಳಿದಂತಾಯಿತು. ಹಾಗಾದರೆ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಅನಂತತ್ವ, ಉದ್ಗೀಥತ್ವ, ಪರೋವರೀಯಸ್ತ್ವತ್ವ ಮೊದಲಾದ ಲಿಂಗಗಳನ್ನು ಹೇಳಿದ್ದಾರೆ. ಆದರೆ ಈಗ ನೀವು ಹೇಳುವಂತೆ 'ಅನಂತ' ಎಂಬ ಶಬ್ದವು ಯೋಗರೂಢಪದವಾಗಿದೆ. ಅಂದರೆ 'ನವಿದ್ಯತೇ ಅಂತಃ ಯಸ್ಯ' ಎಂಬ ವ್ಯುತ್ಪತ್ತಿಯಿಂದ ಯೌಗಿಕವಾಗಿದೆ. 'ಅನಂತ' ಎಂಬ ಹೆಸರನ್ನು ಪರಮಾತ್ಮನು ಹೊಂದಿರುವುದರಿಂದ ರೂಢವಾಗಿದೆ. ಹೀಗೆ ಯೋಗರೂಢವಾದ 'ಅನಂತ' ಎಂಬ ಪದದಲ್ಲಿ ನೀವು ಹೇಳಿದ, ಶ್ರುತಿತ್ವವು ಬಂದೇ ಬರುತ್ತದೆ. ಆದರೆ ಸೂತ್ರಕಾರರು ಇದನ್ನು ಲಿಂಗಾತ್ಮಕವೆಂದು ಪರಿಗಣಿಸಿದ್ದಾರೆ. ಆದ್ದರಿಂದ ಅಲಕ್ಷ್ಯವಾದ ಅನಂತತ್ವಾದಿಗಳಲ್ಲಿ ಶ್ರುತಿತ್ವಲಕ್ಷಣಕ್ಕೆ ಅತಿವ್ಯಾಪ್ತಿದೋಷ ಬರುತ್ತದಲ್ಲವೇ?

**प्रकाशः** – न यौगिकत्वेनैव तत्र लिङ्गत्वोक्तेः । ''अन्तवद्वै किल ते साम'' इत्यादौ पूर्वत्रान्तवत्त्वमुक्त्वाऽऽकाशप्रकरणेऽनन्त इत्यक्त्या यौगिकत्वस्यैव प्रतीतेः ।

ಸಮಾಧಾನ - ಈ ಶಂಕೆಯು ಸರಿಯಲ್ಲ. 'ಅನಂತ' ಎಂಬ ಶಬ್ದವು ಯೌಗಿಕವಾಗಿರುವುದರಿಂದ ಲಿಂಗವೂ ಆಗುತ್ತದೆ. ರೂಢವಾದ್ದರಿಂದ ನಾಮಾತ್ಮಕವೂ ಆಗುತ್ತದೆ. ಸೂತ್ರಕಾರರು ಯೌಗಿಕಾರ್ಥವನ್ನು ವಿವಕ್ಷಿಸಿ, ಲಿಂಗವೆಂದು ಹೇಳಿದ್ದಾರೆ. ನಾಮಾತ್ಮಕವೆಂದು ವಿವಕ್ಷಿಸಿದಾಗ ರೂಢವಾಗುವುದರಿಂದ ಶ್ರುತಿತ್ವವೂ ಸಹ ಅದರಲ್ಲಿ ಬರಬಹುದು. ಆಕಾಶಾಧಿಕರಣದಲ್ಲಿರುವ 'ಅನಂತ' ಪದವನ್ನು ಯೌಗಿಕವೆಂದೇ ಸ್ವೀಕರಿಸಬೇಕು. ಏಕೆಂದರೆ 'ಅಂತವದ್ವೈ ಕಿಲ ತೇ ಸಾಮ' ಇತ್ಯಾದಿಯಾಗಿ ಹಿಂದಿನ ಪ್ರಕರಣದಲ್ಲಿ ರುದ್ರ, ಬ್ರಹ್ಮ ಮೊದಲಾದ ದೇವತೆಗಳಿಗೆ ಅಂತವತ್ತ್ವವನ್ನು ಹೇಳಿ, ಮುಂದೆ ಆಕಾಶಪ್ರಕರಣದಲ್ಲಿ 'ಸ ಏಷೋ ಅನಂತಃ' ಎಂಬುದಾಗಿ ಪರಮಾತ್ಮನನ್ನು ಅನಂತನೆಂದು ಕರೆಯಲಾಗಿದೆ. ಅಂದರೆ ರುದ್ರಾದಿ ದೇವತೆಗಳಿಗೆಲ್ಲಾ ಅಂತವತ್ತ್ವವಿದ್ದರೂ ಪರಮಾತ್ಮನಿಗೆ ಮಾತ್ರ ಅಂತವತ್ತ್ವವು ಇರುವುದಿಲ್ಲ. ಅವನು ಅನಂತನಾಗಿದ್ದಾನೆಂದು ಹೇಳಿದಂತಾಗುತ್ತದೆ. ಆದ್ದರಿಂದ ಯೌಗಿಕಾರ್ಥವೇ ಉಪಸ್ಥಿತವಾಗುತ್ತದೆ.

**प्रकाशः** – अत एवोक्तं तत्र 'अन्तत्रयोज्झिते विष्णुः'' इत्यादि ।

ಆದ್ದರಿಂದಲೇ ಹಿಂದೆ ಗ್ರಂಥಕಾರರು 'ಅಂತತ್ರಯೋಜ್ಝಿತೇ ವಿಷ್ಣುಃ' ಇತ್ಯಾದಿಯಾಗಿ ಅನಂತತ್ವವನ್ನು ಪರಮಾತ್ಮನಲ್ಲಿ ಯೌಗಿಕವೆಂದು ಉಪಪಾದನೆ ಮಾಡಿದ್ದಾರೆ. ಭೂತಾಕಾಶದಲ್ಲಿ ದೇಶತಃ, ಕಾಲತಃ, ಗುಣತಃ ಅನಂತತ್ವವನ್ನು ಹೇಳಲು ಸಾಧ್ಯವಿಲ್ಲ. ಮೂರೂ ಬಗೆಯ ಅನಂತತ್ವವನ್ನು ಪರಮಾತ್ಮನಲ್ಲಿ ಮಾತ್ರ ಹೇಳಬಹುದು. ಆದ್ದರಿಂದಲೇ ಅನಂತನೆನಿಸಿದ್ದಾನೆಂದು ಸಮರ್ಥಿಸಿದ್ದಾರೆ. ಇದರಿಂದ ಯೌಗಿಕ ಪದವೆಂದು ಸೂಚಿಸಿದಂತಾಯಿತು. ಆದ್ದರಿಂದ ಯೋಗರೂಢಪದಗಳಲ್ಲಿ ನಾಮಾತ್ಮಕತ್ವವಿರುವುದರಿಂದ ಶ್ರುತಿತ್ವವು ಇರುತ್ತದೆ. ಯೌಗಿಕಾರ್ಥವಿರುವುದರಿಂದ ಲಿಂಗತ್ವವು ಇರುತ್ತದೆ. ಬೇರೆ ಬೇರೆ ವಿವಕ್ಷೆಯಿಂದ ಸಮಸ್ಯೆಯನ್ನು ಪರಿಹರಿಸಬಹುದು. ಹೀಗೆ ಹೇಳಿದ್ದರಿಂದ ಯೋಗರೂಢಪದಗಳನ್ನು ಲಕ್ಷ್ಯಕೋಟಿಯಲ್ಲಿಯೇ ಸೇರಿಸಿದ್ದರಿಂದ ಅತಿವ್ಯಾಪ್ತಿದೋಷವನ್ನು ಪರಿಹರಿಸಿದಂತಾಯಿತು.

**प्रकाशः** – यद्वा अनन्तशब्दस्य श्रुतित्वेऽपि तत्र पूर्वोक्तन्यायातिदेशार्थं यौगिकत्वमात्राश्रयणेन लिङ्गत्वोक्तिः ।

ಶಂಕೆ - ಅನಂತ ಶಬ್ದವನ್ನು ಯೋಗರೂಢವೆಂದು ವಿವಕ್ಷಿಸಿ, ಶ್ರುತಿತ್ವವೂ ಇದೆ, ಲಿಂಗತ್ವವೂ ಇದೆಯೆಂದು ಸಮರ್ಥಿಸಿದಿರಿ. ಹಾಗಾದರೆ ಸೂತ್ರಕಾರರು, 'ತತ್‌ಶ್ರುತೇಃ' ಎಂದೂ ಸಹ ಹೇಳಬಹುದಿತ್ತು. 'ತಲ್ಲಿಂಗಾತ್' ಎಂಬುದಾಗಿ ಲಿಂಗವನ್ನೇ ಏಕೆ ಹೇಳಿದ್ದಾರೆ. ವಿಚಾರ ಮಾಡಿದರೆ, ಲಿಂಗಕ್ಕಿಂತ ಶ್ರುತಿಯೇ ಪ್ರಬಲವಾದ್ದರಿಂದ, 'ತತ್‌ಶ್ರುತೇಃ' ಎಂದು ಹೇಳಿದಾಗ ಬಲಿಷ್ಠವಾದ ಲಿಂಗವನ್ನೇ ಹೇಳಿದಂತಾಗುತ್ತದಲ್ಲವೇ?

ಸಮಾಧಾನ - ವಾಸ್ತವಿಕವಾಗಿ ಅನಂತಶಬ್ದವನ್ನು ಉಲ್ಲೇಖಿಸುವಾಗ ಸೂತ್ರದಲ್ಲಿ 'ತತ್ ಶ್ರುತೇಃ' ಎಂದೇ ಹೇಳಬಹುದಿತ್ತು. ಆದರೆ ಹಿಂದಿನ ಅಧಿಕರಣ 'ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಲಿಂಗವನ್ನೇ ಹೇತುವನ್ನಾಗಿ ಬಳಸಿದ್ದಾರೆ. ಆದ್ದರಿಂದ ಮುಂದಿನ ಸೂತ್ರದಲ್ಲಿಯೂ 'ತಲ್ಲಿಂಗಾತ್' ಎಂದು ಹೇಳಿದಾಗ,

ಹಿಂದಿನ ನ್ಯಾಯವನ್ನು ಅತಿದೇಶ ಮಾಡಿದಂತಾಗುತ್ತದೆ. ಪೂರ್ವೋಕ್ತನ್ಯಾಯದ ಅತಿದೇಶಕ್ಕೋಸ್ಕರ ಅನಂತತ್ವಾದಿಗಳನ್ನು ಯೌಗಿಕವೆಂದು ವಿವಕ್ಷಿಸಿ, ಲಿಂಗತ್ವವನ್ನೇ ಹೇಳಿರುತ್ತಾರೆ.

**प्रकाशः** – यद्वा ''नाममात्रेण निर्देशः'' इत्यत्र रूढशब्देनैव निर्देश इति प्रतीतेस्सर्वस्यापि शब्दस्यौणादिकप्रत्ययान्तत्वेन यौगिकत्वादप्रसिद्धिरित्यतो ''वाचकशब्दः श्रुतिः'' इत्यभिप्राय उक्तः ।

ಶಂಕೆ - ಟೀಕೆಯಲ್ಲಿ 'ನಾಮಮಾತ್ರೇಣ ನಿರ್ದೇಶಃ' ಎಂಬುದಾಗಿ ರೂಢಶಬ್ದದಿಂದಷ್ಟೇ ನಿರ್ದೇಶ ಮಾಡಬೇಕೆಂದು ಹೇಳಿದ್ದಾರೆ. ಹೀಗೆ ಹೇಳಿದರೆ ಅಸಂಭವ ದೋಷವು ಬರುತ್ತದೆ. ಏಕೆಂದರೆ ಕೆಲವು ವಾದಿಗಳ ಪ್ರಕಾರ, ಯೋಗ ಇಲ್ಲದೇ ಇರುವಂತಹ ಪದವೇ ಇರುವುದಿಲ್ಲ. ಯಾವುದೇ ಪದಗಳನ್ನು ತೆಗೆದುಕೊಂಡರೂ, ಅವುಗಳ ಮೇಲೆ ಔಣಾದಿಕ ಪ್ರತ್ಯಯವನ್ನು ಮಾಡಿದಾಗ ಎಲ್ಲವೂ ಯೌಗಿಕವೇ ಆಗುತ್ತವೆ. ಕೇವಲ ರೂಢವಾದ ಶಬ್ದಗಳೇ ಇರುವುದಿಲ್ಲ. ಇವರ ಪ್ರಕಾರ 'ನಾಮಮಾತ್ರೇಣ' ಎಂಬುದಾಗಿ ಕೇವಲ ರೂಢವಾದ ಶಬ್ದಗಳನ್ನು ಪರಿಗಣಿಸಲು ಹೇಗೆ ಸಾಧ್ಯ ?

ಸಮಾಧಾನ - ಈ ಶಂಕೆಯ ಪರಿಹಾರಕ್ಕಾಗಿಯೇ ಗ್ರಂಥಕಾರರು 'ವಾಚಕಶಬ್ದಃ ಶ್ರುತಿಃ' ಎಂದು ಹೇಳಿದಾದರೆ. ವಾಚಕವಾಗಬೇಕಾದರೆ, ಯೋಗವೂ ಆಗಿರಬಹುದು. ರೂಢವೂ ಆಗಿರಬಹುದು. ವಾಚಕವಾಗಿದ್ದರೆ ಸಾಕು, ಶ್ರುತಿಯೆನಿಸುತ್ತದೆಂದು ಹೇಳಿರುತ್ತಾರೆ.

**प्रकाशः** – न चैवमनन्तादिलिङ्गेऽतिव्याप्तिः । तत्र स्वार्थे श्रुतित्वस्यापि सत्त्वात् ।

ಶಂಕೆ - ಹಾಗಾದರೆ ಅನಂತತ್ವಾದಿಲಿಂಗಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಏಕೆಂದರೆ ವಾಚಕಶಬ್ದವನ್ನೇ ಶ್ರುತಿಯೆನ್ನುವುದಾದರೆ, ವಾಚಕಶಬ್ದತ್ವವನ್ನು ಅಲ್ಲಿ ಹೇಳಲು ಬರುವುದಿಲ್ಲ.

ಸಮಾಧಾನ - ಯಾವುದೇ ಶಬ್ದವನ್ನು ಲಿಂಗಾತ್ಮಕವೆಂದು ಹೇಳಿದರೂ ಸಹ ಸ್ವಾರ್ಥದಲ್ಲಿ ಅದು ಶ್ರುತಿಯೇ ಆಗಿರುತ್ತದೆ. ನಿರ್ಣೀತವಾದ ಅರ್ಥದಲ್ಲಿ ವ್ಯಾಪ್ಯವನ್ನು ಸಮರ್ಪಣೆ ಮಾಡುವಾಗ ಅನುಮಾಪಕವಾದ್ದರಿಂದ ಅದನ್ನು ಲಿಂಗವೆಂದು ಹೇಳುತ್ತೇವೆ. ಅಂದರೆ ಯಾವುದೇ ಶಬ್ದಗಳು ಸ್ವಾರ್ಥವನ್ನು ಬೋಧಿಸುವಾಗ ಶ್ರುತಿಯೇ ಆಗುತ್ತದೆ. ಅವೇ ನಿರ್ಣೀತವಾದ ಅರ್ಥದಲ್ಲಿ ವ್ಯಾಪ್ಯವನ್ನು ಸಮರ್ಪಣೆ ಮಾಡುವಾಗ ಲಿಂಗವಾಗಿರುತ್ತದೆ ಎಂದು ತಿಳಿಯಬೇಕು.

**प्रकाशः** – निर्णेयार्थे च व्याप्यार्पकत्वेनानुमापकतया वाचकत्वाभावात् ।

ನಿರ್ಣಯ ಮಾಡಬೇಕಾದ ಅರ್ಥದಲ್ಲಿ ವ್ಯಾಪ್ಯವಾದ್ದನ್ನು ಸಮರ್ಪಣೆ ಮಾಡುವ ಶಬ್ದವು ಅನುಮಾಪಕವಾದ್ದರಿಂದ ಅದು ವಾಚಕ ಎನಿಸುವುದಿಲ್ಲ.

**प्रकाशः** – नचैवं वामनशब्दोऽपि वामनेतृत्वादिव्याप्यार्पकतया निर्णेयार्थेऽनुमापक इति न श्रुतिः स्यादिति वाच्यम् ।

ಶಂಕೆ - ಹಾಗಾದರೆ 'ವಾಮನ' ಶಬ್ದವೂ ಸಹ ವಾಮನೇತೃತ್ವಾದಿ ವ್ಯಾಪ್ಯಧರ್ಮವನ್ನು ಸಮರ್ಪಣೆ ಮಾಡುವುದರಿಂದ ನಿರ್ಣೇಯಾರ್ಥದಲ್ಲಿ ಅನುಮಾಪಕವೆಂದೇ ಹೇಳಿದಂತಾಯಿತು. ಆವಾಗ ಶ್ರುತಿತ್ವವೇ ಬರುವುದಿಲ್ಲವಲ್ಲ.

**प्रकाशः** – आपततोऽपि व्याप्यार्पकस्यैव लिङ्गत्वेनाभिमततया वामनशब्दे तदभावात् ।

ಸಮಾಧಾನ - 'ಅನಂತ' ಶಬ್ದವನ್ನು ಹೇಳಿದಾಗಲೇ ಅಂತವತ್ತ್ವವಿಲ್ಲವೆಂಬರ್ಥವು ಉಪಸ್ಥಿತವಾಗುತ್ತದೆ. ಆ ರೀತಿಯಲ್ಲಿ 'ವಾಮನ' ಶಬ್ದವನ್ನು ಕೇಳಿದಾಕ್ಷಣ, ವಾಮನೇತೃತ್ವಾದಿ ಧರ್ಮಗಳ ಉಪಸ್ಥಿತಿಯು ಬರುವುದಿಲ್ಲ. ಆದ್ದರಿಂದ, ಯಾವ ಶಬ್ದಗಳನ್ನು ಕೇಳಿದಾಕ್ಷಣದಲ್ಲಿ ವ್ಯಾಪ್ಯಧರ್ಮದ ಉಪಸ್ಥಿತಿಯೂ ಬರುತ್ತದೆಯೋ, ಅವುಗಳನ್ನು ಮಾತ್ರ ಲಿಂಗಾತ್ಮಕವೆಂದು ಪರಿಗಣಿಸಲಾಗಿದೆ. ವಾಮನ ಶಬ್ದದಲ್ಲಿ ಆಪಾತತಃ ವ್ಯಾಪ್ಯಧರ್ಮದ ಉಪಸ್ಥಿತಿಯು ಬಾರದ ಕಾರಣ ಲಿಂಗಾತ್ಮಕವೆಂದು ಪರಿಗಣಿಸಿಲ್ಲ.

**प्रकाशः** – तस्य द्विरूपत्वेऽपि लिङ्गत्वानाश्रयणेनापाततो रूढ्याश्रयणेन श्रुतित्वाभिधानाद्वा ।

ಅಥವಾ 'ವಾಮನ' ಶಬ್ದವು ನಾಮಾತ್ಮಕ ಮತ್ತು ಲಿಂಗಾತ್ಮಕವಾಗಿದ್ದರೂ ಲಿಂಗತ್ವವನ್ನು ಆಶ್ರಯಿಸದೇ ಆಪಾತತಃ ತೋರುವಂತಹ ರೂಢ್ಯರ್ಥವನ್ನಷ್ಟೇ ವಿವಕ್ಷಿಸಿ, ಶ್ರುತಿತ್ವವನ್ನು ಈ ಅಧಿಕರಣದಲ್ಲಿ ಹೇಳಿದ್ದಾರೆಂದೂ ಸಹ ತಿಳಿಯಬಹುದು.

**प्रकाशः** – नन्वेवं यत्तदादिसाधारणशब्दानां सर्ववाचकतया विष्णोरपि वाचकत्वात्तच्छ्रुतित्वापत्तिरिति चेत् ।

ಶಂಕೆ - 'ವಾಚಕಶಬ್ದಃ ಶ್ರುತಿಃ' ಎಂದು ನೀವು ಹೇಳುವುದಾದರೆ, 'ಯತ್', 'ತತ್', 'ಏತತ್' ಮೊದಲಾದ ಸರ್ವನಾಮಶಬ್ದಗಳೆಲ್ಲವೂ ಶ್ರುತಿಯೆಂದಾಗಬೇಕಾದೀತು. ಏಕೆಂದರೆ, ಈ ಶಬ್ದಗಳೂ ಸಕಲ ಪದಾರ್ಥಗಳನ್ನು ಪ್ರತಿಪಾದನೆ ಮಾಡುವುದರಿಂದ, ವಿಷ್ಣುವನ್ನೂ ಸಹ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ, ವಿಷ್ಣುವಿಗೆ ವಾಚಕಗಳಾದ್ದರಿಂದ ಇವುಗಳಲ್ಲಿಯೂ ಶ್ರುತಿತ್ವವು ಬರಬಹುದಲ್ಲವೇ?

**प्रकाशः** – न श्रुतित्वसामान्यस्येष्टत्वात् । विष्णुश्रुतित्वेप्यनिष्टाभावात् ।

ಸಮಾಧಾನ - ಹೀಗೆ ಶಂಕಿಸಬಾರದು. ಏಕೆಂದರೆ ನಮಗೆ ಇದು ಇಷ್ಟವೇ ಆಗಿದೆ. ವಿಷ್ಣುವಿಗೆ ವಾಚಕವಾಗಿರುವ ಕಾರಣ, ಶ್ರುತಿತ್ವವೆಂಬ ಸಾಮಾನ್ಯಧರ್ಮವು ಇಂತಹ ತತ್, ಏತತ್ ಇತ್ಯಾದಿ ಸರ್ವನಾಮ

ಶಬ್ದಗಳಲ್ಲಿ ನಮಗೆ ಇಷ್ಟವೇ ಆಗಿದೆ. ವಿಷ್ಣು ಶ್ರುತಿಯಾಗಬೇಕಾದೀತು ಎಂದು ಆಕ್ಷೇಪವೂ ಸಹ ನಮಗೆ ಇಷ್ಟವೇ ಆಗಿದೆ.

**प्रकाशः** – नच तन्निर्णायकतापत्तिप्रसङ्गोऽनिष्टः ।

ಶಂಕೆ - 'ತತ್' 'ಏತತ್' ಮೊದಲಾದ ಶಬ್ದಗಳು ವಿಷ್ಣುವಾಚಕಗಳಾಗಲಿ ಎಂದಷ್ಟೇ ನಮ್ಮ ಅಭಿಪ್ರಾಯವಲ್ಲ. ವಿಷ್ಣುತ್ವಕ್ಕೆ ನಿರ್ಣಾಯಕವಾಗಲಿ ಎಂದು ಆಕ್ಷೇಪದ ಅಭಿಪ್ರಾಯ. ಏಕೆಂದರೆ ಶ್ರುತಿ-ಲಿಂಗ-ವಾಕ್ಯ ಇವೆಲ್ಲವೂ ನಿರ್ಣಾಯಕವಾದ ಪ್ರಮಾಣಗಳಾದ್ದರಿಂದ, ಸರ್ವನಾಮ ಶಬ್ದಗಳಲ್ಲಿ ಶ್ರುತಿತ್ವವಿದ್ದರೆ, ವಿಷ್ಣುತ್ವ ನಿರ್ಣಾಯಕವಾಗಬೇಕಾದೀತು ಎಂಬುದೇ ಆಕ್ಷೇಪದ ಅಭಿಪ್ರಾಯ. ಇದನ್ನು ನಿಮಗೆ ಇಷ್ಟಾಪತ್ತಿಯೆಂದು ಹೇಳಲು ಬರುವುದಿಲ್ಲವಲ್ಲವೇ?

**प्रकाशः** – श्रुतिमात्रस्यानिर्णायकत्वेऽपि श्रुतित्वानपायात् ।

ಸಮಾಧಾನ - 'ಯತ್ರ ಯತ್ರ ಶ್ರುತಿತ್ವಂ ತತ್ರ ತತ್ರ ನಿರ್ಣಾಯಕತ್ವಮ್' ಎಂಬ ವ್ಯಾಪ್ತಿಯನ್ನು ನಾವು ಹೇಳಿಯೇ ಇಲ್ಲ. ಶ್ರುತಿತ್ವವು ಬರಬೇಕಾದೀತೆಂದು ನೀವು ಆಕ್ಷೇಪಿಸಿದಾಗ ಮಾತ್ರ ಇಷ್ಟಾಪತ್ತಿಯೆಂದಿದ್ದೇವೆ. ಶ್ರುತಿತ್ವ ಬಂದ ಮಾತ್ರಕ್ಕೆ ನಿರ್ಣಾಯಕತ್ವವನ್ನು ಒಪ್ಪಬೇಕೆಂದೇನೂ ನಿಯಮವಿಲ್ಲ. ನಿರ್ಣಾಯಕತ್ವವು ಸರ್ವನಾಮ ಶಬ್ದಗಳಲ್ಲಿ ಬರುವುದಿಲ್ಲವೆಂದಮಾತ್ರಕ್ಕೆ ಶ್ರುತಿತ್ವವೂ ಇರುವುದಿಲ್ಲವೆಂದೇನೂ ಆಗುವುದಿಲ್ಲ.

**प्रकाशः** – असाधारण्येन वाचकश्शब्दश्श्रुतिरित्यप्याहुः ।

ಕೆಲವರು ಗ್ರಂಥದಲ್ಲಿರುವ 'ವಾಚಕಶಬ್ದಃ' ಎಂಬ ಪದಕ್ಕೆ 'ಅಸಾಧಾರಣ್ಯೇನ ವಾಚಕಶಬ್ದಃ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಅಂದರೆ ವಿಷ್ಣುವಿಗೆ ಅಸಾಧಾರಣ ಶಬ್ದದಿಂದ ವಾಚಕವಾಗಿದ್ದರೆ ಮಾತ್ರ ನಿರ್ಣಾಯಕತ್ವೇನ ಶ್ರುತಿಯೆನಿಸುತ್ತದೆಂದು ಇವರ ಅಭಿಪ್ರಾಯ. ಈ ಪಕ್ಷದಲ್ಲಿ ಸರ್ವನಾಮಶಬ್ದಗಳಿಗೆ ಅಸಾಧಾರಣ ವಾಚಕತ್ವವಿಲ್ಲದ ಕಾರಣ, ಶ್ರುತಿತ್ವವೇ ಬರುವುದಿಲ್ಲವೆಂದು ತಿಳಿಯಬೇಕು.

**प्रकाशः** – नन्वेवमप्यतन्विताभिधानेऽन्वयरूपवाक्यार्थे पदस्यैव वाचकतया तत्र श्रुतित्वं स्यादिति चेत्

ಶಂಕೆ - ನಾವು ಅನ್ವಿತಾಭಿಧಾನ ವಾದಿಗಳು. ಆದ್ದರಿಂದ ಪದಗಳಿಗೆ ಯೋಗ್ಯವಾದ ಇತರಪದಾರ್ಥದಿಂದ ಅನ್ವಿತವಾದ ಸ್ವಾರ್ಥದಲ್ಲಿ ಶಕ್ತಿಯಿದೆಯೆಂದು ಒಪ್ಪುತ್ತೇವೆ. ಇದರಿಂದ ಸ್ವಾರ್ಥದಲ್ಲಿ ಮತ್ತು ಅನ್ವಯದಲ್ಲಿ ಶಕ್ತಿಯನ್ನು ಒಪ್ಪಿದಂತಾಯಿತು. ಆದ್ದರಿಂದ ಪದಗಳು ಸ್ವಾರ್ಥದಲ್ಲಿ ಹೇಗೆ ಶ್ರುತಿಯೆನಿಸುತ್ತವೋ ಅದರಂತೆ ಅನ್ವಯ ಎಂಬ ವಾಕ್ಯಾರ್ಥದಲ್ಲಿಯೂ ಪದಗಳಿಗೆ ಶ್ರುತಿತ್ವವು ಬರಬೇಕಾದೀತು.

**प्रकाशः** – इष्टत्वात् । नच वाक्यप्रमाणकत्वव्यवहारविरोधः । सामान्यान्वये श्रुतित्वेऽपि विशेषान्वये पदान्तरसमभिव्याहारसापेक्षत्वेन तदुपपत्तेः ।

ಸಮಾಧಾನ - ಇದು ನಮಗೆ ಇಷ್ಟವೇ ಆಗಿದೆ. ಪದವು ಸ್ವಾರ್ಥದಲ್ಲಿ ವಾಚಕವಾಗಲೀ, ಅನ್ವಯದಲ್ಲಿ ವಾಚಕವಾಗಲೀ ಆಗಿದ್ದರೆ ಸಾಕು, ಅದು ಆ ವಿಷಯದಲ್ಲಿ ಶ್ರುತಿಯೇ ಆಗುತ್ತದೆ.

ಶಂಕೆ - ಹಾಗಾದರೆ ವಾಕ್ಯಪ್ರಮಾಣಕತ್ವವ್ಯವಹಾರದ ವಿರೋಧ ಬರುತ್ತದಲ್ಲವೇ? ವಾಕ್ಯಗಳು ಅನ್ವಯಕ್ಕೆ ಪ್ರಮಾಪಕವಾಗಿರುತ್ತವೆಂದು ಎಲ್ಲರೂ ವ್ಯವಹರಿಸುತ್ತಾರೆ. ಆದರೆ ನೀವು ವಾಕ್ಯಾರ್ಥವಾದ ಅನ್ವಯದಲ್ಲಿಯೂ ಶಕ್ತವಾಗಿವೆಯೆಂದು ಹೇಳಿದರೆ, ಈ ವ್ಯವಹಾರದ ವಿರೋಧ ಬರುತ್ತದಲ್ಲವೇ?

ಸಮಾಧಾನ - ನಾವು ಸಾಮಾನ್ಯಾನ್ವಯ ವಿಶೇಷಾನ್ವಯವೆಂದು ಎರಡು ಬಗೆಯ ಅನ್ವಯವನ್ನು ಒಪ್ಪಿದ್ದೇವೆ. ಪದಗಳಿಗೆ ಸಾಮಾನ್ಯಾನ್ವಯದಲ್ಲಿ ಶಕ್ತಿಯಿರುತ್ತದೆ. ವಾಕ್ಯಕ್ಕೆ ವಿಶೇಷಾನ್ವಯದಲ್ಲಿ ಶಕ್ತಿಯಿರುತ್ತದೆ. ಉದಾಹರಣೆ 'ಗಾಂ' ಎಂಬ ಪದಕ್ಕೆ ಆನಯನಾನ್ವಿತವಾದ ಗೋವಿನಲ್ಲಿ ಶಕ್ತಿಯಿಲ್ಲ. ಸಾಮಾನ್ಯವಾದ ಯೋಗ್ಯವಾದ ಕ್ರಿಯೆಯಿಂದ ಅನ್ವಿತವಾದ 'ಗೋ' ಎಂಬ ಪದದಲ್ಲಿ ಶಕ್ತಿಯಿದೆ. ಒಂದು ವೇಳೆ ಆನಯ ಎಂಬ ಪದದ ಸಮಭಿವ್ಯಾಹಾರವು ದೊರೆತರೆ, ಆವಾಗ ಅದೇ 'ಗಾಂ' ಎಂಬ ಪದವು ಆನಯನಾನ್ವಿತವಾದ ಸ್ವಾರ್ಥವನ್ನು ಹೇಳುತ್ತದೆ. ಆದ್ದರಿಂದ ಪದಗಳಿಗೆ ಸಾಮಾನ್ಯಾನ್ವಯದಲ್ಲಿ ಶ್ರುತಿತ್ವವಿದ್ದರೂ ಕೂಡ ವಾಕ್ಯಬೋಧ್ಯವಾದ ಅಪೂರ್ವವಾದ ವಿಶೇಷಾನ್ವಯವಿರುತ್ತದೆ. ಅದರಲ್ಲಿ ಕೇವಲ ಪದಗಳಿಗೆ ಶಕ್ತಿಯು ಇರುವುದಿಲ್ಲ. ಪದಗಳು ಪದಾಂತರ ಸಮಭಿವ್ಯಾಹಾರದಿಂದಲೇ ವಿಶೇಷಾನ್ವಯವನ್ನು ಬೋಧಿಸುತ್ತವೆ. ಪದಾಂತರಸಮಭಿವ್ಯಾಹಾರವನ್ನೇ ವಾಕ್ಯವೆಂದು ಎಲ್ಲರೂ ಕರೆಯುತ್ತಾರೆ. ಆದ್ದರಿಂದ ವಿಶೇಷಾನ್ವಯವು ವಾಕ್ಯಪ್ರಮಾಣಕವೆಂದಾಯಿತು. ಪದವು ಸಾಮಾನ್ಯಾನ್ವಯ ಪ್ರಮಾಣಕವೆಂದಾಯಿತು.

**प्रकाशः** – तदुक्तं तर्कताण्डवे ''तत्तद्विशेषोपस्थापनेन पदान्तरसार्थक्यात्'' इति ।

ಈ ಅಭಿಪ್ರಾಯದಿಂದಲೇ ತರ್ಕತಾಂಡವದಲ್ಲಿ 'ತತ್ತದ್ವಿಶೇಷೋಪಸ್ಥಾಪನೇನ ಪದಾಂತರಸಾರ್ಥಕ್ಯಾತ್' ಎಂದು ಹೇಳಿರುತ್ತಾರೆ. ಅಂದರೆ ಎಲ್ಲ ಪದಗಳಿಗೂ ಇತರಾನ್ವಿತವಾದ ಸ್ವಾರ್ಥದಲ್ಲಿ ಶಕ್ತಿಯನ್ನು ಹೇಳುವುದಾದರೆ, ಪದಾಂತರಗಳೆಲ್ಲವೂ ವ್ಯರ್ಥವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಸಾಮಾನ್ಯವಾದ ಇತರಾನ್ವಿತವಾದ ಸ್ವಾರ್ಥದಲ್ಲೇ ಪದಗಳಿಗೆ ಶಕ್ತಿಯಿರುತ್ತದೆ. ಆಯಾ ಪದಗಳನ್ನು ಉಚ್ಚರಿಸಿದಾಗ ಅವು ವಿಶೇಷಾನ್ವಿತವಾದ ಸ್ವಾರ್ಥದಲ್ಲಿ ಶಕ್ತವಾಗುತ್ತದೆಂದು ಪದಾಂತರಗಳ ಸಾರ್ಥಕ್ಯವನ್ನು ಉಪಪಾದನೆ ಮಾಡಿದ್ದಾರೆ.

**प्रकाशः** – यद्वा ''नाममात्रेण'' इत्यत्र नामपदस्य सुबन्तपद एव प्रसिद्ध्या प्रातिपदिकप्रत्ययपदरूपश्रुतित्रयपरिग्रहाय वाचकश्शब्दश्श्रुतिरित्यर्थ उक्तः ।

ಟೀಕೆಯಲ್ಲಿರುವ 'ನಾಮಮಾತ್ರೇಣ' ಎಂಬ ಪದಕ್ಕೆ ಗ್ರಂಥಕಾರರು 'ವಾಚಕಶಬ್ದಃ ಶ್ರುತಿಃ' ಎಂದು ವ್ಯಾಖ್ಯಾನ ಮಾಡಿದರು. ಇದಕ್ಕೆ ಮತ್ತೊಂದು ಕಾರಣವನ್ನು ಹೀಗೆ ತಿಳಿಯಬಹುದು. ನಾಮಪದವು ಸುಬಂತದಲ್ಲಷ್ಟೇ ಪ್ರಸಿದ್ಧವಾಗಿದೆ. ಆದರೆ ಪ್ರಾತಿಪದಿಕ, ಪ್ರತ್ಯಯ, ಪದ ಈ ಮೂರಕ್ಕೂ ಶ್ರುತಿತ್ವವನ್ನು ಸಮರ್ಥಿಸಬೇಕಾಗಿದೆ. ಅದಕ್ಕೋಸ್ಕರ ಗ್ರಂಥಕಾರರು 'ನಾಮಮಾತ್ರೇಣ' ಎಂಬ ಪದಕ್ಕೆ 'ವಾಚಕಶಬ್ದಃ ಶ್ರುತಿಃ'

ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಪ್ರಾತಿಪದಿಕಾದಿಗಳು ವಾಚಕಶಬ್ದಗಳೆನಿಸಿದ್ದರಿಂದ ಶ್ರುತಿಯೆನಿಸಬಹುದೆಂದು ಅಭಿಪ್ರಾಯ.

**प्रकाशः** – एवञ्च ''अत्ता चराचर'' इत्यादावादित्यादिप्रातिपदिकस्य गुहानये ''ऋतं पिबन्तौ'' इति द्विवचनस्य पिबत्प्रातिपदिकस्य च ''ब्रह्मजिज्ञासा'' इत्यादौ ब्रह्मपदादेश्श्रुतित्वव्यवहारष्टीकादौ युक्तः ।

ಆದ್ದರಿಂದಲೇ 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ 'ಅದಿತಿ' ಎಂಬ ಪ್ರಾತಿಪದಿಕಕ್ಕೆ ಶ್ರುತಿತ್ವವನ್ನು ಹೇಳಿದಂತಾಗುತ್ತದೆ. ಗುಹಾಧಿಕರಣದಲ್ಲಿ 'ಋತಂ ಪಿಬಂತೌ' ಎಂಬಲ್ಲಿರುವ ದ್ವಿವಚನವನ್ನು 'ಪಿಬತ್' ಎಂಬ ಪ್ರಾತಿಪದಿಕವನ್ನು ಶ್ರುತಿಯೆಂದು ಪರಿಗಣಿಸಲಾಗಿದೆ. 'ಬ್ರಹ್ಮಜಿಜ್ಞಾಸಾ' ಸೂತ್ರದಲ್ಲಿ ಬ್ರಹ್ಮಪದವನ್ನು ಶ್ರುತಿಯೆಂದು ವ್ಯವಹರಿಸಲಾಗಿದೆ. ಆದ್ದರಿಂದ ಪ್ರಾತಿಪದಿಕ, ಪ್ರತ್ಯಯ, ಪದ ಇವುಗಳಲ್ಲೆಲ್ಲಾ ಶ್ರುತಿತ್ವವು ಸೂತ್ರಕಾರರಿಗೆ ಸಮ್ಮತವಾಗಿರುವುದರಿಂದ, ಗ್ರಂಥಕಾರರು 'ವಾಚಕಶಬ್ದಃ ಶ್ರುತಿಃ' ಎಂದು ವ್ಯಾಖ್ಯಾನಿಸಿದ್ದು ಅತ್ಯಂತ ಅರ್ಥಪೂರ್ಣವಾಗಿದೆ.

**प्रकाशः** – अत एव प्रकृतिप्रत्ययसमभिव्याहारेण जीवान्यगुणपूर्णवस्तुनः कर्मत्वप्रतीत्या विषयसिद्धिरुच्यते जिज्ञासासूत्रे ।

ಆದ್ದರಿಂದಲೇ ಜಿಜ್ಞಾಸಾಸೂತ್ರದಲ್ಲಿ ಬ್ರಹ್ಮಶಬ್ದವು 'ಬೃಹ'ಧಾತು ಮತ್ತು 'ಮನಿನ್' ಪ್ರತ್ಯಯದಿಂದ ಸೇರಿಕೊಂಡು ಜೀವನಿಗಿಂತ ಭಿನ್ನವಾದ ಗುಣಪೂರ್ಣವಾದ ವಸ್ತುವನ್ನು ಪ್ರತಿಪಾದನೆ ಮಾಡುತ್ತದೆಂದು ಸಮರ್ಥಿಸಲಾಗಿದೆ. ಹೀಗೆ ಬ್ರಹ್ಮಶಬ್ದದಿಂದಲೇ ಕರ್ಮತ್ವವು ಪ್ರತೀತವಾಗುವುದರಿಂದ ಅಧಿಕರಣದ ವಿಷಯವು ಸಿದ್ಧವಾಗುತ್ತದೆಂದು ಹೇಳಿರುತ್ತಾರೆ.

**प्रकाशः** – नन्वेवं ''नतु श्रुतेस्स्वतोभेदः'' इति तर्कताण्डववाक्यविरोध इति चेत्

ಶಂಕೆ - ಶ್ರುತಿಯಲ್ಲಿ ಪ್ರಾತಿಪದಿಕ, ಪ್ರತ್ಯಯ, ಪದ ಇತ್ಯಾದಿಯಾಗಿ ಅನೇಕ ಅವಾಂತರ ಭೇದಗಳನ್ನು ನೀವು ಹೇಳಿದಂತಾಯಿತು. ಆದರೆ ತರ್ಕತಾಂಡವದಲ್ಲಿ 'ನತು ಶ್ರುತೇಃ ಸ್ವತೋಭೇದಃ' ಶ್ರುತಿಯಲ್ಲಿ ಯಾವುದೇ ತರಹ ಅವಾಂತರಭೇದಗಳಿರುವುದಿಲ್ಲ ಎಂದು ಹೇಳಿದ್ದಾರೆ. ತರ್ಕತಾಂಡವದ ಈ ಮಾತಿನಿಂದ ಪ್ರಕೃತ ನೀವು ಹೇಳುತ್ತಿರುವ ವಿಷಯಕ್ಕೆ ವಿರೋಧ ಬರುತ್ತದಲ್ಲವೇ?

**प्रकाशः** – मैवम् । मीमांसकोक्तविधायकत्वविनियोजकत्वादिभेदनिषेध एव तात्पर्यात् ।

ಸಮಾಧಾನ - ನಮ್ಮ ಸಿದ್ಧಾಂತದ ಶ್ರುತಿಯ ಬಗ್ಗೆ 'ನತು ಶ್ರುತೇಃ ಸ್ವತೋಭೇದಃ' ಎಂಬ ವಾಕ್ಯವು ವಿವರಣೆಯನ್ನು ನೀಡುತ್ತಿಲ್ಲ. ಹೊರತಾಗಿ, ಮೀಮಾಂಸಕರು ಹೇಳಲ್ಪಡುವ ವಿಧಾಯಕತ್ವ, ವಿನಿಯೋಜಕತ್ವ,

ಮೊದಲಾದ ಅವಾಂತರ ಪ್ರಭೇದಗಳನ್ನು ಶ್ರುತಿಯು ಹೊಂದಿರುವುದಿಲ್ಲ ಎಂದಷ್ಟೇ 'ನತು ಶ್ರುತೇಃ' ಇತ್ಯಾದಿ ವಾಕ್ಯದಲ್ಲಿ ನಿಷೇಧ ಮಾಡುತ್ತಿದ್ದಾರೆ.

**प्रकाशः** – यद्वा ''श्रुतिश्शब्दोऽनपेक्षस्स्याद्विध्युक्तिविनियोगकृत्'' इत्यादिना मीमांसकैर्विधायकाभिधायकविनियोजकभेदेन श्रुतित्रैविध्यमुक्तम् ।

ಅಥವಾ ಟೀಕೆಯಲ್ಲಿ 'ನಾಮಮಾತ್ರೇಣ' ಇತ್ಯಾದಿ ವಾಕ್ಯಕ್ಕೆ ಗ್ರಂಥಕಾರರು 'ವಾಚಕಶಬ್ದಃ ಶ್ರುತಿಃ' ಎಂದು ವ್ಯಾಖ್ಯಾನ ಮಾಡಿದ್ದು ಪರಮತವನ್ನು ನಿರಾಕರಿಸುವುದಕ್ಕಾಗಿಯೂ ಎಂದೂ ತಿಳಿಯಬಹುದು.

ಮೀಮಾಂಸಕರು ಹೀಗೆ ಹೇಳುತ್ತಾರೆ - 'ಶ್ರುತಿಶಬ್ದೋಽನಪೇಕ್ಷಃ ಸ್ಯಾದ್ವಿಧ್ಯುಕ್ತಿವಿನಿಯೋಗಕೃತ್' ಇತ್ಯಾದಿಯಾಗಿ ವಿಧಾಯಕ, ಅಭಿಧಾಯಕ, ವಿನಿಯೋಜಕ ಎಂಬುದಾಗಿ ಶ್ರುತಿಯು ಮೂರು ವಿಧವಾಗಿದೆಯೆಂದು ಹೇಳಿರುತ್ತಾರೆ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬಲ್ಲಿರುವ ಲಿಙ್ ಪ್ರತ್ಯಯವು ವಿಧಾಯಕವೆಂದು ಹೇಳುತ್ತಾರೆ. ಇದರಂತೆ 'ಐಂದ್ರ್ಯಾಗ್ರಾರ್ಹಪತ್ಯಮುಪತಿಷ್ಠತೇ' ಇತ್ಯಾದಿ ಸ್ಥಳಗಳಲ್ಲಿರುವ ತೃತೀಯಾ ಶ್ರುತಿಯು ಶೇಷತ್ವವನ್ನು, ದ್ವಿತೀಯಾ ಶ್ರುತಿಯು ಶೇಷಿತ್ವವನ್ನು ಹೇಳುತ್ತದೆಂದು ಉಪಪಾದಿಸುತ್ತಾರೆ. ಇವುಗಳನ್ನು ವಿನಿಯೋಜಕವೆಂದು ಕರೆಯಲಾಗುತ್ತದೆ. ಯಾವ ಶ್ರುತಿಗಳು ವಿಧಾಯಕವೂ ಅಲ್ಲವೋ, ವಿನಿಯೋಜಕವೂ ಅಲ್ಲವೋ, ಕೇವಲ ವಾಚಕಗಳಾಗಿರುತ್ತವೋ, ಅವನ್ನು ಅಭಿಧಾಯಕವೆಂದು ಕರೆಯುತ್ತಾರೆ. ಹೀಗೆ 'ಅನಪೇಕ್ಷಸ್ಯ ಶಬ್ದಃ ಶ್ರುತಿಃ' ಎಂಬ ಲಕ್ಷಣವನ್ನು ನಮ್ಮಂತೆ ಹೇಳಿದರೂ ಅವಾಂತರ ಭೇದವನ್ನು ನಮಗಿಂತ ವಿಲಕ್ಷಣವಾಗಿ ಮೀಮಾಂಸಕರು ಹೇಳುತ್ತಾರೆ.

**प्रकाशः** – तदयुक्तम् । सर्वासां श्रुतीनामभिधायकत्वेन ततो विधान्तराभावादिति परमतनिरासमभिप्रेत्य ''नाममात्रेण'' इत्यादि टीकाप्रवृत्तेत्यभिप्रेत्य ''वाचकश्शब्दश्श्रुतिः'' इत्यर्थ उक्तः ।

ಮೀಮಾಂಸಕರ ಈ ಅಭಿಪ್ರಾಯ ಸರಿಯಿಲ್ಲ. ಏಕೆಂದರೆ ಸಕಲ ಶ್ರುತಿಗಳೂ ಅಭಿಧಾಯಕವೇ ಆಗಿದೆ ಹೊರತು, ವಿಧಾಯಕವೆಂದಾಗಲೀ, ವಿನಿಯೋಜಕವೆಂದಾಗಲೀ, ಇರಲು ಸಾಧ್ಯವಿಲ್ಲ. ಈ ಉದ್ದೇಶದಿಂದಲೇ ಮಾತ್ರಶಬ್ದ ಪ್ರಯೋಗವೆಂದು 'ನಾಮಮಾತ್ರೇಣ' ಎಂಬುದಾಗಿ ಟೀಕೆಯಲ್ಲಿ ಹೇಳಿರುತ್ತಾರೆ. ಯಾವುದೇ ಶಬ್ದಗಳಾದರೂ ಮೊದಲು ವಾಚಕವಾದರೆ ಮಾತ್ರ ಅನಂತರ ವಿಧಾಯಕವೆಂದಾಗಲೀ, ವಿನಿಯೋಜಕವೆಂದಾಗಲೀ ಹೇಳಲು ಸಾಧ್ಯ. ಆದ್ದರಿಂದ 'ವಾಚಕಶಬ್ದಃ ಶ್ರುತಿಃ' ಎಂದಷ್ಟೇ ಶ್ರುತಿಯ ಲಕ್ಷಣವನ್ನು ಹೇಳಿದರೆ ಸಾಕು.

**प्रकाशः** – यथोक्तं तर्कताण्डवे ''सर्वाऽपि श्रुतिरभिधात्र्येव । ज्ञापक एव हि शब्दो नतु कारकः । परं त्विन्द्रादिश्रुतिरिन्द्रमभिधत्ते । लिङ्गादिश्रुतिस्तु विधिम्'' इत्यादि ।

ಇದನ್ನೇ ತರ್ಕತಾಂಡವದಲ್ಲಿ 'ಸರ್ವಾಽಪಿ ಶ್ರುತಿರಭಿಧಾತ್ರ್ಯೇವ । ಜ್ಞಾಪಕ ಏವ ಹಿ ಶಬ್ದೋ ನತು

ಕಾರಕಃ । ಪರಂ ತು ಇಂದ್ರಾದಿಶ್ರುತಿರಿಂದ್ರಮಭಿಧತ್ತೇ । ಲಿಂಗಾದಿಶ್ರುತಿಸ್ತು ವಿಧಿಮ್' ಎಂದು ಹೇಳಿದ್ದಾರೆ. ಸಕಲ ಶ್ರುತಿಗಳೆಲ್ಲವೂ ಅಭಿಧಾಯಕವೇ ಆಗಿದೆ. ವಿನಿಯೋಜಕವೂ ಅಲ್ಲ, ವಿಧಾಯಕವೂ ಅಲ್ಲ. ಏಕೆಂದರೆ ಶಬ್ದವು ಯಾವುದೇ ಪ್ರಮೇಯಕ್ಕೆ ಕಾರಕವಲ್ಲ. ಕೇವಲ ಜ್ಞಾಪಕವೇ ಆಗಿರುತ್ತದೆ. ಉದಾಹರಣೆ : ವಿಷ್ಣು ಸರ್ವೋತ್ತಮನಾಗಿದ್ದಾನೆ ಎಂದು ಹೇಳಿದಾಗ, ಶಬ್ದವು ವಿಷ್ಣುಸರ್ವೋತ್ತಮತ್ವಜ್ಞಾನವನ್ನು ತಂದು ಕೊಡುತ್ತದೆ ಹೊರತು, ವಿಷ್ಣುವಿಗೆ ಸರ್ವೋತ್ತಮತ್ವವನ್ನು ತಂದುಕೊಡುವುದಿಲ್ಲ. ಆದ್ದರಿಂದ ಶಬ್ದವೇ ಸ್ವತಃ ವಿನಿಯೋಗ ಮಾಡುತ್ತದೆಂದಾಗಲೀ, ವಿಧಾನ ಮಾಡುತ್ತದೆಂದಾಗಲೀ ಹೇಳುವುದು ಬಹಳ ತಪ್ಪಾಗುತ್ತದೆ. ಆದ್ದರಿಂದ ಇಂದ್ರಾದಿ ಶ್ರುತಿಗಳು ಇಂದ್ರಾದಿಗಳಿಗೆ ಅಭಿಧಾಯಕವಾಗಿವೆ. ಲಿಂಗಾದಿಗಳು ಇಷ್ಟಸಾಧನತಾಕ್ಕೆ ಅಭಿಧಾಯಕಗಳಾಗಿವೆ. ದ್ವಿತೀಯಾ ಶ್ರುತಿ, ತೃತೀಯಾ ಶ್ರುತಿ ಇವುಗಳೆಲ್ಲವೂ ಅಂಗಾಂಗಿಭಾವಗಳಿಗೆ ಅಭಿಧಾಯಕವಾಗಿವೆ. ಹೀಗೆ ಅಭಿಧಾಯಕತ್ವದಲ್ಲಿಯೇ ಮೂರು ಬಗೆಯನ್ನು ಹೇಳಬಹುದೇ ಹೊರತು, ಶ್ರುತಿಯಲ್ಲಿ ಮೂರು ಬಗೆಯನ್ನು ಹೇಳುವುದು ತಪ್ಪಾಗುತ್ತದೆ ಎಂದು ತರ್ಕತಾಂಡವದಲ್ಲಿ ಸಮರ್ಥಿಸಿದ್ದಾರೆ.[೧]




ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಈ ಆರು ಬಗೆಯ ಲಿಂಗಗಳು ವೇದದ ಅರ್ಥವನ್ನು ನಿಶ್ಚಯಿಸುತ್ತವೆ. ಇವುಗಳ ಸ್ವರೂಪವನ್ನು ಹಿಂದೆ ಸಮನ್ವಯಾಧಿಕರಣದಲ್ಲಿಯೂ ತೋರಿಸಿದ್ದಾರೆ. ಪ್ರಕೃತ ಇವುಗಳಿಗೆ ಪರಸ್ಪರ ವಿರೋಧ ಬಂದಾಗ ಮುಂದಿನ ಪ್ರಮಾಣಗಳಿಗಿಂತ ಹಿಂದಿನ ಪ್ರಮಾಣಗಳೇ ಬಲಿಷ್ಠವಾಗುತ್ತವೆ ಎಂದು ಸ್ಪಷ್ಟಪಡಿಸುತ್ತಿದ್ದಾರೆ. ಉದಾಹರಣೆ : ಶ್ರುತಿಗೂ ಲಿಂಗಕ್ಕೂ ಪರಸ್ಪರ ವಿರೋಧ ಬಂದರೆ ಶ್ರುತಿಯೇ ಪ್ರಬಲವಾಗುತ್ತದೆ. ಪ್ರಕೃತ ವಾಮನಾಧಿಕರಣದಲ್ಲಿ 'ಈಶಾನ' ಎಂಬ ಶಬ್ದವು ಶ್ರುತಿರೂಪವಾಗಿದೆ. ಪ್ರಾಣವ್ಯವಸ್ಥಾಪಕತ್ವವು ಲಿಂಗರೂಪವಾಗಿದೆ. ಶ್ರುತಿಯಿಂದ ವಿಷ್ಣುವೇ ವಾಮನನೆಂದು ನಿರ್ಧಾರವಾದರೆ, ಲಿಂಗದಿಂದ ಮುಖ್ಯಪ್ರಾಣದೇವರು ವಾಮನಶಬ್ದಪ್ರತಿಪಾದ್ಯರೆಂದು ನಿರ್ಣಯವಾಗುತ್ತದೆ. ಹೀಗೆ ಶ್ರುತಿಯಿಂದ ಒಂದು ನಿರ್ಧಾರವಾದರೆ, ಲಿಂಗದಿಂದ ಮತ್ತೊಂದು ನಿರ್ಧಾರವಾಗುವ ಪರಿಸ್ಥಿತಿಯಿದೆ. ಈ ಸಂದರ್ಭದಲ್ಲಿ ಶ್ರುತಿಯನ್ನೇ ಬೆಂಬಲಿಸಿ, ಲಿಂಗವನ್ನು ಶ್ರುತಿಗನುಗುಣವಾಗಿ ಅರ್ಥೈಸಬೇಕಾಗುತ್ತದೆ. ಹೀಗೆ ಮುಂದಿನ ಪ್ರಮಾಣಗಳಲ್ಲಿಯೂ ಪರಸ್ಪರ ವಿರೋಧ ಬಂದಾಗ ಹಿಂದಿನ ಪ್ರಮಾಣವನ್ನೇ ಪ್ರಬಲವೆಂದು ಪರಿಗಣಿಸಬೇಕು.

ಒಂದು ವೇಳೆ ಲಿಂಗವು ನಿರವಕಾಶವಾಗಿದ್ದರೆ, ಶ್ರುತಿಯು ಲಿಂಗಕ್ಕಿಂತ ದುರ್ಬಲವಾಗುತ್ತದೆಂಬುದನ್ನು ಮರೆಯಬಾರದು.



---

(೧) 'ವಾಚಕಶಬ್ದಃ ಶ್ರುತಿಃ' ಎಂಬ ಗ್ರಂಥದ ಮಾತನ್ನು ಮಂತ್ರಾಲಯ ಪ್ರಭುಗಳು ಅತ್ಯಂತ ಸುಂದರವಾಗಿ ನಾಲ್ಕು ಬಗೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಎಲ್ಲಾ ವ್ಯಾಖ್ಯಾನಗಳೂ ಸಹ ಬಹಳ ಅರ್ಥಪೂರ್ಣವಾಗಿವೆ. ಬಹಳ ಗಂಭೀರವಾಗಿವೆ. ಜಿಜ್ಞಾಸುಗಳು ಪ್ರಕಾಶ ಟಿಪ್ಪಣಿಯ ಈ ಸ್ವಾರಸ್ಯವನ್ನು ಗಮನಿಸಬೇಕು.

## 'ಲಿಂಗ'ದ ಲಕ್ಷಣ
## ಶ್ರುತಿಲಿಂಗಗಳ ಪ್ರಾಬಲ್ಯ-ದೌರ್ಬಲ್ಯಗಳ ವಿಚಾರ

**तात्पर्यचन्द्रिका**

**असाधारणधर्मार्पकः शब्दो वा तदर्पितोऽसाधारणधर्मो वा इह लिङ्गम् ।**

ಅನುವಾದ - ಲಿಂಗ - ಅಸಾಧಾರಣಧರ್ಮಕ್ಕೆ ಅರ್ಪಕವಾದ ಶಬ್ದವು ಲಿಂಗವೆನಿಸುತ್ತದೆ. ಅಥವಾ ಶಬ್ದದಿಂದ ಅರ್ಪಿತವಾದ (ತಿಳಿಯುವ) ಅಸಾಧಾರಣಧರ್ಮವೂ ಸಹ ಲಿಂಗವೆನಿಸುತ್ತದೆ.

**न हीहानुमानमात्रं लक्ष्यम् । तस्य वाक्याद्दुर्बलत्वात् । किन्तु श्रुतितो दुर्बलं वाक्याच्च प्रबलं वैदिकं लिङ्गम् ।**

ಪ್ರಕೃತ ಲಿಂಗಶಬ್ದದಿಂದ ಅನುಮಾನವನ್ನಷ್ಟೇ ವಿವಕ್ಷಿಸಿ ಲಕ್ಷ್ಯವೆಂದು ಹೇಳಬಾರದು. ಏಕೆಂದರೆ ಅನುಮಾನವು ವಾಕ್ಯಕ್ಕಿಂತಲೂ ದುರ್ಬಲವಾಗಿರುತ್ತದೆ. ಆದರೆ ಇಲ್ಲಿ ಸ್ವೀಕರಿಸುತ್ತಿರುವ ಲಿಂಗವು ಶ್ರುತಿಗಿಂತ ದುರ್ಬಲವಾಗಿದ್ದರೂ ವಾಕ್ಯಪ್ರಮಾಣಕ್ಕಿಂತ ಪ್ರಬಲವಾದ ವೈದಿಕಲಿಂಗವಾಗಿರುತ್ತದೆ.

**तच्च द्विविधम् । एकपदात्मकमनेकपदात्मकं चेति । तत्राद्यं यथा । 'तल्लिङ्गात्' इत्यादावनन्त इत्यादि ।**

ಇಂತಹ ವೈದಿಕ ಲಿಂಗವು ಎರಡುಬಗೆಯಲ್ಲಿದೆ. ಏಕಪದಾತ್ಮಕವೆಂದು, ಅನೇಕಪದಾತ್ಮಕವೆಂದು. 'ಆಕಾಶಸ್ತಲ್ಲಿಂಗಾತ್' ಇತ್ಯಾದಿ ಸೂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಅನಂತತ್ವ ಮೊದಲಾದವು ಏಕಪದಾತ್ಮಕವಾದ ಲಿಂಗವೆನಿಸಿದೆ.

**द्वितीयं यथा । "अत एव प्राणः" इत्यादौ "श्रीश्च ते लक्ष्मीश्च पत्न्यौ " इत्यादि ।**

ಎರಡನೆಯದ್ದು ಹೀಗೆ - 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರದಲ್ಲಿ ಉಲ್ಲೇಖಿಸಲ್ಪಟ್ಟ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಇತ್ಯಾದಿ ಶಬ್ದಗಳಿಂದ ತಿಳಿಯಲ್ಪಡುವ ಶ್ರೀಲಕ್ಷ್ಮೀಪತಿತ್ವ ಮೊದಲಾದವುಗಳು ಅನೇಕ ಪದಾತ್ಮಕವಾದ ಲಿಂಗವೆನಿಸಿವೆ.

**तत्राग्निशब्दादिरूपायाः श्रुतेरग्न्यादिरूपे स्वार्थे साक्षाद्धीहेतुत्वात्सर्वतः प्राबल्यम् ।**

ಅಗ್ನಿಶಬ್ದ ಮೊದಲಾದ ಸ್ವರೂಪದಲ್ಲಿರುವ ಶ್ರುತಿಯು ಅಗ್ನಿ ಮೊದಲಾದ ಸ್ವಾರ್ಥದಲ್ಲಿ ಸಾಕ್ಷಾತ್ ಜ್ಞಾನಹೇತುವಾಗಿರುವುದರಿಂದ, ಎಲ್ಲದಕ್ಕಿಂತಲೂ ಪ್ರಬಲವಾಗಿರುತ್ತದೆ.

**धूमशब्दादिरूपस्य लिङ्गस्य तु स्वार्थे व्याप्ये श्रुतिरूपत्वेऽपि व्यापकेऽग्न्यादौ व्याप्यधीद्वारा धीहेतुत्वात् श्रुतितो दौर्बल्यम् ।**

'ಧೂಮ' ಶಬ್ದ ಸ್ವರೂಪವಾದ ಲಿಂಗವು ಸ್ವಾರ್ಥವೆನಿಸಿದ ವ್ಯಾಪ್ಯದಲ್ಲಿ ಶ್ರುತಿರೂಪವಾಗಿದ್ದರೂ, ವ್ಯಾಪಕವಾದ ಅಗ್ನ್ಯಾದಿ ವಿಷಯದಲ್ಲಿ ವ್ಯಾಪ್ಯಜ್ಞಾನವನ್ನು ಹುಟ್ಟಿಸುವ ಮೂಲಕ ಅಗ್ನಿಜ್ಞಾನಕ್ಕೆ ಕಾರಣವಾಗುವುದರಿಂದ, ಶ್ರುತಿಗಿಂತಲೂ ದುರ್ಬಲವಾಗಿರುತ್ತದೆ.

**यथाऽत्रैव व्याप्यार्पकस्य ''ऊर्ध्वं प्राणमुन्नयति'' इत्यस्य वामनश्रुतितः ।**

ಅಥವಾ ಇಲ್ಲಿಯೇ ಹೇಳುತ್ತಿರುವಂತೆ ವ್ಯಾಪ್ಯಜ್ಞಾನವನ್ನು ಹುಟ್ಟಿಸುವ 'ಊರ್ಧ್ವಂ ಪ್ರಾಣಮುನ್ನಯತಿ' ಎಂಬಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವ ಲಿಂಗವು ವಾಮನಶ್ರುತಿಗಿಂತಲೂ ಪ್ರಬಲವಾಗಿರುತ್ತದೆ.

**प्रकाशः –**

''असाधारणधर्मो लिङ्गम्'' इति टीका न युक्तेव । तल्लिङ्गादित्यादेर-सिद्ध्यापत्तेः ।

'स एषोऽनन्तः' इत्यादौ तादृशधर्मवाचिन एव सत्त्वेन धर्मस्याभावादित्यत आह – **असाधारणेति** ॥

ವಿವರಣೆ - ಶ್ರುತಿಯ ಲಕ್ಷಣವನ್ನು ತಿಳಿದಿದ್ದಾಯಿತು. ಈಗ ಲಿಂಗದ ಲಕ್ಷಣವನ್ನು ತಿಳಿಯೋಣ - ಟೀಕೆಯಲ್ಲಿ ಲಿಂಗದ ಲಕ್ಷಣವನ್ನು 'ಅಸಾಧಾರಣಧರ್ಮೋ ಲಿಂಗಮ್' ಅಸಾಧಾರಣಧರ್ಮವೇ ಲಿಂಗವೆನಿಸಿದೆ ಎಂದು ಹೇಳಿರುತ್ತಾರೆ. ಆದರೆ 'ಆಕಾಶಸ್ತಲ್ಲಿಂಗಾತ್' ಇತ್ಯಾದಿ ಸೂತ್ರದಲ್ಲಿ ಲಿಂಗವಾಚಕವಾದ 'ಸ ಏಷೋ ಅನಂತಃ' ಎಂಬಲ್ಲಿರುವ ಅನಂತ ಮೊದಲಾದ ಶಬ್ದಗಳನ್ನೇ ಲಿಂಗವೆಂದು ಹೇಳಿರುತ್ತಾರೆ. ಅಸಾಧಾರಣ ಧರ್ಮವನ್ನು ಲಿಂಗವೆಂದು ಈ ಸೂತ್ರದಲ್ಲಿ ಪರಿಗಣಿಸಿಲ್ಲ. ಆದ್ದರಿಂದ. ಲಿಂಗದ ಲಕ್ಷಣಕ್ಕೆ ಅಸಿದ್ಧಿದೋಷ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅಸಾಧಾರಣ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಅಸಾಧಾರಣ ಧರ್ಮವನ್ನು ತಿಳಿಸುವಂತಹ ಶಬ್ದವು ಲಿಂಗವೆಂದು ಹೇಳಿದ್ದರಿಂದ, ಅನಂತ ಮೊದಲಾದ ಶಬ್ದಗಳು ಅನಂತತ್ವವೆಂಬ ಅಸಾಧಾರಣ ಧರ್ಮವನ್ನು ತಿಳಿಸುವುದರಿಂದ ಲಿಂಗವೆನಿಸುತ್ತಿದೆ. ಅಸಿದ್ಧಿದೋಷಕ್ಕೆ ಅವಕಾಶವಿಲ್ಲ.

**प्रकाशः** – असाधारणधर्मवाचको लिङ्गमित्युक्तेऽनेकपदात्मकलिङ्गेऽव्याप्तिरतस्तदर्पक इत्युक्तम् ।

ಅಸಾಧಾರಣ ಧರ್ಮವನ್ನು ತಿಳಿಸುವ ಶಬ್ದವನ್ನು ಲಿಂಗವೆಂದು ಹೇಳಿದರೆ, ಅನೇಕ ಪದಸ್ವರೂಪವಾದ ಲಿಂಗದಲ್ಲಿ ಅವ್ಯಾಪ್ತಿದೋಷವು ಬರುತ್ತದೆ. ಏಕೆಂದರೆ, 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಇತ್ಯಾದಿ ಸ್ಥಳದಲ್ಲಿ ಅನೇಕ ಪದಗಳಿಂದ ಶ್ರೀಲಕ್ಷ್ಮೀಪತಿತ್ವಲಿಂಗವು ತಿಳಿಯುತ್ತಿದೆ. ಅಸಾಧಾರಣಧರ್ಮವಾಚಕವಾದ ಒಂದು ಶಬ್ದವನ್ನು ಇಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷಣವು ಬರುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಗ್ರಂಥದಲ್ಲಿ 'ಅಸಾಧಾರಣಧರ್ಮಾರ್ಪಕಃ' ಎಂದು 'ಅರ್ಪಕ' ಶಬ್ದವನ್ನು ಬಳಸಿದ್ದಾರೆ. ಅಂದರೆ ಅಸಾಧಾರಣಧರ್ಮವನ್ನು ಶಕ್ತಿವೃತ್ತಿಯಿಂದ ಪ್ರತಿಪಾದಿಸಬೇಕಾಗಿಲ್ಲ. ಶಬ್ದಗಳಿಂದ ಅಸಾಧಾರಣಧರ್ಮವು ತಿಳಿದರೆ ಸಾಕು. 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಇತ್ಯಾದಿ ಅನೇಕ ಪದಸ್ವರೂಪವಾದ ಪದಗಳಿಂದ 'ಶ್ರೀಲಕ್ಷ್ಮೀಪತಿತ್ವ' ಎಂದು ಅರ್ಥಾತ್ ತಿಳಿಯುವುದರಿಂದ ಲಿಂಗವೆನಿಸುತ್ತದೆ.

**प्रकाशः** – तदर्पितः शब्दार्पितः । अस्मिन् पक्षे "तल्लिङ्गात्" इत्युक्तिस्तदर्थस्य लिङ्गत्वात्तस्य लिङ्गत्वमभिप्रेत्येति भावः ।

ಅಥವಾ 'ತದರ್ಪಿತ' ಎಂದರೆ ಶಬ್ದದಿಂದ ಅರ್ಪಿತವಾದ ಅಸಾಧಾರಣಧರ್ಮವನ್ನೂ ಸಹ ಲಿಂಗದ ಲಕ್ಷಣವೆನ್ನಬಹುದು. ಈ ಪಕ್ಷದಲ್ಲಿ 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿರುವ 'ತಲ್ಲಿಂಗಾತ್' ಎಂಬ ವಚನವು. ಆ ಶಬ್ದದ ಅರ್ಥವು ಲಿಂಗವಾದ್ದರಿಂದ. ಹೀಗೆ 'ತಲ್ಲಿಂಗಾತ್' ಎಂದಿದ್ದಾರೆಂದು ತಿಳಿಯಬೇಕು.

**प्रकाशः** – अव्याप्तिं निरस्यति – नहीति ।। तस्य स्वतन्त्रस्य ।

ಈ ಲಿಂಗದ ಲಕ್ಷಣಕ್ಕೆ ಅವ್ಯಾಪ್ತಿದೋಷವನ್ನು ಆಶಂಕಿಸಿ, ನಿರಾಕರಿಸುತ್ತಿದ್ದಾರೆ 'ನಹಿ' ಇತ್ಯಾದಿ ಗ್ರಂಥದಿಂದ. 'ತಸ್ಯ' ಎಂಬ ಪದಕ್ಕೆ 'ಸ್ವತಂತ್ರಸ್ಯ' ಎಂದರ್ಥ. ಅಂದರೆ ಸ್ವತಂತ್ರವಾದ ಅನುಮಾನವು ವಾಕ್ಯಪ್ರಮಾಣಕ್ಕಿಂತ ದುರ್ಬಲವಾಗಿದೆಯೆಂದು ತಿಳಿಯಬೇಕು.

**प्रकाशः** – एवं श्रुतिलिङ्गयोर्लक्षणटीकां विवृत्येदानीं "श्रुतेस्साक्षादर्थधीजनकत्वात्सर्वतः प्राबल्यम् । लिङ्गस्यानुमापकतयाऽर्थबोधकत्वात्तदानन्तर्यम्" इति बलाबलोक्तिपरां टीकां विवृणोति – तत्रेति ।।

ಇಲ್ಲಿಯತನಕ ಶ್ರುತಿ ಹಾಗೂ ಲಿಂಗದ ಲಕ್ಷಣವನ್ನು ಹೇಳುವಂತಹ ಟೀಕೆಯನ್ನು ವಿವರಿಸಿದರು. ಈಗ 'ಶ್ರುತೇಃ ಸಾಕ್ಷಾತ್ ತದರ್ಥಧೀಜನಕತ್ವಾತ್ ಸರ್ವತಃ ಪ್ರಾಬಲ್ಯಮ್ । ಲಿಂಗಸ್ಯಾನುಮಾಪಕತಯಾऽರ್ಥ ಬೋಧಕತ್ವಾತ್ತದಾನಂತರ್ಯಮ್' ಶ್ರುತಿಯು ನೇರವಾಗಿ ಅರ್ಥಜ್ಞಾನವನ್ನು ಹುಟ್ಟಿಸುವುದರಿಂದ, ಇತರ ಎಲ್ಲಾ ಪ್ರಮಾಣಗಳಿಗಿಂತಲೂ ಪ್ರಬಲವಾಗಿದೆ. ಲಿಂಗವು ಅನುಮಾಪಕವಾಗಿ ಅರ್ಥವನ್ನು ಬೋಧಿಸುವುದರಿಂದ ಶ್ರುತಿಯ ಅನಂತರದಲ್ಲಿ ಪ್ರಬಲಪ್ರಮಾಣವಾಗಿದೆ ಎಂಬ ಪ್ರಾಬಲ್ಯ-ದೌರ್ಬಲ್ಯ ವಿಚಾರವನ್ನು ಮಾಡುವಂತಹ ಟೀಕೆಯನ್ನು ವಿವರಿಸುತ್ತಿದ್ದಾರೆ 'ತತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – **दौर्बल्यमिति ।। विलम्बितप्रतीतेर्हेतुत्वादिति भावः । इत्यस्य प्राणव्यवस्थापकत्वबोधकशब्दस्य ।**

ಗ್ರಂಥದಲ್ಲಿ 'ದೌರ್ಬಲ್ಯಮ್' ಎಂದು ಹೇಳಿರುತ್ತಾರೆ. ಶ್ರುತಿಗಿಂತಲೂ ಲಿಂಗವು ವಿಲಂಬವಾಗಿ ಅರ್ಥಜ್ಞಾನವನ್ನು ಹುಟ್ಟಿಸುವುದರಿಂದ ದುರ್ಬಲವಾಗಿದೆಯೆಂದು ತಿಳಿಯಬೇಕು. 'ಇತ್ಯಸ್ಯ' ಎಂದರೆ ಪ್ರಾಣವ್ಯವಸ್ಥಾಪಕತ್ವ ಬೋಧಕವಾದ ಶಬ್ದಕ್ಕೆ ಎಂದರ್ಥ.

**प्रकाशः** – **यावदयं शब्दस्स्वार्थं व्याप्यमुपस्थाप्येशानशब्दाद्यर्थतया वायुं बोधयित्वा वाक्यस्य तत्परत्वं बोधयति ततः प्रागेव वामनश्रुतिर्झटिति स्वार्थमीशानपदाभिमतं बोधयतीति तस्य दौर्बल्यमित्यर्थः ।**

ವಾಮನಶ್ರುತಿಗಿಂತಲೂ 'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಲಿಂಗಾರ್ಪಕವಾದ ಶಬ್ದವು ದುರ್ಬಲವಾಗಿದೆ. ಏಕೆಂದರೆ 'ಊರ್ಧ್ವಂ ಪ್ರಾಣಮುನ್ನಯತಿ' ಎಂಬಲ್ಲಿರುವ ಶಬ್ದಗಳು ವ್ಯಾಪ್ಯವಾದ ಸ್ವಾರ್ಥವನ್ನು ಮೊದಲು ತಿಳಿಸಿ, ಅನಂತರ ಈಶಾನ ಶಬ್ದದ ಅರ್ಥವೆನಿಸಿದ ವಾಯುವನ್ನು ತಿಳಿಸಿ, ವಾಕ್ಯಕ್ಕೆ ವಾಯುಪರತ್ವವನ್ನು ಸಮರ್ಥಿಸಬೇಕು. ಅದಕ್ಕಿಂತ ಮೊದಲೇ ವಾಮನಶ್ರುತಿಯು ಕೂಡಲೇ ತನ್ನ ಅರ್ಥವಾದ ಈಶಾನ ಪದದಿಂದ ಪ್ರತಿಪಾದ್ಯನಾದ ವಿಷ್ಣುವನ್ನು ತಿಳಿಸಿಬಿಡುತ್ತದೆ. ಆದ್ದರಿಂದ ಶ್ರುತಿಗಿಂತಲೂ ಲಿಂಗವು ದುರ್ಬಲವಾಗಿದೆಯೆಂದು ತಿಳಿಯಬೇಕು.




ಅಸಾಧಾರಣಧರ್ಮಕ್ಕೆ ಅರ್ಪಕವಾದ ಶಬ್ದವೇ 'ಲಿಂಗ'. ಅಥವಾ ಶಬ್ದದಿಂದ ಅರ್ಪಿತವಾದ ಅಸಾಧಾರಣಲಿಂಗವೆನಿಸುತ್ತದೆ.

ಲಿಂಗವು ಎರಡು ವಿಧ - 'ಏಕ ಪದಾತ್ಮಕ', 'ಅನೇಕ ಪದಾತ್ಮಕ' ಎಂದು. 'ಅನಂತ' ಇತ್ಯಾದಿ ಶಬ್ದವು 'ಅನಂತತ್ವ' ಎಂಬ ಅಸಾಧಾರಣಧರ್ಮಕ್ಕೆ ಅರ್ಪಕವಾದ್ದರಿಂದ, ಏಕಪದಸ್ವರೂಪವಾದ ಲಿಂಗವೆನಿಸುತ್ತದೆ. 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬುದು ಅನೇಕ ಪದಗಳ ಸ್ವರೂಪವಾದ ಲಿಂಗ. ಈ ಎಲ್ಲ ಪದಗಳೂ ಸೇರಿ, 'ಶ್ರೀಲಕ್ಷ್ಮೀಪತಿತ್ವ' ಎಂಬ ಅಸಾಧಾರಣಧರ್ಮಕ್ಕೆ ಅರ್ಪಕಗಳಾಗಿವೆ.

ಇಂತಹ ಲಿಂಗವು ಶ್ರುತಿಗಿಂತಲೂ ದುರ್ಬಲವಾಗಿದೆ. ಏಕೆಂದರೆ ಶ್ರುತಿಯು ನೇರವಾಗಿ ಪ್ರತಿಪಾದ್ಯವಾದ ಅರ್ಥವನ್ನು ತಿಳಿಸುತ್ತದೆ. ಆದರೆ ಲಿಂಗವು ವ್ಯಾಪ್ಯಜ್ಞಾನವನ್ನು ಹುಟ್ಟಿಸುವ ಮೂಲಕ ವ್ಯಾಪಕಜ್ಞಾನವನ್ನು ಹುಟ್ಟಿಸಬೇಕಾದ್ದರಿಂದ ದುರ್ಬಲವಾಗಿದೆ. ಉದಾಹರಣೆ ವಾಮನಶ್ರುತಿಯು ನೇರವಾಗಿ ವಿಷ್ಣುವೆಂಬರ್ಥವನ್ನು ತಿಳಿಸುತ್ತದೆ. ಆದರೆ 'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಲಿಂಗಸ್ವರೂಪವಾದ ವಾಕ್ಯವು ಸ್ವಾರ್ಥವಾದ

ವ್ಯಾಪ್ಯವನ್ನು ಮೊದಲು ತಿಳಿಸಿ, 'ಈಶಾನ' ಶಬ್ದ ಪ್ರತಿಪಾದ್ಯನು ವಾಯುದೇವನಾಗಿದ್ದಾನೆಂದು ತಿಳಿಸಿ, ವಾಕ್ಯಕ್ಕೆ ತತ್ಪರತ್ವವನ್ನು ಅನಂತರ ತಿಳಿಸುತ್ತದೆ. ಹೀಗೆ ವಿಳಂಬವಾಗಿ ಅರ್ಥಬೋಧಕವಾಗುವುದರಿಂದ ಶ್ರುತಿಗಿಂತಲೂ ದುರ್ಬಲವಾಗಿರುತ್ತದೆ.



• • • • •

## ವಾಕ್ಯದ ಲಕ್ಷಣ

### तात्पर्यचन्द्रिका

**स्वस्मिन्नेव पूर्णाकाङ्क्षत्वेनान्यत्र निराकाङ्क्षपदसन्दर्भरूपवाक्यस्य तु स्वार्थे शब्दप्रमाणत्वेऽपि स्वान्तर्गतपदार्थनिर्णये वा समभिव्याहृतवाक्यान्तरार्थनिर्णये वा कार्येऽनुमापकत्वमेव ।**

ಅನುವಾದ - ವಾಕ್ಯಲಕ್ಷಣ - ತನ್ನಲ್ಲಿರುವ ಪದಗಳಿಂದಲೇ ಆಕಾಂಕ್ಷೆಯು ಪೂರ್ಣವಾಗಬೇಕು. ಬೇರೆಡೆ ಆಕಾಂಕ್ಷಾ ಇರಬಾರದು. ಹೀಗೆ ನಿರಾಕಾಂಕ್ಷಿತವಾದ ಅನೇಕ ಪದಗಳ ಸಮೂಹವೇ ವಾಕ್ಯವೆನಿಸುತ್ತದೆ. ಇದು ಸ್ವಾರ್ಥದಲ್ಲಿ ಶಬ್ದರೂಪವಾಗಿ ಪ್ರಮಾಣವಾಗಿದ್ದರೂ ಸ್ವಾಂತರ್ಗತವಾದ ಪದಾರ್ಥದ ನಿರ್ಣಯದಲ್ಲಿ ಅಥವಾ ಸಮಭಿವ್ಯಾಹೃತವಾದ ವಾಕ್ಯಾಂತರಾರ್ಥದ ನಿರ್ಣಯದಲ್ಲಿ ಅನುಮಾನರೂಪದಿಂದಲೇ ಪ್ರಮಾಣವಾಗಿರುತ್ತದೆ.

**तत्राद्यं यथा । 'तत्त्वमसि' इति वाक्ये तत्सादृश्यं तच्छब्दार्थ इत्यत्र तत्पदेन सह त्वमसीति पदसमभिव्याहारस्य ।**

ಸ್ವಾಂತರ್ಗತ ಪದಾರ್ಥನಿರ್ಣಯದಲ್ಲಿ ಅನುಮಾಪಕವಾಗುತ್ತದೆಂಬುದನ್ನು ಹೀಗೆ ತಿಳಿಯಬೇಕು - 'ತತ್ತ್ವಮಸಿ' ಎಂಬ ಶ್ರುತಿಯಲ್ಲಿರುವ 'ತತ್' ಪದಕ್ಕೆ ಅಭೇದಾರ್ಥವನ್ನು ಸ್ವೀಕರಿಸಬೇಕೋ, ಸಾದೃಶ್ಯಾರ್ಥವನ್ನು ಸ್ವೀಕರಿಸಬೇಕೋ? ಎಂಬ ಗೊಂದಲವಾದಾಗ 'ತ್ವಮಸಿ' ಎಂಬ ಸಮಭಿವ್ಯಾಹೃತವಾದ ಪದಗಳೇ ಅರ್ಥನಿರ್ಣಾಯಕವಾಗುತ್ತದೆ. 'ತತ್' ಎಂಬ ಪದದಿಂದ 'ತತ್ ಸಾದೃಶ್ಯ'ವನ್ನೇ ವಿವಕ್ಷಿಸಬೇಕು. ಏಕೆಂದರೆ ವಿರುದ್ಧ ಧರ್ಮಾಧಿಕರಣತ್ವವನ್ನು ಹೇಳುವಂತಹ 'ತ್ವಮಸಿ' ಎಂಬ ಪದಸಮಭಿವ್ಯಾಹಾರವಿರುವುದರಿಂದ. ವಿರುದ್ಧ ಧರ್ಮಾಧಿಕರಣನಾದ ಪುರುಷನನ್ನು ಮುಂದೆ ಹೇಳಿದ್ದರಿಂದ 'ತತ್' ಪದಕ್ಕೆ ತದಭಿನ್ನವೆಂದು ಅರ್ಥೈಸದೇ ತತ್‌ಸದೃಶನಾದವನು ಎಂದೇ ವಿವಕ್ಷಿಸಬೇಕು. ಹೀಗೆ 'ತತ್ತ್ವಮಸಿ' ಎಂಬ ವಾಕ್ಯದಲ್ಲೇ ಸೇರಿರುವ 'ತತ್' ಎಂಬ ಪದಾರ್ಥದ ನಿರ್ಣಯದಲ್ಲಿ ಈ ವಾಕ್ಯವು ಅನುಮಾಪಕವಾಗುತ್ತದೆಂಬುದಕ್ಕೆ ದೃಷ್ಟಾಂತವನ್ನಾಗಿ ಇದನ್ನು ತಿಳಿಯಬೇಕು.

### ಪರಿಪೂರ್ಣಚಂದ್ರಿಕಾ

**वाक्यान्तरार्थनिर्णायकत्वमपि तन्निर्णायकश्रुत्यादियुक्तत्वेन वा प्रश्नोत्तरादिभावेन समभिव्याहारमात्रेण वा ।**

ಸಮಭಿವ್ಯಾಹೃತವಾದ ವಾಕ್ಯಾಂತರಾರ್ಥನಿರ್ಣಯದಲ್ಲಿಯೂ ವಾಕ್ಯವು ಅನುಮಾಪಕವಾಗುತ್ತದೆಂಬುದು ಎರಡನೆಯ ಪಕ್ಷ. ಈ ವಾಕ್ಯಾಂತರಾರ್ಥನಿರ್ಣಾಯಕತ್ವವೂ ಸಹ ಎರಡು ವಿಧ - ಸಂದಿಗ್ಧವಾದ ಅರ್ಥವನ್ನು ನಿರ್ಣಯ ಮಾಡುವಂತಹ ಶ್ರುತಿ-ಲಿಂಗ ಇವುಗಳಿಂದ ಯುಕ್ತವಾಗಿರಬೇಕು. ಅಥವಾ ಶ್ರುತಿ-ಲಿಂಗ ಮೊದಲಾದ ಯಾವುದೇ ಪ್ರಮಾಣಗಳಿಲ್ಲದೇ ಕೇವಲ ಪ್ರಶ್ನೋತ್ತರಾದಿಭಾವದಿಂದ ಸಮಭಿವ್ಯಾಹಾರವಿದ್ದರೆ ಸಾಕು, ಅದೂ ಸಹ ವಾಕ್ಯಾಂತರಾರ್ಥಕ್ಕೆ ನಿರ್ಣಾಯಕವಾಗುತ್ತದೆ.

**तत्राप्याद्यं यथा । 'आकाश इति होवाच' इति वाक्ये ब्रह्माकाशशब्दार्थ इत्यत्र 'आकाशः परायणम्'' इति वाक्यस्य ।**

ಮೊದಲನೆಯದ್ದು ಹೀಗಿದೆ - 'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ಬ್ರಹ್ಮನೇ ಆಕಾಶಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆನ್ನಲು 'ಆಕಾಶಃ ಪರಾಯಣಮ್' ಎಂಬ ಶ್ರುತಿಯು ಸರ್ವಾಶ್ರಯತ್ವವನ್ನು ಹೇಳುವ ಮೂಲಕ ಪ್ರಮಾಣವಾಗಿದೆ.

**द्वितीयं यथा । 'हृद्यन्तर्ज्योतिः' इति वाक्ये ब्रह्मैव ज्योतिश्शब्दार्थ इत्यत्र प्रसिद्धजीवपरत्वेऽनुपपन्नस्य ''कतम आत्मा'' इति प्रश्नवाक्यस्य ।**

ಎರಡನೆಯದ್ದು ಹೀಗೆ - ಇದೇ ಪಾದದಲ್ಲಿ ಮುಂದೆ ಬರುವ ಜ್ಯೋತಿರಧಿಕರಣದಲ್ಲಿ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಜ್ಯೋತಿಃ' ಎಂಬ ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಜೀವನಲ್ಲ. ಈ ವಿಷಯವನ್ನು 'ಕತಮ ಆತ್ಮಾ' ಎಂಬ ಪ್ರಶ್ನ ವಾಕ್ಯದಿಂದಲೇ ನಿರ್ಣಯಿಸಿದ್ದಾರೆ. ಒಂದು ವೇಳೆ ಪ್ರಸಿದ್ಧನಾದ ಜೀವನನ್ನು 'ಜ್ಯೋತಿಃ' ಎಂಬ ಶಬ್ದವು ಪ್ರತಿಪಾದನೆ ಮಾಡಿದರೆ, 'ಕತಮ ಆತ್ಮಾ' ಎಂಬ ಪ್ರಶ್ನೆಯು ಹೇಗೆ ಕೂಡುತ್ತದೆ ಎಂಬ ಅನ್ಯಥಾನುಪಪತ್ತಿಯಿಂದಲೇ 'ಜ್ಯೋತಿಃ' ಶಬ್ದಕ್ಕೆ ಬ್ರಹ್ಮನೆಂಬರ್ಥವನ್ನು ನಿರ್ಣಯಿಸಲಾಗಿದೆ.

**ततश्च वाक्यस्य लिङ्गवत् साक्षाद्व्याप्यभूतैकार्थासमर्पकत्वादव्याप्यभूतानेकपदार्थकथनद्वारा प्रश्नोत्तरादिभावेन समभिव्याहृतस्वार्थान्वययोग्य एव वाक्यान्तरार्थ इत्यनुमापकत्वाल्लिङ्गाद्दुर्बलत्वम् ।**

ಈ ವಾಕ್ಯವು ಲಿಂಗಕ್ಕಿಂತಲೂ ದುರ್ಬಲವಾಗಿದೆ. ಏಕೆಂದರೆ ವಾಕ್ಯವು ಲಿಂಗದಂತೆ ನೇರವಾಗಿ ವ್ಯಾಪ್ಯಭೂತವಾದ ಅರ್ಥವನ್ನು ಸಮರ್ಪಣೆ ಮಾಡುವುದಿಲ್ಲ. ಮತ್ತೇನೆಂದರೆ ಅವ್ಯಾಪ್ಯಭೂತವಾದ

ಅನೇಕ ಪದಾರ್ಥಗಳನ್ನು ಹೇಳುವ ಮೂಲಕ ಪ್ರಶ್ನೋತ್ತರಾದಿಭಾವದಿಂದ ತನ್ನ ಜೊತೆಗೆ ಸಮಭಿವ್ಯಾಹೃತವಾದ ಸ್ವಾರ್ಥದಲ್ಲಿ ಅನ್ವಯಕ್ಕೆ ಯೋಗ್ಯವೇ ಆದ ವಾಕ್ಯಾಂತರಾರ್ಥದಲ್ಲೇ ಇದು ಅನುಮಾಪಕವಾಗುತ್ತದೆ. ಆದ್ದರಿಂದ ಲಿಂಗಕ್ಕಿಂತಲೂ ದುರ್ಬಲವೆಂದು ಇದನ್ನು ತಿಳಿಯಬೇಕು.

**यथा ''दहरः'' इत्यत्र ''किं तदत्र विद्यते यदन्वेष्टव्यम्'' इत्यादि-वाक्यस्यापहतपाप्मत्वादिलिङ्गात् ।**

ಉದಾಹರಣೆ - 'ದಹರ ಉತ್ತರೇಭ್ಯಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಲಿಂಗಗಳು ವಾಕ್ಯಕ್ಕಿಂತಲೂ ಪ್ರಬಲವಾಗಿವೆ. 'ಕಿಂತ ತದತ್ರ ವಿದ್ಯತೇ' 'ಯದನ್ವೇಷ್ಟವ್ಯಮ್' 'ಯದ್ವಾವ ವಿಜಿಜ್ಞಾಸಿತವ್ಯಮ್' ಎಂಬುದು ವಾಕ್ಯವೆನಿಸಿದೆ. ಈ ವಾಕ್ಯದಲ್ಲಿ ಪ್ರಶ್ನೋತ್ತರಭಾವವಿದೆ. ಇದನ್ನು ಬ್ರಹ್ಮಪರವೆಂದು ಹೇಳಿದರೆ, ಅನನ್ವಯ ದೋಷವು ಬರುತ್ತದೆ. ಒಂದು ವೇಳೆ ಆಕಾಶವನ್ನು ಅಥವಾ ದ್ಯಾವಾಪೃಥಿವ್ಯಾದಿಗಳನ್ನು ತೆಗೆದುಕೊಂಡರೆ ಈ ವಾಕ್ಯದಲ್ಲಿ ಅನನ್ವಯದೋಷವು ಬರುವುದಿಲ್ಲವೆಂದು ಪೂರ್ವಪಕ್ಷಿಯು ಹೇಳಿದ್ದನು. ಪ್ರಶ್ನವಾಕ್ಯದ ಸಮಭಿವ್ಯಾಹಾರವು ಉತ್ತರವಾಕ್ಯದಲ್ಲಿದೆ. ಹೀಗೆ ಸಮಭಿವ್ಯಾಹಾರದ ಬಲದಿಂದಲೇ ಅನ್ವಯಾನುಪಪತ್ತಿಯನ್ನು ಹೇಳಿ, ಪೂರ್ವಪಕ್ಷಿಯು ಹೃತ್ಪದ್ಮಸ್ಥವಾದದ್ದು ಆಕಾಶವೆಂದು ಹೇಳಿದ್ದನು. ಆದರೆ ಇದಕ್ಕಿಂತಲೂ ಪ್ರಬಲವಾಗಿ ಸೂತ್ರಕಾರರು ಅಪಹತಪಾಪ್ಮತ್ವಾದಿಲಿಂಗಗಳನ್ನು ಹೇಳಿದ್ದಾರೆ. ಆದ್ದರಿಂದ ವಾಕ್ಯಕ್ಕಿಂತಲೂ ಲಿಂಗವೇ ಪ್ರಬಲವೆಂದು ಲಿಂಗಕ್ಕಿಂತ ವಾಕ್ಯವು ದುರ್ಬಲವೆಂದು ತಿಳಿಯುತ್ತದೆ.

**प्रकाशः –**

निराकाङ्क्षपदानि वाक्यमिति टीका ''गौरश्वः पुरुषः'' इत्यादावतिव्याप्तेरन्योन्या-काङ्क्षावत्पदकदम्बकवाक्ये असम्भवाच्चायुक्तेत्यतस्तदाशयव्यक्तिपूर्वं ''वाक्यस्यानेकार्थ-कथनद्वाराऽर्थानुमापकत्वात्ततोऽपि दौर्बल्यम्'' इति टीकावाक्ये चानुमापकत्वोक्तिर-युक्ता। तस्य शब्दप्रमाणत्वादित्यतस्तत्साधयंस्तदवान्तरविभागमाह – **स्वस्मिन्नेवेति** ।।

ವಿವರಣೆ - ವಾಕ್ಯದ ಲಕ್ಷಣವನ್ನು ಹೇಳುತ್ತಿದ್ದಾರೆ 'ನಿರಾಕಾಂಕ್ಷಪದಾನಿ ವಾಕ್ಯಮ್' ಎಂದು ಟೀಕೆಯಲ್ಲಿ ನಿರಾಕಾಂಕ್ಷಿತವಾದ ಪದಗಳ ಸಮೂಹವನ್ನೇ ವಾಕ್ಯವೆಂದು ಹೇಳಿದ್ದಾರೆ. ಇಷ್ಟೇ ಲಕ್ಷಣವನ್ನು ತಿಳಿದರೆ, 'ಗೌರಶ್ವಃ ಪುರುಷಃ ಹಸ್ತಿಷೋ' ಎಂಬಲ್ಲಿರುವ ಪದಗಳ ಸಮೂಹವೂ ಸಹ ನಿರಾಕಾಂಕ್ಷಿತವಾದ್ದರಿಂದ ವಾಕ್ಯವೆನಿಸಬೇಕಾಗುತ್ತದೆ. ಆದ್ದರಿಂದ ವ್ಯರ್ಥಪದಗಳ ಸಮೂಹದಲ್ಲಿ ವಾಕ್ಯದಲಕ್ಷಣಕ್ಕೆ ಅತಿವ್ಯಾಪ್ತಿದೋಷ ಬರುತ್ತದೆ. ಮತ್ತು ಆಕಾಂಕ್ಷಾವಿಲ್ಲದ ಪದಸಮೂಹವೇ ವಾಕ್ಯದ ಲಕ್ಷಣವಾದಲ್ಲಿ, ಪರಸ್ಪರ ಆಕಾಂಕ್ಷೆಯಿರುವಂತಹ ಪದಸಮೂಹದಲ್ಲೇ ನಿರಾಕಾಂಕ್ಷಿತತ್ವವು ಇರುವುದಿಲ್ಲ. ಆದ್ದರಿಂದ, ವಾಕ್ಯಲಕ್ಷಣಕ್ಕೆ

ಅಸಂಭವದೋಷವೂ ಸಹ ಬರುತ್ತದೆ. ಆದ್ದರಿಂದ ಟೀಕೆಯ ಮಾತಿಗೆ ಏನು ಅಭಿಪ್ರಾಯ? ಎಂಬ ಪ್ರಶ್ನೆಗೆ ಪ್ರಕೃತ ಗ್ರಂಥಕಾರರು, ಪರಿಷ್ಕರಿಸಿ ವಾಕ್ಯದ ಲಕ್ಷಣವನ್ನು ಹೇಳುತ್ತಿದ್ದಾರೆ.

ಮತ್ತು 'ವಾಕ್ಯಸ್ಯಾನೇಕಾರ್ಥಕಥನದ್ವಾರಾಽರ್ಥಾನುಮಾಪಕತ್ವಾತ್ತತೋಽಪಿ ದೌರ್ಬಲ್ಯಮ್' ವಾಕ್ಯವು ಅನೇಕಾರ್ಥಗಳನ್ನು ಹೇಳುವ ಮೂಲಕ ಅರ್ಥಕ್ಕೆ ಅನುಮಾಪಕವಾದ್ದರಿಂದ ಲಿಂಗಕ್ಕಿಂತಲೂ ದುರ್ಬಲವಾಗಿದೆ ಎಂಬ ಟೀಕಾವಾಕ್ಯದಲ್ಲಿ ಅನುಮಾಪಕತ್ವವನ್ನು ವಾಕ್ಯಕ್ಕೆ ಹೇಳಿದ್ದಾರೆ. ಇದೂ ಸಹ ತಪ್ಪು. ಏಕೆಂದರೆ, ವಾಕ್ಯವು ಶಬ್ದರೂಪವಾಗಿಯೇ ಪ್ರಮಾಣವಾಗಿರುವಾಗ ಅನುಮಾಪಕವಾಗಿ ಪ್ರಮಾಣವೆಂದು ಹೇಳಿದ್ದು ಹೇಗೆ ಸರಿಯಾಗುತ್ತದೆ? ಈ ಪ್ರಶ್ನೆಗೂ ಉತ್ತರಿಸುತ್ತಾ ಟೀಕೆಯ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ, ವಾಕ್ಯದಲ್ಲಿರುವ ಅವಾಂತರವಿಭಾಗವನ್ನೂ ಕೂಡ ತೋರಿಸಲು ಹೊರಟಿದ್ದಾರೆ. 'ಸ್ವಸ್ಮಿನ್ನೇವ' ಇತ್ಯಾದಿ ಗ್ರಂಥದಿಂದ.

**प्रकाशः** – **स्वार्थे** संसर्गरूपे । **स्वान्तरिति** ।। अनेन वाक्यं स्वान्तस्थ-पदार्थनिर्णायकं समभिव्याहृतन्यवाक्यार्थनिर्णायकं चेति द्विविधमित्युक्तं भवति ।

'ಸ್ವಾರ್ಥೇ' ಎಂಬುದಕ್ಕೆ 'ಸಂಸರ್ಗರೂಪವಾದ ಅರ್ಥದಲ್ಲಿ' ಎಂದರ್ಥ. ಗ್ರಂಥದಲ್ಲಿ 'ಸ್ವಾಂತರ್ಗತಪದಾರ್ಥನಿರ್ಣಯೇ' ಎಂದು ಹೇಳಿದ್ದರಿಂದ ವಾಕ್ಯವು ತನ್ನಲ್ಲಿ ಸೇರಿರುವ ಪದಗಳ ಅರ್ಥವನ್ನು ನಿರ್ಣಯಿಸುವುದರಲ್ಲಿ ಮತ್ತು ಸಮಭಿವ್ಯಾಹೃತವಾದ ವಾಕ್ಯದ ಅರ್ಥವನ್ನು ನಿರ್ಣಯಿಸುವುದರಲ್ಲಿ ಪ್ರಮಾಣವಾಗುತ್ತದೆಂದು ಎರಡು ಪ್ರಕಾರವನ್ನು ಹೇಳಿದಂತಾಯಿತು.

**प्रकाशः** – द्वितीयमपि द्विविधमित्याह – **वाक्यान्तरेति** ।। इदानीं ''वाक्यस्यानेकार्थकथनद्वारा'' इति वाक्यं व्याख्याति – **ततश्चेति** ।।

ಸಮಭಿವ್ಯಾಹೃತ ವಾಕ್ಯಾರ್ಥನಿರ್ಣಾಯಕವೂ ಕೂಡ ಎರಡು ವಿಧವೆಂದು 'ವಾಕ್ಯಾಂತರ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ಪ್ರಕೃತ 'ವಾಕ್ಯಸ್ಯಾನೇಕಾರ್ಥಕಥನದ್ವಾರಾ' ಎಂಬ ವಾಕ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ತತಶ್ಚ' ಇತ್ಯಾದಿ ಗ್ರಂಥದಿಂದ.

**प्रकाशः** – उक्तदिशाऽनुमापकत्वे सतीत्यर्थः । कथं तर्ह्यनुमापकत्वमित्यत आह – **प्रश्नोत्तरेति** ।। आदिपदेन श्रुतिलिङ्गयोर्ग्रहः ।

'ತತಶ್ಚ' ಎಂದರೆ ಹಿಂದೆ ಹೇಳಿದಂತೆ ಅನುಮಾಪಕವಾದಲ್ಲಿ ಎಂದರ್ಥ. ಹಾಗಾದರೆ ಹೇಗೆ ಅನುಮಾಪಕವಾಗುತ್ತದೆ ಎಂಬ ಪ್ರಶ್ನೆಗೆ 'ಪ್ರಶ್ನೋತ್ತರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಆದಿಪದದಿಂದ ಶ್ರುತಿ ಹಾಗೂ ಲಿಂಗಗಳನ್ನು ಸ್ವೀಕರಿಸಬೇಕು.

**गुरुराजीयम्** – किञ्चाग्न्यादिश्रुत्या पूर्वपक्ष इति पूर्वोक्तम् । तदयुक्तम् । तत्राग्न्यादिशब्दानां यौगिकत्वस्यापि सत्वेन नाममात्रेण निर्देशत्वाभावादित्यत आह

– **रूढश्शब्दः श्रुतिरिति** ।। असाधारणधर्मो लिङ्गमिति टीकायामुक्तम् । तदयुक्तम् । तथात्वे गन्धवत्त्वधूमादेरप्यसाधारणधर्मत्वेन लिङ्गत्वं स्यात् । न चेष्टापत्तिः । वाक्यापेक्षया प्रबलस्य श्रुत्यपेक्षया दुर्बलस्य लिङ्गस्यैव लक्षणीयत्वादित्यतो व्याचष्टे – **असाधारणेति** ।। निराकाङ्क्षपदानि वाक्यमित्यत्र सर्वथाऽकाङ्क्षाशून्यत्वं वाऽन्यदीयाकाङ्क्षाशून्यत्वं वा । नाद्यः । गौरश्वः पुरुषो हस्तीत्यादेरप्याकाङ्क्षाशून्यत्वेन वाक्यत्वप्रसङ्गात् । न द्वितीयः । कुण्डं तिष्ठति अजा तिष्ठतीत्यस्याप्यन्यदीयाकाङ्क्षाशून्यत्वेन वाक्यत्वापत्तेरित्यतो व्याचष्टे – **स्वस्मिन्नेवेति** ।। पदानीत्यत्र बहुत्वं न विवक्षितमिति भावेनोक्तं पदसन्दर्भरूपस्येति – **स्वार्थ इति** ।। अन्वितशक्तेः सत्त्वात्संसर्गरूपवाक्यार्थे वाक्यस्य शब्दप्रमाणत्वम् । तन्निर्णायकश्रुत्यादियुक्तत्वेनेत्यत्रादिपदेन लिङ्गपरिग्रहः । नन्वेकपदात्मकस्यानेकपदात्मकस्यापि लिङ्गत्वं चेदुच्यते तर्हि टीकाविरोधः । टीकायां लिङ्गस्य साक्षाद्व्याप्यभूतैकार्थसमर्पकत्वं वाक्यस्याव्याप्यभूतानेकपदार्थकथनद्वारा लिङ्गसमर्पकत्वं च लिङ्गवाक्ययोः साक्षादसाक्षात्त्वेन भेद इत्यनेनोक्त्वा तत्रैव गोत्रभिदं प्रवक्षणा इति दृष्टान्तस्योक्तत्वेन तत्रानेकपदात्मकस्य वाक्यत्वस्यैवाभिप्रेतत्वात् ।।




ವಾಕ್ಯದ ಲಕ್ಷಣ ಹೀಗಿದೆ. ತನ್ನಲ್ಲಿರುವ ಪದಗಳಿಂದಲೇ ಆಕಾಂಕ್ಷೆಯು ಪೂರ್ಣವಾಗಿರಬೇಕು. ಮತ್ತು ಬೇರೆ ಪದಗಳಿಂದ ಆಕಾಂಕ್ಷಾ ಇರಬಾರದು. ಇಂತಹ ವಾಕ್ಯವು ಸ್ವಾರ್ಥದಲ್ಲಿ ಶಬ್ದರೂಪವಾಗಿ ಪ್ರಮಾಣವಾಗುತ್ತದೆ. ಆದರೆ ಸ್ವಾಂತರ್ಗತವಾದ ಪದಾರ್ಥಗಳ ನಿರ್ಣಯದಲ್ಲಿ ಮತ್ತು ತನ್ನ ಜೊತೆಗೆ ಸಮಭಿವ್ಯಾಹೃತವಾದ ಬೇರೆ ವಾಕ್ಯಗಳ ಅರ್ಥನಿರ್ಣಯದಲ್ಲಿ ಅನುಮಾನರೂಪದಿಂದ ಪ್ರಮಾಣವಾಗಿರುತ್ತದೆ. ಉದಾಹರಣೆ 'ತತ್ತ್ವಮಸಿ' ಎಂಬ ವಾಕ್ಯದಲ್ಲಿ 'ತತ್' ಎಂಬ ಪದದ ಅರ್ಥವನ್ನು ನಿರ್ಣಯಿಸುವಾಗ 'ತ್ವಮಸಿ' ಎಂಬ ಪದಗಳು ಅನುಮಾನರೂಪದಿಂದ ಪ್ರಮಾಣವಾಗಿವೆ. ಅಂದರೆ 'ತತ್' ಎಂಬ ಪದಕ್ಕೆ 'ತತ್ಸದೃಶ' ಎಂಬರ್ಥವನ್ನು ಸ್ವೀಕರಿಸಬೇಕು. ಏಕೆಂದರೆ ವಿರುದ್ಧಧರ್ಮಾಧಿಕರಣ ಬೋಧಕವಾದ 'ತ್ವಮಸಿ' ಎಂಬ ಪದಗಳಿರುವುದರಿಂದ, ಹೀಗೆ ಸ್ವಾಂತರ್ಗತವಾದ ಪದಾರ್ಥನಿರ್ಣಯದಲ್ಲಿ 'ತ್ವಮಸಿ' ಎಂಬ ಪದಗಳು ಅನುಮಾನರೂಪದಿಂದ ಪ್ರಮಾಣವಾಗಿವೆ.

ಬೇರೆ ವಾಕ್ಯದ ಅರ್ಥವನ್ನು ನಿರ್ಣಯಿಸುವಾಗಲೂ ಶ್ರುತಿಲಿಂಗಾದಿಗಳಿಂದ ಉಪಪನ್ನವಾಗಿ ವಾಕ್ಯವು ನಿರ್ಣಾಯಕವಾಗಬಹುದು ಅಥವಾ ಅಂತಹ ಶ್ರುತಿಲಿಂಗಾದಿಗಳಿಲ್ಲದೇ ಕೇವಲ ಪ್ರಶ್ನೋತ್ತರಾದಿ ಭಾವದಿಂದಲೂ ವಾಕ್ಯಾರ್ಥಕ್ಕೆ ನಿರ್ಣಾಯಕವಾಗಬಹುದು. 'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ಬ್ರಹ್ಮನೇ

ಆಕಾಶಶಬ್ದಪ್ರತಿಪಾದ್ಯನಾಗಿದ್ದಾನೆನ್ನಲು 'ಆಕಾಶಪರಾಯಣಂ' ಎಂಬ ವಾಕ್ಯವು 'ಪರಾಯಣತ್ವ' ಎಂಬ ಲಿಂಗದಿಂದ ಸಹಿತವಾಗಿ ಅರ್ಥನಿರ್ಣಾಯಕವಾಗಿದೆ. 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿ 'ಜ್ಯೋತಿಃ' ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆನ್ನಲು 'ಕತಮ ಆತ್ಮಾ' ಎಂಬ ಪ್ರಶ್ನೋತ್ತರ ಭಾವವು ನಿರ್ಣಾಯಕವಾಗಿದೆ. ಹೀಗೆ ವಾಕ್ಯವು ಮೂರುಬಗೆಯಲ್ಲಿ ಅರ್ಥನಿರ್ಣಾಯಕವಾಗುತ್ತದೆಂಬುದನ್ನು ತಿಳಿಯಬೇಕು.

ಲಿಂಗಕ್ಕಿಂತಲೂ ವಾಕ್ಯವು ದುರ್ಬಲ. ಏಕೆಂದರೆ ಲಿಂಗವು ನೇರವಾಗಿ ವ್ಯಾಪ್ತಜ್ಞಾನದ ಮೂಲಕ ವ್ಯಾಪಕಜ್ಞಾನವನ್ನು ತಂದುಕೊಡುತ್ತದೆ. ಆದರೆ ವಾಕ್ಯವು ಅನೇಕ ಪದಗಳ ಅರ್ಥವನ್ನು ತಿಳಿಸುತ್ತಾ, ಶ್ರುತಿ-ಲಿಂಗ ಇವುಗಳೆನ್ನೆಲ್ಲಾ ಅಪೇಕ್ಷಿಸಿ, ವಾಕ್ಯದ ಅರ್ಥದಲ್ಲಿ ಅನುಮಾಪಕವಾಗಿ ಅರ್ಥವನ್ನು ನಿರ್ಣಯಿಸುತ್ತದೆ. ಹೀಗೆ ಲಿಂಗಕ್ಕಿಂತಲೂ ವಿಳಂಬವಾಗಿ ಅರ್ಥನಿರ್ಣಾಯಕವಾಗುವುದರಿಂದ, ಲಿಂಗಕ್ಕಿಂತಲೂ ದುರ್ಬಲವೆಂದು ತಿಳಿಯಬೇಕು.



## ಲಿಂಗವಾಕ್ಯಗಳೆರಡೂ ಸಮಾನ ಪ್ರಮಾಣವಲ್ಲ

### तात्पर्यचन्द्रिका

**विवृतं चैतत्तत्रैव । अत एव तत्र टीका ''वाक्यान्वयानुपपत्तेः'' इति ।**

ಅನುವಾದ - ನ್ಯಾಯವಿವರಣದ ಟೀಕೆಯಲ್ಲಿಯೇ ವಾಕ್ಯವು ಲಿಂಗಕ್ಕಿಂತಲೂ ವಿಳಂಬವಾಗಿ ಅರ್ಥನಿರ್ಣಾಯಕವಾಗುತ್ತದೆಂಬುದನ್ನು ವಿವರಿಸಿದ್ದಾರೆ. ಆದ್ದರಿಂದಲೇ ನ್ಯಾಯವಿವರಣ ಟೀಕೆಯಲ್ಲಿ 'ವಾಕ್ಯಾನ್ವಯಾನುಪಪತ್ತೇಃ' ಎಂಬ ಮಾತು ಹೊರಟಿದೆ.

**अत्रापि ''लिङ्गवाक्ययोः साक्षादसाक्षात्त्वेन भेदः'' इति टीकायामिद-मेवाभिप्रेतम् ।**

ಪ್ರಕೃತ ತತ್ವಪ್ರಕಾಶಿಕಾ ಟೀಕೆಯಲ್ಲಿಯೂ 'ಲಿಂಗವಾಕ್ಯಯೋಃ ಸಾಕ್ಷಾದಸಾಕ್ಷಾತ್ತ್ವೇನ ಭೇದಃ' ಲಿಂಗ ಮತ್ತು ವಾಕ್ಯಗಳಲ್ಲಿ ನೇರವಾಗಿ ಅರ್ಥವನ್ನು ನಿರ್ಣಯಿಸುವಿಕೆ ಹಾಗೂ ಪರಂಪರೆಯಿಂದ ಅರ್ಥವನ್ನು ನಿರ್ಣಯಿಸುವಿಕೆ ಎಂಬ ವೈಲಕ್ಷಣ್ಯವಿದೆ ಎಂಬುದಾಗಿ ನ್ಯಾಯವಿವರಣದ ಅಭಿಪ್ರಾಯವನ್ನೇ ಪ್ರತಿಬಿಂಬಿಸಿದ್ದಾರೆ.

**'गोत्रभिदं' 'प्रवक्षणा अभिनत्पर्वतानाम्' इतीमे अपि लिङ्गे एवोक्तरूपयोर्लिङ्गवाक्ययोः साक्षादसाक्षात्त्वेन भेदे दृष्टान्तिते ।**

'ಗೋತ್ರಭಿದಂ' ಎಂಬುದು ಏಕಪದಾತ್ಮಕವಾದ ಲಿಂಗಸ್ವರೂಪವಾಗಿದೆ. 'ಪ್ರವಕ್ಷಣಾ ಅಭಿನತ್ ಪರ್ವತಾನಾಮ್' ಎಂಬುದು ಅನೇಕ ಪದಾತ್ಮಕವಾದ ಲಿಂಗಸ್ವರೂಪವಾಗಿದೆ. ಇವೆರಡು

ಪರ್ವತಪಕ್ಷಭೇದಕತ್ವವೆಂಬ ಒಂದೇ ಧರ್ಮವನ್ನು ಹೇಳುತ್ತಿವೆ. ಆದರೂ ಸಹ ಅನೇಕ ಪದಗಳು ಇಲ್ಲದ ಕಾರಣ ಏಕಪದಾತ್ಮಕವಾದ ಲಿಂಗವು ಶೀಘ್ರವಾಗಿ ಅರ್ಥನಿರ್ಣಾಯಕವಾಗುತ್ತದೆ. ಅನೇಕ ಪದಾತ್ಮಕವಾದಲಿಂಗವು ವಿಳಂಬವಾಗಿ ಅರ್ಥನಿರ್ಣಾಯಕವಾಗುತ್ತದೆ. ಹೀಗೆ ಲಿಂಗದಲ್ಲಿಯೇ ಹೇಗೆ ಅವಾಂತರ ವೈಲಕ್ಷಣ್ಯವಿದೆಯೋ, ಅದರಂತೆ ಲಿಂಗ ಮತ್ತು ವಾಕ್ಯಗಳಲ್ಲಿಯೂ ಅವಾಂತರ ವೈಲಕ್ಷಣ್ಯವಿದೆಯೆಂದು ತಿಳಿಯಬೇಕು. ಹೀಗೆ ಟೀಕೆಯಲ್ಲಿರುವ 'ಸಾಕ್ಷಾದಸಾಕ್ಷಾತ್ತ್ವೇನ ಭೇದಃ' ಎಂಬುದನ್ನು ವ್ಯಾಖ್ಯಾನಿಸಬೇಕು.

**नतु लिङ्गवाक्ये । अत एव ''इत्यादिवत्'' इतिवत्करणम् ।**

ಹೊರತು, ಕೇವಲ ಲಿಂಗವಾಕ್ಯಗಳ ವಿಷಯದಲ್ಲಿ ಇದನ್ನು ದೃಷ್ಟಾಂತವನ್ನಾಗಿ ತಿಳಿಯಬಾರದು. ಆದ್ದರಿಂದಲೇ 'ಇತ್ಯಾದಿವತ್' ಎಂಬುದಾಗಿ 'ವತ್' ಎಂಬ ಪ್ರತ್ಯಯವನ್ನು ಬಳಸಿದ್ದಾರೆ.

**उक्तं ह्यनेकपदार्पितस्याप्यसाधारणधर्मस्य लिङ्गत्वम् 'अन्तस्तद्धर्मोपदेशात्', 'अत एव प्राणः', 'जीवमुख्यप्राणलिङ्गात्' 'तथाहि दृष्टं लिङ्गं च' इत्यादिसूत्रेषु ।**

ಅನೇಕ ಪದಸ್ವರೂಪವಾದದ್ದೂ ಕೂಡ ಲಿಂಗರೂಪವಾಗುತ್ತದೆಂಬುದು, ಸೂತ್ರಗಳಿಗೆ ಅಭಿಪ್ರೇತವಾಗಿದೆ. ಅನೇಕ ಪದಾರ್ಥಕವಾದ ಅಸಾಧಾರಣಧರ್ಮಕ್ಕೆ ಲಿಂಗತ್ವವನ್ನು 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ 'ತದ್ಧರ್ಮೋಪದೇಶಾತ್' ಎಂಬುದರಿಂದ ತಿಳಿಸಿದ್ದಾರೆ. 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ 'ಶ್ರೀಲಕ್ಷ್ಮೀಪತಿತ್ವ' ಎಂಬ ಲಿಂಗವನ್ನು, ಹಾಗೂ 'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಲ್ಲಿ 'ಶತಾಯುಷ್ಟ್ವ' ಎಂಬ ಲಿಂಗವನ್ನು, 'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರದಲ್ಲಿ 'ಸುಧಾಸಮುದ್ರಾಶಯಲೋಕವತ್ತ್ವ' ಎಂಬ ಲಿಂಗವನ್ನು ಸೂತ್ರಕಾರರು ಹೇಳಿದ್ದಾರೆ. ಇವೆಲ್ಲವೂ ಕೂಡ ಅನೇಕ ಪದಗಳಿಂದ ತಿಳಿಯುವಂತಹ ಲಿಂಗಗಳೇ ಆಗಿವೆ.

**तद्व्याख्यानेषु भाष्यानुव्याख्यानन्यायविवरणेषु तट्टीकासु च ।**

ಮತ್ತು ಸೂತ್ರಕ್ಕೆ ವ್ಯಾಖ್ಯಾನರೂಪವಾದ ಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ ಇವುಗಳ ಟೀಕೆಗಳಲ್ಲೂ ಕೂಡ ಅನೇಕ ಪದಾತ್ಮಕವಾದ ಲಿಂಗಪ್ರಮಾಣವನ್ನು ಸ್ಪಷ್ಟವಾಗಿ ಎತ್ತಿತೋರಿಸಿದ್ದಾರೆ. ಆದ್ದರಿಂದ ಅನೇಕ ಪದಾರ್ಪಿತವಾದ ಅಸಾಧಾರಣಧರ್ಮಕ್ಕೆ ಲಿಂಗತ್ವವು ಸೂತ್ರ, ಭಾಷ್ಯ, ಟೀಕೆಗಳಿಗೆ ಅಭಿಪ್ರೇತವೇ ಆಗಿದೆಯೆಂದು ತಿಳಿಯಬೇಕು.

**प्रकाशः —**

**विवृतमिति ।। "यदिदमस्मिन् ब्रह्मपुरे दहरं पुण्डरीकं वेश्म दहरोऽस्मिन्नन्तराकाशस्तस्मिन्यदन्तस्तदन्वेष्टव्यम्" इति पूर्ववाक्यं "किं तदत्र विद्यते" इत्यादिप्रश्नप्रतिवचनपरवाक्यानुरोधेनाकाशस्य प्रसिद्धाकाशत्वमुपेत्य तद्द्वारा द्यावापृथिव्यादेर्हृत्पद्मस्थत्वादिपरमुत "एष आत्माऽपहतपाप्मा" इत्यादि-लिङ्गानुसाराद्ब्रह्मणस्तथात्वपरमिति विशये**

ವಿವರಣೆ - ನ್ಯಾಯವಿವರಣದಲ್ಲಿ ಹೀಗೆ ವಿವರಿಸಲಾಗಿದೆ - 'ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಎಂಬ ಹಿಂದಿನ ವಾಕ್ಯದಲ್ಲಿ ದಹರಪುಂಡರೀಕದಲ್ಲಿ ಆಕಾಶವಿದೆ. ಅದರಲ್ಲಿ ಇರುವವನನ್ನು ಅನ್ವೇಷಣೆ ಮಾಡಬೇಕೆಂದು ಹೇಳಲಾಗಿದೆ. ಅನಂತರ ದಹರಾಕಾಶದಲ್ಲಿರುವ ವಸ್ತು ಯಾವುದು? ಎಂಬುದಾಗಿ 'ಕಿಂ ತದತ್ರ ವಿದ್ಯತೇ' ಎಂಬ ಮುಂದಿನ ಪ್ರಶ್ನವಾಕ್ಯವು ಹೊರಟಿದೆ. ಈ ಪ್ರಶ್ನಪ್ರತಿವಚನ ವಾಕ್ಯಗಳಿಗೆ ಅನುಸಾರಿಯಾಗಿ ಆಕಾಶಪದದಿಂದ ಪ್ರಸಿದ್ಧವಾದ ಭೂತಾಕಾಶವನ್ನೇ ಸ್ವೀಕರಿಸಬೇಕು. ಭೂತಾಕಾಶದ ಮೂಲಕ ದ್ಯಾವಾಪೃಥಿವ್ಯಾದಿಗಳೇ ಹೃದಯಪದ್ಮ-ದಲ್ಲಿರುತ್ತವೆಂದು ಹೇಳಬೇಕೋ? ಅಥವಾ 'ಏಷ ಆತ್ಮಾಽಪಹತಪಾಪ್ಮಾ' ಎಂಬ ವಾಕ್ಯದಲ್ಲಿ ಹೇಳಿದಂತೆ ಅಪಹತಪಾಪ್ಮತ್ವಾದಿ ಲಿಂಗಗಳಿಗೆ ಅನುಸಾರಿಯಾಗಿ ಹೃತ್ಪದ್ಮಸ್ಥನಾದವನು ಬ್ರಹ್ಮನಾಗಿದ್ದಾನೆಂದು ಹೇಳಬೇಕೋ? ಎಂದು ಸಂಶಯ.

**प्रकाशः — आकाशस्य दहरवाक्ये हृत्पद्मस्थतामुक्त्वाऽन्वेष्टव्यवाक्ये दहराकाशान्तस्स्थस्यान्वेष्टव्यत्व उक्ते "किं तदत्र विद्यते" इत्यनेनान्वेष्टव्य आधेये पृष्टे "यावान्वा" इत्यादिना पूर्वोक्तमाधारमाकाशमनूद्य तच्च पृथिव्याद्याश्रयत्व-योग्यत्वाय बाह्याकाशतुल्यतया विशिष्य "उभे अस्मिन्" इत्यादिना द्यावापृथिव्यादेरन्वेष्टव्यत्वोक्तेरन्विततत्वेन "किं तदत्र" इत्यादिवाक्यानुरोधात् द्यावापृथिव्यादेरेव तथात्वपरमिति प्राप्ते**

ಆಕಾಶವು ಹೃತ್ಪದ್ಮದಲ್ಲಿದೆಯೆಂದು 'ದಹರ' ವಾಕ್ಯವು ಹೇಳುತ್ತಿದೆ. ಅನಂತರ ಅನ್ವೇಷಣ ವಾಕ್ಯವು ದಹರಾಕಾಶದಲ್ಲಿರುವ ವಸ್ತುವನ್ನು ಅನ್ವೇಷಣ ಮಾಡಬೇಕೆಂದು ಹೇಳಿದೆ. ಹೀಗೆ ಹೇಳಿದ ಮೇಲೆ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನವಾಕ್ಯವು ಯಾವುದನ್ನು ಅನ್ವೇಷಣ ಮಾಡಬೇಕೆಂದು ಆಧೇಯದ ಬಗ್ಗೆ ಪ್ರಶ್ನಿಸುತ್ತಿದೆ. ಅದಕ್ಕೆ ಉತ್ತರರೂಪವಾಗಿ 'ಯಾವಾನ್ವಾ ಅಯಮಕಾಶಃ' ಎಂಬ ಇತ್ಯಾದಿ ವಾಕ್ಯವು ಹಿಂದೆ ಹೇಳಲ್ಪಟ್ಟ ಆಧಾರರೂಪವಾದ ಆಕಾಶವನ್ನು ಅನುವಾದ ಮಾಡಿ, ಅದು ಪೃಥಿವ್ಯಾದಿಗಳಿಗೆ ಆಶ್ರಯವಾಗಿದೆಯೆಂದು ಹೇಳಿದೆ. ಸಣ್ಣದಾದ ಹೃದಯಾಕಾಶವು ವಿಶಾಲವಾದ ಪೃಥಿವ್ಯಾದಿಗಳಿಗೆ ಹೇಗೆ ಆಶ್ರಯವಾಗುತ್ತದೆಂದು ಪುನಃ ಪ್ರಶ್ನೆಯು ಪ್ರಾಪ್ತವಾದಾಗ, ಬಾಹ್ಯಾಕಾಶವು ಹೇಗೆ ಸರ್ವಕ್ಕೂ ಆಧಾರವಾಗಿದೆಯೋ, ಅದರಂತೆ ಇದೂ

ಆದ್ದರಿಂದ ಅದರ ಸಾಮ್ಯವಿರುವುದರಿಂದ ಇದೂ ಸಹ ಸಕಲಕ್ಕೂ ಆಧಾರವಾಗಿದೆಯೆಂದು 'ಉಭೇ ಅಸ್ಮಿನ್' ಇತ್ಯಾದಿ ವಾಕ್ಯವು ಪ್ರತಿಪಾದನೆ ಮಾಡಿದೆ. ಹೀಗೆ ಶ್ರುತಿಗಳನ್ನು ವ್ಯಾಖ್ಯಾನ ಮಾಡಿದಾಗ, ಹೃತ್ಕಮಲದಲ್ಲಿರುವ ದ್ಯಾವಾಪೃಥಿವ್ಯಾದಿಗಳ ಅನ್ವೇಷಣವೇ ಶ್ರುತಿಯ ಅಭಿಪ್ರಾಯವೆಂದು ತಿಳಿಯುತ್ತದೆ. ಈ ಅರ್ಥವು ಅತ್ಯಂತ ಸಂಗತವಾಗುತ್ತದೆ. ಆದ್ದರಿಂದ 'ಕಿಂ ತದತ್ರ' ಎಂಬ ವಾಕ್ಯಕ್ಕೆ ಅನುಸಾರಿಯಾಗಿ ದ್ಯಾವಾಪೃಥಿವ್ಯಾದಿಗಳೇ ಅನ್ವೇಷಣಕ್ಕೆ ಅರ್ಹವಾದವುಗಳು. 'ಆಕಾಶ' ಶಬ್ದದಿಂದ ಭೂತಾಕಾಶವು ಪ್ರತಿಪಾದ್ಯವಾಗುವುದಿಲ್ಲ. ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆಂದು ವಿವಕ್ಷಿಸಿದಲ್ಲಿ ಹೀಗೆ ಸಂಗತವಾಗುವಂತೆ ವ್ಯಾಖ್ಯಾನ ಮಾಡಲು ಬರುವುದಿಲ್ಲ. 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಬ್ರಹ್ಮವಿದ್ಯತೇ' ಎಂದಷ್ಟೇ ಉತ್ತರವು ಸಾಕಾಗುತ್ತದೆ. ಆದ್ದರಿಂದ 'ಆಕಾಶ' ಶಬ್ದದಿಂದ ಭೂತಾಕಾಶವೇ ಪ್ರತಿಪಾದ್ಯವಾಗಿದೆಯೆಂದು ಪೂರ್ವಪಕ್ಷ.

**प्रकाशः** – पापाद्यप्रसक्त्या जडेऽपहतपाप्मत्वादेरयोगात्सजातीये जीवे तत्प्रसक्तिमात्रेण ब्रह्मणि तत्सम्भवात्तदनुरोधेन वाक्यस्यापि कथञ्चिद्ब्रह्मणि नेयत्वात्पूर्ववाक्यं ब्रह्मण एव सर्वाधारतया हृत्पद्मस्थत्वादिपरमिति ।

ಭೂತಾಕಾಶದಲ್ಲಿ ಪಾಪಾದಿಗಳಿಗೆ ಅವಕಾಶವೇ ಇಲ್ಲ. ಅವಕಾಶವೇ ಇಲ್ಲದಿದ್ದಾಗ ಅಪ್ರಸಕ್ತವಾದದ್ದನ್ನು ನಿಷೇಧ ಮಾಡುವುದರಲ್ಲಿ ಅರ್ಥವಿಲ್ಲ. ಆದರೆ ಜೀವನಿಗೆ ಪಾಪಾದಿಗಳಿರಲು ಪ್ರಸಕ್ತಿಯಿರುವುದರಿಂದ ತತ್ ಸಜಾತೀಯನಾದ ಬ್ರಹ್ಮನಲ್ಲಿಯೂ ಪಾಪಾದಿಗಳಿರುತ್ತವೆಯೋ ಏನೋ? ಎಂಬ ಸಂಶಯವು ಪ್ರಾಪ್ತವಾಗುತ್ತದೆ. ಹೀಗೆ ಪ್ರಸಕ್ತವಾದದ್ದನ್ನು ನಿಷೇಧ ಮಾಡುವುದಕ್ಕಾಗಿ ಶ್ರುತಿಯು ಅಪಹತಪಾಪ್ಮತ್ವಾದಿ ಗುಣಗಳನ್ನು ಬ್ರಹ್ಮನಲ್ಲಿ ಹೇಳುತ್ತಿದೆ. ಹೀಗೆ ಅಪಹತಪಾಪ್ಮತ್ವಾದಿ ಧರ್ಮಗಳಿಗೆ ಅನುಸಾರಿಯಾಗಿ ವಾಕ್ಯವನ್ನು ಕಂಥಚಿತ್ ಬ್ರಹ್ಮನಲ್ಲಿ ಸಮನ್ವಯ ಮಾಡಬೇಕು. ಆದ್ದರಿಂದ 'ಯದಿದಮಸ್ಮಿನ್' ಎಂಬ ಹಿಂದಿನ ವಾಕ್ಯವೂ ಸಹ ಬ್ರಹ್ಮನೇ ಸಕಲಕ್ಕೂ ಆಧಾರನಾಗಿದ್ದಾನೆ. ಅವನೇ ಹೃತ್ಪದ್ಮಸ್ಥನಾಗಿದ್ದಾನೆಂದು ಪ್ರತಿಪಾದಿಸುತ್ತಿದೆ.

**प्रकाशः** – यद्वा "यावान्वा अयमाकाशः" इत्येतद्वाक्यं प्रसिद्धाकाशपरमुत ब्रह्मपरमिति विशये प्रसिद्धाकाशस्य दहरवाक्ये हृत्पद्मस्थतामुक्त्वेत्यादि द्रष्टव्यम् । पूर्ववाक्यमित्यत्राप्युत्तरं वाक्यं ब्रह्मपरमित्यपि ध्येयम् ।

ಅಥವಾ ಮತ್ತೊಂದು ಬಗೆಯಲ್ಲಿ ಅಧಿಕರಣದ ಕ್ರಮವನ್ನು ತಿಳಿಯಬಹುದು - 'ಯಾವಾನ್ವಾ ಅಯಮಾಕಾಶಃ' ಎಂಬ ವಾಕ್ಯವು ಪ್ರಸಿದ್ಧವಾದ ಭೂತಾಕಾಶ ಪರವೋ? ಅಥವಾ ಬ್ರಹ್ಮಪರವೋ? ಎಂದು ಸಂಶಯವು ಪ್ರಾಪ್ತವಾದರೆ, ಪ್ರಸಿದ್ಧಾಕಾಶಕ್ಕೆ 'ದಹರ' ವಾಕ್ಯವು ಹೃತ್ಪದ್ಮಸ್ಥತ್ವವನ್ನು ಹೇಳುತ್ತಿದೆಯೆಂದು ಪೂರ್ವಪಕ್ಷ. ಹಿಂದಿನ ವಾಕ್ಯ ಹಾಗೂ ಉಳಿದೆಲ್ಲ ಪೂರ್ವಪಕ್ಷಸಿದ್ಧಾಂತಗಳು ಹಿಂದಿನಂತೆ ತಿಳಿಯಬೇಕು. ಆದರೆ 'ಪೂರ್ವವಾಕ್ಯಂ' ಎಂಬಲ್ಲಿ ಮಾತ್ರ 'ಉತ್ತರಂ ವಾಕ್ಯಂ' ಎಂದು ವಿವಕ್ಷಿಸಬೇಕು. ಅಂದರೆ ಮುಂದಿನ ವಾಕ್ಯದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆಂದು ತಿಳಿಯಬೇಕು.

ಹಿಂದಿನ ಅಧಿಕರಣ ಕ್ರಮದಲ್ಲಿ 'ಯದಿದಮಸ್ಮಿನ್' ಎಂಬುದು ವಿಷಯವಾಕ್ಯವಾಗಿತ್ತು. ಈ ಅಧಿಕರಣ ಕ್ರಮದಲ್ಲಿ 'ಯಾವಾನ್ವಾ ಅಯಮಾಕಾಶಃ' ಎಂಬುದು ವಿಷಯವಾಕ್ಯವಾಗಿದೆ ಎಂಬ ವ್ಯತ್ಯಾಸವನ್ನು

ಗಮನಿಸಬೇಕು. 'ಯಾವಾನ್ವಾ ಅಯಮಾಕಾಶಃ' ಎಂಬುದು ಮುಂದಿನ ವಾಕ್ಯವಾದ್ದರಿಂದ 'ಉತ್ತರ ವಾಕ್ಯವೆಂದು ತಿಳಿಯಬೇಕು. 'ಯದಿದಮಸ್ಮಿನ್' ಎಂಬದು ಹಿಂದಿನ ವಾಕ್ಯವಾದ್ದರಿಂದ 'ಪೂರ್ವವಾಕ್ಯಂ' ಎಂದು ತಿಳಿಯಬೇಕು.

**प्रकाशः** – तत्र यावत् ''किं तदत्र'' इत्यादिवाक्यं तद्यदाऽनेकपदार्थसंसर्गरूपस्वार्थं बोधयित्वा समभिव्याहृतपूर्ववाक्यमन्यार्थकमिति बोधयति ततःप्रागेव तत्समानाधिकरणमपहतपाप्मत्वादिशब्दरूपं लिङ्गं व्याप्यं स्वार्थमुपस्थाप्य हृत्पद्मस्थं ब्रह्मेति निश्चाययतीति द्वितीयायामेव कक्ष्यायां निर्णीतत्वेन तृतीयकक्ष्यायां प्रवर्तमानं वाक्यं न तत्र पराक्रमत इत्यर्थः ।

ಮೇಲೆ ಹೇಳಿದ ಅಧಿಕರಣ ಕ್ರಮವನ್ನು ಗಮನಿಸಿದಾಗ, ಲಿಂಗಕ್ಕಿಂತಲೂ ವಾಕ್ಯವು ದುರ್ಬಲವೆಂದು ಸ್ಪಷ್ಟವಾಗುತ್ತದೆ. ಅದು ಹೀಗೆ - 'ಕಿಂ ತದತ್ರ' ಇತ್ಯಾದಿ ವಾಕ್ಯವು ಯಾವಾಗ ಅನೇಕ ಪದಾರ್ಥಸಂಸರ್ಗರೂಪವಾದ ಸ್ವಾರ್ಥವನ್ನು ತಿಳಿಸಿ, ಸಮಭಿವ್ಯಾಹೃತವಾದ ಹಿಂದಿನ ವಾಕ್ಯವು ಅನ್ಯಾರ್ಥವುಳ್ಳದ್ದೆಂದು ತಿಳಿಸುತ್ತದೋ, ಅದಕ್ಕಿಂತ ಮೊದಲೇ ತತ್‌ಸಮಾನಾಧಿಕರಣವಾದ ಅಪಹತಪಾಪ್ಮತ್ವಾದಿ ರೂಪವಾದ ಶಬ್ದರೂಪಲಿಂಗವು ವ್ಯಾಪ್ಯವಾದ ಸ್ವಾರ್ಥವನ್ನು ತಿಳಿಸುತ್ತಾ ಹೃತ್ಪದ್ಮಸ್ಥನಾದವನು ಬ್ರಹ್ಮನೇ ಆಗಿದ್ದಾನೆಂದು ನಿಶ್ಚಯಿಸಿ ಬಿಡುತ್ತದೆ. ಹೀಗೆ ಎರಡನೆಯ ಕಕ್ಷೆಯಲ್ಲಿಯೇ ಲಿಂಗವು ನಿಶ್ಚಾಯಕವಾಗುತ್ತದೆ. ಅನಂತರ ಮೂರನೆಯ ಕಕ್ಷೆಯಲ್ಲಿ ವಾಕ್ಯವು ಪ್ರವೃತ್ತಿ ಮಾಡುತ್ತದೆ. ಹೀಗಿರುವಾಗ ಎರಡನೆಯ ಕಕ್ಷೆಯಲ್ಲಿ ನಿರ್ಣಾಯಕವಾದ ಲಿಂಗಕ್ಕಿಂತ ಮೂರನೆಯ ಕಕ್ಷೆಯಲ್ಲಿ ಪ್ರವೃತ್ತಿ ಮಾಡುವ ವಾಕ್ಯವು ಪ್ರಬಲವಾಗಲು ಸಾಧ್ಯವಿಲ್ಲ.

**प्रकाशः** – इदं च ''समभिव्याहारमात्रेण वा'' इत्यस्योदाहरणम् ।

ದಹರಾಧಿಕರಣದ ದೃಷ್ಟಾಂತ ನೀಡಿದ್ದು 'ಸಮಭಿವ್ಯಾಹಾರಮಾತ್ರೇಣ ನಿರ್ಣಾಯಕಮ್' ಎಂಬುದಕ್ಕೆ, ಅಂದರೆ ವಾಕ್ಯವು ತನ್ನಲ್ಲೇ ಇರುವ ಪದಗಳ ಸಮಭಿವ್ಯಾಹಾರದಿಂದ ಪದಾರ್ಥನಿರ್ಣಾಯಕವಾಗುತ್ತದೆನ್ನಲು ದೃಷ್ಟಾಂತವಾಗಿದೆಯೆಂದು ತಿಳಿಯಬೇಕು.

**प्रकाशः** – श्रुतियुक्तस्य तु यथाऽत्रैव ''मध्ये वामनमासीनं विश्वेदेवा उपासते'' इति वाक्यं ''ईशानो भूतभव्यस्य'' इत्यादिवाक्यार्थनिर्णायकम् ।

ಸ್ವಾಂತರ್ಗತವಾದ ಪದಾರ್ಥನಿರ್ಣಾಯಕವಾಗಿದೆಯೆನ್ನಲು ಅನೇಕ ದೃಷ್ಟಾಂತಗಳನ್ನು ಹೀಗೆ ತಿಳಿಯಬೇಕು. ಸ್ವಾಂತರ್ಗತಪದಾರ್ಥ ನಿರ್ಣಾಯಕವಾಗಬೇಕಾದರೆ ವಾಕ್ಯವು ಶ್ರುತಿ ಅಥವಾ ಲಿಂಗಗಳಿಂದ ಯುಕ್ತವಾಗಿರುತ್ತದೆ. ಶ್ರುತಿಯುಕ್ತವಾಗಿರುತ್ತದೆಂಬುದಕ್ಕೆ ದೃಷ್ಟಾಂತ ಹೀಗಿದೆ - ಇದೇ ಅಧಿಕರಣದಲ್ಲಿ 'ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ' ಎಂಬ ವಾಕ್ಯದಲ್ಲಿರುವ ವಾಮನ ಶ್ರುತಿಯು 'ಈಶಾನೋ ಭೂತಭವಸ್ಯ' ಇತ್ಯಾದಿ ವಾಕ್ಯಾರ್ಥನಿರ್ಣಾಯಕವಾಗಿದೆ. ಅಂದರೆ ಈಶಾನ ಶಬ್ದ ಪ್ರತಿಪಾದ್ಯನಾದವನು

ಯಾರು? ಎಂಬುದನ್ನು 'ಮಧ್ಯೇ ವಾಮನಂ' ಇತ್ಯಾದಿ ವಾಕ್ಯವು ನಿರ್ಣಯಿಸುತ್ತಿದೆ. ಇಂತಹ ವಾಕ್ಯವು ವಾಮನಶ್ರುತಿಯಿಂದ ಸಹಿತವಾಗಿ ನಿರ್ಣಾಯಕವಾಗಿದೆಯೆಂದು ತಿಳಿಯಬೇಕು.

**ಪ್ರಕಾಶಃ** – यथा वा ''तमेवैकं जानथ आत्मानम्'' इति वाक्यं ''यस्मिन्द्यौः'' इत्यादिपूर्ववाक्यार्थनिर्णायकमित्यादि ।

ಅಥವಾ 'ಯಸ್ಮಿನ್ದ್ಯೌಃ ಪೃಥಿವೀ' ಇತ್ಯಾದಿ ಪೂರ್ವವಾಕ್ಯದ ಅರ್ಥವನ್ನು ನಿರ್ಣಯಿಸಲು 'ತಮೇವೈಕಂ ಜಾನಥ ಆತ್ಮಾನಮ್' ಎಂಬ ವಾಕ್ಯವು ಪ್ರವೃತ್ತವಾಗಿದೆ. ಇಂತಹ ವಾಕ್ಯವು 'ಆತ್ಮಾ' ಎಂಬ ಶ್ರುತಿಯಿಂದ ಸಹಿತವಾಗಿದೆ. ಹೀಗೆ ಶ್ರುತಿಸಹಿತವಾದ ವಾಕ್ಯವು ವಾಕ್ಯಾಂತರಾರ್ಥನಿರ್ಣಾಯಕವಾಗಿದೆಯೆನ್ನಲು ಇದನ್ನೂ ಸಹ ದೃಷ್ಟಾಂತವನ್ನಾಗಿ ತಿಳಿಯಬೇಕು.

**ಪ್ರಕಾಶಃ** – लिङ्गयुक्तं तु ''स एष परोवरीयान्'' इत्यादिवाक्यं पूर्ववाक्यार्थ-निर्णायकम् ।

ಶ್ರುತಿ ಸಹಿತವಾದ ವಾಕ್ಯವು ವಾಕ್ಯಾಂತರಾರ್ಥನಿರ್ಣಾಯಕವಾಗುತ್ತದೆನ್ನಲು ಮೇಲೆ ಎರಡು ದೃಷ್ಟಾಂತಗಳನ್ನು ಹೇಳಿದರು. ಈಗ ಲಿಂಗಸಹಿತವಾದ ವಾಕ್ಯವೂ ಕೂಡ ವಾಕ್ಯಾಂತರಾರ್ಥನಿರ್ಣಾಯಕ-ವಾಗಿದೆಯೆನ್ನಲು ದೃಷ್ಟಾಂತವನ್ನು ಹೀಗೆ ತಿಳಿಯಬೇಕು ಎಂದು ಹೇಳಿದ್ದಾರೆ. 'ಅಸ್ಯ ಲೋಕಸ್ಯ ಕಾ ಗತಿಃ ಆಕಾಶ ಇತಿ ಹೋವಾಚ' ಎಂಬ ಹಿಂದಿನ ವಾಕ್ಯದಲ್ಲಿ ಶ್ರುತವಾದ ಆಕಾಶಶಬ್ದ ಪ್ರತಿಪಾದ್ಯವಾದ ವಸ್ತು ಯಾವುದು? ಎಂದರೆ ಈ ಪ್ರಶ್ನೆಗೆ 'ಸ ಏಷ ಪರೋವರೀಯಾನ್ ಉದ್ಗೀಥಃ' ಇತ್ಯಾದಿ ವಾಕ್ಯವೇ ನಿರ್ಣಾಯಕವಾಗಿದೆ. ಅಂದರೆ ಈ ವಾಕ್ಯವು 'ಪರೋವರೀಯಸ್ತ್ವಾದಿ' ಲಿಂಗಗಳಿಂದ ಯುಕ್ತವಾಗಿರುವ ಕಾರಣ ಪರಮಾತ್ಮನೇ 'ಆಕಾಶ' ಶಬ್ದ ಪ್ರತಿಪಾದ್ಯನಾಗಿದ್ದಾನೆಂದು ಲಿಂಗಸಹಿತವಾಗಿ ನಿರ್ಣಯಮಾಡುತ್ತಿದೆ.

**ಪ್ರಕಾಶಃ** – यथा वा ''तदैक्षत बहुस्यां प्रजायेय'' इति वाक्यं ''सदेव सोम्य'' इत्यादिवाक्यार्थनिर्णायकम् ।

'ಸದೇವ ಸೌಮ್ಯ' ಇತ್ಯಾದಿ ವಾಕ್ಯಾಂತರಾರ್ಥವನ್ನು ನಿರ್ಣಯ ಮಾಡಲು 'ತದೈಕ್ಷತ ಬಹುಸ್ಯಾಂ ಪ್ರಜಾಯೇಯ' ಎಂಬ ವಾಕ್ಯವು ಹೊರಟಿದೆ. ಇದರಲ್ಲಿ 'ಈಕ್ಷಣ ಕರ್ತೃತ್ವ' ಎಂಬ ಲಿಂಗವು ಶ್ರುತವಾಗಿದೆ. ಇಂತಹ ಲಿಂಗಸಹಿತವಾದ ವಾಕ್ಯವು 'ಸದೇವ ಸೌಮ್ಯ' ಎಂಬಲ್ಲಿರುವ 'ಸತ್' ಪದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯ ಮಾಡುತ್ತಿದೆ.

**ಪ್ರಕಾಶಃ** – स्वान्तर्गतपदार्थनिर्णायकं तु ''गामानय'' इत्यादौ गोशब्दस्य पृथिव्यादिपरत्वनिरासेन पश्वर्थत्वनिर्णायकम् ।

ಇನ್ನು ಸ್ವಾಂತರ್ಗತಪದಾರ್ಥನಿರ್ಣಾಯಕವಾಗಿದೆಯೆನ್ನಲು ದೃಷ್ಟಾಂತವನ್ನು ಹೀಗೆ ತಿಳಿಯಬೇಕು - 'ಗಾಮಾನಯ' ಎಂಬಲ್ಲಿರುವ 'ಗೋ' ಶಬ್ದವು ಪೃಥಿವ್ಯಾದಿಗಳನ್ನು ಪ್ರತಿಪಾದನೆ ಮಾಡುವುದಿಲ್ಲ. ಹಸುವನ್ನೇ ಪ್ರತಿಪಾದನೆ ಮಾಡುತ್ತದೆಂದು 'ಆನಯ' ಎಂಬ ಸಮಭಿವ್ಯಾಹೃತವಾದ ಸ್ವಾಂತರ್ಗತವಾದ ಪದವೇ

ನಿರ್ಣಯ ಮಾಡುತ್ತಿದೆ. ಪೃಥಿವ್ಯಾದಿಗಳಲ್ಲಿ ಆನಯನವು ಅನನ್ವಿತವಾದ್ದರಿಂದ ಹಸುವನ್ನೇ 'ಗೋ' ಪದಾರ್ಥವನ್ನಾಗಿ ತಿಳಿಯಬೇಕೆಂದು ಸ್ವಾಂತರ್ಗತವಾದ ಪದಾರ್ಥವನ್ನು 'ಆನಯ' ಪದವು ನಿರ್ಣಯಿಸುತ್ತಿದೆ.

**प्रकाशः** – यथा वा ''शब्दविशेषात्'' इत्यत्र ''एतमेव ब्रह्मेत्याचक्षते'' इति वाक्यं चतुर्मुखाद्यर्थत्वनिरासेन ब्रह्मशब्दस्य विष्ण्वर्थत्वनिर्णायकम् ।

ಅಥವಾ 'ಶಬ್ದವಿಶೇಷಾತ್' ಎಂಬ ಸೂತ್ರದಲ್ಲಿ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ವಾಕ್ಯವನ್ನು ವಿಚಾರ ಮಾಡಿದ್ದಾರೆ. ಇಲ್ಲಿರುವ ಬ್ರಹ್ಮ ಶಬ್ದಕ್ಕೆ ಚತುರ್ಮುಖಾದ್ಯರ್ಥಗಳನ್ನು ವಿವಕ್ಷಿಸಬಾರದೆನ್ನಲು ಸಮಭಿವ್ಯಾಹೃತವಾದ ಅವಧಾರಣವು ನಿರ್ಣಾಯಕವಾಗಿದೆ. ಅಂದರೆ ಚತುರ್ಮುಖಾದಿಗಳನ್ನು ಅವಧಾರಣಪುರಸ್ಸರವಾಗಿ ಬ್ರಹ್ಮಶಬ್ದ ಪ್ರತಿಪಾದ್ಯರೆಂದು ಹೇಳಲಾಗದು. 'ಬೃಹಜಾತಿಜೀವ' ಇತ್ಯಾದಿ ಧಾತುಕೋಶಾದಿಗಳೂ ಇತರ ಪದಾರ್ಥಗಳನ್ನೂ ಕೂಡ ಬ್ರಹ್ಮಶಬ್ದ ಪ್ರತಿಪಾದ್ಯವೆಂದು ಹೇಳುತ್ತಿವೆ. ಆದ್ದರಿಂದ 'ಏವ' ಎಂಬ ಅವಧಾರಣವು ಬ್ರಹ್ಮಶಬ್ದದಿಂದ ಪರಮಮುಖ್ಯವೃತ್ತ್ಯಾ ಪ್ರತಿಪಾದ್ಯನಾದವನು ವಿಷ್ಣುವೊಬ್ಬನೇ ಆಗಿದ್ದಾನೆಂದು ನಿರ್ಣಯಿಸುತ್ತಿದೆ. ಇದೂ ಸಹ ಸ್ವಾಂತರ್ಗತಪದಾರ್ಥ ನಿರ್ಣಾಯಕಕ್ಕೆ ದೃಷ್ಟಾಂತವಾಗಿದೆ.

**प्रकाशः** – यथा वा ''यं पृथिवी न वेद'' इत्यादिवाक्यं पृथिव्यादिशब्दस्य चेतनार्थत्वनिर्णायकं ध्येयमिति भावः ।

ಅಥವಾ 'ಯಂ ಪೃಥಿವೀ ನ ವೇದ' ಇತ್ಯಾದಿ ವಾಕ್ಯದಲ್ಲಿರುವ 'ಪೃಥಿವೀ' ಎಂಬ ಶಬ್ದವು ಜಡವಾಚಕವಾದಲ್ಲಿ, 'ನ ವೇದ' ಎಂಬುದಾಗಿ ಜ್ಞಾನನಿಷೇಧವನ್ನು ಮಾಡುವುದೇ ತಪ್ಪಾಗುತ್ತದೆ. ಏಕೆಂದರೆ ಜಡಪದಾರ್ಥದಲ್ಲಿ ಜ್ಞಾನಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಆದ್ದರಿಂದ ಸಮಭಿವ್ಯಾಹೃತವಾದ 'ನ ವೇದ' ಎಂಬುದೇ 'ಪೃಥಿವೀ' ಎಂಬ ಶಬ್ದ ಪ್ರತಿಪಾದ್ಯವಾದದ್ದು ಚೇತನವಾಗಿದೆಯೆಂದು ನಿರ್ಣಯಿಸುತ್ತದೆಂದು ತಿಳಿಯಬೇಕು.

**प्रकाशः** – यद्यपि स्वान्तर्गतपदार्थनिर्णायकमपि वाक्यं तन्निर्णायक-श्रुतिलिङ्गोपेतत्वेन वाऽऽकाङ्क्षादिमत्पदसमभिव्याहारमात्रेण वेत्यत्रापि द्वैविध्यं सम्भवति । ''अन्योऽन्तर आत्माऽऽनन्दमयः'' इत्यादिवाक्यमानन्दमयादिपदार्थ-निर्णायकात्मश्रुत्युपेतत्वेन ''यो वै भूमा तत्सुखम्'' इत्यादिवाक्यं भूम्नो विष्णुत्वनिर्णायकपूर्णसुखोपेतत्वेन । समभिव्याहारमात्रेण तु 'गामानय' 'एतमेव ब्रह्मेत्याचक्षते' इत्यादि ।

ಪ್ರಶ್ನೆ - ಹಿಂದೆ ಗ್ರಂಥಕಾರರು ಪ್ರಾರಂಭದಲ್ಲಿ ವಾಕ್ಯವನ್ನು ಸ್ವಾತಂರ್ಗತಪದಾರ್ಥನಿರ್ಣಾಯಕ ವಾಕ್ಯಾಂತರಾರ್ಥನಿರ್ಣಾಯಕ ಎಂಬ ಎರಡು ಪ್ರಕಾರಗಳನ್ನು ಹೇಳಿದರು. ಪುನಃ ಸ್ವಾತಂರ್ಗತಪದಾರ್ಥ-ನಿರ್ಣಾಯಕವಾದ ಶ್ರುತ್ಯಾದಿಗಳಿಂದ ಸಹಿತವಾದದ್ದು ಮತ್ತು ಸಮಭಿವ್ಯಾಹಾರ ಮಾತ್ರದಿಂದ ಯುಕ್ತವಾದದ್ದು ಎಂಬ ಎರಡು ಪ್ರಕಾರಗಳನ್ನು ಹೇಳಿದರು. ಇದರಂತೆ ಸ್ವಾಂತರ್ಗತಪದಾರ್ಥನಿರ್ಣಾಯಕವನ್ನೂ ಕೂಡ

ಎರಡು ಪ್ರಕಾರದಲ್ಲಿ ಹೇಳಬಹುದು. ತನ್ನಿರ್ಣಾಯಕವಾದ ಶ್ರುತಿಲಿಂಗಾದಿಗಳಿಂದ ಕೂಡಿರುವ ವಾಕ್ಯವು ಸ್ವಾಂತರ್ಗತಪದಾರ್ಥ ನಿರ್ಣಾಯಕವಾಗಿದೆಯೆಂದು ಅಥವಾ ಶ್ರುತಿಲಿಂಗಾದಿಗಳಿಂದ ಸಹಿತವಾಗದ ಆಕಾಂಕ್ಷಾದಿಗಳುಳ್ಳ ಪದಗಳ ಸಮಭಿವ್ಯಾಹಾರ ಮಾತ್ರದಿಂದಲೂ ಸ್ವಾಂತರ್ಗತಪದಾರ್ಥನಿರ್ಣಾಯಕ-ವಾಗಿದೆಯೆಂದು ಎರಡು ಪ್ರಕಾರವನ್ನು ಹೇಳಬಹುದು.

ಉದಾಹರಣೆ - 'ಅನ್ಯೋಽಂತರ ಆತ್ಮಾಽಽನಂದಮಯಃ' ಇತ್ಯಾದಿ ವಾಕ್ಯದಲ್ಲಿರುವ ಆನಂದಮಯ ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನ್ನೆನ್ನಲು ಹತ್ತಿರದಲ್ಲೇ ಇರುವ ಆತ್ಮಾ ಎಂಬ ಶ್ರುತಿಯು ನಿರ್ಣಾಯಕವಾಗಿದೆ. ಇಂತಹ ಆತ್ಮಶ್ರುತಿಯಿಂದ ಯುಕ್ತವಾಗಿರುವ 'ಅನ್ಯೋಽಂತರ ಆತ್ಮಾ' ಇತ್ಯಾದಿ ವಾಕ್ಯವು ಆನಂದಮಯ ಪದಾರ್ಥವನ್ನು ನಿರ್ಣಯಿಸುತ್ತದೆ. ಇದರಂತೆ 'ಯೋ ವೈ ಭೂಮಾ ತತ್ ಸುಖಮ್' ಎಂಬ ವಾಕ್ಯದಲ್ಲಿರುವ 'ಭೂಮಾ' ಎಂಬ ಶಬ್ದವೂ ಕೂಡ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ ಅದೇ ವಾಕ್ಯದಲ್ಲಿರುವ 'ತತ್ ಸುಖಮ್' ಎಂಬ ಪದವು ಪೂರ್ಣಸುಖವನ್ನು ಹೇಳುತ್ತಿದೆ. ಇದು ವಿಷ್ಣುವಿನಲ್ಲಿ ಮಾತ್ರ ಬರುವುದರಿಂದ ಪೂರ್ಣಸುಖತ್ವವೆಂಬ ಲಿಂಗವನ್ನು 'ತತ್ ಸುಖಮ್' ಎಂಬ ಪದವು ಹೇಳುತ್ತಿದೆ. ಇದರಿಂದ ಸಹಿತವಾದ 'ಯೋ ವೈ ಭೂಮಾ' ಇತ್ಯಾದಿ ವಾಕ್ಯವು 'ಭೂಮಾ' ಶಬ್ದದ ಅರ್ಥದಲ್ಲಿ ನಿರ್ಣಾಯಕವಾಗಿದೆ.

ಮತ್ತು ಸಮಭಿವ್ಯಾಹಾರ ಮಾತ್ರದಿಂದಲೂ ವಾಕ್ಯಾಂತರಾರ್ಥನಿರ್ಣಾಯಕ- ವಾಗಿದೆಯೆಂದು ಹೇಳಬಹುದು. ಉದಾಹರಣೆ - 'ಗಾಮಾನಯ' ಎಂಬಲ್ಲಿ ಆಕಾಂಕ್ಷಾದಿಗಳಿಂದ ಕೂಡಿರುವ 'ಆನಯ' ಎಂಬ ಪದಸಮಭಿವ್ಯಾಹಾರದಿಂದಲೇ 'ಗೋ' ಶಬ್ದದಿಂದ ಪೃಥಿವ್ಯಾದಿಗಳು ಪ್ರತಿಪಾದ್ಯವಾಗುವುದಿಲ್ಲವೆಂದು ನಿರ್ಣಯಿಸಬಹುದು. 'ಏತಮೇವ ಬ್ರಹ್ಮೇತ್ಯಾಕ್ಷತೇ' ಎಂಬಲ್ಲಿಯೂ ಸಮಭಿವ್ಯಾಹೃತವಾದ ಅವಧಾರಣವೇ ಬ್ರಹ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸುತ್ತದೆ. ಹೀಗೆ ಸ್ವಾಂತರ್ಗತಪದಾರ್ಥನಿರ್ಣಾಯಕವನ್ನೂ ಕೂಡ ಎರಡು ಪ್ರಕಾರದಲ್ಲಿ ಹೇಳಬಹುದಿತ್ತಲ್ಲವೇ?

**प्रकाशः – तथापि स्पष्टत्वात्स्वयमेवोहितुं शक्यमिति विशेषाभावाद्वा तन्नोक्तमिति ध्येयम् ।।**

ಉತ್ತರ - ವಾಕ್ಯಾಂತರಾರ್ಥನಿರ್ಣಾಯಕತ್ವವೂ ಎರಡು ಪ್ರಕಾರದಲ್ಲಿದ್ದಂತೆ ಸ್ವಾಂತರ್ಗತಪದ-ನಿರ್ಣಾಯಕವೂ ಕೂಡ ಎರಡು ಪ್ರಕಾರದಲ್ಲಿದೆಯೆಂದು ಹೇಳುವುದೇನೂ ತಪ್ಪಲ್ಲ. ಇದು ಅತ್ಯಂತ ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಪ್ರತ್ಯೇಕವಾಗಿ ಉಲ್ಲೇಖಿಸಿಲ್ಲವೆಂದು ತಿಳಿಯಬೇಕು. ಅಥವಾ ಹೆಚ್ಚಿನ ವಿಶೇಷ ವಿಚಾರವೇನೂ ಇದರಲ್ಲಿ ಇಲ್ಲದ ಕಾರಣ ಗ್ರಂಥಕಾರರು ಅದನ್ನು ಹೇಳಿಲ್ಲವೆಂದೂ ಕೂಡ ತಿಳಿಯಬಹುದು.

**प्रकाशः – नन्वनेकपदात्मके वाक्ये समभिव्याहृतानि पदान्येव स्वार्थविशिष्टसंसर्गं**

वा संसर्गविशिष्टस्वार्थानेव वा युगपद्बोधयन्ति । नतु पदार्थान् प्रतिपाद्यानन्तरं तत्संसर्गं वाक्यार्थं बोधयन्ति । विरम्य व्यापारानुपपत्तेः । तथाच वाक्यमनेकपदार्थ-विशिष्टसंसर्गरूपं स्वार्थं बोधयित्वा तदन्वययोग्यं वाक्यान्तरार्थमनुमापयतीति लिङ्गवदेवाविप्रकर्षात्कथं ततो दौर्बल्यम् ।

ಆಕ್ಷೇಪ - ಲಿಂಗಕ್ಕಿಂತಲೂ ವಾಕ್ಯಕ್ಕೆ ದೌರ್ಬಲ್ಯವನ್ನು ಹೇಳುತ್ತಿದ್ದೀರಿ. ಇದು ಸರಿಯಲ್ಲ. ಏಕೆಂದರೆ ಲಿಂಗಕ್ಕಿಂತಲೂ ವಾಕ್ಯವು ವಿಳಂಬವಾಗಿ ಅರ್ಥನಿರ್ಣಾಯಕವಾಗುವುದರಿಂದ ದುರ್ಬಲವಾಗಿದೆಯೆಂದು ಹೇಳುತ್ತಿದ್ದೀರಿ. ಆದರೆ ವಾಕ್ಯ ಹಾಗೂ ಲಿಂಗಗಳೆರಡರಲ್ಲಿ ಏನೂ ವೈಲಕ್ಷಣ್ಯವಿಲ್ಲ. ವಾಕ್ಯದಿಂದ ಅರ್ಥವನ್ನು ನಿರ್ಣಯಿಸುವಾಗ ವಿಳಂಬವಾಗುವಂತೆ ಲಿಂಗದಿಂದ ಅರ್ಥವನ್ನು ನಿರ್ಣಯಿಸುವಾಗಲೂ ವಿಳಂಬ ಆಗಿಯೇ ಆಗುತ್ತದೆ. ಲಿಂಗವು ಶೀಘ್ರೋಪಸ್ಥಾಪಕವೆಂದು ಹೇಳಿದರೆ, ವಾಕ್ಯವೂ ಕೂಡ ಶೀಘ್ರೋಪಸ್ಥಾಪಕವೇ ಆಗಿದೆ. ಏಕೆಂದರೆ ನಾವು ಅನ್ವಿತಾಭಿಧಾನವಾದಿಗಳು. ವಾಕ್ಯದಲ್ಲಿರುವ ಸಮಭಿವ್ಯಾಹೃತವಾದ ಪದಗಳೆಲ್ಲವೂ ಸ್ವಾರ್ಥಸಂಸರ್ಗವನ್ನು ಅಥವಾ ಸಂಸೃಷ್ಟವಾದ ಸ್ವಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಇವುಗಳು ಏಕಕಾಲದಲ್ಲಿಯೇ ಪದಾರ್ಥವನ್ನು ತಿಳಿಸುತ್ತವೆ ಹೊರತು, ಮೊದಲು ಪದಾರ್ಥಗಳನ್ನು ತಿಳಿಸಿ, ಅನಂತರ ಪದಾರ್ಥಗಳಲ್ಲಿರುವ ಸಂಬಂಧವನ್ನು ತಿಳಿಸುವುದಿಲ್ಲ. ಏಕೆಂದರೆ ಜಡವಾದ ಪದಗಳಿಗೆ ವಿರಮ್ಯವ್ಯಾಪಾರವು ಕೂಡುವುದಿಲ್ಲ. ಆದ್ದರಿಂದ ವಾಕ್ಯವು ಅನೇಕ ಪದಾರ್ಥವಿಶಿಷ್ಟವಾದ ಸಂಸರ್ಗರೂಪವಾದ ತನ್ನ ಅರ್ಥವನ್ನು ಮೊದಲು ತಿಳಿಸಿ, ಅನಂತರ ಆ ಪದಾರ್ಥಗಳಿಗೆ ಅನ್ವಯಯೋಗ್ಯವಾದ ವಾಕ್ಯಾಂತರಾರ್ಥವನ್ನು ಅನುಮಾನದಿಂದ ತಿಳಿಸುತ್ತದೆ. ಆದ್ದರಿಂದ ಲಿಂಗವು ಹೇಗೆ ದ್ವಿತೀಯ ಕಕ್ಷಾದಲ್ಲೇ ನಿರ್ಣಾಯಕವಾಗಿದೆಯೋ, ಅದರಂತೆ ವಾಕ್ಯವೂ ಸಹ ದ್ವಿತೀಯ ಕಕ್ಷೆಯಲ್ಲಿಯೇ ನಿರ್ಣಾಯಕವಾಗಿದೆ. ಏಕೆಂದರೆ ವಾಕ್ಯವು ತನ್ನಲ್ಲಿರುವ ಪದಾರ್ಥಗಳ ಸಂಸರ್ಗವನ್ನು ಬೋಧಿಸುವುದು ಮೊದಲನೆಯ ಕಕ್ಷೆ. ಅನಂತರ ಈ ವಾಕ್ಯಾರ್ಥದ ಅನ್ವಯಕ್ಕೆ ಯೋಗ್ಯವಾಗಿರುವಂತಹದ್ದೇ ವಾಕ್ಯಾಂತರಾರ್ಥ ಎಂದು ನಿರ್ಣಯಿಸುವುದು ಎರಡನೆಯ ಕಕ್ಷೆ. ಇಷ್ಟರಿಂದಲೇ ವಾಕ್ಯಾಂತರಾರ್ಥದ ಅನುಮಿತಿಯು ಬರುವುದರಿಂದ ಲಿಂಗಕ್ಕಿಂತಲೂ ವಿಪ್ರಕರ್ಷವೆಂದು ಹೇಳಲು ಸಾಧ್ಯವಿಲ್ಲ. ಹೀಗಿರುವಾಗ ಲಿಂಗಕ್ಕಿಂತಲೂ ವಾಕ್ಯವು ದುರ್ಬಲವೆಂದು ಹೇಗೆ ಹೇಳಿದಿರಿ?

**प्रकाशः** – नच पदैः पदार्थस्मृतौ जातायामनन्तरं वाक्यार्थबोधस्ततस्तदन्वययोग्य-वाक्यान्तरार्थानुमितिरिति विप्रकर्ष इति वाच्यम् ।

ಸಮಾಧಾನ - ಎರಡು ಕಕ್ಷೆಗಳಿಂದಲೇ ವಾಕ್ಯವು ಅರ್ಥನಿರ್ಣಾಯಕವಾಗುವುದಿಲ್ಲ. ಏಕೆಂದರೆ ಮೊದಲು ಪದಗಳನ್ನು ಕೇಳಿದಾಗ ಪದಾರ್ಥಸ್ಮರಣೆ ಬರುತ್ತದೆ. ಇದು ಮೊದಲನೆಯ ಕಕ್ಷೆ. ಅನಂತರ ವಾಕ್ಯಾರ್ಥಜ್ಞಾನ ಬರುತ್ತದೆ. ಇದು ಎರಡನೆಯ ಕಕ್ಷೆ. ಅನಂತರ ಆ ಪದಾರ್ಥಗಳ ಅನ್ವಯಕ್ಕೆ ಯೋಗ್ಯವಾದ ವಾಕ್ಯಾಂತರಾರ್ಥದ ಅನುಮಿತಿ ಬರುತ್ತದೆ. ಇದು ಮೂರನೆಯ ಕಕ್ಷೆ. ಹೀಗೆ ಮೂರು ಕಕ್ಷೆಗಳಿಂದಲೇ ಅನುಮಿತಿಯು ಹುಟ್ಟಲು ಸಾಧ್ಯ. ಆದ್ದರಿಂದ ಲಿಂಗಕ್ಕಿಂತಲೂ ವಿಲಂಬವಾಗಿಯೇ ಅರ್ಥನಿರ್ಣಯವು ಉಂಟಾಗುತ್ತದೆ.

**प्रकाशः** – पदकदम्बश्रवणवाक्यार्थबोधयोर्मध्ये पदार्थस्मृतेरेवानङ्गीकारात् । उक्तञ्च तर्कताण्डवे "वाक्यस्थपदज्ञानान्वयानुभवयोर्मध्ये पदार्थस्मृतिरेव नास्ति" इति । उक्तञ्च सुधायामपि "पदनिचयश्रवणवाक्यार्थबोधौ अन्तरा अर्थस्मृतीनामेवानभ्युपगमात्" इति ।

ಆಕ್ಷೇಪ - ಅನೇಕ ಪದಗಳನ್ನು ಕೇಳಿದಾಗ ನೇರವಾಗಿ ವಾಕ್ಯಾರ್ಥಜ್ಞಾನ ಬರುತ್ತದೆಂಬುದು ನಮ್ಮ ಸಿದ್ಧಾಂತ. ಮಧ್ಯದಲ್ಲಿ ಪದಾರ್ಥ ಸ್ಮರಣೆಯನ್ನು ಭಾಟ್ಟರು, ನೈಯ್ಯಾಯಿಕರು ಮೊದಲಾದವರು ಒಪ್ಪುತ್ತಾರೆ ಹೊರತು, ನಮ್ಮ ಸಿದ್ಧಾಂತದಲ್ಲಿ ಇದನ್ನು ಒಪ್ಪುವುದಿಲ್ಲ. ಇದನ್ನೇ ತರ್ಕತಾಂಡವದಲ್ಲಿ 'ವಾಕ್ಯಸ್ಥಪದಜ್ಞಾನಾನ್ವಯಾನುಭವಯೋರ್ಮಧ್ಯೇ ಪದಾರ್ಥಸ್ಮೃತಿರೇವ ನಾಸ್ತಿ' ಎಂದು ಹೇಳಿದ್ದಾರೆ. ವಾಕ್ಯದಲ್ಲಿರುವ ಪದಗಳನ್ನು ಕೇಳಿದಾಗ ವಾಕ್ಯಾರ್ಥಬೋಧವು ಬರುತ್ತದೆ. ಇವೆರಡರ ಮಧ್ಯದಲ್ಲಿ ಪದಾರ್ಥಸ್ಮೃತಿಯೇ ಇರುವುದಿಲ್ಲ ಎಂದು ಇದರ ಅರ್ಥ. ನ್ಯಾಯಸುಧೆಯಲ್ಲಿಯೂ ಸಹ 'ಪದನಿಚಯಶ್ರವಣವಾಕ್ಯರ್ಥಬೋಧೌ - ಅಂತರಾ - ಅರ್ಥಸ್ಮೃತೀ ನಾಮೇವಾನಭ್ಯುಪಗಮಾತ್' ಪದಗಳ ಸಮೂಹವನ್ನು ಕೇಳಿದಾಗ ವಾಕ್ಯಾರ್ಥಜ್ಞಾನವು ಬರುತ್ತದೆ. ಮಧ್ಯದಲ್ಲಿ ಪದಾರ್ಥಸ್ಮೃತಿಯನ್ನೇ ನಾವು ಒಪ್ಪಿಲ್ಲವೆಂದು ಹೇಳಿದ್ದಾರೆ.

**प्रकाशः** – नच पदनिचयरूपवाक्यश्रवणानन्तरं सङ्केतस्मरणे सति पदार्थविशिष्टसंसर्गबोध इति विलम्बः ।

ಅವಾಂತರ ಸಮಾಧಾನ - ಹಾಗಾದರೆ ಪದಸಮೂಹರೂಪವಾದ ವಾಕ್ಯವನ್ನು ಕೇಳಿದ ಮೇಲೆ ಶಕ್ತಿಸ್ಮರಣೆಯು ಬರುತ್ತದೆ. ಅನಂತರ ಪದಾರ್ಥವಿಶಿಷ್ಟವಾದ ಸಂಸರ್ಗಬೋಧ ಬರುತ್ತದೆ. ಹೀಗೆ ಮೊದಲು ಪದಗಳ ಜ್ಞಾನ, ಅನಂತರ ಶಕ್ತಿಸ್ಮರಣೆ, ಅನಂತರ ಪದಾರ್ಥಗಳ ಸಂಸರ್ಗಜ್ಞಾನ. ಹೀಗೆ ಮೂರು ಕಕ್ಷೆಯನ್ನು ಒಪ್ಪಲೇ ಬೇಕಾದ್ದರಿಂದ ವಿಳಂಬವಾಗಿ ಉಪಸ್ಥಿವಾಗುತ್ತದೆ.

**प्रकाशः** – लिङ्गेऽपि सङ्केतस्मरणानन्तरमेव व्याप्यरूपस्वार्थबोध इति साम्यात् ।

ಅವಾಂತರ ಆಕ್ಷೇಪ - ಈ ಶಕ್ತಿಸ್ಮರಣೆಯು ಲಿಂಗದಲ್ಲಿಯೂ ಸಮಾನವಾಗಿದೆ. ಲಿಂಗವಾಚಕವಾದ ಶಬ್ದವೂ ಸಹ ಮೊದಲು ಪದಜ್ಞಾನವನ್ನು ಹುಟ್ಟಿಸಿ, ಅನಂತರ ಶಕ್ತಿಜ್ಞಾನವನ್ನು ಹುಟ್ಟಿಸಿ, ಕೊನೆಯಲ್ಲಿ ವ್ಯಾಪ್ಯರೂಪವಾದ ಸ್ವಾರ್ಥವನ್ನು ಬೋಧಿಸುತ್ತಿದೆ. ಹೀಗೆ ವಾಕ್ಯಕ್ಕಿಂತಲೂ ಲಿಂಗದಲ್ಲಿ ವ್ಯತ್ಯಾಸವನ್ನು ತೋರಿಸಲಾಗದು.

**प्रकाशः** – किञ्चैकपदात्मकलिङ्गे खटिति स्वार्थबोधेऽप्यनेकपदात्मकलिङ्गेऽनेकपदार्थकथनद्वारा व्याप्यस्वरूपस्वार्थबोधेन विलम्बाद्वाक्यादविशेषः ।

ಮತ್ತು ಏಕಪದಸ್ವರೂಪವಾದ ಲಿಂಗದಲ್ಲಿ ಕೂಡಲೇ ಸ್ವಾರ್ಥಬೋಧವು ಹುಟ್ಟಿದರೂ ಸಹ ಅನೇಕ ಪದಾತ್ಮಕವಾದ ಲಿಂಗದಲ್ಲಿ ಅನೇಕ ಪದಗಳ ಅರ್ಥವನ್ನು ಹೇಳುವ ಮೂಲಕವೇ ವ್ಯಾಪ್ಯರೂಪವಾದ

ಸ್ವಾರ್ಥವನ್ನು ಬೋಧಿಸಬೇಕು. ಆದ್ದರಿಂದ ವಿಲಂಬವಾಗಿಯೇ ಲಿಂಗವು ಅರ್ಥೋಪಸ್ಥಾಪಕವಾಗುವುದರಿಂದ ವಾಕ್ಯಕ್ಕಿಂತ ವೈಲಕ್ಷಣ್ಯವನ್ನು ತೋರಿಸಲು ಸಾಧ್ಯವಿಲ್ಲ.

**प्रकाशः** – एकपदात्मकेऽप्यवयवसमभिव्याहारसापेक्षत्वेन विलम्बाचेति चेत्

ಮತ್ತು ಏಕಪದಾತ್ಮಕವಾದ ಲಿಂಗವೂ ಕೂಡ ಅವಯವಸಮಭಿವ್ಯಾಹಾರ ಸಾಪೇಕ್ಷಿತವಾದ್ದರಿಂದ ಅಲ್ಲಿಯೂ ಸಹ ವಿಲಂಬವು ಆಗಿಯೇ ಆಗುತ್ತದೆ. ಆದ್ದರಿಂದ ವಾಕ್ಯವು ಲಿಂಗಕ್ಕಿಂತಲೂ ವಿಪ್ರಕರ್ಷವಾಗಿ ಅರ್ಥನಿರ್ಣಾಯಕವಾಗಿದೆ. ಮತ್ತು ಲಿಂಗಕ್ಕಿಂತಲೂ ದುರ್ಬಲವಾಗಿದೆಯೆಂದು ಹೇಗೆ ಹೇಳುತ್ತೀರಿ?

**प्रकाशः** – उच्यते । वाक्यं स्वार्थं बोधयित्वा तस्याव्याप्यत्वाज्झटिति वाक्यान्तरार्थनिर्णयेऽसमर्थं सत्, स्वार्थान्वयायोग्यार्थपरत्वे समभिव्याहारानुपपत्तेरित्यन्यथानुपपत्ति सध्रीचीनमेव वाक्यान्तरार्थं निर्णाययति ।

ಅಂತಿಮ ಸಮಾಧಾನ - ವಾಕ್ಯವು ವಿಳಂಬವಾಗಿಯೇ ಅರ್ಥನಿರ್ಣಾಯಕವಾಗಿದೆಯೆನ್ನಲು ಪ್ರಬಲವಾದ ಕಾರಣ ಹೀಗಿದೆ - ವಾಕ್ಯವು ಮೊದಲು ಸ್ವಾರ್ಥವನ್ನು ಬೋಧನೆ ಮಾಡುತ್ತದೆ. ಇದರಂತೆ ಏಕಪದಾತ್ಮಕವಾದ ಲಿಂಗವಾಗಲೀ, ಅನೇಕ ಪದಾತ್ಮಕವಾದ ಲಿಂಗವಾಗಲೀ, ಮೊದಲು ಸ್ವಾರ್ಥವನ್ನೇ ಬೋಧಿಸುತ್ತದೆ. ಆದರೆ ಲಿಂಗದಿಂದ ತಿಳಿಯುವ ಅರ್ಥವು ವ್ಯಾಪ್ಯಧರ್ಮವಾಗಿರುತ್ತದೆ. ವಾಕ್ಯದಿಂದ ತಿಳಿಯುವ ಅರ್ಥವು ವ್ಯಾಪ್ಯಧರ್ಮವಾಗಿರುವುದಿಲ್ಲ. ಆದ್ದರಿಂದ ಅದು ಕೂಡಲೇ ವಾಕ್ಯಾಂತರಾರ್ಥನಿರ್ಣಯದಲ್ಲಿ ಸಮರ್ಥವಾಗುವುದಿಲ್ಲ. ಆದ್ದರಿಂದ ಮೊದಲು ಸ್ವಾರ್ಥವನ್ನು ತಿಳಿಸಿ, ಅನಂತರ ಈ ಅರ್ಥದ ಅನ್ವಯಕ್ಕೆ ಯೋಗ್ಯವಾದ ವಾಕ್ಯಾಂತರಾರ್ಥದಲ್ಲಿ ಅನ್ವಯವನ್ನು ತಿಳಿಸುತ್ತದೆ. ಒಂದು ವೇಳೆ ಸ್ವಾರ್ಥದ ಅನ್ವಯದಲ್ಲಿ ಅಯೋಗ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡುವುದಾದರೆ ಸಮಭಿವ್ಯಾಹಾರವೇ ಅನುಪಪನ್ನವಾಗುತ್ತದೆ. ಉದಾಹರಣೆ - 'ಯಂ ಪೃಥಿವೀ ನ ವೇದ' ಎಂಬಲ್ಲಿರುವ ಪೃಥಿವೀ ಶಬ್ದವು ಅಭಿಮಾನಿಚೇತನವನ್ನು ಪ್ರತಿಪಾದನೆ ಮಾಡದಿದ್ದರೆ 'ನ ವೇದ' ಎಂಬ ಸಮಭಿವ್ಯಾಹಾರವೇ ಕೂಡುವುದಿಲ್ಲವೆಂಬ ಅನ್ಯಥಾನುಪಪತ್ತಿಯಿಂದ ಸಹಿತವಾಗಿ ವಾಕ್ಯಾಂತರಾರ್ಥವನ್ನು ನಿರ್ಣಯಿಸುತ್ತದೆ.

**प्रकाशः** – लिङ्गं तु नैवमिति विप्रकर्षसन्निकर्षौ । वाक्यद्वयानुसन्धानसापेक्षत्वाद्वाक्यस्य विप्रकर्षः ।

ಆದರೆ ಲಿಂಗವು ಹೀಗೆ ಅನ್ಯಥಾನುಪಪತ್ತಿಯಿಂದ ಸಹಿತವಾಗಿ ವಾಕ್ಯಾಂತರಾರ್ಥವನ್ನು ನಿರ್ಣಯಿಸುವುದಿಲ್ಲ. ನೇರವಾಗಿ ವ್ಯಾಪ್ಯಧರ್ಮವನ್ನು ತಿಳಿಸುವ ಮೂಲಕವೇ ವಾಕ್ಯಾಂತರಾರ್ಥಕ್ಕೆ ನಿರ್ಣಾಯಕವಾಗುತ್ತದೆ. ಹೀಗೆ ವಾಕ್ಯವು ವಿಪ್ರಕೃಷ್ಟವಾಗಿದೆ. ಲಿಂಗವು ಸನ್ನಿಕೃಷ್ಟವಾಗಿದೆಯೆಂದು ತಿಳಿಯಬೇಕು. ಮತ್ತು ವಾಕ್ಯಾಂತರಾರ್ಥನಿರ್ಣಾಯಕದಲ್ಲಿ ಎರಡು ವಾಕ್ಯಗಳನ್ನು ಅನುಸಂಧಾನ ಮಾಡಬೇಕು. ಆದ್ದರಿಂದ ವಾಕ್ಯವು ವಿಳಂಬವಾಗಿ ಅರ್ಥನಿರ್ಣಾಯಕವಾಗುತ್ತದೆ.

ವಾಮನಾಧಿಕರಣ (೧-೩-೭)

**प्रकाशः** – 'अनेकपदार्थकथनद्वारा' इत्युक्तिस्तु विशेषान्वयबोधेऽर्थ-विशेषोपस्थापकपदान्तर समभिव्याहारसापेक्षत्वमात्रेण वा ''युक्तं चैकार्थत्वे'' इत्यादिवक्ष्यमाणरीत्या पदनिचयश्रवणविलम्बेनार्थप्रतीतेर्विलम्बितत्वाद्वा संसर्ग-ज्ञानस्यानेकपदार्थपूर्वकत्वाद्वेति

ಹಾಗಾದರೆ 'ಅನೇಕಪದಾರ್ಥಕಥನದ್ವಾರಾ' ಎಂದೇಕೆ ಹೇಳಬೇಕಿತ್ತು? ಏಕೆಂದರೆ ಈಗಾಗಲೇ ಹೇಳಿದಂತೆ ಲಿಂಗವು ವ್ಯಾಪ್ಯಧರ್ಮವನ್ನು ನೇರವಾಗಿ ತಿಳಿಸಿ, ಅರ್ಥನಿರ್ಣಾಯಕವಾಗುತ್ತದೆ. ಆದರೆ ವಾಕ್ಯವು ನೇರವಾಗಿ ವ್ಯಾಪ್ಯಧರ್ಮವನ್ನು ತಿಳಿಸದ ಕಾರಣ, ದುರ್ಬಲವಾಗಿದೆಯೆಂದು ಹೇಳುತ್ತಿದ್ದೀರಿ. ಹೀಗಿರುವಾಗ ಇಷ್ಟನ್ನೇ ಗ್ರಂಥಕಾರರು ಹೇಳಿ, ವಾಕ್ಯಕ್ಕೆ ದೌರ್ಬಲ್ಯವನ್ನು ಸಮರ್ಥಿಸಿದ್ದರೆ ಸಾಕಾಗುತ್ತಿತ್ತು. 'ಅನೇಕಪದಾರ್ಥಕಥನದ್ವಾರಾ' ಎಂದೇಕೆ ಹೇಳಿದರು? ಎಂದರೆ ಸಾಮಾನ್ಯತಃ ಒಂದೊಂದು ಪದಗಳನ್ನು ಕೇಳಿದಾಗ, ಅನ್ವಯಜ್ಞಾನವು ಬರಬಹುದು. ಆದರೆ ವಿಶೇಷವಾದ ಅನ್ವಯಬೋಧವು ಬರಬೇಕಾದರೆ, ಪದಾಂತರದ ಸಮಭಿವ್ಯಾಹಾರವು ನಿಯಮೇನ ಇರಲೇಬೇಕು. ಅಥವಾ 'ಯುಕ್ತಂ ಚೈಕಾರ್ಥತ್ವೇ' ಇತ್ಯಾದಿಯಾಗಿ ಮುಂದೆ ಹೇಳುವಂತೆ ಅನೇಕ ಪದಗಳನ್ನು ಕೇಳಬೇಕಾದ್ದರಿಂದ ವಿಳಂಬವಾಗುತ್ತದೆ. ಆದ್ದರಿಂದಲೇ ಅರ್ಥಪ್ರತೀತಿಯಲ್ಲೂ ಸಹ ವಿಳಂಬವಿರುತ್ತದೆ. ಅಥವಾ ಸಂಸರ್ಗಜ್ಞಾನವು ಅನೇಕ ಪದಾರ್ಥಪೂರ್ವಕವಾದ್ದರಿಂದಲೂ ವಾಕ್ಯದಲ್ಲಿ ವಿಳಂಬವಿರುತ್ತದೆಂದು ತಿಳಿಯಬೇಕು. ಈ ಹೀಗೆ ಲಿಂಗಕ್ಕಿಂತಲೂ ವಾಕ್ಯಕ್ಕಿಂತಲೂ ವಿಳಂಬವಾಗಿ ಅರ್ಥನಿರ್ಣಾಯಕವಾಗಿದೆಯೆಂದು ತಿಳಿಯಬೇಕು.

**प्रकाशः – इदमेवेति ।।** ततश्च वाक्यस्येत्यादिनोक्तमेव बीजमित्यर्थः ।

'ಇದಮೇವ' ಎಂದರೆ 'ತತಶ್ಚ ವಾಕ್ಯಸ್ಯ' ಇತ್ಯಾದಿ ವಾಕ್ಯದಿಂದ ಹೇಳಿದ್ದಕ್ಕೆ ಟೀಕೆಯಲ್ಲಿ ಹೇಳಿದ ಸಾಕಾದಸಾಕ್ಷಾತ್ತ್ವಗಳೇ ಕಾರಣವಾಗಿವೆ ಎಂದು ಅರ್ಥ.

**प्रकाशः** – ननु टीकायां ''लिङ्गवाक्ययोस्साक्षादसाक्षात्त्वेन भेदः । ''गोत्रभिदम्'' ''प्रवक्षणा अभिनत्पर्वतानाम्'' इत्यादिवत्'' इति पर्वतपक्षभेदकत्व-रूपव्याप्यार्थकस्यैव वाक्यतयोदाहृतत्वात्कथमेतदेवाभिप्रेतमित्युक्तमित्यत आह – **गोत्रेति ।।**

ಟೀಕೆಯಲ್ಲಿ 'ಲಿಂಗವಾಕ್ಯಯೋಃ ಸಾಕ್ಷಾದಸಾಕ್ಷಾತ್ತ್ವೇನ ಭೇದಃ' ಎಂದು ಹೇಳಿ ಇದಕ್ಕೆ 'ಗೋತ್ರಭಿದಂ ಪ್ರವಕ್ಷಣಾ ಅಭಿನತ್ ಪರ್ವತಾನಾಮಿತ್ಯಾದಿವತ್' ಎಂದು ಉದಾಹರಣೆಯನ್ನು ನೀಡಿದ್ದಾರೆ. ಇಲ್ಲಿ 'ಗೋತ್ರಭಿದಂ' ಎಂಬುದಕ್ಕೆ ಪರ್ವತಗಳ ರೆಕ್ಕೆಯನ್ನು ತುಂಡರಿಸುತ್ತಾನೆಂದೇ ಅರ್ಥ. 'ಪ್ರವಕ್ಷಣಾ ಅಭಿನತ್ ಪರ್ವತಾನಾಮ್' ಎಂಬಲ್ಲಿಯೂ ಪರ್ವತಗಳ ರೆಕ್ಕೆಗಳನ್ನು ತುಂಡರಿಸುತ್ತಾನೆಂದೇ ಅರ್ಥ. ಎರಡೂ ಸಹ ಲಿಂಗವೇ ಆಗಿವೆ. 'ಗೋತ್ರಭಿದಂ' ಎಂಬುದು ಏಕಪದಾತ್ಮಕವಾದ ಲಿಂಗವಾಗಿದ್ದು, ಪರ್ವತಭೇದಕತ್ವವೆಂಬ ವ್ಯಾಪ್ಯಧರ್ಮವನ್ನು ತಿಳಿಸುತ್ತಿದೆ. 'ಅಭಿನತ್ ಪರ್ವತಾನಾಮ್' ಎಂಬುದು ಅನೇಕ ಪದಾತ್ಮಕವಾದ

ಲಿಂಗಸ್ವರೂಪವಾಗಿದೆ. ಇದು ನೇರವಾಗಿ ಪರ್ವತಪಕ್ಷಭೇದಕತ್ವ ಧರ್ಮವನ್ನು ಹೇಳುತ್ತಿದೆ. ಆದ್ದರಿಂದ ಈ ವಾಕ್ಯವೇ ಲಿಂಗಸ್ವರೂಪವಾಗಿದೆ ಹೊರತು, ಲಿಂಗದಿಂದ ವಾಕ್ಯವು ಯುಕ್ತವಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಲಿಂಗವಾಕ್ಯಗಳಲ್ಲಿ ಸಾಕ್ಷಾದರ್ಥೋಪಸ್ಥಾಪಕತ್ವ, ಪರಂಪರಯಾ ಅರ್ಥೋಪಸ್ಥಾಪಕತ್ವವಿರುವುದರಿಂದ ವೈಲಕ್ಷಣ್ಯವಿದೆಯೆಂದು ಹೇಳಿ ಉದಾಹರಣೆಯನ್ನು ನೀಡುವಾಗ ಒಂದಕ್ಕೆ ಮಾತ್ರ ಉದಾಹರಣೆಯನ್ನು ನೀಡಿದಂತಿದೆ. ವಾಕ್ಯಕ್ಕೆ ದೃಷ್ಟಾಂತವನ್ನೇ ನೀಡಿದಂತೆ ಕಾಣುವುದಿಲ್ಲವಲ್ಲ. ('ಗೋತ್ರಭಿದಂ' ಎಂಬುದೇ ಬೇರೆ ವಾಕ್ಯ, 'ಪ್ರವಕ್ಷಣಾ ಅಭಿನತ್ ಪರ್ವತನಾಮ್' ಎಂಬುದೇ ಬೇರೆ ವಾಕ್ಯ. ಒಟ್ಟಿಗೆ ಬಂದಿರುವ ವಾಕ್ಯವಲ್ಲವೆಂದು ತಿಳಿಯಬೇಕು.) ಈ ಪ್ರಶ್ನೆಗೆ ಗ್ರಂಥಕಾರರು 'ಗೋತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – यथा लिङ्गयोरेवैकपदानेकपदात्मकयोस्साक्षात्त्वादिना भेदस्तथा लिङ्गवाक्ययोरपि व्याप्याव्याप्यार्पकत्वादिना भेदो ज्ञेयः । उदाहरणं तु 'किं तदत्र' इत्यादिकमेवेति द्रष्टव्यमिति तात्पर्यमुक्तं भवति ।।

ಅಂದರೆ ಲಿಂಗವಿಷಯದಲ್ಲಷ್ಟೇ ಉದಾಹರಣೆಯನ್ನು ನೀಡಿದ್ದು ಸತ್ಯ. ಕಾರಣವೇನೆಂದರೆ, ಏಕಪದಾತ್ಮಕವಾದ ಲಿಂಗವು ಅನೇಕ ಪದಾತ್ಮಕವಾದ ಲಿಂಗಕ್ಕಿಂತಲೂ ಶೀಘ್ರವಾಗಿ ಅರ್ಥನಿರ್ಣಾಯಕವಾಗಿದೆ. ಏಕೆಂದರೆ ಅನೇಕ ಪದಗಳನ್ನು ಕೇಳಿ, ಅನಂತರ ಅರ್ಥನಿರ್ಣಯವು ಬರುವುದಕ್ಕಿಂತ, ಏಕಪದರೂಪವಾದ ಲಿಂಗದಿಂದ ಕೂಡಲೇ ಅರ್ಥನಿರ್ಣಯವು ಬರುತ್ತದೆ. ಆದ್ದರಿಂದ ಲಿಂಗದಲ್ಲಿಯೇ ಯಾವರೀತಿಯಾಗಿ 'ಸಾಕ್ಷಾತ್ತ್ವ' ಮತ್ತು 'ಅಸಾಕ್ಷಾತ್ತ್ವ' ಎಂಬ ಧರ್ಮಗಳಿಂದ ವೈಲಕ್ಷಣ್ಯವಿದೆಯೋ ಅದರಂತೆ ಲಿಂಗ ಹಾಗೂ ವಾಕ್ಯಗಳಲ್ಲಿಯೂ ವೈಲಕ್ಷಣ್ಯವಿದೆ ಎಂಬ ಅಭಿಪ್ರಾಯದಲ್ಲಿ ಈ ಉದಾಹರಣೆಯನ್ನು ನೀಡಿದ್ದಾರೆ. ಲಿಂಗವು ವ್ಯಾಪ್ಯೋಪಸ್ಥಾಪಕವಾಗಿದೆ. ವಾಕ್ಯವು ವ್ಯಾಪ್ಯೋಪಸ್ಥಾಪಕವಾಗಿಲ್ಲ. ಆದ್ದರಿಂದ ಲಿಂಗಕ್ಕಿಂತಲೂ ವಿಳಂಬವಾಗಿ ವಾಕ್ಯವು ಅರ್ಥೋಪಸ್ಥಾಪಕವಾಗಿದೆಯೆಂದು ತಿಳಿಯಬೇಕು. ಈ ವಿಷಯದಲ್ಲಿ ಉದಾಹರಣೆಯನ್ನು 'ಕಿಂ ತದತ್ರ' ಇತ್ಯಾದಿ ವಾಕ್ಯವೇ ಎಂಬುದಾಗಿ ತಿಳಿಯಬೇಕು. ಈಗಾಗಲೇ ಇದರ ಬಗ್ಗೆ ವಿವರಿಸಿದ್ದಾಗಿದೆ.

**प्रकाशः** – अत एवेति ।। अन्यथा तद्यथेत्येवावक्ष्यदिति भावः । कुत एवं लिङ्गवाक्ये एवैते । वदित्यपि तद्यथेत्यर्थे व्याख्यायतामित्यत आह – उक्तं हीति ।। उत्तरत्रान्वयः ।।

'ಅತ ಏವ' ಎಂದು ಗ್ರಂಥದಲ್ಲಿದೆ. ಹಾಗಿಲ್ಲದಿದ್ದರೆ 'ತದ್ಯಥಾ' ಎಂದೇ ಹೇಳುತ್ತಿದ್ದರು ಎಂದರ್ಥ. ಹೀಗೆ ಲಿಂಗದಲ್ಲಿಯೇ ಅವಾಂತರ ವೈಲಕ್ಷಣ್ಯವಿದೆಯೆಂದು ತಿಳಿಸುವುದಕ್ಕಾಗಿಯೇ ಟೀಕೆಯಲ್ಲಿ 'ಇತ್ಯಾದಿವತ್' ಎಂಬುದಾಗಿ ವತ್‌ಕರಣವನ್ನು ಮಾಡಿದ್ದಾರೆ. ಇಲ್ಲದಿದ್ದರೆ 'ತದ್ಯಥಾ' ಎಂದೇ ಹೇಳುತ್ತಿದ್ದರು. ಇದರಿಂದ 'ಸಾಕ್ಷಾತ್ತ್ವ-ಅಸಾಕ್ಷಾತ್ತ್ವ' ಎಂಬ ವಿಷಯದಲ್ಲಿ ಮಾತ್ರ ದೃಷ್ಟಾಂತವೆಂದು ತಿಳಿಯುತ್ತದೆ. 'ವತ್' ಎಂಬುದಕ್ಕೇ 'ತದ್ಯಥಾ' ಎಂಬರ್ಥವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ಉಕ್ತಂ ಹಿ' ಎಂಬುದಾಗಿ ಉತ್ತರಿಸಿದ್ದಾರೆ. 'ಉಕ್ತಂ ಹಿ' ಎಂಬುದಕ್ಕೆ ಮುಂದೆ ಅನ್ವಯ ಮಾಡಬೇಕು.

**प्रकाशः** – अन्तरिति ।। ''अन्तस्समुद्रे मनसा चरन्तं' 'यस्याण्डकोशं शुष्ममाहुः'' इति समुद्रस्थत्वब्रह्माण्डवीर्यत्वादिलिङ्गादित्युक्तेः ।

ಅನೇಕ ಪದಗಳಿಂದ ಅರ್ಪಿತವಾದ ಅಸಾಧಾರಣ ಧರ್ಮಕ್ಕೆ ಲಿಂಗತ್ವವು ಸೂತ್ರ, ಭಾಷ್ಯ, ಟೀಕೆಗಳಿಗೆ ಸಮ್ಮತವಾಗಿದೆಯೆಂದು 'ಅಂತಃ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ಅಂತಃಸಮುದ್ರೇ ಮನಸಾ ಚರಂತಂ' 'ಯಸ್ಯಾಂಡಕೋಶಂ ಶುಷ್ಮಮಾಹುಃ' ಎಂಬಲ್ಲಿ ಅನೇಕ ಪದಗಳಿಂದ ಸಮುದ್ರಸ್ಥತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದ ಲಿಂಗಗಳು ತಿಳಿಯುತ್ತಿವೆ.

**प्रकाशः** – ''अत एव प्राणः'' इत्यत्र ''श्रीश्च ते लक्ष्मीश्च पत्न्यौ'' इति श्रीलक्ष्मीपतित्वस्य,

'ಅತ ಏವಪ್ರಾಣಃ' ಎಂಬ ಸೂತ್ರದಲ್ಲಿ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ಅನೇಕ ಪದಗಳಿಂದ 'ಶ್ರೀಲಕ್ಷ್ಮೀಪತಿತ್ವ' ಎಂಬ ಲಿಂಗವು ತಿಳಿಯುತ್ತಿದೆ.

**प्रकाशः** –''जीवमुख्यप्राण'' इत्यत्र ''तावन्ति शतसंवत्सरस्याह्नां सहस्राणि'' इति शतायुष्ट्वस्य, ''ता अहिंसन्ताहमुक्थमस्म्यहमुक्थमस्मि'' इत्यादिप्राणसंवादादि-लिङ्गस्य,

'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಲ್ಲಿ 'ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ' ಎಂಬ ವಾಕ್ಯದಲ್ಲಿ ತಿಳಿಯುವ ಶತಾಯುಷ್ಟ್ವಲಿಂಗವೂ ಕೂಡ ಅನೇಕ ಪದಾತ್ಮಕವಾಗಿದೆ. 'ತಾ ಅಹಿಂಸಂತಾಹ-ಮುಕ್ಥಮಸ್ಮ್ಯಹಮುಕ್ಥಮಸ್ಮಿ' ಇತ್ಯಾದಿ ವಾಕ್ಯದಿಂದ ತಿಳಿಯುವ ಪ್ರಾಣಸಂವಾದಾದಿಲಿಂಗವೂ ಕೂಡ ಅನೇಕ ಪದಾತ್ಮಕವಾಗಿದೆ.

**प्रकाशः** – ''तथाहि दृष्टं लिङ्गं च'' इत्यत्र ''अरश्च हवै ण्यश्चार्णवौ ब्रह्मलोके'' इति सुधासमुद्राश्रयलोकवत्त्वादिलिङ्गस्य चोक्तेरिति भावः ।

'ತಥಾಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರದಲ್ಲಿ ಹೇಳಿದ 'ಅರಶ್ಚ ಹವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂಬ ಅನೇಕ ಪದಗಳಿಂದ 'ಸುಧಾಸಮುದ್ರಾಶ್ರಯಲೋಕವತ್ತ್ವ' ಮೊದಲಾದ ಲಿಂಗವೆಂದು ತಿಳಿಯಬೇಕು. ಆದ್ದರಿಂದ ಅನೇಕ ಪದಗಳಿಂದ ಅರ್ಪಿತವಾದ ಲಿಂಗವು ಸೂತ್ರ, ಭಾಷ್ಯ, ಟೀಕೆಗಳಿಗೆ ಸಮ್ಮತವಾಗಿದೆಯೆಂದು ತಿಳಿಯಬೇಕು.




ಲಿಂಗವು ಹೇಗೆ ಅರ್ಥವನ್ನು ನಿರ್ಣಯಿಸುತ್ತದ್ದೋ, ಅದರಂತೆ ವಾಕ್ಯಪ್ರಮಾಣವೂ ಸಹ, ಅರ್ಥವನ್ನು ನಿರ್ಣಯಿಸುತ್ತದೆ. ಇವೆರಡರಲ್ಲಿ ತಾರತಮ್ಯವನ್ನು ಕಲ್ಪಿಸುವುದೇ ತಪ್ಪಾಗುತ್ತದೆಂಬ ಆಶಂಕೆಗೆ ಅವಕಾಶವಿಲ್ಲ. ಏಕೆಂದರೆ ಲಿಂಗವು ನೇರವಾಗಿಯೇ ವ್ಯಾಪ್ಯಜ್ಞಾನವನ್ನು ಹುಟ್ಟಿಸಿ, ಅರ್ಥನಿರ್ಣಾಯಕವಾದರೆ, ವಾಕ್ಯವು ಪದಾರ್ಥಜ್ಞಾನವನ್ನು ಹುಟ್ಟಿಸಿ, ಅನಂತರ ವ್ಯಾಪ್ಯಜ್ಞಾನವನ್ನು ಹುಟ್ಟಿಸುವ ಮೂಲಕ ಅರ್ಥನಿರ್ಣಾಯಕವಾಗಬೇಕು. ಒಂದು ಹಂತದಲ್ಲಿ ಇದು ವಿಳಂಬಪ್ರವೃತ್ತಿ ಮಾಡುವುದರಿಂದ ವಾಕ್ಯವು ದುರ್ಬಲವಾಗಿದೆಯೆಂದು ಅಭಿಪ್ರಾಯ. ವಿಚಾರ ಮಾಡಿದರೆ, ಲಿಂಗದಲ್ಲಿಯೇ ಪರಸ್ಪರ ತಾರತಮ್ಯವಿದೆ. ಕೆಲವು ಲಿಂಗಗಳು ಒಂದೇ ಪದದಿಂದ ತಿಳಿಯುತ್ತವೆ. ಇನ್ನೂ ಕೆಲವು ಲಿಂಗಗಳು ಅನೇಕ ಪದಗಳಿಂದ ತಿಳಿಯುತ್ತವೆ. ಒಂದೇ ಪದದಿಂದ ತಿಳಿಯುವಂತಹ ಲಿಂಗದಲ್ಲಿ ಅನೇಕ ಪದಾರ್ಥಗಳ ಜ್ಞಾನದ ಅನಿವಾರ್ಯತೆ ಇಲ್ಲದ ಕಾರಣ ಕೂಡಲೇ ಅರ್ಥವು ನಿಶ್ಚಯವಾಗುತ್ತದೆ. ಅನೇಕ ಪದಗಳಿಂದ ಲಿಂಗಜ್ಞಾನ ಬರುವಾಗ ಆ ಎಲ್ಲಾ ಪದಾರ್ಥಗಳನ್ನು ತಿಳಿದು ಅನಂತರ ಅರ್ಥನಿಶ್ಚಯವಾಗಬೇಕಾದ ಕಾರಣ ವಿಳಂಬವಾಗಿ ಅರ್ಥನಿರ್ಣಯವಾಗುತ್ತದೆ. ಹೀಗೆ ಲಿಂಗದಲ್ಲೇ ಯಾವರೀತಿಯಾಗಿ ಅವಾಂತರ ತಾರತಮ್ಯವಿದೆಯೋ, ಅದರಂತೆ ಲಿಂಗ ಮತ್ತು ವಾಕ್ಯಗಳ ನಡುವೆಯೂ ತಾರತಮ್ಯವು ಇದ್ದೇ ಇರುತ್ತದೆ.

ಅನೇಕ ಪದಗಳಿಂದ ಅರ್ಪಿತವಾದ ಅಸಾಧಾರಣಧರ್ಮವು ಲಿಂಗವಾಗುವುದಿಲ್ಲವೆಂದು ಶಂಕಿಸಬಾರದು. 'ಅಂತಸ್ತದ್ಧರ್ಮೋಪದೇಶಾತ್' 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರಗಳೆಲ್ಲಾ ಸೂತ್ರಕಾರರು ಉಲ್ಲೇಖ ಮಾಡುವಂತಹ ಸಮುದ್ರಶಾಯಿತ್ವ, ಶ್ರೀಲಕ್ಷ್ಮೀಪತಿತ್ವ ಮೊದಲಾದ ಲಿಂಗಗಳು ಒಂದೊಂದು ಪದಗಳಿಂದ ತಿಳಿಯುವಂತಹದ್ದಲ್ಲ, ಅನೇಕ ಪದಗಳಿಂದಲೇ ತಿಳಿಯುತ್ತದೆ. ಆದ್ದರಿಂದ, ಸೂತ್ರಕಾರರಿಗೆ ಅಭಿಪ್ರೇತವಾದದ್ದನ್ನೇ ಗ್ರಂಥಕಾರರು ಇಲ್ಲಿ ಉಲ್ಲೇಖಿಸುತ್ತಿದ್ದಾರೆಂಬುದನ್ನು ಗಮನಿಸಬೇಕು.



● ● ● ● ●

## ನ್ಯಾಯಸುಧಾ ಅನುವ್ಯಾಖ್ಯಾನಗಳಲ್ಲಿ ವಾಕ್ಯಪ್ರಮಾಣ ಸ್ವರೂಪ ವಿಚಾರ

### तात्पर्यचन्द्रिका

**यद्यपि ''अस्तङ्गतः सविता'' इत्यादिवाक्यं सन्ध्यामुपास्स्वेत्याद्यर्थे तथा 'अयं दण्ड' 'इयं गौः' इत्यादिवाक्यमपि दण्डेन गामानयेत्याद्यर्थे लिङ्गम् । उक्तं हि सुधायां ''वाक्यलिङ्गानुमा हि सा'' इति ।**

ಪ್ರಶ್ನೆ - 'ಅಸ್ತಂಗತಃ ಸವಿತಾ' ಇತ್ಯಾದಿ ವಾಕ್ಯವು ಸಂಧ್ಯಾವಂದನೆಯನ್ನು ಮಾಡು ಇವೇ ಮೊದಲಾದ ಅರ್ಥಗಳಲ್ಲಿ ಲಿಂಗರೂಪವಾಗಿದೆ. ಆದರಂತೆ 'ಅಯಂ ದಂಡಃ' 'ಇಯಂ ಗೌಃ' ಇತ್ಯಾದಿ

ವಾಕ್ಯವೂ ಸಹ ಕೋಲಿನಿಂದ ಹಸುವನ್ನು ಕರೆದುಕೊಂಡು ಬಾ ಇತ್ಯಾದ್ಯರ್ಥದಲ್ಲಿ ಲಿಂಗರೂಪವಾಗಿದೆ. ಆದ್ದರಿಂದಲೇ ನ್ಯಾಯಸುಧೆಯಲ್ಲಿ 'ವಾಕ್ಯಲಿಂಗಾನುಮಾ ಹಿ ಸಾ' ಎಂದು ಹೇಳಿರುತ್ತಾರೆ. ಅಂದರೆ ವಾಕ್ಯವು ನೇರವಾಗಿ ವ್ಯಾಪ್ಯಾರ್ಪಕವಾಗದ ಕಾರಣ, ಲಿಂಗಕ್ಕಿಂತಲೂ ದುರ್ಬಲವಾಗಿದೆಯೆಂದು ಹೇಳಿದಿರಿ, ಆದರೆ ಈ ಉದಾಹರಣೆಗಳನ್ನು ಗಮನಿಸಿದಾಗ, ನೇರವಾಗಿ ವ್ಯಾಪ್ಯಾರ್ಪಕವೇ ಆಗಿದೆಯೆಂದು ತಿಳಿಯುತ್ತದೆ. ಆದ್ದರಿಂದ ಅವ್ಯಾಪೀಭೂತವಾದ ಅನೇಕ ಅರ್ಥಗಳಿಗೆ ಅನುಮಾಪಕವಾದ್ದರಿಂದ ವಾಕ್ಯವು ದುರ್ಬಲವೆಂದು ಹೇಳಿದ್ದು ತಪ್ಪಲ್ಲವೇ?

**तथापि वाक्यान्तरार्थावसितावलिङ्गत्वान्न तदिहोदाहरणम् । उक्तं ह्यनुव्याख्याने–**

**आगमार्थावसित्यर्था नियतव्याप्तयोऽखिलाः ।**
**वाक्यं प्रकरणं स्थानं समाख्या च तथाविधाः ।। इति ।**

ಹೌದು, ಆದರೆ ವಾಕ್ಯಾಂತರಾರ್ಥದ ನಿರ್ಣಯದಲ್ಲಿ 'ಅಸ್ತಂಗತಃ ಸವಿತಾ' ಇತ್ಯಾದಿ ವಾಕ್ಯಗಳು ಲಿಂಗವಾಗುವುದಿಲ್ಲ. ವಕ್ತೃವಿನ ಉದ್ದೇಶವನ್ನು ತಿಳಿಸುವುದರಲ್ಲಷ್ಟೇ ಲಿಂಗರೂಪವಾಗಬಹುದು. ಆದರೆ ಇಲ್ಲಿ ನಾವು ಉಲ್ಲೇಖಿಸುತ್ತಿರುವ ಶ್ರುತಿ, ಲಿಂಗ, ವಾಕ್ಯ ಮೊದಲಾದ ಪ್ರಮಾಣಗಳು ಇತರ ವಾಕ್ಯದ ಅರ್ಥದಲ್ಲಿ ನಿರ್ಣಾಯಕವಾಗಿರಬೇಕು ಎಂದು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ.

ಆಗಮಾರ್ಥವಸಿತ್ಯರ್ಥಾ ನಿಯತವ್ಯಾಪ್ತಯೋಽಖಿಲಾಃ ।
ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾಃ ॥

ವೇದದ ಅರ್ಥವನ್ನು ನಿರ್ಣಯಿಸುವುದರಲ್ಲಿ ನಿಯತವಾದ ವ್ಯಾಪ್ತಿವುಳ್ಳವುಗಳೆಂದರೆ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಇತ್ಯಾದಿಗಳು ಎಂದು ಹೇಳಿದ್ದಾರೆ.

ಆದ್ದರಿಂದ ನೀವು ಉದಾಹರಿಸಿದ, ದೃಷ್ಟಾಂತದಿಂದ ವಾಕ್ಯಕ್ಕೆ ನೇರವಾಗಿ ವ್ಯಾಪ್ಯಾರ್ಪಕತ್ವವನ್ನು ಸಮರ್ಪಿಸಲು ಬರುವುದಿಲ್ಲ. ಹಾಗಾಗಿ ಲಿಂಗಕ್ಕಿಂತಲೂ ವಾಕ್ಯವು ದುರ್ಬಲವೇ ಆಗಿದೆಯೆಂದು ಸಿದ್ಧವಾಯಿತು.

**प्रकाशः –**

नन्वेवमपि लोकेऽऽर्थान्तरानुमापकव्याप्यार्पकमपि वाक्यमुपलभ्यत इत्यव्याप्यभूतानेकार्थानुमापकत्वेन वाक्याप्राबल्योक्तिरयुक्तेत्याशङ्क्याह – **यद्यपीति ।।**

ವಿವರಣೆ - ವಾಕ್ಯವು ನೇರವಾಗಿ ವ್ಯಾಪ್ಯವನ್ನು ಸಮರ್ಪಣೆ ಮಾಡದ ಕಾರಣ ದುರ್ಬಲವೆಂದು ಹೇಳಿದಿರಿ, ಆದರೆ ಲೋಕದಲ್ಲಿರುವ ಅನೇಕ ಪ್ರಯೋಗಗಳನ್ನು ಗಮನಿಸಿದಾಗ, ಅರ್ಥಾಂತರ

ಅನುಮಾಪಕವಾದ ವ್ಯಾಪ್ಯವನ್ನು ಸಮರ್ಪಣೆ ಮಾಡುವಂತಹ ವಾಕ್ಯಗಳೂ ಸಹ ಉಪಲಬ್ಧವಾಗುತ್ತಿವೆ. ಹೀಗಿರುವಾಗ ಅವ್ಯಾಪ್ಯಭೂತವಾದ ಅನೇಕಾರ್ಥಗಳಿಗೆ ಅನುಮಾಪಕವಾದ ಕಾರಣ, ವಾಕ್ಯವು ದುರ್ಬಲವಾಗಿದೆ ಎಂದು ಹೇಳಿದ್ದು, ಹೇಗೆ ಸಮಂಜಸವಾಗುತ್ತದೆ ? ಎಂಬ ಪ್ರಶ್ನೆಗೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – विप्रस्य सन्ध्यामुपास्स्वेति चोरस्य स्तेयार्थमुद्युङ्क्ष्वेति पान्थस्य पन्थानं न व्रजेति कामिन्याः कान्तप्रलोभने प्रवर्तस्वेत्यादिरादिपदार्थः । सवित्रस्तमयस्य तद्व्याप्यत्वादिति भावः ।

ಸೂರ್ಯನು ಅಸ್ತಂಗತನಾದನು ಎಂಬ ಒಂದೇ ವಾಕ್ಯವನ್ನು ಕೇಳಿದಾಗ ಒಂದೊಂದು ರೀತಿಯ ಜನರಿಗೆ ಬೇರೆ ಬೇರೆಯೇ ಅರ್ಥವಾಗುತ್ತದೆ. ವಿಪ್ರನಿಗೆ ಸಂಧ್ಯಾವಂದನೆ ಮಾಡಬೇಕೆಂದು ಅನಿಸುತ್ತದೆ, ಕಳ್ಳನಿಗೆ ಕದಿಯಲು ಉದ್ಯುಕ್ತನಾಗು ಎಂಬರ್ಥವು ತಿಳಿಯುತ್ತದೆ. ದಾರಿಹೋಕನಿಗೆ ಮುಂದೆ ಹೋಗಬೇಡ ಎಂಬರ್ಥವೂ ತಿಳಿಯುತ್ತದೆ. ಕಾಮಿನಿಸ್ತ್ರೀಗೆ ಕಾಂತಪುರುಷನಲ್ಲಿ ರತಿಗೆ ತಯಾರಾಗು ಎಂಬರ್ಥವೂ ತಿಳಿಯುತ್ತದೆ. ಗ್ರಂಥದಲ್ಲಿ ಆದಿಪದದಿಂದ ಈ ಎಲ್ಲ ದೃಷ್ಟಾಂತಗಳನ್ನು ತಿಳಿಯಬೇಕು. ಏಕೆಂದರೆ ಸೂರ್ಯನ ಅಸ್ತಂಗಮನದಿಂದ ಇವೆಲ್ಲವೂ ವ್ಯಾಪ್ಯಭೂತವಾಗಿವೆ.

**प्रकाशः** – उक्तं हीति ।। आनुमानिकपादे शब्दवृत्तिचिन्ताप्रस्तावे ''व्यञ्जनं नाम अपरवृत्तिरस्तीति चेन्न । अनुमानत्वेन शब्दशक्तित्वानङ्गीकारात् । यथोक्तम् । वचनलिङ्गानुमा हि सेति'' इति कर्मनिर्णयवाक्यमुदाहृत्यानुमानत्वमुक्तमित्यर्थः

'ಉಕ್ತಂ ಹಿ' ಎಂದರೆ ಆನುಮಾನಿಕಾಧಿಕರಣದಲ್ಲಿ ಶಬ್ದವೃತ್ತಿಯ ಬಗ್ಗೆ ಚಿಂತನೆ ಮಾಡುವಾಗ 'ವ್ಯಂಜನಂ ನಾಮ ಅಪರವೃತ್ತಿರಸ್ತ ಇತಿ ಚೇನ್ನ ಅನುಮಾನತ್ವೇನ ಶಬ್ದಶಕ್ತಿತ್ವಾನಂಗೀಕಾರಾತ್ । ಯಥೋಕ್ತಮ್ । ವಚನಲಿಂಗಾನುಮಾ ಹಿ ಸೇತಿ' ಎಂದರೆ ವ್ಯಂಜನವೆಂಬ ಪ್ರತ್ಯೇಕ ವೃತ್ತಿಯಿದೆಯೆಂದು ಶಂಕಿಸಬಾರದು. ಅನುಮಾನದಿಂದಲೇ ಅರ್ಥಬೋಧವು ಬರುವಾಗ ಶಬ್ದಶಕ್ತಿಯನ್ನು ಪ್ರತ್ಯೇಕವಾಗಿ ಅಂಗೀಕರಿಸಬೇಕಾಗಿಲ್ಲ. ಇದನ್ನೇ 'ವಚನಲಿಂಗನುಮಾ ಹಿ ಸಾ' ಎಂದು ಹೇಳಲಾಗಿದೆ' ಎಂಬುದಾಗಿ ಕರ್ಮನಿರ್ಣಯದ ವಾಕ್ಯವನ್ನು ಉದಾಹರಿಸಿ, 'ಅಸ್ತಂಗತಃ ಸವಿತಾ' ಇತ್ಯಾದಿ ವಾಕ್ಯಗಳಿಗೆ ಅನುಮಾನತ್ವವನ್ನು ಸಮರ್ಥಿಸಿದ್ದಾರೆ.

**प्रकाशः** – वाक्यान्तरेति ।। वाक्यान्तरार्थावसायकवाक्यमिहाभिप्रेतम् । तच्चोक्तरूपमेवेति न दोष इति भावः ।

'ವಾಕ್ಯಾಂತರಾರ್ಥಾವಸಿತೌ' ಎಂದರೆ ವಾಕ್ಯಾಂತರಾರ್ಥದ ನಿರ್ಣಯಕ್ಕೆ ವಾಕ್ಯವು ಲಿಂಗವಾಗಿರುವುದಿಲ್ಲವೆಂದು ಅಭಿಪ್ರಾಯ. ಈ ವಾಕ್ಯವು ಹಿಂದೆ ಹೇಳಿದ ಸ್ವರೂಪವನ್ನು ತಾಳಿದ್ದರಿಂದ ದೋಷವಿಲ್ಲವೆಂದು ತಿಳಿಯಬೇಕು.

**प्रकाशः – उक्तं हीति ।।** भक्तिपादे ''सन्ध्ये सृष्टिराह हि'' इत्यधिकरणव्याख्यावसर उक्तमित्यर्थः । अखिला उपक्रमादयः नियतव्याप्तयः यो यत्रोपक्रम्यते स तत्र प्रतिपाद्यत इत्यादिरूपां व्याप्तिमपेक्षमाणा आगमार्थावसित्यर्था इत्यर्थः । तथाविधा व्याप्तिमपेक्ष्यागमावसित्यर्थेत्यर्थः ।

ನ್ಯಾಯಸುಧೆಯ ಭಕ್ತಿಪಾದದ 'ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಅಧಿಕರಣದ ವ್ಯಾಖ್ಯಾನದಲ್ಲಿ ಹೀಗಿದೆ - 'ಅಖಿಲಾಃ ಉಪಕ್ರಮಾದಯಃ ನಿಯತವ್ಯಾಪ್ತಯಃ ಯೋ ಯತ್ರ ಉಪಕ್ರಮ್ಯತೇ ಸ ತತ್ರ ಪ್ರತಿಪಾದ್ಯತೇ' ಇತ್ಯಾದಿ ರೂಪಂ ವ್ಯಾಪ್ತಿಮ್ ಅಪೇಕ್ಷಮಾಣಾಃ ಆಗಮಾರ್ಥಾವಸಿತ್ಯರ್ಥಾಃ' ಎಂದು. ಇದರ ಅಭಿಪ್ರಾಯ ಹೀಗಿದೆ - ಅಖಿಲಾಃ = ಸಮಸ್ತವಾದ, ಉಪಕ್ರಮಾದಯಃ = ಉಪಕ್ರಮಾದಿಗಳು, ನಿಯತವ್ಯಾಪ್ತಯಃ = ಯಾವುದು ಯಾವ ವಿಷಯದಲ್ಲಿ ಉಪಕ್ರಾಂತವಾಗಿದೆಯೋ, ಆ ವಿಷಯವು ಆ ಪ್ರಕರಣದಲ್ಲಿ ಪ್ರತಿಪಾದ್ಯವಾಗಿದೆ ಇತ್ಯಾದಿ ವ್ಯಾಪ್ತಿಯನ್ನು ಅಪೇಕ್ಷಿಸಿ, ಆಗಮಾವಸಿತ್ಯರ್ಥಾಃ = ಆಗಮಾರ್ಥ ನಿರ್ಣಾಯಕಗಳಾಗಿವೆ. ಆದ್ದರಿಂದಲೇ ಅವುಗಳೆಲ್ಲವೂ, ಯುಕ್ತಯಃ = ಅನುಮಾನವೇ ಆಗಿವೆ. ಇದರಿಂದ ಅಂದರೆ ವ್ಯಾಪ್ತಿಯನ್ನು ಅವಲಂಬಿಸಿ, ಆಗಮಾರ್ಥವನ್ನು ನಿರ್ಣಯಿಸುವುದರಿಂದ ಇವುಗಳೆಲ್ಲಾ ಆಗಮದಲ್ಲಿ ಸೇರುತ್ತವೆಂದು ಹೇಳಬಾರದು.

ಅಭಿಪ್ರಾಯ ಹೀಗಿದೆ - ಉಪಕ್ರಮಾದಿಗಳೆಲ್ಲವೂ ಯುಕ್ತಿರೂಪವೇ ಆಗಿವೆ. ಏಕೆಂದರೆ ವ್ಯಾಪ್ತಿಯನ್ನು ಅವಲಂಬಿಸಿ, ಆಗಮದ ಅರ್ಥವನ್ನು ನಿಶ್ಚಯಿಸುತ್ತವೆ. ಆದ್ದರಿಂದ ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾಗಳು ಅನುಮಾನರೂಪವೆಂದಂತಾಯಿತು. ಅನುವ್ಯಾಖ್ಯಾನದಲ್ಲಿರುವ 'ತಥಾ ವಿಧಾಃ' ಎಂದರೆ ವಾಕ್ಯಾದಿಗಳೂ ಸಹ ವ್ಯಾಪ್ತಿಯನ್ನು ಅವಲಂಬಿಸಿ, ಆಗಮಾರ್ಥವನ್ನು ನಿರ್ಣಯಿಸುವುದರಿಂದ ಅನುಮಾನರೂಪವೇ ಆಗಿವೆ ಎಂದಭಿಪ್ರಾಯ.

ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಎಂಬ ಆರುವಿಧ ಪ್ರಮಾಣಗಳಲ್ಲಿ ಲಿಂಗವು ಸಹಜವಾಗಿಯೇ ಅನುಮಾನದಲ್ಲಿ ಅಂತರ್ಭೂತವಾಗಿದೆ, ಶ್ರುತಿಯು ಆಗಮರೂಪವಾಗಿದೆ. ಆದ್ದರಿಂದ ವಾಕ್ಯ ಮೊದಲಾದ ನಾಲ್ಕನ್ನು ಮಾತ್ರ ಇಲ್ಲಿ ಅನುಮಾನದಲ್ಲಿ ಅಂತರ್ಭಾವ ಮಾಡಿದ್ದಾರೆ.

**गुरुराजीयम्** – भवद्भिश्चानेकपदात्मकस्यापि लिङ्गत्वाभिधानादित्यत आह – **अत्रापीति ।।** अनेकपदात्मकस्यापि लिङ्गत्वे टीकाकारीयं ज्ञापकमाह – **अत एवेति ।।** ननु तद्यथेत्यादिवद्वत्करणस्योदाहरणार्थत्वस्यापि सम्भवेन कथमेतदित्यतोऽनेकपदात्मकस्यापि लिङ्गत्वे ज्ञापकमाह – **उक्तं हीति ।।**




ಪರಿಪೂರ್ಣಚಂದ್ರಿಕಾ

ವಾಕ್ಯವು ನೇರವಾಗಿ ವ್ಯಾಪ್ಯಾರ್ಪಕವಾಗುವುದಿಲ್ಲವೆಂದು ಹೇಗೆ ಹೇಳಿದಿರಿ? ಏಕೆಂದರೆ ಸೂರ್ಯನು ಮುಳುಗಿದನು ಎಂದು ಹೇಳಿದಾಗ, ಒಬ್ಬೊಬ್ಬ ವ್ಯಕ್ತಿಗೆ ಒಂದೊಂದು ಬಗೆಯಲ್ಲಿ ಅರ್ಥವಾಗುತ್ತದೆ. ವಿಪ್ರನಿಗೆ ಸಂಧ್ಯಾವಂದನೆ ಮಾಡು ಎಂದು, ಕಳ್ಳನಿಗೆ ಕಳ್ಳತನದಲ್ಲಿ ಉದ್ಯುಕ್ತನಾಗು ಎಂದು, ದಾರಿಹೋಕನಿಗೆ ಮುಂದೆ ಹೋಗಬೇಡ ಎಂದು, ಕಾಮಿನಿಸ್ತ್ರೀಗೆ ರತಿಕ್ರೀಡಗಾಗಿ ಕಾಂತಪುರುಷನನ್ನು ಪ್ರಲೋಭನೆ ಮಾಡು ಎಂದು ಅರ್ಥವಾಗುತ್ತದೆ. ಹೀಗೆ ಸೂರ್ಯನ ಅಸ್ತಂಗಮನದಿಂದ ವ್ಯಾಪ್ಯವಾದ ಅರ್ಥಗಳನ್ನು 'ಅಸ್ತಂಗತಃ ಸವಿತಾ' ಎಂಬ ವಾಕ್ಯವು ತಿಳಿಸುವುದರಿಂದ ವಾಕ್ಯವು ಲಿಂಗರೂಪವೇ ಆಗಿದೆ. ಹೀಗಿರುವಾಗ ಲಿಂಗಕ್ಕಿಂತಲೂ ದುರ್ಬಲವೆಂದು ಹೇಗೆ ಹೇಳುತ್ತೀರಿ?

ಈ ಆಕ್ಷೇಪವೂ ಸಹ ತಪ್ಪು. ಏಕೆಂದರೆ ಪ್ರಕೃತ ಉಲ್ಲೇಖಿಸುತ್ತಿರುವ ಶ್ರುತಿ, ಲಿಂಗ, ವಾಕ್ಯ ಇವೆಲ್ಲವೂ ವೇದದ ಅರ್ಥನಿರ್ಣಯದಲ್ಲಿ ಲಿಂಗರೂಪವಾಗಿರಬೇಕು ಹೊರತು, ವಕ್ತೃವಿನ ವಿವಕ್ಷೆಯನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಪ್ರಮಾಣವನ್ನಾಗಿ ಉಲ್ಲೇಖಿಸುತ್ತಿಲ್ಲ. 'ಅಸ್ತಂಗತಃ ಸವಿತಾ' ಇತ್ಯಾದಿ ವಾಕ್ಯವನ್ನು ನೀವು ಉದಾಹರಿಸಿದ್ದು, ವಕ್ತೃವಿನ ವಿವಕ್ಷೆಯನ್ನು ತಿಳಿಯಲಷ್ಟೇ ಅನುಮಾಪಕವಾಗಿದೆ, ಆದ್ದರಿಂದ ದೃಷ್ಟಾಂತವು ವಿಷಮವಾದ್ದರಿಂದ ಆಕ್ಷೇಪವೂ ತಪ್ಪು. ಆದ್ದರಿಂದ 'ಆಗಮಾರ್ಥಾವಸಿತ್ಯರ್ಥಾ ನಿಯತವ್ಯಾಪ್ತಯೋಽಖಿಲಾಃ । ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾಚ ತಥಾವಿಧಾಃ ॥' ಎಂದರೆ ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾಗಳೆಲ್ಲವೂ ವೇದಾರ್ಥದ ನಿರ್ಣಯದಲ್ಲಿ ನಿಯತವ್ಯಾಪ್ತವಾಗಿವೆ ಆದ್ದರಿಂದ ಅನುಮಾನರೂಪವಾಗಿವೆಯೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

• • • • •

## ಪ್ರಕರಣ ಲಕ್ಷಣ
## ವಾಕ್ಯಕ್ಕಿಂತ ಪ್ರಕರಣ ದುರ್ಬಲ

### तात्पर्यचन्द्रिका

**एकार्थतात्पर्ययुक्तानेकवाक्यसन्दर्भरूपप्रकरणस्य तु बह्वर्थपरत्वेनानेकावान्तर-वाक्यार्थधीपूर्वकमिदं प्रकरणमेतत्परमिति यज्ज्ञानं तत्पूर्वकं प्रकरणान्तर्गतविप्रतिपन्न-वाक्यस्यापि प्रकरणानुगुण एवार्थ इत्यनेकवाक्यार्थधीद्वारा लिङ्गत्वाद्वाक्याद् दुर्बलत्वम् ।**

ಅನುವಾದ - ಒಂದೇ ಅರ್ಥದಲ್ಲಿ ತಾತ್ಪರ್ಯವುಳ್ಳ ಅನೇಕ ವಾಕ್ಯಗಳ ಸಮೂಹ ಎಂದು ಪ್ರಕರಣದ ಲಕ್ಷಣ.

ಈ ಪ್ರಕರಣವು ಅನೇಕ ವಾಕ್ಯಗಳಿಂದ ಕೂಡಿರುತ್ತದೆ. ಆದ್ದರಿಂದ ಆ ಎಲ್ಲಾ ವಾಕ್ಯಗಳ ಅರ್ಥವನ್ನು ತಿಳಿದು ಆ ವಾಕ್ಯಾರ್ಥಗಳ ಜ್ಞಾನದ ಅನಂತರ ಈ ಪ್ರಕರಣವು ಇಂತಹ ಪದಾರ್ಥವನ್ನು ಪ್ರತಿಪಾದಿಸುತ್ತದೆಂದು ತಿಳಿಯಬೇಕು. ಮತ್ತು ಪ್ರಕರಣದಲ್ಲಿ ಅಂತರ್ಗತವಾದ ವಿಪ್ರತಿಪನ್ನವಾದ ವಾಕ್ಯಗಳನ್ನು ಪ್ರಕರಣಕ್ಕೆ ಅನುಗುಣವಾಗಿಯೇ ಅರ್ಥೈಸಬೇಕು. ಹೀಗೆ ಅನೇಕ ವಾಕ್ಯಾರ್ಥಗಳ ಜ್ಞಾನದ ಮೂಲಕ ಅರ್ಥನಿಶ್ಚಯದಲ್ಲಿ ಲಿಂಗರೂಪವಾಗಿದೆ. ಆದ್ದರಿಂದ ವಾಕ್ಯಕ್ಕಿಂತಲೂ ಇದು ದುರ್ಬಲ.

**यथा ''ज्योतिर्दर्शनात्'' इत्यत्र ''किं ज्योतिरयं पुरुषः आदित्येनैवायं ज्योतिषाऽऽस्ते'' इत्यादिजीवप्रकरणस्य प्रसिद्धजीवपरत्वेऽनुपपन्नात् ''कतम आत्मा'' इत्यादि प्रश्नवाक्यात् । अत एव तत्र टीका ''कतम आत्मेति प्रश्नायोगात्'' इति ।**

ಇದೇ ಪಾದದಲ್ಲಿ ಮುಂದೆ ಬರುವ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣವು ಇದಕ್ಕೆ ದೃಷ್ಟಾಂತ. ಈ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ - 'ಕಿಂ ಜ್ಯೋತಿರಯಂ ಪುರುಷಃ' ಎಂದು ಜನಕರಾಜರು ಜೀವನು ಯಾವರೀತಿಯ ಜ್ಞಾನಸಾಧನವುಳ್ಳವನಾಗಿದ್ದಾನೆ ? ಎಂದು ಯಾಜ್ಞವಲ್ಕ್ಯರನ್ನು ಕುರಿತು ಪ್ರಶ್ನಿಸುತ್ತಾರೆ. ಇದಕ್ಕೆ ಉತ್ತರಿಸುತ್ತಾ ಯಾಜ್ಞವಲ್ಕ್ಯರು 'ಆದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ' ಆದಿತ್ಯನೇ ಜೀವನಿಗೆ ಜ್ಞಾನಸಾಧನನಾಗಿದ್ದಾನೆ ಇತ್ಯಾದಿಯಾಗಿ ಉತ್ತರಿಸುತ್ತಾ ಕೊನೆಯಲ್ಲಿ ಆತ್ಮನು ಜ್ಞಾನಸಾಧನನಾಗಿದ್ದಾನೆಂದು ಪರಿಸಮಾಪ್ತಿ ಮಾಡಿದ್ದಾರೆ. ಆದ್ದರಿಂದ ಈ ಪ್ರಕರಣವು 'ಜ್ಯೋತಿಸ್' ಶಬ್ದದಿಂದ ಜೀವನು ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸುತ್ತಿದೆ.

ಆದರೆ 'ಕತಮ ಆತ್ಮಾ' ಎಂಬ ಪ್ರಶ್ನವಾಕ್ಯವು ವಿಷ್ಣುವೇ 'ಜ್ಯೋತಿಸ್' ಶಬ್ದ ಪ್ರತಿಪಾದ್ಯನೆಂದು ಸಮರ್ಥಿಸುತ್ತಿದೆ. ಏಕೆಂದರೆ ಜೀವನೇ 'ಜ್ಯೋತಿಸ್' ಶಬ್ದದಿಂದ ಪ್ರತಿಪಾದ್ಯನಾದಲ್ಲಿ, ಮುಂದೆ ಜನಕರಾಜರು 'ಕತಮ ಆತ್ಮಾ' ಎಂದೇಕೆ ಪ್ರಶ್ನಿಸುತ್ತಿದ್ದರು. ಹೀಗೆ ಪ್ರಶ್ನಿಸಿದ್ದರಿಂದ 'ಜ್ಯೋತಿಸ್' ಶಬ್ದವು ವಿಷ್ಣುಪರವಾಗುತ್ತದೆಂದು ತಿಳಿಯುತ್ತದೆ. ಆದ್ದರಿಂದ ಪ್ರಕರಣ ಪ್ರಮಾಣಕ್ಕಿಂತಲೂ ವಾಕ್ಯಪ್ರಮಾಣವು ಶೀಘ್ರೋಪಸ್ಥಾಪಕವಾದ್ದರಿಂದ ವಿಷ್ಣುವೇ 'ಜ್ಯೋತಿಸ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು. ಆದ್ದರಿಂದಲೇ ಜ್ಯೋತಿರಧಿಕರಣದ ಟೀಕೆಯಲ್ಲಿ 'ಕತಮ ಆತ್ಮೇತಿ ಪ್ರಶ್ನಾಯೋಗಾತ್' 'ಜ್ಯೋತಿಸ್' ಶಬ್ದದಿಂದ ಜೀವ ಪ್ರತಿಪಾದ್ಯನಾದಲ್ಲಿ ಆತ್ಮನೆಂದರೆ ಯಾರು? ಎಂಬ ಪ್ರಶ್ನೆಯೇ 'ಅಯುಕ್ತವಾಗುತ್ತದೆ' ಎಂದು ಹೇಳಿರುತ್ತಾರೆ.

**प्रकाशः –**

एवं वाक्यस्य दौर्बल्यं तद्बीजं चोपपाद्येदानीम् ''एकप्रमेयप्रतिपादकानेकवाक्यानि प्रकरणम्'' इति टीकाविवरणपूर्वं ''प्रकरणस्य बह्वर्थपरत्वेनार्थानुमितिहेतुत्वात्तदवमते'' इति टीकावाक्यं च व्यनक्ति – एकेति ।।

ವಿವರಣೆ - ಇಲ್ಲಿಯ ತನಕ ಶ್ರುತಿಗಿಂತಲೂ ಲಿಂಗ ದುರ್ಬಲವಾಗಿದೆ. ಲಿಂಗಕ್ಕಿಂತಲೂ ವಾಕ್ಯ ದುರ್ಬಲವಾಗಿದೆಯೆಂದು ಸಮರ್ಥಿಸಿದ್ದಾಯಿತು. ಈಗ ವಾಕ್ಯಕ್ಕಿಂತಲೂ ಪ್ರಕರಣವು ದುರ್ಬಲವಾಗಿದೆಯೆಂದು ಸಮರ್ಥಿಸುತ್ತಿದ್ದಾರೆ. ಮತ್ತು 'ಏಕಪ್ರಮೇಯಪ್ರತಿಪಾದಕಾನೇಕವಾಕ್ಯಾನಿ ಪ್ರಕರಣಮ್' ಒಂದೇ ಪ್ರಮೇಯವನ್ನು ಪ್ರತಿಪಾದಿಸುವಂತಹ ಅನೇಕ ವಾಕ್ಯಗಳ ಸಮೂಹವೇ 'ಪ್ರಕರಣ' ಎಂಬ ಟೀಕಾ ಮಾತನ್ನು ವಿವರಿಸುವವರಾಗಿ ಪ್ರಕರಣವು ಅನೇಕ ಅರ್ಥಗಳನ್ನು ಬೋಧಿಸಬೇಕಾದ್ದರಿಂದ ಅರ್ಥನಿರ್ಣಯ ವಿಷಯದಲ್ಲಿ ವಾಕ್ಯಕ್ಕಿಂತಲೂ ದುರ್ಬಲವಾಗಿದೆ ಎಂದು ಸಮರ್ಥಿಸುವ 'ಪ್ರಕರಣಸ್ಯ ಬಹ್ವರ್ಥಪರತ್ವೇನಾರ್ಥಾನುಮಿತಿಹೇತುತ್ವಾತ್ತದವಮತಾ' ಎಂಬ ಟೀಕಾವಾಕ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಏಕಾರ್ಥ' ಇತ್ಯಾದಿ ಗ್ರಂಥದಿಂದ.

**प्रकाशः –** भिन्नतात्पर्यकवाक्यसन्दर्भेऽतिव्याप्तिवारणायैतद्विशेषणम् । बह्वर्थपरत्वेन निमित्तेन यान्यनेकान्यवान्तरवाक्यानि तदर्थधीपूर्वकमित्यर्थः ।

ಗ್ರಂಥದಲ್ಲಿ 'ಏಕಾರ್ಥ ತಾತ್ಪರ್ಯ' ಎಂಬ ವಿಶೇಷಣವನ್ನೇಕೆ ಹೇಳಿದ್ದಾರೆಂದರೆ ಭಿನ್ನ-ಭಿನ್ನವಾದ ತಾತ್ಪರ್ಯವುಳ್ಳ ಅನೇಕ ವಾಕ್ಯಗಳ ಸಮೂಹವು ಪ್ರಕರಣವೆನಿಸುವುದಿಲ್ಲ. ಅದನ್ನು ವ್ಯಾವೃತ್ತಿ ಮಾಡುವುದಕ್ಕಾಗಿ 'ಏಕಾರ್ಥ ತಾತ್ಪರ್ಯ' ಎಂಬ ವಿಶೇಷಣವನ್ನು ಹೇಳಿರುತ್ತಾರೆ.

ಆದ್ದರಿಂದ ಪ್ರಕರಣ ಪ್ರಮಾಣವು ಅನೇಕ ಅರ್ಥಗಳನ್ನು ಪ್ರತಿಪಾದನೆ ಮಾಡುತ್ತಾ ಅನೇಕ ಅವಾಂತರ ವಾಕ್ಯಗಳ ಅರ್ಥವನ್ನು ತಿಳಿಯುವ ಮೂಲಕ ಅರ್ಥನಿಶ್ಚಾಯಕವಾಗಿರುತ್ತದೆಂದು ಅಭಿಪ್ರಾಯ.

**प्रकाशः – यथेति** ।। वक्ष्यते चैतदधिकरणशरीरम् । तत्र ''किं ज्योतिरयं पुरुषः'' इति प्रकरणं ''यावदुभौ लोकावनुसञ्चरति इमं लोकमभिक्रामत्युत्क्रमिष्यन् म्रियमाणः'' इत्यादिजीवासाधारणलिङ्गप्रतिपादकानेकावान्तरवाक्यार्थधीमतः प्रकरणमेतज्जीवपरमिति जानतः ''योऽयं विज्ञानमयः प्राणेषु हृद्यन्तर्ज्योतिः'' इति वाक्यस्य जीवपरत्वं बोधयति । ततः प्रागेव ''कतम आत्मा'' इति ''आत्मनैव ज्योतिषाऽऽस्ते'' इति पूर्वोक्तात्मस्वरूपप्रश्नवाक्यं स्वार्थप्रतिपादनद्वारा समभिव्याहारेण तद्वाक्यं विष्णुपरमिति बोधयतीति द्वितीयकक्ष्यायामेव वाक्यार्थनिर्णायात्'

तृतीयकक्ष्यायां प्रवर्तमानं प्रकरणं न कल्पयितुं क्षमत इति वाक्याद्दुर्बलत्वं तस्येत्यर्थः ।

ಜ್ಯೋತಿರಧಿಕರಣವನ್ನು ಮುಂದೆ ವಿವರವಾಗಿ ವ್ಯಾಖ್ಯಾನಿಸುತ್ತೇವೆ. ಪ್ರಕೃತಕ್ಕೆ ಉಪಯೋಗಿ ಆಗುವ ಅಂಶವನ್ನು ಹೀಗೆ ತಿಳಿಯಬೇಕು -

'ಕಿಂ ಜ್ಯೋತಿರಯಂ ಪುರುಷಃ' ಜೀವನು ಯಾವರೀತಿಯ ಜ್ಞಾನಸಾಧನವುಳ್ಳವನು ಎಂಬ ಜನಕರಾಜರ ಪ್ರಶ್ನೆಯಿಂದ ಪ್ರಕರಣವು ಪ್ರಾರಂಭವಾಗುತ್ತದೆ. ಮುಂದೆ ಯಾಜ್ಞವಲ್ಕ್ಯರು ಜನಕರಾಜರ ಪ್ರಶ್ನೆಗೆ ಉತ್ತರಿಸುತ್ತಾ 'ಯಾವದುಭೌ ಲೋಕಾವನುಸಂಚರತಿ ಇಮಂ ಲೋಕಮಭಿಕ್ರಾಮತ್ಯುತ್ಕ್ರಮಿಷ್ಯನ್ ಮ್ರಿಯಮಾಣಃ' ಇತ್ಯಾದಿಯಾಗಿ ಹೇಳಿರುತ್ತಾರೆ. ಈ ವಾಕ್ಯದಲ್ಲಿ ಜೀವನ ಅಸಾಧಾರಣಲಿಂಗವೆನಿಸಿದ 'ಲೋಕಾಭಿಕ್ರಮಣ', 'ದೇಹಾದುತ್ಕ್ರಮಣ', 'ಮ್ರಿಯಮಾಣತ್ವ' ಮೊದಲಾದವುಗಳು ಶ್ರುತವಾಗಿದೆ. ಇಂತಹ ಲಿಂಗಗಳನ್ನು ಪ್ರತಿಪಾದಿಸುವ ಅನೇಕ ಅವಾಂತರ ವಾಕ್ಯಾರ್ಥವನ್ನು ತಿಳಿಯುವ ಪುರುಷನಿಗೆ ಈ ಪ್ರಕರಣವು ಜೀವಪರವಾಗಿದೆಯೆಂದು ಬೋಧಿಸುತ್ತದೆ. ಹೀಗೆ ಯಾವ ಪುರುಷನಿಗೆ ಅವಾಂತರ ವಾಕ್ಯಾರ್ಥಗಳ ಜ್ಞಾನವು ಬರುತ್ತದೋ ಅಂತಹವನಿಗೆ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬ ವಿಷಯವಾಕ್ಯವು ಜೀವಪರವಾಗಿದೆಯೆಂದು ತಿಳಿಸುತ್ತವೆ. ಹೀಗೆ ಪ್ರಕರಣವು ವಿಲಂಬವಾಗಿ ಜೀವಪರತ್ವವನ್ನು ಸಮರ್ಥಿಸುವುದಕ್ಕಿಂತ ಮೊದಲೇ 'ಕತಮ ಆತ್ಮಾ' ಎಂಬ ವ್ಯಾಕ್ಯವು ವಿಷ್ಣುಪರತ್ವವನ್ನು ಪ್ರತಿಪಾದಿಸಿ ಬಿಡುತ್ತದೆ. ಅಂದರೆ 'ಕತಮ ಆತ್ಮಾ' ಎಂಬ ಜನಕರಾಜರ ಪ್ರಶ್ನೆಗೆ 'ಆತ್ಮನೈವ ಜ್ಯೋತಿಷಾಽಽಸ್ತೇ' ಎಂದು ಯಾಜ್ಞವಲ್ಕ್ಯರ ಉತ್ತರವಾಕ್ಯವು ಸ್ವಾರ್ಥವನ್ನು ಪ್ರತಿಪಾದನೆ ಮಾಡುವ ಮೂಲಕ ಸಮಭಿವ್ಯಾಹಾರದ ಬಲದಿಂದ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯಕ್ಕೆ ವಿಷ್ಣುಪರತ್ವವನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ಎರಡನೆಯ ಕಕ್ಷೆಯಲ್ಲಿಯೇ ವಾಕ್ಯಾರ್ಥವನ್ನು ನಿರ್ಣಯಿಸುತ್ತದೆ. ಆದರೆ ಪ್ರಕರಣ ಪ್ರಮಾಣವು ಮೂರನೆಯ ಕಕ್ಷೆಯಲ್ಲಿ ವಾಕ್ಯಾರ್ಥವನ್ನು ನಿರ್ಣಯಿಸುತ್ತದೆ.

ಅಭಿಪ್ರಾಯ ಹೀಗಿದೆ - ವಾಕ್ಯಪ್ರಮಾಣವು 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯಕ್ಕೆ ವಿಷ್ಣುಪರತ್ವವನ್ನು ಎರಡು ಹಂತದಲ್ಲೇ ಸಮರ್ಥಿಸುತ್ತದೆ - ೧. ಮೊದಲು ಪದಾರ್ಥಜ್ಞಾನವನ್ನು ಹುಟಿಸುತ್ತದೆ, ೨. ಸಮಭಿವ್ಯಾಹಾರದಿಂದ ವಿಪ್ರತಿಪನ್ನವಾದದ್ದು ವಿಷ್ಣುಪರವಾಗಿದೆಯೆಂದು ನಿರ್ಣಯಿಸುತ್ತದೆ. ಆದರೆ ಪ್ರಕರಣ ಪ್ರಮಾಣವು ಮೂರು ಹಂತದಲ್ಲಿ ಜೀವಪರತ್ವವನ್ನು ಸಮರ್ಥಿಸುತ್ತದೆ - ೧. ಮೊದಲು ಜೀವನ ಅಸಾಧಾರಣ ಲಿಂಗಗಳನ್ನು ಬೋಧಿಸುತ್ತದೆ. ೨. ಪ್ರಕರಣಕ್ಕೆ ಜೀವಪರತ್ವವನ್ನು ನಿಶ್ಚಯಿಸುತ್ತದೆ. ೩. ವಿಪ್ರತಿಪನ್ನವಾದದ್ದಕ್ಕೆ ಜೀವಪರತ್ವವನ್ನು ಸಮರ್ಥಿಸುತ್ತದೆ. ಹೀಗೆ ವಾಕ್ಯಕ್ಕಿಂತಲೂ ಪ್ರಕರಣ ಪ್ರಮಾಣವು ವಿಳಂಬವಾಗಿ ಅರ್ಥನಿಶ್ಚಾಯಕವಾಗುವುದರಿಂದ ವಾಕ್ಯಕ್ಕಿಂತಲೂ ದುರ್ಬಲವಾಗಿದೆಯೆಂದು ತಿಳಿಯಬೇಕು.

**प्रकाशः** – यद्यपि महाप्रकरणमवान्तरप्रकरणमिति च प्रकरणेऽपि द्वैविध्यं भाति ।

यथा ''नैवेह किञ्चनाग्र आसीत्'' इति विष्णुपरे महाप्रकरणे ''स एष प्राणस्त्रेधा विहितः'' इति प्राणावान्तरप्रकरणेन ''तस्य प्राची दिक्शिरः'' इत्यादिनोच्यमानं कूर्मरूपं प्राणस्येत्युच्यते ।

ಪ್ರಶ್ನೆ - ಹಿಂದೆ ವಾಕ್ಯದಲ್ಲಿ ಅವಾಂತರ ವಿಭಾಗವನ್ನು ಮಾಡಿದಂತೆ ಪ್ರಕರಣದಲ್ಲಿಯೂ ಅವಾಂತರ ವಿಭಾಗವನ್ನು ಮಾಡಬಹುದು. ೧. ಮಹಾಪ್ರಕರಣ, ೨. ಅವಾಂತರ ಪ್ರಕರಣ ಎಂದು.

'ನೈವೇಹ ಕಿಂಚನಾಗ್ರ ಆಸೀತ್' ಎಂದು ಬೃಹದಾರಣ್ಯಕೋಪನಿಷತ್ತು ವಿಷ್ಣುವಿನ ಬಗ್ಗೆ ಹೇಳುತ್ತಾ ಪ್ರಾರಂಭವಾಗುತ್ತದೆ. ಹೀಗೆ ಪ್ರಾರಂಭವಾಗುವ ಮಹಾಪ್ರಕರಣದಲ್ಲಿ 'ಸ ಏಷ ಪ್ರಾಣಸ್ತ್ರೇಧಾ ವಿಹಿತಃ' ಎಂಬುದಾಗಿ ಮಧ್ಯದಲ್ಲಿ ಮುಖ್ಯಪ್ರಾಣದೇವರ ಬಗ್ಗೆ ಹೇಳುವಂತಹ ವಾಕ್ಯಗಳಿವೆ. ಈ ವಾಕ್ಯಗಳು ವಿಷ್ಣುವನ್ನು ಪ್ರತಿಪಾದನೆ ಮಾಡದೇ 'ತಸ್ಯ ಪ್ರಾಚೀ ದಿಕ್‌ಶಿರಃ' ಇತ್ಯಾದಿ ವಾಕ್ಯಗಳಿಂದ ಮುಖ್ಯಪ್ರಾಣದೇವರ ಕೂರ್ಮರೂಪವನ್ನು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಇದನ್ನು ಅವಾಂತರ ಪ್ರಕರಣವೆನ್ನಬೇಕು. ವಿಷ್ಣುವನ್ನು ಪ್ರತಿಪಾದನೆ ಮಾಡುವ ಸಮಗ್ರ ವಾಕ್ಯಗಳೆಲ್ಲವೂ ಮಹಾಪ್ರಕರಣವಾಗಿದ್ದರೆ, ಮಧ್ಯದಲ್ಲಿ ವಾಯುಕೂರ್ಮದ ಬಗ್ಗೆ ಹೇಳುವಂತಹ ವಾಕ್ಯಗಳ ಸಮೂಹವನ್ನು ಅವಾಂತರ ಪ್ರಕರಣವೆಂದೇ ಹೇಳಬೇಕಾಗುತ್ತದೆ.

**प्रकाशः** – वाक्ये तु महावाक्यमवान्तरवाक्यमिति विधा न सम्भवति । महावाक्यस्यानेकवाक्यसन्दर्भरूपतया प्रकरण एवान्तर्भावसम्भवात् ।

ಇದರಂತೆ ವಾಕ್ಯದಲ್ಲಿಯೂ ಮಹಾವಾಕ್ಯ, ಅವಾಂತರ ವಾಕ್ಯವೆಂಬ ಪ್ರಭೇದವನ್ನು ಹೇಳಬಹುದಲ್ಲವೇ? ಎಂದು ಪ್ರತಿಯಾಗಿ ಶಂಕಿಸಲಾಗದು. ಏಕೆಂದರೆ ಮಹಾವಾಕ್ಯವು ಅನೇಕ ವಾಕ್ಯಗಳ ಸಮೂಹವೇ ಆಗಿರುವುದರಿಂದ ಪ್ರಕರಣದಲ್ಲೇ ಅಂತರ್ಭಾವವಾಗುತ್ತದೆ.

**प्रकाशः** – नचैवं महाप्रकरणं स्थानमेवेति वाच्यम् ।

अनेकप्रकरणसन्दर्भशून्येऽपि ब्रह्मप्रकरणेऽन्यावान्तरप्रकरणसत्त्वात् ।

ಹಾಗಾದರೆ ಮಹಾಪ್ರಕರಣವೂ ಕೂಡ ಸ್ಥಾನಪ್ರಮಾಣದಲ್ಲೇ ಸೇರಬಹುದಲ್ಲವೇ? ಎಂದೂ ಕೂಡ ಪ್ರತಿಯಾಗಿ ಶಂಕಿಸಬಾರದು. ಏಕೆಂದರೆ ಅನೇಕ ಪ್ರಕರಣಗಳ ಸಮೂಹರೂಪವಾಗದಿದ್ದರೂ ಮಹಾಪ್ರಕರಣದ ಮಧ್ಯದಲ್ಲಿ ಅವಾಂತರ ಪ್ರಕರಣವು ಪ್ರಸಕ್ತವಾಗಿದೆಯೆಂದು ನಾವು ಶಂಕಿಸುತ್ತಿದ್ದೇವೆ. ಒಂದು ವೇಳೆ ಅನೇಕ ಪ್ರಕರಣಗಳ ಸಮೂಹವನ್ನು ನಾವು ಹೇಳಿದ್ದಲ್ಲಿ ಮಹಾಪ್ರಕರಣವನ್ನು ಸ್ಥಾನಪ್ರಮಾಣದಲ್ಲಿ ಸೇರಿಸಬಹುದೆಂದು ನೀವು ಆಕ್ಷೇಪಿಸಬಹುದಿತ್ತು.

**प्रकाशः** – तथा च तयोर्विरोधे सन्निकर्षादिसम्भवादवान्तरप्रकरणं बलवदित्यपि वक्तुं शक्यम् ।

ಹೀಗೆ ಮಹಾಪ್ರಕರಣ, ಅವಾಂತರಪ್ರಕರಣವೆಂಬ ವೈವಿಧ್ಯಕಲ್ಪನೆಯಿಂದ ಏನು ಉಪಯೋಗ?

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಮಹಾಪ್ರಕರಣ ಮತ್ತು ಅವಾಂತರ ಪ್ರಕರಣಗಳಲ್ಲಿ ಪರಸ್ಪರ ವಿರೋಧ ಬಂದಾಗ ಅವಾಂತರ ಪ್ರಕರಣವು ಶೀಘ್ರವಾಗಿ ಅರ್ಥನಿರ್ಣಾಯಕವಾಗುವುದರಿಂದ ಬಲಿಷ್ಠವಾಗುತ್ತದೆ. ಮಹಾಪ್ರಕರಣವು ವಿಳಂಬವಾಗಿ ಅರ್ಥನಿರ್ಣಾಯಕವಾಗುವುದರಿಂದ ಅವಾಂತರಪ್ರಕರಣಕ್ಕಿಂತ ದುರ್ಬಲವಾಗಿರುತ್ತದೆ. ಈ ಒಂದು ಪ್ರಮೇಯವು ಸಿದ್ಧವಾಗುವುದಕ್ಕಾಗಿ ಹೀಗೆ ವೈವಿಧ್ಯವನ್ನು ಕಲ್ಪಿಸಬೇಕಲ್ಲವೇ? ಆದರೆ ಗ್ರಂಥಕಾರರೇಕೆ ಇದನ್ನು ಹೇಳಿಲ್ಲ.

**प्रकाशः – तथापि स्पष्टत्वान्नोक्तमित्याहुः ।**

ಉತ್ತರ - ನಿಮ್ಮ ಪ್ರಶ್ನೆಯು ನಮಗೆ ಸಮ್ಮತವೇ ಆಗಿದೆ. ಅಂದರೆ ಪ್ರಕರಣವು ಮಹಾಪ್ರಕರಣ, ಅವಾಂತರ ಪ್ರಕರಣವೆಂದು ಮತ್ತು ಮಹಾಪ್ರಕರಣಕ್ಕಿಂತ ಆವಾಂತರ ಪ್ರಕರಣವು ಶ್ರೇಷ್ಠವಾಗಿದೆಯೆಂಬ ವಿಚಾರವು ಗ್ರಂಥಕಾರರಿಗೆ ಸಮ್ಮತವೇ ಆಗಿದೆ. ಆದರೆ ಈ ವಿಷಯವು ಅತ್ಯಂತ ಸ್ಪಷ್ಟವಾದ್ದರಿಂದ ಪ್ರತ್ಯೇಕವಾಗಿ ಉಲ್ಲೇಖಿಸಿಲ್ಲವೆಂದು ಕೆಲವರು ಸಮಾಧಾನವನ್ನು ನೀಡಿದ್ದಾರೆ.

**प्रकाशः – यत्तु वाक्य इव प्रकरणेऽपि स्वान्तर्गतपदार्थनिर्णायकं तादृशवाक्यार्थ-निर्णायकं चेत्यपि विधा सम्भवति ।**

ಕೆಲವರ ಆಕ್ಷೇಪ - ವಾಕ್ಯಪ್ರಮಾಣದಲ್ಲಿ ಹೇಗೆ ವಿಭಾಗವನ್ನು ಮಾಡಿದಿರೋ, ಆದರಂತೆ ಪ್ರಕರಣಪ್ರಮಾಣದಲ್ಲಿಯೂ ೧. ಸ್ವಾಂತರ್ಗತಪದನಿರ್ಣಾಯಕ ಪ್ರಕರಣ, ೨. ಸ್ವಾಂತರ್ಗತವಾಕ್ಯಾರ್ಥ ನಿರ್ಣಾಯಕ ಪ್ರಕರಣ ಎಂಬುದಾಗಿ ಎರಡು ಪ್ರಕಾರವನ್ನು ಹೇಳಬಹುದಿತ್ತಲ್ಲವೇ ?

**प्रकाशः – आद्यं यथा ''अदितेरदितित्वम्'' इत्यदितिपदार्थनिर्णायकं ''नैवेह किञ्चन'' इति ब्रह्मप्रकरणम् ।**

ಈ ಎರಡು ಪ್ರಕಾರಗಳೂ ಕೂಡ ಅತ್ಯಂತ ಉಚಿತವಾಗಿವೆ. ಏಕೆಂದರೆ 'ಅದಿತೇಃ ಅದಿತಿತ್ವಮ್' ಎಂಬಲ್ಲಿರುವ 'ಅದಿತಿ' ಎಂಬ ಪದದ ಅರ್ಥವನ್ನು ನಿರ್ಣಯಿಸಲು 'ನೈವೇಹ ಕಿಂಚನ' ಇತ್ಯಾದಿ ಬ್ರಹ್ಮಪ್ರಕರಣವು ಹೊರಟಿರುತ್ತದೆ. ಇದರಿಂದ ಸ್ವಾಂತರ್ಗತವಾದ ಪದಾರ್ಥನಿರ್ಣಯದಲ್ಲಿ ಪ್ರಕರಣವು ಅನುಮಾಪಕವಾಗುತ್ತದೆಂದು ತಿಳಿಯುತ್ತದೆ.

**प्रकाशः – द्वितीयं तु ''यस्मिन्द्यौः'' इत्यादिवाक्यार्थनिर्णायकं ''द्वे विद्ये वेदितव्ये'' इत्यादि ।**

ಮತ್ತು 'ಯಸ್ಮಿನ್‌ದ್ಯೌಃ' ಇತ್ಯಾದಿ ವಾಕ್ಯದ ಅರ್ಥವನ್ನು ನಿರ್ಣಯಿಸುವುದಕ್ಕಾಗಿ 'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾದಿ ಪ್ರಕರಣವು ಹೊರಟಿರುತ್ತದೆ.

**प्रकाशः – प्रकरणं समभिव्याहृतप्रकरणान्तरार्थनिर्णायकमिति तु विधा न सम्भवति । प्रकरणस्य प्रकरणान्तरार्थानिर्णायकत्वादिति ।**

ಇನ್ನು ಪ್ರಕರಣವು ಸಮಭಿವ್ಯಾಹೃತವಾದ ಪ್ರಕರಣಾಂತರದ ಅರ್ಥವನ್ನು ನಿಶ್ಚಯಿಸುತ್ತದೆ ಎಂಬ ಮತ್ತೊಂದು ಪ್ರಕಾರವನ್ನು ಒಪ್ಪಬೇಕಲ್ಲವೆ? ಎಂದು ಶಂಕಿಸಬಾರದು. ಏಕೆಂದರೆ ಒಂದು ಪ್ರಕರಣವು ಮತ್ತೊಂದು ಪ್ರಕರಣದ ಅರ್ಥಕ್ಕೆ ನಿಶ್ಚಾಯಕವಾಗಲು ಸಾಧ್ಯವಿಲ್ಲ. ಆದ್ದರಿಂದ ಪದಾರ್ಥನಿರ್ಣಾಯಕವೆಂದು ವಾಕ್ಯಾರ್ಥನಿರ್ಣಾಯಕವೆಂದು ಎರಡು ಬಗೆಯನ್ನು ಗ್ರಂಥಕಾರರು ಹೇಳಬಹುದಿತ್ತಲ್ಲವೇ?

**प्रकाशः – तन्न । वाक्यार्थनिर्णयेनैव तस्य लाभात् । नहि पदार्थनिर्णयं विना वाक्यार्थनिर्णयस्समस्ति । एवं स्थानेऽपि द्रष्टव्यम् ।**

ನಿರಾಕರಣೆ - ಇವರ ವಾದ ಸರಿಯಿಲ್ಲ. ಏಕೆಂದರೆ ವಾಕ್ಯಾರ್ಥನಿರ್ಣಯದಿಂದಲೇ ಪದಾರ್ಥನಿರ್ಣಯವು ಸಿದ್ಧವಾಗುತ್ತದೆ. ಏಕೆಂದರೆ ಪದಾರ್ಥನಿರ್ಣಯವನ್ನು ಬಿಟ್ಟು ವ್ಯಾಕ್ಯಾರ್ಥ ನಿರ್ಣಯವಿರಲು ಸಾಧ್ಯವೇ ಇಲ್ಲ. 'ಅದಿತೇಃ ಅದಿತಿತ್ವಮ್' ಎಂಬ ಸಂಪೂರ್ಣವಾಕ್ಯದ ಅರ್ಥವು ನಿಶ್ಚಯವಾಗುವುದರಿಂದಲೇ ಅದಿತಿಶಬ್ದ ಪ್ರತಿಪಾದ್ಯನಾದವನು ಪರಮಾತ್ಮನೆಂದೂ ಸಹ ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ ಇದನ್ನು ಪ್ರತ್ಯೇಕವಾಗಿ ಪರಿಗಣಿಸಬೇಕಾಗಿಲ್ಲ.

ಮತ್ತು ಪ್ರಕರಣವು ಪರಮಾತ್ಮ ಪರವಾಗಿದೆಯೆಂದು ನಿಶ್ಚಯವಾಗುವುದರಿಂದಲೇ ಆದರಿಂದ ಅಂತರ್ಗತವಾದ ವಾಕ್ಯದಿಂದಲೂ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನಿಶ್ಚಯವಾಗುತ್ತದೆ. 'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾದಿ ಪ್ರಕರಣವೆಲ್ಲವೂ ಪರಮಾತ್ಮ ಪರವೆಂದು ನಿಶ್ಚಯವಾದ ಮೇಲೆ ಪುನಃ 'ಯಸ್ಮಿನ್ ದ್ಯೌಃ' ಎಂಬ ವಾಕ್ಯದ ಅರ್ಥವು ನಿಶ್ಚಯವಾಗಬೇಕಾಗಿಲ್ಲ. ಆದ್ದರಿಂದ ಪ್ರತ್ಯೇಕವಾಗಿ ಈ ಪ್ರಕಾರಗಳನ್ನು ಹೇಳುವ ಅನಿವಾರ್ಯತೆ ಇರುವುದಿಲ್ಲ.

ಇದರಂತೆ ಸ್ಥಾನ ಪ್ರಮಾಣದಲ್ಲಿಯೂ ಪ್ರತ್ಯೇಕವಾದ ವೈವಿಧ್ಯಗಳನ್ನು ಹೇಳಬೇಕಲ್ಲವೇ? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಸ್ವತಃ ತಿಳಿದುಕೊಳ್ಳಬೇಕು.




ಒಂದೇ ಅರ್ಥದಲ್ಲಿ ತಾತ್ಪರ್ಯವುಳ್ಳ ಅನೇಕ ವಾಕ್ಯಗಳ ಪುಂಜವೇ ಪ್ರಕರಣ ಎನಿಸುತ್ತದೆ. ಈ ಪ್ರಕರಣವು ಅನೇಕ ಅವಾಂತರ ವಾಕ್ಯಾರ್ಥಗಳನ್ನು ತಿಳಿಸುವ ಮೂಲಕ ವಿಪ್ರತಿಪನ್ನವಾದ ವಾಕ್ಯವನ್ನು ಪ್ರಕರಣಕ್ಕೆ ಅನುಗುಣವಾಗಿ ಅರ್ಥೈಸಬೇಕಾದ್ದರಿಂದಲೂ ವಾಕ್ಯಕ್ಕಿಂತಲೂ ವಿಳಂಬವಾಗಿ ಪ್ರವೃತ್ತಿ ಮಾಡುತ್ತದೆ. ಆದ್ದರಿಂದ ಪ್ರಕರಣಕ್ಕಿಂತ ವಾಕ್ಯವೇ ಪ್ರಬಲವಾಗುತ್ತದೆ -

ವಾಮನಾಧಿಕರಣ (೧-೩-೭)

ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯೋऽಯಂ ವಿಜ್ಞಾನಮಯಃ ಪ್ರಾಣೇऽಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಪ್ರಾರಂಭವಾಗುವ ವಾಕ್ಯವು ಜೀವನನ್ನು ಪ್ರತಿಪಾದನೆ ಮಾಡುತ್ತಿದೆ. 'ಕಿಂ ಜ್ಯೋತಿರಯ ಪುರುಷಃ' ಎಂದು ಜನಕರಾಜರು ಜೀವನು ಯಾವರೀತಿಯ ಜ್ಞಾನಸಾಧನವನ್ನು ಹೊಂದಿದ್ದಾನೆಂದು ಪ್ರಶ್ನಿಸಿದ್ದಾರೆ. ಅದಕ್ಕೆ ಯಾಜ್ಞವಲ್ಕ್ಯರು ಉತ್ತರಿಸುವ ಪ್ರಕರಣವೇ ಇದಾಗಿದೆ. ಇಲ್ಲಿ ಜೀವಾತ್ಮನ ಬಗ್ಗೆ ಪ್ರಶ್ನೆ ಹಾಗೂ ಉತ್ತರಗಳಿರುವುದರಿಂದ 'ಜ್ಯೋತಿಸ್' ಶಬ್ದದಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆಂದು ಈ ಪ್ರಕರಣ ಸಮರ್ಥಿಸುತ್ತದೆ. ಆದರೆ ಅದಕ್ಕಿಂತ ಮೊದಲೇ 'ಕತಮ ಆತ್ಮಾ' ಎಂಬ ವಾಕ್ಯವು ವಿಷ್ಣುವೇ 'ಜ್ಯೋತಿಸ್' ಶಬ್ದ ಪ್ರತಿಪಾದ್ಯನೆಂದು ಸಮರ್ಥಿಸಿಬಿಡುತ್ತದೆ. ಏಕೆಂದರೆ ಒಂದು 'ಜ್ಯೋತಿಸ್' ಶಬ್ದ ಪ್ರತಿಪಾದ್ಯನು ಜೀವಾತ್ಮನಾದಲ್ಲಿ 'ಕತಮ ಆತ್ಮಾ' ಆತ್ಮನೆಂದರೆ ಯಾರು ? ಎಂಬ ಪ್ರಶ್ನೆಯೇ ಕೂಡುವುದಿಲ್ಲ. ಹೀಗೆ ಪ್ರಶ್ನೆಯನ್ನು ಮಾಡಿದ್ದರಿಂದಲೇ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ಹೀಗೆ ಪ್ರಕರಣಕ್ಕಿಂತ ವಾಕ್ಯವೇ ಪ್ರಬಲ.

• • • • •

## ಪ್ರಕಾರಾಂತರದಿಂದ ಬಲಾಬಲ ವಿಚಾರ

### तात्पर्यचन्द्रिका

**यद्वाऽत्र टीकायां वत्करणस्य तद्यथेत्यादिवदुदाहरणार्थत्वाट्टीकास्वारस्यानुसारेण व्याप्यार्पकं पदं लिङ्गं तदर्पकाणि निराकाङ्क्षपदानि वाक्यम् ।**

ಅನುವಾದ - ಅಥವಾ ಟೀಕೆಯಲ್ಲಿರುವ ವತ್ಕರಣಕ್ಕೆ 'ತದ್ಯಥಾ' ಎಂಬರ್ಥವನ್ನೇ ವಿವಕ್ಷಿಸಿ ಉದಾಹರಣಾರ್ಥವನ್ನು ಹೇಳಬಹುದು. ಈ ಟೀಕೆಯ ಸ್ವಾರಸ್ಯಕ್ಕೆ ಅನುಸಾರಿಯಾಗಿ ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಹೀಗೆ ತಿಳಿಯಬೇಕು -

ವ್ಯಾಪ್ಯಧರ್ಮಕ್ಕೆ ಅರ್ಪಕವಾದ ಪದವೇ ಲಿಂಗ. ವ್ಯಾಪ್ಯಧರ್ಮಕ್ಕೆ ಅರ್ಪಕವಾದ ನಿರಾಕಾಂಕ್ಷಿತವಾದ ಅನೇಕ ಪದಗಳ ಸಮೂಹವೇ ವಾಕ್ಯ ಎಂದು.

**युक्तं चैकार्थत्वेऽपि ''एकः कर्ता वर्तमाने काले स्वार्थं पाकक्रियां निर्वर्तयति'' 'पचते' इत्यनयोर्मध्ये 'एकः' इत्यादिवाक्यात् 'पचते' इति पदस्येव झटिति बोधकस्य लिङ्गस्य वाक्यात्प्राबल्यम् ।**

ಹೀಗೆ ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಹೇಳಿದರೆ, ಲಿಂಗವು ವಾಕ್ಯಕ್ಕಿಂತಲೂ ಪ್ರಬಲವೆಂದು ಹೇಗೆ ಹೇಳುವುದು? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. - 'ಏಕಃ ಕರ್ತಾ ವರ್ತಮಾನೇ ಕಾಲೇ ಸ್ವಾರ್ಥಂ ಪಾಕಕ್ರಿಯಾಂ ನಿರ್ವರ್ತಯತಿ' 'ಒಬ್ಬ ಕರ್ತೃವು ವರ್ತಮಾನಕಾಲದಲ್ಲಿ ತನಗಾಗಿ

ಪಾಕಕ್ರಿಯೆಯಲ್ಲಿ ತೊಡಗುತ್ತಾನೆ' ಎಂಬ ವಾಕ್ಯವನ್ನು ಪ್ರಯೋಗಿಸಿದಾಗ ಯಾವ ಅರ್ಥವು ತಿಳಿಯುತ್ತದೋ, ಅಷ್ಟು ಅರ್ಥವು 'ಪಚತೇ' ಎಂಬ ಒಂದೇ ಪದದಿಂದ ತಿಳಿಯುತ್ತದೆ. 'ಪಚತೇ' ಎಂಬಲ್ಲಿರುವ ಧಾತು, ಆಖ್ಯಾತಪ್ರತ್ಯಯ, ಆತ್ಮನೇಪದ ಇಷ್ಟರಿಂದ ಸಂಪೂರ್ಣವಾಕ್ಯದಿಂದ ತಿಳಿಯುವ ಅರ್ಥವು ಲಭ್ಯವಾಗುತ್ತದೆ. ಆದ್ದರಿಂದ 'ಪಚತೇ' ಎಂಬ ಧಾತುವಿನಿಂದಲೇ ಕೂಡಲೇ ಶಬ್ದಬೋಧವು ಬರುವುದರಿಂದ ವಾಕ್ಯಕ್ಕಿಂತಲೂ ಲಿಂಗವು ಪ್ರಬಲವೆಂದು ನಿಶ್ಚಯಿಸಬಹುದು.

**यथा ''तल्लिङ्गात्'' इत्यत्र वाय्वादिभूतकारणत्वरूपभूताकाशलिङ्गार्पकात् ''सर्वाणि हवा इमानि भूतान्याकाशादेव समुत्पद्यन्ते'' इति वाक्यादनन्तत्व-लिङ्गस्य ।**

ಪ್ರಕೃತ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ 'ಸರ್ವಾಣಿ ಹವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' ಎಂದು ಉದಾಹರಿಸುವ ವಾಕ್ಯದಿಂದ ವಾಯು ಮೊದಲಾದ ಭೂತ ಪದಾರ್ಥಗಳ ಕಾರಣತ್ವ ಎಂಬ ಲಿಂಗದಿಂದ ಭೂತಾಕಾಶವೇ ಆಕಾಶಶಬ್ದಪ್ರತಿಪಾದ್ಯವೆಂದು ತಿಳಿಯುತ್ತದೆ. ಆದರೆ 'ಸ ಏಷೋ ಅನಂತಃ' ಎಂಬ ಶ್ರುತಿಯಲ್ಲಿರುವ 'ಅನಂತ' ಎಂಬ ಒಂದೇ ಪದದಿಂದ ಅನಂತತ್ವಲಿಂಗವು ಆಕಾಶಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸುತ್ತಿದೆ. ಒಂದೇ ಪದದಿಂದ ತಿಳಿಯುವಂತಹ ಲಿಂಗವು, ಶೀಘ್ರೋಪಸ್ಥಾಪಕವಾದ್ದರಿಂದ ಲಿಂಗಕ್ಕಿಂತಲೂ ಪ್ರಬಲವಾಗಿದೆಯೆಂದು ತಿಳಿಯಬೇಕು. ಆದ್ದರಿಂದ ಆಕಾಶಶಬ್ದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಲಿಂಗಪ್ರಮಾಣದಿಂದ ನಿಶ್ಚಯವಾಗುತ್ತದೆ.

**अस्मिन्पक्षे वाक्यस्य प्रकरणात्प्राबल्ये ''ज्योतिश्चरण'' इत्यत्राग्निसूक्तात् ''वि मे कर्णा पतयतः'' इत्यादिवाक्यमुदाहार्यम् ।**

ಈ ಎರಡನೆಯ ವ್ಯಾಖ್ಯಾನದ ಪ್ರಕಾರ ಪ್ರಕರಣ ಪ್ರಮಾಣಕ್ಕಿಂತಲೂ ವಾಕ್ಯವೇ ಪ್ರಬಲವೆಂಬುದನ್ನು ಈ ದೃಷ್ಟಾಂತದಿಂದ ತಿಳಿಯಬೇಕು - 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರದಲ್ಲಿ ಅಗ್ನಿಸೂಕ್ತಕ್ಕಿಂತಲೂ 'ವಿ ಮೇ ಕರ್ಣಾ ಪತಯತಃ' ಇತ್ಯಾದಿ ವಾಕ್ಯವು ಶೀಘ್ರೋಪಸ್ಥಾಪಕವಾಗಿದೆ. ಸಂಪೂರ್ಣ ಅಗ್ನಿಪ್ರಕರಣವನ್ನು ಓದಿ ಅರ್ಥಮಾಡಿಕೊಳ್ಳುವುದಕ್ಕಿಂತ ಬಹುಬೇಗ 'ವಿಮೇ ಕರ್ಣಾ ಪತಯತಃ' ಎಂಬ ವಾಕ್ಯದಿಂದ ಶಾಬ್ದಬೋಧವು ಬರುತ್ತದೆ ಆದ್ದರಿಂದ ಪ್ರಕರಣಕ್ಕಿಂತಲೂ ವಾಕ್ಯವು ಪ್ರಬಲವಾಗಿದೆಯೆಂದು ತಿಳಿಯಬೇಕು.

**सूत्रादौ वाक्योक्तेऽपि व्याप्ये लिङ्गत्वोक्तिस्तु बोधकस्य शब्दस्य वाक्यत्वेऽपि बोध्यस्य समुद्रशायित्वलक्ष्मीपतित्वादेर्व्याप्यत्वमभिप्रेत्यावान्तरभेदाविवक्षया युक्ता ।**

ವಾಮನಾಧಿಕರಣ (೧-೩-೭)

ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯೋಽಯಂ ವಿಜ್ಞಾನಮಯಃ ಪ್ರಾಣೇಽಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಪ್ರಾರಂಭವಾಗುವ ವಾಕ್ಯವು ಜೀವನನ್ನು ಪ್ರತಿಪಾದನೆ ಮಾಡುತ್ತಿದೆ. 'ಕಿಂ ಜ್ಯೋತಿರಯ ಪುರುಷಃ' ಎಂದು ಜನಕರಾಜರು ಜೀವನು ಯಾವರೀತಿಯ ಜ್ಞಾನಸಾಧನವನ್ನು ಹೊಂದಿದ್ದಾನೆಂದು ಪ್ರಶ್ನಿಸಿದ್ದಾರೆ. ಆದಕ್ಕೆ ಯಾಜ್ಞವಲ್ಕ್ಯರು ಉತ್ತರಿಸುವ ಪ್ರಕರಣವೇ ಇದಾಗಿದೆ. ಇಲ್ಲಿ ಜೀವಾತ್ಮನ ಬಗ್ಗೆ ಪ್ರಶ್ನೆ ಹಾಗೂ ಉತ್ತರಗಳಿರುವುದರಿಂದ 'ಜ್ಯೋತಿಸ್' ಶಬ್ದದಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆಂದು ಈ ಪ್ರಕರಣ ಸಮರ್ಥಿಸುತ್ತದೆ. ಆದರೆ ಅದಕ್ಕಿಂತ ಮೊದಲೇ 'ಕತಮ ಆತ್ಮಾ' ಎಂಬ ವಾಕ್ಯವು ವಿಷ್ಣುವೇ 'ಜ್ಯೋತಿಸ್' ಶಬ್ದ ಪ್ರತಿಪಾದ್ಯನೆಂದು ಸಮರ್ಥಿಸಿಬಿಡುತ್ತದೆ. ಏಕೆಂದರೆ ಒಂದು 'ಜ್ಯೋತಿಸ್' ಶಬ್ದ ಪ್ರತಿಪಾದ್ಯನು ಜೀವಾತ್ಮನಾದಲ್ಲಿ 'ಕತಮ ಆತ್ಮಾ' ಆತ್ಮನೆಂದರೆ ಯಾರು ? ಎಂಬ ಪ್ರಶ್ನೆಯೇ ಕೂಡುವುದಿಲ್ಲ. ಹೀಗೆ ಪ್ರಶ್ನೆಯನ್ನು ಮಾಡಿದ್ದರಿಂದಲೇ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ಹೀಗೆ ಪ್ರಕರಣಕ್ಕಿಂತ ವಾಕ್ಯವೇ ಪ್ರಬಲ.



• • • • •

## ಪ್ರಕಾರಾಂತರದಿಂದ ಬಲಾಬಲ ವಿಚಾರ

### तात्पर्यचन्द्रिका

**यद्वाऽत्र टीकायां वत्करणस्य तद्यथेत्यादिवदुदाहरणार्थत्वाट्टीकास्वारस्यानुसारेण व्याप्यार्पकं पदं लिङ्गं तदर्पकाणि निराकाङ्क्षपदानि वाक्यम् ।**

ಅನುವಾದ - ಅಥವಾ ಟೀಕೆಯಲ್ಲಿರುವ ವತ್ಕರಣಕ್ಕೆ 'ತದ್ಯಥಾ' ಎಂಬರ್ಥವನ್ನೇ ವಿವಕ್ಷಿಸಿ ಉದಾಹರಣಾರ್ಥವನ್ನು ಹೇಳಬಹುದು. ಈ ಟೀಕೆಯ ಸ್ವಾರಸ್ಯಕ್ಕೆ ಅನುಸಾರಿಯಾಗಿ ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಹೀಗೆ ತಿಳಿಯಬೇಕು -

ವ್ಯಾಪ್ಯಧರ್ಮಕ್ಕೆ ಅರ್ಪಕವಾದ ಪದವೇ ಲಿಂಗ. ವ್ಯಾಪ್ಯಧರ್ಮಕ್ಕೆ ಅರ್ಪಕವಾದ ನಿರಾಕಾಂಕ್ಷಿತವಾದ ಅನೇಕ ಪದಗಳ ಸಮೂಹವೇ ವಾಕ್ಯ ಎಂದು.

**युक्तं चैकार्थत्वेऽपि ''एकः कर्ता वर्तमाने काले स्वार्थं पाकक्रियां निर्वर्तयति'' 'पचते' इत्यनयोर्मध्ये 'एकः' इत्यादिवाक्यात् 'पचते' इति पदस्येव झटिति बोधकस्य लिङ्गस्य वाक्यात्प्राबल्यम् ।**

ಹೀಗೆ ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಹೇಳಿದರೆ, ಲಿಂಗವು ವಾಕ್ಯಕ್ಕಿಂತಲೂ ಪ್ರಬಲವೆಂದು ಹೇಗೆ ಹೇಳುವುದು? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. - 'ಏಕಃ ಕರ್ತಾ ವರ್ತಮಾನೇ ಕಾಲೇ ಸ್ವಾರ್ಥಂ ಪಾಕಕ್ರಿಯಾಂ ನಿರ್ವರ್ತಯತಿ' 'ಒಬ್ಬ ಕರ್ತೃವು ವರ್ತಮಾನಕಾಲದಲ್ಲಿ ತನಗಾಗಿ

ಪಾಕಕ್ರಿಯೆಯಲ್ಲಿ ತೊಡಗುತ್ತಾನೆ' ಎಂಬ ವಾಕ್ಯವನ್ನು ಪ್ರಯೋಗಿಸಿದಾಗ ಯಾವ ಅರ್ಥವು ತಿಳಿಯುತ್ತದೋ, ಅಷ್ಟು ಅರ್ಥವು 'ಪಚತೇ' ಎಂಬ ಒಂದೇ ಪದದಿಂದ ತಿಳಿಯುತ್ತದೆ. 'ಪಚತೇ' ಎಂಬಲ್ಲಿರುವ ಧಾತು, ಆಖ್ಯಾತಪ್ರತ್ಯಯ, ಆತ್ಮನೇಪದ ಇಷ್ಟರಿಂದ ಸಂಪೂರ್ಣವಾಕ್ಯದಿಂದ ತಿಳಿಯುವ ಅರ್ಥವು ಲಭ್ಯವಾಗುತ್ತದೆ. ಆದ್ದರಿಂದ 'ಪಚತೇ' ಎಂಬ ಧಾತುವಿನಿಂದಲೇ ಕೂಡಲೇ ಶಬ್ದಬೋಧವು ಬರುವುದರಿಂದ ವಾಕ್ಯಕ್ಕಿಂತಲೂ ಲಿಂಗವು ಪ್ರಬಲವೆಂದು ನಿಶ್ಚಯಿಸಬಹುದು.

**यथा ''तल्लिङ्गात्'' इत्यत्र वाय्वादिभूतकारणत्वरूपभूताकाशलिङ्गार्पकात् ''सर्वाणि हवा इमानि भूतान्याकाशादेव समुत्पद्यन्ते'' इति वाक्यादनन्तत्व-लिङ्गस्य ।**

ಪ್ರಕೃತ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ 'ಸರ್ವಾಣಿ ಹವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' ಎಂದು ಉದಾಹರಿಸುವ ವಾಕ್ಯದಿಂದ ವಾಯು ಮೊದಲಾದ ಭೂತ ಪದಾರ್ಥಗಳ ಕಾರಣತ್ವ ಎಂಬ ಲಿಂಗದಿಂದ ಭೂತಾಕಾಶವೇ ಆಕಾಶಶಬ್ದಪ್ರತಿಪಾದ್ಯವೆಂದು ತಿಳಿಯುತ್ತದೆ. ಆದರೆ 'ಸ ಏಷೋ ಅನಂತಃ' ಎಂಬ ಶ್ರುತಿಯಲ್ಲಿರುವ 'ಅನಂತ' ಎಂಬ ಒಂದೇ ಪದದಿಂದ ಅನಂತತ್ವಲಿಂಗವು ಆಕಾಶಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಸುತ್ತಿದೆ. ಒಂದೇ ಪದದಿಂದ ತಿಳಿಯುವಂತಹ ಲಿಂಗವು ಶೀಘ್ರೋಪಸ್ಥಾಪಕವಾದ್ದರಿಂದ ಲಿಂಗಕ್ಕಿಂತಲೂ ಪ್ರಬಲವಾಗಿದೆಯೆಂದು ತಿಳಿಯಬೇಕು. ಆದ್ದರಿಂದ ಆಕಾಶಶಬ್ದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಲಿಂಗಪ್ರಮಾಣದಿಂದ ನಿಶ್ಚಯವಾಗುತ್ತದೆ.

**अस्मिन्पक्षे वाक्यस्य प्रकरणात्प्राबल्ये ''ज्योतिश्चरण'' इत्यत्राग्निसूक्तात् ''वि मे कर्णा पतयतः'' इत्यादिवाक्यमुदाहार्यम् ।**

ಈ ಎರಡನೆಯ ವ್ಯಾಖ್ಯಾನದ ಪ್ರಕಾರ ಪ್ರಕರಣ ಪ್ರಮಾಣಕ್ಕಿಂತಲೂ ವಾಕ್ಯವೇ ಪ್ರಬಲವೆಂಬುದನ್ನು ಈ ದೃಷ್ಟಾಂತದಿಂದ ತಿಳಿಯಬೇಕು - 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರದಲ್ಲಿ ಅಗ್ನಿಸೂಕ್ತಕ್ಕಿಂತಲೂ 'ವಿ ಮೇ ಕರ್ಣಾ ಪತಯತಃ' ಇತ್ಯಾದಿ ವಾಕ್ಯವು ಶೀಘ್ರೋಪಸ್ಥಾಪಕವಾಗಿದೆ. ಸಂಪೂರ್ಣ ಅಗ್ನಿಪ್ರಕರಣವನ್ನು ಓದಿ ಅರ್ಥಮಾಡಿಕೊಳ್ಳುವುದಕ್ಕಿಂತ ಬಹುಬೇಗ 'ವಿಮೇ ಕರ್ಣಾ ಪತಯತಃ' ಎಂಬ ವಾಕ್ಯದಿಂದ ಶಾಬ್ದಬೋಧವು ಬರುತ್ತದೆ ಆದ್ದರಿಂದ ಪ್ರಕರಣಕ್ಕಿಂತಲೂ ವಾಕ್ಯವು ಪ್ರಬಲವಾಗಿದೆಯೆಂದು ತಿಳಿಯಬೇಕು.

**सूत्रादौ वाक्योक्तेऽपि व्याप्ये लिङ्गत्वोक्तिस्तु बोधकस्य शब्दस्य वाक्यत्वेऽपि बोध्यस्य समुद्रशायित्वलक्ष्मीपतित्वादेर्व्याप्यत्वमभिप्रेत्यावान्तरभेदाविवक्षया युक्ता ।**

ಹಾಗಾದರೆ 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರದಲ್ಲಿ 'ತಲ್ಲಿಂಗಾತ್' ಎಂಬುದರಿಂದ ವಾಕ್ಯವನ್ನು ಲಿಂಗವೆಂದೇಕೆ ಪರಿಗಣಿಸಿದ್ದಾರೆ ? ಎಂದು ಪ್ರಶ್ನಿಸಬಾರದು. ವಾಕ್ಯದಿಂದ ಪ್ರತಿಪಾದ್ಯವಾದ ವ್ಯಾಪ್ಯಧರ್ಮವನ್ನು ಲಿಂಗವೆಂದು ಹೇಳಿದ್ದಾದರೂ ಬೋಧಕವಾದ ಶಬ್ದಕ್ಕೆ ವಾಕ್ಯತ್ವವಿದ್ದರೂ ಬೋಧ್ಯವಾದ ಸಮುದ್ರಶಾಯಿತ್ವ, ಲಕ್ಷ್ಮೀಪತಿತ್ವಮೊದಲಾದ ಧರ್ಮಗಳಿಗೆ ವ್ಯಾಪ್ಯಧರ್ಮತ್ವವನ್ನು ವಿವಕ್ಷಿಸಿ, ಅವಾಂತರ ಭೇದವನ್ನು ವಿವಕ್ಷೆ ಮಾಡದೇ ಹಾಗೇ ಹೇಳಿರುತ್ತಾರೆ. ಅಂದರೆ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಇತ್ಯಾದಿ ವಾಕ್ಯದಿಂದ 'ಶ್ರೀಲಕ್ಷ್ಮೀಪತಿತ್ವ' ಎಂಬ ಲಿಂಗವು ತಿಳಿಯುತ್ತದೆ. ಲಿಂಗ ಹಾಗೂ ವಾಕ್ಯಗಳಲ್ಲಿರುವ ವ್ಯತ್ಯಾಸವನ್ನು ವಿವಕ್ಷಿಸದೇ, ವಾಕ್ಯದಿಂದ ತಿಳಿಯುತ್ತಿರುವ ವ್ಯಾಪ್ಯಧರ್ಮವೆಂಬ ಅಸಾಧಾರಣ ಧರ್ಮವನ್ನು ಮಾತ್ರ ವಿವಕ್ಷಿಸಿ, ಹಾಗೇ 'ತಲ್ಲಿಂಗಾತ್' ಇತ್ಯಾದಿಯಾಗಿ ಹೇಳಿರುತ್ತಾರೆ.

**प्रकाशः –**

**एवं लिङ्गवाक्ययोर्बलाबलत्वे टीकास्वारस्यानुरोधेन बीजान्तरं वक्तुं प्रकारान्तरेण तत्स्वरूपमाह – यद्वेति ।।**

ವಿವರಣೆ - ಇಲ್ಲಿಯ ತನಕ ಶ್ರುತಿ, ಲಿಂಗ, ವಾಕ್ಯ, ಪ್ರಕರಣ ಇವುಗಳ ಬಲಾಬಲ ವಿಚಾರವನ್ನು ಒಂದು ಬಗೆಯಲ್ಲಿ ಮಾಡಿದರು. ಪ್ರಕೃತ ಲಿಂಗ ಹಾಗೂ ವಾಕ್ಯಗಳ ಪ್ರಾಬಲ್ಯ-ದೌರ್ಬಲ್ಯ ವಿಚಾರದಲ್ಲಿ ಮತ್ತೊಂದು ಪ್ರಕಾರವನ್ನು ಹೇಳುತ್ತಿದ್ದಾರೆ. ಮತ್ತು ಟೀಕಾ ಸ್ವಾರಸ್ಯವನ್ನು ತೋರಿಸುವುದಕ್ಕಾಗಿ ಕಾರಣಾಂತರವನ್ನು ಹೇಳುತ್ತಾ ಮತ್ತೊಂದು ಬಗೆಯಲ್ಲಿ ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನೂ ಕೂಡ ಹೇಳುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥದಿಂದ.

**प्रकाशः – ननूभयोरपि व्याप्यार्पकत्वे कथं प्राबल्यादीत्यत आह – युक्तश्चेति ।।**

ಲಿಂಗವು ವ್ಯಾಪ್ತಧರ್ಮಕ್ಕೆ ಅರ್ಪಕವಾಗಿದೆ. ವಾಕ್ಯವೂ ಸಹ ವ್ಯಾಪ್ಯಧರ್ಮಕ್ಕೆ ಅರ್ಪಕವಾಗಿದೆ. ಹೀಗಿರುವಾಗ ವಾಕ್ಯಕ್ಕಿಂತಲೂ ಲಿಂಗವು ಪ್ರಬಲವೆಂದು ಹೇಗೆ ನಿರ್ಣಯಿಸುವುದು ಎಂಬ ಪ್ರಶ್ನೆಗೆ 'ಯುಕ್ತಂ ಚ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

**प्रकाशः –** एक इत्येकवचनार्थः । कर्तेति लकारार्थः । वर्तमानेति लडर्थः । एकस्यैव लकारत्वलट्त्वरूपधर्मभेदेनार्थभेदात् । स्वार्थमित्यात्मनेपदार्थः । पाकेति प्रकृत्यर्थः । निर्वर्तयतीत्याख्यातार्थः ।

'ಏಕಃ ಕರ್ತಾ ವರ್ತಮಾನೇ ಕಾಲೇ ಸ್ವಾರ್ಥಂ ಪಾಕಕ್ರಿಯಂ ಪಾಕೇ ನಿರ್ವರ್ತಯತಿ' ಎಂಬ ಸಂಪೂರ್ಣವಾಕ್ಯದಿಂದ ತಿಳಿಯುವಂತಹ ಅರ್ಥವು 'ಪಚತೇ' ಎಂಬ ಒಂದೇ ಪದದಿಂದ ತಿಳಿಯುತ್ತದೆ. ಅದು ಹೀಗೆ - 'ಪಚತೇ' ಎಂಬಲ್ಲಿರುವ ಏಕವಚನದಲ್ಲಿ 'ಏಕಃ' ಎಂಬರ್ಥವು ಲಕಾರದಿಂದ 'ಕರ್ತಾ' ಎಂಬರ್ಥವೂ 'ಲಟ್' ಲಕಾರದಿಂದ ವರ್ತಮಾನ ಎಂಬರ್ಥವೂ ತಿಳಿಯುತ್ತದೆ. ಒಂದೇ ಲಕಾರಕ್ಕೆ ಲಕಾರತ್ವ ಲಟ್‌ತ್ವ ಎಂಬ ಧರ್ಮಭೇದದಿಂದ ಕರ್ತೃತ್ವ ವರ್ತಮಾನತ್ವ ಎಂಬ ಎರಡರ್ಥಗಳೂ ಸಿದ್ಧವಾಗಿವೆ. 'ಆತ್ಮನೇ' ಪದದಿಂದ 'ಸ್ವಾರ್ಥಮ್' ಎಂಬರ್ಥವು, ಪ್ರಕೃತಿಯಿಂದ 'ಪಾಕ' ಎಂಬರ್ಥವೂ ಆಖ್ಯಾತದಿಂದ 'ನಿರ್ವರ್ತಯತಿ' (ಭಾವನಾ) ಎಂಬರ್ಥವೂ ತಿಳಿಯುತ್ತದೆ. ಆದ್ದರಿಂದ ಒಂದೇ ಪದದಿಂದ ಶೀಘ್ರೋಪಸ್ಥಿತಿಯು ಉಂಟಾಗುತ್ತದೆಂದು ತಿಳಿಯಬೇಕು.

**प्रकाशः** – नन्वेवं ''कतम आत्मा'' इति प्रश्नवाक्यस्य व्याप्यार्पकत्वाभावाद्वाक्य-प्राबल्येनेदमुदाहरणमित्यत आह – **अस्मिन्निति** ।।

ಹಾಗಾದರೆ 'ಕತಮ ಆತ್ಮಾ' ಎಂಬ ಪ್ರಶ್ನವಾಕ್ಯಕ್ಕೆ ವ್ಯಾಪ್ಯಾರ್ಪಕತ್ವವು ಇಲ್ಲವೆಂದಂತಾಯಿತು. ಹೀಗಿರುವಾಗ ಪ್ರಕರಣಕ್ಕಿಂತಲೂ ವಾಕ್ಯವು ಪ್ರಬಲವಾಗಿದೆಯೆನ್ನಲು ಇದನ್ನು ಉದಾಹರಿಸಿದ್ದು ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೆ 'ಅಸ್ಮಿನ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – सूक्तस्याग्निप्रकरणत्वात् ''वि मे कर्णा'' इति वाक्यस्य कर्णादिविदूरत्वरूपव्याप्यार्पकत्वादिति भावः ।

ಸೂಕ್ತವು ಅಗ್ನಿಪ್ರಕರಣವಾಗಿದೆ. 'ವಿ ಮೇ ಕರ್ಣಾ ಪತಯತಃ' ಎಂಬ ವಾಕ್ಯವು ಕರ್ಣಾದಿವಿದೂರತ್ವ ಎಂಬ ವ್ಯಾಪ್ಯಧರ್ಮಕ್ಕೆ ಅರ್ಪಕವಾಗಿದೆ. ಪ್ರಕರಣಕ್ಕಿಂತಲೂ ವಾಕ್ಯದಿಂದ ಶೀಘ್ರವಾಗಿ ಶಾಬ್ದಬೋಧ ಬರುವುದರಿಂದ ಪ್ರಬಲವಾಗಿದೆಯೆಂದು ತಿಳಿಯಬೇಕು.

**प्रकाशः** – एतेनायं पक्षः प्रागेव तत्प्रस्तावे कस्मान्नावतारित इति निरस्तम् । प्रकरणदौर्बल्यज्ञानेऽपि वाक्यस्वरूपस्य ज्ञातव्यत्वादिति ।

ಹೀಗೆ ಹೇಳಿದ್ದರಿಂದ ಈ ಲಿಂಗ ಮತ್ತು ವಾಕ್ಯಗಳ ಮತ್ತೊಂದು ಬಗೆಯ ಈ ಪ್ರಾಬಲ್ಯ-ದೌರ್ಬಲ್ಯ ವಿಚಾರವನ್ನು ಇಲ್ಲೇಕೆ ಮಾಡುತ್ತಿದ್ದಾರೆ ? ಮೊದಲೇ ಮಾಡಬಹುದಿತ್ತಲ್ಲವೇ ? ಎಂಬ ಪ್ರಶ್ನೆಯನ್ನು ನಿರಾಕರಿಸಿದಂತಾಯಿತು. ವಾಕ್ಯಕ್ಕಿಂತಲೂ ಪ್ರಕರಣವು ದುರ್ಬಲವಾಗಿದೆಯೆಂದು ತಿಳಿಯಬೇಕಾಗಿದೆ. ಅದಕ್ಕೋಸ್ಕರ ವಾಕ್ಯಸ್ವರೂಪವನ್ನು ಮೊದಲು ತಿಳಿಸಿ, ಆನಂತರ ಈ ವಿಚಾರವು ಪ್ರಸಕ್ತವಾಗಿದೆಯೆಂದು ತಿಳಿಯಬೇಕು.

**प्रकाशः** – प्रागुदाहृतसूत्रभाष्यादौ लिङ्गत्वोक्तेर्गतिमाह – **सूत्रेति** ।।

ಹಿಂದೆ ಉದಾಹರಿಸಿದ ಸೂತ್ರ ಹಾಗೂ ಭಾಷ್ಯಗಳಲ್ಲಿ ವಾಕ್ಯಕ್ಕೆ ಲಿಂಗತ್ವವನ್ನು ಏಕೆ ಹೇಳಿದ್ದಾರೆಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - 'ಸೂತ್ರ' ಇತ್ಯಾದಿ ವಾಕ್ಯದಿಂದ.




ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಮತ್ತೊಂದು ಬಗೆಯಲ್ಲಿ ತಿಳಿಯಬಹುದು. ವ್ಯಾಪ್ಯಾರ್ಥಕವಾದ ಪದವು ಲಿಂಗ. ವ್ಯಾಪ್ಯಾರ್ಥಕವಾದ ಅನೇಕ ಪದಗಳೇ ವಾಕ್ಯ ಎಂದು. ಹಿಂದೆ ಲಿಂಗವೇ ಏಕಪದಾತ್ಮಕವಾಗಿದೆ. ಮತ್ತು ಅನೇಕ ಪದಾತ್ಮಕವಾಗಿದೆಯೆಂದು ಎರಡು ಪ್ರಕಾರದಿಂದ ಲಿಂಗವನ್ನು ವಿಭಾಗಮಾಡಲಾಗಿತ್ತು. ಆದರೆ ಈಗ ವ್ಯಾಪ್ಯಧರ್ಮವನ್ನು ತಿಳಿಸುವ ಒಂದು ಪದವಿದ್ದರೆ ಲಿಂಗವೆಂದು, ಅನೇಕ ಪದಗಳಿದ್ದರೆ ವಾಕ್ಯವೆಂದು ವಿಭಿನ್ನವಾಗಿ ಮತ್ತೊಂದು ಪ್ರಕಾರದಲ್ಲಿ ಲಿಂಗ ಹಾಗೂ ವಾಕ್ಯಗಳ ಲಕ್ಷಣವನ್ನು ಹೇಳಿದ್ದಾರೆ. ಹಾಗಾದರೆ ಲಿಂಗವು ವಾಕ್ಯಕ್ಕಿಂತಲೂ ಪ್ರಬಲವೆಂದು ಹೇಗೆ ಹೇಳುವುದು ಎಂದರೆ? 'ಒಬ್ಬ ಕರ್ತೃವು ವರ್ತಮಾನ ಕಾಲದಲ್ಲಿ ತನಗಾಗಿ ಪಾಕಕ್ರಿಯೆಯಲ್ಲಿ ತೊಡಗುತ್ತಾನೆ' ಎಂದು ಉದ್ದವಾದ ವಾಕ್ಯದಿಂದ ಯಾವ ಶಾಬ್ದಬೋಧವು ಬರುತ್ತದೋ ಅದನ್ನು 'ಪಚತೇ' ಎಂಬ ಒಂದೇ ಕ್ರಿಯಾಪದದಿಂದ ಅಷ್ಟೂ ಶಾಬ್ದಬೋಧವನ್ನು ಪಡೆಯಬಹುದು. ಇಲ್ಲಿರುವ 'ಪಚತೇ' ಎಂಬ ಒಂದೇ ಪದವು ವ್ಯಾಪ್ಯಾರ್ಥಕವಾದ ಲಿಂಗರೂಪವಾದ ಪದವಾಗಿದೆ. ಒಬ್ಬ ಕರ್ತೃ ವರ್ತಮಾನ ಕಾಲದಲ್ಲಿ ತನಗಾಗಿ ಪಾಕಕ್ರಿಯೆಯಲ್ಲಿ ತೊಡಗುತ್ತಾನೆ ಎಂಬುದು ಅನೇಕ ಪದಗಳುಳ್ಳ ವಾಕ್ಯರೂಪವಾಗಿದೆ. ಯಾವುದರಿಂದ ಶೀಘ್ರವಾಗಿ ಶಾಬ್ದಬೋಧವು ಬರುತ್ತದೋ ಅದೇ ಪ್ರಬಲವಾದ್ದರಿಂದ 'ಪಚತೇ' ಎಂಬ ಲಿಂಗರೂಪವಾದ ಪದವೇ ಪ್ರಬಲವೆಂದು ಸಿದ್ಧವಾಗುತ್ತದೆ. ಅದರಂತೆ 'ಸರ್ವಾಣಿ ಹವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' ಎಂಬ ದೀರ್ಘವಾದ ವಾಕ್ಯದಿಂದ ವಾಯ್ವಾದಿ ಭೂತಕಾರಣತ್ವವನ್ನು ತಿಳಿಯುವುದಕ್ಕಿಂತಲೂ 'ಅನಂತಃ' ಎಂಬ ಒಂದೇ ಪದದಿಂದ ಅನಂತತ್ವ ಲಿಂಗವನ್ನು ತಿಳಿಯುವುದೇ ಶ್ರೇಷ್ಠ. ಇದರಂತೆ ಅಗ್ನಿ ಪ್ರಕರಣದಿಂದ ಅಗ್ನಿಯೇ ಪ್ರತಿಪಾದ್ಯನೆಂದು ತಿಳಿಯುವುದಕ್ಕಿಂತಲೂ 'ವಿಮೇ ಕರ್ಣಾ ಪತಯತಃ' ಎಂಬ ಒಂದೇ ವಾಕ್ಯದಿಂದ ವಿಷ್ಣುವೇ 'ಜ್ಯೋತಿಸ್' ಶಬ್ದದಿಂದ ಪ್ರತಿಪಾದ್ಯನೆಂದು ತಿಳಿಯುವುದು ಶ್ರೇಷ್ಠವಾಗಿದೆ. ಆದ್ದರಿಂದ ಪ್ರಕರಣಕ್ಕಿಂತ ವಾಕ್ಯವು ಪ್ರಬಲವಾಗಿದೆಯೆಂದೂ ಸಹ ತಿಳಿಯಬೇಕು.

ಹಾಗಾದರೆ 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರಗಳಲ್ಲಿ ಶ್ರೀಲಕ್ಷ್ಮೀಪತಿತ್ವ ಮೊದಲಾದವುಗಳನ್ನು ಲಿಂಗವೆಂದೇಕೆ ಹೇಳಿದ್ದಾರೆ ಈಗ ಹೇಳಿದ ಲಕ್ಷಣದಂತೆ ಅವುಗಳು ವಾಕ್ಯವಾಗಬೇಕಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ವ್ಯಾಪ್ಯಾರ್ಥಕವಾದ ಅನೇಕ ಪದಗಳ ಸಮೂಹವು ವಾಕ್ಯವೆನಿಸಿದ್ದರಿಂದ 'ಶ್ರೀಶ್ಚ ತೇ ಲಕ್ಷ್ಮೀಶ್ಚ' ಇತ್ಯಾದಿ ಪದಸಮೂಹವು ವಾಕ್ಯರೂಪ ಪ್ರಮಾಣವೇ ಆಗಿದೆ. ಆದರೆ ಇದರಿಂದ ತಿಳಿಯುವಂತಹ 'ಶ್ರೀಲಕ್ಷ್ಮೀ ಪತಿತ್ವ' ಎಂಬ ಅಸಾಧಾರಣ ಧರ್ಮವು ಲಿಂಗರೂಪವಾಗಿರುವುದರಿಂದ ಅವಾಂತರ ಭೇದವನ್ನು ವಿವಕ್ಷಿಸದೇ ಇದನ್ನು ಮಾತ್ರ ವಿವಕ್ಷಿಸಿ, ಸೂತ್ರಕಾರರು ಲಿಂಗವೆಂದು ಪ್ರಯೋಗಿಸಿದ್ದಾರೆ.

'ಸ್ಥಾನ' ಲಕ್ಷಣ
ಪ್ರಕರಣಕ್ಕಿಂತ ಸ್ಥಾನವು ದುರ್ಬಲ

**तात्पर्यचन्द्रिका**

**एकार्थपरानेकप्रकरणसन्दर्भरूपस्थानस्य तु अतिबह्वर्थकथकत्वेनानेकप्रकरणार्थ धीपूर्वकमिदं स्थानमेतत्परमिति यज्ज्ञानं तत्पूर्वकं स्थानान्तर्गतविप्रतिपन्न-वाक्यस्यापि स्थानानुगुण एवार्थ इत्यनेकप्रकरणार्थधीद्वारा लिङ्गत्वात् प्रकरणाद्दुर्बलत्वम् ।**

ಅನುವಾದ - ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುವ ಅನೇಕ ಪ್ರಕರಣಗಳ ಸಂದರ್ಭವೇ ಸ್ಥಾನದ ಲಕ್ಷಣ.

ಈ ಸ್ಥಾನವು ಅನೇಕ ಅರ್ಥಗಳನ್ನು ಪ್ರತಿಪಾದನೆ ಮಾಡಬೇಕು. ಅನಂತರ ಅನೇಕ ಪ್ರಕರಣಗಳ ಅರ್ಥವನ್ನು ತಿಳಿಸಬೇಕು. ತದನಂತರವೇ ಸ್ಥಾನವು ಇಂತಹ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆಂಬ ತಿಳುವಳಿಕೆ ಬರುತ್ತದೆ. ಇದರಿಂದ ಸ್ಥಾನದಲ್ಲಿ ಅಂತರ್ಗತವಾದ ವಿಪ್ರತಿಪನ್ನ ವಾಕ್ಯವೂ ಕೂಡ ಸ್ಥಾನಕ್ಕೆ ಅನುಗುಣವಾಗಿಯೇ ಅನೇಕ ಪ್ರಕರಣಗಳ ಅರ್ಥಜ್ಞಾನವನ್ನು ತಂದುಕೊಡುವ ಮೂಲಕ ಲಿಂಗರೂಪವಾಗಿ ಜ್ಞಾಪಕವಾಗುತ್ತವೆ. ಆದ್ದರಿಂದ ಪ್ರಕರಣಕ್ಕಿಂತಲೂ ಸ್ಥಾನವು ವಿಳಂಬವಾಗಿ ಅರ್ಥೋಪಸ್ಥಾಪಕವಾಗುವುದರಿಂದ ದುರ್ಬಲವಾಗಿದೆಯೆಂದು ತಿಳಿಯಬೇಕು.

**यथा षट्प्रश्नोपनिषद्रूपस्येश्वरपरस्य स्थानस्य ''भगवन्कुत एष प्राणोजायते'' इत्यादिखण्डरूपान्मुख्यप्राणप्रकरणात् ।**

ಉದಾಹರಣೆ - ಸಮಗ್ರ ಷಟ್‌ಪ್ರಶ್ನೋಪನಿಷತ್ತು ಈಶ್ವರನನ್ನು ಪ್ರತಿಪಾದನೆ ಮಾಡುವುದರಿಂದ ಸ್ಥಾನರೂಪವಾಗಿದೆ. ಈ ಉಪನಿಷತ್ತಿನ ಮೂರನೆಯ ಪ್ರಶ್ನೆಯಲ್ಲಿರುವ 'ಭಗವನ್‌ಕುತ ಏಷ ಪ್ರಾಣೋಜಾಯತೇ' ಎಂಬ ಭಾಗವು ಮಾತ್ರ ಮುಖ್ಯಪ್ರಾಣನನ್ನು ಪ್ರತಿಪಾದನೆ ಮಾಡುತ್ತದೆ.

**अत एव तत्खण्डमध्यस्थं ''एवमेवैष प्राणः'' इत्यादिकं स्थानबाधेन प्रकरणान्मुख्यप्राणपरम् ।**

ಆದ್ದರಿಂದಲೇ ಮುಖ್ಯಪ್ರಾಣನನ್ನು ಪ್ರತಿಪಾದಿಸುವ ಆ ಭಾಗದ ಮಧ್ಯದಲ್ಲಿ 'ಏವಮೇವ ಏಷ ಪ್ರಾಣಃ' ಇತ್ಯಾದಿ ವಾಕ್ಯವು ಸ್ಥಾನವನ್ನು ಬಾಧಿಸುವ ಮೂಲಕ ಮುಖ್ಯಪ್ರಾಣಪರತ್ವವನ್ನು ಸಮರ್ಥಿಸುತ್ತಿದೆ. ಅಂದರೆ ಸಮಗ್ರ ಸ್ಥಾನಪ್ರಮಾಣವು ವಿಷ್ಣುವನ್ನು ಪ್ರತಿಪಾದನೆ ಮಾಡಿದರೂ

ಮಧ್ಯದಲ್ಲಿರುವ ಈ ಪ್ರಕರಣವು ಮುಖ್ಯಪ್ರಾಣನನ್ನು ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ ಸ್ಥಾನಕ್ಕಿಂತಲೂ ಪ್ರಕರಣವು ಪ್ರಬಲವಾಗಿದೆಯೆಂದು ನಿಶ್ಚಯವಾಗುತ್ತದೆ.

**अत एवात्र तत्रोक्तप्राणव्यवस्थापकत्वादीनां मुख्यप्राणलिङ्गत्वमुपेत्य श्रुत्या बाध उक्तः ।**

ಆದ್ದರಿಂದಲೇ ವಾಮನಾಧಿಕರಣದ ಪೂರ್ವಪಕ್ಷದಲ್ಲಿ ಷಟ್‌ಪ್ರಶ್ನೋಪನಿಷತ್ತಿನಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವಾದಿ ಧರ್ಮಗಳಿಗೆ ಮುಖ್ಯಪ್ರಾಣಲಿಂಗತ್ವವನ್ನು ಒಪ್ಪಿ 'ಮಧ್ಯೇ ವಾಮಾನಮಾಸೀನಂ' ಎಂಬ ಶ್ರುತಿಯಿಂದ ಬಾಧವನ್ನು ಹೇಳಿದ್ದಾರೆ ಹೊರತು, ವಿಪ್ರತಿಪನ್ನವಾದ ವಾಕ್ಯಕ್ಕೆ ಬಾಧವನ್ನು ಹೇಳಿರುವುದಿಲ್ಲ.

**यथा चाऽकाङ्क्षादिमद्वाक्यसङ्घरूपप्रकरणस्य वाक्याद्भेदः तथाऽकाङ्क्षादिमत्प्रकरण-सङ्घरूपस्य स्थानस्यापि प्रकरणाद्भेदः ।**

ಆದ್ದರಿಂದ ಹೇಗೆ ಆಕಾಂಕ್ಷಾ, ಯೋಗ್ಯತಾ ಮೊದಲಾದವುಗಳಿಂದ ಕೂಡಿರುವಂತಹ ವಾಕ್ಯಗಳ ಸಮೂಹರೂಪವಾದ ಪ್ರಕರಣವು ವಾಕ್ಯಕ್ಕಿಂತಲೂ ಭಿನ್ನವಾಗಿದೆಯೋ, ಅದೇ ರೀತಿಯಾಗಿ ಆಕಾಂಕ್ಷಾ, ಯೋಗ್ಯತಾ ಮೊದಲಾದವುಗಳಿಂದ ಕೂಡಿರುವಂತಹ ಪ್ರಕರಣಗಳ ಸಮೂಹವೆಂಬ ಸ್ಥಾನಪ್ರಮಾಣವೂ ಕೂಡ ಪ್ರಕರಣಕ್ಕಿಂತ ಭಿನ್ನವೇ ಆಗಿದೆ.

**प्रकाशः –**

**''अनेकप्रमेयप्रतिपादकमेकार्थे तात्पर्ययुक्तं स्थानम्'' इति लक्षणटीकां विवृण्वन् ''स्थानस्यातिबह्वर्थकथनेनाभिप्रायतोऽर्थानुमितिजनकस्य ततोऽपि दौर्बल्यम्'' इति टीकावाक्योक्तं दौर्बल्यबीजं व्यनक्ति – एकार्थेति ।।**

ವಿವರಣೆ - ಇಲ್ಲಿಯ ತನಕ ಪ್ರಕರಣದ ಲಕ್ಷಣವನ್ನು ಹೇಳಿ, ವಾಕ್ಯಕ್ಕಿಂತಲೂ ಪ್ರಕರಣವು ದುರ್ಬಲವಾಗಿದೆಯೆಂಬುದನ್ನು ಸಮರ್ಥಿಸಿದರು. ಪ್ರಕೃತ ಸ್ಥಾನದ ಲಕ್ಷಣವನ್ನು ಹೇಳುತ್ತಾ ಸ್ಥಾನ ಪ್ರಮಾಣವು ಪ್ರಕರಣ ಪ್ರಮಾಣಕ್ಕಿಂತಲೂ ದುರ್ಬಲವಾಗಿದೆಯೆಂದು ಸಮರ್ಥಿಸುತ್ತಿದ್ದಾರೆ.

'ಅನೇಕಪ್ರಮೇಯಪ್ರತಿಪಾದಕಮ್ ಏಕಾರ್ಥೇ ತಾತ್ಪರ್ಯಯುಕ್ತಂ ಸ್ಥಾನಮ್' ಅನೇಕ ಪ್ರಮೇಯಗಳನ್ನು ಪ್ರತಿಪಾದನೆ ಮಾಡುವ ಒಂದೇ ಅರ್ಥದಲ್ಲಿ ತಾತ್ಪರ್ಯವುಳ್ಳದ್ದೇ 'ಸ್ಥಾನ' ಎನಿಸುತ್ತದೆ. ಎಂಬ ಸ್ಥಾನದ ಲಕ್ಷಣವನ್ನು ಟೀಕೆಯು ಹೇಳುತ್ತಿದೆ. ಅದನ್ನು ಪ್ರಕೃತ ವಿವರಿಸುತ್ತಿದ್ದಾರೆ. 'ಸ್ಥಾನಸ್ಯಾತಿಬಹ್ವರ್ಥ-ಕಥನೇನಾಭಿಪ್ರಾಯತೋಽರ್ಥಾನುಮಿತಿಜನಕಸ್ಯ ತತೋಽಪಿ ದೌರ್ಬಲ್ಯಮ್' ಸ್ಥಾನವು ಅನೇಕ ಅರ್ಥಗಳನ್ನು

ಹೇಳುವ ಮೂಲಕ ಅರ್ಥಾನುಮಿತಿಗೆ ಜನಕವಾದ್ದರಿಂದ ಪ್ರಕರಣಕ್ಕಿಂತಲೂ ದುರ್ಬಲವಾಗಿದೆಯೆಂದು ತಿಳಿಯಬೇಕು. ಇತ್ಯಾದಿ ಟೀಕಾವಾಕ್ಯವನ್ನೂ ಕೂಡ ವ್ಯಾಖ್ಯಾನಿಸುತ್ತಾ ದೌರ್ಬಲ್ಯಕ್ಕೆ ಕಾರಣವನ್ನು ನಿರೂಪಣೆ ಮಾಡುತ್ತಿದ್ದಾರೆ 'ಏಕಾರ್ಥ' ಇತ್ಯಾದಿ ವಾಕ್ಯದಿಂದ.

**प्रकाशः – प्रकरणार्थधीपूर्वकमिति ।। तदभावे स्थानस्य तत्परत्वबुद्धेरयोगादिति भावः ।।**

'ಪ್ರಕರಣಾರ್ಥಧೀಪೂರ್ವಕಮ್' ಎಂದು ಗ್ರಂಥದಲ್ಲಿದೆ. ಅಂದರೆ ಸ್ಥಾನವು ಮೊದಲು ಅನೇಕ ಪ್ರಕರಣಗಳ ಅರ್ಥಜ್ಞಾನವನ್ನು ತಂದುಕೊಡಬೇಕೆಂದು ಇದರ ಅಭಿಪ್ರಾಯ. ಇಲ್ಲದಿದ್ದರೆ, ಸ್ಥಾನವು ಪ್ರಕರಣಾರ್ಥಪರವಾಗಿದೆಯೆಂಬ ಬುದ್ಧಿ ಹುಟ್ಟುವುದಿಲ್ಲ.

**प्रकाशः – यथेति ।। उपनिषद्रूपं स्थानं यावत् ''प्रजाकामो ह वै प्रजापतिः'' इत्यादिस्रष्टृत्वादिभगवन्महिमप्रतिपादकान्यनेकप्रकरणानि तदन्तस्स्थविष्णुलिङ्ग-बोधकनानावाक्यार्थालोचनपूर्वं ब्रह्मपराणीति विज्ञाय**

ಸಮಗ್ರ ಷಟ್‌ಪ್ರಶ್ನೋಪನಿಷತ್ತು ಸ್ಥಾನರೂಪವಾಗಿ ಪ್ರಮಾಣವಾಗಿದೆ. ಏಕೆಂದರೆ 'ಪ್ರಜಾಕಾಮೋ ಹ ವೈ ಪ್ರಜಾಪತಿಃ' ಇತ್ಯಾದಿಯಾಗಿ ಸ್ರಷ್ಟೃತ್ವವೇ ಮೊದಲಾದ ಭಗವಂತನ ಅನೇಕ ಮಹಿಮೆಗಳನ್ನು ಪ್ರತಿಪಾದನೆ ಮಾಡುವಂತಹ ಅನೇಕ ಪ್ರಕರಣಗಳು ಇದರಲ್ಲಿ ಅಡಗಿದೆ. ಅಂತಹ ಪ್ರಕರಣಗಳಲ್ಲಿರುವ ವಿಷ್ಣುವಿನ ಅಸಾಧಾರಣಧರ್ಮಗಳನ್ನು ತಿಳಿಸುವಂತಹ ಅನೇಕ ವಾಕ್ಯಗಳ ಅರ್ಥವನ್ನು ಆಲೋಚನೆ ಮಾಡಿದಾಗ ಪ್ರಕರಣವು ಬ್ರಹ್ಮಪರವಾಗಿದೆಯೆಂದು ತಿಳಿಯುತ್ತದೆ.

**प्रकाशः – ''सुकेशा भारद्वाजः प्रजाकामः'' इत्यारभ्य ''नमः परमऋषिभ्यः'' इत्यन्तं स्थानं विष्णुपरमिति जानतः**

ಅನಂತರ ಲಿಂಗಗಳು ವಿಷ್ಣುಪರವಾದ್ದರಿಂದ, 'ಸುಕೇಶಾ ಭಾರದ್ವಾಜಃ ಪ್ರಜಾಕಾಮಃ' ಎಂದು ಪ್ರಾರಂಭವಾಗಿ 'ನಮಃ ಪರಮಋಷಿಭ್ಯಃ' ಎಂಬಲ್ಲಿಯ ತನಕ ಇರುವಂತಹ ವಾಕ್ಯಗಳೆಲ್ಲವೂ ವಿಷ್ಣುಪರವಾಗಿವೆಯೆಂದು ಸ್ಥಾನಪ್ರಮಾಣವು ತಿಳಿಸುತ್ತಿದೆ.

**प्रकाशः – ''एवमेवैष प्राण इतरान् प्राणान् पृथक्पृथगेव सन्निधत्ते'' इति तृतीयप्रश्नस्थं वाक्यं स्थानानुगुणतया विष्णुपरमिति बोधं जनयति ।**

ಅನಂತರ ಯಾವಾತನು ಸಂಪೂರ್ಣಸ್ಥಾನವು ವಿಷ್ಣುಪರವಾಗಿದೆಯೆಂದು ತಿಳಿದಿರುತ್ತಾನೋ, ಅಂತಹವನನ್ನು ಕುರಿತು 'ಏವಮೇವ ಏಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್‌ಪೃಥಗೇವ ಸನ್ನಿಧತ್ತೇ' ಎಂಬ ಮೂರನೆಯ ಪ್ರಶ್ನೆಯಲ್ಲಿರುವ ವಾಕ್ಯವು ಸ್ಥಾನಕ್ಕೆ ಅನುಗುಣವಾಗಿ ವಿಪ್ರತಿಪನ್ನವಾದ ವಾಕ್ಯವೂ ಕೂಡ ವಿಷ್ಣುಪರವಾಗಿದೆಯೆಂದೇ ತಿಳಿಸುತ್ತದೆ. ಇಷ್ಟು ಸ್ಥಾನಪ್ರಮಾಣದಿಂದ ತಿಳಿಯುವಂತಹ ವಿಚಾರ.

ವಾಮನಾಧಿಕರಣ (೧-೩-೭)

**प्रकाशः** – ततः प्रागेव "आत्मत एष प्राणो जायते । यथेषा पुरुषेच्छाया एतस्मिन्नेतदाततम्" इत्यारभ्य

उत्पत्तिमायतिं स्थानं विभुत्वं चैव पञ्चधा ।
अध्यात्मं चैव प्राणस्य विज्ञायामृतमश्नुते ।।

इत्यन्तं प्रकरणं विष्णुजत्वादिलिङ्गप्राणश्रुत्युपेतावान्तरनानावाक्यार्थधीपूर्वं प्रकरणं वायुपरमिति जानतः

ಆದರೆ ಯಾವಾಗ ಸ್ಥಾನಪ್ರಮಾಣವು ಹೀಗೆ ವಿಲಂಬವಾಗಿ ವಿಷ್ಣುಪರತ್ವವನ್ನು ಸಮರ್ಥಿಸುತ್ತದೋ ಅಷ್ಟರಮಧ್ಯದಲ್ಲಿಯೇ ಪ್ರಕರಣ ಪ್ರಮಾಣವು 'ಆತ್ಮತ ಏಷ ಪ್ರಾಣೋ ಜಾಯತೇ । ಯಥೇಷಾ ಪುರುಷೇಚ್ಛಾಯಾ ಏತಸ್ಮಿನ್ನೇತದಾತತಮ್' ಎಂದು ಪ್ರಾರಂಭವಾಗಿ

ಉತ್ಪತ್ತಿಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಂಚಧಾ ।
ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾಮೃತಮಶ್ನುತೇ ॥

ಎಂಬಲ್ಲಿಯ ತನಕ ಇರುವ ವಾಕ್ಯಗಳೆಲ್ಲವೂ ಪ್ರಕರಣ ರೂಪದಿಂದ ವಾಯುಪರತ್ವವನ್ನು ಹೇಳುತ್ತದೆ. ಮತ್ತು 'ಪ್ರಾಣೋ ಜಾಯತೇ' ಎಂಬುದರಿಂದ ತಿಳಿಯುವ 'ವಿಷ್ಣುಜತ್ವ' ಮೊದಲಾದ ಲಿಂಗಗಳು, ಪ್ರಾಣಶ್ರುತಿಗಳಿಂದ ಕೂಡಿದ ಅವಾಂತರವಾದ ಅನೇಕ ವಾಕ್ಯಗಳ ಅರ್ಥಜ್ಞಾನವನ್ನು ತಂದುಕೊಡುವ ಮೂಲಕ ಪ್ರಕರಣಕ್ಕೆ ವಾಯುಪರತ್ವವನ್ನು ಸಮರ್ಥಿಸುತ್ತವೆ.

**प्रकाशः** – तदनुगुणतया "एवमेवैष प्राणः" इति वाक्यं वायुपरमिति बुद्धिमुत्पादयतीति तृतीयकक्ष्यायामेव प्रकरणेन निर्णये चतुर्थकक्ष्यायां प्रवर्तमानं स्थानं निराकाङ्क्षत्वान्न प्रभवति निर्णाययितुमित्यर्थः ।

ಇದಕ್ಕನುಗುಣವಾಗಿ 'ಏವಮೇವ ಏಷ ಪ್ರಾಣ' ಎಂಬ ವಾಕ್ಯವು ವಾಯುಪರವಾಗಿದೆಯೆಂದು ತಿಳಿಯುತ್ತದೆ. ಹೀಗೆ ಮೂರನೆಯ ಕಕ್ಷೆಯಲ್ಲಿ ಪ್ರಕರಣದಿಂದ ಮುಖ್ಯಪ್ರಾಣಪರತ್ವವು ಸಿದ್ಧವಾಗುತ್ತದೆ. ಅನಂತರ ನಾಲ್ಕನೆಯ ಕಕ್ಷೆಯಲ್ಲಿ ಪ್ರವೃತ್ತಿಸುವ ಸ್ಥಾನಪ್ರಮಾಣವು ನಿರಾಕಾಂಕ್ಷಿತವಾಗುವುದರಿಂದ ವಿಷ್ಣುಪರತ್ವವನ್ನು ನಿರ್ಣಯಿಸಲು ಸಮರ್ಥವಾಗುವುದಿಲ್ಲ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಸ್ಥಾನಪ್ರಮಾಣವು ವಿಳಂಬವಾಗಿ ಅರ್ಥೋಪಸ್ಥಾಪಕವಾಗುತ್ತದೆ. ಅದು ಹೀಗೆ -

೧. ವಿಷ್ಣುವಿನ ಲಿಂಗಗಳ ಅನುಸಂಧಾನ,

೨. ಲಿಂಗಗಳ ಅನುಸಂಧಾನದಿಂದ ಪ್ರಕರಣಕ್ಕೆ ವಿಷ್ಣುಪರತ್ವ ಸಮರ್ಥನೆ,

೩. ಪ್ರಕರಣವು ವಿಷ್ಣುಪರವಾದ್ದರಿಂದ ಸ್ಥಾನವೂ ಕೂಡ ವಿಷ್ಣುಪರವಾಗಿದೆಯೆಂಬ ತಿಳುವಳಿಕೆ.

ಪರಿಪೂರ್ಣಚಂದ್ರಿಕಾ

೪. ಸ್ಥಾನಕ್ಕೆ ಅನುಗುಣವಾಗಿ ವಿಪ್ರತಿಪನ್ನವಾಕ್ಯಕ್ಕೂ ಕೂಡ ವಿಷ್ಣುಪರತ್ವದ ಸಮರ್ಥನೆ.

ಹೀಗೆ ನಾಲ್ಕು ಹಂತದಲ್ಲಿ ಸ್ಥಾನವು ಅರ್ಥನಿಶ್ಚಾಯಕವಾಗುತ್ತದೆ. ಆದರೆ ಪ್ರಕರಣವು ಮೂರೇ ಹಂತದಲ್ಲಿ ವಾಯುಪರತ್ವವನ್ನು ಸಮರ್ಥಿಸುತ್ತದೆ. ಅದು ಹೀಗೆ -

೧. ಲಿಂಗಗಳಿಂದ ಅನೇಕ ವಾಕ್ಯಗಳ ಅರ್ಥಾನುಸಂಧಾನ.

೨. ಪ್ರಕರಣಕ್ಕೆ ವಾಯುಪರತ್ವ ಸಮರ್ಥನೆ,

೩. ಪ್ರಕರಣಕ್ಕೆ ಅನುಗುಣವಾಗಿ ವಿಪ್ರತಿಪನ್ನವಾದ ವಾಕ್ಯಕ್ಕೆ ವಾಯುಪರತ್ವದ ಸಮರ್ಥನೆ.

ಹೀಗೆ ಒಟ್ಟು ಮೂರೇ ಹಂತಗಳಿರುತ್ತವೆ. ಆದ್ದರಿಂದ ಪ್ರಕರಣವೇ ಸ್ಥಾನಪ್ರಮಾಣಕ್ಕಿಂತ ಪ್ರಬಲವೆಂದು ನಿಶ್ಚಯವಾಗುತ್ತದೆ.

**प्रकाशः – लिङ्गवाक्ययोर्व्याप्यार्पकत्वाविशेषेऽपि टीकोक्तं भेदमुपपाद्य तदुपलक्षणमिति भावेन स्थानप्रकरणयोरपि स्वयमाह – यथाचेति ॥**

ಲಿಂಗ ಹಾಗೂ ವಾಕ್ಯಗಳಲ್ಲಿ ವ್ಯಾಪ್ಯಾರ್ಪಕತ್ವದ ವಿಷಯದಲ್ಲಿ ವಿಶೇಷವಿಲ್ಲದಿದ್ದರೂ ಲಿಂಗವು ಏಕಪದರೂಪವಾಗಿರುತ್ತದೆ. ವಾಕ್ಯವು ಅನೇಕ ಪದರೂಪವಾಗಿರುತ್ತದೆಂಬ ದೃಷ್ಟಿಯಿಂದ ಟೀಕೆಯಲ್ಲಿ ಭೇದವನ್ನು ಹೇಳಿದ್ದಾರೆಂಬುದನ್ನು ಹಿಂದೆ ಸಮರ್ಥಿಸಿದರು. ಅದೇ ಟೀಕಾಮಾತು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ ಪ್ರಕೃತ ಸ್ಥಾನ ಹಾಗೂ ಪ್ರಕರಣಗಳಿಗೂ ಕೂಡ ಭೇದವಿರುತ್ತದೆಂದು ಸ್ವತಃ ಸಮರ್ಥಿಸುತ್ತಿದ್ದಾರೆ 'ಯಥಾಚ' ಇತ್ಯಾದಿ ವಾಕ್ಯದಿಂದ.

**प्रकाशः – अनुवादमहिम्ना वाक्यप्रकरणयोरपि भेदस्स्पष्ट इत्युक्तं भवति । उक्तरीत्या सन्निकर्षविप्रकर्षयोरानुभाविकत्वादिति भावः ।**

ಅನುವಾದ ಮಾಡಿದ್ದರಿಂದಲೇ ವಾಕ್ಯ ಹಾಗೂ ಪ್ರಕರಣಗಳಿಗೆ ಭೇದವು ಸ್ಪಷ್ಟವಾಗಿದೆಯೆಂದು ತಿಳಿಯುತ್ತದೆ. ಹಿಂದೆ ಹೇಳಿದಂತೆ ವಾಕ್ಯಪ್ರಮಾಣದಿಂದ ಶೀಘ್ರವಾಗಿ ಅರ್ಥೋಪಸ್ಥಿತಿಯು ಬರುತ್ತದೆ. ಪ್ರಕರಣ ಪ್ರಮಾಣದಿಂದ ವಿಳಂಬವಾಗಿ ಅರ್ಥೋಪಸ್ಥಿತಿಯು ಬರುವುದು ಅನುಭೂತವಾಗಿದೆಯೆಂದು ಅಭಿಪ್ರಾಯ.




ಪ್ರಕರಣ ಪ್ರಮಾಣಕ್ಕಿಂತಲೂ ಸ್ಥಾನಪ್ರಮಾಣವು ದುರ್ಬಲವಾಗಿದೆ - ಸಮಗ್ರ ಷಟ್‌ಪ್ರಶ್ನೋಪನಿಷತ್ತು ಅನೇಕ ಪ್ರಕರಣದಿಂದ ಕೂಡಿರುವಂತಹ ಸ್ಥಾನರೂಪವಾದ ಪ್ರಮಾಣ. ಆದರೆ ಉಪನಿಷತ್ತಿನ ಮೂರನೆಯ ಪ್ರಶ್ನೆಯಲ್ಲಿ 'ಆತ್ಮತಃ ಏಷ ಪ್ರಾಣೋ ಜಾಯತೇ' ಎಂಬುದಾಗಿ ಪ್ರಾಣನ ಉಲ್ಲೇಖವಿದೆ. ಪ್ರಕರಣ

ಪ್ರಮಾಣವು ಮುಖ್ಯಪ್ರಾಣನ ಅಸಾಧಾರಣ ಲಿಂಗಗಳಿಂದ 'ಭಗವನ್‌ಕುತ ಏಷ ಪ್ರಾಣೋಜಾಯತೇ' ಎಂಬ ವಾಕ್ಯವು ಮುಖ್ಯಪ್ರಾಣಪರವಾಗಿದೆಯೆಂದು ಸಮರ್ಥಿಸುತ್ತದೆ. ಸ್ಥಾನಪ್ರಮಾಣವು ಸ್ವಲ್ಪ ವಿಳಂಬವಾಗಿ 'ಏವಮೇವ ಏಷ ಪ್ರಾಣಃ ಎಂಬುದನ್ನು ವಿಷ್ಣುಪರವಾಗಿದೆಯೆಂದು ಸಮರ್ಥಿಸುತ್ತದೆ. ವಿಳಂಬವಾಗಿ ಸಮರ್ಥಿಸುವಂತಹ ಸ್ಥಾನ ಪ್ರಮಾಣಕ್ಕಿಂತಲೂ ಶೀಘ್ರವಾಗಿ ವಾಯುಪರತ್ವವನ್ನು ಸಮರ್ಥಿಸುವ ಪ್ರಕರಣ ಪ್ರಮಾಣವೇ ಪ್ರಬಲವಾಗಿದೆಯೆಂದು ಇದರಿಂದ ನಿಶ್ಚಯವಾಗುತ್ತದೆ.

• • • • •

## 'ಸಮಾಖ್ಯಾ' ಲಕ್ಷಣ
## ಸಮಾಖ್ಯೆಗಿಂತ ಸ್ಥಾನವು ದುರ್ಬಲ

### तात्पर्यचन्द्रिका

**निर्णीतस्थले समानोक्तिः समाख्या ।**

ಅನುವಾದ - ಯಾವ ಸ್ಥಳದಲ್ಲಿ ಅರ್ಥವು ನಿರ್ಣೀತವಾಗಿರುತ್ತದೋ, ಅದೇ ಅರ್ಥದಲ್ಲಿ ಸಮಾನವಾದ ವಚನವನ್ನು ಹೇಳುವುದು 'ಸಮಾಖ್ಯಾ' ಎನಿಸುತ್ತದೆ.

**सा चार्थतः शब्दतश्चेति द्वेधा । तत्राद्या वैश्वानरस्य विष्णुत्वे पुरुषसूक्तसमाख्या।**

ಇಂತಹ ಸಮಾಖ್ಯೆಯು ಎರಡು ವಿಧ. ೧. ಅರ್ಥತಃ, ೨. ಶಬ್ದತಃ ಎಂದು. ಮೊದಲನೆಯದ್ದು ವೈಶ್ವಾನರನು ವಿಷ್ಣುವೇ ಆಗಿದ್ದಾನೆನ್ನಲು ಪುರುಷಸೂಕ್ತದ ಪ್ರಮಾಣವನ್ನು ಆಧಾರವನ್ನಾಗಿ ಹೇಳಲಾಗುತ್ತದೆ. ವೈಶ್ವಾನರವಿದ್ಯೆಯಲ್ಲಿ ಇರುವಂತಹ ವಾಕ್ಯಗಳ ವಿನ್ಯಾಸವೇ ಬೇರೆ, ಪುರುಷಸೂಕ್ತದಲ್ಲಿರುವ ವಾಕ್ಯಗಳ ವಿನ್ಯಾಸವೇ ಬೇರೆ, ಆದರೆ ಅರ್ಥವು ಒಂದೇ ಆಗಿರುವುದರಿಂದ ಅರ್ಥತಃ ಸಮಾಖ್ಯಾಪ್ರಮಾಣವಿರುತ್ತದೆಂದು ಇದರ ಅಭಿಪ್ರಾಯ.

**द्वितीया विश्वकर्मसूक्तोक्तस्याजस्य विष्णुत्वे अम्भ्रणीसूक्तसमाख्या ।**

ವಿಶ್ವಕರ್ಮಸೂಕ್ತದಲ್ಲಿ ಹೇಳಲ್ಪಟ್ಟ 'ಅಜ' ಶಬ್ದ ಪ್ರತಿಪಾದ್ಯನು ವಿಷ್ಣುವೇ ಆಗಿದ್ದಾನೆನ್ನಲು ಅಂಭ್ರಣೀ ಸೂಕ್ತದ ಸಮಾಖ್ಯಾಪ್ರಮಾಣವನ್ನು ನೀಡಲಾಗುತ್ತದೆ. ಇದು ಶಬ್ದತಃ ಸಮಾನವಾಗಿದೆ. ಅಂದರೆ ವಿಶ್ವಕರ್ಮಸೂಕ್ತದಲ್ಲಿರುವ ವಾಕ್ಯಗಳೇ ಅಂಭ್ರಣೀಸೂಕ್ತದಲ್ಲಿರುವುದರಿಂದ ಶಬ್ದತಃ ಸಮಾಖ್ಯವೆನಿಸುತ್ತದೆ.

**अस्याः स्वार्थे शब्दरूपत्वेऽप्यत्रोक्तमेव स्थलान्तरस्थविप्रतिपन्नवाक्येनापि बोध्यमित्यत्र स्थलद्वयानुसन्धानपूर्वकं तत्सदृशत्वादिदं तदर्थपरमित्येवं सादृश्यमात्रेण लिङ्गत्वात्स्थानाद्दुर्बलता ।**

ಪರಿಪೂರ್ಣಚಂದ್ರಿಕಾ

ಇಂತಹ ಸಮಾಖ್ಯಾಪ್ರಮಾಣವು ಸ್ವಾರ್ಥದಲ್ಲಿ ಶಬ್ದರೂಪವಾಗಿದ್ದರೂ ಇಲ್ಲಿ ಹೇಳಿದ ವಿಷಯವನ್ನೇ ಬೇರೆ ಸ್ಥಳದಲ್ಲಿರುವ ವಿಪ್ರತಿಪನ್ನವಾದ ವಾಕ್ಯದಿಂದಲೂ ತಿಳಿಯಬೇಕು ಎಂಬುದಾಗಿ ಎರಡು ಸ್ಥಳಗಳ ಅನುಸಂಧಾನಪೂರ್ವಕವಾಗಿ; ಆ ವಾಕ್ಯಕ್ಕೆ ಈ ವಾಕ್ಯವು ಸದೃಶವಾಗಿದೆ. ಆದ್ದರಿಂದ ಇದು ಆ ವಾಕ್ಯದ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆಂಬ ಸಾದೃಶ್ಯ ಪ್ರಯುಕ್ತವಾಗಿ ಲಿಂಗರೂಪವಾಗಿದೆ. ಆದ್ದರಿಂದ ಸ್ಥಾನಕ್ಕಿಂತಲೂ ದುರ್ಬಲವೆಂದು ತಿಳಿಯಬೇಕು.

**यथा ''सैषा भार्गवी वारुणी विद्या परमे व्योमन्प्रतिष्ठिता'' इति श्रुत्या ब्रह्मपरानेकप्रकरणसन्दर्भरूपभृगुवल्लीस्थानात् ''अन्नमयप्राणमयमनोमय-विज्ञानमयानन्दमया मे शुध्यन्ताम्'' इति कोशपरसमाख्यायाः ।**

ಉದಾಹರಣೆ - 'ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್‌ಪ್ರತಿಷ್ಠಿತಾ' ಎಂಬ ಶ್ರುತಿಯಿಂದ ಬ್ರಹ್ಮಪರವಾದ ಅನೇಕ ಪ್ರಕರಣಗಳ ಸಮೂಹರೂಪವಾದ ಭೃಗುವಲ್ಲಿ ಎಂಬ ಸ್ಥಾನಪ್ರಮಾಣಕ್ಕಿಂತಲೂ, 'ಅನ್ನಮಯಪ್ರಾಣಮಯಮನೋಮಯ ವಿಜ್ಞಾನಮಯಾನಂದಮಯಾ ಮೇ ಶುಧ್ಯಂತಾಮ್' ಇತ್ಯಾದಿಯಾದ ಕೋಶಪರವಾದ ಸಮಾಖ್ಯಾಪ್ರಮಾಣವು ದುರ್ಬಲವಾಗಿದೆ.

**प्रकाशः –**

''समानोक्तिस्समाख्या'' इति टीकोक्तेः पक्षसमेऽतिव्याप्तिवारणाय तदाशयव्यक्तिपूर्वं तदवान्तरविभागमाह – **निर्णीतेति** ।।

ವಿವರಣೆ - ಇಲ್ಲಿಯ ತನಕ ಸ್ಥಾನಪ್ರಮಾಣವನ್ನು ನಿರೂಪಣೆ ಮಾಡಿ, ಪ್ರಕರಣಕ್ಕಿಂತ ಸ್ಥಾನಕ್ಕೆ ದೌರ್ಬಲ್ಯವನ್ನು ಪ್ರತಿಪಾದಿಸಿದ್ದಾಯಿತು. ಈಗ ಸಮಾಖ್ಯಾಪ್ರಮಾಣದ ಲಕ್ಷಣವನ್ನು ಹೇಳುವ ಮೂಲಕ, ಸ್ಥಾನಕ್ಕಿಂತಲೂ ಸಮಾಖ್ಯೆಗೆ ದೌರ್ಬಲ್ಯವನ್ನು ಸಮರ್ಥಿಸುತ್ತಿದ್ದಾರೆ.

'ಸಮಾನೋಕ್ತಿಃ ಸಮಾಖ್ಯಾ' ಸಮಾನವಾದ ವಚನವೇ ಸಮಾಖ್ಯಾವೆನಿಸುತ್ತವೆ ಎಂಬ ಟೀಕೆಯಲ್ಲಿ ಹೇಳಲ್ಪಟ್ಟ ಸಮಾಖ್ಯಾಲಕ್ಷಣಕ್ಕೆ ಪಕ್ಷಸಮದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಟೀಕಾಮಾತಿನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ ಸಮಾಖ್ಯಾಪ್ರಮಾಣದಲ್ಲಿಯೂ ಅವಾಂತರ ವಿಭಾಗವಿದೆಯೆಂದು ನಿರ್ಣಯಿಸುತ್ತಿದ್ದಾರೆ 'ನಿರ್ಣೀತ' ಇತ್ಯಾದಿ ಗ್ರಂಥದಿಂದ.

**प्रकाशः – तत्राद्येति** ।। ''शब्दादिभ्योन्तः प्रतिष्ठानात्'' इति सूत्रे ''पुरुषविधमपि चैनमधीयत'' इत्यनेन यः पुरुषाख्यो विष्णुःपुरुषसूक्ते ''शीर्ष्णो द्यौस्समवर्तत, चक्षोस्सूर्यो अजायत, प्राणाद्वायुरजायत, पद्भ्यां भूमिः'' इत्यादिना वाक्येन द्यादिजनकशीर्षादिमानभिहितः तद्विधमेवात्र वैश्वानरं चाधीयते छन्दोगाः

ಪ್ರಮಾಣವು ಮುಖ್ಯಪ್ರಾಣನ ಅಸಾಧಾರಣ ಲಿಂಗಗಳಿಂದ 'ಭಗವನ್‌ಕುತ ಏಷ ಪ್ರಾಣೋಜಾಯತೇ' ಎಂಬ ವಾಕ್ಯವು ಮುಖ್ಯಪ್ರಾಣಪರವಾಗಿದೆಯೆಂದು ಸಮರ್ಥಿಸುತ್ತದೆ. ಸ್ಥಾನಪ್ರಮಾಣವು ಸ್ವಲ್ಪ ವಿಳಂಬವಾಗಿ 'ಏವಮೇವ ಏಷ ಪ್ರಾಣಃ ಎಂಬುದನ್ನು ವಿಷ್ಣುಪರವಾಗಿದೆಯೆಂದು ಸಮರ್ಥಿಸುತ್ತದೆ. ವಿಳಂಬವಾಗಿ ಸಮರ್ಥಿಸುವಂತಹ ಸ್ಥಾನ ಪ್ರಮಾಣಕ್ಕಿಂತಲೂ ಶೀಘ್ರವಾಗಿ ವಾಯುಪರತ್ವವನ್ನು ಸಮರ್ಥಿಸುವ ಪ್ರಕರಣ ಪ್ರಮಾಣವೇ ಪ್ರಬಲವಾಗಿದೆಯೆಂದು ಇದರಿಂದ ನಿಶ್ಚಯವಾಗುತ್ತದೆ.

• • • • •

## 'ಸಮಾಖ್ಯಾ' ಲಕ್ಷಣ
## ಸಮಾಖ್ಯೆಗಿಂತ ಸ್ಥಾನವು ದುರ್ಬಲ

### तात्पर्यचन्द्रिका

**निर्णीतस्थले समानोक्तिः समाख्या ।**

ಅನುವಾದ - ಯಾವ ಸ್ಥಳದಲ್ಲಿ ಅರ್ಥವು ನಿರ್ಣೀತವಾಗಿರುತ್ತದೋ, ಅದೇ ಅರ್ಥದಲ್ಲಿ ಸಮಾನವಾದ ವಚನವನ್ನು ಹೇಳುವುದು 'ಸಮಾಖ್ಯಾ' ಎನಿಸುತ್ತದೆ.

**सा चार्थतः शब्दतश्चेति द्वेधा । तत्राद्या वैश्वानरस्य विष्णुत्वे पुरुषसूक्तसमाख्या।**

ಇಂತಹ ಸಮಾಖ್ಯೆಯು ಎರಡು ವಿಧ. ೧. ಅರ್ಥತಃ, ೨. ಶಬ್ದತಃ ಎಂದು. ಮೊದಲನೆಯದ್ದು ವೈಶ್ವಾನರನು ವಿಷ್ಣುವೇ ಆಗಿದ್ದಾನೆನ್ನಲು ಪುರುಷಸೂಕ್ತದ ಪ್ರಮಾಣವನ್ನು ಆಧಾರವನ್ನಾಗಿ ಹೇಳಲಾಗುತ್ತದೆ. ವೈಶ್ವಾನರವಿದ್ಯೆಯಲ್ಲಿ ಇರುವಂತಹ ವಾಕ್ಯಗಳ ವಿನ್ಯಾಸವೇ ಬೇರೆ, ಪುರುಷಸೂಕ್ತದಲ್ಲಿರುವ ವಾಕ್ಯಗಳ ವಿನ್ಯಾಸವೇ ಬೇರೆ, ಆದರೆ ಅರ್ಥವು ಒಂದೇ ಆಗಿರುವುದರಿಂದ ಅರ್ಥತಃ ಸಮಾಖ್ಯಾಪ್ರಮಾಣವಿರುತ್ತದೆಂದು ಇದರ ಅಭಿಪ್ರಾಯ.

**द्वितीया विश्वकर्मसूक्तोक्तस्याजस्य विष्णुत्वे अम्भ्रणीसूक्तसमाख्या ।**

ವಿಶ್ವಕರ್ಮಸೂಕ್ತದಲ್ಲಿ ಹೇಳಲ್ಪಟ್ಟ 'ಅಜ' ಶಬ್ದ ಪ್ರತಿಪಾದ್ಯನು ವಿಷ್ಣುವೇ ಆಗಿದ್ದಾನೆನ್ನಲು ಅಂಭ್ರಣೀ ಸೂಕ್ತದ ಸಮಾಖ್ಯಾಪ್ರಮಾಣವನ್ನು ನೀಡಲಾಗುತ್ತದೆ. ಇದು ಶಬ್ದತಃ ಸಮಾನವಾಗಿದೆ. ಅಂದರೆ ವಿಶ್ವಕರ್ಮಸೂಕ್ತದಲ್ಲಿರುವ ವಾಕ್ಯಗಳೇ ಅಂಭ್ರಣೀಸೂಕ್ತದಲ್ಲಿರುವುದರಿಂದ ಶಬ್ದತಃ ಸಮಾಖ್ಯವೆನಿಸುತ್ತದೆ.

**अस्याः स्वार्थे शब्दरूपत्वेऽप्यत्रोक्तमेव स्थलान्तरस्थविप्रतिपन्नवाक्येनापि बोध्यमित्यत्र स्थलद्वयानुसन्धानपूर्वकं तत्सदृशत्वादिदं तदर्थपरमित्येवं सादृश्यमात्रेण लिङ्गत्वात्स्थानाद्दुर्बलता ।**

ಪರಿಪೂರ್ಣಚಂದ್ರಿಕಾ

ಇಂತಹ ಸಮಾಖ್ಯಾಪ್ರಮಾಣವು ಸ್ವಾರ್ಥದಲ್ಲಿ ಶಬ್ದರೂಪವಾಗಿದ್ದರೂ ಇಲ್ಲಿ ಹೇಳಿದ ವಿಷಯವನ್ನೇ ಬೇರೆ ಸ್ಥಳದಲ್ಲಿರುವ ವಿಪ್ರತಿಪನ್ನವಾದ ವಾಕ್ಯದಿಂದಲೂ ತಿಳಿಯಬೇಕು ಎಂಬುದಾಗಿ ಎರಡು ಸ್ಥಳಗಳ ಅನುಸಂಧಾನಪೂರ್ವಕವಾಗಿ; ಆ ವಾಕ್ಯಕ್ಕೆ ಈ ವಾಕ್ಯವು ಸದೃಶವಾಗಿದೆ. ಆದ್ದರಿಂದ ಇದು ಆ ವಾಕ್ಯದ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆಂಬ ಸಾದೃಶ್ಯ ಪ್ರಯುಕ್ತವಾಗಿ ಲಿಂಗರೂಪವಾಗಿದೆ. ಆದ್ದರಿಂದ ಸ್ಥಾನಕ್ಕಿಂತಲೂ ದುರ್ಬಲವೆಂದು ತಿಳಿಯಬೇಕು.

**यथा "सैषा भार्गवी वारुणी विद्या परमे व्योमन्प्रतिष्ठिता" इति श्रुत्या ब्रह्मपरानेकप्रकरणसन्दर्भरूपभृगुवल्लीस्थानात् "अन्नमयप्राणमयमनोमय-विज्ञानमयानन्दमया मे शुध्यन्ताम्" इति कोशपरसमाख्यायाः ।**

ಉದಾಹರಣೆ - 'ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್‌ಪ್ರತಿಷ್ಠಿತಾ' ಎಂಬ ಶ್ರುತಿಯಿಂದ ಬ್ರಹ್ಮಪರವಾದ ಅನೇಕ ಪ್ರಕರಣಗಳ ಸಮೂಹರೂಪವಾದ ಭೃಗುವಲ್ಲಿ ಎಂಬ ಸ್ಥಾನಪ್ರಮಾಣಕ್ಕಿಂತಲೂ, 'ಅನ್ನಮಯಪ್ರಾಣಮಯಮನೋಮಯ ವಿಜ್ಞಾನಮಯಾನಂದಮಯಾ ಮೇ ಶುಧ್ಯಂತಾಮ್' ಇತ್ಯಾದಿಯಾದ ಕೋಶಪರವಾದ ಸಮಾಖ್ಯಾಪ್ರಮಾಣವು ದುರ್ಬಲವಾಗಿದೆ.

**प्रकाशः –**

"समानोक्तिस्समाख्या" इति टीकोक्तेः पक्षसमेऽतिव्याप्तिवारणाय तदाशयव्यक्तिपूर्वं तदवान्तरविभागमाह – **निर्णीतेति** ।।

ವಿವರಣೆ - ಇಲ್ಲಿಯ ತನಕ ಸ್ಥಾನಪ್ರಮಾಣವನ್ನು ನಿರೂಪಣೆ ಮಾಡಿ, ಪ್ರಕರಣಕ್ಕಿಂತ ಸ್ಥಾನಕ್ಕೆ ದೌರ್ಬಲ್ಯವನ್ನು ಪ್ರತಿಪಾದಿಸಿದ್ದಾಯಿತು. ಈಗ ಸಮಾಖ್ಯಾಪ್ರಮಾಣದ ಲಕ್ಷಣವನ್ನು ಹೇಳುವ ಮೂಲಕ, ಸ್ಥಾನಕ್ಕಿಂತಲೂ ಸಮಾಖ್ಯೆಗೆ ದೌರ್ಬಲ್ಯವನ್ನು ಸಮರ್ಥಿಸುತ್ತಿದ್ದಾರೆ.

'ಸಮಾನೋಕ್ತಿಃ ಸಮಾಖ್ಯಾ' ಸಮಾನವಾದ ವಚನವೇ ಸಮಾಖ್ಯಾವೆನಿಸುತ್ತವೆ ಎಂಬ ಟೀಕೆಯಲ್ಲಿ ಹೇಳಲ್ಪಟ್ಟ ಸಮಾಖ್ಯಾಲಕ್ಷಣಕ್ಕೆ ಪಕ್ಷಸಮದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಟೀಕಾಮಾತಿನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ ಸಮಾಖ್ಯಾಪ್ರಮಾಣದಲ್ಲಿಯೂ ಅವಾಂತರ ವಿಭಾಗವಿದೆಯೆಂದು ನಿರ್ಣಯಿಸುತ್ತಿದ್ದಾರೆ 'ನಿರ್ಣೀತ' ಇತ್ಯಾದಿ ಗ್ರಂಥದಿಂದ.

**प्रकाशः – तत्राद्येति** ।। "शब्दादिभ्योन्तः प्रतिष्ठानात्" इति सूत्रे "पुरुषविधमपि चैनमधीयत" इत्यनेन यः पुरुषाख्यो विष्णुःपुरुषसूक्ते "शीर्ष्णो द्यौस्समवर्तत, चक्षोस्सूर्यो अजायत, प्राणाद्वायुरजायत, पद्भ्यां भूमिः" इत्यादिना वाक्येन द्यादिजनकशीर्षादिमानभिहितः तद्विधमेवात्र वैश्वानरं चाधीयते छन्दोगाः

''मूर्धैव सुतेजाश्चक्षुर्विश्वरूपः प्राणः पृथग्वर्त्मा पृथिव्येव पादौ'' इत्यादिना वाक्येनेत्युक्तत्वेन तत्र शब्दतस्साम्याभावेऽप्यर्थतः समानत्वात्समाख्यात्वं युक्तमित्यर्थः ।

'ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾತ್' ಎಂಬ ಸೂತ್ರದಲ್ಲಿ 'ಪುರುಷವಿಧಮಪಿ ಚೈನಮಧೀಯತೇ' ಎಂಬ ಸೂತ್ರದಿಂದ ಯಾವ ಪುರುಷ ಎಂಬ ವಿಷ್ಣುವಿದ್ದಾನೋ, ಅವನಿಗೆ ಪುರುಷಸೂಕ್ತದಲ್ಲಿ 'ಶೀರ್ಷ್ಣೋ ದ್ಯೌಃ ಸಮವರ್ತತ, ಚಕ್ಷೋಃ ಸೂರ್ಯೋ ಅಜಾಯತ', 'ಪ್ರಾಣಾದ್ವಾಯುರಜಾಯತ', 'ಪದ್ಭ್ಯಾಂಭೂಮಿಃ' ಇತ್ಯಾದಿ ವಾಕ್ಯದಿಂದ ಯಾವ ದ್ವ್ಯಾದಿ ಲೋಕಗಳಿಗೆ ಜನಕವಾದ ತಲೆ ಮೊದಲಾದ ಅವಯವಗಳಿರುವಿಕೆ ಎಂಬ ಲಿಂಗಗಳನ್ನು ಹೇಳಲಾಗಿದೆಯೋ, ಅದೇ ಮಾತುಗಳು 'ವೈಶ್ವಾನರಮಧೀಯತೇ' ಎಂಬ ಸೂತ್ರದಲ್ಲಿ 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ ಪೃಥಿವ್ಯೇವ ಪಾದೌ' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ. ಈ ಪುರುಷಸೂಕ್ತದಲ್ಲಿರುವ ವಾಕ್ಯಕ್ಕೂ ಈ ವೈಶ್ವಾನರವಿದ್ಯೆಯಲ್ಲಿರುವ ವಾಕ್ಯಕ್ಕೂ ಶಬ್ದತಃ ಸಾಮ್ಯವಿಲ್ಲದಿದ್ದರೂ ಅರ್ಥದಲ್ಲಿ ಸಾಮ್ಯವಿರುವುದರಿಂದ ಸಮಾಖ್ಯಾರೂಪವಾಗಿದೆಯೆಂದು ತಿಳಿಯಬೇಕು.

**प्रकाशः – द्वितीयेति** ।। ''परो दिवा पर एना पृथिव्या परो देवेभिरसुरैर्यदस्ति'' इत्यनेन विश्वकर्मसूक्तोक्तेन सूक्तान्तरे ''परोदिवापर एना पृथिव्यैतावती महिना सम्बभूव'' इति समाख्यानाच्च विष्णुरेव विश्वकर्मसूक्तोक्त इत्याद्यसूत्रे भाष्यादावुक्तत्वेन शब्दत एव तत्र साम्यस्य सत्त्वादित्यर्थः ।

ಶಬ್ದತಃ ಸಾಮ್ಯವಿರುವ ಸಮಾಖ್ಯಾಪ್ರಮಾಣ ಹೀಗಿದೆ - 'ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸುರೈರ್ಯದಸ್ತಿ' ಇತ್ಯಾದಿಯಾಗಿ ವಿಶ್ವಕರ್ಮಸೂಕ್ತದಲ್ಲಿ ಯಾವ ಪದಗಳಿವೆಯೋ, ಅದೇ ಪದಗಳು 'ಪರೋ ದಿವಾ ಪರ ಏನಾ ಪೃಥಿವ್ಯೈ ತಾವತೀ ಮಹಿನಾ ಸಂಭಭೂವ' ಎಂಬ ಅಂಭ್ರಣಿಸೂಕ್ತದಲ್ಲಿಯೂ ಇದೆ. ಆದ್ದರಿಂದ ವಿಷ್ಣುವೇ ವಿಶ್ವಕರ್ಮಸೂಕ್ತದಿಂದ ಪ್ರತಿಪಾದ್ಯನಾದ್ಯನಾಗಿದ್ದಾನೆಂದು ಪ್ರಥಮಸೂತ್ರದ ಭಾಷ್ಯದಲ್ಲಿ ಹೇಳಲಾಗಿದೆ. ಇದು ಶಬ್ದತಃ ಸಾಮ್ಯಕ್ಕೆ ಉದಾಹರಣೆಯಾಗುತ್ತದೆ.

**प्रकाशः –** ''समाख्यायास्स्थानान्तरगतायास्सादृश्यमात्रेणार्थानुमापकत्वात्ततोऽपि दुर्बलत्वम्'' इति वाक्यं व्याचष्टे – **अस्याः इति** ।

'ಸಮಾಖ್ಯಾಯಾಃ ಸ್ಥಾನಾಂತರಗತಾಯಾಃ ಸಾದೃಶ್ಯಮಾತ್ರೇಣಾರ್ಥಾನುಮಾಪಕತ್ವಾತ್ತತೋಽಪಿ ದುರ್ಬಲತ್ವಮ್' ಸಾದೃಶ್ಯಮಾತ್ರದಿಂದ ಅರ್ಥಾನುಮಾಪಕವಾಗುವ ಕಾರಣ ಸಮಾಖ್ಯಾಪ್ರಮಾಣವು ಸ್ಥಾನಪ್ರಮಾಣಕ್ಕಿಂತಲೂ ದುರ್ಬಲವಾಗುತ್ತದೆ ಎಂಬ ವಾಕ್ಯವನ್ನು 'ಅಸ್ಯಾಃ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ.

**प्रकाशः – सैषेति** । श्रुत्यैव परमे व्योम्नि ब्रह्मणि इयं विद्या प्रतिष्ठितेत्युक्तत्वादित्यर्थः ।

ಶ್ರುತಿಯಲ್ಲಿಯೇ 'ಪರಮೇ ವ್ಯೋಮ್ನಿ' ಎಂದರೆ ಬ್ರಹ್ಮನಲ್ಲಿ ಈ ವಿದ್ಯೆಯು ಪ್ರತಿಷ್ಠಿತವಾಗಿದೆಯೆಂದು ಹೇಳಿದ್ದರಿಂದ ಎಂದರ್ಥ.

**प्रकाशः** – एतेन ब्रह्मवल्लीस्थानादिति वक्तव्ये भृगुवल्लीस्थानादित्युक्तिः किमर्था । तत्रान्नमयादेस्स्पष्टमुक्तेः । सुधायां तत्रैवान्नमयप्राणमयमनोमयविज्ञानमयानन्दमया मे शुध्यन्तामिति श्रुत्यन्तरानुगुण्यं स्यादित्युक्तेरिति चोद्यं निरस्तम् ।

ಇದರಿಂದ 'ಬ್ರಹ್ಮವಲ್ಲೀಸ್ಥಾನಾತ್' ಎಂದು ಹೇಳದೇ 'ಭೃಗುವಲ್ಲೀಸ್ಥಾನಾತ್' ಎಂದು ಹೇಳಿದ್ದೇಕೆ? ಏಕೆಂದರೆ ಬ್ರಹ್ಮವಲ್ಲಿಯಲ್ಲಿ ಅನ್ನಮಯಾದಿಗಳನ್ನು ಸ್ಪಷ್ಟವಾಗಿ ಹೇಳಿದ್ದಾರಲ್ಲವೇ? ಸುಧೆಯಲ್ಲಿಯೂ ಬ್ರಹ್ಮವಲ್ಲಿಯಲ್ಲಿರುವಂತಹ 'ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಾ ಮೇ ಶುಧ್ಯಂತಾಮಿತಿ ಶುತ್ಯಂತರಾನುಗುಣ್ಯಂ ಸ್ಯಾತ್' ಎಂದು ಹೇಳಿದ್ದಾರಲ್ಲವೇ? ಎಂಬ ಪ್ರಶ್ನೆಗೆ ಈಗ ಅವಕಾಶವಿಲ್ಲ.

**प्रकाशः** – अस्येव तस्य ब्रह्मणि विनियोजकवाक्यस्याभावेन ब्रह्मपरत्वस्यास्पष्टत्वादिति ।

ಇದರಂತೆ ಬ್ರಹ್ಮವಲ್ಲಿ ಬ್ರಹ್ಮನಲ್ಲಿರುವ ವಿನಿಯೋಜಕವಾಕ್ಯಗಳು ಇರುವುದಿಲ್ಲ. ಆದ್ದರಿಂದ ಬ್ರಹ್ಮಪರತ್ವವು ಸ್ಪಷ್ಟವಾಗುವುದಿಲ್ಲ. ಆದ್ದರಿಂದ ಬ್ರಹ್ಮವಲ್ಲಿಯನ್ನು ಹೇಳದೇ ಭೃಗುವಲ್ಲಿಯನ್ನೇ ಉಲ್ಲೇಖಿಸಿದ್ದಾರೆ.

**प्रकाशः** – केचित्तु ब्रह्मवल्ल्युक्तान्नमयादयो भृगुवल्लीस्थानाद् ब्रह्मपरा उत कोशसमाख्यानात्कोशपरा वेति सन्देहे समाख्यातः प्रबलाद्भृगुवल्लीस्थानाद्ब्रह्मपरा इत्यर्थ इत्याहुः ।

ಕೆಲವರು ಹೇಳುವ ಪರಿಹಾರ ಹೀಗಿದೆ - ಬ್ರಹ್ಮವಲ್ಲಿಯಲ್ಲಿ ಹೇಳಲ್ಪಟ್ಟ ಅನ್ನಮಯಾದಿಗಳು ಭೃಗುವಲ್ಲಿಯೆಂಬ ಸ್ಥಾನಪ್ರಮಾಣದಿಂದ ಬ್ರಹ್ಮಪರವಾಗುತ್ತವೋ ಅಥವಾ ಕೋಶಸಮಾಖ್ಯಾದಿಂದ ಕೋಶಪರವಾಗುತ್ತವೋ? ಎಂದು ಸಂದೇಹವು ಬಂದರೆ ಸಮಾಖ್ಯಾ ಪ್ರಮಾಣಕ್ಕಿಂತಲೂ ಸ್ಥಾನಪ್ರಮಾಣವು ಪ್ರಬಲವಾದ್ದರಿಂದ ಭೃಗುವಲ್ಲಿಯೆಂಬ ಸ್ಥಾನಪ್ರಮಾಣದಿಂದ ಬ್ರಹ್ಮಪರವಾಗಿದೆಯೆಂದೇ ನಿರ್ಣಯಿಸಬೇಕು ಎಂದು ಉತ್ತರಿಸಿದ್ದಾರೆ.

**प्रकाशः** – तच्चिन्त्यम् । स्थानस्य स्वान्तर्गतवाक्यार्थनिर्णायकत्वेन स्थानान्तरगतानिर्णायकत्वात् । अत एव प्राक् स्वान्तर्गतेत्युक्तम् ।

ಇವರ ಈ ವಾದವನ್ನು ಚಿಂತಿಸಬೇಕು. ಏಕೆಂದರೆ ಪ್ರಕರಣವಾಗಲೀ, ಸ್ಥಾನಪ್ರಮಾಣವಾಗಲೀ, ತನ್ನಲ್ಲೇ ಅಂತರ್ಗತವಾದ ವಿಪ್ರತಿಪನ್ನವಾದ ವಾಕ್ಯದ ಅರ್ಥವನ್ನಷ್ಟೇ ನಿರ್ಣಯಿಸುತ್ತವೆ ಹೊರತು, ಮತ್ತೊಂದು ಸ್ಥಾನದಲ್ಲಿರುವ, ಅಥವಾ ಮತ್ತೊಂದು ಪ್ರಕರಣದಲ್ಲಿರುವ ಅರ್ಥವನ್ನು ನಿಶ್ಚಯಿಸುವುದಿಲ್ಲ. ಆದ್ದರಿಂದ ಗ್ರಂಥಕಾರರು 'ಸ್ವಾಂತರ್ಗತ' ಎಂದು ಹಿಂದೆ ಹೇಳಿದ್ದರು.

**प्रकाशः** – अन्यथा स्थानद्वयानुसन्धानविलम्बाविशेषात्समाख्यातः प्राबल्यहानिस्स्यात् । स्थानान्तरस्थनिर्णये बीजाभावाच्चेति ।

ಸಮಾಖ್ಯಾಪ್ರಮಾಣಕ್ಕಿಂತಲೂ ಸ್ಥಾನಪ್ರಮಾಣವು ಪ್ರಬಲವೆಂದು ಹೇಳುತ್ತಿದ್ದೀರಿ. ಇದೇ ಈಗ ಕೂಡುವುದಿಲ್ಲ. ಏಕೆಂದರೆ ಅನೇಕ ಪ್ರಕರಣಗಳ ಸಮೂಹವೇ ಸ್ಥಾನವೆನಿಸುತ್ತದೆ. ಆದರೆ ಸಮಾಖ್ಯಾಪ್ರಮಾಣದಲ್ಲಿ ಎರಡು ಸ್ಥಾನಗಳ ಅನುಸಂಧಾನ ಬೇಕಾದ್ದರಿಂದ ವಿಳಂಬವಾಗುತ್ತದೆ. ಆದ್ದರಿಂದ ಸ್ಥಾನಕ್ಕಿಂತಲೂ ದುರ್ಬಲವೆಂದು ಹೇಳಬೇಕು. ಈಗ ಒಂದು ಸ್ಥಾನದಿಂದ ಮತ್ತೊಂದು ಸ್ಥಾನವನ್ನು ನಿರ್ಣಯಿಸುವುದಾದರೆ, ಇಲ್ಲಿಯೂ ಕೂಡ ಸ್ಥಾನದ್ವಯದ ಅನುಸಂಧಾನ ಬೇಕು ಎಂದಂತಾಯಿತು. ಹೀಗೆ ಸ್ಥಾನದ್ವಯಗಳ ಅನುಸಂಧಾನವು ಸ್ಥಾನ ಮತ್ತು ಸಾಮಾಖ್ಯಾ ಎರಡಲ್ಲಿಯೂ ಬೇಕಾದ್ದರಿಂದ, ವಿಳಂಬವು ಎರಡರಲ್ಲಿಯೂ ಸಮಾನವೆಂದಾಯಿತು. ಹೀಗಿರುವಾಗ ಸಮಾಖ್ಯಾಪ್ರಮಾಣಕ್ಕಿಂತಲೂ ಸ್ಥಾನಪ್ರಮಾಣಕ್ಕೆ ಪ್ರಾಬಲ್ಯವನ್ನು ಹೇಳಲು ಹೇಗೆ ಸಾಧ್ಯ ?

ಮತ್ತು ಈ ಸ್ಥಾನವು ಬ್ರಹ್ಮಪರವಾದ ಮಾತ್ರಕ್ಕೆ ಮತ್ತೊಂದು ಸ್ಥಾನವು ಬ್ರಹ್ಮಪರವೇ ಏಕಾಗಬೇಕು ? ಸಮಾಖ್ಯಾದಲ್ಲಾದರೆ ಸಾದೃಶ್ಯವೆಂಬ ಬೀಜವಿದೆ. ಆದರೆ ಒಂದು ಸ್ಥಾನವು ಮತ್ತೊಂದು ಸ್ಥಾನವನ್ನು ನಿರ್ಣಯಿಸಬೇಕಾದರೆ ಅಂತಹ ಬೀಜಗಳೇನೂ ಇರುವುದಿಲ್ಲ. ಆದ್ದರಿಂದ ಸ್ಥಾನ ಪ್ರಮಾಣದಿಂದ ಬ್ರಹ್ಮಪರವಾಗಿದೆಯೆಂದೇ ಹೇಳಬೇಕು. ಬ್ರಹ್ಮವಲ್ಲಿಗೆ ಹೋಗುವ ಅವಶ್ಯಕತೆಯೇ ಇಲ್ಲ.

**गुरुराजीयम्** – एकप्रमेयप्रतिपादकेति प्रकरणलक्षणम् । अत्रैकप्रमेयप्रतिपादकत्वे पर्यायत्वापत्त्या व्याख्याति – **एकार्थेति** ।। **अत एवेति** ।। वाक्यात्प्रकरणस्य दौर्बल्यस्य टीकायामभिप्रेतत्वादेवेत्यर्थः । नन्वेवमनेकपदात्मकस्यापि लिङ्गत्वेऽनेकपदात्मकस्य लिङ्गस्याप्यव्याप्यभूतानेकार्थकथनद्वारा व्याप्यसमर्पकत्वाविशेषात्तादृशवाक्यस्य तादृशलिङ्गाद्दौर्बल्यं स्यादित्यरुचेराह – **यद्वेति** ।। **व्याप्यार्पकमिति** ।। अव्यवधानेनेति शेषः । **तदर्पकाणीति** ।। व्यवधानेनेति शेषः । नन्वेवमुभयोरपि व्याप्यार्पकत्वाविशेषे लिङ्गस्याव्यवधानेन वाक्यस्य व्यवधानेन व्याप्यार्पकत्वमिति कथमुच्यत इत्यत आह – **युक्तश्चेति** ।। अस्मिन्पक्षे वाक्यापेक्षया लिङ्गस्य प्राबल्ये 'किं तदत्र विद्यते' इति वाक्यस्यापि हृत्पद्मस्थत्वादिलिङ्गापेक्षया दौर्बल्यमित्युदाहरणं युज्यते । तस्य व्याप्यार्पकत्वाभावेन वाक्यत्वाभावात् अत उदाहरणान्तरमाह – **यथेति** ।। व्याप्यार्पकाणि निराकाङ्क्षपदानि वाक्यमित्यस्मिन्पक्षे वाक्यस्य प्रकरणापेक्षया प्राबल्य उदाहरणतयोक्तं 'किं ज्योतिरयं पुरुषः' इत्यादि जीवप्रकरणात् 'आत्मत एष प्राणः' इति वाक्यस्य प्राबल्यम् ।

तन्नोपपद्यते । 'आत्मत एष प्राणो जायते' इत्युदाहृतस्य व्याप्यार्पकत्वाभावादित्यत आह – **अस्मिन्पक्ष इति** ।। नन्वेवमनेकपदात्मकस्य लिङ्गत्वाभावे श्रीलक्ष्मीपतित्वादेरनेकपदात्मकत्वेन लिङ्गत्वाभावापत्त्या लिङ्गत्वेन सूत्रोक्तिरयुक्तेत्यत आह – **सूत्रादाविति** ।। स्थान-प्रकरणयोर्भेदमुपपादयति – **यथाचेति** ।। समानोक्तिस्समाख्येति टीकायामुक्तम् । तत्र सन्दिग्धसमानोक्तेः समाख्यात्वं स्यादतो व्याचष्टे – **निर्णीतेति** ।। श्रुतित्वेन चेत्यत्रैवकारेण श्रुतेर्लिङ्गत्वस्य न व्यावृत्तिः । किन्तु लिङ्गान्तरसमर्पकत्वमेव व्यावर्त्यत इति बोध्यं श्रुतिलिङ्गवाक्यानां साक्षाद्विप्रतिपन्नार्थनिष्ठत्वे श्रुत्यादित्वेनैव ज्ञापकत्वमिति टीकायामुक्तम् । तत्रोदाहरणं दर्शयितुमनुवदति – **तत्रेत्यादि** ।।




ಸಮಾಖ್ಯಾಪ್ರಮಾಣವು ಸ್ಥಾನಪ್ರಮಾಣಕ್ಕಿಂತಲೂ ದುರ್ಬಲವಾಗಿದೆ. 'ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಾ ಮೇ ಶುಧ್ಯಂತಾಮ್' ಎಂಬ ಮಹಾನಾರಾಯಣೋಪನಿಷತ್ತಿನಲ್ಲಿರುವ ಸಮಾಖ್ಯಾಪ್ರಮಾಣಕ್ಕಿಂತಲೂ ತೈತ್ತಿರೀಯೋಪನಿಷತ್ತಿನಲ್ಲಿರುವ ಪ್ರಾಣಮಯಾದಿ ಶಬ್ದಗಳು ಕೋಶವಾಚಕವಾಗಿದೆಯೆಂದು ಹೇಳಬಹುದು. ಇದರಂತೆ ಬ್ರಹ್ಮಶಬ್ದದ ಉಲ್ಲೇಖವಿರುವಂತಹ ಪ್ರಕರಣದಲ್ಲಿ ಹೇಳಿರುವುದರಿಂದ, ಅನ್ನಮಯಾದಿ ಶಬ್ದಗಳು ಬ್ರಹ್ಮವಾಚಕಗಳೂ ಆಗಿವೆಯೆಂದು ಹೇಳಬಹುದು. ಆದರೆ ಸಮಾಖ್ಯಾಪ್ರಮಾಣಕ್ಕಿಂತಲೂ ಪ್ರಕರಣಪ್ರಮಾಣವು ಪ್ರಬಲವಾದ್ದರಿಂದ ಅನ್ನಮಯಾದಿಗಳೆಲ್ಲವೂ ಬ್ರಹ್ಮವಾಚಕಗಳಾಗುತ್ತವೆಂದೇ ಸಿದ್ಧಾಂತ.

ಆದ್ದರಿಂದ ಶ್ರುತಿಯು ಲಿಂಗಕ್ಕಿಂತಲೂ ಪ್ರಬಲವಾಗಿದೆ. ವಾಕ್ಯಕ್ಕಿಂತ ಲಿಂಗವು ಪ್ರಬಲವಾಗಿದೆ. ಪ್ರಕರಣ ಪ್ರಮಾಣಕ್ಕಿಂತ ವಾಕ್ಯವು ಪ್ರಬಲವಾಗಿದೆ. ಸ್ಥಾನಪ್ರಮಾಣಕ್ಕಿಂತ ಪ್ರಕರಣವು ಪ್ರಬಲವಾಗಿದೆ. ಸ್ಥಾನಪ್ರಮಾಣವು ಸಮಾಖ್ಯಾಪ್ರಮಾಣಕ್ಕಿಂತಲೂ ಪ್ರಬಲವಾಗಿದೆಯೆಂದು ನಿಶ್ಚಯವಾಯಿತು.



## ಶ್ರುತ್ಯಾದಿಗಳು ಹೇಗೆ ತಾತ್ಪರ್ಯನಿಶ್ಚಾಯಕಗಳಾಗುತ್ತವೆ

**तात्पर्यचन्द्रिका**

**अत्र च श्रुतिः स्वनिर्णये श्रुतित्वेनैव निर्णायिका । वाक्यादि तु अनुमानत्वेन ।**

ಅನುವಾದ - ಈ ಷಡ್ವಿಧ ತಾತ್ಪರ್ಯಲಿಂಗಗಳ ನಡುವೆ ಶ್ರುತಿಯು ತನ್ನ ಅರ್ಥವನ್ನು ನಿರ್ಣಯಿಸುವಾಗ ಶ್ರುತಿತ್ವಪ್ರಯುಕ್ತವಾಗಿಯೇ ನಿರ್ಣಾಯಕವಾಗುತ್ತದೆ. ಆದರೆ ವಾಕ್ಯಪ್ರಕರಣಾದಿಗಳೆಲ್ಲವೂ ಅನುಮಾನರೂಪವಾಗಿ ನಿರ್ಣಾಯಕವಾಗುತ್ತವೆ.

**अत एव ''वाक्यं प्रकरणं स्थानं समाख्या च तथाविधा'' इत्यनुव्याख्याने ''समाख्यावाक्यप्रकरणस्थानानि चोपपत्तिविशेषाः'' इति प्रमाणलक्षणे च वाक्यादीनामेव लिङ्गतोक्ता । नतु श्रुतेः ।**

ಆದ್ದರಿಂದಲೇ ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ 'ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾಚ ತಥಾವಿಧಾಃ' ಎಂದರೆ ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಇವೆಲ್ಲವೂ ಅನುಮಾನರೂಪವಾಗಿವೆಯೆಂದು ಹೇಳಿರುತ್ತಾರೆ. ಅದರಂತೆ ಪ್ರಮಾಣಲಕ್ಷಣದಲ್ಲಿಯೂ 'ಸಮಾಖ್ಯಾವಾಕ್ಯಪ್ರಕರಣಸ್ಥಾನಾನಿ ಚೋಪಪತ್ತಿವಿಶೇಷಾಃ' ಎಂದರೆ ಸಮಾಖ್ಯಾ, ವಾಕ್ಯ, ಪ್ರಕರಣ, ಸ್ಥಾನ ಇವುಗಳೆಲ್ಲವೂ ಲಿಂಗದ ವಿಶೇಷ ರೂಪವೇ ಆಗಿವೆಯೆಂದು ಹೇಳಿದ್ದಾರೆ. ಹೀಗೆ ವಾಕ್ಯಾದಿಗಳಿಗಷ್ಟೇ ಅನುಮಾನಸ್ವರೂಪವನ್ನು ಹೇಳಿದ್ದಾರೆ ಹೊರತು, ಶ್ರುತಿಗೆ ಅನುಮಾನಸ್ವರೂಪವನ್ನು ಹೇಳಿಲ್ಲ. ಆದ್ದರಿಂದ ಶ್ರುತಿ ಬಿಟ್ಟು ಉಳಿದೆಲ್ಲವೂ ಅನುಮಾನರೂಪವಾಗಿ ಅರ್ಥನಿರ್ಣಾಯಕವಾಗುತ್ತವೆಂದು ತಿಳಿಯಬೇಕು.

**लिङ्गस्य त्वनुमानत्वमविप्रतिपन्नमिति न लिङ्गं तत्रोक्तम् ।**

ಅನುವ್ಯಾಖ್ಯಾನ ಹಾಗೂ ಪ್ರಮಾಣಲಕ್ಷಣಗಳ ವಾಕ್ಯದಲ್ಲಿ ಲಿಂಗವನ್ನು ಏಕೆ ಬಿಟ್ಟಿದ್ದಾರೆ ? ಎಂದರೆ ಲಿಂಗವು ಅನುಮಾನರೂಪವಾಗಿದೆಯೆಂಬುದರಲ್ಲಿ ವಿಪ್ರತಿಪತ್ತಿ ಇಲ್ಲ. ಆದ್ದರಿಂದ ಲಿಂಗವನ್ನು ಬಿಟ್ಟು ವಾಕ್ಯಪ್ರಕರಣಾದಿಗಳಿಗೆ ಅನುಮಾನರೂಪತ್ವವನ್ನು ಹೇಳಿರುತ್ತಾರೆ.

**तत्र श्रुतिलिङ्गवाक्यानां साक्षाद्विप्रतिपन्नार्थनिष्ठत्वे श्रुत्यादित्वेनैव ज्ञापकत्वम् ।**

ಈ ಶ್ರುತಿ, ಲಿಂಗ, ವಾಕ್ಯ ಇವುಗಳು ವಿಪ್ರತಿಪನ್ನವಾದ ವಾಕ್ಯದಲ್ಲೇ ಇರುವುದಾದರೆ ಅವುಗಳು ಶ್ರುತಿ-ಲಿಂಗ ಇವುಗಳ ಸ್ವರೂಪದಿಂದಲೇ ಅರ್ಥನಿಶ್ಚಾಯಕವಾಗುತ್ತದೆ.

**यथाऽत्रैव सर्वदेवोपास्यरूपविप्रतिपन्नार्थनिष्ठवामनश्रुतेः ।**

ಉದಾಹರಣೆ - ಇದೇ ಅಧಿಕರಣದಲ್ಲಿ ಸರ್ವದೇವೋಪಾಸ್ಯತ್ವವೆಂಬ ವಿಪ್ರತಿಪನ್ನವಾದ ಅರ್ಥದಲ್ಲಿ ವಾಮನಶ್ರುತಿಯು ಇರುತ್ತದೆ. ಆದ್ದರಿಂದ ಇಂತಹ ವಾಮನಶ್ರುತಿಯು ಶ್ರುತಿರೂಪವಾಗಿಯೇ ಅರ್ಥನಿಶ್ಚಾಯಕವಾಗುತ್ತದೆ.

**यथा च विप्रतिपन्नाकाशनिष्ठस्यानन्तत्वादिलिङ्गस्य ।**

ಮತ್ತೊಂದು ಉದಾಹರಣೆ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಆಕಾಶದಲ್ಲಿರುವ 'ಅನಂತತ್ವ' ಎಂಬ ಲಿಂಗವು ವಿಪ್ರತಿಪನ್ನವಾದ ಆಕಾಶನಿಷ್ಠವೇ ಆಗಿದೆ.

**यथा च विप्रतिपन्नान्तर्यामिनिष्ठस्य ''यं पृथिवी न वेद'' इत्यादिवाक्यस्य ।**

ಮತ್ತು ಅಂತರ್ಯಾಮ್ಯಧಿಕರಣದಲ್ಲಿ ವಿಪ್ರತಿಪನ್ನವಾದ ಅಂತರ್ಯಾಮಿಯಲ್ಲಿ 'ಯಂ ಪೃಥಿವೀ ನ ವೇದ' ಎಂಬ ವಾಕ್ಯವು ಇರುತ್ತದೆ. ಹೀಗೆ ಶ್ರುತಿ-ಲಿಂಗ-ವಾಕ್ಯಗಳು ವಿಪ್ರತಿಪನ್ನವಾದ ಅರ್ಥದಲ್ಲಿರುವುದನ್ನು ಗಮನಿಸಬೇಕು.

**श्रुत्यादेर्विप्रतिपन्नार्थनिष्ठत्वं विनोपक्रमोपसंहारयोः श्रुतत्वे तन्निश्चायकतया लिङ्गत्वम् ।**

ಶ್ರುತಿ-ಲಿಂಗಾದಿಗಳು ವಿಪ್ರತಿಪನ್ನವಾದ ಅರ್ಥದಲ್ಲಿ ನಿಷ್ಠವಾಗದೇ ಉಪಕ್ರಮ-ಉಪಸಂಹಾರಗಳಲ್ಲಿ ಇರುವುದಾದರೆ ಉಪಕ್ರಮೋಪಸಂಹಾರಗಳ ಅರ್ಥವನ್ನು ನಿಶ್ಚಯಮಾಡುವ ಮೂಲಕ ವಿಪ್ರತಿಪನ್ನವಾದ ಅರ್ಥಕ್ಕೆ ನಿಶ್ಚಾಯಕವಾಗುತ್ತವೆ.

**यथा ''वैश्वानरः'' इत्यत्र ''को न आत्मा किं ब्रह्म'' इत्युपक्रमस्थब्रह्मश्रुत्यादेः।**

ಉದಾಹರಣೆ - ವೈಶ್ವಾನರಾಧಿಕರಣದಲ್ಲಿ 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂಬ ಉಪಕ್ರಮದಲ್ಲಿರುವ ಬ್ರಹ್ಮಶ್ರುತಿಯು ಉಪಕ್ರಮಕ್ಕೆ ಬ್ರಹ್ಮಪರತ್ವವನ್ನು ನಿರ್ಣಯಿಸಿ, ಅನಂತರ ವೈಶ್ವಾನರಶ್ರುತಿಗೆ ಬ್ರಹ್ಮಪರತ್ವವನ್ನು ನಿರ್ಣಯಿಸುತ್ತದೆ.

**यथा च ''प्रथमेऽश्रवणादिति चेन्न ता एव ह्युपपत्तेः'' इत्यत्र ''इति तु पञ्चम्यामाहुतावापः पुरुषवचसो भवन्ति'' इत्युपसंहारस्थात् श्रुत्यादेः ।**

ಮತ್ತು 'ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ' ಎಂಬ ಶ್ರುತಿಯಲ್ಲಿ 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಎಂಬ ಉಪಸಂಹಾರದಲ್ಲಿರುವ ಶ್ರುತಿಯು ಅರ್ಥನಿಶ್ಚಾಯಕವಾಗಿದೆ. ಇದೂ ಸಹ ಹಿಂದಿನಂತೆ ಮೊದಲು ಉಪಸಂಹಾರ ವಾಕ್ಯದ ಅರ್ಥವನ್ನು ನಿಶ್ಚಯಿಸಿ, ಅನಂತರ ವಿಪ್ರತಿಪನ್ನವಾದ ವಾಕ್ಯಕ್ಕೆ ಅರ್ಥನಿಶ್ಚಾಯಕವಾಗುತ್ತದೆ.

**साक्षाद्विप्रतिपन्नार्थनिष्ठत्वं विनोपक्रमोपसंहाराभ्यामन्यत्र श्रुतत्वे तु प्रकरणनिश्चायकतया लिङ्गत्वम् ।**

ನೇರವಾಗಿ ವಿಪ್ರತಿಪನ್ನವಾದ ಅರ್ಥದಲ್ಲಿ ಇಲ್ಲದೇ ಉಪಕ್ರಮ-ಉಪಸಂಹಾರಗಳಲ್ಲಿಯೂ ಇಲ್ಲದ, ಬೇರೆ ಕಡೆ ಶ್ರುತಿ-ಲಿಂಗಾದಿಗಳು ಇದ್ದಲ್ಲಿ, ಅವುಗಳು ಪ್ರಕರಣಕ್ಕೆ ನಿಶ್ಚಾಯಕರೂಪವಾಗಿ ಲಿಂಗರೂಪವಾಗುತ್ತದೆಂದು ತಿಳಿಯಬೇಕು.

**यथा ''प्राणस्तथा'' इत्यत्र ''ब्रह्मेमं पुरुषम्'' इति ब्रह्मश्रुत्यादेः ।**

ಉದಾಹರಣೆ - 'ಪ್ರಾಣಸ್ತಥಾಽನುಗಮಾತ್' ಎಂಬ ಸೂತ್ರದಲ್ಲಿ 'ಬ್ರಹ್ಮೇಮಂ ಪುರುಷಮ್' ಎಂಬ ಬ್ರಹ್ಮಶ್ರುತಿಯು ವಿಪ್ರತಿಪನ್ನವಾದ ಅರ್ಥದಲ್ಲಿಯೂ ಇಲ್ಲದೇ ಉಪಕ್ರಮ-ಉಪಸಂಹಾರಗಳಲ್ಲಿಯೂ ಇಲ್ಲದೇ ಬೇರೆಡೆ ಶ್ರುತವಾಗಿದೆ. ಇದು ಪ್ರಕರಣಕ್ಕೆ ನಿಶ್ಚಾಯಕವಾಗಿ ಲಿಂಗರೂಪವಾಗಿದೆಯೆಂದು ತಿಳಿಯಬೇಕು.

**उपक्रमोपसंहारावपि श्रुत्यादिनाऽर्थे निर्णीते तात्पर्यातिशयलिङ्गे ।**

ಉಪಕ್ರಮ-ಉಪಸಂಹಾರಗಳಿಂದಲೇ ಶ್ರುತಿಯ ಅರ್ಥವು ನಿರ್ಣಯವಾಗುವಾಗ ಪುನಃ ಶ್ರುತ್ಯಾದಿಗಳು ಇರುವುದಾದಲ್ಲಿ, ನಿರ್ಣೀತವಾದ ತಾತ್ಪರ್ಯದಲ್ಲಿ ಅತಿಶಯವುಂಟಾಗುತ್ತದೆಂದು ತಿಳಿಯಬೇಕು. ಆದ್ದರಿಂದ ಉಪಕ್ರಮ-ಉಪಸಂಹಾರಗಳಿದ್ದಲ್ಲಿ ಶ್ರುತ್ಯಾದಿಗಳು ತಾತ್ಪರ್ಯಾತಿಶಯಕ್ಕೆ ಲಿಂಗರೂಪವಾಗಿ ಕಾರಣವಾಗಿವೆಯೆಂದು ಅಭಿಪ್ರಾಯ.

**यथा ''अत्ता चराचरात्'' इत्यत्रात्तुर्ब्रह्मत्वे सर्वात्तृत्वादिना निर्णीते ''नैवेह किञ्चनाग्र आसित्'' इत्युपक्रमः ।**

ಉದಾಹರಣೆ - 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ ಸರ್ವಾತ್ತೃತ್ವಾದಿಲಿಂಗಗಳಿಂದ ಬ್ರಹ್ಮನೇ ಅತ್ತೃಯೆನಿಸಿದ್ದಾನೆಂದು ನಿರ್ಣಯವಾಗಿದೆ. ಆದರೂ ಸಹ 'ನೈವೇಹ ಕಿಂಚನಾಗ್ರ ಆಸೀತ್' ಎಂಬ ಉಪಕ್ರಮವು ಪ್ರಮಾಣವಾಗಿರುವುದರಿಂದ, ಬ್ರಹ್ಮನೊಬ್ಬನೇ ಅತ್ತೃತ್ವವುಳ್ಳವನಾಗಿದ್ದಾನೆಂಬ ತಾತ್ಪರ್ಯದಲ್ಲಿ ಅತಿಶಯವು ಲಬ್ಧವಾಗುತ್ತದೆ.

**यथा च ''सर्वत्र प्रसिद्ध'' इत्यत्र सर्वगतस्य ब्रह्मत्वे ब्रह्मशब्दादिना निर्णीते ''स योऽतोऽश्रुतः'' इत्याद्युपसंहारः ।**

'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಸರ್ವಗತನಾದವನು ಬ್ರಹ್ಮನೆಂದು ಬ್ರಹ್ಮಶಬ್ದಾದಿಗಳ ಬಲದಿಂದ ನಿರ್ಣಯವಾದ ಮೇಲೆ, ಪುನಃ 'ಸ ಯೋಽತೋಽಶ್ರುತಃ' ಎಂಬ ಉಪಸಂಹಾರವಾಕ್ಯವು ಅದೇ ವಿಷಯವನ್ನು ಉಪೋದ್ಬಲಿಸುತ್ತಿದೆ. ಈ ಉಪಸಂಹಾರವೂ ಸಹ ತಾತ್ಪರ್ಯಾತಿಶಯಕ್ಕೆ ದ್ಯೋತಕ.

**अन्यथा तु प्रकरणनिश्चायकौ ।**

ಒಂದು ವೇಳೆ ಶ್ರುತ್ಯಾದಿಗಳಿಂದ ಅರ್ಥನಿಶ್ಚಯವಾಗಿ ಉಪಕ್ರಮ-ಉಪಸಂಹಾರಗಳು ಅನುಗುಣವಾಗಿದ್ದಲ್ಲಿ ತಾತ್ಪರ್ಯಾತಿಶಯವು ಉಂಟಾಗುತ್ತದೆ. ಶ್ರುತ್ಯಾದಿಗಳಿಂದ ಅರ್ಥನಿಶ್ಚಯವಾಗದೇ ಉಪಕ್ರಮೋಪಸಂಹಾರಗಳು ಮಾತ್ರವಿದ್ದಲ್ಲಿ ಪ್ರಕರಣವು ನಿರ್ಣಯದ್ವಾರಾ ವಿಪ್ರತಿಪನ್ನವಾದ ಅರ್ಥನಿರ್ಣಾಯಕವಾಗುತ್ತದೆ. ಇನ್ನು ಶ್ರುತ್ಯಾದಿಗಳಿಂದ ಅರ್ಥನಿಶ್ಚಯವು ಉಂಟಾಗಿ, ಉಪಕ್ರಮೋಪ-ಸಂಹಾರಗಳು ವಿಪರೀತವಾದ ಅರ್ಥದಲ್ಲಿದ್ದರೆ ಶ್ರುತಿ-ಲಿಂಗಾದಿಗಳಿಂದ ಈ ವಾಕ್ಯವು ಬೇರೆ ಅರ್ಥವನ್ನೇ ನಿರ್ಣಯಿಸುತ್ತದೆ. ಉಪಕ್ರಮಾದಿಗಳಿಂದ ಪ್ರಕರಣವು ಅನ್ಯಪರವೆಂದು ನಿರ್ಣಯವಾಗುತ್ತದೆ. ಹೀಗೆ ವ್ಯವಸ್ಥೆಯನ್ನು ತಿಳಿಯಬೇಕು.

**यथा द्युभ्वाद्यधिकरणे ''प्रकरणात्'' इत्यत्र ''द्वे विद्ये वेदितव्ये'' इति परमेश्वरोपक्रमः ''अन्यमीशम्'' इत्यत्रापि तस्यैव प्रकृतत्वनिश्चायकः ।**

ಉದಾಹರಣೆ - ದ್ಯುಭ್ವಾದ್ಯಧಿಕರಣದ 'ಪ್ರಕರಣಾತ್' ಎಂಬ ಸೂತ್ರದಲ್ಲಿ 'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಾಕ್ಯದಲ್ಲಿ ಪರಮೇಶ್ವರನ ಉಪಕ್ರಮವಿದೆ. ಇದು 'ಅನ್ಯಮೀಶಮ್' ಎಂಬಲ್ಲಿರುವ 'ಈಶ' ಶಬ್ದವು ಪರಮಾತ್ಮ ಪರವಾಗಿದೆಯೆನ್ನಲು ನಿರ್ಣಾಯಕವಾಗಿದೆ.

**यथा चानुमानिकाधिकरणे ''प्रकरणात्'' इत्यत्र ''तद्विष्णोः परमं पदम्'' इत्युपसंहारः ''अनाद्यनन्तं महतः परम्'' इत्यादेर्विष्णुप्रकरणत्वनिश्चायकः ।**

ಆನುಮಾನಿಕಾಧಿಕರಣದ 'ಪ್ರಕರಣಾತ್' ಎಂಬ ಸೂತ್ರದಲ್ಲಿ 'ತದ್ವಿಷ್ಣೋಃ ಪರಮಂ ಪದಮ್' ಎಂಬುದು ಉಪಸಂಹಾರ ವಾಕ್ಯವಾಗಿದೆ. ಇದು 'ಅನಾದ್ಯನಂತಂ ಮಹತಃ ಪರಮ್' ಎಂಬಲ್ಲಿರುವ 'ಮಹತಃ ಪರಮ್' ಎಂಬ ಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು ನಿಶ್ಚಯಿಸುತ್ತದೆ. ಇಲ್ಲದಿದ್ದರೆ, 'ಮಹತಃ ಪರಮ್' ಎಂಬುದು ಪ್ರಕೃತಿಪರವಾಗುತ್ತಿತ್ತು. ಆದ್ದರಿಂದ ಉಪಕ್ರಮ ಮತ್ತು

ಉಪಸಂಹಾರಗಳಿಗೆ ಬಾಧಕವಾಗಿ ಮತ್ತೊಂದು ಶ್ರುತಿ-ಲಿಂಗಾದಿಗಳು ಇಲ್ಲದಿದ್ದಾಗ, ಈ ಉಪಕ್ರಮ-ಉಪಸಂಹಾರಗಳು ಪ್ರಕರಣವು ವಿಷ್ಣುಪರವಾಗಿದೆಯೆಂದು ನಿಶ್ಚಯಿಸುತ್ತದೆ.

**प्रकाशः –**

"श्रुतिलिङ्गवाक्यानां साक्षाद्विप्रतिपन्नार्थनिष्ठत्वे श्रुत्यादित्वेनैव ज्ञापकत्वम्" इत्यादिटीकां विवरिष्यञ्छ्रुत्यादेर्वैलक्षण्यमाह – **अत्र चेति** ।।

ವಿವರಣೆ - ಇಲ್ಲಿಯತನಕ ಶ್ರುತಿ-ಲಿಂಗ ಮೊದಲಾದವುಗಳ ಬಲಾಬಲ ವಿಚಾರವನ್ನು ಮಾಡಿದ್ದಾಯಿತು. ಈಗ ಶ್ರುತಿ-ಲಿಂಗಾದಿಗಳು ಹೇಗೆ ತಾತ್ಪರ್ಯನಿಶ್ಚಾಯಕಗಳಾಗುತ್ತವೆಂಬುದನ್ನು ಸಮರ್ಥಿಸುತ್ತಿದ್ದಾರೆ.

'ಶ್ರುತಿಲಿಂಗವಾಕ್ಯಾನಾಂ ಸಾಕ್ಷಾದ್ವಿಪ್ರತಿಪನ್ನಾರ್ಥನಿಷ್ಠತ್ವೇ ಶ್ರುತ್ಯಾದಿತ್ವೇನೈವ ಜ್ಞಾಪಕತ್ವಮ್' ಶ್ರುತಿ-ಲಿಂಗ-ವಾಕ್ಯ ಇವುಗಳು ವಿಪ್ರತಿಪನ್ನವಾಕ್ಯದಲ್ಲಿ ನೇರವಾಗಿ ಇರುವುದಾದರೆ, ಶ್ರುತಿ-ಲಿಂಗ ಇವುಗಳ ಸ್ವರೂಪದಲ್ಲೇ ಅರ್ಥನಿಶ್ಚಾಯಕಗಳಾಗುತ್ತವೆ. ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ, ಶ್ರುತ್ಯಾದಿಗಳಲ್ಲಿರುವ ವೈಲಕ್ಷಣ್ಯವನ್ನು ತೋರಿಸುತ್ತಿದ್ದಾರೆ 'ಅತ್ರಚ' ಇತ್ಯಾದಿ ಗ್ರಂಥದಿಂದ.

**प्रकाशः – तत्रोक्तमिति** ।। अनुव्याख्यानादावुक्तमित्यर्थः । इदानीं टीकां विवृणोति – **तत्रेति** ।। क्रमेण त्रयाणामुदाहरणमाह – **यथेति** ।।

'ತತ್ರೋಕ್ತಮ್' ಎಂದರೆ ಅನುವ್ಯಾಖ್ಯಾನ ಮೊದಲಾದವುಗಳಲ್ಲಿ ಹೇಳಲಾಗಿದೆ ಎಂದರ್ಥ. ಪ್ರಕೃತ ಟೀಕೆಯನ್ನು ವಿವರಿಸುತ್ತಿದ್ದಾರೆ 'ತತ್ರ' ಇತ್ಯಾದಿ ಗ್ರಂಥದಿಂದ. ಶ್ರುತಿ-ಲಿಂಗ-ವಾಕ್ಯ ಇವುಗಳಿಗೆ ಕ್ರಮವಾಗಿ ಉದಾಹರಣೆಯನ್ನು ನೀಡುತ್ತಿದ್ದಾರೆ 'ಯಥಾ' ಇತ್ಯಾದಿ ಗ್ರಂಥದಿಂದ.

**प्रकाशः – श्रुतेरित्यादेर्ज्ञापकत्वमिति योज्यम् । इत्यादिवाक्यस्येति** ।। एतच्च व्याप्यार्पकं पदं लिङ्गं तदर्पकाणि निराकाङ्क्षाणि पदानि वाक्यमिति पक्षे । तेन तत्र टीकादौ लिङ्गत्वोक्तिविरोधो न शङ्क्यः । प्रागुक्तसमाधानादिति ध्येयम् ।

ಶ್ರುತಿ ಮೊದಲಾದವುಗಳು ಜ್ಞಾಪಕಗಳಾಗಿವೆಯೆಂದು ಯೋಜನೆ ಮಾಡಿಕೊಳ್ಳಬೇಕು. 'ಇತ್ಯಾದಿ ವಾಕ್ಯಸ್ಯ' ಎಂಬ ಗ್ರಂಥದಲ್ಲಿರುವ ಮಾತಿನ ಅಭಿಪ್ರಾಯ ಹೀಗಿದೆ - ವ್ಯಾಪ್ಯವನ್ನು ಸಮರ್ಪಿಸುವ ಪದವೇ ಲಿಂಗರೂಪವಾಗಿದೆ. ವ್ಯಾಪ್ಯವನ್ನು ಸಮರ್ಪಿಸುವಂತಹ ನಿರಾಕಾಂಕ್ಷಿತವಾದ ಅನೇಕ ಪದಗಳು ವಾಕ್ಯವೆನಿಸಿದೆ ಎಂಬ ಪಕ್ಷದಲ್ಲಿ ಮಾತ್ರ ಗ್ರಂಥಕಾರರು ದೃಷ್ಟಾಂತವನ್ನು ನೀಡಿದ್ದಾರೆಂದು ತಿಳಿಯಬೇಕು. ಹೀಗೆ ತಿಳಿಯುವುದರಿಂದ ಟೀಕಾದಿಗಳಲ್ಲಿ ನಿರಾಕಾಂಕ್ಷಿತವಾದ ಅನೇಕ ಪದಗಳ ಸಮೂಹವೂ ಕೂಡ ಲಿಂಗರೂಪವೇ ಆಗಿರುತ್ತದೆಂಬ ಮಾತಿಗೆ ವಿರೋಧವು ಬರುವುದಿಲ್ಲ. ಈಗಾಗಲೇ ಹಿಂದೆ ಎರಡು ಬಗೆಯಲ್ಲಿ ಲಿಂಗ ಮತ್ತು ವಾಕ್ಯಗಳ ಲಕ್ಷಣವನ್ನು ಹೇಳುವ ಮೂಲಕ, ಈ ಶಂಕೆಗೆ ಸಮಾಧಾನವನ್ನು ನೀಡಿದ್ದಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः** – उपक्रमोपसंहारयोश्श्रुतत्वे तन्निश्चायकतया लिङ्गत्वमिति टीकावाक्यं सोदाहरणं व्यनक्ति – **श्रुत्यादेरिति** ।। उपक्रमनिश्चायकमुदाहरति – **यथेति** ।।

ಉಪಕ್ರಮ ಮತ್ತು ಉಪಸಂಹಾರ ಇವುಗಳಲ್ಲಿ ಶ್ರುತಿಯಿದ್ದರೆ, ಉಪಕ್ರಮ-ಉಪಸಂಹಾರಗಳ ಅರ್ಥವನ್ನು ನಿಶ್ಚಯ ಮಾಡುವ ಮೂಲಕ ಲಿಂಗವಾಗುತ್ತದೆ ಎಂದು 'ಉಪಕ್ರಮೋಪಸಂಹಾರಯೋಃ ಶ್ರುತತ್ವೇ ತನ್ನಿಶ್ಚಾಯಕತಯಾ ಲಿಂಗತ್ವಮ್' ಎಂಬ ಟೀಕಾಮಾತನ್ನು ಉದಾಹರಣ ಪುರಸ್ಸರವಾಗಿ ವ್ಯಾಖ್ಯಾನಿಸುತ್ತಿದ್ದಾರೆ 'ಶ್ರುತ್ಯಾದೇಃ' ಇತ್ಯಾದಿ ಗ್ರಂಥದಿಂದ. ಉಪಕ್ರಮಕ್ಕೆ ನಿಶ್ಚಾಯಕವಾದ ಶ್ರುತಿಪ್ರಮಾಣವನ್ನು 'ಯಥಾಚ' ಇತ್ಯಾದಿ ಗ್ರಂಥದಿಂದ ಉದಾಹರಿಸಿದ್ದಾರೆ.

**प्रकाशः** – ''तथा दृष्ट्युपदेशादसम्भवात्पुरुषविधमपि चैनमधीयते'' इति गुणसूत्रे ''को न आत्मा किं ब्रह्मेत्यारम्भाच्चान्येषामसम्भवाद्विष्णुरेव वैश्वानरः'' इति भाष्यादावसम्भवशब्दव्याख्यायां तथोक्तत्वादिति भावः ।

'ತಥಾ ದೃಷ್ಟ್ಯುಪದೇಶಾದಸಂಭವಾತ್ಪುರುಷವಿಧಮಪಿ ಚೈನಮಧೀಯತೇ' ಎಂಬ ಗುಣಸೂತ್ರದಲ್ಲಿ 'ಕೋ ನ ಆತ್ಮಾ ಕಿಂ ಬ್ರಹ್ಮೇತ್ಯಾರಂಭಾಚ್ಚಾನ್ಯೇಷಾಮಸಂಭವಾದ್ವಿಷ್ಣುರೇವ ವೈಶ್ವಾನರಃ' ಇತ್ಯಾದಿ ಭಾಷ್ಯದಲ್ಲಿ ಇರುವ ಅಸಂಭವಶಬ್ದವನ್ನು ವ್ಯಾಖ್ಯಾನ ಮಾಡುವಾಗ ಬ್ರಹ್ಮಶ್ರುತಿಯನ್ನು ಉದಾಹರಿಸಿದ್ದಾರೆಂದು ತಿಳಿಯಬೇಕು.

**प्रकाशः** – उपसंहरन्निश्चायकमुदाहरति – **यथा चेति** ।। वैराग्यपादे पञ्चमेऽधिकरणे भूतानि किं जीवेन सह गच्छन्ति नवेति सन्देहे वाजसनेयेऽष्टमेऽध्याये ''तस्मिन्नेतस्मिन्नग्नौ देवाः श्रद्धां जुह्वति'' इत्युक्त्वा तस्य श्रद्धयेष्टवतश्श्रद्धासहितस्यैव द्याख्ये प्रथमाग्नौ होमश्रवणाद्भूतानामपि सहगतौ तथोक्तिप्रसङ्गान्न सह गच्छन्तीति प्राप्ते उपसंहारे ''इति तु पञ्चम्यामाहुतावापः पुरुषवचसो भवन्ति'' इत्यापां जीवेन सह गतिश्रवणात्तदनुसारेणोपक्रमे श्रद्धाशब्दस्याजहल्लक्षणया श्रद्धयाऽद्भिश्च युक्तो जीवोऽर्थ इति कल्पनोपपत्तेस्सह गच्छन्तीति सिद्धान्तितमिति तत्रोपसंहारस्याप्-परत्वमपूश्रुत्या सिद्धमित्यर्थः ।

ಉಪಸಂಹಾರದ ಅರ್ಥಕ್ಕೆ ನಿಶ್ಚಾಯಕವಾದ ಶ್ರುತ್ಯಾದಿಗಳನ್ನು ಉದಾಹರಣಪುರಸ್ಸರವಾಗಿ ಸಮರ್ಥಿಸುತ್ತಿದ್ದಾರೆ 'ಯಥಾಚ' ಇತ್ಯಾದಿ ಗ್ರಂಥದಿಂದ.

ವೈರಾಗ್ಯಪಾದದ ಐದನೆಯ ಅಧಿಕರಣದಲ್ಲಿ ಭೂತಗಳೆಲ್ಲವೂ ಜೀವನ ಜೊತೆಗೆ ತೆರಳುತ್ತವೋ ಇಲ್ಲವೋ? ಎಂದು ಸಂದೇಹ. ಬೃಹದಾರಣ್ಯಕೋಪನಿಷತ್ತಿನ ಎಂಟನೇ ಅಧ್ಯಾಯದಲ್ಲಿ 'ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ' ಎಂದು ಹೇಳಲಾಗಿದೆ. ಅನಂತರ ಶ್ರದ್ಧೆಯಿಂದ ಕೂಡಿರುವಂತಹ ಜೀವನು 'ದ್ಯು'

ಎಂಬ ಪ್ರಥಮಾಗ್ನಿಯಲ್ಲಿ ಹೋಮಿಸುತ್ತಾನೆಂದು ಹೇಳಲಾಗಿದೆ. ಒಂದು ವೇಳೆ ಭೂತಗಳು ಜೀವನ ಜೊತೆಗೆ ತೆರಳುವುದಾದರೆ, ಅವುಗಳ ಉಲ್ಲೇಖವನ್ನು 'ತಸ್ಮಿನ್' ಇತ್ಯಾದಿ ವಾಕ್ಯದಲ್ಲಿ ಹೇಳಬೇಕಿತ್ತು. ಹೇಳಿಲ್ಲವಾದ್ದರಿಂದ, ಜೀವನ ಜೊತೆಗೆ ಪಂಚಭೂತಗಳ ಗಮನವು ಇರುವುದಿಲ್ಲವೆಂದು ಪೂರ್ವಪಕ್ಷ.

ಉಪಸಂಹಾರದಲ್ಲಿ 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಎಂಬುದಾಗಿ ನೀರು ಜೀವನ ಜೊತೆಗೆ ತೆರಳುತ್ತದೆಂದು ಹೇಳಲಾಗಿದೆ. ಅದಕ್ಕನುಸಾರಿಯಾಗಿ ಉಪಕ್ರಮದಲ್ಲಿರುವ ಶ್ರದ್ಧಾ ಶಬ್ದಕ್ಕೆ ಅಜಹಲ್ಲಕ್ಷಣಾವನ್ನು ಮಾಡಿ, ಶ್ರದ್ಧೆ ಹಾಗೂ ನೀರು ಇವುಗಳಿಂದ ಯುಕ್ತನಾದ ಜೀವನು ತೆರಳುತ್ತಾನೆಂದು ಹೇಳಬೇಕು. ನೀರು ಎಂಬುದರಿಂದ ಉಪಲಕ್ಷಣವಾಗಿ ಪಂಚಭೂತಗಳನ್ನು ವಿವಕ್ಷಿಸಬೇಕು. ಆದುದರಿಂದ ಪಂಚಭೂತಗಳ ಜೊತೆಗೆ ಜೀವನು ತೆರಳುತ್ತಾನೆಂದು ಸಿದ್ಧಾಂತ.

ಇಲ್ಲಿ ಉಪಸಂಹಾರದಲ್ಲಿರುವ 'ಅಪ್' ಶಬ್ದಕ್ಕೆ 'ನೀರು' ಎಂಬರ್ಥವು 'ಅಪ್' ಶ್ರುತಿಯಿಂದ ಸಿದ್ಧವಾಗಿದೆಯೆಂದು ಅಭಿಪ್ರಾಯ.

**प्रकाशः – 'अन्यत्र चेत्प्रकरणनिश्चायकत्वेन' इति टीकावाक्यं व्यनक्ति – साक्षादिति ।। यथेति ।। अत एव तत्र तच्छतिलिङ्गानामस्मिन् प्रकरणे बहुस्थलेष्वनुगमादित्यवादिष्मेति भावः ।**

ಒಂದು ವೇಳೆ ಉಪಕ್ರಮ-ಉಪಸಂಹಾರಗಳಲ್ಲಿಯೂ ಶ್ರುತಿ-ಲಿಂಗಾದಿಗಳಿಲ್ಲದಿದ್ದರೆ, ಪ್ರಕರಣಕ್ಕೆ ನಿಶ್ಚಾಯಕವಾಗುತ್ತವೆಂಬ ಟೀಕಾ ಮಾತನ್ನು 'ಸಾಕ್ಷಾತ್' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಯಥಾ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಆದ್ದರಿಂದಲೇ ಶ್ರುತಿ-ಲಿಂಗಗಳು ಪ್ರಕರಣದಲ್ಲಿ ಅನೇಕ ಸ್ಥಳಗಳಲ್ಲಿರುವುದರಿಂದ, ಪ್ರಕರಣನಿಶ್ಚಾಯಕವಾಗುತ್ತವೆಂದು ಮುಂದೆ ಹೇಳುವವರಿದ್ದೇವೆ ಎಂದು ಗ್ರಂಥಕಾರರ ಅಭಿಪ್ರಾಯ.

**प्रकाशः – "उपक्रमोपसंहारावपि श्रुत्यादिना सत्यामर्थसिद्धौ तात्पर्यलिङ्गे । अन्यथा प्रकरणनिश्चायकौ" इति टीकां विवृणोति – उपक्रमेति ।।**

ಉಪಕ್ರಮೋಪಸಂಹಾರಗಳಿದ್ದಾಗಲೂ ಶ್ರುತ್ಯಾದಿಗಳು ಅರ್ಥವನ್ನು ನಿಶ್ಚಯಿಸಲು ತಾತ್ಪರ್ಯಲಿಂಗಗಳು ಆಗಿಯೇ ತೀರುತ್ತವೆ. ಇಲ್ಲದಿದ್ದರೆ ಪ್ರಕರಣಕ್ಕೆ ನಿಶ್ಚಾಯಕಗಳಾಗುತ್ತವೆ ಎಂದು 'ಉಪಕ್ರಮೋಪಸಂಹಾರಾವಪಿ ಶ್ರುತ್ಯಾದಿನಾ ಸತ್ಯಾಮರ್ಥಸಿದ್ಧೌ ತಾತ್ಪರ್ಯಲಿಂಗೇ । ಅನ್ಯಥಾ ಪ್ರಕರಣನಿಶ್ಚಾಯಕೌ' ಎಂಬ ಟೀಕೆಯನ್ನು ವಿವರಿಸುತ್ತಿದ್ದಾರೆ 'ಉಪಕ್ರಮ' ಇತ್ಯಾದಿ ಗ್ರಂಥದಿಂದ.

**प्रकाशः – क्रमेण द्वयमप्युदाहरति – यथेति ।। व्यक्तमेतत्तत्रैव "प्रकरणाच्च" इति गुणसूत्रे । यथाचेति ।। व्यक्तमेतत् "विवक्षितगुणोपपत्तेश्च" इति गुणसूत्रे ।**

ಉಪಕ್ರಮೋಪಸಂಹಾರಗಳಿಗೆ ಕ್ರಮವಾಗಿ ಉದಾಹರಣೆಯನ್ನು ನೀಡುತ್ತಿದ್ದಾರೆ 'ಯಥಾ' ಇತ್ಯಾದಿ

ಗ್ರಂಥದಿಂದ. ಅತ್ತ್ರತ್ವಾಧಿಕರಣದಲ್ಲಿರುವ 'ಪ್ರಕರಣಾಚ್ಚ' ಎಂಬ ಗುಣಸೂತ್ರದಲ್ಲಿ ಇದು ಸ್ಪಷ್ಟವಾಗಿದೆಯೆಂದು ತಿಳಿಯಬೇಕು. 'ಯಥಾಚ' ಎಂಬುದರಿಂದ ಸರ್ವಗತತ್ವಾಧಿಕರಣದಲ್ಲಿರುವ 'ವಿವಕ್ಷಿತಗುಣೋಪಪತ್ತೇಶ್ಚ' ಎಂಬ ಸೂತ್ರದಲ್ಲಿ ಈ ವಿಷಯವು ಸ್ಪಷ್ಟವಾಗಿದೆಯೆಂದು ತಿಳಿಯಬೇಕು.

**प्रकाशः** – विवक्षितत्वं वक्ष्यमाणत्वमिति स्वयं व्याख्यानात् । द्वयोरपि क्रमेणोदाहरणमाह – **यथाद्युभ्वादीति** ।। **अन्यमीशमिति** ।। ''भेदव्यपदेशात्'' इति पूर्वसूत्रोदाहरण इत्यर्थः ।

'ವಿವಕ್ಷಿತ' ಎಂದರೆ 'ವಕ್ಷ್ಯಮಾಣ' ಎಂದು ಮುಂದೆ ವ್ಯಾಖ್ಯಾನ ಮಾಡುತ್ತಾರೆ. ಪ್ರಕೃತ ಉಪಕ್ರಮ ಹಾಗೂ ಉಪಸಂಹಾರಗಳೇ ಪ್ರಕರಣಕ್ಕೆ ನಿಶ್ಚಾಯಕಗಳಾಗಿವೆಯೆನ್ನಲು ಕ್ರಮವಾಗಿ ಉದಾಹರಣೆಯನ್ನು ಹೇಳುತ್ತಿದ್ದಾರೆ 'ಯಥಾದ್ಯುಭ್ವಾದಿ' ಇತ್ಯಾದಿ ಗ್ರಂಥದಿಂದ. 'ಅನ್ಯಮೀಶಮ್' ಎಂಬುದನ್ನು 'ಭೇದವ್ಯಪದೇಶಾತ್' ಎಂಬ ಹಿಂದಿನ ಸೂತ್ರದಲ್ಲಿ ವ್ಯಾಖ್ಯಾನಿಸಿದ್ದಾರೆಂದು ತಿಳಿಯಬೇಕು.

**प्रकाशः** – अत एव तत्र टीकायां ''नन्वत्र जीवस्य कस्माच्चिदीशादन्यत्वमुच्यते न परमात्मनः'' इति शङ्कानिरासकत्वेन प्रकरणादिति सूत्रमवतारितमिति भावः । **यथा चेति** ।। वक्ष्यति चैतत्तत्रैव ।

ಆದ್ದರಿಂದಲೇ 'ಭೇದವ್ಯಪದೇಶ' ಸೂತ್ರದ ಟೀಕೆಯಲ್ಲಿ 'ನನ್ವತ್ರ ಜೀವಸ್ಯ ಕಸ್ಮಾಚಿತ್ ಈಶಾದನ್ಯತ್ವಮುಚ್ಯತೇ ನ ಪರಮಾತ್ಮನಃ' ಎಂಬುದಾಗಿ ಶಂಕೆಯನ್ನು ನಿರಾಸ ಮಾಡುವುದಕ್ಕಾಗಿಯೇ 'ಪ್ರಕರಣಾತ್' ಎಂಬ ಸೂತ್ರವು ಹೊರಟಿದೆಯೆಂದು ಅವತಾರಿಕೆಯನ್ನು ನೀಡಿದ್ದಾರೆ. 'ಯಥಾ ಚ' ಎಂದರೆ ಆನುಮಾನಿಕಾಧಿಕರಣದಲ್ಲಿಯೇ ಹೆಚ್ಚಿಗೆ ವಿವರಿಸಲಾಗುತ್ತದೆ ಎಂದರ್ಥ.

**गुरुराजीयम्** – उपक्रमोपसंहारयोः श्रुतत्वे तन्निश्चायकतया लिङ्गत्वमिति टीकायां यत्र साक्षाद्विप्रतिपन्नार्थनिष्ठत्वं वर्तते उपक्रमोपसंहारयोरपि श्रुतत्वं वर्तते तत्रापि श्रुतिलिङ्गवाक्यानामुपक्रमोपसंहारनिश्चायकत्वमित्येव भातीत्यतस्तस्यां टीकायां साक्षाद्विप्रतिपन्नार्थनिष्ठत्वं विनेति शेषं सम्पूर्य तत्रोदाहरणं दर्शयितुमाह – **श्रुत्यादेरिति** ।। अन्यत्र चेत्प्रकरणनिश्चायकत्वेनेत्यत्रान्यत्रेत्येतन्न सङ्कोचनीयमित्याह – **साक्षाद्विप्रतिपन्नार्थनिष्ठत्वं विनेति** ।। उपक्रमोपसंहारावपीत्यादि टीकायामुक्तम् । तच्चोदाहरणपूर्वकमनुवदति – **उपक्रमेत्यादि** ।। अन्यथा प्रकरण-निश्चायकावित्येतत्सोदाहरणमाह – **अन्यथेत्यादि** ।।




ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಎಂಬ ಆರು ಬಗೆಯ ಈ ತಾತ್ಪರ್ಯಲಿಂಗಗಳೆಲ್ಲವೂ ಅನುಮಾನರೂಪದಲ್ಲಿಯೇ ಅರ್ಥನಿಶ್ಚಾಯಕವಾಗುತ್ತವೆ. ಆದರೆ ಶ್ರುತಿ ಮಾತ್ರ ಶ್ರುತಿತ್ವಪ್ರಯುಕ್ತವಾಗಿ ಅರ್ಥನಿರ್ಣಾಯಕವಾಗುತ್ತದೆ.

ವೇದದಲ್ಲಿರುವ ಯಾವ ವಾಕ್ಯದ ಅರ್ಥವನ್ನು ನಿಶ್ಚಯ ಮಾಡಲು ಶ್ರುತಿ-ಲಿಂಗಾದಿಗಳನ್ನು ಅವಲಂಬಿಸುತ್ತೇವೋ, ಅಂತಹ ಶ್ರುತಿ-ಲಿಂಗಾದಿಗಳು ಅದೇ ವಾಕ್ಯದಲ್ಲಿಯೇ ಇರಬೇಕಾಗುತ್ತವೆ. ಅಂದರೆ ವಿಪ್ರತಿಪನ್ನವಾದ ವಾಕ್ಯದಲ್ಲಿರುವ ಶ್ರುತಿ-ಲಿಂಗ ಮೊದಲಾದವುಗಳನ್ನು ಅವಲಂಬಿಸಿ, ಅದರ ಅರ್ಥವನ್ನು ನಾವು ನಿಶ್ಚಯಮಾಡಬೇಕು. ಒಂದು ವೇಳೆ ವಿಪ್ರತಿಪನ್ನವಾದ ವಾಕ್ಯದಲ್ಲಿ ಶ್ರುತಿ-ಲಿಂಗಾದಿಗಳಿಲ್ಲದೇ, ಅದರ ಹಿಂದಿನ ಅಥವಾ ಮುಂದಿನ ವಾಕ್ಯದಲ್ಲಿ ಶ್ರುತಿ-ಲಿಂಗಾದಿಗಳಿದ್ದರೆ ಹಿಂದಿನ-ಮುಂದಿನ ವಾಕ್ಯಗಳ ಅರ್ಥವನ್ನು ನಿರ್ಣಯಿಸಿ ಅನಂತರ ವಿಪ್ರತಿಪನ್ನವಾದ ವಾಕ್ಯದ ಅರ್ಥವನ್ನು ನಿಶ್ಚಯಿಸಬೇಕು.

ಒಂದು ವೇಳೆ ಹಿಂದಿನ-ಮುಂದಿನ ವಾಕ್ಯಗಳಲ್ಲಿಯೂ ಮತ್ತು ವಿಪ್ರತಿಪನ್ನವಾದ ವಾಕ್ಯದಲ್ಲಿಯೂ ಶ್ರುತಿ-ಲಿಂಗಾದಿಗಳಿಲ್ಲದೇ ಬೇರೆ ಕಡೆ ಇದ್ದರೆ, ಆವಾಗ ಪ್ರಕರಣಕ್ಕೆ ನಿಶ್ಚಾಯಕವಾಗುವ ಮೂಲಕ ಅವು ತಾತ್ಪರ್ಯಲಿಂಗಗಳೆನಿಸುತ್ತವೆ.

ಒಂದು ವೇಳೆ ಶ್ರುತ್ಯಾದಿಗಳಿಂದ ಅರ್ಥನಿಶ್ಚಯವಾಗಿ ಉಪಕ್ರಮ-ಉಪಸಂಹಾರಗಳು ಅನುಗುಣವಾಗಿದ್ದರೆ ಅಲ್ಲಿ ತಾತ್ಪರ್ಯಾತಿಶಯವು ಉಂಟಾಗುತ್ತದೆ. ಶ್ರುತ್ಯಾದಿಗಳಿಂದ ಅರ್ಥನಿಶ್ಚಯವಾಗದೇ ಉಪಕ್ರಮೋಪಸಂಹಾರಗಳು ಮಾತ್ರವಿದ್ದಲ್ಲಿ ಪ್ರಕರಣವು ನಿರ್ಣಯದ್ವಾರಾ ವಿಪ್ರತಿಪನ್ನವಾದ ಅರ್ಥನಿರ್ಣಾಯಕವಾಗುತ್ತದೆ. ಇನ್ನು ಶ್ರುತ್ಯಾದಿಗಳಿಂದ ಅರ್ಥನಿಶ್ಚಯವು ಉಂಟಾಗಿ, ಉಪಕ್ರಮೋಪಸಂಹಾರಗಳು ವಿಪರೀತವಾದ ಅರ್ಥದಲ್ಲಿದ್ದರೆ ಶ್ರುತಿ-ಲಿಂಗಾದಿಗಳಿಂದ ಈ ವಾಕ್ಯವು ಬೇರೆ ಅರ್ಥವನ್ನೇ ನಿರ್ಣಯಿಸುತ್ತದೆ. ಉಪಕ್ರಮಾದಿಗಳಿಂದ ಪ್ರಕರಣವು ಅನ್ಯಪರವೆಂದು ನಿರ್ಣಯವಾಗುತ್ತದೆ. ಹೀಗೆ ವ್ಯವಸ್ಥೆಯನ್ನು ತಿಳಿಯಬೇಕು.



ಸಮಾಖ್ಯೆಗೆ ತಾತ್ಪರ್ಯ ನಿಶ್ಚಾಯಕತ್ವಸಮರ್ಥನೆ

## तात्पर्यचन्द्रिका

**समाख्याऽपि साक्षाद्विप्रतिपन्नार्थनिष्ठा समाख्यात्वेनैव लिङ्गम् ।**

ಅನುವಾದ - ಶ್ರುತಿ, ಲಿಂಗ, ವಾಕ್ಯ, ಪ್ರಕರಣಗಳಂತೆ ಸಮಾಖ್ಯೆಯೂ ಸಹ ವಿಪ್ರತಿಪನ್ನವಾದ ವಾಕ್ಯದಲ್ಲಿ ನೇರವಾಗಿ ಇದ್ದರೆ ಸಮಾಖ್ಯಾರೂಪವಾಗಿಯೇ ಲಿಂಗವಾಗುತ್ತದೆ.

**यथा ''पुरुषविधमपि चैनम्'' इत्यत्र ''शीर्ष्णो द्यौः समवर्तत' 'चक्षोःसूर्यो अजायत'' इति पुरुषसूक्तोक्तिसमानायाः साक्षाद्विप्रतिपन्नवैश्वानरनिष्ठायाः वैश्वानरस्य ''मूर्धैव सुतेजाश्चक्षुर्विश्वरूपः'' इत्याद्युक्तेः ।**

ಉದಾಹರಣೆ - 'ಪುರುಷವಿಧಮಪಿ ಚೈನಮ್' ಎಂಬ ಸೂತ್ರದಲ್ಲಿ 'ಶೀರ್ಷ್ಣೋ ದ್ಯೌಃ ಸಮವರ್ತತ' 'ಚಕ್ಷೋಃ ಸೂರ್ಯೋ ಅಜಾಯತ' ಎಂಬ ಪುರುಷಸೂಕ್ತದ ಮಾತನ್ನು ಉಲ್ಲೇಖಿಸಲಾಗಿದೆ. ಈ ಪುರುಷಸೂಕ್ತದ ಮಾತು ವಿಷ್ಣುಪರವಾಗಿದೆಯೆಂದು ನಿರ್ಣೀತವಾಗಿದೆ. ಇದಕ್ಕೆ ಸಮಾನವಾದ ವಚನವೆಂದರೆ 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ' ಎಂಬುದು. ಇದು ವಿಪ್ರತಿಪನ್ನವಾದ ವೈಶ್ವಾನರ ವಾಕ್ಯದಲ್ಲಿ ನೇರವಾಗಿ ಇದೆ. ಇಂತಹ ಸಮಾಖ್ಯೆಯು ಅರ್ಥನಿಶ್ಚಯ ವಿಷಯದಲ್ಲಿ ಲಿಂಗರೂಪವಾಗುತ್ತದೆ.

**अन्यथा प्रकरणनिश्चायकत्वेन ।**

ಒಂದು ವೇಳೆ ವಿಪ್ರತಿಪನ್ನವಾದ ವಾಕ್ಯದಲ್ಲಿ ಸಮಾಖ್ಯೆಯು ಇಲ್ಲದೆ, ಬೇರೆ ಕಡೆ ಸಮಾಖ್ಯೆಯು ಇದ್ದರೆ, ಆ ಪ್ರಕರಣಕ್ಕೆ ನಿಶ್ಚಾಯಕವಾಗುವ ಮೂಲಕ, ವಿಪ್ರತಿಪನ್ನವಾದ ಅರ್ಥಕ್ಕೆ ನಿಶ್ಚಾಯಕವಾಗುತ್ತದೆ.

**यथा ''परो दिवा पर एना पृथिव्यैतावती'' इत्यम्भ्रणीसूक्तोक्तिसमानायाः ''अजस्य नाभौ'' इति विप्रतिपन्नाजे साक्षादश्रुतायाः ''परो दिवा पर एना पृथि॰ या परो देवेभिः'' इत्याद्युक्तेरिति ।**

ಉದಾಹರಣೆ - 'ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ' ಎಂಬ ಅಂಭ್ರಣೀಸೂಕ್ತದಲ್ಲಿ ಹೇಳಿದ ಮಾತಿಗೆ 'ಅಜಸ್ಯ ನಾಭೌ' ಎಂಬುದಾಗಿ ವಿಪ್ರತಿಪನ್ನವಾದ ನೇರವಾಗಿ ಕೇಳಲ್ಪಡದ 'ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿಃ' ಇತ್ಯಾದಿ ಮಾತುಗಳು ಪ್ರಕರಣನಿಶ್ಚಾಯಕಗಳಾಗಿವೆ. ಅಂದರೆ ನೇರವಾಗಿ ವಿಪ್ರತಿಪನ್ನವಾಕ್ಯದಲ್ಲಿ ಸಮಾಖ್ಯೆಯು ಇಲ್ಲದ ಕಾರಣ ಪ್ರಕರಣವನ್ನು ನಿಶ್ಚಯಿಸುವ ಮೂಲಕ ವಿಪ್ರತಿಪನ್ನವಾದ ವಾಕ್ಯದ ಅರ್ಥವನ್ನು ನಿಶ್ಚಯಿಸುತ್ತದೆಂದು ತಿಳಿಯಬೇಕು.

**मीमांसकोक्तं श्रुत्यादिलक्षणं तद्बलाबलबीजं चान्यत्र निरस्तम् ॥**

ಮೀಮಾಂಸಕರು ಹೇಳಿದ ಶ್ರುತಿ-ಲಿಂಗಾದಿಗಳ ಲಕ್ಷಣವನ್ನು ಮತ್ತು ಅವರು ಹೇಳುವ ಬಲಾಬಲಗಳ ಬೀಜವನ್ನು ತರ್ಕತಾಂಡವದಲ್ಲಿ ನಿರಾಕರಿಸಲಾಗಿದೆ.

**टीकाक्षरार्थस्तु ॥ कथनवैयर्थ्यादिति ॥ अङ्गुष्ठवद्व्यक्तिविशेषनिर्धारणं विना यत्किञ्चिदङ्गुष्ठमात्रत्वेनोपासनाया असम्भवात्कथनं व्यर्थमित्यर्थः ।**

ಟೀಕೆಯ ಕೆಲವು ಕಠಿಣಪದಗಳ ಅರ್ಥ ಹೀಗಿದೆ - 'ಕಥನವೈಯರ್ಥ್ಯಾತ್' ಎಂಬ ಟೀಕಾ ಮಾತಿನ ಅರ್ಥ ಹೀಗಿದೆ - ಆಯಾ ಪುರುಷರ ಅಂಗುಷ್ಠದಷ್ಟು ಪರಿಮಾಣವುಳ್ಳ ಪರಮಾತ್ಮನ ರೂಪವು ಹೃದಯದಲ್ಲಿದೆಯೆಂದು ಹೇಳುವುದು ಅತ್ಯಂತ ಸೂಕ್ತವಾಗುತ್ತದೆ. ಹಾಗೇ ಹೇಳದೇ ಕೇವಲ ಅಂಗುಷ್ಠಪರಿಮಾಣವುಳ್ಳವನೆಂದು ಹೇಳಿದರೆ, ಅಂಗುಷ್ಠವುಳ್ಳ ವ್ಯಕ್ತಿಯ ವಿಶೇಷ ನಿರ್ಧಾರಣವನ್ನು ಮಾಡಿದಂತಾಗುವುದಿಲ್ಲ. ಯಾವುದೋ ಒಂದು ಅಂಗುಷ್ಠಪರಿಮಾಣದ ಉಪಾಸನೆಯನ್ನು ಮಾಡುವುದು ಸಾಧ್ಯವೂ ಇಲ್ಲ. ಆದ್ದರಿಂದ ಪರಮಾತ್ಮನಿಗೆ ಅಂಗುಷ್ಠಪರಿಮಾಣವನ್ನು ಹೇಳಿದ್ದು ವ್ಯರ್ಥವಾಗಿದೆ ಎಂದಭಿಪ್ರಾಯ.

**असम्भवाच्चेति ॥ पिपीलिकाहृदयस्थे अङ्गुष्ठमात्रत्वसामान्यस्यैवासम्भवादित्यर्थः ।**

ಮತ್ತು ಯತ್‌ಕಿಂಚಿದಂಗುಷ್ಠಮಾತ್ರತ್ವವನ್ನು ಹೇಳಿದರೆ, ಪಿಪೀಲಿಕಾ (ಇರುವೆ) ಹೃದಯದಲ್ಲಿರುವ ಪರಮಾತ್ಮನಿಗೆ 'ಅಂಗುಷ್ಠಮಾತ್ರತ್ವ' ಎಂಬ ಸಾಮಾನ್ಯಧರ್ಮವೇ ಇಲ್ಲದ ಕಾರಣ 'ಯತ್‌ಕಿಂಚಿತ್' ಅಂಗುಷ್ಠಮಾತ್ರತ್ವವನ್ನು ಸುತರಾಂ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅಸಂಭವದೋಷವೂ ಸಹ ಬರುತ್ತದೆ. ಏಕೆಂದರೆ ಯಾವುದೇ ಅಂಗುಷ್ಠವನ್ನು ಸ್ವೀಕರಿಸಿದರೂ ಇರುವೆಗಿಂತಲೂ ಅಂಗುಷ್ಠವು ಬೃಹತ್ತಾಗಿಯೇ ಇರುತ್ತದೆ ಎಂದು 'ಅಸಂಭವಾಚ್ಚ' ಎಂಬುದರ ಅರ್ಥ.

**पूर्वं सौत्रस्तुशब्दो "हृद्यवकाशापेक्षया" इति भाष्यानुसारादेवार्थो व्याख्यातः।**

'ಹೃದ್ಯಪೇಕ್ಷಯಾ ತು' ಎಂಬಲಿರುವ 'ತು' ಶಬ್ದಕ್ಕೆ ಟೀಕೆಯಲ್ಲಿ 'ಏವ' ಮತ್ತು 'ಅಪಿ' ಎಂಬೆರಡರ್ಥಗಳನ್ನು ಹೇಳಿದ್ದಾರೆ. ಮೊದಲನೆಯ ಅರ್ಥದ ಅಭಿಪ್ರಾಯ ಹೀಗಿದೆ - 'ಹೃದ್ಯವಕಾಶಾಪೇಕ್ಷಯಾ' ಎಂಬ ಭಾಷ್ಯದಲ್ಲಿ ಪರಮಾತ್ಮನು ಎಲ್ಲೆಡೆ ವ್ಯಾಪ್ತನಾಗಿದ್ದರೂ ಹೃದಯವು ಅಂಗುಷ್ಠಪರಿಮಾಣವುಳ್ಳದ್ದರಿಂದ, ಅದನ್ನು ಅಪೇಕ್ಷಿಸಿಯೇ ಪರಮಾತ್ಮನಿಗೆ ಅಂಗುಷ್ಠಪರಿಮಾಣವನ್ನು ಹೇಳಲಾಗಿದೆ ಎಂಬುದಾಗಿ ಏವಕಾರಾರ್ಥದಲ್ಲಿ 'ತು' ಶಬ್ದವನ್ನು ಹೇಳಲಾಗಿದೆ. ಅದಕ್ಕನುಸಾರಿಯಾಗಿ ಟೀಕಾಕಾರರು 'ಏವ' ಎಂಬರ್ಥದಲ್ಲಿ 'ತು' ಶಬ್ದವನ್ನು ವ್ಯಾಖ್ಯಾನ ಮಾಡಿದ್ದಾರೆ.

इदानीं ''अङ्गुष्ठाभावेऽपि'' इति भाष्यानुसारादप्यर्थतया व्याचष्टे – तुशब्दोऽपिशब्दार्थ इति ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायां वामनाधिकरणं सम्पूर्णम् ।।

ಪ್ರಕೃತ 'ಅಂಗುಷ್ಠಾಭಾವೇऽಪಿ' ಎಂಬ ಭಾಷ್ಯಕ್ಕೆ ಅನುಸಾರಿಯಾದ ಅರ್ಥವನ್ನು ಹೇಳುತ್ತಿದ್ದಾರೆ - 'ತು ಶಬ್ದಃ 'ಅಪಿಶಬ್ದಾರ್ಥಃ' ಎಂಬುದಾಗಿ. ಅಂದರೆ ಪ್ರಾಣಿಗಳಿಗೆ ಅಂಗುಷ್ಠವು ಇಲ್ಲದಿದ್ದರೂ ಮನುಷ್ಯರನ್ನು ಕುರಿತು ಶಾಸ್ತ್ರವು ಹೊರಟಿದ್ದರಿಂದ, ಅವರ ವಿಷಯದಲ್ಲಿ ಅಂಗುಷ್ಠಪರಿಮಾಣವನ್ನು ಹೇಳಬಹುದೆಂದು ಭಾಷ್ಯದ ಅಭಿಪ್ರಾಯ. ಹೀಗೆ ಟೀಕೆಯಲ್ಲಿರುವ 'ತು' ಶಬ್ದದ ಎರಡು ಬಗೆಯ ವ್ಯಾಖ್ಯಾನಗಳು ಭಾಷ್ಯಮಾತಿನ ವ್ಯಾಖ್ಯಾನವೇ ಆಗಿದೆಯೆಂದು ತಿಳಿಯಬೇಕು.

ಇಲ್ಲಿಗೆ ಶ್ರೀವ್ಯಾಸತೀರ್ಥರು ರಚಿಸಿದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ವಾಮನಾಧಿಕರಣವು ಸಂಪೂರ್ಣವಾಯಿತು.

**प्रकाशः –**

''समाख्याऽपि साक्षाद्विप्रतिपन्नार्थनिष्ठा समाख्यात्वेनैव लिङ्गमन्यथा प्रकरणनिश्चायकत्वेन'' इति टीकां व्यनक्ति – **समाख्यापीति** ।।

ವಿವರಣೆ - ಶ್ರುತಿ, ಲಿಂಗ, ವಾಕ್ಯ , ಪ್ರಕರಣ ಇವುಗಳು ಹೇಗೆ ತಾತ್ಪರ್ಯ ನಿಶ್ಚಾಯಕಗಳಾಗುತ್ತವೆಂಬುದನ್ನು ಈ ಹಿಂದೆ ವಿವರಿಸಿದ್ದಾಯಿತು. ಪ್ರಕೃತ ಸಮಾಖ್ಯಾಪ್ರಮಾಣವೂ ಸಹ ಹೇಗೆ ತಾತ್ಪರ್ಯ ನಿಶ್ಚಾಯಕವಾಗುತ್ತದೆಂಬುದನ್ನು ಈಗ ವಿವರಿಸುತ್ತಿದ್ದಾರೆ - 'ಸಮಾಖ್ಯಾऽಪಿ ಸಾಕ್ಷಾದ್ವಿಪ್ರತಿಪನ್ನಾರ್ಥನಿಷ್ಠಾ ಸಮಾಖ್ಯಾತ್ವೇನೈವ ಲಿಂಗಮನ್ಯಥಾ ಪ್ರಕರಣನಿಶ್ಚಾಯಕತ್ವೇನ' ವಿಪ್ರತಿಪನ್ನವಾದ ವಾಕ್ಯದಲ್ಲಿ ಸಮಾಖ್ಯೆಯು ನೇರವಾಗಿ ಇರುವುದಾದರೆ, ಸಮಾಖ್ಯಾರೂಪವಾಗಿಯೇ ಅರ್ಥನಿಶ್ಚಾಯಕವಾಗುತ್ತದೆ. ಇಲ್ಲದಿದ್ದರೆ, ಪ್ರಕರಣವನ್ನು ನಿಶ್ಚಯಿಸುವ ಮೂಲಕ ಅರ್ಥನಿಶ್ಚಾಯಕವಾಗುತ್ತದೆಂಬ ಟೀಕಾಮಾತನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಸಮಾಖ್ಯಾऽಪಿ' ಇತ್ಯಾದಿ ಗ್ರಂಥದಿಂದ.

**प्रकाशः – अन्यत्रेति** ।। तर्कताण्डवे द्वितीयपरिच्छेदान्ते । तथा च न तद्विरोधः शङ्क्यः । तस्य दुष्टत्वादिति भावः ।

'ಅನ್ಯತ್ರ' ಎಂದರೆ ತರ್ಕತಾಂಡವದ ಎರಡನೆಯ ಪರಿಚ್ಛೇದದ ಕೊನೆಯಲ್ಲಿ ಎಂದರ್ಥ. ಆದ್ದರಿಂದ ಇಲ್ಲಿಯ ತನಕ ನಾವು ಸಮರ್ಥಿಸಿದ ಶ್ರುತಿ-ಲಿಂಗಾದಿಗಳ ಲಕ್ಷಣಕ್ಕೆ ಮತ್ತು ಪ್ರಾಬಲ್ಯ-ದೌರ್ಬಲ್ಯ ವಿಚಾರಕ್ಕೆ ಮೀಮಾಂಸಕ ಮತದ ವಿರೋಧ ಬರುವುದಿಲ್ಲ. ಏಕೆಂದರೆ ಮೀಮಾಂಸಕರ ಮತವೇ ದುಷ್ಟವಾಗಿದೆಯೆಂದು ಅಭಿಪ್ರಾಯ.

**प्रकाशः** – हृदीति गुणसूत्रे टीकायाम् ''अङ्गुष्ठमात्रत्वं किं तत्तदङ्गुष्ठमात्रत्वं वा यत्किञ्चिदङ्गुष्ठमात्रत्वं वा । न द्वितीयः । कथनवैयर्थ्यादसम्भवाच्च'' इत्युक्तम् । तद्दुर्गमत्वाद्व्यनक्ति – **कथनेति** ।।

'ಹೃದ್ಯಪೇಕ್ಷಯಾತು'ಎಂಬ ಗುಣಸೂತ್ರದ ಟೀಕೆಯಲ್ಲಿ 'ಅಂಗುಷ್ಠ ಮಾತ್ರತ್ವಂ ಕಿಂ ತತ್ತದಂಗುಷ್ಠಮಾತ್ರತ್ವಂ ವಾ ಯತ್ಕಿಂಚಿದಂಗುಷ್ಠಮಾತ್ರತ್ವಂ ವಾ । ನ ದ್ವಿತೀಯಃ । ಕಥನವೈಯರ್ಥ್ಯಾದಸಂಭವಾಚ್ಚ' ಎಂದರೆ ಅಂಗುಷ್ಠಮಾತ್ರತ್ವವೆಂದರೇನು? ಆಯಾ ಮನುಷ್ಯರ ಅಂಗುಷ್ಠವೆಂದೋ, ಅಥವಾ ಯಾವುದಾದರೊಂದು ಅಂಗುಷ್ಠವೆಂದೋ, ಎರಡನೆಯ ಪಕ್ಷವನ್ನು ಅಂಗೀಕರಿಸುವುದು ತಪ್ಪು. 'ಯತ್ಕಿಂಚಿತ್ ಅಂಗುಷ್ಠಪರಿಮಾಣವನ್ನು ಪಿಪಿಲೀಕಾಗಳಲ್ಲಿ ಹೇಳಲು ಸಾಧ್ಯವಿಲ್ಲ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯವು ಸ್ಪಷ್ಟವಾಗಿ ತಿಳಿಯದ ಕಾರಣ 'ಕಥನ' ಇತ್ಯಾದಿ ವ್ಯಾಖ್ಯಾನದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – ''तुशब्दः परिच्छिन्नतयाऽङ्गुष्ठमात्रत्वनिवृत्त्यर्थमेवार्थः'' इत्यस्य, ''तुशब्दोऽपिशब्दार्थः'' इत्यस्य च विरोधं परिहरति – **पूर्वमिति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे वामनाधिकरणं सम्पूर्णम् ।।**

'ತುಶಬ್ದಃ ಪರಿಚ್ಛಿನ್ನತಯಾಽಂಗುಷ್ಠಮಾತ್ರತ್ವನಿವೃತ್ತ್ಯರ್ಥಮೇವಾರ್ಥಃ' ಎಂಬ ಟೀಕಾ ಮಾತಿಗೂ 'ತುಶಬ್ದೋಽಪಿಶಬ್ದಾರ್ಥಃ' ಎಂಬ ಟೀಕಾಮಾತಿಗೂ ಪರಸ್ಪರ ವಿರೋಧ ಬರುತ್ತದೆ. ಏಕೆಂದರೆ ಸೂತ್ರದಲ್ಲಿರುವ 'ತು' ಶಬ್ದಕ್ಕೆ 'ಏವ' ಎಂಬರ್ಥವನ್ನು ಹೇಳಿ, ಮುಂದೆ 'ಅಪಿ' ಎಂಬರ್ಥವನ್ನು ಹೇಳಲಾಗಿದೆ. ಇದಕ್ಕೇನು ಪರಿಹಾರ ಎಂಬ ಪ್ರಶ್ನೆಗೆ 'ಪೂರ್ವಮ್' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ವಾಮನಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

गुरुराजीयम् – समाख्याऽपीत्यादि टीकायामुक्तम् । तत्सोदाहरणं प्रदर्शयति – समाख्याऽपीत्यादि ।। अन्यथा प्रकरणे निश्चायकत्वेनेति टीकायामुक्तम् । तत्कुत्रेति न प्रतीयते । अत उदाहरणमाह ।। ७ ।।

।। इति श्रीकेशवभट्टारकेण विरचितायां भावदीपिकायां
वामनाधिकरणं सम्पूर्णम् ।। ७ ।।

ಪರಿಪೂರ್ಣಚಂದ್ರಿಕಾ

श्री मदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## वामनाधिकरणम् (१।३।७)

**प्राणप्रेरकः**

ಪ್ರಾಣವ್ಯವಸ್ಥಾಪಕನು ಮಹಾವಿಷ್ಣುವೇ ಆಗಿದ್ದಾನೆ ಹೊರತು, ಮುಖ್ಯಪ್ರಾಣನಲ್ಲ.

***

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

## वामनाधिकरणम् (१।३।७)

नन्वथापि विष्णुरेव जिज्ञास्य इत्युक्तमयुक्तम् । काठके 'अङ्गुष्ठमात्रः पुरुषो मध्य आत्मनि तिष्ठति । ईशानः' इत्युक्त्वा 'ऊर्ध्वं प्राणमुन्नयत्यपानं प्रत्यगस्यति । मध्ये वामनमासीनं विश्वेदेवा उपासते' इतीशानस्यैव जिज्ञास्यत्वोक्तेः । 'सोपासना च द्विविधा' इत्युक्तोपासनाजिज्ञासयोरैक्यात् । ईशानस्य 'एवमेवैष प्राणः' इत्यादिश्रुत्यन्तरप्रसिद्धप्राणव्यवस्थापकत्वादिरूपमुख्यप्राणलिङ्गानां ईशाने 'ऊर्ध्वं प्राणं' इति श्रवणेन मुख्यप्राणत्वेन तस्यापि जिज्ञास्यत्वप्राप्त्या मोचकत्वस्यापि स्वातन्त्र्येण प्राप्तेरित्यतः प्राप्तं - शब्दादेव प्रमित इत्यादि सूत्रद्वयम् । तदर्थः - प्राणप्रेरक इति ।

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## अक्षराधिकरणम् (१।३।३)

**न्यायविवरणम् –**

**विष्णोश्चेतनप्रकृतेश्चाविनाशित्वसाम्यादक्षरशब्दः साधारणः ॥ ३ ॥**

'ಅವಿನಾಶಿತ್ವ' ಎಂಬುದು 'ಅಕ್ಷರ' ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಚೇತನಪ್ರಕೃತಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದದ ರೂಢಿಯೂ ಸಹ ಇರುತ್ತದೆ. ಚೇತನಪ್ರಕೃತಿಯೆನಿಸಿದ ಮಹಾಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿಯೂ 'ಅವಿನಾಶಿತ್ವ' ಎಂಬ ಪ್ರವೃತ್ತಿನಿಮಿತ್ತವು ಸಾಧಾರಣವಾಗಿರುವುದರಿಂದ ಇಬ್ಬರಲ್ಲಿಯೂ ಅಕ್ಷರಶಬ್ದವು ಸಾಧಾರಣವಾಯಿತು.

**टीका – 'अक्षरमम्बरान्तधृतेः' इत्यत्रेदानीमुक्ताशङ्कानिरासार्थमाह – विष्णोरिति ।। 'अविनाशित्वस्याक्षरशब्दप्रवृत्तिनिमित्तत्वाद्' इत्यत्रोपस्कर्तव्यम् । उपलक्षणं चैतत् । अक्षरशब्दस्य तत्र प्रसिद्धत्वादित्यपि द्रष्टव्यम् । नन्वचेतनप्रकृतौ वर्णेषु च कुतो न शङ्का परिहृता । परिहृतमेव तद्भाष्यकृता 'अदृष्टं द्रष्टृ' इत्यादिविषयवाक्यमुदाहरतैव । न चाचेतनप्रकृतौ द्रष्टृत्वादिकं सम्भवति । नच वर्णेष्वदृष्टत्वादिकमपीति ।। ३ ।।**

'ಅಕ್ಷರಮಂಬರಾಂತಧೃತೇಃ' ಎಂಬಲ್ಲಿ ಹಿಂದಿನ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ 'ವಿಷ್ಣೋಃ' ಇತ್ಯಾದಿ ಮೂಲವು ಹೊರಟಿದೆ. ಇಲ್ಲಿ 'ಅವಿನಾಶಿತ್ವಸ್ಯ ಅಕ್ಷರಶಬ್ದಪ್ರವೃತ್ತಿನಿಮಿತ್ತತ್ವಾತ್' ಅವಿನಾಶಿತ್ವವು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವಾದ್ದರಿಂದ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಉಪಲಕ್ಷಣಯಾ

ಶಂಕೆ - ಜಿಜ್ಞಾಸಾಧಿಕರಣದಲ್ಲಿ ವಿಷ್ಣುವೇ ಜಿಜ್ಞಾಸ್ಯನಾಗಿದ್ದಾನೆಂದು ಹೇಳಲಾಗಿದೆ. ಇದು ಸರಿಯಲ್ಲ. ಏಕೆಂದರೆ ಕಾಠಕೋಪನಿಷತ್ತಿನಲ್ಲಿ 'ಅಂಗುಷ್ಠಮಾತ್ರಃ ಪುರುಷಃ ಮಧ್ಯೇ ಆತ್ಮನಿ ತಿಷ್ಠತಿ ಈಶಾನಃ' ಎಂಬುದಾಗಿ ಈಶಾನನನ್ನು ಉಲ್ಲೇಖಮಾಡಿ ಮುಂದೆ ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ । ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ' ಇತ್ಯಾದಿಯಾಗಿ ಈಶಾನನೇ ಜಿಜ್ಞಾಸ್ಯನಾಗಿದ್ದಾನೆಂದು ಹೇಳಲಾಗಿದೆ.

'ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸ ಸ್ವರೂಪಿಣೀ' ಇತ್ಯಾದಿಯಾಗಿ ಹೇಳಿದಂತೆ ಉಪಾಸನೆ ಹಾಗೂ ಜಿಜ್ಞಾಸ್ಯಗಳು ಒಂದೇ ಅರ್ಥವನ್ನು ಹೇಳುವ ಶಬ್ದಗಳಾಗಿವೆ. ಈಶಾನನು ಮುಖ್ಯಪ್ರಾಣನೇ ಆಗಿದ್ದಾನೆ. ಏಕೆಂದರೆ 'ಏವಮೇವೈಷ ಪ್ರಾಣಃ' ಇತ್ಯಾದಿಯಾಗಿ ಶ್ರುತ್ಯಂತರದಲ್ಲಿ ಪ್ರಸಿದ್ಧವಾದ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಮುಖ್ಯಪ್ರಾಣನ ಲಿಂಗಗಳು ಶ್ರುತವಾಗಿವೆ. 'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿಯಾಗಿ ಮುಖ್ಯಪ್ರಾಣನ ಧರ್ಮಗಳೇ ಶ್ರುತವಾಗಿರುವುದರಿಂದ ಮುಖ್ಯಪ್ರಾಣನೇ ಜಿಜ್ಞಾಸ್ಯನಾಗುತ್ತಾನೆ. ಅಂತಹ ಮುಖ್ಯಪ್ರಾಣನಲ್ಲಿಯೇ ಸ್ವಾತಂತ್ರ್ಯ ಮೋಚಕತ್ವಗಳು ಪ್ರಾಪ್ತವಾಗುತ್ತವೆ. ಆದ್ದರಿಂದ ಮಹಾವಿಷ್ಣು ಜಿಜ್ಞಾಸ್ಯನಾಗಿದ್ದಾನೆಂದು ಹೇಳಿದ್ದು ಹೇಗೆ ಸರಿ?

ಸಮಾಧಾನ - ಈ ಶಂಕೆಯನ್ನು ಪರಿಹರಿಸಲು 'ಶಬ್ದಾದೇವ ಪ್ರಮಿತಃ' ಇತ್ಯಾದಿಯಾಗಿ ಎರಡು ಸೂತ್ರಗಳು ಹೊರಟಿವೆ. ಈ ವಾಮನಾಧಿಕರಣದ ಸಾರಾಂಶವನ್ನು 'ಪ್ರಾಣಪ್ರೇರಕಃ ಎಂಬ ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ.

पूर्ववदनुषङ्गः । 'ऊर्ध्वं प्राणं' इति वाक्ये श्रुतः प्राणप्रेरकः प्राणानां प्राणोपलक्षितप्राणादिवायूनां व्यवस्थापकः सः प्राग् जिज्ञास्यत्वेनोक्तः एको जनार्दनः । नतु मुख्यप्राणः । तस्मात्प्रेरकत्वसाम्येन तदन्यत्रापि वाचकतया प्रतीतेशानशब्दतद्विशेषणाङ्गुष्ठमात्रादिसर्वशब्दैः मुख्यतः स्वारस्येन वाच्य एव ।

ಇಲ್ಲಿಯೂ ಸಹ ಹಿಂದಿನಂತೆ ಅನುಷಂಗ ಮಾಡಿಕೊಳ್ಳಬೇಕು. 'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ಶ್ರುತಿಯಲ್ಲಿ ಪ್ರಾಣಪ್ರೇರಕನು ಅಂದರೆ ಪ್ರಾಣಪದದಿಂದ ಉಪಲಕ್ಷಿತವಾದ ಅಪಾನ, ವ್ಯಾನ ಮೊದಲಾದ ವಾಯುಗಳ ವ್ಯವಸ್ಥಾಪಕನು ಜಿಜ್ಞಾಸಾಧಿಕರಣದಲ್ಲಿ ಜಿಜ್ಞಾಸ್ಯನೆಂದು ಪ್ರತಿಪಾದ್ಯನಾದ ಜನಾರ್ದನನೇ ಆಗಿದ್ದಾನೆ. ಹೊರತು, ಮುಖ್ಯಪ್ರಾಣನಲ್ಲ. ಪ್ರೇರಿತತ್ವವೆಂಬ ಧರ್ಮವು ಇಬ್ಬರಲ್ಲಿಯೂ ಸಾಧಾರಣವಾಗಿದ್ದರೂ ಪರಮಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿಯೇ ಆ ಧರ್ಮವಿರುವುದರಿಂದ ವಿಷ್ಣುವೇ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಮತ್ತು 'ಅಂಗುಷ್ಠಮಾತ್ರ' ಮೊದಲಾದ ಶಬ್ದಗಳು ಪರಮಾತ್ಮನಲ್ಲಿಯೇ ಸ್ವರಸವಾಗಿ ಉಪಪನ್ನವಾಗುತ್ತವೆ.

कुतः । प्राणप्रेरको विष्णुः लिङ्गैर्युतो हि । लिङ्गशब्दोऽत्र श्रुतेरप्युपलक्षकः । 'मध्ये वामनं' इति विष्णौ प्रसिद्धवामनश्रुत्या 'ईशानो भूतभव्यस्य'

इत्युक्तासङ्कुचितभूतभव्येशितृत्व - विश्वदेवोपास्यत्वविमुच्यत इति श्रुतमोचकत्व - 'इतरेण तु जीवन्ति' इत्यादिनोक्तमुख्यप्राणादिसर्वजीवनदत्वादिलिङ्गैश्च युतत्वात्तेषां वैष्णवत्वप्रसिद्धेरित्यर्थः । सूत्रे 'शब्दादेव' इत्युक्तावपि लिङ्गानामप्युक्तिः शब्दादेवेत्युपलक्षणमिति सूचनाय । व्यक्तमेतत् । 'कम्पनात्' इत्यत्र टीकायाम् । 'सुखविशिष्टभिधानादेव' इत्यत्रेव शब्दादेव किमुलिङ्गैरिति सूचनाय वा ।

ವಿಷ್ಣುವೇ ಏಕೆ ಪ್ರತಿಪಾದ್ಯನಾಗಬೇಕು? ಎಂದರೆ ಪ್ರಾಣಪ್ರೇರಕನಾದವನು ಮಹಾವಿಷ್ಣುವೇ ಆಗಿದ್ದಾನೆ. ಶ್ರುತಿಯಲ್ಲಿರುವ ಎಲ್ಲ ಲಿಂಗಗಳು ವಿಷ್ಣುವಿನ ಅಸಾಧಾರಣ ಧರ್ಮಗಳೇ ಆಗಿವೆ. ಲಿಂಗಶಬ್ದವು ಶ್ರುತಿಗೆ ಉಪಲಕ್ಷಕವಾಗಿದೆ. 'ಮಧ್ಯೇ ವಾಮನಂ' ಎಂಬುದಾಗಿ ವಿಷ್ಣುವಿನಲ್ಲಿ ಪ್ರಸಿದ್ಧವಾದ ವಾಮನ ಶ್ರುತಿಯಿಂದ 'ಈಶಾನೋ ಭೂತಭವ್ಯಸ್ಯ' ಎಂಬಲ್ಲಿ ಹೇಳಿದ ಅಸಂಕುಚಿತವಾದ ಭೂತಭವ್ಯೇಶಿತೃತ್ವ - ವಿಶ್ವದೇವೋಪಾಸ್ಯತ್ವ, ವಿಮುಚ್ಯತೇ ಎಂಬಲ್ಲಿ ಹೇಳಲ್ಪಟ್ಟ ಮೋಚಕತ್ವ, 'ಇತರೇಣ ತು ಜೀವಂತಿ' ಎಂಬಲ್ಲಿ ಹೇಳಲ್ಪಟ್ಟ ಮುಖ್ಯಪ್ರಾಣಾದಿ ಸಕಲಜೀವರ ಜೀವನಪ್ರದತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲೇ ಯುಕ್ತವಾಗುತ್ತವೆ. ಇವೆಲ್ಲವೂ ವಿಷ್ಣುಲಿಂಗಗಳೆಂದು ಪ್ರಸಿದ್ಧವಾಗಿದೆ. ಸೂತ್ರದಲ್ಲಿ 'ಶಬ್ದಾದೇವ' ಎಂದು ಶ್ರುತಿಯನ್ನಷ್ಟೇ ಹೇಳಿದ್ದರೂ ಲಿಂಗವನ್ನು ಇಟ್ಟುಕೊಳ್ಳಬೇಕೆಂದು ಹೇಳಿದ್ದರಿಂದ 'ಶಬ್ದಾದೇವ' ಎಂಬುದು ಉಪಲಕ್ಷಣವೆಂದು ಹೇಳಿದಂತಾಯಿತು. 'ಕಂಪನಾತ್' ಎಂಬ ಸೂತ್ರಭಾಷ್ಯದ ಟೀಕೆಯಲ್ಲಿ ಇದು ಸ್ಪಷ್ಟವಾಗಿದೆ.

ಅಥವಾ 'ಸುಖವಿಶಿಷ್ಟಾಭಿಧಾನಾದೇವ' ಎಂಬ ಸೂತ್ರದಲ್ಲಿ ಹೇಳಿದಂತೆ ಶ್ರುತಿಯಿಂದಲೇ ಪ್ರಮಿತವಾದ ಮೇಲೆ ಲಿಂಗಗಳಿಂದಲೂ ಪ್ರಮಿತವಾಗಿದೆಯೆಂದು ಪ್ರತ್ಯೇಕವಾಗಿ ಹೇಳಬೇಕೇನು? ಎಂಬ ಕೈಮುತ್ಯ-ನ್ಯಾಯದಿಂದ ಸೂಚಿತವಾಗಿದೆ.

अङ्गुष्ठमात्रत्वं तु शास्त्रस्य मनुष्याधिकारिकत्वेन तत्तदङ्गुष्ठमितहृदयस्थस्य उपचारेण युक्तमिति भावः । 'एको जनार्दनः' इत्येकस्यैव मोचकत्वसूचनात् विश्वदेवोपास्यत्वमन्यस्य न मुख्यमिति सूचितम् ।

'ಅಂಗುಷ್ಠಮಾತ್ರಃ ಪುರುಷಃ' ಇತ್ಯಾದಿ ಕಾಠಕೋಪನಿಷತ್ತಿನಲ್ಲಿ ಈಶಾನ' ಶಬ್ದಪ್ರತಿಪಾದ್ಯನಾದ ಪರಮಾತ್ಮನು ಅಂಗುಷ್ಠಪರಿಮಾಣವುಳ್ಳವನೆಂದು ಹೇಳಿದ್ದಾರೆ. 'ವಿಭುವಾದ ಪರಮಾತ್ಮನಲ್ಲಿ ಅಂಗುಷ್ಠಪರಿಮಾಣವು ಹೇಗೆ ಯುಕ್ತವಾಗುತ್ತದೆ ಎಂದು ಶಂಕಿಸಬಾರದು. ಮನುಷ್ಯರ ಹೃದಯವು ಅಂಗುಷ್ಠ ಪರಿಮಾಣದಲ್ಲಿರುವುದರಿಂದ ಅಲ್ಲಿರುವ ಪರಮಾತ್ಮನನ್ನು ಅಂಗುಷ್ಠಪರಿಮಾಣನೆಂದು ಶ್ರುತಿಯು ಔಪಚಾರಿಕವಾಗಿ ಹೇಳುತ್ತಿದೆ. ಮನುಷ್ಯರಷ್ಟೇ ಅಧಿಕಾರಿಗಳಾದ್ದರಿಂದ ಅವರ ಅಂಗುಷ್ಠವನ್ನು ಮಾತ್ರ ಇಲ್ಲಿ ವಿವಕ್ಷಿಸಬೇಕು. ಉಳಿದ ಪ್ರಾಣಿಗಳನ್ನು ವಿವಕ್ಷಿಸಲು ಬರುವುದಿಲ್ಲ.'ಏಕೋ ಜನಾರ್ದನಃ' ಎಂಬುದಾಗಿ ಜನಾರ್ದನನೊಬ್ಬನೇ ಮೋಚಕನೆಂದು ಸೂಚಿಸಿದ್ದರಿಂದ ಸರ್ವದೇವೋಪಾಸ್ಯತ್ವವು ಬೇರೆಯವರಲ್ಲಿ ಮುಖ್ಯವಾಗಿ ಬರುವುದಿಲ್ಲವೆಂದು ಸ್ಪಷ್ಟವಾಗುತ್ತದೆ.

अत्रेशानपदस्य विष्णवर्थत्वे वक्तव्ये 'ऊर्ध्वं प्राणं(म्)' इति वाक्योक्तलिङ्गस्य वैष्णवत्वोक्तिः पूर्वपक्षमूलभञ्जनाय वा, ईशानपदप्रवृत्तिनिमित्तं ईशान् मुख्यप्राणादीन् अनिति प्रेरयतीति ईशानपदस्य योगवृत्त्या वैष्णवत्वं सूचयितुं वेति । अत एव पूर्वपक्षलिङ्गस्य सावकाशत्वादेव आक्षिप्तमपि विश्वदेवोपास्यत्वादिलिङ्गं सिद्धान्त-साधकमेव । व्यक्तमेतदपि 'कम्पनात्' इत्यत्र टीकायाम् । यद्वा, ईशं प्राणमुन्नयतीति व्युत्पत्त्या यौगिकेशानपदार्थस्यैवायं निर्देशः । समासः प्राग्वत् ।।७।।

'ಈಶಾನ' ಎಂಬ ಶಬ್ದವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ. ಆದರೆ ಅಣುಭಾಷ್ಯದಲ್ಲಿ 'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ವಾಕ್ಯದಲ್ಲಿ ಬಂದ 'ಪ್ರಾಣಪ್ರೇರಕತ್ವ' ಎಂಬ ಲಿಂಗವನ್ನು ವಿಷ್ಣುಲಿಂಗವೆಂದು ವಿವರಿಸಿ. ಈ ಅಧಿಕರಣದ ಸಾರವನ್ನು ಹೇಳಿದ್ದಾರೆ. ಏಕೆಂದರೆ ಪ್ರಾಣಪ್ರೇರಕತ್ವ ಲಿಂಗದಿಂದ ವಾಯುದೇವರಲ್ಲಿ ಸಮನ್ವಯವನ್ನು ಹೇಳುವ ಪೂರ್ವಪಕ್ಷಿಯ ಬೀಜವನ್ನು ನಿರಾಕರಣೆ ಮಾಡಿದ್ದಾರೆ. ನಿರಾಕರಣೆ ಮಾಡಬೇಕಾಗಿದೆ. ಪ್ರಾಣಪ್ರೇರಕತ್ವವು ವಿಷ್ಣುವಿನ ಧರ್ಮವಾದ್ದರಿಂದ ಈ ಧರ್ಮವುಳ್ಳ ಈಶಾನನು ವಿಷ್ಣುವೆಂಬುದು ಅಣುಭಾಷ್ಯದ ಅಭಿಪ್ರಾಯ. ಅಥವಾ ಈಶಾನ ಶಬ್ದಕ್ಕೆ ಹೀಗರ್ಥ - 'ಈಶಾನ್' = ಮುಖ್ಯಪ್ರಾಣಾದಿಗಳನ್ನು, ಅನಿತಿ = ಪ್ರೇರಣೆ ಮಾಡುತ್ತಾನಾದ್ದರಿಂದ, 'ಈಶಾನ' ಶಬ್ದ ಪ್ರತಿಪಾದ್ಯನು. ಈ ವ್ಯುತ್ಪತ್ತಿಯಿಂದ 'ಈಶಾನ' ಪದವು ವಿಷ್ಣುವಾಚಕವಾಗಿದೆಯೆಂಬುದನ್ನು ವಿವರಿಸಲು ಪ್ರಾಣಪ್ರೇರಕಃ' ಎಂದು ಹೇಳಲಾಗಿದೆ. ಹೀಗೆ ಪೂರ್ವಪಕ್ಷಿಯು ಹೇಳಿದ ಪ್ರಾಣಪ್ರೇರಕತ್ವ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಗಿರುವುದರಿಂದ, ಸರ್ವದೇವೋಪಾಸ್ಯತ್ವರೂಪವಾದ ಲಿಂಗವನ್ನು ಸಿದ್ಧಾಂತಕ್ಕೆ ಸಾಧಕವಾಗಿ ಹೇಳಿದ್ದಾರೆ. 'ಕಂಪನಾತ್' ಎಂಬ ಸೂತ್ರಭಾಷ್ಯದ ಟೀಕೆಯಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ. ಅಥವಾ 'ಈಶಂ' ಮುಖ್ಯಪ್ರಾಣದೇವರನ್ನು, 'ಉನ್ನಯತಿ = ಪ್ರೇರಣೆ ಮಾಡುತ್ತಾನೆಂಬ ವ್ಯುತ್ಪತ್ತಿಯಿಂದ ಯೌಗಿಕವಾದ ಈಶಾನ ಪದದ ಅರ್ಥವನ್ನೇ 'ಪ್ರಾಣಪ್ರೇರಕಃ' ಎಂಬುದರಿಂದ ಹೇಳಿದ್ದಾರೆಂದು ತಿಳಿಯಬಹುದು. ಸಮಾಸವನ್ನು ಹಿಂದಿನಂತೆ ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ವಾಮನಾಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## वामनाधिकरणम् (१।३।७)

**।। ॐ शब्दादेव प्रमितः ॐ ।। १-३-२४**

अत्र नये ईशाननाम समन्वीयते । तच्च योग्यतयाऽन्वेति । तत्त्वित्यस्ति । ''अङ्गुष्ठमात्रः पुरुषो मध्य आत्मनि तिष्ठति, ''ईशानो भूतभव्यस्य'' इत्युक्त ईशानो ब्रह्मैव प्रमितः । ईशानशब्दो ब्रह्ममात्रवाचित्वेन प्रमितो नतु वायुवाचित्वेनेत्यर्थः । ''मध्ये वामानमासीनम्'' इति वामनशब्दादेवेत्यर्थः ।

ಈ ಅಧಿಕರಣದಲ್ಲಿ 'ಈಶಾನ' ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಸೂತ್ರದಲ್ಲಿ 'ಈಶಾನ' ಎಂಬ ಶಬ್ದವು ಯೋಗ್ಯತಾದಿಗಳಿರುವುದರಿಂದ ಅನ್ವಯವನ್ನು ಹೊಂದುತ್ತದೆ. 'ತತ್' ಎಂಬ ಪದಗಳು ಅನುವೃತ್ತವಾಗುತ್ತದೆ.

ಸೂತ್ರಾರ್ಥ ಹೀಗೆ - 'ಈಶಾನಃ' = 'ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ, ಈಶಾನೋಭೂತಭವ್ಯಸ್ಯ' ಎಂಬಲ್ಲಿ ಪ್ರತಿಪಾದ್ಯನಾದ ಈಶಾನನು ಬ್ರಹ್ಮನೇ ಆಗಿದ್ದಾನೆಂದು ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಸಿದ್ಧನಾಗಿದ್ದಾನೆ. ಏಕೆಂದರೆ 'ಪ್ರಮಿತಃ' = 'ಈಶಾನ' ಶಬ್ದವು ಬ್ರಹ್ಮನನ್ನು ಮಾತ್ರ ಪ್ರತಿಪಾದನೆ ಮಾಡುತ್ತದೆ ಹೊರತು, ಮುಖ್ಯಪ್ರಾಣಾದಿಗಳನ್ನು ಪ್ರತಿಪಾದನೆ ಮಾಡುವುದಿಲ್ಲ ಎಂದು ಅರ್ಥ. 'ಮಧ್ಯೇ ವಾಮನಮಾಸೀನಂ' ವಾಮನಶಬ್ದ ಇರುವುದರಿಂದಲೇ ಎಂದು ಅರ್ಥ.

एवेति प्राणादिव्यवस्थापकत्वादिवायुलिङ्गाच्छ्रुतेः प्राबल्यमुच्यते । प्रमित इति निरवकाशत्वम् ।।

'ಏವ' ಶಬ್ದವು ಪ್ರಾಣಾದಿವ್ಯವಸ್ಥಾಪಕತ್ವವೇ ಮೊದಲಾದ ಮುಖ್ಯಪ್ರಾಣದೇವರ ಲಿಂಗಗಳಿಗಿಂತಲೂ ಶ್ರುತಿಯು ಪ್ರಬಲವಾಗಿದೆಯೆಂದು ಹೇಳುತ್ತಿದೆ. 'ಪ್ರಮಿತ' ಎಂಬ ಪದವು ಶ್ರುತಿಯ ನಿರವಕಾಶತ್ವವನ್ನು ಹೇಳುತ್ತಿದೆ.

ननु कथमङ्गुष्ठमात्र इत्युक्ततन्मात्रत्वं ब्रह्मण इत्यत आह -

**।। ॐ हृद्यपेक्षया तु मनुष्याधिकारत्वात् ॐ ।। १-४-२५**

''अङ्गुष्ठमात्रः'' इति योग्यतयाऽन्वेति । तत्त्वित्यस्ति । तुरेव । अप्यर्थे च । हृदीति तत्स्थावकाश उच्यते । हृत्स्थावकाशापेक्षयैव ब्रह्माख्यपुरुषोऽङ्गुष्ठमात्र उच्यते नतु स्वत इत्यर्थः ।

'ಅಂಗುಷ್ಠಮಾತ್ರಃ' ಎಂಬಲ್ಲಿ ಹೇಳಿರುವ ಅಂಗುಷ್ಠ ಪರಿಮಾಣವು ಬ್ರಹ್ಮನಲ್ಲಿ ಮಾತ್ರ ಇದೆಯೆಂದು, ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಮುಂದಿನ ಸೂತ್ರವು ಹೊರಟಿದೆ.

'ಓಂ ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್ ಓಂ' 'ಅಂಗುಷ್ಠಮಾತ್ರಃ' ಎಂಬುದು ಸೂತ್ರದಲ್ಲಿ ಯೋಗ್ಯತಾದಿಗಳಿರುವುದರಿಂದ ಅನ್ವಯವನ್ನು ಹೊಂದುತ್ತದೆ. 'ತತ್' ಎಂಬ ಪದಗಳು ಅನುವೃತ್ತವಾಗುತ್ತದೆ. 'ತು' ಶಬ್ದಕ್ಕೆ 'ಏವ' ಎಂದರ್ಥ. 'ಅಪಿ' ಎಂಬರ್ಥವನ್ನು ವಿವಕ್ಷಿಸಬಹುದು. 'ಹೃದಿ' ಎಂಬುದು ಹೃದಯದಲ್ಲಿರುವ ಅವಕಾಶವನ್ನು ಹೇಳುತ್ತಿದೆ. ಹೃದಯದಲ್ಲಿರುವ ಅವಕಾಶದ ಅಪೇಕ್ಷೆಯಿಂದಲೇ ಬ್ರಹ್ಮನೆಂಬ ಪುರುಷನು ಅಂಗುಷ್ಠಪರಿಮಾಣವುಳ್ಳವನಾಗಿದ್ದಾನೆಂದು ಹೇಳಲಾಗಿದೆ ಹೊರತು, ಸರ್ವತ್ರವ್ಯಾಪ್ತನಾದ ಬ್ರಹ್ಮನಿಗೆ ಅಂಗುಷ್ಠಪರಿಮಾಣವನ್ನು ಸ್ವಾಭಾವಿಕವಾಗಿ ಹೇಳುವುದಕ್ಕಾಗಲ್ಲ ಎಂದು ಸೂತ್ರದ ಅಭಿಪ್ರಾಯ.

हृदयाकाशरूपस्थानगतं तद्गते विष्णावुपचयर्त इति भावः । तन्मात्रपरिमाणतया व्यक्तहृत्स्थरूपापेक्षयेत्यपि मुख्योऽर्थः टीकातो भाति ।

ಹೃದಯಾಕಾಶರೂಪವಾದ ಸ್ಥಾನದಲ್ಲಿರುವುದನ್ನು ಹೃದಯಾಕಾಶದಲ್ಲಿರುವ ವಿಷ್ಣುವಿನಲ್ಲಿ ಔಪಚಾರಿಕವಾಗಿ ಹೇಳಲಾಗಿದೆಯೆಂದು ಅಭಿಪ್ರಾಯ. ಅಭಿವ್ಯಕ್ತವಾಗುವ ಹೃದಯದಲ್ಲಿರುವ ಭಗವಂತನ ರೂಪವು ಅಂಗುಷ್ಠಪರಿಮಾಣದಷ್ಟು ವ್ಯಕ್ತವಾಗುತ್ತದೆ. ಈ ದೃಷ್ಟಿಯಿಂದ ಪರಮಾತ್ಮನಿಗೆ ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ತಪ್ಪಾಗುವುದಿಲ್ಲವೆಂದು ಟೀಕೆಯಿಂದ ತಿಳಿಯುತ್ತದೆ.

पश्वादीनामङ्गुष्ठाभावेऽप्यङ्गुष्ठमात्र इति विद्याया मनुष्याधिकारत्वात् ''अङ्गुष्ठमात्रः पुरुषः'' इति युक्तमित्यर्थः । पश्वादिगतस्याङ्गुष्ठमात्रत्वानुक्तेरिति भावः ।।७।।

'ಪಶು' ಮೊದಲಾದವುಗಳಿಗೆ ಅಂಗುಷ್ಠವಿಲ್ಲದಿದ್ದರೂ 'ಅಂಗುಷ್ಠಮಾತ್ರಃ' ಎಂದು ತಿಳಿಸುವ ವೇದವಿದ್ಯೆಗೆ ಮನುಷ್ಯರಷ್ಟೇ ಅಧಿಕಾರಿಗಳಾದ್ದರಿಂದ 'ಅಂಗುಷ್ಠಮಾತ್ರಃ ಪುರುಷಃ' ಎಂದು ಹೇಳಿದ್ದು ಯುಕ್ತವಾಗಿದೆ ಎಂದರ್ಥ. ಪಶ್ವಾದಿಗಳಲ್ಲಿರುವ ಭಗವದ್‌ರೂಪಕ್ಕೆ ಅಂಗುಷ್ಠಮಾತ್ರತ್ವವನ್ನು ಹೇಳಿಲ್ಲವೆಂದು ಅಭಿಪ್ರಾಯ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ವಾಮನಾಧಿಕರಣವು ಸಮಾಪ್ತವಾಯಿತು.
ವಾಮನಾಧಿಕರಣ (೧-೩-೭)

श्री राघवेन्द्रतीर्थविरचिता

# श्रीन्यायमुक्तावलिः

## वामनाधिकरणम् (१।३।७)

।। ॐ शब्दादेव प्रमितः ॐ ।।७।।

।। ॐ हृद्यपेक्षया तु मनुष्याधिकारत्वात् ॐ ।।

अत्र ''विश्वे देवा उपासते'' इत्यन्यस्य (का. २-२-३) उपास्यात्वोक्त्या तज्ज्ञानादेव मोक्षावश्यम्भावात् ''तमात्मस्थं येऽनु पश्यन्ति' इत्युक्तस्य (का. २-२-१२) विष्णुज्ञानादेव मोक्ष इत्यस्य आक्षेपात्सङ्गतिः ।

ಈ ಅಧಿಕರಣದಲ್ಲಿ 'ಈಶಾನ' ಎಂಬ ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. 'ವಿಶ್ವೇದೇವಾಃ ಉಪಾಸತೇ' ಎಂಬುದಾಗಿ ಕಾಠಕೋಪನಿಷತ್ತಿನಲ್ಲಿ ಮುಖ್ಯಪ್ರಾಣದೇವರಿಗೆ ಉಪಾಸ್ಯತ್ವವನ್ನು ಹೇಳಿದ್ದರಿಂದ, ಅವರ ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಒಪ್ಪಬೇಕು. 'ತಮಾತ್ಮಸ್ಥಮ್ ಯೇऽನುಪಶ್ಯಂತಿ' ಎಂಬ ಮುಂದಿನ ಕಾಠಕದ ಮಾತಿನಲ್ಲಿ ವಿಷ್ಣುಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳಿದ್ದು ಯುಕ್ತವಾಗುವುದಿಲ್ಲ. ಹೀಗೆ ಆಕ್ಷೇಪ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಸಂಗತಿಯನ್ನು ತಿಳಿಯಬೇಕು.

काठके ''अङ्गुष्ठमात्रः पुरुषो मध्य आत्मनि तिष्ठति ईशानो भूतभव्यस्य'' (का. २-१-१२) इत्युक्तेशानः किं मुख्यवायुः उत विष्णुरिति सन्देहः ।

'ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ ಈಶಾನೋ ಭೂತಭವ್ಯಸ್ಯ' ಎಂಬುದಾಗಿ ಅಂಗುಷ್ಠಮಾತ್ರತ್ವಧರ್ಮವುಳ್ಳ ವ್ಯಕ್ತಿಯು ಮುಖ್ಯಪ್ರಾಣನೋ, ಅಥವಾ ವಿಷ್ಣುವೋ ಎಂದು ಸಂದೇಹ.

वायुरिति पूर्वः पक्षः । ''ऊर्ध्वं प्राणमुन्नयति अपानं प्रत्यगस्यति मध्ये वामनमासीनं विश्वेदेवा उपासते'' इति (का. २-२३) प्राणादिव्यवस्थापकत्वमध्यमत्व-सर्वदेवोपास्यत्वानां श्रवणात् तेषां च ''एवमेव एष प्राणः इतरान् प्राणान् पृथक्पृथगेव सन्निधत्ते'' इति (षट्प्र. ३-४) ''अथेममेव नाप्रोद्योऽयं मध्यमः

प्राणः'' इति (बृ. ३-६-२१) वाजसनेये तृतीये, वाजसनेये चतुर्थे ''अयं वाव शिशुः योऽयं मध्यमः प्राणः'' (बृ. ४-२-१) इति शिशुब्राह्मणे । ''कुविदङ्ग नमसा'' (ऋ.७-९ १-१) इत्यादिश्रुतिभिः वायुधर्मत्वावगमात् ।

ಮುಖ್ಯಪ್ರಾಣದೇವರೇ ಪ್ರತಿಪಾದ್ಯರೆಂದು ಪೂರ್ವಪಕ್ಷ. ಏಕೆಂದರೆ 'ಊರ್ಧ್ವಂ ಪ್ರಾಣಮುನ್ನಯತಿ ಅಪಾನಂ ಪ್ರತ್ಯಗಸ್ಯತಿ ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ' ಎಂಬುದಾಗಿ ಪ್ರಾಣವ್ಯವಸ್ಥಾಪಕತ್ವ, ಮಧ್ಯಮತ್ವ, ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳು ಮುಖ್ಯಪ್ರಾಣದೇವರ ಅಸಾಧಾರಣ ಧರ್ಮವಾಗಿವೆ. ಇವುಗಳು 'ಏವಮೇವೈಷ ಪ್ರಾಣಃ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ' ಎಂಬ ಷಟ್‌ಪ್ರಶ್ನೋಪನಿಷತ್ತಿನ ಮಾತಿನಿಂದ, 'ಅಥೇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಬೃಹದಾರಣ್ಯೋಕೋಪನಿಷತ್ತಿನ ಮಾತಿನಿಂದ ಬೃಹದಾರಣ್ಯಕದ ಮೂರು ಹಾಗೂ ನಾಲ್ಕನೆಯ ಅಧ್ಯಾಯದಲ್ಲಿರುವ 'ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ' ಶಿಶುಬ್ರಾಹ್ಮಣದ ಮಾತಿನಿಂದ 'ಕುವಿದಂಗ ನಮಸಾ' ಇತ್ಯಾದಿ ಋಗ್ವೇದದ ಮಾತಿನಿಂದ ಮುಖ್ಯಪ್ರಾಣದೇವರ ಧರ್ಮವೇ ಆಗಿದೆಯೆಂದು ನಿಶ್ಚಯವಾಗಿದೆ.

विष्णावक्षरनये अणुत्वोक्तावपि इह श्रुताङ्गुष्ठमात्रत्वायोगाच्च । तस्य ततोऽधिकपरिमाणराहित्यार्थत्वात् । नच हृदयापेक्षयोपपत्तिः । विकल्पासहत्वात् । यत्किञ्चिदङ्गुष्ठमितत्वे निर्धारणायोगेन उपासनानुपपत्त्या तदुक्तिवैयर्थ्यात् । तत्तदङ्गुष्ठमितत्वे पश्वादेस्तदभावेन तदन्तस्थस्य तत्त्वायोगादिति ॥

ವಸ್ತುತಃ ಅಕ್ಷರಾಧಿಕರಣದಲ್ಲಿ ವಿಷ್ಣುವಿಗೆ ಅಣುರೂಪವಿದೆಯೆಂದು ಹೇಳಲಾಗಿತ್ತು. ಆದರೆ ಇಲ್ಲಿ ಹೇಳುತ್ತಿರುವ ಕೇವಲ ಅಂಗುಷ್ಠಪರಿಮಾಣವು ವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಯಾವಾತನಿಗೆ ಅಂಗುಷ್ಠಪರಿಮಾಣವನ್ನು ಹೇಳಲಾಗಿದೆಯೋ, ಅವನಿಗೆ ಅದಕ್ಕಿಂತ ಅಧಿಕವಾದ ಪರಿಮಾಣವನ್ನು ಇಲ್ಲವೆಂದು ನಿಷೇಧಿಸಲಾಗಿದೆ.

ಇನ್ನು ಹೃದಯವು ಅಂಗುಷ್ಠಪರಿಮಾಣದಲ್ಲಿರುವುದರಿಂದ ವಿಷ್ಣುವಿಗೆ ಹಾಗೇ ಅಂಗುಷ್ಠ-ಪರಿಮಾಣವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಒಬ್ಬನೇ ಪರಮಾತ್ಮನಿಗೆ ಕೇವಲ ಅಂಗುಷ್ಠಪರಿಮಾಣ ಹಾಗೂ ಸರ್ವತ್ರವ್ಯಾಪ್ತತ್ವ ಮೊದಲಾದ ವಿರುದ್ಧಧರ್ಮಗಳು ಬರಲು ಸಾಧ್ಯವಿಲ್ಲ. ಮತ್ತು ಯಾವುದೋ ಬಗೆಯಲ್ಲಿ ಅಂಗುಷ್ಠಪರಿಮಾಣವನ್ನು ಹೇಳುವುದರಿಂದ ಅವನ ರೂಪವನ್ನು ನಿರ್ಧಾರ ಮಾಡಲು ಸಾಧ್ಯವೇ ಆಗುವುದಿಲ್ಲ. ಉಪಾಸನೆಯೂ ಕೂಡ ವಿಧಿಸಲು ಸಾಧ್ಯವಾಗದ ಕಾರಣ. ಅಂತಹ ಅಂಗುಷ್ಠಪರಿಮಾಣವನ್ನು ಪರಮಾತ್ಮನಿಗೆ ಹೇಳುವುದರಿಂದ ಏನೂ ಸಾರ್ಥಕತೆಯಿರುವುದಿಲ್ಲ. ಆಯಾ ವ್ಯಕ್ತಿಗಳ ಅಂಗುಷ್ಠಪರಿಮಾಣವನ್ನು ಹೇಳಿದರೆ, ಪಶ್ವಾದಿಗಳಿಗೆ ಅಂಗುಷ್ಠವೇ ಇಲ್ಲದ ಕಾರಣ. ಪಶು ಮೊದಲಾದವುಗಳ ಹೃದಯದಲ್ಲಿರುವ ಭಗವಂತನಿಗೆ

ಅಂಗುಷ್ಠಪರಿಮಾಣವನ್ನು ಹೇಳಲೂ ಕೂಡ ಸಾಧ್ಯವಿಲ್ಲ. ಆದ್ದರಿಂದ ಮುಖ್ಯಪ್ರಾಣದೇವರೇ 'ಈಶಾನ' ಶಬ್ದದಿಂದ ಪ್ರತಿಪಾದ್ಯರೆಂದು ಪೂರ್ವಪಕ್ಷ.

सिद्धान्तस्तु ।। वामनमिति श्रुतवामनश्रुतेः ''एष उ एव वामनिः एष हि सर्वाणि वामानि नयति'' (छां. ४-१५-३) ''उपेन्द्रो वामनः प्रांशुः'' (विष्णु.स.ना.) इत्यादिश्रुतिस्मृतिभिः एकदेशविकृतं अनन्यवद्भवतीति न्यायेन विद्वत्प्रसिद्ध्या च योगरूढिभ्यां विष्णवेकनिष्ठत्वेन अन्यत्रानवकाशात् ।

ಸಿದ್ಧಾಂತ ಹೀಗಿದೆ - 'ವಾಮನಮ್' ಎಂಬ ವಾಮನಶ್ರುತಿಯಿಂದ 'ಏಷ ಉ ಏವ ವಾಮನಿಃ ಏಷ ಹಿ ಸರ್ವಾಣಿ ವಾಮಾನಿ ನಯತಿ' ಎಂಬ ಛಾಂದೋಗ್ಯೋಪನಿಷತ್ತಿನ ಮಾತಿನಿಂದ, 'ಉಪೇಂದ್ರೋ ವಾಮನಃ ಪ್ರಾಂಶುಃ' ಎಂಬ ವಿಷ್ಣುಸಹಸ್ರನಾಮದ ಮಾತಿನ ಬಲದಿಂದ, ಮತ್ತು 'ಏಕದೇಶವಿಕೃತಮ್ ಅನನ್ಯವದ್ಭವತಿ' ಎಂಬ ನ್ಯಾಯದಿಂದ ವಿದ್ವದ್ರೂಢಿಯಿಂದ ಮಹಾಯೋಗ ಹಾಗೂ ವಿದ್ವದ್ರೂಢಿಗಳ ಬಲದಿಂದ, 'ವಾಮನ' ಎಂಬ ಶಬ್ದವು ಕೇವಲ ವಿಷ್ಣುವಿನಲ್ಲಿ ಮಾತ್ರ ಇರುತ್ತದೆ ಹೊರತು, ಬೇರೆ ಯಾರಲ್ಲಿಯೂ ಇರುವುದಿಲ್ಲವೆಂದು ಸಿದ್ಧವಾಗಿದೆ.

प्राणनियामकत्वस्य अन्तर्यामिनयन्यायेन (ब्र.सू.१-२-१८) सर्वनियामके हरौ युक्तत्वात् । ''यद्देवान् प्राणयो नव'' (तै. आ. ३-१४) इति विशिष्य च श्रुत्यन्तरे वैष्णवत्वोक्तेः मध्य इति मध्यशब्दस्य ऊर्ध्वशब्दसाहचर्येण मध्यदेशवाचितया मध्यमोक्त्यभावेन मध्यदेशेऽवस्थानस्य विष्णावपि योगात् ।

ಅಂತರ್ಯಾಮ್ಯಧಿಕರಣದ ನ್ಯಾಯದಂತೆ ಪ್ರಾಣನಿಯಾಮಕತ್ವವನ್ನು ಸರ್ವನಿಯಾಮಕನಾದ ಪರಮಾತ್ಮನಲ್ಲಿ ಉಪಪಾದಿಸಬಹುದು. 'ಯದ್ದೇವಾನ್ ಪ್ರಾಣಯೋ ನವ' ಎಂಬ ಮತ್ತೊಂದು ಶ್ರುತಿಯಲ್ಲಿ ವೈಷ್ಣವತ್ವವನ್ನು ಹೇಳಿದ್ದರಿಂದ ಮಧ್ಯೇ ಎಂಬಲ್ಲಿರುವ ಮಧ್ಯಶಬ್ದವು ಊರ್ಧ್ವಶಬ್ದದ ಸಾಹಚರ್ಯದಿಂದ ಮಧ್ಯದೇಶವನ್ನು ಪ್ರತಿಪಾದನೆ ಮಾಡುತ್ತದೆ ಹೊರತು, ತಾರತಮ್ಯದ ಅವಾಂತರ ನಿಯಾಮಕತ್ವವನ್ನು ಹೇಳುತ್ತಿಲ್ಲ. ಮಧ್ಯದೇಹದಲ್ಲಿರುವಿಕೆಯನ್ನು ವಿಷ್ಣುವಿನಲ್ಲಿ ಹೇಳುವುದು ಯುಕ್ತವೇ ಆಗುತ್ತದೆ.

सर्वदेवोपास्यत्वस्यापि सर्वजिज्ञास्यत्वपर्यायतया तस्य दहरनये सिद्धत्वात् एवं सावकाशतया स्वतश्च दुर्बलानां स्वतो निरवकाशतया बलवत्या श्रुत्या बाधात् अङ्गुष्ठमात्रत्वस्य च तत्तदङ्गुष्ठमितरूपविशेषस्य व्यक्त्यात्मना अङ्गुष्ठमात्रत्वाद्वा तादृशस्थानहृदयगतस्य तत्तत्स्थानिनि ईशेउपचाराद्वा युक्तत्वात् प्राण्यन्तरस्याङ्गुष्ठाभावेऽपि शास्त्रस्य मनुष्याधिकारित्वेनादोषात् अयमीशानो विष्णुरेवेति ।

ಸರ್ವದೇವೋಪಾಸ್ಯತ್ವವನ್ನೂ ಕೂಡ ವಿಷ್ಣುವಿನಲ್ಲಿ ಉಪಪಾದಿಸಬಹುದು. ಸರ್ವಜಿಜ್ಞಾಸ್ಯತ್ವವನ್ನೇ ಸರ್ವೋದೇವೋಪಾಸ್ಯತ್ವವೆಂದು ಕರೆಯಲಾಗುತ್ತದೆ. ಸರ್ವರಿಂದ ಜಿಜ್ಞಾಸೆ ಮಾಡಲು ಅರ್ಹನಾಗಿದ್ದಾನೆಂಬ ಸರ್ವದೇವೋಪ್ಯಾಸತ್ವವು ವಿಷ್ಣುವಿನಲ್ಲಿ ಮಾತ್ರವಿರುತ್ತದೆಂದು ಸಿದ್ಧವಾಗಿದೆ. ಈ ಪೂರ್ವಪಕ್ಷಲಿಂಗಗಳೆಲ್ಲವೂ ಸಾವಕಾಶವಾಗಿವೆ. ಸ್ವತಃ ದುರ್ಬಲವೂ ಆಗಿವೆ. ಆದರೆ ಸಿದ್ಧಾಂತಸ್ಥಾಪಕಗಳಾದ ಲಿಂಗಗಳು ಸ್ವಾಭಾವಿಕವಾಗಿ ನಿರವಕಾಶವಾಗಿವೆ. ಬಲಿಷ್ಠವಾದ ಶ್ರುತಿಗಳ ಆಧಾರವನ್ನು ಹೊಂದಿದೆ. ಇಂತಹ ಸಿದ್ಧಾಂತಲಿಂಗಗಳಿಂದ ಪೂರ್ವಪಕ್ಷಲಿಂಗಗಳೆಲ್ಲವೂ ಬಾಧಿತವಾಗುತ್ತದೆ. ಅಂಗುಷ್ಠಮಾತ್ರತ್ವವನ್ನು ಆಯಾ ಪುರುಷರ ಅಂಗುಷ್ಠಪರಿಮಾಣ ವಿಶೇಷದಿಂದ ಕೂಡಿಸಬಹುದು. ಪರಮಾತ್ಮನು ಆಯಾವ್ಯಕ್ತಿಗಳ ಹೃದಯದಲ್ಲಿ ಆಯಾವ್ಯಕ್ತಿಗಳ ಅಂಗುಷ್ಠ-ಪರಿಮಾಣದಷ್ಟೇ ಅಭಿವ್ಯಕ್ತನಾಗುತ್ತಾನೆಂದು ತಿಳಿಯಬೇಕು. ಮತ್ತು ಎಲ್ಲರ ಹೃದಯವು ಅಂಗುಷ್ಠಪರಿ ಮಾಣದಷ್ಟು ಇರುವುದರಿಂದ, ಅಲ್ಲಿರುವಂತಹ ಈಶ್ವರನಲ್ಲಿಯೂ ಅಂಗುಷ್ಠಪರಿಮಾಣವನ್ನು ಶ್ರುತಿಯು ಔಪಚಾರಿಕವಾಗಿ ಹೇಳುತ್ತಿದೆ. ಪಶು ಮೊದಲಾದವುಗಳಿಗೆ ಅಂಗುಷ್ಠವಿಲ್ಲದಿದ್ದರೂ ಈ ಬ್ರಹ್ಮಮೀಮಾಂಸಾಶಾಸ್ತ್ರವು ಮನುಷ್ಯರನ್ನು ಕುರಿತು ಹೊರಟಿದ್ದರಿಂದ ದೋಷವಿಲ್ಲ. ಆದ್ದರಿಂದ ಈಶಾನ ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ.

फलं तु उपास्यत्वमुखेन जिज्ञासासूत्राक्षेपः तत्समाधिश्च ॥७॥

ಫಲಫಲಿಭಾವ ಹೀಗಿದೆ - ಉಪಾಸ್ಯತ್ವದ ಮೂಲಕ ಜಿಜ್ಞಾಸೂತ್ರವನ್ನು ಆಕ್ಷೇಪಿಸುವುದೇ ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ವಾಮನಾಧಿಕರಣವು ಸಮಾಪ್ತವಾಯಿತು.

# सूत्रार्थरत्नावळिः

## वामनाधिकरणम् (१।३।७)

**ॐ॥ शब्दादेव प्रमितः ॥ ॐ ॥२४॥**

अत्र 'ईशान'नामसमन्वयः क्रियते ।

ननु ईशानो वायुरेव भवेत् । 'एवमेवैष' (प्रश्न.३।४) इत्यत्र प्राणव्यवस्थापकत्वम्, 'योऽयं मध्यमः' (बृ.३।५।२१) इति मध्यमत्वम्, 'कुविदङ्ग' (ऋ.७।९१।१) इति सर्वदेवोपास्यत्वम्; एवमादिवायुधर्माणां श्रवणात् । न चेदमनिष्टम् । वायोरपि जिज्ञास्यताऽभ्युपगमात् । विष्णुजिज्ञास्यत्वस्याबाधात् । ततश्च 'ईशान'पदोक्तगुणस्य वायुनिष्ठत्वान्न विष्णोः सर्वगुणपूर्णत्वमिति प्राप्ते; सूत्रितम् –

ॐ।। शब्दादेव प्रमित इति ।। अस्यार्थः – विष्णुरेव ईशानो भूतभव्यस्य (कठ.४।१२) इति ईशानशब्दवाच्यत्वेन प्रमितः तत्त्वतो निश्चयः । नतु वायुः । कुतः? शब्दादेव 'मध्ये वामनम्' (कठ.५।३) इति निरवकाशवामन-श्रुतेरेवेत्यर्थः ।।

एवञ्च वामनश्रुतिसद्भावात् । तस्याश्च महायोगरूढिसिद्धायास्त्प्रमापकत्वात् । लिङ्गापेक्षया श्रुतेः प्राबल्यात् । तेषामपि लिङ्गानां 'तद्वै त्वं प्राणः' (तै.आ. ३।१४।४) इत्यत्र वैष्णवत्वस्य सिद्धत्वात् विष्णुरेवेशान इति सिद्धम् ।।*।।

ॐ।। हृद्यपेक्षया तु मनुष्याधिकारत्वात् ।।ॐ ।।२५।।

ननु माभूत् प्राणव्यवस्थापकत्वादिलिङ्गेन ईशानस्य वायुत्वसिद्धिः; अङ्गुष्ठमात्रत्वलिङ्गेन सिद्ध्येत्, एव । तस्य विष्णौ असम्भवात् । यद्यपि विष्णौ परिमितत्वं सम्भवति; तथाऽपि 'अङ्गुष्ठमात्र' (महा ना. १६।३) इति विशिष्योक्तिबललभ्यपरिमाणान्तरव्यवच्छेदस्यासम्भव एवेति प्राप्ते, समादधत्सूत्रमाह –

ॐ।। हृद्यपेक्षया तु मनुष्याधिकारत्वात् इति ।। अस्यार्थः – तुशब्द एवार्थे । अपिशब्दार्थे च । तथा च सर्वगतस्यापि विष्णोः अङ्गुष्ठमात्रत्वोक्तिः हृद्यपेक्षया अङ्गुष्ठपरिमितहृदयाकाशापेक्ष्यैव । न तावता विष्णोः परिच्छिन्नत्वं ज्ञेयम् - इत्यर्थः । ननु पश्वादीनाम् अङ्गुष्ठाभावात् कथं तन्मात्रवचनं सर्वाधिकारिकम्? इत्यत उक्तम् – मनुष्याधिकारत्वादिति।। तथाच एतद्विद्योपासनस्य मनुष्याधिकारिकत्वात् । तान् प्रति एतद्विद्याप्रवृत्ति-सम्भवात् । पश्वादीनामङ्गुष्ठाभावेऽपि न दोष इति भावः ।।

एवञ्च हृद्यवकाशेऽभिव्यक्तस्य परमात्मनोऽङ्गुष्ठमितत्वेन तथोपासनायैव श्रुतावङ्गुष्ठ-मात्रत्वस्योक्तत्वेन परिमाणान्तरव्यवच्छेदाभिप्रायकल्पनायोगात् । यद्यपि इतरप्राणिनामङ्गुष्ठा-भावस्तथाऽपि मनुष्याणामेव वेदविद्याधिकारात् तान् प्रति अङ्गुष्ठमात्रत्वोक्तेर्युक्तत्वात् । तस्मात् 'ईशानो विष्णुरेव' इति, 'ईशानपदोक्तं गुणत्वं जिज्ञास्यत्वं च तस्यैव' इति सिद्धम् ।।*।। इति वामनाधिकरणम् ।।

।। इति सूत्रार्थरत्नावळ्यां वामनाधिकरणम् ।।

॥ ಪರಿಪೂರ್ಣಚಂದ್ರಿಕೆಯಲ್ಲಿ ವಾಮನಾಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ಭಾಗ -೪ (ಪರಿಶಿಷ್ಟ)

## ನ್ಯಾಯವಿವರಣ, ನ್ಯಾಯವಿವರಣಟೀಕಾ
## ಮತ್ತು
## ಶ್ರೀ ರಘೂತ್ತಮತೀರ್ಥರು ರಚಿಸಿದ
## ನ್ಯಾಯವಿವರಣ, ಭಾವಬೋಧ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## अक्षराधिकरणम् (१।३।३)

**न्यायविवरणम् –**

**विष्णोश्चेतनप्रकृतेश्चाविनाशित्वसाम्यादक्षरशब्दः साधारणः ॥ ३ ॥**

'ಅವಿನಾಶಿತ್ವ' ಎಂಬುದು 'ಅಕ್ಷರ' ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಚೇತನಪ್ರಕೃತಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದದ ರೂಢಿಯೂ ಸಹ ಇರುತ್ತದೆ. ಚೇತನಪ್ರಕೃತಿಯೆನಿಸಿದ ಮಹಾಲಕ್ಷ್ಮೀದೇವಿ ಹಾಗೂ ವಿಷ್ಣು ಇಬ್ಬರಲ್ಲಿಯೂ 'ಅವಿನಾಶಿತ್ವ' ಎಂಬ ಪ್ರವೃತ್ತಿನಿಮಿತ್ತವು ಸಾಧಾರಣವಾಗಿರುವುದರಿಂದ ಇಬ್ಬರಲ್ಲಿಯೂ ಅಕ್ಷರಶಬ್ದವು ಸಾಧಾರಣವಾಯಿತು.

**टीका – 'अक्षरमम्बरान्तधृतेः' इत्यत्रेदानीमुक्ताशङ्कानिरासार्थमाह – विष्णोरिति ।। 'अविनाशित्वस्याक्षरशब्दप्रवृत्तिनिमित्तत्वाद्' इत्यत्रोपस्कर्तव्यम् । उपलक्षणं चैतत् । अक्षरशब्दस्य तत्र प्रसिद्धत्वादित्यपि द्रष्टव्यम् । नन्वचेतनप्रकृतौ वर्णेषु च कुतो न शङ्का परिहृता । परिहृतमेव तद्भाष्यकृता 'अदृष्टं द्रष्टृ' इत्यादिविषयवाक्यमुदाहरतैव । न चाचेतनप्रकृतौ द्रष्टृत्वादिकं सम्भवति । नच वर्णेष्वदृष्टत्वादिकमपीति ।। ३ ।।**

'ಅಕ್ಷರಮಂಬರಾಂತಧೃತೇಃ' ಎಂಬಲ್ಲಿ ಹಿಂದಿನ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ 'ವಿಷ್ಣೋಃ' ಇತ್ಯಾದಿ ಮೂಲವು ಹೊರಟಿದೆ. ಇಲ್ಲಿ 'ಅವಿನಾಶಿತ್ವಸ್ಯ ಅಕ್ಷರಶಬ್ದಪ್ರವೃತ್ತಿನಿಮಿತ್ತತ್ವಾತ್' ಅವಿನಾಶಿತ್ವವು ಅಕ್ಷರಶಬ್ದದ ಪ್ರವೃತ್ತಿನಿಮಿತ್ತವಾದ್ದರಿಂದ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಉಪಲಕ್ಷಣಾಯಾ

ಮಹಾಲಕ್ಷ್ಮೀ ಹಾಗೂ ವಿಷ್ಣು ಇಬ್ಬರಲ್ಲಿಯೂ ಅಕ್ಷರಶಬ್ದದ ರೂಢಿಯೂ ಸಹ ಇರುತ್ತದೆಂಬುದನ್ನು ಇಟ್ಟುಕೊಳ್ಳಬೇಕು.

ಲಕ್ಷ್ಮೀದೇವಿ ಹಾಗೂ ಪರಮಾತ್ಮ ಇಬ್ಬರನ್ನು ಮಾತ್ರ ವಿವಕ್ಷಿಸಿ, ಅಚೇತನಪ್ರಕೃತಿಯನ್ನಾಗಲೀ, ವರ್ಣಗಳನ್ನಾಗಲೀ, ವಿವಕ್ಷಿಸದಿರಲು ಏನು ಕಾರಣ? ಎಂದು ಪ್ರಶ್ನಿಸಬಾರದು. 'ಅದೃಷ್ಟಂ ದ್ರಷ್ಟೃ' ಎಂಬುದಾಗಿ ಭಾಷ್ಯಕಾರರು ವಿಷಯವಾಕ್ಯವನ್ನು ಉದಾಹರಿಸುವ ಮೂಲಕವೇ ಅಚೇತನಪ್ರಕೃತಿ ಹಾಗೂ ವರ್ಣಗಳನ್ನು ವಿವಕ್ಷಿಸದಿರಲು ಕಾರಣವನ್ನು ಸೂಚನೆ ಮಾಡಿದ್ದಾರೆ. ಏಕೆಂದರೆ ಅಚೇತನಪ್ರಕೃತಿಯಲ್ಲಿ ಮತ್ತು ವರ್ಣಗಳಲ್ಲಿ ದ್ರಷ್ಟೃತ್ವಾದಿಗಳು ಸರ್ವಥಾ ಉಪಪನ್ನವಾಗುವುದಿಲ್ಲ.

## सदधिकरणम् (१।३।४)

**न्यायविवरणम् – कारणत्वसाम्यात् विष्णोः अचेतनप्रकृतेश्च, 'सदेव सोम्येदमग्र आसीत्' इत्यादिसृष्टिस्थानं साधारणम् ॥ ४ ॥**

'ಸದೇವ ಸೌಮ್ಯದಮಗ್ರ ಆಸೀತ್' ಇತ್ಯಾದಿ ವಾಕ್ಯಗಳಿಂದ ಜಗತ್ತಿನ ಸೃಷ್ಟಿಗೋಸ್ಕರ 'ಸತ್' ಶಬ್ದ ಪ್ರತಿಪಾದ್ಯವಾದ ವಸ್ತು ಪ್ರಳಯಕಾಲದಲ್ಲಿ ಇತ್ತು ಎಂದು ಹೇಳಲಾಗಿದೆ. ಮಹಾವಿಷ್ಣು ಹಾಗೂ ಅಚೇತನ ಪ್ರಕೃತಿ ಎರಡಲ್ಲಿಯೂ ಜಗತ್ಕಾರಣತ್ವವು ಸಮಾನವಾಗಿರುವುದರಿಂದ 'ಸದೇವ ಸೌಮ್ಯ' ಇತ್ಯಾದಿ ಸೃಷ್ಟಿಸ್ಥಾನದಲ್ಲಿರತಕ್ಕ 'ತತ್' ಎಂಬ ನಾಮಾತ್ಮಕ ಶಬ್ದವು ಉಭಯಸಾಧಾರಣವಾಗಿದೆ.

**टीका – 'ईक्षतिकर्मव्यपदेशात्सः' इत्यत्र साधारणं स्थानं विचार्यमित्युक्तम् । तत्पूर्ववद्विवृणोति – कारणत्वेति ।। 'सदेव सोम्येत्यादिसृष्टिस्थानम्' इति 'सदेव सोम्य' इत्यादिना प्रतिपादितं सृष्ट्यर्थं प्रलयेऽवस्थानमिति वर्णयन्ति । एवं तर्हि विषयमालायां लिङ्गमित्येव वक्तव्यम् । सत्यम् । विशेषतः तदेव प्रदर्शितमित्यदोषः ।**

'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬ ಸೂತ್ರದಲ್ಲಿ ಸೃಷಿಸ್ಥಾನವು ಉಭಯಸಾಧಾರಣವಾಗಿರುವುದರಿಂದ ವಿಚಾರ ಮಾಡಲು ಅರ್ಹವಾಗಿದೆ ಎಂದು ಹೇಳಲಾಗಿದೆ. ಹಿಂದಿನಂತೆ ಇದನ್ನೂ ಸಹ ವಿವರಣೆ ಮಾಡುತ್ತಿದ್ದಾರೆ 'ಕಾರಣತ್ವ' ಇತ್ಯಾದಿ ಮೂಲದಿಂದ. 'ಸದೇವ ಸೋಮ್ಯ' ಇತ್ಯಾದಿ ವಾಕ್ಯಗಳು ಸೃಷ್ಟಿಸ್ಥಾನ ಎನಿಸುತ್ತವೆ. 'ಸದೇವ ಸೋಮ್ಯ' ಇತ್ಯಾದಿ ವಾಕ್ಯದಿಂದ ಸೃಷ್ಟಿಗೋಸ್ಕರ ಪ್ರಳಯದಲ್ಲಿ ಇರುವಂತಹ ವಸ್ತುವಿನ ವರ್ಣನೆ ಇದೆ. ಅಂದರೆ ಸೃಷ್ಟಿಗೋಸ್ಕರ ಪ್ರಳಯದಲ್ಲಿರುವಿಕೆಯನ್ನು ಈ ಶ್ರುತಿಯು ಹೇಳುತ್ತಿದೆ. ಹಾಗಾದರೆ

ಸೃಷ್ಟ್ಯರ್ಥಂ ಪ್ರಳಯೇऽವಸ್ಥಾನಮ್ ಎಂಬುದು ಲಿಂಗರೂಪವಾಯಿತು. ವಿಷಯಮಾಲೆಯಲ್ಲಿ ಶ್ರೀಮದಾಚಾರ್ಯರು 'ಲಿಂಗಮ್' ಎಂದೇ ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಆ ಲಿಂಗವು ಯಾವ ಸ್ವರೂಪದಲ್ಲಿದೆಯೆಂಬುದನ್ನು ವಿಷಯಮಾಲೆಯಲ್ಲಿ ತೋರಿಸಿದ್ದಾರೆಂದು ತಿಳಿಯಬೇಕು.

**अपरे तु 'सदेव सोम्य' इत्यादिकं सृष्टिस्थानं सृष्टिकारणविषयः प्रकरणसमुदाय इत्याचक्षते । एवं तर्हि तत्रान्यत्र प्रसिद्धानां लिङ्गानां नाम्नामिति विषयोक्तिविरोधः।**

ಕೆಲವರು 'ಸದೇವ ಸೋಮ್ಯ' ಇತ್ಯಾದಿ ಸೃಷ್ಟಿಸ್ಥಾನವು ಸೃಷ್ಟಿಕಾರಣವಿಷಯಕವಾಗಿದೆ. ಆದ್ದರಿಂದ ಪ್ರಕರಣಗಳ ಸಮುದಾಯವೇ ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆಯೆಂದು ಹೇಳುತ್ತಾರೆ. ಹಾಗಾದರೆ ಉಭಯತ್ರಪ್ರಸಿದ್ಧವಾದ ಲಿಂಗಾತ್ಮಕ ಮತ್ತು ನಾಮಾತ್ಮಶಬ್ದಗಳ ಸಮನ್ವಯವನ್ನು ಈ ಪಾದದಲ್ಲಿ ಮಾಡುತ್ತಿದ್ದಾರೆಂಬ ಪ್ರತಿಜ್ಞೆಗೆ ವಿರೋಧ ಬರುತ್ತದಲ್ಲವೇ?

**मैवम् । स्थानमिति स्थानेऽनुवर्तमानस्य सन्नाम्नो विवक्षितत्वात् । तथा च सङ्क्षेपे – 'सोऽक्षरः सन् हृदब्जगः' इति । 'सतः स्रष्टृत्व' इत्यादिभाष्ये च सन्नामविचारे महान् प्रकरणसन्दर्भो विचारित इति ज्ञापनाय सृष्टिस्थानमित्युक्तम्। साधारण्यप्रतिपत्त्यर्थं च । कारणत्वसाम्यात्स शब्दः साधारण इत्युक्ते निराकाङ्क्षत्वाभावात् । एवं त्वुच्यमानेऽयमर्थः सम्पद्यते ।**

ಇದು ತಪ್ಪು. ಸ್ಥಾನಶಬ್ದದಿಂದ ಸೃಷ್ಟಿಸ್ಥಾನದಲ್ಲಿ ಅನುವೃತ್ತವಾದ 'ಸತ್' ಎಂಬ ನಾಮಾತ್ಮಕ ಶಬ್ದದ ಸಮನ್ವಯವೇ ಈ ಅಧಿಕರಣಕ್ಕೆ ವಿವಕ್ಷಿತವಾಗಿದೆ. ಆದ್ದರಿಂದಲೇ ಶ್ರೀಮದಾಚಾರ್ಯರು ಅಣುಭಾಷ್ಯದಲ್ಲಿ 'ಸೋऽಕ್ಷರಃ ಸನ್ ಹೃದಬ್ಜಗಃ' ಎಂದು 'ಸತ್' ಎಂಬ ಶಬ್ದದಿಂದ ನಾಮಾತ್ಮಕಶಬ್ದದ ಸಮನ್ವಯವನ್ನು ಸೂಚನೆ ಮಾಡಿದ್ದಾರೆ. 'ಸತಃ ಸ್ರಷ್ಟೃತ್ವಮ್' ಇತ್ಯಾದಿ ಭಾಷ್ಯದಲ್ಲಿಯೂ ಸಹ 'ತತ್' ಎಂಬ ನಾಮಾತ್ಮಕ ಶಬ್ದದ ಸಮನ್ವಯ ಮಾಡುವ ಪ್ರಸಂಗದಲ್ಲಿ ಪ್ರಕರಣದ ಸಮನ್ವಯವು ಪ್ರಾಸಂಗಿಕವಾಗಿ ಪ್ರಾಪ್ತವಾಗಿದೆಯೆಂದು ಹೇಳಿದ್ದಾರೆ. ಆದ್ದರಿಂದಲೇ 'ಸೃಷ್ಟಿಸ್ಥಾನಮ್' ಎಂಬ ಪದವು ಪ್ರಯುಕ್ತವಾಗಿದೆ. ಮತ್ತು ಉಭಯ-ಸಾಧಾರಣವಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿಯೇ 'ಸ್ಥಾನ' ಪದವು ಪ್ರಯುಕ್ತವಾಗಿದೆ. ಕಾರಣತ್ವವು ಉಭಯಸಾಧಾರಣವಾದ್ದರಿಂದ 'ತತ್' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆಂದು ಹೇಳಿದರೆ ನಿರಾಕಾಂಕ್ಷವೇ ಬರುವುದಿಲ್ಲ. ಮೇಲೆ ಹೇಳಿದ ಪ್ರಕಾರವೇ ಹೇಳುವುದು ಅನಿವಾರ್ಯ.

**यद्यपि निमित्तत्वमुपादानत्वं च विलक्षणं तथापि कारणत्वमात्रं विष्णोरचेतनप्रकृतेश्च समम् । महदादीनां कारणत्वेऽपि न सर्वकारणत्वम् । कारणत्वं चात्र स्थाने सतः प्रतीयते । 'तदैक्षत' इति प्रकृतौ विरुद्धमिति चेत् 'बहु स्याम्' इति विष्णोरपि साम्यमेवेति ।। ४ ।।**

ವಾಸ್ತವಿಕವಾಗಿ ಪರಮಾತ್ಮನಲ್ಲಿ ನಿಮಿತ್ತಕಾರಣತ್ವವಿದೆ. ಜಡಪ್ರಕೃತಿಯಲ್ಲಿ ಉಪಾದಾನಕಾರಣತ್ವವಿದೆ. ಈ ಎರಡೂ ಕೂಡ ಅತ್ಯಂತ ವಿಲಕ್ಷಣವಾದ್ದರಿಂದ ಒಂದೇ ಕಾರಣತ್ವವನ್ನು ಉಭಯಸಾಧಾರಣವೆಂದು ಹೇಳಲು ಸಾಧ್ಯವಿಲ್ಲ. ಆದರೆ ನಿಮಿತ್ತಕಾರಣ ಹಾಗೂ ಉಪಾದಾನಕಾರಣಗಳಲ್ಲಿ ಸಾಮಾನ್ಯವಾಗಿರುವ ಕಾರಣತ್ವವನ್ನಷ್ಟೇ ಇಲ್ಲಿ ವಿವಕ್ಷಿಸಿ ವಿಷ್ಣು ಹಾಗೂ ಅಚೇತನ ಪ್ರಕೃತಿಗಳಲ್ಲಿ ಸಾಧಾರಣವಾಗಿದೆಯೆಂದು ಸೂತ್ರಕಾರರು ವಿವಕ್ಷಿಸಿದ್ದಾರೆ. ಮಹದಾದಿಗಳಲ್ಲಿಯೂ ಕಾರಣತ್ವವಿರಬಹುದು. ಆದರೆ ಸಕಲ ಜಗತ್ಕಾರಣವಿಲ್ಲದ ಕಾರಣ ಅದನ್ನು ಸಂಶಯಕೋಟಿಯಲ್ಲಿ ಸೇರಿಸಲಾಗದು. ಈ ಶ್ರುತಿಪ್ರಕರಣಗಳಲ್ಲಿ ಕಾರಣತ್ವವು 'ತತ್' ಪದಾರ್ಥದಲ್ಲಿ ಪ್ರತೀತವಾಗುತ್ತಿದೆ. ಆದರೆ 'ತದೈಕ್ಷತ' ಎಂಬ ಶ್ರುತಿಯಿರುವುದರಿಂದ ಜಡಪ್ರಕೃತಿಯಲ್ಲಿ ಇಂತಹ ಕಾರಣತ್ವವು ವಿರುದ್ಧವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. 'ಬಹು ಸ್ಯಾಂ ಪ್ರಜಾಯೇಯ' ಎಂಬುದಾಗಿ ಪರಮಾತ್ಮನಲ್ಲಿ ಅಸಂಭಾವಿತವಾದ ಉಪಾದಾನಕಾರಣತ್ವವೂ ಸಹ ಶ್ರುತಿಯಲ್ಲಿಯೇ ಪ್ರಯುಕ್ತವಾದ್ದರಿಂದ ಪರಮಾತ್ಮನಲ್ಲಿಯೂ ಇಂತಹ ಕಾರಣತ್ವವು ಅಸಂಭಾವಿತವಾಗುತ್ತದೆಂಬ ದೋಷವು ಸಮಾನವಾಗಿದೆ. ಆದ್ದರಿಂದ 'ತದೈಕ್ಷತ' ಎಂಬ ಶ್ರುತಿಯು ಜಡಪ್ರಕೃತಿಯ ಕಾರಣತ್ವಕ್ಕೆ ಬಾಧಕವಾಗುವುದಿಲ್ಲ.

## दहराधिकरणम् (१।३।५)

**न्यायविवरणम् – लिङ्गं हृत्पद्मस्थिततत्वं साधारणम् ॥ ५ ॥**

ಹೃತ್ಪದ್ಮಸ್ಥಿತತ್ವವೆಂಬ ಲಿಂಗವು ವಿಷ್ಣು ಹಾಗೂ ಆಕಾಶ ಜೀವರಲ್ಲಿ ಸಾಧಾರಣವಾಗಿದೆ.

**टीका – 'दहर उत्तरेभ्यः' इत्यत्र साधारणं लिङ्गं विचार्यमित्युक्तम् । तल्लेशतो विवृणोति – लिङ्गमिति ॥ कुत्र कथं चेत्याद्याकाङ्क्षानिवारणमस्माभिरन्यत्र कृतमनुसन्धेयम् । इह विचार्यमिति सम्बन्धः ॥ ५ ॥**

'ದಹರ ಉತ್ತರೇಭ್ಯಃ' ಎಂಬ ಸೂತ್ರದಲ್ಲಿ ಉಭಯಸಾಧಾರಣವಾದ ಲಿಂಗವನ್ನು ವಿಚಾರ ಮಾಡುತ್ತೇವೆಂದು ಹೇಳಿದ್ದಾರೆ. ಅದನ್ನೇ ಲೇಶತಃ ವಿವರಿಸುತ್ತಿದ್ದಾರೆ 'ಲಿಂಗಮ್' ಇತ್ಯಾದಿ ವಾಕ್ಯಗಳಿಂದ. ಹೃತ್ಪದ್ಮಸ್ಥಿತತ್ವವೆಂಬ ಲಿಂಗವು ಉಭಯಸಾಧಾರಣವಾಗಿದೆಯೆಂದಷ್ಟೇ ಮೂಲದಲ್ಲಿ ಹೇಳಿದ್ದಾರೆ. ಎಲ್ಲಿ ಸಾಧಾರಣವಾಗಿದೆ, ಹೇಗೆ ಸಾಧಾರಣವಾಗಿದೆಯೆಂಬುದನ್ನು ತತ್ವಪ್ರಕಾಶಿಕಾದಿಗಳಲ್ಲಿ ಹೇಳಿದಂತೆ ತಿಳಿದುಕೊಳ್ಳಬೇಕು. 'ವಿಚಾರ್ಯಂ' ಎಂಬುದನ್ನು ಇಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು.

## अनुकृत्यधिकरणम् (१।३।६)

**न्यायविवरणम् – 'कथं नु तद्विजानीयाम्' इत्यानुकूल्येन ग्रहणं कस्येति विचार्यमनुग्रहः ॥ ६ ॥**

ಯಾವ ಉಪಾಯದಿಂದ ಅದನ್ನು ತಿಳಿಯುವೆನು ಎಂಬುದಾಗಿ ಜ್ಞಾನಕ್ಕಾಗಿ ಪ್ರಾರ್ಥಿತತ್ವ ಎಂಬ ಆನುಕೂಲ್ಯೇನ ಗೃಹ್ಯಮಾಣತ್ವರೂಪವಾದ ಲಿಂಗವನ್ನು ಈ ಅಧಿಕರಣದಲ್ಲಿ ವಿಚಾರ ಮಾಡುತ್ತಿದ್ದಾರೆ. ಈ ಆನುಕೂಲ್ಯೇನಗೃಹ್ಯಮಾಣತ್ವರೂಪವಾದ ಲಿಂಗವು ಜ್ಞಾನಿಗಳ ಸುಖವನ್ನು ವಿಷಯೀಕರಿಸುತ್ತಿದೆಯೋ ? ವಿಷ್ಣುವನ್ನು ವಿಷಯೀಕರಿಸುತ್ತದೋ ? ಎಂಬುದಾಗಿ ಅನುಗ್ರಹವು ಯದ್ವಿಷಯಕವಾಗಿದೆ ಎಂದು ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಹೀಗೆ 'ಅನುಗ್ರಹಃ' ಎಂಬ ಲಿಂಗವು ಉಭಯಸಾಧಾರಣವೆಂದು ತಿಳಿಯಬೇಕು.

**टीका – 'अनुकृतेस्तस्य च' इत्यत्रानुग्रहः साधारणो विचार्य इत्युक्तम् । तद्विवृणोति ॥ कथं न्विति ॥ इहानुग्रह इत्यनुवादेनानुकूल्येन ग्रहणमिति व्याख्यानम् ।**

'ಓಂ ಅನುಕೃತೇಸ್ತಸ್ಯ ಚ' ಎಂಬ ಸೂತ್ರದಲ್ಲಿ 'ಅನುಗ್ರಹಃ' ಎಂಬ ಧರ್ಮವು ಉಭಯಸಾಧಾರಣವಾದ್ದರಿಂದ ವಿಚಾರ ಮಾಡಲು ಅರ್ಹವಾಗಿದೆಯೆಂದು ಹೇಳಿರುತ್ತಾರೆ. ಅದನ್ನೇ 'ಕಥಂನು' ಇತ್ಯಾದಿ ಮೂಲದಿಂದ ವಿವರಿಸುತ್ತಿದ್ದಾರೆ. 'ಅನುಗ್ರಹಃ' ಎಂದು ಅನುವಾದ ಮಾಡಿ ಆನುಕೂಲ್ಯೇನ 'ಗ್ರಹಣಂ' ಎಂಬುದರಿಂದ ಅದನ್ನೇ ವ್ಯಾಖ್ಯಾನ ಮಾಡಿದ್ದಾರೆ.

**आनुकूल्येनाभिलषितज्ञानतया ग्रहणमुच्चारणं स्वीकरणं वा । तस्योदाहरणवाक्यस्थताप्रदर्शनाय कथं न्विति वाक्योदाहरणं ज्ञातव्यम् । तत्सर्वथा कथं नु केनोपायेन जानीयामहमिति प्रतीयमानानुकूल्येन ग्रहणमनुग्रहः इति सम्बन्धः ।**

ಆನುಕೂಲ್ಯೇನ = ಅಭಿಲಷಿತವಾದ ಜ್ಞಾನದಿಂದ, ಗ್ರಹಣಂ = ಉಚ್ಚರಿಸುವಿಕೆ ಅಥವಾ ಸ್ವೀಕರಿಸುವಿಕೆ ಎಂದರ್ಥ. ವಿಷಯವಾಕ್ಯದಲ್ಲಿ ಇದನ್ನು ತೋರಿಸುತ್ತಿದ್ದಾರೆ 'ಕಥಂನು' ಇತ್ಯಾದಿಯಾಗಿ. ಇದು ಈ ಅಧಿಕರಣದ ವಿಷಯವಾಕ್ಯವಾಗಿದೆ. ಅಂತಹ ವಸ್ತುವನ್ನು ಯಾವ ಉಪಾಯದಿಂದ ನಾನು ತಿಳಿಯಲು ಸಾಧ್ಯ? ಎಂಬುದಾಗಿ ಆನುಕೂಲ್ಯೇನ ಗ್ರಹಣವೇ 'ಅನುಗ್ರಹಃ' ಎನಿಸುತ್ತದೆಂದು ಅನ್ವಯ ಮಾಡಿಕೊಳ್ಳಬೇಕು.

विचारप्रकारप्रदर्शनं 'कस्येति विचार्यम्' इति । कस्य किं विषयं, किं ज्ञानिसुखविषयमुत विष्णुविषयमित्यर्थः । अत्रापि लिङ्गमेव विचार्यम् । अनुग्रहणं तु तस्यैव विशेषतः प्रतिपत्त्यर्थम् । साधारण्यहेत्वादि स्वयमेवोहनीयमिति भावः ॥ ६ ॥

ವಿಚಾರ ಮಾಡುವ ಪ್ರಕಾರವನ್ನು 'ಕಸ್ಯೇತಿ ವಿಚಾರ್ಯಮ್' ಎಂಬುದರಿಂದ ತೋರಿಸಿದ್ದಾರೆ. 'ಕಸ್ಯ' ಎಂದರೆ ಯಾವ ವಿಷಯಕವಾಗಿದೆ ಎಂದರ್ಥ. ಜ್ಞಾನಿಸುಖವಿಷಯಕವಾಗಿದೆಯೋ? ಅಥವಾ ವಿಷ್ಣುವಿಷಯಕವಾಗಿದೆಯೋ? ಎಂದು ತಿಳಿಯಬೇಕು. ಇಲ್ಲಿಯೂ ಸಹ ಲಿಂಗದ ವಿಚಾರವೇ ಪ್ರಸಕ್ತವಾಗಿದೆ. 'ಅನುಗ್ರಹ' ಎಂದರೆ ವಿಶೇಷ ಜ್ಞಾನಕ್ಕೋಸ್ಕರ ಎಂದರ್ಥ. ಉಭಯಸಾಧಾರಣವಾದ ಹೇತು ಮೊದಲಾದವುಗಳನ್ನು ಸ್ವತಃ ಊಹಿಸಿಕೊಳ್ಳಬೇಕು.

## वामनाधिकरणम् (१।३।७)

### वामनाधिकरणमारभ्य सुषुप्त्यधिकरणपर्यन्तम् १-३- ७-१३

**न्यायविवरणम् – पुनः शब्दाः ईशानो वज्रो ज्योतिराकाश इति ।**

ಪುನಃ ವಾಮನಾಧಿಕರಣದಲ್ಲಿ 'ಈಶಾನ' ಶಬ್ದವು, ಕಂಪನಾಧಿಕರಣದಲ್ಲಿ 'ವಜ್ರ' ಎಂಬ ಶಬ್ದವು, ಜ್ಯೋತಿರಧಿಕರಣದಲ್ಲಿ 'ಜ್ಯೋತಿಃ' ಎಂಬ ಶಬ್ದವು, ಆಕಾಶಾಧಿಕರಣದಲ್ಲಿ 'ಆಕಾಶ' ಎಂಬ ಶಬ್ದವು ವಿಚಾರ ಮಾಡಲು ಅರ್ಹವಾಗಿವೆ.

टीका – 'पुनः शब्दाः' इत्युत्तराधिकरणेषु नामात्मकानां शब्दानां साधारणानां विचार्यत्वमित्युक्तम् । तद्विवृणोति – पुनरिति ॥ न केवलं भूराद्यधिकरणेषु पुनरुत्तरेष्वपि शब्दा विचार्या इत्यर्थः । तत्र 'शब्दादेव प्रमितः' इत्यत्रेशानशब्दः (७) 'कम्पनात्' इत्यत्र 'वज्र' इति शब्दः, (१०) 'ज्योतिर्दर्शनात्' इत्यत्र 'ज्योतिः' इति शब्दः, (११) 'आकाशोऽर्थान्तरत्वादिव्यपदेशात्' इत्यत्र 'आकाश' इति शब्दः (१२) इत्यर्थः ।

'ಪುನಃ ಶಬ್ದಾಃ' ಎಂಬುದಾಗಿ ಮುಂದಿನ ಅಧಿಕರಣಗಳಲ್ಲಿ ನಾಮಾತ್ಮಕವಾದ ಶಬ್ದಗಳು ಉಭಯ-ಸಾಧಾರಣವಾದ್ದರಿಂದ ವಿಚಾರಕ್ಕೆ ಅರ್ಹವಾಗಿವೆಯೆಂದು ಹೇಳಿರುತ್ತಾರೆ. ಅದನ್ನೇ 'ಪುನಃ' ಇತ್ಯಾದಿ ಮೂಲದಿಂದ ವಿವರಿಸುತ್ತಿದ್ದಾರೆ. ಕೇವಲ ಹಿಂದಿನ ಅಧಿಕರಣಗಳಲ್ಲಷ್ಟೇ ಅಲ್ಲ. ಮುಂದಿನ ಅಧಿಕರಣ-ಗಳಲ್ಲಿಯೂ ಶಬ್ದಗಳು ವಿಚಾರಕ್ಕೆ ಅರ್ಹವಾಗಿವೆಯೆಂದು ತಿಳಿಯಬೇಕು. 'ಶಬ್ದಾದೇವ ಪ್ರಮಿತಃ' ಎಂಬ ವಾಮನಾಧಿಕರಣದಲ್ಲಿ 'ಈಶಾನ' ಎಂಬ ಶಬ್ದವು 'ಕಂಪನಾತ್' ಎಂಬ ಕಂಪನಾಧಿಕರಣದಲ್ಲಿ 'ವಜ್ರ' ಎಂಬ ಶಬ್ದವು, 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣದಲ್ಲಿ 'ಜ್ಯೋತಿಸ್ಸ್(ಸ್)' ಶಬ್ದವು ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' ಎಂಬ ಅಧಿಕರಣದಲ್ಲಿ 'ಆಕಾಶ' ಎಂಬ ಶಬ್ದವು ವಿಚಾರಕ್ಕೆ ಅರ್ಹವಾಗಿವೆಯೆಂದರ್ಥ.

**देवताधिकरणस्यापशूद्राधिकरणस्य च न समन्वयविषयत्वमिति ज्ञापनाय न तद्विषयौ दर्शितौ । पूर्वोत्तरपक्षन्यायानुक्तिरप्यत एव । वेदविद्याधिकारस्तु तत्र विषयो ज्ञातव्यः ।।**

ದೇವತಾಧಿಕರಣದಲ್ಲಿ ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂದು ಮತ್ತು ಅಪಶೂದ್ರಾಧಿಕರಣದಲ್ಲಿ ಶೂದ್ರಾದಿಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳಿದ್ದರಿಂದ ಸಮನ್ವಯಾಧ್ಯಾಯದಲ್ಲಿ ಈ ಎರಡು ಅಧಿಕರಣಗಳಲ್ಲಿ ಸಮನ್ವಯವನ್ನು ಹೇಳದ ಕಾರಣ ಅವುಗಳನ್ನು ಇಲ್ಲಿ ಸೇರಿಸಿಲ್ಲ. ಮತ್ತು ಪೂರ್ವಪಕ್ಷಸಿದ್ಧಾಂತನ್ಯಾಯಗಳನ್ನೂ ಕೂಡ ಹೇಳಿರುವುದಿಲ್ಲ. ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದು ದೇವತಾಧಿಕರಣದ ವಿಷಯವಾಗಿದೆ. ಶೂದ್ರಾದಿಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದು ಅಪಶೂದ್ರಾಧಿಕರಣದ ವಿಷಯವಾಗಿದೆಯೆಂದು ತಿಳಿಯಬೇಕು.

**न्यायविवरणम् – लिङ्गं स्वप्नादिदर्शनं कस्येति ।। १३ ।।**

ಸ್ವಪ್ನಾದಿದರ್ಶನರೂಪವಾದ ಲಿಂಗವು ಜೀವನಿಗೋ, ವಿಷ್ಣುವಿಗೋ ಎಂದು ವಿಚಾರ ಮಾಡಬೇಕು.

**टीका – 'लिङ्गशब्दौ' इत्युत्तरयोरधिकरणयोर्विषयौ दर्शितौ । तत्र 'सुषुप्त्युत्क्रान्त्योर्भेदेन' इत्यत्र किं लिङ्गं विचार्यमित्यत आह – लिङ्गमिति ।। 'कस्येति' विचारप्रकारप्रदर्शनम् । 'किं जीवस्योत विष्णोः' इति विचार्यमिति शेषः ।। १३ ।।**

'ಲಿಂಗಶಬ್ದೌ' ಎಂಬುದರಿಂದ ಮುಂದಿನ ಎರಡು ಅಧಿಕರಣಗಳ ವಿಷಯಗಳನ್ನು ತೋರಿಸಿದ್ದಾರೆ. ಅವರಲ್ಲಿ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಸೂತ್ರದಲ್ಲಿ ಲಿಂಗದ ವಿಚಾರವು ಪ್ರಸಕ್ತವಾಗಿದೆಯೇನು? ಎಂಬ ಪ್ರಶ್ನೆಗೆ 'ಲಿಂಗಮ್' ಇತ್ಯಾದಿ ಮೂಲದಿಂದ ಉತ್ತರಿಸಿದ್ದಾರೆ. 'ಕಸ್ಯ' ಎಂಬುದು ವಿಚಾರಪ್ರಕಾರದ ಪ್ರದರ್ಶನರೂಪವಾಗಿದೆ. ಜೀವನಿಗೋ ಅಥವಾ ವಿಷ್ಣುವಿಗೋ ಎಂಬುದೇ ಅಲ್ಲಿ ಮಾಡುವಂತಹ ವಿಚಾರವಾಗಿದೆ.

## ब्राह्मणाधिकरणम् २-३-१४

**न्यायविवरणम् – शब्दो ब्राह्मण इति ॥ १४ ॥**

'ಪತ್ಯಾದಿಶಬ್ದೇಭ್ಯಃ' ಎಂಬ ಬ್ರಾಹ್ಮಣಾಧಿಕರಣದಲ್ಲಿ 'ನಿತ್ಯಮಹಿಮತ್ವ' ಎಂಬ ಲಿಂಗದಿಂದಲೂ 'ಅಜಃ' ಎಂಬ ಶ್ರುತಿಯಿಂದಲೂ ವಿಷ್ಣು ಹಾಗೂ ಚತುರ್ಮುಖ ಇಬ್ಬರಲ್ಲಿಯೂ ಸಾಧಾರಣವಾದ 'ಬ್ರಾಹ್ಮಣ' ಎಂಬ ಶಬ್ದವನ್ನು ವಿಚಾರ ಮಾಡಲಾಗಿದೆ.

टीका – 'पत्यादिशब्देभ्यः' इत्यत्र कश्शब्दो विचार्य इत्यत आह – शब्द इति ॥

इतिशब्दोऽर्थाद्व्यवच्छिद्यस्वरूपे व्यवस्थापनाय । इहाऽधिकरणेषु क्रमेण पूर्वपक्षन्यायाः सङ्ग्रहेणोक्ताः ।

''बाहुल्यं लिङ्गशब्दानामनुक्तिश्च विरुद्धता ।
अदृष्टिरन्वयाऽभावो विपरीतश्रुतिभ्रमः ॥
लिङ्गाऽवकाशराहित्यभ्रमस्तादृग्द्वयं तथा ।
बहुतादृक्त्वमुक्तस्य विरोधोऽर्थात्तथागतिः ॥

समस्तमेतदित्यत्र पूर्वपक्षेषु युक्तयः' इति । तानि पदानि विवृण्वँस्तावत् 'बाहुल्यं लिङ्गशब्दानाम्' इति प्रथमाऽधिकरण-पूर्वपक्षन्यायं विवृणोति – यस्मिन्द्यौरिति ॥

॥ इति श्रीमदानन्दतीर्थभगवत्पादाचार्यविरचितन्यायविवरणपञ्चिका
जयतीर्थभिक्षुविरचिता समाप्ता ॥

'ಇತಿ' ಶಬ್ದವು ಅರ್ಥಾತ್ ವ್ಯವಚ್ಛಿದ್ಯಸ್ವರೂಪದ ವ್ಯವಸ್ಥೆಗೋಸ್ಕರವೆಂದು ತಿಳಿಯಬೇಕು. ಈ ಎಲ್ಲಾ ಅಧಿಕರಣಗಳ ಪೂರ್ವಪಕ್ಷ ನ್ಯಾಯವನ್ನು ಕ್ರಮವಾಗಿ ಸಂಗ್ರಹಿಸಿದ್ದಾರೆ. ಅಂದರೆ ಈ ಪಾದದ ಎಲ್ಲಾ ಅಧಿಕರಣಗಳನ್ನು ವ್ಯಾಖ್ಯಾನ ಮಾಡದಿರುವುದರಿಂದ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳನ್ನು ಹೇಳಿದ್ದರಿಂದಲೇ ವ್ಯಾಖ್ಯಾನ ಮಾಡಿದಂತಾಯಿತೆಂದು ತಿಳಿಯಬೇಕು. ಆದ್ದರಿಂದ ಈ ಪಾದದ ಅಧಿಕರಣಗಳ ಪೂರ್ವಪಕ್ಷನ್ಯಾಯಗಳನ್ನು ಸಂಗ್ರಹಮಾಡಿ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ಬಾಹುಲ್ಯಂ ಲಿಂಗಶಬ್ದಾನಾಮ್ ಅನುಕ್ತಿಶ್ಚ ವಿರುದ್ಧತಾ ।
ಅದೃಷ್ಟಿರನ್ವಯಾಭಾವೋ ವಿಪರೀತಶ್ರುತಿಭ್ರಮಃ ॥
ಲಿಂಗಾವಕಾಶರಾಹಿತ್ಯಭ್ರಮಸ್ತಾದೃಗ್ ದ್ವಯಂ ತಥಾ ।
ಬಹುತಾದ್ಯಕ್ತ್ವಮುಕ್ತಸ್ಯ ವಿರೋಧೋಽರ್ಥಾನ್ತಥಾಗತಿಃ ॥
ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ॥

ಹೀಗೆ ಪೂರ್ವಪಕ್ಷನ್ಯಾಯಗಳು ಹೇಳಲ್ಪಟ್ಟಿವೆ. ಇಲ್ಲಿರುವ ಪದಗಳನ್ನೇ ವಿವರಿಸುತ್ತಾ 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬುದಾಗಿ ಮೊದಲನೆಯ ಪೂರ್ವಪಕ್ಷದ ನ್ಯಾಯವನ್ನು ವಿವರಿಸುತ್ತಿದ್ದಾರೆ 'ಯಸ್ಮಿನ್‌ದ್ಯೌಃ' ಇತ್ಯಾದಿ ಮೂಲದಿಂದ.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ನ್ಯಾಯವಿವರಣವೆಂಬ ಗ್ರಂಥಕ್ಕೆ ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ ನ್ಯಾಯವಿವರಣಪಂಚಿಕಾ ಎಂಬ ವ್ಯಾಖ್ಯಾನವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

(ಶ್ರೀಮಟ್ಟೀಕಾಕೃತ್ಪಾದರು ನ್ಯಾಯವಿವರಣ ಗ್ರಂಥಕ್ಕೆ ಟೀಕೆಯನ್ನು ಬರೆದಿದ್ದಾರೆ. ಆದರೆ ಕೇವಲ ಮೂರು ಪಾದಗಳಿಗೆ ಮಾತ್ರ. ಉಳಿದೆಲ್ಲಾ ಪಾದಗಳಿಗೆ ಶ್ರೀ ರಘೂತ್ತಮತೀರ್ಥಶ್ರೀಪಾದಂಗಳವರು ಟೀಕೆಯನ್ನು ಬರೆದಿದ್ದಾರೆ. ತಮ್ಮ ಶಿಷ್ಯರ ಉದ್ಧಾರಕ್ಕೋಸ್ಕರ ಟೀಕಾಕೃತ್ಪಾದರು ಗ್ರಂಥವನ್ನು ತಾವು ಮಾರ್ಗದರ್ಶನ ಮಾಡಿ ಉಳಿದೆಲ್ಲ ವ್ಯಾಖ್ಯಾನವನ್ನು ಶ್ರೀ ರಘೂತ್ತಮತೀರ್ಥಶ್ರೀಪಾದಂಗಳವರ ದೆಸೆಯಿಂದ ಬರೆಸಿದ್ದಾರೆ. ಶ್ರೀಮಟ್ಟೀಕಾಕೃತ್ಪಾದರು ರಚನೆ ಮಾಡಿದ 'ನ್ಯಾಯವಿವರಣಾ ಟೀಕಾ' ಎಂಬ ಗ್ರಂಥವನ್ನು ಅಪರಿಪೂರ್ಣವೆಂದು ತಿಳಿಯಬಾರದು. ತಾವು ಮಂಗಳಾಚರಣೆಯನ್ನು ಮಾಡುವಾಗ ಕೇವಲ ಮೂರು ಪಾದಗಳಿಗೆ ಟೀಕೆಯನ್ನು ಬರೆಯುತ್ತೇನೆಂಬ ಸಂಕಲ್ಪದಿಂದಲೇ ಮಂಗಳಾಚರಣೆಯನ್ನು ಮಾಡಿ, ತಮ್ಮ ಸಂಕಲ್ಪವನ್ನು ಪರಿಪೂರ್ಣ-ಗೊಳಿಸಿರುತ್ತಾರೆ. ಉಳಿದ ಭಾಗಗಳ ಟೀಕೆಯನ್ನು ಶ್ರೀರಘೂತ್ತಮತೀರ್ಥಶ್ರೀಪಾದಂಗಳವರು ಬರೆಯ-ಬೇಕೆಂಬುದೇ ಇವರ ಸಂಕಲ್ಪವಾಗಿರುತ್ತದೆಂಬುದನ್ನು ಜಿಜ್ಞಾಸುಗಳು ತಿಳಿದುಕೊಳ್ಳಬೇಕು.)

॥ ಶ್ರೀಗುರುಭ್ಯೋ ನಮಃ ॥

॥ಶ್ರೀ ರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ ।

## ಅಥ ಶ್ರೀಶ್ರೀ ರಘೂತ್ತಮತೀರ್ಥಶ್ರೀಪಾದಂಗಳವರಿಂದ ವಿರಚಿತವಾದ ನ್ಯಾಯವಿವರಣ ಟೀಕೆ

श्रीरघूत्तमतीर्थविरचितः

# भावबोधः

**भावबोधः –**

**गुणादिसद्रत्नयुतं क्षयादिदोषोज्झितं वेदनदीभिराप्यम् ।**
**कृपापयस्कं हरिदुग्धवार्धिं श्रये स्वपादप्लवमुक्तगम्यम् ॥ १ ॥**

ಗುಣಾದಿಸದ್ರತ್ನಯುತಂ ಕ್ಷಯಾದಿದೋಷೋಜ್ಝಿತಂ ವೇದನದೀಭಿರಾಪ್ಯಮ್ ।
ಕೃಪಾಪಯಸ್ಕಂ ಹರಿದುಗ್ಧವಾರ್ಧಿಂ ಶ್ರಯೇ ಸ್ವಪಾದಪ್ಲವಮುಕ್ತಗಮ್ಯಮ್ ॥ ೧ ॥

ಸಮುದ್ರವು ರತ್ನಗಳಿಂದ ಕೂಡಿರುತ್ತದೆ ಎಂದು ಹ್ರಾಸವಾಗುವುದಿಲ್ಲ. ಎಲ್ಲ ನದಿಗಳು ಸಮುದ್ರವನ್ನೇ ಸೇರುತ್ತವೆ. ಹಡಗು ಮೊದಲಾದವುಗಳಿಂದ ಹೊಂದಲು ಯೋಗ್ಯವಾಗಿದೆ. ಶ್ರೀಹರಿಯೂ ಸಹ ಕ್ಷೀರಸಮುದ್ರದಂತಿದ್ದಾನೆ. ಕಾರುಣ್ಯವೆಂಬ ಕ್ಷೀರದಿಂದ ಕೂಡಿದ್ದಾನೆ. ಸದ್ಗುಣಗಳೆಂಬ ಒಳ್ಳೆಯ ರತ್ನಗಳಿಂದ ಸಹಿತನಾಗಿದ್ದಾನೆ. ಎಂದೂ ನಾಶವಿಲ್ಲದವನಾಗಿದ್ದಾನೆ. ವೇದಗಳೆಂಬ ನದಿಗಳಿಂದ ಹೊಂದಲು ಯೋಗ್ಯನಾಗಿದ್ದಾನೆ. ತನ್ನ ಪಾದಗಳೆಂಬ ಹಡಗುಗಳಿಂದ ಮುಕ್ತರಿಗೆ ಗಮ್ಯನಾಗಿದ್ದಾನೆ. ಇಂತಹ ಶ್ರೀಹರಿಯನ್ನು ಅನನ್ಯವಾಗಿ ಶರಣಾಗುತ್ತೇನೆ.

**सुशास्त्रप्रभया स्वस्य परेषां च प्रकाशकम् ।**
**भजतामिष्टदं व्यासचिन्तामणिमहं भजे ॥ २ ॥**

ಸುಶಾಸ್ತ್ರಪ್ರಭಯಾ ಸ್ವಸ್ಯ ಪರೇಷಾಂ ಚ ಪ್ರಕಾಶಕಮ್ ।
ಭಜತಾಮಿಷ್ಟದಂ ವ್ಯಾಸಚಿಂತಾಮಣಿಮಹಂ ಭಜೇ ॥ ೨ ॥

ಚಿಂತಾಮಣಿಯು ತನ್ನ ಪ್ರಭೆಯಿಂದ ತನ್ನನ್ನು ಪ್ರಕಾಶಿಸುವುದಷ್ಟೇ ಅಲ್ಲದೇ ಬೇರೆ ಪದಾರ್ಥಗಳನ್ನೂ ಸಹ ಪ್ರಕಾಶಪಡಿಸುತ್ತದೆ. ಭಜಿಸುವವರಿಗೆ ಬೇಡಿದ್ದೆಲ್ಲವನ್ನೂ ನೀಡುತ್ತದೆ. ಅದರಂತೆ ಶ್ರೀವೇದವ್ಯಾಸದೇವರೂ ಸಹ ತಾತ್ವಿಕವಾದ ಶಾಸ್ತ್ರಗಳ ಪ್ರಭೆಯಿಂದ ತಮ್ಮನ್ನು ಹಾಗೂ ಲಕ್ಷ್ಮೀದೇವೀ ಮೊದಲಾದವರನ್ನು ಪ್ರಕಾಶ ಪಡಿಸಿದ್ದಾರೆ. ಬೇಡುವವರಿಗೆಲ್ಲಾ ಇಷ್ಟಪ್ರದರಾಗಿದ್ದಾರೆ. ಇಂತಹ ವೇದ ವ್ಯಾಸದೇವರೆಂಬ ಚಿಂತಾಮಣಿಯನ್ನು ಆಶ್ರಯಿಸುತ್ತೇನೆ.

**वेदभेदविविधोरुसुशाखं बोधपूर्वकगुणाढ्यफलेतम् ।**
**आदरेण भजतां फलदं श्रीमोदतीर्थसुरभूरुहमीडे ॥ ३ ॥**

ವೇದಭೇದವಿವಿಧೋರುಸುಶಾಖಂ ಬೋಧಪೂರ್ವಕಗುಣಾಢ್ಯಫಲೇತಮ್ ।
ಆದರೇಣ ಭಜತಾಂ ಫಲದಂ ಶ್ರೀಮೋದತೀರ್ಥಸುರಭೂರುಹಮೀಡೇ ॥ ೩ ॥

ಕಲ್ಪವೃಕ್ಷವು ಅನೇಕ ಶಾಖೆಗಳಿಂದ ಕೂಡಿರುತ್ತದೆ. ಹಣ್ಣುಗಳಿಂದ ಶೋಭಿತವಾಗಿರುತ್ತದೆ. ಆದರದಿಂದ ಭಜಿಸುವವರಿಗೆ ಫಲವನ್ನು ನೀಡುತ್ತದೆ. ಇದರಂತೆ ಶ್ರೀಮದಾಚಾರ್ಯರು ವಿವಿಧವಾದ ವೇದಗಳೆಂಬ ಶಾಖೆಗಳಿಂದ ಕೂಡಿದ್ದಾರೆ. ಜ್ಞಾನವೇ ಮೊದಲಾದ ಸದ್ಗುಣಗಳೆಂಬ ಫಲಗಳಿಂದ ಶೋಭಿತರಾಗಿದ್ದಾರೆ. ಆದರದಿಂದ ಭಜಿಸುವ ಭಕ್ತರಿಗೆ ಫಲವನ್ನು ನೀಡುವ ಶ್ರೀಮದಾಚಾರ್ಯರೆಂಬ ಕಲ್ಪವೃಕ್ಷವನ್ನು ಆಶ್ರಯಿಸುತ್ತೇನೆ.

**सुगुणनरहरिश्रीमाधवाक्षोभ्यरूपान्**
**हरिभजननियुक्ताञ्छुद्धधर्मार्थकामान् ।**
**सुजननियमनार्थं यः प्रसाध्यापरोक्षम्**
**स भवतु मम भूत्यै पद्मनाभाख्ययोगी ॥ ४ ॥**

ಸುಗುಣನರಹರಿಶ್ರೀಮಾಧವಾಕ್ಷೋಭ್ಯರೂಪಾನ್
ಹರಿಭಜನನಿಯುಕ್ತಾಂಚ್ಛುದ್ಧಧರ್ಮಾರ್ಥಕಾಮಾನ್ ।
ಸುಜನನಿಯಮನಾರ್ಥಂ ಯಃ ಪ್ರಸಾಧ್ಯಾಪರೋಕ್ಷಮ್
ಸ ಭವತು ಮಮ ಭೂತ್ಯೈ ಪದ್ಮನಾಭಾಖ್ಯಯೋಗೀ ॥ ೪ ॥

ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು ಮತ್ತು ಶ್ರೀ ಅಕ್ಷೋಭ್ಯತೀರ್ಥರು ಸದ್ಗುಣಗಳಿಂದ ಶೋಭಿತರಾಗಿ ಹರಿಭಜನೆಯಲ್ಲಿ ನಿರತರಾಗಿದ್ದಾರೆ. ಸಾತ್ವಿಕವಾದ ಧರ್ಮ ಮತ್ತು ಅರ್ಥಗಳಲ್ಲಿ ಕಾಮನೆಯುಳ್ಳವರಾಗಿದ್ದಾರೆ. ಇವರುಗಳನ್ನು ಮತ್ತು ಸಜ್ಜನರ ನಿಯಮನ ಮಾಡುವುದಕ್ಕಾಗಿ ಅಪರೋಕ್ಷಜ್ಞಾನವನ್ನು ಪಡೆದಿರುವ ಪದ್ಮನಾಭತೀರ್ಥರೆಂಬ ಯೋಗಿಗಳನ್ನು ನನ್ನ ಉದ್ಧಾರವೆಂಬ ಸಂಪತ್ತಿಗಾಗಿ ಆಶ್ರಯಿಸುತ್ತೇನೆ.

**तारकूर्मधृतसूत्रभूभृतावेष्टितेन पवनोक्तिभोगिना ।**
**(तारकूर्मधृतमध्वशुद्धगीर्भोगिवेष्टितसुसूत्रभूभृता)**
**यो विमथ्य निगमोदधेः सुधामाप तं जयमुनीन्द्रमाभजे ।। ५ ।।**

ತಾರಕೂರ್ಮಧೃತಸೂತ್ರಭೂಭೃತಾವೇಷ್ಟಿತೇನ ಪವನೋಕ್ತಿಭೋಗಿನಾ ।
(ತಾರಕೂರ್ಮಧೃತಮಧ್ವಶುದ್ಧಗೀರ್ಭೋಗಿವೇಷ್ಟಿತಸುಸೂತ್ರಭೂಭೃತಾ)
ಯೋ ವಿಮಥ್ಯ ನಿಗಮೋದಧೇಃ ಸುಧಾಮಾಪ ತಂ ಜಯಮುನೀಂದ್ರಮಾಭಜೇ ॥ ೫ ॥

ಇಂದ್ರದೇವರು ಹಿಂದೆ ಸಮುದ್ರಮಥನ ಮಾಡಿದ್ದರು. ಕೂರ್ಮರೂಪಿಯಾದ ಭಗವಂತನಿಂದ ಧರಿಸಲ್ಪಟ್ಟ ಮಂದರಪರ್ವತವು ವಾಸುಕಿಯಿಂದ ಕಟ್ಟಲ್ಪಟ್ಟು ಕ್ಷೀರಸಮುದ್ರವನ್ನು ಮಥಿಸಿದಾಗ ಅಮೃತವು ದೊರೆಯಿತು. ಅಂತಹ ಅಮೃತವನ್ನು ಇಂದ್ರದೇವರು ಪಡೆದರು. ಇದರಂತೆ

ಶ್ರೀ ಜಯತೀರ್ಥರೆಂಬ ಮುನೀಂದ್ರರು ಪ್ರಣವವೆಂಬ ಕೂರ್ಮದಿಂದ ಧರಿಸಲ್ಪಟ್ಟ ಶ್ರೀಮದಾಚಾರ್ಯರ ಮಾತುಗಳೆಂಬ ವಾಸುಕಿಯಿಂದ ಕಟ್ಟಲ್ಪಟ್ಟ ಬ್ರಹ್ಮಸೂತ್ರಗಳೆಂಬ ಮಂದರ-ಪರ್ವತದಿಂದ, ವೇದಗಳೆಂಬ ಕ್ಷೀರಸಮುದ್ರವನ್ನು ಮಥನ ಮಾಡಿದರು. ಇದರಿಂದ ಉದ್ಭವಿಸಿದ, 'ಶ್ರೀಮನ್ನ್ಯಾಯಸುಧಾ' ಎಂಬ ಗ್ರಂಥವನ್ನು ಪಡೆದರು. ಇಂತಹ ಶ್ರೀಜಯತೀರ್ಥಮುನಿಗಳನ್ನು ನಿರಂತರ ಭಜಿಸುತ್ತೇನೆ.

**मध्वोक्तिद्युनदीजयार्यशुभवाक्सूर्यात्मजासङ्गमे**
**व्याख्यास्नानमहो विधाय नृहरेः प्राप्य प्रसादं परम् ।**
**प्रापुर्ये कृतकृत्यतां गतमला विद्याधिराजादयो**
**योगीशाः कृपयन्तु ते जयमुनेर्भावस्य बोधाय मे ।। ६ ।।**

ಮಧ್ವೋಕ್ತಿದ್ಯುನದೀಜಯಾರ್ಯಶುಭವಾಕ್ಸೂರ್ಯಾತ್ಮಜಾಸಂಗಮೇ
ವ್ಯಾಖ್ಯಾಸ್ನಾಮಹೋ ವಿಧಾಯ ನೃಹರೇಃ ಪ್ರಾಪ್ಯ ಪ್ರಸಾದಂ ಪರಮ್ ।
ಪ್ರಾಪುರ್ಯೇ ಕೃತಕೃತ್ಯತಾಂ ಗತಮಲಾ ವಿದ್ಯಾಧಿರಾಜಾದಯೋ
ಯೋಗಿಶಾಃ ಕೃಪಯಂತು ತೇ ಜಯಮುನೇರ್ಭಾವಸ್ಯ ಬೋಧಾಯ ಮೇ ॥ ೬ ॥

ಶ್ರೀಮದಾಚಾರ್ಯರ ಮಾತುಗಳೆಂಬ ಗಂಗಾನದಿ ಹಾಗೂ ಶ್ರೀಮಟ್ಟೀಕಾಕೃತ್ಪಾದರ ಮಾತುಗಳೆಂಬ ಯಮುನಾನದಿ ಇವುಗಳ ಸಂಗಮದಲ್ಲಿ ವ್ಯಾಖ್ಯಾನವೆಂಬ ಸ್ನಾನವನ್ನು ಮಾಡಿ, ನರಸಿಂಹದೇವರ ಉತ್ತಮಪ್ರಸಾದವನ್ನು ಪಡೆದು ಕೃತಕೃತ್ಯರಾಗಿ ಮನಸ್ಸಿನ ದೋಷಗಳೆಲ್ಲವನ್ನೂ ಪರಿಹರಿಸಿಕೊಂಡ ಶ್ರೀವಿದ್ಯಾಧಿರಾಜರೇ ಮೊದಲಾದ ಯೋಗಿವರ್ಯರು, ನನ್ನ ವಿಷಯದಲ್ಲಿ ಕೃಪೆ ತೋರಲಿ. ಶ್ರೀಮಟ್ಟೀಕಾಕೃತ್ಪಾದರ ಅಭಿಪ್ರಾಯವನ್ನು ತಿಳಿಯುವಂತಹ ಶಕ್ತಿಯನ್ನು ಕೊಡಲಿ.

(ಶ್ರೀಮಟ್ಟೀಕಾಕೃತ್ಪಾದರ ಭಾವವನ್ನು ಬೋಧಿಸುವಂತಹ ಶಕ್ತಿಯನ್ನು ಕೊಡಲಿ ಎಂಬ ಪ್ರಾರ್ಥನೆ-ಗೋಸ್ಕರವೇ ತಮ್ಮ ವ್ಯಾಖ್ಯಾನಕ್ಕೆ ಭಾವಬೋಧ ಎಂಬ ಹೆಸರಿಟ್ಟಿದ್ದಾರೆ.)

**वेदव्याससरोवरे समुदिते वेदोरुनालस्थिते**
**मध्वोक्तिश्रिय आलये विकसिते गोभिर्जयेनस्य तु ।**
**सद्वाक्यादिसुपत्रपूर्वकयुते गुर्वाशुगादर्शिते**
**सूत्राब्जे रघुनाथमुन्यलिवरं वन्दे सुपक्षान्वितम् ।। ७ ।।**

ವೇದವ್ಯಾಸಸರೋವರೇ ಸಮುದಿತೇ ವೇದೋರುನಾಲಸ್ಥಿತೇ
ಮಧ್ವೋಕ್ತಿಶ್ರಿಯ ಆಲಯೇ ವಿಕಸಿತೇ ಗೋಭಿರ್ಜಯೇನಸ್ಯ ತು ।
ಸದ್ವಾಕ್ಯಾದಿಸುಪತ್ರಪೂರ್ವಕಯುತೇ ಗುರ್ವಾಶುಗಾದರ್ಶಿತೇ
ಸೂತ್ರಾಬ್ಜೇ ರಘುನಾಥಮುನ್ಯಲಿವರಂ ವಂದೇ ಸುಪಕ್ಷಾನ್ವಿತಮ್ ॥ ೭ ॥

ದುಂಬಿಯು ಸರೋವರದಲ್ಲಿರುವ ಕಮಲದ ಮಕರಂದವನ್ನು ಪುನಃಪುನಃ ಅನುಭವಿಸುತ್ತದೆ. ಕಮಲವು ಸೂರ್ಯನಿಂದ ಅರಳಿ, ಅನೇಕವಿಧವಾದ ದಳಗಳನ್ನು ಹೊಂದಿ, ಒಳ್ಳೆಯ ಪರಿಮಳದಿಂದ ಕಂಗೊಳಿಸುತ್ತಿರುತ್ತದೆ. ಗಾಳಿಯಿಂದ ಕಮಲದಲ್ಲಿರುವ ಮಕರಂದವನ್ನು ದುಂಬಿಗಳು ಪಡೆಯುತ್ತವೆ. ಆದರಂತೆ ಶ್ರೀರಘುನಾಥತೀರ್ಥರೆಂಬ ದುಂಬಿಯು ಸೂತ್ರಗಳೆಂಬ ಕಮಲದ ಮಕರಂದವನ್ನು ಆಸ್ವಾದಿಸಿದ್ದಾರೆ. ಶ್ರೀವೇದವ್ಯಾಸದೇವರೆಂಬ ಸರೋವರದಲ್ಲಿ ಹುಟ್ಟಿದ, ವೇದಗಳೆಂಬ ನಾಳದಲ್ಲಿರುವ ಶ್ರೀಮದಾಚಾರ್ಯರ ಮಾತುಗಳೆಂಬ ಆಲಯದಲ್ಲಿ ವಿಕಸಿತವಾದ ಟೀಕಾಕೃತ್ಪಾದರ ಮಾತುಗಳೆಂಬ ಸೂರ್ಯನಿಂದ ಅರಳಿದ ಒಳ್ಳೆಯ ಮಾತುಗಳೆಂಬ ದಳಗಳಿಂದ ಕಂಗೊಳಿಸುತ್ತಿರುವ ಗುರುಗಳ ಆಶೀರ್ವಾದವೆಂಬ ಗಾಳಿಯಿಂದ ಪ್ರದರ್ಶಿತವಾದ ಸೂತ್ರಗಳೆಂಬ ಕಮಲದಲ್ಲಿ, ಶ್ರೀರಘುನಾಥತೀರ್ಥರೆಂಬ ದುಂಬಿಯು ಆಸಕ್ತವಾಗಿದೆ. ಎರಡು ರೆಕ್ಕೆಗಳಿಂದ ದುಂಬಿಯು ಕೂಡಿರುವಂತೆ ಇವರೂ ಸಹ ಒಳ್ಳೆಯ ಸಿದ್ಧಾಂತದಿಂದ ಕೂಡಿದ್ದಾರೆ. ಇಂತಹ ಶ್ರೀರಘುನಾಥತೀರ್ಥರನ್ನು ನಮಸ್ಕಾರ ಮಾಡುತ್ತೇನೆ.

**श्रीमध्वशास्त्रं समुदीर्य मेऽस्मिन् विश्वासहेतोः समदर्शयद्यः ।**
**प्रधानसूत्रप्रतिपाद्यमादौ वन्दे गुरुं तं रघुवर्यसञ्ज्ञम् ।। ८ ।।**

ಶ್ರೀಮಧ್ವಶಾಸ್ತ್ರಂ ಸಮುದೀರ್ಯ ಮೇಽಸ್ಮಿನ್ ವಿಶ್ವಾಸಹೇತೋಃ ಸಮದರ್ಶಯದ್ಯಃ ।
ಪ್ರಧಾನಸೂತ್ರಪ್ರತಿಪಾದ್ಯಮಾದೌ ವಂದೇ ಗುರುಂ ತಂ ರಘುವರ್ಯಸಂಜ್ಞಮ್ ॥ ೮ ॥

ಶ್ರೀರಘುವರ್ಯತೀರ್ಥರು ಶ್ರೀಮದಾಚಾರ್ಯರ ಶಾಸ್ತ್ರಗಳನ್ನು ಚೆನ್ನಾಗಿ ಪಾಠಮಾಡಿ, ಶ್ರೀಮದಾಚಾರ್ಯರ ಶಾಸ್ತ್ರದಲ್ಲಿ ವಿಶ್ವಾಸ ಬರುವಂತೆ ಪ್ರತ್ಯಕ್ಷ ಅನುಭವವನ್ನು ನೀಡಿ, ನಾಲ್ಕನೆಯ ಪಾದದಲ್ಲಿರುವ ಪ್ರಧಾನಸೂತ್ರದ ಪ್ರತಿಪಾದ್ಯವಿಷಯವನ್ನು ಅನುಭವಕ್ಕೆ ಬರುವಂತೆ ಮಾಡಿದ್ದಾರೆ. ಇಂತಹ ಗುರುಗಳನ್ನು ಸಾಷ್ಟಾಂಗ ನಮಿಸುತ್ತೇನೆ.

**तत्वप्रकाशिकागूढं विचार्य गुरुणोदितम् ।**
**सन्न्यायविवृतेर्भावमुद्धरिष्ये यथामति ।। ९ ।।**

ತತ್ವಪ್ರಕಾಶಿಕಾಗೂಢಂ ವಿಚಾರ್ಯ ಗುರುಣೋದಿತಮ್ ।
ಸನ್ನ್ಯಾಯವಿವೃತೇರ್ಭಾವಮುದ್ಧರಿಷ್ಯೇ ಯಥಾಮತಿ ॥ ೯ ॥

ತತ್ವಪ್ರಕಾಶಿಕೆಯ ಗೂಢಾಭಿಪ್ರಾಯವನ್ನು ಸರಿಯಾಗಿ ವಿಚಾರ ಮಾಡಿ, ಗುರುಗಳಿಂದ ಉಪದೇಶಿಸಲ್ಪಟ್ಟ ನ್ಯಾಯವಿವರಣೆಯ ಅಭಿಪ್ರಾಯವನ್ನು ಬುದ್ಧಿಗೆ ನಿಲುಕಿದಷ್ಟು ತೋರಿಸಲು ಪ್ರಯತ್ನಿಸುತ್ತೇನೆ.

**आद्याध्यायगते सार्धपूर्वपादद्वयेऽस्ति हि ।**
**पञ्चिका जयतीर्थीया तस्मात्त्यक्तं मयाऽत्र तत् ।। १० ।।**

ಆದ್ಯಾಧ್ಯಾಯಗತೇ ಸಾರ್ಧಪೂರ್ವಪಾದದ್ವಯೇಽಸ್ತಿ ಹಿ ।
ಪಂಚಿಕಾ ಜಯತೀರ್ಥೀಯಾ ತಸ್ಮಾತ್ತ್ಯಕ್ತಂ ಮಯಾಽತ್ರ ತತ್ ॥ ೧೦ ॥

ಮೊದಲನೆಯ ಅಧ್ಯಾಯದಲ್ಲಿರುವ ಪ್ರಾರಂಭದ ಎರಡು ಪಾದಗಳಿಗೆ ಶ್ರೀಮಟ್ಟೀಕಾಕೃತ್ಪಾದರು, ನ್ಯಾಯವಿವರಣಪಂಚಿಕೆಯನ್ನು ಬರೆದಿದ್ದಾರೆ. ಆದ್ದರಿಂದ ಮೊದಲೆರಡು ಪಾದಗಳನ್ನು ವ್ಯಾಖ್ಯಾನ ಮಾಡದೇ ಮೂರನೆಯ ಪಾದದಿಂದ ವ್ಯಾಖ್ಯಾನ ಮಾಡುತ್ತೇವೆ.

**उभयत्रप्रसिद्धनामलिङ्गात्मकशब्दसमन्वयार्थमयं पादः प्रवृत्तः ।**

**एतत्पादीयाधिकरणानां सर्वेषामव्याख्याततत्वात् 'व्याख्यां करोम्यन्वपि' इति प्रतिज्ञा वन्ध्या स्यादिति पूर्वोत्तरपक्षयुक्तिकथनेनैव सर्वाधिकरणानां व्याख्याततां मन्यमानेन भगवता आचार्येण तत्पादीयाधिकरणपूर्वपक्षन्याया अनुव्याख्यायां सङ्ग्रहेणोक्ताः । अत एव व्याख्यातसर्वाधिकरणेषु प्रथमाध्यायगताद्यद्वितीय, द्वितीया ध्यायद्वितीयपादेष्वधिकरणसम्बन्धिपूर्वपक्षसिद्धान्तन्यायानां सङ्ग्रहेणानुक्तिः ।**

ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕವಾದ ಶಬ್ದಗಳ ಸಮನ್ವಯಕ್ಕಾಗಿ ಮೂರನೆಯ ಪಾದವು ಹೊರಟಿರುತ್ತದೆ. ಈ ಪಾದದಲ್ಲಿರುವ ಎಲ್ಲಾ ಅಧಿಕರಣಗಳನ್ನು ವ್ಯಾಖ್ಯಾನ ಮಾಡದ ಕಾರಣ 'ವ್ಯಾಖ್ಯಾಂ ಕರೋಮ್ಯನ್ವಪಿ' ಎಂಬ ಪ್ರತಿಜ್ಞೆಯು ತಪ್ಪಾಗಬೇಕಾಗುತ್ತದೆ. ಅದಕ್ಕೋಸ್ಕರ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತ ನ್ಯಾಯಗಳನ್ನು ಹೇಳುವುದರಿಂದಲೇ ಎಲ್ಲಾ ಅಧಿಕರಣಗಳು ವ್ಯಾಖ್ಯಾತಪ್ರಾಯವಾಗುತ್ತದೆಂದು ತಿಳಿದು ಶ್ರೀಮದಾಚಾರ್ಯರು ಮೂರನೆಯ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ನ್ಯಾಯವನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹವಾಗಿ ಹೇಳಿರುತ್ತಾರೆ. ಆದ್ದರಿಂದಲೇ ಯಾವ ಅಧಿಕರಣಗಳನ್ನು ಸಂಪೂರ್ಣವಾಗಿ ವ್ಯಾಖ್ಯಾನ ಮಾಡಿದ್ದಾರೋ, ಅಂತಹ ಅಧಿಕರಣಗಳ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳ ಸಂಗ್ರಹವನ್ನು ಶ್ರೀಮದಾಚಾರ್ಯರು ಹೇಳಿರುವುದಿಲ್ಲ. ಅಂದರೆ ಪ್ರಥಮಾಧ್ಯಾಯದ ಮೊದಲನೆಯ ಹಾಗೂ

ಎರಡನೆಯ ಪಾದಗಳ, ಮತ್ತು ಎರಡನೆಯ ಅಧ್ಯಾಯದ ಎರಡನೆಯ ಪಾದದ ಅಧಿಕರಣಗಳ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳ ಸಂಗ್ರಹವನ್ನು ಒಂದೇ ಕಡೆ ಹೇಳಿರುವುದಿಲ್ಲ.

**ननु तर्हि तादृशयुक्तिपादे कथमाप्ततेत्यादिना तदुक्तिः । अभ्युच्चयात् । यद्वा समस्तसूत्राणामव्याख्याततत्वात्तत्र तदुक्तिः । तर्हि कथं तादृशे लिङ्गपादे तदनुक्तिः । तत्रापि, 'एतद्भावाभिधम्' इत्यादिना विषयाणां कथितत्वात् ।**

ಹಾಗಾದರೆ ಎರಡನೆಯ ಅಧ್ಯಾಯದ ಮೊದಲನೆಯ ಪಾದವೆನಿಸಿದ ಯುಕ್ತಿಪಾದದಲ್ಲಿ ಪೂರ್ವಪಕ್ಷ ಹಾಗೂ ಸಿದ್ಧಾಂತನ್ಯಾಯಗಳ ಸಂಗ್ರಹವನ್ನು 'ಆಪ್ತತಾ' ಇತ್ಯಾದಿ ವಾಕ್ಯಗಳಿಂದ ಏಕೆ ಹೇಳಿದ್ದಾರೆ? ಎಂದರೆ ಅಭ್ಯುಚ್ಚಯಕ್ಕಾಗಿ ಎಂದು ತಿಳಿಯಬಹುದು. ಅಥವಾ ಪ್ರಥಮಪಾದದಲ್ಲಿರುವ ಎಲ್ಲಾ ಅಧಿಕರಣಗಳನ್ನು ಸಂಪೂರ್ಣವಾಗಿ ವ್ಯಾಖ್ಯಾನ ಮಾಡದ ಕಾರಣದಿಂದಲೂ ಸಂಗ್ರಹವಾಗಿ ಹೇಳಿರುತ್ತಾರೆಂದು ತಿಳಿಯಬಹುದು. ಹಾಗಾದರೆ ಲಿಂಗಪಾದದಲ್ಲಿಯೂ ಅದರಂತೆ ಪೂರ್ವಪಕ್ಷ ಹಾಗೂ ಸಿದ್ಧಾಂತನ್ಯಾಯಗಳ ಸಂಗ್ರಹವನ್ನು ಹೇಳಬೇಕಿತ್ತಲ್ಲವೇ? ಎಂದರೆ ಅಲ್ಲಿಯೂ ಸಹ 'ಏತದ್ಭಾವಾಭಿಧಮ್' ಇತ್ಯಾದಿ ವಾಕ್ಯದಿಂದ ವಿಷಯಗಳ ಸಂಗ್ರಹವನ್ನು ಹೇಳಿರುತ್ತಾರೆ.

**अत एवोक्तं सुधायाम् – 'अत्र न सर्वसूत्राणि व्याख्यातानि । ततः प्रतिज्ञा व्याहन्येतेत्यतो विषयादिकथनेन व्याख्याततां मन्वान' इति ।**

**बाहुल्यं लिङ्गशब्दनामनुक्तिश्च विरुद्धता ।**
**अदृष्टिरन्वयाभावो विपरीतश्रुतिभ्रमः ॥**
**लिङ्गावकाशराहित्यभ्रमस्तादृग्द्वयं तथा ।**
**बहुतादृक्त्वमुक्तस्य विरोधोऽर्थात्तथागतिः ॥**
**समस्तमेतदित्यत्र पूर्वपक्षेषु युक्तयः ॥**

**इति पूर्वपक्षन्याया उक्ताः ॥**

ಆದ್ದರಿಂದಲೇ ಶ್ರೀಮನ್ನ್ಯಾಯಸುಧೆಯಲ್ಲಿ 'ಅತ್ರ ನ ಸರ್ವಸೂತ್ರಾಣಿ ವ್ಯಾಖ್ಯಾತಾನಿ । ತತಃ ಪ್ರತಿಜ್ಞಾ ವ್ಯಾಹನ್ಯೇತ ಇತ್ಯತಃ ವಿಷಯಾದಿಕಥನೇನ ವ್ಯಾಖ್ಯಾತತಾಂ ಮನ್ವಾನಃ' 'ಈ ಪಾದದಲ್ಲಿ ಎಲ್ಲಾ ಸೂತ್ರಗಳು ವ್ಯಾಖ್ಯಾನ ಮಾಡಿಲ್ಲ ಆದ್ದರಿಂದ ಪ್ರತಿಜ್ಞೆಯು ವ್ಯಾಹತವಾಗುತ್ತದಲ್ಲವೇ ? ಎಂದರೆ ವಿಷಯಾದಿಗಳ ಸಂಗ್ರಹವನ್ನು ಮಾಡಿದ್ದರಿಂದ ಎಲ್ಲಾ ಅಧಿಕರಣಗಳನ್ನು ವ್ಯಾಖ್ಯಾನ ಮಾಡಿದಂತಾಯಿತೆಂದು ತಿಳಿಯಬೇಕು' ಎಂದು ಹೇಳಿದ್ದಾರೆ.

ಬಾಹುಲ್ಯಂ ಲಿಂಗಶಬ್ದಾನಾಮ್ ಅನುಕ್ತಿಶ್ಚ ವಿರುದ್ಧತಾ।
ಅದೃಷ್ಟಿರನ್ವಯಾಭಾವೋ ವಿಪರೀತಶ್ರುತಿಭ್ರಮಃ॥

ಲಿಂಗಾವಕಾಶರಾಹಿತ್ಯಭ್ರಮಸ್ತಾದೃಗ್ ದ್ವಯಂ ತಥಾ ।
ಬಹುತಾದ್ವಕ್ತ್ವಮುಕ್ತಸ್ಯ ವಿರೋಧೋಽರ್ಥಾತ್ತಥಾಗತಿಃ ॥
ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ॥

ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಪೂರ್ವಪಕ್ಷನ್ಯಾಯಗಳನ್ನು ಹೇಳಿದ್ದಾರೆ.

**न्यायविवरणम् –**

**'यस्मिन्द्यौः पृथीवीचाऽन्तरिक्षमोतम् मन ओतम्, प्राणा ओता' इत्यत्रोक्तानां लिङ्गानाम् अन्यत्र रुद्रादि विषयत्वे, शब्दबाहुल्यम् ॥**

ಯಾವಾತನಲ್ಲಿ ಸ್ವರ್ಗ, ಭೂಮಿ, ಅಂತರಿಕ್ಷಲೋಕಗಳು ಆಶ್ರಿತವಾಗಿವೆಯೋ, ಮನಸ್ಸು, ಪ್ರಾಣಗಳೂ ಆಶ್ರಿತವಾಗಿವೆಯೋ, ಇತ್ಯಾದಿ ಶ್ರುತಿವಾಕ್ಯದಲ್ಲಿ ಪ್ರತಿಪಾದಿತವಾದ 'ದ್ಯುಪೃಥಿವ್ಯಾದ್ಯಾಶ್ರಯತ್ವಾದಿಲಿಂಗಗಳು ಅಥವಾ ಲಿಂಗಪ್ರತಿಪಾದಕವಾದ ಶಬ್ದಗಳು ರುದ್ರಾದಿಗಳನ್ನು ವಿಷಯೀಕರಿಸುತ್ತವೆ. ಹೀಗೆ ಸಾಧಿಸುವುದಕ್ಕಾಗಿ 'ಪ್ರಾಣಾನಾಮ್' ಇತ್ಯಾದಿ ಉದಾಹರಿಸುವ ಶ್ರುತ್ಯಂತರದಲ್ಲಿ ಅಂದರೆ 'ಅಂತಕಃ ಕೃತ್ತಿವಾಸಾಃ ಪಿನಾಕೀ' ಎಂಬಲ್ಲಿ ಹೇಳಲ್ಪಟ್ಟ ಲಿಂಗವೂ ಸಹ ರುದ್ರಾದಿ ಶಬ್ದಗಳೂ ಇವುಗಳ ಬಾಹುಲ್ಯವು ಕಾರಣವಾಗಿದೆ.

ಎಲೈ! ರುದ್ರನೇ ನೀನು ಇಂದ್ರಿಯಗಳಿಗೆ ಆಧಾರನಾಗಿದ್ದಿ, ಅಂತಕನಾಗಿ ನನ್ನನ್ನು ಪ್ರವೇಶ ಮಾಡಬೇಡ. ರುದ್ರನು ಇಂದ್ರಿಯಗಳಿಗೆ ನಿಯಾಮಕನು, ಚರ್ಮಧರನು, ಪಿನಾಕವೆಂಬ ಆಯುಧವನ್ನು ಧಾರಣ ಮಾಡಿದವನು, ಮನೋಭಿಮಾನಿಯು ಎಲ್ಲಾ ವಸ್ತುಗಳಿಗೂ ಆಶ್ರಯನಾದವನು. ಇಂತಹ ರುದ್ರನೇ ಸಮಸ್ತಲೋಕಗಳಿಗೂ ಆಧಾರನು. ಇವೇ ಮೊದಲಾದ ಶ್ರುತಿವಾಕ್ಯಗಳಲ್ಲಿ ಹೇಳಲ್ಪಟ್ಟ ಲಿಂಗಗಳು ಮತ್ತು ಶ್ರುತಿ ಇವುಗಳ ಆಧಿಕ್ಯವು ಹೇತುವಾಗಿದೆ. ಅಂದರೆ 'ಅಂತಕಃ ಕೃತ್ತಿವಾಸಾಃ' ಎಂಬಲ್ಲಿ ಹೇಳಲ್ಪಟ್ಟ ಅಂತಕತ್ವಾದಿಲಿಂಗಗಳು ರುದ್ರ ಮೊದಲಾದ ಶ್ರುತಿ ಇವುಗಳ ಆಧಿಕ್ಯವು ಹೇತುವಾಗಿದೆ ಎಂದರ್ಥ. ಈ ಸಮಾಖ್ಯಾಪ್ರಮಾಣದಿಂದ 'ಯಸ್ಮಿನ್ದ್ಯೌಃ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯನತ್ವವೂ ಕೂಡ ರುದ್ರಾದಿಗಳಲ್ಲೇ ಬರುತ್ತದೆಂಬುದು ಪೂರ್ವಪಕ್ಷ.

**न्यायविवरणम् –**

**ॐ द्युभ्वाद्यायतनं स्वशब्दात् ॐ ॥**

**'यस्मिन्द्यौः' इति वाक्योक्तं द्युभ्वाद्यायतनत्वं विष्णोर्वा रुद्रादेर्वेति तत्तत्प्रापकश्रुत्या सन्देहे रुद्रादेरेवेति पूर्वपक्षः विष्णोरेवेति सिद्धान्तः ।**

'ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ' 'ಯಸ್ಮಿನ್ದ್ಯೌಃ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿ ಬರುತ್ತದೋ ಅಥವಾ ರುದ್ರಾದಿಗಳಲ್ಲಿ ಬರುತ್ತದೋ? ಎಂದು ಸಂದೇಹ. ಏಕೆಂದರೆ ಇಬ್ಬರ ವಿಷಯದಲ್ಲಿಯೂ ಶ್ರುತಿಯು ಸಮಾನವಾಗಿರುವುದೇ ಸಂದೇಹಕ್ಕೆ ಕಾರಣ.

ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗಿದ್ದಾರೆಂಬುದು ಪೂರ್ವಪಕ್ಷ. ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆಂಬುದು ಸಿದ್ಧಾಂತ.

**तत्र 'बाहुल्यं लिङ्गशब्दानां' इत्युक्तन्यायं तावत्पूर्वपक्षसम्बन्धित्वेन विवृणोति ।। यस्मिन्द्यौरित्यादिना ।। इत्यत्र इत्यादिविषयवाक्ये । उक्तानां प्रतिपादितानां द्युपृथिव्याद्याश्रयत्वादिलिङ्गानां रुद्रादिविषयत्वे ।**

ಹೀಗಿರುವಾಗ 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ನ್ಯಾಯವನ್ನು ಪೂರ್ವಪಕ್ಷಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಯಸ್ಮಿನ್ದ್ಯೌಃ' ಇತ್ಯಾದಿ ಮೂಲದಿಂದ. 'ಇತ್ಯತ್ರ' ಎಂದರೆ ಇತ್ಯಾದಿ ವಿಷಯವಾಕ್ಯದಲ್ಲಿ ಎಂದರ್ಥ. ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟ ದ್ಯುಲೋಕಾದ್ಯಾಶ್ರಯತ್ವ ಮೊದಲಾದ ಲಿಂಗಗಳು ರುದ್ರಾದಿವಿಷಯಕವಾದರೆ ಎಂದು ರುದ್ರಾದಿವಿಷಯತ್ವ ಎಂಬ ಪದದ ಅರ್ಥ.

**यद्वा उक्तानां प्रयुक्तानां लिङ्गानां लिङ्गप्रतिपादकशब्दानां रुद्रादिविषयत्वे साध्येऽन्यत्र प्राणानामित्युदाहरिष्यमाणश्रुत्यन्तरे, 'अन्तकः कृत्तिवासाः पिनाकी' इत्युक्तलिङ्गम् । तथा रुद्रादिशब्दबाहुल्यं हेतुरित्यर्थः ।**

ಅಥವಾ 'ಉಕ್ತಾನಾಂ' = ಹೇಳಲ್ಪಟ್ಟ, ಲಿಂಗಾನಾಂ = ಲಿಂಗಪ್ರತಿಪಾದಕವಾದ ಶಬ್ದಗಳು, ರುದ್ರಾದಿ ವಿಷಯತ್ವೇ = ರುದ್ರಾದಿವಿಷಯಕವೆಂದು ಸಾಧನೆ ಮಾಡಿದರೆ, ಬೇರೆ ಕಡೆ 'ಪ್ರಾಣಾನಾಮ್' ಇತ್ಯಾದಿ ಮುಂದೆ ಉದಾಹರಿಸಲ್ಪಟ್ಟ ವಾಕ್ಯಗಳಲ್ಲಿ 'ಅಂತಕಃ ಕೃತ್ತಿವಾಸಾಃ ಪಿನಾಕೀ' ಇತ್ಯಾದಿ ಲಿಂಗಗಳು ರುದ್ರಾದಿ ಶಬ್ದಗಳು ಬಹಳವಾಗಿ ಇರುವುದೇ ಕಾರಣವಾಗಿದೆಯೆಂದರ್ಥ.

**अन्यत्रेत्युक्तं श्रुत्यन्तरमुदाहरति – प्राणानामिति ।। शब्दबाहुल्यमिति लिङ्गबाहुल्यस्याप्युपलक्षणम् ।**

'ಅನ್ಯತ್ರ' ಎಂಬುದರ ವಿವರಣೆಯನ್ನು ಮಾಡುತ್ತಾ ಆ ಶ್ರುತ್ಯಂತರವನ್ನು ಉದಾಹರಿಸುತ್ತಿದ್ದಾರೆ 'ಪ್ರಾಣಾನಾಮ್' ಇತ್ಯಾದಿಯಾಗಿ. 'ಶಬ್ದಬಾಹುಲ್ಯಮ್' ಎಂಬುದರಿಂದ ಲಿಂಗಬಾಹುಲ್ಯವನ್ನೂ ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು.

**यद्यप्यत्र श्रुतेः प्रकृति – रुद्र – वायुरूपपूर्वपक्षत्रये सत्त्वेऽपि जीवरूपपूर्वपक्षेऽभावात्, लिङ्गस्य तु पूर्वपक्षचतुष्टयेऽपि सद्भावात्, 'प्राधान्येन बाहुल्यं लिङ्गशब्दानाम्' इत्यत्र लिङ्गस्य प्रथमतो ग्रहणं कृतम् ।**

ಪ್ರಶ್ನೆ - ಶ್ರುತಿಯು ಪ್ರಕೃತಿ, ರುದ್ರ, ವಾಯು ಎಂಬ ಮೂರು ಬಗೆಯ ಪೂರ್ವಪಕ್ಷಗಳಲ್ಲಿ ಸಾಧಾರಣವಾಗಿದ್ದರೂ ಜೀವ ಎಂಬ ಪೂರ್ವಪಕ್ಷದಲ್ಲಿ ಇರುವುದಿಲ್ಲ. ಲಿಂಗವು ಪ್ರಕೃತಿ, ರುದ್ರ, ವಾಯು,

ಜೀವ ಎಂಬ ನಾಲ್ಕು ಪೂರ್ವಪಕ್ಷಗಳಲ್ಲಿಯೂ ಇರುತ್ತದೆ. ಆದ್ದರಿಂದಲೇ 'ಪ್ರಾಧಾನ್ಯೇನ ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬಲ್ಲಿ ಲಿಂಗವನ್ನೇ ಮೊದಲು ಗ್ರಹಣ ಮಾಡಿದ್ದಾರಲ್ಲವೇ? ಹೀಗಿರುವಾಗ ಶ್ರುತಿಯನ್ನೇಕೆ ಉದಾಹರಿಸುತ್ತಿದ್ದೀರಿ ?

ಉತ್ತರ - ಆದರೆ ಲಿಂಗಕ್ಕಿಂತಲೂ ಶ್ರುತಿಯು ಪ್ರಬಲವಾಗಿದೆ. ಆದ್ದರಿಂದಲೇ ಸೂತ್ರಕಾರರು ಸ್ವಶಬ್ದದಿಂದ ಶ್ರುತಿಯನ್ನು ಸ್ವೀಕರಿಸಿದ್ದಾರೆಂದು ತಿಳಿಯಬೇಕು.

**तथापि लिङ्गापेक्षया श्रुतेः प्राबल्यात् श्रुतेः स्वशब्देनोपादानं कृतमिति ज्ञातव्यम् ।**

**अत्रादिशब्देन रुद्रादीत्यादिशब्दोक्तप्रकृत्यादेर्द्युभ्वाधारत्वप्रतिपादकस्य वाक्यस्य ग्रहणम् । अयमर्थः । 'प्राणानां गन्थिरसि' इत्यादिवाक्योक्तं प्राणाधारत्वं तावद्रुद्रादिनिष्ठम् । रुद्राद्यसाधारणान्तकत्वादिलिङ्गशब्दसमभिव्याहारात् । तथा च तत्समाख्यया 'यस्मिन्द्यौः' इत्यादिवाक्योक्तं द्युभ्वाधारत्वमपि रुद्रादि-निष्ठमेवेति ।।१।।**

ಮೂಲದಲ್ಲಿರುವ ಆದಿಶಬ್ದದಿಂದ 'ರುದ್ರಾದಿ' ಎಂಬಲ್ಲಿರುವ ಆದಿಶಬ್ದದಿಂದ ಸ್ವೀಕರಿಸಲ್ಪಟ್ಟ ಪ್ರಕೃತ್ಯಾದಿಗಳಿಗೆ ದ್ಯುಭ್ವಾದ್ಯಾಯತನತ್ವವನ್ನು ಪ್ರತಿಪಾದನೆ ಮಾಡುವಂತಹ ವಾಕ್ಯವನ್ನು ಸ್ವೀಕರಿಸಬೇಕು.

ಒಟ್ಟು ಅಭಿಪ್ರಾಯ - 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯದಿಂದ ಹೇಳಲ್ಪಟ್ಟ ಪ್ರಾಣಾಧಾರತ್ವವಾದರೂ ರುದ್ರಾದಿಗಳಲ್ಲೇ ಬರುತ್ತದೆ. ಏಕೆಂದರೆ ರುದ್ರಾದಿಗಳಲ್ಲಿ ಅಸಾಧಾರಣವಾದ ಅಂತಕತ್ವ ಮೊದಲಾದ ಧರ್ಮಗಳನ್ನು ಪ್ರತಿಪಾದಿಸುವ ಶಬ್ದಗಳ ಸಮಭಿವ್ಯಾಹಾರ ಇರುವುದರಿಂದ. ಈ ಸಮಾಖ್ಯಾಪ್ರಮಾಣದಿಂದ 'ಯಸ್ಮಿನ್ದ್ಯೌಃ' ಎಂಬ ವಿಷಯವಾಕ್ಯದಲ್ಲಿ ಪ್ರತಿಪಾದ್ಯವಾದ ದ್ಯುಭ್ವಾದ್ಯಾಯತನತ್ವವೂ ಕೂಡ ರುದ್ರಾದಿಗಳಲ್ಲೇ ಬರುತ್ತದೆ.

## भूमाधिकरणम्

**न्यायविवरणम् – प्राणो वा आशाया भूयानित्युक्त्वा प्राणाद्भूयसोऽनुक्तिः ।। २ ।।**

ನಾಮವಾಗಾದ್ಯಭಿಮಾನಿದೇವತೆಗಳ ತಾರತಮ್ಯವನ್ನು ಆಶಾನಾಮಕಳಾದ ಭಾರತೀದೇವಿಯ ತನಕ ಹೇಳಿ, ಭಾರತೀದೇವಿಗಿಂತ ಮುಖ್ಯಪ್ರಾಣನು ಶ್ರೇಷ್ಠನೆಂದು ಪ್ರಥಮಧ್ಯಾಯದ ಮೂರನೆಯ ಪಾದದ ನ್ಯಾಯವಿವರಣ

ಪ್ರಾಣನಿಗೆ ಉತ್ತಮತ್ವವನ್ನು ಹೇಳಲಾಗಿದೆ. ಅನಂತರ ಮುಖ್ಯಪ್ರಾಣನಿಗಿಂತ ಉತ್ತಮನಾದ ಮತ್ತೊಬ್ಬನನ್ನು ಹೇಳದ ಕಾರಣ 'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಮುಖ್ಯಪ್ರಾಣದೇವನೇ ಆಗಿರುತ್ತಾನೆ.

**भावबोधः – ॐ भूमा सम्प्रसादादध्युपदेशात् ॐ ।। 'प्राणो वा आशाया भूयान्' इत्यत्रोक्तो भूमोपक्रमश्रुतिभ्यां किं मुख्यवायुरुत विष्णुरिति सन्देहे मुख्यवायुरिति पूर्वः पक्षः विष्णुरिति सिद्धान्तः ।**

'ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ' ಎಂಬ ಸೂತ್ರದಲ್ಲಿ ಹೀಗೆ ವಿಚಾರ ಮಾಡಲಾಗಿದೆ - 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬಲ್ಲಿ ಹೇಳಲ್ಪಟ್ಟ ಭೂಮನು 'ಭೂಮಾ' ಎಂಬ ಉಪಕ್ರಮ ಹಾಗೂ ಶ್ರುತಿಗಳಿಂದ ಮುಖ್ಯಪ್ರಾಣದೇವರು ಪ್ರತಿಪಾದ್ಯರೋ? ಅಥವಾ ವಿಷ್ಣುವೋ? ಎಂದು ಸಂದೇಹ. ಮುಖ್ಯಪ್ರಾಣದೇವರೇ 'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆಂದು ಪೂರ್ವಪಕ್ಷ. ವಿಷ್ಣು ಎಂದು ಸಿದ್ಧಾಂತ.

**तत्रानुक्तिरित्युक्तन्यायं तावत्पूर्वपक्षसम्बन्धित्वेन विवृणोति – प्राणो वा इत्यादिना ।।**

ಅದರಲ್ಲಿ ಅನುಕ್ತಿಯೆಂಬ ನ್ಯಾಯವನ್ನು ಪೂರ್ವಪಕ್ಷಿ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಪ್ರಾಣೋ ವಾ' ಇತ್ಯಾದಿ ಮೂಲದಿಂದ.

**ननु प्राणाद्भूयसोऽनुक्तिर्न प्राणस्य भूमत्वसाधिका । विद्यमानस्यापि प्राणादुत्तमस्य अनुक्तिसम्भवादित्यत उक्तं, प्राणो वा आशाया भूयानित्युक्त्वेति ।**

ಮುಖ್ಯಪ್ರಾಣದೇವರಿಗಿಂತ ಉತ್ತಮನಾದ ಮತ್ತೊಬ್ಬನನ್ನು ಹೇಳದಿರುವಿಕೆಯು ಮುಖ್ಯಪ್ರಾಣದೇವರ ಭೂಮತ್ವಕ್ಕೆ ಸಾಧಕವಾಗುವುದಿಲ್ಲ. ಏಕೆಂದರೆ ಮುಖ್ಯಪ್ರಾಣದೇವರಿಗಿಂತಲೂ ಮತ್ತೊಬ್ಬನು ಉತ್ತಮನಾಗಿದ್ದರೂ ಸಹ ಅವನನ್ನು ಶ್ರುತಿಯು ಉಲ್ಲೇಖ ಮಾಡದಿರಬಹುದಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಣೋ ವಾ ಆಶಾಯಾ' ಇತ್ಯಾದಿ ಮೂಲದಿಂದ ಉತ್ತರಿಸುತ್ತಿದ್ದಾರೆ.

**ततश्च नामवागादितारतम्यमाशावसानमुक्त्वा 'प्राणो वा आशाया भूयान्' इति प्राणस्योत्तमत्वं चोक्त्वा तदुत्तमस्यान्यस्यानुक्तेराम्नातो भूमा मुख्यवायुरेवेति भावः ।। २ ।।**

ಅಂದರೆ ನಾಮಾವಾಗಾದ್ಯಭಿಮಾನಿದೇವತೆಗಳ ತಾರತಮ್ಯವನ್ನು ಆಶಾನಾಮಕಳಾದ ಭಾರತೀದೇವಿಯ ತನಕ ಹೇಳಿ, ಮತ್ತು 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬುದಾಗಿ ಅಂತಹ ಆಶಾನಾಮಕಳಾದ

ಭಾರತೀದೇವಿಗಿಂತಲೂ ಮುಖ್ಯಪ್ರಾಣದೇವರು ಉತ್ತಮರಾಗಿದ್ದಾರೆಂದು ಹೇಳಿ, ಕೊನೆಯಲ್ಲಿ ಅಂತಹ ಮುಖ್ಯಪ್ರಾಣದೇವರಿಗಿಂತಲೂ ಉತ್ತಮನಾದ ಮತ್ತೊಬ್ಬನನ್ನು ಹೇಳದ ಕಾರಣ, ಮುಖ್ಯಪ್ರಾಣದೇವರೇ 'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆಂಬುದು ಪೂರ್ವಪಕ್ಷದ ಅಭಿಪ್ರಾಯ.

**न्यायविवरणम् – अत्तेत्युक्त्वा, न तदश्नाति किञ्चनेति विरुद्धता ॥ ३ ॥**

'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ ವಿಷ್ಣುವಿಗೆ ಸರ್ವಾತ್ತೃತ್ವವನ್ನು ಹೇಳಲಾಗಿದೆ. ಈಗ ಅವನಿಗೆ ಅನಶನವನ್ನು ಹೇಳಿದರೆ, ಹಿಂದೆ ಹೇಳಿದ ಸರ್ವಾತ್ತೃತ್ವದಿಂದ ವಿರೋಧವೂ ಬರುತ್ತದೆ. ಹೀಗೆ ವಿರುದ್ಧತ್ವವು ಪೂರ್ವಪಕ್ಷಯುಕ್ತಿ.

**भावबोधः – ॐ अक्षरमम्बरान्तधृतेः ॐ ॥ 'तद्वा एतदक्षरं गार्गि' इत्युक्तमक्षरमनाशित्वसाम्यात् किं चेतनप्रकृतिरुत विष्णुरिति सन्देहे चेतनप्रकृतिरेवेति पूर्वः पक्षः । विष्णुरेवेति सिद्धान्तः । तत्र विरुद्धतेत्युक्तन्यायं पूर्वपक्षसम्बन्धित्वेन तावद्विवृणोति – अत्तेत्युक्त्वेति ॥**

'ತದ್ವಾ ಏತದಕ್ಷರಂ ಗಾರ್ಗಿ' ಎಂಬಲ್ಲಿ ಅಕ್ಷರಶಬ್ದ ಪ್ರವೃತ್ತಿನಿಮಿತ್ತವೆನಿಸಿದ ಅವಿನಾಶಿತ್ವವು ಚೇತನಪ್ರಕೃತಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆ. ಆದ್ದರಿಂದ ಅಕ್ಷರಶಬ್ದಪ್ರತಿಪಾದ್ಯವಾದದ್ದು ಚೇತನಪ್ರಕೃತಿಯೋ? ಅಥವಾ ವಿಷ್ಣುವೋ ? ಎಂದು ಸಂದೇಹ. ಚೇತನಪ್ರಕೃತಿಯೇ ಎಂದು ಪೂರ್ವಪಕ್ಷ. ವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತ. ಅದರಲ್ಲಿ 'ವಿರುದ್ಧತಾ' ಎಂಬ ನ್ಯಾಯವನ್ನು ಪೂರ್ವಪಕ್ಷಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಅತ್ತೇತ್ಯುಕ್ತ್ವಾ' ಇತ್ಯಾದಿ ಮೂಲದಿಂದ.

**एतदक्षरस्य विष्णुत्वेऽस्यैवाक्षरस्य 'न तदश्नाति किञ्चन' इति उक्तानशनस्य 'विष्णोरत्ता चराचरग्रहणाद्' इत्युक्तेन सर्वात्तृत्वेन विरुद्धता स्यादित्यर्थः । एतद्विरुद्धतासमुचितस्यैवाक्षरशब्दप्रसिध्यादेः पूर्वपक्षसाधकत्वम् । केवलस्य तस्य विष्णावपि सम्भवात् । अतो विरुद्धतायाः पूर्वपक्षन्यायत्वमिति भावः ॥ ३ ॥**

ಒಂದು ವೇಳೆ ವಿಷ್ಣು ಅಕ್ಷರಶಬ್ದ ಪ್ರತಿಪಾದ್ಯನಾದರೆ, ಇಂತಹ ಅಕ್ಷರದಲ್ಲಿ 'ನ ತದಶ್ನಾತಿ ಕಿಂಚನ' ಎಂಬುದಾಗಿ ಅನಶನವನ್ನು ಹೇಳಲಾಗಿದೆ. ಆದರೆ ಹಿಂದೆ 'ಅತ್ತಾಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ ವಿಷ್ಣುವಿಗೆ ಸರ್ವಾತ್ತೃತ್ವವನ್ನು ಹೇಳಿದ್ದರಿಂದ ಅದರ ವಿರೋಧವೂ ಬರುತ್ತದೆ. ಹೀಗೆ 'ವಿರುದ್ಧತ್ವ' ಎಂಬ ಧರ್ಮದಿಂದ ಸಮುಚ್ಚಿತವಾದ ಅಕ್ಷರಶಬ್ದದ ಪ್ರಸಿದ್ಧಿ ಎಂಬುದು ಪೂರ್ವಪಕ್ಷಸಾಧಕಯುಕ್ತಿಯಾಗಿದೆ. ಕೇವಲ ಅಕ್ಷರಶಬ್ದಪ್ರಸಿದ್ಧಿಯು ವಿಷ್ಣುವಿನಲ್ಲಿಯೂ ಇರುವುದರಿಂದ, ವಿರುದ್ಧತ್ವದಿಂದ ಸಮುಚ್ಚಿತವಾದ ಅರ್ಥಶಬ್ದದ ಪ್ರವೃತ್ತಿಯನ್ನೇ ಪೂರ್ವಪಕ್ಷ ನ್ಯಾಯವೆಂದು ತಿಳಿಯಬೇಕು.

ಪ್ರಥಮಾಧ್ಯಾಯದ ಮೂರನೆಯ ಪಾದದ ನ್ಯಾಯವಿವರಣ

**न्यायविवरणम् – 'बहु स्यां प्रजायेय' इत्यन्यस्यान्यभावादृष्टिः ॥ ४ ॥**

'ಬಹು ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಪಂಚರೂಪವಾದ ಪರಿಣಾಮವು ವಿಷ್ಣುವಿನಲ್ಲಿ ಕೂಡುವುದಿಲ್ಲ. ಏಕೆಂದರೆ ನಿರ್ವಿಕಾರನು ಜಗತ್ತಿಗಿಂತ ಅತ್ಯಂತ ಭಿನ್ನನೂ ಆಗಿದ್ದಾನೆಂದು ಪ್ರಮಿತನಾಗಿದ್ದಾನೆ. ಒಂದು ಪದಾರ್ಥಕ್ಕೆ ಭಿನ್ನವಾದ ಮತ್ತೊಂದು ಪದಾರ್ಥದ ವಸ್ತುವಿನ ಸ್ವಭಾವವು ಎಲ್ಲೂ ಕೂಡ ಕಂಡಿರುವುದಿಲ್ಲ.

भावबोधः – ॐ ईक्षतिकर्मव्यपदेशात्सः ॐ ॥ 'सदेव सोम्येदमग्र आसीत्' इत्यादि सृष्टिस्थानगतसच्छब्दवाच्यं कारणत्वसाम्यात्प्रधानमुत विष्णुरिति सन्देहे प्रधानमेवेति पूर्वः पक्षः । विष्णुरिति सिद्धान्तः । तत्रादृष्टिरित्युक्तन्यायं पूर्वपक्षसम्बन्धित्वेन विवृणोति – बहु स्यामिति ॥

'ಸದೇವ ಸೌಮ್ಯ ಇದಮಗ್ರ ಆಸೀತ್' ಇತ್ಯಾದಿಯಾದ ಸೃಷ್ಟಿಸ್ಥಾನದಲ್ಲಿರುವ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯವಾದ ಕಾರಣತ್ವವು ವಿಷ್ಣು ಹಾಗೂ ಪ್ರಕೃತಿ ಇಬ್ಬರಲ್ಲಿಯೂ ಸಮಾನವಾಗಿದೆ. ಆದ್ದರಿಂದ 'ಸತ್' ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಕೃತಿಯೋ ಅಥವಾ ವಿಷ್ಣುವೋ ? ಎಂದು ಸಂದೇಹ ಪ್ರಕೃತಿಯೇ ಆಗಿದೆಯೆಂದು ಪೂರ್ವಪಕ್ಷ. ವಿಷ್ಣುವೆಂದು ಸಿದ್ಧಾಂತ. ಅದರಲ್ಲಿ ಅದೃಷ್ಟಿಯೆಂಬ ನ್ಯಾಯವನ್ನು ಪೂರ್ವಪಕ್ಷಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಬಹು ಸ್ಯಾಮ್' ಇತ್ಯಾದಿ ವಾಕ್ಯದಿಂದ.

इति श्रुत्युक्तस्यान्यभावस्य, प्रपञ्चत्वेन भवनस्य, अन्यस्य ततोऽत्यन्तभिन्नत्वेन प्रमितस्य विष्णोरदृष्टिः दृष्ट्यभावः । दर्शनायोग्यत्वमेवेति यावत् । कुत इत्यतो यत इत्यध्याहारेण हेतुप्रतिपादकतयाऽप्यन्यस्यान्यभावादृष्टिरित्येतदेव योज्यम् ॥

ಶ್ರುತ್ಯುಕ್ತವಾದ ಅನ್ಯಭಾವವು ಅಂದರೆ ಪ್ರಪಂಚರೂಪದಿಂದ ಪರಿಣಾಮವಾಗುವಿಕೆಯು ಪ್ರಪಂಚಕ್ಕಿಂತ ಅತ್ಯಂತ ಅನ್ಯನಾದ ವಿಷ್ಣುವಿಗೆ ಕೂಡುವುದಿಲ್ಲ. ಏಕೆಂದರೆ ಮತ್ತೊಂದು ವಸ್ತುವಿಗೆ ಇನ್ನೊಂದು ವಸ್ತುವಿನ ಸ್ವಭಾವವು ಇರುವುದು ಎಲ್ಲಿಯೂ ಕಂಡಿಲ್ಲ.

यद्वाऽन्यस्य विकारिकारणादन्यस्य विष्णोः 'बहु स्यां प्रजायेय' इति श्रुत्युक्तस यान्यभावस्यान्यत्वेन परिणामस्यादृष्टिरित्यर्थः । अत एव विष्णुत्वपक्षासम्भवात्प्रध ाने चोक्तदोषाभावात् प्रधानमेव सच्छब्दवाच्यमित्यर्थः ॥ ४ ॥

ಅಥವಾ ಅನ್ಯಸ್ಯ = ವಿಕಾರಿಕಾರಣಕ್ಕಿಂತ ಭಿನ್ನನಾದ ವಿಷ್ಣುವಿಗೆ ಬಹು ಸ್ಯಾಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ, ಅನ್ಯಭಾವಸ್ಯ = ಪ್ರಪಂಚರೂಪವಾದ ಪರಿಣಾಮವು, ಅದೃಷ್ಟಿಃ = ಕಂಡಿಲ್ಲ. ಆದ್ದರಿಂದಲೇ ವಿಷ್ಣು ಜಗತ್ಕಾರಣನಾಗಿದ್ದಾನೆಂಬ ಪಕ್ಷವು ಕೂಡುವುದಿಲ್ಲ. ಪ್ರಕೃತಿಯಲ್ಲಿ ಮೇಲೆ ಹೇಳಿದ ದೋಷವು ಬಾರದ

ಕಾರಣ, ಪ್ರಕೃತಿಯೇ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯವಾಗಿದೆ ಎಂದು ಅದೃಷ್ಟಿಯನ್ನು ಪೂರ್ವಪಕ್ಷಯುಕ್ತಿಯನ್ನಾಗಿ ತಿಳಿಯಬೇಕು.

## दहराधिकरणम् २।३।५

**न्यायविवरणम् – 'दहरोऽस्मिन्नन्तर आकाशस्तस्मिन्यदन्तस्तदन्वेष्टव्यम्' इत्यनेन 'यावान् वा अयमाकाशस्तावानेषोऽन्तर्हृदय आकाशः' इत्यस्यान्वयाभावः ॥५॥**

'ದಹರೋऽಸ್ಮಿನ್ನಂತರ ಆಕಾಶಃ ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಎಂಬುದರಿಂದ 'ಯಾವಾನ್ ವಾ ಅಯಮಾಕಾಶಃ ತಾವಾನೇಷೋऽಂತರ್ಹೃದಯ ಆಕಾಶಃ' ಎಂಬುದಕ್ಕೆ ಅನ್ವಯವು ಇರುವುದಿಲ್ಲ. ಹೀಗೆ ಅನ್ವಯಾಭಾವವೇ ಪೂರ್ವಪಕ್ಷಯುಕ್ತಿಯಾಗಿದೆ.

**भावबोधः – ॐ दहर उत्तरेभ्यः ॐ ॥ 'अथ यदिदमस्मिन् ब्रह्मपुरे दहरं पुण्डरीकम्' इत्यादिवाक्योक्तं हृत्पद्मस्थत्वं किमाकाशस्योत विष्णोरिति तत्प्रापकश्रुत्या सन्देहे आकाशस्यैवेति पूर्वः पक्षः । विष्णोरेवेति सिद्धान्तः । तत्रान्वयाभाव इत्युक्तन्यायं पूर्वपक्षसम्बन्धित्वेन विवृणोति – दहर इति ॥**

'ಓಂ ದಹರ ಉತ್ತರೇಭ್ಯಃ' ಎಂಬ ಅಧಿಕರಣದಲ್ಲಿ 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಮ್' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯವಾದ ಹೃತ್ಪದ್ಮಸ್ಥತ್ವವು ಆಕಾಶಕ್ಕೋ, ಅಥವಾ ವಿಷ್ಣುವಿಗೋ ಎಂದು ಸಂದೇಹ. ಆಕಾಶಕ್ಕೆ ಮಾತ್ರವೆಂದು ಪೂರ್ವಪಕ್ಷ. ವಿಷ್ಣುವಿಗೆ ಮಾತ್ರ ಎಂದು ಸಿದ್ಧಾಂತ. ಅದರಲ್ಲಿ 'ಅನ್ವಯಾಭಾವ' ಎಂಬ ನ್ಯಾಯವನ್ನು ಪೂರ್ವಪಕ್ಷಕ್ಕೆ ಸಂಬಂಧಿಯಾಗಿ 'ದಹರಃ' ಇತ್ಯಾದಿ ಮೂಲದಿಂದ ಹೇಳಿದ್ದಾರೆ.

**अयमर्थः । 'तस्मिन्यदन्तस्तत्' इत्यन्वेष्टव्यत्वादिनोक्तस्य दहराकाशस्थस्य विष्णुत्वेऽङ्गीक्रियमाणे 'तस्मिन्यदन्तः' इत्यनेनैतत्समानविषयकेण 'किं तदत्र विद्यते' इति वाक्येन 'ब्रह्म विद्यते' इति परिहारवाक्यं विना 'यावान्वा अयम्' इति वाक्यस्यान्वयाभाव इति । अत्र 'किं तदत्र विद्यते' इति प्रश्नवाक्येनेति वक्तव्ये 'तस्मिन्यदन्तः' इति तत्समानार्थवाक्योपादानं हृदयाकाशस्थत्वमन्वेष्टव्ये प्रदर्शयितुम् ।**

ಒಟ್ಟು ಅಭಿಪ್ರಾಯ ಹೀಗಿದೆ - 'ತಸ್ಮಿನ್ಯದಂತಃ' ಇತ್ಯಾದಿ ವಾಕ್ಯದಲ್ಲಿ ಅನ್ವೇಷ್ಟವ್ಯತ್ವ ಧರ್ಮದಿಂದ ಕೂಡಿರುವಂತಹನು ವಿಷ್ಣುವೆಂದಾದರೆ, 'ತಸ್ಮಿನ್ಯದಂತಃ' ಎಂಬ ವಾಕ್ಯದಿಂದ ಸಮಾನವಿಷಯಕವಾದ 'ಕಿಂ ತದತ್ರ ವಿದ್ಯತೇ' ಎಂಬ ವಾಕ್ಯದಿಂದ 'ಬ್ರಹ್ಮ ವಿದ್ಯತೇ' ಎಂಬ ಪರಿಹಾರ ವಾಕ್ಯವನ್ನು ಬಿಟ್ಟು, 'ಯಾವಾನ್ವಾ ಅಯಮ್' ಎಂಬ ವಾಕ್ಯಕ್ಕೆ ಅನ್ವಯವು ಕೂಡುವುದಿಲ್ಲ. ಆದ್ದರಿಂದ ಅನ್ವಯಾಭಾವವು ಪೂರ್ವಪಕ್ಷಯುಕ್ತಿಯಾಗಿದೆ. ಅಂದರೆ ಇದರೊಳಗೆ ಅಲ್ಪವಾದ ಆಕಾಶವಿದೆ. ಅದರೊಳಗೆ ಯಾವುದಿದೆ. ಅದನ್ನು ಹುಡುಕಬೇಕು ಎಂದು ಅನ್ವೇಷಣೆಗೆ ಯೋಗ್ಯವೆಂದು ಹೇಳಲ್ಪಟ್ಟ ದಹರಾಕಾಶದಲ್ಲಿರುವುದು ವಿಷ್ಣುವೆಂದು ಅಂಗೀಕಾರ ಮಾಡಿದರೆ, 'ತಸ್ಮಿನ್ಯಂದತಃ' ಎಂಬುದಕ್ಕೆ ಸಮಾನಾರ್ಥಕವಾದ 'ಕಿಂ ತದತ್ರ ವಿದ್ಯತೇ' ಇದರೊಳಗೆ ಯಾವುದಿದೆ ? ಎಂಬ ಪ್ರಶ್ನೆಗೆ 'ಬ್ರಹ್ಮ ವಿದ್ಯತೇ' ಪರಬ್ರಹ್ಮನಿದ್ದಾನೆಂದು ಉತ್ತರ ಕೊಡಬೇಕಿತ್ತು. ಹಾಗೇ ಉತ್ತರ ನೀಡದೆ, 'ಯಾವಾನ್ವಾ ಅಯಮಾಕಾಶಃ' ಈ ಆಕಾಶವು ಎಷ್ಟು ಪರಿಮಾಣವುಳ್ಳದ್ದೋ ಅಷ್ಟು ಪರಿಮಾಣವುಳ್ಳದ್ದು ಹೃದಯದೊಳಗಿರುವ ಆಕಾಶವೆಂದು ಹೇಳಿದ ಪರಿಹಾರವಾಕ್ಯಕ್ಕೆ ಅನ್ವಯವಿರುವುದಿಲ್ಲ. ಹೀಗೆ ಅನ್ವಯಾಭಾವವು ಪೂರ್ವಪಕ್ಷಯುಕ್ತಿಯೇ ಆಗಿದೆ. ಆದ್ದರಿಂದ ವಿಷ್ಣುಪಕ್ಷದಲ್ಲಿ ಅನ್ವಯ ಕೂಡುವುದಿಲ್ಲ. ಆಕಾಶಪಕ್ಷದಲ್ಲಿ ಅನ್ವಯವು ಕೂಡುತ್ತದೆ.

**'तस्मिन्यदन्तः' इत्यनेन 'यावान्वा अयम्' इत्यस्यान्वयाभाव इत्येव वक्तव्ये 'दहरोऽस्मिन्नन्तर आकाशे' इति 'अयमाकाशस्तावानेषोऽन्तर्हृदय आकाशः' इति चाधिकांशोदाहरणं तु पूर्वपक्षेऽन्वयाभावलक्षणदोषाभावप्रदर्शनार्थम् । तथा हि । 'दहरोऽस्मिन्नन्तर आकाश' इत्युक्ताकाशस्य सर्वाधारतया हृत्पद्मस्थत्वाङ्गीकारेऽस्त्यन्वयः । हृदयाकाशस्थमुपास्यमित्युक्ते 'किं तत्र विद्यते' इति प्रश्ने 'यावान्वा अयमाकाशः' इति प्रागुक्ताकाशमेव विशिष्य उभे अस्मिन्नित्यादिपरिहारसंश्लेषात् ।**

**तथा च विष्णुपक्षेऽन्वयासम्भवात् आकाशपक्षे तत्सम्भवादाकाश एव हृत्पद्मस्थ इति भावः ।। ५ ।।**

'ತಸ್ಮಿನ್ಯದಂತಃ' ಎಂಬುದರಿಂದ 'ಯಾವಾನ್ವಾ ಅಯಮ್' ಎಂಬುದಕ್ಕೆ ಅನ್ವಯವು ಇಲ್ಲವೆಂದು ಹೇಳುವುದಕ್ಕೆ 'ದಹರೋऽಸ್ಮಿನ್ನಂತರ ಆಕಾಶಃ' ಅಯಮಕಾಶಃ ತಾವಾನೇಷೋऽಂತರ್ಹೃದಯ ಆಕಾಶಃ' ಎಂದು ಅಧಿಕಾಂಶವನ್ನು ಏಕೆ ಹೇಳಿದ್ದೆಂದರೆ ಪೂರ್ವಪಕ್ಷದಲ್ಲಿ 'ಅನ್ವಯಾಭಾವ' ಎಂಬ ದೋಷವಿಲ್ಲವೆಂದು ತೋರಿಸುವುದಕ್ಕಾಗಿ. ಹೇಗೆಂದರೆ 'ದಹರೋऽಸ್ಮಿನ್ನಂತರಾಕಾಶಃ' ಎಂದು ಹೇಳಿದ ಆಕಾಶವು ಸರ್ವಾಧಾರವಾದ ಪ್ರಯುಕ್ತ ಹೃತ್ಪದ್ಮಸ್ಥವೆಂದು ಅಂಗೀಕಾರ ಮಾಡಿದರೆ ಅನ್ವಯವು ಕೂಡುತ್ತದೆ. ಹೃದಯಾಕಾಶದಲ್ಲಿರುವುದನ್ನು ಉಪಾಸನಾ ಮಾಡಬೇಕೆಂದು ಹೇಳಿದಾಗ, 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಯಾವಾನ್ವಾ ಅಯಮಾಕಾಶಃ' ಎಂದು ಹಿಂದೆ ಹೇಳಲ್ಪಟ್ಟ ಆಕಾಶವನ್ನೇ ಉದ್ದೇಶಿಸಿ 'ಉಭೇऽಸ್ಮಿನ್' ಇತ್ಯಾದಿ ಪರಿಹಾರ ನೀಡುವ ವಾಕ್ಯವು ಯುಕ್ತವಾಗುತ್ತದೆ. ಆದ್ದರಿಂದ ವಿಷ್ಣುಪಕ್ಷದಲ್ಲಿ ಅನ್ವಯವು

ಕೂಡುವುದಿಲ್ಲ. ಆಕಾಶಪಕ್ಷದಲ್ಲಿ ಅನ್ವಯವು ಕೂಡುವುದರಿಂದ, ಹೃತ್ಪದ್ಮಸ್ಥವಾದದ್ದು ಭೂತಾಕಾಶವೇ ಆಗುತ್ತದೆ.

## अनुकृत्यधिकरणम् २।३।६

**न्यायविवरणम् – 'तदेतदिति मन्यन्ते' 'कथं नु तद्विजानीयाम्' इति 'तेषां सुखं शाश्वतम्' इत्युक्तज्ञानिसुखग्रहणमिति विपरीतश्रुतिभ्रमः ॥ ६ ॥**

'ತದೇತದಿತಿ ಮನ್ಯಂತೇ' 'ಕಥಂ ನು ತದ್ವಿಜಾನೀಯಾಮ್' 'ತೇಷಾಂ ಸುಖಂ ಶಾಶ್ವತಮ್' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ 'ತತ್', 'ಏತತ್' ಮೊದಲಾದ ಶಬ್ದಗಳಿಂದ ಜ್ಞಾನಿಸುಖವನ್ನು ಸ್ವೀಕರಿಸಬೇಕು. ಇಲ್ಲಿ 'ವಿಪರೀತ ಶ್ರುತಿಭ್ರಮಃ' ಎಂಬುದು ಪೂರ್ವಪಕ್ಷಯುಕ್ತಿಯಾಗಿದೆ.

**भावबोधः – ॐ अनुकृतेस्तस्य च ॐ ॥ 'कथं नु तद्विजानीयाम्' इति श्रुत्युक्तमानुकूल्येन गृह्यमाणत्वं सुखशब्दसाम्यात् किं ज्ञानिसुखस्योत विष्णोरिति सन्देहे ज्ञानिसुखस्यैवेति पूर्वःपक्षः । विष्णोरेवेति सिद्धान्तः । तत्र 'विपरीतश्रुतिभ्रमः' इत्युक्तन्यायं पूर्वपक्षसम्बन्धित्वेन विवृणोति – तदिति ॥**

'ಓಂ ಅನುಕೃತೇಃ ತಸ್ಯ ಚ ಓಂ' ಎಂಬ ಅಧಿಕರಣದಲ್ಲಿ 'ಕಥಂ ನು ತದ್ವಿಜಾನೀಯಾಮ್' ಅದನ್ನು ಹೇಗೆ ತಾನೇ ತಿಳಿದೇನು ? ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಆನುಕೂಲ್ಯೇನ ಗೃಹ್ಯಮಾಣತ್ವವು ಜ್ಞಾನಿಸುಖ, ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿರುವುದರಿಂದ ಜ್ಞಾನಿಸುಖಕ್ಕೋ ಅಥವಾ ವಿಷ್ಣುವಿಗೋ ? ಎಂದು ಸಂಶಯ. ಜ್ಞಾನಿಸುಖಕ್ಕೇನೇ ಆನುಕೂಲ್ಯೇನ ಗೃಹ್ಯಮಾಣತ್ವ ಬರುತ್ತದೆಂದು ಪೂರ್ವಪಕ್ಷ. ವಿಷ್ಣುವಿಗೆ ಮಾತ್ರ ಬರುತ್ತದೆಂದು ಸಿದ್ಧಾಂತ. ಈ ವಿಷಯದಲ್ಲಿ 'ವಿಪರೀತಶ್ರುತಿಭ್ರಮಃ' ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ತದೇತತ್' ಇತ್ಯಾದಿ ಮೂಲದಿಂದ.

'तदेतदिति मन्यन्तेऽनिर्देश्यं परमं सुखम्' इत्यत्र तदेतच्छब्दाभ्यां 'कथं नु तद्विजानीयाम्' इत्यत्र तच्छब्देन च

एको वशी सर्वभूतान्तरात्मा एकं रूपं बहुधा यः करोति ।
तमात्मस्थं येऽनु पश्यन्ति धीरास्तेषां सुखं शाश्वतं नेतरेषाम् ॥

**इत्युक्तज्ञानिसुखस्यैव ग्रहणं परामर्शः । नतु 'एको वशी' इत्यादि प्रकृतात्मपरामर्शः ।**

'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್' ಅಂತಹದ್ದನ್ನು ಪರಮಸುಖರೂಪವನ್ನಾಗಿ ತಿಳಿಯುತ್ತಾರೆ ಎಂಬಲ್ಲಿ 'ತತ್' ಮತ್ತು 'ಏತತ್' ಶಬ್ದಗಳಿಂದ ಮತ್ತು 'ಕಥಂ ನು ತದ್ವಿಜಾನೀಯಾಮ್' ಅದನ್ನು ಹೇಗೆ ತಾನೇ ತಿಳಿದೇನು ? ಎಂಬಲ್ಲಿರುವ 'ತತ್' ಶಬ್ದಗಳಿಂದಲೂ ಮತ್ತು

'ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಃ ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥'

ಸರ್ವತಂತ್ರ ಸ್ವತಂತ್ರನು ಸರ್ವರನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವವನು ಸಮಸ್ತ ಪ್ರಾಣಿಗಳಿಗೆ ಅಂತರ್ನಿಯಾಮಕನು ಆಗಿರುವ ಶ್ರೀಹರಿಯು ಒಂದೇ ರೂಪವನ್ನು ಬಹುಪ್ರಕಾರದಲ್ಲಿ ತೋರಿಸುತ್ತಾನೆ. ಅಂತಹ ಹೃದಯಾಂತರ್ಗತನಾದ ಶ್ರೀಹರಿಯನ್ನು ಯಾವ ಜ್ಞಾನಿಗಳು ತಿಳಿಯುತ್ತಾರೋ, ಅಂತಹವರಿಗೆ ಮಾತ್ರ ಶಾಶ್ವತವಾದ ಆನಂದವು ಲಭಿಸುತ್ತದೆ. ಬೇರೆಯವರಿಗೆ ಲಭಿಸುವುದಿಲ್ಲ ಎಂದು ಹೇಳಿದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕು ಹೊರತು 'ಏಕೋ ವಶೀ' ಇತ್ಯಾದಿ ವಾಕ್ಯಗಳಿಂದ ಪ್ರಕೃತನಾದ ವಿಷ್ಣುವನ್ನು ಪರಾಮರ್ಶ ಮಾಡಬಾರದು.

**ज्ञानिसुखस्य नपुंसकलिङ्गसुखशब्देन प्रकृतस्य 'तदेतत्' इत्यनेन सुखशब्दसमानाधिकृतेन 'तदेतत्' इति वाक्यसमानविषयक कथं नु तद्विजानीयामिति वाक्यगततच्छब्देन च परामर्श उपपद्यते । न त्वतथाविधस्य परमात्मन इति विपरीतश्रुतिभ्रम इत्यर्थः । एवं च नित्यो नित्यानामित्यादि-विष्णुप्रस्तावकवाक्यगतपुल्लिङ्गनित्य इत्यादि श्रुत्यपेक्षया । 'तदेतदिति मन्यन्तेऽनिर्देश्यम्' इत्यादिवाक्यगत 'तदेतत्सुखम्' इत्यादिश्रुतेर्नपुंसकलिङ्गत्वादिना वैपरीत्यात्तद्वाक्यगततच्छब्दादिना न विष्णुपरामर्शः । किन्तु 'तेषां सुखं शाश्वतम्' इति ज्ञानिसुखप्रस्तावकसुखश्रुतेर्वैपरीत्याभावात्तद्वाक्योक्तज्ञानिसुखस्यैव परामर्श इति विपरीतश्रुतिरेव पूर्वपक्षयुक्तिः । पूर्वपक्ष्यभिप्रायस्य भ्रमत्वादुभयत्र भ्रमपदप्रयोगः ॥ ६ ॥**

ಜ್ಞಾನಿಗಳ ಸುಖವು ನಪುಂಸಕಲಿಂಗದಲ್ಲಿರುವ ಸುಖಶಬ್ದದಿಂದ ಪ್ರಕೃತವಾಗಿದೆ. ಆದಕ್ಕೆ 'ತದೇತತ್' ಎಂಬ ಸುಖಶಬ್ದದ ಸಾಮಾನಾಧಿಕರಣ್ಯದಿಂದಲೂ 'ಕಥಂ ನು ತದ್ವಿಜಾನೀಯಾಮ್' ಎಂಬ ವಾಕ್ಯದಲ್ಲಿರುವ 'ತತ್' ಶಬ್ದದಿಂದಲೂ ಪರಾಮರ್ಶವು ಯುಕ್ತವಾಗುತ್ತದೆ. ಹೊರತು, ಹಾಗೆ ಪ್ರಕೃತನಾಗದ ಪರಮಾತ್ಮನನ್ನು ತಿಳಿಯಬಾರದೆಂದು ವಿಪರೀತ ಶ್ರುತಿಭ್ರಮವಿರುತ್ತದೆ. ಆದ್ದರಿಂದ 'ನಿತ್ಯೋ ನಿತ್ಯಾನಾಮ್' ಇತ್ಯಾದಿ

ಪುಲ್ಲಿಂಗದಿಂದ ಪ್ರಕೃತನಾದ ಪರಮಾತ್ಮನಿಗೆ ಪರಾಮರ್ಶವು ಕೂಡುವುದಿಲ್ಲ. ಹೀಗೆ ವಿಪರೀತಶ್ರುತಿಯೇ ಪೂರ್ವಪಕ್ಷಪ್ರಾಪಕವಾಗಿದೆ. ಪೂರ್ವಪಕ್ಷಿಯ ಅಭಿಪ್ರಾಯವು ಭ್ರಮವಾದ ಪ್ರಯುಕ್ತ ಎರಡು ಕಡೆಯಲ್ಲಿಯೂ ಭ್ರಮಪದವನ್ನು ಪ್ರಯೋಗಿಸಲಾಗಿದೆ.

## वामनाधिकरणम् २।३।७

**न्यायविवरणम् – 'ऊर्ध्वं प्राणमुन्नयति' इत्यादिलिङ्गानां प्राणादन्यत्रावकाशराहित्यमिति भ्रमः । 'एवमेवैष प्राण इतरान्प्राणान्पृथक्पृथगेव सन्निधत्ते' इत्यादिवाक्याद्भ्रमः ॥ ७ ॥**

ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವಾದಿ ಲಿಂಗಗಳಿಗೆ ಮುಖ್ಯಪ್ರಾಣನಿಗಿಂತ ಭಿನ್ನನಾದ ವಿಷ್ಣುವಿನಲ್ಲಿ ಅವಕಾಶವಿಲ್ಲವೆಂದು ಭ್ರಮವು. ಏಕೆಂದರೆ 'ಏವಮೇವೈಷ ಪ್ರಾಣಃ ಇತರಾನ್ ಪ್ರಾಣಾನ್‌ಪೃಥಕ್‌ಪೃಥಗೇವ ಸನ್ನಿಧತ್ತೇ' ಎಂಬ ವಾಕ್ಯವನ್ನು ನೋಡಿದಾಗ ಭ್ರಮವು ಉಂಟಾಗುತ್ತದೆ.

**भावबोधः – ॐ शब्दादेव प्रमितः ॐ ।। 'ईशानो भूतभव्यस्य' इति श्रुत्युक्तईशानः किं मुख्यवायुरुत विष्णुरिति प्रेरकत्वसाम्येन सन्देहे मुख्यवायुरेवेति पूर्वपक्षः । विष्णुरेवेति सिद्धान्तः ।**

**तत्र 'लिङ्गावकाशराहित्यभ्रमः' इत्युक्तन्यायं पूर्वपक्षसम्बन्धित्वेन विवृणोति – ऊर्ध्वमिति ।।**

'ಓಂ ಶಬ್ದಾದೇವ ಪ್ರಮಿತಃ ಓಂ' ಎಂಬ ಅಧಿಕರಣದಲ್ಲಿ 'ಈಶಾನೋ ಭೂತಭವಸ್ಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಈಶಾನಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಪ್ರೇರಕತ್ವವು ಉಭಯಸಾಧಾರಣವಾದ್ದರಿಂದ ಈಶಾನಶಬ್ದಪ್ರತಿಪಾದ್ಯರಾದವರು ಮುಖ್ಯಪ್ರಾಣದೇವರೋ ? ಅಥವಾ ವಿಷ್ಣುವೋ? ಎಂದು ಸಂದೇಹ. ಮುಖ್ಯಪ್ರಾಣದೇವರೇ ಆಗಿದ್ದಾರೆಂದು ಪೂರ್ವಪಕ್ಷ. ವಿಷ್ಣುವೆಂದು ಸಿದ್ಧಾಂತ.

ಅದರಲ್ಲಿ 'ಲಿಂಗಾವಕಾಶರಾಹಿತ್ಯಭ್ರಮಃ' ಎಂಬ ನ್ಯಾಯವನ್ನು ಪೂರ್ವಪಕ್ಷಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಊರ್ಧ್ವಂ' ಇತ್ಯಾದಿ ಗ್ರಂಥದಿಂದ.

**'ईशानो भूतभव्यस्य' इति विषयवाक्यशेषरूपोर्ध्वं प्राणमुन्नयतीत्यादिवाक्योक्तानां प्राणव्यवस्थापकत्वमध्यमत्वसर्वदेवोपास्यत्वानां मुख्यप्राणादन्यत्र विष्णाववकाशराहित्यमिति भ्रम इत्यर्थः ॥ अस्मिन् भ्रमे किं कारणमित्यत आह – एवमिति ॥**

'ಈಶಾನೋ ಭೂತಭವ್ಯಸ್ಯ' ಎಂಬ ವಿಷಯವಾಕ್ಯದ ಶೇಷರೂಪವಾದ 'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವ, ಮಧ್ಯಮತ್ವ, ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳಿಗೆ ಮುಖ್ಯಪ್ರಾಣದೇವರಿಗಿಂತ ಭಿನ್ನನಾದ ವಿಷ್ಣುವಿನಲ್ಲಿ ಅವಕಾಶವಿಲ್ಲವೆಂದು ಭ್ರಮೆಯು. ಈ ಭ್ರಮೆಗೆ ಕಾರಣವನ್ನು 'ಏವಮೇವ' ಇತ್ಯಾದಿ ಮೂಲದಿಂದ ಹೇಳುತ್ತಿದ್ದಾರೆ.

**आदिपदेन 'योऽयं मध्यमः प्राणः,' 'कुविदङ्ग' इति वाक्यद्वयस्य ग्रहणम् । ततश्च मुख्यप्राणादन्यत्रावकाशरहितप्राणव्यवस्थापकत्वादिलिङ्गसमुदायादीशानो मुख्यवायुरेवेति । अत्रापि लिङ्गावकाशराहित्यमेव युक्तिः । भ्रमपदप्रयोगः पूर्ववदेव ।**

ಆದಿಪದದಿಂದ 'ಯೋಽಯಂ ಮಧ್ಯಮಃಪ್ರಾಣಃ ಕುವಿದಂಗ' ಎಂಬೆರಡು ವಾಕ್ಯಗಳನ್ನು ವಿವಕ್ಷಿಸಬೇಕು. ಆದ್ದರಿಂದ ಮುಖ್ಯಪ್ರಾಣನನ್ನು ಬಿಟ್ಟು ಬೇರೆ ಕಡೆ ಅವಕಾಶವಿಲ್ಲದ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳ ಸಮುದಾಯವನ್ನು ವಿವಕ್ಷಿಸಿ, ಈಶಾನನು ಮುಖ್ಯಪ್ರಾಣದೇವರೇ ಆಗಿದ್ದಾರೆಂದು ಪೂರ್ವಪಕ್ಷ ಮಾಡಬೇಕು. ಇಲ್ಲಿಯೂ ಸಹ 'ಲಿಂಗಾವಕಾಶರಾಹಿತ್ಯ' ಎಂಬುದೇ ಯುಕ್ತಿಯಾಗಿದೆ. ಭ್ರಮಪದವನ್ನು ಪ್ರಯೋಗಿಸಿದ್ದು ಹಿಂದಿನಂತೆ ತಿಳಿಯಬೇಕು.

## कम्पनाधिकरणम् २।३।१०

**न्यायविवरणम् – वज्रशब्द उद्यतत्वलिङ्गं च तादृग्द्वयम् ॥ १० ॥**

'ವಜ್ರಶಬ್ದ' 'ಉದ್ಯತತ್ವಲಿಂಗ' ಇವೆರಡು 'ತಾದೃಕ್' ಅಂದರೆ ಇಂದ್ರಾಯುಧದಿಂದ ಭಿನ್ನನಾದ ಪರಮಾತ್ಮನಲ್ಲಿ ಅವಕಾಶವಿಲ್ಲದವುಗಳು.

**भावबोधः – ॐ कम्पनात् ॐ ॥ 'महद्भयं वज्रम्' इति श्रुत्युक्तं वज्रं किमिन्द्रायुधमुत विष्णुरिति प्रसिद्धिलिङ्गाभ्यां सन्देहे इन्द्रायुधमेवेति पूर्वः पक्षः विष्णुरेवेति सिद्धान्तः । तत्र तादृग्द्वयमित्युक्तन्यायं पूर्वपक्षसम्बन्धित्वेन विवृणोति – वज्रशब्द इति ॥**

'ಓಂ ಕಂಪನಾತ್ ಓಂ' ಎಂಬ ಅಧಿಕರಣದಲ್ಲಿ 'ಮಹದ್ಭಯಂ ವಜ್ರಮುದ್ಯತಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ 'ವಜ್ರ' ಶಬ್ದವು ಪ್ರಸಿದ್ಧಿ ಹಾಗೂ ಲಿಂಗ ಇವುಗಳ ಬಲದಿಂದ ಇಂದ್ರಾಯುಧವನ್ನು

ಪ್ರತಿಪಾದಿಸುತ್ತದೋ, ಅಥವಾ ವಿಷ್ಣುವನ್ನೋ ? ಎಂದು ಸಂದೇಹ. ಇಂದ್ರಾಯುಧವೇ ಎಂದು ಪೂರ್ವಪಕ್ಷ. ವಿಷ್ಣುವೇ ಎಂದು ಸಿದ್ಧಾಂತ. ಈ ವಿಷಯದಲ್ಲಿ 'ತಾದೃಗ್ದ್ವಯಮ್' ಎಂಬ ನ್ಯಾಯವನ್ನು ಪೂರ್ವಪಕ್ಷಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ವಜ್ರಶಬ್ದಃ' ಎಂಬುದಾಗಿ.

**लिङ्गं चेत्यतः परमिति शब्दोऽध्याहार्यः । वज्रशब्दोद्यतत्वलिङ्गयोस्तादृक्त्वं नाम इन्द्रायुधादन्यत्र परमात्मन्यवकाशराहित्यमिति ज्ञातव्यम् । अत्र श्रुतिलिङ्गयोर्वैजात्याद् द्वयमित्युक्तम् । ततश्चेन्द्रायुधादन्यत्राऽवकाशरहितश्रुतिलिङ्गाभ्यां वज्रशब्दवाच्यमिन्द्रायुधमेवेति भावः ।**

'ಲಿಂಗಂಚ' ಎಂಬುದರ ಅನಂತರ 'ಇತಿ' ಶಬ್ದವನ್ನು ಅಧ್ಯಾಹಾರ ಮಾಡಬೇಕು. ವಜ್ರಶಬ್ದ ಹಾಗೂ ಉದ್ಯತತ್ವಲಿಂಗ ಇವೆರಡು 'ತಾದೃಕ್' ಎಂದರೆ ಇಂದ್ರಾಯುಧದಿಂದ ಭಿನ್ನನಾದ ಪರಮಾತ್ಮನಲ್ಲಿ ಅವಕಾಶವಿಲ್ಲದವುಗಳು ಎಂದು ತಿಳಿಯಬೇಕು. ಶ್ರುತಿಲಿಂಗಗಳೆರಡು ವಿಜಾತೀಯಗಳಾದ್ದರಿಂದ 'ದ್ವಯಮ್' ಎಂದು ಹೇಳಿದ್ದಾರೆ. ಆದ್ದರಿಂದ ವಜ್ರಶಬ್ದದಿಂದ ಪ್ರತಿಪಾದ್ಯವಾದದ್ದು ಇಂದ್ರಾಯುಧವೇ ಆಗಿದೆ.

## ज्योतिरधिकरणम् २।३।११

**न्यायविवरणम् – आदित्यादिज्योतिष्ट्वमुभयलोकसञ्चरणं 'आदित्येनैवायं ज्योतिषाऽस्ते' इत्यवधारणमित्यादीनां परमात्मन्यवकाशाभावो बहुतादृक्त्वम् ॥११॥**

ಆದಿತ್ಯಾದಿಜ್ಯೋತಿಷ್ಟ್ವವು ಮತ್ತು ಉಭಯಲೋಕಸಂಚರಣವು 'ಆದಿತ್ಯೇನೈವಾಯಂ ಜ್ಯೋತಿಷಾಽಸ್ತೇ' ಎಂಬಲ್ಲಿ ಹೇಳಲ್ಪಟ್ಟ ಅವಧಾರಣ ಮೊದಲಾದವು ಪರಮಾತ್ಮನಲ್ಲಿ ಕೂಡಲು ಸಾಧ್ಯವಿಲ್ಲ. ಹೀಗೆ ಬಹುತಾದೃಕ್ತ್ವವು ಪೂರ್ವಪಕ್ಷಯುಕ್ತಿಯಾಗಿದೆ.

**भावबोधः – ॐ ज्योतिर्दर्शनात् ॐ ॥ 'योऽयं विज्ञानमयः प्राणेषु हृद्यन्तर्ज्योतिः' इति वाक्योक्तं ज्योतिः किं जीव उत विष्णुरिति ज्ञानरूपत्वसाम्येन सन्देहे जीव एवेति पूर्वः पक्षः । विष्णुरेवेति सिद्धान्तः ।**

**तत्र 'बहुतादृक्त्वम्' इत्युक्तन्यायं पूर्वपक्षसम्बन्धित्वेन विवृणोति – आदित्योऽऽदज्योतिष्ट्वमित्यादिना ॥**

'ಓಂ ಜ್ಯೋತಿರ್ದರ್ಶನಾತ್ ಓಂ' ಎಂಬ ಅಧಿಕರಣದಲ್ಲಿ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಯು ಇಬ್ಬರಲ್ಲಿಯೂ ಜ್ಞಾನರೂಪತ್ವವಿರುವುದರಿಂದ ಜೀವನೋ, ಅಥವಾ ವಿಷ್ಣುವೋ? ಎಂದು ಸಂಶಯ. ಜೀವನೇ ಜ್ಯೋತಿರೂಪನೆಂದು

ಪೂರ್ವಪಕ್ಷ. ವಿಷ್ಣುವೆಂದು ಸಿದ್ಧಾಂತ. ಇಲ್ಲಿ 'ಬಹುತಾದ್ರ್ಯ್ತ' ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಿದ್ದರೆ 'ಆದಿತ್ಯಾದಿ' ಇತ್ಯಾದಿ ಮೂಲದಿಂದ.

**जीव एवेदं ज्योतिः । तस्यादित्यादिज्योतिष्ट्वोक्तेः। ननु 'किं ज्योतिरयं पुरुषः' इत्यादित्यज्योतिः, 'सम्राडिति होवाच' इत्यादिनोक्तमादित्यज्योतिष्ट्वं 'प्राणेषु हृद्यन्तर्ज्योतिः' इत्युक्तज्योतिषः कथमिति चेन्न । यस्य पुरुषस्यादित्यादिज्योतिष्ट्वमुक्तं तस्यैव 'आत्मैवास्य ज्योतिर्भवति' इति श्रुत्या(सुप्त्यादावा)त्मज्योतिष्ट्वोक्तौ कतम आत्मेति तदात्म(त्व)प्रश्ने ज्योतिष उक्तत्वादिति भावः ।**

**आदित्याऽऽदिज्योतिष्ट्वं तु 'न तत्र सूर्यो भाति' इत्यादेः परमात्मन्यनवकाशम् । 'स समानः सन्नुभौ लोकावनुसञ्चरति' इत्यनेन लोकसञ्चरणं च ज्योतिष उच्यते । तच्च जीव(स्यैव)स्य कर्मवशाद्युक्तम् । ईश्वरे कर्माभावादनवकाशम् ।**

ಜೀವನೇ ಜ್ಯೋತಿಯೆನಿಸಿದ್ದಾನೆ. ಏಕೆಂದರೆ ಅಂತಹ ಜೀವನಿಗೆ ಆದಿತ್ಯಾದಿಜ್ಯೋತಿಷ್ಟ್ವವನ್ನು ಹೇಳಿದ್ದರಿಂದ 'ಕಿಂ ಜ್ಯೋತಿರಯಂ ಪುರುಷಃ ಇತ್ಯಾದಿತ್ಯಜ್ಯೋತಿಃ' ಎಂದು ಹೇಳಲ್ಪಟ್ಟ ಆದಿತ್ಯಾದಿಜೋತಿಷ್ಟ್ವವು ಮತ್ತು 'ಸಮ್ರಾಡಿತಿ ಹೋವಾಚ' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಆದಿತ್ಯಜೋತಿಷ್ಟ್ವವು 'ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬಲ್ಲಿ ಹೇಳಲ್ಪಟ್ಟ ಜ್ಯೋತಿಸ್ಸಿಗೆ ಹೇಗೆ ಕೂಡುತ್ತದೆ? ಎಂದು ಪ್ರಶ್ನಿಸಬಾರದು. ಯಾವ ಪುರುಷನಿಗೆ ಆದಿತ್ಯಾದಿಜ್ಯೋತಿಷ್ಟ್ವವನ್ನು ಹೇಳಲಾಗಿದೆಯೋ, ಅದೇ ಪುರುಷನಿಗೇ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬ ಶ್ರುತಿಯಿಂದ ಆತ್ಮಜ್ಯೋತಿಷ್ಟ್ವವನ್ನು ಹೇಳಿದ ಮೇಲೆ 'ಕತಮ ಆತ್ಮಾ' ಎಂಬುದಾಗಿ ಆತ್ಮನ ಬಗ್ಗೆ ಪ್ರಶ್ನಿಸಿದಾಗ, ಜ್ಯೋತಿಯ ಬಗ್ಗೆ ಉತ್ತರಿಸಲಾಗಿದೆ. ಆದಿತ್ಯಾದಿಜ್ಯೋತಿಷ್ಟ್ವವಾದರೂ 'ನ ತತ್ರ ಸೂರ್ಯೋ ಭಾತಿ' ಎಂದು ಹೇಳಿದ್ದರಿಂದ ಪರಮಾತ್ಮನಲ್ಲಿ ಅಂದರೆ ಜೀವನ ದೆಸೆಯಿಂದ ಭಿನ್ನನಾದ ವಿಷ್ಣುವಿನಲ್ಲಿ 'ನ ತತ್ರ ಸೂರ್ಯೋ ಭಾತಿ' ಎಂದು ಹೇಳಿದ್ದರಿಂದ ಆದಿತ್ಯಾದಿಜ್ಯೋತಿಷ್ಟ್ವವು ಕೂಡುವುದಿಲ್ಲ. 'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' ಎಂಬುದರಿಂದ ಹೇಳಲ್ಪಟ್ಟ ಉಭಯಲೋಕಸಂಚರಣವು ಜ್ಯೋತಿಸ್ಸಿನಲ್ಲಿ ಶ್ರುತವಾಗಿದೆ. ಇದು ಕರ್ಮವಶದಿಂದ ಜೀವನಲ್ಲಿ ಹೇಳಬಹುದು. ಈಶ್ವರನಿಗೆ ಕರ್ಮವಿಲ್ಲದ ಕಾರಣ, ಕೂಡುವುದಿಲ್ಲ.

**(ननु) यस्यादित्यादिज्योतिष्ट्वमुक्तं स जीव एवास्तु । तस्य च 'आत्मैवास्य ज्योतिः' इत्यत्र परमात्मज्योतिष्ट्वमुच्यते । तदात्मप्रश्ने च 'योऽयं विज्ञानमयः' इत्यादिना ज्योतिष आम्नानात्परमात्मैवेदं ज्योतिरित्यत उक्तम् ।। आदित्येनैवायं ज्योतिषाऽस्त इत्यवधारणमिति । 'आत्मैवाऽस्य ज्योतिः' इत्यत्र न जीवस्य**

**परमात्मज्योतिष्ट्वमुच्यते । जीवस्य परमात्मज्योतिष्ट्वस्यैवायोगात् । तथात्वे परमात्मनोऽस्तमयादिशून्यस्य जाग्रत्यपि ज्योतिष्ट्वप्राप्त्या 'तदादित्येनैवायं ज्योतिषाऽस्ते चन्द्रमसैवायं ज्योतिषाऽऽस्त' इत्यवधारणानुपपत्तिः । 'आत्मैवास्य ज्योतिरित्युक्तार्थस्य 'अत्रायं पुरुषः स्वयं ज्योतिः' इति प्रत्यभिज्ञाविरोधश्च सङ्ग्राह्य इति भावः ।**

ಯಾವ ಆದಿತ್ಯಾದಿಜ್ಯೋತಿಷ್ಟ್ವವು ಹೇಳಲ್ಪಟ್ಟಿದೆಯೋ, ಅದು ಜೀವನಲ್ಲಿ ಕೂಡಬಹುದು. ಏಕೆಂದರೆ 'ಆತ್ಮೈವಾಽಸ್ಯ ಜ್ಯೋತಿಃ' ಎಂದು ಪರಮಾತ್ಮಜ್ಯೋತಿಷ್ಟ್ವವು ಉಕ್ತವಾಗಿದೆ. ಆತ್ಮನ ಬಗ್ಗೆ ಪ್ರಶ್ನಿಸಿದಾಗ 'ಯೋಽಯಂ ವಿಜ್ಞಾನಮಯಃ' ಇತ್ಯಾದಿ ವಾಕ್ಯದಿಂದ ಜ್ಯೋತಿಸ್ಸಿನ ಬಗ್ಗೆ ಉತ್ತರಿಸಿದ್ದರಿಂದ ಪರಮಾತ್ಮನೇ ಜ್ಯೋತಿಯಾಗಬಹುದಲ್ಲವೇ ? ಎಂದು ಪ್ರಶ್ನಿಸಬಾರದೆಂದು 'ತದಾದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ ಜೀವನಿಗೆ ಪರಮಾತ್ಮಜ್ಯೋತಿಷ್ಟ್ವವು ಯುಕ್ತವಾಗುವುದಿಲ್ಲ. ಹಾಗಾದಲ್ಲಿ ನಾಶಾದಿಗಳಿಲ್ಲದ ಪರಮಾತ್ಮನಿಗೆ ಜಾಗ್ರತ್‌ಕಾಲದಲ್ಲಿಯೂ ಜ್ಯೋತಿಷ್ಟ್ವವಿರುವುದರಿಂದ 'ತದಾದಿತ್ಯೇನೈವಾಯಂ ಚಂದ್ರಮಸೈವಾಯಂ ಜ್ಯೋತಿಷಾಽಽಸ್ತೇ' ಎಂಬಲ್ಲಿ ಅವಧಾರಣವೇ ತಪ್ಪಾಗುತ್ತದೆ. 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ ಹೇಳಲ್ಪಟ್ಟ ಅರ್ಥಕ್ಕೆ 'ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬ ಪ್ರತ್ಯಭಿಜ್ಞಾದಿಂದ ವಿರೋಧವೂ ಸಹ ಬರುತ್ತದೆಂದು ಸಂಗ್ರಹಿಸಬೇಕು.

**यद्वाऽऽदिपदेन 'इमं लोकमतिक्रामति मृत्यो रूपाणि स वाऽयं पुरुषो जायमानः शरीरमभिसम्पद्यमानः पाप्मभिः संसृज्यते । उत्क्रामन् म्रियमाणः पाप्मनो विजहाति उभयान् पाप्मन आनन्दाँश्च पश्यति स यत्तत्र प्रस्वपिति स्वप्नान्तमुच्चावचमीयमान उभयानि पश्यन्' इत्यादिजीवलिङ्गानां परमात्मन्यवकाशरहितानां ग्रहणम् । तेन बहुतादृक्त्व(मुक्त)मुपपन्नम् । इत्यादीनामित्यनेन बहुतादृक्त्वमित्यत्र बहूनां तादृक्त्वमिति विग्रहः प्रदर्शितो भवति । ततश्च जीवादन्यत्रावकाशरहितबहुलिङ्गेभ्यो जीव एवेदं ज्योतिरिति भावः ।**

ಅಥವಾ ಆದಿಪದದಿಂದ 'ಇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ ಸ ವಾಽಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ । ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ ಉಭಯಾನ್ ಪಾಪ್ಮನ ಆನಂದಾಂಶ್ಚ ಪಶ್ಯತಿ ಸ ಯತ್ತತ್ರ ಪ್ರಸ್ವಪಿತಿ ಸ್ವಪ್ನಾಂತಮುಚ್ಚಾವಮೀಯಮಾನ ಉಭಯಾನಿ ಪಶ್ಯನ್' ಇತ್ಯಾದಿ ಜೀವಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶವಿಲ್ಲವೆಂಬುದನ್ನು ಇಟ್ಟುಕೊಳ್ಳಬೇಕು. ಇದರಿಂದ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ 'ಬಹುತಾದೃಕ್ತ್ವ'

ಎಂಬ ಲಿಂಗವನ್ನು ಸಮರ್ಥಿಸಿದಂತಾಗುತ್ತದೆ. 'ಇತ್ಯಾದೀನಾಮ್' ಎಂಬುದರಿಂದ 'ಬಹುತಾದೃಕ್ತ್ವಮ್' ಎಂಬಲ್ಲಿ 'ಬಹೂನಾಂ ತಾದೃಕ್ತ್ವಮ್' ಎಂಬ ವಿಗ್ರಹವನ್ನು ತೋರಿಸಿದ್ದಾರೆ. ಆದ್ದರಿಂದ ಜೀವನನ್ನು ಹೊರತಾಗಿ ಬೇರೆಕಡೆ ಅವಕಾಶವಿಲ್ಲದ ಬಹುಲಿಂಗಗಳ ಆಧಾರದಿಂದ ಜೀವನೇ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಗುತ್ತದೆ.

**न्यायविवरणम् – वै नामेति प्रसिद्धिद्योतकनिपातद्वयं, रूढित्यागेनोक्तयौगिकार्थस्वीकारे विरोधि(धः) ॥ १२ ॥**

'ವೈ ನಾಮ' ಎಂಬ ಎರಡು ನಿಪಾತಗಳು ಆಕಾಶಶಬ್ದಾರ್ಥಕ್ಕೆ ಪ್ರಸಿದ್ಧಿಯನ್ನು ತೋರಿಸಿಕೊಡುತ್ತವೆ. ಭೂತಾಕಾಶದಲ್ಲಿರುವ ರೂಢಿಯನ್ನು ಬಿಟ್ಟು ವಿಷ್ಣುರೂಪವನ್ನು ಯೌಗಿಕಾರ್ಥವನ್ನು ಸ್ವೀಕಾರ ಮಾಡಿದರೆ 'ವೈ ನಾಮ' ಎಂಬ ಎರಡು ನಿಪಾತಗಳಿಂದ ವಿರೋಧವು ಬರುತ್ತದೆ.

**भावबोधः – ॐ आकाशोऽर्थान्तरत्वादिव्यपदेशात् ॐ ।। 'आकाशो वै नाम नामरूपयोर्निर्वहिता' इति वाक्योक्त आकाशः किं भूताकाशः उत विष्णुः इति प्रयोगात्सन्देहे भूताकाश एवेति पूर्वः पक्षः । विष्णुरेवेति सिद्धान्तः । तत्रोक्तस्य विरोध इत्युक्तन्यायं पूर्वपक्षसम्बन्धित्वेन विवृणोति – वै नामेति ।।**

'ಓಂ ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ಓಂ' ಎಂಬ ಈ ಅಧಿಕರಣದಲ್ಲಿ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎಂಬ ವಾಕ್ಯದಲ್ಲಿ ಆಕಾಶವು ಭೂತಾಕಾಶವೋ, ಅಥವಾ ವಿಷ್ಣುವೋ? ಎಂದು ಸಂದೇಹ. 'ಭೂತಾಕಾಶವೇ' ಎಂದು ಪೂರ್ವಪಕ್ಷ. 'ವಿಷ್ಣುವೇ' ಎಂದು ಸಿದ್ಧಾಂತ. ಇಲ್ಲಿ ಹೇಳಲ್ಪಟ್ಟ 'ವಿರೋಧಃ' ಎಂಬ ನ್ಯಾಯವನ್ನು ಪೂರ್ವಪಕ್ಷ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ವೈ ನಾಮ' ಇತ್ಯಾದಿಯಾಗಿ.

**वै नामेति निपातद्वयमाकाशशब्दार्थस्य प्रसिद्धिद्योतकम् । आकाशशब्दस्य भूताकाशे रूढित्यागेन 'आकाशस्तल्लिङ्गाद्' इत्यत्रोक्त विष्णुरूपयौगिकार्थस्वीकारे विरोधि स्यादित्यर्थः । 'प्रसिद्धिद्योतकेति' हेत्वर्थगर्भं विशेषणम् । नहि विष्णोस्तन्निर्वहितृत्वं वा प्रसिद्धमिति भावः । अनेन उक्तस्य विरोध इत्यनुव्याख्याने निपातद्वयेनेति शेष इत्युक्तं भवति ।**

**(यद्वा उक्तस्य श्रुतौ प्रयुक्तस्याप्रसिद्धस्य विष्णुपक्षे विरोध इति यथाश्रुतमिति) ततश्चाकाशपदार्थत्वेनाप्रसिद्धस्य प्रागुक्तविष्णोः स्वीकारे प्रसिद्धिद्योतकनिपातद्वयविरोधाद् भूताकाशे तदानुकूल्याद् भूताकाशमेवाकाशपदवाच्यमिति भावः ।**

'ವೈ ನಾಮ' ಎಂಬ ಎರಡು ನಿಪಾತಗಳು ಆಕಾಶ ಶಬ್ದಾರ್ಥಕ್ಕೆ ಪ್ರಸಿದ್ಧಿಯನ್ನು ತೋರಿಸಿಕೊಡುತ್ತಿವೆ. ಆಕಾಶಶಬ್ದಕ್ಕೆ ಭೂತಾಕಾಶದಲ್ಲಿ ರೂಢಿಯನ್ನು ಬಿಟ್ಟು 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿ ಹೇಳಲ್ಪಟ್ಟ ವಿಷ್ಣುವೆಂಬ ಯೌಗಿಕಾರ್ಥವನ್ನು ಸ್ವೀಕಾರ ಮಾಡಲು ವಿರೋಧ ಬರುತ್ತದೆಂದರ್ಥ. 'ಪ್ರಸಿದ್ಧಿದ್ಯೋತಕ' ಎಂಬುದು ಹೇತ್ವರ್ಥಗರ್ಭವಿಶೇಷಣವಾಗಿದೆ. ವಿಷ್ಣುವಿನಲ್ಲಿ ನಿರ್ವಹಿತೃತ್ವವು ಪ್ರಸಿದ್ಧವಾಗಿಲ್ಲವಷ್ಟೇ ಆದ್ದರಿಂದ 'ಉಕ್ತಸ್ಯ ವಿರೋಧಃ' ಎಂಬ ಅನುವ್ಯಾಖ್ಯಾನದಲ್ಲಿ 'ನಿಪಾತದ್ವಯೇನ' ಶೇಷಪೂರಣ ಮಾಡಿಕೊಳ್ಳಬೇಕೆಂದು ಹೇಳಿದಂತಾಯಿತು.

ಅಥವಾ 'ಆಕಾಶ' ಶಬ್ದದ ಅರ್ಥವು ವಿಷ್ಣುವಾಗಿದ್ದಾನೆಂಬುದು ಅಪ್ರಸಿದ್ಧವಾಗಿದೆ. ಆದ್ದರಿಂದ ಹಿಂದೆ ಪ್ರತಿಪಾದ್ಯನಾದ ವಿಷ್ಣುವನ್ನು ಸ್ವೀಕಾರ ಮಾಡಿದರೆ, ಪ್ರಸಿದ್ಧಿದ್ಯೋತಕವಾದ ನಿಪಾತದ್ವಯಗಳ ವಿರೋಧ ಬರುತ್ತದೆ. ಹಾಗಾಗಿ ಭೂತಾಕಾಶದಲ್ಲಿ ಇಂತಹ ನಿಪಾತವಿರೋಧವಿಲ್ಲದ ಕಾರಣ ಅದನ್ನೇ ಆಕಾಶಪದ-ವಾಚ್ಯವೆನ್ನಬೇಕೆಂದು ತಿಳಿಯಬೇಕು.

**न्यायविवरणम् – जीवेश्वराभेदे ईश्वरोक्तावप्यर्थाज्जीव एवोच्यत इत्यार्थात्तथागतिः ॥१३॥**

ಜೀವೇಶ್ವರರಿಗೆ ಅಭೇದವಿರುವುದರಿಂದ ಚೇತನತ್ವರೂಪವಾದ ಅರ್ಥವನ್ನು ವಿವಕ್ಷಿಸಿ 'ಅಸಂಗೋಹ್ಯಯಂ ಪುರುಷಃ' ಎಂದು ಹೇಳಲ್ಪಟ್ಟ ಅಸಂಗತ್ವವನ್ನು ಜೀವನಲ್ಲಿ ಹೇಳುವುದಾದರೆ, ಜೀವನೇ ಪ್ರತಿಪಾದ್ಯನಾಗುತ್ತಾನೆ. ಹೀಗೆ 'ಅರ್ಥಾತ್ ತಥಾಗತಿಃ' ಎನ್ನುವುದು ಇಲ್ಲಿ ಪೂರ್ವಪಕ್ಷಯುಕ್ತಿ.

**भावबोधः – ॐ सुषुप्त्युत्क्रान्त्योर्भेदेन ॐ ॥ 'स यत्तत्र किञ्चित्पश्यत्यनन्वागतस्तेन भवति' इति श्रुत्युक्तं स्वप्नादिद्रष्टृत्वं (किं) जीवस्योत विष्णोरिति लोकप्रसिध्यसङ्गत्वलिङ्गाभ्यां सन्देहे जीवस्यैवेति पूर्वः पक्षः । विष्णोरेवेति सिद्धान्तः । तत्र 'अर्थात्तथागतिः' इत्युक्तन्यायं पूर्वपक्षसम्बन्धित्वेन तावद् विवृणोति – जीवेश्वराभेद इति ॥**

'ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ' ಈ ಸುಷುಪ್ತ್ಯಧಿಕರಣದಲ್ಲಿ 'ಸ ಯತ್ತತ್ರ ಕಿಂಚಿತ್ ಪ್ಯಶ್ಯತ್ಯನ್ವಾಗತಸ್ತೇನ ಭವತಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವು ಲೋಕಪ್ರಸಿದ್ಧಿ ಹಾಗೂ ಅಸಂಗತ್ವಲಿಂಗ ಇವುಗಳಿಂದ ಜೀವನಿಗೋ, ಅಥವಾ ವಿಷ್ಣುವಿಗೋ? ಎಂದು ಸಂದೇಹ. ಜೀವನಿಗೆ ಎಂದು ಪೂರ್ವಪಕ್ಷ. ವಿಷ್ಣುವಿಗೆಂದು ಸಿದ್ಧಾಂತ. ಇಲ್ಲಿ 'ಅರ್ಥಾತ್ ತಥಾಗತಿಃ' ಎಂಬ ನ್ಯಾಯವು ಪೂರ್ವಪಕ್ಷ ಸಂಬಂಧಿಯಾಗಿದೆಯೆಂದು ವಿವರಿಸುತ್ತಿದ್ದಾರೆ 'ಜೀವೇಶ್ವರಾಭೇದ ' ಇತ್ಯಾದಿ ಮೂಲದಿಂದ.

**निमित्तसप्तमीयम् । ईश्वरोक्तावपि असङ्गत्वलिङ्गबलेन 'स यत्तत्र किञ्चित्पश्यति' इत्युक्तस्वप्नादिद्रष्टृत्वेन सिद्धान्तिना ईश्वरोक्तावित्यर्थः । अपिशब्दोऽस्वरससूचनार्थः।**

'ಜೀವೇಶ್ವರಾಭೇದೇ' ಎಂಬಲ್ಲಿರುವ ಸಪ್ತಮೀವಿಭಕ್ತಿಯು ನಿಮಿತ್ತಸಪ್ತಮೀ ಎನಿಸಿದೆ. ಈಶ್ವರನಲ್ಲಿ ಹೇಳಲ್ಪಟ್ಟಿದ್ದರೂ ಅಸಂಗತ್ವ ಎಂಬ ಲಿಂಗದ ಬಲದಿಂದ 'ಸ ಯತ್ತತ್ರ ಕಿಂಚಿತ್ ಪಶ್ಯತಿ' ಎಂಬಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವದಿಂದ ಈಶ್ವರನಿಗೆ ಹೇಳಿದರೂ ಸಹ ಎಂದರ್ಥ. 'ಅಪಿ' ಶಬ್ದವು ಅಸ್ವಾರಸ್ಯದ ಸೂಚನಾರ್ಥವಾಗಿ ಪ್ರಯುಕ್ತವಾಗಿದೆ.

**ततश्चायमर्थः – असङ्गत्वलिङ्गबलात् श्रुत्युक्तं स्वप्नादिद्रष्टृत्वमीश्वरस्येति न वाच्यम् । यतो जीवेश्वरयोरभेदेन चैतन्यरूपार्थविवक्षयाऽसङ्गत्वेन 'असङ्गो ह्ययम्' इति श्रुतौ जीव एवोच्यते । ततश्च लोकप्रसिध्या 'स यत्तत्र किञ्चित्पश्यति' इत्यत्रापि स्वप्नादिद्रष्टृत्वेन जीव एवोच्यत इति ।**

ಒಟ್ಟು ಅಭಿಪ್ರಾಯ - ಅಸಂಗತ್ವ ಎಂಬ ಲಿಂಗದ ಬಲದಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವು ಈಶ್ವರನಿಗೆ ಎಂದು ಹೇಳಬಾರದು. ಏಕೆಂದರೆ ಜೀವೇಶ್ವರರಿಗೆ ಅಭೇದವಿರುವ ಕಾರಣ ಚೈತನ್ಯರೂಪವಾದ ಅರ್ಥವನ್ನು ವಿವಕ್ಷಿಸಿ, ಅಸಂಗತ್ವಲಿಂಗದಿಂದ 'ಅಸಂಗೋ ಹ್ಯಯಂಪುರುಷಃ' ಎಂದು ಜೀವನೇ ಕರೆಸಿಕೊಳ್ಳುತ್ತಾನೆಂದು ಹೇಳಬೇಕು. ಹೀಗೆ ಲೋಕಪ್ರಸಿದ್ಧಿಯಿಂದ ಮತ್ತು 'ಸ ಯತ್ತತ್ರ ಕಿಂಚಿತ್ ಪಶ್ಯತಿ' ಎಂಬ ಸ್ವಪ್ನಾದಿದ್ರಷ್ಟೃತ್ವ ಲಿಂಗದಿಂದಲೂ ಜೀವನೇ ಪ್ರತಿಪಾದ್ಯನಾಗುತ್ತಾನೆ.

**ननु तथापि जीव एवेत्यवधारणानुपपत्तिः । यथा स्वप्नादिदर्शनस्य जीवे मुख्यत्वेनासङ्गत्वमभेदाभिप्रायेण नीयते । तथाऽसङ्गत्वस्येश्वरे मुख्यत्वेन स्वप्नादिदर्शनस्याभेदाभिप्रायेण नेतुं शक्यत्वादिति चेन्न । चैतन्यैक्याभिप्रायेण तद्गतासङ्गत्वस्य जीवेऽमुख्यवृत्तिवदीश्वरे स्वप्नादिद्रष्टृत्वस्य विशिष्टनिष्ठस्यामुख्यतोऽपि वक्तुमयोगादिति । इतिशब्दः प्रकारार्थः । एवं प्रकारार्थात्तथागतिरित्यर्थः ।**

ಆದರೂ ಸಹ ಜೀವನೇ ಎಂಬ ಅವಧಾರಣವು ಹೇಗೆ ಯುಕ್ತವಾಗುತ್ತದೆ? ಯಾವರೀತಿಯಾಗಿ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿ ಮುಖ್ಯವಾಗಿದ್ದರೂ ಅಭೇದ ಅಭಿಪ್ರಾಯದಿಂದ ಅಸಂಗತ್ವವನ್ನು ಜೀವನಲ್ಲಿ ಕೂಡಿಸಲಾಗುತ್ತದೋ, ಅದರಂತೆ ಅಸಂಗತ್ವವು ಪರಮಾತ್ಮನಲ್ಲಿ ಮುಖ್ಯವಾಗಿದ್ದರೂ ಅಭೇದವಿರುವ ಕಾರಣ ಸ್ವಪ್ನಾದಿದ್ರಷ್ಟೃತ್ವವನ್ನು ಪರಮಾತ್ಮನಲ್ಲಿ ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಎರಡೂ ಚೈತನ್ಯಗಳಿಗೆ ಅಭೇದವನ್ನು ಒಪ್ಪಿರುವುದರಿಂದ, ಪರಮಾತ್ಮನಲ್ಲಿರುವ ಅಸಂಗತ್ವವು ಜೀವನಲ್ಲಿ ಅಮುಖ್ಯವಾಗಿ ಬಂದರೂ ಜೀವನಲ್ಲಿರುವ ಸ್ವಪ್ನಾದಿದ್ರಷ್ಟೃತ್ವವು ಪರಮಾತ್ಮನಲ್ಲಿ ಬರಲು ಸಾಧ್ಯವಿಲ್ಲ. ಏಕೆಂದರೆ ವಿಶಿಷ್ಟದಲ್ಲಿರುವುದು ಅಮುಖ್ಯವಾಗಿಯೂ ಸಹ ವಿಶೇಷ್ಯದಲ್ಲಿ ಬರಲು ಸಾಧ್ಯವಿಲ್ಲ. ಅಂದರೆ ಜೀವನಲ್ಲಿರುವ ಧರ್ಮವನ್ನು ಪರಮಾತ್ಮನಲ್ಲಿ ಹೇಳಬಹುದೇ ಹೊರತು, ಪರಮಾತ್ಮನಲ್ಲಿರುವ ಧರ್ಮವನ್ನು ಜೀವನಲ್ಲಿ ಹೇಳಲು ಸಾಧ್ಯವಿಲ್ಲ. 'ಇತಿ' ಶಬ್ದವು ಪ್ರಕಾರಾರ್ಥದಲ್ಲಿದೆ. ಈ ಪ್ರಕಾರದಲ್ಲಿ ಹಾಗೇ ತಿಳಿಯಬೇಕೆಂದರ್ಥ.

यद्वा जीवेश्वराभेद एव कुतः सिद्ध इत्यत आह – इत्यर्थादिति ॥ इत्यर्थात् असङ्गत्वस्वप्नादिद्रष्टृत्वरूपविशेषणद्वयसामानाधिकरण्यान्यथानुपपत्त्या तथा जीवेश्वरयोरभिन्नत्वेन गतिरवगतिरित्यर्थः । एवं चासङ्गत्वस्वप्नादिद्रष्टृत्वलिङ्गान्यथा-नुपपत्त्याऽभेदस्य सिद्धेर्जीव एवायं स्वप्नादिद्रष्टेत्यर्थः ।

ಅಥವಾ ಜೀವೇಶ್ವರಾಭೇದವೇ ಹೇಗೆ ಸಿದ್ಧವಾಗಿದೆ ? ಎಂಬ ಪ್ರಶ್ನೆಗೆ 'ಇತ್ಯರ್ಥಾತ್' ಎಂಬುದರಿಂದ ಉತ್ತರಿಸಿದ್ದಾರೆ. 'ಅಸಂಗತ್ವ - ಸ್ವಪ್ನಾದಿದ್ರಷ್ಟೃತ್ವ' ಎಂಬ ಎರಡು ವಿಶೇಷಣಗಳ ಸಾಮಾನಾಧಿಕರಣ್ಯದ ಅನ್ಯಥಾನುಪಪತ್ತಿಯಿಂದ ಜೀವೇಶ್ವರರಿಗೆ ಅಭೇದವನ್ನು ಹೇಳಬಹುದು.

## ब्राह्मणाधिकरणम् २।३।१४

**न्यायविवरणम् – ब्राह्मणशब्दस्य पापालेपलिङ्गस्य च चतुर्मुखेन सह परमात्मनोऽभेदं विनाऽवकाशराहित्यादर्थादभेदप्राप्तिरिति समस्तमेतत् ॥ १४ ॥**

'ಬ್ರಾಹ್ಮಣ' ಶಬ್ದವೂ ಸಹ ಮತ್ತು ಪಾಪಾದ್ಯಲೇಪಲಿಂಗವೂ ಸಹ ಚತುರ್ಮುಖನಿಗೆ ವಿಷ್ಣುವಿನಿಂದ ಅಭೇದ ಹೇಳಿದರೆ ಮಾತ್ರ, ಯುಕ್ತವಾಗುತ್ತದೆ. ಹೀಗೆ ನಿರವಕಾಶವಾದ ಪ್ರಯುಕ್ತ ಇಬ್ಬರಿಗೂ ಅಭೇದವು ಪ್ರಾಪ್ತವಾಗುತ್ತದೆ.

भावबोधः – ॐ पत्यादिशब्देभ्यः ॐ ॥ 'एष नित्यो महिमा ब्राह्मणस्य' इति श्रुत्युक्तब्राह्मणः किं विरिञ्च उत विष्णुरिति अजश्रुतिनित्यमहिमत्व लिङ्गाभ्यां सन्देहे विरिञ्च एवेति पूर्वः पक्षः । विष्णुरेवेति सिद्धान्तः ।

'ಓಂ ಪತ್ಯಾದಿಶಬ್ದೇಭ್ಯಃ ಓಂ' ಬ್ರಾಹ್ಮಣಾಧಿಕರಣದಲ್ಲಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಾಹ್ಮಣನು ಚತುರ್ಮುಖನೋ, ಅಥವಾ ವಿಷ್ಣುವೋ ? ಎಂದು ಸಂದೇಹ. 'ಅಜಶ್ರುತಿ' 'ನಿತ್ಯಮಹಿಮತ್ವ' ಎಂಬೆರಡು ಲಿಂಗಗಳಿಂದ ಚತುರ್ಮುಖನೋ ಅಥವಾ ವಿಷ್ಣುವೋ? ಎಂದು ಸಂದೇಹ. ಚತುರ್ಮುಖನೆಂದು ಪೂರ್ವಪಕ್ಷ. ವಿಷ್ಣುವೇ ಎಂದು ಸಿದ್ಧಾಂತ.

तत्रैतदव्यवहितपूर्वाधिकरणसम्बन्ध्यर्थात्तथागतिरित्युक्तन्याय एव 'समस्तमेतत्' इत्यत्रैतच्छब्देन परामृश्यत इत्यभिप्रेत्य तं न्यायं पूर्वपक्षसम्बन्धित्वेन विवृणोति – ब्राह्मणशब्दस्येति ॥ ब्राह्मणशब्दस्य 'स न साधुना कर्मणा भूयान्नो एवासाधुना कर्मणा कनीयान्' इति पापाद्यलेपलिङ्गस्य चैकनिष्ठतया प्रतीतस्य विष्णु-विरिञ्चान्यतरग्रहणेऽयोगात् चतुर्मुखस्य परमात्मनाऽभेदं विना शब्दलिङ्गयोरवकाश-राहित्यादर्थात्तदन्यथानुपपत्त्याऽभेदप्राप्तिरित्येवं प्रकारेण समस्तमेतदित्यर्थः ।

'ಜೀವೇಶ್ವರಾಭೇದೇ' ಎಂಬಲ್ಲಿರುವ ಸಪ್ತಮೀವಿಭಕ್ತಿಯು ನಿಮಿತ್ತಸಪ್ತಮೀ ಎನಿಸಿದೆ. ಈಶ್ವರನಲ್ಲಿ ಹೇಳಲ್ಪಟ್ಟಿದ್ದರೂ ಅಸಂಗತ್ವ ಎಂಬ ಲಿಂಗದ ಬಲದಿಂದ 'ಸ ಯತ್ತತ್ರ ಕಿಂಚಿತ್ ಪಶ್ಯತಿ' ಎಂಬಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವದಿಂದ ಈಶ್ವರನಿಗೆ ಹೇಳಿದರೂ ಸಹ ಎಂದರ್ಥ. 'ಅಪಿ' ಶಬ್ದವು ಅಸ್ವಾರಸ್ಯದ ಸೂಚನಾರ್ಥವಾಗಿ ಪ್ರಯುಕ್ತವಾಗಿದೆ.

**ततश्चायमर्थः – असङ्गत्वलिङ्गबलात् श्रुत्युक्तं स्वप्नादिद्रष्टृत्वमीश्वरस्येति न वाच्यम् । यतो जीवेश्वरयोरभेदेन चैतन्यरूपार्थविवक्षयाऽसङ्गत्वेन 'असङ्गो ह्ययम्' इति श्रुतौ जीव एवोच्यते । ततश्च लोकप्रसिध्या 'स यत्तत्र किञ्चित्पश्यति' इत्यत्रापि स्वप्नादिद्रष्टृत्वेन जीव एवोच्यत इति ।**

ಒಟ್ಟು ಅಭಿಪ್ರಾಯ - ಅಸಂಗತ್ವ ಎಂಬ ಲಿಂಗದ ಬಲದಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವು ಈಶ್ವರನಿಗೆ ಎಂದು ಹೇಳಬಾರದು. ಏಕೆಂದರೆ ಜೀವೇಶ್ವರರಿಗೆ ಅಭೇದವಿರುವ ಕಾರಣ ಚೈತನ್ಯರೂಪವಾದ ಅರ್ಥವನ್ನು ವಿವಕ್ಷಿಸಿ, ಅಸಂಗತ್ವಲಿಂಗದಿಂದ 'ಅಸಂಗೋ ಹ್ಯಯಂಪುರುಷಃ' ಎಂದು ಜೀವನೇ ಕರೆಸಿಕೊಳ್ಳುತ್ತಾನೆಂದು ಹೇಳಬೇಕು. ಹೀಗೆ ಲೋಕಪ್ರಸಿದ್ಧಿಯಿಂದ ಮತ್ತು 'ಸ ಯತ್ತತ್ರ ಕಿಂಚಿತ್ ಪಶ್ಯತಿ' ಎಂಬ ಸ್ವಪ್ನಾದಿದ್ರಷ್ಟೃತ್ವ ಲಿಂಗದಿಂದಲೂ ಜೀವನೇ ಪ್ರತಿಪಾದ್ಯನಾಗುತ್ತಾನೆ.

**ननु तथापि जीव एवेत्यवधारणानुपपत्तिः । यथा स्वप्नादिदर्शनस्य जीवे मुख्यत्वेनासङ्गत्वमभेदाभिप्रायेण नीयते । तथाऽसङ्गत्वस्येश्वरे मुख्यत्वेन स्वप्नादिदर्शनस्याभेदाभिप्रायेण नेतुं शक्यत्वादिति चेन्न । चैतन्यैक्याभिप्रायेण तद्गतासङ्गत्वस्य जीवेऽमुख्यवृत्तिवदीश्वरे स्वप्नादिद्रष्टृत्वस्य विशिष्टनिष्ठस्यामुख्यतोऽपि वक्तुमयोगादिति । इतिशब्दः प्रकारार्थः । एवं प्रकारार्थात्तथागतिरित्यर्थः ।**

ಆದರೂ ಸಹ ಜೀವನೇ ಎಂಬ ಅವಧಾರಣವು ಹೇಗೆ ಯುಕ್ತವಾಗುತ್ತದೆ? ಯಾವರೀತಿಯಾಗಿ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿ ಮುಖ್ಯವಾಗಿದ್ದರೂ ಅಭೇದ ಅಭಿಪ್ರಾಯದಿಂದ ಅಸಂಗತ್ವವನ್ನು ಜೀವನಲ್ಲಿ ಕೂಡಿಸಲಾಗುತ್ತದೋ, ಅದರಂತೆ ಅಸಂಗತ್ವವು ಪರಮಾತ್ಮನಲ್ಲಿ ಮುಖ್ಯವಾಗಿದ್ದರೂ ಅಭೇದವಿರುವ ಕಾರಣ ಸ್ವಪ್ನಾದಿದ್ರಷ್ಟೃತ್ವವನ್ನು ಪರಮಾತ್ಮನಲ್ಲಿ ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಎರಡೂ ಚೈತನ್ಯಗಳಿಗೆ ಅಭೇದವನ್ನು ಒಪ್ಪಿರುವುದರಿಂದ, ಪರಮಾತ್ಮನಲ್ಲಿರುವ ಅಸಂಗತ್ವವು ಜೀವನಲ್ಲಿ ಅಮುಖ್ಯವಾಗಿ ಬಂದರೂ ಜೀವನಲ್ಲಿರುವ ಸ್ವಪ್ನಾದಿದ್ರಷ್ಟೃತ್ವವು ಪರಮಾತ್ಮನಲ್ಲಿ ಬರಲು ಸಾಧ್ಯವಿಲ್ಲ. ಏಕೆಂದರೆ ವಿಶಿಷ್ಟದಲ್ಲಿರುವುದು ಅಮುಖ್ಯವಾಗಿಯೂ ಸಹ ವಿಶೇಷ್ಯದಲ್ಲಿ ಬರಲು ಸಾಧ್ಯವಿಲ್ಲ. ಅಂದರೆ ಜೀವನಲ್ಲಿರುವ ಧರ್ಮವನ್ನು ಪರಮಾತ್ಮನಲ್ಲಿ ಹೇಳಬಹುದೇ ಹೊರತು, ಪರಮಾತ್ಮನಲ್ಲಿರುವ ಧರ್ಮವನ್ನು ಜೀವನಲ್ಲಿ ಹೇಳಲು ಸಾಧ್ಯವಿಲ್ಲ. 'ಇತಿ' ಶಬ್ದವು ಪ್ರಕಾರಾರ್ಥದಲ್ಲಿದೆ. ಈ ಪ್ರಕಾರದಲ್ಲಿ ಹಾಗೇ ತಿಳಿಯಬೇಕೆಂದರ್ಥ.

यद्वा जीवेश्वराभेद एव कुतः सिद्ध इत्यत आह – इत्यर्थादिति ।। इत्यर्थात् असङ्गत्वस्वप्नादिद्रष्टृत्वरूपविशेषणद्वयसामानाधिकरण्यान्यथानुपपत्त्या तथा जीवेश्वरयोरभिन्नत्वेन गतिरवगतिरित्यर्थः । एवं चासङ्गत्वस्वप्नादिद्रष्टृत्वलिङ्गान्यथा-नुपपत्त्याऽभेदस्य सिद्धेर्जीव एवायं स्वप्नादिद्रष्टेत्यर्थः ।

ಅಥವಾ ಜೀವೇಶ್ವರಾಭೇದವೇ ಹೇಗೆ ಸಿದ್ಧವಾಗಿದೆ ? ಎಂಬ ಪ್ರಶ್ನೆಗೆ 'ಇತ್ಯರ್ಥಾತ್' ಎಂಬುದರಿಂದ ಉತ್ತರಿಸಿದ್ದಾರೆ. 'ಅಸಂಗತ್ವ - ಸ್ವಪ್ನಾದಿದ್ರಷ್ಟೃತ್ವ' ಎಂಬ ಎರಡು ವಿಶೇಷಣಗಳ ಸಾಮಾನಾಧಿಕರಣ್ಯದ ಅನ್ಯಥಾನುಪಪತ್ತಿಯಿಂದ ಜೀವೇಶ್ವರರಿಗೆ ಅಭೇದವನ್ನು ಹೇಳಬಹುದು.

## ब्राह्मणाधिकरणम् २।३।१४

**न्यायविवरणम् – ब्राह्मणशब्दस्य पापालेपलिङ्गस्य च चतुर्मुखेन सह परमात्मनोऽभेदं विनाऽवकाशराहित्यादर्थादभेदप्राप्तिरिति समस्तमेतत् ॥ १४ ॥**

'ಬ್ರಾಹ್ಮಣ' ಶಬ್ದವೂ ಸಹ ಮತ್ತು ಪಾಪಾದ್ಯಲೇಪಲಿಂಗವೂ ಸಹ ಚತುರ್ಮುಖನಿಗೆ ವಿಷ್ಣುವಿನಿಂದ ಅಭೇದ ಹೇಳಿದರೆ ಮಾತ್ರ, ಯುಕ್ತವಾಗುತ್ತದೆ. ಹೀಗೆ ನಿರವಕಾಶವಾದ ಪ್ರಯುಕ್ತ ಇಬ್ಬರಿಗೂ ಅಭೇದವು ಪ್ರಾಪ್ತವಾಗುತ್ತದೆ.

**भावबोधः – ॐ पत्यादिशब्देभ्यः ॐ ।। 'एष नित्यो महिमा ब्राह्मणस्य' इति श्रुत्युक्तब्राह्मणः किं विरिञ्च उत विष्णुरिति अजश्रुतिनित्यमहिमत्व लिङ्गाभ्यां सन्देहे विरिञ्च एवेति पूर्वः पक्षः । विष्णुरेवेति सिद्धान्तः ।**

'ಓಂ ಪತ್ಯಾದಿಶಬ್ದೇಭ್ಯಃ ಓಂ' ಬ್ರಾಹ್ಮಣಾಧಿಕರಣದಲ್ಲಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಾಹ್ಮಣನು ಚತುರ್ಮುಖನೋ, ಅಥವಾ ವಿಷ್ಣುವೋ ? ಎಂದು ಸಂದೇಹ. 'ಅಜಶ್ರುತಿ' 'ನಿತ್ಯಮಹಿಮತ್ವ' ಎಂಬೆರಡು ಲಿಂಗಗಳಿಂದ ಚತುರ್ಮುಖನೋ ಅಥವಾ ವಿಷ್ಣುವೋ? ಎಂದು ಸಂದೇಹ. ಚತುರ್ಮುಖನೆಂದು ಪೂರ್ವಪಕ್ಷ. ವಿಷ್ಣುವೇ ಎಂದು ಸಿದ್ಧಾಂತ.

तत्रैतदव्यवहितपूर्वाधिकरणसम्बन्ध्यर्थात्तथागतिरित्युक्तन्याय एव 'समस्तमेतत्' इत्यत्रैतच्छब्देन परामृश्यत इत्यभिप्रेत्य तं न्यायं पूर्वपक्षसम्बन्धित्वेन विवृणोति – ब्राह्मणशब्दस्येति ।। ब्राह्मणशब्दस्य 'स न साधुना कर्मणा भूयान्नो एवासाधुना कर्मणा कनीयान्' इति पापाद्यलेपलिङ्गस्य चैकनिष्ठतया प्रतीतस्य विष्णु-विरिञ्चान्यतरग्रहणेऽयोगात् चतुर्मुखस्य परमात्मनाऽभेदं विना शब्दलिङ्गयोरवकाश-राहित्यादर्थात्तदन्यथानुपपत्त्याऽभेदप्राप्तिरित्येवं प्रकारेण समस्तमेतदित्यर्थः ।

ಇಲ್ಲಿ ಅವ್ಯವಹಿತವಾದ ಪೂರ್ವಾಧಿಕರಣದಿಂದ ಸಂಬಂಧವಾದ 'ಅರ್ಥಾತ್ ತಥಾಗತಿಃ' ಎಂಬ ನ್ಯಾಯವೇ ಪೂರ್ವಪಕ್ಷಯುಕ್ತಿಯೆನಿಸಿದೆ. ಅದನ್ನು 'ಸಮಸ್ತಮೇತತ್' ಎಂಬಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶಿಸಲಾಗಿದೆ ಎಂಬ ದೃಷ್ಟಿಯಿಂದ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಿದ್ದಾರೆ 'ಬ್ರಾಹ್ಮಣಶಬ್ದಸ್ಯ' ಇತ್ಯಾದಿ ಗ್ರಂಥದಿಂದ. 'ಬ್ರಾಹ್ಮಣ' ಶಬ್ದವು 'ಸ ನ ಸಾಧುನಾ ಕರ್ಮಣಾ ಭೂಯಾನ್ನೋ ನವಾ ಅಸಾಧುನಾ ಕರ್ಮಣಾ ಕನೀಯಾನ್' ಎಂದು ಪಾಪಾದ್ಯಲೇಪಲಿಂಗಕ್ಕೆ ಏಕನಿಷ್ಠತ್ವವು ಪ್ರತೀತವಾಗುತ್ತಿದೆ. ವಿಷ್ಣು, ಚತುರ್ಮುಖ ಇಬ್ಬರಲ್ಲಿ ಒಬ್ಬರನ್ನು ವಿವಕ್ಷಿಸಿದರೆ, ಇದು ಯುಕ್ತವಾಗುವುದಿಲ್ಲ. ಆದ್ದರಿಂದ ಚತುರ್ಮುಖನಿಗೆ ವಿಷ್ಣುವಿನಿಂದ ಅಭೇದ ಹೇಳದೇ ಅಜಶ್ರುತಿ ನಿತ್ಯಮಹಿಮತ್ವಲಿಂಗಗಳಿಗೆ ಅವಕಾಶವಿರುವುದಿಲ್ಲ. ಆದ್ದರಿಂದ ಅರ್ಥಾತ್ ಅನ್ಯಥಾನುಪಪನ್ನವಾದ್ದರಿಂದ ಅಭೇದವು ಪ್ರಾಪ್ತವಾಗುತ್ತದೆ.

**पूर्वाधिकरणवदिहापि श्रौतोभयसामानाधिकरण्यस्याक्षेपकत्वं, विरिञ्चरूपजीवेश्वराभेदस्याक्षेप्यत्वं, विरिञ्च एवेति निर्बन्धे कारणसद्भावश्चेत्येतत्सर्वं सममित्यभिप्रेत्य समस्तमित्युक्तम् ।**

ಈ ಪ್ರಕಾರದಲ್ಲಿ ಹಿಂದಿನ ಅಧಿಕರಣದಿಂದ ಇಲ್ಲಿಯೂ ಶ್ರುತ್ಯುಕ್ತವಾದ ಅಸಂಗತ್ವ ಸ್ವಪ್ನಾದಿದ್ರಷ್ಟೃತ್ವ ವಿಶೇಷಣವು ಉಭಯಸಾಮಾನ್ಯಾಧಿಕರಣ್ಯದಿಂದ ಚತುರ್ಮುಖನೇ ಆಗಿದ್ದಾನೆಂಬ ನಿರ್ಬಂಧಕ್ಕೆ ಕಾರಣವಾಗಿದೆ. ಇವೆಲ್ಲವೂ ಸಮವಾಗಿವೆ ಎಂಬ ಅಭಿಪ್ರಾಯದಿಂದ 'ಸಮಸ್ತಮ್' ಎಂದು ಮೂಲದಲ್ಲಿ ಹೇಳಿದ್ದಾರೆ.

**यद्वा इतिशब्द आद्यर्थे प्रकारार्थे च । इत्यनेन प्रकारेण इत्यादि समस्तमेतत् ।**

**'उक्तस्य विरोधः' इत्यादिकं 'बाहुल्यं लिङ्गशब्दानाम्' इत्यन्तं न्यायदशकं ग्राह्यम् ।**

ಅಥವಾ 'ಇತಿ' ಶಬ್ದವು 'ಆದಿ' ಎಂಬರ್ಥದಲ್ಲಿಯೂ, 'ಪ್ರಕಾರ' ಎಂಬರ್ಥದಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಆವಾಗ 'ಇತ್ಯನೇನ ಪ್ರಕಾರೇಣ ಇತ್ಯಾದಿ ಸಮಸ್ತಮೇತತ್' ಎಂಬರ್ಥವನ್ನು ಹೇಳಿದಂತಾಗುತ್ತದೆ. ಇಲ್ಲಿಯತನಕ 'ಸಮಸ್ತಮೇತತ್' ಎಂಬುದಕ್ಕೆ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ನ್ಯಾಯವನ್ನೆಲ್ಲಾ ವಿವಕ್ಷಿಸಬೇಕೆಂದು ಅರ್ಥೈಸಿದರೂ ಈಗ 'ಉಕ್ತಸ್ಯ ವಿರೋಧಃ' ಎಂಬಲ್ಲಿಂದ ಪ್ರಾರಂಭ ಮಾಡಿ, 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬಲ್ಲಿಯ ತನಕ ಯಾವ ಹತ್ತು ಪೂರ್ವಪಕ್ಷ-ನ್ಯಾಯಗಳನ್ನು ಆಚಾರ್ಯರು ಹೇಳಿದ್ದಾರೋ, ಆ ಎಲ್ಲಾ ಪೂರ್ವಪಕ್ಷನ್ಯಾಯಗಳನ್ನು ಬ್ರಾಹ್ಮಣಾಧಿಕರಣಕ್ಕೆ ಸಂಬಂಧಪಟ್ಟಂತೆ ಹೇಳಬಹುದೆಂದು ತೋರಿಸುತ್ತಿದ್ದಾರೆ.

**तथा हि । ऐक्याभावे उक्तस्य 'ब्राह्मणस्य' इत्यस्य नित्यमहिमत्वादिलिङ्गस्य च विरोधः । ब्राह्मणाजादिशब्दाः नित्यमहिमत्वपापाद्यलेपलिङ्गानि चेति बहुतादृत्त्वम् ।**

ಅದು ಹೀಗೆ - ಚತುರ್ಮುಖಬ್ರಹ್ಮನಿಗೂ ವಿಷ್ಣುವಿಗೂ ಐಕ್ಯವನ್ನು ಒಪ್ಪದಿದ್ದರೆ, ಹಿಂದೆ ಹೇಳಲ್ಪಟ್ಟ 'ಬ್ರಾಹ್ಮಣಸ್ಯ' ಎಂಬ ವಾಕ್ಯದಿಂದ ತಿಳಿಯುವ ನಿತ್ಯಮಹಿಮತ್ವ ಮೊದಲಾದ ಲಿಂಗಗಳ ವಿರೋಧವೂ ಪ್ರಾಪ್ತವಾಗುತ್ತದೆ. ಆದ್ದರಿಂದ ಉಕ್ತಸ್ಯ ವಿರೋಧಃ' ಎಂಬ ಪೂರ್ವಪಕ್ಷನ್ಯಾಯವು ಸಮನ್ವಯವಾಯಿತು. ಅದರಂತೆ 'ಬ್ರಾಹ್ಮಣ' 'ಅಜ' ಮೊದಲಾದ ಶಬ್ದಗಳು, 'ನಿತ್ಯಮಹಿಮತ್ವ' 'ಪಾಪಾದ್ಯಲೇಪತ್ವ' ಮೊದಲಾದ ಲಿಂಗಗಳು ಐಕ್ಯವಿಲ್ಲದಿದ್ದರೆ, ಉಪಪನ್ನವಾಗುವುದಿಲ್ಲ. ಇದರಿಂದ 'ಬಹುತಾದೃಕ್ತ್ವ' ಎಂಬ ಪೂರ್ವಪಕ್ಷ ಲಿಂಗವು ಸಮನ್ವಯವಾಯಿತು.

**ब्राह्मणाजादिशब्दः पापाद्यलेपलिङ्गं चेति तादृग्द्वयम् ।**

**पापाद्यलेपलिङ्गस्य चतुर्मुखस्य परमात्मनाऽभेदं विनाऽवकाशराहित्यभ्रमः ।**

'ಬ್ರಾಹ್ಮಣ' 'ಅಜ' ಮೊದಲಾದ ಶಬ್ದಗಳು ಚತುರ್ಮುಖನಲ್ಲಿ ಮಾತ್ರ ಇರುತ್ತವೆ. ಪಾಪಾದ್ಯಲೇಪ ಲಿಂಗವು ವಿಷ್ಣುವಿನಲ್ಲಿ ಮಾತ್ರ ಇರುತ್ತದೆ. ಐಕ್ಯವನ್ನು ಒಪ್ಪದಿದ್ದರೆ, ಈ ಬ್ರಾಹ್ಮಣಾದಿಶಬ್ದಗಳನ್ನು ಪಾಪಾದ್ಯಲೇಪಲಿಂಗಗಳನ್ನು ಕೂಡಿಸಲು ಬರುವುದಿಲ್ಲ. ಇದರಿಂದ 'ತಾದೃಕ್‌ದ್ವಯಮ್' ಎಂಬ ಪೂರ್ವಪಕ್ಷನ್ಯಾಯವನ್ನು ಹೇಳಿದಂತಾಯಿತು. ಪಾಪಾದ್ಯಲೇಪಲಿಂಗವು ವಿಷ್ಣುವಿನಲ್ಲಿ ಮಾತ್ರ ಇರುವುದರಿಂದ ಚತುರ್ಮುಖನಿಗೆ ಪರಮಾತ್ಮನಿಂದ ಅಭೇದವನ್ನು ಒಪ್ಪದಿದ್ದರೆ ಕೂಡುವುದಿಲ್ಲ. ಆದ್ದರಿಂದ ಅವಕಾಶರಾಹಿತ್ಯಭ್ರಮವನ್ನು ಹೇಳಿದಂತಾಯಿತು.

**वर्णशून्यत्वेन ब्राह्मणशब्दस्य रूढ्या विष्णोर्विष्णुजातत्वासम्भवेनाजशब्दस्य योगेन विष्णावनवकाश इति विपरीतश्रुतिभ्रमः ।**

ವಿಷ್ಣುವಿಗೆ ಯಾವುದೇ ವರ್ಣವಿಲ್ಲದ ಕಾರಣ, ವರ್ಣವಾಚಕವಾದ ಬ್ರಾಹ್ಮಣಶಬ್ದವನ್ನು ರೂಢಿಯಿಂದ ವಿಷ್ಣುವಿನಲ್ಲಿ ಹೇಳಲು ಸಾಧ್ಯವಿಲ್ಲ. ವಿಷ್ಣುವಿನಿಂದ ಹುಟ್ಟಿದ್ದಾನೆಂಬರ್ಥವನ್ನು ಹೇಳುವಂತಹ 'ಅಜ' ಶಬ್ದಕ್ಕೆ ಚತುರ್ಮುಖನಲ್ಲಿ ಬಿಟ್ಟು ವಿಷ್ಣುವಿನಲ್ಲಿ ಅರ್ಥವನ್ನು ಹೇಳಲು ಬರುವುದಿಲ್ಲ. ಐಕ್ಯವನ್ನು ಒಪ್ಪಿದರೆ ಮಾತ್ರ ಬ್ರಾಹ್ಮಣಶಬ್ದವನ್ನು 'ಅಜ' ಶಬ್ದವನ್ನು ವಿಷ್ಣುವಿನಲ್ಲಿ ಹೇಳಲು ಸಾಧ್ಯ. ಇದರಿಂದ 'ವಿಪರೀತಶ್ರುತಿಭ್ರಮಃ' ಎಂಬ ನ್ಯಾಯವನ್ನು ಹೇಳಿದಂತಾಯಿತು.

**ऐक्यं विना विष्णुविरिञ्चप्रतिपादकवाक्यस्यैकार्थपरत्वरूपान्वयाभावः ।**

ವಿಷ್ಣುವನ್ನು ಮತ್ತು ಚತುರ್ಮುಖನನ್ನು ಪ್ರತಿಪಾದನೆ ಮಾಡುವ ವಾಕ್ಯಕ್ಕೆ, ಏಕಾರ್ಥತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಅನ್ವಯಾಭಾವ'ವೆಂಬ ಪೂರ್ವಪಕ್ಷನ್ಯಾಯವನ್ನು ಸಮನ್ವಯ ಮಾಡಿದಂತಾಯಿತು.

**पापाद्यसङ्गत्वनित्यमहिमत्वादिलिङ्गस्य विष्णुव्यतिरिक्तचेतनेषु, ब्राह्मणाजादिशब्दानां विरिञ्चव्यतिरिक्तेष्वदृष्टिः ।**

ಇಲ್ಲಿ ಅವ್ಯವಹಿತವಾದ ಪೂರ್ವಾಧಿಕರಣದಿಂದ ಸಂಬಂಧವಾದ 'ಅರ್ಥಾತ್ ತಥಾಗತಿಃ' ಎಂಬ ನ್ಯಾಯವೇ ಪೂರ್ವಪಕ್ಷಯುಕ್ತಿಯೆನಿಸಿದೆ. ಅದನ್ನು 'ಸಮಸ್ತಮೇತತ್' ಎಂಬಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶಿಸಲಾಗಿದೆ ಎಂಬ ದೃಷ್ಟಿಯಿಂದ ಪೂರ್ವಪಕ್ಷನ್ಯಾಯವನ್ನು ವಿವರಿಸುತ್ತಿದ್ದಾರೆ 'ಬ್ರಾಹ್ಮಣಶಬ್ದಸ್ಯ' ಇತ್ಯಾದಿ ಗ್ರಂಥದಿಂದ. 'ಬ್ರಾಹ್ಮಣ' ಶಬ್ದವು 'ಸ ನ ಸಾಧುನಾ ಕರ್ಮಣಾ ಭೂಯಾನ್ನೋ ನವಾ ಅಸಾಧುನಾ ಕರ್ಮಣಾ ಕನೀಯಾನ್' ಎಂದು ಪಾಪಾದ್ಯಲೇಪಲಿಂಗಕ್ಕೆ ಏಕನಿಷ್ಠತ್ವವು ಪ್ರತೀತವಾಗುತ್ತಿದೆ. ವಿಷ್ಣು, ಚತುರ್ಮುಖ ಇಬ್ಬರಲ್ಲಿ ಒಬ್ಬರನ್ನು ವಿವಕ್ಷಿಸಿದರೆ, ಇದು ಯುಕ್ತವಾಗುವುದಿಲ್ಲ. ಆದ್ದರಿಂದ ಚತುರ್ಮುಖನಿಗೆ ವಿಷ್ಣುವಿನಿಂದ ಅಭೇದ ಹೇಳದೇ ಅಜಶ್ರುತಿ ನಿತ್ಯಮಹಿಮತ್ವಲಿಂಗಗಳಿಗೆ ಅವಕಾಶವಿರುವುದಿಲ್ಲ. ಆದ್ದರಿಂದ ಅರ್ಥಾತ್ ಅನ್ಯಥಾನುಪಪನ್ನವಾದ್ದರಿಂದ ಅಭೇದವು ಪ್ರಾಪ್ತವಾಗುತ್ತದೆ.

**पूर्वाधिकरणवदिहापि श्रौतोभयसामानाधिकरण्यस्याक्षेपकत्वं, विरिञ्चरूपजीवेश्वराभेदस्याक्षेप्यत्वं, विरिञ्च एवेति निर्बन्धे कारणसद्भावश्चेत्येतत्सर्वं सममित्यभिप्रेत्य समस्तमित्युक्तम् ।**

ಈ ಪ್ರಕಾರದಲ್ಲಿ ಹಿಂದಿನ ಅಧಿಕರಣದಿಂದ ಇಲ್ಲಿಯೂ ಶ್ರುತ್ಯುಕ್ತವಾದ ಅಸಂಗತ್ವ ಸ್ವಪ್ನಾದಿದ್ರಷ್ಟೃತ್ವ ವಿಶೇಷಣವು ಉಭಯಸಾಮಾನ್ಯಾಧಿಕರಣ್ಯದಿಂದ ಚತುರ್ಮುಖನೇ ಆಗಿದ್ದಾನೆಂಬ ನಿರ್ಬಂಧಕ್ಕೆ ಕಾರಣವಾಗಿದೆ. ಇವೆಲ್ಲವೂ ಸಮವಾಗಿವೆ ಎಂಬ ಅಭಿಪ್ರಾಯದಿಂದ 'ಸಮಸ್ತಮ್' ಎಂದು ಮೂಲದಲ್ಲಿ ಹೇಳಿದ್ದಾರೆ.

**यद्वा इतिशब्द आद्यर्थे प्रकारार्थे च । इत्यनेन प्रकारेण इत्यादि समस्तमेतत् । 'उक्तस्य विरोधः' इत्यादिकं 'बाहुल्यं लिङ्गशब्दानाम्' इत्यन्तं न्यायदशकं ग्राह्यम् ।**

ಅಥವಾ 'ಇತಿ' ಶಬ್ದವು 'ಆದಿ' ಎಂಬರ್ಥದಲ್ಲಿಯೂ, 'ಪ್ರಕಾರ' ಎಂಬರ್ಥದಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಆವಾಗ 'ಇತ್ಯನೇನ ಪ್ರಕಾರೇಣ ಇತ್ಯಾದಿ ಸಮಸ್ತಮೇತತ್' ಎಂಬರ್ಥವನ್ನು ಹೇಳಿದಂತಾಗುತ್ತದೆ. ಇಲ್ಲಿಯತನಕ 'ಸಮಸ್ತಮೇತತ್' ಎಂಬುದಕ್ಕೆ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ನ್ಯಾಯವನ್ನೆಲ್ಲಾ ವಿವಕ್ಷಿಸಬೇಕೆಂದು ಅರ್ಥೈಸಿದರೂ ಈಗ 'ಉಕ್ತಸ್ಯ ವಿರೋಧಃ' ಎಂಬಲ್ಲಿಂದ ಪ್ರಾರಂಭ ಮಾಡಿ, 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬಲ್ಲಿಯ ತನಕ ಯಾವ ಹತ್ತು ಪೂರ್ವಪಕ್ಷ-ನ್ಯಾಯಗಳನ್ನು ಆಚಾರ್ಯರು ಹೇಳಿದ್ದಾರೋ, ಆ ಎಲ್ಲಾ ಪೂರ್ವಪಕ್ಷನ್ಯಾಯಗಳನ್ನು ಬ್ರಾಹ್ಮಣಾಧಿಕರಣಕ್ಕೆ ಸಂಬಂಧಪಟ್ಟಂತೆ ಹೇಳಬಹುದೆಂದು ತೋರಿಸುತ್ತಿದ್ದಾರೆ.

**तथा हि । ऐक्याभावे उक्तस्य 'ब्राह्मणस्य' इत्यस्य नित्यमहिमत्वादिलिङ्गस्य च विरोधः । ब्राह्मणाजादिशब्दाः नित्यमहिमत्वपापाद्यलेपलिङ्गानि चेति बहुतादृक्त्वम् ।**

ಅದು ಹೀಗೆ - ಚತುರ್ಮುಖಬ್ರಹ್ಮನಿಗೂ ವಿಷ್ಣುವಿಗೂ ಐಕ್ಯವನ್ನು ಒಪ್ಪದಿದ್ದರೆ, ಹಿಂದೆ ಹೇಳಲ್ಪಟ್ಟ 'ಬ್ರಾಹ್ಮಣಸ್ಯ' ಎಂಬ ವಾಕ್ಯದಿಂದ ತಿಳಿಯುವ ನಿತ್ಯಮಹಿಮತ್ವ ಮೊದಲಾದ ಲಿಂಗಗಳ ವಿರೋಧವೂ ಪ್ರಾಪ್ತವಾಗುತ್ತದೆ. ಆದ್ದರಿಂದ ಉಕ್ತಸ್ಯ ವಿರೋಧಃ' ಎಂಬ ಪೂರ್ವಪಕ್ಷನ್ಯಾಯವು ಸಮನ್ವಯವಾಯಿತು. ಅದರಂತೆ 'ಬ್ರಾಹ್ಮಣ' 'ಅಜ' ಮೊದಲಾದ ಶಬ್ದಗಳು, 'ನಿತ್ಯಮಹಿಮತ್ವ' 'ಪಾಪಾದ್ಯಲೇಪತ್ವ' ಮೊದಲಾದ ಲಿಂಗಗಳು ಐಕ್ಯವಿಲ್ಲದಿದ್ದರೆ, ಉಪಪನ್ನವಾಗುವುದಿಲ್ಲ. ಇದರಿಂದ 'ಬಹುತಾದ್ರೂಕ್ತ್ವ' ಎಂಬ ಪೂರ್ವಪಕ್ಷ ಲಿಂಗವು ಸಮನ್ವಯವಾಯಿತು.

**ब्राह्मणाजादिशब्दः पापाद्यलेपलिङ्गं चेति तादृग्द्वयम् ।**

**पापाद्यलेपलिङ्गस्य चतुर्मुखस्य परमात्मनाऽभेदं विनाऽवकाशराहित्यभ्रमः ।**

'ಬ್ರಾಹ್ಮಣ' 'ಅಜ' ಮೊದಲಾದ ಶಬ್ದಗಳು ಚತುರ್ಮುಖನಲ್ಲಿ ಮಾತ್ರ ಇರುತ್ತವೆ. ಪಾಪಾದ್ಯಲೇಪ ಲಿಂಗವು ವಿಷ್ಣುವಿನಲ್ಲಿ ಮಾತ್ರ ಇರುತ್ತದೆ. ಐಕ್ಯವನ್ನು ಒಪ್ಪದಿದ್ದರೆ, ಈ ಬ್ರಾಹ್ಮಣಾದಿಶಬ್ದಗಳನ್ನು ಪಾಪಾದ್ಯಲೇಪಲಿಂಗಗಳನ್ನು ಕೂಡಿಸಲು ಬರುವುದಿಲ್ಲ. ಇದರಿಂದ 'ತಾದೃಕ್‌ದ್ವಯಮ್' ಎಂಬ ಪೂರ್ವಪಕ್ಷನ್ಯಾಯವನ್ನು ಹೇಳಿದಂತಾಯಿತು. ಪಾಪಾದ್ಯಲೇಪಲಿಂಗವು ವಿಷ್ಣುವಿನಲ್ಲಿ ಮಾತ್ರ ಇರುವುದರಿಂದ ಚತುರ್ಮುಖನಿಗೆ ಪರಮಾತ್ಮನಿಂದ ಅಭೇದವನ್ನು ಒಪ್ಪದಿದ್ದರೆ ಕೂಡುವುದಿಲ್ಲ. ಆದ್ದರಿಂದ ಅವಕಾಶರಾಹಿತ್ಯಭ್ರಮವನ್ನು ಹೇಳಿದಂತಾಯಿತು.

**वर्णशून्यत्वेन ब्राह्मणशब्दस्य रूढ्या विष्णोर्विष्णुजातत्वासम्भवेनाजशब्दस्य योगेन विष्णावनवकाश इति विपरीतश्रुतिभ्रमः ।**

ವಿಷ್ಣುವಿಗೆ ಯಾವುದೇ ವರ್ಣವಿಲ್ಲದ ಕಾರಣ, ವರ್ಣವಾಚಕವಾದ ಬ್ರಾಹ್ಮಣಶಬ್ದವನ್ನು ರೂಢಿಯಿಂದ ವಿಷ್ಣುವಿನಲ್ಲಿ ಹೇಳಲು ಸಾಧ್ಯವಿಲ್ಲ. ವಿಷ್ಣುವಿನಿಂದ ಹುಟ್ಟಿದ್ದಾನೆಂಬರ್ಥವನ್ನು ಹೇಳುವಂತಹ 'ಅಜ' ಶಬ್ದಕ್ಕೆ ಚತುರ್ಮುಖನಲ್ಲಿ ಬಿಟ್ಟು ವಿಷ್ಣುವಿನಲ್ಲಿ ಅರ್ಥವನ್ನು ಹೇಳಲು ಬರುವುದಿಲ್ಲ. ಐಕ್ಯವನ್ನು ಒಪ್ಪಿದರೆ ಮಾತ್ರ ಬ್ರಾಹ್ಮಣಶಬ್ದವನ್ನು 'ಅಜ' ಶಬ್ದವನ್ನು ವಿಷ್ಣುವಿನಲ್ಲಿ ಹೇಳಲು ಸಾಧ್ಯ. ಇದರಿಂದ 'ವಿಪರೀತಶ್ರುತಿಭ್ರಮಃ' ಎಂಬ ನ್ಯಾಯವನ್ನು ಹೇಳಿದಂತಾಯಿತು.

**ऐक्यं विना विष्णुविरिञ्चप्रतिपादकवाक्यस्यैकार्थपरत्वरूपान्वयाभावः ।**

ವಿಷ್ಣುವನ್ನು ಮತ್ತು ಚತುರ್ಮುಖನನ್ನು ಪ್ರತಿಪಾದನೆ ಮಾಡುವ ವಾಕ್ಯಕ್ಕೆ, ಏಕಾರ್ಥತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಅನ್ವಯಾಭಾವ'ವೆಂಬ ಪೂರ್ವಪಕ್ಷನ್ಯಾಯವನ್ನು ಸಮನ್ವಯ ಮಾಡಿದಂತಾಯಿತು.

**पापाद्यसङ्गत्वनित्यमहिमत्वादिलिङ्गस्य विष्णुव्यतिरिक्तचेतनेषु, ब्राह्मणाजादिशब्दानां विरिञ्चव्यतिरिक्तेष्वदृष्टिः ।**

ಪಾಪದ್ಯಸಂಗತ್ವ, ನಿತ್ಯಮಹಿಮತ್ವ, ಮೊದಲಾದ ಲಿಂಗಗಳು ವಿಷ್ಣುವನ್ನು ಬಿಟ್ಟು ಬೇರೆ ಚೇತನರಲ್ಲಿ ಕಂಡಿರುವುದಿಲ್ಲ. 'ಬ್ರಾಹ್ಮಣ' 'ಅಜ' ಮೊದಲಾದ ಶಬ್ದಗಳು ಚತುರ್ಮುಖನನ್ನು ಬಿಟ್ಟು ಬೇರೆಯವರಲ್ಲಿ ಕಂಡಿರುವುದರಿಲ್ಲ. ಇದರಿಂದ 'ಅದೃಷ್ಟಿಃ' ಎಂಬ ಪೂರ್ವಪಕ್ಷನ್ಯಾಯವನ್ನು ಹೇಳಿದಂತಾಯಿತು.

**ऐक्यं विना विष्णुविरिञ्चप्रापकलिङ्गशब्दानां विरुद्धता ।**

**विष्णुविरिञ्चयोर्विशिष्य भेदस्यानुक्तिः ।**

**विष्णुविरिञ्चयोरैक्ये पापाद्यसङ्गत्वनित्यमहिमत्वादिविष्णुलिङ्गानां ब्राह्मणाजादि-विरिञ्चशब्दानां च बाहुल्यमिति ।। १४ ।।**

**इति पूर्वपक्षन्यायाः ।।**

ಐಕ್ಯವನ್ನು ಒಪ್ಪದಿದ್ದರೆ ವಿಷ್ಣು ಹಾಗೂ ಚತುರ್ಮುಖನನ್ನು ಸಮರ್ಥಿಸುವಂತಹ ಲಿಂಗ ಹಾಗೂ ಶ್ರುತಿಗಳ ವಿರೋಧವು ಬರುತ್ತದೆ. ಇದರಿಂದ 'ವಿರುದ್ಧತಾ' ಎಂಬ ಪೂರ್ವಪಕ್ಷನ್ಯಾಯವನ್ನು ಹೇಳಿದಂತಾಯಿತು. ಮತ್ತು ವಿಷ್ಣು ಹಾಗೂ ಚತುರ್ಮುಖರಿಗೆ ವಿಶೇಷವಾಗಿ ಭೇದವನ್ನು ಎಲ್ಲಿಯೂ ಹೇಳಿರುವುದಿಲ್ಲ. ಇದರಿಂದ 'ಅನುಕ್ತಿಃ' ಎಂಬ ಪೂರ್ವಪಕ್ಷನ್ಯಾಯವನ್ನು ಹೇಳಿದಂತಾಯಿತು. ಮತ್ತು ವಿಷ್ಣು ಹಾಗೂ ಚತುರ್ಮುಖರಿಗೆ ಐಕ್ಯವನ್ನು ಒಪ್ಪಿದಾಗ, ಪಾಪಾದ್ಯಸಂಗತ್ವ, ನಿತ್ಯಮಹಿಮತ್ವ ಮೊದಲಾದ ವಿಷ್ಣು ಲಿಂಗಗಳು. 'ಬ್ರಾಹ್ಮಣ', 'ಅಜ' ಮೊದಲಾದ ಚತುರ್ಮುಖನಲ್ಲಿರುವ ಶ್ರುತಿಗಳು ಬಹಳವಾಗಿ ಇವೆಯೆಂದು ಹೇಳಿದಂತಾಗುತ್ತದೆ. ಇದರಿಂದ 'ಬಾಹುಲ್ಯಮ್ ಲಿಂಗಶಬ್ದಾನಾಮ್' ಎಂಬ ಪೂರ್ವಪಕ್ಷನ್ಯಾಯವನ್ನು ಬ್ರಾಹ್ಮಣಾಧಿಕರಣಕ್ಕೆ ಸಂಬಂಧಪಟ್ಟಂತೆ ಸಮರ್ಥಿಸಿದಂತಾಯಿತು. ಹೀಗೆ ಹತ್ತು ಪೂರ್ವಪಕ್ಷನ್ಯಾಯಗಳನ್ನು ಬ್ರಾಹ್ಮಣಾಧಿಕರಣದಲ್ಲಿ ತಿಳಿಯಬೇಕು. ಇಲ್ಲಿಗೆ ಪ್ರಥಮಾಧ್ಯಾಯದ ಮೂರನೆಯ ಪಾದದ ಎಲ್ಲಾ ಪೂರ್ವಪಕ್ಷನ್ಯಾಯಗಳು ಉಕ್ತಪ್ರಾಯವಾದವು.

## सिद्धान्तन्यायाः

**न्यायविवरणम् – तेषामेव लिङ्गशब्दानां 'प्राणानां गन्थिरसि' इत्यादीनां विष्णौ मुख्यवृत्तिरिति बलवत्त्वम् । तस्य हि रुद्रावणादिकर्तृत्वं मुख्यम् ।।१।।**

### ಸಿದ್ಧಾಂತ ನ್ಯಾಯಗಳು

ಹಿಂದೆ ಹೇಳಿದ ಲಿಂಗಶಬ್ದಗಳೇ 'ಪ್ರಾಣಾನಾಂ ಗ್ರಂಥಿರಸಿ' ಮೊದಲಾದವುಗಳಲ್ಲಿ ಹೇಳಲ್ಪಟ್ಟ ಶಬ್ದಗಳಿಗೆ ವಿಷ್ಣುವಿನಲ್ಲಿಯೇ ಮುಖ್ಯವೃತ್ತಿಯು ಇರುತ್ತದೆ. ಆದ್ದರಿಂದ ಆ ಲಿಂಗಶಬ್ದಗಳೇ ಪ್ರಬಲಗಳು. ಆ ವಿಷ್ಣುವಿಗೆ ರೋಗಪರಿಹಾರಕತ್ವ ಮೊದಲಾದ ರುದ್ರಶಬ್ದದ ಪ್ರವೃತ್ತಿ-ನಿಮಿತ್ತವು ಮುಖ್ಯವಾಗಿರುತ್ತದೆ.

भावबोधः –

ता एव बलवत्यस्तु गत्यन्तरविवर्जिताः ।
सिद्धान्तयुक्तयो ज्ञेया दृश्यन्ते ताश्च सर्वशः ॥

इत्यनुव्याख्याने 'बाहुल्यं लिङ्गशब्दानाम्' इत्याद्युक्ता एव सिद्धान्तन्यायत्वेनोक्ताः । तत्र 'बाहुल्यं लिङ्गशब्दानाम्' इत्युक्तमेव न्यायं द्युभ्वाद्यधिकरणसिद्धान्तसम्बन्धित्वेनापि विवृणोति – तेषामेवेति ॥ एवकारेणात्म शब्दमुक्तोपसृप्यत्वादीनां बलवत्त्वे (बाहुल्ये) कैमुत्यमभिप्रैति । तच्छब्दपरामृष्टमेव दर्शयति – प्राणानामिति ॥ मुख्यवृत्तिमुपपादयति – तस्येति ॥ शब्दमुख्यवृत्तौ प्रवृत्तिनिमित्तातिशयः कारणमिति भावः । ततश्च बलवद्युक्तिलिङ्गबाहुल्याद् विष्णुरेव द्युभ्वाद्यायतनमित्यर्थः ॥ १ ॥

ತಾ ಏವ ಬಲವತ್ಯಸ್ತು ಗತ್ಯಂತರವಿವರ್ಜಿತಾಃ ।
ಸಿದ್ಧಾಂತಯುಕ್ತಯೋ ಜ್ಞೇಯಾ ದೃಶ್ಯಂತೇ ತಾಶ್ಚ ಸರ್ವಶಃ ॥

ಎಂಬ ಅನುವ್ಯಾಖ್ಯಾನದಲ್ಲಿ 'ಬಾಹುಲ್ಯಂ ಲಿಂಗಶಬ್ದಾನಾಮ್' ಇತ್ಯಾದಿಯಾಗಿ ಹೇಳಲ್ಪಟ್ಟವುಗಳೇ ನಿರವಕಾಶಗಳಾಗಿ ಸಿದ್ಧಾಂತನ್ಯಾಯಗಳೆಂದು ಕರೆಸಿಕೊಳ್ಳುತ್ತವೆ. ಅವುಗಳಲ್ಲಿ 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂದು ಹೇಳಿದ ನ್ಯಾಯವನ್ನೇ ದ್ಯುಭ್ವಾದ್ಯಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ತೇಷಾಮೇವ' ಇತ್ಯಾದಿಯಾಗಿ.

ಏವಕಾರದಿಂದ ಬಲಿಷ್ಠವಾದ ಆತ್ಮಶಬ್ದ, ಮುಕ್ತೋಪಸೃಪ್ಯತ್ವಗಳು ಹೆಚ್ಚಾಗಿರುವಾಗ ಪ್ರಬಲವಾಗಿವೆ ಎಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತವೆಯೆಂದು ತಿಳಿಯಬೇಕು. 'ತತ್' ಶಬ್ದದಿಂದ ಪರಾಮರ್ಶಿಸಲ್ಪಟ್ಟದ್ದನ್ನೇ 'ಪ್ರಾಣಾನಾಮ್' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಮುಖ್ಯವೃತ್ತಿಯನ್ನು ಉಪಪಾದನೆ ಮಾಡುವುದಕ್ಕಾಗಿ 'ತಸ್ಯಹಿ' ಎಂಬ ವಾಕ್ಯವು ಹೊರಟಿದೆ. ಶಬ್ದದ ಮುಖ್ಯವೃತ್ತಿಗೆ ಪ್ರವೃತ್ತಿನಿಮಿತ್ತದಿಂದ ಅತಿಶಯವೇ ಕಾರಣವಾಗಿದೆಯೆಂದು ಇದರ ಅಭಿಪ್ರಾಯ. ಆದ್ದರಿಂದ 'ಅಂತಕತ್ವ' ಮೊದಲಾದ ಲಿಂಗಗಳು ರುದ್ರಾದಿಶಬ್ದಗಳು ವಿಷ್ಣುವಿನಲ್ಲಿ ಮುಖ್ಯವಾಗಿರುವ ಕಾರಣ ಅಂತಹ ಬಲಿಷ್ಠವಾದ ಉಕ್ತಿ ಹಾಗೂ ಲಿಂಗಗಳು ಬಹಳವಾಗಿರುವುದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನೆಂದು ಸಿದ್ಧಾಂತ.

## भूमाधिकरणम्

**न्यायविवरणम् – प्राणस्य विष्णोः सकाशाद्भूयस्त्वाऽनुक्तिः, चशब्देन 'एष तु वा अतिवदति यः सत्येनातिवदति' इति प्राणाद्विष्णोर्भूयस्त्वोक्तिश्च ॥ २ ॥**

ವಿಷ್ಣುವಿನ ದೆಸೆಯಿಂದ ಮುಖ್ಯಪ್ರಾಣದೇವರಿಗೆ ಶ್ರೇಷ್ಠತ್ವವನ್ನು ಹೇಳಿಲ್ಲ. 'ಅನುಕ್ತಿಶ್ಚ' ಎಂಬ ಅನುವ್ಯಾಖ್ಯಾನದಲ್ಲಿರುವ 'ಚ' ಶಬ್ದದಿಂದ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಇತ್ಯಾದಿ ಶ್ರುತಿಗಳಲ್ಲಿಯೂ ಮುಖ್ಯಪ್ರಾಣನ ದೆಸೆಯಿಂದ ವಿಷ್ಣುವಿಗೇನೇ ಶ್ರೇಷ್ಠತ್ವವು ಹೇಳಲ್ಪಟ್ಟದೆ.

**भावबोधः – 'अनुक्तिश्च' इत्युक्तन्यायं भूमाधिकरणसिद्धान्तसम्बन्धित्वेनापि विवृणोतिप्राणस्येति ॥**

'ಅನುಕ್ತಿಶ್ಚ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ 'ಅನುಕ್ತಿ' ಎಂಬ ನ್ಯಾಯವನ್ನು ಭೂಮಾಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಪ್ರಾಣಸ್ಯ' ಇತ್ಯಾದಿ ಮೂಲದಿಂದ.

**अत्र भूमा विष्णुः पूर्णसुखाभिधानात् सर्वेषामुपर्युपदेशाच्च ।**

**ननु सर्वोत्तमत्वोपदेशोऽपि न विष्णुत्त्वनिश्चयः । विष्णुवत्स्वेतरसर्वोत्तमत्वस्य वायावपि सम्भवादित्यत उक्तं – प्राणस्येति ॥**

ಇಲ್ಲಿ ವಿಷ್ಣುವೇ ಭೂಮನಾಗಿದ್ದಾನೆ. ಏಕೆಂದರೆ ಪೂರ್ಣಸುಖವುಳ್ಳವನೆಂದು ಹೇಳಿದ್ದರಿಂದ ಎಲ್ಲರಿಗಿಂತಲೂ ಉತ್ತಮನಾಗಿದ್ದಾನೆಂದು ಹೇಳಿದ್ದರಿಂದ ಅನುಮಾನವನ್ನು ಹೀಗೆ ತಿಳಿಯಬೇಕು - 'ಭೂಮಾ ವಿಷ್ಣುಃ ಪೂರ್ಣಸುಖಾಭಿಧಾನಾತ್ ಸರ್ವೇಷಾಮುಪರ್ಯುಪದೇಶಾಚ್ಚ' ಎಂಬುದಾಗಿ.

ಶ್ರುತಿಯಲ್ಲಿ ಸರ್ವೋತ್ತಮತ್ವವು ಉಕ್ತವಾಗಿದ್ದರೂ ವಿಷ್ಣುವೇ ಭೂಮಾನಾಗಿದ್ದಾನೆಂದು ನಿಶ್ಚಯಿಸಲಾಗದು. ಏಕೆಂದರೆ ವಿಷ್ಣು ಹೇಗೆ ತನಗಿಂತ ಇತರರಾದ ಸಮಸ್ತಜೀವಿಗಳಿಗಿಂತ ಉತ್ತಮನಾಗಿದ್ದಾನೋ, ಅದರಂತೆ ವಾಯುದೇವರೂ ಸಹ ಎಲ್ಲರಿಗಿಂತಲೂ ಉತ್ತಮರಾಗಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಣಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**यदि प्राणस्य स्वेतरविष्ण्वादिसर्वोत्तमत्वमङ्गीक्रियते तर्हि कुत्रचित् प्राणस्य विष्णोः सकाशाद् भूयस्त्वोक्तिः स्यात् । नच साऽस्ति । नच कुत्राप्यनुक्तमङ्गीकर्तुमुचितम् । 'अनुक्तं पञ्चभिर्वेदैर्न वस्त्वस्ति कुतश्चन' इत्युक्तेरिति भावः ।**

ಒಂದು ವೇಳೆ ಮುಖ್ಯಪ್ರಾಣದೇವರು ತಮಗಿಂತ ಇತರರಾದ ವಿಷ್ಣು ಮೊದಲಾದವರಿಗಿಂತಲೂ ಉತ್ತಮರಾಗಿದ್ದಾರೆಂದು ಒಪ್ಪಿದರೆ ಶ್ರುತಿಯಲ್ಲಿ ಎಲ್ಲಿಯಾದರೂ ಒಂದು ಕಡೆ ವಿಷ್ಣುವಿನ ದೆಸೆಯಿಂದ ಮುಖ್ಯಪ್ರಾಣದೇವರು ಉತ್ತಮರಾಗಿದ್ದಾರೆಂಬ ಮಾತು ಇರಬೇಕಿತ್ತು. ಆದರೆ ಹಾಗೇ ಎಲ್ಲಿಯೂ ಕಾಣಿಸುತ್ತಿಲ್ಲ. ಎಲ್ಲಿಯೂ ಹೇಳದ್ದನ್ನು ಅಂಗೀಕರಿಸುವುದು ಉಚಿತವಲ್ಲ. 'ಅನುಕ್ತಂ ಪಂಚಭಿರ್ವೇದೈರ್ನ ವಸ್ತ್ವಸ್ತಿ ಕುತಶ್ಚನ' ಎಂದು ಹೇಳಿದ್ದರಿಂದ.

**पूर्णानन्दत्वमपि वायौ सावकाशं कथं विष्णुत्त्वनिश्चायकमित्यत आह – चशब्देन प्राणाद्विष्णोर्भूयस्त्वोक्तिश्चेति ।।**

'ಪೂರ್ಣಾನಂದತ್ವ' ಎಂಬ ಲಿಂಗವು ಮುಖ್ಯಪ್ರಾಣದೇವರಲ್ಲಿ ಸಾವಕಾಶವಾಗಿರುವಾಗ ಈ ಲಿಂಗವು ವಿಷ್ಣುವೇ ಭೂಮನಾಗಿದ್ದಾನೆಂಬುದನ್ನು ಹೇಗೆ ಸಾಧಿಸುತ್ತಿದೆ? ಎಂಬ ಪ್ರಶ್ನೆಗೆ 'ಚಶಬ್ದೇನ ಪ್ರಾಣಾದ್ವಿಷ್ಣೋರ್ಭೂಯಸ್ತ್ವೋಕ್ತಿಶ್ಚ' ಎಂಬುದರಿಂದ ಉತ್ತರಿಸಿದ್ದಾರೆ.

**'अनुक्तिश्च' इत्यनुव्याख्यानगतचशब्देनेत्यर्थः ।**

'ಅನುಕ್ತಿಶ್ಚ' ಎಂಬ ಅನುವ್ಯಾಖ್ಯಾನದಲ್ಲಿರುವ 'ಚ' ಶಬ್ದದಿಂದ ಎಂದರ್ಥ. 'ಉಕ್ತಿಶ್ಚ' ಎಂಬಲ್ಲಿರುವ 'ಚ' ಶಬ್ದವು ಹಿಂದೆ ಹೇಳಿದ ಅನುಕ್ತಿಯನ್ನು ಸಮುಚ್ಚಯ ಮಾಡುತ್ತಿದೆ. 'ಪೂರ್ಣಾನಂದಃ ಪೂರ್ಣಭುಕ್ ಪೂರ್ಣಕರ್ತಾ ಯತೋ ವಾಚೋ ನಿರ್ವರ್ತಂತೇ' ಇತ್ಯಾದಿ ಶ್ರುತಿಗಳಲ್ಲಿ ಮತ್ತು 'ಲಕ್ಷಣಂ ಪರಮಾನಂದೋ ವಿಷ್ಣುರೇವ ನ ಸಂಶಯಃ ಅವ್ಯಕ್ತಾದಿ ತೃಣಾಂತಾಸ್ತು ವಿಷ್ಣ್ವಡಾನಂದಭಾಗಿನಃ' ಇತ್ಯಾದಿ ಸ್ಮೃತಿಗಳಲ್ಲಿಯೂ ಮುಖ್ಯಪ್ರಾಣದೇವರಿಗಿಂತಲೂ ಮಹಾವಿಷ್ಣುವೇ ಉತ್ಕೃಷ್ಟವಾದ ಆನಂದವುಳ್ಳವನಾದ್ದರಿಂದ ಶ್ರೇಷ್ಠನಾಗಿದ್ದಾನೆಂದು ಹೇಳಲಾಗಿದೆ.

**ननु 'प्राणो वा आशाया भूयान्' इत्युपक्रमे प्राणशब्दश्रवणात् कथं भूमा विष्णुरित्यतोऽप्याह – प्राणस्येति ।।**

'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಉಪಕ್ರಮದಲ್ಲಿ ಪ್ರಾಣಶಬ್ದವು ಶ್ರುತವಾದ್ದರಿಂದ ಪ್ರಾಣಶಬ್ದವು ಶ್ರುತವಾದ್ದರಿಂದ ವಿಷ್ಣುವನ್ನು ಭೂಮನೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಪ್ರಾಣಸ್ಯ' ಎಂಬುದರಿಂದ ಉತ್ತರಿಸಿದ್ದಾರೆ.

**प्राणस्य विष्णोरिति सामानाधिकरण्यम् । भूयस्त्वेत्यतः पूर्वमन्यस्येति शेषः । तथा च न विष्णोर्भूमत्वाङ्गीकारे उपक्रमगतप्राणशब्दविरोधः । तस्यापि विष्णुपरत्वात् । प्राणस्य सकाशादन्यस्य भूयस्त्वानुक्तेः ।**

'ಪ್ರಾಣಸ್ಯ ವಿಷ್ಣೋಃ' ಎಂಬೆರಡು ಪದಗಳು ಒಂದೇ ವಿಭಕ್ತಿಯಲ್ಲಿ ಪ್ರಯುಕ್ತವಾಗಿವೆ. 'ಭೂಯಸ್ತ್ವ' ಎಂಬುದಕ್ಕಿಂತ ಮೊದಲು 'ಅನ್ಯಸ್ಯ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಈಗ ಹೀಗೆ

ಹೇಳಿದಂತಾಗುತ್ತದೆ. ವಿಷ್ಣುವಿಗೆ ಭೂಮತ್ವವನ್ನು ಅಂಗೀಕಾರ ಮಾಡಿದರೆ, ಉಪಕ್ರಮದಲ್ಲಿರುವ ಪ್ರಾಣಶಬ್ದದ ವಿರೋಧವು ಬರುವುದಿಲ್ಲ. ಏಕೆಂದರೆ ಉಪಕ್ರಮದಲ್ಲಿರುವ ಪ್ರಾಣಶಬ್ದವೂ ಕೂಡ ವಿಷ್ಣುಪ್ರತಿಪಾದಕವೇ ಆಗಿದೆ. ಪ್ರಾಣನಿಗಿಂತ ಬೇರೆಯವರಲ್ಲಿ ಭೂಯಸ್ತ್ವವನ್ನು ಹೇಳದಿರುವಿಕೆಯೇ ಇದಕ್ಕೆ ಕಾರಣ.

**अन्यथा प्राणापेक्षयोत्तमस्य विष्णोः सद्भावेन तारतम्यप्रकरणे तदनुक्तौ निमित्ताभवेन तदुक्तिः स्यादिति भावः ।**

ಹೀಗೊಪ್ಪದಿದ್ದರೆ ಮುಖ್ಯಪ್ರಾಣದೇವರಿಗಿಂತಲೂ ವಿಷ್ಣುವಿಗೆ ಉತ್ತಮತ್ವವು ಇರುವ ಕಾರಣ ತಾರತಮ್ಯ-ಪ್ರಕರಣದಲ್ಲಿ ಮುಖ್ಯಪ್ರಾಣದೇವರಿಗಿಂತಲೂ ವಿಷ್ಣುವಿಗೆ ಉತ್ತಮತ್ವವನ್ನು ಹೇಳದಿರಲು ಕಾರಣವಿಲ್ಲ. ಆದ್ದರಿಂದ ಮುಖ್ಯಪ್ರಾಣದೇವರಿಗಿಂತಲೂ ವಿಷ್ಣುವಿಗೆ ಉತ್ತಮತ್ವವನ್ನು ಹೇಳಬೇಕಿತ್ತು ಎಂದಭಿಪ್ರಾಯ.

**अस्तु वोपक्रमगतप्राणशब्दो वायुपरः । तथापि न तस्य भूमत्वप्राप्तिरित्यत्रानु-व्याख्यानगतचशब्दसूचितयुक्तिमाह – चशब्देनेति ।।**

ಅಥವಾ ಉಪಕ್ರಮದಲ್ಲಿರುವ ಪ್ರಾಣಶಬ್ದವು ವಾಯುಪರವಾಗಲೀ, ಆದರೂ ಸಹ ಮುಖ್ಯಪ್ರಾಣದೇವರಿಗೆ ಭೂಮತ್ವವು ಬರುವುದಿಲ್ಲ ಎಂಬುದಾಗಿ ಅನುವ್ಯಾಖ್ಯಾನದಲ್ಲಿರುವ 'ಚ' ಶಬ್ದದಿಂದ ಸೂಚಿತವಾದ ಯುಕ್ತಿಯನ್ನು 'ಚಶಬ್ದೇನ' ಎಂಬುದರಿಂದ ಹೇಳುತ್ತಿದ್ದಾರೆ.

**उपक्रमोक्तप्राणशब्दस्य वायुपरत्वेऽपि न तस्य भूमत्वम् । 'एष तु वा अतिवदति' इत्यादिना ज्ञापकेन प्रश्नाद्यध्याहारात् प्राणाद्विष्णोर्भूयस्त्वोक्तेः । तथा च तदनन्तरमुक्तभूम्नो विष्णुत्वसम्भवादिति भावः ।**

ಉಪಕ್ರಮದಲ್ಲಿರುವ ಪ್ರಾಣಶಬ್ದವು ಮುಖ್ಯಪ್ರಾಣದೇವರನ್ನು ಪ್ರತಿಪಾದನೆ ಮಾಡಿದರೂ ಭೂಮತ್ವವು ಅವರಿಗೆ ಯುಕ್ತವಾಗುವುದಿಲ್ಲ. ಏಕೆಂದರೆ 'ಏಷ ತು ವಾ ಅತಿವದತಿ' ಇತ್ಯಾದಿ ವಾಕ್ಯಗಳಿಂದ ಪ್ರಶ್ನೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಮತ್ತು ಮುಖ್ಯಪ್ರಾಣದೇವರಿಗಿಂತ ವಿಷ್ಣುವಿಗೆ ಭೂಯಸ್ತ್ವವೇ ಹೇಳಲ್ಪಟ್ಟಿದೆ. ಆದ್ದರಿಂದ ಅನಂತರ ಹೇಳಲ್ಪಟ್ಟ ಭೂಮನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಬಹುದು.

**प्रश्नाद्यध्याहारप्रकारं च 'व्यतिहारो विशिंषन्ति हि' इत्यत्र स्पष्टयिष्यत्याचार्यः।**

ಪ್ರಶ್ನೆಯನ್ನು ಹೇಗೆ ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ಪ್ರಕಾರವನ್ನು ಶ್ರೀಮದಾಚಾರ್ಯರೇ 'ವ್ಯತಿಹಾರೋ ವಿಶಿಷಂತಿ ಹಿ' ಎಂಬ ಸೂತ್ರಭಾಷ್ಯದಲ್ಲಿ ಸ್ಪಷ್ಟಪಡಿಸುವವರಿದ್ದಾರೆ.

**ननु प्राणशब्दस्य विष्णुपरत्वाङ्गीकारे पूर्ववाक्येन 'तमुत्क्रामन्तम्' इति भाष्येण च विरोधः । वायुपरत्वानङ्गीकारे तु 'इयदामननाद्' इत्यादिसूत्रादिना छान्दोग्यभाष्येण च विरोध इति कथमेतदिति चेन्न ।**

ಪ್ರಾಣಶಬ್ದವು ವಿಷ್ಣುಪರವೆಂದು ಅಂಗೀಕಾರ ಮಾಡಿದರೆ, ಹಿಂದಿನ ವಾಕ್ಯದಿಂದ 'ತಮುತ್ಕ್ರಾಮಂತಮ್' ಎಂಬ ಭಾಷ್ಯದಿಂದಲೂ ವಿರೋಧ ಬರುತ್ತದೆ. ವಾಯುಪರವೆಂದು ಅಂಗೀಕಾರ ಮಾಡದಿದ್ದರೆ 'ಇಯದಾಮನನಾದ್' ಇತ್ಯಾದಿ ಸೂತ್ರಗಳಿಂದ ಛಾಂದೋಗ್ಯಭಾಷ್ಯದಿಂದಲೂ ವಿರೋಧ ಬರುತ್ತದೆ. ಹೀಗಿರುವಾಗ ಪ್ರಾಣಶಬ್ದದ ವ್ಯಾಖ್ಯಾನವನ್ನು ಹೇಗೆ ಮಾಡುವುದು ? ಎಂದು ಪ್ರಶ್ನಿಸಬಾರದು.

**प्राणपदेन 'आत्मन आकाशः सम्भूत' इतिवदन्तर्यामिविवक्षया विष्णोरुक्तेः । एतेनोक्त्यनुक्त्योर्विरोधोऽपि परिहृतः ।**

ಪ್ರಾಣಪದದಿಂದ 'ಆತ್ಮನ ಆಕಾಶಃ ಸಂಭೂತಃ' ಎಂಬಲ್ಲಿ ಹೇಗೆ ವ್ಯಾಖ್ಯಾನ ಮಾಡಲಾಯಿತೋ, ಅದರಂತೆ ಅಂತರ್ಯಾಮಿವಿವಕ್ಷೆಯಿಂದ ವಿಷ್ಣುವೆಂದೇ ವ್ಯಾಖ್ಯಾನ ಮಾಡಬೇಕು. ಇದರಿಂದ ಉಕ್ತಿ ಹಾಗೂ ಅನುಕ್ತಿಗಳ ವಿರೋಧವನ್ನೂ ಕೂಡ ಪರಿಹರಿಸಿದಂತಾಯಿತು.

**यदा प्राणशब्दस्य अन्तर्यामिविवक्षया विष्णुपरत्वं तदा प्रश्नाद्यध्याहारानभ्युपगमेन प्राणादन्यस्य भूयस्त्वादनुक्तिः । यदा तु मुख्यप्राणपरत्वं तदा व्यतिहाराधिकरणोक्तन्यायेन प्रश्नाद्यध्याहारेण प्राणाद्विष्णोर्भूयस्त्वोक्तिरिति पक्षभेदेन दोषाभावादिति भावः ।। २ ।।**

ಒಂದು ವೇಳೆ ಪ್ರಾಣಶಬ್ದಕ್ಕೆ ಅಂತರ್ಯಾಮಿಪರತ್ವವನ್ನು ವಿವಕ್ಷಿಸಿ, ವಿಷ್ಣುಪರತ್ವವನ್ನು ಹೇಳಿದರೆ, ಆವಾಗ ಪ್ರಶ್ನೆಯ ಅಧ್ಯಾಹಾರವನ್ನು ಒಪ್ಪಬೇಕಾಗಿಲ್ಲ. ಪ್ರಾಣನಿಗಿಂತ ಅನ್ಯನಿಗೆ ಭೂಯಸ್ತ್ವದ ಅನುಕ್ತಿಯು ಯುಕ್ತವಾಗುತ್ತದೆ. ಒಂದುವೇಳೆ ಮುಖ್ಯಪ್ರಾಣಪರತ್ವವನ್ನು ಒಪ್ಪಿದರೆ ಆವಾಗ ವ್ಯತಿಹಾರಾಧಿಕರಣದ ನ್ಯಾಯದಿಂದ ಪ್ರಶ್ನೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆವಾಗ ಮುಖ್ಯಪ್ರಾಣದೇವರಿಗಿಂತಲೂ ವಿಷ್ಣುವಿಗೆ ಭೂಯಸ್ತ್ವದ ಉಕ್ತಿಯು ಉಪಪನ್ನವಾಗುತ್ತದೆಂಬ ಪಕ್ಷಭೇದವನ್ನು ಆಶ್ರಯಿಸಿದಾಗ, ಯಾವುದೇ ದೋಷಕ್ಕೂ ಅವಕಾಶವಿಲ್ಲ.

## अक्षराधिकरणम्

**न्यायविवरणम् – सर्वाधारप्रकृत्याधारत्वं, विष्णोरन्यस्य विरुद्धम् । 'पतिं विश्वस्यात्मेश्वरं' 'विश्वात्मानं परायणम्' इत्यादिश्रुतेः । अनशनोक्तिस्त्वनुपजीवनार्थत्वेनैव सावकाशा ।। ३ ।।**

ಸಮಸ್ತಕ್ಕೂ ಆಧಾರಭೂತವಾದ ಪ್ರಕೃತಿಗೆ ಆಧಾರತ್ವವು ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ವಿರುದ್ಧವಾಗಿದೆ. ಏಕೆಂದರೆ ಮಹಾವಿಷ್ಣುವೇ 'ಪತಿಂ ವಿಶ್ವಸ್ಯಾತ್ಮೇಶ್ವರಂ' 'ವಿಶ್ವಾತ್ಮಾನಂ ಪರಾಯಣಮ್' ಇತ್ಯಾದಿ ಶ್ರುತಿಗಳ ಬಲದಿಂದ ಸರ್ವಕ್ಕೂ ಆಶ್ರಯನಾಗಿದ್ದಾನೆಂದು

ಸಿದ್ಧವಾಗಿದೆ. ಪೂರ್ವಪಕ್ಷಸಾಧಕವಾಗಿ ಹೇಳಿದ ಅನಶನೋಕ್ತಿರೂಪವಾದ ಯುಕ್ತಿ-ಯಾದರೂ ಉಪಜೀವನಕ್ಕೋಸ್ಕರ ಭೋಗವನ್ನು ಅಪೇಕ್ಷಿಸುವುದಿಲ್ಲ ಎಂಬರ್ಥದಲ್ಲಿ ಸಾವಕಾಶವಾಗಿರುತ್ತದೆ.

**भावबोधः – विरुद्धतेत्युक्तमेव न्यायमक्षराधिकरणसिद्धान्तसम्बन्धित्वेनापि विवृणोति – सर्वाधारेति ।।**

'ವಿರುದ್ಧತಾ' ಎಂಬ ನ್ಯಾಯವನ್ನು ಅಕ್ಷರಾಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಸರ್ವಾಧಾರ' ಇತ್ಯಾದಿಯಾಗಿ.

**'तद्वा एतदक्षरं गार्गि' इत्युक्तमक्षरं ब्रह्मैव । 'यदूर्ध्वं गार्गि दिवो यदर्वाक् पृथिव्या यदन्तरा द्यावापृथिवी इमे यद्भूतं च भवच्च भविष्यच्चेत्याचक्षते आकाश एव तदोतं च प्रोतं च' इत्याकाशाख्यप्रकृतेः सर्वाधारत्वमुक्त्वा 'एतस्मिन् खल्वक्षरे गार्गि आकाश ओतश्च प्रोतश्च' इति श्रुत्या, अक्षरस्योच्यमानं सर्वाधारप्रकृत्याधारत्वं विष्णोरन्यस्य (श्रीतत्वस्य) विरुद्धमित्यर्थः ।**

'ತದ್ವಾ ಏತದಕ್ಷರಂ ಗಾರ್ಗಿ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬುದಾಗಿ ಆಕಾಶವೆಂಬ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ, 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶಃ ಓತಶ್ಚ ಪ್ರೋತಶ್ಚ' ಎಂಬ ಶ್ರುತಿಯಿಂದ ಅಕ್ಷರನಿಗೆ ಹೇಳಲ್ಪಟ್ಟ ಸಮಸ್ತಕ್ಕೂ ಆಧಾರವಾದ ಪ್ರಕೃತಿಯ ಆಧಾರತ್ವವು ವಿಷ್ಣುಗಿಂತ ಭಿನ್ನನಾದವನಲ್ಲಿ ವಿರುದ್ಧವಾಗಿದೆ.

**(कुत एतदित्यतः) विष्णोः सर्वाश्रयत्वे प्रमाणमाह – पतिं विश्वस्येति ।। 'विश्वस्य पतिं' सकललोकपालकत्वेन तदाधारम् । 'आत्मेश्वरम्' लक्ष्म्यादिसकल-चेतननियामकत्वेन तदाधारम् । 'विश्वात्मानम्' 'परायणम्' इति पदयोरपि क्रमेण पूर्वोक्त एवार्थः ।**

ಮಹಾವಿಷ್ಣುವೇ ಸರ್ವಕ್ಕೂ ಆಶ್ರಯನಾಗಿದ್ದಾನೆಂಬ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಿದ್ದಾರೆ 'ಪತಿಂ ವಿಶ್ವಸ್ಯ' ಇತ್ಯಾದಿಯಾಗಿ. 'ವಿಶ್ವಸ್ಯ ಪತಿಂ' ಸಮಸ್ತ ಲೋಕಗಳನ್ನು ರಕ್ಷಣೆ ಮಾಡುವುದರಿಂದ ಸಕಲ ಲೋಕಗಳಿಗೂ ಆಧಾರನಾಗಿದ್ದಾನೆ. 'ಆತ್ಮೇಶ್ವರಮ್' = ಲಕ್ಷ್ಮೀ ಮೊದಲಾದ ಸಕಲಚೇತನರಿಗೂ ನಿಯಾಮಕನಾಗಿರುವುದರಿಂದಲೂ ಅವರಿಗೆ ಆಧಾರನಾಗಿದ್ದಾನೆ. 'ವಿಶ್ವಾತ್ಮಾನಮ್' = ಸಮಸ್ತ ಲೋಕಗಳಿಗೆ ಆಧಾರನು. 'ಪರಾಯಣಂ' = ಲಕ್ಷ್ಮ್ಯಾದಿಗಳಿಗೂ ಆಶ್ರಯನು. ಇತ್ಯಾದಿ ಶ್ರುತಿಗಳ ಆಧಾರದಿಂದ ಮಹಾವಿಷ್ಣುವೇ ಸಕಲಕ್ಕೂ ಆಶ್ರಯನಾಗಿದ್ದಾನೆಂದು ಸಿದ್ಧವಾಗುತ್ತದೆ.

**आदिपदेन सर्वाश्रयत्वं विष्णोरन्यस्य विरुद्धमित्यत्र भाष्योदाहृतं प्रमाणं सङ्गृहीतम् । पूर्वपक्षसाधकत्वेनोक्तयुक्तेः श्रौतत्वात्सावकाशत्वमाह – अनशनोक्तिस्त्विति ।।**

ಆದಿಪದದಿಂದ ಸರ್ವಾಶ್ರಯತ್ವವು ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ವಿರುದ್ಧವಾಗಿದೆ ಎಂಬ ವಿಷಯದಲ್ಲಿ ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣವನ್ನು ಸಂಗ್ರಹಿಸಿದ್ದಾರೆ. ಪೂರ್ವಪಕ್ಷಸಾಧಕವಾಗಿ ಹೇಳಲ್ಪಟ್ಟ ಯುಕ್ತಿಗೆ ಶ್ರುತಿಯ ಆಧಾರದಿಂದ ಸಾವಕಾಶತ್ವವನ್ನು ಹೇಳುತ್ತಿದ್ದಾರೆ 'ಅನಶನೋಕ್ತಿಸ್ತು' ಇತ್ಯಾದಿಯಾಗಿ.

**ततश्च विष्णोरन्यस्य सर्वाधारप्रकृत्याधारत्वस्य विरुद्धत्वाद् विष्णुरेवाक्षर-शब्दवाच्यमिति भावः ।। ३ ।।**

ಹೀಗೆ ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಸರ್ವಾಧಾರವಾದ ಪ್ರಕೃತಿಗೆ ಆಧಾರವಾಗಿರುವಿಕೆಯು ವಿರುದ್ಧವಾದ್ದರಿಂದ ಮಹಾವಿಷ್ಣುವೇ ಅಕ್ಷರಶಬ್ದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು.

## सदधिकरणम्

**न्यायविवरणम् – अचेतनस्येक्षणाऽदृष्टिः । बहुभावश्रुतिस्त्वन्यभावं विना तत्तन्नियामकतया स्वरूपबहुत्वार्थत्वेनैव युज्यते ।। ४ ।।**

ಅಚೇತನವಾದ ಪ್ರಕೃತಿಗೆ ಈಕ್ಷಣವು ಕೂಡುವುದಿಲ್ಲ. ಪೂರ್ವಪಕ್ಷಿಯು ಹೇಳಿದ 'ಬಹು ಸ್ಯಾಂ ಪ್ರಜಾಯೇಯ' ಎಂಬ ಬಹುರೂಪತ್ವ ಹೇಳುವ ಶ್ರುತಿಯು ಶ್ರೀಹರಿಗೆ ಪರಿಣಾಮವಿಲ್ಲದೇ ಪರಿಣಾಮವನ್ನು ಹೊಂದಿದ ವಸ್ತುಗಳಿಗೆ ನಿಯಾಮಕನಾಗಿರುವ, ಭಗವಂತನ ಸ್ವರೂಪಗಳಿಗೆ ಬಹುತ್ವವಿದೆ ಎಂಬ ಅಭಿಪ್ರಾಯದಿಂದ ಉಪಪನ್ನವಾಗುತ್ತದೆ.

**भावबोधः – 'अदृष्टिः' इत्युक्तन्यायं सदधिकरणसिद्धान्तसम्बन्धित्वेनापि विवृणोति – अचेतनस्येति ।।**

'ಅದೃಷ್ಟಿಃ' ಎಂಬ ನ್ಯಾಯವನ್ನು ಸದಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಅಚೇತನಸ್ಯ' ಇತ್ಯಾದಿ ವಾಕ್ಯದಿಂದ.

**'सदेव' इत्यादिसच्छब्दवाच्यो विष्णुरेव । 'तदैक्षत' इतीक्षतिश्रवणात् । नच तदचेतनप्रकृतौ सम्भवति । अचेतनस्येक्षणादृष्टेरित्यर्थः । (व्याप्तिमात्रस्या-**

**साधकत्वात्प्रधानस्या चेतनत्वादिति हेतुवाक्यं चोपस्कर्तव्यम् ।) पूर्वपक्षयुक्तेः श्रौतत्वात् सावकाशत्वमाह – बहुभावेति ।।**

'ಸದೇವ' ಎಂಬಲ್ಲಿರುವ 'ಸತ್' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. 'ತದೈಕ್ಷತ' ಎಂಬಲ್ಲಿ ಈಕ್ಷತಿಯು ಶ್ರುತವಾದ್ದರಿಂದ. ಈಕ್ಷಣವು ಅಚೇತನಪ್ರಕೃತಿಯಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಜಡವಾದ ವಸ್ತುವಿನಲ್ಲಿ ನೋಡುವಿಕೆಯು ಎಲ್ಲಿಯೂ ಕಂಡಿಲ್ಲ. ಪೂರ್ವಪಕ್ಷಯುಕ್ತಿಯು ಶ್ರುತಿಯ ಆಧಾರದಿಂದ ಸಾವಕಾಶವಾಗಿದೆಯೆಂದು 'ಬಹುಭಾವ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**'अन्यभावं' परिणामम् । 'बहुत्वार्थत्वेनैव' इत्येवकारेण चेतनस्य विकारासम्भवं सिद्धान्तयुक्तेर्निरवकाशत्वं चाभिप्रैति । एवञ्च जडत्वेन प्रधानस्येक्षणा (सम्भवात्)दृष्टेः विष्णौ च त(द्)ददृष्टेः (तत्सम्भवात्) विष्णुरेव सच्छब्दवाच्य इत्यर्थः ।। ४ ।।**

'ಅನ್ಯಭಾವಂ' ಪರಿಣಾಮವು 'ಬಹುತ್ವಾರ್ಥತ್ವೇನೈವ' ಎಂಬಲ್ಲಿರುವ ಏವಕಾರದಿಂದ ಚೇತನಕ್ಕೆ ವಿಕಾರವಿಲ್ಲದಿರುವಿಕೆಯು ಎಂದರ್ಥ. ಇದರಿಂದ ಸಿದ್ಧಾಂತಯುಕ್ತಿಯು ನಿರವಕಾಶವಾಗಿದೆಯೆಂದು ಹೇಳಿರುತ್ತಾರೆ. ಆದ್ದರಿಂದ ಜಡವಾದ ಪ್ರಧಾನಕ್ಕೆ ಈಕ್ಷಣವು ಯುಕ್ತವಾಗದ ಕಾರಣ ವಿಷ್ಣುವೇ 'ಸತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು.

## दहराधिकरणम्

**न्यायविवरणम् – आकाशपक्ष एवान्वयाभावः । विष्णुपक्षे तु, 'योऽन्वेष्टव्यो भगवान् तस्यान्तर्हृदये यावान्वाऽयमाकाशस्तावानाकाशः, तस्मिन्द्यावापृथिवी अन्तरेव समाहिते, स भगवानपहतपाप्मे' इत्यन्वयः ।। ५ ।।**

ಆಕಾಶಪಕ್ಷದಲ್ಲಿಯೇ ಅನ್ವಯವು ಕೂಡುವುದಿಲ್ಲ. ವಿಷ್ಣುಪಕ್ಷದಲ್ಲಾದರೂ 'ಯೋಽನ್ವೇಷ್ಟವ್ಯಃ ಭಗವಾನ್ ತಸ್ಯಾಂತರ್ಹೃದಯೇ ಯಾವಾನ್ವಾಽಯಮಾಕಾಶ-ಸ್ತಾವಾನಾಕಾಶಃ, ತಸ್ಮಿನ್‌ದ್ಯಾವಾಪೃಥಿವೀ ಅಂತರೇವ ಸಮಾಹಿತೇ, ಸ ಭಗವಾನಪಹತಪಾಪ್ಮಾ' ಎಂಬುದಾಗಿ ಅನ್ವಯವು ಯುಕ್ತವಾಗುತ್ತದೆ.

**भावबोधः – 'अन्वयाभावः' इत्युक्तन्यायं दहराधिकरणसिद्धान्तसम्बन्धित्वेन विवृणोति – आकाशपक्ष एवेति ।।**

'ಅನ್ವಯಾಭಾವಃ' ಎಂದು ಹೇಳಿದ ನ್ಯಾಯವನ್ನು ದಹರಾಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಆಕಾಶಪಕ್ಷೇ' ಇತ್ಯಾದಿ ವಾಕ್ಯದಿಂದ.

'दहराकाशस्थमुपास्यम्' इत्युक्ते किं तदत्र विद्यते इति प्रश्ने 'यावान्वा' इत्यस्यान्वयादर्शनात् । नहि दहराकाशस्थो व्याप्ताकाशोऽन्वेष्टव्य इत्युपपद्यते तदभावादयोगाच्च ।

ದಹರಾಕಾಶದಲ್ಲಿರುವವನನ್ನು ಉಪಾಸನೆ ಮಾಡಬೇಕೆಂದು ಹೇಳಿದಾಗ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಯು ಹುಟ್ಟುತ್ತದೆ. ಆವಾಗ 'ಯಾವಾನ್ವಾ' ಎಂಬುದಕ್ಕೆ ಅನ್ವಯವು ಯುಕ್ತವಾಗುವುದಿಲ್ಲ. ಏಕೆಂದರೆ ದಹರಾಕಾಶದಲ್ಲಿ ವ್ಯಾಪ್ತಾಕಾಶದ ಇರುವಿಕೆಯು ಅಸಾಧ್ಯವಾದ್ದರಿಂದ ಅದರ ಅನ್ವೇಷಣೆಯು ತಪ್ಪಾಗುತ್ತದೆ. ಅಯುಕ್ತವೂ ಆಗಿದೆ. ದಹರಾಕಾಶದಲ್ಲಿರತಕ್ಕ ವ್ಯಾಪ್ತಾಕಾಶವನ್ನು ಹುಡುಕಬೇಕೆನ್ನುವುದು ಕೂಡುವುದಿಲ್ಲ. ದಹರಾಕಾಶದಲ್ಲಿ ವ್ಯಾಪ್ತವಾದ ಆಕಾಶವಿಲ್ಲವಷ್ಟೇ? ಮತ್ತು ದಹರಾಕಾಶದಲ್ಲಿ ವ್ಯಾಪ್ತವಾದ ಆಕಾಶವಿದೆಯೆನ್ನುವುದು ಯುಕ್ತವೂ ಆಗುವುದಿಲ್ಲ.

नच दहराकाशमेव विशिष्य 'उभे अस्मिन्' इत्यादिपरिहार इति युक्तम् । दहरस्याव्याप्तत्वेन विशेषणायोगात् । पृथिव्यादीनां मुख्यतोऽनुपास्यत्वाच्चेति भावः।

ಮತ್ತು ದಹರಾಕಾಶವನ್ನೇ ಉದ್ದೇಶ್ಯವಾಗಿಟ್ಟುಕೊಂಡು 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಇತ್ಯಾದಿ ವಾಕ್ಯಗಳಿಂದ ಉತ್ತರಿಸಲಾಗಿದೆಯೆಂದು ಹೇಳುವುದೂ ಸಹ ಯುಕ್ತವಲ್ಲ. ಏಕೆಂದರೆ ದಹರವು ವ್ಯಾಪಿಸಿಕೊಂಡು ಇಲ್ಲದ ಕಾರಣ, ಉದ್ದೇಶವಾಗಲು ಸಾಧ್ಯವಿಲ್ಲ. ಪೃಥಿವ್ಯಾದಿಗಳು ಮುಖ್ಯವಾಗಿ ಉಪಾಸ್ಯಗಳೂ ಅಲ್ಲ.

एवकारव्यवच्छेद्यमाह – विष्णुपक्ष इति ॥ 'तस्मिन् यदन्तः' इत्यत्र हृत्पद्मस्थाकाशगतं ब्रह्मान्वेष्टव्यमित्युच्यते ।

ಏವಕಾರದಿಂದ ವ್ಯವಚ್ಛೇದ್ಯವಾದದ್ದನ್ನು 'ವಿಷ್ಣುಪಕ್ಷ' ಎಂಬುದರಿಂದ ಹೇಳುತ್ತಿದ್ದಾರೆ. 'ತಸ್ಮಿನ್ ಯದಂತಃ' ಎಂಬಲ್ಲಿ ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ಬ್ರಹ್ಮನನ್ನು ಅನ್ವೇಷಣೆ ಮಾಡಬೇಕೆಂದು ಹೇಳಲಾಗಿದೆ.

'ब्रह्मपुर' पदेनैव ब्रह्मस्थितिसिद्धेः । नचैवं 'किं तदत्र' इति प्रश्नानुपपत्तिः । तस्य 'कीदृशं तत्' इति धर्मविषयत्वेन स्वरूपविषयकत्वाभावादिति प्रश्नवाक्याभिप्रायं सिद्धवत्कृत्य 'अन्वेष्टव्यः' इत्यनूद्य वाक्यान्वयः प्रदर्शितः । तस्य भगवतः । तावानाकाशः, विद्यत इति शेषः ।

'ಬ್ರಹ್ಮಪುರ' ಪದದಿಂದಲೇ ಬ್ರಹ್ಮನ ಇರುವಿಕೆಯು ಸಿದ್ಧವಾಗಿದೆ.

ಪ್ರಥಮಾಧ್ಯಾಯದ ಮೂರನೆಯ ಪಾದದ ನ್ಯಾಯವಿವರಣ

ಹಾಗಾದರೆ 'ಕಿಂ ತದತ್ರ' ಎಂಬ ಪ್ರಶ್ನೆಯೇ ತಪ್ಪಾಗುತ್ತದಲ್ಲವೇ? ಏಕೆಂದರೆ 'ಕೀದೃಶಂ ತತ್' ಎಂಬುದಾಗಿ ಧರ್ಮದ ಬಗ್ಗೆ ಚರ್ಚಿಸಿದಾಗ ಸ್ವರೂಪದ ಬಗ್ಗೆ ಉತ್ತರಿಸುವುದು ಸರಿಯಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ 'ಅನ್ವೇಷ್ಟವ್ಯಃ' ಎಂಬುದನ್ನು ಅನ್ವಯ ಮಾಡಿ, ವಾಕ್ಯದ ಜೊತೆಗೆ ಅನ್ವಯವನ್ನು ತೋರಿಸಿದ್ದಾರೆ. 'ತಸ್ಯ' ಎಂದರೆ 'ಭಗವಂತನ' ಎಂದರ್ಥ. 'ತಾವಾನಾಕಾಶಃ' ಎಂಬಲ್ಲಿ 'ವಿದ್ಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

**तस्मिन् आकाशे विष्णौ वा । उपलक्षणं चैतत् । 'नास्य जरयैतज्जीर्यते, न वधेनास्य हन्यते' इति वाक्योक्तधर्मान्तरयुक्तश्चेत्यपि ग्राह्यम् ।**

'ತಸ್ಮಿನ್' ಎಂದರೆ ಆಕಾಶದಲ್ಲಿ ಅಥವಾ ವಿಷ್ಣುವಿನಲ್ಲಿ ಎಂದರ್ಥ. ಉಪಲಕ್ಷಣಯಾ ಇದನ್ನು ತಿಳಿಯಬೇಕು. 'ನಾಸ್ಯ ಜರಯೈತಜ್ಜೀರ್ಯತೇ, ನ ವಧೇನಾಸ್ಯ ಹನ್ಯತೇ' ಎಂಬ ವಾಕ್ಯದಲ್ಲಿ ಶ್ರೀಹರಿಗೆ ವಾರ್ಧಕ್ಯಾದಿಗಳು ಬರುವುದಿಲ್ಲ. ಜೀವನ ಸಂಹಾರದಿಂದ ಶ್ರೀಹರಿಯು ಸಂಭೃತನಾಗುವುದಿಲ್ಲ ಎಂಬುದಾಗಿ ವಿಷ್ಣುವಿನ ಅಸಾಧಾರಣಧರ್ಮವನ್ನು ಸ್ವೀಕರಿಸಬೇಕು.

**तथा च आकाशपक्ष एवान्वयाभावात् विष्णुपक्षे चान्वयभावाद् विष्णुरेव हृत्पद्मस्थ इत्यर्थः ।। ५ ।।**

ಹೀಗೆ ಆಕಾಶಪಕ್ಷದಲ್ಲೇ ಅನ್ವಯವು ಕೂಡುವುದಿಲ್ಲ. ವಿಷ್ಣುಪಕ್ಷದಲ್ಲಿ ಅನ್ವಯವು ಕೂಡುತ್ತದೆ. ಈ ಕಾರಣದಿಂದ ವಿಷ್ಣುವೇ ಹೃತ್ಪದ್ಮಸ್ಥನಾಗಿದ್ದಾನೆಂದು ಸಿದ್ಧವಾಗುತ್ತದೆ.

## अनुकृत्यधिकरणम्

**न्यायविवरणम् — यज्ज्ञानाच्छाश्वतं सुखं स भगवान्यद्ब्रह्मानिर्देश्यं सुखमिति वदन्ति तदेतत्स्वरूपमिति मन्यन्ते । अतः पूर्ववादविपरीतैव श्रुतिः । पूर्ववादोक्तयोजना तु भ्रम एव ॥६॥**

ಯಾವ ಜ್ಞಾನದಿಂದ ಜ್ಞಾನಿಗಳಿಗೆ ಶಾಶ್ವತವಾದ ಸುಖವು ಆಗುತ್ತದೋ, ಅವನೇ ಶ್ರೀಹರಿಯು. ಯಾವ ಪರಬ್ರಹ್ಮನನ್ನು ಅನಿರ್ದೇಶ್ಯಸುಖರೂಪನೆನ್ನುತ್ತಾರೋ, ಆ ಅನಿರ್ದೇಶ್ಯ ಸುಖವನ್ನು ಪ್ರಕೃತನಾದ ಪರಮಾತ್ಮನ ಸತ್‌ಸ್ವರೂಪವೆನ್ನುತ್ತಾರೆ. ಆದ್ದರಿಂದ 'ತದೇದಿತಿ ಮನ್ಯಂತೇ' ಎಂಬ ಶ್ರುತಿಯು ಹಿಂದೆ ಹೇಳಿದಂತೆ ವಿಷ್ಣುವಿಷಯಕವೇ ಆಗಿರುವುದರಿಂದ, ಜ್ಞಾನಿಸುಖವೆಂಬ ಪೂರ್ವಪಕ್ಷಕ್ಕೆ ಬಾಧಕವಾಗಿವೆ. ಪೂರ್ವಪಕ್ಷದಲ್ಲಿ ಹೇಳಿದ ಯೋಜನೆಯಾದರೂ ಭ್ರಾಂತಿಮೂಲಕವಾಗಿದೆ.

**भावबोध – 'विपरीतश्रुतिभ्रमः' इत्युक्तन्यायं 'अनुकृतेस्तस्य च' इत्यधिकरण-सिद्धान्तसम्बन्धित्वेनापि विवृणोति – यज्ज्ञानाच्छाश्वतं सुखमित्यादिना ॥**

'ವಿಪರೀತಶ್ರುತಿಭ್ರಮಃ' ಎಂಬ ನ್ಯಾಯವನ್ನು 'ಅನುಕೃತ್ಯಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಯಜ್ಜ್ಞಾನಾತ್‌ಶಾಶ್ವತಂ ಸುಖಮ್' ಇತ್ಯಾದಿ ವಾಕ್ಯದಿಂದ.

**'तदेतदिति मन्यन्ते' इति वाक्यस्य ज्ञानिसुखपरत्वे 'तेषां सुखम्' इति ज्ञानिसुखस्य प्रकृतत्वात्प्रकृतपरामर्शत्वम् । विष्णुपरत्वे तु तस्याप्रकृतत्वाद-प्रकृतपरामर्शः स्यादिति शङ्कानिरासार्थं विष्णोः प्रकृतत्वमुपपादयितुं 'यज्ज्ञानाच्छाश्वतं सुखं स भगवान्' इत्युक्तम् । 'तमात्मस्थम्' इत्युपनिषद्वाक्ये तच्छब्देन 'नित्यो नित्यानां चेतनश्चेतनानाम्' इति प्रकृतविष्णोः परामर्श इति भावः ।**

'ತದೇತದಿತಿ ಮನ್ಯಂತೇ' ಎಂಬ ವಾಕ್ಯವು ಜ್ಞಾನಿಸುಖಪರವಾದರೆ, 'ತೇಷಾಂ ಸುಖಮ್' ಎಂಬುದರಿಂದ ಜ್ಞಾನಿಸುಖವು ಪ್ರಕೃತವಾಯಿತು. ಅಂತಹ ಪ್ರಕೃತವಾದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕಾಗುತ್ತದೆ. ಒಂದು ವೇಳೆ 'ತದೇತದಿತಿ' ಎಂಬ ವಾಕ್ಯವು ವಿಷ್ಣುಪರವಾದರೆ, ಜ್ಞಾನಿಸುಖವು ಅಪ್ರಕೃತವಾದ್ದರಿಂದ ಅಪ್ರಕೃತವಾದದ್ದನ್ನು ಪರಾಮರ್ಶ ಮಾಡಬೇಕಾಗುತ್ತದೆ. ಈ ಶಂಕೆಯನ್ನು ನಿರಾಕರಿಸುವುದಕ್ಕಾಗಿ ವಿಷ್ಣುವಿಗೆ ಪ್ರಕೃತತ್ವವನ್ನು ಸಮರ್ಥಿಸುವುದಕ್ಕಾಗಿ 'ಯಜ್ಜ್ಞಾನಾಶಾಶ್ವತಂ ಸುಖಂ ಸ ಭಗವಾನ್' ಎಂದು ಹೇಳಿದ್ದಾರೆ. 'ತಮಾತ್ಮಸ್ಥಮ್' ಎಂಬ ಉಪನಿಷದ್‌ವಾಕ್ಯದಲ್ಲಿ 'ತತ್' ಶಬ್ದದಿಂದ 'ನಿತ್ಯೋ ನಿತ್ಯಾನಾಂ ಚೇತನ-ಶ್ಚೇತನಾನಾಮ್' ಎಂಬುದರಿಂದ ಪ್ರಕೃತನಾದ ವಿಷ್ಣುವನ್ನು ಪರಾಮರ್ಶ ಮಾಡಬೇಕು.

**ननु परमात्मनः प्रकृतत्वेऽपि नपुंसकसुखशब्देनाप्रकृतत्वाज्ज्ञानिसुखस्य च तादृशसुखशब्देन प्रकृतत्वात्तस्यैव परामर्शो युक्त इत्यतस्तद्वाक्यं योजयति – यद्ब्रह्मेति ॥**

ಪರಮಾತ್ಮನು ಪ್ರಕೃತನಾಗಿದ್ದರೂ ನಪುಂಸಕಲಿಂಗದಲ್ಲಿರುವ ಸುಖಶಬ್ದದಿಂದ ಅಪ್ರಕೃತನಾಗಿದ್ದಾನೆ. ಆದರೆ ಜ್ಞಾನಿಸುಖವು ಅಂತಹ ನಪುಂಸಕಲಿಂಗದಲ್ಲಿರುವ ಸುಖಶಬ್ದದಿಂದ ಪ್ರಕೃತವಾಗಿದೆ. ಆದ್ದರಿಂದ ಜ್ಞಾನಿಸುಖದ ಪರಾಮರ್ಶವೇ ಯುಕ್ತವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ವಾಕ್ಯವನ್ನು ಯೋಜನೆಯನ್ನು ಮಾಡುತ್ತಿದ್ದಾರೆ 'ಯದ್‌ಬ್ರಹ್ಮ' ಇತ್ಯಾದಿ ಮೂಲದಿಂದ.

**तदेतत्स्वरूपमिति ॥ तद् अनिर्देश्यं सुखम्, एतस्य प्रकृतस्य भगवतः स्वरूपमित्यर्थः । न चैवमभ्युपगमे कारणाभावः । 'तमेव भान्तम्' इत्याद्युक्तहेतू-नामनुपपत्तेरिति भावः । कथमनेन न्यायो विवृत इत्यत आह – अत इति ॥**

'ತದೇತತ್ ಸ್ವರೂಪಮ್' ಎಂಬಲ್ಲಿ 'ತತ್' ಶಬ್ದದಿಂದ ಅನಿರ್ದೇಶ್ಯವಾದ ಸುಖವು 'ಏತತ್' ಶಬ್ದದಿಂದ ಪ್ರಕೃತನಾದ ಭಗವಂತನ ಸ್ವರೂಪವು ವಿವಕ್ಷಿತವಾಗಿದೆ. ಹೀಗೆ ಒಪ್ಪಲು ಕಾರಣವಿಲ್ಲವೆನ್ನಬಾರದು. 'ತಮೇವ ಭಾಂತಮ್' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಸೂರ್ಯಾದಿಭಾಸಕತ್ವಾದಿ ಹೇತುಗಳು ಅನುಪಪನ್ನವಾಗುತ್ತವೆ. ಇದರಿಂದ ನ್ಯಾಯವು ಹೇಗೆ ವಿವೃತವಾಯಿತು? ಎಂಬ ಪ್ರಶ್ನೆಗೆ 'ಅತಃ' ಎಂಬುದರಿಂದ ಉತ್ತರಿಸಿದ್ದಾರೆ.

**अत उक्तप्रकारेण विष्णुविषयत्वात् 'तदेतदिति मन्यन्ते' इति श्रुतिः पूर्वपक्षबाधकरूपैवेत्यर्थः । पूर्ववादिनापि नपुंसकलिङ्गस्वारस्यादेरुक्तत्वात्कथमेतदित्यत आह – पूर्ववादोक्तेति ।। भ्रमो भ्रममूलिकेत्यर्थः ।**

'ಅತಃ' ಎಂದರೆ ಹಿಂದೆ ಹೇಳಿದಂತೆ ವಿಷ್ಣುವಿಷಯಕವಾದ್ದರಿಂದ 'ತದೇತದಿತಿ ಮನ್ಯಂತೇ' ಎಂಬ ಶ್ರುತಿಯು ಪೂರ್ವಪಕ್ಷಕ್ಕೆ ಬಾಧಕವಾಗಿರುವುದರಿಂದಲೂ ಎಂದರ್ಥ. ಪೂರ್ವಪಕ್ಷಿಯೂ ಸಹ ನಪುಂಸಕಲಿಂಗದ ಸ್ವಾರಸ್ಯವನ್ನು ಉಪಪಾದನೆ ಮಾಡಿದ್ದರಿಂದ ಅವನ ಪ್ರಕಾರ ಏಕೆ ತಪ್ಪಾಗುತ್ತದೆ ? ಎಂಬ ಪ್ರಶ್ನೆಗೆ 'ಪೂರ್ವವಾದೋಕ್ತ' ಎಂಬುದರಿಂದ ಉತ್ತರಿಸಿದ್ದಾರೆ. 'ಭ್ರಮಃ' ಎಂದರೆ ಭ್ರಮಮೂಲಕ ಎಂದರ್ಥ.

**नन्वेवं सति विपरीतश्रुतेरेव सिद्धान्तयुक्तित्वादनुव्याख्याने भ्रमपदं किमर्थमित्यतो वाऽह – पूर्ववादेति ।। 'इति सूचनाय भ्रमपदप्रयोगः' इति वाक्यशेषः ।। ६ ।।**

ಹಾಗಾದರೆ ವಿಪರೀತಶ್ರುತಿಯೇ ಸಿದ್ಧಾಂತ ಯುಕ್ತಿಯೆಂದಂತಾಯಿತು. ಆವಾಗ ಅನುವ್ಯಾಖ್ಯಾನದಲ್ಲಿ ಭ್ರಮಪದವನ್ನೇಕೆ ಪ್ರಯೋಗ ಮಾಡಿದ್ದಾರೆ ? ಎಂಬ ಪ್ರಶ್ನೆಗೂ 'ಪೂರ್ವವಾದ' ಎಂಬುದರಿಂದಲೇ ಉತ್ತರಿಸಿದ್ದಾರೆ. 'ಇತಿ ಸೂಚನಾಯ ಭ್ರಮಪದಪ್ರಯೋಗಃ' ಎಂಬ ವಾಕ್ಯವನ್ನು ಶೇಷಪೂರಣ ಮಾಡಿಕೊಳ್ಳಬೇಕು.

## वामनाधिकरणम्

**न्यायविवरणम् – लिङ्गानां परमात्मन्यवकाशो वियत एवेति तद्राहित्यं भ्रम एव । वामनश्रुतेरेवानवकाश इति ईशानशब्दोक्तो विष्णुरेव ।। ७ ।।**

ಪ್ರಾಣವ್ಯವಸ್ಥಾಪಕತ್ವವೇ ಮೊದಲಾದ ಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶವು ಇದ್ದೇ ಇರುತ್ತದೆ. ಅವಕಾಶವಿಲ್ಲವೆನ್ನುವ ಜ್ಞಾನವು ಭ್ರಮಮೂಲಕವಾಗಿದೆ. ವಾಮನಶ್ರುತಿಗೇನೇ ವಿಷ್ಣುವನ್ನು ಬಿಟ್ಟು ಬೇರೆ ಕಡೆ ಅವಕಾಶವಿರುವುದಿಲ್ಲ. ಆದ್ದರಿಂದ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ.

ಪರಿಪೂರ್ಣಚಂದ್ರಿಕಾ

**भावबोधः – 'लिङ्गावकाशराहित्यभ्रमः' इत्युक्तन्यायं वामनाधिकरणसिद्धान्तसम्बन्धित्वेनापि विवृणोति ।। लिङ्गानामिति ।।**

'ಲಿಂಗಾವಕಾಶರಾಹಿತ್ಯಭ್ರಮಃ' ಎಂಬ ನ್ಯಾಯವನ್ನು ವಾಮನಾಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಲಿಂಗಾನಾಮ್' ಇತ್ಯಾದಿಯಾಗಿ.'

**लिङ्गानां प्राणव्यवस्थापकत्वादीनाम् । विद्यत एवेत्यवधारणं तु 'शब्दादेव' इति सूत्रानुसारेण । साधकप्राबल्यानुरोधित्वात्साध्यावधारणस्य ।**

'ಲಿಂಗಾನಾಮ್' ಎಂದರೆ ಪ್ರಾಣವ್ಯವಸ್ಥಾಪಕತ್ವಾದಿ ಲಿಂಗಗಳಿಗೆ ಎಂದರ್ಥ. 'ವಿದ್ಯತೇ ಏವ' ಎಂಬಲ್ಲಿರುವ ಅವಧಾರಣವು 'ಶಬ್ದಾದೇವ' ಎಂಬ ಸೂತ್ರಕ್ಕೆ ಅನುಸಾರಿಯಾಗಿದೆ. ಆದ್ದರಿಂದ ಸಾಧಕವಾದ ಪ್ರಾಬಲ್ಯಕ್ಕೆ ಅನುಸಾರಿಯಾಗಿ ಸಾಧ್ಯದ ಅವಧಾರಣವು ಸಿದ್ಧವಾಗುತ್ತದೆ.

**ननु भ्रमत्वे हेतुरनेनोच्यते नतु न्यायविवरणमित्यत आह – इतीति ।। भ्रमो भ्रमविषयः । सौत्रप्रमितपदाभिप्रायं वदँस्तत्फलमप्याह – वामनेति ।।**

ಅವಕಾಶವಿಲ್ಲವೆನ್ನುವುದು ಭ್ರಮಮೂಲಕವಾಗಿದೆಯೆಂಬ ವಿಷಯದಲ್ಲಿ ಹೇತುವನ್ನು ಹೇಳುತ್ತಿದ್ದಾರೆ. ಹೊರತು, ನ್ಯಾಯವನ್ನು ವಿವರಿಸಿದಂತಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಇತಿ' ಎಂಬುದರಿಂದ ಉತ್ತರಿಸಿದ್ದಾರೆ. 'ಭ್ರಮಃ' ಎಂದರೆ 'ಭ್ರಮವಿಷಯಃ' ಎಂದರ್ಥ. ಸೂತ್ರದಲ್ಲಿ ಪ್ರಮಿತಪದದ ಅಭಿಪ್ರಾಯವನ್ನು ಹೇಳುತ್ತಾ ಫಲವನ್ನು ಹೇಳುತ್ತಿದ್ದಾರೆ 'ವಾಮನ' ಇತ್ಯಾದಿಯಾಗಿ.

**अनवकाशः, विष्णोरन्यत्रेति शेषः । (यद्वा 'परमात्मन्यवकाशो विद्यत एव' इत्यत्र 'परमात्मन्येव' इति एवकारसम्बन्धः । 'लिङ्गानाम्' इत्यनेनैव वाक्येन लिङ्गानां, प्राणव्यवस्थापकत्वादिलिङ्गानां विष्णोरन्यत्रावकाशराहित्यमिति न्यायो विवृतः । तदुक्तं भाष्ये 'तच्च लिङ्गं विष्णोरेव' इति ।**

'ಅನವಕಾಶಃ' ಎಂದರೆ ವಿಷ್ಣುವನ್ನು ಬಿಟ್ಟು ಬೇರೆ ಕಡೆ ಅವಕಾಶವಿಲ್ಲವೆಂದರ್ಥ. 'ಲಿಂಗಾನಾಮ್' ಎಂಬುದರಿಂದಲೇ ಪ್ರಾಣವ್ಯವಸ್ಥಾಪಕತ್ವಾದಿ ಲಿಂಗಗಳಿಗೆ ವಿಷ್ಣುವನ್ನು ಬಿಟ್ಟು ಬೇರೆಕಡೆ ಅವಕಾಶವಿಲ್ಲವೆಂಬ ನ್ಯಾಯವನ್ನು ವಿವರಿಸಿದಂತಾಯಿತು. ಇದನ್ನೇ ಭಾಷ್ಯದಲ್ಲಿ 'ತಚ್ಚ ಲಿಂಗಂ ವಿಷ್ಣೋರೇವ' ಎಂದು ಹೇಳಿದ್ದಾರೆ.

**ननु पूर्वपक्षिणा विष्णाववकाशराहित्यस्यैवोक्तत्वात् कथमित्यत आह – तद्राहित्यमिति ।। लिङ्गानां परमात्ममात्रनिष्ठत्वे हेतुमाह – वामनश्रुतेरिति ।।) सिद्धान्तफलकथनं तु मूल एव स्पष्टम् ।। ७ ।।**

ಪೂರ್ವಪಕ್ಷಿಯು ವಿಷ್ಣುವಿನಲ್ಲಿ ಈ ಲಿಂಗಕ್ಕೆ ಅವಕಾಶವಿಲ್ಲವೆಂದು ಹೇಳಿದ್ದಾನಲ್ಲವೇ? ಎಂಬ ಪ್ರಶ್ನೆಗೆ 'ತದ್ರಾಹಿತ್ಯಮ್' ಎಂಬುದರಿಂದ ಉತ್ತರಿಸಿದ್ದಾರೆ. ಲಿಂಗಗಳು ಪರಮಾತ್ಮನಲ್ಲಿ ಮಾತ್ರ ಇರುತ್ತವೆನ್ನಲು

ಕಾರಣವನ್ನು 'ವಾಮನಶ್ರುತೇಃ' ಎಂಬುದರಿಂದ ಹೇಳಿದ್ದಾರೆ. ಸಿದ್ಧಾಂತಫಲಕಥನವು ಮೂಲದಿಂದಲೇ ಸ್ಪಷ್ಟವಾಗುತ್ತದೆ.

## कम्पनाधिकरणम्

**न्यायविवरणम् – वज्रशब्दस्योद्यतत्वस्य च विष्णावेवावकाशः । उद्यमित्वमेवोद्य-तत्वमिति ॥ १० ॥**

'ವಜ್ರ' ಶಬ್ದಕ್ಕೂ ಉದ್ಯತತ್ವಲಿಂಗಕ್ಕೂ ಸಹ ವಿಷ್ಣುವಿನಲ್ಲಿ ಮಾತ್ರ ಅವಕಾಶವಿರುತ್ತದೆ. ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಸರ್ವಥಾ ಅವಕಾಶವಿರುವುದಿಲ್ಲ. 'ಉದ್ಯತತ್ವ' ಎಂದರೆ 'ಉದ್ಯಮತ್ವ' ಎಂದರ್ಥ.

**भावबोधः – 'तादृग्द्वयम्' इत्युक्तन्यायं वज्राधिकरणसिद्धान्तसम्बन्धित्वेनापि विवृणोति – वज्रशब्दस्येति ।। अत्र वज्रशब्दोद्यतत्वयोस्तादृक्त्वं नाम वामनश्रुतेरिव विष्णोरन्यत्रानवकाशलक्षणं ज्ञातव्यम् । अत एव 'विष्णावेव' इत्युक्तम् । अन्यथा सकलजगच्चेष्टकत्वविरोधादिति भावः ।**

'ತಾದೃಗ್ ದ್ವಯಮ್' ಎಂಬ ನ್ಯಾಯವನ್ನು ವಜ್ರಾಧಿಕರಣದ ಸಿದ್ಧಾಂತಕ್ಕೆ ಸಬಂಧಿಯಾಗಿ ವಿವರಿಸುತ್ತಿದ್ದಾರೆ 'ವಜ್ರಶಬ್ದಸ್ಯ' ಇತ್ಯಾದಿ ಮೂಲದಿಂದ. ಇಲ್ಲಿ 'ವಜ್ರಶಬ್ದ' ಹಾಗೂ 'ಉದ್ಯತತ್ವಲಿಂಗ' ಎರಡಕ್ಕೂ 'ತಾದೃತ್ವ' ಎಂದರೆ ವಾಮನಶ್ರುತಿಯಂತೆ ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಅವಕಾಶ-ವಿರುವುದಿಲ್ಲವೆಂದು ತಿಳಿಯಬೇಕು. ಆದ್ದರಿಂದಲೇ 'ವಿಷ್ಣಾವೇವ' ಎಂದು ಏವಕಾರವನ್ನು ಹೇಳಿದ್ದಾರೆ. ಇಲ್ಲದಿದ್ದರೆ ಸಕಲಜಗಚ್ಚೇಷ್ಟಕತ್ವದ ವಿರೋಧವು ಬರುತ್ತದೆಂದು ಅಭಿಪ್ರಾಯ.

**नन्वस्तु 'वर्जनाद्वज्रमुच्यते' इति वाक्यबलाद्वज्रशब्दस्य विष्णुपरत्वम् । उद्यतत्वलिङ्गस्य कथमित्यत आह – उद्यमत्वमेवेति ।।**

'ವರ್ಜನಾದ್ ವಜ್ರಮುಚ್ಯತೇ' ಎಂಬ ವಾಕ್ಯದ ಬಲದಿಂದ ವಜ್ರಶಬ್ದವು ದುಷ್ಟರನ್ನು ಬಿಡುವುದರಿಂದ ವಜ್ರನೆನಿಸುತ್ತಾನೆಂದು ವಿಷ್ಣುಪರವಾಗಿದೆ. ಆದರೆ 'ಉದ್ಯತತ್ವಲಿಂಗವು' ಹೇಗೆ ವಿಷ್ಣುಪರವಾಗಿದೆ ? ಎಂಬ ಪ್ರಶ್ನೆಗೆ 'ಉದ್ಯಮತ್ವಮೇವ' ಎಂಬುದರಿಂದ ಉತ್ತರಿಸಿದ್ದಾರೆ.

**एवकारेणोत्रमनादिकं व्यवच्छिनत्ति । हेतुस्तूक्त एव । एवं च निरवकाशत्व-रूपतादृक्त्वोपेतवज्रशब्दोद्यतत्वलिङ्गरूपद्वयाद् वज्रशब्दवाच्यो विष्णुरेवेति भावः ॥१० ॥**

ಏವಕಾರದಿಂದ ಉನ್ನಮನಾದಿಗಳನ್ನು ನಿರಾಕರಿಸಿದ್ದಾರೆ. ಕಾರಣವನ್ನು ಈಗಾಗಲೇ ಹೇಳಿದ್ದಾಗಿದೆ. ಆದ್ದರಿಂದ ನಿರವಕಾಶತ್ವರೂಪವಾದ 'ತಾದೃಕ್ತ್ವ' ಎಂಬ ಧರ್ಮದಿಂದ ಉಪೇತವಾದ 'ವಜ್ರಶಬ್ದ' ಮತ್ತು 'ಉದ್ಯತತ್ವ' ಎಂಬ ಲಿಂಗ ಇವೆರಡರ ಬಲದಿಂದ ವಜ್ರಶಬ್ದವಾಚ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತ.

## ज्योतिरधिकरणम्

**न्यायविवरणम् – 'अयं पुरुषः' इति संसारी । आत्मशब्दोदित एव विष्णुः । अत आदित्यादिज्योतिष्ट्वं संसारिण एव । 'आदित्येनैव' इत्यवधारणं बाह्यज्योतिष्षु प्राधान्यापेक्षयेत्यादि । लोकसञ्चरणं तु जीवमादाय तस्यैवादुःखेन स्वातन्त्र्यात् ॥११॥**

'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯವು ವಿಷ್ಣುಪರವಾದರೆ, 'ಆದಿತ್ಯಾದಿ ಜ್ಯೋತಿಸಮ್ರಾಟ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಆದಿತ್ಯಾದಿಜ್ಯೋತಿಷ್ಟ್ವವು ಯಾರಿಗೆ ? ಎಂದರೆ, 'ಕಿಂ ಜ್ಯೋತಿರಯಂ ಪುರುಷಃ' ಎಂದು ಪ್ರತಿಪಾದ್ಯನಾದವನು ಸಂಸಾರಿಜೀವನೇ ಆಗಿದ್ದಾನೆ. 'ಆತ್ಮೈವಾಸ್ಯ ಜ್ಯೋತಿಃ' ಎಂದು ಆತ್ಮಶಬ್ದದಿಂದ ತಾನೇ 'ಜ್ಯೋತಿಸ್' ಎಂದು ಹೇಳಲು 'ಕತಮ ಆತ್ಮಾ' ಎಂಬುದಾಗಿ ಪುನಃ ಆತ್ಮನು ಯಾರೆಂದು ? ಪ್ರಶ್ನಿಸಿದಾಗ 'ಯೋಽಯಂ ವಿಜ್ಞಾನಮಯಃ' ಎಂಬ ವಾಕ್ಯವು ಪ್ರವೃತ್ತವಾಗಿರುವುದರಿಂದ, 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿರುವ ಆದಿತ್ಯಶಬ್ದವಾಚ್ಯನು ಮಹಾವಿಷ್ಣುವೇ ಆಗಿದ್ದಾನೆ. 'ಕಿಂ ಜ್ಯೋತಿರಯಂ ಪುರುಷಃ' ಎಂಬಲ್ಲಿರುವ ಪುರುಷ ಶಬ್ದವಾಚ್ಯನು ಸಂಸಾರಿಜೀವನೇ ಆಗಿರುವುದರಿಂದ, ಆದಿತ್ಯಾದಿಜ್ಯೋತಿಷ್ಟ್ವವು ಸಂಸಾರೀಜೀವನಿಗೇನೇ ಬರುತ್ತದೆ. 'ಆದಿತ್ಯೇನೈವ' ಇತ್ಯಾದಿ ಅವಧಾರಣವು ಬಾಹ್ಯಜ್ಯೋತಿಸ್ಸುಗಳಲ್ಲಿ ಆದಿತ್ಯನಿಗೆ ಪ್ರಾಧಾನ್ಯವನ್ನು ವಿವಕ್ಷಿಸಿ ಹೇಳಲಾಗಿದೆ. ಉಭಯಲೋಕಸಂಚಾರವಾದರೂ ಶ್ರೀಹರಿಗೇನೇ ಸರ್ವಸ್ವಾತಂತ್ರ್ಯವಿದ್ದರಿಂದ ದುಃಖ ದೋಷವಿಲ್ಲದೇ ಕೂಡುತ್ತದೆ.

**ಭಾವಬೋಧಃ – 'बहुतादृक्त्वम्' इत्युक्तन्यायं ज्योतिरधिकरणसिद्धान्तसम्बन्धित्वेनापि विवृणोति – अयं पुरुष इत्यादिना ॥**

'ಬಹುತಾದೃಕ್ತ್ವಮ್' ಎಂದು ಹೇಳಿದ ನ್ಯಾಯವನ್ನು ಜ್ಯೋತಿರಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಅಯಂ ಪುರುಷಃ' ಇತ್ಯಾದಿ ವಾಕ್ಯದಿಂದ.

**'हृद्यन्तर्ज्योतिः' इति वाक्यस्य विष्णुपरत्वे 'आदित्यादिज्योतिः सम्राट्' इति वाक्योक्तादित्यादिज्योतिष्ट्वं न बाधकमिति वक्तुमाह – अयं पुरुष इति ।।**

'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯವು ವಿಷ್ಣುಪರವಾದರೆ 'ಆದಿತ್ಯಾದಿಜ್ಯೋತಿಃ ಸಮ್ರಾಟ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಆದಿತ್ಯಾದಿಜ್ಯೋತಿಷ್ಟ್ವವು ಬಾಧಕವಾಗುವುದಿಲ್ಲವೆಂದು ಹೇಳಲು 'ಅಯಂ ಪುರುಷಃ' ಎಂದಿದ್ದಾರೆ.

**'किं ज्योतिरयं पुरुषः' इत्युक्तः, संसारीत्यर्थः । 'न तद्भासयते सूर्यः' इत्यादिवचनात् मुक्तस्याप्यादित्यज्योतिष्ट्वायोगात् संसारीत्युक्तम् । नन्वस्यैव संसारिणो वागादि (ज्योतिषां) शान्तौ सत्यां 'आत्मैवास्य ज्योतिः' इति स्वयं शब्दपर्यायात्मशब्देन स्वयं ज्योतिष्ट्वोक्तौ 'कतम आत्मा' इति तदात्मप्रश्ने 'योऽयं विज्ञानमयः' इति वाक्यस्य प्रवृत्तत्वेन तस्य विष्णुपरत्वं कथमित्यत आह – आत्मशब्दोदित इति ।।**

'ಕಿಂ ಜ್ಯೋತಿರಯಂ ಪುರುಷಃ' ಎಂಬಲ್ಲಿ ಸಂಸಾರಿಜೀವನು ಹೇಳಲ್ಪಟ್ಟಿದ್ದಾನೆ. 'ನ ತದ್ಭಾಸಯತೇ ಸೂರ್ಯಃ' ಇತ್ಯಾದಿ ವಾಕ್ಯಗಳ ಆಧಾರದಿಂದ ಮುಕ್ತನಿಗೂ ಸಹ ಆದಿತ್ಯಾದಿಜ್ಯೋತಿಷ್ಟ್ವವು ಯುಕ್ತವಾಗದ ಕಾರಣ ಸಂಸಾರಿಯೆಂದು ಹೇಳಿದ್ದಾರೆ. ಈ ಸಂಸಾರಿಜೀವನಿಗೆ ವಾಗಾದಿಗಳು ನಿರ್ವ್ಯಾಪಾರವಾಗುವಾಗ 'ಆತ್ಮೈವಾಸ್ಯ ಜ್ಯೋತಿಃ' ಎಂದು ಆತ್ಮಶಬ್ದದಿಂದ ತಾನೇ ಜ್ಯೋತಿಸ್ಸು ಎಂದು ಹೇಳಲು 'ಕತಮ ಆತ್ಮಾ' ಎಂದು ಪುನಃ ಆತ್ಮನು ಯಾರೆಂದು ಪ್ರಶ್ನಿಸಿದಾಗ 'ಯೋಽಯಂ ವಿಜ್ಞಾನಮಯಃ' ಎಂಬ ವಾಕ್ಯವು ಪ್ರವೃತ್ತವಾಗಿದೆ. ಆದ್ದರಿಂದ ಅದಕ್ಕೆ ವಿಷ್ಣುಪರತ್ವವು ಹೇಗೆ ಕೂಡುತ್ತದೆ ? ಎಂಬ ಪ್ರಶ್ನೆಗೆ 'ಆತ್ಮಶಬ್ದೋದಿತಃ' ಎಂಬುದರಿಂದ ಉತ್ತರಿಸಿದ್ದಾರೆ.

**'आत्मैवास्य ज्योतिः' इति वाक्यस्थात्मशब्दोदितो विष्णुरेवेत्यर्थः । 'अयं पुरुषः' इति संसारीत्युक्तस्य फलमाह – अत इति ।।**

'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿ ಆತ್ಮಶಬ್ದದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ಇದರ ಅರ್ಥ. 'ಅಯಂ ಪುರುಷಃ' ಎಂಬುದರಿಂದ, ಸಂಸಾರಿಜೀವನು ಪ್ರತಿಪಾದ್ಯನಾಗಿದ್ದಾನೆಂಬುದರ ಫಲವನ್ನು ಹೇಳುತ್ತಿದ್ದಾರೆ 'ಅತಃ' ಎಂಬುದಾಗಿ.

**यतः 'अयं पुरुषः' इति संसारी अतस्तत्रोक्तमादित्यादिज्योतिष्ट्वं तस्यैवेत्यर्थः ।**

ಯಾವ ಕಾರಣದಿಂದ ಈ ಪುರುಷನು ಸಂಸಾರಿಜೀವನಾಗಿದ್ದಾನೋ? ಆದ್ದರಿಂದ ಆ ಶ್ರುತಿಯಲ್ಲಿ ಪ್ರತಿಪಾದ್ಯವಾದ ಆದಿತ್ಯಾದಿಜ್ಯೋತಿಷ್ಟ್ವವು ಸಂಸಾರಿಜೀವನಿಗೇನೇ ಬರುತ್ತದೆಂದರ್ಥ.

नन्वात्मशब्दस्य विष्णुपरत्वे तस्यास्तमयादिशून्यत्वेन तज्ज्योतिष्ट्वस्य सर्वदा जीवे सत्त्वात् 'आदित्येनैव' इति 'चन्द्रमसैव' इत्यवधारणानुपपत्तिरित्यत आह – आदित्येनैवेति ।।

ಆತ್ಮಶಬ್ದವು ವಿಷ್ಣುಪರವಾದರೆ ವಿಷ್ಣುವಿಗೆ ಅಸ್ತಮಯಾದಿಗಳಿಲ್ಲದಿರುವುದರಿಂದ ಆ ಜ್ಯೋತಿಷ್ಟ್ವ ಜೀವನಿಗೆ ಯಾವಾಗಲೂ ಇರುವುದರಿಂದ 'ಆದಿತ್ಯೇನೈವ' 'ಚಂದ್ರಮಸೈವ' ಎಂಬ ಅವಧಾರಣವು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ 'ಆದಿತ್ಯೇನೈವ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

आदिपदेन परमात्मनोऽस्तमयादिशून्यत्वेन जागरादावपि सद्भावादात्मैवास्य ज्योतिरिति, 'सुप्तावेव विशिष्योक्तेर्भावे भावेऽपि' इति बृहदारण्यकभाष्योक्तगतिः, तथा 'अत्राऽयं पुरुषः' इति वाक्ये 'आत्मैवास्य ज्योतिः' इत्युक्तार्थप्रत्यभिज्ञानात्तत्र च स्वयंशब्दस्य जीववाचकत्वादात्मशब्दस्य विष्णुवाचकत्वे, शङ्क्यमानप्रत्यभिज्ञाविरोधस्यात्र 'अयं भगवान् विष्णुः' इति बृहदारण्यकभाष्योक्तपरिहारश्च गृह्यते । एतदेवाभिप्रेत्योक्तं तत्वप्रकाशिकायां 'नच विशिष्योक्तिविरोधः' इति ।

ಆದಿಪದದಿಂದ ಪರಮಾತ್ಮನಿಗೆ ಅಸ್ತಮಯಾದಿಗಳು ಇಲ್ಲದ ಕಾರಣ. ಜಾಗ್ರತ್ಕಾಲದಲ್ಲಿಯೂ ಇರುವುದರಿಂದ 'ಆತ್ಮೈವಾಸ್ಯಜ್ಯೋತಿಃ' ಎಂಬುದಾಗಿ 'ಸುಪ್ತಾವೇವ ವಿಶಿಷ್ಯೋಕ್ತೇರ್ಭಾವೇ ಭಾವೇಽಪಿ' ಎಂಬ ಬೃಹದಾರಣ್ಯಕಭಾಷ್ಯದಲ್ಲಿ ಹೇಳಿದಂತೆ ತಿಳಿಯಬೇಕು. ಅದರಂತೆ 'ಅತ್ರಾಽಯಂ ಪುರುಷಃ' ಎಂಬ ವಾಕ್ಯದಲ್ಲಿ 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ ಹೇಳಲ್ಪಟ್ಟ ಅರ್ಥದ ಪ್ರತ್ಯಭಿಜ್ಞಾನವೂ ಬರುವುದರಿಂದ ಅಲ್ಲಿರುವ ಸ್ವಯಂಶಬ್ದಕ್ಕೆ ಜೀವವಾಚಿತ್ವವನ್ನು ಒಪ್ಪಿ, ಆತ್ಮಶಬ್ದಕ್ಕೆ ವಿಷ್ಣುಪರತ್ವವನ್ನು ಒಪ್ಪಿದರೆ, ಪ್ರತ್ಯಭಿಜ್ಞಾನದ ವಿರೋಧಕ್ಕೆ ಅವಕಾಶವಿದೆ. ಅದಕ್ಕೆ 'ಅತ್ರಾಯಂ ಭಗವಾನ್ ವಿಷ್ಣುಃ' ಎಂಬ ಬೃಹದಾರಣ್ಯಕಭಾಷ್ಯದಲ್ಲಿ ಹೇಳಲ್ಪಟ್ಟ ಪರಿಹಾರವನ್ನು ತಿಳಿದುಕೊಳ್ಳಬೇಕು. ಈ ಅಭಿಪ್ರಾಯದಿಂದಲೇ ತತ್ವಪ್ರಕಾಶಿಕೆಯಲ್ಲಿ 'ನಚ ವಿಶಿಷ್ಯೋಕ್ತಿವಿರೋಧಃ' ಎಂದು ಹೇಳಿದ್ದಾರೆ.

यद्वा आदिपदेन 'इमं लोकमतिक्रामति' इत्यादेः 'कृत्वा विवाहन्तु कुरुप्रवीराः' इत्यादिवदन्तर्णीतणिच्त्वेनोपपत्तिरिति बृहदारण्यकभाष्योक्तसावकाशत्वं गृह्यते ।

ಅಥವಾ ಆದಿಪದದಿಂದ 'ಇಮಂ ಲೋಕಮತಿಕ್ರಾಮತಿ' ಇತ್ಯಾದಿ ಮಾತಿಗೆ 'ಕೃತ್ವಾ ವಿವಾಹಂತು ಕುರುಪ್ರವೀರಾಃ' ಇತ್ಯಾದಿ ಪ್ರಯೋಗಗಳಂತೆ ಅಂತರ್ಣೀತವಾದ 'ಣಿಚ್' ಪ್ರತ್ಯಯವನ್ನು ಮಾಡಿ, ಬೃಹದಾರಣ್ಯಕಭಾಷ್ಯದಲ್ಲಿ ಹೇಳಿದ್ದನ್ನು ಸಾವಕಾಶ ಮಾಡಬೇಕು.

ननु तथापि कर्ममरणादिरहितस्य विष्णोः कर्मनिबन्धनोभयलोकसञ्चरण-मृत्युरूपदर्शनादि कथमित्यत आह – लोकसञ्चरणं त्विति ।।

ಆದರೂ ಸಹ ಕರ್ಮ, ಮರಣ ಮೊದಲಾದವುಗಳಿಂದ ರಹಿತನಾದ ವಿಷ್ಣುವಿಗೆ, ಕರ್ಮನಿಬಂಧನ, ಉಭಯಲೋಕಸಂಚಾರ, ಮೃತ್ಯುವಿನ ದರ್ಶನ ಮೊದಲಾದವುಗಳು ಹೇಗೆ ಕೂಡುತ್ತವೆ? ಎಂಬ ಪ್ರಶ್ನೆಗೆ 'ಲೋಕಸಂಚರಣಂ ತು' ಎಂಬುದರಿಂದ ಉತ್ತರಿಸಿದ್ದಾರೆ.

**'स समानः सन्' इति समानशब्दाभिप्रायमाह – अदुःखेनैवेति ।। एतच्च जीवे न सम्भवतीति तस्यैवेत्युक्तम् । समानत्वे प्रमाणान्तरप्रमितहेतुमाह – स्वातन्त्र्यादिति ।।**

'ಸ ಸಮಾನಃ ಸನ್' ಎಂಬುದಾಗಿ ಸಮಾನಶಬ್ದ ಅಭಿಪ್ರಾಯವನ್ನು 'ಅದುಃಖೇನೈವ' ಎಂಬುದರಿಂದ ಹೇಳಿದ್ದಾರೆ. ದುಃಖರಾಹಿತ್ಯವು ಜೀವನಲ್ಲಿ ಯುಕ್ತವಾಗುವುದಿಲ್ಲವಾದ್ದರಿಂದ ವಿಷ್ಣುವಿನಲ್ಲಿಯೇ ಉಭಯಲೋಕ ಸಂಚಾರವನ್ನು ಕೂಡಿಸಬೇಕು. ಸಮಾನತ್ವವಿಷಯದಲ್ಲಿ ಪ್ರಮಾಣಾಂತರದಿಂದ ಪ್ರಮಿತವಾದ ಹೇತುವನ್ನು 'ಸ್ವಾತಂತ್ರ್ಯಾತ್' ಎಂಬುದರಿಂದ ಹೇಳುತ್ತಿದ್ದಾರೆ.

**नन्वादित्यादिज्योतिष्ट्वस्य जीवनिष्ठत्वं, (मृत्युरूपदर्शनाऽऽदेर्विष्णौ सावकाशत्वमात्रं), लोकसञ्चरणस्य विष्णुमात्रनिष्ठत्वमित्यनेकप्रकारत्वेन बहूनां तादृक्त्वाभाव इति चेन्न ।**

ಆದಿತ್ಯಾದಿ ಜ್ಯೋತಿಷ್ಟ್ವವು ಜೀವನಲ್ಲಿದೆ. ಲೋಕಸಂಚರಣವು ವಿಷ್ಣುವಿನಲ್ಲಷ್ಟೇ ಇದೆ. ಹೀಗೆ ಅನೇಕ ಪ್ರಕಾರದಿಂದ ಬಹುತಾದೃಕ್ತ್ವವು ಸಿದ್ಧಾಂತಲಿಂಗವೆಂದು ಹೇಳಲಾಗದು. ಕೇವಲ ಉಭಯಲೋಕಸಂಚಾರವೆಂಬ ಒಂದೇ ಧರ್ಮದಿಂದ ಬಹುತಾದೃಕ್ತ್ವವನ್ನು ಹೇಳಲು ಹೇಗೆ ಸಾಧ್ಯ ? ಎಂದು ಪ್ರಶ್ನಿಸಬಾರದು.

**प्रसिद्धत्वेन 'कतम आत्म' इति प्रश्नायोगः, स्वाप्नपदार्थकर्तृत्वं 'स्वप्नेन शारीरम्' इति मन्त्रासङ्गतिरित्येतैः सहितस्य लोकसञ्चरणस्य सिद्धान्त-साधकत्वाङ्गीकारात्तादृशानां बहुत्वसम्भवात् । अत एव बृहदारण्यकभाष्ये 'कतम आत्म' इति प्रश्नानुपपत्यादिनैषां जीवपक्ष एव बाधकत्वोक्तिः ।**

ಪ್ರಸಿದ್ಧವಾದ್ದರಿಂದ 'ಕತಮ ಆತ್ಮಾ' ಎಂಬ ಪ್ರಶ್ನೆಯೇ ಕೂಡುವುದಿಲ್ಲ. ಮತ್ತು 'ಸ್ವಾಪ್ನಪದಾರ್ಥಕರ್ತೃತ್ವ', ಮತ್ತು 'ಸ್ವಪ್ನೇನ ಶರೀರಮ್' ಎಂಬ ಮಂತ್ರದ ಅಸಂಗತಿ ಈ ಮೊದಲಾದ ಲಿಂಗಗಳಿಂದ ಕೂಡಿರುವಂತಹ ಲೋಕಸಂಚರಣವು ಸಿದ್ಧಾಂತಸಾಧಕಲಿಂಗವಾಗಿದೆಯೆಂದು ಒಪ್ಪಿರುವುದರಿಂದ ಬಹುತಾದೃಕ್ತ್ವವನ್ನು ಹೇಳಬಹುದು. ಆದ್ದರಿಂದ ಬೃಹದಾರಣ್ಯಕಭಾಷ್ಯದಲ್ಲಿ 'ಕತಮ ಆತ್ಮಾ' ಎಂಬ ಪ್ರಶ್ನೆಯ ಅನುಪಪತ್ತಿಯಿಂದಲೇ ಜೀವಪಕ್ಷದಲ್ಲಿ ಬಾಧಕಗಳನ್ನು ಹೇಳಿದ್ದಾರೆ.

**एतदेवाभिप्रेत्योक्तं तत्वप्रकाशिकायां – 'जीवपक्षे बहुबाधकसद्भावाद्' इति । ततश्च बहूनां लोकसञ्चरणादीनां तादृक्त्वाद्विष्णोरन्यत्र निरवकाशत्वाद् विष्णुरेव ज्योतिःशब्दवाच्य इत्यर्थः ।। ११ ।।**

ಈ ಅಭಿಪ್ರಾಯದಿಂದಲೇ ತತ್ವಪ್ರಕಾಶಿಕೆಯಲ್ಲಿ 'ಜೀವಪಕ್ಷೇ ಬಹುಬಾಧಕಸದ್ಭಾವಾತ್' ಎಂದು ಹೇಳಿದ್ದಾರೆ. ಆದ್ದರಿಂದ ಲೋಕಸಂಚಾರವೇ ಮೊದಲಾದ ಅನೇಕ ಲಿಂಗಗಳಿಂದ ಬಹುತಾದೃಕ್ತ್ವವನ್ನು ವಿಷ್ಣುವಿನಲ್ಲಿ ಹೇಳಬಹುದು. ಈ ಧರ್ಮವು ಅನ್ಯತ್ರನಿರವಕಾಶವಾದ್ದರಿಂದ, ವಿಷ್ಣುವೇ 'ಜ್ಯೋತಿಸ್' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

## आकाशाधिकरणम्

**न्यायविवरणम् – वै नामेति निर्वहितृत्वे श्रुत्यादिप्रसिद्धिबाहुल्यम् । प्रसिद्धाकाश-स्योक्तमनामरूपत्वं विरुद्धम् ॥ १२ ॥**

'ವೈ ನಾಮ' ಎಂಬೆರಡು ನಿಪಾತಗಳು ನಾಮರೂಪಗಳನ್ನು ವಿಷ್ಣು ನಿರ್ವಹಿಸುತ್ತಾನೆ ಎನ್ನುವ ವಿಷಯದಲ್ಲಿ ಶ್ರುತ್ಯಾದಿಪ್ರಸಿದ್ಧಿಗಳ ಬಾಹುಲ್ಯವನ್ನು ತೋರಿಸುತ್ತಿದೆ. ಪ್ರಸಿದ್ಧವಾದ ಆಕಾಶವನ್ನು ಇಟ್ಟುಕೊಂಡರೆ 'ತೇ ತದಂತರೇ ತದ್‌ಬ್ರಹ್ಮ' ಎಂಬಲ್ಲಿ ಹೇಳಿದ ಅನಾಮಧೇಯತ್ವವು ವಿರುದ್ಧವಾಗುತ್ತದೆ. .

**भावबोधः – 'उक्तस्य विरोधः' इत्युक्तन्यायमाकाशाधिकरणसिद्धान्त-सम्बन्धित्वेनापि विवृण्वन् पूर्वपक्षन्यायस्य सावकाशत्वं तावदाह – वै नामेति ॥**

'ಉಕ್ತಸ್ಯ ವಿರೋಧಃ' ಎಂಬಲ್ಲಿ ಹೇಳಿದ ನ್ಯಾಯವನ್ನು ಆಕಾಶಾಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಾ ಪೂರ್ವಪಕ್ಷನ್ಯಾಯಕ್ಕೆ ಸಾವಕಾಶತ್ವವನ್ನು ಹೇಳುತ್ತಿದ್ದಾರೆ 'ವೈ ನಾಮ' ಇತ್ಯಾದಿಯಾಗಿ.

**वै नामेति निपातद्वयं भगवतो नामरूपनिर्वहितृत्वे लोकप्रसिद्धभावेऽपि 'एको दाधार भुवनानि विश्वे' इत्यादिश्रुतिप्रसिद्धिबाहुल्यं दर्शयतीत्यर्थः ।**

'ವೈ ನಾಮ' ಎಂಬೆರಡು ನಿಪಾತಗಳು ವಿಷ್ಣು ನಾಮರೂಪಗಳೆರಡನ್ನು ನಿರ್ವಹಿಸುತ್ತಾನೆನ್ನುವಲ್ಲಿ, ಲೋಕಪ್ರಸಿದ್ಧಿಯಿಲ್ಲದಿದ್ದರೂ 'ಏಕೋ ದಾಧಾರ ಭುವನಾನಿ ವಿಶ್ವಾ' ಇವೇ ಮೊದಲಾದ ಶ್ರುತಿಗಳ ಪ್ರಸಿದ್ಧಿಯು ಬಹಳವಾಗಿವೆಯೆಂದು ತೋರಿಸುತ್ತದೆ.

**अनेन श्रुतौ वै नामेति निपादद्वयस्य 'नामरूपयोर्निर्वहिता' इत्युत्तरेणान्वयः। विधेयार्थप्रसिद्धिद्योतकत्वान्निपातस्य पूर्वपक्षे तदयोगादित्युक्तं भवति ।**

ಹೀಗೆ ಹೇಳಿದ್ದರಿಂದ ಶ್ರುತಿಯಲ್ಲಿ 'ವೈ ನಾಮ' ಎಂಬೆರಡು ನಿಪಾತಗಳು 'ನಾಮರೂಪಯೋರ್ನಿರ್ವಹಿತಾ' ಎಂಬ ಮುಂದಿನ ವಾಕ್ಯದಿಂದ ಅನ್ವಿತವಾಗುತ್ತದೆ. ಅಂದರೆ 'ಆಕಾಶ ಯೋ ನಾಮರೂಪಯೋರ್ನಿರ್ವಹಿತಾ'

ಎಂಬಲ್ಲಿ ಆಕಾಶವನ್ನು ಉದ್ದೇಶಿಸಿ, ನಾಮರೂಪನಿಯಾಮಕತ್ವ ರೂಪವಿಧೇಯವನ್ನು ಶ್ರುತಿಯು ಹೇಳಿದೆ. 'ವೈ ನಾಮ' ಎಂಬೆರಡು ನಿಪಾತಗಳು ವಿಧೇಯಪ್ರಸಿದ್ಧಿಯೆಂದು ಹೇಳುತ್ತವೆ.

**लौकिकोद्देश्यप्रसिद्धिपरित्यागेन वैदिकविधेयप्रसिध्यङ्गीकारे को हेतुरित्यतो न्यायं विवृणोति – प्रसिद्धाकाशस्येति ।।**

ಆದ್ದರಿಂದ ಉದ್ದೇಶ್ಯರೂಪವಾದ ಆಕಾಶಶಬ್ದಕ್ಕೆ ಲೋಕಪ್ರಸಿದ್ಧಿಯನ್ನು ಬಿಟ್ಟು ಶ್ರುತಿಯಲ್ಲಿ ಹೇಳಿದ ನಾಮ ರೂಪನಿಯಾಮಕತ್ವರೂಪವಿಧೇಯಪ್ರಸಿದ್ಧಿಯನ್ನು ಅಂಗೀಕರಿಸಲು ಏನು ಕಾರಣ? ಎಂಬ ಪ್ರಶ್ನೆಗೆ ನ್ಯಾಯವನ್ನು ವಿವರಿಸುತ್ತಾ ಉತ್ತರಿಸುತ್ತಿದ್ದಾರೆ 'ಪ್ರಸಿದ್ಧಾಕಾಶಸ್ಯ' ಇತ್ಯಾದಿಯಾಗಿ.

**अनेन निपातद्वयस्योद्देशस्य लौकिकप्रसिद्धिद्योतकत्वमभ्युपेत्यापि प्रसिद्धाकाश-ग्रहणे 'ते तदन्तरे' इत्युक्तनामरूपत्वस्य विरोध इति न्यायविवरणं कृतं भवति । उपलक्षणं चैतत् । 'तद्ब्रह्म' इत्युक्तब्रह्मशब्दविरोधश्चेत्यपि ज्ञातव्यम् ।**

ಹೀಗೆ ಹೇಳಿದ್ದರಿಂದ, ಎರಡು ನಿಪಾತಗಳ ಉದ್ದೇಶವು ಲೋಕಪ್ರಸಿದ್ಧವಾಗಿದ್ದರೂ ಪ್ರಸಿದ್ಧವಾದ ಆಕಾಶವನ್ನು ಇಟ್ಟುಕೊಂಡರೆ 'ತೇ ತದಂತರ ತದ್‌ಬ್ರಹ್ಮ' ಎಂದು ಹೇಳಿದ ಅನಾಮರೂಪತ್ವವು ವಿರುದ್ಧವಾಗುತ್ತದೆ. ಅಂದರೆ ನಾಮರೂಪಗಳಿಲ್ಲವೆಂದು ಹೇಳಿದ್ದು ವಿರುದ್ಧವಾಗುತ್ತದೆ. ಹೀಗೆ ನ್ಯಾಯವನ್ನು ವಿವರಿಸಿದಂತಾಗುತ್ತದೆ. ಉಪಲಕ್ಷಣಯಾ 'ತದ್‌ಬ್ರಹ್ಮ' ಎಂದು ಹೇಳಿದ ಬ್ರಹ್ಮಶಬ್ದವಿರೋಧವೂ ಸಹ ಬರುತ್ತದೆಂದು ತಿಳಿಯಬೇಕು.

**प्रसिद्धपदं न केवलं विष्णुव्यावृत्त्यर्थम् । किन्तु उक्ताभ्युपगमसूचनार्थम् । एवंच प्रसिद्धाकाशस्य नामरूपत्वेनोक्तस्यानामरूपत्वस्य विरोधाद्विष्णुपक्षे च तदभावाद्विष्णुरेवाकाशपदवाच्य इत्यर्थः ।। १२ ।।**

ಪ್ರಸಿದ್ಧಪದವು ಕೇವಲ ವಿಷ್ಣುವನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ಅಲ್ಲ. ಹೊರತಾಗಿ, ಹಿಂದೆ ಹೇಳಿದ್ದನ್ನು ಅಭ್ಯುಪಗಮಸೂಚನೆಗಾಗಿಯೂ ಎಂದು ತಿಳಿಯಬೇಕು. ಆದ್ದರಿಂದ ಪ್ರಸಿದ್ಧವಾದ ಆಕಾಶಕ್ಕೆ ನಾಮರೂಪಗಳಿಲ್ಲವೆಂದು ಹೇಳಿದ್ದು ವಿರುದ್ಧವಾಗುತ್ತದೆ. ವಿಷ್ಣುವೆಂದು ಇಟ್ಟುಕೊಂಡರೆ, 'ಅನಾಮತೋ ಅಪ್ರಸಿದ್ಧತ್ವಾತ್ ಅರೂಪೋ ಭೂತವರ್ಜನಾತ್' ಎಂದು ಹೇಳಿದ ಪ್ರಕಾರ ವಿರೋಧ ಬರುವುದಿಲ್ಲ. ಆದ್ದರಿಂದ ವಿಷ್ಣುವೇ ಆಕಾಶಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧಾಂತ.

## सुषुप्त्यधिकरणम्

**न्यायविवरणम्—सुषुप्त्युत्क्रान्त्योर्जीवेश्वरयोर्भेदोक्तेरसङ्गत्वादिचेश्वरस्यैवेत्यर्थाद्भेद एव भवति । जीवस्य तद्युक्तेरीशे सावकाशत्वाच्च ॥ १३ ॥**

ಸುಷುಪ್ತ್ಯುತ್ಕ್ರಾಂತಿ ಪ್ರಕರಣಗಳಲ್ಲಿ ಜೀವೇಶ್ವರರಿಗೆ ಭೇದವನ್ನು ಹೇಳಿರುವುದರಿಂದಲೂ ಅಸಂಗತ್ವ ಸ್ವಪ್ನಾದಿದ್ರಷ್ಟೃತ್ವ ಮೊದಲಾದವುಗಳು ವಿಷ್ಣುವಿಗೆ ಮಾತ್ರ ಕೂಡುವುದರಿಂದಲೂ ಅನ್ಯಥಾನುಪಪತ್ತಿಯಿಲ್ಲದ ಕಾರಣ ಜೀವೇಶ್ವರರಿಗೆ ಅಭೇದವು ಸರ್ವಥಾ ಕೂಡುವುದಿಲ್ಲ. ಭೇದವೇ ಇರುತ್ತದೆ. ಅಸಂಗತ್ವವು ಜೀವನಿಗೆ ಸರ್ವಥಾ ಕೂಡುವುದಿಲ್ಲ. ಸರ್ವಜ್ಞನಾದ್ದರಿಂದ ಸ್ವಪ್ನಾದಿದ್ರಷ್ಟೃತ್ವ ಮುಖ್ಯವಾಗಿ ಪರಮಾತ್ಮನಲ್ಲಿಯೇ ಕೂಡುವುದರಿಂದ ಸಾವಕಾಶವಾಗಿದೆ.

**भावबोधः – 'अर्थात्तथागतिः' इत्युक्तन्यायं सुषुप्त्यधिकरणसिद्धान्तसम्बन्धित्वेनापि विवृणोति – सुषुप्त्युत्क्रान्त्योरिति ॥**

'ಅರ್ಥಾತ್ತಥಾಗತಿಃ' ಎಂಬಲ್ಲಿ ಹೇಳಿದ ನ್ಯಾಯವನ್ನು ಸುಷುಪ್ತ್ಯಧಿಕರಣದ ಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಸುಷುಪ್ತ್ಯುತ್ಕ್ರಾಂತ್ಯೋಃ' ಇತ್ಯಾದಿಯಾಗಿ.

**भेद एवाभेदो नेत्यर्थः । यदुक्तमर्थात्स्वप्नादिद्रष्टृत्वासङ्गत्वयोः सामानाधिकरण्यान्यथानुपपत्त्या जीवेश्वरयोरभेद इति, तन्न ।**

ಭೇದವೇ ಇರುತ್ತದೆ ಹೊರತು, ಅಭೇದವಲ್ಲವೆಂದರ್ಥ. ಸ್ವಪ್ನಾದಿದ್ರಷ್ಟೃತ್ವ, ಅಸಂಗತ್ವ ಮೊದಲಾದ ಲಿಂಗಗಳು ಒಬ್ಬನೇ ವ್ಯಕ್ತಿಯಲ್ಲಿ ಇರಬೇಕಾದ್ದರಿಂದ, ಅದರ ಅನ್ಯಥಾನುಪಪತ್ತಿಯಿಂದ ಜೀವೇಶ್ವರರಿಗೆ ಅಭೇದವೆಂದು ಹೇಳಿದ್ದು ಯುಕ್ತವಲ್ಲ.

**सुषुप्त्युत्क्रान्तिप्रकरणयोः 'प्राज्ञेनात्मना सम्परिष्वक्तः प्राज्ञेनात्मनाऽरूढः' इति जीवेश्वरयोर्भेदोक्तेरसङ्गत्वं, आदिपदोक्तं स्वप्नादिद्रष्टृत्वं चेश्वरस्यैव भवतीति तदुभयसामानाधिकरण्यान्यथानुपपत्त्यभावाच्च जीवेश्वरयोरभेदस्यैवाभावादित्यर्थः ।**

ಏಕೆಂದರೆ ಸುಪುಪ್ತ್ಯುತ್ಕ್ರಾಂತಿ ಪ್ರಕರಣಗಳಲ್ಲಿ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಪ್ರಾಜ್ಞೇನಾತ್ಮನಾಽರೂಢಃ' ಎಂಬುದಾಗಿ ಜೀವೇಶ್ವರರಿಗೆ ಭೇದವನ್ನು ಹೇಳಿರುವುದರಿಂದಲೂ ಅಸಂಗತ್ವ, ಸ್ವಪ್ನಾದಿದ್ರಷ್ಟೃತ್ವ ಮೊದಲಾದವುಗಳು ಈಶ್ವರನಿಗೆ ಮಾತ್ರ ಕೂಡುವುದರಿಂದಲೂ ಅನ್ಯಥಾನುಪಪತ್ತಿಯಿಲ್ಲದ ಕಾರಣ ಜೀವೇಶ್ವರರಿಗೆ ಅಭೇದವು ಸರ್ವಥಾ ಇಲ್ಲದಿರುವುದರಿಂದ, ಭೇದವೇ ಯುಕ್ತವಾಗುತ್ತದೆ.

ಪ್ರಥಮಧ್ಯಾಯದ ಮೂರನೆಯ ಪಾದದ ನ್ಯಾಯವಿವರಣ

**अनेन अर्थात्तथा, भेदेनैव न त्वभेदेन गतिरवगतिरिति न्यायो विवृतो भवति । असङ्गत्वमीश्वरस्यैवेत्युक्तमुपपादयति – जीवस्येति ।।**

ಅಂದರೆ ಅರ್ಥಾತ್ ಅನ್ಯಥಾನುಪಪತ್ತಿಯಿಲ್ಲದಿರುವುದರಿಂದ 'ತಥಾ' = ಭೇದದಿಂದಲೇ, ಗತಿಃ = ತಿಳುವಳಿಕೆಯು ಅಭೇದದಿಂದ ಅಲ್ಲ. ಹೀಗೆ ನ್ಯಾಯವು ವಿವೃತವಾಯಿತು. ಅಸಂಗತ್ವವು ಈಶ್ವರನಿಗೆ ಮಾತ್ರ ಬರುತ್ತದೆಂಬುದನ್ನು ಉಪಪಾದನೆ ಮಾಡುತ್ತಿದ್ದಾರೆ 'ಜೀವಸ್ಯ' ಇತ್ಯಾದಿ ವಾಕ್ಯದಿಂದ.

**ननु स्वप्नादिद्रष्टृत्वं जीवस्यैव प्रसिद्धम्, इति कथमीश्वरस्यैवेत्युक्तमित्यत आह – ईशे सावकाशत्वाच्चेति ।। ईशस्य सर्वज्ञत्वेन स्वाप्नपदार्थानां च सत्यत्वेन स्वप्नादिद्रष्टृत्वस्य मुख्यतः परमात्मन्येवोपपत्तेरिति भावः ।**

ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿ ಮಾತ್ರ ಪ್ರಸಿದ್ಧವಾಗಿದೆ. ಹೀಗಿರುವಾಗ ಈಶ್ವರನಲ್ಲಿ ಮಾತ್ರವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಈಶೇ ಸಾವಕಾಶತ್ವಾಚ್ಚ' ಎಂಬುದರಿಂದ ಉತ್ತರಿಸಿದ್ದಾರೆ. ಈಶ್ವರನು ಸರ್ವಜ್ಞನಾದ್ದರಿಂದ ಸ್ವಪ್ನಾದಿಪದಾರ್ಥಗಳು ಸತ್ಯವಾದ್ದರಿಂದ ಸ್ವಪ್ನಾದಿದ್ರಷ್ಟೃತ್ವಗಳು ಮುಖ್ಯವಾಗಿ ಪರಮಾತ್ಮನಲ್ಲೇ ಉಪಪನ್ನವಾಗುತ್ತದೆಂದು ತಿಳಿಯಬೇಕು.

## ब्राह्मणाधिकरणम्

**न्यायविवरणम् – 'ब्रह्मणा वेदेन गम्यते' इति ब्राह्मणशब्दो विष्णावेव युज्यत इत्यर्थादजशब्दोऽपि तस्मिन्नेव । चतुर्मुखस्य कर्मफलाभावायुक्तेस्तयो र्भेदोऽर्थादापद्यते । उक्तविरोधश्च तत्रैव । भेदश्रुतिबाहुल्यात् । तल्लिङ्गं स शब्दश्च चतुर्मुखेऽनवकाश इति समस्तमेतत् ।। १४ ।।**

इति श्रीमन्न्यायविवरणे प्रथमाध्यायस्य तृतीयः पादः।।

'ಬ್ರಹ್ಮಣಾ' = ವೇದದಿಂದ, 'ಗಮ್ಯತೇ' = ತಿಳಿಯಲ್ಪಡುತ್ತಾನೆ. ಈ ವ್ಯುತ್ಪತ್ತಿಯಿಂದ ಬ್ರಾಹ್ಮಣಶಬ್ದವು ವಿಷ್ಣುವಿನಲ್ಲೇ ಯುಕ್ತವಾಗುತ್ತದೆ. ಅರ್ಥಾತ್ 'ಬ್ರಾಹ್ಮಣ' ಶಬ್ದದ ಸಮಭಿವ್ಯಾಹಾರದ ಅನ್ಯಥಾನುಪಪತ್ತಿಯಿಂದ 'ಅಜ' ಶಬ್ದವೂ ಸಹ ಪರಮಾತ್ಮನಲ್ಲೇ ಮುಖ್ಯವಾಗಿ ಉಪಪನ್ನವಾಗುತ್ತದೆ. ಚತುರ್ಮುಖನಿಗೆ ಕರ್ಮಫಲವಿಲ್ಲವೆಂಬುದು ಕೂಡದ ಕಾರಣ, ಅವರಿಗೆ ಭೇದವೇ ಅರ್ಥಾತ್ ತಿಳಿಯುತ್ತದೆ. ಅನೇಕ ವಚನಗಳ ವಿರೋಧ ಬರುವುದರಿಂದ ಹಿಂದೆ ಹೇಳಿದ ವ್ಯುತ್ಪತ್ತಿಯಿಂದ 'ಬ್ರಾಹ್ಮಣ' 'ಅಜ' ಶಬ್ದಗಳು

ವಿಷ್ಣುಪರವೇ ಆಗುತ್ತದೆ. ಭೇದಪ್ರತಿಪಾದಿಕವಾದ ಶ್ರುತಿಗಳು ಬಹಳವಿರುವ ಪ್ರಯುಕ್ತ ವಿಷ್ಣು ಹಾಗೂ ಚತುರ್ಮುಖರಿಗೆ ಭೇದವನ್ನೇ ಹೇಳಬೇಕು. ಹಿಂದೆ ಹೇಳಿದ ಪ್ರಕಾರ ವಿಷ್ಣು ಚತುರ್ಮುಖರಿಗೆ ಅಭೇದವಿಲ್ಲದಿರುವ ಕಾರಣ ಪಾಪದ್ಯಲೇಪ ಮೊದಲಾದ ಲಿಂಗಗಳು ಸಾವಕಾಶವೆಂದು ಹೇಳಬಾರದು. ಏಕೆಂದರೆ ಆ ಲಿಂಗಶಬ್ದಗಳು ಚತುರ್ಮುಖಪರವೇ ಆಗುವುದಿಲ್ಲ. ವಿಷ್ಣುಪರವೇ ಆಗುತ್ತವೆಂದು ಹಿಂದೆ ಹೇಳಿದ ಪ್ರಕಾರ ಪೂರ್ವಾಧಿಕರಣದಲ್ಲಿ ಹೇಳಿದ್ದೆಲ್ಲವು ಸಿದ್ಧವಾಯಿತು.

ಇಲ್ಲಿಗೆ ಶ್ರೀ ಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಅನುವ್ಯಾಖ್ಯಾನದ ನ್ಯಾಯವಿವರಣದ ಪ್ರಥಮಾಧ್ಯಾಯದಲ್ಲಿ ಮೂರನೆಯ ಪಾದವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

**भावबोधः – 'समस्तमेतद्' इत्यत्रैतच्छब्देन पूर्वाधिकरणसम्बन्ध्यर्थात्तथागति रूपन्यायपरामर्श इत्यभिप्रेत्य तं न्यायं 'पत्यादिशब्देभ्यः' इत्यधिकरणसिद्धान्त-सम्बन्धित्वेनापि विवृणोति – ब्रह्मणेति ।।**

'ಸಮಸ್ತಮೇತದ್' ಎಂಬಲ್ಲಿರುವ 'ಏತತ್' ಶಬ್ದದಿಂದ ಪೂರ್ವಾಧಿಕರಣಕ್ಕೆ ಸಂಬಂಧಿಯಾದ 'ಅರ್ಥಾತ್ತಥಾ ಗತಿಃ' ಎಂಬ ನ್ಯಾಯವನ್ನು ಪರಾಮರ್ಶ ಮಾಡಬೇಕೆಂಬ ಅಭಿಪ್ರಾಯದಿಂದ, ಆ ನ್ಯಾಯವನ್ನು 'ಪತ್ಯಾದಿಶಬ್ದೇಭ್ಯಃ' ಎಂಬ ಅಧಿಕರಣಸಿದ್ಧಾಂತಕ್ಕೆ ಸಂಬಂಧಿಯಾಗಿ ವಿವರಿಸುತ್ತಿದ್ದಾರೆ 'ಬ್ರಹ್ಮಣಾ' ಇತ್ಯಾದಿ ಮೂಲದಿಂದ.

**सङ्कोचे कारणाभावेन 'ब्रह्माण' इति भवितव्ये 'ब्राह्मण' इत्याधिक्यार्थक स्वरव्यत्ययेन च मुख्यतया सर्ववेदवेद्यत्वं 'एष नित्यः' इति श्रुतिगतब्राह्मण-शब्दप्रवृत्तिनिमित्तमित्यभिप्रेत्य 'ब्राह्मणशब्दो विष्णावेव' इत्युक्तम् ।**

'ಬ್ರಹ್ಮಣಃ ಗಮ್ಯತೇ' ಎಂಬ ವ್ಯುತ್ಪತ್ತಿಯಿಂದ ಬ್ರಾಹ್ಮಣ ಶಬ್ದವು ವಿಷ್ಣುವಿನಲ್ಲೇ ಯುಕ್ತವಾಗುತ್ತದೆ. ಸಂಕೋಚ ಮಾಡಲಿಕ್ಕೆ ಕಾರಣವಿಲ್ಲದ್ದರಿಂದ, 'ಬ್ರಹ್ಮ ಅಣ' 'ಬ್ರಹ್ಮಾಣಃ' ಎಂದಾಗಬೇಕಾಗಿತ್ತು. 'ಬ್ರಾಹ್ಮಣಃ' ಎಂದು ಹೇಗಾಯಿತು? ಎಂದರೆ ಆಧಿಕ್ಯಾರ್ಥಕ ಸ್ವರದ ವ್ಯತ್ಯಾಸದಿಂದ ಪರಮಮುಖ್ಯವೃತ್ತಿಯಿಂದ ಸರ್ವವೇದವೇದ್ಯತ್ವವು ಪರಮಾತ್ಮನಲ್ಲೇ ಬರುತ್ತದೆ. 'ಏಷ ನಿತ್ಯಃ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತ್ಯನುಸಾರಿಯಾಗಿಯೂ 'ಬ್ರಾಹ್ಮಣಃ' ಎಂದು ಹೇಳಿದ್ದು ಯುಕ್ತವಾಗಿದೆ.

**तथा च तत्समभिव्याहारादजशब्दोऽपि केनापि प्रकारेण 'न जायते' इति व्युत्पत्त्या प्रयुक्त इत्यभिप्रेत्याह – तस्मिन्नेवेति ।।**

ಆದ್ದರಿಂದ ಬ್ರಾಹ್ಮಣಶಬ್ದದ ಸಮಭಿವ್ಯಾಹಾರದ ಅನ್ಯಥಾನುಪಪತ್ತಿಯಿಂದ 'ಜಾಯತೇತ್ಯಜಃ' ಯಾವ ಪ್ರಕಾರದಿಂದಲೂ ಯಾರಿಂದಲೂ ಹುಟ್ಟುವುದಿಲ್ಲ ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿ, 'ಅಜ' ಶಬ್ದವೂ ಸಹ ವಿಷ್ಣುವಿನಲ್ಲೇ ಯುಕ್ತವಾಗುತ್ತದೆಂದು ಹೇಳಬೇಕು. ಈ ಅಭಿಪ್ರಾಯದಿಂದ 'ತಸ್ಮಿನ್ನೇವ' ಇತ್ಯಾದಿ ವಾಕ್ಯವು ಹೊರಟಿದೆ.

**नन्वजशब्दस्योक्तव्युत्पत्तिकत्वे स्वत एव विष्णुपरत्वसम्भवेन तस्योक्त-यौगिकार्थब्राह्मणशब्दसमभिव्याहारान्यथानुपपत्त्या विष्णुपरत्वं कुत इति चेन्न । 'अयं ब्राह्मणो विरिञ्च एव । तस्मिन्नजशब्दश्रवणात् ।**

'ಅಜ' ಶಬ್ದಕ್ಕೆ ಹೀಗೆ ವ್ಯುತ್ಪತ್ತಿಯನ್ನು ಆಶ್ರಯಿಸಿದರೆ ಸ್ವತಃ ವಿಷ್ಣುಪರವಾಗುತ್ತದೆ. ಹೀಗಿರುವಾಗ ಯೌಗಿಕಾರ್ಥವಾದ ಬ್ರಾಹ್ಮಣಶಬ್ದದ ಸಮಭಿವ್ಯಾಹಾರದ ಅನ್ಯಥಾನುಪಪತ್ತಿಯಿಂದ ಅಜಶಬ್ದಕ್ಕೆ ವಿಷ್ಣುಪರತ್ವವನ್ನು ಹೇಳಿದ್ದು ಏಕೆ ? ಎಂದು ಪ್ರಶ್ನಿಸಬಾರದು. ಈ ಬ್ರಾಹ್ಮಣನು ಚತುರ್ಮುಖನೇ ಆಗಿದ್ದಾನೆ. ಏಕೆಂದರೆ 'ಅಜ' ಶಬ್ದವು ಕೇಳಿಸುತ್ತಿರುವುರರಿಂದ ಎಂದು ಅನುಮಾನವನ್ನು ಮಾಡಿರುವ ಕಾರಣ, ಹಾಗೇ ಹೇಳಿದ್ದಾರೆ.

**नच तस्य विष्णाववकाशः । ब्राह्मणशब्दसमभिव्याहृतस्य चतुर्मुखपरत्वोपपत्तेः' इति पूर्वपक्षिणा ब्राह्मणशब्दस्य रूढिमभिप्रेत्याजशब्दस्य चतुर्मुखपरत्व-साधकताङ्गीकारात् । ततश्च पूर्ववाद्युक्तन्यायेनैव ब्राह्मणशब्दस्योक्तयोगेन विष्णुमात्रपरत्वे, तत्समभिव्याहारादजशब्दस्यापि तत्परत्वमित्यभिप्रायात् । अत एव तत्वप्रकाशिकायां एतदनुरोधेनैवमेव पूर्वपक्षः कृतः ।**

'ಅಜ' ಶಬ್ದವು ವಿಷ್ಣುವಿನಲ್ಲಿ ಸಾವಕಾಶವಾಗಿದೆಯೆಂದು ಹೇಳಬಾರದು. ಏಕೆಂದರೆ 'ಬ್ರಾಹ್ಮಣ' ಶಬ್ದದ ಸಮಭಿವ್ಯಾಹಾರವಿರುವುದರಿಂದ ಚತುರ್ಮುಖಪರವೇ ಆಗುತ್ತದೆಂದು ಪೂರ್ವಪಕ್ಷಿಯು ಆಕ್ಷೇಪ ಮಾಡಿದಾಗ 'ಬ್ರಾಹ್ಮಣ' ಶಬ್ದಕ್ಕೆ ರೂಢಿಯನ್ನು ಒಪ್ಪಿ, 'ಅಜ' ಶಬ್ದಕ್ಕೆ ಚತುರ್ಮುಖಪರತ್ವವನ್ನು ಪೂರ್ವಪಕ್ಷಿಯು ಒಪ್ಪಿರುತ್ತಾನೆ. ಆದ್ದರಿಂದ ಪೂರ್ವಪಕ್ಷಿಯು ಹೇಳಿದ ನ್ಯಾಯದಿಂದಲೇ 'ಬ್ರಾಹ್ಮಣ' ಶಬ್ದಕ್ಕೆ ಮೊದಲು ಹೇಳಿದ ಯೋಗದಿಂದ ವಿಷ್ಣುಮಾತ್ರಪರತ್ವವನ್ನು ಒಪ್ಪಿ, ತತ್‌ಸಮಭಿವ್ಯಾಹಾರದಿಂದ 'ಅಜ' ಶಬ್ದಕ್ಕೂ ಕೂಡ ವಿಷ್ಣುಪರತ್ವವನ್ನು ಸಮರ್ಥಿಸಲಾಗಿದೆ. ಆದ್ದರಿಂದಲೇ ತತ್ವಪ್ರಕಾಶಿಕೆಯಲ್ಲಿ ಇದಕ್ಕನುಸಾರಿಯಾಗಿ ಪೂರ್ವಪಕ್ಷವನ್ನು ಮಾಡಿದ್ದಾರೆ.

**ननु ब्राह्मणशब्दस्यैव रूढिपरित्यागेन यौगिकत्वाङ्गीकारे को हेतुः । येनाजशब्दस्याप्युक्तयौगिकताङ्गीकार इति चेन्न । एतद्वाक्योक्तब्राह्मणस्य विरिञ्चत्वे पापालेपादिलिङ्गविरोधात्, पत्यादिशब्दविरोधाच्च ।**

'ಬ್ರಾಹ್ಮಣ' ಶಬ್ದಕ್ಕೇನೇ ರೂಢಿಯನ್ನು ಪರಿತ್ಯಾಗ ಮಾಡಿ, ಯೋಗಾರ್ಥವನ್ನು ಸ್ವೀಕರಿಸಲು ಏನು ಕಾರಣ? 'ಅಜ' ಶಬ್ದಕ್ಕೂ ಕೂಡ ಯೋಗವನ್ನು ಅಂಗೀಕರಿಸಬಹುದಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಈ ವಾಕ್ಯದಲ್ಲಿ ಹೇಳಲ್ಪಟ್ಟ ಬ್ರಾಹ್ಮಣಶಬ್ದಕ್ಕೆ ಚತುರ್ಮುಖಪರತ್ವವನ್ನು ಒಪ್ಪಿದರೆ, ಪಾಪಾಲೇಪತ್ವವೆಂಬ ಲಿಂಗದ ವಿರೋಧವು ಬರುತ್ತದೆ. ಪತ್ಯಾದಿಶಬ್ದಗಳ ವಿರೋಧವೂ ಸಹ ಬರುತ್ತದೆ.

**ननु विष्णुविरिञ्चयोरभेदाभिप्रायेण तल्लिङ्गं, स शब्दश्च चतुर्मुखे सावकाशावित्यतस्तमेव न्यायं प्रकारान्तरेण विवृणोति – चतुर्मुखस्येति ।।**

ವಿಷ್ಣು ಹಾಗೂ ಚತುರ್ಮುಖರಿಗೆ ಅಭೇದವನ್ನು ಒಪ್ಪಿ, ಪಾಪಾಲೇಪವೆಂಬ ಲಿಂಗವನ್ನು ಮತ್ತು ಬ್ರಾಹ್ಮಣಶಬ್ದವನ್ನು ಚತುರ್ಮುಖನಲ್ಲಿ ಸಾವಕಾಶ ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ ಅದೇ ನ್ಯಾಯವನ್ನು ಮತ್ತೊಂದು ಪ್ರಕಾರದಿಂದ ವಿವರಿಸುತ್ತಿದ್ದಾರೆ 'ಚತುರ್ಮುಖಸ್ಯ' ಇತ್ಯಾದಿಯಾಗಿ.

**न विष्णुविरिञ्चयोरभेदः मानाभावात् । नच ब्राह्मणाजशब्दपापालेपादि-लिङ्गसामानाधिकरण्यबलात्तत्सिद्धिः ।**

ವಿಷ್ಣು ಹಾಗೂ ಚತುರ್ಮುಖರಿಗೆ ಅಭೇದವನ್ನು ಒಪ್ಪಲು ಪ್ರಮಾಣವಿಲ್ಲ. ಬ್ರಾಹ್ಮಣಶಬ್ದ, ಅಜಶಬ್ದ, ಪಾಪಾಲೇಪಾದಿಲಿಂಗ ಇವುಗಳ ಬಲದಿಂದ ಅಭೇದವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**ब्राह्मणाजशब्दयोरुक्तरीत्या सावकाशत्वात् । 'स्वधर्मनिष्ठः शतजन्मभिः पुमान् विरिञ्चतामेति ततः परं हि माम्' । इति वचनात् विरिञ्चस्य कर्मफलाभावा युक्तेर्नित्यमुक्तेन परमात्मना भेदस्यैवोपपन्नत्वादिति भावः ।**

ಬ್ರಾಹ್ಮಣಶಬ್ದ, ಅಜಶಬ್ದ ಇವುಗಳು ಭಗವತ್‌ಪರವೇ ಆಗಿವೆ ಆದ್ದರಿಂದ ಸಾವಕಾಶವೆಂದು ಹೇಳಬಾರದು. ಏಕೆಂದರೆ 'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃ ಪರಂ ಹಿ ಮಾಮ್' ಎಂಬ ಪ್ರಮಾಣದಿಂದ ಚತುರ್ಮುಖನಿಗೆ ಕರ್ಮಫಲವಿಲ್ಲವೆಂಬುದು ಕೂಡದ ಕಾರಣ, ಅವರಿಗೆ ಭೇದವೇ ಅರ್ಥಾತ್ ತಿಳಿಯುತ್ತದೆ. ಅಂದರೆ ನಿತ್ಯಮುಕ್ತನಾದ ಪರಮಾತ್ಮನ ದೆಸೆಯಿಂದ ಚತುರ್ಮುಖನಿಗೆ ಭೇದವನ್ನೇ ಹೇಳಬೇಕೆಂದು ಅಭಿಪ್ರಾಯ.

**ननु ब्राह्मणाजशब्दयोर्विष्णौ सावकाशत्वमेव कुतः । रूढ्यपेक्षया योगस्य दुर्बलत्वात् । तथा च तदुभयसामानाधिकरण्यबलादभेदसिद्धिः स्यादेवेत्यत आह – उक्तविरोधश्चेति ।।**

ಬ್ರಾಹ್ಮಣ ಮತ್ತು ಅಜಶಬ್ದಗಳಿಗೆ ವಿಷ್ಣುವಿನಲ್ಲಿ ಸಾವಕಾಶತ್ವವನ್ನು ಹೇಗೆ ಹೇಳುತ್ತೀರಿ? ಏಕೆಂದರೆ ರೂಢಿಗಿಂತಲೂ ಯೋಗವು ದುರ್ಬಲವಾಗಿರುತ್ತದೆ. ಆದ್ದರಿಂದ ಸಾಮಾನಾಧಿಕರಣ್ಯದ ಬಲದಿಂದ ಅಭೇದವನ್ನೇ ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ 'ಉಕ್ತವಿರೋಧಶ್ಚ' ಎಂಬುದರಿಂದ ಉತ್ತರಿಸಿದ್ದಾರೆ.

ಪ್ರಥಮಧ್ಯಾಯದ ಮೂರನೆಯ ಪಾದದ ನ್ಯಾಯವಿವರಣ

**चो यस्मादित्यर्थे । यस्मात् ब्राह्मणाजशब्दयो रूढ्या चतुर्मुखपरत्वाङ्गीकारे, 'सर्वस्य वशी' 'सर्वस्येशानः' 'सर्वस्याधिपतिः' इत्याद्युक्तं विरुद्धं भवत्यत उक्तयोगेन तयोर्विष्णुपरत्वमेवेति भावः ।**

'ಚ' ಶಬ್ದವು ಯಾವಕಾರಣದಿಂದ ಎಂಬರ್ಥದಲ್ಲಿದೆ. ಯಾವಕಾರಣದಿಂದ 'ಬ್ರಾಹ್ಮಣ' ಹಾಗೂ 'ಅಜ' ಶಬ್ದಗಳಿಗೆ ರೂಢಿಯಬಲದಿಂದ ಚತುರ್ಮುಖಪರತ್ವವನ್ನು ಅಂಗೀಕಾರ ಮಾಡಿದರೆ, 'ಸರ್ವಸ್ಯ ವಶೀ' 'ಸರ್ವಸ್ಯೇಶಾನಃ' 'ಸರ್ವಸ್ಯಾಧಿಪತಿಃ' ಇವೇ ಮೊದಲಾದ ವಚನಗಳು ವಿರುದ್ಧವಾಗುತ್ತವೋ, ಆದ್ದರಿಂದ ಹಿಂದೆ ಹೇಳಿದ ವ್ಯುತ್ಪತ್ತಿಯಿಂದ 'ಬ್ರಾಹ್ಮಣ' ಹಾಗೂ 'ಅಜ' ಶಬ್ದಗಳು ವಿಷ್ಣುಪರವೇ ಆಗುತ್ತವೆಂದು ತಿಳಿಯಬೇಕು.

**विष्णुविरिञ्चयोर्भेद एव 'विश्वो हिरण्यगर्भः' इत्यादिभेदश्रुतिबाहुल्यान्न तयोरभेदो युक्त इत्याह – तत्रैवेति ।।**

ವಿಷ್ಣು ಹಾಗೂ ಚತುರ್ಮುಖಬ್ರಹ್ಮರಿಗೆ ಭೇದವನ್ನೇ ಹೇಳಬೇಕು. ಏಕೆಂದರೆ 'ವಿಶ್ವೋ ಹಿರಣ್ಯಗರ್ಭಃ' ಇತ್ಯಾದಿ ಭೇದಶ್ರುತಿಯು ಬಹಳವಾಗಿರುವುದರಿಂದ. ಆದ್ದರಿಂದ ಅವರಿಬ್ಬರಿಗೆ ಅಭೇದವು ಸರ್ವಥಾ ಯುಕ್ತವಾಗುವುದಿಲ್ಲವೆಂದು 'ತತ್ರೈವ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**एवं विष्णुविरिञ्चयोर्भेदेन यत्सिद्धं तदाह – तल्लिङ्गमिति ।। यस्मादुक्तप्रकारेण विष्णुविरिञ्चयोरभेदाभावः । तस्मात् तल्लिङ्गं पापाद्यलेपनित्यमहिमत्वादिलिङ्गं पत्यादिशब्दश्च चतुर्मुखे विष्णुविरिञ्चयोरभेदेन सावकाश इति नेत्यर्थः ।**

ಹೀಗೆ ವಿಷ್ಣು ಹಾಗೂ ಚತುರ್ಮುಖರಿಗೆ ಭೇದವನ್ನು ಒಪ್ಪಿದ್ದರಿಂದ ಯಾವ ಪ್ರಮೇಯವು ಸಿದ್ಧವಾಯಿತೋ ಅದನ್ನು 'ತಲ್ಲಿಂಗಮ್' ಎಂಬುದರಿಂದ ಹೇಳಿದ್ದಾರೆ. ಯಾವಕಾರಣದಿಂದ ಹಿಂದೆ ಹೇಳಿದ ಪ್ರಕಾರ ವಿಷ್ಣು ಹಾಗೂ ಚತುರ್ಮುಖರಿಗೆ ಅಭೇದವು ಇರುವುದಿಲ್ಲವೋ? ಆ ಕಾರಣದಿಂದ 'ತಲ್ಲಿಂಗಮ್' = ಪಾಪಾದ್ಯಲೇಪ, ನಿತ್ಯಮಹಿಮತ್ವ ಮೊದಲಾದ ಲಿಂಗಗಳು ಪತ್ಯಾದಿಶಬ್ದವೂ ಸಹ ಚತುರ್ಮುಖನಲ್ಲಿ ವಿಷ್ಣು ಹಾಗೂ ಚತುರ್ಮುಖರಿಗೆ ಅಭೇದವಿರುವ ಪ್ರಯುಕ್ತ ಸಾವಕಾಶವೆಂದು ಹೇಳಬಾರದು. ಅಂದರೆ ಆ ಲಿಂಗ ಹಾಗೂ ಶಬ್ದಗಳು ಚತುರ್ಮುಖಪರವೇ ಆಗುವುದಿಲ್ಲ, ವಿಷ್ಣುಪರವೇ ಆಗುತ್ತವೆ.

**इति उक्तप्रकारेण, एतत् पूर्वाधिकरणोक्तं, समस्तमत्र नतु किञ्चिदेवेत्यर्थः । पूर्वाधिकरणवत् भेदश्रुतेः सामानाधिकरण्यान्यथानुपपत्तिपरिहारस्य च साम्यादिति भावः ।**

ಹೀಗೆ ಹಿಂದೆ ಹೇಳಿದ ಪ್ರಕಾರ ಪೂರ್ವಾಧಿಕರಣದಲ್ಲಿ ಹೇಳಲ್ಪಟ್ಟ ಸಮರ್ಥಪ್ರಮೇಯವು ಸಿದ್ಧವಾಯಿತು ಹೊರತು, ಪೂರ್ವಾಧಿಕರಣದ ಒಂದು ಪ್ರಮೇಯವಷ್ಟೇ ಸಿದ್ಧವಾಯಿತೆಂದಲ್ಲ. ಹಿಂದಿನ ಅಧಿಕರಣದಂತೆ

ಭೇದಶ್ರುತಿ ಹಾಗೂ ಸಾಮಾನಾಧಿಕರಣ್ಯದ ಅನ್ಯಥಾನುಪಪತ್ತಿಯ ಪರಿಹಾರವು ಇಲ್ಲಿಯೂ ಸಮಾನವಾಗಿದೆಯೆಂದು ತಿಳಿಯಬೇಕು.

**यद्वाऽत्र समस्तशब्देन 'बाहुल्यं लिङ्गशब्दानाम्' इत्यादयः, 'अर्थात्तथागतिः' इत्यन्ता एकादशापि न्यायाः सङ्गृहीताः । तत्रार्थात्तथागतेरव्यवहितपूर्वाधिकरणसम्बन्धित्वेनैतच्छब्देन शीघ्रोपस्थितेस्तद्विवरणं प्रथमतः कृत्वा तत्सङ्गत्या प्रतिलोमक्रमेण न्यायान्विवृण्वन् 'उक्तस्य विरोधः' इत्युक्तन्यायं तावद्विवृणोति – उक्तेति ॥**

ಅಥವಾ ಇಲ್ಲಿ ಸಮಸ್ತ ಎಂಬ ಶಬ್ದದಿಂದ 'ಬಾಹುಲ್ಯಂ ಲಿಂಗಶಬ್ದಾನಾಮ್' ಇತ್ಯಾದಿ ವಾಕ್ಯವನ್ನು ಸ್ವೀಕರಿಸಿ, 'ಅರ್ಥಾತ್ತಥಾಗತಿಃ' ಎಂಬಲ್ಲಿಯ ತನಕ ಹನ್ನೊಂದು ನ್ಯಾಯಗಳನ್ನು ಸಂಗ್ರಹಿಸಲಾಗಿದೆ. ಅದರಂತೆ 'ಅರ್ಥಾತ್ತಥಾಗತೇಃ' ಅವ್ಯವಹಿತವಾದ ಹಿಂದಿನ ಅಧಿಕರಣಕ್ಕೆ ಸಂಬಂಧಿಯಾಗಿ 'ಏತತ್' ಶಬ್ದದಿಂದ ಶೀಘ್ರೋಪಸ್ಥಿತಿಯು ಬರುವುದರಿಂದ, ಮೊದಲು ಅದರ ವಿವರಣೆಯನ್ನು ಮಾಡಿ, ಅದಕ್ಕೆ ಸಂಗತವಾಗುವಂತೆ ಪ್ರತಿಲೋಮಕ್ರಮದಿಂದ ನ್ಯಾಯಗಳನ್ನು ವಿವರಿಸುತ್ತಾ 'ಉಕ್ತಸ್ಯ ವಿರೋಧಃ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನು ವಿವರಿಸಿದ್ದಾರೆ 'ಉಕ್ತ' ಇತ್ಯಾದಿ ವಾಕ್ಯದಿಂದ.

**चशब्दः समुच्चये । तत्रैव ब्राह्मणशब्दस्य चतुर्मुखपरत्व एव । उक्तस्य पत्यादिशब्दस्य विरोध इत्यर्थः । अत एव तत्वप्रकाशिकायां 'अन्यथा पत्यादिशब्दविरोधात्' इत्युक्तम् । ब्राह्मणस्येत्यस्य नित्यमहिमत्वादिलिङ्गस्य च विरोध इति पूर्वपक्ष्युक्तं तु ब्राह्मणशब्दव्याख्यानेनैव निरस्तम् । एवमुत्तरत्रापि ज्ञातव्यम् ।**

'ಚ' ಶಬ್ದವು ಸಮುಚ್ಚಯಾರ್ಥದಲ್ಲಿದೆ. ಬ್ರಾಹ್ಮಣಶಬ್ದವು ಚತುರ್ಮುಖಪರವೇ ಆಗಿದೆ. ಆದ್ದರಿಂದಲೇ ತತ್ವಪ್ರಕಾಶಿಕೆಯಲ್ಲಿ 'ಅನ್ಯಥಾನುಪಪತ್ತ್ಯಾದಿಶಬ್ದವಿರೋಧಾತ್' ಎಂದು ಹೇಳಿದ್ದಾರೆ. 'ಬ್ರಾಹ್ಮಣಸ್ಯ' ಎಂಬುದಕ್ಕೆ ನಿತ್ಯಮಹಿಮತ್ವಾದಿ ಲಿಂಗಗಳಿಗೆ ವಿರೋಧಬರುತ್ತದೆಂದು ಪೂರ್ವಪಕ್ಷಿಯ ವಚನವು 'ಬ್ರಾಹ್ಮಣ' ಶಬ್ದದ ವ್ಯಾಖ್ಯಾನದಿಂದಲೇ ನಿರಾಕೃತವಾಯಿತು. ಹೀಗೆ ಮುಂದೆಯೂ ಸಹ ತಿಳಿಯಬೇಕು.

**ननु विशिष्टस्य कर्मफलाभावात्पत्यादिशब्दयोगेऽपि चतुर्मुखस्येश्वरस्वरूपत्वात्स्वरूपापेक्षया तदुभयोपपत्तिरित्यत आह – भेदश्रुतीति ॥**

ವಿಶಿಷ್ಟನಿಗೆ ಕರ್ಮಫಲವೂ ಇಲ್ಲದ ಕಾರಣ 'ಪತ್ಯಾದಿ' ಶಬ್ದಗಳನ್ನು ಕೂಡಿಸಬಹುದಾದರೂ, ಚತುರ್ಮುಖನು ಈಶ್ವರಸ್ವರೂಪನಾದ್ದರಿಂದ, ಸ್ವರೂಪಾಪೇಕ್ಷೆಯಿಂದ 'ಪತ್ಯಾದಿ' ಶಬ್ದಗಳನ್ನು ಕೂಡಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಭೇದಶ್ರುತಿ' ಎಂಬುದರಿಂದ ಉತ್ತರಿಸಿದ್ದಾರೆ.

ಪ್ರಥಮಾಧ್ಯಾಯದ ಮೂರನೆಯ ಪಾದದ ನ್ಯಾಯವಿವರಣ

**'तत एते व्यजायन्त' 'विश्वो हिरण्यगर्भः' इत्यादिभेदश्रुतिबाहुल्यादित्यर्थः । यद्वा 'बहुतादृक्त्वम्' इत्युक्तन्यायं विवृणोति – भेदश्रुतीति ।।**

'ತತ ಏತೇ ವ್ಯಜಾಯಂತ' 'ವಿಶ್ವೋ ಹಿರಣ್ಯಗರ್ಭಃ' ಇತ್ಯಾದಿ ಭೇದಪ್ರತಿಪಾದಕವಾದ ಶ್ರುತಿಗಳು ಬಹಳವಾಗಿರುವುದರಿಂದ, ಅಭೇದವನ್ನು ಹೇಳಬಾರದೆಂದು ಅಭಿಪ್ರಾಯ. ಅಥವಾ 'ಬಹುತಾದೃಕ್ತ್ವಮ್' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ 'ಭೇದಶ್ರುತಿ' ಎಂಬುದರಿಂದ ವಿವರಿಸುತ್ತಿದ್ದಾರೆ.

**'विश्वो हिरण्यगर्भः' इत्यादिबहुश्रुतीनां विशिष्य विष्णुविरिञ्चयोर्भेद-प्रतिपादकत्वेन निरवकाशत्वरूपं तादृक्त्वं द्रष्टव्यम् । तादृग्द्वयमित्युक्तन्यायं विवृणोति – तल्लिङ्गमिति ।।**

'ವಿಶ್ವೋ ಹಿರಣ್ಯಗರ್ಭಃ' ಇತ್ಯಾದಿ ಬಹುಶ್ರುತಿಗಳು ವಿಶೇಷವಾಗಿ ವಿಷ್ಣು ಹಾಗೂ ಚತುರ್ಮುಖರಿಗೆ ಭೇದವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ, ನಿರವಕಾಶತ್ವ ರೂಪವಾದ ತಾದೃಕ್ತ್ವವನ್ನು ಹೇಳಿದಂತಾಗುತ್ತದೆ. 'ತಾದೃಕ್ದ್ವಯಂ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನು 'ತಲ್ಲಿಂಗಮ್' ಎಂಬುದರಿಂದ ವಿವರಿಸುತ್ತಿದ್ದಾರೆ.

**पापालेपत्वलिङ्गं, पत्या(ब्राह्मणा)दिशब्दश्च । तादृक्त्वप्रदर्शनार्थमुक्तं चतुर्मुखेऽनवकाश इति । यद्वा 'लिङ्गावकाशराहित्यम्' इत्युक्तं विवृणोति – तल्लिङ्गमिति ।।**

'ಪಾಪಾಲೇಪತ್ವಲಿಂಗ', 'ಪತ್ಯಾದಿ' ಶಬ್ದ ಇವುಗಳಿಗೆ ತಾದೃಕ್ತ್ವವನ್ನು 'ಚತುರ್ಮುಖೇಽನವಕಾಶಃ' ಎಂಬುದರಿಂದ ಸಮರ್ಥಿಸಿದ್ದಾರೆ. ಅಥವಾ 'ಲಿಂಗಾವಕಾಶರಾಹಿತ್ಯಮ್' ಎಂಬುದನ್ನು 'ತಲ್ಲಿಂಗಮ್' ಎಂಬುದರಿಂದ ವಿವರಿಸಿದ್ದಾರೆ.

**उक्तरीत्या धर्मसाध्यपदप्राप्तिमति चतुर्मुखे नित्यमहिमत्वादिलिङ्गजातं निरवकाशमित्यर्थः । तथा च चतुर्मुखस्य परमात्मनाऽभेदं विना पापालेपत्व-लिङ्गस्यावकाशराहित्यभ्रमेण पूर्वपक्षप्रवृत्तिरित्युक्तं भवति ।**

**तथा 'विपरीतश्रुतिः' इत्युक्तन्यायं विवृणोति – स शब्दश्चेति ।।**

ಹಿಂದೆ ಹೇಳಿದ ಪ್ರಕಾರ ನಿತ್ಯಮಹಿಮತ್ವಾದಿಲಿಂಗಗಳೆಲ್ಲವೂ ಚತುರ್ಮುಖನಲ್ಲಿ ನಿರವಕಾಶವಾಗಿವೆ. ಆದ್ದರಿಂದ ಚತುರ್ಮುಖನಿಗೆ ಪರಮಾತ್ಮನಿಂದ ಅಭೇದವನ್ನು ಒಪ್ಪದೇ ಪಾಪಾಲೇಪತ್ವಲಿಂಗಗಳಿಗೆ ನಿರವಕಾಶತ್ವವು ಕೂಡುವುದಿಲ್ಲ ಎಂಬ ಭ್ರಮೆಯಿಂದ ಪೂರ್ವಪಕ್ಷಿಯು ಪ್ರವೃತ್ತನಾಗಿದ್ದಾನೆಂದು

ಹೇಳಿದಂತಾಗುತ್ತದೆ. ಅದರಂತೆ 'ವಿಪರೀತಶ್ರುತಿಃ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ 'ಸ ಶಬ್ದಶ್ಚ' ಎಂಬುದರಿಂದ ವಿವರಿಸಿದ್ದಾರೆ.

**सर्ववेदमुख्यार्थत्वनिमित्तकब्राह्मणशब्दः सर्वथा जन्मराहित्यनिमित्तकाजशब्दश्च चतुर्मुखेऽनवकाश इति पूर्वपक्षविपरीतैव श्रुतिः । प्रथमवर्णप्रतिपादको ब्राह्मणशब्दो, विष्णुजातत्वनिमित्तश्चाजशब्द इति भ्रमेण पूर्वपक्षप्रवृत्तेरिति भावः ।**

ಸರ್ವವೇದಮುಖ್ಯಾರ್ಥತ್ವವೆಂಬ ಪ್ರವೃತ್ತಿನಿಮಿತ್ತವುಳ್ಳ ಬ್ರಾಹ್ಮಣಶಬ್ದವು, ಸರ್ವಥಾ ಜನ್ಮರಾಹಿತ್ಯವೆಂಬ ಪ್ರವೃತ್ತಿನಿಮಿತ್ತವುಳ್ಳ ಅಜಶಬ್ದವು ಚತುರ್ಮುಖನಲ್ಲಿ ಬರುವುದಿಲ್ಲ. ಹೀಗೆ ಪೂರ್ವಪಕ್ಷಿಗೆ ಶ್ರುತಿಯು ವಿಪರೀತವೇ ಆಗುತ್ತದೆ. ಪ್ರಥಮವರ್ಣಪ್ರತಿಪಾದಕವಾದ ಬ್ರಾಹ್ಮಣಶಬ್ದವನ್ನು, ಅಜಶಬ್ದವನ್ನು ಭ್ರಾಂತಿಯಿಂದ ತಿಳಿದು ಪೂರ್ವಪಕ್ಷಿಯು ಪ್ರವೃತ್ತನಾಗಿದ್ದಾನೆಂದು ಅಭಿಪ್ರಾಯ.

**'अन्वयाभावः' इत्युक्तन्यायं विवृण्वन् तत्साध्यमप्याह – चतुर्मुखस्येति ॥ कर्मसाध्यज्ञानानन्दादिवृद्धिमतः चतुर्मुखस्य कर्मफलाभावायुक्तेरन्वयाभावात्, विष्णोश्च कर्मफलाभावात्तयोर्भेद एव बलादापद्यत इत्यर्थः ।**

'ಅನ್ವಯಾಭಾವಃ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ ವಿವರಿಸುತ್ತಾ ಸಾಧ್ಯವನ್ನೂ ಸಹ ಹೇಳುತ್ತಿದ್ದಾರೆ 'ಚತುರ್ಮುಖಸ್ಯ' ಎಂಬುದಾಗಿ. ಕರ್ಮಸಾಧ್ಯವಾದ ಜ್ಞಾನಾನಂದಾದಿಗಳಿಂದ ಅಭಿವೃದ್ಧರಾದ ಚತುರ್ಮುಖರಿಗೆ ಕರ್ಮಫಲಾಭಾವವು ಅಯುಕ್ತವಾಗುತ್ತದೆ. ಹೀಗೆ ಅನ್ವಯಾಭಾವವಿರುವುದರಿಂದ ವಿಷ್ಣುವಿನಲ್ಲಿ ಕರ್ಮಫಲವೇ ಇಲ್ಲದ ಕಾರಣ ಇವರಿಬ್ಬರಿಗೆ ಭೇದವೇ ಸಿದ್ಧವಾಗುತ್ತದೆ.

**यद्वा 'अदृष्टिः' इत्युक्तन्यायं पूर्ववद्विवृणोति – चतुर्मुखस्येति ॥ विरुद्धधर्माधिकरणयोरभेदस्य काप्यदृष्टेरुक्तरीत्या विरुद्धधर्माधिकरणयोस्तयोर्विष्णु-विरिञ्चयोर्भेद एवार्थाद्बलादापद्यत इत्यर्थः ।**

ಅಥವಾ 'ಅದೃಷ್ಟಿಃ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ ಹಿಂದಿನಂತೆ ವಿವರಣೆ ಮಾಡುತ್ತಿದ್ದಾರೆ 'ಚತುರ್ಮುಖಸ್ಯ' ಇತ್ಯಾದಿ ವಾಕ್ಯದಿಂದ. ವಿರುದ್ಧಧರ್ಮಾಧಿಕರಣವುಳ್ಳ ಎರಡು ಪದಾರ್ಥಗಳಿಗೆ ಅಭೇದವನ್ನು ಒಪ್ಪಿರುವುದು ಎಲ್ಲಿಯೂ ಕಂಡಿಲ್ಲವಾದ್ದರಿಂದ ವಿರುದ್ಧಧರ್ಮಾಧಿಕರಣವುಳ್ಳ ವಿಷ್ಣು ಹಾಗೂ ಚತುರ್ಮುಖರಿಗೆ ಭೇದವನ್ನೇ ಅರ್ಥಾತ್ ಹೇಳಬೇಕೆಂದು ತಿಳಿಸಿದಂತಾಗುತ್ತದೆ.

**'विरुद्धता' इत्युक्तन्यायं विवृणोति – उक्तविरोध इति ॥ चशब्दो न्यायान्तरसमुच्चये । तत्रैव तयोरभेद एव श्रुत्युक्तविरोध इत्यर्थः । कथमित्यत आह – भेदेति ॥**

'ವಿರುದ್ಧತಾ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನೇ 'ಉಕ್ತವಿರೋಧಃ' ಎಂಬುದರಿಂದ ವಿವರಿಸಿದ್ದಾರೆ. 'ಚ' ಶಬ್ದವು ನ್ಯಾಯಾಂತರವನ್ನು ಸಮುಚ್ಚಯ ಮಾಡುತ್ತಿದೆ. ಅದೇ ವಿಷಯದಲ್ಲಿ ವಿಷ್ಣು ಹಾಗೂ ಚತುರ್ಮುಖರಿಗೆ ಅಭೇದವನ್ನು ಒಪ್ಪಿದರೆ ಶ್ರುತಿಯ ವಿರೋಧ ಬರುತ್ತದೆಂದು ಹೇಳಿದ್ದಾರೆ. ಹೇಗೆ? ಎಂಬ ಪ್ರಶ್ನೆಗೆ 'ಭೇದ' ಎಂಬುದರಿಂದ ಉತ್ತರಿಸಿದ್ದಾರೆ.

**अथवा 'अनुक्तिः' इत्युक्तन्यायं विवृणोति – उक्तेति ।। उक्तिरुक्तम् । भावे क्तः । तद्विरोधोऽनुक्तिरेवेति यावत् । तत्र तयोरभेदे । विषयसप्तमीयम् ।**

ಅಥವಾ 'ಅನುಕ್ತಿಃ' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನು 'ಉಕ್ತ' ಎಂಬುದರಿಂದ ವಿವರಿಸಿದ್ದಾರೆ. 'ಉಕ್ತಿಃ' ಎಂದರೆ 'ಉಕ್ತಮ್' ಎಂದರ್ಥ. ಭಾವಾರ್ಥದಲ್ಲಿ 'ಕ್ತ' ಪ್ರತ್ಯಯವಿರುತ್ತದೆ. 'ತತ್ರ' ಎಂದರೆ ವಿಷ್ಣು ಹಾಗೂ ಚತುರ್ಮುಖರ ವಿಷಯದಲ್ಲಿ ಅಭೇದವನ್ನು ಹೇಳಿದರೆ ಎಂಬುದಾಗಿ ವಿಷಯಸಪ್ತಮಿಯನ್ನು ತಿಳಿಯಬೇಕು.

**ननु 'स्थित्यादये हरि-विरिञ्चि-हरेतिसञ्ज्ञाः' इत्यादिना तयोरभेदस्योक्तत्वात् कथमनुक्तिरित्यत आह – भेदेति ।।**

'ಸ್ಥಿತ್ಯಾದಯೇ ಹರಿ-ವಿರಿಂಚಿ-ಹರೇತಿಸಂಜ್ಞಾಃ' ಇತ್ಯಾದಿ ವಾಕ್ಯದಿಂದ ವಿಷ್ಣು ಹಾಗೂ ಚತುರ್ಮುಖರಿಗೆ ಅಭೇದವನ್ನು ಹೇಳಿದೆಯಲ್ಲವೇ? ಹೀಗಿರುವಾಗ ಅನುಕ್ತಿಯನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಭೇದ' ಎಂಬುದರಿಂದ ಉತ್ತರಿಸಿದ್ದಾರೆ.

**एवेत्यनुवर्तते । भेदश्रुतेरेव बाहुल्यात्तद्विरोधेन क्वचित्तदुक्तेरन्तर्याम्यभेद-परत्वमिति भावः ।**

'ಏವ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಭೇದಶ್ರುತಿಯೇ ಬಹಳವಾಗಿರುವುದರಿಂದ ಅದರ ವಿರೋಧವಿರುವ ಕಾರಣ ಕೆಲವೊಮ್ಮೆ ಅಭೇದವಿರುವಂತಹ ಶ್ರುತಿಗಳಿಗೆ ಅಂತರ್ಯಾಮಿರೂಪಗಳಿಗೆ ಅಭೇದವನ್ನು ವಿವಕ್ಷಿಸಿ ಅರ್ಥೈಸಬೇಕೆಂದು ಅಭಿಪ್ರಾಯ.

**यद्वा 'अनुक्तिश्च' इति चशब्दसमुच्चितयुक्तिमाह – भेदेति ।। न केवलमभेदानुक्तिः किन्तु भेदोक्तिश्चेति भावः ।**

ಅಥವಾ 'ಅನುಕ್ತಿಶ್ಚ' ಎಂಬಲ್ಲಿರುವ 'ಚ' ಶಬ್ದದಿಂದ ಸಮುಚ್ಚಿತವಾದ ಯುಕ್ತಿಯನ್ನು 'ಭೇದ' ಎಂಬುದರಿಂದ ಹೇಳುತ್ತಿದ್ದಾರೆ. ಕೇವಲ ಅಭೇದವನ್ನು ಹೇಳಿಲ್ಲವೆಂದಷ್ಟೇ ಅಲ್ಲ. ಭೇದವೇ ಉಕ್ತವಾಗಿದೆಯೆಂದು ತಿಳಿಯಬೇಕು.

**यद्वा 'बाहुल्यं लिङ्गशब्दानाम्' इत्युक्तन्यायं विवृणोति – तल्लिङ्गमिति ।। नित्यमहिमत्वादिलिङ्गजातं पत्यादिशब्दसमूहश्च चतुर्मुखेऽनवकाश इत्यर्थः ।।१४।।**

ಅಥವಾ 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬಲ್ಲಿ ಹೇಳಲ್ಪಟ್ಟ ನ್ಯಾಯವನ್ನು 'ತಲ್ಲಿಂಗಮ್' ಎಂಬುದರಿಂದ ವಿವರಿಸಿದ್ದಾರೆ. ನಿತ್ಯಮಹಿತ್ವಾದಿಲಿಂಗಗಳು ಪತ್ಯಾದಿಶಬ್ದಗಳ ಸಮೂಹವು ಚತುರ್ಮುಖನಲ್ಲಿ ಬರಲು ಸಾಧ್ಯವಿಲ್ಲ ಎಂದರ್ಥ.

**अनवकाश इति प्राबल्यकथनम् । इति, अनेन प्रकारेण, (ए) तत् प्रागुक्तन्यायजातं समस्तमत्र नतु किञ्चिदेवेत्यर्थः । सर्वमेतत्सूचितं सूत्रे 'शब्देभ्यः' इति आद्यर्थकबहुवचनेन ।**

'ಅನವಕಾಶಃ' ಎಂದು ಹೇಳಿದ್ದು ಸಿದ್ಧಾಂತನ್ಯಾಯಕ್ಕೆ ಪ್ರಾಬಲ್ಯವನ್ನು ಸೂಚಿಸುವುದಕ್ಕಾಗಿ. ಈ ಪ್ರಕಾರದಿಂದ ಹಿಂದೆ ಹೇಳಿದ ನ್ಯಾಯಗಳೆಲ್ಲವೂ ವಿಷ್ಣುವಿನಲ್ಲಿ ಯುಕ್ತವಾಗುತ್ತದೆ ಹೊರತು, ಕೆಲವು ನ್ಯಾಯಗಳಷ್ಟೇ ಯುಕ್ತವಾಗುತ್ತದೆಂದಷ್ಟೇ ಅರ್ಥವಲ್ಲ. ಇದೆಲ್ಲವೂ ಸೂತ್ರದಲ್ಲಿ 'ಶಬ್ದೇಭ್ಯಃ' ಎಂಬಲ್ಲಿರುವ ಬಹುವಚನದಿಂದ ಸೂಚನೆ ಮಾಡಿದ್ದಾರೆ.

**(एते सर्वेऽपि न्यायाः सूत्रेणैव वचनवृत्त्युपलक्षणाभ्यां दर्शिताः । अत एव सुधायां, 'दृश्यन्ते ताश्च सर्वशः' इत्यनुव्याख्यानं 'सूत्रसूचितान्यायानभिधाय' इति व्याख्यातम् । एवमुत्तरत्रापि 'स्वयं भगवतोदिताः' इत्यादौ द्रष्टव्यम्) ॥**

इति श्रीमन्न्यायविवरणभावबोधे प्रथमाध्यायस्य तृतीयः पादः ॥

ಈ ಎಲ್ಲಾ ನ್ಯಾಯಗಳು ಸೂತ್ರದ ಶಕ್ತಿವೃತ್ತಿಯಿಂದ ಅಥವಾ ಲಕ್ಷಣಾವೃತ್ತಿಯಿಂದ ಪ್ರದರ್ಶಿಸಲ್ಪಟ್ಟಿವೆ. ಆದ್ದರಿಂದಲೇ ನ್ಯಾಯಸುಧೆಯಲ್ಲಿ 'ದೃಶ್ಯಂತೇ ತಾಶ್ಚ ಸರ್ವಶಃ' ಎಂಬ ಅನುವ್ಯಾಖ್ಯಾನವನ್ನು ವ್ಯಾಖ್ಯಾನ ಮಾಡುವಾಗ 'ಸೂತ್ರಸೂಚಿತಾನ್ನ್ಯಾಯಾನಭಿಧಾಯ' ಎಂದು ಸೂತ್ರಸೂಚಿತವಾದ ನ್ಯಾಯಗಳನ್ನೇ ಹೇಳಲಾಗಿದೆಯೆಂದು ಹೇಳಿದ್ದಾರೆ. ಹೀಗೆ ಮುಂದೆಯೂ ಸಹ 'ಸ್ವಯಂ ಭಗವತೋದಿತಾಃ' ಇತ್ಯಾದಿ ಸ್ಥಳಗಳಲ್ಲಿ ತಿಳಿಯಬೇಕು.

ಇಲ್ಲಿಗೆ ಶ್ರೀ ರಘೂತ್ತಮತೀರ್ಥಶ್ರೀಪಾದಂಗಳವರು ರಚನೆ ಮಾಡಿದ ನ್ಯಾಯವಿವರಣಭಾವಬೋಧದ ಪ್ರಥಮಾಧ್ಯಾಯದ ತೃತೀಯ ಪಾದವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

## ಭಗವಂತನ ಸಾಕ್ಷಾತ್ಕಾರ ಬಿಟ್ಟು ಯಾವ್ ಯಾವ್ದೋ ಆಸೆ ಹಿಂದೆ ಹೋಗ್ಬೇಡಿ

ಕ್ಷರವೆಂದರೆ ನಾಶವುಳ್ಳದ್ದು, ಅಕ್ಷರವೆಂದರೆ ನಾಶವಿಲ್ಲದ್ದು.
ವರ್ಣ, ಪ್ರಕೃತಿ, ವಿಷ್ಣು ಮೂವರಿಗೂ ನಾಶವಿಲ್ಲ. ಹಾಗಾದರೆ ಅಕ್ಷರ ಯಾರು?
ನಾಶವಿಲ್ಲದಿದ್ದರಷ್ಟೇ ಸಾಲದು. ಅಕ್ಷರ ಎನಿಸಲು ಎಲ್ಲವನ್ನೂ ಹೊರಬೇಕು ... ಹೊರುವುದ ಬಿಟ್ಟರೆ ಆ ಎಲ್ಲವೂ ನಾಶವಾಗಬೇಕು.
ಎಲ್ಲವನ್ನೂ, ತನ್ನನ್ನೂ ಧರಿಸಿದವನು ... ಧಾರಣೆಯಿಂದ ಒಂದು ಕ್ಷಣವೂ ವಿಶ್ರಮಿಸದವನು ಮಹಾವಿಷ್ಣುವೇ.

''ಪ್ರಕೃತಿಯೇ ಎಲ್ಲ, ಪ್ರಕೃತಿಯಿಂದಲೇ ಎಲ್ಲ'' ... ಎಂದು ಆಧುನಿಕ ವಿಜ್ಞಾನಿಗಳು ಹೇಳುತ್ತಿರುವರಲ್ಲಾ?!
ಹೌದು.... ಇದನ್ನು ಅಂದೇ ಶಂಕಿಸಿದ್ದರು. ಸಿದ್ಧಾಂತಿಗಳು ಉತ್ತರಿಸಿದ್ದರು.
ಜಗತ್ತಿನ ಸೃಷ್ಟಿಗೆ ಜ್ಞಾನ, ಸ್ವಾತಂತ್ರ್ಯಗಳೆರಡೂ ಅತ್ಯವಶ್ಯ.
ಜಡ .... ಜಡ .... ಕೇವಲ ಜಡವಾದ ಪ್ರಕೃತಿಗೆ ಎರಡರಲ್ಲಿ ಒಂದೂ ಇಲ್ಲ ....
ವಿಷ್ಣುವಿಗೋ ಪರಿಪೂರ್ಣಜ್ಞಾನ, ನಿರವಧಿಕ ಸ್ವಾತಂತ್ರ್ಯ. ಆಹಾ !! ಸ್ವಾನಸಮನ್ವಯ ಧನ್ಯ !!

ಹೃದಯದಲ್ಲೊಂದು ತಾವರೆ, ಅದರಲ್ಲೊಂದು ಸಣ್ಣ ಪ್ರದೇಶ.
ಅದರೊಳಗಿರುವವನು ಯಾರು ? ಜೀವ ಅಂದ್ಕೊಂಡ್ರಾ ? ಬೇಡ ಬೇಡ ಯಾಗ್ಗೊತ್ತಾ ....
'ಏಷ ಆತ್ಮಾ......' ಮುಂದಿನ ವಾಕ್ಯಗಳೇ ಹೇಳ್ತಿವೆ - 'ಅಲ್ಲಿರೋನು ಸರ್ವಾಧಾರಕ, ಸರ್ವವ್ಯಾಪ್ತ....'

ಅನುಕೂಲ ಅನ್ಸಿದ್ರೆ ಸುಖ. ಹಾಗನ್ನಿಸ್ದಿದ್ರೆ ಅದೇ ದುಃಖ ಅಂತ ಹೇಳ್ತಾರೆ.
ಇರ್ಬಹುದೇನೋ !! ಆದ್ರೆ, ಜ್ಞಾನಿಗಳು 'ಭಗವಂತ ನೀನ್ ಬೇಕು, ನೀನಷ್ಟೇ ಬೇಕು ...' ಅಂತಾರೆ.
ಸುಖ-ದುಃಖ, ಸೋಲು-ಗೆಲವು, ಸನ್ಮಾನ-ಅವಮಾನ ಇವಕ್ಕೆಲ್ಲಾ ಅರ್ಥವೇ ಇಲ್ಲ.
ಭಗವಂತ ಕೇವಲ ಭಗವಂತ. ಅವ್ನ ಸಿಕ್ಕಮೇಲೆ ಬೇರ್ಬೇರೆ ಇಚ್ಛೆನೂ ಇಲ್ಲ. ಭಗವಂತನ ಸಾಕ್ಷಾತ್ಕಾರ ಬಿಟ್ಟು
ಯಾವ್ ಯಾವ್ದೋ ಆಸೆ ಹಿಂದೆ ಹೋಗ್ಬೇಡಿ ಅಂತ ಎಚ್ಚರಿಸ್ತಿದೆ ಅನುಕೃತ್ಯಧಿಕರಣ.

'ವಾಮನ' ಅಂದ್ರೆ ವಾಸುದೇವನೇ ಅನ್ನೋದ್‌ಬಿಟ್ಟು, ಬೇರೆಯವರು ಅನ್ನೋದು
ವೇದ-ವೈದಿಕ ಗ್ರಂಥಗಳ ಪರಿಚಯ ಇದ್ದವರಿಗೆ ಅತ್ಯಂತ ಕರಾಳ. ಅಂದ್‌ಮೇಲೆ ವಿಷ್ಣುವಿನ ಜಿಜ್ಞಾಸೆ ನಿರಾತಂಕ.

ಮುಂದಿನ ಸಂಪುಟ ಎಂಟನೆಯದು, ಅದರಲ್ಲಿ ಪ್ರಥಮಾಧ್ಯಾಯದ ಮೂರನೇ ಪಾದದವರೆಗಿನ ಚಂದ್ರಿಕಾ ಸಂಪನ್ನವಾಗುವುದು.
ಘೋಷಿತ ಯೋಜನೆ ಅಲ್ಲಿಗೆ ಮುಕ್ತಾಯ. ಮುಂದಿನ ಭಾಗ ಪ್ರತ್ಯೇಕ ಯೋಜನೆ.

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು